ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತ

# ಬೃಹಜ್ಜಾತಕಾಖ್ಯ ಹೋರಾಶಾಸ್ತ್ರಮ್

ಸುಧಾರಸಧಾರಾಖ್ಯ ಕರ್ನಾಟಕ ಟೀಕಾ ಸಹಿತಂ
ಉದಾಹರಣ ಸಮಲಂಕೃತಂಚ


ಮೂಲಶ್ಲೋಕ ಸಂಗ್ರಹ – ಪ್ರತಿಪದಾರ್ಥ–ತಾತ್ಪರ್ಯ–ಟೀಕೆ

ಬ್ರಹ್ಮಶ್ರೀ ಬಿ.ವಿ. ಸುಬ್ರಹ್ಮಣ್ಯಶರ್ಮ

ಚನ್ನಪಟ್ಟಣ



ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

234, ಚಿಕ್ಕಪೇಟೆ, ಬೆಂಗಳೂರು–560 053.

ದೂರವಾಣಿ : 22258217

ಪರಿಷ್ಕೃತ ಮುದ್ರಣ : 2009



ಪ್ರಕಾಶನ ನಿರ್ವಹಣೆ :
ಟಿ.ಎಸ್. ಸುರೇಶ್ ಬಿ.ಎಸ್ಸಿ., (ಆನರ್ಸ್)
ಬನಶಂಕರಿ, ಬೆಂಗಳೂರು–560 070.

ಪುನರ್ ಪರಿಷ್ಕರಣೆ :
ಶ್ರೀ ವೆಂಕಟರಮಣ ಭಟ್
ಬೆಂಗಳೂರು.

ಬೆಲೆ : ರೂ. 600–00

ಡಿ.ಟಿ.ಪಿ. :
ಬೆಂಗಳೂರು – 560 078.

ಮುದ್ರಣ :
ಶ್ರೀ ವೆಂಕಟೇಶ್ವರ ಪ್ರಿಂಟಿಂಗ್ ಪ್ರೆಸ್
ನಂ. 57, 9ನೇ ಕ್ರಾಸ್, ಇಂದಿರಾಗಾಂಧಿ ವೃತ್ತ
ಬೆಂಗಳೂರು–560 078. ದೂರವಾಣಿ : 22444763.

# - : ಅರ್ಪಣೆ :-

ನಮ್ಮ ಪ್ರಕಾಶನ ಸಂಸ್ಥೆಯ ಸಂಸ್ಥಾಪಕರಾದ

## ದಿವಂಗತ ಶ್ರೀ ಟಿ.ಎನ್. ಕೃಷ್ಣಯ್ಯಶೆಟ್ಟಿ

ಹಾಗೂ

ಅವರ ಪುತ್ರ

## ದಿವಂಗತ ಶ್ರೀ ಟಿ.ಕೆ. ಸಂಪಂಗಿರಾಮಯ್ಯಶೆಟ್ಟಿ

ಯವರಿಗೆ

# ಬೃಹಜ್ಜಾತಕಾಖ್ಯ ಹೋರಾಶಾಸ್ತ್ರದ ಉಪೋದ್ಘಾತವು

ಸಕಲ ಚರಾಚರಾತ್ಮಕವಾದ ಪ್ರಪಂಚವು ಪಂಚಭೂತಮಯವಾಗಿರುವುದು. ಈ ಪಂಚಭೂತಾಧಿಕಾರವು ಸೂರ್ಯಾದಿ ಸಪ್ತಗ್ರಹಗಳಿಗೆ ಮಾತ್ರ ಉಂಟಾಗುವುದು. ಖಗೋಳದಲ್ಲಿ ಸೂರ್ಯಾದಿ ಸಪ್ತಗ್ರಹಗಳೂ, ಅಶ್ವಿನ್ಯಾದಿ 27 ನಕ್ಷತ್ರಗಳೂ, ಧೂಮಾದಿ ಅಷ್ಟಗ್ರಹಗಳೂ ಮುಖ್ಯವಾದವು. ''ಮುಂದಾವರೇಜ್ಯ ಭೂಪುತ್ರ ಸೂರ್ಯ ಶುಕ್ರೇಂದುಜೇಂದನಃ। ಪರಿಭ್ರಮಂತಧೋಧ್ಯಸ್ಸಾತ್ಕ್ರಮಶಃ ಶೀಘ್ರಗಾಮಿನಃ॥'' ಈ ಶ್ಲೋಕದ ಪ್ರಕಾರ ಸೂರ್ಯನು ಗ್ರಹಗಳಲ್ಲಿ ಮಧ್ಯವರ್ತಿಯಾಗಿರುವನು. ಈ ಸೂರ್ಯನನ್ನು ಈಶಾನ್ಯಾದಿಗ್ರಹಗಳು ಅವರವರ ಮಧ್ಯಮಾನಗತಿಯಿಂದ ಸುತ್ತುತ್ತಾರೆ. ಈ ಗ್ರಹಗಳ ಮಂಡಲಗಳಲ್ಲಿ ಭೂಮಿಯು ಒಂದಾಗಿರುವುದು. ಈ ಭೂಮಿಯು ಸೂರ್ಯನನ್ನು ಸುತ್ತುವಾಗ ಚಂದ್ರನು ಭೂಮಿಯನ್ನು ಸುತ್ತುತ್ತಾನೆ. ಈ ವಿಷಯವು ಸಿದ್ಧಾಂತ ಶಿರೋಮಣಿ ಮತ್ತು ಆರ್ಯಭಟ ಸಿದ್ಧಾಂತಗಳಲ್ಲಿ ತಿಳಿಸಿರುತ್ತಾರೆ. ಗೋಲಾಧ್ಯಾಯೇ ಭಾಸ್ಕರಾಚಾರ್ಯಃ ॥ಶ್ಲೋಕ॥ ಭೂಮೇಃ ಪಿಂಡಃ ಶಶಾಂಕಜ್ಞ ಕವಿರವಿ ಕುಜೇಜ್ಯಾರ್ಕಿ ನಕ್ಷತ್ರಾಕ್ಷ್ಯಾ । ವೃತ್ತೈರ್ವೃತ್ತೋವೃತಃ ಸನ್ಮೃದನಿಲ ಸಲಿಲವ್ಯೋಮ ತೇಜೋಮಯೋಯಮ್ ॥ ನನ್ಯಾಧಾರಃ ಸ್ವಶಕ್ತ್ಯೈವವಿಯತಿ ನಿಯತಂತಿಷ್ಠತೀ ಹಾಸ್ಯಪೃಷ್ಠೇ । ನಿಷ್ಠಂವಿಶ್ವಂಚಕಶ್ವತ್ ಸದನುಜ ಮನುಜಾದಿತ್ಯದೈತ್ಯಂ ಸಮಂತಾತ್ ॥ಇತಿ॥ ಈ ಪ್ರಕಾರವಾಗಿ ಅನೇಕ ಸಿದ್ಧಾಂತಗಳಲ್ಲಿ ಹೇಳಿರುತ್ತಾರೆ. ಪೃಥ್ವಿಯು ಪಂಚಭೂತವಾಗಿದೆ. ಪೃಥ್ವಿಯ ಮೇಲಿರುವ ಸಸ್ಯವರ್ಗಗಳೂ, ಪ್ರಾಣಿಕೋಟಿಗಳೂ ಪಂಚಭೂತಮಯವಾಗಿರುತ್ತವೆ. ಸೂರ್ಯಾದಿ ಗ್ರಹಗಳೇ ಪಂಚಭೂತಕ್ಕೆ ಮಾತೃಸ್ಥಾನವಾಗಿರುವುದರಿಂದ ಗ್ರಹಗಳಿಗೂ, ಭೂಮಿಗೂ, ಭೂಮಿಯ ಮೇಲೆ ಬೆಳೆಯುವ ಸಸ್ಯಾದಿಗಳಿಗೂ, ಪ್ರಾಣಿವರ್ಗಕ್ಕೂ ವಾಯುಶಕ್ತಿಯಿಂದ ಪರಸ್ಪರ ಸಂಬಂಧ ಉಂಟಾಗಿ ವೃದ್ಧಿ ಕ್ಷಯ, ಸುಖ, ದುಃಖಾದಿಗಳಿಗೆ ಹೇತುವಾಗಿದೆ. ಈ ವಿಷಯವು ಮಹರ್ಷಿಗಳು ಬರೆದಿರುವ ಸಿದ್ಧಾಂತಗಳಿಂದ ತಿಳಿದುಬರುತ್ತದೆ. (ಅವರು ಯಾವ ರೀತಿ ಕಂಡುಹಿಡಿದ–ರೆಂಬುವುದನ್ನು ನಿರ್ಧರಿಸುವುದು ಅಸಾಧ್ಯವಾಗಿದೆ) ಆದರೆ ಈ ಸಿದ್ಧಾಂತಗಳನ್ನು ಬರೆದ ಅಷ್ಟಾದಶಸಂಹಿತಾ ಕರ್ತರ ಹೆಸರುಗಳನ್ನು ತಿಳಿಸುವುದವಶ್ಯಕವಾಗಿದೆ.

''ಸೂರ್ಯಃ ಪಿತಾಮಹೋ ವ್ಯಾಸೋ ವಸಿಷ್ಠೋತ್ರಿಃ ಪರಾಶರಃ। ಕಶ್ಯಪೋ ನಾರದೋ ಗರ್ಗೋ ಮರೀಚಿರ್ಮನುರಂಗಿರಾಃ ॥೧॥ ಲೋಮಶಃ ಪೌಲಶಶ್ಚೈದಚ್ಯವನೋ ಯಮನೋ ಮನಃ । ಶೌನಕೋಷ್ಟಾದಶೈತೇ ಜ್ಯೋತಿಶ್ಶಾಸ್ತ್ರ ಪ್ರವರ್ತಕಾಃ ॥೨॥ ಈ ಜ್ಯೋತಿಶ್ಶಾಸ್ತ್ರಕ್ಕೆ ಕಾಲ್ಪನಿಕತ್ವವೆಂಬುವುದಿಲ್ಲ. ಪ್ರಥಮತಃ ವೇದಾಂಗವಾಗಿ ಹುಟ್ಟಿತೆಂದು ಸ್ಪಷ್ಟವಾಗಿರುತ್ತೆ. ವಸಿಷ್ಠಮಹರ್ಷಿಗಳು ಹೇಳಿರುವುದೇನೆಂದರೆ ॥ಶ್ಲೋಕ॥ ಜ್ಯೋತಿಶ್ಶಾಸ್ತ್ರಂ ಸಮಗ್ರಂ ಪ್ರಥಮಪುರುಷಃ ಸ್ವರ್ಣ ಗರ್ಭಾದ್ವಿತಿತ್ವಾ । ಪೂರ್ವಂ ಬ್ರಹ್ಮಾ ತತೋಯಂ ನಿಖಿಲಮುನಿಗಣ ಪ್ರಾರ್ಥನಾದ್ಯಚ್ಚಕಾರ॥ ತಚ್ಚೇದಂ ಸುಪ್ರಸನ್ನಂ ಮೃದುಪದನಿಕರೈಃ ಗ್ರ್ಯಹ್ಯಮಧ್ಯಾತ್ಯರೂಪಮ್। ಶಶ್ವದ್ವಿಶ್ವ ಪ್ರಕಾಶಂ ಗ್ರಹಚರಿತ ವಿದ್ಯಾಂ ನಿರ್ಮಲಂ ಜ್ಞಾನಚಕ್ಷುಃ ॥೧॥ ಈ ಪ್ರಕಾರವಾಗಿ ಬ್ರಹ್ಮನು ಮಹರ್ಷಿಗಳಿಗೆ ಉಪದೇಶಮಾಡಿದನೆಂದು ಸಿದ್ಧಾಂತ. ಈ ಅಷ್ಟಾದಶ ಸಿದ್ಧಾಂತಗಳು ಕಾಲವಶದಿಂದ ಕೆಲವು ಖಿಲವಾಗುತ್ತಾ ಬಂದು, ಇದರ ಆಧಾರದ ಮೇಲೆ ವರಾಹಮಿಹಿರ, ಕಾಳಿದಾಸ, ವರರುಚಿ, ವೆಂಕಟೇಶ, ಕಾಶ್ಯಪ, ನೀಲಕಂಠ, ಜಯದೇವ, ಗಣಪತಿ, ಸತ್ಯಾಚಾರ್ಯ, ಮಣಿತ್ಥ, ಜೀವಶರ್ಮ, ಬ್ರಹ್ಮದೇವ, ಭಾಸ್ಕರಾಚಾರ್ಯ, ಆರ್ಯಭಟ್ಟ ಮೊದಲಾದವರು ತಂತ್ರಗಳನ್ನೂ, ಕರಣಗಳನ್ನೂ ನಿರ್ಮಿಸಿದರು. ಇವರುಗಳಲ್ಲಿ ಅತ್ಯಂತ ಗೌರವವನ್ನು ಪಡೆದ ಅವಂತೀ ನಗರದ ನಿವಾಸಿ ಆದಿತ್ಯದಾಸರ ಪುತ್ರ ವರಾಹಮಿಹಿರ ಭಟ್ಟಾಚಾರ್ಯರು ೪೦೭ ಶ್ಲೋಕಗಳಿಂದ ಬೃಹಜ್ಜಾತಕವೆಂಬುವ ಈ ಗ್ರಂಥವನ್ನು ನಿರ್ಮಾಣ ಮಾಡಿದರು. ಈ ಗ್ರಂಥವು ಗೀರ್ವಾಣ ಭಾಷೆಯಲ್ಲಿ ಅತಿ ಗೂಢಾರ್ಥ ಉಳ್ಳದ್ದಾದ್ದರಿಂದ ಸರ್ವರ ಉಪಯೋಗಕ್ಕೋಸ್ಕರ ಭಟ್ಟೋತ್ಪಲಾಚಾರ್ಯರೂ, ಕೃಷ್ಣಭಟ್ಟರೂ ವ್ಯಾಖ್ಯಾನಗಳನ್ನು ಮಾಡಿದರು. ಈ ವ್ಯಾಖ್ಯಾನಗಳು ಪಂಡಿತರಿಗನುಕೂಲ, ಇತರರಿಗೆ ಅಸದಳವಾಗಿರುವುದು. ಈ ಎರಡು ಟೀಕೆಗಳ ಆಧಾರದ ಮೇಲೆ ಉತ್ತರ ದೇಶದಲ್ಲಿ ಹಿಂದೀ, ಮರಾಠೀ, ಬಂಗಾಳೀ, ಗುಜರಾತಿ, ಓಡ್ರ ಈ ಭಾಷೆಗಳಲ್ಲಿ ದೇಶಾ ಭಾಷಾ ಟೀಕೆಗಳನ್ನು ಬರೆದರು. ದಕ್ಷಿಣ ದೇಶದಲ್ಲಿ ಆಂಧ್ರ, ಕರ್ನಾಟಕ, ದ್ರಾವಿಡ, ಮಲಯಾಳ ಭಾಷೆಗಳಲ್ಲಿ ಟೀಕೆಗಳು ಬರೆಯಲ್ಪಟ್ಟು ಪ್ರಚಾರಕ್ಕೆ ಬಂದಿರುತ್ತವೆ. ಜಿಜ್ಞಾಸುಗಳು ಯಾವ ಭಾಷೆಯ ಟೀಕೆಗಳನ್ನು ಪಠನ ಮಾಡಿದರೂ ವರಾಹಮಿಹಿರಾಚಾರ್ಯರ ಗೂಢಾರ್ಥವು ತಿಳಿಯುವುದು ಅಸಾಧ್ಯವಾಗಿ ಬೃಹಜ್ಜಾತಕಾಭ್ಯಾಸ ಮಾಡಲುಪಕ್ರಮಿಸಿದ ನಂತರ ಅರ್ಥವಾಗದೆ, ಬೇಕಾದ ವಿಷಯಗಳನ್ನು ತೃಪ್ತಿಕರವಾಗಿ ತಿಳಿಯದೆ ಬೃಹಜ್ಜಾತಕವೆಂದರೆ ಉದಾಸೀನ ಮಾಡುತ್ತಾ ''ಕಬ್ಬಿಣದ ಕಡಲೆ'' ಎಂಬುವ ಹೆಸರೇ ನಿಜವಾಯಿತು. ಈ ಅನುತಾಪವನ್ನು ಪರಿಹರಿಸಬೇಕೆಂದು ಅನೇಕರು ನನ್ನನ್ನು ಪ್ರಾರ್ಥಿಸಿದ ಕಾರಣ ವರಾಹಮಿಹಿರಾಚಾರ್ಯಕೃತವಾದ ಬೃಹಜ್ಜಾತಕಕ್ಕೆ ಈಚೆಗೆ

ದಿನೇದಿನೇ ಅಭಿವೃದ್ಧಿ ಹೊಂದುತ್ತಿರುವ ಕನ್ನಡ ಭಾಷೆಯಲ್ಲಿ ಸರ್ವಜನರಿಗೂ ಚೆನ್ನಾಗಿ ತಿಳಿಯಲು ಸುಲಭವಾಗುವ ಹಾಗೆ ಪುರಾತನ ಗ್ರಂಥಗಳ ಅರ್ಥತಾತ್ಪರ್ಯಗಳನ್ನು ಚೆನ್ನಾಗಿ ಪರಿಶೋಧಿಸಿ ಮೂಲಶ್ಲೋಕ, ಅದಕ್ಕೆ ಪ್ರತಿಪದಾರ್ಥ, ನಂತರ ತಾತ್ಪರ್ಯ, ಉದಾಹರಣೆಗಳು, ಅನ್ಯಗ್ರಂಥ ಸಮ್ಮತಿಗಳು ಆಶಾಪೂರ್ತಿಯಾಗದಿರುವ ಸಂಭವ ಬರುವ ಸ್ಥಳಗಳಲ್ಲಿ ವಿಶೇಷವಾಗಿ ಅನ್ಯಗ್ರಂಥದ ಉದಾಹರಣ ಶ್ಲೋಕಗಳು ಸೇರಿಸಿ ಈ **ಬೃಹಜ್ಜಾತಕ** ಪುಸ್ತಕದಿಂದಲೇ ಜಾತಕನ ಫಲವು ಸಮಗ್ರವಾಗಿ ತಿಳಿಯುವಂತೆ **''ಸುಧಾರಸಧಾರಾ''** ಎಂಬುವ ಹೆಸರಿನಿಂದ ಟೀಕೆಯನ್ನು ರಚಿಸಿರುವೆನು – ಆದರೆ ವರಾಹಮಿಹಿರಾಚಾರ್ಯರ ಗಂಭೀರವಾದ ಪದಗಳಿಗೆ ಅಲ್ಪಜ್ಞನಾದ ನಾನು ಟೀಕೆ ಬರೆಯುವುದೆಂದರೇನು ? ಅವರ ಜ್ಞಾನದ ಸಹಸ್ರಾಂಶದ ಒಂದಂಶಕ್ಕೂ ಹೋಲಲಾರೆನು. ಆದಾಗ್ಯೂ ನನಗೆ ಈ ಜ್ಯೋತಿಶ್ಶಾಸ್ತ್ರಾಭ್ಯಾಸ ಮಾಡುವುದಕ್ಕೆ ಆರಂಭಿಸಿದ 30 ವರ್ಷಗಳಿಂದುಂಟಾದ ಅನುಭವದಿಂದಲೂ, ಜ್ಯೋತಿಷ ವಿದ್ಯಾಭ್ಯಾಸ ಕಾಲದಲ್ಲಿ ನನ್ನ ಮಿತ್ರವರ್ಯರುಗಳಾದ ಕಾನಕಾನಹಳ್ಳಿ ನಿವಾಸಿಗಳಾದ ವೇದಶಾಸ್ತ್ರ ಸಂಪನ್ನ ||ಬ್ರಹ್ಮಶ್ರೀ. ಅ|| ನರಸಿಂಹ ಸಿದ್ಧಾಂತಿಗಳು ಮತ್ತು ಡಿ|| ನರಸಿಂಹಶಾಸ್ತ್ರಿ ಸಿದ್ಧಾಂತಿಯವರಿಂದುಂಟಾದ ಉಪದೇಶ ಬಲದಿಂದಲೂ, ನನ್ನ ಬಾಲ್ಯ ವಿದ್ಯಾಭ್ಯಾಸ ಮಾಡುವುದರಲ್ಲಿ ಸಹಾಧ್ಯಾಯಿಗಳಾದ ವೇ|| ಬ್ರಹ್ಮಶ್ರೀ ಕೃಷ್ಣಭಟ್ಟರಿಂದ ಉಂಟಾದ ಪ್ರೋತ್ಸಾಹದಿಂದಲೂ ಈ ಟೀಕೆಯನ್ನು ರಚಿಸಿ ಆಸ್ತಿಕರೋಮಣಿಗಳಾದ ಜ್ಯೋತಿಷ್ಕರುಗಳ ಕಂಠಕ್ಕೆ ಮುಕ್ತಾಹಾರವಾಗಿ ಸಮರ್ಪಿಸಿರುವೆನು.

ಈ ಪುಸ್ತಕದಲ್ಲಿ ದೃಗೋಚರವಾಗದ ತಪ್ಪುಗಳು ಏನಾದರೂ ಕಂಡುಬಂದರಲ್ಲಿ ಅವುಗಳನ್ನೇ ಮುಖ್ಯವೆಂದೆಣಿಸಿದೆ ಸರಿಪಡಿಸಿಕೊಂಡು ಪಠನಮಾಡಿ ''ಹಂಸಕ್ಷೀರಮಿವಾಂಭಸಃ'' ಎಂಬುವ ವಚನದಂತೆ ರಸವನ್ನೇ ಗ್ರಹಿಸಿದರೆ ಶ್ರಮಪರಿಹಾರವಾಗುವುದೆಂದು ಅತ್ಯಂತ ವಿನಯದಿಂದ ಪ್ರಾರ್ಥಿಸುವೆನು, ಈ ಗ್ರಂಥವನ್ನು ಪ್ರಕಟಿಸುತ್ತಿರುವ ಕರ್ಣಾಟಕದ ಪ್ರಸಿದ್ಧ ಪ್ರಕಾಶನ ಸಂಸ್ಥೆಯಾದ ಮೆ|| ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ ರವರಿಗೆ ನಾನು ಆಭಾರಿಯಾಗಿದ್ದೇನೆ.

ಶಕ 1835||1913
ಪ್ರಮಾದೀಚ ಸಂವತ್ಸರ
ಚನ್ನಪಟ್ಟಣ
ಬೆಂಗಳೂರು ಜಿಲ್ಲಾ

ಆಸ್ತಿಕ ಶಿರೋಮಣಿ
ಸಕಲ ಸಜ್ಜನಗಳಿಗೆ ವಿಧೇಯನಾದ
ಬಂಕೀಪುರ ವಿ. ಸುಬ್ರಹ್ಮಣ್ಯಶರ್ಮ

# ಬೃಹಜ್ಜಾತಕಾಖ್ಯ ಪ್ರಕರಣ ಸೂಚಿಕೆ



೩. ಅಧಿಕ ಪಾಠ ಶ್ಲೋಕ ಸೇರಿಸಿದೆ.

# ಬೃಹಜ್ಜಾತಕ ವಿಷಯಸೂಚಿಕೆ :
# ಪೂರ್ವಭಾಗ

ಪೂರ್ವಭಾಗದ ವಿಷಯಾನುಕ್ರಮಣಿಕ ಸಮಾಪ್ತಂ

# ಉತ್ತರಭಾಗ

---0---

ಉತ್ತರಭಾಗದ ವಿಷಯಾನುಕ್ರಮಣಿಕಾ ಸಮಾಪ್ತಂ

ಶ್ರೀರಸ್ತು

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತ

# ಬೃಹಜ್ಜಾತಕಾಖ್ಯ
# ಹೋರಾಶಾಸ್ತ್ರಮ್

ಸುಧಾರಸಧಾರಾ ಟೀಕಾ ಸಹಿತಂ

## ರಾಶಿಭೇದ ಪ್ರಕರಣಂ

### ಮಂಗಳಾಚರಣಂ

ಅವತಾರಿಕೆ - ಈ ಗ್ರಂಥಕರ್ತನು ಗ್ರಂಥಪರಿಸಮಾಪ್ತಿ ಪ್ರತಿಬಂಧಕ ವಿಘ್ನ ನಿವೃತ್ತ್ಯರ್ಥವಾಗಿಯೂ, ವಾಕ್ಸಿದ್ಧಿಗೋಸ್ಕರವಾಗಿಯೂ ತನ್ನ ಇಷ್ಟ ದೇವರಾದ ಸೂರ್ಯಭಗವಾನನನ್ನು ಮೂರ್ತಿತ್ವೇ ಎಂಬುವ ಶ್ಲೋಕದಿಂದ ಪ್ರಾರ್ಥನೆ ಮಾಡುತ್ತಾನೆ.

ಶಾರ್ದೂಲವಿಕ್ರೀಡಿತ ವೃತ್ತ

ಮೂಲ॥ ಮೂರ್ತಿತ್ವೇ ಪರಿಕಲ್ಪಿತಃ ಶಶಿಭೃತೋ ವರ್ತ್ಮಾ ಪುನರ್ಜನ್ಮನಾ । ಮಾತ್ಮೇತ್ಯಾತ್ಮವಿದಾಂ ಕ್ರತುಶ್ಚ ಯಜತಾಂ ಭರ್ತಾಮರಜ್ಯೋತಿಷಾಮ್ ॥ ಲೋಕಾನಾಂ ಪ್ರಲಯೋದ್ಭವಸ್ಥಿತಿವಿಭುಶ್ಚಾನೇಕಧಾಯಃ ಶ್ರುತೌ। ವಾಚಂ ನಃ ಸ ದದಾತ್ವನೇಕ ಕಿರಣ ಸ್ತ್ರೈಲೋಕ್ಯ ದೀಪೋರವಿಃ ॥ ।೧॥

ಟೀಕು ॥ ಶಶಿಭೃತಃ - ಅರ್ಧಚಂದ್ರಕಲೆಯನ್ನು ಜಟಾಮುಕುಟದಲ್ಲಿ ಧರಿಸಿದ ಪರಮೇಶ್ವರನ, ಮೂರ್ತಿತ್ವೆ-ಅಷ್ಟಮೂರ್ತಿಗಳಲ್ಲಿ ಒಂದು ಮೂರ್ತಿಯಾಗಿ, ಪರಿಕಲ್ಪಿತಃ-ಕಲ್ಪಿಸಲ್ಪಟ್ಟ, ಅದು ಯಾವ ಪ್ರಕಾರವೆಂದರೆ,

ಶ್ಲೋಕ॥ ಸೂರ್ಯೋಜಲಂವಹೀವಾಯುು ರ್ವಹ್ನಿರಾಕಾಶಮೇವಚ ।
ಯಾಯಜೂಕಶ್ಚ ಸೋಮಶ್ಚ ರುದ್ರಸ್ಯಾಷ್ಟೌತುಮೂರ್ತಯಃ ॥೧॥

ಈ ಪ್ರಮಾಣದಿಂದ ಸೂರ್ಯನು ಪರಮೇಶ್ವರನ ಅಷ್ಟಮೂರ್ತಿ ಭೇದದಲ್ಲಿ ಒಬ್ಬನಾಗಿದ್ದಾನೆಂದು ತಿಳಿಯಬೇಕು. ಅಪುನರ್ಜನ್ಮನಾಂ-ಪುನರ್ಜನ್ಮವಿಲ್ಲದೆ ಮುಕ್ತಿಯನ್ನು ಹೊಂದುವವರಿಗೆ, ವರ್ತ್ಮ-ಮಾರ್ಗವಾಗಿರುವ, ಇದಕ್ಕೆ ಪ್ರಮಾಣ "ದ್ವಾವಿಮೌ ಪುರುಷೌ ಲೋಕೆ ಸೂರ್ಯಮಂಡಲಭೇದಿನೌ ॥ ಪರಿವ್ರಾಡ್ಯೋಗಯುಕ್ತಶ್ಚ ರಣೇಚಾಭಿಮುಖೋಹತಃ ॥೨॥ ಎಂದರೆ - ಪರಿವ್ರಾಜಕಾಚಾರ್ಯ ನಾದ ಯೋಗಿಯು ಮತ್ತು ಯುದ್ಧದಲ್ಲಿ ಹಿಂದಿರುಗದೆ ಇರುವ ಭಟನು, ಸೂರ್ಯಮಂಡಲವನ್ನು ಪ್ರವೇಶಿಸಿ ಮೋಕ್ಷಸಾಮ್ರಾಜ್ಯವನ್ನು ಹೊಂದುತ್ತಾರೆಂದು ತಾತ್ಪರ್ಯ॥ ಆತ್ಮವಿದಾಂ-ಆತ್ಮನನ್ನು ತಿಳಿಯುವವರಿಗೆ ಸಚ್ಚಿದಾನಂದಸ್ವರೂಪವನ್ನು ತಿಳಿಸುವಂಥ, ಇದಕ್ಕೆ ಋಗ್ವೇದ ಶೃತಿಯಲ್ಲಿ ಉಕ್ತವಾಗಿರುವುದೇನೆಂದರೆ, 'ಸೂರ್ಯ ಆತ್ಮಾಜಗತಸ್ತಸ್ಥುಷಶ್ಚ' ಎಂದು ಪ್ರಮಾಣವು, ಯಜತಾಂ-ಯಜ್ಞಾದಿಗಳನ್ನು ಮಾಡುವ ಸೋಮಯಾಜಿಗಳಿಗೆ, ಕ್ರತುಶ್ಚ - (ಅಗ್ನಿಮೂಲಕವಾಗಿ ಆಹುತಿಯನ್ನು ಹೊಂದುವಂಥ) ಯಜ್ಞಸ್ವರೂಪನಾದ, ಇದಕ್ಕೆ ಪ್ರಮಾಣ - ಶ್ಲೋಕ ॥ ಅಗ್ನೌಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೆ ॥ ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂತತಃಪ್ರಜಾಃ ॥೩॥ ಅನೇಕಕಿರಣಃ-ಅನೇಕೆ ಅಂದರೆ-ಅಸಂಖ್ಯಾತವಾದ, ಕಿರಣಃ-ಕಿರಣಗಳುಳ್ಳ, ತ್ರೈಲೋಕ್ಯದೀಪಃ-ಮೂರು ಲೋಕಕ್ಕೂ (ಸ್ವರ್ಗ, ಮರ್ತ್ಯ ಪಾತಾಳ) ಪ್ರಕಾಶಕನಾದ, ಅಮರಜ್ಯೋತಿಷಾಂ, ಅಮರ-ದೇವತೆಗಳಿಗೂ, ಜ್ಯೋತಿಷಾಂ-ಗ್ರಹ ನಕ್ಷತ್ರಗಳಿಗೂ, ಭರ್ತಾ-ಉದಯ, ಅಸ್ತ, ವಕ್ರ, ಅತಿಚಾರ ಮೊದಲಾದ ಖಗೋಳ ವೈಚಿತ್ರ್ಯಗಳಿಗೆ ಅಧಿಕಾರಮೂಲವಾಗಿ ರಾಜತ್ವವನ್ನು ಹೊಂದಿರುವ, ಲೋಕಾನಾಂ-ಭೂರ್ಭುವಸ್ಸುವರಾದಿ ಲೋಕಗಳಿಗೆ, ಪ್ರಳಯೋದಯ ಸ್ಥಿತಿವಿಭುಃ, ಪ್ರಳಯ-ನಾಶಕ್ಕು, (ಸಂವರ್ತಃಪ್ರಳಯಃಕಲ್ಪ ಇತ್ಯಮರಃ) ಉದಯ-ಉತ್ಪತ್ತಿ-(ಅಂದರೆ ಸೃಷ್ಟಿಗೂ) ಸ್ಥಿತಿ-ಸೃಷ್ಟಿ ಕಾಲಕ್ಕೂ ನಾಶಕಾಲಕ್ಕೂ ಮಧ್ಯೆ ಅನುಭವಕಾಲಕ್ಕೂ, ವಿಭುಃ-ಕರ್ತನಾದ, ಶೃತೌ-ವೇದದಲ್ಲಿ, ಅನೇಕಧಾ-ಅನೇಕ ಪ್ರಕಾರವಾಗಿ ವರ್ಣಿಸಲ್ಪಟ್ಟಿರುವಂಥ, ಸಃ-ಆ, ರವಿಃ-ಸೂರ್ಯನು, ನಃ-ನಮಗೆ, ವಾಚು-ವಾಕ್ಸಿದ್ಧಿಯನ್ನು, ದದಾತು-ಕೊಡಲಿ, ಇದಕ್ಕೆ ಪ್ರಮಾಣ-ಋಗ್ವೇದಶೃತಿಃ ॥ ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಸ್ಸಸುಪರ್ಣೋ ಗರುತ್ಮಾನ್ ಏಕಂ ಸದ್ವಿಪ್ರಾಬಹುಧಾವದಂತ್ಯಗ್ನಿಂ ಯಮಂಮಾತರಿಶ್ವಾನಮಾಹುಃ ॥೪॥ ಮತ್ತು - ಹಗ್ಂಸಶ್ಶುಚಿಷದ್ವಸುರಂತರಿಕ್ಷ ಸದ್ಧೋತಾವೇದಿಷದತಿಥಿರ್ದು ರೋಣಸತ್ । ನೃಷದ್ವರಸದೃತ ಸದ್ವ್ಯೋಮ ಸದಬ್ಜಾಗೋಜಾ ಋತಜಾ ಅದ್ರಿಜಾಋತಂ ॥೫॥ ಎಂದು ಅನೇಕ ಪ್ರಕಾರವಾಗಿ ಸೂರ್ಯ ಮಹಿಮೆಯು ವೇದದಲ್ಲಿ ಹೇಳಲ್ಪಟ್ಟಿದೆ.

ತಾತ್ಪರ್ಯ ।। ಸೂರ್ಯನು, ಪ್ರಪಂಚ, ಸೃಷ್ಟಿ, ಸ್ಥಿತಿ, ಲಯವೆಂಬ ಕಾಲತ್ರಯಕ್ಕೆ ಕಾರಣಭೂತನಾದ ಪರಮೇಶ್ವರನ ಅಷ್ಟಮೂರ್ತಿಗಳಲ್ಲಿ ಆದಿಮೂರ್ತಿಯಾಗಿ, ಚಂದ್ರನಿಗೆ-ಸಾಕ್ಷಾತ್ತಾಗಿ ಪ್ರಕಾಶವಿಲ್ಲದಿರುವುದರಿಂದ ತನ್ನ ಕಿರಣವನ್ನು ಚಂದ್ರಮಂಡಲದ ಮೇಲೆ ಪ್ರಸರಿಸಿ ದಿನೇದಿನೇ ಕಲೆಯನ್ನು ಅಭಿವೃದ್ಧಿಮಾಡಿ, ಚಂದ್ರನನ್ನು ಪ್ರಕಾಶಪಡಿಸುತ್ತ, ಮುಮುಕ್ಷುಗಳಿಗೆ ಮೋಕ್ಷಮಾರ್ಗವಾಗಿ, ಆತ್ಮಜ್ಞಾನ ನಿರತರಾದ ಯೋಗಿಗಳಿಗೆ ಆತ್ಮನನ್ನು ತಿಳಿಸುವವನೆನಿಸಿ, ಯಜ್ಞಾದಿ ಕ್ರತುಗಳಲ್ಲಿ ಆಹುತಿಯನ್ನು ಸ್ವೀಕರಿಸಿ ಯಜ್ಞಫಲವನ್ನು ಸೋಮಯಾಜಿಗಳಿಗೆ ಕೊಡುತ್ತ, ಅಂದರೆ ಅಗ್ನಿಯಲ್ಲಿ ಹೋಮ ಮಾಡಿದ ಆಹುತಿಗಳಿಂದ ಉಂಟಾದ ತೇಜಸ್ಸು ಸೂರ್ಯಮಂಡಲವನ್ನು ಹೊಂದಿ, ಅಲ್ಲಿಂದ ವೃಷ್ಟಿರೂಪವಾಗಿ ಫಲವನ್ನು ಕೊಟ್ಟು, ಅದರಿಂದ ಪ್ರಾಣಿಕೋಟಿಯನ್ನು ಸಂರಕ್ಷಿಸುವ ಅಸಂಖ್ಯಾತವಾದ ಕಿರಣಗಳಿಂದ ತ್ರೈಲೋಕ್ಯವನ್ನು ಬೆಳಗಿಸುವಂಥವನು, ದೇವತೆಗಳಿಗೂ, ಖಗೋಳದಲ್ಲಿ ಸಂಚರಿಸುವ ಗ್ರಹ, ನಕ್ಷತ್ರಗಳಿಗೂ ರಾಜನಾಗಿ, ಭೂರ್ಭುವಸ್ಸುವರಾದಿ ಲೋಕಗಳಿಗೆ ಸೃಷ್ಟಿ, ಸ್ಥಿತಿ, ನಾಶವನ್ನುಂಟುಮಾಡುತ್ತ, ವೇದದಲ್ಲಿ ಅನೇಕ ಪ್ರಕಾರವಾಗಿ ಇಂದ್ರ, ಮಿತ್ರ ವರುಣ, ಅಗ್ನಿ, ಯಮ, ಗರುಡ, ವಾಯು ಎಂಬುದಾಗಿ ಸ್ತೋತ್ರ ಮಾಡಿಸಿಕೊಳ್ಳುವ ಸೂರ್ಯಭಗವಂತನು ನಮಗೆ ವಾಕ್ಸಿದ್ಧಿಯನ್ನು ಕೊಡಲಿ ಎಂದು ಅಭಿಪ್ರಾಯ.

ವಿಶೇಷ ತಾತ್ಪರ್ಯ ।। ಪ್ರಪಂಚದಲ್ಲಿರುವ ಆಬ್ರಹ್ಮಕೀಟಪರ್ಯಂತವಾಗಿ ಸಮಸ್ತ ಪ್ರಾಣಿಗಳೂ ಸೂರ್ಯರಶ್ಮಿಯ ಆಧಾರದಿಂದಲೇ ಜೀವಿಸುತ್ತಲಿವೆ. ಈ ಸೂರ್ಯರಶ್ಮಿ ಇಲ್ಲದಿದ್ದರೆ ಯಾವ ಪ್ರಾಣಿಯೂ ಜೀವಿಸಲಾರದು. ಮತ್ತು ಅಂತರಿಕ್ಷದಲ್ಲಿ ಯಾವ ಗ್ರಹ ನಕ್ಷತ್ರಗಳೂ ಸಂಚರಿಸಲಾರವು. ಆದುದರಿಂದ ಪ್ರಪಂಚದ ಮುಖ್ಯ ಅಧಿಕಾರವೇ ಸೂರ್ಯನಿಗೆ ಸೇರಿರುವುದರಿಂದ ಸೂರ್ಯನೇ ಪ್ರತ್ಯಕ್ಷದೈವವೆಂದು ತಿಳಿಯಬೇಕು. ।।೧।। ಇಂಗ್ಲೀಷ್ ಜ್ಯೋತಿಶ್ಶಾಸ್ತ್ರದಲ್ಲಿ ಸೂರ್ಯನಿಗೆ ಸಕಲಾಧಿಕಾರವಿರುವಂತೆ ನ್ಯೂಟರ್ ಎಂಬುವ ಸಿದ್ಧಾಂತಿಯು ಹೇಳುತ್ತಾನೆ.

ಅವತಾರಿಕೆ–ಈ ಗ್ರಂಥಕರ್ತನು-ಜ್ಯೋತಿಶ್ಶಾಸ್ತ್ರವನ್ನು ಅಭ್ಯಾಸ ಮಾಡುವವರು ಸಂಪೂರ್ಣ ವಿಷಯಗಳಡಗಿರುವ ಗ್ರಂಥ ದೊರೆಯದ್ದರಿಂದ ತಮ್ಮತಮ್ಮ ಉತ್ಸಾಹವನ್ನು ಭಂಗಮಾಡಿಕೊಂಡು ತಟಸ್ಥರಾಗಿರುವುದರಿಂದ ಅಂಥವರಿಗೆ ಸುಲಭವಾಗಿ ಬೃಹಜ್ಜಾತಕ ಗ್ರಂಥಾವಲೋಕನದಿಂದ ಆಶಾಪೂರ್ತಿಯಾಗುವುದಾಗಿಯೂ, ಹೋರಾಶಾಸ್ತ್ರವೆಂಬ ಸಮುದ್ರವನ್ನು ದಾಟಲಿಕ್ಕೆ ಈ ಬೃಹಜ್ಜಾತಕವೆಂಬುವ ಗ್ರಂಥವನ್ನು ನಾವೆಯರೂಪವಾಗಿ ರಚಿಸುತ್ತೇನೆಂದು ಹೇಳಿರುತ್ತಾನೆ.

ಮೂಲ॥ ಭೂಯೋಭಿಃ ಪಟುಬಿದ್ಧಿಭಿಃ ಪಟುಧಿಯಾಂ ಹೋರಾಫಲಜ್ಞ-ಪ್ತಯೇ। ಶಬ್ದನ್ಯಾ ಯಸಮನ್ವಿತೇಷು ಬಹುಶಃ ಶಾಸ್ತ್ರೇಷು ದೃಷ್ಟೇ-ಷ್ವಪಿ॥೧॥ ಹೋರಾತಂತ್ರಮಹಾರ್ಣವಪ್ರತರಣೆ ಭಗ್ನೋದ್ಯಮಾನಾ-ಮಹಂ । ಸ್ವಲ್ಪವೃತ್ತ ವಿಚಿತ್ರಮರ್ಥಬಹುಳಂ ಶಾಸ್ತ್ರಪ್ಲವಂ ಪ್ರಾರಂಭೇ ॥೨॥

ಟೀಕು॥ ಪಟುಧಿಯಾಂ-ಸೂಕ್ಷ್ಮಬುದ್ಧಿಯುಳ್ಳ ಪಂಡಿತರಿಗೆ ಹೋರಾಫಲಜ್ಞ-ಪ್ತಯೇ-ಹೋರಾ-ಜನ್ಮಕಾಲ ಲಗ್ನದ, ಫಲ-ಶುಭಾಶುಭ ಸೂಚನೆಯ, ಜ್ಞಪ್ತಯೇ-ತಿಳುವಳಿಕೆಗಾಗಿ, ಪಟುಬುದ್ಧಿಭಿಃ-ಬಹುಸೂಕ್ಷ್ಮ ಬುದ್ಧಿಯುಳ್ಳ, ಭಯೋಭಿಃ ಅನೇಕ ವಿದ್ವಾಂಸರುಗಳಿಂದ (ನಿರ್ಮಿಸಲ್ಪಟ್ಟ) ಶಬ್ದನ್ಯಾಯಸಮನ್ವಿತೇಷು, ಶಬ್ದ-ವ್ಯಾಕರಣ ದಿಂದಲೂ, (ಅಂದರೆ ಶಬ್ದಾದಿಗಳ ಸ್ವರೂಪವನ್ನು ತಿಳಿಸತಕ್ಕ ವಿಧಿ ರೂಪವಾದ ಪ್ರಮಾಣ ಗ್ರಂಥಕ್ಕೆ ವ್ಯಾಕರಣ ಅಥವಾ ಶಬ್ದ ಶಾಸ್ತ್ರವೆಂದು ಹೆಸರು) ನ್ಯಾಯ-ಅರ್ಥವನ್ನು ತಿಳಿದುಕೊಳ್ಳುವಿಕೆ. ಎಂದರೆ-ಯಾವ ಶಾಸ್ತ್ರದಿಂದ ಯುಕ್ತಿಪೂರ್ವಕವಾಗಿ ಅರ್ಥವು ನಿರ್ಣಯಿಸಲ್ಪಡುತ್ತಲಿದೆಯೋ ಆ ಶಾಸ್ತ್ರಕ್ಕೆ 'ತರ್ಕ' ಶಾಸ್ತ್ರವೆಂದು ಹೆಸರು. ಅಂಥಾ ತರ್ಕಶಾಸ್ತ್ರ ಮತ್ತು ಪೂರ್ವಮೀಮಾಂಸೆ, ಉತ್ತರಮೀಮಾಂಸೆಯಿಂದಲೂ, ಸಮನ್ವಿತೇಷು - ಚೆನ್ನಾಗಿ ಕೂಡಿಕೊಂಡಿರುವ, ಶಾಸ್ತ್ರೇಷು-ಪರಾಶರ, ಸತ್ಯಾಚಾರ್ಯಮಯ, ಯವನ, ಮಣಿತ್ಥ, ಜೀವಶರ್ಮ ಮೊದಲಾದವರ ಗ್ರಂಥಗಳು, ಬಹುಶಃ-ಅನೇಕಪ್ರಕಾರವಾಗಿ (ಅಂದರೆ ಒಬ್ಬೊಬ್ಬರ ಮತದಲ್ಲಿ ಒಂದೊಂದು ವಿಧವಾಗಿ ಹೇಳಲ್ಪಟ್ಟಿರುತ್ತೆ) ಅಂಥಾ ಗ್ರಂಥಗಳನೇಕಗಳನ್ನು ನೋಡುತ್ತಿದ್ದಾಗ್ಯೂ, ಅವುಗಳ ಅರ್ಥಗಳನ್ನು ಏಕರೀತಿಯಾಗಿಯೂ ಸಮಂಜಸವಾಗಿಯೂ ತಿಳಿದು ಕೊಳ್ಳಲಾರದೆ, ಹೋರಾತಂತ್ರ ಮಹಾರ್ಣವಪ್ರತರಣೇ, ಹೋರಾ-ಜನ್ಮಕಾಲ ಹೋರೆಯ (ಅಂದರೆ ಜನ್ಮಲಗ್ನಭಾವದ) ತಂತ್ರ-ಶುಭಾಶುಭ ಸೂಚಕವಾದ ಫಲಶಾಸ್ತ್ರದ, ಫಲಪರಿಪಾಕವನ್ನು ತಿಳಿಯಪಡಿಸುವ ಈ ಜ್ಯೋತಿಶ್ಶಾಸ್ತ್ರದ, ಮಹಾರ್ಣವ-ಮಹಾಸಮುದ್ರದ, ಪ್ರತರಣೇ-ದಾಟಿಹೋಗುವಿಕೆಯಲ್ಲಿ, ಭಗ್ನೋ-ದ್ಯಮಾನಾಂ- ಭಗ್ನ-ಮುರಿದ, ಉದ್ಯಮಾನಾಂ-ಪ್ರಯತ್ನಪಟ್ಟವರ (ಅಂದರೆ ಜ್ಯೋತಿಶ್ಶಾಸ್ತ್ರವನ್ನೋದಿ ಚೆನ್ನಾಗಿ ತಿಳಿಯದೆ ಹೋದದ್ದರಿಂದ ತಮ್ಮ ಉದ್ದೇಶ ಪೂರ್ತಿಯಾಗದೆ ಇರುವವರ ಉಪಯೋಗಕ್ಕೋಸ್ಕರ) ಅಹಂ-ನಾನು, ಸ್ವಲ್ಪಂ-ಮಿತ್ರಗ್ರಂಥವಾಗಿಯೂ, ಅಂದರೆ ಅಲ್ಪ ಸಂಖ್ಯಾತವಾದ ಪದ್ಯಗಳುಳ್ಳದ್ದಾಗಿಯೂ, ವೃತ್ತ-ಶಾರ್ದೂಲವಿಕ್ರೀಡಿತ ಮೊದಲಾದ ನಾನಾವಿಧವಾದ ವೃತ್ತಗಳಿಂದಲೂ, ವಿಚಿತ್ರಂ-ಆಶ್ಚರ್ಯಕರವಾಗಿಯೂ, ಅರ್ಥಬಹುಳಂ-ಅನೇಕವಾದ ಅರ್ಥವುಳ್ಳದ್ದಾಗಿಯೂ ಇರುವ, ಶಾಸ್ತ್ರಂ-ಬೃಹಜ್ಜಾತಕವೆಂಬುವ ಹೆಸರಿನ, ಪ್ಲವಂ-ನಾವೆಯನ್ನು ಮಾಡುವುದಕ್ಕೆ,

ಪ್ರಾರಂಭೇ-ಪ್ರಾರಂಭಿಸುತ್ತೇನೆ ಎಂದು ವರಾಹಮಿಹಿರಾಚಾರ್ಯರ ಪ್ರತಿಜ್ಞಾಭಿಪ್ರಾಯವು ॥೨॥

ವಿಶೇಷ ತಾತ್ಪರ್ಯ ॥ ಜ್ಯೋತಿಶ್ಶಾಸ್ತ್ರವೆಂದರೆ (ಬೆಳಕನ್ನು) ಪ್ರಕಾಶವನ್ನು ತಿಳಿಯಪಡಿಸುವ ಶಾಸ್ತ್ರವೆಂದು ಪ್ರಸಿದ್ಧವಾಗಿರುವುದು. ಈ ಜ್ಯೋತಿಶ್ಶಾಸ್ತ್ರವು ಪೀಠಿಕೆಯಲ್ಲುದಹರಿಸಿರುವಂತೆ ಅಷ್ಟಾದಶ ಸಂಹಿತಾರೂಪವಾಗಿರುವುದು. ಇದರಿಂದ ಜನನಕಾಲ, ವಿದ್ಯಾಭ್ಯಾಸಕಾಲ, ವ್ರತಬಂಧಕಾಲ, ವಿವಾಹಕಾಲ, ಗರ್ಭಾದಾನಕಾಲ, ಪ್ರಯಾಣಕಾಲ ಈ ಮೊದಲಾದ ಅನೇಕ ಶುಭಾಶುಭ ಕಾರ್ಯಗಳಿಗೆ ಬೇಕಾಗಿರುವುದು. ಇಂಥಾ ಕಾಲವು ಶುಭವಾದದ್ದೋ ಅಶುಭವಾದದ್ದೋ ತಿಳಿಯಬೇಕಾದರೆ ಜ್ಯೋತಿಶ್ಶಾಸ್ತ್ರವನ್ನು ಅಧ್ಯಯನ ಮಾಡಬೇಕು. ಮತ್ತು ಸಮೂಲವಾಗಿ ತಿಳಿದಿರಬೇಕು. ಇಲ್ಲದಿದ್ದರೆ ಅಂಥಾ ಶುಭಾಶುಭಗಳನ್ನು ತಿಳಿಯಲು ಯಾವ ಆಧಾರವೂ ಇಲ್ಲ. ವೇದದಲ್ಲಿ ಯಾಗಾದಿಗಳು, ವ್ರತೋಪವಾಸಾದಿಗಳು ಇವುಗಳನ್ನು ಮಾಡಿ, ಅದರಿಂದ ಮೋಕ್ಷ ಸಾಮ್ರಾಜ್ಯವನ್ನು ಪಡೆಯಬೇಕೆಂದು ಹೇಳಿರುತ್ತೆ. ಅಂಥಾ ಕರ್ಮವನ್ನು ಶುಭಷಡ್ವರ್ಗಯುಕ್ತವಾದ ಕಾಲದಲ್ಲಿ ಮಾಡಬೇಕು, ಶುಭಕಾಲದಲ್ಲಿ ಮಾಡದೆ ಹೋದರೆ ಅದರಿಂದ ಐಹಿಕಾಮುಷ್ಮಿಕಕ್ಕೆ ಫಲಪ್ರಯೋಜವಾಗಲಾರದು. ಇದಕ್ಕೆ ದೃಷ್ಟಾಂತವೇನೆಂದರೆ- ವಿವಾಹಕಾಲದಲ್ಲಿ ಲಗ್ನವು ಬಲಿಷ್ಠವಾಗಿ; ಗ್ರಹಗಳು ಶುಭಸ್ಥಾನಗಳಲ್ಲಿದ್ದರೆ, ವಿವಾಹಿತರಾದ ದಂಪತಿಗಳು-ಧರ್ಮ, ಅರ್ಥ, ಕಾಮ ಎಂಬ ತ್ರಿವರ್ಗ ಫಲವನ್ನೂ ಹೊಂದುವರು. ಈ ತ್ರಿವರ್ಗವು ಯಾರಲ್ಲಿ ಅವಿಚ್ಛಿನವಾಗಿರುವುದೋ ಅವರಲ್ಲಿ ನಾಲ್ಕನೆಯದಾದ ಮೋಕ್ಷವು ಲಭಿಸುವುದು. ಇದನ್ನು ಮುಹೂರ್ತ ಚಿಂತಾಮಣಿಯೆಂಬ ಗ್ರಂಥದಲ್ಲಿ "ಭಾರ್ಯಾತ್ರಿವರ್ಗಕರಣಂ" ಎಂಬುವ ವೃಂದಾವನ ದಲ್ಲಿ ಭಾವಾಧ್ಯಾಯದಲ್ಲಿ ಹೇಳಿರುವಂತೆ ವಿವಾಹಿತ ಸ್ತ್ರೀಯು ಅನ್ಯರಲ್ಲಿ ಪ್ರೀತಿ ಯುಳ್ಳವಳಾಗಿ ವ್ಯಭಿಚಾರಾದಿ ದುರ್ನಡತೆಯುಳ್ಳವಳಾಗಿ ಯಾವ ಪುರುಷಾರ್ಥವೂ ಇಲ್ಲದೆ ಇಹಲೋಕದಲ್ಲಿ ನಿಂದೆಗೂ, ಪರಲೋಕದಲ್ಲಿ ಅಧೋಗತಿಗೂ ಹೋಗುವಳು. ಆದರೆ ಈ ಸಹವಾಸ ದೋಷದಿಂದ ಪತಿಗೂ ಪತ್ನಿಯ ಪಾಪದ ಭಾಗಬರುವುದು. ಆದ್ದರಿಂದ ಯಾವ ಕಾರ್ಯ ಮಾಡಿದರೂ ಶುಭಮುಹೂರ್ತವನ್ನು ಅನುಸರಿಸಬೇಕು. ಈ ಜ್ಯೋತಿಶ್ಶಾಸ್ತ್ರವನ್ನು ಸಾಂಗವಾಗಿ ತಿಳಿದುಕೊಳ್ಳುವುದಕ್ಕೆ ವಸಿಷ್ಠ, ಪರಾಶರ, ಮಯ, ಯವನ, ಮಣಿತ್ಥ, ಸತ್ಯಾಚಾರ್ಯ, ಜೀವಶರ್ಮ, ಶ್ರುತಕೀರ್ತಿ, ಜಯದೇವ ಮೊದಲಾದವರು ಅನೇಕ ಗ್ರಂಥಗಳನ್ನು ರಚಿಸಿರುತ್ತಾರೆ. ಆದರೆ ಅವುಗಳೆಲ್ಲವನ್ನೂ ಅಭ್ಯಾಸಮಾಡಿ ತಿಳಿದುಕೊಳ್ಳುವುದಕ್ಕೆ ಕಷ್ಟವಾಗಿರುವುದರಿಂದಲೂ, ಈಗಿನ ಕಾಲದಲ್ಲಿ ಆಯುಃ ಕಾಲವೇ ಸಾಲದ್ದಾಗಿರುವುದರಿಂದಲೂ ತಮ್ಮ ಮನೋರಥ ಪೂರ್ತಿಯಾಗದೆ

ಭಗ್ನರಾಗಿರುವರು. ಅಂದರೆ-ಹೋರಾಶಾಸ್ತ್ರವು ದಾಟಲಸಾಧ್ಯವಾದ ಸಾಗರಪ್ರಾಯವಾಗಿರುವುದು. ಜಿಜ್ಞಾಸುಗಳ ಮನೋರಥವು ಸುಲಭವಾಗಿ ಪೂರ್ತಿಯಾಗಲು ಅಲ್ಪವಾದ ವೃತ್ತಗಳಿಂದಲೂ, ಅಮೋಘವಾದ ಅರ್ಥಬಾಹುಳ್ಯದಿಂದಲೂ, ದಾಟಲಸಾಧ್ಯವಾದ ಜ್ಯೋತಿಷ ಮಹಾಸಾಗರವನ್ನು ದಾಟುವುದಕ್ಕೆ ಬೃಹಜ್ಜಾತಕವೆಂಬ ಪ್ಲವ (ನಾವೆ) ರೂಪವಾದ ಗ್ರಂಥವನ್ನು ರಚಿಸುತ್ತೇನೆಂದು ಈ ಗ್ರಂಥಕರ್ತರಾದ ವರಾಹ ಮಿಹಿರಾಚಾರ್ಯರ ಅಭಿಪ್ರಾಯವಾಗಿರುವುದು.

ಮುಖ್ಯಾಂಶ ॥ ಜಿಜ್ಞಾಸುಗಳು ಜ್ಯೋತಿಶ್ಶಾಸ್ತ್ರವನ್ನು ಎಷ್ಟು ಅಭ್ಯಾಸ ಮಾಡಿದರೂ ಕೊನೆಗಾಣದೆ ತಟಸ್ಥರಾಗಿರುವುದರಿಂದ ಅವರಿಗೆ ಸುಲಭವಾಗಿ ತಿಳುವಳಿಕೆಗೆ ಬಂದು ಮನೋರಥ ಪೂರ್ತಿಯಾಗುವುದಕ್ಕೆ ಈ ಬೃಹಜ್ಜಾತಕ ಪುಸ್ತಕವೇನಾಯಿತೆಂದು ವರಾಹಮಿಹಿರಾಚಾರ್ಯನು "ಭೂಯೋಭಿಃ - ಪಟು ಬುದ್ಧಿಭಿಃ" ಎಂಬುವ ಶ್ಲೋಕದಲ್ಲಿ ಹೇಳಿರುವನಾದ್ದರಿಂದ ಬೃಹಜ್ಜಾತಕವನ್ನು ಪಾಠಮಾಡುವುದು ಸರ್ವೋತ್ತಮವಾಗಿರುವುದು ॥೨॥

-೦-

## ಹೋರಾಶಬ್ದ ನಿರ್ಣಯಃ

ಅವತಾರಿಕೆ ॥ ಈ ಜಾತಕ ಸ್ಕಂಧಕ್ಕೆ ಹೋರಾ ಎಂಬುವ ಅಭಿಧಾನ ಉಂಟಾಗಲು ಕಾರಣವನ್ನು "ಹೋರೇತ್ಯ ಹೋರಾತ್ರ" ಎಂಬುವ ವೃತ್ತದಿಂದ ವರ್ಣಿಸುತ್ತಾನೆ.

ಮೂಲ॥ ಹೋರೇತ್ಯ ಹೋರಾತ್ರ ವಿಕಲ್ಪಮೇಕೇ । ವಾಂಛಂತಿಪೂರ್ವಾ ಪರ
ವರ್ಣಲೋಪಾತ್ ॥ ಕರ್ಮಾರ್ಜಿತಂ ಪೂರ್ವಭವೇಸದಾದಿಯತ್ತ
ಸ್ಯಪಕ್ತಿಂ ಸಮಭಿವ್ಯನಕ್ತಿ ॥ ॥೩॥

ಟೀಕು ॥ ಹೋರಾಶಾಸ್ತ್ರಕ್ಕೆ ಪೂರ್ವಜನ್ಮಫಲ ತಿಳಿಯುವ ಸಂಜ್ಞೆಯೆಂಬುವ "ಹೋರಾ" ಎಂಬುವ ಆಕಾರವಿಕಲ್ಪನ್ಯಾಸವನ್ನು ಹೋರೇ ಎಂಬುವ ಶ್ಲೋಕದಿಂದ ತಿಳಿಸಲ್ಪಡುತ್ತೆ. ಏಕೇ-ಕೆಲವರು, ಅಹೋರಾತ್ರವಿಕಲ್ಪಂ - ಅಹೋರಾತ್ರವಿಕಲ್ಪ ದಿಂದ, ಹೋರೇತಿ-ಹೋರೆಯೆಂದು, ವಾಂಛಂತಿ - ಕೋರುತ್ತಲಿದ್ದಾರೆ. ಅದು ಹೇಗೆಂದರೆ- ಪೂರ್ವವರ್ಣವಾದ ಆಕಾರವನ್ನೂ-ಪರವರ್ಣವಾದ ತ್ರಕಾರವನ್ನೂ ಲೋಪ ಮಾಡಿದರೆ ಮಧ್ಯೆ ಉಳಿಯುವ ಅಕ್ಷರದ್ವಯುವು (ಹೋರಾ) ಎಂದು ಉಚ್ಚಾರವಾಗುವುದು. ಈ ಹೋರಾಶಾಸ್ತ್ರವು ಅಹೋರಾತ್ರ

ಫಲಸೂಚಕವಾಗಿರುವುದು. ಆ ಹೋರಾಶಾಸ್ತ್ರಕ್ಕೆ ಪ್ರಯೋಜನವೇನೆಂದರೆ :- ಪೂರ್ವ ಭವೇ-ಪೂರ್ವಜನ್ಮದಲ್ಲಿಯೂ, ಯತ್-ಯಾವ, ಸದಾದಿ ಶುಭಾಶುಭಮಿತ್ರ ರೂಪವಾದ, ಕರ್ಮಕರ್ಮವು (ಅಗಾಮಿ-ಸಂಚಿತ-ಪ್ರಾರಬ್ಧ) ತಸ್ಯ-ಆ ಶುಭಾ ಶುಭ ಮಿಶ್ರವಾದ ಕರ್ಮಕ್ಕೆ, ಪಂಕ್ತಿ-ಅನುಭವಕಾಲವನ್ನು, ಅಭಿವ್ಯನಕ್ತಿ-ತಿಳಿಯಪಡಿಸುತ್ತದೆ. ಈ ಪ್ರಕಾರವಾಗಿಯೇ ಲಘುಜಾತಕದಲ್ಲಿಯೂ ಸಹಾ ಹೇಳಿರುತ್ತೆ. ಶ್ಲೋಕ ॥ ಯದುಪಚಿತಮನ್ಯಜನ್ಮನಿ ಶುಭಾಶುಭಂ ತಸ್ಯ ಜನ್ಮನಃ ಪಂಕ್ತಿಂ । ವ್ಯಂಜಯತಿ ಶಾಸ್ತ್ರಮೇತತ್ತಮಸಿ ದ್ರವ್ಯಾಣಿ ದೀಪ ಇವ ॥೬॥ ಇತಿ ಈ ಹೋರಾಶಾಸ್ತ್ರ ವೆಂಬುವ ಜ್ಞಾನಚಕ್ಷುಸ್ಸಿನಿಂದ ಪೂರ್ವಜನ್ಮ ಇಹಜನ್ಮ ಪರಜನ್ಮದ ಫಲವನ್ನು ಕತ್ತಲಲ್ಲಿರುವ ಪದಾರ್ಥಗಳನ್ನು ದೀಪದಿಂದ ತಿಳಿಯುವಂತೆ ಈ ಶಾಸ್ತ್ರವೆಂಬುವ ನೇತ್ರಗಳಿಂದ ತಿಳಿಯಬಹುದು. ಇದಕ್ಕೆ ಪ್ರಮಾಣ ಶ್ಲೋಕ ॥ ವಿಧಾತ್ರಾಲಿಖಿತಾಯಾಸಾ ಲಲಾಟೇಕ್ಷರಮಾಲಿಕಾ । ದೈವಜ್ಞ ಸ್ತಾಂವದೇತ್ ಪ್ರಾಜ್ಞೋ ಹೋರಾನಿರ್ಮಲ ಚಕ್ಷುಷಾ । ॥೭॥

-೦-

## ಅಥ ಕಾಲಪುರುಷಸ್ಯ ಮೇಷಾದ್ಯಂಗ ವಿಭಾಗಃ

ಹೋರಾಶಾಸ್ತ್ರ ವ್ಯವಹಾರ ಜ್ಞಾನಾರ್ಥವಾಗಿ ಮೇಷಾದಿ ದ್ವಾದಶರಾಶಿ ಗಳನ್ನೂ, ಕಾಲಪುರುಷನ ಅಂಗವಿಭಾಗಾದಿ ಸ್ಥಾನಗಳನ್ನೂ, ಅದರ ಪ್ರಯೋಜನ ವನ್ನೂ ಮತ್ತು ಮೇಷಾದಿರಾಶಿಗಳ ನಕ್ಷತ್ರ ಪಾದ ಭೇದವನ್ನೂ ತಿಳಿಸುತ್ತಾನೆ.

ಮೂಲ॥ ಕಾಲಾಂಗಾನಿ ವರಾಂಗಮಾನನಮುರೋ ಹೃತ್ಕ್ರೋಡವಾ ಸೋಭೃತೋ। ವಸ್ತಿರ್ವ್ಯಂಜನಮೂರುಜಾನುಯುಗಳೇ ಜಂಘೇತ ತೋಂಘ್ರಿದ್ವಯಂ ॥ ಮೇಷಾಶ್ವಿಪ್ರಥಮಾನವರ್ಕ್ಷಚರಣಾಶ್ಚಕ್ರ ಸ್ಥಿತಾರಾಶಯೋ । ರಾಶಿಕ್ಷೇತ್ರಗೃಹರ್ಕ್ಷಭಾನಿಭವನಂ ಚೈಕಾರ್ಥಸಂ ಪತ್ಯಯಾಃ ॥ ॥೪॥

ಟೀಕು ॥ ಮೇಷಾಶ್ವಿಪ್ರಥಮಾಃ-ಮೇಷರಾಶಿಯು, ಅಶ್ವಿನೀ ನಕ್ಷತ್ರವು ಮೊದಲಾಗಿ, ನವರ್ಕ್ಷಚರಣಾಃ-೯ ನಕ್ಷತ್ರಪಾದಗಳಿಗೆ, ಚಕ್ರಸ್ಥಿತಾಃ-ರಾಶಿಚಕ್ರವನ್ನು, ರಾಯಶಃ-ಮೇಷಾದಿ ರಾಶಿಗಳು, ಕಾಲಾಂಗಾನಿ, ಕಾಲ-ಕಾಲಪುರುಷನ,

ಅಂಗಾನಿ-ಅವಯವಗಳಾಗಿರುತ್ತವೆ, ಅದು ಹೇಗೆಂದರೆ :- ಅಶ್ವಿನೀ, ಭರಣಿ, ಕೃತ್ತಿಕಾ, ಪಾದ ಒಂದು ಸೇರಿ-ಒಂಭತ್ತು ಪಾದಗಳಿಗೆ ಮೇಷರಾಶಿ, ಈ ಪ್ರಕಾರ ಒಂಭತ್ತು ಪಾದಗಳಿಗೆ ಮೇಷರಾಶಿ, ಈ ಪ್ರಕಾರ ಒಂಭತ್ತು ನಕ್ಷತ್ರ ಪಾದಗಳಿಗೆ ಒಂದೊಂದು ರಾಶಿ ಪ್ರಕಾರ೨೭ ನಕ್ಷತ್ರಗಳಿಗೆ, ಮೇಷಾದಿರಾಶಿ ಚಕ್ರವೆಂದು ೧೨ರಾಶಿಗಳಾಗುತ್ತವೆ. ಅದರಲ್ಲಿ, ಮೇಷರಾಶಿ ಕಾಲಪುರುಷನ ವರಾಂಗ-ಶಿರಸ್ಸು, ಆನನಂ-ಮುಖ, ವೃಷಭ, ಉರಃ - ಎದೆ, ಮಿಥುನ, ಹೃತ್ - ಹೃದಯ, ಕರ್ಕಾಟಕ, ಕ್ರೋಡಂ-ಭುಜಮಧ್ಯದೇಶ, ಸಿಂಹ, ಹೊಟ್ಟೆ - ಸಿಂಹ, ವಾಸೋಭೃತ್-ಕಟಿಪ್ರದೇಶ, ಕನ್ಯಾ, ವಸ್ತಿ-ನಾಭಿಯ ಕೆಳಭಾಗ, ತುಲಾ, ವ್ಯಂಜನಂ-ಪುರುಷಚಿಹ್ನ ಪ್ರದೇಶ, ವೃಶ್ಚಿಕ, ಊರುಯುಗಳಂ - ಎರಡು ತೊಡೆಗಳು, ಧನುಸ್ಸು, ಜಾನುಯುಗಳಂ-ಎರಡು ಮೊಣಕಾಲು, ಮಕರ, ಜಂಘೆ - ಎರಡು ಕಣಕಾಲು, ಕುಂಭ, ಅನಘ್ರಿದ್ವಯಂ - ಎರಡು ಪಾದಗಳು, ಮೀನರಾಶಿ ಇದಕ್ಕೆ ಅನ್ಯಗ್ರಂಥ ಪ್ರಮಾಣ.

ಶ್ಲೋಕ॥ ಶಿರೋಮುಖಂ ಬಾಹು ಯುಗಂ ಚ ವಕ್ಷಃ ಕ್ರೋಡಂ
ಕಟಿರ್ವಸ್ತಿ ತಥೈವ ಗುಹ್ಯಂ ಊರೂ ತಥಾ ಜಾನು ಯುಗಂಚ
ಜಂಘೇ ಪಾದಾವಿತಿಸ್ಯುಃ ತ್ರಿಯತಃ ಕ್ರಮೇಣ ॥೮॥

ಟೀಕು॥ ಮೇಷ - ತಲೆ, ವೃಷಭ - ಮುಖ, ಮಿಥುನ - ವಕ್ಷಸ್ಥಳ, ಕರ್ಕ-ಹೃದಯ, ಸಿಂಹ-ಉದರ, ಕನ್ಯಾ-ಕಟಿ, ತುಲಾ-ನಾಭಿಯ ಕೆಳಭಾಗ, ವಸ್ತಿ-(ವಸ್ತಿರ್ನಾಭೇ ರಧೋದ್ವಯೋಃ ಇತ್ಯಮರಃ), ವೃಶ್ಚಿಕ-ಲಿಂಗ, ಧನುಸ್ಸು-ಊರು, ಮಕರ ೨ ಜಂಘೆ, ಕುಂಭ ೨ ಮೊಣಕಾಲು, ಮೀನ ೨ ಪಾದವೆಂದು ಉಕ್ತವಾಗಿರುತ್ತೆ ॥ ಇದಕ್ಕೆ ಪ್ರಯೋಜನವೇನೆಂದರೆ :- ಜನ್ಮಕಾಲದಲ್ಲಿ ಪಾಪಗ್ರಹಾಕ್ರಾಂತವಾದ ರಾಶಿ ಕಾಲಪುರುಷನ ಯಾವ ಅಂಗವಾಗಿರುವುದೋ, ಆ ಅಂಗಹ್ರಸ್ವ - ಅಥವಾ ಉಪಘಾತವಾಗಿರುವುದು. ಶುಭಗ್ರಹಾಕ್ರಾಂತವಾದ ರಾಶಿಯು ಕಾಲಪುರುಷನ ಯಾವ ಅಂಗವಾಗಿರುವುದೋ, ಆ ಭಾಗ ಪುಷ್ಟಿಯಾಗಿರುವುದು. ಒಂದು ವೇಳೆ ಪಾಪಗ್ರಹಾಕ್ರಾಂತವಾದ ರಾಶಿಯ ಅಂಗದಲ್ಲಿ ಮಚ್ಚೆ ಇರುವುದು. ಹಾಗಿಲ್ಲದಿದ್ದರೆ ಆ ಗ್ರಹ ದಶಾ ಕಾಲದಲ್ಲಿ ವ್ರಣಾದಿಗಳಿಂದ ಶಾಶ್ವತವಾದ ಚಿಹ್ನೆ ಉಂಟಾಗುವುದು. ಈ ಪ್ರಕಾರವೇ - ಸಾರಾವಳಿಯಲ್ಲಿ ಉಕ್ತವಾಗಿರುತ್ತೆ ॥

ಶ್ಲೋಕ॥ ಕಾಲ ನರಸ್ಯಾ ವಯವಾ ಪುರುಷಾಣಾಂ ಕಲ್ಪಯೇತ್ಪ್ರಸವಕಾಲೇ।
ಸದಸದ್ಗ್ರಹ ಸಂಯೋಗಾತ್ತುಪ್ಯಾಸ್ಪೋಪದ್ರ ವಾಶ್ಚೇತಿ ॥೯॥

ಟೀಕು॥ ರಾಶಿಕ್ಷೇತ್ರ ಗ್ರಹರ್ಕ್ಷ ಭಾವಭವನಂ-ರಾಶಿ, ಕ್ಷೇತ್ರ, ಗ್ರಹ, ಋಕ್ಷ, ಭವನವೆಂದು, ಭಂ-ಎಂದುಸಂಕೇತಗಳು, ಏಕಾರ್ಥಸಂ ಪ್ರತ್ಯಯಾಃ- ಏಕಾರ್ಥ ಜ್ಞಾಪಕಕ್ಕಾಗಿ ರಾಶಿ ಸಂಜ್ಞೆಗಳು ॥

ವಿಶೇಷ ತಾತ್ಪರ್ಯ - ಮೂಲ ಶ್ಲೋಕದಲ್ಲಿ ಮೇಷಾಶ್ವಿ ಪ್ರಥಮಾನವರ್ಕ್ಷ ಚರಣಾಶ್ಚಕ್ರ ಸ್ಥಿತಾ ರಾಶಯೋ, ಎಂಬುವ ವಚನಕ್ಕೆ ಅರ್ಥಪೂರಣೆ ಆಗಲಿಲ್ಲ, ಇದಕ್ಕೆ ಉದಾಹರಣೆ, ವರರುಚಿ ವಾಕ್ಯಗಳು.

## ಅಥ ರಾಶೀನಾಂ ನಕ್ಷತ್ರ ನಿರ್ಣಯಃ

ಅಶ್ವಿನೀ ಭರಣೀ ಕೃತ್ತಿಕಾ ಪಾದೋಮೇಷಃ ॥೧॥ ಕೃತ್ತಿಕಾಣಾಂ
ತ್ರಯಃ ಪಾದಾರೋಹಿಣೀ । ಮೃಗಶಿರಾರ್ಧಂ ವೃಷಭಃ ॥೨॥
ಮೃಗಶಿರಾರ್ಧಂ ಆರ್ದ್ರಾ ಪುನರ್ವಸು ಪಾದತ್ರಯಂ ಮಿಥುನಂ॥೩॥
ಪುನರ್ವಸು ಪಾದಮೇಕಂ ಪುಷ್ಯಾ ಶ್ಲೇಷಾಂತಂ ಕರ್ಕಃ ॥೪॥
ಮಖಾ ಪೂರ್ವಾ ಫಾಲ್ಗುಣೀ ಉತ್ತರಾ ಪಾದಃ ಸಿಂಹಃ ॥೫॥
ಉತ್ತರಾಣಾಂ ತ್ರಯಃ ಪಾದಾ ಹಸ್ತಚಿತ್ತಾರ್ಧಂ ಕನ್ಯಾ ॥೬॥
ಚಿತ್ತಾರ್ಧಂ ಸ್ವಾತೀ ವಿಶಾಖಾ ಪಾದತ್ರಯಂ ತುಲಾ ॥೭॥
ವಿಶಾಖಾ ಪಾದಮೇಕಂತು ಅನೂರಾಧಾ ಜ್ಯೇಷ್ಠಾಂತಃ ವೃಶ್ಚಿಕಃ॥೮॥
ಮೂಲ ಪೂರ್ವಾಷಾಢಾ ಉತ್ತರಾಷಾಢಾ ಪಾದಂ ಧನುಃ ॥೯॥
ಉತ್ತರಾಷಾಢಾತ್ರಯಃ ಪಾದಾಃ ಶ್ರವಣ ಧನಿಷ್ಠಾರ್ಧಕಂ ಮಕರಃ
॥೧೦॥ ಧನಿಷ್ಠಾರ್ಧಂ ಶತಭಿಷಾ ಪೂರ್ವಾಭಾದ್ರಪದಾ
ಪಾದತ್ರಯಂ ಕುಂಭಃ ॥೧೧॥ ಪೂರ್ವಾಭಾದ್ರಾ ಪಾದ ಮೇಕಂ
ಉತ್ತರಾ ರೇವತ್ಯಂತಃ ಮೀನಃ ॥೧೨॥

ಟೀಕು ॥ ಅಶ್ವಿನಿ ೪ ಭರಣಿ ೪ ಕೃತ್ತಿಕಾ ೧ ಅಂತು ೯ ಪಾದ ಮೇಷ ರಾಶಿ. ಕೃತ್ತಿಕಾ ೩ ಪಾದ ರೋಹಣೀ ೪ ಮೃಗಶಿರ ೨ ಅಂತು ೯ ಪಾದ ವೃಷಭರಾಶಿ. ಮೃಗಶಿರ ೨ ಆರ್ದ್ರಾ ೪ ಪುನರ್ವಸು ೩ ಪಾದ ಅಂತು ೯ ಪಾದ ಮಿಥುನರಾಶಿ. ಪುನರ್ವಸು ೪ನೇ ಪಾದ ಪುಷ್ಯ ೪ ಆಶ್ಲೇಷ ೧ ಅಂತು ೯ ಪಾದ ಕಟಕರಾಶಿ. ಮಖ ೪ ಪುಬ್ಬಾ ೪ ಉತ್ತರ ೧ ಪಾದ ಅಂತು ೯ ಪಾದ ಸಿಂಹರಾಶಿ. ಉತ್ತರಾ ೩ ಪಾದ ಹಸ್ತ ೪ ಚಿತ್ತ ೨ ಪಾದ ಅಂತು ೯ ಪಾದ

ಕನ್ಯಾರಾಶಿ. ಚಿತ್ತ ೨ ಸ್ವಾತಿ ೪ ವಿಶಾಖ ೩ ಅಂತು ೯ ಪಾದ ತುಲಾರಾಶಿ. ವಿಶಾಖ ೪ನೆ ಪಾದ ಅನೂರಾಧಾ ೧ ಜ್ಯೇಷ್ಠಾ ೪ ಪಾದ ಅಂತು ೯ ಪಾದ ವೃಶ್ಚಿಕರಾಶಿ. ಮೂಲ ೪ ಪೂರ್ವಾಷಾಢಾ ೪ ಉತ್ತರಾಷಾಢಾ ೧ ನೆ ಪಾದ ಅಂತು ೯ ಪಾದ ಧನೂರಾಶಿ. ಉತ್ತರಾಷಾಢಾ ೩ ಶ್ರವಣ ೪ ಧನಿಷ್ಠ ೨ ಅಂತು ೯ ಪಾದ ಮಕರರಾಶಿ. ಧನಿಷ್ಠ ೨ ಶತತಾರಾ ೪ ಪೂರ್ವಾಭಾದ್ರಾ ೩ ಅಂತು ೯ ಪಾದ ಕುಂಭರಾಶಿ. ಪೂರ್ವಾಭಾದ್ರಾ ೪ನೆ ಪಾದ ಉತ್ತರಾಭಾದ್ರಾ ೧ ರೇವತಿ ೪ ಅಂತು ೯ ಪಾದ ಮೀನರಾಶಿ. ಈ ಪ್ರಕಾರ ೨೭ ನಕ್ಷತ್ರ ಚಕ್ರವು ೧೨ ರಾಶಿಗಳಾಗಿರುವುವು. ಇದಕ್ಕೆ ವಚನ : ಶ್ಲೋಕ - ಸಪ್ತವಿಂಶತಿ ಭಂ ಜ್ಯೋತಿಶ್ಚಕ್ರಂ ತಿಮಿರವಾಯುಜಂ ||೧೦|| ಸುಲಭೋಪಾಯದಿಂದ ಯಾವ ನಕ್ಷತ್ರ ಯಾವರಾಶಿಗೆ ಸೇರಿದ್ದೆಂದು ತಿಳಿಯುವ ಕ್ರಮ. ||ಉದಾಹರಣೆ|| ಇಷ್ಟ ನಕ್ಷತ್ರ ೪ ರಿಂದ ಗುಣಿಸಿ, ಬಂದ ಲಬ್ಧವನ್ನು ೯ ರಿಂದ ಭಾಗಿಸಿದರೆ ಬರುವ ಭಾಗಲಬ್ಧವೇ ಕಳೆದ ರಾಶಿಯಾಗಿಯೂ, ಶೇಷವೇ ಮುಂದಿನ ರಾಶಿಯಾಗಿಯೂ, ಸಂಖ್ಯಾಶೇಷವೇ ಆ ರಾಶಿಯಲ್ಲಿ ನವಾಂಶ ಸಂಖ್ಯೆಯಾಗಿರುವುದು. ಅನೂರಾಧ ನಕ್ಷತ್ರ ೩ನೇ ಪಾದಕ್ಕೆ ರಾಶಿ ತಿಳಿಯಬೇಕು. ಅನೂರಾಧ ನಕ್ಷತ್ರವು ಅಶ್ವಿನ್ಯಾದಿಯಾಗಿ ೧೭ನೆ ನಕ್ಷತ್ರವಾಗಿರುತ್ತೆ. ಆದ್ದರಿಂದ ಅಶ್ವಿನ್ಯಾದಿಯಾಗಿ ವಿಶಾಖಾನಕ್ಷತ್ರದವರಿಗೆ ೧೬ ಆಗುತ್ತೆ. ೧೬ x ೪ = ೬೪ ಆಯಿತು. ಇದಕ್ಕೆ ಅನೂರಾಧಾ ೩ ಪಾದ ಸೇರಿಸಲಾಗಿ ೬೪ + ೩ = ೬೭ ಆಯಿತು. ಈ ೬೭ಕ್ಕೆ ೯ ರಿಂದ ಭಾಗಿಸಲಾಗಿ, ೬೭ ÷ ೯ = ೭ ೪/೯ ಆಯಿತು. ಮೇಷಾದಿಯಾಗಿ ೭ ನೆ ರಶಿ ತುಲಾ ಕಳೆದು ೮ನೆ ರಾಶಿಯಾದ ವೃಶ್ಚಿಕದಲ್ಲಿ ೪ನೆ ನವಾಂಶವೆಂದು ತಿಳಿಯಬೇಕು. ಇದೇ ಪ್ರಕಾರವೇ ಯಾವ ನಕ್ಷತ್ರಕ್ಕೆ ಬೇಕಾದವರು ರಾಶಿಯನ್ನು, ಆ ರಾಶಿಯ ಭುಕ್ತ ನವಾಂಶವನ್ನು ತಿಳಿಯಬಹುದು. ನಕ್ಷತ್ರ ಮಂಡಲಿಗಳು ವರ್ತುಲಾಕಾರವಾಗಿ ಭೂಭಾಗವನ್ನಾವರಿಸಿಕೊಂಡು ಇರುವುದರಿಂದ ಜ್ಯೋತಿಶ್ಚಕ್ರವೆಂದು, ಖಗೋಳವೆಂದು ಹೆಸರಾಯಿತು. ಈ ನಕ್ಷತ್ರಗಳು ಭೂಮಂಡಲಕ್ಕೆ ಪ್ರದಕ್ಷಿಣ ಮಾಡುತ್ತ ಪಶ್ಚಿಮದಿಕ್ಕಿಗೆ ಹೋಗುತ್ತಲಿವೆ. ಅಶ್ವಿನೀ ಮೊದಲಾಗಿ ಒಂದರ ಕೆಳಗೊಂದು ಉದಯಿಸುತ್ತವೆ. ಈ ನಕ್ಷತ್ರಗಳು ಉದಯಿಸುವಾಗ ಮೊದಲು ಅಶ್ವಿನಿ ನಕ್ಷತ್ರದ ೧ನೆ ಪಾದವು, ಅನಂತರ ಕ್ರಮವಾಗಿ ೨-೩-೪ನೆ ಪಾದಗಳು ಉದಯಿಸಿ ಅನಂತರ ಭರಣಿ ೧ನೇ ಪಾದ ಉದಯವಾಗುತ್ತೆ. ಈ ನಕ್ಷತ್ರಗಳು ಭೂಮಿಯ ಸುತ್ತಲೂ ವೃತ್ತರೂಪವಾಗಿ ೩೬೦ ಭಾಗಗಳಿಂದ ಸುತ್ತಿಕೊಂಡು ಇದೆ. ಯಾವಾಗ್ಯೂ ೧೮೦ ಭಾಗಗಳೇ ದೃಶ್ಯಾರ್ಧಚಕ್ರವಾಗಿಯೂ ಉಳಿದ ೧೮೦ ಭಾಗಗಳು ಅದೃಶ್ಯಾರ್ಧಚಕ್ರವಾಗಿಯೂ ಇರುತ್ತೆ. ಭೂಭಾಗದ ಮೇಲೆ ಇರುವವರಿಗೆ ಯಾವಾಗ್ಯೂ ೨೭ ನಕ್ಷತ್ರಗಳು ಏಕಕಾಲದಲ್ಲಿ ಕಾಣಬರುವುದಿಲ್ಲ. ಅಶ್ವಿನಿ ನಕ್ಷತ್ರ ೧ನೆ ಪಾದ

ಉದಯದಲ್ಲಿರುವಾಗ ಚಿತ್ತ ನಕ್ಷತ್ರ ೩ನೆ ಪಾದವು ಅಸ್ತದಲ್ಲಿರುತ್ತದೆ. ದೃಶ್ಯಾರ್ಧಚಕ್ರ ಅಂದರೆ ೧೮೦ ಭಾಗದಲ್ಲಿ ಮಧ್ಯ ಭಾಗವಾದ ೯೦ನೆ ಭಾಗದಲ್ಲಿ ನಿಂತಿರುವವನಿಗೆ ಎರಡು ಕಡೆಯಲ್ಲೂ ೯೦ ಭಾಗಗಳು ಕಾಣಬರುತ್ತವೆ. ಉದಾಹರಣೆ:- ವೃಷಭರಾಶಿಯಲ್ಲಿ ೧೫ನೆ ಭಾಗ ಉದಯದಲ್ಲಿ ಪೂರ್ವದಲ್ಲಿರುವಾಗ, ವೃಶ್ಚಿಕ ರಾಶಿಯ ೧೫ನೆ ಭಾಗ ಪಶ್ಚಿಮದಲ್ಲಿ ಅಸ್ತದಲ್ಲಿಯೂ, ಸಿಂಹ ರಾಶಿಯ ೧೫ನೆ ಭಾಗ ಪಾತಾಳ (ಕೆಳಭಾಗದಲ್ಲಿಯೂ), ಕುಂಭ ರಾಶಿಯ ೧೫ನೆ ಭಾಗ ಉಚ್ಚ-ಅಂದರೆ ಅಂತರಿಕ್ಷದ ಮಧ್ಯಭಾಗದಲ್ಲಿಯೂ ಇರುತ್ತದೆ. ಈ ಜ್ಯೋತಿಶ್ಚಕ್ರದ ಪರಿಮಾಣವೇನೆಂದರೆ :- ೬೦ ವಿಕಲೆಗಳಿಗೆ ೧ ಕಲೆ, ೬೦ಕಲೆಗಳಿಗೆ ೧ ಭಾಗ, ೩೦ ಭಾಗಗಳಿಗೆ ೧ ರಾಶಿ, ೧೨ ರಾಶಿಗಳಿಗೆ ೧ ಚಕ್ರ, ಇಂಗ್ಲೀಷ್ ವೃತ್ತದ ಪ್ರಮಾಣ ಸಹಾ ಇದೇ ರೀತಿಯಾಗಿದೆ. ೬೦ ಸೆಕೆಂಡ್ ೧ ಮಿನಿಟ್, ೬೦ ಮಿನಿಟ್ ೧ ಡಿಗ್ರಿ, ೩೬೦ ಡಿಗ್ರಿಗಳಿಗೆ ಸರ್ಕಲ್ ಅಥವಾ ವೃತ್ತ. ಸಿದ್ಧಾಂತಶಾಸ್ತ್ರ ಪ್ರಕಾರ ೨೧೬೦೦ ಕಲೆಗೆ ೧ ವೃತ್ತ. ಇದರಲ್ಲಿ ಅಶ್ವಿನ್ಯಾದಿಯಾಗಿ ೨೭ ನಕ್ಷತ್ರಕ್ಕೆ ಪ್ರತಿನಕ್ಷತ್ರಕ್ಕೆ ೮೦೦ ಕಲಾಪ್ರಕಾರ ೨೭ x ೩೦೦=೨೧೬೦೦ ಆಗುತ್ತದೆ. ಈ ಸಂಖ್ಯೆಯನ್ನು ವಿಕಲೆಯಾಗಿ ಮಾಡಲು ೨೧೬೦೦ x ೬೦=೧೨೯೬೦೦೦ ಆಗುತ್ತದೆ. ಈ-ಭ ಚಕ್ರವನ್ನು, ಸೂರ್ಯಾದಿ ೯ ಗ್ರಹಗಳು, ಮಧ್ಯಮಾಸ ದಿನಗತಿ (ಸರಾಸರಿ) ಮುಂದೆ ಉದಹರಿಸುವ ಪ್ರಕಾರ ಅಪ್ರದಕ್ಷಿಣವಾಗಿ, ಪೂರ್ವದಿಕ್ಕಿಗೆ ಪ್ರತಿದಿನವು ಸಂಚರಿಸಿ ಭೋಗಿಸುವರು. ಇದು ಗ್ರಹಗಳಿಗೆ ಸರಿಯಾದ ಗತಿಯಾಗಿರುವುದು. ಇದಕ್ಕೆ ಪ್ರಮಾಣ,

## ಸಿದ್ಧಾಂತರತ್ನೆ

ಶ್ಲೋಕ॥ ಲಿಪ್ತ ವಿಪ್ತಸ್ತ್ವರ್ಕಸ್ಯಗತಿರ್ನವಶರಾಗಜಾಃ । (೫೯-೮)
ಚಂದ್ರಸ್ಯಶೂನ್ಯನಂದಾಶ್ವವಿಷಯಾಗ್ನಯು ವಿವಚ (೭೯೦-೩೫)
ಅಂಗಾರಕಸ್ಯ ಚ ಕ್ಷೋಣೀ ವಹ್ನಯೋಂಗಾಶ್ವಿನೌಗತಿಃ। (೩೨-೨೬)
ಜ್ಞಸ್ಯಬಾಣ ಜಿನಾದಂತಾಃ (೨೪೫-೩೨) ಗುರೋಃ ಪಂಚಾಂಬರಂ
ತಥಾ (೫-೦) ॥೧೨॥ ಶುಕ್ರಸ್ಯಾಂಗಾ ನವೌಷ್ಟೌಚ (೯೬-೮)
ಸೂರ್ಯಜಸ್ಯಾಶ್ವಿನೌವಿಯತ್ । (೨-೦) ಷಡ್ಭೂವೇದಾ ವಿಧೂಚ್ಚಸ್ಯ
(೬-೪೧) ರಾಹೋರ್ವಹ್ನಯ ಈಶ್ವರಾಃ (೩-೧೧) ॥೧೩॥

ಈ ಪ್ರಕಾರ ಪ್ರತಿದಿನ ಭೋಗಿಸುವುದರಿಂದ ಸೂರ್ಯನು ೧ ಸಾರಿ ಭ ಚಕ್ರ ಸುತ್ತಿ ಅಶ್ವಿನಿ ೧ನೆ ಕಲೆಗೆ ಬರುವುದಕ್ಕೆ ೩೬೫ ದಿವಸ ೧೫ ಘಳಿಗೆ ೩೧ ವಿಘಳಿಗೆ ೩೦ ಪರೆಗಳಕಾಲ ಬೇಕಾಗುತ್ತದೆ. ಇದೇ ಭ ಚಕ್ರ ಸುತ್ತುವುದಕ್ಕೆ

ಚಂದ್ರನಿಗೆ ೨೮½ದಿವಸವು, ಅಂಗಾರಕನಿಗೆ ೧೮ ತಿಂಗಳು, ಬುಧ, ಶುಕ್ರರಿಗೆ ಸೂರ್ಯನಂತೆ ೧ ಸಂವತ್ಸರವು, ಬೃಹಸ್ಪತಿಗೆ ೩೬೦ ದಿವಸಗಳು ೧೨ ಸಂವತ್ಸರವು, ಶನಿಗೆ ೩೦ ಸಂವತ್ಸರ, ರಾಹು, ಕೇತುಗಳಿಗೆ ೧೮ ಸಂವತ್ಸರ ಬೇಕಾಗುವುದು. ಭ ಚಕ್ರವನ್ನು ಸುತ್ತುವುದಕ್ಕೆ ಪೂರ್ವಾದಿ ಗ್ರಹಗಳಿಗೆ ಕಾಲ ವ್ಯತ್ಯಾಸಕ್ಕೆ ಕಾರಣವೇನೆಂದರೆ, ಚಂದ್ರಾದಿಯಾಗಿ-ಉನ್ನತೋನ್ನತ ಸ್ಥಾನಗಳಲ್ಲಿ ಸಂಚರಿಸುವುದರಿಂದ ಕಾಲ ವಿಪರ್ಯಾಸ ಉಂಟಾಗುವುದು. ಇದಕ್ಕೆ ಪ್ರಮಾಣ ಸೂರ್ಯಸಿದ್ಧಾಂತದಲ್ಲಿ ಮತ್ತು ಪುಲಿಶಾದಿ ಸಿದ್ಧಾಂತಗಳಲ್ಲಿ ಸಹ ಹೇಳಿರುವುದು ಏನೆಂದರೆ,

ಶ್ಲೋಕ॥ ಮಂದಾಮರೇಜ್ಯ ಭೂ ಪುತ್ರ ಸೂರ್ಕ ಶುಕೇಂದುಜೇಂದರಃ। ಪರಿಭ್ರಮಂತ್ಯ ಧೋಧಸ್ತಾಃ ಕ್ರಮಶಃ ಶೀಘ್ರಗಾಮಿನಃ । ಇತಿ ॥೧೪॥

ಎಲ್ಲಾ ಗ್ರಹಗಳಿಗಿಂತಲೂ ಶನಿಯ ಮೇಲ್ಭಾಗದಲ್ಲಿಯೂ, ಅವನಿಂದ ಕೆಳಗೆ ಬೃಹಸ್ಪತಿಯು, ಅಂಗಾರಕನು, ಸೂರ್ಯನು, ಶುಕ್ರನು, ಬುಧನು, ಚಂದ್ರನು, ಈ ಪ್ರಕಾರ ಒಂದು ಗ್ರಹದ ಕೆಳಗೆ ಅಧೋಧ ಪ್ರಕಾರವಾಗಿ ಸಂಚರಿಸುತ್ತಾರೆ. ಭೂಮಿಗೆ ಚಂದ್ರನಿಗಿಂತ ಸಮೀಪವಾದ ಯಾವ ಗ್ರಹವು ಇಲ್ಲ. ಈ ಗ್ರಹಗಳ ಸಂಚಾರ ಕ್ರಮವನ್ನನುಸರಿಸಿ ಭಾನುವಾರಾದಿ ೭ ವಾರಗಳು, ಹೋರೆಗಳು ಕ್ರಮವಾಗಿ ಉಂಟಾಗಿರುತ್ತವೆ, ಅದು ಹೇಗೆಂದರೆ :- ಶನಿ, ಗುರು, ಕುಜ, ರವಿ, ಶುಕ್ರ, ಬುಧ, ಚಂದ್ರ ಈ ಪ್ರಕಾರ ಸಂಚರಿಸುವುದರಿಂದ ಈ ಕ್ರಮದಲ್ಲಿ ಸೂರ್ಯಾದಿಯಾಗಿ ೪ ಗ್ರಹ ಯಾವದೋ ಆ ಗ್ರಹದ ಹೆಸರಿನ ವಾರವೇ ಭಾನುವಾರವಾದ ಮಾರನೆ ದಿನ, ಸೂರ್ಯೋದಯ ಕಾಲಕ್ಕೆ ಚಂದ್ರಹೋರೆ ಬರುವುದರಿಂದ ಸೋಮವಾರವಾಗುವುದು. ಚಂದ್ರನಿಂದ ೪ನೆ ಗ್ರಹ ಮಂಗಳನಾದ್ದರಿಂದ ಸೋಮವಾರದ ಬಳಿಕ ಮಂಗಳವಾರ ಬರುವುದು. ಉದಾ :- ದಿನ ೧ಕ್ಕೆ ೬೦ ಘಳಿಗೆ ೨½ ಘಳಿಗೆಗೆ ೧ ಹೋರಾ ಆದ್ದರಿಂದ ೬೦÷೨½=೨೪. ೨೫÷೭=೩. ೪ನೆ ವಾರಾಧಿಪತಿ ಕುಜ, ಹೋರೆಗಳು. ಹೋರಾಧಿಪತಿಗಳು ಆಗುವ ಕ್ರಮಕ್ಕೆ ಪ್ರಮಾಣ, ಗರ್ಗಃ । ಅರ್ಕ, ಶುಕ್ರ, ಬುಧಾ, ಶ್ಚಂದ್ರ ಮಂದಜೀವ ಧರಾಸುತಾಃ ॥ ಕ್ರಮಾದರ್ಕಾ ದಯೋವಾರೆ ಸ್ವಸ್ವಕಾಲ ಪ್ರವರ್ತಕಾಃ ॥೧೫॥ ಭಾನುವಾರಾದಿಯಲ್ಲಿ ಸೂರ್ಯ ಉದಯಕಾಲಕ್ಕೆ ರವಿ ಹೋರೆಯಾಗಿರುವುದು. ೨ನೆ ಹೋರಗೆ ಶುಕ್ರ, ೩ನೆ ಹೋರಗೆ ಬುಧ, ೪ನೆ ಹೋರೆಗೆ ಚಂದ್ರ, ೫ನೆ ಹೋರೆಗೆ ಶನಿ, ೬ನೆ ಹೋರೆಗೆ ಗುರು, ೭ನೆ ಹೋರೆಗೆ ಕುಜ, ೮ನೆ ಹೋರೆಗೆ ರವಿಗೆ ಸ್ವಹೋರೆ ಬರುತ್ತದೆ. ನ್ಯಾಸಕ್ರಮ=೧

ರವಿ, ೨ ಶುಕ್ರ, ೩ ಬುಧ, ೪ ಚಂದ್ರ, ೫ ಶನಿ, ೬ ಗುರು, ೭ ಕುಜಂ, ೮ ರವಿ, ೯ ಶುಕ್ರ, ೧೦ ಬುಧ, ೧೧ ಚಂದ್ರ, ೧೨ ಶನಿ, ೧೩ ಗುರು, ೧೪ ಕುಜ, ೧೫ ರವಿ, ೧೬ ಶುಕ್ರ, ೧೭ ಬುಧ, ೧೮ ಚಂದ್ರ, ೧೯ ಶನಿ, ೨೦ ಗುರು, ೨೧ ಕುಜ, ೨೨ ರವಿ, ೨೩ ಶುಕ್ರ, ೨೪ ಬುಧ, ಇಲ್ಲಿಗೆ ಭಾನುವಾರವಾಯಿತು. ೨೫ನೆ ಹೋರೆಗೆ ಚಂದ್ರನಧಿಪತಿ - ಈ ಚಂದ್ರನು ಸೂರ್ಯನಿಂದ ೪ ನೆ ಗ್ರಹ, ದಿನ ೧ ಕ್ಕೆ ೨೪ ಹೋರೆ ಆದ್ದರಿಂದ ೨೫ನೆ ಹೋರೆಯಾದ ಚಂದ್ರ ಹೋರೆಯಲ್ಲಿ ಸೂರ್ಯನು ಉದಯಿಸುವುದರಿಂದ ಸೋಮವಾರವಾಯಿತು. ಈ ಪ್ರಕಾರವೇ ಯಾವ ಹೋರೆಯಲ್ಲಿ ಸೂರ್ಯನು ಉದಯಿಸುತ್ತಾನೋ ಆ ಹೋರಾಧಿಪತಿಯಾದ ಗ್ರಹದ ಹೆಸರಿನ ವಾರವೆನ್ನಿಸುತ್ತದೆ. ಯಾವ ವಾರವೂ ಆ ದಿವಸ ೧-೮-೧೫-೨೨ ಈ ಹೋರೆಗಳು ವಾರಾಧಿಪತಿಯ ಸ್ವಹೋರೆಯಾಗಿರುತ್ತದೆ. ಹೋರೆಗೆ ೨॥ ಘಳಿಗೆ, ಘಂಟೆಗೆ ೨॥ ಘಳಿಗೆ, ಆದ್ದರಿಂದ ಹೋರಾಧಿಪತಿಗಳನ್ನು ಘಂಟೆಯ ಲೆಕ್ಕದ ಪ್ರಕಾರ ಸುಲಭವಾಗಿ ತಿಳಿದುಕೊಳ್ಳಬಹುದು. ಇದನ್ನು ಹೋರಾಕೋಷ್ಟಕ ಪದಕದಿಂದ ಸುಲಭವಾಗಿ ತಿಳಿಯಬಹುದು ಮತ್ತು ನಕ್ಷತ್ರ ಪಾದಪದಕದಿಂದ ೧೨ ರಾಶಿಗಳನ್ನೂ, ನವಾಂಶವನ್ನೂ ತಿಳಿಯಬಹುದು.

## ನಕ್ಷತ್ರಚರಣ ನವಾಂಶಕೋಷ್ಟಕ

| ರಾಶಿಪಾದ ನವಾಂಶ | | | | | ದ್ರೇಕ್ಕಾಣವರ್ಗೋತ್ತಮಾಂಶ | | ನವಾಂಶ ಸಂಖ್ಯೆ |
|---|---|---|---|---|---|---|---|
| ಸಂಖ್ಯೆ | ನಕ್ಷತ್ರ | ಪಾದ | ಗ್ರಹವಿರುವ ರಾಶಿಯಲ್ಲಿ ನವಾಂಶ | ರಾಶಿ | ದ್ರೇಕ್ಕಾಣ | ವರ್ಗೋತ್ತಮಾಂಶ | |
| ೧ | ಅಶ್ವಿನಿ | ೧ | ೧ ಮೇಷಾಂಶೆ | | *ಮೇಷ | *ಮೇಷರಾಶಿ | ೧ |
| | | ೨ | ೨ ವೃಷಭಾಂಶೆ | | ದ್ರೇಕ್ಕಾಣ | ಮೇಷಾಂಶ | ೨ |
| | | ೩ | ೩ ಮಿಥುನಾಂಶೆ | | | | ೩ |
| | | ೪ | ೪ ಕಟಕಾಂಶೆ | ಮೇಷರಾಶಿ ೧ | *ಸಿಂಹ | | ೪ |
| ೨ | ಭರಣಿ | ೧ | ೫ ಸಿಂಹಾಂಶೆ | | ದ್ರೇಕ್ಕಾಣ | | ೫ |
| | | ೨ | ೬ ಕನ್ಯಾಂಶೆ | | | | ೬ |
| | | ೩ | ೭ ತುಲಾಂಶೆ | | *ಧನು | | ೭ |
| | | ೪ | ೮ ವೃಶ್ಚಿಕಾಂಶೆ | | ದ್ರೇಕ್ಕಾಣ | | ೮ |
| ೩ | ಕೃತ್ತಿಕ | ೧ | ೯ ಧನುರಂಶೆ | | | | ೯ |
| | | ೨ | ೧೦ ಮಕರಾಂಶೆ | | *ಕುಂಭ | | ೧೦ |
| | | ೩ | ೧೧ ಕುಂಭಾಂಶೆ | | ದ್ರೇಕ್ಕಾಣ | | ೧೧ |
| | | ೪ | ೧೨ ಮೀನಾಂಶೆ | | | | ೧೨ |
| ೪ | ರೋಹಿಣಿ | ೧ | ೧ ಮೇಷಾಂಶೆ | ವೃಷಭರಾಶಿ ೨ | *ವೃಷಭ | | ೧೩ |
| | | ೨ | ೨ ವೃಷಭಾಂಶೆ | | ದ್ರೇಕ್ಕಾಣ | *ವೃಷಭರಾಶಿ | ೧೪ |
| | | ೩ | ೩ ಮಿಥುನಾಂಶೆ | | | ವೃಷಭ | ೧೫ |
| | | ೪ | ೪ ಕಟಕಾಂಶೆ | | *ಕನ್ಯಾ | ದ್ರೇಕ್ಕಾಣ | ೧೬ |
| ೫ | ಮೃಗಶಿರ | ೧ | ೫ ಸಿಂಹಾಂಶೆ | | ದ್ರೇಕ್ಕಾಣ | ನವಾಂಶ | ೧೭ |
| | | ೨ | ೬ ಕನ್ಯಾಂಶೆ | | | | ೧೮ |
| | | ೩ | ೭ ತುಲಾಂಶೆ | | *ತುಲಾ | | ೧೯ |
| | | ೪ | ೮ ವೃಶ್ಚಿಕಾಂಶ | | ದ್ರೇಕ್ಕಾಣ | | ೨೦ |
| ೬ | ಆರ್ದ್ರಾ | ೧ | ೯ ಧನುರಂಶ | | | | ೨೧ |
| | | ೨ | ೧೦ ಮಕರಾಂಶ | ಮಿಥುನರಾಶಿ ೩ | *ಕುಂಭ | | ೨೨ |
| | | ೩ | ೧೧ ಕುಂಭಾಂಶ | | ದ್ರೇಕ್ಕಾಣ | | ೨೩ |
| | | ೪ | ೧೨ ಮೀನಾಂಶ | | | | ೨೪ |
| ೭ | ಪುನರ್ವಸು | ೧ | ೧ ಮೇಷಾಂಶ | | *ಸ್ವ | *ಮಿಥುನರಾ | ೨೫ |
| | | ೨ | ೨ ವೃಷಭಾಂಶ | | ದ್ರೇಕ್ಕಾಣ | ಶಿಯಮಿಥುನ | ೨೬ |
| | | ೩ | ೩ ಮಿಥುನಾಂಶ | | | ನವಾಂಶ | ೨೭ |

| ರಾಶಿಪಾದ ನವಾಂಶ | | | | | ದ್ರೇಕ್ಕಾಣವರ್ಗೋತ್ತಮಾಂಶ | | |
|---|---|---|---|---|---|---|---|
| ಸಂಖ್ಯೆ | ನಕ್ಷತ್ರ | ಪಾದ | ಗ್ರಹವಿರುವ ರಾಶಿಯಲ್ಲಿ ನವಾಂಶ | ರಾಶಿ | ದ್ರೇಕ್ಕಾಣ | ವರ್ಗೋತ್ತಮಾಂಶ | ಅಶ್ವಿನಿಯಿಂದ ಪಾದದ ಸಂಖ್ಯೆ |
| | | ೪ | ೪ ಕಟಕಾಂಶೆ | | *ಕಟಕ | *ಕಟಕರಾಶಿಯ | ೨೮ |
| ೮ | ಪುಷ್ಯ | ೧ | ೫ ಸಿಂಹಾಂಶೆ | | ಸ್ವದ್ರೇಕ್ಕಾಣ | ಕರ್ಕಟಾಂಶ | ೨೯ |
| | | ೨ | ೬ ಕನ್ಯಾಂಶೆ | | | | ೩೦ |
| | | ೩ | ೭ ತುಲಾಂಶೆ | | *ವೃಶ್ಚಿಕ | | ೩೧ |
| | | ೪ | ೮ ವೃಶ್ಚಿಕಾಂಶೆ | ೪ ಕಟಕರಾಶಿ | ದ್ರೇಕ್ಕಾಣ | | ೩೨ |
| ೯ | ಆಶ್ಲೇಷ | ೧ | ೯ ಮಕರಾಂಶೆ | | | | ೩೩ |
| | | ೨ | ೧೦ ಮಕರಾಂಶೆ | | *ಮೀನ | | ೩೪ |
| | | ೩ | ೧೧ ಕುಂಭಾಂಶೆ | | ದ್ರೇಕ್ಕಾಣ | | ೩೫ |
| | | ೪ | ೧೨ ಮೀನಾಂಶೆ | | | | ೩೬ |
| ೧೦ | ಮಖಾ | ೧ | ೧ ಮೇಷಾಂಶೆ | | ಮೇಷ | | ೩೭ |
| | | ೨ | ೨ ವೃಷಭಾಂಶೆ | | ದ್ರೇಕ್ಕಾಣ | | ೩೮ |
| | | ೩ | ೩ ಮಿಥುನಾಂಶೆ | | | | ೩೯ |
| | | ೪ | ೪ ಕಟಕಾಂಶೆ | | ಸಿಂಹ | ವರ್ಗೋತ್ತರ | ೪೦ |
| ೧೧ | ಪುಬ್ಬಾ | ೧ | ೫ ಸಿಂಹಾಂಶೆ | | ದ್ರೇಕ್ಕಾಣ | ಸ್ವನವಾಂಶೆ | ೪೧ |
| | | ೨ | ೬ ಕನ್ಯಾಂಶೆ | ೫ ಸಿಂಹರಾಶಿ | | | ೪೨ |
| | | ೩ | ೭ ತುಲಾಂಶೆ | | ಧನು | | ೪೩ |
| | | ೪ | ೮ ವೃಶ್ಚಿಕಾಂಶೆ | | ದ್ರೇಕ್ಕಾಣ | | ೪೪ |
| ೧೨ | ಉತ್ತರ | ೧ | ೯ ಧನುರಂಶೆ | | | | ೪೫ |
| | | ೨ | ೧೦ ಮಕರಾಂಶೆ | | ಮಕರ | | ೪೬ |
| | | ೩ | ೧೧ ಕುಂಭಾಂಶೆ | | ದ್ರೇಕ್ಕಾಣ | | ೪೭ |
| | | ೪ | ೧೨ ಮೀನಾಂಶೆ | | | | ೪೮ |
| ೧೩ | ಹಸ್ತ | ೧ | ೧ ಮೇಷಾಂಶೆ | | ವೃಷಭ | | ೪೯ |
| | | ೨ | ೨ ವೃಷಭಾಂಶೆ | | ದ್ರೇಕ್ಕಾಣ | | ೫೦ |
| | | ೩ | ೩ ಮಿಥುನಾಂಶೆ | | | *ಕನ್ಯಾಸ್ವ | ೫೧ |
| | | ೪ | ೪ ಕಟಕಾಂಶೆ | ೬ ಕನ್ಯಾರಾಶಿ | ಕನ್ಯಾ | ನವಾಂಶ | ೫೨ |
| ೧೪ | ಚಿತ್ತ | ೧ | ೫ ಸಿಂಹಾಂಶೆ | | ದ್ರೇಕ್ಕಾಣ | | ೫೩ |
| | | ೨ | ೬ ಕನ್ಯಾಂಶೆ | | | | ೫೪ |
| | | ೩ | ತುಲಾಂಶೆ | | ತುಲಾ | ತು॥ನವಾಂಶೆ | ೫೫ |
| | | ೪ | ವೃಶ್ಚಿಕಾಂಶೆ | | ದ್ರೇಕ್ಕಾಣ | ವ॥ತ್ತಮಾಂಶ | ೫೬ |

*ವರ್ಗೋತ್ತಮಾಂಶ

| ರಾಶಿಪಾದ ನವಾಂಶ | | | | | ದ್ರೇಕ್ಕಾಣವರ್ಗೋತ್ತಮಾಂಶ | | [illegible] |
|---|---|---|---|---|---|---|---|
| ಸಂಖ್ಯೆ | ನಕ್ಷತ್ರ | ಪಾದ | ಗ್ರಹವಿರುವ ರಾಶಿಯಲ್ಲಿ ನವಾಂಶ | ರಾಶಿ | ದ್ರೇಕ್ಕಾಣ | ವರ್ಗೋತ್ತಮಾಂಶ | |
| ೧೫ | ಸ್ವಾತಿ | ೧ | ೯ ಧನುರಂಶೆ | | | | ೫೭ |
| | | ೨ | ೧೦ ಮಕರಾಂಶೆ | | ಕುಂಭ | | ೫೮ |
| | | ೩ | ೧೧ ಮಂದಭಾಂಶೆ | | ದ್ರೇಕ್ಕಾಣ | | ೫೯ |
| | | ೪ | ೧೨ ಮೀನಾಂಶ | ತುಲಾರಾಶಿ ೭ | | | ೬೦ |
| | | ೧ | ೧ ಮೇಷಾಂಶೆ | | ಮಿಥುನ | | ೬೧ |
| ೧೬ | ವಿಶಾ | ೨ | ೨ ವೃಷಭಾಂಶೆ | | ದ್ರೇಕ್ಕಾಣ | | ೬೨ |
| | | ೩ | ೩ ಮಿಥುನಾಂಶೆ | | | | ೬೩ |
| | | ೪ | ೪ ಕಟಕಾಂಶೆ | | ಕಟಕ | | ೬೪ |
| | | ೧ | ೫ ಸಿಂಹಾಂಶೆ | | ದ್ರೇಕ್ಕಾಣ | | ೬೫ |
| ೧೭ | ಅನೂ | ೨ | ೬ ಕನ್ಯಾಂಶೆ | | | | ೬೬ |
| | | ೩ | ೭ ತುಲಾಂಶೆ | | ವೃಶ್ಚಿಕ | ವೃಶ್ಚಿಕನ | ೬೭ |
| | | ೪ | ೮ ವೃಶ್ಚಿಕಾಂಶೆ | ವೃಶ್ಚಿಕರಾಶಿ ೮ | ದ್ರೇಕ್ಕಾಣ | ನವಾಂಶೆ | ೬೮ |
| | | ೧ | ೯ ಧನುರಂಶೆ | | | | ೬೯ |
| ೧೮ | ಜ್ಯೇಷ್ಠ | ೨ | ೧೦ ಮಕರಾಂಶೆ | | ಮೀನಾ | | ೭೦ |
| | | ೩ | ೧೧ ಕುಂಭಾಂಶೆ | | ದ್ರೇಕ್ಕಾಣ | | ೭೧ |
| | | ೪ | ೧೨ ಮೀನಾಂಶೆ | | | | ೭೨ |
| | | ೧ | ೧ ಮೇಷಾಂಶೆ | | ಮೇಷ | | ೭೩ |
| ೧೯ | ಮೂಲ | ೨ | ೨ ವೃಷಭಾಂಶೆ | | ದ್ರೇಕ್ಕಾಣ | | ೭೪ |
| | | ೩ | ೩ ಮಿಥುನಾಂಶೆ | | | | ೭೫ |
| | | ೪ | ೪ ಕಟಕಾಂಶೆ | | ಸಿಂಹ | | ೭೬ |
| | | ೧ | ೫ ಸಿಂಹಾಂಶೆ | ಧನುರಾಶಿ ೯ | ದ್ರೇಕ್ಕಾಣ | | ೭೭ |
| ೨೦ | ಪೂಷಾ | ೨ | ೬ ಕನ್ಯಾಂಶೆ | | | | ೭೮ |
| | | ೩ | ೭ ತುಲಾಂಶೆ | | ಧನುರ್ | ಧನುಸ್ಸು | ೭೯ |
| | | ೪ | ೮ ವೃಶ್ಚಿಕಾಂಶೆ | | ದ್ರೇಕ್ಕಾಣ | | ೮೦ |
| ೨೧ | ಉಷಾ | ೧ | ೯ ಧನುರಾಂಶೆ | | | | ೮೧ |
| | | ೨ | ೧೦ ಮಕರಾಂಶೆ | | ಮಕರ | | ೮೨ |
| | | ೩ | ೧೧ ಕುಂಭಾಂಶೆ | | ದ್ರೇಕ್ಕಾಣ | | ೮೩ |
| | | ೪ | ೧೨ ಮೀನಾಂಶೆ | | | | ೮೪ |
| ೨೨ | ಶ್ರವಣ | ೧ | ೧ ಮೇಷಾಂಶೆ | | | ಮಕರ | ೮೫ |

| ರಾಶಿಪಾದ ನವಾಂಶ | | | | | ದ್ರೇಕ್ಕಾಣವರ್ಗೋತ್ತಮಾಂಶ | | |
|---|---|---|---|---|---|---|---|
| ಸಂಖ್ಯೆ | ನಕ್ಷತ್ರ | ಪಾದ | ಗ್ರಹವಿರುವ ರಾಶಿಯಲ್ಲಿ ನವಾಂಶ | ರಾಶಿ | ದ್ರೇಕ್ಕಾಣ | ವರ್ಗೋತ್ತಮಾಂಶ | ಒಟ್ಟು ನವಾಂಶ ಸಂಖ್ಯೆ |
| | | ೨ | ೨ ವೃಷಭಾಂಶ | ೧೦ ಮಕರರಾಶಿ | ವೃಷಭ ದ್ರೇಕ್ಕಾಣ | | ೮೬ |
| | | ೩ | ೩ ಮಿಥುನಾಂಶ | | | | ೮೭ |
| | | ೪ | ೪ ಕಟಕಾಂಶ | | ಕನ್ಯಾ ದ್ರೇಕ್ಕಾಣ | | ೮೮ |
| ೨೩ | ಧನಿಷ್ಠ | ೧ | ೫ ಸಿಂಹಾಂಶ | | | | ೮೯ |
| | | ೨ | ೬ ಕನ್ಯಾಂಶ | | | | ೯೦ |
| | | ೩ | ೭ ತುಲಾಂಶ | ೧೧ ಕುಂಭರಾಶಿ | ತುಲಾ ದ್ರೇಕ್ಕಾಣ | | ೯೧ |
| | | ೪ | ೮ ವೃಶ್ಚಿಕಾಂಶ | | | | ೯೨ |
| ೨೪ | ಶತಭಿಷ | ೧ | ೯ ಧನುರಂಶ | | | | ೯೩ |
| | | ೨ | ೧೦ ಮಕರಾಂಶ | | ಕುಂಭ ದ್ರೇಕ್ಕಾಣ | ಕುಂಭ | ೯೪ |
| | | ೩ | ೧೧ ಕುಂಭಾಂಶ | | | | ೯೫ |
| | | ೪ | ೧೨ ಮೀನಾಂಶ | | | | ೯೬ |
| ೨೫ | ಪೂಭಾ | ೧ | ೧ ಮೇಷಾಂಶ | | ಮಿಥುನ ದ್ರೇಕ್ಕಾಣ | | ೯೭ |
| | | ೨ | ೨ ವೃಷಭಾಂಶ | | | | ೯೮ |
| | | ೩ | ೩ ಮಿಥುನಾಂಶ | | | | ೯೯ |
| | | ೪ | ೪ ಕಟಕಾಂಶ | ೧೨ ಮೀನರಾಶಿ | ಕಟಕ ದ್ರೇಕ್ಕಾಣ | | ೧೦೦ |
| ೨೬ | ಉಭಾ | ೧ | ೫ ಸಿಂಹಾಂಶ | | | | ೧೦೧ |
| | | ೨ | ೬ ಕನ್ಯಾಂಶ | | | | ೧೦೨ |
| | | ೩ | ೭ ತುಲಾಂಶ | | ವೃಶ್ಚಿಕ ದ್ರೇಕ್ಕಾಣ | | ೧೦೩ |
| | | ೪ | ೮ ವೃಶ್ಚಿಕಾಂಶ | | | | ೧೦೪ |
| ೨೭ | ರೇವತಿ | ೧ | ೯ ಧನುರಂಶ | | | | ೧೦೫ |
| | | ೨ | ೧೦ ಮಕರಾಂಶ | | ಮೀನ ದ್ರೇಕ್ಕಾಣ | | ೧೦೬ |
| | | ೩ | ೧೧ ಕುಂಭಾಂಶ | | | ಮೀನ | ೧೦೭ |
| | | ೪ | ೧೨ ಮೀನಾಂಶ | | | | ೧೦೮ |

## ಹೋರೆಯ ಕೋಷ್ಟಕ

| ಕಾಲ | | | | | ವಾರ | | | | | | |
|---|---|---|---|---|---|---|---|---|---|---|---|
| ಹೋರಾ ಸಂಖ್ಯೆ | ಘಂಟೆ ಸಂಖ್ಯೆ | | | ಉದಯಾದಿ ಘಳಿಗೆಯಿಂದ | ರವಿ ವಾರ | ಸೋಮ ವಾರ | ಮಂಗಳ ವಾರ | ಬುಧ ವಾರ | ಗುರು ವಾರ | ಶುಕ್ರ ವಾರ | ಶನಿ ವಾರ |
| ೧ | ೭ | A.M. | ದಿವಾ | ೦-೨॥ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| ೨ | ೮ | | | ೨-೫ | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| ೩ | ೯ | | | ೫-೭॥ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| ೪ | ೧೦ | | | ೭॥-೧೦ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರವಿ |
| ೫ | ೧೧ | | | ೧೦-೧೨॥ | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
| ೬ | ೧೨ | | | ೧೨॥-೧೫ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| ೭ | ೧ | P.M. | | ೧೫-೧೭॥ | ಕುಜ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ |
| ೮ | ೨ | | | ೧೭॥-೨೦ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| ೯ | ೩ | | | ೨೦-೨೨॥ | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| ೧೦ | ೪ | | | ೨೨॥-೨೫ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| ೧೧ | ೫ | | | ೨೫॥-೨೭॥ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರವಿ |
| ೧೨ | ೬ | | | ೨೭॥ ೩೦ | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |

| | | | | | | | | | | | | |
|---|---|---|---|---|---|---|---|---|---|---|---|---|
| ೧೩ | ೭ | A.M. | ರಾತ್ರಿ | ೩೦-೩೨॥ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| ೧೪ | ೮ | | | ೩೨॥-೩೫ | ಕುಜ | ಬುಧ | ಗುರು | ಶುಕ್ರ | ಶನಿ | ರಪಿ | ಚಂದ್ರ |
| ೧೫ | ೯ | | | ೩೫-೩೭॥ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| ೧೬ | ೧೦ | | | ೩೭॥-೪೦ | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| ೧೭ | ೧೧ | | | ೪೦-೪೨॥ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| ೧೮ | ೧೨ | | | ೪೨॥-೪೫ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಪಿ |
| ೧೯ | ೧ | | | ೪೫-೪೭॥ | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
| ೨೦ | ೨ | | | ೪೭॥-೫೦ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| ೨೧ | ೩ | | | ೫೦-೫೨॥ | ಕುಜ | ಬುಧ | ಗುರು | ಶುಕ್ರ | ಶನಿ | ರಪಿ | ಚಂದ್ರ |
| ೨೨ | ೪ | | | ೫೨-೫೫॥ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶಸಿ |
| ೨೩ | ೫ | | | ೫೫-೫೭॥ | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| ೨೪ | ೬ | | | ೫೭॥-೬೦ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |

ಈ ಪದಕವನ್ನು ನೋಡುವಲ್ಲಿ ಭಾನುವಾರಾದಿ ಪ್ರತಿದಿವಸವು, ವಾರಾಧಿಪತಿಯ ಸ್ವಹೋರೆಯ ಆದಿಯಲ್ಲಿ ಬರುವುದು.

## ಮೇಷಾದಿರಾಶಿಗಳ ಸ್ವರೂಪ

ಅವತಾರಿಕೆ ॥ ವರಾಹಮಿಹಿರಾಚಾರ್ಯನು ಮೇಷಾದಿ ರಾಶಿ ಸ್ವರೂಪವನ್ನು ರಾಶಿಗಳ ಲಕ್ಷಣವನ್ನು ಮತ್ಸ್ಯೌಘಟೀಯೆಂಬುವ ಶ್ಲೋಕದಿಂದ ವರ್ಣಿಸುತ್ತಾನೆ.

ಮೂಲ॥ ಮತ್ಸ್ಯೌಘಟೀ ನೃಮಿಥುನಂ ಸವೀಣಂ । ಚಾಪೀನರೋಽಶ್ವಜಘನೊ ಮಕರೊ ಮೃಗಾಸ್ಯಃ ॥ ತೌಳಿಸಸಸ್ಯದಹನಾ ಪ್ಲವಗಾಚ ಕನ್ಯಾ । ಶೇಷಾಸ್ಸ್ವನಾಮ ಸದೃಶಾ ಸ್ವಚರಾಶ್ಚ ಸರ್ವೆ ॥೫॥

ಟೀಕು ॥ ರಾಶಿಗಳ ಸ್ವರೂಪವನು ್ನಹೇಳುತ್ತಾನೆ. ಮತ್ಸ್ಯೌ-ಅನ್ಯೋನ್ಯ ಪುಚ್ಛಾಭಿಮುಖವಾಗಿರುವ ಮತ್ಸ್ಯದ್ವಯ-ಮೀನರಾಶಿ, ಘಟೀ-ಕುಂಭವನ್ನು ಭುಜದ ಮೇಲೆ ಹೊತ್ತುಕೊಂಡಿರುವುದು, ಕುಂಭರಾಶಿ, ಸಗದಂ ಸವೀಣಂ-ಸಗದಂ-ಗದೆ ಯನ್ನು ಹಿಡಿದ ಪುರುಷನು, ವೀಣೆಯನ್ನು ಹಿಡಿದ ಸ್ತ್ರೀಯೂ, ಈ ಸ್ತ್ರೀ ಪುರುಷ ದ್ವಂದ್ವ ರೂಪವಾಗಿರುವುದು, ಮಿಥುನರಾಶಿ, ಅಶ್ವಜಘನಃ - ಕುದುರೆಯ ಜಘನ ದಂತೆ ಮೊಣಕಾಲುಳ್ಳದ್ದಾಗಿಯು ಮೇಲಿನ ಭಾಗವೆಂದರೆ ಕಟಿ ಪಶ್ಚಾದ್ಭಾಗ ಮನುಷ್ಯ ರೂಪವಾಗಿರುವಂಥ, ಧನುರ್ರಾಶಿ, ಮೃಗಾಸ್ಯ-ಮೃಗಮುಖವುಳ್ಳ ಮಕರ- ಮೊಸಳೆಯ ರೂಪವುಳ್ಳದ್ದೇ ಮಕರರಾಶಿ, ತಾಳೀ-(ತಕ್ಕಡಿ) ತ್ರಾಸನ್ನು ಕೈಯಲ್ಲಿ ಹಿಡಿದ ಮನುಷ್ಯನು ಈ ರೂಪವಾದದ್ದು ತುಲಾರಾಶಿ, ಸಸಸ್ಯದಹನಾ-ಒಂದು ಕೈಯಲ್ಲಿ ಸಸ್ಯವನ್ನು ಮತ್ತೊಂದು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ಇರುವ ಕನ್ಯೆಯ ರೂಪವಾಗಿರುವುದು ಕನ್ಯಾರಾಶಿ, ಶೇಷಾಃ - ಅವಶಿಷ್ಟವಾದ ಇಲ್ಲಿ ವರ್ಣಿಸದೆ ಇರುವ, ಮೇಷ, ವೃಷಭ, ಕರ್ಕಾಟಕ, ಸಿಂಹ, ವೃಶ್ಚಿಕ ರಾಶಿಗಳೂ, ಸ್ವನಾಮ ಸದೃಶಾಃ-ತಮ್ಮ ತಮ್ಮ ಹೆಸರಿಗೆ ತಕ್ಕ ಸ್ವಭಾವರೂಪುವುಳ್ಳದ್ದಾಗಿರುತ್ತವೆ. ಅದು ಹೇಗೆಂದರೆ-ಮೇಷರಾಶಿ ಮೇಷಾಕಾರ, ವೃಷಭರಾಶಿ ವೃಷಭಾಕಾರ, ಕರ್ಕಾಟಕ ಕನಳ್ಳಿಯ ಆಕಾರ, ಸಿಂಹ-ಸಿಂಹಾಕಾರ, ವೃಶ್ಚಿಕ- ಚೇಳಿನ ಆಕಾರ, ಸರ್ವೇ - ಮೇಷಾದಿ ಸಮಸ್ತರಾಶಿಗಳು, ಸ್ವಚರಾಃ - ತಮ್ಮ ತಮ್ಮ ವಿಹಾರಸ್ಥಾನಗಳಲ್ಲಿ, ಭವಂತಿ - ಆಗುತ್ತವೆ. ಆ ವಿಹಾರಸ್ಥಾನಗಳ ವಿಷಯದಲ್ಲಿ ಯವನಾಚಾರ್ಯರು ಹೇಳಿರುವುದನ್ನು ಉದಾಹರಣಾರ್ಥವಾಗಿ ಇಲ್ಲಿ ಹೇಳಲ್ಪಟ್ಟಿರುತ್ತೆ.

---

ಕನ್ಯೆ ಅಂದರೆ ಋತುಮತಿಯಾಗದ, ವಿವಾಹವಾಗದ ಹುಡುಗಿ

## ೧ ಮೇಷರಾಶಿ ಸ್ವರೂಪಂ

ಶ್ಲೋಕ॥ ಆದ್ಯಸ್ಸ್ರುತೋ ಮೇಷಸಮಾನಮೂರ್ತಿಃ - ಕಾಲಸ್ಯಮೂರ್ಧಾ ಗದಿತಃ ಪುರಾಣೈಃ ॥ ಸೋಚಾವಿಕಾಪಂಚರಕಂದರಾದ್ರಿ ಸ್ತೇನಾಗ್ನಿ ಧಾತ್ವಾಕರರತ್ನಭೂಮಿಃ ॥೧೬॥ ತಥಾಚನೀಲಕಂಠಃ ॥ ಪುರ್ಮಾಶ್ಚರೋಗ್ನಿಃ ಸುಧೃಢಶ್ಚತುಷ್ಪಾತ್ ರಕ್ತೋಷ್ಣಪಿತ್ತೋ ತೀರಪೂರ್ದ್ಧಿರುಗ್ರಃ ॥ ಪೀತೋದಿನಂಪ್ರಾಗ್ವಿಷತೋದಯೋಲ್ಪಸಂಗ ಪ್ರಜೋಃಖುಕ್ಷಃ ಸಮೋಜಃ ॥೧೭॥

ತಾ॥ ಮೇಷ ಸಮಾನ ಶರೀರ, ಕಾಲಪುರುಷನ ಶಿರೋಭಾಗ, ಪ್ರಕಾಶಮಾನ, ಬೆಟ್ಟದ ತುದಿಯಲ್ಲಿ ಸಂಚಾರ, ಕಳ್ಳ-ಅಗ್ನಿ ಧಾತು, ರತ್ನ, ಭೂಮಿರಾಶಿ-ಮತ್ತು ನೀಲಕಂಠತಾಚಕದಲ್ಲಿ ಮೇಷರಾಶಿ, ಸ್ವಭಾವ, ಪುರುಷರಾಶಿ, ಚರ, ಅಗ್ನಿರಾಶಿ, ದೃಢಾಂಗ, ಚತುಷ್ಪಾದ, ರಕ್ತವರ್ಣ, ಉಷ್ಣಸ್ವಭಾವ, ಮಹಾಶಬ್ದ, ಪರ್ವತ ಸಂಚಾರಿ, ಉಗ್ರ, ಪೀತವರ್ಣ, ದಿವಾಬಲೀ, ಪೂರ್ವದಿಕ್ಸ್ವಾಮಿ, ವಿಷಮೋದಯ, ಅಲ್ಪಸಂಗ, ಅಲ್ಪಪ್ರಜ, ಕಾಂತಿರಹಿತ, ಕ್ಷತ್ರಿಯವರ್ಣ, ಸಮಾಂಗ ಈ ಗುಣಗಳಿಂದ ಕೂಡಿರುವುದು, ಜನನಕಾಲ ಲಕ್ಷಣಕ್ಕೂ, ಚೋರಾದಿ ಪ್ರಶ್ನೆಗೂ ಪ್ರಯೋಜನವಾಗಿರುವುದು ॥೨॥

## ವೃಷಭರಾಶಿಸ್ವರೂಪಮಾಹ

ಶ್ಲೋಕ॥ ವೃಷಾಕೃತಿಸ್ತು ಪ್ರಥಿತೋದ್ವಿತೀಯಃ । ಸವಕ್ತ್ರಕಂಠಾಯತಪಂ ವಿಧಾತುಃ । ವನಾದ್ರಿಸಾನುದ್ವಿಪಗೋಕುಲನಾಂ । ಕೃಷೀವಲಾನಾ ಮಧಿವಾಸಭೂಮಿಃ ॥೧೮॥ ನೀಲಕಂಠಃ॥ ವೃಷಸ್ಥಿರಸ್ತ್ರೀಕ್ಷಿತಿಶೀತ ಖುಕ್ಸ್ನೋಯುವೋಟ್ ಸುಭೂರ್ವಾಯುನಿಶಾ ಚತುಷ್ಪಾತ್ ॥ ಶ್ವೇತೋತಿಶಬ್ದೋ ವಿಷವೋದಯುಶ್ಚ ಮಧ್ಯಪ್ರಜಾಸಂಗ ಶುಭೋಪಿವೈಶ್ಯಃ ॥೧೯॥

ಟೀಕು॥ ವೃಷಭರಾಶಿ, ವೃಷಭಾಕಾರ ಮೇಷಾದಿಯಾಗಿ ೨ ನೇ ರಾಶಿ ಕಾಲ ಪುರುಷನಬಾಯಿ, ಕುತ್ತಿಗೆ ನೀಲವಾಗಿರುವುದು, ಸತುಧಾತುವಿನ ಬೆಟ್ಟ, ಜರಿ, ಗೋಕುಲದಲ್ಲಿ ಸಂಚರಿಸುವುದು, ಕೃಷೀವಲರಿಗೆ ಪ್ರೀತಿ, ಭೂರಾಶಿ, ನೀಲಕಂಠ ತಾಚಕದಲ್ಲಿ, ವೃಷಭ-ಸ್ಥಿರ, ಸ್ತ್ರೀ, ಭೂಮಿ, ರಾಶಿ, ಶೀತಸ್ವಭಾವ, ಕಾಂತಿರಹಿತ, ದಕ್ಷಿಣದಿಕ್ಸ್ವಾಮಿ, ಸುಭೂಮಿಚಾರಿ, ವಾಯುಪ್ರಕೃತಿ, ರಾತ್ರಿಬಲ, ಚತುಷ್ಪಾದ, ಶುಭ್ರವರ್ಣ, ಮಹಾಶಬ್ಧ, ವಿಷಮೋದಯ, ಮಧ್ಯಪ್ರಜಾಸಂಗ, ಸೌಮ್ಯ, ವೈಶ್ಯವರ್ಣ, ಶ್ಲಥಾಂಗ, (ಶಿಥಿಲಾಂಗ) ಈ ಲಕ್ಷಣಗಳು ವೃಷಭರಾಶಿಗೆ ಇರುತ್ತವೆ. ॥೪॥

## ಮಿಥುನರಾಶಿ ಸ್ವರೂಪಮಾಹ

ಶ್ಲೋಕ।। ನೀಲಕಂಠಃ ।। ಪ್ರತ್ಯಕ್‌ಸಮೀರಃ ಶುಕಭಾದ್ವಿಪನ್ನಾ ದ್ವಂದ್ವಂ ದ್ವಿಮೂರ್ತಿರ್ವಿಷಮೋದಯೋಷ್ಣಃ ।। ಮಧ್ಯ ಪ್ರಜಾಸಂಗವನಸ್ಥ ಶೂದ್ರೋದೀರ್ಘಸ್ವನ ಸ್ನಿಗ್ಧದಿನೇಟ್‌ತಥೋಗ್ರಃ ।।೨೦।। ಯವನಃ ।। ವೀಣಾಗದಾ ಭೃನ್ಮಿಥುನಂ ತೃತೀಯಃ ಪ್ರಜಾಪತೇ ಸ್ಕಂಧ ಭುಜಾಂಸ ದೇಶಃ ।। ಪ್ರಣರ್ತಕೊದ್ಗಾಯಕ ಶಿಲ್ಪಕ ಸ್ತ್ರೀ ಕ್ರೀಡಾರತಿರ್ದ್ಯೂತ ವಿಹಾರಭೂಮಿಃ ।।೨೧।।

ಟೀಕು।। ತೃತೀಯವಾದ-ಮಿಥುನರಾಶಿ - ಪಶ್ಚಿಮದಿಕ್ಕಿಗೆ - ಅಧಿಪತಿ, ವಾಯು ರಾಶಿ ಶುಕಕಾಂತಿ (ಗಿಳಿಯಬಣ್ಣ) ದ್ವಿಪದ ಪುರುಷನರಾಶಿ, ದ್ವಿಸ್ವಭಾವ (ಅಂದರೆ ಸ್ಥಿರರಾಶಿಯ ಕಡೆಗೆ ೧/೨ ಭಾಗ ಸ್ಥಿರ ಅನಂತರ ಚರರಾಶಿಯ ಕಡೆಗೆ ೧/೨ ಭಾಗ ಚರ, ಆದ್ದರಿಂದ ಈ ರಾಶಿಗೆ ದ್ವಿಸ್ವಭಾವರಾಶಿಯೆಂದು ಹೆಸರಾಗಿದೆ) ಇದಕ್ಕೆ ಪ್ರಮಾಣ-ನಾರದೀಯ ಸಂಹಿತೆಯಲ್ಲಿ ಚರ ಸ್ಥಿರ ದ್ವಿಸ್ವಭಾವೊ ಮೇಷಾದಿ ಕ್ರಮಶೋಭವೇತ್।। ಭಟ್ಟೋತ್ಪಲಃ ।। ಚರರಾಶೌ ವಿಪರೀತಂ ಮಿಶ್ರಂವಾಚ್ಯಂ ದ್ವಿಮೂರ್ತ್ಯುದಯೆ।। ಸ್ಥಿರವತ್ಪ್ರಥಮೇರ್ಧಸ್ಯಾ ದಪರೇ ಚರರಾಶಿವತ್ಸರ್ವ ಇತಿ।।೨೨।। ವಿಷಮೋದಯ, ಉಷ್ಣಸ್ವಭಾವ, ಮಧ್ಯಪ್ರಜಾಸಂಗ, ವನಚಾರೀ-ಶೂದ್ರವರ್ಣ, ಮಹಶಬ್ದ, ಸ್ನಿಗ್ಧ, ದಿವಾಬಲೀ, ಉಗ್ರಸ್ವಭಾವ ।।೫।। ಯವನಃ।। ಪುರುಷನು ಗದೆಹಿಡಿದುಕೊಂಡು, ಸ್ತ್ರೀಯು ವೀಣೆಯನ್ನು ಹಿಡಿದುಕೊಂಡು ಏಕತ್ರ ಇರುವದು, ಕಾಲಪುರುಷನ ಸ್ಕಂದ, ಭುಜ, ಕುಣಿಯುವುದು, ಗಾಯನಮಾಡುವುದು, ಶಿಲ್ಪೀ, ಸ್ತ್ರೀ ಕ್ರೀಡಾರತಿ ವಿಹಾರಭೂಮಿಯಲ್ಲಿ ಸಂಚರಿಸುವುದು ಮತ್ತು ದ್ಯೂತಸ್ವಭಾವ, ಈ ಗುಣಗಳಿಂದ ಮಿಥುನರಾಶಿ ಕೂಡಿರುವುದು ।।೬।।

## ಕರ್ಕಾಟಕ ರಾಶಿ ಸ್ವರೂಪಮಾಹ

ಶ್ಲೋಕ।। ನೀಲಕಂಠಃ ।। ಬಹು ಪ್ರಜಾಸಂಗಪದಃ ಕುಲೀರ ಶ್ವರೋಂಗನಾ ಪಾಟಲಿ ಹೀನಶಬ್ದಃ ।। ಶುಭಃ ಕಫೀಸ್ನಿಗ್ಧ ಜಲಾಂಬುಚಾರೀ ಸಮೋದಯೀ ವಿಪ್ರನಿಶೋತ್ತರೇಶಃ ।।೨೩।। ಯವನಾಚಾರ್ಯಃ ।। ಕರ್ಕಃ ಕುಳೀರಾಕೃತಿರಂಬುಸಂಸ್ಥೋವಕ್ಷಃಪ್ರದೇಶೋ ವಿಹಿತಶ್ಚಧಾತುಃ।। ಕೇದಾರವಾಪೀ ಪುಲಿನಾನಿತಸ್ಯ ದೇವಾಂಗನಾ ರಮ್ಯವಿಹಾರ ಭೂಮಿಃ।।೨೪।।

ಟೀಕು।। ಕರ್ಕಾಟಕ ರಾಶಿಸ್ವರೂಪವು ಹೇಳಲ್ಪಡುತ್ತೆ. ಬಹು ಪ್ರಜಾ, ಬಹುಸಂಗ, ಬಹುಚಾರಣ, ಚರ, ಸ್ತ್ರೀರಾಶಿ, ಪಾಟಲವರ್ಣ, (ಶ್ವೇತರಕ್ತಸ್ತು

ಪಾಟಲಃ ಇತ್ಯಮರಃ) ನಿಶ್ಶಬ್ದ, ಶುಭರಾಶಿ, ಕಫಪ್ರಕೃತಿ, ಸ್ನಿಗ್ಧ, ಜಲರಾಶಿ, ಸಮೋದಯಾ, ಬ್ರಾಹ್ಮಣವರ್ಣ, ರಾತ್ರಿಬಲೀ, ಉತ್ತರದಿಕ್ಕಿಗೆ ಅಧಿಪತಿ ॥೨೩॥ ಯವನೇಶ್ವರ ಹೇಳಿರುವದೇನೆಂದರೆ- ಕರ್ಕಾಟಕರಾಶಿ-ಕುಳೀರಾಕೃತಿ ನೀರಿನಲ್ಲಿರುವದು ಕಾಲಪುರುಷನ ವಕ್ಷಸ್ಥಳ, ಧಾತುರಾಶಿ, ಹಳ್ಳ ಭಾವಿ ಮತ್ತು ನೀರಿನ ಭೂಪ್ರದೇಶದಲ್ಲಿ ಸಂಚರಿಸುವುದು. ದೇವತೆಗಳಿಗೆ ಯೋಗ್ಯವಾದ ರಮ್ಯಭೂಮಿಯಲ್ಲಿ ವಿಹರಿಸುತ್ತದೆ ॥೨೪॥

## ಸಿಂಹರಾಶಿ ಸ್ವರೂಪಮ್

ಶ್ಲೋಕ॥ ಪುಮಾಂಶ್ಚಿರೋಗ್ನಿರ್ದಿನಪೀತರುಕ್ಷೋ ಪಿತ್ತೋಷ್ಣಪೂರ್ವೇ ಶಧೃಢಶ್ಚ ಕೋಷ್ಪಾತ್॥ ಸಮೋದಯೋ ದೀರ್ಘರವ್ರೋಲ್ಪಸಂಗ ಪ್ರಜೋಹರಿ ಶೈಲನೃಪೋಗ್ರಧೂಮ್ರಃ ॥೨೫॥ ಯವನೇಶ್ವರಃ॥ ಸಿಂಹಶ್ಚಶೈಲೇಚ ಹೃದಿಪ್ರದೇಶಂ ಪ್ರಜಾಪತೇಃ ಪಂಚಮಮಾಹುರಾರ್ಯಾಃ॥ ಕನ್ಯಾಟವೀದುರ್ಗ ಗುಹಾವನೇದ್ರಿವ್ಯಾಧಾವನೀದುರ್ಗ ವನಪ್ರದೇಶಃ ॥೨೬॥

ತಾ॥ ಸಿಂಹರಾಶಿ ಸ್ವರೂಪ ಮತ್ತು ಲಕ್ಷಣವನ್ನು ಹೇಳುತ್ತಾನೆ. ಸಿಂಹರಾಶಿ, ಪುರುಷರಾಶಿ, ಸ್ಥಿರ, ಅಗ್ನಿರಾಶಿ, ದಿವಾಬಲೀ, ಪೀತವರ್ಣ, ರೂಕ್ಷ, ಪಿತ್ತೋಷ್ಣಧಾತು, ಪೂರ್ವದಿಗ್ರಾಶಿ, ದೃಢಶರೀರ, ಚತುಷ್ಪದ, ಸಮೋದಯ, ದೀರ್ಘರವ, ಅಲ್ಪಸಂಗ, ಅಲ್ಪಪ್ರಜ, ಹರಿ -- ಶೈಲವನಚಾರಿ, ಕ್ಷತ್ರಿಯವರ್ಣ, ಉಗ್ರ, ಧೂಮ್ರ ಈ ಗುಣಗಳಿಂದ ಕೂಡಿರುವುದು. ಮತ್ತು ಯವನಾಚಾರ್ಯರು ಹೇಳಿರುವುದೇನೆಂದರೆ - ಸಿಂಹರಾಶಿ ಶೈಲವನಚಾರೀ, ಕಾಲಪುರುಷನ ಹೃದಯ ಪ್ರಜಾಗತಿ ಪಂಚಮರಾಶಿ, ಅಡವಿದುರ್ಗ ಗುಹಾ ವನಾದ್ರಿಯಲ್ಲಿ ಸಂಚರಿಸತಕ್ಕ ಸ್ವಭಾವವುಳ್ಳದ್ದಾಗಿರುವುದು.

## ಕನ್ಯಾರಾಶಿ ಸ್ವರೂಪಮ್

ಶ್ಲೋಕ॥ ತಾಚಕೆ । ಪಾಣ್ಯುರ್ದ್ವಿಪಾತ್ ಸ್ತ್ರಿದ್ವಿತಮುರ್ಯಮಾಶಾ । ನಿಶಾಮರುಚ್ಛೇತಸಮೋದಯಕ್ಷ್ಮಾ॥ ಕನ್ಯಾರ್ದಶಬ್ದಾ ಶುಭಭೂಮಿ-ವೈಶ್ಯಾರೂಕ್ಷಾಲ್ಪಸಂಗ ಪ್ರಸವಾ ಶುಭಾಚ ॥೨೭॥ ಯವನಃ॥ ಪ್ರದೀಪಿ ಕಾಂಗ್ಯಹ್ಯಕರೇಣ ಕನ್ಯಾನೌಸ್ಥಾಜಲೇಷಷ್ಠ ಮಿತಿಬೃವಂತಿ ॥ ಕಲಾರ್ಥಧೀರಾ ಜಠರಂ ವಿಧಾತು ಪಶಾಡಲ ಸ್ತ್ರೀರತಿಶಿಲ್ಪ ಭೂಮಿಃ ॥೨೮॥

ತಾ।। ಕನ್ಯಾರಾಶಿಸ್ವರೂಪವು ಹೇಳಲ್ಪಡುತ್ತೆ. ಪಿಂಗಳವರ್ಣ:, ದ್ವಿಪದ, ಸ್ತ್ರೀರಾಶಿ, ದ್ವಿಸ್ವಭಾವ, ದಕ್ಷಿಣದಿಕ್‌ಸ್ವಾಮಿ, ರಾತ್ರಿಬಲೀವಾಯುಪ್ರಕೃತಿ, ಶೀತ ಸ್ವಭಾವ, ಸಮೋದಯ, ಭೂಮಿರಾಶಿ, ಅರ್ಧಶಬ್ದ, ಶುಭಭೂಮಿಚಾರೀ ವೈಶ್ಯ ವರ್ಣ, ಕಾಂತಿರಹಿತ, ಅಲ್ಪಸಂಗ, ಅಲ್ಪಪ್ರಸವ, ಶುಭ, ಸೌಮ್ಯರಾಶಿ, ।।ಯವನ:।। ಕನ್ಯಾರಾಶಿಯಸ್ವಭಾವ-ಕನ್ಯೆಯು ಒಂದು ಕೈಯಲ್ಲಿ ಸಸಿಯನ್ನು, ಮತ್ತೊಂದು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ನೀರಿನಲ್ಲಿ ತೆಪ್ಪದ (ನೌಕೆ) ಮೇಲೆ ಕುಳಿತು ಕೊಂಡಿರುತ್ತದೆ. ಕಲಾರ್ಧ ತಿಳಿದದ್ದು, ಕಾಲಪುರುಷನ ಜಠರಪ್ರದೇಶ, ವೈಶ್ಯವರ್ಣ, ಶಾಡ್ವಲಭೂಮಿ, ಸ್ತ್ರೀರಾಶಿ, ರತಿಶಿಲ್ಪಭೂಮಿಯಲ್ಲಿ ಸಂಚರಿಸುವ ಗುಣವುಳ್ಳದ್ದಾಗಿದೆ. ।।೧೧ ।। ೧೨।।

## ತುಲಾರಾಶಿ ಸ್ವರೂಪಮ್

ಶ್ಲೋಕ।। ಪೂರ್ಮಾಶ್ಚರಶ್ಚಿತ್ರಸಮೋದಯೋಷ್ಣ: । ಪತಙ್ಗರುತ್ಸ್ನಿಗ್ಧರವೋಕ ನವನ್ಯ: ।। ಸ್ವಲ್ಪಪ್ರಜಾಸಂಗಮಶೂದ್ರ ಉಗ್ರಸ್ತುಲೋದ್ಯು ವೀರ್ಯೋ ದ್ವಿಪದ: ಸಮಾನ: ।।೨೯।। ಯವನ:।। ವೀಥ್ಯಾಂತುಲಾ ಪಣ್ಯ ಧೂರೇಮನುಷ್ಯ: ಸ್ಥಿತಸ್ಸನಾಭೀಕಟವಸ್ತಿ ದೇಶೇ ।। ಶುಲ್ಕಾರ್ಥ ವಿದ್ಯಾಪಣಪತ್ತ ನಾರ್ದ್ವಾಧಿ ವಾಗೋನ್ನತಸಸ್ಯಭೂಮಿ: ।।೩೦।।

ತಾ।। ತುಲಾರಾಶಿಸ್ವರೂಪ ಹೇಳಲ್ಪಡುತ್ತೆ. ಪುರ್ಮಾ, ಚರರಾಶಿ, ನಾನಾ ವಿಧ ಚಿತ್ರವರ್ಣ, ಸಮೋದಯ, ಉಷ್ಣ, ಪಶ್ಚಿಮದಿಕ್ಕಿಗೆ ಅಧಿಪತಿ, ವಾಯು ರಾಶಿ, ಸ್ನಿಗ್ಧ, ನಿಶ್ಶಬ್ದ, ವನಚಾರೀ, ಸ್ವಲ್ಪಪ್ರಜಾಸಂಗ, ಸ್ವಲ್ಪಪ್ರಸವ, ಶೂದ್ರವರ್ಣ, ಕ್ರೂರ, ದಿವಾಬಲಿ, ದ್ವಿಪದ, ಸಮಾಂಗ, ಶಿಥಿಲಾಂಗ. ।।ಯವನ:।। ಕೈಯಲ್ಲಿ ತಕ್ಕಡಿ ಹಿಡಿದುಕೊಂಡು ಇರುವನು, ಕಾಲಪುರುಷ ವಸ್ತಿ ಪ್ರದೇಶ, ಪಟ್ಟಣದಲ್ಲಿ ಸಂಚರಿಸುವ ಸ್ವಭಾವ, ಉನ್ನತಾಂಗ ಸಸ್ಯಭೂಮಿಸಂಚಾರೀ - ಈ ಗುಣಗಳಿಂದ ಕೂಡಿರುವುದು. ।।೧೩ ।। ೧೪।।

## ವೃಶ್ಚಿಕರಾಶಿ ಸ್ವರೂಪಮ್

ಶ್ಲೋಕ।। ತಾಜಕೇ।। ಸ್ಥಿರಸ್ಸಿತಸ್ತ್ರೀಜಲಮುತ್ತರೇಶ ನಿಶಾರವೊನೊ ಬಹುಪಾತ್ ಕಫೀಚ ।। ಸವೋದಯೋವಾರಿಚರೋತಿಸಂಗ ಪ್ರಜ:ಶುಭ: ಸ್ನಿಗ್ಧತನುರ್ದಿಜೋಳಿ: ।।೩೦।। ಯವನ:।। ಶ್ವಭ್ರೇಷ್ವಮೊ ವೃಶ್ಚಿಕ ವಿಗ್ರಹಸ್ತು ಪ್ರೋಕ್ತ: ಪ್ರಭೋರ್ಮೇಢ್ರಗುದ ಪ್ರದೇಶ: ।। ಗುಹಾ ಬಲಶ್ವಭ್ರದಿವಾತ್ಮ ಗುಪ್ತಿರ್ವಲ್ಮೀಕಕೀಟಾಜಗರಾಹಿಭೂಮಿ: ।।೧೬।।

ತಾ।। ವೃಶ್ಚಿಕರಾಶಿಲಕ್ಷಣ-ಸ್ಥಿರರಾಶಿ, ಶುಭ್ರವರ್ಣ, ಸ್ತ್ರೀರಾಶಿ, ಜಲರಾಶಿ, ಉತ್ತರದಿಕ್ಕಿಗೆ ಅಧಿಪತಿ, ರಾತ್ರೀಬಲೀ, ನಿಶ್ಶಬ್ದ, ಬಹುಪದ, ಕಫ ಪ್ರಕೃತಿ, ಸಮೋದಯ, ವಾರಿಚಾರ, ಬಹುಸ್ತ್ರೀಸಂಗ, ಬಹುಪ್ರಜ, ಸೌಮ್ಯ, ಸ್ನಿಗ್ಧಶರೀರ, ಬ್ರಾಹ್ಮಣವರ್ಣ, ಚೇಳಿನ ಆಕಾರವುಳ್ಳದಾಗಿರುವುದು. ಯವನಾಚಾರ್ಯರ ಮತದಲ್ಲಿ-ವೃಶ್ಚಿಕರಾಶಿ - ವೃಶ್ಚಿಕಾಕಾರವುಳ್ಳದ್ದು, ಕಾಲಪುರುಷನ ಮೇಢ್ರಗುದಪ್ರದೇಶ, ಗುಹೆ, ಜಲ, ತೂತು ಈ ಸ್ಥಳದಲ್ಲಿ ವಾಸಿಸುವುದು. ದಿವಾಬಲೀ, ಕೀಟರಾಶಿ, ಹುತ್ತ ಅಜಗರ ಸಂಚಾರವುಳ್ಳ ಭೂಮಿಯಲ್ಲಿ ಸಂಚರಿಸುವುದು. ।।೧೫ ।। ೧೬।।

## ಧನೂರಾಶಿ ಸ್ವರೂಪಮ್

ಶ್ಲೋಕ।। ನಾಸ್ವರ್ಣಭಾಃ ಶೈಲಸಮೋದಯೋತಿ ಶಬ್ದೋನಂಪ್ರಾಕ್ ದೃಢ ರೂಕ್ಷಪೀತಃ।। ರಜೋಽಷ್ಣಪಿತ್ತೋಧನುರಲ್ಪಸೂಕ್ತಿ ಸಂಗೋದ್ವಿ-ಮೂರ್ತಿರ್ದ್ವಿಪದೋಗ್ನಿರುಗ್ರಃ।।೩೨।। ಯವನಃ।। ಧ್ವನೀ ಮನುಷ್ಯೋ ಹಯಪಶ್ಚಿಮಾರ್ಧ ಸ್ತಮಾಹುರುರೂ ಭವನ ಪ್ರಣೇತುಃ ।। ಸಮಸ್ಥಿಂವ್ಯಸ್ತ ಸಮಸ್ತವಾಜಿ ಶೂರಾಸ್ತ್ರಭೃದ್ಯಜ್ಞರಥಾಶ್ವಭೂಮಿಃ ।।೩೩।।

ತಾ।। ಧನುರಾಶಿ ಸ್ವರೂಪ ಮತ್ತು ಲಕ್ಷಣವೇನೆಂದರೆ - ಪುರುಷ ರಾಶಿ, ಸ್ವರ್ಣಕಾಂತಿ, ಪರ್ವತಚಾರೀ, ಸಮೋದಯ, ಅತಿಶಬ್ದ, ದಿವಾಬಲಿ, ಪೂರ್ವ ದಿಕ್ಕಿಗೆ ಅಧಿಪತಿ, ದೃಢಾಂಗ, ಕಾಂತಿರಹಿತ, ಪೀತವರ್ಣ, ಕ್ಷತ್ರಿಯವರ್ಣ, ಉಷ್ಣ ಪಿತ್ತಪ್ರಕೃತಿ, ಅಲ್ಪಸೂಕ್ತಿ, ಅಲ್ಪಪ್ರಜ, ಅಲ್ಪಸಂಗ, ದ್ವಿಸ್ವಭಾವ, ದ್ವಿಪದ, ಇದರಲ್ಲಿ ವಿಶೇಷವೇನೆಂದರೆ - ಧನೂರಾಶಿಯ ಪೂರ್ವಾರ್ಧ ದ್ವಿಪದ, ಉತ್ತರಾರ್ಧ - ಚತುಷ್ಪದ, ಅಗ್ನಿರಾಶಿಃ, ಉಗ್ರ, ದ್ವಿವರ್ಣ - ಸುವರ್ಣವರ್ಣ, ಪೀತವರ್ಣ, ಈ ಗುಣಗಳಿಂದ ಕೂಡಿರುವುದು ।।೧೭।। ಧನುರಾಶಿಯು, ಕಟಿಭಾಗದಿಂದ ಕೆಳಗೆ ಅಶ್ವಾಕಾರವಾಗಿಯೂ, ಮೇಲ್ಭಾಗದಲ್ಲಿ ಮನುಷ್ಯಾಕಾರವಾಗಿ ಧನುರ್ಬಾಣವನ್ನು ಹಿಡಿದುಕೊಂಡು, ಸಮಶರೀರ ಯಾಜ್ಞ ರಥಾಶ್ವ ಭೂಮಿಯಲ್ಲಿ ಸಂಚರಿಸುವುದು।।೧೮।।

## ಮಕರರಾಶಿ ಸ್ವರೂಪಮ್

ಶ್ಲೋಕ।। ತಾಚಕೇ ।। ಮೃಗಶ್ಚರಃ ರಕ್ಷ್ಯಾರ್ಧರವೋಯ ಮಾಶಾಸ್ತ್ರೀ-ಪಿಂಗರೂಕ್ಷಃ ಶುಭಭೂಮಿಶೀತಃ ।। ಸ್ವಲ್ಪಪ್ರಜಾಸಂಗ ಸಮೀರ ರಾತ್ರಿ ರಾದೌ ಚತುಷ್ಪಾ ದ್ವಿಷವೋದಯೋಽವಿಟ್ ।।೩೪।। ಮೃಗಾರ್ಧಪೂರ್ವೋ ಮಕರೋಂಬುಚಾರೀ ಜಾನುಪ್ರದೇಶಂತಮಂ

ಶಂತಿಧಾತುಃ ॥ ನದೀವನಾರಣ್ಯ ಪರಸ್ಯನೂಪಶ್ವಭ್ರಾದಿವಾಸೋ-
ದಶಮಃಪ್ರದಿಷ್ಟಃ ॥

ತಾ॥ ಮಕರರಾಶಿ, ಚರ, ಭೂಮಿರಾಶಿ, ಅರ್ಧಶಬ್ದಃ, ದಕ್ಷಿಣದಿಕ್ಕಿಗೆ ಅಧಿಪತಿ, ಸ್ತ್ರೀರಾಶಿ, ಪಿಂಗಳವರ್ಣ, ಕಾಂತಿರಹಿತ, ಸೌಮ್ಯ, ಭೂಮಿಚಾರೀ, ಶೀತಲ ಸ್ವಭಾವ, ಸ್ವಲ್ಪಪ್ರಜಾ, ಸ್ವಲ್ಪ ಸ್ತ್ರೀಲಿಂಗ, ವಾತಪ್ರಕೃತಿ, ರಾತ್ರಿಬಲೀ, ಚತುಷ್ಪಾತ್ (ಇದರಲ್ಲಿ ವಿಶೇಷ) ಪೂರ್ವಾರ್ಧ ಚತುಷ್ಪದತ್ವ, ಉತ್ತರಾರ್ಧ, ಜಲಚರ, ವಿಷಮೋದಯ, ವೈಶ್ಯವರ್ಣ, ಶ್ಲಥಾಂಗ ॥೧೯॥ ಯವನಾಚಾರ್ಯ ಮತದಲ್ಲಿ, ಮೃಗರಾಶಿಯ ಪೂರ್ವಾರ್ಧ ಚತುಷ್ಪದ-ಉತ್ತರಾರ್ಧ ಜಲಚರ ಕಾಲಪುರುಷನ ಜಾನುಪ್ರದೇಶ, ನದೀವನ ಅರಣ್ಯಸಂಚಾರ ಶ್ವಭ್ರದಲ್ಲಿ ವಾಸ, ಈ ಲಕ್ಷಣವುಳ್ಳದ್ದಾಗಿರುವುದು.

## ಕುಂಭರಾಶಿ ಸ್ವರೂಪಮ್

ಶ್ಲೋಕ॥ ತಾಜಿಕೆ ॥ ಕುಂಭೋಲ್ಪದೋನಾದಿನಮಧ್ಯ ಸಂಗೆ ಪ್ರಸೂಃ ಸ್ಥಿರಃ ಕರ್ಬುರವನ್ಯವಾಯುಃ ॥ ಸ್ನಿಗ್ಧೋಷ್ಣಖಂಡಸ್ವರತುಲ್ಯಧಾತುಃ ಶೂದ್ರಃ ಪ್ರತೀಚೀ ವಿಷಮೋದಯೋಗ್ರಃ ॥೩೬॥ ಯವನೇಶ್ವರಃ ॥ ಸ್ಕಂಧೇತುರಿಕ್ತಃ ಪುರುಷಸ್ಯಕುಂಭೋಜಂಘೇತಮೇಕಾದದ-ಮಾಹುರಾರ್ಯಾಃ॥ ತಸ್ಯೋದಕಾಧಾರಕುಸಸ್ಯಪಕ್ಷಿಸ್ತ್ರೀ ಶೌಂಡಿಕದ್ಯೂತ ನಿವಾಸಭೂಮಿಃ ॥೩೭॥

ತಾ॥ ಕುಂಭರಾಶಿ - ಚರಣಹೀನ, ಪುರುಷರಾಶಿ, ದಿವಾಬಲೀ, ಮಧ್ಯಸಂಗ, ಮಧ್ಯಪ್ರಸವ, ಮಧ್ಯಸ್ತ್ರೀಸಂಗ, ಸ್ಥಿರ, ಚಿತ್ರವರ್ಣ, ವನಚಾರೀ, ವಾಯುರಾಶಿ, ಸ್ನಿಗ್ಧ, ಉಷ್ಣ, ಅರ್ಧಸ್ವರ, ತುಲ್ಯಧಾತು, ಸಮವಾತ ಪಿತ್ಥ ಕಫ-ಪ್ರಕೃತಿ, ಶೂದ್ರವರ್ಣ ಪಶ್ಚಿಮದಿಕ್ಕಿಗೆ ಅಧಿಪತಿ, ವಿಷಮೋದಯ, ಉಗ್ರಶ್ಲಥಾಂಗ ॥೨೦॥ ಯವನಾಚಾರ್ಯ ॥ ಕುಂಭರಾಶಿಯ ಸ್ವರೂಪ ಕುಂಭವನ್ನು ಭುಜದಮೇಲೆ ಹೊತ್ತುಕೊಂಡಿರುವುದು, ಕಾಲಪುರುಷನ ಜಂಘೆ ಉದಕಧಾರಾಸಹಿತವಾದದ್ದು, ಸ್ತ್ರೀ ಶೌಂಡಿಕದ್ಯೂತ ಭೂಮಿಯಲ್ಲಿ ವಾಸ, ಈ ಲಕ್ಷಣದಿಂದ ಕೂಡಿರುವುದು.

## ಮೀನರಾಶಿ ಸ್ವರೂಪಮ್

ಶ್ಲೋಕ॥ ನೀಲಕಂಠ॥ ಮೀನೋಪದ ಸ್ತ್ರೀಕಫವಾರಿ ರಾತ್ರಿರ್ನಿಶ್ಶಬ್ದಬಭ್ರು ದ್ವಿತನುರ್ಜಲಸ್ಥಃ॥ ಸ್ನಿಗ್ಧೋತಿಸಂಗಪ್ರಸವೋಕಪಃ ಶುಭೋತ್ತರಾಶ್ಯೇಟ್ ವಿಷಮೋದಯಶ್ಚ ॥೩೮॥ ಯವನ ॥ ಜಲೇತು ಮೀನದ್ವಯ-ಮತ್ಸ್ಯರಾಶಿಃ ಕಾಲಸ್ಯಪಾದೌ ವಿಹಿತೌವರಿಷ್ಠೌ॥ ಸಪುಣ್ಯದೇವ

ದ್ವಿಜತೀರ್ಥಭೂಮರ್ನದೀಸಮುದ್ರಾಂ ಬುಧರಾಧಿವಾಸಃ ॥೩೯॥

ತಾ॥ ಮೀನರಾಶಿಲಕ್ಷಣ:- ಚರಣಹೀನ, ಸ್ತ್ರೀರಾಶಿ, ಕಫಪ್ರಕೃತಿ, ಜಲರಾಶಿ, ರಾತ್ರೀಬಲೀ, ನಿಃಶಬ್ದ, ಪಿಂಗಳವರ್ಣ, ದ್ವಿಸ್ವಭಾವ, ಜಲದಲ್ಲಿವಾಸ, ಸ್ನಿಗ್ಧಂ, ಅತಿಸಂಗ ಪ್ರಸವ, ಅತ್ಯಂತ ಸ್ತ್ರೀಸಂಯೋಗ, ಅತ್ಯಂತ ಪ್ರಸವ, ಬ್ರಾಹ್ಮಣವರ್ಣ, ಸೌಮ್ಯ, ಉತ್ತರದಿಕ್ಕಿಗೆ ಅಧಿಪತಿ, ಉಭಯೋದಯ, ಶ್ಲಥಾಂಗ ॥ಯವನಃ॥ ಮೀನರಾಶಿ ಎರಡು ಮೀನುಗಳು, ಒಂದರತಲೆ ಒಂದರ ಬಾಲ, ಒಂದೊಂದು ಕಡೆಗೆ ಸೇರಿರುವುದು. ಕಾಲಪುರುಷನ ಪಾದ, ಪುಣ್ಯಸ್ಥಳ, ದೇವದ್ವಿಜತೀರ್ಥ ಈ ಸ್ಥಳದಲ್ಲಿ ಸಂಚರಿಸುವುದು. ನದೀ, ಸಮುದ್ರ, ಆಗಾಧವಾದ ನೀರು ಇಂಥಾ ಮಹಾಜಲದಲ್ಲಿ ವಾಸಿಸುವುದು ॥೨೩॥ ॥೨೪॥

ಈ ರಾಶಿಲಕ್ಷಣ ಸ್ವಭಾವದಲ್ಲಿ ಜೀವಶರ್ಮ ಮತದಲ್ಲಿ ಈ ಅರ್ಥವೇ ಕೊಡುತ್ತದೆ. ಶ್ಲೋಕ॥ ಮೇಷೇ ಮೇಷಾಕಾರೋರಮತೆ ಜಲಪಂಕೂರ್ಜಿತೇ ದೇಶೆ, ಕಟುತಿಕ್ತ ವಿಗಟಭೂಮೌಕಂಟಕ ವಿಷಮೋನ್ನತೇಚಸದಾ ॥೨೫॥ ಇತ್ಯಾದಿ ಲಕ್ಷಣವನ್ನು ಹೇಳಿರುತ್ತಾರೆ. ಮೇಷರಾಶಿಯು ಮೇಷಾಕಾರವಾಗಿ ನೀರು ಕೆಸರು ವರ್ಜಿತವಾದ ಪ್ರದೇಶದಲ್ಲಿ ಸಂಚರಿಸುವುದು, ಕಟುತಿಕ್ತ-ಅಡವೀ, ಕಲ್ಲು ಮುಳ್ಳು, ವಿಷಯವಾಗಿಯೂ ಉನ್ನತಪ್ರದೇಶದಲ್ಲಿಯೂ ಸಂಚರಿಸುತ್ತದೆ. ಇದುವರೆಗೂ ರಾಶಿಲಕ್ಷಣಗಳು ಹೇಳಲ್ಪಟ್ಟಿರುತ್ತೆ. ಆದರೆ ರಾಶಿ ಮೈತ್ರತ್ವ ಹೇಳದಿರುವುದರಿಂದ ರಾಶಿಸ್ವಭಾವ ಪೂರ್ತಿಯಾಗಲಿಲ್ಲ. ತಾಚಕೆ ॥ ಧರಾಂಬುನೋರಗ್ನಿ ಸಮೀರಯೋಶ್ಚ॥ ವರ್ಗೇಸುಹೃತ್ವಂ ಪರತೋರಿಭಾವಃ ಚಾಪಾಂತ್ಯಭಾಗಸ್ಯ ಚತುಷ್ಪದತ್ವಂ ಜ್ಞೇಯಂಮೃಗಾಂತ್ಯಸ್ಯ ಜಲೇಚರತ್ವಂ ॥

ತಾ॥ ಈ ರಾಶಿಗಳಲ್ಲಿ ಪೃಥ್ವೀರಾಶಿಗಳಿಗೂ ಜಲರಾಶಿಗಳಿಗೂ ಸಂಬಂಧವಿರುವುದರಿಂದ ಮಿತ್ರತ್ವವಿರುತ್ತೆ. ಅಗ್ನಿರಾಶಿಗಳಿಗೂ, ವಾಯುರಾಶಿಗಳಿಗೂ, ಸಂಬಂಧವಿರುವುದರಿಂದ ಮಿತ್ರತ್ವವಿರುತ್ತೆ. ಅನ್ಯಥಾ ಮಿತ್ರತ್ವವಿಲ್ಲ.

## ಉದಾಹರಣೆ

ಸಿಂಹರಾಶಿ, ಭೂರಾಶಿಮಾನ ಜಲರಾಶಿ ಆದ್ದರಿಂದ ಸಿಂಹರಾಶಿಗೂ ಮೀನರಾಶಿಗೂ ಮೈತ್ರತ್ವವಿದೆ. ಕುಂಭ ವಾಯುರಾಶಿ, ಮೇಷ ಅಗ್ನಿರಾಶಿ ಕುಂಭಕ್ಕೂ ಮೇಷಕ್ಕೂ ಮಿತ್ರತ್ವವಿದೆ. ಮೇಷ ಅಗ್ನಿರಾಶಿ, ಮೀನ ಜಲರಾಶಿ ಆದ್ದರಿಂದ

ಇವೆರಡಕ್ಕೂ ಮಿತ್ರತ್ವವಿಲ್ಲ. ಧನಸ್ಸು ಅಗ್ನಿರಾಶಿ, ಮಕರ ಭೂರಾಶಿ ಇವೆರಡಕ್ಕೂ ಮಿತ್ರತ್ವವಿಲ್ಲ. ಈ ಪ್ರಕಾರವೇ ತಿಳಿಯತಕ್ಕದ್ದು. ಧನುರಾಶಿಯ ಅಂತ್ಯಭಾಗ ಚತುಷ್ಪದವಾಗಿಯೂ, ಮಕರದ ಅಂತ್ಯಭಾಗ ಜಲಚರವಾಗಿಯೂ ವಿಶೇಷವಾಗಿ ತಿಳಿಯತಕ್ಕದ್ದು. ಈ ರಾಶಿ ಲಕ್ಷಣಗಳಿಂದ ಚೋರಾದಿ ಅಪಹರಿತವಸ್ತುವಿರತಕ್ಕ ಸ್ಥಳ ನಿರ್ದೇಶಕ್ಕೂ, ಜನನಕಾಲ ಲಕ್ಷಣಕ್ಕೂ ಪ್ರಯೋಜನವುಳ್ಳದ್ದಾಗಿದೆ.

## ಅಥ ರಾಶ್ಯಾಧಿಪತಯಃ

ಮೂಲ॥ ಕ್ಷಿತಿಜಸಿತಜ್ಞ ಚಂದ್ರ ರವಿ ಸೌಮ್ಯ ಸಿತಾವನಿಜಾಸ್ಸುರ ಗುರುಮಂದಸೌರಿಗುರವಶ್ಚಗೃಹಾಂಶಕಪಾಃ ॥ ಅಜಮೃಗತೌಳಿಚಂದ್ರಭವನಾದಿ ನವಾಂಶ ವಿಧಿರ್ಭವನ ಸಮಾಂಶಕಾಧಿಪಯಃ ಸ್ವಗೃಹಾತ್ ಕ್ರಮಶಃ ॥

ಅವತಾರಿಕೆ॥ ರಾಶಿನವಾಂಶ ದ್ವಾದಶಾಂಶ ಲಕ್ಷಣವನ್ನೂ, ತದಧಿಪತಿಗಳನ್ನೂ ಕ್ಷಿತಿಜ ಎಂಬ ಶ್ಲೋಕದಿಂದ ಹೇಳುತ್ತಾನೆ. ಕ್ಷಿತಿಜಾದಯೋಗ್ರಹಾಃ-ಕುಜನೇ ಮೊದಲಾದ ಗ್ರಹಗಳು, ಗೃಹಾಂಶಕಪಾಃ-ಮೇಷಾದಿ ರಾಶಿಗಳಿಗೂ, ಮೇಷಾದಿ ನವಾಂಶಗಳಿಗೂ ಅಧಿಪತಿಗಳಾಗುವರು. ಅದು ಹೇಗೆಂದರೆ:- ಕ್ಷಿತಿಜ:- ಅಂಗಾರಕನು ಮೇಷರಾಶಿಗೆ, ಸಿತಃ-ಶುಕ್ರನು ವೃಷಭರಾಶಿಗೆ, ಜ್ಞಃ-ಬುಧನು ಮಿಥುನರಾಶಿಗೆ, ಚಂದ್ರಃ-ಚಂದ್ರನು ಕರ್ಕಾಟಕರಾಶಿಗೆ, ರವಿಃ- ಸೂರ್ಯನು, ಸಿಂಹರಾಶಿಗೆ, ಸೌಮ್ಯಃ-ಬುಧನು ಕನ್ಯಾ ರಾಶಿಗೆ, ಸಿತಃ- ಶುಕ್ರನು ತುಲಾರಾಶಿಗೆ, ಅವನಿಜ-ಕುಜನು, ವೃಶ್ಚಿಕರಾಶಿಗೆ, ಸುರಗುರುಃ-ಬೃಹಸ್ಪತಿಯು, ಧನುಸ್ಸಿಗೆ, ಮಂದಃ-ಶನಿಯು ಮಕರರಾಶಿಗೆ, ಮಂದಃ- ಶನಿಯು ಕುಂಭರಾಶಿಗೆ, ಗುರುಃ- ಬೃಹಸ್ಪತಿಯು ಮೀನರಾಶಿಗೆ ಅಧಿಪತಿಗಳಾಗುವರು. ಈ ಗ್ರಹಗಳೇ ಮೇಷಾದಿ ನವಾಂಶಗಳಿಗೂ ಅಧಿಪತಿಗಳಾಗುವರು. ಅದು ಹೇಗೆಂದರೆ:-ಅಜಮೃಗತೌಳಿ ಚಂದ್ರಭವನಾದಿ ನವಾಂಶವಿಧಿಃ-ಅಜಾದಿ ಮೃಗಾದಿ ಪ್ರತ್ಯೇಕ ಅನ್ವಯಿಸಬೇಕು. ಅಜ- ಮೇಷಮೃಗಃ-ಮಕರತೌಳಿ-ತುಲೆಯಾಚಂದ್ರಭವನ-ಕರ್ಕಾಟಕವು ಆದಿಯಾಗಿ ನವಾಂಶ ಪ್ರಾರಂಭವಾಗುವುದು, ಅಜ-ಮೇಷಕವು, ಮೃಗ-ಮಕರವು, ತೌಳಿತುಲಾ, ಚಂದ್ರಭವನ-ಕರ್ಕಾಟಕ, ಆದಿನವಾಂಶಕವಿಧಿಃ. ಈ ಹೇಳಲ್ಪಟ್ಟ ೪ ರಾಶಿಗಳಿಗೂ, ಆ ರಾಶ್ಯಾದಿಯಾಗಿ ನವಾಂಶಾಧಿಪತಿಗಳಾಗುವರು. ಮೇಷರಾಶಿಗೆ ನವಾಂಶ ತಿಳಿಯಬೇಕು.

## ಉದಾಹರಣೆ

ಮೇಷರಾಶಿಗೆ-೧ ಮೇಷ, ೨ ವೃಷಭ, ೩ ಮಿಥುನ, ೪ ಕರ್ಕಾಟಕ, ೫ ಸಿಂಹ, ೬ ಕನ್ಯಾ, ೭ ತುಲಾ, ೮ ವೃಶ್ಚಿಕ, ೯ ಧನುಸ್ಸು ಇಲ್ಲಿಗೆ ಮೇಷರಾಶಿಗೆ ನವಾಂಶ ಪೂರ್ತಿಯಾಯಿತು. ವೃಷಭರಾಶಿಗೆ ನವಾಂಶ ಪ್ರಾರಂಭವಾಗಬೇಕಾದರೆ, ಇದರಂತೆ ವೃಷಭ ರಾಶಿಯಿಂದ ಪ್ರಾರಂಭವಾಗುವುದಿಲ್ಲ, ಮಕರಾದಿಯಿಂದ ಪ್ರಾರಂಭವಾಗುವುದು. ಅದು ಹೇಗೆಂದರೆ :- ಮೇಷರಾಶಿ ನವಾಂಶವು ಧನುರ್ನವಾಂಶೆ ಕೊನೆಯದಾದ ೯ ನೇ ನವಾಂಶವಾದ್ದರಿಂದ ಮೇಷದಿಂದ ೨ನೇ ರಾಶಿಯಾದ ವೃಷಭಕ್ಕೆ ನವಾಂಶ ಪ್ರಾರಂಭವಾಗದೆ ಮೇಷಕ್ಕೆ ೧೦ನೇದಾಗಿಯೂ, ವೃಷಭಕ್ಕೆ ೯ನೇದಾಗಿ ಇರುವ ಮಕರಾದಿ ಪ್ರಾರಂಭವಾಗಿ ಕನ್ಯಾ ನವಾಂಶವೇ ಅಂತ್ಯ ನವಾಂಶೆಯಾಗಿರುವುದು. ೧ ಮಕರ, ೨ ಕುಂಭ, ೩ ಮೀನ, ೪ ಮೇಷ, ೫ ವೃಷಭ, ೬ ಮಿಥುನ, ೭ ಕರ್ಕಾಟಕ, ೮ ಸಿಂಹ, ೯ ಕನ್ಯಾ ಈ ಪ್ರಕಾರ ನವಾಂಶಾಧಿಪತಿಗಳಾಗುವರು. ಮಿಥುನರಾಶಿಗೆ ನವಾಂಶ ಪ್ರಾರಂಭ, ಮಿಥುನಾದಿಯಾಗಿ ಆಗದೆ ವೃಷಭರಾಶಿ ನವಾಂಶ ಕನ್ಯೆಯೇ ಕೊನೇದಾದ್ದರಿಂದ ಮಿಥುನಕ್ಕೆ ತುಲಾರಾಶ್ಯಾದಿ ಮಿಥುನವೆ ಅಂತ್ಯ ನವಾಂಶವಾಗುವುದು. ೧ ತುಲ, ೨ ವೃಶ್ಚಿಕ, ೩ ಧನುಸ್ಸು, ೪ ಮಕರ, ೫ ಕುಂಭ, ೬ ಮೀನ, ೭ ಮೇಷ, ೮ ವೃಷಭ, ೯ ಮಿಥುನ, ಕರ್ಕಾಟಕರಾಶಿ ನವಾಂಶಗಳು ಕಟಕಾದಿ ಮೀನಾಂತ್ಯದವರಿಗೆ. ೧ ಕರ್ಕಾಟಕ, ೨ ಸಿಂಹ, ೩ ಕನ್ಯಾ, ೪ ತುಲ, ೫ ವೃಶ್ಚಿಕ, ೬ ಧನುಸ್ಸು, ೭ ಮಕರ, ೮ ಕುಂಭ, ೯ ಮೀನ ಇಲ್ಲಿಗೆ ಕಟಕರಾಶಿಯ ನವಾಂಶವಾಯಿತು. ಪುನಃ ಸಿಂಹರಾಶಿಗೆ ನವಾಂಶ ಇದೇ ಕ್ರಮದಿಂದಲೇ ತಿಳಿಯಬೇಕು. ಈ ವಿಷಯಕ್ಕೆ ನಾರದೀಯ ಸಂಹಿತೆಯಲ್ಲಿ ಶ್ಲೋಕ।। ಮೇಷ-ಕೇಸರಿ ಧ್ವನಿನಾಂ ಮೇಷಾದ್ಯಾ ಅಂಶಕಾಃಸ್ಮೃತಾಃ ।। ವೃಷಕನ್ಯಾಮೃಗಾಣಾಂಚ ಮೃಗದ್ಯಾ ಅಂಶಕಾಸ್ಸ್ಮೃತಾಃ ।।೪೧।। ನೃಯುಕ್ತು ಲಘಟಾನಾಂಚ ತುಲಾದ್ಯಾನವಕೀರ್ತಿತಾಃ ।। ಕರ್ಕೀವೃಶ್ಚಿಕ ಮೀನಾನಾಂ ಕಟಕಾದ್ಯಾನವಸ್ಸ್ಮೃತಾಃ ।।೪೨।। ಭವನಸಮಾಂಶಕಾಧಿಪತಯಃ ।। ದ್ವಾದಶಾಂಶಾಧಿಪತಿಗಳು, ಸ್ವಗೃಹಾತ್ - ತಮ್ಮ ತಮ್ಮ ರಾಶಿಯಿಂದ, ಕ್ರಮಶಃ - ಕ್ರಮವಾಗಿ ೧೨ ರಾಶಿ ಅಧಿಪತ್ಯ ಹೊಂದಿದ ಗ್ರಹಗಳೇ ದ್ವಾದಶಾಂಶಾಧಿಪತಿಗಳಾಗುವರು. ಇದಕ್ಕೆ ಸಮ್ಮತಿ ।।ಜಯದೇವಃ ।।ಶ್ಲೋಕ।। ಸ್ವಗೇಹ ದ್ವಾದಶೈರ್ಭಾಗೈಃ ಕ್ರಮಶೋದ್ವಾದ-ಶಾಂಶಪಾಃ ।।೪೩।।

## ಹೋರಾದ್ರೇಕ್ಕಾಣ ನಿರ್ಣಯಃ

ಮೂಲ॥ ದ್ರೇಕಾಣಹೋರಾನವಭಾಗಸಂಜ್ಞಾ । ಸ್ತ್ರಿಂಶಾಂಶಕದ್ವಾದಶ ಸಂಜ್ಞಿಕಾಶ್ಚ॥ ಕ್ಷೇತ್ರಂಚಯದ್ಯಸ್ಯ ಸತಸ್ಯವರ್ಗೋ ಹೋರೇತಿ ಲಗ್ನಂ ಭವನಸ್ಯಚಾರ್ಧಮ್ ॥೭॥

ಅವತಾರಿಕೆ ॥ ರಾಶಿಗಳಿಗೂ, ಲಗ್ನಗಳಿಗೂ ದ್ರೇಕ್ಕಾಣಹೋರಾ- ನವಾಂಶ- ದ್ವಾದಶಾಂಶ- ತ್ರಿಂಶಾಂಶ- ವರ್ಗೋತ್ತಮಾಂಶ-ಇವುಗಳಿಗೆ ಅಧಿಪತಿಗಳು, ಅದರ ಸ್ವಭಾವವನ್ನೂ ಹೇಳಲ್ಪಡುತ್ತೆ.

ದ್ರೇಕ್ಕಾಣಃ - ರಾಶಿ ತೃತೀಯಾಂಶವು, ಹೋರಾ-ರಾಶಿಯ ಅರ್ಧಭಾಗ, ನವ ಭಾಗ-ರಾಶಿಯಲ್ಲಿ ೯ನೇ ಒಂದು ಭಾಗವು, ತ್ರಿಂಶಾಂಶ ರಾಶಿಯಲ್ಲಿ ೩೦ರಲ್ಲಿ ಒಂದು ಭಾಗ, ದ್ವಾದಶಾಂಶರಾಶಿಯಲ್ಲಿ ೧೨ ರಲ್ಲಿ ೧ ಭಾಗವು, ಕ್ಷೇತ್ರಂಚ - ರಾಶಿಯನ್ನು, ಯತ್-ಯವರಾಶಿ, ಯಸ್ಯ-ಯಾವ ಗ್ರಹಾಧಿಪತ್ಯವುಳ್ಳದ್ದೋ, ಸಃ - ಆ ರಾಶಿ, ತಸ್ಯ-ಆ ಗ್ರಹಕ್ಕೆ, ವರ್ಗಃ-ವರ್ಗವೆಂದು ತಿಳಿಯಬೇಕು. ಅದು ಹೇಗೆಂದರೆ :- ಶ್ಲೋಕ॥ ತ್ರ್ಯಾದ್ಯೇಷ್ವೇಷು ವಿಕಲ್ಪೇಷು, ಗ್ರಹಸ್ತಿಷ್ಠತ್ಸ ಸವರ್ಗಗಃ ॥ ಪರವರ್ಗ ಗತೋಪ್ಯೇವಂ ಗ್ರಹೋಭವತಿನಾನ್ಯಥಾ ॥೪೪॥

ತಾ॥ ಯಾವ ರಾಶಿಯಲ್ಲಿ ಯಾವ ಗ್ರಹವಿರುತ್ತೋ ಆ ರಾಶಿಯ ನವಾಂಶೆಯಲ್ಲಿ ಆ ಗ್ರಹವಿದ್ದರೆ ಆ ರಾಶಿ ಸ್ವವರ್ಗವೆಂದು ಮತ್ತು ವರ್ಗೋತ್ತಮಾಂಶೆ ಎಂದು ತಿಳಿಯತಕ್ಕದ್ದು. ಪರಗ್ರಹ ರಾಶಿಯಾಗಿದ್ದರೆ ಪರಷಡ್ವರ್ಗವೆಂದು ತಿಳಿಯತಕ್ಕದ್ದು. ಉದಾಹರಣೆ:- ವೃಷಭರಾಶಿಯಲ್ಲಿ, ವೃಷಭನವಾಂಶೆಯಲ್ಲಿ ಆ ರಾಶ್ಯಧಿಪತಿ ಶುಕ್ರನಿದ್ದಾನೆ. ಈ ಶುಕ್ರನು ಆ ರಾಶ್ಯಧಿಪತಿಯಾಗಿ ಇರುವದರಿಂದ, ಶುಕ್ರನಿಗೆ ಸ್ವಷಡ್ವರ್ಗವೆಂದು, ಸ್ವವರ್ಗೋತ್ತಮಾಂಶೆಯೆಂದು ತಿಳಿಯಬೇಕು. ಇದೇ ವೃಷಭರಾಶಿಯಲ್ಲಿ ವರ್ಗೋತ್ತಮಾಂಶೆಯಲ್ಲಿ ಬೃಹಸ್ಪತಿ ಇದ್ದಾನೆ. ಈ ಗುರು ಶುಕ್ರರಿಗೆ ಶತೃತ್ವವಿದೆ. ವೃಷಭರಾಶಿಯಲ್ಲಿ ವೃಷಭಾಂಶೆ ಗುರು ಪಡೆದು ಇದ್ದಾಗ್ಯೂ ಶತೃ ಷಡ್ವರ್ಗವಾಯಿತು. ಈ ಶತೃ ಮಿತ್ರತ್ವದಲ್ಲಿ ತಾತ್ಕಾಲಿಕ ಮಿತ್ರತ್ವ ಉಂಟಾಗಿದ್ದರೆ ಸಮಷಡ್ವರ್ಗವೆಂತಲೂ, ಕ್ರಮ ಪ್ರಕಾರ ತಿಳಿಯಬೇಕು. ಈ ವಿಷಯವನ್ನು ಗ್ರಹಭೇದ ಪ್ರಕರಣದಲ್ಲಿ ಸ್ಪಷ್ಟಪಡಿಸುತ್ತೇವೆ.

## ಉದಾಹರಣೆ

ರಾಶಿ, ಹೋರಾ, ಮೊದಲಾದ ಭೇದಗಳಿಗೆ ಉದಾಹರಣೆ ಮೂಲಕ ತಿಳಿಸುತ್ತೇವೆ.

ರಾಶಿಗೆ ಯಾವ ಗ್ರಹ ಅಧಿಕಾರ ಬರುವದೆಂಬುವದು ಮೊದಲೇ ಹೇಳಲ್ಪಟ್ಟಿರುತ್ತೆ. ವಸಿಷ್ಠಃ ॥ ಮೇಷಾಧೀಷಾ ಭೌಮ ಶುಕ್ರಜ್ಞಚಂದ್ರಾ ಸೂರ್ಯಸೌಮ್ಯ ಶುಕ್ರ ಭೌಮೋ ಗುರುಶ್ಚ॥ ಪಂಗುಸೌರಿರ್ದೇವಪೂಜ್ಯಃ ಕ್ರಮಾತ್ಸೂರ್ಯಾತ್ ಕ್ಷೇತ್ರಂ ಸ್ಯಾತ್ತಸ್ಯವರ್ಗಃ ಸವಿವ ॥೪೫॥ ಮೇಷಕ್ಕೆ-ಕುಜ, ವೃಷಭಕ್ಕೆ ಶುಕ್ರ, ಮಿಥುನಕ್ಕೆ ಬುಧ, ಕರ್ಕಾಟಕಕ್ಕೆ ಚಂದ್ರ, ಸಿಂಹಕ್ಕೆ ಸೂರ್ಯ, ಕನ್ಯಾರಾಶಿಗೆ ಬುಧ, ತುಲೆಗೆ ಶುಕ್ರ, ವೃಶ್ಚಿಕಕ್ಕೆ ಅಂಗಾರಕ, ಧನುಸ್ಸಿಗೆ ಗುರು, ಮಕರಕ್ಕೆ ಶನಿ, ಕುಂಭಕ್ಕೆ ಶನಿ, ಮೀನಕ್ಕೆ ಗುರು, ಈ ರೀತಿಯಾಗಿ ರಾಶ್ಯಧಿಪತಿಗಳಾಗುವರು. ಈ ಗ್ರಹಗಳೇ ಪ್ರತಿದಿವಸವೂ ಮೇಷಾದಿಯಾಗಿ ಉದಯಿಸುವ ಲಗ್ನಗಳಿಗೂ, ಲಗ್ನವಿಭಾಗಗಳಿಗೂ ಅಧಿಪತಿಗಳಾಗುವರು. ರಾಶ್ಯಾಧಿಪತ್ಯವೆಂದರೆ, ೧೮೦೦ ಕಲಾಕ್ಷೇತ್ರಕ್ಕೆ ೧ ರಾಶಿ, ೧೨ ರಾಶಿಗಳಿಗೆ ೧ ಭ ಚಕ್ರ * ತಿಳಿಯಬೇಕಾದ ಅಂಶವೇನೆಂದರೆ :- ೧೮೦೦ ಕಲೆಗೆ ೬೦ ರಿಂದ ಭಾಗಮಾಡಿದರೆ ೩೦ ಭಾಗ. ಇದೇ ರಾಶಿಯೆಂದು ಸಂಕೇತವು. ಅಶ್ವಿನೀನಕ್ಷತ್ರ ೧ನೇ ಕಲೆಯ ಪ್ರಾರಂಭದಿಂದ ೧೮೦೦ನೇ ಕಲೆ ಮುಗಿಯುವವರೆಗೆ, ಕೃತ್ತಿಕಾ ನಕ್ಷತ್ರದಿಂದ ೧ನೇ ಪಾದದಲ್ಲಿ ೨೦೦ನೇ ಕಲೆಯ ಅಂತ್ಯದವರಿಗೆ ಮೇಷರಾಶಿ, ಇದೇ ಪ್ರಕಾರವಾಗಿ ಉಳಿದ ರಾಶಿಗಳಿಗೆ ತಿಳಿಯುವುದು.

ಈ ೩೦ ಭಾಗದಲ್ಲಿ ೨ ರಿಂದ ಭಾಗ ತೆಗೆದುಕೊಂಡರೆ ಪ್ರತಿಭಾಗಕ್ಕೂ ೧೫ ಬರುತ್ತದೆ. ಇದು ರಾಶಿಯ ಅರ್ಧ ಹೋರೆಯಾಯಿತು. - ಈ ೩೦ ಭಾಗವನ್ನು ೩ ರಿಂದ ಭಾಗಮಾಡಿದರೆ ೩೦÷೩=೧೦ ಭಾಗ ಬರುತ್ತದೆ. ಇದು ರಾಶಿಯ ತೃತೀಯಾಂಶ ಅಂದರೆ ದ್ರೇಕ್ಕಾಣವೆಂದು ಸಂಕೇತ. ರಾಶಿಯನ್ನು ೩೦÷೯= ಭಾಗಮಾಡಿದರೆ ಪ್ರತಿಭಾಗಕ್ಕೂ ೩ ಭಾಗ ೨೦ ಕಲೆ ಬರುತ್ತೆ. ಇದು ನವಾಂಶ ವಾಯಿತು, ಈ ರಾಶಿಯನ್ನು ೧೨ ಭಾಗಮಾಡಿದರೆ, ಪ್ರತಿಭಾಗಕ್ಕೂ ೩೦÷೧೨=೨ ಭಾಗ ೩೦ ಕಲೆ ಬರುತ್ತದೆ. ಇದೇ ದ್ವಾದಶಾಂಶವಾಯಿತು. ರಾಶಿಯನ್ನು ೩೦ ರಿಂದ ಭಾಗಮಾಡಿದರೆ ಭಾಗ ೧ಕ್ಕೆ ೩೦÷೩೧ ಬರುತ್ತದೆ. ಇದು ತ್ರಿಂಶಾಂಶೆಯಾಯಿತು, ಇದಕ್ಕೆ ನಾರದೀಯ ಸಂಹಿತಾ ವಚನ ॥

ಶ್ಲೋಕ॥ ತ್ರಿಂಶದ್ಭಾಗಾತ್ಮಕಂ ಲಗ್ನಂ ಹೋರಾ ರಾಶ್ಯರ್ಧಮುಚ್ಯತೆ । ರಾಶಿ ಭಾಗೋ ದ್ರೇಕ್ಕಾಣಃ ನವಾಂಶೋ ನವಭಾಗಕಃ ॥೪೬॥
ದ್ವಾದಶಾಂಶೋ ದ್ವಾದಶಾಂಶ ಸ್ತ್ರಿಂಶಾಂಶ ಸ್ತ್ರಿಂಶಂದಂಶಕಃ ।
ಷಡ್ವರ್ಗ ಲಕ್ಷಣಂ ಪ್ರೋಕ್ತಂ ಸರ್ವಲಗ್ನೇಷ್ವಯಂ ಕ್ರಮಃ ॥೪೭॥

---

*ಈ ವಿಷಯವನ್ನು ಈ ಪ್ರಕರಣದಿಂದ ೪ನೇ ಶ್ಲೋಕದ ಟೀಕೆಯಲ್ಲಿ ಸ್ಪಷ್ಟಪಡಿಸಿರುತ್ತೇನೆ.

## --ಹೋರಾನಿರ್ಣಯಃ--

ಹೋರಾಧಿಪತಿಗಳು-

ಶ್ಲೋಕ।। ಜಗನ್ಮೋಹನೆ ನಾರದಃ । ವಿಷಮೇರ್ಕೆವಿಧೋರ್ಹೋರೆ ಸಮೇವಿಧು ವಿಭಾವಸೋಃ ।।೪೮।।

ತಾ।। ವಿಷಮರಾಶಿಗಳಾದ, ಮೇಷ, ಮಿಥುನ, ಸಿಂಹ, ತುಲಾ, ಧನಸ್ಸು, ಕುಂಭ, ಈ ೬ ರಾಶಿಗಳಲ್ಲಿ ಪ್ರತಿರಾಶಿಯಲ್ಲಾಗಲೀ, ಲಗ್ನದಲ್ಲಾಗಲೀ ೧ ರಿಂದ ೧೫ ಭಾಗದವರೆಗೆ ಸೂರ್ಯ ಹೋರೆ, ೬ ರಿಂದ ೩೦ರವರೆಗೆ ಚಂದ್ರ-ಹೋರೆ, ಸಮರಾಶಿಗಳಾದ ವೃಷಭ, ಕಟಕ, ಕನ್ಯಾ, ವೃಶ್ಚಿಕ, ಮಕರ ಮೀನ, ಈ ೬ ರಾಶಿಗಳಲ್ಲಿ ೧ ರಿಂದ ೧೫ ಭಾಗದವರೆಗೆ ಚಂದ್ರ ಹೋರೆ, ೧೬ರಿಂದ೩೦ ರವರೆಗೆ ಸೂರ್ಯ ಹೋರೆ ಎಂದು ತಿಳಿಯಬೇಕು.

## ಹೋರಾ ಉದಾಹರಣಂ

ಉದಾಹರಣ : ರವಿಸ್ಪಷ್ಟಂ, ರಾ ೪ ರಿಂದ ೧೦ ಭಾ ಕಲೆ ೧೨ ವಿಕಲೆ ೧೫ ಇರುತ್ತೆ. ಈ ಗ್ರಹಕ್ಕೆ ಹೋರಾ ತಿಳಿಯಬೇಕು. ರಾಶಿ ಸ್ಥಾನದಲ್ಲಿ ೪ ಇರುವುದರಿಂದ ಮೇಷಾದಿಯಾಗಿ ೪ ರಾಶಿಗಳು ತಿಳಿದು ಇರುತ್ತೆ. ೫ನೇ ರಾಶಿಯಾದ ಸಿಂಹದಲ್ಲಿ ೧೦ ಭಾಗ ೧೨ ಕಲೆ ೧೫ ವಿಕಲೆ ಇರುವದರಿಂದ ಸಿಂಹ ವಿಷಮರಾಶಿ, ಇದರಲ್ಲಿ ೧ ರಿಂದ ೧೫ ಭಾಗದ ವರಿಗೆ ರವಿ ಹೋರಾ, ಆದ್ದರಿಂದ ಸೂರ್ಯನು ಸಿಂಹರಾಶಿಯುಲ್ಲಿ ಸ್ವಹೋರೆಯಲ್ಲಿದ್ದಾನೆಂದು ನಿಶ್ಚಿತವಾಯಿತು.

## -- ದ್ರೇಕ್ಕಾಣನಿರ್ಣಯಃ --

ದ್ರೇಕ್ಕಾಣಕ್ಕೆ ಉದಾಹರಣೆ -- ನಾರದಃ ।

ಸ್ವಸದ್ಮಸುತದರ್ಮೇಶಾಃ ದ್ರೇಕ್ಕಾಣಾಸ್ತೆ ಪ್ರಕೀರ್ತಿತಾಃ ।।೪೧।।

ದ್ರೇಕ್ಕಾಣಾಧಿಪತಿಗಳು ತಿಳಿಯತಕ್ಕ ಕ್ರಮ :- ೧ ರಾಶಿಗೆ ೩೦ ಭಾಗ ದ್ರೇಕ್ಕಾಣಕ್ಕೆ ೩ ರಿಂದ ಭಾಗಿಸಿದರೆ ಪ್ರತಿಭಾಗಕ್ಕೂ ೧೦ ಭಾಗಬರುತ್ತದೆ. ಆದ್ದರಿಂದ ಮೊದಲು ೧ ರಿಂದ ೧೦ ಭಾಗದವರೆಗೆ ಆ ರಾಶ್ಯಾಧಿಪತಿ ೧೧ ರಿಂದ ೨೦ ರ ವರೆಗೆ ಆ ರಾಶಿಯಿಂದ ೫ನೇರಾಶಿ ಯಾವುದೊ, ಆ ರಾಶ್ಯಾಧಿಪತಿ ೨೧ ರಿಂದ ೩೦ರವರೆಗೆ ಆ ರಾಶ್ಯಾಧಿಪತಿಯಿಂದ ೯ನೇ ಅಧಿಪತಿ, ಈ ಪ್ರಕಾರ ತಿಳಿಯತಕ್ಕದ್ದು. ಉದಾಹರಣೆ ಮೇಷರಾಶಿಗೆ ೩ನೇ ದ್ರೇಕ್ಕಾಣಗಳು, ೧ನೇ ದ್ರೇಕ್ಕಾಣಾಧಿಪತಿ ಮೇಷಾಂಗರಕ, ೨ನೇ ದ್ರೇಕ್ಕಾಣಾಧಿಪತಿ ಸಿಂಹ ಮೇಷರಾಶಿಗೆ ೫ನೇದಾದ ಸಿಂಹ, ರವಿ, ೩ನೆ ದ್ರೇಕ್ಕಾಣಾಧಿಪತಿ ಮೇಷಾದಿಯಾಗಿ

೯ನೆ ಅಧಿಪತಿಯಾದ ಧನುರ್ಗುರುವೆಂದು ತಿಳಿಯಬೇಕು. ಮೂಲದಲ್ಲಿ ಸ್ವಸದ್ಮಸುತ ಧರ್ಮೇಶಾ ಎಂದುಕ್ತವಾಗಿರುವುದು. ಸರ್ವ ರಾಶಿಗಳಿಗು ಅನ್ವಯಿಸತಕ್ಕದೆಂದು ತಿಳಿಯಬರುತ್ತೆ. ಈ ಕ್ರಮವು ಚರರಾಶಿಗಳಾದ ಮೇಷ, ಕಟಕ, ತುಲಾ, ಮಕರ, ಈ ನಾಲ್ಕು ರಾಶಿಗಳಿಗೆ ಕ್ರಮವಾಗಿ ಅನ್ವಯವಾಗುತ್ತದೆ ಹೊರತು ಉಳಿದ ವೃಷಾದಿ ೪ ಮಿಥುನಾದಿ ೪ ರಾಶಿಗಳಿಗೆ ಅನ್ವಯಿಸುವುದಿಲ್ಲ. ಅದು ಹೇಗೆಂದರೆ ನವಾಂಶಕ್ರಮುವು, ಮೇಷಾದಿಯಾಗಿ ಚರ ರಾಶಿಯಲ್ಲಿ ಪ್ರಾರಂಭಿಸುವುದರಿಂದ ಮೇಷರಾಶಿಗೆ ೯ನೆ ನವಾಂಶೆಯು ಧನುರಾಶಿಗೆ ಕೊನೆಯಾಯಿತು. ವೃಷಾದಿರಾಶಿಗೆ ಮಕರಾದಿಯಾಗಿ ನವಾಂಶೆ ಕನ್ಯಾಂತವಾಗಿ ೯ ಆಗುತ್ತದೆ. ಆದರೆ ಮೇಲಿನ ಶ್ಲೋಕದ ಅರ್ಥರೀತ್ಯಾ ವೃಷಭರಾಶಿಗೆ ಮೊದಲನೇ ದ್ರೇಕ್ಕಾಣಾಧಿಪತಿ ವೃಷಭ ಶುಕ್ರ, ೨ನೇ ದ್ರೇಕ್ಕಾಣಾಧಿಪತಿ ಕನ್ಯಾ ಬುಧ, ೩ನೇ ದ್ರೇಕ್ಕಾಣಾಧಿಪತಿ ಮಕರ ಶನಿ ಈ ಪ್ರಕಾರ ಆಗುತ್ತಾರೆ. ಇದು ಸರಿಯಲ್ಲ. ನವಾಂಶವಿಧಿಯು ಮಕರರಾಶಿಯಿಂದಲೂ, ದ್ರೇಕ್ಕಾಣವಿಧಿಯು ವೃಷಭರಾಶಿಯಿಂದಲೂ ಪ್ರಾರಂಭವಾಗುವದು. ಆಯುಕ್ತ ದ್ರೇಕ್ಕಾಣವೆಂದರೆ ೩ ನವಾಂಶ ಕ್ಷೇತ್ರ, ಇಂಥಾ ನವಾಂಶವು ಭಿನ್ನವಾದರೆ ತದಧಿಪತಿಗಳು ಭಿನ್ನಾಧಿಪತ್ಯ ಉಳ್ಳವರಾಗುವರು. ಈ ಅರ್ಥರೀತ್ಯಾ ವೃಷಭ ದ್ರೇಕ್ಕಾಣ ೧ನೇದಾಗುವುದು. ಇದಕ್ಕೆ ೧ನೇ ನವಾಂಶ ವೃಷಭ, ೨ನೇ ನವಾಂಶ ಮಿಥುನ, ೩ನೇ ನವಾಂಶ ಕಟಕ, ಇದಕ್ಕೆ ವೃಷಭ ದ್ರೇಕ್ಕಾಣವೆಂದರೆ ವೃಷಭ ಶುಕ್ರ ಅಧಿಪತಿಯಾಗುತ್ತಾನೆ. ನವಾಂಶ ಕ್ರಮದಿಂದ ವೃಷಭ ರಾಶಿಯಲ್ಲಿ ನವಾಂಶ ಕ್ರಮ ಮಕರಾದಿಯಾಗಿ ಇರುವುದರಿಂದ ೧ನೇ ನವಾಂಶ ಮಕರ, ೨ನೇ ನವಾಂಶ ಕುಂಭ, ೩ನೇ ನವಾಂಶ ಮೀನ, ಇಲ್ಲಿಗೆ ೩ ನವಾಂಶ ಪೂರ್ತಿ ಆದ್ದರಿಂದ ವೃಷಭ ೧ನೇ ದ್ರೇಕ್ಕಾಣ ಪೂರ್ತಿ ಆಯಿತು. ಇದಕ್ಕಧಿಪತಿ ಮಕರ ಶನಿ ಎಂದುಕ್ತವಾಗಿದೆ. ಶ್ಲೋಕ॥ ಪರಾಶರಃ॥ ಚರೇಸ್ವಪುತ್ರನವಪಾಃ ಸ್ಥಿರೇ ಧರ್ಮ ಸ್ವಪುತ್ರಪಾಃ ಪುತ್ರ ಧರ್ಮಸ್ವಪಾದಿಸ್ವೇ ದ್ರೇಕ್ಕಾಣಪತಯಃಕ್ರಮಾತ್ ॥ಇತಿ॥ ಚರರಾಶಿಗಳಾದ ಮೇಷ, ಕಟಕ, ತುಲಾ, ಮಕರ ಈ ನಾಲ್ಕು ರಾಶಿಗಳಲ್ಲಿ ಮೊದಲನೆ ದ್ರೇಕ್ಕಾಣಾಧಿಪತಿ ಆಯಾಯ ರಾಶ್ಯಧಿಪತಿಯೆಂತಲೂ, ೨ನೇ ದ್ರೇಕ್ಕಾಣಾಧಿಪತಿ ಆ ರಾಶಿಗೆ ಪಂಚಮಾಧಿಪತಿಯೆಂತಲೂ, ೩ನೇ ದ್ರೇಕ್ಕಾಣಾಧಿಪತಿ ಆ ರಾಶಿಗೆ ೯ ನೇ ಅಧಿಪತಿಯೆಂತಲೂ, ಸ್ಥಿರರಾಶಿಗಳಾದ ವೃಷಭ, ಸಿಂಹ ವೃಶ್ಚಿಕ, ಕುಂಭ ಈ ೪ ರಾಶಿಗಳಲ್ಲಿ ಮೊದಲನೆ ದ್ರೇಕ್ಕಾಣಾಧಿಪತಿ ಈ ಸ್ಥಿರರಾಶಿಗೆ ೯ ನೇ ರಾಶ್ಯಧಿಪತಿ ಎಂತಲೂ, ಎರಡನೇ ದ್ರೇಕ್ಕಾಣಾಧಿಪತಿ ಆ ಸ್ಥಿರ ರಾಶ್ಯಧಿಪತಿಯಾದ್ದರಿಂದ ಸ್ವದ್ರೇಕ್ಕಾಣವೆಂತಲೂ, ಮೂರನೇ ದ್ರೇಕ್ಕಾಣಾಧಿಪತಿ ಆ ಸ್ಥಿರ ರಾಶಿಗೆ ೫ನೇ ರಾಶ್ಯಧಿಪತಿಯೆಂದು ನಿಶ್ಚಿತವಾಯಿತು. ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ,

ಧನುಃ, ಮೀನ, ಈ ೪ ರಾಶಿಗಳಿಗೆ ಮೊದಲನೇ ದ್ರೇಕ್ಕಾಣಕ್ಕೆ ಆ ದ್ವಿಸ್ವಭಾವರಾಶಿಗೆ ೫ನೇ ಅಧಿಪತಿ ಯಾವ ರಾಶಿ ಗ್ರಹವೋ ಆ ರಾಶಿ ದ್ರೇಕ್ಕಾಣವೆಂತಲೂ, ೨ನೇ ದ್ರೇಕ್ಕಾಣಕ್ಕೆ ಆ ದ್ವಿಸ್ವಭಾವರಾಶಿಗೆ ೯ನೇ ರಾಶಿ ದ್ರೇಕ್ಕಾಣವೆಂತಲೂ, ೩ನೇ ದ್ರೇಕ್ಕಾಣವು ಆಯಾಯ ದ್ವಿಸ್ವಭಾವ ರಾಶ್ಯಧಿಪತಿಗಳೇ ಅಧಿಪತಿಗಳಾಗುವದ್ದರಿಂದ ಸ್ವದ್ರೇಕ್ಕಾಣವೆಂತಲೂ ಪರಾಶರರ ಅಭಿಪ್ರಾಯವಾಗಿರುವುದು. ಇವೆರಡರಲ್ಲಿ ಯಾವುದು ಗ್ರಾಹ್ಯಮಾಡತಕ್ಕದ್ದೆಂದರೆ ನವಾಂಶ ಕ್ರಮದ ಮೇಲೆ ಅನುಸರಿಸಿದ ದ್ರೇಕ್ಕಾಣಾಧಿಪತಿಗಳ ನಿರ್ಣಯವೇ ಸರಿಯಾದುದ್ದೆಂದು ನಾನು ಅಂಗೀಕರಿಸುತ್ತೇನೆ. (ಲೇಖಕರ - ಅಭಿಪ್ರಾಯ)

ಉದಾಹರಣೆ।। ಮೇಷ ರಾಶಿಗೆ ಅಥವಾ ಲಗ್ನಕ್ಕೆ ದ್ರೇಕ್ಕಾಣಾಧಿಪತಿಗಳು ಮೇಷ ೧ನೇ ದ್ರೇಕ್ಕಾಣ ಮೇಷಾಂಗಾರಕ, ೨ನೇ ದ್ರೇಕ್ಕಾಣ ೫ನೆಯದಾದ ಸಿಂಹ- ಸೂರ್ಯ, ೩ನೇ ದ್ರೇಕ್ಕಾಣಾಧಿಪತಿ ಧನುಸ್ಸು, ಗುರು, ವೃಷಭ, ೧ನೇ ದ್ರೇಕ್ಕಾಣಾಧಿಪತಿ ಮಕರ ಶನಿ, ೨ನೇ ದ್ರೇಕ್ಕಾಣಾಧಿಪತಿ ವೃಷಭ ಶುಕ್ರ, ೩ನೇ ದ್ರೇಕ್ಕಾಣಾಧಿಪತಿ ಕನ್ಯಾ ಬುಧ, ಮಿಥುನ, ೧ನೇ ದ್ರೇಕ್ಕಾಣಾಧಿಪತಿ ತುಲಾ ಶುಕ್ರ, ೨ನೇ ದ್ರೇಕ್ಕಾಣಾಧಿಪತಿ ಕುಂಭ ಶನಿ, ೩ನೇ ದ್ರೇಕ್ಕಾಣಾಧಿಪತಿ ಮಿಥುನ, ಬುಧ, ಈ ಪ್ರಕಾರ ಅಧಿಪತ್ಯವುಳ್ಳವರಾಗುವರು. ಈ ಪ್ರಕಾರ ಕಟಕಾದಿ, ತುಲಾದಿ, ಮಕರಾದಿ ೩ ರಾಶಿಗಳಿಗೂ ಸುಲಭವಾಗಿ ನಿರ್ಣಯ ಮಾಡಿಕೊಳ್ಳಬೇಕು.

## ಸಪ್ತಾಂಶನಿರ್ಣಯಃ

ಸಪ್ತಾಂಶಕ್ರಮ :- ಇದು ಈ ಗ್ರಂಥದಲ್ಲಿ ಉಕ್ತವಾಗಿಲ್ಲ. ಆದ್ದರಿಂದ "ಅನುಕ್ತ ಮನ್ಯತೋಗ್ರಾಹ್ಯಂ'' ಎಂಬುವ ನ್ಯಾಯಪ್ರಕಾರ ಇಲ್ಲಿ ಹೇಳಲ್ಪಟ್ಟಿರುತ್ತೆ. ಸಪ್ತಾಂಶಕ್ರಮದ್ರವ್ಯರೂಪಾದಿ ವಿಚಾರಕ್ಕೆ ಅವಶ್ಯವಾಗಿದೆ. ।।ಜಯದೇವಃ।। ಶ್ಲೋಕ ।। ಸ್ವಗೇಹಸಪ್ತ ಭಾಗೇಭ್ಯಃ ಸಪ್ತಾಂಶೇಂಶಾ ಬುಧೈಃಸ್ಮೃತಾ।। ಓಜೇಸ್ವಗೇಹತೋಗಣ್ಯಾಃ ಸಮೇಸಪ್ತಮರಾಶಿತಃ ।।೫೧।। ತಥಾಚ ।। ನಾರದೀಯೇ ।।ಶ್ಲೋಕ।। ಸಪ್ತಾಂಶಕಾಸ್ತ್ವೋಜಗ್ರಹೇತದೀಶಾಃ । ಯುಗ್ಮೇ ಗೃಹೇ ಸಪ್ತಮರಾಶಿಪಸ್ಯಾತ್ ।।ಇತಿ।।೫೨।। ।।ತಾ।। ಸಪ್ತಾಂಶವನ್ನು ಮಾಡಬೇಕಾದ ಕ್ರಮ:- ರಾಶಿಯನ್ನು ೭ ರಿಂದ ಭಾಗಮಾಡಿದರೆ ಭಾಗ ೧ ಕ್ಕೆ ೪ - ೧೭ ಬರುತ್ತೆ. ಉದಾಹರಣೆ :- ೩೦÷೭=೪-೧೭ ಸಪ್ತಮಾಂಶಾಧಿಪತಿಗಳು ವಿಷಮ ರಾಶಿಯಾದ ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಮಕರ ಈ ರಾಶಿಗಳಲ್ಲಿ ಸ್ವರಾಶ್ಯಾದಿಯಾಗಿಯು, ಸಮರಾಶಿಗಳಾದ ವೃಷಭ, ಕಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ರಾಶಿಗಳಲ್ಲಿ ಈ ರಾಶಿಗಳಿಗೆ ೭ನೇ ರಾಶಿಯಿಂದ ಪ್ರಾರಂಭವಾಗುವುದು.

## ನವಾಂಶ ನಿರ್ಣಯಃ
## ನವಾಂಶಕ್ರಮ - ಜಯದೇವಃ ||

ಶ್ಲೋಕ|| ಮೇಷಾದೀನಾಂಚತುರ್ಥ್ನಾಂತು ಸಕೋಣಾನಾಂ ನವಾಂಶಪಾಃ ||
ಮೇಷಾದಯೋಮೃಗಾದ್ಯಾಶ್ಚ ತುಲಾದ್ಯಾಃ ಕರ್ಕಟಾದಯಃ ||೫೩||

೧-೫-೯ನೇ ರಾಶಿಗಳಲ್ಲಿ ಮೇಷಾದಿಯಾಗಿಯೂ, ೨-೬-೧೦ ನೇ ರಾಶಿಗಳಲ್ಲಿ ಮಕರಾದಿಯಾಗಿಯೂ, ೩-೭-೧೧ನೇ ರಾಶಿಗಳಲ್ಲಿ ತುಲಾದಿಯಾಗಿಯೂ, ೪-೮-೧೨ ನೇ ರಾಶಿಗಳಲ್ಲಿ ಕರ್ಕಾದಿಯಾಗಿ ನವಾಂಶ ಕ್ರಮವನ್ನನುಸರಿಸಬೇಕು. ಈ ನವಾಂಶ ಕ್ರಮಕ್ಕೆ ಪದಕವನ್ನು ಕೊಟ್ಟಿರುತ್ತೆ. ಅದರಿಂದ ತಿಳಿಯಬೇಕು.

## ದ್ವಾದಶಾಂಶ ನಿರ್ಣಯಃ
## ದ್ವಾದಶಾಂಶ-ದ್ವಾದಶಾಂಶಾಧಿಪತಿಗಳು ||ಸತ್ಯಾಚಾರ್ಯ||

ಶ್ಲೋಕ|| ರಾಶೇರ್ದ್ವಾದಶಭಾಗೋಯಃ ದ್ವಾದಶಾಂಶಃ ಪ್ರಕೀರ್ತಿತಃ|| ತತ್ತ-
ದ್ರಾಶ್ಯಾದಿರಾಶೀ ಶೋದ್ವಾದಶಾಂಶಾಧಿಪಾಃ ಕ್ರಮಾತ್ ||೫೪||
ತಥಾಚ ಜಯದೇವಃ|| ಸ್ವಗೇಹಾದ್ದ್ವಾದಶೈರ್ಭಾಗೈಃ ಕ್ರಮಶೋ
ದ್ವಾದಶಾಂಶಪಾಃ ||೫೫||

ದ್ವಾದಶಾಧಿಪತಿಗಳು ಯಾವ ರಾಶಿಗೆ ತಿಳಿಯಬೇಕೋ, ಆ ರಾಶಿಯನ್ನು ೧೨ ಭಾಗ ಮಾಡಿದರೆ ಪ್ರತಿ ೧ ಭಾಗಕ್ಕೂ ೨ ಭಾಗ ೩೦ ಕಲೆ ಬರುತ್ತೆ. ಆ ರಾಶಿ ಮೊದಲುಗೊಂಡು ೧೨೦ ರಾಶಿಗಳ ಅಧಿಪತಿಗಳು ದ್ವಾದಶಾಂಶಾಧಿಪತಿಗಳಾಗುತ್ತಾರೆ. ಉದಾಹರಣೆ :- ಮೇಷ ರಾಶಿಗೆ ಮೇಷಾದಿಯಾಗಿ ಮೀನರಾಶಿಯೇ ಅಂತ್ಯವಾಗುವುದು. ಈ ಪ್ರಕಾರ ಉಳಿದ ರಾಶಿಗಳಿಗೆ ತಿಳಿಯತಕ್ಕದ್ದು.

## ತ್ರಿಂಶಾಂಶ ನಿರ್ಣಯಃ
## ತ್ರಿಂಶಾಂಶ ಕ್ರಮ-ಜಯದೇವಃ

ಶ್ಲೋಕ|| ಆರಾರ್ಕಿಜೀವಃ ಬುಧದೈತ್ಯ ಪುರೋಧಸಶ್ಚ ಪಂಚೇಂದ್ರಿಯಾಷ್ಟ
ನವಮಾರುತ ಭಾಗಕಾನಾಂ| ಓಜೇಷು ರಾಶಿಷು ಭವಂತಿಯಥಾ
ಕ್ರಮೇಣ ತ್ರಿಂಶಾಂಶ ಪಾಸ್ಸಮಗೃಹೇಷುವಿಲೋಮತಸ್ಸ್ಯುಃ ||೫೬||

ತಾ।। ತ್ರಿಂಶಾಂಶಾಧಿಪತಿಗಳ ಕ್ರಮವು ತಿಳಿಸಲ್ಪಡುತ್ತೆ. ವಿಷಮ ರಾಶಿಗಳಲ್ಲಿ ಅಂದರೆ ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ೬ ರಾಶಿಗಳಲ್ಲಿ ೧ ರಿಂದ ೫ ಭಾಗದವರೆಗೆ ಕುಜ, ೬ ರಿಂದ ೧೦ ಭಾಗದವರೆಗೆ ಶನಿ, ೧೧ ರಿಂದ ೧೮ ಭಾಗದವರೆಗೆ ಗುರು, ೧೯ ರಿಂದ ೨೫ರವರೆಗೆ ಬುಧ, ೨೬ ರಿಂದ ೩೦ ಭಾಗದವರೆಗೆ ಶುಕ್ರ ಈ ಪ್ರಕಾರವಾಗಿಯೂ, ಸಮರಾಶಿಗಳಾದ ವೃಷಭ, ಕಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ೬ ರಾಶಿಗಳಲ್ಲಿ ೧ ರಿಂದ ೫ ನೆ ಭಾಗದವರೆಗೆ ಶುಕ್ರ, ೬ ರಿಂದ ೧೨ ನೆ ಭಾಗದವರೆಗೆ ಬುಧ, ೧೩ ರಿಂದ ೨೦ರ ವರೆಗೆ ಗುರು, ೨೧ ರಿಂದ ೨೫ರ ವರೆಗೆ ಶನಿ, ೨೬ ರಿಂದ ೩೦ ರ ವರೆಗೆ ಕುಜ, ಈ ಪ್ರಕಾರ ವ್ಯತ್ಯಸ್ತವಾಗಿಯೂ ತಿಳಿಯತಕ್ಕದ್ದು. ಉದಾಹರಣೆ :- ವಿಷಮ ರಾಶಿಗಳಲ್ಲಿ ಕುಜ ೫ + ಶನಿ ೫ + ಗುರು ೮--- ಬುಧ ೭ x ಶುಕ್ರ ೫ = ಅಂತು ೩೦ ಭಾಗ, ಸಮ ರಾಶಿಗಳಲ್ಲಿ - ಶುಕ್ರ ೫ + ಬುಧ ೭ + ಗುರು ೮ + ಶನಿ ೫ + ಕುಜ ೫ = ಅಂತು ೩೦ ಭಾಗ ಈ ರೀತಿಯಾಗಿ-ತ್ರಿಂಶಾಂಶಾಧಿಪತಿಗಳಾಗುವರು.

## -ಹೋರಾ ಉದಾಹರಣೆ-

ಸ್ಪಷ್ಟರವಿ :- ರಾಶಿ ೪ ಭಾಗ ೨೭ ಕಲ ೧೫ ವಿಕಲಾ ೨೭ ಯಾವ ಷಡ್ವರ್ಗಾಧಿಪತ್ಯ ಬರುತ್ತದೆಂದು ತಿಳಿಯಬೇಕು.

೧. ರಾಶಿ-ರಾಶಿ ಸ್ಥಾನಗಳಲ್ಲಿ ೪ ಇದ್ದದ್ದರಿಂದ ಮೇಷಾಧಿಯಾಗಿ ೪ ರಾಶಿ ಕಳೆದು ೫ನೇ ರಾಶಿಯಲ್ಲಿ ೨೭ ಭಾಗದಲ್ಲಿ ೫ ನೆ ರಾಶಿಗಧಿಪತಿಯಾದ ಸೂರ್ಯನು ರಾಶ್ಯಾಧಿಪತಿಯಾದನು.

೨. ಹೋರಾ ರಾಶಿ ಸ್ಥಾನವಾದ ೪ನ್ನು ಬಿಟ್ಟು ಭಾಗಸ್ಥಾನದ ಅಂತ ೨೭ ೧೫-೨೭ರನ್ನೂ ೧೫-೦-೦ ಮಾಡಲಾಗಿ ೨೧-೧೫-೨೭ ಉಳಿಯಿತು. ಸಿಂಹ ವಿಷಮ ರಾಶಿಯಾದುದರಿಂದ ಮೊದಲು ಸೂರ್ಯ ಹೋರೆ ೧೫ ಭಾಗ ಕಳೆದು ಹೋಗಿ ಚಂದ್ರನಲ್ಲಿ ಸೂರ್ಯನಿರುತ್ತಾನೆಂದು ತಿಳಿಯಬೇಕು.

## - ದ್ರೇಕ್ಕಾಣೋದಾಹರಣಂ-

೩. ದ್ರೇಕಾಣ-ಭಾಗ ೨೭-೧೫-೨೭ ದ್ರೇಕ್ಕಾಣ ೧ಕ್ಕೆ ೧೦ ಭಾಗ ಆದ್ದರಿಂದ ೩ ರಿಂದಾ ಭಾಗಿಸಲಾಗಿ ಭಾಗಲಬ್ಧ ೨ ಶೇಷ ೭-೧೫-೨೬ ಬಂತು, ಸಿಂಹ ರಾಶಿಯ ೩ನೇ ದ್ರೇಕ್ಕಾಣದಲ್ಲಿ ಸೂರ್ಯನಿರುವುದರಿಂದ ದ್ರೇಕ್ಕಾಣಾಧಿಪತಿ ಧನುರ್ಗುರು ಆದ್ದರಿಂದ ಧನುರ್ಗುರು ದ್ರೇಕ್ಕಾಣವೆಂದು ತಿಳಿಯಬೇಕು.

## - ಚತುರ್ಥಾಂಶೋದಾಹರಣಂ -

೪. ಚತುರ್ಥಾಂಶ ಸ್ಪಷ್ಟ ರವಿ ೪-೨೭-೧೫-೨೭ ಇರುವುದರಿಂದ, ರಾಶಿ ಸ್ಥಾನವನ್ನು ಬಿಟ್ಟು ಭಾಗಸ್ಥಾನವಾದ ೨೭-೧೫-೨೭ರನ್ನು ೪ರಿಂದ ಭಾಗಮಾಡಲಾಗಿ ಭಾಗಲಬ್ಧ ೩ ಶೇಷ ೪-೨೫-೨೭ ಬಂತು, ಆದ್ದರಿಂದ ೪ನೆ ಅಂಶವಾಯಿತು. ಸಿಂಹರಾಶಿಗೆ ೪ನೆ ಕೇಂದ್ರಾಧಿಪತಿಯಾದ ಶುಕ್ರನು ಅಧಿಪತಿಯಾದನು.

## -ಸಪ್ತಾಂಶೋದಾಹರಣಂ-

೫. ನವಮಾಂಶೆ-ಸ್ಪಷ್ಟರವಿ ರಾಶಿ ೪ ಭಾಗ ೨೬ ಕ ೧೫ ವಿ. ೨೭೯ರಿಂದ ಭಾಗಿಸಲಾಗಿ-ಭಾಗಲಬ್ಧ ೮ ಶೇಷ' ಭಾಗಂ ಕಲೆ ೨೫-ವಿಕಲೆ ೨೭ ಬಂತು. ಆದ್ದರಿಂದ ಗತನವಾಂಶ ಸಂಖ್ಯೆ ೮ ಆಗಿ ೯ನೆ ನವಾಂಶೆಯಲ್ಲಿ ೦-೦-೩೫-೨೭ ರಲ್ಲಿ ರವಿ ಇದ್ದಾನೆಂದು ಸ್ಪಷ್ಟವಾಯಿತು. ನವಾಂಶಚಕ್ರದಲ್ಲಿ ೯ನೆ ನವಾಂಶೆಗೆ ಗುರು ಅಧಿಪತಿಯೆಂದು ತಿಳಿಯಬೇಕು.

## ದ್ವಾದಶಾಂಶೋದಾಹರಣಮ್

ದ್ವಾದಶಾಂಶ - ಸ್ಪಷ್ಟರವಿ ೪ ಭಾಗ ೨೭ ಕಲೆ ೧೫ ವಿಕಲೆ ೨೭ ಇದಕ್ಕೆ ೧೨ ರಿಂದ ಭಾಗ ಮಾಡಲಾಗಿ ೧೦ ಭಾಗಲಬ್ಧ ಶೇಷಭಾಗ ೨ ಕಲೆ ೧೫ ವಿಕಲೆ ೨ ಬಂತು. ಆದ್ದರಿಂದ ದ್ವಾದಶಾಂಶೆಯಲ್ಲಿ ೧೦ ಅಂಶ ಕಳೆದು ೧೧ನೇ ಅಂಶೆಯಲ್ಲಿ ಸೂರ್ಯನಿದ್ದಾನೆಂದು ತಿಳಿಯತಕ್ಕದ್ದು, ಇದು ಸಿಂಹರಾಶಿಯಾದ್ದರಿಂದ ಸಿಂಹ ಮೊದಲಾಗಿ ೧೧ನೇ ದ್ವಾದಶಾಂಶಾಧಿಪತಿ ಮಿಥುನ ಬುಧನೆಂದು ತಿಳಿಯತಕ್ಕದ್ದು. ದ್ವಾದಶಾಂಶೆ ಪದಕದಲ್ಲಿ ಸಿಂಹರಾಶಿಯ ದ್ವಾದಶಾಂಶೆ ೧೧ನೇ ಅಂಶಕ್ಕೆ ಬುಧ ೩ ಎಂದಿದೆ. ಅದನ್ನು ನೋಡಿದರೆ ಸ್ಪಷ್ಟವಾಗುತ್ತೆ.

## - ತ್ರಿಂಶಾಂಶೋದಾಹರಣಮ್ -

ತ್ರಿಂಶಾಂಶೆ - ಸ್ಪಷ್ಟರವಿ ರಾಶಿ ೪ ಭಾಗ ೨೭ ಕಲೆ ೧೫ ವಿಕಲೆ ೨೭ ಇದರಲ್ಲಿ ವಿಶೇಷವೇನೆಂದರೆ :- ವಿಷಯರಾಶಿಯಲ್ಲಿ ೨೬-೨೫ನೇ ಭಾಗ ಮೊದಲು ಗೊಂಡು ೩೦ರವರಿಗೂ ಶುಕ್ರ ತ್ರಿಶಾಂಶೆಯಲ್ಲಿ ಸೂರ್ಯನಿರುತ್ತಾನೆಂದು ತಿಳಿಯಬೇಕು.

## - ಸಪ್ತವರ್ಗೋದಾಹರಣಮ್ -

ಸೂರ್ಯನು-ಸಿಂಹರಾಶಿಯಲ್ಲಿ, ಚಂದ್ರಹೋರೆ ಧನುರ್ಗುರು ದ್ರೇಕ್ಕಾಣ, ವೃಷಭ ಶುಕ್ರ ಚತುರ್ಥಾಂಶ, ಧನುರ್ಗುರು ನವಾಂಶ, ಮಿಥುನ ಬುಧ ದ್ವಾದಶಾಂಶ, ತುಲಾ ಶುಕ್ರ ತ್ರಿಂಶಾಂಶೆಯಲ್ಲಿದ್ದಾನೆಂದು ನಿರ್ಣಯವಾಯಿತು.

ಇದಕ್ಕೆ ಪ್ರಯೋಜನವೇನೆಂದರೆ :- ಜಾತಕಚಂದ್ರಿಕೆಯಲ್ಲಿ ಜ. ದೇ॥ ಶಾಲಿನೀವೃತ್ತ ॥ ಲಗ್ನಂ ದೇಹೋ ವರ್ಗಷಟ್ಕಾಂಗಕಾನಿ ಪ್ರಾಣಶ್ಚನ್ದ್ರೋ ಧಾತವಃ ಖೇಚರೇಂದ್ರಾಃ ॥ ಪ್ರಾಣೇನಷ್ಟೇಧಾತವೊ ದೇಹನಾಶಂ ತಸ್ಮಾತ್ ಜ್ಞೇಯಂ ಚಂದ್ರವೀರ್ಯಃ ಪ್ರಧಾನಮ್ ॥೫೨॥ ಚಂದ್ರನು ಮುಖ್ಯ ಪ್ರಾಣ ರಕ್ಷಕನೆಂದು ಹೇಳಲ್ಪಟ್ಟಿರುತ್ತೆ. ಲಗ್ನವೇ ಶರೀರ, ಹೋರಾ ಮೊದಲಾದ ೬ ಷಡ್ವರ್ಗಗಳು, ಷಡಂಗಗಳು ಚಂದ್ರನೇ ಪ್ರಾಣ, ಆದ್ದರಿಂದ ಪ್ರಾಣ ನಷ್ಟವಾದ ಒಡನೆ ಶರೀರಧಾತು, ಅಂಗ ಪ್ರಾಣದೊಡನೆ ನಷ್ಟವನ್ನು ಹೊಂದುತ್ತವೆ. ಆದ್ದರಿಂದ ಚಂದ್ರವೀರ್ಯವನ್ನು ತಿಳಿದುಕೊಂಡು ಫಲ ತಿಳಿಯಬೇಕು. ಆದ್ದರಿಂದಲೇ ಚಂದ್ರ ರಾಶ್ಯಾದಿಯಾಗಿ ಫಲವನ್ನು ಹೇಳತಕ್ಕದ್ದು.

## - ಷಡ್ವರ್ಗಪ್ರಯೋಜನಮ್-

ಷಡ್ವರ್ಗಪ್ರಯೋಜನವೇನೆಂದರೆ,

ಶ್ಲೋಕ॥ ಸೌಖ್ಯಂ ಶೀಲಂ ಪದಂ ದ್ರವ್ಯಂ ವರ್ಣಬುದ್ಧಿ ಗುಣಾತ್ಮಜಾ॥
ವಪುಸ್ತ್ರೀಫಲಮಿತ್ಯಾಹುಃ ಷಡ್ವರ್ಗೇಕ್ರಮಶೋಗ್ರಹಾತ್ ॥೫೮॥

## - ಕೇರಳೀಯೇ -

ಶ್ಲೋಕ॥ ಶಾ॥ ವಿ॥ ಗೇಹಾತ್ಸೌಖ್ಯಮುದಾಹರಂತಿಮುನಯೋ ಹೋರಾ-ಬಲಂ ಶೀಲತಾಂ । ದ್ರೇಕ್ಕಾಣೇ ಪದವೀಂ ಧನಸ್ಯನಿಚಯಂ ಸಪ್ತಾಂಶಕೇಚನ್ತಯೇತ್॥ ವರ್ಣಂರೂಪಗುಣಾನ್ಸುಧೀಸುತ ನಯನ್ವಾಯೋನವಾಂಶೇಖಿಲಂ । ಲಿಂಗೇದ್ವಾದಶಗೆವಪುರ್ವಯಮಿದಂ ತ್ರಿಂಶಾಂಶಕೆಸ್ತ್ರೀಫಲಂ ॥೫೯॥

ರಾಶಿ (ಭಾವ) ಕುಂಡಲಿಯಿಂದ ಸೌಖ್ಯವಿಚಾರ, ಹೋರಾ ಕುಂಡಲಿಯಿಂದ ಶೀಲಸ್ವಭಾವ, ದ್ರೇಕ್ಕಾಣ ಕುಂಡಲಿಯಿಂದ ಪದವೀ ಮೊದಲಾದ ಅಧಿಕಾರ, ಐಶ್ವರ್ಯ, ಸಪ್ತಾಂಶ ಕುಂಡಲಿಯಿಂದ ದ್ರವ್ಯ ಧಾನ್ಯಾದಿ ಸಂಚಯ, ನವಾಂಶ ಕುಂಡಲಿಯಿಂದ ಸ್ವರೂಪ, ಗುಣ, ಸಂತತಿ, ದ್ವಾದಶಾಂಶ ಕುಂಡಲಿಯಿಂದ ಲಿಂಗಾದಿ ಸ್ವರೂಪ, ಅತಿಬಲ, ಕ್ಷೀಣಬಲ, ಸಮಬಲ, ಲಘುದೀರ್ಘಾದಿ ಹ್ರಸ್ವಾದಿ ವಿಚಾರ, ತ್ರಿಂಶಾಂಶ ಕುಂಡಲಿಯಲ್ಲಿ ಸ್ತ್ರೀ ಸ್ವಭಾವ ದಿಕ್ಕು ನಡತೆ ಸ್ತ್ರೀಯರಿಂದ ಸುಖ ದುಃಖ ಸ್ವಭಾವವನ್ನು ತಿಳಿಯತಕ್ಕದ್ದು.

## ಲಗ್ನ ಷಡ್ವರ್ಗನಿರ್ಣಯಃ

ಆದರೆ ಗ್ರಹಗಳಿಗೆ ಷಡ್ವರ್ಗ ಹೇಳಿದಂತೆಯೇ ಲಗ್ನಕ್ಕೂ ಕನ್ಯಾದಿ ದ್ವಾದಶ

ಭಾವಗಳಿಗೂ ಷಡ್ವರ್ಗ ಕಂಡು ಹಿಡಿಯಬೇಕು. ಲಗ್ನಕುಂಡಲಿಯಲ್ಲಿ ಲಗ್ನವೆಂದು ಗುರ್ತುಮಾಡಿದಂತೆಯೇ ಹೋರಾದಿ ಷಡ್ವರ್ಗ ಕುಂಡಲಿಗಳಲ್ಲಿಯೂ ಲಗ್ನವನ್ನು ಕಂಡು ಹಿಡಿದುಕೊಳ್ಳಬೇಕು. ಇದರಿಂದ ಲಗ್ನ ಯಾವ ಷಡ್ವರ್ಗದಲ್ಲಿರುತ್ತೆಂದು ಕಂಡುಹಿಡಿದು ಮುಂದೆ ಫಲಪ್ರಕರಣದಲ್ಲಿ ಇದಕ್ಕೆ ಕ್ರಿಯೆ ॥೬೦॥ ನ ॥ ಕ್ರಮವಾಗಿ ಗಣಿತ ಮಾಡಲಾರದೇಯೋ ಅಥವಾ ತಿಳಿಯಲರಿಯದೇಯೋ ಅನೇಕ ಜ್ಯೋತಿಷ್ಕರು ಈ ಕ್ರಮವನ್ನನುಸರಿಸುವುದಿಲ್ಲ. ಆದ್ದರಿಂದ ಅವರು ಫಲ ಹೇಳುವುದು ಕ್ರಮವಾಗಿ ದೃಷ್ಟಾಂತಕ್ಕೆ ಬರುವುದಿಲ್ಲವೆಂದು ಹೇಳಬಹುದು. "ಷಡ್ವರ್ಗಗತಿಭಿಃಫಲಂ" ಎಂದು ಉಕ್ತವಾಗಿರುವುದರಿಂದ ಷಡ್ವರ್ಗ, ಸಪ್ತವರ್ಗ, ಚತುರ್ದಶವರ್ಗ, ಈ ಪ್ರಕಾರ ಈ ಮೂರರಲ್ಲಿ ಅಧಮಪಕ್ಷ ಷಡ್ವರ್ಗವನ್ನಾದರೂ ಕಂಡುಹಿಡಿಯಬೇಕು.

## ಮೇಷಾದಿರಾಶಿ ಪದಕಮ್

| | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ | ರಾಶಿ ಹೆಸರು |
|---|---|---|---|---|---|---|---|---|---|---|---|---|---|
| ೩೦ ಭಾಗ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ಸಂಖ್ಯೆ |

## ಅಥ ಹೋರಾಚಕ್ರ ಪದಕಮ್

| ಭಾಗ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ | |
|---|---|---|---|---|---|---|---|---|---|---|---|---|---|
| ೧ರಿಂದ೧೫ಭಾಗದವರೆಗೆ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | |
| ೧೬ರಿಂದ೩೦ಭಾಗದವರೆಗೆ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | ಚಂದ್ರ ೪ | ರವಿ ೫ | |

## ಅಥ ದ್ರೇಕ್ಕಾಣ ಪದಕಮ್

| ಭಾಗ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ | |
|---|---|---|---|---|---|---|---|---|---|---|---|---|---|
| ೧ ರಿಂದ ೧೦ ಭಾಗದವರೆಗೆ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | |
| ೧೧ ರಿಂದ ೨೦ ಭಾಗದವರೆಗೆ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೫ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | |
| ೨೧ ರಿಂದ ೩೦ ಭಾಗದವರೆಗೆ | ಗುರು ೯ | ಬುಧ ೬ | ಬುಧ ೬ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | |

# ಚತುರ್ಥಾಂಶ ಪದಕಮ್

| ಭಾಗ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ೧ ರಿಂದ ೭-೩೦ರ ವರೆಗೆ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ |
| ೭-೩೧ ರಿಂದ ೧೫-೦ ರ ವರೆಗೆ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ |
| ೧೬ ರಿಂದ ೨೨-೩೦ ರ ವರೆಗೆ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ |
| ೨೨-೩೧ ರಿಂದ ೩೦ರ ವರೆಗೆ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ |

## ನವಾಂಶ ಪದಕಂ

| ಸ್ಪಷ್ಟ ರಾಶಿ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ | ಅಂಶ |
|---|---|---|---|---|---|---|---|---|---|---|---|---|---|
| ೦ ರಿಂದ ೩-೨೦ರ ವರಗೆ | ಕು ೧* | ಶ ೧೦ | ಶು ೭ | ಚ ೪* | ಕು ೧ | ಶ ೧೦ | ಶು ೭* | ಚ ೪ | ತು ೧ | ಶ ೧೦* | ಶು ೭ | ಚ ೪ | ೧ |
| ೩-೨೦ ರಿಂದ ೬-೪೦ರ ವರಗೆ | ಶು ೨ | ಶನಿ ೧೧ | ಕು ೮ | ರ ೫ | ಶು ೨ | ಶ ೧೧ | ಕು ೮ | ರ ೫ | ಶು ೨ | ಶ ೧೧ | ಕು ೮ | ರ ೫ | ೨ |
| ೬-೪೧ ರಿಂದ ೧೦ರ ವರಗೆ | ಬು ೩ | ಗು ೧೨ | ಗು ೯ | ಬು ೬ | ಬು ೩ | ಗು ೧೨ | ಗು ೯ | ಬು ೬ | ಬು ೩ | ಗು ೧೨ | ಗು ೯ | ಬು ೬ | ೩ |
| ೧೦ ರಿಂದ ೧೩-೨೦ರ ವರಗೆ | ಚ ೪ | ಕು ೧ | ಶ ೧೦ | ಶು ೭ | ಚ ೪ | ಕು ೧ | ಶ ೧೦ | ಶು ೭ | ಚ ೪ | ಕು ೧ | ಶ ೧೦ | ಶು ೭ | ೪ |
| ೧೩-೨೧ರಿಂದ೧೬-೪೦ರ ವರಗೆ | ರ ೫ | ಕು ೨* | ಶ ೧೧ | ಕು ೮ | ರ* ೫ | ಕು ೨ | ಶ ೧೧ | ಕು* ೮ | ರವಿ ೫ | ಕು ೨ | ಶ ೧೧* | ಕು ೮ | ೫ |
| ೧೬-೪೧ರಿಂದ೨೦-೦೦ರ ವರಗೆ | ಬು ೬ | ಬು ೩ | ಗು ೧೨ | ಗು ೯ | ಬು ೬ | ಬು ೩ | ಗು ೧೨ | ಗು ೯ | ಬು ೬ | ಬು ೩ | ಗು ೧೨ | ಗು ೯ | ೬ |
| ೨೦ ರಿಂದ ೨೩-೨೦ರ ವರಗೆ | ಶು ೭ | ಚ ೪ | ಕು ೧ | ಶ ೧೦ | ಶು ೭ | ಚ ೪ | ಕು ೧ | ಶ ೧೦ | ಶು ೭ | ಚ ೪ | ಕು ೧ | ಶ ೧೦ | ೭ |
| ೨೩-೨೧ ರಿಂದ ೨೬-೪೦ ರ ವರಗೆ | ಕು ೮ | ರ ೫ | ಶು ೨ | ಶ ೧೧ | ಕು ೮ | ರ ೫ | ಶು ೨ | ಶ ೧೧ | ಕು ೮ | ರ ೫ | ಶು ೨ | ಶ ೧೧ | ೮ |
| ೨೬-೪೦ ರಿಂದ ೩೦ ರವರಗೆ | ಗುರು ೯ | ಬುಧ ೬ | ಬು ೩* | ಗು ೧೨ | ಗು ೯ | ಬು ೬* | ಬು ೩೧ | ಗು ೧೨ | ಗು ೯* | ಬು ೬ | ಬು ೩ | ಗು ೧೨ | ೯ |

*ವರ್ಗೋತ್ತಮಾಂಶಗಳು

# ದ್ವಾದಶಾಂಶ ಪದಕಂ

| ಸ್ಪಷ್ಟ ರಾಶಿ | ಮೇ. | ವೃ. | ಮಿ. | ಕ. | ಸಿಂ. | ಕ. | ತು. | ವೃ. | ಧ. | ಮ. | ಕುಂ. | ಮೀ. | |
|---|---|---|---|---|---|---|---|---|---|---|---|---|---|
| ರಾ.ಭಾ ೨-೩೦ | ಕು ೧ | ಕು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ೧ |
| ೫-೦ | ಶು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ೨ |
| ೭-೩೦ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ೩ |
| ೧೦-೦ | ಚಂ ೪ | ರವಿ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ೪ |
| ೧೨-೩೦ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ೫ |
| ೧೫-೦ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ೬ |
| ೧೭-೩೦ | ಶು ೭ | ತು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬು ೬ | ೭ |
| ೨೦-೦ | ತು ೮ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ೮ |
| ೨೨-೩೦ | ಗು ೯ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬುಧ ೬ | ಶು ೭ | ಕು ೮ | ೯ |
| ೨೫-೦ | ಶ ೧೦ | ಶ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ೧೦ |
| ೨೭-೩೦ | ರ ೧೧ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ೧೧ |
| ೩೦-೦ | ಗು ೧೨ | ಕು ೧ | ಶು ೨ | ಬು ೩ | ಚಂ ೪ | ರ ೫ | ಬು ೬ | ಶು ೭ | ಕು ೮ | ಗು ೯ | ಶ ೧೦ | ಶ ೧೧ | ೧೨ |

## ವಿಶಮರಾಶಿ ತ್ರಿಂಶಾಂಶ ಪದಕಂ

| ಸ್ಪಷ್ಟರಾಶಿ ಭಾಗ | ಮೇಷ | ಮಿಥುನ | ಸಿಂಹ | ತುಲ | ಧನುಸ್ಸು | ಕುಂಭ |
|---|---|---|---|---|---|---|
| ೧ ರಿಂದ ೫ ಭಾಗದವರೆಗೆ ಕುಜ | ಮೇಷ ೧ | ಕುಜ ೧ | ಕುಜ ೧ | ಕುಜ ೧ | ಕುಜ ೧ | ಕುಜ ೧ |
| ೬ ರಿಂದ ೧೦ ಭಾಗದವರೆಗೆ ಶನಿ | ಶನಿ ೧೧ | ಶನಿ ೧೧ | ಶನಿ ೧೧ | ಶನಿ ೧೧ | ಶನಿ ೧೧ | ಶನಿ ೧೧ |
| ೧೦ ರಿಂದ ೧೮ ಭಾಗದವರೆಗೆ ಗುರು | ಗುರು ೯ | ಗುರು ೯ | ಗುರು ೯ | ಗುರು ೯ | ಗುರು ೯ | ಗುರು ೯ |
| ೧೯ ರಿಂದ ೨೫ ಭಾಗದವರೆಗೆ ಬುಧ | ಬುಧ ೩ | ಬುಧ ೩ | ಬುಧ ೩ | ಬುಧ ೩ | ಬುಧ ೩ | ಬುಧ ೩ |
| ೨೬ ರಿಂದ ೩೦ ಭಾಗದವರೆಗೆ ಶುಕ್ರ | ಶುಕ್ರ ೭ | ಶುಕ್ರ ೭ | ಶುಕ್ರ ೭ | ಶುಕ್ರ ೭ | ಶುಕ್ರ ೭ | ಶುಕ್ರ ೭ |

## ಸಮತ್ರಿಂಶಾಂಶ ಪದಕಂ

| ಸ್ಪಷ್ಟರಾಶಿ ಭಾಗ | ವೃಷಭ | ಕಟಕ | ಕನ್ಯ | ವೃಶ್ಚಿಕ | ಮಕರ | ಮೀನ |
|---|---|---|---|---|---|---|
| ೧ ರಿಂದ ೫ ಭಾಗದವರೆಗೆ | ಶುಕ್ರ ೨ | ಶುಕ್ರ ೨ | ಶುಕ್ರ ೨ | ಶುಕ್ರ ೨ | ಶುಕ್ರ ೨ | ಶುಕ್ರ ೨ |
| ೬ ರಿಂದ ೧೨ ಭಾಗದವರೆಗೆ | ಬುಧ ೬ | ಬುಧ ೬ | ಬುಧ ೬ | ಬುಧ ೬ | ಬುಧ ೬ | ಬುಧ ೬ |
| ೧೩ ರಿಂದ ೨೦ ಭಾಗದವರೆಗೆ | ಗುರು ೧೨ | ಗುರು ೧೨ | ಗುರು ೧೨ | ಗುರು ೧೨ | ಗುರು ೧೨ | ಗುರು ೧೨ |
| ೨೧ ರಿಂದ ೨೫ ಭಾಗದವರೆಗೆ | ಶನಿ ೧೦ | ಶನಿ ೧೦ | ಶನಿ ೧೦ | ಶನಿ ೧೦ | ಶನಿ ೧೦ | ಶನಿ ೧೦ |
| ೨೬ ರಿಂದ ೩೦ ಭಾಗದವರೆಗೆ | ಕುಜ ೮ | ಕುಜ ೮ | ಕುಜ ೮ | ಕುಜ ೮ | ಕುಜ ೮ | ಕುಜ ೮ |

ಕುಜಾದಿ ಪಂಚತಾರಾಗ್ರಹಗಳಿಗೆ ತ್ರಿಂಶಾಂಶ ಭಾಗವಿರುತ್ತೆ. ಸೂರ್ಯಚಂದ್ರರು ಪ್ರಕಾಶಾಂಶ ಗ್ರಹಗಳಾದ್ದರಿಂದ ತ್ರಿಂಶಾಂಶವಿಲ್ಲ.

## ಸಪ್ತಾಂಶ ಪದಕಂ

| ಸ್ಪಷ್ಟ ಗ್ರಹ | ಮೇ. | ವೃ. | ಮಿ. | ಕ. | ಸಿಂ. | ಕ. | ತು. | ವೃ. | ಧ. | ಮ. | ಕುಂ. | ಮೀ. |
|---|---|---|---|---|---|---|---|---|---|---|---|---|
| ೦ ರಿಂದ ೪-೧೭ರವರೆವಿಗೆ | ಕು ೧ | ಕು ೮ | ಬು ೩ | ಶ ೧೦ | ರ ೫ | ಗು ೧೨ | ಶು ೭ | ಶು ೨ | ಗು ೯ | ಚಂ ೪ | ಶ ೧೧ | ಬು ೬ |
| ೮-೩೪ರವರೆವಿಗೆ | ಶು ೨ | ಗು ೯ | ಚ ೪ | ಶ ೧೧ | ಬು ೬ | ಕು ೧ | ಕು ೮ | ಬು ೩ | ಶ ೧೦ | ರ ೫ | ಗು ೧೨ | ಶು ೭ |
| ೧೨-೫೧ | ಬು ೩ | ಶ ೧೦ | ರ ೫ | ಗು ೧೨ | ಶು ೭ | ಶು ೨ | ಗು ೯ | ಚಂ ೪ | ಶ ೧೧ | ಬು ೬ | ಕು ೧ | ಕು ೮ |
| ೧೭-೮ | ಚ ೪ | ಶ ೧೧ | ಬು ೬ | ಕು ೧ | ಕು ೮ | ಬು ೩ | ಶ ೧೦ | ರ ೫ | ಗು ೧೨ | ಶು ೭ | ಶು ೨ | ಗು ೯ |
| ೨೧-೨೫ | ರ ೫ | ಗು ೧೨ | ಶು ೭ | ಶು ೨ | ಗು ೯ | ಚಂ ೪ | ಶ ೧೧ | ಬು ೬ | ಕು ೧ | ಕು ೮ | ಬು ೩ | ಶ ೧೦ |
| ೨೫-೪೩ | ಬು ೬ | ಕು ೧ | ಕು ೮ | ಬು ೩ | ಶ ೧೦ | ರ ೫ | ಶ ೧೨ | ಶು ೭ | ಕು ೨ | ಗು ೯ | ಚಂ ೪ | ಶ ೧೧ |
| ೩೦-೦ | ಶು ೭ | ಶು ೨ | ಗು ೯ | ಚಂ ೪ | ಶ ೧೧ | ಬು ೬ | ಗು ೧ | ಕು ೮ | ಬು ೩ | ಶ ೧೦ | ಶ ೫ | ಗು ೧೨ |

## ತ್ರಿಂಶಾಂಶ ನಿರ್ಣಯಃ

ಮೂಲ|| ಕುಜರವಿಜ ಗುರುಜ್ಞ ಶುಕ್ರ ಭಾಗಾಃ ಪವನ ಸಮೀರಣಕೌರ್ಪಿ-
ಜೂಕಲೇಯಾಃ । ಅಯುಜಿ ಯುಜತುಭೇವಿಪರ್ಯಯಸ್ಥಾಃ ಶಶಿ
ಭವನಾಳಿ ಝಷಾಂತ ಮೃಕ್ಷಸಂಧಿಃ ||೮||

ಟೀಕು || ತ್ರಿಂಶಾಂಶಾಧಿಪತಿಗಳು ಹೇಳಲ್ಪಡುತ್ತೆ. ಅಯುಜಿ - ವಿಷಮ ರಾಶಿಯಲ್ಲಿ, ಪವನ-೫, ಸಮೀರಣ-೫, ಕೌರ್ಪ್ಪಿ - ವೃಶ್ಚಿಕ ೮, ಜೂಕ-ತುಲಾ ರಾಶಿ, ೭ ಲೇಯ-ಸಿಂಹ ೫ ಈ ಪ್ರಕಾರವಾಗಿ ೩೦ ಭಾಗಗಳಿಗೆ, ಕುಜ - ಅಂಗಾರಕ, ರವಿಜ - ಶನಿ, ಗುರು - ಬೃಹಸ್ಪತಿ, ಜ್ಞ - ಬುಧ, ಶುಕ್ರ-ಶುಕ್ರ, ಭಾಗಾಃ- ಮೇಲೆ ಹೇಳಲ್ಪಟ್ಟ ಭಾಗಗಳು ಕ್ರಮವಾಗಿ ತ್ರಿಂಶಾಂಶಾಧಿಪತಿಗಳಾಗುವರು. ಯುಜ - ಸಮರಾಶಿಗಳಲ್ಲಿ ಈ ಮೇಲೆ ಹೇಳಲ್ಪಟ್ಟ ಭಾಗಗಳು, ವಿಪರ್ಯಯಸ್ಥಾ- ವ್ಯತ್ಯಾಸವಾಗಿ, ಅನ್ವಯಿಸಿಕೊಳ್ಳತಕ್ಕದ್ದು. ಈ ತ್ರಿಂಶಾಂಶ ಉದಾಹರಣೆಯನ್ನು ಹಿಂದಿನ ೭ನೇ ಶ್ಲೋಕದ ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿರುತ್ತೆ. ಮೂಲ ಗ್ರಂಥದಲ್ಲಿ ಕ್ರಮವಾಗಿ ಬಾರದ್ದರಿಂದ ಈ ಶ್ಲೋಕವನ್ನು ಬಿಟ್ಟರೆ ಗ್ರಂಥಲೋಪ ದೋಷವುಂಟಾಗುವುದರಿಂದ ಪುನಃ ಸಂಕ್ಷೇಪವಾಗಿ ಹೇಳಲ್ಪಟ್ಟಿರುತ್ತೆ. ಶಶಿಭವನಾಳಿ ಝಷಾಂತಂ - ಇಲ್ಲಿ ಅಂತ ಶಬ್ದವನ್ನು, ಶಶಿ ಭವನಾಂಶಂ, ಅಳಿಭವನಾಂತಂ, ಝಷಭವನಾಂತಂ ಎಂದು ತಿಳಿದುಕೊಳ್ಳಬೇಕು. ಇದಕ್ಕೆ ಪ್ರಮಾಣ ಅಂತಂ ಇತಿ ಸರ್ವತ್ರ ಸಂಬಧ್ಯತೆ || ಅಭಿದಾನ ಸಂಗ್ರಹೆ ನಾಮಾಲೇಖ್ಯಯಶಃ ಶೇಷೋ-ಶೇಷಶಬ್ದೋ ನಾಮಾಧಿಭಿಃ ಪ್ರತ್ಯೇಕ ಮನ್ವೇತಿಯಥಾ ನಾಮಶೇಷಃ, ಯಶಃಶೇಷಃ ಲೇಖ್ಯಶೇಷಃ, ತದ್ವತ್ ಶಶಿಭವನಾಂತಂ, ಅಳಿಭವನಾಂತಂ ಝಷಭವನಾಂತಂ, ಇತಿ ||

ಶಶಿಭವನಾಂತಂ - ಕರ್ಕಾಟಕ ರಾಶಿಯ ಅಂತ್ಯನವಾಂಶ ಅಳ್ಯಂತಂ-ವೃಶ್ಚಿಕ ರಾಶಿಯ ಅಂತ್ಯನವಾಂಶ, ಝಷಾಂತಂ ಮೀನರಾಶಿಯ ಅಂತ್ಯನವಾಂಶ, ಋಕ್ಷ ಸಂಧಿಃ - ನಕ್ಷತ್ರ ಸಂಧಿಯೆಂದು ತಿಳಿಯಬೇಕು, ಅದು ಹೇಗೆಂದರೆ - ಕಟಕ ರಾಶ್ಯಂತವಾದ ಆಶ್ಲೇಷಾ ನಕ್ಷತ್ರದ ಅಂತ್ಯಭಾಗ, ವೃಶ್ಚಿಕರಾಶಿಯ ಅಂತ್ಯವಾದ, ಜ್ಯೇಷ್ಠಾ ನಕ್ಷತ್ರದ ಅಂತ್ಯಭಾಗವು, ಮೀನರಾಶಿಯ ಅಂತ್ಯವಾದ ರೇವತೀ ನಕ್ಷತ್ರದ ಅಂತ್ಯಭಾಗವು ಗಂಡಾಂತರವೆಂದು ಹೇಳಲ್ಪಟ್ಟಿರುತ್ತೆ. ನಾರದೀಯೇ || ಶ್ಲೋಕ || ಕುಳೀರ ಸಿಂಹಯೋಃ ಕೀಟ ಚಾಪಯೋರ್ಮೀನ ಮೇಷಯೋಃ । ಗಂಡಾಂತ ಮಂತರಾಳಂಸ್ಯಾ ದ್ಘಟಿಕಾರ್ದ್ಧಂ ಮೃತಿಪದಂ ||೧೬|| ಲಘುಜಾತಕೆ ||ಶ್ಲೋಕ|| ಪೂಷಾಶ್ವಿನೋ ಸ್ಸಂಧಾ ಉರಗಮಘಾ, ಜೇಷ್ಠ ಮೂಲಯೋಸ್ಸಂಧೌ । ಘಟಿಕಾ ಗಂಡಾ ಹ್ಯಷ್ಟೌಚತಸ್ರ ಇಹಾಪರೇ ಪರಿತಾಃ ಇತಿ ||೬೨|| ತಾ|| ರೇವತೀ

ನಕ್ಷತ್ರ- ಅಶ್ವಿನೀ ನಕ್ಷತ್ರದ ಸಂಧಿಯಲ್ಲಿ ಅರ್ಧ ಅರ್ಧಗಳಿಗೆಗಳು, ಆಶ್ಲೇಷಾ-ಮಖಾ ನಕ್ಷತ್ರದ ಸಂಧಿಯಲ್ಲಿ ಅರ್ಧ ಅರ್ಧ ಗಳಿಗೆಗಳು, ಜ್ಯೇಷ್ಠಾ ನಕ್ಷತ್ರ, ಮೂಲ ನಕ್ಷತ್ರದ ಸಂಧಿಯಲ್ಲಿ ಅರ್ಧ ಅರ್ಧಗಳಿಗೆಗಳು ಸಂಧಿಕಾಲ ಗಂಡಾಂತ ಕಾಲವೆಂದು ತಿಳಿಯಬೇಕು. ಇದಕ್ಕೆ ಅನ್ಯಗ್ರಂಥ ಉದಾಹರಣೆಯು ಏಕ ವಾಕ್ಯತೆಯಾಗಿರುತ್ತೆ. ಶ್ಲೋಕ ॥ ಆಶ್ಲೇಷಾಂತಂ ಮಘಾತ್ಪೂರ್ವಂ - ಜ್ಯೇಷ್ಠಾಂತಂ ಮೂಲಪೂರ್ವಕಂ॥ ರೇವತ್ಯಶ್ವಿನ್ಯೋರ್ಮಧ್ಯೇ ಪಿತ್ರಾರಿಷ್ಟಂವಿನಿರ್ದಿಶೇತ್ ॥೬೩॥ ಎಂದು ಯವನೇಶ್ವರರು ಹೇಳಿರುತ್ತಾರೆ. ಇದಕ್ಕೆ ಪ್ರಯೋಜನ, ಜನ್ಮ ಕಾಲದಲ್ಲಿ ಈ ಗಂಡಕಾಲಗಳಲ್ಲಿ ಶಿಶು ಹುಟ್ಟಿದರೆ ಬಾಲಾರಿಷ್ಟಾದಿ ಸೂಚಕವಾಗುವುದು ॥೮॥

## ಮೇಷಾದಿರಾಶಿ ನಾಮಾನಿ

ಮೂಲ॥ ಕ್ರಿಯ ತಾಲುರಿಜತು ಮಕಳೀರ ಲೇಯ ಪಾಥೋನ ಜೂಕಕೌರ್ಪ್ಯಾಖ್ಯಾಃ ॥ ಕೌಕ್ಷಿಕ ಆಕೋಕೇರೋ ಹೃದ್ರೋಗಶ್ಚಾಂತ್ಯಭ್ಯಂ ಚೇತ್ಥಮ್ ॥೯॥

ಅವ॥ ಈ ಬೃಹಜ್ಜಾತಕದಲ್ಲಿ ವ್ಯವಹಾರ ಜ್ಞಾನಾರ್ಥವಾಗಿ ಮೇಷಾದಿರಾಶಿ ಗಳಿಗೂ, ಲಗ್ನಗಳಿಗೂ ಪ್ರಯೋಗ ಮಾಡಿರುವ ಸಂಜ್ಞೆಗಳನ್ನು ಹೇಳುತ್ತಾನೆ.

ಟೀಕು॥ ಕ್ರಿಯ-ಮೇಷ, ತಾಲುರಿ-ವೃಷಭ, ಜತುಮ-ಮಿಥುನ, ಕುಳೀರ-ಕರ್ಕಾಟಕ, ಲೇಯ-ಸಿಂಹ, ಪಾಥೋನ-ಕನ್ಯ, ಜೂಕ-ತುಲ, ಕೌರ್ಪಿ-ವೃಶ್ಚಿಕ, ಕೌಕ್ಷಿಕ-ಧನುಸ್ಸು, ಆಕೋಕೇರ-ಮಕರ, ಹೃದ್ರೋಗ-ಕುಂಭ, ಅಂತ್ಯಭ್ಯಂ-ಮೀನ ಈ ಪ್ರಕಾರವಾಗಿ ಮೇಷಾದಿಯಾಗಿ ದ್ವಾದಶರಾಶಿಗಳ ಹೆಸರುಗಳು ॥೯॥

## ರಾಶೀನಾಂ ದಿವಾರಾತ್ರಿಬಲ ನಿರ್ಣಯಃ

ಮೂಲ॥ ಗೋಜಾಶ್ವಿ ಕರ್ಕಿ ಮಿಥುನಾಸ್ಸಮೃಗಾನಿಶಾಖ್ಯಾಃ । ಪೃಷ್ಠೋದಯಾನಿಮಿಥುನಾಃ ಕಥಿತಾಸ್ತಏವ॥ ಶೀರ್ಷೋದಯಾದಿನಬಲಾಶ ಭವಂತಿ ಶೇಷಾಃ ಲಗ್ನಂ ಸಮೇತ್ಯುಭಯತಃ ಪೃಥುರೋಮಯುಗ್ಮಂ ॥೧೦॥

ಅವತಾರಿಕೆ ॥ ರಾಶಿಗಳಿಗೆ ದಿವಾರಾತ್ರಿ ಬಲವನ್ನು, ವೃಷ್ಠೋದಯ ಶಿರೋದಯ ಲಕ್ಷಣವನ್ನು ಹೇಳುತ್ತಾನೆ.

ಟೀಕು॥ ಗೋಜಾಶ್ವಿಕರ್ಕಿ ಮಿಥುನಾ ಸ್ವಮೃಗಾಃ-ಗೋ-ವೃಷಭ, ಅಜ-ಮೇಷವು, ಅಶ್ವಿ - ಧನುಸ್ಸು, ಧನುರಾಶಿಗೆ - ಅಶ್ವೀ ಎಂದು ನಿಘಂಟು. ಕರ್ಕಿ-

ಕರ್ಕಾಟಕ ಮಿಥುನ-ಸ್ತ್ರೀ ಪುರುಷ ದ್ವಂದ್ವಯುಕ್ತವಾದದ್ದು. ಮಿಥುನ, ಸಮೃಗಾಃ-ಮಕರರಾಶಿಯು ಸಹಿತವಾಗಿ ೬ ರಾಶಿಗಳು ನಿಶಾಖ್ಯಾಃ-ರಾತ್ರಿ ಬಲವುಳ್ಳ ರಾಶಿಗಳು, ಮಿಥುನಾಃ - ಮಿಥುನರಾಶಿ ವರ್ಜ್ಯವಾಗಿ ಉಳಿದ ವೃಷಭ, ಮೇಷ, ಧನುಸ್ಸು, ಕರ್ಕಾಟಕ, ಮಕರ ರಾಶಿಗಳು ಪೃಷ್ಠೋದಯರಾಶಿಗಳೆಂದು, ಕಥಿತಾಃ-ಹೇಳಲ್ಪಟ್ಟಿದೆ. ಶೇಷಾಃ- ಉಳಿದ ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ರಾಶಿಗಳು, ದಿನಬಲಾಃ-ಹಗಲಿನಲ್ಲಿ ಬಲವುಳ್ಳವುಗಳು, ಈ ದಿವಾ ಬಲರಾಶಿಗಳು, ಮಿಥುನರಾಶಿಯ ಸಹಾಶೀರ್ಷೋದಯಾಃ-- ಶಿರೋದಯರಾಶಿಗಳೆ, ಭವಂತಿ - ಆಗುತ್ತವೆ. ಪೃಥುರೋಮಯುಗ್ಮಂ, ಮೀನರಾಶಿ ಉಭಯತಃ, ಪೃಷ್ಠೋದಯ ಶಿರೋದಯಗಳಾದ್ದರಿಂದ, ಉಭಯೋ ದಯರಾಶಿ ಎಂದು ಹೇಳಲ್ಪಡತಕ್ಕದ್ದು, ಲಗ್ನಂ-ಈ ಸಂಜ್ಞೆಗಳು ಲಗ್ನಗಳಾಗಿ, ಸಮೇತಿ-ಉದಯಿಸುತ್ತದೆ. ಈ ವಿಷಯಕ್ಕೆ ದೈವಜ್ಞಭೂಷಣೆ ।।ಶ್ಲೋಕ।। ದಿವಾಬಲಾ ಮಾನುಷರಾಯಸ್ಸ್ಯುಃ। ರಾತ್ರೌಬಲಾಸ್ಸ್ಯುಃ ಪ್ರಬಲಾಶ್ಚಕೀಟಾಃ ।। ಸಂಧ್ಯಾದ್ವಯೋರ್ಬಲಯುತಾಶ್ಚ ಬಲಾಪ್ರದಾನಾಂ ಸಪಷ್ಟಭಾನಾಂತು ಚ ಯತ್ರಸಂಜ್ಞಾಃ ।।೬೪।। ತಾ ।। ಮಾನುಷ ರಾಶಿಗಳು ಹಗಲಿನಲ್ಲಿ ಬಲವುಳ್ಳವು, ಕೀಟರಾಶಿಗಳು ಸಂಧ್ಯಾಕಾಲದ್ವಯಗಳಲ್ಲಿ ಬಲವುಳ್ಳವು, ಶೇಷರಾಶಿಗಳು ರಾತ್ರಿ ಬಲವುಳ್ಳವುಗಳು. ಜ್ಞಾನಪ್ರದೀಪಿಕಾಂ ।। ಚಾಪೋಕ್ಷಕರ್ಕಿನಕ್ರಾಜಾಃ ಪೃಷ್ಠೋದಯಬಲಾನ್ವಿತಾಃ । ತಿರ್ಯಜ್ಮೀನಸ್ತಥಾ ಶೇಷಾಃ ರಾಶಯೋಮಸ್ತಕೋದಯಾಃ ।।೬೫-೧೦।।

## ರಾಶೀನಾಂ ಕ್ರೂರಸೌಮ್ಯಾದಿ ನಿರ್ಣಯಃ

ಮೂಲ।। ಕ್ರೂರಸೌಮ್ಯಃ ಪುರುಷವನಿತೇ ತೇಚರಾಗದ್ವಿದೇಹಾಃ । ಪ್ರಾಗಾ- ದೀಶಾಃ
ಕ್ರಿಯವೃಷನೃಯತ್ಕರ್ಕಟಾಸ್ಸತ್ರಿಕೋಣಾಃ ।। ಮಾರ್ತಾಂ-
ಡೇಂದ್ವೋರಯುಜಿ ಸಮಭೇಚನ್ದ್ರಭಾನೋಶ್ಚ ಹೋರೇ ದ್ರೇಕ್ಕಾಣಾಸ್ಸ್ಯುಃ
ಸ್ವಭವನ ಸುತತ್ರಿ ತ್ರಿಕೋಣಾಧಿಪಾನಾಂ ।।೧೧।।

ಅವತಾರಿಕೆ ।। ಈ ಶ್ಲೋಕದಲ್ಲಿ ರಾಶಿಗಳಿಗೆ ಉಗ್ರತ, ಸೌಮ್ಯತ್ವ, ಪುರುಷ, ಸ್ತ್ರೀ ಸ್ವಭಾವವನ್ನು, ಚರ, ಸ್ಥಿರ, ದ್ವಿದೇಹ ಲಕ್ಷಣವನ್ನು, ದಿಕ್ಕುಗಳನ್ನು, ಹೋರಾದ್ರೇಕ್ಕಾಣ ನವಾಂಶ ವಿಧಿಗಳನ್ನು ಹೇಳುತ್ತಾನೆ.

ಟೀಕು।। ಕ್ರೂರಃ ಸೌಮ್ಯಃ - ಕ್ರೂರ ಸ್ವಭಾವ ಸೌಮ್ಯ ಸ್ವಭಾವ, ಮೇಷಾದಿ ರಾಶಿಗಳನ್ನು ಕ್ರಮವಾಗಿ ತಿಳಿಯತಕ್ಕದ್ದು. ಅದು ಹೇಗೆಂದರೆ - ಮೇಷಾದಿಯಾಗಿ ವಿಷಮರಾಶಿಗಳು, ೬ ಕ್ರೂರರಾಶಿಗಳು ವೃಷಾದಿಯಾಗಿ ೬ ಸಮರಾಶಿಗಳು ಸೌಮ್ಯ

ರಾಶಿಗಳು, ಇದಕ್ಕೆ ಪ್ರಯೋಜನವೇನೆಂದರೆ, ಕ್ರೂರರಾಶಿಯಲ್ಲಿ ಹುಟ್ಟಿದವರು ಕ್ರೂರಸ್ವಭಾವವುಳ್ಳವರಾಗಿರುವರು. ಸೌಮ್ಯರಾಶಿಯಲ್ಲಿ ಹುಟ್ಟಿದವರು ಸೌಮ್ಯ ಸ್ವಭಾವದಿಂದಿರುವರು. ಇದಕ್ಕೆ ಪ್ರಮಾಣ ಸತ್ಯಾಚಾರ್ಯಃ ।।ಶ್ಲೋಕ।। ಓಜೇ ಷೂತ್ಥಾಃ ಕ್ರೂರಾಸೌಮ್ಯಾ ಯುಗ್ಮೇಷು ಭವನೇಷು ।।ಇತಿ।। ।।೬೬।। ಪುರುಷ ವನಿತೆ ಮೇಷಾದಿ ವಿಷಮರಾಶಿಗಳು ೬ ಪುರುಷರಾಶಿಗಳು, ವೃಷಾದಿ ೬ ರಾಶಿಗಳು ಸ್ತ್ರೀರಾಶಿಗಳು. ಇದಕ್ಕೆ ಪ್ರಯೋಜನ :- ಪುರುಷರಾಶಿಯಲ್ಲಿ ಹುಟ್ಟಿದವರು ತೇಜೋವಂತರಾಗುವರು. ಸ್ತ್ರೀರಾಶಿಯಲ್ಲಿ ಹುಟ್ಟಿದವರು ತೇಜೋಹೀನರಾಗುವರು. ತೆ-ಅ ಮೇಷಾದಿ ರಾಶಿಗಳು, ಚರಾಗದ್ವಿದೇಹಾಃ ಚರ-ಚರರಾಶಿ, (ಚರಿಷ್ಣು ಜಂಗಮ ಚರಂ ಚಲಂ ಲೋಲಂಚಲಮಿತ್ಯಮರಃ ।।) ಆಗ-ಸ್ಥಿರ, ದ್ವಿದೇಹಃ ದ್ವಿಸ್ವಭಾವ, ಈ ಪ್ರಕಾರ ಮೇಷಾದಿಯಾಗಿ ಚರ-ಮೇಷ, ಸ್ಥಿರ-ವೃಷಭ, ದ್ವಿಸ್ವಭಾವ ಮಿಥುನ, ಪುನಃ ಕಟಕಾದಿ ೩ ತುಲಾದಿ ೩ ಮಕರಾದಿ ೩ ಕ್ರಮವಾಗಿ ಆಗುತ್ತವೆ।। ಇದಕ್ಕೆ ಪ್ರಮಾಣ ।।ನಾರದೀಯೇ।। ಚರಸ್ಥಿರ ದ್ವಿಸ್ವಭಾವೋ ಮೇಷಾದಿ ಕ್ರಮಶೋಭವೇತ್ ।।೪೭।। ಇದಕ್ಕೆ ಪ್ರಮಾಣ ಮತ್ತು ಪ್ರಯೋಜನವೇನೆಂದರೆ ।।ಸತ್ಯಾಚಾರ್ಯಃ।। ರಾಶಿ ಸ್ವಭಾವ ತುಲ್ಯಾ ಜಾಯಂತೆ ಪ್ರಕೃತಯಃ ಪ್ರಸೂತಾನಾಂ ।।೬೮।। ಯಾವರಾಶಿಯಲ್ಲಿ ಹುಟ್ಟಿದವನು ಯಾವ ಸ್ವಭಾವದಿಂದ ಕೂಡಿರುತ್ತಾನೆಂದು :- ಚರರಾಶಿಯಲ್ಲಿ ಹುಟ್ಟಿದವನು (ಚರ) ಸಂಚಾರ ಸ್ವಭಾವ ಉಳ್ಳವನಾಗಿಯೂ, ಸ್ಥಿರರಾಶಿಯಲ್ಲಿ ಹುಟ್ಟಿದವನು ಕೆಲವುಕಾಲ ಸ್ಥಿರವಾಗಿಯೂ, ಕೆಲವುಕಾಲ ಚರಸ್ವಭಾವ ಉಳ್ಳವನಾಗಿಯೂ ಆಗುತ್ತಾನೆ ಮತ್ತು ನೈರ್ಯಾಣಿಕಾಧ್ಯಾಯದಲ್ಲಿ ಮರಣಸ್ಥಳಗಳು ಈ ರಾಶಿ ಸ್ವಭಾವದಮೇಲೆ ಲಗ್ನದಿಂದ ೮ನೆ ರಾಶಿಯ ಗುಣವನ್ನು ಅನುಸರಿಸಿ ಫಲ ಹೇಳಲ್ಪಡುತ್ತದೆ. ಚೋರ ಪ್ರಶ್ನೆಯಲ್ಲಿಯೂ ವಸ್ತುವಿರತಕ್ಕ ಪ್ರದೇಶ ತಿಳಿಯಲು ಪ್ರಯೋಜನವಾಗಿರುತ್ತೆ.

## ಅಥ ರಾಶಿನಾಂ ದಿಗ್ವಿಚಾರಃ

ಸ್ವತ್ರಿಕೋಣಾಃ- ತಮ್ಮ ತಮ್ಮ ಪಂಚಮನವಮ ರಾಶಿಗಳು, ಕ್ರಿಯ ವೃಶನ್ಯ-ಯುಕ್ಕರ್ಕಟಾಃ- ಮೇಷ, ವೃಷಭ, ಮಿಥುನ, ಕರ್ಕಾಟಕಗಳು, ಪ್ರಾಗಾದೀಶಾಃ-ಪೂರ್ವ ಮೊದಲಾದ ದಿಕ್ಕುಗಳಿಗೆ ಅಧಿಪತಿಗಳಾಗುವರು. ಅದು ಹೇಗೆಂದರೇ- ಮೇಷ, ಸಿಂಹ, ಧನುಸ್ಸು ಈ ೩ ಪೂರ್ವದಿಗ್ರಾಶಿಗಳು. ವೃಷಭ, ಕನ್ಯಾ, ಮಕರ ಈ ೩ ದಕ್ಷಿಣ ದಿಗ್ರಾಶಿಗಳು. ಮಿಥುನ, ಕುಂಭ, ತುಲಾ ಈ ೩ ಪಶ್ಚಿಮ ದಿಗ್ರಾಶಿಗಳು. ಕರ್ಕಾಟಕ, ವೃಶ್ಚಿಕ, ಮೀನ ಈ ೩ ಉತ್ತರ ದಿಗ್ರಾಶಿಗಳು. ಇದಕ್ಕೆ ನಾರದೀಯ ಸಂಹಿತೆಯಲ್ಲಿ ಪ್ರಮಾಣ ।।ಶ್ಲೋಕ।। ಮೇಷ, ಸಿಂಹ, ಧನುಷ್ಯೈಂದ್ರೆ ವೃಷಭ ಕನ್ಯಾ ಮೃಗೇಯ ಮೆ ।। ಘಟಿಕಾಕಾಲ ತುಲಾಃ ಪಶ್ಚಾತ್ ಅನ್ಯೇ ಚೋತ್ತರದಿಗ್ಗತಾಃ ।।೬೯।।

ಇತಿ ॥ ಅನ್ಯಕ್ಷ ॥ ಸತ್ಯಾಚಾರ್ಯಃ॥ ದಿಗೀಶಾಶ್ಚಾಪ ಸಿಂಹಜಾ ಶ್ಲೋಕ್ಷ ಕನ್ಯಾಮೃಗಾಃ ಕ್ರಮಾತ್ ॥ ನೃಯುಕ್ತುಲಾಚ ಕುಂಭಶ್ಚಕರ್ಕೀ ಕೀಟಾಂತ್ಯ ರಾಶಯಃ ॥೭೦॥ ಇತಿ

## ಹೋರಾ ವಿಚಾರಃ

ಅಯುಜಿ - ವಿಷಮರಾಶಿಗಳಲ್ಲಿ, ಮಾರ್ತಾಂಡೇಂದ್ವೋಃ- ಸೂರ್ಯ ಚಂದ್ರರ ಹೋರೆಗಳು ಅಂದರೆ :- ಪ್ರಥಮ ಹೋರೆ ಸೂರ್ಯಹೋರೆಯೆಂತಲೂ, ದ್ವಿತೀಯ ಹೋರೆ ಚಂದ್ರ ಹೋರೆಯೆಂತಲೂ, ಸಮಭೆ-ಸಮರಾಶಿಗಳಲ್ಲಿ, ಚಂದ್ರಭಾನ್ವೋಶ್ಚ- ಚಂದ್ರ ಸೂರ್ಯರ ಹೋರೆಗಳು, ಅಂದರೆ ಪ್ರಥಮ ಹೋರೆ ಚಂದ್ರಾಧಿಪತ್ಯ ಉಳ್ಳದ್ದೆಂತಲೂ, ದ್ವಿತೀಯ ಹೋರೆ ಸೂರ್ಯಾಧಿಪತ್ಯ ಉಳ್ಳದ್ದೆಂತಲೂ ತಿಳಿಯತಕ್ಕದ್ದು. ಇದಕ್ಕೆ ಪ್ರಮಾಣ ಸಾರಾವಳ್ಯಾಂ ॥ಶ್ಲೋಕ॥ ಹೋರಾರ್ಕ ಚಂದ್ರಯೋ ರೋಜೆಯುಗ್ಮಭೇಚಂದ್ರಸೂರ್ಯಯೋ ॥೭೧॥ ಇತಿ ॥

## ದ್ರೇಕ್ಕಾಣ ವಿಚಾರಃ

ಸ್ವಭವನ ಸುತತ್ರಿ ತ್ರಿಕೋಣಾಧಿಪಾನಾಂ । ಸ್ವಭವನ-ಸ್ವರಾಶ್ಯಾಧಿಪತಿಗೂ, ಸುತಪಂಚಮಾಧಿಪತಿಗೂ, ತ್ರಿಕೋಣ-ನವಮಾಧಿಪತಿಗೂ ಅಧಿಪತಿಗಳಾಗುವರು. ಅಂದರೆ :- ಈ ದ್ರೇಕ್ಕಾಣಾಧಿಪತಿಗಳ ಅನ್ವಯ ಚರರಾಶಿಗಳಿಗೆ ಸಮಂಜಸವಾಗುತ್ತದೆ. ಉಳಿದ ಚರಸ್ಥಿರ ದ್ವಿಸ್ವಭಾವ ರಾಶಿಗಳಿಗೆ ಅನ್ವಯಿಸುವುದಿಲ್ಲ. ಏಕೆಂದರೆ, ವಕ್ಷ್ಯಮಾಣ ಶ್ಲೋಕಾರ್ಥದ ಪ್ರಕಾರ ವೃಷಭರಾಶಿಗಳಿಗೆ ೧ನೆ ದ್ರೇಕ್ಕಾಣಾಧಿಪತಿ ಶುಕ್ರ, ೨ನೆ ದ್ರೇಕ್ಕಾಣಾಧಿಪತಿ ಕನ್ಯ ಮತ್ತು ಬುಧ, ೩ನೆ ದ್ರೇಕ್ಕಾಣಾಧಿಪತಿ ಮಕರ ಮತ್ತು ಶನಿ ಈ ಪ್ರಕಾರವಾಗುವುದು. ವೃಷಭರಾಶಿಗೆ ನವಾಂಶ ವಿಧಿಯು ಮಕರರಾಶಿಯಿಂದ ಪ್ರಾರಂಭವಾಗುವುದರಿಂದ ವೃಷಭರಾಶಿಯಲ್ಲಿ ೧ನೆ ಮಕರ ನವಾಂಶ, ೨ನೆ ಕುಂಭ ನವಾಂಶ, ೩ನೆ ಮೀನ ನವಾಂಶ ಈ ೩ ನವಾಂಶಗಳಿಗೊಂದು ದ್ರೇಕ್ಕಾಣ. ಈ ವೃಷಭ ಮೊದಲನೆ ದ್ರೇಕ್ಕಾಣಾಧಿಪತಿನವಾಂಶ ವಿಧಿಪ್ರಕಾರ ಮಕರ ದ್ರೇಕ್ಕಾಣಾಧಿಪತ್ಯವಾಗುವುದು. ಶ್ಲೋಕಾರ್ಥ ಪ್ರಕಾರ ಮೊದಲನೇ ದ್ರೇಕ್ಕಾಣಾಧಿಪತಿ ಶುಕ್ರನಾಗುವುದಿಲ್ಲ. ಇಲ್ಲಿ ಯುಕ್ತಾಯುಕ್ತ ಅನ್ಯಗ್ರಂಥಾಧಾರ ಪ್ರಕಾರ ಈ ಗ್ರಂಥಕರ್ತರ ಮತ ಅಂಗೀಕರಿಸಲ್ಪಡುವುದಿಲ್ಲ. ದ್ರೇಕ್ಕಾಣ ವಿಧಿಯು ೭ನೆ ಶ್ಲೋಕದ ಟೀಕೆಯಲ್ಲಿ ವಿಶದ ಪಡಿಸಲ್ಪಟ್ಟಿರುತ್ತದೆ. ಈ ಗ್ರಂಥಕರ್ತನು ಶ್ಲೋಕದ ಪೂರಣ ಆಗುವದಕ್ಕೋಸ್ಕರ ಒಂದು ವಿಷಯವನ್ನು ಒಂದೇ ಕಡೆಗೆ ಹೇಳದೆ ಅಲ್ಲಲ್ಲಿ ಹೇಳಿರುವುದರಿಂದ ಕ್ರಮವಾಗಿ ಬರಲಿಲ್ಲ. ಹಿಂದೆ ಬಂದ ವಿಷಯ ಮುಂದೆಯೂ ಹೇಳತಕ್ಕದ್ದು ಪುನರುಕ್ತಿ ದೋಷಬಂದಾಗ್ಯೂ, ಗ್ರಂಥಾಶಯಪೂರ್ತಿಯಾಗುವುದಕ್ಕೋಸ್ಕರ ಇಲ್ಲಿ ಆಕ್ಷೇಪಣೆ ಸಮಾಧಾನಕ್ಕೋಸ್ಕರ ಹೇಳಲ್ಪಟ್ಟಿರುತ್ತೆ.॥೧೧॥

## ಹೋರಾ ಪೂರ್ವಪಕ್ಷಸಿದ್ಧಾಂತ ವಿಚಾರಃ

ಮೂಲ॥ ಕೇಚಿತ್ತುಹೋರಾಂ ಪ್ರಥಮಾಂಭವಸ್ಯ ವಾಛಂತಿ ಲಾಭಾದಿಪತೇ-ರ್ದ್ವಿತೀಯಂ । ದ್ರೇಕ್ಕಾಣಸಂಜ್ಞಾ ಮಪಿವರ್ಣಯನ್ತಿ ಸ್ವದ್ವಾದಶೈಕಾ ದಶರಾಶಿಪಾನಾಂ॥೧೨॥

ಅವತಾರಿಕೆ ॥ ಮಂತಾಂತರದಲ್ಲಿ ದ್ರೇಕ್ಕಾಣಾಧಿಪತಿಗಳನ್ನು ಹೇಳಲ್ಪಟ್ಟಿರುವುದನ್ನು ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನು ಹೇಳಿ ಈ ಮತವನ್ನು ಅಭಿಮತವಲ್ಲವೆಂದು ಹೇಳಿರುತ್ತಾನೆ.

ಟೀಕು॥ ಕೇಚಿಕ್ - ಯವನಾದಿಗಳು, ಪ್ರಥಮಾಂ-ಮೊದಲನೆ ಹೊರೆಯು ಆ ರಾಶಾಧಿಪತಿಯು ಅಧಿಪತ್ಯವುಳ್ಳದ್ದೆಂದು, ದ್ವಿತೀಯಾಂ-೨ನೇ ಹೋರೆಗೆ, ಲಾಭಾಧಿಪತೇಃ- ಆ ರಾಶಿಗೆ ೧೧ನೇ ರಾಶ್ಯಾಧಿಪತಿ ಹೋರೆಯೆಂತಲೂ, ವಾಂಛಂತಿ - ಇಚ್ಛಯಿಸುತ್ತಾರೆ. ಆದರೆ ಮೇಷರಾಶಿಗೆ ಮೊದಲನೇ ಹೋರಾಧಿಪತಿ ಕುಜನೆಂತಲೂ, ೨ನೇ ಹೋರಾಧಿಪತಿ ಮೇಷರಾಶಿಗೆ ೧೧ನೆಯದಾದ ಕುಂಭ ಶನಿ ಅಧಿಪತ್ಯವುಳ್ಳದ್ದೆಂದು ತಾತ್ಪರ್ಯ. ಈ ಪ್ರಕಾರ ಉಳಿದ ರಾಶಿಗಳಿಗೂ ತಿಳಿಯ ತಕ್ಕದ್ದು. ಸ್ವದ್ವಾದಶೈಕಾದಶರಾಶಿಪಾನಾಂ, ಸ್ವ-ಆ ರಾಶ್ಯಾಧಿಪತಿಗೂ ಪ್ರಥಮ ದ್ರೇಕ್ಕಾಣಾಧಿಪತಿಯೆಂತಲೂ, ದ್ವಾದಶ-ದ್ವಾದಶ ರಾಶ್ಯಾಧಿಪತಿ ದ್ವಿತೀಯ ದ್ರೇಕ್ಕಾಣಾಧಿಪತಿಯೆಂತಲೂ, ಏಕಾದಶ - ಲಾಭಾಧಿಪತಿ ತೃತೀಯ ದ್ರೇಕ್ಕಾಣಾಧಿಪತಿಯೆಂದೂ, ಈ ಪ್ರಕಾರವಾಗಿ ದ್ರೇಕ್ಕಾಣ ಸಂಜ್ಞಾಮಪಿ - ದ್ರೇಕ್ಕಾಣಸಂಜ್ಞೆಯನ್ನು, ವರ್ಣಯಂತಿ - ಹೇಳಿರುತ್ತಾರೆ, ಈ ಅರ್ಥಕ್ಕೆ ಶ್ಲೋಕ ॥ಯವನೇಶ್ವರಃ॥ ಅದ್ಯಾಚಹೋರಾ ಭವನಸ್ಯಪತ್ಯುರೇಕಾದಶಕ್ಷೇತ್ರಪತೇರ್ದ್ವಿತೀಯಾ॥ ಸ್ವದ್ವಾದಶೈಕಾದಶರಾಶಿಪಾನಾಂ ದ್ರೇಕ್ಕಾಣಸಂಜ್ಞಾ ಕ್ರಮಶೋತ್ರಚೋಕ್ತಾಃ ॥೭೨॥

ತಾತ್ಪರ್ಯ॥ ಈ ಹೋರಾ ದ್ರೇಕ್ಕಾಣಾಧಿಪತ್ಯವನ್ನು ವರಾಹಮಿಹಿರಾಚಾರ್ಯರು ಅಂಗೀಕರಿಸಲಿಲ್ಲ.

## ಗ್ರಹಾಣಾಂಮೇಷಾದಿರಾಶೌ ಉಚ್ಚಭಾಗನಿರ್ಣಯಃ

ಮೂಲ॥ ಅಜವೃಷಭ ಮೃಗಾಂಗನಾಕುಳೀರಾ ಝಷವಣಿಜಾಚದಿವಾಕರಾದಿ ತುಂಗಾಃ॥ ದಶಶಿಖಿಮನುಯುಕ್ತಿಥೀಂದ್ರಿಯಾಂ ಶೈಸ್ತ್ರಿನವಕವಿಂಶತಿ ಭಿಶ್ಚತೇಸ್ತನೀಚಾಃ ॥೧೩॥

ಅವತಾರಿಕೆ ॥ ಮೇಷಾದಿ ರಾಶಿಗಳಲ್ಲಿ ಸೂರ್ಯಾದಿ ಸಪ್ತಗ್ರಹಗಳಿಗೆ, ಉಚ್ಚ ರಾಶಿಯನ್ನು, ಅದರಲ್ಲಿ ಉಚ್ಚಪರಮೋಚ್ಚಭಾಗಗಳನ್ನು ಮತ್ತು ನೀಚರಾಶಿ, ನೀಚಭಾಗದ ಪರಮ ನೀಚಭಾಗಗಳನ್ನು ಹೇಳುತ್ತಾನೆ ॥

ಟೀ॥ ಅಜಾದಿ-ಮೇಷಾದಿ ರಾಶಿಗಳು, ದಿವಾಕರಾದಿ ತುಂಗಾಃ-ಸೂರ್ಯನೇ ಮೊದಲಾದ ಗ್ರಹಗಳಿಗೆ ಉಚ್ಚರಾಶಿಗಳು, ಅದು ಹೇಗೆಂದರೆಃ- ಅಜಃ- ಮೇಷರಾಶಿ ಸೂರ್ಯನಿಗೆ, ವೃಷಭ-ವೃಷಭರಾಶಿ ಚಂದ್ರನಿಗೆ, ಮೃಗ-ಮಕರರಾಶಿ ಅಂಗಾರಕನಿಗೆ, ಅಂಗನಾ-ಕನ್ಯಾರಾಶಿ ಬುಧನಿಗೆ, ಕುಳೀರಾ-ಕರ್ಕಾಟಕರಾಶಿ ಬೃಹಸ್ಪತಿಗೆ, ಝಷ-ಮೀನರಾಶಿ ಶುಕ್ರನಿಗೆ, ವಣಿಜ-ತುಲಾರಾಶಿ ಶನಿಗೆ ಉಚ್ಚರಾಶಿಗಳು, ದಶ-ಕ್ರಮವಾಗಿ, ಮೇಷರಾಶಿಯಲ್ಲಿ ೧೦ ಭಾಗ ಉಚ್ಚ ಇದರಲ್ಲಿ ೧ ರಿಂದ ೯ ಭಾಗದವರಿಗೆ ಉಚ್ಚ ೧೦ನೇ ಭಾಗ ಪರಮೋಚ್ಚ, ಶಿಖಿ-ಮೂರು ಭಾಗ ವೃಷಭ ರಾಶಿಯಲ್ಲಿ ಚಂದ್ರನಿಗೆ ಉಚ್ಚಭಾಗ ಇದರಲ್ಲಿ ೩ ನೇ ಭಾಗ ಪರಮೋಚ್ಚ, ಮನು- ಯುಕ್ - ಮನು ಚತುರ್ದಶ ಮನುಸಂಖ್ಯೆ-ಯುಕ್-ಜೋಡಿಯಾಗಿ, ಅಂದರೆ ೨೮ಭಾಗ ಮಕರರಾಶಿಯಲ್ಲಿ ಅಂಗಾರಕನಿಗೆ ಪರಮೋಚ್ಚ, ಇದರಲ್ಲಿಯು ೨೭ರ ವರೆಗೂ ಉಚ್ಚ ೨೮ನೇ ಭಾಗ ಪರಮೋಚ್ಚ, ತಿಥಿ-ಹದಿನೈದು ಭಾಗ ಕನ್ಯಾರಾಶಿ ಯಲ್ಲಿ ಬುಧನಿಗೆ ಉಚ್ಚ ಇದರಲ್ಲಿ ೧೫ನೆ ಭಾಗ ಪರಮೋಚ್ಚ, ಇಂದ್ರಿಯಾಂಶೈಃ ಇಂದ್ರಿಯ ಪಂಚೇಂದ್ರಿಯ ಸಂಖ್ಯೆ, ೫ ಅಂಶೈಃ ಭಾಗ ಕರ್ಕಾಟಕದಲ್ಲಿ ಬೃಹಸ್ಪತಿಗೆ ಉಚ್ಚ ಇದರಲ್ಲಿ ೫ನೆ ಭಾಗ ಪರಮೋಚ್ಚ, ೫ ತ್ರೀನವಕ-ತ್ರಿ-ಮೂರು, ನವಕ-೯ ಅಂದರೆ ೩x೯=೨೭ ಭಾಗ ಮೀನರಾಶಿಯಲ್ಲಿ ಶುಕ್ರನಿಗೆ ಉಚ್ಚ, ಇದರಲ್ಲಿ-೨೭ನೆ ಭಾಗ ಪರಮೋಚ್ಚ ವಿಂಶತಿಶ್ಚ - ೨೦ ಭಾಗಗಳು ತುಲಾರಾಶಿಯಲ್ಲಿ ಶನಿಗೆ ಉಚ್ಚ ಇದರಲ್ಲಿ ೨೦ನೆ ಭಾಗ ಪರಮೋಚ್ಚ ॥ ಇದಕ್ಕೆ ಪ್ರಯೋಜನವೇನೆಂದರೆ, ಸೂರ್ಯಾದಿ ಗ್ರಹಗಳು ತಮ್ಮತಮ್ಮ ಉಚ್ಚಸ್ಥಾನದಲ್ಲಿರುವಾಗ ಹುಟ್ಟಿದವನು ರಾಜನಾಗುತ್ತಾನೆ. ಇದಕ್ಕೆ ಪ್ರಮಾಣ, ಸರ್ಗಸಂಹಿತಾಯಾಂ ॥ಶ್ಲೋಕ॥ ಸ್ವೋಚ್ಚ ಗೌರ ವಿಶೀತಾಂಶೂ ಜನಯೇಶಾಂ ನರಾಧಿಪಂ॥ ಉಚ್ಚಸ್ಥಾಧನಿಸಂಖ್ಯಾಕಂ ಸ್ವತ್ರಿಕೋಣ ಗತಾಮಪಿ ಇತಿ ॥೭೩॥ ಅನ್ಯಶ್ಚ - ವೇಂಕಟೇಶ - ಷಡ್ಭಿರ್ಗ್ರಹೈ ರುಚ್ಚ ಸಮನ್ವಿತಸ್ಸ್ಯಾದ್ರಾಜಾಧಿರಾಜೋ ಬಹುದೇಶಭರ್ತಾ ॥ ಉಚ್ಚಸ್ಥಿತೈಃ ಪಂಚಭಿರತ್ರಜಾತಃ ಕ್ಷ್ಮನ್ವಿತೋದೇವ ಗುರೋರ್ವಿಗ್ನೆ ॥ ತೇ-ಸೂರ್ಯಾದಿ ಗ್ರಹಗಳು ಉಚ್ಚರಾಶಿಗಳಿಗೆ, ಸಪ್ತಮರಾಶಿಗಳಲ್ಲಿ ಮೇಲೆ ಹೇಳಲ್ಪಟ್ಟ ಉಚ್ಚಭಾಗ ಪರಮೋಚ್ಚ ಭಾಗಗಳ ಸಂಖ್ಯೆಯೇ ನೀಚರಾಶಿ ಮತ್ತು ನೀಚಧ್ರುವ ಪರಮ ನೀಚಭಾಗಗಳು ಅದು ಹೇಗೆಂದರೆ, ಸೂರ್ಯನು ಮೇಷ ರಾಶಿಯಲ್ಲಿ ಉಚ್ಚನಾದ್ದರಿಂದ ಅದಕ್ಕೇಳನೇ ತುಲಾರಾಶಿ ನೀಚರಾಶಿ, ಆ

ನೀಚರಾಶಿಯಲ್ಲಿ ೧೦ ಭಾಗ ನೀಚ ಇದರಲ್ಲಿ ೧೦ನೇ ಭಾಗ ಪರಮನೀಚ, ಚಂದ್ರನಿಗೆ ವೃಷಭರಾಶಿ ಉಚ್ಚರಾಶಿ ಅದಕ್ಕೇಳನೆ ವೃಶ್ಚಿಕರಾಶಿ ನೀಚರಾಶಿ, ಅದರಲ್ಲಿ ೩ನೇ ಭಾಗ ಪರಮನೀಚ, ಅಂಗಾರಕನಿಗೆ ಮಕರರಾಶಿಯು ಉಚ್ಚ, ಅದಕ್ಕೇಳನೆ ಕರ್ಕಾಟಕರಾಶಿ ನೀಚ, ಅದರಲ್ಲಿ ೨೮ನೇ ಭಾಗ ಪರಮನೀಚ, ಬುಧನಿಗೆ ಕನ್ಯಾರಾಶಿ ಉಚ್ಚ ಇದಕ್ಕೇಳನೆ ಮೀನರಾಶಿ ನೀಚ, ಇದರಲ್ಲಿ ೧೫ನೇ ಭಾಗ ಪರಮನೀಚ, ಬೃಹಸ್ಪತಿಗೆ ಕಟಕರಾಶಿ ಉಚ್ಚ, ಅದಕ್ಕೇಳನೇ ಮಕರರಾಶಿ ನೀಚ, ಅದರಲ್ಲಿ ೫ನೇ ಭಾಗ ಪರಮನೀಚ, ಶುಕ್ರನಿಗೆ ಮೀನ ಉಚ್ಚ, ಅದಕ್ಕೇಳನೆ ಕನ್ಯಾರಾಶಿ ನೀಚರಾಶಿ, ಅದರಲ್ಲಿ ೨೭ಭಾಗ ಪರಮನೀಚ, ಶನಿಗೆ ತುಲಾರಾಶಿ ಉಚ್ಚ, ಅದಕೇಳನೆ ಮೇಷರಾಶಿ ನೀಚ ಇದರಲ್ಲಿ ೨೦ನೆ ಭಾಗ ಪರಮನೀಚ ಈ ಪ್ರಕಾರ ನೀಚರಾಶಿ ಪರಮನೀಚ ಭಾಗಗಳೆಂದು ತಿಳಿಯತಕ್ಕದ್ದು. ಇದಕ್ಕೆ ಪ್ರಯೋಜನವೇನೆಂದರೆ, ಸಾರಾವಳ್ಯಾಂ ಶ್ಲೋಕ॥ ಅಂಧಂದಿಗಂಬರಂ ಮೂರ್ಖಂ ಪರಪಿಂಡೋಪ ಜೀವಿನಂ ॥ ಕುರುತಾಮತಿನೀಚಸ್ಥೌಪುರುಷಂ ಶಶಿಭಾಸ್ಕರೌ ॥೭೫॥ ಇತಿ ಅಂದರೆ ಪರಮನೀಚ ಸ್ಥಾನದಲ್ಲಿ ರವಿ-ಚಂದ್ರರು ಇದ್ದರೆ ಆ ಕಾಲದಲ್ಲಿ ಹುಟ್ಟಿದವನು ಅಂಧ, ದಿಗಂಬರ, ಮೂರ್ಖ, ಪರಾನ್ನ ತಿಂದು ಜೀವಿಸುವವನೂ ಆಗುವನು ಮತ್ತು ಧುಂಡಿರಾಜ ಶ್ಲೋಕ॥ ತುಲಾಯಾಂ ದಶಮೇಭಾಗೆಸ್ಥಿತಃ ಪರಮಭೋಜನಃ ॥ ಸಹಸ್ರ ರಾಜಾಯೋಗಾನಾಂ ದಳಾನಾಂಚಮಹೀಪತೇಃ ॥ ಮಕೃಗೇಲಗ್ನೇ ಸುರಾಚಾರ್ಯೇ ಪರಮಂ ನೀಚಮಾಶ್ರಿತಃ ॥ ತಥಾಪರಾಜಯೋಗಾನಾಂ ಭಂಗಮಾಹಮಹೀಪತೇಃ ॥ ಭೃಗೋಃ ಪುತ್ರೋಪಿ ನೀಚಸ್ಥೋ ರಾಜಯೋಗವಿನಾಶಕಃ ॥೭೭॥ ಇತ್ಯಾದಿ ವಾಕ್ಯಗಳಿಂದ ನೀಚರ ಫಲ ಹೇಳುತ್ತಾರೆ. ಈ ಉಚ್ಚಾದಿ ಭಾಗಗಳಿಗೆ ಪರಾಶರರ ಪ್ರಮಾಣ ವಚನ, ಅಜೋವೃಷಮೃಗ ಕನ್ಯಾಕುಳೀರ ಝಷತೌಲಿಕಾಃ ॥ ಸೂರ್ಯಾದೀನಾಂ ಕ್ರಮಾದೇತಾಸ್ತುಂಗಸಂಜ್ಞಾಃ ಪ್ರಕೀರ್ತಿತಾ ॥೭೮॥ ನೀಚಾಸ್ತು ಸಪ್ತಮಾಜ್ಞೇಯಾ ಗ್ರಹಾನೀಚವಿನಿಶ್ಚಿತಾಃ ॥ ಸೂರ್ಯಸ್ಯಭಾಗೆ ದಶಮೇ ತೃತೀಯೇ ಚಂದ್ರಸ್ಯಜೀವಸ್ಯತು ಪಂಚಮಾಂಶೆ ॥ ಸೌರಸ್ಯವಿಂಶೇ ತ್ರಧಿಸಪ್ತ ಕೇತೋರ್ವಿದ್ಯಾದ್ಭೃಗೋ ಪಂಚದಶೇ ಬುಧಸ್ಯ ॥ ಭೌಮಸ್ಯವಿಂಶೇಷ್ವಯಂತೇ ಪರೋಚ್ಚೈರ್ವಿಂಶಲ್ಲವೇ ಸೂರ್ಯಸುತಸ್ಯನೀಚಾಃ ॥

## ವರ್ಗೋತ್ತುಮಾಂಶ ವಿಚಾರಃ

ಮೂಲ॥ ವರ್ಗೋತ್ತಮಾಂಶ್ಚರಗೃಹಾದಿಷು ಪೂರ್ವಮಧ್ಯ ಪರ್ಯಂತಚಗಾಶ್ಶುಭ ಫಲಾನವ ಭಾಗಸಂಜ್ಞಾಃ॥ ಸಿಂಹೋ ವೃಷಪ್ರಥಮ ಷಷ್ಠಹ ಯಾಂಗತೌಳಿಕುಂಭಾಸ್ತ್ರಿಕೋಣಭವನಾನಿ ಭವಂತಿಸೂರ್ಯಾತ್ ॥೧೪॥

ಅವತಾರಿಕೆ ॥ ವರ್ಗೋತ್ತಮಾಂಶೆ ಮತ್ತು ಗ್ರಹಗಳಿಗೆ ಮೂಲತ್ರಿಕೋಣ ಸ್ವಕ್ಷೇತ್ರವನ್ನು ಹೇಳುತ್ತಾನೆ.

ಟೀಕು॥ ಚರಗ್ರಷಾದಿಷು-ಚರಸ್ಥಿರ ದ್ವಿಸ್ವಭಾವ ರಾಶಿಗಳಲ್ಲಿ ಪೂರ್ವಮಧ್ಯ ಪರ್ಯಂತಗಾಃ-ಮೊದಲನೇ, ಐದನೇ, ಒಂಭತ್ತನೆ, ನವಭಾಗಸಂಜ್ಞಾಃ - ನವಾಂಶಗಳು, ವರ್ಗೋತಮಾ ಃ- ವರ್ಗೋತ್ತಮಾಂಶಗಳಾಗಿರುತ್ತವೆ. ಅದು ಹೇಗೆಂದರೆ :- ಚರರಾಶಿಗಳಾದ ಮೇಷ, ಕರ್ಕಾಟಕ, ತುಲಾ, ಮಕರ ಈ ೪ ರಾಶಿಗಳಲ್ಲಿ ಆದಿ ನವಾಂಶಗಳು ಆ ರಾಶಿ ನವಾಂಶೆಯಾದ್ದರಿಂದ ವರ್ಗೋತ್ತಮಾಂಶೆಯಾಗುತ್ತದೆ. ಸ್ಥಿರರಾಶಿಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ೪ ರಾಶಿಗಳಲ್ಲಿ ಮಧ್ಯ ನವಾಂಶಗಳು ಆ ರಾಶಿಯ ಸ್ವನವಾಂಶಗಳಾದ್ದರಿಂದ ವರ್ಗೋತ್ತಮಾಂಶೆಗಳು, ದ್ವಿಸ್ವಭಾವರಾಶಿಗಳಾದ ಮಿಥುನ, ಕನ್ಯಾ, ಧನುಸ್ಸು, ಮೀನ ಈ ೪ ರಾಶಿಗಳಲ್ಲಿ ಅಂತ್ಯ ನವಾಂಶೆಗಳು ಆ ರಾಶಿಗಳ ಸ್ವನವಾಂಶೆಗಳಾದ್ದರಿಂದ ವರ್ಗೋತ್ತಮಾಂಶೆ ಗಳಾಗಿರುತ್ತವೆ. ಈ ವಿಷಯವನ್ನು ರಾಶಿ ಪಕ್ಕದಲ್ಲಿಯೂ, ನವಾಂಶಪದಕದಲ್ಲಿಯೂ, *ಗುರ್ತು ಹಾಕಿರುವ ನವಾಂಶೆಗಳು ವರ್ಗೋತ್ತಮಾಂಶವೆಂದು ಸಂಕೇತ ಮಾಡಿರುತ್ತೆ. ಇದಕ್ಕೆ ಪ್ರಯೋಜನ, ಯಾವ ಗ್ರಹಗಳು ವರ್ಗೋತ್ತಮಾಂಶೆಯಲ್ಲಿ ಇರುವರೋ ಆ ಗ್ರಹಗಳು ಅತಿಶಯ ಶುಭಫಲ ಕೊಡುವುದು.

## ಮೂಲತ್ರಿಕೋಣ ಸ್ವಕ್ಷೇತ್ರ ನಿರ್ಣಯಃ

ಸಿಂಹಾದಿ ರಾಶಿಗಳಲ್ಲಿ ಸೂರ್ಯಾದಿ ಸಪ್ತಗ್ರಹಗಳಿಗೆ ಮೂಲತ್ರಿಕೋಣ ಸಂಜ್ಞೆಯು ಹೇಳಲ್ಪಡುತ್ತೆ. ಸಿಂಹಃ-ಸಿಂಹರಾಶಿ, ತ್ರಿಕೋಣಭವನಾನಿ-ಮೂಲ ತ್ರಿಕೋಣ ರಾಶಿಗಳು, ಭವಂತಿ-ಆಗುತ್ತವೆ. ಅದು ಹೇಗೆಂದರೆ:- ಸಿಂಹ:- ಸಿಂಹರಾಶಿ ಸೂರ್ಯನಿಗೆ, ವೃಷಭಃ- ವೃಷಭರಾಶಿ ಚಂದ್ರನಿಗೆ, ಪ್ರಥಮ-ಮೇಷ, ಕುಜನಿಗೆ, ಷಷ್ಠ-ಕನ್ಯಾ-ಬುಧನಿಗೆ, ಹಯಾಂಘ್ರಿ-ಧನುಸ್ಸು, ಬೃಹಸ್ಪತಿಗೆ, ಕೌಳಿ-ಕುಲ ಶುಕ್ರನಿಗೆ, ಕುಂಭ-ಕುಂಭರಾಶಿ ಶನಿಗೆ ಮೂಲತ್ರಿಕೋಣವಾಗುತ್ತವೆ. ಈ ತ್ರಿಕೋಣರಾಶಿಗಳಲ್ಲಿಯೇ ಆಯಾಯ ಗ್ರಹಗಳಿಗೆ ಉಚ್ಚ ಸ್ವಕ್ಷೇತ್ರ ಸಹಾ ಆಗುತ್ತವೆ. ಈ ವಿಷಯದಲ್ಲಿ ಶ್ಲೋಕ ॥ಪರಾಶರಃ॥ ವಿಂಶತಿರಂತಾ ಸಿಂಹೇಕೋಣ ಮಪರೆ ಸ್ವಭಾವನಮರ್ಕಸ್ಯ ॥ ಉಚ್ಚಂಭಾಗಂ ತ್ರಿತಯಂ ವೃಷಮಿಂದೋಃ ಸ್ಯಾತ್ರಿಕೋಣಪರೇಂಶಾಃ ॥೮೦॥ ದ್ವಾದಶಭಾಗಾಮೇಷೇ ತ್ರಿಕೋಣಮಪರೇ ಸ್ವಭೇತು ಭೌಮಸ್ಯ ॥ ಉಚ್ಚಾಫಲಂ ಕನ್ಯಾಯಾಂ ಬುಧಸ್ಯ ತಿಧ್ಯಂಶಕೈಃ ಸದಾಚಿಂತ್ಯಮ್ ॥೮೧॥ ಪರತಸ್ತ್ರೀಕೋಣಜಾತೇ ಪಂಚಭಿರಂ ಶೈಸ್ವರಾಶಿಜಂಪರತಃ ॥ ದಶಭಿರ್ಭಾಗೈ

ರ್ಜೀವತ್ರಿಕೋಣಫಲಂ ಸ್ವಭಂಪರಂಚಾಪೆ ॥೮೨॥ ಶುಕ್ರಸ್ಯತು ತಿಥಯೋಂಶಾ ಸ್ತ್ರಿಕೋಣಮಪರೇತುಲೆ ಸ್ವರಾಶಿಶ್ಚ ಕುಂಭೇ ತ್ರಿಕೋಣ ನಿಜಭೇರವಿಜಸೂರ್ಯವಿಂಶತಿಥಾಸಿಂಹೆ ॥೮೩॥

ತಾ॥ ಸೂರ್ಯನಿಗೆ ಸಿಂಹರಾಶಿಯಲ್ಲಿ ೨೦ ಭಾಗ ಮೂಲ ತ್ರಿಕೋಣ, ಉಳಿದ ೧೦ ಭಾಗ ಸ್ವಕ್ಷೇತ್ರ, ಚಂದ್ರನಿಗೆ ಮೊದಲು ೩ ಭಾಗ ಉಚ್ಚ, ಉಳಿದ ೨೮ ಭಾಗಗಳು ಮೂಲತ್ರಿಕೋಣ ॥ ವೃಷಭರಾಶಿಯಲ್ಲಿ ಕುಜನಿಗೆ ಮೇಷದಲ್ಲಿ ೧೨ ಭಾಗ ಮೂಲತ್ರಿಕೋಣ, ಉಳಿದ ೧೮ ಭಾಗ ಸ್ವಕ್ಷೇತ್ರ, ಬುಧನಿಗೆ ಕನ್ಯೆಯಲ್ಲಿ ಮೊದಲು ೧೫ ಭಾಗ ಉಚ್ಚ, ೫ ಭಾಗ ಮೂಲತ್ರಿಕೋಣ, ೧೦ ಭಾಗ ಸ್ವಕ್ಷೇತ್ರ॥ ಬೃಹಸ್ಪತಿಗೆ ಧನುಸ್ಸಿನಲ್ಲಿ ೧೦ ಭಾಗ ಮೂಲತ್ರಿಕೋಣ ಉಳಿದ ೨೦ ಭಾಗ ಸ್ವಕ್ಷೇತ್ರ, ಶುಕ್ರನಿಗೆ ತುಲೆಯಲ್ಲಿ ೧೫ ಭಾಗ ಮೂಲ ತ್ರಿಕೋಣ ಉಳಿದ ೧೫ ಭಾಗ ಸ್ವಕ್ಷೇತ್ರ ॥ ಶನಿಗೆ ಕುಂಭದಲ್ಲಿ ೨೦ ಭಾಗ ಮೂಲ ತ್ರಿಕೋಣ ಉಳಿದ ೧೦ ಭಾಗ ಸ್ವಕ್ಷೇತ್ರ. ಇದಕ್ಕೆ ಮಾಧಾವಾಚಾರ್ಯಃ ॥ಶ್ಲೋಕ॥ ಸಿಂಹೇ ವಿಂಶತಿರಾದಿತೊ ಗವಿಪತಿ ಸ್ಸರ್ವೇಂಶ ಕಾಸ್ತುಂಗತೋ । ಮೇಷೆದ್ವಾದಶ ಪಂಚಯೋಷಿತಿ ಪರೇತುಂಗಾಂದ್ಧಯಾಂಗೆ ದಶ ॥ ಜೋಕೇ ಪಂಚೆಘಟೇತು ವಿಂಶತಿ ರಮೀಮೂಲ ತ್ರಿಕೋಣಾ ಹ್ವಯಾ । ಸೂರ್ಯದೇವ ಕ್ರಮತೋ ಗ್ರಹಸ್ಯ ಕಥಿತಾ ಶ್ಶೇಷಾ ಸ್ವರಾಶ್ಯಂಶಕಾಃ ॥೮೪॥ ಇದರಲ್ಲಿ ಶುಕ್ರನಿಗೆ ತುಲೆಯಲ್ಲಿ ೫ ಭಾಗ ಮೂಲ ತ್ರಿಕೋಣವೆಂದು ಹೇಳಿರುತ್ತಾರೆ. ಈ ಮತವನ್ನು ವರಾಹಮಿಹಿರ, ಯವನ, ಮಣೇತ್ಥಾದಿ ಆಚಾರ್ಯರು ಒಪ್ಪುವುದಿಲ್ಲ. ಆದ್ದರಿಂದ ಇಲ್ಲಿಯೂ ಅಂಗೀಕಾರ ಮಾಡುವುದಿಲ್ಲ. ॥೧೮॥

## ತನ್ವಾದಿ ದ್ವಾದಶ ಭಾಗಸಂಜ್ಞಾ

ಮೂಲ॥ ಹೋರಾದಯ ಸ್ತನುಕುಟುಂಬ ಸಹೋತ್ಥ ಬಂಧು ಪುತ್ರಾರಿ
ಮರಣಾನಿ ಶುಭಾಸ್ಪದಾಯಾಃ ॥ ರಿಃ ಫಾಖ್ಯ ಮಿತ್ಯಪಚಯಾನ್ಯರಿ
ಕರ್ಮ ಲಾಭ ದುಶ್ಚಿಕ್ಯ ಸಂಜ್ಞಿತ ಗೃಹಾಣಿ ನ ನಿಮಿತ್ತಿ ಮೇಕೆ॥೧೫॥

ಅವತಾರಿಕೆ ॥ ಲಗ್ನಾದಿ ದ್ವಾದಶರಾಶಿಗಳಿಗೆ ತನ್ವಾದಿದ್ವಾದಶಭಾವ ಸಂಜ್ಞೆಗಳನ್ನು, ೩-೬-೧೦-೧೧ ಸ್ಥಾನಗಳಿಗೆ ಉಪಚಯ ಸಂಜ್ಞೆಗಳನ್ನು ಹೇಳುತ್ತಾನೆ. ಹೋರಾದಯಃ- ಲಗ್ನವೇ ಮೊದಲಾದ ೧೨ ರಾಶಿಗಳಿಗೆ ತಮ್ಮ ಕುಟುಂಬ ಸಮೇತ ಬಂಧು ಪುತ್ರ ಪತ್ನಿ ಮುಂತಾಗಿ ಶುಭಾಸ್ಪದಾಯಾಃ ರಿಃಖಲ್ಯಮಿತಿ-ತನು-ಲಗ್ನವೇ ಶರೀರ, ಮತ್ತು ಶರೀರ ಸಂಬಂಧವಾದ ಎಲ್ಲಾ ಸುಖ ದುಃಖಗಳು

ಹೇಳಲ್ಪಡುತ್ತದೆ. ಇದಕ್ಕೆ ಪ್ರಮಾಣ ಪರಾಶರಃ ।। ತನೂರುಹಂಚಜ್ಞಾನಂಚ ವರ್ಣಂಚೈವಾ ಬಲಾಬಲಂ ।। ಶೀಲಂ ವೈಪ್ರಕೃತಿಶ್ಚಾಧ ತನುಸ್ಥಾನಾಗ್ನಿ ರೀಕ್ಷಯೇತ್।।೮೫।। ಶ್ಲೋಕ ।। ರೂಪಂತಥಾವರ್ಣ ವಿವರ್ಣತಾಶ್ಚ ಚಿಹ್ನಾನಿ ಜಾತಿರ್ವಯಸಃ ಪ್ರಮಾಣಂ ।। ಸಂಖಾನಿ ದುಃಖಾನ್ಯಪಿ ಸಾಹಸಂಚ । ಲಗ್ನೆ ವಿಲೋಕ್ಯಂ ಖಲು ಸರ್ವಮೇತತ್ ।।೮೬।।

ತಾತ್ಪರ್ಯ।। ರೂಪ, ವರ್ಣ, ಶರೀರಚಿಹ್ನೆ, ಜಾತಿ, ಆಯುಷ್ಯಪ್ರಮಾಣ ಸುಖದುಃಖ, ಸಾಹಸ, ಈ ವಿಷಯಗಳನ್ನು ತನುಭಾವದಿಂದ ತಿಳಿಯತಕ್ಕದ್ದು.

## ಕುಟುಂಬ ಭಾವನಾಮಾನಿ

ಕುಟುಂಬ-ದ್ವಿತೀಯ ಸ್ಥಾನದಿಂದ ಕುಟುಂಬ ದ್ರವ್ಯಾದಿಗಳನ್ನು ತಿಳಿಯತಕ್ಕದ್ದು. ಇದಕ್ಕೆ ಸಮ್ಮತಿ ।।ಪರಾಶರಃ।। ಧನಸ್ಯಾಪಿ ಕುಟುಂಬಸ್ಯ ಮೃತ್ಯಜಾಲ ಮಮಿತ್ರಕಂ। ಧಾತುರತ್ನಾದಿಕಂ ಸರ್ವಂ ಧನಸ್ಥಾನಾನ್ನಿರೀಕ್ಷಯೇತ್ ।।೮೭।। ಜಾ-ಭ ।। ಸ್ವರ್ಣಾದಿ ಧಾತು ಕ್ರಯವಿಕ್ರಯಶ್ಚ ರತ್ನಾದಿ ಕೋಶೋಪಿಚ ಸಂಗ್ರಹಶ್ಚ ।। ಏತತ್ಸಮಸ್ತಂ ಪರಿಚಿಂತನೀಯಂ ಧನಾಭಿದಾನೆ ಭವನೇ ಸುಧೀಭಿ ।।೮೮।।

## ಧನಭಾವೆ ಜ್ಞಾತವ್ಯ ವಿಷಯಾಣಿ

ದ್ವಿತೀಯ ಸ್ಥಾನದಿಂದ ಧನ, ಕುಟುಂಬ, ಮೃತ್ಯು, ಗಂಡ, ಶತೃತ್ವ, ಲೋಹಾದಿಗಳು, ರತ್ನಾದಿ ದ್ರವ್ಯ ಸಂಬಂಧವಾದ ಸಮಸ್ತ ವಿಷಯವನ್ನು ವಿಚಾರಮಾಡತಕ್ಕದ್ದು ।। ಜಾತಕಾಭರಣ ಕರ್ತರ ಅಭಿಪ್ರಾಯವು ಸಹ ಏಕ ವಾಕ್ಯತೆಯಾಗಿದೆ. ಸವಾರ್ಥ ಚಿಂತಾಮಣಿಯಲ್ಲಿ, ।।ಶ್ಲೋಕ।। ಕೌಟುಂಬಾದ್ಯಾಂಶ್ಚ ವಕ್ತವ್ಯಾ ಮುಖಂಚ ವಾಕ್ ದಕ್ಷಿಣಾಕ್ಷಿಪೂರ್ವಾರ್ಥಾನ್ । ವಿದ್ಯಾಭುಕ್ತಿ ವಿಶೇಷಾನ್, ದಾಸಾನ್ಮಿತ್ರಾಣಿಚ ಪ್ರವದೇತ್ ।।೮೯।। ದ್ವಿತೀಯ ಸ್ಥಾನದಿಂದ ಮುಖ, ವಾಕ್, ದಕ್ಷಿಣಾಕ್ಷಿ, ಪೂರ್ವಾರ್ಥ, ವಿದ್ಯಾಭುಕ್ತಿ ದಾನಾದಿಗಳು, ಮಿತ್ರರನ್ನು ಸಹಾ ತಿಳಿಯತಕ್ಕದ್ದು.

## ಸಹಜಭಾವೆ ಜ್ಞಾತವ್ಯ ವಿಷಯಾಣಿ

ಸಹೋತ್ಥ-ತೃತೀಯ ಭಾವದ ಮೂಲವಾಗಿ ಸಹೋದರಾದಿಗಳನ್ನು ಚಿಂತಿಸತಕ್ಕದ್ದು. ಪರಾಶರರ ವಚನ ।।ಶ್ಲೋಕ।। ವಿಕ್ರಮಂ ಭೃತ್ಯ ಭ್ರಾತ್ರಾದಿ ಉಪದೇಶ ಪ್ರಯಾಣಕಮ್।। ಪಿತ್ರೋರ್ವೈ ಮರಣಂ ವಿದ್ಯಾದ್ದುಶ್ಚಿಕಾಚ್ಚ ನಿರೀಕ್ಷಯೇತ್ ।।೯೦।। ಸ-ಚಿಂ ।।ಶ್ಲೋಕ।। ಸಹಜೇನ ಸಹಜ ವಿಕ್ರಮೌಷಧ

ಸಹಯಾನ್ ಸಹೋದರಸಸ್ಥಾನಮ್ ॥ ವಿಂದ್ಯಾದ್ದಕ್ಷಿಣಕರ್ಣಂ ಭಕ್ಷವಿಶೇಷಾಂಶ್ಚ ಮೂಲಾದೀನ್ ॥೯೧॥ ಜಾ ॥ಭ॥ ಸಹೋದರಾಣಾ ಮಥ ಕಿಂ ಕರಾಣಾಂ ಪರಾಕ್ರಮಾಣಾ ಮುಪಜೀವಿನಾಂಚ ॥ ವಿಚಾರಣಾ ಜಾತಕಶಾಸ್ತ್ರವಿದ್ಭಿ ಸ್ತ್ರಿತೀಯ ಭಾವೆ ನಿಯಮೇನಕಾರ್ಯಾ ॥೯೨॥ ಸಹೋದರಭಾವದಿಂದ ವಿಕ್ರಮ, ಭೃತ್ಯರು, ಭ್ರಾತ್ರಾದಿಗಳು, ಉಪದೇಶ, ಪ್ರಯಾಣ, ಪಿತೃಮರಣ, ಇವುಗಳನ್ನು ಚಿಂತಿಸತಕ್ಕದ್ದು. ॥ ಔಷಧ, ಸಹಾಯ, ಕಂಠಸ್ಥಾನ, ರಸ, ದಕ್ಷಿಣಕರ್ಣ, ಭಕ್ಷ್ಯ ವಿಶೇಷ ಇವುಗಳನ್ನು ತಿಳಿಯತಕ್ಕದ್ದೆಂದು ಧುಂಡಿರಾಜರ ಮತ. ಸರ್ವಾರ್ಥ ಚಿಂತಾಮಣಿಯಲ್ಲಿ ಇದೇ ಅರ್ಥವನ್ನು ಅಂಗೀಕರಿಸುತ್ತಾರೆ.

## ಮಾತೃಭಾವೆ ಜ್ಞಾತವ್ಯ ವಿಷಯಾಣಿ

ಬಂಧು-ಬಂಧುಸ್ಥಾನವೆಂದರೆ ಲಗ್ನದಿಂದ ನಾಲ್ಕನೆ ಭಾವ, ಈ ಭಾವದಿಂದ ಗ್ರಹ, ಕ್ಷೇತ್ರ, ಮಾತೃ, ಸುಖ, ಇವುಗಳ ವಿಚಾರಮಾಡತಕ್ಕದ್ದು. ಇದಕ್ಕೆ ಪರಾಶರರ ಅಭಿಮತ. ಶ್ಲೋಕ॥ ವಾಹನ ಸ್ಯಾಧಬಂಧೂನಾಂ ಮಾತೃಸೌಖ್ಯಾದಿ ಕಾನಪಿ ॥ ನಿಧಿಕ್ಷೇತ್ರ ಗೃಹಂಚಾಪಿ ಹರ್ಮ್ಯ ರಾಮಾದಿ ಕಾನಪಿ ॥ ಧರ್ಮಸ್ಯ ವಿಮಲ ಸ್ಥಾನಂ ಪಾತಾಲಾಚ್ಚವಿ ಚಿಂತಯೇತ್ ॥೯೩॥ ಜಾ - ಭ ॥ ಸುಹೃದ್ಗೃಹ ಗ್ರಾಮ ಚತುಷ್ಪದಾನಂ ಕ್ಷೇತ್ರಾದ್ಯಮಾ ಲೋಕನಕಂ ಚತುರ್ಥೆ॥ ದೃಷ್ಟಂ ಶುಭಾನಾಂ ಶುಭಯೋಗ ತೋವಾ ಭವೇತ್ಪ್ರಭೂತಿರ್ನಿಯಮೇನ ತೇಷಾಮ್ ॥೯೪॥ ಸ ॥ಚಿಂ॥ ಬಂಧುಭವನೇತುಬಂಧೂನಂ ಗೃಹಮಾತೃ ಜಲಾತ್ಮವೃದ್ಧಿ ಭೋಜ್ಯಾದೀನ್॥ ವಾಹನಹೃದಯಸ್ಕಂಧಾಸನ ಶಯನಸುಖಾನ ಧೋಜಲಂ ಬ್ರೂಯಾತ್ ॥೯೫॥ ತಾ ॥ ಬಂಧುಸ್ಥಾನದ ಮೂಲವಾಗಿ, ವಾಹನ, ಬಂಧು, ಮಾತೃ, ಸೌಖ್ಯ, ನಿಧಿ, ಕ್ಷೇತ್ರ, ಗೃಹ, ಪ್ರಾಸಾದ, ಉಪವನ, ಧರ್ಮ, ನಿರ್ಮಲಹೃದಯ, ಇವುಗಳನ್ನು ವಿಚಾರಮಾಡತಕ್ಕದ್ದು. ॥ಜಾ - ಭ॥ ಧುಂಡಿರಾಜೀಯದಲ್ಲಿ ಸುಹೃತ್-ಗೃಹ, ಗ್ರಾಮ, ಚತುಷ್ಪದ, (ಅಶ್ವ, ಗೋ ಮಹಿಷ್ಯಾದಿಗಳು) ಕ್ಷೇತ್ರ, ಶುಭ ಇವುಗಳನ್ನು ನೋಡತಕ್ಕದ್ದು. ಸರ್ವಾರ್ಥ ಚಿಂತಾಮಣಿಯಲ್ಲಿ ಬಂಧು, ಗೃಹ, ಮಾತೃ, ಜಲ, ಆತ್ಮವೃದ್ಧಿ, ಭೋಜ್ಯ, ವಾಹನ, ಹೃದಯ, ಸ್ಕಂಧ, ಸಿಂಹಾಸನ, ಶಯನ, ಸುಖ, ಅಧೋಜಲ, ಈ ಮೊದಲಾದ ವಿಷಯಗಳನ್ನು ತಿಳಿಯತಕ್ಕದ್ದು.

## ಪಂಚಮಭಾವೆ ಜ್ಞಾತವ್ಯ ವಿಷಯಾಣಿ

ಪುತ್ರ-ಪುತ್ರ ಸ್ಥಾನದಿಂದ, ಶ್ಲೋಕ ॥ಪರಾಶರಃ॥ ಯಂತ್ರ ಮಂತ್ರೌಷಧೆತಥಾ ವಿದ್ಯಾಬುದ್ಧೇಶ್ಚೈವಪ್ರಬಂಧಕಾಃ ॥ ಪುತ್ರರಾಜ್ಯಾಪಭ್ರಂಶಾದೇಃಪಶ್ಯೇ-

ತ್ಪುತ್ರಾಲಯಾದ್ಬುಧಃ ॥೯೬॥ ಜಾ-ಭರಣೆ ॥ ಬುದ್ಧಿ ಪ್ರಬಂಧಾತ್ಮಜಮಂತ್ರ ವಿದ್ಯಾವಿನೇಯ, ಗರ್ಭಸ್ಥಿತಿನೀತಿಸಂಸ್ಥಂ ॥ ಸುತಾಭಿಧಾನೆ ಭವನೇನರಾಣಾಂ ಹೋರಾ ಗಮಜ್ಞೈಃ ಪರಿಚಿಂತನೀಯಂ ॥೯೭॥ ಸ ॥ ಚಿಂ ॥ ಸುತಾಭವನಾ-ತ್ಸುತ ಬುದ್ಧಿ ಮಂತ್ರಿಣಾಮಪಿಮಂತ್ರಭೋಜನ ಪಿತೃಭಾವಾನ್ ॥ ಹೃದಯೋ ದರ ಪ್ರವೇಶಂ ವಿವೇಕಶಕ್ತಿಂಚನಿರ್ದಿಶೇನ್ಮತಿರ್ಮಾ ॥೯೮॥ ತಾತ್ಪರ್ಯ ॥ ಯಂತ್ರ, ಮಂತ್ರ, ವಿದ್ಯಾ, ಬುದ್ಧಿ, ಕಲ್ಪನೆ, ಪುತ್ರ, ರಾಜ್ಯಪದ, ಅಪಭ್ರಂಶ ॥ ಬುದ್ಧಿ ಪ್ರಬಂಧ, ಆತ್ಮಜ, ಮಂತ್ರ, ವಿದ್ಯಾ ವಿನಯ, ಗರ್ಭಸ್ಥಿತಿ, ನೀತಿ, ಸರ್ವಾರ್ಥ ಚಿಂತಾಮಣಿಯಲ್ಲಿ ಬುದ್ಧಿ, ಮಂತ್ರ, ಭೋಜನ ಪಿತೃಭಾವ ಹೃದಯ, ಉದರ, ಪ್ರವೇಶ, ವಿವೇಕ, ಶಕ್ತಿ, ಈ ಮೊದಲಾದ ವಿಷಯಗಳನ್ನು ಚಿಂತಿಸತಕ್ಕದ್ದು.

## ಷಷ್ಠಭಾವೆ ಜ್ಞಾತವ್ಯ ವಿಷಯಾಣಿ

ಅರಿ-ಷಷ್ಠಭಾವದ ದೆಸೆಯಿಂದ ಶತ್ರ, ಜ್ಞಾತಿ ಮೊದಲಾದ ವಿಷಯಗಳನ್ನು ತಿಳಿಯತಕ್ಕದ್ದು.॥ ಪರಾಶರಃ ॥ ಮಾತುಲಾಂತಕ ಶಂಕನಾಂಶತ್ರೂಂಶ್ಚೈವ ವ್ರಣಾದಿಕಾನ್ ॥ ಸಪತ್ನೀ ಮಾತರಶ್ಚಾಪಿ ಹ್ಯರಿಸ್ಥಾನಾನ್ನಿರೀಕ್ಷಯೇತ್ ॥೯೯॥ ॥ಜಾ॥ ಭರಣೆ ॥ ವೈರಿವ್ರಾತಃ ಕ್ರೂರಕರ್ಮ ಮಯಾನಾಂ ಚಿಂತಾಶಂಕಾ ಮಾತುಲಾನಾಂ ವಿಚಾರಃ ॥ ಹೋರಾಪಾರಾವಾರಪಾರಂ ಪ್ರಯಾತೈರೇತತ್ಸರ್ವಂ ಶತೃಭಾವೇಪಿಚಿಂತ್ಯಂ ॥೧೦೦॥ ಸ--ಚಿ.। ಅರಿಭವನಾದರಿಚೋಕ್ಷತವಿಘ್ನ ಕೇಶನಾಭ್ಯುದರದೇಶಾನ್ ॥ ಮಧುರಾದಿ ಷಡುಪದಂಶಾನ್ ಗ್ರಹರಾಶ್ಯುದಿತಾನ್ವ ದೇತಾ ಪ್ರಾಜ್ಞಃ ॥ ೧೦೧ ॥ ತಾತ್ಪರ್ಯ ॥ ಮಾತುಲ, ಅಂತಕಶಂಕೆ, ಶತ್ರ, ವ್ರಣಾದಿಗಳು, ಸಪತ್ನೀಮಾತೃ. ಜಾ ॥ ಭ ॥ ವೈರಿಸಮೂಹ, ಕ್ರೂರಕರ್ಮರೋಗ, ಚಿಂತೆ, ಅನುಮಾನ, ಅಥವಾ ಅಪವಾದ, ಮಾತುಲ ॥ ಸ ॥ ಚಿಂ ॥ ಶತ್ರ, ಚೋರ-ಕ್ಷತ, ವಿಘ್ನ, ಕೇಶ, ನಾಭಿಉದರದೇಶ, ಮಧುರಾದಿಷಡ್ರಸ, ಉಪದಂಶ ಮೊದಲಾದ ವಿಚಾರಗಳನ್ನು ತಿಳಿಯತಕ್ಕದ್ದು.

## ಸಪ್ತಮಭಾವೆ ಜ್ಞಾತವ್ಯ ವಿಷಯಾಣಿ

ಪತ್ನಿ - ಲಗ್ನದಿಂದ ೭ನೇ ಭಾವ ಮೂಲದಿಂದ ॥ ಜಾಯಾ ಭಾವ ಮೂಲದಿಂದ ವಿಚಾರಮಾಡತಕ್ಕದ್ದರ ವಿವರಣೆ ॥ ಪರಾಶರಃ ॥ ಜಾಯಾಮಧ್ವ ಪ್ರಯಾಣಂಚ ವ್ಯಯಭಾವಂತಥಾನಿಶಿ ॥ ಮರಣಂಚ ಸ್ವದೇಹಸ್ಯ ಜಾಯಾ ಭಾವಾನ್ನಿರೀಕ್ಷಯೇತ್ ॥೧೦೨॥ ಜಾ - ಭರಣೆ ॥ ರಣಾಂಗಣಂಚಾಪಿ ವಣಿಕ್ಕ್ರಿ-ಯಾಶ್ಚ ಜಾಯಾವಿಚಾರಾಗಮನ ಪ್ರಯಾಣಮ್ ॥ ಶಾಸ್ತ್ರಪ್ರವೀಣೈರ್ಹಿವಿಚಾರ ಣೀಯಂ ಕುಲತ್ರಭಾವೆಕಿಲಸರ್ವಮೇತತ್ ॥೧೦೩॥ ಸ--ಚಿಂ ॥ ಯುವತಿಪದಾ-

ದುದ್ವಾಹಂ ಭಾರ್ಯಾಪತಿಸೂಪದಧಿಗುಡಕ್ಷೀರಂ ।। ಆಗಮಾಗಮಕಾಮಾವಾಪ್ತಿಃ ಬ್ರೂಯಾನ್ಮೂತ್ರಾಶಯಚನಷ್ಟಧನಂ ।।೧೦೪।। ಪರಾಶರಃ ।। ಪತ್ನೀ, ಪ್ರಯಾಣ ಶರೀರಮಧ್ಯಭಾಗ, ವ್ಯಯ, ಕಾಮ, ಸ್ವದೇಹಮಾರಕ, ।।ಜಾ-ಭ।। ಯುದ್ಧ, ವ್ಯಾಪಾರ, ಸ್ತ್ರೀ, ಯಾತ್ರಾ ।।ಸ।। ಚಿ ।। ವಿವಾಹ, ಭಾರ್ಯೆ, ಪತಿ, ಸೂಪ, ದಧಿ, ಗುಡ, ಕ್ಷೀರ, ಆಗಮನ, ಗಮನ, ಕಾಮ, ಪ್ರಾಪ್ತಿ, ನಷ್ಟ, ದ್ರವ್ಯ, ಲಾಭ, ಮೂತ್ರಾಶಯ ಈ ವಿಷಯಗಳನ್ನು ವಿಚಾರಮಾಡತಕ್ಕದ್ದು.

## ಅಷ್ಟಮಭಾವೇ ಜ್ಞಾತವ್ಯ ವಿಷಯಾಣಿ

ಮರಣ-ಅಷ್ಟಮಸ್ಥಾನದ ದೆಸೆಯಿಂದ ಮುಂದೆ ಉದಹರಿಸುವ ವಿಷಯಗಳನ್ನು ವಿಚಾರಮಾಡತಕ್ಕದು . ।।ಪರಾಶರಃ।। ಶ್ಲೋಕ ।। ಋಣದಾನ ಗ್ರಹಣ ಯೋರ್ಗುದೇ ದೇವಾಂ ಕುರಾದಯಃ ।। ಗತ್ಯನುಕ್ತಾದಿಕಂ ಸರ್ವಂ ಪಶ್ಯೇದ್ರಂಧ್ರಾದ್ವಿ-ಚಕ್ಷಣಃ ।।೧೦೫।। ಜಾ-ಭರಣೆ ।। ನದ್ಯುಕ್ತರಾಶ್ಯಂತ ದುಷ್ಕ ದುರ್ಗಂ ಶಸ್ತ್ರಂಚಾಯುಃ ಸಂಕಟೇಚೇತಿ ಸರ್ವಮ್ ।।ರಂಧ್ರಸ್ಥಾನೆ ಸರ್ವದಾ ಕಲ್ಪನೀಯಂ ಪ್ರಾಚೀನಾ ನಾವಮಾಜ್ಞಯಾ ಜಾತಕಜ್ಞೈಃ ।।೧೦೬।। ।।ಸ-ಚಿಂ।। ಮರಣಾಜ್ಜೀವಿತಮರಣಂ ಗುಹ್ಯಸ್ಥಾನಂಚ ಮರಣ ಹೇತುಂಚ ।। ಅನ್ನಸುಖಂ ಮೃತಿದಂಶಂಪರಿಭವ ಮಪಿಚಿಂತಯೇತ್ಪಾಜ್ಞಃ ।।೧೦೭।।

ತಾತ್ಪರ್ಯ।। ಋಣ, ದಾನ, ಗ್ರಹಣ, ಗುದಸ್ಥಾನದಲ್ಲಿ ರೋಗೋತ್ಪತ್ತಿ, ಗತಿ ಮತ್ತು ದ್ವಾದಶ ಭಾವಗಳಲ್ಲಿ ಯಾವುದು ಹೇಳಲಿಲ್ಲವೋ ಆ ವಿಷಯಗಳನ್ನು ವಿಚಾರಮಾಡತಕ್ಕದ್ದು. ।।ಜಾ-ಭ।। ನದೀ ದಾಟತಕ್ಕದ್ದು. ಕಷ್ಟವಾದ ಕೋಟೆ, ಶಸ್ತ್ರ ಸಂಕಟ, ಆಯುಷ್ಯ ।।ಸ-ಚಿಂ।। ಮರಣ, ಜೀವಿತ ಕಾಲ, ಗುಹ್ಯಸ್ಥಾನ, ಮರಣಕೇತು, ಅನ್ನ, ಸುಖ, ಮೃತಿ, *ಕಚ್ಚುವಿಕೆ, ಅಪಜಯ, ಈ ಮೊದಲಾದ ವಿಷಯಗಳನ್ನು ವಿಚಾರ ಮಾಡತಕ್ಕದ್ದು.।।

## ನವಮಭಾವೇ - ಜಾತವ್ಯ ವಿಷಯಾಣಿ

ಶುಭ-ನವಮ ಭಾವದ ಮೂಲವಾಗಿ ತಿಳಿಯತಕ್ಕ ಅಂಶಗಳು ಯಾವುವೆಂದರೆ:- ಪರಾಶರಃ ।।ಶ್ಲೋಕ।। ಹರ್ಮ್ಯಂಧರ್ಮಶ್ಚಶ್ಯಾಲಶ್ಚ ಭ್ರಾತೃಪತ್ನ್ಯಾದಯ ಸ್ತಥಾ।। ತೀರ್ಥಯಾತ್ರಾದಿಕಂಸರ್ವಂ ಧರ್ಮಸ್ಥಾನಾನ್ನಿರೀಕ್ಷತಯೇತ್ ।।೧೦೮।। ಜಾ-ಭರಣೆ ।। ಧರ್ಮಕ್ರಿಯಾಂ ಯಾಹಿಭರ್ಮೇತ್ರವೃತ್ತಿರ್ಭಾಗ್ಯೋ ಪಪತ್ತಿರ್ವಿಮಲಂಚ ಶೀಲಂ ।। ತೀರ್ಥಪ್ರಯಾಣಂ ಪ್ರಣಯಃ ಪುರಾಣೈಃ ಪುಣ್ಯಾಲಯೇ ಸರ್ವ-

* ದುಷ್ಟ ಮೃಗಾದಿಗಳಿಂದ ಕಚ್ಚಿಸಿಕೊಳ್ಳುವಿಕೆ

ಮಿದಂ ಪ್ರದಿಷ್ಟಂ ||೧೦೯|| ಸ-ಚಿಂ || ಶುಭ ಭವನಾದ್ಗುರುಭಾಗ್ಯಂ ಪಿತ್ರು ಪೌತ್ರಾದಯಾತಪಃ ಪ್ರಾಪ್ತಿಂ || ಊರುಸ್ಥಾನಂ ಸ್ವಾಂತಂ ಸಹಭೋಕ್ತ್ರೂನ್ ದಾನಯೋಗಮಪಿ ವಿಂದ್ಯಾತ್ ||೧೧|| ತಾ|| ಮಹಡೀಮನೆ (ಪ್ರಾಸಾದ), ಧರ್ಮ, ಶ್ಯಾಲಕ, ಭ್ರಾತೃಪತ್ನೀ, ತೀರ್ಥಯಾತ್ರಾದಿಗಳು, ||ಜಾ-ಭ|| ಧರ್ಮ-ಕರ್ಮದ ಬುದ್ಧಿ, ಭಾಗ್ಯಪ್ರಾಪ್ತಿ, ಶುದ್ಧಸ್ವಭಾವ, ತೀರ್ಥಯಾತ್ರೆಗೆ ಹೋಗುವುದು, ಸ್ನೇಹ, ಪುಣ್ಯಸ್ಥಾನ ||ಸ-ಚಿಂ|| ಗುರು, ಭಾಗ್ಯ, ಪಿತೃಪೌತ್ರಾದಿಗಳು, ತಪಸ್ಸು, ಆಹ್ನಿಕ, ಊರುಸ್ಥಾನ, ಮನಸ್ಸು, ಸಹ ಭೋಕ್ತೃಗಳು, ದಾನ ಈ ಮೊದಲಾದ ವಿಷಯಗಳನ್ನು ವಿಚಾರಮಾಡತಕ್ಕದ್ದು.

## ದಶಮಭಾವೆ - ಜ್ಞಾತವ್ಯ ವಿಷಯಾಣಿ

ಆಸ್ಪದ - ದಶಮಸ್ಥಾನದ ಮೂಲವಾಗಿ ವಿಚಾರಮಾಡತಕ್ಕ ವಿಷಯಗಳು ಯಾವುವೆಂದರೆ :- ಪರಾಶರಃ ||ಶ್ಲೋಕ|| ರಾಜ್ಯಂ ಚಾಕಾಶ ವೃತ್ತಿಂಚಮಾನಂ ಚೈವ ಪಿತಾತಥಾ || ಪ್ರವಾಸಸ್ಯ ಋಣಸ್ಯಾಪಿ ವ್ಯೋಮಸ್ಥಾನಾನಿರೀಕ್ಷಣಂ || ಜಾ-ಭರಣೆ|| ವ್ಯಾಪಾರ ಮುದ್ರಾನೃಪಮಾನರಾಜ್ಯಂ ಪ್ರಯೋಜನಂಚಾಪಿ ಪಿತಂಸ್ತಥೈವ । ಮಹತ್ವದಾಪ್ತಿಃ ಖಲುಸರ್ವಮೇತತ್ ರಾಜ್ಯಾಭಿಧಾನೆ ಭವನೇ ವಿಚಾರ್ಯಂ ||೧೧೨|| ಸಮುದಿತಮೃಷಿವರ್ಯೈರ್ಮಾನವಾನಾಂ ಪ್ರಯತ್ನಾದಿಹ ಹಿದಶಮಭಾವೆ ಸರ್ವಕರ್ಮಪ್ರಕಾಮಮ್ || ಗಗನಗಪರಿ ದೃಷ್ಯಾರಾಶಿ ಖೇಟಸ್ಸಭಾವ್ಯೈಃ ಸಕರಿಮಪಿವಿಚಿಂತ್ಯಂ ಸತ್ವಯೋಗಾತ್ಸುಧೀಭಿಃ ||೧೧೩|| ಸಂ-ಚಿಂ|| ದಶಮಾತ್ ಪ್ರವೃಶ್ತಿಮಾಜ್ಞಾಂ ಕೀರ್ತಿಂ ವೃಷ್ಟಿಂ ಪ್ರವಾಸಪೂರ್ತಾದೀನ್ || ಮಾನಂ ಕರ್ಮಾಜೀವಂ ಜಾನುಸ್ಥಾನಂಚನಿರ್ದಿಶೇದ್ವಾನಾನ್ ||೧೧೪|| ರಾಜ್ಯ, ವೃತ್ತಿ, ಮಾನ, ಪಿತೃ, ಪ್ರವಾಸ, ಋಣ ಇವುಗಳನ್ನು ದಶಮ ಭಾವದಿಂದ ವಿಚಾರ ಮಾಡಬೇಕು. ||ಜಾ-ಭ|| ವ್ಯಾಪಾರ, ದ್ರವ್ಯ ರಾಜಮೂಲವಾದ ಮಾನ, ರಾಜ್ಯ ಪದ, ತಂದೆ, ದೊಡ್ಡಸ್ತಿಕೆ, ಗೌರವ ಈ ಮೊದಲಾದ ವಿಚಾರವನ್ನು ಮತ್ತು ಸ್ವಭಾವ ಈ ಬಲಾಬಲ ವಿಚಾರಮಾಡಿ ತಿಳಿಯತಕ್ಕದ್ದು. ||ಸ-ಚಿಂತಾಮಣಿ|| ದಶಮ ಸ್ಥಾನದ ಮೂಲವಾಗಿ, ಪುನರ್ಜನ್ಮ, ಆಜ್ಞೆ, ಕೀರ್ತಿ ವೃಷ್ಟಿ, ಪ್ರವಾಸ, ಆಶಾಪೂರ್ತಿ, ಮಾನ, ಕರ್ಮಜೀವ (ಜೀವನೋಪಾಯ), ಜಾನುಸ್ಥಾನ ಈ ವಿಷಯಗಳನ್ನು ವಿಚಾರಮಾಡತಕ್ಕದ್ದು.

## ಲಾಭಭಾವೆ ಜ್ಞಾತವ್ಯ ವಿಷಯಾಣಿ

ಆಯಾಃ - ಲಾಭಸ್ಥಾನದ ಮೂಲವಾಗಿ ತಿಳಿಯತಕ್ಕದ್ದೇನೆಂದರೆ-ಪರಾಶರಃ|| ನಾನಾವಸ್ತು ಭವಸ್ಯಾಪಿ ಪುತ್ರಜಾಯಾದಿಕಾನಪಿ । ರಿಪೂಣಾಂರಿಪವಶ್ಚೈವ ಭವ-

ಸ್ಥಾನಾನ್ನಿರೀಕ್ಷಯೇತ್ ॥೧೧೫॥ ಜಾ--ಭ ॥ ಗಜಾಶ್ವಹೈಮಾಂಬರ ರತ್ನಜಾತ ಮಾಂದೋಲಿಕಾ ಮಂಗಲಮಂಡನಾನಿ ॥ ಲಾಭಃ ಕಿಲೈಷಾಮಖಿಲಂ ವಿಚಾರ್ಯ ಮೇತತ್ ಲಾಭಸ್ಯಗೃಹೆ ಗೃಹಜ್ಞೈಃ ॥ ಸಂ--ಚಿಂ॥ ಆಯೇನಾರ್ಥಪ್ರಾಪ್ತಿಂಪಾದಾ-ವಪಿ ವಾಮಕರ್ಣಾ ಚಿಂತಾಂಚ । ಜಾತವಪಿ ಜಕತುರ್ಜಾ ಜ್ಯೇಷ್ಠಾನ್ಪ್ರಾಯಾ-ದ್ಧನಾನ್ಯಾಶಾಮ್ ॥೧೧೭॥ ತಾ॥ ನಾನಾ ವಸ್ತುಗಳ ಪ್ರಾಪ್ತಿ, ಪುತ್ರಜಾಯಾ (ಸೊಸೆ), ಶತ್ರುಗಳ ಪರಾಭವ, ಈ ವಿಷಯ ವಿಚಾರ ಮಾಡತಕ್ಕದ್ದು. ॥ಜಾ-ಭ॥ ಗಜ, ಅಶ್ವ, ಸುವರ್ಣ, ವಸ್ತ್ರ, ನಾನಾವಿಧವಾದ ರತ್ನಪಲ್ಲಕ್ಕಿ ಮೊದಲಾದ ಯಾನ, ವಾಹನ, ಮಂಗಲಭೂಷಣ, ಲಾಭ, ಇವುಗಳ ವಿಚಾರ ಮಾಡತಕ್ಕದ್ದು. ಸ-ಚಿಂ॥ ಧನಪ್ರಾಪ್ತಿ, ಪಾದ, ವಾಮಕರ್ಣ, ಚಿಂತೆ, ಜ್ಯೇಷ್ಠಭ್ರಾತೃ, ಧನ, ಆಶಾ ಈ ವಿಷಯಗಳ ವಿಚಾರ ಮಾಡತಕ್ಕದ್ದು.

## ವ್ಯಯಭಾವೆ ಜ್ಞಾತವ್ಯ ವಿಷಯಾಣಿ

ರಿಃಫಾಖ್ಯ - ವ್ಯಯ ಅಂದರೆ ೧೨ನೆ ಭಾವದ ಮೂಲವಾಗಿ ವಿಚಾರ ಮಾಡತಕ್ಕ ವಿಷಯಗಳೇನೆಂದರೆ, ಪರಾಶರಃ ॥ಶ್ಲೋಕ॥ ವ್ಯಯಂಚವೈರಿವೃತ್ತಾಂತಂ ರಿಃಫಮಂತ್ಯಾದಿಕಂತಥಾ ॥ ವ್ಯಯಾಚ್ಚೈವ ಹಿಜ್ಞಾತವ್ಯಂ ಮೇತ್ತಿಸರ್ವತ್ರ ಬುದ್ಧಿರ್ಮಾ ॥೧೧೮॥ ಸ-ಚಿಂ॥ ವ್ಯಯಭವನಾದ್ವ್ಯಯಮಖಿಲಂ ಪತನಂ ನರಕೇಚ ವೈಕಲ್ಯಂ॥ ವಾಮೋಕ್ಷಿ ಚರಣಯುಗಳಂ ಶಯನಸ್ಥಾನಂ ವಿನಿರ್ದಿಶೇತ್ಪ್ರಾಜ್ಞಃ ॥೧೧೯॥ ॥ಜಾ-ಭರಣೆ॥ ಹಾನಿರ್ದಾನಂ ವ್ಯಯಶ್ಚಾಪಿ ದಂಡೋ ನಿರ್ಬಂಧವಿವಚ॥ ಸರ್ವಮೇತದ್ವ್ಯಯಸ್ಥಾನೇ ಚಿಂತನೀಯಂ ಪ್ರಯತ್ನತಃ ॥ ವ್ಯಯಸ್ಥಾನದ ಮೂಲವಾಗಿ ವ್ಯಯ, ವೈರಿವೃತ್ತಾಂತ, (ರಿಃ ಫ) ಮೋಕ್ಷ, ಈ ವಿಷಯಗಳನ್ನು ವಿಚಾರ ಮಾಡತಕ್ಕದ್ದು. ॥ಸ-ಚಿ॥ ವ್ಯಯ ನರಕಪ್ರಾಪ್ತಿ ಅರ್ಥಾತ್ ಸ್ವರ್ಗಪ್ರಾಪ್ತಿ, ಮೋಕ್ಷ (ಸಾಯುಜ್ಯ), ದೇಹ ವೈಕಲ್ಯ ವಾಮಾಕ್ಷಿಂ ವಾಮಾಂಘ್ರಿ, ಶಯನಸ್ಥಾನ, ದೇವತಾ ಉಪಾಸನೆ, ಈ ವಿಷಯಗಳನ್ನು ವಿಚಾರಮಾಡತಕ್ಕದ್ದು. ॥ಜಾ-ಭ॥ ದಾಸಿ-ದಾಸ, ದಂಡ, ನಿರ್ಬಂಧ, ಈ ಮೊದಲಾದ ವಿಷಯಗಳನ್ನು ವಿಚಾರ ಮಾಡತಕ್ಕದ್ದು.

## ವಿಶೇಷ ಸ್ಥಾನ ನಾಮಾನಿ

ಮತ್ತು ವಿಶೇಷ ಸ್ಥಾನಗಳು-ಕೆಲವು ಭಾಗಗಳಿಗೆ ಹೇಳಲ್ಪಟ್ಟಿರುತ್ತೆ. ಪರಾಶರಃ ॥ ಚತುರ್ಥಂ ದಶಮಂಚೈವ ವಿಶೇಷಂ ಸುಖಮುಚ್ಯತೆ ॥ಪಂಚಮಂ ನವಮಂಚೈವ ವಿಶೇಷಂ ಧನಮುಚ್ಯತೆ ॥೧೨೦॥ ಭ್ರಾತೃಸ್ಥಾನಂ ತೃತೀಯಂಚ ನವೈಕಾದಶ ಸಪ್ತಮಂ॥ ತತ್ತದೀಶದಶಾಯಾಂಚ ಭಾವವೃದ್ಧಿಕರಂ ಶುಭಂ ॥ ತಾತ್ಪರ್ಯ ॥

ವಿಶೇಷ ಧನಸ್ಥಾನಗಳು, ಪಂಚಮ, ನವಮ, ವಿಶೇಷ ಸುಖಸ್ಥಾನಗಳು, ೪ ಚತುರ್ಥ - ದಶಮ, ವಿಶೇಷ ಭ್ರಾತೃಸ್ಥಾನ, ತೃತೀಯಾ, ಸಪ್ತಮ, ನವಮ, ಏಕಾದಶ ಸ್ಥಾನಗಳು ಈ ಭಾವಾಧಿಪತಿಗಳ ದೆಶೆಗಳು ಬಂದ ಕಾಲದಲ್ಲಿ ಭಾವವೃದ್ಧಿ ಮತ್ತು ಶುಭ ಉಂಟಾಗುವುದು. ॥ವಿಶೇಷ ತಾತ್ಪರ್ಯ॥ ಮೂಲ ಶ್ಲೋಕದಲ್ಲಿ ಭಾವಗಳ ಹೆಸರುಗಳನ್ನು ಮಾತ್ರ ಹೇಳಲ್ಪಟ್ಟಿರುತ್ತೆ. ಆದರೆ :- ಲಗ್ನಾದಿ ದ್ವಾದಶ ಭಾವಗಳ ಮೂಲವಾಗಿ ವಿಚಾರಮಾಡತಕ್ಕ ವಿಷಯಗಳು ಯಾವುದೆಂದು ತಿಳಿಯದೆ ಇದ್ದರೆ, ಗ್ರಂಥಕರ್ತನ ಉದ್ದೇಶ ಪೂರ್ತಿ ಆಗುವುದಿಲ್ಲ. ಆದ್ದರಿಂದ ಪರಾಶರರು, ಧುಂಡಿರಾಜರು, ವೆಂಕಟೇಶದೈವಜ್ಞ ಇವರುಗಳು ಭಾವಫಲ ತಿಳಿಯುವುದಕ್ಕೆ ಭಾವಾದಿಯಲ್ಲಿ ಪ್ರತಿಜ್ಞಾ ಶ್ಲೋಕವನ್ನು ಹೇಳಿರುತ್ತಾರೆ. ಆದ್ದರಿಂದ ಪ್ರತಿಯೊಂದು ಭಾವಕ್ಕೆ ಈ ಮಹನೀಯರ ಅಭಿಪ್ರಾಯವನ್ನು ತೆಗೆದುಕೊಂಡು, ಆ ಭಾವ ಮೂಲವಾಗಿ ತಿಳಿಯತಕ್ಕ ವಿಷಯಗಳನ್ನು ವಿಶದಪಡಿಸಿರುತ್ತೇವೆ. ಕೆಲವು ಕಡೆ ಮಾತ್ರ ಭಿನ್ನಾಭಿಪ್ರಾಯ ಬಂದಿರುತ್ತೆ. ಆ ವಿಷಯಗಳನ್ನು ಆ ಭಾವಗಳ ಮೂಲವಾಗಿ ವಿಚಾರಿಸತಕ್ಕದ್ದು ಸಂಹಿತಾ ಗ್ರಂಥ ಕರ್ತರ ಅಭಿಮತವಾಗಿರುತ್ತೆ. ಆ ಮೂಲವಾಗಿ ವಿಚಾರ ಮಾಡಿದರೂ ಪ್ರತ್ಯಕ್ಷವಾಗಿ ನಿದರ್ಶನಕ್ಕೆ ಬರುವುದರಿಂದ ಅದನ್ನು ಅಂಗೀಕರಿಸಿದೆ.

ಅರಿ-ಷಷ್ಠಭಾವ, ಕರ್ಮ-ದಶಮ, ಲಾಭ-ಏಕಾದಶ, ದುಶ್ಚಿತ್ರಸಂಜ್ಞಿತ-ತೃತೀಯ ಈ ೬-೧೦-೧೧-೩ ಭಾವಗಳ, ಉಪಚಯಾಃ-ಉಪಚಯ ಸ್ಥಾನಗಳು, ಉಳಿದ ೧-೨-೪-೫-೭-೮-೯-೧೨, ಈ ೮ ಭಾವಗಳು ಅಪಚಯ ಸ್ಥಾನಗಳು. ಈ ಮೇಲಿನ ಉಪಚಯಸ್ಥಾನಗಳು ನನಿತ್ಯಂ-ನಿತ್ಯವಲ್ಲವೆಂದು ಈ ಉಪಚಯ ಸಂಜ್ಞೆಗಳಿಗೆ ಪ್ರಯೋಜನ ॥ಶ್ಲೋಕ॥ ಉಪಚಯಂ ಗ್ರಹಮಿತ್ರಸ್ವೋಚ್ಚಗೈಃ ಪುಷ್ಪಖುಷ್ಪಂ। ತ್ವಪಚಯ ಗ್ರಹನೀಚಾ ರಾತ್ರಿಗೈರ್ನೇಷ್ಟಸಂಪತ್ ॥ ಇತ್ಯಾದಿ ಸ್ಥಾನಾಂತರದಿಂದ ಫಲ ತಿಳಿಯತಕ್ಕದ್ದು ॥೧೫॥

## ದ್ವಾದಶಭಾವ ಸಂಜ್ಞಾನಾಮಾನಿ

ಮೂಲ॥ *ಕಲ್ಪಸ್ವ ವಿಕ್ರಮಗೃಹ ಪ್ರತಿಭಾಕ್ಷತಾನಿ ಚತ್ತೋರ್ಥ ರಂಧ್ರ ಗುರುಮಾನ ಭವವ್ಯಯಾನಿ ॥ ಲಗ್ನಾಚ್ಚತುರ್ಥನಿಧನೇಚತುರಶ್ರ ಸಂಜ್ಞೇ ದ್ಯೂನಂಚ ಸಪ್ತಮಗೃಹಂ ದಶಮರ್ಕ್ಷಮಾಜ್ಞಾ ॥೧೬॥

* ಕಲ್ಪಸ್ವವಿಕ್ರಮ ಎಂದು ಉತ್ತರದೇಶದಲ್ಲಿ ಪಾಠವಿದೆ.

ಅವತಾರಿಕೆ ॥ ಲಗ್ನಾದಿ ದ್ವಾದಶ ಭಾವಗಳಿಗೆ ಇನ್ನು ಕೆಲವು ವಿಶೇಷ ಭಾವ ಸಂಜ್ಞೆಗಳನ್ನು ವ್ಯವಹಾರ ಜ್ಞಾನಾರ್ಥವಾಗಿ ಹೇಳುತ್ತಾನೆ ॥

ಟೀಕು ॥ ಕಲ್ಪ-ಲಗ್ನ, ಸ್ವ-ದ್ವಿತೀಯ, ವಿಕ್ರಮ-ತೃತೀಯ, ಗ್ರಹ-ಚತುರ್ಥ, ಪ್ರತಿಭ-ಪಂಚಮ, ಕ್ಷತ-ಷಷ್ಠ, ಚಿತ್ತೋತ್ಥ-ಸಪ್ತಮ, ರಂಧ್ರ-ಅಷ್ಟಮ, ಗುರು-ನವಮ, ಮಾನ ದಶಮ, ಭವ-ಲಾಭ, ವ್ಯಯ-ದ್ವಾದಶ (ನಿಶ್ಶಬ್ದ ಸಮುಚ್ಚಯಾರ್ಥಃ) ಈ ಪ್ರಕಾರ ದ್ವಾದಶ ಭಾವಗಳಿಗೆ ಸಂಜ್ಞೆಗಳು. ಲಗ್ನಾತ್-ಲಗ್ನ ಮೊದಲುಗೊಂಡು, ಚತುರ್ಥನಿಧನೆ-ಚತುರ್ಥಾ ಅಷ್ಟಮಗಳು, ಚತುರಶ್ರಸಂಜ್ಞೆ- ಚತುರಶ್ರಗಳೆಂದು ಸಂಜ್ಞೆಗಳು, ಸಪ್ತಮಗ್ರಹಂ-ಸಪ್ತಮಸ್ಥಾನವು, ದ್ಯೂನಂದ್ಯೂನಸಂಜ್ಞೆಯುಳ್ಳದ್ದು, ದಶಮರ್ಕ್ಷಂ-ದಶಮಸ್ಥಾನವು, ಆಜ್ಞಾ-ಆಜ್ಞೆಯೆಂದು ಸಂಜ್ಞೆ, ಈ ಸಂಜ್ಞೆಗಳು-ಆಯಾಯ ಸ್ಥಾನ ವ್ಯವಹಾರಾರ್ಥವಾಗಿ ಪ್ರಯೋಗಿಸಿರುತ್ತೆ ॥೧೬॥

ಗಣಪತಿಃ ॥ಶ್ಲೋಕ॥ ಲಗ್ನ ಮೂರ್ತಿ ಸ್ತಥಾಂಗಂ ತನುರುದಯವಪುಃ ಕಲ್ಪಮಾದ್ಯಂ ತತಃ ಸ್ವಂಕೋಶಾಖ್ಯಾರ್ಥಂ ಕುಟುಂಬಂಧನ ಮಥ ಸಹಜಂ ಭ್ರಾತೃದುಶ್ಚಿಕ್ಕ ಸಂಜ್ಞಮ್ ॥ ಅಂಬಾ ಪಾತಾಳತುರ್ಯಂ ಹಿಬುಕಗೃಹ ಸುಹೃದ್ವಾಹನಂ ಯಾನ ಸಂಜ್ಞಂ ಬಂಧ್ವಾಖ್ಯಂ ಚಾಂಬುನೀರಂ ಜಲಮಥ ತನಯಂ ಬುದ್ಧಿವಿದ್ಯಾತ್ಮ ಚಾಖ್ಯಮ್ ॥೧೪॥ ವಾಕ್ಸ್ಥಾನಂ ಪಂಚಮಂ ಸ್ಯಾತ್ತನುಜವಂಥ ರಿಪುದ್ವೇಷ ವೈರಿಕ್ಷತಾಖ್ಯಂ ಷಷ್ಠಂಜಾಮಿತ್ರಮಸ್ತಂ ಸ್ಮರಮದನ ಮದದ್ಯೂನ ಕಾಮಾಭಿಧಾನಮ್ ॥ ರಂಧ್ರಾಯುಶ್ಛಿದ್ರಯಾಮ್ಯಂ ನಿಧನಲಯ ಪದಂಚಾಷ್ಟಮಂಮೃತ್ಯುರನ್ಯದ್ದುರ್ವಾಖ್ಯಂ ಧರ್ಮಸಂಜ್ಞಂ ನವಮಮಿಹ ಶುಭಂಸ್ಯಾತ್ತಪೋ ಮಾರ್ಗ ಸಂಜ್ಞಮ್ ॥೧೫॥ ತಾತಾಜ್ಞಾ ಮಾನಕರ್ಮಾಸ್ಪದ ಗಗನನಭೋ ವ್ಯೋಮ ಮೇಷೂರಣಾಖ್ಯಂ ಮಧ್ಯಂ ವ್ಯಾಪಾರ ಮೂಚುರ್ದಶ ಮಮಥ ಭವಂಚಾಗಮಂ ಪ್ರಾಪ್ತಿಮಾಯಮ್ ॥ ಇತ್ಥಂಪ್ರಾಂತ್ಯಾಂತಿ ಮಾಖ್ಯಂ ಮುನಯ ಇಹತತೋ ದ್ವಾದಶಂ ರಿಃಫಮಾಹುರ್ಗ್ರಾಹ್ಯಂ ಬುಧ್ವಾ ಪ್ರವೀಣೈರ್ಯ ದಧಿಕಮಮುತಃ ಸಂಜ್ಞಯಾ ತಸ್ಯ ತಚ್ಚ ॥೧೬॥ ॥ತಾ॥ ಲಗ್ನಾದಿ ಭಾವಗಳಿಗೆ ಸಂಜ್ಞೆಗಳು :- ಲಗ್ನ, ಮೂರ್ತಿ, ಅಂಗ, ತನು, ಉದಯಃ, ವಪುಃ, ಕಲ್ಪ - ಈ ೭ ಲಗ್ನಭಾವದ ಹೆಸರುಗಳು. ಧನ, ಸಂಕೋಶ, ಅರ್ಥ, ಕುಟುಂಬ - ಈ ೪ ಧನಭಾವದ ಹೆಸರುಗಳು. ಸಹಜ, ಭ್ರಾತೃ, ಸಹಜ, ದುಶ್ಚಿಕ್ಯ - ಈ ೪ ತೃತೀಯಭಾವದ ಹೆಸರುಗಳು. ಅಂಬಾ, ಪಾತಾಳ, ತುರ್ಯ, ಹಿಬುಕ, ಗೃಹ, ಸುಹೃದ, ವಾಹನ, ಯಾನ, ಬಂಧು, ಅಂಬು, ನೀರು, ಜಲ - ಈ ೧೨ ಚತುರ್ಥಭಾವದ ಹೆಸರುಗಳು. ತನಯ, ಬುದ್ಧಿ, ವಿನಯ, ಆತ್ಮಜ, ವಾಕ್ಸ್ಥಾನ,

ಪಂಚಮ, ತನುಜ - ಈ ಏಳು ಪಂಚಮಭಾಗದ ಹೆಸರುಗಳು. ರಿಪು, ದ್ವೇಷ, ವೈರಿ, ಕ್ಷತ, ಷಷ್ಠಂ - ಈ ೫ ಷಷ್ಠ ಭಾವದ ಹೆಸರುಗಳು. ಜಾಮಿತ್ರಂ, ಅಸ್ತಂ, ಸ್ಮರಃ, ಮದನ, ಮದ, ದ್ಯೂನ, ಕಾಮಾಬಿಧಃ-ಈ ೭ ಸಪ್ತಮ ಭಾವದ ಹೆಸರುಗಳು. ರಂಧ್ರ, ಆಯು, ಛಿದ್ರಂ, ಯಾಮ್ಯಂ, ನಿಧನ, ಲಯಪದ, ಅಷ್ಟಮ, ಮೃತ್ಯುಃ-ಈ ೮ ಅಷ್ಟಮಭಾವದ ಹೆಸರುಗಳು. ಗುರುಃ, ಧರ್ಮ, ನವಮ, ಶುಭಂ, ತಪಃ ಈ ಐದು ನವಮಭಾವದ ಹೆಸರುಗಳು. ತಾತ, ಆಜ್ಞಾ, ಮಾನ, ಕರ್ಮ, ಆಸ್ಪದ, ಗಗನ, ನಭಃ, ವ್ಯೋಮ, ಮೇಷೂರಣ, ಮಧ್ಯ, ವ್ಯಾಪಾರ, ದಶಮ - ಈ ೧೨ ದಶಮಭಾವದ ಹೆಸರುಗಳು. ಭವ, ಆಗಮ, ಪ್ರಾಪ್ತಿ, ಆಯ - ಈ ೪ ಲಾಭಭಾವದ ಹೆಸರುಗಳು. ಪ್ರಾಂತ್ಯ, ಅಂತ್ಯ, ದ್ವಾದಶರಿಃಫ- ಈ ೩ ದ್ವಾದಶ ಸ್ಥಾನದ ಹೆಸರುಗಳು ॥೧೨೪-೧೨೫-೧೨೬॥ ॥೧೬॥

## ಕೇಂದ್ರಾದಿ ವಿಚಾರಃ

ಮೂಲ॥ ಕಂಟಕ ಕೇಂದ್ರ ಚತುಷ್ಟಯ ಸಂಜ್ಞಾಸ್ಸಪ್ತಮ ಲಗ್ನ ಚತುರ್ಥಜ
ಭಾನಾಂ ॥ ಕೇಷು ಯಥಾಭಿಹಿತೇಷು, ಬಲಾಢ್ಯಾಃ ಕೀಟ
ನರಾಂಬ ಚರಾ ಪಶವಶ್ಚ ॥೧೭॥

ಅವತಾರಿಕೆ-ಲಗ್ನಾದಿ ಭಾವಗಳಲ್ಲಿ ಕೇಂದ್ರಾದಿ ಸಂಜ್ಞೆಗಳನ್ನು ಕೇಂದ್ರರಾಶಿ ಬಲವನ್ನು ಹೇಳುತ್ತಾನೆ ॥

ಟೀಕು॥ ಸಪ್ತಮ ಲಗ್ನ ಚತುರ್ಥಜಭಾನಾಂ-ಸಪ್ತಮ ಲಗ್ನಚತುರ್ಥ ದಶಮ ಭಾವಗಳಿಗೆ ಕಂಟಕ, ಕೇಂದ್ರ, ಚತುಷ್ಟಯವೆಂಬ ಈ ೩ ಹೆಸರು, ಯಥಾಭಿಹಿತೇಷು, ಈ ಹೇಳಲ್ಪಟ್ಟ ಸ್ಥಾನಗಳು, ಕೀಟನರಾಂಬು ಚರಾಪಶವಶ್ಚ- ಕೀಟ-ಕೀಟರಾಶಿಃ, ನರ-ಮನುಷ್ಯರಾಶಿ, ಅಂಬು-ಜಲಚರರಾಶಿ, ಪಶವಶ್ಚ-ಪಶು ರಾಶಿಗಳಾದರೆ, ಬಲಾಢ್ಯಾಃ-ಬಲವುಳ್ಳದ್ದಾಗುವುದು. ಅದು ಹೇಗೆಂದರೆ :- ಕೀಟರಾಶಿಯಾದ ವೃಷ್ಚಿಕವು ಸಪ್ತಮ ಭಾವವಾದರೆ ಬಲವುಳ್ಳದ್ದಾಗುವುದು. ನರರಾಶಿಗಳಾದರೆ ಮಿಥುನ, ಕನ್ಯಾ, ತುಲಾ, ಧನುಸ್ಸಿನ ಪೂರ್ವಾರ್ಧ, ಕುಂಭ ಈ ೫ ಲಗ್ನಗಳಾದರೆ ಬಲವುಳ್ಳದ್ದಾಗುವುದು. ಜಲರಾಶಿಗಳಾದ ಕರ್ಕಾಟಕ, ಮಕರರಾಶಿಯ ಉತ್ತರಭಾಗ, ಮೀನ ಈ ಮೂರು ರಾಶಿಗಳು ಚತುರ್ಥ ಸ್ಥಾನ ವಾದರೆ ಬಲವುಳ್ಳದ್ದಾಗುವವು. ಚತುಷ್ಪದ ರಾಶಿಗಳಾದ ಮೇಷ, ವೃಷಭ, ಸಿಂಹ, ಧನುಸ್ಸಿನ ಪರಾರ್ಧ, ಮಕರ ಪೂರ್ವಾರ್ಧ, ಈ ರಾಶಿಗಳಲ್ಲಿ ದಶಮ

ಸ್ಥಾನಗಳಾದರೆ ಬಲವುಳ್ಳದ್ದಾಗುವವು. ಈ ಪ್ರಕಾರ ಗರ್ಗಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತೆ. ॥ಶ್ಲೋಕ॥ ನೃಯುಕ್ತುಲಘಟಂಕನ್ಯಾ ಪೂರ್ವಾರ್ಧಂಚೈವ ಧನ್ವಿನಃ॥ ಲಗ್ನಸ್ಥಾ ಬಲಿನೋ ನಿತ್ಯಾಮೇಕೇಹೀನರರಾಶಯಃ ॥೧೨೭॥ ಚತುರ್ಥೇಕರ್ಕಟೋ ಮೇನೋ, ಮಕರಾರ್ಧಂಚ ಪಶ್ಚಿಮಂ । ವಿಜ್ಞೇಯಾ ಬಲಿನೋ ನಿತ್ಯ ಮೇತೇಹಿ ಜಲರಾಶಯಃ ॥೧೨೮॥ ಸಪ್ತಮೇ ವೃಶ್ಚಿಕಃ ಕೀಟೋ ಬಲವಾ‌ನ್ ಪರಿಕೀರ್ತಿತಃ ॥ ಧನ್ವ್ಯಂತ್ಯಾರ್ಥಾ ಜಗೋಸಿಂಹ ಬಲಿನಸ್ತೇ ಚತುಷ್ಪದಾಃ ॥೧೨೯॥ ಎಂದುಕ್ತ ವಾಗಿರುತ್ತೆ ॥೧೭॥

ಮೂಲ॥ ಕೇಂದ್ರಾತ್ಪರಂ ಪಣಪರಂ ಪರತಸ್ತು ಸರ್ವಮಾಪೋಕ್ಲಿಮಂ ಹಿಬುಕ ಮಂಬುಸುಖಂಚವೇಶ್ಮ ॥ ಜಾಮಿತ್ರ ಮಸ್ತಭವನಂ ಸುತಬಂ ತ್ರಿಕೋಣಂ ಮೇಷೂರಣಂ ದಶಮಮುತ್ರಚಕರ್ಮ ವಿದ್ಯಾತ್ ॥೧೮॥

ಅವತಾರಿಕೆ ॥ ಲಗ್ನಾದಿ ದ್ವಾದಶ ಭಾವಗಳಿಗೆ ಕೇಂದ್ರ, ತ್ರಿಕೋಣ, ಪಣಪರ, ಆಪೋಕ್ಲೀಮ - ಈ ಸಂಜ್ಞೆಗಳನ್ನು ಹೇಳುತ್ತಾನೆ.

ಟೀಕು॥ ಕೇಂದ್ರಾತ್ - ಕೇಂದ್ರಸ್ಥಾನದಿಂದ, ಪರಂ-ಮುಂದೆ ಬರುವ ರಾಶಿ (ಭಾವ), ಪಣಪರಂ-ಪಣಪದ ಸ್ಥಾನವೆಂದು ಸಂಜ್ಞೆ, ಅದು ಹೇಗೆಂದರೆ :- ೧-೪-೭-೧೦ ಈ ನಾಲ್ಕು ಕೇಂದ್ರಗಳು, ಈ ಭಾವಗಳಿಗೆ ಪಣಪರಗಳೆಂದು ಸಂಕೇತವು. ಪರತಶ್ಚ-ಆ ಪಣಪರರಾಶಿಗಳಿಗೆ ಪರದಲ್ಲಿ ಬರುವ ೩-೬-೯-೧೨ ಈ ನಾಲ್ಕು ರಾಶಿಗಳಿಗೆ ಆಪೋಕ್ಲಿಮವೆಂದು ಸಂಕೇತವು. ಹಿಬುಕ ಅಂಬು ಸುಖಂಚವೇಶ್ಮ-ಹಿಬುಕ, ಅಂಬು, ಸುಖಂ, ವೇಶ್ಮ ಈ ನಾಲ್ಕು ಚತುರ್ಥ ಸ್ಥಾನದ ಹೆಸರು. ಜಾಮಿತ್ರಮಸ್ತಭವನಂ-ಜಾಮಿತ್ರಂ, ಅಸ್ತಭವನಂ, ಈ ೨ ಸಪ್ತಮ ಭಾವದ ಹೆಸರು. ಸುತಭಂ ತ್ರಿಕೋಣಂ ಸುತ ಸುತಭೆ-ಪುತ್ರಸ್ಥಾನ, ನವಮ-ಈ ೨ ತ್ರಿಕೋಣದ ಹೆಸರು. ಮೇಷೂರಣಂಚ ದಶಮ-ಮೇಷೂರಣ, ದಶಮ, ಕರ್ಮ, ಈ ೩ ದಶಮ ಭಾವದ ಹೆಸರುಗಳೆಂದು ವಿದ್ಯಾತ್ - ತಿಳಿಯತಕ್ಕದ್ದು. ಈ ಅರ್ಥಕ್ಕೆ ಗರ್ಗಸಂಹಿತೆಯಲ್ಲಿ ಶ್ಲೋಕ॥ ಆದ್ಯಂ ತುರ್ಯಂ ಕಳತ್ರಂ ದಶಮ ಮಿಹಬುಧೈಃ ಕೇಂದ್ರಮುಕ್ತಂ ತ್ರಿಕೋಣಂ । ಪುತ್ರಂ ಧರ್ಮಾಖ್ಯ ಮುಕ್ತಂ ಪಣಪರಮುದಿತಂ ಮೃತ್ಯುಲಾಭಾತ್ಮಜಾರ್ಥಂ ॥೧೩೦॥ ಧರ್ಮಂಚಾಪೋ ಕ್ಲಿಮಾಖ್ಯಂವ್ಯಯರಿಪುಸಹಜಂ ಕಂಟಕಾಖ್ಯಂ ಹಿಕೇಂದ್ರಂ ॥ ಏತಚ್ಚಾತುಷ್ಟಯಂ ಸ್ವಾತ್ರಿಕ ಮಿಹಗದಿತಂ ವೈರಿರಿಃ ಘಾಂತಕಾಖ್ಯಂ ॥೧೩೧॥ ತಥಾಚ ॥ ಜಯದೇವಃ ॥ ಶ್ಲೋಕ॥ ಕೇಂದ್ರಂಚ ಕಂಟಕ ಗೃಹಂಚ ಚತುಷ್ಟಯಂಚ ಲಗ್ನಾಸ್ತ ತುರ್ಯದಶಮಸ್ಯ ಚ

ನಾಮಧೇಯಮ್ ॥ ತಸ್ಮಾತ್ಪರಂ ಪಣಪರಂ ಖಲುತತ್ಪರಃ ಸ್ಯಾದಾಪೋಕ್ಲಿಮಂಮ್ಮತಿ ಸುಖೇ ಚತುರಶ್ರಸಂಜ್ಞೆ॥೧೩೨॥

## ಲಗ್ನಾದಿ ಭಾವಬಲ ನಿರ್ಣಯಃ

ಮೂಲ॥ ಹೋರಾಸ್ವಾಮಿ ಗುರುಜ್ಞ ವೀಕ್ಷಣ ಯುತಾ ನಾನ್ಯೈಶ್ಚ ವೀರ್ಯೋತ್ಕಟಾ। ಕೇಂದ್ರಸ್ಥಾ ದ್ವಿಪದಾದಯೋಹ್ನಿ ನಿಶಿಚ ಪ್ರಾಪ್ತೇಚ ಸಂಧ್ಯಾದ್ವಯೇ॥ ಪೂರ್ವಾರ್ಧೇ ವಿಷಮೋದಯಃ ಕೃತಗುಣಾಮಾನಂ ಪ್ರತೀಪಂಚತದ್ದುಶ್ಚಿಕ್ಯಂ ಸಹಜಂ ತಪಶ್ಚ ನವಮಂ ತ್ರ್ಯಾದ್ಯಂ ತ್ರಿಕೋಣಂಚತತ್ ॥೧೯॥

ಅವತಾರಿಕೆ -- ಲಗ್ನಾದಿ ದ್ವಾದಶ ಭಾವಗಳಿಗೆ ಬಲವನ್ನು ಹೇಳುತ್ತಾನೆ.

ಟೀಕು ॥ ಹೋರಾ -- ಲಗ್ನವು, ಸ್ವಾಮಿ ಗುರುಜ್ಞ ವೀಕ್ಷಣಯುತಾ -- ಲಗ್ನಾದಿಪತಿಯಿಂದಲಾದರೂ, ಗುರು ಬುಧರಿಂದಲಾದರೂ, ನೋಡಲ್ಪಟ್ಟರೂ ಅಥವಾ ಕೂಡಿದ್ದರೂ, ಅನ್ಯೈಶ್ಚ - ಇತರ ಗ್ರಹಗಳಿಂದ, ನವೀಕ್ಷಣಯತಾ - ನೋಡಲ್ಪಡದೆಯೂ ಅಥವಾ ಕೂಡಲ್ಪಡದೆಯೂ ಇದ್ದರೆ, ಲಗ್ನವು ವಿರ್ಯೋತ್ಕಟಾ- ಬಲಾಧಿಕ್ಯವುಳ್ಳದ್ದಾಗಿ, ಭವತಿ-- ಆಗುವದು. ಲಗ್ನಾಧಿಪತಿ ಗುರು ಬುಧರಿಂದ ನೋಡಲ್ಪಟ್ಟು ಉಳಿದ ಗ್ರಹಗಳಿಂದ ನೋಡಲ್ಪಟ್ಟರೂ ಅಥವಾ ಕೂಡಲ್ಪಟ್ಟರೂ, ಆ ಲಗ್ನವು ಮಧ್ಯಬಲವುಳ್ಳದ್ದು. ಲಗ್ನವು - ಲಗ್ನಾಧಿಪತಿ, ಗುರು, ಬುಧರಿಂದ ನೋಡಲ್ಪಡದೆಯೂ, ಕೂಡಲ್ಪಡದೆಯೂ ಇದ್ದರೆ, ಆ ಲಗ್ನವು ದುರ್ಬಲ ಉಳ್ಳದ್ದು ॥ ಈ ರೀತಿಯಾಗಿಯೇ ಬಾದರಾಯಣ ಸಂಹಿತೆಯಲ್ಲಿ ಹೇಳಲ್ಪಟ್ಟಿದೆ. ಶ್ಲೋಕ॥ ಜೀವಸ್ವನಾಥ ಶಶಿಚೈರ್ಯುಕ್ತಾ ದೃಷ್ಟಾ, ಬಲವತೀ ಭವತೀ । ಶೇಷೈರ್ಬಲವಿಹೀನಾಸ್ಯಾದೇವಂ ಮಿಶ್ರೈಸ್ಸು ಮಧ್ಯಬಲಾ ॥ ಬಲಹೀನಾ ಯದಿಸರ್ವೈರ್ನವೀಕ್ಷಿತಾ ಸೈವಯುಕ್ತಾವಾ ॥೧೩೩॥ ಕೇಂದ್ರಸ್ಥಾಃ- ಕೇಂದ್ರಸ್ಥಾನಗತರಾದ ಗ್ರಹಗಳಿಂದ, ವಿರ್ಯೋತ್ಕಟಾಃ- ಬಲಾಧಿಕ ಉಳ್ಳವರಾಗುವರು. ಪಣಪರದಲ್ಲಿದ್ದ ಗ್ರಹಗಳು ಮಧ್ಯಬಲವುಳ್ಳವರಾಗುವರು. ಆಪೋಕ್ಲಿಮದಲ್ಲಿರುವ ಗ್ರಹಗಳು ಹೀನಬಲ ಉಳ್ಳವರಾಗುವರು. ಇದಕ್ಕೆ ಬಾದರಾಯಣಸಂಹಿತಾ ಪ್ರಮಾಣ ॥ಶ್ಲೋಕ॥ ಕೇಂದ್ರಸ್ಥಾತಿಬಲಾಸ್ಯುರ್ಮಧ್ಯ ಬಲಾಃ ಪಣಪರಾಶ್ರಿತಾಜ್ಞೇಯಾಃ ॥ ಆಪೋಕ್ಲಿಮಗಾಸ್ಸರ್ವೆಹೀನಬಲಾರಾಶಯಃ ಕಥಿತಾಃ ॥೧೩೪॥

ದ್ವಿಪದಾದಯಃ - ದ್ವಿಪದ ಚತುಷ್ಪದ ಕೀಟರಾಶಿಗಳು ಯಥಾಕ್ರಮವಾಗಿ, ಅಹ್ನಿ-ಹಗಲಿನಲ್ಲೂ, ನಿಶಿ-ರಾತ್ರಿಯಲ್ಲೂ, ಸಂಧ್ಯಾದ್ವಯೇ - ಪ್ರಾತಃ ಸಾಯಂ ಕಾಲಗಳಲ್ಲಿಯೂ, ಪ್ರಾಪ್ತೇಸತಿ - ಪ್ರಾಪ್ತವಾದ ಕಾಲದಲ್ಲಿ, ವೀರ್ಯೋತ್ಕಟಾಃ - ಬಲವುಳ್ಳದ್ದಾಗುವುದು. ಅದು ಹೇಗೆಂದರೆ - ಹಗಲಿನಲ್ಲಿ ದ್ವಿಪದರಾಶಿಗಳು, ರಾತ್ರಿಯಲ್ಲಿ ಚತುಷ್ಪದ ರಾಶಿಗಳು, *ಸಂಧ್ಯಾಕಾಲದಲ್ಲಿ ಕೀಟರಾಶಿಗಳು, ಜಲಚರ ರಾಶಿಗಳು ಬಲವುಳ್ಳದ್ದಾಗುವವು. ಪೂರ್ವಾರ್ಧೇ - ಚಕ್ರಪೂರ್ವಾರ್ಧ ಅಂದರೆ ಮೇಷಾದಿ ಕನ್ಯಾಂತ ೬ ರಾಶಿಗಳು, ವಿಷಯಾದಯಃ-೫ ಮೊದಲಾದ ೫-೬-೭-೮-೯-೧೦ ಈ ಸಂಖ್ಯೆಗಳು, ಕೃತಗುಣಾಃ - ನಾಲ್ಕರಿಂದ ಗುಣಿಸಿದರೆ, ಮೇಷಾದಿ ರಾಶಿ ಷಟ್ಕಗಳಿಗೆ ಹ್ರಸ್ವದೀರ್ಘ ಪ್ರಮಾಣವಾಗುವದು, ಅದು ಹೇಗೆಂದರೆ - ಕನ್ಯೆಗೆ ೪೦ ಆಗುವುದು. ಈ ಸಂಖ್ಯೆಯನ್ನು ೧೦ ರಿಂದ ಗುಣಿಸಿದರೆ ವಿಘಳಿಗೆಗಳಾಗುವುದು. ತತ್-ಆ ಮೇಷಾದಿರಾಶಿಗಳಿಗೆ ಹೇಳಿದ ಸಂಖ್ಯಾಷಟ್ಕವೆ ಪ್ರತೀಪಂ ವ್ಯತ್ಯಸ್ತವಾಗಿ ತುಲಾದಿ ಮೀನಾಂಶ ರಾಶಿಗಳಿಗೆ ವಿಘಳಿಗೆಗಳು ಆಗುವದು. ಈ ಪ್ರಕಾರ ಗುಣಿಸಿದ ವಿಘಳಿಗೆಗಳು, ಮೀನ ಮೇಷಕ್ಕೆ ೨೦೦, ವೃಷಭ ಕುಂಭಕ್ಕೆ ೨೪೦, ಮಕರ ಮಿಥುನಕ್ಕೆ ೨೮೦, ಧನುಃ ಕರ್ಕಾಟಕಕ್ಕೆ ೩೨೦, ಸಿಂಹ ವೃಶ್ಚಿಕಗಳಿಗೆ ೩೬೦, ತುಲಾ ಕನ್ಯೆಗೆ ೪೦೦ ಆಗುವವು.

ಈ ಸಂಖ್ಯೆಗಳನ್ನು ೬೦ ರಿಂದ ಭಾಗಿಸಿದರೆ ಘಳಿಗೆ ವಿಘಳಿಗೆಗಳು ಬರುತ್ತವೆ. ಮೇಷ, ಮೀನಕ್ಕೆ ೩-೨೦, ವೃಷಭ ಕುಂಭಕ್ಕೆ ೪-೦, ಮಕರ ಮಿಥುನಕ್ಕೆ ೪-೪೦, ಧನುಃ ಕರ್ಕಾಟಕಕ್ಕೆ ೫-೨೦, ಸಿಂಹ ವೃಶ್ಚಿಕಕ್ಕೆ ೬-೦, ತುಲಾ ಕನ್ಯೆಗೆ ೬-೪೦ ಈ ಪ್ರಕಾರ ಲಗ್ನಖಂಡಗಳಾಗುವುದು. ಇದಕ್ಕೆ ಪ್ರಯೋಜನವೇನೆಂದರೆ-ಕಾದಿ ವಿಲಗ್ನ ವಿಭಕ್ತ ಭಗಾತ್ರ :- ಕಾಲಪುರುಷನ ಅಂಗಗಳಲ್ಲಿ ದೀರ್ಘರಾಶಿಯುಳ್ಳ ಅಂಗವು ದೀರ್ಘವಾಗಿಯೂ, ಹ್ರಸ್ವರಾಶಿಯುಳ್ಳ ಅಂಗ ಹ್ರಸ್ವವಾಗಿಯೂ, ಸಮರಾಶಿಯುಳ್ಳ ಅಂಗ ಸಮವಾಗಿಯೂ ಆಗುತ್ತದೆಂದು ತಾತ್ಪರ್ಯ. ಚೋರ ಪ್ರಶ್ನಾದಿಗಳಲ್ಲಿ ಈ ಪ್ರಮಾಣದಿಂದ ಕಳ್ಳನು ಹೋದ ಮಾರ್ಗದ ದೂರವನ್ನು ತಿಳಿಯಲು ಪ್ರಯೋಜನವುಳ್ಳದ್ದಾಗುವದು. ಈ ಪ್ರಕಾರವಾಗಿಯೇ ಯವನಾಚಾರ್ಯ ಸಮ್ಮತಿ ಇರುವುದು. ಶ್ಲೋಕ ॥ ಏವಂ ಪ್ರಮಾಣಾನಿ ಗ್ರಹಾಣಿ ಬುಧ್ವಾ, ಹ್ರಸ್ವಾನಿ ಮಧ್ಯಾನಿ ತಥಾಯಚ ॥ ಚತ್ರಾಂಗಭೇದೈಃಸದೃಶೀ ಕೃತಾನಿಮಾರ್ಗ ಪ್ರಮಾಣಾನಿ ವಿಕಲ್ಪಯಂತಿ ॥೧೩೫॥ ಜಯದೇವ ॥ಶ್ಲೋಕ॥ ಹ್ರಸ್ವಂಗೋಜಘಟಾ ಮಿಥುನಧನುಃ ಕರ್ಕಿಮೃಗ

* ಪ್ರಾತಃಕಾಲ ಸಾಯಂಕಾಲ

ಮುಖಾಶ್ಚಸಮಾಃ । ವೃಶ್ಚಿಕ ಕನ್ಯಾ ಮೃಗಪತಿ ವೇಣಾಜಾದೀರ್ಗಾ ಸಮಾಖ್ಯಾತಾಃ ॥೩೭೧॥ ಸಹಜಂ-ತೃತೀಯ ಸ್ಥಾನಕ್ಕೆ ದುಶ್ಚಿಕ್ಯವೆಂತಲೂ, ನವಮಂ-ನವಮ ಸ್ಥಾನವೇ ತಪಸ್ಥಾನವೆಂತಲೂ, ತತ್-ಆ ಸ್ಥಾನವೇ, ತ್ರ್ಯಾದ್ಯಂ-ತ್ರಿಕೋಣವೆಂದುಕ್ತವಾಗಿದೆ.

## ಲಗ್ನಖಂಡ ಪದಕಮ್

| ಕ್ರಮ ರಾಶಿ | ೧ | ೨ | ೩ | ೪ | ೫ | ೬ |
|---|---|---|---|---|---|---|
| ವ್ಯುತ್ಕ್ರಮರಾಶಿ | ೧೨ | ೧೧ | ೧೦ | ೯ | ೮ | ೭ |
| ಲಗ್ನಮಾನ | ೫ | ೬ | ೭ | ೮ | ೯ | ೧೧ |
| ಚತುರ್ಗಣಮಾನ | ೨೦ | ೨೪ | ೨೮ | ೩೨ | ೩೬ | ೪೦ |
| ದಶಗುಣಲಗ್ನಖಂಡ | ೨೦೦ | ೨೪೦ | ೨೮೦ | ೩೨೦ | ೩೬೦ | ೪೦೦ |
| ರಾಶಿನಾಮ | ಮೇಷ ಮೀನ | ವೃಷಭ ಕುಂಭ | ಮಿಥುನ ಮಕರ | ಕಟಕ ಧನುಸ್ಸು | ಸಿಂಹ ವೃಶ್ಚಿಕ | ಕನ್ಯಾ ತುಲಾ |
| ಹ್ರಸ್ವಾದಿ ವಿಭಾಗ | ಹ್ರಸ | ಹ್ರಸ | ಸಮ | ಸಮ | ದೀರ್ಘ | ದೀರ್ಘ |

## ಅಥ ರಾಶಿನಾಂ ವರ್ಣನಿರ್ಣಯಃ

ಮೂಲ॥ ರಕ್ತಶ್ವೇತಶ್ಶುಕತನು ನಿಭಃ ಪಾಟಲೋಧೂಮ್ರಪಾಂಡುಃ॥ ಚಿತ್ರಃ ಕೃಷ್ಣಃ ಕನಕಸದೃಶಃ ಪಿಂಗಳಃ ಕರ್ಬುರಶ್ಚ ॥ ಬಭ್ರುಸ್ಸ್ವಚ್ಛಃ ಪ್ರಥಮ ಭವನಾದ್ಯೇಷು ವರ್ಣಾಃಪ್ಲವತ್ವಂ ಸ್ವೇಶಾಶಾಖ್ಯಂ ದಿನಕರಯುತಾದ್ಬಾ ದ್ವಿತೀಯಂಚವೇಶಿ ॥೨೦॥

ಪ್ರಥಮ ಪ್ರಕರಣಂ ಸಮಾಪ್ತಂ

ಅವತಾರಿಕೆ ।। ರಾಶಿವರ್ಣವನ್ನು ವೇಶಿಸ್ಥಾನವನ್ನು ಹೇಳುತ್ತಾನೆ.

ಟೀಕು।। ಪ್ರಥಮ ಭವನಾದ್ಯೇಷು - ಮೇಷಾದಿ ೧೨ ರಾಶಿಗಳಿಗೆ ಕ್ರಮವಾಗಿ, ವರ್ಣಾ-ರಕ್ತಾದಿವರ್ಣಗಳು ತಿಳಿಯತಕ್ಕದ್ದು. ಅದು ಹೇಗೆಂದರೆ:- ರಕ್ತ:- ಮೇಷ ರಕ್ತವರ್ಣ, ಶ್ವೇತಃ- ವೃಷಭ ಶ್ವೇತವರ್ಣ, ಶುಕತಾನುನಿಭಃ - ಮಿಥುನ ಗಿಳಿಯವರ್ಣ, ಅಂದರೆ ಎಲೆ ಹಸರುವರ್ಣ, ಪಾಟಲಃ - ಕರ್ಕಾಟಕ, ಶ್ವೇತರಕ್ತ ವರ್ಣ ।।ನಿ।। ಶ್ವೇತರಕ್ತಸ್ತುಪಾಟಲ ಇತ್ಯಮರಃ।। ಧೂಮ್ರ ಪಾಂಡುಃ- ಸಿಂಹ ರಾಶಿ ಹೊಗೆವರ್ಣ ಕೂಡಿದ ಬಿಳೀವರ್ಣ, ಚಿತ್ರಃ- ಕನ್ಯ ಚಿತ್ರವರ್ಣ, ಕೃಷ್ಣಃ- ತುಲಾ ನೀಲವರ್ಣ, ಕನಕಸದೃಶಃ - ವೃಶ್ಚಿಕ, ಬಂಗಾರಕ್ಕೆ ಸದೃಶವಾದ ವರ್ಣ, ಪಿಂಗಳ-ಧನುಸ್ಸು, ಕಪಿಲವರ್ಣ, ಕರ್ಬುರಃ - ಮಕರ ಶುಕ್ಲ ಕಪಿಲಮಿಶ್ರವರ್ಣಃ, ಬಭೃಃ-ಕುಂಭ ಹೂಗಿಡದ ಬಿಳೀವರ್ಣ, ಬೂದಿವರ್ಣ, ಸ್ವಚ್ಛಃ-ಮೀನ, ಸ್ವಚ್ಛವರ್ಣ, ಈ ಪ್ರಕಾರವಾಗಿ ಮೇಷಾದಿ ೧೨ ರಾಶಿಗಳಿಗೂ ವರ್ಣಗಳು, ಇದಕ್ಕೆ ಸಮ್ಮತಿ, ವೆಂಕಟೇಶಃ ।।ಶ್ಲೋಕ।। ರಕ್ತಶ್ವೇತಃ ಶಾಮೋಕಾಂತಿಶ್ಚ ರಕ್ತೋ ಧೂಮ್ರಶ್ಚಿತ್ರೋ ಕೃಷ್ಣಕಾಂತಿಸುವರ್ಣಃ।। ಸ್ವರ್ಣಾಭಸ್ಯಾತ್ಕರ್ಬುರೋ ಬಭೃವರ್ಣಃ ಸ್ವಚ್ಛೋವರ್ಣೋವರ್ಣತೋ ಬುದ್ಧಿಮದ್ಭಿಃ ।।೧೩೭।। ಪ್ಲವತ್ವಂ ನಿಮ್ನತ್ವ ಸ್ವೇಶಾಶಾಖ್ಯಂ-ತೇಷಾಮಿಶಾಃ, ಸ್ವೇಶಾ-ತೇಷಾಮಾಶಾ ಸ್ವೇಶಶಾಃ ತಾಭಿರಾಖ್ಯಾಯಸ್ಯಪ್ಲವತ್ವಸ್ಯ ತತ್ ಸ್ವೇಶಾಶಾಖ್ಯಂ, ಪ್ಲವತ್ವಂ - ನಿಮ್ನತ್ವ, ಸ್ವೇಶಾಶಾಖ್ಯಂ-ಸ್ವೇಶ, ರಾಶ್ಯಾಧಿಪತಿಯ, ಆಶಾ--ದಿಕ್ಕು, ಆಖ್ಯಾ-ತಿಳಿಯತಕ್ಕದ್ದು ಅಂದರೆ, ಆ ರಾಶ್ಯಾಧಿಪತಿಗೆ ಯಾವ ದಿಕ್ಕು ಹೇಳಲ್ಪಟ್ಟಿರುತ್ತೋ ಆ ರಾಶಿಗೆ ಆ ದಿಕ್ಕು ಪ್ಲವಸಂಜ್ಞೆಯೆಂದರಿಯುವುದು, ಅದು ಹೇಗೆಂದರೆ :- ಮೇಷ ವೃಶ್ಚಿಕಗಳಿಗೆ ಕುಜನು ಅಧಿಪತಿ, ಆ ಕುಜನಿಗೆ ದಕ್ಷಿಣದಿಕ್ಕಿಗೆ ಮೇಷ ವೃಶ್ಚಿಕಗಳು ಪ್ಲವಸಂಜ್ಞೆ ಗಳೆಂದು ತಿಳಿಯಬೇಕು. ವೃಷಭ ತುಲೆಗಳಿಗೆ ಶುಕ್ರ ಅಧಿಪತಿ, ಶುಕ್ರನ ದಿಕ್ಕಾದ ಆಗ್ನೇಯ ದಿಕ್ಕು ವೃಷಭ ತುಲೆಗಳಿಗೆ ಪ್ಲವಸಂಜ್ಞೆ, ಮಿಥುನ ಕನ್ಯೆಗಳಿಗೆ ಬುಧ ಅಧಿಪತಿ - ಆ ಬುಧನಿಗೆ ಉತ್ತರದಿಕ್ಕು ಆದ್ದರಿಂದ ಮಿಥುನ ಕನ್ಯೆಗಳು ಉತ್ತರ ದಿಕ್ಕಿಗೆ ಪ್ಲವತ್ವ, ಕರ್ಕಾಟಕಕ್ಕೆ ಚಂದ್ರ ಅಧಿಪತಿ, ಚಂದ್ರನಿಗೆ ವಾಯುವ್ಯದಿಕ್ಕು ಆದ್ದರಿಂದ ವಾಯುವ್ಯದಿಕ್ಕಿಗೆ ಕಟಕರಾಶಿ ಪ್ಲವತ್ವ, ಧನುರ್ಮೀನಗಳಿಗೆ ಗುರು ಅಧಿಪತಿ, ಗುರುವಿಗೆ ಈಶಾನ್ಯ ದಿಕ್ಕು ಆದ್ದರಿಂದ ಈ ದಿಕ್ಕಿನಲ್ಲಿ, ಧನುರ್ಮೀನ ರಾಶಿಗೆ ಪ್ಲವತ್ವ, ಮಕರ ಕುಂಭಗಳಿಗೆ ಶನಿ ಅಧಿಪತಿ , ಶನಿಗೆ ಪಶ್ಚಿಮದಿಕ್ಕು, ಆದ್ದರಿಂದ ಮಕರ ಕುಂಭಗಳಿಗೆ ಪಶ್ಚಿಮ ದಿಕ್ಕಿನಲ್ಲಿ ಪ್ಲವತ್ವ, ಈ ಪ್ಲವಸಂಜ್ಞೆಗಳಿಗೆ ಪ್ರಯೋಜನವೇನೆಂದರೆ :- ನಷ್ಟಾದಿ ಪ್ರಶ್ನೆಗಳಲ್ಲಿ ಪ್ಲವತ್ವಯುತ ರಾಶಿಯ ಮೂಲವಾಗಿ, ಚೋರಾದಿಗಳು ಹೋದ ಮತ್ತು ಇರತಕ್ಕ ಸ್ಥಳ ನಿರ್ದೇಶ

ಮಾಡತಕ್ಕದ್ದು. ವೇಶಸ್ಥಾನ ನಿರ್ಣಯಃ ॥ ದಿನಕರಯುತಾತ್ - ಸೂರ್ಯನಿರುವ, ಭಾತ್-ರಾಶಿಯಿಂದ, ದ್ವಿತೀಯಂ-ಎರಡನೇ ರಾಶಿ, ವೇಶಿಃ-ವೇಶಿ ಎಂದು ಹೆಸರು, ಇದಕ್ಕೆ ಪ್ರಯೋಜನವೇನೆಂದರೆ :- ವೇಶ್ಶಿಲಗ್ನೋಪಗತೋ ಪಿಯೋ ಸಾವೇಶಿಸ್ಥಾನೇಪಿಸದ್ಗ್ರಹಃ- ಎಂದು ಯಾತ್ರಾ ಪ್ರಕರಣದಲ್ಲಿ ಹೇಳಲ್ಪಟ್ಟಿರುತ್ತೆ. ಈ ಸಂಜ್ಞಾಧ್ಯಾಯದಲ್ಲಿ ಹೇಳಲ್ಪಟ್ಟ ಎರಡು ವಿಧವಾದ ಸಂಜ್ಞೆಗಳು, ಸಂಜ್ಞಾ ಮಾತ್ರ ಪ್ರಯೋಜನ ಉಳ್ಳದ್ದು ॥

ವಿಶೇಷ ತಾತ್ಪರ್ಯ - ಈ ಸಂಜ್ಞಾಧ್ಯಾಯದಲ್ಲಿ ಹೇಳಲ್ಪಟ್ಟ ವಿಷಯಗಳನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡು ಈ ಪುಸ್ತಕವನ್ನು ಪಠಣಮಾಡಿದರೆ ಚೆನ್ನಾಗಿ ಅರ್ಥವಾಗುತ್ತೆಂದು ಪ್ರಾರ್ಥಿಸುವೆನು ॥

ಇತಿ ಶ್ರೀ ಮದ್ಗೌತಮಾನ್ವಯ ಪಯಃ ಪಾರಾವಾರ ರಾಕಾಸುಧಾ
ಕರಾಯಮಾನ ಬಂಕೀಪುರ ವಿಠಲರಾಯ ತನೂಜಜ್ಯೋತಿ-
ರ್ವಿತ್ಸುಬ್ರಹ್ಮಣ್ಯಶರ್ಮವಿರಚಿತೇ ಬೃಹಜ್ಜಾತಕಾಖ್ಯ
ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ
ರಾಶಿಭೇದೋ ನಾಮ ಪ್ರಥಮ
ಪ್ರಕರಣಮ್

ಶ್ರೀರಸ್ತು

# ಬೃಹಜ್ಜಾತಕೇ ದ್ವಿತೀಯ ಪ್ರಕರಣಂ

## ಗ್ರಹಯೋನಿಭೇದ ಪ್ರಕರಣ ಪ್ರಾರಂಭಃ

ಮೂಲ॥ ಕಾಲಾತ್ಮಾ ದಿನಕೃನ್ಮನಸ್ತು ಹಿನಗುಸ್ಸತ್ವಂ ಕುಜೋಜ್ಞೋವ ಚೋ
ಜೀವೋ ಜ್ಞಾನಸುಖೇ ಸಿತಶ್ಚ ಮದನೋ ದುಃಖಂದಿನೇಶಾತ್ಮಜಃ॥
ರಾಜಾನೌರವಿ ಶೀತಗೂಕ್ಷಿತಿಸುತೋ ನೇತಾಕುಮಾರೋ ಬುಧಃ ।
ಸೂರಿರ್ದಾನವ ಪೂಜಿತಶ್ಚ ಸಚಿವೌಪ್ರೇಷ್ಯಃ ಸಹಸ್ರಾಂಶುಜಃ ॥೧॥

ಅವತಾರಿಕೆ ॥ ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನು ಪೂರ್ವ ಪ್ರಕರಣದಲ್ಲಿ ಕಾಲಾಂಗಾದಿ ಎಂಬುವ ಪದ್ಯದಿಂದ ಹೇಳಲ್ಪಟ್ಟ ಮೇಷಾದಿ ರಾಶಿಗಳಿಗೆ ಮತ್ತು ಆ ರಾಶಿಗಳಿಗೆ ಅಧಿಪತಿಗಳಾದ ಸೂರ್ಯಾದಿ ಸಪ್ತಗ್ರಹಗಳಿಗೆ ಆತ್ಮಾಧಿಕಾರತ್ವವನ್ನೂ, ಜಾತಿಭೇದವನ್ನೂ ಸಹ ಹೇಳುತ್ತಾನೆ. ಆದರೆ ಸೂರ್ಯಾದಿ ನವಗ್ರಹಗಳು ಪಂಚಭೂತಾದಿಗಳಿಗೆ ಅಧಿಪತಿಗಳಾಗಿರುವುದರಿಂದ, ಪರಬ್ರಹ್ಮನ ಆಜ್ಞೆಯಿಂದ ಈ ನವಗ್ರಹಗಳೇ ಜಗತ್ಪಾಲಕರಾಗಿರುವದರಿಂದ ಅವರಿಗುಂಟಾಗಿರುವ ಸ್ವಭಾವವನ್ನು ಈ ಶ್ಲೋಕದಿಂದಲೂ ಮತ್ತು ಈ ಪ್ರಕರಣದಲ್ಲಿರುವ ಪದ್ಯ ಸಮೂಹ ಗಳಿಂದಲೂ ಹೇಳಲ್ಪಡುತ್ತೆ.

ಟೀಕು॥ ಈ ಕಾಲಾತ್ಮ-ಕಾಲಪುರುಷನಿಗೆ, ಆತ್ಮ-ಆತ್ಮನು, ದಿನಕೃತ್-ಸೂರ್ಯನು, ಮನಃ-ಮನಸ್ಸು, ತುಹಿನಗು--ಹಿಮರಶ್ಮಿಯುಳ್ಳ ಚಂದ್ರನು, ಸತ್ವಂ-ಬಲವು, ಕುಜಃ-ಅಂಗಾರಕನು, ವಚಃ-ವಾಕ್ಕು, ಜ್ಞಃ -ಬುಧನು, ಜ್ಞಾನಸಖೇ-ಜ್ಞಾನಸುಖಗಳು, ಜೀವಃ - ಬೃಹಸ್ಪತಿಯು, ಮದನಃ- ಮನ್ಮಥನು, ಸಿತಃ-ಶುಕ್ರನು, ದುಃಖ-ದುಃಖವು, ದಿನೇಶಾತ್ಮಜಃ-ಶನಿಯು ಈ ಪ್ರಕಾರ ಕಾಲಪುರುಷನಿಗೆ ನವಗ್ರಹಗಳೇ ಅವಯವಗಳಾಗಿರುವುದರಿಂದ, ಪ್ರಪಂಚವೇ ನವಗ್ರಹಗಳಿಂದ ಪಾಲಿಸಲ್ಪಡುತ್ತೆಂದು ತಿಳಿಯಬೇಕು. ಕಾಲಪುರುಷನ ಅಂಗಗ್ರಹಗಳಾದ ಈ ಸಪ್ತಗ್ರಹಗಳಲ್ಲಿ ಜನ್ಮಕಾಲದಲ್ಲಿ ಯಾರು ಅತ್ಯಂತ ಬಲಿಷ್ಠರಾಗಿರುವರೋ ಆ ಜಾತಕನಿಗೆ ಆತ್ಮಾಧಿಕಾರಿಗಳು ಪ್ರಾಬಲ್ಯವುಳ್ಳ ದ್ದಾಗಿರುವುದು. ರವಿಶೀತಗೂ - ರವಿ ಚಂದ್ರರು, ರಾಜಾನೌ-- ರಾಜರುಗಳು (ಅಂದರೆ ಸೂರ್ಯನು ಹಗಲಿಗೂ, ಚಂದ್ರನು ರಾತ್ರಿಗೂ ಅಧಿಪತಿಗಳು),

ಕ್ಷಿತಿಸುತಃ-ಭೂಪುತ್ರನಾದ ಅಂಗಾರಕನು, ನೇತಾ-ಸೇನಾಪತಿ, ಬುಧಃ-ಬುಧನು, ಕುಮಾರಃ- ಯುವರಾಜನು, ಸೂರಿರ್ದಾನವಪೂಜಿತಶ್ಚ-ಗುರು ಶುಕ್ರರು, ಸಚಿವೌ-ಮಂತ್ರಿಗಳು, ಸಹಸ್ರಾಂಶುಜಃ ಸಹಸ್ರ ಕಿರಣನ ಮಗನಾದ ಶನಿಯು, ಪ್ರೇಷ್ಯಃ-ಪರಿಚಾರಕನು ಎಂದುಕ್ತವಾಗಿದೆ. ಈ ಮೇಲೆ ಹೇಳಿದ ಆತ್ಮಕಾರಕಕ್ಕೆ ಶ್ಲೋಕ।। ಆತ್ಮಾರವಿಃ ಶೀತಕರೋಮನಸ್ತು ಸತ್ವಂ ಕುಜೋಭಾಷಣಮಬ್ಜ ಸೂನುಃ ।। ವಾಚಾಂಪತಿರ್ಜ್ಞಾನಸುಖಂ ಮದೇಶಶ್ಶುಕ್ರೋ ಭವೇದರ್ಕಸುತಸ್ತು ದುಃಖಂ ।।೧।। ಮತ್ತು ।। ರಾಜಾದಿಗ್ರಹಾಃ ।। ದಿನೇಶಚಂದ್ರೌ ನರಪಾಲ ಕಾಖ್ಯೌ ನೇತಾಕುಜಃ ಸೋಮಸುತಃ ಕುಮಾರಃ ।। ಶುಕೇಂದ್ರಪೂಜ್ಯೌಸಚಿವೌ ಶನಿಶ್ಚ ಪ್ರೇಷ್ಯಂತು ತದ್ವೃತ್ತಿ ಮುಪೈತಿಜಾತಃ ।।೨।। ಈ ಪ್ರಯೋಜನವು ಜನ್ಮಕಾಲದಲ್ಲಾಗಲಿ, ಪ್ರಶ್ನಕಾಲದಲ್ಲಾಗಲಿ, ಜಾತಕದ ಸ್ವಭಾವವನ್ನು ಮತ್ತು ಅವನ ಜೀವಿತಕಾಲದ ವೃತ್ತಿಯನ್ನು, ನಷ್ಟ ಪ್ರಶ್ನೆಯಲ್ಲಿ ಚೋರಾದಿಗಳನ್ನೂ ನಿಶ್ಚೈಸುವುದಕ್ಕೆ ಪ್ರಯೋಜನಕಾರಿ ಆಗುವುದು.

ಮೂಲ।। ಹೇಳಿಃ ಸೂರ್ಯಶ್ಚಂದ್ರಮಾಃ ಶೀತರಶ್ಮಿರ್ಹೇಮ್ನೋವಿಟ್‌ಜ್ಞೋಬೋದನ ಶ್ಚಂದ್ರಪುತ್ರಃ ।। ಆರೋವಕ್ರಃ ಕ್ರೂರದೃಕ್ ಚಾವನೇಯಃ ಕೋಣೋ ಮಂದಃ ಸೂರ್ಯಪುತ್ರೋಽಸಿತಶ್ಚ ।।೨।।

ಅವತಾರಿಕೆ ।। ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನು ಈ ಬೃಹಜ್ಜಾತಕದಲ್ಲಿ ಪ್ರಯೋಗಿಸಿರುವ ಗ್ರಹಗಳ ಹೆಸರುಗಳಿಗೆ ಸಂಕೇತಾರ್ಥವಾಗಿ ಸಂಗ್ರಹಿಸಿ, ಹೇಳಿಃ - ಸೂರ್ಯನೆಂಬುವ ಪದ್ಯದಿಂದ ಹೇಳಿರುತ್ತಾನೆ. ಶಾಲಿನೀ ವೃತ್ತ।। ಲೋಕವ್ಯವಹಾರಾರ್ಥವಾಗಿ ಈ ಶ್ಲೋಕ ಮತ್ತು ಮುಂದಿನ ಶ್ಲೋಕದಿಂದ ತಿಳಿಸುತ್ತಾನೆ. ಹೇಳಿಃ, ಸೂರ್ಯ, ಈ ಎರಡು ಸೂರ್ಯನ ಹೆಸರು, ಚಂದ್ರಮಾಃ, ಶೀತರಶ್ಮಿಃ - ಈ ಎರಡು ಚಂದ್ರನ ಹೆಸರು, ಹೇಮ್ನಃ, ವಿಟ್, ಜ್ಞಃ, ಬೋಧದಃ, ಇಂದುಪುತ್ರಃ ಈ ಐದು ಬುಧನ ಹೆಸರು. ಆರಃ, ವಕ್ರಃ, ಕ್ರೂರದೃಕ್ (ಕ್ರೂರದೃಷ್ಟಿಯುಳ್ಳವನು), ಅವನೇಯಃ. ಭೂಪುತ್ರ, ಅಸಿತಃ ಈ ನಾಲ್ಕು ಶನೈಶ್ಚರನ ಹೆಸರು ।।

ಮೂಲ।। ಜೀವೋಂಗಿರಾಸ್ಸುರಗುರುರ್ವಚಸಾಂಪತೀ ಜ್ಯಾಶುಕ್ರೋಭೃಗುರ್ಭೃಗು-ಸುತಸ್ಸಿತ ಆಸ್ಫುಜಿಚ್ಚ ।। ರಾಹುಸ್ತಮೋಗುರುಸುರಶ್ಚ ಶಿಖೀಚ ಕೇತುಃ ಪರ್ಯಾಯಮನ್ಯ ಮುಪಲಭ್ಯ ವದೇಚ್ಚಲೋಕಾತ್ ।।೩।।

ಟೀಕು।। ಜೀವಃ, ಆಂಗಿರಾಃ, ಸುರುಗುರುಃ, ವಚಸಾಂಪತಿಃ, ಇಜ್ಯಃ - ಈ ೫ ಬೃಹಸ್ಪತಿಯ ನಾಮಗಳು. ಶುಕ್ರಃ, ಭೃಗುಃ, ಭೃಗುಸುತಃ, ಸಿತಃ, ಅಸ್ಫುಜಿತ್-

ಈ ೫ ಶುಕ್ರನ ನಾಮಗಳು. ರಾಹುಃ, ತಮಃ, ಆಗುಃ, ಅಸುರಃ - ಈ ನಾಲ್ಕು ರಾಹುವಿನ ನಾಮುಗಳು. ಶಿಖೀ, ಕೇತುಃ - ಈ ಎರಡು ಕೇತು ಗ್ರಹದ ನಾಮಗಳು. ಅನ್ಯಪರ್ಯಾಯಂ - ಇತರ ಪರ್ಯಾಯ ಪದಗಳು, ಲೋಕಾತ್ - ವ್ಯವಹಾರಸಿದ್ಧವಾದ ನಿಘಂಟುಗಳಿಂದ, ಉಪಲಭ್ಯ - ತಿಳಿದುಕೊಂಡು, ವದೇತ್- ಹೇಳತಕ್ಕದ್ದು. ಉದಾಹರಣೆ-ಸೂರ್ಯನ ಹೆಸರು ತಿಳಿಯತಕ್ಕದ್ದು ಅಮರಾದಿ ನಿಘಂಟಿನಿಂದ. ಭಾಸ್ಕರಃ, ಅಹಸ್ಕರಃ, ಬ್ರಧ್ನಃ, ಪ್ರಭಾಕರಃ, ವಿಭಾಕರಃ, ಸೂರಃ, ಸೂರ್ಯಃ, ಆದಿತ್ಯಃ, ಆರ್ಯಮಾ, ದ್ವಾದಶಾತ್ಮಾ ಇತ್ಯಾದಿ. ಚಂದ್ರನಿಗೆ ಚಂದ್ರಃ, ಹಿಮಾಂಶುಃ, ಇಂದುಃ, ಕುಮುದಭಾಂದವಃ, ಸುಧಾಂಶುಃ, ಶುಭ್ರಾಂಶುಃ, ಮೃಗಾಂಕಃ, ಶಶಾಂಕಃ, ಹರಿಣಾಂಕಃ ಇತ್ಯಾದಿ. ಅಂಗಾರಕಃ, ಕುಜಃ, ಭೌಮಃ, ಲೋಹಿತಾಂಗಃ, ಮಹೀಸುತಃ ಇತ್ಯಾದಿ. ರೌಹಿಣೇಯಃ, ಬುಧಃ, ಸೌಮ್ಯಃ, ಶನಿಃ, ಮಂದಃ, ಪಂಗುಃ, ವಾಚಸ್ಪತಿ ಚಿತ್ರಶಿಖಂಡಿಜಃ, ಶುಕ್ರಃ, ದೈತ್ಯಗುರುಃ, ಉಶನಾಃ, ಕಾವ್ಯಃ, ಭಾರ್ಗವಃ, ಕವಿಃ ಇತ್ಯಾದಿ ಶುಕ್ರನ ಹೆಸರು. ಉಳಿದ ಹೆಸರುಗಳು ಸಹ ನಿಘಂಟಿನಿಂದ ತಿಳಿದುಕೊಳ್ಳಬೇಕು ॥

ಮೂಲ॥ ರಕ್ತಃ ಶ್ಯಾಮೋ ಭಾಸ್ಕರೋ ಗೌರ ಇಂದರ್ನಾತ್ಯುಚ್ಚಾಂಗೋ ರಕ್ತ
ಗೌರಶ್ಚವಕ್ರಃ ॥ ದೂರ್ವಾಶ್ಯಾಮೋಜ್ಞೋ ಗುರುರ್ಗೌರಗಾತ್ರಃ
ಶ್ಯಾಮಃ ಶುಕ್ರೋಭಾಸ್ಕರಿಃ ಕೃಷ್ಣದೇಹಃ ॥೪॥

ಟೀಕು॥ ಸೂರ್ಯಾದಿ ಗ್ರಹಗಳಿಗೆ ರಕ್ತಶ್ಯಾಮಾದಿ ವರ್ಣಗಳು ಹೇಳಲ್ಪಡುತ್ತವೆ. ಭಾಸ್ಕರಃ - ಸೂರ್ಯನು, ರಕ್ತಶ್ಯಾಮಃ - ರಕ್ತ ಶ್ಯಾಮಮಿಶ್ರವುಳ್ಳವನು, ಅಂದರೆ, ಪಾಟಲ ಪುಷ್ಪದ ವರ್ಣವುಳ್ಳವನು, ಇಂದುಃ-ಚಂದ್ರನು, ಗೌರಃ-ಶ್ವೇತವರ್ಣವುಳ್ಳವನು, ನಾತ್ಯುಚ್ಚಾಂಗಃ - ಮಟ್ಟವಾದ ಶರೀರ ಉಳ್ಳವನು, ವಕ್ರಃ-ಅಂಗಾರಕನು, ರಕ್ತಗೌರಃ -ರಕ್ತ ಗೌರವರ್ಣದ ಮಿಶ್ರವುಳ್ಳವನು ಅಂದರೆ-ದೀಪಾಗ್ನಿ ಸಮಾನವಾದ ವರ್ಣಕಾಂತಿ ಉಳ್ಳವನು, ಜ್ಞಃ-ಬುಧನು, ದೂರ್ವಾಶ್ಯಾಮಃ-ಗರಿಕೆ ವರ್ಣದಂಥಾ ಬಣ್ಣ ಉಳ್ಳವನು, ಅಂದರೆ-ಪಚ್ಚೇವರ್ಣ ಉಳ್ಳವನು, ಗುರುಃ-ಬೃಹಸ್ಪತಿಯು, ಗೌರಗಾತ್ರಃ-ಗೌರವರ್ಣ ಉಳ್ಳವನು, ॥ ಗೌರೋರುಣೋ ಸಿತೇಪಿತೇ ॥ ಎಂದಮರವು. ಅರಿಶಿನ ವರ್ಣವುಳ್ಳವನು, ಅಂದರೆ ರಕ್ತಕಾಂಚನ ವರ್ಣವುಳ್ಳವನು, ಶುಕ್ರಃ-ಶುಕ್ರನು, ಶ್ವೇತಃ-ಶ್ವೇತ ವರ್ಣವುಳ್ಳವನು, ಭಾಸ್ಕರಿಃ-ಶನಿಯು, ಕೃಷ್ಣದೇಹಃ- ನೀಲವರ್ಣ ಉಳ್ಳವನು, ಈ ಪ್ರಕಾರ ಗ್ರಹಗಳಿಗೆ ವರ್ಣ ಹೇಳಲ್ಪಟ್ಟಿರುತ್ತೆ. ಇದಕ್ಕೆ ಪ್ರಯೋಜನವೇನೆಂದರೆ-ಜನ್ಮಕಾಲದಲ್ಲಿ ಲಗ್ನದಲ್ಲಿ ಯಾರ ಗ್ರಹ ಬಲವುಳ್ಳವನಾಗಿರುತ್ತಾನೋ, ಜಾತಕನು ಆ ವರ್ಣವುಳ್ಳವನಾಗುತ್ತಾನೆ. ಚೋರಾದಿ

ಪ್ರಶ್ನೆಗಳಲ್ಲೂ, ನಷ್ಟ ಪ್ರಶ್ನೆಗಳಲ್ಲೂ, ನಷ್ಟವಸ್ತು ವರ್ಣ ತಿಳಿಯುವುದಕ್ಕೂ, ಚೋರವರ್ಣ ತಿಳಿಯುವುದಕ್ಕೂ, ಸೂತಿಕಾಗ್ರಹದಲ್ಲಿದ್ದ ಉಪಸೂತಿಕೆಯರ ಲಕ್ಷಣ ವರ್ಣಗಳನ್ನು ತಿಳಿಯುವುದಕ್ಕೂ ಉಪಯೋಗವಾಗಿರುವುದು.

## ।। ಅಥ ಗ್ರಹಾಣಾಂ ತಾಮ್ರಾದಿ ವರ್ಣಾಧಿಪತ್ಯಮಾಹ ।।

ಮೂಲ।। ವರ್ಣಾಸ್ತಾಮ್ರ ಸಿತಾತಿರಕ್ತಹರಿತ ವ್ಯಾಪೀತ ಚಿತ್ರಾಸಿತಾ । ವಹ್ನ್ಯಂಬ್ವಗ್ನಿಜ ಕೇಶವೇಂದ್ರಶಚಿಕಾಃ ಸೂರ್ಯಾದಿನಾಥಾಃ ಕ್ರಮಾತ್ ।। ಪ್ರಾಗಾದ್ಯಾರವಿ ಶುಕ್ರಲೋಹಿತತಮಃ ಸೌರೇಂದು ವಿತ್ಸೂರಯಃ।। ಕ್ಷೀಣೇಂದ್ವರ್ಕ ಮಹೀಸುತಾರ್ಕತನಯಾಃ ಪಾಪಾಃ ಬುಧಸ್ತೈರ್ಯುತಃ ।।೫।।

ಅವತಾರಿಕೆ ।। ಸೂರ್ಯಾದಿ ಗ್ರಹಗಳಿಗೆ ತಾಮ್ರಾದಿ ವರ್ಣಗಳನ್ನೂ, ಧಾತುಗಳನ್ನೂ, ದೇವತೆಗಳನ್ನೂ, ಪೂರ್ವಾದಿ ದಿಕ್ಕುಗಳನ್ನೂ, ಶುಭ ಪಾಪಗ್ರಹಗಳನ್ನೂ ಸಹ ಹೇಳುತ್ತಾನೆ. ತಾಮ್ರ-ತಾಮ್ರವರ್ಣಕ್ಕೆ ಸೂರ್ಯನು, ಸಿತಃ- ಶ್ವೇತವರ್ಣಕ್ಕೆ ಚಂದ್ರನು, ಅತಿರಕ್ತಃ-ಅತ್ಯಂತ ರಕ್ತವರ್ಣ ಕುಜನು, ಹರಿತ-ಹಸರು ಪಚ್ಚೆ ವರ್ಣವುಳ್ಳವನು ಬುಧನು, ವ್ಯಾಪೀತ-ಹಳದೀ ಛಾಯಾವರ್ಣ ಬೃಹಸ್ಪತಿಯು, ಚಿತ್ರಃ-ನಾನಾವರ್ಣ ಉಳ್ಳವನು ಶುಕ್ರನು, ಅಸಿತ-ಕೃಷ್ಣವರ್ಣದವನು ಶನಿ. ಈ ಪ್ರಕಾರ ಸೂರ್ಯಾದಿ ಗ್ರಹಗಳು ವಿಶೇಷ ವರ್ಣವುಳ್ಳವರು. ವಹ್ನ್ಯಂಬ್ವಗ್ನಿಜ ಕೇಶವೇಂದ್ರ ಶಚಿಕಾಃ ।। ವಹ್ನಿಃ-ಅಗ್ನಿ ಸೂರ್ಯನಿಗೆ, ಅಂಬು-ಉದಕ ಚಂದ್ರನಿಗೆ, ಅಗ್ನಿಜ-ಕುಮಾರಸ್ವಾಮಿ ಅಂಗಾರಕನಿಗೆ, ಕೇಶವ-ವಿಷ್ಣು ಬುಧನಿಗೆ, ಇಂದ್ರಃ- ಇಂದ್ರನು ಬೃಹಸ್ಪತಿಗೆ, ಶಚೀ-ಶಚೀದೇವಿಯು ಶುಕ್ರನಿಗೆ, ಕಃ-ಬ್ರಹ್ಮನು ಶನಿಗೆ - ಈ ಪ್ರಕಾರ ಸೂರ್ಯಾದಿ ಗ್ರಹಗಳಿಗೆ ದೇವತೆಗಳು. ಸೂರ್ಯನಿಗೆ ಅಗ್ನಿದೇವತೆ- ಅಗ್ನಿಂದೂತಂ ವಣೀಮಹೆ ।। ಚಂದ್ರನಿಗೆ ಅಪ್ಸುಮೆ ಸಿಂಧುದ್ವೀಪೋ ಅಪೊಗಾಯತ್ರೀ।। ಅಂಗಾರಕನಿಗೆ-ಅಗ್ನಿಜಕುಮಾರಂ ಮಾತಾ ।। ಬುಧನಿಗೆ-ದದಂ ವಿಷ್ಣುರ್ವಿಚಕ್ರಮೆ ।। ಬೃಹಸ್ಪತಿಗೆ-ಇಂದ್ರಶ್ರೇಷ್ಠಾಣಿ ।। ಶುಕ್ರನಿಗೆ - ಇಂದ್ರಾಣೀ ಮಾಶುಗಾರಿಷು ।। ಶನಿಗೆ-ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಃ । ಪ್ರಜಾಪತೇಃ।। ಈ ದೇವತಾ ಪ್ರಯೋಜನವೇನೆಂದರೆ-ನವಗ್ರಹ ಪೂಜಾಕಾಲದಲ್ಲಿ ಗ್ರಹೋಕ್ತ ದೇವತಾರಾಧನೆ ಗೋಸ್ಕರ ಉಪಯೋಗವಾಗಿರುವುದು ಮತ್ತು ಲಗ್ನರಾಶಿಯಿಂದ ೫ ನೇ ಸ್ಥಾನದಲ್ಲಿದ್ದ ಗ್ರಹದ ದೇವತಾ ಪೂಜೆಯು ಮತ್ತು ಆ ದೇವರಲ್ಲಿ ಭಕ್ತಿಯೂ ಇರುವುದೆಂದೂ ಮುಂದೆ ಹೇಳಲ್ಪಡುತ್ತೆ. ।।ಶ್ಲೋಕ।। ತಾಮ್ರಸಿತಾತಿರಕ್ತ ಹರಿತವ್ಯಾಪೀತ ವಿಚಿತ್ರಾಸಿತಾ

ಇನಾದೀನಾಂ ॥ ಪಾವಕ ಜುಲಗುಹ ಕೇಶವಶಕ್ರಶುಚೀವೇಧಸಃ ಪತಯಃ ॥೩॥ ಪೂರ್ವಾದಿ ಗ್ರಹದೇವಾಂಸ್ತನ್ಮಂತ್ರೈಸ್ಸಮಭಿಪೂಜ್ಯತಾಮಾಶಾಂ ॥ ಕನಕಜವಾಹ ನಾದೀನ್ ಪ್ರಾಪ್ನೋತಿ ನೃಪೋರಿತಶ್ಶೀಘ್ರಂ॥೪॥ ಎಂದು ಸಾರಾವಳಿಯಲ್ಲಿ ಹೇಳಿರುತ್ತೆ. ರವಿಶುಕ್ರಲೋಹಿತ ತಮಸ್ಸೌರೀಂದುವಿಟ್ಸೂರಯಃ ರವ್ಯಾದಿ ಗ್ರಹಗಳು ಕ್ರಮವಾಗಿ ಪ್ರಾಗಾದ್ಯಾಃ-ಪೂರ್ವಾದಿ ದಿಕ್ಕಿಗೆ ಅಧಿಪತಿಗಳಾಗಿ ದಿಶಾಧಿಪತಿ ಗಳಾಗುವರು. ರವಿಃ-ರವಿ ಪೂರ್ವದಿಕ್ಕಿಗೆ ಅಂದರೆ ಇಂದ್ರದಿಕ್ಕಿಗೆ, ಶುಕ್ರಃ-ಶುಕ್ರನು ಅಗ್ನಿದಿಕ್ಕಿಗೆ, ಲೋಹಿತಃ-ಅಂಗಾರಕನು ಯಮ ಅಥವಾ ದಕ್ಷಿಣದಿಕ್ಕಿಗೆ, ತಮಃ-ರಾಹುವು ನೈಋತ್ಯದಿಕ್ಕಿಗೆ, ಸೌರಿಃ-ಶನಿಯು ಪಶ್ಚಿಮ ಅಥವಾ ವರುಣ ದಿಕ್ಕಿಗೆ, ಇಂದುಃ- ಚಂದ್ರನು ವಾಯುವ್ಯದಿಕ್ಕಿಗೆ, ವಿಟ್-ಬುಧನು ಉತ್ತರ ಅಥವಾ ಕುಬೇರ ದಿಕ್ಕಿಗೆ, ಸೂರಿಃ-ಬೃಹಸ್ಪತಿ ಈಶಾನ್ಯ ದಿಕ್ಕಿಗೆ ಕ್ರಮಾಗಿ ಅಧಿಪತಿ ಗಳಾಗುವರು. ಇದಕ್ಕೆ ಪ್ರಯೋಜನವೇನೆಂದರೆ-ಕೇಂದ್ರದಲ್ಲಿ ಈ ಗ್ರಹಗಳು ಇದ್ದರೆ ಅವರುಗಳಲ್ಲಿ ಬಲಿಷ್ಠರು ಯಾರೋ ಅವರಿಗೆ ಅಧಿಕಾರ ಉಂಟಾಗಿರುವ ದಿಕ್ಕಿನಲ್ಲಿ ಜನ್ಮವಾದ ಮನೆಯಲ್ಲಿ ಪ್ರಸೂತಸ್ಥಾನವೆಂದು ಮತ್ತು ಸೂತಿಕಾಗೃಹದ್ವಾರ ನಿರ್ಣಯ ಮಾಡತಕ್ಕದ್ದು. ಮತ್ತು ಚೋರಾದಿ ಪ್ರಶ್ನೆಗಳಲ್ಲು, ಸಮ-ಸಮ ಪ್ರಶ್ನೆಗಳಲ್ಲು ಉಪಯೋಗವಾಗಿರುವುದು.

## ॥ಅಥ ಗ್ರಹಾಣಾಂ ಶುಭಪಾಪತ್ವಮಾಹ॥

ಕ್ಷೀಣೇಂದ್ವರ್ಕ ಮಹೀಸುತಾರ್ಕ ತನಯಾಃ॥ ಕ್ಷೀಣೇಂದು-ಕ್ಷೀಣ ಚಂದ್ರನು, ಅರ್ಕ-ಸೂರ್ಯನು, ಮಹೀಸುತಃ-ಅಂಗಾರಕನು, ಅರ್ಕತನಯಾಃ- ಶನಿಯು, ಪಾಪಾ-ಪಾಪಗ್ರಹಗಳು, ತೈಃ-ಅ ಪಾಪಗ್ರಹಗಳೊಂದಿಗೆ, ಯತಃ - ಕೂಡಿದ, ಬುಧಃ- ಬುಧನು, ಅಂದರೆ ಪಾಪಗ್ರಹಯುತ ಬುಧನು ಪಾಪಗ್ರಹವಾಗುತ್ತಾನೆ. ಶುದ್ಧ, ಬುಧ, ಶುಕ್ರ, ಗುರು, ಪೂರ್ಣಚಂದ್ರ ಇವರು ಶುಭಗ್ರಹಗಳು. ಚಂದ್ರನಿಗೆ ಶುಭ ಪಾಪತ್ವದಲ್ಲಿ ವಿಶೇಷವೇನೆಂದರೆ-ಶುಕ್ಲಪಕ್ಷದ ಪ್ರತಿಪದ ಮೊದಲುಗೊಂಡು ಹತ್ತು ದಿವಸ ಮಧ್ಯಬಲವುಳ್ಳವನು, ಅನಂತರ ಹತ್ತು ದಿನ ಪೂರ್ಣ ಬಲವುಳ್ಳವನು, ಅನಂತರ ೧೦ ದಿವಸ ದುರ್ಬಲವುಳ್ಳವನು, ಇದು ಒಂದು ಪಕ್ಷ. ಆದರೆ ಮಧ್ಯಬಲ, ಪೂರ್ಣಬಲ, ಅಲ್ಪಬಲ ಈ ಮೂರು ಕಾಲಗಳಲ್ಲಿಯೂ ಶುಭಗ್ರಹ ವೀಕ್ಷಿತನಾದರೆ ಶುಭನಾಗುವನು. ॥ ಗ್ರಂಥಾಂತರೇವೇಂಕಟೇಶಃ ॥ಶ್ಲೋಕ॥ ಅಷ್ಟಮ್ಯೋರುಭಯೋಶ್ಚ ಮಧ್ಯಮಗತಃ ಶುಕ್ಲಾನ್ಯಯೊರ್ವ್ಯತ್ಯಯೇಪೂರ್ಣಃ ಕ್ಷೀಣ ಇತಿ ಕ್ರಮಾಚ್ಛಶಧರಃ ಪೂರ್ಣಶ್ಶುಭೋಮಂಗಳೇ । ಕೃಷ್ಣಾದೌದಿನಪಂಚಕಂ ಶುಭಕರಂ

ತನ್ಮಧ್ಯಮಂ ಮಧ್ಯಂ ತಸ್ಯಾಂತ್ಯಂ ತ್ವಧಮಾಭಿಧಂ ಶಶಿವಶಾಚ್ಛುಕ್ಲೇತು ತದ್ವ್ಯತ್ಯಯಃ ॥೫॥ ಶುಕ್ಲಪಕ್ಷದ ಅಷ್ಟಮಿ ಮೊದಲುಗೊಂಡು ಕೃಷ್ಣಪಕ್ಷದ ಅಷ್ಟಮೀವರೆಗೆ ೧೫ ದಿವಸ ಶುಭಕರನು, ಕೃಷ್ಣಪಕ್ಷಾದಿ ಅಷ್ಟಮೀ ಮೊದಲುಗೊಂಡು ಶುಕ್ಲಪಕ್ಷದ ಅಷ್ಟಮೀವರೆಗೆ ಅಶುಭಕರನೆಂದು ಒಂದು ಮತ ॥ ಇನ್ನೊಂದು ಸರ್ವ ಸಮ್ಮತವಾದ ಮತವೇನೆಂದರೆ:- ಕೃಷ್ಣಪಕ್ಷದ ಪ್ರತಿಪದ ಮೊದಲುಗೊಂಡು ೫ ದಿವಸ ಶುಭನು, ಕೃಷ್ಣ ಷಷ್ಠಿಯಿಂದ ದಶಮೀವರಿಗೆ ೫ ದಿವಸ ಮಧ್ಯಚಂದ್ರ, ಕೃಷ್ಣ ೧೧ ಏಕಾದಶಿಯಿಂದ ಅಮಾವಾಸ್ಯೆವರೆಗೆ ಮತ್ತು ಶುಕ್ಲ ಪ್ರತಿಪತ್ತು ಮೊದಲು ಗೊಂಡು ಶುಕ್ಲ ಪಂಚಮೀವರೆಗೆ ಕ್ಷೀಣಚಂದ್ರ ಅಧಮನು, ಶುಕ್ಲ ಷಷ್ಠಿ (೬) ಯಿಂದ ಶುಕ್ಲ ದಶಮೀವರೆಗೆ ಶುಕ್ಲ ಮಧ್ಯ ಚಂದ್ರನು, ಶುಕ್ಲ ಏಕಾದಶಿಯಿಂದ ಪೌರ್ಣಮೀವರೆಗೆ ಪೂರ್ಣಚಂದ್ರ ಶುಭನು. ಈ ಚಂದ್ರನ ಕ್ಷೀಣತ್ವ ಪೂರ್ಣತ್ವದ ವಿಷಯವಾಗಿ ಯವನಾಚಾರ್ಯರ ಸಮ್ಮತಿ ॥ ಮಾಸೇತುಶುಕ್ಲಪ್ರತಿಪತ್ಪ್ರವೃತ್ತೇಃ ಪಕ್ಷೇ ಶಶೀ ಮಧ್ಯ ಬಲೋದಶಾಹೆ ॥ ಶ್ರೇಷ್ಠೋದ್ವಿತೀಯೇಲ್ಪ ಬಲಸ್ತೃತೀಯೇ ಸೌಮ್ಯೈಶ್ಚದೃಷ್ಟೋ ಬಲವಾನ್ಸದೈವ ॥೬॥ ಶುಕ್ಲಪಕ್ಷದ ಪ್ರತಿಪದ ಮೊದಲುಗೊಂಡು ಶುಕ್ಲ ದಶಮೀವರೆಗೆ ಮಧ್ಯಬಲ ಚಂದ್ರನು, ಶುಕ್ಲ ಏಕಾದಶಿಯಿಂದ ಕೃಷ್ಣ ಪಂಚಮೀವರೆಗೆ ಪೂರ್ಣ ಚಂದ್ರನು ಶುಭನು, ಕೃಷ್ಣ ಷಷ್ಠೀಯಿಂದ ಅಮಾವಾಸ್ಯೆವರೆಗೆ ಕ್ಷೀಣಚಂದ್ರನು ದುರ್ಬಲನು ಎಂದುಕ್ತವಾಗಿರುತ್ತೆ. ಈ ವರಾಹಮಿಹಿರಭಟ್ಟಾಚಾರ್ಯನು ಯವನ ಮತವನ್ನು ಅನೇಕ ಸಂದರ್ಭಗಳಲ್ಲಿ ಅಂಗೀಕರಿಸಿರುತ್ತಾನೆ. ಆದ್ದರಿಂದ ಯವನ ಮತವನ್ನೇ ಅಂಗೀಕರಿಸುವುದು ಪಂಡಿತ ಪರಿಗ್ರಾಹ್ಯವಾಗಿರುತ್ತೆ.

ಈ ಶುಭ ಪಾಪಗ್ರಹಗಳ ಪ್ರಯೋಜನವೇನೆಂದರೆ :- ಶುಭಗ್ರಹಗಳು ಬಲಿಷ್ಠರಾಗಿದ್ದರೆ ಶುಭಸ್ವಭಾವವಾದ ಸದ್ವೃತ್ತಿಯುಳ್ಳವರಾಗುವರು. ಪಾಪಗ್ರಹಗಳು ಬಲಿಷ್ಠರಾಗಿದ್ದರೆ ಜಾತಕರು ಪಾಪಾತ್ಮಕರಾಗುವರು. ಶುಭಗ್ರಹಗಳು ಪಾಪಗ್ರಹಗಳು ಬಲಿಷ್ಠರಾಗಿದ್ದರೆ ಮಿಶ್ರಸ್ವಭಾವವುಳ್ಳವರಾಗುವರು.

## ॥ ಅಥ ಗ್ರಹಾಣಾಂ ಸ್ತ್ರೀ ಪುನ್ನಪುಂಸಕಾದೀನಾಹ ॥

ಮೂಲ॥ ಬುಧಸೂರ್ಯಸುತೌ ನಪುಂಸಕಾಖ್ಯೌ ಶಶಿಶುಕ್ರೌ ಯುವತೀನರಾಶ ಶೇಷಾಃ ॥ ಶಿಖಿಭೂಖಪಯೋ ಮರುದ್ಗಣಾನಾಂ ವಶಿನೋ ಭೂಮಿ ಸುತಾದಯಃ ಕ್ರಮೇಣ ॥೬॥

ಟೀಕು॥ ಗ್ರಹಗಳಿಗೆ ಪುಂಸ್ತ್ರೀ ನಪುಂಸಕ ಸಂಜ್ಞೆಗಳು, ಪಂಚ ಭೂತಾದಿಪತ್ಯವೂ ಸಹ ಹೇಳಲ್ಪಡುತ್ತವೆ. ಬುಧ ಸೂರ್ಯಸುತೌ-ಬುಧ ಶನಿಗಳು, ನಪುಂಸಕಾಖ್ಯೌ-ನಪುಂಸಕಾಭಿಧಾನವುಳ್ಳವರು, ಶಶಿಶುಕ್ರೌ-ಶಶಿ-ಚಂದ್ರನೂ, ಶುಕ್ರೌ-ಶುಕ್ರನೂ, ಯುವತೀ-ಸ್ತ್ರೀಗ್ರಹಗಳು, ತತ್ - ಈ ಹೇಳಲ್ಪಟ್ಟ ಬುಧ ಶನಿ ಚಂದ್ರ ಶುಕ್ರ ಈ ನಾಲ್ಕು ಗ್ರಹಗಳ, ಶೇಷಾಃ-ಉಳಿದವರು, ಅಂದರೆ ಗುರು, ಸೂರ್ಯ, ಅಂಗಾರಕರು ಇವರು, ನರಾಃ-ಪುಂ ಗ್ರಹಗಳು, ಇದಕ್ಕೆ ಪ್ರಯೋಜನವೇನೆಂದರೆ-ಜನ್ಮ ಕಾಲದಲ್ಲಿ ಬಲವಂತರಾಗಿರುವ ಗ್ರಹಗಳ ಸ್ವಭಾವ ಜಾತಕನಿಗೆ ಉಂಟಾಗುವುದು. ಚೋರಪ್ರಶ್ನೆಯಲ್ಲಿ ಚೋರನನ್ನು ತಿಳಿಯುವುದಕ್ಕೆ ಉಪಯೋಗವಾಗುತ್ತೆ.

## ॥ ಅಥ ಪಂಚಭೂತಾಧಿಪತ್ಯಮಾಹ ॥

ಶಿಖಿಭೂಖಪಯೋ ಮರುದ್ಗಣಾನಾಂ-ಅಗ್ನ್ಯಾದಿ ಭೂತಗಳಿಗೆ, ಕ್ರಮೇಣ ಕ್ರಮವಾಗಿ, ಭೂಮಿಸುತಾದಯಃ-ಅಂಗಾರಕನೆ ಮೊದಲಾದ (ಅಂದರೆ ಅಂಗಾರಕ, ಬುಧ, ಗುರು, ಶುಕ್ರ, ಶನಿ ಈ ೫ ಗ್ರಹಗಳೂ), ಶಿಖಿ-ಅಗ್ನಿ, ಭೂ-ಭೂಮಿ, (ಪೃಥ್ವೀ), ಖ-ಆಕಾಶ, ಪಯಃ-ಜಲ, ಮರುತ್-ವಾಯು ಈ ಪ್ರಕಾರವಾಗಿ ಅಧಿಪತಿಗಳಾಗುವರು; ಮತ್ತು ಪೂರ್ವದಲ್ಲಿಯೇ ಸೂರ್ಯನಿಗೆ ಅಗ್ನಿತತ್ವ, ಚಂದ್ರನಿಗೆ ಜಲತತ್ವವೆಂದು ಹೇಳಲ್ಪಟ್ಟಿರುವುದರಿಂದ, ಇಲ್ಲಿ ಜ್ಞಾಪಕಕ್ಕಾಗಿ ಉದಹರಿಸಿರುತ್ತೆ. ಅಂದರೆ ಸೂರ್ಯನಿಗೆ ಅಗ್ನಿ, ಚಂದ್ರನಿಗೆ ಜಲ, ಕುಜನಿಗೆ ಅಗ್ನಿ, ಬುಧನಿಗೆ ಪೃಥ್ವೀ, ಬೃಹಸ್ಪತಿಗೆ ಆಕಾಶ, ಶುಕ್ರನಿಗೆ ಜಲ, ಶನಿಗೆ ವಾಯು ಈ ಪ್ರಕಾರ ಅಧಿಪತಿಗಳಾಗುವರು. ಇದರ ಪ್ರಯೋಜನವೇನೆಂದರೆ - ಮುಂದೆ ಹೇಳಲ್ಪಡುವ ದಶಾ ಪ್ರಕರಣದಲ್ಲಿ "ಛಾಯಾಂಮಹಾಭೂತ ಕೃತಾಂಚಸರ್ವೇಭಿವ್ಯಂಜಯಂತಿ ಸ್ವದಶಾಮವಾಪ್ಯ" ಎಂದು ಹೇಳಿರುವುದರಿಂದ ಆ ಫಲ ಪ್ರಯೋಜನ ತಿಳಿದು ಕೊಳ್ಳುವುದಕ್ಕೆ ಉಪಯೋಗವಾಗಿರುತ್ತೆ. ಇದರಲ್ಲಿ ತಿಳಿಯತಕ್ಕ ವಿಶೇಷವೇನೆಂದರೆ- "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ-ಸಂಭೂತಃ" ॥ ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃಪೃಥಿವೀ ॥ ಇತಿ ತೈತ್ತರೀಯಶ್ರುತೇಃ ॥ ಎಂದು ತೈತ್ತರೀಯೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತೆ. ಪರಬ್ರಹ್ಮನಿಂದ ಆದಿಯಲ್ಲಿ ಆಕಾಶ ಉತ್ಪತ್ತಿ ಆಯಿತು ; ಆ ಆಕಾಶದಿಂದ ವಾಯು ಉತ್ಪತ್ತಿ ಆಯಿತು; ಆ ವಾಯುವಿನಿಂದ ಅಗ್ನಿ ಉತ್ಪತ್ತಿ ಆಯಿತು; ಆ ಅಗ್ನಿಯಿಂದ ಜಲ ಉತ್ಪತ್ತಿ ಆಯಿತು; ಆ ಜಲದಿಂದ ಪೃಥ್ವೀ ಉತ್ಪತ್ತಿ ಆಯಿತು ; ಇಂಥಾ ಪ್ರಪಂಚ ಸೃಷ್ಟಿಯ ಅಧಿಕಾರವು ನವಗ್ರಹಗಳಲ್ಲಿ ರಾಹುಕೇತುಗಳು ಬಿಟ್ಟು,

ಸೂರ್ಯಾದಿಶನ್ಯಂತವಾಗಿ ಸಪ್ತಗ್ರಹಗಳಿಗುಂಟಾಗಿರುತ್ತೆ. ಆದ್ದರಿಂದ ಪ್ರಪಂಚದಲ್ಲಿ ಸಮಸ್ತವೂ ಪಂಚಭೂತಮಯವಾಗಿರುವುದರಿಂದ, ದೇಹಧಾರಿಗಳಿಗೆ ಪಂಚಭೂತಮಯವಾದ ಶರೀರವಾಗಿರುವುದರಿಂದ, ಸೂರ್ಯಾದಿ ಸಪ್ತಗ್ರಹಗಳಿಗೂ ಪಂಚಭೂತಾಧಿಪತ್ಯವಿರುವುದರಿಂದ, ನವಗ್ರಹಗಳ ಸಂಚಾರದಿಂದ ಪ್ರಾಣಿಗಳಿಗೆ ಕಷ್ಟಸುಖಗಳುಂಟಾಗುತ್ತವೆ. ಈ ಪಂಚಭೂತಾಧಿಕಾರವಿರುವುದರಿಂದ ಸೂರ್ಯಾದಿ ಗ್ರಹಗಳು ಲೋಕ ಪೂಜ್ಯರಾಗಿರುವರು. ಈ ವಿಷಯವನ್ನು ಬುದ್ಧಿಶಾಲಿಗಳಾದವರು ಸಾತ್ವಿಕ ಸ್ವಭಾವದಿಂದ ಯೋಚಿಸಿ ನೋಡತಕ್ಕದ್ದು ಪಂಡಿತ ಪರಿಗ್ರಾಹ್ಯವಾಗಿದೆ.

ಮೂಲ|| ವಿಪ್ರಾದಿತಶ್ಶುಕ್ರ ಗುರೂಕುಜಾರ್ಕೌ ಶಶೀಬುಧಶ್ಶೇತ್ಯಸಿತೋಂತ್ಯ ಜಾತಿಃ| ಚಂದ್ರಾರ್ಕಜೀವಜ್ಞಸಿತೌ ಕುಜಾರ್ಕಿಯಥಾಕ್ರಮಂ ಸತ್ವ ರಜಸ್ತಮಾಂಸಿ ||೭||

ಟೀಕು|| ಗ್ರಹಗಳಿಗೆ ಬ್ರಾಹ್ಮಣಾದಿ ವರ್ಣಗಳನ್ನೂ, ಸತ್ವರಜಸ್ತಮೋಗುಣಗಳನ್ನೂ ಹೇಳುತ್ತಾನೆ. ವಿಪ್ರಾದಿತಃ - ಬ್ರಾಹ್ಮಣವರ್ಣ ಮೊದಲುಗೊಂಡು ನಾಲ್ಕು ವರ್ಣಗಳಿಗೂ ಅಧಿಪತಿಗಳಾಗುವರು, ಶುಕ್ರ ಗುರೂ-ಶುಕ್ರ ಬೃಹಸ್ಪತಿಗಳೂ ಬ್ರಾಹ್ಮಣವರ್ಣ, ಕುಜಾರ್ಕೌ - ಕುಜರವಿಗಳು ಕ್ಷತ್ರಿಯರು, ಶಶೀ-ಚಂದ್ರನು ವೈಶ್ಯವರ್ಣ, ಬುಧಶ್ಶೇತ್-ಬುಧನು ಶೂದ್ರವರ್ಣ, ಅಸಿತಃ-ಶನಿಯು, ಅಂತ್ಯಜಾತಿಃ-ಅಂತ್ಯಜಾತಿಯವನು (ಇಲ್ಲಿ ತಿಳಿಯತಕ್ಕ ಅಂಶವೇನೆಂದರೆ - ಸೂರ್ಯಾದಿ ಗ್ರಹಗಳಿಗೆ ವರ್ಣವೆಂದರೆ ಆ ಗ್ರಹಗಳು ಆ ಜಾತಿ ಅಥವಾ ವರ್ಣದವರೆಂದು ತಿಳಿಯಕೂಡದು. ಅಂದರೆ ಆ ವರ್ಣಾಭಿಮಾನವುಳ್ಳವರೆಂದು ಜ್ಞಾಪಕದಲ್ಲಿಡಬೇಕು). ಈ ವರ್ಣ ವಿಷಯದಲ್ಲಿ ಉದಾಹರಣೆ :- ಶ್ಲೋಕ|| ವಿಪ್ರೌಭವೇ ತಾಂ ಗುರುದಾನವೇಜ್ಯೌದಿನೇಶ ಭೌಮೌನರಪಾಲಿಕಾಖ್ಯೌ || ಸೋಮೋಶ್ಚ-ವಿಡ್ವೈಶ್ಯಕುಲಪ್ರಸೂತಃ ದಿನೇಶಪುತ್ರಸ್ತು ಚತುರ್ಥಗೋತ್ರಃ ||೭|| ಇತಿ ವೇಂಕಟೇಶಃ || ಗುರು ಶುಕ್ರರು ಬ್ರಾಹ್ಮಣವರ್ಣ, ಕುಜ ಸೂರ್ಯರು ಕ್ಷತ್ರಿಯವರ್ಣ, ಚಂದ್ರ ಬುಧರು ವೈಶ್ಯವರ್ಣ, ಶನಿಯು ಶೂದ್ರವರ್ಣ ಎಂದು ಪರಾಶರಃ|| ಶ್ಲೋಕ ಗುರುಶುಕ್ರೌ ವಿಪ್ರವರ್ಣೌ ಕುಜಾರ್ಕೌ ಕ್ಷತ್ರಿಯೌದ್ವಿಜ|| ಶಶಿಸೌಮ್ಯೌ ವೈಶ್ಯವರ್ಣೌ ಶನಿಶೂದ್ರೋದ್ವಿಜೋತ್ತಮ ||೮|| ಎಂದು ಪರಾಶರರು ಬುಧನಿಗೆ ವೈಶ್ಯವರ್ಣ ಹೇಳಿರುತ್ತಾರೆ. ವೇಂಕಟೇಶಪಂಡಿತರೂ ಬುಧನಿಗೆ ವೈಶ್ಯವರ್ಣವನ್ನು ಹೇಳಿರುತ್ತಾರೆ. ಪರಾಶರರು ಹೇಳಿದ ಅಭಿಪ್ರಾಯಕ್ಕೆ ವಿರೋಧವಾಗಿ ವರಾಹಮಿಹಿರಭಟ್ಟಾಚಾರ್ಯರು ಬುಧನಿಗೆ ಶೂದ್ರವರ್ಣ ಹೇಳಿರುವುದಕ್ಕೆ ಕಾರಣವೇನೋ ತಿಳಿಯುವುದು ಅಸಾಧ್ಯವಾಗಿರುತ್ತೆ. ಅಷ್ಟಾದಶಸಂಹಿತಾಕರ್ತರಲ್ಲಿ

ಪರಾಶರರು ಸೇರಿದವರು ಮತ್ತು ದೇವರ್ಷಿ ಬ್ರಹ್ಮರ್ಷಿಗಳ ವಚನವೇ ಗ್ರಾಹ್ಯವಾದದ್ದು. ಅನುಭವದಲ್ಲಿ ಬುಧನಿಗೆ ವೈಶ್ಯವರ್ಣವೇ ದೃಷ್ಟಾಂತವಾಗಿರುವುದರಿಂದ ಬುಧನಿಗೆ ವೈಶ್ಯವರ್ಣವೇ ನಿಶ್ಚಿತವಾಯಿತು.

## ।। ಗ್ರಹಾಣಾಂ ಸತ್ವರಜಸ್ತಮೋಗುಣಾನ್ಯಾಹ ।।

ಚಂದ್ರಾರ್ಕಜೀವಾಃ - ಚಂದ್ರರವಿ ಗುರುಗಳು, ಜ್ಞಸಿತೌ-ಬುಧ ಶುಕ್ರರು, ಕುಜಾರ್ಕಿ-ಕುಜಶನಿಗಳು, ಯಥಾಕ್ರಮಂ-ಕ್ರಮವಾಗಿ, ಸತ್ವರಜಸ್ತಮಾಂಸಿ-ಸತ್ವರಜಸ್ತಮೋಗುಣಾಧಿಪತಿಗಳಾಗುವರು, ಅದು ಹೇಗೆಂದರೆಃ- ಚಂದ್ರ, ರವಿ, ಗುರು ಸತ್ವಗುಣವುಳ್ಳವರು ।। ಪರಾಶರಃ ।। ಶ್ಲೋಕ।। ಚಂದ್ರಾರ್ಯಮಾಜೀವ ಸೌಮ್ಯಾ ಭೃಗ್ವಾರಶನಯೋರ್ದ್ವಿಜ ।। ಸತ್ವಂರಜಸ್ತಮ ಇತಿಸ್ವಭಾವೋಜ್ಞಾಯತೇಕ್ರಮಾತ್ ।।೯।। ಇದಕ್ಕೆ ಪ್ರಯೋಜನವೇನೆಂದರೆ:- ।।ಯವನೇಶ್ವರಃ।। ಸತ್ವಂ ತಮೋವಾತ್ರಿಂಶೇಯಸ್ಯ ಭಾಸ್ಕರಸ್ತಾದೃಕ್ ।। ಇತ್ಯಾದಿ ಪ್ರಯೋಜನವಿರುವುದು. ಮತ್ತು ಕೆಲವರು ಜಾತಕನಿಗೆ ಜನ್ಮಕಾಲದಲ್ಲಿ ಯಾವ ಗುಣವುಳ್ಳ ಗ್ರಹಗಳು ಬಲಿಷ್ಠರಾಗಿರುವರೋ ಆ ಗುಣ ಜಾತಕನಿಗೆ ಇರುವುದೆಂದು ಹೇಳುವರು. ಬಲವದ್ಭಿಸ್ತದ್ಗುಣೋಭವೇಜ್ಜಾತಃ ।। ಎಂದು ದೇವಕೀರ್ತಿ ಹೇಳಿರುವುದರಿಂದ, ಸತ್ವಾದಿಕಾಭಾಸ್ಕರಭೌಮಜೀವಾಃ ಭೃಗ್ವಾತ್ಮಜೋ ರಾಜಸಿಕಶ್ಶಿಶೀಚ ।। ಶನೈಶ್ಚರಸ್ತಾಮಸಿಕೋ ಬುಧಸ್ತು ಸಂಯೋಗತೋನ್ಯಾನ್ ಲಭತೇ ವಿಶೇಷಾ ।।೧೦।। ಎಂದು ಸತ್ಯಾಚಾರ್ಯರು ಹೇಳಿರುವರು. ಈ ಮತವನ್ನು ವರಾಹ ಮಿಹಿರಭಟ್ಟರು ಅಂಗೀಕರಿಸಲಿಲ್ಲ. ।।ಶ್ಲೋಕ।। ತಾಮಸಿಕೌ ಕುಜಸೌರೀ ರಾಜಸಿಕೌ ಭಾಗರ್ವವಶ್ಶಿಸುತಶ್ಚ ।।೧೧।। ಸತ್ವಾಧಿಕವುಳ್ಳ ಗ್ರಹಗಳು ಬಲಿಷ್ಠರಾಗಿದ್ದರೆ ಜಾತಕನು ಸತ್ವಗುಣವುಳ್ಳವನಾಗುವನು. ರಜೋಗುಣವುಳ್ಳ ಗ್ರಹಗಳು ಬಲಿಷ್ಠರಾಗಿದ್ದರೆ ರಜೋಗುಣವುಳ್ಳವನಾಗುವನು. ತಮೋಗುಣವುಳ್ಳ ಗ್ರಹಗಳು ಬಲಿಷ್ಠರಾಗಿದ್ದರೆ ತಮೋಗುಣವುಳ್ಳವನಾಗುವನು. ಮಿಶ್ರವಾಗಿದ್ದರೆ ಮಿಶ್ರಗುಣವುಳ್ಳವನಾಗುವನು. ಹಿಂದಿನ ಶ್ಲೋಕದಲ್ಲಿ ಸತ್ವಂಕುಜೋ ಎಂದು ಹೇಳಿರುತ್ತೆ. ಇಲ್ಲಿ ಕುಜನಿಗೆ ತಮೋಗುಣವೆಂದು ಹೇಳಲ್ಪಟ್ಟಿರುತ್ತೆ. ಸತ್ವಂ ಎಂಬುವ ಶಬ್ದಕ್ಕೆ ಶಕ್ತಿ - ಸಾಮರ್ಥ್ಯ, ಶೌರ್ಯ, ಪರಾಕ್ರಮ ಮೊದಲಾದ ಅರ್ಥವಾಗುತ್ತದೆ. ಆದರೆ ಸತ್ವ - ಅಂದರೆ ಸತ್ವಗುಣವೆಂದು ತಿಳಿಯಬೇಕು. ಗ್ರಂಥಾಂತರೇ ।।ಶ್ಲೋಕ।। ಸತ್ವಾದಿ ಗುಣಸ್ವರೂಪ।। ಯಸ್ಸಾತ್ವಿಕಸ್ತ್ಸದ ಯಾಸ್ಥಿರತ್ವಂ ಸತ್ವಾರ್ಜಿತಬ್ರಾಹ್ಮಣದೇವಭಕ್ತಿಃ।। ರಜೋಧಿಕಃ ಕಾವ್ಯಕಲಾವೃತ ಸ್ತ್ರೀಸಂಸಕ್ತಚಿತ್ತಃ

ಪುರಷೋತಿಶೂರಃ ॥ ತಮೋದಿಕೋಪಂಚಯಿತಾ ಪರಶಾಂ ಮೂರ್ಖೋಲಸಃ ಕ್ರೋಧಪರೋತಿನಿದ್ರಃ ॥೧೭॥ ಎಂದುಕ್ತವಾಗಿರುತ್ತೆ. ತಾತ್ಪರ್ಯ ॥ ಯಾರಿಗೆ ಸತ್ವಗುಣವಿರುತ್ತೋ ಆ ಪುರುಷನು ಭೂತದಯ ಪಶ್ಚಾತ್ತಾಪ ಉಳ್ಳವನು, ಸ್ಥಿರವಾದ ಬುದ್ಧಿಯುಳ್ಳವನು, ತನ್ನ ಸಂಪಾದನೆಯಿಂದ ದ್ರವ್ಯ ಕೂಡಿಡುವನು, ಬ್ರಾಹ್ಮಣರಲ್ಲೂ ದೇವರಲ್ಲಿಯೂ ಭಕ್ತಿಯುಳ್ಳವನು. ಯಾರಿಗೆ ರಜೋಗುಣವಿರುತ್ತೊ ಅವನು ಕಾವ್ಯಕಲಾ ಶಾಸ್ತ್ರಾದಿಗಳಲ್ಲಿ ಪ್ರೀತಿಯುಳ್ಳವನು, ಸ್ತ್ರೀಯರಲ್ಲಿ ಆಸಕ್ತ ಚಿತ್ತನು ಮತ್ತು ಅತಿಶೂರನು, ಕಾಮೋಪಭೋಗ ಕೇಳಿ ಕುಶಲನು, ಭೋಗಿಯೂ ಆಗುವನು, ಯಾರಿಗೆ ರಜೋಗುಣವಿರುತೋ ಅವನು ವಂಚಕನು, ಮೂರ್ಖ, ಅಸದ್ವ್ಯಯ ಮಾಡುವನು, ಆಲಸ್ಯ ಉಳ್ಳವನು, ಕ್ರೋಧವುಳ್ಳವನು, ಅತಿ ನಿದ್ರೆಯುಳ್ಳವನು, ಈ ಪ್ರಕಾರ ಲಕ್ಷಣ ಹೇಳಲ್ಪಟ್ಟಿರುವುದು. ಜನ್ಮಕಾಲ ಗ್ರಹಬಲ ವಿಶೇಷದಿಂದ ಆಯಾಯು ಗುಣವುಳ್ಳವನಾಗುತ್ತಾನೆ.

| ಗುರು | | | ಶನಿ |
|---|---|---|---|
| | | | |
| ಲ | | | ರವಿ |
| | ಚಂದ್ರ | | ಶುಕ್ರ ಬುಧ |

ಈ ಜಾತಕನಿಗೆ ಗುರು ಸ್ವಕ್ಷೇತ್ರದಲ್ಲಿ ಇದ್ದಾನೆ. ಗುರುವಿಗೆ ಸತ್ವಗುಣ ಈ ಶ್ಲೋಕದ ಪ್ರಕಾರ ಹೇಳಿರುತ್ತೆ. ಬುಧ ಉಚ್ಚರಾಶಿ ಯಲ್ಲಿರುವನು. ಬುಧನಿಗೆ ರಜೋಗುಣ. ರವಿಗೆ ಸತ್ವ ಗುಣ. ಕುಜನಿಗೆ ತಮೋಗುಣ. ಇಲ್ಲಿ ಸತ್ವಗುಣ ೨ ಗ್ರಹಕ್ಕೆ ಇದೆ. ರಜೋಗುಣ ಬುಧನಿಗೆ, ತಮೋಗುಣ ಕುಜನಿಗೆ ಇರುತ್ತೆ.

ಈ ಗ್ರಹಗಳು ನಾಲ್ಕು (ಗುರು, ರವಿ, ಬುಧ, ಕುಜ) ಸ್ವಕ್ಷೇತ್ರದಲ್ಲಿ ಇರುವುದರಿಂದ, ಸತ್ವಗುಣ ಅಧಿಕವಾಗಿರುವುದರಿಂದ ಜಾತಕನು ಸತ್ವಗುಣ ಪ್ರಧಾನ ಉಳ್ಳವನಾಗಿರುವನು ಇತ್ಯಾದಿ -

## ಅಥ ರವಿಚಂದ್ರ ಸ್ವರೂಪ ವಿಚಾರಃ

ಮೂಲ॥ ಮಧುಪಿಂಗಳದೃಕ್ ಚತುರಶ್ರತನುಃ ಪಿತ್ತಪ್ರಕೃತಿಸ್ಸವಿತಾಲ್ಪಕಚಃ॥
ತನುವೃತ್ತ ತನರ್ಬಹುವಾತಕಫಃ ಪ್ರಾಜ್ಞಶ್ಚ ಶಶಿಮೃದುವಾಕ್ ಶುಭದೃಕ್ ॥೮॥

ಟೀಕು॥ ಸೂರ್ಯಚಂದ್ರರ ಸ್ವರೂಪ ಹೇಳಲ್ಪಡುತ್ತೆ. ಸವಿತಾ-ಸೂರ್ಯನು, ಮಧುಪಿಂಗಳದೃಕ್-ಜೇನುತುಪ್ಪದ ವರ್ಣಸೇರಿದ ಪಿಂಗಳವರ್ಣವುಳ್ಳ ಕಣ್ಣುಳ್ಳವನು, ಚತುರಶ್ರತನುಃ - ಚತುಷ್ಕೋಣ ಶರೀರವುಳ್ಳವನು ಅಂದರೆ ಪ್ರಸಾರಿತ ಭುಜದ್ವಯ

ಪ್ರಮಾಣಸಮೋಚ್ಚ ಶರೀರವುಳ್ಳವನು, ಪಿತ್ತಪ್ರಕೃತಿಃ-ಪಿತ್ತಾಧಿಕ ಸ್ವಭಾವವುಳ್ಳವನು, ಅಲ್ಪಕಚಃ- ಅಲ್ಪವಾದ ತಲೆಗೂದಲುಳ್ಳವನು, ಕಚ_ಕೇಶಶ್ಶಿರೋರುಹ ಇತ್ಯಮರಃ ॥ ಈ ಗುಣವುಳ್ಳವನೆಂದುಕ್ತವಾಗಿರುತ್ತೆ. ॥ಕಿಂಚ॥ ॥ಪರಾಶರಃ॥ ಶ್ಲೋಕ ॥ ಮಧುಪಿಂಗಲದೃಕ್ಸೂರ್ಯಶ್ಚತುರಸ್ರಃ ಶುಚಿರ್ದ್ವಿಜ ॥ ॥ಪಿತ್ತಪ್ರಕೃತಿಕ್ರೋಧೀರ್ಮಾ ಪುಮಾನಲ್ಪಕಚೋದ್ವಿಜ ॥೧೩॥ ತಥಾಚ ॥ ॥ಸಾರಾವಳ್ಯಾಂ ॥ಶ್ಲೋಕ॥ ಅಲ್ಪಾಕಂಚಿತ ಮೂರ್ಧಜಃ ಪಟುಮತಿರ್ಮೂರ್ಖಿಸ್ಸುರೂಪಶ್ಚಲೋನಾತ್ಯುಚ್ಚೋ ಮಧುಪಿಂಗಳೋರ್ಧ್ವನಯನಶ್ಶೂರಃ ಪ್ರಚಂಡ ಸ್ಥಿರಃ ॥ ರಕ್ತಶ್ಯಾಮತನು- ರ್ನಿಗೂಢಚರಣಃ ಪಿತ್ತಾಸಾರೋಮಹಾರ್ ಗಂಭೀರಶ್ಚತುರಪ್ರತೋ ಪೃಥುಲಕಃ ಕಾಸೋದ್ಭವಸ್ಸೂರವಿಃ ॥೧೪॥ ಎಂದು ವಿಶೇಷಗುಣ ಹೇಳಿರುತ್ತೆ.

## ಚಂದ್ರಸ್ವರೂಪ ವಿಚಾರಃ

ಶಶೀ-ಚಂದ್ರನು, ತನುವೃತ್ತತನುಃ - ತನು-ಕೃಶವಾದ, ವೃತ್ತ-ದುಂಡಾದ, ತನುಃ-ಶರೀರವುಳ್ಳವನು, ಬಹುವಾತಕಫಃ - ಬಹು ವಾತ ಕಫ ಮಿಶ್ರವಾದ ಪ್ರಕೃತಿ ಯುಳ್ಳವನು, ಪ್ರಾಜ್ಞಶ್ಚ - ಒಳ್ಳೆಯ ತಿಳುವಳಿಕೆ ಉಳ್ಳವನು, ಮೃದುವಾಕ್ - ಮಧುರವಾಗಿ ಮಾತನಾಡುವವನು, ಶುಭದೃಕ್ - ಶುಭ್ರವಾದ ದೃಷ್ಟಿಯುಳ್ಳವನು. ಈ ವಿಷಯದಲ್ಲಿ ॥ಪರಾಶರಃ - ಶ್ಲೋಕ॥ ಬಹುವಾತಕಫಃ ಪ್ರಾಜ್ಞಶ್ಚಂದ್ರೋವೃತ್ತ ತನುರ್ದ್ವಿಜ ॥ ಶುಭದೃಕ್ *ಮೃದುವಾಕ್ಯಶ್ಚ ಚಂಚಲೋ ಮದನಾತುರಃ ॥೧೫॥ ತಥಾಚ ಸಾರಾವಳ್ಯಾಂ ॥ಶ್ಲೋಕ॥ ಸೌಮ್ಯಃಕಾಂತಿವಿಲೋಚನೋ ಮಧುರವಾಗ್ಗೌರಃ ಕೃಶಾಂಗೋಯುವಾ । ಪ್ರಾಜ್ಞಸ್ಸೂಕ್ಷ್ಮ ನಿಕುಂಚಿತೋಸಿತ ಕಚಸ್ಸೌಮ್ಯೋ ಮೃದುಸ್ಸಾತ್ವಿಕಃ ॥ ಚಾರುದ್ವಾರಕಫಾತ್ಮಕಃ ಪ್ರಿಯಸಖೋ ಕ್ಷಾರೋತಿ ಸಾರೋಘೃಣಿಃ। ವೃತ್ತಸ್ತ್ರೀಷುಯುತಶ್ಚ ಲೋತಿ ಸಭಗುಶ್ಶುಕ್ಲಾಂಬರಶ್ಚಂದ್ರಮಾಃ ॥೧೬॥ ಎಂದು ವಿಶೇಷ ಲಕ್ಷಣಗಳು ಹೇಳಲ್ಪಟ್ಟಿರುತ್ತೆ. ಈ ಗ್ರಂಥಕರ್ತನು ಪರಾಶರ ಮತ್ತು ಸಾರಾವಳಿಯಲ್ಲಿ ಹೇಳಿದ ಸೂರ್ಯ ಚಂದ್ರರ ಗುಣವನ್ನು ಹೇಳದೆ ಇದ್ದಾಗ್ಯೂ ಅನುಕ್ತಮ ನ್ಯತೋಗ್ರಾಹ್ಯಂ ಎಂಬುವ ನ್ಯಾಯದಂತೆ ಅನ್ಯ ಗ್ರಂಥೋದಾಹರಣದಿಂದ ತಿಳಿದುಕೊಳ್ಳತಕ್ಕದ್ದು ಅವಶ್ಯವಾಗಿರುವುದರಿಂದ ಇಲ್ಲಿ ಉದಹರಿಸುತ್ತೇನೆ. ಇತಿ ರವಿಚಂದ್ರ ಸ್ವರೂಪ ವಿಚಾರಃ.

---

* ಮಧುವಾಕ್ಯಶ್ಚ - ಪಾಠಾಂತರ

## ಅಥ ಅಂಗಾರಕ, ಬುಧ ಸ್ವರೂಪ ವಿಚಾರಃ

ಮೂಲ॥ ಕ್ರೂರದೃಕ್ತರುಣಮೂರ್ತಿರುದಾರಃ ಪೈತ್ತಿಕಸ್ಸುಚಪಲಃ ಕೃಶಮಧ್ಯಃ॥
ಶ್ಲಿಷ್ಟವಾಕ್ಸತತ ಹಾಸ್ಯರುಚಿರ್ಜ್ಞಃ ಪಿತ್ತಮಾರುತ ಕಫಪ್ರಕೃತಿಶ್ಚ ॥೯॥

ಟೀಕು॥ ಅಂಗಾರಕ ಬುಧಸ್ವರೂಪ ಹೇಳಲ್ಪಡುತ್ತೆ. ಅಂಗಾರಕನು ಕ್ರೂರದೃಕ್-ಕ್ರೂರದೃಷ್ಟಿ, ತರುಣಮೂರ್ತಿ - ಯೌವ್ವನಯುಕ್ತ ಶರೀರವುಳ್ಳವನು, ಉದಾರಃ-ದಾತೃತ್ವ ಗುಣವುಳ್ಳವನು, ಪೈತ್ತಿಕ-ಪಿತ್ತ ಪ್ರಕೃತಿಯುಳ್ಳವನು, ಸುಚಪಲಃ-ಒಳ್ಳೇ ಸ್ಥಿರವಿಲ್ಲದ ಚಾಪಲ್ಯವುಳ್ಳವನು, ತನು ಮಧ್ಯಃ-ಕೃಶಮಧ್ಯವಾದ ಶರೀರವುಳ್ಳವನು, ಏತಾದೃಶ ಗುಣಗಳು ಅಂಗಾರಕನಿಗುಂಟಾಗಿರುವದು. ॥ಕಿಂಚ॥ ಪರಾಶರಃ ॥ ಕ್ರೂರರಕ್ತಾರುಣೋಭೌಮಶ್ಚಪಲೋದಾರ ಮೂರ್ತಿಕಃ ॥ ಪಿತ್ತಪ್ರಕೃತಿಕಃ ಕ್ರೋಧೀಕೃಶಮಧ್ಯತನುರ್ದ್ವಿಜ ॥೧೭॥ ಎಲೈ ಮೈತ್ರೇಯನೇ ! ಅಂಗಾರಕನು ಈ ಮೇಲೆ ಹೇಳಲ್ಪಟ್ಟ ಗುಣವುಳ್ಳವನಾಗಿದ್ದಾನೆಂದು ಉಪದೇಶ ಮಾಡಿರುತ್ತಾರೆ. ಮತ್ತು ॥ ಸಾರಾವಳ್ಯಾಂ ॥ಶ್ಲೋಕ॥ ಹ್ರಸ್ವಃ ಪಿಂಗಳಲೋಚನೋ ದೃಢವಪುರ್ದೀಪ್ತಾಗ್ನಿ ಕಾಂತಿಶ್ಚಲೋ ಮಜ್ಜಾವಾನರುಣಾಂಬರಃ ಪಟುತರಶ್ಶೂರ ಶುಚಿಸ್ಪಷ್ಟವಾಕ್ ॥ ಹಿಂಕುಂಚಿತ ದೀಪ್ತಿಕಶ್ಚತರುಣಃ ಪಿತ್ತಾತ ಕಸ್ತಾ ಮಸಶ್ಚಂಡಸ್ಸಾಹಸಿಕೋ ವಿಭೂತಿಕುಶಲಸ್ಸಂರಕ್ತ ಗೌರಃ ಕುಜಃ ॥೧೮॥ ಎಂದು ವಿಶೇಷ ಲಕ್ಷಣಗಳು ಹೇಳಿರುತ್ತೆ.

## ಅಥ ಬುಧಸ್ವರೂಪ ವಿಚಾರಃ

ಜ್ಞ-ಬುಧನು, ಶ್ಲಿಷ್ಟವಾಕ್-ಗದ್ಗದಸ್ವರಯುಕ್ತವಾಗಿ ಮಾತನಾಡುವವನು, ಸತತ ಹಾಸ್ಯರುಚಿಃ-ಯಾವಾಗಲೂ ಹಾಸ್ಯರಸದಲ್ಲಿ ಅಭಿರುಚಿಯುಳ್ಳವನು, ಅಂದರೆ ಪರಿಹಾಸ್ಯ ಭಾಷಣಪ್ರಿಯನು, ಪಿತ್ತಮಾರುತ ಕಫಪ್ರಕೃತಿಃ- ಪಿತ್ತ, ವಾತ, ಶ್ಲೇಷ್ಮ ಸ್ವಭಾವವಾದ ಪ್ರಕೃತಿಯುಳ್ಳವನು, ಈ ವಿಷಯದಲ್ಲಿ ॥ಪರಾಶರಃ॥ ವಿಪ್ರಶ್ರೇಷ್ಠೋಕ್ಲಿಷ್ಟವಾಕ್ ಚಹ್ಯತಿಹಾಸ್ಯರುಚಿರ್ಬುಧಃ ॥ ಪಿತ್ತವಾನ್ಕಫವಾನ್ವಿಪ್ರ-ಮಾರುತ ಪ್ರಕೃತಿಸ್ತಥಾ ॥೧೯॥ ಪರಾಶರರು ಮೈತ್ರೇಯ ಋಷಿಗಳಿಗೆ ಉಪದೇಶಮಾಡಿರುವುದೇನೆಂದರೆ:- ಬುಧನು ಶ್ರೇಷ್ಠವಾದ ಶರೀರವುಳ್ಳವನು, ಗದ್ಗದವಾಕ್ಕುಳ್ಳವನು, ಅತಿ ಹಾಸ್ಯರಸಪ್ರಿಯನು, ವಾತಪಿತ್ತ ಕಫ ಪ್ರಕೃತಿಯುಳ್ಳವನು, ॥ತಥಾಚ॥ ಸಾರಾವಳ್ಯಾಂ ॥ಶ್ಲೋಕ॥ ಅರಕ್ತಾ ಯತಲೋಚನೋ ಮಧುರವ್ವಾಗ್ದೂರ್ವಾದಳ ಶ್ಯಾಮಲಃ ॥ ತತ್ವಾರೋತಿ ರಜೋಧಿಕಃ ಸ್ಫುಟವಚಃ ಪೀನಸ್ತ್ರಿದೋಷಾತ್ಮಕಃ ॥ ಹೃಷ್ಟೋಮಧ್ಯಮರೂಪವಾ್ಗ ಸುನಿಪುಣ್ಯೋ

ವೃತ್ತಶ್ಶರಶ್ಯಾಂತರ್ವಾ । ಸರ್ವಸ್ಯಾನುಕರೋತಿ ಮೇಷರಚನಃ ವಾಲಾಶವಾಸೀಬುಧಃ ॥೨೦॥ ಎಂದು ವಿಶೇಷ ಗುಣಗಳು ಹೇಳಲ್ಪಟ್ಟಿರುತ್ತವೆ.

## ಅಥ ಗುರು ಶುಕ್ರ ಸ್ವರೂಪ ವಿಚಾರಃ

ಮೂಲ॥ ಬೃಹತ್ತನುಃ ಪಿಂಗಳಮೂರ್ಧಜೇಕ್ಷಣೋ ಬೃಹಸ್ಪತಿಃ ಶ್ರೇಷ್ಠಮತಿಃ ಕಫಾತ್ಮಕಃ॥ ಭೃಗುಸ್ಸುಖೀಕಾಂತ ವಪುಸ್ಸುಲೋಚನಃ ಕಫಾನಿಲಾತ್ಮಾ ಸಿತ ವಕ್ರಮೂರ್ಧಜಃ ॥೧೦॥

ಟೀಕು॥ ಗುರುಶುಕ್ರ ಸ್ವರೂಪವನ್ನು ಹೇಳುತ್ತಾನೆ. ಬೃಹಸ್ಪತಿಃ-ಗುರುವು, ಬೃಹತ್ತನುಃ-ಸ್ಥೂಲವಾದ ಶರೀರವುಳ್ಳವನು, ಪಿಂಗಳಮೂರ್ಧಜೇಕ್ಷಣಃ- ಪಿಂಗಳವಾದ ತಲೆಗೂದಲುಗಳುಳ್ಳವನು ಮತ್ತು ಪಿಂಗಳನೇತ್ರಗಳುಳ್ಳವನು, ಶ್ರೇಷ್ಠಮತಿಃ- ಶ್ರೇಷ್ಠವಾದ ಧರ್ಮಬುದ್ಧಿಯುಳ್ಳವನು, ಕಫಾತ್ಮಕಃ - ಶ್ಲೇಷ್ಮಧಾತುವುಳ್ಳವನು, ಇದಕ್ಕೆ ಪರಾಶರ ಸಂಹಿತೆಯಲ್ಲಿ ॥ಶ್ಲೋಕ॥ ಬೃಹದ್ಗಾತ್ರೋ ಗುರುಶ್ಚೈವ ಪಿಂಗಳೋ ಮೂರ್ಧಜೇಕ್ಷಣಃ॥ ಕಫಪ್ರಕೃತಿಕೋಧೀಮಾ್ ಸರ್ವಶಾಸ್ತ್ರವಿಶಾರದಃ ॥೨೧॥ ಕಿಂಚ ॥ ಸಾರಾವಳ್ಯಾಂ ॥ ಈಷತ್ಪಿಂಗಳಲೋಚನಃ ಶೃತಿಧರಸ್ಸಿಂಹಾದಿ ಸಾಸಿಸ್ಥರಸ್ಯತ್ವಾಡ್ಯಶ್ಚ ವಿಶುದ್ಧ ಕಾಂಚನತನುಃ ಪೀನೋನ್ನ ತೋರುಸ್ಥಳಃ ॥ ಹೃಸ್ವೋಧರ್ಮಪರೋತಿನೀತಿ ನಿಪುಣೋ ಬುದ್ಧೋರ್ಧ್ವಜೂಟಿಃ ಕ್ಷಮಾವ್ಯಾಪೀತಾಂಬರಬೃತ್ ಕಫಾಧಿಕತನುರ್ಮೇಧಃ ಪ್ರಧಾನೋಗುರುಃ ॥೨೨॥ ಭೃಗು-ಶುಕ್ರನು, ಸುಖೀ-ನಿತ್ಯ ಸುಖಾಸಕ್ತನು, ಕಾಂತವಪುಃ- ಕಾಂತಿಯುಕ್ತವಾದ ಶರೀರವುಳ್ಳವನು, ಸುಲೋಚನಃ- ವಿಶಾಲನೇತ್ರ ಉಳ್ಳವನು, ಕಫಾನಿಲಾತ್ಮ-ಕಫವಾತ ಪ್ರಕೃತಿಯುಳ್ಳವನು, ಅಸಿತವಕ್ರಮೂರ್ಧಜಃ- ಕಪ್ಪಾದ ಗುಂಗುರುಗೂದಲುಳ್ಳವನು, ॥ಪರಾಶರಃ॥ ಸುಖೀಕಾಂತವಪುಃ ಶ್ರೇಷ್ಠಃ ಸುಲೋಚನಭೃಗೋಸ್ಸುತಃ ॥ ಕಾವ್ಯಕರ್ತಾ ಕಫಾಧಿಕೋ ನೀಲಾತ್ಮವಕ್ರ ಮೂರ್ಧಜಃ ॥೨೩॥ ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಚಾರುಃದೀರ್ಘಭುಜಃ ಪೃಥೂರುರಧನಶ್ಶುಕ್ಲಾಧಿಕಃ ಕಾಂತಿಮಾ್ ಕೃಷ್ಣಾಂಚಿತ ಸೂಕ್ಷ್ಮ ಲಂಬಿಚಿಕುರೋ ದೂರ್ವಾದಳಶ್ಯಾಮಲಃ ॥ ಕಾಮಿವಾತ ಕಫಾತ್ಮಿಕೋತಿ ಸುಭಗಶ್ಚಿತ್ರಾಂಬರೋ ರಾಜಸೋಲೀಲಾವಾ್ ಮತಿಮಾನ್ವಿಶಾಲನಯನ ಸ್ಥೂಲಸ್ವ ದೇಶಸ್ಥಿತಃ ॥೨೪॥ ಶುಕ್ರನು ಸುಂದರವಾದ ದೀರ್ಘಭುಜವುಳ್ಳವನು, ದೊಡ್ಡಾದ ಮೊಣಕಾಲುಳ್ಳವನು, ಶುಕ್ಲಾಧಿಕ್ಯವುಳ್ಳವನು, ಕಾಂತಿವಂತನು, ಕಪ್ಪಾದ ಗುಂಗುರು ಕೂದಲುಳ್ಳವನು, ಸೂಕ್ಷ್ಮವಾದ ಮುಂಗುರುಳುಳ್ಳವನು, ಗರಿಕೆ ಹುಲ್ಲಿನಂತೆ ಶ್ಯಾಮಲವರ್ಣವುಳ್ಳವನು, ಕಾಮೀ, ವಾತ ಕಫಪ್ರಕೃತಿಯುಳ್ಳವನು, ಸರ್ವಜನಪ್ರಿಯನು, ಚಿತ್ರಾಂಬರಧಾರಿಯಾದವನು, ರಜೋಗುಣ ಪ್ರಧಾನವಾಗಿವುಳ್ಳವನು,

ಲೀಲಾವಿಲಾಸವುಳ್ಳವನು, ಬುದ್ಧಿವಂತನು, ವಿಶಾಲನೇತ್ರಗಳುಳ್ಳವನು, ಸ್ಥೂಲದೇಹ ಉಳ್ಳವನು, ಸ್ವದೇಶಾಭಿಮಾನವುಳ್ಳವನು, ಈ ಗುಣಗಳು ಶುಕ್ರನಿಗೆ ಹೇಳಲ್ಪಟ್ಟಿರುತ್ತವೆ ॥೧॥

## ಅಥ ಶನಿಸ್ವರೂಪ ವಿಚಾರಃ

ಮೂಲ॥ ಮಂದೋಲಸಃ ಕಪಿಲದೃಕ್ಕೃಶದೀರ್ಘಗಾತ್ರಃ ಸ್ಥೂಲದ್ವಿಜಃ ಪುರುಷ ರೋಮ ಕಚೋನಿಲಾತ್ಮಾ। ಸ್ನಾಯ್ವಸ್ಥ್ಯಸೃಕ್ತ್ವಗಥ ಶುಕ್ರವಸ್ತಾಸ ಮಜ್ಜಾಮಂದಾರ್ಕ ಚಂದ್ರಬುಧ ಶುಕ್ರಸುರೇಜ್ಯಭೌಮಾಃ ॥೧೧॥

ಟೀಕು ॥ ಶನಿಸ್ವರೂಪ ಹೇಳಲ್ಪಡುತ್ತೆ. ಮಂದಃ-ಶನಿಯು, ಆಲಸಃ*-ಸ್ವಭಾವವುಳ್ಳವನು, ಕಪಿಲದೃಕ್ - ಕಪಿಲ ವರ್ಣವಾದ ಕಣ್ಣುಳ್ಳವನು, (ಅಂದರೆ ಕಾಡಿಗೆಗಣ್ಣುಳ್ಳವನು,) ಕೃಶದೀರ್ಘಗಾತ್ರಃ-ಉದ್ದವಾದ ದೀರ್ಘಶರೀರವುಳ್ಳವನು, ಸ್ಥೂಲದ್ವಿಜಃ-ಸ್ಥೂಲವಾದ ಹಲ್ಲುಗಳುಳ್ಳವನು, ಪುರುಷರೋಮಕಚಃ-ಬಿರುಸಾದ ರೋಮವುಳ್ಳವನು, ಅನಿಲಾತ್ಮಾ-ವಾತಧಾತುವುಳ್ಳವನು, ಈ ವಿಷಯದಲ್ಲಿ ಪರಾಶರ ಸಂಹಿತೆಯಲ್ಲಿ ॥ಶ್ಲೋಕ॥ ಕೃಶದೀರ್ಘತನುಸ್ಸೌರಿಃ ಪಿಂಗದೃಷ್ಟ್ಯನಿಲಾತ್ಮಕಃ ॥ ಸ್ಥೂಲದಂತೋಲಸಃಪಂಗುಃ ಕರರೋಮಾಕಚೋದ್ವಿಜ ॥೨೫॥ ತಥಾಸಾರಾ ವಳ್ಯಾಂ ॥ವಿಶೇಷಃ॥ ಪಿಂಗೋನಿಮ್ನವಿಲೋಚನಃ ಕೃಶತನುದೀರ್ಘಶ್ಶರೀರಾಲಸಃ ॥ ಕೃಷ್ಣಾಂಗಃ ಪವನಾತ್ಮಕೋತಿಪಿಶುನಃ ಸ್ನಾಯ್ವಾತ್ಮಕೋನಿರ್ಘ್ರಣಃ । ಮೂರ್ಖಃ ಸ್ಥೂಲನಖಃ ದ್ವಿಜಾತಿಮಲಿನೋರೂಕ್ಷೋ ಶುಚಿಸ್ತಾಮಸಃರೌದ್ರಃ ಕ್ರೋಧಪರೋ ಜರಾಪರಿಣತಃ ಕೃಷ್ಣಾಂಬರೋ ಭಾಸ್ಕರಿಃ ॥೨೬॥ ಇತಿ ॥ ಶನಿಯು ಪಿಂಗಳವರ್ಣವಾಗಿ ಗುಣಿಯಾದ ಕಣ್ಣುಳ್ಳವನು, ಕೃಶಶರೀರವುಳ್ಳವನು, ಸೋಮಾರಿತನವುಳ್ಳವನು, ಕಪ್ಪಾದ ಶರೀರವುಳ್ಳವನು, ವಾತಧಾತುಪ್ರಧಾನನಾಗಿರುವನು, ಪಿಶುನಗುಣವುಳ್ಳವನು, ಸ್ನಾಯುಧಾತುವುಳ್ಳವನು, ನಿರ್ದಯನು, ಮೂರ್ಖನು, ದಪ್ಪವಾದ ಉಗುರು-ಗಳುಳ್ಳವನು, ದಪ್ಪವಾದ ಹಲ್ಲುಗಳುಳ್ಳವನು, ನಿರ್ಮಲವಿಲ್ಲದವನು, ತಾಮಸಗುಣವುಳ್ಳವನು, ರೌದ್ರಾಕಾರವುಳ್ಳವನು, ಕೋಪಿಷ್ಠನು, ಕಪ್ಪಾದ ವಸ್ತ್ರಗಳುಳ್ಳವನು, ಈ ಗುಣಗಳಿಂದ ಶನಿಯು ಪ್ರಕಾಶಿಸುತ್ತಲಿರುವನು, ಇದರ ಪ್ರಯೋಜನ ಏನೆಂದರೆ:- ಜನ್ಮಕಾಲದಲ್ಲಿ ಲಗ್ನವನ್ನು ಗ್ರಹ ನೋಡುತ್ತಿದ್ದರೂ ಲಗ್ನಾಧಿಪತಿ ಯಾವ ಗ್ರಹದ ನವಾಂಶೆಯಲ್ಲಿರುತ್ತಾನೋ ಮತ್ತು ಲಗ್ನದಲ್ಲಿ ಗ್ರಹಗಳಿದ್ದರೂ ಅವರಲ್ಲಿ ಯಾರು ಬಲಿಷ್ಠರೋ ಅವರ ಸ್ವಭಾವವುಳ್ಳವ ರಾಗಿರುತ್ತಾರೆಂದು ಭಾವವು.

---

* ಪಶುವಿನಂತೆ ಆಲಸ್ಯ ಸ್ವಭಾವ

## ಗ್ರಹಾಣಾಂ ಸ್ನಾಯ್ವಾದಿ ವಿಚಾರಃ

ರವ್ಯಾದಿ ಗ್ರಹಗಳು ಸ್ನಾಯ್ವಾದಿ ಸಾರಗಳಿಗೆ ಕ್ರಮವಾಗಿ ಅಧಿಪತಿಗಳಾಗುವರು. ಸ್ನಾಯು-ನರ, ಮಂದಃ-ಶನಿಗೆ, ಅಸ್ಥಿ-ಎಲುಬು, ಅರ್ಕಃ - ಸೂರ್ಯನಿಗೆ, ಅಸೃಕ್-ರಕ್ತವು, ಚಂದ್ರಃ-ಚಂದ್ರನಿಗೆ, ತ್ವಕ್-ಚರ್ಮ, ಬುಧಃ-ಬುಧನಿಗೆ, ವಸಾ-ಮೆದಳು, ಸುರೇಜ್ಯ-ಬೃಹಸ್ಪತಿಗೆ, ಶುಕ್ರಃ-ವೀರ್ಯವು, ಶುಕ್ರಃ-ಶುಕ್ರನಿಗೆ, ಶುಕ್ರಂ-ತೇಜೋರೇತಸೀಚ ಬೀಜವೀರ್ಯೇಂದ್ರಿಯಾಣಿಚ ಇತ್ಯಮರಸಿಂಹಃ ॥ ಮಜ್ಜಾ-ಎಲುಬಿನಲ್ಲಿರುವ ಧಾತುವಿಶೇಷವು ಅಂಗಾರಕನಿಗೆ ಈ ಗ್ರಹ ಸ್ವಭಾವಾದಿ ಪ್ರಯೋಜನವು ಜನ್ಮಕಾಲದಲ್ಲಿ ಯಾವ ಗ್ರಹಸ್ಥಾನಾದಿ ಷಡ್ಬಲಯುಕ್ತವಾಗಿರುವದೋ ಆ ಗ್ರಹಕ್ಕೆ ಹೇಳಲ್ಪಟ್ಟ ಧಾತುಗಳು ಜಾತಕನಿಗಿರುತ್ತೆಂದು ತಿಳಿಯತಕ್ಕದ್ದು. ಚೋರನಕ್ಷತ್ರ ಪ್ರಶ್ನೆಯಲ್ಲಿ ಚೋರಾದಿಗಳು ಬಲವದ್ಗ್ರಹ ಸ್ವರೂಪವಾಗಿರುವರೆಂದು ತಿಳಿಯತಕ್ಕದ್ದು. ವ್ಯಾಧಿ ಪ್ರಶ್ನೆಯಲ್ಲಿ ಲಗ್ನಾಧಿಪತಿ ನವಾಂಶಧಿಪತಿಗಳ ಬಲದಿಂದ ಆ ಗ್ರಹಗಳಿಗೆ ಹೇಳಿದ ವಾತಶ್ಲೇಷ್ಮಾದಿಗಳ ಮೂಲವಾಗಿ ರೋಗಪ್ರಾಪ್ತಿಯನ್ನು ತಿಳಿಯತಕ್ಕದ್ದು ॥೧೨॥

## ಅಥ ಗ್ರಹಾಣಾಂಸ್ಥಾನ ವಸ್ತ್ರದ್ರವ್ಯಾದಿ ವಿಚಾರಃ

ಮೂಲ॥ ದೇವಾಂಬ್ವಗ್ನಿ ವಿಹಾರಕೋಶಶಯನ ಕ್ಷಿತ್ಯುತ್ಕರೇಶಾಃ ಕ್ರಮಾದ್ವಸ್ತ್ರ
ಸ್ಥೂಲಮಭುಕ್ತಮಗ್ನಿಕಹತಂ ಮಧ್ಯಂದೃಢಂಸ್ಫಾಟಿತಂ ॥ ತಾಮ್ರಂ
ಸ್ಯಾನ್ಮಣಿಹೇಮಶುಕ್ತಿರಜತಾನ್ಯರ್ಕಾಚ್ಚ ಮುಕ್ತಾಯಸೀ । ದ್ರೇಕ್ಕಾಣೈ
ಶ್ಯಶಿರಾದಯ ಶ್ಯಶುರುಚಜ್ಞಗ್ವಾದಿಷೂದ್ಯುತ್ಸವಾ ॥೧೩॥

ಅವತಾರಿಕೆ ॥ ಗ್ರಹಗಳಿಗೆ ಸ್ಥಾನ, ವಸ್ತ್ರ, ದ್ರವ್ಯ, ಋತು ಮೊದಲಾದ ವಿಷಯಗಳನ್ನು ಹೇಳುತ್ತಾನೆ.

ಟೀಕು॥ ಅಥ ಗ್ರಹಾಣಾಂ ಸ್ಥಾನವಿಚಾರಃ ॥ ಅರ್ಕಾತ್ - ಸೂರ್ಯನೇ ಆದಿಯಾಗಿ ಸಪ್ತ ಗ್ರಹಗಳಿಗೂ, ಕ್ರಮಾತ್-ಕ್ರಮವಾಗಿ, ದೇವಾಂಬ್ವಗ್ನಿವಿಹಾರ ಕೋಶಶಯನ ಕ್ಷಿತ್ಯುತ್ಕರೇಶಾಃ-ದೇವ-ದೇವಸ್ಥಾನವು, ಅಂದರೆ ಪೂಜಾದಿಗಳಿಗೆ ಉಪಯುಕ್ತವಾದ ಸ್ಥಾನ ಸೂರ್ಯನಿಗೂ, ಅಂಬು-ಜಲ ಅಂದರೆ ನೀರಿನ ಸಮೀಪ ಸ್ಥಾನವು ಚಂದ್ರನಿಗೆ, ಅಗ್ನಿಃ--ಸಮೀಪಸ್ಥಾನವು, ಅಡಿಗೆಮನೆ, ಅಂದರೆ ಬೆಂಕಿ ಇರತಕ್ಕ ಸ್ಥಾನವು ಅಂಗಾರಕನಿಗೆ, ವಿಹಾರ-ಕ್ರೀಡಾ ವಿಹಾರಸ್ಥಾನಕ್ಕೆ ಬುಧನು, ಕೋಶಃ-ಭಂಡಾರ ದ್ರವ್ಯಸ್ಥಾನಕ್ಕೆ ಬೃಹಸ್ಪತಿಯು, ಶಯ್ಯ-ಶಯನಸ್ಥಾನ (ಮಲಗುವ

ಮನೆ) ಶುಕ್ರನಿಗೆ, ಕ್ಷಿತ್ಯುತ್ಕರ-ಮಣ್ಣುರಾಶಿಗೂ ಶನಿಯೂ ಕ್ರಮವಾಗಿ ಅಧಿಕಾರ ಉಳ್ಳವರಾಗುವರು. ಇದಕ್ಕೆ ಪರಾಶರ ಸಂಹಿತೆಯಲ್ಲಿ ಪ್ರಮಾಣ ॥ಶ್ಲೋಕ॥ ದೇವಾಲಯಜಲಂವಹ್ನಿ ಕ್ರೀಡಾದೀನಾಂ ತಥೈವಚ ॥ ಕೋಶಶಯ್ಯೋತ್ಕರಣಾ ಮಿಶಾಸ್ಸೂರ್ಯೋದಯಃ ಕ್ರಮಾತ್ ॥೨೭॥ ಮತ್ತು ಕೇರಳೀಯೆ ನೀಲಕಂಠಃ ॥ ದೇವಸ್ಥಾನಂ ಭಾಸ್ಕರಸ್ಯಾಂಬುವಾಸಂ ಚಂದ್ರಸ್ಯಾಗ್ನಿಸ್ಥಾನಮಂಗಾರಕಸ್ಯ ॥ ಕ್ರೀಡಾಸ್ಥಾನಂ ಸೋಮಪುತ್ರಸ್ಯ ಕೋಶಸ್ಥಾನಂ ಜೀವಸ್ಯೈವವಮಾಹುರ್ಭೃಗೋಸ್ತು ॥ ಸುಪ್ತಸ್ಥಾನಂಭಾನುಜಸ್ಯೋತ್ಕರಂತು *ಸರ್ಪಸ್ಥಾನಂಸ್ಯೆಂಹಿಕೇ ಯಸ್ಯಚೈವಂ ॥೨೮॥

## ಅಥ ಗ್ರಹಾಣಾಂ ವಸ್ತ್ರ ವಿಚಾರಃ

ಸ್ಥೂಲಂ-ದಪ್ಪವಾದ, ವಸ್ತ್ರಂ-ವಸ್ತ್ರವು ಸೂರ್ಯನಿಗೆ, ಅಭುಕ್ತಂ-ಹೊಸವಸ್ತ್ರ ಚಂದ್ರನಿಗೆ ಅಗ್ನಿಹತಂ-ಬೆಂಕಿಯಿಂದ ಸುಟ್ಟು ಗುರ್ತುಳ್ಳ ವಸ್ತ್ರವು ಅಂಗಾರಕನಿಗೆ, (ವಸ್ತ್ರದ ಕೊನೆಭಾಗ ಸುಟ್ಟಿತೆಂದು ಕೆಲವರ ಅಭಿಪ್ರಾಯ) ಕಹತಂ - ನೀರಿನಿಂದ ನೆನೆಸಿದ ವಸ್ತ್ರವು ಬುಧನಿಗೆ, ಮಧ್ಯಂ - ನಡುಹಳೆದಾದ ವಸ್ತ್ರ ಬೃಹಸ್ಪತಿಗೆ, ದೃಢ-ಘಟ್ಟಿ, ವಸ್ತ್ರವು ಶುಕ್ರನಿಗೆ, ಸ್ಫಾಟಿತಂ - ಹರಿದ ವಸ್ತ್ರವು-ಶನಿಗೆ ಈ ಪ್ರಕಾರ ಗ್ರಹಗಳಿಗೆ ವಸ್ತ್ರಾಭಿಮಾನ. ಇದಕ್ಕೆ ಪರಾಶರ ಸಂಹಿತಾ ಪ್ರಮಾಣ ॥ಶ್ಲೋಕ॥ ಜೀರ್ಣಂಶನೇರ್ವಾಸರ ಗಾಯಕಸ್ಯಸ್ಥೂಲಂ ಗುರೋರ್ಧ್ರ್ಯಮಗಂಕವೇಶ್ಚ ॥ ಕಾಠಿಣ್ಯ ಮಜ್ಞಸ್ಯ ನವಂಬುಧಸ್ಯಶೈತ್ಯಂ ಕುಜಸ್ಯಾಗ್ನಿಹತಂ ಚ ವಸ್ತ್ರ ॥೨೯॥ ಈ ಮೇಲೆ ಹೇಳಲ್ಪಟ್ಟ ಸ್ಥಾನದಿಂದಲೂ, ವಸ್ತ್ರದಿಂದಲೂ ಸೂತಿಕಾ ಗೃಹದಲ್ಲಿರುವ ಉಪಸೂತಿಕೆಯರ ವಸ್ತ್ರ ಮತ್ತು ಪ್ರಸೂತಸ್ಥಾನ ನಿರ್ಣಯ ಮಾಡಿಕೊಳ್ಳಲು ಉಪಯೋಗವಾಗಿರುವುದು. ಚೋರ ನಷ್ಟ ಪ್ರಶ್ನೆಗಳಲ್ಲಿ ವಸ್ತು, ಕಳ್ಳರು ಹೋದ ಸ್ಥಾನ, ಚೋರನ ವಸ್ತ್ರ ಸ್ವಭಾವ ಮೊದಲಾದವುಗಳನ್ನು ತಿಳಿಯಲು ಪ್ರಯೋಜನವಾಗಿರುವುದು.

## ಅಥ ಗ್ರಹಾಣಾಂ ಧಾತು ವಿಚಾರಃ

ಸೂರ್ಯಾದಿ ಗ್ರಹಗಳಿಗೆ ಧಾತು ಹೇಳಲ್ಪಡುತ್ತೆ. ಅರ್ಕಾಚ್ಚ - ಅರ್ಕಾದಿಯಾಗಿ (ಚ ಎಂಬುವದು ಸಮುಚ್ಚಯಾರ್ಥ (ನಿ॥ ತುಹಿಚಸ್ಮಹವೈಪಾದ ಪೂರಣೆಸತಿ) ಇತ್ಯಮರಃ ॥ ತಾಮ್ರಂಸ್ಯಾನ್ಮಣಿಮಯುಕ್ತಿರಜಿತಾ - ಮುಕ್ತಾ ಯಸೀ-ತಾಮ್ರಂ-ತಾಮ್ರಧಾತು ಸೂರ್ಯನಿಗೆ, ಮಣಿ-ರತ್ನ ಚಂದ್ರನಿಗೆ ॥ನಿ॥ ಇಂದ್ರನೀಲಂ

* ಸರ್ಪಸ್ಥಾನ-ಹುತ್ತ

ಮರಕತಂ ಹೀರವೈಡೂರ್ಯ ಮಾಣಿಕಾಃ ।। ಪದ್ಮರಾಗಂ ಪುಷ್ಯರಾಗ ಮುಕ್ತಾಗೋಮೇಧಿಕಾನವ।। ಎಂದು ನವರತ್ನಗಳು ।।೩೦।। ಹೇಮಸುವರ್ಣ ಕುಜನಿಗೆ ಯುಕ್ತಿ-ಹಿತ್ತಾಳೆ ತಾಮ್ರ ಸೇರಿಸಿದ ಕಂಚು ಬುಧನಿಗೆ, ರಜತ-ಬೆಳ್ಳಿ ಬೃಹಸ್ಪತಿಗೆ, ಮುಕ್ತಾ-ಮುತ್ತು ಶುಕ್ರನಿಗೆ *ಆಯುಸೀ-ಸೀಸ ಶನಿಗೆ, ಈ ಪ್ರಕಾರವಾಗಿ ಸಪ್ತಗ್ರಹಗಳಿಗೆ ದ್ರವ್ಯ ಹೇಳಿರುವುದು. ಇದಕ್ಕೆ ಪ್ರಮಾಣ।। ಜ್ಯೋತಿರ್ನಿಬಂಧೇನಾರದಃ ।। ತಾಮ್ರಂದಿನೇಶಸ್ಯ ನಿಶಾಕರಸ್ಯ ಮಣಿರ್ಹಿರಣ್ಯಂತುಧರಾಸುತಸ್ಯ।। ಶುಕ್ತಿರ್ವಿಧೋರ್ದೇವ ಗುರೋಸ್ತುರೌಪ್ಯಂ ಮುಕ್ತಾ ಭೃಗೋರ್ಹ್ಯಾಯಸೂನೋಃ ।।೩೧।। ಮತ್ತು ಇಲ್ಲಿ ಬೃಹಸ್ಪತಿಗೆ ರಜತವನ್ನು ಹೇಳಿರುವುದಕ್ಕೂ ಈ ಗ್ರಂಥಕರ್ತರಾದ ವರಾಹಮಿಹಿರಾಚಾರ್ಯರೇ ಸೂಕ್ಷ್ಮ ಜಾತಕದಲ್ಲಿ ಸ್ವಕ್ಷೇತ್ರದಲ್ಲಿದ್ದ ಬೃಹಸ್ಪತಿಗೆ ಸುವರ್ಣವನ್ನು ಹೇಳಿರುತ್ತಾರೆ. ।।ಶ್ಲೋಕ।। ಅರ್ಕಾದಿ ತಾಮ್ರಮಣಿ ಹೇಮಯುಕ್ತಿರಜತಾನಿ ಮೌಕ್ತಿಕಂಲೋಹಂ।। ವಕ್ತವ್ಯಂಬಲವದ್ಭಿಃ ಸ್ವಸ್ಥಾನೇಹೇಮಜೀವೇಹಿ ।।೩೨।। ಎಂದುಕ್ತ ವಾಗಿರುತ್ತೆ. ಈ ಪ್ರಕಾರವೇ ಬಾದರಾಯಣ ಸಂಹಿತೆಯಲ್ಲಿ ಸಹ ಹೇಳಿರುತ್ತೆ. ಅರ್ಕಸ್ಯತಾಮ್ರಂ ಮಣಯೋಹಿಮಾಂಶೋಃ ಭೌಮಸ್ಯಹೇಮೇಂದು ಸುತಸ್ಯ ಯುಕ್ತಿಃ।। ಜೀವಸ್ಯರೌಪ್ಯಂ ಸ್ವಗೃಹಸ್ಥಿತಸ್ಯೈತಸ್ಯೈವಹೇಮೋಶನಸಶ್ಚಮುಕ್ತಾಃ।। ತೀಕ್ಷ್ಣಾಂಶುದೇಹ ಪ್ರಭವಸ್ಯಸೀಸಂ ಕೃಷ್ಣಾಯಂಚ ಪ್ರವದಂತಿಸಂತಃ ।।೩೩।। ಈ ಪ್ರಕಾರವಾಗಿ ಸ್ವಕ್ಷೇತ್ರದಲ್ಲಿದ್ದ ಬೃಹಸ್ಪತಿಗೆ ಸುವರ್ಣವನ್ನು ಹೇಳಿರುತ್ತಾರೆ. ಇದಕ್ಕೆ ಪ್ರಯೋಜನ।। ಬಲವದ್ಗ್ರಹವಶದಿಂದ ಸೂತಿಕಾಗೃಹದಲ್ಲಿ ದೀಪ್ತ ಭಾಜನದಲ್ಲಿ ತೈಲಾದಿಗಳನ್ನು, ಹೃತಸಪ್ತಾದಿ ಪ್ರಶ್ನೆಯಲ್ಲಿ ಚೋರಾಪಹೃತ ದ್ರವ್ಯ ಪರಿಜ್ಞಾನಕ್ಕೂ, ಜನ್ಮಕಾಲದಲ್ಲಿ ಬಲವದ್ಗ್ರಹ ವಶದಿಂದ ಆಗ್ರಹಕ್ಕೆ ಬಂದ ದಶಾಕಾಲದಲ್ಲಿ ಆ ದ್ರವ್ಯಪ್ರಯೋಜನ ಮತ್ತು ದುರ್ಬಲಗ್ರಹದ ದಶಾಕಾಲದಲ್ಲಿ ತತ್ತದ್ರವ್ಯನಾಶವನ್ನು ಹೇಳತಕ್ಕದ್ದು. ಉದಾಹರಣೆ-ಪರಾಶರಃ ।। ಹೈಮಾಂಬರಾಭರಣ ಸಂಗ್ರಹಕೀರ್ತಿಲಾಭಃ ।। ವಿದ್ಯಾವಿನೋದ ಸ್ವಜನಾನುಮೋದಃ ।। ಸ್ತ್ರೀಪುತ್ರಸೌಖ್ಯವಿಭವಃ ಪಶುಧಾನ್ಯವೃದ್ಧಿಸ್ಸ್ಯಾತ್ಸರ್ವದಾ ಗುರುದಶಾಗಮನೇನ ಪುಂಸಾಂ ।।೩೪।। ಬೃಹಸ್ಪತಿ ಬಲವಂತ ನಾಗಿದ್ದರೆ ಈ ಶ್ಲೋಕಾರ್ಥದಲ್ಲಿ ಹೇಳಿರುವ ಫಲ ಕೊಡುವನು. ಅಂದರೆ ಸುವರ್ಣಪ್ರದನಾಗುವನು.

## ಅಥ ಗ್ರಹಾಣಾಂ ಋತುನಿರ್ಣಯಃ

ಶಶುರುಚಜ್ಞಸ್ವಾದಿಷು -ಶ - ಶನಿ, ಶು-ಶುಕ್ರ, ರು-ರುಧಿರ (ಅಂಗಾರಕ),

---

* ಆಯತ - ಕಬ್ಬಿಣ - ಉಕ್ಕು

ಚ-ಚಂದ್ರ, ಜ್ಞ-ಬುಧ (ಅಂದರೆ ಮೇಲೆ ಹೇಳಿದ ಸಂಕೇತಾಕ್ಷರಗಳು ಅಧ್ಯಕ್ಷರವಾಗಿರುವ ಗ್ರಹಗಳು) ಉದ್ಯತ್ಸುಲಗ್ನಗತವಾದರೆ, ಶಿಶಿರಾದಯಃ-ಶಿಶಿರಋತು ಮೊದಲಾದ ಷಡೃತುಗಳು, ಜ್ಞೇಯಾಃ-ತಿಳಿಯತಕ್ಕದ್ದು. ವಾ-ಶಬ್ದದಿಂದ, ದ್ರೇಕ್ಕಾಣೈರ್ವಾ-ಶನ್ಯಾದಿ ದ್ರೇಕ್ಕಾಣದಿಂದ ಶಿಶಿರಾದಿ ಷಡೃತುಗಳನ್ನು ತಿಳಿಯತಕ್ಕದ್ದು, ಮತ್ತು ಲಗ್ನಗತ ಗ್ರಹಗಳಿಂದ ಋತುಗಳನ್ನು ತಿಳಿಯತಕ್ಕದ್ದು. ಲಗ್ನದಲ್ಲಿ ಗ್ರಹವೇ ಇಲ್ಲದಿದ್ದರೆ ಲಗ್ನಗತ ದ್ರೇಕ್ಕಾಣದಿಂದ ಋತುನಿರ್ಣಯ ಮಾಡತಕ್ಕದ್ದು. ಲಗ್ನದಲ್ಲಿ ಅನೇಕ ಗ್ರಹಗಳು ಇದ್ದರೆ ಅವರಲ್ಲಿ ಬಲವದ್ಗ್ರಹಕ್ಕೆ ಹೇಳಿರುವ ಋತುವೆಂದು ತಿಳಿಯತಕ್ಕದ್ದು. ಕೆಲವರು ಲಗ್ನದಲ್ಲಿ ಬಹುಗ್ರಹವಿದ್ದರೆ, ದ್ರೇಕ್ಕಾಣಾಧಿಪತಿಯಿಂದ ಋತುನಿರ್ಣಯ ಮಾಡಬೇಕೆಂದು ಅಭಿಪ್ರಾಯಪಡುವರು. ಆದರೆ ಲಗ್ನದಲ್ಲಿ ಗ್ರಹವಿಲ್ಲದೆ ಇರುವ ಕಾಲದಲ್ಲಿ ದ್ರೇಕ್ಕಾಣಾಧಿಪತಿಯಿಂದ ಋತುನಿರ್ಣಯ ಮಾಡತಕ್ಕದ್ದು. ಲಗ್ನದಲ್ಲಿ ಶನಿ ಇದ್ದರೆ ಶಿಶಿರಋತು, ಶುಕ್ರನಿದ್ದರೆ ವಸಂತಋತು, ಅಂಗಾರಕನಿದ್ದರೆ ಗ್ರೀಷ್ಮಋತು, ಚಂದ್ರನಿದ್ದರೆ ವರ್ಷಋತು, ಬುಧನಿದ್ದರೆ ಶರದೃತು, ಗುರುವಿದ್ದರೆ ಹೇಮಂತಋತು ಈ ಪ್ರಕಾರ ನಿರ್ಣಯ ಮಾಡತಕ್ಕದ್ದು.

ಶ್ಲೋಕ॥ ಗ್ರೀಷ್ಮಮಥಪ್ರವದಂಶಿಕಜಾರ್ಕ್ ಎಂದು ಬಾದರಾಯಣ ವಚನ ವಿರುತ್ತೆ. ಸೂರ್ಯನು ಲಗ್ನಗತನಾದರೆ ಗ್ರೀಷ್ಮಋತುವೆಂದು ತಿಳಿಯಬೇಕೆಂದು ಅಭಿಪ್ರಾಯಪಡುವರು. ಇದು ಬೃಹಜ್ಜಾತಕ ಗ್ರಂಥಕರ್ತನಿಗೆ ಸಮ್ಮತಿಯಿಲ್ಲ. ಈ ದ್ರೇಕ್ಕಾಣ ಮತ್ತು ಲಗ್ನಗತ ಗ್ರಹಗಳಿಂದ ನಷ್ಟಜಾತಕದಲ್ಲು ಮತ್ತು ಜಾತಕಗಳಲ್ಲಿ ಲಗ್ನ ನಿಶ್ಚಯ ಮಾಡಿಕೊಳ್ಳುವುದಕ್ಕೆ ಹೃತನಷ್ಟಾದಿ ಪ್ರಶ್ನೆಗಳಲ್ಲಿ ಕಾಲ ನಿರ್ಣಯ ಮಾಡಿಕೊಳ್ಳುವುದಕ್ಕೆ ಉಪಯೋಗವಾಗಿರುವುದು.

| ಲಗ್ನ ಚಂ ೯ | | ಶು ೨ | |
|---|---|---|---|
| | | | ರವಿ೪ ಬುಧ೮ |
| ೮ | | | ಕುಜ ೮ |
| ಗುರು ೧ | | ಶನಿ ೭ | |

ಈ ವರ್ಷ ಋತುವಿನಲ್ಲಿ ಜನ್ಮವಾದ ಜಾತಕ ಲಗ್ನದಲ್ಲಿ ಚಂದ್ರನಿರುವುದರಿಂದ, ಈ ಶ್ಲೋಕಾರ್ಥ ಪ್ರಕಾರ ವರ್ಷಋತು ನಿರ್ಣೀತವಾಗಿರುವುದು. ಕ್ರೋಧನ ಸಂವತ್ಸರದ ಕಟಕಮಾಸ ೧ನೇ ತೇದಿ ದಿವಸ ರಾತ್ರಿ ೯ ॥ ಘಳಿಗೆಗೆ ಜನ್ಮ.

## ಅಥ ಗ್ರಹಾಣಾಂ ದೃಷ್ಟಿ ವಿಚಾರಃ

ಮೂಲ॥ ತ್ರಿದಶತ್ರಿಕೋಣ ಚತುರಸ್ರ ಸಪ್ತಮಾನ್ಯವಲೋಕಯಂತಿ,
ಚರಣಾಭಿವೃದ್ಧಿತಃ॥ ರವಿಜಾಮರೇಜ್ಯ ರುಧಿರಾಃಪರೇಚಯೋ
ಕ್ರಮಶೋಭವಂತಿ ಕಿಲವೀಕ್ಷಣೇಧಿಕಾಃ ॥೧೩॥

ಟೀಕು॥ ಗ್ರಹಗಳಿಗೆ ಅನ್ಯೋನ್ಯ ದೃಷ್ಟಿಸ್ಥಾನವನ್ನು ನೈಸರ್ಗಿಕ ದೃಷ್ಟಿಯೂ ಹೇಳಲ್ಪಡುತ್ತೆ. ಯಾವ ಸ್ಥಾನದಲ್ಲಿ ಯಾವ ಗ್ರಹವಿರುವದೋ ಆ ಸ್ಥಾನ ಮೊದಲುಗೊಂಡು ತ್ರಿದಶ ತ್ರಿಕೋಣ ಚತುರಸ್ರ ಸಪ್ತಮಾ ತೃತೀಯ ದಶಮದಲ್ಲಿ ರವಿಜ-ಶನಿಗೆ ದೃಷ್ಟಿ ತ್ರಿಕೋಣ, ೫-೬ರಲ್ಲಿ ಅಮರೆಜ್ಯ - ಬೃಹಸ್ಪತಿಗೆ ದೃಷ್ಟಿ, ಚತುರಶ್ರ-೪-೮ನೇ ಸ್ಥಾನಗಳಲ್ಲಿ, ರುಧಿರ-ಅಂಗಾರಕನಿಗೆ ದೃಷ್ಟಿ, ಪರೆ-ಉಳಿದ ಚಂದ್ರ, ಸೂರ್ಯ, ಬುಧ, ಶುಕ್ರನಿಗೆ ಸಪ್ತಮಾ-ಸಪ್ತಮ ಸ್ಥಾನದಲ್ಲಿ ದೃಷ್ಟಿ, ಚರಣಾಭಿವೃದ್ಧಿತಃ-ಪಾದಾಭಿವೃದ್ಧಿ ದೃಷ್ಟಿಯಿಂದ ಅವಲೋಕಯಂತಿ-ನೋಡುತ್ತಾರೆ. ಅಂದರೆ ಶನಿಗೆ ೩-೧೦ರಲ್ಲಿ ಪಾದದೃಷ್ಟಿ, ಸಪ್ತಮದಲ್ಲಿಪೂರ್ಣ ದೃಷ್ಟಿ, ಈ ಗ್ರಹಕ್ಕೆ ೩-೧೦ರಲ್ಲಿ ವಿಶೇಷ ದೃಷ್ಟಿ ಇರುವದರಿಂದ, ಸಪ್ತಮದಲ್ಲಿ ಇರುವ ದೃಷ್ಟಿ ಸಾಮಾನ್ಯದೃಷ್ಟಿಯೆಂದು ಹೇಳತಕ್ಕದ್ದು. ಬೃಹಸ್ಪತಿಗೆ ತ್ರಿಕೋಣ ಸ್ಥಾನದಲ್ಲಿ (೫-೬) ವಿಶೇಷ ದೃಷ್ಟಿಯಾಗಿ ಅರ್ಧದೃಷ್ಟಿಯಾಗಿ ಇರುವುದರಿಂದ ಸಪ್ತಮದಲ್ಲಿ ಸಾಮಾನ್ಯ ದೃಷ್ಟಿ ಎಂದು ಹೇಳಲ್ಪಡತಕ್ಕದ್ದು. ಅಂಗಾರಕನಿಗೆ ಚತುರಶ್ರ ಸ್ಥಾನ (೪-೮ರಲ್ಲಿ) ತ್ರಿಪಾದ ವಿಶೇಷ ದೃಷ್ಟಿ ಇರುವುದರಿಂದ ಸಪ್ತಮ ಸ್ಥಾನದಲ್ಲಿರುವ ದೃಷ್ಟಿ, ಸಾಮಾನ್ಯ ದೃಷ್ಟಿ, ಉಳಿದ ರವಿ, ಚಂದ್ರ, ಶುಕ್ರ ಬುಧರಿಗೆ ವಿಶೇಷ ದೃಷ್ಟಿ ಇಲ್ಲದಿರುವದರಿಂದ, ಸಪ್ತಮ ಸ್ಥಾನ ದಲ್ಲಿ ಪೂರ್ಣದೃಷ್ಟಿಯೆಂದು ತಿಳಿಯತಕ್ಕದ್ದು. ಗ್ರಹಗಳು ಯಾವ ರಾಶಿಯನ್ನು ಎಷ್ಟು ಮಾತ್ರ ನೋಡುವರೋ, ಅಷ್ಟುಮಾತ್ರ ಫಲ ಕೊಡುವರೆಂದು ಲಘು ಜಾತಕದಲ್ಲಿ ಹೇಳಿರುತ್ತೆ. ಉದಾಹರಣೆ ॥ಶ್ಲೋಕ॥ ದಶಮತೃತೀಯೌನವಮರ ಪಂಚಮ ಚತುರಷ್ಟಮಾ ಕಳತ್ರಂಚ ॥ ಪಶ್ಯಂತಿ ಪಾದವೃದ್ಧ್ಯಾ ಫಲಾನಿ ಚೈವಂಪ್ರಯಚ್ಛಂತಿ ॥೩೫॥ ಸಾರಾವಳ್ಯಾಂ ॥ ಸರ್ವಂಪಶ್ಯಂತಿ ಸದಾಗ್ರಹಶ್ಚರಣ ವೃದ್ಧಿತಸ್ಸರ್ವೇ ॥ ತ್ರಿದಶತ್ರಿಕೋಣ ಚತುರಸ್ರ ಸಪ್ತಮಗತಾ ಫಲಂಕ್ರಮೇಣೈವಂ ॥೩೬॥ ಯವನೇಶ್ವರಃ ॥ ದ್ವೌಪಶ್ಚಿಮೌ ಷಷ್ಠಮಥದ್ವಿತೀಯಂ ಸಂಸ್ಥಾನರಾಶೇಃ ಪರಿಹೃತ್ಯರಾಶಿಂ ॥ ಶೇಷಾಗ್ರಹಾಃ ಪಶ್ಯತಿ ಸರ್ವಕಾಲಮಿಷ್ಟೇ ಷುಚೈಷಾಂ ವಿಹಿತಾದ್ವಶಿಷ್ಟಾ ॥೩೭॥ ಜಾಮಿತ್ರಭೇದೃಷ್ಟಿಫಲಂ ಸಮಗ್ರಂ ಸ್ವಪಾದಹೀನಂ ಚತುರಶ್ರಯೋಶ್ಚ ॥ ತ್ರಿಕೋಣಯೋರ್ದೃಷ್ಟಿ ಫಲಾರ್ಧಮಾಹುರ್ದುಶ್ಚಿಕ್ಯ ಸಂಜ್ಞೇ ದಶಮೇಚಪಾದಂ ॥೩೮॥

ರವಿಜಾಮರೇಜ್ಯರುಧಿರಾಃ - ಶನಿ, ಗುರು, ಕುಜರು, ಅಪರೇಚ - ಇತರ ಗ್ರಹಗಳು ತ್ರಿದಶಸ್ಥಾನವನ್ನು ಕ್ರಮವಾಗಿ, ವೀಕ್ಷಣೇ-ನೋಡುವಿಕೆಯಲ್ಲಿ, ಅಧಿಕಾಃ-ಸಂಪೂರ್ಣ ದೃಷ್ಟಿಯುಳ್ಳವರು. ಭವಂತಿ ಕಿಲ - ಆಗುತ್ತಾರೆ, ಶನಿ ತೃತೀಯ ದಶಮವನ್ನು, ಬೃಹಸ್ಪತಿ ಪಂಚಮ ನವಮವನ್ನು ಕುಜನು ಚತುರ್ಥಾಷ್ಟಮವನ್ನು, ಸೂರ್ಯ, ಚಂದ್ರ, ಬುಧ, ಶುಕ್ರರು ಸಪ್ತಮ ಸ್ಥಾನವನ್ನು ಸಂಪೂರ್ಣ ದೃಷ್ಟಿಯಿಂದ ನೋಡುತ್ತಾರೆಂದು ತಾತ್ಪರ್ಯವು.

ಇದಕ್ಕೆ ಸಾರಾವಳಿಯಲ್ಲಿ ।।ಶ್ಲೋಕ।। ಪೂರ್ಣಂಪಶ್ಯತಿ ರವಿಜ ಸ್ತ್ರಿತೀಯ ದಶಮೇ ತ್ರಿಕೋಣಮಪಿಜೀವಃ ।। ಚತುರಶ್ರಂ ಭೂಮಿಸುತಸ್ಸಿತಾರ್ಕ ಬುಧಹಿಮ ಕರಾಃ ಕಳತ್ರಂಚ ।।೩೯।। ಇದೇ ಅರ್ಥಕ್ಕೆ ಮಾಧವಾಚಾರ್ಯರು ಹೇಳಿರುವದೇನೆಂದರೆ:- ।।ಸೌರಿಸ್ತೃತೀಯ ದಶಮೌಗುರುಸ್ತ್ರಿಕೋಣಂ ಕುಜಸ್ತು ಚತುರಶ್ರಂ।। ಪಶ್ಯತಿಸಮಗ್ರಮಿತರೇಚರಣ ವಿವೃದ್ಧ್ಯಾಥ ಸಪ್ತಮಂಸರ್ವೇ ।।೪೦।। ಎಂದು ಹೇಳಿರುತ್ತೆ. ಗರ್ಗಸಂಹಿತೆಯಲ್ಲಿ ।।ಶ್ಲೋಕ।। ದುಶ್ಚಿಕ್ಯದಶಗಾ ಸೌರಿ ಸ್ತ್ರಿಕೋಣಸ್ಥಾ ಬೃಹಸ್ಪತಿಃ ।। ಚತುರ್ಥಾಷ್ಟಮಗಾ ಭೌಮಶ್ಶೇಷಾಸ್ಸಪ್ತಮ ಸಂಸ್ಥಿತಾ ।।೪೧।। ಭವಂತಿವೀಕ್ಷಣೇ ನಿತ್ಯಮುಕ್ತಾಧಿಕ ಫಲಾಗ್ರಹಾಃ ।। ಸರ್ವಗ್ರಹಗಳಿಗೂ ಸಪ್ತಮದಲ್ಲಿ ಸಂಪೂರ್ಣದೃಷ್ಟಿ, ಚರ ಸ್ಥಿರರಾಶಿಯಲ್ಲಿರುವಾಗ ಸೂರ್ಯ, ಚಂದ್ರ, ಬುಧ, ಶುಕ್ರರಿಗೆ ಸಪ್ತಮದಲ್ಲಿ ಸಂಪೂರ್ಣ ದೃಷ್ಟಿ ಸೂರ್ಯ ಚಂದ್ರ, ಬುಧ ಶುಕ್ರರು ಅಧಿಕ ಫಲಪ್ರದರೆಂದು ತಿಳಿಯತಕ್ಕದ್ದು. ಈ ತಿಳಿಯಪಡಿಸಿರುವ ಅರ್ಥವೇ ಅನೇಕ ಗ್ರಂಥಗಳಲ್ಲಿ ಹೇಳಲ್ಪಟ್ಟಿರುತ್ತೆ. ಕೆಲವರು ರವಿಜಾಮರೇಜ್ಯರುಧಿರಾಃ - ಶನಿ ಗುರು ಕುಜರು, ಅಪರೇ - ಇತರ ಗ್ರಹಗಳು ಕ್ರಮವಾಗಿ, ವೀಕ್ಷಣೇ - ದೃಷ್ಟಿಯಲ್ಲಿ, ಚರಣಾಭಿವೃದ್ಧಿತಃ - ಪಾದಾಭಿವೃದ್ಧಿಯಿಂದ, ಅಧಿಕಾಃ-ಅಧಿಕ ಫಲಪ್ರದರೆಂದು ಹೇಳುವರು. ಶನಿಯು ಪಾದಫಲ ಪ್ರದನು, ಗುರುವು (ದ್ವಿಪಾದ) ಅರ್ಧ ಫಲಪ್ರದನು, ಕುಜನು ತ್ರಿಪಾದ ಫಲಪ್ರದನು, ಉಳಿದ, ಚಂದ್ರ, ಬುಧ, ಶುಕ್ರ, ರವಿಗಳು ಪೂರ್ಣ ಫಲಪ್ರದರೆಂದು ಹೇಳುತ್ತಾರೆ - ಗ್ರಹಕ್ಕೆ ನೈಸರ್ಗಿಕ ದೃಷ್ಟಿಗಳಲ್ಲದೇ ವಿಶೇಷ ದೃಷ್ಟಿಯೆಂದರ್ಥವು. ಈ ವಿಷಯದಲ್ಲಿ ಈ ಶ್ಲೋಕದ ಅರ್ಥವನ್ನೇ ಎರಡು ಪ್ರಕಾರವಾಗಿ ಮಾಡಿರುವರು ।।. ಪರಾಶರೀಯದಲ್ಲಿ ।।ಶ್ಲೋಕ।। ಪಶ್ಯಂತಿ ಸಪ್ತಮಾ ಸರ್ವೇಶನಿಜೀವ ಕುಜಾಃ ಪುನಃ ।। ವಿಶೇಷತಶ್ಚತ್ರಿದಶತ್ರಿಕೋಣ ಚತುರಷ್ಟಮಾ ।।೪೨।। ಈ ದೃಷ್ಟಿಯಲ್ಲಿ ಸ್ವಲ್ಪ ವಿಶೇಷವಿರುತ್ತೆ ।।ಜ್ಯೋತಿರ್ಬಂಧೆ ।।ಶ್ಲೋಕ।। ಅಥೋರ್ಧ್ವದೃಷ್ಟೀದಿನನಾಥ ಭೌಮೌದೃಷ್ಟಿಃ ಕಟಾಕ್ಷೇಣ ಕವೀಂದುಸೂನ್ವೋಃ।। ಗುರೋಶ್ಶಶಾಂಕಸ್ಯ

ಸರ್ವೈವದೃಷ್ಟಿ ರಧೋಕ್ಷಿಪಾತಸ್ಥಹಿ ನಾಥಶನ್ಯೋಃ ॥೪೩॥ ತಾತ್ಪರ್ಯ॥ ಸೂರ್ಯಾಂಗಾರಕರಿಗೆ ಊರ್ಧ್ವದೃಷ್ಟಿ, ಶುಕ್ರ ಬುಧರಿಗೆ ಕಟಾಕ್ಷದೃಷ್ಟಿ (ಅಂದರೆ ಕಡೇಗಣ್ಣಿನನೋಟ) ಕುಟಾಕ್ಷೋಪಾಂಗದರ್ಶನಮಿತ್ಯ ಮರಸಿಂಹಃ ॥ ಅಂದರೆ ಅಪಾಂಗ ದೃಷ್ಟಿಯೆಂದರ್ಥ ॥ ಬೃಹಸ್ಪತಿಗೂ ಚಂದ್ರನಿಗೂ ಸಮಾನವಾದ ಎದುರುದೃಷ್ಟಿ ॥ ರಾಹು ಶನಿಗಳಿಗೆ ಅರ್ಧಕಣ್ಣು ಮುಚ್ಚಿಕೊಂಡು ನೋಡುವಂಥಾ ದೃಷ್ಟಿಯು ॥ ಇದರ ಪ್ರಯೋಜನವೇನೆಂದರೆ :- ಜನ್ಮಕಾಲದಲ್ಲಿ ನೇತ್ರಸ್ಥಾನದಲ್ಲಿ ಯಾವ ಗ್ರಹವಿರುತ್ತೋ ಆ ಗ್ರಹದ ದೃಷ್ಟಿ ಸ್ವಭಾವದ ಮೇಲೆ ಜಾತಕನು, ನೋಡುತ್ತಿರುವನೆಂದು ತಾತ್ಪರ್ಯ ॥ಶ್ಲೋಕ॥ ಪಶ್ಯತ್ಯಸೌ ಭಾನು ಸುತ ಸ್ತ್ರತೀಯ್ಕಂ ॥ ಮಾನಂಚ ಪೂರ್ಣಂ ಚತುರಶ್ರಮಾರಃ ॥ ಜೀವಸ್ತ್ರಿಕೋಣಂ ಮದನಂಚ ಸರ್ವೇಪಶ್ಯಂತಿ ದೃಷ್ಟ್ಯಾ ಚರಣಾಭಿವೃಧ್ಯಾ ॥೪೪॥ ಎಂದು ಹೇಳಿರುವರು.

ವಿಶೇಷ ತಾತ್ಪರ್ಯ ॥ ಗ್ರಹಗಳ ದೃಷ್ಟಿ ವಿಚಾರವನ್ನು ಹೇಳಿದ್ದಾಯಿತು. ಇದರ ಪ್ರಾದುರ್ಭಾವ ವಿಶೇಷವನ್ನು ಚೆನ್ನಾಗಿ ತಿಳಿದುಕೊಳ್ಳತಕ್ಕದ್ದು ಅವಶ್ಯಕವಾಗಿದೆ. ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ಈ ಏಳು ಗ್ರಹಗಳ ದೃಷ್ಟಿಯ ವಿಷಯದಲ್ಲಿ ಕುಜ, ಶನಿ, ಗುರು ಇವರು ವಿಶೇಷ ದೃಷ್ಟಿಯಿಂದ ನೋಡುತ್ತಾರೆ. ಅಂದರೆ, ೬೦ ವಿಕಲೆಗಳಿಗೆ ೧ ಕಲೆ, ೬೦ ಕಲೆಗಳಿಗೆ ೧ ಭಾಗ ೩೦ ಭಾಗಗಳಿಗೆ ೧ ರಾಶಿ ಚಕ್ರ, (ಅಥವಾ ಭಚಕ್ರ) ೬೦ ಕಲೆ x ೩೦ ಭಾಗ = ೧೮೦೦ ಕಲೆ x ೧೨ ರಾಶಿ ಭಚಕ್ರವೆಂದರೆ, ೨೧೬೦೦ ಕಲಾಕ್ಷೇತ್ರ, = ಇದಕ್ಕೆ ಇಂಗ್ಲೀಷ್ ಜ್ಯೋತಿಶ್ಶಾಸ್ತ್ರ ರೀತಿಯಾಗಿ ೬೦ ಸೆಕೆಂಡ್ ೧ ಮಿನಿಟ್, ೬೦ ಮಿನಿಟ್-೧ ಡಿಗ್ರಿ, ೩೬೦ ಡಿಗ್ರಿ, ೧ ಸರ್ಕಲ್ (ವೃತ್ತ) ೩೬೦ x ೬೦=೨೧೬೦೦=ಮಿನಿಟ್, ಇದರಲ್ಲಿ ೩೬೦ ಭಾಗಗಳು ೩೬೦ ಡಿಗ್ರಿಗಳು ೧ ಸರ್ಕಲ್, ಅಥವಾ ೧ ಭಚಕ್ರ, ೨೧೬೦೦, ಕಲಾಕ್ಷೇತ್ರವೂ, ೨೧೬೦೦, ಮಿನಿಟ್, ಸಹ ೧ ಪರಿಮಾಣವುಳ್ಳದ್ದಾಗಿರುತ್ತೆ. ಇದರಲ್ಲಿ ಇಂಗ್ಲಿಷ್ ಶಾಸ್ತ್ರಕ್ಕೂ ಹಿಂದೂ ದೇಶದ ಆಸ್ಥಾನಮೀಯೆಂಬುವ ಸಿದ್ಧಾಂತ ಶಾಸ್ತ್ರಕ್ಕೂ ವ್ಯತ್ಯಾಸವೇನೂ ಇಲ್ಲ ॥ ೩೬೦ ಭಾಗಗಳನ್ನಾದರೂ, ೩೬೦ ಡಿಗ್ರಿಗಳನ್ನಾದರೂ ೨೧ ರಾಶಿಸ್ಥಾನವನ್ನಾಗಿ ಮಾಡಿದರೆ, ಪ್ರತಿ ೧ ರಾಶಿ ೩೦ ಡಿಗ್ರಿ, ಅಥವಾ ಭಾಗಗಳಾಗುತ್ತವೆ ॥ ಈ ೧೨ ರಾಶಿಗಳೇ ಮೇಷಾದಿ ರಾಶಿಗಳಾಗಿ ನಕ್ಷತ್ರ ಚಕ್ರದ ಪ್ರಕಾರ ಏರ್ಪಟ್ಟಿರುತ್ತೆ । ಗ್ರಹಗಳು ೭ನೆ ಸ್ಥಾನವನ್ನು ನೋಡುತ್ತಾರೆಂದರೆ, ಮೇಷರಾಶಿಯ ೩ನೆ ಭಾಗದ ಅಂತ್ಯದಲ್ಲಿ ಸೂರ್ಯನಿದ್ದರೆ, ಮೇಷರಾಶಿಯ ೩ನೇ ಭಾಗದಿಂದ ವೃಷಭರಾಶಿಯ ೩ನೇ ಭಾಗಕ್ಕೆ ೧ ರಾಶಿ, ಅಲ್ಲಿಂದ ಮಿಥುನರಾಶಿಯ

೩ನೇ ಭಾಗಕ್ಕೊಂದು ರಾಶಿ, ಈ ಪ್ರಕಾರವೇ ತುಲಾರಾಶಿಯ ೩ನೇ ಭಾಗದ ಕೊನೇವರೆಗೆ ೬ ರಾಶಿಗಳಾಗುತ್ತವೆ. ೭ನೇ ರಾಶಿಯು ತುಲಾರಾಶಿಯ ೩ನೇ ಭಾಗದ ಮೊದಲನೇ ಕಲೆಯಿಂದಾ ವೃಶ್ಚಿಕರಾಶಿಯ ೨ನೇ ಭಾಗದ ೬೦ನೇ ಕಲೆವರೆಗೂ ಸೂರ್ಯನಿಗೆ ಸಪ್ತಮ ಸಂಪೂರ್ಣದೃಷ್ಟಿ ಇರುತ್ತೆ. ಆದ್ದರಿಂದ ಚಂದ್ರನು ಕರ್ಕಾಟಕರಾಶಿಯಲ್ಲಿ ೧೧ನೇ ಭಾಗ ೨೬ ಕಲೆ, ೨೧ ವಿಕಲೆಯಲ್ಲಿರುತ್ತಾನೆ. ಚಂದ್ರದೃಷ್ಟಿಯು ಸೂರ್ಯನಂತೆ ಸಪ್ತಮಸ್ಥಾನಕ್ಕೆ ಇರುತ್ತೆ. ರಾಶಿಸ್ಥಾನ ಮೊದಲುಗೊಂಡು ೩-೧೧-೨೬-೩೭ರಲ್ಲಿ ಚಂದ್ರನಿದ್ದರೆ ರಾಶ್ಯಾದಿ ೩-೧೧-೨೬-೩೭+೬-೦-೦-೧೯-೧೧-೨೬-೩೭ ಮಕರ ರಾಶಿಯಲ್ಲಿ ೧೧-೨೬-೩೭ರಿಂದ ಮಕರರಾಶಿ ಅಂತ್ಯದವರೆವಿಗೂ ಕುಂಭರಾಶಿಯಲ್ಲಿ ೧೧ ಭ, ೨೬ ಕ, ೩೭, ವಿಕಲಸ್ಥಾನದ ವರೆವಿಗೂ ಚಂದ್ರನ ಸಂಪೂರ್ಣದೃಷ್ಟಿ ಇರುತ್ತೆ. ಮತ್ತು ಈ ಮೇಲೆ ಕಂಡ ರಾಶಿಗಳಲ್ಲಿ ಯಾವುದಾದರೂ ಗ್ರಹವಿದ್ದರೆ ಆ ಗ್ರಹಗಳನ್ನು ಸಹ ನೋಡುತ್ತಾನೆ. ಅಂದರೆ ಚಂದ್ರನ ರಶ್ಮಿ ಈ ರಾಶಿಯಲ್ಲಿ ಬೀಳುವುದೇ ಮುಖ್ಯಾಭಿಪ್ರಾಯವು. ೩ನೇ ಉದಾಹರಣೆ:- ಬೃಹಸ್ಪತಿ ಮೇಷರಾಶಿಯ ೮ನೇ ಭಾಗ, ೨೬ನೇ ಕಲೆ ೪೮ ವಿಕಲೆಯಲ್ಲಿದ್ದಾನೆ. ಈ ಗುರು ಯಾವಯಾವ ಸ್ಥಾನವನ್ನು ನೋಡುತ್ತಾನೆಂದರೆ:- ರಾಶಿಸ್ವಭಾವದ ರಾಶಿಚಕ್ರದಮೇಲೆ ನೋಡಿದರೆ, ಕರ್ಕಾಟಕ ರಾಶಿಗೂ, ೭ನೇ ದಾದ ತುಲಾರಾಶಿಗೂ, ೯ನೇ ಧನೂರಾಶಿಗೂ ಸಾಮಾನ್ಯವಾಗಿ ಗುರು ದೃಷ್ಟಿ ಇರುತ್ತೆಂದು ಹೇಳುವರು. ಇದು ಶಾಸ್ತ್ರಸಮ್ಮತಿಯೇ ಆಗಿದ್ದಾಗ್ಯೂ ಸಿದ್ಧಾಂತ ಶಾಸ್ತ್ರಕ್ಕೆ ಬಹಳ ದೂರದಲ್ಲಿರುತ್ತೆ. ಯಾಕೆಂದರೆ:- ಲೆಕ್ಕಾಚಾರದ ಪ್ರಕಾರ ಗಣಿತಾಗತವಾಗಿ ಬಂದ ದೃಷ್ಟಿಯನ್ನು ಮೇಲೆ ರವಿಚಂದ್ರರಿಗೆ ಉದಾಹರಣೆ ತೋರಿಸಿರುವಂತೆ ತಿಳಿದುಕೊಳ್ಳಬೇಕು ॥೧೩॥

ಮೂಲ॥ ಅಯನಕ್ಷಣವಾಸರರ್ತವೋ ಮಾಸಾರ್ಧಂಚ ಸಮಾಶ್ಚ ಭಾಸ್ಕರತ್॥
ಕಟುಕಲವಣತಿಕ್ತ ಮಿಶ್ರಿತಾಮಧುರಾಮ್ಲೌ ಚ ಕಷಾಯ
ಇತ್ಯಪಿ ॥೧೪॥

## ಗ್ರಹಾಣಾಂ ಕಾಲನಿರ್ಣಯಃ

ಟೀಕು ॥ ಸೂರ್ಯನೇ ಆದಿಯಾದ ಸಪ್ತಗ್ರಹಗಳಿಗೆ ಅಯನಾದಿ ಕಾಲವನ್ನು ಕಟುಕಾದಿ ರಸವನ್ನು ಈ ಶ್ಲೋಕದಿಂದ ಹೇಳುತ್ತಾನೆ. ಭಾಸ್ಕರಾತ್ - ಸೂರ್ಯನೇ ಆದಿಯಾಗಿ ಅಯನಾದಿ ಕಾಲಬಲವನ್ನು ತಿಳಿಯಪಡಿಸುತ್ತದೆ. ಅದು ಯಾವ

ಪ್ರಕಾರವೆಂದರೆ - ಅಯನ - ಆರು ಮಾಸಗಳು ಸೂರ್ಯನಿಗೆ, ಕ್ಷಣ ಒಂದು ಮುಹೂರ್ತ ಮಾತ್ರವೇ ಚಂದ್ರನಿಗೆ, ವಾಸರ-ಒಂದು ದಿನ ಕುಜನಿಗೆ, ಋತು-ಎರಡು ಮಾಸಗಳು ಬುಧನಿಗೆ, ಮಾಸ-ಒಂದು ತಿಂಗಳು ಬೃಹಸ್ಪತಿಗೆ, ಮಾಸಾರ್ಧಂ-ಒಂದು ತಿಂಗಳಲ್ಲಿ ಅರ್ಧ ಅಂದರೆ ೧೫ ದಿವಸ ಶುಕ್ರನಿಗೆ, ಸಮಾಃ ಒಂದು ಸಂವತ್ಸರ ಶನಿಗೆ ।। ಸಂವತ್ಸರೋವತ್ಸರೋಬ್ದೋಹಾಯನೋಂ ಸ್ತ್ರಿಶರತ್ಸಮಾಃ ಇತ್ಯಮರಸಿಂಹಃ ।। ಈ ಪ್ರಕಾರವಾಗಿ ಕಾಲನಿರ್ಣಯ ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ದೈವಜ್ಞವಿಲಾಸದಲ್ಲಿ ।।ಶ್ಲೋಕ।। ಅಯನಕ್ಷಣದಿನಋತುವೋಮಾಸಃ ಪಕ್ಷಸ್ತಥಾಜಾಬ್ದಃ ।। ಸೂರ್ಯಾದೀನಾಂ ಕಾಲೋಗಮನಾಗಮನಾದಿ ಚಿಂತಾಯಾಂ ।।೪೬।। ಇದಕ್ಕೆ ಪ್ರಯೋಜನವೇನೆಂದರೆ - ಪ್ರಶ್ನೆ ಲಗ್ನದಲ್ಲಿ ಯಾವ ಗ್ರಹ ಸಂಬಂಧವಾದ ನವಾಂಶ ಉದಯಿಸುವುದೋ, ಆ ಗ್ರಹಕ್ಕೆ ಎಷ್ಟು ಕಾಲ, ಮೇಲೆ ಹೇಳಿದ ಶ್ಲೋಕದ ಪ್ರಕಾರ ಕಾಲವುಕ್ತವಾಗಿರುತ್ತೋ ಅದಕ್ಕೆ ಶುಭಾಶುಭ ಫಲ ಹೇಳಲ್ಪಟ್ಟಿರುತ್ತದೆ. ಮತ್ತು ಕೆಲವರು ಲಗ್ನದಲ್ಲಿ ಎಷ್ಟನೆ ನವಾಂಶ ಉದಯಿಸುವದೋ ಅಷ್ಟು ಮಾತ್ರ ಸಂಖ್ಯೆಯ ಅಯನಾದಿ ಕಾಲವನ್ನು ಅಂಶಪತಿಯ ಮೇಲಿನಿಂದ ಹೇಳುವರು. ಈ ಪ್ರಕಾರವೇ ಮಣಿತ್ಥನೂ ಹೇಳಿರುವುದರಿಂದ ಈ ಪಕ್ಷವನ್ನು ಅಂಗೀಕರಿಸಿರುತ್ತೆ.

## ಅಥ ಗ್ರಹಾಣಾಂ ರಸನಿರ್ಣಯಃ

ಸೂರ್ಯಾದಿ ಗ್ರಹಗಳಿಗೆ ಕ್ರಮವಾಗಿ ಕಟುಕಾದಿ ರಸನಿರ್ಣಯ ಹೇಳಲ್ಪಡುತ್ತೆ. ಕಟುಕ-ಕಾರರಸ ಸೂರ್ಯನಿಗೆ, ಲವಣಂ-ಉಪ್ಪು ಚಂದ್ರನಿಗೆ, ತಿಕ್ತ-ಕಹಿ ಅಂಗಾರಕನಿಗೆ, ಮಿಶ್ರಿತ-ಮಿಶ್ರರಸವು ಅಂದರೆ ಷಡ್ರಸ ಮಿಶ್ರಿತವಾದದ್ದು ಬುಧನಿಗೆ, ಕಷಾಯ-ಒಗರು ಶನೈಶ್ಚರನಿಗೆ, ಈ ಪ್ರಕಾರ ಸೂರ್ಯಾದಿ ಗ್ರಹಗಳಿಗೆ ರಸ ನಿರ್ಣಯುವಾಗಿರುತ್ತೆ. ಈ ವಿಷಯುದಲ್ಲಿ ।।ಶ್ಲೋಕ।। ತಿಕ್ತಸ್ತು ಶನಿರಾಹ್ವೋಶ್ವಮಧುರಂತು ಬೃಹಸ್ಪತೇಃ।। ಅಮ್ಲಂಭೃಗೋರ್ವಿಧೋಃ ಕ್ಷಾರಂ ಕುಜಸ್ಯತಿಕ್ತಕೋರಸಃ।। ತುವರಸ್ಸೋಮಪುತ್ರಸ್ಯ ಭಾಸ್ಕರಸ್ಯ ಕಟುರ್ಭವೇತ್ ।।೪೭।। ಈ ರಸಾದಿಗಳ ಪ್ರಯೋಜನವೇನೆಂದರೆ - ಲಗ್ನಕ್ಕೆ ರಸಸ್ಥಾನ ಷಷ್ಠ ಅಲ್ಲಿ ಈ ಗ್ರಹಗಳು ಯಾರು ಬಲಿಷ್ಠರಾಗಿರುತ್ತಾರೋ ಆ ರಸಪ್ರಧಾನವಾಗಿ ಜಾತಕನು ಭೋಜನ ಮಾಡುವನು. ಮತ್ತು ಚೋರನಷ್ಟ ಪ್ರಶ್ನೆಗಳಲ್ಲಿ ಗ್ರಹಿಸುವುದಕ್ಕೆ ಈ ಶ್ಲೋಕದ ಅರ್ಥ ಪ್ರಯೋಜನವಾಗಿರುವುದು.

## ಗ್ರಹಾಣಾಂ ಶತ್ರುಮಿತ್ರತ್ವ ನಿರ್ಣಯಃ

ಮೂಲ॥ ಜೀವೋಜೀವಬುಧೌ ಸಿತೇಂದುತನಯೌವ್ಯರ್ಕಾವಿ ಭೌಮಾಃ ಕ್ರಮಾತ್ ದ್ವೀಂದ್ವರ್ಕಾವಿಕುಜೇಂ* ದ್ವಿನಾಶ್ಚಸುಹೃದಃಕೇಷಾಂಚಿ ದೇವಂಮತಂ ॥ ಸತ್ಯೋಕ್ತೆಸುಹೃದ ಸ್ತ್ರೀಕೋಣಭವನಾತ್ಸ್ವಾತ್ಸ್ವಾತ್ಯ ಧೀಧರ್ಮಪಾಃ । ಸ್ವೋಚ್ಚಾಯುಸ್ಸುಖಪಾಃ ಸ್ವಲಕ್ಷಣ ವಿಧೇರ್ನಾನ್ಯೇ ವಿರೋಧಾದಿತಿ ॥೧೫॥

ಟೀಕು॥ ಅಥ ಗ್ರಹಾಣಾಂ ಶತೃಮಿತ್ರತ್ವ ನಿರ್ಣಯಃ ॥ ಜೀವಃ-ಬೃಹಸ್ಪತಿ ಸೂರ್ಯನಿಗೆ, ಜೀವಬುಧೌ-ಗುರು ಬುಧರು ಚಂದ್ರನಿಗೆ, ಸೀತೇಂದುತನಯೌ- ಶುಕ್ರ ಬುಧರು ಕುಜನಿಗೆ, ವ್ಯರ್ಕಾಃ-ಸೂರ್ಯ ವರ್ಜಿತವಾದ ಉಳಿದ ಗ್ರಹಗಳು (ಚಂದ್ರ, ಕುಜ, ಗುರು, ಶುಕ್ರ, ಶನಿ) ಬುಧನಿಗೆ, ವಿಭೌಮಾಃ-ಕುಜೇತರ ಗ್ರಹಗಳು (ರವಿ, ಚಂದ್ರ, ಬುಧ, ಶುಕ್ರ, ಶನಿ) ಬ್ರಹಸ್ಪತಿಗೆ, ವೀಂದ್ವರ್ಕಾಃ-ಚಂದ್ರ ಸೂರ್ಯರನ್ನು ಬಿಟ್ಟು, ಉಳಿದ ನಾಲ್ಕು ಗ್ರಹಗಳು (ಕುಜ, ಬುಧ, ಗುರು, ಶನಿ) ಶುಕ್ರನಿಗೆ ವಿಕುಜೇಂದ್ವಿನಾಃ-ಕುಜ ಚಂದ್ರ ಸೂರ್ಯರನ್ನು ಬಿಟ್ಟು ಉಳಿದ (ಬುಧ, ಶುಕ್ರ, ಬೃಹಸ್ಪತಿ) ಶನಿಗೆ, ಸುಹೃದಃ-ಮಿತ್ರರು, ಇತರ ಗ್ರಹಗಳು ಶತ್ರುಗಳು. ಏವಂ-ಈ ಪ್ರಕಾರವಾಗಿ, ತೇಷಾಂಚಿತ್-ಕೆಲವರ, ಮತಂ-ಅಭಿಪ್ರಾಯವಾಗಿರುತ್ತೆ. ಆದರೆ ಈ ಹೇಳಲ್ಪಟ್ಟ, ಮಿತ್ರ-ಶತೃತಾದಿಗಳು ಯವನಾಚಾರ್ಯಾದಿಗಳಿಗೆ ಸಮ್ಮತಿಯಾದಾಗ್ಯೂ, ಬಹು ಗ್ರಂಥಾಭಿಪ್ರಾಯಕ್ಕೆ ಸಮ್ಮತಿಯಾಗುವುದಿಲ್ಲವಾಗಿ ॥ ಯವನಾಚಾರ್ಯಃ ॥ಶ್ಲೋಕ॥ ರವೇರ್ಗುರುರಿತ್ರಮತೋತ್ಯಥಾನ್ಯೇ ಗುರೋಸ್ತುಭೌಮಂ ಪರಿಹೃತ್ಯಸರ್ವೇ॥ ಚಾಂದ್ರೇರನರ್ಕಾ ಭೃಗುನಂದನಸ್ಯ ವ್ಯರೇಂದವೊವ್ಯೆಸುಹೃದಂ ಪ್ರದಿಷ್ಟಾಃ ॥೪೯॥ ಭೌಮಸ್ಯ ಶುಕ್ರಶ್ಶಿಜಶ್ಚಮಿತ್ರ ಮಿಂದೋರ್ಬುಧಃ ದೇವಗುರುಂಚವಿಂದ್ಯಾತ್ ॥ ಸೌರಸ್ಯಮಿತ್ರಾಣ ಕುಜೇಂದು ಸೂರ್ಯಾಶೇಷಾರಿಪೂರ್ ವಿದ್ಧಿನ್ಯಣಾಂಚತದ್ವತ್ ॥೫೦॥ ಎಂದುಕ್ತವಾಗಿರುತ್ತೆ. ಈ ಪಕ್ಷದಲ್ಲಿ ಮಿತ್ರತ್ವ ಶತೃತ್ವ ವ್ಯವಹಾರ ತಿಳಿಸುವುದೇ ಹೊರತು ಸಮತ್ವ ತಿಳಿಸುವುದಿಲ್ಲ. ಆದ್ದರಿಂದ ಸತ್ಯಾಚಾರ್ಯ ಮತವನ್ನು ಅಂಗೀಕರಿಸಬೇಕಾದ್ದು ನ್ಯಾಯವಾಗಿರುತ್ತೆ. ಸತ್ಯಾಚಾರ್ಯೋಕ್ತ ಹೋರಾಶಾಸ್ತ್ರೆ॥ ಗ್ರಹಗಳಿಗೆ-ಸ್ವಾತ್-ತನ್ನ ಸಂಬಂಧವಾದ, ತ್ರಿಕೋಣಭವನಾತ್-ಮೂಲ ತ್ರಿಕೋಣರಾಶಿ ಮೊದಲುಗೊಂಡು, ಸ್ವಾಂತ್ಯಧೀಧರ್ಮಪಾಃ - ದ್ವಿತೀಯ,

* ಕುಜೇಂದವಶ್ಚ - ಎಂದು ಉತ್ತರ ದೇಶಿಯ ಪಾಠವಿದೆ.

ದ್ವಾದಶ, ಪಂಚಮ ನವಮಾಧಿಪತಿಗಳು, ಸ್ವೇಚ್ಚಾಯುಸ್ಸುಖಿಪಾಃ - ತನ್ನ ಉಚ್ಚರಾಶ್ಯಾಧಿಪತಿಯು, ಆಯುಸ್ಥಾನಾಧಿಪತಿಯಾದ ಅಂದರೆ (ಅಷ್ಟಮಾಧಿಪತಿಯು) ಸುಖಸ್ಥಾನಾಧಿಪತಿಯು, (೪ನೆ ಸ್ಥಾನಾಧಿಪತಿಯು) ಈ ಹೇಳಲ್ಪಟ್ಟ ತನ್ನ ಉಚ್ಚದ್ವಿತೀಯ, ಚತುರ್ಥ, ಪಂಚಮ, ಅಷ್ಟಮ, ನವಮ, ದ್ವಾದಶ ಸ್ಥಾನಾಧಿಪತಿಗಳು, ಸುಹೃದಃ-ಮಿತ್ರರು, ಸ್ವಲಕ್ಷಣವಿಧೇಃ-ಈ ಹೇಳಲ್ಪಟ್ಟ ಮಿತ್ರಲಕ್ಷಣ ವಿಧಿಗೆ, ವಿರೋಧಾತ್-ವ್ಯತಿರಿಕ್ತವಾಗಿದ್ದ, ಅನ್ಯೇ-ಉಕ್ತ ವ್ಯತಿರಿಕ್ತ ಗ್ರಹಗಳು, ಅಂದರೆ ಹೇಳಲ್ಪಡದಿರುವ ಗ್ರಹಗಳು, ನಸುಹೃದಃ-ಮಿತ್ರರಾಗುವುದಿಲ್ಲ. ಈ ಪ್ರಕಾರ ಹೇಳಲ್ಪಟ್ಟಿರುತ್ತೆ. ಅಂದರೆ ಯಾವ ಸ್ಥಾನಾಧಿಪತಿಗೆ ಮಿತ್ರತ್ವ ಹೇಳಲ್ಪಟ್ಟಿರುತ್ತೋ ತದಿತರ ಸ್ಥಾನಾಧಿಪತಿಗಳು ಮಿತ್ರರಾಗುವುದಿಲ್ಲ, ಈ ಪ್ರಕಾರವೇ ಸತ್ಯಾಚಾರ್ಯರು ।।ಶ್ಲೋಕ।। ಸುಹೃದಸ್ತ್ರಿಕೋಣಭವನಾದ್ಗ್ರಹಸ್ಯ ಸುತಭೇವ್ಯಯೇಥಧನಭವನೇ ।। ಸ್ವಜನೇನಿಧನೇಧರ್ಮೇ ಸ್ವೋಚ್ಚೇಚ ಭವಂತಿನೋಽಶೇಷಾಃ ।।೫೧।। ಸ್ವಜನವೆಂದರೆ ಚತುರ್ಥಸ್ಥಾನ ।।ಇಲ್ಲಿ ತಿಳಿಯ ಬೇಕಾದ ಅಂಶವೇನೆಂದರೆ:- ದ್ವಿರಾಶ್ಯಧಿಪತಿಗೆ ದ್ವಿಮಿತ್ರಸ್ಥಾನ ಬಂದಿದ್ದರೆ ಮಿತ್ರನಾಗುವನು. ಅದೇ ದ್ವಿರಾಶ್ಯಧಿಪತಿಗೆ ಏಕಮಿತ್ರಸ್ಥಾನ ಬಂದರೆ ಸಮನಾಗುವನು. ಮಿತ್ರಸ್ಥಾನ ಬಾರದೇ ಹೋದರೆ ಶತ್ರುವಾಗುವನು. ಈ ಪ್ರಕಾರವೇ ವಕ್ಷ್ಯಮಾಣ ಶ್ಲೋಕದಲ್ಲಿ ಉತ್ತರಾರ್ಧದಲ್ಲಿ ಹೇಳಲ್ಪಟ್ಟಿರುತ್ತೆ. ।।ಶ್ಲೋಕ।। ದ್ವ್ಯೇಕಾನುಕ್ತಭವಾ ಸುಹೃತ್ಸಮರಿಪೂ ಸಂಚಿಂತ್ಯನೈಸಗಿಕಾಗಿ ।।೫೨।। ಏಕರಾಶ್ಯಾಧಿಪತಿ ಸೂರ್ಯಚಂದ್ರರಿಗೆ ಮಾತ್ರ ಅನ್ವಯಿಸುತ್ತೆ. ಅಂದರೆ ಸೂರ್ಯ ಚಂದ್ರರಿಗೆ ರಾಶಿದ್ವಯಾಧಿಪತ್ಯವಿಲ್ಲದ್ದರಿಂದ ಅವರಿಗೆ ಉಕ್ತಸ್ಥಾನಗಳಲ್ಲಿ ಏಕಮಿತ್ರಸ್ಥಾನ ಬಂದರೆ ಮಿತ್ರರಾಗುವರು. ದ್ವಿರಾಶ್ಯಧಿಪತಿ ಉಚ್ಚ ರಾಶ್ಯಧಿಪತಿತ್ವದಿಂದ ತ್ರಿರಾಶ್ಯಧಿಪತಿಯಾಗುವನು. ಏಕರಾಶ್ಯಧಿಪತಿಗಳಾದ ಸೂರ್ಯ ಚಂದ್ರರು ಉಚ್ಚರಾಶ್ಯಧಿಪತಿತ್ವದಿಂದ ರಾಶಿದ್ವಯಾಧಿಪತ್ಯ ಉಳ್ಳವರಾಗುವರು. ಆದ್ದರಿಂದ ಯಾವ ಗ್ರಹಕ್ಕೆ ಶತ್ರುಮಿತ್ರತ್ವವನ್ನು ನಿರ್ಣಯಿಸಬೇಕಾದರೂ ಈ ಕ್ರಮವನ್ನನುಸರಿಸಬೇಕು. ಸರ್ವರಿಗೂ ಸುಲಭವಾಗುವಂತೆ ವಿವರಿಸಲ್ಪಟ್ಟಿರುತ್ತೆ.

## ಸೂರ್ಯನಿಗೆ ಮಿತ್ರತ್ವ ನಿರ್ಣಯ

ಸೂರ್ಯನಿಗೆ ಸಿಂಹಮೂಲ ತ್ರಿಕೋಣ, ಅದಕ್ಕೆ ದ್ವಾದಶರಾಶಿ ಕರ್ಕಾಟಕ, ಅದಕ್ಕಧಿಪತಿ ಚಂದ್ರ, ದ್ವಿರಾಶ್ಯಾಧಿಪತ್ಯವಿಲ್ಲದಿರುವುದರಿಂದ ಮಿತ್ರನು, ಸಿಂಹಕ್ಕೆ ನಾಲ್ಕನೇ ವೃಶ್ಚಿಕ, ಅದಕ್ಕಧಿಪತಿ ಕುಜ, ಸೂರ್ಯನಿಗೆ ಉಚ್ಚಸ್ಥಾನ ಮೇಷ (ಮತ್ತು

೯ನೇ ರಾಶ್ಯಧಿಪತಿಯು ಕುಜನೇ) ಆದ್ದರಿಂದ ರಾಶಿ ದ್ವಯಾಧಿಕಾರವುಳ್ಳ ಕುಜನು ಮಿತ್ರ, ಇಲ್ಲಿ ಉಕ್ತಸ್ಥಾನಗಳೆರಡೇ ಗ್ರಾಹ್ಯ ಮಾಡಬೇಕು. ಸಿಂಹಕ್ಕೆ ಪಂಚಮ ಧನುಸ್ಸು, ಅದಕ್ಕಧಿಪತಿ ಗುರು, ಮೀನ ಅಷ್ಟಮ, ಅದಕ್ಕಧಿಪತಿ ಗುರು, ವಕ್ಷ್ಯಮಾಣ ಶ್ಲೋಕದಲ್ಲಿ ೫-೮ನೆ ಸ್ಥಾನ ಮಿತ್ರಸ್ಥಾನಕ್ಕೆ ಸೇರಿರುವುದರಿಂದ, ರಾಶಿದ್ವಯಾಧಿಕಾರವುಳ್ಳ ಬೃಹಸ್ಪತಿಯು ಮಿತ್ರನು, ಸಿಂಹಕ್ಕೆ ದ್ವಿತೀಯೇಕಾದಶ ಕನ್ಯಾ ಮಿಥುನ, ಅದಕ್ಕೆ ಅಧಿಪತಿ ಬುಧ ದ್ವಿತೀಯ ಉಕ್ತ ಮಿತ್ರಸ್ಥಾನ, ಏಕಾದಶಸ್ಥಾನ ಅನುಕ್ತವಾದ್ದರಿಂದ, ಮಿತ್ರ ಸಂಜ್ಞಾಸ್ಥಾನ ದ್ವಿತೀಯಸ್ಥಾನ ಮಾತ್ರವೇ ಬಂದದ್ದರಿಂದ ಸೂರ್ಯನಿಗೆ ಬುಧ ಸಮ, ಸಿಂಹಕ್ಕೆ ತೃತೀಯ ದಶಮಸ್ಥಾನ ತುಲಾ, ವೃಷಭ ಇದಕ್ಕಧಿಪತಿ ಶುಕ್ರ ಮಿತ್ರರೆಂದುಕ್ತ ಸ್ಥಾನವಾದದ್ದು ೨-೪-೫-೯-೧೨ ಇದರಲ್ಲಿ ಯಾವುದೂ ಬರಲಿಲ್ಲವಾದ್ದರಿಂದ, ಸೂರ್ಯನಿಗೆ ಶುಕ್ರ ಶತ್ರು, ಸಿಂಹಕ್ಕೆ ೬-೭ನೇ ಅಧಿಪತಿ ಶನಿ. ೬-೭ನೇ ಸ್ಥಾನ ಮಿತ್ರನೆಂದುಕ್ತ ಸ್ಥಾನದಲ್ಲಿ ಬರಲಿಲ್ಲವಾದ್ದರಿಂದ ಸೂರ್ಯನಿಗೆ ಶನಿ ಶತ್ರು. ಈ ಕ್ರಮದಿಂದ ಸೂರ್ಯನಿಗೆ ಚಂದ್ರ, ಗುರು, ಕುಜರು ಮಿತ್ರರು, ಬುಧ ಸಮ, ಶನಿ ಶುಕ್ರರು ಶತ್ರುಗಳು.

## ಚಂದ್ರನಿಗೆ ಮಿತ್ರತ್ವ ನಿರ್ಣಯ

ಚಂದ್ರನಿಗೆ ವೃಷಭ ಮೂಲತ್ರಿಕೋಣ-ಅದಕ್ಕಧಿಪತಿ ಶುಕ್ರ-ಇದಕ್ಕೆ ೬ನೆ ರಾಶಿ ತುಲಾ-ಅದಕ್ಕೂ ಅಧಿಪತಿ ಶುಕ್ರ, ಆದ್ದರಿಂದ ಮಿತ್ರಸ್ಥಾನ ಉಕ್ತವಾಗಿಲ್ಲ. ಆದಾಗ್ಯೂ ಉಚ್ಚಸ್ಥಾನಾಧಿಪತಿಯಾದ್ದರಿಂದ ಚಂದ್ರನಿಗೆ ಶುಕ್ರ ಸಮ, ವೃಷಭಕ್ಕೆ ಮಿಥುನರಾಶಿ ದ್ವಿತೀಯ ಕನ್ಯಾರಾಶಿ ಪಂಚಮ. ಇವೆರಡಕ್ಕು ಬುಧ ಅಧಿಪತಿ ಆದ್ದರಿಂದ ಮಿತ್ರಸ್ಥಾನೋಕ್ತವಾದ ೨-೫ ಅಧಿಪತ್ಯವಿರುವ ಬುಧನು ಚಂದ್ರನಿಗೆ ಮಿತ್ರ, ವೃಷಭಕ್ಕೆ ಸಿಂಹ ಚತುರ್ಥಸ್ಥಾನ-ಅದಕ್ಕಧಿಪತಿ ಸೂರ್ಯ, ಸೂರ್ಯನಿಗೆ ಏಕರಾಶ್ಯಾಧಿಪತ್ಯ ಇರುವುದರಿಂದ ಸೂರ್ಯ ಮಿತ್ರ, ವೃಷಭಕ್ಕೆ ವೃಶ್ಚಿಕ ಸಪ್ತಮ-ಮೇಷದ್ವಾದಶ ಇವೆರಡಕ್ಕೂ ಅಧಿಪತಿ ಕುಜ, ಮಿತ್ರಸ್ಥಾನ ಮೂಲಸೂತ್ರದ ಪ್ರಕಾರ ೭-೧೨ನೇ ಅಧಿಪತಿಯಾದ ಕುಜನು ಸಮನು. ವೃಷಭಕ್ಕೆ ಧನುವು ಅಷ್ಟಮರಾಶಿ-ಅದಕ್ಕಧಿಪತಿ ಗುರು, ಮೀನ ೧೧ನೇ ರಾಶಿ-ಅದಕ್ಕಧಿಪತಿ ಗುರು, ಇಲ್ಲಿ ಮೂಲಸೂತ್ರದ ಪ್ರಕಾರ ೮ ಉಕ್ತಮಿತ್ರ ರಾಶಿ, ೧೦ ಅನುಕ್ತರಾಶಿ, ಗುರುವಿಗೆ ರಾಶಿದ್ವಯಾಧಿಪತ್ಯ ಇರುವುದರಿಂದ, ಚಂದ್ರನಿಗೆ ಗುರು ಸಮ, ವೃಷಭಕ್ಕೆ ಮಕರ ೯ನೆ ರಾಶಿ. ಅದಕ್ಕಧಿಪತಿ ಶನಿ, ಕುಂಭ ೧೦ನೇ ರಾಶಿ ಅಧಿಪತಿ ಶನಿ, ಮೂಲಸೂತ್ರ ಪ್ರಕಾರ ದ್ವಿರಾಶ್ಯಧಿಪತಿ ಶನಿಗೆ ಮಕರಾಧಿಪತ್ಯ ಮಾತ್ರ ಮಿತ್ರತ್ವಕ್ಕೆ ಸೇರಿರುವುದರಿಂದ

ಚಂದ್ರನಿಗೆ ಸಮ ಆದ್ದರಿಂದ ಚಂದ್ರನಿಗೆ ಬುಧ ರವಿ ಈ ಎರಡು ಗ್ರಹಗಳೇ ಮಿತ್ರರು. ಉಳಿದ ಕುಜ, ಶನಿ, ಶುಕ್ರ ಗುರು ಸಮರು. ಶತೃಗಳಿಲ್ಲ -

## ಕುಜನಿಗೆ ಮಿತ್ರತ್ವ ನಿರ್ಣಯ

ಕುಜನಿಗೆ ಮೇಷ ಮೂಲತ್ರಿಕೋಣ, ಇದಕ್ಕೆ ೨ನೆ ರಾಶಿ ವೃಷಭ, ೭ನೆ ರಾಶಿ ತುಲಾ, ಇವೆರಡಕ್ಕೂ ಅಧಿಪತಿ ಶುಕ್ರ. ಶುಕ್ರನಿಗೆ ರಾಶಿದ್ವಯಾಧಿಪತ್ಯ ಮೂಲಸೂತ್ರಪ್ರಕಾರ ಮಿತ್ರಸ್ಥಾನದಲ್ಲಿ ಸೇರಿರುತ್ತೆ. ತುಲಾ ಸೇರುವುದಿಲ್ಲವಾದ್ದರಿಂದ, ಕುಜನಿಗೆ ಶುಕ್ರಸಮ. ಮೇಷಕ್ಕೆ ಮಿಥುನ ತೃತೀಯ, ಕನ್ಯಾ ಷಷ್ಠ - ಇವೆರಡು ಸ್ಥಾನಕ್ಕೆ ಬುಧನೇ ಅಧಿಪತಿ. ೬--೩ನೇ ಸ್ಥಾನ ಮೂಲಸೂತ್ರದ ಪ್ರಕಾರ ಮಿತ್ರಸ್ಥಾನದಲ್ಲಿ ಸೇರಲಿಲ್ಲ. ಆದ್ದರಿಂದ ಕುಜನಿಗೆ ಬುಧ ಶತೃ, ಮೇಷಕ್ಕೆ ಧನುಸ್ಸು, ೯ನೇ ರಾಶಿ ಮೀನ, ೧೨ನೇ ರಾಶಿ ಇವೆರಡಕ್ಕೂ ಗುರು ಅಧಿಪತಿ, ಮೂಲ ಸೂತ್ರದ ಪ್ರಕಾರ ಮಿತ್ರ ಸ್ಥಾನಗಳೆರಡು. ೯-೧೨ ಆದ್ದರಿಂದ ಕುಜನಿಗೆ ಗುರು ಮಿತ್ರ, ಮೇಷಕ್ಕೆ ಮಕರ, ಕುಂಭ ೧೦-೧೧ನೇ ರಾಶಿ ಆದಕ್ಕಧಿಪತಿ ಶನಿ, ಮೂಲ ಸೂತ್ರದ ಪ್ರಕಾರ ಮಿತ್ರಸ್ಥಾನ ಬರಲಿಲ್ಲ, ಆದ್ದರಿಂದ ಕುಜನಿಗೆ ಶನಿ ಶತೃವೆಂದು ಹೇಳಬಹುದು, ಆದರೆ ಅಂಗಾರಕನಿಗೆ ಮಕರರಾಶಿ ಉಚ್ಚ ಆದ್ದರಿಂದ ಕುಜನಿಗೆ ಶನಿ ಸಮ, ॥ ಕುಜನಿಗೆ, ಗುರು, ಚಂದ್ರ, ಸೂರ್ಯರು ಮಿತ್ರರು, ಶನಿ ಸಮ, ಬುಧ, ಶನಿಗಳು ಶತೃಗಳು (ಬುಧಾಂಗಾರಕಯೋರಿವ ಎಂದು ರಾಮಾಯಣದಲ್ಲಿ ಹೇಳಿದೆ.)

## ಬುಧನಿಗೆ ಮಿತ್ರತ್ವ ನಿರ್ಣಯ

ಬುಧನಿಗೆ ಕನ್ಯಾರಾಶಿ ಮೂಲತ್ರಿಕೋಣ, ಕನ್ಯಾರಾಶಿಗೆ-ತುಲಾ ವೃಷಭ, ೨-೯ನೇ ರಾಶಿ, ಇವೆರಡಕ್ಕೂ ಅಧಿಪತಿ ಶುಕ್ರ, ಆದ್ದರಿಂದ. ಬುಧನಿಗೆ ಶುಕ್ರ ಮಿತ್ರ. ಕನ್ಯಾಕ್ಕೆ ವೃಶ್ಚಿಕ ಮೇಷ ೩-೮ನೇ ರಾಶಿ, ಇವೆರಡಕ್ಕೂ ಕುಜ ಅಧಿಪತಿ, ಇಲ್ಲಿ ೮ನೇ ಸ್ಥಾನ ಮಾತ್ರ ಉಕ್ತ ಮಿತ್ರಸ್ಥಾನವಾದ್ದರಿಂದ ಬುಧನಿಗೆ ಕುಜ ಸಮ, ಕನ್ಯಾಕ್ಕೆ ಧನುಸ್ಸು ೪, ಮೀನ ೭, ಇವೆರಡು ರಾಶಿಗೂ ಗುರು ಅಧಿಪತಿ, ೪ ಉಕ್ತ ಮಿತ್ರಸ್ಥಾನ ೭ನೇ ಸ್ಥಾನವಾದ್ದರಿಂದ ಬುಧನಿಗೆ ಗುರು ಸಮ, ಕನ್ಯಾಕ್ಕೆ ಮಕರ ೫ನೇ ಸ್ಥಾನ, ಕುಂಭ ೬ನೇ ಸ್ಥಾನ, ಇವೆರಡಕ್ಕೂ ಶನಿ ಅಧಿಪತಿ, ಉಕ್ತಮಿತ್ರ ಸ್ಥಾನ ೫ ಆದ್ದರಿಂದ ಬುಧನಿಗೆ ಶನಿ ಸಮ. ಕನ್ಯಾಕ್ಕೆ ಚಂದ್ರನು ೧೧ನೇ ಸ್ಥಾನಾಧಿಪತಿ, ಮಿತ್ರಸ್ಥಾನ ೧೧ ಉಕ್ತವಾಗಿಲ್ಲವಾದ್ದರಿಂದ ಬುಧನಿಗೆ ಚಂದ್ರ ಶತೃ,

ಕನ್ಯಾಕ್ಕೆ ಸಿಂಹ ೧೨ನೇ ಸ್ಥಾನ-ಅದಕ್ಕಧಿಪತಿ ಸೂರ್ಯ, ೧೨ ಮಿತ್ರಸ್ಥಾನ ಉಕ್ತವಾಗಿರುತ್ತೆ. ಆದ್ದರಿಂದ ಬುಧನಿಗೆ ಸೂರ್ಯ ಮಿತ್ರ. ಈ ಪ್ರಕಾರ ಬುಧನಿಗೆ ಸೂರ್ಯ-ಶುಕ್ರರು ಮಿತ್ರರು, ಚಂದ್ರನೊಬ್ಬನೇ ಶತೃವು, ಉಳಿದ ಕುಜ, ಗುರು, ಶನಿ ಇವರುಗಳು ಸಮರು.

## ಬೃಹಸ್ಪತಿಗೆ ಮಿತ್ರತ್ವ ನಿರ್ಣಯ

ಬೃಹಸ್ಪತಿಗೆ ಮೂಲ ತ್ರಿಕೋಣ, ಧನುಸ್ಸಿಗೆ ಮಕರ-ಕುಂಭ ೨-೩ನೇ ಸ್ಥಾನ, ಈ ಎರಡು ಸ್ಥಾನಕ್ಕೆ ಶನಿ ಅಧಿಪತಿ, ೨ನೇ ಮಕರ ಮಾತ್ರ ಮಿತ್ರಸ್ಥಾನದಲ್ಲೇ ಸೇರಿರುತ್ತೆ. ಆದ್ದರಿಂದ ಬೃಹಸ್ಪತಿಗೆ ಶನಿ-ಸಮ, ಧನುಸ್ಸಿಗೆ ಮೇಷ ೫ನೇ ಸ್ಥಾನ, ವೃಶ್ಚಿಕ ೧೨ನೇ ಸ್ಥಾನ, ಇವೆರಡಕ್ಕೂ ಕುಜನಧಿಪತಿ. ೫-೧೨ ಎರಡು ಸ್ಥಾನಗಳು ಮಿತ್ರಸ್ಥಾನ, ಆದ್ದರಿಂದ ಬೃಹಸ್ಪತಿಗೆ ಕುಜ ಮಿತ್ರ. ಧನುಸ್ಸಿಗೆ ವೃಷಭ ೬ನೇ ಸ್ಥಾನ, ತುಲಾ ೧೧ನೇ ಸ್ಥಾನ ಇವೆರಡು ಸ್ಥಾನಕ್ಕೂ ಶುಕ್ರನಧಿಪತಿ, ಮಿತ್ರಸ್ಥಾನದಲ್ಲಿ ಇವೆರಡು ಸ್ಥಾನಗಳು ಸೇರಿಲ್ಲವಾದ್ದರಿಂದ, ಬೃಹಸ್ಪತಿಗೆ ಶುಕ್ರ ಶತೃ. ಧನುಸ್ಸಿಗೆ ಮಿಥುನ ೭ನೇ ಸ್ಥಾನ, ಕನ್ಯಾ ೧೦ನೇ ಸ್ಥಾನ, ಇವೆರಡಕ್ಕೂ ಬುಧನಧಿಪತಿ, ಆದ್ದರಿಂದ ಬೃಹಸ್ಪತಿಗೆ ಬುಧ ಶತೃ. ಧನುಸ್ಸಿಗೆ ಕಟಕ ೮ನೇ ರಾಶಿ, ಸಿಂಹ ೯ನೇ ರಾಶಿ, ಇವೆರಡಕ್ಕೂ ಚಂದ್ರ-ಸೂರ್ಯರು ಏಕರಾಶ್ಯಧಿಪತಿಗಳು, ಆದ್ದರಿಂದ ಬೃಹಸ್ಪತಿಗೆ ಚಂದ್ರ-ಸೂರ್ಯರು ಮಿತ್ರರು. ಈ ಪ್ರಕಾರ ಬೃಹಸ್ಪತಿಗೆ ಚಂದ್ರ-ಸೂರ್ಯ, ಕುಜರು ಮಿತ್ರರು. ಶನಿ ಸಮ, ಶುಕ್ರ-ಬುಧರು ಶತೃಗಳು.

## ಶುಕ್ರನಿಗೆ ಮಿತ್ರತ್ವ ನಿರ್ಣಯ

ಶುಕ್ರನಿಗೆ ತುಲಾ ಮೂಲತ್ರಿಕೋಣ, ತುಲೆಗೆ ವೃಶ್ಚಿಕ ೨, ಮೇಷ ೭ ಇವೆರಡಕ್ಕೂ ಕುಜನಧಿಪತಿ, ಮಿತ್ರಸ್ಥಾನ ೨ನೇ ಸ್ಥಾನಮಾತ್ರ ಆದ್ದರಿಂದ ಶುಕ್ರನಿಗೆ ಕುಜ ಸಮ. ತುಲೆಗೆ ಧನುಸ್ಸು ೩, ಮೀನ ೬, ಮತ್ತು ಮೀನ ಶುಕ್ರನಿಗೆ ಉಚ್ಚರಾಶಿ, ಆದ್ದರಿಂದ ಶುಕ್ರನಿಗೆ ಗುರು ಸಮ. ಶುಕ್ರನಿಗೆ ಮೂಲತ್ರಿಕೋಣವಾದ ತುಲೆಗೆ ಮಿಥುನ ೯, ಕನ್ಯಾ ೧೨ ಅವೆರಡಕ್ಕೆ ಬುಧನಧಿಪತಿ, ೯-೧೨ ಮಿತ್ರಸ್ಥಾನವಾದ್ದರಿಂದ ಶುಕ್ರನಿಗೆ ಬುಧ ಮಿತ್ರ. ತುಲೆಗೆ ಕಟಕ ೧೦, ಅದಕ್ಕಧಿಪತಿ ಚಂದ್ರ, ಆದ್ದರಿಂದ ಶುಕ್ರನಿಗೆ ಸೂರ್ಯ ಶತೃ. ತುಲೆಗೆ ಸಿಂಹ ೧೧, ಅದಕ್ಕಧಿಪತಿ ಸೂರ್ಯ ಆದ್ದರಿಂದ ಶುಕ್ರನಿಗೆ ಸೂರ್ಯ ಶತೃ. ಈ ಪ್ರಕಾರ ಶುಕ್ರನಿಗೆ ಬುಧ ಶನಿಗಳು ಮಿತ್ರರು, ಗುರು-ಕುಜರು ಸಮರು, ಸೂರ್ಯ-ಚಂದ್ರರು ಶತೃಗಳು.

## ಶನಿಗೆ ಮಿತ್ರತ್ವ ನಿರ್ಣಯ

ಶನಿಗೆ ಮೂಲ ತ್ರಿಕೋಣ ಕುಂಭರಾಶಿ, ಇದಕ್ಕೆ ಮೀನ ೨, ಧನುಸ್ಸು ೧೧ ಇವೆರಡಕ್ಕು ಗುರು ಅಧಿಪತಿ, ಮಿತ್ರಸ್ಥಾನ ದ್ವಿತೀಯ ಮೀನ ಆದ್ದರಿಂದ ಗುರು ಅಧಿಪತಿ, ಆದ್ದರಿಂದ ಶನಿಗೆ ಗುರು ಸಮ. ಕುಂಭಕ್ಕೆ ಮೇಷ ೩, ವೃಶ್ಚಿಕ ೧೦ ಇವೆರಡಕ್ಕೆ ಕುಜನಧಿಪತಿ ೩-೧೦ ಎರಡಕ್ಕೂ ಅಧಿಪತಿಯಾದ ಕುಜ ಶತ್ರು, ಕುಂಭಕ್ಕೆ ವೃಷಭ ೪, ತುಲೆ ೯ ಇವೆರಡಕ್ಕು ಶುಕ್ರನಧಿಪತಿ, ಮಿತ್ರಸ್ಥಾನ, ೪-೯ ಆದ್ದರಿಂದ ಶನಿಗೆ ಶುಕ್ರ ಮಿತ್ರ. ಕುಂಭಕ್ಕೆ ಕಟಕ ೬, ಸಿಂಹ ೭, ಇವೆರಡು ರಾಶಿಗಳಿಗೂ ಚಂದ್ರ-ಸೂರ್ಯರು ಅಧಿಪತಿಗಳು, ೬-೭ ಈ ಎರಡು ಸ್ಥಾನಗಳು ಮಿತ್ರಸ್ಥಾನದಲ್ಲಿ ಸೇರಲಿಲ್ಲ. ಆದ್ದರಿಂದ ಶನಿಗೆ ಚಂದ್ರ-ಸೂರ್ಯರು ಶತ್ರುಗಳು. ಕುಂಭಕ್ಕೆ ಮಿಥುನ ೫, ಕನ್ಯೆ ೮ ಇವೆರಡಕ್ಕೂ ಬುಧನಧಿಪತಿ, ಮಿತ್ರಸ್ಥಾನದಲ್ಲಿ ೫-೮ ಸೇರಿರುತ್ತೆ. ಆದ್ದರಿಂದ ಶನಿಗೆ ಬುಧ ಮಿತ್ರ. ಈ ಪ್ರಕಾರವಾಗಿ ಶನಿಗೆ ಶುಕ್ರ ಬುಧರು ಮಿತ್ರರು, ಗುರು ಸಮ, ಕುಜ, ಚಂದ್ರ, ರವಿ ಈ ಮೂರು ಗ್ರಹಗಳು ಶತ್ರುಗಳು.

### ಅಥನಿಸರ್ಗಮೈತ್ರಿ ಚಕ್ರಂ

| ಸಂಖ್ಯೆ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ಮಿತ್ರಾದಿ |
|---|---|---|---|---|---|---|---|---|
| ೧. | ಚಂದ್ರ ಕುಜ ಗುರು | ಸೂರ್ಯ ಬುಧ | ರವಿ ಚಂದ್ರ ಗುರು | ರವಿ ಶುಕ್ರ | ರವಿ ಚಂದ್ರ ಕುಜ | ಬುಧ ಶನಿ | ಬುಧ ಶುಕ್ರ | ಮಿತ್ರ |
| ೨. | ಬುಧ | ಕುಜ ಗುರು ಶುಕ್ರ ಶನಿ | ಶುಕ್ರ ಶನಿ | ಕುಜ ಗುರು ಶನಿ | ಶನಿ | ಕುಜ ಗುರು | ಗುರು | ಸಮ |
| ೩. | ಶುಕ್ರ ಶನಿ | ೦ | ಬುಧ | ಚಂದ್ರ | ಬುಧ ಶುಕ್ರ | ರವಿ ಚಂದ್ರ | ರವಿ ಚಂದ್ರ ಕುಜ | ಶತ್ರು |

ಈ ಪದಕದಿಂದ ನೈಸರ್ಗಿಕ ಮಿತ್ರತ್ವ ಸ್ಪಷ್ಟವಾಗುತ್ತೆ.

## ಗ್ರಹಾಣಾಂ ಶತ್ರುಮಿತ್ರತ್ವ ನಿರ್ಣಯಃ

ಮೂಲ।। ಶತ್ರುಮಂದಸಿತೌ ಸಮಶ್ಚಶಶಿಜೋ ಮಿತ್ರಾಣಿ ಶೇಷಾರವೇ ಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚ ಸುಹೃದೌ ಶೇಷಾಸ್ಸಮಾಶ್ಶೀತಗೋಃ।। ಜೀವೇಂದೂಷ್ಣಕರಾಃ ಕುಜಸ್ಯಸುಹೃದೋಜ್ಞೋರಿಸ್ಸಿತಾರ್ಕಿಸಮ್। ಮಿತ್ರೇಸೂರ್ಯಸಿತೌ ಬುಧಸ್ಯಹಿಮಗುಶ್ಶತ್ರುಸ್ಸಮಾಶ್ಚಾಪರೇ ।।೧೬।।

ಟೀಕು।। ವರಾಹಮಿಹಿರಾಚಾರ್ಯರು ಪೂರ್ವೋಕ್ತವಾದ ಸತ್ಯಾಚಾರ್ಯ ಮತಕ್ಕನುಸಾರವಾಗಿ ಸೂರ್ಯಾದಿ ಗ್ರಹಗಳಿಗೆ ಶತ್ರು-ಮಿತ್ರತ್ವವನ್ನು ಹೇಳುತ್ತಾರೆ.

ರವೇಃ ಸೂರ್ಯನಿಗೆ, ಮಂದಸಿತೌ-ಶನಿ ಶುಕ್ರರು, ಶತ್ರು-ಶತ್ರುಗಳು, ಶಶಿಜಃ-ಬುಧನು, ಸಮಃ - ಸಮನೆಂದರೆ ಮಧ್ಯನಾದವನು, ಶೇಷಾಃ-ಉಳಿದ ಚಂದ್ರ, ಗುರು, ಕುಜರು, ಮಿತ್ರಾಣಿ-ಮಿತ್ರರು, ಶೀತಗೋಃ-ಚಂದ್ರನಿಗೆ, ತೀಕ್ಷ್ಣಾಂಶುಃ-ಸೂರ್ಯನು, ಹಿಮರಶ್ಮಿಜಶ್ಚ-ಚಂದ್ರನ ಮಗನಾದ ಬುಧನು, ಸುಹೃದೌ-ಮಿತ್ರರು, ಶೇಷಾಃ ಉಳಿದ ಕುಜ, ಗುರು, ಶುಕ್ರ, ಶನಿಗಳು, ಸಮಾಃ-ಮಧ್ಯಸ್ಥರು, ಚಂದ್ರನಿಗೆ ಶತ್ರುಗಳೇ ಇಲ್ಲ. ಕುಜಸ್ಯ-- ಅಂಗಾರಕನಿಗೆ ಜೀವೇಂದೂಷ್ಣಕರಾಃ - ಗುರು, ಚಂದ್ರ, ಸೂರ್ಯರು, ಸುಹೃದಃ-ಮಿತ್ರರು, ಜ್ಞಃ-ಬುಧನು, ಅರಿಃ-ಶತ್ರುವು, ಸಿತಾರ್ಕೀ-ಶುಕ್ರ ಶನಿಗಳು, ಸಮ್-ಸಮರು. ಬುಧಸ್ಯ-ಬುಧನಿಗೆ, ಸೂರ್ಯಹಿತೌ-ರವಿ ಶುಕ್ರರು, ಮಿತ್ರೇ-ಮಿತ್ರರು, ಹಿಮಗುಃ-ಚಂದ್ರನು, ಶತ್ರು-ಶತ್ರುವು, ಅಪರೇ-ಕುಜ, ಗುರು, ಶನಿಗಳು, ಸಮಾಃ-ಮಧ್ಯಸ್ಥರಾದವರು. ಈ ಪ್ರಕಾರ ತಿಳಿಯತಕ್ಕದ್ದು. ಇದಕ್ಕೆ ಸಮ್ಮತಿ ।।ಪರಾಶರಃ।। ।।ಶ್ಲೋಕ।। ರವೇಃ ಸಮೋಜ್ಞಃ ಸಿತಸೂರ್ಯಪುತ್ರಾವರೀ ಪರೇಯೇಸು ಹೃದೋವರಾಯಃ।। ಚಂದ್ರಸ್ಯನಾರೀ ರವಿಚಂದ್ರಪುತ್ರೌ ಮಿತ್ರೇಸಮಾಃ ಶೇಷನಭಶ್ಚ ರಾಸ್ಸ್ಯುಃ ।।೫೩।। ಸಮೌಸಿತಾರ್ಕೀ ಶಶಿಜಶ್ಚ ಶತ್ರುರ್ಮಿತ್ರಾಣಿ ಶೇಷಾಃ ಪೃಥಿವೀ ಸುತಸ್ಯ ।। ಶತ್ರುಃಶಶೀ ಸೂರ್ಯಸಿತೌಚ ಮಿತ್ರೇಸಮಾಃ ಪರೇಸ್ಸ್ಯುಃ ಶಶಿನಂದ ನಸ್ಯ ।।೫೪।।

ಮೂಲ।। ಸೂರೇಸ್ಸೌಮ್ಯಸಿತಾವರೀ ರವಿಸುತೋ ಮಧ್ಯಃಪರೇತ್ವನ್ಯಥಾ ಸೌಮ್ಯಾರ್ಕಿಸುಹೃದೌಸಮೌ ಕುಜಗುರೂಶುಕ್ರಸ್ಯಶೇಷಾವರೀ ।। ಶುಕ್ರಜ್ಞಾಸುಹೃದೌ ಸುಮಸ್ಸುರ ಗುರುಸೌರಸ್ಯಚಾನ್ಯೇರಯೋ ಯೇಪ್ರೋಕ್ತಾಸ್ಸ್ವ ತ್ರಿಕೋಣಭಾದಿಷು ಪುನಸ್ತೇಮಿಮಯಾ ಕೀರ್ತಿತಾಃ ।।

ಟೀಕು।। ಸೂರೇಃ - ಬೃಹಸ್ಪತಿಗೆ, ಸೌಮ್ಯಸಿತೌ-- ಬುಧ ಶುಕ್ರರು, ಅರೀ-ಶತೃಗಳು, ರವಿಸುತಃ-ಶನಿಯು, ಮಧ್ಯ-ಸಮನು, ಅಪರೇ-ಉಳಿದ ಸೂರ್ಯ, ಚಂದ್ರ, ಕುಜರು, ಅನ್ಯಥಾ-ಈಮೊದಲೇ ಹೇಳಲ್ಪಟ್ಟ, ಶತೃ-ಸಮ ಹೋಗಲಾಗಿ ನಿಂತದ್ದು ಮಿತ್ರತ್ವ, ಆದ್ದರಿಂದ ಮಿತ್ರರು, ಶುಕ್ರಸ್ಯ-ಶುಕ್ರನಿಗೆ, ಸೌಮ್ಯಾರ್ಕೀ-ಬುಧ ಶನಿಗಳು, ಸುಹೃದೌ-ಮಿತ್ರರು, ಕುಜ ಗುರೂ-ಅಂಗಾರಕ ಬೃಹಸ್ಪತಿಗಳು, ಸಮೌ-ಮಧ್ಯಸ್ತರು, ಶೇಷಾಃ-ಉಳಿದ ಸೂರ್ಯ ಚಂದ್ರರು, ಅರೀ-ಶತೃಗಳು. ಸೌರಸ್ಯ-ಶನಿಗೆ, ಶುಕ್ರಜ್ಞೌ-ಶುಕ್ರ ಬುಧರು. ಸುಹೃದೌ-ಮಿತ್ರರು, ಸುರಗುರುಃ-ಬೃಹಸ್ಪತಿ, ಸಮಃ-ಸಮನು, ಅನ್ಯೇ-ಉಳಿದ ಸೂರ್ಯ ಚಂದ್ರಾಂಗಾರಕರು, ಅರಯಃ-ಶತೃಗಳು, ಯೇ-ಯಾವ ಗ್ರಹಗಳು, ಮಯಾ-ನನ್ನಿಂದ, ಸ್ವತ್ರಿಕೋಣಭಾದಿಷು (ಸತ್ಯೋಕ್ತೆ ಸುಹೃದ ಸ್ತ್ರೀಕೋಣ ಭವನಾತ್ಸ್ವಾತ್ಸ್ವಾಂತ್ಯಧೀಧರ್ಮಪಾಃ) ಇತ್ಯಾದಿ ಗ್ರಂಥದಿಂದ ಸ್ವತ್ರಿಕೋಣ ರಾಶ್ಯಾದಿಗಳಿಂದ, ಪ್ರೋಕ್ತಾಃ-ಸಮತ್ವ, ಶತೃತ್ವ ಮಿತ್ರತ್ವಗಳನ್ನು, ತೇಮೀ- ಆ ಗ್ರಹಗಳೇ, ಪುನಃ - ತಿರುಗಿಯೂ, ಕೀರ್ತಿತಾಃ - ವಿಭಾಗವಮಾಡಿ ಹೇಳಲ್ಪಟ್ಟಿರುತ್ತಾರೆ. ।।ಶ್ಲೋಕ।। ಗುರೋರ್ಜ್ಞಶುಕ್ರೌರಿಪುಸಂಜ್ಞಕೌತು ಶನಿಃಸಮೋನ್ಯೆ ಸುಹೃದೋ-ಭವಂತಿ।। ಶುಕ್ರಸ್ಯಮಿತ್ರೇ ಬುಧಸೂರ್ಯಪುತ್ರೌ ಸಮೌಕುಜಾರ್ಕವಿತರಾವರೀತೌ ।।೫೫।। ಶನೇಃ ಸಮೋವಾಕ್ಪತಿರಿಂದುಸೂನು ಶುಕ್ರೌಚ ಮಿತ್ರೌರಿಪ ವಃಪರೇಪಿ । ಧೃವಂಗ್ರಹಾಣಾಂ ಚತುರಾನನೇನ।। ಶತೃತ್ವಮಿತ್ರತ್ವ ಸಮತ್ವ ಮುಕ್ತಂ ।।೫೬।। ಎಂದು ಚತುರ್ಮುಖ ಬ್ರಹ್ಮನಿಂದ ಹೇಳಲ್ಪಟ್ಟಿದೆಯೆಂದು ಪರಾಶರರು ಹೇಳಿರುತ್ತಾರೆ.

## ತಾತ್ಕಾಲಿಕ ಮಿತ್ರತ್ವ ನಿರ್ಣಯಃ

ಮೂಲ।। ಅನ್ಯೋನ್ಯಸ್ಯ ಧನವ್ಯಯಾಯ ಸಹಜವ್ಯಾಪಾರ ಬಂಧುಸ್ಥಿತಾ।
ಸ್ತತ್ಕಾಲೇಸುಹೃದಸ್ವತುಂಗಭವನೇಪ್ಯೇಕೇರಯಸ್ತ್ವನ್ಯಥಾ।।
ದ್ವ್ಯೇಕಾನುಕ್ತಭಪಾ ಸುಹೃತ್ಸಮರಿಪೂ ಸಂಚಿಂತ್ಯನೈಸರ್ಗಿಕಾಂ।
ಸ್ತತ್ಕಾಲೇಚ ಪುನಸ್ತುತಾನಧಿಸುಹೃನ್ಮಿತ್ರಾಧಿಭಿಃ ಕಲ್ಪಯೇತ್ ।।೧೮।।

ಟೀಕು।। ಈ ಮೇಲೆ ಹೇಳಲ್ಪಟ್ಟ ಪ್ರಕಾರ ನೈಸರ್ಗಿಕ ಶತೃ, ಸಮಮಿತ್ರತ್ವ ಹೇಳಲ್ಪಟ್ಟಿದೆ. ಆದರೆ ತಾತ್ಕಾಲಿಕ ಮಿತ್ರತ್ವ, ಶತೃತ್ವ, ಸಮತ್ವವೇ ಈಗ ಹೇಳಲ್ಪಡುತ್ತೆ. ಅನ್ಯೋನ್ಯಸ್ಯ - ಒಂದು ಗ್ರಹದಿಂದ ಇನ್ನೊಂದು ಗ್ರಹಕ್ಕೆ, ಧನ ವ್ಯಯಾಯ -- ಸಹಜ ವ್ಯಾಪಾರ, ಬಂಧುಸ್ಥಿತಾಃ - ಧನ ೨, ವ್ಯಯ ೧೨, ಆಯ ೧೧, ಸಹಜ ೩, ವ್ಯಾಪಾರ ೧೦, ಬಂಧು ೪, ಇವುಗಳಲ್ಲಿ ಸ್ಥಿತಾಃ - ಇರತಕ್ಕ (ಅಂದರೆ ಯಾವ ಗ್ರಹಕ್ಕಾದರೂ ಆ ಗ್ರಹವಿರುವ ಸ್ಥಾನದಿಂದ

೨-೧೨-೧೧-೩-೧೦-೪, ಈ ಸ್ಥಾನಗಳಲ್ಲಿರುವ ಗ್ರಹಗಳು), ತತ್ಕಾಲೆ - ಅವರು ಇರತಕ್ಕ ಕಾಲದಲ್ಲಿ, ಸುಹೃದಃ ಮಿತ್ರರಾಗುತ್ತಾರೆ. ಏಕೇ - ಯವನಾಚಾರ್ಯನು ಮೊದಲಾದ ಕೆಲವರು, ಸ್ವತುಂಗಭವನೇ - ಯಾವ ಗ್ರಹದ ಉಚ್ಚ ಸ್ಥಾನದಲ್ಲಿ ಯಾವ ಗ್ರಹವಿರುವುದೋ ಆ ಗ್ರಹವು ಅನ್ಯೋನ್ಯ ಮಿತ್ರರಾಗುವರೆಂದು ಹೇಳಿರುವರು. ಇದಕ್ಕೆ ಸಮ್ಮತಿ ॥ಶ್ಲೋಕ॥ ಮೂಲತ್ರಿಕೋಣಾದ್ಧನಧರ್ಮ ಬಂಧು ಮಿತ್ರವ್ಯಯಸ್ಥಾನ ಗತಾಗ್ರಹೇಂದ್ರಾಃ ॥ ತಾತ್ಕಾಲಿಕಾಸ್ತೆ ಸುಹೃದೋ ಭವಂತಿ ಸ್ವೋಚ್ಚೇ ಚಯೋಯಸ್ಯ ನಿಕೃಷ್ಟ ವೀರ್ಯಃ ॥೫೭॥ ಇದು ವರಾಹಮಿಹಿರಾಚಾರ್ಯರಿಗೆ ಸಮ್ಮತಿ ಇಲ್ಲ. ಇದಕ್ಕೆ ಲಘುಜಾತಕದಲ್ಲಿ ॥ಶ್ಲೋಕ॥ ತತ್ಕಾಲೇಚ ದಶಾಯ ಬಂಧು ಸಹಜಸ್ವಾಂತೇಷು ಮಿತ್ರಾಸ್ಥಿತಾಃ ॥೫೮॥ ಎಂದು ಹೇಳಲ್ಪಟ್ಟಿರುತ್ತೆ. ಆದ್ದರಿಂದ ಅನ್ಯಥಾ - ಉಕ್ತವ್ಯತಿರಿಕ್ತವಾಗಿದ್ದ ಗ್ರಹಗಳು, ಅಂದರೆ, ಯಾವ ರಾಶಿಯಲ್ಲಿಯಾದರೂ ಪಂಚಮ, ಷಷ್ಠ, ಸಪ್ತಮ, ಅಷ್ಟಮ, ನವಮ ಸ್ಥಾನಗಳಲ್ಲಿದ್ದ ಗ್ರಹಗಳೂ, ಅರಯಃ - ತತ್ಕಾಲ ಶತೃಗಳಾಗುತ್ತಾರೆ. ದ್ವೈಕಾನುಕ್ತಭರ್ವಾ ಪೂರ್ವೋಕ್ತೆ ಪ್ರಕಾರವಾಗಿ ದ್ವಿರಾಶ್ಯಾಧಿಪತಿಯು, ಏಕರಾಶ್ಯಾಧಿಪತಿಯು, ಅನುಕ್ತರಾಶ್ಯಾಧಿಪತಿಗಳು, ನೈಸರ್ಗಿಕಾ - ಅಂದರೆ, ಶತೃ ಮಂದಸಿತೌ - ಇತ್ಯಾದಿ ಶ್ಲೋಕದ್ವಯೋಕ್ತ ಪ್ರಕಾರವಾಗಿ ಸ್ವಭಾವಸಿದ್ಧವಾದ, ಸುಹೃತ್ಸಮರಿಪೂ - ಮಿತ್ರ ಮಧ್ಯಸ್ಥ ಶತೃಗಳನ್ನು, ಸಂಚಿಂತ್ಯ - ತಿಳಿದುಕೊಂಡು ತತ್ಕಾಲೇ (ಅನ್ಯೋನ್ಯಸ್ಯ ಧನವ್ಯಯಾಯ ಸಹಜವ್ಯಾಪಾರ ಬಂಧು ಸ್ಥಿತಾಃ - ಎಂದು ಈ ಶ್ಲೋಕದಿಂದ ಹೇಳಲ್ಪಟ್ಟ ಪ್ರಕಾರವಾಗಿ ತಾತ್ಕಾಲಿಕ ಮಿತ್ರ ಸಮಶತೃಗಳನ್ನು ತಿಳಿದುಕೊಂಡು, ಪುನಶ್ಚ-ಪುನಃ, ತಾನೇವ-- ಆ ಗ್ರಹಗಳನ್ನೇ, ಅಧಿಸುಹೃನ್ಮಿತ್ರಾದಿ - ಸಂಜ್ಞೆಗಳಿಂದ ಕೂಡಿದವರನ್ನಾಗಿ ಕಲ್ಪಯೇತ್ - ಯೋಚಿಸಿ ತಿಳಿಯತಕ್ಕದ್ದು. ಅದು ಹೇಗೆಂದರೆ:- ಮಿತ್ರನು ತಾತ್ಕಾಲಿಕ ಮಿತ್ರನಾದರೆ ಅಧಿಮಿತ್ರನಾಗುವನು, ನೈಸರ್ಗಿಕ ಶತೃವೂ ತಾತ್ಕಾಲಿಕ ಶತೃವಾದರೆ ಅಧಿಶತೃವಾಗುವನು. ಶತೃವಾಗಿದ್ದ ಗ್ರಹ ತತ್ಕಾಲ ಮಿತ್ರನಾದರೆ ಸಮನಾಗುವನು, ನೈಸರ್ಗಿಕ ಸಮನು, ತತ್ಕಾಲದಲ್ಲಿ ಶತೃವಾದರೆ ಅಧಿಶತೃವಾಗುವನು. ಇದಕ್ಕೆ ಪ್ರಮಾಣ ॥ಶ್ಲೋಕ॥ ಶತೃಮಿತ್ರಸ್ಸಮಃ ಪ್ರೋಕ್ತಃ ಸಮಶತೃರಿಪುರ್ಭವೇತ್ ॥ ಮಿತ್ರವೀತ್ರೋಧಿ ಮಿತ್ರಂಸ್ಯಾತ್ ಚ್ಛತ್ರುರೇವಾಧಿಶತೃತಾ ॥೫೭॥ ಎಂದು ನಾರದೀಯ್ಯದಲ್ಲಿ ಹೇಳಲ್ಪಟ್ಟಿರುತ್ತೆ.

## ಉದಾಹರಣೆ

| | | | |
|---|---|---|---|
| | | | |
| | ಪಿಲಂಬಿ ಸಂ॥ ಆ॥ಶು॥ಲದಿವ ಸಉದಯಾದಿ ೧॥ ಘಳಿಗೆ | | ಕುಜ |
| ಚಂದ್ರ | | | |
| | ಶನಿ ಶುಕ್ರ | ಲ.ಗು ರ ಬು॥ | |

ಈ ಜಾತಕಕ್ಕೆ ತತ್ಕಾಲ ಮಿತ್ರಗ್ರಹವನ್ನು ತಿಳಿಯಬೇಕು. ಗುರು + ಬುಧ-ಗುರುವಿಗೆ ಬುಧನು ಯಾವಾಗ್ಯೂ ಶತ್ರು, ತತ್ಕಾಲ ಮಿತ್ರನಾಗಿದ್ದಾನೆ. ಆದ್ದರಿಂದ ಸಮನು. ರವಿ + ಗುರು ಯಾವಾಗ್ಯೂ ಮಿತ್ರರು, ತತ್ಕಾಲದಲ್ಲಿ ಅಧಿ ಮಿತ್ರರಾದರು. ಬುಧ + ರವಿ ಸಮಮಿತ್ರರು. ತತ್ಕಾಲದಲ್ಲಿ ಬುಧನಿಗೆ ರವಿ ಅಧಿಮಿತ್ರನಾಗಿರುವನು. ರವಿ + ಬುಧರು ಸಮ, ತತ್ಕಾಲ ಮಿತ್ರನಾಗಿರುವದ್ದರಿಂದ ತತ್ಕಾಲ ಮಿತ್ರನಾಗಿರುವನು. (ಅಧಿಮಿತ್ರ)

ಗುರುವಿಗೆ + ಶನಿ ನೈಸರ್ಗಿಕ ಸಮ, ತತ್ಕಾಲ ಮಿತ್ರತ್ವವಿರುವದರಿಂದ ಗುರುವಿಗೆ ತತ್ಕಾಲದಲ್ಲಿ ಮಿತ್ರನಾದನು. ಗುರುವಿಗೆ + ಶುಕ್ರ ನೈಸರ್ಗಿಕ ಸಮ, ತತ್ಕಾಲದಲ್ಲಿ ಮಿತ್ರನಾದ್ದರಿಂದ ಸಮ. ಗುರುವಿಗೆ + ಚಂದ್ರ ನೈಸರ್ಗಿಕ ಮಿತ್ರ, ತತ್ಕಾಲದಲ್ಲಿ ಮಿತ್ರನಾಗಿರುವನು. ಆದ್ದರಿಂದ ಅಧಿಮಿತ್ರನಾದನು. ಬುಧನಿಗೆ ಶುಕ್ರ ನೈಸರ್ಗಿಕಮಿತ್ರ, ತತ್ಕಾಲದಲ್ಲಿ ಅಧಿಮಿತ್ರನಾಗುವನು. ಚಂದ್ರನಿಗೆ ರವಿ ನೈಸರ್ಗಿಕ ಮಿತ್ರ. ತತ್ಕಾಲ ಮಿತ್ರನಾದ್ದರಿಂದ ಅಧಿಮಿತ್ರ. ಈ ಪ್ರಕಾರವೇ ಎಲ್ಲಾ ಗ್ರಹಗಳಿಗೂ ವಿಚಾರ ಮಾಡಿ ತಿಳಿಯತಕ್ಕದ್ದು.

**ಮೂಲ॥ ಸ್ವೋಚ್ಚ ಸುಹೃತ್ಸ್ವತ್ರಿಕೋಣ ನವಾಂಶೈಃ ಸ್ಥಾನಬಲಂ ಸ್ವಗೃಹೋಪ ಗತೇಚ॥ ದಿಕ್ಷುಬುಧಾಂಗಿರಸೌರವಿಭೌಮೌ ಸೂರ್ಯಸುತಸ್ಸಿತ ಶೀತ ಕರೌಚ ॥೧೯॥**

ಟೀಕು॥ ಗ್ರಹಗಳಿಗೆ ಸ್ಥಾನ, ದಿಕ್, ಚೇಷ್ಟಾ, ಕಾಲ ನೈಸರ್ಗಿಕ ಬಲವನ್ನು ಹೇಳುತ್ತಾನೆ. ಸ್ವೋಚ್ಚ ಸುಹೃತ್ಸ್ವತ್ರಿಕೋಣ ನವಾಂಶೈಃ-ಸ್ವೋಚ್ಚ-ತನ್ನ ಉಚ್ಚಸ್ಥಾನದಲ್ಲಿದ್ದ ಗ್ರಹ, ಸುಹೃತ್-ತನ್ನ ಮಿತ್ರ ಕ್ಷೇತ್ರದಲ್ಲಿದ್ದ ಗ್ರಹ, ಸ್ವತ್ರಿಕೋಣ-ತನ್ನ ಮೂಲ ತ್ರಿಕೋಣದಲ್ಲಿದ್ದ ಗ್ರಹ, ಸ್ವನವಾಂಶ-ತನ್ನ ಸ್ವನವಾಂಶದಲ್ಲಿದ್ದ ಗ್ರಹ, ಸ್ವಗೃಹೋಪಗತೇಚ - ತನ್ನ ಸ್ವಕ್ಷೇತ್ರದಲ್ಲಿದ್ದ ಗ್ರಹ, ಈ ಗ್ರಹಗಳು ಸ್ಥಾನಬಲಯುಕ್ತ ರಾಗುವರು. ಸೂರ್ಯನಿಗೆ ಮೇಷ ಉಚ್ಚ, ಸಿಂಹ ಮೂಲತ್ರಿಕೋಣ ಮತ್ತು ಸ್ವಕ್ಷೇತ್ರ, ಚಂದ್ರನಿಗೆ ವೃಷಭ ಉಚ್ಚ ಮತ್ತು ಮೂಲತ್ರಿಕೋಣ, ಕರ್ಕಾಟಕ ಸ್ವಕ್ಷೇತ್ರ, ಕುಜನಿಗೆ ಮಕರ ಉಚ್ಚ, ಮೇಷ ಮೂಲತ್ರಿಕೋಣ ಮತ್ತು ಸ್ವಕ್ಷೇತ್ರ, ವೃಶ್ಚಿಕ ಸ್ವಕ್ಷೇತ್ರ, ಬುಧನಿಗೆ ಕನ್ಯಾ ಉಚ್ಚ,

ಮೂಲತ್ರಿಕೋಣ, ಸ್ವಕ್ಷೇತ್ರ, ಮಿಥುನ ಸ್ವಕ್ಷೇತ್ರ, ಬೃಹಸ್ಪತಿಗೆ ಕರ್ಕಾಟಕ ಉಚ್ಚ, ಧನುಸ್ಸು ಮೂಲತ್ರಿಕೋಣ ಮತ್ತು ಸ್ವಕ್ಷೇತ್ರ, ಮೀನ ಸ್ವಕ್ಷೇತ್ರ, ಶುಕ್ರನಿಗೆ ಮೀನ ಉಚ್ಚ, ತುಲಾ ಮೂಲತ್ರಿಕೋಣ ಮತ್ತು ಸ್ವಕ್ಷೇತ್ರ, ವೃಷಭ ಸ್ವಕ್ಷೇತ್ರ, ಶನಿಗೆ ತುಲಾ ಉಚ್ಚ, ಕುಂಭ ಮೂಲತ್ರಿಕೋಣ, ಮಕರ ಸ್ವಕ್ಷೇತ್ರ, ಸೂರ್ಯಾದಿ ಗ್ರಹಗಳಿಗೆ ಉಚ್ಚ ಮೂಲತ್ರಿಕೋಣ ಮೊದಲಾದ ವಿಷಯ ಮೊದಲನೇ ಪ್ರಕರಣದ ೧೪ನೇ ಶ್ಲೋಕದಲ್ಲಿ ಗ್ರಂಥಾಂತರ ಶ್ಲೋಕದ ಉದಾಹರಣ ಸಹಿತವಾಗಿ ಸ್ಪಷ್ಟಪಡಿಸಿರುತ್ತೆ. ಆ ಪ್ರಕಾರ ಬಲ ತಿಳಿದುಕೊಳ್ಳುವುದರಲ್ಲಿ ಈ ಅಂಶಪ್ರಕಾರ ತಿಳಿದುಕೊಳ್ಳಬೇಕು.

## ಅಥ ಗ್ರಹಾಣಾಂ ದಿಶಾಧಿಪತಿತ್ವ ನಿರ್ಣಯಃ

ದಿಕ್ಕು-ಪೂರ್ವದಿಕ್ಕು ಮೊದಲುಗೊಂಡು ೪ ದಿಕ್ಕುಗಳಿಗೂ ಬುಧಗುರುಗಳು ಬಲವಂತರಾಗುವರು, ಅದು ಹೇಗೆಂದರೆ:- ಪೂರ್ವದಿಕ್ಕಿನಲ್ಲಿ, ಬುಧಾಂಗಿರಸೌ-ಬುಧ ಬೃಹಸ್ಪತಿಗಳು ಲಗ್ನದಲ್ಲಿದ್ದರೆ ಬಲವಂತರಾಗುವರು. ದಕ್ಷಿಣದಲ್ಲಿ - ರವಿ ಭೌಮೌ-ರವಿ ಕುಜರು ದಶಮಸ್ಥಾನದಲ್ಲಿ ಬಲವುಳ್ಳವರಾಗುವರು, ಪಶ್ಚಿಮದಲ್ಲಿ - ಸೂರ್ಯಸುತಃ - ಶನಿಯು ಸಪ್ತಮಸ್ಥಾನದಲ್ಲಿ ಬಲವಂತನಾಗುವನು, ಉತ್ತರ ದಿಕ್ಕಿನಲ್ಲಿ-ಶಿತಸೀತಕರೌ-ಶುಕ್ರ ಚಂದ್ರರು ಬಲವಂತರಾಗುವರು. ಆದ್ದರಿಂದ ಇಲ್ಲಿ ತಿಳಿಯಬೇಕಾದ ಅಂಶವೇನೆಂದರೆ:- ಪೂರ್ವದಿಗ್ರಾಶಿಗಳಲ್ಲಿ ಬುಧ ಗುರುಗಳಿದ್ದು, ಆ ರಾಶಿಲಗ್ನಗಳಾದರೆ ಅಲ್ಲಿ ದಿಗ್ಬಲವುಳ್ಳವರಾಗುವರು. ದಕ್ಷಿಣ ದಿಗ್ರಾಶಿ ದಶಮಸ್ಥಾನವಾಗಿ ಅಲ್ಲಿ ಸೂರ್ಯಾಂಗಾರಕರಿದ್ದರೆ ಅಲ್ಲಿ ದಿಗ್ಬಲವುಳ್ಳವರಾಗುವರು. ಪಶ್ಚಿಮ ದಿಗ್ರಾಶಿ ಸಪ್ತಮ ಸ್ಥಾನವಾಗಿ ಅಲ್ಲಿ ಶನಿ ಇದ್ದರೆ ದಿಗ್ಬಲವುಂಟಾಗುವುದು. ಉತ್ತರ ದಿಗ್ರಾಶಿ ಚತುರ್ಥ ಸ್ಥಾನವಾಗಿ ಅಲ್ಲಿ ಚಂದ್ರ ಶುಕ್ರರಿದ್ದರೆ ದಿಗ್ಬಲವುಳ್ಳವರಾಗುವರು. ಇಲ್ಲಿ ಯಾವ ಗ್ರಹಕ್ಕೆ ದಿಗ್ಬಲವೆಂದು ಹೇಳಲ್ಪಟ್ಟಿರುತ್ತೋ; ಅದಕ್ಕೆ ಸಪ್ತಮದಲ್ಲಿ ದಿಗ್ಬಲಶೂನ್ಯರಾಗಿ, ದುರ್ಬಲರಾಗುವರು. ಈ ವಿಷಯವನ್ನು ರಾಶಿಭೇದ ಪ್ರಕರಣದ ೫ನೇ ಶ್ಲೋಕದ ಟೀಕೆಯಲ್ಲಿ ಉದಾಹರಣೆಯನ್ನು ನೋಡಬೇಕು. ॥ಶ್ಲೋಕ॥ ಮೇಷಸಿಂಹಧನುಷ್ಪೆಂದ್ರೇ ವೃಷಕನ್ಯಾ ಮೃಗೇಯಮೇ॥ ಘಟಕೌಲಿತುಲಾಪಶ್ಚಾದನ್ಯೇ ತೂತ್ತರದಿಗ್ಗತಾಃ ॥೫೬॥ ಎಂದು ಪರಾಶರರು ಹೇಳುತ್ತಾರೆ. ಗ್ರಹಗಳಿಗೆ ದಿಗ್ಬಲಕ್ಕೆ ಉದಾಹರಣೆ ॥ಶ್ಲೋಕ॥ ಯವನಾಚಾರ್ಯಃ॥ ಗುರ್ವೈಂದವೌ ಪೂರ್ವವಿಲಗ್ನಸಂಸ್ಥೌ ನಭಸ್ಥಲಸ್ಥೌಚದಿವಾಕರಾಶೌ ॥ ಸೌರೋಸ್ತಗಶ್ಶುಕ್ರ ನಿಶಾಕರೌತು ಬಲೆಸ್ಥಿತಾವುಗ್ರಬಲೌಭವೇತಾಂ ॥೬೦॥

## ಅಥ ಗ್ರಹಾಣಾಂ ಚೇಷ್ಟಾಬಲ ನಿರ್ಣಯಃ

ಮೂಲ॥ ಉದಗಯನೇರವಿ ಶೀತಮಯೂಖೌ ವಕ್ರಸಮಾಗಮಗಾಃ ಪರಿಶೇಷಾಃ ॥ ವಿಪುಲಕರಾಯುಧಿ ಚೋತ್ತರಸಂಸ್ಥಾಶ್ಚೇಷ್ಟಿತ ವೀರ್ಯಯುತಾಃ ಪರಿಕಲ್ಪ್ಯಾಃ ॥೨೦॥

ಟೀಕು ॥ ಗ್ರಹಾಣಾಂ ಚೇಷ್ಟಾಬಲ ನಿರ್ಣಯಃ ॥ ಉದಗಯನೇ-ಉತ್ತರಾಯಣದಲ್ಲಿ, ರವಿಶೀತಮಯೂಖೌ-ಸೂರ್ಯ ಚಂದ್ರರು ಬಲವಂತರು, ಪರಿತೇಷಾಃ-ಉಳಿದ ಗ್ರಹಗಳು (ಕುಜ, ಬುಧ, ಗುರು, ಶುಕ್ರ, ಶನಿ) ವಕ್ರಸಮಾಗಮಗಾಃ-ವಕ್ರಗತಿಯುಳ್ಳವರಾಗಿ ಚಂದ್ರನ ಸಂಗಡ ಸೇರಿದರೆ ಬಲವಂತರಾಗುವರು, ಈ ಮೇಲೆ ಹೇಳಿದ ಗ್ರಹಗಳೇ ಸೂರ್ಯನ ಸಂಗಡ ಸೇರಿದರೆ ಅಸ್ತವಾಗಿ ಬಲಹೀನರಾಗುವರು. ಕುಜಾದಿ ಪಂಚಗ್ರಹಗಳು ಅನ್ಯೋನ್ಯವಾಗಿ ಸೇರಿದರೆ ಯುದ್ಧವುಂಟಾಗುವುದು. ಸಿದ್ಧಾಂತದಲ್ಲಿ ಹೇಳಲ್ಪಟ್ಟಿರುತ್ತೆ. ॥ಶ್ಲೋಕ॥ ತಾರಾಗ್ರಹಣಾ ಮನ್ಯೋನ್ಯಂ ಯುದ್ಧಂವಾಪಿಸಮಾಗಮಃ ॥ ಯೆಂದುಕ್ತವಾಗಿರುತ್ತೆ. ಮತ್ತು ಈ ವಿಷಯಕ್ಕೆ ವಿಷ್ಣುಗುಪ್ತ ಸಮ್ಮತಿ ॥ಶ್ಲೋಕ॥ ದಿವಸಕರೇಣಾಸ್ತಮಯ ಸ್ಸಮಾಗಮಶ್ಶೀತರಶ್ಮಿಸಹಿತಾನಾಂ ॥ ಕುಸುತಾದೀನಾ ಯುದ್ಧಂನಿಗದ್ಯತೇನ್ಯೋನ್ಯಯುಕ್ತಾನಾಂ ॥೬೧॥ ವಿಪುಲಕರಾಃ - ವಿಸ್ತಾರವಾದ ಕಿರಣವುಳ್ಳವರಾಗಿ ಬಲವಂತರಾಗುವರು, ಈ ವಿಸ್ತೃತಕಿರಣ ಶೀಘ್ರ ಕೇಂದ್ರದಲ್ಲಿ ದ್ವಿತೀಯ ತೃತೀಯ ಪಾದದಲ್ಲಿರುವಾಗ ಉಂಟಾಗುತ್ತೆ. ಯುಧಿ - ಗ್ರಹ ಯುದ್ಧದಲ್ಲಿ, ಉತ್ತರಸಂಸ್ಥಾಃ-ಉತ್ತರದಿಕ್ಕಿನಲ್ಲಿರುವ ಗ್ರಹಗಳು ಬಲವಂತರಾಗುವರು. ಉತ್ತರ ಸಂಸ್ಥಾಃ-ಎಂದು ಹೇಳಿರುವ, ಸಂಕೇತಜಯೋಪಲಕ್ಷಣ ಆದರೆ ಗ್ರಹ ಯುದ್ಧದಲ್ಲಿ ಜಯವನ್ನು ಹೊಂದಿದ ಬಲಾಧಿಕನೆಂದರ್ಥ.

## ಜಯಾಪಜಯ ಲಕ್ಷಣ

ಸಿದ್ಧಾಂತ ಶಿರೋಮಣಿಯಲ್ಲಿ ॥ಶ್ಲೋಕ॥ ದಕ್ಷಿಣದಿಕ್‌ಸ್ಥಃ ಪರುಷೋವೇಪಥು ರಪ್ರಾಪ್ತ ಸನ್ನಿಕೃಷ್ಟೋಣುಃ ॥ ಅವಿರೂಢೋ ವಿಕೃತೋನಿಷ್ಟಭೋ ವಿವರ್ಣಶ್ಚ ಯಸ್ಸಜಿತಃ ॥೬೨॥ ಉಕ್ತವಿಪರೀತಲಕ್ಷಣಸಂಪನ್ನೋ ಜಯಗತೋ ವಿನಿರ್ದಿಷ್ಟಃ॥ ವಿಪುಲಸ್ಸ್ನಿಗ್ಧೋ ಧೃತಿಮಾ‌ರ್ ದಕ್ಷಿಣದಿಕ್ ಸೋಪಿಜಯಯುಕ್ತಃ ॥೬೩॥ ಎಂದು ದಕ್ಷಿಣ ದಿಕ್ಕಿನಲ್ಲಿರುವ ಕಾಲದಲ್ಲಿ ಗೂಢಜಯವೆನ್ನುವುದು ಶುಕ್ರನಿಗೆ ಮಾತ್ರವಿರುತ್ತೆ. ಇತರ ಶನಿ, ಕುಜ, ಬುಧ ಗುರುಗಳಿಗೆ ಇಲ್ಲ. ಈ ವಿಷಯದಲ್ಲಿ ॥ಶ್ಲೋಕ॥ ಸರ್ವಜಯಿನಉದಕ್‌ಸ್ಥೋ ದಕ್ಷಿಣದಿಕ್‌ಸ್ಥೋ ಜಯೀಶುಕ್ರ

॥ ಎಂದು ಪುಲಶಸಿದ್ಧಾಂತದಲ್ಲಿ ಹೇಳಿರುತ್ತೆ. ಈ ಮೇಲೆ ಹೇಳಿದ ಪ್ರಕಾರ ಜಯವುಳ್ಳವರು ಚೇಷ್ಟಾ ಬಲವುಳ್ಳವರೆಂದು ತಿಳಿಯತಕ್ಕದ್ದು ॥೨೦॥

## ತಾರಾಬಲ ನೈಸರ್ಗಿಕಬಲ ನಿರ್ಣಯಃ

ಮೂಲ॥ ನಿಶಿಶಶಿಕುಜ ಸೌರಾಸ್ಸರ್ವದಾಜ್ಞೋಹ್ನಿಚಾನ್ಯೇ । ಬಹುಳ ಸಿತಗತಾ ಸ್ಸ್ಯುಃ ಕ್ರೂರಸೌಮ್ಯಾ) ಕ್ರಮೇಣ॥ ದ್ವ್ಯಯನ ದಿನಸ ಹೋರಾಮಾ ಸಪೈಃ ಕಾಲವೀರ್ಯಂ ಶಕುಬುಗುಶುಚರಾದ್ಯಾ ವೃದ್ಧಿತೋ ವೀರವ-ೡ ॥೨೧॥

ಟೀಕು॥ ಕಾಲನೈಸರ್ಗಿಕಬಲ ಹೇಳಲ್ಪಡುತ್ತೆ. ದಿವಾರಾತ್ರಿ ಬಲನಿರ್ಣಯಃ- ಶಶಿಕುಜಸೌರಾಃ - ಚಂದ್ರ, ಅಂಗಾರಕ, ಶನಿ ಈ ಮೂರು ಗ್ರಹಗಳು, ನಿಶಿರಾತ್ರಿ ಕಾಲದಲ್ಲಿ, ವೀರ್ಯವಂತಃ-ಬಲವುಳ್ಳವರು, ಜ್ಞಃ-ಬುಧನು, ಸರ್ವದಾ-ದಿವಾರಾತ್ರಿ ಕಾಲದಲ್ಲಿ ಕೂಡ, ವೀರ್ಯವಾ--ಬಲವಂತನು, ಅನ್ಯೇ--ರವಿ, ಗುರು, ಶುಕ್ರ, ಬೃಹಸ್ಪತಿಗಳು, ಅಹ್ನಿ-ಹಗಲಿನಲ್ಲಿ ಬಲವಂತರು.

## ಅಥ ಪಕ್ಷಬಲಂ

ಬಹುಳ ಸಿತಗತಾಃ-ಶುಕ್ಲ ಕೃಷ್ಣಪಕ್ಷದಲ್ಲಿ (ಕ್ರಮವಾಗಿ) ಕ್ರೂರಸೌಮ್ಯಾಃ ಪಾಪಗ್ರಹಗಳು, ಶುಭಗ್ರಹಗಳು ಬಲವುಳ್ಳವರಾಗಿ, ಸ್ಯುಃ ಆಗುವರು, ಅಂದರೆ ಶುಭಗ್ರಹಗಳು ಶುಕ್ಲಪಕ್ಷದಲ್ಲಿಯೂ, ಪಾಪಗ್ರಹಗಳು ಕೃಷ್ಣಪಕ್ಷದಲ್ಲಿಯೂ ಬಲವುಳ್ಳವರಾಗುವರು.

## ಆಯನ ಮಾಸಬಲ ನಿರ್ಣಯ

ದ್ವ್ಯಯನ ದಿವಸ ಹೋರಾಮಾಸಪೈಃ-ದ್ವ್ಯಯನ-ಅಂದರೆ, ದ್ವ್ಯಯ ನಪ-ಸಂವತ್ಸರಾಧಿಪತಿ, ದಿವಸ--ಜನ್ಮದಿನ ತಾರಾಧಿಪತಿ ಹೋರಾಪ-ಹೋರಾಧಿ ಪತಿ, (ಅಂದರೆ ಕಾಲಹೋರಾಧಿಪತಿ), ಮಾಸಪ-ಜನ್ಮಮಾಸಾಧಿಪತಿ, ಇವರುಗಳು, ಕಾಲವೀರ್ಯಂ-ಕಾಲಬಲವುಳ್ಳವರೆಂದು ತಿಳಿಯತಕ್ಕದ್ದು. ಅಂದರೆ ಸಂವತ್ಸರಾಧಿಪತಿ, ಜನ್ಮಮಾಸಾಧಿಪತಿ, ದಿವಸಾಧಿಪತಿ, ಕಾಲಹೋರಾಧಿಪತಿ ಈ ನಾಲ್ಕು ಗ್ರಹಗಳು ಬಲವಂತರಾಗುವರು.

ಸ್ವದಿವಸಸಮಾಹೋರಾ ಕಾಲಪೈಃ, ಎಂದು ಪಾಠದಲ್ಲಿ ಸಮಶಬ್ದ, ಸಂವತ್ಸರಶಬ್ದ ಸೂಚಿಸುತ್ತದೆ. (ಸಂವತ್ಸರೋವತ್ಸರೋಬ್ದೋಹಾಯನೋಸ್ತ್ರೀ ಶರತ್ಸಮಾಃ) ॥ಇತ್ಯಮರಃ॥

## ಅಥ ನೈಸರ್ಗಿಕಬಲ ನಿರ್ಣಯಃ

ಶ, ಕು, ಬು, ಗು, ಚ, ರ, ದ್ಯಾಃ - ಆದಿ ಇವರುಗಳು ಕ್ರಮವಾಗಿರುವ ಗ್ರಹಗಳು. ಶನಿ, ಕುಜ, ಬುಧ, ಗುರು, ಶುಕ್ರ, ಚಂದ್ರ-ರವಿಗಳು, ವೃದ್ಧಿತಃ- ಉತ್ತರೋತ್ತರಾಭಿವೃದ್ಧಿಯಾಗಿ ಕ್ರಮವಾಗಿ, ವೀರ್ಯವಂತಃ-ಬಲವಂತರಾಗುವರು, ಅಂದರೆ ಶನಿಗಿಂತ ಕುಜ-ಕುಜನಿಗಿಂತ ಬುಧ-ಬುಧನಿಗಿಂತ ಗುರು, ಗುರುವಿಗಿಂತ ಶುಕ್ರ, ಶುಕ್ರನಿಗಿಂತ ಚಂದ್ರ, ಚಂದ್ರನಿಗಿಂತ ರವಿ ಬಲವಂತರಾಗುವರು. ಈ ಪ್ರಕಾರವೇ ಲಘುಜಾತಕದ ।।ಶ್ಲೋಕ।। ಮಂದರಸೌಮ್ಯ ವಾಕ್ಪತಿ ಸಿತಚಂದ್ರಾರ್ಕೌಯಥೋತ್ತರಂಬಲಿನಃ ।। ನೈಸರ್ಗಿಕ ಬಲಮೇತದ್ಬಲ ಸಾಮ್ಯೇಸ್ಯಾದಧಿಕ ಚಿಂತಾ ।।೬೪।। ಎಂದುಕ್ತವಾಗಿರುತ್ತೆ. ಇದೇ ಪ್ರಕಾರ ಜಯದೇವನು ಉದಾಹರಿಸಿರುವನು. ದಿನೇಶುಕ್ರಾರ್ಕೇಜ್ಯಾದ್ಯುನಿಶಿ ಶಶಿಜಶ್ಚೈವ ಬಲವಾಂಸ್ತಥಾನಕ್ತೆ ಕಾಲೆಶನಿ ವಿಧುಕುಜಾಶ್ಚಾಪಿಬಲಿನಃ ।। ದಿನೇಸ್ವೇಸ್ವೇಸರ್ವೆಬಹುಲ ಸಿತಪಕ್ಷೇ ಶುಭಶುಭಾಸ್ಥಥಾ ಸೌರಾರಾಜ್ಞೇಜ್ಯ ಸಿತಶಶಿಸೂರ್ಯಾಃ ಪರಪರಾಃ ।।೬೫।। ಪೂರ್ವದಲ್ಲಿ ಹೇಳಲ್ಪಟ್ಟ ತ್ರಿದಶ ತ್ರಿಕೋಣ ಚತುರಶ್ರ ಸಪ್ತಮಾನವಲೋಕಯಂತಿ ಚರಣಾಭಿವೃದ್ಧಿತಃ ।। ಎಂಬುವ ಶ್ಲೋಕದಲ್ಲಿಟ್ಟು ದೃಗ್ಬಲ ಕೂಡ ಸ್ಥಾನಾದಿ ಷಡ್ಬಲದಲ್ಲಿ ಹೇಳಲ್ಪಟ್ಟಿರುತ್ತೆ. ಈ ಬಲಗಳು ಇರುವ ಗ್ರಹಗಳು ವಿಶೇಷ ಫಲಪ್ರದರೆಂದು ವರಾಹಮಿಹಿರಭಟ್ಟರು ಹೇಳಲಿಲ್ಲ. ಆದ್ದರಿಂದ ಲಘುಜಾತಕದಲ್ಲಿ ಹೇಳಿರುವುದೇನೆಂದರೆ-ಶ್ಲೋಕ।। ಬಲವಾನಿತ್ರ ಸ್ವಗೃಹೋಚ್ಚನವಾಂಶಕೇಕ್ಷಿತ ಶ್ಮ ಬೈ ಶ್ಚಾ ಪಿ ।। ಚಂದ್ರಸಿತೌ ಸ್ತ್ರೀಕ್ಷೇತ್ರೇ ಪುರುಷಕ್ಷೇತ್ರೋಪಗಾಃಶೇಷಾಃ ।।೬೬।।

## ಶುಭದೃಷ್ಟಿ ನಿರ್ಣಯಃ

ಶ್ಲೋಕ।। ಶುಭದರ್ಶನ ಬಲಸಹಿತಃ ಪುರುಷಂಕುರ್ಯಾದ್ಧನಾನ್ವಿತಂಖ್ಯಾತಂ ।। ಸುಭಗಂಪ್ರಧಾನಮಖಿಲಂ ಸುರೂಪದೇಹಂಚ ಸೌಮ್ಯಂಚ ।।೬೭।। ಪುಂಸ್ತ್ರೀ ಭವಬಲೇನಚ ಕರೋತಿ ಜನಪೂಜಿತಂ ಕಲಾಕುಶಲಂ ।। ಪುರುಷಂ ಪ್ರಸನ್ನ ಚಿತ್ತಂ ಕಲ್ಯಂಪರಲೋಕಭೀತಂಚ ।।೬೭।। ಆಶಾಬಲ ಸಮವೇತೋ ನಯತಿ ಸ್ವದಿಶಂ ನಭಶ್ಚರಂ ಪುರುಷಂ ।। ನೀತ್ವಾವಸ್ತ್ರವಿಭೂಷಣ ವಾಹನಸೌಖ್ಯಾನ್ವಿತಂ ಕುರುತೇ ।।೬೯।। ಕ್ವಚಿದ್ರಾಜ್ಯಂ ಕ್ವಚಿತ್ಪೂಜಾಂ ಕ್ವಚಿದ್ರವ್ಯಂ ಕ್ವಚಿದ್ಯಶಃ ದದಾತಿ ವಿಹಗಶ್ಚಿತ್ರಂ ಚೇಷ್ಟಾವೀರ್ಯಸಮನ್ವಿತಃ ।।೭೦।। ವಕ್ರಿಣಸ್ತು ಮಹಾವೀರ್ಯಾಃ ಶುಭಾರಾಜ್ಯ ಪ್ರದಾಗ್ರಹಾಃ ।। ಪಾಪಾಃ ವ್ಯಸನದಾಃ ಪುಂಸಾಂ ಕುರ್ವಂತಿಚ ವೃಥಾಟನಂ ।।೭೧।। ಸ್ವಸ್ವಶ್ಯರೀರ ಸಮಾಗಮ ಸುಖಮೂಹವ ಜಯಬಲೇನ ವಿದಧಾತಿ ।।

ಶುಭಮತುಲಂ ವಿಹಂಗೇದ್ರೋ ರಾಜ್ಯಂಚ ವಿನಿರ್ಜ ತಾರಾತಿಃ ॥೭೨॥ ರಾತ್ರಿದಿವಾಬಲ ಪೂರ್ಣ್ಯೆರ್ಭೂಗತಲಾಭೇನ ಶೌರ್ಯಪರಿವೃದ್ಧ್ಯಾ॥ ಮಲಿನಯತಿ ಶತೃಪಕ್ಷಂ ಭಜಂತಿಲಕ್ಷ್ಮೀಂ ನಭಶ್ಚರೈಃ ಪುರುಷಾ ॥ ದ್ವಿಗುಣಂದ್ವಿಗುಣಂ ದದ್ಯುರ್ವರ್ಷಾಧಿಪಮಾಸ ದಿವಸಹೋರೇಶಾಃ ॥ ಕುರ್ಯುರ್ವ್ಯರ್ಧ್ಯಾಸೌಖ್ಯಂ ಸ್ವದಶಾಸಮಯೇಧನಂಚ ಕೀರ್ತಿಂಚ ॥೭೪॥ ಪಕ್ಷ ಬಲಾದ್ರಿಪುನಾಶಂ ರತ್ನಾಂಬರ ಹಸ್ತಿಸಂಪದಂದದ್ಯುಃ ॥ ಸ್ತ್ರೀ ಕನಕ ಭೂಮಿ ಲಾಭಂ ಕೀರ್ತಿಂಚ ಶಶಾಂಕ ಧವಳತರಾಂ ॥೭೫॥ ಸಕಲಬಲಭಾರಭರಿತಾ ನಿರ್ಮಲಕರಜಾಲ ಭಾಸುರಾಸ್ತತಂ॥ ರಾಜ್ಯಗ್ರಹಾವಿದದ್ಯುಃ ಸೌಖ್ಯಂಚ ಮನೋರಥಾ ತೀತಂ ॥೭೬॥ ಆಚಾರಸೌಖ್ಯಶುಭ ಶೌಚಯುತಾಸ್ಸು ರೂಪಾಸ್ತೇಜಸ್ವಿನಃ ಕೃತವಿದೋದ್ವಿಜ ದೇವಭಕ್ತಾ॥ ಸದ್ವಸ್ತ್ರಮಾಲ್ಯಧನ ಭೂಷಣ ಸಂಯುತಾಶ್ಚ ಸೌಮ್ಯಗ್ರಹೈರ್ಬಲಯುತೈಃ ಪುರುಷಾಭವಂತಿ ॥೭೭॥ ಲುಬ್ಧಾಃ ಕುಕುರ್ಮನಿರತಾಃ ನಿಜಕಾರ್ಯನಿಷ್ಠಾಃ ಪಾಪಗ್ರಹೈರ್ಬಲಯುತೈಃ ಪಿಶುನಾಃ ಕುರುಪಾಃ ॥ ಪುಂರಾಶಿಷುಗ್ರಹೇಂದ್ರೈರ್ವೀರಾ ಸ್ಸಂಗ್ರಾಮಮಕಾಂಕ್ಷಿಣೋ ಬಲಿನಃ ॥೭೮॥ ನಿಸ್ನೇಹಾಬಹುರೋಗಾಃ ಕ್ರೂರಾಮೂರ್ಖಾಶ್ಚಜಾಯಂತೆ ॥ ಯುವತಿ ಭವನಸ್ಥಿತೇಷುಚ ಮೃದುವಸ್ಸಂಗ್ರಾಮಭೀರವಃ ಪುರುಷಾಃ ॥೭೯॥ ಜಲಕುಸುಮವಸ್ತ್ರ ನಿರತಾಃಸಾಮ್ಯಾಃ ಕುಲಹೈಸ್ಸು ಸಂಯುಕ್ತಾ ॥೮೦॥

ಇತಿ ಶ್ರೀ ಆವಂತಿಕಾಚಾರ್ಯ ವರಾಹಮಿಹಿರಭಟ್ಟ
ವಿರಚಿತೆ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ
ಗ್ರಹಪ್ರಾದುರ್ಭಾವೋನಾಮ ದ್ವಿತೀಯಂ
ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾ ಸುಧಾಕಾರಾ
ಯಮಾನ ಬಂಕೀಪುರ ವಿಠಲರಾಯ ತನುಜ ಸುಬ್ರಹ್ಮಣ್ಯಶರ್ಮ
ವಿರಚಿತೇ ಬೃಹಜ್ಜಾತಕ ಸುಧಾರಸಧಾರಾ ಟೀಕಾಯಾಂ
ಸೋದಾಹರಣೆ ಯುಕ್ತಾಯಾಂ ಗ್ರಹಪ್ರಾದು-
ರ್ಭಾವೋನಾಮ ದ್ವಿತೀಯ ಪ್ರಕರಣಂ

ಶ್ರೀ

ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕೇ

## ೩ನೆ ವಿಯೋನಿಜನ್ಮ ಪ್ರಕರಣಂ

ಅವತಾರಿಕೆ ।। ಈ ಪ್ರಕರಣದಲ್ಲಿ ನಾನಾವಿಧವಾದ ತಿರ್ಯಗ್ಜಂತುಗಳ ಉತ್ಪತ್ತಿ, ಮೃಗಾಶ್ವ, ಮಹಿಷ, ವೃಷಭ, ಶುನಕ, ಮಾರ್ಜಾರಾದಿಗಳ ಮತ್ತು ಪಶು, ಪಕ್ಷಿ, ವೃಕ್ಷ, ಲತಾದಿಗಳ ಉತ್ಪತ್ತಿಗಳನ್ನು ಸಹ ಹೇಳಲ್ಪಡುತ್ತೆ. ಜ್ಯೋತಿಷ್ಕರ ಪರೀಕ್ಷಾರ್ಥವಾಗಿಯಾದರೂ, ಉತ್ಪತ್ತಿಯಾದ ಜಂತು ಕ್ಷೇಮಾದಿ ಪರೀಕ್ಷಾರ್ಥವಾಗಿಯಾದರೂ ಪ್ರಶ್ನೆ ಮಾಡಿದರೆ, ಪ್ರಶ್ನಕಾಲದಿಂದಲಾದರೂ, ಜನ್ಮಕಾಲದಿಂದಲಾದರೂ ಮುಂದೆ ಹೇಳಲ್ಪಡುವ ಕ್ರಮದಿಂದ ವಿಯೋನಿ ಜನ್ಮ ವಿಚಾರವಾಗಿ ಅವಂತಿಕಾಚಾರ್ಯ ವರಾಹಮಿಹಿರ ಭಟ್ಟರು ಹೇಳಿರುತ್ತಾರೆ.

ಮೂಲ।। ಕ್ರೂರಗ್ರಹೈಸ್ಸುಬಲಿಭಿರ್ವಿಬಲೈಶ್ಚಸೌಮ್ಯೈಃ ಕ್ಲೀಬೇಚತುಷ್ಟಯಗತೇ
ತದವೇಕ್ಷಣಾದ್ವಾ । ಚಂದ್ರೋಪಗದ್ವಿರಸಭಾಗಸಮಾನರೂಪಂ
ಸತ್ವಂವದೇದ್ಯದಿ ಭವೇತ್ಸವಿಯೋನಿಸಂಜ್ಞಃ ।।೧೫।।

ಟೀಕು।। ಜನ್ಮಕಾಲದಲ್ಲಿ ಚಂದ್ರನು ಯಾವ ದ್ವಾದಶಾಂಶೆಯಲ್ಲಿ ಇರುತ್ತಾನೋ, ಆ ದ್ವಾದಶಾಂಶೆ ಯಾವ ಗ್ರಹದ ರಾಶಿದ್ವಾದಶಾಂಶೆಯಾಗಿರುತ್ತೊ ಆ ದ್ವಾದಶಕ್ಕೆ ಹೇಳಲ್ಪಟ್ಟ ಸ್ವಭಾವಜಂತು ಹುಟ್ಟುತ್ತದೆ. ಆ ಕಾಲದಲ್ಲಿ ಕ್ರೂರ ಗ್ರಹಗಳು ಬಲಿಷ್ಠರಾಗಿಯೂ, ಸೌಮ್ಯಗ್ರಹಗಳು ಬಲಹೀನರಾಗಿಯೂ, ನಪುಂಸಕ ಗ್ರಹಗಳು ಚತುಷ್ಟಯಗಳಲ್ಲಿಯೂ ಇರಬೇಕು.

ಈ ವಿಷಯದಲ್ಲಿ ವರಾಹಮಿಹಿರರು-ಚಂದ್ರೋಪಗ ದ್ವಿರಸಭಾಗಸಮಾನ ರೂಪಂ-ಚಂದ್ರೋಪಗ-ಚಂದ್ರನಿರುವ, ದ್ವಿರಸಭಾಗ - ದ್ವಾದಶಾಂಶಕ್ಕೆ, ಸಮಾನ ಸರಿಯಾದ, ರೂಪಂ - ಆಕಾರವುಳ್ಳ, ಸತ್ವಂ - ಜಂತುವು ವದೇತ್ - ಹುಟ್ಟುವುದು. (ಅಥವಾ ಹುಟ್ಟಿದೆ) ಎಂದು ಹೇಳತಕ್ಕದ್ದು. ಆದರೆ ಸಃ- ಆ ಚಂದ್ರನಿದ್ದ ದ್ವಾದಶಾಂಶ, ವಿಯೋನಿಸಂಜ್ಞೋಯದಿ-ಮೃಗ ಮೇಷಾದಿ ತಿರ್ಯಗ್ಜಂತುಗಳೆಂದು ತಿಳಿಯತಕ್ಕದ್ದು. ಆ ದ್ವಾದಶಾಂಶ ಮಾತ್ರದಿಂದಲೇ ವಿಯೋನಿ ಜನ್ಮವೆಂದು ತಿಳಿಯುವಾಗ ಆ ಚಂದ್ರನು ಮೇಷ ದ್ವಾದಶಾಂಶೆಯಲ್ಲಿದ್ದರೆ ಕುರಿ, ಆಡು ಇವುಗಳ ಜನ್ಮವೆಂದು, ವೃಷಭ ದ್ವಾದಶಾಂಶೆಯಾದರೆ ಗೋ, ವೃಷಭ, ಮಹಿಷ ಜನನವೆಂದು, ಕರ್ಕಾಟಕ ದ್ವಾದಶಾಂಶೆಯಲ್ಲಿದ್ದರೆ ನಳಿ (ಏಡಿ) ಮೊದಲಾದ ಜನ್ಮವೆಂದು; ಸಿಂಹ ದ್ವಾದಶಾಂಶೆಯಲ್ಲಿದ್ದರೆ ಸಿಂಹ, ಶಾರ್ದೂಲ,

ಹುಲಿ, ಕರಡಿ, ಶುನಕ ಜಂಬೂಕಾದಿ ಮೃಗಜನ್ಮ ವೃಶ್ಚಿಕ ದ್ವಾದಶಾಂಶೆಯಾದರೆ ವೃಶ್ಚಿಕ, ಕೀಟ ಮೊದಲಾದ ಹುಳುಗಳ ಜನ್ಮವೆಂದು, ಸರ್ಪ ಮೊದಲಾದ ವಿಷಜಂತು ಜನ್ಮವೆಂದು, ಧನುಸ್ಸಿನ ಉತ್ತರಾರ್ಧ ದ್ವಾದಶಾಂಶೆಯಾದರೆ ಅಶ್ವ, ಗಾರ್ದಭಾದಿ ಜನನವೆಂದು, ಮಕರ ಪೂರ್ವಾರ್ಧ ದ್ವಾದಶಾಂಶೆಯಾದರೆ ಮೃಗ, ಎರಳೆ, ಸಾರಂಗ, ಕಾಡು ಕುರಿ ಮೊದಲಾದ ಜನ್ಮವೆಂದು, ಮಕರ ಉತ್ತರಾರ್ಧ ದ್ವಾದಶಾಂಶೆಯಾದರೆ ಮೊಸಳೆ, ಕಪ್ಪೆ, ಮಕರ ಮೊದಲಾದ ಜಲಜಂತು ಜನನವೆಂದು ಮೀನ ದ್ವಾದಶಾಂಶೆಯಾದರೆ ಮತ್ಸ್ಯ, ತಿಮಿ, ತಿಮಿಂಗಿಲ ಮೊದಲಾದ ಜನ್ಮವೆಂದು ತಿಳಿಯತಕ್ಕದ್ದು. ಆದರೆ ಈ ಚಂದ್ರದ್ವಾದಶಾಂಶ ಮಾತ್ರದಿಂದಲೇ ವಿಯೋನಿಜನ್ಮ ಹೇಳಕೂಡದು. ಕ್ರೂರಗ್ರಹೈಸ್ಸುಬಲಿಭಿಃ-ರವಿ, ಕುಜ, ಶನಿ, ಕ್ಷೀಣಚಂದ್ರ, ಪಾಪಯುಕ್ತ ಬುಧ, ಈ ಗ್ರಹಗಳು ಬಲವಂತರಾಗಿದ್ದು, ವಿಬಲೈಶ್ಚಸೌಮ್ಯೈಃ- ಶುಭಗ್ರಹಗಳು, (ಪೂರ್ಣಚಂದ್ರ, ಶುದ್ಧಬುಧ, ಗುರು, ಶುಕ್ರರು) ಬಲಹೀನರಾಗಿದ್ದು, ಕ್ಲೀಬೇ ನಪುಂಸಕ ಗ್ರಹಗಳು ಅಂದರೆ ಶನಿ, ಬುಧರು ಚತುಷ್ಟಯಗತೆ-ಕೇಂದ್ರ ಸ್ಥಾನಗಳಲ್ಲಿದ್ದು ಮೇಲೆ ಹೇಳಲ್ಪಟ್ಟಿದ್ದ ದ್ವಾದಶಾಂಶೆಗಳಲ್ಲೇ ಚಂದ್ರನಿದ್ದರೆ ವಿಯೋನಿ ಜನ್ಮವೆಂದು ಹೇಳತಕ್ಕದ್ದು. ತದವೇಕ್ಷಣಾದ್ವಾ - ಚಂದ್ರನು ವಕ್ಷ್ಯಮಾಣ ಶ್ಲೋಕದಲ್ಲಿ ಹೇಳಲ್ಪಟ್ಟಂತೆ ದ್ವಾದಶಾಂಶೆಯಲ್ಲಿದ್ದು ಕ್ರೂರಗ್ರಹಗಳು ಬಲಿಷ್ಠರಾಗಿ, ಶುಭಗ್ರಹಗಳು ಬಲಹೀನರಾಗಿ ಶನಿಯಾಗಲಿ, ಬುಧನಾಗಲಿ ಲಗ್ನವನ್ನು ಎಲ್ಲಿಯಾದರೂ ನೋಡಿದರೆ ವಿಯೋನಿ ಜನ್ಮಯೋಗ. ಚಂದ್ರನು ದ್ವಿರಸಾಂಶ ದ್ವಿಪದರಾಶಿ ದ್ವಾದಶಾಂಶೆಯಲ್ಲಿದ್ದು, ಶುಭಗ್ರಹಗಳು ಬಲಿಷ್ಠರಾಗಿ, ಪಾಪಗ್ರಹಗಳು ಬಲಹೀನರಾಗಿದ್ದರೆ ಮನುಷ್ಯ ಜನ್ಮವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಕ್ರೂರೈಸ್ಸು ಬಲಸಮೇತೈ ರ್ವಿಬಲೈ ಸೌಮ್ಯೈರ್ವಿಯೋನಿಭಾಗಕೈಃ।। ಚಂದ್ರೇಜ್ಞ ಶನಿಕೇಂದ್ರೇ ತದ್ವೀಕ್ಷಿತೇಚೋದಯೇ ವಿಯೋನಿಸ್ಸ್ಯಾತ್ ।।೧।। ಮೇಷೇಶಶೀತದಂಶೆ ಛಾಗಾದಿ ಪ್ರಸವಮಾಹುರಾಚಾರ್ಯಾಃ ।। ಗೋಮಹಿಷಾಣಾಂ ಗೋಂಶೇನರರೂಪಾಣಾಂ ತೃತೀಯಾಂಶೇ ।।೨।। ತತ್ರಚತುರ್ಥೇಭಾಗೇ ಕೂರ್ಮಾದೀನಾಂ ಭವೇದುದಕ ಜಾನಾಂ।। ವ್ಯಾಘ್ರಾದೀನಾಂ ಪರತಃ ಪರತೋಜ್ಞೇಯಾನರಾಣಾಂಚ ।।೩।। ವಣಿಗಂಶೇನರೂಪಾವೃಶ್ಚಿಕಭಾಗೇ ತಥಾಭುಜಂಗದ್ಯಾಃ ।। ಖರತುರಗಾದ್ಯಾ ನವಮೇ ಮೃಗಶಿಖಿನಾಂ ಸ್ಯಾತ್ತದಾದಶಮೇ ।।೪।। ಜ್ಞೇಯಾಶ್ಚತತ್ರವಿವಿಧಾ ವೃಕ್ಷಾಸಕೃಣಜಾತಯುಶ್ಚಿತ್ರಾಃ।। ಏಕಾದಶೇಚ ಪುರುಷಾಜಲಜಾ ನಾನಾವಿಧಾಶ್ಚಾಂತ್ಯೆ।।೫।। ಒಂದನೇ ಶ್ಲೋಕದ ಅರ್ಥವು ಸ್ಪಷ್ಟವಾಗಿ ಮೊದಲೇ ಹೇಳಲ್ಪಟ್ಟಿದೆ. ಮೇಷರಾಶಿಯಲ್ಲಿ ಮೇಷದ್ವಾದಶಾಂಶೆಯಲ್ಲಿದ್ದು, ಆ ಕಾಲದಲ್ಲಿ

ಸೌಮ್ಯಗ್ರಹಗಳು ಬಲಹೀನರಾಗಿ, ಕ್ರೂರಗ್ರಹಗಳು ಬಲಿಷ್ಠರಾಗಿ ಕೇಂದ್ರದಲ್ಲಿ ನಪುಂಸಕ ಗ್ರಹಗಳಿದ್ದರೂ, ಲಗ್ನವನ್ನು ನೋಡಿದರೂ ಭಾಗ; ಮೇಕೆ, ಕಾಡುಕುರಿ ಮೊದಲಾದ ಜನ್ಮವು. ವೃಷಭರಾಶಿಯಲ್ಲಿ ವೃಷಭ ದ್ವಾದಶಾಂಶೆಯಲ್ಲಿದ್ದರೆ ಹಸು, ಎತ್ತು, ಕೋಣ, ಎಮ್ಮೆಮೊದಲಾದವು. ಮಿಥುನ ರಾಶಿಯಲ್ಲಿ ಮಿಥುನ ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಮನುಷ್ಯ ಜನ್ಮವು. ಕರ್ಕರಾಶಿಯಲ್ಲಿ ಕರ್ಕ ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಆಮೆ, (ಕೂರ್ಮ) ಮೊದಲಾದ ಜಲಚರ ಜಂತುಗಳು. ಸಿಂಹರಾಶಿಯಲ್ಲಿ ಸಿಂಹ ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಹುಲಿ, ಕರಡಿ, ಸಿಂಹ, ಚಿರತೆ, ಶಾರ್ದೂಲ, ಶರಭ, ಶುನಕ, ಮಾರ್ಜಾಲ ಮೊದಲಾದ ಜನ್ಮವು. ಕನ್ಯಾರಾಶಿಯಲ್ಲಿ ಕನ್ಯಾ ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಮನುಷ್ಯ ಜನ್ಮ. ಹಾಗೆಯೇ ತುಲಾದಲ್ಲಿ ಚಂದ್ರನು ತುಲಾ ದ್ವಾದಶಾಂಶೆಯಲ್ಲಿದ್ದರೆ ಮನುಷ್ಯ ಜನ್ಮವು. ವೃಶ್ಚಿಕರಾಶಿಯಲ್ಲಿ ವೃಶ್ಚಿಕ ದ್ವಾದಶಾಂಶೆಯಲ್ಲಿ ಚಂದ್ರನು ಇದ್ದರೆ ಸರ್ಪವಿಷಜಂತು ಜನ್ಮವು. ಧನೂರಾಶಿಯಲ್ಲಿ ದನುರ್ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಕತ್ತೆ, ಕುದುರೆ ಮೊದಲಾದ ಜನ್ಮ. ಮಕರ ರಾಶಿಯಲ್ಲಿ ಮಕರ ದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಮೃಗ, (ಶಿಖೀ) ನವಿಲು ಮೊದಲಾದ ಜನ್ಮವು ಮತ್ತು ನಾನಾವಿಧವಾದ ವೃಕ್ಷ, ಲತಾ, ಗುಲ್ಮ ತೃಣಗಳು ವಿಚಿತ್ರವಾದ ವನಸ್ಪತಿಗಳು, ಕುಂಭರಾಶಿಯಲ್ಲಿ ಕುಂಭದ್ವಾದಶಾಂಶೆಯಲ್ಲಿ ಚಂದ್ರನಿದ್ದರೆ ಮತ್ಸ್ಯ, ಕಪ್ಪೆ ಮೊದಲಾದ ಜಲಚರಗಳು. ಈ ಪ್ರಕಾರವಾಗಿ ವಿಯೋನಿ ಜನ್ಮ (ಉತ್ಪತ್ತಿ) ಯಾಗುತ್ತೆಂದು ತಿಳಿಯತಕ್ಕದ್ದು. ಈ ಹುಟ್ಟಿದ (ವಿಯೋನಿ ತಿರ್ಯಗ್ಜಂತುಗಳು - ಸ್ತ್ರೀಪುರುಷರ ಸಂಖ್ಯೆ ತಿಳಿಯುವುದಕ್ಕೆ ।।ಶ್ಲೋಕ।। ಶ್ವಪ್ರಭೃತೀನಾಂ ಪ್ರಭವೆಯಾವಂತೋ ದ್ವಾದಶಾಂಶಕಾಲಗ್ನೆ ।। ತಾವಂತ್ಯೇವಪ್ರವದೇತ್ ಪುಂಸ್ತ್ರೀಸಂಜ್ಞಾನ್ಯಪತ್ಯಾನಿ ।।೬।। ತಾತ್ಪರ್ಯ।। ಯಾವ ಲಗ್ನದಲ್ಲಿ ಜನ್ಮವಾಗುವುದೋ ಆ ಲಗ್ನಕ್ಕೆ ಎಷ್ಟು ದ್ವಾದಶಾಂಶಗಳು ಸಂದಿರುತ್ತವೋ ಅಷ್ಟು ಸಂಖ್ಯೆಯೆಂದು ಅದರಲ್ಲಿ ಪುಂಸ್ತ್ರೀ ನಪುಂಸಕಭೇದ ಅಂಶಗಳಿಂದ ಸ್ತ್ರೀಪುರುಷ ನಪುಂಸಕ ಪ್ರಾಣಿಗಳೆಂದು ಹೇಳತಕ್ಕದ್ದು. ಈ ವಿಷಯುವನ್ನು ಜ್ಯೋತಿಷ್ಕನು ಜ್ಞಾಪಕದಲ್ಲಿಟ್ಟುಕೊಂಡು ನಿರ್ಣಯಿಸತಕ್ಕದ್ದು.

ಲಗ್ನದ್ವಾದಶಾಂಶವನ್ನು ನೋಡಿದರೆ ಉಂಟಾಗತಕ್ಕ ಜನ್ಮ

| ಸಂಖ್ಯೆ | ಯಾವ ಅಂಶೆಯಲ್ಲಿದ್ದರೆ | ಯಾವ ಪ್ರಾಣಿ ಜನ್ಮವಾಗುತ್ತದೆ. |
|---|---|---|
| ೧ | ಮೇಷರಾಶಿಯಲ್ಲಿ ಮೇಷದ್ವಾದ-ಶಾಂಶೆಯಲ್ಲಿ ಚಂದ್ರನಿದ್ದರೆ*, | ಆಡು, ಕುರಿ, ಮೇಕೆ ಮತ್ತು ಈ ಸಂಬಂಧಿಸಿದ ಜಂತುಜನ್ಮ |
| ೨ | ವೃಷಭದಲ್ಲಿ ವೃಷಭ ದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಗಜ, ಅಶ್ವ, ಮಹಿಷ, ಕಾಡೆಮ್ಮೆ ಮೊದಲಾದ ಜನ್ಮ |
| ೩ | ಮಿಥುನದಲ್ಲಿ ಮಿಥುನ ದ್ವಾದ-ಶಾಂಶೆಯಲ್ಲಿ ಚಂದ್ರನಿದ್ದರೆ, | ನರಜನ್ಮ |
| ೪ | ಕರ್ಕದಲ್ಲಿ ಕರ್ಕ ದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಆಮೆ, ಶಂಖ, ಮುತ್ತು, ಕವಡೆ ಈ ಸಂಬಂಧವಾದ ಜಲಜಂತು |
| ೫ | ಸಿಂಹದಲ್ಲಿ ಸಿಂಹ ದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಸಿಂಹ, ಕರಡಿ, ಶಾರ್ದೂಲ, ಚಿರತೆ, ಶರಭ ಹಂದಿ, ನಾಯಿ |
| ೬ | ಕನ್ಯಾರಾಶಿಯಲ್ಲಿ ಕನ್ಯಾ ದ್ವಾದ ಶಾಂಶೆಯಲ್ಲಿ ಚಂದ್ರನಿದ್ದರೆ, | ಮನುಷ್ಯ ಜನ್ಮ |
| ೭ | ತುಲಾರಾಶಿಯಲ್ಲಿ ತುಲಾ ದ್ವಾದ ಶಾಂಶೆಯಲ್ಲಿ ಚಂದ್ರನಿದ್ದರೆ, | ಮನುಷ್ಯ ಜನ್ಮ |
| ೮ | ವೃಶ್ಚಿಕದಲ್ಲಿ ವೃಶ್ಚಿಕ ದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಚೇಳು, ಚುಚ್ಚುವ ಹುಳ, ಸರ್ಪ, ವೃಶ್ಚಿಕಾದಿಗಳು |
| ೯ | ಧನುಸ್ಸಿನಲ್ಲಿ ಧನುರ್ದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಕತ್ತೆ, ಕುದುರೆ, ಹೇಸರಕತ್ತೆ, ಘೇಂಡಾಮೃಗ ಮೊದಲಾದುವು. |
| ೧೦ | ಮಕರದಲ್ಲಿ ಮಕರದ್ವಾದಶಾಂಶೆ ಯಲ್ಲಿ ಚಂದ್ರನಿದ್ದರೆ, | ಮೃಗ, ನವಿಲು, ಸಾರಂಗ, ದುಪ್ಪಿ ಎರಳೆ ಅರ್ಧಹುಲ್ಲು ವ್ಯ.ಲ.ಗು. |
| ೧೧ | ಕುಂಭ ರಾಶಿಯಲ್ಲಿ ಕುಂಭದ್ವಾದ ಶಾಂಶೆಯಲ್ಲಿ ಚಂದ್ರನಿದ್ದರೆ, | ಮನುಷ್ಯ |
| ೧೨ | ಮೀನದಲ್ಲಿ ಮೀನರಾಶಿ ದ್ವಾದ ಶಾಂಶೆಯಲ್ಲಿ ಚಂದ್ರನಿದ್ದರೆ, | ಮೀನು, ತಿಮಿ, ತಿಮಿಂಗಿಲ, ಮಕರ ಕಪ್ಪೆ, ಮೊಸಳೆ ಜಲಚರ ಪ್ರಾಣಿಗಳು |

* **ಟಿಪ್ಪಣಿ** – ಸೌಮ್ಯಗ್ರಹಗಳು ಬಲಹೀನರಾಗಿ, ಕ್ರೂರಗ್ರಹಗಳು ಬಲಿಷ್ಠರಾಗಿ ನಪುಂಸಕ ಗ್ರಹಗಳು ಕೇಂದ್ರದಲ್ಲಿದ್ದರೂ ಅಥವಾ ಲಗ್ನವನ್ನು ನೋಡಿದರೂ ಈ ಯೋಗ ಲಭಿಸುವುದು.

## ವಿಯೋನಿಜನ್ಮ ಜ್ಞಾನಪ್ರಕರಣಂ

ಮೂಲ॥ ಪಾಪಾಬಲಿನಸ್ಸ್ವಭಾಗಗಾಃ ಪಾರಕ್ಯೇವಿಬಲಶ್ಚ ಶೋಭನಾಃ ॥ ಲಗ್ನಂಚ ವಿಯೋನಿ ಸಂಜ್ಞಕಂ ದೃಷ್ಟ್ವಾತ್ರಾಪಿ ವಿಯೋನಿ ಮಾದಿಶೇತ್ ॥

ಟೀಕು॥ ವಿಯೋನಿ ಜನ್ಮಯೋಗಃ ॥ ಈ ಯೋಗವು ಮೊದಲನೇ ಶ್ಲೋಕ ದಲ್ಲಿ ಹೇಳಲ್ಪಟ್ಟಂತೆ ಚಂದ್ರನು ಯಾವರಾಶಿ ದ್ವಾದಶಾಂಶೆಯಲ್ಲಿರುತ್ತಾನೋ ಅದೆನ್ನನುವರ್ತಿಸಿ ಹೇಳಲ್ಪಡುತ್ತೆ. ಪಾಪಾಃ-ಪಾಪಾಗ್ರಹಗಳು, ಬಲಿನಃ-ಬಲ ವಂತರಾಗಿ, ಸ್ವಭಾಗಗಾಃ-ಸ್ವನವಾಂಶೆಯಲ್ಲಿದ್ದು, ಶೋಭನಾ-ಶುಭಗ್ರಹಗಳು, ವಿಬಲಾಃ-ಬಲಹೀನರಾಗಿ, ಪಾರಕ್ಯೇ-ಪರಕೀಯ್ಯನವಾಂಶೆಯಲ್ಲಿದ್ದು, ಲಗ್ನಂಚ - ತಾತ್ಕಾಲಿಕ ಜನ್ಮ ಲಗ್ನವನ್ನು, ವಿಯೋನಿಸಂಜ್ಞಿಕಂ-ವಿಯೋನಿ ಜನ್ಮಸಂಜ್ಞಿಕ ವಾದದ್ದನ್ನಾಗಿ, ದೃಷ್ವಾ-ತಿಳಿದುಕೊಂಡು, ಅತ್ರಾಪಿ-ಈ ಯೋಗದಲ್ಲಿ (ಚುದ್ರೋಪಗ ದ್ವಿರಸಬಾಗ ಸಮಾನರೂಪಂ) ಎಂದು ಪೂರ್ವೋಕ್ತವಾದ ದ್ವಾದಶ್ಯಾಂಶೆ ಪ್ರಕಾರ, ವಿಯೋನಿತಿರ್ಯಗ್ಜಂತು ಜನ್ಮವನ್ನು, ಆದಿಶೇತ್-ಹೇಳತಕ್ಕದ್ದು. ಅಂದರೆ ಮೇಷ, ವೃಷಭ, ಕರ್ಕಾಟಕ ಸಿಂಹ, ವೃಶ್ಚಿಕ, ಧನುಸ್ಸು, ಪೂರ್ವಾರ್ಧ ಮಕರ, ಮೀನ ಈ ಲಗ್ನಗಳಿಗೆ ಈ ಶ್ಲೋಕದ ಅರ್ಥ ಉಪಯೋಗವಾಗತಕ್ಕದ್ದು.

## ಚತುಷ್ಪದ ಜಂತುವಿಗೆ ಮೇಷಾದಿ ಅಂಗವಿಭಾಗಃ

ಮೂಲ॥ ಕ್ರಿಯಶ್ಶಿರೋ ವಕ್ತ್ರಗಳಂ ವೃಷೋನ್ಯೇ ಪಾದಾಂಸಕಂ ಪೃಷ್ಠಮೂರೋಥಪಾರ್ಶ್ವೇ ॥ ಕುಕ್ಷಿಸ್ತ್ವಪಾನಾಂಘ್ರ್ಯಥ ಮೇಢ್ರ ಮುಷ್ಕೌಸ್ಫಿಕ್ಪುಚ್ಛಮಿತ್ಯಾಹ ಚತುಷ್ಪದಾಂಗೆ ॥೩॥

ಟೀಕು॥ ಚತುಷ್ಪದ ಜಂತುವಿಗೆ ಮೇಷಾದಿ ದ್ವಾದಶರಾಶಿಗಳು ಯಾವ ಯಾವ ಅವಯವಗಳಾಗಿವೆಯೋ ಆ ಅಂಶವನ್ನು ಹೇಳುತ್ತಾನೆ-ಕ್ರಿಯಃ-ಮೇಷ, ಶಿರಃ-ಚತುಷ್ಪದ ಜಂತುವಿನ ಶಿರಸ್ಸು, ವೃಷಃ-ವೃಷಭರಾಶಿಯು, ವಕ್ತ್ರಗಳಂ- ಮುಖ ಮತ್ತು ಕಂಠ, ಅನ್ಯೇ - ಮಿಥುನಾದಿ ೧೦ ರಾಶಿಗಳು ಕ್ರಮವಾಗಿ ಪದಾದಿ ಸಂಜ್ಞೆಗಳಾಗುವುವು. ಅದು ಹೇಗೆಂದರೆ:- ಮಿಥುನವು, ಪಾದಾಂಸಕಂ-ಮುಂದಿನ ಕಾಲು ಭುಜ ಶಿರಸ್ಸು, ಕರ್ಕಾಟಕವು,-ಪೃಷ್ಠ-ಅಂಡು, ಸಿಂಹ ರಾಶಿಯು, ಉರಃ-ವಕ್ಷಸ್ಥಳ, ಅಥ-ಅನಂತರದಲ್ಲಿ, ಕನ್ಯಾ, ಪಾರ್ಶ್ವೇ-ಎರಡು ಪಕ್ಕಗಳು, ತುಲಾರಾಶಿ-ಕುಕ್ಷಿಃ-ಹೊಟ್ಟೆ, ವೃಶ್ಚಿಕರಾಶಿ, ಅಪಾನ-ಗುದ ಪ್ರದೇಶ, ಧನುಸ್ಸು ಅಂಘ್ರಿ-ಪಶ್ಚಿಮ ಪಾದಗಳು, (ಹಿಂಗಾಲು) ಮಕರರಾಶಿ, ಮೇಢ್ರ, ಮುಷ್ಕೌ-ಲಿಂಗ

* ಸ್ತ್ವಪಾನಾಂಘ್ರ್ಯಥವೆಂದು ಉತ್ತರ ದೇಶದ ಪಾಠವಿರುತ್ತೆ.

ಮತ್ತು ತರಡುಗಳು, ಕುಂಭರಾಶಿ, ಸ್ಫಿಕ್-ಪಿರ್ರೆಗಳು, ಮೀನರಾಶಿ, ಪುಚ್ಛಂ-ಬಾಲ, ಇತಿ ಈ ಪ್ರಕಾರವಾಗಿ, ಚತುಷ್ಪದಾಂಶೆ-ಚತುಷ್ಪದ ಜಂತುಗಳ ಅವಯವ ಗಳಾಗುತ್ತವೆ. ಈ ಪ್ರಕಾರವಾಗಿ ರಾಶಿ ವಿಭಾಗವನ್ನು ಆಹ-ಹೇಳುತ್ತಾನೆ. ಚತುಷ್ಪದ ಗ್ರಹಣ ಉಪಲಕ್ಷಣಾರ್ಥವಾಗಿ ಹೇಳಿರುತ್ತೆ. ಈ ಪ್ರಕಾರವೇ ಪಕ್ಷಿಗಳಿಗೂ, ಪೂರ್ವ ಪಾದಸ್ಥಾನಕ್ಕೆ ಎರಡು ರೆಕ್ಕೆಗಳನ್ನಾಗಿ ಉಳಿದ ಸ್ಥಾನಗಳು ಚತುಷ್ಪಾದ ಜಂತುವಿನ ಆಯಾಯ ಸ್ಥಾನಗಳಾಗಿ ತಿಳಿಯತಕ್ಕದ್ದು. ಇದಕ್ಕೆ ಪ್ರಯೋಜನವೇನೆಂದರೆ:- ರಾಶಿಗಳಿಗೆ ಹೇಳಿದ ಸ್ಥಾನದಲ್ಲಿ ವರ್ಣೋಪಘಾತವೆಂದು ತಿಳಿಯತಕ್ಕದ್ದು.

## ವಿಯೋನಿಜಂತು ವರ್ಣವಿಚಾರ

ಮೂಲ|| ಲಗ್ನಾಂಶಕಾದ್ಗ್ರಹಯೋಗೇ ಕ್ಷಣದ್ವಾವರ್ಣಾನ್ವ ದೇದ್ಬಲಯುಕ್ತಾ
ದ್ವಿಯೋನೌ || ದೃಷ್ಟ್ಯಾ ಸಮಾನಾರ್ ಪ್ರವದೇತ್ಸ್ವಸಂಖ್ಯ-
ಯಾರೇಖಾಃವದೇತ್ ಸ್ಮರಸಂಸ್ಥೈಶ್ಚ ಪೃಷ್ಠೇ ||೪||

ಟೀಕು|| ವಿಯೋನಿ ಜನ್ಮವಾದ ಜಂತುಗಳಿಗೆ ವರ್ಣವು ಹೇಳಲ್ಪಡುತ್ತೆ. ಗ್ರಹಯೋಗೇಕ್ಷಣಾತ್-ಗ್ರಹಯೋಗ ಲಗ್ನದಲ್ಲಿ ಯಾವ ಗ್ರಹವಿರುವುದೋ ಆ ಗ್ರಹಕ್ಕೆ (ತಾಮ್ರಸಿತಾತಿರಕ್ತ ಹರಿತವ್ಯಾಪೀತ ಚಿತ್ರಾಸಿತಾ) ಎಂದು ಯಾವ ವರ್ಣ ಉಕ್ತವಾಗಿರುವುದೋ, ಆ ವರ್ಣ ತಿರ್ಯಗ್ಜಂತುಗಳಿಗೆ ಹೇಳಬೇಕು. ಲಗ್ನದಲ್ಲಿ ಗ್ರಹ ವಿಲ್ಲದಿದ್ದರೆ, ಈ ಕ್ಷಣಾದ್ವಾ-ಲಗ್ನವು ಯಾವ ಗ್ರಹದಿಂದ ನೋಡಲ್ಪಡುತ್ತೋ, ಆ ವರ್ಣವನ್ನು ವಿಯೋನಿ ಜಂತುವಿಗೆ ಹೇಳಬೇಕು. ಮತ್ತು ಲಗ್ನವನ್ನು ಯಾವ ಗ್ರಹವು ನೋಡದೆ ಹೋದರೆ, ಲಗ್ನಾಂಶಕಾತ್-ಲಗ್ನದಲ್ಲಿ ಯಾವರಾಶಿ ನವಾಂಶ ಉದಯಿಸುತ್ತೋ ಆ ರಾಶಿಗೆ ಹೇಳಿದ (ರಕ್ತಶ್ವೇತಶುಕತನುನಿಭಃ) ಎಂದು ಹೇಳಲ್ಪಟ್ಟ ವರ್ಣವನ್ನು, ವಿಯೋನೌ-ವಿಯೋನಿ ಜಂತುವಿಗೆ, ವದೇತ್-ಹೇಳಲ್ಪಡತಕ್ಕದ್ದು. ಅನೇಕ ಗ್ರಹಗಳು ಲಗ್ನವನ್ನು ನೋಡಿದರೂ ಲಗ್ನದಲ್ಲಿದ್ದರೂ, ಬಲಯುಕ್ತಾತ್-ಆ ಗ್ರಹಗಳಲ್ಲಿ ಬಲವುಳ್ಳ ಗ್ರಹದ ವರ್ಣವನ್ನು ಬಾಹುಳ್ಯ ವಾಗಿಯೂ, ಬಲಹೀನ ಗ್ರಹದ ವರ್ಣವನ್ನು ಅಲ್ಪವಾಗಿಯೂ ಹೇಳತಕ್ಕದ್ದು. ದೃಷ್ಟ್ಯಾ ಸಮಾನಾರ್ ಪ್ರವದೇತ್ಸ್ವಸಂಖ್ಯಯಾ ಎಷ್ಟು ಗ್ರಹಗಳು ಲಗ್ನವನ್ನು ನೋಡುತ್ತಾರೋ ಅಷ್ಟು ವರ್ಣವನ್ನು ಹೇಳತಕ್ಕದ್ದು. ಲಗ್ನವಾಗಲಿ, ಲಗ್ನ ನವಾಂಶವಾಗಲಿ, ಲಗ್ನಾಧಿಪತಿಯಿಂದಾಗಲಿ, ನವಾಂಶಾಧಿಪತಿಯಿಂದಾಗಲಿ, ಯುಕ್ತವಾಗಿಯಾಗಲಿ, ದೃಷ್ಟವಾಗಿಯಾಗಲಿ ಇದ್ದರೆ ಆಗ ಆ ಗ್ರಹಗಳ ವರ್ಣವನ್ನು ಹೇಳತಕ್ಕದ್ದು. ಸ್ಮರಸಂಸ್ಥೈಃ-ಸಪ್ತಮ ಸ್ಥಾನದಲ್ಲಿದ್ದ ಗ್ರಹಗಳ ಮೂಲವಾಗಿ, ಪೃಷ್ಠೇ- ಅವುಗಳ ಪೃಷ್ಠವನ್ನು, ರೇಖಾಃ-ರೇಖೆಗಳನ್ನು, ವದೇತ್-ಹೇಳತಕ್ಕದ್ದು.

ಈ ಹೇಳಲ್ಪಟ್ಟ ಯಾವದ್ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಮೇಷಾದಿಭಿರುದಯಸ್ಥೈ ರಂಶೈರ್ವಾಗ್ರಹಯುತೈಶ್ಚ ದೃಷ್ಟೈರ್ವಾ ।। ಸ್ವಂಸ್ವಂವರ್ಣಂ ಬ್ರೂಯಾದ್ಗಾತ್ರೇ ಚಿನ್ಹಂವ್ರಣಂಚಾಪಿ ।।೭।। ಸ್ವಗೃಹಾಂಶಕ ಸಂಯೋಗಾದ್ವಿಂದ್ಯಾದ್ವರ್ಣಾ ಪರಾಂಶಕೇಸೂತೌ ।। ಸಪ್ತಮ ಸಂಸ್ಥಾಕುರ್‍ಯುಃ ಪೃಷ್ಠೇರೇಖಾಸ್ವವರ್ಣಸಮಾಃ।।೮।। ವೀಕ್ಷ್ಯಂತೇಯಾವಂ ತೋವಿಯೋನಿ ವರ್ಣಾಶ್ಚತಾವಂತಃ।। ಬಲಹೀನೋ ಗಗನಚರಃ ಕರೋತಿ ವರ್ಣಂ ವಿಯೋನಿಜಂಹೀನಂ ।।೯।। ಪೀತಂಕರೋತಿ ಜೀವಶ್ಶಶೀಸಿತಂ ಭಾರ್ಗವೋ ವಿಚಿತ್ರಂಚ।। ರಕ್ತಂದಿನಕರರುಧಿರೌರವಿಜಃ ಕೃಷ್ಣಂಬುಧಶ್ಶಬಲಂ ।।೧೦।। ಸ್ವೇರಾಶೌ ಪರಭಾಗೇ ಪರರಾಶೌ ಸ್ವೇನವಾಂಶಕೆತಿಷ್ಠ।। ಪಶ್ಯಗ್ರಹೋವಿಲಗ್ನಂ ಸ್ವವರ್ಣವರ್ಣಂ ತದಾಕುರುತೇ ।।೧೧।। ಎಂದುಕ್ತವಾಗಿರುತ್ತೆ.

## ಪಕ್ಷಿಜನ್ಮ ಯೋಗ

**ಮೂಲ।। ಖಗೇದೃಗಾಣೇತಿ ಬಲಸಂಯುತೇನವಾ ಗ್ರಹೇಣಯುಕ್ತೆ ಚರಭಾಂಶ ಕೋದಯೇ ।। ಬುಧಾಂಶಕೇವಾ ವಿಹಗಾಃಸ್ಥಲಾಂಬುಜಾಃ ಶನೈಶ್ಚರೇಂದ್ವೀಕ್ಷಣಯೋಗಸಂಭವಾಃ ।।೫।।**

ಟೀಕು।। ಪಕ್ಷಿಜನ್ಮಯೋಗ ಹೇಳಲ್ಪಡುತ್ತೆ.

ಖಗ - (ಪಕ್ಷಿ), ದ್ರೇಕ್ಕಾಣಗಳು, ವಿವರಣೆ.

೧. ಮಿಥುನ ದ್ವಿತೀಯ ದ್ರೇಕ್ಕಾಣ.

೨. ಸಿಂಹ ಪ್ರಥಮ ದ್ರೇಕ್ಕಾಣ.

೩. ತುಲಾ ದ್ವಿತೀಯ ದ್ರೇಕ್ಕಾಣ.

೪. ಕುಂಭ ಪ್ರಥಮ ದ್ರೇಕ್ಕಾಣ.

ಖಗದೃಗಾಣೇತಿ ।। ಖಗೇದ್ರೇಕ್ಕಾಣೇ - ದ್ರೇಕಾಣಗಳಲ್ಲಿ ಯಾವುದಾದರೂ ಒಂದು ದ್ರೇಕಾಣಕ್ಕೆ ಶನಿ, ಚಂದ್ರರ ವೀಕ್ಷಣೆಯಿದ್ದರೂ ಅಥವಾ ಅಲ್ಲಿಯೇ ಶನಿ ಚಂದ್ರರಿದ್ದರೂ, ಆ ಕಾಲದಲ್ಲಿ ಹುಟ್ಟಿದ ಪ್ರಾಣಿಯು ಕ್ರಮವಾಗಿ ಸ್ಥಲಾಂಬುಜಾಃ-ಭೂಮಿಯಲ್ಲು ಜಲದಲ್ಲು ಸಂಚರಿಸುವ, ವಿಹಗಾಃ-ಪಕ್ಷಿಗಳು (ಭವಂತಿ-ಆಗುತ್ತವೆ). ಅದು ಹೇಗೆಂದರೆ:- ಪಕ್ಷಿದ್ರೇಕ್ಕಾಣಕ್ಕೆ ಶನಿ ನೋಡಿದರೂ ಅಲ್ಲಿ ಶನಿ ಇದ್ದರೂ ಆ ಕಾಲದಲ್ಲಿ ಪಕ್ಷಿಜನ್ಮವಾಗುವುದು. ಪಕ್ಷಿದ್ರೇಕ್ಕಾಣಕ್ಕೆ ಚಂದ ದೃಷ್ಟಿಯಿದ್ದರೂ ಚಂದ್ರನೂ ಅಲ್ಲಿಯೇ ಇದ್ದರೂ ಜಲಚರಪಕ್ಷಿ ಜನ್ಮವಾಗುವುದು, ಬಲಸಂಯುತೇನ-ಬಲಯುಕ್ತವಾದ ಗ್ರಹದಿಂದ, ಯುಕ್ತೆ-ಕೂಡಿದರೆ,

ಚರಭಾಂಶಕೋದಯೇ-ಚರರಾಶಿಯಾಗಲೀ ಚರನವಾಂಶವಾಗಲೀ ಶನಿಯಿಂದ ಕೂಡಿದರೂ ಅಥವಾ ನೋಡಲ್ಪಟ್ಟರೂ ಸ್ಥಲಪಕ್ಷಿ ಜನನವಾಗುವುದು. ಇದು ಎರಡನೇ ವಿಧವಾದ ಪಕ್ಷಿ ಜನನಯೋಗ. ಬುಧಾಂಶಕೇವಾ-ಜನ್ಮ ಲಗ್ನ, ಬುಧನವಾಂಶಗಳಾದ ಕನ್ಯಾ, ಮಿಥುನ ನವಾಂಶಗಳಲ್ಲೊಂದಾಗಿ ಆ ನವಾಂಶ ಬಲಿಷ್ಠವಾದ ಗ್ರಹಯುಕ್ತವಾಗಿ ಶನಿಯಿಂದ ನೋಡಲ್ಪಟ್ಟರೂ, ಅಲ್ಲಿ ಶನಿಯೇ ಇದ್ದರೂ ಸ್ಥಲಪಕ್ಷಿ ಜನನವಾಗುವುದು. ಚಂದ್ರಯುಕ್ತವಾಗಿಯೇ ಆಗಲಿ, ದೃಷ್ಟವಾಗಿಯೇ ಆಗಲೀ ಆ ಕಾಲದಲ್ಲಿ ಜಲಚರಪಕ್ಷಿ ಜನನವಾಗುವುದು. ಇದು ೩ನೆ ವಿಧ ಪಕ್ಷಿ ಜನನಯೋಗ. ಈ ಯೋಗವು ಶನಿ-ಚಂದ್ರರ ಯೋಗವೀಕ್ಷಣೆ ಯಿಂದ ಹುಟ್ಟುವುದು. ಈ ವಿಷಯಕ್ಕೆ ಸಾರಾವಳಿಯಲ್ಲಿ ।।ಶ್ಲೋಕ।। ವಿಹಗೋದಿತ ದೃಕ್ಕಾಣೇ ಗ್ರಹೇಣಬಲಿನಾಯುತೆ ಥಚರಭಾಂಶೆ।। ಬೌಧಾಂಶೆ ವಿಹಗಾಃ ಸ್ಥಲಾಂಬುಜಾಶ್ಮನಿಶಶೀಕ್ಷಣಾದ್ಯೋಗಾತ್ ।।೧೨।।

| ಯೋನಿ | ಸ್ಥಾನಗಳು | ಸ್ಥಲಚರ ಪಕ್ಷಿಜನ್ಮ | ಜಲಚರ ಪಕ್ಷಿಜನ್ಮ |
|---|---|---|---|
| ೧ | ಪಕ್ಷಿದ್ರೇಕ್ಕಾಣಕ್ಕೆ* | ಶನಿದೃಷ್ಟಿ ಇದ್ದರೆ | ಚಂದ್ರದೃಷ್ಟಿ ಇದ್ದರೆ |
| ೨ | ಚರರಾಶಿಗಾಗಲಿ ಚರನವಾಂಶಕ್ಕಾಗಲಿ | ಶನಿದೃಷ್ಟಿ ಇದ್ದರೆ | ಚಂದ್ರದೃಷ್ಟಿ ಇದ್ದರೆ |
| ೩ | ಕನ್ಯಾ ಮಿಥುನಲಗ್ನ ನವಾಂಶಗಳಿಗೆ | ಶನಿದೃಷ್ಟಿ ಇದ್ದರೆ | ಚಂದ್ರದೃಷ್ಟಿ ಇದ್ದರೆ |

## ವೃಕ್ಷೋತ್ಪತ್ತಿ ಯೋಗಃ

ಮೂಲ।। ಹೋರೇಂದುಸೂರಿ ರವಿಭಿರ್ವಿಬಲೈಸ್ತರೂಣಾಂ ತೋಯೇಸ್ಥಲೇವ ತರುಭವೋಂಶಕೃತಃ ಪ್ರಭೇದಃ ।। ಲಗ್ನಾದ್ಗ್ರಹಃ ಸ್ಥಲಜಲರ್ಕ್ಷಪತಿಸ್ತು ಯಾವಾಂಸ್ತಾವಂತ ಏವತರವಃ ಸ್ಥಲತೋಯಜಾತಾಃ ।।೬।।

ಅ।। ವೃಕ್ಷೋತ್ಪತ್ತಿಯೋಗ ಹೇಳಲ್ಪಡುತ್ತೆ.

ಟೀಕು।। ಹೋರೇಂದುಸೂರಿರವಿಭಿರ್ವಿಬಲೈಃ-ಹೋರಾ-ಲಗ್ನವು, ಇಂದು ಚಂದ್ರನು, ಸೂರಿ-ಬೃಹಸ್ಪತಿಯು, ರವಿ-ಸೂರ್ಯನು, ವಿಬಲೈ-ಬಲಹೀನರಾಗಿದ್ದರೆ

(ಪ್ರಶ್ನಲಗ್ನಕ್ಕಾಗಲಿ, ಜನ್ಮಲಗ್ನಕ್ಕಾಗಲಿ) ವೃಕ್ಷಜನ್ಮವೆಂದು ತಿಳಿಯತಕ್ಕದ್ದು. ಇದರಲ್ಲಿ ವಿಶೇಷವೇನೆಂದರೆಃ-ತರುಭವಃ-ವೃಕ್ಷಗಳನ್ನು, ತೋಯೆ-ಜಲಪ್ರಾಯ ಪ್ರದೇಶದಲ್ಲಿ ಬೆಳೆಯುವ ವೃಕ್ಷಗಳ, ಸ್ಥಲೇವ-ನಿರ್ಜಲ ಪ್ರದೇಶದಲ್ಲಿ ಬೆಳೆಯತಕ್ಕ ವೃಕ್ಷಗಳ, ಪ್ರಭೇದಃ - ಭೇದವು, ಅಂಶಕೃತಃ-ನವಾಂಶದಿಂದ ತಿಳಿಯತಕ್ಕದ್ದು. ಇತರವುಗಳಾದ ಮೇಷ, ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನುಸ್ಸು, ಮಕರ ಪೂರ್ವಾರ್ಧ ಕುಂಭ ಈ ರಾಶಿ ನವಾಂಶಗಳಾದರೆ ನಿರ್ಜಲ ಪ್ರದೇಶದಲ್ಲಿನ ವೃಕ್ಷಗಳೆಂದು ಹೇಳತಕ್ಕದ್ದು.

ಅದು ಹೇಗೆಂದರೆ:- ಲಗ್ನವು ಜಲರಾಶಿಗಳಾದ ಕರ್ಕಾಟಕ, ಕನ್ಯಾ, ಮಕರ, ಪಶ್ಚಿಮಾರ್ಧ ಮೀನ ಇವುಗಳಲ್ಲಿ ಯಾವುದಾದರೂ ಒಂದು ರಾಶಿ ನವಾಂಶ ಉದಯವಾದರೆ ಜಲಪ್ರಾಯ ಪ್ರದೇಶದಲ್ಲಿ ವೃಕ್ಷೋತ್ಪತ್ತಿಯೆಂದು ಹೇಳತಕ್ಕದ್ದು. ಇತರವುಗಳಾದ ಮೇಷ, ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನುಸ್ಸು, ಮಕರ ಪೂರ್ವಾರ್ಧ ಕುಂಭ ಈ ರಾಶಿ ನವಾಂಶಗಳಾದರೆ ನಿರ್ಜಲ ಪ್ರದೇಶದಲ್ಲಿನ ವೃಕ್ಷಗಳೆಂದು ಹೇಳತಕ್ಕದ್ದು.

ವೃಕ್ಷಾದಿಗಳ ಸಂಖ್ಯೆ ತಿಳಿಯತಕ್ಕದ್ದನ್ನು ಹೇಳುತ್ತಾನೆ :- ಸ್ಥಲಜಲರ್ಕ್ಷ ಪತಿಃ- ಲಗ್ನನವಾಂಶವು ಸ್ಥಲರಾಶಿಯಾಗಲಿ, ಜಲರಾಶಿಯಾಗಲಿ ತದಧಿಪತಿಯಾದ ಗ್ರಹವು, ಲಗ್ನಾತ್ - ಲಗ್ನದಿಂದ, ಯಾವಾ - ಎಷ್ಟನೆ ರಾಶಿಯಲ್ಲಿದ್ದಾನೆಯೋ, ತಾವಂತ ಏವತರವಃ - ಅಷ್ಟು ಸಂಖ್ಯೆ ವೃಕ್ಷಗಳು, ಸ್ಥಲತೋಯಜಾತಾಃ-ಸ್ಥಲದಲ್ಲಿ ಅಂದರೆ ಭೂಮಿಯಲ್ಲಾಗಲಿ ನೀರಿನಲ್ಲಿಯಾಗಲಿ ಸ್ಥಲಜಲರಾಶಿ ನವಾಂಶ ಸಂಖ್ಯೆಯಿಂದ ಹೇಳತಕ್ಕದ್ದು. ಇಲ್ಲಿ ನವಾಂಶಾಧಿಪತಿ ವಶದಿಂದ ಈ ಹೇಳಲ್ಪಟ್ಟ ಶ್ಲೋಕದಿಂದ ಆಯುರ್ದಾಯ ವಿಧಾನದಿಂದ ದ್ವಿತ್ರಿಗುಣದಿಂದ ಹೇಳತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಲಗ್ನಾರ್ಕಜೀವಚಂದ್ರೈರಬಲೈಶ್ಚೈಷೈಶ್ಚ ಮೂಲಯೋನಿಸ್ಸ್ಯಾತ್।। ಸ್ಥಲಜಲಭವನವಿಭಾಗಾ ವೃಕ್ಷಾದೀನಾಂ ಪ್ರಭೇದ ಕರಾಃ ।।೧೩।। ಸ್ಥಲಜಲಯೋಗೇ ಲಗ್ನಾದ್ಯಾವತಿರಾಶೌತು ।। ತೇಪಿತಾವಂತಃ।। ದ್ವಿತ್ರಿಗುಣತ್ವಂ ತೇಷಾಮಾಯುರ್ದಾಯ ಪ್ರಕಾರೋಕ್ತಂ ।।೧೪।।

## ನವಾಂಶ ಮೂಲಾದ್ವೃಕ್ಷಜನ್ಮ ಜ್ಞಾನಯೋಗ

ಮೂಲ।। ಅನ್ತಸ್ಸಾರಾ ಜನಯತಿ ರವಿರ್ದುರ್ಭಗಾ ಸೂರ್ಯಸೂನುಃ ।
ಕ್ಷೀರೋಪೇತಾ ತುಹಿನಕಿರಣಃ ಕಂಟಕಾಢ್ಯಾಂಶ್ಚಶುಕ್ರಃ ।।
ವಾಗೀಶಜ್ಞೌ ಸಫಲವಿಫಲಾ ಪುಷ್ಪವೃಕ್ಷಾಂಶ್ಚಶುಕ್ರಃ ।। ಸ್ನಿಗ್ಧಾನಿಂದುಃ
ಕಟುಕವಿಟಪಾ ಭೂಮಿಪುತ್ರಶ್ಚಭೂಯಃ ।।೭।।

ಟೀಕು॥ ರವಿಃ-ಸೂರ್ಯನು ನವಾಂಶಾಧಿಪತಿಯಾದರೆ, ಅಂತಸ್ಸಾರಾ-ಮಧ್ಯ ದೃಢವಾ ಶಿಂಶುಪಾದಿ ವೃಕ್ಷ ಅಂದರೆ ಚೇಗು ಇರುವ ವೃಕ್ಷವನ್ನು, ಜನಯತಿ-ಹುಟ್ಟಿಸುತ್ತಾನೆ, ಸೂರ್ಯಸೂನುಃ-ಶನಿ ನವಾಂಶಾಧಿಪತಿಯಾದರೆ, ದುರ್ಭಗಾ-ಮನಸ್ಸಿಗೂ, ಚಕ್ಷುಸ್ಸಿಗೂ ಅಪಾಯುವಾದ ವೃಕ್ಷವನ್ನು ಹುಟ್ಟಿಸುವನು, ತುಹಿನಕಿರಣ-ಚಂದ್ರನು ನವಾಂಶಾಧಿಪತಿಯಾದರೆ, ಕ್ಷೀರೋಪೇತಾ-ಹಾಲಿನಿಂದೊಡಗೂಡಿದ ರಸ ಮೊದಲಾದುದ್ದು ಬರುವ ಗಿಡವನ್ನು ಹುಟ್ಟಿಸುವನು, ಭೌಮಾಃ-ಕುಜನು ನವಾಂಶಾಧಿಪತಿಯಾದರೆ, ಕಂಟಕಾಢ್ಯಾ-ಮುಳ್ಳುಗಳಿಂದ ಕೂಡಿದ, ವಿಟಪಾ-ವೃಕ್ಷಗಳನ್ನು ಹುಟ್ಟಿಸುವನು, ವಾಗೀಶಜ್ಞೌ-ಗುರುಬುಧರು ನವಾಂಶಾಧಿಪತಿಗಳಾದರೆ (ಕ್ರಮವಾಗಿ), ಸಫಲವಿಫಲಾ-ಸಫಲ-ಫಲಬಿಡತಕ್ಕ, ವಿಫಲಾ-ಫಲಬಿಡದೆ ಇರತಕ್ಕ ಗಿಡಗಳನ್ನು ಹುಟ್ಟಿಸುವರು, ಅಂದರೆ-ಬುಧನು, ಫಲಹೀನ ವೃಕ್ಷವನ್ನು, ಗುರುವು ಫಲಬಿಡತಕ್ಕ ವೃಕ್ಷವನ್ನು ಹುಟ್ಟಿಸುತ್ತಾನೆ. ಶುಕ್ರಃ-ಶುಕ್ರನು ನವಾಂಶಾಧಿಪತಿಯಾದರೆ, ಪುಷ್ಪವೃಕ್ಷಾ-ಪುಷ್ಪದಿಂದ ಶೋಭಿಸತಕ್ಕ ನಾಗಸಂಪಿಗೆ, ಸಂಪಿಗೆ, ಬೆಟ್ಟದಾವರೆ, ಜಾಲಾರಿ ಮೊದಲಾದ ವೃಕ್ಷಗಳನ್ನು ಮತ್ತು ಮಾಲತಿ, ಸೇವಂತಿಕಾದಿ ವೃಕ್ಷ ಗಿಡಗಳನ್ನು ಹುಟ್ಟಿಸುವನು. ಭೂಯಃ-ಮತ್ತು, ಇಂದುಃ-ಚಂದ್ರನು, ಸ್ನಿಗ್ಧಾ-ನುಣಿಪಾಗಿರುವ ದೇವದಾರ್ವಾದಿ ವೃಕ್ಷಗಳನ್ನು, ಭೂಮಿಪುತ್ರಃ-ಅಂಗಾರಕನು, ಕಟುಕವಿಟಪಾ-ಕಹಿಯಾಗಿರುವ ಗಿಡಗಳನ್ನು, ಇಲ್ಲಿ ಕುಜ-ಚಂದ್ರರು ದ್ವಿವಿಧವಾದ ವೃಕ್ಷಗಳನ್ನು ಹುಟ್ಟಿಸುವವರಾಗುವರು, ಅಂದರೆ ಚಂದ್ರನು ಕ್ಷೀರೋಪೇತ ವೃಕ್ಷಗಳನ್ನಾಗಲೀ, ಸ್ನಿಗ್ಧ ವೃಕ್ಷಗಳನ್ನಾಗಲೀ, ಕುಜನು ಮುಳ್ಳಿನಿಂದ ಕೂಡಿರುವ ಗಿಡಗಳನ್ನಾಗಲೀ, ಕಹಿಯಾದ ಗಿಡಗಳನ್ನಾಗಲೀ ಹುಟ್ಟಿಸುವನು. ಈ ವಿಷಯದಲ್ಲಿ ಪರಾಶರರ ಅಭಿಪ್ರಾಯ-ಅಂತ-ಸ್ಸಾರಾ ವೃಕ್ಷಾ ಭಾನುರ್ದುರ್ಗೋದ್ಭವಾ ಕರೋತಿಭೃಶಂ ॥ ಕ್ಷೀರಸ್ನೇಹ ಸಮೇತಾ ಶಶಿಗುರು ಫಲಸಮೇತಾಂಶ್ಚ ॥೧೫॥ ಕಟುಕಂಟಕಿನೊ ರುಧಿರಸ್ಸುದುರ್ಭಗಾಂಸ್ತ ರಣಿಜಸ್ತತಶ್ಶುಕ್ರಃ॥ ಕುಸುಮಫಲ ಸ್ನೇಹಸಂಯುತಾ ಬುಧಸ್ತುಫಲ ವರ್ಜಿತಾ ಜನಯೇತ್ ॥೧೬॥

## ನವಾಂಶ ಮೂಲದಿಂದ ವೃಕ್ಷಜಾತಿ ಜನ್ಮಯೋಗ

ಈ ಯೋಗಕ್ಕೆ ಲಗ್ನ, ಚಂದ್ರ, ಗುರು, ಸೂರ್ಯರು ದುರ್ಬಲರಾಗಿರುವ ನವಾಂಶಧಿಪತಿ ಈ ಪದಕದಲ್ಲಿ ಕಂಡ ಗ್ರಹವಾದರೆ ವೃಕ್ಷಾದಿಗಳ ಜನ್ಮವಾಗುವುದು.

| ಸಂಖ್ಯೆ | ನವಾಂಶಾಧಿಪತಿಯಾದರೆ | ಎಂಥಾ ವೃಕ್ಷ ಹುಟ್ಟುತ್ತದೆ |
|---|---|---|
| ೧ | ನವಾಂಶಾಧಿಪತಿಯಾದರೆ | ಒಳಗೆ ಚೇಗು ಇರುವ ವೃಕ್ಷ |
| ೨ | ಚಂದ್ರ ನವಾಂಶಾಧಿಪತಿ | ಹಾಲು ಬರುವುದು, ಕಬ್ಬು ಮೊದಲಾದ್ದು |
| ೩ | ಕುಜ ನವಾಂಶಾಧಿಪತಿ | ಮುಳ್ಳುಗಳಿಂದ ಕೂಡಿದ ಕಂಟಕವೃಕ್ಷ |
| ೪ | ಬುಧ ನವಾಂಶಾಧಿಪತಿ | ಫಲ ಬಿಡದೆ ಇರುವ ವೃಕ್ಷ |
| ೫ | ಗುರು ನವಾಂಶಾಧಿಪತಿ | ಫಲ ಬಿಡತಕ್ಕ ವೃಕ್ಷ |
| ೬ | ಶನಿ ನವಾಂಶಾಧಿಪತಿ | ನೋಡುವುದಕ್ಕೆ ಅಪ್ರಿಯವಾದ ದುರ್ವೃಕ್ಷ |
| ೭ | ಶುಕ್ರ ನವಾಂಶಾಧಿಪತಿ | ಪುಷ್ಪ ಬಿಟ್ಟು ಶೋಭಿಸತಕ್ಕ ವೃಕ್ಷ |
| ೮ | ಅಂಗಾರಕನಾದರೆ | ಕಹಿಯಾದ ರಸವುಳ್ಳ ಗಿಡ |
| ೯ | ಚಂದ್ರನಾದರೆ | ಮೃದುವಾದ ಮನೋಹರ ವೃಕ್ಷ |

ಈ ವಿಷಯದಲ್ಲಿ ಜ್ಯೋತಿರ್ನಿಬಂಧದಲ್ಲಿ ।।ಶ್ಲೋಕ।। ಲಗ್ನೇಶಚಂದ್ರ ಜೀವಾರ್ಕೈರ್ಬಲಹೀನೈರಿದಂವದೇತ್ ।। ನವಾಂಶೋದನಾಥೇನ ಪ್ರಾಶ್ನಿಕಂ ವಾಥಜಾತಕಂ ।।೧೭।। ಸಸ್ಯಾನಾಂ ವೀರುಧಾಂಚೈವ ಸಮಷ್ಟ್ವಾ ತರುಗುಲ್ಮಯೋಃ।। ವೃಷ್ಟ್ವಾ ವಾನಾಥಶೀಲೇನ ಶೃಂಗಾರಾರಾಮಜಸ್ಯಚ ।।೧೫।। ಸ್ಥಲ ಜಾನೂಪಯೋಶ್ಚಾಪಿ ದುರ್ಗಾರಣ್ಯಭವಸ್ಯಚ ।। ಗೃಹಕೇಳೀವನಸ್ಥಸ್ಯ ತರುಜಾತಸ್ಯಜಾತಕಂ ।।೧೯।। ನವಾಂಶಶ್ಚೈರ್ನವಾಂಶೇಶ ಯುಕ್ತೈಸ್ತದುಭಯೇ ಕ್ಷಿತ್ಯೈಃ।। ಶುದ್ಧೈರ್ಮಿಶ್ರೈರ್ಬಲೋಪೇತೈ ಸ್ಸಸ್ಯಜಾತಿಮುದೀರಯೇತ್ ।।೨೦।। ವಿವಿಧಾನ್ ವೃಕ್ಷಭೇದಾಂಶ್ಚ ಕಾಲದೇಶಾನುಮಾನತಃ ।। ಸ್ತಂಭಸ್ಥೂಣೋಪಯುಕ್ತಾಂಶ್ಚ ಬಲಿಷ್ಠಾನ್ಭಾರವಾಹನಃ ।।೨೧।। ಅಂತಸ್ಸಾರಾನ್ ಪರ್ವವತೋ ವೇಣ್ವಾ ದೀನಪಿಭಾಸ್ಕರಾತ್ ।। ಸಚಿಕ್ಕಣಾಂಶ್ಚಕ್ಷೀರಾಢ್ಯಾನ್ ಕಮಲಾದೀನ್ ಶಶಾಂಕತಃ ।। ಕಂಟಿಕಾಢ್ಯಾಂಶ್ಚ ಕಟುಕಾ ನುಷಾನ್ಭೂಮಿಸುತಾದ್ವದೇತ್ ।। ಅಫಲಾನ್ವತ್ರಭೂಮಿಷ್ಠಾ ನ್ಮಂಜುಳಾಶ್ಚ ಶಶಾಂಕಜಾತ್ ।।೨೩।। ಸಫಲಾನ್ವಿವಿಧಾನ್ಸಸ್ಯಾನ್ಗೀಷ್ಪತೇಶ್ಚ ಮಹೀರುಹಾನ್ ।। ಸಪುಷ್ಪಾನ್ ಗಂಧಿನಸ್ನಿಗ್ಧಾನ್ ವೀರುಧಶ್ಚ ಸಿತಾದ್ವದೇತ್ ।।೨೪।। ತ್ವಕ್ಚಕ್ಷುಷೋರಪ್ರಿಯಾಂಶ್ಚ ಸತಿಕ್ತಾನಪಿಮಂದತಃ ।। ವಿಷವೃಕ್ಷಾಂಸ್ತಥಾರಾಹೋ ರ್ಮಿಶ್ರಾನ್ಮಿಸ್ರಾನುದೀರಯೇತ್ ।।೨೫।। ಚಂದ್ರಾರ್ಕಾ ಭ್ಯಾಂ ಯುತಾಭ್ಯಾಂವಾ ವೀಕ್ಷಿತಾಭ್ಯಾಂ ನವಾಂಶಕೇ ।। ಅಂತಸ್ಸಾರಾಂಶ್ಚಸ ಕ್ಷೀರಾನ್ ಸ್ನುಹ್ಯಾದೀನಿಂದುಯುಕ್ತನೇಃ ।।೨೬।। ಕುಜೇಂದುಭ್ಯಾಂ ಕದಂಬಾ ದೀನ್ ಕ್ರಮುಕಾದೀನ್ ಸಿತೇಂದುತಃ ।। ಪನಸಾದೀನ್ ಸೇಂದುಜೀವಾಚ್ಚು ಕ್ರೇಂದ್ವೋರ್ನಂದಿವರ್ಧನಂ ।।೨೭।। ನೇಪಾಳಾದ್ಯಾಭೂರುಹಶ್ಚ ಚಂದ್ರಮಂದ ತಮೋಯುತೈಃ ।। ತಮಸೋವತ್ಸನಾಭಾದ್ಯಾ ರಂಭಾಶುಕ್ರೇಂದುಜೀವತಃ ।। ಆಮ್ರಾದಿಫಲವೃಕ್ಷಾಂಶ್ಚ ಪ್ರವದೇಚ್ಚಬೃಹಸ್ಪತೇಃ ।। ಗುರುದೃಷ್ಟೇಂದು ನಾವಾಚ್ಯಾ ನಾರಿಕೇಳಾದಿಭೂರುಹಾಃ ।।೨೯।। ಕುಜದೃಷ್ಟೇಂದುನಾಜ್ಞೇಯಾ ।। ತರವಶ್ಚಂದನಾದಯಃ ।। ಅಂಗಾರಕೇಕ್ಷಿತಾರ್ಕಾಚ್ಚ ಚಿತ್ರಭಲ್ಲಾತಕಾದಯಃ ।। ಗೋಧೂಮಾದೀನಿಸಸ್ಯಾನಿ ಸೂರ್ಯಾದನ್ನಂಶಶಾಂಕತಃ ।। ತತ್ತದ್ಗ್ರಹಾಣಾಂ ಧಾನ್ಯಾನಿ ತತ್ತದ್ಗ್ರಹವಶಾದ್ಭವೇತ್ ।।೩೦।। ಗ್ರಹವರ್ಣಪ್ರಭೇದೇನ ಗಂಧಾಧಿ ಗುಣಭೇದತಃ।। ಪುಷ್ಪಜಾತಿವಿಶೇಷಾಂಶ್ಚ ಗ್ರಹದೃಗ್ಯೋಗಭೇದತಃ ।।೩೧।। ಫಲವೃಕ್ಷವಿಶೇಷಾಂಶ್ಚ ತತ್ತದ್ಗ್ರಹರಸಾಧಿಭಿಃ ।। ಅನುಮಾಯವಿಜಾನೀಯಾದ್ಧೌರಿಕಃ ಸಸ್ಯಜಾತಕೇ ।।೩೨।। ಪಲಾಶವಟರಂಭಾದ್ಯಾಜ್ಞೇಯಾಃ ಪರ್ಣೋಪಯೋಗಿನಃ ।। ಫಲಪ್ರಧಾನಾವಿಜ್ಞೇಯಾಃ ಪನಸಾಮ್ರಕಪಿತ್ಥಕಾಃ ।।೩೪।। ಜಂಬೂನಾರಂಗಜಂಬೀರ ದಾಡಿಮೀಕ್ರಮುಕಾದಯಃ।। ಮಲ್ಲಿಕಾಮಾಲತೀಜಾತೀ ಮುಖ್ಯಾಃಪುಷ್ಪಲತಾಃಸ್ಮೃತಾಃ

॥೩೫॥ ದೇಶಕಾಲೋಚಿತಾಂಸ್ತಾಂ ಸ್ತಾನ್ವದೇ ಚ್ಛಾಸ್ತ್ರೇಣಲೌಕಿರ್ಕಾ ॥೩೬॥ ಎಂದು ವೃಕ್ಷಲತಾ ಗುಲ್ಮಾದಿಗಳ ಉತ್ಪತ್ತಿಯನ್ನು ಸೂಕ್ಷ್ಮ ಬುದ್ದಿಯಿಂದ ತಿಳಿಯತಕ್ಕದ್ದು.

## ಸದಸ್ತವೃಕ್ಷಜ್ಞಾನ ಯೋಗಃ

ಮೂಲ॥ ಶುಭೋಶುಭರ್ಕ್ಷೆ ರುಚಿರಂ ಕುಭೂಮಿಜಂ ಕರೋತಿವೃಕ್ಷಂ ವಿಪರೀತಮನ್ಯಥಾ ॥ ಪರಾಂಶಕೇಯಾವತಿ ವಿಚ್ಯುತಸ್ಸ್ವಕಾದ್ಭವಂತಿ ತುಲ್ಯಾಸ್ತರವಸ್ತಥಾವಿಧಾಃ ॥೮॥

ಟೀಕು॥ ಸದಸದ್ವ ೃಕ್ಷಜ್ಞಾನವನ್ನು ಹೇಳುತ್ತಾನೆ. ಶುಭಃ- ಲಗ್ನ - ಲಗ್ನ ನವಾಂಶರಾಶಿ, ಸ್ಥಲರಾಶಿಯಾಗಲಿ, ಜಲರಾಶಿಯಾಗಲಿ ತದಧಿಪತಿಯಾದ ಶುಭ ಗ್ರಹವು, ಅಶುಭರ್ಕ್ಷೆ-ತತ್ಕಾಲದಲ್ಲಿ (ಅಶುಭಗ್ರಹ) ಪಾಪಗ್ರಹ ನವಾಂಶೆಯಲ್ಲಿದ್ದರೆ, ರುಚಿರಂ-ಮನೋಹರವಾದ, ॥ನಿ॥ ಸುಂದರಂರುಚಿರಂ ಚಾರುಮನೋಜ್ಞಂ ಮಂಜುಮಂಜುಳಂ ॥ ಇತ್ಯಮರಸಿಂಹಃ ॥ ವೃಕ್ಷವನ್ನು, ಕುಭೂಮಿಜಂ-ಅಶುಭ ಸ್ಥಾನವಾದ ಸ್ಮಶಾನ ಮೊದಲಾದ ಸ್ಥಾನಗಳಲ್ಲಿ ಹುಟ್ಟುವಂತೆ, ಕರೋತಿ-ಮಾಡುವನು. ಅನ್ಯಾಥಾ - ಹಾಗಾಗದೇ ಇದ್ದರೆ, ವಿಪರೀತಂ-ಉಕ್ತ ವಿಪರೀತವಾಗಿ, ಕರೋತಿ-ಮಾಡುವನು, ಅದು ಹೇಗೆಂದರೆ - ನವಾಂಶಾಧಿಪತಿ ಅಶುಭಗ್ರಹವಾಗಿ ತತ್ಕಾಲದಲ್ಲಿ ಶುಭಗ್ರಹ ರಾಶಿಯಲ್ಲಿದ್ದರೆ, ಉದ್ಯಾನವನ ಮೊದಲಾದ ಮನೋಹರವಾದ ಸ್ಥಾನಗಳಲ್ಲಿರುವ ವೃಕ್ಷಗಳನ್ನು ಹುಟ್ಟಿಸುವನು. ನವಾಂಶಾಧಿಪತಿ ಶುಭಗ್ರಹವಾಗಿ ಶುಭರಾಶಿಯಲ್ಲಿ ತತ್ಕಾಲದಲ್ಲಿದ್ದರೆ, ಉಪಯೋಗವುಳ್ಳ ವೃಕ್ಷವಾಗಿ ಸುಭೂಮಿಯಾಗಿ ಹುಟ್ಟುತ್ತದೆಂದು ತಿಳಿಯುತಕ್ಕದ್ದು. ನವಾಂಶಾಧಿಪತಿ ಅಶುಭಗ್ರಹವಾದ ಅಶುಭ ನವಾಂಶೆಯಲ್ಲಿ ತತ್ಕಾಲದಲ್ಲಿದ್ದರೆ, ದುಷ್ಟಭೂಮಿ ಅಂದರೆ ಸ್ಮಶಾನ ಮೊದಲಾದ ಸ್ಥಳಗಳಲ್ಲಿ ವೃಕ್ಷೋತ್ಪತ್ತಿಯಾಗುವುದೆಂದು ತಿಳಿಯತಕ್ಕದ್ದು. ಆ ಸ್ಥಲ ಜಲರಾಶಿ ನವಾಂಶಾಧಿಪತಿಯಾದ ಗ್ರಹವು, ಸ್ವಕಾತ್-ಸ್ವನವಾಂಶೆಯಲ್ಲಿದ್ದು, ವಿಚ್ಯುತಃ- ಚಲಿಸಿದವನಾದರೆ ಯಾವತಿ-ಎಲ್ಲಿಯುವರೆವಿಗೆ, ಪರಾಂತಕೆ-ಪರನವಾಂಶೆಯಲ್ಲಿದ್ದಾನೋ, ತತ್ತುಲ್ಯಾಃ-ಅಷ್ಟು ಸಂಖ್ಯಾಪ್ರಮಾಣ, ತಥಾವಿಧಾಃ-ತಜ್ಜಾತಿಯುಮುಗಳಾದ, ತರವಃ-ವೃಕ್ಷಗಳು, ಭವಂತಿ-ಆಗುತ್ತವೆ. ಅಂದರೆ-ನವಾಂಶಾಧಿಪತಿಯಾದ ಗ್ರಹ ತನ್ನ ನವಾಂಶವನ್ನು ಬಿಟ್ಟು, ಎಷ್ಟು ಸಂಖ್ಯೆಯ ಪರನವಾಂಶೆಯಲ್ಲಿದ್ದಾನೋ ಅಷ್ಟು ಸಂಖ್ಯಾ ವೃಕ್ಷಗಳು ನವಾಂಶ ರಾಶಿ ಸಮಾನವಾಗಿ ಸ್ಥಲದಲ್ಲಿಯಾಗಲಿ ಜಲದಲ್ಲಿಯಾಗಲಿ ಹುಟ್ಟುತ್ತವೆಂದು ತಿಳಿಯತಕ್ಕದ್ದು. ಪೂರ್ವದಲ್ಲಿ ನವಾಂಶಾಧಿಪತಿ ಲಗ್ನ ಮೊದಲುಗೊಂಡು ಯಾವ ರಾಶಿ

ಸ್ಥಾನದಲ್ಲಿದ್ದಾನೆಯೋ ಅಷ್ಟು ಸಂಖ್ಯೆ ವೃಕ್ಷಗಳೆಂದು ಹೇಳಲ್ಪಟ್ಟಿರುತ್ತೆ. ಈಗ ಎರಡನೇ ಯೋಗದಲ್ಲಿ ಸ್ವನವಾಂಶ ಮೊದಲುಗೊಂಡು, ಎಷ್ಟನೆ ಪರಕೀಯ ನವಾಂಶದಲ್ಲಿದ್ದಾನೆಯೋ ಅಷ್ಟು ಸಂಖ್ಯೆ ವೃಕ್ಷಗಳೆಂದು ವೃಕ್ಷಸಂಖ್ಯೆ ಹೇಳಲ್ಪಟ್ಟಿರುತ್ತೆ. ಆದರೆ ಈ ಎರಡು ವಿಧದಲ್ಲಿ ಒಂದು ವಿಧವಾಗಿಯೇ ಹೇಳಬಹುದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಸ್ವಾಂಶಾತ್ಪರಾಂಶಗಾಮಿಷು ಯಾವತ್ಸಂಖ್ಯಾ ಭವಂತಿ ತಾವಂತಃ ॥ ಸ್ಥಲಜೌವಾ ಜಲಜೌವಾತಾರವಃ ಪ್ರಾಕ್ಸಂಖ್ಯಯಾ-ಪ್ರವದೇತ್॥

## ಸದಸದ್ವೃಕ್ಷಯೋಗ ಪದಕಂ

| ಸಂಖ್ಯೆ | ಗ್ರಹಸ್ಥಿತಿ ಲಗ್ನಾಧಿಪತಿಗೆ | ವೃಕ್ಷಸ್ಥಿತಿ |
|---|---|---|
| ೧ | ಶುಭಗ್ರಹ ಶುಭರಾಶಿ ಶುಭನವಾಂಶಾಧಿ ಪತಿಯಾಗಿ ಪಾಪನವಾಂಶೆಯಲ್ಲಿದ್ದರ - | ಸ್ಮಶಾನಾದಿ ಭೂಮಿಯಲ್ಲಿ ಸುಂದರವಾದ ವೃಕ್ಷಜನ್ಮ |
| ೨ | ಪಾಪಗ್ರಹ ಪಾಪರಾಶಿ ಪಾಪನವಾಂಶಾಧಿ ಪತಿಯಾಗಿ ಶುಭರಾಶಿಯಲ್ಲಿದ್ದರೆ - | ಮನೋಹರವಾದ ಉದ್ಯಾನ ವನಾದಿಗಳಲ್ಲಿ ಅಪ್ರಿಯ ವೃಕ್ಷಜನ್ಮ |
| ೩ | ಶುಭಗ್ರಹ ಶುಭರಾಶಿ ಶುಭನವಾಂಶಾಧಿ ಪತಿಯಾಗಿ ಶುಭರಾಶಿಯಲ್ಲಿದ್ದರೆ - | ಸುಂದರವಾದ ಉದ್ಯಾನವನಗಳಲ್ಲಿ ಸುಂದರವಾದ ವೃಕ್ಷಜನ್ಮ |
| ೪ | ಪಾಪಗ್ರಹಪಾಪರಾಶಿ ಪಾಪನವಾಂಶಕ್ಕೆ ಅಧಿಪತಿಯಾಗಿ ಪಾಪರಾಶಿಯಲ್ಲಿದ್ದರೆ - | ಸ್ಮಶಾನಾದಿ ಮರುಭೂಮಿಯಲ್ಲಿ ಅಪ್ರಿಯವಾದ ವೃಕ್ಷಜನ್ಮ |

ಟಿಪ್ಪಣಿ - ಶುಭರಾಶಿ ಪಾಪರಾಶಿಗಳು. ಸ್ಥಲರಾಶಿ ನಿರ್ಜಲರಾಶಿ (ಜಲರಾಶಿ ಗಳಲ್ಲಿ ಸ್ಥಲವೃಕ್ಷ-ಜಲವೃಕ್ಷಗಳೆಂದು ತಿಳಿಯತಕ್ಕದ್ದು)

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕಾಖ್ಯೆ
ಹೋರಾಶಾಸ್ತ್ರೇ ವಿಯೋನಿಜನ್ಮಾಖ್ಯ ಪಶು ಮೃಗ ಪಕ್ಷಿ ವೃಕ್ಷಾದಿ
ಜನ್ಮಜ್ಞಾನ ಯೋಗೋನಾಮ ತೃತೀಯ ಪ್ರಕರಣಂ

-೦-

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರಾವಾರಾ ರಾಕಾ ಸುಧಾಕರಾಯನಮಾನ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೇ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ ವಿಯೋನಿಜನ್ಮಾಖ್ಯ ಮೃಗ
ಪಶು ಪಕ್ಷಿ ವೃಕ್ಷ ಜನ್ಮ ಜ್ಞಾನಯೋಗೋನಾಮ
ತೃತೀಯ ಪ್ರಕರಣಂ.

ಶ್ರೀರಸ್ತು

# ಆವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕೇ

## ೪ನೇ ನಿಷೇಕಾಖ್ಯೆ ಪ್ರಕರಣಂ

ಈ ಬೃಹಜ್ಜಾತಕ ಪುಸ್ತಕದಲ್ಲಿ ಹೇಳಲ್ಪಟ್ಟಿರುವ ಯೋಗಗಳಿಗೆ ಕಾರಣಭೂತವಾದ ಗರ್ಭದಾನಾದಿ ಮೂಹೂರ್ತವನ್ನೆ ಹಿಡಿದು ತನ್ಮೂಲಕ ಶುಭಾಶುಭ ಫಲಪರಿಪಾಕವನ್ನು ಹೇಳುತ್ತಾನಾದ್ದರಿಂದ ಇದರಲ್ಲಿ ಆದಿಯಾಗಿ ಗರ್ಭಧಾರಣ ಯೋಗ್ಯತೆ ಉಂಟಾಗುವ ಸ್ತ್ರೀಯರ ಋತುಲಕ್ಷಣವನ್ನು ಮತ್ತು ಸ್ತ್ರೀ ಪುರುಷ ಸಂಯೋಗಾ ಸಂಯೋಗ ಲಕ್ಷಣವನ್ನು, ಹಾಗೆಯೇ ಗರ್ಭಕೋಶ ಲಕ್ಷಣವನ್ನು ಮತ್ತು ಗರ್ಭ ಸಂಭವಾಸಂಭವ ಲಕ್ಷಣವನ್ನು, ಅಂಥಾ ಗರ್ಭ ಅವಿರ್ಭೂತವಾದ ಮೇಲೆ ಪ್ರಸೂತಿ ಕಾಲದವರಿಗೆ ಯಾವ ಯಾವ ತಿಂಗಳಿನಲ್ಲಿ ಗರ್ಭ ಯಾವ ಪ್ರಕಾರ ವೃದ್ಧಿಯಾಗುತ್ತೋ ಆ ಲಕ್ಷಣ ಮತ್ತು ಗರ್ಭಸ್ರಾವಯೋಗ ಗರ್ಭಿಣೀ ಮರಣ, ಗರ್ಭಿಣೀ ಪತಿ ಮರಣ, ಹೀನ, ಅಧಿಕಾಂಗ, ಅಂಧ, ಬುದ್ಬುದಾಕ್ಷಯೋಗ, ಶಿರೋಹೀನ, ಪಾದಹೀನ, ಭುಜಹೀನ, ವಾಮನ, ಖಂಜ ಮೊದಲಾದ ದುರ್ಯೋಗವನ್ನು ಸಹ ಪೂರ್ವಾಚಾರ್ಯ ಸಮ್ಮತಿಯಿಂದ ಹೇಳಲ್ಪಟ್ಟಿರುತ್ತವೆ.

ಆವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕೇ
ನಿಷೇಕ ಪ್ರಕರಣ ಪ್ರಾರಂಭಂಃ

ಮೂಲ॥ ಕುಜೇಂದುಹೇತುಃ ಪ್ರತಿಮಾ ಸಮಾರ್ತವಂ । ಗತೇತುಪೀಡರ್ಕ್ಷ
ಮನುಷ್ಣದೀಧಿತೌ ॥ ಅತೋನ್ಯಥಾಸ್ಥೆ ಶುಭಸಂಗ್ರಹೇಕ್ಷಿತೇ ॥
ನರೇಣೆ ಸಂಯೋಗಮು ಪೈತಿಕಾಮಿನೀ ॥೧॥

ಈ ಗ್ರಂಥಕರ್ತನು ನಿಷೇಕ ಪ್ರಕರಣದಲ್ಲಿ ಗರ್ಭದಾನ ಕಾಲವಶದಿಂದ ಫಲ ಹೇಳಲುಪಕ್ರಮಿಸಿ, ಗರ್ಭಧಾರಣ ಕಾಲಭೂತವಾಗಿರುವ ಸ್ತ್ರೀಯರ ಋತುಕಾಲವನ್ನು ಆ ಸ್ತ್ರೀಯರಿಗೆ ಪುರುಷ ಸಂಯೋಗಾಸಂಯೋಗವನ್ನು ಮತ್ತು ಸುರತಕೇಳಿ ಸಲ್ಲಾಪ ಸರಸವಿರಸಗಳನ್ನು ಗರ್ಭಧಾರಣಯೋಗ್ಯ ಋತುಕಾಲ ಲಕ್ಷಣವನ್ನು ಹೇಳುತ್ತಾನೆ.

ಈ ಗರ್ಭಧಾನ ಪ್ರಕರಣದಲ್ಲಿ ಗರ್ಭಕೋಶ ಲಕ್ಷಣವನ್ನು ವರಾಹಮಿಹಿರ ಭಟ್ಟರು ಹೇಳಲಿಲ್ಲವಾದ್ದರಿಂದ ಅದನ್ನು ಅನಂತದೇವ ಕೃತಸಂಸ್ಕಾರ ಕೌಂಸ್ತುಭದಿಂದ ಸಂಗ್ರಹಿಸಿ ಹೇಳುತ್ತೇನೆ.

ಶ್ಲೋಕ।। ನಾಭಿಮೂಲೇ ಸ್ಥಿತಂಪದ್ಮಂ (ಪುಷ್ಪಂ) ಚತುರ್ದಲ ಸಮನ್ವಿತಂ।। ತಸ್ಮಿ‌ನ್ ಸರ್ವಾಶ್ಚದಧತೆ ಗರ್ಭ ಸಂಭವಕಾರಣಂ ।।೧।। ಅಧೋಮುಖಂ ಸ್ಥಿತಂ ಸ್ತ್ರೀಣಾಂ ಬಾಲ್ಯೇತು ಮುಕುಳೀಕೃತಂ ।। ಬಾಲಾತ್ಪರವಯಃ ಪ್ರಾಪ್ತೌ ಮುಕಲಂ ವಿಕಸಮ್ಭವೇತ್ ।।೨।। ಉತ್ಫುಲ್ಲೇ ಕುಸುಮೇಸ್ತ್ರೀಣಾಂ ಸ್ವಭಾವೇನ ಸ್ರವೇದ್ರಜಃ ।। ತದಾಪ್ರಭೃತಿ ಸರ್ವಾಸಾಂಮಾಸಿಮಾಸಿ ಋತುರ್ಭವೇತ್ ।।೩।। ತಾತ್ಪರ್ಯ ।। ಸ್ತ್ರೀಯರಿಗೆ ನಾಭಿಮೂಲದಲ್ಲಿ ಚತುರ್ದಳ ಯುಕ್ತವಾದ ಕಮಲವಿರುತ್ತೆ. ಆ ಕಮಲವು ಅಧೋಮುಖವಾಗಿ ಬಾಲ್ಯ ವಯಸ್ಸಿನಲ್ಲಿ ಮುಕುಳಿತ (ಮೊಗ್ಗಾಗಿರುತ್ತೆ.) ಬಾಲ್ಯಾತ್ಪರ ವಯಸ್ಸು ಪ್ರಾಪ್ತಿಯಾದೊಡನೆ ಆ ಮುಕುಳಿತವಾದ ಪುಷ್ಪದ ಮೊಗ್ಗು ಅರಳಿಕೊಂಡು ಅದರಿಂದ ಸ್ವಭಾವವಾಗಿ ರಜಸ್ಸು ಸ್ರವಿಸುತ್ತದೆ. ಆ ಮೊದಲುಗೊಂಡು ತಿಂಗಳು ತಿಂಗಳಿಗೂ ಸ್ತ್ರೀಯರು ಋತುಮತಿಯರಾಗಿ ಗರ್ಭಧಾರಣಯೋಗ್ಯರಾದವರಾಗುತ್ತಾರೆ. ಇಂಥ ಗರ್ಭಸಂಭವಕ್ಕೆ ಹೇತುವಾದ ಋತುಕಾಲವು ಯಾವ ಗ್ರಹಗಳ ಚಾರಮೂಲವಾಗಿ ಹುಟ್ಟುತ್ತದೆಂಬುದನ್ನು ಮತ್ತು ಸ್ತ್ರೀ ಪುರುಷ ಸಂಯೋಗ ಕಾಲವನ್ನು ಸಹ ಹೇಳುತ್ತಾನೆ.

ಟೀಕು।। ಪ್ರತಿಮಾಸಂ-ತಿಂಗಳು ತಿಂಗಳಿಗೂ, ಆರ್ತವಂ-ಸ್ತ್ರೀಯರಿಗೆ ರಜೋದರ್ಶನಕ್ಕೆ, ಕುಜೇಂದು ಹೇತುಃ -ಅಂಗಾರಕ ಚಂದ್ರರೇ ಕಾರಣಭೂತ ರಾಗಿರುವರು. ಅದು ಹೇಗೆಂದರೆ:- ಅನುಷ್ಣ ದೀಧಿತೌ - ಚಂದ್ರನು, ಪೀಡರ್ಕ್ಷಂ- ಸ್ತ್ರೀಯರ ಜನ್ಮರಾಶಿಗೆ ಅನುಪಚಯಸ್ಥಾನವನ್ನು, ಗತೇನತಿ-ಹೊಂದಿದವನಾಗಿ, ಅಂದರೆ ಅನುಪಚಯರಾಶಿಗಳಾದ ೧-೨, ೪-೫, ೭-೮, ೯-೧೨, ಈ ಸ್ಥಾನಗಳಲ್ಲಿ ಎಲ್ಲಿಯಾದರೂ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಗರ್ಭಸಂಭವ ಹೇತುವಾದ ಋತುಮತಿಯರಾಗುವರು. ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಸ್ತ್ರೀಣಾಂ ಗತೋನುಪಚಯರ್ಕ್ಷ ಮನುಷ್ಣ ರಶ್ಮಿ ಸ್ಸಂದೃಶ್ಯತೇಯದಿ ಧರಾತನಯೇನ ತಾಸಾಂ ।। ಗರ್ಭಗ್ರಹಾರ್ತವ ಮುಶಂತಿತ ದಾನ ವಂಧ್ಯಾವೃದ್ಧಾತುರಾಲ್ಪವಯಸಾ ಮಪಿಬ್ಲೈತದಿಷ್ಟಂ ।।೪।।ತಾ।। ಸ್ತ್ರೀಯರು ಈ ಕೆಳಗೆ ಹೇಳಲ್ಪಟ್ಟವರನ್ನು ಗರ್ಭಧಾರಣ ಯೋಗ್ಯತೆ ಇಲ್ಲದವರನ್ನಾಗಿ ಬಿಟ್ಟು ಇರುತ್ತಾರೆ. ವಂಧ್ಯಾಸ್ತ್ರೀಯರು, ವೃದ್ಧಸ್ತ್ರೀಯರು, ಎಂಬುವುದಕ್ಕೆ ಪ್ರಮಾಣ.

ಕಾಳಿದಾಸಃ ॥ಶ್ಲೋಕ॥ ಅಷೋಡಶಾಭವೇದ್ಬಾಲಾ ತರುಣೀ ತ್ರಿಂಶಕಾಮತಾ॥ ಪಂಚಪಂಚಾಶಕಾಪ್ರೌಢಾ ಭವೇದ್ವೃದ್ಧಾತತಃಪರಂ ॥೫॥ ಅಂದರೆ ೫೫ ವರ್ಷಕ್ಕೆ ಮೇಲ್ಪಟ್ಟು ವಯಸ್ಸುಳ್ಳವರು ಆತುರರು ಎಂಬುವದರಲ್ಲಿ ೨ ಭೇದಗಳು ಇರುತ್ತೆ. ೧ ರೋಗಾದಿ ಪೀಡಿತರು, ೨ನೇದು ವೇಶ್ಯಾಸ್ತ್ರೀಯರು (ಮತ್ತು ಸದಾಕಾಲವು ಪುರುಷ ಭೋಗಾಪೇಕ್ಷೆಯುಳ್ಳ ಕಾಮಿನಿಯರು) ಅಲ್ಪ ವಯಸಾಂ-ಅಂದರೆ, ರಜೋ ದರ್ಶನವಿಲ್ಲದ ಹುಡುಗಿಯರು. (ಅಂದರೆ ಋತುದರ್ಶನವಿಲ್ಲದ ಇದ್ದ ಹುಡುಗಿಯರೆಂದು ಭಾವವು). ಇವರನ್ನೆಲ್ಲಾ ಬಿಟ್ಟು ಉಳಿದವರು (ಸ್ತ್ರೀಯರು) ಅವರುಗಳ ಜನ್ಮರಾಶಿಗೆ ಅನುಪಚಯಸ್ಥಾನದಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಋತುಮತಿಯಾದವರು ಗರ್ಭಧಾರಣ ಯೋಗ್ಯರಾಗುತ್ತಾರೆಂದು ತಾತ್ಪರ್ಯ ಮತ್ತು ವಿನಾಯಿತಿಯಲ್ಲಿ ಇಂದ್ರಿಯನಿಗ್ರಹ ಶಕ್ತಿಯುಳ್ಳ ಬ್ರಹ್ಮಚಾರಿಣಿ ಸ್ತ್ರೀಯರು ಅರ್ಥಾತ್ ವಿಧವಾ ಸ್ತ್ರೀಯರು ಸಹ ಸೇರಿರುವರು. ಇದೇ ವಿಷಯದಲ್ಲಿ ಸಾರಾವಳ್ಯಾಂ ॥ಶ್ಲೋಕ॥ ಅನುಪಚಯರಾಶಿ ಸಂಸ್ಥೇಕುಮುದಾಕರ ಬಾಂಧವೇರುಧಿರದೃಷ್ಟೇ ॥ಪ್ರತಿಮಾಸಂ ಯುವತೀನಾಂ ಭವತಿ ರಜೋಧೃವಂತ್ವೇವಂ ॥೬॥ ಇಂದುರ್ಜಲಂ ಕುಜೋಗ್ನಿರ್ಜಲಮಿಶ್ರಂ ತ್ವಗ್ನಿರೇವಪಿತ್ತಂಸ್ಯಾತ್ ॥ ಏವಂರಕ್ತೇ ಕ್ಷುಭಿತೇ ಪಿತ್ತೇವ ರಜಃ ಪ್ರವರ್ತತೇ ಸ್ತ್ರೀಷು॥೭॥ ಏವಂ ಯುದ್ಭ್ರವತಿ ರಜೋಗರ್ಭಸ್ಯ ನಿಮಿತ್ತಮೇವ ತದಿದಂತತ್ ॥ ಉಪಚಯಸಂಸ್ಥೇವಿಪುಲಂ ಪ್ರತಿಮಾಸಂ ದರ್ಶನಂ ತಸ್ಯಾಃ ॥೮॥ ಎಂದು ಹೇಳಲ್ಪಟ್ಟಿರುತ್ತೆ. ತಾತ್ಪರ್ಯ ॥ ಸ್ತ್ರೀಯರ ಅನುಪಚಯ ರಾಶಿಗಳಲ್ಲಿ ಚಂದ್ರನಿದ್ದು ಕುಜನಿಂದ ನೋಡಲ್ಪಟ್ಟರೆ ಪ್ರತಿ ತಿಂಗಳಲ್ಲಿ ರಜೋದರ್ಶನ ಉಂಟಾಗುತ್ತೆ. ॥೬॥ ಚಂದ್ರನನ್ನು ಕುಜನು ನೋಡಿದರೆ ಏತಕ್ಕೆ ರಜಸ್ಸು ಕಾಣಲ್ಪಡುತ್ತೆಂದರೆ ಚಂದ್ರನೇ ನೀರು, ಕುಜನೇ ಅಗ್ನಿ, ಬೆಂಕಿಯಿಂದ ನೀರು ಕಾಯುವಾಗ ಪಿತ್ತ ಉಂಟಾಗುತ್ತೆ. ಈ ರೀತಿ ಪಿತ್ತ ಮಿಶ್ರವಾದದ್ದು (ಉಕ್ಕಿ) ಕ್ಷುಭಿತವಾಗಿ ರಜಸ್ಸು ಹೊರಗೆ ಬರಲು ಪ್ರವರ್ತಿಸುತ್ತೆ. ಇದಕ್ಕೆ ರಜೋವತಿ, ಪುಷ್ಪಿಣೀ, ಪುಷ್ಪವತಿ, ಋತುಮತಿ, ಉದಕ್ಯಾ ಎಂದು ಈ ಅರ್ಥದಿಂದಲೇ ಹೆಸರು ಹುಟ್ಟಿದವರಿಗೆ ಮುಟ್ಟಾದವರೆಂದು ರೂಢನಾಮವಾಗಿರುತ್ತೆ. ಈ ವಿಷಯವನ್ನು ಈ ಶ್ಲೋಕದ ಆದಿಯಲ್ಲಿ ಲಕ್ಷಣವನ್ನು ಸ್ಪಷ್ಟಪಡಿಸಿರುತ್ತೆ ॥೭॥ ಯಾವಾಗ ಸ್ತ್ರೀಯರಿಗೆ ರಜಸ್ಸು ಪ್ರವರ್ತಿಸುತ್ತೊ ಆ ಮೊದಲುಗೊಂಡು ಗರ್ಭಧಾರಣೆಗೆ ಯೋಗ್ಯರಾಗಿರುತ್ತಾರೆ. ಇಂಥಾ ರಜೋ ದರ್ಶನವು ಆ ಸ್ತ್ರೀಯರಿಗೆ ಉಪಚಯ ಸ್ಥಾನದಲ್ಲಿ ಚಂದ್ರನಿರುವಾಗ ಋತುಮತಿ (ಪುಷ್ಪವತಿ) ಯಾಗಿದ್ದರೆ ಆ ಋತುವಿನಲ್ಲಿ ಗರ್ಭಧಾರಣವಾಗುವ ಯೋಗ್ಯತೆ ಇರುವುದಿಲ್ಲವೆಂದು ತಾತ್ಪರ್ಯ.

ಅತೋನ್ಯಥಾಸ್ಥೇ-ಈ ಹೇಳಿದ ಕ್ರಮಕ್ಕೆ ವ್ಯತ್ಯಾಸವಾಗಿ ಚಂದ್ರನಿದ್ದರೆ ಅಂದರೆ, ಪುರುಷ ಜನ್ಮರಾಶಿ ಮೊದಲುಗೊಂಡು ಉಪಚಯಸ್ಥಾನಗಳಲ್ಲಿ ಚಂದ್ರನಿದ್ದು (ಉಪಚಯ ೩-೬, ೧೦, ೧೧) ಶುಭಪುಂಗ್ರಹೇಕ್ಷಿತೇ-ಶುಭನೂ ಪುರುಷನೂ ಆದ ಗ್ರಹವೆಂದರೆ ಬೃಹಸ್ಪತಿ, ಈ ಬೃಹಸ್ಪತಿಯಿಂದ ನೋಡಲ್ಪಟ್ಟರೆ, ಕಾಮಿನೀ - ಸ್ತ್ರೀ, ನರೇಣ - ಪುರುಷನ ಸಂಗಡ, ಸಂಯೋಗಂ-ಸಂಭೋಗವನ್ನು ಹೊಂದುವಳು. ಅಂದರೆ ಪುರುಷ ಜನ್ಮರಾಶಿಗೆ ಉಪಚಯಸ್ಥಾನಗಳಾದ ೩-೬, ೧೦-೧೧ ರಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ, ಸ್ತ್ರೀ ಪುರುಷ ಸಂಯೋಗ ಉಂಟಾಗುವುದೆಂದು ಮುಖ್ಯಾಶಯ. ವ್ಯತ್ಯಾಸವಾಗಿದ್ದರೆ ಸ್ತ್ರೀ ಪುರುಷ ಸಂಯೋಗವಾಗುವುದಿಲ್ಲ. ಈ ವಿಷಯದಲ್ಲಿ ಬಾದರಾಯಣ ಸಂಹಿತಾಯಾಂ ॥ಶ್ಲೋಕ॥ ಪುರುಷೋಪಚಯಗ್ಗೃಹಸ್ತೋ ಗುರಣಾಯದಿ ದೃಶ್ಯತೇಹಿ ಮಮಯೂಖಃ ॥ ಸ್ತ್ರೀಪುಂಸೋಃ ಸಂಯೋಗಂ ತದಾವದೇ ದನ್ಯಥಾನ್ಯೆವಂ ॥ ಸಾರಾವಳಿಯಲ್ಲಿ ॥ಶ್ಲೋಕ॥ ಉಪಚಯಭುವನೇ ಶತಬೃದ್ಧ್ಯ್ರಷ್ಟೋಗುರುಣಾಸು ಹೃಧ್ಬಿ ರಥವಾಸೌ ॥ ಪುಂಸಾಕರೋತಿ ಸಂಯೋಗಂ ವಿಶೇಷತ ಶುಕ್ರಸಂದೃಷ್ಟಃ ॥೧೦॥ ಎಂದು ಸಾಮಾನ್ಯವಾಗಿ ಹೇಳಲ್ಪಟ್ಟಿರುತ್ತೆ. ಇದಕ್ಕೆ ಋತುಕಾಲಾನಂತರದಲ್ಲಿನ ವಿಷಯಕ್ಕೆ ॥ಶ್ಲೋಕ॥ ಮಣಿತ್ಥಃ ಋತುವಿರಮೇಸ್ನಾತಾ ಯಾಂ ಯದ್ಯುಪಚಯಸ್ಥಶೀಭವತಿ॥ ಬಲಿನಾ ಗುರುಣಾ ದೃಷ್ಟೋ ಭರ್ತ್ರಾ ಸಹಸಂಗಮಶ್ನತದಾ ॥೧೦॥ ರಾಜಪುರುಷೇಣರವಿಣಾ ವಿಟೇನ ಭೌಮೇನ ವೀಕ್ಷಿತೇಚಂದ್ರೇ ॥ ಸೌಮ್ಯೇನ ಚಪಲಮತಿನಾ ಭೃಗುಣಾ ಕಾಂತೇನ ರೂಪವತಾ ॥೧೧॥ ಭೃತ್ಯೇನಸೂರ್ಯಪುತ್ರೇಣಾಯಾತಿ ಸ್ತ್ರೀಸುಸಂಯೋಗಂ ॥ ಏಕೈಕೇನ ಫಲಸ್ಯಾ-ದ್ದೃಷ್ಟೋನಾನ್ಯೈಃ ಕುಜಾದಿಭಿಃ ಪಾಪೈಃ ॥೧೨॥ ಸರ್ವೈಸ್ಸ್ವಗೃಹತ್ಯಕ್ತ್ವೈರ್ಗಚ್ಛತಿ ವೇಶ್ಯಾಪದಂಯುವತೀ ॥ತಾ॥ ಋತುವಿರಮವೆಂದರೆ ಋತುಸ್ನಾನಕಾಲ. ಈ ಕಾಲ, ಪ್ರಥಮೇಹನಿಚಾಂಡಾಲೀ ದ್ವಿತೀಯೇ ಬ್ರಹ್ಮಘಾತಕೀ ॥ ತೃತೀಯೇರಜಕೀ ಪ್ರೋಕ್ತಾಚತುರ್ಥೇಹನಿಶುದ್ಧ್ಯತಿ ॥೧೩॥ ಇತಿ ಪರಾಶರಃ ॥ ಆದ್ದರಿಂದ ನಾಲ್ಕನೇ ದಿವಸ ಪೂರ್ವಾಹ್ನದಲ್ಲಿ ಸ್ನಾನಮಾಡತಕ್ಕ ಕಾಲ, ಈ ಕಾಲದಲ್ಲಿನ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದ ಫಲವು ಹೇಳಲ್ಪಡುತ್ತೆ. ಮಣೀತ್ಥರೆಂಬುವರ ಅಭಿಪ್ರಾಯ-ಚಂದ್ರನು ಉಪಚಯ ೩-೬, ೧೦-೧೧ನೇ ಸ್ಥಾನದಲ್ಲಿದ್ದು ಬಲಿಷ್ಠನಾದ ಬೃಹಸ್ಪತಿಯಿಂದ ನೋಡಲ್ಪಟ್ಟರೆ ಆಕೆಗೆ ಗಂಡನಿಂದಲೇ ಸಂಯೋಗ ಉಂಟಾಗುತ್ತದೆ. ಸೂರ್ಯನಿಂದ ನೋಡಲ್ಪಟ್ಟರೆ ರಾಜಪುರುಷನಿಂದ, ಅಂಗಾರಕನಿಂದ ನೋಡಲ್ಪಟ್ಟರೆ ವಿಟಪುರುಷನಿಂದ, ಬುಧನಿಂದ ನೋಡಲ್ಪಟ್ಟರೆ

ಚಪಲಮತಿಯಾದವನಿಂದ, ಶುಕ್ರನಿಂದ ನೋಡಲ್ಪಟ್ಟರೆ ರೂಪವಂತನಾದ ತನ್ನ ಪತಿಯಿಂದ, ಶನಿಯಿಂದ ನೋಡಲ್ಪಟ್ಟರೆ ಭೃತ್ಯನಿಂದ ಸಂಯೋಗವಾಗುತ್ತದೆಂದು ತಾತ್ಪರ್ಯ. ಈ ಮೇಲೆ ಹೇಳಲ್ಪಟ್ಟ ಒಂದೊಂದು ಗ್ರಹದ ದೃಷ್ಟಿಯಿಂದ ಈ ಪ್ರಕಾರ ಸಂಯೋಗವಾಗುವಲ್ಲಿ ಕುಜಾದಿ ಪಾಪಗ್ರಹಗಳಿಂದ ನೋಡಲ್ಪಟ್ಟರೆ ಆ ಯುವತಿಯು ತನ್ನ ಮನೆಯನ್ನು ಬಿಟ್ಟು ಸೂಳೆಯಂತೆ ಹೋಗುವಳು.

ವಿಶೇಷ ತಾತ್ಪರ್ಯ - ಈ ಮೇಲೆ ಹೇಳಲ್ಪಟ್ಟ ಸ್ತ್ರೀಯರಿಗೆ ಉಂಟಾಗುವ ಪ್ರತಿ ತಿಂಗಳಲ್ಲಿಯೂ ಋತುವಾದ ಕಾಲಕ್ಕೆ ಅಥವಾ ಸ್ನಾನಕಾಲಕ್ಕೆ ಈ ಯೋಗ ಉಂಟಾದರೇ ಗ್ರಹಗಳು ಬಲಿಷ್ಠರಾಗಿದ್ದರೆ ಉಕ್ತಫಲ ಅನುಭವವಾಗುತ್ತೆ. ಇಲ್ಲದಿದ್ದರೆ ಮನಸಃ ಆದರೂ ಅಥವಾ ಸ್ವಪ್ನಾಧಿಗಳಲ್ಲಿಯಾದರೂ ಉಂಟಾಗುತ್ತೆ. ಈ ವಿಷಯ ಮುಂದೆ ದಶಾಂತರ್ದಶಾ ಪ್ರಕರಣದಲ್ಲಿ ಕೊನೆಯ ಶ್ಲೋಕದಲ್ಲಿ ವಿಶದ ಪಡಿಸಿರುತ್ತೇನೆ.

ಮತ್ತು ಮಣಿತ್ಥಾಚಾರ್ಯರ ಅಭಿಪ್ರಾಯ ।।ಶ್ಲೋಕ।। "ಜನ್ಮನಿಮದನೇ ಶುದ್ಧೇ ಪ್ರಥಮಾರ್ತಾವಪಿ ಪತಿವ್ರತೇತ್ಯರ್ಥೇ ।। ನಿರ್ಣೀತಂ ಪ್ರತಿಮಾಸಂ ಕುಗ್ರಹ ದೃಷ್ಟ್ಯಾತು ಮಾನಸಂಪಾಪಂ ।। ಸ್ವಾಪ್ನಿಕ ಮಥವಾಮಿಶ್ರೈ ರ್ದೃಷ್ಟೇ ಚಂದ್ರೇಚ ಶಂಕಿತಾಭವತಿ ।। ಸ್ವಕ್ಷೇತ್ರಗೈಶ್ಚಗುರಣಾ ದೃಷ್ಟೇಸತಿ ಧವಗತ್ಯೈವ ಶಂಕಾಸ್ಯಾತ್ ।।"

ಮೂಲ।। ಯಥಾಸ್ತರಾಶಿರ್ಮಿಥುನಂ ಸಮೇತಿ ತಥೈವವಾಚ್ಯೋ ಮಿಥುನ ಪ್ರಯೋಗಃ।। ಅಸದ್ಗ್ರಹಾಲೋಕಿತ ಸಂಯುತಸ್ತೆ ಸರೋಷಇಷ್ಟೈ-ಸ್ಸವಿಲಾಸಹಾಸಃ ।।೨।।

ಅ।। ಸ್ತ್ರೀ ಪುರುಷ ಕ್ರೀಡಾವಿಲಾಸ ಸರಸ ವಿರಸವನ್ನು ವರ್ಣಿಸುತ್ತಾನೆ. ಟೀ।। ಅಸ್ತರಾಶಿಃ-ಅಥಾವ ಲಗ್ನಕ್ಕಾಗಲೀ, ಜನ್ಮಲಗ್ನಕ್ಕಾಗಲೀ, ಪ್ರಶ್ನಲಗ್ನಕ್ಕಾಗಲೀ ಸಮಸ್ತ ರಾಶಿ ಅಸ್ತರಾಶಿಯೆಂದು ಸಂಕೇತವು, ಆ ರಾಶಿ ಸಂಜ್ಞೆ ಋತುವು, ಯಥಾ-ಯಾವ ಪ್ರಕಾರವಾಗಿ, ಮಿಥುನಂ-ಸ್ತ್ರೀಪುರುಷ ಸಂಯೋಗವನ್ನು, ಸಮೇತಿ- ಮಾಡುವುದೋ, ತಥೈವ-ಅಪ್ರಕಾರವಾಗಿಯೇ, ಮಿಥುನ ಪ್ರಯೋಗಃ- ಸ್ತ್ರೀ ಪುರುಷರ ಸಂಯೋಗವು, ಉದ್ಯತ್ಸುಲಗ್ನಗತವಾದರೆ, ಶಿಶಿರಾದಯಃ-ಶಿಶಿರರ ಸಪ್ತಮರಾಶಿ ಸ್ವಭಾವ ಜಂತುವು ಯಾವ ಪ್ರಕಾರ ಕ್ರೀಡಿಸುತ್ತದೋ ಆ ಪ್ರಕಾರವಾಗಿ

ಸ್ತ್ರೀಪುರುಷರು ಕ್ರೀಡಿಸವರೆಂದು ತಿಳಿಯತಕ್ಕದ್ದು. ಅದು ಹೇಗೆಂದರೆ- ಲಗ್ನಕ್ಕೆ ಸಪ್ತಮರಾಶಿ ಮೇಷವಾಗಿದ್ದರೆ ಮೇಷಕ್ರೀಡಿಸುವಂತೆಯೂ, ವೃಷಭವಾಗಿದ್ದರೆ ಗೋ ವೃಷಭಗಳು ಕ್ರೀಡಿಸುವಂತೆಯೂ, ಈ ಪ್ರಕಾರ ದ್ವಿಪದ (ಮನುಷ್ಯರು) ಕ್ರೀಡಿಸುವಂತೆಯೂ, ದ್ವಿಪದ ರಾಶಿಗಳಲ್ಲು ಚತುಷ್ಪದ ಜಂತುಗಳು ಕ್ರೀಡಿಸುವಂತೆ ಚತುಷ್ಪದ ರಾಶಿಗಳಿಗೂ ಕೀಟರಾಶಿಯಾದರೆ ಕ್ರಿಮಿಕೀಟಾದಿಗಳು ಸೇರುವಂತೆ ಸ್ತ್ರೀ ಪುರುಷ ಸಂಯೋಗವಾಗುತ್ತದೆಂದು ತಿಳಿಯತಕ್ಕದ್ದು. ಅಸ್ತೆ-ಸಪ್ತಮ ಸ್ಥಾನವು, ಅಸದ್ಗ್ರಹಾ ಲೋಕಿತ ಸಂಯುತಸ್ಥೇ - ಪಾಪಗ್ರಹದಿಂದ ನೋಡಲ್ಪಟ್ಟರೂ ಅಥವಾ ಸಪ್ತಮದಲ್ಲಿ ಪಾಪಗ್ರಹವಿದ್ದರೂ, ಸರೋಷಃ-ಕೋಪದಿಂಪ ಕೂಡಿದ ಸರಸಕೇಳಿ ಸಲ್ಲಾಪ ವೆಂದು ತಿಳಿಯತಕ್ಕದ್ದು. ಇಷ್ಟೈಃ-ಶುಭಗ್ರಹವೀಕ್ಷಿತವಾದರೂ ಶುಭಗ್ರಹದಿಂದ ಸಪ್ತಮರಾಶಿ ಕೂಡಿದ್ದರೂ, ಸವಿಲಾಸಹಾಸಃ-ವಿಲಾಸ ಪರಿಹಾಸದಿಂದ ಕೂಡಿದ ಸುರತಕೇಳಿಯೆಂದು ತಿಳಿಯತಕ್ಕದ್ದು. ಯಾವ ಗ್ರಹವು ನೋಡದೆಯೂ ಅಲ್ಲಿ ಯಾವ ಗ್ರಹವಿಲ್ಲದೆಯೂ ಇದ್ದರೆ ಸರಸವೂ, ವಿರಸವೂ, ಕಲಹವೂ ಇಲ್ಲದೆ, ಚೇಷ್ಟಾ ಶೂನ್ಯವಾಗಿ ಸುರತವೆಂಬುವ ಸಂಗಮ ನಡೆಯುವುದೆಂದು ತಿಳಿಯತಕ್ಕದ್ದು. ಶುಭಾ ಶುಭ ಗ್ರಹಯುತವಾಗಿಯೇ ಆಗಲಿ, ಶುಭಾಶುಭ ಗ್ರಹದೃಷ್ಟವಾಗಿಯೇ ಆಗಲಿ ಇದ್ದರೆ ಕಿಂಚತ್ಕಲಹಯುಕ್ತವಾಗಿ ಸರಸಕೇಳಿ ಸಲ್ಲಾಪವು ನಡೆಯುವುದೆಂಮು ಯಾ ನಡೆದಿರುವುದೆಂದು ಹೇಳತಕ್ಕದ್ದು. ಈ ವಿಷಯಕ್ಕೆ ಸಾರಾವಳಿಯಲ್ಲಿ ॥ಶ್ಲೋಕ॥ ದ್ವಿಪದಾದಯೋ ವಿಲಗ್ನಾತ್ಸುರತಂ ಕುರ್ವಂತಿಯದ್ವತ್॥ ತದ್ವತ್ ಸ್ತ್ರೀ ಪುರುಷಾಣಾಂ ಗರ್ಭಾದಾನಂ ಸಮಾದೇಶ್ಯಂ ॥೧೩॥ ಅಸ್ತೇ ಶುಭಯುತೇದೃಷ್ಟೇ ಸರೋಷಕಲ ಹಂವದೇದ್ಸಾಮ್ಯಂ ॥ ಸೌಮ್ಯೈಸೌಮ್ಯಂಸುತರಂ ವಾತ್ಸ್ಯಾಯನ ಸುಪ್ರಯೋಗಕಂ ವಾಚ್ಯಂ ॥೧೪॥ ಎಂದು ವಾತ್ಸಯಾನ ಕಾಮಸೂತ್ರದಲ್ಲಿ ಹೇಳಿರುತ್ತೆ ॥೨॥ ಮತ್ತು ಸುರಸ ವಿಲಾಸ ವಿಷಯದಲ್ಲಿ ಗ್ರಂಥಾಂತರೇ ॥ "ವಂದೇ ದಸ್ತ ಬಲಾಧಿಕ್ಯೇ ತಜ್ಜಂತ್ವನುಗುಣಾರತಿಂ ॥ ದೃಷ್ಟ್ಯಗ್ರಹಬಲಾಧಿಕ್ಯೇ ತದ್ಗುಣಾನುಗುರ್ಣಾತಥಾ ॥ ರಾಶಿಗ್ರಹಬಲತ್ವೇತು ತತ್ಪ್ರಕಾರೋನಸಂಭವೇತ್ ॥ ಛಾಯಮಾತ್ರಾಪರಂತುಸ್ಯಾ ತ್ತದ್ರೂಪಸದೃಶಾರತಿಃ॥ ಶಿಶುಜನ್ಮವಶಾಚ್ಚಿಂತ್ಯಾ ಬೀಜಕ್ಷೇಪಣಾಕಾಲಕೀ ॥ ಅಧಾನ ಪ್ರಶ್ನಲಗ್ನಾ ಭ್ಯಾ ಮಥವಾತಾಂ ಸಮುನ್ನಯೇತ್॥ ಈ ಪ್ರಕಾರ ಗರ್ಭಧಾರಣ ಪ್ರಶ್ನೆ ನಿಷೇಕ ಈ ಕಾಲದ ಸುರತ ಪ್ರಕಾರವನ್ನು ಊಹಿಸಬೇಕು ॥೨॥

ಮೂಲ|| ರವೀಂದುಶುಕ್ರಾ ವನಿಜೈಸ್ಸಭಾಗಗೈರ್ಗುರೌ ತ್ರಿಕೋಣೋದಯ ಸಂಸ್ಥಿತೇಪಿವಾ || ಭವತ್ಯಪತ್ಯಂಹಿ ವಿಬೀಜನಾಮಿಮೇಕರಾಹಿಮಾಂ ಶೋರ್ವಿದ್ರಶಾಮಿವಾಫಲಾಃ ||೩||

ಟೀಕು|| ಗರ್ಭಸಂಭವಾಸಂಭವ ಯೋಗವನ್ನು ಹೇಳುತ್ತಾನೆ. ಸ್ವಭಾಗಗೈ- ಸ್ವನವಾಂಶವನ್ನು ಹೊಂದಿದ, ರವೀಂದುಶುಕ್ರಾವನಿಜೈಃ - ರವಿ, ಚಂದ್ರ, ಶುಕ್ರ, ಕುಜರಿಂದ, ಅಪತ್ಯಂ-ಗರ್ಭೋತ್ಪತ್ತಿ, ಭವತಿ-ಆಗುತ್ತಲಿದೆ. ಅಂದರೆ-ಗರ್ಭಾಧಾನ ಲಗ್ನಕ್ಕಾಗಲೀ, ಪ್ರಶ್ನಕಾಲ ಲಗ್ನಕ್ಕಾಗಲೀ ಸೂರ್ಯ ಚಂದ್ರ ಅಂಗಾರಕರು ಯಾವ ರಾಶಿಯಲ್ಲಿದ್ದರೂ ಸ್ವನವಾಂಶವನ್ನು ಹೊಂದಿದರೆ ಗರ್ಭ ನಿಲ್ಲುತ್ತದೆಂದು ತಾತ್ಪರ್ಯ. ಇಲ್ಲದಿದ್ದರೆ ಗರ್ಭೋತ್ಪತ್ತಿ ಆಗುವುದಿಲ್ಲ. ಈ ವಿಷಯಕ್ಕೆ ಲಘುಜಾತಕದಲ್ಲಿ ||ಶ್ಲೋಕ|| ಬಲಯುಕ್ತೌ ಸ್ವಗೃಹಾಂಶೇಷ್ವರ್ಕಸಿತಾ ಉಪಚಯರ್ಕ್ಷ ಗೌಪುಂಸಿಂ || ಸ್ತ್ರೀಣಾಂವಾಕುಜಚಂದ್ರೌ ಯದಾತದಾ ಸಂಭವತಿಗರ್ಭಃ ||೧೫|| ಸೂರ್ಯ, ಚಂದ್ರ, ಶುಕ್ರ, ಕುಜರು ಈ ನಾಲ್ಕು ಗ್ರಹಗಳು ಸ್ವನವಾಂಶಗತರಾಗಿದ್ದರೂ ಪುರುಷನ ಉಪಚಯರಾಶಿಗತರಾಗಿ ಸೂರ್ಯ-ಶುಕ್ರರು ಸ್ತ್ರೀರಾಶಿಯುಪಚಯಗಳಲ್ಲಿದ್ದು ಕುಜ-ಚಂದ್ರರು ಸ್ವನವಾಂಶಗತರಾದರೆ ಗರ್ಭೋತ್ಪತ್ತಿಯಾಗುವುದೆಂದು ತಿಳಿಯತಕ್ಕದ್ದು. ಗುರೌ-ಬೃಹಸ್ಪತಿಯು, ತ್ರಿಕೋಣೋದಯ ಸಂಸ್ಥಿತೇಪಿವಾ-ತ್ರಿಕೋಣ ೪-೭ರಲ್ಲಿ ಎಲ್ಲಿಯಾದರೂ ಇದ್ದರೆ, ಇಮೆ-ಈಮೇಲೆ ಹೇಳಲ್ಪಟ್ಟ ಗರ್ಭ ಸಂಭವಯೋಗ ಹೇಳತಕ್ಕದ್ದು. ವಿಬೀಜನಾಂ-ನಪುಂಸಕರಿಗೆ, ಅಂದರೆ ವೀರ್ಯಹೀನರಾದ ಸ್ತ್ರೀಪುರುಷರಿಗೆ ಹಿಮಾಂಶೋಃ ಚಂದ್ರನ, ಕರಾಃ-ಕಿರಣಗಳು, ವಿದ್ಯಶಾಮಿವ-ಕುರುಡರಿಗೋಪಾದಿ ಯಲ್ಲಿ, ವಿಫಲಾಹಿ-ನಿಷ್ಫಲವಾಗುತ್ತೆ. ಅಂದರೆ ಈ ಮೇಲೆ ಹೇಳಲ್ಪಟ್ಟ ಯೋಗಗಳು ವೀರ್ಯಹೀನರಾದ ಸ್ತ್ರೀಪುರುಷರಿಗೆ ಗರ್ಭೋತ್ಪತ್ತಿ ಮಾಡಲಾರದೆಂದು ತಿಳಿಯಬೇಕು.

| | | | |
|---|---|---|---|
| | ರವಿ ೫ | ಶುಕ್ರ ೨ | |
| | ಆಧಾನಕಾಲ | | ಚಂ ೪ |
| ಚಂದ್ರ | | | |
| | ಕುಜ ೮ | | |

## ಉದಾಹರಣೆ

*ಗರ್ಭ ಸಂಭವಯೋಗ* ಈ ಕುಂಡಲಿಯಲ್ಲಿ ರವಿ, ಚಂದ್ರ, ಶುಕ್ರ, ಕುಜರು, ತಮ್ಮ ತಮ್ಮ ಸ್ವನವಾಂಶೆಯಲ್ಲಿರುವುದರಿಂದ ಮಕರ ಲಗ್ನದಲ್ಲಿ *ಗರ್ಭಾದಾನವಾದರೆ ಗರ್ಭ* ನಿಲ್ಲುವುದು.

| | | | |
|---|---|---|---|
| ರವಿ ೫ ಶು ೭ | ಚಂ ೪ | | ಲಗ್ನ |
| | ಪುರುಷ ರಾಶಿಗೆ | | |
| | | | ಕುಜ ೧ |
| | | | |

ಈ ಕುಂಡಲಿಯಲ್ಲಿ ರವಿ, ಶುಕ್ರ, ಚಂದ್ರ, ಕುಜರು ಲಗ್ನಕ್ಕೆ ಉಪಚಯುರಾಶಿಗಳಲ್ಲಿ ಬಲಿಷ್ಠರಾಗಿರುವುದರಿಂದ ಈ ಪುರುಷನಗರ್ಭ ನಿಲ್ಲುವುದು.

| | | | |
|---|---|---|---|
| ರವಿ ೫ ಶು ೭ | ಚಂದ್ರ ೪ | | ಲಗ್ನ |
| | ಸ್ತ್ರೀ ರಾಶಿ | | ಜನ್ಮ ರಾಶಿ |
| | | | |
| | | | ಕುಜ ೧ |

ಈ ಕುಂಡಲಿಯಲ್ಲಿ ಸ್ತ್ರೀ ಜನ್ಮರಾಶಿಗೆ ಇದೇ ಗ್ರಹಗಳು ಏರ್ಪಡಿಸಿ ಇರುತ್ತೆ. ಆದ್ದರಿಂದ ಈ ಪುರುಷರ ಸ್ತ್ರೀಯರಿಗೆ ಗರ್ಭಸಂಭವ ಉಂಟಾಗುವುದು.

### ಆದಾನ ಕಾಲಾತ್ ಪ್ರಸವಪರ್ಯಂತ ಶುಭಶುಭ ಯೋಗಾಃ

ಮೂಲ॥ ದಿವಾಕರೇಂದ್ವೋಃ ಸ್ಮರಗೌಕುಜಾರ್ಕ್ಯ ಜೌಗದಪ್ರದೌ ಪುಂಸವಯೋಃ ಹಿತೋಃಸ್ತದಾ ॥ ವ್ಯಯಸ್ಥಗೌಮೃತ್ಯುಕರೌಯುತಸ್ತಥಾ ತದೇಕ ದೃಷ್ಟ್ಯೋಃ ಮರಣಾಯಕಲ್ಪತೆ ॥೪॥

ಅ॥ ಗರ್ಭಾದಾನ ಕಾಲದಿಂದ ಪ್ರಸವ ಪರ್ಯಂತವಾಗಿ ದಂಪತಿಗಳಿಗೆ ಉಂಟಾಗುವ ಶುಭಾಶುಭ ಫಲವು ಹೇಳಲ್ಪಡುತ್ತೆ.

ಟೀಕು।। ದಿವಾಕರೇಂದ್ವೋಃ-ಸೂರ್ಯ ಚಂದ್ರರಿಗೆ, ಕುಜಾರ್ಕಜೌ-ಕುಜ ಶನಿಗಳು, ಸ್ಮರಗೌಯದಿ-ಸಪ್ತಮ ಸ್ಥಾನದಲ್ಲಿದ್ದರೆ, ತದಾ-ಆ ಕಾಲದಲ್ಲಿ, ಪುಂಸವ ಯೋಷಿತೋಃ- ಪುರುಷ ಸ್ತ್ರೀಯರಿಗೆ, ಗದಪ್ರದೌ-ರೋಗವನ್ನು ಕೊಡುತ್ತಾರೆ. ಅಂದರೆ ಗರ್ಭಾದಾನ ಕಾಲದಲ್ಲಿ ಯಾವ ರಾಶಿಯಲ್ಲಿ ಸೂರ್ಯನಿದ್ದಾನೋ, ಆ ರಾಶಿಗೆ ಸಪ್ತಮ ರಾಶಿಯಲ್ಲಿ ಗರ್ಭದ್ವಿತೀಯ ಮಾಸಾಧಿಪತಿ ಕುಜನಿದ್ದರೆ ದ್ವಿತೀಯ ಮಾಸದಲ್ಲೂ, ಷಷ್ಠಮಾಸಾಧಿಪತಿಯಾದ ಶನಿಯಿದ್ದರೆ ಆರನೇ ತಿಂಗಳಲ್ಲಿ, ಪುರುಷನಿಗೆ ರೋಗವುಂಟಾಗುವುದು. ಆದಾನಕಾಲದಲ್ಲಿ ಯಾವ ರಾಶಿಯಲ್ಲಿ ಚಂದ್ರನಿದ್ದನೋ ಆ ರಾಶಿಗೆ ಸಪ್ತಮರಾಶಿಯಲ್ಲಿ ಶನಿಯಿದ್ದರೆ ಪುರುಷನಿಗೆ ಹೇಳಿದ ಪ್ರಕಾರವೇ ಸ್ತ್ರೀಗೆ ಆರನೇ ತಿಂಗಳಲ್ಲೂ ಮತ್ತು ಕುಜನಿದ್ದರೆ ದ್ವಿತೀಯ ಮಾಸದಲ್ಲೂ ರೋಗಪ್ರದರಾಗುವರು.

## ಸ್ತ್ರೀ ಪುರುಷ ಮರಣಯೋಗಃ

ತಯೋಃ- ಆ ಸೂರ್ಯ ಚಂದ್ರರಿಗೆ, ವ್ಯಯಸ್ವಗೌ-ಕುಜ ಶನಿಗಳಲ್ಲಿ ಯಾರಾದರೂ ಒಂದು ಗ್ರಹ ದ್ವಾದಶದಲ್ಲಿದ್ದು ಮತ್ತೊಂದು ಗ್ರಹ ದ್ವಿತೀಯದಲ್ಲಿದ್ದರೆ ಪುರುಷ ಸ್ತ್ರೀಯರಿಗೆ ಮರಣವನ್ನು ಕೊಡುವರು. ಅಂದರೆ ಗರ್ಭದಾನ ಲಗ್ನಕ್ಕೆ ಸೂರ್ಯನಿರುವ ರಾಶಿಗೆ ದ್ವಾದಶದಲ್ಲೊಂದು ಗ್ರಹ, ದ್ವಿತೀಯದಲ್ಲೊಂದು ಗ್ರಹ, ಕುಜ ಶನಿಗಳಲ್ಲಿ ಯಾರಾದರೂ ಇದ್ದರೆ ಅವರಲ್ಲಿ ಯಾರು ಬಲವಂತರೋ ಅವರಿಗೆ ಹೇಳಿರುವ ತಿಂಗಳಲ್ಲಿ ಪುರುಷನಿಗೆ ಮರಣ ಉಂಟಾಗುವುದು. ಚಂದ್ರನಿಗೆ ದ್ವಾದಶ ದ್ವಿತೀಯದಲ್ಲಿ ಕುಜ ಶನಿಗಳಲ್ಲಿ ಯಾರಾದರೂ ಇದ್ದರೆ, ಅವರಲ್ಲಿ ಯಾರು ಬಲಿಷ್ಠರೋ ಅವರಿಗೆ ಹೇಳಿದ ತಿಂಗಳಲ್ಲಿ (ಅಂದರೆ ಗರ್ಭಮಾಸದಲ್ಲಿ ಸ್ತ್ರೀಗೆ ಮರಣ ಉಂಟಾಗುವುದು) ತಥಾ-ಆ ಪ್ರಕಾರವೇ, ಯುತಃ-ಸೂರ್ಯನು, ಕುಜ ಶನಿಗಳಲ್ಲಿ ಯಾರಾದರೂ ಒಂದು ಗ್ರಹದ ಸಂಗಡ ಕೂಡಿದರೆ, ತದೇಕದೃಷ್ಟಃ- ಮತ್ತೊಬ್ಬ ಗ್ರಹದಿಂದ ನೋಡಲ್ಪಟ್ಟರೆ, ಮರಣಾಯ ಕಲ್ಪತೆ - ಆ ಕುಜ ಶನಿಗಳಲ್ಲಿ ಯಾರು ಬಲವಂತರೋ ಆ ಗ್ರಹಕ್ಕೆ ಹೇಳಿದ ಗರ್ಭಮಾಸದಲ್ಲಿ ಪುರುಷನಿಗೆ ಮರಣವಾಗುತ್ತೆ. ಈ ಪ್ರಕಾರವೇ ಆದಾನ ಲಗ್ನಕ್ಕೆ ಚಂದ್ರನಿರುವ ರಾಶಿಗೆ ಕುಜ ಶನಿಗಳಲ್ಲಿ ಯಾರಾದರೂ ಕೂಡಿ, ಅವರಲ್ಲಿ ಯಾರಿಂದಾದರೂ ನೋಡಲ್ಪಟ್ಟರೆ ಅವರಲ್ಲಿ ಯಾರು ಬಲಿಷ್ಠರೋ ಅವರಿಗೆ ಉಕ್ತವಾಗಿರುವ ತಿಂಗಳಿನಲ್ಲಿ ಸ್ತ್ರೀಗೆ ಮರಣ ಉಂಟಾಗುವುದು.

## ಉದಾಹರಣೆ

| | | | |
|---|---|---|---|
| ಗುರು ಶುಕ್ರ | ರವಿ ಬುಧ | ಚಂದ್ರ | |
| | ಸ್ತ್ರೀ ಪುರುಷ ರೋಗಪ್ರದ ಯೋಗ | | |
| | | | |
| ಲ | ಶನಿ | ಕುಜ | |

### ರೋಗಪ್ರದಯೋಗ

ಈ ಕುಂಡಲಿಯಲ್ಲಿ ಸೂರ್ಯನಿಂದ ಸಪ್ತಮದಲ್ಲಿ ಕುಜನಿರುವುದರಿಂದ ಗರ್ಭಧಾರಣೆಯಾದ ಮೇಲೆ ೨ನೇ ತಿಂಗಳಲ್ಲಿ ಪುರುಷನಿಗೆ ರೋಗವುಂಟಾಗುವುದು. ಚಂದ್ರನಿಗೆ ಸಪ್ತಮದಲ್ಲಿ ಶನಿ ಇರುವುದರಿಂದ ೬ನೇ ತಿಂಗಳಿನಲ್ಲಿ ಬಸುರಿಗೆ ರೋಗ ಉಂಟಾಗುತ್ತದೆ.

| | | | |
|---|---|---|---|
| | | ಕುಜ | ರವಿ ಶುಕ್ರ |
| ಲಗ್ನ | ಪುರುಷ ಮರಣ ಯೋಗ | | ಶನಿ ಬುಧ |
| | | | ಗುರು |
| | | ಚಂದ್ರ | |

### ಪುರುಷ ಮರಣಯೋಗ

ಈ ಕುಂಡಲಿಯಲ್ಲಿ ಸೂರ್ಯನಿಂದ ದ್ವಾದಶದಲ್ಲಿ ಅಂಗಾರಕನು, ದ್ವಿತೀಯದಲ್ಲಿ ಶನಿಯು ಇರುವುದರಿಂದ ಇವರಲ್ಲಿ ಶನಿ ಬಲಿಷ್ಠನಾಗಿರುವುದರಿಂದ ೬ನೇ ತಿಂಗಳಲ್ಲಿ ಗರ್ಭಾದಾನ ಮಾಡಿದ ಪುರುಷನು ಮರಣ ಹೊಂದುವನು.

| | | | |
|---|---|---|---|
| ಗುರು | | ಕುಜ ಚಂದ್ರ | |
| | ಗರ್ಭಿಣಿಮರಣ ಯೋಗ | | |
| | | | ಶುಕ್ರ |
| | ಶನಿ | | ರವಿ ಬುಧ |

### ಗರ್ಭಿಣಿ ಮರಣಯೋಗ

ಈ ಕುಂಡಲಿಯುಲ್ಲಿ ಚಂದ್ರನಿಗೆ ಕುಜನ ಸಂಯೋಗವಿದ್ದು, ಶನಿಯಿಂದ ನೋಡಲ್ಪಡುವುದರಿಂದ ಇವರಲ್ಲಿ ಕುಜನು ಬಲಿಷ್ಠನಾಗಿರುವುದರಿಂದ ಬಸುರಿಯು ದ್ವಿತೀಯ ಮಾಸದಲ್ಲಿ ಮೃತಿ ಹೊಂದುವಳು.

| | | | |
|---|---|---|---|
| | ಗುರು | | ಶನಿ |
| | ಗರ್ಭಿಣೀ ಮರಣ ಯೋಗ | | |
| ಶುಕ್ರ ಬುಧ | | | ಲಗ್ನ |
| ರವಿ ಕುಜ | | ಚಂದ್ರ | |

ಈ ಕುಂಡಲಿಯಲ್ಲಿ ರವಿಗೆ ಅಂಗಾರಕ ಗ್ರಹ ಸಂಬಂಧವಿದ್ದು ಶನಿಯಿಂದ ನೋಡಲ್ಪಡುವುದರಿಂದ, ಕುಜನು ಬಲಿಷ್ಠನಾಗಿರುವುದರಿಂದ ಪತ್ನಿಯು ೨ ತಿಂಗಳು ಗರ್ಭಿಣಿಯಾಗಿರುವಾಗ ಮೃತಿಯನ್ನು ಹೊಂದುವಳು.

## ಪುರುಷ ಮರಣಯೋಗ

|  | ರವಿ ಶನಿ | ಬುಧ ಶುಕ್ರ | ಲಗ್ನ |
|---|---|---|---|
|  |  |  |  |
| ಕುಜ |  |  |  |
| ಗುರು |  | ಚಂದ್ರ |  |

ಈ ಕುಂಡಲಿಯಲ್ಲಿ ಸೂರ್ಯನಿಗೆ ಶನಿ ಸಂಯೋಗವಿದ್ದು, ಕುಜನಿಂದ ನೋಡಲ್ಪಟ್ಟಿರುವುದರಿಂದ ೭ನೇ ತಿಂಗಳಲ್ಲಿ ಪುರುಷ ಮರಣವಾಗಲು ಶನಿ ನೀಚನಾಗಿ ಬಲಹೀನನಾದ್ದರಿಂದ ಕುಜನು ಬಲಿಷ್ಠನಾಗಿ ೪ನೇ ದೃಷ್ಟಿಯಿಂದ ನೋಡುವುದರಿಂದ ೨ನೇ ತಿಂಗಳಲ್ಲಿ ಪುರುಷನಿಗೆ ಮರಣ.

ಈ ಮೇಲೆ ಹೇಳಲ್ಪಟ್ಟ ಕುಂಡಲಿಗಳ ಯೋಗಗಳು ದಿಕ್ಪ್ರದರ್ಶಕವಾಗಿ ತೋರಿಸಲ್ಪಟ್ಟಿವೆ. ಆದ್ದರಿಂದ ಬುದ್ಧಿವಂತರಾದವರು ಚೆನ್ನಾಗಿ ತಮ್ಮ ಬುದ್ಧಿಗನುಸಾರವಾಗಿ ತಿಳಿದು ಯೋಚಿಸಿದರೆ ಅವರಿಗೆ ವಿಶದವಾಗಿ ತಿಳಿಯುವುದು. ಈ ವಿಷಯದಲ್ಲಿ ಹುಟ್ಟತಕ್ಕ ಯೋಗವನ್ನೆಲ್ಲ ಬರೆಯಲು ಗ್ರಂಥವಿಸ್ತಾರ ಭಯದಿಂದ ಉದಾಹರಣೆಗೋಸ್ಕರ ತೋರಿಸಿರುತ್ತೇನೆ.

ಗರ್ಭಾದಾನ ಲಗ್ನವಶಾತ್ ಬಂಧುವರ್ಗ ಅನಿಷ್ಟಯೋಗಾಃ

ಮೂಲ।। ದಿವಾರ್ಕ ಶುಕ್ರೌ ಪಿತೃಮಾತೃ ಸಂಜ್ಞಿತೌ । ಶನೈಶ್ಚರೇಂದೂನಿಶಿತ
ದ್ವಿಪರ್ಯಯಾತ್ ಪಿತೃವ್ಯ ಮಾತೃಷ್ವಸ್ರ ಸಂಜ್ಞಿತೌಚ ತಾವಥೌ
ಜಯುಗ್ಮರ್ಕ್ಷ ಗತೌತಯೋಃಶುಭೌ ।।೫।।

ಅವ।। ಆದಾವ ಲಗ್ನವಶದಿಂದ ಪಿತೃಮಾತೃ, ಪಿತೃವ್ಯ, ಮಾತೃಷ್ವಸ್ರ ಇವರುಗಳಿಗೆ ಉಂಟಾಗುವ ಶುಭಾಶುಭ ಫಲವು ಹೇಳಲ್ಪಡುತ್ತೆ.

ಟೀಕು।। ದಿವಾ-ಹಗಲಿನಲ್ಲಿ (ಆದಾವ ಲಗ್ನಕ್ಕಾಗಲೀ, ಜನ್ಮಲಗ್ನಕ್ಕಾಗಲೀ) ಆರ್ಕಶುಕ್ರೌ-ರವಿಶುಕ್ರರು, ಪಿತೃಮಾತೃಸಂಜ್ಞಿಕೌ-ಪಿತೃ ಮಾತೃ ಸಂಜ್ಞೆಯುಳ್ಳವರಾಗುವರು. ಅಂದರೆ ಸೂರ್ಯನೇ ಪಿತೃ, ಶುಕ್ರನೇ ತಾಯಿ ಎಂದು ನಿಶಿರಾತ್ರಿಕಾಲದಲ್ಲಿ, (ಆದಾನಕ್ಕಾಗಲೀ, ಜನನಕ್ಕಾಗಲೀ, ಶನೈಶ್ಚರೇಂದೂ-ಶನಿ ಚಂದ್ರರು ಪಿತೃಮಾತೃ ಸಂಜ್ಞೆಯುಳ್ಳವರು), ಅಂದರೆ ರಾತ್ರಿಕಾಲದಲ್ಲಿ ಶನಿ ಪಿತೃ ಸಂಜ್ಞೆ, ಚಂದ್ರ ಮಾತೃಸಂಜ್ಞೆಯುಳ್ಳವರೆಂದು ನಿಯಮಿತವಾಗಿರುತ್ತೆ. ತದ್ವಿಪರ್ಯಯಾತ್-ಆ ದಿವಾರಾತ್ರಿ ವ್ಯತ್ಯಾಸಗಳಿಂದ, ತಾವೇವ-ಆ ಎರಡು ಗ್ರಹಗಳೇ, ಪಿತೃವ್ಯ ಮಾತೃಷ್ವಸ್ರ ಸಂಜ್ಞಿತೌ-ಪಿತೃವ್ಯ ಮಾತೃಷ್ವಸ್ರ ಸಂಜ್ಞೆಯುಳ್ಳವರಾಗುವರು. ಅಂದರೆ, ಆದಾನಕ್ಕಾಗಲೀ, ಜನನಕ್ಕಾಗಲೀ, ಹಗಲಿನಲ್ಲಿ ಶನಿ ಪಿತೃವ್ಯ ಸಂಜ್ಞೆಯುಳ್ಳವನು,

ಚಂದ್ರನು ಮಾತೃಷ್ವಸ್ರ ಸಂಜ್ಞೆಯುಳ್ಳವನು, ರಾತ್ರಿಯಲ್ಲಿ ಆದಾನಕ್ಕಾಗಲೀ, ಜನನಕ್ಕಾಗಲೀ ಸೂರ್ಯನು ಪಿತೃವ್ಯ, ಶುಕ್ರನು ಮಾತೃಷ್ವಸ್ರ ಸಂಜ್ಞೆಯುಳ್ಳವರು. ಪಿತೃವ್ಯ ಅಂದರೆ ತಂದೆಯ ಅಣ್ಣ ಅಥವಾ ತಮ್ಮ, ಮಾತೃಷ್ವಸಾ ಅಂದರೆ ತಾಯಿಯ ಅಕ್ಕ-ತಂಗಿ ಎಂದು ತಿಳಿಯತಕ್ಕದ್ದು.

## ಉದಾಹರಣೆ

| ಆದಾನ ಲಗ್ನಕ್ಕಾಗಲೀ | | ಜನನಕ್ಕಾಗಲೀ | |
|---|---|---|---|
| ಹಗಲಿನಲ್ಲಿ | | ರಾತ್ರಿಯಲ್ಲಿ | |
| ರವಿ | ಪಿತೃ | ಶನಿ | ಪಿತೃ |
| ಶುಕ್ರ | ಮಾತೃ | ಚಂದ್ರ | ಮಾತೃ |
| ಶನಿ | ಪಿತೃವ್ವ | ರವಿ | ಪಿತೃವ್ವ |
| ಚಂದ್ರ | ಮಾತೃಷ್ವಸಾ | ಶುಕ್ರ | ಮಾತೃಷ್ವಸಾ |

ಈ ಮೇಲೆ ಹೇಳಲ್ಪಟ್ಟ ತಾರಕ ಸಂಜ್ಞೆಗಳಿಂದ ಪ್ರಯೋಜನವೇನೆಂದರೆ - ತೌ - ಆಮೇಲೆ ಹೇಳಲ್ಪಟ್ಟ ಎರಡೇ ಗ್ರಹಗಳು ಕ್ರಮವಾಗಿ ಓ ಜಯುಗರ್ಕ್ಷ ಗತೌ-ವಿಷಮ ಸಮರಾಶಿಗಳಿದ್ದರೆ, ತಯೋಃ - ಆ ಪಿತೃ-ಮಾತೃಗಳಿಗೆ ಮತ್ತು ಪಿತೃವ್ಯ ಮಾತೃಷ್ವಸಾ ಇವರುಗಳಿಗೂ ಶುಭೌ-ಶುಭ ಫಲಪ್ರದರಾಗುವರು. ಅಂದರೆ ರವಿ ವಿಷಮರಾಶಿಗಳಲ್ಲಿದ್ದು, ಶುಕ್ರನು ಸಮರಾಶಿಗಳಲ್ಲಿದ್ದರೆ ದಿವಾಜನ್ಮನಿಗೆ ತಂದೆ, ತಾಯಿ, ಪಿತೃವ್ಯ, ಮಾತೃಷ್ವಸಾ ಇವರುಗಳಿಗೆ ಶುಭಕರನು. ಅಂದರೆ ಸೂರ್ಯನು ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ವಿಷಮ ರಾಶಿಗಳಲ್ಲಿದ್ದರೆ ದಿವಾಜಾತಕನಿಗೆ ಆಗಲೀ, ತಂದೆಗೂ ರಾತ್ರಿ ಜನ್ಮನಿಗೆ ಚಿಕ್ಕಪ್ಪ, ದೊಡ್ಡಪ್ಪ ಇವರಿಗೆ ಶುಭಕರನು. ಶುಕ್ರನು ಸಮರಾಶಿಗಳಾದ ವೃಷಭ, ಕಟಕ, ಕನ್ಯ, ವೃಶ್ಚಿಕ, ಮಕರ, ಮೀನ ರಾಶಿಗಳಲ್ಲಿದ್ದರೆ ಹಗಲಿನಲ್ಲಿ ಹುಟ್ಟಿದವನ ತಾಯಿಗೆ, ರಾತ್ರಿ ಹುಟ್ಟಿದವನ ಚಿಕ್ಕಮ್ಮ, ದೊಡ್ಡಮ್ಮನಿಗೆ ಶುಭಕರನು. ಶನಿ ವಿಷಮರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭಗಳಲ್ಲಿದ್ದರೆ ದಿವಾಜನ್ಮನಿಗೆ ದೊಡ್ಡಪ್ಪ, ಚಿಕ್ಕಪ್ಪನಿಗೆ ರಾತ್ರಿ ಜನಿಸಿದವನು ತಂದೆಗೂ ಶುಭಕರನು. ಚಂದ್ರನು ಸಮರಾಶಿಗಳಾದ ೨-೪, ೬-೮, ೧೦-೧೨ರಲ್ಲಿದ್ದರೆ ರಾತ್ರಿ ಜನಿಸಿದವನ

ತಾಯಿಗೂ, ಹಗಲು ಜನಿಸಿದವನ ಚಿಕ್ಕಮ್ಮ ದೊಡ್ಡಮ್ಮನಿಗೂ ಶುಭಕರನು, ಈ ಮೇಲೆ ಹೇಳಲ್ಪಟ್ಟ ಗ್ರಹಗಳು ಅನುಕ್ತ ಸ್ಥಾನಗಳಲ್ಲಿದ್ದರೆ ಅವರವರಿಗೆ ಅಶುಭಕರವೆಂದು ತಿಳಿಯತಕ್ಕದ್ದು. ಅದು ಹೇಗೆಂದರೆ- ಸಮರಾಶಿಗತನಾದ ಸೂರ್ಯನು ಹಗಲಿನಲ್ಲಿ ತಂದೆಗೂ, ರಾತ್ರಿಯಲ್ಲಿ ಆದರೆ ಪಿತೃವ್ಯಾದಿಗಳಿಗೆ ಅಶುಭಕರನು. ವಿಷಯರಾಶಿಗತನಾದ ಶುಕ್ರನು ಹಗಲಿನಲ್ಲಿ ತಾಯಿಗೂ, ರಾತ್ರಿಯಲ್ಲಿ ಚಿಕ್ಕಮ್ಮ ದೊಡ್ಡಮ್ಮನಿಗೂ ಅಶುಭಕರನು. ಸಮರಾಶಿಗತನಾದ ಶನಿಯು ರಾತ್ರಿಯಲ್ಲಿ ತಂದೆಗೂ, ಹಗಲಿನಲ್ಲಿ ಚಿಕ್ಕಪ್ಪ ದೊಡ್ಡಪ್ಪಂದಿರಿಗೂ ಅಶುಭಕರನು. ವಿಶಮರಾಶಿಗತ ಚಂದ್ರನು ರಾತ್ರಿಯಲ್ಲಿ ತಾಯಿಗೂ, ಹಗಲಿನಲ್ಲಿ ಚಿಕ್ಕಮ್ಮ ದೊಡ್ಡಮ್ಮನಿಗೂ ಅಶುಭಕರನು.

## ಆದಾನ ಕಾಲವಶಾತ್ ಸ್ತ್ರೀಮರಣ ಯೋಗಃ

ಮೂಲ।। ಅಭಿಲಷದ್ಭಿರುದಯರ್ಕ್ಷಮ ಸದ್ಭಿರ್ಮಣಮೇತಿ ಶುಭ ದೃಷ್ಟಿ ಮಯಾತೇ ।। ಉದಯರಾಶಿ ಸಹಿತೇ ಚಯಮೇಸ್ತ್ರಿ ವಿಗಳಿತೋಡು ಪತಿ ಭೂಸುತದೃಷ್ಟೇ ।।೬।।

ಅ।। ಆದಾನ ಕಾಲದಿಂದ ಸ್ತ್ರೀಗೆ ಮರಣ ಉಂಟಾಗುವ ಎರಡು ಯೋಗಗಳು ಹೇಳಲ್ಪಡುತ್ತವೆ. ಲಗ್ನೆ - ಗರ್ಭಾಧಾನ ಲಗ್ನವು, ಶುಭದೃಷ್ಟಂ - ಶುಭ ಗ್ರಹಗಳಾದ ಗುರು, ಶುಕ್ರ, ಪೂರ್ಣಚಂದ್ರ, ಶುದ್ಧ ಬುಧರ ದೃಷ್ಟಿಯನ್ನು, ಆಯಾತೇಸತಿ-ಹೊಂದಿದ್ದರೆ, ಉದಯರ್ಕ್ಷಂ-ಗರ್ಭಾಧಾನ ಲಗ್ನವನ್ನು ಅಭಿಲಷದ್ಭಿಃ-ಅಪೇಕ್ಷಿಸುವ, ಅಸದ್ಭಿಃ-ಕ್ರೂರಗ್ರಹಗಳಿಂದ ಕೂಡಿದ್ದರೆ ಸ್ತ್ರೀ-ಗರ್ಭಿಣಿಯಾದವಳು, ಮರಣಂ-ಯಮಾಲಯವನ್ನು, ಏತಿ-ಹೊಂದುತ್ತಾಳೆ. ಅಂದರೆ ಶುಭಗ್ರಹಗಳಿಂದ ವೀಕ್ಷಿಸಲ್ಪಡದ, ಆದಾನ ಲಗ್ನಕ್ಕೆ ವ್ಯಯದಲ್ಲಿ ಕ್ರೂರ ಗ್ರಹಗಳಿದ್ದರೆ ಆಗ ಗರ್ಭಿಣಿಯಾಗುವ ಸ್ತ್ರೀ ಮೃತಿಹೊಂದುವಳು. ಈ ವಿಷಯದಲ್ಲಿ ।।ಶ್ಲೋಕ।। ಗರ್ಗಃ।। ಅಶುಭೈರ್ದ್ವಾದಶರ್ಕ್ಷ ಸ್ಥೆಶ್ಶುಭದೃಷ್ಟಿವಿವರ್ಜಿತೇ ।। ಆದಾನ ಲಗ್ನೆ ಮರಣಂಯೋಷಿತಃ ಪ್ರವದೇದ್ಬುಧಃ ।।೧೬।। ಎಂದು ಪ್ರಮಾಣವು. ಉದಯರ್ಕ್ಷಮಭಿಲಷದ್ಭಿಃ - ದ್ವಿತೀಯದಲ್ಲಿದ್ದ ಪಾಪಗ್ರಹಗಳೆಂದು ಕೆಲವರು ಅರ್ಥಮಾಡಿದರು. ಉದಯರಾಶಿ ಸಹಿತೇ-ಉದಯರಾಶಿಯನ್ನು ಹೊಂದಿದ, ಯಮ-ಶನೈಶ್ಚರನು, ವಿಗಳಿತೋಡುವಪತಿ ಭೂಸುತದೃಷ್ಟೇ-ವಿಗಳಿತೋಡುಪತಿ ಕಲಾಹೀನನಾದ ಚಂದ್ರನಿಂದಲೂ, ಭೂಸುತ-ಕುಜನಿಂದಲೂ, ದೃಷ್ಟೇಸತಿ-ನೋಡಲ್ಪಟ್ಟರೆ, ಸ್ತ್ರೀ-ಗರ್ಭಿಣಿಯಾದ ಹೆಂಗಸರು, ಮರಣಮೇತಿ-ಮೃತಿಯನ್ನು ಹೊಂದುತ್ತಾಳೆ.

ಮೂಲ॥ ಪಾಪದ್ವಯ ಮಧ್ಯಸಂಸ್ಥಿತೌ ಲಗ್ನೇಂದೂನಚಸೌಮ್ಯವೀಕ್ಷಿತೌ ॥
ಯುಗಪತ್ಪೃಗೇಥವ ಸಾವದೇನ್ನಾರೀ ಗರ್ಭಯುತಾವಿಪದ್ಯತೆ ॥

ಅವತಾರಿಕೆ॥ ಪುನಃ ಮತ್ತೊಂದು ವಿಧವಾದ ಗರ್ಭಿಣೀ ಮರಣಯೋಗವನ್ನು ಹೇಳುತ್ತೆ. ಟೀ॥ ಲಗ್ನೇಂದೂ - ಗರ್ಭದಾನ ಲಗ್ನಚಂದ್ರರು, ಯುಗಪತ್-ಏಕಕಾಲದಲ್ಲಿ, ಪಾಪದ್ವಯ ಮಧ್ಯಸಂಸ್ಥಿತೌ-ಎರಡು ಪಾಪಗ್ರಹ ಮಧ್ಯದಲ್ಲಿದ್ದು, ಸೌಮ್ಯಗ್ರಹವೀಕ್ಷಿತೌ-ಸೌಮ್ಯಗ್ರಹವೀಕ್ಷಣೆ, ನಚೇತ್-ಇಲ್ಲದಿದ್ದರೆ, ಗರ್ಭಯುತಾ-ಗರ್ಭಸಹಿತವಾಗಿ, ನಾರೀ-ಸ್ತ್ರೀ ವಿಪದ್ಯತೇ-ಮೃತಿಹೊಂದುವಳು, ಅಂದರೆ ಆದಾನ ಲಗ್ನಕ್ಕೆ ಆಗಲೀ ಚಂದ್ರಿಗೆ ಆಗಲೀ ಅಥವಾ ಲಗ್ನದಲ್ಲಿ ಚಂದ್ರನಿದ್ದು, ಒಂದು ಪಾಪಗ್ರಹ ದ್ವಾದಶದಲ್ಲಿದ್ದು ಮತ್ತೊಂದು ಪಾಪಗ್ರಹ ದ್ವಿತೀಯ ಸ್ಥಾನದಲ್ಲಿದ್ದರೆ, ಆ ಲಗ್ನಚಂದ್ರರು ಶುಭಗ್ರಹದಿಂದ ನೋಡಲ್ಪಡದಿದ್ದರೆ ಗರ್ಭಿಣೀ ಸ್ತ್ರೀ ಗರ್ಭಸಹಿತವಾಗಿ ಮರಣಹೊಂದುವಳು. ಪೃಥಗೇವಸಾವ ದೇತ್-ಲಗ್ನವು ಒಂದು ರಾಶಿ, ಚಂದ್ರನು ಒಂದು ರಾಶಿಯಾಗಿ ಆ ಲಗ್ನಚಂದ್ರರಿಗೆ ಶುಭಗ್ರಹವೀಕ್ಷಣೆ ಇಲ್ಲದಿದ್ದರೆ ಆಗ ಗರ್ಭಿಣಿ ಮೃತಿಯನ್ನು ಹೊಂದುವಳು. ಮತ್ತೊಂದು ಯೋಗ ಹೇಳಲ್ಪಡುತ್ತೆ :- ಲಗ್ನದಿಂದ ೨ನೇ ಸ್ಥಾನದಲ್ಲಿ ಚಂದ್ರನಿದ್ದು ದ್ವಾದಶ, ದ್ವಿತೀಯ, ಚತುರ್ಥ ಸ್ಥಾನಗಳಲ್ಲಿ ಪಾಪಗ್ರಹವಿದ್ದು ಆ ಲಗ್ನ ಚಂದ್ರರು ಶುಭಗ್ರಹವೀಕ್ಷಿತರಾಗಿದ್ದರೆ, ಆ ಆದಾನ ಲಗ್ನದಲ್ಲಿ ಗರ್ಭವತಿಯಾದವಳು ಮೃತಿಯನ್ನು ಹೊಂದುವಳು. ಈ ಮೇಲೆ ಹೇಳಲ್ಪಟ್ಟ ಯೋಗಗಳಲ್ಲಿ ಬಲವಂತವಾದ ಗ್ರಹಕ್ಕೆ ಹೇಳಲ್ಪಟ್ಟ ಮಾಸಗಳಲ್ಲಿ ಗರ್ಭಿಣೀ ಮರಣ ಉಂಟಾಗುವುದು. ಇದುವರಿಗೆ ಹೇಳಲ್ಪಟ್ಟ ಶ್ಲೋಕಗಳಲ್ಲಿ ಆ ಗ್ರಹಕ್ಕೆ ಉಕ್ತವಾದ ಮಾಸವೆಂದು ಹೇಳಲ್ಪಟ್ಟಿರುತ್ತೆ. ಆದರೆ ಅದರ ಪ್ರಮಾಣ ಹೇಳಲ್ಪಡಲಿಲ್ಲ. ಆದ್ದರಿಂದ ಗರ್ಭಿಣಿ ಮಾಸಾಧಿಪತಿಗಳು ॥ಜಯದೇವಃ॥ ॥ಶ್ಲೋಕ॥ ಕಲಿಲಪಿಂಡಾಂಕುರಾಸ್ಥಿ ಗಂಗೇರುಹಸ್ಮತಿ ಭೃಗೂದ್ವೇಗಜನ್ಮಾದಿ ಮಾಸಾತ್ಕ್ರಮಾತ್॥ ಭೃಗುಕುಜೇಜ್ಯಾರ್ಕ ಚಂದ್ರಾರ್ಕಿ ಚಂದ್ರಾತ್ಮಜೋದಯ ಶೀತಾಂಶು ಚಂಡಾಂಶವೋಧೀಶ್ವರಾಃ ॥೧೭॥ ತಾತ್ಪರ್ಯ ॥ ಗರ್ಭಮಾಸಾಧಿ ಪತಿಗಳನ್ನು ಹೇಳುತ್ತಾನೆ-ಪ್ರಥಮ ತಿಂಗಳಲ್ಲಿ ಕಲಿಲ, ಅರ್ಥಾತ್ - ಶುಕ್ರ ಶೋಣಿತ ಮಿಶ್ರಿತ-ಇದಕ್ಕೆ ಶುಕ್ರಸ್ವಾಮಿ, ಎರಡನೇ ತಿಂಗಳಲ್ಲಿ ಪಿಂಡ ಕಠಿಣವಾಗುತ್ತೆ - ಕುಜಸ್ವಾಮಿ, ಮೂರನೇ ತಿಂಗಳಲ್ಲಿ ಹಸ್ತಾದಿ ಅಂಗೋತ್ಪತ್ತಿ ಇದಕ್ಕೆ ಬೃಹಸ್ಪತಿ ಸ್ವಾಮಿ, ನಾಲ್ಕನೆ ತಿಂಗಳಲ್ಲಿ ಎಲಬುಗಳ ಉತ್ಪತ್ತಿಯಾಗುತ್ತೆ ಇದಕ್ಕೆ ಸೂರ್ಯಸ್ವಾಮಿ, ಐದನೇ ತಿಂಗಳಲ್ಲಿ ಚರ್ಮೋತ್ಪತ್ತಿಯಾಗುತ್ತೆ - ಇದಕ್ಕೆ ಚಂದ್ರ ಸ್ವಾಮಿ, ಆರನೆ ತಿಂಗಳಲ್ಲಿ ರೋಮೋತ್ಪತ್ತಿಯಾಗುತ್ತೆ - ಇದಕ್ಕೆ ಶನಿಸ್ವಾಮಿ, ಏಳನೇ ತಿಂಗಳಿನಲ್ಲಿ

ಚೈತನ್ಯ ಉತ್ಪತ್ತಿಯಾಗುತ್ತೆ - ಇದಕ್ಕೆ ಬುಧ ಸ್ವಾಮಿ, ಅಷ್ಟಮ ಮಾಸಕ್ಕೆ ಮಾತೃಭಕ್ಷಿತವಸ್ತು ನಾಲದ್ವಾರದಿಂದ ಶಿಶುವಿನ ಶರೀರಕ್ಕೆ ಹೋಗುತ್ತೆ. ಆ ತಿಂಗಳಿಗೆ ಲಗ್ನಾಧಿಪತಿಯಾದ ಗ್ರಹ ಸ್ವಾಮಿ, ನವಮ ಮಾಸದಲ್ಲಿ ಉದಭ್ರಮ ಅರ್ಥಾತ್ ಉದ್ವೇಜನ-ಚಂದ್ರಮ ಸ್ವಾಮಿ, ದಶಮ ಮಾಸಕ್ಕೆ ಪ್ರಸವಮಾಸ-ಇವಕ್ಕೆ ಸೂರ್ಯಸ್ವಾಮಿಯಾಗಿರುವನು. ಆದ್ದರಿಂದ ಕ್ರಮವಾಗಿ ೧೦ ತಿಂಗಳಿಗೂ ಗರ್ಭಿಣೀ ಮಾಸಾಧಿಪತಿಗಳಾಗುವರು. ಇವರಲ್ಲಿ ಪಾಪಗ್ರಹಗಳಿಂದ ಯೋಗ ಹುಟ್ಟಿದರೆ ಅವರಿಗೆ ಉಕ್ತವಾಗಿರುವ ಮಾಸಗಳಲ್ಲಿ ಅರಿಷ್ಟಕಾರಕರು ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಫಲ ಕೊಡುವರು.

ಆ ಮೇಲೆ ಹೇಳಲ್ಪಟ್ಟ ಯೋಗಗಳಲ್ಲಿ ಶುಭಗ್ರಹವೀಕ್ಷಣೆ ಇದ್ದರೆ, ಗರ್ಭಿಣೀಸ್ತ್ರೀ ರೋಗಪೀಡಿತಳಾಗಿ ವ್ಯಥೆಪಡುವಳೇ ಹೊರತಾಗಿ ಮರಣವನ್ನು ಹೊಂದುವುದಿಲ್ಲವೆಂದು ನಿಶ್ಚಯಿಸಬೇಕು, ಈ ವಿಷಯದಲ್ಲಿ ಪಾಪಗ್ರಹ ಕರ್ತರೀ ಯೋಗಬಲ ಶುಭಗ್ರಹವೀಕ್ಷಣಬಲ, ಇವೆರಡನ್ನು ಯೋಚಿಸಿ ಹೇಳತಕ್ಕದ್ದು. ಜಗನ್ಮೋಹನೆ ।।ನಾರದಃ।। ಪಾಪಮಧ್ಯಗತೌಸ್ಯಾತಾಂ ನಚಸದ್ಗ್ರಹವೀಕ್ಷಿತೌ ।। ಏಕಸ್ಥಾವಾ ಪೃಥಕ್ಸ್ಥೌವಾ ಮೃತಿಮಾಯಾತಿ ಗರ್ಭಿಣೀ । ಸೌಮ್ಯೈ ಸ್ಸುಬಲಿಭಿದೃಷ್ಟೌ ರೋಹಿಣೀ ಲಗ್ನಶೀತಗೂ ।।೧೮।। ಇದೇ ಅರ್ಥಕ್ಕೆ ಜಯದೇವನ ಸಮ್ಮತಿ ।।ಶ್ಲೋಕ।। ಖಲಖೇಟದ್ವಯ ಮಧ್ಯಗೌಯದಾ ಶನುಚುದ್ರೌ ಶುಭದೃಷ್ಟಿದೂರಿತೌ ।। ಯುಗಪದ್ವಾ ಪೃಥಗೇವವಾಧೂಃ ಸಹಗರ್ಭೇಣ ವಿಪದ್ಯತೇತದಾ ।।೧೯।। ಆದ್ದರಿಂದ ಮೇಲಿನ ಯೋಗ ದೃಷ್ಟಾಂತವಾದದ್ದೆಂದು ತಿಳಿಯತಕ್ಕದ್ದು.

ಮೂಲ।। ಕ್ರೂರೇಶಶಿನಶ್ಚತುರ್ಥಗೆ ಲಗ್ನಾದ್ವಾ ನಿಧನಾಶ್ರಿತೆಕುಜೆ ।। ಬಂಧ್ವಂತ್ಯಗಯೋಃ ಕುಜಾರ್ಕಯೋಃ ಕ್ಷೀಣೇಂದೌ ನಿಧನಾಯ ಪೂರ್ವವತ್ ।।

ಟೀಕು।। ಮೂರು ಮರಣಯೋಗಗಳನ್ನು ಹೇಳುತ್ತಾನೆ. ಶಶಿನಃ-ಚಂದ್ರ ನಿದ್ದ ರಾಶಿ ಮೊದಲುಗೊಂಡು, ಕ್ರೂರೇ-ಯಾವುದಾದರೂ ಒಂದು ಪಾಪಗ್ರಹ, ಚತುರ್ಥಗೇಸತಿ -ಚಂದ್ರನಿಗೆ ಚತುರ್ಥ ಸ್ಥಾನದಲ್ಲಿದ್ದು, ಕುಜೆ-ಮಂಗಳನು, ನಿಧನಾಶ್ರಿತೆ-ಅಷ್ಟಮದಲ್ಲಿದ್ದರೆ-೧ಯೋಗ, ಲಗ್ನಾದ್ವಾಲಗ್ನ ಮೊದಲುಗೊಂಡು ಚತುರ್ಥದಲ್ಲಿ ಯಾವುದಾದರು ಪಾಪಗ್ರಹವಿದ್ದು ಅಷ್ಟಮದಲ್ಲಿ ಅಂಗಾರಕನಿದ್ದರೆ ದ್ವಿತೀಯಯೋಗ, ಕುಜಾರ್ಕಯೋಃ-ಕುಜಸೂರ್ಯರು, ಬಂಧ್ವಂತ್ಯಗಯೋಃ- ಚತುರ್ಥ ದ್ವಾದಶದಲ್ಲಿದ್ದರೆ, ಅಂದರೆ, ಕುಜನು ಚತುರ್ಥದಲ್ಲು, ಸೂರ್ಯನು ದ್ವಾದಶದಲ್ಲಿದ್ದು, ಕ್ಷೀಣೇಂದೌ-ಚಂದ್ರನು ಕ್ಷೀಣನಾಗಿ ಅಷ್ಟಮ ರಾಶಿಯಲ್ಲಿದ್ದರೆ ೩ನೇ ಯೋಗ,

ಪೂರ್ವವತ್ - (ನಾರೀಗರ್ಭಯುತಾ ವಿಪದ್ಯತೆ ।।) ಎಂದು ಹೇಳಿದ ಪ್ರಕಾರ ಮೂರು ಯೋಗಗಳಲ್ಲಿಯೂ, ಮರಣಾಯ-ಗರ್ಭಿಣೀಮರಣಂ (ಭವತಿ-ಆಗುತ್ತದೆ). ಈ ಅರ್ಥಕ್ಕೆ ಜಯದೇವಃ ।। ಖಲಖೇಟೇಶಶಿನಃ ಸುಖಾಲಯೇ ತನುತೋವಾಷ್ಟ ಮಗೇಧರಾತ್ಮಜೆ ।। ವ್ಯಯತುರ್ಯಸ್ಥಿತಯೋಃ ಕುಜಾರ್ಕಯೋಃ ರ್ದ್ವಿಬಲೇಬ್ಜೇ ನಿಧನಂವದೇತ್ತದಾ ।।೨೯।।

ಮೂಲ।। ಉದಯಾಸ್ತಗಯೋಃ ಕುಜಾರ್ಕಯೋರ್ನಿಧನಂಶಸ್ತ್ರ ಕೃತಂವದೇ ತ್ತದಾ।।
ಮಾಸಾಧಿಪತೌನಿಪೀಡಿತೆ ತತ್ಕಾಲಂ ಸ್ರವಣಂ ಸಮಾಧಿ ಶೇತ್।।೯।।

ಅ ।। ಆದಾನ ಲಗ್ನವಂಶದಿಂದ ಗರ್ಭಿಣೀ ಶಸ್ತ್ರ ಚಿಕಿತ್ಸಾ ಮರಣ ಯೋಗವು ಹೇಳಲ್ಪಡುತ್ತೆ. ಟೀ।। ಕುಜಾರ್ಕಯೋಃ-ಅಂಗಾರಕ ಸೂರ್ಯರು, ಉದಯಾಸ್ತಗಯೋಃ-ಲಗ್ನದಲ್ಲೂ ಸಪ್ತಮದಲ್ಲೂ ಇದ್ದರೆ, ಅಂದರೆ ಕುಜನು ಆದಾನ ಲಗ್ನದಲ್ಲು ಸಪ್ತಮದಲ್ಲು ಸೂರ್ಯನಿದ್ದರೆ, ತದಾ-ಆವಾಗ, ಶಸ್ತ್ರಕೃತಂ-ಶಸ್ತ್ರಹೇತುವಾದ, ನಿಧನಂ-ಮರಣವನ್ನು, ವದೇತ್-ಹೇಳತಕ್ಕದ್ದು.

## ಗರ್ಭಪಾತಯೋಗಃ

ಭೌಮಾದಿ ಗ್ರಹಗಳು (ಯುದ್ಧಾದಿಗಳಲ್ಲಿ ಗೆದ್ದವರಾಗಿದ್ದರೂ, ಕೇತೂಲ್ಕಾ ಪಾತಾದಿಗಳಿಂದ ಪೀಡಿಸಲ್ಪಟ್ಟವರಾಗಿದ್ದರೂ, ಸೂರ್ಯ-ಚಂದ್ರರು ರಾಹುಕೇತುಗ್ರಸ್ತರಾಗಿದ್ದರೂ ಈ ರೀತಿಯಾಗಿ ಮಾಸಾಧಿಪತೌ-ವೃಕ್ಷ್ಯಮಾಣ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಮಾಸಾಧಿಪತಿ) ನಿಪೀಡಿತೇ-ನಿಷೇಕ ಕಾಲದಲ್ಲಿ ಪೀಡಿತನಾಗಿದ್ದರೆ ಆ ಗ್ರಹಾಧಿಪತಿಯಾದ ಮಾಸದಲ್ಲಿ, ಸ್ರವಣಂ-ಗರ್ಭಪಾತವು, ಸಮಾದಿಶೇತ್- ಹೇಳತಕ್ಕದ್ದು. ।।೯।। ಶ್ಲೋಕ।। ಜಯದೇವಃ ।। ಉದಯಾಸ್ತಗತಯೋರ್ಭೌಮ ಸೂರ್ಯಯೋಃ ಶಸ್ತ್ರಕೃನ್ಮೃತೀ ।। ಮಾಸಾದೌಚವಿಬಲೇ ತತ್ಕಾಲಂ ಸ್ಖಲಿತಂ ವದೇತ್ ।।೨೦।।

## ಗರ್ಭಪುಷ್ಟಿ ಯೋಗಃ

ಮೂಲ।। ಶಶಾಂಕಲಗ್ನೋಪಗತೈಶ್ಶುಭಗ್ರಹೈ ಸ್ತ್ರಿ ಕೋಣಜಾಯಾರ್ಥ ಸುಖಾಸ್ಪದಸ್ಥಿತೈಃ ।। ತೃತೀಯ ಲಾಭರ್ಕ್ಷಗತೈರಶೋಭನೈ ಸ್ಸುಖೀತು ಗರ್ಭೋ *ರವಿಣಾನಿರೀಕ್ಷಿತಃ ।।೧೦।।

* ಗುರುಣಾ ನಿರೀಕ್ಷಿತಃ - ಪಾಠಾಂತರ

ಅವತಾರಿಕೆ ।। ಇದುವರಿವಿಗೆ ಹೇಳಲ್ಪಟ್ಟ ದುರ್ಯೋಗಗಳಿಲ್ಲದೆ ಇರುವ ಆದಾನ ಲಗ್ನದಲ್ಲಿ ಗರ್ಭನಿಂತವರಿಗೆ ಗರ್ಭಪುಷ್ಟಿಯಾಗುವ ಯೋಗವನ್ನು ಹೇಳುತ್ತಾನೆ. ಟೀ।। ಶಶಾಂಕ ಲಗ್ನೋಪಗತ್ಯೈ-ಆದಾನಕಾಲದ ಚಂದ್ರನನ್ನಾಗಲೀ ಆದಾನಕಾಲದ ಲಗ್ನವನ್ನಾಗಲೀ ಹೊಂದಿರುವ, ಶುಭೈಃ-ಶುಭಗ್ರಹಗಳಾದ ಗುರು, ಶುಕ್ರ, ಪೂರ್ಣಚಂದ್ರ, ಶುದ್ಧ ಬುಧ ಗುರುಗಳಿಂದ, (ಅಥವಾ) ತ್ರಿಕೋಣ ಜಾಯಾರ್ಥ ಸುಖಾಸ್ಪದಸ್ಥಿತೈಃ - ತ್ರಿಕೋಣ, ನವಮ, ಪಂಚಮ ಸ್ಥಾನಗಳು, ಜಾಯಾ-ಸಪ್ತಮಸ್ಥಾನ, ಅರ್ಥ-ದ್ವಿತೀಯ, ಸುಖ-ಚತುರ್ಥಸ್ಥಾನ, ಆಸ್ಪದ-ದಶಮಸ್ಥಾನ ಈ ಸ್ಥಾನಗಳಲ್ಲಿ ಶುಭಗ್ರಹಗಳಿದ್ದು, ತೃತೀಯ ಲಾಭರ್ಕ್ಷಗತ್ಯೈ- ಚಂದ್ರನಿಗಾಗಲೀ ಲಗ್ನಕ್ಕಾಗಲೀ ತೃತೀಯೈಕಾದಶ ಸ್ಥಾನಗಳಲ್ಲಿ, ಅಶೋಭನೈಃ-ಪಾಪಗ್ರಹಗಳಿದ್ದರೂ, ಗರ್ಭಃ-ಗರ್ಭವು, ಸುಖೀ-ಪುಷ್ಟಿಯುಳ್ಳದ್ದು (ಭವೇತ್-ಆಗುತ್ತದೆ) ಚಂದ್ರನಾಗಲೀ, ಲಗ್ನವಾಗಲೀ, ರವಿಣಾ-ಸೂರ್ಯನಿಂದ, ನಿರೀಕ್ಷಿತಃ-ನೋಡಲ್ಪಟ್ಟರೆ ಗರ್ಭ ಪುಷ್ಟಿಯಾಗುವುದು. ಅಂದರೆ ಶುಭಗ್ರಹಗಳು ಲಗ್ನವನ್ನಾಗಲೀ, ಚಂದ್ರನನ್ನಾಗಲೀ ಹೊಂದಿದ್ದರೆ ಲಗ್ನಾಕ್ಕಾಗಲಿ ಚಂದ್ರನಿಗಾಗಲಿ ೯-೫, ೬-೨, ೪-೧೦ ಈ ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೂ, ತೃತೀಯೈಕಾದಶಸ್ಥಾನಗಳಲ್ಲಿ ಕ್ರೂರಗ್ರಹಗಳಿದ್ದರೂ ಲಗ್ನವಾಗಲೀ, ಚಂದ್ರನಾಗಲೀ ಸೂರ್ಯನಿಂದ ನೋಡಲ್ಪಟ್ಟರೆ, ಗರ್ಭ ಚೆನ್ನಾಗಿ ಪುಷ್ಟಿಯಾಗುವುದು. ಈ ಪ್ರಕಾರವಾಗಿಯೇ ಚಂದ್ರನಿಂದ ಗರ್ಭ ಪುಷ್ಟಿಯಾಗುವುದು. ಕೆಲವರು-ರವಿಣಾ ನಿರೀಕ್ಷಿತಃ ಎಂಬುವ ಪದಕ್ಕೆ ಗುರುಣಾ ನಿರೀಕ್ಷಿತಃ ಎಂದು ಪಾಠ ಹೇಳುವರು. ಈ ವಿಷಯದಲ್ಲಿ ಸಾರಾವಳಿಯಲ್ಲಿ ಶ್ಲೋಕ।। ಹೋರೇಂದು ಗತೈಸ್ಸೌಮ್ಯೈ ಸ್ತ್ರಿಕೋಣಜಾಯಾರ್ತ ಸುಖಾಸ್ಪದಸ್ಥೈರ್ವಾ ।। ಪಾಪೈಸ್ತ್ರಿಲಾಭಯಾತೈ ಸ್ಸುಖೀಗರ್ಭೋ ನಿರೀಕ್ಷಿತೋ ರವಿಣಾ ।। ಎಂದುಕ್ತವಾಗಿರುತ್ತೆ. ।।೨೨।। ಇದೇ ಅರ್ಥಕ್ಕೆ ಜಯದೇವಃ ।। ಜಾತಕ ಚಂದ್ರಿಕಾಯಾಂ ।।ಶ್ಲೋಕ।। ತನುಚಂದ್ರೋಪಗತೈಃ ಶುಭಗ್ರಹೈಃ ಸ್ಮರಖಾಂಬುದ್ರವಿಣತ್ರಿಕೋಣಗೈಃ ।। ಖಲಖೇಟೈಃ ಸಹಜಾಯಗೈರ್ಯುದಾ ಖಲು ಗರ್ಭೋಽಸ್ತಿ ಸುಖೀರವೀಕ್ಷಿತಃ ।।೨೩।। ಆದ್ದರಿಂದ ಸೂರ್ಯನಿಂದ ನೋಡಲ್ಪಡುವುದೇ ನಿಶ್ಚಿತವಾಯಿತು ।।೧೦।। ಮತ್ತು ಭಾರ್ಗವ ವಚನ ।। ಲಗ್ನಸ್ಯಚಂದ್ರಸ್ಯಚ ಸೌಮ್ಯಯೋಗೇ ಕೇಂದ್ರತ್ರಿಕೋಣೇಷು ಧನೇಚಸೌಮ್ಯೇ ಕ್ರೂರಗ್ರಹೇ ವಿಕ್ರಮ ಲಾಭಯಾತೇ ಗರ್ಭೋಽಸುಖೀದೇವ ಗುರೋರ್ನಿರೀಕ್ಷಣಾತ್ ।। ಮತ್ತು ಗ್ರಹ ಚೇಷ್ಟಾವಿಧಾನ ।। ಶುಭಖಗಸಹಿತೇ ಶಶಿನಿಚಲಗ್ನೇ ಧನುಸುಖಜಾಯಾಸ್ಪದ ಕೋಣಾಸ್ಥೆ ।। ಖಚರೇ ಶುಭದೇವಿಕ್ರಮಲಾಭರ್ಕ್ಷಗತೇಚಖಲೇ ಗುರುದೃಕ್ಕು ಭದಾ ।। ಮತ್ತು ಕೇರಳೀಯ ಸಂಹಿತೆಯಲ್ಲಿ ।।ಶ್ಲೋಕ।।

"ಹೋರಾಶಶಾಂಕ ಧನಕೇಂದ್ರ ತಪಸ್ಸುತಸ್ಥೈಸ್ಸೌಮ್ಯೈಸ್ತ್ರಿಲಾಭಕಲಿತ್ಯೈಃ ಖಚರೈಶ್ಚಪಾಪೈಃ ಗರ್ಭ್ಯಭಂ ಭಜನೇತಿ ವಿಚಾರಣಾಯಾಂ ದೇವೇಜ್ಯ ದೃಷ್ಟಿರಥ ಪುಷ್ಟಿಕರೀ ನಿಷೇಕೇ" ॥ ಈ ಮೂರು ವಚನಗಳಿಂದ ಗುರುದೃಷ್ಟಿಯೇ ಅವಶ್ಯಕವೆಂದು ತಿಳಿಯತಕ್ಕದ್ದು.

## ಪುಂಸ್ತ್ರೀ ಜನ್ಮಯೋಗಾಃ

ಮೂಲ॥ ಓಜರ್ಕ್ಷೇ ಪುರುಷಾಂಶಕೇಷು ಬಲಭಿರ್ಲಗ್ನಾರ್ಕ ಗುರ್ವಿಂದುಭಿಃ ಪುಂಜನ್ಮಪ್ರವದೇತ್ಸಮಾಂಶಕಗತೈರ್ಯುಗ್ಮೇಷುತೈರ್ಯೋಷಿತಃ ॥ ಗುರ್ವರ್ಕೌ ವಿಷಮೇನರಂ ಶಶಿಸಿತೌವಕ್ರಶ್ಚ ಯುಗ್ಮೇಸ್ತ್ರಿಯಂ ದ್ವ್ಯಂಗಸ್ಥಾ ಬುಧವೀಕ್ಷಣಾಚ್ಚಯಮಳೌ ಕುರ್ವಂತಿ ಪಕ್ಷೇಸ್ವಕೇ ॥೧೦॥

ಅವತಾರಿಕೆ ॥ ನಿಷೇಕ ಕಾಲದಲ್ಲಾಗಲೀ ಜನ್ಮ ಕಾಲದಲ್ಲಾಗಲೀ ಪ್ರಶ್ನಕಾಲದಲ್ಲಾಗಲೀ ಪುಂಸ್ತ್ರೀಜನ್ಮ ತಿಳಿಯುವ ಯೋಗ ಹೇಳಲ್ಪಡುತ್ತೆ.

ಟೀಕು॥ ಓಜರ್ಕ್ಷೆ - ಓಜರಾಶಿಗಳಲ್ಲಿ ಪುರುಷಾಂಶಕೇಷು-ಹಸಿರಾಶಿ ನವಾಂಶಗಳಲ್ಲಿ, ಬಲಿಭಿಃ-ಬಲಯುಕ್ತರಾದ, ಲಗ್ನಾರ್ಕಗುರ್ವಿಂದುಭಿಃ-ಲಗ್ನ, ಗುರು, ಇಂದ್ರ, ಸೂರ್ಯ ಇವರುಗಳಿಂದ, ಪುಂಜನ್ಮ-ಪುರುಷಜನ್ಮವನ್ನು ಪ್ರವದೇತ್-ಹೇಳತಕ್ಕದ್ದು. ಯುಗ್ಮೇಷು-ಸಮರಾಶಿಗಳಲ್ಲಿ, ಅಂದರೆ (೨-೪, ೬-೮, ೧೦-೧೨) ಸಮಾಂಶಕಗತೈಃ - (ಈ ೨-೪, ೬-೮, ೧೦-೧೨) ಸಮಾರಾಶಿ ನವಾಂಶೆಯಲ್ಲಿರುವ ಬಲಿಭಿಃ-ಬಲಯುಕ್ತರಾದ, ತೈ-ಆ ಲಗ್ನಾರ್ಕ ಗುರು ಚಂದ್ರರಿಂದ, ಯೋಷಿತಃ-ಸ್ತ್ರೀಜನ್ಮವನ್ನು ಹೇಳತಕ್ಕದ್ದು. ಈ ಮೇಲೆ ಹೇಳಲ್ಪಟ್ಟ ಲಗ್ನ ಗ್ರಹಗಳು ಸಮರಾಶಿಯಲ್ಲಿ ಕೆಲವರು, ವಿಷಮರಾಶಿಯಲ್ಲಿ ಕೆಲವರು ಈ ಪ್ರಕಾರ ಗ್ರಹಗಳು ಸಮರಾಶಿಯಲ್ಲಿ ಮಿಶ್ರವಾಗಿದ್ದರೆ ಅಧಿಕವಾಗಿ ಯಾವ ರಾಶಿಯಲ್ಲಿರುವರೋ ಆ ರಾಶಿಯಿಂದ ಪುಂಸ್ತ್ರೀ ನಿರ್ದೇಶ ಹೇಳಲ್ಪಡತಕ್ಕದ್ದು. ಅದು ಹೇಗೆಂದರೆ - ವಿಷಯಮರಾಶಿಯಲ್ಲಿ ಕೆಲವರು, ಸಮರಾಶಿಗಳಲ್ಲಿ ಕೆಲವರು ಇದ್ದು ಅದರಲ್ಲಿ ಪುಂಗ್ರಹವು ಬಲಿಷ್ಠವಾಗಿದ್ದರೆ ಪುಂಜನ್ಮವನ್ನು, ಗ್ರಹಗಳು ಬಲಿಷ್ಠರಾಗದಿದ್ದರೆ ಸ್ತ್ರೀ ಜನ್ಮವನ್ನು ಹೇಳತಕ್ಕದ್ದು. ಗುರ್ವರ್ಕೌ -ಬಲವಂತರಾದ ಬೃಹಸ್ಪತಿ ಸೂರ್ಯರು, ವಿಷಮೇ-ವಿಷಮ ಸಂಖ್ಯಾರಾಶಿಯಲ್ಲಿ, ಯಾವ ನವಾಂಶೆಯಲ್ಲಿದ್ದರೂ, ನರಂ-ಪುರುಷನ ಜನ್ಮವೆಂದು ತಿಳಿಯುವುದು. ಶಶಿಶುಕ್ರೌ-ಚಂದ್ರ ಶುಕ್ರರು, ವಕ್ರಶ್ಚ-ಅಂಗಾರಕನೂ ಈ ಮೂರು ಗ್ರಹಗಳು ಬಲವಂತರಾದರೆ ಸ್ತ್ರೀಯಂ-ಸ್ತ್ರೀ ಜನ್ಮವನ್ನು, ಕುರ್ವಂತಿ-ಮಾಡುತ್ತಾರೆ. ದ್ವ್ಯಂಗಸ್ಥಾಃ - ಈ ಮೇಲೆ ಹೇಳಲ್ಪಟ್ಟ

ಗ್ರಹಗಳೇ, ದ್ವಿದೇಹ ರಾಶಿಗಳಲ್ಲಿದ್ದು, ಬುಧವೀಕ್ಷಣಾತ್-ಬುಧ ದೃಷ್ಟಿಯಿಂದ, ಸ್ವಕೇಪಕ್ಷೇ - ಸ್ವಪಕ್ಷದಲ್ಲಿ ಅಂದರೆ, ಪುಂಸ್ತ್ರೀ ನವಾಂಶಗಳಲ್ಲಿ ಯಾವ ನವಾಂಶದಲ್ಲಿದ್ದರೋ ಆ ಪಕ್ಷದಲ್ಲಿ, ಯಮಳೌ-ಎರಡು ಮಕ್ಕಳನ್ನು, ಕುರ್ವಂಶಿ- ಮಾಡುತಲಿದ್ದಾರೆ. ಅಂದರೆ, ಮಿಥುನ ಕನ್ಯಾ, ಧನುಸ್ಸು, ಮೀನ ಈ ನಾಲ್ಕು ದ್ವಿದೇಹರಾಶಿಗಳು. ಅದರಲ್ಲಿ ಮಿಥುನ ಧನುಸ್ಸು ಪುರುಷರಾಶಿಯೇ ಆದ್ದರಿಂದ ಮಿಥುನ ಧನುರ್ನವಾಂಶೆಗಳಲ್ಲಿ ರವಿ ಬೃಹಸ್ಪತಿಗಳು ಬುಧನಿಂದ ನೋಡಲ್ಪಟ್ಟರೆ ಪುರುಷರಾಶಿಗಳೆಂದು ತಿಳಿಯತಕ್ಕದ್ದು. ಕನ್ಯಾ ಮೀನಗಳು ಸ್ತ್ರೀ ಸ್ವಭಾವ ರಾಶಿ ಗಳಾದ್ದರಿಂದ ಈ ರಾಶಿ ನವಾಂಶೆಯಲ್ಲಿ ಕುಜ, ಚಂದ್ರ, ಶುಕ್ರರು, ಬುಧದೃಷ್ಟಿ ಯುಳ್ಳವರಾದರೆ ಸ್ತ್ರೀಶಿಶುಗಳೆರಡೆಂದು ಹೇಳತಕ್ಕದ್ದು. ಇಲ್ಲಿ ದ್ವಿಸ್ವಭಾವ ರಾಶಿಗಳೆಂದು ಹೇಳಿರುವುದರಿಂದ, ಆ ನವಾಂಶಗಳು ಹೇಳಲ್ಪಡಲಿಲ್ಲ. ಈ ವರಾಹ ಮಿಹಿರಾಚಾರ್ಯನಿಂದಲೇ ಲಘುಜಾತಕದಲ್ಲಿ ಹೇಳಲ್ಪಟ್ಟಿರುವುದೇನೆಂದರೆ:- ॥ಶ್ಲೋಕ॥ ಬಲಿನೌ ವಿಷಮೇರ್ಕ್ಷೆ ಗುರೂನರಂ ಸ್ತ್ರಿಯಂಸಮಗೇಹೇ ಕುಜೇಂದುಸಿತಾಃ ॥ ಯಮಳೌ ದ್ವಿಶರೀರಾಂಶೆಷ್ವಿಂದುಜದೃಷ್ಟಾಸ್ಸ್ವಪಕ್ಷಸಮಂ ॥೨೩॥ ಎಂದು ಹೇಳಲ್ಪಟ್ಟಿರುತ್ತೆ. ಆದ್ದರಿಂದ ಸ್ವಭಾವರಾಶಿ ನವಾಂಶಗಳೆಂದು ಹೇಳಲ್ಪಡತಕ್ಕದ್ದು.

## ಪುರುಷ ಜನನಯೋಗಃ

ಮೂಲ॥ ವಿಹಾಯಲಗ್ನಂ ವಿಷಮರ್ಕ್ಷಸಂಸ್ಥ ಸೌರೋಪಿ ಪುಂಜನ್ಮ ಕರೋವಿ ಲಗ್ನಾತ್ ॥ ಪ್ರೋಕ್ತಗ್ರಹಾಣಾಮವ ಲೋಕ್ಯ ವೀರ್ಯಂ ವಾಚ್ಯಃ ಪ್ರಸೂತೌ ಪುರುಷೋಂಗನಾವಾ ॥೧೨॥

ಟೀಕು॥ ಪುರುಷಜನ್ಮಯೋಗ ಹೇಳಲ್ಪಡುತ್ತೆ. ಈ ಮೇಲೆ ಹೇಳಲ್ಪಟ್ಟ ಯೋಗಗಳಿಲ್ಲದೆ ಇರುವಾಗ, ಸೌರಃ-ಶನೈಶ್ವರನು, ಲಗ್ನಂ-ನಿಷೇಕ ಲಗ್ನವಾಗಲಿ, ಪ್ರಶ್ನಲಗ್ನವಾಗಲೀ, ವಿಹಾಯ-ಬಿಟ್ಟು, ವಿಷಮರ್ಕ್ಷಸಂಸ್ಥಃ-ಉಳಿದ ವಿಷಮ ಸ್ಥಾನಗಳೆಂದರೆ, ತೃತೀಯ, ಪಂಚಮ, ಸಪ್ತಮ, ನವಮ ಏಕಾದಶ ಸ್ಥಾನಗಳಲ್ಲೊಂದು ಸ್ಥಾನದಲ್ಲಿದ್ದರೆ, ಪುಂಜನ್ಮ ಕರಃ-ಪುರುಷಜನ್ಮವನ್ನುಂಟು ಮಾಡುವನು. ಪ್ರೋಕ್ತಗ್ರಹಾಣಾಂ - ಈ ಹೇಳಲ್ಪಟ್ಟ ಯೋಗಗಳಲ್ಲಿ ಗ್ರಹಗಳು, ವೀರ್ಯಂ- ಬಲವನ್ನು, ಅವಲೋಕ್ಯ-ವಿಚಾರಿಸಿ, ಪ್ರಸೂತೌ - ಪ್ರಸವಕಾಲದಲ್ಲಿ, ಪುರುಷಃ- ಪುರುಷನೆಂದು, ಅಂಗನಾವಾ-ಸ್ತ್ರೀ ಎಂದು, ವಾಚ್ಯಃ - (ಹುಟ್ಟುತ್ತದೆಂದು) ಹೇಳತಕ್ಕದ್ದು. ಯಾವಾಗ ಪುಂಸ್ತ್ರೀ ಜನ್ಮಯೋಗಗಳು ಎರಡು ಸಂಭವಿಸುತ್ತೋ ಆಗ ಯಾವಯೋಗ ಬಲಾಧಿಕವಾಗಿರುವುದೋ ಆ ಗ್ರಹ ನಿರ್ಮಿತವಾದ ಯೋಗಕ್ಕೆ ತಕ್ಕಂತೆ ಹೇಳತಕ್ಕದ್ದು ॥೧೨॥

ತಾತ್ಪರ್ಯ ॥ ಈ ಶ್ಲೋಕದಲ್ಲಿ ಪುಂಜನ್ಮಯೋಗ ೧, ಸ್ತ್ರೀಜನ್ಮಯೋಗ ೧ ಹೇಳಲ್ಪಟ್ಟಿರುತ್ತೆ. ಶನಿಯು ನಿಷೇಕಕ್ಕಾಗಲೀ, ಪ್ರಶ್ನಲಗ್ನಕ್ಕಾಗಲೀ, ೩-೫, ೭-೯, ೧೧ ಈ ಸ್ಥಾನಗಳಲ್ಲಿದ್ದರೆ ಪುರುಷ ಜನ್ಮಕರನಾಗುವನು. ಈ ಹೇಳಲ್ಪಟ್ಟ ಗ್ರಹಗಳಿಂದಲೇ ಬಲಾಬಲವನ್ನು ವಿಚಾರಮಾಡಿ ಪುರುಷನೆಂದು, ಸ್ತ್ರೀ ಗ್ರಹಗಳು ಬಲಿಷ್ಠರಾಗಿದ್ದರೆ ಸ್ತ್ರೀ ಜನ್ಮವೆಂದು ಹೇಳತಕ್ಕದ್ದು. ಮತ್ತು ಇದೇ ವಿಷಯವನ್ನೇ ಜನ್ಮಕಾಲಕ್ಕೂ ಗ್ರಹಬಲಾಬಲದಿಂದ ಪುರುಷಜನ್ಮ ಅಥವಾ ಸ್ತ್ರೀ ಜನ್ಮವೆಂದು ಹೇಳತಕ್ಕದ್ದು, ಈ ವಿಷಯದಲ್ಲಿ ಜಯದೇವಃ ॥ "ವಿಷಮರ್ಕ್ಷೇ ತನುತ ಸ್ತುನುಂವಿನಾರವಿಜೇವಾಸುತ ಜನ್ಮಚಾದಿಶೇತ್ ॥ ಅವಲೋಕ್ಯಗ್ರಹ ಜಂಬಲಂತತಃ ಪುರುಷಂವಾವನಿತಾಂ ವದೇದ್ಬುಧಃ ॥" ॥೧೨॥

## ನಪುಂಸಕ ಜನ್ಮಯೋಗಾಃ (ಷಟ್ಕ್ಲೀಬಯೋಗಾಃ)

ಮೂಲ॥ ಅನ್ಯೋನ್ಯಂ ಯದಿಪಶ್ಯತಶ್ಶಿರವೀ ಯದ್ವಾರ್ಕಿ ಸೌಮ್ಯಾವಪಿ । ವಕ್ರೋವಾಸವಮಂಗಂ ದಿನೇಶವಮಸವೋ ಚಂದ್ರೋದಯೌ ಚೇತ್ಸ್ಥಿತೌ॥ ಯುಗ್ಮೌಜರ್ಕ್ಷ ಗತಾವಪೀಂದು ಶಶಿಜೌ ಭೂಮ್ಯಾತ್ಮ ಜೇನೇಕ್ಷಿತೌ। ಪುಂಭಾಗೇ ಸಿತಲಗ್ನಶೀತಕಿರಣಾಷಟ್ ಕ್ಲೀಬಯೋಗಾಃಸ್ಮೃತಾಃ॥೧೩॥

ಅವತಾರಿಕೆ ॥ ಈ ಪದ್ಯದಲ್ಲಿ ಷಟ್ಕ್ಲೀಬಯೋಗ ಹೇಳಲ್ಪಡುತ್ತೆ. ಜಾತಕ ಗಳಲ್ಲಿ ಈ ಯೋಗವನ್ನು ತಪ್ಪದೇ-ಶೋಧನೆ ಮಾಡಬೇಕು. ಅಂದರೆ ಸ್ತ್ರೀ ಜನ್ಮ ಪುಂಜನ್ಮಯೋಗವಿಲ್ಲದಿರುವಾಗ ಇದು ಉಪಯೋಗವಾಗುತ್ತದೆ. ಟೀ॥ ಶಶಿ ರವೀ-ಚಂದ್ರಸೂರ್ಯರು (ರವಿಶಬ್ದಕ್ಕೆ ವ್ಯುತ್ಪತ್ತಿ, ರೂಯತೆಸ್ತೂಯತ । ಇತಿ ರವಿಃ-ಅಂದರೆ ಸ್ತೋತ್ರಮಾಡಲ್ಪಡುವವನು,) ಕ್ರಮವಾಗಿ, ಯುಗ್ಮೌಜರ್ಕ್ಷಗತೌ-ಯುಗ್ಮ-ಯುಗ್ಮಂತುಯುಗಳಂ ಯುಗಮಿತ್ಯಮರಃ ॥ ಯುಗ್ಮ ಜೋಡಿಯಾದದ್ದು, ಸಮವಾದದ್ದು, ಯುಗ್ಮರಾಶಿಗಳೆಂದರೆ ಮೇಷಾದಿಯಾಗಿ ೨-೪, ೬-೮, ೧೦-೧೨ ಈ ರಾಶಿಗಳಲ್ಲಿ ಎಲ್ಲಿಯಾದರು ಚಂದ್ರನಿದ್ದು ಓಜರ್ಕ್ಷ-ಓಜವೆಂದರೆ, ವಿಷಮ (ಬೆಸ) ಮೇಷಾದಿಯಾಗಿ ೧-೩, ೫-೭, ೯-೧೧ ಈ ರಾಶಿಗಳಲ್ಲಿ ಎಲ್ಲಿಯಾದರು ಸೂರ್ಯನಿದ್ದು, ಅನ್ಯೋನ್ಯಂ-ಒಬ್ಬರಿಗೊಬ್ಬರು ಅಂದರೆ ಸಮರಾಶಿಯಲ್ಲಿದ್ದ ಚಂದ್ರನನ್ನು ವಿಷಮರಾಶಿಯಲ್ಲಿದ್ದ ಸೂರ್ಯನು ನೋಡುತ್ತಲಿದ್ದರೆ ಆ ಕಾಲದಲ್ಲಿ ನಪುಂಸಕ ಜನ್ಮವಾಗುವುದು. ಇದು ಒಂದು ವಿಧವಾದ ಕ್ಲೀಬಯೋಗ. ಅರ್ಕಿಸೌಮ್ಯಾ-ಅರ್ಕಿ ಅಂದರೆ ಅರ್ಕಸ್ಯಾಪತ್ಯಂ ಪುಮಾನ್ ಅರ್ಕಿ-ಶನಿ, ಸೌಮ್ಯ-ಸೋಮಸ್ಯಾಪತ್ಯಂ ಪುಮಾನ್ ಸೌಮ್ಯಃ - ಬುಧನು, ಅಂದರೆ ಶನಿ

ಬುಧರು, ಅಂದರೆ ಶನಿಯು ಸಮರಾಶಿಗಳಾದ ೨-೪, ೬-೮, ೧೦-೧೨ರಲ್ಲಿದ್ದು ಬುಧನು ವಿಷಮರಾಶಿಗಳಾದ ೩-೫, ೭-೯, ೧೧, ರಲ್ಲಿದ್ದು ಪರಸ್ಪರ ನೋಡುತ್ತಲಿದ್ದರೆ ೨ನೇ ವಿಧವಾದ ನಪುಂಸಕ ಜನ್ಮಯೋಗ. ವಕ್ರಃ-ಆರೋವಕ್ರೋ ಮಹೀಸುತ ಇತಿ ನಿಘಂಟು ।। ಸದಾ ವಕ್ರಚಾರಿಯಾದವನು ಅಂದರೆ ಮಂಗಳನು, ವಿಷಮರಾಶಿಗಳಾದ ೩-೫, ೭-೯, ೧೧ರಲ್ಲಿದ್ದು, ಸಮಗಃ-ಸಮರಾಶಿಯೆಂದರೆ, ೨-೪, ೬-೮, ೧೦-೧೨ರಲ್ಲಿ ರವಿಯನ್ನು ಪರಸ್ಪರ ನೋಡುತ್ತಲ್ಲಿದ್ದರೆ ಇದು ಮೂರನೆ ವಿಧವಾದ ಕ್ಲೀಬಜನನಯೋಗ. ಚಂದ್ರೋದಯೌ-ಚಂದ್ರ ಲಗ್ನಗಳು, ಅಸಮೇ-ಬೆಸರಾಶಿಯಲ್ಲಿ, ಸಂಸ್ಥಿತೌ-ಇದ್ದು, ಭುಮ್ಯಾತ್ಮಜೇನ- ಸಮರಾಶಿಸ್ಥಿತನಾದ ಅಂಗಾರಕನಿಂದ, ಈ ಕ್ಷಿತೌಯದಿ-ಈಕ್ಷಿಸಲ್ಪಟ್ಟರೆ ಇದೊಂದು ಕ್ಲೀಬಯೋಗ. ಇದು ೪ನೇ ವಿಧವಾದ ನಪುಂಸಕ ಜನ್ಮಯೋಗ. ಇಂದು ಶಶಿಜೌ-ಚಂದ್ರ ಬುಧರು, ಯುಗ್ಮೌಜರ್ಕ್ಷಗತೌ- ಸಮ ವಿಷಮರಾಶಿಗಳಲ್ಲಿದ್ದರೆ ಅಂದರೆ ಚಂದ್ರನು ಸಮರಾಶಿಗಳಾದ ವೃಷಭ, ಕರ್ಕ, ವೃಶ್ಚಿಕ, ಮಕರ, ಮೀನ ರಾಶಿಗಳಲ್ಲೊಂದು ರಾಶಿಯಲ್ಲಿದ್ದು ಬುಧನು ವಿಷಮರಾಶಿಗಳಾದ ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ರಾಶಿಗಳಲ್ಲೂ ಇರುವವರಾಗಿ ಯಾವ ರಾಶಿಯಲ್ಲಾದರೂ ಇರುವ ಭೂಮ್ಯಾತ್ಮಜೇನ-(ಭೂಮಪುತ್ರನಾದ) ಕುಜನಿಂದ, ಈಕ್ಷಿತೌಜೇತ್-ನೋಡಲ್ಪಟ್ಟರೆ, ಇದು ೫ನೇ ವಿಧವಾದ ನಪುಂಸಕ ಜನ್ಮಯೋಗ. ಸಿತಲಗ್ನಶೀತ ಕಿರಣಾಃ - ಸಿತ - ಶುಕ್ರ, ಲಗ್ನ-ಜನ್ಮಲಗ್ನ,, ಶೀತಕಿರಣಾಃ-ಚಂದ್ರ ಈ ಮೂರು ಗ್ರಹಗಳು ಯಾವ ರಾಶಿಯೊಳಗಾದರೂ ಪುಂಭಾಗೆ - ಪುಂಗ್ರಹ ನವಾಂಶೆಯೊಳಗಿದ್ದರೆ, ಇದೊಂದು ೬ ನೇ ವಿಧವಾದ ನಪುಂಸಕ ಜನ್ಮಯೋಗವು. ಈ ಪ್ರಕಾರವಾಗಿ ಕ್ಲೀಬಯೋಗಾಃ - ಷಂಡಜನ್ಮಯೋಗಗಳು, ಷಟ್-ಆರುವಿಧವಾಗಿ ಸ್ಮೃತಾಃ-ಸ್ಮರಿಸಲ್ಪಟ್ಟಿವೆ (ಯುಕ್ತವಾಗಿವೆ).

ಈ ವಿಷಯದಲ್ಲಿ ।।ಶ್ಲೋಕ।। ಬಾದರಾಯಣಃ।। ಅನ್ಯೋನ್ಯಂ ರವಿಶಶಿನೌ ವಿಷಮರ್ಕ್ಷಸಮರ್ಕ್ಷ ಗೌನಿರೀಕ್ಷೇತೇ।। ಇಂದುಜಲವಿಪುತ್ರೌವಾ ತಥೈವಗರ್ಭಂ ನಪುಂಸಕಂಕುರುತಃ ।।೨೫।। ವಕ್ರೋವಿಷಮೇಸೂರ್ಯಸ್ಸಮಗಸ್ತ್ವೇವಂ ಪರಸ್ಪರಾ ಲೋಕಾತ್ ।। ವಿಷಮರ್ಕ್ಷೇಲಗ್ನೇಂದೂ ಸಮರಾಶಿಗಃ ಕುಜೋವಲೋಕಯತಿ ।।೨೬।। ಬುಧಚಂದ್ರೌಕುಜವೃಷ್ಟೌ ವಿಷಮರ್ಕ್ಷಸಮರ್ಕ್ಷಗೌ ತಥೈವೋಕ್ತಾಃ।। ಓಜನವಾಂಶಕಸಂಸ್ಥಾ ಲಗ್ನೇಂದುಸಿತಾಸ್ತಥೈವೋಕ್ತಾಃ ।।೩೭।। ಈ ನಪುಂಸಕ ಜನ್ಮಯೋಗಗಳೂ, ಪುಂಸ್ತ್ರೀ ಜನ್ಮಯೋಗಗಳೂ ಇಲ್ಲದಿರುವಾಗ ಹೇಳಲ್ಪಡತಕ್ಕದ್ದು. ಪುಂಜನ್ಮಯೋಗ, ಸ್ತ್ರೀಜನ್ಮಯೋಗವಿರುವಾಗ ಈ ನಪುಂಸಕ ಜನ್ಮಯೋಗವಿದ್ದರೆ ಈ ಯೋಗ ಫಲಕ್ಕೆ ಬರುವುದಿಲ್ಲ. ಆದ್ದರಿಂದ ಹೇಳಕೂಡದು. ಈ ವಿಷಯದಲ್ಲಿ

ಪರಾಶರ ಸಂಹಿತೆಯಲ್ಲಿ ॥ಶ್ಲೋಕ॥ ಓಜನಾ ಜಗತೌ ದಿನೇಶಶಶಿನೌವಾಸೌಮ್ಯಗೌಕಾಕಥಾ। ಭೌಮಾರ್ಕ್ಯೌಯದಿ ಪಶ್ಯತೋ ನಿಜಭತೋನ್ಯೋನ್ಯಂ ಹಿಷಂಡೋದ್ಭವಃ॥ ಓಜೇಲಗ್ನವಿಧೂ ಸಮಾಸಮಗತೌ ಚೇಚ್ಚಂದ್ರ ಸೌಮ್ಯೌಕುಜಃ। ಪಶ್ಯೇದ್ವಾವಿಷಮಾಂಶಕೇಶಶಿಸಿತೌ ಲಗ್ನಂಚ ಷಂಡಾಸ್ತ್ರಯಃ॥೨೮॥ ಇದಲ್ಲದೆ ವೀರಸಿಂಹಾವಲೋಕನದಲ್ಲಿ ॥ಶ್ಲೋಕ॥ ಕ್ಲೀಬಾ ಜಾರೋದ್ವೇಷ್ಯಃ ಸರ್ವಜಿತೋ ಬಂಧುಭಿಃ ಪರಿತ್ಯಕ್ತಃ । ಸೌರಾದಿತ್ಯೇಂದು ಸುತ್ತೈರೇಕಸ್ಥೈರ್ಜಾಯತೆ ಪುರುಷಃ ॥೨೯॥ ಜ್ಞೋನೀಚರವಿಭವನೇ ದುಃಖಾಂ ತಂ ವೀಕ್ಷತಾಂಗಮಸುರೂಪಂ॥ ಅನಾಚಾರಶೀಲಮಕಾಂತಂ ನಪುಂಸಕಂ ಭೌಮಸಂದೃಷ್ಟಃ ॥೩೦॥ ಕ್ಲೀಬೊವಿಪನ್ನದುಷ್ಟಃ ಪರಾರ್ಥಚೇಷ್ಟಃ ಸದುಃಖಿತೋಮೂಢಃ॥ ಮಕರೇದಾನವಪೂಜ್ಯೆ ಕ್ಲೇಶಸಹೋಜಾಯತೇ ಪುರುಷಃ॥ ತಾ॥ ರವಿಬುಧಶನಿಯೋಗ ಷಂಡತ್ವಂ ಸಂಭವೇತ್॥ ರವಿಗ್ರಹಸ್ಥಿತಭೌಮದೃಷ್ಟ ಬುಧಜಸಿತ ಷಂಡತ್ವಂಸಂಭವತ್ ॥ ಈ ಯೋಗಗಳು ಮೇಲೆ ಹೇಳಿರುವ ಯೋಗಗಳಲ್ಲಿ ಸೇರಲಿಲ್ಲ. ಈ ವಿಷಯ ಪ್ರಾಚೀನ ಗ್ರಂಥದಲ್ಲಿ ಹೇಳಿರುವುದರಿಂದ ಇಲ್ಲಿ ಉದಹರಿಸಿರುತ್ತೆ.

## ದ್ವಿಕತ್ರಿಕ ಪ್ರಸವಯೋಗಃ

ಮೂಲ॥ ಯುಗ್ಮೇಚಂದ್ರಸಿತೌ ತಥಾಜಭವನೇ ಸ್ಯುರ್ಜ್ಞಾರಜೀವೋದಯಾ
ಲಗ್ನೇಂದೂನ್ನನಿರೀಕ್ಷಿತೌಚಸಮಗೌ ಯುಗ್ಮೇಷುವಾಪ್ರಾಣಿನಃ ॥
ಕುರುಷ್ಯೇ ಮಿಥುನಂಗ್ರಹೋದಯಗರ್ತಾ ದ್ವ್ಯಂಗಾಂಶಕಾ ಪಶ್ಯತಿ
ಸ್ವಾಂಶೆಜ್ಞೇತ್ರಿತಯಂ ಜ್ಞಗಾಂಶಕವಶಾದ್ಯುಗ್ಮಂತ್ವ ಮಿಶ್ರೈಃಸಮಂ ॥

ಟೀಕು॥ ದ್ವಿಕತ್ರಿಕ ಪ್ರಸವ ಜನನಯೋಗಃ ॥ ಚಂದ್ರಸಿತೌ-ಚಂದ್ರ ಶುಕ್ರರು ಯುಗ್ಮಸಮರಾಶಿಯಲ್ಲಿ ತಥಾ - ಆ ಪ್ರಕಾರವೇ, ಜ್ಞಾರಜೀವೋದಯಾಃ- ಬುಧ ಕುಜ ಗುರು ಲಗ್ನವು, ಓಜಭವವೇ ವಿಷಮರಾಶಿಯಲ್ಲಿ, ಸ್ಯುಃ - ಇರುವದಾಗಿದ್ದರೆ ಮಿಥುನಂ-ಒಂದು ಹೆಣ್ಣು ಒಂದು ಗಂಡು (ಅವಳಿ ಮಕ್ಕಳನ್ನು ಕುರ್ಯುಃ- ಹುಟ್ಟಿಸುವರು, ಅಂದರೆ ಯುಗ್ಮರಾಶಿಗಳಾದ ವೃಷಭ, ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ ಮೀನರಾಶಿಗಳಲ್ಲಿ ಚಂದ್ರ ಶುಕ್ರರಿದ್ದು, ವಿಷಮರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ರಾಶಿಗಳಲ್ಲಿ ಯಾವುದಾದರೂ ಲಗ್ನಗಳಾಗಲೀ ಅಲ್ಲಿ ಬುಧ, ಕುಜ, ಬೃಹಸ್ಪತಿ ಈ ಮೂರು ಗ್ರಹಗಳು ವಿಷಮರಾಶಿಗಳಲ್ಲಿದ್ದರೆ ಆ ಕಾಲದಲ್ಲಿ ಒಂದೇ ಗರ್ಭದಲ್ಲಿ ಒಂದು ಪುಂಶಿಶು,

ಒಂದು ಸ್ತ್ರೀಶಿಶು ಹುಟ್ಟುತ್ತದೆ. ಲಗ್ನೇಂದೂ-ಲಗ್ನವು ಚಂದ್ರನು, ಸಮಗೌ-ಸಮರಾಶಿಯಾಗಿ ಅಲ್ಲಿದ್ದು, ನೃನಿರೀಕ್ಷಿತೌ-ಪುರುಷ ಗ್ರಹಗಳಾದ ರವಿ, ಕುಜ, ಗುರುಗಳಿಂದ ನೋಡಲ್ಪಟ್ಟರೆ ಸ್ತ್ರೀಪುರುಷ ದ್ವಂದ್ವ ಜನನವಾಗುವುದು. ವಾ-ವಾ ಯೆಂಬುವ ವಿಕಲ್ಪದಿಂದ, ತಏವ-ಆ ಬುಧ ಕುಜ ಗುರು ಲಗ್ನವು, ಯುಗ್ಮೇಷು-ಸಮರಾಶಿಯಲ್ಲಿ ಸ್ಥಿತಾಃ-ಇದ್ದರೆ, ಪ್ರಾಚೀನಃ ಬಲವಂತರಾಗಿದ್ದರೆ, ತಥಾಪಿ-ಹಾಗೆಯೇ, ಮಿಥುನಂ-ಸ್ತ್ರೀಪುರುಷ ದ್ವಂದ್ವ ಜನನವನ್ನು, ಕುರ್ಯುಃ-ಹುಟ್ಟಿಸುವರು.

## ತ್ರಿಕಪ್ರಸವಯೋಗಃ

ಗ್ರಹೋದಯಗತಾ - ಗ್ರಹ ಸಕಲ ಗ್ರಹಗಳು, ಉದಯ-ಲಗ್ನವನ್ನು, ಗತಾ-ಹೊಂದಿ, ದ್ವ್ಯಂಗಾಂಶಕಾ-ದ್ವಿಸ್ವಭಾವರಾಶಿ ನವಾಂಶವನ್ನು ಅಂದರೆ ದ್ವಿಸ್ವಭಾವರಾಶಿ ನವಾಂಶದಲ್ಲಿದ್ದ ಗ್ರಹಗಳು ಲಗ್ನವನ್ನು, ಸ್ವಾಂಶೆ-ಸ್ವನವಾಂಶೆ ಯಲ್ಲಿರುವ, ಜ್ಞ-ಬುಧನು, ಪಶ್ಯತಿಸತಿ-ನೋಡಿದರೆ, ತ್ರಿತಯಂ-ಮೂರು ಶಿಶುಗಳು ಹುಟ್ಟುವವು. ಆ ಮೂರು ಶಿಶುಗಳಲ್ಲಿ ಯುಗ್ಮಂ-ಎರಡು ಶಿಶುಗಳು, ಜ್ಞಾಂಶಕವಶಾತ್-ಬುಧನವಾಂಶೆಯಿಂದ, ಸ್ತ್ರೀಯಂತಾದರೂ ಪುರುಷನಂತಾದರೂ ಹೇಳತಕ್ಕದ್ದು. ಅಂದರೆ ಬುಧನಿದ್ದ ನವಾಂಶೆ ಸ್ತ್ರೀ ಪುರುಷ ಚಿಹ್ನೆಗಳಲ್ಲಿ ಯಾವ ಚಿಹ್ನೆಯಾಗಿರುವುದೋ ಆ ಚಿಹ್ನೆಯುಕ್ತವಾದ ಶಿಶುವು ಎರಡಲ್ಲಿ ತದ್ವ್ಯತಿರಿಕ್ತವಾದ ಚಿನ್ಹೆಯಾದರೆ ಗಂಡು ಶಿಶು ಒಂದು, ಮತ್ತೊಂದು ಶಿಶುವು ಹೆಣ್ಣು ಎಂದು ಹೇಳತಕ್ಕದ್ದು. ಅದು ಹೇಗೆಂದರೆ:- ಮಿಥುನ ನವಾಂಶದಲ್ಲಿದ್ದ ಬುಧನು ದ್ವಿಸ್ವಭಾವರಾಶಿ ನವಾಂಶೆಯಲ್ಲಿದ್ದ ಗ್ರಹ ಲಗ್ನವನ್ನು ನೋಡಿದರೆ, ಗಂಡು ಶಿಶುಗಳೆರಡು ಒಂದು ಹೆಣ್ಣುಶಿಶು ಜನನವಾಗುವುದೆಂದು ಹೇಳತಕ್ಕದ್ದು. ಕನ್ಯಾ ನವಾಂಶಗತನಾದ ಬುಧನು ದ್ವಿಸ್ವಭಾವರಾಶಿ ನವಾಂಶೆಯಲ್ಲಿದ್ದ ಗ್ರಹಲಗ್ನವನ್ನು ನೋಡಿದರೆ ಎರಡು ಕನ್ಯಾಗಳು ಒಂದು ಪುರುಷನೂ ಹುಟ್ಟುವ ಯೋಗವೆಂದು, ಈ ರೀತಿಯಾಗಿ ಹೇಳತಕ್ಕದ್ದು. ಅಮಿಶ್ರೈಸ್ಸಮಂ-ಗ್ರಹಲಗ್ನದಲ್ಲಿ ಬುಧನು, ದ್ವಿಸ್ವಭಾವರಾಶಿ ನವಾಂಶಗಳಲ್ಲಿ ಕೆಲವು ಗ್ರಹಗಳು ಸ್ತ್ರೀ ನವಾಂಶವನ್ನು, ಕೆಲವರು ಪುರುಷನವಾಂಶವನ್ನು ಹೊಂದಿ ಇದ್ದರೆ ಎಲ್ಲಾ ಗ್ರಹಗಳು ಸಮರಾಶಿ ನವಾಂಶೆಗಳಲ್ಲಿದ್ದರೆ ಮೂರು ಶಿಶುಗಳು ಸಮ ಚಿಹ್ನೆಗಳುಳ್ಳದ್ದೆಂದು ಹೇಳತಕ್ಕದ್ದು. ಅದು ಹೇಗೆಂದರೆ:- ಉದಾಹರಣೆ. ಮಿಥುನ ನವಾಂಶೆಯಲ್ಲಿದ್ದ ಬುಧನು ಮಿಥುನ ಧನುರ್ನವಾಂಶೆಯಲ್ಲಿದ್ದ ಗ್ರಹಗಳನ್ನು ನೋಡಿದರೆ ೩ ಪುರುಷಶಿಶುಗಳು ಹುಟ್ಟುವವು. ಕನ್ಯಾ ನವಾಂಶೆಯಲ್ಲಿದ್ದ ಬುಧನು ಕನ್ಯಾ ಮೀನ ನವಾಂಶೆಯಲ್ಲಿದ್ದ ಗ್ರಹಗಳನ್ನು ನೋಡಿದರೆ ಮೂರು ಸ್ತ್ರೀ ಶಿಶುಗಳು ಹುಟ್ಟುವವು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಸಮರಾಶೌ ಶಶಿಸಿತಯೋರ್ವಿಷಮೇ

ಗುರುವಕ್ರಸೌಮ್ಯಲಗ್ನೇಷು।। ಯೋಗೇಸ್ಮಿನ್ ಗರ್ಭಗತಂ ನೂನಂ ಮಿಥುನಂತುವಿಜ್ಞೇಯಂ ।।೩೨।। ಲಗ್ನೇಂದೂವಾಸಮಗೌ ಪುಂಗ್ರಹ ದೃಷ್ಟೌಚ ಮಿಥುನಜನ್ಮಕರೌ ।। ಉದಯಜ್ಞವಕ್ರಗುರುವೊ ಬಲಿನಸ್ಸಮರಾಶಿಗಾಸ್ತಥೈವೋಕ್ತಾಃ ।।೩೩।। ದ್ವಿಶರೀರಾಂಶಕಯುಕ್ತಾನ್ ಗ್ರಹಾನ್ವಿಲಗ್ನಂಚ ಪಶ್ಯತೀಂದುಸುತಃ ।। ಕನ್ಯಾಂಶೆದ್ವೇಕನ್ಯೇ ಪುರುಷಶ್ಚ ನಿಷಿಚ್ಯತೇಗರ್ಭೇ ।।೩೪।। ಮಿಥುನಾಂಶೆ ಕನ್ಯೆ ಕಾದ್ವೌಪುರುಷೌತ್ರಿತಯಮೇವಸ್ಯಾತ್ ।। ಮಿಥುನಾಂಶಸ್ಥಶ್ಚ ಯದಾಪುರುಷತ್ರಿತಯಂತದಾಗರ್ಭೇ ।।೩೫।। ಕನ್ಯಾಮೀನಾಂಶಸ್ಥಾನ್ ವಿಹಗಾನುದಯಂಯುವತಿಭಾಗಗತಾಃ ।। ಪಶ್ಯತಿಶೀತಗುತನಯಃ ಕನ್ಯಾತ್ರಿತಯಂ ತದಾಗರ್ಭೇ ।।೩೬।। ಎಂದು ಸ್ಪಷ್ಟವಾಗಿರುವುದರಿಂದ ಈ ವಿಷಯ ಚೆನ್ನಾಗಿ ಪರಿಶೋಧಿಸಿ ತಿಳಿದುಕೊಳ್ಳತಕ್ಕದ್ದು.

## ಜರಾವೇಷ್ಟಿತಪಿಂಡ ಜನನಯೋಗಃ

ಮೂಲ।। ಧನುರ್ಧರಸ್ಯಾಂತ್ಯ ಗತೇವಿಲಗ್ನೆಗ್ರಹೈಸ್ತದಂಶೋಪಗತೈರ್ಬಲಿಷ್ಠೈಃ।। ಜ್ಞೇನಾರ್ಕಿಣಾ ವೀರ್ಯಯುತೇನ ದೃಷ್ಟೇಸಂತಿಪ್ರಭೂತಾ ಅಪಿಕೋಶ ಸಂಸ್ಥಾಃ ।।೧೫।।

ಟೀಕು।। ಜರಾವೇಷ್ಟಿತಪಿಂಡಜನನಯೋಗಃ।। ಧನುರ್ಧರಸ್ಯ-ಧನೂರಾಶಿಯ, ಅಂತ್ಯಗತೇ-ಅಂತ್ಯನವಾಂಶವು, ವಿಲಗ್ನೆ-ಲಗ್ನವಾಗುವಾಗ, ತದಂಶೋಪಗತೈಃ-ಯಾವ ರಾಶಿಯಲ್ಲಿಯಾದರೂ ಆ ಧನೂರಾಶಿಯ ನವಾಂಶದಲ್ಲಿ ಬಲಿಷ್ಠೈಃ-ಸ್ಥಾನಾದಿ ಷಡ್ಬಲಯುಕ್ತರಾದ, ಗ್ರಹೈಃ-ಸೂರ್ಯಾದಿ ಗ್ರಹಗಳಿಂದಲೂ, ವೀರ್ಯಯುತೇನ-ಬಲವಂತನಾದ, ಜ್ಞೇನ-ಬುಧನಿಂದ, ಅರ್ಕಿಣಾ-ಶನಿಯಿಂದ, ದೃಷ್ಟೇ-ಲಗ್ನವು ನೋಡಲ್ಪಟ್ಟರೆ, ಪ್ರಭೂತಾಃ-ಅನೇಕವಾದ, ಕೋಶಸಂಸ್ಥಾಃ-ಜರಾವೇಷ್ಟಿತ ಶರೀರಗಳು ಗರ್ಭಗತವಾಗಿರುವುದು. ಅಂದರೆ ಬೆಕ್ಕು, ನಾಯಿ, ಹಂದಿ, ಹುಲಿ, ಕರಡಿ, ಸಿಂಹ ಮೊದಲಾದವುಗಳ ಜಾತಿಗಳಿಗೆ ಈ ಶ್ಲೋಕ ಅನ್ವಯಿಸುತ್ತದೆ. ಮನುಷ್ಯರಿಗೆ ಉಪಯೋಗವಿಲ್ಲ.

## ಗರ್ಭಮಾಸಾಧಿಪತಯಃ

ಮೂಲ।। ಕಲಿಲಘನಾಂಕುರಾಸ್ಥಿ ಚರ್ಮಾಂಗಜಚೇತನತಾಃ । ಸಿತಕುಜಸೂರ್ಯ ಚಂದ್ರಾರ್ಕಿಬುಧಾಃಪರತಃ ।। ಉದಯಪಚಂದ್ರ ಸೂರ್ಯನಾಥಾಃ । ಕ್ರಮಶೋಗದಿತಾಭವಂತಿ ಶುಭಾ ಶುಭಂಚ ಮಾಸಾಧಿಪತೇಸ್ಸದೃಶಂ ।।೧೬।।

ಟೀಕು।। ಗರ್ಭದಾನಕಾಲ ಮೊದಲುಗೊಂಡು ಪ್ರತಿಮಾಸಕ್ಕೂ ಗರ್ಭಗತ ಪ್ರಾಣಿಗೆ ಸ್ವಭಾವವನ್ನು ಗರ್ಭಮಾಸಾಧಿಪತಿಗಳನ್ನು ಹೇಳುತ್ತಾನೆ. ಗರ್ಭಾದಾನಕಾಲ ಮೊದಲುಗೊಂಡು ಪ್ರಥಮ ದ್ವಿತೀಯಾದಿ ಮಾಸಗಳಲ್ಲಿ ಗರ್ಭಕ್ಕೆ ಕಲಿಲ ಘನತ್ವಾದಿ ಸ್ವಭಾವ ಉಂಟಾಗುತ್ತೆ. ಆ ಪ್ರಥಮಾದಿ ಮಾಸಗಳಿಗೆ ಕ್ರಮವಾಗಿ ಶುಕ್ರಕುಜಾದಿಗಳು ಅಧಿಪತಿಗಳಾಗುವರು. ಉದಾಹರಣೆ-ಗರ್ಭ ಪ್ರಥಮ ಮಾಸದಲ್ಲಿ ಕಲಿಲಂ-ಶುಕ್ರಶೋಣಿತ ಮಿಶ್ರವಾದದ್ದು ಬುದ್ಬುದಾಕಾರ ಉಂಟಾಗುವುದು. ಆ ಮಾಸಕ್ಕೆ, ಸಿತಃ-ಶುಕ್ರ ಅಧಿಪತಿ. ಎರಡನೇ ತಿಂಗಳಲ್ಲಿ ಘನ-ಕಠಿಣವಾದ ಮಾಂಸವಾಗುವುದು, ಆ ಮಾಸಕ್ಕೆ-ಕುಜಃ-ಅಂಗಾರಕನಧಿಪತಿ. ಮೂರನೆಯ ತಿಂಗಳಲ್ಲಿ, ಅಂಕುರ-ಅವಯವಾಂಕುರವಾಗುವುದು, ಆ ತಿಂಗಳಿಗೆ ಜೀವಃ-ಬೃಹಸ್ಪತಿಯಧಿಪತಿ. ನಾಲ್ಕನೇ ತಿಂಗಳಲ್ಲಿ ಅಸ್ಥಿ-ಎಲುಬುಗಳು ಹುಟ್ಟುವುದು, ಆ ಮಾಸಕ್ಕೆ ಸೂರ್ಯ, ರವಿಯಧಿಪತಿ. ಐದನೇ ತಿಂಗಳಿನಲ್ಲಿ, ಚರ್ಮ-ಚರ್ಮ ಉತ್ಪತ್ತಿಯಾಗುವುದು, ಆ ತಿಂಗಳಿಗೆ-ಚಂದ್ರ-ಚಂದ್ರನಧಿಪತಿ. ಆರನೇ ತಿಂಗಳಿನಲ್ಲಿ, ಅಂಗಜ-ರೋಮಗಳು-ಕೇಶಗಳು ಉತ್ಪತ್ತಿಯಾಗುವುದು. ಮತ್ತು ಶರೀರಾವಯನ ಉತ್ಪತ್ತಿಯಾಗುವುದು. ಆ ಮಾಸಕ್ಕೆ ಅರ್ಕಿ-ಶನಿ ಅಧಿಪತಿ. ಏಳನೇ ತಿಂಗಳನಲ್ಲಿ-ಚೇತನತಾ-ಜ್ಞಾನೇಂದ್ರಿಯಗಳು-ಉತ್ಪತ್ತಿಯಾಗುವುದು, ಆ ಮಾಸಕ್ಕೆ ಬುಧಃ-ಬುಧನಧಿಪತಿ *ಪರತಃ-ಅಷ್ಟಮ ನವಮ ದಶವು ಮಾಸಗಳಲ್ಲಿ ಕ್ರಮಶಃ--ಕ್ರಮವಾಗಿ, ಉದಯಪಚಂದ್ರ ಸೂರ್ಯನಾಥಾಃ-ಉದಯಪ- ಗರ್ಭಾದಾನ ಲಗ್ನಾಧಿಪತಿ, ಚಂದ್ರ ಸೂರ್ಯರು ಅಧಿಪತಿಗಳಾಗುವರು. ಈ ವಿಷಯದಲ್ಲಿ ಲಘುಜಾತಕದಲ್ಲಿ ।।ಶ್ಲೋಕ।। ಅಶನೋದ್ವೇಗಪ್ರಸವಾಃ ಪರತೋಲಗ್ನೇಶ ಚಂದ್ರ ಸೂರ್ಯಾಣಾಂ ।। ಯೆಂದುಕ್ತವಾಗಿರುವುದರಿಂದ, ಅಷ್ಟಮ ನವಮ ಮಾಸಗಳಲ್ಲಿ ಅಶನೋದ್ವೇಗ ಪ್ರಸವ ಮೊದಲಾದ ಸ್ವಭಾವಗಳಿಗೆ ಕ್ರಮವಾಗಿ ಆದಾನ ಲಗ್ನಾಧಿಪತಿ ಚಂದ್ರ ಸೂರ್ಯರು ಅಧಿಪತಿಗಳಾಗುವರು. ಅದು ಹೇಗೆಂದರೇ- ಎಂಟನೇ ತಿಂಗಳಿನಲ್ಲಿ ಗರ್ಭದಲ್ಲಿದ್ದು ಜಂತು (ಪ್ರಾಣಿ) ತಾಯಿ ಭುಂಜಿಸಿದ ಅನ್ನಾದಿಗಳನ್ನು ನಾಳಮಾರ್ಗವಾಗಿ ಗರ್ಭಸ್ಥ ಪ್ರಾಣಿಯ ದೇಹಕ್ಕೆ ಸಂಚರಿಸುವುದು. ಮಾತೃದೇಹಕ್ಕೂ ಗರ್ಭಸ್ಥಪ್ರಾಣಿ ದೇಹಕ್ಕೂ ರಕ್ತಸಂಚಾರ ಶ್ವಾಸಸಂಚಾರವಿರುವುದು. ಆ ತಿಂಗಳಿಗೆ ಗರ್ಭಲಗ್ನಾಧಿಪತಿ ಯಾವ ಗ್ರಹವೋ ಆ ಗ್ರಹ ಅಧಿಪತಿ. ಇದು ನಿಶ್ಚೈಸುವುದು ಬಹು ಕಷ್ಟತರವಾಗಿರುವುದು. ನವಮ ಮಾಸದಲ್ಲಿ ಉದ್ವೇಗಃ - ಪ್ರಸವೋದ್ವೇಗಗಳುಂಟಾಗುವುದು, ಆ ತಿಂಗಳಿಗೆ ಚಂದ್ರನಧಿಪತಿ. ದಶಮಮಾಸದಲ್ಲಿ, ಪ್ರಸವಃ-ಪ್ರಸೂತಿಯಾಗುವುದು. ಆ ದಶಮ ಮಾಸಕ್ಕೆ ಸೂರ್ಯನಧಿಪತಿ, ಈ ವಿಷಯದಲ್ಲಿ ಹೋರಾಸಾರದಲ್ಲಿ ।।ಶ್ಲೋಕ।।

* ಬುಧನು ಪ್ರಜ್ಞಾಕಾರಕನಾದ್ದರಿಂದ ಪ್ರಜ್ಞೆಯುಂಟಾಗುವುದು.

ಕಲಿಲಂಪ್ರಥಮೇಮಾಸಿ ತನ್ಮಾಸಾಧಿಪತಿರ್ಭೃಗುಃ ॥ ದ್ವಿತೀಯಮಾಸಪೊಭೌಮಃ ಗರ್ಭಪಿಂಗಾಕ್ಷಬೀಜವತ್ ॥೩೭॥ ಗರ್ಭಾಂಕುರಂ ತೃತೀಯೇಸ್ಯಾತ್ತನ್ಮಾಸಾಧಿಪತಿರ್ಗುರುಃ ॥ ಮಜ್ಜಾಸ್ಥಿಸಂಭವೋಮಾಸಿ ಚತುರ್ಥೇ ಭಾಸ್ಕರೋಧಿಪಃ ॥೩೮॥ ಪಂಚಮೇಮಾಸಿ ಸೋಮೇಶತ್ವಜ್ಮೇಜೋ ರಕ್ತಸಂಭವಃ॥ ಸರ್ವಾಂಗಸಂಭವಃಷಷ್ಠೇ ತನ್ಮಾಸಾಧಿಪತಿಃಶನಿಃ ॥೩೯॥ ಜ್ಞಾನೇಂದ್ರಿಯಯುತಃ ಪಶ್ಚಾತ್ಸಪ್ತಮೇಬುಧ ಈಶ್ವರಃ॥ ಭವದೇಶೋಷ್ಟಮೇಮಾಸೀ ಕ್ಷುತ್ತೃಷ್ಣಾಸಂಭ್ರಮೋಭವೇತ್ ॥೪೦॥ ಉದ್ವೇಗಿ ಗರ್ಭಸಂಸ್ಥಶ್ಚ ಮಾಸೇಶೋನವಮೇಶಶೀ ॥ ಪ್ರಸೂತಿರ್ದಶಮೇಮಾಸಿ ಮಾಸೇ ಶೋಭಾಸ್ಕರಸ್ಮೃತಃ ॥೪೧॥ ಎಂದು ಮಾಸಾಧಿಪತಿಗಳನ್ನು ಹೇಳಿರುತ್ತೆ. ಇದೇ ವಿಷಯದಲ್ಲಿ ಲಘುಜಾತಕದಲ್ಲಿ ॥ಶ್ಲೋಕ॥ತಾ॥ ಕಲಿಲಘನಾಂಕುರಾಸ್ಥಿತ್ವಗ್ರೋಮಸ್ಮೃತಿಸಮುದ್ಭವಾಃಕ್ರಮಶಃ ॥ ಮಾಸೇಷುಶುಕ್ರಕುಜಜೀವ ಸೂರ್ಯಚಂದ್ರಾರ್ಕಿಸೌಮ್ಯಾನಾಂ ॥೪೨॥ ಅಶನೋದ್ವೇಗಪ್ರಸವಾಃ ಪರತೋಲಗ್ನೇಶಚಂದ್ರಸೂರ್ಯಾಣಾಂ॥ ಇಲ್ಲಿ ಯಮುನಾಚಾರ್ಯನು ಪ್ರಥಮ ಮಾಸಾಧಿಪತಿ ಕುಜನು, ದ್ವಿತೀಯ ಮಾಸಾಧಿಪತಿ ಶುಕ್ರನೆಂದು ಹೇಳಿರುತ್ತಾರೆ. ಅದು ಹೇಗೆಂದರೆ :- ಶ್ಲೋಕ ॥ ಕುಜಾಸ್ಸುಜಜ್ಜೀವರವೀಂದುಸೌರ ಶಶಾಂಕಲಗ್ನೇಂದು ದಿವಾಕರಾಣಾಂ ॥೪೩॥ ಎಂದು ಶುಭಾಶುಭಂ-ಶುಭಾಶುಭಫಲಗಳು, ಮಾಸಾಧಿಪತೇಃ- ಗರ್ಭಮಾಸಾಧಿಪತಿಗೆ, ಸದೃಶಂ-ಯೋಗ್ಯತೆಗೆ ತಕ್ಕಹಾಗೆ, ಭವತಿ-ಆಗುತ್ತದೆ. ಅಂದರೆ ಗರ್ಭಾದಾನ ಕಾಲದಲ್ಲಿ ಯಾವ ಮಾಸಾಧಿಪತಿಯಾದ ಗ್ರಹವು, ಮಾಸಾಧಿ ಪತೌನಿಪೀಡಿತೇ ತತ್ಕಾಲಂ ಸ್ರವಣಂ ಸಮಾದಿಶೇತ್ ॥ ಎಂದು ಮೊದಲೇ ಗರ್ಭಸ್ರಾವ ಯೋಗದಲ್ಲಿ ಹೇಳಿರುತ್ತೆ. ಯಾವ ಮಾಸಾಧಿಪತಿ, ಪೀಡಿತನಾಗಿರುವನೋ, ಆ ತಿಂಗಳಲ್ಲಿ ಗರ್ಭಪತನವಾಗುವುದು. ಮಾಸಾಧಿಪತಿಗಳು ನಿರ್ಮಲರಾಗಿದ್ದರೆ ಗರ್ಭಕ್ಕೆ ಪುಷ್ಟಿಯಾಗುವುದು. ಈ ವಿಷಯದಲ್ಲಿ ॥ಶ್ಲೋಕ॥ ಲಘುಜಾತಕೆ॥ ಕಲುಷೈಃಪೀಡಾಪತನಂ ನಿಪೀಡಿತೈಃ ನಿರ್ಮಲೈಃಪುಷ್ಟಿಃ ಎಂದು ಹೇಳಲ್ಪಟ್ಟಿರುತ್ತೆ. ॥೧೬॥ ಮತ್ತು ಇದೇ ವಿಷಯದಲ್ಲಿಯೇ ಗರ್ಭೋಪನಿಷತ್ತಿನಲ್ಲಿ ಹೇಳಿರುವ ಅಭಿಪ್ರಾಯ ವೇದಪ್ರಮಾಣ್ಯವಾದ್ದರಿಂದ ಪ್ರಸಂಗತ್ವೇನ ಸೂಚಿಸಿರುತ್ತೆ.

ತತ್ರಾಪಿ ಕಾಲವಿಶೇಷ ನಿಯಮಮಾಹ ॥ ಋತುಕಾಲೆ ಪ್ರಯೋಗ ಏಕ ರಾತ್ರೋಷಿತಂ ಕಲಿಲಂಭವತಿ ಸಪ್ತರಾತ್ರೋಷಿತಂಬುದ್ಬುದಂ ಭವತ್ಯರ್ಧ ಮಾಸಾಭ್ಯಂತರೇಣ ಪಿಂಡೋಭವತಿ ಮಾಸಾಭ್ಯಂತರೇಣ ಕಠಿನೋಭವತಿ ಮಾಸದ್ವಯೇನ ಶಿರಃಕರುತೆ ಮಾಸತ್ರಯೇಣ ಪಾದಪ್ರದೇಶೋಭವತಿ ಅಥ

ಚತುರ್ಥೇಮಾಸೇಂಗುಲ್ಯ ಜಠರಕಟಿಪ್ರದೇಶೋಭವತಿ ಪಂಚಮೇಮಾಸೆ ಪೃಷ್ಠವಂಶೋ ಭವತಿ ಷಷ್ಠೇಮಾಸೇ ನಾಸಾಕ್ಷಿಣಿಶ್ರೋತ್ರಾಣಿಭವಂತಿ ಸಪ್ತಮೇಮಾಸೇ ಜೀವೇನ ಸಂಯುಕ್ತೋ ಭವತ್ಯಷ್ಟಮೇಮಾಸೇ ಸರ್ವಸಂಪೂರ್ಣೋಭವತಿ ಅಥ ನವಮೇಮಾಸೆ ಸರ್ವಲಕ್ಷಣ ಸಂಪೂರ್ಣೋಭವತಿ ಪೂರ್ವಜಾತೀಃ ಸ್ಮರತಿಕೃತಾಕೃತಂಚ ಕರ್ಮ್ರಭವತಿ ಶುಭಾ ಶುಭಂಚವಿಂದತಿ ॥ ಮತ್ತು ವರಾಹಮಿಹಿರ ಮತಕ್ಕೂ ಯವನಾಚಾರ್ಯ ಮತಕ್ಕೂ ವ್ಯತ್ಯಾಸವಿರುವುದೇನೆಂದರೆಃ- ಕುಜಾಸ್ಪುಜಜ್ಜೀವ ರವೀಂದು ಸೌರಶಶಾಂಕ ಲಗ್ನೇಂದು ದಿವಾಕರಾಣಾಂ ॥ ಮಾಸಾಧಿಪತ್ಯಪ್ರಭವೋ ನಚೈಷಾಂ ಜಯೋಪಘಾತಾತ್ರಹವದ್ಭ ವಂತಿ ॥ತಾ॥ ಕುಜ, ಶುಕ್ರ, ಗುರು, ರವಿ, ಚಂದ್ರ, ಶನಿ, ಚಂದ್ರ, ಲಗ್ನ, ಚಂದ್ರ, ರವ್ಯಂತ ಕ್ರಮವಾಗಿ ೧೦ ತಿಂಗಳಿಗೆ ಮಾಸಾಧಿಪತಿಗಳಾಗುತ್ತಾರೆ. ಮತ್ತು ಪ್ರಥಮಾದಿ ಮಾಸಗಳಲ್ಲಿ ಗರ್ಭವೃದ್ಧಿಸ್ಥಿತಿ ಯಾವ ಪ್ರಕಾರವೆಂದರೆ ಃ- ಶ್ಲೋಕ ॥

ಆದ್ಯೇಕಮಾಸೇ ಕಲಿಲಂದ್ವಿತೀಯೇ । ಪೇಶೀ ತೃತೀಯೆಪಿಭವಂತಿಶಾಖಾಃ ॥
ಅಸ್ಥೀನ್ಯಥಸ್ನಾಯುಸಿರಾಶ್ಚತುರ್ಥೇ ಮಜ್ಜಾತುಚರ್ಮಾಣ್ಯಪಿ ಪಂಚಮೇಚ ॥
ಷಷ್ಠೇತ್ವಸೃಗ್ಲೋಮನಖಾಯು ಕೃಚ್ಚಚೇತಸ್ಥಿತಾಸ್ಸಪ್ತಮುಮಾಸಚೇಷ್ಟಾಃ ॥
ತೃಷ್ಣಾಶನಾಸ್ವಾದನಮಷ್ಟಮೇಸ್ಯಾತ್ಪೂರ್ವಾಪರಾರ್ಧ ನವಮೇರತಿಶ್ಚ ।
ಸ್ರೋತೋಭಿರುದ್ಘಾಟಿತ ಪೂರ್ಣದೇಹೊ ಗರ್ಭೋರ್ಕಮಾಸೆ ದಶಮೇಪ್ರಸೂಯತೆ॥

ಇದೇ ವಿಷಯದಲ್ಲಿ ಗರ್ಭೋತ್ಪತ್ತಿ ಕಾಲದ ಸ್ಥಿತಿಯಿಂದ ಹುಟ್ಟುವ ಶಿಶುವಿನ ಲಕ್ಷಣ-ತತ್ರಶುಭಾಶುಭಮಿಶ್ರ್ಃ । ಕರ್ಮಭಿರಧಿವಾಸಿತಾ ವಿಷಯವೃತ್ತಿಃ ॥ ಗರ್ಭಾವಾಸೇನಿಪತತಿ । ಸಂಯೋಗೋ ಶುಕ್ರಶೋಣಿತಯೋಃ । ಮಿಥುನಸ್ಯಮನೋಭಾವೋ । ಯಾದೃಕ್ಪ್ರಬಲಸ್ಯ ಸಂಭವತ್ರಿ ಶ್ಲೇಷ್ಮಾದ್ರಿಭಿಶ್ಚದೋಷೈ। ಸ್ತತ್ತುಲ್ಯಗುಣೋನಿಷಕ್ತಸ್ಯ ॥ ಯಾದೃಕ್ಪತಿಸ್ತು । ತತ್ತುಲ್ಯಬಲಗುಣಂಸುತಂ ಸಮಾಧತ್ತೆ॥ ಪಿತೃಜನನೀಸಾದೃಶ್ಯಂರವೇಃ ಶಶಾಂ ಕಸ್ಯ ಬಲಸ್ಯಯೋಗಾತ್ ॥ ಶುಭಾಶುಭಮಿಶ್ರ ಕರ್ಮಮ್ವಕ್ಕುತಃ । ಕರಣಗಳು ದ್ರವಸಿ ಶುಕ್ಲಶೋಣಿತ ರೂಪದಿಂದ ಗರ್ಭಕಮಲವನ್ನು ಪ್ರವೇಶಿಸುವವು. ಆ ಸ್ತ್ರೀ ಪುರುಷರ ಅಂತಃಕರಣ ಮನೋಭಾವ ಯಾವ ಪ್ರಕಾರ ಪ್ರಬಲವಾಗಿರುತ್ತೋ ಅದಕ್ಕನುಸಾರವಾಗಿಯೂ ಮಾತಾಪಿತೃಗಳ ಮಿಶ್ರಗುಣಗಳಿಂದ ಕೂಡಿ ತತ್ವಧಾತು ಸಂಮಿಶ್ರ ಪರಿಪಾಕದಿಂದಲೂ ಆ ಶಿಶುಪ್ರಕ್ರಿಯಾ ರೂಪಗುಣ ವಿಲಕ್ಷಣವನ್ನುಂಟಾಗಿರುತ್ತೆ. ಬೀಜಾವಾಪಕಾಲದ ರವಿಚಂದ್ರರ ಚಾರದಿಂದ ಮಾತಾಪಿತೃಗಳ ಗುಣವು ಶಿಶುವಿಗೆ ಉಂಟಾಗುವುದೆಂದು ತಿಳಿಯಬೇಕು.

# ಗರ್ಭಮಾಸಾಧಿಪತಿ ವಶಾತ್ ಗರ್ಭವೃದ್ಧಿಸ್ಥಿತಿ ಪದಕಂ

| ಮಾಸ ಸಂಖ್ಯೆ ಮಾಸಾಧಿ | ಗರ್ಭಸ್ಥಿತಿ | ಗರ್ಭವೃದ್ಧಿ ಪ್ರಕಾರ |
|---|---|---|
| ೧ ಶುಕ್ರ | ಕಲಿಲ (ಶುಕ್ಲ + ಶೋಣಿತ) | ಬುದ್ಬುದಾಕಾರವಾಗಿರುವುದು |
| ೨ ಕುಜ | ಕಠಿಣವಾಗುತ್ತೆ | ಮಾಂಸದ ಪಿಂಡವಾಗುವುದು ಶಿರಸ್ಸುತ್ಪತ್ತಿ |
| ೩ ಗುರು | ಅಂಕುರವಾಗುತ್ತೆ | ಅವಯವಾಂಕುರವಾಗುವುದು ಪಾದಪ್ರದೇಶ ಉಂಟಾಗುವುದು |
| ೪ ಸೂರ್ಯ | ಗರ್ಭವೃದ್ಧಿ | ಎಲುಬುಗಳು ಹುಟ್ಟುವುದು ಬೆರಳು ಜಠರ ಕಟಿಪ್ರದೇಶ ಉಂಟಾಗುತ್ತೆ. |
| ೫ ಚಂದ್ರ | | ಚರ್ಮ ಉತ್ಪತ್ತಿ ಆಗುವುದು ಪೃಷ್ಠ ವಂಶೋತ್ಪತ್ತಿ |
| ೬ ಶನಿ | ಅಂಗಜೋತ್ಪತ್ತಿ | ರೋಮ, ಲೋಮ, ನಖಾದಿಗಳು ತ್ಪತ್ತಿ, ಮೂಗು, ಕಣ್ಣು, ಕಿವಿ |
| ೭ ಬುಧ | ಚೈತನ್ಯ | ಜ್ಞಾನೇಂದ್ರಿಯಗಳ ಉತ್ಪತ್ತಿ ಜೀವ ಸಂಯುಕ್ತವಾಗುತ್ತೆ. |
| ೮ ಗರ್ಭಾದಾನ ಲಗ್ನಾಧಿಪತಿ | ಅಶನೋದ್ವೇಗ | ತಾಯಿ ಭುಂಜಿಸಿದ ಆಹಾರವು ನಾಳ ಮೂಲಕ ಶಿಶುವಿನ ಉದರಕ್ಕೆ ಪ್ರವೇಶಿಸಿ ದೇಹಪುಷ್ಟಿಯನ್ನು ಕೊಡುತ್ತದೆ ಮತ್ತು ರಕ್ತಶ್ವಾಸ ಸಂಚಾರವಾಗುತ್ತದೆ. |
| ೯ ಚಂದ್ರ | ಪ್ರಸವೋದ್ವೇಗ | ಸರ್ವಾಂಗ ಸಂಪೂರ್ಣವಾಗುತ್ತೆ ಸರ್ವಲಕ್ಷಣಸಂಪೂರ್ಣ ವಾಗುವುದು. ಪೂರ್ವಜಾತಿಸ್ಮರಣೆಉಂಟಾಗುವುದು ಶುಭಾಶುಭತ್ವ ತಿಳಿದುಕೊಳ್ಳುತ್ತವೆ. |
| ೧೦ ಸೂರ್ಯ<br>೧೧ ಆದಾನ<br>೧೨ ಲಗ್ನಾಧಿಪತಿ | ಪ್ರಸವವಾಗುವ ಕಾಲ | ಪ್ರಸವವಾದ ಮೇಲೆ ಪ್ರಪಂಚದ ಅಜ್ಞಾನ ಮುಚ್ಚಿಕೊಳ್ಳುತ್ತದೆ. |

## ಅಧಿಕಾಂಗಮೂಕ ಜನನಯೋಗಃ

ಮೂಲ|| ತ್ರಿಕೋಣಗೇಜ್ಞೇವಿಬಲೈ ಸ್ತಥಾಪರೈರ್ಮುಖಾಂಘ್ರಿಹಸ್ತೈರ್ದ್ವಿಗುಣೈ ಸ್ತದಾಭವೇತ್ || ಅವಾಗ್ಗವೀಂ ದಾವಶುಭೈರ್ಭಸಂಧಿಗೈ ಶ್ಶುಭೇಕ್ಷಿತ ಶ್ಚೇತ್ಕುರತೇಗಿರಂಚಿರಾತ್ ||೧೭||

ಟೀಕು|| ಅಧಿಕಾಂಗಯೋಗಃ || ಜ್ಞೇ-ಬುಧನು, ತ್ರಿಕೋಣಗೆ - ಲಗ್ನಕ್ಕೆ, ನವಮ ಪಂಚಮ ಸ್ಥಾನದಲ್ಲಿದ್ದು, ತತಃ-ಆ ಬುಧನಿಗಿಂತ, ವಿಬಲೈಃ-ಬಲಹೀನರುಗಳಾದ, ಅಪರೈಃ-ಉಳಿದ ಗ್ರಹಗಳಿಂದ ಗರ್ಭಸ್ಥನು, ಮುಖಾಂಘ್ರಿಹಸ್ತೈಃ-ಮುಖವಾದ ಹಸ್ತಗಳಿಂದ, ದ್ವಿಗುಣಃ-ದ್ವಿಗುಣದ ಒಂದೇ ತಲೆಯುಳ್ಳ ಪ್ರಾಣಿಯು, ಭವೇತ್-ಆಗುತ್ತದೆ. ಕೆಲವರು ಬುಧನು ತ್ರಿಕೋಣದಲ್ಲಿದ್ದರೆ ಎಂಬುವ ಪದಕ್ಕೆ ಮೂಲತ್ರಿಕೋಣ ಸ್ಥಾನದಲ್ಲಿದ್ದರೆಂದು ಅರ್ಥಮಾಡಿರುವರು. ಅದು ಯುಕ್ತವಲ್ಲ. ||ಶ್ಲೋಕ|| ಬಲಹೀನೈಗ್ರಹಸ್ಸರ್ವೈಃ ನವಪಂಚಮಗೆ ಬುಧೆ || ದ್ವಿಗುಣಾಂಘ್ರಿ ಶಿರೋಹಸ್ತೋ ಭವತ್ಯೇಕೋದರಸ್ತಥಾ ||೪೪|| ಎಂದು ಗರ್ಗಸಂಹಿತೆ ಯಲ್ಲಿ ಹೇಳಲ್ಪಟ್ಟಿರುತ್ತೆ. ಆದ್ದರಿಂದ ಇಲ್ಲಿ ತ್ರಿಕೋಣ ಶಬ್ದಕ್ಕೆ ನವಮ ಪಂಚಮ ಸ್ಥಾನಗಳೆಂದೇ ಅರ್ಥವಾಗುತ್ತೆ. ಅಂದರೆ ಲಗ್ನಕ್ಕೆ ಪಂಚಮಸ್ಥಾನದಲ್ಲಿ ಬುಧನು ಬಲಿಷ್ಠನಾಗಿದ್ದು, ಉಳಿದ ಗ್ರಹಗಳೆಲ್ಲರೂ ಬುಧನಿಗಿಂತ ಬಲಹೀನರಾಗಿದ್ದರೆ ಆ ಕಾಲದಲ್ಲಿ ಅಧಿಕಾರಂ ಜನನವಾಗುತ್ತೆ.

## ಮೂಕಜನನ ಯೋಗಃ

ಗವಿ-ವೃಷಭದಲ್ಲಿ ಚಂದ್ರನಿದ್ದು, ಭಸಂಧಿಗೈ-ಕರ್ಕಾಟಕ ವೃಶ್ಚಿಕ ಮೀನ ರಾಶಿಗಳ ಅಂತ್ಯ ನವಾಂಶಗಳಲ್ಲಿ ಅಶುಭೈಃ-ಪಾಪಗ್ರಹಗಳಿದ್ದರೆ, ಅವಾಕ್-ಗರ್ಭಸ್ಥಶಿಶುವು ಮೂಗನಾಗುವನು. ಅಂದರೆ ವೃಷಭದಲ್ಲಿ ಚಂದ್ರನಿದ್ದು, ಕರ್ಕಾಟಕ ವೃಶ್ಚಿಕ ಮೀನಾಂತ್ಯ ನವಾಂಶೆಯಲ್ಲಿ ಪಾಪಗ್ರಹಗಳಿದ್ದು ಯಾವ ಲಗ್ನವಾದಾಗ್ಯೂ ಮೂಕಜನನವಾಗುವುದು. ಈ ಭಸಂಧಿಗಳಲ್ಲಿರುವ ಪಾಪಗ್ರಹಗಳಿಗೆ, ಶುಭೇಕ್ಷಿತಶ್ಚೇತ್-ಶುಭಗ್ರಹ ದೃಷ್ಟಿಯಿದ್ದರೆ, ಚಿರಾತ್--ಬಹುಕಾಲದ ನಂತರ, ಗಿರಂ-ವಾಕ್ಕು, ಕುರುತೇ-ಆಡುತ್ತಾನೆ. ಅಂದರೆ ಮೇಲೆ ಹೇಳಿದ ಯೋಗದಲ್ಲಿ ಕರ್ಕವೃಶ್ಚಿಕ ಮೀನಾಂತ್ಯ ನವಾಂಶೆಯಲ್ಲಿರುವ ಪಾಪಗ್ರಹಗಳಿಗೆ ಶುಭದೃಷ್ಟಿ ಇದ್ದರೆ ಬಹುಕಾಲದ ನಂತರ ಮಾತನಾಡುವುದಕ್ಕೆ ಪ್ರಾರಂಭಿಸುತ್ತಾನೆ. ಅಥವಾ ಮಾತು ಬರುತ್ತೆ. ಇದರಲ್ಲಿ ಪಾಪಗ್ರಹದ ಬಲ ಹೆಚ್ಚಾಗಿ ಶುಭಗ್ರಹ ಬಲಹೀನವಾಗಿದ್ದರೆ ಬಹುಕಾಲ ಕಳೆದರೂ ಮಾತು ಬರುವುದಿಲ್ಲ. ಆದರೆ ಪಾಪಗ್ರಹಕ್ಕಿಂತ ಶುಭಗ್ರಹ ಬಲವೇ ಹೆಚ್ಚಾಗಿದ್ದರೆ ಮಾತು ಬರುತ್ತೆ ಈ ವಿಷಯದಲ್ಲಿ ||ಶ್ಲೋಕ||

ಗರ್ಗಸಂಹಿತೆಯಲ್ಲಿ ।। ಕುಳೀರಾಳೀರ್ಝುಷಾಂತ್ಯಸ್ಥೇ ಪಾಪೈಶ್ಚಂದ್ರೇ ವೃಷೋಪಗೆ।। ಮೂಕಃಪಾಪೇಕ್ಷಿತೇ ಸೌಮ್ಯೈಶ್ಚಿರೇಣಲಭತೇಗಿರಂ।। ಮಿಶ್ರದೃಷ್ಟೇ ಯಥಾವೀರ್ಯಂ ಫಲಂಬೋಧ್ಯಂ ಮನೀಷಿಣಾ ।।೪೫।।

## ಸದಂತ ಕುಬ್ಜಪಂಗ್ವಾದಿ ಜನನ ಯೋಗಃ

ಮೂಲ।। ಸೌಮ್ಯರ್ಕ್ಷಾಂಶೆ ರವಿಜರುಧಿರೌ ಚೇತ್ಸದಂತೋತ್ರಜಾತಃ ।। ಕುಬ್ಜ ಸ್ಸ್ವರ್ಕ್ಷೇ ಶಶಿನಿತನುಗೆ ಮಂದಮಾಹೇಯ ದೃಷ್ಟೇ ।। ಪಂಗುರ್ಮೀನೇ ಯಮಶಶಿಕುಜೈರ್ವೀಕ್ಷಿತೇ ಲಗ್ನಸಂಸ್ಥೇ ಸಂಧೌಪಾಪೇ ಶಶಿನಿಚಜಡಸ್ಸ್ಯಾನ್ನ ಚೇತ್ಸೌಮ್ಯದೃಷ್ಟಾಃ ।।೧೮।।

ಸದಂತಜನನ, ಕುಬ್ಜ, ಪಂಗು, ಜಡಜನ್ಮಯೋಗಾಃ

ಟೀ।। ರವಿಜರುಧಿರೌ--ಶನಿಕುಜರು ಎಲ್ಲಿದ್ದರೂ, ಸೌಮ್ಯರ್ಕ್ಷಾಂಶೇ ಚೇತ್--ಬುಧರಾಶಿಗಳಾದ ಮಿಥುನ ಕನ್ಯಾನವಾಂಶೆಯಲ್ಲಿದ್ದರೂ, ಈ ರಾಶಿಗಳಲ್ಲಿ ಮಿಥುನ ಕನ್ಯಾ ನವಾಂಶೆಯಲ್ಲಿದ್ದರೂ, ಅತ್ರ-ಈ ಯೋಗದಲ್ಲಿ, ಜಾತಃ-ಹುಟ್ಟಿದವನು, ಸದಂತಃ-ದಂತತಸಹಿತವಾಗಿ ಹುಟ್ಟುವನು. ಅಂದರೆ ಶನಿ ಕುಜರು ಯಾವ ರಾಶಿಯಲ್ಲಿದ್ದರೂ ಮಿಥುನ ಕನ್ಯಾ ನವಾಂಶೆಯಲ್ಲಿದ್ದರೆ, ಮಿಥುನ ಕನ್ಯಾ ರಾಶಿಯಲ್ಲಿ ಆ ನವಾಂಶೆಯಲ್ಲಿದ್ದರೂ ಗರ್ಭಸ್ಥ ಶಿಶುವು ಸದಂತವಾಗಿ ಹುಟ್ಟುವ ಯೋಗಲಕ್ಷಣ. ಇದರಲ್ಲಿ ಮೇಷಾದಿ ಯಾವ ರಾಶಿಗಳಾದರೂ ಯಾವ ಲಗ್ನವಾದರೂ ಈ ಯೋಗಕ್ಕೆ ಭಂಗವಿಲ್ಲ.

## ಕುಬ್ಜ ಜನನ ಯೋಗಃ

ಶಶಿನಿ-ಚಂದ್ರನು, ಸ್ವರ್ಕ್ಷೇ-ಸ್ವಕ್ಷೇತ್ರವಾದ ಕರ್ಕಾಟಕ ರಾಶಿಯಲ್ಲಿದ್ದು, ತನುಗೆ-ಆ ಕರ್ಕಾಟಕವೇ ಲಗ್ನವಾಗುತ್ತಿರುವಾಗ ಚಂದ್ರನು, ಮಂದಮಾಹೇಯ ದೃಷ್ಟೇ-ಶನಿಕುಜರಿಂದ ನೋಡಲ್ಪಟ್ಟರೆ, ಕುಬ್ಜಃ-ಕುಬ್ಜ ಅಂದರೆ ಬಹಳ ಗಿಡ್ಡವಾದ ಶಿಶು ಜನನವಾಗುವುದು. (ಅಂದರೆ ಆಳು ಗುಜ್ಜಾರಿ ಎಂದು ರೂಢವಾಗಿರುವುದು.) ಅಂದರೆ ಸ್ವಕ್ಷೇತ್ರವಾದ ಕರ್ಕಾಟಕದಲ್ಲಿ ಚಂದ್ರನಿದ್ದು, ಶನಿ ಕುಜರಿಂದ ನೋಡಲ್ಪಟ್ಟರೆ, ಕುಬ್ಜಃ-ಕುಬ್ಜಜನನಯೋಗ. ಈ ಯೋಗ ಕರ್ಕಾಟಕ ಲಗ್ನಕ್ಕೆ ಮಾತ್ರ ಲಭಿಸುವುದು.

## ಪಂಗುಜನನ ಯೋಗಃ

ಮೀನೆ-ಮೀನಾರಾಶಿಯು ಲಗ್ನವಾಗಿ ಯಮಶಶಿಕುಜೈಃ-ಶನಿ ಚಂದ್ರ ಕುಜರುಗಳಿಂದ, ವೀಕ್ಷಿತೇ-ನೋಡಲ್ಪಟ್ಟರೂ, ಲಗ್ನಸಂಸ್ಥೇ-ಮೀನಲಗ್ನವಾಗಿ ಅಲ್ಲಿಯೇ

ಇದ್ದರೂ, ಪಂಗುಃ-ಗರ್ಭಸ್ಥವಾದ ಶಿಶುವು ಕುಂಟನಾಗುವುದು. ಈ ಯೋಗ ಮೀನ ಲಗ್ನವಾಗಿ ಅಲ್ಲಿ ಶನಿ, ಕುಜ,ಚಂದ್ರರಿದ್ದರೆ ೧ ಯೋಗ, ಮೀನ ಲಗ್ನಕ್ಕೆ ಶನಿ, ಕುಜ, ಚಂದ್ರರು ನೋಡಿದರೆ ೧ ಯೋಗ ಅಂತೂ ೨ ಯೋಗ.

## ಜಡಯೋಗಃ

ಪಾಪೇ-ಪಾಪಗ್ರಹವಾದ, ಶಶಿನಿ-ಚಂದ್ರನು, ಸಂಧೌ-ಭಸಂಧಿಯಾದ ಕರ್ಕಟಾಂತ್ಯ, ವೃಶ್ಚಿಕಾಂತ್ಯ, ಮೀನಾಂತ್ಯ ನವಾಂಶೆಯಲ್ಲಿದ್ದರೆ, ಜಡಃ-ಸ್ತಬ್ಧನಾಗಿರುವವನು ಹುಟ್ಟುವನು, ಅಂದರೆ ಪಾಪಗ್ರಹನಾದ ಚಂದ್ರನು ಕರ್ಕಾಟಕ ರಾಶಿಯ ಅಂತ್ಯ ನವಾಂಶೆಯಲ್ಲಿದ್ದರೆ ೧೨ ಲಗ್ನದಲ್ಲಿ ೧೨ ಯೋಗ, ವೃಶ್ಚಿಕ ರಾಶಿಯ ಅಂತ್ಯ ನವಾಂಶೆಯಲ್ಲಿದ್ದರೆ ೧೨ ಲಗ್ನ ೧೨ ಯೋಗ, ಮೀನರಾಶಿಯ ಅಂತ್ಯ ನವಾಂಶೆಯಲ್ಲಿದ್ದರೆ ೧೨ ಲಗ್ನದಲ್ಲಿ ೧೨ ಯೋಗ, ಅಂತೂ ೩೬ ಯೋಗಗಳು ಹುಟ್ಟುತ್ತವೆ. ನಚೀತ್-ಸೌಮ್ಯದೃಷ್ಟ್ಯಾ-ಶುಭಗ್ರಹಗಳಿಂದ ನೋಡಲ್ಪಡದಿದ್ದರೆ, ಈ ಮೇಲೆ ಹೇಳಲ್ಪಟ್ಟ ಯೋಗಗಳು ಸಂಪೂರ್ಣವಾಗಿ ಕಾಣಬರುವುದು; ಶುಭಗ್ರಹಗಳು ನೋಡಿದರೆ ಮಧ್ಯಬಲ, ಪೂರ್ಣಬಲ, ಹೀನಬಲಪ್ರಕಾರ ಎಷ್ಟರಮಟ್ಟಿಗೆ ಅನ್ವಯಿಸುವುದೋ ಅಷ್ಟರಮಟ್ಟಿಗೆ ಅನ್ವಯಿಸುವುದು. ಬಲವತ್ತರವಾದ ಶುಭಗ್ರಹಗಳು ನೋಡಿದರೆ ಈ ಯೋಗ ಲಭಿಸದೆ ಹೋಗುವುದು, ಇದನ್ನು ಬುದ್ಧಿವಂತರು ಆಲೋಚಿಸಿ ನಿರ್ಣಯ ಮಾಡಬೇಕು. ಈ ವಿಷಯದಲ್ಲಿ ||ಶ್ಲೋಕ||
ಸೌಮ್ಯರ್ಕ್ಷಾಂಶಕಗೌ ಕುಜಾರ್ಕಜೌಯದಿದಂತೈಸ್ಸಹ ಜಾತಕೋ ಭವೇತ್||
ಸ್ವರ್ಕ್ಷೇಬ್ಜೆತನುಗೇಚ ಕುಬ್ಜಕೋಯದಿ ಸೌರಾರಸಮೀಕ್ಷಿತೆತದಾ ||

## ವಾಮನ ಹೀನಾಂಗಯೋಗಃ

ಮೂಲ|| ಸೌರಶಶಾಂಕದಿವಾಕರದೃಷ್ಟೇ ವಾಮನಕೋಮಕರಾಂತ್ಯವಿಲಗ್ನೇ||
ಧೀನವಮೋದಯಗೈಶ್ಚದೃಕಾಣ್ಯೆಃ ಪಾಪಯುತೈರಭುಜಾಂಘ್ರಿ
ಶಿರಾಸ್ಸ್ಯಾತ್ ||೧೮||

ಟೀಕು|| ವಾಮನಯೋಗಃ-ಮಕರಾಂತ್ಯವಿಲಗ್ನೇ-ಮಕರ ರಾಶಿಯ ಅಂತ್ಯಭಾಗ ಲಗ್ನವಾಗಿ, ಆ ಲಗ್ನವು-ಸೌರಶಶಾಂಕ ದಿವಾಕರದೃಷ್ಟೇ-ಶನಿ ಚಂದ್ರ ಸೂರ್ಯ ಈ ಮೂರು ಗ್ರಹಗಳಿಂದ ನೋಡಲ್ಪಟ್ಟರೆ, ವಾಮನಕಃ-ಗರ್ಭದಲ್ಲಿ ಹುಟ್ಟಿದವನು, ವಾಮನಕ-ಗಿಡ್ಡಗಿರುವ ಮನುಷ್ಯನಾಗಿ ಹುಟ್ಟುವನು.

## ಅಭುಜ ಜನನಯೋಗಃ

ಧೀನವಮೊದಯಗೈಶ್ಚ ದೃಕಾಣ್ಯೆಃ ಅಂದರೆ ಪಂಚಮ ನವಮ ಲಗ್ನ

(ದ್ರೇಕ್ಕಾಣಾಃ ಪ್ರಥಮ ಪಂಚಮ ನವಮಾನಾಂ) ಎಂದು ಹೇಳಲ್ಪಟ್ಟು ಇರುವುದರಿಂದ, ಲಗ್ನದಲ್ಲಿ ದ್ವಿತೀಯ ದ್ರೇಕ್ಕಾಣ ಪಂಚಮರಾಶಿ ಸಂಬಂಧವಾಗಿರುತ್ತೆ. ಆದ್ದರಿಂದ ಧೀ ದ್ರೇಕ್ಕಾಣವೆಂದರೆ ದ್ವಿತೀಯ ದ್ರೇಕ್ಕಾಣವೆಂದು ಹೆಸರು. ಗರ್ಭಾದಾನ ಲಗ್ನಕ್ಕೆ ದ್ವಿತೀಯ ದ್ರೇಕ್ಕಾಣ ಪಾಪಯುತ್ಯೆಃ-ರವಿ ಶನಿ ವ್ಯತಿರಿಕ್ತವಾದ ಪಾಪಗ್ರಹವೆಂದರೆ ಕುಜನಿಂದ ಕೂಡಿದ್ದರೆ, ಸೌರಶಶಾಂಕ ದಿವಾಕರದೃಷ್ಟೇ-ಶನಿ ಚಂದ್ರ ಸೂರ್ಯರಿಂದ ನೋಡಲ್ಪಟ್ಟರೆ, ಗರ್ಭದಲ್ಲಿ ಅಭುಜ-ಭುಜಹೀನವಾದ ಶಿಶು ಹುಟ್ಟುವುದು.

## ಪಾದವಿಹೀನ ಜನನಯೋಗ

ತೃತೀಯ ದ್ರೇಕ್ಕಾಣವು ನವಮರಾಶಿ ಸಂಬಂಧವಾದದ್ದಾಗಿರುವುದರಿಂದ, ನವಮ ದ್ರೇಕ್ಕಾಣವೆಂದರೆ ತೃತೀಯ ದ್ರೇಕ್ಕಾಣ. ಅಲ್ಲಿ ಕುಜನಿದ್ದು ಶನಿ ಚಂದ್ರ ಸೂರ್ಯರಿಂದ ನೋಡಲ್ಪಟ್ಟರೆ ಗರ್ಭದಲ್ಲಿ ಅನಂಘ್ರಿಃ-ಪಾದಹೀನನು ಹುಟ್ಟುವನು.

## ಶಿರೋಹೀನ ಜನನಯೋಗಃ

ಲಗ್ನಪ್ರಥಮದ್ರೇಕ್ಕಾಣ-ಲಗ್ನಕ್ಕೆ ಸಂಬಂಧಪಟ್ಟದ್ದು. ಆದ್ದರಿಂದ ಆ ಲಗ್ನ ಪ್ರಥಮ ದ್ರೇಕ್ಕಾಣದಲ್ಲಿ ಕುಜನಿದ್ದು, ಶನಿ ಚಂದ್ರ ಸೂರ್ಯರಿಂದ ನೋಡಲ್ಪಟ್ಟರೆ, ಅಶಿರಾಃ-ಶಿರಸ್ಸು ಇಲ್ಲದ ಶಿಶು ಹುಟ್ಟುವುದು. ಈ ರೀತಿಯಾಗಿ ಕೆಲವರು ವ್ಯಾಖ್ಯಾನ ಮಾಡುತ್ತಾರೆ. ಇನ್ನೂ ಕೆಲವರು ಸೌರಶಶಾಂಕ ದಿವಾಕರ ದೃಷ್ಟೇ--ಎಂದರೆ ಈ ಮೇಲೆ ಹೇಳಲ್ಪಟ್ಟ ದ್ರೇಕ್ಕಾಣಗಳು ಪಾಪಗ್ರಹಯುಕ್ತವಾಗಿದ್ದರೆ ಭುಜಹೀನ, ಪಾದಹೀನ, ಶಿರೋಹೀನ, ಈ ವಿಧವಾಗಿ ಜನಿಸುವರೆಂದು ಹೇಳುವರು. ಮತ್ತು ಕೆಲವರು ಯಥಾಕ್ರಮವಿಲ್ಲದೇ ಮೂರು ದ್ರೇಕ್ಕಾಣದಲ್ಲಿ ಯಾವ ದ್ರೇಕ್ಕಾಣವಾದರೂ ಪಾಪಯುತವಾಗಿ ಶನಿ ಚಂದ್ರ ರವಿಗಳಿಂದ ನೋಡಲ್ಪಟ್ಟರೆ ಭುಜಹೀನನಾಗಲೀ, ಪಾದಹೀನನಾಗಲೀ, ಶಿರೋಹೀನನಾಗಲೀ ಹುಟ್ಟುವರೆಂದು ಹೇಳುವರು. ಮತ್ತು ಕೆಲವರು ಲಗ್ನ ಪಂಚಮ ನವಮರಾಶಿಗಳಲ್ಲಿ ಪ್ರಥಮ ದ್ರೇಕ್ಕಾಣಗಳು ಮೂರು ಪಾಪಗ್ರಹಯುಕ್ತವಾದರೆ ಭುಜಹೀನನು ಜನಿಸುವನೆಂದು ಹೇಳುವರು. ದ್ವಿತೀಯ ದ್ರೇಕ್ಕಾಣ ಮೂರು ಪಾಪ ಗ್ರಹಯುಕ್ತವಾಗಿದ್ದರೆ, ಪಾಪಹೀನವಾದ ಶಿಶು ಜನಿಸುವುದು. ತೃತೀಯ ದ್ರೇಕ್ಕಾಣ ಮೂರು ಪಾಪಗ್ರಹಯುಕ್ತವಾದರೆ ಶಿರೋಹೀನನಾದವನು ಹುಟ್ಟುವನು. ಈ ವಿಷಯದಲ್ಲಿ ಅನೇಕ ಗ್ರಂಥಕರ್ತರ ಮತದ ರೀತಿಯಲ್ಲಿ ಅನೇಕ ಕಾಲದಲ್ಲಿ ಪಂಚಮರಾಶಿ

ಯಾವ ದ್ರೇಕ್ಕಾಣವಾದರೂ ಕುಜಯುಕ್ತವಾಗಿ ಶನಿ, ಚಂದ್ರ, ರವಿಗಳಿಂದ ನೋಡಲ್ಪಟ್ಟರೆ ಪಾದಹೀನ ಶಿಶು ಜನ್ಮಿಸುವುದು. ಲಗ್ನದಲ್ಲಿ ಯಾವ ದ್ರೇಕ್ಕಾಣವಾದರೂ ಕುಜಯುಕ್ತವಾಗಿ ಶನಿ, ಚಂದ್ರ, ಸೂರ್ಯರಿಂದ ನೋಡಲ್ಪಟ್ಟರೆ ಶಿರೋಹೀನಪ್ರಾಣಿ ಜನ್ಮಿಸುವುದೆಂದು ಅರ್ಥಮಾಡಿರುವರು. ಈ ವಿಷಯದಲ್ಲಿ ।।ಶ್ಲೋಕ।। ಲಗ್ನದ್ರೇಕ್ಕಾಣಗೋಭೌಮಃ ಸೌರ ಸೂರ್ಯೇಂದುವೀಕ್ಷಿತಃ ।। ಕುರ್ವಾದ್ವಿಶಿರಸಂತದ್ವತ್ಪಂಚಮೇ ಬಾಹುವರ್ಜಿತಂ।। ವಿಪದಂನವಮಸ್ಥಾನೇ ಯದಿಸೌಮ್ಯೈರ್ನವೀಕ್ಷಿತಃ ।। ಎಂದು ಗರ್ಗಸಂಹಿತಾ ಸಮ್ಮತಿ ಇರುತ್ತೆ. ಮತ್ತು ಸಾರಾವಳಿಯಲ್ಲಿ ಭೌಮಯುತೋದ್ರೇಕ್ಕಾಣ ಸ್ತ್ರೀಕೋಣ ಲಗ್ನೇಷುಭೇಷು ಸಂದೃಷ್ಟಃ ।। ವಿಭುಜಾಂಘ್ರಿ ಮಸ್ತಕಾಸ್ಸ್ಯ್ಯಚ್ಛನಿರಚಂದ್ರೈರ್ವದೇದ್ಗರ್ಭೇ ।।೪೮।। ಎಂದು ಹೇಳಲ್ಪಟ್ಟಿರುತ್ತೆ. ಈ ಮೂರು ಯೋಗಗಳು ಶುಭಗ್ರಹ ದೃಷ್ಟಿ ಇದ್ದರೆ ಈ ಹೇಳಲ್ಪಟ್ಟ ದುರ್ಯೋಗ ಆಗುವುದಿಲ್ಲವೆಂದು ನಿಶ್ಚಯವಾಗಿ ತಿಳಿಯತಕ್ಕದ್ದು. ಈವಿಷಯದಲ್ಲಿ ಜಯದೇವ ಹೇಳಿರುವುದೇನೆಂದರೆ:- ।।ಶ್ಲೋಕ।। ಪೃಥುರೋಮಕರಾಶಿಗೆ ಯದಾತನುಗೆ ಸೌರಿಕುಜೇಂದು ವೀಕ್ಷಿತೆ ।। ಪಂಗುಸ್ಯಾದಿಹನಿಶ್ಚಿತಂತ ರಾಂಜಗದುರ್ಗರ್ಗ ವರಾಹಕಾದಯಃ ।। ಪಾದಹೀನಯೋಗಃ-ಮೀನಲಗ್ನ ಜಾತಕವಾಗಿ ಶನಿ, ಚಂದ್ರ, ಕುಜರಿಂದ ನೋಡಲ್ಪಟ್ಟರೆ ನಿಶ್ಚಯವಾಗಿ ಪಾದಹೀನ ಶಿಶು ಹುಟ್ಟುತ್ತದೆಂದು ಗರ್ಗ ವರಾಹಮಿಹಿರರು ಹೇಳಿರುತ್ತಾರೆಂದುಕ್ತವಾಗಿರುತ್ತೆ.

## ಅಂಧಾದಿ ಜನನಯೋಃಗಃ

ಮೂಲ।। ರವಿಶಶಿಯುತೇ ಸಿಂಹಲಗ್ನೆ ಕುಜಾರ್ಕಿನಿರೀಕ್ಷತೇ । ನಯನರಹಿತ ಸೌಮ್ಯಾಸೌಮ್ಯೈ ಸ್ಸಬುದ್ಬುದಲೋಚನಃ ।। ವ್ಯಯಗೃಹ-ಗತಶ್ಚಂದ್ರೋ ವಾಮಂ ಹಿನಸ್ತಪರಂ ರವಿಸ್ತ್ರ ಶುಭಗದಿತಾಯೋಗಾ ಝಿಯಾಪ್ಯಾಭವಂತಿ ಶುಭೇಕ್ಷಿತಾಃ ।।೨೦।।

## ಅಂಧ ಬುದ್ಬುದಾಕಾದಿ ಜನನಯೋಗ

ಟೀಕು।। ಸಿಂಹೇ-ಸಿಂಹರಾಶಿಯು, ಲಗ್ನೇ-ಜನ್ಮಲಗ್ನವಾಗಿ ಆ ಸಿಂಹರಾಶಿಯು ರವಿ ಶಶಿಯತೆ-ಸೂರ್ಯ ಚಂದ್ರರಿಂದ ಕೂಡಿ, ಕುಜಾರ್ಕಿನಿರೀಕ್ಷಿತೇ-ಕುಜ ಶನಿಗಳಿಂದ ನೋಡಲ್ಪಟ್ಟರೆ, ನಯನರಹಿತಃ - ಎರಡು ಕಣ್ಣುಗಳಿಲ್ಲದವನು ಹುಟ್ಟುವನು. ಆ ಸಿಂಹಲಗ್ನವು ಸೂರ್ಯನಿಂದೊಡಗೂಡಿ ಕುಜ ಶನಿಗಳಿಂದ ನೋಡಲ್ಪಟ್ಟರೆ ಕುಡಿಗಣ್ಣು (ಗೆಡ್ಡೆ ಗಣ್ಣುಗಳುಳ್ಳವನು) ಹುಟ್ಟುವನು. ಆ ಸಿಂಹದಲ್ಲಿ ಚಂದ್ರನಿದ್ದು

ಕುಜ-ಶನಿಗಳಿಂದ ನೋಡಲ್ಪಟ್ಟರೆ ಎಡಗಣ್ಣಿಲ್ಲದವನು ಹುಟ್ಟುವನು. ಆ ಸಿಂಹವು ಸೂರ್ಯ-ಚಂದ್ರರಿಂದ ಕೂಡಿ, ಸೌಮ್ಯಾಸೌಮ್ಯೈಃ-ಶುಭಪಾಪ ಗ್ರಹಗಳಿಂದ ನೋಡಲ್ಪಟ್ಟರೆ, ಸಬುದ್ಬುದಲೋಚನಃ - ಹೂ ಗಣ್ಣುಳ್ಳವನು ಜನಿಸುವನು. ಆ ಸಿಂಹದಲ್ಲಿ ರವಿಯಿದ್ದು ಶುಭಗ್ರಹ ಪಾಪಗ್ರಹದಿಂದ ನೋಡಲ್ಪಟ್ಟರೆ ಕುಡಿಗಣ್ಣು ಪೂಗಣ್ಣುಳ್ಳವನು ಹುಟ್ಟುವನು. ಆ ಸಿಂಹದಲ್ಲಿ ಚಂದ್ರನೊಬ್ಬನೆ ಇದ್ದು, ಶುಭಗ್ರಹ ಪಾಪಗ್ರಹದಿಂದ ನೋಡಲ್ಪಟ್ಟರೆ ಎಡದ ಕಣ್ಣು ಹೂಗಣ್ಣಾಗುವುದು. ಚಂದ್ರಃ-ಚಂದ್ರನು ಆದಾನಲಗ್ನಕ್ಕಾಗಲೀ, ಜನ್ಮಲಗ್ನಕ್ಕಾಗಲೀ, ವ್ಯಯಗೃಹಗತಃ-ದ್ವಾದಶದಲ್ಲಿದ್ದರೆ, ವಾಮಂ-ಎಡದ ಕಣ್ಣು, ಹಿನಸ್ತಿ -ಹೋಗಲಾಡಿಸುವನು. ರವಿಃ-ಸೂರ್ಯನು ದ್ವಾದಶಸ್ಥಾನದಲ್ಲಿದ್ದು ಪರಂ-ಬಲಗಣ್ಣನ್ನು, ಹಿನಸ್ತಿ-ಹಿಂಸಿಸುವನು, ಈ ವಿಷಯಕ್ಕೆ ॥ಶ್ಲೋಕ॥ ವಕ್ರಶ್ಮನಿರ್ವಾವ್ಯಯಗೋಕ್ಷಿಹಂತಾ। ವಾಮಂಕುಜೋದಕ್ಷಿಣಾಕ್ಷಿಸೌರಃ ॥ ವ್ಯಯೇರವೀಂದೂ ಯುಗ ಪತ್ಪಥಗ್ವಾ ನೇತ್ರೇಹರೇ ತಾಮಪಸವ್ಯಸವ್ಯೆ ॥೩೦॥ ಈ ಪ್ರಕಾರ ನವನೀತಾ ರಿಷ್ಟಗ್ರಂಥದಲ್ಲಿ ಹೇಳಲ್ಪಟ್ಟಿರುತ್ತೆ. ಅಶುಭಗದಿತಾಃ-ತ್ರಿಕೋಣಜ್ಞೇ ಎಂದು ಇತ್ಯಾದಿ ಶ್ಲೋಕೋಕ್ತ ಫಲಗಳು ಆ ಶುಭಗ್ರಹ ಸಂಯೋಗವೀಕ್ಷಣ ಭೂತವಾದ, ಯೋಗಾಃ-ಯೋಗಗಳು, ಅಂದರೆ ಆ ಯೋಗವನ್ನುಂಟುಮಾಡುವ ಗ್ರಹಗಳು, ಶುಭೇಕ್ಷಿತಾ-ಶುಭಗ್ರಹಗಳಿಂದ ನೋಡಲ್ಪಟ್ಟವರಾದರೆ, ಯಾಪ್ಯಾಭವಂತಿ-ಫಲಕೊಡುವಾಗ ಕಡಿಮೆಯಾಗುವುದು. ಅಂದರೆ ಯಾವ ಸಮಯದಲ್ಲಿ ಹೇಳಿದ ಫಲಗಳು ನಡಿಯದೆ ಹೋದರೂ ಕಾಲಾಂತರದಲ್ಲಿ ಸ್ವಲ್ಪವಾಗಿ ಕೊಡುವರೆಂದು ತಿಳಿಯತಕ್ಕದ್ದು.

ಮೂಲ॥ ತತ್ಕಾಲಇಂದು ಸಹಿತೋ ದ್ವಿರಸಾಂಶಕೋಯಸ್ತತ್ತುಲ್ಯ ರಾಶಿಸಹಿತೇ
ಪುರತಶ್ಯಶಾಂಕೆ ॥ ಯಾವಾನುದೇತಿದಿನರಾತ್ರಿ ಸಮಾನಭಾಗೆ
ತಾವದ್ಗತೇದಿನನಿಶೋಃ ಪ್ರವದಂತಿಜನ್ಮ ॥೨೧॥

ಟೀಕು॥ ಗರ್ಭದಾನ ಲಗ್ನಕ್ಕಾಗಲೀ, ಪ್ರಶ್ನಲಗ್ನಕ್ಕಾಗಲೀ, ಪ್ರಸವಕಾಲಕ್ಕಾಗಲೀ ಲಗ್ನ ತಿಳಿಯುವುದು ಹೇಳುತ್ತಾನೆ. ತತ್ಕಾಲೇ-ಗರ್ಭಾಧಾನ ಲಗ್ನದಲ್ಲಾದರೂ, ಪ್ರಶ್ನಲಗ್ನದಲ್ಲಾದರೂ, ಯೋದ್ವಿರಸಾಂಶಕಃ-ಯಾವ ದ್ವಾದಶಾಂಶವು, ಇಂದು ಸಹಿತಃ - ಚಂದ್ರನಿಂದ ಕೂಡಿರುವುದೋ, ಶಶಾಂಕೇ-ಚಂದ್ರನು, ತತ್ತುಲ್ಯರಾಶಿಸಹಿತೇ-ಆ ರಾಶಿಗೆ ಸಮಾನವಾದ ರಾಶಿಯನ್ನು ಕೂಡಿದರೆ ಎಷ್ಟಾಗುವುದೋ, ಪುರತಃ-ಮುಂದಿನ ದಶಮ ಮಾಸದಲ್ಲಿ, ಜನ್ಮ-ಜನ್ಮವಾಗುವುದು ಎಂದು, ಪ್ರವದಂತಿ-ಹೇಳುವರು ಅಂದರೆ ಆದಾನ ಲಗ್ನಕ್ಕಾಗಲೀ ಪ್ರಶ್ನಲಗ್ನಕ್ಕಾಗಲೀ ಚಂದ್ರನು ತಾನಿರುವ ರಾಶಿಯಲ್ಲಿ ಯಾವ ದ್ವಾದಶಾಂಶೆಯಲ್ಲಿದ್ದಾನೋ ಮೇಷ ಮೊದಲುಗೊಂಡು ಯಾವ ರಾಶಿಯಲ್ಲಿ ಚಂದ್ರನಿದ್ದಾನೆಯೋ ಆ ಹತ್ತನೆ

ತಿಂಗಳಲ್ಲಿ ಪ್ರಸವವಾಗುವುದೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಯಸ್ಮಿನ್ದ್ವಾದಶಭಾಗೇ ಗರ್ಭಾದಾನೇ ವ್ಯವಸ್ಥಿತಶ್ಚಂದ್ರ ।। ತತ್ತುಲ್ಯರ್ಕ್ಷೆ ಪ್ರಸವೋಗರ್ಭಸ್ಯ ಸಮಾದಿಶೇತ್ಪ್ರಾಜ್ಞಃ ।।೫೧।। ಎಂದು ಹೇಳಲ್ಪಟ್ಟಿರುತ್ತೆ. ಅನೇಕ ಗ್ರಂಥಕರ್ತರ ಅಭಿಮತವೇನೆಂದರೆ :- ಗರ್ಭಾದಾನಾದಿ ಕಾಲಗಳಲ್ಲಿ ಚಂದ್ರನು ತಾನಿರುವ ರಾಶಿಯಲ್ಲಿ ಯಾವ ದ್ವಾದಶಾಂಶೆಯಲ್ಲಿ ಇರುವನೋ ಆ ದ್ವಾದಶಾಂಶೆ ಮೊದಲುಗೊಂಡು, ಎಷ್ಟನೆ ಸಂಖ್ಯೆಯ ರಾಶಿಯಾಗುವುದೋ ಆ ರಾಶಿಯಲ್ಲಿ ಚಂದ್ರನಿರುವಾಗ ಪ್ರಸವವಾಗುವುದೆಂದು ಹೇಳತಕ್ಕದ್ದು. ಇದಕ್ಕೆ ಸಮ್ಮತಿ ।।ಶ್ಲೋಕ।। ಯಾವತ್ಸಂಖ್ಯೇ ದ್ವಾದಶಾಂಶೆ ಶೀತರಶ್ಮಿ ವ್ಯವಸ್ಥಿತಃ।। ತತ್ಸಂಖ್ಯೋಯಂತತೋರಾಶಿರ್ಜನ್ಮೇಂದೌ ತದ್ಗತೇವದೇತ್ ।।೨೫।। ಇತಿ ಗರ್ಗಃ ।। ದಿವಾರಾತ್ರಿ ಸಮಾನಭಾಗಃ- ದಿವಾರಾತ್ರಿಯಲ್ಲಿ ಸಮಾನವಾದ ತ್ರಿಂಶದ್ಭಾಗವು, ಯಾವಾ-ಎಷ್ಟನೇದು, ಉದಯತಿ-ಉದಯಿಸುವುದೋ ದಿನವಿಶೋಃ-ದಿವಾ ರಾತ್ರಿಯಲ್ಲಿ, ತಾವದ್ಗತೇ-ಅಷ್ಟು ಘಳಿಗೆಗಳು ಹೋಗಲಾಗಿ, ಜನ್ಮ-ಪ್ರಸವಕಾಲವನ್ನು, ಪ್ರವದಂತಿ-ಹೇಳುತ್ತಾರೆ. ಅಂದರೆ ಮೇಷ, ವೃಷಭ, ಮಿಥುನ, ಕರ್ಕಾಟಕ, ಧನುರ್ಮಕರ ರಾಶಿಗಳು ದಿವಾ ಬಲವುಳ್ಳವುಗಳೆಂದು ಪೂರ್ವದಲ್ಲಿಯೇ ಹೇಳಲ್ಪಟ್ಟಿರುತ್ತವೆ. ಅವುಗಳ ಆದಾನ ಲಗ್ನವಾಗಲೀ, ಪ್ರಶ್ನಲಗ್ನವಾಗಲೀ ದಿವಾಬಲ ರಾಶಿಯಾದರೆ, ಹಗಲಿನಲ್ಲಿ ಪ್ರಸವವೆಂತಲೂ, ರಾತ್ರಿಬಲರಾಶಿಗಳಿಂದ ಪ್ರಬಲವಾಗಿದ್ದರೆ ರಾತ್ರಿ ಪ್ರಸವವೆಂತಲೂ ಹೇಳತಕ್ಕದ್ದು. ಆ ದಿವಾಬಲ ಲಗ್ನದಲ್ಲಿ ಎಷ್ಟು ತ್ರಿಶಾಂಶಗಳು ಉದಯಿಸಿದ ತರುವಾಯ ಆದಾನವಾಗಲೀ, ಪ್ರಶ್ನವಾಗಲೀ ಮಾಡಲ್ಪಡುತ್ತೋ ಅಷ್ಟು ಘಳಿಗೆಗಳು ಗತಿಸಿದ ತರುವಾಯ ಹಗಲು ಪ್ರಸವವೆಂದು ಹೇಳತಕ್ಕದ್ದು. ರಾತ್ರಿ ಬಲಲಗ್ನದಲ್ಲಿ ಎಷ್ಟು ತ್ರಿಂಶಾಶಗಳು ಗತಿಸಿದ ತರುವಾಯ ಆದಾನ ಪ್ರಶ್ನೆಗಳು ಮಾಡಲ್ಪಡುವುದೋ ಅಷ್ಟು ಘಳಿಗೆಗಳು ಗತಿಸಿದ ಮೇಲೆ ರಾತ್ರಿ ಪ್ರಸವವೆಂದು ಹೇಳತಕ್ಕದ್ದು. ಈ ವಿಷಯುಕ್ಕೆ ಸಾರಾವಳಿಯಲ್ಲಿ ।।ಶ್ಲೋಕ।। ತತ್ಕಾಲೆ ದಿವಸ ನಿಶಾಸಂಜ್ಞಾಸಮುದೇತಿರಾಶಿ ಭಗೋಯಃ ।। ಯಾವಾನುದಯಸ್ತಾವಾ ನ್ವಾಚ್ಯೊದಿವಸಸ್ಯ ರಾತ್ರೇರ್ವಾ ।।೫೩।। ಇತ್ಯಾಧಾನಾತ್ ಪ್ರಥಮಂಸೂತೇಃ ಕಾಲಂಸುನಿಶ್ಚಿತಂಕೃತ್ವಾ ।। ಜಾತಕರಹಿತಂಚ ವಿಧಿಂ ಪಿಚಿಂತಯೇತ್ತತ್ರಗಣಿತಜ್ಞ ।।೫೪।। ಎಂದುಕ್ತವಾಗಿರುತ್ತೆ. ಈ ರೀತಿಯಾಗಿಯೇ ಪ್ರಸವಕಾಲ ನಿರ್ಣಯ ಮಾಡಿಕೊಳ್ಳಬೇಕು.

## ಗರ್ಭಾದಾನ ಕಾಲವಶಾತ್ ಮೂರು ಮತ್ತೆ ಹನ್ನೆರಡು ವರ್ಷಕ್ಕೆ ಜನ್ಮಿಸುವ ಯೋಗ

ಮೂಲ॥ ಉದಯತಿ ಮೃದುಭಾಂಶೆ ಸಪ್ತಮಸ್ಥೇಚಮಂದೇ । ಯಧಿಭವತಿ ನಿಷೇಕಸ್ಸೂತಿರಬ್ದತ್ರಯೇಣ ॥ ಶಶಿನಿತುವಿಧಿರೇಷದ್ವಾದಶೇಬ್ದೇ ಪ್ರಕುರ್ಯಾನ್ನಿಗದಿತ ಮಿಹಚಿಂತ್ಯಂ ಸೂತಿಕಾಲೇಪಿಯುಕ್ತ್ಯಾ ॥೨೨॥

ಅಬ್ದತ್ರಿಕ ಪ್ರಸವಯೋಗಃ ॥ ಮೃದುಭಾಂಶೆ-ಮೃದುಶನಿಯರಾಶಿನವಾಂಶೆಯು, ಅಂದರೆ, ಮಕರ ಕುಂಭಾಂಶೆಗಳು, ಉದಯತಿನತಿ-ಲಗ್ನವಾಗುತ್ತಿರಲಾಗಿ, ಮಂದೆ-ಶನೈಶ್ಚರನು, ಸಪ್ತಮಸ್ಥೆ-ಲಗ್ನಕ್ಕೆ ಸಪ್ತಮದಲ್ಲಿದ್ದಾಗ, ನಿಷೇಕಃ-ಗರ್ಭಾದಾನವು, ಭವತಿ-ಆದರೆ, ಅಬ್ದತ್ರಯೇಣ-ಮೂರು ವರ್ಷಕ್ಕೆ, ಸೂತಿಃ-ಪ್ರಸೂತಿಯಾಗುವುದು. ಅಂದರೆ, ಯಾವ ಲಗ್ನದಲ್ಲಾದರೂ, ಮಕರ-ಕುಂಭ ನವಾಂಶಗಳು ಲಗ್ನವಾಗಿ ಆ ಲಗ್ನಕ್ಕೆ ಸಪ್ತಮದಲ್ಲಿ ಶನಿಯಿದ್ದರೆ ಮೂರು ವರ್ಷಕ್ಕೆ ಪ್ರಸೂತಿಯಾಗುವುದು.

## ದ್ವಾದಶಾಬ್ದ ಪ್ರಸೂತಿಯೋಗಃ

ಏಷವಿಧಿಃ-ಈ ಮೇಲೆ ಹೇಳಲ್ಪಟ್ಟ ವಿಧಿಯಿಂದ ಇರುವ ಯೋಗದಲ್ಲಿದ್ದು ಅಂದರೆ, ಕರ್ಕಾಟಕ ಲಗ್ನನವಾಂಶೆ ಯಾವ ಲಗ್ನದಲ್ಲಿಯಾದರೂ ಗರ್ಭಾದಾನ ಲಗ್ನವಾಗಿ, ಶಶಿನಿ-ಚಂದ್ರನು ನೋಡಿದರೆ, ದ್ವಾದಶಾಬ್ದೇ-ಹನ್ನೆರಡು ಸಂವತ್ಸರಕ್ಕೆ ಪ್ರಸವವಾಗುವುದು ಎಂದು ವಿದ್ಯುತ್-ತಿಳಿಯತಕ್ಕದ್ದು. ಅಂದರೆ ಯಾವ ಲಗ್ನದಲ್ಲಾದರೂ ಕರ್ಕಾಟಕ ನವಾಂಶವು ಗರ್ಭಾದಾನ ಲಗ್ನವಾಗಿ ಆ ಲಗ್ನಕ್ಕೆ ಸಪ್ತಮದಲ್ಲಿ ಚಂದ್ರನಿದ್ದು ನೋಡಿದರೆ ಆ ಕಾಲದಲ್ಲಿ ಗರ್ಭಧರಿಸಿದವಳು ೧೨ ಸಂವತ್ಸರಗಳು ಆದ ಒಡನೆ ಪ್ರಸವಿಸುವಳು.

## ನಿಷೇಕಾಧ್ಯಾಯ ಪ್ರಯೋಜನ

ಇಹ - ಈ ನಿಷೇಕಾಧ್ಯಾಯದಲ್ಲಿ ನಿಗದಿತಂ-ಆದಾನಕಾಲದ ಮೂಲವಾಗಿ ಹೇಳಲ್ಪಟ್ಟ, ಹೀನಾಂಗಾದಿ ಯೋಗಗಳು, ಸೂತಿಕಾಲೇಪಿ-ಜನ್ಮಕಾಲದಲ್ಲಿಯೂ, ಯುಕ್ತ್ಯಾ-ಯುಕ್ತಿಯಿಂದ, ಚಿಂತ್ಯಂ-ಯೋಚಿಸಿ ಫಲ ಹೇಳತಕ್ಕದ್ದು. ಅಂದರೆ ಈ ನಿಷೇಕಾಧ್ಯಾಯದಲ್ಲಿ ಹೇಳಲ್ಪಟ್ಟ ಹೀನಾಂಗಾದಿ ದುರ್ಯೋಗಗಳು ನಿಷೇಕಕಾಲವಲ್ಲದೆ ಜನ್ಮ ಕಾಲದಲ್ಲಿ ಸಹಾ ಯೋಗಗಳ ಫಲಗಳು ಸಮಂಜಿಸುವಷ್ಟರ ಮಟ್ಟಿಗೆ ಯೋಚಿಸಿ ಫಲ ನಿರ್ಣಯ ಮಾಡತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೆ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಗರ್ಭಾದಾನಾದಿ
ಮುಹೂರ್ತಫಲ ಜ್ಞಾನಂ ನಾಮ
ಚತುರ್ಥ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾ ಸುಧಾಕರಾಯಮಾನ
ಬಂಕೀಪುರ ವಿಠಲರಾಯ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ ಜ್ಞಾನಂ ನಾಮ
ಚತುರ್ಥ ಪ್ರಕರಣಂ

## ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕೇ

## ೫ನೇ ಜನ್ಮಕಾಲ ಲಕ್ಷಣಾಖ್ಯ ಪ್ರಕರಣಂ

ಜನ್ಮಕಾಲ ಖಂಡಿತವಾಗಿ ಸರಿಯಾದ ಕಾಲನಿರ್ಣಯ ಮಾಡಿಕೊಳ್ಳಬೇಕು. ಪ್ರಾಯಶಃ ಸ್ತ್ರೀಯರು ಸೂತಿಕಾಗೃಹದಲ್ಲಿ ಬಾಲಕ ಉತ್ಪನ್ನವಾದ ಮೇಲೆ ಚೆನ್ನಾಗಿ ಕನ್ಯಾ ಅಥವಾ ಪುತ್ರನೆಂದು ನೋಡಿಕೊಳ್ಳುತ್ತಾರೆ. ನಂತರ ಹೊರಗಿನ ಆವರಣದಲ್ಲಿದ್ದವರಿಗೆ ಹೇಳುತ್ತಾರೆ. ಆ ಸಮಯದಲ್ಲಿ ಜ್ಯೋತಿಷ್ಕನು ಸಮೀಪಸ್ಥನಾಗಿದ್ದರೆ ಸೂತಿಕಾ ಗೃಹಸ್ಥರಾದ ಸ್ತ್ರೀಯರು ಹೇಳಿದಂಥಾ ಕಾಲವನ್ನೇ ಇಷ್ಟಕಾಲ (ಜನ್ಮಕಾಲ) ವೆಂದು ತಿಳಿಯುತ್ತಾರೆ. ಕೆಲವು ಜ್ಯೋತಿಃ ಶಾಸ್ತ್ರಗಳಲ್ಲಿ ಶಿರೋದಯಕಾಲ ಮುಖ್ಯವಾದದ್ದೆಂದು ಹೇಳಿರುತ್ತಾರೆ. ಆದರೆ ಇನ್ನೂ ಕೆಲವು ವಿಜ್ಞಾನ ಶಾಸ್ತ್ರಗಳ ಆಧಾರದ ಮೇಲೆ ನನಗೆ ತಿಳಿಯಬರುವುದರಲ್ಲಿ ಇಷ್ಟಕಾಲ ಯಾವಾಗ ನಿರ್ಣಯ ಮಾಡಬೇಕೆಂದರೆ:- ಬಾಲಕನ ಶಿರೋದಯವಾದ ಮೇಲೆ ೧ ಘಳಿಗೆ ಮೇಲೆ  ಸರ್ವಾಂಗವು ಉತ್ಪನ್ನವಾಗುತ್ತದೆ ಮತ್ತು ಎರಡನೆಯದು ಕೆಲವು ಬಾಲಕರು ಪೂರ್ಣವಾಗಿ ಉತ್ಪನ್ನವಾದ ಮೇಲೂ ಶ್ವಾಸವನ್ನು ತೆಗೆದು ಕೊಳ್ಳುವುದಿಲ್ಲ. ಆ ಕಾಲದಲ್ಲಿ ನಾಳವನ್ನು ಸೂತ್ರದಿಂದ ಕಟ್ಟುತ್ತಾರೆ. ಆಗ ಶ್ವಾಸ ತೆಗೆದುಕೊಳ್ಳಲು ಪ್ರಾರಂಭಿಸುತ್ತಾನೆ. ಮೂರನೆಯದು ನಾಳವು ಕೆಲವು ಸಾರಿ ಗರ್ಭಪ್ರಶ್ನೆಯಿಂದ ಇಷ್ಟಕಾಲ ಸಿಕ್ಕುತ್ತದೆಂದು ಚೆನ್ನಾಗಿ ಪರಿಶೋಧಿಸಿರುತ್ತೇನೆ. ಆದರೆ ಶಿರೋದಯ ಕಾಲ ಸಿಗುವುದಿಲ್ಲ; ಸರಿಯಾದ ಶೀರ್ಷೋದಯ ಸಿಕ್ಕಿದರೂ ಅದು ಅಷ್ಟು ಉತ್ತಮವಾದುದಲ್ಲ. ಈ ಪ್ರಕಾರ ನಿಶ್ಚಯವಾಗುತ್ತದೆ - ಪ್ರಾಣವೆಂಬುದು ಕೇವಲ ವಾಯು ಮಾತ್ರದಿಂದ ಉಂಟಾಗುವುದು, ಯಾವಾಗ ಹುಟ್ಟಿದ ಶಿಶು (ಬಾಲಕ) ಅಥವಾ ಪ್ರಾಣಿ ಶ್ವಾಸ ತೆಗೆದುಕೊಳ್ಳಲು ಪ್ರಾರಂಭ ಮಾಡುತ್ತದೋ, ಆಗ ಪ್ರಾಣ ಉಂಟಾಗುತ್ತದೆ. ಈ ಕಾಲ ನಿರ್ಣಯ ಮಾಡುವುದು ಸಮ್ಮತವಾದದ್ದು. ಇದನ್ನು ಯಾರೂ ಪರೀಕ್ಷೆ ಮಾಡಿ ನೋಡಿಲ್ಲ. ಈ ಪರೀಕ್ಷೆಯನ್ನು ನನ್ನಂತೆ ಬಹಳ ಕಾಲ ವಿಚಾರ ಮಾಡುವವರಾಗಿರಬಹುದು. ಇದಕ್ಕೆ ಕೆಲವರು ಆಕ್ಷೇಪಣೆ ಮಾಡಬಹುದು. ಶ್ವಾಸ ತೆಗೆದುಕೊಳ್ಳುವುದಕ್ಕೆ ಪ್ರಾರಂಭವಾದ ಮೇಲೆ ಪ್ರಾಣಬರುತ್ತದೆಂದರೆ ಮುಂಚೆಯೇ ಗರ್ಭದಲ್ಲಿ ಮೃತವಾಗಿದ್ದನೇ ? ಎಂದು ತಿಳಿಯಬಹುದು, ಇದಕ್ಕೆ ಕಾರಣವಿದೆ. ಏನೆಂದರೆ:- ಗರ್ಭದಲ್ಲಿ ಪ್ರಾಣವಿಲ್ಲದೆ

ಇರಲಿಲ್ಲ, ಪ್ರಾಣಸಹಿತವಾಗಿಯೇ ಇದ್ದ. ಆದರೆ ತಾಯಿಯ ಪ್ರಾಣದ ಸಂಗಡ ಈ ಬಾಲಕನು ಜೀವಿಸುತಲಿದ್ದ. ಅದು ಹೇಗೆಂದರೆ :- ಬಾಲಕನ ನಾಭಿಯಲ್ಲಿ ನಾಳವಿರುತ್ತೆ. ಅದೇ ಮೂಲಧಾರವಾಗಿರುವುದು. (ವಿವರಣೆ) ಹೇಗೆ ವೃಕ್ಷಗಳಲ್ಲಿ ಉಂಟಾಗುವ ಫಲಗಳು ಬೇರಿನ ಮೂಲಕವಾಗಿ ರಸವನ್ನು ಸ್ವೀಕರಿಸಿ ಪುಷ್ಟಿಯನ್ನು ಹೊಂದುತ್ತವೋ ಹಾಗೆಯೇ ಬಾಲಕನು ಗರ್ಭನಾಳ ದ್ವಾರವಾಗಿ ತಾಯಿಯ ಶರೀರದಿಂದ ಪುಷ್ಟಿಯನ್ನು ಹೊಂದುತ್ತಾನೆ. ರಕ್ತ ಬಾಲಕನ ಶರೀರಕ್ಕೂ ಮಾತೃ ಶರೀರಕ್ಕೂ ನಾಳದ್ವಾರದಿಂದ ಸಂಚರಿಸುತ್ತಲಿರುತ್ತದೆ. ಏನಾದರೂ ಭಕ್ಷ್ಯವಸ್ತುವನ್ನು ತಾಯಿ ಭುಜಿಸಿದರೆ ಅದರ ಸಾರ ತಾಯಿಯ ರಕ್ತದಲ್ಲಿ ಸೇರಿ ನಾಳಮೂಲಕ ಬಾಲಕನ ಸರ್ವಾಂಗದಲ್ಲಿಯು ಸಂಚರಿಸಿ ಪುಷ್ಟಿಯನ್ನು ಕೊಡುತ್ತಲಿದೆ. ತಾಯಿಯ ಶ್ವಾಸ ತೆಗೆದುಕೊಳ್ಳುವುದರಿಂದ ಪೃಥಕ್ಕಾಗಿ ಶ್ವಾಸ ತೆಗೆದುಕೊಳ್ಳುವ ಅವಶ್ಯಕವಿಲ್ಲ. ಜನ್ಮವಾದಮೇಲೆ ನಾಳಛೇದನ ಮಾಡಿದರೂ, ಅಥವಾ ಸೂತ್ರದಿಂದ ಬಂಧಿಸಿದರೂ ತಾಯಿಯ ಶರೀರದ ರಕ್ತ ಬಾಲಕನ ಶರೀರಕ್ಕೂ ಬಾಲಕನ ಶರೀರದ ರಕ್ತ ತಾಯಿಯ ಶರೀರಕ್ಕೂ ಸಂಚಾರವಾಗುವುದು ನಿಂತುಹೋಗುತ್ತದೆ. ಆಗ ಪ್ರತ್ಯೇಕವಾಗಿ ಶ್ವಾಸ ತೆಗೆದುಕೊಳ್ಳುವುದಕ್ಕೆ ಕಾರಣಭೂತವಾಗಿರುತ್ತದೆ. ಧರ್ಮಶಾಸ್ತ್ರ ಪ್ರಕಾರ ಬಾಲಕನು ಗರ್ಭದಲ್ಲಿರುತ್ತಾನಷ್ಟೆ. ೬ ತಿಂಗಳು ತುಂಬಿದನಂತರ ತಂದೆಗೆ ಒಂದು ವಿಧವಾದ ಅಶೌಚ ಸಂಭವಿಸುತ್ತದೆ. ಆದ್ದರಿಂದ ದೇವಪೂಜೆಗು ಕೆಲವು ನಿತ್ಯಕರ್ಮ ವಿನಹ ನೈಮಿತ್ಯ ಕರ್ಮಕ್ಕು ಅನರ್ಹನಾಗುತ್ತಾನೆ. ಅನಂತರ ಜನನವಾದಮೇಲೆ ೧೦ ದಿವಸದವರಿಗೂ ವೃದ್ಧಿಸೂತಕವಿರುತ್ತೆ. ಮತ್ತು ಜನ್ಮಕ್ಷಣದಲ್ಲಿ ತಂದೆಯೇ ಜಾತಕರ್ಮ ಮಾಡಬೇಕೆಂದು ಸೂತ್ರದಲ್ಲಿ ಉಕ್ತವಾಗಿರುತ್ತೆ. ಆದರೆ ಸೂತಕದಲ್ಲಿ ಹಾಗೆ ಮಾಡಬಹುದು. ಇದಕ್ಕೆ ನಿಶ್ಚಯ ಈ ಪ್ರಕಾರವಿರುತ್ತೆ. ಏನೆಂದರೆ - "ಜಾತ ಮಾತ್ರಸ್ಯ ಪುತ್ರಸ್ಯ ಪಿತಾಜಾತ ಕರ್ಮಕುರ್ಯಾತ್ ನಾಳಚ್ಛೇದನಾತ್ಪೂರ್ವಂ ಸಂಪೂರ್ಣ ಸಂಧ್ಯಾವಂದನಾತಿ ಕರ್ಮಣಿನಾಶೌಚಂ" ಇತಿ ಧರ್ಮಸಿಂಧೌ ಅಚ್ಛಿನ್ನನಾಭಿ ಕರ್ಮಣಿಕರ್ತವ್ಯಂ ಶ್ರಾದ್ಧಂವೈ ಪುತ್ರಜನ್ಮನಿ" ಇತಿ ಮನುಸ್ಮೃತೌ।। ಇತ್ಯಾದಿ ವಿಧಿವಾಕ್ಯಗಳ ಪ್ರಕಾರ ಆ ಸಮಯದಲ್ಲಿ ನಾಳಚ್ಛೇದನ ಪರ್ಯಂತ ಸೂತಕವಿರುವುದಿಲ್ಲ. ಗರ್ಭಸೂತಕವು ಬಾಲಕನು ಗರ್ಭವನ್ನು ಬಿಟ್ಟು ಬಂದನಂತರ ನಿಂತುಹೋಗುತ್ತದೆ. ಜನ್ಮಸೂತಕ ನಾಳಚ್ಛೇದನ ಮಾಡುವವರಿಗೂ ಉಂಟಾಗುವುದಿಲ್ಲ. ಆಗ ಶೀರ್ಷೋದಯ ಇಷ್ಟವಾದರೆ ಜನ್ಮದಿಂದಲೆ ಸೂತಕ ಉಂಟಾಗಬೇಕು. ಆದರೆ ಜಾತಕರ್ಮ ಹಾಗೆ ಉಂಟಾಗುತ್ತದೆ. ಆದರೆ ಧರ್ಮಶಾಸ್ತ್ರ ತಾತ್ಪರ್ಯ ಈ ಪ್ರಕಾರವಾಗಿದೆ. ನಾಳಚ್ಛೇದನ ಪರ್ಯಂತ ಜನ್ಮಸೂತಕ ಉಂಟಾಗುವುದಿಲ್ಲ. ಪರಂತು ಜನ್ಮವು ಪೂರಾ ಆಗಿರುವುದಿಲ್ಲ. ಆದರೆ ಇದರಲ್ಲಿ ಒಂದು ಶಂಕೆ ಇರುತ್ತದೆ.

ಆದರೆ ನಾಳಚ್ಛೇದನ ೧-೨ ಘಟಿಕಾ ಅಥವಾ ಕೆಲವು ಕಾಲ ಪರ್ಯಂತ ಮಾಡದೆ ಇದ್ದರೆ ಅವನ ಜನ್ಮವಾಗಲಿಲ್ಲವೇ ಏನು? ಇದಕ್ಕೆ ಈ ಪ್ರಕಾರ ಉತ್ತರ ಹೇಳಬೇಕು. ಧರ್ಮಶಾಸ್ತ್ರದಲ್ಲಿ ಹೇಳಿರುವುದೇನೆಂದರೆ:- ಗರ್ಭಸ್ಥವಾದ ಶಿಶುವು ಹೊರಗೆ ಬಂದಮೇಲೆ ೧ ಮುಹೂರ್ತ ಅಂದರೆ ೨ ಘಳಿಗೆ ಪರ್ಯಂತ ಜನ್ಮಸೂತಕ ಉಂಟಾಗುವುದಿಲ್ಲ ಮತ್ತು ನಾಳಚ್ಛೇದನ ವಿಲಂಬದಿಂದ ಮಾಡಿದರೆ ಆ ಬಾಲಕನು ಮಾತೃ ಶರೀರದ ರಕ್ತಗತಿ ನಿಂತು ಹೋಗುವುದರಿಂದ, ತನ್ನ ಶರೀರದಿಂದ ತಕ್ಕಷ್ಟು ಶ್ವಾಸಗತಿ ಉಂಟಾಗದೇ ಹೋದರೆ ಬದುಕದೇ ಹೋಗಬಹುದು. ನಾಳಚ್ಛೇದನ ವಿಲಂಬವಾಗುತ್ತೆಂದು ನೋಡಿಕೊಂಡು ಸ್ತ್ರೀಯರು ಛೇದನದಿಂದ ಯಾವ ಕಾರ್ಯ ಉಂಟಾಗಬೇಕೋ, ಮುಂಚೆಯೇ ಸೂತ್ರದಿಂದ ಕಟ್ಟುತ್ತಾರೆ. ನಾಳವನ್ನು ಕತ್ತರಿಸುವುದರಿಂದಲೂ ಅಥವಾ ನಾಳವನ್ನು ಕಟ್ಟುವುದರಿಂದಲೂ ಆಕಸ್ಮಿಕವಾಗಿ ಆ ನಾಳದ ಮೇಲೆ ಏನಾದರೂ ಪೀಡೆಯುಂಟಾದರೆ, ಅಥವಾ ಅಮುಕುವುದರಿಂದ ರಕ್ತವು ಮಾತೃಶರೀರದಿಂದ ಮಗುವಿನ ಶರೀರಕ್ಕೆ ಸೇರುವುದು ನಿಂತು, ಆ ಬಾಲಕನು ಪೃಥಕ್ಕಾಗಿ ಶ್ವಾಸ ತೆಗೆದುಕೊಳ್ಳುವನು. ಇದರಲ್ಲಿಯೂ ಬಾಲಕನು ಶ್ವಾಸ ತೆಗೆದುಕೊಳ್ಳುವ ಕಾಲ ಇಷ್ಟವಾಗಿರುವುದು.

ಸಮಸ್ತ ಶಾಸ್ತ್ರದಿಂದಲೂ ದೃಢವಾಗಿರುವುದೇನೆಂದರೆ :- ಜೀವಮಾನದ (ಆಯುಷ್ಮದ) ಪರಿಮಾಣ ಕೇವಲ ಶ್ವಾಸೋಚ್ಛ್ವಾಸದ ಮೇಲಯೇ ಆಗಿರುತ್ತೆ. ಯಾವಾಗ ಪ್ರಾಣಿಯು ದೇಹ ಬಿಡುತ್ತದೋ ಆಗ ಕೇವಲ ಶ್ವಾಸ ಬಿಟ್ಟು ಬಿಡುತ್ತದೆ. ಆವಾಗ ಶ್ವಾಸತೆಗೆದುಕೊಳ್ಳುವುದು ನಿಂತು ಹೋಗುತ್ತದೋ ಆಗ ಸತ್ತು ಹೋದನೆಂದು (ಸತ್ತು ಹೋಯಿತೆಂದು) ಹೇಳೋಣಾಗುತ್ತದೆ. ಅಥವಾ ಅಗ್ನಿ ಮೂಲವಾಗಿ ಯಾದರೂ ನೀರಿನಲ್ಲಿಯಾದರೂ ಪ್ರಾಣ ಹೋಗುವಲ್ಲಿ ಇದೇ ಗತಿಯೇ ಉಂಟಾಗುತ್ತದೆ. ಆಯುಸ್ಸಿನ ಪ್ರಾರಂಭವು ಜನ್ಮದಲ್ಲಿ ಶ್ವಾಸ ತೆಗೆದುಕೊಳ್ಳುವುದರಿಂದ ಉಂಟಾಗುತ್ತದೆ. ಗರ್ಭದಿಂದ ಶಿರಸ್ಸು ಅಥವಾ ದೇಹ ಹೊರಗೆ ಬರುವುದರಿಂದ ಮಾತ್ರವೆ ಅಲ್ಲ. ಈ ಪ್ರಕಾರವಾದರೂ ಶೀರ್ಷೋದಯ ಹಿಡಿದು ಕಾಲ ನಿಶ್ಚಯ ಮಾಡುವುದು ಯೋಗ್ಯವಲ್ಲ. ಶ್ವಾಸ ತೆಗೆದುಕೊಳ್ಳುವುದರಿಂದ ಇಷ್ಟಕಾಲ ನಿರ್ಧರಿಸುವುದು ನ್ಯಾಯವಾಗಿರುವುದು ವೇದಶಾಸ್ತ್ರದಲ್ಲಿಯು ಇದೇ ವಿಷಯವೇ ಪುಷ್ಟೀಕರಿಸಿರುತ್ತಾರೆ. ಏನೆಂದರೆ-ಅತಿ ಮಾತನಾಡುವುದರಿಂದ, ಅತ್ಯಂತ ಓಡುವುದರಿಂದ, ಅತಿ ಶ್ರಮಪಡುವುದರಿಂದ ಶ್ವಾಸ ಸಂಖ್ಯೆಯು ದಿನಗತಿಗಿಂತಲೂ ಹೆಚ್ಚಾಗಿ ಮಾಡಲಾರಂಭಿಸಿ ಆಯುಃಕ್ಷೀಣವಾಗುತ್ತದೆಂದು ನಿರ್ಧರಿಸಲ್ಪಟ್ಟಿರುತ್ತದೆ. ಕಾರಣವೇನೆಂದರೆ :- ಈ

ಮೇಲೆ ಹೇಳಲ್ಪಟ್ಟಂತೆ ಮಾಡುವುದರಿಂದ ಶ್ವಾಸ ಹೆಚ್ಚಾಗಿ ವ್ಯಯವಾಗಿ (ಖರ್ಚಾಗಿ) ಹೋಗುತ್ತದೆ. ಆಯುಃಪ್ರಮಾಣ ಕೇವಲ ಶ್ವಾಸದ ಮೇಲೆ ಇರುತ್ತದೆ. ಹೆಚ್ಚಾಗಿ ಶ್ವಾಸ ವ್ಯಯವಾದರೆ ಅವನ ಆಯುಸ್ಸಿನಲ್ಲಿ ಅಷ್ಟು ಕಡಿಮೆ (ನ್ಯೂನ) ಯಾಗುತ್ತದೆ. ಜನ್ಮದಿಂದ ಮರಣದವರೆಗೆ ಎಷ್ಟು ಶ್ವಾಸಗಳು ಜೀವ ತೆಗೆದುಕೊಳ್ಳುತ್ತದೋ ಅಷ್ಟು ಆಯಸ್ಸುಂಟಾಗುತ್ತದೆ. ಶ್ವಾಸ ಮುಗಿದುಹೋಗು ವುದರಿಂದ ಯಾವ ಪ್ರಕಾರ ಮರಣ ಉಂಟಾಗುತ್ತದೋ ಆ ಪ್ರಕಾರವೇ ಪ್ರಥಮ ಶ್ವಾಸ ತೆಗೆದುಕೊಳ್ಳುವುದರಿಂದ ಜನ್ಮವೂ ಉಂಟಾಗುತ್ತದೆ. ಇದನ್ನು ಕೆಲವು ವಿಜ್ಞಜನರು ಜನ್ಮ ಶಬ್ದದ ಪದಾರ್ಥ "ಜಾಯತೆ ಇತಿ ಜನ್ಮ" ಅರ್ಥಾತ್ ಯಾವಾಗ ಜನ್ಮಿಸಿದ ಆಗಲೇ ಜನ್ಮವೆಂದು ಹೇಳುವರು. ಶ್ವಾಸ ತೆಗೆದುಕೊಳ್ಳುವುದರಿಂದ ಅಲ್ಲವೆಂದು ತಿಳಿಯುತ್ತಾರೆ. ಅವರು ಮುಖ್ಯವಾಗಿ ಜ್ಯೋತಿಶ್ಶಾಸ್ತ್ರದ ಅನಭಿಜ್ಞ ಪಂಡಿತರು. ಇಂಥಹ ಪದಾರ್ಥ ಹುಡುಕುವರು. ಇಂಥಾ ಅಭಿಪ್ರಾಯ ನಾನು ಖಂಡಿಸುತ್ತೇನೆ. ಪರಂತು ಇಷ್ಟು ವ್ಯವಧಾನವಿರುತ್ತೆ. ಹೇಗೆಂದರೆ:- ೫ ಘಳಿಗೆ ರಾತ್ರಿ ಶೇಷ ಅರುಣೋದಯದಿಂದ ಹಗಲಿನ ನ್ಯಾಯವಾದ ಕೃತ್ಯ ಸಂಧ್ಯಾವಂದನಾದಿ ಕರ್ಮಾಚರಣೆಗೆ ವಿಧಿ ಆಜ್ಞೆ ಇರುತ್ತೋ, ಹಾಗೆ ಉದಯೇಷ್ಟಂ ಘಳಿಗೆ ೧ ವಿಘಳಿಗೆ ಇರುತ್ತೆ. ಅರ್ಧೋದಯದಿಂದ ಏಕೆ ಆಗುವುದಿಲ್ಲ. ಏನೆಂದರೆ "ಪಂಚಪಂಚ ಉಷಃಕಾಲ" ಇತ್ಯಾದಿ ವಚನದಿಂದ ೫ ಘಳಿಗೆ ರಾತ್ರಿ ಶೇಷದಿಂದ ದಿನಮಾನವನ್ನಾಗಿ ತಿಳಿಯುವರು. ಆದರೆ ಅರುಣೋದಯದಿಂದ ಹಗಲಿನ ಕೃತ್ಯ ಯಾವತ್ತು ಆಗುವುದು. ಆದರೆ ಸೂರ್ಯೋದಯ ಮಾತ್ರವೆ ಆಗಲಿಲ್ಲ. ಈ ಪ್ರಕಾರವಾಗಿಯೆ ಬಾಲಕನು ಜನ್ಮವಾದ ಮೇಲೂ ಅಂದರೆ ಗರ್ಭದಿಂದ ಪ್ರಸವ ಮಾತ್ರ ಆಯಿತು. ಆಯುಸ್ಸಿನ ಆರಂಭ ಮಾತ್ರ ಶ್ವಾಸ ತೆಗೆದುಕೊಳ್ಳುವವರಿಗೂ ಪ್ರಾರಂಭವಾಗುವುದಿಲ್ಲ. ವಿದ್ವಾಂಸರು ತಮ್ಮ ಬುದ್ಧಿ ಬಲದಿಂದ ಈ ವಿಷಯುವನ್ನು ಚೆನ್ನಾಗಿ ತಿಳಿದುಕೊಳ್ಳುವರು. ಇಂತು ಯಾರ ಹೃದಯಕಮಲ ಹೋರಾಶಾಸ್ತ್ರದ ಸೂಕ್ಷ್ಮ ವಿಚಾರದಿಂದ ಮುಕುಳಿತವಾಗುವುದಿಲ್ಲವೋ ಅವರಿಗೆ ಪ್ರಕಾಶಪಡಿಸುವ ನಿಮಿತ್ತ ಇಷ್ಟು ಉದಾಹರಣೆಗಳನ್ನು ಇಲ್ಲಿ ಬರೆಯಬೇಕಾಯಿತು. ಇಂಥಾ ಪ್ರಮಾಣಗಳು ಅನೇಕ ಪ್ರಕಾರವಾಗಿರುತ್ತದೆ. ಯಾವ ಪ್ರಕಾರದಿಂದ ಶ್ವಾಸ ತೆಗೆದು ಕೊಳ್ಳುವ ಸಮಯ ಇಷ್ಟಕಾಲ ಉತ್ತಮವಾಗಿರುವುದೋ, ಅದೇ ಪ್ರಮಾಣವಾದ ಕಾಲವಾಗಿರುವುದು.

ಈ ಕಾಲದಲ್ಲಿ ಕೆಲವರು ಜ್ಯೋತಿಷ್ಕರು ಹೇಳುವ ಫಲ ಸುಳ್ಳಾಗಿರುವುದು. ಮತ್ತು ಪೂರ್ತಿಯಾಗಿ ಹೇಳುವುದಿಲ್ಲ. ಮತ್ತು ಸಂಪೂರ್ಣವಾಗಿ ತಿಳಿಯಬರುವುದಿಲ್ಲ. ಜ್ಯೋತಿಶಾಸ್ತ್ರವೇನು ಪ್ರಯೋಜನವಾದ ಶಾಸ್ತ್ರವಲ್ಲ. ಬ್ರಾಹ್ಮಣರು ತಮ್ಮ

ಸ್ವಪ್ರಯೋಜಕ್ಕೋಸ್ಕರ ಪ್ರಾಮುಖ್ಯವಾಗಿ ಮಾಡಿರುವರು ಎಂದು ಹೇಳುತ್ತಾರೆ. ಮತ್ತು ವಿಚಾರವಿಲ್ಲದೆ ಶಾಸ್ತ್ರಮರ್ಯಾದೆಯಂ ತಿಳಿಯದೆ ಅಲ್ಲಗಳೆಯುತ್ತಾರೆ. ಫಲದಲ್ಲಿ ವಿಪರೀತ ಉಂಟಾಗುವ ಕಾರಣ ಈ ಪ್ರತೀತಿ ಉಂಟಾಗುವುದು. ಪ್ರಾಯಶಃ ಅನೇಕರು ಅಲ್ಪ ಸ್ವಲ್ಪ ಓದಿ ಅಥವಾ ಕೇಳಿ ಚಮತ್ಕಾರದಿಂದ ತಮ್ಮ ಲಾಭನಿಮಿತ್ತ ಹೇಳತೊಡಗುತ್ತಾರೆ. ಗ್ರಹಗಳ ಸ್ಪಷ್ಟೀಕರಣ ಅವಸ್ಥಾ ಬಲಾಬಲದ ನ್ಯೂನಾಧಿಕತೆ ವಿಚಾರಮಾಡದೆ, ಹೇಗೆ ನಿಜವಾಗುತ್ತದೆ ? ಇದರಲ್ಲಿ ಎಲ್ಲರ ಜನ್ಮಕಾಲ (ಇಷ್ಟಕಾಲ) ಸರಿಯಾಗಿರುವುದಿಲ್ಲ. ಇದರಲ್ಲಿ ಕೆಲವರು ಹೇಳುತ್ತಾರೆ, ಅದೇನೆಂದರೆಃ- ಜ್ಯೋತಿಷ್ಕನು ಸೂತಿಕಾಗೃಹದ ಬಾಗಿಲಿನಲ್ಲಿ ಇದ್ದವನು ತನಗೆ ಇಷ್ಟಕಾಲ ಸರಿಯಾಗಿ ದೊರಕಿತೆಂದು ತಿಳಿಯುವನು. ಆದರೆ ಆದರಲ್ಲಿ ಕಾಲನಿಶ್ಚಯ ಸರಿಯಾಗಿರಲಾರದು. ಇಷ್ಟಕಾಲ ಸ್ತ್ರೀಯರ ಕೈಯಲ್ಲಿರುತ್ತೆ. ಜ್ಯೋತಿಷ್ಕನು ಸೂತಿಕಾಗೃಹಸ್ಥರಾದ ಸ್ತ್ರೀಯರ ಮಾತಿನ ಮೇಲೆ ಇಷ್ಟಸಾಧನೆ ಮಾಡುತ್ತಾನೆ. ಕಾಲಮಾನವನ್ನು ಅನೇಕ ವಿಧವಾದ ಯಂತ್ರೋಪಕರಣಗಳಿಂದ ಸರಿಯೆಂದು ಹೇಳುವರು. ಸೂತಿಕಾಗೃಹದಲ್ಲಿ ಬುದ್ಧಿವಂತಳಾದ ಸ್ತ್ರೀಯು ಇದ್ದುಕೊಂಡು ಬಾಲಕನು ಶ್ವಾಸ ತೆಗೆದುಕೊಳ್ಳುವ ಕಾಲವನ್ನು ಅತಿ ಶೀಘ್ರವಾಗಿ ತಿಳಿಸಬೇಕು. ಇದರ ಪರೀಕ್ಷಾರ್ಥ ಹೊರಗೆ ಜ್ಯೋತಿಷ್ಕನಾಗಲೀ, ಬುದ್ಧಿವಂತನಾದವನು ಯಾರೇ ಆಗಲಿ ಸರಿಯಾದ ಕಾಲವನ್ನು ಕಂಡುಹಿಡಿದರೆ ಜನ್ಮೇಷ್ಟಕಾಲ ಸರಿಯಾಗಿ ಸಿಕ್ಕುವುದು. ಇದರ ಮೇಲೆ ಸ್ವಲ್ಪ ವ್ಯತ್ಯಾಸ ಬಂದರೂ ಶಾಸ್ತ್ರಾಧಾರದಮೇಲೆ ಹುಡುಕಿಕೊಳ್ಳಬಹುದು.

ಮತ್ತೊಂದು ವಿಶೇಷವೇನೆಂದರೆ - ಶಿಶು ಜನನವಾದ ಒಡನೆಯೇ ಅಳತೊಡಗುವುದು. ಅದು ನಾಳಚ್ಛೇದನಾತ್ಪೂರ್ವವೇ ಆಗಿದ್ದರೆ, ಆ ಅಳತೊಡಗಿದ ಕಾಲಕ್ಕೆ ಹಿದಿನ ಕಾಲವೇ ಇಷ್ಟಕಾಲವೆಂದು ತಿಳಿಯಬೇಕು. ಇದು ಸರ್ವತ ಅನ್ವಯಿಸುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರವೇ ಉಪಯೋಗವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ನಾಳಚ್ಛೇದನವಾದ ನಂತರವೂ ಕೆಲವುಕಾಲ ರೋದನ ಮಾಡಲು ಪ್ರಾರಂಭಿಸುವುದಿಲ್ಲ. ಆದ್ದರಿಂದ ಈ ವಿಷಯ ಚೆನ್ನಾಗಿ ಜ್ಞಾಪಕದಲ್ಲಿಡಬೇಕು.

# ಪ್ರಸೂತಿಕಾಲ ಲಕ್ಷಣಾಖ್ಯ ಪ್ರಕರಣಂ

ಮೂಲ|| ಪಿತುರ್ಜಾತಃ ಪರೋಕ್ಷಸ್ಯ ಲಗ್ನಮಿಂದಾವಪಶ್ಯತಿ || ವಿದೇಶಸ್ಥಸ್ಯ ಚರಭೇ ಮಧ್ಯಾದ್ಭ್ರಷ್ಟೇ ದಿವಾಕರೆ ||೧||

ಟೀಕು|| ಈ ಶ್ಲೋಕ ಮತ್ತು ಮುಂದಿನ ಶ್ಲೋಕದಿಂದ ಪಿತೃಪರೋಕ್ಷ ಜನನ ಯೋಗವನ್ನು ಹೇಳುತ್ತಾನೆ. ಇಂದೌ-ಜನ್ಮಕಾಲ ಚಂದ್ರನು, ಲಗ್ನಂ-ಜನ್ಮಕಾಲ ಲಗ್ನವನ್ನು, ಅಪಶ್ಯತಿ-ನೋಡದೆ ಇದ್ದರೆ, ಪಿತುಃ ಪರೋಕ್ಷಸ್ಯ-ತಂದೆ ಸಮೀಪದಲ್ಲಿಲ್ಲದಾಗ, ಜಾತಃ-ಜನ್ಮಿಸಿದವನೆಂದು ತಿಳಿಯಬೇಕು. ದಿವಾಕರೇ-ಸೂರ್ಯನು, ಮಧ್ಯಾತ್-ದಶಮಸ್ಥಾನಕ್ಕಿಂತ, ಭ್ರಷ್ಟೇ-ಹಿಂದೆ ಇದ್ದರೆ, ಚರಭೇ-ಚರರಾಶಿಯಲ್ಲಿ (ಅಂದರೆ ನವಮ ಅಷ್ಟಮ ರಾಶಿಗಳಲ್ಲಿದ್ದು ಲಗ್ನವನ್ನು ಚಂದ್ರನು ನೋಡದಿದ್ದರೆ) ಪಿತುರ್ವಿದೇಶಸ್ಥಸ್ಯ-ತಂದೆ ದೇಶಾಂತರದಲ್ಲಿದ್ದಾಗ, ಜಾತಃ-ಹುಟ್ಟಿದವನೆಂದು ತಿಳಿಯಬೇಕು. ಅಂದರೆ ಲಗ್ನವನ್ನು ಚಂದ್ರನು ನೋಡದೆ, ಆ ಲಗ್ನಕ್ಕೆ ನವಮ ಅಷ್ಟಮ ರಾಶಿಗಳು ಚರರಾಶಿಗಳಾಗಿ ಅಲ್ಲಿ ಸೂರ್ಯನಿದ್ದರೆ ಆಗ ಹುಟ್ಟಿದವನ ತಂದೆ ಆ ಪುತ್ರ ಜನನ ಕಾಲದಲ್ಲಿ ವಿದೇಶದಲ್ಲಿದ್ದನೆಂದು ತಿಳಿಯತಕ್ಕದ್ದು. ಚಂದ್ರನು ಲಗ್ನವನ್ನು ನೋಡಿ ಲಗ್ನಕ್ಕೆ ನವಮ ಅಷ್ಟಮರಾಶಿಗಳು ಸ್ಥಿರರಾಶಿಗಳಾಗಿ ಅಲ್ಲಿ ಸೂರ್ಯನಿದ್ದರೆ ಹುಟ್ಟಿದವನ ತಂದೆ ಸಮಕ್ಷಮದಲ್ಲಿರದೆ (ಸಮೀಪಸ್ಥನಲ್ಲದೆ) ಇರುವನು. ಚಂದ್ರನು ಲಗ್ನವನ್ನು ನೋಡಿದರೆ, ನವಮ ಅಷ್ಟಮಸ್ಥಾನಗಳು ದ್ವಿಸ್ವಭಾವ ರಾಶಿಗಳಾದರೆ, ಆ ರಾಶಿಗಳಲ್ಲಿ ಸೂರ್ಯನಿದ್ದರೆ ಆ ಕಾಲದಲ್ಲಿ ಹುಟ್ಟಿದವನ ತಂದೆ ಮಧ್ಯಮಾರ್ಗಸ್ಥನಾಗಿದ್ದನೆಂದು ತಿಳಿಯಬೇಕು. ಈ ವಿಷಯಕ್ಕೆ ಉದಾಹರಣೆ, ಸಾರಾವಳಿಯಲ್ಲಿ ||ಶ್ಲೋಕ|| ಹೋರಾಮವೀಕ್ಷ್ಯಮಾಣೆ ಪಿತರಿಪರೋಕ್ಷಸ್ಥಿತಿ ಶಶಿನಿಜಾತಃ || ಮೇಷೂರಣಾಚ್ಯುತೇವಾ ಚರಭೆ ಭೌನೌ ವಿದೇಶಗತಃ ||೧|| ಎಂದುಕ್ತವಾಗಿರುತ್ತೆ.

ಮೂಲ|| ಉದಯಸ್ಥೇ ಪಿವಾಮಂದೆ ಕುಜೇವಾಸ್ತಂ ಸಮಾಗತೆ | ಸ್ಥಿತೇ ವಾಂತಃ ಕ್ಷಪಾನಾಥೇ ಶಶಾಂಕಸುತ ಶುಕ್ರಯೋಃ ||೨||

ಟೀಕು|| ಮತ್ತು ಮೂರು ವಿಧವಾದ ಪಿತೃಪರೋಕ್ಷ ಜನನಯೋಗ ಹೇಳಲ್ಪಡುತ್ತೆ. ಮಂದೆ-ಶನ್ಯೈಶ್ಚರನು, ಉದಯಸ್ಥೇ-ಲಗ್ನದಲ್ಲಿದ್ದರೆ ಪಿತೃಪರೋಕ್ಷದಲ್ಲಿ ಜನನಯೋಗ, ಅಥವಾ ಕುಜೆ-ಮಂಗಳನು, ಅಸ್ತಂ-ಸಪ್ತಮರಾಶಿಯನ್ನು, ಸಮಾಗತೇ-ಹೊಂದಿದರೆ, ಪಿತೃಪರೋಕ್ಷ ಜನನಯೋಗ, ಕ್ಷಪಾನಾಥೆ-ಚಂದ್ರನು,

ಶಶಾಂಕಸುತ ಶುಕ್ರಯೋಃ - ಬುಧ ಶುಕ್ರರ, ಅಂತಃ-ಮಧ್ಯದಲ್ಲಿ, ಸ್ಥಿತೇ (ಸತಿ) ಇದ್ದರೆ, ಪಿತೃಪರೋಕ್ಷ ಜನನಯೋಗ. ಅದು ಹೇಗೆಂದರೆ:- ಚಂದ್ರನ ದ್ವಾದಶದಲ್ಲಿ ಶುಕ್ರ, ದ್ವಿತೀಯದಲ್ಲಿ ಬುಧ ೧ ಯೋಗ, ಚಂದ್ರನ ದ್ವಾದಶದಲ್ಲಿ ಬುಧ, ದ್ವಿತೀಯದಲ್ಲಿ ಶುಕ್ರ ೧ ಯೋಗ. ಈ ಪ್ರಕಾರ ಒಂದೇ ರಾಶಿಯಲ್ಲಿ ಚಂದ್ರನಿಂದ ಹಿಂಭಾಗದಲ್ಲಿಯೂ ಮುಂಭಾಗದಲ್ಲಿಯೂ ಬುಧ ಶುಕ್ರರು ಇದ್ದರೆ ಚಂದ್ರನು ಲಗ್ನವನ್ನು ನೋಡಿದರೂ ಪಿತೃ ಪರೋಕ್ಷ ಜನನಯೋಗ. ಈ ಪ್ರಕಾರವಾಗಿಯೇ ಲಘುಜಾತಕದಲ್ಲಿ ।।ಶ್ಲೋಕ।। ಚಂದ್ರೇಲಗ್ನಮುಪಶ್ಯತಿ ಮಧ್ಯೇವಾ ಸೌಮ್ಯಶುಕ್ರಯೋಶ್ಚಂದ್ರೇ । ಜನ್ಮಪರೋಕ್ಷಸ್ಯ ಪಿತುರ್ಯಮೋದಯೇವಾ ಕುಜೇ ಚಾಸ್ತೆ ।।೨।। ಎಂದುಕ್ತವಾಗಿರುತ್ತೆ. ಮತ್ತು ಜಾತಕ ಚಂದ್ರಿಕೆಯಲ್ಲಿ ।। ಜಯ ದೇವಃ ।।ಶ್ಲೋಕ।। ವಿಲಗ್ನಭಂಗೊ ಶಶಿನೇಕ್ಷ್ಯಮಾಣೆ ಪಿತುಃ ಪರೋಕ್ಷಸ್ಯಚ ಜಾತಕಸ್ಸ್ಯಾತ್ ।। ಮಧ್ಯೆಜ್ಞ ಭೃಗ್ವೋರಥವಾ ಶಶಾಂಕೇತನೌ ಶನಾವಸ್ತ ಗೃಹೇಮಹೀಜೆ ।।೩।। ಆದ್ದರಿಂದ ಗ್ರಂಥಕರ್ತರ ಅಭಿಪ್ರಾಯ ದೃಢವಾಯಿತು.

## ಸರ್ಪ ಜನನಯೋಗಃ

ಮೂಲ।। ಶಶಾಂಕೇ ಪಾಪಲಗ್ನೇವಾ ವೃಶ್ಚಿಕೇಶ ತ್ರಿಭಾಗಗೆ ।। ಶುಭೈಸ್ಸ್ವಾಯ ಸ್ಥಿತೈರ್ಜಾತಃ ಸರ್ಪಸ್ತದ್ವೇಷ್ಟಿತೋಪಿವಾ ।।೩।।

ಅವ ।। ಸರ್ಪಜನನ ಯೋಗವನ್ನು, ಸರ್ಪವೇಷ್ಟಿತ ಜಂತು ಜನನ ಯೋಗವನ್ನು ಹೇಳುತ್ತಾನೆ.

ಟೀಕು।। ಶಶಾಂಕೆ-ಚಂದ್ರನು, ವೃಶ್ಚಿಕೇಶತ್ರಿಭಾಗಗೆ-ವೃಶ್ಚಿಕ ಕುಜನ ದ್ರೇಕ್ಕಾಣದಲ್ಲಿದ್ದು, *ಸ್ವಾಯಸ್ಥಿತೈ-ದ್ವಿತೀಯ ದ್ವಾದಶ ಸ್ಥಾನಗಳಲ್ಲಿ, ಶುಭೈ-ಶುಭಗ್ರಹ ಗಳಿದ್ದರೆ, ಅವರಿಂದ, ಸರ್ಪಃ-ಸರ್ಪ ಹುಟ್ಟುವುದು. ಅಂದರೆ ಮೇಷ ಪ್ರಥಮ ದ್ರೇಕ್ಕಾಣ, ಕರ್ಕಾಟಕ ದ್ವಿತೀಯ ದ್ರೇಕ್ಕಾಣ, ಸಿಂಹ ತೃತೀಯ ದ್ರೇಕ್ಕಾಣ, ವೃಶ್ಚಿಕ ಪ್ರಥಮ ದ್ರೇಕ್ಕಾಣ, ಧನು ದ್ವಿತೀಯ ದ್ರೇಕ್ಕಾಣ, ಮೀನ ತೃತೀಯ ದ್ರೇಕ್ಕಾಣ ಇವುಗಳು ಕುಜಾಧಿಪ ದ್ರೇಕ್ಕಾಣಗಳಾದ್ದರಿಂದ ಇವುಗಳಲ್ಲಿ ಯಾವುದಾದರು ದ್ರೇಕ್ಕಾಣವಾಗಿ ಅಲ್ಲಿ ಚಂದ್ರನಿದ್ದು, ದ್ವಿತೀಯೈಕಾದಶ ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ ಸರ್ಪ ಹುಟ್ಟುವುದೆಂದು ಹೇಳತಕ್ಕದ್ದು. ಕೆಲವರು ವೃಶ್ಚಿಕ ದ್ರೇಕ್ಕಾಣಕ್ಕೆ ಮಾತ್ರವೇ ಎಂದು ಅರ್ಥ ಮಾಡಿರುವರು.

---

* ನವಾಂಶ ದ್ರೇಕ್ಕಾಣ ಪದಕ ನೋಡಿ.

## ಸರ್ಪವೇಷ್ಟಿತ ಜಂತು ಜನ್ಮಯೋಗಃ

ಪಾಪಲಗ್ನೆ-ಪಾಪಗ್ರಹ ಲಗ್ನದಲ್ಲಿ, ವೃಶ್ಚಿಕೇಶ ತ್ರಿಭಾಗೆ-ಕುಜ ದ್ರೇಕ್ಕಾಣಗಳಲ್ಲಿ, ಅಂದರೆ-ಪಾಪಗ್ರಹ ಲಗ್ನಗಳಲ್ಲಿ ಮೇಷ ಪ್ರಥಮ ದ್ರೇಕ್ಕಾಣದಲ್ಲಿ ಚಂದ್ರನು ಕ್ಷೀಣವಾಗಿರುವಾಗ ಕರ್ಕಾಟಕ ದ್ವಿತೀಯ ದ್ರೇಕ್ಕಾಣ, ಸಿಂಹ ತೃತೀಯ ದ್ರೇಕ್ಕಾಣ, ಸಿಂಹ ತೃತೀಯ ದ್ರೇಕ್ಕಾಣ, ವೃಶ್ಚಿಕ ಪ್ರಥಮ ದ್ರೇಕ್ಕಾಣ ಇವು ಕುಜದ್ರೇಕ್ಕಾಣಗಳು. ಇವುಗಳಲ್ಲಿ ಯಾವುದಾದರು ದ್ರೇಕ್ಕಾಣವಾಗಿ ಅದು ಲಗ್ನಗತವಾದರೆ ಆ ಲಗ್ನಕ್ಕೆ ದ್ವಿತೀಯ ಲಾಭಗಳಲ್ಲಿ ಶುಭ ಗ್ರಹಗಳಿದ್ದರೆ, ಆ ಕಾಲದಲ್ಲಿ ಜನ್ಮಿಸಿದ ಪ್ರಾಣಿಯು ಸರ್ಪವೇಷ್ಟಿತವಾಗಿರುವುದು. ಈ ವಿಷಯಕ್ಕೆ ಗರ್ಗಸಂಹಿತೆಯಲ್ಲಿ ||ಶ್ಲೋಕ|| ಭೌಮದ್ರೇಕ್ಕಾಣಗೇಚಂದ್ರೇ ಸೌಮ್ಯೈರಾಯ ಧನಸ್ಥಿತೈಃ । ಸರ್ಪಸ್ತದ್ವೇಷ್ಟಿತ ಸ್ತದ್ವತ್ಪಾಪಲಗ್ನೆ ವಿನಿರ್ದಿಶೇತ್ ||೪|| ಎಂದು ಗರ್ಗಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತೆ. ಏಕಕೋಶವೇಷ್ಟಿತ ದ್ವಿಕಪ್ರಸವಯೋಗಃ.

ಮೂಲ|| ಚತುಷ್ಪದಗತೇಭಾನೌ ಶೇಷೈರ್ವೀರ್ಯಸಮನ್ವಿತೈಃ || ದ್ವಿತನುಸ್ಥೈಶ್ಚ ಯಮಳೌ ಭವತಃ ಕೋಶವೇಷ್ಟಿತೌ ||೪||

ಟೀಕು|| ಏಕಕೋಶವೇಷ್ಟಿತ ದ್ವಿಪ್ರಸವ ಯೋಗ ಹೇಳಲ್ಪಡುತ್ತೆ. ಭಾನೌ-ರವಿಯು, ಚತುಷ್ಪದಗತೆ-ಚತುಷ್ಪದ ರಾಶಿಗಳಾದ, ಮೇಷ, ವೃಷಭ, ಸಿಂಹ, ಧನುರಪರಾರ್ಧ ಮಕರ ಪೂರ್ವಾರ್ಧ ಈ ರಾಶಿಗಳಲ್ಲಿ ಯಾವುದಾದರು ಒಂದು ರಾಶಿಯಲ್ಲಿದ್ದು, ಶೇಷೈ-ಉಳಿದ ಗ್ರಹಗಳು, ವೀರ್ಯಸಮನ್ವಿತೈ-ಬಲವಂತರಾಗಿ, ದ್ವಿತನುಸ್ಥೈ-ದ್ವಿಸ್ವಭಾವ ರಾಶಿಗಳಲ್ಲಿ (ಅಂದರೆ ಮಿಥುನ, ಕನ್ಯಾ, ಧನಸ್ಸು, ಮೀನ ಈ ರಾಶಿಗಳಲ್ಲಿದ್ದರೆ) ಕೋಶವೇಷ್ಟಿತೌ-ಏಕಜರಾ ಕೋಶ ವೇಷ್ಟಿತವಾದ, ಯಮಳೌ-ಎರಡು ಮಕ್ಕಳು, ಭವತಃ-ಹುಟ್ಟುವರು. ಅಂದರೆ ಈ ಯೋಗದಲ್ಲಿ ಯಮಳ ಜನ್ಮವಾಗುವುದೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಜಯದೇವಃ ||ಶ್ಲೋಕ|| ಚತುಷ್ಪದರ್ಕ್ಷೇಚರವೌಸವೀರ್ಯೈ ಶೇಷೈರ್ದ್ವಿದೇಹೋಪ ಗತೈರ್ಗ್ರಹೇಂದ್ರೈ|| ||ಧ್ರುವಂ ಭವೇತಾಂ ಯಮಲಾಚಜಾತೌ ಕೋಶೇನಯುಕ್ತಾ ವಿತಿಕೇಚಿದಾಹುಃ ||೫||

## ನಾಳವೇಷ್ಟಿತ ಜನನಯೋಗಃ

ಮೂಲ|| ಭಾಗಸಿಂಹ ವೃಷಲಗ್ನೆ ಶತಸ್ಥೆ ಸೌರೇಭವಾಕುಜೇ || ರಾಶ್ಯಂಶ ಸದೃಶೇ **ಗಾತ್ರೇ ಜಾಯತೇ** ನಾಳವೇಷ್ಟಿತಃ ||೫||

ಟೀಕು|| **ನಾಳವೇಷ್ಟಿತ ಜನನಯೋಗ ಹೇಳಲ್ಪಡುತ್ತೆ.** ಭಾಗಸಿಂಹ ವೃಷ್ಯೆ-ಮೇಷ ಸಿಂಹ ವೃಷಭ ಇವುಗಳಲ್ಲಿ ಯಾವುದಾದರೂ ರಾಶಿ, ಲಗ್ನೆ-

ಲಗ್ನವಾಗಿ, ಸೌರೇ- ಶನೈಶ್ಚರನಾದರೂ, ಕುಜೆ-ಮಂಗಳನಾದರೂ, ತತ್‌ಸ್ಥೆ-ಆ ಲಗ್ನದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದ ಶಿಶುವು ರಾಶ್ಯಂಶ ಸದೃಶೇ - ರಾಶಿಲಗ್ನದಲ್ಲಿ, ಅಂಶ-ಯಾವ ನವಾಂಶ ಉದಯಿಸುವುದೋ ಆ ನವಾಂಶ ಯಾವ ರಾಶಿ ಸಂಬಂಧವಾಗಿರುವುದೊ ಆ ರಾಶಿಗೆ, ಸದೃಶೇ-ಸಮಾನವಾದ, ಗಾತ್ರೇ-ಅವಯವದಲ್ಲಿ, ನಾಳವೇಷ್ಟಿತಃ-ನಾಭಿ ನಾಳದಿಂದ ಸುತ್ತಿಕೊಂಡು, ಜಾಯತೆ-ಹುಟ್ಟುತ್ತದೆ. ಅಂದರೆ ಮೇಷ, ಸಿಂಹ, ವೃಷಭ ಈ ಮೂರು ರಾಶಿಗಳಲ್ಲಿ ಯಾವುದಾದರೂ ಜನ್ಮ ಲಗ್ನವಾಗಿ, ಅಲ್ಲಿ ಶನಿಯಾಗಲೀ ಕುಜನಾಗಲೀ ಇದ್ದರೆ ಆ ಲಗ್ನದಲ್ಲಿ ಯಾವ ನವಾಂಶವು ಜನ್ಮಕಾಲ ನವಾಂಶವಾಗಿರುವುದೋ ಆ ನವಾಂಶ ಕಾಲಾಂಗಾನಿ ವರಾಂಗ ಎಂಬುವ ಶ್ಲೋಕದ ಪ್ರಕಾರ ಕಾಲಪುರುಷನ ಯಾವ ಅಂಗವಾಗಿರುವುದೋ ಆ ಅವಯವದಲ್ಲಿ ನಾಭಿ ನಾಳವೇಷ್ಟಿತವಾಗಿ ಶಿಶು ಜನನವಾಗುವುದು. ಈ ವಿಷಯಕ್ಕೆ ಗರ್ಗಸಂಹಿತೆಯಲ್ಲಿ ||ಶ್ಲೋಕ|| ಸಿಂಹಾಜ ಗೋಭಿರುದಯೇ ಸೂತೌ ನಾಳವೇಷ್ಟಿತೋ ಜಂತುಃ || ಲಗ್ನೇಕುಜೇಥ ಸೌರೀರಾಶ್ಯಂಶ ಸಮಾನ ಗಾತ್ರೇಷು ||೬|| ತಥಾಚ ಜಯದೇವಃ|| *ಕ್ರಿಯೇಹರೌ ವೃಷೋದಯೇಸ್ಥಿತ ಕುಜೇಥವಾಶನೌ || ಯದಾತದಾಚ ಜಾತಕೋ ಭವೇದ್ಧಿ ನಾಳವೇಷ್ಟಿತಃ ||೭||

## ಪರಜಾತಯೋಗಃ

ಮೂಲ|| ನಲಗ್ನಮಿಂದುಂಚ ಗುರುರ್ನಿರೀಕ್ಷತೆ ನವಶಶಾಂಕಂ ರವಿಣಾ-
ಸಮಾಗತಮ್|| ಸಪಾಪಕೋರ್ಕೇಣ ಯುತೋಥವಾ ಶಶೀ-
ಪರೇಣಜಾತಂ ಪ್ರವದಂತಿ ನಿಶ್ಚಯಾತ್ ||೬||

ಟೀಕು|| ಜಾರ ಜನನಯೋಗವೆಂಬ ಪರಜಾತಯೋಗ ಹೇಳಲ್ಪಡುತ್ತೆ. ಗುರುಃ-ಗುರುವು, ಲಗ್ನಂ-ಜನ್ಮಲಗ್ನವನ್ನಾಗಲೀ, ಚಂದ್ರಂ-ಚಂದ್ರನನ್ನಾಗಲೀ, ನನಿರೀಕ್ಷತೆ-ನೋಡಿದಿದ್ದರೆ, ನಿಶ್ಚಯಾತ್-ನಿಶ್ಚಯವಾಗಿ, ಪರೇಣ-ತನ್ನ ಪತಿ ಅಲ್ಲದ ಮತ್ತೊಬ್ಬನಿಂದ, ಅಂದರೆ, ಜಾರ ಪುರುಷನಿಂದ, ಜಾತಮಿತಿ-ಹುಟ್ಟಿದವನೆಂದು, ಪ್ರವದಂತಿ-ಮುನಿಗಳು ಹೇಳುತ್ತಾರೆ. ಇದು ಎರಡು ವಿಧವಾದ ಪರಜಾತಯೋಗ. ಆದರೆ ಬೃಹಸ್ಪತಿಯು ಲಗ್ನವನ್ನಾಗಲೀ ಚಂದ್ರನನ್ನಾಗಲೀ ನೋಡದೆ ಇದ್ದರೂ, ಚಂದ್ರನಾಗಲೀ, ಲಗ್ನ ನವಾಂಶವಾಗಲೀ ಬೃಹಸ್ಪತಿಯ ನವಾಂಶವಾಗಿದ್ದರೆ ಈ ಯೋಗ ಹೇಳಕೂಡದು. ಈ ವಿಷಯಕ್ಕೆ ||ಶ್ಲೋಕ|| ||ಯವನಾಚಾರ್ಯ||

* ನಾಗಸ್ವರೂಪಿಣೀ ವೃತ್ತ

ಅಜೀವಭಾಗೆ ಪ್ಷಿನವೀಕ್ಷಿತೇವಾ ಜೀವೇಥ ಚಂದ್ರೇಣ ವಿಲಗ್ನಭೇವಾ ।। ವಾಚ್ಯಂ ಪರೋದ್ಭೂತ ಮಿತಿ ಬೃವಂತಿ ವಾಚ್ಯೋ ಜನೇನಾಥ ಬಲಾವಲೋಕಾತ್ ।।೮।। ತಥಾಚ ಜಯದೇವಃ ।।ಶ್ಲೋಕ।। ಗುರುಕ್ಷೇತ್ರ ಗತೇಚಂದ್ರೇ ತದ್ಯುಕ್ತೇವಾನ್ಯರಾಶಿಗೆ।। ತದ್ರೇಕ್ಕಾಣೆ ತದಂಶೇವಾ ನಪರೈರ್ಜಾತಇಷ್ಯತೆ ।।೯।। ಈ ಅರ್ಥದ ಪ್ರಕಾರ ಗುರುಕ್ಷೇತ್ರಗಳಾದ ಧನುರ್ಮೀನ ರಾಶಿಗಳಲ್ಲಿ ಚಂದ್ರನಿದ್ದರೂ ಅಥವಾ ಯಾವ ರಾಶಿಯಲ್ಲಾದರೂ ಚಂದ್ರನು ಗುರುವಿನಸಂಗಡ ಇದ್ದರೂ, (ಅಥವಾ ಗುರುದ್ರೇಕ್ಕಾಣದಲ್ಲಾಗಲಿ ಗುರು ನವಾಂಶೆಯಲ್ಲಾಗಲೀ ಚಂದ್ರನಿದ್ದರೂ) ಅಥವಾ ಗುರುಕ್ಷೇತ್ರ ಲಗ್ನಗಳಾಗಿದ್ದರೂ, ಗುರುದ್ರೇಕ್ಕಾಣ ಗುರುನವಾಂಶ ಜನ್ಮಲಗ್ನದಲ್ಲಿದ್ದು ಅದರಲ್ಲಿ ಜನ್ಮವಾದರೂ ಪರಜಾತಯೋಗ ಹೇಳಲ್ಪಡಕೂಡದು. ರವಿಣಾ-ಸೂರ್ಯನ ಸಂಗಡ, ಸಮಾಗತುಂ-ಕೂಡಿರುವ, ಶಶಾಂಕಂ-ಚಂದ್ರನನ್ನು, ಅಂದರೆ,-ಏಕರಾಶಿಗತರಾದ ಸೂರ್ಯ-ಚಂದ್ರರು ಬೃಹಸ್ಪತಿಯಿಂದ ನೋಡಲ್ಪಡದಿದ್ದರೆ ಆ ಕಾಲದಲ್ಲಿ ಹುಟ್ಟಿದ ಶಿಶುವು ಜಾರಜಾತಕವನ್ನಿಸಲ್ಪಡುವುದು. ಅಥವಾ ಹಾಗಾಗದಿದ್ದರೆ, ಶಶೀ-ಚಂದ್ರನು, ಸಪಾಪಕಃ-ಪಾಪಗ್ರಹಗಳಾದ ಕುಜಶನಿಗಳಲ್ಲೊಬ್ಬನಿಂದ ಕೂಡಿದರೂ, ಅರ್ಕೇಣಯುಕ್ತಃ-ಸೂರ್ಯನೊಡನೆ ಕೂಡಿದರೂ ಜಾರಜಾತಕನಾಗುವನು. ಆದರೆ ಚಂದ್ರನು ಗುರುಕ್ಷೇತ್ರದಲ್ಲಾಗಲೀ ಗುರುದ್ರೇಕ್ಕಾಣ ನವಾಂಶ ದ್ವಾದಶಾಂಶಗಳಲ್ಲಿ ಇತರ ಗ್ರಹಗಳ ರಾಶಿಯಲ್ಲಿ ಗುರುಯುಕ್ತನಾಗಿದ್ದರೆ ಜಾರಜಾತಕನಾಗಿರುವುದಿಲ್ಲವೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಶ್ಲೋಕ ಮೇಲೆಯೇ ಹೇಳಲ್ಪಟ್ಟಿರುತ್ತೆ. ಕೆಲವರು ಈ ಮೂರನೆ ಯೋಗದಲ್ಲಿ ಗುರುದೃಷ್ಟಿ ಇದ್ದರೂ ಗುರು ದೃಷ್ಟಿ ಇಲ್ಲದಿದ್ದರೂ ಜಾರಜನೆಂದು ಹೇಳಕೂಡದೆಂದು ಅಭಿಪ್ರಾಯಪಡುವರು. ಈ ವಿಷಯದಲ್ಲಿ ।।ಶ್ಲೋಕ।। ಸಾರಾವಳ್ಯಾಂ ।।ಪಶ್ಯತಿ ನಗುರುಶ್ಯಶಿನಂ ಲಗ್ನಂಚ ದಿವಾಕರಂ ಸೇಂದುಂ ।। ಪಾಪಯುತೌವಾಸೂರ್ಯ್ಯೌಚಂದ್ರಮಸೌಚಯದಿ ಜಾರಜಾತಸ್ಸ್ಯಾತ್ ।।೧೦।। ಎಂದು ಸಾರಾವಳೀ ಶ್ಲೋಕವನ್ನುದಹರಿಸಿ ಭಟ್ಟೋತ್ಪಲ ವ್ಯಾಖ್ಯಾನದಲ್ಲಿ ಏಕರಾಶಿಗತರಾದ ಸೂರ್ಯಚಂದ್ರರು ಇತರ ಪಾಪಗ್ರಹ ಯುಕ್ತರಾಗಿದ್ದರೂ ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾರಜಾತ ಯೋಗವಲ್ಲವೆಂದು ಹೇಳಲ್ಪಟ್ಟಿರುತ್ತೆ. ಈ ವಿಷಯದಲ್ಲಿ ಜಯದೇವಃ ।।ಶ್ಲೋಕ।। ಸಪಾಪೋರಯುಕ್ತೆ ಕ್ಷಪಾನಾಯಕಶ್ಚೇ ದ್ವಿಲಗ್ನಂಚ ಚಂದ್ರಂ ನವಾಪಶ್ಯತೀಜ್ಯಃ ।। ನಸಾರ್ಕಂ ವಿಧುಂ ಪಶ್ಯತೀಜ್ಯೋಥವಾ ಚೆತ್ತದಾಜಾಯತೇ ಜಾತಕೋಜಾರಿಪುತ್ರಃ ।।

ಉದಾ :- ಅಥ ಪ್ರಸಂಗಾತ್ಪರ ಜಾತಯೋಗಃ।। ಗ್ರಂಥಾಂತರೆ।। ಸ. ಚಿಂ.

ಮೂಲ॥ ಲಗ್ನೇಶ ಭಾಗ್ಯೇಶ ಸುಖೇಶಯುಕ್ತೆ ಷಷ್ಠಾಧಿಪೇಸ್ಯಾತ್ಪರಜಾತ ಏವ॥
ತದಂಶನಾಥೇನ ಯುತೇತದೀಶೆ ಪಾಪೇಕ್ಷಿತಸ್ಸ್ಯಾತ್ಪರಜಾತ ಏವ
॥೧೨॥ ಪಾಪಾಂತರೇ ಮಾತೃಗೃಹೇ ತದೀಶೇ ತತ್ಕಾರಕೇವಾ
ಶುಭದೃಷ್ಟಿಯುಕ್ತೇ ॥ ಲಗ್ನೇಶ್ವರಾಧೀನಬಲೇಶುಭೇಶೇ ಜಾತಸ್ತದಾ
ನೀಂ ಪರಜಾತ ಏವ ॥೧೩॥ ನವೀಕ್ಷಿತಂಚೇ ದ್ಗುರುಣಾವಿಲಗ್ನಂ
ನಿಶಾಕರೋವಾ ಗುರುಣಾನದೃಷ್ಟಃ ॥ ದಿವಾಕರೇಣಾಪಿಯುತಃ
ಶಶಾಂಕಸ್ಸಪಾಪಕೇಂದ್ರೌ ರವಿಣಾತಥೈವ ॥೧೪॥ ಪಾಪೇಶುಭೇ
ಮಾತೃಗೃಹೇನ ಪಾಪೇ ಲಗ್ನೇಶ್ವರೇ ಹೀನಬಲೇಸಪಾಪೆ॥ ಪರಾಂಶ
ಕಾದೌ ಸುಖಭೇತ ದಾನೀಂ ಜಾತೋನರಸ್ಸ್ಯಾತ್ಪರಜಾತ ಏವ॥೧೫॥

ತಾ॥ ಪರಜಾತಯೋಗವೆಂಬುವುದು ಬೃಹಜ್ಜಾತಕದಲ್ಲಿ ಹೇಳದೇ ಇದ್ದ ಅನ್ಯತರವಾದ ಯೋಗವನ್ನು ಹೇಳುತ್ತಾನೆ. ೧ನೇ ಯೋಗ-ಷಷ್ಠಾಧಿಪತಿ, ಲಗ್ನಾಧಿಪತಿ, ಭಾಗ್ಯಾಧಿಪತಿ ಸುಖಾಧಿಪತಿಯೊಡನೆ ಸೇರಿದ್ದರೆ ಪರಜಾತಯೋಗ. ೨ನೇ ಯೋಗ-ಷಷ್ಠಾಧಿಪತಿ ಯಾವ ನವಾಂಶದಲ್ಲಿರುವನೋ ಆ ನವಾಂಶಧಿಪತಿ ಸಂಗಡ ಸುಖಾಧಿಪತಿ ಕೂಡಿ ಪಾಪಗ್ರಹದಿಂದ ನೋಡಲ್ಪಟ್ಟರೆ ಪರಜಾತ ಯೋಗ. ೩ನೇ ಯೋಗ-ಮಾತೃಸ್ಥಾನವು ಪಾಪಗ್ರಹ ಮಧ್ಯದಲ್ಲಿದ್ದು ಮಾತೃಸ್ಥಾನಾಧಿಪತಿಯಾಗಲೀ ಮೃತಕಾರಕನಾಗಲೀ ಪಾಪಗ್ರಹ ದೃಷ್ಟನಾಗಿ ನವಮಾಧಿಪತಿ ಲಗ್ನಾಧಿಪತಿಗಿಂತ ಬಲಹೀನನಾದರೆ ಪರಜಾತಯೋಗ. ಇದರಲ್ಲಿ ಮಾತೃಕಾರಕನಾದ ಚಂದ್ರನಿಂದ ೧, ಮಾತೃಸ್ಥಾನಾಧಿಪತಿಯಿಂದ ೧ ಈ ಎರಡು ಯೋಗಗಳು ಹುಟ್ಟುತ್ತವೆ. ॥ನವೀಕ್ಷಿತಂಚೇತ್॥ ಈ ಶ್ಲೋಕದ ಅರ್ಥವು ಮೊದಲೇ ಸ್ಪಷ್ಟವಾಗಿರುತ್ತೆ. ೪ನೇ ಯೋಗ ನವಮಸ್ಥಾನದಲ್ಲೂ ಮಾತೃಸ್ಥಾನದಲ್ಲೂ ಪಾಪಗ್ರಹವಿದ್ದು ಮತ್ತೊಂದು ಪಾಪಗ್ರಹ ಮಾತೃಸ್ಥಾನದಲ್ಲಿದ್ದು ಲಗ್ನಾಧಿಪತಿ ಪಾಪಗ್ರಹಯುಕ್ತನಾಗಿ ಚತುರ್ಥಭಾವ ಉದಯ ನವಾಂಶ ಪರನವಾಂಶಾದಿ ಷಡ್ವರ್ಗದಲ್ಲಿದ್ದರೆ ಆ ಕಾಲದಲ್ಲಿ ಜನ್ಮಿಸಿದವನು ಪರಜಾತನಾಗುವನು. ॥೧೨॥ ೧೩॥೧೪॥೧೫॥ ಈ ಪರಜಾತ ಯೋಗವು ಮಹರ್ಷಿ ಮತದಲ್ಲಿ ಹೇಳಲ್ಪಟ್ಟಿರುತ್ತೆ. ಆದರೆ ಬೃಹಜ್ಜಾತಕೋಕ್ತವಲ್ಲದೆ ಇದ್ದಾಗ್ಯೂ ಪರಜಾತಯೋಗ ಪ್ರಕರಣ ಪೂರ್ತಿಯಾಗುವುದಕ್ಕೋಸ್ಕರ ಪರಿಶಿಷ್ಟರೂಪವಾಗಿ ಇಲ್ಲಿ ಉದಹರಿಸಿರುತ್ತೇನೆ.

## ಪಿತೃಣಾಂ ಬಂಧನಪ್ರಾಪ್ತಿಯೋಗಃ

ಮೂಲ॥ ಕ್ರೂರರ್ಕ್ಷಗತಾವ ಶೋಭನೌ ಸೂರ್ಯಾದ್ದ್ಯೂನನವಾತ್ಮ ಜಸ್ಥಿತೌ॥
ಬದ್ಧಸ್ತುಪಿತಾವಿದೇಶಗಃ ಸ್ವೇವಾರಾಶಿವಶಾದಥೋಪಥಿ॥೭॥

ಟೀಕು।। ಜನ್ಮಕಾಲ ಲಕ್ಷಣದಿಂದ ತಂದೆಗೆ ಬಂಧನಪ್ರಾಪ್ತಿ ಯೋಗ ಹೇಳಲ್ಪಡುತ್ತೆ. ಕ್ರೂರರ್ಕ್ಷಗತೌ-ಕ್ರೂರಗ್ರಹಗಳ ರಾಶಿಗಳಾದ ಮೇಷ, ಸಿಂಹ, ವೃಶ್ಚಿಕ, ಮಕರ, ಕುಂಭ, ರಾಶಿಗಳಲ್ಲಿ ಚಂದ್ರನು ಕ್ಷೀಣನಾಗಿರುವಾಗ ಮಿಥುನ ಕನ್ಯಾ ಈ ರಾಶಿಗಳಲ್ಲಿ, ಅಶೋಭನೌ - ಎರಡು ಪಾಪಗ್ರಹಗಳು ಅಂದರೆ ಶನಿ ಕುಜರು, ಸೂರ್ಯಾತ್-ಸೂರ್ಯನಿರುವ ಸ್ಥಾನಕ್ಕೆ, ದ್ಯೂನನವಾತ್ಮಜ ಸ್ಥಿತೌ-ಸಪ್ತಮ ನವಮ ಪಂಚಮಲ್ಲಿದ್ದರೆ ಇಂಥಾ ಕಾಲದಲ್ಲಿ ಹುಟ್ಟಿದವನ, ಪಿತಾ-ತಂದೆಯು ರಾಶಿವಶಾತ್-ಸೂರ್ಯನಿರುವ ರಾಶಿ ಸ್ವಭಾವದಿಂದ, ವಿದೇಶಗಃ-ದೇಶ ಸಂಚಾರದಲ್ಲಿಯಾಗಲೀ, ಸ್ವೇವಾ-ಸ್ವದೇಶದಲ್ಲಾಗಲೀ, ಪಥಿವಾ-ಮಾರ್ಗದಲ್ಲಾಗಲೀ ಬಂಧನ ಪ್ರಾಪ್ತಿಯುಳ್ಳವನಾಗುವನು. ಅಂದರೆ ಸೂರ್ಯನು ಚರರಾಶಿಯಲ್ಲಿದ್ದು ಆ ರಾಶಿಗೆ ಸಪ್ತಮ, ನವಮ ಪಂಚಮ ಸ್ಥಾನಗಳು ಮೇಲೆ ಹೇಳಲ್ಪಟ್ಟ ಕ್ರೂರಗ್ರಹ ರಾಶಿಯಾಗಿ ಅಲ್ಲಿ ಶನಿ ಕುಜರಿದ್ದರೆ ಪರದೇಶದಲ್ಲಿ ತಂದೆಯು ಇವನ ಜನ್ಮಕಾಲದಲ್ಲಿ ಬಂಧನಕ್ಕೊಳಪಟ್ಟಿರುವನು. ಸೂರ್ಯನು ಸ್ಥಿರರಾಶಿಯಲ್ಲಿದ್ದರೆ ಸ್ವದೇಶದಲ್ಲಿಯೂ, ದ್ವಿಸ್ವಭಾವ ರಾಶಿಯಲ್ಲಿದ್ದರೆ ಮಧ್ಯಮಾರ್ಗದಲ್ಲಿಯೂ, ಚರ ರಾಶಿಯಲ್ಲಿದ್ದರೆ ಪರದೇಶದಲ್ಲಿಯೂ, ಈ ಮೇಲೆ ಹೇಳಲ್ಪಟ್ಟ ಯೋಗ ಲಕ್ಷಣದಿಂದ ಬಂಧನದಲ್ಲಿರುವನು. ಇಂಥಾ ಬಂಧನವು ಸೂರ್ಯರಾಶಿ ವಶಾತ್ ತಿಳಿಯತಕ್ಕದ್ದು. ಅದು ಹೇಗೆಂದರೆ:- ಚರರಾಶಿಯಾದರೆ ಪರದೇಶದಲ್ಲಿ, ಸ್ಥಿರರಾಶಿಯಾದರೆ ಸ್ವದೇಶದಲ್ಲಿ, ದ್ವಿದೇಹರಾಶಿಯಾದರೆ ಮಾರ್ಗಸ್ಥನಾಗಿರುವಾಗ ಸೂರ್ಯನು ರಾಶ್ಯಾದಿಯಲ್ಲಿದ್ದರೆ ಸೆರೆಗೆ ಹೋಗುತ್ತಾನೆಂದು, ಮಧ್ಯದಲ್ಲಿದ್ದರೆ ಸೆರೆಯಲ್ಲಿದ್ದು ಅರ್ಧಕಾಲ ಕಳೆದಿದೆ ಎಂದು, ಅಂತ್ಯದಲ್ಲಿದ್ದರೆ ಜಾಗ್ರತೆಯಲ್ಲಿ ಆತನಿಗೆ ಬಿಡುಗಡೆ ಯಾಗುತ್ತೆಂದು ಹೇಳತಕ್ಕದ್ದು.

## ನೌಕಾಯಾಂ ಜನನಯೋಗಃ

ಮೂಲ।। ಪೂರ್ಣೇಶಶಿನಿ ಸ್ವರಾಶಿಗೆ ಸೌಮ್ಯೇಲಗ್ನ ಪತೌಶುಭೇಸುಖೇ।। ಲಗ್ನೆ
ಜಲಜೇಸ್ತಗೇಪಿವಾಚಂದ್ರೇ ಪೋತಗತಾ ಪ್ರಸೂಯತೆ ।।೮।।

ಟೀಕು।। ಜಾತಕನು ದೋಣಿ, ಹಡಗು ಮೊದಲಾದ ಜಲಯಾನಗಳಲ್ಲಿ ಹುಟ್ಟುವ ಯೋಗ ಹೇಳಲ್ಪಡುತ್ತೆ. *ಪೂರ್ಣೇ-ಸಂಪೂರ್ಣ ಕಳಾಯುಕ್ತನಾದ, ಶಶಿನಿ-ಚಂದ್ರನು, ಸ್ವರಾಶಿಗೆ-ಕರ್ಕಾಟಕದಲ್ಲಿರುವಾಗ, ಸೌಮ್ಯೇ-ಬುಧನು, ಲಗ್ನಗತೆ-ಲಗ್ನದಲ್ಲಿದ್ದು, ಶುಭೆ-ಶುಭಗ್ರಹವಾದ ಬೃಹಸ್ಪತಿಯು, ಸುಖೇ-ಚತುರ್ಥ

* ಪೂರ್ಣಚಂದ್ರನೆಂದರೆ ೧೫ ಚಂದ್ರನೆಂದಿರಿಯಕೂಡದು; ಶುಕ್ಲೈಕಾದಶೀ ಯಿಂದ ಕೃಷ್ಣ ಪಂಚಮಿವರಿಗೆಂದು ತಿಳಿಯಬೇಕು.

ಭಾವದಲ್ಲಿದ್ದರೆ (ಗರ್ಭಿಣಿ), ಪೋತಗತಾ-ಹಡಗಿನಲ್ಲಿ, ಪ್ರಸೂಯತೇ-ಪ್ರಸವಿಸುವಳು. ಈ ಮೇಲೆ ಹೇಳಲ್ಪಟ್ಟ ಯೋಗದಲ್ಲಿ ಶುಭೇ ಎಂದು ಅರ್ಥಮಾಡಿರುವುದರಲ್ಲಿ ಗುರುವೆಂದು ಹೇಳಿರುತ್ತೆ. ಅಲ್ಲಿ ಶುಭಗ್ರಹ ಶಬ್ದ ಶುಕ್ರನಿಗೂ ಅನ್ವಯಿಸುತ್ತದೆ ಯಾದ್ದರಿಂದ ಶುಕ್ರನಿಂದ ೧ ಯೋಗ, ಗುರುವಿನಿಂದ ೧ ಯೋಗ ಅಂತು ೨ ಯೋಗಗಳು, ಜಲಭೇ-ಜಲರಾಶಿಗಳು, ಅಂದರೆ ಕರ್ಕಾಟಕ, ಮಕರೋತ್ತರಾರ್ಧ, ಮೀನ ಈ ಮೂರರಲ್ಲಿ ಒಂದು ರಾಶಿ ಲಗ್ನವಾಗಿ, ಚಂದ್ರೇ-ಚಂದ್ರನು, ಅಸ್ತಗೆ-ಸಪ್ತಮದಲ್ಲಿದ್ದರೆ ಹಡಗಿನಲ್ಲಿ ಜನ್ಮವಾಗುವುದು. ಅಂದರೆ, ಕರ್ಕಾಟಕದಲ್ಲಿ ಪೂರ್ಣ ಚಂದ್ರನಿರುವಾಗ ಬುಧನು ಲಗ್ನದಲ್ಲೂ, ಬೃಹಸ್ಪತಿ ಚತುರ್ಥದಲ್ಲೂ ಇದ್ದರೆ ೧೨ ಯೋಗ. ಕರ್ಕಾಟಕದಲ್ಲಿ ಪೂರ್ಣ ಚಂದ್ರನಿದ್ದು ಬುಧನು ಲಗ್ನದಲ್ಲೂ, ಶುಕ್ರನು ಚತುರ್ಥದಲ್ಲೂ ಇದ್ದರೆ ೧೨ ಯೋಗ. ಕರ್ಕಾಟಕ ಮಕರ ಉತ್ತರಾರ್ಧ ಮೀನರಾಶಿ ಲಗ್ನವಾಗಿ ಸಪ್ತಮದಲ್ಲಿ ಚಂದ್ರನಿದ್ದರೆ ೩ ಯೋಗ ಅಂತು ೨೭ ವಿಧವಾದ ಹಡಗು ಮೊದಲಾದ ಜನಯಾನಗಳಲ್ಲಿಯೇ ಜನ್ಮವಾಗುವ ಯೋಗ ಉಂಟಾಗುವುದು. ಅಂದರೆ, ಶುಕ್ಲಪಕ್ಷದ ೧೦ ಮೊದಲುಗೊಂಡು ಕೃಷ್ಣಪಕ್ಷದ ೫ ವರಿಗೂ ಈ ಯೋಗ ಲಭಿಸುವುದು.

## ಉದಕಸಮೀಪ ಜನನಯೋಗಃ

ಮೂಲ।। ಆಪ್ಯೋದಯಮಾಪ್ಯಗಃ ಶಶೀಸಂಪೂರ್ಣ ಸ್ತಮವೇಕ್ಷತೇಥವಾ ।।
ಮೇಷೂರಣ ಬಂಧುಲಗ್ನಗಃ ಸ್ಯಾತ್ಸೂತಿಃ ಸಲಿಲೇನಸಂಶಯಃ ।।೯।।

ಟೀಕು।। ಉದಕ ಸಮೀಪ ಜನನಯೋಗ ಹೇಳಲ್ಪಡುತ್ತೆ.

ಆಪ್ಯೋದಯಂ-ಜಲರಾಶಿಗಳಾದ ಕರ್ಕಾಟಕ ಮಕರೋತ್ತರಾರ್ಧ ಮೀನ ರಾಶಿಗಳಲ್ಲೊಂದು ಲಗ್ನವಾಗಿ, ಸಂಪೂರ್ಣಶಶೀ-ಪೂರ್ಣ ಚಂದ್ರನು, ಅಪ್ಯಗಃ-ಜಲರಾಶಿಯಲ್ಲಿದ್ದು, ಸಮವೇಕ್ಷಿತೇ-ತನುಭಾವವನ್ನು ನೋಡಿದರೆ, ಸಲಿಲೇ-ಉದಕ ಸಮೀಪದಲ್ಲಿ, ಸೂತಿಃ-ಪ್ರಸವವು, ಸ್ಯಾತ್-ಆಗುವುದು (ನಸಂಶಯಃ- ಸಂದೇಹವಿಲ್ಲ) ।।೧।। ಅಥವಾ ಆ ಪ್ರಕಾರವಾಗದಿದ್ದರೆ ಯಾವ ರಾಶಿಯುಲ್ಲಾದರೂ, ಸಂಪೂರ್ಣಶಶೀ-ಪೂರ್ಣಚಂದ್ರನಿದ್ದು, ತ-ಆ ಜಲರಾಶಿಯಾದ ಲಗ್ನವನ್ನು, ಅವೇಕ್ಷತೆ-ನೋಡಿದರೆ, ಉದಕ ಸಮೀಪದಲ್ಲಿ ಜನನವಾಗುವುದು।।೨।। ಜಲರಾಶಿ ಲಗ್ನವಾಗಿ ಚಂದ್ರನು, ಮೇಷೂರಣ ಬಂಧುಲಗ್ನಗಃ-ದಶಮ ಚತುರ್ಥ ಲಗ್ನದಲ್ಲಿ ಯಾವ ರಾಶಿಯಲ್ಲಾದರೂ ಒಂದು ರಾಶಿಯಲ್ಲಿದ್ದರೆ ಜಲ ಸಮೀಪದಲ್ಲಿ ಪ್ರಸವವಾಗುವುದು. ।।೩।। ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಸಲಿಲಭ ಲಗ್ನೆ ಚಂದ್ರೋ ಜಲರಾಶಿಂ ವೀಕ್ಷ್ಯತೇಥವಾಪೂರ್ಣಃ ।। ಪ್ರಸವಂ ಸಲಿಲೇ ವಿಂದ್ಯಾದ್ವಂಧೂದಯ ದಶಮಗಶ್ಚಯದಾ ।।೧೬।।

## ಕಾರಾಗೃಹೆ ಪ್ರಸವಯೋಗಃ

ಮೂಲ।। ಉದಯೋಡು ಪಯೋರ್ವ್ಯಯಸ್ಥಿತೆ ಗುಪ್ತ್ಯಾಂ ಪಾಪನಿರೀಕ್ಷಿತೇ ಯಮೆ।। ಅಳಿಕರ್ಕಿಯುತೇವಿಲಗ್ನಗೆ ಸೌರೆಶೀತಕರೇಕ್ಷಿತೇವಟೇ।।೧೦।।

ಅ।। ಈ ಶ್ಲೋಕದಲ್ಲಿ ಕಾರಾಗೃಹದಲ್ಲಿ ಜನನವಾಗುವ ಯೋಗ ಮತ್ತು ಭೂರಂಧ್ರ ಕುಹರ ಬಿಲಾದಿ ಗುಹೆಗಳಲ್ಲಿ ಜನನಯೋಗ ಸಹ ಹೇಳಲ್ಪಡುತ್ತೆ.

ಟೀಕು।। ಉದಯೋಡುಪಯೋಃ-ಲಗ್ನ ಚಂದ್ರರಿಗೆ, ವ್ಯಯಸ್ಥಿತೆ-ದ್ವಾದಶ ಸ್ಥಾನದಲ್ಲಿ, ಯಮೆ-ಶನೈಶ್ಚರನು, ಪಾಪನಿರೀಕ್ಷಿತೆ-ಪಾಪಗ್ರಹದಿಂದ ನೋಡಲ್ಪಟ್ಟರೆ, ಗುಪ್ತ್ಯಾಂ-ಕಾರಾಗೃಹದಲ್ಲಿ ಅಥವಾ ಸಾಧಾರಣವಾಗಿ ಸರ್ವ ಜನರ ಪ್ರವೇಶಕ್ಕೆ ಅಸಾಧ್ಯವಾದ ಸ್ಥಳದಲ್ಲಿ ಪ್ರಸವವೆಂದು ಹೇಳಲ್ಪಡತಕ್ಕದ್ದು. ಈ ಯೋಗ ಚಂದ್ರನು ಲಗ್ನವು ಏಕವಾಗಿದ್ದು ದ್ವಾದಶದಲ್ಲಿ ಶನಿಯಿದ್ದರೆ ೧೨ ಯೋಗಗಳು ಸಂಭವಿಸುತ್ತದೆ।।೧।।

## ಭೂರಂಧ್ರ (ಕುಹರೆ) ಜನನಯೋಗಃ

ಸೌರೆ-ಶನಿಯು, ಅಳಿಕರ್ಕಿಯುತೆ-ವೃಶ್ಚಿಕ ಕರ್ಕಾಟಕಗಳಲ್ಲೊಂದು ರಾಶಿಯಲ್ಲಿದ್ದು, ಆ ರಾಶಿಯೇ, ವಿಲಗ್ನಗೆ-ಜನ್ಮಲಗ್ನವಾಗಿ, ಶೀತಕರೇಕ್ಷಿತೇ-ಚಂದ್ರನಿಂದ ನೋಡಲ್ಪಟ್ಟರೆ, ಅವಟೀ-ರಂಧ್ರದಲ್ಲಿ ಜನ್ಮಸ್ಥಳವೆಂದು ಹೇಳತಕ್ಕದ್ದು. ।।ಗರ್ತಾವಟೌ ಭುವಿಶ್ವಭ್ರೇ ಸರಂಧ್ರೆಸುಷಿರಂತ್ರಿಷು, ಇತ್ಯಮರಃ ।। ಈ ಎರಡು ಯೋಗಗಳು ಕರ್ಕಾಟಕ ವೃಶ್ಚಿಕ ಲಗ್ನಗಳಲ್ಲಿಯೆ ಸಂಭವಿಸುವುದು ।।೧೦।। ಈ ವಿಷಯದಲ್ಲಿ ಪರಾಶರಃ ಶ್ಲೋಕ ।। ಶ್ವಭ್ರೇಜಲೇಚ ಕಿಟಾಸ್ಸ್ಯುಃ ಪಂಕಿಲೇತೇನ ವೃಶ್ಚಿಕೇ ।। ಕರ್ಕಟೇವಾ ಶನೌಲಗ್ನೇ ಚಂದ್ರದೃಷ್ಟೇವಟೇಜನಿಃ ।। ಮತ್ತು ಕೇರಳೀಯೇ ನೀಲಕಂಠಃ।। ಚಂದ್ರಾಲಗ್ನ ಗತಾದ್ವ್ಯಯೇಯದಿ ಶನಿರ್ಭೌಮಾರ್ಕದೃಷ್ಟೋ ಭವೇದ್ಗುಪ್ತ್ಯಾಂ ಜನ್ಮವದೇದಧೋಯದಿ ಗುರುಶ್ಶುಕ್ರೋಥವಾತಂ ಪುನಃ ।। ಪಶ್ಯೇತ್ತದ್ವ್ಯಹಮೇವಬಂಧನಗೃಹಪ್ರಾಯಂ ವದೇದ್ರಾಜಭಿ । ಸ್ತತ್ಕಾಲೇ ಕೃತಯಂತ್ರಣಂ ನಿಗದಿತಂ ಯದ್ಬಂಧಕಲ್ಪಾಯತೆ ।। ಎಂದುಕ್ತವಾಗಿರುತ್ತೆ.

## ಕ್ರೀಡಾಗೃಹ ಊಪರಕ್ಷೇತ್ರ ದೇವಾಗಾರೇ ಜನನಯೋಗಃ

ಮೂಲ।। ಮಂದೇಬ್ಜಗತೇವಿಲಗ್ನಗೆ ಬುಧಸೂರ್ಕೇಂ *ದು ನಿರೀಕ್ಷಿತೆಕ್ರಮಾತ್।। ಕ್ರೀಡಾಭವನಂ ಸುರಾಲಯಂ ಪ್ರಸವೇಸೂಷರಭೂಮಿ ಮಾದಿಶೇತ್।।

---

* ಶುಕ್ರೇಂದು ನಿರೀಕ್ಷಿತೆ ಎಂದು ಪಾಠಾಂತರವಿದೆ (ಇದು ಸರಿಯಲ್ಲ)

ಟೀಕು।। ಕ್ರೀಡಾಭವನ, ದೇವಾಗಾರ ಊಷರಕ್ಷೇತ್ರದಲ್ಲಿ ಪ್ರಸವವಾಗುವ ಯೋಗಗಳು ಹೇಳಲ್ಪಡುತ್ತವೆ.

ಅಬ್ಜಗತೆ-ಜಲಾರಾಶಿಯಲ್ಲಿ, ಮಂದೆ-ಶನೈಶ್ಚರನು, ವಿಲಗ್ನಗೆ-ಲಗ್ನವನ್ನು ಹೊಂದಿದ್ದರೆ, ಕ್ರಮಾತ್-ಕ್ರಮವಾಗಿ, ಬುಧಸೂರ್ಯೇಂದು ನಿರೀಕ್ಷಿತೆ-ಬುಧ ರವಿ ಚಂದ್ರರಿಂದ ನೋಡಲ್ಪಟ್ಟರೆ, ಕ್ರೀಡಾಭವನಾದಿ ಸ್ಥಳಗಳಲ್ಲಿ ಜನನವು, ಆದಿಶೇತ್-ಹೇಳಲ್ಪಡತಕ್ಕದ್ದು, ಅಂದರೆ ಜಲರಾಶಿಗಳಾದ ಕರ್ಕಾಟಕ ಮಕರ ಉತ್ತರಾರ್ಧ ಮೀನರಾಶಿಗಳು ಲಗ್ನವಾಗಿ ಅಲ್ಲಿ ಶನಿಯಿದ್ದು ಸೂರ್ಯನಿಂದ ನೋಡಲ್ಪಟ್ಟರೆ, ಸುರಾಲಯಂ-ದೇವಾಗಾರದಲ್ಲೂ, ಬುಧನಿಂದ ನೋಡಲ್ಪಟ್ಟರೆ, ಕ್ರೀಡಾಭವನಂ-ಕ್ರೀಡಾಸ್ಥಳದಲ್ಲೂ, ಸೋಷರಭೂಮಿಂ-ಚಂದ್ರನಿಂದ ನೋಡಲ್ಪಟ್ಟರೆ, ಊಷರಕ್ಷೇತ್ರದಲ್ಲೂ ಪ್ರಸವಸ್ಥಳವೆಂದು ಲಗ್ನ ನಿಶ್ಚಯ ಮಾಡತಕ್ಕದ್ದು. ಈ ವಿಷಯದಲ್ಲಿ ಯಾವ ಗ್ರಹ ನೋಡುವುದೋ ಆ ಗ್ರಹಕ್ಕೆ ಹೇಳಲ್ಪಟ್ಟ ಸ್ಥಳಗಳಲ್ಲಿ ಜನನವೆಂದು ಹೇಳಬೇಕು. ದೇವಸ್ಥಾನಂ ಭಾಸ್ಕರಸ್ಯ ಎಂದು ಗ್ರಹಭೇದ ಪ್ರಕರಣದಲ್ಲಿ ಹೇಳಿರುತ್ತೆ. ಈ ವಿಷಯವು ಹೃತನಾಷ್ಟಾದಿ ಪ್ರಶ್ನೆಗಳಲ್ಲಿ ಉಪಯೋಗವಾಗುತ್ತದೆ. ಈ ವಿಷಯದಲ್ಲಿ ಕೇರಳೀಯೆ ನೀಲಕಂಠಃ ।। ಕುಳೀರ ಲಗ್ನೋತ್ತರ ಮೀನಲಗ್ನೆ । ಯಮಾನ್ವಿತೆ ಭಾಸ್ಕರ ಚಂದ್ರಸೌಮ್ಯೈಃ ।। ನಿರೀಕ್ಷಿತೇ ದೇವಗೃಹಂಚಸೋಷರ । ಸ್ಥಲಂವಿಹಾರಾಯತನಂಚ ಜನ್ಮಭೂಃ ।।೧೧।।

ಮೂಲ।। ನೃಲಗ್ನಗಂ ಪ್ರೇಕ್ಷ್ಯಕುಜಃ ಸ್ಮಶಾನೆ ರಮ್ಯೇಸಿತೇಂದೂ ಗುರುರಗ್ನಿಹೋತ್ರೇ ।। ರವಿರ್ನರೇಂದ್ರಾಮರಗೋಕುಲೇಷು ಶಿಲ್ಪಾಲಯೇಜ್ಞಃ ಪ್ರಸವಂ ಕರೋತಿ ।।೧೨।।

ಅ।। ಸ್ಮಶಾನ ರಮ್ಯಪ್ರದೇಶ ವಹ್ನಿಶಾಲಾದಿಗಳಲ್ಲಿ ಪ್ರಸವಯೋಗ ಹೇಳಲ್ಪಡುತ್ತೆ. ಪೂರ್ವೋಕ್ತ ಶ್ಲೋಕದಲ್ಲಿ ಹೇಳಲ್ಪಟ್ಟ ಮಂದಶಬ್ದವನ್ನನುಸರಿಸಿರುತ್ತೆ.

ಟೀಕು।। ನೃಲಗ್ನಗಂ-ನರರಾಶಿಗಳಾದ ಮಿಥುನ, ಕನ್ಯಾ, ತುಲಾ, ಧನು-ಪೂರ್ವಾರ್ಧ ಕುಂಭ ರಾಶಿಗಳಲ್ಲಿ ಯಾವುದಾದರೂ ಒಂದು ರಾಶಿ ಲಗ್ನವಾಗಿ ಅಲ್ಲಿ ಶನಿಯಿದ್ದರೆ, ಕುಜಃ-ಅಂಗಾರಕನು, ಪ್ರೇಕ್ಷ್ಯ-ನೋಡಿದರೆ, ಸ್ಮಶಾನ-ಸ್ಮಶಾನದಲ್ಲಿ, ಪ್ರಸವಂ-ಪ್ರಸೂತಿಯನ್ನು, ಕರೋತಿ-ಮಾಡುತ್ತಾನೆ. ಆ ನರರಾಶಿಯಲ್ಲಿರುವ ಶನಿಯನ್ನು ಸಿತೇಂದೂ-ಶುಕ್ರ ಚಂದ್ರರು ನೋಡಿದರೆ, ರಮ್ಯೇ-ರಮಣೀಯವಾದ ಪ್ರದೇಶದಲ್ಲಿ (ಮನೆಯಲ್ಲಿ) ಜನನವೆಂದು, ಗುರು-ಬೃಹಸ್ಪತಿ ನೋಡಿದರೆ, ಅಗ್ನಿಹೋತ್ರೆ-ಅಗ್ನಿಶಾಲೆಯಲ್ಲಿಯೂ, ರವಿಃ-ಸೂರ್ಯನು ನೋಡಿದರೆ, ನರೇಂದ್ರಾಮರಗೋಕುಲೇಷು- ರಾಜಗೃಹ, ದೇವಾಲಯ, ಗೋಶಾಲೆಯಲ್ಲೂ, ಜ್ಞ-ಬುಧನು

ನೋಡಿದರೆ, ಶಿಲ್ಪಾ ್ಯಲಯೇ-ಶಿಲ್ಪ ಶಾಸ್ತ್ರಾಭ್ಯಾಸ ಮಾಡತಕ್ಕ ಸ್ಥಳದಲ್ಲಿಯೂ ಪ್ರಸವ ಸ್ಥಳವೆಂದು ಹೇಳತಕ್ಕದ್ದು. ಶಿಲ್ಪಾ ್ಯಲಯೇ ಎಂಬುವ ಸ್ಥಳದಲ್ಲಿ ದೃಢವಾಗಿ ಸುಂದರವಾದ ಪ್ರತಿಮಾಯುಕ್ತವಾದ ಗೃಹವೆಂದು ಕೆಲವರು ಅರ್ಥ ಮಾಡಿರುವರು. ಈ ಅರ್ಥದಲ್ಲಿ ।।ಶ್ಲೋಕ।। ಪರಾಶರಃ ।। ಕುಜೇನ ದೃಷ್ಟೇ ರವಿಜೇಸ್ಮಶಾನಂ ಬುಧೇನ ಶಿಲ್ಪಾಲಯಮಿತ್ಯುಶಂತಿ ।। ಸೂರ್ಯೇಕ್ಷಿತೆ ಗೋನೃಪದೇವಮಾಸೇ ಶುಕ್ರೇಂದುಜಾಭ್ಯಾಂ ರಮಣೀಯದೇಶೆ ।।೧೭।। ಸೂರ್ಯೇಜ್ಯದೃಷ್ಟೇ ದ್ವಿಜವನ್ಹಿಹೋತ್ರೇನರೋದಯೇ ಸಂಪ್ರವದಂತಿಸೂತಿಂ ।।೧೭।। ಎಂದು ಹೇಳಿರುವುದರಿಂದ ಆಯಾಯ ಸ್ಥಳಗಳನ್ನು ನಿರ್ದೇಶಮಾಡಿ ಜನ್ಮಲಗ್ನ ನಿಶ್ಚಯ ಮಾಡತಕ್ಕದ್ದು. ಮತ್ತು ಈ ಅರ್ಥವು ಹೃತನಷ್ಟಾದಿ ಪ್ರಶ್ನೆಗಳಲ್ಲಿ ನಷ್ಟಸ್ಥಳ ವಿಚಾರ ಮಾಡಲು ಅತ್ಯುಪಯುಕ್ತವಾಗಿರುವುದು. ಈ ವಿಷಯಕ್ಕೆ ಸಾರಾವಳಿಯಲ್ಲಿ ।।ಶ್ಲೋಕ।। ರವಿಜೇಲಜದಿಲಗ್ನೇ ಕ್ರೀಡೋದ್ಯಾನೆ ಬುಧೇಕ್ಷಿತೇ ಪ್ರಸವಃ ।। ರವಿಣಾದೇವಾಗಾರೇ ತಥೋಷರೇಚೈವ ಚಂದ್ರೇಣ । ಅರಣ್ಯ ಭವನ ಲಗ್ನೆ ಗಿರಿವನದುರ್ಗೆ ಪುನರ್ಗುರವಿಲಗ್ನೆ।। ರುಧಿರೇಕ್ಷಿತೇ ಸ್ಮಶಾನೇ ಶಿಲ್ಪಕನಿಲಯೇಚ ಸೌಮ್ಯೇನ ।। ಎಂದುಕ್ತವಾಗಿರುತ್ತೆ ।।೧೨।।

### ಪ್ರಸವ ಪ್ರದೇಶ ಜ್ಞಾನಯೋಗಃ

ಮೂಲ।। ರಾಶ್ಯಂಶ ಸಮಾನಗೋಚರೇ ಮಾರ್ಗೆ ಜನ್ಮಚರೇಸ್ಥಿರೇಗೃಹೇ ।। ಸ್ವರ್ಕ್ಷಾಂಶಗತೇ ಸ್ವಮಂದಿರೇ ಬಲಯೋಗಾತ್ಫಲಮಂಶಕರ್ಕ್ಷಯೋಃ ।।೧೩।।

ಟೀಕು।। ಪ್ರಸವ ಪ್ರದೇಶ ತಿಳಿಯುವ ವಿಷಯ ಹೇಳಲ್ಪಡುತ್ತೆ. ರಾಶ್ಯಂಶ ಸಮಾನಗೋಚರೇ-ರಾಶಿ ಲಗ್ನಕ್ಕೆ, ಅಂಶ-ಅಂಶವೆಂದರೆ ನವಾಂಶಕ್ಕೆ, ಸಮಾನ ಗೋಚರೆ-ಸಮಾನ ವಿಷಯವಾದ ಮಾರ್ಗಾದಿಯಲ್ಲಿ ಪ್ರಸವ ಸ್ಥಳವನ್ನು ಹೇಳತಕ್ಕದ್ದು. ಈ ಗ್ರಂಥದ ಪ್ರಥಮ ಪ್ರಕರಣದಲ್ಲಿ ಟೀಕಾದಲ್ಲಿ ಉದಹರಿಸಲ್ಪಟ್ಟ ।।ಶ್ಲೋಕ।। ಅದ್ಯಸ್ಥತೋ ಮೇಷಸಮಾನಮೂರ್ತಿಃ ಕಾಲಸ್ಯ ಮೂರ್ಧಾಗ್ರದಿತಃ ಪುರಾಣ್ಯೈಃ ।। ಸೋಜಾವಿಕಾಸಂಚರಕಂ ದರಾದ್ರಿ ಸ್ತೇನಾಗ್ನಿ ಧಾತ್ವಾಕರ ರತ್ನ ಭೂಮಿಃ ।। ಇತ್ಯಾದಿ ರಾಶಿ ಸಂಚಾರ ವಿಷಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತೆ. ಆಯಾಯ ರಾಶಿಲಗ್ನ ನವಾಂಶದಿಂದ ಆಯಾಯ ಪ್ರದೇಶದಲ್ಲಿ ಜನನವೆಂದು ಹೇಳತಕ್ಕದ್ದು. ಲಗ್ನರಾಶಿಗಾದರೂ ನವಾಂಶ ರಾಶಿಗಾದರೂ ಚರೆ-ಚರರಾಶಿಯಾದರೆ, ಮಾರ್ಗೆ- ಆ ರಾಶಿ ಸಂಚಾರ ಪ್ರದೇಶವುಳ್ಳ ಮಾರ್ಗದಲ್ಲೂ, ಸ್ಥಿರೇ-ಸ್ಥಿರರಾಶಿಯಾದರೆ, ಆ ರಾಶಿಪ್ರದೇಶವುಳ್ಳ ಪ್ರದೇಶ ಮನೆಯಲ್ಲೂ ದ್ವಿಸ್ವಭಾವವಾದರೆ ಆ ರಾಶಿ ಸಂಚಾರ

ಪ್ರದೇಶದಲ್ಲಿ ಮಾರ್ಗದಲ್ಲೂ, ಪ್ರಸವಸ್ಥಾನವನ್ನು ಹೇಳತಕ್ಕದ್ದು. ಸ್ವರ್ಕ್ಷಾಂಶಗತೆ ಸ್ವಮಂದಿರೇ-ಅಂದರೆ ಚರರಾಶಿ ಲಗ್ನವಾಗಿ ಆ ಲಗ್ನರಾಶಿ ನವಾಂಶವು ಉದಯಿಸುತ್ತಿದ್ದರೆ ಸ್ವಗೃಹಮಾರ್ಗದಲ್ಲೂ, ಸ್ಥಿರರಾಶಿ ಲಗ್ನವಾಗಿ ಆ ಲಗ್ನರಾಶಿ ನವಾಂಶ ಉದಯಿಸುವುದಾದರೆ ತನ್ನ ಮನೆಯಲ್ಲೂ, ದ್ವಿಸ್ವಭಾವರಾಶಿ ಲಗ್ನವಾಗಿ ಆ ರಾಶಿ ನವಾಂಶವೇ ಉದಯಿಸಿದರೆ ತನ್ನ ಮನೆ ಬಾಗಿಲ ಸಮೀಪದಲ್ಲೂ, ಪ್ರಸವ ಸ್ಥಳವನ್ನು ಹೇಳತಕ್ಕದ್ದು. ಇಲ್ಲಿ ರಾಶ್ಯಂಶ ಸಮಾನಗೋಚರೇ ಎಂದು ಲಗ್ನ ನವಾಂಶವು ಸಾಮಾನ್ಯವಾಗಿ ಹೇಳಲ್ಪಟ್ಟಿರುತ್ತೆ ಅಲ್ಲವೆ? ಆಗ ಪ್ರಸವ ಪ್ರದೇಶವನ್ನು ಲಗ್ನ ರಾಶಿಯಿಂದ ಹೇಳಬೇಕೆ? ನವಾಂಶರಾಶಿಯಿಂದ ಹೇಳಬೇಕೇ ? ಎಂದು ಅನುಮಾನವಿರುವುದರಿಂದ ಶಂಕಾ ಸಮಾಧಾನ ಹೇಳಲ್ಪಡುತ್ತೆ. ಅಂಶಕಕ್ಷಯೋಃ-ಅಂಶಕ-ನವಾಂಶದ, ಋಕ್ಷ-ರಾಶಿಯ, ಬಲಯೋಗಾತ್-ಬಲದಿಂದ, ಫಲಂ-ಪ್ರಸವಸ್ಥಾನರೂಪ ಫಲವನ್ನು ತಿಳಿಯಬೇಕು. ಲಗ್ನರಾಶಿ ನವಾಂಶ ರಾಶಿಗಳಲ್ಲಿ ಯಾವುದು ಬಲಯುಕ್ತವಾಗಿರುವುದೋ ಆ ರಾಶಿ ಸಂಚಾರ ಪ್ರದೇಶದಲ್ಲಿ ಪೂರ್ವೋಕ್ತಪ್ರಕಾರವಾಗಿ ಪ್ರಸವ ಸ್ಥಳವನ್ನು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಭವನಾಂಶ ಸದೃಶದೇಶೇ ಪ್ರಸವೋಜ್ಞೇಯ ಸ್ಸದಾತ್ರಯುವತೀನಾಂ ॥ ಮಿಶ್ರ ಗ್ರಹಾಂಶೆ ವರ್ತ್ಮನಿ ಸ್ಥಿರರಾಶ್ಯಂಶೆ ತಥಾ ಸ್ವಗೃಹೇ ॥೧೮॥ ಸ್ವಾಧಿಪಯುತೇ ಮಿಲಗ್ನೇ ಸ್ವಗೃಹೇಷ್ವನ್ಯಸ್ಮಿ ತಥಾನ್ಯಥೌ ಪ್ರಸವಃ ॥೧೯॥ ಎಂದು ಹೇಳಲ್ಪಟ್ಟಿರುತ್ತೆ. ಪೂರ್ವೋಕ್ತವಾದ ಯೋಗ ಇಲ್ಲದಿರುವಾಗ ಮಾತ್ರವೇ ಈ ರಾಶ್ಯಂಶ ಸಮಾನಗೋಚರ ಮಾರ್ಗಾದಿಯಲ್ಲಿ ಪ್ರಸವವೆಂದು ತಿಳಿದುಕೊಂಡು ಲಗ್ನ ನಿರ್ಣಯ ಮಾಡಿಕೊಳ್ಳಬೇಕು ॥೧೩॥

## ಶಿಶುವಿಸೃಜ್ಯ ಯೋಗಃ

ಮೂಲ॥ ಆರಾರ್ಕಜಯೋಃ ಸ್ತ್ರಿಕೋಣಗೆ ಚಂದ್ರರ್ಕೇಚ ವಿಸೃಜ್ಯತೇಂಬಯಾ॥
ದೃಷ್ಟೇಮರರಾಜಮಂತ್ರಿಣಾದೀರ್ಘಾಯುಸ್ಸುಖಭಾಕ್ಷಸಸ್ಮೃತಃ ॥

ಅವತಾರಿಕೆ ॥ ಹುಟ್ಟಿದ ಶಿಶು ತಾಯಿಯಿಂದ ಬಿಡಲ್ಪಡುವಿಕೆ ಮತ್ತು ಬಿಡಲ್ಪಟ್ಟ ಶಿಶು ಧೀರ್ಘಾಯುಷ್ಮಂತನಾಗಿ ಸೌಖ್ಯದಿಂದಿರುವಿಕೆ; ಈ ಎರಡು ಯೋಗಗಳನ್ನು ಹೇಳುತ್ತಾನೆ.

ಟೀಕು॥ ಚಂದ್ರೇ-ಜನ್ಮಕಾಲ ಚಂದ್ರನು, ಆರಾರ್ಕಜಯೋಃ-ಅಂಗಾರಕ ಶನೈಶ್ಚರರಿಗೆ, ತ್ರಿಕೋಣಗೆ-೫-೯ನೇ ಸ್ಥಾನಗಳಲ್ಲಿದ್ದರೆ, ಅಂಬಯಾ-ಮಾತೃವಿನಿಂದ, ವಿಸೃಜ್ಯತೆ-ತ್ಯಜಿಸಲ್ಪಡುತ್ತಾನೆ. ಇದು ಒಂದು ಯೋಗ ಮತ್ತು ಅರ್ಕೇಚ-ಸೂರ್ಯನೂ, ಆರಾರ್ಕಜಯೋಃ (ಮೇಲೆ ಹೇಳಿದಂತೆಯೇ) ಅಂಗಾರಕ ಶನೈಶ್ಚರರಿಗೆ, ತ್ರಿಕೋಣಗೆ

೫-೯ನೇ ಸ್ಥಾನಗಳಲ್ಲಿದ್ದರೆ, ಅಂಬಯಾ-ತಾಯಿಯಿಂದ, ವಿಸೃಜ್ಯತೇ-ತ್ಯಜಿಸಲ್ಪಡುವನು. ಈ ಪ್ರಕಾರವಾಗಿ ಎರಡು ಯೋಗಗಳಾಗಿ ಭಟ್ಟೋತ್ಪಲಾಚಾರ್ಯರಿಂದ ಮಾಡಲ್ಪಟ್ಟ ವ್ಯಾಖ್ಯಾನದಲ್ಲಿ, ಅರ್ಕೇಚ ಎಂಬುವ ಮೂಲದೊಳಗಿನ ಚಕಾರ ಸಮುಚ್ಚಯದಿಂದ, ಅರ್ಕೇವಾ ಎಂದು ಅರ್ಥಮಾಡಿ ವಕಾರದ ವಿಕಲ್ಪದಿಂದ ಅರ್ಥ ಹೇಳಲ್ಪಟ್ಟಿರುತ್ತೆ. ಇಲ್ಲಿ ಸೂರ್ಯ ಚಂದ್ರರು ತ್ರಿಕೋಣಸ್ಥಾನಗಳಲ್ಲಿ (೫-೯) ರವಿಚಂದ್ರರಿಬ್ಬರೂ ಇದ್ದು ಆ ಸ್ಥಾನವು ಶನಿಗೆ ಪಂಚಮ ಅಥವಾ ನವಮ ಸ್ಥಾನವಾಗಿರಬೇಕು. ಈ ರೀತಿಯಾಗಿ ಸೂರ್ಯಚಂದ್ರರಿಬ್ಬರೂ ಶನಿಗೆ ತ್ರಿಕೋಣ ಸ್ಥಾನಗಳಲ್ಲಿದ್ದರೆ ಈ ಯೋಗ ಪ್ರಬಲವಾದದ್ದೆಂದು ತಿಳಿಯಬರುತ್ತೆ. ಕೆಲವರು ಈ ಯೋಗವನ್ನು ಕುಜತ್ರಿಕೋಣದಲ್ಲಿ ಚಂದ್ರ, ಸೂರ್ಯತ್ರಿಕೋಣದಲ್ಲಿ ಶನಿಯಿದ್ದರೆ ಈ ಯೋಗವೆಂದು ಹೇಳುತ್ತಾರೆ. ಮತ್ತೆ ಕೆಲವರು ಕುಜಶನಿಗಳು ಏಕತ್ರಯಿದ್ದು ಅವರಿಗೆ ತ್ರಿಕೋಣ ಸ್ಥಾನಗಳಲ್ಲಿ ಚಂದ್ರನಿದ್ದರೂ ಅಥವಾ ಸೂರ್ಯನಿದ್ದರೂ ಈ ಯೋಗವೆಂದು ಹೇಳುತ್ತಾರೆ. ಯಾವಾಗ ತಾಯಿಯಿಂದ ಬಿಡಲ್ಪಡುವನೋ ಅವನು ತಂದೆಯಿಂದಲೂ ಬಿಡಲ್ಪಡುವನು. ಆದ್ದರಿಂದ ಚಂದ್ರೇರ್ಕೇಚ ಎಂದು ಹೇಳಿದ ಮೂಲದ ಅರ್ಥ ಪ್ರಕಾರ ಕುಜ ಶನಿಗಳು ಏಕತ್ರ ಇದ್ದು ಅವರಿಗೆ ಪಂಚಮ ನವಮ ಸ್ಥಾನಗಳಲ್ಲಿ ರವಿಚಂದ್ರರಿದ್ದರೆ ಈ ಯೋಗವೆಂದು ತಿಳಿಯಬೇಕು. ಈ ಯೋಗ ೧೨ ಲಗ್ನಕ್ಕೂ ಪಂಚಮದಲ್ಲಿದ್ದರೆ ೧೨ ಯೋಗ, ನವಮದಲ್ಲಿದ್ದರೆ ೧೨ ಯೋಗ, ಅಂತು ೨೪ ಯೋಗಗಳು ಹುಟ್ಟುತ್ತವೆ.

## ಬಿಡಲ್ಪಟ್ಟ ಶಿಶುವಿಗೆ ಸೌಖ್ಯಯೋಗ

ಅಮರರಾಜ ಮಂತ್ರಿಣಾ-ದೇವರಾಜ ಮಂತ್ರಿಯಿಂದ ಅಂದರೆ ಗುರುವಿನಿಂದ, ದೃಷ್ಟೇ-ಆ ಸೂರ್ಯಚಂದ್ರರು ಏಕೈಕವಾಗಿ ಆಗಲೀ ಸೂರ್ಯ ಚಂದ್ರರಿಬ್ಬರೂ ಆಗಲಿ ನೋಡಲ್ಪಟ್ಟರೆ, ಸಃ-ಆ ಮಾತೃವಿನಿಂದ ಬಿಡಲ್ಪಟ್ಟ ಶಿಶುವು, ದೀರ್ಘಾಯುಃ-ದೀರ್ಘಾಯುಸ್ಸುಳ್ಳದ್ದಾಗಿಯೂ, ಸುಖಭಾಕ್ಚ-ಸೌಖ್ಯವನ್ನೂ ಪಡೆಯುತ್ತೆಂಬುದಾಗಿ, ಸ್ಮೃತಃ-ಸ್ಮರಿಸಲ್ಪಟ್ಟಿರುತ್ತೆ. ಮತ್ತು ಇಲ್ಲಿ ಕೆಲವರು "ಚಂದ್ರೇಸ್ತೇಚ ವಿಸೃಜ್ಯತೇಂಬಯಾ" ಎಂದು ಪಾಠ ಮಾಡಿ ಸಪ್ತಮದಲ್ಲಿ ಚಂದ್ರನಿದ್ದನೆಂದು ಅರ್ಥ ಮಾಡಿರುವರು. ಇದಕ್ಕೆ ಅನ್ಯಮತ ಸಮ್ಮತಿ ಇರುತ್ತೆ. ಕೇರಳಿಯೇ ॥ ವಕ್ರಃಕೋಣೋಪಿವಾಕೋಣೆ ಯಸ್ಯಜನ್ಮನಿ ಚಂದ್ರತಃ ॥ ತಸ್ಯ ಮಾತ್ರಾ ವಿಯೋಗಸ್ಸ್ಯಾಚ್ಚತುರ್ಥೇ ಸಪ್ತಮೇ ಪಿವಾ ॥ ಎಂದು ಉದಾಹರಣವಿರುತ್ತೆ. ಇಲ್ಲಿ ಮಾತೃ ವಿಯೋಗಸ್ಯಾ ಪಾಠಾಂತರವಿರುತ್ತೆ ॥೧೪॥

## ಮಾತೃ ವಿಸೃಷ್ಟ ಶಿಶುಮರಣ ಯೋಗಃ

ಮೂಲ।। ಪಾಪೇಕ್ಷಿತೇ ತುಹಿನಗಾವುದಯೇ ಕುಜೇಸ್ತೇತ್ಯಕ್ತೊ ವಿನಶ್ಯತಿ ಕುಜಾರ್ಕ ಜಯೋಸ್ತಥಾಯೇ ।। ಸೌಮ್ಯೇಪಿ ಪಶ್ಯತಿ ತಥಾವಿಧಹಸ್ತ ಮೇತಿ ಸೌಮ್ಯೇತರೇಷು ಪರಹಸ್ತ ಗತೋಪ್ಯನಾಯುಃ ।।೧೫।।

ಅ।। ತಾಯಿಯಿಂದ ಬಿಡಲ್ಪಟ್ಟ ಶಿಶು ಮರಣ ಹೊಂದುವ ಯೋಗವನ್ನು ಮತ್ತು ಆ ಶಿಶುವು ಬ್ರಾಹ್ಮಣಾದಿ ವರ್ಣದವರಲ್ಲಿ ಪೋಷಿಸಲ್ಪಡುವ ಯೋಗವನ್ನು ಸಹ ಹೇಳುತ್ತಾನೆ. ಟೀ ।। ಪಾಪೇಕ್ಷಿತೇ-ಕುಜ ಶನಿಗಳಲ್ಲಿ ಒಂದು ಗ್ರಹದಿಂದ ನೋಡಲ್ಪಟ್ಟ, ತುಹಿನಗೌ-ಚಂದ್ರನು, ಉದಯೇ-ಲಗ್ನದಲ್ಲಿದ್ದು, ಕುಜ-ಅಂಗಾರಕನು, ಅಸ್ತೆ-ಸಪ್ತಮದಲ್ಲಿದ್ದರೆ, ತ್ಯಕ್ತಃ-ತಾಯಿಯಿಂದ ಬಿಡಲ್ಪಟ್ಟ ಶಿಶುವು, ವಿನಶ್ಯತಿ-ಮೃತಿಹೊಂದುವುದು. ತಥಾ ಆ ಪ್ರಕಾರವೇ ಲಗ್ನದಲ್ಲಿರುವ ಚಂದ್ರನು ಪಾಪೇಕ್ಷಿತ-ಸೂರ್ಯನಿಂದ ನೋಡಲ್ಪಟ್ಟರೆ, ಆಯೇ-ಏಕಾದಶ ಸ್ಥಾನದಲ್ಲಿ, ಕುಜಾರ್ಕಜಯೋಃ-ಕುಜಶನಿಗಳಿದ್ದರೆ ತಾಯಿಯಿಂದ ಬಿಡಲ್ಪಟ್ಟ ಶಿಶುವು ನಾಶವಾಗುವುದು. ಈ ಹೇಳಲ್ಪಟ್ಟ ಪ್ರಕಾರವೇ ಚಂದ್ರನು ಲಗ್ನದಲ್ಲೂ ಕುಜನು ಸಪ್ತಮದಲ್ಲಿರುವಾಗ, ಸೌಮ್ಯೇಪಿ - ಶುಭಗ್ರಹವಾದರೂ, ಪಶ್ಯತಿ-ಚಂದ್ರನು ನೋಡಿದರೆ, ಆ ಹುಟ್ಟಿದ ಶಿಶುವು ತ್ಯಜಿಸಲ್ಪಟ್ಟಿದ್ದಾದರೂ, ತಥಾವಿಧಹಸ್ತಮೇತಿ-ಆ ನೋಡುವ ಶುಭಗ್ರಹವು ಬ್ರಾಹ್ಮಣಾದಿ ವರ್ಣಗಳಲ್ಲಿ ಯಾವ ವರ್ಣ ಉಳ್ಳದ್ದಾಗಿರುವನೋ ಆ ವರ್ಣದವರಲ್ಲಿ ಸಿಕ್ಕಿ ಬದುಕುವುದು. ಈ ಹೇಳಲ್ಪಟ್ಟಯೋಗದಲ್ಲಿ ಚಂದ್ರನಿಗೆ, ಸೌಮ್ಯೇತರೇಷು-ಪಾಪಗ್ರಹದಿಂದ ನೋಡಲ್ಪಟ್ಟರೆ, ಆ ಗ್ರಹಗಳಲ್ಲಿ ಬಲಯುಕ್ತವಾದ ಗ್ರಹವ್ಯಾವುದೋ ಆ ಗ್ರಹದ ಜಾತಿ ವರ್ಣದವರಲ್ಲಿ ಸಿಕ್ಕಿ, ಅನಾಯುಃ-ಆಯುರ್ಹೀನವಾಗಿ ನಾಶವಾಗುವುದು. ದೃಷ್ಟೇಮರರಾಜ ಮಂತ್ರೀಣಾ ಧೀರ್ಘಾಯುಸ್ಸುಖಭಾಕ್ಷ ಸಸ್ಯ ಸ್ಯಾತ್-ಎಂದು ಪೂರ್ವೋಕ್ತ ಶ್ಲೋಕದಲ್ಲಿ ಹೇಳಿದ ಪ್ರಕಾರ ಬಲಯುಕ್ತವಾದ ಬೃಹಸ್ಪತಿಯಿಂದ ನೋಡಲ್ಪಟ್ಟರೆ ಯಾವ ಜಾತಿಯವರಲ್ಲಿ ಸಿಕ್ಕಿದರೂ, ಶಿಶು ದೀರ್ಘಾಯು ಸುಖಭಾಗ್ಯವನ್ನು ಹೊಂದುವುದೆಂದು ಹೇಳತಕ್ಕದ್ದು, ಈ ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಮ್ರಿಯತೇ ಪಾಪೈರ್ದೃಷ್ಟ । ಶ್ಶಶಿನಿವಿಲಗ್ನೇ ಕುಜೇಸ್ತಗೇತ್ಯಕ್ತಃ ।। ಲಗ್ನಾಚ ಲಾಭಗತಯೋರ್ವ ಸುಧಾಸುತ ಮಂದಯೋರೇವಂ ।।೧೯।। ಪಶ್ಯತಿ ಸೌಮ್ಯೋ ಬಲವಾರ್ನ ಯಾದೃಗ್ಗೃಹ್ಣಾತಿತಾದೃಶೋಜಾತಂ ।। ಶುಭಪಾಪಗ್ರಹದೃಷ್ಟೇ ವರ್ಣ್ಯೈರ್ಹೀತೋಪ್ಯಸೌಮ್ರಿಯತೇ ।।೨೦।। ಸರ್ವೇಷ್ವೇತೇಷುಯದಾಯೋಗೇಷು ಶಶೀ ಸುರೇಜ್ಯ ಸಂದೃಷ್ಟಃ ।। ಭವತಿತದಾ ದೀರ್ಘಾಯುರ್ಹಸ್ತ ಗತಸ್ಸರ್ವವರ್ಣೇಷು ।।೨೧।।

## ಪಿತೃ ಮಾತೃಗೃಹೇ ಜನನಯೋಗಃ

ಮೂಲ॥ ಪಿತೃಮಾತೃಗೃಹೇಷು ತದ್ಬಲಾತ್ತರುಸಾಲಾದಿಷು ನೀಚಗೈಶ್ಶುಭೈಃ॥
ಯದಿನೈಕ ಗತೈಸ್ತು ವೀಕ್ಷಿತೌ ಲಗ್ನೇಂದೂವಿಜನೇ ಪ್ರಸೂಯತೇ॥

ಅವ ॥ ಪಿತೃಮಾತೃಗೃಹದಲ್ಲಿ ಪ್ರಸವವಾಗುವ ಯೋಗ ಹೇಳಲ್ಪಡುತ್ತೆ.

ಟೀಕು ॥ ಪಿತೃಮಾತೃಗೃಹೇಷು ನಾಲ್ಕನೇ ಪ್ರಕರಣದಲ್ಲಿ 'ದಿವಾರ್ಕಶುಕ್ರೌ ಪಿತೃಮಾತೃಸಂಜ್ಞಿತೌ' ಎಂದು ಹೇಳಿರುವ ಪ್ರಕಾರ ಪಿತೃಮಾತೃ ಸಂಜ್ಞರಾದ ಗ್ರಹಗಳಿಂದ ತಾಯಿಯ ಮನೆಯಲ್ಲೂ, ತಂದೆಯ ಮನೆಯಲ್ಲು ಪ್ರಸವವಾಯಿತೆಂದು ಹೇಳಲ್ಪಡತಕ್ಕದ್ದು, ತದ್ಬಲಾತ್-ಹಗಲು ಸೂರ್ಯನು ರಾತ್ರಿ ಶನೈಶ್ಚರನು ಬಲವಾಗಿದ್ದರೆ ಪಿತೃಗೃಹದಲ್ಲಿಯೂ, ಹಗಲು ಶುಕ್ರನಾಗಲೀ ರಾತ್ರಿ ಚಂದ್ರನಾಗಲೀ ಬಲವಂತರಾಗಿದ್ದರೆ ಮಾತೃಗೃಹದಲ್ಲೂ ಪ್ರಸವವೆಂದು ಹೇಳತಕ್ಕದು. ಪಿತೃಮಾತೃಗೃಹೇಷು ಎಂಬುವಲ್ಲಿ ಬಹುವಚನವಿರುವುದರಿಂದ ಪಿತೃಮಾತೃಸ್ವಸ್ರಾದಿ ಗೃಹಗಳಲ್ಲಿ ಪ್ರಸವವನ್ನು ಕೂಡಾ ಹೇಳಬಹುದು. ಅದು ಹೇಗೆಂದರೆ; ಹಗಲು ಶನಿಯಾಗಲೀ, ರಾತ್ರಿ ಸೂರ್ಯನಾಗಲೀ ಬಲವಂತರಾಗಿದ್ದರೆ ಚಿಕ್ಕಪ್ಪ, ದೊಡ್ಡಪ್ಪನ ಮನೆಯಲ್ಲೂ, ಸೋದರತ್ತೆ ಮೊದಲಾದವರ ಮನೆಯಲ್ಲೂ ಹಗಲು ಚಂದ್ರನಾಗಲಿ, ರಾತ್ರಿ ಶುಕ್ರನಾಗಲಿ ಬಲಿಷ್ಠರಾಗಿದ್ದರೆ ಚಿಕ್ಕಮ್ಮ ದೊಡ್ಡಮ್ಮ ಸೋದರಮಾವ ಮೊದಲಾದವರ ಮನೆಯಲ್ಲು ಪ್ರಸವವೆಂದು ಹೇಳತಕ್ಕದ್ದು.

## ವೃಕ್ಷ ಪ್ರಾಕಾರಾದಿಗಳ ಸಮೀಪ ಜನನಯೋಗಃ

ಶುಭೈಃ- ಸರ್ವ ಶುಭ ಗ್ರಹಗಳೂ, *ನೀಚಗೈಃ-ತಮ್ಮ ತಮ್ಮ ನೀಚಸ್ಥಾನ ಗಳಲ್ಲಿದ್ದರೆ, ತರುಸಾಲಾದಿಷು-ವೃಕ್ಷಪ್ರಕಾರ ಸಮೀಪದಲ್ಲೂ, ಆದಿ ಶಬ್ದದಿಂದ ನದೀ ಕೂಪಾದಿಗಳ ಸಮೀಪದಲ್ಲೂ ಪ್ರಸವವೆಂದು ಹೇಳತಕ್ಕದ್ದು.

## ಜನಯುಕ್ತ ಪ್ರದೇಶೇ ಜನನಯೋಗಾಃ

ಆ ಏಕರಾಶಿಗತರಾದ ಬಹು ಶುಭಗ್ರಹಗಳಿಂದ ಲಗ್ನಚಂದ್ರನು ನೋಡಲ್ಪಟ್ಟರೆ ಜನಯುಕ್ತವಾದ ಪ್ರದೇಶದಲ್ಲಿ ಪ್ರಸವವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ

---

* ಶುಭೈಃ- ಎಂಬುವುದು ಏಕಕಾಲದಲ್ಲಿ ಶುಕ್ರ ಬುಧರು ನೀಚರಾಗುವುದಿಲ್ಲ. ಆದ್ದರಿಂದ ಎರಡು ಶುಭಗ್ರಹಗಳೇ ನೀಚರೆಂದು ತಿಳಿಯಬೇಕು.

ಸಾರಾವಳಿಯಲ್ಲಿ ।।ಶ್ಲೋಕ।। ಪಿತೃಮಾತೃಗ್ರಹಬಲತಸ್ತತ್ಸ್ವಜನ ಗೃಹೇಷು ಬಲಯೋಗಾತ್।। ಪ್ರಾಕಾರ ತರುನದೀಷುಚಸೂತಿರ್ನೀಚಾಶ್ರಿತೈಸ್ಸೌಮ್ಯೈಃ । ನೇಕ್ಷೇತೇ ಲಗ್ನೇಂದೂಯದ್ಯೇಕಸ್ಥಾಗ್ರಹಾಸ್ತದಾಟವ್ಯಾಂ ।।೨೨।। ಈ ಪ್ರಕಾರ ಹೇಳಿರುತ್ತೆ.

## ಅಂಧಕಾರಾನಂಧಕಾರಾದಿ ಸ್ಥಳಜನ್ಮಯೋಗಃ

ಮೂಲ।। ಮಂದರ್ಕ್ಷಾಂಶೇ ಶಶಿನಿಹಿಬುಕೇ ಮಂದದೃಷ್ಟೇಬ್ಜಗೇವಾ ।
ತದ್ಯುಕ್ತೇವಾ ತಮಸಿಶಯನಂ ನೀಚಸಂಸ್ಥೇಚಭೂಮೌ।।
ಯದ್ವದಾಶಿರ್ವ್ರಜತಿಹರಿಜಂ ಗರ್ಭಮೋಕ್ಷಸ್ತು ತದ್ವಾತ್ಪಾಪೈಶ್ಚಂದ್ರಾತ್
ಸ್ಮರಸುಖಗತೈಃ ಕ್ಲೇಶಮಾಹುರ್ಜನನ್ಯಾಃ ।।೧೭।।

ಅ ।। ಅಂಧಕಾರ ಅನಂಧಕಾರಾದಿ ಸ್ಥಳದಲ್ಲಿ ಜನನವನ್ನು ಮತ್ತು ಜನ್ಮಕಾಲದಲ್ಲಿ ಶಿರೋದಯ ಪ್ರಕಾರವನ್ನು, ತಾಯಿಗೆ ಕಷ್ಟಪ್ರಸವ ಮೊದಲಾದವುಗಳನ್ನೂ ಹೇಳಿರುತ್ತೆ. ಟೀ।। ಶಶಿನಿ-ಚಂದ್ರನು ಯಾವ ರಾಶಿಯಲ್ಲಾದರೂ, ಮಂದರ್ಕ್ಷಾಂಶೇ-ಶನಿನವಾಂಶೆಯಲ್ಲಿ ಅಂದರೆ ಮಕರ ಕುಂಭ ನವಾಂಶೆಯಲ್ಲಿದ್ದರೆ, ತಮಸಿ-ಕತ್ತಲೆ ಮನೆಯಲ್ಲಿ, ಶಯನಂ-ಸೂತಿಕಾ ಶಯನವನ್ನು ಹೇಳತಕ್ಕದ್ದು. ಹಿಬುಕೇ-ಲಗ್ನಕ್ಕೆ ಚತುರ್ಥದಲ್ಲಿ ಚಂದ್ರನಿದ್ದರೆ, ಅಂಧಕಾರದಲ್ಲಿಯೇ ಶಯನವೆಂದು ಹೇಳತಕ್ಕದ್ದು. ಮಂದದೃಷ್ಟೇ-ಯಾವ ರಾಶಿಯಲ್ಲಾದರೂ ಚಂದ್ರನು ಶನಿಯಿಂದ ನೋಡಲ್ಪಟ್ಟರೆ ಅಂಧಕಾರದಲ್ಲಿ ಸೂತಿಕಾ ಶಯನವೆಂದು ಹೇಳಲ್ಪಡತಕ್ಕದ್ದು. ಅಬ್ಜಗೇ-ಇಲ್ಲಿ ಅಬ್ಜವೆಂಬ ಶಬ್ದ ಕರ್ಕಾಟಕ ಮೀನ ರಾಶಿಗಳಿಗೆ ಅನ್ವಯಿಸುತ್ತದೆ. ಆದ್ದರಿಂದ ಚಂದ್ರನು ಯಾವ ರಾಶಿಯಲ್ಲಾದರೂ ಕರ್ಕಾಟಕ ಮೀನ ನವಾಂಶದಲ್ಲಿದ್ದರೆ ಅಂಧಕಾರದಲ್ಲಿ ಸೂತಿಕಾ ಶಯನವೆಂದು ಹೇಳತಕ್ಕದ್ದು. ತದ್ಯುಕ್ತೇವಾ-ಚಂದ್ರನು ಶನಿಯ ಸಂಗಡ ಇದ್ದರೆ ಅಂಧಕಾರದಲ್ಲಿ ಸೂತಿಕಾ ಶಯನವೆಂದು ಹೇಳತಕ್ಕದ್ದು. ಈ ಪ್ರಕಾರವೇ ನಿಷೇಕ ಕಾಲದಲ್ಲಿಯೂ ಅಂಧಕಾರದಲ್ಲಿ ಶಯನವೆಂದು ತಿಳಿಯತಕ್ಕದ್ದು. ಈ ಯೋಗಗಳು ಇದ್ದಾಗ್ಯೂ ಚಂದ್ರನು ಸೂರ್ಯನಿಂದ ನೋಡಲ್ಪಟ್ಟರೆ ಅಂಧಕಾಲದಲ್ಲಿ ಶಯನ ವಾಗುವುದಿಲ್ಲ. ಈ ವಿಷಯದಲ್ಲಿ ಯವನಾಚಾರ್ಯಃ ।।ಶ್ಲೋಕ।। ಸೌರಾಂಶಕಸ್ಥೇ ಶಶಿನಿ ಪ್ರಲಗ್ನೇ ಜಲೇಜಲಾಖ್ಯಾಂ ಸಕಮಾಶ್ರಿತೇವಾ । ಸ್ವಾಂಶಸ್ಥಿತೇಕೇಂದ್ರ ಗತೇರ್ಕಜೇವಾ ಜಾತಸ್ತಮಿಸ್ರೇಯದಿವಾರ್ಕದೃಷ್ಟಃ ।।೨೨।। ಎಂದು ಹೇಳಲ್ಪಟ್ಟಿದೆ. ಬಲವಂತನಾದ ಸೂರ್ಯನು ಅಂಗಾರಕನಿಂದ ನೋಡಲ್ಪಟ್ಟರೆ, ದೀಪಸಹಿತವಾದ ಮನೆಯಲ್ಲಿ ಸೂತಿಕಾ ಶಯನವೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ-ಶ್ಲೋಕ।। ಬಲವತಿಸೂರ್ಯೇದೃಷ್ಟೇ ಬಹುಪ್ರದೀಪಾಧರಾಕುಪುತ್ರೇಣ ।। ಅನ್ವೈರ್ವ್ಯಪಗತ

ವೀರ್ಕೇಸುತೌ ಜ್ಯೋತಿಸ್ಪೃಕ್ಛೈರ್ಭವತಿ ॥೨೪॥ ಸೌರಾಂಶೇಥ ಜಲಾಂಶೇ ಚಂದ್ರೇರ್ಕಜಸಂಯುತೇಥವಾಹಿಬುಕೇ । ತದ್ದೃಷ್ಟೇನಾ ಕುರ್ಯಾತ್ತಮಸಿ ಪ್ರಸವಂನಸಂದೇಹಃ ॥೨೫॥ ಎಂದು ಹೇಳಲ್ಪಟ್ಟಿರುತ್ತೆ. ನೀಚಸಂಸ್ಥೈ-ನೀಚಸ್ಥಾನದಲ್ಲಿದ್ದ ಗ್ರಹಗಳಿಂದ, ಅಂದರೆ-ನೀಚಸಂಸ್ಥೈ-ಎಂದು ಬಹು ವಚನ ಪ್ರಯೋಗದಿಂದ ಎರಡಕ್ಕಿಂತ ಹೆಚ್ಚಾದ ಗ್ರಹಗಳು ನೀಚಸ್ಥಾನದಲ್ಲಿದ್ದರೆ, ಭೂಮೌ-ನೆಲದ ಮೇಲೆ ಹುಲ್ಲು ಹಾಸಿಗೆ ಮಾಡಿಕೊಂಡು, ಸೂತಿಕಾ ಸ್ತ್ರೀ ಮಲಗಿರುವಳೆಂದು ಹೇಳತಕ್ಕದ್ದು. ಕೆಲವರು ಚಂದ್ರನು ಲಗ್ನದಲ್ಲಾಗಲಿ ನೀಚ ಸ್ಥಾನದಲ್ಲಾಗಲಿ ಇದ್ದರೆ ಭೂಮಿಯಲ್ಲಿ ಸೂತಿಕಾ ಸ್ತ್ರೀ ಶಯನವೆಂದು ಹೇಳುತ್ತಾರೆ. ಈ ವಿಷಯಕ್ಕೆ ಸಾರಾವಳಿಯಲ್ಲಿ ॥ಶ್ಲೋಕ॥ ನೀಚಸ್ಥೈರ್ಭೂಶಯನಂ ಚಂದ್ರೇಪ್ಯಥವಾ ಸುಖೇವಿಲಗ್ನೇವಾ ॥ ಎಂದು ಹೇಳಲ್ಪಟ್ಟಿರುತ್ತೆ. ಈ ಯೋಗ ವೃಶ್ಚಿಕ ಸಿಂಹ ಲಗ್ನಕ್ಕೆ ಮಾತ್ರ ಸಂಭವಿಸುತ್ತದೆ.

## ಶೀರ್ಷೋದಯಾದಿ ಗರ್ಭಮೋಕ್ಷ ಯೋಗಃ

ರಾಶಿಃ-ಪ್ರಸವ ಲಗ್ನರಾಶಿ, ಯದ್ವತ್-ಯಾವ ಪ್ರಕಾರವಾಗಿ, ಹರಿಜಂ*-ಉದಯವನ್ನು, ವ್ರಜತಿ-ಹೊಂದುವುದೋ, ತದ್ವತ್-ಆ ಪ್ರಕಾರವಾಗಿಯೇ, ಗರ್ಭಮೋಕ್ಷ-ಪ್ರಸವವನ್ನು ಹೇಳತಕ್ಕದ್ದು. ಅದು ಯಾವ ಪ್ರಕಾರವೆಂದರೆಃ-ಶೀರ್ಷೋದಯರಾಶಿ ಪ್ರಸವ ಲಗ್ನವಾದರೆ, ಮುಂಚಿತವಾಗಿ ಶಿರಸ್ಸು ಉದಯ ವಾಗುವುದು. ಪೃಷ್ಠೋದಯರಾಶಿ ಪ್ರಸವ ಲಗ್ನವಾದರೆ ಶಿಶುವು ಅಧೋಮುಖವಾಗಿ ಪಾಪಪುರಸ್ಸರವಾಗಿ ಪೃಷ್ಠವನ್ನು ತೋರಿಸಿಕೊಳ್ಳುತ್ತಾ ಜನನವಾಗುವುದು. ಉಭಯೋದಯರಾಶಿ ಜನನಕಾಲ ಲಗ್ನವಾದರೆ, ಶಿಶುವು ಹಸ್ತ ಮುಂಚಿತವಾಗಿ ಕಾಣಿಸಿಕೊಂಡು ಹಸ್ತಪುರಸ್ಸರವಾಗಿ ಜನನವಾಗುವುದು. ಈ ವಿಷಯಕ್ಕೆ ಸಾರಾವಳಿಯಲ್ಲಿ ॥ಶ್ಲೋಕ॥ ಶಿರ್ಷೋದಯೇ ವಿಲಗ್ನೇಮೂರ್ಧ್ನಾ ಪ್ರಸವೋನ್ಯಥೋ ದಯೇಚರಣ್ಯೇ॥ ಉಭಯೋದಯೇಹಸ್ತೇ ಶುಭದೃಷ್ಟೇ ಶೋಭನೋನ್ಯಥಾ ಕಷ್ಟಃ ॥೨೬॥ ಎಂದು ಹೇಳಲ್ಪಟ್ಟಿರುತ್ತೆ. ಕೆಲವರು ಲಗ್ನಾಧಿಪತಿಗಾಗಲೀ, ನವಾಂಶಾಧಿಪತಿಗಾಗಲೀ, ಲಗ್ನಗತ ಗ್ರಹಕ್ಕಾಗಲೀ ವಕ್ರತ್ವವುಂಟಾಗಿದ್ದರೆ ಆಗ ಈ ಮೇಲೆ ಹೇಳಲ್ಪಟ್ಟ ರಾಶಿಲಕ್ಷಣ ಪ್ರಸವಕ್ಕೆ ವಿಪರೀತವಾಗಿ ಗರ್ಭಮೋಕ್ಷವೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ॥ಶ್ಲೋಕ॥ ಲಗ್ನಾಧಿಪೇಂ ಶಕಗತೌ ಲಗ್ನಸ್ಥೇವಕ್ರಿತೇಗ್ರಹೇಪ್ಯಥವಾ ॥ ವಿಪರೀತಗತೋಮೋಕ್ಷೋ ವಾಚ್ಯೋಗರ್ಭಸ್ಯ ಸಂಕ್ಲೇಶಃ ॥೨೭॥ ಎಂದು ಮಣಿತ್ಥನು ಹೇಳಿರುವನು.

* ಹರಿಜವೆಂದರೆ ಇಂದ್ರ ದಿಕ್ಕಿನಲ್ಲಿ ಭೂಗೋಳ ಖಗೋಳವನ್ನು ಸೇರುವ ಸಂಧಿ ಸ್ಥಾನ. ಇಲ್ಲಿ ಉದಯವಾಗುವುದರಿಂದ ಉದಯಸ್ಥಾನ.

## ಕಷ್ಟ ಪ್ರಸವಯೋಗಃ

ಚಂದ್ರಾತ್-ತತ್ಕಾಲದಲ್ಲಿ ಚಂದ್ರನು ಯಾವ ರಾಶಿಯಲ್ಲಿರುವನೋ ಆ ಸ್ಥಾನ ಮೊದಲುಗೊಂಡು, ಸ್ಮರಸುಖಗತ್ಯೆಃ - ಸಪ್ತಮ ಚತುರ್ಥ ಸ್ಥಾನದಲ್ಲಿ, ಪಾಪೈಃ-ಪಾಪಗ್ರಹಗಳಾದ ರವಿ, ಕುಜ, ಶನಿ, ಪಾಪಯುಕ್ತ ಬುಧ ಇವರಿದ್ದರೆ, ಜನನ್ಯಾಃ-ತಾಯಿಗೆ, ಕ್ಲೇಶಂ-ಕಷ್ಟವನ್ನು, ಆಹುಃ-ಹೇಳುತ್ತಾರೆ. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಕ್ಲೇಶೋಮಾತುಃ ಕ್ರೂರೈರ್ಬಂಧ್ವಸ್ತಗತೈಃ ಶಶಾಂಕಯುಕ್ತೇವಾ ॥೨೮॥ ಎಂದು ಹೇಳಲ್ಪಟ್ಟಿರುತ್ತೆ. ಆದ್ದರಿಂದ ಚಂದ್ರನು ಪಾಪಗ್ರಹಯುಕ್ತನಾದರೆ ತಾಯಿಗೆ ಜನ್ಮಕಾಲದಲ್ಲಿ ಹೆಚ್ಚಾದ ಕಷ್ಟದಿಂದ ಪ್ರಸವವೆಂದು ಹೇಳತಕ್ಕದ್ದು.

## ಸೂತಿಕಾಗೃಹೇ ದೀಪವಿಚಾರಃ

ಮೂಲ॥ ಸ್ನೇಹಶ್ಶಶಾಂಕಾದುದಯರ್ಕ್ಷವರ್ತಿ ದೀರ್ಘೋರ್ಕ ಯುಕ್ತರ್ಕ್ಷ ವಶಾಚ್ಚರಾದ್ಯಃ ॥ ದ್ವಾರಂಚ ತದ್ವಾಸ್ತುನಿಕೇಂದ್ರಸಂಸ್ಥೈಃಜ್ಞೇಯಂ ಗೃಹೈರ್ವೀರ್ಯಸಮನ್ವಿತೈರ್ವಾ ॥೧೮॥

ಆ ॥ಸೂತಿಕಾ ಗ್ರಹದಲ್ಲಿ ದೀಪದ ಬಟ್ಟಲನ್ನೂ ಅದರಲ್ಲಿರುವ ತೈಲದ ಅಲ್ಪ ಮಧ್ಯ ಪೂರ್ಣತ್ವವನ್ನೂ, ದೀಪದ ಬತ್ತಿಯ ದೀರ್ಘ ಹ್ರಸ್ವತ್ವವನ್ನೂ ಮತ್ತು ಆ ಬತ್ತಿಯ ವರ್ಣವನ್ನೂ, ದೀಪಪಾತ್ರ ಸ್ಥಿತಪ್ರದೇಶವನ್ನೂ, ಸೂತಿಕಾ ಗೃಹ ದ್ವಾರವನ್ನೂ ಸಹ ಹೇಳುತ್ತಾನೆ. ಇಲ್ಲಿ ಸ್ನೇಹವೆಂದರೆ ಘೃತ ತೈಲಾದಿಗಳು ಮೊದಲಾದ ದೀಪೋಕರಣವನ್ನು ಸೇರಿಸಿಕೊಂಡಿರುತ್ತದೆ.

ಟೀಕು॥ ಶಶಾಂಕಾತ್-ಚಂದ್ರನಿಂದ, ಸ್ನೇಹ-ಘೃತತೈಲಾದಿಗಳನ್ನು ನಿರ್ಣಯಿಸಲ್ಪಡತಕ್ಕದ್ದು ಅದು ಯಾವ ಪ್ರಕಾರವೆಂದರೆ :- ಜನ್ಮಕಾಲದಲ್ಲಿ ಚಂದ್ರನು ತಾನಿರುವ ರಾಶಿಯಲ್ಲಿ ಆದಿಯಲ್ಲಿದ್ದರೆ, ದೀಪಪಾತ್ರದಲ್ಲಿ ತೈಲವು ಹೆಚ್ಚಾಗಿರುವುದೆಂದೂ, ರಾಶಿ ಮಧ್ಯದಲ್ಲಿದ್ದರೆ ಆ ಪಾತ್ರವು ಎಷ್ಟು ತೈಲ ಹಿಡಿಯುವುದೋ ಅದರಲ್ಲಿ ಅರ್ಧಾವಶಿಷ್ಟವಾಗಿರುವುದೆಂದೂ, ರಾಶ್ಯಂಶದಲ್ಲಿದ್ದರೆ ತೈಲವು ಅತ್ಯಲ್ಪವಾಗಿತ್ತೆಂದೂ ಈ ಪ್ರಕಾರವಾಗಿ ಚಂದ್ರನ ರಾಶಿಭೋಗಪ್ರಕಾರ ತೈಲವನ್ನು ಊಹಿಸಿ ಹೇಳತಕ್ಕದ್ದು. ಮತ್ತು ಚಂದ್ರನು ರಾಶಿಯ ಭೋಗ ಭಾಗಕಲಾ ವಿಕಲಾಪ್ರಕಾರ ಆ ರಾಶಿಯಲ್ಲಿ ಎಷ್ಟು ಕಾಲವಿಕಲಗಳು ಗತಿಸಿರುವುದೋ ಅಷ್ಟು ಎಣ್ಣೆ ದೀಪಭಾಜನದಲ್ಲಿ ಕಳೆದುಹೋಗಿರತಕ್ಕದ್ದೆಂದು ತಿಳಿಯಬೇಕು. ಉದಾಹರಣೆ-ಚಂದ್ರನು ೪ ರಾಶಿ ೫ ಭಾಗ ೧೦ ಕಲೆ ೨೦ ವಿಕಲೆ ಭೋಗ ಕಳೆದಿದ್ದರೆ ಆ

ದೀಪಪಾತ್ರದಲ್ಲಿ ಮೂವತ್ತು ಭಾಗವನ್ನು ಕಲ್ಪಿಸಿ, ಅದರಲ್ಲಿ ಚಂದ್ರನ ಭೋಗ ಕಲಾ ವಿಕಲೆಗಳನ್ನು ಕಳೆಯಲಾಗಿ ಉಳಿದ ಭಾಗಕಲಾ ವಿಕಲ ಪ್ರಯಾಣಕ್ಕೆ ಸರಿಯಾದ ತೈಲವು ಜನ್ಮಕಾಲಕ್ಕೆ ಸೂತಿಕಾ ಗೃಹದಲ್ಲಿಟ್ಟಿರುವ ದೀಪ ಪಾತ್ರದಲ್ಲಿತ್ತೆಂದು ತಿಳಿಯತಕ್ಕದ್ದು. ಕೆಲವರು ಜನ್ಮಕಾಲದಲ್ಲಿ ಚಂದ್ರನು ಸಂಪೂರ್ಣ ಷೋಡಶಕಲಾ ಉಳ್ಳವನಾಗಿದ್ದರೆ, ದೀಪ ಪಾತ್ರದಲ್ಲಿ ತೈಲ ಪೂರ್ಣವಾಗಿರುವುದೆಂದೂ ಅರ್ಧಚಂದ್ರನಾಗಿದ್ದರೆ, ಅರ್ಧವಶಿಷ್ಟವಾಗಿರುವುದೆಂದೂ, ಕ್ಷೀಣ ಚಂದ್ರನಾಗಿದ್ದರೆ ಅತ್ಯಲ್ಪನಾಗಿರುವುದೆಂದೂ ಹೇಳುತ್ತಾರೆ. ಈ ಪ್ರಕಾರದಲ್ಲಿ ಸಾರಾವಳಿಯಲ್ಲಿ ಸಮ್ಮತಿ. ||ಶ್ಲೋಕ|| ದೀಪಃ ಪೂರ್ಣಃ ಪೂರ್ಣೇಶಶಿವಿಕ್ಷೀಣೇ ಕ್ಷಯಸ್ತು ತೈಲಸ್ಯ || ಎಂದು ಹೇಳಿರುತ್ತಾರೆ. ಈ ನಿರ್ಣಯಾರ್ಥವನ್ನನುಸರಿಸಿದರೆ ಅಮಾವಾಸ್ಯೆ ದಿವಸ ಹುಟ್ಟಿದವನು ಕತ್ತಲೆಯಲ್ಲಿಯೇ ಹುಟ್ಟದನೆಂದು ಹೇಳಬೇಕು. ಯಾಕೆಂದರೆಃ- ಅಮಾವಾಸ್ಯೆ ದಿವಸ ಚಂದ್ರನು ಕಲಾಹೀನನಾಗಿರುವುದರಿಂದ, ಚಂದ್ರನು ಕಾಣಿಸುವುದಿಲ್ಲ. ಚಂದ್ರನ ಕಲಾವೃದ್ಧಿಯ ಪ್ರಕಾರ ದೀಪಭಾಜನದಲ್ಲಿ ತೈಲವಿತ್ತೆಂದು ಹೇಳವುದು ಶುದ್ಧ ಅಸಂಗತ. ಮತ್ತು ಲೋಕವ್ಯವಹಾರಕ್ಕೆ ವಿರುದ್ಧವಾಗಿರುವುದು. ಆದ್ದರಿಂದ ಮೊದಲು ಹೇಳಲ್ಪಟ್ಟ ಪ್ರಕಾರವಾಗಿ ತೈಲದ ಸ್ಥಿತಿಯನ್ನು ನಿರ್ಣಯಿಸತಕ್ಕದ್ದು. ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನಿಗೆ ಸಮ್ಮತಿಯಾಗಿರುತ್ತೆ. ಆದ್ದರಿಂದ ಈ ಪಕ್ಷವನ್ನೇ ಅನುಸರಿಸತಕ್ಕದ್ದು. ಈ ವಿಷಯದಲ್ಲಿ ಜಯದೇವಃ-||ಶ್ಲೋಕ|| ರಾಶ್ಯಾದಿಕೇ ಚಂದ್ರಮುಸಿಪ್ರದಿಪಸ್ತೈಲೇನ ಪೂರ್ಣೋಸ್ತಿವದೇದ್ಬುಧಾಗ್ರ್ಯಃ || ತಥೈವ ಮಧ್ಯಾಂತಗತೇ ಶಶಾಂಕೇ ಮಧ್ಯತ್ವ ಮಲ್ಪತ್ವ ಮುಪೈತಿ ದೀಪಃ ||೨೯|| ತೈಲೇನ ಪೂರ್ಣಃ ಪ್ರಥಮೇ ದೃಕಾಣೆ ತ್ವರ್ಧೋ ದ್ವಿತೀಯೇಚ ತೃತೀಯಕೇಲ್ಪಃ ||೨೯|| ಎಂದು ಹೇಳಿರುವ ಈ ಪ್ರಕಾರವೇ ದೀಪಪಾತ್ರದಲ್ಲಿರುವ ತೈಲವನ್ನು ತಿಳಿಯತಕ್ಕದ್ದು.

## ದೀಪಪ್ರಾಶಸ್ಥ ವರ್ತಿಜ್ಞಾನಯೋಗಃ

ಉದಯರ್ಕ್ಷ-ತತ್ಕಾಲೋದಯ ಲಗ್ನದಿಂದ, ವರ್ತಿಃ-ಬತ್ತಿಯನ್ನು ನಿರ್ಣಯಿಸಬೇಕು. ಅದು ಹೇಗೆಂದರೆಃ- ಜನ್ಮಕಾಲ ಲಗ್ನದ ಆದಿಭಾಗದಲ್ಲಿ ಜನ್ಮವಾಗಿದ್ದರೆ ಬತ್ತಿ ಉದ್ದವಾಗಿರುವುದೆಂದೂ, ಲಗ್ನ ಮಧ್ಯಭಾಗವಾಗಿದ್ದರೆ ಬತ್ತಿ ಅರ್ಧ ಸುಟ್ಟಿರುವುದೆಂದೂ, ಅಂತ್ಯಭಾಗವಾಗಿದ್ದರೆ ಬತ್ತಿ ಅತ್ಯಲ್ಪವಾಗಿರುವುದೆಂದೂ ಹೇಳತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ||ಶ್ಲೋಕ|| ಯಾವಲ್ಲಗ್ನ ಮತೀತಂ ವರ್ತಿರ್ದಗ್ಧಾತುತಾವತೀ ಭವತಿ ||೩೦||

## ವರ್ತಿವರ್ಣ ನಿರ್ಣಯಃ

ಲಗ್ನ ಯಾವವರ್ಣ ಉಳ್ಳದ್ದೋ ಆ ವರ್ಣವುಳ್ಳ ಬತ್ತಿ ದೀಪಭಾಜನ ದಲ್ಲಿರುವುದೆಂದು ಹೇಳುತ್ತಾರೆ. ಈ ವಿಷಯಕ್ಕೆ ॥ಶ್ಲೋಕ॥ ಮಣೇತ್ಥ॥ ಲಗ್ನಸ್ಯ ಯೋತ್ರವರ್ಣೋ ನಿರ್ದಿಷ್ಟಸ್ತೇನ ವರ್ತಿರಾದೇಶ್ಯಾ ॥ ಮತ್ತು ಜಯದೇವಃ ॥ ಲಗ್ನೇಶವದ್ವರ್ಣಕರೂಪಕೇನತುಲ್ಯಂ ಸ್ವರೂಪಂಖಲುವರ್ತಿ ಕಾಯಾಃ ॥೧೩॥ ಅರ್ಕಯುಕ್ಷರ್ಕ್ಷವಶಾತ್-ಸೂರ್ಯನಿರುವ ರಾಶಿ ಸ್ವಭಾವದಿಂದ, ದೀಪಃ-ದೀಪವನ್ನು ಹೇಳತಕ್ಕದ್ದು. ಅದು ಹೇಗೆಂದರೆ:- ಸೂರ್ಯನು ಚರರಾಶಿಯಲ್ಲಿದ್ದರೆ ಯಾರಾದರು ಕೈಯಲ್ಲಿ ಹಿಡಿದು ಸಂಚರಿಸುತ್ತಲಿದ್ದರೆಂತಲೂ, ಸ್ಥಿರರಾಶಿಯಲ್ಲಿದ್ದರೆ ಒಂದು ಕಡೆ ಸ್ಥಿರವಾಗಿತ್ತೆಂತಲೂ, ದ್ವಿಸ್ವಭಾವ ರಾಶಿಯಲ್ಲಿದ್ದರೆ ಡೋಲಾಯ ಮಾನವಾಗಿ ತೂಗಾಡುತ್ತಿತ್ತೆಂತಲೂ, ಹೇಳುತ್ತಾರೆ. ಕೆಲವರು ಸೂರ್ಯನು ಯಾವ ರಾಶಿಯಲ್ಲಿದ್ದನೋ ಆ ರಾಶಿಗೆ ಪ್ರಾಗಾದೀಶಾಃ "ಕ್ರಿಯವೃಷನೃಯು ಕರ್ಕಾಟಾಸ್ಯ ತ್ರಿಕೋಣಾಃ" ಎಂಬುವ ಶ್ಲೋಕದಲ್ಲಿ ಹೇಳಿದ ಪ್ರಕಾರ ಆ ರಾಶಿಗೆ ಯಾವ ದಿಕ್ಕು ಹೇಳಲ್ಪಟ್ಟಿರುವುದೋ ಆ ದಿಕ್ಕಿನಲ್ಲಿ ದೀಪವಿರುತ್ತೆಂದು ಹೇಳತಕ್ಕದ್ದು. ಇನ್ನೂ ಕೆಲವರು ಸೂರ್ಯನ ಭ್ರಮಣವಶದಿಂದ ಎಂಟು ಜಾವದಲ್ಲಿ ಎಂಟು ದಿಕ್ಕುಗಳಲ್ಲಿ ತಿರುಗುವುದರಿಂದ ಆ ಪ್ರಕಾರವಾಗಿ ಸೂರ್ಯನಿರುವ ದಿಕ್ಕಿನಲ್ಲಿ ದೀಪವಿತ್ತೆಂದು ಹೇಳುವರು. ಕೇರಳ ಪ್ರಶ್ನೆಯಲ್ಲಿ ದಿನಸೂರ್ಯಚಾರ "ಅಹೋ ರಾತ್ರ ಭಾಗೇಷು ಯಾಮಾರ್ಧಚಾರೀ ದಿವಾಗವ್ಯಮೇವಾಪಗವ್ಯಂಚನಕ್ತಂ ॥ ಸಹಸ್ರಾಂಶುರಾಖಂಡಲಾಂಶಾದ್ಯದಾಯಂ । ಪಸೇತ್ತತ್ರಗೇಹೇ ಪಿದೀಪಾದಿಚಿಂತ್ಯಂ"॥ ಎಂದುಕ್ತವಾಗಿರುತ್ತೆ. ಈ ವಿಷಯದಲ್ಲಿ ॥ಶ್ಲೋಕ॥ ದ್ವಾದಶಭಾಗೇ ಭಕ್ತೇವಾ ಸಗೃಹೇ ವ್ಯವಸ್ಥಿತೇ ಸಹಸ್ರಾಂಶೌ ॥ ದೀಪಶ್ಚರಸ್ಥಿರಾದಿಷು ತಥೈವವಾಚ್ಯಃ ಪ್ರಸವಕಾಲೇ ॥೩೨॥ ಎಂದು ಸಾರಾವಳಿಯಲ್ಲಿ ಹೇಳಿರುತ್ತೆ, ಮತ್ತು ಜಯದೇವಕೃತ ಜಾತಕ ಚಂದ್ರಿಕಾಯಾಂ ॥ ಯಸ್ಮಿನ್ರಾಶೌ ಭಾಸ್ಕರ ಸ್ತದ್ದಿಶಿಸ್ಯಾ ದೀಪಸ್ಥಾನಂ ಸೂತಿಕಾವೇಶ್ಮನೀಹ ॥ ಲಗ್ನಾರಂಭೇ ವರ್ತಿಕಾ ಪೂರ್ಣ ದೇಹಾ ಮಧ್ಯೇತ್ವರ್ಧಾಸ್ವಲ್ಪಶೇಷಾವಸಾನೇ ॥೩೩॥ ॥ತಾ॥ ಯಾವ ರಾಶಿಯಲ್ಲಿ ತತ್ಕಾಲ ಸೂರ್ಯನು ಸಂಚರಿಸುವನೋ, ಆ ರಾಶಿಯಲ್ಲಿ ದೀಪವಿತ್ತೆಂದು, ಮತ್ತು ಲಗ್ನಾರಂಭವಾಗಿದ್ದರೆ ಬತ್ತಿ ಪೂರ್ಣವಾಗಿತ್ತೆಂದು, ಮಧ್ಯ ಲಗ್ನವಾಗಿದ್ದರೆ ಅರ್ಧ ಬತ್ತಿ ಇತ್ತೆಂದು, ಲಗ್ನಾಂತ್ಯವಾಗಿದ್ದರೆ ಬತ್ತಿ ಅಲ್ಪವಾಗಿತ್ತೆಂದು ಹೇಳತಕ್ಕದ್ದು. ಸಾರಾವಳಿಯಲ್ಲಿ ಹೇಳಿರುವ ಪ್ರಕಾರ ಪ್ರಸೂತವಾಗಿರುವ ಮನೆಯನ್ನು ೧೨ ರಾಶಿಗಳಿಗೆ ೧೨ ಭಾಗಮಾಡಿ ಸೂರ್ಯನು ಯಾವರಾಶಿಯಲ್ಲಿರುವನೋ ಆ ದಿಕ್ಕಿನ ಮನೆಯಲ್ಲಿ ದೀಪವಿತ್ತೆಂದು ಜ್ಯೋತಿಷ್ಕನು ನಿಶ್ಚಯಿಸತಕ್ಕದ್ದು. ಸೂರ್ಯನು

ಬಲವಂತನಾಗಿ ಅಂಗಾರಕನಿಂದ ನೋಡಲ್ಪಟ್ಟರೆ ಅನೇಕ ದೀಪಗಳಿತ್ತೆಂದು, ಬಲಹೀನರಾದ ಗ್ರಹಗಳಿಂದ ನೋಡಲ್ಪಟ್ಟರೆ ತೃಣಕಾಷ್ಠಾದಿ ಜ್ಯೋತಿ (ಕೊಳ್ಳೀ ಬೆಳಕು) ಇತ್ತೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಪರಾಶರಃ ।।ಶ್ಲೋಕ।। ಬಲವಾರ್ದೃಷ್ಟೇಬಾನೌ ಬಹುಪ್ರದೀಪಾನ್ವದೇತ್ಕುಪುತ್ರೇಣ ।। ಅನ್ಯೈರ್ವ್ಯಪಗತ ವೀರ್ಯೈಸ್ಸೂತೌ ಜ್ಯೋತಿಸ್ತೃಣೈರ್ಭವತಿ ।।

## ಅಥ ಸೂತಿಕಾಗೃಹದ್ವಾರ ನಿರ್ಣಯಮಾಹ

ತದ್ವಾಸ್ತುತಿ-ಆ ಸೂತಿಕಾ ಗೃಹದಲ್ಲಿ ದ್ವಾರಂ-ಬಾಗಿಲನ್ನು, ಕೇಂದ್ರಸ್ಥಿತೈಃ ೪-೭-೧೦ನೇ ಕೇಂದ್ರ ಸ್ಥಾನದಲ್ಲಿರುವ, ವೀರ್ಯಸಮನ್ವಿತೈ-ಬಲಯುಕ್ತರಾದ, ಗ್ರಹೈಃ-ಗ್ರಹಗಳಿಂದ, ಜ್ಞೇಯಂ-ತಿಳಿಯತಕ್ಕದ್ದು. ಅಂದರೆ ಪ್ರಾಗಾದ್ಯಾರವಿ ಶುಕ್ರ ಲೋಹಿತತಮ ಸೌರೀಂದು ವಿಟ್ಸೂರಯಃ । ಎಂಬುವ ಶ್ಲೋಕದಲ್ಲಿ ಹೇಳಿರುವ ಪ್ರಕಾರ ರವಿ, ಶುಕ್ರ, ಕುಜ, ರಾಹು, ಶನಿ, ಚಂದ್ರ, ಬುಧ, ಗುರು, ಇಂದ್ರಾದಿ ಎಂಟು ದಿಕ್ಕುಗಳಿಗೆ ಅಧಿಪತಿಗಳಾಗುವರು. ಆ ಗ್ರಹಗಳು ಬಲಿಷ್ಟರಾಗಿ ಕೇಂದ್ರಗಳಲ್ಲಿದ್ದರೆ ಆ ಬಲಯುಕ್ತವಾದ ।। ಗ್ರಹವಿರುವ ದಿಕ್ಕಿಗೆ ದ್ವಾರವನ್ನು ತಿಳಿಯತಕ್ಕದ್ದು. ಒಂದು ಗ್ರಹ ಕೇಂದ್ರದಲ್ಲಿದ್ದರೆ ಆ ಗ್ರಹದ ದಿಕ್ಕನ್ನು ಹೇಳತಕ್ಕದ್ದು, ಅನೇಕ ಗ್ರಹಗಳು ಇರುವ ಪಕ್ಷದಲ್ಲಿ ಅವರಿಗೆ ಬಲಯುಕ್ತವಾದ ಗ್ರಹದ ದಿಕ್ಕಿನಲ್ಲಿ ಬಾಗಿಲು ಹೇಳತಕ್ಕದ್ದು, ಅನೇಕ ಗ್ರಹಗಳು ಸಮಬಲಯುಕ್ತರಾಗಿದ್ದರೆ ಆಯಾ ಗ್ರಹವಿರುವ ದಿಕ್ಕುಗಳಲ್ಲಿ ದ್ವಾರಗಳು ಹೇಳತಕ್ಕದ್ದು ಕೇಂದ್ರದಲ್ಲಿ ಗ್ರಹಗಳು ಇಲ್ಲದಿದ್ದರೆ ಪ್ರಾಗಾದಿಗ್ರಹಃ ಕ್ರಿಯಾದಯೋ ದ್ವೇದ್ವೇಕೋಣಗತಾ ದ್ವಿಮೂರ್ತಯಃ ।। ಎಂಬುವ ಪ್ರಕಾರ ಲಗ್ನರಾಶಿ ದಿಕ್ಕಿನಲ್ಲಿ ಸೂತಿಕಾಗೃಹದ್ವಾರವೆಂದು ತಿಳಿಯತಕ್ಕದ್ದು, ಈ ವಿಷಯ ದಲ್ಲಿ ಲಘು ಜಾತಕದಲ್ಲಿ ।।ಶ್ಲೋಕ।। ದ್ವಾರಂವಾಸ್ತುವಿ ಕೇಂದ್ರೋಪಗತಾ ದ್ಗ್ರಹಾದಸತಿವಾವಿಲಗ್ನರ್ಕ್ಷಾತ್ ।। ಎಂದು ಹೇಳಲ್ಪಟ್ಟಿರುತ್ತೆ, ಕೆಲವರು ವೀರ್ಯಸಮನ್ವಿತೈರ್ವಾ ಎಂದು ಬೇರೆಯಾಗಿ ವಿಭಾಗಿಸಿ ಕೇಂದ್ರದಲ್ಲಿ ಗ್ರಹ ಶೂನ್ಯವಾಗಿದ್ದರೆ ತತ್ಕಾಲದಲ್ಲಿ ಎಲ್ಲಾ ಗ್ರಹಗಳಲ್ಲಿ ಯಾವ ಗ್ರಹ ಬಲಾಧಿಕವಾಗಿರುವುದೋ ಆ ಗ್ರಹದಿಂದ ಗೃಹದ್ವಾರವನ್ನು ನಿರ್ಣಯ ಮಾಡತಕ್ಕದ್ದು. (ಎಂದು ಹೇಳುವರು) ಇದೇ ವಿಷಯದಲ್ಲಿ ಜಯದೇವನು ಹೇಳಿರುವುದೇನೆಂದರೆಃ- ವಸಂತ ತಿಲಕ ।। ಲಗ್ನಾಚ್ಚಕೇಂದ್ರಗತ ಖೇಟದಿಶಂ ದಿಶಂತಿದ್ವಾರಂ ಜನುರ್ಭವನಜಂ ತದಭಾವಕೇವಾ ।। ಲಗ್ನರ್ಕ್ಷ ದಿಗ್ಭವತಿವಾ ಸಕಲಗ್ರಹೇಂದ್ರಾ ಸ್ಸಾಯಾಭವೇದಿತಿ ವದೇತ್ಸಕಲಂ ವಿಚಾರ್ಯಂ ।।೭೫।।

ಲಗ್ನಕೇಂದ್ರದಲ್ಲಿರುವ ಗ್ರಹದ ದಿಕ್ಕಿನಲ್ಲಿ ಸೂತಿಕಾ ಗೃಹದ್ವಾರ ನಿರ್ಣಯ ಮಾಡತಕ್ಕದ್ದು. ಕೇಂದ್ರದಲ್ಲಿ ಅನೇಕ ಗ್ರಹಗಳಿದ್ದರೆ ಅವರಲ್ಲಿ ಬಲಿಷ್ಠವಾದ ಗ್ರಹದ ದಿಕ್ಕಿನಲ್ಲಿ ದ್ವಾರವಿದೆ ಎಂದು ಹೇಳಬೇಕು. ಕೇಂದ್ರದಲ್ಲಿ ಗ್ರಹವಿಲ್ಲದಿದ್ದರೆ ಲಗ್ನವು ಯಾವ ದಿಗ್ರಾಸಿಯೋ ಆ ದಿಕ್ಕಿನಲ್ಲಿ ದ್ವಾರವನ್ನು ಹೇಳತಕ್ಕದ್ದು. ಮತ್ತು ಎಲ್ಲಾ ಗ್ರಹಗಳಲ್ಲಿ ಯಾವ ಗ್ರಹಕ್ಕೆ ಬಲವು ಹೆಚ್ಚಾಗಿರುವುದೋ ಆ ಗ್ರಹದ ದಿಕ್ಕಿನಲ್ಲಿ ಸೂತಿಕಾಗೃಹಾದ್ವಾರವೆಂದು ತಿಳಿಯತಕ್ಕದ್ದು ॥೧೮॥

## ಸೂತಿಕಾ ಗೃಹಲಕ್ಷಣಂ

ಮೂಲ॥ ಜೀರ್ಣಂ ಸಂಸ್ಕೃತಮರ್ಕಜೇ ಕ್ಷಿತಿಸುತೇ ದಗ್ಧಂನವಂ ಶೀತಗೌ ॥
ಕಾಷ್ಠಾಢ್ಯಂದೃಢಂ *ರವೌ ಶಶಿಸುತೇ ತನ್ನೈಕ ಶಿಲ್ಪ್ಯುದ್ಭವಂ ॥
ರಮ್ಯಂಚಿತ್ರಯುತಂ ನವಂಚ ಭೃಗುಜೇಜೀವೇದೃಡಂ ಮಂದಿರಂ
ಚಕ್ರಸ್ಥೈಶ್ಚ ಯಥೋಪದೇಶರಚನಂ ಸಾಮಂತ ಪೂರ್ವಾನ್ವದೇತ್॥

ಅವತಾರಿಕೆ॥ ಸೂತಿಕಾಗ್ರಹಲಕ್ಷಣ ಹೇಳಲ್ಪಡುತ್ತೆ. ಪೂರ್ವ ಶ್ಲೋಕದಲ್ಲಿ ವೀರ್ಯಸಮನ್ವಿತವೆಂಬುವ ಶಬ್ದವು ಈ ಶ್ಲೋಕಕ್ಕೂ ಅನ್ವಯವಾಗುತ್ತದೆ. ಟೀ॥ ಎಲ್ಲಾ ಗ್ರಹಗಳಿಗಿಂತಲೂ, ಅರ್ಕಜೇ-ಶನಿಯು, ವೀರ್ಯಸಮನ್ವಿತೇ-ಬಲವಂತನಾಗಿದ್ದರೆ ತನ್ಮಂದಿರಂ-ಆಸೂತಿಕಾಗ್ರಹ, ಜೀರ್ಣಂ-ಬಹು ಪುರಾತನವಾಗಿಯೂ ಶಿಥಿಲ ವಾಗಿಯೂ, ಸಂಸ್ಕೃತಂ-ಚೆನ್ನಾಗಿ ಮಾಡಲ್ಪಟ್ಟಿತೆಂದು, ಕ್ಷಿತಿಸುತೇ-ಕುಜನು ಬಲಿಷ್ಠನಾಗಿದ್ದರೆ, ದಗ್ಧಂ-ಬೆಂಕಿಯಿಂದ ಸುಟ್ಟಿದ್ದಾಗಿಯೂ, ಶೀತಗೌ-ಚಂದ್ರನು ಬಲವಂತನಾಗಿದ್ದರೆ, ನವಂ-ಹೊಸ ಮನೆಯಾಗಿಯೂ, ಇದಕ್ಕೆ ಯವನಾಚಾರ್ಯನು ಸಂವರ್ಧತಾಂ ಚಂದ್ರಮಸೋಪಲಿಪ್ತಂ-ಎಂದು ಹೇಳಿರುವುದರಿಂದ, ಆದರೆ ಶುಕ್ಲಪಕ್ಷದಲ್ಲಿ ಚಂದ್ರನು ಬಲವಂತನಾಗಿದ್ದರೆ, ಹೊಸದಾದ ಸುಂದರವಾದ ಮನೆಯೆಂತಲೂ, ಕೃಷ್ಣಪಕ್ಷದಲ್ಲಿ ಚಂದ್ರನು ಬಲಹೀನನಾಗಿದ್ದರೆ, ಸಾಧಾರಣವಾದ ಹೊಸ ಮನೆಯೆಂತಲೂ, ರವೌ-ಸೂರ್ಯನು ಬಲವಂತನಾಗಿದ್ದರೆ, ಕಾಷ್ಠಾಢ್ಯಂ-ದಪ್ಪವಾದ ತೊಲೆಗಳಿಂದ ಮತ್ತು ಮರವೆ ಮುಖ್ಯವಾಗಿ ಹೆಚ್ಚಾಗಿರುವ, ನದೃಢಂ-ದುರ್ಬಲವಾಗಿರುವ ಮನೆಯೆಂತಲೂ, ಶಶಿಸುತೇ-ಬುಧನು ಬಲವಂತನಾಗಿದ್ದರೆ, ನೈಕಶಿಲ್ಪ್ಯುದ್ಭವಂ •ಬಹುಮಂದಿ ಶಿಲ್ಪಿಗಳಿಂದ

* ಸದೃಢಂ ಎಂದು ಪಾ ॥

• ನೈಕಶಿಲೋದ್ಭವಂ - ಪಾ ॥ ಕೈ ಕೆಲಸಗಳ ಚಮತ್ಕಾರವುಳ್ಳದೆಂದು ಹೇಳುವರು.

ರಚಿಸಲ್ಪಟ್ಟದ್ದಾಗಿಯೂ, ಭೃಗುಜೇ-ಶುಕ್ರನು ಬಲವಂತನಾಗಿದ್ದರೆ, ರಮ್ಯಂ-ಸುಂದರವಾಗಿ, ಚಿತ್ರಯುತಂ-ಚಿತ್ರದ ಕೆಲಸ ಮಾಡಿದ, ನವಂ-ಹೊಸ ಮನೆಯೆಂತಲೂ, ಜೀವೇ-ಬೃಹಸ್ಪತಿಯು ಬಲವಂತನಾಗಿದ್ದರೆ, ದೃಢಂ-ಬಹುಕಾಲವಿರುವ ಹಾಗೆ ಭದ್ರವಾಗಿ ಕಟ್ಟಿದ ಮನೆಯೆಂದು, ವದೇತ್-ಹೇಳತಕ್ಕದ್ದು. ಚಕ್ರಸ್ಥೈಃ-ರಾಶಿ ಚಕ್ರಾರೂಢವಾಗಿರುವ ಪೂರ್ವೋಕ ಸೂತಿಕಾ ಗೃಹವೆಂದು ತಿಳಿಯತಕ್ಕದ್ದು. ಒಂದು ಗೃಹದ ಸಮೀದಲ್ಲಿ ಇತರ ಗ್ರಹಗಳಿದ್ದರೆ, ಸಾವಂತಪೂರ್ವಾನ್-ಸೂತಿಕಾ ಗೃಹಕ್ಕೆ ಸಮೀಪ ಪಕ್ಕಗಳಲ್ಲಿರತಕ್ಕ ಗೃಹವು, ಯಥೋಪದೇಶ ರಚನಂ- 'ಜೀರ್ಣಂ ಸಂಸ್ಕೃತ ಮರ್ಕಜೇತ್ಯಾದಿ' ವಾಕ್ಯಗಳಿಂದ ಸೂತಿಕಾಗೃಹ ಲಕ್ಷಣ ಯಾವ ಪ್ರಕಾರ ಹೇಳಲ್ಪಟ್ಟಿರುವುದೋ ಆ ಪ್ರಕಾರವಾಗಿಯೇ, ವದೇತ್-ಹೇಳತಕ್ಕದ್ದು. ಆದರೆ ಎಲ್ಲಾ ಗ್ರಹಗಳಿಗಿಂತಲೂ ಬಲಾಧಿಕವಾದ ಗ್ರಹದಿಂದ ಸೂತಿಕಾಗೃಹ ಲಕ್ಷಣ ಹೇಳಲ್ಪಡತಕ್ಕದ್ದಾದ್ದರಿಂದ, ಆ ಸೂತಿಕಾ ಗೃಹಕ್ಕೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಸಾಮಂತ ಗೃಹಗಳು, ಸೂತಿಕಾಗೃಹ ಲಕ್ಷಣ ಪ್ರಕಾರವೇ ತಿಳಿಯತಕ್ಕದ್ದಾದ್ದರಿಂದ, ದ್ವಾದಶ ರಾಶ್ಯಾತ್ಮಕವಾದ ರಾಶಿಚಕ್ರವನ್ನು ನಾಲ್ಕು ಪಾಲಾಗಿ ವಿಭಾಗ ಮಾಡಿ, ಅಲ್ಲಿ ಸೂತಿಕಾಗೃಹ ಲಕ್ಷಣವನ್ನು ತಿಳಿದುಕೊಳ್ಳುವ ಗ್ರಹವಿರುವ ರಾಶಿಯನ್ನು ಮೊದಲು ಭಾಗದಲ್ಲಿರುವ ಇತರ ಗ್ರಹಗಳಿಂದ ಪೂರ್ವದಿಕ್ಕನ್ನು ದ್ವಿತೀಯ ಭಾಗಗತ ಗ್ರಹಗಳಿಂದ ದಕ್ಷಿಣ ದಿಕ್ಕನ್ನು, ತೃತೀಯ ಭಾಗಗತ ಗ್ರಹಗಳಿಂದ ಪಶ್ಚಿಮ ದಿಕ್ಕನ್ನು, ಚತುರ್ಥ ಭಾಗಗತ ಗ್ರಹಗಳಿಂದ ಉತ್ತರ ದಿಕ್ಕನ್ನು ಹೇಳಬೇಕು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಭವನಗ್ರಹ ಸಂಯೋಗೈಃ । ಪ್ರತಿವೇಶ್ಮನಿಚಿಂತನೀಯಾನಿ ॥ ದೇವಾಲಯಾಂಬುಪಾವಕ । ಕೋಶವಿಹಾರಾದ್ಯವಸ್ಕರಸ್ಥಾನಂ ॥೩೬॥ ಎಂದುಕ್ತವಾಗಿರುವುದರಿಂದ ಇಲ್ಲಿ ಗುರುಭಾರ್ಗವಾರ್ಕಿ ಬುಧಯೋಗಾತ್ ॥೩೬॥ ಎಂದುಕ್ತವಾಗಿರುವುದರಿಂದ ಇಲ್ಲಿ ಹೇಳಲ್ಪಟ್ಟ ದ್ವಿಭೂಮಿಕ ದ್ವಿಶಾಲ ತ್ರಿಶಾಲ ಮೊದಲಾದ ನಿರ್ಣಯವು ಈ ವರಾಹಮಿಹಿರಾಚಾರ್ಯನಿಂದಲೇ ಲಘುಜಾತಕದಲ್ಲಿ ಹೇಳಲ್ಪಟ್ಟಿರುವುದರಿಂದ, ಆ ಪ್ರಕಾರವಾಗಿ ತಿಳಿಯತಕ್ಕದ್ದು. ಈ ವಿಷಯದಲ್ಲಿ ಲಘುಜಾತಕದಲ್ಲಿ ॥ಶ್ಲೋಕ॥ ಗುರುರುಚ್ಚೇ ದಶಮಸ್ಥೋ ದ್ವಿತ್ರಿ ಚತುರ್ಭೂಮಿಕಂ ಕರೋತಿಗೃಹಂ ॥ ಧನುಷಿಸಬಲೇ ತ್ರಿಶಾಲಂ ದ್ವಿಶಾಲಮನ್ಯೇಷು ಯಮಳೇಷು ॥೩೭॥ ತಾ॥ ಬೃಹಸ್ಪತಿಯು ತನ್ನುಚ್ಚಸ್ಥಾನದಿಂದ ಕರ್ಕಾಟಕ ರಾಶಿಯಲ್ಲಿ ಪರಮೋಚ್ಚದಲ್ಲಿದ್ದು ಲಗ್ನಕ್ಕೆ ದಶಮಸ್ಥಾನವಾಗಿದ್ದರೆ, ಸೂತಿಕಾ ಗೃಹವು ಎರಡಂತಸ್ತುಳ್ಳದ್ದಾಗಿಯೂ, ಪರಮೋಚ್ಚದ ಕೆಳಗಿದ್ದರೆ ಮೂರು ಅಂತಸ್ತುಳ್ಳದ್ದೆಂದು, ಪರಮೋಚ್ಚಭಾಗದಲ್ಲಿದ್ದರೆ ನಾಲ್ಕಂತಸ್ತುಳ್ಳದ್ದೆಂದೂ ಹೇಳತಕ್ಕದ್ದು. ಧನುರ್ಲಗ್ನದಲ್ಲಿ ಗುರು ಬಲವಂತನಾಗಿದ್ದರೆ

ಸೂತಿಕಾಗೃಹ ತ್ರಿಶಾಲೆಯುಳ್ಳದ್ದೆಂದೂ, ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಮೀನರಾಶಿಗಳಾಗಿ ಅಲ್ಲಿ ಬೃಹಸ್ಪತಿಯಿದ್ದು ಲಗ್ನಕ್ಕೆ ದಶಮ ಸ್ಥಾನವಾಗಿದ್ದರೆ ದ್ವಿಶಾಲೆಯುಳ್ಳದ್ದೆಂದೂ ತಿಳಿಯತಕ್ಕದ್ದು. ಈ ವಿಷಯದಲ್ಲಿ, ಜಯದೇವಃ॥ ॥ಶ್ಲೋಕ॥ ಸೂರ್ಯೇಬಲೇನಸಹಿತೇ ದೃಢಮಿಂಧನಾಢ್ಯಂ ನಾಮ್ಯಂವಿಧೌ ಹುತಾಹುತಾಶಹತಂಮಹೀಜೇ ॥ ಜ್ಞೇಚಿತ್ರಿತಂ ಸುರಸುತೌ ದೃಢಮಾಸು-ರೇಜ್ಯೇರಮ್ಯಂ ನವಂತ್ವಥಶನೌ ಭವನಂ ಪುರಾಣಂ ॥೩೮॥

## ಗೃಹೇ ಸೂತಿಕಾಸ್ಥಾನ ನಿರ್ಣಯಃ

ಮೂಲ॥ ಮೇಷಕುಳೀರ ತುಲಾಳಿಘಟೈಃ ಪ್ರಾಗುತ್ತರತೋ ಗುರುಸೌಮ್ಯ ಗೃಹೈಶ್ಚ ॥ ಪಶ್ಚಿಮತಶ್ಚ ವೃಷೇಣ ನಿವಾಸೋ ದಕ್ಷಿಣಭಾಗಗತೌ ಮೃಗಸಿಂಹೌ ॥೨೪॥

ಅ॥ ಮನೆಯಲ್ಲಿ ಸೂತಿಕಾ ಗೃಹವಿರುವ ದಿಕ್ಕು ತಿಳಿಯುವ ವಿಷಯವು ಹೇಳಲ್ಪಡುತ್ತೆ. ಟೀ॥ ಮೇಷಕುಳೀರ ತುಲಾಳಿಘಟೈಃ-ಮೇಷ, ವೃಶ್ಚಿಕ, ಕರ್ಕಾಟಕ, ತುಲಾ, ಕುಂಭ ರಾಶಿಗಳಲ್ಲಿ ಒಂದು ಜನ್ಮಲಗ್ನವಾದರೆ, ಪ್ರಾಕ್-ಮನೆಯಲ್ಲಿ ಪೂರ್ವ ದಿಕ್ಕಿನಲ್ಲಿ ಸೂತಿಕಾ ಗೃಹವಿರುವುದು. ಗುರುಸೌಮ್ಯಗ್ರಹೈಶ್ಚ-ಬೃಹಸ್ಪತಿ ರಾಶಿಗಳಾದ ಧನುರ್ಮೀನಗಳು, ಬುಧನ ರಾಶಿಗಳಾದ ಮಿಥುನ, ಕನ್ಯಾರಾಶಿಗಳು, ಈ ನಾಲ್ಕು ರಾಶಿಗಳಲ್ಲಿ ಯಾವುದಾದರೂ ಒಂದು ಲಗ್ನವಾದರೆ, ಉತ್ತರತಃ-ಮನೆಯಲ್ಲಿ ಉತ್ತರ ದಿಕ್ಕಿನಲ್ಲಿ ಸೂತಿಕಾ ಗೃಹವಿರುವುದು. ವೃಷೇಣ-ವೃಷಭ ಲಗ್ನವಾದರೆ, ಪಶ್ಚಿಮತಶ್ಚ-ಮನೆಯ ಪಶ್ಚಿಮ ದಿಕ್ಕಿನಲ್ಲಿ, ನಿವಾಸಃ-ಸೂತಿಕಾ ಗೃಹವಿರುವುದು. ಮೃಗಸಿಂಹೌ-ಮಕರ ಸಿಂಹಗಳಲ್ಲಿ ಒಂದು ಲಗ್ನವಾದರೆ, ದಕ್ಷಿಣಭಾಗಗತೌ-ಮನೆಯಲ್ಲಿ ದಕ್ಷಿಣ ದಿಕ್ಕಿನಲ್ಲಿ ಸೂತಿಕಾ ಗೃಹವಿರುವುದು ಮತ್ತು ಆಯಾಯ ರಾಶಿಗಳ ಅಂಶಗಳಲ್ಲಿ ಆಯಾಯ ದಿಕ್ಕುಗಳಲ್ಲಿ ಸೂತಿಕಾ ಗೃಹವಿರುವುದೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ಮೇಷಾಳಿ ಕರ್ಕಘಟಕುಂಭಭ ಐಂದ್ರಭಾಗೇ ಜೀವಜ್ಞವೇಶ್ಮನಿ ನಥೋತ್ತರ ಭಾಗನೇಚ ॥ ನಕ್ರೇಹರೌ ಯಮದಿಶಾಸು ವೃಷೇಪ್ರತೀಚ್ಯಾಂ ತದ್ವಾಸ್ತುನೀತಿ ವಸತಿಂ ಪ್ರವದೇತ್ಪ್ರಸೂತ್ಯಾಃ ॥೩೯॥

## ಸೂತಿಕಾಗೃಹೇ ಸೂತಿಕಾಸ್ಥಾನ ನಿರ್ಣಯಃ

| ಜನ್ಮಲಗ್ನ ಅಥವಾ ನವಾಂಶ ಲಗ್ನ | ಮನೆಯಲ್ಲಿ ಯಾವ ದಿಕ್ಕಿನಲ್ಲಿ ಸೂತಿಕಾ ಸ್ತ್ರೀ ಇರುವಳು |
|---|---|
| ಮೇಷ, ವೃಶ್ಚಿಕ, ಕರ್ಕಾಟಕ, ತುಲಾ, ಕುಂಭ - | ಪೂರ್ವ ದಿಕ್ಕಿನಲ್ಲಿ- |
| ಧನುಸ್ಸು, ಮೀನ, ಮಿಥುನ, ಕನ್ಯಾ | ಉತ್ತರ ದಿಕ್ಕಿನಲ್ಲಿ- |
| ವೃಷಭ - | ಪಶ್ಚಿಮ ದಿಕ್ಕಿನಲ್ಲಿ - |
| ಮಕರ, ಸಿಂಹ - | ದಕ್ಷಿಣ ದಿಕ್ಕಿನಲ್ಲಿ - |

## ಸೂತಿಕಾಗೃಹೇ ಶಯನಸ್ಥಳ ನಿರ್ಣಯಃ

ಮೂಲ।। ಪ್ರಾಚ್ಯಾದಿಗೃಹೇ ಕ್ರಿಯಾದಯೋ ದ್ವೌದ್ವೌಕೋಣಗತೌದ್ವಿಮೂರ್ತ ಯಃ ।। ಶಯ್ಯಾ ಸ್ವಪಿ ವಾಸ್ತುವದ್ವದೇತ್ಪಾದೈಷ್ಷಟ್ ತ್ರಿನವಾಂತ್ಯ ಸಂಸ್ಥಿತೈಃ ।।೨೧।।

ಅ।। ಸೂತಿಕಾ ಗೃಹದಲ್ಲಿ ಶಯನ ಸ್ಥಳ ತಿಳಿಯುವ ಲಕ್ಷಣ ಹೇಳಲ್ಪಡುತ್ತೆ. ಟೀ।। ಗೃಹೇ - ಸೂತಿಕಾ ಗೃಹದಲ್ಲಿ, ಪ್ರಾಚ್ಯಾದಿ-ಪೂರ್ವಾದಿ ಅಷ್ಟು ದಿಕ್ಕುಗಳಲ್ಲಿಯೂ, ಕ್ರಿಯಾದಯ-ಮೇಷಾದಿ ೧೨ ರಾಶಿಗಳು, ದ್ವೌದ್ವೌ-ಎರಡು ಚರ ಸ್ಥಿರರಾಶಿಗಳು, ಪ್ರಾಗ್ದಕ್ಷಿಣ ಪಶ್ಚಿಮೋತ್ತರ ದಿಗ್ಗತಗಳಾಗುವವು. ದ್ವಿಮೂರ್ತ ಯಃ-ದ್ವಿಸ್ವಭಾವ ರಾಶಿಗಳು, ಕೋಣಗತಾಃ-ಆಗ್ನೇಯ, ನೈಋತ್ಯ, ವಾಯುವ್ಯ, ಈಶಾನ್ಯ ದಿಕ್ಕುಗಳಾಗುವವು, ಪ್ರಸವಲಗ್ನ ಮೇಷ ವೃಷಭಗಳಲ್ಲಿ ಒಂದು ಲಗ್ನವಾದರೆ ಪೂರ್ವ ದಿಕ್ಕಿನಲ್ಲೂ, ಮಿಥುನ ಲಗ್ನವಾದರೆ ನೈಋತ್ಯ ದಿಕ್ಕು, ತುಲಾ ವೃಶ್ಚಿಕ ಲಗ್ನವಾದರೆ ಪಶ್ಚಿಮ ದಿಕ್ಕು, ಧನುರ್ಲಗ್ನವಾದರೆ ವಾಯುವ್ಯ ದಿಕ್ಕು, ಮಕರ ಕುಂಭವಾದರೆ ಉತ್ತರ ದಿಕ್ಕು, ಮೀನ ಲಗ್ನವಾದರೆ ಈಶಾನ್ಯ ದಿಕ್ಕು, ಈ ಪ್ರಕಾರವಾಗಿ ಸೂತಿಕಾಶಯನ ಹೇಳಲ್ಪಡುತ್ತೆ. ಈ ವಿಷಯದಲ್ಲಿ, ಜಯ ದೇವಃ ।।ಶ್ಲೋಕ।। ದ್ವೌದ್ವೌ ಕ್ರಿಯಾದಿಂದ್ರಮುಖಾದಿದಿಕ್ಷು ದ್ವಿಮೂರ್ತಯಃ ಕೋಣಗತಾ

ಭವಂತಿ ॥ ಯೋಜನಕ್ರಾಲೇ ಸತಿಲಗ್ನವರ್ತೀ ತದ್ದಿಗ್ಗತಂಸ್ಯಾಚ್ಛಯನಂ ಪ್ರಸೂತ್ಯಾಂ ॥೪೦॥ ಎಂದು ಹೇಳಲ್ಪಟ್ಟಿರುತ್ತೆ.

## ಸೂತಿಕಾಸ್ತ್ರೀ ಶಯನಪರ್ಯಂಕಾದಿ ನಿರ್ಣಯಃ

ಶಯ್ಯಾಸ್ವಪಿ - ಮಂಚ ಮೊದಲಾದವುಗಳು, ವಾಸ್ತುವತ್-ಶಯನ ಗೃಹಕ್ಕೆ ಹೇಳಿದಂತೆ, ವದೇತ್-ಹೇಳತಕ್ಕದ್ದು. ಆದರೆ, ಪಾದೈಷ್ಷಟ್ ತ್ರಿನವಾಂತ್ಯ ಸಂಸ್ಥಿತ್ಯೈ ೬-೩. ೯-೧೨ ಈ ಸ್ಥಾನಗಳಾದ ರಾಶಿಗಳಿಂದ ಮಂಚಕ್ಕೆ ಪಾದಗಳನ್ನು ಹೇಳತಕ್ಕದ್ದು. ಇಲ್ಲಿ ವಿಶೇಷವೇನೆಂದರೆ:- ಯಾವ ಪ್ರಸವ ಲಗ್ನವಾಗುವುದೋ ಆ ರಾಶಿ ದಿಕ್ಕನ್ನು ಶಿರೋಭಾಗವಾಗಿ ಏರ್ಪಡಿಸಿ, ಆ ಲಗ್ನ ಮೊದಲುಗೊಂಡು ತೃತೀಯರಾಶಿ ಮಂಚಕ್ಕೆ ಪೂರ್ವಪಾದ, ೧೨ನೇ ರಾಶಿ ಮಂಚಕ್ಕೆ ದಕ್ಷಿಣಪಾದ, ನವಮರಾಶಿ, ಪಶ್ಚಿಮ ವಾಮಪಾದ, ಲಗ್ನದ್ವಿತೀಯ ಶಿರೋಭಾಗ, ಚತುರ್ಥ ಪಂಚಮ ಮಂಚದ ದಕ್ಷಿಣಭಾಗ, ಸಪ್ತಮಾಷ್ಟಮ ಪಾದಾಂತ್ಯ ಪಶ್ಚಿಮಭಾಗ, ದಶಮೇಕಾದಶರಾಶಿ ಉತ್ತರಭಾಗ, ಈ ಪ್ರಕಾರವಾಗಿ ಮಂಚಕ್ಕೆ ಪಾದಗಳಾಗಿ ವಿಭಾಗಿಸಿ, ಮಂಚಕ್ಕೆ ದ್ವಾದಶ ರಾಶಿಗಳನ್ನು ಆಯಾಯ ಸ್ಥಾನಗಳಾಗಿ ತಿಳಿಯತಕ್ಕದ್ದು. ಇದಕ್ಕೆ ಪ್ರಯೋಜನವೇನೆಂದರೆ-ಯಾವ ಭಾಗದಲ್ಲಿ ದ್ವಿಸ್ವಭಾವ ರಾಶಿಗಳಿರುವುದೋ, ಆ ಭಾಗದ ಮಂಚ ಬಗ್ಗಿಕೊಂಡಿರುವುದು. ಯಾವ ಭಾಗದಲ್ಲಿ ಪಾಪಗ್ರಹಾಕ್ರಾಂತರಾಶಿ ಇರುವುದೋ ಆ ಭಾಗದಲ್ಲಿ ತತ್ತು ಲ್ಯೋಪಘಾತವಿರುವುದು. ಆದರೆ ದ್ವಿಸ್ವಭಾವ ರಾಶಿಗಳು ಶುಭಗ್ರಹಯುಕ್ತವಾಗಿದ್ದರೆ ಅಥವಾ ಶುಭಗ್ರಹ ದೃಷ್ಟವಾದರೆ ಆ ಭಾಗ ಬಗ್ಗಿರುವುದಿಲ್ಲ. ಪಾಪ ಗ್ರಹಗಳು ಸ್ವೋಚ್ಚ, ಸ್ವತ್ರಿಕೋಣ, ಸ್ವಕ್ಷೇತ್ರ, ಮಿತ್ರಕ್ಷೇತ್ರಾದಿ ಸ್ಥಾನಗಳಲ್ಲಿದ್ದರೆ ತತ್ತುಲೋಪಘಾತವಿರುವುದಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಲಘುಜಾತಕದಲ್ಲಿ ॥ಶ್ಲೋಕ॥ ವಿನತತ್ವಂ ಯಮಳರ್ಕ್ಷೈಃ ಕ್ರೂರೇತತ್ತುಲ್ಯ ಉಪಘಾತ ॥೪೧॥ ಎಂದು ಹೇಳಲ್ಪಟ್ಟಿರುತ್ತೆ. ಇದೇ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಷಟ್ತ್ರಿನವಾಂತ್ಯಾಃಪಾದಾಃ ಪರ್ಯಂಕಾಂಗಾನಿರಾಶಯ ಶ್ಯೇಷಾಃ ॥ ಪರ್ಯಂಕಸ್ಥಿತಭವನೇ ಯುತವಿಹಗ ಸಮಾನಿ ತತ್ರಚಿನ್ಹಾನಿ ॥ ಆಸ್ತರಣಾನಿಚ ವಿಂದ್ಯಾಚ್ಛುಭದೃಷ್ಟಿಯಂತಾನಿ ದೈವಜ್ಞಃ ॥೪೨॥ ಎಂದು ಹೇಳಲ್ಪಟ್ಟಿರುತ್ತೆ. ಈ ಪ್ರಕಾರವಾಗಿಯೇ ಸುರತ ಪ್ರಶ್ನೆಗೂ ಮಂಚಪಾದಾದಿ ಲಕ್ಷಣವನ್ನು ತಿಳಿಯತಕ್ಕದ್ದು. ಮತ್ತು ಸ್ತ್ರೀ ಪುರುಷರ ನಖದಂತಾದಿ ಚಿಹ್ನೆಗಳನ್ನು ಹೇಳತಕ್ಕದ್ದಕ್ಕೂ ಉಪಯುಕ್ತವಾಗಿರುವುದು ॥೨೧॥

## ಉಪಸೂತಿಕಾ ಲಕ್ಷಣಂ ಸಂಖ್ಯಾ ವಿವರಣಾಶ್ಚ

ಮೂಲ॥ ಚಂದ್ರಲಗ್ನಾಂತರಗತೈ ರ್ಗೃಹೈಸ್ಸುರುಪಸೂತಿಕಾಃ ॥ ಬಹಿರಂತಶ್ಚ ಚಕ್ರಾರ್ಥೇ ದೃಶ್ಯಾದೃಶ್ಯೇನಥಾಪರೇ ॥೨೨॥

ಅವತಾರಿಕೆ॥ ಸೂತಿಕಾ ರಕ್ಷಣಾರ್ಥ ತತ್ಸಮೀಪದಲ್ಲಿರುವ ಸ್ತ್ರೀ ಸಂಖ್ಯೆಯು ಅವರ ಲಕ್ಷಣಗಳು ಸಹಾ ಹೇಳಲ್ಪಡುತ್ತೆ. ಟೀ॥ ಚಂದ್ರಲಗ್ನಾಂತರಗತೈಃ - ಜನ್ಮ ಲಗ್ನಕ್ಕೂ ಚಂದ್ರನಿಗೂ ಮಧ್ಯೆ ಇರುವ, ಗ್ರಹೈಃ- ಗ್ರಹಗಳಿಂದ, ಉಪಸೂತಿಕಾಃ- ಸೂತಿಕಾ ಸಮೀಪದಲ್ಲಿರುವ ಸ್ತ್ರೀಯರು ಉಪಸೂತಿಕೆಗಳೆನ್ನಿಸುವರು, ಅಂದರೆ ಅಂಥಾವರು (ಉಪಸೂತಿಕೆಯರು, ಸ್ಯುಃ ಆಗುವರು, ಅಂದರೆ ಲಗ್ನಕ್ಕೂ ಚಂದ್ರನಿಗೂ ಮಧ್ಯೆ ಇರುವ ಗ್ರಹಗಳೆಷ್ಟೋ ಅಷ್ಟು ಸಂಖ್ಯೆಯುಳ್ಳವರೆಂದು ನಿರ್ಣಯಿಸತಕ್ಕದ್ದು. ಈ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ಲಗ್ನ ಚಂದ್ರಾಂತರ್ಗತಸ್ಥೈರ್ಗ್ರಹೈ ಹೈಸ್ತತ್ರೋಪಸೂತಿಕಾಃ ॥ ಚಕ್ರೋತ್ತರಾರ್ಧೆಭ್ಯಂತಸ್ಥಾ ದಕ್ಷಿಣಾರ್ಧೇತುಬಾಹ್ಯಗಾಃ ॥೪೩॥ ತಾ॥ ಲಗ್ನದಿಂದ ಚಂದ್ರನವರಿಗೆ ಮಧ್ಯೆ ಇರುವ ಗ್ರಹಗಳ ಸಂಖ್ಯೆಯಷ್ಟು ಉಪಸೂತಿಕೆಯರನ್ನು ತಿಳಿಯತಕ್ಕದ್ದು ಮತ್ತು ರಾಶಿಚಕ್ರದಲ್ಲಿ ಉತ್ತರಾರ್ಧದಲ್ಲಿರುವ ಗ್ರಹಗಳ ಸಂಖ್ಯೆಯಷ್ಟು ಉಪಸೂತಿಕೆಯರನ್ನು ಸೂತಿಕಾ ಗೃಹದಲ್ಲಿಯೂ, ದಕ್ಷಿಣಾರ್ಧ ಚಕ್ರದಲ್ಲಿರುವ ಗ್ರಹಗಳ ಸಂಖ್ಯೆಯಷ್ಟು ಸೂತಿಕಾ ಗೃಹದ ಬಹಿರಾವಣದಲ್ಲಿರುವ ಸ್ತ್ರೀಯರನ್ನು ತಿಳಿಯತಕ್ಕದ್ದು. ಮತ್ತು ॥ ಸ್ವೋಚ್ಚವಕ್ರೋಪಗೈಸ್ತ್ರಿಘ್ನಃ ಸ್ವಸ್ಥೈರ್ದ್ವಿಘ್ನಾಸ್ತದಂಶಗೈಃ ॥ ತಥೈವ ಗ್ರಹತುಲ್ಯಂಸ್ಯಾ- ದ್ವಯೋಜಾತಿಸ್ವರೂಕೈಃ ॥೪೪॥ ತಾ॥ ಮೇಲೆ ಉಪಸೂತಿಕೆಯರ ಸಂಖ್ಯೆಯನ್ನು ಚಂದ್ರಲಗ್ನಾಂತರಸ್ಥವಾದ ಗ್ರಹಗಳು ವಕ್ರವಾಗಿಯೂ ಸ್ವೋಚ್ಚದಲ್ಲಿದ್ದರೆ ಆ ಗ್ರಹಸಂಖ್ಯೆಗೆ ತ್ರಿಗುಣ ಸಂಖ್ಯೆಯರಾಗಿಯೂ, ವರ್ಗೋತ್ತಮ ಸ್ವನವಾಂಶ ಸ್ವದ್ರೇಕ್ಕಾಣ ಸ್ವಕ್ಷೇತ್ರದಲ್ಲಿದ್ದರೆ ದ್ವಿಗುಣವಾಗಿಯೂ, ಅವರ ವಯೋಜಾತಿ ಗುಣಗಳನ್ನು ನಿರ್ಣಯ ಮಾಡತಕ್ಕದ್ದು.

## ಉಪಸೂತಿಕಾಯಂ ವಯೋರೂಪ ಲಕ್ಷಣ ವಿಚಾರಃ

ಉಪಸೂತಿಕಾ ಸ್ತ್ರೀಯರ ವಯಸ್ಸನ್ನು, "ಬಾಲಬುಧಾಶಶಿಭೌಮಾಃ" ಎಂಬುವ ಸಂಜ್ಞಾ ಪ್ರಕರಣದಲ್ಲಿ ಹೇಳಲ್ಪಟ್ಟ ಪ್ರಕಾರವೂ, ಅವರ ಜಾತಿವರ್ಣವನ್ನೂ, "ವಿಪ್ರಾದಿತಃ ಶುಕ್ರಗುರು" ಎಂಬುವ ಶ್ಲೋಕದಿಂದಲೂ, ರಕ್ತಶ್ಯಾಮೇತ್ಯಾದಿ ಶ್ಲೋಕದಿಂದ ಅವರ ಶರೀರಕಾಂತಿ ವರ್ಣವನ್ನು, ಮಧುಪಿಂಗಳದೃಗಿತ್ಯಾದಿ ಶ್ಲೋಕಕೋಕ್ತವಾದಂತೆ ಅವರ ರೂಪ ಸೌಂದರ್ಯಾತಿಶಯವನ್ನು ನಿರೂಪಿಸತಕ್ಕದ್ದು. ಈ

ವಿಷಯದಲ್ಲಿ ಸಾರಾವಳಿಯಲ್ಲಿ ।।ಶ್ಲೋಕ।। ಶಶಿಲಗ್ನವಿವರ ಯುಕ್ತ ಗ್ರಹತುಲ್ಯಶ್ಚೋಪ ಸೂತಿಕಾವಾಚ್ಯಾಃ ।। ಅನುದಿತ ಚಕ್ರಾರ್ಧಯತ್ತೈರಂತರ್ಬಹಿರನ್ಯಥಾ ತ್ವೇಕೇ ।।೪೫।। ಲಕ್ಷಣರೂಪ ವಿಭೂಷಣ ಯೋಗಾಸ್ತಾಸಾಂ ಶುಭೈರ್ಯೋಗಾತ್ ಕೂರೈರ್ವಿರೂಪದೇಹಾ ಲಕ್ಷಣಹೀನಾ ಸುರೌದ್ರಮಲಿನಾಶ್ಚ ।। ಮಿಶ್ರೈರ್ಮಧ್ಯಮರೂಪಾಬಲಸಹಿತೈ ಸ್ಸರ್ವಮೇತದವಧಾರ್ಯಂ ।।೪೬।। ಎಂದುಕ್ತವಾಗಿರುತ್ತೆ. ಇದೂ ಅಲ್ಲದೆ, ।।ಶ್ಲೋಕ।। ಚಂದ್ರಲಗ್ನಾಂತರಗತ ಗ್ರಹಸಂಖ್ಯೋಪಸೂತಿಕಾಃ ।। ಶುಭೈಃ ಪುಣ್ಯಸ್ತ್ರಿಯೋವಾಚ್ಯಾಃ ಕ್ರೂರೈಶ್ಚವಿಧವಾಸ್ತಥಾ ।।೪೭।। ಎಂದು ಪರಾಶರ ಹೋರಾಸಾರದಲ್ಲಿ ಹೇಳಲ್ಪಟ್ಟಿರುತ್ತೆ. ಈ ಪ್ರಕಾರವಾಗಿ ಉಪಸೂತಿಕೆಯರುಗಳಲ್ಲಿ ಪುಣ್ಯಸ್ತ್ರೀಯರನ್ನು ವಿಧವಾ ಸ್ತ್ರೀಯರನ್ನು ತಿಳಿಯತಕ್ಕದ್ದು. ಈ ವಿಷಯದಲ್ಲಿ ।।ಶ್ಲೋಕ।। ಜಯದೇವಃ।। ಬಾಲಾಂ ಪೂರ್ಣಃ ಶೀತಗುಃ ಸೋಮಜೋಪಿವೃದ್ಧಾಂಸೌರಿಃ ಕರ್ಕಶಾಂ ಭೂಮಿಪುತ್ರಂ।। ಆದಿತ್ಯೇಜಾ ಸುಪ್ರಸೂತಾಂ ಭೃಗುಶ್ಚಕುರ್ವಾತೇಸ್ತ್ರೀಂ ಕರ್ಕಶಾಂಚಾಪಿ ವೃದ್ಧಾಂ ।।೪೮।।ತಾ।। ಲಗ್ನಚಂದ್ರಾಂತರ್ಗತಸ್ಥನಾಗಿ ಪೂರ್ವೋಕ್ತನಾದ ಪೂರ್ಣಚಂದ್ರನು ಮತ್ತು ಬುಧನಿದ್ದರೆ ಬಾಲಾಸ್ತ್ರಿ, ಶನಿಯಿದ್ದರೆ ವೃದ್ಧಸ್ತ್ರೀ, ಮಂಗಳನಿದ್ದರೆ ಕಲಹಗಾತಿ, ಸೂರ್ಯ ಮತ್ತು ಬೃಹಸ್ಪತಿ ಇದ್ದರೆ ಸುಂದರಸ್ತ್ರೀ, ಮತ್ತು ಸಂತತಿಯುಳ್ಳವಳು, ಶುಕ್ರನಿದ್ದರೆ ಕಲಹಪ್ರಿಯಳು ಮತ್ತು ವೃದ್ಧ ಸ್ತ್ರೀ ಎಂದು ಅವರ ವಯಸ್ಸನ್ನು ತಿಳಿಯತಕ್ಕದ್ದು. ಅವರ ವಯೋನಿರ್ಣಯ।। ।।ಶ್ಲೋಕ।। ಆಷೋಡಶಾಭವೇದ್ಬಾಲಾ ತರುಣೀತ್ರಿಂಶಕಾಮತಾ ।। ಪಂಚಪಂಚಾಶಕಾಪ್ರೌಢಾ ಭವೇದ್ವೃದ್ಧಾತತಃಪರಂ ।।೪೯।। ಎಂದು ವಯೋನಿರ್ಣಯದಿಂದ ವೃದ್ಧಾ, ಪ್ರೌಢಾ, ತರುಣೀ, ಬಾಲಾ ಈ ವಿಷಯಗಳು ಹೇಳಲ್ಪಟ್ಟಿರುತ್ತೆ. ಬಹಿರಂತಶ್ಚ ಚಕ್ರಾರ್ಧೇ-ಅಂದರೆ ದೃಶ್ಯಚ ಚಕ್ರಾರ್ಧದಲ್ಲಿ ಎಷ್ಟು ಗ್ರಹಗಳು ಇರುತ್ತಾರೆಯೋ, ಅಷ್ಟು ಸ್ತ್ರೀಯರು ಸೂತಿಕಾ ಗೃಹದ ಬಹಿರಾವರಣದಲ್ಲಿರುತ್ತಾರೆಂತಲೂ, ಅದೃಶ್ಯಾರ್ಧ ಚಕ್ರದಲ್ಲಿರುವ ಗ್ರಹಗಳ ಸಂಖ್ಯೆಯುಷ್ಟು ಸೂತಿಕಾ ಗೃಹದವಳಿಗೆ ಇರುವವರೆಂದು ತಿಳಿಯತಕ್ಕದ್ದು. ಅನ್ಯಥಾಪರೆ-ಅಂದರೆ, ಉಕ್ತ ವ್ಯತಿರಿಕ್ತವಾಗಿ ಹೇಳತಕ್ಕದ್ದು. ಅದು ಹೇಗೆಂದರೆ-ಈ ವಿಷಯದಲ್ಲಿ ।।ಶ್ಲೋಕ।। ಜೀವಶರ್ಮಾ ।। ಉದಯೋಡುಪಮಧ್ಯಸ್ಥೈ ರ್ಗ್ರಹೈಸ್ಸುರುಪಸೂತಿಕಾಸ್ತತ್ರ ।। ಉದಗರ್ಧರ್ಧ್ವೈರ್ಬಾಹ್ಯೇ ದಕ್ಷಿಣಗೈರಂತರೇಜ್ಞೇಯಾಃ ।।೫೦।। ಆದರೆ ಲಘು ಜಾತಕದಲ್ಲಿ ।।ಶ್ಲೋಕ।। ಶಶಿಲಗ್ನಾಂತರಸಂಸ್ಥಾ ಗ್ರಹತುಲ್ಯಾಶ್ಚೋಪಸೂತಿಕಾ ವಾಚ್ಯಾಃ ।। ಉದಗರ್ಧೇಭ್ಯಂತರಗಾ ಬಾಹ್ಯಾಶ್ಚಕ್ರಸ್ಯದೃಶ್ಯಾರ್ಧೇ ।।೫೧।। ಎಂದು ವರಾಹ ಮಿಹಿರಾಚಾರ್ಯರಿಂದಲೇ ಲಘುಜಾತಕದಲ್ಲಿ ಹೇಳಲ್ಪಟ್ಟಿರುತ್ತೆ ।।

## ಜಾತಸ್ಯಸ್ವರೂಪ ವಿಚಾರಃ

ಮೂಲ॥ ಲಗ್ನನವಾಂಶಪತುಲ್ಯ ತನುಸ್ಸ್ಯಾದ್ವೀರ್ಯಯುತ ಗ್ರಹತುಲ್ಯತನುರ್ವಾ॥
ಚಂದ್ರಸಮೇತ ನವಾಂಶಪವರ್ಣಃ ಕಾದಿವಿಲಗ್ನವಿಭಕ್ತಭಗಾತ್ರ ॥೨೩॥

ಟೀಕು॥ ಹುಟ್ಟಿದ ಶಿಶುವಿನ ಸ್ವರೂಪಾದಿಗಳು ಹೇಳಲ್ಪಡುತ್ತೆ - ಹುಟ್ಟಿದ ಶಿಶುವು. ಲಗ್ನನವಾಂಶಪತುಲ್ಯತನುಃ-ಲಗ್ನನವಾಂಶಪ-ಜನ್ಮಲಗ್ನದಲ್ಲಿ ಉದಯ ನವಾಂಶಧಿಪತಿಗೆ, ತುಲ್ಯ-ಸಮಾನವಾದ, ತನುಃ-ಶರೀರವುಳ್ಳವನು, ಸ್ಯಾತ್-ಆಗುವನು, ವಾ ಶಬ್ದದಿಂದ ಹಾಗೆ ಆಗದಿದ್ದರೆ, ವೀರ್ಯಯುತ ಗ್ರಹತುಲ್ಯ ತನುಃ-ಅಂದರೆ ಜನ್ಮಕಾಲದಲ್ಲಿ ಲಗ್ನನವಾಂಶ ರಾಶಿ ಬಲಯುಕ್ತವಾಗಿದ್ದರೆ, ಆ ಅಧಿಪತಿಗೆ ಸಮಾನ ಶರೀರವುಳ್ಳವನು, ನವಾಂಶರಾಶಿ ಬಲಹೀನವಾಗಿದ್ದರೆ ಎಲ್ಲಾ ಗ್ರಹಗಳಲ್ಲಿಯೂ ಯಾವ ಗ್ರಹ ಬಲಾಧಿಕವಾಗಿರುವದೋ ಆ ಗ್ರಹದ ಸಮಾನ ಶರೀರವುಳ್ಳವನಾಗುವನು, ಮಧುಪಿಂಗಳ ದೃಕ್ಚತುರಶ್ರತನುಃ - ಇತ್ಯಾದ್ಯುಕ್ತ ಗ್ರಹಸ್ವರೂಪಗಳನ್ನು ಹುಟ್ಟಿದ ಶಿಶುವಿಗೆ ಹೇಳತಕ್ಕದ್ದು. ಚಂದ್ರಸಮೇತ ನವಾಂಶಪವರ್ಣಃ-ಅಂದರೆ ಜನ್ಮಕಾಲದಲ್ಲಿ ಚಂದ್ರನು ಯಾವ ನವಾಂಶೆಯಲ್ಲಿರುವನೋ ಆ ನವಾಂಶ ರಾಶ್ಯಧಿಪತಿಯಾದ ಗ್ರಹಕ್ಕೆ ಸಮಾನವಾದ ವರ್ಣವುಳ್ಳವನಾಗುವನು. ರಕ್ತಶ್ಯಾಮೋ ಭಾಸ್ಕರೋಗೌರ ಇಂದುಃ- ಇತ್ಯಾದ್ಯುಕ್ತ ಗ್ರಹವರ್ಣವನ್ನು ಶಿಶುವಿಗೆ ಹೇಳತಕ್ಕದ್ದು. ಈ ವರ್ಣಗಳನ್ನು, ಜಾತಿಕುಲ ದೇಶದವರನ್ನು ಸಹ ಹೇಳತಕ್ಕದ್ದು. ಈ ವಿಷಯದಲ್ಲಿ ॥ಶ್ಲೋಕ॥ ಬಲಿನಸ್ಸದೃಶೀ ಮೂರ್ತಿ ರ್ಬುಧ್ವಾಜಾತಿ ಕುಲದೇಶರ್ಣಾ, ಎಂದು ಜ್ಯೋತಿಷಾರ್ಣವದಲ್ಲಿ ಹೇಳಿರುತ್ತೆ. ಶಿರಸ್ಸು ಮೊದಲುಗೊಂಡು ಅವಯವಗಳಲ್ಲಿ ಹ್ರಸ್ವದೀರ್ಘ ಸಮತ್ವವನ್ನು ಸಹಾ ತಿಳಿಯತಕ್ಕದ್ದು. ಕಾದಿ ವಿಲಗ್ನ ವಿಭಕ್ತಭಗಾತ್ರಃ-ಕಾದಿ-ಶಿರಸ್ಸು ಮೊದಲು, ವಿಲಗ್ನ-ಲಗ್ನಾದಿ ದ್ವಾದಶ ಭಾವಗಳನ್ನು, ವಿಭಕ್ತ-ವಿರ್ಪಡಿಸಿದ, ಭಗಾತ್ರಃ-ಅವಯವಗಳನ್ನು ತಿಳಿಯಬೇಕು. ಅದು ಹೇಗೆಂದರೆಃ- ಕಾಲಾಂಗಾನಿ ವರಾಂಗಮಾನನವೆಂಬುವ ಶ್ಲೋಕದಲ್ಲಿ ಮೇಷಾದಿ ಕ್ರಮವಾಗಿ ಅಂಗವಿಭಾಗ ಮಾಡಲ್ಪಟ್ಟಿದೆ. ಆ ಪ್ರಕಾರವೇ ಅಂಗವಿಭಾಗವನ್ನು ಮಾಡಬೇಕು. ಉದಾಹರಣೆಃ-ಜನ್ಮಲಗ್ನ ಶಿರಸ್ಸು, ದ್ವಿತೀಯ ಮುಖ, ತೃತೀಯ ವಕ್ಷಸ್ಥಳ, ಚತುರ್ಥ ಹೃದಯ, ಪಂಚಮ ಹೊಟ್ಟೆ, ಷಷ್ಠ ಕಟಿಪ್ರದೇಶ, ಸಪ್ತಮವಸ್ತಿ, ಅಷ್ಟಮಲಿಂಗ ಅಥವಾ ಯೋನಿ, ನವಮ ವೃಷಣ, ದಶಮ ತೊಡೆ, ಏಕಾದಶ ಮೊಣಕಾಲು ದ್ವಾದಶ ಕಾಲುಗಳು, ಈ ಪ್ರಕಾರ ಲಗ್ನ ಮೊದಲುಗೊಂಡು ದ್ವಾದಶರಾಶಿಗಳನ್ನು ವಿರ್ಪಡಿಸಿ, ಪೂರ್ವಾರ್ಧೇ ವಿಷಯಾದಯಃ ಕೃತಗುಣಾಃ ಎಂಬುವ ಪದ್ಯದಲ್ಲಿ ಉಕ್ತವಾಗಿರುವ ಪ್ರಕಾರ ರಾಶಿಗಳ ಹ್ರಸ್ವದೀರ್ಘ ಸಮತ್ವ ಪ್ರಕಾರ ರಾಶಿಶೀಲ

ಪ್ರಕರಣದಲ್ಲಿ ಹೇಳಿರುವಂತೆ ಯಾವ ರಾಶಿ ಯಾವ ಅಂಗದಲ್ಲಿರುವುದೋ ಆ ರಾಶಿ ದೀರ್ಘರಾಶಿಯಾಗಿದ್ದರೆ ಆ ಅಂಗ ದೀರ್ಘವಾಗಿಯೂ, ಹ್ರಸ್ವರಾಶಿಯಾಗಿದ್ದರೆ ಆ ಅಂಗ ಹ್ರಸ್ವವಾಗಿಯೂ, ಸಮರಾಶಿ ಅಂಗವಾಗಿದ್ದರೆ ಸಮಾನವಾಗಿಯೂ, ದೀರ್ಘರಾಶ್ಯಾಧಿಪತಿ ದೀರ್ಘರಾಶಿಯಲ್ಲಿದ್ದರೆ ಆ ಅಂಗ ಅತಿ ದೀರ್ಘವಾಗಿಯೂ, ದೀರ್ಘರಾಶಿಯಲ್ಲಿ ಹ್ರಸ್ವರಾಶ್ಯಾಧಿಪತಿ ಇದ್ದರೆ ಆ ಅಂಗ ಸಮವಾಗಿಯೂ, ಹ್ರಸ್ವರಾಶ್ಯಾಧಿಪತಿ ಹ್ರಸ್ವರಾಶಿಯಲ್ಲಿದ್ದರೆ ಆ ಅಂಗ ಅತ್ಯಂತ ಹ್ರಸ್ವವಾಗಿಯೂ ಮತ್ತು ಆ ರಾಶಿಯಲ್ಲಿ ಅನೇಕ ಗ್ರಹಗಳಿದ್ದರೆ ಅವರಲ್ಲಿ ಬಲಯುಕ್ತ ಗ್ರಹ ಸದೃಶನಾಗಿ ಆಯಾಯ ಅಂಗವನ್ನು ತಿಳಿಯತಕ್ಕದ್ದು. ಮತ್ತು ಆ ರಾಶಿಗಳಲ್ಲಿ ಗ್ರಹವಿಲ್ಲದೆ ಇದ್ದರೆ ರಾಶಿ ಸಮಾನವಾಗಿಯೇ ಆ ಅಂಗವಿರುವುದೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸತ್ಯಾಚಾರ್ಯರ ವಚನ ।।ಶ್ಲೋಕ।। ದೀರ್ಘಾಧಿಪತಿರ್ದೀರ್ಘೋ ಗೃಹಃಸ್ಥಿತೋವಯುವ ದೀರ್ಘಕೃದ್ಭವತಿ।। ಹ್ರಸ್ವೋಧಿಪತಿ ರ್ಹ್ರಸ್ವೋಗ್ರಹಃ ಸ್ಥಿತೋವಯವ ಹ್ರಸ್ವಕೃದ್ಭವತಿ ।।೫೨।।

## ದ್ರೇಕ್ಕಾಣಾಂಗ ವಿಭಾಗಃ

ಮೂಲ।। ಕಂದೃಕ್ಶ್ರೋತ್ರನಸಾ ಕಪೋಲಹನವೋ ವಕ್ತ್ರಂಚಹೋರಾದಯ।
ಸ್ತೇಕಂಠಾಂಸಕಬಾಹುಪಾರ್ಶ್ವಹೃದಯ ಕ್ರೋಡಾನಿನಾಭಿಸ್ತತಃ।। ವಸ್ತಿಃ
ಶಿಶ್ನಗುದೇ ತತಶ್ಚವೃಷಣಾ ವೂರೂತತೋಜಾನುನೀ।।
ಜಂಘೇಂಘ್ರಿತ್ಯುಭಯತ್ರವಾಮಮುದಿತೈ ದ್ರೇಕ್ಕಾಣಭಾಗೈ ಸ್ತ್ರಿಧಾ।।

ಅ ।। ಜಾತಕನಿಗೆ ವ್ರಣಮಶಕಾದಿಗಳನ್ನು ಜನ್ಮಲಗ್ನ ದ್ರೇಕ್ಕಾಣ ಮೂಲದಿಂದ ಅಂಗವಿಭಾಗವು ಮೂರು ವಿಧವಾಗಿ ಹೇಳಲ್ಪಡುತ್ತೆ. ಟೀ।। ದ್ರೇಕ್ಕಾಣ ಭಾಗೈಃ-ಜನ್ಮಲಗ್ನದಲ್ಲಿ ಮೂರು ದ್ರೇಕ್ಕಾಣದಿಂದ, ತ್ರಿಧಾ-ಮೂರು ವಿಧವಾಗಿ ಅಂಗವಿಭಾಗ ಮಾಡತಕ್ಕದ್ದು ಅದು ಯಾವ ಪ್ರಕಾರವೆಂದರೆ-ಲಗ್ನದಲ್ಲಿ ಪ್ರಥಮ ದ್ರೇಕ್ಕಾಣ ಉದಯವಾದರೆ ನಾಭಿಯಿಂದ ಪಾದದವರಿಗೆ ಅಂಗವಿಭಾಗ ಮಾಡತಕ್ಕದ್ದು. ಈ ಪ್ರಕಾರ ಮೂರು ವಿಧವಾಗಿ ಮಾಡತಕ್ಕದ್ದು. ಈ ಅಂಗ ವಿಭಾಗಗಳಲ್ಲಿ ವಾಮ ದಕ್ಷಿಣ ಅವಯವಗಳನ್ನು ತಿಳಿಯುವ ಪ್ರಕಾರವೇನೆಂದರೆ:- ಊದಿತೈ- ದ್ವಾದಶ ರಾಶಿಗಳಲ್ಲಿ ಯಾವ ರಾಶಿ ಲಗ್ನವಾಗುವುದೋ ಆ ಅರ್ಧ ರಾಶಿಗಳು ಉದಿತರಾಶಿಗಳೆಂದು ಸಂಜ್ಞೆಯು, ಮುಂದಿನ ಅರ್ಧರಾಶಿಗಳು ಅನುದಿತ ರಾಶಿಗಳೆಂದು ಸಂಜ್ಞೆಯು, ಉದಾಹರಣೆ-ಲಗ್ನಕ್ಕೆ ೧೨-೧೧, ೧೦-೯, ೮ ಈ ರಾಶಿಗಳು ಸಪ್ತಮದಲ್ಲಿ ಎಷ್ಟು ಭಾಗಗಳು ಗತಿಸಿರುವುದೋ ಅಷ್ಟು ಭಾಗಗಳ ಅನುದಿತರಾಶಿಗಳು, ಉಳಿದ ೨-೩, ೪-೫, ೬ ಈ ರಾಶಿಗಳು ಸಪ್ತಮ

ಲಗ್ನದಲ್ಲಿ ಎಷ್ಟು ಭಾಗಗಳು ಗತಿಸಿರುವುದೋ ಅಷ್ಟು ಭಾಗಗಳ ಸಹಿತ ಅನುದಿತರಾಶಿಗಳಾಗುವವು. ಆಗ ಉದಿತ ರಾಶಿಗಳಿಂದ ವಾಮಃ- ಎಡದ ಪಕ್ಕದ ಅವಯವಗಳು, ಅನುದಿತ ರಾಶಿಗಳಿಂದ ಬಲಗಡೆ ಪಕ್ಕದ ಅವಯವಗಳೆಂದು ತಿಳಿಯತಕ್ಕದ್ದು. ವಿವರಣೆ

## ಪ್ರಥಮ ದ್ರೇಕ್ಕಾಣಜಾತಸ್ಯ ಅಂಗವಿಭಾಗಾಃ

ಜನ್ಮಲಗ್ನದಲ್ಲಿ ಪ್ರಥಮ ದ್ರೇಕ್ಕಾಣ ಉದಯವಾಗಿದ್ದರೆ ಲಗ್ನರಾಶಿ, ಕಂಶಿರಸ್ಸು, ದ್ವಿತೀಯ ದ್ವಾದಶ ರಾಶಿಗಳು, ದೃಕ್-ಕಣ್ಣುಗಳು, ಅದರಲ್ಲಿ ದ್ವಿತೀಯ ಬಲಗಣ್ಣು, ದ್ವಾದಶ ಎಡಗಣ್ಣು, ತೃತೀಯ ಏಕಾದಶಗಳು, ಶ್ರೋತ್ರ-ಕಿವಿಗಳು, ಅದರಲ್ಲಿ ತೃತೀಯ ಬಲಗಿವಿ, ಏಕಾದಶ ಎಡಗಿವಿ, ಚತುರ್ಥ ದಶಮಗಳು, ನಸ್-ನಾಸಾ ಪುಟಗಳು, ಅದರಲ್ಲಿ ಚತುರ್ಥ ದಕ್ಷಿಣ ನಾಸಾಪುಟ, ದಶಮ ವಾಮ ನಾಸಾಪುಟ, ಪಂಚಮ ನವಮಗಳು, ಕಪೋಲ-ಕೆನ್ನೆಗಳು, ಅದರಲ್ಲಿ ಪಂಚಮ ಬಲ ಕಪಾಳ, ನವಮ ಎಡಕಪಾಳ, ಷಷ್ಠಾಷ್ಟಮಗಳು, ಹನು-ಹನುಪ್ರದೇಶ, ಹನುಪ್ರದೇಶವೆಂದರೆ, ದವಡೆ, ಗಂಡಕಪೋಲೌ ತತ್ಪರಾಹನುಃ ಇತ್ಯಮರಃ ॥ ಅಷ್ಟಮವಾಮ ಹನುಪ್ರದೇಶ, ಷಷ್ಠದಕ್ಷಿಣ ಹನುಪ್ರದೇಶ, ಸಪ್ತಮ, ವಕ್ತ್ರಂ-ಬಾಯಿ, ಈ ಪ್ರಕಾರವಾಗಿ ಪ್ರಥಮ ದ್ರೇಕ್ಕಾಣದಲ್ಲಿ ಹುಟ್ಟಿದವನಿಗೆ ಅಂಗವಿಭಾಗ.

## ದ್ವಿತೀಯ ದೇಕ್ಕಾಣಜಾತಸ್ಯ ಅಂಗವಿಭಾಗಾಃ

ಲಗ್ನದಲ್ಲಿ ದ್ವಿತೀಯ ದ್ರೇಕ್ಕಾಣ ಜನ್ಮವಾದರೆ, ತೇಹೋರಾದಯಃ-ಆ ಲಗ್ನಾಧಿಪತಿಗಳು ಕಂಠಾದ್ಯವಯವಗಳು ವಿಭಾಗಿಸತಕ್ಕದ್ದು. ಅದರ ವಿವರಣೆ-ಲಗ್ನವೆ, ಕಂಠ-ಕಂಠದೇಂ, ದ್ವಿತೀಯ ದ್ವಾದಶಗಳು, ಅಸಂಕ-ಭುಜ ಶಿರಸ್ಸು, ಅದರಲ್ಲಿ ದ್ವಿತೀಯ ಬಲಭುಜ, ದ್ವಾದಶ-ಎಡದಭುಜ, ತೃತೀಯೈಕಾದಶಗಳು, ಬಾಹು-ತೋಳಗಳು, ಆದರಲ್ಲಿ ತೃತೀಯ ಬಲಬಾಹು, ಏಕಾದಶ-ಎಡದಬಾಹು, ಚತುರ್ಥ ದಶಮಗಳು, ಪಾರ್ಶ್ವ-ಪಕ್ಕೆಗಳು, ಅದರಲ್ಲಿ ಚತುರ್ಥ ಬಲಪಕ್ಕೆ, ದಶಮ ಎಡದಪಕ್ಕೆ, ಪಂಚಮ ನವಮಗಳು, ಹೃದಯಃ-ಹೃದಯಪ್ರದೇಶ ಅದರಲ್ಲಿ ಪಂಚಮ ಹೃದಯದಲ್ಲಿ ದಕ್ಷಿಣಭಾಗ, ನವಮ ವಾಮಹೃದಯ, ಷಷ್ಠಾಷ್ಟಮಗಳು, ಕ್ರೋಢ-ಹೊಟ್ಟೆ, ಸಪ್ತಮ ನಾಭಿ-ಹೊಕ್ಕಳು, ನಾಭಿ ಶಬ್ದವು ಅಪರೋದರಕ್ಕೆ ಅನ್ವಯಿಸುತ್ತದೆ. ಈ ಪ್ರಕಾರ ಕಂಠ ಮೊದಲುಗೊಂಡು ನಾಭಿಪರ್ಯಂತ ಅಂಗವಿಭಾಗಗಳಾಗುತ್ತೆ.

## ತೃತೀಯ ದ್ರೇಕ್ಕಾಣೇ ಜಾತಸ್ಯ ಅಂಗವಿಭಾಗಃ

ಜನ್ಮಲಗ್ನದಲ್ಲಿ ತೃತೀಯ ದ್ರೇಕ್ಕಾಣದಲ್ಲಿ ಜನ್ಮವಾಗಿದ್ದರೆ ಆಮೇಲೆ ಹೇಳಲ್ಪಟ್ಟ ಲಗ್ನಾದಿ ದ್ವಾದಶ ಭಾವಗಳ ವಸ್ತ್ಯಾದಿ ಅವಯವಗಳಾಗುತ್ತವೆ. ಅದರ ವಿವರಣೆಃ- ಲಗ್ನವು, ವಸ್ತಿಃ-ನಾಭಿ ಕೆಳಗಿನ ಪ್ರದೇಶ, ದ್ವಿತೀಯ ದ್ವಾದಶಗಳು, ಶಿಶ್ನಗುದೆ-ಮೇಢ್ರ ಗುದಪ್ರದೇಶಗಳು, ಅದರಲ್ಲಿ ದ್ವಿತೀಯ, ಶಿಶ್ನಗುದದಲ್ಲಿ ಬಲಗಡೆ ಭಾಗ ದ್ವಾದಶ, ಶಿಶ್ನಗುದದಲ್ಲಿ ಎಡಪ್ರದೇಶ, ತೃತೀಯೈಕಾದಶಗಳು, ವೃಷಣಗಳು, ಅದರಲ್ಲಿ ತೃತೀಯ ಬಲಗಡೆ ವೃಷಣ, ಮುಷ್ಕೋಂಡಕೋಶೋ ವೃಷಣಗಳು, ಇತ್ಯಮರಃ।। ಏಕಾದಶ ಎಡಗಡೆ ವೃಷಣ, ಚತುರ್ಥ, ದಶಮಗಳು, ಊರು-ತೊಡೆಗಳು, ಅದರಲ್ಲಿ ಚತುರ್ಧ ಬಲತೊಡೆ, ದಶಮ ಎಡತೊಡೆ, ಪಂಚಮ, ನವಮಗಳು, ಜಾನುನೀ-ಮೊಣಕಾಲು ಗಳು ಅದರಲ್ಲಿ ಪಂಚಮ ಬಲ ಮೊಣಕಾಲು, ನವಮ ಎಡ ಮೊಣಕಾಲು, ಷಷ್ಠಾಷ್ಟಮಗಳು, ಜಂಘ-ಪಿರ್ರೆಗಳು, ಅದರಲ್ಲಿ ಷಷ್ಠ ಬಲಿಪಿರ್ರೆ, ಅಷ್ಟಮ ಎಡಪಿರ್ರೆ, ಸಪ್ತಮ ಅಂಘ್ರಿದ್ವಯ, ಪಾದದ್ವಯ ಈ ಪ್ರಕಾರ ನಾಭಿಯಿಂದ ಕೆಳಗಿನ ಅಂಗವಿಭಾಗಗಳಾಗುತ್ತವೆ. ಈ ವಿಷಯದಲ್ಲಿ ।।ಶ್ಲೋಕ।। ಪರಾಶರಃ।। ಕಗ್ರೀವವಸ್ತಿಪ್ರಮುಖಾಃ ತುಲಾದ್ರಿಶೈಲಾಗಸಂಖ್ಯಾ ಸ್ತ್ರಿವಿಧಾದ್ಯಕಾಣ್ಯೈ। ಕ್ರಮೇಣ ಕಾಲಾಯವಾಃ ಪ್ರದಿಷ್ಟಾಃ ಸವ್ಯಾಪಸವ್ಯೈಃ ಸಹಲಗ್ನಭಾಗ್ಯಾತ್।।೫೩।। ಮೂರ್ಧ್ವಾಲೋಚನಕರ್ಣ ಗಂಧವಹನಾ ಗಂಡೌಹನೂಚಾನನಂ । ಗ್ರೀವಾಸ್ಕಂಧ ಭುಜಂತು ಪಾರ್ಶ್ವಹೃದಯ ಕ್ರೋಡಾನಿನಾಭಿಃ ಪುನಃ।। ವಸ್ತಿರ್ಲಿಂಗಗುದೇಚ ಮುಷ್ಕಯುಗಳಂ ಚೋರುದ್ವಯಂ ಜಾನುನೀ ।। ಜಂಘೇಪಾದ ಯುಗಂ ವಿಲಗ್ನಭವನಾತ್ ಪಾರ್ಶ್ವದ್ವಯೇಕಲ್ಪ್ಯತಾಂ ।।೫೪।। ಎಂದುಕ್ತವಾಗಿರುತ್ತೆ. ಇದರ ಪ್ರಯೋಜನವೇನೆಂದರೆಃ- ಯಾವ ಯಾವ ರಾಶಿಗಳಲ್ಲಿ ಕ್ರೂರಗ್ರಹಗಳು ಇದ್ದರೆ ಆ ರಾಶಿ ಮೇಲೆ ಹೇಳಿದಂತೆ ದ್ರೇಕ್ಕಾಣ ವಿಧಿಪ್ರಕಾರ ಅಂಗವಿಭಾಗವಾಗಿರುವುದೋ ಆ ಅಂಗದಲ್ಲಿ ಚಿಹ್ನೆಯುಂಟಾಗಿರುವುದು. ಮತ್ತು ಪಾಪಗ್ರಹಕಾಂತವಾಗಿದ್ದರೆ, ಮಚ್ಚೆಯುಂಟಾಗಿರುವುದು, ಮತ್ತು ಆ ಅಂಗವಾಗಿರತಕ್ಕ ರಾಶಿಯಲ್ಲಿರುವ ಗ್ರಹದ ದೆಶೆ ಬಂದ ಕಾಲದಲ್ಲಿ ವ್ರಣವುಂಟಾದರೂ, ಪೆಟ್ಟುಬಿದ್ದರೂ ಅದರಿಂದ ವೇಧೆಯುಂಟಾಗುವುದು. ಈ ವಿಷಯದಲ್ಲಿ ಲಗ್ನನಿರ್ಣಯೋಪಯೋಗಕ್ಕಾಗಿ ಹೇಳಲ್ಪಟ್ಟಿರುತ್ತೆ. ಈ ವಿಷಯದಲ್ಲಿ ।।ಶ್ಲೋಕ।।ಗ್ರ-ಭಾ-ದೀ।। ದ್ರೇಕಾಣ್ಯೆ ರಂಗ ನಿರ್ದೇಶ್ಯೆ ರೇಕರಾಶ್ಯಂಗಯುಗ್ಮಕಂ ।। ದಕ್ಷಿಣಂ ಸಮ್ಯಗುನ್ನೇಯಂ ಪ್ರಾಕ್ಪಶ್ಚಾದ್ದೋರ ಯಾಸಕೃತ್।।೨೪।।

# ದ್ರೇಕ್ಕಾಣವಶಾತ್ ಅಂಗವಿಭಾಗ ಚಕ್ರಪದಕ

| ಸಂಖ್ಯೆ | ಲಗ್ನಾದಿ ಭಾವಗಳು | ಉದಾಹರಣೆ ರಾಶಿ | ಪ್ರಥಮ ದ್ರೇಕ್ಕಾಣ | ದ್ವಿತೀಯ ದ್ರೇಕ್ಕಾಣ | ತೃತೀಯ ದ್ರೇಕ್ಕಾಣ |
|---|---|---|---|---|---|
| ೧ | ಲಗ್ನರಾಶಿ | ಉದಿತ ಅನುದಿತ | ಶಿರಸ್ಸು | ಕಂಠ | ವಸ್ತಿ |
| ೨ | ದ್ವಿತೀಯ | ಉದಿತ | ಬಲಗಣ್ಣು | ಬಲಭುಜ | ಶಿಶ್ನಗುದದಲ್ಲಿ ಬಲಭಾಗ |
| ೩ | ದ್ವಾದಶ | ಅನುದಿತ | ಎಡಗಣ್ಣು | ಎಡಭುಜ | ಶಿಶ್ನಗುದದಲ್ಲಿ ಎಡಭಾಗ |
| ೪ | ತೃತೀಯ | ಉದಿತ | ಬಲಗಿವಿ | ಬಲಬಾಹು | ಬಲಗಡೆ ವೃಷಣ |
| ೫ | ಏಕಾದಶ | ಅನುದಿತ | ಎಡಗಿವಿ | ಎಡಬಾಹು | ಎಡಗಡೆ ವೃಷಣ |
| ೬ | ಚತುರ್ಥ | ಉದಿತ | ಬಲಮೂಗಿನ ಹೊಳ್ಳೆ | ಬಲಪಕ್ಕ | ಬಲತೊಡೆ |
| ೭ | ದಶಮ | ಅನುದಿತ | ಎಡಮೂಗಿನ ಹೊಳ್ಳೆ | ಎಡಪಕ್ಕ | ಎಡತೊಡೆ |
| ೮ | ಪಂಚಮ | ಉದಿತ | ಬಲ ಕಪಾಳ | ಹೃದಯ ದಕ್ಷಿಣಭಾಗ | ಬಲಮೊಣ ಕಾಲು |
| ೯ | ನವಮ | ಅನುದಿತ | ಎಡಕಪಳ | ಹೃದಯ ವಾಮಭಾಗ | ಎಡಮೊಣ ಕಾಲು |
| ೧೦ | ಷಷ್ಠ | ಉದಿತ | ಬಲಗಡೆಹನು | ಬಲಹೊಟ್ಟೆ | ಬಲಗಡೆ ಪಿರ್‍ರೆ |
| ೧೧ | ಅಷ್ಟಮ | ಅನುದಿತ | ಎಡಗಡೆಹನು | ಎಡಹೊಟ್ಟೆ | ಎಡಗಡೆ ಪಿರ್‍ರೆ |
| ೧೨ | ಸಪ್ತಮ | ಉದಿತ ಅನುದಿತ | ಬಾಯಿ | ನಾಭಿ | ಪಾದದ್ವಯ |

## ಜಾತಸ್ಯ ಅಂಗೇ ಚಿನ್ಹಾದಿ ಯೋಗವಿಚಾರಃ

ಮೂಲ॥ ತಸ್ಮಿನ್ಪಾಪಯುತೇ ವ್ರಣಂ ಶುಭಯುತೇ ದೃಷ್ಟೇಚ ಲಕ್ಷ್ಮಾದಿಶೇ।
ತ್ಸ್ವರ್ಕ್ಷಾಂಶೇ ಸ್ಥಿರಸಂಯುತೇಚ ಸಹಜಸ್ಸ್ಯಾದನ್ಯಥಾಗಂತುಕಃ ॥
ಮಂದೇಶ್ಮಾನಿಲಜೋಗ್ನಿ ಶಸ್ತ್ರವಿಷಜೋ ಭೌಮೇಬುಧೇಭೂಭವಃ।
ಸೂರ್ಯೇಕಾಷ್ಠಚತುಷ್ಪದೇಷುಹಿಮಗೌ ಶೃಂಗ್ಯಬ್ಜಜೋನ್ಯೈಃ ಶುಭಂ ॥

ಅವತಾರಿಕೆ॥ ಜಾತಕನಿಗೆ ಪೂರ್ವ ಶ್ಲೋಕದಲ್ಲಿ ಪಾದಾದಿ ಶಿರಸ್ಸು ಪರ್ಯಂತ ದ್ರೇಕ್ಕಾಣ ವಿಭಾಗವನ್ನು ಹೇಳಿರುತ್ತಷ್ಟೆ. ಆಯಾಯ ಭಾವಗಳಲ್ಲಿ ಪಾಪಗ್ರಹ ಶುಭಗ್ರಹಸ್ಥಿತವಾದರೆ ಮಚ್ಚೆಗುರುತು ಆಗುಂತಕ ಚಿಹ್ನೆ ಈ ಮೊದಲಾದ ವಿಷಯವನ್ನು ಈ ಶ್ಲೋಕದಿಂದ ಹೇಳಲ್ಪಡುತ್ತೆ. ಆದರೆ ಲಗ್ನದಲ್ಲಿ ಪ್ರಥಮ ದ್ರೇಕ್ಕಾಣದಲ್ಲಿ ಹುಟ್ಟಿದವನಿಗೆ ಶಿರಸ್ಸಿನಿಂದ ಕಂಠದವರಿಗೂ, ದ್ವಿತೀಯ ದ್ರೇಕ್ಕಾಣದಲ್ಲಿ ಹುಟ್ಟಿದವನಿಗೆ ಕಂಠಾದಿ ನಾಭಿವರಿಗೂ, ತೃತೀಯ ದ್ರೇಕ್ಕಾಣದಲ್ಲಿ ಹುಟ್ಟಿದವನಿಗೆ ವಸ್ತ್ಯಾದಿ ಪಾದಗಳವರೆಗೆ ಅಂಗವಿಭಾಗ ದ್ವಾದಶ ರಾಶಿಗಳಿಗೂ ಮಾಡಲ್ಪಟ್ಟಿರುತ್ತೆ.
ಟೀ॥ ತಸ್ಮಿನ್-ಆ ರಾಶಿ ಎಂದರೆ ಲಗ್ನಾದಿ ದ್ವಾದಶ ರಾಶಿಗಳು ಯಾವ ಅಂಗವಾಗಿ ವಿಭಾಗಿಸಿರುವುದೋ, ಪಾಪಯುತೇ-ಪಾಪಗ್ರಹಯುಕ್ತವಾಗಿದ್ದರೆ, ಆ ಅಂಗದಲ್ಲಿ ವ್ರಣಂ-ಹುಣ್ಣು, ಆದಿಶೇತ್-ಹೇಳತಕ್ಕದ್ದು, ಆ ಪಾಪಗ್ರಹಯಂತರಾಶಿ, ಶುಭಯುತೇ-ಶುಭಗ್ರಹದಿಂದ ಯುಕ್ತವಾಗಿದ್ದರೆ, ಅಥವಾ ದೃಷ್ಟೇ-ಶುಭಗ್ರಹದೃಷ್ಟಿಯುಕ್ತವಾಗಿದ್ದರೆ, ಆ ರಾಶಿ ಯಾವ ಅಂಗವಾಗಿರುವುದೋ ಆ ಅಂಗದಲ್ಲಿ ಲಕ್ಷ್ಮ-ಮಚ್ಚೆ, ಆದಿಶೇತ್-ಹೇಳತಕ್ಕದ್ದು, ಆ ವ್ರಣ ಮಶಕಾದಿಗಳನ್ನು ಕೊಡುವ ಪಾಪಗ್ರಹ, ಸ್ವರ್ಕ್ಷಾಂಶೇ-ಸ್ವಕ್ಷೇತ್ರದಲ್ಲಾಗಲೀ, ಸ್ವನವಾಂಶದಲ್ಲಾಗಲೀ, ಸ್ಥಿರಸಂಯುತೇಚ-ಆ ರಾಶಿ ಸ್ಥಿರರಾಶಿಯಾಗಿದ್ದರೆ, ವ್ರಣಮಶಕಾದಿಗಳು, ಸಹಜಃ-ಹುಟ್ಟುವಾಗಲೇ ಇರುವುದು. ಅನ್ಯಥಾ- ಹಾಗಲ್ಲದಿದ್ದರೆ ಚರರಾಶಿ ನವಾಂಶೇ-ಪರನವಾಂಶೆಗಳಲ್ಲಿದ್ದರೆ ವ್ರಣಮಶಕಾದಿಗಳು, ಆಗುಂತುಕಃ-ಮುಂದೆಯೆ ಹೇಳಕೂಡದು, ಅಂದರೆ ಆ ಚಿಹ್ನೆಯುಂಟಾಗಿ ಶಾಶ್ವತವಾಗಿಲ್ಲದೆ ಹೋಗುವದು. ಈ ಪ್ರಕಾರವಾಗಿಯೇ ಒಂದಾನೊಂದು ನಿಮಿತ್ತದಿಂದ ಆಯಾಯ ದಶಾಕಾಲದಲ್ಲಿ ಸಂಭವಿಸುವುದು. ಪೂರ್ವೋಕ್ತ ಪ್ರಕಾರ ವ್ರಣಾದಿಗಳನ್ನುಂಟು ಮಾಡುವ ಗ್ರಹ, ಮಂದೇ-ಶನಿಯಾದರೆ, ಅಶ್ಮಾನಿಲಜಃ-ಕಲ್ಲು ಪೆಟ್ಟಿನಿಂದಾಗಲಿ, ವಾತವ್ಯಾಧಿ ಯಿಂದಾದರೂ, ವ್ರಣ ಉಂಟಾಗುವುದು. ಭೌಮೇ-ಕುಜನಾದರೆ, ಅಗ್ನಿ, ಶಸ್ತ್ರವಿಷಜಃ-ಅಗ್ನಿಯಿಂದಾಗಲಿ, ಕತ್ತಿಯ ಗಾಯವಾಗಲಿ, ಸರ್ಪಾದಿ ವಿಷದಿಂದಾಗಲಿ ವ್ರಣಮಶಕಾದಿಗಳುಂಟಾಗುವುದು. ಬುಧೇ-ಪಾಪಗ್ರಹಯುಕ್ತನಾದ ಬುಧನಾದರೆ, ಭೂಭುವಃ-ನೆಲದಿಂದಾಗಲಿ, ನೆಲದಮೇಲೆ ಜಾರಿಬಿದ್ದಾಗಲೀ ಮಣ್ಣಿನಗೆಡ್ಡೆ,

ಯಿಂದಾಗಲೀ, ವ್ರಣಮಶಕಾದಿಗಳು ಸಂಭವಿಸುವುದು. ಸೂರ್ಯೇ-ಸೂರ್ಯನಾದರೆ, ಕಾಷ್ಠ ಚತುಷ್ಪದೇನ-ಕಟ್ಟಿಗೆ ಪೆಟ್ಟಿನಿಂದಾಗಲೀ, ಚತುಷ್ಪದ ಜಂತುವಿನಿಂದಾಗಲೀ ವ್ರಣವುಂಟಾಗುವುದು, ಮತ್ತು ಅದರಿಂದ ಚಿಹ್ನೆ ಯುಂಟಾಗುವುದು. ಹಿಮಗೌ-ಕ್ಷೀಣಚಂದ್ರನಾದರೆ, ಶೃಂಗ್ಯಬ್ಜಜಃ-ಕೊಂಬುಳ್ಳ ಜಂತುವಿನಿಂದಾಗಲೀ, ಜಲಚರ ಜಂತುಗಳಿಂದಾಗಲೀ, ವ್ರಣಮಶಕಾದಿ ಗಳುಂಟಾಗುವುದು, ಅನ್ಯೈಃ- ಉಳಿದ ಶುಭಗ್ರಹಗಳಾದರೆ (ಅಂದರೆ ವರ್ಧಮಾನ ಚಂದ್ರ, ಶುದ್ಧಬುಧ, ಶುಕ್ರ, ಗುರು) ವ್ರಣಮಶಕಾದ್ಯ ಭಾವವಾಗಿ ಆರೋಗ್ಯ ದೃಢಕಾಯವುಳ್ಳವನಾಗುವನು. ॥೨೫॥

## ವ್ರಣಪ್ರಾಪ್ತಿ ಯೋಗಃ

ಮೂಲ॥ ಸಮನುಪತಿತಾ ಯಸ್ಮಿಂಭಾಗೇತ್ರಯಃ ಸಬುಧಾ ಗ್ರಹಾಃ । ಭವತಿ ನಿಯಮಾತ್ತಸ್ಯಾವಾಪ್ತಿಃ ಶುಭೇಷ್ವಶುಭೇಷುವಾ॥ ವ್ರಣಕೃದಶುಭಃ ಷಷ್ಠೇದೇಹೇ ತನೋರ್ಭಸಮಾಶ್ರಿತೇ । ತಿಲಕಮಶಕೈರ್ದೃಷ್ಟಃ ಸೌಮ್ಯೈರ್ಯುತಶ್ಚಸಲಕ್ಷ್ಮವಾನ್ ॥

ಟೀಕು॥ ಮತ್ತು ಕೆಲವು ವ್ರಣಪ್ರಾಪ್ತಿಯೋಗವು ಹೇಳಲ್ಪಡುತ್ತೆ. ಯಸ್ಮಿಭಾಗೇ-ಯಾವ ಭಾಗದಲ್ಲಿ, ತ್ರಯೋಗ್ರಹಾಃ-ಮೂರು ಗ್ರಹಗಳು, ಸಬುಧಾಃ-ಬುಧಸಹಿತರಾಗಿ, ಸಮನುಪತಿತಾಃ-ಇದ್ದಾರೆಯೋ, ಶುಭೇಷ್ವ ಶುಭೇಷುವಾ ಎಲ್ಲಾ ಶುಭಗ್ರಹಗಳು, ಪಾಪಗ್ರಹಗಳು ಆ ಭಾಗದಲ್ಲಿದ್ದರೆ ಆ ಅವಯವದಲ್ಲಿ ನಿಯಮಾತ್-ನಿಶ್ಚಯವಾಗಿ, ತಸ್ಯ-ಆ ವ್ರಣದ, ಅವ್ಯಾಪ್ತಿಃ-ಪ್ರಾಪ್ತಿ, ಭವತಿ-ಆಗುತ್ತದೆ, ಅಂದರೆ ಶರೀರದಲ್ಲಿ ದಕ್ಷಿಣಭಾಗದಲ್ಲಾಗಲೀ, ವಾಮಭಾಗದಲ್ಲಾಗಲೀ, ಯಾರಾದರೂ ಮೂರು ಗ್ರಹಗಳು ಬುಧನಸಂಗಡ ಕೂಡಿ ನಾಲ್ಕು ಗ್ರಹಗಳಾಗಲೀ, ಎಲ್ಲಾ ಶುಭಗ್ರಹಗಳು ಪಾಪಗ್ರಹಗಳಲ್ಲಿ ಬಲಾಧಿಕವಾದ ಗ್ರಹವಾವುದೋ ಆ ಗ್ರಹ ಸ್ವದಶಾಕಾಲದಲ್ಲಿ ತಾನಿದ್ದ ಅವಯವದಲ್ಲಿ ಅವಶ್ಯವಾಗಿ ವ್ರಣಪ್ರಾಪ್ತಿಯಾಗುತ್ತದೆ. ಮತ್ತು ಸಮನುಪತಿತಾ ಯಸ್ಮಿಗಾತ್ರೇ-ಈ ಯೋಗದಲ್ಲಿ ಬುಧಸಹಿತವಾಗಿ ಮೂರು ಗ್ರಹಗಳಿರುವರೋ, ಆ ಅಂಗದಲ್ಲಿ ವ್ರಣಪ್ರಾಪ್ತಿಯಾಗುತ್ತೆಂದು ತಿಳಿಯತಕ್ಕದ್ದು. ತನೋಃ-ಲಗ್ನಕ್ಕೆ, ಷಷ್ಠೇ-ಷಷ್ಠ ಸ್ಥಾನದಲ್ಲಿ, ಅಶುಭಃ-ಪಾಪಗ್ರಹವಿದ್ದರೆ, ಭಸಮಾಶ್ರಿತೇ ತಾನಿದ್ದ ರಾಶಿಯಿಂದ ಅಥವಾ ಆ ಗ್ರಹವಿರುವ ರಾಶಿಯಾಗಿರುವ ದೇಹೇ-ಅವಯವದಲ್ಲಿ ವ್ರಣಕೃತ್-ವ್ರಣವನ್ನುಂಟು ಮಾಡುತ್ತಾರೆ. ಇಲ್ಲಿ ಪೂರ್ವಶ್ಲೋಕದಲ್ಲಿ ಸ್ವರ್ಕ್ಷಾಂಶೇ ಸ್ಥಿರ ಸಂಯುತಶ್ಚ ಸಹಜಸ್ಯಾದನ್ಯಥಾ ಗಂತುಕಃ ॥ ಎಂಬುವ ಪಾದವನ್ನನುವರ್ತಿಸುತ್ತದೆ. ಅಂದರೆ ಲಗ್ನಕ್ಕೆ ಷಷ್ಠಸ್ಥಾನದಲ್ಲಿ ಪಾಪಗ್ರಹವಿದ್ದರೆ ಲಗ್ನಾದಿ ಷಷ್ಠರಾಶಿ ಕಾಲಾಂಗಾದಿ ವರಾಂಗ

ಮಾನೋಕ್ತ ಪ್ರಕಾರವಾಗಿ ಯಾವ ಅಂಗದಲ್ಲಿರುವುದೋ, ಆ ಅಂಗದಲ್ಲಿ ವ್ರಣಪ್ರಾಪ್ತಿಯಾಗುತ್ತದೆ. ಆ ಪಾಪಗ್ರಹವು ಸ್ಥಿರರಾಶಿಯಲ್ಲಿ ಸ್ವಕ್ಷೇತ್ರ ಸ್ವನವಾಂಶದಲ್ಲಿದ್ದರೆ, ಹುಟ್ಟಿದಾಗಲೆ ವ್ರಣ ಉಂಟಾಗಿರುವುದು. ಚರರಾಶಿಯಲ್ಲಿ ಪರಕ್ಷೇತ್ರ ಪರನವಾಂಶದಲ್ಲಿದ್ದರೆ ಆ ಗ್ರಹ ದಶಕಾಲದಲ್ಲಿ ವ್ರಣವುಂಟಾಗುವುದು. ಆ ಷಷ್ಠಸ್ಥಾನದಲ್ಲಿದ್ದ ಪಾಪಗ್ರಹವು, ಸೌಮ್ಯ-ಶುಭಗ್ರಹಗಳಿಂದ, ದೃಷ್ಟಃ-ನೋಡಲ್ಪಟ್ಟರೆ, ಪೂರ್ವೋಕ್ತಾವಯವದಲ್ಲಿ, ತಿಲಕವಶಕದೃಷ್ಟಃ-ತಿಲಕವೆಂದರೆ ಎಳ್ಳುಮಚ್ಚೆ, ಮಶಕವೆಂದರೆ ಕರಿಮಚ್ಚೆ ಇವುಗಳು, ಭವತಿ-ಆಗುತ್ತದೆ. ಆ ಷಷ್ಠಸ್ಥಾನದಲ್ಲಿದ್ದ ಪಾಪಗ್ರಹವು, ಸೌಮ್ಯಃ-ಶುಭ ಗ್ರಹಗಳ ಸಂಗಡ, ಯುತಃ-ಕೂಡಿದ್ದರೆ, ಸಃ-ಆ ಹುಟ್ಟಿದ ಶಿಶುವು, ಲಕ್ಷ್ಮಾರ್ಣ-ಪೂರ್ವೋಕ್ತವಾದ ರೋಮನಿಚಯಾದಿ ಚಿಹ್ನೆಗಳುಂಟಾದವನಾಗುವನು ॥೨೬॥

ಇತಿ ಶ್ರೀ ಆವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಪ್ರಸೂತಿಕಾಲ
ಲಕ್ಷಣಾಖ್ಯ ವಿಚಾರೋ ನಾಮ
ಪಂಚಮ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾ ಸುಧಾಕರಾಯಮಾನ
ಬಂಕೀಪುರಪಿತಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ ಪ್ರಸೂತಿ
ಕಾಲ ಲಕ್ಷಣ ವಿಚಾರ ನಾಮ
ಪಂಚಮ ಪ್ರಕರಣಂ

# ೬ನೆ ಬಾಲಾರಿಷ್ಟ ಪ್ರಕರಣಂ

ಅವತಾರಿಕೆ ॥ ೫ನೆ ಪ್ರಕರಣದಲ್ಲಿ ಹೇಳಲ್ಪಟ್ಟಿರುವ ಸಕಲ ಲಕ್ಷಣಗಳಿಂದಲೂ, ಲಗ್ನನಿಶ್ಚಯ ಮಾಡಿಕೊಂಡನಂತರ ಭಾವಸ್ಪಷ್ಟ, ಭಾವಸಂಧಿ ಸ್ಪಷ್ಟಮಾಡಿಕೊಂಡ ನಂತರ (ಹುಟ್ಟಿದ ಶಿಶುವಿಗೆ) ಆಯುರ್ದಾಯ ತಿಳಿಯುವುದಕ್ಕೆ, ಬಾಲಾರಿಷ್ಟವೆಂಬುವ ದುರ್ಯೋಗವನ್ನು ಮುಂಚಿತವಾಗಿ ತಿಳಿಯಬೇಕಾದದ್ದು ಅವಶ್ಯಕವಾಗಿರುತ್ತೆ. ಬಾಲಾರಿಷ್ಟ ಉಂಟಾದರೆ ಮುಂದೆ ಎಂಥಹ ಆಯುರ್ದಾಯವಿದ್ದರೂ ಪ್ರಯೋಜನಕ್ಕೆ ಬಾರದೆ ಹೋಗುವುದು. ಅನೇಕ ಜ್ಯೋತಿಷ್ಕರು ಬಾಲಾರಿಷ್ಟ ವಿಷಯವನ್ನು ಗಮನಿಸದೆ ಮೋಸಹೋಗುವರು. ಆದ್ದರಿಂದ ಮುಂಚಿತವಾಗಿ ಬಾಲಾರಿಷ್ಟ ದೋಷವಿರುತ್ತದೆಯೇ ಯಾ ಇಲ್ಲವೇ ಎಂಬುವುದು ಚೆನ್ನಾಗಿ ತಿಳಿದಿರಬೇಕು. ನಂತರ ಬಾಲಾರಿಷ್ಟ ಭಂಗವಿದ್ದರೆ ಅದನ್ನು ತಿಳಿಯಬೇಕು. ಅರಿಷ್ಟ, ತದ್ಭಂಗ ಈ ಎರಡು ಅಂಶಗಳನ್ನು ದೃಢವಾಗಿ ತಿಳಿದುಕೊಂಡನಂತರ ಆಯುರ್ದಾಯ ಗಣಿತ ಮಾಡುವುದು ಯುಕ್ತವಾಗಿರುತ್ತದೆ. ಆದ್ದರಿಂದ ಮಹನೀಯರಾದ ಜ್ಯೋತಿಷ್ಕರು ನನ್ನ ಪ್ರಾರ್ಥನೆಯನ್ನಂಗೀಕರಿಸದೆ ಇರಲಾರರೆಂದು ನಂಬಿದ್ದೇನೆ.

## ಸಾಧಾರಣ ಬಾಲಾರಿಷ್ಟ ಯೋಗಾಃ

ಮೂಲ॥ ಸಂಧ್ಯಾಯಾಂ ಹಿಮದೀಧಿತಿ ಹೋರಾಪಾಪೈರ್ಭಾಂತಗತೈಃ ನ್ನಿಧ ನಾಯ । ಪ್ರತ್ಯೇಕಂ ಶಶಿಪಾಪಸಮೇತೇಃ ಕೇಂದ್ರೈ ರ್ವಾಸರ್ವವಿನಾಶ ಮುಪೈತಿ ॥೧॥

ಅವತಾರಿಕೆ॥ ಹುಟ್ಟಿದ ಶಿಶುವಿಗೆ ಬಾಲಾರಿಷ್ಟವಿಲ್ಲವೆಂದು ನಿಶ್ಚಯಮಾಡಿಕೊಂಡು ನಂತರ ಆಯುರ್ದಾಯ ಕಲ್ಪಿಸಬೇಕಾಗಿದೆ. ಆದ್ದರಿಂದ ಮುಂಚಿತವಾಗಿ ಈ ಬಾಲಾರಿಷ್ಟ ಪ್ರಕರಣವನ್ನು ಹೇಳುತ್ತೇನೆಂದು ವರಾಹಮಿಹಿರಭಟ್ಟನ ಆಶಯವು. ಆದರೆ ಬಾಲಾರಿಷ್ಟವಿರುವ ಶಿಶುವಿಗೆ ಮುಂದು ಮುಂದಿನ ಫಲ ವಿಸ್ತಾರವು ಪ್ರಯೋಜನಕ್ಕೆ ಬಾರದೆ ಹೋಗುವುದು. ಈ ವಿಷಯದಲ್ಲಿ ಕೇರಳೀಯದಲ್ಲಿ ॥ಶ್ಲೋಕ॥ ಪೂರ್ವಮಾಯುಃ ಪರೀಕ್ಷೇತ ಪಶ್ಚಾಲ್ಲಕ್ಷಣಕಂಶುಭಂ ॥ ಆಯುರ್ಹೀನೇ ನರಾಣಾಂತು ಕಿಮನ್ಯೈಃಫಲವಿಸ್ತರೈಃ ॥೧॥ ಈ ಪ್ರಕಾರ ಪ್ರತ್ಯಕ್ಷ ಅನುಭವವಿರುವುದರಿಂದ

ಮುಂಚಿತವಾಗಿ ಬಾಲಾರಿಷ್ಟವನ್ನು ಉದಹರಿಸುತ್ತೇನೆ ಸಂಧ್ಯಾಯಾಂ ಎಂಬುವ ಶ್ಲೋಕದಿಂದ ಈ ಶ್ಲೋಕದಲ್ಲಿ ೨ ವಿಧವಾದ ಬಾಲಾರಿಷ್ಟ ಯೋಗವು ಹೇಳಲ್ಪಡುತ್ತೆ.

ಟೀಕು।। ಸಂಧ್ಯಾಯಾಂ--ಸಂಧ್ಯಾಯಾಂ ಅಂದರೆ ದಿವಾರಾತ್ರಿ ಸಂಧಿಕಾಲು, ಇದರ ವಿವರಣೆ-ಬೃಹತ್ಸಂಹಿತೆಯಲ್ಲಿ ।।ಶ್ಲೋಕ।। ಅರ್ಧಾಸ್ತಮಯಾತ್ಸಂಧ್ಯಾ ವ್ಯಕ್ತೀಭೂತಾನತಾರಕಾಯಾವತ್ ।। ತೇಜಃ ಪರಿಭಾತಿಮುಖಾದ್ಭಾನೋರರ್ಧೋ ದಯೋಯಾವತ್ ।।೨।। ಅಂದರೆ ಸಾಯಂಕಾಲದಲ್ಲಿ ಸೂರ್ಯಮಂಡಲದ ಅರ್ಧಾಸ್ತಮಯ ಮೊದಲುಗೊಂಡು ನಕ್ಷತ್ರಪ್ರಕಾಶ ಪರ್ಯಂತ ಸಾಯಂಸಂಧ್ಯಾಕಾಲ ।। ಪ್ರಾತಃಕಾಲದಲ್ಲಿ ಒಬ್ಬರ ಮುಖ ಮತ್ತೊಬ್ಬರಿಗೆ ಕಾಣುವ ಸಮಯು ಮೊದಲುಗೊಂಡು ಸೂರ್ಯಮಂಡಲ ಅರ್ಧೋದಯ ಪರ್ಯಂತ ಪ್ರಾತಃ ಸಂಧ್ಯಾಕಾಲ ।। ಸಂಧ್ಯಾಕಾಲವೆಂದರೆ ಈ ಮೇಲೆ ಹೇಳಲ್ಪಟ್ಟ ಕಾಲಗಳೆರಡು ಸಂಧ್ಯಾಕಾಲವೆಂದು ಸರ್ವವಿಷಯದಲ್ಲಿಯೂ ತಿಳಿಯತಕ್ಕದ್ದು. ಈ ಅರ್ಥದಲ್ಲಿ ಭರದ್ವಾಜ ಸಂಹಿತೆಯಲ್ಲಿ - ।।ಶ್ಲೋಕ।। ಉದಯಾತ್ಪ್ರಾಕ್ತನೀಸಂಧ್ಯಾ ಘಟಿಕಾದ್ವಯ ಮುಚ್ಯತೇ ।। ಸಾಯಂಸಂಧ್ಯಾದ್ವಿಘಟಿಕಾ ಹ್ಯಸ್ತಾದುಪರಿಭಾಸ್ವತಃ ।।೩।। ಎಂದು ಪ್ರಕಾರಾಂತರವಾಗಿ ಹೇಳಲ್ಪಟ್ಟಿರುತ್ತೆ. ಸೂರ್ಯೋದಯಕ್ಕೆ ಮುಂಚಿತವಾಗಿ ೨ ಘಳಿಗೆ ಪ್ರಾತಃಸಂಧ್ಯಾಕಾಲ. ಸೂರ್ಯಾಸ್ತಮಯಾನಂತರ ೨ ಘಳಿಗೆ ಸಾಯಂಸಂಧ್ಯಾ ಕಾಲ. ಈ ಸಂಧ್ಯಾಕಾಲದಲ್ಲಿ ಹಿಮದೀಧಿತಿಹೋರಾ--ಚಂದ್ರಹೋರಾ, ಭಾಂತಗತ್ಯೈ- ಭ-ರಾಶಿಯ, ಅಂತ-ಕಡೆಯ ನವಾಂಶವನ್ನು, ಗತ್ಯೈ-ಹೊಂದಿರುವ, ಪಾಪೈ-ಪಾಪಗ್ರಹಗಳಿಂದ (ಅಂದರೆ ಕುಜ, ಶನಿ, ರವಿ, ಪಾಕಿಯುಕ್ತ ಬುಧ ಕ್ಷೀಣ ಚಂದ್ರ) ನಿಧನಾಯ-ಶಿಶುವಿನ ಮರಣಕ್ಕೆ, (ಭವತಿ-ಆಗುತ್ತದೆ) ಅಂದರೆ ಸಂಧ್ಯಾಕಾಲದಲ್ಲಿ ಚಂದ್ರಹೋರಾ ಲಗ್ನವಾಗಿ ಪಾಪಗ್ರಹಗಳು ಯಾವ ರಾಶಿಯಲ್ಲಾದರೂ ಅಂತ್ಯ ನವಾಂಶದಲ್ಲಿದ್ದರೆ ಹುಟ್ಟಿದ ಶಿಶುವು ಬದುಕುವುದಿಲ್ಲವೆಂದು ಹೇಳತಕ್ಕದ್ದು. ಇದು ೧ ಬಾಲಾರಿಷ್ಟಯೋಗ. ಪ್ರತ್ಯೇಕಂ-ಬೇರೆಬೇರೆಯಾಗಿ, ಶಶಿಪಾಪಸಮೇತ್ಯೈ-ಚಂದ್ರನು ಪಾಪಗ್ರಹಗಳನ್ನು ಕೂಡಿ, ಕೇಂದ್ರೈ-ಕೇಂದ್ರ (೧-೪, ೭-೧೦) ಸ್ಥಾನಗಳಲ್ಲಿದ್ದರೆ, ಸಃ-ಆ ಜನಿಸಿದ ಶಿಶುವು, ವಿನಾಶಂ-ಮರಣವನ್ನು, ಉಪೈತಿ-ಹೊಂದುತ್ತದೆ. ಅಂದರೆ ಕೇಂದ್ರಸ್ಥಾನವಾದ ಲಗ್ನ ಚತುರ್ಥ, ದಶಮ, ಸಪ್ತಮಗಳಲ್ಲಿ ಪ್ರತ್ಯೇಕವಾಗಿ ಮೂರು ಪಾಪಗ್ರಹಗಳೂ ಚಂದ್ರನೂ ಒಂದು ಸ್ಥಾನದಲ್ಲಿದ್ದರೆ ಆಗ ಹುಟ್ಟಿದ ಶಿಶುವು ಬದುಕುವುದಿಲ್ಲವೆಂದು ಹೇಳತಕ್ಕದ್ದು. ಇದು ಒಂದು ವಿಧವಾದ ಯೋಗ. ಈ ವಿಷಯದಲ್ಲಿ ।।ಶ್ಲೋಕ।। ಕ್ಷೀಣಚಂದ್ರಸ್ತ್ರಿಭಿಃ ಕ್ರೂರೈಃ ಸ್ಸಹಿತೋಯದಿ ಕೇಂದ್ರಗಃ।। ಶಿಶೋರ್ನಿಧನ ಮಾಚಷ್ಟೇ

ಶುಭದೃಗ್ಯೋಗವರ್ಜಿತೇ ॥ ಅಂತೂ ಈ ಶ್ಲೋಕದಲ್ಲಿ ಎರಡು ತರಗತಿಯ ಯೋಗವು ಹೇಳಲ್ಪಟ್ಟಿರುತ್ತೆ. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಕೇಂದ್ರೇಷು ಸರ್ವೇಷುಚ ಚಂದ್ರಪಾಪೈರ್ಯುಕ್ತೇಷುಜಾತೋ ಯಮಲೋಕಮೇತಿ ॥ ಮೃತ್ಯುಃ ಪ್ರತ್ಯೇಕಸ್ಥೇಕೇಂದ್ರೇಷು ಶಶಾಂಕಪಾಪೈಶ್ಚ ॥೪॥ ಎಂದು ಪರಾಶರರು ಹೇಳಿರುತ್ತಾರೆ. ಈ ವಿಷಯವು ರೋಗ ಪ್ರಶ್ನೆಗೂ ಸಹ ಉಪಯೋಗವಾಗುತ್ತದೆ. ಆದ್ದರಿಂದ ರೋಗಿ ಗುಣಹೊಂದುವನೇ ಎಂದು ಕೇಳಿದಾಗ ಈ ಯೋಗಗಳಿದ್ದರೆ ರೋಗಿ ಮರಣಹೊಂದುವನೆಂದು ಹೇಳತಕ್ಕದ್ದು.

## ಚಂದ್ರ ಪೂರ್ವಾಪರ ಭಾಗಜನಿತ ಬಾಲಾರಿಷ್ಟಯೋಗಾಃ

ಮೂಲ॥ ಚಂದ್ರಸ್ಯ ಪೂರ್ವಾಪರ ಭಾಗಗೇಷು ಕ್ರೂರೇಷುಸೌಮ್ಯೇಷುಚಕೀಟ ಲಗ್ನೇ ॥ ಕ್ಷಿಪ್ರಂವಿನಾಶಂ ಸಮುಪೈತಿಜಾತಃ ಪಾಪೈರ್ವಿಲಗ್ನಾಸ್ತ ಮಯಾಭಿತಶ್ಚ ॥೨॥

ಅವತಾರಿಕೆ॥ ಪುನಃ ಎರಡು ಬಾಲಾರಿಷ್ಟ ಯೋಗ ಹೇಳಲ್ಪಡುತ್ತೆ. ಲಗ್ನದಲ್ಲಿ ಎಷ್ಟುಭಾಗ ಸಂದಿರುವುದೋ ಅಷ್ಟು ಭಾಗಗಳು ದಶಮದಲ್ಲಿ ಬಿಟ್ಟು ಸಲ್ಲಬೇಕಾದ ಎಷ್ಟು ಭಾಗಗಳೋ ಅಷ್ಟು ಭಾಗಗಳಿಂದ ದಶಮದಲ್ಲೂ, ಏಕಾದಶ, ದ್ವಾದಶ, ಲಗ್ನ, ದ್ವಿತೀಯ ತೃತೀಯದಲ್ಲು, ಚತುರ್ಥದಲ್ಲಿ ಲಗ್ನದಲ್ಲಿ ಎಷ್ಟು ಭಾಗಗಳು ಸಂದಿರುವುವೋ ಅಷ್ಟು ಭಾಗ ಪರ್ಯಂತ ಚಕ್ರ ಪೂರ್ವಾರ್ಧವೆಂದನ್ನಿಸುವುದು. ಚತುರ್ಥದಲ್ಲಿ ಉಳಿದ ಭಾಗಗಳು ಪಂಚಮ, ಷಷ್ಠ, ಸಪ್ತಮಾಷ್ಟಮ, ನವಮಗಳಲ್ಲು, ದಶಮದಲ್ಲಿ ಲಗ್ನದಲ್ಲಿ ಎಷ್ಟು ಭಾಗಗಳು ಸಂದಿರುವುದೋ ಅಷ್ಟು ಭಾಗಗಳ ಪರ್ಯಂತ ಚಕ್ರೋತ್ತರಾರ್ಧವೆಂದು ಸಂಜ್ಞೆ. ಈ ವಿಷಯದಲ್ಲಿ ॥ಶ್ಲೋಕ॥ ತ್ರಿರಾಶಿಸಹಿತಂಲಗ್ನಂ ಪೂರ್ವಾರ್ಥಂ ಷಡ್ಭಿರನ್ವಿತಂ ॥ ಪಶ್ಚಾರ್ಧಂ ಶಿಷ್ಟಮರ್ಥಂಸ್ಯಾಚ್ಚಕ್ರಪೂರ್ವಾಪರೇಕ್ರಮಾತ್ ॥೫॥ ಎಂದು ಬಾದರಾಯಣ ಸಂಹಿತಾ ವಚನವು.

ಟೀಕು॥ ಕ್ರೂರೇಷು-ಪಾಪಗ್ರಹಗಳು, ಸೌಮ್ಯೇಷುಚ ಶುಭಗ್ರಹಗಳು ಕೂಡಾ, (ಕ್ರಮವಾಗಿ) ಚಕ್ರಸ್ಯ-ರಾಶಿಚಕ್ರದ, ಪೂರ್ವಾಪರಭಾಗಗೇಷು-ಪೂರ್ವೋತ್ತರ ಭಾಗಗತರಾಗಿರುವಾಗ ಅಂದರೆ ಪಾಪಗ್ರಹಗಳು ಪೂರ್ವಾರ್ಧದಲ್ಲೂ, ಶುಭಗ್ರಹಗಳು ಉತ್ತರಾರ್ಧದಲ್ಲೂ ಇರುವಾಗ, ಕೀಟಲಗ್ನೇ-ವೃಶ್ಚಿಕ ಲಗ್ನದಲ್ಲಾಗಲೀ, ಕರ್ಕಾಟಕ ಲಗ್ನದಲ್ಲಾಗಲೀ, ಜಾತಃ-ಹುಟ್ಟಿದ ಶಿಶುವು, ಕ್ಷಿಪ್ರಂ-ಶೀಘ್ರವಾಗಿ,

ವಿನಾಶಂ-ಮರಣವನ್ನು, ಉಪೈತಿ-ಹೊಂದುವುದು. ಇಲ್ಲಿ ಹೇಳಿದ ಕೀಟ ಶಬ್ದವು ಕರ್ಕಾಟಕ, ವೃಶ್ಚಿಕ ಲಗ್ನಗಳೆರಡಕ್ಕೂ ಅನ್ವಯಿಸುತ್ತದೆ. ಈ ವಿಷಯಕ್ಕೆ ||ಶ್ಲೋಕ|| ಬಾದರಾಯಣಃ || ಪೂರ್ವಾಪರಗ್ಯೆ ಶುಭ್ಯೆ ಸೌಮ್ಯೈರಳಿ ಕರ್ಕಟೇಲಗ್ನೇ || ಜಾತಸ್ಯ ಶಿರೋರ್ಮ್ರಣಂ ಸದ್ಯಃ ಕಥಯಂತಿ ಯುವನೇಂದ್ರಾಃ ||೬|| ಮತ್ತು ಪರಾಶರರು ಇದೇ ವಿಷಯಕ್ಕೆ ಹೇಳಿರುವುದೇನೆಂದರೆ- ||ಶ್ಲೋಕ|| ಚಕ್ರಸ್ಯೆ ಪೂರ್ವಭಾಗೇ ಪಾಪಾಸ್ಸೌಮ್ಯಾಸ್ತಥೋತ್ತರಾರ್ಧೇಚ|| ವೃಶ್ಚಿಕಲಗ್ನೇ ಜಾತಾಗತಾಯುಷೋ ಮಂತ್ರಯೋಗೇಸ್ಯುಃ ||೭|| ಈ ವಚನಪ್ರಕಾರ ಕೀಟಲಗ್ನವೆಂದರೆ ವೃಶ್ಚಿಕಕ್ಕೆ ಮಾತ್ರ ಅನ್ವಯಿಸುತ್ತದೆ. ಮತ್ತು ಧುಂಡಿರಾಜರು ವೃಶ್ಚಿಕ ಮತ್ತು ಕರ್ಕಾಟಕ ಲಗ್ನಗಳಿಗೆ ಅನ್ವಯಿಸುತ್ತದೆಂದು ಹೇಳಿರುವರು. ಲಗ್ನೇಕುಳೀರೆ ಪ್ರಥವಾಳಿ ಸಂಜ್ಞೇಖಲಗ್ರಹಾಃ ಪೂರ್ವದಳೇಯದಿಸ್ಯುಃ || ಸೌಮ್ಯಾಃ ಪರಾರ್ಧೇ ಖಲುವಜ್ರಮುಷ್ಟಿಃ ಯೋಗೋಯಮುಕ್ತಃ ಪ್ರಕರೋತ್ಯರಿಷ್ಟಂ ||೮|| ಈ ಯೋಗ ೧, ವಿಲಗ್ನಾಸ್ತಮಯಾಭಿತಶ್ಚ-ವಿಲಗ್ನ-ಲಗ್ನಕ್ಕೆ, ಅಸ್ತಮಯ-ಸಪ್ತಮ ಸ್ಥಾನಕ್ಕೂ, ಅಭಿತಃ-ಎರಡು ಪಕ್ಕಗಳಲ್ಲಿ, ಪಾಪ್ಯೆ-ಪಾಪಗ್ರಹಗಳಿದ್ದರೆ, ಜಾತಃ- ಹುಟ್ಟಿದ ಶಿಶುವು, ಕ್ಷಿಪ್ರಂವಿನಾಶಂಸಮುಪೈತಿ ಶೀಘ್ರವಾಗಿ ನಾಶಹೊಂದುವುದು. ಅಂದರೆ, ಲಗ್ನಕ್ಕೆ ದ್ವಿತೀಯ ದ್ವಾದಶದಲ್ಲಾಗಲೀ, ಷಷ್ಠದಲ್ಲಾಗಲೀ, ಅಷ್ಟಮದಲ್ಲಾಗಲೀ ಪಾಪಗ್ರಹಗಳು ಶುಭಯುಕ್ತರಾಗಿರದೆ ಇದ್ದರೆ, ಹುಟ್ಟಿದ ಶಿಶುವು ಮರಣಹೊಂದುವುದು. ಈ ವಿಷಯಕ್ಕೆ-ಶ್ಲೋಕ|| ದೇವಕಲಿಃ|| ಲಗ್ನದ್ವಾದಶ ಧನಗ್ಯೆಃ ಪಾಪ್ಯೆರ್ಮ್ರಿಯತೇಚ ರಂಧ್ರರಿಪುಸಂಸ್ಥೈಃ || ಶುಭಸಂಪರ್ಕಮಯಾತ್ಯೆರ್ರಾಸ್ಮೇಷಷ್ಠಾಷ್ಟಮೇವಾಪಿ ||೯|| ಭಟ್ಟೋತ್ಪಲಾಚಾರ್ಯರು ವ್ಯಾಖ್ಯಾನ ಮಾಡಿದ್ದರಲ್ಲಿ ನಿರ್ಣಯಿಸಿರುವುದೇನೆಂದರೆ-ಯವನೇಶ್ವರಃ || ಗ್ರಹೇಷು ಲಗ್ನಾಭಿ ಮುಖೇಷು ಸರ್ವ್ಯೆಷ್ವವಾಪ್ತವೀರ್ಯೇಷು ಸವರ್ಗಗೇಷು || ಎಂದುಕ್ತವಾಗಿರುವುದರಿಂದ, ವಿಲಗ್ನಾಸ್ತಮಯಾಭಿತಃ-ಅಂದರೆ ಲಗ್ನಾಭಿಮುಖವಾಗಿಯೂ, ಅಸ್ತಾಭಿಮುಖವಾಗಿಯೂ ಎಂದರ್ಥವು. ದ್ವಾದಶದಲ್ಲಿದ್ದ ಗ್ರಹ ಲಗ್ನಾಭಿಮುಖವೆಂದರ್ಥ. ಷಷ್ಠದಲ್ಲಿದ್ದ ಗ್ರಹ ಅಸ್ತಾಭಿಮುಖವೆಂದರ್ಥ. ಆದ್ದರಿಂದ ಷಷ್ಠ ದ್ವಾದಶದಲ್ಲಿ ಪಾಪಗ್ರಹವಿರುವಾಗ ಹುಟ್ಟಿದ ಶಿಶುವು ಮೃತಿಹೊಂದುವುದೆಂದು ಭಟ್ಟೋತ್ಪಲಾಚಾರ್ಯರ ಸ್ವಾಭಿಪ್ರಾಯ. ಕೆಲವರು ದ್ವಿತೀಯದಲ್ಲಿದ್ದ ಗ್ರಹವು ಲಗ್ನಾಭಿಮುಖವೆಂತಲೂ, ಅಷ್ಟಮದಲ್ಲಿದ್ದ ಗ್ರಹ ಸಪ್ತಮಾಭಿಮುಖವೆಂತಲೂ ಆದ್ದರಿಂದ ದ್ವಿತೀಯಾಷ್ಟಮದಲ್ಲಿ ಗ್ರಹಗಳಿದ್ದರೆ ಬಾಲಾರಿಷ್ಟವೆಂದು ಹೇಳುವರು. ಇದಕ್ಕೆ ಗರ್ಗಸಂಹಿತಾ ವಚನ ||ಶ್ಲೋಕ|| ರಿಪುವ್ಯಯಗತ್ಯೆಃ ಪಾಪ್ಯೆರ್ಯದಿವಾಧನ ಮೃತ್ಯುಗ್ಯೆಃ || ಲಗ್ನೇವಾಪಾಪಮಧ್ಯಸ್ಥೇ

ದ್ಯೂನೇವಾಮೃತ್ಯುಮಾಪ್ನುಯಾತ್ ।।ಆದ್ದರಿಂದ ಲಗ್ನಕ್ಕೆ ೧೨-೨, ೬-ಲರಲ್ಲಿ ಪಾಪಗ್ರಹವಿದ್ದರೆ ಬಾಲಾರಿಷ್ಟ.

ಮೂಲ।। ಪಾಪವುದಯಾಸ್ತಗತೌ ಕ್ರೂರೇಣಯುತಶ್ಚಶಶೀ।। ದೃಷ್ಟಶ್ಚ ಶುಭೈರ್ನಯದಾ ಮೃತ್ಯುಶ್ಚ ಭವೇದಚಿರಾತ್ ।।೩।।

ಟೀಕು।। ಮತ್ತೊಂದು ವಿಧವಾದ ಬಾಲಾರಿಷ್ಟಯೋಗ. ಪಾಪೌ-ಎರಡು ಪಾಪಗ್ರಹಗಳು, ಉದಯಾಸ್ತಗತೌ-ಉದಯಾಸ್ತ ರಾಶಿಗಳಲ್ಲಿದ್ದರೆ, ಅಂದರೆ, ಉದಯ ಲಗ್ನದಲ್ಲಿ ಒಂದು ಪಾಪಗ್ರಹ, ಸಪ್ತಮದಲ್ಲೊಂದು ಪಾಪಗ್ರಹವಿದ್ದು ಶಶೀ-ಚಂದ್ರನು, ಯಾವ ರಾಶಿಯಲ್ಲಿದ್ದರೂ ಚಂದ್ರನು, ಕ್ರೂರೇಣ-ಪಾಪಗ್ರಹದಿಂದ, ಯುತಃ-ಕೂಡಿದ್ದರೆ, ಯದಾ-ಆಗ, ಶುಭೈಃ-ಶುಭಗ್ರಹಗಳಿಂದ, ನದೃಷ್ಟಃ- ನೋಡಲ್ಪಡದಿದ್ದರೆ, ಆ ಕಾಲದಲ್ಲಿ ಹುಟ್ಟಿದ ಶಿಶುವು, ಅಚಿರಾತ್-ಶೀಘ್ರವಾಗಿಯೇ, ಮೃತ್ಯುಃ-ಮರಣವನ್ನು, ಭವೇತ್-ಹೊಂದುವುದು. ತಾ।। ಲಗ್ನದಲ್ಲೂ ಸಪ್ತಮದಲ್ಲೂ ಪಾಪಗ್ರಹವಿದ್ದು, ಚಂದ್ರನು ಯಾವ ಸ್ಥಾನದಲ್ಲಿದ್ದರೂ ಪಾಪಗ್ರಹಗಳಿಂದ ಕೂಡಿ ಶುಭಗ್ರಹಗಳಿಂದ ನೋಡಲ್ಪಡದಿದ್ದರೆ ಆ ಕಾಲದಲ್ಲಿ ಹುಟ್ಟಿದ ಶಿಶುವು ಶೀಘ್ರವಾಗಿ ಮರಣವನ್ನು ಹೊಂದುವುದು.

ಮೂಲ।। ಕ್ಷೀಣೇಹಿಮಗೌವ್ಯಯಗೇ ।। ಪಾಪೈರುದಯಾಷ್ಟಮಗೈಃ ಕೇಂದ್ರೇಷು ಶುಭಾಶ್ಚನಚೇತ್ ಕ್ಷಿಪ್ರಂ ನಿಧನಂಪ್ರವದೇತ್ ।।೪।।

ಟೀಕು।। ಮತ್ತೊಂದು ವಿಧವಾದ ಬಾಲಾರಿಷ್ಟವು ಹೇಳಲ್ಪಡುತ್ತೆ. ಕ್ಷೀಣೇ ಹಿಮಗೌ-ಕ್ಷೀಣಚಂದ್ರನು, ವ್ಯಯಗೇ-ದ್ವಾದಶದಲ್ಲಿದ್ದು, ಪಾಪೈಃ-ಪಾಪಗ್ರಹಗಳು, ಉದಯಾಷ್ಟಮಗೈಃ-ಲಗ್ನದಲ್ಲೂ ಅಷ್ಟಮದಲ್ಲೂ ಇದ್ದರೆ, ಕೇಂದ್ರೇಷು- ಲಗ್ನಚತುರ್ಥ ಸಪ್ತಮ ದಶಮ ೧-೪, ೭-೧೦ ರಲ್ಲಿ, ಶುಭಾಃ-ಶುಭಗ್ರಹಗಳು, ನಚೇತ್-ಇಲ್ಲದಿದ್ದರೆ, ಆ ಕಾಲದಲ್ಲಿ ಹುಟ್ಟಿದ ಶಿಶುವಿಗೆ, ಕ್ಷಿಪ್ರಂ-ಶೀಘ್ರವಾಗಿ, ನಿಧನಂ-ಮರಣವನ್ನು, ಪ್ರವದೇತ್-ಹೇಳತಕ್ಕದ್ದು. ಕೆಲವರು ಪಾಪಗ್ರಹಗಳು ಲಗ್ನಾಷ್ಟಮಗತರಾದರೆ ಅರಿಷ್ಟವೆಂದೇ ಹೇಳಿರುವರು, ಅದು ಯುಕ್ತವು. ಈ ವಿಷಯದಲ್ಲಿ ।।ಶ್ಲೋಕ।।ಗರ್ಗಃ।। ಕ್ಷೀಣೇಚಂದ್ರೇ ವ್ಯಯಗತ್ಯೈಃ ಪಾಪೈರಷ್ಟಮಲಗ್ನಗೈಃ।। ।।ಕೇಂದ್ರಬಾಹ್ಯಗತೈಃ ಸೌಮ್ಯೈರ್ಜಾತಸ್ಯ ನಿಧನಂಭವೇತ್।।

ಮೂಲ।। ಕ್ರೂರಸಂಯುತಶ್ಶಶೀ ಸ್ಮರಾಂತ್ಯಮೃತ್ಯುಲಗ್ನಗಃ।। ಕಂಟಕಾದ್ಬಹಿಶ್ಶುಭೈ ರವೀಕ್ಷಿತಶ್ಚ ಮೃತ್ಯುದಃ ।।೫।।

ಟೀಕು॥ ಮತ್ತೊಂದು ವಿಧವಾದ ಬಾಲಾರಿಷ್ಟಯೋಗ ಹೇಳಲ್ಪಡುತ್ತೆ. ಕ್ರೂರ ಸಂಯುತಃ-ಪಾಪಗ್ರಹದಿಂದೊಡಗೂಡಿದ, ಶಶೀ-ಚಂದ್ರನು ಸ್ಮರಾಂತ್ಯ ಮೃತ್ಯುಲಗ್ನಗಃ- ಸಪ್ತಮ, ದ್ವಾದಶ, ಅಷ್ಟಮ ಲಗ್ನ, ಈ ಸ್ಥಾನಗಳಲ್ಲಿ ಎಲ್ಲಿಯಾದರೂ ಇದ್ದರೆ, ಕಂಟಕಾತ್-ಕೇಂದ್ರಸ್ಥಾನದಿಂದ (೧-೪, ೭-೧೦) ಬಹಿಃ-ಹೊರಗೆ, ಅಂದರೆ, ಕೇಂದ್ರ ವ್ಯತಿರಿಕ್ತ ಸ್ಥಾನಗಳಲ್ಲಿದ್ದು, ಶುಭೈ-ಶುಭಗ್ರಹಗಳಿಂದ, ಅವೀಕ್ಷಿತಃ- ನೋಡಲ್ಪಡದಿದ್ದರೆ, ಮೃತ್ಯುದಃ-ಶಿಶುವಿಗೆ ಮರಣವುಂಟುಮಾಡುವನು. ಈ ಪ್ರಕಾರ ೭-೧೨, ೮-೧ರಲ್ಲಿ ಚಂದ್ರನು ಪಾಪಗ್ರಹದಿಂದ ಕೂಡಿದ್ದರೂ, ಕೇಂದ್ರದಲ್ಲಿ ಶುಭಗ್ರಹವಿದ್ದರೆ ಅರಿಷ್ಟವಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ವ್ಯಯಾಷ್ಟ ಸಪ್ತೋದಯಗೇ ಶಶಾಂಕೇ ಪಾಪೈಸ್ಸಮೇತೇ ಶುಭದೃಷ್ಟಿಹೀನೇ ॥ ಕೇಂದ್ರೇಷು ಸೌಮ್ಯಗ್ರಹವರ್ಜಿತೇಷು ಜಾತಸ್ಯ ಸದ್ಯಃ ಕುರುತೇ ಪ್ರಣಾಶಂ ॥೧೨॥ ಎಂದು ಪ್ರಮಾಣವಿರುತ್ತೆ.

ಮೂಲ॥ ಶಶಿನ್ಯರಿವಿನಾಶಗೇ ನಿಧನಮಾಶು ಪಾಪೇಕ್ಷಿತೇ ಶುಭೈರಥ ಸಮಾಷ್ಟಕಂದಳಮತಶ್ಚ ಮಿಶ್ರೈಸ್ಥಿತಿಃ॥ ಅಸದ್ಭಿರವಲೋಕಿತೇ ಬಲಿಭಿರತ್ರ ಮಾಸಂ ಶುಭೇಕಳತ್ರಸಹಿತೇಚ ಪಾಪವಿಜಿತೇ ವಿಲಗ್ನಾಧಿಪೇ ॥೬॥

ಅವತಾರಿಕೆ॥ ಯಾವ ಯೋಗದಲ್ಲಿ ಹುಟ್ಟಿದ ಶಿಶುವು ಯಾವ ಕಾಲದಲ್ಲಿ ಬಾಲಾರಿಷ್ಟದಿಂದ ನಾಶವಾಗುವುದೋ ಆ ಯೋಗವು ಹೇಳಲ್ಪಡುತ್ತೆ.

ಟೀಕು॥ ಅರಿವಿ ನಾಶಗೇ-ಷಷ್ಠಾಷ್ಟಮದಲ್ಲಿ ಒಂದು ಸ್ಥಾನದಲ್ಲಿದ್ದ, ಶಶಿನಿ-ಚಂದ್ರನು, ಪಾಪೇಕ್ಷಿತೇ- ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದ ಶಿಶುವು, ಆಶು-ಬೇಗನೆ, ಅಂದರೆ, ಒಂದು ತಿಂಗಳೊಳಗೆ, ನಿಧನಂ-ಮರಣಹೊಂದುವುದು. ಈ ವಿಷಯಕ್ಕೆ ಸಾರಾವಳಿಯಲ್ಲಿ ॥ಶ್ಲೋಕ॥ ವರ್ಷೇಣ ಷಷ್ಠಾಷ್ಟಮಗಃ ಶಶಾಂಕೋ ನಿಹಂತಿಮಾಸಾದ ಶುಭೈಶ್ಚದೃಷ್ಟಃ॥ ಅಬ್ದಾಷ್ಟಕಾತ್ಕೇವಲ ಸೌಮ್ಯದೃಷ್ಟೇ ಮಿಶ್ರೇಕ್ಷಿತೋ ವರ್ಷಚತುಷ್ಟಯೇನ ॥೧೩॥ ಎಂದು ಹೇಳಲ್ಪಟ್ಟಿರುತ್ತೆ. ಅಥ-ಅಥ ಶಬ್ದವು ಬಹು ಯೋಗಾಂತರ ಪ್ರಾರಂಭವನ್ನು ಹೇಳುತ್ತದೆ. ಶುಭೈಃ-ಲಗ್ನಕ್ಕೆ ಷಷ್ಠಾಷ್ಟಮ ಸ್ಥಾನಗಳಲ್ಲೊಂದು ಸ್ಥಾನದಲ್ಲಿದ್ದು ಚಂದ್ರನು, ಶುಭಗ್ರಹಗಳಿಂದ ನೋಡಲ್ಪಟ್ಟು ಪಾಪಗ್ರಹಗಳಿಂದ ನೋಡಲ್ಪಡದಿದ್ದರೆ ಆ ಶಿಶುವು, ಸಮಾಷ್ಟಕಂ-ಎಂಟು ವರ್ಷಕಾಲ, ಸ್ಥಿತಿಃ-ಜೀವಿಸುವುದು. ಲಗ್ನಕ್ಕೆ ಷಷ್ಠಾಷ್ಟಮದಲ್ಲಿದ್ದ ಚಂದ್ರನು, ಮಿಶ್ರೈಃ-ಶುಭಗ್ರಹ ಪಾಪಗ್ರಹ ಈ ಎರಡು

ಗ್ರಹಗಳಿಂದ ನೋಡಲ್ಪಟ್ಟರೆ, ಅತಃ-ಎಂಟು ಸಂವತ್ಸರಗಳ ದಳವಾದ ನಾಲ್ಕು ಸಂವತ್ಸರಗಳ ಕಾಲ, ಸ್ಥಿತಿಃ-ಜೀವಿಸುವುದು, ಮತ್ತು ಷಷ್ಠಾಷ್ಟಮದಲ್ಲಿದ್ದ ಚಂದ್ರನು ಪಾಪ ಗ್ರಹಕ್ಷೇತ್ರಗತನಾಗಿ ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಹುಟ್ಟಿದಾಗಲೇ ಮರಣವನ್ನು ಹೊಂದುವುದು. ಷಷ್ಠಾಷ್ಟಮಗತನಾದ ಚಂದ್ರನು ಶುಭಗ್ರಹಕ್ಷೇತ್ರ ಗತನಾಗಿಯಾಗಲಿ, ಪಾಪಗ್ರಹಕ್ಷೇತ್ರದಲ್ಲಿಯಾಗಲೀ ಶುಭಗ್ರಹ ಯುಕ್ತನಾಗಿಯಾದರೂ ಇದ್ದರೆ ಮರಣಪ್ರದನಾಗುವುದಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಯವನಾಚಾರ್ಯಃ ।।ಶ್ಲೋಕ।। ಲಗ್ನಾಚ್ಛಶೀ ನೈಧನಗಶ್ಶುಭರ್ಕ್ಷೇ ಷಷ್ಠೇ ಥವಾ ಪಾಪನಿರೀಕ್ಷಿತಶ್ಚ ।। ಸರ್ವಾಯುರಾಹಂತಿ ಶುಭೈರದೃಷ್ಟಸ್ತದೀಕ್ಷಿತೇ ಚಾಷ್ಟವಿ ಪರ್ಯಯೇಣ ।।೧೪।। ಎಂದು ಹೇಳಲ್ಪಟ್ಟಿರುತ್ತೆ. ಇಲ್ಲಿ ಭಟ್ಟೋತ್ಪಲ ವ್ಯಾಖ್ಯಾನದಲ್ಲಿ ಷಷ್ಠಾಷ್ಟಮಗತನಾದ ಚಂದ್ರನು ಯಾವ ಗ್ರಹಗಳಿಂದಲೂ ನೋಡಲ್ಪಡದಿದ್ದರೆ, ಅರಿಷ್ಟವಿಲ್ಲವೆಂದು ಹೇಳಲ್ಪಟ್ಟಿರುತ್ತೆ. ಆದರೆ ಈ ಅರ್ಥವು ಸಾರಾವಳಿ ಮೊದಲಾದ ಗ್ರಂಥ ವಚನಕ್ಕನುಸಾರವಿಲ್ಲ. ಆದ್ದರಿಂದ ವಿಚಾರಾರ್ಹವಾಗಿರುತ್ತೆ. ಸಾರಾವಳಿಯಲ್ಲಿ ।।ಶ್ಲೋಕ।। ವರ್ಷೇಣ ಷಷ್ಠಾಷ್ಟಮಗಶ್ಶಶಾಂಕೋ ನಿಹಂತಿ ಮಾಸಾದಶುಭೈರದೃಷ್ಟಃ ।।೧೫।। ಈ ವಚನವಿರುವುದು. ಈ ವಿಷಯಕ್ಕೆ ದೇವಕೀರ್ತಿ ಹೇಳಿರುವುದೇನೆಂದರೆ:- ।।ಶ್ಲೋಕ।। ವರ್ಷಾನ್ಮ್ರಿಯತೇ ಚಂದ್ರೇ ಷಷ್ಠಾಷ್ಟಮ ಸಂಹಿತೇಸ್ಥಿತೇ ವಿಲಗ್ನರ್ಕ್ಷಾತ್ ।। ಸದ್ಯಃಕ್ರೂರೈರ್ದೃಷ್ಟಿಃ ಸೌಮ್ಯೈರಬಾರ್ದ್ವಷ್ಟ ಕಾಚ್ಛೈವ ।।೧೬।। ಈ ರೀತಿಯಾಗಿ ದೇವಕೀರ್ತಿ ಹೇಳಿರುವನು. ಈ ವಚನದಲ್ಲಿ ಷಷ್ಠಾಷ್ಟಮದಲ್ಲಿದ್ದ ಚಂದ್ರನು ಯಾವ ಗ್ರಹದಿಂದಲೂ ನೋಡಲ್ಪಡದಿದ್ದರೆ ಒಂದು ಸಂವತ್ಸರದಲ್ಲಿ, ಪಾಪಗ್ರಹದಿಂದ ನೋಡಲ್ಪಟ್ಟ ೧ ತಿಂಗಳಲ್ಲಿ ಅರಿಷ್ಟವು ಸಂಭವಿಸುವುದೆಂದು ಅಭಿಪ್ರಾಯವು ಹೇಳಲ್ಪಟ್ಟಿರುತ್ತೆ. ಇಲ್ಲಿ ।।ಶ್ಲೋಕ।। ಪಕ್ಷೇಸಿತೇಭವತಿ ಜನ್ಮಯದಿಕ್ಷಪಾಯಾಂ । ಕೃಷ್ಣೇಥವಾಹನಿ ಶುಭಾಶುಭ ದೃಶ್ಯಮಾನಃ ।। ತಚ್ಚಂದ್ರ ಮಾರಿಪುವಿನಾಶಗತೋಪಿ ಯತ್ನಾದಾಪತ್ಸುರಕ್ಷತಿ ಪಿತೇವಶಿಶುಂನಹಂತಿ ।।೧೭।। ಎಂದು ಮಾಂಡವ್ಯ ವಚನವಿರುತ್ತೆ. ಇದರಲ್ಲಿ ಶುಕ್ಲಪಕ್ಷದ ರಾತ್ರಿಯಲ್ಲಿ ಕೃಷ್ಣಪಕ್ಷದ ಹಗಲಿನಲ್ಲಿ ಜನ್ಮಿಸಿದ ಶಿಶುವನ್ನು ಚಂದ್ರನು ಷಷ್ಠಾಷ್ಟಮದಲ್ಲಿದ್ದರೂ ಶುಭಗ್ರಹಗಳಿಂದ ನೋಡಲ್ಪಟ್ಟರೆ, ಅಪತ್ಕಾಲದಲ್ಲಿ ತಂದೆ ಶಿಶುವಂ ರಕ್ಷಣೆಮಾಡುವಂತೆ ರಕ್ಷಿಸುವನೆಂದು ಹೇಳಲ್ಪಟ್ಟಿರುತ್ತೆ. ಆದ್ದರಿಂದ ಈ ಅರಿಷ್ಟವು ಶುಕ್ಲಪಕ್ಷದ ಹಗಲಿನಲ್ಲೂ ಕೃಷ್ಣಪಕ್ಷದ ರಾತ್ರಿಯಲ್ಲೂ ಹುಟ್ಟಿದವರಿಗೆ ಸಂಭವಿಸುವುದೆಂದೂ ಊಹಿಸತಕ್ಕದ್ದು. ಅತ್ರ-ಷಷ್ಠಾಷ್ಟಮ ಸ್ಥಾನಗಳಲ್ಲಿ, ಶುಭೇ- ಶುಭಗ್ರಹಗಳಿದ್ದು, ಬಲಿಭಿಃ-ಬಲವಂತರಾದ ಅಸದ್ಭಿಃ-ಪಾಪಗ್ರಹಗಳಿಂದ, ಅವಲೋಕಿತೇಸತಿ- ನೋಡಲ್ಪಟ್ಟರೆ, ಆ ಕಾಲದಲ್ಲಿ

ಹುಟ್ಟಿದ ಶಿಶುವು, ಮಾಸಂ-ಒಂದು ತಿಂಗಳು, ಸ್ಥಿತಿಃ-ಜೀವಿಸುವುದು ಅಂದರೆ, ಆ ಶಿಶುವು ಒಂದು ತಿಂಗಳಿಗಿಂತ ಹೆಚ್ಚಾಗಿ ಬದುಕಲಾರದು. ಈ ಮೇಲೆ ಹೇಳಲ್ಪಟ್ಟ ಷಷ್ಠಾಷ್ಟಮ ಸ್ಥಾನದಲ್ಲಿದ್ದ ಶುಭಗ್ರಹವು ಮತ್ತೊಂದು ಶುಭಗ್ರಹದಿಂದ ನೋಡಲ್ಪಟ್ಟರೆ ಅರಿಷ್ಟವಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಲಘುಜಾತಕದಲ್ಲಿ ॥ಶ್ಲೋ॥ ಶಶಿನಸೌಮ್ಯಾಃ ಪಾಪೈರ್ವಕ್ರಿಭಿರವಲೋಕಿತಾ ನಶುಭದೃಷ್ಟಾಃ । ಮಾಸೇನ ಮರಣದಾಸ್ಯುಃ ಪಾಪಜಿತೋ ಲಗ್ನಪಶ್ಚಾಸ್ತೇ ॥೧೮॥ ಎಂದು ಮತ್ತು ದೇವಕೀರ್ತಿಯಿಂದ ಹೇಳಲ್ಪಡುವುದೇನೆಂದರೆ :- ಶ್ಲೋಕ॥ ಸೌಮ್ಯಾಃ ಷಷ್ಠಾಷ್ಟಮಗಾಃ ಕ್ರೂರೈರ್ವಕೋಪಸಂಗತೈರ್ದೃಷ್ಟಾಃ । ಮಾಸೇನ ಮೃತ್ಯುದಾಸ್ತೇಯದಿನಶುಭೈಸ್ತತ್ರ ಸಂದೃಷ್ಟಾಃ ॥ ಎಂದು ಹೇಳಲ್ಪಟ್ಟಿರುತ್ತೆ. ವಿಲಗ್ನಾಧಿಪೇ-ವಿಲಗ್ನಾಧಿಪತಿ, ಪಾಪವಿಜಿತೇ-ಪಾಪಗ್ರಹದಿಂದ ಯುದ್ಧದಲ್ಲಿ ಸೋತುಹೋದ ಗ್ರಹವು, ಕಳತ್ರಸಹಿತೇ- ಲಗ್ನಕ್ಕೆ ಸಪ್ತಮ ಸ್ಥಾನದಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದ ಶಿಶುವು ಒಂದು ತಿಂಗಳಿಗಿಂತ ಹೆಚ್ಚಾಗಿ ಬದುಕಲಾರದು. ಗ್ರಹ ಯುದ್ಧದ ಜಯಾಪಜಯ ಲಕ್ಷಣವನ್ನು ಹಿಂದೆಯೇ ಹೇಳಿರುತ್ತೆ.

## ಬಾಲಾರಿಷ್ಟಸಹಿತ ಮಾತೃ ಮರಣಯೋಗಾಃ

ಮೂಲ॥ ಲಗ್ನೇಕ್ಷೀಣೇ ಶಶಿನಿನಿಧನಂ ರಂಧ್ರಕೇಂದ್ರೇಷುಪಾಪೈಃ ಪಾಪಾಂತಸ್ಥೇ ನಿಧನಹಿಬುಕದ್ಯೂನ ಯುಕ್ತೇಚಚಂದ್ರೇ ॥ ಏವಂ ಲಗ್ನೇ ಭವತಿ ಮದನಚ್ಛಿದ್ರಸಂಸ್ಥೇಚ ಪಾಪೈರ್ಮಾತ್ರಾ ಸಾರ್ಧಂಯದಿಚನ ಶುಭೈರೀಕ್ಷಿತಶ್ಶಕ್ತಿಮದ್ಭಿಃ ॥೭॥

ಅವತಾರಿಕೆ ॥ ಈ ಶ್ಲೋಕದ ಪೂರ್ವಾರ್ಧದಲ್ಲಿ ನಾಲ್ಕು ಬಾಲಾರಿಷ್ಟ ಯೋಗವೂ, ಉತ್ತರಾರ್ಧದಲ್ಲಿ ಮಾತೃಸಹಿತ ಶಿಶುಮರಣವೂ ಹೇಳಲ್ಪಡುತ್ತೆ.

ಟೀಕು॥ ಕ್ಷೀಣೇ ಶಶಿನಿ-ಕ್ಷೀಣಚಂದ್ರನು, ಲಗ್ನೇ-ಜನ್ಮಲಗ್ನದಲ್ಲಿರುವಾಗ, ರಂಧ್ರಕೇಂದ್ರೇಷು- ಅಷ್ಟಮದಲ್ಲೂ ಕೇಂದ್ರ ಸ್ಥಾನಗಳಲ್ಲೂ, ಪಾಪೈ-ಪಾಪಗ್ರಹಗಳಿದ್ದರೆ ಶಿಶುವಿಗೆ ನಿಧನಂ-ಮರಣ ಉಂಟಾಗುವುದು. ॥೧॥ ನಿಧನಹಿ ಬುಕದ್ಯೂನಯುಕ್ತೇ- ಅಷ್ಟಮ ಚತುರ್ಥ ಸಪ್ತಮ ಸ್ಥಾನಗಳಲ್ಲೊಂದು ಸ್ಥಾನದಲ್ಲಿ, ಚಂದ್ರೇ-ಚಂದ್ರನು, ಪಾಪಾಂತಸ್ಥೇ- ಪಾಪಗ್ರಹ ಮಧ್ಯದಲ್ಲಿದ್ದರೆ, ಅದು ಹೇಗೆಂದರೆ :- ೧ ಪಾಪಗ್ರಹ ಚಂದ್ರನ ದ್ವಿತೀಯದಲ್ಲೂ, ಮತ್ತೊಂದು ಗ್ರಹ ದ್ವಾದಶದಲ್ಲೂ ಇರುವಾಗ ಜನ್ಮಿಸಿದ ಶಿಶುವು ಮರಣ ಹೊಂದುವುದು. ಇಲ್ಲಿ ಚಂದ್ರನು ಅಷ್ಟಮದಲ್ಲಿದ್ದು, ಪಾಪದ್ವಯ ಮಧ್ಯಗತನಾದರೆ ೧ನೇ ಯೋಗ ॥೨॥ ಚಂದ್ರನು ಚತುರ್ಥದಲ್ಲಿದ್ದು, ಪಾಪದ್ವಯ

ಮಧ್ಯದಲ್ಲಿರುವಾಗ ೨ನೇ ಯೋಗ ॥೩॥ ಚಂದ್ರನು ಸಪ್ತಮದಲ್ಲಿದ್ದು ಪಾಪದ್ವಯ ಮಧ್ಯದಲ್ಲಿರುವಾಗ ೩ನೇ ಯೋಗ ॥೪॥ ಈ ಪ್ರಕಾರ ೪ ಅರಿಷ್ಟಯೋಗವು ಹೇಳಲ್ಪಟ್ಟಿರುತ್ತೆ. ಈ ಪ್ರಕಾರವಾಗಿಯೇ, ಲಗ್ನೇ-ಲಗ್ನದಲ್ಲಿ ಚಂದ್ರನು ಪಾಪದ್ವಯ ಮಧ್ಯಗತನಾದ, ಶಕ್ತಿಮದ್ಭಿಃ- ಬಲವಂತನಾದ, ಶುಭೈಃ- ಶುಭಗ್ರಹಗಳಿಂದ, ನವೀಕ್ಷಿತಃ- ನೋಡಲ್ಪಡದೆ, ಮದನಚ್ಛಿದ್ರಸಂಸ್ಥೈಃ- ಸಪ್ತಮಾಷ್ಟಮದಲ್ಲಿ, ಪಾಪೈ-ಪಾಪಗ್ರಹಗಳಿದ್ದರೆ, ಮಾತ್ರಾಸಾರ್ಧಂ- ತಾಯಿ ಸಹಿತ ಶಿಶುವಿನ ಮರಣ ಉಂಟಾಗುವುದು. ಅದು ಹೇಗೆಂದರೆ:- ಚಂದ್ರನು ಬಲವಂತನಾದ ಶುಭಗ್ರಹಗಳಿಂದ ನೋಡಲ್ಪಡದೆ ಪಾಪದ್ವಯ ಮಧ್ಯಗತನಾಗಿ ಜನ್ಮಲಗ್ನದಲ್ಲಿದ್ದು ಪಾಪಗ್ರಹಗಳು ಸಪ್ತಮಾಷ್ಟಮಗಳಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದ ಶಿಶುವು ತಾಯಿ ಸಹಿತ ಮೃತಿ ಹೊಂದುವುದು. ಈ ಮೇಲೆ ಹೇಳಲ್ಪಟ್ಟ ಯೋಗಕರ್ತನಾದ ಚಂದ್ರನು ಶುಭಾಶುಭ ಗ್ರಹಗಳಿಂದ ನೋಡಲ್ಪಡದೆ ಇದ್ದರೆ, ಶಿಶುವಿಗೆ ಮಾತ್ರ ಮರಣ ಉಂಟಾಗಿ ತಾಯಿಗೆ ಮರಣವಿಲ್ಲವೆಂದು ತಿಳಿಯತಕ್ಕದ್ದು. ಇಲ್ಲಿ ಕೆಲವರು ಬಲಯುಕ್ತವಾದ ಶುಭಗ್ರಹಗಳಿಂದ ಈ ಯೋಗಕಾರನಾದ ಚಂದ್ರನು ನೋಡಲ್ಪಟ್ಟರೆ ಶಿಶುವಿಗೂ ತಾಯಿಗೂ ವ್ಯಾಧಿ ಉಂಟಾಗಿ ಮರಣ ಉಂಟಾಗುವುದಿಲ್ಲವೆಂದು ಅನುಭವದಿಂದ ಹೇಳಿರುವರು.

## ರಾಶ್ಯಾಂತ ನವಾಂಶಸ್ಥಿತ ಬಾಲಾರಿಷ್ಟಯೋಗಾಃ

ಮೂಲ॥ ರಾಶ್ಯಂತಗೇ ಸದ್ಭಿರವೀಕ್ಷ್ಯಮಾಣೇ ಚಂದ್ರೇತ್ರಿಕೋಣೋಪಗತೈಶ್ಚ ಪಾಪೈಃ ॥ ಪ್ರಾಣೈಃ ಪ್ರಯಾತ್ಯಾಶು ಶಿಶುರ್ವಿಯೋಗಮಸ್ತೇತು ಪಾಪೈಸ್ತುಹಿನಾಂಶುಲಗ್ನೇ॥೮॥

ಟೀಕು॥ ಪುನಃ ಎರಡು ಅರಿಷ್ಟ ಯೋಗಗಳನ್ನು ಹೇಳುತ್ತಾನೆ. ರಾಶ್ಯಂತಗೆ-ಯಾವ ರಾಶಿಯಲ್ಲಿಯಾದರೂ ಅಂತ್ಯ ನವಾಂಶವಾದ ೯ನೇ ನವಾಂಶವನ್ನು ಹೊಂದಿದ, ಚಂದ್ರೇ-ಚಂದ್ರನು, ಸದ್ಭಿ- ಶುಭಗ್ರಹಗಳಿಂದ, ಅವೀಕ್ಷ್ಯಮಾಣೇಸತಿ-ನೋಡಲ್ಪಡದಿದ್ದರೆ, ತ್ರಿಕೋಣೋಪಗತ್ಯೆ- ಪಂಚಮ ನವಮ ಸ್ಥಾನದಲ್ಲಿ, ಪಾಪೈ-ಪಾಪಗ್ರಹಗಳಿದ್ದರೆ, ಶಿಶುಃ- ಹುಟ್ಟಿದ ಶಿಶುವು, ಅಶು-ವೇಗವಾಗಿ (ಅಂದರೆ ಜಾಗ್ರತೆಯಾಗಿ), ಪ್ರಾಣೈರ್ವಿಯೋಗಂ-ಮರಣವನ್ನು, ಪ್ರಯಾತಿ-ಹೊಂದುವುದು. ಇದು ಒಂದು ಯೋಗ. ತುಹಿನಾಂಶುಲಗ್ನೇ - ಚಂದ್ರನು ಲಗ್ನದಲ್ಲಿದ್ದು, ಅಸ್ತೇ - ಸಪ್ತಮದಲ್ಲಿ, ಪಾಪೇ- ಪಾಪಗ್ರಹಗಳಿದ್ದರೆ, ಆ ಕಾಲದಲ್ಲಿ ಹುಟ್ಟಿದ ಶಿಶುವು ಜಾಗ್ರತೆಯಾಗಿ ಮರಣ ಹೊಂದುವುದು, ಇದು ೨ನೇ ಯೋಗ. ಇಲ್ಲಿ ತುಹಿನಾಂಶು

ಲಗ್ನವೆಂದರೆ ಕರ್ಕಾಟಕ ಲಗ್ನವೆಂದು ಕೆಲವರು ಅರ್ಥ ಮಾಡಿದರು, ಇದು ಯುಕ್ತವಲ್ಲ. ಈ ವಿಷಯಕ್ಕೆ ಲಘುಜಾತದಲ್ಲಿ ।।ಶ್ಲೋಕ।। ಉದಯಗತೋವಾ ಚಂದ್ರಸ್ಸಪ್ತಮ ರಾಶಿಸ್ಥಿತಃಪಾಪೈಃ।।೨೦।। ಎಂದು ಹೇಳಿರುವುದರಿಂದ ಈ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಹೇಳಿರುತ್ತೆ.

## ಚಂದ್ರ-ಸೂರ್ಯ ಗ್ರಹಣ ಜನಿತ ಬಾಲಾರಿಷ್ಟಯೋಗ

ಮೂಲ।। ಅಶುಭಸಹಿತೇಗ್ರಸ್ತೇ ಚಂದ್ರೆ ಕುಜೇ ನಿಧನಾಶ್ರಿತೇ । ಜನಿಸುತ ಯೋರ್ಮೃತ್ಯುರ್ಲಗ್ನೇ ರವೌತುಸಶಸ್ತ್ರಜಃ ।। ಉದಯಶಿರವೌ ಶೀತಾಂಶೌವಾ ತ್ರಿಕೋಣವಿನಾಶಗೈರ್ನಿಧನಮಶುಭೈ ರ್ವಿರ್ಯೋಪೇತೈ ಶ್ಶುಭೈರ್ನಯುತೇಕ್ಷತೇ ।।೯।।

ಟೀ।। ತಾಯಿಗೂ ಮಗುವಿಗೂ ಕೂಡ ಮರಣ ಸಂಭವಿಸುವ ಯೋಗವು ಹೇಳಲ್ಪಡುತ್ತೆ. ಅಶುಭಸಹಿತೇ- ಪಾಪಗ್ರಹದೊಡಗೂಡಿದ, ಚಂದ್ರೇ - ಚಂದ್ರನು, ಲಗ್ನೇ- ಲಗ್ನದಲ್ಲಿ, ಗ್ರಸ್ತೇ- ರಾಹುಗ್ರಸ್ತನಾಗಿರುವಾಗ, ಕುಜೇ- ಅಂಗಾರಕನು, ನಿಧಾನಸ್ರಿತೇ- ಅಷ್ಟಮ ಭಾವದಲ್ಲಿದ್ದರೆ, ಜನನಿಸುತಯೋಃ-ತಾಯಿಗೂ ಶಿಶುವಿಗೂ, ಮೃತ್ಯುಃ- ಮರಣ ಉಂಟಾಗುವುದು. ಇದು ಚಂದ್ರಗ್ರಹಣಜನಿತ ಅರಿಷ್ಟ. ದವೌತು - ಸೂರ್ಯನು, ಜನ್ಮಲಗ್ನದಲ್ಲಿದ್ದು ಮೇಲೆ ಹೇಳಿದ ಪ್ರಕಾರ ಗ್ರಹಗಳಿದ್ದರೆ, ಸೂರ್ಯಗ್ರಹಣ ಜನಿತ ಬಾಲಾರಿಷ್ಟಯೋಗ. ಇದರಲ್ಲಿ ವಿಶೇಷವೇನೆಂದರೆಃ- ಅಶುಭಗ್ರಹವೆಂದರೆ ಶನಿ ಯಿಂದ ಸೂರ್ಯನು ಲಗ್ನದಲ್ಲಿ ರಾಹುಗ್ರಸ್ತನಾಗಿದ್ದು ಅಷ್ಟಮದಲ್ಲಿ ಕುಜನಿದ್ದರೆ, ಜನನಿ ಸುತಯೋಃ- ತಾಯಿಗೂ ಮಗುವಿಗೂ ಸಹ, ಶಸ್ತ್ರಜಃ- ಶಸ್ತ್ರಚಿಕಿತ್ಸೆಯಿಂದ ಉಂಟಾದ, ಮೃತ್ಯುಃ- ಮರಣ ಉಂಟಾಗುವುದು. ಇದು ಸೂರ್ಯಗ್ರಹಣ ಬಾಲಾರಿಷ್ಟ ಸಹಿತ ಮಾತ್ರ ಮೃತ್ಯುಯೋಗವು. ಅಶುಭಸಹಿತೇ ಎಂದು ಹೇಳುವಾಗ ಚಂದ್ರಗ್ರಹಣ ಕಾಲದಲ್ಲಿ ಲಗ್ನಗತನಾದ ಚಂದ್ರನಿಗೆ ಸೂರ್ಯನು ಇರಕೂಡದು, ಬುಧನು ಇರಕೂಡದು, ಬುಧನು ಪಾಪಗ್ರಹನಾಗುವನು. ಆದ್ದರಿಂದ ಇಲ್ಲಿ ಸೂರ್ಯ ಬುಧರನ್ನು ಬಿಟ್ಟು ಶನಿಯನ್ನೇ ನಿರ್ದೇಶಿಸಬೇಕಾಯಿತು. ಅಂಗಾರಕನು ಅಷ್ಟಮದಲ್ಲಿರಬೇಕಾದ್ದರಿಂದ ಅಶುಭಸಹಿತೇ ಎಂಬುವ ಪದಕ್ಕೆ ಶನಿಯೆಂದೇ ಅರ್ಥ ಮಾಡಬೇಕಾಯಿತು.

ಸೂರ್ಯಗ್ರಹಣ ಜನಿತ
ಶಸ್ತ್ರಕೃತಮಾತ್ರಾಸಹ ಮೃತ್ಯುಯೋಗ)

| | | | |
|---|---|---|---|
| | ರಾಹು ಚಂದ್ರ | ಕುಜ | |
| | ಈ ಕುಂಡಲಿ ನೋಡಿದರೆ | | |
| | ಸ್ಪಷ್ಟ ವಾಗುತ್ತೆ | | ಗುರು |
| | ಶುಕ್ರ | ಲಗ್ನ ಕೇ ರಶ | ಬುಧ |

ಚಂದ್ರಗ್ರಹಣ ಜನಿತ
(ಮಾತ್ರಾಸಹ ಮೃತ್ಯುಯೋಗ

| | | | |
|---|---|---|---|
| ಕುಜ ಶುಕ್ರ | ಗುರು | | |
| ರವಿ ರಾಹು | ಈ ಕುಂಡಲಿ ನೋಡಿದರೆ | | |
| ಬುಧ | ಸ್ಪಷ್ಟ ವಾಗುತ್ತೆ | | ಚಂ ಶ ಕೇ. ಲ |
| | | | |

ವೀರ್ಯೋಪೇತ್ಯೈ:- ಬಲಯುಕ್ತರಾದ, ಶುಭೈ - ಶುಭ ಗ್ರಹಗಳಿಂದ, ಆಯುತೇ ಕ್ಷಿತೇ- ಕೂಡದೆಯೂ, ನೋಡಲ್ಪಡದೆಯೂ ಇರುವ, ರವೌ- ಸೂರ್ಯನಾಗಲೀ, ಶೀತಾಂ ಶೌವಾ- ಚಂದ್ರನಾಗಲೀ, ಉದಯತಿಸತಿ- ಲಗ್ನದಲ್ಲಿರುವಾಗ, ತ್ರಿಕೋಣವಿನಾಶಗೈ:- ನವಮ ಪಂಚಮ ಅಷ್ಟಮ ಸ್ಥಾನಗಳನ್ನು ಹೊಂದಿರುವ, ಅಶುಭೈ:- ಪಾಪಗ್ರಹಗಳಿಂದ, ನಿಧನಂ- ಮರಣ ಉಂಟಾಗುವುದು. ಶುಭಗ್ರಹಗಳಿಂದ ನೋಡಲ್ಪಡದ ಮತ್ತು ಕೂಡಲ್ಪಡದ ಚಂದ್ರನಾಗಲೀ, ಸೂರ್ಯನಾಗಲೀ, ಲಗ್ನದಲ್ಲಿದ್ದು, ೫-೮-೯ನೇ ಸ್ಥಾನಗಳಲ್ಲಿ ಪಾಪಗ್ರಹಗಳು, ಕುಜ, ಶನಿ, ಮೊದಲಾದವರು ಇದ್ದರೆ ಶಿಶುವಿಗೆ, ನಿಧನಂ- ಮರಣ ಉಂಟಾಗುವುದು. ಈ ವಿಷಯಕ್ಕೆ ಶ್ಲೋಕ ।।ಪರಾಶರಃ।। ಪಾಪಾಸ್ತ್ರೀಕೋಣಾಷ್ಟಮಗಾ-ವಿಸೌಮ್ಯಾಶ್ಚಂದ್ರೇತನೌಭಾಸ್ವತಿವಾಕ್ಷಯಾಯ ।।೨।। ಎಂದು ಹೇಳಲ್ಪಟ್ಟಿರುತ್ತೆ. ಈ ಯೋಗ ಪ್ರಕಾರ ಲಗ್ನದಲ್ಲಿದ್ದ ಸೂರ್ಯನು ಅಥವಾ ಚಂದ್ರನು ಬಲವಚ್ಛುಭ ಗ್ರಹವನ್ನು ನೋಡಿದರೂ ಅಥವಾ ಅಂಥಾ ಸೂರ್ಯ ಚಂದ್ರರು ಬಲಿಷ್ಠ ಶುಭಗ್ರಹ ವೀಕ್ಷಿತರಾಗಿದ್ದರೂ ಅರಿಷ್ಟವಿಲ್ಲವೆಂದು ಅಭಿಪ್ರಾಯ ಉಂಟಾಗುತ್ತದೆ.

| | | | |
|---|---|---|---|
| ರಾ | | | ಬುಧ |
| ಶನಿ | | | ರವಿ ಲಗ್ನ |
| | | | ಚಂದ್ರ |
| | ಕುಜ | | ಕೇತು |

ಉದಾಹರಣೆ :- ಈ ಕುಂಡಲಿಯಲ್ಲಿ ರವಿ ಲಗ್ನದಲ್ಲಿ, ಅಷ್ಟಮದಲ್ಲಿ ಶನಿ, ನವಮದಲ್ಲಿ ರಾಹು, ಪಂಚಮದಲ್ಲಿ ಕುಜ, ಇವರು ಇರಬೇಕಾದ್ದು ಆಗುತ್ತೆ. ಈ ಯೋಗವಿದ್ದರೆ ಬಾಲಾರಿಷ್ಟಯೋಗ.

ಮೂಲ॥ ಅಸಿತರವಿಶಶಾಂಕ ಭೂಮಿಜೈರ್ವ್ಯಯನವಮೋದಯ ನೈಧನಾಶ್ರಿತೈಃ॥ ಭವತಿ ಮರಣಮಾಶು ದೇಹಿನಾಂ ಯದಿಬಲಿನಾ ಗುರುಣಾ ನವೀಕ್ಷಿತಾಃ ॥೧೦॥

ಟೀಕು॥ ಮತ್ತೊಂದು ವಿಧವಾದ ಬಾಲಾರಿಷ್ಟ ಯೋಗವು ಹೇಳಲ್ಪಡುತ್ತೆ. ವ್ಯಯನವಮೋದಯ ನೈಧನಾಶ್ರಿತೈಃ-ದ್ವಾದಶ, ನವಮ, ಉದಯ, ಅಷ್ಟಮ ಸ್ಥಾನಗಳನ್ನು ಹೊಂದಿರುವ ಅಸಿತರವಿಶಶಾಂಕ ಭೂಮಿತನಯೈಃ- (ಭೂಮಿಜೈಃ) (ಪಕ್ಷಾಂತರ ಪಾಠವಿರುವುದು) ಶನಿ, ಸೂರ್ಯ, ಚಂದ್ರ, ಕುಜರಿಂದ, ನಿಧನಂ-ಮರಣವು, ಭವತಿ-ಉಂಟಾಗುವುದು, ಅಂದರೆ-ಲಗ್ನಕ್ಕೆ ದ್ವಾದಶದಲ್ಲಿ ಶನಿ, ನವಮದಲ್ಲಿ ಸೂರ್ಯ, ಲಗ್ನದಲ್ಲಿ ಚಂದ್ರ, ಅಷ್ಟಮದಲ್ಲಿ ಕುಜನು, ಈ ಪ್ರಕಾರದಲ್ಲಿ ಗ್ರಹಗಳಿದ್ದು ಈ ನಾಲ್ಕು ಗ್ರಹಗಳನ್ನು, ಬಲಿನಾ-ಬಲಯುಕ್ತನಾದ, ಗರುಣಾ-ಬೃಹಸ್ಪತಿಯಿಂದ, ನವೀಕ್ಷಿತಾಯದಿ-ನೋಡಲ್ಪಡದಿದ್ದರೆ, ದೇಹಿನಾಂ- ದೇಹಧಾರಿಯಾದ ಶಿಶುವಿಗೆ, ಆಶು-ವೇಗವಾಗಿ, ನಿಧನಂ-ಮರಣವು, ಭವತಿ-ಉಂಟಾಗುತ್ತದೆ. ಈ ಹೇಳಲ್ಪಟ್ಟ ಯೋಗಕ್ಕೆ ಗುರು ಬಲವಂತನಾಗಿದ್ದು, ಈ ಯೋಗಕರ್ತನು ಶನ್ಯಾದಿಗಳಲ್ಲಿ ಕೆಲವರನ್ನು ನೋಡಿ, ಕೆಲವರನ್ನು ನೋಡಿದಿದ್ದರೆ ಆ ಶಿಶುವಿಗೆ ಸ್ವಲ್ಪಕಾಲ ಕಳೆದನಂತರ ಅರಿಷ್ಟವುಂಟಾಗುವುದು. ಗುರು ಪಂಚಮದಲ್ಲಿದ್ದು, ಯೋಗಕರ್ತನು ಶನ್ಯಾದಿಗಳಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದ ಶಿಶುವಿಗೆ ಅರಿಷ್ಟವಿಲ್ಲವೆಂದು ತಿಳಿಯತಕ್ಕದ್ದು.

## ಪುನಃ ೬ ಬಾಲಾರಿಷ್ಟ ಯೋಗಗಳು

ಮೂಲ॥ ಸುತಮದನ ನವಾಂತ್ಯಲಗ್ನರಂಧ್ರೇಷ್ವಶುಭಯುತೋ ಮರಣಾಯ ಶೀತರಶ್ಮಿಃ ॥ ಭೃಗುಸುತ ಶಿವಪುತ್ರ, ದೇವಪೂಜ್ಯೈರ್ಯದಿಬಲಿಭಿರ್ನ ಯುತೋವಲೋಕಿತೋವಾ ॥೧೧॥

ಟೀಕು॥ ಪುನಃ ಆರು ಬಾಲಾರಿಷ್ಟಯೋಗ ಹೇಳಲ್ಪಡುತ್ತೆ. ಅಶುಭಯುತಃ-ಪಾಪಗ್ರಹಗಳನ್ನೊಳಗೂಡಿದ, ಶೀತರಶ್ಮಿ-ಕ್ಷೀಣಚಂದ್ರನು, ಸುತ ಮದನ ನವಾಂತ್ಯ ಲಗ್ನರಂಧ್ರೇಷು-ಪಂಚಮ, ಸಪ್ತಮ, ನವಮ, ದ್ವಾದಶಲಗ್ನ ಅಷ್ಟಮಸ್ಥಾನದಲ್ಲಿದ್ದು, ಭೃಗುಸುತಶಶಿ ಪುತ್ರದೇವ ಪೂಜ್ಯೈ-ಶುಕ್ರ, ಬುಧ, ಗುರುಗಳಲ್ಲಿ ಯಾವ ಗ್ರಹವಾದರೂ, ಯುತಃ-ಕೂಡಿದರೂ, ಅವಲೋಕಿತೋವಾ-ಈ ಶುಕ್ರ ಬುಧ ಗುರುಗಳ ದೃಷ್ಟಿ, ನಯದಿ-ಇಲ್ಲದಿದ್ದರೆ, ಮರಣಾಯ-ಮರಣವು, ಭವತಿ-ಉಂಟಾಗುವುದು. ಇಲ್ಲಿ ಹೇಳಲ್ಪಟ್ಟ ವಿಶೇಷದಿಂದೊಡಗೂಡಗೂಡಿದ ಚಂದ್ರನು ಪಂಚಮದಲ್ಲಿದ್ದರೆ ೧ನೇ ಯೋಗ. ಸಪ್ತಮದಲ್ಲಿದ್ದರೆ ೨ನೇ ಯೋಗ. ನವಮದಲ್ಲಿದ್ದರೆ

೩ನೇ ಯೋಗ. ದ್ವಾದಶದಲ್ಲಿದ್ದರೆ ೪ನೇ ಯೋಗ. ಲಗ್ನದಲ್ಲಿದ್ದರೆ ೫ನೇ ಯೋಗ. ಅಷ್ಟಮದಲ್ಲಿದ್ದರೆ ೬ನೇ ಯೋಗ. ಈ ಪ್ರಕಾರ ೬ ಯೋಗಗಳಿರುತ್ತೆ. ಈ ಮೇಲೆ ಹೇಳಲ್ಪಟ್ಟ ೬ ಯೋಗಗಳಲ್ಲಿ ಈ ಯೋಗ ಕರ್ತನಾದ ಕ್ಷೀಣಚಂದ್ರನಿಗೆ ಶುಕ್ರ, ಬುಧ, ಗುರುಗಳಲ್ಲಿ ಬಲಯುಕ್ತವಾದ ಒಂದು ಗ್ರಹದ ಸಂಯೋಗವಾಗಲೀ, ವೀಕ್ಷಣೆಯಾಗಲೀ ಇದ್ದರೆ ಬಾಲಾರಿಷ್ಟವಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯಕ್ಕೆ ಸಾರಾವಳಿಯಲ್ಲಿ ।।ಶ್ಲೋಕ।। ನಿಧನಾಸ್ತ ವ್ಯಯಲಗ್ನ ತ್ರಿಕೋಣಗಾಃ ಕ್ಷೀಣಚಂದ್ರ ಸಂಯುಕ್ತಾಃ ।। ಪಾಪಾಬಲಿಶ್ಶುಭ ದೈರದೃಶ್ಯಮಾನಾ ಗತಾಯುಷಂ ಕುರ್ಯುಃ ।।೨೩।। ಎಂದುಕ್ತವಾಗಿರುವುದರಿಂದ, ಶೀತರಶ್ಮಿಃ ಎಂಬುವ ಕಡೆಗೆ ಕ್ಷೀಣಚಂದ್ರನೆಂದು ಅರ್ಥಮಾಡಿಕೊಳ್ಳತಕ್ಕದ್ದು. (ಸಾಧಾರಣವಾಗಿ ಶೀತರಶ್ಮಿ ಎಂಬುವ ಪದದಿಂದ ಚಂದ್ರನೆಂದು ಅರ್ಥ ಸ್ಪಷ್ಟವಾಗುತ್ತೆ. ಆದರೆ ಈ ವ್ಯಾಖ್ಯಾನದಲ್ಲಿ ಶೀತರಶ್ಮಿ ಎಂಬುವ ಪದಕ್ಕೆ ಕ್ಷೀಣ ಚಂದ್ರನೆಂದು ಇಲ್ಲಿ ಪ್ರಯೋಗವಾಗಿದೆ.)

## ಸದ್ಯೋ ಮರಣಯೋಗಾಃ

।।ಅಧಿಕಪಾಠ ಶ್ಲೋಕ।।

ಮೂಲ।। ಭೌಮೇ ವಿಲಗ್ನೇ ಶುಭದೈರದೃಷ್ಟೇ ಷಷ್ಠೇಷ್ಟಮೇವಾರ್ಕ ಸುತೇನ ಯುಕ್ತೇ ।। ತಾವಸ್ತ ಸಂಸ್ಥೌ ಶುಭದೃಷ್ಟಿಹೀನೌ ಜಾತಸ್ಯಸರ್ವಃ ಕುರುತೇ ಪ್ರಣಾಶಂ ।।೧೨।।

ಟೀಕು।। ಈ ಶ್ಲೋಕವು ವರಾಹಮಿಹಿರಾಚಾರ್ಯನು ಬರೆದ ಮೂಲ ಗ್ರಂಥದಲ್ಲಿ ಇಲ್ಲ. ಆದರೆ ಅನೇಕ ಪುಸ್ತಕಗಳಲ್ಲಿ ಈ ಶ್ಲೋಕವಿರುವುದರಿಂದ ಇದಕ್ಕೂ ಟೀಕಾ ಬರೆದಿರುತ್ತೆ. ವಿಲಗ್ನೇ-ಜನ್ಮಲಗ್ನದಲ್ಲಿ, ಭೌಮೇ-ಅಂಗಾರಕನಿದ್ದು, ಶುಭದೈರದೃಷ್ಟೇ-ಶುಭಗ್ರಹಗಳಿಂದ ನೋಡಲ್ಪಡದಿದ್ದರೂ, ವಾ - ಅಥವಾ - ಷಷ್ಠೇಷ್ಟಮೇ-ಷಷ್ಠದಲ್ಲಾಗಲೀ ಅಷ್ಟಮದಲ್ಲಾಗಲೀ, ಅರ್ಕಸುತೇನಯುಕ್ತೇ-ಶನಿಯೊಡನೆ ಅಂಗಾರಕನಿದ್ದರೂ, ತೌ-ಅಂಗಾರಕ ಶನಿಗಳು, ಅಸ್ತಸಂಸ್ಥೌ-ಸಪ್ತಮದಲ್ಲಿದ್ದು, ಶುಭದೃಷ್ಟಿಹೀನೌ- ಶುಭಗ್ರಹಗಳಿಂದ ನೋಡಲ್ಪಡದೆ ಇದ್ದರೆ ತಸ್ಯ-ಆ ಕಾಲದಲ್ಲಿ ಹುಟ್ಟಿದ ಶಿಶುವಿಗೆ, ಸದ್ಯಃ-ಹುಟ್ಟಿದ ಕ್ಷಣದಲ್ಲಿ, ಪ್ರಣಾಶಂ-ಮರಣವನ್ನು, ಕುರುತೇ-ಉಂಟುಮಾಡುತ್ತಾರೆ. ।।೧೨।।ತಾ।। ಲಗ್ನದಲ್ಲಾಗಲೀ, ನಿಧನ ಸ್ಥಾನದಲ್ಲಾಗಲೀ, ಶನ್ಯಂಗಾರಕರಿದ್ದು ಅಥವಾ ಸಪ್ತಮ ಸ್ಥಾನದಲ್ಲಿದ್ದರೂ ಶುಭಗ್ರಹ ಗಳಾದ ಗುರು, ಶುಕ್ರ, ಶುದ್ಧಬುಧ, ಪೂರ್ಣಚಂದ್ರ ಇವರಲ್ಲಿ ಯಾರಾದರೂ ಒಂದೆರಡು ಗ್ರಹಗಳಿಂದಾದರೂ ನೋಡಲ್ಪಡದಿದ್ದರೆ, ಜಾಗ್ರತೆಯಾಗಿ

ಮರಣವಾಗುವುದು. ಈ ಮೇಲೆ ಹೇಳಿದ ಪ್ರಕಾರ ಶುಭಗ್ರಹಗಳ ದೃಷ್ಟಿ ಇದ್ದರೆ, ಬಾಲಾರಿಷ್ಟವಿಲ್ಲ. ಈ ಪ್ರಕಾರ ಲಗ್ನದಿಂದ ೧೨, ಸಪ್ತಮದಿಂದ ೧೨, ಅಷ್ಟಮ ದಿಂದ ೧೨, ಅಂತು ೩೬ ಯೋಗಗಳಾಗುತ್ತವೆ.

## ಅರಿಷ್ಟಯೋಗೇ ಕಾಲನಿರ್ಣಯಃ

ಮೂಲ।। ಯೋಗೇಸ್ಥಾನಂಗತವತಿಬಲಿನಶ್ಚಂದ್ರೇಸ್ವಂವಾಂತನುಗೃಹಮಥವಾ ।।
ಪಾಪೈರ್ದೃಷ್ಟೇ ಬಲವತಿಮರಣಂ ವರ್ಷಸ್ಯಾಂತೇ ಕಿಲಮುನಿಗದಿತಂ।।

ಅವತಾರಿಕೆ।। ಈ ಮೇಲೆ ಹೇಳಲ್ಪಟ್ಟ ಅರಿಷ್ಟಯೋಗಗಳಿಗೆ ಕಾಲನಿರ್ಣಯವನ್ನು ಹೇಳದಿರುವುದರಿಂದ ಆ ಶಿಶುವು ಎಷ್ಟು ಕಾಲ ಬದುಕುವದೆಂಬುವುದು ಚಂದ್ರವಿಚಾರದಿಂದ ಹೇಳಲ್ಪಡುತ್ತೆ.

ಟೀಕು।। ಯೋಗೇ-ಈ ಮೇಲೆ ಹೇಳಲಟ್ಟ ಯೋಗಗಳಲ್ಲಿ ಒಂದು ಯೋಗದಲ್ಲಿ, ಬಲಿನಃ-ಅರಿಷ್ಟಯೋಗ ಕರ್ತೃಗ್ರಹಗಳಲ್ಲಿ ಬಲಾಧಿಕವಾದ ಒಂದು ಗ್ರಹದ, ಸ್ಥಾನಂ-ಸ್ಥಾನವನ್ನು, ವರ್ಷಸ್ಯಾಂತೇ-ಒಂದು ಸಂವತ್ಸರದ ದೊಳಗೆ, ಪಾಪೈ-ಅನೇಕ ಪಾಪಗ್ರಹಗಳಿಂದ, ದೃಷ್ಟೇ-ನೋಡಲ್ಪಟ್ಟು, ಬಲವತಿ-ಬಲಿಷ್ಠನಾದ, ಚಂದ್ರೇ-ಚಂದ್ರನು, ಗತವತಿ-ಹೊಂದಲಿಕ್ಕಾಗಿ, ಮರಣಂ-ಬಾಲಾರಿಷ್ಟವು, ಮುನಿಗದಿತಂ-ಋಷಿಗಳಿಂದ ಹೇಳಲ್ಪಡುತ್ತೆ. (ಪಾಪದೃಷ್ಟನಾದ ಬಲವಂತನಾದ ಚಂದ್ರನು) ಸ್ವಂವಾ-ಜನ್ಮ ಕಾಲದಲ್ಲಿ ತಾನಿರುವ ರಾಶಿಯಿಂದ ಅಥವಾ, ತನುಗೃಹಂ-ಜನ್ಮಲಗ್ನ ರಾಶಿಯನ್ನು ಹೊಂದುವಾಗ ಬಾಲಾರಿಷ್ಟ ಉಂಟಾಗುವುದು. ಅಂದರೆ, ಅರಿಷ್ಟಯೋಗ ಕರ್ತೃಗ್ರಹಗಳಲ್ಲಿ ಬಲಯುಕ್ತ ಗ್ರಹ ಜನ್ಮ ಕಾಲದಲ್ಲಿ ಯಾವ ರಾಶಿಯಲ್ಲಿದ್ದನೋ ಆ ರಾಶಿಗೆ ಚಂದ್ರನು ಬಂದು ಬಹು ಪಾಪಗ್ರಹ ದೃಷ್ಟನಾಗಿ ಬಲವಂತನಾಗಿ ಒಂದು ಸಂವತ್ಸರದೊಳಗೆ ಯಾವಾಗ ಹೊಂದುವನೋ ಆ ಸಮಯದಲ್ಲಾಗಲೀ, ಚಂದ್ರನು ಜನ್ಮಕಾಲದಲ್ಲಿ ತಾನಿರುವ ರಾಶಿಯಲ್ಲಿ ಬಹು ಪಾಪಗ್ರಹ ದೃಷ್ಟನಾಗಿ ಬಲವಂತನಾಗಿರುವಾಗ ಒಂದು ಸಂವತ್ಸರದೊಳಗೆ ಯಾವಾಗ ಹೊಂದುತ್ತಾನೊ ಆ ಸಮಯದಲ್ಲಾಗಲೀ, ಜನ್ಮಲಗ್ನರಾಶಿಗೆ ಉಕ್ತವಾದ ವಿಶೇಷಗಳೇನೆಂದರೆ :- ಬಹು ಪಾಪಗ್ರಹಗಳು ನೋಡುವಾಗ ಚಂದ್ರನು ಯಾವಾಗ ಹೊಂದುತ್ತಾನೋ ಆ ಸಮಯದಲ್ಲಾಗಲೀ ಶಿಶುವಿಗೆ ಮರಣ ಉಂಟಾಗುವುದು. ಈ ಅರ್ಥದಲ್ಲಿ ।।ಶ್ಲೋಕ।। ಬಲಿಗ್ರಹಸ್ಥಾನಗತೇ ಶಶಾಂಕೇ ಜನ್ಮಾಗತೇವಾ ತನುಮಾಗತೇವಾ।। ಸಮಗ್ರವೀರ್ಯೇ ಬಹುಪಾಪದೃಷ್ಟೇ ವರ್ಷಾತ್ಪುರಾಮೃತ್ಯುರನುಕ್ತಾಲೇ ।।೨೪।। ಎಂದು ಪರಾಶರ ಪ್ರಮಾಣ ವಚನವಿರುತ್ತೆ. ಇಲ್ಲಿ ಒಂದು ಸಂವತ್ಸರದ

ಒಳಗೆ ಅರಿಷ್ಟ ಉಂಟಾಗುವುದೆಂದು ಹೇಳಿರುತ್ತೆ. ಆದರೆ ಮಾಸ ದಿವಸಾದಿ ಕಾಲವನ್ನು ಸ್ಪಷ್ಟವಾಗಿ ಹೇಳಲಿಲ್ಲ. ಆದ್ದರಿಂದ ಬಲವದ್ಗ್ರಹವಶವಾಗಿ 'ಅಯನ ಕ್ಷಣವಾಸರ ಋತು' ಇತ್ಯಾದಿ ಶ್ಲೋಕೋಕ್ತ ಪ್ರಕಾರವಾಗಿ ದಿವಸಾದಿ ಕಾಲವನ್ನು ತಿಳಿಯಬೇಕು. ಈ ಪ್ರಕರಣದಲ್ಲಿ ಹೇಳಲ್ಪಟ್ಟ ಮಾತ್ರಾದ್ಯರಿಷ್ಟಗಳು ತಿಳಿಯುವುದಕ್ಕೆ ಅನುಕ್ತಮನ್ಯತೋ ಗ್ರಾಹ್ಯವೆಂಬುವ ವಚನಕ್ಕನುಸಾರವಾಗಿ ಇಲ್ಲಿ ಉದಹರಿಸಿರುತ್ತೆ. ಈ ಅರಿಷ್ಟಗಳು ಜನ್ಮಕಾಲ ದ್ರೇಕ್ಕಾಣದಿಂದಲೂ, ಚಂದ್ರಾಕ್ರಾಂತ ನಕ್ಷತ್ರದಿಂದಲೂ, ಚಂದ್ರಾಕಾಂತ ನವಾಂಶಗಳಿಂದಲೂ, ಜನ್ಮಕಾಲ ಗ್ರಹಗಳಿಂದಲೂ (ಈ ನಾಲ್ಕು ಪ್ರಕಾರಗಳಿಂದ) ಸಂಭವಿಸುತ್ತದೆ. ಇದಕ್ಕೆ ಪರಾಶರ ಸಂಹಿತೆಯಲ್ಲಿ -॥ಶ್ಲೋ॥ ಲಗ್ನೇದೃಗಾಣಾನಿಗಳಾಹಿ ಪಕ್ಷಿಪಾಶಾನ್ವಿತಾ ಸ್ವಾಮಿಭಿರಪ್ಯ ದೃಷ್ಟಾಃ ॥ ಕ್ರೂರಾಶ್ರಿತಾಮೃತ್ಯುಕರಾಃ ಪ್ರಸೂತೌ ಸಂವತ್ಸರೈಸ್ಸಪ್ತರೇವ ಸತ್ಯಂ ॥೨೫॥ ಇತ್ಯಾದಿ ವಚನಗಳಿಂದ ದ್ರೇಕ್ಕಾಣರಿಷ್ಟವನ್ನು ತಿಳಿಯತಕ್ಕದ್ದು. ॥ಶ್ಲೋಕ॥ ಅಭುಕ್ತಮೂಲ ಸಂಭವಂ ಪರಿತ್ಯಜೇಚ್ಚಬಾಲಕಂ । ಸಮಾಷ್ಟಕಂ ಪಿತಾತಥಾ ತನ್ಮುಖಂ ವಿಲೋಕಯೇತ್ ॥೨೬॥ ತದಾದ್ಯಪಾದಕೇಪಿತಾ ಜನನ್ಯಧೋ ದ್ವಿತೀಯಕೇ ॥ ಧನಕ್ಷಯಸ್ತೃತೀಯಕೇ ಚತುರ್ಥಕೇ ಶುಭಾವಹಃ ॥೨೭॥ ಪ್ರತೀಪಮಂತ್ಯಪಾದತಃ ಫಲಂತದೇವ ಸಾರ್ಪಭೇ॥ ತದುಕ್ತದೋಷ ಶಾಂತಯೇ ವಿಧೇಯ ಮತ್ರಶಾಂತಿಕಂ ॥೨೮॥ ಪಿತೃಜನನ್ನಿ ಯೇಜಾತಾಃತೇ ಹನ್ಯುಕ್ಷ್ತತಥಾ ಪಿತೄರ್ ॥ ಮಾತೃಜನ್ನಿಯಾಜಾತಾ ಮಾತ್ರ್ಯಾಣಾಂ ಘಾತುಕಾಃ ಸ್ತ್ರಿಯಃ ॥೨೯॥ ಪುಷ್ಯೇ ಕರ್ಕಾಟಕೇ ಜಾತೋ ಜಲೇಶೇಪಿತೃ ಮೃತ್ಯುಕೃತ್ ॥ ಪುತ್ರೋಜಾತೋ ಯದಿಸ್ತ್ರೀಚೇ ನ್ಮಾತರಂಚ ಜಿಘಾಂಸತಿ ॥೩೦॥ ತ್ವಾಷ್ಟ್ರೇಚ ತಿಷ್ಯೇಚ ತಥೈವ ತೋಯೇ ಕನ್ಯಾಕುಳೀರೋದಯ ಚಾಪಲಗ್ನೇ ॥ ಶುಭಗ್ರಹಃ ಪಶ್ಯತಿ ಚೇನ್ನ ಹನ್ಯಾ ತ್ರಿತ್ರ್ಯಂಶ್ಚಮಾತೃಶ್ಚಸುತಂಚ ಮಾತುಲಂ ॥೩೧॥ ಚಾಪೇ ಕರ್ಕಟ ಕೇಚ ಷಷ್ಠಭವನೇ ಸಿಂಹಾಂಶಕಸ್ಥೇವಿಧೌ । ತಾತೋಂಬಾವನಿ ತಾಂಶಕೇಚ ಪೃಥುಕೋ ಜೂಕಾಂಶಕೇಮಾತುಲಃ ॥ ಕೌರ್ಪ್ಯಂಶೋಪ ಗತೇಸಮೇತಿ ಮರಣಂ ಕೇಚಿತ್ತು ಲಾಳ್ಯಂಶಕೇ ॥ ಪ್ರೋಕ್ತಾಂಶಂ ಶುಭಮಾಹುರುಕ್ತಭವನೇಷ್ವೇವಂ ವಿನಾಶಂ ಕ್ರಮಾತ್ ॥೩೨॥ ಇತ್ಯಾದಿ ವಚನಪ್ರಕಾರ ನಕ್ಷತ್ರಾರಿಷ್ಟ ಚಂದ್ರಾದಿಷ್ಠಿತ ನವಾಂಶಾರಿಷ್ಟಗಳನ್ನು ತಿಳಿಯತಕ್ಕದ್ದು. ಸಪ್ತಾಷ್ಟಲಗ್ನವ್ಯಯಗೇ ಶಶಾಂಕೇ ಕ್ರೂರೇಣಯುಕ್ತೇ ಶುಭದೃಷ್ಟಿಹೀನೇ ॥ ಸೌಮ್ಯೈರ್ವಿಹೀನೇಷುಚ ಕಂಟಕೇಷು ಕೃತಾಂತದಂಷ್ಟ್ರಾಂತರಗಃ ಪ್ರಸೂತಃ ॥೩೩॥ ತಾತಾಂಬಿಕಾ ಸೋದರಮಾತುಲಾಶ್ಚ ಮಾತಾಮಹಸ್ತ ತ್ಸದೃಶಶ್ಚಸೂನಂಃ ॥ ಸೂರ್ಯಾದಿ ಖೇಟಾಃ ಕ್ರಮಶಃ ಪ್ರದಿಷ್ಟಾ ಸ್ತ್ರಿ ಕೋಣಗಾಸ್ತೇ ಪಿಚತಂನಿಹನ್ಯುಃ ॥೩೪॥ ಇತ್ಯಾದಿ ವಚನ ಪ್ರಕಾರ ಮಾತ್ರಾದಿಬಂಧ್ವರಿಷ್ಟಗಳನ್ನು ತಿಳಿಯತಕ್ಕದ್ದು. ಮತ್ತು ಚಂದ್ರ ನಕ್ಷತ್ರ

ಪಾದಮೂಲವಾಗಿ ಬಂಧ್ವಾದಿ ಅರಿಷ್ಟಯೋಗಗಳು- ॥ಶ್ಲೋಕ॥ ಚಂದ್ರ ನಕ್ಷತ್ರ ಪಾದಾಭ್ಯಾಂ ಜನ್ಮ ಕಾಲೇಗ್ರಹಸ್ಥಿತೇಃ ॥ ಲಗ್ನದ್ರೇಕ್ಕಾಣ ಭಾಗೈಶ್ಚ ಬಂಧುಗಂಡಾನುದೀರಯೇತ್ ॥ ಚಂದ್ರನು ಇರುವ ನಕ್ಷತ್ರ ನವಾಂಶ ಜನ್ಮಕಾಲ ಗ್ರಹಗಳಚಾರ, ಲಗ್ನಗತದ್ರೇಕ್ಕಾಣ, ಈ ನಾಲ್ಕು ವಿಧವಾಗಿ ಬಂಧರಿಷ್ಟವು ಹೇಳಲ್ಪಡತಕ್ಕದ್ದು.

## ಬಾಲಾರಿಷ್ಟ ಭಂಗಯೋಗಾಃ

ಅವತಾರಿಕೆ॥ ಬಾಲಾರಿಷ್ಟ ಪ್ರಕರಣದಲ್ಲಿ ಹೇಳಿರುವ ಅರಿಷ್ಟಯೋಗಗಳು ಅನೇಕರೀತಿ ಉಂಟಾಗುತ್ತವೆ. ಆದರೆ ಈ ಯೋಗಗಳಲ್ಲಿ ಹುಟ್ಟಿದವರನೇಕರು ಜೀವಿಸಿರುವರು. ಈ ವಿಷಯದಲ್ಲಿ ನಾರದ ಪರಾಶರಾದಿ ಋಷಿಗಳ ಮತವನ್ನನುಸರಿಸಿ ದೇವಕೀರ್ತಿ, ಬಾದರಾಯಣ, ಮಾಂಡವ್ಯ ಮೊದಲಾದವರು ಅರಿಷ್ಟಭಂಗವನ್ನು ಹೇಳಿರುವರು. ಅವುಗಳನ್ನು ಬೃಹಜ್ಜಾತಕ ಗ್ರಂಥಕರ್ತನು ಹೇಳಲಿಲ್ಲ. ಆದರೆ ಬಾಲಾರಿಷ್ಟ ಪ್ರಯೋಜನಕ್ಕಾಗಿ ಇಲ್ಲಿ ಉದಹರಿಸಿರುತ್ತೆ.

॥ಶ್ಲೋಕ॥ ಸರ್ವಾನಿಮಾನಿತಿ ಬಲಸ್ಫುರದಂಶುಜಾಲೋ ಲಗ್ನಸ್ಥಿತಃ ಪ್ರಶಮಯೇ ತ್ಸುರರಾಜಮಂತ್ರೀ॥ ಏಕೋಬಹೂನಿದುರಿತಾನಿ ಸುಧಾಸ್ತರಾಣಿ ಭಕ್ತ್ಯಾ ಪ್ರಯುಕ್ತ ಇವಚಕ್ರಧರೇ ಪ್ರಣಾಮಃ ॥೩೫॥

ತಾ॥ ಪ್ರಕಾಶಮಾನವಾಗಿ ಬಲವಂತನಾದ ಬೃಹಸ್ಪತಿ ಲಗ್ನದಲ್ಲಿದ್ದರೆ ಶ್ರೀಮನ್ನಾರಾಯಣನಿಗೆ ಭಕ್ತಿಯಿಂದ ಪ್ರಣಾಮ ಮಾಡಿದರೆ ಸಮಸ್ತ ಪಾಪಗಳ ನಾಶಮಾಡಿ ಹೇಗೆ ಸಲಹುವನೋ, ಆ ಪ್ರಕಾರ ಬಾಲಾರಿಷ್ಟ ದೋಷಗಳ ನಾಶಮಾಡಿ ಶಿಶುವನ್ನು ರಕ್ಷಿಸುವನು ॥೩೫॥

॥ಶ್ಲೋಕ॥ ಲಗ್ನಾಧಿಪೋತಿ ಬಲವಾ ನಶುಭೈರದೃಷ್ಟಃ ಕೇಂದ್ರಸ್ಥಿತೈಶುಭಖಗೈ ರವಲೋಕ್ಯಮಾನಃ ॥ ಮೃತ್ಯುಂ ವಿಧೂಯ ವಿದಧಾತಿಸುದೀರ್ಘಮಾಯುಃ ಸಾರ್ಧಂಗುಣೈ ರ್ಬಹುಭಿರೂರ್ಜಿತಯಾಚಲಕ್ಷ್ಮಾ ೬೯ ॥೩೬॥

ತಾ॥ ಲಗ್ನಾಧಿಪತಿಯಾದ ಗ್ರಹ ಪಾಪಗ್ರಹಗಳಿಂದ ನೋಡಲ್ಪಡದೆ ಹೆಚ್ಚಾದ ಬಲಿಷ್ಠನಾಗಿ ಕೇಂದ್ರಸ್ಥಾನವನ್ನು ಹೊಂದಿ, ಶುಭಗ್ರಹದಿಂದ ನೋಡಲ್ಪಟ್ಟರೆ, ಮೃತ್ಯುವನ್ನು ಜೈಸಿ ಅನೇಕ ಸದ್ಗುಣ ಸಂಪತ್ತಿನಿಂದ ಕೂಡಿ ದೀರ್ಘಾಯುಷ್ಯವನ್ನು ಕೊಡುವನು.

॥ಶ್ಲೋಕ॥ ಲಗ್ನಾದ್ದೃಷ್ಟ ಮವರ್ತ್ಯಪಿ ಗುರುಭೃದ ಶುಕ್ರದೃಕಾಣಗಶ್ಚಂದ್ರಃ ಮೃತ್ಯುಪ್ರಾಪ್ತಂ ಸುತಮಪಿ ಪರಿರಕ್ಷತ್ಯೇಷ ನಿರ್ವ್ಯಾಜಂ ॥೩೭॥

ತಾ॥ ಚಂದ್ರನು ಲಗ್ನದಿಂದ ಅಷ್ಟಮ ಸ್ಥಾನದಲ್ಲಿದ್ದರೂ ಗುರು ಬುಧ ಶುಕ್ರ ಇವರು ದ್ರೇಕ್ಕಾಣದಲ್ಲಿದ್ದರೆ ಶಿಶುವು ಮೃತ್ಯುಮುಖಿಗತವಾಗುವುದನ್ನು ತಪ್ಪಿಸಿ ನಿಷ್ಕಪಟವಾಗಿ ರಕ್ಷಿಸುವನೆಂದು ಸಂಶಯವಿಲ್ಲದೆ ಹೇಳಬಹುದು.

॥ಶ್ಲೋಕ॥ ಚಂದ್ರಸ್ಸಂಪೂರ್ಣ ತನುಸ್ಸೌಮ್ಯರ್ಕ್ಷ ಗತಸ್ಥಿತ ಶ್ಶುಭಸ್ಯಾಂತಃ ಪ್ರಕರೋತ್ಯರಿಷ ಭಂಗಂ ವಿಶೇಷತಃಶುಕ್ರ ಸಂದೃಷ್ಟಃ ॥೩೮॥

ತಾ॥ ಪೂರ್ಣಚಂದ್ರನು ಶುಭಕ್ಷೇತ್ರಗತನಾಗಿ ಶುಭಗ್ರಹ ಮಧ್ಯವರ್ತಿಯಾದರೆ ಸಕಲಾರಿಷ್ಟವನ್ನೂ ನಾಶಮಾಡುವನು. ಮತ್ತು ಶುಕ್ರನಿಂದ ನೋಡಲ್ಪಟ್ಟರೆ ವಿಶೇಷವಾಗಿ ಹೇಳತಕ್ಕದ್ದೇನು ಇರುತ್ತೆ. ಅಂದರೆ ಅರಿಷ್ಟ ನಾಶ ಮಾಡುವುದರಲ್ಲಿ ವಿಶೇಷ ಬಲವುಳ್ಳವನು.

॥ಶ್ಲೋಕ॥ ಬುಧಭಾರ್ಗವ ಜೀವನಾ ಮೇಕತಮಃ ಕೇಂದ್ರಮಾಗತೋ ಬಲವಾನ್॥ ಯದಪಿ ಕ್ರೂರಸಹಾಯಃ ಸದ್ಯೋರಿಷ್ಟಸ್ಯಭಂಗಾಯ ॥೩೯॥

॥ಶ್ಲೋಕ॥ ರಿಪುಭವನಗತೋಪಿಶಶೀ ಗುರುಸಿತ ಚಂದ್ರಾತ್ಮಜ ದೃಕಾಣಸ್ಥಃ ಗರುಡಇವಭೋಗಿದಷ್ಟಂ ಪರಿರಕ್ಷ್ಯತ್ಯೇಷ ನಿರ್ವ್ಯಾಜಂ ॥೪೦॥

ತಾ॥ ಚಂದ್ರನು ಲಗ್ನದಿಂದ ಷಷ್ಠಸ್ಥಾನದಲ್ಲಿದ್ದರೂ, ಗುರು, ಶುಕ್ರ, ಬುಧ ಈ ಮೂರು ಗ್ರಹಗಳ ದೃಕಾಣಗಳಲ್ಲಿ ಯಾರ ದೃಕಾಣದಲ್ಲಿಯಾದರೂ ಇದ್ದರೆ ಸರ್ಪದಷ್ಟನಾದವನನ್ನು ಗರುಡನು ಸಂರಕ್ಷಿಸುವಂತೆ ನಿಷ್ಕಪಟವಾಗಿ ರಕ್ಷಿಸುವನು.

॥ಶ್ಲೋಕ॥ ಸೌಮ್ಯದ್ವಯಾಂತರಗತ ಸ್ಸಂಪೂರ್ಣ ಸ್ನಿಗ್ಧಮಂಡಲಃ ಶಶಭೃತ್॥ ನಿಶ್ಶೇಷಾರಿಷ್ಟಹಂತಾ ಭುಜಗಲೋಕಸ್ಯ ಗರುಡ ಇವ ॥

ತಾ॥ ಪೂರ್ಣಚಂದ್ರನು ಎರಡು ಶುಭಗ್ರಹಗಳ ಮಧ್ಯದಲ್ಲಿದ್ದರೆ ಗರುಡನು ಸರ್ಪಸಮೂಹವನ್ನು ನಾಶಮಾಡುವಂತೆ ಸಕಲ ಅರಿಷ್ಟ ನಾಶಮಾಡಿ ಶಿಶುವನ್ನು ರಕ್ಷಿಸುವನು.

॥ಶ್ಲೋಕ॥ ಶಕಭೃತ್ಪೂರ್ಣಶರೀರೇ ಶುಕ್ಲೇಕೃಷ್ಣೇ ನಿಶಾಭವೇದಿವಸೇ ॥ ರಿಪುನಿದನಸ್ಥೇರಿಷ್ಟಂ ಪ್ರಭವತಿನೈವಾತ್ರ ಜಾತಸ್ಯ ॥೪೨॥

ತಾ|| ಪೂರ್ಣಚಂದ್ರನು ಷಷ್ಠಾಷ್ಟಮದಲ್ಲಿದ್ದರೆ, ಶುಕ್ಲಪಕ್ಷದ ರಾತ್ರಿಯಲ್ಲೂ, ಕೃಷ್ಣಪಕ್ಷದ ಹಗಲಿನಲ್ಲೂ ಹುಟ್ಟಿದ ಬಾಲಕನಿಗೆ ಅರಿಷ್ಟ ಭಂಗಮಾಡುವನು.

|| ಶ್ಲೋಕ || ಪ್ರಸ್ಫುರಿತ ಕಿರಣಜಾಲೇ ಸಂಧಾಮಯಮಂಡಲೇ ವಿಲೋಕಯತಿ| ಸುರಮಂತ್ರಿಣೆ ಕೇಂದ್ರಗತೇ ಸರ್ವಾರಿಷ್ಟಂ ಶಮಂಯಾತಿ ||

ತಾ|| ಪೂರ್ಣಚಂದ್ರನು ಲಗ್ನವನ್ನು ನೋಡುತ್ತಲೂ ಬೃಹಸ್ಪತಿ ಕೇಂದ್ರದಲ್ಲಿದ್ದರೆ ಸರ್ವಾರಿಷ್ಟವನ್ನು ನಾಶಮಾಡುವನು.

|| ಶ್ಲೋಕ || ಸೌಮ್ಯಭವನೋಪಯಾತಾಃ ಸೌಮ್ಯಾಂಶಕಾಸ್ಸೌಮ್ಯದೃಕ್ಕಾಣಾಃ || ಗುರುಚಂದ್ರ ಕಾವ್ಯಶಶಿಜಾಃ ಸರ್ವೇರಿಷ್ಟಸ್ಯಹಂತಾರಃ ||

ತಾ|| ಶುಭಕ್ಷೇತ್ರ, ಶುಭನವಾಂಶ, ಶುಭದ್ರೇಕ್ಕಾಣವನ್ನು ಹೊಂದಿದ ಗುರು, ಚಂದ್ರ, ಶುಕ್ರ, ಬುಧರು ಸರ್ವಾರಿಷ್ಟವನ್ನು ನಾಶಮಾಡುವರು.

|| ಶ್ಲೋಕ || ಪಾಪಾಯದಿಶುಭವರ್ಗೇ ಸೌಮ್ಯೈರ್ದೃಷ್ಟಾ ಶ್ಶುಭಾಂಶವರ್ಗಸ್ಥೈಃ|| ವಿಘ್ನಂತಿ ತದಾರಿಷ್ಟಂ ಪತಿಂವಿರಕ್ತಾ ಯಥಾಯುವತೀ ||

ತಾ|| ಪಾಪಾಗ್ರಹಗಳು ಶುಭ ಷಡ್ವರ್ಗದಲ್ಲಿದ್ದು ಶುಭಾಂತವರ್ಗಸ್ಥರಾದ ಶುಭಗ್ರಹ ಗಳಿಂದ ನೋಡಲ್ಪಟ್ಟರೆ, ಅನುರಾಗವಿಲ್ಲದ ಸ್ತ್ರೀ, ಪತಿಯನ್ನು ಹೇಗೆ ಹಿಂಸಿಸುವಳೋ ಆ ಪ್ರಕಾರ ಸರ್ವಾರಿಷ್ಟವನ್ನು ಹೋಗಲಾಡಿಸಿ, ಶಿಶುಸಂರಕ್ಷಣೆ ಮಾಡುವನು.

|| ಶ್ಲೋಕ || ತತ್ಕಾಲೇಯದಿವಿಜಯೀ ಶುಭಗ್ರಹ ಶ್ಶುಭನಿರೀಕ್ಷಿತೋವಶ್ಯಂ || ನಾಶಯತಿ ಸರ್ವರಿಷ್ಟಂ ಮಾರುತ ಇವ ಪಾದಪಾರ್ಪಪ್ರಬಲಃ ||

ತಾ|| ಜನ್ಮಕಾಲದಲ್ಲಿ ಒಂದು ಶುಭಗ್ರಹವು ಯುದ್ಧದಲ್ಲಿ ಜಯ ಹೊಂದಿದವ ನಾಗಿದ್ದರೆ, ಆ ಜಯಹೊಂದಿದ ಗ್ರಹ ಶುಭಗ್ರಹದಿಂದ ನೋಡಲ್ಪಟ್ಟರೆ ಪ್ರಬಲವಾದ ಗಾಳಿಯು ವೃಕ್ಷವನ್ನು ಬುಡಸಹಿತ ನಾಶಮಾಡುವ ಹಾಗೆ ಅರಿಷ್ಟದೋಷವನ್ನೆಲ್ಲಾ ನಾಶಮಾಡುವನು.

|| ಶ್ಲೋಕ || ಸರ್ವಗ್ರಹೈರ್ದೃಷ್ಟ ತನುರ್ಹಿಮಾಂಶು ರಾಪೂರ್ಯಮಾಣೋ ವಿನಿಹಂತ್ಯ ರಿಷ್ಟಂ || ಸ್ವಾತ್ಯುಚ್ಚಭಾಗೇ ಸುಹೃದಂಶಕೇವಾರಿಷ್ಟಂ ನಿಹಂತೀತಿಚ ಶುಕ್ರದೃಷ್ಟಃ ||

ತಾ।। ಪೂರ್ಣಚಂದ್ರನು ಎಲ್ಲಾ ಗ್ರಹಗಳಿಂದ ನೋಡಲ್ಪಟ್ಟರೂ ಮತ್ತು ಚಂದ್ರನು ಪರಮೋಚ್ಚ ಭಾಗದಲ್ಲಿದ್ದರೂ ಮಿತ್ರನವಾಂಶೆಯಲ್ಲಿದ್ದರೂ ಶುಕ್ರನಿಂದ ನೋಡಲ್ಪಟ್ಟರೆ ಅರಿಷ್ಟನಾಶವನ್ನುಂಟುಮಾಡುವನು.

।। ಶ್ಲೋಕ ।। ಷಟ್ಸಪ್ತರಂಧ್ರೇ ಶಶಿನಸ್ತು ಸೌಮ್ಯಃಪಾಪೈರ್ಮಿಶ್ರಾಶ್ಚಹರಂತ್ಯರಿಷ್ಟಂ।। ಯುಕ್ತಸ್ತುಸೌಮ್ಯೈ ರ್ವಿನಿಹಂತ್ಯರಿಷ್ಟಂಚಂದ್ರಃ ಶುಭಸ್ತ್ರ್ಯಂಶ ಗತಸ್ತಥೈವ ।।

ತಾ।। ಲಗ್ನಕ್ಕೆ ಷಷ್ಠ ಸಪ್ತಮ ಅಷ್ಟಮಾಧಿಪತಿಗಳು ಶುಭರಾಗಿ ಪಾಪಗ್ರಹಗಳನ್ನು ಕೂಡದಿದ್ದರೆ ಅರಿಷ್ಟನಾಶ. ೬-೭-೮ನೇ ಅಧಿಪತಿಗಳು ಶುಭಗ್ರಹಯುಕ್ತರಾದರೆ ಅರಿಷ್ಟನಾಶ. ಚಂದ್ರನು ಶುಭತ್ರಿಂಶಾಂಶೆಯಲ್ಲಿದ್ದರೆ ಅರಿಷ್ಟನಾಶ.

।। ಶ್ಲೋಕ ।। ಚಂದ್ರಃ ಶುಭದ್ವಾದಶಭಾಗಗೋವಾ ಹೋರೇಶದೃಷ್ಟಃ ಶುಭರಾಶಿ ಗೋವಾ।। ಜನ್ಮಾಧಿಪೋ ಮಿತ್ರಶು ಭೇಕ್ಷಿತೋವಾ ಸರ್ವೇಕ್ಷಿತೌ ಜನ್ಮಪತಿಸ್ತನೌವಾ।।

ತಾ।। ಚಂದ್ರನು ಶುಭ ದ್ವಾದಶಾಂಶೆಯಲ್ಲಿದ್ದರೂ, ಶುಭರಾಶಿಯಲ್ಲಿದ್ದರೂ, ಲಗ್ನಾಧಿಪತಿ ನೋಡಿದರೂ, ಜನ್ಮಲಗ್ನಾಧಿಪತಿ ಮಿತ್ರರಾದ ಶುಭ ಗ್ರಹಗಳಿಂದ ನೋಡಲ್ಪಟ್ಟರೂ, ಲಗ್ನಾಧಿಪತಿ ಲಗ್ನದಲ್ಲಿದ್ದು ಸರ್ವಗ್ರಹಗಳಿಂದ ನೋಡಲ್ಪಟ್ಟರೂ ಅರಿಷ್ಟನಾಶವಾಗುವುದು.

।। ಶ್ಲೋಕ ।। ಹೋರೇಶ್ವರಶ್ಚೋಪಚಯೇ ಶಶೀವಾರಿಷ್ಟಂ ಪೃಥಕ್ಚಂದ್ರಕೃತಂ ನಿಹಂತಿ।। ಚಂದ್ರಾದ್ವ್ಯಯೇ ಶುಕ್ರಬುಧೌಚಲಾಭೇ ಪಾಪಗುರುರ್ವ್ಯೋಮ್ನಿಚ ದೋಷನಾಶಃ।।

ತಾ।। ಲಗ್ನಾಧಿಪತಿಗೆ ಉಪಚಯ ಸ್ಥಾನಗಳಲ್ಲಿ ಚಂದ್ರನಿದ್ದರೆ ಚಂದ್ರಾರಿಷ್ಟ ಭಂಗ. ಚಂದ್ರನಿಗೆ ವ್ಯಯದಲ್ಲಿ ಶುಕ್ರ-ಬುಧರು, ಚಂದ್ರಾಲ್ಲಾಭದಲ್ಲಿ ಪಾಪಗ್ರಹಗಳು, ಚಂದ್ರಾದಶಮದಲ್ಲಿ ಗುರುವು ಇದ್ದರೆ ಅರಿಷ್ಟನಾಶ.

।। ಶ್ಲೋಕ ।। ದೃಶ್ಯೋಪ್ಯದೃಶ್ಯಃ ಸುಹೃದಾಂ ರಿಪೂಣಾಂ ಪೂರ್ಣಃಶಶೀಹಂ ತಿಚಸತ್ವರಿಷ್ಟಂ।। ಸಂಪೂರ್ಣ ಇಂದುರ್ಗುರುಶುಕ್ರಯುಕ್ತಃ ಕ್ರೂರೈರದೃಷ್ಟ ಸ್ವಗೃಹೇಪಿ ತುಂಗೇ ।।

ತಾ।। ಪೂರ್ಣಚಂದ್ರನು ಶುಭಗ್ರಹಗಳಿಂದ ನೋಡಲ್ಪಟ್ಟು ಪಾಪಗ್ರಹಗಳಿಂದ ನೋಡಲ್ಪಡದಿದ್ದರೂ, ಸಂಪೂರ್ಣ ಚಂದ್ರನು ಸ್ವಕ್ಷೇತ್ರದಲ್ಲಾದರೂ ತನುಚ್ಚದಲ್ಲಾದರೂ ಇದ್ದು, ಶುಕ್ರ ಗುರು ಯುಕ್ತನಾಗಿದ್ದರೂ ಅರಿಷ್ಟಭಂಗ.

॥ಶ್ಲೋಕ॥ ಚಂದ್ರಾಷ್ಟಮೇವಾ ಕುಜಸಪ್ತಮೇವಾ ರಾಹೌನವಮ್ಯೇಚ ಗುರೌತೃತೀಯ್ಯೇ ॥ ಲಗ್ನೇಚಕೇತಾ ವಸಿತೇಚಮೃತ್ಯುಂ ವರ್ಗೋತ್ತಮಾಂಶ ಶ್ಯುಭವಾನ್ನಿರಸ್ಯತಿ ॥

ತಾ॥ ಚಂದ್ರನು ಅಷ್ಟಮದಲ್ಲಿದ್ದರೂ, ಕುಜನು ಸಪ್ತಮದಲ್ಲಿದ್ದರೂ, ರಾಹು ನವಮದಲ್ಲಿದ್ದರೂ, ಗುರು ತೃತೀಯದಲ್ಲಿದ್ದರೂ, ಲಗ್ನದಲ್ಲಿ ಕೇತುವಿದ್ದರೂ, ಶುಕ್ರನು ಅಷ್ಟಮದಲ್ಲಿದ್ದರೂ ಬಾಲಾರಿಷ್ಟಯೋಗವೆಂದು ಹೇಳಲ್ಪಡುತ್ತೆ. ಆದರೆ ಈ ಮೇಲೆ ಹೇಳಿದ ಪ್ರಕಾರ ಯೋಗವಿದ್ದರೂ ಜನ್ಮಲಗ್ನದಲ್ಲಿ ಶುಭ ವರ್ಗಾಂಶೆ ಜನ್ಮ ನವಾಂಶೆ ಯಾಗಿದ್ದರೆ ಅರಿಷ್ಟಭಂಗವಾಗುವುದು.

॥ ಶ್ಲೋಕ ॥ ಪ್ರಸ್ಫುರಿತಕಿರಣಮಾಲೇ ಸುಧಾಮಯೂಖಂ ವಿಲೋಕಯತಿ ॥ ಸೌಮ್ಯದ್ವಯಾಂತರಗತಂ ಸಂಪೂರ್ಣ ಸ್ನಿಗ್ಧಮಂಡಲಸ್ಸೇಜ್ಯಃ ॥ ಸುರಮಂತ್ರಿಣೆ ಕೇಂದ್ರಗತೇ ಸರ್ವೇದೋಷಾಶ್ಯಮಂಯಾಂತಿ ॥

ತಾ॥ ಸೂರ್ಯನು ಚಂದ್ರನನ್ನು ನೋಡಿದರೆ ಅರಿಷ್ಟಭಂಗ. ಸೌಮ್ಯಗ್ರಹಗಳ ಮಧ್ಯದಲ್ಲಿ ಪೂರ್ಣಚಂದ್ರನು ಗುರುಯುಕ್ತನಾಗಿದ್ದರೆ ಅರಿಷ್ಟಭಂಗ. ಬೃಹಸ್ಪತಿಯು ಲಗ್ನದಿಂದ ಕೇಂದ್ರಸ್ಥಾನಗಳಲ್ಲಿಯಾಗಲಿ, ಚಂದ್ರನಿಂದ ಕೇಂದ್ರಸ್ಥಾನಗಳಲ್ಲಾಗಲಿ ಇದ್ದರೆ ಅರಿಷ್ಟಭಂಗ. ಈ ಪ್ರಕಾರ ಅರಿಷ್ಟ ಭಂಗವನ್ನು ತಿಳಿಯತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಬಾಲಾರಿಷ್ಟ ತದ್ಭಂಗಾದಿ
ನಿರೂಪಣಂ ನಾಮ ಷಷ್ಠಮ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾ ಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ ಬಾಲಾರಿಷ್ಟ
ತದ್ಭಂಗಾದಿ ನಿರೂಪಣಂ ನಾಮ
ಷಷ್ಠಮ ಪ್ರಕರಣಂ

# ೭ನೇ ಆಯುರ್ದಾಯ ಪ್ರಕರಣಂ

ಅವತಾರಿಕೆ ।। ಪೂರ್ವೋಕ್ತವಾದ ಬಾಲಾರಿಷ್ಟವಿಲ್ಲದ ಜಾತಕರಿಗೆ ಆಯುದಾರ್ಯ ತಿಳಿಯಬೇಕಾದದ್ದು ಜಾತಕ ಶಾಸ್ತ್ರದ ಮುಖ್ಯೋದ್ದೇಶವಾಗಿರುವುದು. ಆರ್ಯುದಾರ್ಯವಿಲ್ಲದವರಿಗೆ ರಾಜಯೋಗಾದಿ ಫಲವಿಸ್ತಾರದಿಂದ ಪ್ರಯೋಜನ ಉಂಟಾಗಲಾರದು. ಈ ವಿಷಯಕ್ಕೆ ।।ಶ್ಲೋಕ।। ಪರಾಶರಃ ।। ಪೂರ್ವಮಾಯುಃ ಪರಿಕ್ಷೇತ ಪಶ್ಚಾಲ್ಲಾಕ್ಷಣಿಕಂಶುಭಂ ।। ಆಯುರ್ಹೀನ ನರಾಣಾಂತು ಕಿಮನ್ಯೈಃ ಫಲವಿಸ್ತರೈಃ ।।೧।।

ತಾ।। ಜಾತಕವನ್ನು ತೆಗೆದುಕೊಂಡು ನೋಡುವಾಗ ಮೊದಲು ಆಯುರ್ದಾಯವನ್ನು ನೋಡಬೇಕು. ಆಯುರ್ದಾಯವಿದ್ದರೆ ಜಾತಕದ ಲಕ್ಷಣವನ್ನು ಮತ್ತು ರಾಜಯೋಗಾದಿ ಫಲವಿಸ್ತಾರವನ್ನು ಯೋಚಿಸಬೇಕು. ಆಯುರ್ದಾಯವಿಲ್ಲದವರಿಗೆ ಫಲವಿಸ್ತಾರದಿಂದೇನು ಪ್ರಯೋಜನ ? ಆದ್ದರಿಂದ ಆರ್ಯುದಾಯ ಪರೀಕ್ಷೆ ಮುಖ್ಯವೆಂದು ತಿಳಿದುಕೊಳ್ಳಬೇಕು. ಆಯುರ್ದಾಯ ವಿಷಯಕ್ಕೆ ಪರಾಶರರ ಅಭಿಪ್ರಾಯ ।।ಶ್ಲೋಕ।। ತ್ರಿವಿಧಾಶ್ಚಾಯುಷೋಯೋಗಾಃ ಸ್ವಲ್ಪಾಯುರ್ಮಧ್ಯ ಮೋತ್ತಮಾಃ।। ದ್ವಾತ್ರಿಂಶಾತ್ಪೂರ್ವಮಲ್ಪಾಯುಃ ಮಧ್ಯ ಮಾಯುಸ್ತಥಾಭವೇತ್ ।।೨।। ಚತುಷ್ಷಷ್ಟ್ಯಾಃ ಪುರುಸ್ತಾತ್ತು ತತೋದೀರ್ಘ ಮುದಾಹೃತಂ ।। ಉತ್ತಮಾಯುಶ್ಶತಾದೂರ್ಧ್ವಂ ಜ್ಞಾತವ್ಯಂ ಮುನಿಸತ್ತಮ ।। ಆಯುರ್ದಾಯ ವಿಷಯವನ್ನು ಪರಾಶರ ಋಷಿಗಳು ತಮ್ಮ ಪ್ರೀತಿಪಾತ್ರರಾದ ಮೈತ್ರೇಯ ಋಷಿಗಳಿಗೆ ಉಪದೇಶ ಮಾಡುತ್ತಾರೆ. ಆಯುರ್ಯೋಗವೆಂಬುವುದು ಅಲ್ಪಾಯುರ್ಯೋಗ, ಮಧ್ಯಾಯುರ್ಯೋಗ, ಉತ್ತಮಾಯುರ್ಯೋಗವೆಂದು ಮೂರು ಪ್ರಕಾರವಾಗಿರುವುದು. ಇದರಲ್ಲಿ ಮೂವ್ವತ್ತೆರಡು ವರ್ಷಗಳಿಗೆ ಬರುವಂಥಾದ್ದು ಅಲ್ಪಾಯುರ್ಯೋಗ. ಮುವ್ವತ್ತೆರಡು ವರ್ಷ ಮೊದಲುಗೊಂಡು ಅರವತ್ತುನಾಲ್ಕು ವರ್ಷಗಳವರಿವಿಗೆ ಮಧ್ಯಾಯುರ್ಯೋಗವು. ಅರವತ್ತುನಾಲ್ಕು ವರ್ಷದಿಂದ ಮುಂದೆ ದೀರ್ಘಾಯುರ್ಯೋಗ. ಉತ್ತಮಾಯುರ್ಯೋಗವೆಂಬುವುದು ಶತವರ್ಷಗಳಿಂದ ಮುಂದಕ್ಕೆ ಬರುವುದು. ಮತ್ತು ಈ ಮೂರು ವಿಧವಾದ ಯೋಗಗಳಲ್ಲಿ ಪ್ರತ್ಯೇಕ ಭೇದವನ್ನು ಹೇಳುತ್ತಾರೆ :- ।।ಶ್ಲೋಕ।। ತ್ರಿಷುಯೋಗೇಷು ಸರ್ವೇಷು ಪ್ರತ್ಯೇಕಂ ತ್ರಿವಿಧಂ ಭವೇತ್।। ಅಲ್ಪಾಯುರಲ್ಪಮಧ್ಯಂತು ಪೂರ್ಣಾಯು ಸ್ತ್ರಿವಿಧಂಭವೇತ್ ।।೪೪।।

ಮಧ್ಯಮಾದಲ್ಪ ಮಧ್ಯಂತು ಪೂರ್ಣಾಯು ಸ್ತ್ರಿವಿಧಂಭವೇತ್ ॥ ದೀರ್ಘಾಯುಷೋಲ್ಪಮಧ್ಯಂತು ಪೂರ್ಣಾಯುಸ್ತ್ರಿವಿಧಂ ಭವೇತ್ ॥೫॥ ಏವಂ ಬಹುವಿಧಂಪ್ರೋಕ್ತ ಆಯುಷಸ್ತುವಿರ್ನಿರ್ಣಯಃ ॥೫॥ ಅಲ್ಪಾಯುರ್ಯೋಗದಲ್ಲಿ ಅಲ್ಪಾಯು, ಮಧ್ಯಾಯು, ಪೂರ್ಣಾಯುರ್ಯೋಗವೆಂದು ಮೂರು ವಿಧ. ಮಧ್ಯಾಯುರ್ಯೋಗದಲ್ಲಿ ಅಲ್ಪಾಯು, ಮಧ್ಯಾಯು, ಪೂರ್ಣಾಯುರ್ಯೋಗವೆಂದು ಮೂರು ವಿಧ. ಪೂರ್ಣಾಯುರ್ಯೋಗದಲ್ಲಿ ಅಲ್ಪಾಯು, ಮಧ್ಯಾಯು, ಪೂರ್ಣಾಯುರ್ಯೋಗವೆಂದು ಮೂರು ವಿಧ ಅಂತೂ ಒಂಭತ್ತು ಬಗೆಯಾಗಿರುವುದು. ಈ ರೀತಿಯಾಗಿ ಅನೇಕ ವಿಧವಾಗಿ ಆಯುರ್ನಿರ್ಣಯವಿರುತ್ತೆ.

## ಆಯುರ್ಯೋಗ ಪದಕ

| ಅಲ್ಪಾಯುರ್ಯೋಗ<br>೮ರಿಂದ ೩೨ | ಮಧ್ಯಾಯುರ್ಯೋಗ<br>೩೨ರಿಂದ ೭೪ರವರೆಗೆ | ಪೂರ್ಣಾಯುರ್ಯೋಗ<br>೭೪ರಿಂದ ೧೦೦ರ ಮೇಲೆ |
|---|---|---|
| ಅಲ್ಪ ಅಲ್ಪಾಯುರ್ಯೋಗ<br>ಮಧ್ಯಾಲ್ಪಾಯುರ್ಯೋಗ<br>ಪೂರ್ಣಾಲ್ಪಾಯುರ್ಯೋಗ | ಅಲ್ಪ ಮಧ್ಯಾಯುರ್ಯೋಗ<br>ಮಧ್ಯಮಧ್ಯಾಯುರ್ಯೋಗ<br>ಪೂರ್ಣಾಮಧ್ಯಾಯುರ್ಯೋಗ | ಅಲ್ಪ ಪೂರ್ಣಾಯುರ್ಯೋಗ<br>ಮಧ್ಯಪೂರ್ಣಾಯುರ್ಯೋಗ<br>ಪೂರ್ಣಾಪೂರ್ಣಾಯುರ್ಯೋಗ |

ಟಿಪ್ಪಣಿ - ಈ ಯೋಗವಲ್ಲದೆ ಮುನಿಯೋಗ ಅಮಿತಾಯುರ್ಯೋಗವೆಂದು ಪ್ರತ್ಯೇಕವಾಗಿರುತ್ತೆ. ಅದನ್ನು ಈ ಪ್ರಕರಣದ ಕೊನೆಯಲ್ಲಿ ಸ್ಪಷ್ಟಮಾಡಿದೆ.

ಮೈತ್ರೇಯರ ಪ್ರಶ್ನೆ ॥ಶ್ಲೋಕ॥ ಕರ್ಮವೇತ್ತಮಹಾಭಾಗ ಹ್ಯಾಯುಷೋ ಗಹನಾಗತಿಃ ॥ನಿರ್ವಿಶಂಕಂ ಮಮಾಗ್ರೇಚ ಕಥಯಸ್ವಕೃಪಾನಿಧೇ ॥೬॥ ಕೃಪಾ ನಿಧಿಯಾಗಿಯೂ ಪ್ರಾಣಿಮಾತ್ರದ ಆಗಾಮಿಸಂಚಿತ ಪ್ರಾರಬ್ಧವೆಂಬ ತ್ರಿಕರ್ಮಗಳನ್ನು ತಿಳಿದವನಾಗಿಯೂ ಇರುವ ಮಹಾತ್ಮನೇ । ಆಯುರ್ದಾಯವೆಂಬುವುದು ತಿಳಿಯಲು ಸಾಧ್ಯವಾಗಿ ಗಹನವಾಗಿರುವುದು ಆದ್ದರಿಂದ ಅದನ್ನನುಮಾನವಿಲ್ಲದಂತೆ ನನಗೆ ಉಪದೇಶಮಾಡು 1 ಪರಾಶರರ ಉತ್ತರ ॥ಶ್ಲೋಕ॥ ಅಧುನಾಸಂ ಪ್ರವಕ್ಷ್ಯಾಮಿ ಆಯುರ್ದಾಯಗತಿಂತವ ॥ ಯಸ್ಯವಿಜ್ಞಾನಮಾತ್ರೇಣ ಕಾಲಜ್ಞೋ ಭವತಿಧ್ರುವಂ ॥೭॥ ಆಯುರ್ದಾಯ ಗತಿಯನ್ನು ಚೆನ್ನಾಗಿ ಹೇಳಲುಪಕ್ರಮಿಸುತ್ತೇನೆ. ಈ ಆಯುರ್ದಾಯವನ್ನು ತಿಳಿದುಕೊಳ್ಳುವುದರಿಂದ, ಕಾಲಜ್ಞಾನಿಯಾಗುತ್ತಾನೆ. ಇದು ನಿಶ್ಚಯ ॥೭॥ ಶ್ಲೋಕ॥ ಲಗ್ನೇಶಾದಷ್ಟಮೇಶಾಭ್ಯಾ ಮಾಯುರ್ದಾಯಂ

ವಿಚಿಂತಯೇತ್ ।। ದೀರ್ಘಮಧ್ಯಾಲ್ಪಯೋಗತ್ವಂ ಯಥಾವದ್ಗದಿತೋಮಯಾ ।।೮।। ಆಯುರ್ದಾಯವನ್ನು ಲಗ್ನಾಧಿಪತಿ ಅಷ್ಟಮಾಧಿಪತಿಗಳ ಬಲಾಬಲಗಳಮೇಲೆ ದೀರ್ಘಾಯುರ್ಯೋಗವೆಂತಲೂ, ಮಧ್ಯಾಯುರ್ಯೋಗವೆಂತಲೂ, ಅಲ್ಪಾಯುರ್ಯೋಗ ವೆಂತಲೂ (ಸೃಷ್ಟಿಕರ್ತನಾದ ಬ್ರಹ್ಮನಿಂದ) ನಾನು ತಿಳಿದುಕೊಂಡಿರುವಂತೆ ಹೇಳುತ್ತೇನೆ. ಎಂದು ಪರಾಶರ ಸಂಹಿತೆಯಲ್ಲಿ ಉಕ್ತವಾಗಿರುತ್ತೆ. ಆಯುರ್ದಾಯ ವಿಷಯದಲ್ಲಿ ಈ ಪ್ರಕರಣದಲ್ಲಿ ವರಾಹಮಿಹಿರಾಚಾರ್ಯರು ಇತರ ಮತವನ್ನೂ ಸ್ವಮತವನ್ನೂ ಸಹ ಪ್ರತಿಪಾದಿಸಿರುತ್ತಾರೆ ಮತ್ತು ಉತ್ತರ ಶ್ಲೋಕದಲ್ಲಿ 'ಮಯಯವನ ಮಣೀತ್ಥಶಕ್ತಿಪೂರ್ವೈಃ ಎಂದು ವರಾಹಮಿಹಿರಾಚಾರ್ಯರು ಉದಹರಿಸಿರುವುದರಿಂದ, ಮಯಾದಿ ಜ್ಯೋತಿಷ್ಕರು ಯಾರೆಂದು ಅವರ ಪೂರ್ಣ ಚರಿತ್ರೆಯನ್ನು ತಿಳಿಯಬೇಕಾದದ್ದು ಅವಶ್ಯಕವಾಗಿರುತ್ತೆ. ಆದ್ದರಿಂದ ಇಲ್ಲಿ ಪ್ರಸ್ತಾಪಿಸಿರುತ್ತೇನೆ. ಏತಕ್ಕೆಂದರೆ-ಜ್ಯೋತಿಷ್ಕರು ಅವರ ಪೂರ್ವಾಪರ ವೃತ್ತಾಂತವನ್ನು ತಿಳಿದಿರಬೇಕಾದದ್ದು. ಅವರು ಯಾವ ಮೂಲಕವಾಗಿ ಜ್ಯೋತಿರ್ಜ್ಞಾನವನ್ನು ಸಂಪಾದಿಸಿ, ಈ ಶಾಸ್ತ್ರಕ್ಕೆ ಆಚಾರ್ಯರಾದರೋ ಆ ವಿಷಯವನ್ನು ತಿಳಿದಿರಬೇಕಾದದ್ದು ಅವಶ್ಯಕವಾಗಿರುತ್ತೆ.

## ಮಯನ ಚರಿತ್ರೆ

ಶ್ಲೋಕ।। ಅಲ್ಪಾವಶಿಷ್ಟೇತು ಕೃತೇಮಯೋನಾಮ ಮಹಾಸುರಃ। ರಹಸ್ಯಂ ಪರಮಂ ಪುಣ್ಯಂ ಜಿಜ್ಞಾಸುರ್ಜ್ಞಾನಮುತ್ತಮಂ ।।೯।। ವೇದಾಂಗಮಗ್ರ್ಯಮಖಿಲಂ ಜ್ಯೋತಿಷಾಂಗತಿಕಾರಣಂ । ಆರಾಧಯ ನ್ವಿವಸ್ವಂತಂ ತಪಸ್ತೇಪೇ ಸುದುಸ್ತರಂ ।।೧೦।। ತೋಷಿತಸ್ತ ಪಸಾತೇನ ಪ್ರೀತಸ್ತಸ್ಮೈ ವರಾರ್ಥಿನೇ । ಗ್ರಹಾಣಾಂ ಚರಿತಂಪ್ರಾದಾ ನ್ಮಯಾಯಸವಿತಾ ಸ್ವಯಂ ।।೧೧।। ವಿದಿತಸ್ತೇಮಯಾ-ಭಾವಸ್ತಪಸಾರಾಧಿತಸ್ತ್ವಹಂ।। ದದ್ಯಾಂಕಾಲಾಶ್ರಿತಂಜ್ಞಾನಂ ಜ್ಯೋತಿಷಾಂಚರಿತಂಮಹತ್ ।।೧೨।। ನಮೇತೇಜಃ ಸಹಃ ಕಶ್ಚಿದಾಖ್ಯಾತೋನಾಸ್ತಿಮೇಕ್ಷಣಃ । ಮದಂಶಃ ಪುರುಷೋಯಂತೇ ನಿಶ್ಶೇಷಂ ಕಥಯಿಷ್ಯತಿ ।।೧೩।। ಇತ್ಯುಕ್ತ್ವಾಂತರ್ದಧೇದೇವ ಸ್ಸಮಾದಿಶ್ಯಾಂ ಶಮಾತ್ಮನಃ। ಸಪುಮಾನ್ಮಯಮಾಹೇದಂಪ್ರಣತಂ ಪ್ರಾಂಜಲಿಸ್ಥಿತಂ ।।೧೪।।

ತಾ।। ಮಯನೆಂಬ ಹೆಸರಿನ ದಾನವನು, ಕೃತಯುಗವು ಅತ್ಯಲ್ಪವಾಗಿ ಅವಶಿಷ್ಟವಾಗಿರುವ ಕಾಲದಲ್ಲಿ **ವೇದಾಂತಶಾಸ್ತ್ರವಾಗಿಯೂ**, ಸಮಸ್ತ ಗ್ರಹಗಳ ವಿಚಾರ

(ಗತಿ) ಕ್ರಮವನ್ನು ತಿಳಿಯಪಡಿಸುವುದಾಗಿಯೂ, ರಹಸ್ಯವಾಗಿಯೂ ಪರಮಪುಣ್ಯ ಸಾಧಕವಾಗಿಯೂ ಇರುವ ಜ್ಯೋತಿಶಾಸ್ತ್ರವನ್ನು ತಿಳಿದುಕೊಳ್ಳುವವರಿಗೆ ಉತ್ತಮವಾದ ಸಾಧನವಾಗಿರುವ ಗ್ರಹ ಚರಿತ್ರೆಯನ್ನು ಸಾಂಗವಾಗಿ ತಿಳಿಯಲಪೇಕ್ಷಿಸಿ, ನವಗ್ರಹ ರಾಜನಾಗಿಯೂ ಗಾಯತ್ರೀ ಸ್ವರೂಪನಾಗಿರುವ ಸೂರ್ಯ ಭಗವಂತನನ್ನು ಕುರಿತು ಸುಮುಖನಾಗಿಯೂ, ಇತರರು ಆಚರಿಸಲು ಕಠಿಣವಾಗಿಯೂ ಇರುವ ತಪಸ್ಸನ್ನು ಮಾಡುತ್ತಿರಲಾಗಿ, ಆತನ ತಪಸ್ಸಿಗೆ ಮೆಚ್ಚಿ ಸೂರ್ಯನು ಪ್ರತ್ಯಕ್ಷನಾಗಿ ಮಯನನ್ನು ಕುರಿತು, ವರಾರ್ಥಿಯಾದ ಮಯನೇ । ನಾನು ನಿನ್ನ ಆರಾಧನೆಯಿಂದ ಸುಪ್ರೀತನಾಗಿದ್ದೇನೆ, ಜ್ಯೋತಿರ್ಜ್ಞಾನವೆಂಬುವುದು ಕಾಲವನ್ನನುಸರಿಸುವುದು ಮತ್ತು ಗ್ರಹನಕ್ಷತ್ರಗಳ ಚರಿತ್ರೆ ಮಹತ್ತರವಾಗಿ (ಅಗಾಧವಾಗಿ) ರುವುದು. ಈ ಮುಹೂರ್ತದಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ನನ್ನ ಅಂಶ ಸಂಭೂತನಾದ ಈ ಪುರುಷಾಕಾರದ ಮೂರ್ತಿಯು ನಿನ್ನ ಪ್ರಶ್ನೆಗಳಿಗೆಲ್ಲ ಅನುಮಾನವಿಲ್ಲದಂತೆ ಉತ್ತರ ಹೇಳುತ್ತಾನೆಂದು ವರಪ್ರದಾನಮಾಡಿ ಅಂತರ್ಧಾನ (ಅದೃಶ್ಯನಾದನು) ಹೊಂದಿದನು. ಸೂರ್ಯಾಂಶ ಸಂಭೂತನಾದ ಮಹಾಪುರುಷನಿಂದ ಅತ್ಯಂತ ಭಕ್ತಿಯೊಡನೆ ಜ್ಯೋತಿರ್ಜ್ಞಾನವನ್ನು ಪಡೆದುಕೊಂಡು ಈ ಶಾಸ್ತ್ರಕ್ಕೆ ಆಚಾರ್ಯನಾದನು.

## ಯವನಾಚಾರ್ಯರ ಚರಿತ್ರೆ

ಶ್ಲೋಕ॥ ದ್ವಾಪರಾದೌ ತಪಸ್ತೇಪೇ ಯವನೋ ನಾಮದಾನವಃ । ನಿಶಾಕರಂ
ಸಮುದ್ದಿಶ್ಯ ತೇನಲಬ್ಧವರೋಭವತ್ ॥೧೫॥

ಈ ಯವನಾಚಾರ್ಯನ ವೃತ್ತಾಂತವೆಲ್ಲ ಸೋಮ ಸಂಹಿತೆಯಲ್ಲಿ ವಿಸ್ತಾರ ವಾಗಿರುತ್ತೆ. ಮತ್ತು ಈ ಯವನಾಚಾರ್ಯನಿಗೆ ಯವನೇಶ್ವರನೆಂತಲೂ ಹೆಸರಾಗಿ ಈತನು ಮ್ಲೇಚ್ಛದೇಶಾಧಿಪತಿಯೆಂತಲೂ ಹೇಳಿರುತ್ತೆ. ಈಚಿಗೆ ಯವನತಾಚಕ, ವೃದ್ಧಯವನೋಕ್ತ ಸ್ತ್ರೀಜಾತಕ, ಯವನಜಾತಕ, ಈ ಗ್ರಂಥಾವಲೋಕನದಿಂದ ಯವನಾಚಾರ್ಯ ಗ್ರಂಥಗಳು ಪ್ರತ್ಯಕ್ಷ ಫಲನಿದರ್ಶನ ಭೂತವಾದದ್ದೆಂದು ಅನುಭವಕ್ಕೆ ಬಂದಿರುತ್ತೆ. ಇವನು ದ್ವಾಪರಾದಿಯಲ್ಲಿ ತಪಸ್ಸುಮಾಡಿ ಚಂದ್ರನಿಂದ ವರವನ್ನು ಪಡೆದನು.

## ಮಣೀತ್ಥನ ಚರಿತ್ರೆ

ಶ್ಲೋಕ॥ ಚಿಂತಾಮಣ್ಯಂಶ ಸಂಭೂತಃ ಶ್ರೀಚಿಂತಾಮಣಿ ಮಂತ್ರವಿತ್॥
ಹೋರಾಶಾಸ್ತ್ರಕೃದಾಚಾರ್ಯೋ ಮಣೀತ್ಥೋನಾಮಭೂಸುರಃ ॥

ಮಣೀತ್ಥನೆಂಬುವ ಬ್ರಾಹ್ಮಣನು ಚಿಂತಾಮಣಿ ಮಂತ್ರೋಪಾಸನೆಯಿಂದ ಹೋರಾಶಾಸ್ತ್ರವನ್ನು ಸಮಗ್ರವಾಗಿ ತಿಳಿದುಕೊಂಡು ಈ ಶಾಸ್ತ್ರಕ್ಕೆ ಆಚಾರ್ಯನಾದನು.

ಪರಾಶರರ ವೃತ್ತಾಂತವು (ಸಕಲರಿಗೂ ತಿಳಿದೆ ಇರುತ್ತೆ)

ಶ್ಲೋಕ।। ಪ್ರಪೌತ್ರೋ ಬ್ರಹ್ಮಣಃ ಸಾಕ್ಷಾದ್ವಾಸಿಷ್ಠ ಶ್ಯಕ್ತಿನಂದನಃ ।। ವಿದ್ವಾನ್ ಪರಾಶರಾಚಾರ್ಯೋ ಬ್ರಹ್ಮಲಬ್ಧವರೋಮಹಾನ್ ।।

ತಾ।। ಪರಾಶರ ಮಹರ್ಷಿಗಳು ಸಾಕ್ಷಾತ್ತಾಗಿ ಚತುರ್ಮುಖ ಬ್ರಹ್ಮನಿಗೆ ಪ್ರಪೌತ್ರರಾಗಿಯೂ, ವಸಿಷ್ಠ ಪುತ್ರರಾಗಿಯೂ ಮತ್ತು ಬ್ರಹ್ಮನಿಂದಲೇ ಜ್ಯೋತಿ ಶ್ಯಾಸ್ತ್ರೋಪದೇಶ ಹೊಂದಿದವರಾಗಿಯೂ ಇರುವುದರಿಂದ, ಇವರ ವಿಷಯದಲ್ಲಿ ಹೆಚ್ಚಾಗಿ ತಿಳಿಯಪಡಿಸಬೇಕಾದದ್ದು ಏನೂ ತೋರುವುದಿಲ್ಲ. ಈ ಪರಾಶರರೇ ಮೈತ್ರೇಯ ಋಷಿಗಳಿಗೆ ೧೧ ಸಹಸ್ರ ಗ್ರಂಥಗಳಿಂದ ಶತಾಧ್ಯಾಯದೊಡನೆ ಸಾಂಗವಾಗಿ ಬೃಹತ್ಪರಾಶರ ಹೋರಾಶಾಸ್ತ್ರವನ್ನು ಹೇಳಿರುತ್ತಾರೆ.

## ಪರಾಶರರ ಗ್ರಂಥಕ್ಕೆ ಪ್ರಾಶಸ್ತ್ಯ

ಮಯ ಯವನರಿಬ್ಬರೂ, ದಕ್ಷಿಣಗೋಳದ ಜ್ಯೋತಿಷ ಶಾಸ್ತ್ರಕ್ಕೆ ಮಯನು ಸೂರ್ಯಸಿದ್ಧಾಂತಮೂಲವಾಗಿಯೂ, ಯವನಾಚಾರ್ಯನು ಚಂದ್ರನ ಮೂಲವಾಗಿಯೂ ಆಚಾರ್ಯರಾದರು. ।।ಶ್ಲೋಕ।। ಪರಾಶರೋ ಮಣಿತ್ಥಶ್ಚ ಹೋರಾಶಾಸ್ತ್ರ ವಿದೌ ಸ್ಮೃತೌ।। ದೈವಸಂಪದ್ಯುತಾಚಾರ್ಯೌ ಶ್ರೇಷ್ಠಸ್ತತ್ರ ಪರಾಶರಃ।। ಪರಾಶರ ಮಹರ್ಷಿಗಳು ಮಣೀತ್ಥಾಚಾರ್ಯರು ಉತ್ತರಭಾಗದ ಜ್ಯೋತಿಃಶಾಸ್ತ್ರಕ್ಕೆ ಆಚಾರ್ಯರಾದರು, ಮತ್ತು ಈ ಉಪೋದ್ಘಾತದಲ್ಲಿ ಉದಹರಿಸಿರುವ ಪ್ರಕಾರ "ಸೂರ್ಯಪಿತಾ ಮಹೇತ್ಯಾದಿ" ಎಂಬುವ ಶ್ಲೋಕದಲ್ಲಿ ಹೇಳಿರುವ ಪ್ರಕಾರ ಈ ಶಾಸ್ತ್ರಕ್ಕೆ ಹದಿನೆಂಟು ಮಂದಿ ಮಹಾತ್ಮರು ಆಚಾರ್ಯರಾದರು. ಅವರಿಂದುಕ್ತವಾಗಿರುವ ಕೆಲವು ಗ್ರಂಥಗಳು ಸಿಕ್ಕುತ್ತವೆ. ಕೆಲವು ಗ್ರಂಥಗಳು ಸಿಕ್ಕದೆ ನಾಮಮಾತ್ರಕ್ಕೆ ೩೦೦-೪೦೦ ವರ್ಷದ ಹಿಂದೆ ಮಾಡಿರುವ ಅನೇಕ ಗ್ರಂಥಗಳ ವ್ಯಾಖ್ಯಾನಗಳಲ್ಲಿ ಉದಾಹೃತವಾಗಿರುತ್ತೆ.

## ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೆ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಆಯುರ್ದಾಯ ಪ್ರಕರಣ ಪ್ರಾರಂಭಃ

ಅವತಾರಿಕೆ ।। ಈ ಪೂರ್ವೋಕ್ತ ಪ್ರಕರಣದಲ್ಲಿ ಬಾಲಾರಿಷ್ಟ ವಿಷಯ ಹೇಳಲ್ಪಟ್ಟಿರುತ್ತದಷ್ಟೆ. ಜಾತಕಗಳಲ್ಲಿ ಬಾಲಾರಿಷ್ಟವಿಲ್ಲವೆಂಬುವುದು ನಿರ್ಣಯವಾದ ಬಳಿಕ ಆಯುರ್ದಾಯ ನಿರ್ಣಯ ಮಾಡಬೇಕಾಗಿರುವುದರಿಂದ, ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನು ಮಯ, ಯವನ, ಮಣೀತ್ಥ, ಪರಾಶರ ಮೊದಲಾದವರಿಂದ ಹೇಳಲ್ಪಟ್ಟ ಮಾತಾನುಸಾರವಾಗಿ ಸೂರ್ಯಾದಿ (ಲಗ್ನಸಹಿತ) ಗ್ರಹಗಳಿಗೆ ಪರಮಾಯುರ್ನಿರ್ಣಯವನ್ನು ಹೇಳುತ್ತಾನೆ.

### ಗ್ರಹಾಣಾಂ ಪರಮಾಯುರ್ನಿರ್ಣಯಃ

ಮೂಲ।। ಮಯಯವನ ಮಣೀತ್ಥ ಶಕ್ತಿಪೂರ್ವೈರ್ದಿವಸತರಾದಿಷುವತ್ಸರಾಃ ಪ್ರದಿಷ್ಟಾಃ ।। ನವತಿಥಿ ವಿಷಯಾಶ್ವಿಭೂತ ರುದ್ರೈರ್ದಶಸಹಿತಾದಶ ಭಿಸ್ಸ್ವತುಂಗಭೇಷು ।।೧।।

ಟೀಕು।। ಮಯಯವನ ಮಣೀತ್ಥಶಕ್ತಿಪೂರ್ವೈಃ-ಮಯ-ಮಯನೆಂಬ, (ಸೂರ್ಯೋಪಾಸನದಿಂದ ವರಪ್ರಧಾನವನ್ನು ಹೊಂದಿದ) ದಾನವನು, ಯವನ-ಚಂದ್ರೋಪಾಸನದಿಂದ ವರಲಬ್ಧವಾದ ಯವನ ದೇಶಾಧಿಪತಿಯಾದ ಯವನೇಶ್ವರ ನೆಂಬುವನು, ಮಣೀತ್ಥ-ಶ್ರೀ ಚಿಂತಾಮಣಿ ಮಂತ್ರ ಪುರಶ್ಚರಣ ಸಿದ್ಧಿಯನ್ನು ಹೊಂದಿದ ಬ್ರಾಹ್ಮಣ ಶ್ರೇಷ್ಠನು, ಶಕ್ತಿಪೂರ್ವ-ಪರಾಶರ ಮಹರ್ಷಿಗಳು, ಅಂದರೆ ಮಯ, ಯವನ, ಮಣೀತ್ಥ, ಪರಾಶರರಿಂದ, ದಿವಸಕರಾದಿಷು-ಸೂರ್ಯನೇ ಮೊದಲಾದ, ಅಂದರೆ-ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಈ ೭ ಗ್ರಹಗಳಿಗೆ, ಸ್ವತುಂಗಭೇಷು-ಸ್ವ-ತಮ್ಮ (ತಮ್ಮ) ತುಂಗಉಚ್ಚ (ಪರಮೋಚ್ಚಸ್ಥಾನ), ಭೇಷು-ಸ್ಥಾನಗಳಲ್ಲಿರುವಾಗ, ವತ್ಸರಾಃ-ಆಯಾಯ ಗ್ರಹಗಳು ಕೊಡತಕ್ಕ, ಪರಮಾಯುಃ-ಪ್ರಮಾಣವರ್ಷಗಳು, ಪ್ರದಿಷ್ಟಾಃ-ಉಕ್ತವಾಗಿರುತ್ತವೆ. ವಿವರಣೆ-ನವತಿಥಿ ವಿಷಯಾಶ್ವಭೂತ ರುದ್ರಾದಶ-ನವ-ಒಂಭತ್ತು (೯) ತಿಥಿ-ಹದಿನೈದು, (೧ ಪಕ್ಷಕ್ಕೆ ೧೫ ತಿಥಿಗಳು ಪ್ರಸಿದ್ಧ), (೧೫) ವಿಷಯ-ಪಂಚೇಂದ್ರಿಯ ವಿಷಯ ಅಂದರೆ (೫) ಅಶ್ವಿ-(೨) ಎರಡು, ಭೂತ-ಪಂಚ ಮಹಾಭೂತ ಐದು ಪೃಥ್ವೀ, ಅಪ್ಪು, ತೇಜಸ್ಸು, ವಾಯು, ಆಕಾಶ (೪) ರುದ್ರ-ಏಕಾದಶ ರುದ್ರರು ಪ್ರಸಿದ್ಧ (೧೧) ದಶ-ಹತ್ತು (೧೦) ಈ ಅಂಕಗಳು, ದಶಭಿಃ ಸಹಿತಾಃ-ಪ್ರತಿಯೊಂದು ೧೦ನ್ನು ಸೇರಿಸಿ ಸಂಕಲನ ಮಾಡಿದರೆ ಅಂದರೆ, ೯+೧೦-೧೯ ವರ್ಷ ಸೂರ್ಯನಿಗೆ,

೧೫+೧೦-೨೫ ವರ್ಷ ಚಂದ್ರನಿಗೆ, ೫+೧೦-೧೫ ವರ್ಷ ಅಂಗಾರಕನಿಗೆ, ೨+೧೦-೧೨ ವರ್ಷ ಬುಧನಿಗೆ, ೪+೧೦-೧೪ ವರ್ಷ ಬೃಹಸ್ಪತಿಗೆ, ೧೧+೧೦-೨೧ ವರ್ಷ ಶುಕ್ರನಿಗೆ ೧೦+೧೦-೨೦ ವರ್ಷ ಶನಿಗೆ, ಅಂತು ೧೯+೨೫+೧೫+೧೨+೧೫+೨೧+೨೦ = ೧೨೭ ವರ್ಷಗಳು ಎಂದು ಹೇಳಲ್ಪಟ್ಟಿರುತ್ತೆ. ಈ ವಿಷಯಕ್ಕೆ ಹೋರಾಸಾರೇ ॥ಶ್ಲೋಕ॥ ಜ್ಞಾರೇಜ್ಯಾರ್ಕಾ ಸಿತಸಿತ ನಿಶಾನಾಯಕಾಸ್ತುಂಗ ಸಂಸ್ಥಾಃ। ರಾಶೀನಬ್ಧಾಂ ಸ್ತಿಥಿತಿಥಿಮಿತಾನೇಕ ಹೀನಾನ್ನಖಾಂಶ್ಚ॥ ವಿಘ್ನಾದೀಶಾ ಶರಯುತನಖಾಗ್ನೀ ಚಸಂಸ್ಥಾಪ್ತದರ್ಧಂ । ಯಚ್ಛಂತ್ಯಾಯುರ್ಜನನ ಸಮಯೇಚಾಂತರೇಚಾನುಪಾತಾತ್॥ ಎಂದುಕ್ತವಾಗಿರುತ್ತೆ.

### ಪದಕ

| ಗ್ರಹಗಳು | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಪರಮೋಚ್ಛದಲ್ಲಿದ್ದರೆ | ೧೯ | ೨೫ | ೧೫ | ೧೨ | ೧೫ | ೨೧ | ೨೦ |

## ನೀಚಾದಿಹರಣ ಭರಣನಿರ್ಣಯಃ

ಮೂಲ॥ ನೀಚೇಚಾರ್ಧಂ ಪ್ರಸತಿಹಿತ ತಶ್ಚಾಂತರಪ್ಯೇನುಪಾತೋ ।
ಹೋರಾತ್ವಂಶ ಪ್ರತಿಮಯು ಪರೇರಾಶಿತುಲ್ಯಂ ವದಂತಿ ॥
ಹಿತ್ವಾವಕ್ರಂ ರಿಪುಗೃಹಗತೇ ಹ್ರೀಯ್ಯತೇಸ್ವತ್ರಿಭಾಗಃ ।
ಸೂರ್ಯಾಚ್ಛನ್ನದ್ಯುತಿಷು ಚರಭಂ ಪ್ರೋಜ್ಝ್ಯ ಶುಕ್ರಾರ್ಕಪುತ್ರೌ ॥೨॥

ಅವತಾರಿಕೆ॥ ಪರಮನೀಚಾಂಶದಲ್ಲಿದ್ದ ಸೂರ್ಯಾದಿ ಗ್ರಹಗಳು ಕೊಡುವ ಆಯುರ್ದಾಯವನ್ನು ಲಗ್ನಾಯುರ್ದಾಯ ನಿರ್ಣಯ ಪ್ರಕಾರವನ್ನೂ, ಶತ್ರುಕ್ಷೇತ್ರ ಹರಣವನ್ನೂ, ಮೂಢಹರಣವನ್ನೂ ತಿಳಿಸಿರುತ್ತೆ. ನೀಚೇ (ಸೂರ್ಯಾದಿ ಗ್ರಹಗಳು), ಪರಮನೀಚಾಂಶದಲ್ಲಿದ್ದರೆ, ಅರ್ಧಂ-ಪೂರ್ವದಲ್ಲಿ ಹೇಳಲ್ಪಟ್ಟ ಆಯುರ್ದಾಯ ಸಂವತ್ಸರಗಳಲ್ಲಿ ಅರ್ಧವನ್ನು, ಹ್ರಸತಿ-ಹ್ರಾಸಮಾಡುವರು, ಅದು ಹೇಗೆಂದರೆ :- ಸೂರ್ಯನಿಗೆ ೧೯ ವರ್ಷ ಪರಮೋಚ್ಚಾಯಸ್ಸು, ೧೯÷೨=೯ ½, ೯ ಮತ್ತು ೬ ತಿಂಗಳು ಚಂದ್ರನಿಗೆ, ೨೫÷೨=೧೨½॥=೧೨ವರ್ಷ ೬ ತಿಂಗಳು, ಕುಜನಿಗೆ ೧೫÷೨=೭½॥, ೭ ವರ್ಷ ೬ ತಿಂಗಳು, ಬುಧನಿಗೆ ೧೨÷೨=೬ವರ್ಷ ಗುರುವಿಗೆ ೧೫÷೨=೭½॥, ೭ ವರ್ಷ ೬ ತಿಂಗಳು ಶುಕ್ರನಿಗೆ ೨೧÷೨=೧೦½॥,=೧೦ ವರ್ಷ ೬ ತಿಂಗಳು, ಶನಿಗೆ ೨೦÷೨=೧೦=೧೦

ವರ್ಷ ಪರಮನೀಚದಲ್ಲಿದ್ದರೆ ಈ ಪ್ರಕಾರ ಆಯುರ್ದಾಯ ಬರುವುದು. ತತಶ್ಚಾಂತರಸ್ಥೇನುಪಾತಃ- ತತಃ ಆ ಪರಮೋಚ್ಚ-ಧ್ರುವಕ್ಕು, ಪರಮನೀಚಾಂಶ ಧ್ರುವಕ್ಕು ಅಂತರಸ್ಥೇ- ಮಧ್ಯದಲ್ಲಿದ್ದರೆ, ಅನುಪಾತಃ-ತ್ರೈರಾಶಿಕ ಕ್ರಮ ಪ್ರಕಾರದಿಂದ ಆಯುಃ ಪ್ರಮಾಣ ನಿರ್ಣಯ ಮಾಡಬೇಕು. ಅದು ಹೇಗೆಂದರೆ-ಸೂರ್ಯಾದಿ ಸಕಲ ಗ್ರಹಗಳಿಗೂ ಪರಮೋಚ್ಚ ಪರಮನೀಚಕ್ಕೆ ಮಧ್ಯೆ ೭ ರಾಶಿಗಳಿರುತ್ತವೆ. ಒಂದು ರಾಶಿಗೆ ೩೦ ಭಾಗ, ಒಂದು ಭಾಗಕ್ಕೆ ೬೦ ಲಿಪ್ತಿ, ಒಂದು ಲಿಪ್ತಿಗೆ ೬೦ ವಿಲಿಪ್ತಿ, ಈ ಪ್ರಕಾರ ೬ ರಾಶಿಗಳಿಗೂ ೧೦, ೮೦೦ ಲಿಪ್ತಿಗಳ ಕ್ಷೇತ್ರವಾಗುವುದು. ಈ ರಾಶಿಗಳು ಗ್ರಹಗಳ ಪರಮೋಚ್ಚಾಂಶಕ್ಕಿಂತ ಅಧಿಕವಾಗಿದ್ದರೆ ಆಗ ಪರಮೋಚ್ಚ ಭಾಗದವರಿಗು ಕಳೆದು ಹಾಕಿ ಶೇಷವನ್ನು ಲಿಪ್ತಿಗಳಾಗಿ ಮಾಡಿಕೊಳ್ಳಬೇಕು. ಆ ಲಿಪ್ತಿಗಳೇ ಗ್ರಹಭುಕ್ತಿ ಲಿಪ್ತಿಗಳೆಂದು ತಿಳಿಯತಕ್ಕದು. ಆ ಗ್ರಹಗಳಿಗೆ ಪರಮನೀಚಾಂಶಕ್ಕೆ ಹೇಳಲ್ಪಟ್ಟ ಆಯುಃ ಪ್ರಮಾಣ ಸಂವತ್ಸರ ಮಾಸಗಳನ್ನು ಮಾಡಿಕೊಳ್ಳತಕ್ಕದ್ದು. ಈ ಪ್ರಕಾರ ಮಾಡಿದರೆ ಪರಮನೀಚಾಂಶಗತ ಸೂರ್ಯಾದಿ ಗ್ರಹಗಳಿಗೆ ಮಾಸಗಳು ಈ ಕೆಳಗೆ ಪದಕಮಾಡಿ ಬರೆದಿರುತ್ತೆ.

## ಭಗಣಾರ್ಧ ಲಿಪ್ತಿಗೆ ಸೂರ್ಯಾದಿ ಮಾಸಪದಕ

| ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ಗ್ರಹಗಳು |
|---|---|---|---|---|---|---|---|
| ೧೯ | ೨೫ | ೧೫ | ೧೨ | ೧೫ | ೨೧ | ೨೦ | ಪರಮೋಚ್ಚ ವರ್ಷ |
| ೧೧೪<br>೯-೬ | ೧೫೦<br>೧೨-೬ | ೯೦<br>೭-೬ | ೭೨<br>೬-೦ | ೯೦<br>೭-೬ | ೧೨೬<br>೧೦-೬ | ೧೨೦<br>೧೦ | ಭಗಣಾರ್ಧ ಪರಮನೀಚ<br>ವರ್ಷ ಮಾಸಾಃ |

ಪ್ರತಿ ಗ್ರಹಕ್ಕೂ ಭಗಣಲಿಪ್ತಿ ೨,೧೬,೦೦೦ ಆಗಿರುತ್ತೆ. ಇದರಲ್ಲಿ ಭಗಣಾರ್ಧಲಿಪ್ತಿ, ೧೦,೮೦೦ ಇದಕ್ಕೆ ಸೂರ್ಯನಿಗೆ ಪರಮೋಚ್ಚಕ್ಕೆ ೧೯ ವರ್ಷವಾದ್ದರಿಂದ ಪರಮನೀಚಕ್ಕೆ ೯ ವರ್ಷ, ೬ ತಿಂಗಳು ಬಂದು, ಪರಮನೀಚಕ್ಕೆ ೯॥ ವರ್ಷವಾದರೆ ಉಚ್ಚದಿಂದ ನೀಚಕ್ಕೆ ಬರುವವರಗೆ ಮಧ್ಯದಲ್ಲಿರುವ ಗ್ರಹ ಭುಕ್ತಿ ಲಿಪ್ತಿಗಳಿಗೆ ಎಷ್ಟು ಬರಬೇಕೆಂಬುದನ್ನು ತ್ರೈರಾಶಿಕದಿಂದ ತಿಳಿಯಬೇಕು. ಇದಕ್ಕೆ ತ್ರೈರಾಶಿಕ ಸೂತ್ರದಲ್ಲಿ ಶ್ಲೋಕ ॥ ಪ್ರಮಾಣಮಿಚ್ಛಾಚ ಸಮಾನಜಾತಿ ರಾದ್ಯಂತಯೋಸ್ಯಃ ಫಲಮನ್ಯಜಾತಿಃ । ಮಧ್ಯೇತದಿಚ್ಛಾ ಹತಮಾದ್ಯಹೃತ್ಯಾ ದಿಚ್ಛಾಫಲಂ ವ್ಯಸ್ತವಿಧಿರ್ವಿಲೋಮೇ ॥ ಎಂದು ಲೀಲಾವತಿಯಲ್ಲುಕ್ತವಾಗಿರುತ್ತೆ. ತ್ರೈರಾಶಿಕ ಕ್ರಮ ಹೇಗೆಂದರೆ :- ಎರಡು ಬೇರೆಬೇರೆ ಜಾತಿಗಳಾಗಿಯೂ, ಮತ್ತೊಂದು ಇವುಗಳಲ್ಲಿ

ಒಂದಾಗಿಯೂ ಇದ್ದು, ಸಜಾತೀಯಗಳಾದ ೧ನೇ - ಎರಡನೇಯದಕ್ಕೆ ಏನು ಸಂಬಂಧವಿರುವುದೋ, ಅಂಥಾ ಸಂಬಂಧವುಳ್ಳ ೩ನೇ ಸಂಖ್ಯೆಗೆ ತಕ್ಕ ೪ನೇ ಸಂಖ್ಯೆ ಯಾವುದೆಂದು ತಿಳಿದುಕೊಳ್ಳುವಿಕೆಯಾಗಿದೆ. ಈ ಕ್ರಮದಲ್ಲಿ ಯಾವಾಗಲೂ ೩ ಸಂಖ್ಯೆಗಳು ತಿಳಿದು ಇದ್ದರೆ ಅವುಗಳ ಮೂಲಕ ನಾಲ್ಕನೆ ಸಂಖ್ಯೆಯು ತಿಳಿಯುವುದಾದ್ದರಿಂದ ಇದಕ್ಕೆ ತ್ರೈರಾಶಿಕವೆಂಬುವ ಹೆಸರುಂಟಾಗಿರುತ್ತೆ. ಇದರಲ್ಲಿ ಕೊಟ್ಟ ಮೂರು ಸಂಖ್ಯೆಗಳ ಒಳಗೆ ೨ ಒಂದು ಜಾತಿಯ ಸಂಖ್ಯೆಗಳಾಗಿಯೂ, ಉಳಿದ ೧ ಯಾವ ಜಾತಿಯದಾಗಿದೆಯೋ, ೪ ಸಂಖ್ಯೆ ಅದೇ ಜಾತಿಯಾಗಿ ಬರುವುದು.

೧.ಯಾವ ಜಾತಿಯ ಸಂಖ್ಯೆಯಲ್ಲಿ ಪ್ರಶ್ನೆಗೆ ಉತ್ತರ ಬರುವುದೋ ಅಂಥಾ ಸಂಖ್ಯೆಯನ್ನು ೩ ನೇ ಸ್ಥಳದಲ್ಲಿ ಬರೆಯುವುದು.

೨.ಆಮೇಲೆ ಉತ್ತರ ಹೆಚ್ಚಾದದ್ದಾಗಿ ಬರುವುದೋ, ಅಥವಾ ಕಡಿಮೆಯಾದದ್ದಾಗಿ ಬರುವುದೋ ಅದನ್ನು ಆಲೋಚಿಸಿಕೊಂಡು, ಹೆಚ್ಚಾದದ್ದಾಗಿ ಬರುವುದಾದರೆ ಹೆಚ್ಚಾದ ಸಂಖ್ಯೆಯನ್ನು ಕಡಿಮೆಯಾದದ್ದಾಗಿ ಬರುವುದಾದರೆ ಕಡಿಮೆಯಾದ ಸಂಖ್ಯೆಯನ್ನೂ ಎರಡನೇ ಸ್ಥಳದಲ್ಲಿ ಬರೆಯತಕ್ಕದ್ದು.

೩.ತರುವಾಯ ೧ನೇ ೨ನೇ ಸ್ಥಳಗಳ ಸಂಖ್ಯೆಯನ್ನು ಸಮರಾಶಿಗೆ ತೆಗೆದುಕೊಂಡು ವಿಧಿಪ್ರಕಾರ ೨-೩ನೇ ಸ್ಥಳಗಳ ಸಂಖ್ಯೆಗಳನ್ನು ಗುಣಿಸಿ, ಲಬ್ಧವನ್ನು ೧ನೇ ಸಂಖ್ಯೆಯಿಂದ ಭಾಗಿಸಿದರೆ ಬರುವ ಸಂಖ್ಯೆಯೇ ಬೇಕಾದ ಉತ್ತರವಾಗಿರುವುದು. ಇದು ೩ನೇ ಸಂಖ್ಯೆಯು ಯಾವ ಜಾತಿಯೋ ಅದೇ ಜಾತಿಯದಾಗಿರುವುದು.

## ಉದಾಹರಣೆ

ಸೂರ್ಯನು ವೃಷಭದಲ್ಲಿ ೧೩ ಭಾಗಗಳ ಮೇಲೆ ೪೮ ಲಿಪ್ತಿ ಅತಿಕ್ರಮಿಸಿ ೪೯ನೇ ವಿಲಿಪ್ತಿಯಲ್ಲಿದ್ದಾನೆ. (ಇದಕ್ಕೆ ರಾಶ್ಯಾದಿ ೧-೧೩, ೪೮-೪೯, ಸೂರ್ಯನಿಗೆ ಮೇಷದಲ್ಲಿ ೦-೧೦-೦-೦ ಪರಮೋಚ್ಚಭಾಗ) ಆದ್ದರಿಂದ ೧-೧೩, ೪೮-೪೯, ರಲ್ಲಿ ರಾ ೧೦-೦-೦ ಕಳೆದರೆ ೧-೩, ೪೮-೪೯ ಬರುತ್ತೆ. ಇದಕ್ಕೆ ವಿಲಿಪ್ತಿಗಳು ೨೦೨೮ ಲಿಪ್ತಿ, ೪೯ ಲಿಪ್ತಿ ಅಥವಾ (೧,೨೧,೭೨೯) ವಿಲಿಪ್ತಿಗಳಾಗುತ್ತದೆ.

## ತ್ರೈರಾಶಿಕನ್ಯಾಸ

| ಪ್ರಮಾಣ | ಫಲ | ಇಚ್ಛ |
|---|---|---|
| ಭಗಣಾರ್ಧ. ಲಿಪ್ತಿಗಳು. ೧೦,೮೦೦. | ರವಿ ಪರಮನೀಚ. ಮಾಸಗಳು. ೧೧೪. | ರವಿಭುಕ್ತಿ. ಲಿಪ್ತಿಗಳು. ೨,೦೨೮. |

ಇಲ್ಲಿ ಇಚ್ಛಾಸಂಖ್ಯೆ ೨,೦೨೮ಕ್ಕೆ ಇಚ್ಛಾ, ರವಿಭುಕ್ತಿ, ಲಿಪ್ತಿ ೨,೦೨೮ ರಿಂದ ಗುಣಿಸಲಾಗಿ ೨,೩೧,೯೯೨ ಆಗುತ್ತದೆ. ಈ ಸಂಖ್ಯೆಯನ್ನು ಭಗಣಾರ್ಧ ಲಿಪ್ತಿ ೧೦,೮೦೦ ರಿಂದ ಭಾಗಿಸಲಾಗಿ ಬಂದ ತಿಂಗಳು ೨೧ ಆಯಿತು. ೪,೩೯೨ ಶೇಷ, ಇದನ್ನು ೩೦ ರಿಂದ ಗುಣಿಸಿ ಬಂದ ೧,೩೧,೭೬೦ಕ್ಕೆ ಪುನಃ ಭಗಣಾರ್ಧ ಲಿಪ್ತಿ ೧೦,೮೦೦ ರಿಂದ ಭಾಗಿಸಲಾಗಿ ಭಾಗಲಬ್ಧ ೧೨ ದಿನವಾಯಿತು. ಶೇಷ ೨, ೧೬೦ನ್ನು ೬೦ ರಿಂದ ಗುಣಿಸಿದರೆ ಬಂದ ಸಂಖ್ಯೆ ೧,೨೯,೬೦೦, ಪುನಃ ಭಗಣಾರ್ಧಲಿಪ್ತಿ ೧೦,೮೦೦೦ ರಿಂದ ಭಾಗಿಸಲಾಗಿ ಬಂದ ಭಾಗಲಬ್ಧ ೧೨ ಘಳಿಗೆಗಳು ಆಯಿತು. ಶೇಷ ಉಳಿಯಲಿಲ್ಲ. ಶೇಷ ಉಳಿದರೆ ಪುನಃ ೬೦ ರಿಂದ ಗುಣಿಸಿ ವಿಘಟಿಕೆಗಳಾಗಿ ಮಾಡಿಕೊಂಡು ಪುನಃ ೧೦,೮೦೦ ರಿಂದ ಭಾಗಿಸಿದರೆ ಬರುವ ಸಂಖ್ಯೆಯು ವಿಘಟಿಕೆಗಳಾಗಿರುವುದು. ಈ ರೀತಿಯಾಗಿ ಬಂದ ೧ ಸಂ ॥೯ ತಿಂ॥ ೧೨ ದಿವಸ-೧೨ ಘಳಿಗೆ, ಇದನ್ನು ಪರಮೋಚ್ಚಸ್ಥಾನರಾಶಿ ಪರಮಾಯಃ ಪ್ರಮಾಣ ೧೯ ವರ್ಷಗಳಲ್ಲಿ ಕಳೆದುಹಾಕಿದರೆ ಸಂ ॥೧೭, ದಿವಸ ೧೭, ಘಳಿಗೆ ೪೮ ಇದು ಪರಮೋಚ್ಚ ಭಾಗಬಿಟ್ಟು ನೀಚಕ್ಕೆ ಹೋಗುವರಾಶಿ ೧ ಭಾಗ ೧೩ ಲಿಪ್ತಿ ೪೮ರಲ್ಲಿರುವ ಸೂರ್ಯನು ಕೊಡುವ ಪರಮಾಯುಃ ಪ್ರಮಾಣವಾಗಿರುವುದು. ಪರಮ ನೀಚಾಂಶ ತುಲಾರಾಶಿಯಲ್ಲಿ ೧೦ ಭಾಗದಲ್ಲಿದ್ದರೆ ತನ್ನುಚ್ಚಕ್ಕೆ ಹೋಗುವಾಗ ೮೨೯ ವಿಲಿಪ್ತಿಯಲ್ಲಿದ್ದ ಸೂರ್ಯನಿಗೆ ಈ ಪ್ರಕಾರ ಗಣಿತ ಮಾಡಲಾಗಿ ಸಂವತ್ಸರ ೧, ಮಾಸ ೯, ದಿನ ೧೨, ಘಟಿಕಾ ೧೨ ಬರುವುದು. ಇದು ನೀಚ ಪರಮನೀಚಸ್ಥಾನದಲ್ಲಿದ್ದ ಸೂರ್ಯನಿಗೆ ಹೇಳುವಾಗ ಸಂವತ್ಸರ ೯, ಮಾಸ ೬ ರಲ್ಲಿ ಸೇರಿಸಿದರೆ ಬರುವ ಮೊತ್ತವು ಸಂ ॥೧೨, ಮಾಸ ೩, ದಿವಸ ೧೨, ಘಳಿಗೆ ೧೨, ಪರಮ ನೀಚದಲ್ಲಿದ್ದು ಪರಮನೀಚರಾಶಿ ೭ ಭಾಗ, ೧೩ ಲಿಪ್ತ, ೪೮ ಭುಕ್ತಿ ಸೂರ್ಯನು ಕೊಡುವ ಆಯುಃಪರಿಮಾಣವಾಗಿರುವುದೆಂದು ತಿಳಿಯತಕ್ಕದ್ದು. ಈ ಪ್ರಕಾರ ಉಳಿದ ಗ್ರಹಗಳಿಗೆ ಅನುಪಾತ ಮೂಲದಿಂದ ಆಯುರ್ದಾಯ ನಿರ್ಣಯ ಮಾಡತಕ್ಕದ್ದು.

## ೨ನೇ ಉದಾಹರಣೆ

ಯಾವ ಗ್ರಹವು ಪರಮೋಚ್ಚದಲ್ಲಿರುವುದೋ ಆ ಗ್ರಹಕ್ಕೆ ಹೇಳಿದ ವರ್ಷ ಸಂಪೂರ್ಣವಾಗಿ ಆಯಸ್ಸು ಕೊಡುತ್ತದೆ. ಮತ್ತು ಪರಮನೀಚದಲ್ಲಿದ್ದರೆ ಆ ಗ್ರಹಕ್ಕೆ ಉಕ್ತವಾಗಿರುವ ವರ್ಷಗಳಲ್ಲಿ ಅರ್ಧಭಾಗ ಆಯುಸ್ಸು ಕೊಡುವನು. ಸೂರ್ಯನಿಗೆ ಮೇಷದಲ್ಲಿ ೧೦ನೇ ಭಾಗಕ್ಕೆ ಸಂಪೂರ್ಣ ೧೯ ವರ್ಷ ದೆಶೆ ಬರುವುದು. ಈ ಗ್ರಹ ಪರಮನೀಚ ತುಲಾರಾಶಿಯಲ್ಲಿ ೧೦ನೇ ಭಾಗದಲ್ಲಿದ್ದರೆ ೯ ಮತ್ತು ೬ ತಿಂಗಳು ಮಾತ್ರ ಬರುತ್ತದೆ. ಮತ್ತು ನೀಚರಾಶಿ ಧ್ರುವಕ್ಕೂ, ಉಚ್ಚಧ್ರುವಕ್ಕೂ ಮಧ್ಯದಲ್ಲಿ ಇದ್ದರೆ, ಅನುಪಾತ ಮೂಲವಾಗಿ ತಿಳಿಯತಕ್ಕದ್ದು. ಉಚ್ಚಸಮೀಪ ತತ್ಕಾಲಗ್ರಹ ಸ್ಫುಟವಾಗಿದ್ದರೆ ಉಚ್ಚರಾಶ್ಯಾದಿ ಸಂಗಡವೂ, ನೀಚರಾಶ್ಯಾದಿಯಲ್ಲಿ ಗ್ರಹವಿದ್ದರೆ ನೀಚರಾಶಿಯ ಸಂಗಡವೂ ತ್ರೈರಾಶಿಕ ರೀತಿಯಿಂದ ತಿಳಿಯತಕ್ಕದ್ದು.

## ೩ನೇ ಉದಾಹರಣೆ

ಗ್ರಹಸ್ಫುಟದಲ್ಲಿ ನೀಚವನ್ನು ಕಳೆದು ಉಳಿದ ಅಂಶಕ್ಕೆ ಆ ಗ್ರಹಕ್ಕೆ ಉಕ್ತವಾದ ದಶಾವರ್ಷದ ಅರ್ಧವನ್ನು ನೀಚವರ್ಷದಿಂದ ಗುಣಿಸಿ ೬ ರಾಶಿಯಿಂದ ಭಾಗ ಮಾಡಿ ಉಳಿದ ಲಬ್ಧ ಅದೇ ಗ್ರಹದ ಉಚ್ಚ ವರ್ಷದಲ್ಲಿ ಕಳೆಯಬೇಕು. ಉಳಿದರೆ ಶೇಷ ಆ ಗ್ರಹದ ವರ್ಷಾದಿ ದೆಶೆಯಾಗುತ್ತದೆ. ಮತ್ತು ಆ ಗ್ರಹಕ್ಕೆ ನೀಚ ರಾಶ್ಯಂಶದಲ್ಲಿ ವ್ಯವಕಲನ ಮಾಡದಿದ್ದರೆ ನೀಚಸ್ಪಷ್ಟವನ್ನು ಗ್ರಹಸ್ಪಷ್ಟದಲ್ಲಿ ವ್ಯವಕಲನ ಮಾಡಬೇಕು. ಶೇಷದಲ್ಲಿ ನೀಚವರ್ಷಾದಿ ಗುಣಾಕಾರಮಾಡಿ ಆರುರಾಶಿಯಿಂದ ಭಾಗ ಕೊಡಬೇಕು. *ಭಾಗಲಬ್ಧವನ್ನು ನೀಚವರ್ಷಾದಿಯಲ್ಲಿ ಸೇರಿಸಬೇಕು. ಇದು ಆ ಗ್ರಹದ ದೆಶೆಯಾಗುವುದು.

## ೪ನೇ ಉದಾಹರಣೆ

ಶುಕ್ರಸ್ಪಷ್ಟ ೩-೨೫-೧೭-೩೮, ಶುಕ್ರೋಚ್ಚ ೧೧-೨೭-೦-೦, ನೀಚ-೫ ೨೭-೦-೦, ಉಚ್ಚವರ್ಷ ೨೧-೦-೦, ನೀಚದಲ್ಲಿ ೧೦-೬-೦-೦, ಸ್ಪಷ್ಟ ಕಳೆದರೆ ೨-೧-೪೨-೨೨, ನೀಚವರ್ಷಕ್ಕೆ ಗುಣಿಸಿ ಭಾಗಹರಕ್ಷೇಪಕ ೬-೦-೦-೦ ರಿಂದ ಭಾಗಮಾಡಿದರೆ ಬಂದ ಲಬ್ಧ ೪-೨-೫-೪೯, ಶುಕ್ರೋಚ್ಚವರ್ಷ ೨೧ರಲ್ಲಿ ವ್ಯವಕಲನ ಮಾಡಿದರೆ ಶೇಷವರ್ಷ ೧೬-೨-೫-೪೯ ಇದು ಶುಕ್ರದೆಶೆಯಾಯಿತು. ಯಾವಾಗ ನೀಚದಲ್ಲಿ ಸ್ಪಷ್ಟಗ್ರಹ ವ್ಯವಕಲನ ಮಾಡದೆ ಇದ್ದರೆ -

---

* ಸ್ವೋಚ್ಚಶುದ್ಧೋಗ್ರಹ ಶೋಧ್ಯಃಷಡ್ರಾಶ್ಯೂನೋಭಮಂಡಲಾತ್ ।। ಸ್ವಪಿಂಡಗುಣಿತೋಭುಕ್ತೋ ರಾಶಿಮಾನೇನವತ್ಸರಾಃ ।।೧।।

## ೫ನೇ ಉದಾಹರಣೆ

ಕುಜಸ್ಪಷ್ಟ ೪-೯-೪೫-೫೩, ಉಚ್ಚ ೯-೨೮-೦-೦, ನೀಚ ೩-೨೮-೦-೦, ಉಚ್ಚವರ್ಷ ೧೫-೦-೦-೦ ನೀಚವರ್ಷ ೭-೬-೦-೦, ಸ್ಪಷ್ಟದಲ್ಲಿ ನೀಚ ವ್ಯವಕಲನ ಮಾಡಿದರೆ ೦-೧೧-೪೫-೫೩, ಇದರಲ್ಲಿ ನೀಚವರ್ಷ ಗುಣಾಕಾರಮಾಡಿ ಕ್ಷೇಪಕ ಷಡ್ರಾಶಿ ೬-೦-೦-೦ ರಿಂದ ಭಾಗಹಾರ ಮಾಡಿದರೆ ಬಂದ ಲಬ್ಧ ೦-೫-೨೫-೨೮ ಇದನ್ನು ನೀಚವರ್ಷಕ್ಕೆ ಸಂಕಲನೆ ಮಾಡಿದರೆ ೭-೧೧-೨೬-೨೮ ಇದು ಕುಜದಶೆ ಆಯಿತು. ಇದೇ ಪ್ರಕಾರ ಸರ್ವಗ್ರಹಗಳಿಗೂ ಆಯುರ್ದಾಯ ತಿಳಿಯತಕ್ಕದ್ದು.

## ೬ನೇ ಲಗ್ನದಶೆಗೆ ಉದಾಹರಣೆ

ಲಗ್ನದಶೆ ಹೇಗೆಂದರೆ-ಲಗ್ನದಲ್ಲಿ ಎಷ್ಟನೇ ನವಾಂಶದಲ್ಲಿ ಭುಕ್ತವಾಗಿರುತ್ತೋ ಅಷ್ಟು ವರ್ಷ ಲಗ್ನದೆಶೆಯಾಗುತ್ತದೆ. ಲಗ್ನಸ್ಪಷ್ಟ ೭-೭೫-೧೦-೧೭ ಆಗಿದೆ, ೨೩-೨೦ ಅಂಶಪರ್ಯಂತ ೭ ನವಾಂಶ ಭುಕ್ತವಾಗಿರುತ್ತದೆ. ಇದಕ್ಕೆ ೭ ವರ್ಷ ಬರುತ್ತದೆ. ಶೇಷ ೧-೫೦ಕ್ಕೆ ತ್ರೈರಾಶಿಕ ಹೇಗೆಂದರೆ, ೧-೫೦ ಕ್ಕೆ ೧೨ ರಿಂದ ಗುಣಿಸಿದರೆ ೩-೨೦ ರಿಂದ ಭಾಗಮಾಡಿದರೆ ಲಬ್ಧ ೬ ತಿಂಗಳು ಬರುತ್ತೆ. ಶೇಷವನ್ನು ೧೨೦ ಕ್ಕೆ ೩೦ ರಂದ ಗುಣಿಸಿದರೆ ೩-೨೦ ಅಂಶಕಲಾ ೨೦೦ ರಿಂದ ಭಾಗಮಾಡಿದ ಲಬ್ಧ ೧೮ ದಿನವಾಗುತ್ತದೆ. ಶೇಷ ಏನೂ ಉಳಿಯಲಿಲ್ಲ. ಒಂದು ವೇಳೆ ಶೇಷ ಉಳಿದರೆ ೬೦ ರಿಂದ ಗುಣಿಸಿ ೨೦೦ ರಿಂದ ಭಾಗ ಮಾಡಿದರೆ ಘಳಿಗೆಗಳು ಬರುತ್ತದೆ. ಇದು ವರ್ಷ ೭, ಮಾಸ ೬, ದಿನ ೧೮, ಘಳಿಗೆ ೦ ಇದು ಲಗ್ನದಶೆ ಆಗುತ್ತದೆ. ಇದರಲ್ಲಿ ಕೆಲವರ ಅಭಿಪ್ರಾಯವೇನೆಂದರೆಃ- ಲಗ್ನಸ್ಪಷ್ಟದಲ್ಲಿ ಎಷ್ಟು ರಾಶಿಗಳು ಭುಕ್ತವಾಗಿರುವವ್ರೋ, ಅಷ್ಟು ವರ್ಷ ಲಗ್ನದಶೆ ಆಗುತ್ತದೆ. ಆದರೆ ಈ ಲಗ್ನ ಸ್ಪಷ್ಟದಲ್ಲಿ ೭ ರಾಶಿ ಭುಕ್ತವಾಗಿದೆ. ಇದಕ್ಕೆ ೭ ವರ್ಷವಾಯಿತು. ಉಳಿದದ್ದು ೨೫-೧೦-೧೭ ಇದರ ವಿಕಲ್ಪ ಪಿಂಡ ೯೦, ೬೧೭ ತಿಂಗಳ ಪ್ರಮಾಣ ೧೨ ರಿಂದ ಗುಣಿಸಿದರೆ ೧೦, ೮೭, ೪೦೪ ಆಗುತ್ತದೆ. ಅಂಶ ೩೦ರ ವಿಕಲ್ಪ ಪಿಂಡ ೧೦,೮೦೦ರಿಂದ ಭಾಗ ಮಾಡಿದರೆ ಬಂದ ಲಬ್ಧವೇ ದಿವಸವಾಗುವುದು. ಪುನಃ ಉಳಿದ ಶೇಷವನ್ನು ೬೦ ರಿಂದ ಗುಣಿಸಿ ೧೦,೮೦೦ರಿಂದ ಭಾಗಿಸಿದರೆ ಬರುವ ಲಬ್ಧವೇ ಘಳಿಗೆಗಳಾಗಿರುವುದು. ಈ ಪ್ರಕಾರವಾಗಿ ಲಗ್ನದಶಾ ೭-೧೦-೨-೩ ಆಗುತ್ತದೆ. ಈಗ ಎರಡು ಪ್ರಕಾರದಿಂದ ಲಗ್ನದಶೆಯನ್ನು ಮಾಡುವುದಕ್ಕೆ ಉದಾಹರಣೆ ತೋರಿಸಿದೆ. ಇದರಲ್ಲಿ ಯಾವುದನ್ನು ನಿಶ್ಚಯ ಮಾಡಬೇಕೆಂದರೆ :- ಷಡ್ವರ್ಗದಲ್ಲಿ ಲಗ್ನಾಧಿಪತಿಯ

ಬಲ ಹೆಚ್ಚಾಗಿದ್ದರೆ, ಆ ರಾಶಿ ತುಲ್ಯ ವರ್ಷ ಅಥವಾ ಲಗ್ನ ನವಾಂಶೇಶ ಬಲಿಷ್ಠನಾಗಿದ್ದರೆ ರಾಶಿ ತುಲ್ಯದಶೆಯನ್ನು ಬಿಟ್ಟು, ಅಂಶತುಲ್ಯ ವರ್ಷಲಗ್ನದಶ ಆಗುವುದು. ಆ ಗ್ರಹಗಳ ಬಲಾಬಲಗಳ ಮೇಲೆ ವಿಚಾರ ಮಾಡಿ ನಿರ್ಣಯ ಮಾಡತಕ್ಕದ್ದು.

## ೭ನೇ ಲಗ್ನಾಯುರ್ದಾಯಕ್ಕೆ ಉದಾಹರಣೆ

ಲಗ್ನಾಯುರ್ದಾಯಕ್ರಮಃ- ಹೋರಾತು-ಲಗ್ನವಾದರೆ, ಅಂಶಪ್ರತಿಮಂ-ಸಂದು ಹೋದ ಅಂಶಸಮಾನವಾದ ವರ್ಷಸಂಖ್ಯೆ ಬರುವುದು. ಅದು ಹೇಗೆಂದರೆಃ- ಲಗ್ನದವರಿಗೂ ಮೇಷಾದಿ ರಾಶಿಗಳನ್ನು ಬಿಟ್ಟು ಲಗ್ನದಲ್ಲಿ ಸಂದುಹೋದ ಭಾಗ (ಅಂಶ) ಕಲೆ ಮೊದಲಾದುದನ್ನು ಲಿಪ್ತೀಕರಿಸಿ ಒಂದು ನವಾಂಶಕ್ಕೆ ೨೦೦ ಲಿಪ್ತಿ ಆದ್ದರಿಂದ ೨೦೦ರಿಂದ ಭಾಗಹಾರ ಮಾಡಿದರೆ, ಒಂದು ಲಿಪ್ತಿಗತ ನವಾಂಶ ಸಂಖ್ಯೆಯಾಗುವುದು. ಈ ಪ್ರಕಾರ ಎಷ್ಟು ನವಾಂಶಗಳು ಸಂದಿರುವುದೋ ಅಷ್ಟು ಸಂವತ್ಸರಗಳು. ಶೇಷಲಿಪ್ತಿಗಳನ್ನು ೧೨ರಿಂದ ಗುಣಿಸಿ ೨೦೦ರಿಂದ ಭಾಗಿಸಲು ಬಂದ ಲಬ್ಧವೇ ಮಾಸವಾಗಿಯೂ, ಪುನಃ ಶೇಷವನ್ನು ೩೦ರಿಂದ ಗುಣಿಸಿ ೨೦೦ ರಿಂದ ಭಾಗಿಸಿದರೆ ಬರುವ ಲಬ್ಧವೇ ದಿನಗಳಾಗಿಯೂ, ತಚ್ಛೇಷವನ್ನು ೬೦ ರಿಂದ ಗುಣಿಸಿ ೨೦೦ ರಿಂದ ಭಾಗಿಸಿದರೆ ಬರುವ ಲಬ್ಧವೇ ಘಳಿಗೆಗಳಾಗಿಯೂ ಇರುವುದು. ಈ ಪ್ರಕಾರ ಲಗ್ನಾಯುರ್ದಾಯ ಮಾಡಬೇಕು. ಆದರೆ ಕೆಲವರು, ರಾಶಿತುಲ್ಯಂ-ರಾಶಿಗೆ ಸಮಾನವಾಗಿ, ವರ್ಷಗಳೆಂದು, ವದಂತಿ-ಹೇಳುವರು. ಅದು ಹೇಗೆಂದರೆ :- ಮೇಷ ಮೊದಲುಗೊಂಡು ಲಗ್ನದವರಿಗೆ ಎಣಿಸಿದರೆ ಎಷ್ಟು ಸಂಖ್ಯೆಯಾಗುವುದೋ ಅಷ್ಟು ಸಂಖ್ಯೆ ಲಗ್ನಾಯುರ್ದಾಯವಾಗುವುದು. ಆಮೇಲೆ ಲಗ್ನದಲ್ಲಿ ಭುಕ್ತಭಾಗಗಳ ಲಿಪ್ತಿಗಳನ್ನು ಮಾಡಿ ೧೨ರಿಂದ ಗುಣಿಸಿ ರಾಶಿಲಿಪ್ತಾಯಗಳಾದ ೧೮೦೦ ರಿಂದ ಭಾಗ ಮಾಡಿದರೆ ಬರುವ ಲಬ್ಧವು ಮಾಸವಾಗಿರುವುದು. ಶೇಷವನ್ನು ೩೦ರಿಂದ ಗುಣಿಸಿ ದಿನಗಳಾಗಿಯೂ, ೬೦ ರಿಂದ ಗುಣಿಸಿ ಘಳಿಗೆಗಳಾಗಿಯೂ, ಮಾಡಿದರೆ ಲಗ್ನದಶೆ ಬರುವುದು.

ಈ ವಿಷಯಕ್ಕೆ ಶ್ಲೋಕ॥ ಲಗ್ನರಾಶಿ ಸಮಾಂಶಾಬ್ದಾ ಮಾಸಾದ್ಯಾನನು ಪಾತತಃ। ಲಗ್ನಾಯುರ್ದಾಯ ಮಿಚ್ಛಂತಿ ಹೋರಾಶಾಸ್ತ್ರವಿಶಾರದಾಃ ॥೨॥ ಎಂದು ಮಣೀತ್ಥರ 'ವಾಕ್ಯವಿರುತ್ತೆ. ಇದರಲ್ಲಿ ಕೆಲವರು ಲಗ್ನದಲ್ಲಿ ನವಾಂಶಾಧಿಪತಿ ಬಲಿಷ್ಠನಾಗಿದ್ದರೆ, ನವಾಂಶ ಸಮವಾಗಿಯೂ, ಲಗ್ನರಾಶ್ಯಧಿಪತಿ ಬಲಿಷ್ಠನಾಗಿದ್ದರೆ ರಾಶಿತುಲ್ಯವಾಗಿಯೂ, ಲಗ್ನಾಯರ್ದಾಯು ನಿರ್ಣಯ ಮಾಡಬೇಕು. ಈ ವಿಷಯಕ್ಕೆ

ಪ್ರಮಾಣ ॥ ಲಗ್ನಾಯುರ್ಭಾಂಶತುಲ್ಯಂ ಸ್ಯಾದಂತ ರೇಖಾನುಪಾತತಃ । ತತ್ರತೌ ಚಲಸಂಯುಕ್ತೇ ರಾಶಿತುಲ್ಯಂ ಬಾಧಿಪೇ ॥೩॥ ಎಂದು ಸಾರಾವಳಿಯಲ್ಲಿ ಪ್ರಮಾಣವಿದೆ ಆದ್ದರಿಂದ :-

ವಕ್ರಂ-ವಕ್ರಿಸಿರುವ ಗ್ರಹವನ್ನು, ಹಿತ್ವಾ-ಬಿಟ್ಟು, ರಿಪುಗೃಹಗತ್ಯೆ-ಶುತ್ರುಕ್ಷೇತ್ರ ಗತವಾದ ಗ್ರಹಕ್ಕೆ, ಸ್ವತ್ರಿಭಾಗಃ-ತಮ್ಮ ಆಯುರ್ದಾಯದಲ್ಲಿ ತೃತೀಯಾಂಶವನ್ನು ಹ್ರೀಯ್ಯತೆ-ಅಪಹಾರ ಮಾಡುತ್ತಾರೆ. ಅದು ಹೇಗೆಂದರೆ :- ವಕ್ರಿಸಿರುವ ಗ್ರಹಗಳು, ಶತ್ರುಕ್ಷೇತ್ರ ಗತಗ್ರಹಗಳು ತಮ್ಮ ತಮ್ಮ ಆಯುರ್ದಾಯ ವರ್ಷಗಳಲ್ಲಿ ಮೂರು ಭಾಗದಲ್ಲಿ ಒಂದು ಭಾಗವನ್ನು ಕಡಿಮೆಮಾಡುವರು. ಈ ಅರ್ಥ ಅನೇಕ ಗ್ರಂಥಕರ್ತರಿಗೆ ಸಮ್ಮತಿಯಾಗಿರುವುದು. ಆದರೆ ಭಟ್ಟೋತ್ಪಲಾಚಾರ್ಯರ ಮತವು ಪ್ರತ್ಯೇಕವಾಗಿರುವುದು. ಇದಕ್ಕೆ ॥ಶ್ಲೋಕ॥ ವಕ್ರಾಚಾರಂ ವಿನಾತ್ರ್ಯಂಶಂ ಶತ್ರುರಾಶೌ ಹರೇದ್ರ್ಗಹಃ । ಎಂದು ಗ್ರಂಥಾಂತರ ವಚನವಿರುವುದು, ಮತ್ತು ವಕ್ರಂಹಿತ್ವಾ-ಅಂಗಾರಕನನ್ನು ಬಿಟ್ಟು ಉಳಿದ ಗ್ರಹಗಳು ಶತ್ರು ಕ್ಷೇತ್ರಗತರಾದರೆ ತಮ್ಮ ತಮ್ಮ ಆಯುರ್ದಾಯಗಳಲ್ಲಿ ತೃತೀಯಾಂಶವನ್ನಪಹಾರ ಮಾಡುವರು, ಅಂಗಾರಕನು ಶತ್ರುಕ್ಷೇತ್ರಗತನಾಗಿದ್ದರೆ ತೃತೀಯಾಂಶವನ್ನು ಅಪಹರಿಸುವುದಿಲ್ಲವೆಂದು ಹೇಳಿರುವರು. ಈ ವಿಷಯಕ್ಕೆ ॥ಶ್ಲೋಕ॥ ಭೂಮ್ಯಾಃಪುತ್ರಂ ವರ್ಜಯಿತ್ವಾರಿಭಸ್ಥಾ ಹನ್ಯುಸ್ಸ್ವ ಸ್ವಾದಾಯುಷಸ್ತೇ ತ್ರಿಭಾಗಂ ॥೪॥ ॥ಇತಿ ಬಾದರಾಯಣಃ ॥ ಶುಕ್ರಾರ್ಕಪುತ್ರೌ-ಶುಕ್ರ ಶನಿಗಳನ್ನು, ಪ್ರೋಜ್ಝ-ಬಿಟ್ಟು, ಉಳಿದವರು, ಸೂರ್ಯೋಚ್ಛಿನ್ನದ್ಯುತಿಷು-ಅಸ್ತರಾಗಿರುವ ಗ್ರಹಗಳಿಗೆ, ದಳಂ ತಮ್ಮ ಆಯುರ್ವರ್ಷಗಳಲ್ಲಿ ಅರ್ಧವನ್ನು ಅಪಹರಿಸುವರು. ಅಂದರೆ, ಶುಕ್ರ ಶನಿಗಳನ್ನು ಬಿಟ್ಟು ಉಳಿದವರು, ಅಸ್ತಂಗತರಾಗಿದ್ದರೆ, ತಮ್ಮ ಆಯುರ್ವರ್ಷಗಳಲ್ಲಿ ಅರ್ಧವನ್ನು ಅಪಹರಿಸುವರು. ಈ ವಿಷಯಕ್ಕೆ ॥ಶ್ಲೋಕ॥ ಅಸ್ತಂಯೂತಾಸರ್ವ ಏವಾರ್ಧಹಾನಿಂ ಕುರ್ಯುರ್ಹಿತ್ವಾ ದೈತ್ಯ ಪೂಜ್ಯಾರ್ಕ ಪುತ್ರೌ ಎಂದು ಬಾದರಾಯಣ ವಚನ ಪ್ರಮಾಣವಿರುತ್ತದೆ. ॥೫॥

## ಸುಲಭೋಪಾಯದಲ್ಲಿ ಅನುಪಾತಾ ನಯನ

ಇಷ್ಟ ಗ್ರಹಕ್ಕೆ ರಾಶ್ಯಾದಿ ಲಿಪ್ತಿಗಳನ್ನು ಮಾಡಿಕೊಂಡು ಪೂರ್ವೋಕ್ತವಾದ ಉಚ್ಚಧ್ರುವಕವನ್ನು ತೆಗೆದುಹಾಕಿ ಶೇಷವನ್ನು ನಿಲ್ಲಿಸಿಕೊಳ್ಳಬೇಕು. ಗ್ರಹವು ಪರಮೋಚ್ಚ ಭಾಗಕ್ಕೆ ಹಿಂದಕ್ಕೆ ಇದ್ದರೆ, ಉಚ್ಚಧ್ರುವಹೋಗುವುದಿಲ್ಲ. ಆಗ ೧೨ ರಾಶಿಗಳನ್ನು ಮಾಡಿ, ಅದರಲ್ಲಿ ಉಚ್ಚಧ್ರುವಕವನ್ನು ತೆಗೆದುಹಾಕಿ ಶೇಷವನ್ನು ೬ ರಾಶಿಗಳಿಗಿಂತ ನ್ಯೂನವಾಗಿದ್ದರೆ, ೧೨ ರಾಶಿಗಳಲ್ಲಿ ವ್ಯವಕಲನೆ ಮಾಡಿಕೊಳ್ಳತಕ್ಕದ್ದು. ಆರು

ರಾಶಿಗಳಿಗೆ ಅಧಿಕವಾಗಿದ್ದರೆ ಅದನ್ನೇ ನಿಲ್ಲಿಸಿಕೊಂಡು, ಈ ರೀತಿಯಾಗಿ ಮಾಡಿದ್ದಕ್ಕೆ ರಾಶ್ಯಾದಿ ವಿಲಿಪ್ತಾಂತವಾಗಿಟ್ಟುಕೊಂಡು, ಗ್ರಹಪರಮಾಯುರ್ವರ್ಷದಿಂದ ಪ್ರತ್ಯೇಕವಾಗಿ ಗುಣಿಸಿ, ವಿಲಿಪ್ತಸ್ಥಾನವನ್ನು ೬೦ರಿಂದ ಭಾಗಮಾಡಿ ಆ ಲಬ್ಧವನ್ನು ಲಿಪ್ತಸ್ಥಾನದಲ್ಲಿ ಸೇರಿಸಿ, ಆ ಲಿಪ್ತಸ್ಥಾನವನ್ನು ೬೦ರಿಂದ ಭಾಗಿಸಿ, ಆ ಲಬ್ಧವನ್ನು ಭಾಗಕ್ಕೆ ಸೇರಿಸಿ, ಆ ಭಾಗಸ್ಥಾನವಾದ ಲಗ್ನ ೨೦ರಿಂದ ಭಾಗಿಸಿ, ಆ ಲಬ್ಧವನ್ನು ರಾಶಿಸ್ಥಾನದಲ್ಲಿ ಕೂಡಿ, ಆ ರಾಶಿಸ್ಥಾನವನ್ನು ೧೨ರಿಂದ ಭಾಗಿಸಲು, ಬಂದ ಲಬ್ಧವೇ ಭಗಣಸ್ಥಾನವಾಗುವುದು. ಆ ಭಗಣ ಸ್ಥಾನವೇ ಸಂವತ್ಸರಗಳು. ರಾಶಿಶೇಷವು ಮಾಸಗಳು, ಭಾಗಶೇಷವೇ ದಿನಗಳು, ಲಿಪ್ತಶೇಷವೇ ಘಳಿಗೆಗಳು, ವಿಲಿಪ್ತಶೇಷವೇ ವಿಘಳಿಗೆಗಳು. ಈ ಪ್ರಕಾರ ಸೂರ್ಯಾದಿ ಗ್ರಹಗಳ ಆಯುರ್ವರ್ಷ ಪ್ರಮಾಣಗಳಾಗುವುದು. ಈ ವಿಷಯದಲ್ಲಿ ಸಾರಾವಳಿಯಲ್ಲಿ **ಶ್ಲೋಕ॥** ಸ್ವೋಚ್ಚಶುದ್ಧೋ ಗ್ರಹಶ್ಯೋಧ್ಯ ಷಡ್ರಾಶ್ಯೂನೋ ಭಮಂಡಲಾತ್ । ಸ್ವಪಿಂಡ ಗುಣಿತೋ ಭುಕ್ತೋಭಾದಿಮಾನೇನ ವತ್ಸರಾಃ ॥೬॥

## ೮ನೇ ಉದಾಹರಣೆ

ಸೂರ್ಯನಿಗೆ ಮೇಷಾದಿ ರಾಶಿ ೧ ಭಾಗ ೧೩ ಲಿಪ್ತಿ ೪೮ ವಿಲಿಪ್ತಿ ಇಷ್ಟು ಸಂದಿರುವಾಗ ಮೇಷದಲ್ಲಿ ಪರಮೋಚ್ಚ ಭಾಗ ೧೦ ವ್ಯವಕಲನ ಮಾಡಿದರೆ ಶೇಷ ೧-೩-೪೮-೦ ಆಗುತ್ತದೆ. ಇದು ಆರು ರಾಶಿಗಳಿಗೆ ಕಡಿಮೆಯಾಗಿರುವುದರಿಂದ ೧೨ ರಾಶಿಗಳಲ್ಲಿ ಸೇರಿಸಿಕೊಂಡು ಅದರಲ್ಲಿ ೧-೩-೪೮-೦ ವ್ಯವಕಲನ ಮಾಡತಕ್ಕದ್ದು. ಈ ಪ್ರಕಾರ ಮಾಡಲಾಗಿ ಉಳಿದ ೧೦-೨೬-೧೨-೦ ಇದು ಸೂರ್ಯನ ಪರಮೋಚ್ಚಾಯುಃ ಪ್ರಮಾಣ ಸಂವತ್ಸರ ಸಂಖ್ಯೆಯಾದ ೧೯-೧೯-೧೯ ಪ್ರತ್ಯೇಕ ಪ್ರತ್ಯೇಕವಾಗಿ ಗುಣಿಸಿ ಬಂದ ಮೊತ್ತ ೧೯೦-೪೯೪-೨೨೮-೦, ಇದನ್ನು ಪೂರ್ವೋಕ್ತ ಪ್ರಕಾರ ಸ್ವಚ್ಛೇದಗಳಿಂದ ಭಾಗಿಸಲಾಗಿ, ಬಂದ ಸಂವತ್ಸರ ೧೭ ಮಾಸ ೨ ದಿ ೧೭ ಪ ೪೮ ವಿ ೦.

## ೯ನೇ ಉದಾಹರಣೆ

ಸೂರ್ಯನು ಮೇಷರಾಶಿ ೦ - ಭಾ ೮ ಲಿಪ್ತಿ ೫ ವಿಲಿಪ್ತಿ ೫ ಭುಕ್ತನಾಗಿರುವಾಗ, ಉಚ್ಚಧ್ರುವಕ ವ್ಯವಕಲನೆ ಮಾಡುವುದಕ್ಕೆ ಆಗುವುದಿಲ್ಲ. ಆದ್ದರಿಂದ ೧೯-೧೯ ರಿಂದ ಪ್ರತ್ಯೇಕ ಪ್ರತ್ಯೇಕವಾಗಿ ಗುಣಿಸಿ, ಸ್ವಚ್ಛೇದಗಳಿಂದ ಭಾಗಿಸಲಾಗಿ, ಬಂದ ಸಂವತ್ಸರ ೧೮, ಮಾಸ ೧೦, ದಿ ೧೩, ಘ ೩೬, ವೆ ೩೫ ಈ ಪ್ರಕಾರ ಸೂರ್ಯನಿಗೆ ದಶಾ ಉದಾಹರಣವನ್ನು ತೋರಿಸಿರುತ್ತೆ. ಇದರಂತೆಯೇ ಉಳಿದ

ಗ್ರಹಗಳಿಗೂ ಉಚ್ಚಧ್ರುವಕ್ಕೆ ಕಡಿಮೆಯಾಗಿರುವಾಗ ಆಯುರ್ದಾಯ ನಿರ್ಣಯ ಮಾಡತಕ್ಕದ್ದು. ಶಾಲೀವಾಹನ ಶಕ ೧೭೭೮ನೇ ನಳನಾಮ ಸಂವತ್ಸರದ ಭಾದ್ರಪದ ಶುದ್ಧ ೮ ರವಿವಾರ ದಿವಸ ಸೂರ್ಯೋದಯಾದಿ ಘಳಿಗೆ ೨೬-೩೦ಕ್ಕೆ ಜನ್ಮವಾದ ಜಾತಕವನ್ನು ಇಲ್ಲಿ ಜಿಜ್ಞಾಸುಗಳಿಗೋಸ್ಕರ ಉದಾಹರಣೆ ಕೊಟ್ಟಿರುತ್ತೇನೆ.

## ೧೦ನೇ ಉದಾಹರಣೆ

ಆದಿತ್ಯಾದಿ ಗ್ರಹಾಸ್ಸರ್ವೇ ಸನಕ್ಷತ್ರಾ ಸ್ಸರಾಶಯಃ ।
ಬೃಹಜ್ಜಾತಕ ಮಾರ್ಗೇಣ ಲಿಖ್ಯತೆ ಜನ್ಮಪತ್ರಿಕಾ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನಶಕ ಗತಾಬ್ದಾಃ ೧೭೭೮ ಕಲಿಗತಾಬ್ದಾಃ ೪೯೫೭ ವರ್ತಮಾನ ನಳನಾಮ ಸಂವತ್ಸರ ಭಾದಪ್ರದ ಶುಕ್ಲ ೮ ರವಿವಾರ ೫೫-೫೪ ಜ್ಯೇಷ್ಠಾನಕ್ಷತ್ರ ೪೮-೫೫ ವಿ ೧೪-೫೭ ಗರ ೨೨-೪೨ ಸಿಂಹ ಮಾಸ ತೇದಿ ೨೪ ಜನನಕಾಲ ಘಟಿಕಾಃ ೨೬-೩೦ ವರ್ಷಸಮೂಹ ೩೩೬ ಚಕ್ರ ೩೦ ಶೇಷ ವರ್ಷ ೬ ಮಾಸ ೭೨ ಅಧಿಮಾಸ ೪ ಗತಮಾಸ ೫ ಯೋಗಮಾಸ ೮೧ ಊನಾಹಃ ಸು ೩೮ ಅಹರ್ಗಣ ೨೦-೪೪ ಅಯನಾಶ ೨೨-೧೪ ಅಕ್ಷಾಂಶ ೨-೪೫ ದೇಶಾಂತರ ಯೋಜನೆ ೨೦ ದಿನ ಮಾನ ೩೦-೩೮ ಪಶ್ಚಾನ್ನತ ೩-೫೮.

# ಸೂರ್ಯಾದಿ ಗ್ರಹಸ್ಫುಟ ಪದಕಮ್

| | | ಮಧ್ಯಮ ಗ್ರಹಗಳು | | | | | | ಸ್ಫುಟಗ್ರಹಗಳು | | | |
|---|---|---|---|---|---|---|---|---|---|---|---|
| ಸಂಖ್ಯೆ | ಗ್ರಹ | ರಾ | ಭಾ | ಕಲೆ | ವಿಕಲೆ | ಗತಿ | | ರಾ | ಭಾ | ಕಲೆ | ವಿಕಲೆ |
| ೧ | ರವಿಃ | ೪ | ೨೪ | ೩೪ | ೫೯ | ೫೯ | ೮ | ೪ | ೨೨ | ೩೫ | ೫೨ |
| ೨ | ಚಂದ್ರಃ | ೭ | ೨೭ | ೪೪ | ೩೬ | ೭೯೦ | ೩೫ | ೭ | ೨೨ | ೫೦ | ೫೧ |
| ೩ | ಚಂ. ಉಚ್ಚ | ೫ | ೨೨ | ೪೭ | ೫೮ | ೬ | ೪೧ | ೦ | ೦ | ೦ | ೦ |
| ೪ | ಕುಜಃ | ೮ | ೨೧ | ೮ | ೧೯ | ೩೧ | ೨೬ | ೭ | ೩ | ೪೬ | ೩೫ |
| ೫ | ಬು.ಕೇ. | ೨ | ೧೫ | ೫೪ | ೪೬ | ೨೪೫ | ೩೨ | ೫ | ೧೫ | ೮ | ೧೫ |
| ೬ | ಗುರುಃ | ೧೧ | ೧೩ | ೩ | ೪೭ | ೫ | ೦ | ೧೧ | ೧೬ | ೪ | ೧೦ |
| ೭ | ಶುಕ್ರಃ | ೧ | ೧ | ೩೯ | ೪೩ | ೯೬ | ೩೮ | ೫ | ೬ | ೪೮ | ೮ |
| ೮ | ಶನಿಃ | ೧ | ೧೪ | ೪೫ | ೫ | ೨ | ೦ | ೨ | ೨೨ | ೪ | ೨೯ |
| ೯ | ರಾಹುಃ | ೧೧ | ೨೫ | ೧೧ | ೩೪ | ೩ | ೧೧ | ೧೧ | ೨೫ | ೧೧ | ೩೪ |
| ೧೦ | ಕೇತುಃ | ೫ | ೨೫ | ೧೧ | ೩೪ | ೩ | ೧೧ | ೫ | ೨೫ | ೧೧ | ೩೪ |

## ತನ್ವಾದಿಭಾವಾಸ್ಪಸಂಧಯಃ

| ಭಾವಾಃ | ರಾಶಿ | ಭಾಗ | ಕಲಾ | ಸಂಧಿಃ | ರಾಶಿ | ಭಾಗ | ಕಲಾ |
|---|---|---|---|---|---|---|---|
| ತನು | ೯ | ೨೮ | ೫೫ | ತನುಧನ ಭಾವಯೋಃ ಸಂಧಿಃ | ೧೦ | ೧೨ | ೧೪ |
| ಧನ | ೧೦ | ೨೫ | ೩೩ | ಅನಯೋಃ ಸಂಧಿಃ | ೧೧ | ೮ | ೫೨ |
| ಸಹಜ | ೧೧ | ೨೨ | ೧೧ | ಅನಯೋಃ ಸಂಧಿಃ | ೦ | ೫ | ೩೦ |
| ಸುಖ | ೦ | ೧೮ | ೪೯ | ಅನಯೋಃ ಸಂಧಿಃ | ೧ | ೫ | ೩ |
| ಪುತ್ರ | ೧ | ೨೨ | ೧೧ | ಅನಯೋಃ ಸಂಧಿಃ | ೨ | ೮ | ೫೨ |
| ಶತ್ರು | ೨ | ೨೫ | ೩೩ | ಅನಯೋಃ ಸಂಧಿಃ | ೩ | ೧೨ | ೧೪ |
| ಜಾಯಾ | ೩ | ೨೮ | ೫೫ | ಅನಯೋಃ ಸಂಧಿಃ | ೪ | ೧೨ | ೧೪ |
| ಅಷ್ಟಮ | ೪ | ೨೫ | ೩೩ | ಅನಯೋಃ ಸಂಧಿಃ | ೫ | ೮ | ೫೨ |
| ಭಾಗ್ಯ | ೫ | ೨೨ | ೧೧ | ಅನಯೋಃ ಸಂಧಿಃ | ೬ | ೫ | ೩೦ |
| ರಾಜ್ಯ | ೬ | ೧೮ | ೪೯ | ಅನಯೋಃ ಸಂಧಿಃ | ೭ | ೫ | ೩೦ |
| ಲಾಭ | ೭ | ೨೨ | ೧೧ | ಅನಯೋಃ ಸಂಧಿಃ | ೮ | ೮ | ೫೨ |
| ವ್ಯಯ | ೮ | ೨೫ | ೩೩ | ಅನಯೋಃ ಸಂಧಿಃ | ೯ | ೧೨ | ೧೪ |

| | | | |
|---|---|---|---|
| ಗುರು ರಾಹುಃ | | | ಶನಿಃ |
| | ರಾಶಿ ಚಕ್ರಂ | | |
| ಲಗ್ನ ೭ | | | ರವಿಃ |
| | ಚಂದ್ರಃ ಕುಜಃ | | ಶುಕ್ರಃ ಬುಧಃ ಕೇತುಃ |

| | | | |
|---|---|---|---|
| ಶುಕ್ರಃ | ಶನಿಃ | ಬು | |
| ರಾಹು | ನವಾಂಶ ಚಕ್ರಂ | | |
| ಚಂದ್ರಃ | | | ಕು ಕೇ |
| | ಗುರು | ರವಿ | |

## ಜ್ಯೇಷ್ಠಾ ನಕ್ಷತ್ರ ಆದ್ಯಂತ ೬೨-೩೨
## ಅಥ ಪಂಚಧಾಮೈತ್ರೀ ಚಕ್ರಂ

| ಗ್ರಹಾಃ | ರವಿಃ | ಚಂದ್ರಃ | ಕುಜಃ | ಬುಧಃ | ಗುರುಃ | ಶುಕ್ರಃ | ಶನಿಃ |
|---|---|---|---|---|---|---|---|
| ಅಧಿ-ಮಿತ್ರ | ಕುಜ ಚಂದ್ರ | ರವಿ ಬುಧ | ರವಿ | ರವಿ ಶುಕ್ರ | ೦ | ಶನಿ | ಶುಕ್ರ ಬುಧ |
| ಮಿತ್ರ | ಬುಧಃ | ಶುಕ್ರ | ಶುಕ್ರ | ಕುಜ ಶನಿ | ಶನಿ | ಕುಜ | ಗುರು |
| ಸಮ | ಗುರು ಶುಕ್ರ ಶನಿ | ೦ | ಚಂದ್ರ ಗುರು ಬುಧ | ಚಂದ್ರ | ರವಿ ಚಂದ್ರ ಕುಜ | ಬುಧ ರವಿ ಚಂದ್ರ | ರವಿ |
| ಶತ್ರುಃ | ೦ | ಕುಜಃ ಗುರುಃ ಶನಿಃ | ಶನಿ | ಗುರು | ೦ | ಗುರು | ೦ |
| ಅಧಿ-ಶತ್ರು | ೦ | ೦ | ೦ | ೦ | ಬುಧ ಶುಕ್ರ | ೦ | ಚಂದ್ರ ಕುಜ |

## ಜನ್ಮಕಾಲಗ್ರಹಾಣಾಂ ಸಪ್ತವರ್ಗ ಶೋಧನ ಪದಕಮ್

| ವರ್ಗ ಗ್ರಹ | ರವಿಃ | ಚಂದ್ರಃ | ಕುಜಃ | ಬುಧಃ | ಗುರು | ಶುಕ್ರಃ | ಶನಿಃ | ಲಗ್ನಂ |
|---|---|---|---|---|---|---|---|---|
| ರಾಶಿ | ರವಿ | ಕುಜಃ | ಕುಜ | ಬುಧ | ಗುರು | ಬುಧ | ಬುಧ | ಶನಿ |
| ಹೋರಾ | ಚಂದ್ರ | ರವಿ | ಚಂದ್ರ | ರವಿ | ರವಿ | ಚಂದ್ರ | ಚಂದ್ರ | ರವಿ |
| ದ್ರೇಕ್ಕಾಣ | ಕುಜ | ಚಂದ್ರ | ಕುಜ | ಶನಿ | ಚಂದ್ರ | ಬುಧ | ಶನಿ | ಬುಧ |
| ಸಪ್ತಾಂಶ | ಶನಿ | ಶುಕ್ರ | ಶುಕ್ರ | ಬುಧ | ಗುರು | ಕುಜ | ಕುಜ | ಶನಿ |
| ನವಾಂಶ | ಶುಕ್ರ | ಶನಿ | ರವಿ | ಶುಕ್ರ | ಕುಜ | ಗುರು | ಕುಜ | ಬುಧ |
| ದ್ವಾದಶಾಂಶ | ಶುಕ್ರ | ರವಿ | ಗುರು | ಗುರು | ಬುಧ | ಕುಜ | ಶನಿ | ಗುರು |
| ತ್ರಿಂಶಾಂಶ | ಬುಧಃ | ಶನಿಃ | ಶುಕ್ರಃ | ಗುರು | ಗುರು | ಬುಧ | ಬುಧ | ಶುಕ್ರ |

## ಜನ್ಮಕಾಲದ ಗ್ರಹಗಳಿಗೆ ದೃಗ್ಬಲ (ದೃಷ್ಟಿಸಾಧನಂ)

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ಲಗ್ನ |
|---|---|---|---|---|---|---|---|---|
| ರವಿ | ೦ | ೪೫-೦ | ೦-೨೬-೦ | ೦ | ೦-೪೭<br>೩೦ | ೦ | ೦।೦।<br>೩೦ | ೦-೦೨<br>೦ |
| ಚಂದ್ರ | ೧೫-೩೦ | ೦ | ೦ | ೦ | ೦-೩೨<br>೩೦ | ೦ | ೦-೪೫<br>೩೦ | ೧-೫೨<br>೩೦ |
| ಕುಜ | ೬-೦ | ೦ | ೦ | ೦ | ೦-೧೮<br>೦ | ೦ | ೦।೪೨।<br>೦ | ೦-೫೨<br>೩೦ |
| ಬುಧ | ೦ | ೦-೩-೦ | ೦-೯-೦ | ೦ | ೦-೦-<br>೦ | ೦ | ೦।೧೧<br>೩೦ | ೦-೧೭<br>೦ |
| ಗುರು | ೧೨-೦ | ೦।೪೮।೨೨ | ೦।೫೩।೩೦ | ೦-೫೮-೦ | ೦ | ೦।೪೧<br>೨೮ | ೦।೪೮।<br>೦ | ೦ |
| ಶುಕ್ರ | ೦ | ೦-೩೧-೦ | ೦-೧೩-೦ | ೦ | ೦-೫೫।<br>೩೦ | ೦ | ೦-೭<br>೩೦ | ೦।೮।೦ |
| ಶನಿ | ೧-೦-೦ | ೦ | ೦-೧೯-೦ | ೦-೪೮।೩೦ | ೦-೫೪-<br>೦ | ೦।೫೩।<br>೦ | ೦ | ೦-೪೨<br>೦ |
| ಶುಭ | ೨೭-೩೦ | ೧-೨-೨೨ | ೧।೧೫-೩೦ | ೦-೫೮-೦ | ೨-೨೮ | ೦।೪೧।<br>೨೮ | ೧।೫೨।<br>೩೦ | ೦-೩<br>೦೬ |
| ಪಾಪ | ೧-೬-೦ | ೦-೪೩-೦ | ೦-೪೫-೦ | ೦-೪೮-೩೦ | ೦।೫೯।<br>೩೦ | ೦।೫೩।<br>೦ | ೦-೪೨<br>೩೦ | ೧೭-<br>೩೭<br>ಋಣ |
| ಅಂತರ | ೮-೩೯<br>ಋಣ | ೯-೨೦<br>ಧನ | ೭-೩೭<br>ಧನ | ೨-೨೩<br>ಧನ | ೫-೮-೦<br>ಧನ | ೨-೫೩<br>೦<br>ಋಣ | ೧೭-<br>೩೦<br>ಧನ | ೧೭-<br>೩೭<br>ಋಣ |

# ಅಥ ಸ್ಥಾನಾದಿ ಬಲಸಾಧನ ಪದಕಂ (ಲಗ್ನಬಲಂ ೭-೨೧-೨)

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಸ್ಥಾನ ಬಲಂ ಪಂಚಧಾ | ೩।೨೪।೪೮ | ೩।೧೫।೩೬ | ೩।೪೬।೧೫ | ೪-೧೦-೦ | ೩।೪೨।೪೧ | ೩।೪೦।೫೪ | ೩-೪೯ ೪೦ |
| ದಿಗ್ಬಲಂ | ೦।೪೧।೧೫ | ೦।೧೧।೨೦ | ೦-೫೫।೧ | ೦-೧೫-೨೦ | ೦।೪೪।೧೭ | ೦-೧೪-೦ | ೦।೪೭ ೪೩ |
| ಕಾಲಬಲ ನತೋನ್ನತ | ೦।೫೨।೦ | ೦-೭-೫೬ | ೦-೭-೫೬ | ೧-೦-೦ | ೦-೫೨-೦ | ೦-೫೨-೦ | ೦-೭ ೫೬ |
| ಪಕ್ಷಬಲಂ | ೦।೨೯।೫೫ | ೦-೩೦-೫ | ೦।೨೯।೫೫ | ೦-೩೦-೫ | ೦-೩೦-೫ | ೦-೩೦-೫ | ೦-೨೯ ೫೫ |
| ಅಹನಿತ್ರಿಭಾಗ | ೦ | ೦ | ೦ | ೦ | ೧-೦-೦ | ೦ | ೧-೦-೦ |
| ವರ್ಷಮಾಸ ದಿವಸ ಹೋರಾ | ೦-೪೫-೦ | ೧-೦-೦ | ೦ | ೦-೧೫-೦ | ೦ | ೦-೨೦-೦ | ೦ |
| ಅಯನ ಬಲಂ | ೦।೫೭।೫೨ | ೦-೫೮-೦ | ೦।೧೩।೩೨ | ೦-೫೯-೪ | ೦।೫೮।೪೮ | ೦-೨೪-೦ | ೭-೦-೦ |
| ಚೇಷ್ಟಾ ಬಲಂ | ೦-೫೭-೫೨ | ೧-೩೦-೫ | ೦-೪೦-೪೦ | ೦।೨೧।೨೦ | ೦-೫೩-೨೦ | ೦-೮-೩೦ | ೦-೨೨ ೩ |
| ನೈಸರ್ಗಿಕ ಬಲಂ | ೧-೦-೦ | ೦-೫೦-೦ | ೦-೧೭-೦ | ೦-೨೬-೦ | ೦-೩೪-೦ | ೦-೪೩-೦ | ೦।೯-೦ |
| ಅಂತು | ೮।೫೮। ೪೨ | ೭-೨೪-೨ | ೬।೩೦।೧೯ | ೭-೫೭-೯ | ೯-೧೫-೧೧ | ೭-೦-೧೯ | ೬-೪೮ ೧೭ |

## ಅಥ ಇಷ್ಟ ಕಷ್ಟ ಬಲಸಾಧನಂ

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಇಷ್ಟ ಉಚ್ಚರಶ್ಮಿ | ೨-೩೪-೫೦ | ೧ ೩೯ ೪೦ | ೪-೧೧-೩೨ | ೭-೦-೧೬ | ೩-೨೨-೮ | ೧-೪೦-೨೪ | ೩-೪-೮ |
| **ಚೇಷ್ಟಾರಶ್ಮಿ** | ೪-೩೦-೨೨ | ೪-೦-೫೦ | ೫-೫-೬ | ೩-೧೧-೧೪ | ೬-೨೦-೨ | ೧-೫೧-೪ | ೩-೧೨-೨೦ |
| ಇಷ್ಟಬಲ | ೨೩-೧೫ | ೧೭-೨ | ೦-೪೦-೧೯ | ೦-೪೦-೩೩ | ೩೭-೬ | ೦-೪-೩೭ | ೨೦-೫೯ |
| ಕಷ್ಟಬಲ | ೩೬-೪೫ | ೪೨-೫೮ | ೦-೧೯-೪೧ | ೧೯-೨೭ | ೨೨-೫೪ | ೫೫-೨೬ | ೩೯-೦ |

## ಅಥ ಸಪ್ತವರ್ಗ ಇಷ್ಟಬಲ ಸಾಧನ ಚಕ್ರಂ

| ಬಲರಾಶಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರಾಶಿ | ೩೦ | ೩೦ | ೩೦ | ೧/೦/೦ | ೩೦ | ೩೦ | ೩೦ |
| ಹೋರಾ | ೨ | ೧೫ | ೨ | ೧೫ | ೧೫ | ೨ | ೨ |
| ದ್ರೇಕ್ಕಾಣ | ೧೫ | ೨ | ೧೫ | ೧೧ | ೨ | ೩೦ | ೧೦ |
| ಸಪ್ತಾಂಶ | ೧೧ | ೪ | ೪ | ೩೦ | ೧೫ | ೧೫ | ೧೫ |
| ನವಾಂಶ | ೪ | ೧೧ | ೧೫ | ೪ | ೧೫ | ೧೫ | ೧೫ |
| ದ್ವಾದಶಾಂಶ | ೪ | ೧೫ | ೧೫ | ೧೫ | ೩೦ | ೧೫ | ೧೧ |
| ತ್ರಿಂಶಾಂಶ | ೩೦ | ೧೧ | ೪ | ೧೫ | ೧೫ | ೩೦ | ೩೦ |
| ಅಂತು | ೧/೬ | ೧/೨೮ | ೧/೨೫ | ೨/೩೦ | ೨/೧೨ | ೨/೧೭ | ೧/೫೩ |

## ಅಥ ಸಪ್ತವರ್ಗಕಷ್ಟ ಬಲಸಾಧನ ಚಕ್ರ

| ಬಲರಾಶಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರಾಶಿ | ೩೦ | ೩೦ | ೩೦ | ೦ | ೩೦ | ೩೦ | ೩೦ |
| ಹೋರಾ | ೨೮ | ೧೫ | ೨೮ | ೧೫ | ೧೫ | ೨೮ | ೨೮ |
| ದ್ರೇಕ್ಕಾಣ | ೧೫ | ೨೮ | ೧೫ | ೧೯ | ೨೮ | ೦ | ೧೯ |
| ಸಪ್ತಾಂಶ | ೧೯ | ೨೬ | ೨೬ | ೦ | ೧೫ | ೧೫ | ೧೫ |
| ನವಾಂಶ | ೨೬ | ೧೯ | ೧೫ | ೨೬ | ೧೫ | ೧೫ | ೧೫ |
| ದ್ವಾದಶಾಂಶ | ೨೬ | ೧೫ | ೧೫ | ೧೫ | ೦ | ೧೫ | ೧೯ |
| ತ್ರಿಂಶಾಂಶ | ೦ | ೧೯ | ೨೬ | ೧೫ | ೧೫ | ೦ | ೦ |
| ಅಂತು | ೨-೨೪ | ೨-೩೨ | ೨-೩೫ | ೧-೩೦ | ೧-೫೮ | ೧-೪೩ | ೨-೬ |

## ಅಥ ಶುಭಸಪ್ತವರ್ಗ ಸ್ಫುಟಬಲಂ

| ಗ್ರಹರಾಶಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರಾಶಿ | ೩೦ | ೩೦ | ೩೦ | ೧-೦-೦ | ೩೦ | ೩೦ | ೩೦ |
| ಹೋರಾ | ೩ | ೨೨॥ | ೩ | ೨೨॥ | ೨೨॥ | ೩ | ೩ |
| ದ್ರೇಕ್ಕಾಣ | ೨೨॥ | ೩ | ೨೨॥ | ೧೬॥ | ೩ | ೩೦ | ೧೬॥ |
| ಸಪ್ತಾಂಶ | ೧೬॥ | ೬ | ೬ | ೩೦ | ೨೨॥ | ೨೨॥ | ೨೨॥ |
| ನವಾಂಶ | ೬ | ೧೬॥ | ೨೨॥ | ೬ | ೨೨॥ | ೨೨॥ | ೨೨॥ |
| ದ್ವಾದಶಾಂಶ | ೬ | ೨೨॥ | ೨೨॥ | ೨೨॥ | ೩೦ | ೨೨॥ | ೧೬॥ |
| ತ್ರಿಂಶಾಂಶ | ೩೦ | ೧೬॥ | ೬ | ೨೨॥ | ೨೨॥ | ೩೦ | ೩೦ |
| ಅಂತು | ೧-೫೪ | ೧ ೫೧ | ೧ ೫೨॥ | ೩-೦ | ೨-೩೩ | ೨-೪೦॥ | ೨-೨೧ |

## ಅಥ ಅಶುಭಸಪ್ತವರ್ಗ ಸ್ಫುಟಬಲಂ

| ಗ್ರಹರಾಶಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರಾಶಿ | ೩೦ | ೩೦ | ೩೦ | ೦ | ೩೦ | ೩೦ | ೩೦ |
| ಹೋರಾ | ೨೭ | ೬॥ | ೨೭ | ೭॥ | ೭॥ | ೨೭ | ೨೭ |
| ದ್ರೇಕ್ಕಾಣ | ೭॥ | ೨೭ | ೭॥ | ೧೩॥ | ೨೭ | ೦ | ೧೩॥ |
| ಸಪ್ತಾಂಶ | ೧೩॥ | ೨೪ | ೨೪ | ೦ | ೭॥ | ೭॥ | ೭॥ |
| ನವಾಂಶ | ೨೪ | ೧೩॥ | ೭॥ | ೨೪ | ೭॥ | ೭॥ | ೭॥ |
| ದ್ವಾದಶಾಂಶ | ೨೪ | ೭॥ | ೭॥ | ೭॥ | ೦ | ೭॥ | ೧೩॥ |
| ತ್ರಿಶಾಂಶ | ೦ | ೧೩ | ೨೪ | ೭॥ | ೭॥ | ೦ | ೦ |
| ಅಂತು | ೨-೬ | ೨-೩ | ೨-೭॥ | ೧-೦ | ೧-೨೭ | ೧-೧೯॥ | ೧-೪೯ |

## ಆಯುರ್ದಾಯ ನಿರ್ಣಯ

| | ಅಂಶಾಯುರ್ದಾಯ | | | | | ಪಿಂಡಾಯುರ್ದಾಯ | | | | |
|---|---|---|---|---|---|---|---|---|---|---|
| ಗ್ರಹಾಃ | ಸಂ | ಮಾ | ದಿ | ಘ | ವಿ | ಸಂ | ಮಾ | ದಿ | ಘ | ವಿ |
| ರವಿದತ್ತಾಯುಃ | ೧೦ | ೯ | ೧೬ | ೧೨ | ೧೮ | ೯ | ೯ | ೫ | ೧೩ | ೪೬ |
| ಚಂದ್ರ " | ೧೨ | ೮ | ೨೧ | ೨೩ | ೨೪ | ೧೦ | ೮ | ೧೦ | ೧೭ | ೪ |
| ಕುಜ " | ೯ | ೯ | ೧೦ | ೩೧ | ೪೮ | ೧೧ | ೫ | ೧೫ | ೧೧ | ೩೬ |
| ಬುಧ " | ೩ | ೫ | ೧೩ | ೨೬ | ೨೪ | ೧೦ | ೮ | ೧೨ | ೯ | ೩೪ |
| ಗುರು " | ೧೬ | ೦ | ೧೧ | ೪೭ | ೨೪ | ೧೦ | ೫ | ೧೫ | ೧ | ೨ |
| ಶುಕ್ರ " | ೧೧ | ೬ | ೨೨ | ೫೫ | ೧೨ | ೧೧ | ೮ | ೩ | ೫೧ | ೧೮ |
| ಶನಿ " | ೯ | ೨ | ೨೮ | ೮ | ೨೪ | ೧೩ | ೫ | ೧೦ | ೧ | ೨೯ |
| ಲಗ್ನ " | ೧೪ | ೬ | ೨ | ೩೦ | ೦ | ೫ | ೪ | ೨೪ | ೩ | ೯ |
| ಅಂತು ಒಟ್ಟು | ೮೦ | ೧ | ೬ | ೫೪ | ೫೪ | ೫೩ | ೬ | ೪ | ೪೮ | ೫೮ |

## ಆಯುರ್ದಾಯ ನಿರ್ಣಯ

| | ನೈಸರ್ಗಿಕಾಯುರ್ದಾಯಗಳು | | | | | ಸ್ಫುಟಾಯುರ್ದಾಯಗಳು | | | | |
|---|---|---|---|---|---|---|---|---|---|---|
| ಗ್ರಹಾಃ | ಸಂ | ಮಾ | ದಿ | ಘ | ವಿ | ಸಂ | ಮಾ | ದಿ | ಘ | ದಿ |
| ರವಿದತ್ತಾಯುಃ | ೧೦ | ೩ | ೨೪ | ೩೦ | ೨೦ | ೧೦ | ೩ | ೧೫ | ೨೪ | ೬ |
| ಚಂದ್ರ " | ೦ | ೫ | ೫ | ೪೦ | ೫೯ | ೭ | ೧೧ | ೧೨ | ೨೬ | ೯ |
| ಕುಜ " | ೧ | ೬ | ೧೧ | ೩೨ | ೫೦ | ೭ | ೭ | ೨ | ೨೫ | ೨೪ |
| ಬುಧ " | ೮ | ೦ | ೧೫ | ೭ | ೪೮ | ೭ | ೪ | ೨೩ | ೩೧ | ೧೫ |
| ಗುರು " | ೧೨ | ೬ | ೧೯ | ೧೫ | ೦ | ೧೩ | ೦ | ೫ | ೨೧ | ೮ |
| ಶುಕ್ರ " | ೧೧ | ೧ | ೧೩ | ೫೭ | ೩೦ | ೧೧ | ೫ | ೧೩ | ೩೧ | ೦ |
| ಶನಿ " | ೩೩ | ೭ | ೧೩ | ೪೪ | ೧೦ | ೧೬ | ೧ | ೭ | ೧೮ | ೧ |
| ಲಗ್ನ " | ೫ | ೪ | ೨೪ | ೩ | ೯ | ೮ | ೫ | ೬ | ೫೨ | ೬ |
| ಅಂತು ಒಟ್ಟು | ೮೩ | ೦ | ೭ | ೫೧ | ೪೬ | ೮೨ | ೨ | ೨೬ | ೫೦ | ೯ |

## ವ್ಯಯಾದಿಹರಣ ನಿರ್ಣಯಃ

ಮೂಲ॥ ಸರ್ವಾರ್ಧ ತ್ರಿಚರಣ ಪಂಚಷಷ್ಠಭಾಗಾಃ ಕ್ಷೀಯಂತೇ
ವ್ಯಯಭವನಾದ ಸತ್ಸುವಾಮಂ । ಸತ್ಸ್ವಾರ್ಧಂ ಹ್ರಸತಿ
ತದ್ವೈಕರಾಶಿಗಾನಾ ಮೇಕೋಂಶಂ ಹರತಿ ಬಲೀತಥಾಹಸತ್ಯಃ ॥೩॥

ಟೀಕು॥ ಚಕ್ರಪಾತ ಹರಣವೆಂದರೆ, ವ್ಯಯಾದಿ ಹರಣವು ಹೇಳಲ್ಪಡುತ್ತೆ. ಅಸತ್ಸು- ಕ್ರೂರಗ್ರಹಗಳು, ವ್ಯಯಭವನಾತ್-ದ್ವಾದಶಸ್ಥಾನ ಮೊದಲುಗೊಂಡು, ವಾಮಂ-ವಿಲೋಮವಾಗಿ, ಸರ್ವಾರ್ಧ ತ್ರಿಚರಣ ಪಂಚಷಷ್ಠ ಭಾಗಾಃ-ಸರ್ವಾರ್ಧಾದ್ಯಂಶಗಳು, ಕ್ಷೀಯಂತೇ-ಹ್ರಾಸವಾಗುತ್ತವೆ. ಅದು ಹೇಗೆಂದರೆ - ಲಗ್ನಕ್ಕೆ ದ್ವಾದಶದಲ್ಲಿ ಪಾಪಗ್ರಹವಿದ್ದರೆ ಆ ಗ್ರಹದ ಆಯುಸ್ಸೆಲ್ಲವೂ ಕ್ಷಯಿಸುವುದು, ಏಕಾದಶದಲ್ಲಿ ಪಾಪಗ್ರಹವಿದ್ದರೆ, ಆ ಗ್ರಹದ ಆಯುಸ್ಸಿನಲ್ಲಿ ಅರ್ಧ-ಅರ್ಧಭಾಗ ನಾಶವಾಗುತ್ತದೆ. ದಶಮ ಸ್ಥಾನದಲ್ಲಿ ಪಾಪಗ್ರಹವಿದ್ದರೆ, ತ್ರಿ-ಮೂರನೆ ೧ ಭಾಗ ಕ್ಷಯಿಸುತ್ತದೆ. ನವಮದಲ್ಲಿ ಪಾಪಗ್ರಹವಿದ್ದರೆ, ಚರಣ-ಚತುರ್ಥಾಂಶ ಕ್ಷಯಿಸುತ್ತದೆ. ಅಷ್ಟಮದಲ್ಲಿ ಪಾಪಗ್ರಹವಿದ್ದರೆ, ಪಂಚಮಾಂಶ ಕ್ಷಯಿಸುತ್ತದೆ. ಸಪ್ತಮದಲ್ಲಿ ಪಾಪಗ್ರಹವಿದ್ದರೆ, ತನ್ನ ಆಯುರ್ದಾಯದಲ್ಲಿ ಅರ್ಧಪಾಲು ಕ್ಷಯಿಸುತ್ತದೆ. ಸತ್ಸು-ಈ ವ್ಯಯಾದಿ ಸ್ಥಾನಗಳಲ್ಲಿ ಈ ಶುಭಗ್ರಹವಿದ್ದರೆ, ಅರ್ಧಂ-ಪಾಪಗ್ರಹಕ್ಕೆ ಹೇಳಿದ ಅರ್ಧಭಾಗವು, ಹ್ರಸತಿ-ಕ್ಷಯಿಸುತ್ತಾನೆ. ಅದು ಹೇಗೆಂದರೆ-ಲಗ್ನಕ್ಕೆ ದ್ವಾದಶದಲ್ಲಿ ಶುಭಗ್ರಹವಿದ್ದರೆ ಆ ಗ್ರಹದ ಆಯುಸ್ಸಿನಲ್ಲಿ ಅರ್ಧ ಹರಿಸುತ್ತದೆ, ಏಕಾದಶದಲ್ಲಿದ್ದರೆ ಚತುರ್ಥಾಂಶ ಹರಿಸುತ್ತಾನೆ, ದಶಮದಲ್ಲಿದ್ದರೆ ಷಷ್ಠಾಂಶ ಹರಿಸುತ್ತಾನೆ, ನವಮದಲ್ಲಿದ್ದರೆ ಅಷ್ಟಮಾಂಶ ಹರಿಸುತ್ತಾನೆ. ಅಷ್ಟಮದಲ್ಲಿದ್ದರೆ ದಶಮಾಂಶ ಹರಿಸುತ್ತಾನೆ, ಸಪ್ತಮದಲ್ಲಿದ್ದರೆ ದ್ವಾದಶಾಂಶ ಹರಿಸುತ್ತಾನೆ. ಈ ಪ್ರಕಾರ ಆಯಾಯ ಸ್ಥಾನಗಳಲ್ಲಿರುವ ಪಾಪಗ್ರಹಗಳು ಕೊಟ್ಟಿರುವ ತಮ್ಮ ತಮ್ಮ ಆಯುರ್ದಾಯ ಸಂವತ್ಸರಗಳು ಕಡಿಮೆಯಾಗುತ್ತದೆ. ತಥಾ-ಆ ಪ್ರಕಾರವಾಗಿಯೇ, ಏಕರಾಶಿಪಾನಾಂ-ಶುಭಗ್ರಹಗಳಾಗಲಿ, ಪಾಪಗ್ರಹಗಳಾಗಲಿ, ಈ ವ್ಯಯಾದಿ ಸ್ಥಾನಗಳಲ್ಲೊಂದು ಸ್ಥಾನದಲ್ಲಿ ಎರಡು ಮೂರು ಗ್ರಹಗಳಿದ್ದರೆ ಅವರೊಳಗೆ, ಬಲೀ-ಬಲವಂತನಾದ, ಏಕಃ-ಒಬ್ಬನೇ, ಅಂಶಂ-ಆ ಸ್ಥಾನದಲ್ಲಿ, ತನಗೆ ಹೇಳಿದ ಹರಣಾಂಶವನ್ನು, ಹರತಿ-ಹರಿಸುತ್ತಾನೆಂದು, ತಥಾ-ಆ ಪ್ರಕಾರವಾಗಿಯೇ, ಸತ್ಯಃ-ಸತ್ಯಾಚಾರ್ಯನು, ಆಹ-ಹೇಳಿರುವನು. ಈ ಮತವು ವರಾಹಮಿಹಿರಾಚಾರ್ಯರಿಗೆ ಸಮ್ಮತಿಯಾದ್ದರಿಂದ ಗ್ರಂಥಾಂತರದಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿರುತ್ತೆ. ಆದ್ದರಿಂದ

ಸತ್ಯಮತೋಪನ್ಯಾಸ ಮಾಡಲ್ಪಟ್ಟಿದೆ. ಪಾಪಗ್ರಹವೆಂದರೆ ಕ್ಷೀಣಚಂದ್ರ ಮತ್ತು ಪಾಪಬಂಧ, ಕ್ರೂರವಾಗಿದ್ದರೆ ಪರಂತು ಆಗ ಆ ಗ್ರಹವು ಪಾಪಿಷ್ಠನಾಗುವುದಿಲ್ಲ, ಅರ್ಥಾತ್-ಪೂರ್ವದಲ್ಲಿ ಉಕ್ತಭಾಗವನ್ನು ಕ್ಷಯಿಸುವುದಿಲ್ಲ. ಅರ್ಧಭಾಗವೆಂದರೆ ಪಾಪಗ್ರಹವಾಗಿದ್ದರೆ ಎಷ್ಟುಭಾಗ ಹ್ರಾಸವಾಗುವುದೋ ಅದರಲ್ಲಿ ಅರ್ಧ ನಾಶವಾಗುವುದು.

ವಿವೇರಣೆ-ಪಾಪಗ್ರಹಗಳಿಗೆ ಅವರು ಇರುವ ರಾಶಿಗಳಲ್ಲಿ ಹರಣ ಮಾಡುವ ವಿಷಯ ಹೇಳಲ್ಪಟ್ಟಿರುತ್ತೆ. ಶುಭಗ್ರಹಗಳಿಗಾದರೆ ಆ ಪಾಪಗ್ರಹಗಳಿಗೆ ಹೇಳಲ್ಪಟ್ಟಿರುವ ಅಂಶಗಳಲ್ಲಿ ಅರ್ಧವನ್ನು ಹ್ರಾಸಮಾಡುತ್ತಾರೆ. ಅದು ಹೇಗೆಂದರೆ-ವ್ಯಯದಲ್ಲಿ ಪಾಪಗ್ರಹವಿದ್ದರೆ, ಅವನಿಂದ ಬಂದ ಆಯುಸ್ಸಂವತ್ಸರಗಳು ಸರ್ವವನ್ನು ನಾಶಮಾಡುತ್ತಾನೆ. ಅಲ್ಲಿ ಶುಭಗ್ರಹವಿದ್ದರೆ ಅವನ ಆಯುರ್ದಾಯ ಸಂವತ್ಸರಗಳು ½ ಹ್ರಾಸ ಮಾಡುತ್ತಾನೆ. ಈ ಪ್ರಕಾರವಾಗಿ ಏಕಾದಶಸ್ಥಾನದ ಶುಭಗ್ರಹದ ದತ್ತಾಯು ಸಂವತ್ಸರಗಳಲ್ಲಿ ¼ ಹ್ರಾಸಮಾಡುತ್ತಾನೆ. ದಶಮದಲ್ಲಿದ್ದ ಶುಭಗ್ರಹದತ್ತಾಯು ಸಂವತ್ಸರಗಳಲ್ಲಿ 1/೪ ಹ್ರಾಸಮಾಡುತ್ತಾನೆ. ನವಮದಲ್ಲಿದ್ದ ಶುಭಗ್ರಹದತ್ತಾಯು ಸಂವತ್ಸರಗಳಲ್ಲಿ 1/೪ ಹ್ರಾಸಮಾಡುತ್ತಾನೆ. ಅಷ್ಟಮದಲ್ಲಿ ಶುಭಗ್ರಹದತ್ತಾಯು ಸಂವತ್ಸರಗಳಲ್ಲಿ ೧/೧೦ ಹ್ರಾಸಮಾಡುತ್ತಾನೆ. ಸಪ್ತಮದಲ್ಲಿ ಶುಭಗ್ರಹವಿದ್ದರೆ ಆ ಗ್ರಹದತ್ತಾಯುಸಂವತ್ಸರಗಳಲ್ಲಿ ೧/೧೨ ಹ್ರಾಸಮಾಡುತ್ತಾನೆ. ಒಂದೇ ರಾಶಿಯಲ್ಲಿರುವ ಗ್ರಹಗಳಿಗೆ ಅದರಲ್ಲಿ ಯಾವ ಗ್ರಹಕ್ಕೆ ಹೆಚ್ಚಾದ ಬಲ ಬಂದಿರುವುದೋ ಆ ಗ್ರಹ ಮಾತ್ರವೆ ಆ ಗ್ರಹಕ್ಕೆ ಉಕ್ತವಾಗಿರುವ ಅಂಶವನ್ನು ಕಡಿಮೆ ಮಾಡುತ್ತಾನೆ. ಆದರೆ ೧೨-೧೧-೧೦-೯-೮-೭ ಈ ರಾಶಿಗಳಲ್ಲಿ ಯಾವ ರಾಶಿಗಳಲ್ಲಾದರೂ ೨-೩-೪-೫-೬-೭ ಈ ಪ್ರಕಾರ ಗ್ರಹ ಸಂಯೋಗವಿದ್ದರೆ, ಅವರಲ್ಲಿ ಯಾರು ಬಲಿಷ್ಠರಾಗಿರುವರೋ ಆ ಗ್ರಹಕ್ಕೆ ಮಾತ್ರ ಆ ಸ್ಥಾನಕ್ಕೆ ಉಕ್ತವಾದ ಅಂಶವನ್ನು ಹ್ರಾಸ ಮಾಡುತ್ತಾನೆ. ಇದು ಸತ್ಯಾಚಾರ್ಯರ ಮತವಾಗಿರುತ್ತೆ. ಈ ವಿಷಯದಲ್ಲಿ ಶ್ಲೋಕ ।।ಸತ್ಯಾಚಾರ್ಯಃ।। ಏಕರ್ಕ್ಷಗೇಷು ವೀರ್ಯಾಧಿಕಸ್ವಭಾಸಂ ಹರೇದೇಕಂ । ಅರ್ಧಂತೃತೀಯಭಾಗಂ ತ್ರ್ಯಥಚತುಃಪಂಚ ಷಷ್ಠಂಚ ।। ಆಯುಃಪಿಂಡಾತ್ಪಾಪಾಹರಂತಿ ಸೌಮ್ಯಾಸ್ತ ತೋರ್ಧಾನಿ । ದ್ವಾದಶ ಸಂಸ್ಥಃ ಪಾಪಸ್ಸ್ವಮಾಯುರಖಿಲಂ ಶುಭಸ್ತತೋರ್ಧಂತು ।। ಅಪಹರತಿ ಸರ್ವಮಾಯುಃ ಯಥಾಚಯೋಗಂತಥಾ ತಮಪಿವಕ್ಷ್ಯೇ ।। ಈಮತವನ್ನೇ ವರಾಹಮಿಹಿರಾಚಾರ್ಯರು ಅಂಗೀಕರಿಸಿರುತ್ತಾರೆ.

## ವ್ಯಯಾದಿ ಶುಭ ಪಾಪಗ್ರಹಾಣಾಂ ಹರಣಪದಕಂ

| ಯಾವ ಭಾವದಲ್ಲಿದ್ದರೆ | ಪಾಪಗ್ರಹ ದತ್ತಾಯು ವಿನಲ್ಲಿ ಹ್ರಾಸವಾಗುವ ಭಾಗ | ಶುಭಗ್ರಹ ದತ್ತಾಯುವಿ ನಲ್ಲಿ ಹ್ರಾಸವಾಗುವ ಭಾಗ |
|---|---|---|
| ವ್ಯಯಭಾವದಲ್ಲಿದ್ದರೆ | ೧ನೇ ಭಾಗ | ೨ನೇ ೧ ಭಾಗ |
| ಏಕಾದಶ " | ೨ನೇ ೧ ಭಾಗ | ೪ನೇ ೧ " |
| ದಶಮ " | ೩ನೇ ೧ " | ೬ನೇ ೧ " |
| ನವಮ " | ೪ನೇ ೧ " | ೮ನೇ ೧ " |
| ಅಷ್ಟಮ " | ೫ನೇ ೧ " | ೧೦ನೇ ೧ " |
| ಸಪ್ತಮ " | ೨ನೇ ೧ " | ೧೨ನೇ ೧ " |

ಟಿಪ್ಪಣಿ - ಗ್ರಹಸಂಯೋಗಕ್ಕೆ ಹರಣ ಶುಭವಾಗಲೀ, ಪಾಪಗ್ರಹವಾಗಲೀ ಸಂಯೋಗವಾಗಿದ್ದರೆ ಅವರಲ್ಲಿ ಯಾರಿಗೆ ಬಲ ಹೆಚ್ಚಾಗಿರುವುದೋ ಆ ಗ್ರಹಕ್ಕೆ ಮೇಲೆ ಹೇಳಿರುವ ಅಂಶ ಪ್ರಕಾರ ಹ್ರಾಸ ಮಾಡುತ್ತಾನೆ. ಉಳಿದ ಗ್ರಹಗಳಿಗೆ ಮಾತು ಹರಣವಿಲ್ಲ ॥೩॥

### ಲಗ್ನಸ್ಥ ಪಾಪಗ್ರಹಹರಣ ನಿರ್ಣಯಃ

ಮೂಲ॥ ಸಾರ್ಧೋದಿತೋದಿತ ನವಾಂಶಹತಾ ತ್ಸಮಸ್ತಾ ದ್ಭಾಗೋಷ್ಟ ಯುಕ್ತ
ಶತಸಂಖ್ಯ ಮುಪೈತಿನಾಶಂ। ಕ್ರೂರೇವಿಲಗ್ನಸಹಿತೇ ವಧಿ ನಾತ್ವನೇನ
ಸಮ್ಯೇಕ್ಷಿತೇ ದಳಮತಃ ಪ್ರಳಯಂ ಪ್ರಯಾತಿಃ ॥೪॥

ಅವತಾರಿಕೆ॥ ಲಗ್ನದಲ್ಲಿದ್ದ ಪಾಪಗ್ರಹವು ಆಯುರ್ದಾಯಾಂಶವನ್ನಪಹರಿಸುವ ವಿಧವು ಹೇಳಲ್ಪಡುತ್ತೆ.

ಟೀಕು॥ ಕೂರ್‍ರೇ-ಪಾಪಗ್ರಹಗಳಾದ ರವಿ, ಬುಧ, ಶನಿಗಳಲ್ಲಿ ಯಾರಾದರೂ ಒಬ್ಬರು, ವಿಲಗ್ನಸಹಿತೇ-ಲಗ್ನದಲ್ಲಿದ್ದರೆ, ಸಾರ್ಧೋದಿತೋ ದಿತನವಾಂಶಹತಾತ್-ಅರ್ಧೋದಿತ ನವಾಂಶಸಹಿತವಾದ ಗತನವಾಂಶದ ಸಂಗಡ ಗುಣಿಸಿದರೆ, ಸಮಸ್ತಾತ್-ಲಗ್ನದತ್ತಾಯುಸ್ಸಹಿತವಾದ ಸರ್ವಗ್ರಹ ದತ್ತಾಯುಃ ಪಿಂಡದೊಳಗಿನ, ಅಷ್ಟಯುಕ್ತ ಶತಸಂಖ್ಯಂ-ಅಷ್ಟಯುಕ್ತವಾದ ಶತಸಂಖ್ಯೆ ಎಷ್ಟು, ಭಾಗಃ- ಪಾಲು

ಮಾಡಿದರೆ, ಒಂದು ಸಂಖ್ಯಾವರ್ಷಗಳು, ನಾಶಂ-ನಾಶವನ್ನು, ಉಪೈತಿ-ಹೊಂದುವುದು. ಅದು ಯಾವ ಪ್ರಕಾರವೆಂದರೆ, ಮೇಷ ಮೊದಲುಗೊಂಡು ತಾತ್ಕಾಲಿಕ ಲಗ್ನ ಭಾಗದವರಿಗೂ ಲಿಪ್ತಿಗಳನ್ನು ಮಾಡಿ, ಅದನ್ನು ನವಾಂಶಲಿಪ್ತಾ ಪ್ರಮಾಣವಾದ ೨೦೦ ರಿಂದ ಭಾಗ ಮಾಡಿದರೆ ಲಬ್ಧವೆಷ್ಟು ಬರುವುದೋ, ಅಷ್ಟು ನವಾಂಶಗಳು ರಾಶಿ ಚಕ್ರದಲ್ಲಿ ಗತನವಾಂಶಗಳಾಗುವುದು. ಇದರಲ್ಲಿ ವರ್ತಮಾನ ನವಾಂಶಕ್ಕೆ ೩೦ ಸೇರಿದರೆ ಅದು ಸಾರ್ಧೋದಿತ ನವಾಂಶವಾಗುವುದು. ಇದರ ಸಂಗಡ ಲಗ್ನಾಯುಸ್ಸಹಿತವಾದ ಸರ್ವ ಗ್ರಹಾಯುಸ್ಸನ್ನು ಗುಣಿಸಿ ೧೦೮ ರಿಂದ ಭಾಗ ಮಾಡಲಾಗಿ ಬಂದ ಲಬ್ಧ ವರ್ಷ, ಮಾಸ, ದಿವಸ, ಘಟಿಕಾದಿಗಳನ್ನು ಲಗ್ನದಲ್ಲಿದ್ದ ಪಾಪಗ್ರಹ ಹರಿಸುತ್ತಾನೆ. ಆದ್ದರಿಂದ ಆ ವರ್ಷಾದಿಗಳನ್ನು ಸರ್ವಗ್ರಹ ದತ್ತಾಯುಃ ಪಿಂಡದಲ್ಲಿ ಕಳೆದು ಶೇಷವನ್ನು ಕ್ರೂರೋದಯಹರಣ ಮಾಡಿ ಶುದ್ಧ ಆಯುಸ್ಸನ್ನು ನಿರ್ಣಯ ಮಾಡಬೇಕು. ಈ ಪ್ರಕಾರ ಆಯಾಯ ಗ್ರಹಗಳಿಗೆ ಪ್ರತ್ಯೇಕ ವಾಗಿ ಅಂಶಹರಣ ಮಾಡಿದನಂತರ ಆಯಾಯ ಗ್ರಹದಶಾ ವರ್ಷಗಳೇರ್ಪಡುತ್ತವೆ.

ಕೆಲವು ಗ್ರಂಥಗಳಲ್ಲಿ ಸಾರ್ಧೋದಿತ ನವಾಂಶವೆಂಬುವಲ್ಲಿ ಮೇಷಾದಿ ರಾಶಿಗಳನ್ನು ಕಳೆದುಹಾಕಿ ಲಗ್ನದಲ್ಲಿ ಗತಭಾಗಗಳನ್ನು ಸೇರಿಸಿ, ಲಿಪ್ತಿಯಾಗಿ ಏಕರಾಶಿ ಮಾಡಿ ಆ ಲಿಪ್ತಿಗಳನ್ನು ೨೦೦ರಿಂದ ಭಾಗಿಸಲಾಗಿ ಬಂದ ಲಬ್ಧವೇ ಗತನವಾಂಶವಾಗುವುದು. ಅದಕ್ಕೆ ವರ್ತಮಾನ ನವಾಂಶ ಕೂಡಿದರೆ ಸಾರ್ಧೋದಿತ ನವಾಂಶ ಸಮೂಹವಾಗುವುದು. ಇದರಿಂದ ಸರ್ವಗ್ರಹದತ್ತಾಯುಃ ಪಿಂಡವನ್ನು ಗುಣಿಸಿ, ಪೂರ್ವೋಕ್ತ ಪ್ರಕಾರವಾಗಿ ಹರಣಮಾಡತಕ್ಕದ್ದು ಎಂದು ಪಕ್ಷಾಂತರವಾಗಿ ಹೇಳಲ್ಪಟ್ಟಿದೆ.

ಸೌಮ್ಯೇಕ್ಷಿತೇ-ಆ ಲಗ್ನದಲ್ಲಿದ್ದ ಪಾಪಗ್ರಹವು, ಶುಭಗ್ರಹದಿಂದ ನೋಡಲ್ಪಟ್ಟರೆ, 'ಅನೇನವಿಧಿನಾ' ಈ ವಿಧಿಯಿಂದಲೇ ಸಾರ್ಧೋದಿತ ನವಾಂಶದಿಂದ ಗುಣಿಸಿ ೧೦೮ ರಿಂದ ಭಾಗಮಾಡಿ ಬಂದ ಲಬ್ಧವನ್ನು, ಅತಃ- ಈ ಲಬ್ಧದಲ್ಲಿ, ದಳಂ-ಅರ್ಧವು, ಪ್ರಳಯಂ-ನಾಶವನ್ನು, ಉಪೈತಿ-ಹೊಂದುವುದು, ಲಗ್ನದಲ್ಲಿ ಒಂದು ಪಾಪಗ್ರಹ, ಒಂದು ಶುಭಗ್ರಹವಿದ್ದರೆ ಆ ಎರಡು ಗ್ರಹಗಳಲ್ಲಿ ವರ್ತಮಾನ ನವಾಂಶಕ್ಕೆ ಕೇವಲ ಸಮೀಪದಲ್ಲಿ ಯಾವಗ್ರಹವಿರುವುದೋ ಆ ಗ್ರಹಕ್ಕೆ ಈ ಪ್ರಕಾರ ಅಂಶಹರಣ ಮಾಡತಕ್ಕದ್ದು. ಇತರ ಗ್ರಹಗಳಿಗೆ ಅಂಶಹರಣ ಮಾಡಕೂಡದು. ಇಲ್ಲಿ ಕ್ಷೀಣಚಂದ್ರ ಹಾಗೂ ಪಾಪಯುಕ್ತ ಬುಧನಿಗೆ ಪಾಪಗ್ರಹ ಹರಣಮಾಡಕೂಡದು. ಈ ವಿಷಯದಲ್ಲಿ ಶ್ಲೋಕ॥ ಸೂರ್ಯಾಂಗಾರಕ ಮಂದೇಷ್ವೇಕಸ್ಮಿ ಲಗ್ನಗೇ ಹಾನಿ- ॥ ವಿಧಾನಾನೇನ ಹಿ

ಸೌಮ್ಯೇಕ್ಷಿತೇದಳಂಪಾತಯೇ ಲ್ಲಬ್ಧಂ ॥೭॥ ಎಂದು ಬಾದರಾಯಣ ಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತೆ.

## ಸಾರ್ಧೋದಿತ ನವಾಂಶಸಾಧನ ಮಾಡತಕ್ಕ ಕ್ರಮ

ಉದಿತ ನವಾಂಶವನ್ನು ಸಾರ್ಧೋದಿತ ನವಾಂಶ ಮಾಡಬೇಕು. ಆದರೆ ಲಗ್ನದಲ್ಲಿ ಎಷ್ಟು ನವಾಂಶ ಭುಕ್ತವಾಗಿದೆಯೋ ಅದಕ್ಕೆ ಉದಿತ ನವಾಂಶವೆಂದು ಹೆಸರು. ಯಾವ ನವಾಂಶದಲ್ಲಿ ಜನ್ಮವಾಗುವುದೋ ಅದರಲ್ಲಿ ಎಷ್ಟು ಭುಕ್ತವಾಗಿರುವುದೋ ಅದನ್ನು ತ್ರೈರಾಶಿಕದಿಂದ ಮಾಡಿ ಅದನ್ನು ಉದಿತ ನವಾಂಶಕ್ಕೆ ಸೇರಿಸಿದರೆ ಸಾರ್ಧೋದಿತ ನವಾಂಶವಾಗುವುದು. ಇದರ ಕಲಾಪಿಂಡ ಮಾಡಿ ಲಗ್ನದಲ್ಲಿ ಪಾಪಗ್ರಹವಿದ್ದರೆ ಆ ಗ್ರಹ ದಶಾದಿಂದ ಗುಣಿಸಿ, ೧೦೮ ರಿಂದ ಭಾಗ ಮಾಡಿದರೆ ಬರುವ ಭಾಗವನ್ನು ಆ ಗ್ರಹದತ್ತಾಯುಃ ಪಿಂಡದಲ್ಲಿ ವ್ಯವಕಲನ ಮಾಡಬೇಕು. ಲಗ್ನದಲ್ಲಿ ಪಾಪಗ್ರಹವಿದ್ದು ಆ ಗ್ರಹದಮೇಲೆ ಶುಭಗ್ರಹದ ಪೂರ್ಣದೃಷ್ಟಿಯಿದ್ದರೆ ಆ ಗ್ರಹವನ್ನು ೧೦೮ ರಿಂದ ಭಾಗ ಮಾಡಿ ಭಾಗದಲ್ಲಿ ಅರ್ಧಕಡಿಮೆ ಮಾಡಬೇಕು. ಲಗ್ನದಲ್ಲಿ ಪಾಪಗ್ರಹವಿದ್ದು ಶುಭದೃಷ್ಟಿ ಇಲ್ಲದಿದ್ದರೆ ೧೦೮ ರ ೧ ಭಾಗ ಮಾತ್ರ ಹರಣಮಾಡಬೇಕು. ಲಗ್ನದಲ್ಲಿ ಎರಡು ಗ್ರಹವಿದ್ದರೆ ಲಗ್ನನವಾಂಶಕ್ಕೆ ಸಮೀಪವಿರುವ ಒಂದು ಗ್ರಹಕ್ಕೆ ಮಾತ್ರ ಹರಣಮಾಡಬೇಕು. ಉಳಿದ ಗ್ರಹಗಳಿಗೆ ಅಂಶಹರಣ ಮಾಡಕೂಡದು. ಲಗ್ನ ನವಾಂಶಕ್ಕೆ ಸಮೀಪದಲ್ಲಿ ಎರಡು ಗ್ರಹಕ್ಕೆ ಕಲಾಸಾಮ್ಯನ್ಯವಾಗಿದ್ದರೆ ಆಗ ಹಿಂದೆ ಈ ಗ್ರಂಥದಲ್ಲಿ ಹೇಳಿರುವಂತೆ ಮೊದಲು ಸೂರ್ಯನಿಂದ ಉದಯವಾದ ಗ್ರಹಕ್ಕೆ ಮಾತ್ರ ಹರಣ ಮಾಡಬೇಕು.

## ಉದಾಹರಣೆ

ಲಗ್ನಸ್ಫುಟ ೭-೨೫-೧೦-೧೭ ಆದರೆ ೨೩ ಭಾಗ ೨೦ ಕಲಾ ಪರ್ಯಂತ ೭ ನವಾಂಶ ಭುಕ್ತವಾಗುತ್ತದೆ. ಶೇಷ, ೮ ನೆ ನವಾಂಶದಲ್ಲಿ ೧ ಅಂಶ ೫೦ ಕಲಾ ಆಗುತ್ತದೆ. ಇದಕ್ಕೆ ತ್ರೈರಾಶಿಕ ೧ ಭಾಗ ೫೦ ಕಲೆಗಳಿಗೆ ಕಲಾಪಿಂಡ ೧೧೦ಕ್ಕೆ ೨೦೦೦ದಿಂದ ಭಾಗಮಾಡಿದರೆ ಲಬ್ಧ ೬ ಶೇಷ ೧೨೦ ಇದಕ್ಕೆ ೩೦ರಿಂದ ಗುಣಿಸಿ ೨೦೦ ಭಾಗಮಾಡಿದರೆ ಫಲ ೧೮ ಶೇಷಕ್ಕೆ ೬೦ ರಿಂದ ಗುಣಿಸಿ ೨೦೦ ರಿಂದ ಭಾಗಿಸಿದರೆ ನಾಲ್ಕನೇ ಫಲ ಸಿಗುತ್ತದೆ. ಅಂತು ಶೇಷ ೦ ಲಬ್ಧ ೦ ಈಗ ಲಾಭ ೪ ಅಂಕ ೧-೬-೧೮-೦ ಕ್ಕೆ ಗತನವಾಂಶ ೭ ಸೇರಿಸಿದರೆ ೭-೬-೧೮-೦ ಆಗುತ್ತದೆ. ಇದು ಸಾರ್ಧೋದಿತ ನವಾಂಶವೆಂದು ತಿಳಿಯತಕ್ಕದ್ದು. ಲಗ್ನದಲ್ಲಿ ಪಾಪಗ್ರಹ ಶನಿಗೆ ದಶಾವರ್ಷಾದಿ ೧೩-೮-೧೪-೪೫ ಇದಕ್ಕೆ ೭-೬-೧೮-೦ ವ್ಯವಕಲನ ಮಾಡಿದರೆ,

೬-೧-೧೬-೪೫ ಇದು ಶನಿ ದಶಾ ಆಯಿತು. ಲಗ್ನದಲ್ಲಿದ್ದ ಈ ಶನಿಯ ಮೇಲೆ ಶುಭ ಗ್ರಹದ ಪೂರ್ಣದೃಷ್ಟಿ ಇದೆ, ಆದಕಾರಣ ಸಾರ್ಧೋದಿತ ನವಾಂಶ ಅರ್ಧ ೩-೬-೯-೦ ಕಳೆದರೆ ೧೦-೨-೬-೪೫ ಇದು ಶನಿದಶಾ ಆಯಿತು. ಯಾವಾಗ ಲಗ್ನದಲ್ಲಿ ಪಾಪಗ್ರಹ, ಅಥವಾ ೨-೩-೪-೫-೬ ಗ್ರಹಗಳಿದ್ದರೆ ಆ ಗ್ರಹಗಳಲ್ಲಿ ಯಾವಗ್ರಹ ಅಂಶದಲ್ಲಿ ಲಗ್ನಾಂಶಕ್ಕೆ ಸಮೀಪದಲ್ಲಿ ಯಾವ ಗ್ರಹವಿರುವುದೋ ಆ ಗ್ರಹಕ್ಕೆ ಉಂಟಾದ ದಶೆಯಲ್ಲಿ ೧೦ಲನೇ ೧ ಭಾಗ ಹರಣ ಮಾಡಬೇಕು. ॥೪॥ ಈ ವಿಷಯದಲ್ಲಿ ಅನ್ಯಮತೋದಾಹರಣದಿಂದ ಸಮ್ಮತಿ ॥ಶ್ಲೋಕ॥ ಲಗ್ನಾಂಶ ಲಿಪ್ತಕಾಹತ್ವ ಪ್ರತ್ಯೇಕ ವಿಹಿತಾಯುಷಃ । ಭಾಜ್ಯಂ ಮಂಡಲ ಲಿಪ್ತಾಭಿಃ ಲಬ್ಧ ವರ್ಷಾದಿಶೋಧಯೇತ್ ॥ ಸ್ವಾಯುಷೋ ಲಗ್ನೇ ಕ್ರೂರೇ ಸೌಮ್ಯದೃಷ್ಟೇಚ ತದ್ದಳಂ ॥ ಎಂದುಕ್ತವಾಗಿರುತ್ತೆ ॥ ಈ ವಿಷಯವನ್ನು ಆಯಾಯ ಗ್ರಹದಿಂದ ಬದ ಆಯುರ್ದಾಯಗಳಿಗೆ ಹರಣಮಾಡಿ ಅನಂತರ ಎಲ್ಲಾ ಗ್ರಹ ದತ್ತಾಯು ಕೊಟ್ಟಿರುವ ಒಟ್ಟು ಸಂಖ್ಯೆಗೆ ಒಂದು ಸಾರಿ ಈ ಶ್ಲೋಕದಲ್ಲಿ ಹೇಳಿರುವ ಪ್ರಕಾರ ಕ್ರೂರಗ್ರಹದಲ್ಲಿದ್ದರೆ ಹ್ರಾಸಮಾಡಬಹುದು, ಈ ರೀತಿ ಮಾಡಿದರೂ ಹೆಚ್ಚು ಕಡಿಮೆಯಾಗುವುದಿಲ್ಲ. ಇಲ್ಲಿ ಸ್ಥೂಲಮಾರ್ಗಕ್ಕಿಂತಲೂ ಸೂಕ್ಷ್ಮವಾದ ಮಾರ್ಗವೇ ವಿದ್ವಾಂಸ ಪರಿಗ್ರಾಹ್ಯವಾಗಿದೆ. ಈ ವಿಷಯವು ಲಗ್ನಗತ ಕ್ರೂರೋದಯ ಹರಣಕ್ಕೆ ಮಾತ್ರವೆ ಅಲ್ಲ, ಚಕ್ರಪಾತಹರಣದಲ್ಲೂ ಈ ಕ್ರಮವನ್ನೇ ಅನುಸರಿಸಬೇಕು. ಈ ಪ್ರಕಾರ ಮಾಡುವುದು ಹೇಗೆಂದರೆ-ತನುಭಾವ (ಲಗ್ನ) ದಿಂದ ಇಷ್ಟ ಗ್ರಹವನ್ನು ಕಳೆದು ಶೇಷವು ಷಡ್ರಾಶಿಗಳಿಗೆ ನ್ಯೂನವಾಗಿದ್ದರೆ ಚಕ್ರಪಾತ ಹರಣವಿಲ್ಲ. ಷಡ್ರಾಶಿಗಳಿಗೆ ಅಧಿಕವಾಗಿದ್ದರೆ ಅದರಲ್ಲಿ ಷಡ್ರಾಶಿಗಳ ವ್ಯವಕಲನೆಮಾಡಿ ಆ ಶೇಷ ಸಂಖ್ಯೆಯಿಂದ ಆಯುಃಪಿಂಡವನ್ನು ಭಾಗಮಾಡಿದರೆ ಬಂದ ಲಬ್ಧಸಂಖ್ಯೆಯೇ ಹರಣವಾಗುತ್ತೆ. ಇದನ್ನು ಮೊದಲು ಆಯುರ್ವರ್ಷಗಳಲ್ಲಿ ನ್ಯೂನಮಾಡಬೇಕು.

ಭಾಗಹರಣ - ಒಂದು ರೂಪಕ್ಕೆ ನ್ಯೂನವಾಗಿದ್ದರೆ ಅದನ್ನು ರೂಪಸಂಖ್ಯೆಯಲ್ಲಿ ವ್ಯವಕಲನಮಾಡಿ ಶೇಷಸಂಖ್ಯೆಯಿಂದ ಆಯುರ್ದಾಯವನ್ನು (ಅಂದರೆ ಆಯುರ್ದಾಯ ಸಂವತ್ಸರ ಮಾಸಾದಿ ವಿಘಟಿಕಾಂತವೆಲ್ಲವನ್ನು) ಗುಣಿಸಿ ರೂಪದಿಂದ ಭಾಗಮಾಡಿ ಹ್ರಾಸಮಾಡಿದರೆ ಬಂದ ಲಬ್ಧ ವರ್ಷಾದಿ ಸಂಖ್ಯೆಯೇ ಶುದ್ಧಾಯುರ್ದಾಯ ಸಂವತ್ಸರಾದಿಗಳಾಗಿರುತ್ತೆ. ಇದು ಪ್ರಾಚೀನ ಜ್ಯೋತಿಷ್ಕರ ಮತವಾಗಿರುತ್ತೆ. ಇದಕ್ಕೆ ಸಮ್ಮತಿ ॥ ಲಗ್ನಗ್ರಹೋನಕಂ ಷಡ್ಭಾದೂನಕಂ ಯದ್ಯಸೌಹರಃ ॥ ಆಯುಃಪಿಂಡಂ ಭವೇತ್ತೇನಲಬ್ಧಂ ವರ್ಷಾದಿ ಶೋಧಯೇತ್ ॥ ರೂಪಾದೂನೋಹಾರಾಕಸ್ಯಾ ದ್ದೂ‌ಪಾಚ್ಛುದ್ಧೇನ ತಾಡಯೇತ್ ॥ ರೂಪೇಣ ವಿಭಜೇಲ್ಲಬ್ಧಂ

ತದೇವಾಯುಃಸ್ಫುಟಂಭವೇತ್ ॥ ಈ ಪ್ರಕಾರ ಕ್ರೂರೋದಯ ಹರಣ ಮಾಡುವಾಗ ಲಗ್ನಸಂಖ್ಯೆಯ ರಾಶಿಭಾಗಾದಿ ಸ್ಫುಟದಲ್ಲಿ ತತ್ಕಾಲ ನವಾಂಶಕ್ಕೆ ಸಮೀಪದಲ್ಲಿರುವ ಗ್ರಹವು ಪಾಪಗ್ರಹವಾಗಲೀ ಶುಭಗ್ರಹವಾಗಲಿ ಅಂಶ ಭಾಗವನ್ನು ಹ್ರಾಸಮಾಡಲುದ್ದೇಶಿಸಿದವನಾಗಿರುತ್ತಾನೆ. ಶುಭಗ್ರಹ ಲಗ್ನ ಸ್ಫುಟಭಾಗ ಕಲಾದಿಗಳಿಗೆ ಸಮೀಪಸ್ತನಾಗಿಯೂ, ಪಾಪಗ್ರಹವು ಆ ಶುಭಗ್ರಹಕ್ಕಿಂತ ದೂರದಲ್ಲಿ ಅದೇ ಲಗ್ನದಲ್ಲಿದ್ದಾಗ್ಯೂ ಕ್ರೂರೋದಯ ಹ್ರಾಸಮಾಡಬೇಕಾದ್ದಿಲ್ಲ. ಈ ಪ್ರಕಾರ ಶುಭಗ್ರಹಕ್ಕಿಂತ ದೂರವಾಗಿ ಕ್ರೂರಗ್ರಹ ಸಮೀಪದಲ್ಲಿದ್ದರೂ, ಶುಭ ಪಾಪಗ್ರಹ ಸಂಯೋಗದಲ್ಲಿ ಕ್ರೂರೋದಯ ಹ್ರಾಸಮಾಡಬೇಕಾದದ್ದಿಲ್ಲ. ಲಗ್ನಕ್ಕೆ ಪಾಪಗ್ರಹ ಸಮೀಪವಾಗಿ ರಾಶಿಸಂಬಂಧ ಮಾತ್ರವಿದ್ದರೆ, ಆ ಕಾಲದಲ್ಲಿ ಶುಭಗ್ರಹ ಸಮೀಪದಲ್ಲಿದ್ದ ರಾಶಿ ಸಂಬಂಧವಿಲ್ಲದೆ ಶುಭಗ್ರಹ ಒಂದರಿಂದಾಗಲೀ, ಎರಡರಿಂದಾಗಲೀ ನೋಡಲ್ಪಟ್ಟರೆ ಆ ಸಂದರ್ಭದಲ್ಲಿ ಸೌಮ್ಯೇಕ್ಷಿತವಾದರೆ ದಳಂ ಎಂದು ಅಗ್ರಹೋಕ್ತ ಅಂಶಹರಣದಲ್ಲಿ ೨ ರಲ್ಲಿ ೧ ಭಾಗವನ್ನು ಹ್ರಾಸಮಾಡಬೇಕು. ಇಲ್ಲಿ ಕ್ಷೀಣ ಚಂದ್ರ ನಿಗೆ ಕ್ರೂರಸೌಮ್ಯಾದಿ ದೋಷಗಳಿಲ್ಲ. ಪೂರ್ಣಚಂದ್ರನು ಮಾತ್ರ ಶುಭಗ್ರಹವೆಂದು ತಿಳಿಯಬೇಕು. ಈ ವಿಷಯದಲ್ಲಿ ॥ಶ್ಲೋಕ॥ ಸೂರ್ಯಾಂಗಾರಕ ಮಂದೇಷ್ವೇಕಸ್ಮಿ ಲಗ್ನೇ ಭಮತಿಹಾನಿಃ । ವಿಧಿನಾತ್ವನೇನ ಸೌಮ್ಯೇಕ್ಷಿತೇ ದಳಂಪಾತಯೇಲ್ಲಬದ್ಧಂ॥ ನಕ್ಷೀಣೇಂದುಃ ಕ್ರೂರೋನಾಪಿಚಸೌಮ್ಯೋ ಭವತ್ಯಸ್ಮಿ । ಪರಮತ್ರಪೂರ್ಣ ಚಂದ್ರಃ ಶುಭಏವ ಬುಧೋನ ಪಾಪಯುತಃ ॥ ಎಂದು ಹೋರಾಮಕರಂದದಲ್ಲಿ ಬರೆದಿದೆ ॥೪॥

## ಪರಮಾಯುಃ ಪ್ರಮಾಣ ನಿರ್ಣಯಃ

ಮೂಲ॥ ಸಮಾಃಷಷ್ಟಿರ್ದ್ವಿಘ್ನಾಮನುಜ ಕರಿಣಾಂ ಪಂಚನಿಶಾಶ್ಚಹಯಾ ನಾಂ ದ್ವಾತ್ರಿಂಶತ್ ಖರಕರಭಯೋಃ ಪಂಚಕಕೃತಿಃ । ವಿರೂಪಾಸಾ-ಪ್ಯಾಯುರ್ವೃಷ ಮಹಿಷಯೋರ್ದ್ವಾದಶ ಶುನಾಂ । ಸ್ಮೃತಶ್ಛಾಗಾ ದೀನಾಂ ದಶಕಸಹಿತಾ ಷಟ್ಚಪರಮಂ ॥೫॥

ಟೀಕು॥ ಮನುಷ್ಯಗಜಾದಿ ಮುಖ್ಯಜಂತುಗಳ ಪರಮಾಯುಃ ಪ್ರಮಾಣವು ಹೇಳಲ್ಪಡುತ್ತೆ. ದ್ವಿಘ್ನಾಃ- ದ್ವಿಗುಣಮಾಡಿದ, ಷಷ್ಟಿಸಮಾಃ-ಅರವತ್ತು ಸಂವತ್ಸರಗಳು, ಪಂಚನಿಶಾಶ್ಚ - ಐದು ರಾತ್ರಿಗಳು, ಅಂದರೆ ೧೨೦ ವರ್ಷ ೫ ದಿವಸಗಳು, ಮನುಜಕರಿಣಾಂ-ಮನುಜ-ಮನುಷ್ಯರಿಗೂ, ಕರಿಣಾಂ-ಆನೆಗಳಿಗೂ, ಪರಮಾಯುಃ-ಅತ್ಯಂತ ದೀರ್ಘಕಾಲದ ಪರಮಾಯುಸ್ಸಾಗಿರುವುದು, ಹಯಾನಾಂ-ಅಶ್ವಗಳಿಗೆ,

ದ್ವಾತ್ರಿಂಶತ್-ಮೂವತ್ತೆರಡು ಸಂವತ್ಸರಗಳು ಪರಮಾಯುಸ್ಸು, ಖರಕರಭಯೋಃ-ಕತ್ತೆಗಳಿಗೂ, ಒಂಟೆಗಳಿಗೂ, ಪಂಚಕೃತಿಃ-ಪಂಚವರ್ಗ ೫×೫=೨೫ ಸಂವತ್ಸರ ಪರಮಾಯುಸ್ಸು, ವೃಷಮಹಿಷಯೋಃ-ಗೋವುಗಳಿಗೂ, ಎಮ್ಮೆಗಳಿಗೂ, ಸಾಪಿ-ಆ ಪಂಚಕೃತಿ ೨೫ ರಲ್ಲಿ, ವಿರೂಪಾ-ಒಂದು ಕಡಿಮೆಯಾಗುವುದು. ಅಂದರೆ ೨೪ ಸಂವತ್ಸರಗಳ ಪರಮಾಯುಸ್ಸು, ಇಲ್ಲಿ ಶುನಾಂ ಎಂಬುವ ಶಬ್ದದಿಂದ ನಖಗಳಿರುವ ಸಿಂಹವ್ಯಾಘ್ರಾದ್ಯುಪಲಕ್ಷಣ ಪ್ರಕಾರ ಹುಲಿ, ಸಿಂಹ, ಕರಡಿ ಬೆಕ್ಕಿಗೂ ೧೨ ವರ್ಷ ಪರಮಾಯುಸ್ಸು, ಛಾಗಾದೀನಾಂ-ಮೇಕೆ, ಕುರಿ ಮೊದಲಾದವುಗಳಿಗೆ, ದಶಕಸಹಿತಾಃ ೧೦ ಕೂಡಿದ, ಷಟ್-ಆರು ಸಂವತ್ಸರ, ಅಂದರೆ ೧೬ ವರ್ಷ ಪರಮಾಯುಸ್ಸು, ಇಲ್ಲಿ ಆದಿಶಬ್ದ ಪ್ರಯೋಗ ಮಾಡಿದ್ದರಿಂದ, ಎರಳೆ, ಸಾರಂಗ, ಕಡವೆ, ಕಾಡುಕುರಿ, ಮೊದಲಾದವುಗಳಿಗೂ ೧೬ ವರ್ಷವೇ ಪರಮಾಯುಸ್ಸೆಂದು ಹೇಳಬಹುದು.

ಇಲ್ಲಿ ಮನುಷ್ಯ ಗಜಗಳಿಗೆ ಒಂದೇ ವಿಧಾದ ಪರಮಾಯುಸ್ಸು ಹೇಳಲ್ಪಟ್ಟಿತು. ಈ ವಿಷಯವಾಗಿಯೇ ಈ ಗ್ರಂಥವೆಲ್ಲವೂ ಹೇಳಲ್ಪಟ್ಟದೆ. ಆದರೆ ಅಶ್ವಾದಿಗಳಿಗೆ ಪರಮಾಯುಸ್ಸು ತಿಳಿಯಬೇಕಾದರೆ, ಜನ್ಮಕಾಲದಿಂದ ಆಯುಃ ಪ್ರಮಾಣ ತಿಳಿಯಬೇಕು. ಆದರೆ ಅಶ್ವಾದಿಗಳ ಪರಮಾಯುಸ್ಸಿನಿಂದ ತ್ರೈರಾಶಿಕ ಗಣಿತ ಮಾಡಬೇಕು. ಪರಮೋಚ್ಚ ಗತವಾದ ಗ್ರಹಕ್ಕೆ ಗ್ರಹಪರಮಾಯು ಹೇಳಲ್ಪಟ್ಟಿರುತ್ತೆ. ಅದು ಹೇಗೆಂದರೆ-ಗ್ರಹ ಪರಮಾಯುವಿನಿಂದ ಅಶ್ವಾದಿಗಳ ಪರಮಾಯುಸ್ಸನ್ನು ಗುಣಿಸಿ, ಮನುಷ್ಯ ಪರಮಾಯುಸ್ಸಿನಿಂದ ಭಾಗಮಾಡಿದರೆ ಅಶ್ವಾದಿಗಳಿಗೆ ಆಯಾಯ ಗ್ರಹಗಳು ಕೊಡುವ ಪರಮಾಯು ಬರುವುದು.

## ಉದಾಹರಣೆ

ರವಿ ಪರಮಾಯುರ್ವರ್ಷ ೧೯, ಅಶ್ವಪರಮಾಯುಸ್ಸು ೩೨, ಇವುಗಳನ್ನು ಪರಸ್ಪರ ಗುಣಿಸಿದರೆ ೧೯×೩೨=೬೦೮ ಇದಕ್ಕೆ ಮನುಷ್ಯ ಪರಮಾಯುಸ್ಸು ೧೨೦ ರಿಂದ ಭಾಗಿಸಿದರೆ ಬರುವ ಲಬ್ಧ ವರ್ಷ ೫ ಮಾಸ ೦ ದಿವಸ ೨೪ ಈ ಪ್ರಕಾರವೇ ಚಂದ್ರನಿಗೆ ವ ೬, ಮಾಸ ೮, ದಿ ೦, ಕುಜನಿಗೆ ಸಂ ೪, ಮಾಸ ೦, ದಿ ೦, ಬುಧನಿಗೆ ಸಂ ೫-೭-೬, ಶನಿಗೆ ೫-೪-೦, ಇದು ಅಶ್ವ ವಿಷಯಕ್ಕೆ ಪರಮೋಚ್ಚ ಗತರಾದ ಸೂರ್ಯಾದಿ ಸಪ್ತಗ್ರಹಗಳು ಕೊಡುವ ಪರಮಾಯುಸ್ಸು. ಈ ಪ್ರಕಾರವೇ ೩೦ ಕರಭಾದಿಗಳಿಗೆ ಸೂರ್ಯಾದಿಗ್ರಹಗಳು ಕೊಡುವ ಪರಮಾಯುರ್ನಿರ್ಣಯವನ್ನು ಮಾಡತಕ್ಕದ್ದು. ಈ ಪ್ರಕಾರ ಅಶ್ವಾದಿಗಳಿಗೆ ಹರಣ ಭರಣಗಳ ಮಾಡಿ ಆಯುರ್ನಿರ್ಣಯ ಮಾಡತಕ್ಕದ್ದು.

# ಪರಮಾಯು ಪದಕಂ

## ಪ್ರಾಣಿವರ್ಗ ಪರಮಾಯುಃ ಪದಕಂ

| ಸಂಖ್ಯೆ | ಪ್ರಾಣಿ ಹೆಸರು | ಪರಮಾಯುರ್ವರ್ಷ | | |
|---|---|---|---|---|
| ೧ | ಮನುಷ್ಯರಿಗೆ | ೧೨೦ | ೦ | ೫ |
| ೨ | ಗಜಕ್ಕೆ | ೧೨೦ | ೦ | ೫ |
| ೩ | ಅಶ್ವಕ್ಕೆ | ೩೨ | ೦ | ೦ |
| ೪ | ಕತ್ತೆಗೆ | ೨೫ | ೦ | ೦ |
| ೫ | ಒಂಟೆಗೆ | ೨೫ | ೦ | ೦ |
| ೬ | ಗೋವಿಗೆ (ಹಸುವಿಗೆ) | ೨೪ | ೦ | ೦ |
| ೭ | ಮಹಿಷಕ್ಕೆ | ೨೪ | ೦ | ೦ |
| ೮ | ನಾಯಿಗೆ | ೧೨ | ೦ | ೦ |
| ೯ | ಹುಲಿಗೆ | ೧೨ | ೦ | ೦ |
| ೧೦ | ಬೆಕ್ಕಿಗೆ | ೧೨ | ೦ | ೦ |
| ೧೧ | ಕರಡಿಗೆ | ೧೨ | ೦ | ೦ |
| ೧೨ | ಆಡಿಗೆ | ೧೬ | ೦ | ೦ |
| ೧೩ | ಕುರಿಗೆ | ೧೬ | ೦ | ೦ |
| ೧೪ | ಜಿಂಕೆಗೆ | ೧೬ | ೦ | |
| ೧೫ | ಸಾರಂಗಕ್ಕೆ | ೧೬ | | |
| ೧೬ | ಕಡವೆಗೆ | ೧೬ | ೦ | |
| ೧೭ | ಕಾಡುಕುರಿಗೆ | ೧೬ | ೦ | |

## ಅಶ್ವಾಯುಃ ಪದಕಂ

ಅಶ್ವಕ್ಕೆ ಸೂರ್ಯಾದಿ ಗ್ರಹಗಳು ಪರಮೋಚ್ಚದಲ್ಲಿರುವಾಗ
ಕೊಡುವ ವಯಸ್ಸು

| ಸಂಖ್ಯೆ | ಗ್ರಹಕ್ಕೆ | ವ | ಮಾ | ದಿ |
|---|---|---|---|---|
| ೧ | ಸೂರ್ಯ | ೫ | ೦ | ೨೪ |
| ೨ | ಚಂದ್ರ | ೬ | ೮ | ೦ |
| ೩ | ಕುಜ | ೪ | ೦ | ೦ |
| ೪ | ಬುಧ | ೩ | ೨ | ೧೨ |
| ೫ | ಗುರು | ೪ | ೦ | ೦ |
| ೬ | ಶುಕ್ರ | ೫ | ೭ | ೬ |
| ೭ | ಶನಿ | ೫ | ೪ | ೦ |
| | ಒಟ್ಟು | ೩೩ | ೧೦ | ೧೨ |
| | ಹರಣ | ೧ | ೧೦ | ೧೨ |
| | ಬಾಕಿ | ೩೨ | ೦ | ೦ |

## ಪರಮಾಯುರ್ಯೋಗ ಜಾತಕಂ

ಮೂಲ॥ ಅನಿಮಿಷ ಗರಮಾಂಶಕೇ ವಿಲಗ್ನೇ । ಶಶಿತನಯೇ ಗವಿಪಂಚವರ್ಗ
ಲಿಪ್ತೇ ॥ ಭವತಿ ಹಿ ಪರವಮಾಯುಃಷಃ ಪ್ರವಮಾಣಂ
ಯದಿಸಕಲಾಸ್ಸಹಿತಸ್ವ್ವ ತುಂಗಭೇಷು ॥೬॥

ಅವತಾರಿಕೆ ॥ ೧೨೦ ವರ್ಷ ೫ ದಿನ ಪರಮಾಯುಸ್ಸೆಂದು ಪೂರ್ವ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತೆ. ಅಂತಹ ಪರಮಾಯುರ್ಯೋಗ ಬರುವುದಕ್ಕೆ ಗ್ರಹ ಸಂಯೋಗ ಲಕ್ಷಣವು ಹೇಳಲ್ಪಡುತ್ತೆ.

ಟೀಕು॥ ಅನಿಮಿಷ ಪರಮಾಂಶಕೇ-ಅನಿಮಿಷ-ಮೀನರಾಶಿಯು, ಪರಮಾಂಶಕೇ-ಪರಮನವಾಂಶೆಯಾದ ೯ನೇ ನವಾಂಶೆಯು, ವಿಲಗ್ನೇ ಜನ್ಮಕಾಲ ಲಗ್ನವಾಗಿ, ಶಶಿತನಯೇ-ಬುಧನು, ರವಿ-ವೃಷಭದಲ್ಲಿ, ಪಂಚವರ್ಗಲಿಪ್ತೇ-೨೫ನೇ ಲಿಪ್ತಿಯಲ್ಲಿದ್ದು, ಸಕಲಾಃ-ಬುಧವ್ಯಧಿರಿಕ್ತವಾದ ೬ ಗ್ರಹಗಳು, ಸ್ವತುಂಗಭೇಷು-ತಮ್ಮ ತಮ್ಮ ಪರಮೋಚ್ಚ ಸ್ಥಾನಗಳಲ್ಲಿ, ಸಹಿತಾಯದಿ-ಇದ್ದರೆ, ಈ ಯೋಗದಲ್ಲಿ ಹುಟ್ಟಿದವನಿಗೆ, ಪ್ರಮಾಣಂ-ಪರಮಾಯುಷ್ಯ ಪ್ರಮಾಣವಾದ ೧೨೦ ವರ್ಷ ಮಾಸ ೦ ದಿವಸ ೫, ಭವತಿಹಿ-ಆಗುತ್ತದೆ.

ತಾ॥ ಮೀನಲಗ್ನದಲ್ಲಿ ೯ನೇ ನವಾಂಶದಲ್ಲಿ ಜನನವಾಗಿ ವೃಷಭದಲ್ಲಿ ೨೫ನೇ ಲಿಪ್ತಿಯಲ್ಲಿ ಬುಧನು ಉಳಿದ ಗ್ರಹಗಳು, ಅಂದರೆ, ಮೇಷದಲ್ಲಿ ಸೂರ್ಯ, ವೃಷಭದಲ್ಲಿ ಚಂದ್ರ, ಕರ್ಕಾಟಕದಲ್ಲಿ ಬೃಹಸ್ಪತಿ, ತುಲೆಯಲ್ಲಿ ಶನಿ, ಮಕರದಲ್ಲಿ ಕುಜ, ಮೀನದಲ್ಲಿ ಶುಕ್ರ, ತಮ್ಮ ತಮ್ಮ ಪರಮೋಚ್ಚ ಭಾಗದಲ್ಲಿದ್ದ ಕಾಲದಲ್ಲಿ ಹುಟ್ಟಿದವನು ೧೨೦ ವರ್ಷ ೫ ದಿವಸಗಳು ಪೂರ್ಣಾಯುಸ್ಸುಳ್ಳವನಾಗುವನು ॥ ಇದಕ್ಕೆ ಪ್ರಮಾಣ ಪರಾಶರಃ ॥ ನರಕಾಬ್ದ ಮಯಂಕಾಲಂ ನೃಲೋಕೆ ನರಜೀವಿತಂ । ತತಊರ್ಧ್ವಂ ಪಂಚನಿಶಾ ಯಥಾವದ್ಬ್ರಹ್ಮಣೋದಿತಂ ॥೬॥ ಮತ್ತು ಇಂಥಹ ಯೋಗಕಾಲದಲ್ಲಿ ಹುಟ್ಟಿದವನು ಚಕ್ರವರ್ತಿಯಾಗುವನೆಂದು ವೆಂಕಟೇಶಃ ॥ ಷಡ್ಭಿರ್ಗ್ರಹೈರುಚ್ಚಸಮನ್ವಿತೈಸ್ಸ್ಯಾದ್ರಾಜಾಧಿ ರಾಜೋಬಹುದೇಶಭರ್ತಾ ॥ ಎಂದು ಉಕ್ತವಾಗಿರುತ್ತೆ.

## ಉದಾಹರಣೆ

| ಸಂಖ್ಯೆ | ಗ್ರಹಾಃ | ರಾ | ಭಾ | ಕ | ವಿ |
|---|---|---|---|---|---|
| ೧ | ಸೂರ್ಯ | ೦ | ೯ | ೦ | ೦ |
| ೨ | ಚಂದ್ರ | ೧ | ೨ | ೦ | ೦ |
| ೩ | ಕುಜ | ೮ | ೨೭ | ೦ | ೦ |
| ೪ | ಬುಧ | ೧ | ೨೪ | ೦ | ೦ |
| ೫ | ಗುರು | ೩ | ೪ | ೦ | ೦ |
| ೬ | ಶುಕ್ರ | ೧೧ | ೨೬ | ೦ | ೦ |
| ೭ | ಶನಿ | ೬ | ೧೯ | ೦ | ೦ |
| ೮ | ಲಗ್ನ | ೧೧ | ೨೭ | ೦ | ೦ |

<table>
<tr><td>ಶುಕ್ರ<br>ಲಗ್ನ ೯</td><td>ರವಿ ೩</td><td>ಚಂದ್ರ ೧೨<br>ಬುಧ ೪</td><td></td></tr>
<tr><td></td><td colspan="2" rowspan="2">೧೨೦ ವರ್ಷ<br>೫ ದಿವಸ<br>ಆಯುರ್ಯೋಗ</td><td>ಗುರು೫</td></tr>
<tr><td>ಕುಜ ೯</td><td></td></tr>
<tr><td></td><td></td><td>ಶನಿ ೧೨</td><td></td></tr>
</table>

## ಉದಾಹರಣೆ

೧೨೦ ವರ್ಷ ೫ ದಿವಸ ಆಯುರ್ಯೋಗ ಯಾವ ಪ್ರಕಾರ ಬರುತ್ತೆಂದರೆ-ಪರಮೋಚ್ಚಗತನಾದ ಸೂರ್ಯನಿಗೆ ೧೯ ವರ್ಷ, ಪರಮೋಚ್ಚಗತ ಚಂದ್ರನಿಗೆ ೨೫ ವರ್ಷ, ಉಚ್ಚಗತನಾದ ಕುಜನಿಗೆ ೧೫ ವರ್ಷ ಪರಂತು ಪಾಪಗ್ರಹನಾಗಿ ೧೧ನೆ ಭಾವದಲ್ಲಿದ್ದದ್ದರಿಂದ ಚಕ್ರ ಪಾತಕ್ರಮ ಪ್ರಕಾರ ಅರ್ಧಹಾರ ಕೊಡಲಾಗಿ ಉಳಿದದ್ದು ೭ ವರ್ಷ, ೬ ಮಾಸ, ಬೃಹಸ್ಪತಿಗೆ ೧೫ ವರ್ಷ, ಶುಕ್ರನಿಗೆ ೨೧ ವರ್ಷ, ಶನಿಗೆ ೧೬ ವರ್ಷ, ಲಗ್ನದ ಅಂಶತುಲ್ಯ, ೯ ವರ್ಷ, ಈಗ ಬುಧನಿಗೆ ಉಚ್ಚ ಕನ್ಯಾರಾಶಿ ಸೂರ್ಯನು ಮೇಷದಲ್ಲಿರುವಾಗ ಕನ್ಯಾರಾಶಿಯಲ್ಲಿ ಬುಧನಿರುವುದು ಅಸಂಭವವಾದ್ದರಿಂದ ಸೂರ್ಯನಿಂದ ಬುಧ ಶುಕ್ರರು, ೧-೨ ರಾಶಿಗಳಲ್ಲಿಯೇ ಇರಬೇಕು. ಇದಕ್ಕಿಂತ ದೂರದಲ್ಲಿ ಯಾವಾಗ್ಯೂ ಇರುವುದಿಲ್ಲ. ಕದಾಚಿತ್-ಶುಕ್ರರು ೩ ರಾಶಿ ದೂರದಲ್ಲಿರಬಹುದು, ಬುಧನ ಸ್ಪಷ್ಟರಾಶಿ ೧ ಭಾಗ ೦ ಕಲಾ ೨೪ ಇದು ಬುಧಸ್ಫುಟ ೧-೦-೨೪-೦ ನೀಚಕ್ಕೆ ಸಮೀಪವಾದ್ದರಿಂದ, ನೀಚ ಧ್ರುವಕ ೧೧-೧೫-೦-೦ ಬುಧಸ್ಫುಟದಲ್ಲಿ ಕಳೆದರೆ ೧-೧೫-೨೫-೦ ಇದರ ಕಲಾಪಿಂಡ ೨೭೨೫ ತ್ರೈರಾಶಿಕ ಕ್ರಮ ಪ್ರಕಾರ ಬುಧ ಪರಮನೀಚ ೬ ರಿಂದ ಬುಧಸ್ಪಷ್ಟ ಲಿಪ್ತಾಪಿಂಡ ೨೭೨೫ ಗುಣಿಸಿ ಭಗಣಾರ್ಧಲಿಪ್ತಾ ೧೦೮೦೦ ರಿಂದ ಭಾಗಮಾಡಿದ ಲಬ್ಧ ೧-೬-೫, ಬುಧನ ಪರಮನೀಚ ವರ್ಷ ೬ ಸೇರಿಸಿದರೆ ೭-೬-೫ ಇದು ಬುಧದತ್ತಾಯು. ಈ ಸರ್ವ ಗ್ರಹಗಳ ಆಯುರ್ದಾಯ ೧೨೦ ವರ್ಷ, ಮಾಸ ೦,೫ ದಿನಗಳಾಗುತ್ತದೆ.

ಈ ಪ್ರಕಾರ ಯಾರ ಗ್ರಹಸ್ಥಿತಿ ಇರುವುದೋ ಅವರಿಗೆ ೧೨೦ ವರ್ಷ ೫ ದಿವಸ ಪೂರ್ಣಾಯುರ್ಯೋಗ ಬರುವುದು. ಇದನ್ನು ತ್ರೈರಾಶಿಕ ಪ್ರಮಾಣದಿಂದ ತಿಳಿಯಬೇಕು. ಮತ್ತು ಈ ಪರಮಾಯುಃ ಪ್ರಮಾಣಕ್ಕಿಂತ ಹೆಚ್ಚಾಗಿ ಯಾವಾಗ್ಯೂ ಬರುವುದಿಲ್ಲ. ಬುಧನು ರಾಶಿ ೧ ಭಾಗ ೪ ಕಲಾ ೦ ವಿಕಲಾ ೦ ಈ ಪ್ರಕಾರ ಸ್ಪಷ್ಟವಾಗಿ ಸಿಕ್ಕಿದರೆ, ಪೂರ್ವೋಕ್ತ ರೀತಿಯಲ್ಲಿ ತ್ರೈರಾಶಿಕ ಮಾಡಿದರೆ ವರ್ಷ ೧ ಮಾಸ ೭ ದಿವಸ ೧೮ ಬುಧದತ್ತಾಯುವಾಗುತ್ತದೆ. ಇದನ್ನು ನೀಚ ವರ್ಷ ೬ಕ್ಕೆ ಸಂಕಲನ ಮಾಡಿದರೆ ೭-೭-೧೮ ಬರುತ್ತದೆ. ಪೂರ್ವೋಕ್ತ ಸೂರ್ಯಾದಿ ಗ್ರಹಗಳ ಆಯುರ್ದಾಯ ಒಟ್ಟು ಸೇರಿಸಿದರೆ ೧೨೦ ವರ್ಷ ೧ ತಿಂಗಳು ೨೩ ದಿವಸ ಆಯುರ್ದಾಯ ಬರುತ್ತದೆ. ೧೨೦ ವರುಷ, ೫ ದಿವಸಕ್ಕಿಂತ ಹೆಚ್ಚು ಆಯುರ್ದಾಯ ಬರುತ್ತೆಂಬುವುದು ಕೇವಲ ಗಣಿತ ಚಾತುರ್ಯದಿಂದ ಮಾಡತಕ್ಕದ್ದಾಗಿರುತ್ತೆ.

## ೧ನೇ ಉದಾಹರಣೆ

ಮೀನಲಗ್ನ ಅಂತ್ಯನವಾಂಶದಲ್ಲಿ ಹುಟ್ಟಿದಾಗ ಬುಧ ವೃಷಭದಲ್ಲಿ ೨೫ನೇ ಭಾಗದಲ್ಲಿದ್ದು ಶೇಷಗ್ರಹಗಳು ಪರಮೋಚ್ಚಗಳಲ್ಲಿದ್ದರೆ ಆಯುರ್ಯೋಗ

| ಸಂಖ್ಯೆ | ಗ್ರಹದತ್ತಾಯುಃ | ವರ್ಷ | ಮಾಸ | ದಿನ |
|---|---|---|---|---|
| ೧ | ರವಿದತ್ತಾಯುಃ | ೧೯ | ೦ | ೦ |
| ೨ | ಚಂದ್ರದತ್ತಾಯುಃ | ೨೫ | ೦ | ೦ |
| ೩ | ಕುಜದತ್ತಾಯುಃ | ೭ | ೬ | ೦ |
| ೪ | ಬುಧದತ್ತಾಯುಃ | ೭ | ೬ | ೫ |
| ೫ | ಗುರುದತ್ತಾಯುಃ | ೧೫ | ೦ | ೦ |
| ೬ | ಶುಕ್ರದತ್ತಾಯುಃ | ೨೧ | ೦ | ೦ |
| ೭ | ಶನಿದತ್ತಾಯುಃ | ೧೬ | ೦ | ೦ |
| ೮ | ಲಗ್ನದತ್ತಾಯುಃ | ೯ | ೦ | ೦ |
| | ಏತೇಷಾಂಯೋಗಃ | ೧೨೦ | ೦ | ೫ |

## ೨ನೇ ಉದಾಹರಣೆ

### ಮೀನಲಗ್ನ ಅಂತ್ಯನವಾಂಶ ಜಾತಕವಾಗಿ ಬುಧನು ವೃಷಭದಲ್ಲಿ ೪ನೇ ಕಲೆಯಲ್ಲಿದ್ದು ಇತರ ಗ್ರಹಗಳು ಪರಮೋಚ್ಚದಲ್ಲಿದ್ದರೆ, ಆಯುರ್ಯೋಗ

| ಸಂಖ್ಯೆ | ಗ್ರಹದತ್ತಾಯುಃ | ವರ್ಷ | ಮಾಸ | ದಿನ |
|---|---|---|---|---|
| ೧ | ರವಿದತ್ತಾಯುಃ | ೧೯ | ೦ | ೦ |
| ೨ | ಚಂದ್ರದತ್ತಾಯುಃ | ೨೫ | ೦ | ೦ |
| ೩ | ಕುಜದತ್ತಾಯುಃ | ೭ | ೬ | ೦ |
| ೪ | ಬುಧದತ್ತಾಯುಃ | ೭ | ೭ | ೧೮ |
| ೫ | ಗುರುದತ್ತಾಯುಃ | ೧೫ | ೦ | ೩ |
| ೬ | ಶುಕ್ರದತ್ತಾಯುಃ | ೨೧ | ೦ | ೦ |
| ೭ | ಶನಿದತ್ತಾಯುಃ | ೧೬ | ೦ | ೦ |
| ೮ | ಲಗ್ನದತ್ತಾಯುಃ | ೯ | ೦ | ೦ |
| | ವಿಶೇಷಾಂಯೋಗಃ | ೧೨೦ | ೧ | ೨ |

೧ನೆ ಟಿಪ್ಪಣಿ ಈ ಮೇಲೆ ಹೇಳಲ್ಪಟ್ಟಿರುವ ಉದಾಹರಣೆಯಲ್ಲಿ ಶನಿಯು ಅಷ್ಟಮದಲ್ಲಿರುವುದಕ್ಕೆ ಪಂಚಮಾಂಶಹರಣ ಮಾಡಿದೆ.

ಉದಾ - ಶನಿಪರಮೋಚ್ಚ ಸ್ವಾಯುಃ ೨೦ ವರ್ಷ ೨೦÷೫=೪೨೦-೪= ೧೬ ಆದ್ದರಿಂದ ೧೬ ವರ್ಷ ಮೀನಲಗ್ನಕ್ಕೆ ಶನಿದತ್ತಾಯುವಾಗುವುದು.

೨ನೆ ಟಿಪ್ಪಣಿ ಈ ಮೇಲೆ ಹೇಳಿದ ಪ್ರಕಾರವಾಗಿಯೇ ಆಯುರ್ದಾಯ ನಿರ್ಣಯ ಮಾಡಬೇಕು.

## ಆಯುರ್ದಾಯೇ ವಿಷ್ಣುಗುಪ್ತಾದಿಮತಂ

ಮೂಲ॥ ಆಯುರ್ದಾಯೇ ವಿಷ್ಣು ಗುಪ್ತೋಪಿ ಚೈವಂ ತೇವಸ್ವಾಮೀ ಸಿದ್ಧ ಸೇನಶ್ಚ ಚಕ್ರೇ ॥ ದೋಷಶ್ಚೈಷಾಂ ಜಾಯತೇಷ್ಟಾ ವರಿಷ್ಟಂ ಹಿತ್ವಾನಾಯುರ್ವಿಂ ಶತೇಶ್ಚಾಪ್ಯ ಧಸ್ತಾತ್ ॥೭॥

ಅವತಾರಿಕೆ ॥ ಪೂರ್ವೋಕ್ತವಾದ ಆಯುರ್ದಾಯದಲ್ಲಿ ದೋಷವು ಹೇಳಲ್ಪಡುತ್ತೆ.

ಟೀಕು॥ ಏವಂ-ಈ ಪೂರ್ವೋಕ್ತ ಪ್ರಕಾರವಾಗಿ, ಆಯುರ್ದಾಯಂ-ಆಯುರ್ದಾಯವನ್ನು, ವಿಷ್ಣುಗುಪ್ತೋಪಿ-ಚಾಣಕ್ಯನೆಂಬ ನಾಮಾಂತರ ಹೊಂದಿದ ವಿಷ್ಣುಗುಪ್ತನು, ದೇವಸ್ವಾಮಿ-ದೇವಸ್ವಾಮಿಯೆಂದು ಪ್ರಸಿದ್ಧನಾದ ಜ್ಯೋತಿಷ್ಕನು, ಸಿದ್ಧಸೇನಶ್ಚ-ಸಿದ್ಧಸೇನನೆಂಬ ಜ್ಯೋತಿಷ ಗ್ರಂಥಕರ್ತೃ, ಚತುರ ಶಬ್ದದಿಂದ ಇನ್ನೂ ಅನೇಕ ಸಿದ್ಧಾಂತಿಗಳು, ಚಕ್ರೇ-ಮಾಡಿದರು, ಅದು ಹೇಗೆಂದರೆ - ವಿಷ್ಣುಗುಪ್ತ- ॥ಶ್ಲೋಕ॥ ಪರಮೋಚ್ಚಗತೈಸ್ಸರ್ವೈರ್ಮೀನೇ ಮೀನಾಂಶ ಸಂಸ್ಥಿತೇ ಲಗ್ನೇ । ಸೌಮ್ಯೇ ವೃಷಗೇ ಜಾತಃ ಪರಮಾಯುರ್ಜೀವತಿ ಮನುಷ್ಯಃ ॥೯॥ ಕಿಂಚದೇವಸ್ವಾಮಿ -

ಶ್ಲೋಕ॥ ಸೂರ್ಯಾದ್ಯೈ ರುಚ್ಚಗತೈರ್ಮೀನೇ ಮೀನಾಂಶ ಸಂಸ್ಥಿತೇ ಲಗ್ನೇ ಸೌಮ್ಯೇ ವೃಷಭಂ ಯಾತೇಜಾತಃ ಪರಮಾಯು ರಾಪ್ನೋತಿ ॥೧೦॥ ಈ ಪ್ರಕಾರ ಸಿದ್ಧಸೇನ ಯವನಮಣಿತ್ಥಾದಿಗಳು ಹೇಳಿರುತ್ತಾರೆ. ಏಷಾಂ-ಈ ಪರಾಶರಮಯ, ಯಮನ, ಮಣಿತ್ಥ, ದೇವಸ್ವಾಮಿ, ವಿಷ್ಣುಗುಪ್ತ, ಸಿದ್ಧಸೇನ, ಶ್ರುತಕೀರ್ತಿ, ಬಾದರಾಯಣ, ಗರ್ಗ ಮೊದಲಾದವರ ಮತದಲ್ಲಿ ಹೇಳಿರುವ ಆಯುರ್ದಾಯಗಳಿಗೆ, ದೋಷಃ-ಪ್ರತ್ಯಕ್ಷದೋಷವು, ಜಾಯತೇ-ಉಂಟಾಗುತ್ತಲಿದೆ. ಆ ದೋಷವು ಯಾವುದೆಂದರೆ-ಅಷ್ಟೌ-೮ ಸಂವತ್ಸರಗಳ, ಅರಿಷ್ಟಂ-ಬಾಲಾರಿಷ್ಟವನ್ನು, ಹಿತ್ವಾ-ಬಿಟ್ಟು, ವಿಂಶತೇಃ ಇಪ್ಪತ್ತು ಸಂವತ್ಸರಗಳ, ಅಧಸ್ತಾತ್-ಒಳಗೆ, ಆಯುಃ-ಆಯುಸ್ಸಮಾಪ್ತಿ, ನಸ್ಯಾತ್-ಆಗುವುದಿಲ್ಲವೆ, ಅಂದರೆ ಇವರು ಹೇಳಿದ ಮಾರ್ಗದಲ್ಲಿ ೮ ವರ್ಷದ ಮೇಲೆ ೨೦

ವರ್ಷಗಳೊಳಗೆ ಆಯುಸ್ಸು ಯಾರಿಗೂ ತುದಿಮುಟ್ಟದು. ೮ ಸಂವತ್ಸರದ ಮೇಲೆ ೨೦ ವರ್ಷದ ಒಳಗೆ ಅನೇಕರು ಮೃತಿ ಹೊಂದುತ್ತಾರೆ. ಆದ್ದರಿಂದ ಇದು ಪ್ರತ್ಯಕ್ಷ ವಿರೋಧವೆಂದು ತಿಳಿಯಬರುತ್ತದೆ.

ತಾತ್ಪರ್ಯ॥ ಆಯುರ್ದಾಯ ವಿಷಯದಲ್ಲಿ, ಮಯ, ಯವನ, ಪರಾಶರ, ವಿಷ್ಣು ಗುಪ್ತ ಮೊದಲಾದವರು ಈ ಪೂರ್ಣಾಯುರ್ಯೋಗಕ್ಕೆ ಪ್ರಮಾಣ ಹೇಳಿದ್ದಾರೆ. ಮತ್ತು ಸತ್ಯಾಚಾರ್ಯರು ಇದಕ್ಕೆ ದೂಷಣೆ ಮಾಡುತ್ತಾರೆ. ದಶಾಗಣನೆ ಮಾಡುವುದರಲ್ಲಿ ಅನೇಕ ಆಚ್ಯಾರರ ಮತಗಳಿರುತ್ತೆ. ವರಾಹಮಿಹಿರಾಚಾರ್ಯರು ಒಂದನ್ನೂ ನಿಶ್ಚಯ ಮಾಡಲಿಲ್ಲ. ಯಾವುದು ಪ್ರಮಾಣವೆಂದು ತಿಳಿಯಬೇಕು? ಎರಡನೆಯದು ಬಾಲಾರಿಷ್ಟ, ಕೇವಲ ೯ ವರುಷಪರ್ಯಂತ ಹೇಳಿದ್ದಾರೆ. ಗ್ರಹಗಳ ಆಯುಃ ಪ್ರಮಾಣ ೨೦ ವರ್ಷಕ್ಕಿಂತ ಊನವಾಗಿ ಯಾವಾಗಲೂ, ಯಾವಪ್ರಕಾರವಾಗಿಯೂ ಬರುವುದಿಲ್ಲ. ಆದರೆ ಕೆಲವರು ೮ ವರ್ಷದ ಮೇಲೆ ೨೦ ವರ್ಷದೊಳಗೆ ಮೃತಪಡುವರು. ಆದ್ದರಿಂದ ಇದು ಮುಖ್ಯ ಪ್ರತ್ಯಕ್ಷದೋಷವಾಗಿರುತ್ತೆ. ಗ್ರಹಗಳ ದತ್ತಾಯು ಸುಳ್ಳೋ ಅಥವಾ ಬಾಲಾರಿಷ್ಟ ಸುಳ್ಳಾದದ್ದೋ ಎಂಬುದು ಪ್ರತ್ಯಕ್ಷ ವಿರೋಧವಾಗಿದೆ ಎಂದು ತೋರುತ್ತಿದೆ. ಆದ್ದರಿಂದ ಬಾಲಾರಿಷ್ಟ ಮೊದಲಾದವುಗಳಿರುವ ಜಾತಕಗಳಲ್ಲಿ ಬಾಲಾರಿಷ್ಟಭಂಗವಿದ್ದರೆ ಅದನ್ನು ತಿಳಿದುಕೊಂಡು ಅನಂತರ ಆಯುರ್ದಾಯ ನಿರ್ಣಯ ಮಾಡಿದರೆ ವರಾಹಮಿಹಿರಾಚಾರ್ಯರು ಹೇಳಿರುವ ಆಯುರ್ದಾಯವು ದೃಷ್ಟಾಂತರವಾಗುತ್ತದೆ. ಕೆಲವರು ಗುಣಿಸಲಾರದೆಯೋ ಅಥವಾ ಜಾತಕವನ್ನು ತೋರಿಸುವವರ ಪ್ರೀತಿ ಸಂಪಾದನೆಗಾಗಿಯೋ, ಆಯುರ್ಯೋಗ ವಿಚಾರದಲ್ಲಿ ಬಹಳ ಚೆನ್ನಾಗಿವೆ ಎಂದು ಹೇಳುತ್ತಾರೆ. ಆದ್ದರಿಂದಲೇ ಈ ಜ್ಯೋತಿಃಶಾಸ್ತ್ರಕ್ಕೆ ಇಂತಹ ಮಹನೀಯರಿಂದಲೆ ಅಪವಾದ ಬಂದಿರುತ್ತೆ. ಆ ಅಪವಾದ ಬರದಂತೆ ನೋಡಿಕೊಂಡು ಮಹನೀಯರು ಹೇಳಿರುವ ಶಾಸ್ತ್ರವನ್ನು ದೃಷ್ಟಾಂತಕ್ಕೆ ತಂದುಕೊಳ್ಳಬೇಕು.

## ಪೂರ್ಣಾಯುರ್ಯೋಗೇದಾರಿದ್ರ್ಯಯೋಗಃ

ಮೂಲ॥ ಯಸ್ಮಿನ್ಯೋಗೇ ಪೂರ್ಣಮಾಯುಃ ಪ್ರದಿಷ್ಟಂ ತಸ್ಮಿನ್ಪ್ರೋಕ್ತಂ
ಚಕ್ರವರ್ತಿ ತ್ವಮನ್ಯೈಃ । ಪ್ರತ್ಯಕ್ಷೋಽಯಂ ತೇಷುದೋಷಃ
ಪರೋಽಪಿ ಜೀವತ್ಯಾಯುಃ ಪೂರ್ಣಮರ್ಥೈರ್ವಿನಾಪಿ ॥೮॥

ಅವತಾರಿಕೆ॥ ಪೂರ್ವೋಕ್ತವಾದ ಪೂರ್ಣಾಯುರ್ಯೋಗದಲ್ಲಿ ಮತ್ತೊಂದು ವಿಧವಾದ ನಿಧನಯೋಗ ದೂಷಣೆ ಹೇಳಲ್ಪಡುತ್ತೆ.

ಟೀಕು॥ ಯಸ್ಮಿನ್ಯೋಗೇ-(ಅನಿಮಿಷ ಪರಮಾಂಶಕೇ ವಿಲಗ್ನೇ) ಎಂಬುವ ಶ್ಲೋಕದಲ್ಲಿ ಹೇಳಲ್ಪಟ್ಟ, ಪೂರ್ಣಂ-ಸಂಪೂರ್ಣವಾದ, ಆಯುಃ-ಆಯುಸ್ಸು, ಪ್ರದಿಷ್ಟಂ-ಹೇಳಲ್ಪಟ್ಟಿದೆಯೋ, ತಸ್ಮಿನ್-ಆ ಯೋಗದಲ್ಲಿ, ಯದಿಸಹಿತಾ ಸ್ವಕಲಾಸ್ವ್ವತುಂಗಭೇಷು-ಎಂದು ೬ ಗ್ರಹಗಳು ಪರಮೋಚ್ಚಗತರಾಗಿದ್ದಾರೆ. ಅನ್ಯೈಃ-ಇನ್ನೂ ಕೆಲವು ಗ್ರಂಥಕರ್ತರಿಂದ, ಚಕ್ರವರ್ತಿತ್ವಂ-ರಾಜಾಧಿರಾಜತ್ವವು, ಪ್ರೋಕ್ತಂ-ಹೇಳಲ್ಪಟ್ಟಿದೆ. ಆದು ಹೇಗೆಂದರೆ-ಬಾದರಾಯಣಃ ॥ಶ್ಲೋಕ॥ ಷಡ್ಭಿಸ್ಸ್ಯಾ ಚಕ್ರವರ್ತೀ ತ್ರಿಭುವನಮಖಿಲಂ ಶಾಸ್ತಿಸರ್ವೈರ್ಗಹೇಂದ್ರೇಃ ॥೧೧॥ ಎಂದು ಹೇಳಿರುವರು. ಆದುದರಿಂದ ೬ ಗ್ರಹಗಳು ಪರಮೋಚ್ಚಗತರಾಗಿರುವಾಗ ಹುಟ್ಟಿದವನು ಸಕಲ ಭೂಮಿಗೂ ರಾಜನಾಗುವನು, ೬ ಗ್ರಹಗಳು ಪರಮೋಚ್ಚಗತರಾಗಿಲ್ಲದಿದ್ದರೆ ಪೂರ್ಣಾಯುಸ್ಸು ಬರುವುದಿಲ್ಲ. ಅರ್ಥೈರ್ವಿನಾ-ಧನವಿಲ್ಲದೆ ದರಿದ್ರರಾಗಿ, ಪೂರ್ಣಮಾಯುಃ-ಪೂರ್ಣಾಯು ಸಂವತ್ಸರಗಳು, ಜೀವತಿ-ಬದುಕುತ್ತಿದ್ದಾರೆ. ಆದಕಾರಣ, ತೇಷು-ಪರಾಶರಮಯ ಯವನಾದಿಗಳಲ್ಲಿ, ಪರಃ-ಮತ್ತೊಂದು, ಆಯುದೋಷಃ - ಈ ದೋಷವು (ದಾರಿದ್ರ್ಯ), ಪ್ರತ್ಯಕ್ಷಃ- ಅನುಭವ ಸಿದ್ಧವಾಗಿರುವುದು - ಎಂದು ಸತ್ಯಾಚಾರ್ಯಾಯುರ್ದಾಯವನ್ನು ಮುಖ್ಯವಾಗಿ ಅಂಗೀಕರಿಸಿ ಪೂರ್ವೋಕ್ತಮಯ ಯವನಾದ್ಯಾಯುರ್ದಾಯದಲ್ಲಿ ದೋಷಗಳು ಹೇಳಲ್ಪಟ್ಟಿವೆ. ಪರಾಶರಾದಿಗಳು ಪೂರ್ವೋಕ್ತವಾದ ಪಿಂಡಾಯುರ್ದಾಯವನ್ನೇ ಮುಖ್ಯವಾಗಿ ಹೇಳಿರುವರು. ಭಟ್ಟೋತ್ಪಲಾಚಾರ್ಯರು ಈ ಪರಮತಾಯುರ್ದಾಯದಲ್ಲಿ ಹೇಳಲ್ಪಟ್ಟ ದೋಷಗಳು ಅಸಂಬದ್ಧವಾಗಿರುವುದರಿಂದ ಈ ಎರಡು ಶ್ಲೋಕಗಳು ವರಾಹಮಿಹಿರಾಚಾರ್ಯ ಪ್ರೋಕ್ತವಲ್ಲವೆಂದು ಹೇಳಿರುವರು, ಇದರ ಪರಿಹಾರಗಳನ್ನೂ ಹೇಳಿದ್ದಾರೆ. ಆಯುರ್ವಿಂಶತೇ ಸ್ಯಾದಧಸ್ತಾತ್-ಎಂದು ೮ ಸಂವತ್ಸರಗಳ ಮೇಲೆ ೩೦ ಸಂವತ್ಸರಗಳೊಳಗೆ ಆಯುಸ್ಸಮಾಪ್ತಿಯಾಗುವುದೆಂದು ಹೇಳಿದ ಪ್ರಥಮ ದೋಷಕ್ಕೆ ಪರಿಹಾರವೇನೆಂದರೆ-'ಸಾರ್ಧೋದಿತೋದಿತ ನವಾಂಶ ಹತಾತ್ಸಮಸ್ತಾದ್ಭಾಗೋಷ್ಟಯುಕ್ತ ಶತಸಂಖ್ಯಮುಪೈತಿನಾಶಂ' ಎಂಬುವ ಪ್ರಕಾರ ತತ್ತಲ್ಲಗ್ನ ನವಾಂಶವಶದಿಂದ ಕ್ರೂರೋದಯ ಹರಣವನ್ನು ಮಾಡುವಾಗ ಆಯುರ್ದಾಯಕ್ಕೆ ಕೊನೆ ಇಲ್ಲದ್ದರಿಂದ ಆಯುರ್ವಿಂಶತೇಸ್ಯಾದ ಧಸ್ತಾತ್-ಎಂಬುವ ದೂಷಣವು ಆಯುಕ್ತವು.

## ಇದಕ್ಕೆ ಉದಾಹರಣೆ

ಕುಂಭರಾಶಿಯ ಪ್ರಥಮ ನವಾಂಶ ಲಗ್ನವಾಗಿ ರವಿ, ಚಂದ್ರ, ಕುಜರು ಪರಮೋಚ್ಚದಲ್ಲಿದ್ದು, ಬುಧ, ಗುರು, ಶನಿಗಳು ಪರಮನೀಚದಲ್ಲು, ಕುಜನು ಕುಂಭ

ರಾಶಿಯ ೨೯ನೇ ಭಾಗದಲ್ಲೂ ಇರುವಾಗ ಲಗ್ನದಲ್ಲಿ ಸ್ವಲ್ಪವಾದರೂ ಭುಕ್ತವಾಗುವುದಿಲ್ಲವಾದ್ದರಿಂದ ಲಗ್ನಾಯುರ್ದಾಯವಿಲ್ಲ. ಪರಮೋಚ್ಚಗತರಾದ ಗ್ರಹಗಳಿಗೂ, ಪರಮ ನೀಚಗತರಿಗೂ, ಆಯುರ್ದಾಯ ತಿಳಿದೇ ಇರುವುದು, ಕುಜಾಯುರ್ದಾಯ ಮಾಡತಕ್ಕದ್ದು ಹೇಗೆಂದರೆ-ಕುಜಭಕ್ತಿ ೧೦-೨೮-೦-೦ ಕುಜ ಪರಮೋಚ್ಚಧ್ರುವಕ ೯-೨೮-೦-೦ ಇದನ್ನು ಕುಜಸ್ಪುಟದಲ್ಲಿ ವ್ಯವಕಲನೆ ಮಾಡಲಾಗಿ, ಶೇಷ ೧-೦-೦-೦ ಬರುತ್ತದೆ. ಇದಕ್ಕೆ ಲಿಪ್ತಿಗಳು ೧೮೦೦ ಈ ಸಂಖ್ಯೆಯನ್ನು ಕುಜ ಪರಮ ನೀಚ ಮಾಸ ಸಂಖ್ಯೆಯಾದ ೯೦ ರಿಂದ ಗುಣಿಸಿ ಭಗಣಾರ್ಧ ಲಿಪ್ತಾ ೧೦೮೦೦ ರಿಂದ ಭಾಗಿಸಿ ಬಂದ ಸಂ . ೧ ಮಾಸ ೩ ರನ್ನು ಕುಜ ಪರಮೋಚ್ಚ ಸಂವತ್ಸರ ೧೫ರಲ್ಲಿ ವ್ಯವಕಲನೆ ಮಾಡಲಾಗಿ ೧೩ ವರ್ಷ ಮಾಸ ೯ ಬರುವುದು. ಇದು ಕುಜ ದತ್ತಾಯುರ್ದಾಯುವಾಯಿತು. ಗುರು ಲಗ್ನಕ್ಕೆ ೧೨ನೇ ದ್ವಾದಶಸ್ಥಾನದಲ್ಲಿರುವನು, ಗುರು ಪರಮನೀಚ ವರುಷ ೭ ಮಾಸ ೬ ಇದರಲ್ಲಿ ಅರ್ಧ ವ್ಯಯಸ್ಥನಾದ್ದರಿಂದ ಹರಿಸುವನು. ಆದುದರಿಂದ ಹರಣವಾದ ಗುರು ದತ್ತಾಯು, ವರುಷ ೩ ಮಾಸ ೯ ಈ ಪ್ರಕಾರ ಆಯಾಯ ಗ್ರಹಕ್ಕೆ ಬಂದ ಆಯುಸ್ಸಂವತ್ಸರಗಳು, ಸೂರ್ಯನಿಗೆ ೧೯, ಚಂದ್ರನಿಗೆ ೨೫, ಕುಜನಿಗೆ ೧೩-೯-೦ ಬುಧನಿಗೆ ೬, ಬೃಹಸ್ಪತಿಗೆ ೩-೯-೦, ಶುಕ್ರನಿಗೆ ೨೧, ಶನಿಗೆ ೧೦ ಲಗ್ನದಲ್ಲಿ ಸ್ವಲ್ಪವಾದರೂ ಭುಕ್ತವಿಲ್ಲದ್ದರಿಂದ ಲಗ್ನಾಯುರ್ದಾಯವಿಲ್ಲ. ಈ ಆಯುರ್ವರ್ಷಗಳ ಸಂಯೋಗ ೮೯ ವರುಷ ೬ ಮಾಸವಾಯಿತು. ಕುಜನು ಲಗ್ನದಲ್ಲಿರುವುದರಿಂದ ಕ್ರೂರೋದಯ ಹರಣಮಾಡಬೇಕು. ಲಗ್ನವು ಕುಂಭ ಪ್ರಥಮ ನವಾಂಶೆ ಯಾದ್ದರಿಂದ ಉದಿತ ನವಾಂಶ ಸಹಿತವಾಗ ಗತನವಾಂಶಗಳು ೯೧ ಇದಕ್ಕೆ ಸರ್ವಗ್ರಹದತ್ತಾಯು- ಪಿಂಡವರ್ಷ ೯೮ ಮಾಸ ೬ನ್ನು ಗುಣಿಸಲಾಗಿ ಬಂದ ಮೊತ್ತ ೮೯೬೩ ರನ್ನು ಅಷ್ಟೋತ್ತರ ಶತವಾದ ೧೦೮ ರಿಂದ ಭಾಗ ಮಾಡಲಾಗಿ ಲಬ್ಧ ೮೩ ಇದನ್ನು ಸರ್ವ ಗ್ರಹದತ್ತಾಯುಃ ಪಿಂಡದಲ್ಲಿ ವ್ಯವಕಲನೆ ಮಾಡಲಾಗಿ ಶೇಷ ಸಂವತ್ಸರ ೧೫ ಮಾಸ ೬ ಇದು ಸ್ಥಿರವಾಗಿ ನಿಲ್ಲುತ್ತದೆ. ಈ ಪ್ರಕಾರ ೮ ಸಂವತ್ಸರದ ಮೇಲೆ ೨೦ ಸಂವತ್ಸರದೊಳಗೆ ಆಯುಸ್ಸಮಾಪ್ತಿ ಆಗುವುದರಿಂದ ಆಯುರ್ವಿಂಶತೇ ಸ್ಯಾದ ಧಸ್ತಾತ್-ಎಂಬುವ ದೋಷಣೆ ಆಯುಕ್ತವಾಗಿರುವುದು. ಆದರೆ ಪಾಪಗ್ರಹ ವರ್ಜಿತವಾದ ಲಗ್ನದಲ್ಲಿ ಹುಟ್ಟಿದವರನೇಕರು ೮ ಸಂವತ್ಸರದ ಮೇಲೆ ೨೦ ಸಂವತ್ಸರದೊಳಗೆ ಮರಣ ಹೊಂದುತ್ತಿದ್ದಾರೆ. ಆದ್ದರಿಂದ ಪೂರ್ವೋಕ್ತವಾದ ಮಯ, ಯವನಾದ್ಯುಕ್ತಾಯುರ್ದಾಯದಲ್ಲಿ ದೋಷ ಹೋಗಲಿಲ್ಲವೆಂದು ಕೆಲವರು ಹೇಳಿದರು, ಹಾಗೆ ಹೇಳಕೂಡದು. ಅದು ಹೇಗೆಂದರೆ- ಈ ಗ್ರಂಥಕರ್ತರ ಈ ಪ್ರಕಾರವಾಗಿ ಹೇಳಿದ್ದಾರೆ. ಈ ಗ್ರಂಥಕರ್ತರೇ ಅನೇಕ ವಿಧವಾದ ಅಪಮೃತ್ಯು

ಯೋಗವನ್ನು ಹೇಳಿದ್ದಾರೆ ಅದು ಹೇಗೆಂದರೆ :- ||ಶ್ಲೋಕ|| ಬಾದರಾಯಣಃ || ಷಷ್ಠಾಷ್ಟಮಸ್ಥೋ ರಿಪುದೃಷ್ಟಮೂರ್ತಿಃ ಪಾಪಗ್ರಹಃ ಪಾಪಗೃಹೇ ಯದಿಸ್ಯಾತ್ । ಸ್ವಾಂತರ್ದಶಾಯಾಂ ಮರಣಾಯ ಜಂತೋರ್ಜ್ಞೇಯ ಸ್ವಯುದ್ಧೇ ವಿದಿತೋಯದಾಸ್ಯೈ || ಎಂದುಕ್ತವಾಗಿರುತ್ತೆ. ಮತ್ತು ಸಾರಾವಳಿಯಲ್ಲಿ ||ಶ್ಲೋಕ|| ಕ್ರೂರದಶಾಯಾಂ ಕ್ರೂರಃ ಪ್ರವಿಶ್ಯಚಾಂತರ್ದಶಾಂ ಯದಾ ಕುರುತೇ || ಪುಂಸಾಂಸ್ಯಾ ತ್ತಂದೇಹಸ್ತದಾರಿಯೋಗೇ ಸದ್ಯೈವಮಹಾರ್ಣ ||೧೩|| ರವಿತನಯಸ್ಯ ದಶಾಯಾಂ ಕ್ಷಿತಿಜಸ್ಯಾಂತರ್ದಶಾ ಯದಾಭವತಿ । ಬಹುಕಾಲ ಜೀವಿನಾಮಪಿ ಮರಣಂ ನಿಸ್ಸಂಶಯಂಪುಂಸಾಂ ||೧೪|| ಎಂದುಕ್ತವಾಗಿದೆ. ಆದೂ ಇರಬಹುದು. ಯವನೇಶ್ವರಃ ||ಶ್ಲೋಕ|| ಷಷ್ಠಾಷ್ಟಮಸ್ಥೋ ರಿಪುದೃಷ್ಟ ಮೂರ್ತಿಃ ಪಾಪಸ್ಸುಭಸ್ಥಾನಗತೇನದೃಷ್ಟಂ । ಸ್ವಾಂತರ್ದಶಾಯಾಂ ಪ್ರಕರೋತಿ ಮೃತ್ಯುಂ ವ್ಯಾಧ್ಯದ್ವ ಬಂಧಾದಿ ಪರಿಕ್ಷಯಾದ್ವಾ ||೧೫|| ಈ ಪ್ರಕಾರ ಉಕ್ತವಾಗಿರುತ್ತೆ. ಆದ್ದರಿಂದ ಪೂರ್ವೋಕ್ತ ಗ್ರಂಥಕರ್ತರ ಮತದಲ್ಲಿ ೮ ಸಂವತ್ಸರದ ಮೇಲೆ ೨೦ ಸಂವತ್ಸರಕ್ಕೆ ಆಯುಸ್ಸಮಾಪ್ತಿ ಆಗುವುದರಿಂದ, ಈ ದೂಷಣೆ ಯುಕ್ತವಾದದ್ದಲ್ಲ. ಇದಕ್ಕೆ ಉದಾಹರಣೆ.

| ಗ್ರಹಾಃ | ಸೂರ್ಯಾದಿ ಗ್ರಹಸ್ಪಷ್ಟಂ | | | | ದತ್ತಾಯುಃ | | | |
|---|---|---|---|---|---|---|---|---|
| | ರಾಶಿ | ಭಾಗ | ಕಲೆ | ವಿಕಲೆ | ವರ್ಷ | ಮಾಸ | ದಿನ | ಘ |
| ರವಿ | ೦ | ೯ | ೦ | ೦ | ೧೯ | ೦ | ೦ | ೦ |
| ಚಂದ್ರ | ೧ | ೨ | ೦ | ೦ | ೨೫ | ೦ | ೦ | ೦ |
| ಕುಜ | ೧೦ | ೨೮ | ೦ | ೦ | ೧೩ | ೯ | ೦ | ೦ |
| ಬುಧ | ೧೧ | ೧೪ | ೦ | ೦ | ೬ | ೦ | ೦ | ೦ |
| ಗುರು | ೯ | ೪ | ೦ | ೦ | ೩ | ೯ | ೦ | ೦ |
| ಶುಕ್ರ | ೧೧ | ೨೬ | ೦ | ೦ | ೨೧ | ೦ | ೦ | ೦ |
| ಶನಿ | ೦ | ೧೯ | ೦ | ೦ | ೦ | ೦ | ೦ | ೦ |
| ಲಗ್ನ | ೧೦ | ೧ | ೦ | ೦ | ೦ | ೦ | ೦ | ೦ |
| ಯೋಗಾಃ | ೦ | ೦ | ೦ | ೦ | ೯೮ | ೬ | ೦ | ೦ |

| | | | | |
|---|---|---|---|---|
| ಕ್ರೂರೋದಯ | ೮೩ | ೦ | ೦ | ೦ |
| ಶೇಷಪರಮಾಯುಃ೧೫ | ೬ | ೦ | ೦ | |

ಲಗ್ನದಲ್ಲಿ ಕುಜನಿರುವುದರಿಂದ ಕ್ರೂರೋದಯ ಹರಣ-ಸರ್ವಗ್ರಹ ದತ್ತಾಯು ೯೮ ವರ್ಷ ೬ ತಿಂಗಳನ್ನು ಗತನವಾಂಶ ಸಂಖ್ಯೆಯಿಂದ ಗುಣಿಸಿ ಬಂದ ಲಬ್ಧ ೮೯೬೩ ಇದನ್ನು ೧೦೮ ರಿಂದ ಭಾಗಿಸಿದರೆ ೮೩ ಬರುತ್ತೆ. ಇದನ್ನು ಸರ್ವಗ್ರಹ ದತ್ತಾಯುಷಿನಲ್ಲಿ ವ್ಯವಕಲನ ಮಾಡಿರುತ್ತೆ. ಉಳಿದಿರುವುದೇ ಪರಮಾಯಸ್ಸು.

ಯಸ್ಮಿನ್ಯೋಗೇ ಪೂರ್ಣಮಾಯುಃ ಪ್ರದಿಷ್ಟಂ ತಸ್ಮಿನ್ಪ್ರೋಕ್ತಂ ಚಕ್ರವರ್ತಿತ್ವಮಸ್ಮೈ ॥ ಎಂದು ಹೇಳಿದ ದ್ವಿತೀಯ ದೋಷಕ್ಕೆ ಪರಿಹಾರವೇನೆಂದರೆ :- ಚಕ್ರವರ್ತಿತ್ವ ಯೋಗವಿಲ್ಲದೆ ದೀರ್ಘಾಯುರ್ಯೋಗಕ್ಕೆ ಉದಾಹರಣೆ.

## ದಾರಿದ್ರ್ಯಯೋಗ ಸಹಿತ ದೀರ್ಘಾಯುರ್ಯೋಗಃ

| | ಗ್ರಹಸ್ಪಷ್ಟಂ | | | | ದತ್ತಾಯುಃ | | | |
|---|---|---|---|---|---|---|---|---|
| ಗ್ರಹಾಃ | ರಾ | ಭಾ | ಕಲೆ | ವಿಕಲೆ | ವರ್ಷ | ಮಾಸ | ದಿನ | ಘ |
| ರವಿ | ೧ | ೧೦ | ೦ | ೦ | ೧೭ | ೬ | ೦ | ೦ |
| ಚಂದ್ರ | ೨ | ೩ | ೦ | ೦ | ೧೯ | ೧ | ೦ | ೦ |
| ಕುಜ | ೧೦ | ೨೮ | ೦ | ೦ | ೧೩ | ೯ | ೦ | ೦ |
| ಬುಧ | ೦ | ೧೫ | ೦ | ೦ | ೭ | ೦ | ೦ | ೦ |
| ಗುರು | ೪ | ೫ | ೦ | ೦ | ೧೨ | ೦ | ೧೨ | ೦ |
| ಶುಕ್ರ | ೧೧ | ೨೭ | ೦ | ೦ | ೧೯ | ೩ | ೦ | ೦ |
| ಶನಿ | ೧೦ | ೨೦ | ೦ | ೦ | ೧೩ | ೦ | ೦ | ೦ |
| ಲಗ್ನ | ೮ | ೭ | ೦ | ೦ | ೮ | ೦ | ೦ | ೦ |
| | | | | | ೯೯ | ೧೦ | ೦ | ೦ |

| | ಬುಧ ಶುಕ್ರ | ರವಿ | ಚಂದ್ರ |
|---|---|---|---|
| ಕುಜ ಶನಿ | | | |
| | | | ಗುರು |
| ಲಗ್ನ ೯ | | | |

ಸೂರ್ಯನು ವೃಷಭದಲ್ಲಿ ೧೦ನೇ ಭಾಗ, ಚಂದ್ರ ಮಿಥುನದಲ್ಲಿ ೩ನೇ ಭಾಗ, ಕುಜ ಕುಂಭದಲ್ಲಿ ೨೮ನೇ ಭಾಗ, ಬುಧ ಮೇಷದಲ್ಲಿ ೫ ಭಾಗ, ಗುರು ಸಿಂಹದಲ್ಲಿ ೫ನೇ ಭಾಗ, ಶುಕ್ರನು ಮೇಷದಲ್ಲಿ ೨೭ನೇ ಭಾಗ, ಶನಿ ಕುಂಭದಲ್ಲಿ ೨೦ನೇ ಭಾಗ, ಲಗ್ನ ಧನುಸ್ಸಿನಲ್ಲಿ ೯ನೇ ನವಾಂಶೆ ಈ ಪ್ರಕಾರವಿರುವಾಗ ಧನುರ್ಲಗ್ನಾಂತ್ಯ ನವಾಂಶೆಯಲ್ಲಿ ಹುಟ್ಟಿದವನಿಗೆ ಮೊದಲು ಹೇಳಿದ ಪ್ರಕಾರ ಆಯುರ್ದಾಯ ಸಂವತ್ಸರಗಳು ಸೂರ್ಯನಿಗೆ ವರ್ಷ ೧೭, ಮಾಸ ೬, ಚಂದ್ರನಿಗೆ ವರ್ಷ ೨೨, ಮಾಸ ೧೧, ಕುಜನಿಗೆ ವರ್ಷ ೧೩, ಮಾಸ ೯, ಬುಧನಿಗೆ ವರ್ಷ ೭, ಗುರುವಿಗೆ ವರ್ಷ ೧೩, ಮಾಸ ೯, ಶುಕ್ರನಿಗೆ ವರ್ಷ ೧೯, ಮಾಸ ೩, ಶನಿಗೆ ವರ್ಷ ೧೩ ಮಾಸ ೪.

ಲಗ್ನಕ್ಕೆ ಸಂವತ್ಸರ ೮ ಮಾಸಂ ಬೃಹಸ್ಪತಿ ಲಗ್ನಕ್ಕೆ ನವಮದಲ್ಲಿರುವುದರಿಂದ ತನ್ನ ಆಯುರ್ದಾಯ ಸಂ. ೧೩ ಮಾಸ ೯ರಲ್ಲಿ ಅಷ್ಟಮಾಂಶ ನಾಶ ಮಾಡುವನು. ಆದ್ದರಿಂದ ಹರಣವಾದ ಶುದ್ಧಾಯುರ್ದಾಯ ಸಂ. ೧೨ ಮಾಸ ೦ ದಿನ ೧೨. ಚಂದ್ರನು ಸಪ್ತಮದಲ್ಲಿರುವುದರಿಂದ, ಅವನು ಕೊಟ್ಟ ಆಯುರ್ದಾಯದಲ್ಲಿ ಷಷ್ಠಾಂಶವನ್ನಪಹರಿಸಲಾಗಿ ಶುದ್ಧಾಯುರ್ದಾಯ ವರ್ಷ ೧೯ ಮಾಸ ೧, ರವಿಗೆ ಗುರು ಮಿತ್ರ ಶುಕ್ರನು ತಾತ್ಕಾಲಿಕ ಮಿತ್ರ ಆದರೂ ಶತ್ರುಕ್ಷೇತ್ರಹರಣವಿಲ್ಲ. ಅಂಗಾರಕನು ಶತ್ರುಕ್ಷೇತ್ರವಾದ ಕುಂಭದಲ್ಲಿರುವುದರಿಂದ (ಹಿತ್ವಾವಕ್ರಂರಿಪುಗೃಹತ್ರೈರ್ಹ್ರೀಯತೇ ಸ್ವತ್ರಿಭಾಗಃ) ಎಂಬುವ ಪ್ರಮಾಣದಿಂದ ವಕ್ರನೆಂದರೆ ಅಂಗಾರಕನೆಂದು ಅನೇಕರು ಅರ್ಥ ಮಾಡುತ್ತಾರೆ. ಆದ್ದರಿಂದ ಕುಜನಿಗೆ ಶತ್ರುಕ್ಷೇತ್ರ ಹರಣವಿಲ್ಲ. ಈ ಪ್ರಕಾರ ಹರಣ ಮಾಡಿದ ಶುದ್ಧಾಯುರ್ದಾಯ ವರ್ಷಗಳು ಸೂರ್ಯನಿಗೆ ಸಂ॥ ೧೭ ಮಾಸ ೫. ಚಂದ್ರನಿಗೆ ಸಂ॥ ೧೯ ಮಾಸ ೧, ಕುಜನಿಗೆ ಸಂವತ್ಸರ ೧೩ ಮಾಸ ೯, ಬುಧನಿಗೆ ಸಂ. ೭, ಮಾಸ ೦, ಗುರುವಿಗೆ ಸಂ ೧೨, ಮಾಸ ೦, ದಿನ ೧೨, ಶುಕ್ರನಿಗೆ ಸಂ. ೧೯ ಮಾಸ ೩ ಶನಿಗೆ ಸಂ. ೧೩ ಮಾಸ ೪, ಲಗ್ನಕ್ಕೆ ಸಂ. ೮ ಮಾಸ ೦ ಇದೆಲ್ಲವೂ ಕೂಡಿಸಲಾಗಿ ಸಂ. ೧೦೯ ಮಾಸ ೧೦ ದಿವಸ ೧೨ ಆಗುತ್ತದೆ. ಈ ಪ್ರಕಾರ ರಾಜಯೋಗವಿಲ್ಲದ ಪೂರ್ಣಾಯುಸ್ಸು ಬರುತ್ತದೆ. ಇದೂ ಅಲ್ಲದೆ ॥ಶ್ಲೋಕ॥ ಹಿತ್ವಾರ್ಕಂ ಸುನಫಾನ ಫಾಧುರಧುರಾ ಸ್ವಾಂತ್ಯೋ ಭಯಸ್ಥೈಗ್ರಹೈಃ ಶ್ಶೀತಾಂಶೋಃ ಕಥಿತೋನ್ಯಥಾತು ಬಹುಭಿಃ ಕೇಮದ್ರುಮೋನ್ಯೈಸ್ತ್ವಸೌ॥ ಎಂದು ಚಂದ್ರಯೋಗ ಹೇಳಿರುವಂತೆ ಸುನಫಾನಫಾ ಯೋಗವಿಲ್ಲದೆ ಕೇಮ ದ್ರುಮಯೋಗ ಉಂಟಾಗಿರುವುದು.

॥ಶ್ಲೋಕ॥ ಕೇಮದ್ರುಮೇ ಮಲಿನ ದುಃಖಿತ ನೀಚನಿಸ್ವಾಃ ಪ್ರೇಷ್ಯಾ ಖಲಾಶ್ಚ ನೃಪತೇ ರವಿವಂಶಜಾತಾಃ । ಎಂದುಕ್ತವಾಗಿರುತ್ತೆ. ಮತ್ತು ನಿರ್ಧನನೆಂಬುವುದಕ್ಕೆ

ಪರಾಶರಃ ॥ಶ್ಲೋಕ॥ ಚಂದ್ರಸ್ಯ ದ್ವಾದಶೇ ವಿತ್ತೇ ಕಶ್ಚಿತ್ತಾರಾ ಗ್ರಹೋನಚೇತ್।
ಯದಿಜಾತೋ ವಿನಾಸೂರ್ಯಂ ನಿಃಸ್ವೋ ಭವತಿ ಜಾತಕಃ ॥

ಎಂದುಕ್ತವಾಗಿರುತ್ತೆ ॥ ಈ ಪ್ರಕಾರ ಕೇಮದ್ರುಮ ಯೋಗಫಲವಿರುತ್ತದೆ. ಆದರೆ ಈ ಮೇಲೆ ಹೇಳಿದ ಜಾತಕನು ದೀರ್ಘಾಯುಷ್ಮಂತನೂ, ಬಹುದರಿದ್ರನೂ ಆಗುವನು. ಆದ್ದರಿಂದ-ಯಸ್ಮಿನ್ಯೋಗೇ ಪೂರ್ಣಮಾಯುಃ ಪ್ರದಿಷ್ಟಂ ತಸ್ಮಿನ್ ಪ್ರೋಕ್ತಂ ಚಕ್ರವರ್ತಿ ತ್ವಮನ್ಯೈಃ ಎಂದು ಹೇಳಿದ ದ್ವಿತೀಯ ದೂಷಣಕ್ಕೆ ಅವಕಾಶವಿಲ್ಲ. ಈ ಪ್ರಕಾರ ಎರಡು ದೋಷಗಳು, ಅಸಂಬದ್ಧವಾಗಿರುವುದರಿಂದ ಈ ಎರಡು ಶ್ಲೋಕಗಳು ವರಾಹಮಿಹಿರಾಚಾರ್ಯ ಪ್ರೋಕ್ತವಾಗಿರಲಾರದು. ಆದರೆ ವರಾಹಮಿಹಿರಾಚಾರ್ಯರು ಈ ವಿಧವಾಗಿ ಹೇಳಲ್ಪಟ್ಟ, ಮಯಯವನಾದಿ ಮತಾಯುರ್ದಾಯವನ್ನು ಬಿಟ್ಟು ಇದರ ಮೇಲೆ ಸತ್ಯಾಚಾರ್ಯಮತ ಅಂಗೀಕರಿಸಿರುವುದರಿಂದ ಈ ಮಾರ್ಗವು ಬಹು ತರಾಚಾರ್ಯರ ಸಮ್ಮತಿಯಾಗಿರುವುದೆಂದು ತಿಳಿಯುವುದಕ್ಕೋಸ್ಕರ ಪೂರ್ವೋಕ್ತಾಯುರ್ದಾಯ ದೂಷಣಾರ್ಥವೆಂದು ತಿಳಿಯತಕ್ಕದ್ದು.

॥ಶ್ಲೋಕ॥ ಜ್ಯೋತಿಷಮಾಗಮ ಶಾಸ್ತ್ರಂ ವಿಪ್ರತಿವತ್ತೌ ನಯೋಗ್ಯಮಸ್ಮಾಕಂ । ಸ್ವಯಮೇವ ವಿಕಲ್ಪಯಿತುಂ ಕಿಂತು ಬಹೂನಾಂ ಮತಂವಕ್ಷ್ಯೇ ॥ ಎಂದು ವರಾಹ ಮಿಹಿರಾಚಾರ್ಯರ ಪ್ರತಿಜ್ಞೆ ಇರುವುದರಿಂದ ಈ ಗ್ರಂಥದಲ್ಲಿ ಬಹು ಗ್ರಂಥಕರ್ತರ ಮತಗಳೇ ಹೇಳಲ್ಪಟ್ಟಿವೆ ಎಂದು ತಿಳಿಯಬರುತ್ತೆ.

ಮೇಲೆ ಹೇಳಿರುವ ಪೂರ್ಣಾಯುರ್ಯೋಗವಿರುವ ಜಾತಕದಲ್ಲಿ ೬ ಗ್ರಹಗಳುಚ್ಚ ರಾಗಿರುತ್ತಾರೆ. ೬ ಗ್ರಹಗಳು ತಮ್ಮ ಉಚ್ಚ ಸ್ಥಾನಗಳಲ್ಲಿದ್ದರೆ ಚಕ್ರವರ್ತಿಯಾಗುತ್ತಾ ನೆಂದು ಅನೇಕ ಪ್ರಾಚೀನ ಜ್ಯೋತಿಷ್ಕರು ಅನುಭವದಿಂದ ಉದಾಹರಿಸಿರುತ್ತಾರೆ. ಆದರೆ 'ಪಾಪೀಚಿರಾಯುಃಸುಕೃತೀಗತಾಯಃ' ಎಂಬುವಂತೆ ದರಿದ್ರನಾಗಿ ಬಹುಕಾಲ ಬದುಕುವುದು, ಐಶ್ವರ್ಯವಂತನಾಗಿ ಸರ್ವಸೌಖ್ಯವುಳ್ಳವನಾಗಿ ಅಲ್ಪಕಾಲ ಬದುಕುವುದು ದೃಷ್ಟಾಂತವಾಗಿರುತ್ತೆ. ಪೂರ್ಣಾಯುರ್ಯೋಗವಾಗಲಿ ದೀರ್ಘಾಯುರ್ಯೋಗವಿಲ್ಲದೆ ಚಕ್ರವರ್ತಿತ್ವ ಬರುವುದಿಲ್ಲವೆಂದಾಗಲಿ, ಪೂರ್ಣವಾದ ಆಯುಸ್ಸುಳ್ಳವನು ಚಕ್ರವರ್ತಿಯಾಗಲಿ ದರಿದ್ರನೇ ಆಗಲಿ ಆಗುತ್ತಾನೆಂಬುವುದು ಈ ಶ್ಲೋಕಾರ್ಥಕ್ಕೆ ವಿರುದ್ಧವಾಗಿರುತ್ತೆ.

## ಉದಾಹರಣೆ

| | | | |
|---|---|---|---|
| | | | |
| | ಧನುರ್ಲಗ್ನದ ೨೮ನೇಭಾಗದಲ್ಲಿ ಜನನ | | |
| ಕುಜ ಶನಿ | | | |
| ಲಗ್ನ ಬುಧ ಗುರು | | ರವಿ ಶುಕ್ರ | ಚಂದ್ರ |

ಈ ಜಾತಕನಿಗೆ ಕುಜನೊಬ್ಬನೆ ತನ್ನ ಉಚ್ಚ ಸ್ಥಾನವಾದ ಮಕರದಲ್ಲಿ ರಾಹು ೯-೨೬-೦-೦ ಯಲ್ಲಿರುವನು. ರವಿಯು ೬-೨೮-೨೦-೦ ಕಲೆಯಲ್ಲಿರುವನು. ಶುಕ್ರನು ರಾಶಿಯ ಅಂತ್ಯ ನವಾಂಶದಲ್ಲೂ, ಗುರು ಧನುಸ್ಸಿಲ್ಲೂ, ಶನಿಯು ಮಕರದಲ್ಲೂ, ಸ್ವಕ್ಷೇತ್ರ ಮೂಲ ತ್ರಿಕೋಣದಲ್ಲಿರುವಾಗ ಹುಟ್ಟಿದವನು ಚಕ್ರವರ್ತಿಯಾಗಿ ೭೦ ವರ್ಷಕಾಲ ಬದುಕಿದ್ದದ್ದು ದೃಷ್ಟಾಂತವಾಗಿರುತ್ತೆ. ಇದಕ್ಕೆ ಈ ಶ್ಲೋಕಾರ್ಥ ಅನ್ವಯಿಸುವುದಿಲ್ಲ.

ಚಾಣಿಕ್ಯ :- ಶ್ಲೋಕ।। ಪರಮೋಚ್ಚಗತ್ಯೈಃ ಸರ್ವೈಃ ಮೀನೇಮೀನಾಂಶ ಸಂಸ್ಥಿತೇಲಗ್ನೇ। ಸೌಮ್ಯೇ ವೃಷಗೇಜಾತಃ ಪರಮಾಯುರ್ಜೀವತಿ ಚ ಮನುಷ್ಯಃ ।। ಮತ್ತು ಪರಮೋಚ್ಚಗತ್ಯೈಃ ಷಡ್ಗ್ರಹೈಃ ಅಖಿಲಾಂ ಭೂಮಿಮವತ್ಯ ಸೌನೃಪಃ ।। ಎಂದು ಹೇಳಲ್ಪಟ್ಟಿರುತ್ತೆ ।। ವಿ. ಗು. ಸೂರ್ಯಾದ್ಯೈರುಚ್ಚಗತ್ಯೈಃ ಮೀನಾಂತಾಂಶಾ ಶ್ರಿತೇಲಗ್ನೇ । ಚಂದ್ರಸುತೇ ವೃಷಭಾದೌ ಪರಮಾಯುರ್ಜಾತ ಕೋಲಭತೇ ।। ಪರಮೋಚ್ಚಗತ್ಯೈಃ ಖೇಟ್ಯೈಃ ಬಹುಧನ ಭೋಗಾನ್ವಿತೋ ಭವನೇನ್ನಪತಿಃ ।। ಎಂದು ದೇವಸ್ವಾಮಿ ಹೇಳಿರುತ್ತಾನೆ.

ಮತ್ತು ।। ಮೀನಪರಮಾಂಶ ಲಗ್ನೇ ಗವಿಸೌಮ್ಯೇಪಂ ಚವರ್ಗಲಿಪ್ತಸ್ಥೇ । ಸರ್ವೈಃಪರಮೋಚ್ಚಗತ್ಯೈಃ ಜಾತಃ ಪರಮಾಯು ರಾಪ್ನೋತಿ।।ಚತುರಧಿಕೈರುಚ್ಚಸ್ಥೈಃ ಖಚರೈರ್ಭೂಮೀಶ್ವರೋ ಧನೀಭವತಿ ।। ಎಂದು ಸಿದ್ಧಸೇನನು ಹೇಳಿರುತ್ತಾನೆ.

ಅನ್ಯಚ್ಚ ।। ಝಷವರ್ಗೋತ್ತಮಲಗ್ನೇ ಜಾತಃ ಶಶಿಜೇ ಗವಿಪಂಚಾಕ್ಷಿ ಕಲಾಸ್ಥೇ ಇತರೈಃ ಪರಮೋಚ್ಚಗತ್ಯೈಃ ಖೇಟ್ಯೈಃ ಪರಪೂರ್ಣಾಯುರ್ಧನರ್ವಾ ನೃಪತಿಃ ।। ಎಂದು ವರರತ್ನನು ಹೇಳಿರುತ್ತಾನೆ.

ಮತ್ತು ।। ಭಚಕ್ರ ಸ್ಯಾಂತಿಮಾಂಶೋ ತ್ಥೇನ ಜೀವೇದ್ಯದಿ ಜೀವತಿ । ಪಂಚವಿಂಶತಿ ಲಿಪ್ತಾಸು ವೃಷಭೇ ಚಂದ್ರಜೋಯದಿ ।। ಪರಮೋಚ್ಚಗತ್ಯೈರನ್ಯೈಃ ಸಂಪೂರ್ಣಾಯುರ್ನರೇಶ್ವರಃ ।। ಮಾರಹ ಲಿಪ್ತಿಕಾಯಾಂ ದಿಶಿಸ್ಥಿತೇ ವಕ್ರಚಾರೇಣ। ತುಂಗಗತ್ಯೈಃ ರಪ್ಯನ್ಯೈ ರ್ಹೀನಾಯಾಂ ಶೋದಿತ ಶ್ಚಿರಂಜೀವೇತ್ ।। ನರಕಾಬ್ದಾ

ಸ್ವಂಚಾಹಂ ನರಪತಿ ಮನ್ಯೋಥವಾ ದರಿದ್ರಸ್ಯಾತ್ ॥ ಇತಿ ಸಮಂತಭದ್ರಃ

ಈ ಮೇಲೆ ಹೇಳಲ್ಪಟ್ಟ ಶ್ಲೋಕಗಳು ಸುಲಭವಾಗಿ ಅರ್ಥವಾಗದಿರುವುದರಿಂದ ಅರ್ಥವನ್ನು ತಿಳಿಯಪಡಿಸುವುದು ಮುಖ್ಯ ಉದ್ದೇಶವಾಗಿರುತ್ತೆ. ಆದರೆ ಆರು ಗ್ರಹಗಳು ತಮ್ಮ ತಮ್ಮ ಪರಮೋಚ್ಚ ಭಾಗಗಳಲ್ಲಿರುವಾಗ ಹುಟ್ಟಿದವರು ಚಕ್ರವರ್ತಿ ಯಾಗಿಯೂ ದೀರ್ಘಾಯುಸ್ಸುಳ್ಳವನಾಗುವುದಕ್ಕೆ ಸಂದೇಹವಿಲ್ಲ. ಆದರೆ ಈ ಯೋಗ ಗಳಲ್ಲದೆ ದೀರ್ಘಾಯುರ್ಯೋಗ ಬಂದ ಜಾತಕಗಳಲ್ಲಿ ಅವರು ದರಿದ್ರರಾಗಿರುವುದಕ್ಕೆ ಕೆಲವು ನಿದರ್ಶನಗಳಾಗಿರುತ್ತವೆ.

ಆಸ್ತಿಕರಾದ ಜ್ಯೋತಿಷ್ಕರ ಅಭಿಪ್ರಾಯವೇನೆಂದರೆ, ಆಯುಸ್ಸು ಪುಣ್ಯಕಾರ್ಯಗಳ ಮೂಲವಾಗಿ ಅಧಿಕವಾಗುವಂತೆಯೂ, ಪಾಪಕಾರ್ಯಗಳಿಂದ ಅಧರ್ಮವನ್ನನುಸರಿಸುವವನಿಗೆ ಆಯುಸ್ಸು ಕ್ಷೀಣವಾಗುತ್ತದೆಂದು ಪ್ರತಿಪಾದಿಸುತ್ತಾರೆ. ಈ ಮತ ವೇದದಲ್ಲಿಯೂ ಹೇಳಲ್ಪಟ್ಟಿರುತ್ತೆ.

ನಾಸ್ತಿಕರಾದ ಕೆಲವರು ಆಹಾರ, ಇಂದ್ರಿಯ ವ್ಯಾಪಾರ, ಭಯ, ಶ್ರಮ ಮೊದಲಾದವುಗಳು ಆಯುಸ್ಸುವನ್ನು ಹ್ರಾಸವೃದ್ಧಿಗೆ ಕಾರಣಗಳೆಂದು ವಿಶೇಷವಾಗಿ ಭಾವಿಸಿರುತ್ತಾರೆ. ಇದು ವಿಜ್ಞಾನ ಶಾಸ್ತ್ರ ಲಕ್ಷಣವಾಗಿರುತ್ತೆ. ಇದು ಅಂಗೀಕರಿಸತಕ್ಕ ವಿಷಯವೇ ಆಗಿರುತ್ತೆ.

ಈ ಹೇಳಲ್ಪಟ್ಟ ಶ್ಲೋಕದಲ್ಲಿ ವರಾಹ ಮಿಹಿರಾಚಾರ್ಯರು ಸತ್ಯಾಚಾರ್ಯರ ಮತದ ಪ್ರಕಾರ ಅಂಶಾಯುರ್ದಾಯವನ್ನೇ ಅಂಗೀಕರಿಸುತ್ತಾರೆ.

ವರಾಹಮಿಹಿರಾಚಾರ್ಯರು ಜ್ಯೋತಿಷ ಮತ್ತು ಆಗಮ ಚಿಕಿತ್ಸಾಸ ಮೊದ ಲಾದ ಶಾಸ್ತ್ರಗಳನ್ನು ಸ್ವಯಂ ಪ್ರತಿಪಾದಿಸಿ ತಮ್ಮಷ್ಟಕ್ಕೆ ತಾವೆ ಸಿದ್ಧಾಂತಿಸಬಾರದು. ಆದರೆ ಬಹುಜನ ಜ್ಯೋತಿಷ್ಕರ ಮತವನ್ನನುಸರಿಸಿ ಹೇಳಬೇಕೆಂಬುದು ಅವರ ಅನುಗ್ರಾಹಿಕಶಕ್ತಿಯಾಗಿರುತ್ತದೆ. ಆಯುರ್ದಾಯ ಸಂವತ್ಸರಗಳ ಹರಣ ಭರಣ ಕಾರ್ಯಗಳಲ್ಲಿ 'ಏಕಂತುಯದ್ಭೂರಿ ತದೇವಕಾರ್ಯಂ' ತತ್ಪೈಕರಾಶಿಗಾನಮೇ ಕೋಂಶಂ ಹರತಿಬಲೀ, ಎಂಬುವ ಪರಸ್ಪರ ಸಂವಾದವನ್ನು ವ್ಯವಸ್ಥೆಯನ್ನು ತೋರಿಸುವುದರಿಂದ ಅನೇಕ ಗ್ರಹಗಳಿಗೆ ಒಂದೇ ನಿಮಿತ್ತವಾಗಿ ಹರಣ ಭರಣಗಳ ಗಣಿತ ಮಾಡುವುದು ಪ್ರಮಾಣಕ್ಕೂ, ಯುಕ್ತಿಗೂ ವಿರುದ್ಧವಾಗಿರುತ್ತದೆ.

ಪೂರ್ವಾಚಾರ್ಯರ ಮತವನ್ನಲಂಬಿಸಿ ನ್ಯಾಯವ್ಯವಸ್ಥೆಗನುಗುಣವಾಗಿ ಆಯುರ್ದಾಯ ಸಂವತ್ಸರಕ್ಕೆ ಹರಣವನ್ನು ಮಾಡುವಲ್ಲಿ ಗ್ರಹಗಳ ಇರುವಿಕೆಯನ್ನು ಯಾವ ಪ್ರಕಾರ ವಿಕಲ್ಪಿಸಿಕೊಂಡರೂ ೨೦ ವರ್ಷಗಳಿಗೆ ನ್ಯೂನವಾಗಿ ಆಯುರ್ದಾಯ ಬರುವುದೇ ಇಲ್ಲ. ಅನೇಕರು ೨೦ ವರ್ಷಗಳ ಒಳಗೆ ಮರಣ ಹೊಂದುತ್ತಾರೆ. ಇದರಿಂದ ಪ್ರತ್ಯಕ್ಷವಿರೋಧವು ನಿಶ್ಚಿತವಾಗುತ್ತೆ. ೨ ನೇ ವಿಧವಾದ ದೋಷವು ಗ್ರಹಗಳ ಪರಮೋಚ್ಚ ಮತ್ತು ಉಚ್ಚಾದಿ ಭಾಗಗಳಲ್ಲಿರುವಾಗ ಅನಿಷ್ಟಫಲವನ್ನು ಕೊಡುವುದನ್ನು ಅವರು ಯಾವ ಯಾವ ಭಾವಕ್ಕೆ ಅಧಿಪತಿಗಳಾಗಿರುತ್ತಾರೋ, ಆ ಅಧಿಪತಿಗಳ ಬಲಾನುಸಾರವಾಗಿ ಹೇಳಬಹುದಾದರೂ ಪೂರ್ಣಾಯುರ್ಯೋಗಕ್ಕೂ ಚಕ್ರವರ್ತಿತ್ವ ಬರುವುದಕ್ಕೆ ವಿರುದ್ಧವಾಗಿ ದರಿದ್ರತ್ವವು ಬಂದು ಪೂರ್ಣಾಯುಷ್ಯಕ್ಕೆ ನ್ಯೂನತೆ ಇಲ್ಲದೆ ಇರುವುದು ನಿದರ್ಶನ ಬರುತ್ತದೆ.

ಅನೇಕ ಗ್ರಹಗಳ ಪರಮೋಚ್ಚಾವಸ್ಥೆಯು, ಸಾಮ್ರಾಜ್ಯಾನುಭೋಗಕ್ಕೆ ಸರ್ವಸಮ್ಮತಿಯಾಗಿರುತ್ತೆ. ಈ ವಿಷಯದಲ್ಲಿ ಬಾದರಾಯಣಚಾರ್ಯರು ಹೇಳಿರುವುದೇನೆಂದರೆ-ಷಡ್ಭಿಸ್ಸ್ಯಾಚ್ಚಕ್ರವರ್ತಿ ತ್ರಿಭುವನಮಖಿಲಂ ಶಾಸ್ತಿಸರ್ವೈರ್ಗ್ರಹೇಂದ್ರೈಃ ॥ ಮತ್ತು ಷಡ್ರಾಜರಾಜರ್ಧಿ ಬಲೋಪಕರ್ಷ ಪ್ರದಾನಮಾನ್ಯೈ ಸ್ವಭಿಜಾತಶಕ್ತಿಂ॥ ಈ ಪ್ರಕಾರ ಯವನೇಶ್ವರನು ಹೇಳಿರುತ್ತಾನೆ. ಆದ್ದರಿಂದ ಎರಡು ವಿಧವಾದ ದೂಷಣೆಗಳು ಉತ್ಪ್ರೇಕ್ಷೆ ಎಂದು ಹೇಳಬೇಕಾಗಿರುತ್ತೆ. ಈ ವಿಷಯವನ್ನೆ ಕೃಷ್ಣಭಟ್ಟೀಯ ವ್ಯಾಖ್ಯಾನದಲ್ಲಿ ಪ್ರತಿಪಾದಿಸಿರುತ್ತಾರೆ. ॥೧೦॥

ಮೂಲ॥ ಸ್ವಮತೇನ ಕಿಲಾಹ* ಜೀವಶರ್ಮಾಗ್ರಹದಾಯಂ ಪರಮಾಯುಷಃ
ಸ್ವರಾಶಂ ॥ ಗ್ರಹಭುಕ್ತ ದಿನಾದಿ ರಾಶಿತುಲ್ಯಂ ಬಹುಸಾಮ್ಯಂ
ಸಮುಪೈತಿ ಸತ್ಯವಾಕ್ಯಮ್ ॥೯॥

ಅವತಾರಿಕೆ ॥ ಜೀವಶರ್ಮ ಮತಾಯುರ್ದಾಯವೂ ಸತ್ಯಾಚಾರ್ಯ ಮತಾಯುರ್ದಾಯವೂ ಹೇಳಲ್ಪಡುತ್ತೆ.

ಟೀಕು॥ ಜೀವಶರ್ಮಾ-ಜೀವಶರ್ಮನೆಂಬ ಗ್ರಂಥಕರ್ತನು, ಸ್ವಮತೇನ-ತನ್ನ ಮತದಿಂದ, ಪರಮಾಯುಷಃ-ಸಂ ೧೨೦ ಮಾಸ ೦, ದಿನ ೫, ಪರಮಾಯಸ್ಸಿನ, ಸ್ವರಾಂಶಂ-ಸಪ್ತಮಾಂಶವನ್ನು, ಗ್ರಹದಾಯಂ-ಒಂದೊಂದು ಗ್ರಹದ ಒಂದು ಆಯುರ್ದಾಯವೆಂದು, ಆಹ-ಹೇಳಿದನು, ಅಂದರೆ, ಪರಮಾಯುವಾದ

* ಜೀವಶರ್ಮನೆಂದರೆ ಬೃಹಸ್ಪತಿಯ ಅವತಾರಪುರುಷನೆಂದು ಹೇಳಲ್ಪಟ್ಟಿರುತ್ತೆ.

ಸಂ. ೧೨೦, ಮಾಸ ೦, ದಿನ ೫ ನ್ನು ೭ ರಿಂದ ಭಾಗಮಾಡಲಾಗಿ ಸಂ ೧೭, ಮಾಸ ೦, ದಿನ ೨೨, ಘ. ೮, ವಿ-೩೪ ಪರಮೋಚ್ಚಗತವಾದ ಒಂದೊಂದು ಗ್ರಹದ ಆಯುರ್ದಾಯವೆಂದು ಜೀವಶರ್ಮನ ತಾತ್ಪರ್ಯ. ಶ್ಲೋ॥ ಸ್ವೋಚ್ಚಶುದ್ಧೋ ಗ್ರಹಶ್ಯೋಧ್ಯ ಷಡ್ರಾಶ್ಯೂನೋಭ ಮಂಡಲಾತ್ । ತದ್ಭಾಗಾಂತ್ವಬ್ಧಿಷಣ್ಣಾಗಾ (೮೬೪೧) ಹತಾವೇದಾಭ್ರನಾಯಕೈಃ ॥೧೭॥ ಭಕ್ತಾದಿನಾದಿಯಲ್ಲಿಬ್ದಂತದಾಯು ರ್ಜೀವಶರ್ಮಜಂ॥ ದಿನ್ಯೆಸ್ತು ತ್ರಿಂಶಕಾಮಾಸಾ ಮಾಸೇಭ್ಯೋ ರವಿಭಿಸ್ಸಮಾಃ ॥ ಎಂದು ಮಾಡಿದ್ದರಿಂದ ಸುಲಭವಾಗಿ ಏರ್ಪಡುವುದು. ಈ ವಿಷಯದಲ್ಲಿ ಜೀವಶರ್ಮ ॥ಶ್ಲೋಕ॥ ಸಪ್ತದಸ್ರೈ (೧೭) ಕಂ (೧) ದ್ವಿಯುವಮೌ (೨೨) ವನಜೋಃ (೮) ವೇದಾಗ್ನಯೋಃ (೩೪) ಗ್ರಹೇಂದ್ರಾಣಾಂ । ವರ್ಷಾದ್ಯುಚ್ಚಸ್ಥಾನಾಂ ನೀಚ ಸ್ಥಾನಾಂ ಮತೋರ್ಧಂಸ್ಯಾತ್ ॥೧೯॥ ಮಧ್ಯೇನುಪಾತಃ ತಸ್ಮಾದಾನಯನಂ ಶಿಷ್ಟಮತ್ರಯತ್ಕಿಂಚಿತ್ । ಪಿಂಡಾಯುಷ ಇವಕಾರ್ಯಂ ತತ್ಸರ್ವಂ ಗಣಿತ ತತ್ವಜ್ಞೈಃ ॥೨೦॥ ಎಂದುಕ್ತವಾಗಿರುವುದರಿಂದ ಪರಮ ನೀಚದಲ್ಲಿದ್ದ ಗ್ರಹಗಳಿಗೆ ಅವರವರ ದಶಾಯುವಿನಲ್ಲಿ ಅರ್ಧವು ಕ್ಷಯಿಸುವುದು. ಆದ್ದರಿಂದ ವರ್ಷ ೮, ಮಾಸ ೬ ದಿನ ೨೬, ಘ ೬, ವಿ ೧೭ ಪರಮನೀಚಾಯುರ್ದಶೆ ಬರುವುದು. ಗ್ರಹಗಳು ಉಚ್ಚನೀಚ ಮಧ್ಯದಲ್ಲಿದ್ದರೆ ಮೊದಲು ಪಿಂಡಾಯುರ್ದಾಯದಲ್ಲಿ ಹೇಳಿದ ಪ್ರಕಾರ ತ್ರೈರಾಶಿಕದಿಂದ ಆಯಾಯ ಗ್ರಹಗಳಿಗೆ ಆಯುರ್ದಾಯ ನಿರ್ಣಯ ಮಾಡಬೇಕು. ಆ ಗ್ರಹಗಳಲ್ಲಿ ಅಂಗಾರಕನನ್ನು ವಿನಾ ಉಳಿದ ಗ್ರಹಗಳು ಶತ್ರು ಕ್ಷೇತ್ರಗಳಲ್ಲಿದ್ದರೆ ತೃತೀಯಾಂಶ ಹರಣವನ್ನು ಮಾಡಬೇಕು. ಶುಕ್ರಶನೈಶ್ಚರರನ್ನು ವಿನಾ ಉಳಿದ ಗ್ರಹಗಳೊಳಗೆ ಯಾವ ಗ್ರಹಗಳಾದರೂ ಅಸ್ತರಾಗಿದ್ದರೆ ಅರ್ಧಾಂಶಹರಣ ಮಾಡತಕ್ಕದ್ದು. ಸರ್ವಾರ್ಧತ್ರಿಚರಣ ಪಂಚ ಷಷ್ಠಭಾಗಾಃ, ಎಂಬುವ ಪ್ರಕಾರವಾಗಿ ವ್ಯಯಾದಿಹರಣ ಮಾಡತಕ್ಕದ್ದು. ಕ್ರೂರಗ್ರಹವು ಜನ್ಮದಲ್ಲಿದ್ದರೆ-ಸಾರ್ಧೋದಿತೋದಿತ ನವಾಂಶ ಹತಾತ್ಸಮಸ್ತಾತ್, ಎಂದು ಹೇಳಿದ ಪ್ರಕಾರವಾಗಿ ಕ್ರೂರೋದಯಹರಣ ಮಾಡಬೇಕು. ಈ ಪ್ರಕಾರ ಜೀವಶರ್ಮಾಯುರ್ದಾಯದಲ್ಲಿ ಅಂಶಹರಣಾದಿಗಳನ್ನು ಸಮಸ್ತವೂ ಪೂರ್ವೋಕ್ತವಾದ ಮಯ ಯುವನಾದಿ ಮತಾನುಸಾರವಾಗಿ ಮಾಡತಕ್ಕದ್ದೆಂದು ಹೇಳಿರುವನು. ಸತ್ಯಾಚಾರ್ಯ ಮತವೇನೆಂದರೆ-ಗ್ರಹಭುಕ್ತ ನವಾಂಶರಾಶಿ ತುಲ್ಯಂ-ಅಂದರೆ, ಒಂದಾನೊಂದು ರಾಶಿಯಲ್ಲಿ ಯಾವ ನವಾಂಶೆಯಲ್ಲಿ ಗ್ರಹವಿರುವುದೋ, ಆ ನವಾಂಶ ಯಾವ ರಾಶಿ ನವಾಂಶ ವಾಗುವುದೋ ಆ ರಾಶಿಯುವರಿಗೆ ಮೇಷ ಮೊದಲುಗೊಂಡು ಗಣನೆ ಮಾಡುವಾಗ ಎಷ್ಟಾಗುವುದೋ ಅಷ್ಟು ಸಂವತ್ಸರಗಳ ಆಯುಸ್ಸನ್ನು ಆ ಗ್ರಹ ಕೊಡುವುದು. ಈ ಪ್ರಕಾರ ಗ್ರಹಭುಕ್ತಿ ನವಾಂಶ ರಾಶಿಗಳೆಷ್ಟಾಗುವುದೋ ಅಷ್ಟು

ಸಂವತ್ಸರಗಳನ್ನು ವರ್ತಮಾನ ನವಾಂಶೆಯ ಗತಲಿಪ್ತಿಗಳಿಂದ ತ್ರೈರಾಶಿಕ ಮಾಡಲಾಗಿ ಬಂದ ಮಾಸ ದಿವಸಾದಿಗಳು ಆಯಾಯಗ್ರಹಗಳಿಗೆ ಆಯುಃಪ್ರಮಾಣ ಕಾಲವಾಗುವುದು. ಆ ತ್ರೈರಾಶಿಕ ವಿಧಾನವು ಮೊದಲು ಶ್ಲೋಕದಲ್ಲಿ ವರಾಹ ಮಿಹಿರಾಚಾರ್ಯರಿಂದಲೇ ಹೇಳಲ್ಪಟ್ಟಿರುತ್ತೆ. ಈ ಅರ್ಥಕ್ಕೆ ಶ್ಲೋಕ।। ರಾಶ್ಯಂಶಕ ಸಂಯೋಗಾದಾಯುರಿಹ ಸಮಾನತೋ ಗ್ರಹಾದದ್ಯುಃ ।।೨೧।। ಎಂದು ಸತ್ಯಾಚಾರ್ಯ ವಚನವಿರುತ್ತೆ. ಸತ್ಯವಾಕ್ಯಂ-ಈ ಹೇಳಿದ ಸತ್ಯಮತಾಯುರ್ದಾಯವು, ಬಹುಸಾಮ್ಯಂ-ಅನೇಕ ಗ್ರಂಥಕರ್ತರು ಹೇಳಿದ ಆಯುರ್ದಾಯಕ್ಕೆ ಸಮುಪೈತಿ-ಸಮಾನವಾಗಿ ಹೊಂದುತ್ತದೆ. ಅದು ಹೇಗೆಂದರೆ-ಶ್ಲೋಕ।। ಆಯುೂಂಷಿರಾಶ್ಯಂಶಕ ಚಾರಯೋಗಾತ್ ಎಂದು ಯವನಾಚಾರ್ಯರು ಹೇಳಿರುವರು. ಆದರೆ ಕೆಲವರು ಈ ಸತ್ಯಯವನೇಶ್ವರರ ವಾಕ್ಯಗಳಿಗೆ ಯಾವ ರಾಶಿಯಲ್ಲಿ ಗ್ರಹವಿರುವುದೋ, ಆ ರಾಶಿಯಲ್ಲಿ ಎಷ್ಟು ನವಾಂಶಗಳು ಭುಕ್ತವಾಗಿರುವುದೋ ಅಷ್ಟು ಸಂವತ್ಸರಗಳನ್ನೇ ಆ ಗ್ರಹವು ಆಯುಸ್ಸು ಕೊಡುವುದೆಂದು ಅರ್ಥವನ್ನು ಹೇಳಿದರು. ಆಗ ಒಂದು ಗ್ರಹಕ್ಕೆ ೯ ಸಂವತ್ಸರಗಳ ಮೇಲೆ ಆಯುರ್ದಾಯವು ಬರುವುದಿಲ್ಲ. ಆದ್ದರಿಂದ ಸೂರ್ಯಾದಿ ಸಪ್ತ ಗ್ರಹಗಳಿಗೂ ೬೩ ವರ್ಷ ಆಯುರ್ದಾಯ ಬರುವುದು. ಆದ್ದರಿಂದ ೧೨೦ ಸಂ, ೫ ದಿವಸ ಆಯುರ್ದಾಯ, ನಿಜವೆ-ಇದು ನಿಜವೆ ? ಎಂದು ಯೋಚಿಸಿದರೆ ಈ ಮೇಲೆ ಹೇಳಲ್ಪಟ್ಟ ೬೩ ವರ್ಷ ಆಯುರ್ದಾಯ ಅಸಂಗತವಾಗಿರುವಂತೆ ತಿಳಿಯಬರುತೆ. ಆದ್ದರಿಂದ ಈ ಪ್ರಕಾರ ಹೇಳಕೂಡದು. ಬಾದರಾಯಣರಿಂದ ಹೇಳಲ್ಪಟ್ಟಿರುವ ।।ಶ್ಲೋಕ।। ರಾಶ್ಯಂಶ ಕಳಾಗುಣಿರಾ ದ್ವಾದಶ ನವಭಿರ್ಗ್ರಹಸ್ಯ ಭಗಣೇಭ್ಯಃ ।। ದ್ವಾದಶಹತಾವಶೇಷೋಬ್ದ ಮಾಸದಿನನಾಡಿಕಾಃಕ್ರಮಶಃ ।।೨೨।। ಎಂದು ಹೇಳಿರುವುದರಿಂದ, ಈ ಬಾದರಾಯಣ ವಚನಾನುಸಾರವಾಗಿ ಸತ್ಯಾಚಾರ್ಯಯವನೇಶ್ವರರ ವಾಕ್ಯಗಳಿಗೆ ಅರ್ಥಮಾಡಬೇಕು. ಹಾಗೆ ಅರ್ಥಮಾಡಿದರೆ ಬಂದ ಮುಖ್ಯತಾತ್ಪರ್ಯವೇನೆಂದರೆ- ಯಾವ ರಾಶಿಯಲ್ಲಾದರೂ ಮೇಷರಾಶಿ ನವಾಂಶೆಯಲ್ಲಿ ಭುಕ್ತವಾದ ಗ್ರಹಕ್ಕೆ ಒಂದು ಸಂವತ್ಸರ, ವೃಷಭನವಾಂಶೆಯಲ್ಲಿ ಭುಕ್ತವಾಗಿರುವ ಗ್ರಹಕ್ಕೆ ಎರಡು ಸಂವತ್ಸರ, ಮಿಥುನಾಂಶ ಭೋಗ್ಯವಾಗಿರುವ ಗ್ರಹಕ್ಕೆ ಮೂರು ಸಂವತ್ಸರ, ಈ ಪ್ರಕಾರ ಉತ್ತರೋತ್ತರ ವೃದ್ಧಿಯಿಂದ ೧೨ ಸಂವತ್ಸರಗಳವರಿಗೆ ಒಂದೊಂದು ಗ್ರಹಕ್ಕೆ ಆಯುರ್ದಾಯ ಬರುವುದು.

ಮೂಲ।। ಸತ್ಯೋಕ್ತೇರ್ಗ್ರಹಮಿಷ್ಟಂ ಲಿಪ್ತೀಕೃತ್ವಾ ಶತದ್ವಯೇನಾಪ್ತಂ।।
ಮಂಡಲಭಾಗವಿಶುದ್ಧೇಬ್ದಾಸ್ಸ್ಯುಶ್ಶೇಷಾತ್ತುಮಾಸಾದ್ಯಾಃ।।೧೦।।

ಟೀಕು॥ ಈ ಪೂರ್ವ ಶ್ಲೋಕೋಕ್ತವಾದ ಸತ್ಯಾಚಾರ್ಯ ಮತಾಯುರ್ದಾಯ ಮಾಡುವ ಕ್ರಮವು ಹೇಳಲ್ಪಡುತ್ತೆ. ಸತ್ಯೋಕ್ತೇಃ-ಸತ್ಯಾಚಾರ್ಯೋಕ್ತವಾದ ಆಯುರ್ದಾಯ ನಯನದಲ್ಲಿ, ಇಷ್ಟಂ-ತನಗೆ ಇಷ್ಟವಾದ, ಗ್ರಹಂ-ಗ್ರಹವನ್ನು, ಲಿಪ್ತಿ ಕೃತ್ವಾ-ಲಿಪ್ತಿಗಳಾಗಿ ಮಾಡಿ, ಶತದ್ವಯೇನ-೨೦೦ ರಿಂದ, ಆಪ್ತಂ-ಭಾಗ ಮಾಡಲಾಗಿ ಬಂದ ಲಬ್ಧವನ್ನು, ಮಂಡಲಭಾಗವಿಶುದ್ಧೇ-೧೨ ರಿಂದ ಭಾಗಮಾಡಲಾಗಿ, ಅಬ್ದಾಃಸ್ಯುಃ-ಸಂವತ್ಸರಗಳಾಗುವವು. ಶೇಷಾತ್ತು-ಶೇಷ ಉಳಿದದ್ದರಿಂದ, ಮಾಸಾದ್ಯಾಃ-ಮಾಸಾದಿಗಳು ಬರುವವು.

## ಉದಾಹರಣೆ

ತಾತ್ಕಾಲಿಕ ಗ್ರಹ ಭುಕ್ತರಾಶಿಗಳು. ರಾ ೧ ಭಾ ೮, ಲಿಪ್ತಿ ೪೫, ಇದಕ್ಕೆ ಅಂತೂ ಲಿಪ್ತಿಗಳು ೨,೩೨೫, ಇದನ್ನು ಶತದ್ವಯವೆಂದರೆ, ೨೦೦ ರಿಂದ ಭಾಗ ಮಾಡಿದರೆ ೧೧ ಬರುವುದು, ಇದನ್ನು ೧೨ ರಿಂದ ಭಾಗ ಮಾಡಲು ಸಾಲದಾದ್ದರಿಂದ ಇದು ೧೧ ಸಂವತ್ಸರಗಳಾಗುವುದು. ಶೇಷ ೧೨೫ನ್ನು ೧೨ ರಿಂದ ಗುಣಿಸಿದರೆ ೧,೫೦೦ ಆಗುವುದು. ಇದನ್ನು ಪುನಃ ೨೦೦ ರಿಂದ ಭಾಗಿಸಿದರೆ ಬಂದ ಭಾಗಲಬ್ಧ ೭, ಶೇಷ ೧೦೦, ಈ ೧೦೦ ನ್ನು ೩೦ ರಿಂದ ಗುಣಿಸಿದರೆ ೩೦೦೦ ಆಗುತ್ತದೆ. ಇದನ್ನು ೨೦೦ ರಿಂದ ಭಾಗಿಸಿದರೆ ಬಂದ ದಿನಗಳು ೧೫, ಶೇಷ ಬರಲಿಲ್ಲ. ಆದ್ದರಿಂದ ಇದರ ಆಯುರ್ದಾಯ ಸಂ ೧೧, ಮಾಸ ೭, ದಿವಸ ೧೫ ಬರುತ್ತದೆ. ಈ ಗ್ರಹಕ್ಕೆ ಪೂರ್ವದಲ್ಲಿ ಶ್ಲೋಕ ೨೨ ರಲ್ಲಿ ಹೇಳಿರುವ ಬಾದರಾಯಣ ವಚನವನ್ನಸರಿಸಿ ಗುಣಿತಮಾಡಬೇಕು. ಆ ಕ್ರಮವೇನೆಂದರೆ-ತಾತ್ಕಾಲಿಕ ಗ್ರಹಭುಕ್ತ ರಾಶ್ಯಾದಿಗಳು ರಾಶಿ ೧, ಭಾಗ ೮, ಕಲೆ ೪೫ ಪ್ರತ್ಯೇಕವಾಗಿ ೧೨ ರಿಂದ ಗುಣಿಸಲಾಗಿ ಬಂದ ಲಬ್ಧ ೧೨-೯೬-೫೪೦ ಇದನ್ನು ೯ ರಿಂದ ಗುಣಿಸಿದರೆ ೧೦೮-೮೬೪-೪, ೮೬೦ ಇದರ ಲಿಪ್ತಾ ಸಂಖ್ಯೆಯಾದ ೪,೮೬೦ ರನ್ನು ೬೦ ರಿಂದ ಭಾಗಮಾಡಲಾಗಿ ಲಬ್ಧ ೮೧ ಶೇಷ ೦, ಈ ೮೧ ನ್ನು ಭಾಗ ಸಂಖ್ಯೆಯಾಗಿ ೮೬೪ ಕ್ಕೆ ಸೇರಿಸಿದರೆ ೯೪೫ ಆಯಿತು. ಇದನ್ನು ೩೦ ರಿಂದ ಭಾಗಮಾಡಲಾಗಿ ಬಂದ ಲಬ್ಧ ೩೧, ಶೇಷ ೧೫, ಈ ಶೇಷ ದಿನವಾಗುವುದು, ಲಬ್ಧ ೩೧ ರಾಶಿ ಸಂಖ್ಯೆಯ ೧೦೮ ಕ್ಕೆ ಸೇರಿಸಲಾಗಿ ೧೩೯ ಆಯಿತು. ಇದನ್ನು ೧೨ ರಿಂದ ಭಾಗಮಾಡಿದರೆ ಲಬ್ಧ ೧೧, ಶೇಷ ೭, ಇದು ಮಾಸವಾಗಿರುವುದು. ಈ ಲಬ್ಧವು ೧೨ ರಿಂದ ಭಾಗಿಸುವುದಕ್ಕೆ ಆಗುವುದಿಲ್ಲ. ಆದ್ದರಿಂದ ಇದೇ ಸಂವತ್ಸರವಾಗಿರುವುದು. ಈ ಮೇಲೆ ಹೇಳಿದ ಎರಡೂ ಪ್ರಕಾರವೂ ಯವನೇಶ್ವರ ಸತ್ಯಾಚಾರ್ಯರ ಬಾದರಾಯಣ ಮತಾನುಸಾರವಾಗಿ ಈ ಗ್ರಂಥಕರ್ತನಾದ ವರಾಹ ಮಿಹಿರಾಚಾರ್ಯರಿಂದ ಆಯುರ್ದಾಯ ನಿರ್ಣಯದಲ್ಲಿ ಹೇಳಲ್ಪಟ್ಟಿರುತ್ತೆ.

## ಸತ್ಯಾಚಾರ್ಯಮತೇ ವಿಶೇಷಃ

ಮೂಲ॥ ಸ್ವತುಂಗವಕ್ರೋಪಗತೈ ಸ್ತ್ರಿಸಂಗುಣಂ ದ್ವಿರುತ್ತಮಸ್ವಾಂಶಕಭತ್ರಿ ಭಾಗಗೈಃ । ಇಯಾನ್ವಿಶೇಷಸ್ತು ಭದತ್ತ ಭಾಷಿತೇಸಮಾನ ಮನ್ಯತ್ಪ್ರ-ಥಮೇಪ್ಯುದೀರಿತಂ ॥೧೧॥

ಟೀಕು॥ ಈ ಪ್ರಕಾರ ಬಂದ ಆಯುರ್ದಾಯಕ್ಕೆ ಸತ್ಯಾಚಾರ್ಯ ಮತದಲ್ಲಿ ಕ್ರಿಯಾವಿಶೇಷವು ಹೇಳಲ್ಪಡುತ್ತೆ. ಸ್ವತುಂಗವಕ್ರೋಪಗತ್ಯೈಃ ಸ್ವತುಂಗ-ತನ್ನುಚ್ಚ ಸ್ಥಾನವನ್ನು ಹೊಂದಿರತಕ್ಕ ಗ್ರಹಗಳಿಂದಲೂ, ವಕ್ರೋಪಗತ್ಯೈಃ-ವಕ್ರಗತಿಯಲ್ಲಿ ಇರುವ ಗ್ರಹಗಣಿತಗಳಿಂದಲೂ, ಗಣಿತಾಗತವಾಗಿ ಬಂದ ಆಯುಸ್ಸು, ತ್ರಿಸಂಗುಣಂ- ೩ ರಿಂದ ಗುಣಿಸಿ ವೃದ್ಧಿ ಮಾಡಲ್ಪಡತಕ್ಕದ್ದು. ಉತ್ತಮಸ್ವಾಂಶಕ ಭತ್ರಿಭಾಗಗೈಃ-ಉತ್ತಮ ವರ್ಗೋತ್ತಮಾಂಶೆಯನ್ನು ಹೊಂದಿದ ಗ್ರಹಗಳಿಂದಲೂ, ಸ್ವಾಂಶಕ-ತನ್ನ ನವಾಂಶೆಯಲ್ಲಿದ್ದ ಗ್ರಹದಿಂದಲೂ, ಸ್ವಭ-ಸ್ವಕ್ಷೇತ್ರದಲ್ಲಿದ್ದ ಗ್ರಹದಿಂದಲೂ, ಸ್ವತ್ರಿಭಾಗಗೈಃ- ತನ್ನ ದ್ರೇಕ್ಕಾಣದಲ್ಲಿದ್ದ ಗ್ರಹದಿಂದಲೂ, ಕೊಡಲ್ಪಟ್ಟ ಆಯುದಾರ್ಯವನ್ನು, ದ್ವಿಃ-೨ ರಿಂದ ಗುಣಿಸಿ ವೃದ್ಧಿ ಮಾಡತಕ್ಕದ್ದು, ಭದತ್ತಭಾಷಿತೇ- ಸತ್ಯಾಚಾರ್ಯೋಕ್ತವಾದ ಈ ಆಯುರ್ದಾಯದಲ್ಲಿ, ಇಯಾರ್ವಿಶೇಷಃ- ಈ ಹೇಳಲ್ಪಪಟ್ಟ (ಸ್ವತುಂಗವಕ್ರೋಪಗತ್ಯೈಃ ಸ್ತ್ರಿಸಂಗುಣಂ ದ್ವಿರುತ್ತಮ ಸ್ವಾಂಶಕಭತ್ರಿಭಾಗಗೈಃ) ಎಂಬುವುದು ವಿಶೇಷ, ಅನ್ಯತ್- ಇತರವಾದ, ಪ್ರಥಮೇಷ್ಯುದೀರಿತಂ-ಮೊದಲು ಮಯಯವನಾದಿ ಮತಗಳಲ್ಲಿ ಹೇಳಿದ್ದ ಶತ್ರುಕ್ಷೇತ್ರ ಹರಣಾದಿ ಕರ್ಮವು, ಸಮಾನಂ-ಈ ಸತ್ಯಾಚಾರ್ಯರ ಮತಾಯುರ್ದಾಯದಲ್ಲಿಯೂ ತುಲ್ಯವಾಗಿರುವುದು. ಅಂದರೆ-ಈ ಸತ್ಯಾಚಾರ್ಯೋಕ್ತ ಮತಾಯುರ್ದಾಯದಲ್ಲೂ ಪೂರ್ವೋಕ್ತ ಪ್ರಕಾರವೇ ವಕ್ರವರ್ಜ್ಯವಾಗಿ ಶತ್ರುಕ್ಷೇತ್ರದಲ್ಲಿದ್ದ ಗ್ರಹಕ್ಕೆ ತೃತೀಯಾಂಶ ಹರಣವನ್ನು, ಶುಕ್ರ ಶನಿಗಳನ್ನು ಬಿಟ್ಟು ಉಳಿದ ಗ್ರಹಕ್ಕೆ ಅರ್ಧಾಂಶ ಹರಣವನ್ನು, ಸರ್ವಾರ್ಧತ್ರಿಚರಣೇ ತ್ಯಾದ್ಯುಕ್ತವಾದ ವ್ಯಯಾದಿ ಹರಣವನ್ನು ಮಾಡಿ, ಈ ಶ್ಲೋಕದಲ್ಲಿ ಹೇಳಿದ ಪ್ರಕಾರ ಉಚ್ಚಸ್ಥಾನದಲ್ಲಿದ್ದ ಗ್ರಹಕ್ಕೂ ವಕ್ರಗತಿಯಲ್ಲಿದ್ದ ಗ್ರಹಕ್ಕೂ ಗಣಿತಾಗತವಾಗಿ ಬಂದ ಆಯುಸ್ಸು ೨ ರಿಂದ ಹೆಚ್ಚು ಗುಣಿಸಬೇಕು, ವರ್ಗೋತ್ತಮಾಂಶೆ ಸ್ವನವಾಂಶೆಯಲ್ಲಿದ್ದ ಗ್ರಹಕ್ಕೂ, ಸ್ವನವಾಂಶ ಸ್ವಕ್ಷೇತ್ರ, ಸ್ವದ್ರೇಕ್ಕಾಣದಲ್ಲಿದ್ದ ಗ್ರಹಕ್ಕೂ, ಗಣಿತಾಗತವಾಗಿ ಬಂದ ಆಯುರ್ದಾಯವನ್ನು ದ್ವಿಗುಣಮಾಡತಕ್ಕದ್ದು. ಈ ಸತ್ಯಾಚಾರ್ಯ ಮತದಲ್ಲಿ ಕ್ರೂರೋದಯ ಹರಣವಿಲ್ಲದ್ದರಿಂದ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತೆ. ॥೧೧॥

## ಕ್ರೂರೋದಯ ಹರಣನಿರ್ಣಯಃ

**ಮೂಲ॥** ಕಿಂತ್ವತ್ರಭಾಂಶೆ ಪ್ರತಿಮಂದದಾತಿ ವೀರ್ಯಾನ್ವಿತಾ ರಾಶಿಸಮಂಚ ಹೋರಾ। ಕ್ರೂರೋದಯೇ ಚಾಪಚಯಸ್ತನಾತ್ರ ಕಾರ್ಯಂಚನಾದ್ಯೈಃ ಪ್ರಥಮೋಪದಿಷ್ಟೈಃ ॥೧೨॥

**ಅವತಾರಿಕೆ॥** ಈ ಪ್ರಕಾರ ಸತ್ಯಾಚಾರ್ಯರ ಮತದಲ್ಲಿ ಗ್ರಹಾಯುರ್ದಾಯವನ್ನು ಹೇಳಿ, ಇದರಮೇಲೆ ಲಗ್ನಾಯುರ್ದಾಯ ಪ್ರಕಾರವೂ, ಕ್ರೂರೋದಯ ಹರಣ ನಿಷೇಧವೂ ಹೇಳಲ್ಪಡುತ್ತೆ.

**ಟೀಕು॥** ಕಿಂತು-ಮತ್ತು, ಅತ್ರ-ಈ ಸತಾಚಾರ್ಯೋಕ್ತಾಯುರ್ದಾಯದ, ಹೋರಾ-ಲಗ್ನಕ್ಕೆ, ಭಾಂಶಪ್ರತಿಮಂ-ನವಾಂಶ ರಾಶಿ ತುಲ್ಯವರ್ಷವನ್ನು, ದದಾತಿ-ಕೊಡುತ್ತದೆ. ಅದು ಹೇಗೆಂದರೆ-ಲಗ್ನದಲ್ಲಿ ಯಾವ ರಾಶಿ ನವಾಂಶ ಉದಯಿಸುತ್ತದೋ ಆ ರಾಶಿಗೆ ಪೂರ್ವಾರಾಶಿಯೆಂದರೆ ಮೇಷ ಮೊದಲುಗೊಂಡು ಎಣಿಸುವಾಗ, ಎಷ್ಟಾಗುವುದೋ ಅಷ್ಟು ಸಂವತ್ಸರಗಳು ವರ್ತಮಾನ ನವಾಂಶಗಳನ್ನು ಲಿಪ್ತಿಗಳಾಗಿ ಮಾಡಿ, ಆ ಲಿಪ್ತಿಗಳನ್ನು ೧೨ ರಿಂದ ಗುಣಿಸಿ ೨೦೦ ರಿಂದ ಭಾಗಮಾಡಿದರೆ ಮಾಸಗಳು ಬರುವುವು. ಶೇಷವನ್ನು ೩೦ ರಿಂದ ಗುಣಿಸಿ, ೨೦೦ ರಿಂದ ಭಾಗಿಸಲಾಗಿ ಬಂದ ಲಬ್ಧವೇ ದಿನಗಳು. ಆ ಶೇಷವನ್ನು ೬ ರಿಂದ ಗುಣಿಸಿ ೨೦೦ ರಿಂದ ಭಾಗಿಸಿದ ಲಬ್ಧವೇ ದಿನಗಳು, ಆ ಶೇಷವನ್ನು ೬೦ ರಿಂದ ಗುಣಿಸಿ ಬಂದ ಲಬ್ಧವು ವಿಘಳಿಗೆಯಾಗಿರುವುದು, ಇದು ಲಗ್ನಾಯುರ್ದಾಯವಾಗಿರುವುದು. ಈ ಲಗ್ನಾಯುರ್ದಾಯವು ಸತ್ಯೋಕ್ತೇರ್ಗ್ರಹ ಮಿಷ್ಟಂ ಲಿಪ್ತೀಕೃತ್ವಾ - ಎಂದು ಗ್ರಹಗಳಿಗೆ ಹೇಳಿದ ಪ್ರಕಾರವೇ ಬರುತ್ತದೆ. ಆ ಲಗ್ನವು, ವೀರ್ಯಾನ್ವಿತಾ-ಹೋರಾಸ್ವಾಮಿ ಗುರುಜ್ಞ ವೀಕ್ಷಿಯುತಾ ನಾನ್ಯೈಸ್ಚ ವೀರ್ಯೋತ್ಕಟಾ' ಎಂಬುವ ಪ್ರಕಾರ ಎಲ್ಲಾ ವಿಧವಾಗಿಯೂ ಬಲಯುಕ್ತವಾಗಿದ್ದರೆ, ರಾಶಿಸ ಮಂಚ-ಲಗ್ನರಾಶಿ ಸಮಾನ ವರ್ಷಗಳನ್ನು, ದದಾತಿ-ಕೊಡುತ್ತದೆ. ಅದು ಹೇಗೆಂದರೆ-ಆ ಲಗ್ನರಾಶಿಗೆ ಪೂರ್ವರಾಶಿಗಳಲ್ಲಿ ಮೇಷ ಮೊದಲುಗೊಂಡು ಗಣನೆಮಾಡುವಾಗ ಎಷ್ಟು ಸಂಖ್ಯೆಯಾಗುವುದೋ ಅಷ್ಟು ಸಂವತ್ಸರಗಳಾಗುವುದು. ಲಗ್ನದಲ್ಲಿ ಭುಕ್ತ ಭಾಗಾದಿಗಳನ್ನು ಲಿಪ್ತಿಮಾಡಿ ಆ ಲಿಪ್ತಿಗಳನ್ನು ೧೨ ರಿಂದ ಗುಣಿಸಿ, ೧,೮೦೦ ರಿಂದ ಭಾಗಮಾಡಲಾಗಿ ಬಂದ ಲಬ್ಧವು ಮಾಸಗಳಾಗುವುದು. ಶೇಷವನ್ನು ೧೨ ರಿಂದ ಗುಣಿಸಿ ೧,೮೦೦ ರಿಂದ ಭಾಗಮಾಡಲಾಗಿ ಬಂದ ಲಬ್ಧವು ದಿನಗಳಾಗುವುದು, ಶೇಷವನ್ನು ೬೦ ರಿಂದ

ಗುಣಿಸಿ ೧,೮೦೦ ರಿಂದ ಭಾಗಮಾಡಿದರೆ ಶೇಷ ವಿಘಳಿಗೆಗಳಾಗುವುದು, ಇದು ಲಗ್ನಾಯುರ್ದಾಯವಾಗುವುದು. ಲಗ್ನವು ಬಲಹೀನನಾಗಿದ್ದರೆ ಭಾಂಶಪ್ರತಿಮಂದದಾತಿ, ಎಂಬುವ ನ್ಯಾಯಪ್ರಕಾರ ನವಾಂಶ ರಾಶಿ ಸಮವಾಗಿ ಲಗ್ನಾಯುರ್ದಾಯವನ್ನು ತಿಳಿಯತಕ್ಕದ್ದು. ಕ್ರೂರೋದಯೇ-ಲಗ್ನದಲ್ಲಿ ಪಾಪಗ್ರಹವಿದ್ದರೆ, ಅಪಚಯಃ-ಸಾರ್ಧೋದಿತೋದಿತ ನವಾಂಶ ಹೃತಾತ್ಸಮಸ್ತಾತ್, ಎಂದು ಮಯ ಯಮನಾದಿಗಳು ಹೇಳಿರುವ ಪ್ರಕಾರ ಕ್ರೂರೋದಯ ಹರಣವು, ಅತ್ರ-ಈ ಸತ್ಯಾಚಾರ್ಯ ಮತದಲ್ಲಿ, ನ-ಇಲ್ಲ, ಪ್ರಥಮೋಪದಿಷ್ಟೈಃ-ಮೊದಲು ಹೇಳಲ್ಪಟ್ಟ, ಅಬ್ದೈಃ-ನವತಿಥಿ ವಿಷಾಯಶ್ಚ ಭೂತರುದ್ರೈಃ ಎಂದು ಹೇಳಿದ ಮಯಯವನ ಪರಾಶರಾದ್ಯಾಯುರ್ವರ್ಷದಿಂದ ಗ್ರಹಾದಯಂ ಪರಮಾಯುಷಸ್ವರಾಂಶಂ ಎಂಬುವ ಜೀವಶರ್ಮಾಯುರ್ವರ್ಷದಿಂದ, ಕಾರ್ಯಂ-ತ್ರೈರಾಶಿಕ ಮಾಡತಕ್ಕದ್ದು. ಅತ್ರ-ಈ ಸತ್ಯಾಚಾರ್ಯಾಯುರ್ದಾಯದಲ್ಲಿ, ನ-ಇಲ್ಲ, ಕೆಲವರು, ಪ್ರತಿಮೋಪತಿಷ್ಟೈಃ-ಪೂರ್ವೋಕ್ತವಾದ, ಅಬ್ದೈಃ- ಮಯಯುವನಾದ್ಯುಕ್ತ ವರ್ಷದಿಂದಲೂ, ಜೀವಶರ್ಮಾಯುರ್ವರ್ಷದಿಂದಲೂ, ನಕಾರ್ಯಂ- ಆಯುರ್ದಾಯವನ್ನು ಮಾಡಕೂಡದು, ಮತ್ತು ಸತ್ಯೋಕ್ತೇರ್ಗ್ರಹಮಿಷ್ಟಂ-ಎಂಬುವ ನ್ಯಾಯಪ್ರಕಾರ ಆಯುರ್ದಾಯ ಮಾಡತಕ್ಕದ್ದೆಂದು ಅರ್ಥ ಹೇಳಿದರು. ಆ ಪ್ರಕಾರ ಭಟ್ಟೋತ್ಪಲಾಚಾರ್ಯರು ಪೂರ್ವೋಕ್ತಾಯುರ್ದಾಯವನ್ನು ನಿಷೇಧಿಸಲಿಲ್ಲ. ಪಕ್ಷಾಂತರವನ್ನಂಗೀಕರಿಸಿ ವ್ಯಾಖ್ಯಾನ ಮಾಡಿರುವರು.

## ಸತ್ಯಾಚಾರ್ಯ ಮತಾಂಗೀಕಾರ

ಮೂಲ।। ಈ ಸತ್ಯೋಪದೇಶೋ ವರಮತ್ರ ಕಿಂತು ಕುರ್ವಂತ್ಯಯೋಗ್ಯಂ ಬಹುವರ್ಗಣಾಭಿಃ । ಆಚಾರ್ಯಕಂತ್ವತ್ರ ಬಹುಘ್ನತಾಯಾ ಮೇಕಂತು ಯದ್ಭೂರಿತಂ ದೇವಕಾರ್ಯಂ ।।೧೩।।

ಅವತಾರಿಕೆ।। ಈ ಪ್ರಕಾರ ವರಾಹಮಿಹಿರಾಭಟ್ಟಾಚಾರ್ಯರು ಮಯಮಣೀತ್ಥಾದಿ ಮತವನ್ನು, ಜೀವಶರ್ಮ ಮತವನ್ನು, ಸತ್ಯಮತವನ್ನು ಉಪನ್ಯಾಸಮಾಡಿ ಆ ಮೂರು ಮತಗಳಲ್ಲಿ ಸತ್ಯಾಚಾರ್ಯ ಮತವನ್ನು ಮುಖ್ಯವಾಗಿ ಅಂಗೀಕರಿಸಿ, ಅದರಲ್ಲಿ ಇತರರ ಮತವನ್ನು ನಿಷೇಧಿಸಿರುವ ವಿಷಯ ಹೇಳಲ್ಪಡುತ್ತೆ.

ಟೀಕು।। ಅತ್ರ - ಆಯುರ್ದಾಯಾ ನಯನವಿಷಯದಲ್ಲಿ ಈ ಮೂರು ಮತಗಳಲ್ಲೂ, ಸತ್ಯೋಪದೇಶಃ- ಸತ್ಯಾಚಾರಮತವು, ವರಂ-ಶ್ರೇಷ್ಠವಾದದ್ದೆಂದು,

ಕಿಂತು-ಮತ್ತು, ಈ ಸತ್ಯಾಚಾರ್ಯಯುರ್ದಾಯುವನ್ನು ಕೆಲವರು, ಬಹುವರ್ಗಾಣಾಭಿಃ-ಹೆಚ್ಚು ಗುಣಗಳಿಂದ ಅಯೋಗ್ಯಂ-ಅಯೋಗ್ಯವಾಗಿರುವುದನ್ನು, ಕುರ್ವಂತಿ-ಮಾಡುತ್ತಾರೆ. ಅಂದರೆ ಅನಾವಶ್ಯಕವಾದ ಅನೇಕ ಗುಣಗಳನ್ನು ಸೇರಿಸಿರುವರು. ಅದು ಹೇಗೆಂದರೆ- ಸ್ವತುಂಗವಕ್ರೋಪಗತ್ಯೈ ಸ್ತ್ರಿಸಂಗುಣಂ, ಎಂಬುವ ನ್ಯಾಯದಿಂದ ಸ್ವೋಚ್ಚದಲ್ಲಿದ್ದ ಗ್ರಹಕ್ಕೆ ಆಯುರ್ದಾಯಮಾಡಿ ತ್ರಿಗುಣ ಮಾಡುವಿಕೆ. ಆ ಗ್ರಹವೇ ವಕ್ರಿಸಿದ್ದರೆ ಪುನಃ ತ್ರಿಗುಣ ಮಾಡುವಿಕೆ, ಆ ಗ್ರಹವೇ ಸ್ವಕ್ಷೇತ್ರದಲ್ಲಿದ್ದರೆ ದ್ವಿಗುಣಮಾಡಿ, ಆ ಗ್ರಹವೇ ಸ್ವನವಾಂಶದಲ್ಲಿದ್ದರೆ ದ್ವಿಗುಣಮಾಡಿ, ಆ ಗ್ರಹವೇ ಸ್ವದ್ರೇಕ್ಕಾಣದಲ್ಲಿದ್ದರೆ ಪುನಃ ದ್ವಿಗುಣಮಾಡಿ- ಈ ಪ್ರಕಾರ ಸತ್ಯಾಚಾರ್ಯ ಮತ ಪ್ರಕಾರ ಆಯುರ್ದಾಯವನ್ನು ಬಹುಗುಣವಾಗಿ ಸೇರಿಸಿರುತ್ತಾರೆ. ಪುನಃ ಈ ಆಯುರ್ದಾಯ ಅಧಿಕ ಮಾಡುವುದಕ್ಕೆ ಬಹುಘ್ನತಾಯಾಂ ಪ್ರಾಪ್ತಾಯಾಂ-ಅನೇಕವಾದ-ದ್ವಿಗುಣತ್ವ ತ್ರಿಗುಣತ್ವ ಪ್ರಾಪ್ತವಾದರೆ ಅದರಲ್ಲಿ ಯತ್-ಯಾವುದು ಭೂರ-ಅಧಿಕವಾಗಿರುವುದೋ, ತತ್-ಆ ಗುಣವು, ಏಕಮೇವ-ಒಂದೇ, ಕಾರ್ಯಂ-ಮಾಡತಕ್ಕದ್ದು. ಇದು ಆಚಾರ್ಯಕಂ-ಪೂರ್ವಗ್ರಂಥಾಚಾರ್ಯ ಸಂಪ್ರದಾಯಸಿದ್ಧವಾಗಿರುವುದು. ಅದು ಹೇಗೆಂದರೆ-ಒಂದು ಗ್ರಹಕ್ಕೆ ಸ್ವಕ್ಷೇತ್ರ ದ್ವಿಗುಣತ್ವವು ಸ್ವನವಾಂಶ್ಯವು ದ್ವಿಗುಣತ್ವವು ಪ್ರಾಪ್ತಿಯಾದರೆ ಒಂದುಸಾರಿ ದ್ವಿಗುಣ ಮಾಡತಕ್ಕದ್ದು. ಒಂದು ದ್ವಿಗುಣವು ಒಂದು ತ್ರಿಗುಣವು ಪ್ರಾಪ್ತಿಯಾದರೆ ಅವೆರಡರಲ್ಲಿ ಅಧಿಕವಾಗಿರುವ ತ್ರಿಗುಣತ್ವವೇ ಮಾಡತಕ್ಕದ್ದು. ಒಂದು ಗ್ರಹಕ್ಕೆ ಎರಡು ತ್ರಿಗುಣತ್ವ ಮಾಡಬೇಕಾದರೆ, ಒಂದುಸಾರಿ ಮಾತ್ರ ತ್ರಿಗುಣ ಮಾಡತಕ್ಕದ್ದು. ಈ ಪ್ರಕಾರವೇ ಚಕ್ರಪಾತಹರಣವಲ್ಲದೆ ಉಳಿದ ಹರಣಗಳಲ್ಲಿ ಅನೇಕ ವಿಧವಾದ ಹರಣಗಳು ಒಂದು ಗ್ರಹಕ್ಕೆ ಸಂಭವಿಸಿದರೆ ಅದರಲ್ಲಿ ಅಧಿಕವಾದ ಹರಣ ಒಂದು ಮಾತ್ರವೇ ಮಾಡತಕ್ಕದ್ದು. ಅದು ಹೇಗೆಂದರೆ - ಈ ಸತ್ಯಾಚಾರ್ಯ ಮತದಲ್ಲಿ ನೀಚಸ್ಥಿತ ಗ್ರಹಕ್ಕೆ ಅರ್ಧಾಂಶ ಹರಣವಾಗದಾದ್ದರಿಂದ ಒಂದು ಗ್ರಹವು ನೀಚ ಕ್ಷೇತ್ರವಾಗಿಯೂ, ಶತ್ರುಕ್ಷೇತ್ರಗತವಾಗಿಯೂ, ಅಸ್ತಂಗತವಾಗಿಯೂ ಇದ್ದರೆ ಒಂದು ಅರ್ಧಾಂಶಹರಣ ಮಾಡಬೇಕು. ಈ ಪ್ರಕಾರ ಒಂದು ಗ್ರಹವು ಕೆಲವು ಹರಣಗಳು, ಕೆಲವು ಗುಣಗಳುಳ್ಳದ್ದಾಗಿ ಸಂಭವಿಸಿದರೆ ಅದರಲ್ಲಿ ಅಧಿಕವಾದ ಒಂದು ಹರಣಮಾಡಿ ಆಮೇಲೆ ಅಧಿಕವಾದ ಗುಣನಮಾಡತಕ್ಕದ್ದು. ಚಕ್ರಪಾತಹರಣವು, ಶತ್ರುಕ್ಷೇತ್ರಾದಿಹರಣವು, ಉಚ್ಚಾದಿ ದ್ವಿಗುಣತ್ವ ಪ್ರಾಪ್ತಿಯಾದರೆ ಮೊದಲು ಚಕ್ರಪಾತಹರಣಮಾಡಿ ಆಮೇಲೆ ಶತ್ರುಕ್ಷೇತ್ರಾದಿ ಹರಣಗಳಲ್ಲಿ ಅಧಿಕವಾದ ಒಂದು ಹರಣಮಾಡಿ ಆಮೇಲೆ ಅಧಿಕವಾದ ಗುಣನಮಾಡತಕ್ಕದ್ದು.

ಈ ವಿಷಯದಲ್ಲಿ-॥ಶ್ಲೋಕ॥ ರಾಶಿತುಲ್ಯಾಂಶ ಸಂಖ್ಯಾನಿ ಗ್ರಹೋವರ್ಷಾಣಿ ಯಚ್ಛತಿ॥ ಲಗ್ನಂಚೇತ್ಸಬಲಂತಾನಿ ಭುಕ್ತರಾಶಿ ಸಮಾನಿತು ॥೨೩॥ ಮಾಸಾದ್ಯಾನಯನಂಕಾರ್ಯ ಮನುಪಾತಗತಂಪರಂ ॥ ಸರ್ವಾರ್ಥತ್ರಿ ಚತುರ್ಥಾಂಶಾ ವಾಮಪಂಚ ಷಡಂಶಕಾ ॥೨೪॥ ಹರಂತಿಪಾಪಾಸ್ಸ್ವದಾಯಾ ತ್ತದರ್ಧ ಮಿತರೇಗ್ರಹಾ । ವ್ಯಯಾಚ್ಯುತ್ರಾಪಹಾನಿಸ್ತು ಕಥಿತೋಯಂ ತಥಾಧ್ರುವಂ ॥ ಏಕಸ್ಮಿನ್ನೃಕ್ಷಗೇಷ್ಯೇವ ಕರೋತಿಬಲವಾನ್ಗ್ರಹಃ । ಶತ್ರುಕ್ಷೇತ್ರಗತಸ್ತ್ರ್ಯಂಶಂ ನೀಚೇರ್ಧಂ ಸೂರ್ಯಗಸ್ತಥಾ ॥೨೬॥ ಹಂತಿಸ್ವದಾಯಾದ್ದ್ವವಿಗೌ ನಸಿತಾದಿತ್ಯ ನಂದನೌ ॥ ನಚಾವನಿಸುತಶ್ಚಾಂಶಂ ಶತ್ರುಕ್ಷೇತ್ರಗತಸ್ತಥಾ ॥೨೭॥ ಧ್ರುವಾಪಹಾನಿಃ ಕರ್ತವ್ಯಾ ತತೋನ್ಯಾಸುಬಹುಷ್ವಪಿ॥ ಪ್ರಾಪ್ತಾಸ್ವೇಕೇಚಕರ್ತವ್ಯಾಯಾ ಸ್ಯಾತ್ತಾಸುಮಹತ್ತರಾ ॥೨೮॥ ತತಸ್ತುಗುಣಗಾಕಾರ್ಯಾಪ್ಯೇಕೇನ ಮಹತೀಂ ಸಕೃತ್ । ದ್ವಾಭ್ಯಾಂವರ್ಗೋತ್ತಮೇಶಾಂಶೇ ಸ್ವದ್ರೇಕ್ಕಾಣೇಸ್ವಕೇಗ್ಯಹೇ ॥ ತ್ರಿಭಿರ್ವಕ್ರಗತಸ್ಯಾಥ ಸೋಚ್ಚರಾಶಿಗತಸ್ಯಚ । ಗ್ರಹದಾಯೋಧವತ್ಯೇವಂ ಶೋಧ್ಯಕ್ಷೇಪ ಕೃತಃಪ್ರಯಃ ॥೩೦॥ ಎಂದು ಗಾರ್ಗಿವಚನವಿರುತ್ತೆ. ಇಲ್ಲಿ ವರಾಹಮಿಹಿರಾಚಾರ್ಯರಿಂದ ಸತ್ಯಾಚಾರ್ಯ ಮತವಾದ ಅಂಶಾಯುರ್ದಾಯವನ್ನು ಮುಖ್ಯವಾಗಿ ಅಂಗೀಕರಿಸಿ, ಮಣಿತ್ಥಾದಿಗಳು ॥ಶ್ಲೋಕ॥ ವಿಲಗ್ನಭೇ ಬಲೋಪೇತೇ ಶುಭ ದೃಷ್ಟೇಂಶಸಂಭವಃ । ರವೌಪಿಂಡೋದ್ಭವಂಕುರ್ಯಾದಿತಿ ಭೂಯುಶ್ಚಿರಂತನಾಃ ॥೩೧॥ ಎಂದು ಹೇಳಿರುವರಾದ್ದರಿಂದ, ಜನ್ಮಲಗ್ನ ಬಲಯುಕ್ತವಾಗಿದ್ದರೆ ಅಂಶಯುರ್ದಾಯವನ್ನೂ, ಜನ್ಮಕಾಲದಲ್ಲಿ ಸೂರ್ಯನು ಬಲವಂತನಾಗಿದ್ದರೆ ಮಯಯುವನಾದ್ಯುಕ್ತ ಪಿಂಡಾಯುರ್ದಾಯವನ್ನೂ ಮಾಡಬೇಕೆಂದು ಭಟ್ಟೋತ್ಪಲರಿಂದ ತಿಳಿಸಲ್ಪಟ್ಟಿರುತ್ತೆ. ಕೆಲವರು ಈ ಅಂಶಾಯುಃ ಪಿಂಡಾಯುವನ್ನು ಮಾಡಿ, ಆವೆರಡಲ್ಲಿ ಯಾವುದು ಅಲ್ಪಾಯುವಾಗುವುದೋ ಅದನ್ನು ಕಡೆಯ ಅಂತರ್ದಶೆಯ ಮೂಲದ ಶಾಪತಿಗೆ ಮಿತ್ರಗ್ರಹಾಂತರ್ದಶೆಯಾಯಿತೆಂದು ಅದರಂತೆ ಬದುಕುವನೆಂದು, ಶತ್ರುಗ್ರಹಾಂತರ್ದಶೆಯಾದರೆ ಆಗಲೇ ಮರಣವಾಗುವುದೆಂದು, ಮಧ್ಯಗ್ರಹಾಂತರ್ದಶೆಯಾದರೆ ಶರೀರಪೀಡೆಯಾಗುವುದೆಂದು ಹೇಳಿದರು ॥೧೩॥

## ಅಮಿತಾಯುರ್ಯೋಗ

ಮೂಲ॥ ಗುರುಶಶಿಸಹಿತೇ ಕುಳೀರಲಗ್ನೇ ಶಶಿತನಯೇ ಭೃಗುಜೇಚ ಕೇಂದ್ರಯಾತೇ । ಭವರಿಪುಸಹಜೋಪಗೈಶ್ಚ ಶೇಷೈರಮಿತ ಮಹಾಯುರನು ಕ್ರಮಾದ್ವಿನಾಸ್ಯಾತ್ ॥೧೪॥

ಟೀಕಾ|| ಅಮಿತಾಯುರ್ಯೋಗವು ಹೇಳಲ್ಪಡುತ್ತೆ. ಕುಳೀರಲಗ್ನೇ-ಜನ್ಮ ಲಗ್ನವಾದ ಕರ್ಕಾಟಕವು, ಗುರುಶಶಿಸಹಿತೇ-ಗುರುಚಂದ್ರರಿಂದ ಕೂಡಿರುವಾಗ, ಶಶಿತನಯೇ-ಬುಧನು, ಭೃಗುಜೇಚ-ಶುಕ್ರನು, ಕೇಂದ್ರಯಾತೇ-ಕೇಂದ್ರಸ್ಥಾನವನ್ನು ಹೊಂದಿರುವಾಗ, ಭವರಿಪುಸಹಜೋಪಗೈ-ಏಕಾದಶ ತೃತೀಯ ಷಷ್ಠಸ್ಥಾನಗಳಲ್ಲಿ, ಶೇಷೈ-ಉಳಿದ ರವಿ ಕುಜ ಶನಿಗಳಿರುವ, ಇಹ-ಈ ಯೋಗದಲ್ಲಿ ಹುಟ್ಟಿದವನಿಗೆ, ಅನುಕ್ರಮಾದ್ವಿನಾಪಿ-ಗಣಿತಕ್ರಮವಿಲ್ಲದೆ, ಅಮಿತಂ-ಅಪರಿಮಿತವಾದ, ಆಯುಃ-ಆಯುಸ್ಸು, ಸ್ಯಾತ್-ಉಂಟಾಗುವುದು.

ತಾ|| ಅಂದರೆ ಕರ್ಕಾಟಕ ಲಗ್ನವು ಜನ್ಮ ಲಗ್ನವಾಗಿ ಅಲ್ಲಿ ಗುರು ಚಂದ್ರರಿದ್ದು, ಬುಧ-ಶುಕ್ರರು ಕೇಂದ್ರಸ್ಥಾನದಲ್ಲಿದ್ದು, ರವಿ-ಕುಜ-ಶನಿಗಳು ಏಕಾದಶ ಷಷ್ಠ ತೃತೀಯದಲ್ಲಿರುವಾಗ ಹುಟ್ಟಿದವನು ಗಣಿತಕ್ರಮವಿಲ್ಲದೆ ಅಪರಿಮಿತಾಯುವಾಗುವನೆಂದು, ಮತ್ತು ಈ ಯೋಗದಲ್ಲಿ ಹುಟ್ಟಿದವನಿಗೆ ಆಯುರ್ದಾಯ ಗಣಿತ ಮಾಡಬೇಕಾದದಿಲ್ಲವೆಂದು ತಾತ್ಪರ್ಯ.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ<br>ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಆಯುರ್ದಾಯ<br>ನಿರೂಪಣಂನಾಮ ಸಪ್ತಮ ಪ್ರಕರಣಂ

ಇತಿ ಶ್ರೀಮದ್ವೈತಮಾನ್ವಯ ಪಯಃಪಾರವಾರ ರಾಕಾ ಸುಧಾಕರಾಯಮಾನ<br>ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ<br>ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ<br>ಸೋದಾಹರಣ ಯುಕ್ತಾಯಾಂ ಆಯುರ್ದಾಯ<br>ವಿಚಾರ ನಿರೂಪಣಂ ನಾಮ<br>ಸಪ್ತಮ ಪ್ರಕರಣಂ.

## ೮ನೇ ದಶಾಂತರ್ದಶಾ ಪ್ರಕರಣಂ

ಅವತಾರಿಕೆ ॥ ಈ ಪ್ರಕರಣದಲ್ಲಿ ಜಾತಕನಿಗೆ ಗ್ರಹಗಳು ಫಲ ಕೊಡುವ ಕಾಲವಾದ ದಶಾಕಾಲವನ್ನು, ಆ ದಶಾಕಾಲದಲ್ಲಿ ಅವರಫಲಕ್ಕನುಸಾರವಾಗಿ ಫಲ ಕೊಡುವ ಅಂತರ್ದಶಾಕಾಲವನ್ನು ಮತ್ತು ಯಾವ ಕಾಲದಲ್ಲಿ ಸುಖದುಃಖ ಸೂಚಕವಾದ ಫಲಪ್ರಾಪ್ತಿಯಾಗುತ್ತೆಂಬುದನ್ನೂ ತಿಳಿಯುವುದೇ ಈ ಪ್ರಕರಣದ ಮುಖ್ಯೋದ್ದೇಶವಾಗಿರುತ್ತೆ. ಈ ಪ್ರಕಾರ ಇರುವುದರಲ್ಲಿ ಜಾತಕನಿಗೆ ಯಾವ ಯಾವ ಗ್ರಹಗಳಿಂದ ಎಷ್ಟು ಆಯುಸ್ಸು ಬರುವುದೋ ಅದೇ ಆ ಗ್ರಹಗಳ ದಶೆಯಾಗಿರುವುದೊ, ಅದರಲ್ಲಿ ಯಾವಯಾವ ಸ್ಥಾನಗಳಲ್ಲಿದ್ದ ಗ್ರಹಗಳ ಭುಕ್ತಿಗಳು ಬರುವುದೋ, ಆ ವಿಷಯವೂ ಸ್ಪಷ್ಟಪಡಿಸಿ ಹೇಳಲ್ಪಡುತ್ತೆ.

ಮೂಲ॥ ಉದಯರವಿ ಶಶಾಂಕ ಪ್ರಾಣಿಕೇಂದ್ರಾದಿಸಂಸ್ಥಾಃ । ಪ್ರಥಮವಯಸಿ ಮಧ್ಯೇಂತೇಚದದ್ಯುಃ ಫಲಾನಿ॥ ನಹಿನಫಲವಿಪಾಕಃ ಕೇಂದ್ರ-ಸಂಸಾದ್ಯಭಾವೇ। ಭವತಿಹಿ ಫಲಪಕ್ತಿಃ ಪೂರ್ವಮಾಪೋಕ್ಲಿಮೇಪಿ ॥೧॥

ಟೀಕು॥ ಉದಯರವಿಶಶಾಂಕ ಪ್ರಾಣಿಕೇಂದ್ರಾದಿ ಸಂಸ್ಥಾ- ಉದಯ- ಜಾತಕನ ಜನ್ಮಲಗ್ನವೆ ಶರೀರವೆನ್ನಿಸಿಕೊಳ್ಳುವುದು, ಆ ಶರೀರವಾದ ಲಗ್ನವು, ರವಿಃ-ಸೂರ್ಯನು, (ಸೂರ್ಯ ಆತ್ಮಜಗತಸ್ತಸ್ಥುಷಶ್ಚ, ಇತಿ ಋಗ್ವೇದಶ್ರುತಿಃ) ಶಶಾಂಕ-ಜಾತಕನ ಮನಸ್ಸಾದ ಚಂದ್ರನು, ಈ ಲಗ್ನ ರವಿ-ಚಂದ್ರರಲ್ಲಿ, ಪ್ರಾಣಿ-ಅತ್ಯಂತ ಬಲಿಷ್ಠವಾದದ್ದು ಯಾವುದೋ, ಅದರ ದಶೆ (ಫಲಪರಿಪಾಕಕಾಲ) ಜಾತಕನಿಗೆ ಜನನಾದಿಯಾಗಿ ಪ್ರಥಮ ದಶೆಯಾಗಿರುತ್ತೆ. ನಂತರ ಎರಡನೇ ದಶೆ ತಿಳಿಯತಕ್ಕ ರೀತಿ ಹೇಗೆಂದರೆಃ- ಆ ಪ್ರಥಮ ದಶೆ ಮೇಲೆ ಹೇಳಲ್ಪಟ್ಟ ಮೂರರಲ್ಲಿ ಯಾರದಾದರೂ ಪ್ರಥಮ ದಶೆಯಾಗುತ್ತಷ್ಟೆ. ಆ ದಶಾಧಿಗತಿಗೆ ಕೇಂದ್ರಾದಿ ಸಂಸ್ಥಾಃ- ಇಲ್ಲಿ ಆದಿಶಬ್ದದಿಂದ, ಮೊದಲು ಕೇಂದ್ರದಲ್ಲಿರುವ ಗ್ರಹಗಳು (ಅಂದರೆ ೪-೭-೧೦ ಪಣಪರ ೨-೫-೮-೧೧ ಆಪೋಕ್ಲಿಮ ೩-೬-೯-೧೨ ಈ ಸ್ಥಾನಗಳೆಂದು ಸಂಕೇತವು) ಅಂದರೆ ಕೇಂದ್ರದಲ್ಲಿರುವ ಗ್ರಹಗಳು, ಪ್ರಥಮ ವಯಸಿ ಆಯುಷ್ಯ ಕಾಲದ ಮೂರನೆ ಒಂದು ಭಾಗದೊಳಗೆ, ಫಲಾನಿದದ್ಯು-ತಮ್ಮ ತಮ್ಮ ಶುಭಾಶುಭ ಫಲಗಳನ್ನು ಕೊಡುತ್ತಾರೆ. ಪಣಪರದಲ್ಲಿರುವ ಗ್ರಹಗಳು, ಆಯುಷ್ಯಕಾಲದಲ್ಲಿ ಮೂರು ಭಾಗಗಳನ್ನು ಮಾಡಿದ್ದರಲ್ಲಿ

ಎರಡನೇ ಭಾಗ ಯಾವುದು ಬರುತ್ತದೆಯೋ ಆ ಭಾಗವೇ ಮಧ್ಯಮಯಸ್ಸಾಗಿ ರುತ್ತೆಯಾದ್ದರಿಂದ, ಆಗ್ಯೆ, ಮಧ್ಯೇ-ಮಧ್ಯವಯಸ್ಸಿನಲ್ಲಿ, ಫಲಾನಿದದ್ಯುಃ-ಫಲಕೊಡುತ್ತಾರೆ. ಅಪೋಕ್ಲೀಮದಲ್ಲಿರುವ ಗ್ರಹಗಳು, ಅಂತ್ಯೇ-ಅಂತ್ಯ ವಯಸ್ಸಂದರೆ ಆಯುಷ್ಯ ಕಾಲದಲ್ಲಿ ಮೂರನೇ ಭಾಗದಲ್ಲಿ, ಫಲಾನಿದದ್ಯುಃ-ಫಲ ಕೊಡುತ್ತಾರೆ. ಕೇಂದ್ರ ಸಂಸ್ಥಾದ್ಯಭಾವೇ-ಆ ಪ್ರಥಮ ದಶಾಧಿಪತಿಗೆ ಕೇಂದ್ರದಲ್ಲಿ ಗ್ರಹವಿಲ್ಲದೆಹೋದರೆ, ಫಲವಿಪಾಕಃ-ಸುಖದುಃಖ ಸೂಚಕವಾದ ಫಲ ಕೊಡುವ ಕಾಲವು, ನಹಿನ-ಇಲ್ಲವೆಂದು ಹೇಳಬೇಕಾದ್ದಿಲ್ಲವಷ್ಟೆ. (ಅಂದರೆ ಫಲ ಕೊಡುವ ಕಾಲವಿದೆಯೆಂದು ಭಾವವಾಗುತ್ತದೆ). ಫಲಪಕ್ತಿ-ಫಲ ಕೊಡುತಕ್ಕಂಥಾ ದಶಾ ಕಾಲವು ಪೂರ್ವಂ-ಆದಿಯಲ್ಲಿಯೇ, ಅಪೋಕ್ಲಿಮೇಪಿ-ಅಪೋಕ್ಲಿಮಸ್ಥಾನದಲ್ಲಿರುವ ಗ್ರಹಗಳಿಂದಲೇ ಭವತಿಹಿ-ಉಂಟಾಗುತ್ತದೆ.

ತಾ॥ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಮತ್ತು ಲಗ್ನ ಈ ಎಂಟು ಗ್ರಹಗಳೂ ದಶಾಧಿಪತಿಗಳಾಗುವರು. ಈ ಎಂಟು ಗ್ರಹಗಳಲ್ಲಿ ಯಾವಯಾವ ಗ್ರಹಗಳು ಎಷ್ಟು ಆಯುರ್ದಾಯವನ್ನು ಸ್ಥಿರೀಕರಣವಾಗಿ ಕೊಟ್ಟಿರುವರೋ, ಅಷ್ಟುಕಾಲ ಆ ಗ್ರಹಗಳ ದಶಾಕಾಲವೆಂದರಿಯಬೇಕು. ಆ ದಶೆಗಳಲ್ಲಿ ಪೂರ್ವಾಪರ ತತ್ವರಕ್ರಮ ಹೇಗೆಂದರೆ-ಜಾತಕನಿಗೆ ಜನ್ಮಕಾಲ ಲಗ್ನ, ಸೂರ್ಯ, ಚಂದ್ರ ಈ ಮೂರರಲ್ಲಿ ಯಾರಿಗೆ ಅಧಿಕವಾದ ಬಲ ಬಂದಿರುತ್ತದೋ, ಆ ದಶಾ ಪರಿಪಾಕಕಾಲವೇ ಮೊದಲನೇ ದಶೆಯಾಗಿರುವುದು. ಅನಂತರ ಆ ಮೊದಲನೇ ದಶಾಧಿಪತಿಗೆ ಕೇಂದ್ರ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ಬರುತ್ತವೆ. ಅನಂತರ ಆ ಮೊದಲನೇ ದಶಾಧಿಪತಿಗೆ ಪಣಪರಸ್ಥಾನಗಳಲ್ಲಿರುವ ದಶೆಗಳು ಬರುತ್ತವೆ. ಅನಂತರ ಆ ಮೊದಲನೇ ದಶಾಧಿಪತಿಗೆ ಅಪೋಕ್ಲಿಮ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ಪ್ರಾರಂಬವಾಗುತ್ತದೆ.

ಮೊದಲನೇ ದಶಾಧೀಶನಿಗೆ ಕೇಂದ್ರಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ ಆ ಮೊದಲನೆ ದಶಾಧಿಪತಿಗೆ ಪಣಪರಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು. ಆ ಬಳಿಕ ಮೊದಲನೇ ದಶಾಧೀಶನಿಗೆ ಅಪೋಕ್ಲಿಮ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ಬರುತ್ತವೆ.

ಮೊದಲನೇ ದಶಾಧಿಪತಿಗೆ ಕೇಂದ್ರ, ಪಣಪರ ಈ ಎರಡು ಸ್ಥಾನಗಳಲ್ಲಿ ಗ್ರಹ ಗಳೇ ಇಲ್ಲದಿದ್ದರೆ, ಆ ಮೊದಲನೆಯ ದಶೆಯಾದ ಬಳಿಕ ಅಪೋಕ್ಲಿಮ ಸ್ಥಾನ ಗಳಲ್ಲಿರುವ ಗ್ರಹಗಳ ದಶೆಗಳು ಬರುತ್ತವೆ.

ಮೊದಲನೇ ದಶಾಧಿಪತಿಗೆ ಕೇಂದ್ರಗಳಲ್ಲಿಯೂ, ಅಪೋಕ್ಲಿಮಗಳಲ್ಲಿಯೂ ಗ್ರಹ ಗಳಿದ್ದರೆ ಮೊದಲನೇ ದಶೆಯಾದ ಬಳಿಕ ಕೇಂದ್ರಗಳಲ್ಲಿರುವ ಗ್ರಹಗಳ ದಶೆ, ಅನಂತರ ಅಪೋಕ್ಲಿಮ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ಬರುತ್ತವೆ.

ಮೊದಲನೇ ದಶಾಧಿಪತಿಗೆ ಕೇಂದ್ರಗಳಲ್ಲಿ ಮಾತ್ರವೇ ಗ್ರಹಗಳಿದ್ದರೆ ಪ್ರಥಮ ದಶೆಯಾದನಂತರ ಕೇಂದ್ರಗಳಲ್ಲಿರುವ ಗ್ರಹಗಳ ದಶೆಗಳೇ ಬರುತ್ತವೆ.

ಪಣಪರದಲ್ಲಿ ಮಾತ್ರ ಗ್ರಹವಿದ್ದು, ಕೇಂದ್ರ ಅಪೋಕ್ಲಿಮಗಳಲ್ಲಿ ಗ್ರಹಗಳೇ ಇಲ್ಲದಿದ್ದರೆ ಪ್ರಥಮ ದಶೆಯಾದನಂತರ ಪಣಪರದಲ್ಲಿರುವ ಗ್ರಹಗಳ ದಶೆಗಳೇ ಬರುವವು.

ಈ ಮೇಲೆ ಹೇಳಲ್ಪಟ್ಟಿರುವ ಆರು ವಿಧಗಳಲ್ಲಿ ಬಲಾಧಿಕ ಗ್ರಹಕ್ಕೆ ಮೊದಲನೇ ದಶೆಯೂ, ನಂತರ ಅದಕ್ಕಿಂತ ಹೀನಬಲವಾದ ಗ್ರಹಕ್ಕೆ ಎರಡನೇ ದಶೆಯೂ ಈ ಪ್ರಕಾರ ಬಲನ್ಯೂನತ್ವವನ್ನನುಸರಿಸಿ ಉತ್ತರೋತ್ತರವಾಗಿ ಕ್ರಮವಾಗಿ ದಶೆಗಳು ಬರುತ್ತವೆ.

## ಉದಾಹರಣೆ

ಮೊದಲನೇ ದಶೆ-ಲಗ್ನ, ಚಂದ್ರ, ಸೂರ್ಯ ಈ ಮೂರರಲ್ಲಿ ಚಂದ್ರನೇ ಬಲಿಷ್ಠನಾಗಿರುವುದರಿಂದ ಮೊದಲನೇ ದಶೆಯೇ ಚಂದ್ರನಾಗಿರುವುದರಿಂದ, ಪ್ರಥಮದಶೆ ಮುಗಿದನಂತರ ಕೇಂದ್ರದಲ್ಲಿ ಗ್ರಹಗಳಿರುವುದರಿಂದ ಮೊದಲನೇ ದಶಾಧಿಪತಿಗೆ ಕೇಂದ್ರದಲ್ಲಿರುವ ಗ್ರಹಗಳ ದಶೆ ಬರಬೇಕಾಗಿರುತ್ತೆ. ಆದರೆ ಕೇಂದ್ರದಲ್ಲಿ ರವಿ-ಕುಜ-ಬುಧರಿರುತ್ತಾರೆ. ಈ ಮೂರು ಗ್ರಹಗಳಲ್ಲಿ ಸೂರ್ಯನು ಬಲಿಷ್ಠ, ಅವನಿಗಿಂತ ಬುಧನು ಹೀನಬಲಿಷ್ಠ, ಆ ಬುಧನಿಗಿಂತ ಕುಜನು ಹೀನ ಬಲವುಳ್ಳವನು, ಆದ್ದರಿಂದ ಪ್ರಥಮ ದಶೆಯಾದ ಬಳಿಕ ಕೇಂದ್ರಗಳಲ್ಲಿರುವ ರವಿ, ಬುಧ, ಕುಜರಲ್ಲಿ ಎರಡನೇ ದಶೆ ಸೂರ್ಯನದಾಗಿಯೂ, ಮೂರನೇ ದಶೆ ಬುಧನದಾಗಿಯೂ, ನಾಲ್ಕನೇ ದಶೆ ಕುಜನದಾಗಿಯೂ ಕಲ್ಪಿಸಬೇಕು.

ಮೊದಲನೇ ದಶಾಧಿಪತಿ ಪಣಪರದಲ್ಲಿ ಶುಕ್ರ, ಲಗ್ನ ಎರಡು ಗ್ರಹಗಳಿವೆ, ಅವುಗಳಲ್ಲಿ ಶುಕ್ರನೇ ಬಲಿಷ್ಠ, ಆದ್ದರಿಂದ ಪಣಪರದಲ್ಲಿದ್ದ ಗ್ರಹಗಳ ದಶೆ ಬರುವಾಗ ಮೊದಲು ಶುಕ್ರದಶೆಯಾಗಿಯೂ, ಎರಡನೇ ದಶೆ ಲಗ್ನದಶೆಯಾಗಿಯೂ ಬರುತ್ತದೆ.

ಮೊದಲನೇ ದಶಾಧಿಪತಿಗೆ ಅಪೋಕ್ಲಿಮ ಸ್ಥಾನದಲ್ಲಿ ಶನಿ-ಗುರು ಇವರಿಬ್ಬರು ಇದ್ದು ಇವರಲ್ಲಿ ಗುರು ಬಲಿಷ್ಠನಾದ್ದರಿಂದ ಅಪೋಕ್ಲಿಮಸ್ಥಾನಸ್ಥ ಗ್ರಹಗಳಲ್ಲಿ ಮೊದಲು ಗುರು ದೆಶೆ, ಅನಂತರ ಶನಿ ದಶೆಯು ಪ್ರಾರಂಭವಾಗುತ್ತದೆ. ಈ

ವಿಷಯದಲ್ಲಿ ಲಘುಜಾತಕೇ ।।ವರಾಹಮಿಹಿರಃ ।।ಶ್ಲೋಕ।। ಲಗ್ನಾರ್ಕಶಶಾಂಕಾನಾಂ। ಯೋಬಲವಾರ್ನ್ಸದ್ದಶಾಭವೇತ್ಪ್ರಥಮಾ।। ತತ್ಕೇಂದ್ರಪಣಪರಾಪೋಕ್ಲಿಮೋಪಗಾನಾಂ ಬಲಾಚ್ಚೇಷಾಃ ।। ಕೇಂದ್ರಾದಿ ಸ್ಥಾನಗಳಲ್ಲಿ ಉತ್ತರೋತ್ತರ ಬಲಹೀನವಾದರೆ ।।ಯವನಃ ।।ಶ್ಲೋಕ।। ನಿಶಾಕರಾದಿತ್ಯ ವಿಲಗ್ನಭಾನಾಂ ತತ್ಕಾಲ ಯೋಗದಧಿ-ಕಂಬಲಂಯಃ ।। ಬಿಭರ್ತಿತಸ್ಯಾದಿ ದಶಾತಶ್ಚ ಕೇಂದ್ರಾದಿಗಾ ನಾಂಚ ಬಲಕ್ರಮೇಣ।। ಪೂರ್ವಂತುಕೇಂದ್ರೋಪಗತಾಃ ಫಲಂತಿ ಮಧ್ಯೇನಯೇ ಪಣಪರಸ್ಥಲಸನ್ನಿವಿಷ್ಟಾಃ ।। ಆಪೋಕ್ಲಿಮಸ್ಥಾಃ ಫಲದಾವಯೋಂತ್ಯೇಯಥಾ ಬಲಂಸ್ತಂ ಸಮುಪೈತಿಪೂರ್ವಂ ।। ಎಂದುಕ್ತವಾಗಿರುತ್ತೆ. ಆದ್ದರಿಂದ ಈ ಕ್ರಮವನ್ನನುಸರಿಸಿ ಜಾತಕನಿಗುಂಟಾಗುವ ಶುದ್ಧಾಯುರ್ದಾಯದಲ್ಲಿ ದಶಾಕ್ರಮ ನಿರ್ಣಯಮಾಡಿಕೊಳ್ಳತಕ್ಕದ್ದು.

**ಮೂಲ।। ಆಯುಃಕೃತಂ ಯೇನಹಿಯತ್ತದೇವ । ಕಲ್ಪ್ಯಾದಶಾ ಸಾ ಪ್ರಬಲಸ್ಯ ಪೂರ್ವಾ ।। ಸಾಮ್ಯೇಬಹೂನಾಂ ಬಹುವರ್ಷದಸ್ಯ । ತೇಷಾಂಚ ಸಾಮ್ಯೇ ಪ್ರಥಮೋದಿತಸ್ಯ ।।೨।।**

ಅವತಾರಿಕೆ ।। ಜಾತಕನಿಗೆ ದಶಾಕಾಲದ ಅನುಕ್ರಮವಾಗಿ ಪ್ರಾಪ್ತಿಯಾಗುವ ಕಾಲವು ಮೊದಲನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತೆ. ಆದರೆ ಕೇಂದ್ರಾದಿ ಸ್ಥಾನಗಳಲ್ಲಿ ಗ್ರಹಗಳಿದ್ದು, ದಶಾಸಾಮ್ಯವಾದರೂ, ಬಲಸಾಮ್ಯವಾದರೂ, ಬಲಾಧಿಕವಾದರೂ ಯಾರದುಶೆ ಮೊದಲನೇ ದಶೆಯಾದಬಳಿಕ ಬರುವುದೋ ಆ ದಶಾಕ್ರಮವು ಈ ಶ್ಲೋಕದಿಂದ ಹೇಳಲ್ಪಡುತ್ತೆ.

ಟೀಕು।। ಯೇನ-ಯಾವ ಗ್ರಹದಿಂದ, ಯದಾಯುಃ ಕೃತಂ-ಎಷ್ಟು ವರ್ಷ, ಮಾಸ, ದಿವಸ, ಘಟಿಕಾ ವಿಘಟಿಕಾಂತ್ಯವಾಗಿ ಆಯುರ್ದಾಯ ಸ್ಥಿರೀಕರಣ ಮಾಡಲ್ಪಟ್ಟಿತೋ, ತದೇವಹಿ-ಅಷ್ಟು ಸಂವತ್ಸರಾದಿಗಳೇ, ತಸ್ಯದಶಾಕಲ್ಪ್ಯಾ- ಆ ಗ್ರಹದ ದಶಾಪರಿಪಾಕ ಕೊಡತಕ್ಕ ಕಾಲವೆಂದು ಕಲ್ಪಿಸತಕ್ಕದ್ದು, ಸಾ-ಆ ಗ್ರಹಗಳು ಕೊಟ್ಟ ದಶೆಗಳಲ್ಲಿ. ಪ್ರಬಲಸ್ಯ-ಸ್ಥಾನಾದಿ ಷಡ್ಬಲಯುಕ್ತನಾದ ಗ್ರಹಕ್ಕೆ, ಪೂರ್ವಂಕಲ್ಪ್ಯಾ- ಪ್ರಥಮ ದಶೆಯಾಗಿ ತಿಳಿಯತಕ್ಕದ್ದು. ಬಹೂನಾಂ- ಅನೇಕ ಗ್ರಹಗಳಿಗೆ, ಸಾಮ್ಯೇ- ಷಡ್ಬಲವು ಸಮಾನವಾಗುವಲ್ಲಿ, ಬಹುವರ್ಷ ದಸ್ಯ-ಆ ಗ್ರಹಗಳಲ್ಲಿ ಹೆಚ್ಚಾಗಿ ಆಯುರ್ದಾಯ ಕೊಟ್ಟಿರುವ ಗ್ರಹಕ್ಕೆ ಮೊದಲನೇ ದಶೆಯೆಂದು ತಿಳಿಯತಕ್ಕದ್ದು. ತೇಷಾಂಚಸಾಮ್ಯೇ-ಆ ಹೆಚ್ಚಾಗಿ ಕೊಟ್ಟಿರುವ ಆಯುರ್ದಾಯು ಸಂವತ್ಸರಗಳು ಒಂದೇ ಸಮಸಂಖ್ಯೆಯಾಗಿರುವಲ್ಲಿ, ಪ್ರಥಮೋದಿ ತಸ್ಯ-ಮೊದಲು ಸೂರ್ಯಮಂಡಲ ದಿಂದುದಯಿಸಿದ ಗ್ರಹಕ್ಕೆ ಮೊದಲು ದಶೆ ಕಲ್ಪಿಸಬೇಕು.

ತಾತ್ಪರ್ಯ॥ ಜಾತಕನಿಗೆ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ಲಗ್ನ ಈ ಪ್ರಕಾರ ಎಂಟು ಗ್ರಹಗಳಿಂದ ಆಯುರ್ದಾಯ ಸ್ಥಿರೀಕರಣದಿಂದ ಶುದ್ಧಾಯುರ್ದಾಯ ಮಾಡಿದ್ದರಲ್ಲಿ ಇವರೆಲ್ಲರಲ್ಲಿಯೂ ಮೊದಲನೇ ದಶ ಕಲ್ಪಿಸಬೇಕಾದರೆ ಲಗ್ನ, ಸೂರ್ಯ, ಚಂದ್ರ ಈ ಮೂರು ಗ್ರಹಗಳಲ್ಲಿ ಯಾರಿಗೆ ಅಧಿಕವಾಗಿ ಬಲಬರುವುದೋ ಆ ಗ್ರಹಕ್ಕೆ ಪ್ರಥಮದಶೆ ಬರುತ್ತೆಂದು ತಿಳಿಯತಕ್ಕದ್ದು. ಈ ವಿಷಯವನ್ನು ಮೊದಲನೇ ಶ್ಲೋಕದಲ್ಲಿಯೇ ಸ್ಪಷ್ಟಪಡಿಸಿದ್ದೇವೆ, ಆದರೆ ಆ ಮೊದಲನೇ ದಶಾಧಿಪತಿಗೆ ಕೇಂದ್ರಸ್ಥಾನಸ್ಥ ಗ್ರಹಗಳಿಗೆ ಎರಡನೇ ದಶೆ ಕಲ್ಪಿಸಬೇಕೆಂದು ಹೇಳಲ್ಪಟ್ಟಿರುವುದರಿಂದ ಈ ಕೇಂದ್ರಸ್ಥಾನವಾದ ಗ್ರಹಗಳಲ್ಲಿ ಬಲಾಧಿಕವಾದ ಗ್ರಹಕ್ಕೆ ಮೊದಲನೇ ದಶೆಯಾಗಿ ಕಲ್ಪಿಸತಕ್ಕದ್ದು. ಆ ಬಲವು ಸಾಮ್ಯವಾಗಿ ಬಂದಿದ್ದರೆ ಆಯುರ್ದಾಯದ ವರ್ಷಗಳನ್ನು ಯಾವ ಗ್ರಹ ಹೆಚ್ಚಾಗಿ ಕೊಟ್ಟಿರುತ್ತೋ, ಆ ಗ್ರಹದ ದಶೆಯೇ ಮೊದಲ ದಶೆಯೆಂದು ತಿಳಿಯತಕ್ಕದ್ದು. ಆ ಆಯುರ್ದಾಯ ಸಂವತ್ಸರಗಳು ಸಮಸಂಖ್ಯೆಯಾಗಿರುವಲ್ಲಿ ಸೂರ್ಯಮಂಡಲದಿಂದ ಕೇಂದ್ರ ಸ್ಥಾನಗಳಲ್ಲಿರುವ ಗ್ರಹಗಳಲ್ಲಿ ಯಾವ ಗ್ರಹ ಉದಯಿಸಿ ಬಂದಿರುತ್ತೋ, ಆ ಗ್ರಹಕ್ಕೆ ಮೊದಲನೇ ದಶೆಯಾಗಿ ಕಲ್ಪಿಸಿ ನಂತರ ಅದಕ್ಕಿಂತ ನ್ಯೂನವಾಗಿರುವ (ಬಲ) ಗ್ರಹಕ್ಕೆ ಎರಡನೇ ದಶೆಯಾಗಿಯೂ ಅದಕ್ಕಿಂತ ನ್ಯೂನಬಲವಾದ ಗ್ರಹಕ್ಕೆ ಮೂರನೇ ದಶೆಯಾಗಿಯೂ ಕಲ್ಪಿಸಬೇಕು. ಪಿಮಂಚ ಸ್ಥಾನಾದಿ ಷಡ್ಬಲಯುಕ್ತಾಗಿಯೂ ಅವರಲ್ಲಿ ಬಲಸಾಮ್ಯವಾದರೆ ದಶಾವರ್ಷ ಹೆಚ್ಚು ಬಂದಿರುವ ಗ್ರಹಕ್ಕೂ, ದಶಾವರ್ಷವು ಹೆಚ್ಚಾಗಿ ಬಂದಿದ್ದರೆ, ಸೂರ್ಯಮಂಡಲದಿಂದ ಮೊದಲು ಉದಯಿಸಿದ ಗ್ರಹಕ್ಕೂ ಮೊದಲು ದಶಾ ಕಲ್ಪಿಸತಕ್ಕದ್ದೆಂದು ಮುಖ್ಯಾಶಯವು. ಇಲ್ಲಿ ತಿಳಿಯತಕ್ಕ ವಿಶೇಷವೇನೆಂದರೆ- ಬಲವೇ ಮುಖ್ಯವಾಗಿರುವಾಗ ಬಲಾಧಿಕತೆ ನ್ಯೂನತೆಯಿಂದ ಪೂರ್ವೋತ್ತರವಾಗಿಯೂ, ದಶಾವರ್ಷ ಮತ್ತು ಉದಯವೇ ಬೇಕಾಗಿದ್ದರೆ, ಮೊದಲು ಪ್ರಥಮೋದಿತ ಗ್ರಹಕ್ಕೂ ಅನಂತರ ಎರಡನೇ ಸಾರಿ ಉದಿತವಾದ ಗ್ರಹಕ್ಕೂ ದಶಾ ಕಲ್ಪಿಸತಕ್ಕದ್ದು. ಇಲ್ಲಿ ಉದಯವೆಂಬುವುದು ಎರಡು ಪ್ರಕಾರವಾಗಿರುವುದು ೧ನೆಯದು ಭ ಚಕ್ರದ ತಿರುಗುವಿಕೆಯಿಂದ ಉಂಟಾದ ಉದಯ, ೨ನೆಯದು ಸೂರ್ಯಮಂಡಲದಿಂದ ಉದಯವಾದದ್ದು. ಇದರಲ್ಲಿ ಪ್ರತಿ ದಿನದಲ್ಲಿ ಉದಯವಾಗಿರುವ ಸಂಗತಿ ಇಲ್ಲಿ ಪ್ರಕೃತವಿಲ್ಲ. ಸೂರ್ಯಮಂಡಲದಿಂದ ಉದಯವಾದ ವಿಷಯವೇ ಪ್ರಥಮೋದಿತಸ್ಯ ಎಂಬುವ ಅರ್ಥದ ಸ್ವಾರಸ್ಯವಾಗಿರುವುದು. ಇಲ್ಲಿ ಸೂರ್ಯನಿಗೆ ದೂರದಲ್ಲಿದ್ದ ಗ್ರಹವೇ ಮೊದಲು ಉದಯಿಸಿದ ಗ್ರಹವೆಂದು ತಿಳಿಯಬೇಕು. ಇಲ್ಲಿ ಸ್ಥಾನಾದಿ ಷಡ್ಬಲ ಮತ್ತು ಶುದ್ಧಾಯುರ್ದಾಯ ಇವೆರಡು ಸಮವಾಗುವಲ್ಲಿ ಸೂರ್ಯಮಂಡಲದಿಂದ

ಪ್ರಥಮೋದಿತ ಗ್ರಹವೇ ಬಲಿಷ್ಠವಾಗಿ ಆ ಗ್ರಹಕ್ಕೆ ದಶೆಯನ್ನು ಕಲ್ಪಿಸುವುದು ಗ್ರಾಹ್ಯವಾಗಿರುವುದು. ಈ ಪ್ರಕಾರವೇ ಶ್ರೀಪತಿಪದ್ದತಿ ಜಾತಕ ಕೇಶವೀಪದ್ಧತಿ, ದಾಮೋದರ ಪದ್ಧತಿ ಮೊದಲಾದ ಗ್ರಂಥಗಳಲ್ಲಿ ಹೇಳಲ್ಪಟ್ಟಿರುತ್ತೆ.

ವಿಶೇಷ ತಾತ್ಪರ್ಯ-ಈ ಪ್ರಕರಣದ ೧ನೇ-೨ನೇ ಶ್ಲೋಕದ ಸಾರಾಂಶವನ್ನು ಪರ್ಯಾಲೋಚಿಸಿದರೆ ತಿಳಿಯಬರುವ ಅಂಶವೇನೆಂದರೆ-ಯಾವ ಗ್ರಹವು ಶುದ್ಧಾಯುರ್ದಾಯ ವರ್ಷಾದಿಯಾಗಿ ಎಷ್ಟು ಸಂಖ್ಯಾರೂಪವಾಗಿ ಕೊಟ್ಟಿರುವನೋ, ಅದೇ ಗ್ರಹದ ಇಷ್ಟ ದಶಾಕಾಲವೆಂದು ತಿಳಿಯತಕ್ಕದ್ದು. ಲಗ್ನ-ಸೂರ್ಯ-ಚಂದ್ರರಲ್ಲಿ ಬಲಾಧಿಕವಾಗಿ ದಶೆಯೇ ಮೊದಲನೇ ದಶೆಯಂತೆ ತಿಳಿಯತಕ್ಕದ್ದು. ಆ ಮೊದಲನೇ ದಶೆಯಾದಮೇಲೆ ಆ ದಶಾಧಿಪತಿಗೆ ಕೇಂದ್ರಸ್ಥಾನದಲ್ಲಿದ್ದ ಗ್ರಹಕ್ಕೆ ದಶೆಯನ್ನು ಕಲ್ಪಿಸಬೇಕು. ಆ ಕೇಂದ್ರಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ ಅವರಲ್ಲಿ ಸ್ಥಾನಾದಿಬಲವು ಯಾವ ಗ್ರಹಕ್ಕೆ ಹೆಚ್ಚಾಗಿ ಬಂದಿರುತ್ತೋ, ಆ ಗ್ರಹಕ್ಕೆ ಮೊದಲನೇ ದಶೆಗೆ ಎರಡನೇ ದಶೆಯಾಗಿ ಕಲ್ಪಿಸತಕ್ಕದ್ದು. ಬಲಸಾಮ್ಯವಾಗಿ ಬಂದಿದ್ದರೆ ಯಾರಿಗೆ ದಶಾವರ್ಷ ಸಂಖ್ಯೆ (ಶುದ್ಧಾಯುರ್ದಾಯ) ಹೆಚ್ಚಾಗಿ ಬಂದಿರುತ್ತೋ, ಆ ಗ್ರಹಕ್ಕೆ ಮೊದಲು ದಶೆಯನ್ನು ಕಲ್ಪಿಸಿ ಅನಂತರ ಬಲನ್ಯೂನತಾರತಮ್ಯ ಪ್ರಕಾರ ಉತ್ತರೋತ್ತರ ದಶೆಗಳನ್ನು ಕಲ್ಪಿಸಬೇಕು. ಆ ಆಯುರ್ದಾಯ ಸಂವತ್ಸರಗಳು ಒಂದೇ ಸಮಸಂಖ್ಯೆಯಾಗಿದ್ದರೆ, ಮೊದಲು ಪ್ರಥಮೋದಿತ ದಶೆಯನ್ನು, ಅನಂತರ ಎರಡನೇ ದಶೆಯನ್ನು ಕಲ್ಪಿಸಬೇಕು. ಈ ಕೇಂದ್ರಗಳ ದಶೆಯಾದಮೇಲೆ- ಇದೇ ಪ್ರಕಾರವಾಗಿಯೇ ಪಣಪರ ಸ್ಥಾನಗಳಲ್ಲಿರುವ ಗ್ರಹಗಳಿಗೂ ದಶೆಯನ್ನು ಕಲ್ಪಿಸಿ, ಅನಂತರ ಆಪೋಕ್ಲಿಮ ರಾಶಿಗತವಾದ ಗ್ರಹಕ್ಕೂ ದಶೆಯನ್ನು ಕಲ್ಪಿಸತಕ್ಕದ್ದು.

ಈ ವಿಷಯಗಳಲ್ಲಿ ಗರ್ಗಃ- ।।ಶ್ಲೋಕ।। ಲಗ್ನೇಬಲೀಂದು ಸೂರ್ಯಾಣಾಂ ದಶಾಮಾದ್ಯಾಂ ಪ್ರಯಚ್ಛತಿ ॥ ತಸ್ಮಾತ್ ತತಃಪ್ರಯಚ್ಛಂತಿ ಕೇಂದ್ರಾದಿಸ್ಥಾಃ ಕ್ರಮೇಣತು॥ ತತ್ರಾಪಿ ಬಲಿನಃ ಪೂರ್ವಂ ತತ್ಸಾಮ್ಯೇ ಬಹುದಾಯುತಾಃ । ತತ್ಸಾಮ್ಯೇಪಿ ಪ್ರಯಚ್ಛಂತಿ ಯೇಪೂರ್ವಂ ರವಿವಿಚ್ಯುತಾಃ ।।ತಾ।। ಲಗ್ನ, ಚಂದ್ರ, ಸೂರ್ಯ ಇವರಲ್ಲಿ ಬಲಿಷ್ಠವಾದದ್ದಕ್ಕೆ ಮೊದಲನೇ ದಶೆ ಏರ್ಪಡುತ್ತೆ. ಅನಂತರ ಲಗ್ನದಿಂದಾಗಲಿ, ಸೂರ್ಯನಿಂದಾಗಲಿ, ಚಂದ್ರನಿಂದಾಗಲಿ ಯಾರು ಬಲಿಷ್ಠರಾಗುವರೊ ಆ ಗ್ರಹಕ್ಕೆ (ಅಂದರೆ ದಶಾಧಿಪತಿಗೆ ಕೇಂದ್ರದಲ್ಲಿರುವ ಗ್ರಹಗಳಲ್ಲಿ ಬಲಿಷ್ಠರಾಗಿರುವ ಗ್ರಹಕ್ಕೆ) ದಶೆ ಬರುತ್ತೆ. ಅವರಲ್ಲಿ ಬಲ ಒಂದೇ ಸಮವಾದರೆ ದಶಾಸಂವತ್ಸರಗಳು ಅಧಿಕವಾಗಿ ಬಂದಿರುವ ಗ್ರಹದಶೆಯನ್ನೇ ಮೊದಲು ಕಲ್ಪಿಸಬೇಕು. ಅದರಲ್ಲಿ ದಶಸಾಮ್ಯವಾದರೆ ಯಾರು

ಸೂರ್ಯನಿಂದ ಮೊದಲು ಉದಯಿಸಲ್ಪಟ್ಟರೋ ಅವರಿಗೆ ಮೊದಲು ಕೊಟ್ಟು, ಅನಂತರ ಮಿಕ್ಕವರಿಗೆ ಯಥಾಕ್ರಮವಾಗಿ ಕೊಡಬೇಕು. ಅನಂತರ ಪಣಾಪರ ಅಪೋಕ್ಲಿಮ ಸ್ಥಾನಗಳಿಗೆ ಇದೇ ರೀತಿಯಾಗಿ ದಶಾ ಏರ್ಪಡಿಸಬೇಕು.

ದಶಾಕ್ರಮಕ್ಕೆ ಉದಾಹರಣೆ :- ನಳ ಸಂವತ್ಸರ ಭಾದ್ರಪದ ಶುದ್ಧ ೮ ಸಿಂಹ ಮಾಸ ತೇದಿ ೨೪, ಜನನಕಾಲ ಘಟಿ ೨೬-೩೦, ಇದಕ್ಕೆ ಸೂರ್ಯಾದಿ ದೃಕ್ಸಿದ್ಧ ಗ್ರಹ ಸ್ಪಷ್ಟಂ

| ಗ್ರಹಸ್ಪಷ್ಟಂ | | | | | ಸೂರ್ಯಾದಿ ಗ್ರಹದತ್ತಾಯುಃ (ಸ್ಫುಟ) | | | | | |
|---|---|---|---|---|---|---|---|---|---|---|
| ಗ್ರಹಾಃ | ರಾಶಿ | ಭಾಗ | ಕಲೆ | ವಿ | ಗ್ರಹಗಳು | ವರ್ಷ | ಮಾಸ | ದಿವ | ಘ | ವಿ |
| ರವಿಃ | ೪ | ೨೨ | ೩೫ | ೫೨ | ರವಿ | ೧೦ | ೩ | ೧೫ | ೨೪ | ೬ |
| ಚಂದ್ರಃ | ೭ | ೨೨ | ೫೦ | ೩೧ | ಚಂದ್ರ | ೭ | ೧೧ | ೧೨ | ೨೭ | ೯ |
| ಕುಜಃ | ೭ | ೩ | ೪೬ | ೨೫ | ಕುಜ | ೭ | ೭ | ೨ | ೨೫ | ೨೪ |
| ಬುಧಃ | ೫ | ೧೫ | ೮ | ೧೫ | ಬುಧ | ೭ | ೪ | ೨೩ | ೩೧ | ೧೫ |
| ಗುರುಃ | ೧೧ | ೧೬ | ೪ | ೧೦ | ಗುರು | ೧೩ | ೦ | ೫ | ೨೧ | ೮ |
| ಶುಕ್ರಃ | ೫ | ೬ | ೪೮ | ೮ | ಶುಕ್ರ | ೧೧ | ೫ | ೧೩ | ೩೧ | ೦ |
| ಶನಿಃ | ೨ | ೨೨ | ೪ | ೨೯ | ಶನಿ | ೧೬ | ೧ | ೭ | ೧೮ | ೧ |
| ಲಗ್ನ | ೯ | ೨೮ | ೫೫ | ೦ | ಲಗ್ನ | ೮ | ೫ | ೬ | ೫೨ | ೬ |

ಈ ಪ್ರಕರಣದ ೨ನೇ ಶ್ಲೋಕದಲ್ಲಿ ಹೇಳಲ್ಪಟ್ಟ "ಆಯುಃಕೃತಂ ಯೇನ ಹಿಯತ್ತ ದೇವ ಕಲ್ಪ್ಯಾ ದಶಾ" ಎಂದುಕ್ತವಾಗಿರುವ ಪ್ರಕಾರ ಆಯಾಯ ಗ್ರಹಗಳು ಕೊಟ್ಟಿರುವ ದತ್ತಶುದ್ಧಾಯುಃ ಸಂವತ್ಸರವೇ ಆಯಾಯ ಗ್ರಹಗಳ ದಶೆಗಳಾಗಿರುವುವು.

ಆದರೆ ಆ ಸೂರ್ಯಾದಿ ಗ್ರಹದತ್ತಾಯುಸ್ಸೇ ಕ್ರಮವಾಗಿ ದಶಾಸಂವತ್ಸರ ಗಳಾಗುವುದಿಲ್ಲ. ಇದರಲ್ಲಿ ವಿಶೇಷವಿರುತ್ತೆ. ಪ್ರಥಮ ದಶೆಯನ್ನು ಕಲ್ಪಿಸಬೇಕಾದರೆ 'ಉದಯ ರವಿ ಶಶಾಂಕಪ್ರಾಣಿ ಕೇಂದ್ರಾದಿ ಸಂಸ್ಥಾಃ' ಎಂಬುವ ವಿಧಿಯಂತೆ :-

| ಗುರು | | | ಶನಿ |
|---|---|---|---|
| | ಭಾವಚಕ್ರಂ | | |
| ಲಗ್ನ | | | ರ೧ನೇ ದಶಾ |
| | ಚಂದ್ರ ಕುಜ | | ಬುಧ ಶುಕ್ರ |

| | |
|---|---|
| ರವಿ ಬಲ | ೮-೫೮-೪೨ |
| ಚಂದ್ರಬಲ | ೭-೨೪-೨ |
| ಕುಜಬಲ | ೬-೩೦-೧೯ |
| ಬುಧಬಲ | ೭-೫೭-೯ |
| ಗುರುಬಲ | ೯-೧೫-೧೧ |
| ಶುಕ್ರಬಲ | ೭-೨-೧೯ |
| ಶನಿಬಲ | ೬-೪೮-೪೭ |
| ಲಗ್ನಬಲ | ೭-೨೧-೨ |

ಈ ಸೂರ್ಯಾದಿ ಗ್ರಹಗಳಲ್ಲಿ ಆದಿದಶೆಯನ್ನು ಕಲ್ಪಿಸಬೇಕಾದರೆ ಲಗ್ನ, ರವಿ, ಚಂದ್ರ ಈ ಮೂರರಲ್ಲಿ ಯಾರು ಬಲಿಷ್ಠರಾಗಿರುವರೋ, ಅದನ್ನು ನೋಡಿದರೆ ಸೂರ್ಯನಿಗೆ ೮-೫೮-೪೨ ಆದ್ದರಿಂದ ಸೂರ್ಯನೇ ಬಲಿಷ್ಠನೆಂದು ಸ್ಪಷ್ಟವಾಯಿತು. ಆದ್ದರಿಂದ ಜಾತಕನಿಗೆ ಸೂರ್ಯದಶೆಯೇ ಜನ್ಮಾರಭ್ಯ ಪ್ರಾರಂಭವಾಗುತ್ತದೆ.

## ೨ನೇ ದಶೆಗೆ ಉದಾಹರಣೆ

ಈಗ ೨ನೆಯ ದಶೆಯು ಯಾವುದೆಂದು ತಿಳಿಯಬೇಕು. ಮೊದಲೇ ದಶಾಪತಿಗೆ ಕೇಂದ್ರಸ್ಥಾನವಾದ ವೃಶ್ಚಿಕದಲ್ಲಿ ಚಂದ್ರ, ಕುಜ ಇರುವರು. ಚಂದ್ರಬಲ ೭-೨೪-೨, ಕುಜಬಲ ೬-೩೦-೧೯, ಇವರಲ್ಲಿ ಬಲಾಧಿಕವಾದ ಗ್ರಹಕ್ಕೆ ಮೊದಲು ದಶೆ ಕೊಡಬೇಕೆಂದು ಹೇಳಿರುವುದರಿಂದ, ಚಂದ್ರದತ್ತಾಯುಃ ಸಂವತ್ಸರಗಳೇ ೨ನೇ ದಶೆಯಾಯಿತು.

## ೩ನೇ ದಶೆಗೆ ಉದಾಹರಣೆ

ಈ ಮೇಲೆ ಹೇಳಿದ ಪ್ರಕಾರವೇ ಚಂದ್ರನಿಗಿಂತ ಕುಜನು ನ್ಯೂನಬಲನಾದ್ದರಿಂದ, ಚಂದ್ರದಶೆಯಾದನಂತರ ಕುಜದಶೆ ಪ್ರಾರಂಭವಾಯಿತು. ಇಲ್ಲಿಗೆ ಆದಿದಶಾಪತಿಗೆ ಕೇಂದ್ರಸ್ಥವಾದ ಗ್ರಹಗಳ ದಶೆಯಾಯಿತು.

## ೪ನೇ ದಶೆಗೆ ಉದಾಹರಣೆ

ಆದಿ ದಶಾಧಿಪತಿಗೆ ಪಣಪರಸ್ಥಾನಗಳಲ್ಲಿರುವ ಗ್ರಹದ ದಶೆ ತಿಳಿಯಬೇಕು. ಆದಿ ದಶಾಧಿಪತಿಗೆ ಪಣಪರಸ್ಥಾನವಾದ ಮೀನ ರಾಶಿಯಲ್ಲಿದ್ದ ಗುರು ದಶೆ

ಬರಬೇಕು. ಆದ್ದರಿಂದ ಕುಜದಶೆ ಆದ ಬಳಿಕ ಗುರು ದಶೆ ಪ್ರಾರಂಭವಾಯಿತು.

## ೫-೬ನೇ ದಶೆಗೆ ಉದಾಹರಣೆ

ಆದಿ ದಶಾಧಿಪತಿಗೆ ಪಣಪರಸ್ಥಾನಗಳಲ್ಲಿರುವ ಅಂದರೆ-ಕನ್ಯೆಯಲ್ಲಿರುವ ಬುಧ-ಶುಕ್ರರ ದಶೆಯ ಪ್ರಾರಂಭವಾಗಬೇಕು. ಇವರಿಬ್ಬರಲ್ಲಿ ಬಲಾಧಿಕ್ಯತೆಯುಂಟಾಗಿರುವ ಗ್ರಹಗಳ ದಶೆ ಮೊದಲು ಪ್ರಾರಂಭವಾಗಬೇಕು. ಬುಧ ಬಲ ೭-೫೭-೯. ಶುಕ್ರಬಲ ೭-೨-೧೯, ಆದ್ದರಿಂದ ಬಲಾಧಿಕನಾದ ಬುಧನ ದಶೆ ೫ನೇ ದಶೆಯಾಗಿಯೂ, ಅನಂತರ ಶುಕ್ರದಶೆಯೂ ಕ್ರಮವಾಗಿ ಬರುತ್ತದೆ.

## ೭ನೇ ದಶೆಗೆ ಉದಾಹರಣೆ

ಆದಿ ದಶಾಧಿಪತಿಗೆ ಮಿಥುನವು ಪಣಪರಸ್ಥಾನವು, ಅಲ್ಲಿ ಶನಿಯೊಬ್ಬನೇ ಇರುತ್ತಾನೆ. ಆದ್ದರಿಂದ ಶನಿದಶೆಯು ಶುಕ್ರದಶೆಯಾದನಂತರದಲ್ಲಿ ಪ್ರಾರಂಭವಾಗುತ್ತದೆ.

## ೮ನೇ ದಶೆಗೆ ಉದಾಹರಣೆ

ಆದಿ ದಶಾಧಿಪತಿಗೆ ಮಕರಲಗ್ನ ೬ನೇ ಸ್ಥಾನ, ಇದು ಆಪೋಕ್ಲಿಮಸ್ಥಾನ, ಆದ್ದರಿಂದ ಲಗ್ನದಶೆಯು ಶನಿದಶೆಯಾದ ಬಳಿಕ ಪ್ರಾರಂಭವಾಗುತ್ತದೆ. ಈ ಪ್ರಕಾರ ಜಾತಕನಿಗೆ ಆಯುರ್ದಾಯವನ್ನು ಕೊಟ್ಟಿರತಕ್ಕ ಕಾಲವೆಲ್ಲ ಪೂರ್ತಿಯಾಯಿತು, ಅನಂತರ ದಶೆಯು ಇರುವುದಿಲ್ಲ.

ಈ ವಿಷಯುವನ್ನು ಮುಂದೆ ವಿವರಿಸುವ ಪದಕದಿಂದ ಸ್ಪಷ್ಟವಾಗಿ ತಿಳಿಯಬಹುದು.

## ಜನ್ಮಾದಿಯಾಗಿ ದಶಾಪದಕ ಪ್ರವೇಶ ವಿರಾಮಕಾಲ ಸಹ

| ಸಂಖ್ಯೆ | ದಶಾಪ್ರವೇಶ | ದಶಾಪ್ರವೇಶಕಾಲರವಿಃ | | | | | ದಶಾಹೆಸರು | ದಶಾಪರಿಮಾಣ | | | | | ಪ್ರವೇಶ ವಿರಾಮಕಾಲ | | |
|---|---|---|---|---|---|---|---|---|---|---|---|---|---|---|---|
| | | ಪಂ | ರಾ | ಭಾ | ಕ | ಏಕ | | ಸಂ | ತಿಂ | ದಿ | ಘ | ವಿ | ಸಂ॥ ಹೆಸರು | ಮಾಸ | ತೇದಿ |
| ೧ | ರವಿದಶಾ ಪ್ರವೇಶ | ೧೭೭೮ | ೪ | ೨೪ | ೮ | ೫೩ | ರವಿದಶ | ೧೦ | ೩ | ೧೫ | ೨೪ | ೬ | ನಳ | ಸಿಂಹ | ೨೪ |
| ೨ | ಚಂದ್ರದಶಾ ಪ್ರವೇಶ | ೧೭೮೮ | ೮ | ೯ | ೩೨ | ೫೩ | ಚಂದ್ರದಶ | ೭ | ೧೧ | ೧೨ | ೨೭ | ೯ | ಕ್ಷಯ | ಧನು | ೧೦ |
| ೩ | ಕುಜದಶಾ ಪ್ರಾ. ಕಾಲ | ೧೭೯೬ | ೭ | ೨೨ | ೦ | ೮ | ಕುಜದಶ | ೭ | ೭ | ೨ | ೨೫ | ೨೪ | ಭಾವ | ವೃಶ್ಚಿಕ | ೨೨ |
| ೪ | ಗುರುದಶಾ ಪ್ರವೇಶಕಾಲ | ೧೮೦೪ | ೨ | ೨೪ | ೨೫ | ೩೨ | ಗುರುದಶ | ೧೩ | ೦ | ೫ | ೨೧ | ೮ | ಚಿತ್ರಭಾನು | ಮಿಥುನ | ೨೫ |
| ೫ | ಬುಧಾದಶಾ ಪ್ರಾ.ಕಾಲ | ೧೮೧೭ | ೨ | ೨೯ | ೪೬ | ೪೦ | ಬುಧದಶ | ೭ | ೪ | ೨೩ | ೩೧ | ೧೫ | ಮನ್ಮಥ | ಮಿಥುನ | ೩೦ |
| ೬ | ಶುಕ್ರದಶಾ ಪ್ರಾ.ಕಾಲ | ೨೮೨೪ | ೭ | ೨೩ | ೧೭ | ೫೫ | ಶುಕ್ರದಶ | ೧೧ | ೫ | ೧೩ | ೩೧ | ೦ | ಶುಭಕೃತು | ವೃಶ್ಚಿಕ | ೨೪ |
| ೭ | ಶನಿದಶಾ ಪ್ರವೇಶ | ೧೮೩೬ | ೧ | ೬ | ೪೮ | ೫೫ | ಶನಿದಶ | ೧೬ | ೧ | ೭ | ೧೮ | ೧ | ಆನಂದ | ವೃಷಭ | ೭ |
| ೮ | ಲಗ್ನದಶಾ ಪ್ರಾರಂಭ | ೧೮೫೨ | ೨ | ೧೪ | ೬ | ೫೬ | ಲಗ್ನದಶ | ೮ | ೮ | ೬ | ೫೨ | ೬ | ಪ್ರಮೋದೂತ | ಮಿಥುನ<br>ಮಿಥುನ | ೧೫<br>೧೫ |
| | ಲಗ್ನದಶಾ ವಿರಾಮಕಾಲ | ೧೮೬೦ | ೭ | ೨೦ | ೫೯ | ೨ | | | | | | | ಬಹುಧನ | ವೃಶ್ಚಿಕ | ೮ |

## ಅಂತರ್ದಶಾನಯನ ವಿಧಿ

ಮೂಲ॥ ಏಕರ್ಕ್ಷಗೋಽರ್ಧಮಪಹೃತ್ಯ ದದಾತಿ ತುಸ್ವಂ । ತ್ರ್ಯಂಶಂ ತ್ರಿಕೋಣಗೃಹಗಃ ಸ್ಮರಗಃ ಸ್ವರಾಂಶಂ ॥ ಪಾದಂ ಫಲಸ್ಯ ಚತುರಶ್ರಗತಾಸ್ಯ ಹೋರಾಸ್ತ್ವೇವಂ ಪರಸ್ಪರಗತಾಃ ಪರಿಪಾಚಯಂತಿ ॥

ಅವತಾರಿಕೆ॥ ಈ ಮೇಲೆ ೧-೨ನೇ ಶ್ಲೋಕದಲ್ಲಿ ನಿರ್ಣಯವಾಗಿರುವ ಪ್ರಕಾರ ದಶೆಗಳು ಸ್ಥಿರವಾದ ಮೇಲೆ ಆಯಾಯ ದಶೆಗಳಲ್ಲಿ ಅಂತರ್ದಶೆಯನ್ನು ತಿಳಿದುಕೊಳ್ಳಬೇಕಾದದ್ದು ಅವಶ್ಯಕವಾಗಿರುವುದರಿಂದ, ಈ ಶ್ಲೋಕದಲ್ಲಿ ಅಂತರ್ದಶಾವಿಧಿ ಹೇಳಲ್ಪಡುತ್ತೆ.

ಟೀಕು॥ ಏಕರ್ಕ್ಷಗಃ-ದಶಾಧಿಪತಿಯೊಂದಿಗೆ ಏಕರಾಶಿಯಲ್ಲಿರುವ ಗ್ರಹವು, ಫಲಸ್ಯಾರ್ಧಂ-ದಶಾನಾಥನು ಕೊಟ್ಟ ದಶಾಕಾಲದಲ್ಲಿ ಅರ್ಧವನ್ನು* (ಸಮಭಾಗ) ಅಪಹೃತ್ಯ-ಅಪಹಾರಮಾಡಿ (ಅಂದರೆ ತೆಗೆದುಕೊಂಡು), ದದಾತಿ-ತನ್ನ ಸ್ವಭಾವಗಳನ್ನು ಸೇರಿಸಿ, ಆ ಅಂತರ್ದಶಾಕಾಲದಲ್ಲಿ ಶುಭಾಶುಭ ಫಲವನ್ನು ಕೊಡುತ್ತಾನೆ. ತ್ರಿಕೋಣಗೃಹಗಃ - ದಶಾನಾಥನಿಗೆ ತ್ರಿಕೋಣ, ಪಂಚಮ, ನವಮ ಸ್ಥಾನಸ್ಥರಾದ ಗ್ರಹವು, ಸ್ವತ್ರ್ಯಂಶಂ-ಅಂದರೆ ದಶೆಯನ್ನು ಮೂರರಿಂದ ಭಾಗಮಾಡಿದರೆ ಬರುವ ಅಂಶ ೩/೧ ಭಾಗವನ್ನು ತನ್ನ ಅಂತರ್ದಶಾಕಾಲವಾಗಿ ತನ್ನು ಗುಣಸ್ವಭಾವಗಳನ್ನು ಸೇರಿಸಿ ಫಲವನ್ನು ಕೊಡುತ್ತಾನೆ. ಸ್ಮರಗಃ-ದಶಾಧೀಶನಿಗೆ ಸಪ್ತಮಸ್ಥಾನದಲ್ಲಿದ್ದ ಗ್ರಹವು ದಶಾಧೀಶನ ಕಾಲದ ಏಳನೇ ಒಂದುಭಾಗ ಕಾಲದಲ್ಲಿ ತನ್ನ ಗುಣರೂಪ ಸ್ವಭಾವಾದಿಗಳನ್ನು ಸೇರಿಸಿ ಫಲ ಕೊಡುತ್ತಾನೆ. ಚತುರಶ್ರಗತಃ-ಚತುರಶ್ರವೆಂದರೆ ೪-೮ನೇ ಸ್ಥಾನಗಳು, ಚತುರ್ಥಾಷ್ಟಮ ಭಾವಸ್ಥವಾದ ಗ್ರಹವು, ದಶಾಪತಿಯು-ದಶಾಪರಿಮಾಣದಲ್ಲಿ ಚತುರ್ಥಾಂಶ ೧/೪ ಪಾದಾಂಶ ಕಾಲವನ್ನು ತನ್ನ ಅಂತರ್ದಶೆಯಾಗಿ ಮಾಡಿಕೊಂಡು ಅದರಲ್ಲಿ ತನ್ನ ಸ್ವಭಾವ ಸ್ಥಿತಿಗನುಗುಣವಾದ ಶುಭಾಶುಭ ಫಲವನ್ನು ಕೊಡುವನು. ಸಹೋರಾಃ-ಲಗ್ನದಿಂದ ಕೂಡಿದ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಈ ಸಪ್ತಗ್ರಹಗಳು, ಏವಂ-ಈ ಮೇಲೆ ಹೇಳಲ್ಪಟ್ಟ ಕ್ರಮವನ್ನನುಸರಿಸಿ, ಪರಸ್ಪರಗತಾಃ ಪರಸ್ಪರ ಸ್ಥಾನಗಳಲ್ಲಿರುವ ಗ್ರಹಗಳು ತಮ್ಮ ಗುಣಗಳನ್ನು ಕೊಡಿಸಿ, ಪರಿಪಾಚಯಂತಿ - ತಮ್ಮ ತಮ್ಮ ಅಂತರ್ದಶೆಗಳಲ್ಲಿ ಫಲ ಕೊಡುತ್ತಾರೆ. ಅಂದರೆ ಲಗ್ನಕ್ಕೆ ಅಂತರ್ದಶಾ ಕಲ್ಪಿಸಬೇಕಾದರೆ, ದಶಾಧಿಪತಿಯ ಸಂಗಡ

---

* ದಶೆಯಲ್ಲಿ ಅರ್ಧವೆಂದು ತಿಳಿಯಕೂಡದು, ದಶಾಧಿಪತಿಗೆ ಬರುವ ಅಂತರ್ದಶೆಯಲ್ಲಿ ಅರ್ಧ, ತ್ರ್ಯಂಶ, ಪಾದಾಂಶ, ಸಪ್ತಮಾಂಶವೆಂದು ಅರ್ಥಮಾಡಿಕೊಳ್ಳತಕ್ಕದ್ದು.

ದಶಾಧಿಪತಿಯಿಂದ ತ್ರಿಕೋಣ ದಶಾಧಿಪತಿಯಿಂದ ಸಪ್ತಮ ದಶಾಧಿಪತಿಯಿಂದ ಚತುರಶ್ರ, ಈ ಸ್ಥಾನಗಳಲ್ಲಿ ಲಗ್ನ ಸೇರಿಸಿದರೆ ಆ ಗ್ರಹಗಳಿಗೆ ಬರುವಂತೆ ಲಗ್ನಾಂತರ್ದಶೆಯು ಬರುತ್ತದೆ.

ತಾತ್ಪರ್ಯ-ದಶಾಧಿಪತಿಗೆ ಮೊದಲು ಅಂತರ್ದಶೆ ಕಲ್ಪಿಸಬೇಕು. ಆಮೇಲೆ ದಶಾಧಿಪತಿಯ ಸಂಗಡ ಇರುವ ಗ್ರಹಕ್ಕೆ ಅಂತರ್ದಶೆ ಕಲ್ಪಿಸಬೇಕು. ಈ ದಶಾಧಿಪತಿಗೆ ಎಷ್ಟು ದಶಾಂತರ್ದಶೆ ಬರುವುದೋ ಅದಕ್ಕನುಸಾರವಾಗಿ ಅರ್ಧಾದಿ ಭಾಗಗಳು ಉಳಿದ ಗ್ರಹಗಳಿಗೆ ಉಂಟಾಗುವವು. ಒಂದು ಸ್ಥಾನದಲ್ಲಿ ಅನೇಕ ಗ್ರಹ ಗಳಿದ್ದರೆ ಆ ಗ್ರಹಗಳಲ್ಲಿ ಬಲಾಧಿಕವಾದ ಗ್ರಹಕ್ಕೆ ಅಂತರ್ದಶೆ ಕಲ್ಪಿಸಬೇಕು. ಉಳಿದವರಿಗೆ ಅಂತರ್ದಶೆಗಳು ಬರುವುದಿಲ್ಲ. ಈ ವಿಷಯ ಶ್ಲೋಕದಲ್ಲಿಯೇ ಏಕವಚನ ಪ್ರಯೋಗ ಮಾಡಿರುವುದರಿಂದ ೧ ಗ್ರಹಕ್ಕೆ ಮಾತ್ರವೇ ದಶಾಕಾಲದಲ್ಲಿ ಅಂತರ್ದಶೆ ಬರುತ್ತೆಂಬುವುದಕ್ಕೆ ಅನ್ಯಗ್ರಂಥ ಸಮ್ಮತಿ ಇರುತ್ತೆ. ಈ ವಿಷಯದಲ್ಲಿ ॥ಶ್ಲೋಕ॥ ಏಕರ್ಕ್ಷೇರ್ಧತ್ಕ್ರ್ಯಂಶಂ ತ್ರಿಕೋಣಯೋಸ್ಸಪ್ತಮೇತುಸಪ್ತಾಂಶಂ ಚತುರಶ್ರಯೋಸ್ತು ಪಾದಂ ಪಾಚಯತಿ ಗತೋಗ್ರಹಸ್ಸ್ವಗುಣೈಃ ॥ ಈ ವಿಷಯಕ್ಕೆ ಗರ್ಗಸಂಹಿತೆಯಲ್ಲಿ- ॥ಶ್ಲೋಕ॥ ಏಕರ್ಕ್ಷೇ ಸಂಸ್ಥಿತಶ್ಚಾರ್ಧಂ ತ್ರಿಭಾಗಂತು ತ್ರಿಕೋಣಗಃ। ಸಪ್ತಮಸ್ಥಃ ಸ್ವರಾಂಶಂತು ಪಾದಂತು ಚತುರಶ್ರಗಃ । ಲಗ್ನೇನ ಸಹಿತಾಃ ಸರ್ವೇಹ್ಯನ್ಯೋನ್ಯಂ ಫಲದಾಯಕಾಃ ॥ ತಥಾಚ ಯವನೇಶ್ವರಃ ॥ ॥ಶ್ಲೋಕ॥ ಕಾಲೋರ್ಧಭಾಗೇಕ ಗೃಹಾಶ್ರಿತಸ್ಯ ತದರ್ಧಭಾಗಂ ಲಭತೇ ಚತುರ್ಥೇ । ತ್ರಿಭಾಗಭಾಗೀಚ ತ್ರಿಕೋಣ-ಸಂಸ್ಥಸ್ತದರ್ಧಭಾಕ್ಸಾ ಚ್ಚ ಪೃಥಕ್ತ್ರಿಕೋಣೇ ॥ ಸ್ಯಾತ್ಸಪ್ತಮೇ ಸಪ್ತಮಭಾಗಭಾಗೀ ಸ್ಥಿತೋಗ್ರಹಶ್ಚಾರವಶಾದ್ಗ್ರಹಸ್ಯ ॥ ಈ ಪ್ರಕಾರ ಏಕವಚನವೇ ಹೇಳಲ್ಪಟ್ಟಿರುತ್ತೆ, ಆದ್ದರಿಂದ ಇದಕ್ಕನುಸಾರವಾಗಿ ॥ ಸತ್ಯಾಚಾರ್ಯ ವಚನ ॥ ಅರ್ಧಂತ್ರತೀಯ ಮರ್ಧಸ್ಯಾರ್ಧಂ ಸ್ವೋಕ್ತಸಪ್ತಮಂಭಾಗಂ । ಏಕರ್ಕ್ಷ ನವಪಂಚಮ ಚತುರ್ಥ ನಿಧನಾಸ್ತ ಸಂಸ್ಥಾನಾಂ ॥ ದದ್ಯುಗ್ರಹಾಗ್ರ್ರಹಾಣಾಂ ಸ್ವದಶಾ ಸ್ವಾಂತರ್ದಶಾಖ್ಯಾನಂ । ಫಲಕಾಲಾನಿತ್ರವಿಧಿಕ್ರಮೇಣ ಭೇದಾಶ್ಚತೇಷ್ವೇವಂ ॥ ಏಕರ್ಕ್ಷಗೇಷುಬಲವಾ ಭಾಗಹರೋ ಮಿತ್ರತೋರಿ ಪೋರ್ವಾಪಿ । ಮಿತ್ರಂಚ ಪುಷ್ಕಳಫಲಂ ತಸ್ಮಿಕಾಲೇ ರಿಪೋರ್ನೈವಂ ॥ ಎಂದು ಹೇಳಲ್ಪಟ್ಟಿರುತ್ತೆ. ಈ ವಿಷಯದಲ್ಲಿ ಯಮಃಏಕರ್ಕ್ಷೋಪ ಗತಾನಾಂ ಯೋಭವತಿ ಬಲಾಧಿಕೋ ವಿಶೇಷೇಣ। ಏಕಸ್ಸ ಏವ ಹರ್ತಾನಾನ್ಯೇತತ್ರ ಸ್ಥಿತಾವಿಹಗಾಃ ॥ ಎಂದು ಲಗ್ನದಲ್ಲೂ ಯಾವಾಗ ಅಂಶಾಪಹಾರಿತ್ವ ಪ್ರಾಪ್ತಿಯಾಗುವ ಸಂಭವವಿರುತ್ತೋ, ಆ ಲಗ್ನದಲ್ಲಿ ಗ್ರಹವಿದ್ದರೆ ಆ ಲಗ್ನಗತರಾದ ಗ್ರಹಗಳಲ್ಲಿ ಯಾರಿಗೆ ಬಲ ಹೆಚ್ಚಾಗಿ ಬರುವುದೋ ಆ ಒಂದು ಗ್ರಹ ಮಾತ್ರವೇ ಹೇಳಲ್ಪಟ್ಟ ಅಂಶಕ್ಕೆ ಭಾಗಿಯಾಗುತ್ತಾನೆ. ಅನೇಕರು ಏಕರಾಶ್ಯಾದಿ ಸ್ಥಾನಗಳಲ್ಲಿರುವ ಗ್ರಹಗಳೆಲ್ಲರೂ ಅವರವರ

ಸ್ಥಾನಕ್ಕೆ ನಿರ್ಣಯವಾದ ಭಾಗವನ್ನು ಹೊಂದುತ್ತಾರೆಂದು ಹೇಳುವರು. ಇಲ್ಲಿ ವಿಧಿಪ್ರಕಾರ ಅಂತರ್ದಶಾಕಾಲ ನಿಶ್ಚಯಿಸುವುದು ಸರಿಯಾಗಿರುತ್ತದೆ.

## ಅಂತರ್ದಶೆಗೆ ಉದಾಹರಣೆ

ಮಕರ ಲಗ್ನದ ೨೮ನೇ ಭಾಗದಲ್ಲಿ ಜನ್ಮಿಸಿದವನ ಜಾತಕ ಇದಕ್ಕೆ ಶುಕ್ರ ಸ್ಪಷ್ಟರಾಶಿ ೫, ಭಾಗ ೬, ಕಲೆ ೪೮, ವಿಕಲೆ ಇದಕ್ಕೆ ಶುಕ್ರದತ್ತಾಯುಃ-ಸಂಪ್ರದಾಯಾನುಸಾರವಾಗಿ ವರ್ಷ ೧೧, ಮಾಸ ೫, ದಿವಸ ೧೩, ಘಳಿಗೆ ೩೧ ಬರುತ್ತೆ. ಇಲ್ಲಿ ಶುಕ್ರನು ದಶಾಧಿಪತಿಯಾದ್ದರಿಂದ ನ್ಯಾಸಕ್ರಮ :-

| ಗುರು | | | ಶನಿ |
|---|---|---|---|
| | ಭಾವಕುಂಡಲಿ | | |
| ಲಗ್ನ | | | ರವಿ |
| | ಚತು | | ಶು ಬು ಕೇತು |

೧. ಶುಕ್ರನಿಗೆ ಒಂದು ಭಾಗ ೧

೨. ಬುಧನು ಶುಕ್ರನ ಸಂಗಡ ಇರುವುದರಿಂದ ಅರ್ಧಭಾಗ ೨/೧

೩. ಲಗ್ನವು ಶುಕ್ರನ ಪಂಚಮ ತ್ರಿಕೋಣದಲ್ಲಿರುವುದರಿಂದ ತೃತೀಯಾಂಶ ೩/೧

೪. ಗುರು ಸಪ್ತಮದಲ್ಲಿರುವುದರಿಂದ ಸಪ್ತಾಂಶ ೭/೧

ಈ ಪ್ರಕಾರ ಶುಕ್ರ, ಬುಧ, ಲಗ್ನ ಮತ್ತು ಗುರು ಅಂತು ನಾಲ್ಕು ಭುಕ್ತಿ (ಅಂತರ್ದಶೆಗಳು) ಬರುತ್ತದೆ.

೨ನೇ ಉದಾಹರಣೆ-ಶನಿದಶೆ ವರ್ಷ ೧೬, ಮಾಸ ೧, ದಿವಸ ೭, ಘಳಿಗೆ ೧೮, ವಿಘಳಿಗೆ ೧ ಬರುತ್ತೆ. ಇದು ಶನಿದತ್ತಾಯುರ್ದಾಯವಾಗಿಯೂ ಶನಿದಶಾ ವರ್ಷವಾಗಿಯೂ ಇರುತ್ತೆ. ಇದಕ್ಕೆ ಅಂತರ್ದಶೆಯನ್ನು ಕಂಡುಹಿಡಿಯುವ ಕ್ರಮ-ಶನಿಗೆ ೧, ಶನಿಯಿಂದ ಕೇಂದ್ರದಲ್ಲಿ ಬುಧ + ಶುಕ್ರರಿರುತ್ತಾರೆ. ಇವೆರಡು ಗ್ರಹಗಳಲ್ಲಿ ಬುಧನಿಗೆ ಇಷ್ಟಬಲ ೦। ೪೦। ೩೩। ಕಷ್ಟಬಲ ೦। ೧೯। ೨೭, ಶುಕ್ರನಿಗೆ ಇಷ್ಟಬಲ ೦। ೪। ೩೭, ಕಷ್ಟಬಲ ೦ । ೫೫ । ೨೬ ಆದ್ದರಿಂದ ಬುಧನಿಗೆ ಇಷ್ಟಬಲ ರೂಪಾದಿ ೦। ೪೦। ೩ ಬಂದದ್ದರಿಂದ ಬುಧನಿಗೆ ಹೆಚ್ಚು ಬಲ ಬರುವುದು, ಶುಕ್ರನಿಗೆ ಬಲವಿಲ್ಲ (೦। ೪। ೩೭) ಆದ್ದರಿಂದ **ಶ್ಲೋಕಾರ್ಥ**ದ ಪ್ರಕಾರ ಬಲೀಯವಾದ ಗ್ರಹಕ್ಕೆ ಚತುಷ್ಟಯದ ಭಾಗಪ್ರಕಾರ ಪಾದಾಂಶ ಅಂತರ್ದಶೆ ಕೊಡಬೇಕಾಗಿರುತ್ತೆ. ಆದ್ದರಿಂದ

ಬುಧನಿಗೆ ೧/೪, ಆಮೇಲೆ ಶನಿಯಿಂದ ಅಷ್ಟಮಸ್ಥಾನದಲ್ಲಿ ಲಗ್ನವಿರುತ್ತೆ, ಈ ಲಗ್ನಕ್ಕು ಚತುರಶ್ರ ವಿಧಿಪ್ರಕಾರ ೧/೪ ಅಂತರ್ದಶೆ ಕೊಡಬೇಕು, ಆದ್ದರಿಂದ ನ್ಯಾಸವಿಧಿ ಶನಿ ೧, ಬುಧ ೧/೪, ಲಗ್ನ ೧/೪ ಈ ಪ್ರಕಾರ ಸ್ವದಶಾ ಸ್ವಭುಕ್ತಿಯು ಸೇರಿಕೊಂಡು ಶನಿ, ಬುಧ, ಲಗ್ನ ಈ ಮೂರು ಭುಕ್ತಿಗಳೇ ಆದವು.

೩ನೇ ಉದಾಹರಣೆ - (ಲಗ್ನದಶೆ ವರ್ಷ ೮, ಮಾಸ ೫, ದಿವಸ ೬, ಘಳಿಗೆ ೫೨, ವಿಘಳಿಗೆ ೬ ಈ ದಶೆಗೆ ಭುಕ್ತಿ) ಅಂತರ್ದಶೆ ಏರ್ಪಡಬೇಕು, ಇದರಲ್ಲಿ ಲಗ್ನಕ್ಕೆ ೧ ಅಂತರ್ದಶೆ, ಲಗ್ನದಿಂದ ಚತುರಶ್ರವಾದ ಸಿಂಹದಲ್ಲಿದ್ದ ರವಿಗೆ ೧ ಅಂತರ್ದಶೆ, ಲಗ್ನದಿಂದ ತ್ರಿಕೋಣವಾದ ಕನ್ಯೆಯಲ್ಲಿರುವ ಬುಧನು ಬಲಿಷ್ಠನಾದ್ದರಿಂದ ಬುಧನಿಗೊಂದು ಅಂತರ್ದಶೆ ಲಗ್ನ ೧/೨, ರವಿ ೧/೪, ಬುಧ ೧/೩ ಈ ಪ್ರಕಾರ ಮೂರು ಅಂತರ್ದಶೆಗಳು ಏರ್ಪಟ್ಟವು, ಈ ಪ್ರಕಾರವೇ ತಿಳಿಯಲು ಮಾರ್ಗ ರೂಪವಾಗಿ ತೋರಿಸಿರುತ್ತೆ.

ಮೂಲ॥ ಸ್ಥಾನಾನ್ಯದೈತಾನಿ ಸವರ್ಣಯಿತ್ವಾ ಸರ್ವಾಣ್ಯಧಃಛ್ಛೇದವಿವರ್ಜಿತಾನಿ ।
ದಶಾಬ್ದಪಿಂಡೇ ಗುಣಕಾಯಥಾಂಶಂ ಛೇದಸ್ತದೈಕ್ಯೇನ ದಶಾ-
ಪ್ರಭೇದಃ ॥೪॥

ಅವತಾರಿಕೆ ॥ ೧-೨ನೇ ಶ್ಲೋಕಗಳಲ್ಲಿ ಹೇಳಲ್ಪಟ್ಟ ದಶೆಗಳಿಗೆ ೩ನೇ ಶ್ಲೋಕದಲ್ಲಿ ಭುಕ್ತಿನಾಥರಾಗುವ ವಿಷಯವು ಹೇಳಲ್ಪಟ್ಟಿರುತ್ತದಷ್ಟೆ. ಆದರೆ ಅಂಥಹ ಅಂತರ್ದಶೆಯ ಗಣಿತಮೂಲವಾಗಿ ನಿರ್ಣಯಮಾಡುವ ವಿಧಾನವು ಹೇಳಲ್ಪಡುತ್ತೆ -

ಟೀಕು॥ ಏತಾನಿ-ಈ ಮೇಲಿನ ಶ್ಲೋಕದಲ್ಲಿ ಹೇಳಿರುವ ಸ್ಥಾನಾನಿ-ಅರ್ಧಾಂಶ, ತೃತೀಯಾಂಶ, ಪಾದಾಂಶ, ಸ್ವರಾಂಶ ಮೊದಲಾದ ಸ್ಥಾನಗಳನ್ನು, ಸವರ್ಣಯಿತ್ವಾ- ಸಮಭಾಗ ಛೇದಗಳನ್ನಾಗಿ ಮಾಡಿ, ಅಧಃ ಛೇದವಿವರ್ಜಿತಾನಿ-ಕೆಳಗಿನ ಛೇದದ ಅಂಕೆಗಳನ್ನು ಬಿಟ್ಟು ಸರ್ವಾಣಿ-ಸಮಛೇದಗಳಾಗಿ ಮಾಡಿರುವ ಸಕಲ ಸ್ಥಾನಾಂಕಗಳನ್ನೂ ಸಂಕಲನಮಾಡಿ, ದಶಾಬ್ದಪಿಂಡೇ- ಮೂಲದಶಾ ಸಂವತ್ಸರ, ಮಾಸ ದಿವಸ, ಘಟಿ, ವಿಘಟಿಕೆಗಳಿಗೆ, ಗುಣನಾ-ಪ್ರತ್ಯೇಕಪ್ರತ್ಯೇಕವಾಗಿ ಗುಣಿಸಿ, ತದೈಕ್ಯೇನ-ಛೇದಸಂಖ್ಯೆಯನ್ನು ಬಿಟ್ಟಿದ್ದ ಮೇಲಿನ ಸ್ಥಾನಾಂಕಗಳ ಒಟ್ಟು ಸಂಖ್ಯೆಯಿಂದ, ಛೇದಃ-ಭಾಗಿಸತಕ್ಕದ್ದು. ಈ ಪ್ರಕಾರ ಮಾಡಿದರೆ, ಯಥಾಂಶಂ-ಮೊದಲು ಹೇಳಲ್ಪಟ್ಟಿರುವ, ಅರ್ಧಾಂಶ, ತೃತೀಯಾಂಶ, ಪಾದಾಂಶ ಸ್ವರಾಂಶಗಳನ್ನ ತಿಕ್ರಮಿಸಿದೆ, ದಶಾಪ್ರಭೇದಃ-ಅಂತರ್ದಶೆ (ಭುಕ್ತಿಕಾಲ) ಬರುವುದು.

ತಾತ್ಪರ್ಯ ॥ ೩ನೇ ಶ್ಲೋಕದಲ್ಲಿ ಹೇಳಿರುವಂತೆ ಏಕರ್ಕ್ಷಗೋರ್ಧಮಪಹೃತ್ಯ ಎಂಬುವಂತೆ, ದಶಾಧಿಪತಿಯ ಸಂಗಡ ಇರುವ ಗ್ರಹಕ್ಕೆ ಅರ್ಧಭಾಗ, ದಶಾಧಿಪತಿ ಯಿಂದ ತ್ರಿಕೋಣ ಸ್ಥಾನದಲ್ಲಿರುವ ಗ್ರಹಕ್ಕೆ ೩ನೇ ೧ಭಾಗ, ದಶಾಧಿಪತಿಯಿಂದ ಸಪ್ತಮ ಸ್ಥಾನದಲ್ಲಿರುವ ಗ್ರಹಕ್ಕೆ ಸಪ್ತಮಾಂಶ, ದಶಾಧಿಪತಿಯಿಂದ ಚತುರಶ್ರ ಅಂದರೆ ೪-೮ನೇ ಸ್ಥಾನದಲ್ಲಿರುವ ಗ್ರಹಕ್ಕೆ ಕಾಲುಭಾಗ, ಅಂಶಮೂಲ ದಶನಾಥನ ವರ್ಷಗಳಲ್ಲಿ ಭಾಗ ತೆಗೆದುಕೊಂಡು ತಮ್ಮ ಅಂತರ್ದಶೆಯಲ್ಲಿ ತಮ್ಮ ಸ್ಥಿತಿಗನುಗುಣವಾಗಿ ಫಲಕೊಡುವರು, ಈ ಅಂತರ್ದಶಾ ವಿಷಯವು ಉಕ್ತವಾದ ಸ್ಥಾನಗಳಲ್ಲಿದ್ದ ೧ ಗ್ರಹಕ್ಕೆ ಮಾತ್ರ ಬರುವುದು, ಅನೇಕ ಗ್ರಹಗಳಿದ್ದರೆ ಅವರಲ್ಲಿ ಬಲಿಷ್ಠವಾದ ೧ ಗ್ರಹಕ್ಕೆ ಮಾತ್ರ ಬರುತ್ತದೆ. ಉಳಿದ ಗ್ರಹಗಳಿಗೆ ಬರುವುದಿಲ್ಲ, ಉಕ್ತಸ್ಥಾನಗಳೆಂದರೆ ದಶಾಧಿಪತಿ ಯಾವ ಸ್ಥಾನದಲ್ಲಿರುತ್ತಾನೋ, ಆ ಸ್ಥಾನದಲ್ಲಿ ಗ್ರಹವಿದ್ದರೆ, ಆ ಗ್ರಹಕ್ಕೆ ಅನಂತರ ಆ ಮೂಲ ದಶಾಧಿಪತಿಯಿಂದ ತ್ರಿಕೋಣದಲ್ಲಿರುವ ಗ್ರಹಕ್ಕೆ ಹಾಗೆಯೇ ಸಪ್ತಮದಲ್ಲಿರುವ ಗ್ರಹಕ್ಕೆ ಮತ್ತು ಚತುರಶ್ರದಲ್ಲಿರುವ ಗ್ರಹಕ್ಕೆ ಮಾತ್ರ ಅಂತರ್ದಶೆ ಬರುತ್ತದೆಯೇ ಹೊರತು, ಇತರ ಸ್ಥಾನಗಳಲ್ಲಿರುವ ಗ್ರಹಕ್ಕೆ ಅಂತರ್ದಶೆ ಬರುವುದಿಲ್ಲ, ಮತ್ತು ಆ ಸ್ಥಾನಗಳಲ್ಲಿ ಅನೇಕ ಗ್ರಹಗಳಿದ್ದರೆ ಅವರೆಲ್ಲರಿಗೂ ಬರುವುದಿಲ್ಲ, ಒಂದು ಗ್ರಹಕ್ಕೆ ಮಾತ್ರ ಅಂತರ್ದಶೆ ಬರುತ್ತದೆ. (ಹಿಂದೆ ದಶೆಗಳ ಅನುಕ್ರಮ ತೋರಿಸಿರುವ) ಈ ವಿಷಯಕ್ಕೆ ಮುಂದೆ ಉದಾಹರಣೆ ತೋರಿಸಿರುತ್ತೆ. ಇದರಿಂದ ಸ್ಪಷ್ಟವಾಗಿ ತಿಳಿಯಬರುತ್ತೆ.

## ಉದಾಹರಣೆ

ಮಕರ ಲಗ್ನದ ೨-೫೫ನೇ ಭಾಗದಲ್ಲಿ ಹುಟ್ಟಿದ ಜಾತಕ ನಳ ಸಂವತ್ಸರದ ಭಾದ್ರಪದ ಶುಕ್ಲ ಅಷ್ಟಮಿ ತಾತ್ಕಾಲಿಕ ಸ್ಫುಟರವಿಃ ರಾಶ್ಯಾದಿ ೪-೨೨-೩೫-೫೨ ಸ್ಫುಟಚಂದ್ರಃ, ರಾ ೭-೨೨-೫೦-೩೧, ಸ್ಫುಟ ಕುಜಃ ರಾ ೭-೩-೪೬-೨೫, ಸ್ಫುಟಬುಧಃ ರಾ ೫-೧೫-೮-೧೫, ಸ್ಫುಟಗುರುಃರಾ, ೧೧-೧೬-೪-೧೦ ಸ್ಫುಟ ಶುಕ್ರಃ ರಾ, ೫-೬-೪೮-೭, ಸ್ಫುಟಶನಿ. ರಾ, ೨-೨೨-೪-೨೯, ಸ್ಫುಟಲಗ್ನಂ ೯-೨೮-೫೫-೦, ಶುಕ್ರ ದತ್ತಾಯುಃ ಸಂವತ್ಸರ ಮಾಸಾದಿ ವರ್ಷ ೧೧, ತಿಂ ೫, ದಿನ ೧೩, ಘ ೩೧, ವಿ. ಯ೦. ತಾತ್ಕಾಲಿಕ ಶುಕ್ರನು ಕನ್ಯಾ ರಾಶಿಸ್ಥಿತನಾಗಿರುವುದರಿಂದ –

## ಈ ಶುಕ್ರದಶೆಗೆ ಅಂತರ್ದಶೆಯ ನ್ಯಾಸವು

| ಶುಕ್ರ | ಬುಧ | ಲಗ್ನ | ಗುರು | ಸಮಚ್ಛೇದಗಳಾಗಿದ್ದರೆ ನ್ಯಾಸ |
|---|---|---|---|---|
| ೧ | ೧ | ೧ | ೨ | ೪೨ ೨೧ ೧೪ ೬, |
| -- | -- | -- | -- | -- -- -- -- |
| ೧ | ೨ | ೩ | ೭, | ೪೨ ೪೨ ೪೨ ೪೨ |

ಛೇದಹೀನವಾಗಿ ಮಾಡಿ ೪೨+೨೧+೧೪+೬ =೮೩, ಪರಸ್ಪರ ಸಂಕಲನ ಮಾಡಬೇಕು.

ಈ ಪ್ರಕಾರ ಸಂಕಲನ ಮಾಡುವುದರಿಂದ ೮೩ ಎಂಬುವ ಅಂಕವು ಧ್ರುವಕವಾಯಿತು. ಶುಕ್ರನ ಅಂಶವಾದ ೪೨, ಬುಧನ ಅಂಶವಾದ ೨೧, ಲಗ್ನದ ಅಂಶವಾದ ೧೪, ಗುರುವಿನ ಅಂಶವಾದ ೬, ಈ ಪ್ರಕಾರ ಶುಕ್ರನ ದಶೆಯಲ್ಲಿ ಅಂತರ್ದಶಾ ಭಾಗಿಗಳಾಗಿರುತ್ತಾರೆ.

ಶುಕ್ರನ ದಶೆಯಾದ ಸಂಖ್ಯೆ ವರ್ಷ ೧೧, ಮಾಸ ೫, ದಿವಸ ೧೩, ಘಳಿಗೆ ೩೧ರನ್ನು ೪೨ ರಿಂದ ಗುಣಿಸಿ ೮೩ ರಿಂದ ಭಾಗಿಸಿದರೆ ಬಂದ ಸಂವತ್ಸರಾದಿ ೫-೯-೧೬-೩೫-೫೫- ಮತ್ತು ೯೩ ರಲ್ಲಿ ೫೫ ಭಾಗ, ಇದು ಶುಕ್ರನ ಅಂತರ್ದಶೆಯಾಯಿತು. ಶುಕ್ರನ ಸಂಗಡ ಇದ್ದ ಬುಧನಿಗೆ ಅಂತರ್ದಶೆಯನ್ನು ತಿಳಿಯಬೇಕು.

ಉದಾ - ಶುಕ್ರದಶೆಯ ಸಂವತ್ಸರಾದಿ ೧೧-೫-೧೩-೩೧ರನ್ನು ಶುಕ್ರಾಂಶವಾದ ೨೦ ರಿಂದ ಗುಣಿಸಿ ಬಂದ ಲಬ್ಧವನ್ನು ೩೨ ರಿಂದ ಭಾಗಿಸಿದರೆ ಬಂದ ಲಬ್ಧ ವ೨, ಮಾ ೧೦, ದಿ ೨೩, ಘ ೧೭, ವಿಘ ೫೭ ಮತ್ತು ೮೩ ರಲ್ಲಿ ೬೯ ಭಾಗ, ಇದು ಶುಕ್ರನ ಸಂಗಡ ಇದ್ದ ಬುಧನ ಅಂತರ್ದಶೆಯಾಯಿತು. ಶುಕ್ರನಿಂದ ತ್ರಿಕೋಣಸ್ಥಾನ, ಲಗ್ನ, ಇದಕ್ಕೆ ಅಂತರ್ದಶೆಯನ್ನು ತಿಳಿಯಬೇಕು. ಶುಕ್ರನ ದಶೆ ವ ೧೧-೫-೧೩-೩೧ ನ್ನು ೧೪ ರಿಂದ ಗುಣಿಸಿ ೮೩ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೧-೧೧-೫-೩೧-೫೮ ಮತ್ತು ೮೩ರಲ್ಲಿ ೪೬ ಭಾಗ ಆಯಿತು. ಇದು ಲಗ್ನ ಭುಕ್ತಿಯಾಗುತ್ತದೆ.

ಶುಕ್ರನಿಂದ ಸಪ್ತಮ ಸ್ಥಾನದಲ್ಲಿದ್ದ ಗುರುವಿಗೆ ಅಂತರ್ದಶೆಯನ್ನು ನಿರ್ಣಯ ಮಾಡಬೇಕು. ಶುಕ್ರನ ದಶೆ ವರ್ಷ ೧೧-೫-೧೩-೩೧ನ್ನು ಗುರ್ವಂಶವಾದ ೬ ರಿಂದ ಗುಣಿಸಿ, ೮೩ ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೦, ಮಾಸ ೯, ದಿನ ೨೮, ಘ ೫, ವಿಘಳಿಗೆ ೭ ಮತ್ತು ೫೮೧ ರಲ್ಲಿ ೫೫೩ನೇ ಭಾಗ ಆಯಿತು. ಇದು ಗುರುವಿನ ಅಂತರ್ದಶೆ.

| | ವರ್ಷ, | ಮಾಸ, | ದಿವಸ, | ಘ, | ವಿಘ | |
|---|---|---|---|---|---|---|
| ಶುಕ್ರನಲ್ಲಿ ಶುಕ್ರಾಂತರ್ದಶೆ | ೫ | ೯ | ೧೬ | ೩೫ | ೫೫ | ಮತ್ತು ೮೩ ರಲ್ಲಿ ೫೪ |
| " ಬುಧಾಂತರ್ದಶೆ | ೧ | ೧೦ | ೨೩ | ೧೭ | ೫೭ | ೮೩ರಲ್ಲಿ ೬೯ |
| " ಲಗ್ನಾಂತರ್ದಶೆ | ೧ | ೧೧ | ೪ | ೩೧ | ೫೮ | ೮೩ ರಲ್ಲಿ ೪೬ |
| " ಗುರ್ವಂತರ್ದಶೆ | ೦ | ೯ | ೨೮ | ೫ | ೭, | ೪೮೧ರಲ್ಲಿ ೫೫೩ |
| ಅಂತೂ | ೧೧ | ೫ | ೧೩ | ೩೧ | ೦ | |

ಈ ಶುಕ್ರನ ಮೂಲದಶೆಯಾಯಿತು, ಇದು ಒಂದು ವಿಧವಾದ ಗಣಿತವಾಗಿರುತ್ತೆ.

ಈ ಮೇಲೆ ಹೇಳಿರುವ ಜಾತಕಕ್ಕೆ ಶನಿದಶೆಗೆ ಅಂತರ್ದಶೆ ಕಂಡುಹಿಡಿಯಬೇಕು. ಶನಿ ಸ್ಫುಟರಾಶ್ಯಾದಿ ೨-೨೨-೪-೨೯ ಶನಿದತ್ತ ಶುದ್ಧಾಯುರ್ದಾಯ ಸಂವತ್ಸರಾದಿ ೧೬-೧-೭-೧೮-೧ ಈ ಶನಿದತ್ತಾಯುಸ್ಸಿನ ವರ್ಷ ಮಾಸಾದಿಗಳೇ ಶನಿಯ ಸಂವತ್ಸರಗಳಾಗಿರುವುದು. ಶನಿ ಮಿಥುನದಲ್ಲಿದ್ದಾನೆ- ಶನಿ ೧ ಶನಿಯಿಂದ ಚತುರಶ್ರದಲ್ಲಿ ಬುಧ ಶುಕ್ರರು ಇದ್ದಾರೆ. ಇವರಲ್ಲಿ ಬುಧ ಬಲಿಷ್ಠ, ಶುಕ್ರನು ಬಲವಿಲ್ಲದವನು. *ಶನಿಯಿಂದ ಶುಕ್ರ ಚತುರಶ್ರದಲ್ಲಿರುವುದರಿಂದ ಪಾದಾಂಶ ೪ನೇ ಒಂದು ಭಾಗಿಯಾಗುತ್ತಾನೆ. ಶನಿಯಿಂದ ಅಷ್ಟಮಸ್ಥಾನ ಮಕರಲಗ್ನ, ಇದು ಚತುರಶ್ರ ೪ನೇ ಒಂದು, ಆದ್ದರಿಂದ ಲಗ್ನಕ್ಕು ೪ನೇ ಒಂದು ಭಾಗವೇ ಬರುತ್ತದೆ.

ಆದ್ದರಿಂದ ೧ನೇ ೧ಭಾಗ, ೪ನೇ ೧ಭಾಗ, ೪ನೇ ೧ಭಾಗ, ಸಮಭೇದ, ೧೬ನೇ ೧೬ ಭಾಗ, ೧೬ನೇ ೪ಭಾಗ, ೧೬ನೇ ೪ಭಾಗ, ಇದನ್ನು ಛೇದಹೀನ ಮಾಡಿ ಅಂಶಗಳ ಪರಸ್ಪರ ಸಂಕಲನ ಮಾಡಬೇಕು. ೧೬+೪+೪=೨೪ ಆಯಿತು. ಶನಿದಶಾ ಸಂವತ್ಸರಗಳಾದ ೧೬-೧-೭-೧೮-೧ನ್ನು ೧೬ ರಿಂದ ಗುಣಿಸಿ, ೨೪ ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೧೦, ಮಾಸ ೮, ದಿವಸ ೨೪, ಘಳಿಗೆ ೫೨, ವಿಘ ೦, ಪರೆ ೪ ಬರುವುದು. ಇದು ಶನಿದಶೆಯಲ್ಲಿ ಶನಿಯ ಅಂತರ್ದಶೆ ಆಯಿತು.

ಶನಿದಶೆಯಲ್ಲಿ ಬುಧಭುಕ್ತಿ ತಿಳಿಯಬೇಕು. ಶನಿದಶೆಯ ವರ್ಷ ೧೬-೧--೭-೧೮-೧ ರನ್ನು ೪ ರಿಂದ ಗುಣಿಸಿ, ೨೪ ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೨, ಮಾಸ ೮, ದಿವಸ ೬, ಘಳಿಗೆ ೧೩, ವಿಘ ೦, ಪರೆ ೧, ಇದು ಶನಿದಶೆಯಲ್ಲಿ ಲಗ್ನ ಭುಕ್ತಿ ಆಯಿತು.

* ಅಂದರೆ ಬುಧನಷ್ಟು ಬಲವಿಲ್ಲ.

| | ವರ್ಷ | ಮಾ, | ದಿ, | ಘ, | ವಿ, | ಪರ |
|---|---|---|---|---|---|---|
| ಶನಿದಶೆಯಲ್ಲಿ ಶನ್ಯಂತರ್ದಶೆ | ೧೦ | ೮ | ೨೪ | ೫೨ | ೦ | ೪ |
| " ಬುಧಾಂತರ್ದಶೆ | ೨ | ೮ | ೬ | ೧೩ | ೦ | ೧ |
| " ಲಗ್ನಾಂತರ್ದಶೆ | ೨ | ೮ | ೬ | ೧೩ | ೦ | ೧ |
| ಅಂತೂ | ೧೬ | ೧ | ೭ | ೧೮ | ೧ | ೦ |

## ಶನಿದಶ ಭುಕ್ತಿಗೆ ೨ನೇ ಉದಾಹರಣೆ

ಶನಿ ೧ನೇ ೧ ಭಾಗ, ೪ನೆ ೧ ಭಾಗ, ಸಮಛೇದ ೧೬ನೇ ೧೬ ಭಾಗ, ೧೬ನೇ ೪ ಭಾಗ, ೧೬ನೇ ೪ ಭಾಗ, ಇದಕ್ಕೆ ಛೇದಹೀನ ಮಾಡಿದರೆ ೧೬-೪-೪ ಆಯಿತು. ಇದನ್ನು ಸಂಕಲನ ಮಾಡಿದರೆ ೧೬+೪+೪=೨೪ ಆಗುತ್ತೆ. ಶನಿದಶಾ ಸಂವತ್ಸರ ೧೬-೧-೭-೧೮-೧ ರನ್ನು ೧೬ ರಿಂದ ಗುಣಿಸಿ ೨೪ ರಿಂದ ಭಾಗಿಸುವುದಕ್ಕೆ ಬದಲಾಗಿ ೨೪ನೇ ೧೬ ಭಾಗ ೩ನೇ ೨ ಭಾಗ ಆಗುತ್ತದೆ.

| ಶನಿದಶಾ | ವ, | ಮಾ, | ದಿ, | ಘ, | ವಿಘ, |
|---|---|---|---|---|---|
| | ೧೬ | ೧ | ೭ | ೧೮, | ೧X೨ |
| ೩) | ೩೨ | ೨ | ೧೪ | ೩೬, | |
| | ೧೦ | ೮ | ೨೪ | ೫೨-೦,೪ ಪ್ರಾಣಕಲೆಬರುತ್ತೆ. | |

ಇದು ಶನ್ಯಂತರ್ದಶೆ.

ದಶಾಧಿಪತಿ ಎಷ್ಟು ಅಂತರ್ದಶೆ ಹೊಂದುವನೋ, ಅದರಲ್ಲಿ ಚತುರಶ್ರ ಸ್ಥಾನದ ಗ್ರಹಗಳು ೪ನೇ ೧ ಭಾಗ ಹೊಂದುವುದರಿಂದ ಶನ್ಯಂತರ್ದಶೆಯನ್ನು ೪ರಿಂದ ಭಾಗಿಸಬೇಕು.

| ಶನ್ಯಂತರ್ದಶೆ- | ವ, | ಮಾ, | ದಿ, | ಘ, | ವಿಘ | ಪ್ರಾ |
|---|---|---|---|---|---|---|
| ೪) | ೧೦, | ೮, | ೨೪, | ೫೨, | ೦, | ೪, |
| | ೨ | -೮ | -೬ | ೧೩ | ೦ | ೧ |

ಇದು ಬುಧಾಂತರ್ದಶೆ

ಶನ್ಯಂತರ್ದಶೆಯಲ್ಲಿ ಲಗ್ನದ ಅಂತರ್ದಶೆಯು ಬುಧಾಂತರ್ದಶೆಯಂತೆ ೪ನೆ ೧ ಭಾಗ ಅಂಶವಾದ್ದರಿಂದ ಮೇಲೆ ಉದಹರಿಸಿದಂತೆಯೇ ವರ್ಷ ೧-೮-೬-೧೩-೦-೧ ಬರುತ್ತದೆ. ಆದ್ದರಿಂದ ಮೊದಲು ಬಂದಂತೆ ಶನಿದಶೆಗೆ ಸರಿಹೋಗುತ್ತದೆ.

## ಗುರುದಶೆಗೆ ಉದಾಹರಣೆ

ಗುರುದಶೆ ವರ್ಷ ೧೩-೦-೫-೨೧-೮.

೧ನೇ ೧ ಭಾಗ, ೪ನೇ ೧ ಭಾಗ, ೭ನೇ ೧ ಭಾಗ=ಸಮಭೇದ ೨೮ನೇ ೨೮ ಭಾಗ, ೨೮ನೇ ೭ ಭಾಗ, ೨೮ನೇ ೫ ಭಾಗ, ಭೇದಹೀನ ೨೮-೭-೪ ಸಂಕಲನ ಮಾಡಿದರೆ, ೨೮+೭+೪=೩೯ ಆಯಿತು.

ಗುರುದಶಾ ಸಂವತ್ಸರಗಳನ್ನು (೧೩-೦-೫-೨೧-೮) ೨೮ ರಿಂದ ಗುಣಿಸಿ ೩೯ ರಿಂದ ಭಾಗ ಮಾಡಿದರೆ ಬಂದ ಲಬ್ಧ ವರ್ಷ ೯, ಮಾಸ ೫, ದಿ ೩, ಘ ೫೦, ವಿಘಳಿಗೆ ೩೦, ೩೯ನೇ ೧೭ ಭಾಗ. ಇದು ಗುರು ಅಂತರ್ದಶೆ ಯಾಯಿತು.

ಗುರುದಶಾ ಸಂವತ್ಸರಗಳನ್ನು (೧೩-೦-೫-೧೨-೮) ೭ ರಿಂದ ಗುಣಿಸಿ, ೩೯ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೧, ಮಾಸ ೪, ದಿ ೦, ಘಳಿಗೆ ೩೨, ವಿಘ ೫೬, ೨೭೩ನೇ ೫೬ ಭಾಗ. ಇದು ಗುರುದಶೆಯಲ್ಲಿ ಶನ್ಯಂತರ್ದಶೆ ಆಯಿತು.

ಗುರುದಶಾ ಸಂವತ್ಸರಗಳಾದ (೧೩-೦-೫-೨೧-೮)ರನ್ನು ೪ ರಿಂದ ಗುಣಿಸಿ ೩೯ ರಿಂದ ಭಾಗಿಸಿದರೆ ಬಂದ ಲಬ್ಧ ವರ್ಷ ೨, ಮಾ ೫, ದಿ ೦, ಘ ೫೭, ವಿ ೩೮, ೩೯ನೇ ೧೪ ಭಾಗ. ಇದು ಗುರುದಶೆಯಲ್ಲಿ ಬುಧಾಂತರ್ದಶೆ ಆಯಿತು.

| | ವ, | ಮಾ, | ದಿ, | ಘ, | ವಿ, | ಪ್ರಾ, ಕಾ. |
|---|---|---|---|---|---|---|
| ಗುರುದಶೆಯಲ್ಲಿ ಗುರ್ವಂತರ್ದಶೆ | ೯ | ೪ | ೩ | ೫೦ | ೩೩ | ೩೯ನೆ ೧೭ ಭಾ. |
| ಶನ್ಯಂತರ್ದಶೆ | ೨ | ೪ | ೦ | ೫೭ | ೩೮ | ೩೯ನೆ ೧೪ ಭಾ. |
| ಬುಧಾಂತರ್ದಶೆ | ೧ | ೪ | ೦ | ೩೨ | ೫೬ | ೨೭೩ನೆ ೫೬ ಭಾ. |
| ಅಂತು | ೧೩ | ೦ | ೫ | ೨೧ | ೮ | |

ಈ ಮೇಲೆ ಹೇಳಿದ ಉದಾಹರಣೆಗಳಿಂದ ಭುಕ್ತಿ ತೆಗೆದುಕೊಳ್ಳುವ ವಿಷಯವು ಸ್ಪಷ್ಟವಾಗುತ್ತೆ.

ಈ ಮೇಲೆ ಉದಾಹರಿಸಿರುವ ಪ್ರಕಾರವಲ್ಲದೆ ತ್ರೈರಾಶಿಕದ ಪ್ರಕಾರ ಸಹ ಈ ಭುಕ್ತಿಗಳನ್ನು ಸಾಧಿಸಬಹುದು. ಅದು ಹೇಗೆಂದರೆ :-

ಗುರುದಶಾ ಸಂವತ್ಸರ ೧೩-೦-೫-೨೧-೮ ಇರುತ್ತೆ. ಈ ದಶಾ ಸಂಖ್ಯೆಯನ್ನು ಅಂತರ್ದಶೆಯಾಗಿ ಮಾಡಬೇಕಾಗಿರುವುದರಿಂದ ದಶಾಪತಿಗೆ ಬರಬೇಕಾದ ಅಂಶ ತಿಳಿಯಬೇಕಾದರೆ ೨೮ನೇ ೨೮ ಭಾಗ, ೨೮ನೇ ೭ ಭಾಗ, ೨೮ನೇ ೪ ಭಾಗ. ಈ ಅಂಶ ಸಂಖ್ಯೆಯ ಮೊತ್ತವಾದ ೩೯ಕ್ಕೆ ವರ್ಷ ೧೩-೦-೫-೨೧-೮, ಆದರೆ ೨೮ಕ್ಕೆ ಎಷ್ಟೆಂದು ಪ್ರಶ್ನೆ ಮಾಡಿದ ಹಾಗಾಯಿತು. ಆದ್ದರಿಂದ ದಶಾನಾಥನ ವರ್ಷಗಳನ್ನು ಭುಕ್ತಿನಾಥನ ಅಂಶಸಂಖ್ಯೆಯಿಂದ ಗುಣಿಸಿ, ಒಟ್ಟು ಅಂಶಸಂಖ್ಯೆಯಿಂದ ಭಾಗಿಸಿದರೆ ಬರುವ ಉತ್ತರವಾಗಿರುವುದು.

ನ್ಯಾಸ- ಆದಿ, ಮಧ್ಯ, ಅಂತ್ಯ,

ಒಟ್ಟು ಅಂಶ÷ ದಶಾವರ್ಷ×ಭುಕ್ತಿ ಅಂಶ. ಈ ಪ್ರಕಾರವೇ ತಿಳಿಯತಕ್ಕದ್ದು.

## ಮತ್ತೊಂದು ಉದಾಹರಣೆ

ಗಣಿತಕಾರಿಕೆ-ಶ್ಲೋ।। ರವಿ ೪೨ ರದ್ಧೃತಚ್ಛೇದೋಹರಿ ೨೮ ಸ್ತ್ರ್ಯಂಶಾಪ ಹಾರಿಣಂ।। ಸಪ್ತಾಪಹಾರಿಣೋರೂಪಂ ೧೨ ಚತುರ್ಭಾಗ ಹೃತಃಕರಃ ।।೨೧।। ಯಾವಂ ತೋಪಹರಂತ್ಯಾಯು ಸ್ತಾವಚ್ಛೇದೈರ್ಧ್ವಜಾ ೮೪ ನ್ವಿತೈಃ।। ಧ್ವಜಸಂಖ್ಯಾ ಹತಾಪಿಂಡ ದಶಾಮೂಲದಶೋಚ್ಯತೇ।। ದ್ವಿತ್ರಿಸಪ್ತಚತುರ್ಭಕ್ತ ಹೃತಾದಂತರ್ದ ಶೋಚ್ಯತೇ।। ಇದಕ್ಕೆ ನ್ಯಾಸ -

| | | |
|---|---|---|
| ಅರ್ಧಾಂಶಹಾರಿಯಾದ | ಗ್ರಹಕ್ಕೆ | ೪೨. |
| ತೃತೀಯಾಂಶಹಾರಿಯಾದ | ಗ್ರಹಕ್ಕೆ | ೨೮. |
| ಸಪ್ತಮಾಂಶಹಾರಿಯಾದ | ಗ್ರಹಕ್ಕೆ | ೧೨. |
| ಚತುರ್ಥಾಂಶಹಾರಿಯಾದ | ಗ್ರಹಕ್ಕೆ | ೨೧. |
| | ಅಂತೂ | ೧೦೩. |
| ಧ್ರುವಕ ಮೂಲ ದಶಾಧಿಪತಿಗೆ | | ೮೪. |
| ಧ್ರುವಕ ಸಹಿತ | | ೧೮೭. |

| | ವ, | ಮಾ, | ದಿ, | ಘ, | ವಿ, |
|---|---|---|---|---|---|
| ಮೂಲದಶಾಧಿಪತಿ ರವಿ ೧೯ ವರ್ಷ, ಇದನ್ನು ೨೪ರಿಂದ ಗುಣಿಸಿ ೧೮೭ ರಿಂದ ಭಾಗ ಮಾಡಿದರೆ ಮೂಲ ದಶಾಧಿಪತಿಯ ಅಂತರ್ದಶೆ | ೮ | ೬ | ೧೨ | ೩೦ | ೪೮, ೧೮೭ನೇ ೨೪ ಭಾಗ |
| ಮೂಲದಶಾಧಿಪತಿ ಸಂವತ್ಸರ ೧೯ರನ್ನು ೨೮ ರಿಂದ ಗುಣಿಸಿ, ೧೮೭ ರಿಂದ ಭಾಗ ಮಾಡಿದರೆ | ೨ | ೧೦ | ೪ | ೧ | ೧೬, ೧೮೭ನೇ ೮ ಭಾಗ |
| ಮೂಲದಶಾ ವರ್ಷಗಳನ್ನು ೪೨ರಿಂದ ಗುಣಿಸಿ ೧೮೭ ರಿಂದ ಭಾಗಿಸಿದರೆ | ೪ | ೩ | ೬ | ೧೫ | ೨೪, ೧೮೭ನೇ ೧೨ ಭಾಗ |
| ಮೂಲದಶಾ ವರ್ಷಗಳನ್ನು ೧೨ರಿಂದ ಗುಣಿಸಿ ೧೮೭ ರಿಂದ ಭಾಗಿಸಿದರೆ | ೧ | ೨ | ೧೮ | ೫೫ | ೪೯ ೧೮೭ನೇ ೧೩೭ ಭಾಗ |
| ಮೂಲದಶಾಧಿಪತಿಯ ವರ್ಷಗಳನ್ನು ೨೧ರಿಂದ ಗುಣಿಸಿ, ೧೮೭ ರಿಂದ ಭಾಗಿಸಿದರೆ, | ೨ | ೧ | ೧೮ | ೭ | ೪೨ ೧೮೭ನೇ ೬ ಭಾಗ |
| ಅಂತೂ | ೧೯- | ೦- | ೦- | ೦- | ೦ |

## ಉದಾಹರಣೆ

ಯಾವಾಗ ದಶಾಧಿಪತಿಯ ಸಂಗಡ ಯಾವ ಗ್ರಹವಿದ್ದರೂ ಮತ್ತು ಪೂರ್ವೋಕ್ತ ಸ್ಥಾನದಲ್ಲಿ ಗ್ರಹವಿಲ್ಲದೆ ಇದ್ದರೆ ಅದು ೧ ಅಂಶಹಾರಕವಾಗುತ್ತದೆ. ಅದು ದಶಾಧಿಪತಿಗೆ

೧ ಹಾರಕ ೧ ಅಂಶ, ಅದೂ ಹರಣವಾಗುತ್ತದೆ. ಅದು ೧/೨ ಈ ರೂಪವಾಗಿದೆ. ಇದರ ನ್ಯಾಸ ೧, ಇದರ ಛೇದ ಗುಣಾಕಾರ ಮಾಡಿದರೆ ೨, ೧/೨ಇದು ಸಮಛೇದವಾಯಿತು. ಇದರಲ್ಲಿ ಛೇದ ಕಳೆದರೆ ೧/೨ ಇದು ಗುಣಕ ವಾಯಿತು. ಇದರಯೋಗ ೩, ಇದು ಭಾಗಹಾರವಾಯಿತು. ದಶಾಧಿಪತಿಯ ಆಯುರ್ವಷಾದಿ ೩।೦।೦।೦ ಇದನ್ನು ೨ ರಿಂದ ಗುಣಿಸಿ ಭಾಗಾಹಾರದಿಂದ ಭಾಗ ಮಾಡಬೇಕು. ಫಲ ೨, ಇದು ಮೂಲ ದಶಾಧಿಪತಿಗೆ ಅಂತರ್ದಶೆ ಆಯಿತು. ಆ ಮೇಲೆ ಮೂಲದಶಾಧಿಪತಿ ವರ್ಷಾದಿ, ೩।೦।೦।೦ ೧ ರಿಂದ ಗುಣಾಕಾರ ಮಾಡಿ, ಹಾರ ೩೦ ರಿಂದ ಭಾಗ ತೆಗೆದುಕೊಂಡರೆ, ಫಲ ವರ್ಷಾದಿ ೩।೦।೦।೦ ಇದು ದಶಾಧಿಪತಿಯ ಸಂಗಡ ಯಾವ ಗ್ರಹವಿರುತ್ತೋ, ಅದರ ಅಂತರ್ದಶೆ ಆಯಿತು. ಮೂಲದಶಾಧಿಪತಿಗೆ ಯಾವ ಅಂತರ್ದಶಾ ಇರುತ್ತದೋ ಅದರಲ್ಲಿ ಅರ್ಧ ಸಂಗಡವಿರುವ ಗ್ರಹಕ್ಕೆ ಹರಣವಾಯಿತು. ಇವೆರಡೂ ಸೇರಿಸಿದರೆ ಅದು ೩।೦।೦।೦ ದಶಾಯು ಆಗುತ್ತದೆ ॥೧॥

ಆಗ ಮೂಲಾ ದಶಾಧಿಪತಿಗೆ ತ್ರಿಕೋಣ ೫।೯ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದರೆ ೪-೮-೭ ಇದರೊಳಗೆ ಆಗಲೀ ಇದರ ಜೊತೆಗೆ ಯಾವ ಗ್ರಹವೂ ಇಲ್ಲದಿದ್ದರೆ ನ್ಯಾಸ ೧ನೇ ೧ ಭಾಗ, ೨ನೇ ೧ ಭಾಗ ಛೇದದಿಂದ ಪರಸ್ಪರ ಗುಣಿಸಿದರೆ ೩ನೇ ೩ ಭಾಗ, ೩ ನೇ ೧ ಭಾಗ ಛೇದಹೀನ ೩।೧ ಇದು ಗುಣಾಕಾರ ಆಯಿತು, ಇದರ ಯೋಗ ೪ ಭಾಗಹಾರ ಆಯಿತು. ಮೂಲದಶಾಧಿಪತಿ ದಶಾವರ್ಷಾದಿ ೪।೦।೦।೦ ಇದು ೩ ರಿಂದ ಗುಣಿಸಿ, ೪ ರಿಂದ ಭಾಗಕೊಟ್ಟರೆ ೩।೦।೦।೦ ಇದಕ್ಕೆ ೧ ರಿಂದ ಗುಣಾಕಾರ ಮಾಡಿ ೪ ರಿಂದ ಭಾಗ ಮಾಡಿದರೆ ಲಬ್ದ ೧।೦।೦।೦, ಇದು ತ್ರಿಕೋಣದಲ್ಲಿರುವ ಗ್ರಹಕ್ಕೆ ಅಂತರ್ದಶೆಯನ್ನು ೩ ಭಾಗ ಬಿಟ್ಟು ಆಗುತ್ತದೆ.

ಆಗ ದಶಾಧಿಪತಿಯಿಂದ ಚತುರಶ್ರ ೪।೮ನೇ ಸ್ಥಾನದಲ್ಲಿದ್ದ ಯಾವ ಗ್ರಹ ವಿರುತ್ತೋ ಆ ಗ್ರಹದ ಸಂಗಡವಾಗಲಿ ೯-೫-೭ನೇ ಸ್ಥಾನದಲ್ಲಿದ್ದ ಯಾವ ಗ್ರಹವೂ ಇಲ್ಲದೆ ಇದ್ದರೆ, ಆಗ ನ್ಯಾಸ ೧ನೇ ೧ ಭಾಗ, ೨ನೇ ೧ ಭಾಗ, ಗುಣಿತ ೪ನೇ ೪ ಭಾಗ, ಛೇದಹೀನವಾಗಿ ಮಾಡಿದರೆ ೪।೧ ಇದಕ್ಕೆ ಗುಣಾಕಾರ ಇದರ ಯೋಗ ೫, ಭಾಗಾಹಾರ ಮೂಲದಶಾಧಿಪತಿ ೫।೦।೦।೦ ಕ್ಕೆ ೪ ರಿಂದ ಗುಣಿಸಿದರೆ ೨।೦।೦।೦ ಆಯಿತು. ಇದಕ್ಕೆ ೫ರಿಂದ ಭಾಗಮಾಡಿದರೆ ೪।೦।೦।೦, ಇದು ಮೂಲದಶಾಧಿಪತಿಗೆ ಅಂತರ್ದಶಾ ಕಾಲವಾಯಿತು. ಇದರ ದಶಾ ೫।೦।೦।೦ ಗುಣಾಕಾರ ಮಾಡಿ ೫ ರಿಂದ ಭಾಗ ಮಾಡಿದರೆ, ೧।೦।೦।೦ ಇದಕ್ಕೆ ೪ ವಾ ೮ನೇ ಸ್ಥಾನದಲ್ಲಿರುವ ಗ್ರಹಕ್ಕೆ ಅಂತರ್ದಶಾ ೪ನೇ ೧ ಭಾಗ ಕಳೆದು ಆಯಿತು, ಇದರ ಯೋಗ ೫।೦।೦।೦ ಇದು ಮೂಲ ದಶಾವರ್ಷಾದಿ ಆಗುತ್ತದೆ.

ಅಥವಾ ದಶಾಧಿಪತಿಯಾದ ೭ನೇ ಸ್ಥಾನದಲ್ಲಿ ಯಾವ ಗ್ರಹವಾದರೂ ಇದ್ದರೆ ಮತ್ತು ಆ ಗ್ರಹದ ಜೊತೆಗೆ ವಾ ೯।೫।೪।೮ರಲ್ಲಿ ಯಾರೂ ಇಲ್ಲದೆ ಹೋದರೆ ಆಗ ನ್ಯಾಸ ೧ನೇ ೧ ಭಾಗ, ೭ನೇ ೧ ಭಾಗ, ಛೇದಗುಣಿತ ೭ನೇ ೭ ಭಾಗ, ೭ನೇ ೧ ಭಾಗ ಛೇದಹೀನ ಮಾಡಿದರೆ, ೭।೧ ಇದರ ಗುಣಕ, ಇದರ ಯೋಗ ೮, ಭಾಗಹಾರ ದಶಾಪತಿವರ್ಷ ೮।೦।೦।೦, ಇದನ್ನು ಗುಣಕದಿಂದ ಗುಣಿಸಿದರೆ ೫೬, ಹಾರದಿಂದ ಭಾಗ ಮಾಡಿದರೆ ೭।೦।೦।೦ ಇದು ದಶಾಧಿಪತಿಯ ಅಂತರ್ದಶೆ ಆಯಿತು. ಇದರ ದಶಾ ೮।೦।೦।೦ ಹಿಂದಿನ ಗುಣಕ ೧ ರಿಂದ ಗುಣಾಕಾರ ಮಾಡಿ ಹಾರ ೮ ರಿಂದ ಭಾಗ ಮಾಡಿದರೆ ೧।೦।೦ ಇದು ಸಪ್ತಮ ಸ್ಥಾನದಲ್ಲಿರುವ ಅಂತರ್ದಶಾ ಆಯಿತು. ಇದರ ಯೋಗ-ಆ ದಶಾಧಿಪತಿಗೆ ದಶಾ ೮।೦।೦।೦ ಇಷ್ಟು ಒಂದಕ್ಕೆ ವಿಕಲ್ಪವಾಯಿತು.

ಮೊದಲು ದಶಾಧಿಪತಿಯ ಅಂತರ ಆಗ ಅಂಶಹಾರಕಕ್ಕೆ ಆಗುತ್ತದೆ. ಆ ದಶಾಧಿಪತಿಯ ಸಂಗಡ ಯಾವುದಾದರೂ ಗ್ರಹವಿದ್ದರೆ ಮತ್ತು ೪-೮-೭ನೇ ಸ್ಥಾನ ದಲ್ಲಿ ಯಾವ ಗ್ರಹವಾದರೂ ಇಲ್ಲದಿದ್ದರೂ ನ್ಯಾಸ-೧ನೇ ೧ ಭಾಗ, ೨ನೇ ೧ ಭಾಗ, ೩ನೇ ೧ ಭಾಗ, ಅನ್ಯೋನ್ಯ ಛೇದಹತ ೯ನೇ ೬ ಭಾಗ, ೬ನೇ ೩ ಭಾಗ, ೬ನೇ ೨ ಭಾಗ, ಛೇದಹೀನ ೬।೩।೨ ಗುಣಾಕಾರ ಇದರ ಯೋಗ ೧೧ ಭಾಗಾಹಾರ ದಶಾಧಿಪತಿಗೆ ದಶಾ ೨೧।೦।೦।೦ ಇದನ್ನು ೬ ರಿಂದ ಗುಣಿಸಿ ೧೧ ರಿಂದ ಭಾಗಮಾಡಿದರೆ ಆಮೇಲೆ ೬।೦।೦।೦ ಆಗುವುದು. ಇದು ಮೂಲ ದಶಾಧಿಪತಿಗೆ ಅಂತರ್ದಶೆಯಾಯಿತು. ೧೧।೦।೦।೦ರನ್ನು ೩ ರಿಂದ ಗುಣಾಕಾರ ಮಾಡಿ ೧೧ರಿಂದ ಭಾಗವನ್ನು ತೆಗೆದುಕೊಂಡರೆ ೩।೦।೦।೦ ಆಗುವುದು. ಇದು ಸಂಗಡದಲ್ಲಿರುವ ಅರ್ಥವಾಚಕವಾಯಿತು. ಪುನಃ ೧೧।೦।೦।೦ ದ್ವಿ ೨ ರಿಂದ ಗುಣಾಕಾರ ಮಾಡಿ ೧೧ರಿಂದ ಭಾಗ ತೆಗೆದುಕೊಂಡರೆ ೨।೦।೦।೦ ಆಗುವುದು. ಇದು ತ್ರಿಕೋಣ ಗ್ರಹಕ್ಕೆ ಆಯಿತು. ಇದೆಲ್ಲಾ ಸೇರಿಸಿದರೆ ೧೧।೦।೦।೦ ಮೂಲದಶಾ ಆಯಿತು.

ಯಾವುದಾದರೂ ಗ್ರಹ ದಶಾಧಿಪತಿಯ ಸಂಗಡ ಮತ್ತು ೪-೮ನೇ ಸ್ಥಾನದಲ್ಲಿ ಗ್ರಹಗಳಿದ್ದರೆ ಮತ್ತು ೯-೫-೭ನೇ ಸ್ಥಾನದಲ್ಲಿ ಯಾವ ಗ್ರಹವೂ ಇಲ್ಲದೆ ಇದ್ದರೆ ಅದಕ್ಕೆ ನ್ಯಾಸ ೧ನೇ ೧ ಭಾಗ, ೨ನೇ ೧ಭಾಗ, ೪ನೇ ೧ಭಾಗ, ಛೇದಹತ ೮ನೇ ೮ಭಾಗ, ೮ನೇ ೪ಭಾಗ, ೮ನೇ ೨ ಭಾಗ, ಛೇದಹೀನ ೮।೪।೨ ಇದು ಗುಣಕ, ಇದರ ಯೋಗ ೪೧ ಭಾಗಹಾರ ದಶಾಧಿಪತಿ ೧೪।೦।೦।೦ ಎಂಟರಿಂದ ಗಣನ ಮಾಡಿ

೧೪ ರಿಂದ ಭಾಗ ಮಾಡಿದರೆ ೮।೦।೦।೦, ಇದು ದಶಾಧಿಪತಿಯ ಅಂತರ, ನಂತರ ೧೪।೦।೦।೦ ರನ್ನು ೪ ರಿಂದ ಗುಣಿಸಿ ೧೪ ರಿಂದ ಭಾಗ ಮಾಡಿದರೆ ಲಬ್ಧ ೪।೦।೦।೦ ಆಗುವುದು. ಇದನ್ನು ಅರ್ಧಹರಣ ಮಾಡಿದರೆ ಪುನಃ ೧೪।೦।೦।೦ ಆಗುವುದು. ಇದನ್ನು ೨ರಿಂದ ಗುಣಿಸಿ, ೧೪ರಿಂದ ಭಾಗ ಮಾಡಿದರೆ ೨।೦।೦।೦ ಆಗುವುದು. ಇದಕ್ಕೆ ಚತುರ್ಥ ಭಾಗ ಪಾಚಕವಾಗಿ ಬರುತ್ತದೆ. ಇದನ್ನೆಲ್ಲಾ ಒಟ್ಟು ಮಾಡಲಾಗಿ ೪।೦।೦।೦ ಆಗುತ್ತದೆ. ಇದು ಮೂಲದಶೆಯಾಗುತ್ತದೆ.

ಮತ್ತು ದಶಾಧಿಪತಿಯ ಸಂಗಡ ಯಾವ ಗ್ರಹವಾದರೂ ಇದ್ದರೆ, ಮತ್ತು ೭ನೇ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದರೆ ಮತ್ತು ಪೂರ್ವೋಕ್ತ ಸ್ಥಾನಗಳಲ್ಲಿ ಯಾವ ಗ್ರಹವೂ ಇಲ್ಲದಿದ್ದರೆ ನ್ಯಾಸ ೧ನೇ ೧ ಭಾಗ, ೨ನೇ ೧ ಭಾಗ, ೭ನೇ ೧ ಭಾಗ ಪರಸ್ಪರ ಛೇದಹತ ೧೪ನೇ ೧೪ ಭಾಗ, ೧೪ನೇ ೭ ಭಾಗ, ೧೪ನೇ ೨ ಭಾಗ, ಛೇದಹೀನ ೧೪।೭।೨, ಇದರ ಯೋಗ ೨೩ ಭಾಗಾಹಾರ ದಶಾಧಿಪತಿವರ್ಷ ೨೩।೦।೦।೦ ಗುಣಕ ೧೪ರಿಂದ ಗುಣಾಕಾರ ಮಾಡಿ ೨೩ರಿಂದ ಭಾಗ ಮಾಡಿದರೆ ೧೪।೦।೦।೦ ಆಗುವುದು. ಇದು ದಶಾಧಿಪತಿಯ ಅಂತರ. ಆಮೇಲೆ ಎರಡನೇ ಗುಣಕ ೭ ರಿಂದ ಗುಣಿ ೨೩ ರಿಂದ ಭಾಗ ಮಾಡಿದರೆ ೭।೦।೦।೦ ಆಗುವುದು. ಇದು ಅದರ ಸಂಗಡವೇ ಇರುವ ಗ್ರಹಕ್ಕೆ ಅಂತರ್ದಶೆ ಆಗಿರುತ್ತೆ. ಮತ್ತು ೨ರಿಂದ ಗುಣಿಸಿ ೨೩ರಿಂದ ಭಾಗ ಮಾಡಲಾಗಿ ೨।೦।೦।೦ ಆಗುತ್ತದೆ. ಇದು ಸಪ್ತಮ ಗ್ರಹಕ್ಕೆ ಬರುವುದು. ಇದರ ಯೋಗ ಆ ಮೂಲದಶಾ ೨೩।೦।೦।೦ ಆಗುತ್ತದೆ.

ದಶಾಧಿಪತಿಯಿಂದ ೯ ಅಥವಾ ೫ನೇ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದು ಮತ್ತು ಪೂರ್ವೋಕ್ತ ಸ್ಥಾನದಲ್ಲಿ ಗ್ರಹವಿಲ್ಲದಿದ್ದರೆ ನ್ಯಾಸ ೧ನೇ ೧ಭಾಗ, ೩ನೇ ೧ ಭಾಗ, ಪರಸ್ಪರ ಛೇದಹತ ೯ ನೇ ೯ ಭಾಗ ೯ನೇ ೩ ಭಾಗ, ಛೇದಹೀನ ೯।೩।೩ ಗುಣಕ ಇದು ಯೋಗ ೧೫, ಭಾಗಾಹಾರ ದಶಾಧಿಪತಿ ದಶಾ ೫।೦।೦।೦ ಒಂಭತ್ತರಿಂದ ಗುಣಿಸಿ ೧೫ ರಿಂದ ಭಾಗ ಮಾಡಿದರೆ ಲಬ್ಧ ೩।೦।೦।೦ ಇದು ಮೂಲ ದಶಾಧಿಪತಿಗೆ ಆಯಿತು. ಆಮೇಲೆ ೩ ರಿಂದ ಗುಣಿಸಿ ೧೬ ರಿಂದ ಭಾಗ ಮಾಡಿದರೆ ೧।೦।೦।೦ ಆಗುವುದು. ಇದು ತ್ರಿಕೋಣದಲ್ಲಿರುವ ಗ್ರಹಕ್ಕೆ ಬರುವುದು. ಇದೇ ಪ್ರಕಾರ ೨ನೆಯದು ಸಹ ಆಗುವುದು. ಈ ಮೂರು ಸ್ಥಾನಗಳನ್ನು ಸೇರಿಸಿದರೆ ೫।೦।೦।೦ ಆಗುವುದು. ಇದು ಮೂಲದಶೆ ಆಗುವುದು.

ಯಾವ ದಶಾಧಿಪತಿಗೆ ೯।೫ನೇ ಸ್ಥಾನದಲ್ಲೂ ೪।೮ನೇ ಸ್ಥಾನದಲ್ಲು ಸಹಾ ಗ್ರಹವಿದ್ದರೆ ಮತ್ತು ಇದರ ಸ್ಥಾನಗಳಲ್ಲಿ ಗ್ರಹವಿಲ್ಲದಿದ್ದರೂ ನ್ಯಾಸ-೧ನೇ ೧ ಭಾಗ, ೩ನೇ ೧ ಭಾಗ, ೪ನೇ ೧ ಭಾಗ, ಛೇದಹತ ೧೨ನೇ ೧೨ ಭಾಗ, ೧೨ನೇ ೪ ಭಾಗ, ೧೨ನೆ ೩ ಭಾಗ, ಛೇದಹೀನ ೧೨।೪।೩ ಇದು ಗುಣಕ. ಇದರ ಯೋಗ ೧೯ ಭಾಗಾಹಾರ ದಶಾಧಿಪತಿ ೧೯।೦।೦।೦ ಮೊದಲು ೧೨ ರಿಂದ ಗುಣಿಸಿ ೧೯

ರಿಂದ ಭಾಗ ಮಾಡಿದರೆ ೧೧।೦।೦।೦ ಬರುತ್ತದೆ. ಇದು ಮೂಲದಶಾಧಿಪತಿಯ ಅಂತರ ಆಯಿತು. ಮತ್ತು ೪ ರಿಂದ ಗುಣಿಸಿ ೧೯ರಿಂದ ಭಾಗ ಮಾಡಿದರೆ ೪।೦।೦।೦ ಇದು ತ್ರಿಕೋಣದಲ್ಲಿದ್ದ ಗ್ರಹಗಳಿಗೆ ಬರುತ್ತದೆ. ಆಮೇಲೆ ೩ ರಿಂದ ಗುಣಿಸಿ ೧೯ ರಿಂದ ಭಾಗ ಮಾಡಿದರೆ ಭಾಗಲಬ್ಧ ೩।೦।೦।೦ ಇದು ಚತುರಶ್ರದಲ್ಲಿರುವ ಚತುರ್ಥಾಂಶ ಹಾರಕಹೋಯಿತು. ಇದನ್ನೆಲ್ಲಾ ಒಟ್ಟು ಮಾಡಿದರೆ ೧೯।೦।೦ ಮೂಲದಶಾ ಬರುತ್ತದೆ.

ಆ ದಶಾಧಿಪತಿಗೆ ೫ ಅಥವಾ ೯ನೇ ಸ್ಥಾನದಲ್ಲಿ ಮತ್ತು ಸಪ್ತಮದಲ್ಲಿ ಯಾವುದಾದರೂ ಗ್ರಹವಿದ್ದರೆ, ಪೂರ್ವೋಕ್ತ ಸ್ಥಾನದಲ್ಲಿ ಗ್ರಹವಿದ್ದರೆ ನ್ಯಾಸವಿಧಿ-೧, ೩ರಲ್ಲಿ ೧ ಭಾಗ, ೭ ರಲ್ಲಿ ೧ ಭಾಗ, ಪರಸ್ಪರ ಛೇದಹತ-೨೧, ೨೧ ರಲ್ಲಿ ೭ ಭಾಗ, ೨೧ರಲ್ಲಿ ೩ ಭಾಗ, ಛೇದಹೀನ ೨೧-೭-೧ ಇದರ ಸಂಯೋಗ ೨೧+೭+೩=೩೧ ಇದರ ಯೋಗವಾಯಿತು. ಭಾಗಾಹಾರ ಆಯಿತು. ದಶಾಧಿಪತಿ ೩೧,೦,೦,೦ ಗುಣಕ ೨೧ ರಿಂದ ಗುಣಿಸಿ ೩೧ ರಿಂದ ಭಾಗ ಮಾಡಿದರೆ ಭಾಗಲಬ್ಧ ೭,೦,೦,೦ ವಿಭಾಗ ವಾಚಕ ಬಂತು. ಮತ್ತು ಇದಕ್ಕೆ ಗುಣಾಕಾರ ೩೧ ರಿಂದ ಭಾಗ ಮಾಡಿದರೆ ಭಾಗ ಲಬ್ಧ ೩,೦,೦,೦ ಸಪ್ತಮ ಭಾವಾಚಕವಾಗುತ್ತದೆ. ಇದರ ಸಂಯೋಗ ೩೧,೦,೦,೦ ಮೂಲದಶೆ ಆಯಿತು. ॥೧೦॥

ಆ ದಶಾಧಿಪತಿಯಿಂದ ೪, ೮ ಈ ಎರಡು ಸ್ಥಾನದಲ್ಲಿ ಗ್ರಹವಿದ್ದರೆ ಮತ್ತು ಪೂರ್ವೋಕ್ತ ಸ್ಥಾನದಲ್ಲಿ ಇಲ್ಲದಿದ್ದರೆ ಆಗ ನ್ಯಾಸಕ್ರಮ-೧, ೪ ರಲ್ಲಿ ೧ ಭಾಗ, ೪ ರಲ್ಲಿ ೧ ಭಾಗ ಛೇದದಿಂದ ಗುಣಿಸಿದರೆ ೧೬, ೧೬ ರಲ್ಲಿ ೪ ಭಾಗ, ೧೬ರಲ್ಲಿ ೪ ಭಾಗ, ಛೇದಹೀನ ೧೬,೪,೪ ಗುಣ. ಇದರ ಸಂಯೋಗ ೧೬+೪+೪ ಭಾಗಾಹಾರ ಆಯಿತು. ಮೂಲದಶಾಧಿಪತಿ ವರ್ಷ ೬-೦-೦-೦ ಹದಿನಾರರಿಂದ ಗುಣಿಸಿ ೨೪ ರಿಂದ ಭಾಗ ತೆಗೆದುಕೊಂಡರೆ ೪೦-೦-೦ ಇದು ದಶಾಧಿಪತಿಯ ಅಂತರ ಆಗುತ್ತದೆ. ಆಗ ೪ ರಿಂದ ಗುಣಿಸಿ ೨೪ರಿಂದ ಭಾಗ ಮಾಡಿದರೆ ೧-೦-೦-೦ ಚತುರ್ಥಾಂಶವಾಚಕ ಅಂತವಾಯಿತು. ೨ನೇ ಸ್ಥಾನದ್ದು ಇಷ್ಟೇ ಆಯಿತು. ಈ ಮೂರು ಸೇರಿದರೆ ೬-೦-೦-೦ ಇದು ಮೂಲದಶೆ ಆಯಿತು ॥೧೧॥

ಆ ದಶಾಧಿಪತಿಯಾದ ೪ ಅಥವಾ ೮, ಈ ಸ್ಥಾನಗಳಲ್ಲಿ ಗ್ರಹವಿದ್ದರೆ ಮತ್ತು ೭ ನೇ ಸ್ಥಾನದಲ್ಲಿ ಗ್ರಹವಿದ್ದರೂ ಮತ್ತು ಎಲ್ಲಿಯೂ ಗ್ರಹವಿಲ್ಲದಿದ್ದರೂ ನ್ಯಾಸ-೨೮, ೨೮ರಲ್ಲಿ ೭ ಭಾಗ, ೨೮ರಲ್ಲಿ ೪ ಭಾಗ, ಛೇದಹತ ೨೮-೭-೪ ಇದರ ಸಂಯೋಗ ೨೮+೭+೪=೩೯ ಭಾಗಹಾರವಾಗುತ್ತೆ. ದಶಾಧಿಪತಿ ವರ್ಷ ೩೭-೦-೦-೦ ಇದಕ್ಕೆ ೨೮ರಿಂದ ಗುಣಿಸಿ, ೩೯ರಿಂದ ಭಾಗಮಾಡಿದರೆ ೨೫-೧೦-೪-೩೬ ಮೂಲದಶೆ ಶನಿಗೆ ಬಂತು. ಈ ಪ್ರಕಾರವಾಗಿ ೭ ರಿಂದ ಗುಣಿಸಿ, ೩೯ ರಿಂದ ಭಾಗಮಾಡಿದರೆ

೬-೫-೫-೮ ಚತುರಸ್ಥಿತ ಗ್ರಹಗಳಿಗೆ ಬರುತ್ತದೆ. ಇದನ್ನು ೪ ರಿಂದ ಗುಣಿಸಿ, ೩೯ ರಿಂದ ಭಾಗಮಾಡಿದರೆ ೩-೮-೯-೨೫ ಸಪ್ತಮಸ್ಥಿತ ಗ್ರಹಕ್ಕೆ ಬರುತ್ತದೆ. ಈ ೩ ಸ್ಥಾನಗಳನ್ನು ಸೇರಿಸಿದರೆ ಅದೇ ಮೂಲದಶೆಯಾಯಿತು. ।।೧೨।।

ಈ ಪ್ರಕಾರ ಮೂರು ವಿಕಲ್ಪವಾಯಿತು. ಯಾವ ದಶಾಧಿಪತಿಯ ಸಂಗಡ ಯಾವುದಾದರೂ ಗ್ರಹವಿದ್ದು ಮತ್ತು ತ್ರಿಕೋಣ ೯-೫ನೇ ಸ್ಥಾನದಲ್ಲು ಗ್ರಹವಿದ್ದು ಮತ್ತು ೪-೮-೭ನೇ ಸ್ಥಾನದಲ್ಲಿ ಗ್ರಹವಿಲ್ಲದೆ ಇದ್ದರೆ ನ್ಯಾಸವಿಧಿ - ೧,೧,೩ ರಲ್ಲಿ ೧ ಭಾಗ, ೪ರಲ್ಲಿ ೧ ಭಾಗ, ಪರಸ್ಪರ ಭೇದಹತ ೧೮,೯,೧೩ ರಲ್ಲಿ ೬ ಭಾಗ, ೧೮ರಲ್ಲಿ ೬ ಭಾಗ, ಭೇದಹೀನ ಮಾಡಿದರೆ ೧೮-೯-೬-೬ ಇದು ಗುಣ. ೧೮+೯+೬+೬=೩೯ ಭಾಗಾಹಾರ ಆಯಿತು. ಮೂಲದಶಾದಿಪತಿ ೧೩-೦-೦-೦ ಪೂರ್ಣವಿಧಿ ಪ್ರಕಾರ ೪ ಅಂತರ್ದಶೆಗಳ ಯೋಗ ೧೦-೦-೦-೦. ಇದು ಮೂಲದಶೆಯಾಯಿತು.

ಆ ದಶಾಧಿಪತಿಯ ಸಂಗಡ ಯಾವುದಾದರೂ ಗ್ರಹವಿದ್ದು ಮತ್ತು ತ್ರಿಕೋಣ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದರೆ ಮತ್ತು ೪-೮ರಲ್ಲಿ ೧ ಸ್ಥಾನದಲ್ಲಿ ಗ್ರಹವಿದ್ದರೆ ನ್ಯಾಸ- ೧,೧,೧,೧ ರಲ್ಲಿ ೪ ಭಾಗ, ಭೇದಹತ ೨೪, ೧೨, ೨೪ ರಲ್ಲಿ ೩ ಭಾಗ, ಭೇದಹೀನ ೨೪,೧೨-೮-೬ ಇದರ ಯೋಗ ೨೪+೧೨+೮+೬=೫೦. ಭಾಗಹಾರ ಮೂಲದಶಾ ೩೬-೦-೦-೦ ಪೂರ್ವ ವಿಧಿ ಪ್ರಕಾರ ೪ ಅಂತರ್ದಶಾಯೋಗ. ೩೬-೦-೦-೦ ಇದು ಮೂಲದಶೆಯಾಯಿತು. ।।೧೪।।

ಆ ದಶಾಧಿಪತಿಯ ಸಂಗಡ ಯಾವುದಾದರು ಗ್ರಹವಿದ್ದು ಮತ್ತು ೯-೫ನೇ ಸ್ಥಾನದಲ್ಲಿ ಒಂದರಲ್ಲಿ ಗ್ರಹವಿದ್ದು ಮತ್ತು ೭ನೇ ಸ್ಥಾನದಲ್ಲಿ ಗ್ರಹವಿದ್ದರೆ ಉಳಿದ ಸ್ಥಾನಗಳಲ್ಲಿ ಗ್ರಹವಿಲ್ಲದಿದ್ದರೆ ನ್ಯಾಸ-೧, ೧, ೩ ರಲ್ಲಿ ೧ ಭಾಗ, ೭ರಲ್ಲಿ ೧ ಭಾಗ ಪರಸ್ಪರ ಭೇದದಿಂದ ಗುಣಿಸಿದರೆ ೪೨, ೨೧, ೪೨ರಲ್ಲಿ ೧೪ ಭಾಗ ೪೨ರಲ್ಲಿ ೬ ಭಾಗ, ಭೇದಹೀನ ೪೨-೨೦-೧೪-೬ ಇದರ ಸಂಯೋಗ ೪೨+೨೧+೧೪+೬=೮೩ ಹಾರ ೦, ಮೂಲದಶಾ ೧೯-೦-೦-೦ ಪೂರ್ವ ಪ್ರಕಾರ ನಾಲ್ಕರ ಅಂತರ್ದಶಾ ಯೋಗ ಮೂಲದಶೆಗೆ ಸಿಗುವುದು ।।೧೫।।

ಒಂದುಗ್ರಹ ದಶಾಧಿಪತಿಯ ಸಂಗಡ ಇದ್ದು ೪-೮ನೇ ಸ್ಥಾನದಲ್ಲಿ ಗ್ರಹವಿದ್ದರೆ ಅದಕ್ಕೆ ನ್ಯಾಸ-೧, ೨ರಲ್ಲಿ ೧ ಭಾಗ, ೪ರಲ್ಲಿ ೧ ಭಾಗ, ೪ರಲ್ಲಿ ೧ ಭಾಗ, ಗುಣಿತ ೩೨,೩೨ರಲ್ಲಿ ೧೬ ಭಾಗ, ೩೨ರಲ್ಲಿ ೮ ಭಾಗ, ೩೨ರಲ್ಲಿ ೮ ಭಾಗ ಭೇದಹೀನ ೩೨-೧೬-೮-೮ ಇದರ ಸಂಯೋಗ ೩೨+೧೬+೮+೮=೬೪ ಭಾಗಹಾರ ಮೂಲ ದಶಾ ೩೬-೦-೦-೦ ಪೂರ್ವರೀತಿಯಿಂದ ನಾಲ್ಕು ಸ್ಥಾನಾಧಿಪತಿಗಳ ಅಂತರ್ದಶಾ ಮೊದಲನೇ ೧೮-೦-೦-೦ ಎರಡನೇ ೯-೦-೦-೦ ಮೂರನೇ ೪-೬-೦-೦ ಇದರ ಸಂಯೋಗ ೩೬-೦-೦-೦ ಇದು ಮೂಲದಶೆಯಾಯಿತು ।।೧೬।।

ಆ ದಶಾಧಿಪತಿಯ ಸಂಗಡ ಗ್ರಹವಿದ್ದು ಮತ್ತು ೪ ಅಥವಾ ೮ನೇ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದು ೭ನೇ ಸ್ಥಾನದಲ್ಲಿ ಗ್ರಹವಿದ್ದರೆ ಇದಕ್ಕೆ ನ್ಯಾಸ-೧ರಲ್ಲಿ ೧ ಭಾಗ, ೨ರಲ್ಲಿ ೧ ಭಾಗ, ೪ರಲ್ಲಿ ೧ ಭಾಗ, ೭ರಲ್ಲಿ ೧ ಭಾಗ, ಭೇದಹತ ೫೬ರಲ್ಲಿ ೫೬, ೫೬ರಲ್ಲಿ ೫೮, ೫೬ ರಲ್ಲಿ ೧೪, ೫೬ರಲ್ಲಿ ೮ ಭಾಗ ಭೇದಹೀನ ೫೬-೨೮-೧೪-೮, ಇದರ ಸಂಯೋಗ ೫೬+೨೮+೧೪, ೯೦=೧೦೬, ಇದರ ಯೋಗ ಭಾಗಹಾರ ೦, ದಶಾಧಿಪತಿ ೩೬-೦-೦-೦ ಪೂರ್ವ ಕ್ರಮದ ಪ್ರಕಾರ ಮೊದಲನೆ ದಶಾ ೧-೯-೬-೪೮, ಎರಡನೇ ೭-೬-೩-೦, ಮೂರನೆ ೪-೯-೧-೪೨, ನಾಲ್ಕನೆ ೨-೮-೧೮-೬ ಇದರ ಸಂಯೋಗ ೩೬-೦-೦-೦ ಇದು ಮೂಲದಶೆ ಆಯಿತು ॥೧೭॥

ಆ ದಶಾಧಿಪತಿಗೆ ೫-೯ನೇ ಸ್ಥಾನದಲ್ಲಿ ಯಾವುದಾದರು ಗ್ರಹ ಮತ್ತು ೪ ಅಥವಾ ೮ನೆ ಸ್ಥಾನದಲ್ಲಿ ಯಾವುದಾದರೂ ಗ್ರಹವಿದ್ದರೆ ನ್ಯಾಸ ೨ರಲ್ಲಿ ೧, ೬ರಲ್ಲಿ ೧, ೩ರಲ್ಲಿ ೧ ಭಾಗ, ಪರಸ್ಪರ ಗುಣಿತ ೩೬ ರಲ್ಲಿ ೩೬ರಲ್ಲಿ ೧೨, ೩೬ರಲ್ಲಿ ೧೨, ೩೬ರಲ್ಲಿ ೯ ಭಾಗ, ಭೇದಹೀನ ೩೬-೧೨-೧೨-೯, ಇದರ ಸಂಯೋಗ ೩೬+೧೨+೧೨+೯=೬೯, ಭಾಗಹಾರ ಮೂಲದಶಾ ೨೩-೦-೦-೦, ಪೂರ್ವವಿಧಿಯಿಂದ ಮೊದಲನೆ ೧೨-೦-೦-೦, ಎರಡನೆ ೪-೦-೦-೦, ಮೂರನೇ ೪-೦-೦-೦, ನಾಲ್ಕನೇ ೩-೦-೦-೦, ಈ ನಾಲ್ಕು ಅಂತರ್ದಶೆಗಳ ಸಂಯೋಗ-೨೩-೦-೦-೦, ಇದು ಮೂಲದಶೆ ಆಯಿತು. ॥೧೮॥

ಆ ಮೂಲ ದಶಾಧಿಪತಿಗೆ ೯ ಅಥವಾ ೫ನೇಸ್ಥಾನದಲ್ಲಿ ಯಾವುದಾದರು ಗ್ರಹವಿದ್ದು ೪-೮ನೇ ಸ್ಥಾನದಲ್ಲೆರಡರಲ್ಲಿ ಗ್ರಹವಿದ್ದರೆ ಅದಕ್ಕೆ ನ್ಯಾಸ-೧ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧ ಭಾಗ, ಪರಸ್ಪರ ಗುಣಿತ-೪೮ರಲ್ಲಿ ೪೮, ೪೮ರಲ್ಲಿ ೧೬, ೪೮ರಲ್ಲಿ ೧೨, ೪೮ರಲ್ಲಿ ೧೨ ಭಾಗ, ಭೇದಹೀನ ೪೮-೧೬-೧೨-೧೨ ಇದರ ಸಂಯೋಗ ೪೮+೧೬+೧೨+೧೨+೮೮ ಭಾಗಹಾರ ಮೂಲದಶಾ ೨೨-೦-೦-೦, ಪೂರ್ವ ವತ್ ಅಂತರ್ದಶಾ ಮೊದಲನೆಯದು ೧೨-೦-೦-೦, ಎರಡನೆಯದು ೪-೦-೦-೦, ಮೂರನೆಯದು, ೩-೦-೦-೦, ನಾಲ್ಕನೆಯದು ೩-೦-೦-೦ ಈ ನಾಲ್ಕರ ಸಂಯೋಗ ಮೂಲದಶೆ ವರ್ಷ ೨೨-೦-೦-೦ ಆಯಿತು ॥೧೯॥

ಆ ದಶಾಧಿಪತಿಗೆ ೯-೫ನೇ ತ್ರಿಕೋಣ ಸ್ಥಾನಗಳಲ್ಲಿ ೧ ತ್ರಿಕೋಣ ಸ್ಥಾನದಲ್ಲಿ ಗ್ರಹವಿದ್ದರೂ ಮತ್ತು ೪-೩ನೇ ಸ್ಥಾನದಲ್ಲಿ ಯಾವ ಸ್ಥಾನದಲ್ಲಿಯಾದರೂ ಒಂದು ಸ್ಥಾನದಲ್ಲಿ ಗ್ರಹವಿದ್ದರೂ ಮತ್ತು ೭ನೇ ಸ್ಥಾನದಲ್ಲಿ ಗ್ರಹವಿದ್ದರೆ ನ್ಯಾಸ-೧ ೩ರಲ್ಲಿ ೧, ೪ರಲ್ಲಿ ೧ , ೭ರಲ್ಲಿ ೧ ಭಾಗ, ಭೇದಗುಣಿತ ೮೪, ೮೪ರಲ್ಲಿ ೨೮, ೮೪ ರಲ್ಲಿ ೨೧, ೮೪ರಲ್ಲಿ ೧೨ ಭಾಗ, ಭೇದಹೀನ ೮೪-೨೮-೨೧-೧೨ ಇದರ ಸಂಕಲನ ಯೋಗ ೮೪+೨೮+೨೧+೧೨=೧೪೫, ಭಾಗಹಾರ ಮೂಲದಶಾ ೩೬-೦-೦-೦,

ಪೂರ್ವಕ್ರಮವನ್ನನುಸರಿಸಿ, ಮೊದಲನೆಯ ಅಂತರ್ದಶಾ ವರ್ಷಾದಿ ೨೦-೧೦-೭-೫೧, ಎರಡನೇ ೬-೧೧-೧೨-೩೮, ಮೂರನೇ ೫-೨-೧೬-೫೮, ನಾಲ್ಕನೆ ವರ್ಷಾದಿ ೨-೧೧-೨೨-೩೪ ಈ ನಾಲ್ಕು ಅಂತರ್ದಶೆಗಳ ಯೋಗವರ್ಷಾದಿ ೩೬-೦-೦, ಇದು ಮೂಲದಶೆ ಆಯಿತು ॥೨೦॥

ಆ ಮೂಲ ದಶಾಧಿಪತಿಗೆ ೪-೮-೭ ಈ ಮೂರು ಸ್ಥಾನಗಳಲ್ಲಿ ಗ್ರಹಗಳು ಇದ್ದರೆ ನ್ಯಾಸ-೧, ೪ನೇ ೧, ೪ನೇ ೧, ೭ನೇ ೧ ಭಾಗ, ಪರಸ್ಪರ ಭೇದದಿಂದ ಗುಣಿಸಿದರೆ ೧೧೨, ೧೧೨ನೇ ೨೮, ೧೧೨ನೇ ೨೮, ೧೧೨ನೇ ೧೬ಭಾಗ, ಭೇದಹೀನ ೧೧೨-೨೮-೨೮-೧೬, ಇದರ ಸಂಕಲನಯೋಗ- ೧೧೨+೨೮+ ೨೮+೧೬=೧೮೪, ಭಾಗ ಮೂಲದಶಾ ವರ್ಷ ೩೬-೦-೦-೦ ಪೂರ್ವಪ್ರಕಾರ ಮಾಡಲಾಗಿ ಮೊದಲನೇ ಅಂತರ್ದಶಾ ವರ್ಷಾದಿ ೨೧-೧೦-೨೮-೪೨, ಎರಡನೆಯ ಅಂತರ್ದಶಾ ವರ್ಷಾದಿ ೫-೫-೨೨-೧೧, ಮೂರನೆ ದಶಾಂತರ್ದಶಾ ವರ್ಷಾದಿ ೫-೫-೨೨-೧೧, ನಾಲ್ಕನೇ ದಶಾಂತರ್ದಶಾ ವರ್ಷಾದಿ ೩-೧-೧೬-೭, ಈ ನಾಲ್ಕು ಅಂತರ್ದಶೆಗಳು ಸಂಕಲನ ಮಾಡಿದರೆ ೩೬-೦-೦-೦, ಮೂಲದಶೆ ಆಯಿತು ॥೨೧॥

ಈವರೆಗೆ ೪ ವಿಕಲ್ಪ, ೫ ಗ್ರಹವಿಕಲ್ಪಗಳು ಹೇಳಲ್ಪಟ್ಟಿದ್ದಾಯಿತು. ೫ನೇ ವಿಕಲ್ಪ ಹೇಳಲ್ಪಡುತ್ತೆ, ಇದರಲ್ಲಿ ನ್ಯಾಸವನ್ನು ಗ್ರಹಸ್ಥಾನ ತಿಳಿಯುವಂತೆ ಮಾಡಿರುತ್ತೆ. ನ್ಯಾಸ-೧, ೨ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧ಭಾಗ ಭೇದ ೨೪, ಗುಣಕ ೨೪-೧೨-೮-೮-೬ ॥೨೨॥

ನ್ಯಾಸ-೧, ೨ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧ ಭಾಗ, ಈ ಭೇದದಿಂದ ಗುಣಾಕಾರ ಮಾಡಿದ ೪೨-೨೧-೧೪-೬ ಭಾಗಾಹಾರ ೮೭ ॥೨೩॥

ನ್ಯಾಸ-೧, ೨ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧ ಭಾಗ, ಭೇದ ೩೫ರಿಂದ ಗುಣಿಸಿ ೨೪-೧೨-೮-೬-೬ ಭಾಗಹಾರ ೫೬ ॥೨೪॥

ನ್ಯಾಸ-೧, ೨ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧, ೭ರಲ್ಲಿ ೧ ಭಾಗ, ಭೇದ ೫೬ ರಿಂದ ಗುಣಿಸಿ ೫೬-೨೮-೧೪-೧೪-೩, ಭಾಗಹಾರ ೧೨೦ ॥೨೫॥

ನ್ಯಾಸ-೧, ೨ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೭ರಲ್ಲಿ ೧ ಭಾಗ ಭೇದ ೮೪ ರಿಂದ ಗುಣಿಸಬೇಕು, ೮೪-೪೨-೨೮-೨೧-೧೨, ಭಾಗಾಹಾರ ೧೮೭ ॥೨೬॥

ನ್ಯಾಸ-೧, ೩ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧ ಭಾಗ, ಭೇದ ೧೪೪ ರಿಂದ ಗುಣಾಕಾರ, ೧೪೪-೪೮-೪೮-೩೬-೩೭, ಭಾಗಹಾರ ೩೧೨ ॥೨೭॥

ನ್ಯಾಸ-೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೭ರಲ್ಲಿ ೧ ಬಾಗ, ಭೇದ ೮೪ ರಿಂದ ಗುಣಿಸಬೇಕು, ೮೪-೨೮-೨೮-೨೧-೧೨ ಭಾಗಹಾರ ೧೭೩॥೨೮॥

ಈಗ ೬ನೇ ವಿಕಲ್ಪದಿಂದ ಅಂತರ್ದಶೆಯು ಹೇಳಲ್ಪಡುತ್ತೆ.

೬ನೇ ವಿಕಲ್ಪನ್ಯಾಸ-೧, ೨ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೭ರಲ್ಲಿ ೧ ಭಾಗ, ಭೇದ ೨೫೨ರಿಂದ ಗುಣಾಕಾರ ೨೫೨-೧೨೬-೮೪-೬೩-೩೬ ಭಾಗಾಹಾರ ೬೪೫ ॥೨೯॥

ನ್ಯಾಸ.ಭೇದ ೧೬೮ರಿಂದ ಗುಣಕ ೧೬೮-೮೪-೫೬-೪೨-೨೪ ಭಾಗಹಾರ ೪೧೬ ॥೩೦॥

ನ್ಯಾಸ-೧, ೨ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧ ಭಾಗ ಭೇದ ೯೬, ಗುಣಕ ೯೬-೪೮-೩೨-೩೨-೨೪-೨೩, ಭಾಗಹಾರ ೨೫೬॥೩೧॥

ನ್ಯಾಸ-೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧, ೭ರಲ್ಲಿ ೧ ಭಾಗ ಭೇದ ೮೪ರಿಂದ ಗುಣಕ, ೮೪-೨೮-೨೮-೨೧-೨೧-೧೨, ಭಾಗಹಾರ ೧೯೪ ॥೩೨॥

ಏಳನೇ ವಿಕಲ್ಪ ಕ್ರಮವೇನೆಂದರೆ-ಇದು ಒಂದು ವಿಧವಾಗಿರುವುದು, ೧, ೨ರಲ್ಲಿ ೧, ೩ರಲ್ಲಿ ೧, ೩ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧, ೪ರಲ್ಲಿ ೧, ೭ರಲ್ಲಿ ೧ ಭಾಗ, ಭೇದ ೧೬೮, ಗುಣಾಕಾರ ೧೬೮-೮೪-೫೬- ೫೬-೪೨-೪೨-೨೪, ಭಾಗಹಾರ ೪೭೨ ॥೩೩॥

ಈ ವಿಕಲ್ಪಗಳು ೩೩ ವಿಧವಾಗಿರುತ್ತದೆ. ಮೊದಲು ದಶಾಪತಿ ಅಂತರ್ದಶಾ ಪಾಚಕ, ಆಮೇಲೆ ದಶಾನ್ಯಾಸದಲ್ಲಿ ಬಂದಿರುತ್ತೆ. ಇದೇ ರೀತಿಯಲ್ಲಿ ಅಂತರ್ದಶಾ ಕ್ರಮ. ಒಂದೇ ಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ ಮೊದಲು ಬಲವಂತನಾದ ಗ್ರಹವೂ ಅನಂತರದಲ್ಲಿ ಹೀನವೀರ್ಯ ಗ್ರಹದಶೆಗಳನ್ನು ಬರೆಯತಕ್ಕದ್ದು. ಸುಲಭೋಪಾಯದಿಂದ ಅಂತರ್ದಶಾನಯನವನ್ನು ಮಾಡತಕ್ಕ ಕ್ರಮ-ರವಿ ೪೨ ರರ್ಧಹೃತ ಶ್ಚೇದೋಹರಿ ೨೮ ಸ್ತ್ರಂಶ ಪಹಾರಿಣಃ ॥ ದ್ವಿ ೨ ತ್ರಿ ೩ ಸಪ್ತ ೭ ಚತು ೪ ರ್ಭಕ್ತ ಹೃತಾದಂತರ್ದ ಶೋಚ್ಯತೇ ॥೬॥ ಮತ್ತು ಅದಾವಂತರ್ದಶಾಪಾತೋ ಭವತ್ಯೇ ವದಾಶಾಪತೇಃ । ತತಃಪರಂತುವಕ್ತವ್ಯಂ ದಶಾಪಾಕಕ್ರಮೇಣಾತು ॥೭॥ ಎಂದು ಗರ್ಗಮಹರ್ಷಿಗಳ ವಚನವಿರುತ್ತೆ. ಆದ್ದರಿಂದ ದಶಾವಿಭಾಗ ಕ್ರಮದಿಂದಲೆ ಅಂತರ್ದಶಾ ವಿಭಾಗವನ್ನು ಮಾಡತಕ್ಕದ್ದೆಂದು ಅಭಿಪ್ರಾಯವು॥೪॥

ಮೂಲ।। ಸಮ್ಯಗ್ಬಲಿನಃ ಸ್ವತುಂಗಭಾಗೇ ಸಂಪೂರ್ಣಾಬಲವರ್ಜಿ ತಸ್ಯರಿಕ್ತಾ।
ನೀಚಾಂಶಗತಸ್ಯ ಶತ್ರುಭಾಗೇ ಜ್ಞೇಯಾನಿಷ್ಟ ದಶಾಫಲಾ ಪ್ರಸೂತೌ ।।೫।।

ಅವತಾರಿಕೆ ।। ಈ ದಶಾಂತರ್ದಶೆಗಳಲ್ಲಿ ಶುಭಾಶುಭ ಫಲಸ್ವರೂಪವು ತಿಳಿಯುವುದಕ್ಕೋಸ್ಕರ ಕೆಲವು ಸಂಜ್ಞೆಗಳು ಹೇಳಲ್ಪಡುತ್ತೆ.

ಟೀಕು।। ಪ್ರಸೂತೌ-ಜನನಕಾಲದಲ್ಲಿ, ಸಮ್ಯಕ್-ಚೆನ್ನಾಗಿ, ಬಲಿನಃ-ಪೂರ್ವೋಕ್ತ ಪ್ರಕಾರ ಸ್ಥಾನಾದಿ ಷಡ್ಬಲಯುಕ್ತವಾದ ಗ್ರಹವು, ಸ್ವತುಂಗಭಾಗೇ-ತನ್ನ ಪರಮೋಚ್ಚ ಭಾಗದಲ್ಲಿರುವಾಗ (ಇರುವಂಥಾ) ದಶಾ-ಮಹಾದಶೆಯು, ಸಂಪೂರ್ಣಾ-ಸಂಪೂರ್ಣ ಶುಭಫಲ ಕೊಡತಕ್ಕದ್ದೆಂದು ತಿಳಿಯತಕ್ಕದ್ದು. ಪರಮೋಚ್ಚಗತವಾದ ಗ್ರಹವು ಇತರ ವಿಧವಾದ ಬಲವರ್ಜಿತನಾದರೂ ಆ ಗ್ರಹದ ದಶೆಯು ಸಂಪೂರ್ಣ ದಶೆಯೆಂದು ಭಾವವು. ಕೇವಲ ಉಚ್ಚರಾಶಿಯಲ್ಲಿದ್ದು ಕಿಂಚದ್ಬಲಸಹಿತವಿರುವ ದಶೆ ಪೂರ್ಣ ದಶೆಯೆಂದು ಸಂಜ್ಞೆಯು. ಸಂಪೂರ್ಣ ದಶಾಂತರ್ದಶಾ ಕಾಲದಲ್ಲಿ ಶರೀರಾರೋಗ್ಯ ಧನಧಾನ್ಯ ಸಮೃದ್ಧಿಯಾಗಿ ಪುರುಷನು ಹೆಚ್ಚಾದ ಅಭಿವೃದ್ಧಿ ಹೊಂದುವನು. ಪೂರ್ಣದಶೆಯಲ್ಲಿ ಆರೋಗ್ಯ ಧನ ಸಮೃಧ್ಯಾದಿಗಳನ್ನು ಹೊಂದುವನು. ಬಲವರ್ಜಿತಸ್ಯ-ಸ್ಥಾನಾದಿ ಷಡ್ಬಲ ರಹಿತವಾದ ಗ್ರಹದ, ದಶಾ-ದಶೆಯು, ರಿಕ್ತಾ-ರಿಕ್ತದಶೆಯೆಂದು ಹೆಸರುಳ್ಳದ್ದು, ಈ ರಿಕ್ತದಶೆ ಧನನಾಶವನ್ನುಂಟುಮಾಡುವುದು. ನೀಚಾಂಶಗತಸ್ಯ- ತನ್ನ ನೀಚಾಂಶವನ್ನು ಹೊಂದಿದರೂ, ಶತ್ರುಭಾಗೇ- ಶತ್ರುನವಾಂಶೆಯಲ್ಲಿದ್ದರೂ, ಆ ದಶೆಯು, ಅನಿಷ್ಟಫಲಾ-ಅನಿಷ್ಟ ಫಲವನ್ನು ಕೊಡುವುದೆಂದು, ಜ್ಞೇಯಾ-ತಿಳಿಯತಕ್ಕದ್ದು. ಈ ಅನಿಷ್ಟ ದಶಾಂತರ್ದಶಾ ಕಾಲದಲ್ಲಿ ವ್ಯಾಧಿ ಧನ ಕ್ಷಯಾದಿಗಳುಂಟಾಗುವುದು. ಈ ಅರ್ಥದಲ್ಲಿ ।।ಶ್ಲೋಕ।। ಗರ್ಗಸಂಹಿತಾಯಾಂ।। ಸರ್ವೈರ್ಬಲೈರುಪೇತಸ್ಯ ಪರಮೋಚ್ಚಗತಸ್ಯಚ । ಸಂಪೂರ್ಣಾಖ್ಯಾ ದಶಾಜ್ಞೇಯಾ ಧನಾರೋಗ್ಯವಿವರ್ಧಿನೀ ।।೮।। ಸ್ವೋಚ್ಚರಾಷೆಗತಸ್ಯಾಚ ಕಿಂಚಿದ್ಬಲಯುತಸ್ಯಚ । ಪೂರ್ಣಾನಾಮದಶಾಜ್ಞೇಯಾ ಧನವೃದ್ಧಿಕರೀಶುಭಾ ।।೬।। ಸರ್ವೈರ್ಬಲೈವಿಹೀನಸ್ಯ ನೀಚರಾಶಿಗತಸ್ಯಚ । ರಿಕ್ತಾನಾಮದಶಾಜ್ಞೇಯಾ ಧನನಾಶಸ್ಯ ಕಾರಿಣೀ ।। ಯೇಸ್ಯುಃಪರಮನೀಚಸ್ಥಾ ಸ್ತಥಾಚಾರಿನವಾಂಶಕೇ। ತಸ್ಯಾನಿಷ್ಟಫಲಾನಾಮವ್ಯಾಧ್ಯನರ್ಥ ವಿವರ್ಧಿನೀ ।।೧೧।। ಮತ್ತು ಷಷ್ಠದಶಾವ್ಯಸನಕರೀ ಮೃತ್ಯುಂಚ ಕರೋತಿ ನೈಧನಸ್ಥದಶಾ। ಸ್ವೋಚ್ಚಗತಸ್ಯತುರಾಜ್ಯಂ ಸ್ವಕ್ಷೇತ್ರಗತಸ್ಯ ಸೌಖ್ಯ ಸಂಪತ್ತಿಂ ।।೧೨।। ಈ ಐದು ಶ್ಲೋಕಗಳಿಗೆ ತಾತ್ಪರ್ಯ-ಸ್ಥಾನಾದಿಷಡ್ಬಲಯುಕ್ತನಾಗಿ ತನ್ನ ಪರಮೋಚ್ಚ ಧ್ರುವದಲ್ಲಿರುವ ಗ್ರಹದ ದಶೆಯು ಸಂಪೂರ್ಣ ದಶೆಯೆಂದು ಇದರಲ್ಲಿ ಧನ

ಆರೋಗ್ಯದ ಅಭಿವೃದ್ಧಿ ಸಹ ಉಂಟಾಗುತ್ತದೆ ॥೮॥ ಉಚ್ಚರಾಶಿಯಲ್ಲದ್ದು ಕಿಂಚಿತ್ತು ಬಲಯುಕ್ತನಾಗಿದ್ದರೆ, ಆ ದಶೆಗೆ ಪೂರ್ಣದಶೆಯೆಂದು ಹೆಸರು ಈ ದಶೆಯಲ್ಲಿ ಧನಧಾನ್ಯ ವೃದ್ಧಿಯಾಗುತ್ತದೆ ॥೯॥ ಗ್ರಹಕ್ಕೆ ಎಲ್ಲಾ ಬಲವೂ ಹೀನವಾಗಿ ನೀಚರಾಶಿಯಲ್ಲಿದ್ದರೆ, ಆ ದಶೆಗೆ ರಿಕ್ತವೆಂದು ಹೆಸರು. ಈ ದಶಾಕಾಲದಲ್ಲಿ ಧನನಾಶ ಮೊದಲಾದವುಗಳುಂಟಾಗುತ್ತದೆ ॥೧೦॥ ಪರಮನೀಚರಾಶಿಯಲ್ಲಿದ್ದು ಶತ್ರುನವಾಂಶೆಯಲ್ಲಿದ್ದರೆ, ಆ ದಶೆಯು ಅನಿಷ್ಟ ಫಲಪ್ರದಾಯಕವೆಂದು ಈ ದಶೆಯಲ್ಲಿ ವ್ಯಾಧಿ, ಮರಣ, ನಾಶ, ಧನವ್ಯಯ ಮೊದಲಾದ ಅನಿಷ್ಟ ಫಲವೇ ಆಗುತ್ತದೆ ॥೧೧॥ ಅನ್ಯವಾಗಿ ಬೇರೊಂದು ಫಲ ಹೇಳಿರುತ್ತೆ. ಲಗ್ನಕ್ಕೆ ಷಷ್ಠಸ್ಥಾನದಲ್ಲಿದ್ದ ದಶೆ ವ್ಯಸನವನ್ನು ಕೊಡುತ್ತದೆ. ಅಷ್ಟಮದಲ್ಲಿದ್ದ ಗ್ರಹದ ದಶೆಯು ಮರಣವನ್ನು, ನಾಶವನ್ನು ಕೊಡುತ್ತದೆ. ಉಚ್ಚದಲ್ಲಿದ್ದ ಗ್ರಹದ ದಶೆ, ರಾಜ್ಯ, ಸಂಪತ್ತು ಸಹ ಕೊಡುತ್ತದೆ. ಸ್ವಕ್ಷೇತ್ರದಲ್ಲಿದ್ದ ದಶೆ ಸಂಪತ್ತು ಕೊಡುತ್ತದೆ. ॥೧೨॥

ಈ ವಿಷಯದಲ್ಲಿ ಪರಾಶರಃ-ಶ್ಲೋಕ॥ ಪರಮೋಚ್ಚಗತೋಯಸ್ತು ಯೋತಿ ವೀರ್ಯ ಪರತ್ರರ್ವಾ। ಸಂಪೂರ್ಣಾಖ್ಯಾತದ್ದಶಾತು ರಾಜ್ಯಭೋಗ್ಯ ಶುಭಪ್ರದಾ ॥ ಕರ್ಕ್ಷ್ರೀಕಾಟಕ್, ಚಿನ್ಹಾನಾಂ ಚಿದಾವಾಸ್ಯಹಪ್ರದಾ ॥ ತುಂಗಮಾತ್ರಗತಸ್ಯಾಪಿ ತೇಥಾವೀರ್ಯಾಧಿಕಸ್ಯಚ ॥ ಪೂರ್ಣಾಖ್ಯಾಬಹುಧೈಶ್ವರ್ಯ ದಾಯಿನ್ಯಪಿ ಋಜಾಪ್ರದಾ। ಅತಿನೀಚಗತಸ್ಯಾಪಿ ದುರ್ಬಲಸ್ಯ ಗ್ರಹಸ್ಯತು ॥ ರಿಕ್ತೇಷ್ಟಾನಿಷ್ಟಫಲದಾ ವ್ಯಾಧ್ಯನರ್ಥಮೃತಿಪ್ರದಾ । ಅತ್ಯುಚ್ಚೇಪತಿ ನೀಚ್ಯೋಚ್ಚೇ ಮಧ್ಯಗಸ್ಯಚರೋಹಿಣೀ ॥ ಮಿತ್ರೋಚ್ಚ ಭಾವಗತ್ಯಾಸ್ಯ ಮಧ್ಯಾಖ್ಯಾ ಚಾರ್ಥದಾದಶಾ॥ ಈ ಪ್ರಕಾರ ಪರಾಶರರು ಹೇಳಿರುತ್ತಾರೆ. ಈ ಅಂಶಕ್ಕನುಸಾರವಾಗಿ ಮಿಹಿರಾಚಾರ್ಯರೂ ಹೇಳಿರುವರು.

ಮೂಲ॥ ಭ್ರಷ್ಟಸ್ಯತುಂಗಾದವರೋಹಸಂಜ್ಞಾ ಮಧ್ಯಾಭವೇತ್ರಾಸುಹೃದುಚ್ಚ ಭಾಂಶೇ ॥ ಆರೋಹಿಣೀನಿಮ್ನಪರಿಚ್ಯುತಸ್ಯ ನೀಚಾರಿಭಾಂಶೇಷ್ವಧ ಮಾಭವೇತ್ಸಾ ॥೬॥

ಅವತಾರಿಕೆ ॥ ಗ್ರಹಗಳಿಗೆ ಪರಮೋಚ್ಚ ಸ್ವಕ್ಷೇತ್ರ ಮಿತ್ರಕ್ಷೇತ್ರ ಶತ್ರು ಕ್ಷೇತ್ರ ಉಚ್ಚಾರೋಹಿ ಅವರೋಹಿ ಮೊದಲಾದ ಸಂಜ್ಞೆಗಳು ಹೇಳಲ್ಪಡುತ್ತೆ.

ಟೀಕು॥ ತುಂಗಾತ್-ಪರಮೋಚ್ಚದಲ್ಲಿದ್ದು, ಭ್ರಷ್ಟಸ್ಯ-ಉಚ್ಚದಿಂದಿಳಿದ ಗ್ರಹದ ದಶೆಗೆ, ಅವರೋಹಿ ಸಂಜ್ಞಾ-ಅವರೋಹಿಣಿ ದಶೆಯೆಂದು ಹೆಸರು ಅಂದರೆ ಗ್ರಹವು ತನ್ನ ಪರಮೋಚ್ಚಾಂಶವನ್ನು ಬಿಟ್ಟು ಪರಮ ನೀಚದವರಿಗೆ ಇಳಿಯುವ ಗ್ರಹಕ್ಕೆ ಅವರೋಹ ದಶೆಯೆಂದು ಹೆಸರು. ಈ ದಶೆ ಅಧಮ ಫಲವನ್ನು ಕೊಡುತ್ತದೆ.

ಸಾ-ಅವರೋಹದಶೆಯು ಸುಹೃದುಚ್ಚ ಭಾಂಶಗೇ - ನೀಚದವರಿಗೆ ಇರುವ ಯಾವ ರಾಶಿಯಲ್ಲಿದ್ದರೂ ಮಿತ್ರಸ್ವೋಚ್ಚ ಸ್ವನವಾಂಶೆಯಲ್ಲಿದ್ದರೆ ಆ ಗ್ರಹವು ಚೇತನವುಳ್ಳದೆಂದು ಹೇಳಲ್ಪಡುತ್ತೆ. ಮಧ್ಯಾ-ಮಧ್ಯದಶೆಯಿಂದ ಸಂಜ್ಞೆ, ನಿಮ್ನ ಪರಿಚ್ಯುತಸ್ಯ-ಪರಮ ನೀಚವನ್ನು ದಾಟಿ, ಉಚ್ಚಾಭಿಮುಖವಾಗಿರುವ ಗ್ರಹದ ದಶೆ, ಆರೋಹಿಣಿ-ಆರೋಹಿಣಿಯೆಂದು ಸಂಜ್ಞೆಯುಳ್ಳದ್ದು, ಸಾ-ಆ ಆರೋಹಿದಶೆ, ನೀಚಾರಿಭಾಗೇಷು-ಯಾವರಾಶಿಯಲ್ಲಿದ್ದರೂ (ನೀಚರಾಶಿ, ನೀಚ ನವಾಂಶೆ, ಶತ್ರುನವಾಂಶೆಯಲ್ಲಿದ್ದರೂ) ಅಧಮಾ-ಅಧಮದಶೆಯೆಂದು ಸಂಕೇತವು, ಮೊದಲು ಶತ್ರುನವಾಂಶಸ್ಥಿತ ಗ್ರಹದಶೆ ಅನಿಷ್ಟದಶೆಯೆಂದು ಸಂಜ್ಞೆಯು. ಈಗ ಅದೇ ಅಧಮದಶೆಯೆಂದು ಹೇಳಲ್ಪಟ್ಟಿರುತ್ತೆ. ಈ ಎರಡರ ಫಲಭೇದವೇನೆಂದರೆ- ಅವರೋಹಿದಶೆಯು ಶತ್ರು ನವಾಂಶಸ್ಥಿತ ಗ್ರಹದತ್ತವಾಗಿದ್ದರೂ ಅಶುಭ ಫಲವನ್ನೇ ಕೊಡುತ್ತದೆ. ಆರೋಹಿಣೀದಶೆ ಶತ್ರುನವಾಂಶಸ್ಥಿತ ಗ್ರಹದತ್ತವಾಗಿದ್ದರೂ ಅಶುಭ ಫಲವನ್ನೇ ಕೊಡುತ್ತದೆ. ಈ ಪ್ರಕಾರ ಅವರೋಹಿದಶೆ, ಅಧಮದಶೆ, ಅನಿಷ್ಟಫಲವನ್ನು ಕೊಡುತ್ತದೆ. ಆರೋಹದಶಾ ಉಚ್ಚನವಾಂಶ, ಮಿತ್ರನವಾಂಶಸ್ಥಿತ ಗ್ರಹದತ್ತವಾಗಿದ್ದರೆ, ಸಂಪೂರ್ಣ ದಶೆಯಿಂದ ಸಂಜ್ಞೆಯು. ಈ ಅರ್ಥದಲ್ಲಿ ಶ್ಲೋಕ॥-ಗರ್ಗಸಂಹಿತಾಯಾಂ ॥ ಉಚ್ಚನೀಚಾಂತರಸ್ಥಸ್ಯದಶಾಸ್ಯಾದವರೋಹಿಣೀ। ತಸ್ಯಾಮಲ್ಪಮವಾಪ್ನೋತಿ ಫಲಂಕ್ಲೇಶಾಚ್ಛುಭಂನರಃ॥ ಮಿತ್ರೋಚ್ಚಾತ್ಮಾಂಶಕಸ್ಥ ಸ್ಯಮಧ್ಯಾಮಧ್ಯಫಲಾತುಸಾ । ನೀಚೋಚ್ಚಮಧ್ಯಗಸ್ಯೋಕ್ತಾ ಶ್ರೇಷ್ಠಾಚಾರೋಹಿಣೀದಶಾ॥೧೪॥ ಸೈವಾದಮಾಖ್ಯಾಭವತಿ ನೀಚರಾಶ್ಯಂಶಗಸ್ಯತು । ಅವರೋಹಿಣೀಚೇದಧಮಾ ಭವೇತ್ಕಷ್ಟಫಲಾತದಾ ॥ ಆರೋಹಿಣೀಮಧ್ಯಫಲಾ ಸಂಪೂರ್ಣಪರಿಕೀರ್ತಿತಾ ॥೧೬॥ ಪರಾಶರಃ ॥ ನೀಚಾಂಶಾದುಚ್ಚಭಾಗಾಂತಂ ಭಷಟ್ಕೇಮಧ್ಯಗಸ್ಯಚ । ದಶಾಚಾರೋಹಿಣೀ ನೀಚ ರಿಪುಭಾಂಶಗತಸ್ಯಚ ॥ ಅಧಮಾಖ್ಯಾಭಯಾಕ್ಲೇಶಾ ವ್ಯಾಧಿದುಃಖವಿವರ್ಧಿನೀ । ನಾಮಾನುರೂಪಫಲದಾಃ ಪಾತಕಾಲೇದಶಾ ಇಮಾಃ ॥ ಈ ವಿಷಯವನ್ನು ಪ್ರತಿಗ್ರಹದ ದಶೆಯಲ್ಲು ಚೆನ್ನಾಗಿ ನೋಡಿ, ಫಲವನ್ನು ನಿಶ್ಚಯಿಸಬೇಕು. ಮತ್ತು ದಶೆಯಲ್ಲಿ ಭುಕ್ತಿಗಳಿಗೂ, ಈ ಬಲಾಬಲಗಳನ್ನು ನೋಡಿಕೊಂಡು ಭುಕ್ತಿ ಫಲವನ್ನು ನಿಶ್ಚಯಿಸಬೇಕು. ಈ ಶ್ಲೋಕಾರ್ಥವನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟು ಕೊಂಡಿರತಕ್ಕದ್ದು.

ಮೂಲ॥ ನೀಚಾರಿಭಾಂಶೇ ಸಮವಸ್ಥಿತಸ್ಯ ಶಸ್ತೇಗ್ರಹೇ ಮಿತ್ರಫಲಾಪ್ರದಿಷ್ಟಾ। ಸಂಜ್ಞಾನುರೂಪಾಣಿಫಲಾನ್ಯಥೈಷಾಂ ದಶಾಸುವಕ್ಷ್ಯಾಮಿಯಥೋಪಯೋಗಂ ॥೭॥

ಅವತಾರಿಕೆ ॥ ಅಂತರ್ದಶೆಗಳಿಗೆ ಮತ್ತೊಂದು ಸಂಜ್ಞೆ ಹೇಳಲ್ಪಡುತ್ತೆ.

ಟೀಕು॥ ಶಸ್ತೇಗ್ರಹೇ-ಪ್ರಶಸ್ತವಾದಗ್ರಹ-ಅಂದರೆ ಸ್ವೋಚ್ಚ, ಮೂಲ, ತ್ರಿಕೋಣ, ಸ್ವಕ್ಷೇತ್ರ, ಮಿತ್ರಕ್ಷೇತ್ರಗಳಲ್ಲಿ, ನೀಚಾರಿಭಾಂಶೇ-ತನ್ನ ನೀಚರಾಶಿ ಶತ್ರುನವಾಂಶದಲ್ಲಿ, ಸಮವಸ್ಥಿತಸ್ಯ-ಇದ್ದವನಿಗೆ, ದಶಾ-ದಶೆಯು, ಮಿಶ್ರಫಲಾ ಶುಭಶುಭಗಳೆರಡೂ ಸೇರಿ ಮಿಶ್ರಫಲವನ್ನು ಕೊಡುತ್ತೆಂದು, ಪ್ರದಿಷ್ಟಾ-ಹೇಳಲ್ಪಡುತ್ತೆ. ಈ ಹೇಳಲ್ಪಟ್ಟ ದಶೆ ಶತ್ರುರಾಶಿಯಲ್ಲಿದ್ದರೂ, ನೀಚರಾಶಿಯಲ್ಲಿದ್ದರೂ ಸ್ವೋಚ್ಚಮೂಲತ್ರಿಕೋಣ ಮಿತ್ರಕ್ಷೇತ್ರಾದಿಗಳನ್ನು ಹೊಂದಿದ ಗ್ರಹದ ದಶೆ ಮಿಶ್ರಫಲದಶೆಯೆಂದು ತಿಳಿಯತಕ್ಕದ್ದು. ಮಿಶ್ರಫಲವೆಂದರೆ-ಸಂಪತ್ತುಳ್ಳದ್ದಾಗಿಯೂ, ರೋಗಾದ್ಯುಪದ್ರವಗಳಿಂದ ಶರೀರ ಸೌಖ್ಯವಿಲ್ಲದೆ ಅಥವಾ ಶರೀರ ಸೌಖ್ಯಾದಿಗಳಿದ್ದರೂ ಧನಾದಿಗಳಿಲ್ಲದೆ ಇರತಕ್ಕದ್ದನ್ನು, ಮಿಶ್ರಫಲವೆಂದು ತಿಳಿಯತಕ್ಕದ್ದು. ಅಥ-ಅನಂತರದಲ್ಲಿ, ಏಷಾಂ-ಈ ಸೂರ್ಯಾದಿ ಗ್ರಹಗಳ, ದಶಾಸು-ದಶಾಂತರ್ದಶೆಗಳಲ್ಲಿ, ಸಂಜ್ಞಾನುರೂಪಿಣಿ-ಹೆಸರಿಗೆ ಸಮಾನವಾದಂಥಾ, ಫಲಾನಿ-ಫಲಗಳನ್ನು, ಯಥೋಪಯೋಗಂ-ಯಾವಯಾವ ದಶೆಯಲ್ಲಿ ಯಾವಯಾವ ಫಲವು ಯಾವ ಪ್ರಕಾರ ಉಪಯುಕ್ತವಾಗುವುದೋ ಆ ಪ್ರಕಾರವಾಗಿ, ವಕ್ಷ್ಯಾಮಿಹೇಳುತ್ತೇನೆ, ಸಂಜ್ಞಾನುರೂಪ ಫಲಗಳೆಂದರೆ- ಸಂಪೂರ್ಣಾದಶೆ ಹೆಚ್ಚಾದ ಅಶುಭಫಲವನ್ನು, ಈ ಪ್ರಕಾರವಾಗಿ ಸೂರ್ಯಾದಿ ಸಕಲ ದಶೆಯಲ್ಲಿಯೂ, ತಮ್ಮ ತಮ್ಮ ಹೆಸರಿಗೆ ತಕ್ಕಂತೆ ಸಮವಾದ ಫಲಗಳನ್ನು ಕೊಡುತ್ತಾರೆಂದು ವಿಶೇಷ ತಾತ್ಪರ್ಯ. ಈ ವಿಷಯದಲ್ಲಿ ಪರಾಶರಃ ॥ ಪರಮೋಚ್ಚೇ ತುಂಗಮಾತ್ರೇ ತದರ್ವಾಕ್ತದುಪರ್ಯಪಿ । ಮೂಲತ್ರಿಕೋಣಭೇಸ್ವರ್ಕ್ಷೇ ಸ್ವಾಧಿ ಮಿತ್ರಗ್ರಹಸ್ಯಭೇ ॥ ತತ್ಕಾಲಸುಹೃದೋಗೇಹೇ ಚೋದಾಸೀನಸ್ಯಭೇತಥಾ । ಶತ್ರೋರ್ಭೇಪಿರಿಪೋರ್ಭೇಚ ನೀಚಾಂತಾದೂರ್ಧ್ವದೇಶಭೇ ತಸ್ಮಾದರ್ವಾಙ್ ನೀಚಮಾತ್ರೇ ನೀಚಾಂತೇ ಪರಮಾಂಶಕೇ । ನೀಚಾರಿ ವರ್ಗೇಶಕಲೇ ಸ್ವವರ್ಗೇ ಕೇಂದ್ರಕೋಣಭೇ ॥ ಪ್ರಾವಸ್ಥಿ ತಸ್ಯಖೇಟಸ್ಯ ಸಮರೇಪೀಡಿತಸ್ಯಚ । ಗಾಢಮೂಢಸ್ಯಚದಶಾ ಪಚಿತಿಸ್ಸ್ವ ಗುಣ್ಯೈಃ ಫಲಂ ॥ಇತಿ॥೭॥

ಮೂಲ॥ ಉಭಯೇಧಮ ಮಧ್ಯಪೂಜಿತಾ ದ್ರೇಕ್ಕಾಣೈಶ್ಚರಭೇಷುಚೋತ್ಕ್ರಮಾತ್ । ಅಶುಭೇಷ್ವಸಮಾಸ್ಥಿರೇಕ್ರಮಾದ್ಧೋರಾಯಾಃ ಪರಿಕಲ್ಪಿತಾ ದಶಾಃ ॥೮॥

ಅವತಾರಿಕೆ ॥ ಲಗ್ನದಶೆಯಲ್ಲಿ ಉತ್ತಮ, ಮಧ್ಯಮಾಧಮ ಫಲಭೇದಗಳು ಹೇಳಲ್ಪಡುತ್ತೆ.

ಟೀಕು ।। ಹೋರಾಯಾಃ-ಲಗ್ನದ, ದ್ರೇಕ್ಕಾಣ್ಯೈಃ-ಪ್ರಥಮ-ದ್ವಿತೀಯ ತೃತೀಯ ದ್ರೇಕ್ಕಾಣದ, ಉಭಯೇ-ದ್ವಿಸ್ವಭಾವರಾಶಿ ಲಗ್ನವಾಗಿರುವಾಗ, ಅಧಮ ಮಧ್ಯಮ ಪೂಜಿತಾಃ-ಅಧಮ, ಮಧ್ಯಮ (ಪೂಜಿತಾ) ಶ್ರೇಷ್ಠಫಲಗಳನ್ನು ಕೊಡುತ್ತದೆ. (ಅದು ಹೇಗೆಂದರೆ) ದ್ವಿಸ್ವಭಾವರಾಶಿ ಲಗ್ನವಾಗಿರುವಾಗ ಪ್ರಥಮ ದ್ರೇಕ್ಕಾಣವಾಗಿದ್ದರೆ, ಅಧಮ-ಲಗ್ನದಶೆ ಅನಿಷ್ಟ ಫಲಪ್ರದವಾಗುವುದು, ದ್ವಿತೀಯ ದ್ರೇಕ್ಕಾಣವಾಗಿದ್ದರೆ (ಪೂಜಿತಾ) ಶ್ರೇಷ್ಠ ಫಲಪ್ರದವಾಗುವುದು, ಚರಭೇಷುಚ್ಯೋ-ತ್ಕ್ರಮಾತ್-ಅಂದರೆ ಚರರಾಶಿ ಲಗ್ನವಾಗಿ ಅದರಲ್ಲಿ ಪ್ರಥಮ ದ್ರೇಕ್ಕಾಣವಾಗಿದ್ದರೆ ಶ್ರೇಷ್ಠಫಲವನ್ನು, ದ್ವಿತೀಯ ದ್ರೇಕ್ಕಾಣವಾಗಿದ್ದರೆ ಮಿಶ್ರಫಲವನ್ನು, ತೃತೀಯ ದ್ರೇಕ್ಕಾಣವಾಗಿದ್ದರೆ ಅಧಮ ಫಲವನ್ನು ಕೊಡುವುದು. ಅಶುಭೇಷ್ವ ಸಮಾಸ್ಥಿರೇಕ್ರಮಾತ್-ಅಂದರೆ ಸ್ಥಿರೇ-ಸ್ಥಿರರಾಶಿ ಲಗ್ನವಾಗಿರುವಾಗ, ಕ್ರಮಾತ್-ಕ್ರಮವಾಗಿ, ಪ್ರಥಮ ದ್ರೇಕ್ಕಾಣವಾಗಿದ್ದರೆ ಅಶುಭಫಲವನ್ನು, ದ್ವಿತೀಯ ದ್ರೇಕ್ಕಾಣವಾಗಿದ್ದರೆ ಶುಭಫಲವನ್ನು, ತೃತೀಯ ದ್ರೇಕ್ಕಾಣವಾಗಿದ್ದರೆ ಮಿಶ್ರಫಲವನ್ನು ಕೊಡುವುದು. ಈ ಪ್ರಕಾರವಾಗಿಯೇ (ಹೋರಾಯಾಃ-ಲಗ್ನದ), ದಶಾಃ-ದಶೆಗಳನ್ನು ಉತ್ತಮಾಧಮ ಮಧ್ಯಮ ದಶೆಗಳಾಗಿ ಪರಿಕಲ್ಪಿತಾಃ-ಕಲ್ಪಿಸಬೇಕು.

## ಅಥ ಗ್ರಹಾಣಾಂ ನೈಸರ್ಗಿಕ ದಶಾನಯನಂ

ಮೂಲ।। ಏಕಂದ್ವೌ ನವವಿಂಶತಿ ರ್ಧೃತಿಕೃತೀ ಪಂಚಾಶದೇಷಾಂಕ್ರಮಾ ।
ಚಂದ್ರಾರೇಂದುಜಶುಕ್ರ ಜೀವದಿನಕೃದ್ವೈವಾಕರೀಣಾಂ ಸಮಾಃ ॥
ಸ್ವೈಃಸ್ವೈಃ ಪುಷ್ಟಫಲಾನಿಸರ್ಗಜನಿತೈಃ ಪಕ್ತಿರ್ದಶಾಯಾಃ ಕ್ರಮಾದಂತೇ
ಲಗ್ನದಶಾ ಶುಭೇತಿ ಯವನಾನೇಚ್ಛಂತಿಕೇಚಿತ್ತಥಾ ॥

ಅವತಾರಿಕೆ।। ಗ್ರಹಗಳಿಗೆ ನೈಸರ್ಗಿಕ ದಶಾಕಾಲವು ಹೇಳಲ್ಪಡುತ್ತೆ.

ಟೀಕು।। ಏಕಾದಿ ವರ್ಷಗಳು ಕ್ರಮವಾಗಿ ಚಂದ್ರಾದಿ ಗ್ರಹಗಳಿಗೆ ನೈಸರ್ಗಿಕ ದಶಾಕಾಲವಾಗುತ್ತದೆ. ಅದೇನೆಂದರೆ-ಚಂದ್ರಾರೇಂದುಜಶುಕ್ರಜೀವದಿನಕೃದ್ವೈವಾ ಕರೀಣಾಂಕ್ರಮಾತ್-ಚಂದ್ರ-ಚಂದ್ರನಿಗೆ, ಏಕಂ-ಒಂದು ।।ನಿ।। ಸಂವತ್ಸರೋ ವತ್ಸರೋಬ್ದೋ ಹಾಯನೋಸ್ತ್ರಿಶರತ್ಸಮಾಃ ।।ಇತ್ಯಮರಃ।। ಆರ-ಅಂಗಾರಕನಿಗೆ, ದ್ವೌ-ಎರಡು ಸಂವತ್ಸರ, ಇಂದುಜ-ಬುಧನಿಗೆ, ನವ-ಒಂಭತ್ತು ವರ್ಷಗಳು, ಶುಕ್ರ-ಶುಕ್ರನಿಗೆ, ವಿಂಶತಿಃ-೨೦ ಸಂವತ್ಸರ, ಜೀವ-ಗುರುವಿಗೆ, ಧೃತಿ-೧೮ ಸಂವತ್ಸರ, ದಿನಕೃತ್-ಸೂರ್ಯನಿಗೆ, ಕೃತೀ-೨೦ ಸಂವತ್ಸರ, ದೈವಾಕರೀಣಾಂ-ಶನಿಗೆ, ಪಂಚಾಶತ್

೫೦ ಸಂವತ್ಸರ, ಈ ರೀತಿಯಾಗಿ, ಏಷಾಂ-ಈ ಚಂದ್ರಾದಿ ಗ್ರಹಗಳಿಗೆ, ಕ್ರಮಾತ್-ಕ್ರಮವಾಗಿ, ಸಮಾಃ-ನೈಸರ್ಗಿಕ ಸಂವತ್ಸರಗಳು, ಈ ಪ್ರಕಾರವಾಗಿ ೧೨೦ ಸಂವತ್ಸರಗಳು ಪರಮಾಯುವಾಗುವುದು. ಈ ನೈಸರ್ಗಿಕ ದಶಾಧಿಪತಿಗಳು ಬಲವಂತವಾಗಿ ಉಪಚಯ ಸ್ಥಾನಗಳಲಿದ್ದರೆ ತಮ್ಮ ತಮ್ಮ ದಶಾಂತರ್ದಶೆಯಲ್ಲಿ ಶುಭಫಲವನ್ನು ಕೊಡುವರು. ಹೀನಬಲರಾಗಿ ಅಪಚಯ ಸ್ಥಾನಗಳಲ್ಲಿದ್ದರೆ ಅಶುಭಫಲವನ್ನು ಕೊಡುವರು. ಈ ವಿಷಯದಲ್ಲಿ ಯವನಜಾತಕೇ ।।ಶ್ಲೋಕ।। ಸ್ತನೋಪಭೋಗ ಶ್ಶಶಿನೋ ಮಯಃಖಂ ಭೌಮಸ್ಯವಿದ್ಯಾದ್ದಶನೂಸುಜನ್ಮ। ಬೌಧಂತುಶಿಕ್ಷಾ ಪರಿಕಾಲಮಾಹು ರವೇಥುನೇಚ್ಛಾಲಲಿತಪ್ರವೃತ್ತಿಂ ।। ಶೌಕ್ರಂಯುವತ್ವಂ ವಿಧಿಪೂರ್ವದೃಷ್ಟಮಾ ಮಧ್ಯಮಾದ್ದೇವಗುರೋರ್ವದಂತಿ । ರವೇರ್ವಯೋರ್ಧಾ ತ್ತರಮನ್ಯದಸ್ಮಾ ತ್ಸೌರೇರ್ಜರಾದುರ್ಭರಕಾಲಮಾಹುಃ ।।೧೬।। ಈ ನೈಸರ್ಗಿಕ ದಶೆಗಳಿಗೆ ಪ್ರಯೋಜನವು ಹೇಳಲ್ಪಡುತ್ತೆ. ದಶಯಾಃ-ಪೂರ್ವೋಕ್ತವಾದ ದಶೆಗಳಲ್ಲಿ, ಪಕ್ತಿಃ-ಪರಿಪಾಕವು ನಿಸರ್ಗಜನಿತೈಃ-ನೈಸರ್ಗಿಕ ದಶಾಜನಿತವಾದ, ಸ್ವೈಸ್ವೈಃ- ತಮ್ಮ ತಮ್ಮ ದಶಾಸಂವತ್ಸರಗಳು, ಪುಷ್ಟಫಲಾ-ಸಂಪೂರ್ಣ ಫಲವಾಗುವುದು, ಅಂದರೆ ಪೂರ್ವದಲ್ಲಿ ಹೇಳಲ್ಪಟ್ಟ ಗ್ರಹದಶೆಗಳು ನೈಸರ್ಗಿಕ ಗ್ರಹದ ದಶೆಯೆಂದು, ಈ ಎರಡು ದಶೆಗಳು ಒಂದೇ ಗ್ರಹಕ್ಕೆ ಏಕಕಾಲದಲ್ಲಿ ಕೂಡಿ ಇದ್ದರೆ ಆ ಕಾಲ ದಶೆಯಾಗಲಿ, ಅಂತರ್ದಶೆಯಾಗಲಿ ಸಂಪೂರ್ಣ ಶುಭಫಲ ಕೊಡುತ್ತದೆ. ಈ ವಿಷಯದಲ್ಲಿ ।।ಶ್ಲೋಕ।। ಏಕಾಬ್ದಿಕಃ ಶಶೀತ್ರ್ಯಬ್ದಿಕಃ ಕುಜೋ ದ್ವಾದಶಾಬ್ದಿಕಃ ಸೌಮ್ಯಃ । ದ್ವಾತ್ರಿಂಶದ್ಭೃಗುಪುತ್ರೋ ಗುರುಸ್ತು ಕಥಿತಶ್ಶತಸ್ಯಾರ್ಧಂ।।೧೭।। ಸಪ್ತತ್ಯಬ್ದಃ ಸುರ್ಯೋ- ವಿಂಶತ್ಯಧಿಕಃ ಶನೈಶ್ಚರೋಬ್ದಶತಃ। ವಯಸೋಂತರಾಣಿಚೈಷಾಂ ಸ್ವದಶಾನೈಸರ್ಗಿಕಃಕಾಲಃ ।।೧೮।। ಸ್ತಂಸ್ತ್ವಂವಯಸಸ್ತದೃಶಂಗ್ರಹಾಃ ಸ್ಸಮಾ ಸಾದ್ಯದೇಹಿನಾಂಕಾಲಂ ।। ರಕ್ಷಣ ಪೋಷಣಚೇಷ್ಟಾ ಸ್ವಭಾವದಾಸ್ಯುರ್ಯಥಾ ಸಂಖ್ಯಂ ।।೧೯।। ಎಂದು ಸತ್ಯಾಚಾರ್ಯ ವಚನಪ್ರಮಾಣವಿರುತ್ತೆ. ಪೂರ್ವಿಕರಾದ ಯವನಾಚಾರ್ಯರ ಮತದಲ್ಲಿ ಈ ಶ್ಲೋಕದಲ್ಲಿ ಲಗ್ನದಶಾ ನೈಸರ್ಗಿಕಕಾಲ ಹೇಳಲ್ಪಟ್ಟಿರುತ್ತೆ. ಯವನಾಃ-ಪುರಾಣ ಯುವನ ಪಂಡಿತರು, ಅಂತೇ-೧೨೦ ಸಂವತ್ಸರಗಳ ಆಯುಸ್ಸುಳ್ಳ, ಲಗ್ನದಶಾ-ಲಗ್ನದ ನೈಸರ್ಗಿಕ ದಶೆಯೆಂದು, ಶುಭಾ- ಆ ಲಗ್ನದಶಾ ಶುಭಕರವೆಂದು ಹೇಳಿದರು, ಅಂದರೆ ಒಂದಾನೊಂದು ಯೋಗದಲ್ಲಿ ೧೨೦ ವರ್ಷದಮೇಲೆ ಆಯುಸ್ಸಿರುವ ಯೋಗವು ಸಂಭವಿಸುತ್ತದೆ. ಅಂಥಹ ಯೋಗದಲ್ಲಿ ಹುಟ್ಟಿದವರಿಗೆ ೧೨೦ ವರ್ಷದ ಮೇಲೆ ಅಂತ್ಯವಯಸ್ಸು ಲಗ್ನನೈಸರ್ಗಿಕ ಕಾಲವೆಂದು ಯುವನಾಚಾರ್ಯರು ಹೇಳುತ್ತಾರೆ. (ಆದರೆ ಈ ದಶಾಕಾಲವನ್ನು ಯವನರು ಹೇಳಿದರೆಂದು ತಾತ್ಪರ್ಯ) ಕೇಚಿತ್-ಶ್ರುತಕೀರ್ತಿ

ಮೊದಲಾದ ಕೆಲವು ಗ್ರಂಥಕರ್ತರು, ತಥಾ-ಆ ಪ್ರಕಾರವೆ ಅಂತ್ಯ ವಯಸ್ಸಿನಲ್ಲಿ ಲಗ್ನದಶೆಯು ಶುಭಕರವೆಂದು, ನೇಚ್ಚುತಿ-ಇಚ್ಛೈಸುವರು, ಈ ಅರ್ಥದಲ್ಲಿ ಶ್ಲೋಕ॥ ಅಂತೇ ಲಗ್ನದಶಾ ಶುಭೇತಿ ಯವನಾ ನೈತದ್ಬಹೂನಾಂಮಂತಂ ॥ ಅಸ್ಮಿ್ಹೀನ ಬಲೇಯತೋಂತ್ಯಸಮಯೇ ಸಾಮ್ಯೈರತೋನೇಷ್ಯತೇ ॥೨೦॥ ಎಂದು ಶ್ರುತಕೀರ್ತಿ ವಚನವಿರುತ್ತೆ. ಆದರೆ ವರಾಹಮಿಹಿರಾಚಾರ್ಯರು ಲಗ್ನದಶೆಯಲ್ಲಿ ಶುಭಾಶುಭವನ್ನು ದ್ರೇಕ್ಕಾಣ ಮೂಲವಾಗಿ ಹೇಳಿದ್ದಾರೆ. ಆದರೆ ಬಲಾಬಲ ವಶದಿಂದ ಹೇಳಲಿಲ್ಲ. ಆದ್ದರಿಂದ ಯವನೋಕ್ತ ಪ್ರಕಾರವಾಗಿ ಅಂತ್ಯವಯಸ್ಸಿನಲ್ಲಿ ಲಗ್ನ ನೈಸರ್ಗಿಕದಶಾ ಶುಭಾಶುಭ ಫಲ ಕೊಡುತ್ತದೆಂದು ತಿಳಿಯತಕ್ಕದ್ದು.

## ನೈಸರ್ಗಿಕ ದಶೋದಾಹರಣೆ
## ನೈಸರ್ಗಿಕಕಾಲ ಮಾಸಪದಕಂ

| ಸಂ | ಎಲ್ಲಿಂದ | ಯಾವವರೆಗೆ | ದಶಾ ಹೆಸರು ಮತ್ತು ಕಾಲ | ಜಾತಕನಿಗುಂಟಾಗುವ ಫಲ |
|---|---|---|---|---|
| ೧ | ಜನ್ಮಾದಿ | ೧ ವರ್ಷ | ಚಂದ್ರದಶಾ ೧ | ಸ್ತನ್ಯಪಾನ ರೋದನ ಖೇಲನಾದಿ ಶಿಶುತ್ವ |
| ೨ | ೧ರಿಂದ- | ೩ರವರಿಗೆ | ಕುಜದಶಾ ೨ | ದಂತೋತ್ಪತ್ತಿ ಶಿಶುತ್ವ |
| ೩ | ೩ರಿಂದ- | ೧೨ರವರಿಗೆ | ಬುಧದಶಾ ೯ | ಬುದ್ಧಿ ಕುಮಾರಾವಸ್ಥ ವಿದ್ಯಾಭಿವೃದ್ಧಿ |
| ೪ | ೧೨ರಿಂದ- | ೩೨ರವರಿಗೆ | ಶುಕ್ರ ೨೦ | ಯೌವ್ವನಾವಸ್ಥೆಕಾಮ ಭೋಗಾಗಿ ಕಾಲ (ಕಾಲ |
| ೫ | ೩೨ರಿಂದ- | ೫೦ರವರಿಗೆ | ಗುರು ೧೮ | ಧರ್ಮಾಚರಣ, ಜ್ಞಾನಸಂಪಾದನ |
| ೬ | ೫೦ರಿಂದ- | ೭೦ರವರಿಗೆ | ರವಿ ೨೦ | ಉಷ್ಣ, ಪಿತ್ತ ಅಪರವಯಸ್ಸು, |
| ೭ | ೭೦ರಿಂದ- | ೧೨೦ರವರಿಗೆ | ಶನಿ ೫೦ | ವಾತಪ್ರಧಾನವಾದ ಮುದಿತನ |
| | | | ಅಂತು ೧೨೦ | ಆಮೇಲೆ ಬರುವುದು ಲಗ್ನದಶೆ |

ಟಿಪ್ಪಣಿ - ಪೂರ್ವೋಕ್ತವಾದ ಈ ದಶೆಗಳು, ಈ ನೈಸರ್ಗಿಕ ದಶೆಗಳು ಏಕಕಾಲದಲ್ಲಿ ಕೂಡಿದರೆ ಶುಭಫಲಪ್ರದವೆಂದು ಮುಖ್ಯಾಭಿಪ್ರಾಯ.

ಮೂಲ॥ ಪಾಕಸ್ವಾಮಿನಿಲಗ್ನಗೇ ಸುಹೃದಿವಾವರ್ಗಸ್ಯ ಸೌಮ್ಯೇಪಿವಾ। ಪ್ರಾರಬ್ಧಾ-
ಶುಭದಾದಶಾ ತ್ರಿದಶಪಳ್ಳಾಭೇಷುವಾಪಾಕಪೇ ॥ ಮಿತ್ರೋ-
ಚ್ಚೋಪಚಯ ತ್ರಿಕೋಣಮದನೇ ಪಾಕೇಶ್ವರಸ್ಯಸ್ಥಿತ । ಶ್ಚಂದ್ರಸ್ತತ್ಸಲ
ಬೋಧನಾನಿಕುರುತೇ ಪಾಪಾನಿಚಾತೋನ್ಯಥಾ ॥೧೦॥

ಈ ಪ್ರಕಾರ ದಶಾಂತರ್ದಶೆಗಳನ್ನು ಹೇಳಿ, ಆ ದಶಾ ಪ್ರವೇಶಕಾಲದಲ್ಲಿ ತತ್ಕಾಲ ಗ್ರಹಚಾರದ ಮೂಲದಿಂದ ಶುಭಾಶುಭ ಫಲವು ಹೇಳಲ್ಪಡುತ್ತೆ. ಪೂರ್ವೋಕ್ತ ಪ್ರಕಾರವಾಗಿ ದಶಾಂತರ್ದಶಾ ಕಾಲವನ್ನು ಹೇಳಿ ಆ ದಶಾಂತರ್ದಶಾ ಪ್ರವೇಶಕಾಲ, ಸವಿಕಲ ಸಾವನ ಪ್ರಮಾಣ ಆರ್ಯಭಟ ಸಿದ್ಧಾಂತ ಮಾರ್ಗವಾಗಿ ಅಹರ್ಗಣ ಸ್ಪುಟವನ್ನು ಮಾಡಿಕೊಂಡು, ಗ್ರಹಗಳನ್ನು ತತ್ಕಾಲಸ್ಪುಟ ಮಾಡಿಕೊಂಡು ಫಲವನ್ನು ನಿರ್ಣಯಿಸತಕ್ಕದ್ದು. ಅದು ಹೇಗೆಂದರೆ-ಶ್ರೀಪತಿ ಹೇಳಿದ ಪ್ರಕಾರ ಜನ್ಮಕಾಲ, ಕಲ್ಯಾದಿಭಗಣ ಮಧ್ಯ ಸೂರ್ಯನಲ್ಲಿ ದಶಾವರ್ಷ, ಮಾಸ, ದಿವಸ, ಘಟಿಕಾ, ವಿಘಟಿಕೆಯನ್ನು ಸೇರಿಸಿದರೆ ಮುಂದಿನ ದಶಾಪ್ರವೇಶಕಾಲ ಭಗಣಾದಿ ಮಧ್ಯ ರವಿಯಾಗುವುದು. ಈ ವಿಷಯದಲ್ಲಿ ಶ್ಲೋಕ-ಶ್ರೀಪತಿಃ ॥ ಜನ್ಮಕಾಲಕಲಿಯಾತವತ್ಸರೋತ್ಪನ್ನ ಮಧ್ಯಮ ರವೌಭಂಡಲೇ । ನಿಕ್ಷಿಪೇದಥ ದಶಾದಿಕಾಃ ಸಮಾಮಾಸವಾಸರ ಘಟೀವಿನಾಡಿಕಾಃ ॥೨೧॥ ತಾದೃಶೋಭವತಿಭಾಸ್ಕರೋ ಯದಾಮಧ್ಯಮೋ ಪರದಶಾಭವೇತ್ತದಾ ॥ ಎಂದುಕ್ತವಾಗಿರುತ್ತೆ. ಇದಕ್ಕೆ ಉದಾಹರಣೆ-ಜನ್ಮಕಾಲ ಭಗಣ ಮಧ್ಯಮ ರವಿ ೪೨೯೨-೧೦, ೮-೫೬, ಇದರಲ್ಲಿ ಲಗ್ನ ಮಹಾದಶೆಯಲ್ಲಿ ಲಗ್ನಾಂತರ್ದಶಾ ವರ್ಷಾದಿ ೩-೯-೧, ೧೯-೦ ಇದನ್ನು ಸೇರಿಸಲಾಗಿ ವರ್ಷಾದಿ ೪೨೯೬, ೭-೧೦-೧೫-೦, ಆಗುತ್ತದೆ. ಸಾಧ್ಯತೇ ದಿನಗಣೋನುಪಾತತಃ ಖೇಚರಾನ್ ಸವಿಕಲಾದಹರ್ಗಣಾನ್ ॥೨೨॥ ಎಂದು ಹೇಳಿರುವ ಪ್ರಕಾರ ಕ್ರಮ ದ್ಯುಗುಣವನ್ನು ಯುಗರವಿ ಭಗಣದಿಂದ ಗುಣಿಸಿ, ಯುಗಸಾವನವಾಸರದಿಂದ ಭಾಗಿಸಲಾಗಿ, ಭಗಣಾದಿ ಸೂರ್ಯನಾಗುವನು. ಆ ಭಗಣಾದಿ ಸೂರ್ಯನನ್ನು ಇಟ್ಟುಕೊಂಡು ಯುಗಸಾವನ ದಿವಸದಿಂದ ಗುಣಿಸಿ ಯುಗ ರವಿ ಭಗಣದಿಂದ ಭಾಗಿಸಲಾಗಿ ಸಕಲದ್ಯುಗಣ ಬರುವುದು. ಈ ವಿಷಯದಲ್ಲಿ ಶ್ಲೋಕ॥ ಯುಗಾರ್ಕವರ್ಕ್ಷೈ ರ್ಯುಗಸೌರಸಾವನ್ಯೈ ರ್ಯವಾದ್ಯುಪಿಂಡಸ್ಸಮವಾಪ್ಯ ನೇಕಧಾ ॥ ಎಂದು ಹೇಳಲ್ಪಟ್ಟಿರುತ್ತೆ. ಲಗ್ನಾಂತರ್ದಶಾಂತ್ಯದ ಮಧ್ಯರವಿ ೧೪೯೬, ೭-೧೦-೧೫ಕ್ಕೆ ಆರ್ಯಭಟ ಸಿದ್ಧಾಂತಸಾವನ ದಿವಸಗಳು - ॥ಶ್ಲೋಕ॥ ಖಖೇಷುನಗಚಂದ್ರಾಂಕ ಸಪ್ತಶೈಲಶರೇಂದವಃ ॥೨೩॥ ೧೫೭೭೯೧೭೫೦೦ ಇದರಿಂದ ಗುಣಿಸಿ, ವಿಲಿಪ್ತಸ್ಥಾನವನ್ನು ೬೦ ರಿಂದ ಭಾಗಿಸಿ, ಲಿಪ್ತಸ್ಥಾನಕ್ಕೆ ಸೇರಿಸಿ, ಆ ಲಿಪ್ತಸ್ಥಾನವನ್ನು

೬೦ ರಿಂದ ಭಾಗಿಸಿ, ಭಾಗಸ್ಥಾನಕ್ಕೆ ಸೇರಿಸಿ, ಆ ಭಾಗಸ್ಥಾನವನ್ನು ೩೦ ರಿಂದ ಭಾಗಿಸಿ, ರಾಶಿಸ್ಥಾನಕ್ಕೆಸೇರಿಸಿ, ಆ ರಾಶಿಸ್ಥಾನವನ್ನು ೧೨ ರಿಂದ ಭಾಗಿಸಿ, ಭಗಣಸ್ಥಾನಕ್ಕೆ ಸೇರಿಸಿ, ಆ ಭಗಮಸ್ಥಾನವನ್ನು ಯುಗರವಿ ಭಗಣಗಳಾದ ೪೩೨೦೦೦೦ ದಿಂದ ಭಾಗಿಸಿ ಬಂದದ್ದು ಸಾವನದ್ಯುಗಣವಾಗುವುದು. ೧೫೯೬೩೭೪೪೫ ಈ ದ್ಯುಗುಣ ಘಟಿಕಗಳನ್ನು ಭಗಣದಿಂದ ಗುಣಿಸಿ, ಘಟಕ ಸ್ಥಾನವನ್ನು ೬೦ ರಿಂದ ಭಾಗಿಸಿ, ನಂತರ ದ್ಯುಗುಣದಲ್ಲಿ ಕೂಡಿ, ಸಾವನ ದಿವಸಗಳಿಂದ ಭಾಗಮಾಡಲಾಗಿ, ಆ ಭಗಣಶೇಷ ಘಟಿಕಾ ಶೇಷವನ್ನು ೧೨ ರಿಂದ ಗುಣಿಸಿ, ಘಟಿಕಾಶೇಷವನ್ನು ೬೦ ರಿಂದ ಭಾಗಿಸಿ, ಭಗಣ ಶೇಷದಲ್ಲಿ ಕೂಡಿಸಿ, ಸಾವನ ದಿವಸಗಳಿಂದ ಭಾಗ ಮಾಡಲಾಗಿ ರಾಶಿಗಳು ಬರುವುದು. ಆ ಶೇಷದಲ್ಲಿ ಭಾಗಾದಿಗಳು ಬರುತ್ತವೆ. ಭಗಣ ಮಧ್ಯರವಿ ೪೨೯೬, ೭-೧೧-೧೫-೦ ಸ್ಫುಟರವಿಃ, ೭-೧೧-೦ ಆಯನಾಂಶ ಇಷ್ಟಘಟಿಕ, ೧೧ ತತ್ಕಾಲೋದಯಲಗ್ನ, ೧-೭-೨೮ ಸ್ಫುಟಚಂದ್ರಃ, ೮-೨-೫೪ ಸ್ಫುಟಕುಜಃ. ೫-೨೮-೫೦ ಸ್ಫುಟಬುಧಃ, ೭-೨೬-೫೦ ಸ್ಫುಟಗುರುಃ, ೩-೧೪-೧೧ ಸ್ಫುಟಶುಕ್ರಃ, ೦-೦-೨೮ ಸ್ಫುಟಶನಿಃ, ೯-೧೪-೩ ಈ ಪ್ರಕಾರವಾಗಿ ಸಕಲ ಗ್ರಹ ದಶಾಂತರ್ದಶಾ ಪ್ರವೇಶ ಕಾಲದಲ್ಲಿ ಗ್ರಹಗಳನ್ನು-ಲಗ್ನವನ್ನು ಸ್ಫುಟಮಾಡಬೇಕು. ಸಾವನ ಮಾಸದಿಂದಲೇ ಆಯುರ್ದಾಯವನ್ನು ಗಣಿತ ಮಾಡಬೇಕೆಂದು ಪ್ರಮಾಣವಿರುತ್ತೆ. ಗರ್ಗಸಂಹಿತಾಯಾಂ ॥ಶ್ಲೋಕ-ಆಯುರ್ದಾಯ ವಿಭಾಗಶ್ಚ ಪ್ರಾಯಶ್ಚಿತ್ತಕ್ರಿಯಾಸ್ತಥಾ ॥ ಸಾವನೇನೈವಕರ್ತವ್ಯಾ ಸತ್ರಾಣಾಮಪ್ಯುಪಾಸನು ॥ ಸಾವನಃ ಕಥಿತೋಮಾಸ ಸ್ತ್ರಿಂಶದುಷ್ಣಕರೋದಯಾಃ- । ತ್ರೈರ್ದ್ವಿಷಟ್ಕೈಸ್ತುವರ್ಷ ಸ್ಯಾತ್ತೇನೈವಾಯುರ್ವಿಕಲ್ಪಯೇತ್ ॥೨೫॥ ಆಯುರ್ದಾಯ ವಿಭಾಗಕ್ಕೂ ಪ್ರಾಯಶ್ಚಿತ್ತ ಕ್ರಿಯಾದಿಗಳಿಗೂ ಸಹ ಸಾವದ ಮಾಸದಿಂದ ಗಣಿತ ಮಾಡಬೇಕು ಆ ಸಾವನಮಾಸ ಪ್ರಯಾಣವೇನೆಂದರೆ-ಸಾವನಃ ಕಥಿತೋಮಾಸ ಎಂಬುವ ಶ್ಲೋಕದಿಂದ ॥ಸಾವನಮಾಸ॥ ಸೂರ್ಯ ಉದಯದಿಂದ ಪರ ದಿವಸ ಸೂರ್ಯೋದಯಕ್ಕೆ ೧ ದಿವಸ, ಇಂಥಾ ೩೦ ಸೂರ್ಯ ಉದಯಗಳಿಗೆ ೧ ತಿಂಗಳು, ಇಂಥಾ ತಿಂಗಳು ೧೨ಕ್ಕೆ ೧ ಸಂವತ್ಸರ, ಇದರಿಂದಲೇ ಆಯುಸ್ಸನ್ನು ಕಲ್ಪಿಸಬೇಕೆಂದು ತಾತ್ಪರ್ಯ. ೩೦ ದಿವಸಕ್ಕೆ ೧ ತಿಂಗಳು, ಇಂಥಾ ೧೨ ತಿಂಗಳಿಗೆ ೧ ಸಂವತ್ಸರ ಅಂದರೆ ಸಾವನ ಸಂವತ್ಸರಕ್ಕೆ ೩೬೦ ದಿವಸಗಳು.

ಇಲ್ಲಿ ಜ್ಯೋತಿಷ್ಕರು ತಿಳಿದಿರತಕ್ಕ ವಿಷಯಗಳು ಪಂಚಾಂಗಗಣಿತ ಮಾಡುವ ಸಿದ್ಧಾಂತಿಗಳಾದವರಿಗೆ ಅಹರ್ಗಣಾದಿ ಗ್ರಹಗಳ ಸ್ವರೂಪವು ತಿಳಿದು ಇರುತ್ತೆ. ಮತ್ತು ಗ್ರಹಗಳ ಸಂವತ್ಸರ ಸ್ವರೂಪವು ತಿಳಿದು ಇರುತ್ತೆ. ಆದರೆ -

## ಪಂಚವಿಧ ಸಂವತ್ಸರಗಳು

"ಪಂಚಸಂವತ್ಸರಮಯಂ" ಎಂಬುವ ಸೂತ್ರದ ಪ್ರಕಾರ ೧ ಸೌರ ಸಂವತ್ಸರ, ೨ ಸಾವನ ಸಂವತ್ಸರ, ೩ನೆಯದು ಚಾಂದ್ರಸಂವತ್ಸರ, (ಇದರಲ್ಲಿ ೨ ವಿಧ) ೧ ಶುಕ್ಲ ಪ್ರತಿಪದಾದಿ ಕೃಷ್ಣ ಅಮಾವಾಸ್ಯ ಪರ್ಯಂತರ ದಾಕ್ಷಿಣಾತ್ಯ ಚಾಂದ್ರ ಮಾನ, ಕೃಷ್ಣ ಪ್ರತಿಪದಾದಿ ಶುಕ್ಲ ಪೂರ್ಣಿಮಾ ಪರ್ಯಂತರವಾಗಿ ಉತ್ತರದೇಶದಲ್ಲಿ ಚಾಂದ್ರಮಾನ, ನಮಗೆ ಮಾಘ ಶುಕ್ಲ ಪೂರ್ಣಿಮಾವರಿಗೆ ಮಾಘ ಮಾಸವಾಗಿರುತ್ತೆ. ಮಾಘ ಕೃಷ್ಣ ಪ್ರತಿಪದಾ ದಿವಸ ವಿಂಧ್ಯೋತ್ತರ ದೇಶದಲ್ಲಿ ಫಾಲ್ಗುಣ ಕೃಷ್ಣಪಕ್ಷವೆಂದು ತಿಳಿಯತಕ್ಕದ್ದು. ಈ ಪ್ರಕಾರ ನಮ್ಮ ಯುಗಾದಿ ಪ್ರತಿಪದಾ ಹಿಂದಿನ ದಿವಸವಾದ ಫಾಲ್ಗುಣ ಬಹುಳ ೩೦ ದಿವಸಕ್ಕೆ ಅವರು ಚೈತ್ರಕೃಷ್ಣ ೩೦ ಎಂದು ಲೆಕ್ಕಿಸುತ್ತಾರೆ, ಇದರಿಂದ ಮಾಸ ಸಂಕೇತನಾಮವು ಬದಲಾವಣೆಯಾಗುವುದು ಒಂದು ಮಾತ್ರವೇ ಆಗಿರುತ್ತೆ, ಇನ್ನು ಯಾವುದೂ ವ್ಯತ್ಯಾಸವಾಗುವುದಿಲ್ಲ, ೪ನೇ ನಾಕ್ಷತ್ರಮಾಸ ೫ನೆಯದು ಬಾರ್ಹಸ್ಪತ್ಯಮಾಸ, ಈ ಪ್ರಕಾರ ಭರತಖಂಡದಲ್ಲಿ ಆಚರಣೆಯಲ್ಲಿರುತ್ತೆ.

## ಪಂಚಸಂವತ್ಸರ ಪದಕಂ
## ಸಂವತ್ಸರ ಮಾನಪ್ರಮಾಣ

| ಸಂ | ಸಂವತ್ಸರಮಾನದ ಹೆಸರು | ದಿವಸ | ಘಳಿಗೆ | ವಿಘ | ಪರೆ | ತತ್ಪ |
|---|---|---|---|---|---|---|
| ೧ | ಸೌರಮಾನ ಸಂವತ್ಸರಕ್ಕೆ | ೩೬೫ | ೧೫ | ೩೧ | ೩೧ | ೨೪ |
| ೨ | ಸಾವನಮಾನ " | ೩೬೦ | ೦ | ೦ | ೦ | ೦ |
| ೩ | ಚಾಂದ್ರಮಾನ " | ೩೫೪ | ೦ | ೦ | ೦ | ೦ |
| ೪ | ನಾಕ್ಷತ್ರಮಾನ " | ೩೨೪ | ೦ | ೦ | ೦ | ೦ |
| ೫ | ಬಾರ್ಹಸ್ಪತ್ಯಮಾನ | ೩೬೦ | ೦ | ೦ | ೦ | ೦ |

೧ ಸೂರ್ಯನ ಸಾವನಮಾನ ಪ್ರಮಾಣ-ಸೂರ್ಯನು ಅಶ್ವಿನೀ ನಕ್ಷತ್ರದ ಪ್ರಥಮಕಲಾ ಆದಿಸ್ಥಾನವನ್ನು ಅತಿಕ್ರಮಿಸಿದವನು ಪುನಃ ಅಶ್ವಿನೀ ನಕ್ಷತ್ರದ ಪ್ರಥಮ ಕಲಾದ್ಯ ಸ್ಥಾನಕ್ಕೆ ಬರುವುದಕ್ಕೆ ೩೬೫ ದಿವಸ, ೧೫ ಘಳಿಗೆ ೩೧ ವಿಘಳಿಗೆ, ೩೧ ಪರೆ, ೨೪ ತತ್ಪರೆಗಳ ಕಾಲ ಬೇಕಾಗುತ್ತದೆ. ಇದು ಪಂಚಾಂಗಗಳಲ್ಲಿ ಅಶ್ವಿನೀ ಪ್ರಥಮೇರವಿಃ ೫೯ ೫೬ ಎಂದಿರುತ್ತದೆ. ಪುನಃ ಸೂರ್ಯನು ಅಶ್ವಿನೀ ಪ್ರಥಮ ಪಾದಕ್ಕೆ ಪ್ರವೇಶ ಮಾಡುವುದಕ್ಕೆ ಇದೇ ರೀತಿಯಾಗಿ ಅಂಕವ್ಯತ್ಯಾಸದಿಂದ ಬರುತ್ತದೆ. ಈ ಮಧ್ಯಕಾಲವೇ ಮೇಲೆ ಹೇಳಿರುವ ಕಾಲವೆಂದರಿಯಬೇಕು. ಇಂಗ್ಲೀಷ್

ಸಂವತ್ಸರಕ್ಕೆ ಜನವರಿ ೩೧, ಫೆಬ್ರವರಿ ೨೮, ಮಾರ್ಚ ೩೧, ಏಪ್ರಿಲ್ ೩೦, ಮೇ ೩೧, ಜೂನ್ ೩೦, ಜುಲೈ ೩೧, ಆಗಸ್ಟ್ ೩೦, ಸೆಪ್ಟೆಂಬರ್ ೩೧ ನವಂಬರ್ ೩೦, ಡಿಸೆಂಬರ್ ೩೧ ಅಂತು ಇವೆಲ್ಲ ಸಂಕಲನ ಮಾಡಿದರೆ ೩೬೫ ದಿವಸಗಳಾಗುವವು. ಅಧಿಕ ಸಂವತ್ಸರ ಬಂದ ವರ್ಷದಲ್ಲಿ ಫೆಬ್ರುವರಿ ತಿಂಗಳಿಗೆ ೨೯ ದಿವಸ ಬರುತ್ತದೆ. ಆದ್ದರಿಂದ ೩೬೫ ದಿವಸ, ೧೫ ಘಳಿಗೆ, ಮೊದಲಾದ ದಿವಸಗಳ ೧/೪ ದಿವಸಗಳು ೪ ಸಂವತ್ಸರಕ್ಕೆ ಸೇರಿ ೧ ದಿವಸವಾಗಿ ಫೆಬ್ರುವರೀ ತಿಂಗಳಿಗೆ ೧ ದಿವಸ ಸೇರಿ, ಅನಂತರ ಕ್ರಮವಾಗಿ ಎಡಬಿಡದೆ ಇಂಗ್ಲೀಷ್ ಸಂವತ್ಸರವು ಸೌರಸಂವತ್ಸರವು ಸೇರಿಕೊಂಡೇ ಇರುತ್ತೆ.

೨. ಚಾಂದ್ರ ಸಂವತ್ಸರ ಪ್ರಮಾಣ ೩೫೪ ದಿವಸ, ಅಧಿಕಮಾಸ ಬಂದ ಸಂವತ್ಸರ ೩೮೪ ದಿವಸವಾಗುತ್ತೆ. "ದ್ವಾತ್ರಿಂಶದ್ಭಿರ್ಗತೈರ್ಮಾಸೈರ್ದಿನೈ ಷೋಡಶಭಿ-ಸ್ತಥಾ। ಘಟಿಕಾನಾಂಚತುಷ್ಕೇಣ ಪತತ್ಯಧಿಕಮಾಸಕಃ" ಅಂದರೆ ೧ ಸಾರಿ ಅಧಿಕಮಾಸ ಬಂದನಂತರ ಪುನಃ ೩೨ ತಿಂಗಳು, ೧೬ ದಿನ, ೪ ಘಳಿಗೆ ಕಳೆದ ನಂತರ ಪುನಃ ಅಧಿಕಮಾಸ ಬರುತ್ತೆ. ಈ ಪ್ರಕಾರ ಬರುವುದರಿಂದ ಸೌರ-ಚಾಂದ್ರ ಸಂವತ್ಸರಗಳು ಕೂಡಿಯೇ ಇರುತ್ತೆ. ಅಧಿಕಮಾಸವೆಂದರೆ ಶುಕ್ಲ ಪ್ರತಿಪತ್ ಮೊದಲು ಗೊಂಡು ಅಮಾವಾಸ್ಯೆ ಕಳೆಯುವವರಿಗೂ ಮಧ್ಯಕಾಲದಲ್ಲಿ ಸೂರ್ಯಸಂಕ್ರಮಣ ಹುಟ್ಟದಿದ್ದರಿಂದ ಸೂರ್ಯಸಂಕ್ರಮಣವಿಲ್ಲದ ಮಾಸವಾದ್ದರಿಂದ ಅಧಿಕಮಾಸವಾಗುವುದು, ಇದೇ ಪ್ರಕಾರ ಚಾಂದ್ರಮಾನದ ೧ ತಿಂಗಳಲ್ಲಿ ಎರಡು ರಾಶಿಗೆ ಸೂರ್ಯ ಪ್ರವೇಶವಾದರೆ ಆ ತಿಂಗಳು ಕ್ಷಯಮಾಸವಾಗುತ್ತೆ, ಇದು ೧೩೫ ವರ್ಷಕ್ಕೊಂದು ಸಾರಿ ಬರುತ್ತೆ, ಇದು ಕಾರ್ತಿಕ, ಮಾರ್ಗಶಿರ, ಪುಷ್ಯ ಈ ಮೂರು ತಿಂಗಳುಗಳಲ್ಲಿ ಬರುತ್ತೆ, ಈ ಮೂರರ ವಿನಹ ಉಳಿದ ಒಂಭತ್ತು ತಿಂಗಳುಗಳಲ್ಲಿ ಯಾವುದಾದರೂ ಅಧಿಕಮಾಸ ಬರುತ್ತೆ.

೩. ಸಾವನಮಾನಕ್ಕೆ ಈ ವಿಧಿಯಿಲ್ಲ, ೩೬೦ ದಿವಸಕ್ಕೆ ಒಂದು ಸಂವತ್ಸರ.

೪. ನಾಕ್ಷತ್ರಮಾನಕ್ಕೆ ೨೭x೧೨=೩೨೪ ದಿವಸಗಳು.

೫. ಬಾರ್ಹಸ್ಪತ್ಯಮಾನಕ್ಕೆ ೩೬೦ ದಿವಸಗಳು, ಇದಕ್ಕೆ ಕೆಲವುಕಾಲ ಹೆಚ್ಚು ಕಡಿಮೆ ಬರುತ್ತದೆ, ಆದೆಲ್ಲ ಸರಿಯಾಗಿ ೬೦ ವರ್ಷಕ್ಕೊಂದುಸಾರಿ ಕ್ರಮಪಡುತ್ತೆ. ।।ಶ್ಲೋಕ।। ಮಾಘೇಮಾಸಿ ಧನಿಷ್ಠಾಯಾಃ ಪ್ರಥಮೇ ಚರಣೇಗುರುಃ । ಯದೋ ದೇತಿತದಾಶ್ರೇಷ್ಠಃ ಪ್ರಭವೋವತ್ಸರಾಗ್ರಣೀಃ ।।ತಾ।। ಪ್ರಭವ ಸಂವತ್ಸರವು ಹುಟ್ಟುವುದು ಹೇಗೆಂದರೆ-ಮಾಘಮಾಸದಲ್ಲಿ ಧನಿಷ್ಠಾ ನಕ್ಷತ್ರದ ೧ನೇ ಚರಣದಲ್ಲಿ ಗುರು ಉದಯವಾದರೆ ಆಗ ಪ್ರಭವ ಸಂವತ್ಸರ ಹುಟ್ಟುತ್ತದೆಂದು ಸಿದ್ಧಾಂತ.

ಟಿಪ್ಪಣಿ-ಈ ಮೇಲೆ ಹೇಳಿದ ಸಂವತ್ಸರ ಮಾಸಗಳಿಗೆ ನಮ್ಮ (ಈ ೨೪ ಘಂಟೆಯು) ದಿವಸಗಳು ಮೇಲೆ ಹೇಳಿದ ಪ್ರಕಾರ ಆದಾಗ್ಯೂ ಆಯಾಯ ಮಾಸಗಳಿಂದ ೩೬೦ ದಿವಸಗಳೇ ಆಗುವವು.

ಮುಖ್ಯವಾಗಿ ದಶಾಂತರ್ದಶಾ ಪ್ರವೇಶ ಕಾಲಕ್ಕೆ ಬೃಹಜ್ಜಾತಕೋಕ್ತ ದಶಾಂತ ರ್ದಶಾ ಪ್ರವೇಶವಾದರೆ, ಜನ್ಮಕಾಲದ ಭಗಣ ಮಧ್ಯರವಿ ಮಾಡಿಕೊಂಡು ಆ ಕ್ರಮ ವನ್ನನುಸರಿಸಬೇಕೆಂದು ಮೊದಲೇ ತಿಳಿಸಿ, ಉದಾಹರಣೆ ಕೊಟ್ಟಿರುವುದು ಅಭ್ಯಾಸಿ ಗಳಿಗೆ ಅನುಕೂಲವಾಗಬಹುದು, ಮತ್ತು ಪರಾಶರ ಉಡುದಶಾ ನಿರ್ಣಯಕ್ಕೂ ಚಾಂದ್ರ ಸೌರವನ್ನು ಉಪಯೋಗಿಸದೆ ಜನ್ಮಕಾಲದ ಅಹರ್ಗಣಕ್ಕೆ ದಶಾಪ್ರವೇಶ ಕಾಲದ ಅಹರ್ಗಣ ಮಾಡಿಕೊಂಡು ದಶಾಪ್ರವೇಶ ಕಂಡುಹಿಡಿಯಬೇಕು.

## ಅಹರ್ಗಣೋದಾರಣೆ

ಸಿದ್ಧಾಂತ ಗಣಿತ ಸಂಗ್ರಹೇ-ಶ್ಲೋಕ ॥ ಗಗನಾಗ್ನಿ ಃ ೩೦ ಷಷ್ಟಿಗುಣಃ ೬೦ ರುದ್ರೋನಃ ೧೧ ಪ್ರಬವಾದಿಯುಕ್ ॥ ಶಕಾಬ್ದೋನವಶೈಲೆಂದ ೩೧೭೯ ವಹ್ನಿಯುಕ್ತಾಃ ಕಲೇರ್ಗತಾಃ ॥ ೩೦ರನ್ನು ೬೦ ರಿಂದ ಗುಣಿಸಿದರೆ ಬರುವ ಲಬ್ಧದಲ್ಲಿ ೧೧ ವ್ಯವಕಲನೆ ಮಾಡಬೇಕು. ಆ ಶೇಷಕ್ಕೆ ಪ್ರಭವಾದಿಯಾಗಿ ಗತಸಂವತ್ಸರ ಸಂಖ್ಯೆಯನ್ನು ಸೇರಿಸಬೇಕು, ಆ ಮೊತ್ತಕ್ಕೆ ೩೧೭೯ ಸಂಕಲನ ಮಾಡಿದರೆ ಕಲಿಗತ ಸಂವತ್ಸರವಾಗುವುದು.

ಕಲ್ಯಬ್ದೋ ರವಿಭಿರ್ಗುಣ್ಯೋ ಮಾಸೈಶ್ಚೈತ್ರಾಧಿಭಿರ್ಯುತಃ ।
ಗಜಾಕ್ಷಘ್ನೋಥ ರುದ್ರಾಂಕೈ ರಾಪ್ತಯಾತಾಧಿಮಾಸಯುಕ್ ॥

ಈ ಮೇಲೆ ಹೇಳಲ್ಪಟ್ಟ ಕಲಿವರ್ಷಗಳನ್ನು ೧೨ ರಿಂದ ಗುಣಿಸಿ ಬಂದ ಮೊತ್ತಕ್ಕೆ ಚೈತ್ರಾದಿಯಾಗಿ ಗತಮಾಸ ಸಂಖ್ಯೆಯನ್ನು ಸೇರಿಸಬೇಕು, ಇದನ್ನು ಎರಡು ಸ್ಥಳದಲ್ಲಿಟ್ಟುಕೊಂಡು, ಎರಡನೇ ಸ್ಥಳದಲ್ಲಿಟ್ಟುಕೊಂಡ ಸಂಖ್ಯೆಯನ್ನು ೨೮ ರಿಂದ ಗುಣಿಸಿ, ಬಂದ ಮೊತ್ತವನ್ನು ೯೧೧ ರಿಂದ ಭಾಗಿಸಿ, ಬಂದ ಲಬ್ಧವನ್ನು ೧ ನೇ ನವಾಂಶಕ್ಕೆ (ಸೇರಿಸಿ) ಸಂಕಲನ ಮಾಡಬೇಕು, ಇದೇ ಅಧಿಮಾಸಗಳು.

ತ್ರಿಂಶದ್ಗುಣಸ್ತಿಥಿಯುತಃ ಪೃಥಗೀಶವಿವರ್ಧಿತಃ ।
ತ್ರಿಖಶೈಲಾಪ್ತಲಬ್ಧೋನಃ ಶುಕ್ರವಾರಾದ್ಯಹರ್ಗಣಃ ॥

ಆ ಮೊತ್ತವನ್ನು ೩೦ ರಿಂದ ಗುಣಿಸಿ, ಅದಕ್ಕೆ ಗತತಿಥಿಗಳ ಸಂಖ್ಯೆಯನ್ನು ಸೇರಿಸಬೇಕು, ಅದನ್ನು ೨ ಸ್ಥಾನದಲ್ಲಿಟ್ಟುಕೊಂಡು, ಎರಡನೆ ಸ್ಥಾನದಲ್ಲಿದ್ದ ಸಂಖ್ಯೆಗೆ ಹನ್ನೊಂದರಿಂದ ಗುಣಿಸಿ ಬಂದ ಮೊತ್ತವನ್ನು ೭೦೩ ರಿಂದ ಭಾಗಿಸಿ, ಬಂದ

ಲಬ್ಧವನ್ನು ೧ನೇ ಸ್ಥಾನಾಂಕದಲ್ಲಿ ವ್ಯವಕಲನೆ ಮಾಡಿದರೆ ಬರುವ ಶೇಷವೇ ಕಲ್ಯಾದಿ ಅಹರ್ಗಣವಾಗುವುದು.

ಇದನ್ನು ೭ ರಿಂದ ಭಾಗಿಸಿದರೆ, ೧ ಶೇಷ ನಿಂತರೆ ಶನಿವಾರ ೨, ಭಾನುವಾರ ೩, ಸೋಮ ೪, ಮಂಗಳ ೫, ಬುಧ ೬, ಗುರು ಶೇಷಶೂನ್ಯವಾದರೆ ಶುಕ್ರವಾರ, ಈ ಪ್ರಕಾರ ವಾರಗಳ ನಿರ್ಣಯ ಮಾಡಿಕೊಳ್ಳಬೇಕು. ಕದಾಚಿತ್-ತಾಳೆಬಾರದಿದ್ದರೆ ೧ ಸೇರಿಸಿಕೊಂಡು ಸಮನ್ವಯ ಮಾಡಿಕೊಳ್ಳತಕ್ಕದ್ದು.

ಶಾಲಿವಾಹನಶಕ ಗತ. ೧೮೩೪ ವರ್ತಮಾನ ಪರೀಧಾವಿ ಸಂವತ್ಸರದ ಮಾಘ ಶುದ್ಧ ಭಾನುವಾರಕ್ಕೆ ಮೇಲಿನ ಪ್ರಕಾರ ಉದಾಹರಣೆ -

೩೦ ಗಗನಾಗ್ನಿ                ೨ನೇ ಪ್ರತಿ
೬೦ ಷಷ್ಟಿಗುಣ                ೬೦,೧೬೬
೧,೮೦೦                ೨೮ಗುಣಿಸು
______
೧೧ ರುದ್ರೋನಃ
೧,೭೮೯                ೯೧೧)೧೬೮೪೬೪೮(೧೮೪೯
______
೪೫ ಪ್ರಭವಾದಿಯುಕ್                ೯೧೧
______                ______
                ೭೭೩೬
೧,೮೩೪ ಇದು ಗತಶಾಲೀವಾಹನಶಕ                ೭೨೮೮
                ______
೩,೧೭೯ ನವಶೈಲೇಂದು ವಹ್ನಿಯುಕ್ತಾಃ                ೪೪೮೪
                ೩,೬೪೪
______                ______
೫,೦೧೩ ಇದು ಕಲ್ಯಾದಿ ಗತಸಂವತ್ಸರ                ೮,೪೦೮
೧೨ ರವಿಭಿರ್ಗುಣ್ಯಃ                ೮,೧೯೯
______                ______
                ೨೦೯ ಶೇಷ
೬೦,೧೫೬
೧೦ ಮಾಸೈಶ್ಚೈತ್ರಾದಿಭಿರ್ಯುಕ್ತ
______
೬೦,೧೬೬ ಇದು ಕಲ್ಯಾದಿ ಗತಮಾಸ                ೨ನೇ ಪ್ರತಿ
ಇದು ೧ನೇ ಪ್ರತಿ                ೧೮,೬೦,೪೫೨
೧,೮೪೯ ಇದು ೨ನೇ ಪ್ರತಿಭಾಗಲಬ್ಧ                ೧೧
______ ಸಂಕಲನ ಮಾಡಿದೆ                ______

| | |
|---|---|
| ೬೨,೦೧೫ | ೭೦೩)೨,೦೪,೬೪,೯೭೨(೨೯,೧೧೦ |
| ೩೦ ದಿನಸಂಖ್ಯೆ | ೧,೪೦೬ |
| ೧೮,೬೦,೪೫೦ | ೬,೪೦೪ |
| ೨ ಗತತಿಥಿ ಸೇರಿಸಿದೆ | ೬,೩೨೭ |
| | ೭೭೯ |
| ೧೮,೬೦,೪೫೨ ಇದೆ ೧ನೇ ಪ್ರತಿ | ೭೦೩ |
| ೨೯,೧೧೦ ೨ನೇ ಪ್ರತಿ ಭಾಗಲಬ್ಧ | ೭೬೭ |
| ವ್ಯವಕಲನೆ ಮಾಡಬೇಕು | ೭೦೩ |
| ೧೮,೩೧,೩೪೨ | ೬೪೨ ಶೇಷ |

ಇದೇ ಕಲ್ಯಾದಿ ಅಹರ್ಗಣವಾಗುವುದು.

ಇದನ್ನು ವಾರಕ್ಕೆ ಸರಿನೋಡಬೇಕು
೭)೧೮,೩೧,೩೪೨
೨೬೧೬೨೦=೨ ಶೇಷ

೧ ಶೇಷವಾದರೆ ಶನಿ, ೨ ಶೇಷ ಭಾನು, ಆದ್ದರಿಂದ ಮಾಘ ಶುದ್ಧ ತೃತೀಯ ಭಾನುವಾರವಾದ್ದರಿಂದ ಅಹರ್ಗಣ ಸರಿಯಾಗಿದೆ.

ಟೀಕು॥ ಪಾಕಸ್ವಾಮಿನಿ-ಅಂತರ್ದಶಾನಾಥನು, ಲಗ್ನಗೇ-ಲಗ್ನದಲ್ಲಿ ಅಂದರೆ ದಶಾಪ್ರವೇಶ ಲಗ್ನದಲ್ಲಿದ್ದರೂ, (ಇದರಲ್ಲಿ ಕೆಲವರು ದಶಾಧಿಪತಿಗೆ ಮಿತ್ರಕ್ಷೇತ್ರ ಲಗ್ನವಾದರೂ ಎಂದು ಅರ್ಥ ಮಾಡಿರುವ) ಅಸ್ಯ-ಈ ದಶಾಧಿಪತಿಗೆ, ವರ್ಗೇ-ಈ ಬೃಹಜ್ಜಾತಕೋಕ್ತ ಸಪ್ತವರ್ಗ ಲಗ್ನಗತವಾದರೂ, ಸೌಮ್ಯೇ-ಶುಭಗ್ರಹ ದಶಾಪ್ರವೇಶ ಲಗ್ನದಲ್ಲಿದ್ದರೂ, ಪಾಕಪೇ-ದಶಾಧಿಪತಿ, ತ್ರಿದಶ ಷಡ್ಲಾಭೇಷುವಾ-ಮೂರು, ಹತ್ತು, ಹನ್ನೊಂದು, ಆರು ಈ ಸ್ಥಾನದಲ್ಲಿದ್ದರೂ, ಅಂದರೆ ದಶಾಪ್ರವೇಶ ಲಗ್ನಕ್ಕೆ ಈ ಉಪಚಯ ಸ್ಥಾನಗಳಲ್ಲಿದ್ದರೂ, ಪ್ರಾರಬ್ಧಾ-ಪ್ರಾರಂಭಿಸಿದ, ದಶಾ-ಮಹಾದಶೆಯು, ಶುಭದಾ-ಶುಭ ಫಲವನ್ನು ಕೊಡುತ್ತದೆ. ಈ ವಿಷಯಕ್ಕೆ ಶ್ಲೋಕ॥ ದಶಾಪತಿರ್ಲಗ್ನಗತೋ ಯದಿಸ್ಯಾತ್ತ್ರಿಷಡ್ದಶೈಕಾದಶಗಶ್ಚ ಲಗ್ನಾತ್ । ತತ್ಸಪ್ತವರ್ಗೋಪ್ಯಥ ತತ್ಸುಹೃದ್ವಾಲಗ್ನೇಶುಭೇವಾ ಶುಭದಾದಶಾಸಾ ॥ ಎಂದು ಶ್ರೀಪತಿಪದ್ಧತಿಯಲ್ಲಿ ಹೇಳಲ್ಪಟ್ಟಿರುತ್ತೆ. ಮಹಾ ದಶಾಧಿಪತಿಗೆ ಅಧಿಕ ಶತ್ರುವಾದ ಗ್ರಹವು

ಅಂತರ್ದಶಾಧಿಪತಿಯಾದರೆ ಹೆಚ್ಚಾದ ಅನಿಷ್ಟ ಫಲವನ್ನು ಕೊಡುವುದು. ಅಧಿಕ ಮಿತ್ರನಾದ ಗ್ರಹವು ಅಂತರ್ದಶಾಧಿಪತಿಯಾದರೆ ಹೆಚ್ಚಾದ ಶುಭಫಲ ಕೊಡುವುದು. ಮಧ್ಯಮ ಗ್ರಹವು ಅಂತರ್ದಶಾಧಿಪತಿಯಾದರೆ ಯಥೋಕ್ತ ಫಲವನ್ನು ಕೊಡುವುದು.

ಈ ಪ್ರಕಾರವೇ ಅಂತರ್ದಶೆಯಲ್ಲಿ ಪ್ರವೇಶಕಾಲದ ಮೂಲವಾಗಿ ಶುಭಾಶುಭ ಫಲಗಳನ್ನು ತಿಳಿಯಬೇಕು. ಈ ಮೇಲೆ ಹೇಳಲ್ಪಟ್ಟ ಶುಭದಶೆಯಲ್ಲಿ ದಶಾಪ್ರವೇಶ ಕಾಲದಿಂದ ದಶಾವಸಾನ ಕಾಲಪರ್ಯಂತ ಶುಭಫಲವನ್ನೇ ಕೊಡಲಾರನು ಮತ್ತು ತತ್ಕಾಲ ಚಂದ್ರಾಕ್ರಾಂತ ವಶದಿಂದ ಒಂದು ದಿವಸ ಶುಭಫಲವನ್ನು, ಮತ್ತೊಂದು ದಿವಸ ಅಶುಭ ಫಲವನ್ನು, ಮತ್ತೊಂದು ದಿವಸ ಮಿಶ್ರಫಲವನ್ನೂ ಕೊಡುತ್ತಾನೆ. ಆದ್ದರಿಂದ ಈ ವಿವರಣೆ ಹೇಳುತ್ತಾನೆ. ಚಂದ್ರಃ-ಚಂದ್ರನು, ಪಾಕೇಶ್ವರಸ್ಯ-ದಶಾಧಿಪತಿ ಪ್ರತಿರಾಶಿಗೆ ಸಂಚರಿಸುವುದರಿಂದ, ಮಿತ್ರೋಚ್ಚೋಪಚಯತ್ರಿಕೋಣಮದನೇ-ಮಿತ್ರ-ತತ್ಕಾಲ ಮಿತ್ರರಾಶಿಯಲ್ಲಾದರೂ, ಉಚ್ಚ-ಉಚ್ಚಸ್ಥಾನದಲ್ಲಿಯಾದರೂ, ಉಪಚಯ ೩-೬-೧೦-೧೧ನೇ ಸ್ಥಾನದಲ್ಲಿಯಾದರೂ, ಮದನೇ-ದಶಾಧಿಪತಿಗೆ ಸಪ್ತಮ ಸ್ಥಾನದಲ್ಲಿಯಾದರೂ, ಸ್ಥಿತಃ-ಇದ್ದಷ್ಟೇ ಆದರೆ, ಸತ್ಫಲಬೋಧನಾನಿ-ಸತ್ಫಲವನ್ನು ಕೊಡುತ್ತದೆಂದು ನಿಶ್ಚಯಿಸಬೇಕು. ಆಗ ಚಂದ್ರನಿದ್ದ ರಾಶಿ ಜನ್ಮಕಾಲದಲ್ಲಿ ಯಾವ ಭಾವ ಸಂಜ್ಞೆಯಾಗಿರುವುದೋ, ಆ ಭಾವಕ್ಕೆ ಶುಭಫಲ ಪ್ರಾದುರ್ಭಾವವನ್ನು, ಕುರುತೇ-ಮಾಡುತ್ತಾನೆ. ಅತಃ-ಈ ಮೇಲೆ ಹೇಳಲ್ಪಟ್ಟ ವಿಧವಲ್ಲದೆ, ಅನ್ಯಥಾ-ಇತರ ವಿಧವಾಗಿ, ದಶಾಧಿಪತಿಗೆ ತಾತ್ಕಾಲಿಕ ಶತ್ರುರಾಶಿಯಲ್ಲಿದ್ದರೂ, ದಶಾಧಿಪತಿಗೆ ನೀಚರಾಶಿಯಲ್ಲಿದ್ದರೂ, ದಶಾಧಿಪತಿಯಿಂದ ಕೂಡಿ ಏಕರಾಶಿಯಲ್ಲಿದ್ದರೂ, ದಶಾಧಿಪತಿಗೆ ದ್ವಿತೀಯ ಚತುರಾಷ್ಟಮ ದ್ವಾದಶ ಸ್ಥಾನದಲ್ಲಿ ಒಂದು ಸ್ಥಾನದಲ್ಲಿದ್ದ ಚಂದ್ರನಿಗೆ ಶುಭದಶೆಯಲ್ಲಿ ಕೂಡಾ, ಪಾಪಾನಿ-ಆ ಚಂದ್ರನಿದ್ದ ರಾಶಿ ಜನ್ಮಕಾಲದಲ್ಲಿ ಯಾವ ಭಾವ ಸಂಜ್ಞೆಗಳಿರುವುದೋ ಆ ಭಾವಕ್ಕೆ ಅಶುಭ ಫಲವನ್ನು ಕೊಡುತ್ತಾನೆ. ಈ ಅರ್ಥದಲ್ಲಿ ಶ್ಲೋಕ ॥ ಯದ್ರಾಶಿಸಂಸ್ಥ ಶೀತಾಂಶುಃ ಶುಭಕೃತ್ತ-ರಿಕೀರ್ತಿತಃ । ಸರಾಶಿರ್ಜನ್ಮಕಾಲೇತು ಯೋಭಾವಸ್ತತ್ಕೃತಂಚತತ್ ॥೨೭॥ ಶರೀರಾದಿಕೃತಂಸೌಖ್ಯಂ ವಕ್ತವ್ಯಂ ಬಲೋಯೋಗತಃ । ಅಯುಕ್ತರಾಶಿಸಂಸ್ಥಸ್ತು ತದ್ಭಾವಾನಾಮಶೋಭನಂ ॥೨೮॥ ಎಂದು ಗರ್ಗಸಂಹಿತೆಯಲ್ಲಿ ಉಕ್ತವಾಗಿರುತ್ತೆ. ಈ ಪ್ರಕಾರ ದಶಾ ಪ್ರವೇಶ ಕಾಲದಲ್ಲಿ ದಶಾಧಿಪತಿಯಿದ್ದ ಸ್ಥಾನದಿಂದ ಈ ಮೇಲೆ ಹೇಳಲ್ಪಟ್ಟ ಸ್ಥಾನಗಳಲ್ಲಿ ಚಂದ್ರನು ಮೇಲೆ ಹೇಳಿದ ಫಲವನ್ನು ಕೊಡುತ್ತಾನೆ.

## ಉದಾಹರಣೆ

## ಸ್ವನವಾಂಶಸ್ಥಿತ ಅಂತರ್ದಶಾಫಲಂ

ಮೂಲ|| ತೇಜಸ್ವಿನಮತಿಸುಖಿನಂ ಸುಸ್ಥಿರವಿಭವಂ ನೃಪಾಚ್ಚಲಬ್ಧಧನಂ । ಸ್ವನವಾಂಶಕ ಬಲಿಯುಕ್ತಃ ಕುರ್ಯಾದ್ದಶಾಸ್ಥಿತಂಖ್ಯಾತಂ ||೨೯||

ತಾತ್ಪರ್ಯ|| ಸ್ವಕೀಯ ನವಾಂಶದಲ್ಲಿದ್ದು ಬಲಯುಕ್ತನಾಗಿರುವ ಗ್ರಹಾಂತರ್ದಶೆಯಲ್ಲಿ ಜಾತಕನು ತೇಜಸ್ಸುಳ್ಳವನಾಗುವನು. ಅಧಿಕಸುಖಿ, ಶಾಶ್ವತವಿಭವಶಾಲಿ, ರಾಜನಿಂದ ಧನವಂತನೂ ಆಗುವನು.

## ಶುಭದೃಷ್ಟಿಯುಕ್ತ ಅಂತರ್ದಶಾಫಲಂ

||ಶ್ಲೋಕ|| ಶುಭದರ್ಶನಬಲಯುಕ್ತಃ ಕುರ್ಯಾದ್ದಶಾಸ್ಥಿತಂಖ್ಯಾತಂ । ಶುಭಸಂಪ್ರದಾನಮಮಲಂ ಸ್ವರೂಪಭೇದಂಚ ದೇಹಸೌಖ್ಯಂಚ ||ತಾ|| ಜನ್ಮಕಾಲ ಶುಭವೀಕ್ಷಣೆಯಿರುವ ಗ್ರಹಾಂತರ್ದಶಾ ಕಾಲದಲ್ಲಿ ಜಾತಕನು ಧನವಂತ, ಪ್ರಸಿದ್ಧನಾದ (ಸುಂದರವಾದ) ದೇಹವುಳ್ಳವನು, ಐಶ್ವರ್ಯವಂತ, ಐಶ್ವರ್ಯವಂತರಲ್ಲಿ ಮುಖ್ಯನು, ನಿರ್ಮಲಚಿತ್ತವುಳ್ಳವನು, ಆತ್ಮಜ್ಞಾನವುಳ್ಳವನು, ದೇಹಸೌಖ್ಯವುಳ್ಳವನು ಆಗುತ್ತಾನೆ.

## ಷಷ್ಠಾಷ್ಟಮಸ್ಥ ಗ್ರಹಾಂತರ್ದಶಾಫಲಂ

||ಶ್ಲೋಕ|| ಅನ್ಯೋನ್ಯ ಷಷ್ಠಾಷ್ಟಮದಾಯಕಾಲೇ ನೃಪಾದ್ಭಯಂ ಶತ್ರುಜನೈರ್ವಿರೋಧಂ । ಸ್ತ್ರೀಯಾವಿರೋಧಂ ಸುತದಾರನಾಶಂ ಚೋರಾಗ್ನಿ ಬಂಧ್ವಾರ್ತಿ ಮನೋವಿಕಾರಂ ||೩೧||ತಾ|| ದಶಾನಾಥನಿಗೆ ಅಂತರ್ದಶಾಧಿಪತಿಯು ಷಷ್ಠಾಷ್ಟಮದಲ್ಲಿದ್ದರೆ ಅಂಥಾ ಗ್ರಹಗಳ ಅಂತರ್ದಶೆಯಲ್ಲಿ ರಾಜಭಯ, ಶತ್ರುಗಳಲ್ಲಿ ವಿರೋಧ, ಸ್ತ್ರೀಯರಲ್ಲಿ ವಿರೋಧ, ಪುತ್ರ ಭ್ರಾತೃಗಳು ನಾಶವಾಗುವಿಕೆ, ಚೋರಾಗ್ನಿಭಾಧೆ, ಬಂಧನ, ಮನೋವಿಕಾರ, ರೋಗ ಈ ಫಲಗಳುಂಟಾಗುತ್ತವೆ.

## ದಶಾನಾಥನಿಂದ ೧೨ ರಲ್ಲಿದ್ದ ಅಂತರ್ದಶಾಫಲಂ

||ಶ್ಲೋಕ|| ಪಾಕೇಶ್ವರಾದಂತ್ಯ ಗತಸ್ಯ ಭುಕ್ತೌ ಸ್ಥಾನಚ್ಯುತಿಂ ಬಂಧುಜನೈರ್ವಿರೋಧಂ । ವಿದೇಶಯಾನಂ ಸ್ವಜನೈರ್ವಿರೋಧಂ ಪಾದಾಕ್ಷಿಹೃದ್ರೋಗ ಮುಪೈತಿ ಕಾಲೇ ||೩೨||ಟೀ|| ದಶಾನಾಥನಿಗೆ ಭುಕ್ತಿನಾಥನು ದ್ವಾದಶ ಸ್ಥಾನದಲ್ಲಿದ್ದರೆ, ಆ ಭುಕ್ತಿಕಾಲದಲ್ಲಿ ಸ್ಥಾನಚ್ಯುತಿ, ಬಂಧು ಜನರಲ್ಲಿ ವಿರೋಧ, ಪರದೇಶ ಸಂಚಾರ, ಸ್ವಜನರಲ್ಲಿ ವಿರೋಧ, ಪಾದ-ಕಣ್ಣು-ಎದೆ ಇವುಗಳಿಗೆ ರೋಗ, ಈ ಫಲಗಳೆಲ್ಲಾ ಉಂಟಾಗುತ್ತದೆ.

## ದಶಾಧಿಪತಿಯುಕ್ತ ಗ್ರಹಾಂತರ್ದಶಾಫಲಂ

ಶ್ಲೋಕ।। ದಶಾಧಿಪೇನಾಪಿಯುತಸ್ಯಭುಕ್ತೌ ಸ್ತ್ರೀಪುತ್ರಭೃತ್ಯಾರ್ಥ ಕೃಷೇರ್ವಿನಾಶಂ। ಉದ್ಯೋಗ ಭಂಗಂ ಸ್ವಜನಸ್ಯ ಕಷ್ಟಮಾಕಸ್ಮಿಕಂ ದೂಷಣಮೇತಿ ಕಾಲೇ ।।೩೩।।ತಾ।। ದಶಾನಾಥನ ಸಂಗಡಲೇ ಇರುವ ಗ್ರಹದ ಅಂತರ್ದಶಾ ಕಾಲದಲ್ಲಿ ಸ್ತ್ರೀ, ಪುತ್ರ, ಭೃತ್ಯ, ಧನ, ಕೃಷಿ ಇವುಗಳ ನಾಶ ಉದ್ಯೋಗಭಂಗ, ಸಜ್ಜನರಿಗೆ ಕಷ್ಟ, ಆಕಸ್ಮಿಕವಾದ ದೂಷಣೆ ಮುಂತಾದವುಗಳನ್ನು ಹೊಂದುತ್ತಾನೆ.

## ದಶಾಧಿಪತಿಯಿಂದ ೨ನೇ ಸ್ಥಾನದಲ್ಲಿದ್ದ ಗ್ರಹಾಂತರ್ದಶಾಫಲಂ

ಶ್ಲೋಕ।। ದಶಾಧಿಪಾದ್ವಿತ್ತ ಗತಸ್ಯಭುಕ್ತೌ ಮೃಷ್ಟಾನ್ನಪಾನಾಂಬರ ಗಂಧಮಾಲ್ಯಂ। ಪರೋಪಕಾರಂ ಸ್ವಜನಸ್ಯಸೌಖ್ಯಂ ಸ್ತ್ರೀಪುತ್ರಬಂಧ್ವಾತ್ಮ ಮನೋವಿಲಾಸಂ ।।೩೪।।ತಾ।। ದಶಾಧಿಪತಿಯಿಂದ ಎರಡನೇ ಸ್ಥಾನದಲ್ಲಿದ್ದ ಗ್ರಹಾಂತರ್ದಶೆಯಲ್ಲಿ ಮೃಷ್ಟಾನ್ನ, ಪಾನೀಯಪದಾರ್ಥ, ವಸ್ತ್ರ, ಗಂಧಮಾಲ್ಯ ಪರೋಪಕಾರ, ಸ್ವಜನರಿಗೆ ಸೌಖ್ಯ, ಸ್ತ್ರೀ, ಮಿತ್ರಬಂಧು ಇವರುಗಳಿಂದ ಮನೋವಿಲಾಸ, ಇವುಗಳುಂಟಾಗುತ್ತವೆ.

## ದಶಾಧಿಪಾತ್ಸೋದರಸ್ಥಾನಸ್ಥ ಗ್ರಹಾಂತರ್ದಶಾಫಲಂ

ಶ್ಲೋಕ।। ದಶಾಧಿಪಾತ್ಸೋದರರಾಶಿಗಸ್ಯಭುಕ್ತೌ ನೃಪಾದ್ವಿತ್ತಮುಪೈತಿಸೌಖ್ಯಂ ಸುಗಂಧ ಮಾಲ್ಯಾಂಬರ ಭೂಷಣಂಚ ಸುಹೃದ್ಭವಂ ಭೋಜನ ಸೌಖ್ಯಪುಷ್ಟಿಂ ।।೩೫।। ತಾ ।। ದಶಾಧಿಪತಿಯಿಂದ ೩ನೇ ಸ್ಥಾನದಲ್ಲಿದ್ದ ಗ್ರಹಾಂತರ್ದಶಾಕಾಲದಲ್ಲಿ ರಾಜರಿಂದ ದ್ರವ್ಯಪ್ರಾಪ್ತಿ, ಸೌಖ್ಯ, ಸುಗಂಧ, ದ್ರವ್ಯ, ಪುಷ್ಪಮಾಲಾದಿಗಳು, ಸುವಸ್ತ್ರ ಭೂಷಣಾದ್ಯಾಭರಣ, ಸುಹೃತ್‌ಗಳಿಂದ ಭೋಜನಸೌಖ್ಯ, ದೇಹ ಪುಷ್ಟಿ ಮುಂತಾದ ಫಲಗಳುಂಟಾಗುವುವು.

## ದಶಾಧಿಪಾಚ್ಚತುರ್ಥ ಸ್ಥಾನಸ್ಥಿತ ಗ್ರಹಾಂತರ್ದಶಾಫಲಂ

ಶ್ಲೋಕ।। ದಾಯೇಶ್ವರಾದ್ಬಂಧುಗತಸ್ಯಭುಕ್ತೌ ದಾರಾತ್ಮಜಾರ್ಥಂ ಗೃಹಬಂಧು- ಯಾನಂ । ಮೃಷ್ಟಾನ್ನ ಪಾನಾಂಬರಭೂಷಣಂಚಾ ಶುಭಗ್ರಹಾಶ್ಚೇತ್ಫಲಮನ್ಯಥಾ ಸ್ಯಾತ್ ।।೩೬।। ತಾ ।। ದಶಾಧಿಪತಿಯಿಂದ ಚತುರ್ಥಸ್ಥಾನದಲ್ಲಿದ್ದ ಗ್ರಹಾಂತರ್ದಶೆಯಲ್ಲಿ ಪತ್ನೀ, ಪುತ್ರ, ದ್ರವ್ಯ, ಗೃಹ, ಬಂಧು, ಯಾನ, ಮೃಷ್ಟಾನ್ನ, ಪಾನೀಯವಸ್ತು, ಪಟ್ಟವಸ್ತ್ರ ಆಭರಣ ಇವುಗಳೆಲ್ಲಾ ಶುಭಗ್ರಹವಾಗಿದ್ದರೆ ತನ್ನಂತರ್ದಶೆಯಲ್ಲುಂಟುಮಾಡುತ್ತಾನೆ. ಪಾಪಗ್ರಹಕ್ಕೆ ಈ ಫಲವು ಅನ್ವಯಿಸುವುದಿಲ್ಲ.

## ದಶಾಧಿಪಾಚ್ಚತುರ್ಥಸ್ಥಾನಸ್ಥಿತ ಪಾಪಗ್ರಹಫಲಂ

ಶ್ಲೋಕ।। ಪಾಪಗ್ರಹೋಪಿಶುಭದಃ ಖಲುದಾಯನಾಥೋ ಬಂಧುಸ್ಥಿತಸ್ಸ್ವ ಭವನೋಚ್ಚ ಬಲಾದಿಯುಕ್ತಃ ।। ಸೌಮ್ಯಗ್ರಹೋಪ್ಯ ಶುಭದಸ್ಸುಖರಾಶಿಯುಕ್ತೋ ದಾಯೇಶ್ವರಸ್ಯ ಭವನೋಚ್ಚ ಬಲಾದಿಹೀನ ।।೩೩।।ತಾ।। ದಶಾಧಿಪತಿಯಿಂದ ಚತುರ್ಥ ಸ್ಥಾನದಲ್ಲಿದ್ದ ಪಾಪಗ್ರಹವಾದರೂ ಸ್ವಕ್ಷೇತ್ರ, ಮೂಲತ್ರಿಕೋಣ ಉಚ್ಚವಾಗಿ ಬಲಿಷ್ಠನಾಗಿದ್ದರೆ, ಶುಭಫಲವನ್ನು ಕೊಡುತ್ತಾನೆ. ಶುಭಗ್ರಹವು ದಶಾನಾಥನಿಂದ ಚತುರ್ಥ ಸ್ಥಾನದಲ್ಲಿದ್ದರೂ ಸ್ವಕ್ಷೇತ್ರ, ಉಚ್ಚಾದಿ ಬಲದಿಂದ ಹೀನನಾಗಿದ್ದರೆ, ಅಶುಭ ಫಲವನ್ನೇ ಕೊಡುತ್ತಾನೆ.

## ದಶಾನಾಥಾತ್ಸುತಸ್ಥಾನಸ್ಥಿತ ಗ್ರಹಾಂತರ್ದಶಾಫಲಂ

ಶ್ಲೋಕ।। ದಶಾನಾಥಾತ್ಸು ತಸ್ಥಸ್ಯಭುಕ್ತೌ ಪುತ್ರಾಪ್ತಿಮಾದಿಶೇತ್ । ಶುಭಗ್ರಹಸ್ಯ ಸೌಮ್ಯಂಚ ಪಾಪಭುಕ್ತೌ ಸುತಕ್ಷಯಃ ।।೩೪।। ತಾ।। ದಶಾನಾಥನಿಂದ ಪಂಚಮಸ್ಥಾನದಲ್ಲಿ ಶುಭಗ್ರಹವಿದ್ದರೆ ಅವನ ಅಂತರ್ದಶೆ ಬಂದಾಗ ಪುತ್ರಪ್ರಾಪ್ತಿ ಯಾಗುತ್ತದೆ. ಪಾಪಗ್ರಹನಾದರೆ ಸುತಕ್ಷಯವಾಗುತ್ತದೆ.

## ದಶಾನಾಥಾತ್ ಷಷ್ಠಸ್ಥ ಗ್ರಹಾಂತರ್ದಶಾಫಲಂ

ಶ್ಲೋಕ।। ಅಂತರ್ದಶಾಯಾಂ ಪಾಪಸ್ಯ ಷಷ್ಠಸ್ಥಸ್ಯ ದಶೇಶ್ವರಾತ್ । ಚೋರಾದಿ ವ್ರಣದೇಹಾರ್ತಿಂ ಲಭತೇ ಪದವಿಭ್ರಮಂ ।।೩೫।।ತಾ।। ದಶಾನಾಥನಿಂದ ಷಷ್ಠ ಸ್ಥಾನದಲ್ಲಿದ್ದ ಪಾಪಗ್ರಹಾಂತರ್ದಶೆ ಕಾಲದಲ್ಲಿ ಚೋರರಿಂದ ನಷ್ಟ, ವ್ರಣಭೀತಿ, ದೇಹಕ್ಕೆ ರೋಗಾದಿ ಪೀಡೆ, ಪದವಿಚ್ಯುತಿ, ವಿಶೇಷ ಸಂಚಾರ ಸಹ ಉಂಟಾಗುತ್ತದೆ.

ಶ್ಲೋಕ।। ತಸ್ಮಿನ್ ಷಷ್ಠಸ್ಯ ಸೌಮ್ಯಸ್ಯ ದಾಯೇಶಾತ್ಸುಖವರ್ಧನಂ। ಲಭತೇ ಪುತ್ರಮಿತ್ರಾಪ್ತಿಂ ಸ್ವೋಚ್ಚಮೂಲಾದಿಗಸ್ಯತು ।।೩೬।।ತಾ।। ದಶಾಧಿಪತಿಯಿಂದ ಷಷ್ಠ ಸ್ಥಾನದಲ್ಲಿ ಸೌಮ್ಯಗ್ರಹವು ಉಚ್ಚಮೂಲತ್ರಿಕೋಣ, ಸ್ವಕ್ಷೇತ್ರ ಮಿತ್ರಕ್ಷೇತ್ರದಲ್ಲಿದ್ದರೆ ಆ ಗ್ರಹಾಂತರ್ದಶಾ ಕಾಲದಲ್ಲಿ ಪುತ್ರಪ್ರಾಪ್ತಿ, ಮಿತ್ರರ ಸೌಖ್ಯ, ಸೌಖ್ಯವೃದ್ಧಿ ಸಹ ಉಂಟಾಗುತ್ತದೆ.

## ದಶಾನಾಥಾತ್ಸಪ್ತಮಸ್ಥ ಗ್ರಹಾಂತರ್ದ ಶಾಫಲಂ

ಶ್ಲೋಕ ।। ದಾಯೇಶಾತ್ಸಪ್ತಮಸ್ಥಸ್ಯ ಪಾಪಸ್ಯಾಪಹೃತಿರ್ಯದಾ । ದಾರಾರ್ಥ ಪುತ್ರಬಂಧೂನಾಂ ನಾಶಂ ಭೂಪತಿನಾಭಯಂ ।।೩೭।। ತಾ।। ದಶಾನಾಥನಿಂದ ಸಪ್ತಮ

ಸ್ಥಾನದಲ್ಲಿದ್ದ ಪಾಪಗ್ರಹಾಂತರ್ದಶಾಕಾಲದಲ್ಲಿ ದಾರ, ಧನ, ಪುತ್ರ, ಬಂಧು ಇವರಿಗೆ ನಾಶ ಮತ್ತು ರಾಜಕೋಪ ಸಹ ಉಂಟಾಗುತ್ತೆ.

ಶ್ಲೋಕ।। ಸಪ್ತಮಸ್ಥ ಶುಭಸ್ಯಾಪಿ ಹೃತೌಸೌಖ್ಯಂ ದಶಾಧಿಪಾತ್। ಶತ್ರುನೀಚ ವಿಹೀನಸ್ಯಾ ನೃಷ್ಟಾನ್ನಾಂಬರ ಭೂಷಣಂ ।।೩೮।।ತಾ।। ದಶಾನಾಥನಿಂದ ಸಪ್ತಮ ಸ್ಥಾನದಲ್ಲಿದ್ದ ಶುಭಗ್ರಹ ಶತ್ರುಸ್ಥಾನ ನೀಚಸ್ಥಾನದಲ್ಲಿಲ್ಲದಿದ್ದರೆ ಆ ಗ್ರಹಾಂತರ್ದಶೆಯಲ್ಲಿ ಮೃಷ್ಟಾನ್ನ ಭೋಜನ, ಉತ್ತಮವಾದ ವಸ್ತ್ರಪ್ರಾಪ್ತಿ, ಭೂಷಣ, ಆಭರಣ ಪ್ರಾಪ್ತಿ ಉಂಟಾಗುತ್ತೆ.

## ದಶಾನಾಥಾದಷ್ಟಮಸ್ಥಾನಸ್ಥ ಗ್ರಹಾಂತರ್ದಶಾಫಲಂ

ಶ್ಲೋಕ।। ಪಾಕೇಶಾದಷ್ಟಮಸ್ಥಸ್ಯ ಪಾಪಸ್ಯಾಪಹೃತೌಭಯಂ ।। ನಿಧನಂ ಕುತ್ಸಿತಾನ್ನಂಚ ಚೋರಾಗ್ನಿನೃಪಪೀಡನಂ ।।೩೯।।ತಾ।। ದಶಾನಾಥನಿಂದ ಅಷ್ಟಮ ಸ್ಥಾನದಲ್ಲಿದ್ದ ಪಾಪಗ್ರಹಾಂತರ್ದಶೆಯಲ್ಲಿ ಭಯ, ಮರಣ, ಕುತ್ಸಿತಾನ್ನ, ಚೋರಭಾಧೆ, ರಾಜಪೀಡೆ ಸಹ ಉಂಟಾಗುತ್ತೆ.

ಶ್ಲೋಕ।। ಪಾಕೇಶಾದಷ್ಟಮಸ್ಥಸ್ಯ ಸೌಮ್ಯಸ್ಯಾಪಹೃತೌ ಸುಖಂ । ಭುಕ್ತ್ಯಾದೌ ಶೋಭನಂಪ್ರೋಕ್ತ ಮಂತೇ ಕಷ್ಟಂವಿನಿರ್ದಿಶೇತ್ ।।೪೦।।ತಾ।। ದಶಾನಾಥನಿಂದ ಅಷ್ಟಮ ಸ್ಥಾನಸ್ಥಿತನಾದ ಶುಭಗ್ರಹಾಂತರ್ದಶೆಯಲ್ಲಿ ಭುಕ್ತ್ಯಾದಿಯಲ್ಲಿ ಶುಭಫಲ ಉಂಟಾಗಿ ಅಂತ್ಯದಲ್ಲಿ ಕಷ್ಟಫಲ ಉಂಟಾಗುತ್ತೆ.

## ದಶಾನಾಥನ್ನವಮಸ್ಥ ಗ್ರಹಾಂತರ್ದಶಾಫಲಂ

ಶ್ಲೋಕ।। ದಾಯೇಶಾನ್ನವಮಸ್ಥಸ್ಯ ಪಾಪಸ್ಯಾಪಹೃತಿರ್ಯದಾ ।। ಅಶುಭಂ ಲಭತೇಕರ್ಮ ಸ್ಥಾನಭ್ರಂಶಂ ಮನೋರುಜಂ ।।೪೧।।ತಾ।। ದಶಾನಾಥನಿಂದ ನವಮಸ್ಥ ಪಾಪಗ್ರಹಾಂತರ್ದಶೆಯಲ್ಲಿ ಅಶುಭಫಲ, ಅಶುಭಕರ್ಮಪ್ರಾಪ್ತಿ, ಸ್ಥಾನಭ್ರಷ್ಟತ್ವ, ಮನೋರೋಗ ಸಹ ಉಂಟಾಗುತ್ತೆ.

ಶ್ಲೋಕ।। ಪ್ರಧಾನತಶ್ಶುಭಸ್ಥಸ್ಯ ಸೌಮ್ಯಸ್ಯಾಪಹೃತೌಯದಾ । ವಿವಾಹಂ ಯಜ್ಞದೀಕ್ಷಾಂಚ ದಾನಾಪ್ತಿಂ ಲಭತೇನರಃ ।।೪೨।।ತಾ।। ದಶಾನಾಥನಿಂದ ನವಮ ಸ್ಥಾನದಲ್ಲಿದ್ದ ಶುಭಗ್ರಹಾಂತರ್ದಶೆಯಲ್ಲಿ ವಿವಾಹ, ಯಜ್ಞ, ದೀಕ್ಷೆ, ದಾನಪ್ರಾಪ್ತಿ, ಲಾಭ ಈ ಫಲಗಳುಂಟಾಗುತ್ತೆ.

## ದಶಾನಾಥಾತ್ಕರ್ಮಸ್ಥಾನಸ್ಥಿತ ಗ್ರಹಾಂತರ್ದಶಾಫಲಂ

ಶ್ಲೋಕ ।।ಕರ್ಮಸ್ಥಃ ಪಾಪಖೇಟಸ್ಯ ಹೃತೌಪಾಕೇಶ್ವರಾದ್ಯದಾ । ಕರ್ಮನಾಶ ಮವಾಪ್ನೋತಿ ದುಷ್ಕೀರ್ತಿಂ ವಿವಿಧಾಪದಂ ।।೪೩।।ತಾ।। ದಶಾನಾಥನಿಂದ

ಕರ್ಮಸ್ಥಾನಸ್ಥಿತ ಪಾಪಗ್ರಹಾಂತರ್ದಶೆಯಲ್ಲಿ ಕರ್ಮನಾಶ, ಅಪಕೀರ್ತಿ, ಅನೇಕವಾದ ವಿಪತ್ತು, ಈ ದುಷ್ಟಫಲಗಳುಂಟಾಗುತ್ತೆ.

ಶ್ಲೋಕ।। ತಸ್ಮಾತ್ಕರಸ್ಥ ಸೌಮ್ಯಸ್ಯ ಹೃತೌಸೌಖ್ಯಂವಿನಿರ್ದಿಶೇತ್ । ತಟಾಕ ಗೋಪುರಾದೀನಾಂ ಪುಣ್ಯಕರ್ಮಾದಿಸಂಗ್ರಹಃ ।।೪೪।। ತಾ।। ದಶಾನಾಥನಿಂದ ದಶಮ ಸ್ಥಾನಸ್ಥಿತ ಸೌಮ್ಯಗ್ರಹಾಂತರ್ದಶೆಯಲ್ಲಿ ಕೆರೆ ಕಟ್ಟಿಸುವಿಕೆ ಮೊದಲಾದ ಶಾಶ್ವತವಾದ ಪುಣ್ಯಕರ್ಮಗಳನ್ನು ಮಾಡುವನು.

## ದಶಾಧಿಪಾಲ್ಲಾಭಸ್ಥಿತ ಗ್ರಹಾಂತರ್ದಶಾಫಲಂ

ಶ್ಲೋಕ।। ಲಾಭಸ್ಥಸ್ಯ ದಶಾನಾಥಾತ್ ಪಾಪಸ್ಯಾಪಹೃತೌಧನಂ । ಲಭತೇ ಪುತ್ರಮಿತ್ರಾದೀನ್ ಸ್ಥಾನ ಪ್ರಾಪ್ತಿಂಚಶಾಶ್ವತಂ ।।೪೫।।ತಾ।। ದಶಾನಾಥನಿಂದ ಲಾಭಸ್ಥಾನ (೧೧) ಸ್ಥಿತಪಾಪಗ್ರಹಾಂತರ್ದಶೆಯಲ್ಲಿ ಧನಲಾಭ, ಪುತ್ರಮಿತ್ರಾದಿಗಳ ಲಾಭ, ಶಾಶ್ವತವಾದ ಸ್ಥಾನಲಾಭ, ಈ ಫಲಗಳುಂಟಾಗುತ್ತವೆ.

ಶ್ಲೋಕ।। ಪಾಕೇಶಾಲ್ಲಾಭಯುಕ್ತಸ್ಯ ಸೌಮ್ಯಸ್ಯಾಪಹೃತೌ ಧನು । ಭಾಗ್ಯೋ- ತ್ತಮಂ ನೃಪಾತ್ಪ್ರೀತಿಃ ಧಾರಪುತ್ರವಿವರ್ಧನಂ ।।೪೬।।ತಾ।। ದಶಾನಾಥನಿಂದ ೧೧ನೆ ಸ್ಥಾನದಲ್ಲಿರುವ ಶುಭಗ್ರಹಾಂತರ್ದಶೆಯಲ್ಲಿ ಧನಪ್ರಾಪ್ತಿ, ಉತ್ತಮವಾದ ಭಾಗ್ಯ, ರಾಜಪ್ರೀತಿ, ಪತ್ನೀಪುತ್ರಾದಿ ವಿವರ್ಧನೇ ಸಹಾ ಉಂಟಾಗುತ್ತದೆ.

## ದಶಾನಾಥಾದ್ವ್ಯಯಸ್ಥಾನಸ್ಥಿತ ಗ್ರಹಾಂತರ್ದಶಾಫಲಂ

ಶ್ಲೋಕ।। ವ್ಯಯಸ್ಥಸ್ಯಹೃತೌದುಃಖಂ ಪಾಪಸ್ಯತುದಶಾಧಿಪಾತ್ । ಅರ್ಥನಾಶಂ ನೃಪಾತ್ಕ್ರೋಧಂ ದುಃಸ್ಥಾನಮ ಪರಿಭ್ರಮಂ ।।೪೭।।ತಾ।। ದಶಾನಾಥನಿಂದ ದ್ವಾದಶಸ್ಥಾನದಲ್ಲಿದ್ದ ಪಾಪಗ್ರಹಾಂತರ್ದಶೆಯಲ್ಲಿ ಧನನಾಶ, ನೃಪಕ್ರೋಧ, ದುಃಸ್ಥಾನಪ್ರಾಪ್ತಿ, ವೃಥಾ ಸಂಚಾರ ಮುಂತಾದ ಫಲಗಳು ಉಂಟಾಗುತ್ತವೆ.

ಶ್ಲೋಕ।। ಪಾಕೇಶ್ವರಾದ್ವ್ಯಯಸ್ಥಸ್ಯ ಸೌಮ್ಯಸ್ಯಾಪಹೃತಿರ್ಯದಾ। ವಾಹನಂ ಭೋಗಭಾಗ್ಯಂಚ ವಸ್ತ್ರಾಭರಣಭೂಷಣಂ ।।೪೮।।ತಾ।। ದಶಾನಾಥನಿಂದ (೧೨) ವ್ಯಯಸ್ಥಾನಸ್ಥಿತ ಶುಭಗ್ರಹಾಂತರ್ದಶೆಯಲ್ಲಿ ವಾಹನಪ್ರಾಪ್ತಿ, ಭೋಗವೃದ್ಧಿ, ಭಾಗ್ಯಪ್ರಾಪ್ತಿ, ವಸ್ತ್ರಪ್ರಾಪ್ತಿ, ಆಭರಣಪ್ರಾಪ್ತಿ, ಭೂಷಣಾದಿ ವಸ್ತು ಲಾಭ ಸಹ ಉಂಟಾಗುತ್ತೆ.

## ಸರ್ವದಶಾಂತರ್ದಶಾಲೋಕನಾಫಲಂ

ಶ್ಲೋಕ।। ತತ್ತದ್ದಶಾಯಾಂ ಸಂಯೋಜ್ಯ ಮೇವಮೇವಂ ವಿಶೇಷತಃ ।।

ಸ್ವಕ್ರೋರ್ಚಮಿತ್ರವರ್ಗಾದಿ ವಿನಾಸರ್ವತ್ರವರ್ಜಯೇತ್ ॥೪೯॥ತಾ॥ ಆಯಾಯ ದಶಾಕಾಲದಲ್ಲಿ ಪೂರ್ವೋಕ್ತ ವಿಶೇಷ ಫಲಗಳನ್ನು ಕೂಡಿಸಿ ಹೇಳತಕ್ಕದ್ದು. ಆದರೆ ಈ ಮೇಲೆ ಹೇಳಲ್ಪಟ್ಟ ಅಂತರ್ದಶಾಫಲಗಳು ದಶಾನಾಥನಿಗೆ ತನ್ವಾದಿ ೧೨ ದ್ವಾದಶ ಭಾವಗಳಂತೆ ದಶಾಧಿಪಾ ದ್ವಾದಶಾ ಸ್ಥಾನಗಳಿಗೆ ಹೇಳಲ್ಪಟ್ಟಿರುತ್ತೆ. ಅಂತರ್ದಶಾನಾಥನು ಉಚ್ಚಸ್ವಕ್ಷೇತ್ರ ಮೂಲತ್ರಿಕೋಣ ಮಿತ್ರಕ್ಷೇತ್ರಶುಭ ಮಿತ್ರ ಷಡ್ವರ್ಗಗಳಲ್ಲಿದ್ದರೆ ಆ ಗ್ರಹಗಳಿಗೆ ಒಂದುವೇಳೆ ಪಾಪಫಲವು ದಶಾಧಿಪತಿಯಿಂದ ಹೇಳಲ್ಪಟ್ಟಿದ್ದಾಗ್ಯೂ ಪಾಪಫಲವನ್ನು ಹೇಳಕೂಡದು. ಶುಭಫಲವನ್ನೇ ಕೊಡುವುದರಿಂದ ಶುಭಫಲವನ್ನೇ ಹೇಳಬೇಕು.

## ಲಗ್ನಾದ್ವಿತೀಯ ತೃತೀಯಸ್ಥಾನಸ್ಥ ಗ್ರಹಾಂತರ್ದಶಾಫಲಂ

ಶ್ಲೋಕ॥ ಲಗ್ನಾರ್ಥಸ್ತೋತ್ಥಗಸ್ಯಾಪಿ ಪಾಪಸ್ಯಾಪ ಹೃತೌಯದಾ । ಪಾಪೇ-ಶಾದ್ದುಃಖಮಾಪ್ನೋತಿ ಸೌಮ್ಯಭುಕ್ತೌ ಶುಭಂಭವೇತ್ ॥೫೦॥ತಾ॥ ಲಗ್ನದಿಂದ ದ್ವಿತೀಯ ತೃತೀಯ ಸ್ಥಾನಗಳಲ್ಲಿ ಪಾಪಗ್ರಹವಿದ್ದು ಅಂತರ್ದಶೆ ಬಂದರೆ, ಆ ಸ್ಥಾನಗಳು ದಶಾನಾಥನಿಂದ ಅದೇ ಸ್ಥಾನಗಳೇ ಆಗಿದ್ದರೆ ದುಃಖಫಲ ಉಂಟಾಗುತ್ತೆ. ಶುಭಗ್ರಹ ಅಂತರ್ದಶೆಯಾದರೆ, ಶುಭಫಲವೇ ಉಂಟಾಗುತ್ತೆ.

## ಕ್ರೂರಗ್ರಹದಶಾಯಾಂ ಕ್ರೂರಾಂತರ್ದಶಾಫಲಂ

ಶ್ಲೋಕ॥ ಅಂತರ್ದಶಾಯಾಂ ಕ್ರೂರಸ್ಯ ಕ್ರೂರದಾಯೇ ಮಹದ್ಭಯಂ ॥ ಸ್ಥಾನಾಕ್ಷಿ ಬಂಧುಪುತ್ರಾರ್ಥ ದಾರನಾಶಂ ನೃಪಾದ್ಭಯಂ ॥೫೧॥ತಾ॥ ಕ್ರೂರಗ್ರಹದಶೆ ಯಲ್ಲಿ ಕ್ರೂರಗ್ರಹಾಂತರ್ದಶೆ ಬಂದ ಕಾಲದಲ್ಲಿ ಮಹಾಭಯ, ಸ್ಥಾನನಾಶ, ಅಕ್ಷಿರೋಗ, ಬಂಧು-ಪುತ್ರ-ದಾರ-ಇವರಿಗೆ ನಾಶ, ಅಥವಾ ಭಯಂಕರವಾದ ಪೀಡೆ, ರಾಜಭಯ ಸಹ ಉಂಟಾಗುತ್ತದೆ.

## ಶುಭಗ್ರಹದಶಾ ಶುಭಾಂತರ್ದಶಾಫಲಂ

ಶ್ಲೋಕ॥ ಶುಭಭುಕ್ತೌ ಶುಭೇದಾಯೇ ಸ್ಥಾನವಾಹನ ಭೂಷಣಂ ॥ತಾ॥ ಶುಭಗ್ರಹ ದಶೆಯಲ್ಲಿ ಶುಭಗ್ರಹಾಂತರ್ದಶೆ ಬಂದಾಗ ಸ್ಥಾನಪ್ರಾಪ್ತಿ, ವಾಹನಪ್ರಾಪ್ತಿ ಭೂಷಣಾದಿ ಪ್ರಾಪ್ತಿ ಈ ಪ್ರಕಾರ ಶುಭಫಲ ಉಂಟಾಗುತ್ತೆ.

## ಪಾಪದಶಾ ಶುಭಭುಕ್ತಿನಾಥಫಲಂ

ಶ್ಲೋಕ॥ ಶುಭಭುಕ್ತೌ ಪಾಪದಾಯೇ ಆದೌಸೌಖ್ಯಂ ಪರಭಯಂ ॥೫೨॥ತಾ॥ ಪಾಪಗ್ರಹದಶೆ ಶುಭಗ್ರಹಾಂತರ್ದಶೆಯಲ್ಲಿ ಇದ್ದರೆ ಆದಿಯಲ್ಲಿ ಸೌಖ್ಯ ಅನಂತರ ಭಯ ಉಂಟಾಗುತ್ತದೆ.

## ಶುಭದಶಾ ಪಾಪಗ್ರಹಾಂತರ್ದಶಾಫಲಂ

ಶ್ಲೋಕ॥ ಸೌಮ್ಯದಾಯೇ ಪಾಪಭುಕ್ತೌ ಆದೌಕಷ್ಟಂ ತತಸ್ಸುಖಂ । ಶೀರ್ಷೋದಯರ್ಕ್ಷಗಾಃ ಖೇಟಾಸ್ಸ್ವಾದೌಚಾಂತ್ಯೇನ್ಯಋಕ್ಷಗಾಃ ॥೫೩॥ತಾ॥ ಸೌಮ್ಯಗ್ರಹದಶೆಯಲ್ಲಿ ಪಾಪಗ್ರಹಾಂತರ್ದಶೆ ಬಂದ ಕಾಲದಲ್ಲಿ ಆದಿಯಲ್ಲಿ ಕಷ್ಟ ಅನಂತರ ಸೌಖ್ಯ ಫಲವನ್ನು ಕೊಡುತ್ತಾನೆ. ಮತ್ತು ಶಿರೋದಯ ರಾಶಿಗಳಲ್ಲಿದ್ದ ಗ್ರಹಗಳೆಲ್ಲರೂ ಅವರವರ ಗ್ರಹಾಂತರ್ದಶೆಯಲ್ಲಿ ಆದಿಯಲ್ಲಿಯೇ ಶುಭವೋ ಅಶುಭವೋ ತಮ್ಮ ಯೋಗ್ಯತೆಗೆ ತಕ್ಕ ಫಲವನ್ನು ಕೊಡುವರು, ಶೀರ್ಷೋದಯ ವಲ್ಲದ ರಾಶಿಗಳಲ್ಲಿದ್ದ ಗ್ರಹಗಳು ತಮ್ಮ ಯೋಗ್ಯತೆಗೆ ತಕ್ಕ ಶುಭಾಶುಭ ಫಲವನ್ನು ಅಂತ್ಯಕಾಲದಲ್ಲಿಯೇ ಕೊಡುವರು.

## ಅಧಿಕ ಶುಭೆಯೋಗಫಲಂ

ಶ್ಲೋಕ॥ ಯಂತ್ರಸಂಪದಿಬಾಹುಳ್ಯಂ ಯೋಜಯಿತ್ವಾ ಫಲಂವದೇತ್ ॥ ಅಪಿಸಂವಾದಕಾರ್ಯೇಷು ಯಥೋಕ್ತಂ ಫಲಮಾದಿಶೇತ್ ॥೫೪॥ತಾ॥ ಒಂದಾನೊಂದು ಗ್ರಹಕ್ಕೆ ಏಕಕಾಲದಲ್ಲಿ ಶುಭಫಲವೇ ಅಧಿಕವಾಗಿ ಕೊಡುವುದಾಗಿ ಕಂಡುಬಂದರೆ ಆ ಗ್ರಹಕ್ಕೆ ಶುಭಫಲವನ್ನೇ ಹೇಳಬೇಕು. ಮತ್ತು ಒಂದು ಗ್ರಹಕ್ಕೆ ಶುಭಫಲ-ಅಶುಭಫಲಗಳೆರಡೂ ಏಕಕಾಲದಲ್ಲಿ ಹೇಳತಕ್ಕ ಸಂದರ್ಭದಲ್ಲಿ ಶುಭಾಶುಭ ಫಲಗಳೆರಡನ್ನೂ ಯೋಚಿಸಿ ಹೇಳಬೇಕು. ಉದಾಹರಣೆ-ಒಂದು ಗ್ರಹವು ಲಗ್ನದಿಂದ ೧೧ನೆ ಸ್ಥಾನದಲ್ಲಿ ಇರುತ್ತಾನೆ. ಆ ಸ್ಥಾನವು ದಶಾಧಿಪತಿಗೆ ೯ನೇ ಸ್ಥಾನವಾಗುತ್ತದೆ, ಆ ಕಾಲದಲ್ಲಿ ದಶಾಧಿಪತಿಯಿಂದಲೂ, ಲಗ್ನದಿಂದಲೂ, ಶುಭ ಫಲವನ್ನು ಕೊಡುತ್ತಾನಾದ್ದರಿಂದಲೂ ಆ ಗ್ರಹವು ಇರುವ ಸ್ಥಾನವು ಸ್ವೋಚ್ಚ ಮೂಲತ್ರಿಕೋಣ ಗಳಾಗಿದ್ದರೆ ಇಲ್ಲಿ ಶುಭ ಬಲಾಧಿಕವೇ ಹೆಚ್ಚಾಗಿರುವುದರಿಂದಲೂ, ಪಾಪಸಂಬಂಧವಿಲ್ಲದಿರುವುದರಿಂದಲೂ ಶುಭ ಫಲವನ್ನೇ ಹೇಳಬೇಕು. ಮತ್ತು ಒಂದಾನೊಂದು ಗ್ರಹ ದಶಾಧಿಪತಿಗೆ ೮ನೇ ಸ್ಥಾನದಲ್ಲಿದ್ದು ಆ ಸ್ಥಾನವು ಲಗ್ನಕ್ಕೆ ಪಂಚಮ ತ್ರಿಕೋಣ ಸ್ಥಾನವಾಗಿರುತ್ತದೆ, ಆ ಕಾಲದಲ್ಲಿ ಯೋಚಿಸತಕ್ಕ ಭಾಗವೇನೆಂದರೆ-ಲಗ್ನದಿಂದ ೫ನೇ ಸ್ಥಾನ ಶುಭಫಲ ಕೊಡತಕ್ಕದ್ದಾಗಿರುತ್ತೆ. ಆದರೆ ಅದೇ ಸ್ಥಾನವೇ ದಶಾಧಿಪತಿಗೆ ೮ನೇ ಸ್ಥಾನವಾಗಿರುವುದರಿಂದ ಆ ಸ್ಥಾನದಲ್ಲಿರುವ ಗ್ರಹಕ್ಕೆ ದುಷ್ಟಫಲವು ಹೇಳಲ್ಪಟ್ಟಿರುತ್ತದೆ ಮತ್ತು ಆ ಗ್ರಹವು ಶುಭಗ್ರಹವಾಗಿದ್ದರೆ, ಶುಭ ಪಾಪಗಳೆರಡರ ಫಲವೂ ಪರಿಹಾರವಾಗಿ ಮಿಶ್ರಫಲ ಉಂಟಾಗುತ್ತೆ. ಇಂಥಾ ವಿಷಯಗಳೆಲ್ಲವನ್ನೂ ಈ ಪುಸ್ತಕದಲ್ಲಿ ವಿಶದಪಡಿಸುವುದು ಅತ್ಯಂತ ಶ್ರಮವು ಮತ್ತು

ಗ್ರಂಥ ಬಾಹುಳ್ಯವೂ ಆಗುವ ಭಯದಿಂದ ಅಷ್ಟು ವಿಷದ ಪಡಿಸಲಿಲ್ಲ. ದಿಕ್ದರ್ಶಕವಾಗಿ ಕೆಲವು ಉದಾಹರಣೆಗಳನ್ನು ಕೊಟ್ಟಿರುತ್ತೇನೆ. ಪ್ರಾಜ್ಞರು ಯೋಚಿಸಿ ತಿಳಿದುಕೊಂಡರೆ ನನ್ನ ಅಭಿಪ್ರಾಯವು ನೆರವೇರಿದಂತಾಗುವುದು ॥೧೦॥

ಮೂಲ॥ ಪ್ರಾರಬ್ಧಾಹಿಮಗೌ ದರ್ಶಾಸ್ವಗೃಹಗೇ ಮಾನಾರ್ಥಸೌಖ್ಯವಹಾ ।
ಕೌಜೇದೂಷಯತಿಸ್ತ್ರಿಯಂ ಬುಧಗೃಹೇ ವಿದ್ಯಾಸುಹೃದ್ವಿತ್ತದಾ ॥
ದುರ್ಗಾರಣ್ಯ ಪಥಾಲಯೇ ಕೃಷಿಕರೀ ಸಿಂಹೇಸಿರ್ಕ್ಷೇನ್ನದಾ ।
ಕುಸ್ತ್ರೀದಾ ಮೃಗಕುಂಭಯೋ ರ್ಗುರಗೃಹೇ ಮಾನಾರ್ಥಸೌಖ್ಯಾವಹಾ ॥೧೧॥

ಅವತಾರಿಕೆ॥ ದಶಾಂತರ್ದಶಾ ಕಾಲದಲ್ಲಿ ಚಂದ್ರನಿದ್ದು ರಾಶಿಯು ಬಲಾಬಲದಿದಂ ಶುಭಾಶುಭಫಲವನ್ನು ಪ್ರಾರಬ್ಧಾ ಎಂಬುವ ಶ್ಲೋಕದಿಂದ ಹೇಳಿದೆ.

ಟೀಕು॥ ಹಿಮಗೌಃ-ಚಂದ್ರನು, ಸ್ವಗೃಹಗೇ-ಸ್ವಕ್ಷೇತ್ರವಾದ ಕರ್ಕಾಟಕದಲ್ಲಿದ್ದಾಗ, ಪ್ರಾರಬ್ಧಾ-ಪ್ರವೇಶಮಾಡಿದ, ದಶಾ-ಅಂತರ್ದಶೆ, ಮಾನಾರ್ಥಸೌಖ್ಯಾವಹಾ-ಮಾನ-ಗೌರವವನ್ನು, ಅರ್ಥಃ-ಧನವನ್ನು, ಸೌಖ್ಯ-ಸೌಖ್ಯವನ್ನು ಅವಹಾ-ಕೊಡುತ್ತದೆ. ಕೌಜೇ-ಕುಜಕ್ಷೇತ್ರಗಳಾದ ಮೇಷ ವೃಶ್ಚಿಕದಲ್ಲಿ ಚಂದ್ರನಿರುವಾಗ ಪ್ರವೇಶಮಾಡಿದ ದಶೆ ಅಂತರ್ದಶೆಗಳು, ಸ್ತ್ರಿಯಂ-ಹೆಂಡತಿಯನ್ನು, ದೂಷಯತಿ-ಪರಪುರುಷ ಸಂಪರ್ಕಾದಿ ದೋಷದಿಂದ ದೂರತರುವುದು. ಬುಧಗೃಹೇ-ಬುಧಕ್ಷೇತ್ರಗಳಾದ ಕನ್ಯಾ ಮಿಥುನಗಳಲ್ಲಿ ಒಂದು ರಾಶಿಯಲ್ಲಿ ಚಂದ್ರನಿರವಾಗ ಪ್ರವೇಶಮಾಡಿದ ದಶೆ-ಅಂತರ್ದಶೆ, ವಿದ್ಯಾಸುಹೃದ್ವಿತ್ತದಾ-ವಿದ್ಯಾ-ವಿದ್ಯೆಯನ್ನು, ಸುಹೃತ್-ಸನ್ಮಿತ್ರರನ್ನು, ವಿತ್ತದಾ-ಧನವನ್ನು ಸಹ ಕೊಡುತ್ತದೆ. ಸಿಂಹೇ-ಸಿಂಹರಾಶಿಯಲ್ಲಿ ಚಂದ್ರನಿರುವಾಗ ಪ್ರವೇಶವಾದ, ದಶೆ-ಅಂತರ್ದಶೆ, ದುರ್ಗಾರಣ್ಯಪಥಾಲಯೇ-ದುರ್ಗ-ದುರ್ಗವನ್ನು, ದುರ್ಗಂ-ಸತ್ರಂದವೋದಾವೋ ಕಾಂತರೋಸ್ತ್ರೀಮಹಾವನ ಮಿತ್ಯಮರಃ ॥ ಕಷ್ಟವಾದ ದಾರಿಯನ್ನು ನಡೆಯಿಸುವುದು, ಅರಣ್ಯ-ಅರಣ್ಯಪ್ರವೇಶವನ್ನು, ಪಥಂದಾರಿ-ನಡೆಯುವಿಕೆಯನ್ನು, ಆಲಯೇ-ಗೃಹಾದಿಗಳನ್ನು ಸಹ, ಕೃಷಿಕರೀ-ಕೃಷಿಯನ್ನು ಮಾಡಲು ಪ್ರಯೋಜನವಾಗುತ್ತದೆ. ಸಿತರ್ಕ್ಷೇ-ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಒಂದು ರಾಶಿಯುಲ್ಲಿ ಚಂದ್ರನಿರುವಾಗ, ಪ್ರವೇಶವಾದ ದಶೆ ಅಂತರ್ದಶೆ, ಅನ್ನದಾಮೃಷ್ಟಾನ್ನಗಳನ್ನು ಕೊಡುತ್ತದೆ. ಮೃಗಕುಂಭಯೋಃ-ಮಕರ ಕುಂಭ ರಾಶಿಗಳಲ್ಲಿ ಚಂದ್ರನಿರುವಾಗ ಪ್ರವೇಶವಾದ, ದಶೆ-ಅಂತರ್ದಶೆ, ಕುಃಸ್ತ್ರೀದಾ-ಕುತಿತ್ಸ ಸ್ತ್ರೀಯನ್ನು ಕೊಡುತ್ತದೆ. ಗುರುಗೃಹೇ-ಬೃಹಸ್ಪತಿ ಕ್ಷೇತ್ರಗಳಾದ ಧನುರ್ಮೀನಗಳಲ್ಲಿ ಒಂದು ರಾಶಿಯಲ್ಲಿ

ಚಂದ್ರನಿರುವಾಗ ಪ್ರವೇಶವಾದ, ದಶೆ-ಅಂತರ್ದಶೆ, ಮಾನಾರ್ಥಸೌಖ್ಯಾವಹಾ-ಮಾನ-ಗೌರವವನ್ನು, ಅರ್ಥ-ಧನವನ್ನು, ಸೌಖ್ಯ-ಸುಖವನ್ನು ಅವಹಾ-ಕೊಡುತ್ತದೆ. ಈ ಪ್ರಕಾರವಾಗಿ ಶುಭಕಾಲದಲ್ಲಿ ಪ್ರವೇಶ ಮಾಡಿದ ಶುಭದಶೆ ಹೆಚ್ಚಾದ ಶುಭಫಲವನ್ನು ಕೊಡುತ್ತದೆ. ಶುಭಕಾಲದಲ್ಲಿ ಪ್ರವೇಶಮಾಡಿದ ಅಶುಭದಶೆ ಮಧ್ಯಮಫಲ ಕೊಡುತ್ತದೆ. ಅಶುಭಕಾಲದಲ್ಲಿ ಪ್ರವೇಶ ಮಾಡಿದ ಅಶುಭದಶೆ ಹೆಚ್ಚಾದ ಅಶುಭಫಲ ಕೊಡುತ್ತದೆ. ಮಧ್ಯಮ ಕಾಲದಲ್ಲಿ ಪ್ರವೇಶಮಾಡಿದ ಅಶುಭದಶೆ ಅಶುಭವನ್ನು ಕೊಡುತ್ತದೆ. ಈ ವಿಷಯವು ಪ್ರತಿ ದಶಾಭುಕ್ತಿಗಳಲ್ಲಿಯೂ ಅನ್ವಯಿಸುತ್ತದೆ. ಈ ವಿಷಯದಲ್ಲಿ ನಾರದ ಸಂಹಿತೆಯಲ್ಲಿ ॥ಶ್ಲೋಕ॥ ಸ್ತ್ರೀಮಿತ್ರಪುತ್ರದ್ರವಿಣೋಲಬ್ಧಿಂ ಕರ್ಕೇಹಿಮಾಂಶುಃ ಕುರುತೇದಶಾಯಾಂ। ಜಾಯಾಪಶೂನಾಂ ಹನನಂಪ್ರವೃತ್ತಿಂ ಕರೋತಿವೃಧ್ವೀ ತನುಜಸ್ಯಗೇಹೆ ॥೫೫॥ ಸ್ವಚ್ಛಾಸ್ತ್ರ (ವಿದ್ಯಾ) ಮಿತ್ರಾದಿಸಮಂಕರೋತಿ ಬುಧಸ್ಯರಾಶೌ ಗುರುಧಾಮಸಂಸ್ಥಃ । ನೃಪಪ್ರಸಾದಂ ವಿಪುಲಾಂಚ ಲಕ್ಷ್ಮೀಂ ಶುಕ್ರಸ್ಯಗೇಹೇ ಫಲಮೇತದೇವ ॥೫೬॥ ತಷಾರರಶ್ಮಿಃ ಶನಿವೇಶ್ಮಸಂಸ್ಥಃ ಪ್ರೇಷ್ಯಂ ಮ್ನನ್ನುಷ್ಯಂ ಕುರುತೇದಶಾಯಾಂ । ಅರಣ್ಯ ದುರ್ಗ ಕ್ಷಿತಿಮಾದದಾತಿ ಪ್ರೀತಿಂಮಹದ್ಗೋಗೃಹ ನಿರ್ಮಿತೌಚ ॥೫೭॥ ಮಿತ್ರೋಚ್ಚೋ-ಪಚಯಸ್ಥಾನೇ ತ್ರಿಕೋಣೇ ಸಪ್ತಮೇಪಿವಾ । ಪಾತೇಶ್ವರಾತ್ ಸ್ಥಿತಶ್ಚಂದ್ರಃ ಕುರುತೇ ಸತ್ಫಲಾಂದಶಾಂ ॥ ಎಂದು ಹೇಳಿರುತ್ತೆ ॥೫೮॥

ಮೂಲ॥ ಸೌರ್ಯಾಂಸ್ವಂ ನಖದಂತಚರ್ಮಕನಕ ಕ್ರೌರ್ಯಾಧ್ವಭೂಪಾಹವೈ ।
ಸ್ತೈಕ್ಷ್ಣ್ಯಂ ಧೈರ್ಯಮಜಸ್ರಮುದ್ಯಮರತಿಃ ಖ್ಯಾತಿಪ್ರತಾಪೋನ್ನತಿಃ ॥
ಭಾರ್ಯಾಪುತ್ರಧನಾರಿ ಶಸ್ತ್ರಹುತಭುಗ್ಭೂ ಪೋದ್ಭವಾವ್ಯಾಪದಸ್ತ್ಯಾ
ಗೀಪಾಪರತಿಸ್ಸ್ವ ಭೃತ್ಯಕಲಹೋ ಹೃತ್ಕ್ರೋಡ ಪೀಡಾಮಯಾಃ ॥

ಅವತಾರಿಕೆ॥ ಈ ಶ್ಲೋಕದಲ್ಲಿ ಸೂರ್ಯದಶಾಫಲ-ಅವನು ಶುಭಫಲ ಕೊಡತಕ್ಕವ ನಾದರೆ ಶುಭಫಲವನ್ನು, ಅಶುಭಫಲ ಕೊಡತಕ್ಕವನಾದರೆ ಅಶುಭ ಫಲವನ್ನು ಸಹ ಹೇಳಿದೆ.

ಟೀಕು॥ ಸೌರ್ಯಾಂ-ಸ್ಥಾನಾದಿಬಲಯುಕ್ತನಾದ ಸೂರ್ಯನ ದಶೆಯಲ್ಲಿ ಮತ್ತು ಅಂತರ್ದಶೆಯಲ್ಲಿಯೂ, ನಖದಂತ ಚರ್ಮಕನಕ ಕ್ರೌರ್ಯಾಧ್ವ ಭೂಪಾಹ್ವೈ-ನಖ- ನಖ ಎಂದರೆ ಸುಗಂಧ ವಿಶೇಷ, ಉಗುರೆಂದು ಅರ್ಥ ಮಾಡಿರುವರು, ಮತ್ತು ಕೆಲವರು ವ್ಯಾಘ್ರನಖವೆಂದು ಹೇಳಬಹುದು. ದಂತ-ಗಜದಂತವನ್ನು, ಚರ್ಮ-ವ್ಯಾಘ್ರ, ಜಿಂಕೆ ಮೊದಲಾದ ಚರ್ಮವಿಶೇಷವನ್ನು, ಅಂದರೆ ಸೂರ್ಯನು ಬಲಿಷ್ಠನಾಗಿದ್ದರೆ

ವ್ಯಾಘ್ರಚರ್ಮ, ಜಿಂಕೆಚರ್ಮ, ಕೃಷ್ಣಾಜಿನ, ಬಲಹೀನವಾಗಿದ್ದರೆ ಯಾವುದಾದರೂ ಚರ್ಮವನ್ನು, ಕ್ರೌರ್ಯ-ಕ್ರೂರವಾದ ಸ್ವಭಾವವುಳ್ಳವನಾಗುವಿಕೆ, ಅಧ್ವ-ದಾರಿ ನಡೆಯುವುದರಿಂದಲೂ, ಭೂಪ-ದೊರೆಗಳಿಂದಾಗಲಿ, ತತ್ಸಮಾನರಾದವರಿಂದಾಗಲಿ, ಆಹವ-ಯುದ್ಧ, ಅಹೂಯಂತೆ ಪರಸ್ಪರಮಿತಿ ಅಹವಃ, ಅಂದರೆ ಕರೆದು ಯುದ್ಧಮಾಡುವಿಕೆ, ಅಥವಾ ಪರಸ್ಪರ ಕಲಹ ಮಾಡುವಿಕೆ, ಈ ಕಾರ್ಯಗಳಿಂದ ಸ್ವಂ-ದ್ರವ್ಯ ಪ್ರಾಪ್ತಿಯಾಗುವುದು, ತೈಕ್ಷ್ಣಂ-ತೇಜಯತಿ ಅಂದರೆ ಉಗ್ರಸ್ವಭಾವ ಉಕ್ಕಿಬರುವಿಕೆ, ಧೈರ್ಯಂ-ಧೀರತ್ವದಿಂದ ಕಾರ್ಯಾಚರಣೆಯೂ, ಅಜಸ್ರಂ-ಸದಾಕಾಲದಲ್ಲೂ, ಉದ್ಯಮರತಿಃ-ಕಾರ್ಯ ಮಾಡುವುದರಲ್ಲಿ ಆಸಕ್ತಿಯೂ, ಪ್ರತಾಪೋನ್ನತಿಃ- ಪ್ರತಾಪವೆಂದರೆ ತನ್ನ ಶೌರ್ಯೌದಾರ್ಯಗಳಿಂದ ಪ್ರಖ್ಯಾತಿ ಹೊಂದುವಿಕೆ, ಯಶಸ್ಸು, ಕೀರ್ತಿ ಮೊದಲಾದುದು, ಇವೇ ಮುಂತಾದ ಶುಭಫಲ ಪ್ರಾಪ್ತಿಯಾಗುತ್ತೆ.

## ಅಶುಭಸೂರ್ಯದಶಾಫಲಂ

ಭಾರ್ಯಾಪುತ್ರಧನಾರಿ ಶಸ್ತ್ರ ಹುತಭುಗ್ಭೂಪೋದ್ಭವಾಃ-ಭಾರ್ಯಾ-ಪತ್ನೀ, ಪುತ್ರ (ಪುನ್ನಾಮ್ನೋನರಕತ್ರಾತಾ ತಸ್ಮಾತ್ ಪುತ್ರ ಇತಸ್ಮತಃ) ಮಗನು, ಧನದ್ರವ್ಯವು, ಅರಿ-ರಿಪೌವೈರಿ ಸಪತ್ನಾರೀತ್ಯಮರಃ ।। ಶತೃಗಳಿಂದಲೂ, ಶಸ್ತ್ರ-ಹರಿತವಾದ ಆಯುಧಗಳಿಂದಲೂ, ಹುತುಭುಕ್-ಬೆಂಕಿಯಿಂದಲೂ, ಭೂಪ-ಭೂಪತಿಯಿಂದಲೂ, ಉದ್ಭವಾಃ-ಹುಟ್ಟಿದ ಅಥವಾ ಈ ಮೂಲದಿಂದ ವ್ಯಾಪದಃ-ವಿಪತ್ತುಗಳಿಂದ ನಷ್ಟವಾಗುವುದು, ತ್ಯಾಗೀ-ಶುಭವಾದ ದಶಾಕಾಲದಲ್ಲಿ ಹೇಳಲಟ್ಟ ಶುಭಫಲ ನಾಶವಾಗುವಿಕೆ ಅಥವಾ ಸನ್ಮಾರ್ಗ ತ್ಯಾಗಮಾಡುವಿಕೆ, ಅಂದರೆ ಶುಭದಶೆಯಲ್ಲಿ ಕೆಟ್ಟನಡತೆ ಬರುವಿಕೆ, ಅಶುಭ ದಶೆಯಲ್ಲಿ ಸನ್ಮಾರ್ಗಕ್ಕೆವಿಮುಖರಾಗುವಿಕೆ, ಸ್ವಭೃತ್ಯಕಲಹಃ-ತನ್ನ ಭೃತ್ಯರಲ್ಲಿ ಜಗಳವಾಡುವಿಕೆ, ಹೃತ್ಕ್ರೋಡಪೀಡಾಮಯಾಃ-ಹೃತ್-ಹೃದಯದಲ್ಲಿಯೂ, ಕ್ರೋಡ-ಹೊಟ್ಟೆಯಲ್ಲಿಯೂ, ಪೀಡಾ-ವ್ಯಥೆಯು, ಅಮಯಾಃ-ರೋಗಾದ್ಯುಪದ್ರವದಿಂದ ಪೀಡಿಸಲ್ಪಡುವಿಕೆ, ಕೆಲವರು ಹೃತ್ಕ್ರೋಡ ಪೀಡಾಮಯವೆಂದರೆ ಹೃದಯದಲ್ಲೂ ಹೊಟ್ಟೆಯಲ್ಲೂ ನೋವುಂಟಾಗುವಿಕೆ, ಹೊಟ್ಟೆಶೂಲೆ ಬರುವಿಕೆ, ಈ ಮೊದಲಾದ ಪಾಪಫಲ ಪ್ರಾಪ್ತಿಯಾಗುತ್ತದೆ ಎನ್ನುವರು.

ಈ ಸೂರ್ಯದಶೆಯ ವಿಷಯದಲ್ಲಿ ।।ಶ್ಲೋಕ।। ಗರ್ಗಃ ।। ಸೂರ್ಯಃಕರೋತಿ ನೀಚೇದೋಷಸಹಸ್ರಂ ಮಹಾವಿಪುಲಂ । ಶತ್ರುದಶಾಯಾಂನಾಶಂ ಧನಜಲ ದೋಷಂ ಸದಾಕುರತೇ ।।೫೮।। ನೈಧನಭಾಗಪ್ರಾಪ್ತೇಪ್ಯೇವಂ ಹ್ಯುಚ್ಚಾದಿ ಶುಭದಶಾ ವರ್ಜ್ಯಂ । ಮೂಲತ್ರಿಕೋಣಗೇಷು ಸ್ವೋಚ್ಚೇಷುಚ ಶುಭಫಲಾಸ ಮಾದೇಶ್ಯಾಃ ।।೫೯।।

ಮಿತ್ರಗೃಹೋಚ್ಚಾಧೀಶಫಲಂ ಧನಧನ್ಯಾಪ್ತಿಂಚತದಾ ॥ ತಾತ್ಪರ್ಯ॥ ಸೂರ್ಯನು ನೀಚನಾಗಿದ್ದರೆ ಅನೇಕ ದೋಷವನ್ನು ಕೊಡುತ್ತಾನೆ. ಶತ್ರುಸ್ಥಾನಸ್ಥಿತನಾಗಿದ್ದರೆ ಧನನಾಶ ಜಲದೋಷವನ್ನು ಕೊಡುತ್ತಾನೆ. ಅಷ್ಟಮ ಸ್ಥಾನದಲ್ಲಿದ್ದರೆ ನಾಶ, ಧನನಾಶ, ರೋಗಾದಿಗಳನ್ನು ಕೊಡುತ್ತಾನೆ. ಮೂಲ ತ್ರಿಕೋಣ ಸ್ವಕ್ಷೇತ್ರ ಉಚ್ಚಕ್ಷೇತ್ರದಲ್ಲಿದ್ದರೆ ಶುಭಫಲವನ್ನು ಕೊಡುತ್ತಾನೆ. ಮಿತ್ರಗೃಹದಲ್ಲೂ, ಉಚ್ಚದಲ್ಲೂ ಇದ್ದರೆ ಧನಧಾನ್ಯ ಮೊದಲಾದ ಶುಭಫಲವನ್ನು ಕೊಡುತ್ತಾನೆ.

## ಪೂರ್ಣಬಲಯುಕ್ತ ರವಿದಶಾಫಲಂ

ಶ್ಲೋಕ॥ ದಶಾರವೇಷ್ಪೂರ್ಣಬಲಸ್ಯಲಾಭು ಗಜಾಶ್ವಹೇಮಾಂಬರ ರತ್ನ ಪೂರ್ಣಂ ॥ ಮಾನೋದಯಂ ಭೂಮಿಪತೇರ್ದದಾತಿ ಯಶಶ್ಚ ದೇವದ್ವಿಜಪೂಜ ನಾದೇಃ) ॥೬೦॥ಟೀ॥ ಸ್ಥಾನಾದಿ ಸಪ್ತಬಲಯುಕ್ತನಾದ ಪೂರ್ಣಬಲಿಷ್ಠನಾದ ಸೂರ್ಯ ದಶೆಯಲ್ಲಿ ಗಜ, ಅಶ್ವ, ಸುವರ್ಣ, ಹೇಮಾಂಬರ, ರತ್ನಲಾಭ, ರಾಜಮೂಲಕವಾದ ಗೌರವ, ಯಶಸ್ಸು, ದೇವದ್ವಿಜ ಪೂಜನಾದಿ ಫಲಪ್ರಾಪ್ತಿ ಈ ಮೊದಲಾದ ಶುಭಫಲವನ್ನು ಕೊಡುತ್ತಾನೆ.

## ಮಧ್ಯಬಲಿಷ್ಠನಾದ ರವಿದಶಾಫಲಂ

ಶ್ಲೋಕ॥ ದಶಾರವೇರ್ಮ್ಧ್ಯಬಲಸ್ಯ ಪೂರ್ವಮಿದಂಫಲಂ ಮಧ್ಯಮ ಮೇವದತ್ತೇ॥ ಗ್ರಾಮಾಧಿಕಾರ ವ್ಯವಸಾಯಧೈರ್ಯೈಃ ಕುಲಾನುಮಾನಾಚ್ಚ ಸುಖಾದಿಲಾಭಃ ॥೬೧॥ ತಾ॥ ಮಧ್ಯಬಲಿಷ್ಠನಾದ ರವಿದಶೆಯಲ್ಲಿ ಎಲ್ಲಾ ಫಲಗಳನ್ನು ಮಧ್ಯಮವಾಗಿ ಕೊಡುತ್ತಾನೆ. ಗ್ರಾಮಾಧಿಕಾರ, ವ್ಯವಸಾಯ, ಧೈರ್ಯ, ಕುಲಾನುಮಾನದಿಂದ ಸುಖಾದಿ ಲಾಭವನ್ನು ಕೊಡುತ್ತಾನೆ.

## ಅಲ್ಪಬಲಯುಕ್ತ ರವಿದಶಾಫಲಂ

ಶ್ಲೋಕ॥ ದಶಾರವೇಲ್ಪಬಲಸ್ಯಪುಂಸಾಂ ದದಾತಿದುಃಖಂ ಸ್ವಜನೈರ್ವಿವಾದರ್ಾ॥ ಮತಿಭ್ರಮಂ ಪಿತ್ತರುಜಂ ಸ್ವತೇಜೋ ವಿನಾಶನಂ ಘರ್ಷಣಮಪ್ಯರಿಭ್ಯಃ॥೬೨॥ತಾ॥ ಅಲ್ಪಬಲವುಳ್ಳ ರವಿದಶೆಯಲ್ಲಿ ದುಃಖ, ಸ್ವಜನರಲ್ಲಿ ವಿರೋಧಮತಿಭ್ರಮೆ, ಪಿತ್ತರೋಗ, ತೇಜಸ್ಸು ನಾಶನ, ಶತ್ರುಗಳ ಪೀಡೆ ಸಹಾ ಉಂಟಾಗುತ್ತೆ.

## ನಷ್ಟಬಲ ರವಿದಶಾಫಲಂ

ಶ್ಲೋಕ|| ದಶಾರವೇರ್ನಷ್ಟ ಬಲಸ್ಯಪುಂಸಾಂ ನೃಪಾದ್ರಿಪೋರ್ವಾ ಭಯಮರ್ಥ ನಾಶಂ || ಸ್ತ್ರೀಪುತ್ರಮಿತ್ರಾದಿ ಜನೈರ್ವಿವಾದಂಕರೋತಿ ಬುದ್ಧಿಭ್ರಮ ಮಾಮಯಂಚ ||೬೩||ತಾ|| ನಷ್ಟಬಲರವಿದಶೆಯಲ್ಲಿ ರಾಜ ಮೂಲದಿಂದಲೂ, ಶತ್ರುಗಳಿಂದಲೂ ದ್ರವ್ಯನಾಶ, ಸ್ತ್ರೀಪುತ್ರಮಿತ್ರಾದಿ ಜನಗಳಲ್ಲಿ ವಿವಾದ, ಭ್ರಮೆ, ಬುದ್ಧಿ ಶೂನ್ಯತ್ವ, ರೋಗ ಪೀಡೆ ಮೊದಲಾದ ಫಲವನ್ನು ಕೊಡುತ್ತಾನೆ.

## ಉಪಚಯಸ್ಥಾನಸ್ಥಿತ ರವಿದಶಾಫಲಂ

ಶ್ಲೋಕ|| ಲಗ್ನಾದ್ರವಿಃ ಷಟ್‌ತ್ರಿದಶಾಯಸಂಸ್ಥೋ ನಿಂದ್ಯೋಪಿಧತ್ತೇ ಶುಭಮರ್ಥಮೇವ || ಮಧ್ಯತ್ವಮೂನಃ ಶುಭತಾಂಚಮಧ್ಯೋಯಾತೀತ್ಥಮತ್ಯಂತ ಶುಭಃಶುಭಃಸ್ಯಾತ್ ||೬೪|| ಸೂರ್ಯನು ಲಗ್ನದಿಂದ ೬-೩-೧೦-೧೧ರಲ್ಲಿ ನಿಂದ್ಯನಾಗಿದ್ದರೆ ಶುಭಫಲವನ್ನು, ಅಲ್ಪಬಲವಂತನಾಗಿದ್ದರೂ ಮಧ್ಯಫಲವನ್ನು, ಶುಭಫಲಪ್ರದನಾಗಿದ್ದರೆ ಶುಭಫಲವನ್ನು ಕೊಡುತ್ತಾನೆ. ಇತಿ ರವಿದಶಾಫಲಂ.

## ಚಂದ್ರ ದಶಾಫಲಂ

ಮೂಲ|| ಇಂದೋಃ ಪ್ರಾಪ್ಯದಶಾಫಲಾನಿಲಭತೇ ಮಂತ್ರ ದ್ವಿಜಾತ್ಯುದ್ಭವಾ|
ನಿಕ್ಷುಕ್ಷೀರವಿಕಾರ ವಸ್ತ್ರಕುಸುಮ ಕ್ರೀಡಾತಿಲಾನ್ನಶ್ರಮೈಃ|| ನಿದ್ರಾಲಸ್ಯ
ಮೃದುದ್ವಿಜಾಮರರತಿಃ ಸ್ತ್ರೀಜಸ್ಮ ಮೇಧಾವಿತಾ |
ಕೀರ್ತ್ಯರ್ಥೋಪಚಯಕ್ಷಯೌಚ ಬಲಿಭಿರ್ವೈರಂ ಸ್ವಪಕ್ಷೇಣಚ ||೧೩||

ಚಂದ್ರದಶಾಫಲವು ಹೇಳಲ್ಪಡುತ್ತೆ.

ಟೀಕು||ಇಂದೋಃ-ಚಂದ್ರನ ದಶಾದಶೆಯು, ಪ್ರಾಪ್ಯ-ಹೊಂದಿ, (ಬಂದ ಕಾಲದಲ್ಲಿ) ಮಂತ್ರದ್ವಿಜಾತ್ಯುದ್ಭವಾನಿ-ಮಂತ್ರ-ಮಂತ್ರ ಪ್ರಯೋಗದಿಂದ, ದ್ವಿಜ-ದೇಹೊತ್ಪತ್ತ್ಯು ಪಯನಾದಿ ಲಕ್ಷಣೇ ದ್ವಿಜಾತಿಃ, ಅಸ್ಯೇತಿ ದ್ವಿಜಾತಿಃ-ಬ್ರಾಹ್ಮಣರಿಂದ, ಉದ್ಭವಾನಿ-ಹುಟ್ಟಿದ, ಫಲಾನಿ-ಫಲಗಳನ್ನು, ಲಭತೆ-ಹೊಂದುತ್ತಾನೆ. ಇಕ್ಷುಕ್ಷೀರವಿಕಾರ ವಸ್ತ್ರಕುಸುಮಕ್ರೀಡಾ ತಿಲಾನ್ನಶ್ರಮೈಃ-ಇಕ್ಷು- ಕಬ್ಬು, ಬೆಲ್ಲ, ಸಕ್ಕರೆ ಮೊದಲಾದವುಗಳು, ಕ್ಷೀರವಿಕಾರ-ಹಾಲು, ಮೊಸರು, ತುಪ್ಪ, ಬೆಣ್ಣೆ ಮೊದಲಾದವುಗಳು, ವಸ್ತ್ರ-ನಾನಾವಿಧ ವಸ್ತ್ರಗಳು, ಕುಸುಮ-ನಾನಾವಿಧವಾದ ಕುಸುಮ, ಪುಷ್ಪ ಮಾಲಿಕಾದಿ ಮನೋಹರವಾದ ವಸ್ತುಗಳು, ಕ್ರೀಡಾ-ಆಟ, ಮಿಹಿರಾದಿಗಳು, ತಿಲ-ಎಳ್ಳು, ಅನ್ನ-ನಾನಾವಿಧವಾದ ಅನ್ನ ಇವುಗಳಿಂದ, ಶ್ರಮೈಃ-

ವ್ಯಾಯಾಮಾದಿಗಳಿಂದ, ಫಲಾನಿ-ಇಷ್ಟಾರ್ಥಗಳನ್ನು, ಲಭತೇ-ಹೊಂದುತ್ತಾನೆ. ಇವೆಲ್ಲಾ ಶುಭಚಂದ್ರದಶೆಯ ಫಲಗಳು. ಅಶುಭಫಲ ಕೊಡತಕ್ಕ ಚಂದ್ರದಶೆಯಾದರೆ-ನಿದ್ರಾಲಸ್ಯ-ಮೃದುದ್ವಿಜಾಮರರತಿಃ-ನಿದ್ರಾ-ನಿದ್ರೆಯಿಂದ, ಅಲಸ್ಯ-ಸಾವಕಾಶದಿಂದ (ಅಥವಾ ಸೋಮಾರಿತನದಿಂದ), ಮೃದು-ಮೃದುಸ್ವಭಾವದಿಂದ, ದ್ವಿಜ-ಬ್ರಾಹ್ಮಣ ಸೇವೆಯಿಂದ, ಅಮರ-ದೇವರಾಧನೆಯಿಂದ, ರತಿಃ-ವಿಹಾರಾಶಕ್ತಿಯು, ಸ್ತ್ರೀಜನ್ಮ-ಸ್ತ್ರೀ ಶಿಶು ಹುಟ್ಟುವಿಕೆ, ಮೇಧಾವಿತಾ-ಬುದ್ಧಿವೃದ್ಧಿಯಾಗುವಿಕೆ, ಅಶುಭದಶೆಯಲ್ಲಿ ಧನನಾಶ ಮೊದಲುಗೊಂಡು ನಾನಾವಿಧ ವಿಪತ್ತುಗಳು, ಕೀರ್ತಿ ನಾಶವಾಗುವಿಕೆ, ಅಪಚಯ-ಅಭಿವೃದ್ಧಿಯಿಲ್ಲದೆ ನಾಶವಾಗುವಿಕೆ, ಬಲಿಭಿಃ-ಬಲವಂತರಾದ ಸ್ವಪ ಕ್ಷೇಣಚ-ತನ್ನ ಪಕ್ಷದ ಜನರುಗಳಿಂದ, ವೈರಂ-ವಿರೋಧವನ್ನು ಮಿಶ್ರದಶೆಯಲ್ಲು ಶುಭಾಶುಭ ಮಿಶ್ರಫಲವನ್ನು ಕೊಡುತ್ತಾನೆ. ಈ ವಿಷಯದಲ್ಲಿ ಗರ್ಗಸಂಹಿತೆಯಲ್ಲಿ ಶ್ಲೋಕ।। ಚಂದ್ರಸ್ವಕ್ಷೇತ್ರಾದಿಷು ಮೂಲತ್ರಿಕೋಣೇಚ ಭಾಗಗೇಸತತಂ । ನೀಚ ಸಮಸ್ಥಾನಗತ ಶ್ಶೀತಾಂಶುಃ ಪಾಪಸಮಫಲಃ ಪ್ರೋಕ್ತ ।।೬೫।। ನೈಧನ ರಾಶಿ ಸಮೇತಂ ವ್ಯಯಗತಚಂದ್ರಂ ಸದಾಪರಿಕ್ಷ್ಯೈಪಂ । ಪಾಪಫಲಂ ಪಬ್ರೂಯಾನ್ನಿ ಯತಮ ಶುಭದಂ ಸದಾಚಿಂತ್ಯಂ ।।೬೬।।ತಾ।। ಚಂದ್ರನು ನೀಚರಾಶಿಯಲ್ಲಿದ್ದರೂ ಸಮಸ್ಥಾನಗಳಲ್ಲಿದ್ದರೂ ಪಾಪಫಲವನ್ನು ಸಮಫಲವನ್ನು ಕ್ರಮವಾಗಿ ಕೊಡುವನು. ಮತ್ತು ವ್ಯಯಸ್ಥಾನದಲ್ಲಿ ಚಂದ್ರನಿದ್ದರೂ ಪಾಪಫಲವನ್ನು ನಿಯತವಾಗಿ ಕೊಡುವನು. ಚಂದ್ರನು ಸ್ವಕ್ಷೇತ್ರ ಉಚ್ಚ ಮೂಲತ್ರಿಕೋಣಗಳಲ್ಲಿದ್ದರೆ ಸದಾ ಶುಭಫಲವನ್ನೇ ಕೊಡುವನೆಂದುಕ್ತವಾಗಿರುತ್ತೆ. ಆದರೆ ಗ್ರಂಥಾಂತರದಲ್ಲಿ ಚಂದ್ರಫಲವು ಬಲಾನುಮಾನುವಾಗಿಹೇಳಲ್ಪಟ್ಟಿರುತ್ತೆ. ಅದನ್ನು ಇಲ್ಲಿ ಉದಾಹರಣೆಗೋಸ್ಕರ ಹೇಳುತ್ತೇನೆ.

## ಪೂರ್ಣಬಲಯುಕ್ತ ಚಂದ್ರದಶಾಫಲಂ

ಶ್ಲೋಕ।। ಇಂದೋರ್ದಶಾಪೂರ್ಣಬಲಸ್ಯಧತ್ತೇ ಶುಕ್ಲಾಂಬರಸ್ರಗ್ಬಣೆ ಮೌಕ್ತಿ-ಕಾದ್ಯಂ । ಸ್ತ್ರೀಸಂಗಮಂ ರಾಜ್ಯಸುಖಂಚಭೂಮಿಲಾಭಂ ಯಶಃ ಕಾಂತಿಬಲಾಭಿವೃದ್ಧಿ ।।೬೭।।ತಾ।। ಚಂದ್ರನು ಪೂರ್ಣ ಬಲಿಷ್ಠನಾಗಿದ್ದರೆ ಶುಕ್ಲಾಂಬರ, ಮೌಕ್ತಿಕ, ರತ್ನ, ಸ್ತ್ರೀಸಂಗ, ರಾಜ್ಯಪ್ರಾಪ್ತಿ, ಭೂಮಿ, ಸೌಖ್ಯ, ಲಾಭ, ಯಶಸ್ಸು ಕಾಂತಿ, ಬಲ ಮೊದಲಾದವುಗಳನ್ನು ಕೊಡುತ್ತಾನೆ.

## ಮಧ್ಯಬಲ ಚಂದ್ರದಶಾಫಲಂ

ಶ್ಲೋಕ।। ಇಂದೋರ್ದಶಾ ಮಧ್ಯಬಲಸ್ಯ ಸರ್ವಮಿದಂಫಲಂ ಮಧ್ಯಮ ಮೇವಧತ್ತೇ ।। ವಾಣಿಜ್ಯ ಮಿತ್ರಾಂಬರಗೇಹಸೌಖ್ಯಂ ಧರ್ಮೇಮತಿಂ ಸತ್ಕೃತಿ

ತೋನ್ನಲಾಭಂ ॥೬೮॥ ತಾ॥ ಮಧ್ಯಮ ಬಲಿಷ್ಠನಾದ ಚಂದ್ರನು ತನ್ನ ದಶೆಯಲ್ಲಿ ಮಿತ್ರರು, ವಸ್ತ್ರ, ಗೃಹ, ಸೌಖ್ಯ, ಧರ್ಮಬುದ್ಧಿ, ಪುಣ್ಯಕರ್ಮ, ಅನ್ನಲಾಭ ಈ ಫಲಗಳನ್ನೆಲ್ಲಾ ಮಧ್ಯಮವಾಗಿ ಕೊಡುತ್ತಾನೆ.

## ಅಲ್ಪಬಲ ಚಂದ್ರದಶಾಫಲಂ

ಶ್ಲೋಕ॥ ಇಂದೋರ್ದಶಾ ಸ್ವಲ್ಪಬಲಸ್ಯಧತ್ತೇ ಕಫಾಮಯಂ ಕಾಂತಿ ವಿನಾಶ ಮಾಹುಃ । ಮಿತ್ರಾದಿವೈರಂ ಜನನಂಕುಮಾರ್ಯಾ ಧರ್ಮಾರ್ಥನಾಶಂ ಸುಖಮಲ್ಪ ಮಾತ್ರಂ ॥೬೯॥ತಾ॥ ಚಂದ್ರನು ಅಲ್ಪಬಲಯುಕ್ತನಾಗಿದ್ದರೆ ತನ್ನ ದಶೆಯಲ್ಲಿ ಕಫರೋಗ, ಕಾಂತಿನಾಶ, ಮಿತ್ರರಲ್ಲಿ ವೈರತ್ವ, ಸ್ತ್ರೀಸಂತತಿ ಜನನ, ಧರ್ಮಾರ್ಥನಾಶ, ಅಲ್ಪಸುಖ ಇವೇ ಮೊದಲಾದ ಅಲ್ಪಫಲಗಳಾಗುತ್ತದೆಂದು ತಾತ್ಪರ್ಯ.

## ನಷ್ಟಬಲಚಂದ್ರದಶಾಫಲ

ಶ್ಲೋಕ॥ ಇಂದೋರ್ದಶಾ ನಷ್ಟಬಲಸ್ಯ ಲೋಕಾಪವಾದ ಭೀತಿಂ ಧನ ಧರ್ಮನಾಶಂ । ಶೀತಾಮಯಂ ಸ್ತ್ರೀಸುತಮಿತ್ರವೈರಂ ದೌಸ್ಥ್ಯಂಚಧತ್ತೆ ವಿರಸಾನ್ನಭುಕ್ತಿಂ॥೭೦॥ತಾ॥ ಚಂದ್ರನು ಬಲವಿಲ್ಲದವನಾಗಿದ್ದರೆ, ತನ್ನ ದಶೆಯಲ್ಲಿ ಲೋಕಾಪವಾದ ಭೀತಿ, ಧನನಾಶ, ಧರ್ಮಹಾನಿ, ಶೀತರೋಗ, ಸ್ತ್ರೀ-ಸುತ-ಮಿತ್ರ ಇವರಲ್ಲಿ ವೈರ, ರಸವಿಲ್ಲದ ಅನ್ನ, ಕುತ್ಸಿತಾನ್ನ, ಭೋಜನ ಮೊದಲಾದ ಫಲವನ್ನು ಕೊಡುತ್ತಾನೆ.

## ಷಷ್ಠಾಷ್ಟಮರಾಶಿಸ್ಥ ಚಂದ್ರದಶಾಫಲಂ

ಶ್ಲೋಕ॥ ಷಷ್ಠಾಷ್ಟ ಮಾಂತ್ಯೇತರ ರಾಶಿಸಂಸ್ಥೋ ನಿಂದ್ಯೋಪಿಧತ್ತೇರ್ಥ ಸುಖಂ ದಶಾಯಾಂ । ಮಧ್ಯತ್ವಮೂನಃ ಶುಭತಾಂಚಮಧ್ಯೋಯಾತೀತ ಮಿಂದುಃಸಶುಭಃ ಶುಭಸ್ಯಾತ್ ॥೭೧॥ತಾ॥ ಚಂದ್ರನು ಷಷ್ಠಾಷ್ಟಮ ದ್ವಾದಶವನ್ನು ಬಿಟ್ಟು, ಇತರ ರಾಶಿಗಳಲ್ಲಿದ್ದು, ಪಾಪಫಲ ಕೊಡತಕ್ಕವನಾಗಿದ್ದರೆ ಅರ್ಥ ಸುಖವನ್ನು ಕೊಡುತ್ತಾನೆ. ಮಧ್ಯಬಲಿಷ್ಠನಾಗಿದ್ದರೆ ಅಲ್ಪಫಲ ಕೊಡುತ್ತಾನೆ. ಶುಭನಾಗಿ ನಿಂದ್ಯಸ್ಥಾನಗಳಲ್ಲಿದ್ದರೆ ಮಧ್ಯಫಲ ಕೊಡುತ್ತಾನೆ. ಶುಭನಾಗಿ ಶುಭಸ್ಥಾನಗಳಲ್ಲಿದ್ದರೆ ಶುಭ ಫಲವನ್ನು ಕೊಡುತ್ತಾನೆ.

## ಉದಾಹರಣೆ

| ಗುರು | | | ರಸಿ |
|---|---|---|---|
| | | | |
| ಲಗ್ನ | | | ರವಿ |
| | ಚ ಕು | | ಬುಧ<br>ಶುಕ್ರ |

ಈ ಜಾತಕದಲ್ಲಿ ಚಂದ್ರನು ನೀಚನಾಗಿದ್ದಾಗ್ಯೂ ಲಗ್ನದಿಂದ ೧೧ನೇ ಸ್ಥಾನದಲ್ಲಿದ್ದು ಕುಜಸಂಯೋಗ ದಿಂದಲೂ, ಗುರುವೀಕ್ಷಣೆಯಿಂದಲೂ ಬಲಿಷ್ಠನಾಗಿರುವನು. ಆದರೆ ಚಂದ್ರದಶೆಯು ಬಂದೊಡನೆ ರಾಜ್ಯ ಪ್ರಾಪ್ತಿಯನ್ನೂ, ಒಳ್ಳೆಯ ಯಶಸ್ಸನ್ನೂ, ಚಂದ್ರ ದಶೆಯ ಅಂತ್ಯಭಾಗದಲ್ಲಿ ಮಹತ್ವದ, ಪತ್ನೀಮರಣ, ಒಳ್ಳೆಯ ಯಶಸ್ಸು ಮೊದಲಾದ ವಿಶೇಷ ಫಲವನ್ನು ಕೊಡುತ್ತಾನೆ.

## ಕುಜಮಹಾದಶಾಫಲಂ

ಮೂ॥ ಭೌಮಸ್ಯಾರಿವಿಮರ್ದ ಭೂಪಸಹಜ ಕ್ಷಿತ್ಯಾವಿಕಾಜೈರ್ಧನಂ।
ಪ್ರದ್ವೇಷಃಸುತ ಮಿತ್ರದಾರಸಹಜೈ ರ್ವಿದ್ವದ್ಗುರುದ್ವೇಷಿತಾ॥
ತೃಷ್ಣಾಸೃಗ್ಜ್ವರಪಿತ್ತ ಭಂಗಜನಿತಾ ರೋಗಾಃ ಪರಸ್ತ್ರೀಕೃತಾಃ ।
ಪ್ರೀತಿಂಪಾಪರತೈ-ರಧರ್ಮ ನಿರತಿಃ । ಪಾರುಷ್ಯ ತೈಕ್ಷ್ಣ್ಯನಿಚ ॥೧೪॥

ಟೀ॥ ಅಂಗಾರಕ ಮಹಾದಶಾಫಲಂ-ಭೌಮಸ್ಯ-ಕುಜನ ದಶೆಯಲ್ಲಿ, ಅರಿವಿಮರ್ದ ಭೂಪಸಹಜಕ್ಷಿತ್ಯಾವಿಕಾಜೈ--ಅರಿವಿಮರ್ದ-ಶತ್ರುನಾಶನ, ಭೂಪ-ರಾಜ, ಸಹಜ, ಸಹೋದರ, ಕ್ಷಿತಿ-ಭೂಮಿ, ಅವಿಕ-ಕುರಿ, (ರೋಮ) ಅಜ-ಮೇಕೆ, ಇವುಗಳ ಮೂಲಕವಾಗಿ, ಧನಂ-ಧನಪ್ರಾಪ್ತಿಯಾಗುತ್ತದೆ. ಕುಜನು ಶುಭಫಲದಾಯಕ ನಾಗಿದ್ದರೆ ಇವುಗಳೆಲ್ಲವಾಗಲೀ, ಇದರಲ್ಲಿ ಕೆಲವು ಫಲಗಳಾಗಲೀ ಲಭಿಸುತ್ತವೆ. ಅಶುಭಕುಜದಶೆಯಾದರೆ-ಸುತಮಿತ್ರದಾರಸಹಜೈ-ಸುತ-ಮಗ, ಮಿತ್ರ-ಸ್ನೇಹಿತ, ದಾರ-ಹೆಂಡತಿ, ॥ದಾರಾಸ್ಯಾತ್ತುಕುಟುಂಬಿನೀ, ಇತ್ಯಮರಃ ॥ಸಹಜೈ-ಸಹೋದರರು ಗಳಲ್ಲಿ ಪ್ರದ್ವೇಷಃ-ವೈರವು, ವಿದ್ವದ್ಗುರು ದ್ವೇಷಿತಾ-ವಿದ್ವಾಂಸರಲ್ಲು ಗುರುಗಳಲ್ಲು ವಿರೋಧವು, ತೃಷ್ಣಾಸೃಗ್ಜ್ವರಪಿತ್ತಭಂಗಜನಿತಾಃ ತೃಷ್ಣಾ-ಅತಿ ನೀರಡಿಕೆಯಿಂದಲೂ, ಅಸೃಕ್-ರಕ್ತಸ್ರಾವದಿಂದಲೂ, ಪಿತ್ತ-ಪಿತ್ತರೋಗದಿಂದಲೂ, ಭಂಗ-ಅವಯವ ಭಂಗದಿಂದ, ಜನಿತಾಃ-ಹುಟ್ಟಿದ, ರೋಗಾಃ-ರೋಗಗಳನ್ನೂ, ಪರಸ್ತ್ರೀಕೃತಾಃ-ಪರಸ್ತ್ರೀಕೃತವೆಂದರೆ ಪರಸ್ತ್ರೀ ಸಂಸರ್ಗದಿಂದುಂಟಾದ ಮೇಹ, ಭಗಂದರ, ರಾಜಯಕ್ಷ್ಮಾದಿ ರೋಗಗಳನ್ನು ಕೊಡುತ್ತಾನೆ, ಪರಸ್ತ್ರೀಷ್ಟತಾ ಎಂದು

ಪಾಠಾಂತರವಿರುತ್ತದೆ. ಪರಸ್ತ್ರೀಷ್ಟತಾ-ಪರಸ್ತ್ರೀಯರಲ್ಲಿ ಪ್ರೀತಿಯು, ಪಾಪರತ್ಯೇ-ಪಾಪಕಾರ್ಯ ಮಾಡತಕ್ಕವರಲ್ಲಿ ಪ್ರೀತಿ, ಅಧರ್ಮನಿರತಿಃ-ಪಾಪಕಾರ್ಯಾಸಕ್ತಿ, ಪಾರುಷ್ಯಶೈಕ್ಷ್ಣ್ಯನೀಚ-ಪಾರುಷ್ಯ-ಮಾತಿನಲ್ಲಿ ಕಠಿನತ್ವ, ಕಠಿನೋಕ್ತಿ, ತೈಕ್ಷ್ಣ್ಯನೀಚ -ಕ್ರೂರಸ್ವಭಾವ ಉಳ್ಳವನಾಗುವಿಕೆ, ಈ ಮೊದಲಾದ ಅಶುಭಫಲಗಳು ಪಾಪಫಲಪ್ರದನಾದ ಕುಜದಶೆಯಲ್ಲಿ ಉಂಟಾಗುತ್ತವೆ. ಮಿಶ್ರಫಲದಶೆಯಲ್ಲಿ ಮಿಶ್ರಫಲವನ್ನು ತಿಳಿಯತಕ್ಕದ್ದು. ಇದಕ್ಕೆ ಗರ್ಗಸಂಹಿತೆಯಲ್ಲಿ ।।ಶ್ಲೋಕ।। ಭೌಮಸ್ವಕ್ಷೇತ್ರಗತಃ ಸ್ವೋಚ್ಚೇಚಕರೋತಿ ಧನಧಾನ್ಯಂ ಮಿತ್ರ ತ್ರಿಕೋಣ ಕೇಷ್ವಪಿ ರತ್ನಾನಾಂಭಾಜನಂಕುರುತೇ ।।೭೨।। ನೀಚರಿಪುಸ್ಥಾನಗತೋ ಭೌಮೋನಿಯತಂ ವಿನಾಶಮಿಹಕುರುತೇ । ಸತತಂಚದೋಷಂಬಹುಳಂ ಕರೋತಿಪುರುಷಂ ನೈಧನಸ್ಥದಶಾ ।।೭೩।।ತಾ।। ಅಂಗಾರಕನು ಸ್ವಕ್ಷೇತ್ರದಲ್ಲಿ ಯಾದರೂ, ಉಚ್ಚಕ್ಷೇತ್ರದಲ್ಲಿಯಾದರೂ, ಚಕಾರ ಶಬ್ದದಿಂದ ಸ್ವ-ಉಚ್ಚ ನವಾಂಶೆಯಲ್ಲಿಯಾದರೂ, ಇದ್ದರೆ ಧನ ಧಾನ್ಯ ವೃದ್ಧಿಯನ್ನೂ, ಮಿತ್ರಕ್ಷೇತ್ರ ತ್ರಿಕೋಣಗಳಲ್ಲಿದ್ದರೆ ರತ್ನಾದಿ ಲಾಭವನ್ನೂ, ನೀಚ ಶತ್ರುಸ್ಥಾನದಲ್ಲಿದ್ದರೆ ನಿಯತವಾಗಿ ವಿನಾಶವನ್ನೂ, ಅಷ್ಟಮ ಸ್ಥಾನದಲ್ಲಿದ್ದರೆ ಯಾವಾಗಲೂ ಪೀಡಯನ್ನೂ, ರೋಗಾದ್ಯುಪದ್ರವವನ್ನೂ ಕೊಡುತ್ತಾನೆ. ಗ್ರಂಥಾಂತರದಲ್ಲಿ ಅಂಗಾರಕನ ಬಲಾಬಲ ವಿಭಾಗಮಾಡಿ ಪೂರ್ಣಬಲ, ಮಧ್ಯಬಲ, ಅಲ್ಪಬಲ, ನಷ್ಟಬಲ ಮತ್ತು ಉಪಚಯ ಸ್ಥಾನಗಳಲ್ಲಿದ್ದರೆ ಫಲತಾರತಮ್ಯವನ್ನು ಹೇಳಿದ್ದಾರೆ. ಅದನ್ನು ಉದಾಹರಣೆಯಾಗಿ ಹೇಳಿರುತ್ತೇನೆ.

## ಪೂರ್ಣಬಲಯುಕ್ತಾಂಗಾರಕ ದಶಾಫಲಂ

ಶ್ಲೋಕ।। ದಶಾಪತಿಃ ಪೂರ್ಣಬಲೋಮಹೀಜಃ ಸೇನಾಪತಿತ್ವಂ ತನುತೇ ನರಾಣಾಂ । ಜಯಂರಣೇ ವಿದ್ರುಮಹೇಮರಕ್ತವಸ್ತ್ರಾದಿಲಾಭಂ ಪ್ರಿಯಸಾಹಸತ್ವಂ ।।೭೪।।ತಾ।। ದಶಾಧಿಪತಿಯಾದ ಅಂಗಾರಕನು ಪೂರ್ಣ ಬಲಿಷ್ಠನಾಗಿದ್ದರೆ ಸೇನಾಪತಿತ್ವ, ಯುದ್ಧದಲ್ಲಿ ವಿಜಯ, ಪ್ರವಾಳ, ಸುವರ್ಣ, ರಕ್ತವಸ್ತ್ರ ಮತ್ತು ಅಂಗಾರಕನಿಗೆ ಹೇಳಲ್ಪಟ್ಟ ಕೆಂಪುವಸ್ತ್ರ, ಸರ್ವರಲ್ಲಿ ಪ್ರಿಯತ್ವ, ಸಾಹಸ ಕರ್ಮಗಳನ್ನು ಮಾಡುವಿಕೆ ಈ ಮೂಲದಿಂದ ಧನಾದಿ ಪ್ರಯೋಜನವನ್ನು ಕೊಡುತ್ತಾನೆ.

## ಮಧ್ಯಬಲ ಕುಜದಶಾಫಲಂ

ಶ್ಲೋಕ।। ದಶಾಪತಿರ್ಮಧ್ಯಬಲೋಮಹೀಜಃ ಕುಲಾನುಮಾನೇನಧನಂದದಾತಿ। ರಾಜಾಧಿಕಾರೋಪ್ಯಥತತ್ಪರತ್ವಂ ತೇಜಸ್ವಿತಾಂಕಾಂತಿ ಬಲಾಭಿವೃದ್ಧಿಂ ।।೭೫।।ತಾ।। ದಶಾಧಿಪತಿಯಾದ ಅಂಗಾರಕನು ಮಧ್ಯ ಬಲಿಷ್ಠನಾಗಿದ್ದರೆ ಜಾತಕದ

ಜಾತ್ಯಾದಿಮಾನನಾಗಿ ಧನವನ್ನು ಕೊಡುತ್ತಾನೆ. ಅಂದರೆ ರಾಜಪುತ್ರನಾದರೆ ರಾಜ್ಯಾಧಿಕಾರವೇ ಆಗುತ್ತದೆ. ರಾಜಪುತ್ರನಲ್ಲದಿದ್ದರೆ ರಾಜಮೂಲದಿಂದ ಅಧಿಕಾರವನ್ನು ಮಾಡಿ ತನ್ಮೂಲಕ ಧನಲಾಭವನ್ನು ತೇಜಸ್ವಿಯಾಗಿಯೂ, ಕಾಂತಿವಂತನಾಗಿಯೂ ಇರುವಂತೆ ಬಲಾಭಿವೃದ್ಧಿಯನ್ನುಂಟುಮಾಡುತ್ತಾನೆ.

## ಅಲ್ಪಬಲ ಕುಜದಶಾಫಲಂ

ಶ್ಲೋಕ|| ದಶಾಪತಿಸ್ಸ್ವಲ್ಪಬಲೋಮಹೀಜೋ ದದಾತಿಪಿತ್ತೋಷ್ಣ ಋಜಂ ಶರೀರೇ । ರಿಪೋರ್ಭಯಂ ಬುಧನಮನ್ಯತೋಸೃಕ್‌ಸ್ರವಂಚವೈರಂ ಸ್ವಜನೈಶ್ಚ ಶಶ್ವತ್ ||೭೬||ತಾ|| ದಶಾಧಿಪತಿಯಾದ ಕುಜನು ಅಲ್ಪ ಬಲವುಳ್ಳವನಾಗಿದ್ದರೆ ಪಿತ್ತ-ಉಷ್ಣ ರೋಗವನ್ನು ಕೊಡುತ್ತಾನೆ. ಶತ್ರುಭಯ, ಬಂಧನ, ರಕ್ತವಾಂತಿ, ವೈರ, ಸ್ವಜನರಲ್ಲಿ ವಿರೋಧ ಇವುಗಳನ್ನು ಕೊಡುತ್ತಾನೆ.

## ನಷ್ಟಬಲ ಕುಜದಶಾಫಲಂ

ಶ್ಲೋಕ|| ದಶಾಪತಿರ್ನಷ್ಟಬಲೋ ಮಹೀಜೋ ವಿವಾದಮಗ್ರಂಜನಯೇದ್ದ್ರಣಂವಾ । ಚೋರಾದ್ಭಯಂ ರಕ್ತರುಜಂ ಜ್ವರಂಚವಿಪತ್ತಿಮನ್ಯಸ್ವಹೃತಿಂಚಖರ್ಜೂಂ ||೭೭||ತಾ|| ದಶಾಧಿಪತಿಯಾದ ಕುಜನು ಬಲಹೀನನಾಗಿದ್ದರೆ ಕ್ರೂರವಾದ ವಿವಾದ, ಅಥವಾ ಯುದ್ಧ, ಚೋರರಿಂದ ಭಯ, ರಕ್ತರೋಗ, ಜ್ವರ, ವಿಪತ್ತು ಅನ್ಯರಿಂದ ಧನಾಪಹರಣ, ತುರಿ, ಖಜ್ಜಿ ಮೊದಲಾದ ರೋಗಗಳನ್ನು ಕೊಡುತ್ತಾನೆ.

## ತ್ರಿಷಡಾಯಗತ ಕುಜದಶಾಫಲಂ

ಶ್ಲೋಕ|| ತ್ರಿಷಡಾಯಗತೋಭೌಮೋ ನಷ್ಟವೀರ್ಯೋಶುಭಾರ್ಧನಃ। ಮಧ್ಯೋಹೀನಃ ಶುಭೋಮಧ್ಯಃ ಶುಭೋತ್ಯಂತಶುಭಾವಹಃ ||೭೮||ತಾ|| ಅಂಗಾರಕನು ೩-೬-೧೦-೧೧ ರಲ್ಲಿದ್ದು ನಷ್ಟವೀರ್ಯನಾಗಿದ್ದರೆ ಅರ್ಧ ಶುಭ ಫಲವನ್ನೂ, ಹೀನಬಲನಾಗಿದ್ದರೆ ಮಧ್ಯಮ ಫಲವನ್ನೂ, ಮಧ್ಯ ಬಲಿಷ್ಠನಾಗಿದ್ದರೆ ಶುಭಫಲವನ್ನೂ ಶುಭಫಲ ಪ್ರದಾಯಕನಾಗಿದ್ದರೆ ಅಂತ್ಯದ ಶುಭ ಫಲವನ್ನೂ ಕೊಡುತ್ತಾನೆ. ಇತಿ, ಕುಜದಶಾಫಲಂ.

## ಬುಧ ಮಹಾದಶಾಫಲಂ

ಮೂಲ|| ಬೌಧ್ಯಾಂದೌತ್ಯಸುಹೃದ್ಗುರುದ್ವಿಜಧನಂ ವಿದ್ವತ್ಪ್ರಶಂಸಾಯಶೋ ।
ಯುಕ್ತಿದ್ರವ್ಯಸುವರ್ಣವೇಸರ ಮಹೀಸೌಭಾಗ್ಯಸೌಖ್ಯಾಪ್ತಯಃ ||
ಹಾಸ್ಯೋಪಾಸನ ಕೌಶಲಂ ಮತಿಚಯೋ ಧರ್ಮಕ್ರಿಯಾಸಿದ್ಧಯಃ ||
ಪಾರುಷ್ಯಶ್ರಮ ಬಂಧಮಾನಸಶುಚಃ ಪೀಡಾಚ ಧಾತುತ್ರಯಾತ್ ||

ಟೀಕು।। ಬುಧದಶಾಫಲ ಹೇಳಲ್ಪಡುತ್ತೆ. ಬೌಧ್ಯಾಂ-ಬುಧಮಹಾದಶೆಯಲ್ಲಿ ದೌತ್ಯಸುಹೃದ್ಗುರುದ್ವಿಜಧನಂ-ದೌತ್ಯಾಂ-ಸೇವಕಾದಿಗಳಿಂದ, ಸುಹೃತ್-ಮಿತ್ರ, ಗುರು-ಗುರುಗಳು, ದ್ವಿಜ-ಬ್ರಾಹ್ಮಣ ಮೂಲವಾಗಿ, ಧನಂ-ದ್ರವ್ಯವು, ವಿದ್ವತ್ಪ್ರಶಂಸಾಯಶಃ-ಪಂಡಿತ ಜನರು ಸ್ತುತಿಸುವುದರಿಂದ ಯಶಸ್ಸು, ಯುಕ್ತಿ ದ್ರವ್ಯ-ಯುಕ್ತಿಯಿಂದ ದ್ರವ್ಯಲಾಭ, ಸುವರ್ಣ-ಬಂಗಾರ, *ವೇಸರ-ಅಶ್ವವನ್ನು, ಮಹೀ-ಭೂಮಿಯನ್ನು, ಸೌಭಾಗ್ಯ-ಸೌಖ್ಯ, ಸೌಭಾಗ್ಯ-ಸರ್ವಜನ ಪ್ರೀತಿ, ಸೌಖ್ಯ-ಸೌಖ್ಯದಿಂದಲೂ, ಆಪ್ತಯಃ-ಲಾಭಪ್ರಾಪ್ತಿಯಾಗುತ್ತದೆ. ಹಾಸ್ಯೋಪಾಶನ ಕೌಶಲಂ-ಹಾಸ್ಯ- ಪರಿಹಾಸನ-ಆರಾಧನೆಯಿಂದ ದಾನ, ಕೌಶಲಂ-ನಿಪುಣತ್ವ ದಿಂದಲೂ, ಮತಿಚಯಃ- ಬುದ್ಧಿ ಚತುರತೆಯು, ಧರ್ಮಕ್ರಿಯಾ ಸಿದ್ಧಯಃ-ಧರ್ಮಕಾರ್ಯ ಸಿದ್ಧಿಯು, ಈ ಫಲಗಳನ್ನು ಬುಧನು ತನ್ನ ಶುಭದಶೆಯಲ್ಲಿ ಕೊಡುತ್ತಾನೆ. ಅಶುಭದಶೆಯಲ್ಲಿ, ಪಾರುಷ್ಯಶ್ರಮ ಬಂಧಮಾನಸ ಶುಚಃ-ಪಾರುಷ್ಯ- ವಾಕ್ಕಠಿನತ್ವದಿಂದ, ಶ್ರಮ-ಅಸಾಧ್ಯ ಕೆಲಸವನ್ನು ಮಾಡಿದ ಶ್ರಮದಿಂದ, (ಖೇದದಿಂದ) ಬಂಧ-ಕಟ್ಟುವಿಕೆ ಮೊದಲಾದ ಬಂಧನದಿಂದ, ಮಾನಸಶುಚಃ-ಮನೋರೋಗದಿಂದಲೂ, ಧಾತುತ್ರಯಾತ್-ವಾತ-ಪಿತ್ತ-ಶ್ಲೇಷ್ಮ ಮೊದಲಾದವುಗಳ ಮೂಲವಾಗಿ ಹುಟ್ಟಿದ, ಪೀಡಾಚ-ವ್ಯಾಧಿಯಿಂದಲೂ ಈ ಮೇಲೆ ಹೇಳಲ್ಪಟ್ಟ ಅಶುಭಫಲ ಕೊಡುತ್ತಾನೆ, ಮಿಶ್ರದಶೆಯಲ್ಲಿ ಮಿಶ್ರಫಲ ಉಂಟಾಗುವುದು. ಈ ಅರ್ಥಕ್ಕೆ ಗರ್ಗಸಂಹಿತೆಯಲ್ಲಿ ।।ಶ್ಲೋಕ।। ಸೌಮ್ಯದಶಾಯಾಂ ಕುರುತೇ ಬಂಧನದೋಷಾಂಶ್ಚ ಶತ್ರುಗೃಹೇ । ನೀಚದಶಾಯಾಮಪಿಕುಷ್ಠಾದಿರೋಗ ಮಷ್ಟಮಗತಾಯಾಂ ।।೭೯।। ಸ್ವೋಚ್ಚದಶಾಯಾಂ ರಾಜ್ಯಂ ಮಿತ್ರಗೃಹೇ ಧಾನ್ಯ ಮುಕ್ತಾದೀ೯ । ಸ್ವಕ್ಷೇತ್ರಗೋಪಿಸೌಮ್ಯಃ ಕರೋತಿ ಧನಧಾನ್ಯಸಂಪತ್ತಿಂ ।।೮೦।। ಶತ್ರುಕ್ಷೇತ್ರಸ್ಥಿತನಾದ ಬುಧದಶೆಯಲ್ಲಿ ಬಂಧನ, ಅವಮಾನ ಮೊದಲಾದ ದೋಷಗಳು ನೀಚನಾದ ಬುಧದಶೆಯಲ್ಲಿಯೂ, ಅಷ್ಟಮದಲ್ಲಿದ್ದ ಬುಧದಶೆಯಲ್ಲಿಯೂ ಕುಷ್ಠ, ಚಿಬ್ಬು, ದದ್ರುವಿಕಾರ ಮೊದಲಾದ ರೋಗಗಳನ್ನೂ, ಬುಧನು ಉಚ್ಚನಾಗಿದ್ದರೆ ರಾಜ್ಯ ಪದವಿಯನ್ನೂ, ಮಿತ್ರಕ್ಷೇತ್ರದಲ್ಲಿದ್ದ ದಶೆಯಲ್ಲಿ ಧನ-ಧಾನ್ಯ, ಮುಕ್ತಾ, ಪ್ರವಾಳ, ಸುವರ್ಣ ರಜತಾದಿ ಲಾಭಗಳು, ಈ ಮೇಲೆ ಹೇಳಲ್ಪಟ್ಟ ಫಲಗಳನ್ನು ಸ್ಥಾನಾನುಗುಣವಾಗಿ ಕೊಡುತ್ತಾನೆ. ಈ ಅರ್ಥದಲ್ಲಿ ಬಲಾಬಲರೂಪವಾಗಿ ವಿಭಾಗಿಸಿ, ಫಲತಾರತಮ್ಯವನ್ನು ಹೇಳಿರುತ್ತಾರೆ. ಉದಾಹರಣೆ:- ಗ್ರಂಥಾಂತರೆ-

## ಪೂರ್ಣಬಲ ಬುಧದಶಾಫಲಂ

ಶ್ಲೋಕ।। ದಶಾಧಿಪತಿಃ ಪೂರ್ಣಬಲೋ ಬುಧಶ್ಚೇದ್ಯಶೋಭಿವೃದ್ಧಿಂ ಗಣಿತಾ ತ್ಸುಶೀಲಾತ್ । ತನೋತಿಸೇವಾಂಸಫಲಾಂ ನೃಪಾದೇರ್ದೂತ್ಯಂಚ ವೈದುಷ್ಯಗಣೋ

* ವೇಸರವೆಂದರೆ ಹೇಸರಕತ್ತೆ ಎಂದು ಅರ್ಥ.

ದಯಂಚ ॥೮೧॥ತಾ॥ ದಶಾಧಿಪತಿಯಾದ ಬುಧನು ಪೂರ್ಣಬಲಿಷ್ಠನಾಗಿದ್ದರೆ ಯಶಸ್ಸು, ವೃದ್ಧಿ, ಗಣಿತ ಮತ್ತು ಉತ್ತಮ ನಡತೆಯಿಂದ ಯಶೋವೃದ್ಧಿ, ಅನೇಕರು ಸೇವೆ ಮಾಡುವಿಕೆ, ರಾಜಮಂತ್ರಿತ್ವ ಅಥವಾ ರಾಜ್ಯಪ್ರಾಪ್ತಿ ಸಹ ಉಂಟಾಗುತ್ತದೆ.

## ಮಧ್ಯಬಲ ಬುಧದಶಾಫಲಂ

ಶ್ಲೋಕ॥ ದಶಾಪತಿರ್ಮಧ್ಯಬಲೋ ಬುಧಶ್ಚೇದ್ಗುರೋಃ ಸುಹೃದ್ಯೋ ್ಲಿಪಿ ಕಾವ್ಯಶಿಲ್ಪೈಃ । ಧನಾಪ್ತಿದಾಯಿ ಸುತಮಿತ್ರಬಂಧು ಸಮಾಗಮಾನ್ಮಧ್ಯಮ ಮೇವ ಸೌಖ್ಯಂ ॥೮೨॥ತಾ॥ ದಶಾಧಿಪತಿಯಾದ ಬುಧನು ಮಧ್ಯಬಲಿಷ್ಠನಾಗಿದ್ದರೆ ಅವನ ದಶೆಯಲ್ಲಿ ಗುರುಗಳು, ಸ್ನೇಹಿತರು, ಲೇಖಿತತ್ವ ಕಾವ್ಯವನ್ನು ರಚಿಸುವಿಕೆ, ಶಿಲ್ಪವಿದ್ಯೆ ಇವುಗಳಿಂದ ಧನಪ್ರಾಪ್ತಿಯಾಗುತ್ತದೆ. ಪುತ್ರರು, ಸ್ನೇಹಿತರು, ಬಂಧುಗಳ ಸಮಾಗಮವನ್ನು ಮಧ್ಯಮವಾಗಿ ಕೊಡುತ್ತಾನೆ.

## ಅಲ್ಪಬಲ ಬುಧದಶಾಫಲಂ

ಶ್ಲೋಕ॥ ದಶಾತೌ ಸ್ವಲ್ಪಬಲೋ ಬುಧೇಸ್ಯಾನ್ಮನಸ್ಯನಾಶಃ ಸ್ವಜನಾಪವಾದಃ। ಅಕಾರ್ಯಕೋಪಸ್ಸಲನಾದ್ಯರಿಷ್ಟಂ ಧನವ್ಯಯಂ ರೋಗಭಯಂಚ ವಿಂದ್ಯಾತ್ ॥೮೩॥ ತಾ॥ ದಶಾಧಿಪತಿಯಾದ ಬುಧನು ಅಲ್ಪಬಲವುಳ್ಳವನಾಗಿದ್ದರೆ, ಅವನ ದಶಾಕಾಲದಲ್ಲಿ ಮಾನಹಾನಿ, ಸ್ವಜನರಲ್ಲಿ ಅಪವಾದ, ಮಾಡಬಾರದ ಕೆಲಸ ಮಾಡುವಿಕೆ, ಕೋಪ, ಅರಿಷ್ಟ, ಧನವ್ಯಯ, ರೋಗಭಯ ಈ ಮೊದಲಾದ ಫಲಗಳನ್ನು ಕೊಡುತ್ತಾನೆ.

## ನಷ್ಟಬಲ ಬುಧದಶಾಫಲಂ

ಶ್ಲೋಕ॥ ದಶಾಪತೌಹೀನಬಲೇ ಬುಧೆಸ್ಯಾತ್ಸ್ವಬುದ್ಧಿದೋಷೋವಧಬಂಧ ಭೀತಿಃ। ದೂರೇಗತಿರ್ವಾತಕಫಾಮಯಾರ್ತಿರ್ನಿಖಾತವಿತ್ತಸ್ಯಚನಾಪಿಲಾಭಃ ॥೮೪॥ ತಾ॥ ದಶಾಧಿಪತಿಯಾದ ಬುಧನು ಹೀನಬಲನಾಗಿದ್ದರೆ, ತನ್ನ ಬುದ್ಧಿಯಿಂದ ವಧ ಬಂಧನಭೀತಿ, ದೂರದೇಶಸಂಚಾರ, ವಾತಕಫರೋಗ, ದ್ರವ್ಯಹಾನಿ ಈ ಮೊದಲಾದ ದುಷ್ಫಲಗಳುಂಟಾಗುತ್ತವೆ.

## ಷಡಷ್ಟಾಂತ್ಯೇತರಸ್ಥ ಬುಧದಶಾಫಲಂ

ಶ್ಲೋಕ॥ ಷಡಷ್ಟಾಂತ್ಯೇತರರ್ಕ್ಷಸ್ಥೋ ನಷ್ಟಜ್ಞೋರ್ಧಶುಭಪ್ರದಃ। ಮಧ್ಯೋಹೀನಃ ಶುಭೋಮಧ್ಯಃ ಶುಭೋತ್ಯಂತ ಶುಭಾವಹಃ ॥೮೫॥ತಾ॥ ಬುಧನು ೬-೮-೧೨ನೇ

ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ ಇದ್ದರೆ, ನಷ್ಟಬಲವಿದ್ದ ದಶೆಯಾದರೆ ಅರ್ಧ ಶುಭ, ಹೀನಬಲದಶೆಯಾದರೆ ಮಧ್ಯಮಫಲ, ಮಧ್ಯಮ ಬಲಿಷ್ಠನಾದರೆ ಶುಭ, ಶುಭಫಲ ಕೊಡತಕ್ಕವನಾದರೆ ಅತ್ಯಂತ ಶುಭಫಲವನ್ನು ಕೊಡುತ್ತಾನೆ. ಇತಿ ಬುಧದಶಾಫಲಂ.

## ಗುರು ಮಹಾದಶಾಫಲಂ

ಮೂಲ॥ ಜೈವ್ಯಾಂಮಾನಗುಣೋದಯೋ ಮತಿಚಯಃ ಕಾಂತಿಃ ಪ್ರತಾಪೋನ್ನತಿ । ರ್ಮಾಹಾತ್ಮ್ಯೋದ್ಯಮಮಂತ್ರ ನೀತಿನೃಪತಿ ಸ್ವಾಧ್ಯಾಯ ಮಂತ್ರೈರ್ಧನಂ ॥ ಹೇಮಾಶ್ವಾತ್ಮಜ ಕುಂಜರಾಂಬರಚಯಃ ಪ್ರೀತಿಶ್ಚಸದ್ಭೂಮಿಪೈಃ । ಸೂಕ್ಷ್ಮೋಹಾಸಹನಾಶ್ರಮಃ ಶ್ರವಣ ರುಗ್ವೈರಂ ವಿಧರ್ಮಾಶ್ರಿತೈಃ ॥೧೬॥

ಅವತಾರಿಕೆ ॥ ಗುರುದಶಾಫಲ ಹೇಳಲ್ಪಡುತ್ತೆ. ಜೈವ್ಯಾಂ-ಗುರುದಶೆಯಲ್ಲಿ, ಮಾನಗುಣೋದಯಃ-ಮಾನ-ಸನ್ಮಾನ,ಗುಣಃ-ವೇದಾಧ್ಯಯನ ಮಾಡುವುದರಿಂದುಂಟಾದ ಸಾತ್ವಿಕಾದಿ ಗುಣಗಳಿಂದ, ಉದಯಃ-ಉದ್ಭವಿಸುವಿಕೆ (ಕಾಣುವಿಕೆ), ಮತಿಚಯಃ-ಬುದ್ದಿ ಅಭಿವೃದ್ಧಿಯು, ಕಾಂತಿಃ-ತೇಜಸ್ಸು, ಪ್ರತಾಪೋನ್ನತಿಃ-ಶತ್ರುಗಳಲ್ಲಿ ಪ್ರತಾಪದಿಂದ ಉನ್ನತತ್ವವು, ಮಹಾತ್ಮ್ಯೋದ್ಯಯ ಮಂತ್ರ ನೀತನೃಪತಿ ಸ್ವಾಧ್ಯಾಯ ಮಂತ್ರೈಃ-ಮಹಾತ್ಮ್ಯ-ಸದ್ವೃತ್ತಿಯಿಂದ ವಾಕ್ಸಿದ್ಧಿ ಮೊದಲಾದ ಮಹಾತ್ಮ್ಯಯಿಂದ, ಉದ್ಯಮ-ಮಹಾಕಾರ್ಯ ಪ್ರಾರಂಭೋದ್ಯೋಗ, ಮಂತ್ರ-ಮಂತ್ರಾಲೋಚನೆ, ನೀತಿ-ನೀತಿಶಾಸ್ತ್ರ, ಸಾಮಾನ್ಯ ನೀತಿ, ರಾಜನೀತಿ, ಅಪದ್ಧರ್ಮ ಮೊದಲಾದವುಗಳು, ನೃಪತಿ-ರಾಜಸೇವಾ, ಸ್ವಾಧ್ಯಾಯ-ವೇದಪಾಠ, ಮಂತ್ರ-ಮಂತ್ರಜಪ ಪುರಶ್ಚರಣ ಮೊದಲಾದವುಗಳ ಮೂಲಕವಾಗಿ, ಧನಂ-ದ್ರವ್ಯಪ್ರಾಪ್ತಿಯಾಗುವುದು. ಹೇಮಾಶ್ವಾತ್ಮಜ ಕುಂಜರಾಂಬರಚಯಃ-ಹೇಮ-ಚಿನ್ನ, ಸ್ವರ್ಣಂಸುವರ್ಣಕನಕಂ ಹಿರಣ್ಯಂಹೇಮ ಹಾಟಕ, ಮಿತ್ಯಮರಃ॥ ಅಶ್ವ-ಕುದುರೆ, ಆತ್ಮಜಃ-ಪುತ್ರರು, ಕುಂಜರ-ಗಜಗಳು ಕುಂಜರೋವಾರಣಃಕರೀ, ಇತ್ಯಮರಃ॥ ಅಂಬರ-ದುಕೂಲವಸ್ತ್ರ, ಪಟ್ಟೆವಸ್ತ್ರಗಳು ಇವುಗಳ ಚಯಃ-ಗುಂಪುಗಳ ಪ್ರಾಪ್ತಿಯು, ಸದ್ಭೂಮಿಪೈಃ-ಸಚ್ಚರಿತ್ರರಾದ ಭೂಪತಿಗಳ, ಪ್ರೀತಿಶ್ಚ-ಸ್ನೇಹವು, ಈ ಫಲಗಳು ಬೃಹಸ್ಪತಿಯ ಶುಭದಶೆಯಲ್ಲಿ ಉಂಟಾಗುವುದು. ಆ ಶುಭದಶೆಯಲ್ಲಿ-ಸೂಕ್ಷ್ಮೋಹಾಸನಾಶ್ರಮಃ-ಸೂಕ್ಷ್ಮ ಸೂಕ್ಷ್ಮವಾದ, ಉಹಾಸಹನ-ತಿಳಿಯಲಸಾಧ್ಯವಾದ ತರ್ಕಶಾಸ್ತ್ರದಿಂದ, ಶ್ರಮಃ ಆಯಾಸವನ್ನುಂಟು ಮಾಡುತ್ತಾನೆ. ಕೆಲವರು-ಸೂಕ್ಷ್ಮೋಹಾಸನ ಶ್ರಮಃ-ಸೂಕ್ಷ್ಮವಾಗಿ ತಿಳಿದುಕೊಂಡದ್ದ

ರಿಂದುಂಟಾದ ಶ್ರಮವೆಂದು ಅರ್ಥಮಾಡಿದರು. ಶ್ರವಣರುಕ್-ಕರ್ಣರೋಗವನ್ನು, ವಿಧರ್ಮಾಶ್ರಿತ್ಯೈ-ಧರ್ಮಬಾಹ್ಯವಾದ ಕೃತ್ಯಗಳನ್ನು ಮಾಡುವುದರಿಂದ, ವೈರಂ-ವಿರೋಧವನ್ನು ಕೊಡುವನು. ಶುಭಾಶುಭ ಮಿಶ್ರಫಲವನ್ನು ಮಿಶ್ರದಶೆಯಲ್ಲಿ ಕೊಡುತ್ತಾನೆ. ಈ ವಿಷಯದಲ್ಲಿ ಗರ್ಗಸಂಹಿತೆಯಲ್ಲಿ ॥ಶ್ಲೋಕ॥ ಜೀವೋಮಿಶ್ರದಶಾ ಯಾಂಕುರುತೇ ಪುರುಷಸ್ಯ ವಾಹನಾವಾಪ್ತಿಂ ಸ್ವೋಚ್ಚಗೃಹೇ ರಾಜ್ಯಾಧಿಕಫಲಂ ಮೇತದಸಂಶಯಂ ಪುಂಸಾಂ ॥೮೬॥ ಸ್ವಕ್ಷೇತ್ರಗಶ್ಚ ಕುರುತೇ ಭೂಷಣಲಾಭಂಚ ವಾಹನಾವಾಪ್ತಿಂ ॥ ನೀಚದಶಾಯಾಂ ಬಂಧಂ ಶತ್ರುಗೃಹೇ ನೃಪಕಲಾದ್ದೋಷಂ ॥೮೭॥ ಉದರಾಮಯಾದಿರೋಗಾ ನಿಧನ ದಶಾಯಾಂ ಕರೋತಿ ಪುರುಷಸ್ಯ॥೮೮॥ತಾ॥ ಗುರುವಿನ ಮಿತ್ರಕ್ಷೇತ್ರ ದಶೆಯಲ್ಲಿ ವಾಹನಪ್ರಾಪ್ತಿ, ಉಚ್ಚ ಕ್ಷೇತ್ರದಲ್ಲಿದ್ದರೆ ಸಂಶಯವಿಲ್ಲದೆ ರಾಜ್ಯಾಧಿಕಾರವಾಗಲಿ, ರಾಜಮಾನಾಧಿಕಾರವಾಗಲಿ ಪ್ರಾಪ್ತಿಯಾಗುತ್ತದೆ. ಸ್ವಕ್ಷೇತ್ರದಲ್ಲಿದ್ದರೆ ಆ ದಶೆಯಲ್ಲಿ ಭೂಷಣಲಾಭ, ವಾಹನ ಪ್ರಾಪ್ತಿ, ಗುರು ನೀಚನಾಗಿದ್ದ ದಶೆಯಲ್ಲಿ ಬಂಧನ, ಶತ್ರು ಕ್ಷೇತ್ರದಲ್ಲಿದ್ದ ದಶೆಯಲ್ಲಿ ರಾಜಭೀತಿ, ರಾಜಕೋಪದಿಂದ ದಂಡ, ಗುರು ಅಷ್ಟಮದಲ್ಲಿದ್ದ ದಶೆಯಲ್ಲಿ ಉದರಾಮಯಾದಿ ರೋಗ, ಜಲೋದರ, ಮಹೋದರ, ಹೊಟ್ಟೆಶೂಲೆ, ಗುಲ್ಮರೋಗ ಮೊದಲಾದದ್ದನ್ನು ಕೊಡುತ್ತಾನೆ. ಈ ವಿಷಯದಲ್ಲಿ ಬಲಾಬಲ ವಿಚಾರದಿಂದ ಗ್ರಂಥಾಂತರದಲ್ಲಿ ಹೇಳಿರುವುದೇನೆಂದರೆ :-

## ಪೂರ್ಣಬಲಯುಕ್ತ ಗುರುದಶಾಫಲಂ

ಶ್ಲೋಕ॥ ಗುರೋರ್ದಶಾ ಪೂರ್ಣಬಲಾಸದತ್ತೇಮಾನೋದಯಂ ರಾಜಸುಹೃದ್ಗುರುಭ್ಯಃ ॥ ಕೀರ್ತ್ಯರ್ಥಲಾಭೋಪಚಯಂ ಸುಖಾನಿರಾಜ್ಯಂ ಸುತಾಪ್ತಿಂ ರಿಪುರೋಗನಾಶನಂ ॥೮೯॥ತಾ॥ ಪೂರ್ಣಬಲಿಷ್ಠನಾದ ಗುರುದಶೆಯಲ್ಲಿ ರಾಜರಿಂದ-ಸ್ನೇಹಿತರಿಂದ-ಗುರುಗಳಿಂದ-ಮರ್ಯಾದೆ ಬರುವಿಕೆ, ಕೀರ್ತಿಲಾ, ಅರ್ಥಲಾಭ, ಸುಖಾಭಿವೃದ್ಧಿ, ರಾಜ್ಯಪ್ರಾಪ್ತಿ, ಪುತ್ರಪ್ರಾಪ್ತಿ, ಶತ್ರುನಾಶ, ರೋಗನಾಶ ಸಹ ಉಂಟಾಗುತ್ತೆ.

## ಮಧ್ಯಬಲಯುಕ್ತ ಗುರುದಶಾಫಲಂ

ಶ್ಲೋಕ॥ ಗುರೋರ್ದಶಾ ಮಧ್ಯಬಲಸ್ಯ ಧರ್ಮೇಮತಿಂ ಸವಿತ್ತಂ ನೃಪಮಂತ್ರಿ ವರ್ಗ್ಯೈ। ತನೋತಿ ಮಾನಾರ್ಥ ಸುಖಾದಿಲಾಭಂ ಸಿದ್ಧಿಂಸುದುತ್ಸಾಹ ಬಲಾತಿರೇಕಾಂ ॥೯೦॥ತಾ॥ ಮಧ್ಯಬಲಿಷ್ಠನಾದ ಗುರುದಶೆಯಲ್ಲಿ ಧರ್ಮದಲ್ಲಿ, ಬುದ್ಧಿ, ರಾಜ-ಮಂತ್ರಿ ಶ್ರೇಷ್ಠರ ಸ್ನೇಹ, ಮಾನ-ಅರ್ಥ-ಸುಖಾದಿ ಲಾಭ, ಕಾರ್ಯಸಿದ್ಧಿ, ಸದುತ್ಸಾಹ, ಬಲಾತಿರೇಕ ಈ ಶುಭಫಲಗಳನ್ನು ಮಧ್ಯಮವಾಗಿ ಕೊಡುತ್ತಾನೆ.

## ಅಲ್ಪಬಲಯುಕ್ತ ಗುರುದಶಾಫಲಂ

ಶ್ಲೋಕ।। ದಶಾಗುರೋರಲ್ಪ ಬಲಸ್ಯದತ್ತೇ ರೋಗಂದರಿದ್ರತ್ವ ಮಥಾರಿಭೀತಿಂ। ಕರ್ಣಾಮಯಂ ಧರ್ಮಧನಪ್ರಣಾಶಂ ವೈರಾಗ್ಯಮರ್ಥಂಚ ಗುಣಂನ ಕಿಂಚಿತ್।।೯೧।। ತಾ।। ಅಲ್ಪಬಲವಿರುವ ಗುರುದಶೆಯಲ್ಲಿ ರೋಗ, ದರಿದ್ರತ್ವ, ಶತ್ರುಭೀತಿ, ಕರ್ಣ್ಣರೋಗ, ಧರ್ಮ-ಧನ-ಧಾನ್ಯ ನಾಶ, ವೈರಾಗ್ಯ, ಗುಣನಾಶ ಸಹ ಉಂಟಾಗುತ್ತದೆ.

## ನಷ್ಟಬಲ ಗುರುದಶಾಫಲಂ

ಶ್ಲೋಕ।। ಗುರೋರ್ದಶಾನಷ್ಟ ಬಲಸ್ಯಪುಂಸಾರಂ ದದಾತಿದುಃಖಾನಿ ರುಜಂಕ ಫಾರ್ತಿಂ। ಕಲತ್ರಪುತ್ರ ಸ್ವಜನಾರಿಭೀತಿಂ ಧರ್ಮಾರ್ಥನಾಶಂ ತನುಪೀಡನಂ ।।ತಾ।। ನಷ್ಟಬಲ ಗುರುದಶೆಯಲ್ಲಿ ದುಃಖ, ರೋಗ, ಕಫರೋಗ, ಕಳತ್ರಪುತ್ರ ಸ್ವಜನರಿಂದಲೂ ಶತ್ರುಗಳಿಂದಲೂ ಭೀತಿ, ಧರ್ಮಾರ್ಥನಾಶ, ಶರೀರಕ್ಕೆ ರೋಗ ಪೀಡೆ ಸಹಾ ಉಂಟಾಗುತ್ತದೆ.

## ಷಡಷ್ಟರಿಃಫೇತರಸ್ಥಿತ ಗುರುದಶಾಫಲಂ

ಶ್ಲೋಕ।। ಷಡಷ್ಟರಿಃ ಫೇತರಗೋ ಗುರುರ್ನಿಂದ್ಯೋರ್ಥ ಸತ್ಫಲಃ। ಮಧ್ಯೋ ಹೀನಃ ಶುಭೋಮಧ್ಯಃ ಶುಭೋತ್ಕಂತ ಶುಭಾವಃ ।।೯೩।।ತಾ।। ಬೃಹಸ್ಪತಿಯು ಲಗ್ನದಿಂದ ೬-೮-೧೨ನೆ ಸ್ಥಾನಗಳಿಗೆ ವಿನಾ ಉಳಿದ ಸ್ಥಾನಗಳಲ್ಲಿದ್ದು ಬಲವಿಲ್ಲದಿದ್ದರೆ ಅರ್ಧಶುಭವು, ಹೀನಬಲವಾದರೆ ಮಧ್ಯಫಲವು, ಮಧ್ಯ ಬಲಿಷ್ಠನಾದರೆ ಶುಭಫಲವು,ಶುಭಫಲ ಕೊಡತಕ್ಕವನಾದರೆ ಅತ್ಯಂತ ಶುಭಫಲವನ್ನು ಕೊಡುತ್ತಾನೆ.

## ಇತಿ ಗುರುದಶಾಫಲಂ

## ಶುಕ್ರದಶಾಫಲಂ

ಮೂಲ।। ಶೌಕ್ರ್ಯಾಂಗೀತರತಿ ಪ್ರಮೋದಸುರಭಿದ್ರವ್ಯಾನ್ನ ಪಾನಾಂಬರ । ಸ್ತ್ರೀ ರತ್ನದ್ಯುತಿ ಮನ್ಮಥೋಪಕರಣ ಜ್ಞಾನೇಷ್ಟ ಮಿತ್ರಾಗಮಾಃ । ಕೌಶಲ್ಯಂ ಕ್ರಯವಿಕ್ರಯೇ ಕೃಹಿನಿಧಿಪ್ರಾಪ್ತಿರ್ಧನಸ್ಯಾಗಮೋ । ಬೃಂದೋರ್ಧ್ವೇಶ ನಿಷಾದಧರ್ಮರಹಿತ್ಯೈ ವೈರಂಶುಚಃ ಸ್ನೇಹತಃ ।।೧೭।।

ಟೀಕು।। ಶುಕ್ರದಶೆಯ ಫಲ. ಶೌಕ್ರ್ಯಂ-ಶುಕ್ರಮಹಾದಶೆಯಲ್ಲಿ, ಗೀತ ರತಿಪ್ರಮೋದ ಸುರಭಿದ್ರವ್ಯಾನ್ನ ಪಾನಾಂಬರ ಸ್ತ್ರೀರತ್ನದ್ಯುತಿ ಮನ್ಮಥೋಪ ಕರಣ ಜ್ಞಾನೇಷ್ಟ ಮಿತ್ರಾಗಮಾಃ, ಗೀತರತಿ-ಸಂಗೀತ ಗಾನಾಸಕ್ತಿ, ಪ್ರಮೋದ-ಆನಂದವು,

ಸುರಭಿದ್ರವ್ಯ-ಸುಗಂಧದ್ರವ್ಯವೆಂದರೆ ಪರಿಮಳದ್ರವ್ಯ, ಗಂಧ-ಅತ್ತರು, ಪುಷ್ಪಸೌರಭ-ಸುಗಂಧತೈಲ ಮೊದಲಾದದ್ದು, ಅನ್ನ-ಮೃಷ್ಟಾನ್ನ, ಪಾನ-ಪಾನಪದಾರ್ಥ ವಿಶೇಷ, ಅಂಬರಂ-ಪಟ್ಟೇ ಪೀತಾಂಬರಾದಿ ಅನುಕೂಲ ವಸ್ತುಗಳು, ಸ್ತ್ರೀ-ಸ್ತ್ರೀಯರು, ರತ್ನ-ರತ್ನಾದಿ ಆಭರಣಗಳು, ದ್ಯುತಿ-ಕಾಂತಿ, ಮನ್ಮಥೋಪಕರಣ-ಕಾಮಭೋಗ ಸಾಧನಗಳಾದ ಪರ್ಯಂಕ, ಹಾಸಿಗೆ, ಬೀಸಣಿಗೆ, ಪಂಕ, ತಾಬೂಲ, ಗಂಧದ್ರವ್ಯ, ಅತ್ತರು, ಪರಿಮಳ, ಪುಷ್ಪಮಾಲಿಕಾದಿಗಳು, ಜ್ಞಾನ-ಜ್ಞಾನವು, ಇಷ್ಟ-ಬೇಕಾದ ನೆಂಟರುಗಳು, ಮಿತ್ರ-ಅಭಿವೃದ್ಧಿಯನ್ನು ಕೋರುವ ಮಿತ್ರರು, ಇವರುಗಳ, ಆಗಮಾಃ- ಲಾಭಾದಿಗಳು ಸಕಲ ವಿಷಯದಲ್ಲಿಯೂ, ಅನುಕೂಲವಾಗುವಿಕೆ, ಕ್ರಯವಿಕ್ರಯೇ-ತೆಗೆದುಕೊಳ್ಳುವಿಕೆ, ಕೊಡುವಿಕೆ, ಇವುಗಳಲ್ಲಿ ಕೌಶಲ್ಯಂ-ಕುಶಲತ್ವವೂ, ಕೃಷಿನಿಧಿಪ್ರಾಪ್ತಿಃ-ಕೃಷಿ-ಭೂಮಿ ಕೃಷಿ, ನಿಧಿ-ನಿಕ್ಷೇಪ, ಪ್ರಾಪ್ತಿ-ಲಾಭವುಂಟಾಗುವಿಕೆ, ಧನಸ್ಯ-ದ್ರವ್ಯದ, ಆಗಮಃ-ಬರುವಿಕೆ, ಈ ಫಲವನ್ನು ಶುಕ್ರನು ಶುಭದಶೆಯಲ್ಲಿ ಕೊಡುವನು. ಶುಕ್ರನ ಪಾಪದಶೆಯಲ್ಲಿ, ಬೃಂದೋರ್ವಿ, ಶನಿಷಾದಧರ್ಮರಹಿತ್ಯೈ-ಬೃಂದ-ಬಹು ಜನಗಳೊಂದಿಗೂ, ಊರ್ವೀಶ-ಭೂಪತಿಯೊಂದಿಗೂ, ನಿಷಾದ-ಜೀವಹಿಂಸೆ ಮಾಡುವುದರಿಂದ ಜೀವಿಸುವ ಕಿರಾತರೊಂದಿಗೂ, ಧರ್ಮರಹಿತ್ಯೈಃ-ಧರ್ಮಹೀನರೊಂದಿಗೂ, ವೈರಂ-ವಿರೋಧ ಉಂಟಾಗುವುದು. ಸ್ನೇಹಿತಃ-ಸ್ನೇಹದಲ್ಲಿ, ಶುಚಃ-ಶೋಕಪ್ರಾಪ್ತಿಯು, ಅಂದರೆ ಯಾರಲ್ಲಿ ಸ್ನೇಹ ಉಂಟಾಗುವುದೋ ಅವರಿಂದ ದುಃಖಪ್ರಾಪ್ತಿಯು, ಈ ವಿಧವಾದ ಫಲ ಪ್ರಾಪ್ತಿಯಾಗುವುದು. ಮಿಶ್ರದಶೆಯಲ್ಲಿ ಮಿಶ್ರಫಲ ಉಂಟಾಗುವುದು. ಈ ವಿಷಯದಲ್ಲಿ ಗರ್ಗಾಚಾರ್ಯರು ಹೇಳಿರುವುದೇನೆಂದರೆ-

ಶ್ಲೋಕ॥ ಪ್ರಾಪ್ತೋಮಿತ್ರ ಗ್ರಹಂಶುಕ್ರೋ ನಾರ್ಯವಾಪ್ತಿಂಕರೋತಿಚ। ಸ್ವೋಚ್ಚ ಗಸ್ಯದಶಾಯಾಂತು ರಾಜ್ಯಲಾಭಂ ಕರೋತ್ಯಸೌ ॥೯೪॥ ಸ್ವಕ್ಷೇತ್ರಗಸ್ಯಾಪಿಸದಾ ಸ್ತ್ರೀಲಾಭಂರತ್ನದಸ್ತಂಥಾ। ನೀಚಶತ್ರುಗೃಹೈಚೈವ ವ್ಯಾಧಿಬಂಧಂ ತಥೈವಚ ॥೯೫॥ ನಿಧನಸ್ಥೋಹಿಕುರುತೇ ವಿದೇಶಗಮನಂ ಧೃತಂ ॥ತಾ॥ ಮಿತ್ರಕ್ಷೇತ್ರದಲ್ಲಿದ್ದ ಶುಕ್ರದಶೆಯಲ್ಲಿ ಸ್ತ್ರೀಪ್ರಾಪ್ತಿಯೂ, ಉಚ್ಚನಾದ ಶುಕ್ರದಶೆಯಲ್ಲಿ ರಾಜ್ಯಪ್ರಾಪ್ತಿಯೂ, ಸ್ವಕ್ಷೇತ್ರದಲ್ಲಿರುವ ಶುಕ್ರದಶೆಯಲ್ಲಿ ಸ್ತ್ರೀಲಾಭ ರತ್ನ ಲಾಭವೂ, ನೀಚಕ್ಷೇತ್ರದಲ್ಲಿದ್ದ ದಶೆಯಲ್ಲಿ ವ್ಯಾಧಿಪ್ರಾಪ್ತಿ ಬಂಧನಪ್ರಾಪ್ತಿಯೂ ಸಹ ಉಂಟಾಗುತ್ತೆ. ಬಲವಿಭಾಗ ಮಾಡಿದ ಶುಕ್ರದಶಾಫಲವು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿರುವುದೇನೆಂದರೆ-

## ಪೂರ್ಣಬಲ ಶುಕ್ರದಶಾಫಲಂ

ಶ್ಲೋಕ।। ದಶಾಭೃಗೋಃ ಪೂರ್ಣಬಲಸ್ಯಸೌಖ್ಯಂ ಸ್ರಗ್ಗಂಧಹೇಮಾಂಬರ ಕಾಮಿನೀಭ್ಯಃ । ಹಯಾದಿಲಾಭಃ ಸುತಕೀರ್ತಿ ತೋಷಾ ನೈರುಜ್ಯಗಾಂಧರ್ವ ರತಿಃ ಪ್ರದೀಪ್ತಿಃ ।।೯೬।।ತಾ।। ಪೂರ್ಣಬಲಿಷ್ಠನಾದ ಶುಕ್ರದಶೆಯಲ್ಲಿ ಸೌಖ್ಯ, ಪುಷ್ಪಮಾಲಿಕಾದಿ ಗಂಧಾದಿ ಪ್ರಾಪ್ತಿಯೂ, ಹೇಮಾಂಬರ, ಸ್ತ್ರೀಯರಿಂದ ಪಟ್ಟೆ ಪೀತಾಂಬರ ಪ್ರಾಪ್ತಿ, ಅಶ್ವಲಾಭ, ಸುತಕೀರ್ತಿ ಸಂತೋಷ, ರೋಗ ರಹಿತವಾಗಿರುವುದು, ಮತ್ತು ಗಾಂಧರ್ವ ರತಿಫಲವು, ಗಾಂಧರ್ವವಿಧಿಯಂತೆ ಸ್ತ್ರೀ ಪ್ರಯೋಜನ ಹೊಂದುವಿಕೆ, ರತಿ ವಿಲಾಸವು ಉಂಟಾಗುತ್ತೆ.

## ಮಧ್ಯಬಲಯುಕ್ತ ಶುಕ್ರಫಲಂ

ಶ್ಲೋಕ।। ದಶಾಭೃಗೋರ್ಮಧ್ಯಬಲಸ್ಯದತ್ತೇ ವಾಣಿಜ್ಯತೋರ್ಥಾಗಮನಂ ಕೃಷೇಶ್ಚ। ಮಿಷ್ಟಾನ್ನಪಾನಾಂಬರ ಭೋಗಲಾಭಂ ಮಿತ್ರಾಂಶ್ಚಯೋಷಿತ್ಸುತಸೌಖ್ಯ ಲಾಭಂ ।।೯೭।।ತಾ।। ಮಧ್ಯಮಬಲಿಷ್ಠನಾದ ಶುಕ್ರದಶೆಯಲ್ಲಿ ವ್ಯಾಪಾರದಿಂದ ಲಾಭ, ಕೃಷಿ ಮೂಲಕವಾಗಿ ಲಾಭ, ಮೃಷ್ಟಾನ್ನ ಭೋಜನ, ಪಾನಾಂಬರ ಭೋಗಪ್ರಾಪ್ತಿ, ಮಿತ್ರರಿಂದಲೂ ಸ್ತ್ರೀಯರಿಂದಲೂ ಸೌಖ್ಯವನ್ನು ಕೊಡುತ್ತಾನೆ.

## ಅಲ್ಪಬಲಯುಕ್ತ ಶುಕ್ರದಶಾಫಲಂ

ಶ್ಲೋಕ।। ದಶಾಭೃಗೋರಲ್ಪಬಲಸ್ಯಧತ್ತೇ ಮತಿಭ್ರಮಂ ಜ್ಞಾನಯಶೋರ್ಥ ನಾಶಂ। ಕದನ್ನಭೋಜ್ಯಂ ವ್ಯಸನಾಮಯಾರ್ತಿಂ ಸ್ತ್ರೀಪಕ್ಷವೈರಂ ಕಲಿಮಪ್ಯರಿಭ್ಯಃ ।।೯೮।।ತಾ।। ಅಲ್ಪಬಲಯುಕ್ತನಾದ ಶುಕ್ರದಶೆಯಲ್ಲಿ ಮತಿಭ್ರಮ, ಅಜ್ಞಾನ ಯಶೋಹಾನಿ, ಅರ್ಥನಾಶ, ಕದನ್ನ ಭೋಜನ, ವ್ಯಸನ, ರೋಗ, ದುಃಖ, ಸ್ತ್ರೀಪಕ್ಷದಲ್ಲಿ ವೈರ, ಶತ್ರುಗಳಲ್ಲಿ ಕಲಹ ಈ ಫಲಗಳುಂಟಾಗುತ್ತವೆ.

## ಷಡಷ್ಟೇತರಸ್ಥಾನಸ್ಥಿತ ಶುಕ್ರದಶಾಫಲಂ

ಶ್ಲೋಕ।। ಷಡಷ್ಟರಿಃಫೇತರಿಗೋ ಭೃಗುರ್ನಿಂದ್ಯೋರ್ಣಸತ್ವಲಂ । ಮಧ್ಯೋಹೀನ ಶ್ಶುಭೋಮಧ್ಯ ಶ್ಶುಭೋತ್ಯಂತ ಶುಭಾವಹಃ ।।೯೯।। ಶುಕ್ರನು ಷಡಷ್ಟರಿಃಫ ೬-೮-೧೨ನೆ ಸ್ಥಾನಾ ವಿನಾ ಉಳಿದ ಸ್ಥಾನಗಳಲ್ಲಿದ್ದು ಬಲವಿಲ್ಲದವನಾಗಿದ್ದರೆ ಅರ್ಧ ಶುಭಫಲವನ್ನು, ಹೀನಬಲನಾಗಿದ್ದರೆ ಮಧ್ಯಮಫಲವು, ಮಧ್ಯನಾಗಿದ್ದರೆ ಶುಭಫಲವನ್ನು, ಶುಭನಾಗಿದ್ದರೆ ಅತ್ಯಂತ ಶುಭಫಲವನ್ನು ಕೊಡುತ್ತಾನೆ. ಇತಿ, ಶುಕ್ರದಶಾಫಲಂ.

## ಶನಿದಶಾಫಲಂ

ಮೂಲ॥ ಸೌರೀಂ ಪ್ರಾಪ್ಯಖರೋಷ್ಟ್ರ ಪಕ್ಷಿಮಹಿಷೀ ವೃದ್ಧಾಂಗನಾ ವಾಪ್ತಯಃ।
ಶ್ರೇಣೀಗ್ರಾಮಪುರಾಧಿಕಾರಜನಿತಾ ಪೂಜಾಕುಧಾನ್ಯಾಗಮಃ ॥
ಶ್ಲೇಷ್ಮೇರ್ಷ್ಯಾನಿಲಕೋಪ ಮೋಹಮಲಿನ ವ್ಯಾಪತ್ತಿತಂದ್ರಾಶ್ರಮಾ ।
ನ್ಭೃತ್ಯಾಪತ್ಯಕಳತ್ರ ಭರ್ತ್ಸನಮಪಿ ಪ್ರಾಪ್ನೋತಿಚವ್ಯಂಗತಾಂ ॥೧೮॥

ಟೀಕು॥ ಶನಿದಶಾಫಲ ಹೇಳಲ್ಪಡುತ್ತೆ. ಸೌರೀಂ-ಶನೈಶ್ಚರನ ದಶೆಯನ್ನು, ಪ್ರಾಪ್ಯ- ಹೊಂದಿದವನಿಗೆ, ಖರೋಷ್ಟ್ರಪಕ್ಷಿ ಮಹಿಷೀ ವೃದ್ಧಾಂಗನಾವಾಪ್ತಯಃ ಖರಃ-ಕತ್ತೆ, ಉಷ್ಟ್ರ-ಒಂಟೆಗಳು, ಪಕ್ಷಿ-ಡೇಗೆ ಮೊದಲಾದ ಪಕ್ಷಿಗಳು (ಉಷ್ಟ್ರಪಕ್ಷಿಯೆಂದು ಪಾಠಾಂತರ) ಉಷ್ಟ್ರಪಕ್ಷಿಯ ರೆಕ್ಕೆಗಳು, ಮಹಿಷೀ-ಎಮ್ಮೆ ವೃದ್ಧಾಂಗನಾ-ವೃದ್ಧಸ್ತ್ರೀ, ಇವರುಗಳು, ಆಪ್ತಯಃ-ಪ್ರಾಪ್ತಿಯಾಗುವುದು. ಶ್ರೇಣೀಗ್ರಾಮ ಪುರಾಧಿಕಾರಜನಿತಾ- ಶ್ರೇಣಿ-ಬೀದಿಯ ಅಧಿಕಾರ, ಗ್ರಾಮ-ಗ್ರಾಮದ, ಪುರಾಧಿಕಾರ-ಪಟ್ಟಣಾಧಿಕಾರ, ಜನಿತಾ-ಇವುಗಳಿಂದ ಹುಟ್ಟಿದ, ಪೂಜಾ-ಸನ್ಮಾನವು, ಕುಧಾನ್ಯಾಗಮಃ-ಎಳ್ಳು ಮೊದಲಾದ ಕೃಷ್ಣಧಾನ್ಯಗಳ ಲಾಭ, ಈ ಫಲವು-ಶುಭ ಶನಿದಶೆಯಲ್ಲಿ ಪ್ರಾಪ್ತಿಯಾಗುತ್ತದೆ. ಶನಿಯು ಪಾಪದಶೆಯಲ್ಲಿ ಶ್ಲೇಷ್ಮೇರ್ಷ್ಯಾನಿಲಕೋಪ ಮೋಹಮಲಿನ ವ್ಯಾಪತ್ತಿತಂದ್ರಾಶ್ರಮಾ-ಶ್ಲೇಷ್ಮೆಶ್ಲೇಷ್ಮರೋಗ, ಈರ್ಷ್ಯಾ-ಹೊಟ್ಟೆ ಕಿಚ್ಚಿನಿಂದಲೂ, ಅನಿಲ-ವಾಯುರೋಗ, ಕೋಪ-ಕ್ರೋಧದಿಂದ, ಮೋಹ-ಪಿತ್ತಭ್ರಮಣೆಯಿಂದ, ಮಲಿನ-ಮಾಲಿನ್ಯ ಶ್ವಪಚತನದಿಂದ, ವ್ಯಾಪತ್ತಿ-ವಿಶೇಷವಾದ ವಿಪತ್ತುಂಟಾಗುವುದು. ತಂದ್ರಾಶ್ರಮಾ-ನಿದ್ರಾಲಸ್ಯ ಮಧ್ಯಗತಾವಸ್ಥೆಯಿಂದಲೂ. ಇಂಥಾ ಅವಸ್ಥೆಗಳಿಂದ ಶ್ರಮವುಂಟಾಗುವುದು. ಭೃತ್ಯಾಪತ್ಯಕಳತ್ರ ಭರ್ತ್ಸನಮಪಿ-ಭೃತ್ಯ-ಚಾಕರರಿಂದ, ಅಪತ್ಯ- ಮಕ್ಕಳು, ಕಳತ್ರ-ಹೆಂಡತಿಯಿಂದ, ಭರ್ತ್ಸನ-ತಿರಸ್ಕಾರವನ್ನು, ವ್ಯಂಗತಾಂ-ಅಂಗ ಹೀನತ್ವವನ್ನು, ಪ್ರಾಪ್ನೋತಿ-ಹೊಂದುವನು. ಮಿಶ್ರದಶೆಯಲ್ಲಿ ಮಿಶ್ರಫಲವೆಂದರೆ ಶುಭಾಶುಭಗಳೆರಡು ಫಲಗಳನ್ನು ಹೊಂದುವನು. ಈ ಅರ್ಥಕ್ಕೆ ಗರ್ಗಸಂಹಿತೆಯಲ್ಲಿ ಶ್ಲೋಕ॥ ಶನೈಶ್ಚರಃಶತ್ರುಗೃಹಂ ಪ್ರಯಾತಃ ಕರೋತಿರಾಜ್ಯಂ ಬಹುಮಾನಯುಕ್ತಂ ॥೧೦೦॥ ಸ್ವಕ್ಷೇತ್ರಗಶ್ಚಾಪಿ ಕರೋತಿಸೌಖ್ಯಂ ಯೋಷಿಚ್ಚ ವೃದ್ಧಾತ್ ಧನಧಾನ್ಯವೃದ್ಧಿಂ। ದಶಾಸುನೀಚಸ್ವಪಿಬಂಧನಾದಿ ರಂಧ್ರೇಪಿಚೈವಂ ಕುರುತೇದಶಾಯಾಂ ॥೧೦೧॥ ಏವಂದಶಾಯಾಂ ಗ್ರಹದೋಷಭಾವಂ ಶುಭಾಶುಭಂ ಸತ್ಫಲದಂವಿಚಾರ್ಯಂ । ಶುಭಾದಶಾ ಮಧ್ಯಫಲಾದಶಾಚ ಸರ್ವಾತ್ರಕಾಲೇನಿಯತಂ ವಿಚಿಂತ್ಯಾ ॥೧೦೨॥ತಾ॥ ಶತ್ರುಗೃಹದಲ್ಲಿರುವ ಶನೈಶ್ಚರನ

ದಶೆಯಲ್ಲಿ ಅನೇಕ ವಿಧವಾದ ದೋಷಗಳೂ, ಸ್ವಜನರಿಂದ ದುಃಖವೂ, ಮಿತ್ರಕ್ಷೇತ್ರ ಮತ್ತು ಉಚ್ಚಕ್ಷೇತ್ರಗತನಾದ ಶನಿದಶೆಯಲ್ಲಿ ಬಹುಮಾನವು, ರಾಜ್ಯಾಧಿಕಾರವು ಸ್ವಕ್ಷೇತ್ರದಲ್ಲಿರುವ ಶನಿದಶೆಯಲ್ಲಿ ವೃದ್ಧ ಸ್ತ್ರೀಯಿಂದ ಸೌಖ್ಯ, ಧನಧಾನ್ಯ ವೃದ್ಧಿಯು, ನೀಚಶತ್ರು ಅಷ್ಟಮದಲ್ಲಿರುವ ಶನಿದಶೆಯಲ್ಲಿ ಬಂಧನ ಮತ್ತು ರೋಗಾದಿಗಳು. ಈ ಮೇಲೆ ಹೇಳಲ್ಪಟ್ಟ ಸೂರ್ಯಾದಿ ೭ ಗ್ರಹಗಳ ಬಲಾಬಲಗಳನ್ನು ನೋಡಿಕೊಂಡು ಆಯಾಯ ದಶೆಗಳಲ್ಲಿ ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರ, ಶತ್ರುಕ್ಷೇತ್ರ, ನೀಚಕ್ಷೇತ್ರ, ಅಷ್ಟಮ ಈ ಸ್ಥಾನಗಳಲ್ಲಿರುವುದಕ್ಕೆ ತಕ್ಕಂತೆ ಫಲ ತಾರತಮ್ಯದಿಂದ ನಿರ್ಣಯಮಾಡಿಕೊಳ್ಳಬೇಕು.

## ಪೂರ್ಣಬಲಯುಕ್ತ ಶನಿದಶಾಫಲಂ

ಶ್ಲೋಕ॥ದಶಾಶನೇಃ ಪೂರ್ಣಬಲಸ್ಯಧತ್ತೇ ನವೀನವೇಶ್ಮಾಂಬರಭೂಮಿಸೌಖ್ಯಂ। ಆರಾಮತೋಯಾಶ್ರಯ ನಿರ್ಮಿತಶ್ಚ ಮ್ಲೇಚ್ಛಾತಿಸಂಗಾ ನೃಪತೇರ್ಧನಾಪ್ತಿಂ ॥೧೦೩॥ ತಾ॥ ಶನಿಯು ಪೂರ್ಣ ಬಲಿಷ್ಠನಾಗಿದ್ದ ದಶೆಯಲ್ಲಿ ಹೊಸದಾಗಿ ಮನೆ ಕಟ್ಟಿಸುವಿಕೆ, ದುಕೂಲಾದಿ ಸಮಸ್ತಲಾಭ, ಭೂಮಿಲಾಭ, ಸೌಖ್ಯ, ಉಪವನ ನಿರ್ಮಾಣ, ನೀರಿನ ಆಶ್ರಯವುಳ್ಳ ಭೂಮಿಯನ್ನು ಸಂಪಾದಿಸುವಿಕೆ, ಮ್ಲೇಚ್ಛಾದಿ ಸಂಸರ್ಗ, ರಾಜಮೂಲದಿಂದ ಧನಲಾಭವು ಸಹ ಉಂಟಾಗುತ್ತೆ.

## ಮಧ್ಯಬಲ ಶನಿದಶಾಫಲಂ

ಶ್ಲೋಕ॥ ದಶಾಶನೇರ್ಮಧ್ಯಬಲಸ್ಯಧತ್ತೇ ಖರೋಷ್ಟ್ರಮಾಷಾಂಡ ಜತೋಧನಾಪ್ತಿಂ। ವೃದ್ಧಾಂಗನಾ ಸಂಗಮ ದುರ್ಗರಕ್ಷಾಧಿಕಾರ ಚಿಂತಾವಿರಸಾನ್ನಭೋಗಃ ॥೧೦೪॥ತಾ॥ ಮಧ್ಯಬಲಿಷ್ಠನಾದ ಶನಿದಶೆಯಲ್ಲಿ ಕತ್ತೆ, ಒಂಟೆ, ಮಾಷ, ಮೊಟ್ಟೆ ಇವುಗಳ ಮೂಲಕವಾಗಿ ಧನಲಾಭ, ವೃದ್ಧಾಂಗನಾ ಸಂಗಮ; ಪಟ್ಟಣರಕ್ಷೆ, ಅಧಿಕಾರ ಚಿಂತೆ, ವಿರಸಾನ್ನ, ಭೋಗ ಇವೇ ಮೊದಲಾದ ಫಲಗಳು ಮಧ್ಯಮವಾಗಿ ಉಂಟಾಗುತ್ತೆ.

## ಅಲ್ಪಬಲ ಶನಿದಶಾಫಲಂ

ಶ್ಲೋಕ॥ ದಶಾಶನೇಃ ಸ್ವಲ್ಪಬಲಸ್ಯಪುಂಸಾಂ ತನೋತಿದುಃಖಂ ರಿಪುತಸ್ಕರೇಭ್ಯಃ। ದಾರಿದ್ರ್ಯಮಾತ್ಮೀಯ ಜನಾಪವಾದಂ ರೋಗಂಚಶೀತಾ ನಿಲಕೋಪ ಮುಗ್ರಂ ॥೧೦೫॥ತಾ॥ ಅಲ್ಪಬಲವುಳ್ಳ ಶನಿಯ ದಶೆಯಲ್ಲಿ ಶತ್ರು ಮತ್ತು ಕಳ್ಳರಿಂದ ದುಃಖ, ದಾರಿದ್ರ್ಯ, ಸ್ವಜನರಿಂದ ಅಪವಾದ, ಶೀತ, ವಾಯುಪ್ರಕೋಪದಿಂದ ಉಗ್ರವಾದ ರೋಗ ಸಹ ಉಂಟಾಗುತ್ತೆ.

## ನಷ್ಟಬಲ ಶನಿದಶಾಫಲಂ

ಶ್ಲೋಕ।। ದಶಾಶನೇರ್ನಷ್ಟಬಲಸ್ಯಪುಂಸಾ ಮನೇಕಧಾತು ವ್ಯಸನಾದಿದತ್ತೇ ।। ಸ್ತ್ರೀಪುತ್ರಮಿತ್ರಸ್ವಜನೈರ್ವಿರೋಧಂ ರೋಗಾಭಿವೃದ್ಧಿಂ ಮರಣೇನತುಲ್ಯಂ ।।೧೦೬।।ತಾ।। ನಷ್ಟಬಲ ಶನಿದಶೆಯಲ್ಲಿ ವಾತ, ಪಿತ್ತ, ಶ್ಲೇಷ್ಮಪ್ರಕೋಪದಿಂದ ರೋಗಾದಿ ವ್ಯಸನ, ಪುತ್ರ-ಮಿತ್ರ-ಸ್ತ್ರೀಜನರಲ್ಲಿ ವಿರೋಧ, ರೋಗಾಭಿವೃದ್ಧಿಯಿಂದ ಮರಣಕ್ಕೆ ಸದೃಶವಾದ ಕಷ್ಟ ಸಹ ಉಂಟಾಗುತ್ತೆ.

## ತ್ರಿಷಷ್ಠಲಾಭಸ್ಥಿತ ಶನಿದಶಾಫಲಂ

ಶ್ಲೋಕ।। ತ್ರಿಷಷ್ಠಲಾಭಾನುಗತೋಮಂದೋ ನಿಂದ್ಯೋರ್ಧಸತ್ಫಲಃ । ಮಧ್ಯೋಹೀನಃ ಶುಭೋಮಧ್ಯಃ ಶುಭೋತ್ಯಂತ ಶುಭಾವಹಃ ।।೧೦೭।।ತಾ।। ಶನಿಯು ಲಗ್ನಕ್ಕೆ ೩-೬-೧೧ರಲ್ಲಿದ್ದರೆ ಬಲವಿಲ್ಲದವನಾಗಿದ್ದರೂ ಅರ್ಧ ಶುಭಫಲ ವನ್ನು, ಹೀನಬಲವುಳ್ಳವನಾಗಿದ್ದರೆ ಮಧ್ಯಮಫಲವನ್ನು, ಮಧ್ಯಮಬಲವುಳ್ಳವನಾಗಿದ್ದರೆ ಶುಭಫಲವನ್ನು, ಶುಭನಾಗಿದ್ದರೆ ಅತ್ಯಂತ ಶುಭಫಲವನ್ನು ಕೊಡುತ್ತಾನೆ. ಇತಿ, ಶನಿದಶಾಫಲಂ.

ಮೂಲ।। ದಶಾಸುಶಸ್ತಾಸು ಶುಭಾನಿಕುರ್ವಂತ್ಯನಿಷ್ಟ ಸಂಜ್ಞಾಸ್ವಶುಭಾನಿಚೈವಂ । ಮಿಶ್ರಾಸು ಮಿಶ್ರಾಣಿ ದಶಾಫಲಾನಿ ಹೋರಾಫಲಂ ಲಗ್ನಪತೇಸ್ಸ ಮಾನಂ ।।೧೯।।

ಅವತಾರಿಕೆ ।। ಈ ಮೇಲೆ ಹೇಳಲ್ಪಟ್ಟ ಶ್ಲೋಕಗಳಲ್ಲಿ ಶುಭಾಶುಭ ಫಲವು ಹೇಳಲ್ಪಟ್ಟಿರುತ್ತೆ. ಆದ್ದರಿಂದ ಶುಭಾಶುಭ ವಿಭಾಗವೂ ಲಗ್ನದಶಾ ಫಲವೂ ಸಹ ಹೇಳಲ್ಪಟ್ಟಿರುತ್ತೆ. ದಶೆಗಳಿಗೆ ಶುಭಾಶುಭತ್ವವು ಹೇಳಲ್ಪಟ್ಟಿದೆ. ಆದರೆ-ಜನ್ಮಕಾಲದಲ್ಲಿ ಉಪಚಯ ಸ್ಥಾನಗಳಲ್ಲಿದ್ದ ಗ್ರಹಗಳು ಬಲಯುಕ್ತವಾಗಿ ದೋಷರಹಿತವಾದ ನಿರ್ಮಲವಾದ ಶುದ್ಧ ಗ್ರಹಗಳೂ, ಮತ್ತು ಶತ್ರುನೀಚಸ್ಥಾನದಲ್ಲಿದ್ದ ಗ್ರಹಗಳೂ, ಅಪಚಯ ಸ್ಥಾನಗಳಲ್ಲಿದ್ದ ಗ್ರಹಗಳೂ ಯಾವಯಾವ ಫಲವನ್ನು ಕೊಡುತ್ತಾರೆಂಬುವುದನ್ನು ಸ್ಪಷ್ಟಪಡಿಸಬೇಕಾದದ್ದು ಅವಶ್ಯಕವಾಗಿದೆ. ಉಪಚಯ ಸ್ಥಾನಗಳಲ್ಲಿದ್ದ ಗ್ರಹಗಳು ಶುಭವನ್ನೂ, ಅಪಚಯ ಸ್ಥಾನಗಳಲ್ಲಿದ್ದ ಗ್ರಹಗಳು ಅಶುಭವನ್ನೂ ಕೊಡುವರು. ಟೀ।।ಸೂರ್ಯಚಂದ್ರಾದಿ ಗ್ರಹಗಳು, ಶಸ್ತಾಸು-ಶುಭವಾದ, ದಶಾಸು-ದಶೆಗಳಲ್ಲಿ, ಶುಭಾನಿ-ಶುಭಫಲವನ್ನು, ಕುರ್ವಂತಿ-ಕೊಡುವರು. ಅನಿಷ್ಟ ಸಂಜ್ಞಾಸು-ಅಶುಭ ಸಂಜ್ಞೆಯುಳ್ಳ ದಶೆಗಳಲ್ಲಿ, ಅಶುಭಾನ್ಯೇವ-ಅನಿಷ್ಟ ಫಲಗಳನ್ನೇ,

ಕುರ್ವಂತಿ-ಕೊಡುವರು. ಮಿಶ್ರಾಸು-ಶುಭಾಶುಭ ಮಿಶ್ರಫಲವುಳ್ಳ ದಶೆಯಲ್ಲಿ, ಮಿಶ್ರಾಣಿ-ಶುಭಾಶುಭ ಮಿಶ್ರಫಲವನ್ನು, ಕುರ್ವಂತಿ-ಕೊಡುವರು. ಈ ವಿಷಯದಲ್ಲಿ ಸತ್ಯಾಚಾರ್ಯರ ವಚನ ||ಶ್ಲೋಕ|| ಜನ್ಮನ್ಯುಪ ಚಯಭವನೇಸು ಸಂಸ್ಥಿತಾಸ್ಸವ್ಯಗಾಸ್ಸುಮೂರ್ತಿಧರಾಃ । ಶ್ರೇಷ್ಠಂಫಲಂ ವಿದಧ್ಯುರ್ಗ್ರಹಾಃ ಕ್ರಮಾತ್ಸ್ವಾಂ ದಶಾಂಪ್ರಾಪ್ಯ ||೧೦೮|| ಅನ್ಯೈರ್ನಿಹತಾ ರೂಕ್ಷಾಲ್ಪ ಮೂರ್ತಯೋನುಪಚಯರ್ಕ್ಷ ಸಂಸ್ಥಾಶ್ಚ । ಸ್ವದಶಾಭಿಹತಾ ನೇಷ್ಟಂಗ್ರಹಾಃ ಪ್ರಯಚ್ಛಂತಿಲೋಕೇಷು ||೧೦೯||ತಾ|| ಜನ್ಮಕಾಲದಲ್ಲಿ ಉಪಚಯ ಸ್ಥಾನದಲ್ಲಿದ್ದ ಸವ್ಯಗಾಮಿಯಾದ, ದೋಷರಹಿತವಾದ ಗ್ರಹಗಳು ಶುಭಫಲವನ್ನೇ ಕೊಡುತ್ತಾರೆ. ಅಪಚಯ ಸ್ಥಾನದಲ್ಲಿದ್ದು ವಕ್ರಾಚಾರ, ಋಜುಗತಿ ಅಸ್ತ ಶತ್ರುನೀಚಸ್ಥಾನದಲ್ಲಿದ್ದು ಪಾಪಗ್ರಹ ಕರ್ತರಿಯಲ್ಲಿದ್ದ ಗ್ರಹಗಳು ಅಶುಭಫಲವನ್ನು ಕೊಡುವರು. ಹೋರಾಫಲಂ-ಲಗ್ನದಶಾಫಲವು ಲಗ್ನಪತೇಃ-ಲಗ್ನಾಧಿಪತಿಗೆ, ಸಮಾನಂ-ಸಮಾನ ವಾಗಿರುವುದು. ಅದು ಹೇಗೆಂದರೆ-ಮೇಷಲಗ್ನಕ್ಕೆ ಕುಜದಶಾಫಲ, ವೃಷಭಲಗ್ನಕ್ಕೆ ಶುಕ್ರದಶಾಫಲ, ಈ ಪ್ರಕಾರ ಆಯಾಯ ಲಗ್ನಕ್ಕೆ ಆಯಾಯ ಲಗ್ನಾಧಿಪತಿಗಳ ಫಲವನ್ನು ತಿಳಿಯತಕ್ಕದ್ದು. ಇದಲ್ಲದೆ, ಉಭಯೋಧಮ ಮಧ್ಯಪೂಜಿತಾಃ ಎಂದು ಶ್ಲೋಕದಲ್ಲಿ ಹೇಳಿರುವುದರಿಂದ, ದ್ರೇಕ್ಕಾಣವಶವಾಗಿ ಲಗ್ನದಶೆಯಾಗಿದ್ದರೆ ಅಶುಭ ಫಲವನ್ನು ಸಾರಾವಳಿಯಲ್ಲಿ ಹೇಳಿರುತ್ತೆ. ||ಶ್ಲೋಕ|| ಪ್ರವೇಶೇಬಲವರ್ಜಾ ಖೇಟೇ ಶುಭೈರ್ವಾಸನ್ನಿರೀಕ್ಷಿತಃ। ಸೌಮ್ಯೋಧಿ ಮಿತ್ರವರ್ಗಸ್ಥೋ ಮೃತ್ಯುಕೃನ್ನಭವೇತ್ತದಾ ||೧೧೦|| ಅಂತರ್ದಶಾಧಿನಾಥಸ್ಯ ವಿಬಲಸ್ಯದಶಾಯದಾ । ಬಲಿನಸ್ಯಾತ್ತದಾಭಂಗೋ ನಬಾಧಾತಸ್ಯ ಚಧ್ರುವಂ ||೧೧೧|| ಯುದ್ಧೇಚವಿಜಯೀತಸ್ಮಿ ಗ್ರಹಯೋಗೇ ಶುಭೋಯದಿ । ದಶಾಯಾಂ ನಭವೇತ್ಕಷ್ಟಂ ಸ್ವೋಚ್ಚಾದಿಷುಚಸಂಸ್ಥಿತಿಃ ||೧೧೨||ತಾ|| ಬಲಿಷ್ಠರಾದ ಶುಭಫಲವನ್ನು ಕೊಡತಕ್ಕ ಗ್ರಹಗಳು ಶುಭಷಡ್ವರ್ಗ. ತತ್ಕಾಲ ವೀತ್ರ ಷಡ್ವರ್ಗದಲ್ಲಿದ್ದರೆ ಅಂಥಾ ದಶೆಗಳಲ್ಲಿ ಮರಣವುಂಟಾಗುವುದಿಲ್ಲ. ಬಲಹೀನರಾದ ಗ್ರಹಗಳ ದಶೆಗಳಲ್ಲಿ ಬಲಿಷ್ಠರಾದ ಗ್ರಹಗಳ ಭುಕ್ತಿ ಬಂದಕಾಲದಲ್ಲಿ ಕಷ್ಟತೋರುತ್ತೆ. ಆದರೆ ಮರಣಭಯವಿಲ್ಲ. ಯುದ್ಧದಲ್ಲಿ ಗೆದ್ದ ಗ್ರಹಗಳು ಸ್ವೋಚ್ಚ ಮೂಲತ್ರಿಕೋಣದಲ್ಲಿದ್ದ ಗ್ರಹಗಳು ಯಾವಾಗ್ಯೂ ಕಷ್ಟವನ್ನು ಕೊಡುವುದಿಲ್ಲ.

ಮೂಲ|| ಸಂಜ್ಞಾಧ್ಯಾಯೇ ಯಸ್ಯಯದ್ರವ್ಯಮುಕ್ತಂ ಕರ್ಮಾಜೀವೋಯಶ್ಚ ಯಸ್ಯೋಪದಿಷ್ಟಃ । ಭಾವಸ್ಥಾನಾಂ ಲೋಕಯೋಗೋದ್ಭವಂಚ ತತ್ತತ್ಸರ್ವಂ ತಸ್ಯಯೋಜ್ಯಂದಶಾಯಾಂ ||೨೦||

ಅವತಾರಿಕೆ।। ಈ ದಶಾಫಲಗಳೂ ಅಲ್ಲದೆ ಇತರವಾದ ಭಾವಫಲ, ದೃಷ್ಟಿಫಲಗಳು ಮೊದಲಾದವುಗಳು ಪ್ರಾಪ್ತಿಯಾಗಬೇಕಾದರೆ ದಶಾಂತರ್ದಶಾ ಕಾಲವಲ್ಲದೆ ಇತರ ಕಾಲಗಳೇ ಇಲ್ಲ. ಆದ್ದರಿಂದ ಈ ಫಲಗಳನ್ನು ದಶಾಂತರ್ದಶಾ ಕಾಲದಲ್ಲಿ ಯೋಚಿಸಿ ದಶಾಫಲವನ್ನು ವಿಚಾರಮಾಡಬೇಕು.

ಟೀಕು।। ಸಂಜ್ಞಾಧ್ಯಾಯೇ-ಸಂಜ್ಞಾ ಪ್ರತಿಪಾದಿಕವಾದ ಗ್ರಹಯೋನಿ ಭೇದಾಧ್ಯಾಯದಲ್ಲಿ, ಯಸ್ಯ-ಯಾವ ಗ್ರಹಕ್ಕೆ, ಯುದ್ದ್ರವ್ಯಂ-"ತಾಮ್ರಸ್ಯಾನ್ಮಣಿಹೇಮ ಯುಕ್ತಿರಜತಾ ನ್ಯರ್ಕಾಚ್ಚ ಮುಕ್ತಿಯಾಸೀ" ಎಂಬ ಪ್ರಕಾರ ದ್ರವ್ಯಗಳು, ಉಕ್ತಂ-ಹೇಳಲ್ಪಟ್ಟಿರುತ್ತೋ ತಸ್ಯ-ಆ ಗ್ರಹದ ಶುಭದಶೆಯಲ್ಲಿ ದ್ರವ್ಯಲಾಭವಾಗುವುದು. ಯಸ್ಯ-ಯಾವ ಗ್ರಹಕ್ಕೆ, ಯಶ್ಚಕರ್ಮಾಜೀವಃ-ಅರ್ಥಾಪ್ತಿಃ ಪಿತೃಜನನೀ ಸಪತ್ನಮಿತ್ರ ಭ್ರಾತೃಸ್ತ್ರೀ ಭೃತಕ ಜನಾದ್ದಿವಾಕರಾದ್ಯೈಃ-ಈ ಪ್ರಕಾರವಾಗಿ ಯಾವ ವಿಧವಾದ ಕರ್ಮಜೀವನ, ಉಪದಿಷ್ಟಃ, ಹೇಳಲ್ಪಟ್ಟಿರುವುದೋ ಆ ಗ್ರಹದ ಗ್ರಹಾಂತರ್ದಶಾ ಕಾಲದಲ್ಲಿ ಆಕರ್ಮಜೀವ ಫಲಪ್ರಾಪ್ತಿಯನ್ನು, ಭಾವಸ್ಥಾನಗಳಲ್ಲಿರುವ (ಭಾವಸ್ಥಾನಾ ಲೋಕಯೋ ಗೋದ್ಭವಂಚ-ಅಂದರೆ (ಶೂರಸ್ತಬ್ಧೋ ವಿಕೃತನಯನೋ ನಿರ್ಘೃಣೋರ್ಕೈತನುಸ್ಥೇ) ಇದೇ ಮೊದಲಾದ ಭಾವಫಲಗಳು "ಪ್ರಥಿತಶ್ಚ ತುರೋಟನೋಲ ವಿತ್ತಃಕ್ರಿಯಗೇ" ಇವೇ ಮೊದಲಾದ ಭಾವಫಲಗಳನ್ನು, ಚಂದ್ರೇಭೂಪ ಬುಧೌ, ಇವೇ ಮೊದಲಾದ ದೃಷ್ಟಿ ಫಲಾಧ್ಯಾಯೋಕ್ತ ಫಲಗಳೂ, ನಾಭಸಯೋಗ ವ್ಯತಿರಿಕ್ತವಾದ ಫಲಗಳೂ, ಈ ಮೇಲೆ ಹೇಳಲ್ಪಟ್ಟ ಫಲಗಳೆಲ್ಲವೂ, ತಸ್ಯ-ಆ ಗ್ರಹದ, ದಶಾಯಾಂ-ದಶೆಯಲ್ಲಿ, ಯೋಜ್ಯಂ-ಯೋಚಿಸಿ, ಫಲವನ್ನು ನಿರ್ಣಯಿಸಲ್ಪಡಬೇಕು. ಪ್ರಮಾಣ-ಶ್ಲೋಕ।।ಇತಿ ನಿಗದಿತ ಯೋಗಾಸ್ಸಾರ್ಧಂ ಫಲೈರಿಹನಾ ಭಸಾ ನಿಯತ ಫಲದಾಶ್ಚಿಂತ್ಯಾಹ್ಯೇತೇ ಸಮಸ್ತದಶಾಸ್ವಪಿ।। ಎಂದು ಹೇಳಿರುತ್ತೆ. ಆದ್ದರಿಂದ ಸಮಸ್ತ ದಶೆಯಲ್ಲಿಯೂ ತಮ್ಮ ತಮ್ಮ ಫಲಗಳನ್ನು ಕೊಡುವರು. ಈ ದಶೆಯಲ್ಲಿ ನಾಭಸಯೋಗ ಫಲಮಾತ್ರವನ್ನೇ ಕೊಡುವುದಿಲ್ಲ. ರಾಜಸಯೋಗ ವಿನಾ ಉಳಿದ ದ್ವಿಗ್ರಹ, ಚಾಂದ್ರ, ವೇಶಿ ರಾಜಯೋಗಗಳ ಫಲಗಳೆಲ್ಲವನ್ನೂ ಆಯಾಯ ಗ್ರಹಗಳ ದಶೆಯಲ್ಲೂ, ಭುಕ್ತಿಗಳಲ್ಲೂ ಹೇಳಬೇಕು.

## ಅಥ ಛಾಯಾದಶಾ ನಿರ್ಣಯಃ

ಮೂಲ।। ಛಾಯಾಂ ಮಹಾಭೂತಕೃತಾಂಚಸರ್ವೇಭಿವ್ಯಂಜಯಂತಿ ಸ್ವದಶಾಮವಾಪ್ಯ । ಕಂಬ್ವಗ್ನಿವಾಯ್ವಂಬರಜಾನ್ಗುಣಾಂಶ್ಚ ನಾಸಾಸ್ಯದೃಕ್ತ್ವಕ್ಶ್ರುದಣಾನುಮೇಯಾರ್ ।।೨೧।।

ಅವತಾರಿಕೆ।। ಜನನಕಾಲವು ತಿಳಿಯದವರಿಗೆ ಶರೀರ ಕಾಂತ್ಯಾದಿಗಳಿಂದ ಗ್ರಹದಶಾ ನಿರ್ಣಯ ಮಾಡುವುದು ಹೇಳಲ್ಪಡುತ್ತೆ. ಪೂರ್ವೋಕ್ತವಾಗಿರುವ- "ಶಿಖಿಭೂಖ- ಪಯೋ ಮರುದ್ಗಣಾನಾಂ ವಶಿನೋಭೂಮಿಸುತಾದಯಃ ಕ್ರಮೇಣ" ಎಂದು ಕುಜಾದಿ ಗ್ರಹಗಳಿಗೆ ಕ್ರಮವಾಗಿ ಅಗ್ನಿ ಬೂಮ್ಯಾಕಾಶ ಜಲವಾಯು ಗುಣಗಳೂ, ರವಿಚಂದ್ರರಿಗೆ ಅಗ್ನಿಜಲಗಳು ಎಂದು ಹೇಳಿರುತ್ತೆಯಾದ್ದರಿಂದ, ಸರ್ವೇ-ಸಕಲ ಗ್ರಹಗಳು, ಸ್ವದಶಾಂ-ತಮ್ಮ ತಮ್ಮ ದಶೆಗಳನ್ನು, ಅವಾಪ್ಯ-ಹೊಂದಿ, ಮಹಾಭೂತಕೃತಾಂ-ಪೃಥಿವ್ಯಾದಿ ಪಂಚಮಹಾ-ಭೂತಗಳ, ಛಾಯಾಂ-ಶರೀರ ಕಾಂತಿಗಳನ್ನು, ಅಭಿವ್ಯಂಜಯಂತಿ-ಪ್ರಕಾಶಪಡಿಸುತ್ತಾರೆ. ಆ ಶರೀರ ಕಾಂತಿಯಿಂದ ಕಂಬ್ವಗ್ನಿ ವಾಯ್ವಂಬರಜಾನ್-ಪೃಥಿವ್ಯಾಪಸ್ತೇಜೋ ವಾಯ್ವಾಕಾರಗಳೆಂಬ ಈ ಮೂಲವಾಗಿ ನಾಸಾಸ್ಯದೃಕ್ತ್ವಕ್ಛ್ರ ವಣಾನುಮೇಯಾನ್-ನಾಸಿಕ, ಜಿಹ್ವಾ ನೇತ್ರ, ತ್ವಕ್, ಶ್ರೋತ್ರಗಳ ಮೂಲವಾಗಿ ತಿಳಿಯತಕ್ಕ, ಗುಣಾನ್-ಗುಣಗಳನ್ನು ಅಧಿವ್ಯಂಜಯತಿ- ಪ್ರಕಾಶಪಡಿಸುತ್ತಾರೆ.

ಅದು ಹೇಗೆಂದರೆ-ಪೃಥಿವೀ ಭೂತಕ್ಕೆ ಘ್ರಾಣೇಂದ್ರಿಯ ಗ್ರಾಹ್ಯವಾದ ಗಂಧಗುಣದಿಂದ ಪುರುಷನು ಯಾವಾಗ ಪ್ರಕಾಶಿಸುವನೋ ಆಗ ಪೃಥಿವೀ ಛಾಯಾಗುಣವುಳ್ಳ ಬುಧನದಶೆ ನಡೆಯುತ್ತದೆಂದು ತಿಳಿಯಬೇಕು. ಜಲಭೂತಕ್ಕೆ ರಸನೇಂದ್ರಿಯ ಗ್ರಾಹ್ಯವಾದ ರಸಗುಣಗಳು ಇರುವಾಗು ಉತ್ತಮವಾದ ರಸಪದಾರ್ಥಗಳು ಭುಜಿಸುವಾಗ ಜಲಛ್ಛಾಯಾಗುಣಗಳು ಕಾಣಬರುವುದರಿಂದ ಅವನಿಗೆ ಚಂದ್ರ-ಶುಕ್ರದಶೆಗಳಲ್ಲೊಂದು ದಶೆ ನಡೆಯುತ್ತಿರುವುದೆಂದು ತಿಳಿಯಬೇಕು. ಅಗ್ನಿಭೂತಕ್ಕೆ ಚಕ್ಷುರಿಂದ್ರಿಯ ಗ್ರಾಹ್ಯವಾದ ರೂಪಗುಣಗಳು ಕಾಣುವಾಗ ಆ ಪುರುಷನು ಒಳ್ಳೇ ಕಾಂತಿಯುಕ್ತನಾಗಿ ಕಾಣಬರುವಾಗ ಅಗ್ನಿಛ್ಛಾಯಾಗುಣವುಳ್ಳ ರವಿ- ಕುಜರ ದಶೆಗಳಲ್ಲೊಂದು ದಶೆ ನಡೆಯುತ್ತಿರುವುದೆಂದು ತಿಳಿಯತಕ್ಕದ್ದು. ವಾಯುಭೂತಕ್ಕೆ ತ್ವಗೀಂದ್ರಿಯ ಗ್ರಾಹ್ಯವಾದ ಸ್ಪರ್ಶಗುಣವುಳ್ಳ ಪ್ರಕಾಶವು ಯಾವನಲ್ಲಿ ಕಾಣಬರುತ್ತೋ, ಮತ್ತು ಮೃದುಸ್ಪರ್ಶವಾದ ಗುಣವಿರುವುದೋ ಆಗ ವಾಯುಭೂತಾಧಿಪತಿಯಾದ ಶನಿದಶೆಯೆಂದು ತಿಳಿಯಬೇಕು. ಆಕಾಶಭೂತಕ್ಕೆ ಶ್ರೋತ್ರೇಂದ್ರಿಯ ಗ್ರಾಹ್ಯವಾದ ಗುಣಗಳು ಯಾವಾಗ ಕಾಣಬರುವುದೋ ಆಗ ಶ್ರವಣಸುಖವನ್ನನುಭವಿಸುತ್ತಾನೆ. ಆಗ ಆಕಾಶಛಾಯಾಗುಣವಂತನಾಗಿರುವನು, ಆಗ ಆಕಾಶಭೂತಾಧಿಪತಿ ಗುರುದಶೆಯೆಂದೂಹಿಸಬೇಕು. ಛಾಯಾಗುಣ ವಿಶೇಷವನ್ನು ತಿಳಿಯುವ ವಿಷಯದಲ್ಲಿ ಗ್ರಂಥಾಂತರದಲ್ಲಿ ವರಾಹ ಮಹಿರಾಚಾರ್ಯನಿಂದಲೇ ಹೇಳಲ್ಪಟ್ಟಿರುತ್ತೆ. ।।ಶ್ಲೋಕ।। ಛಾಯಾಶುಭಾ ಶುಭಫಲಾನಿ ನಿವೇದಯಂತೀ ಲಕ್ಷ್ಯಾ ಮನುಷ್ಯಪಶುಪಕ್ಷಿಷು

ಲಕ್ಷಣಜ್ಞೈಃ । ತೇಜೋಗುಣಾ‌ ಪ್ರವಿಮಲಾ‌ ಪ್ರವಿಭಾಸಯಂತೀ ದೀಪಪ್ರಭಾಸ್ಫಟಿಕರತ್ನ ಘಟಸ್ಥಿತೇವ ॥೧೧೩॥ತಾ॥ ಮನುಷ್ಯ ಪಶುಪಕ್ಷಿ ಮೊದಲಾದವುಗಳಲ್ಲಿ ಛಾಯಾರೂಪ ಗುಣಗಳಿಂದ ಕಂಡುಬರುವ ಪೃಥಿವ್ಯಾದಿ ಮಹಾಭೂತಗಳ ಲಕ್ಷಣಗಳು, ದೀಪವನ್ನು ಸ್ಫಟಿಕ ರತ್ನ ಘಟಕದಲ್ಲಿದ್ದರೆ, ಅಂತಸ್ಥವಾದ ಆ ದೀಪದ ಪ್ರಭೆಯು ಹೊರಗೆ ಯಾವ ಪ್ರಕಾರವಾಗಿ ಕಾಣುವುದೋ ಹಾಗೆ ಮನುಷ್ಯಾದಿಗಳಲ್ಲಿ ಕಾಣಬರುತ್ತದೆ. ಆ ಮೂಲವಾಗಿ ತಿಳಿಯಬೇಕು.

## ಪೃಥಿವೀ ಛಾಯಾದಶಾಲಕ್ಷಣಂ

ಶ್ಲೋಕ॥ ಸ್ನಿಗ್ಧದ್ವಿಜತ್ವಙ್ನಖಲೋಮಕೇಶ ಛಾಯಾಸುಗಂಧಾತುಮಹೀಸಮುತ್ಥಾ। ತುಷ್ಟ್ಯರ್ಥಲಾಭಾಭ್ಯುದಯಾನ್ಕರೋತಿ ಧರ್ಮಸ್ಯಚಾಹನ್ಯಹನಿಪ್ರವೃದ್ಧಿಂ ॥೧೧೪॥ತಾ॥ ಪೃಥ್ವೀಛಾಯಾಗುಣವುಳ್ಳ ಬುಧದಶೆಯಲ್ಲಿ ಸ್ನಿಗ್ಧ, ದ್ವಿಜ, ತ್ವಕ್, ನಖ, ಲೋಮ, ಕೇಶ, ಸುಗಂಧ, ತುಷ್ಟಿ, ಪುಷ್ಟಿ, ಅರ್ಥಲಾಭ, ಅಭ್ಯುದಯ, ದಿನೇ ದಿನೇ ಧರ್ಮವೃದ್ಧಿ ಇವೇ ಮೊದಲಾದ ಗುಣಗಳುಂಟಾಗುತ್ತವೆ.

## ಜಲಛ್ಛಾಯಾ ದಶಾಲಕ್ಷಣಂ

ಶ್ಲೋಕ॥ ಸ್ನಿಗ್ಧಾಸಿತಾಚಹರಿತಾ ನಯನಾಭಿರಾಮಾ ಸೌಭಾಗ್ಯಮಾರ್ದವ ಸುಖಾಭ್ಯುದಯಾನ್ ಕರೋತಿ । ಸರ್ವಾರ್ಥಸಿದ್ಧಿಜನನೀಜನನೀವಚಾಪ್ಯಾಛಾಯಾ ಫಲಂತನುಭೃತಾಂ ಶುಭಮಾದಧಾತಿ ॥೧೧೫॥ತಾ॥ ಜಲಛ್ಛಾಯಾ ದಶಾಲಕ್ಷಣವುಳ್ಳ ಚಂದ್ರ-ಶುಕ್ರರ ದಶೆಗಳಲ್ಲಿ ಸ್ನಿಗ್ಧತ್ವ, ಬಿಳಪುವರ್ಣ, ಹರಿದ್ವರ್ಣ, ಸೊಗಸಾದ ನೇತ್ರದೃಷ್ಟಿ ಸೌಭಾಗ್ಯ, ದ್ರವವಸ್ತುಗಳ ಸುಖ, ದಿನೇ ದಿನೇ ಅಭ್ಯುದಯ, ಸರ್ವಸಿದ್ಧಿ, ಮಾತೃಸೌಖ್ಯ, ಮಾತೃವಚನದಲ್ಲಿ ಪ್ರೀತಿ ಶುಭಯೋಗ, ಈ ಮೊದಲಾದ ಫಲಗಳುಂಟಾಗುತ್ತವೆ.

## ಅಗ್ನಿಛ್ಛಾಯಾ ದಶಾಲಕ್ಷಣಂ

ಶ್ಲೋಕ॥ ಚಂಚಾದೃಷ್ಟ್ಯಾಂ ಪದ್ಮಹೇಮಾಗ್ನಿವರ್ಣಾ ಯುಕ್ತಾತೇಜೋ ವಿಕ್ರಮೈಸ್ಸಪ್ರತಾಪೈಃ । ಆಗ್ನೇಯಾದಿ ಪ್ರಾಣಿಷುಸ್ಯಾಜ್ಜಯಾಯ ಕ್ಷಿಪ್ರಂಸಿದ್ಧಿಂ ವಾಂಛಿತಾರ್ಥಸ್ಯದತ್ತೇ ॥೧೧೬॥ತಾ॥ ಅಗ್ನಿಛ್ಛಾಯಾಧಿಪತಿಗಳಾದ ಸೂರ್ಯಾಂಗಾರಕರ ದಶೆಗಳಲ್ಲಿ ಮನುಷ್ಯನಿಗೆ ಚಂಡದೃಷ್ಟಿ, ಪದ್ಮ ಸುವರ್ಣ, ಅಗ್ನಿಯೋಪಾದಿಯಲ್ಲಿ ತೇಜಸ್ಸು, ಪರಾಕ್ರಮ, ಪ್ರತಾಪ, ಯುದ್ಧದಲ್ಲಿ ಜಯ, ಕ್ಷಿಪ್ರಸಿದ್ಧಿ, ಯತ್ನಮಾಡಿದ ಕಾರ್ಯವು ಲಭಿಸುವಿಕೆ, ಈ ಗುಣಗಳು ಅಭಿವೃದ್ಧಿಯಾಗುತ್ತವೆ.

## ವಾಯುಚ್ಛಾಯಾ ದಶಾಲಕ್ಷಣಂ

ಶ್ಲೋಕ।। ಮಲಿನಪರುಷಕೃಷ್ಣಾ ಪಾಪಗಂಧಾನಿಲೋತ್ಥಾ ಜನಯತಿ ವದಬಂಧವ್ಯಾಧ್ಯನರ್ಥಾನಾಶಂ ।।೧೦೭।।ತಾ।। ವಾಯುಚ್ಛಾಯಾಗುಣವುಳ್ಳ ಶನಿದಶೆಯಲ್ಲಿ ಮಲಿನತ್ವಂ ಕಠಿನವಾಕ್, ಕೃಷ್ಣವರ್ಣ, ದುರ್ಗಂಧ ವಾಯುಪ್ರಕೋಪ, ವಧಬಂಧನ ಬುದ್ಧಿ, ವ್ಯಾಧಿ, ಅನ್ಯಾಯವ್ಯಯ, ಅರ್ಥನಾಶ ಇವೆಲ್ಲಾ ಉಂಟಾಗುತ್ತವೆ.

## ಆಕಾಶಚ್ಛಾಯಾ ದಶಾಲಕ್ಷಣಂ

ಶ್ಲೋಕ।। ಸ್ಫಟಿಕಸದೃಶ ರೂಪಾಭಾಗ್ಯಯುಕ್ತಾತ್ತು ದಾರಾನಿಧಿರವಗಗ ನೋತ್ಥಾಶ್ರೇಯಸಾಂ ಸ್ವಚ್ಛವರ್ಣಾ ।।೧೦೬।।ತಾ।। ಆಕಾಶಚ್ಛಾಯಾಧಿಪತಿಯಾದ ಗುರುದಶೆಯಲ್ಲಿ ಸ್ಫಟಿಕದೃಶವಾದ ರೂಪ, ಭಾಗ್ಯವೃದ್ಧಿ, ಉದಾರ ಬುದ್ಧಿ, ನಿಧಿ ಪ್ರಾಪ್ತಿ ಶ್ರೇಯೋಭಿವೃದ್ಧಿ, ನಿರ್ಮಲವಾದ ಮನಸ್ಸು, ಈ ಗುಣಗಳಿಂದ ಪ್ರಕಾಶಿಸುವಾಗ ಆ ಮನುಷ್ಯನಿಗೆ ಆಕಾಶತತ್ವಾಭಿಮಾನಿಯಾದ ಗುರುದಶೆಯೆಂದು ತಿಳಿಯಬೇಕು.

ಮೂಲ।। ಶುಭಫಲದದಶಾಯಾಂ ತಾದೃಗೇವಾಂತರಾತ್ಮಾ ಬಹುಜನಯಂತಿ ಪುಂಸಾಂ ಸೌಖ್ಯಮರ್ಥಾಗಮಂಚ । ಕಥಿತಫಲವಿಪಾಕೈಃ ಸ್ತರ್ಕಯೇದ್ವರ್ತಮಾನಾಂ ಪರಿಣಮಿತಿಫಲೋಕ್ತಿಃ ಸ್ವಪ್ನಚಿಂತಾಸ್ವವೀರ್ಯೈಃ।।

ಅವತಾರಿಕೆ।। ಈ ಮೇಲೆ ಹೇಳಲ್ಪಟ್ಟ ವಾಯುಚ್ಛಾಯಾದಶೆಯಲ್ಲದೆ ಉಳಿದ ಛಾಯಗಳಲ್ಲಿ ಶುಭಾಶುಭಗಳೆರಡು ಆಗುವುದರಿಂದ, ಅಂತರಾತ್ಮ ಸ್ವರೂಪವುಳ್ಳ ಈ ಫಲ ಭೇದವನ್ನು ಹೇಳುತ್ತಾನೆ. ಟೀಕು।। ಶುಭಫಲದ ದಶಾಯಾಂ-ಶುಭಫಲ ಕೊಡುವ ದಶೆಯಲ್ಲಿ, ಅಂತರಾತ್ಮಾ-ಪುರುಷನ ಮನಸ್ಸು, ತಾದೃಗೇವ-ಶುಭ ಸ್ವರೂಪ ವಾಗಿಯೇ ಇರುವುದು, ಆಗ ಮಹಾಭೂತ ಕೃತಚ್ಛಾಯೆಯಿಂದ ತಿಳಿಯಬಹುದಾದ ಗ್ರಹದಶೆ, ಪುಂಸಾಂ-ಪುರುಹಿರಿಗೆ, ಬಹು-ಬಹುವಿಧವಾದ, ಸೌಖ್ಯಂ-ಸೌಖ್ಯವನ್ನು, ಅರ್ಥಾಗಮಂಚ-ಧನಲಾಭವನ್ನು, ಜನಯತಿ-ಹುಟ್ಟಿಸುತ್ತದೆ. ಈ ಮೇಲೆ ಹೇಳಿದಂಥಾ ಅಶುಭ ದಶೆಯಲ್ಲಿ ಆ ಪುರುಷನ ಮನಸ್ಸು ಅಶುಭಸೂಚಕವಾಗಿಯೇ ಇರುವುದು. ಆಗ ಮಹಾಭೂತ ಕೃತಛಾಯೆಯಿಂದ ತೋರಿಬರುವ ಗ್ರಹದಶೆ ಅಸೌಖ್ಯವನ್ನು, ಅರ್ಥಾಗಮನಕ್ಕೆ ಪ್ರತಿಬಂಧಕತ್ವ ಅವರ್ಥವನ್ನೂ ಕೊಡುತ್ತದೆ. ಮಿಶ್ರದಶಾ-ಮಿಶ್ರ ಫಲಪ್ರದ ದಶೆಯಲ್ಲಿಯೂ ತಿಳಿಯತಕ್ಕದ್ದು. ಯಾತ್ರಾಗ್ರಂಥದಲ್ಲಿ ಶ್ಲೋಕ।। ಶುಭಾಶುಭಾನಿಸರ್ವಾಣಿ ನಿಮಿತ್ತಾನಿಸ್ಯುರೇಕತಃ। ಏಕತಶ್ಚಮನಃಶುದ್ಧಿಸ್ತದ್ವಿಶುದ್ಧಿರ್ಜಯಾ-ವಹಾ

॥೧೧೯॥ ಎಂದು ಹೇಳಲ್ಪಟ್ಟಿರುತ್ತೆ. ಕಥಿತಫಲವಿಪಾಕೈ-ಈ ಹೇಳಲ್ಪಟ್ಟ ಶುಭಾಶುಭ ಫಲಪರಿಪಾಕದಿಂದ, ವರ್ತಮಾನಂ-ದಶೆಗಳನ್ನು, ತರ್ಕಯೇತ್-ಊಹಿಸಬೇಕು, ಅಂದರೆ ಪುರುಷನು ಅನುಭವಿಸುವಾಗ ಶುಭಾಶುಭ ಫಲಗಳನ್ನು ವಿಚಾರಿಸಿ ಯಾವ ಫಲಗಳ ಗ್ರಹದಶೆಯೆಂದು ಹೇಳಿರುತ್ತೋ, ಆ ಗ್ರಹದಶೆಯೆಂದು ತಿಳಿಯಬೇಕು ಈ ಪ್ರಕಾರ ಛಾಯಾಗುಣಗಳಿಂದಲೂ, ಫಲಾನುಭವಗಳಿಂದಲೂ ವರ್ತಮಾನ ದಶೆಯಲ್ಲಿ ತಿಳಿಯಬೇಕು. ಶುಕ್ರ ಶುಭದಶೆಯಲ್ಲಿ ನಿಧಿಪ್ರಾಪ್ತಿಯು, ಶನಿಯ ಶುಭದಶೆಯಲ್ಲಿ ಅಂಗಹೀನತ್ವ, ಈ ಪ್ರಕಾರ ಹೇಳಿರುವುದು ಕೆಲವರಿಗೆ ಅನುಭವಕ್ಕೆ ಬಾರದಿರುವುದರಿಂದ ಕಾರಣವು ಹೇಳಲ್ಪಟ್ಟಿರುತ್ತೆ. ಅವೀರ್ಯೈಃ-ಬಲಹೀನರಾದ ಗ್ರಹ ಗಳಿಂದ, ಫಲೋಕ್ತಿ-ಫಲವಾಕ್ಯವು, *ಸ್ವಪ್ನಚಿಂತಾಸು-ಸ್ವಪ್ನಚಿಂತೆಯಲ್ಲಿ, ಪರಣಮಿತ- ಪರಣಮಿಸಿ ಹೋಗುವುದು, ಅಂದರೆ ಯಾವ ಗ್ರಹ ಬಲಹೀನವಾಗಿರುವುದೋ ಗ್ರಹಕ್ಕೆ ಹೇಳಿದ ಫಲವು ಸ್ವಪ್ನದಲ್ಲಿಯಾಗಲೀ ಮನೋರಥದಲ್ಲಾಗಲೀ ಅನುಭವಿಸುವುದೇ ಹೊರತಾಗಿ ಪ್ರತ್ಯಕ್ಷಾನುಭವಕ್ಕೆ ಬರುವುದಿಲ್ಲ ॥೨೨॥

**ಮೂಲ॥ ಏಕಗ್ರಹಸ್ಯಸದೃಶೇ ಫಲಯೋರ್ವಿರೋಧೇನಾಶಂ ವೇದೆದ್ಯದಧಿಕಂ ಪರಿಪಚ್ಯತೇತ್। ನಾನ್ಯೋಗ್ರಹಸ್ಸದೃಶಮನ್ಯಫಲಂ ನಹಿನಸ್ತಿಸ್ವಾಂ ಸ್ವಾಂ ದಶಾಮುಪಗತಾಸ್ಸ್ವಫಲಪ್ರದಾಸ್ಯುಃ ॥೨೩॥**

ಅವತಾರಿಕೆ ॥ ಒಂದು ಗ್ರಹಕ್ಕೆ ಪರಸ್ಪರ ವಿರುದ್ಧವಾದ ಎರಡು ಫಲಗಳು ಸಂಭವಿಸುವಾಗ ಆ ಫಲಗಳ ಕೆಟ್ಟು, ಪ್ರತ್ಯೇಕ ಫಲ ಉಂಟಾಗುವುದು. ಮತ್ತು ಆ ಗ್ರಹಗಳು ಪರಸ್ಪರ ಮಿತ್ರರಾಗಿದ್ದರೆ, ಆ ಎರಡು ಗ್ರಹಗಳೂ ಕೊಡುವ ಫಲಗಳು ಪ್ರಾಪ್ತಿಯಾಗುತ್ತೆ. ಈ ಫಲಗಳು ಹೇಳಲ್ಪಡುತ್ತೆ.

ಟೀಕು॥ ಏಕಗ್ರಹಸ್ಯ ಒಂದು ಗ್ರಹಕ್ಕೆ, ಫಲಯೋಃ-ಎರಡು ಫಲಗಳಲ್ಲಿ, ವಿರೋಧೇ-ಪರಸ್ಪರ ವಿರೋಧವು, ಸದೃಶೆ-ಸಮಾನವಾಗಿರುವಾಗ, ನಾಶಂ-ಆ ಫಲನಾಶವನ್ನು, ವದೇತ್-ಹೇಳತಕ್ಕದ್ದು. ಅಂದರೆ ನಾಭಸ ಯೋಗ ಫಲಗಳನ್ನು ಬಿಟ್ಟು, ಉಳಿದ ಫಲಗಳು ಆಯಾಯ ಗ್ರಹಗಳು ತಮ್ಮ ತಮ್ಮ ದಶೆಗಳಲ್ಲಿ ಕೊಡುತ್ತಾರೆಂದು ಹೇಳಿದ್ದೇ ಆದರೆ ಒಂದು ಗ್ರಹಕ್ಕೆ ಒಂದು ಯೋಗಫಲದಿಂದ ಸುವರ್ಣವನ್ನು ಕೊಡುತ್ತಾನೆ. ಮತ್ತೊಂದು ಗ್ರಹಯೋಗಫಲವು ಸುವರ್ಣವನ್ನು ಅಪಹರಿಸುವುದಾಗಿರುತ್ತೆ. ಆದ್ದರಿಂದ ಆಗ ಸುವರ್ಣದಾನಾಪಹಾರಗಳೆರಡೂ

* ಸ್ತ್ರೀ ಜಾತಕದಲ್ಲಿ ಈ ವಿಷಯವನ್ನು ಹೇಳಿರುತ್ತೆ.

ಆಗುವುದರಿಂದ, ಈ ಫಲಗಳು ಪ್ರತ್ಯಕ್ಷಾನುಭವಕ್ಕೆ ಬರುವುದಿಲ್ಲ. ಈ ಎರಡು ಫಲಗಳೂ ಹೆಚ್ಚು ಕಡಿಮೆಯಾಗಿರುವಲ್ಲಿ ಆಗ, ಯತ್-ಯಾವ ಫಲವು, ಅಧಿಕಂ-ಅಧಿಕವಾಗಿರುವುದೋ, ತತ್-ಆ ಫಲವು, ಪರಿಪಚ್ಯತ್-ನಡೆಯಿಸಲ್ಪಡುವುದು. ಅದು ಯಾವ ಪ್ರಕಾರವೆಂದರೆ-ಒಂದೇ ಗ್ರಹವೇ ಎರಡು ವಿಧವಾಗಿ ಸುವರ್ಣ ಕೊಡುವನೆಂದು ಇರುವಾಗ, ಒಂದು ವಿಧದಿಂದ ಸುವರ್ಣವನ್ನಪಹರಿಸುವವನಾದರೆ ಈ ಎರಡು ಫಲಗಳಲ್ಲಿ ಸುವರ್ಣಾಪಹಾರ ಒಂದು ವಿಧವಾಗಿ ಹೋಗಿ, ಮತ್ತೊಂದು ವಿಧವಾದದ್ದು ಮಾತ್ರವೇ ಪ್ರಾಪ್ತಿಯಾಗುತ್ತೆ. ಈ ಪ್ರಕಾರ ಎರಡು ವಿಧದಲ್ಲಿ ಸುವರ್ಣಾಪಹಾರವಾಗುವ ಯೋಗವಿರುವಾಗ ಸುವರ್ಣಪ್ರಾಪ್ತಿಯೇ ಆಗುವುದಿಲ್ಲ, ಮತ್ತು ಒಂದು ವಿಧವಾಗಿ ಸುವರ್ಣಪ್ರಾಪ್ತಿ, ಎರಡು ವಿಧವಾಗಿ ಸುವರ್ಣಾಪಹಾರವಿದ್ದರೂ, ಒಂದು ವಿಧವಾದ ಪ್ರಾಪ್ತಿಯಾಗದಯೇ ಮತ್ತೊಂದು ವಿಧಕ್ಕೆ ಪೂರ್ವ ಸಂಚಿತ ಸುವರ್ಣನಾಶವಾಗುವುದು. ಈ ಪ್ರಕಾರವಾಗಿ ಸಮಸ್ತ ಫಲಗಳನ್ನೂ ಊಹಿಸತಕ್ಕದ್ದು. ಅನ್ಯಃ-ಮತ್ತೊಂದು ಗ್ರಹ, ಸದೃಶಂ-ಸಮಾನವಾದ ಫಲವುಳ್ಳದ್ದಾದರೆ, ಅನ್ಯಫಲಂ-ಮತ್ತೊಂದರ ಫಲವನ್ನಾದರೂ, ನಹಿನಸ್ತಿ- ಕೆಡಿಸುವುದಿಲ್ಲ. ಸಕಲ ಗ್ರಹಗಳು, ಸ್ವಾಂಸ್ವಾಂದಶಾಂ-ತಮ್ಮ ತಮ್ಮ ದಶೆಗಳನ್ನು ಉಪಗತಾಃ-ಹೊಂದಿದವರಾದ ಸ್ವಫಲಪ್ರದಾಃ-ತಮ್ಮ ತಮ್ಮ ಫಲಗಳನ್ನು ಕೊಡುವವು, ಸ್ಯುಃ- ಆಗುವವು, ಅಂದರೆ ಒಂದು ಗ್ರಹವು ತನ್ನ ದಶೆಯಲ್ಲಿ ಸುವರ್ಣಾದಾಯವನ್ನು ಮಾಡಿದರೆ ಮತ್ತೊಂದು ಗ್ರಹವು ಸುವರ್ಣ ನಾಶಕನಾಗಿದ್ದರೆ, ಮೊದಲು ಪ್ರಾಪ್ತಿಯಾಗಿ ನಂತರ ಅದಕ್ಕೆ ವ್ಯಯುವುಂಟಾಗುವುದು, ಈ ಪ್ರಕಾರವೇ ಗ್ರಹಗಳ ಅಂತರ್ದಶೆಗಳಲ್ಲಿಯೂ ತಿಳಿಯತಕ್ಕದ್ದು. ಅಂದರೆ, ಶುಕ್ರನು ಕಾಮೋಪಭೋಗ ಕೇಳಿಗಳನ್ನು ಕೊಡತಕ್ಕವನಾಗಿರುವಾಗ ಅವನ ಸಂಗಡ ಶತ್ರುವಾದ ಸೂರ್ಯ ಚಂದ್ರರಲ್ಲಿ ಯಾರಾದರೂ ಇದ್ದರೆ, ಶುಕ್ರನು ಕೊಡುವ ಫಲಗಳನ್ನು ಅಪಹರಿಸದೆ ಈ ಫಲ ಕೊಡುವಾಗ ವಿರೋಧವಾಗಿ ಸ್ತ್ರೀ ಸಂಯೋಗಾದಿಗಳಲ್ಲಿ ವಿರೋಧರೋಗ, ವ್ರಣ, ಧನವ್ಯಯ ಮೊದಲಾದ ಫಲಗಳುಂಟಾಗಿ ಪರ್ಯವಸಾನ ಉಂಟಾಗುವುದು, ಈ ವಿಷಯಗಳನ್ನು ಎಷ್ಟು ವಿಸ್ತಾರವಾಗಿ ಬರೆದರೂ ಬಾಹುಳ್ಯವಾದ ಪುಸ್ತಕವಾಗುದೇ ಹೊರತು ಅಭ್ಯಾಸಿಗಳಿಗೆ ಪ್ರಯೋಜನವಾಗಲಾರದು, ಸೂಕ್ಷ್ಮ ಬುದ್ಧಿಯುಳ್ಳವರು ಈ ಫಲಗಳನ್ನೆಲ್ಲಾ ತಮ್ಮ ಸ್ವಂತ ಬುದ್ಧಿಯಿಂದ ತಿಳಿಯತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ದಶಾಂತರ್ದಶಾಫಲ
ನಿರೂಪಣಂನಾಮ ಅಷ್ಟಮ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಸೋದಾಹರಣ ಯುಕ್ತಾಯಾಂ ದರ್ಶಾಂತರ್ದಶಾಫಲ
ನಿರೂಪಣಂ ನಾಮ ಅಷ್ಟಮ ಪ್ರಕರಣಂ.

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತಕಾಖ್ಯೆ

## ೯ನೇ ಅಷ್ಟಕವರ್ಗ ಪ್ರಕರಣಂ

ಅವತಾರಿಕೆ ।। ಅಷ್ಟಕವರ್ಗದ ಪ್ರಯೋಜನವು ಈ ಪ್ರಕರಣದಲ್ಲಿ ವಿವರಿಸಲ್ಪಡುತ್ತೆ. ಜನ್ಮಕಾಲದಲ್ಲಿ ಸೂರ್ಯಾದಿ ಸಪ್ತಗ್ರಹಗಳೂ ಚಾರವಶದಲ್ಲಿ ಯಾವ ಯಾವ ಕಾಲದಲ್ಲಿ ಯಾವ ಯಾವ ರಾಶಿಯಲ್ಲಿ ಸಂಚರಿಸುತ್ತಾರೋ, ಆ ರಾಶಿ ಸಂಚಾರ ಕಾಲದಲ್ಲಿ ಶುಭಾಶುಭ ಫಲಸೂಚಕವಾದ ಫಲವನ್ನು ಕೊಡುತ್ತಾರೋ ಅದು ಈ ಅಷ್ಟಕವರ್ಗ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಅಷ್ಟಕವರ್ಗದಿಂದ ಪರಾಶರರು ಆಯುರ್ದಾಯವನ್ನು ಸಹ ಹೇಳಿರುತ್ತಾರೆ. ಅದು ಮಹರ್ಷಿಪ್ರೋಕ್ತವಾಗಿದ್ದರೂ ವರಾಹ ಮಿಹಿರಾಚಾರ್ಯನ ಮತವಲ್ಲದ್ದರಿಂದ ಇಲ್ಲಿ ಉದಹರಿಸಲು ಅನಾವಶ್ಯಕವಾಯಿತು.

ಈ ಅಷ್ಟಕವರ್ಗವನ್ನು ಜಾತಕನಿಗೆ ಜನ್ಮಕಾಲದಲ್ಲಿ ಯಾವ ರಾಶಿಯಲ್ಲಿ ಗ್ರಹವಿರುವುದೋ, ಆ ಗ್ರಹಸ್ಥಾತ ಮೊದಲುಗೊಂಡು ಇಲ್ಲಿ ಹೇಳಿರುವ ಸ್ಥಾನಗಳಲ್ಲಿ ಬಿಂದು (ಶುಭ) ಫಲಸಂಜ್ಞೆಯಂತಲೂ, ಉಳಿದ ಸ್ಥಾನಗಳಲ್ಲಿ ರೇಖಾ ಬಂದರೆ ಅಶುಭ ಫಲವನ್ನು ಕೊಡುತ್ತಾರೆಂತಲೂ ತಿಳಿಯತಕ್ಕದ್ದು. ಯಾವರಾಶಿಯಲ್ಲಿಯೂ ೮ ಬಿಂದುವಿಗಿಂತ ಅಧಿಕವಾಗಿ ಬರುವುದಿಲ್ಲ. ಹಾಗೆಯೇ ರೇಖೆಯು ೮ಕ್ಕಿಂತ ಹೆಚ್ಚಾಗಿ ಬರುವುದಿಲ್ಲ. ಮತ್ತು ಈ ವಿಷಯವನ್ನು ೨ ಬಿಂದುವಿಗೆ ೧/೪ ಪಾಲು ಶುಭ, ೪ ಬಿಂದುವಿಗೆ ೧/೨ ಶುಭ, ೬ ಬಿಂದುವಿಗೆ ೩/೪ ಶುಭ, ೮ ಬಿಂದುವಿಗೆ ೧ ಪೂರ್ಣಶುಭವೆಂದು ತಿಳಿಯತಕ್ಕದ್ದು.

### ಸೂರ್ಯಾಷ್ಟಕವರ್ಗ ನಿರ್ಣಯಃ-ಬಿಂದು-೪೮

ಮೂಲ।। ಸ್ವಾದರ್ಕಃಪ್ರಥಮಾಯ ಬಂಧುನಿಧನ ದ್ವ್ಯಾಜ್ಞಾತಪೋದ್ಯೂನಗೋ।
ವಕ್ರಾತ್ಸ್ವಾದಿವತದ್ವದೇವ ರವಿಜಾ ಚ್ಛುಕ್ರಾತ್ ಸ್ಮರಾಂತ್ಯಾರಿಗಃ ।।
ಜೀವಾದ್ಧರ್ಮಸುತಾಯ ಶತ್ರುಷುದಶತ್ರ್ಯಾಯಾರಿಗಃ ಶೀತಗೋಃ ।
ರೇಷ್ವೇವಾಂತ್ಯತಪಃ ಸುತೇಷುಚ ಬುಧಾಲ್ಲಗ್ನಾತ್ಸ ಬಂಧ್ವಂತ್ಯಗಃ।।೧।।

ಟೀಕು।। ಸೂರ್ಯಾಷ್ಟಕವರ್ಗ ಕ್ರಮವು ಹೇಳಲ್ಪಡುತ್ತೆ. ಅರ್ಕಃ-ಸೂರ್ಯನು, ಸ್ವಾತ್-ಜನ್ಮಕಾಲದಲ್ಲಿ ತಾನಿದ್ದ ರಾಶಿಯಿಂದ, ಪ್ರಥಮಾಯ ಬಂಧುನಿಧನ ದ್ವ್ಯಾಜ್ಞಾತಪೋದ್ಯೂನಗಃ-ಪ್ರಥಮ-೧, ಆಯ-೧೧, ಬಂಧು-೪, ನಿಧನ-೮; ದ್ವಿ-೨, ಅಜ್ಞಾ-೧೦, ತಪಃ-೯, ದ್ಯೂನ-೭, ಅಂದರೆ ೧-೧೧-೪-೮-೨-೧೦- ೯-೭ ಈ ಸ್ಥಾನಗಳಲ್ಲಿ ಚಾರವಶದಿಂದ ಶುಭಃ-ಶುಭಫಲಪ್ರದನಾಗುವನು, ಅಂದರೆ ಈ ಮೇಲೆ

ಹೇಳಲ್ಪಡದ ಸ್ಥಾನಗಳಲ್ಲಿ ಅಶುಭಫಲ ಕೊಡತಕ್ಕವನೆಂದು ತಾತ್ಪರ್ಯ. ವಕ್ರಾತ್ ಸ್ವಾದಿವ-ಅಂಗಾರಕನು ತಾನಿರುವ ಸ್ಥಾನ ಮೊದಲುಗೊಂಡು, ಸೂರ್ಯನಂತೆ, ೧-೧೧-೪-೮-೨-೧೦-೯-೭ ಈ ಸ್ಥಾನಗಳಲ್ಲಿ ಸೂರ್ಯನು ಶುಭಫಲಪ್ರದನು, ಉಳಿದ ಸ್ಥಾನಗಳಲ್ಲಿ ಅಶುಭನು. ತದ್ವದೇವರವಿಜಾತ್- ಸೂರ್ಯನಿರುವ ಸ್ಥಾನಗಳಿಂದುಕ್ತವಾದಂತೆಯೇ, ಶನಿಯಿರುವ ಸ್ಥಾನದಿಂದ ೧-೧೧-೪-೮-೨-೧೦-೯-೭ ಈ ಸ್ಥಾನಗಳಲ್ಲಿ ಸೂರ್ಯನು ಶುಭಫಲಪ್ರದನು, ಶುಕ್ರಾತ್-ಶುಕ್ರನಿರುವ ಸ್ಥಾನದಿಂದ, ಸ್ಮರಾಂತ್ಯಾರಿಗಃ-೭-೧೨-೬ ಈ ಸ್ಥಾನಗಳಲ್ಲಿ ಸೂರ್ಯನು ಶುಭಫಲವನ್ನು ಕೊಡುವನು, ಜೀವಾದ್ಧರ್ಮಸುತಾಯ ಶತ್ರುಷು-ಜೀವಾತ್-ಬೃಹಸ್ಪತಿಯಿರುವ ಸ್ಥಾನದಿಂದ, ಧರ್ಮ-೯, ಸುತ-೫, ಆಯ-೧೧, ಶತ್ರುಷು-೬, ಈ ಸ್ಥಾನಗಳಲ್ಲಿ (೯-೫-೧೧-೬) ಸೂರ್ಯನು ಶುಭಫಲಪ್ರದನು, ದಶತ್ರ್ಯಾಯಾರಿಗಶ್ಶೀತಗೋಃ-ಶೀತಗೋಃ- ಚಂದ್ರನಿರುವ ಸ್ಥಾನದಿಂದ, ದಶ-೧೦, ತ್ರಿ-೩, ಆಯ-೧೧, ಅರಿ-೬ ಈ ನಾಲ್ಕು ಸ್ಥಾನಗಳಲ್ಲಿ ಸೂರ್ಯನು ಶುಭಫಲಪ್ರದನು, ಏಷ್ವೇವಾಂತ್ಯ ತಪಸ್ಸು ತೇಷುಚ ಬುಧಾತ್, ಬುಧಾತ್-ಬುಧನಿರುವ ಸ್ಥಾನದಿಂದ, ಚಂದ್ರನಿಗೆ ಹೇಳಲ್ಪಟ್ಟ, ಸ್ಥಾನಗಳಲ್ಲಿ, ಅಂತ್ಯ-೧೨, ತಪಃ-೯ ಸುತ ೫-೧೦-೩-೧೧-೬-೪ ಅಂದರೆ ಬುಧನಿಂದ ೧೦-೩-೧೧-೬-೧೨-೯-೫, ಈ ಸ್ಥಾನಗಳಲ್ಲಿ ಸೂರ್ಯನು ಶುಭಫಲವನ್ನು ಕೊಡುವನು. ಲಗ್ನಾತ್ಸಬಂಧ್ವಂತ್ಯಗಃ-ಲಗ್ನದಿಂದ ೧೦-೩-೧೧-೬-೧೨-೯-೫, ಈ ಸ್ಥಾನಗಳಲ್ಲಿ ಸೂರ್ಯನು ಶುಭಫಲವನ್ನು ಕೊಡುವನು. ಲಗ್ನಾತ್ಸ ಬಂಧ್ವಂತ್ಯಗಃ-ಲಗ್ನದಿಂದ ೧೦-೩-೧೧-೬-೪-೧೨, ಈ ಸ್ಥಾನಗಳಲ್ಲಿ ಸೂರ್ಯನು ಶುಭಕರನು, ಈ ವಿಷಯದಲ್ಲಿ-ಶ್ಲೋಕ॥ ಕೇಂದ್ರಾಯಾಷ್ಟ ದ್ವಿನವಸ್ವರ್ಕ ಸ್ವಾದರ್ಕಿ ಭೌಮಯೋಶ್ಶುಭಃ। ಷಟ್ಸಪ್ತಾಂತ್ಯೇಷು ಸಿತಾತ್ ಷಡಾಯಧೀಧರ್ಮಗೋಜೀವಾತ್ ॥೧॥ ಉಪಚಯಗೋರ್ಕ್ಯಾಂಶ್ಚಂದ್ರಾದುಪಚಯ ನವಮಾಂತ ಧೀಯುತಃ ಸೌಮ್ಯಾತ್ । ಲಗ್ನಾದುಪಚಯ ಬಂಧುವ್ಯವಸ್ಥಿತಃ ಶೋಭನಃಪ್ರೋಕ್ತಃ ॥೨॥ ಎಂದು ಲಘುಜಾತಕದಲ್ಲಿ ಹೇಳಲ್ಪಟ್ಟಿರುತ್ತೆ. ಈ ಅರ್ಥಕ್ಕೆ ವರರುಚಿ ವಾಕ್ಯ-

## ಸೂರ್ಯಾಷ್ಟಕ ವರ್ಗಬಿಂದು ೪೮

೧. ಸೂರ್ಯನಿಂದ-ಪುತ್ರೋವಾಸೋದಧಾನೋಯಂ ೧ - ೨ - ೪ - ೭ - ೮ (೯-೧೦-೧೧)

೨. ಚಂದ್ರನಿಂದ-ಗುಪ್ತಾನಯೇ-೩-೬-೧೦-೧೧,

೩. ಕುಜನಿಂದ - ಪುತ್ರೋವಾಸೋದಧಾನೋಯಂ ೧-೨-೪-೭-೮-೯, (೧೦-೧೧)

೪. ಬುಧನಿಂದ - ಗೋಮತಿಧನಪುತ್ರಂ-೩-೫-೬-೯-೧೦-೧೧-೧೨

೫. ಗುರುವಿನಿಂದ - ಶೇಷೋಧನ್ಯಃ-೫-೬-೯-೧೧,

೬. ಶುಕ್ರನಿಂದ - ತಥಾಶ್ರೀಃ-೬-೭-೧೨,

೭. ಶನಿಯಿಂದ - ಪುತ್ರೋವಾಸೋದಧಾನೋಯಂ-೧-೨-೪-೭-೮, (೯-೧೦-೧೧)

೮. ಲಗ್ನದಿಂದ - ಗರ್ವಿತೇನ ಪುತ್ರಃ-೩-೪-೬-೧೦-೧೧-೧೨.

ಈ ಪ್ರಕಾರ ಸೂರ್ಯನು ಆಯಾ ಗ್ರಹಗಳಿಂದ ಉಕ್ತವಾದ ಸ್ಥಾನಗಳಲ್ಲಿ ಶುಭಫಲವನ್ನು ಕೊಡುತ್ತಾನೆ. ಈ ಪ್ರಕಾರ ಅಷ್ಟಕವರ್ಗ ನ್ಯಾಸಮಾಡುವಾಗ ಶುಭಫಲಕ್ಕೆ (೦) ಅಶುಭಫಲಕ್ಕೆ (೧) ರೇಖಾ ಈ ಗುರುತನ್ನು ಉಪಯೋಗಿಸತಕ್ಕದ್ದು.

## ಇತಿ, ಸೂರ್ಯಾಷ್ಟಕವರ್ಗ ಬಿಂದುನಿರ್ಣಯಃ
## ಚಂದ್ರಾಷ್ಟಕವರ್ಗ ಬಿಂದುನಿರ್ಣಯಃ-ಬಿಂದು-೪೯

ಮೂಲ॥ ಲಗ್ನಾತ್ಷಟ್ತ್ರಿದಶಾಯುಗ ಸ್ವಧನಧೀಧರ್ಮೇಷು ಚಾರಾಚ್ಛಶೀ। ಸ್ವಾತ್ಸಾ
ಸ್ತಾದಿಷುಸಾಷ್ಟಸಪ್ತಸುರವೇಃ ಷಟ್‌ತ್ರ್ಯಾಯಧೀಸ್ಥೋಯಮಾತ್ ॥
ಧೀತ್ರ್ಯಾಯಾಷ್ಟಮ ಕಂಟಕೇಷುಶಶಿಜಾ ಜ್ಜೀವಾದ್ವ್ಯಯಾಯಷ್ಟಗಃ ॥
ಕೇಂದ್ರಸ್ಥಶ್ಚಸಿತಾತ್ತು ಧರ್ಮಸುಖಧೀತ್ರ್ಯಾಯಾಸ್ಪದಾನಂ ಗಗಃ ॥೨॥

ಟೀಕು॥ ಚಂದ್ರಾಷ್ಟಕವರ್ಗವು ಹೇಳಲ್ಪಡುತ್ತೆ. ಶಶೀ-ಚಂದ್ರನು, ಲಗ್ನಾತ್ ಲಗ್ನದಿಂದ, ಷಟ್ತ್ರಿದಶಾಯುಗಃ-೬-೩-೧೦-೧೧, ಈ ಸ್ಥಾನಗಳಲ್ಲಿ ಶುಭಾಫಲವನ್ನು ಕೊಡುತ್ತಾನೆ. ಸಧನಧೀಧರ್ಮೇಷುಚಾರತ್-ಆರಾತ್-ಅಂಗಾರಕನಿರುವ ಸ್ಥಾನದಿಂದ, ಸಧನಧೀಧರ್ಮೇಷು-೨-೫-೯-೬-೩-೧೦-೧೧ ಈ ಸ್ಥಾನಗಳಲ್ಲಿ ಚಂದ್ರನು ಶುಭಫಲವನ್ನು ಕೊಡುವನು. ಶಶೀ-ಚಂದ್ರನು, ಸ್ವಾತ್ಸಾಸ್ತಾದಿಷು-ಸ್ವಾತ್-ತಾನಿರುವ ಸ್ಥಾನದಿಂದ, ಸಾಸ್ತಾ ದಿಷು ೭-೧-೬-೩-೧೦-೧೧ ಈ ಸ್ಥಾನಗಳಲ್ಲಿ ಶುಭಫಲವನ್ನು ಕೊಡುವನು. ಸಾಷ್ಟಸಪ್ತಸುರವೇಃ-ಸೂರ್ಯನಿರುವ ಸ್ಥಾನದಿಂದ ಅಷ್ಟಮ ಸಪ್ತಮ ಲಗ್ನದಲ್ಲಿದ್ದರೆ ೬-೩-೧೦-೧೧-೮-೭ ಈ ಸ್ಥಾನಗಳಲ್ಲಿ ಚಂದ್ರನು ಶುಭಕರನು, ಶನಿಯಿರುವ ಸ್ಥಾನದಿಂದ ಷಟ್ತ್ರ್ಯಾಧೀಸ್ಥೋಯಮಾತ್-ಶನಿಯಿರುವ ಸ್ಥಾನದಿಂದ

೬-೩-೧೧-೫ ಈ ಸ್ಥಾನಗಳಲ್ಲಿ ಚಂದ್ರನು ಶುಭಫಲ ಕೊಡುವನು. ಬುಧನು, ಧೀತ್ರ್ಯಾಯಾಷ್ಟಮ ಕಂಟಕೇಷು ಶಶಿಜಾತ್, ಶಶಿಜಾತ್-ಬುಧನಿರುವ ಸ್ಥಾನನಿಂದ ೫-೩-೧೧-೮-೧-೪-೭-೧೦ ಈ ಸ್ಥಾನಗಳಲ್ಲಿ ಚಂದ್ರನು ಶುಭಫಲ ಕೊಡುವನು. ಜೀವಾದ್ವ್ಯಯಾಯಾಷ್ಟಗಃ ಕೇಂದ್ರಶ್ಚ ಜೀವಾತ್-ಬೃಹಸ್ಪತಿಯಿರುವ ರಾಶಿಯಿಂದ ೧೨-೮-೧೧-೧-೪-೭-೧೦ ಈ ಸ್ಥಾನಗಳಲ್ಲಿ ಶುಭಫಲವನ್ನು ಕೊಡುವನು. ಸಿತಾತ್ತುಧರ್ಮಸುಖಧೀತ್ರ್ಯಾಯಾ ಸ್ವದಾನಂಗಗಃ-ಸಿತಾತ್-ಶುಕ್ರನಿರುವ ಸ್ಥಾನದಿಂದ ೯-೪-೫-೩-೧೧-೧೦-೭ ಈ ಸ್ಥಾನಗಳಲ್ಲಿ ಶುಭಫಲ ಕೊಡುವನು. ಈ ವಿಷಯದಲ್ಲಿ ಲಘುಜಾತಕದಲ್ಲಿ-॥ಶ್ಲೋಕ॥ ಶಶ್ಯುಪಚಯೇಷು ಲಗ್ನಾತ್ಸ್ವಾದ್ಯಮುನಿಸ್ವಾತ್ಯು ತ್ತುಜಾತ್ಸನವಧೀಸ್ವಃ। ಸೂರ್ಯಾತ್ಸಾಷ್ಟ ಸ್ಮರಗ ಸ್ತ್ರಿಷಡಾಯಸುತೇಷು ಸೂರ್ಯಸುತಾತ್ ॥೪॥ ಜ್ಞಾತ್ಕೇಂದ್ರ ತ್ರಿಸುತಾಯಾಷ್ಟಮಗೋ ಗುರೋರ್ವ್ಯಯಾಯ ಕೇಂದ್ರೇಷು । ತ್ರಿಚತುಸ್ಸುತ ನವದಶಸಪ್ತಾಯಗಶ್ಚಂದ್ರಮಾ ಶ್ಶುಭಃಶುಕ್ರಾತ್ ॥೫॥ ಎಂದು ಹೇಳಲ್ಪಟ್ಟಿರುತ್ತೆ. ಜಾ, ಭ. ॥ಶ್ಲೋಕ॥ ಭೌಮಾತ್ ಗ್ಗೌರ್ನವಧೀಧನಪಚಯಗಃ ಷಟ್‌ತ್ರ್ಯಪ್ತಿಧೀಸ್ಥೋರ್ಕ ಜಾಲ್ಲಗ್ನಾಚ್ಚೋವಚಯೇ ರವೇರುಪಚಯಾ ಷ್ಟಾಸ್ತೇಷು ಶಸ್ತೋಬುಧಾತ್ । ಧೀರಂಧ್ರೇಷು ಚತುಷ್ಟಯತ್ರಿಷು ಗುರೋಃ ಕೇಂದ್ರಾಷ್ಟಲಾಭವ್ಯಯೇ ಸ್ವಾದೇಕೋಪಚಯಾಸ್ತಗ ಸ್ವಭವನಾಸ್ತಾಂಬು ತ್ರಿಕೋಣೇಬೃಗೋಃ ।

ವರರುಚಿ ವಾಕ್ಯ-

### ಚಂದ್ರಾಷ್ಟಕವರ್ಗ ಬಿಂದು ೪೯

೧. ಸೂರ್ಯನಿಂದ-ಗತಿಸ್ಸದಾನಿತ್ಯಂ-೩-೬-೭-೮-೧೦-೧೧,

೨. ಚಂದ್ರನಿಂದ-ಪಂಡಿತಸೂನು ಸ್ಯಾತ್-೧-೩-೬-೭-೧೦-೧೧,

೩. ಕುಜನಿಂದ-ತ್ರಿಗುಣಸ್ತುದಾನಯೇ-೨-೩-೫-೬-೯-೧೦-೧೧,

೪. ಬುಧನಿಂದ-ಯೋಗಿವಶಾಸ್ತು ಜನಯೋಂ-೧-೩-೪-೫-೭-೮-೧೦-೧೧,

೫. ಗುರುವಿನಿಂದ-ಪರ್ವಸ್ಥೋ ಜನೋಯತ್ರ-೧-೪-೭-೮-೧೦-೧೧-೧೨,

೬. ಶುಕ್ರನಿಂದ-ಲವಣಾಂಸಾಧುನಿತ್ಯಂ-೩-೪-೫-೭-೯-೧೦-೧೧,

೭. ಶನಿಯಿಂದ-ಗುಣೇತಸ್ಯ-೩-೫-೬-೧೧,

೮. ಲಗ್ನದಿಂದ-ಗೀತಜ್ಞೋಯಂ-೩-೬-೧೦-೧೧,

ಇತಿ, ಚಂದ್ರಾಷ್ಟಕವರ್ಗಂ

## ಕುಜಾಷ್ಟಕ ವರ್ಗಬಿಂದು ನಿರ್ಣಯಃ ಬಿಂದು-೩೯

ಮೂಲ॥ ವಕ್ರಸ್ತೂಪಚಯೇಷ್ವಿ ನಾತ್ತತನಯೇಷ್ವಾ ದ್ಯಾಧಿಕೇಷೂದಯಾ ।
ಚ್ಚಂದ್ರಾದ್ವಿಗ್ವಿಫಲೇಷು ಕೇಂದ್ರನಿಧನಪ್ರಾಪ್ತ್ಯರ್ಥಗಃಸ್ವಾಚ್ಛುಭಃ ॥
ಧರ್ಮಾಯಾಷ್ಟಮಕೇಂದ್ರ ಗೋರ್ಕತನಯಾ ದ್ಞಾತ್‌ಷಟ್
ತ್ರಿಧೀಲಾಭಗಃ। ಶುಕ್ರಾತ್ಷಡ್ವ್ಯಯಲಾಭ ಮೃತ್ಯುಷುಗುರೋಃ
ಕರ್ಮಾಂತ ಲಾಭಾರಿಷು ॥೩॥

ಟೀಕು॥ ಕುಜಾಷ್ಟಕವರ್ಗವು ಹೇಳಲ್ಪಡುತ್ತೆ-ವಕ್ರಸ್ತೂಪಚಯೇಷ್ವಿನಾ ತ್ತತನಯೇಷು-ಸೂರ್ಯನಿರುವ ಸ್ಥಾನದಿಂದ ೩-೬-೧೦-೧೧-೫ ಈ ಐದು ಸ್ಥಾನಗಳಲ್ಲಿ ಕುಜನು ಶುಭನು, ಅದ್ಯಾಧಿಕೇಷೂದಯಾತ್-ಲಗ್ನದಿಂದ ಪ್ರಥಮ ಸ್ಥಾನದಿಂದ ಉಪಚಯಗಳಲ್ಲಿ ೩-೬-೧೦-೧೧-೧ ಈ ಸ್ಥಾನಗಳಲ್ಲಿ ಕುಜನು ಶುಭನು, ಚಂದ್ರಾದ್ವಿಗ್ವಿಫಲೇಷು- ದಶಮಸ್ಥಾನವನ್ನು ಬಿಟ್ಟು ಉಳಿದ ಉಪಚಯಸ್ಥಾನಗಳಲ್ಲೂ ಅಂದರೆ ೩-೬-೧೧ ಈ ಸ್ಥಾನಗಳಲ್ಲಿ ಕುಜನು ಶುಭನು, ಕೇಂದ್ರನಿಧನ-ಪ್ರಾಪ್ತ್ಯರ್ಥಗಸ್ಯಾಚ್ಛುಭಃ-ಕುಜನು ಜನ್ಮಕಾಲದಲ್ಲಿ ತಾನಿರುವ ಸ್ಥಾನ ಮೊದಲುಗೊಂಡು ೧-೪-೭-೧೦-೮-೧೧-೨ ಈ ಸ್ಥಾನಗಳಲ್ಲಿ ಶುಭನು, ಧರ್ಮಾಯಾಷ್ಟಮ-ಕೇಂದ್ರಗೋರ್ಕತನಯಾತ್-ಶನಿಯಿರುವ ಸ್ಥಾನದಿಂದ ೯-೧೧-೮-೧-೪-೭-೧೦ ಈ ಸ್ಥಾನಗಳಲ್ಲಿ ಕುಜನು ಶುಭನು, ಜಾತ್‌ಷಟ್ತ್ರೀಲಾಬ್ಧಗಃ- ಬುದ್ಧನಿರುವ ಈ ಸ್ಥಾನದಿಂದ ೬-೩-೫-೧೧ ಈ ಸ್ಥಾನಗಳಲ್ಲಿ ಕುಜನು, ಶುಕ್ರನು, ಶುಕ್ರಾತ್ ಷಡ್ವ್ಯಯಲಾಭ ಮೃತ್ಯುಷು-ಶುಕ್ರನಿರುವ ಸ್ಥಾನದಿಂದ ೬-೧೨-೧೧-೮, ಈ ಸ್ಥಾನಗಳಲ್ಲಿ ಕುಜನು ಶುಭನು, ಗುರೋಃ ಕರ್ಮಾಂತ್ಯಲಾಭಾರಿಷು-ಗುರುವಿರುವ ಸ್ಥಾನದಿಂದ ೧೦-೧೨-೧೧-೬ ಈ ಸ್ಥಾನಗಳಲ್ಲಿ ಶುಭಫಲ ಕೊಡುತ್ತಾನೆ. ಈ ವಿಷಯಕ್ಕೆ-ಜಾ.ಭ.ಶ್ಲೋಕ॥ ಸ್ವಾದ್ಭೌಮೋಷ್ಟ ಚತುಷ್ಟಯಾಯ ಧನಗೋಜೇಂ ವಾತ್ಷಡಾಯಾಂತ್ಯಷೇ। ಚಂದ್ರಾದಾಯ ರಿಪುತ್ರಿಗೋ ಭೃಗುಸುತಾದಷ್ಟಾಂತ್ಯಲಾಭಾರಿಗಃ ॥ ಜ್ಞಾತ್ಪಂಚಾಯರಿಪು ತ್ರಿಗೋರ್ಕತನಯಾತ್ಕೇಂದ್ರಾಷ್ಟ ಧರ್ಮಾಂತ್ಯಗಃ। ಸೂರ್ಯಾಚ್ಛೋಪಯಾತ್ಮಜೇಷು ತನುತಸ್ತ್ರ್ಯಾಯಾದಿಖಾದ್ಯೇಶುಭಃ ॥೭॥ ಈ ವಿಷಯದಲ್ಲಿ ವರರುಚಿವಾಕ್ಯ-

## ಕುಜಾಷ್ಟಕ ವರ್ಗ ಬಿಂದು-೩೯

೧. ಸೂರ್ಯನಿಂದ-ಗುಣತನಯಃ- ೩-೫-೬-೧೦-೧೧,

೨. ಚಂದ್ರನಿಂದ-ಗತೋನ್ಯಃ- ೩-೬-೧೧,

೩. ಕುಜನಿಂದ-ಪುತ್ರಂವಾತ್ತುಜನಸ್ಯಾತ್:- ೧-೨-೪-೭-೮-೧೦-೧೧,

೪. ಬುಧನಿಂದ ಗೋಶತಂಸ್ಯಾತ್:- ೩-೫-೬-೧೧,

೫. ಗುರುವಿನಿಂದ-ತನಯಶ್ರೀಃ- ೬-೧೦-೧೧-೧೨,

೬. ಶುಕ್ರನಿಂದ-ತೇಜ್ಯೋನ್ಯತ್ರಃ- ೬-೮-೧೧-೧೨,

೭. ಶನಿಯಿಂದ-ಕವಿಃಸದಾಧನಿಕಃ- ೧-೪-೭-೮-೯-೧೦-೧೧,

೮. ಲಗ್ನದಿಂದ-ಕಾಲಸ್ತುನಿತ್ಯಂ-೧-೩-೬-೧೦-೧೧

ಇತಿ ಕುಜಾಷ್ಟಕವರ್ಗಃ

ಬುಧಾಷ್ಟಕವರ್ಗ ಬಿಂದುನಿರ್ಣಯಃ-ಬಿಂದು ೫೪

ಮೂಲ॥ ದ್ವ್ಯಾದ್ಯಾಯಾಷ್ಟ ತಪಃಸುಖೇಷು ಭೃಗುಜಾತ್ಸತ್ರ್ಯಾತ್ಮಜೇಷ್ವಿಂ ದುಜಃ। ಸಾಜ್ಞಾಸ್ತೇಷು ಯಮಾರಯೋ ರ್ವ್ಯಯರಿಪುಪ್ರಾಪ್ತ್ಯಷ್ಟಗೋವಾಕ್ಪತೇಃ ॥ ಧರ್ಮಾಯಾರಿಸುತವ್ಯಯೇಷುಸವಿತುಃ ಸ್ವಾತ್ಸಾದ್ಯಕರ್ಮತ್ರಿಗಃ । ಷಟ್ ಸ್ವಾಯಾಷ್ಟಸುಖಾಸ್ಪದೇಷುಹಿಮಗೋಃ ಸಾದ್ಯೇಷು ಲಗ್ನಾಚ್ಛುಭಃ ॥೪॥

ಟೀಕು॥ ಬುಧಾಷ್ಟಕವರ್ಗವು ಹೇಳಲ್ಪಡುತ್ತೆ. ಇಂದುಜಃ-ಬುಧನು, ಭೃಗುಜಾತ್-ಶುಕ್ರನಿರುವ ಸ್ಥಾನದಿಂದ, ಸತ್ರ್ಯಾತ್ಮಜೇಷು-ತೃತೀಯ ಪಂಚಮ ಸ್ಥಾನದಿಂದ ಕೂಡಿದ, ದ್ವ್ಯಾದ್ಯಾಯಾಷ್ಟ ತಪಸ್ಸುಖೇಷು-ದ್ವಿತೀಯ ಪ್ರಥಮೈಕಾದಶಾಷ್ಟಮನವಮ ಚತುರ್ಥ ಸ್ಥಾನಗಳಲ್ಲಿ, (ಅಂದರೆ ಶುಕ್ರನಿರುವ ಸ್ಥಾನದಿಂದ ೨-೧-೧೧-೮-೯-೪-೩-೫ ಈ ಸ್ಥಾನಗಳಲ್ಲಿ) ಬುಧನು ಶುಭನು. ಸಾಜ್ಞಾಸ್ತೇಷುಯಮಾರಯೋಃ-ದಶಮ ಸಪ್ತಮ ಸಹಿತ, ದ್ವ್ಯಾದ್ಯಾಯಾಷ್ಟ ತಪಸ್ಸುಖ ಸ್ಥಾನಗಳಲ್ಲಿ, ಅಂದರೆ ಶನಿಯಿರುವ ಸ್ಥಾನದಿಂದ ೨-೧-೧೧-೮-೯-೪-೧೦-೭ ಈ ಸ್ಥಾನಗಳಲ್ಲಿ, ಬುಧನು ಶುಭನು, ಇದರಂತೆಯೇ ಕುಜನಿರುವ ಸ್ಥಾನದಿಂದ ೨-೧-೧೧-೮-೯-೪-೧೦-೭ ಈ ಸ್ಥಾನಗಳಲ್ಲಿ ಬುಧನು ಶುಭನು, ವ್ಯಯರಿಪು ಪ್ರಾಪ್ತ್ಯಷ್ಟ ಗೋವಾಕ್ಪತೇಃ-ಬೃಹಸ್ಪತಿ ಇರುವ ಸ್ಥಾನದಿಂದ ದ್ವಾದಶ ಷಷ್ಠಲಾಭ ಅಷ್ಟಮ (ಅಂದರೆ ೧೨-೬-೧೧-೮ ಈ ಸ್ಥಾನಗಳಲ್ಲಿ ಬುಧನು ಶುಭನು.) ಧರ್ಮಾಯಾರಿ ಸುತವ್ಯಯೇಷು ಸವಿತುಃ-ಸೂರ್ಯನಿರುವ ಸ್ಥಾನದಿಂದ ನವಮಲಾಭ ಷಷ್ಠ ಪಂಚಮ ದ್ವಾದಶಗಳಲ್ಲಿ (ಅಂದರೆ (೯-೧೧-೬-೫-೧೨ ಈ ಸ್ಥಾನಗಳಲ್ಲಿ ಬುಧನು ಶುಭನು). ಸ್ವಾತ್ಸಾದ್ಯಕರ್ಮತ್ರಿಗಃ-ಸ್ವಾತ್-ತಾನಿರುವ ಸ್ಥಾನದಿಂದ, ಸಾದ್ಯಕರ್ಮತ್ರಿಗಃ-ಪ್ರಥಮ ದಶಮ ತೃತೀಯ ಸಹಿತ, ಧರ್ಮಾಯಾರಿ ಸುತವ್ಯಯಸ್ಥಾನ (ಅಂದರೆ ಜನ್ಮಕಾಲದಲ್ಲಿ ಬುಧನು ತಾನಿರುವ ರಾಶಿಯಿಂದ ೯-೧೧-೬-೫-೧೨-೧-೧೦-೩ ಈ ಸ್ಥಾನಗಳಲ್ಲಿ

ಶುಭನು), ಷಟ್ಸ್ವಾಯಾಷ್ಟ ಸುಖಾಸ್ಪದೇಷು ಹಿಮಗೋಃ-ಚಂದ್ರನಿರುವ ಸ್ಥಾನದಿಂದ ಆರು ಧನಲಾಭ, ಅಷ್ಟಮ ಸುಖ, ಕರ್ಮ ೬-೨-೧೧-೮-೪-೧೦ ಈ ಸ್ಥಾನಗಳಲ್ಲಿ ಬುಧನು ಶುಭನು, ಸಾದ್ಯೇಷು ಲಗ್ನಾಚ್ಛುಭಃ-ಲಗ್ನದಿಂದ ಪ್ರಥಮ ಸಹಿತವಾದ ಷಟ್‌ಸ್ವಾಯಾಷ್ಟ ಸುಖಾಸ್ಪದ ಸ್ಥಾನಗಳಲ್ಲಿ (ಅಂದರೆ ಲಗ್ನದಿಂದ ೬-೨-೧೧-೮-೧೦-೧-೪ ಈ ಸ್ಥಾನಗಳಲ್ಲಿ ಬುಧನು ಶುಭಫಲವನ್ನು ಕೊಡುವನು) ಈ ವಿಷಯಕ್ಕೆ ಜಾ.ಭ. ಶ್ಲೋಕ॥ ಶುಕ್ರಾದಾಸುತಧರ್ಮಲಾಭ ಮೃತಿಗಃ ಸೌಮ್ಯಃ ಕುಜಾರ್ಕ್ಯೋಸ್ತಪಃ । ಕೇಂದ್ರಾಯಾಷಧನೇಸ್ವತೋಪ್ಯುಪಚಯಾಂತ್ಯೈಕ ತ್ರಿಕೋಣೇಶುಭಃ ॥ ಕೋಣಾಂತ್ಯಾರಿಭವೇರವೇ ರಿಪುಭವಾಷ್ಟಾಂತ್ಯೇ ಗುರೋರಿಂದುತಃ । ಸ್ವಾಯಾಷ್ಟಾರಿ ಸುಖಾರ್ಥಗಃ ಸುಖಭವಾಷ್ಟೈಕೋಂಬು ಷಟ್ಸೂದಯಾತ್ ॥೮॥ ಎಂದು ಹೇಳಿದೆ.

## ವರರುಚಿವಾಕ್ಯ-ಬುಧಾಷ್ಟಕವರ್ಗ-ಬಿಂದು-೫೪

೧. ಸೂರ್ಯನಿಂದ-ಶೇಷೋಧನ್ಯಶ್ರೀ-೫-೬-೯-೧೧-೧೨.

೨. ಚಂದ್ರನಿಂದ-ರವಿಸ್ತೇಜೋನಿತ್ಯಂ-೨-೪-೬-೮-೧೦-೧೧,

೩. ಕುಜನಿಂದ-ಪುತ್ರವಾಸೋ ಧಧಾನೋಯಂ-೧-೨-೪-೭-೮-೯-೧೦-೧೧

೪. ಬುಧನಿಂದ-ಯಾಗಶೇಷೋ ಧನಪಾತ್ರಂ-೧-೩-೫-೬-೯-೧೦-೧೧-೧೨

೫. ಗುರುವಿನಿಂದ-ತೇಜಃಪುತ್ರಃ-೬-೮-೧೧-೧೨.

೬. ಶುಕ್ರನಿಂದ-ಪುತ್ರಲಾಭೋ ಮಹಾಧನ್ಯಃ ೧-೨-೩-೪-೫-೮-೯-೧೧,

೭. ಶನಿಯಿಂದ-ಪುತ್ರವಾಸೋ ಧಧಾನೋಯಂ-೧-೨-೪-೭-೮-೯-೧೦-೧೧

೮. ಲಗ್ನದಿಂ-ಪುತ್ರಮತೀ ಜಾನಕೀ-೧-೨-೪-೬-೮-೧೦-೧೧

ಇತಿ ಬುಧಾಷ್ಟಕವರ್ಗಃ

## ಗುರ್ವಷ್ಟಕವರ್ಗ-ಬಿಂದುನಿರ್ಣಯಃ-ಬಿಂದು-೫೬

ಮೂಲ॥ ದಿಕ್ಸ್ವಾದ್ಯಾಷ್ಟಮದಾಯ ಬಂದುಷುಕುಜಾ ತ್ಸ್ವಾತ್ವತ್ರಿಕೇಷ್ವಂ ಗಿರಾಃ।
ಸೂರ್ಯಾತ್ಸತ್ರಿನವೇಷು ಧೀಸ್ವನವದಿಗ್ಲಾಭಾರಿಗೋಭಾರ್ಗವಾತ್॥
ಜ್ಯಾಯಾಯಾರ್ಥನವಾತ್ಮಜೇಷು ಹಿಮಗೋರ್ಮಂದಾತ್ರಿಷಡ್ಢಿವ್ಯಯೇ ।
ದಿಗ್ಧೀಷಟ್ ಸ್ವಾಸುಖಾಯುಪೂರ್ವನವಗೋ ಜ್ಞಾತ್ಸಸ್ಮರಶ್ಚೋ
ದಯಾತ್ ॥೫॥

ಟೀಕು॥ ಬೃಹಸ್ಪತ್ಯಷ್ಟಕವರ್ಗವು ಹೇಳಲ್ಪಡುತ್ತೆ-ಅಂಗೀರಾ-ಬೃಹಸ್ಪತಿಯು ದಿಕ್ಸ್ವದ್ವ್ಯಾಷ್ಟಮದಾಯ ಬಂಧುಷುಕುಜಾತ್-ಅಂಗಾರಕನಿರುವ ಸ್ಥಾನದಿಂದ, ದಶಮ ದ್ವಿತೀಯ, ಲಗ್ನ ಅಷ್ಟಮ ಸಪ್ತಮಲಾಭ ಸುಖ, ಅಂದರೆ ಜನ್ಮಕಾಲದಲ್ಲಿ ಅಂಗಾರಕನಿರುವ ಸ್ಥಾನದಿಂದ ೧೦-೨-೧-೮-೭-೧೧-೪, ಈ ಸ್ಥಾನಗಳಲ್ಲಿ ಚಾರವಶದಿಂದ ಶುಭಫಲವನ್ನು ಕೊಡುವನು. ಸೂರ್ಯಾತ್ಸತ್ರಿನವೇಷು-ಸೂರ್ಯನಿರುವ ಸ್ಥಾನದಿಂದ ತೃತೀಯ ನವಮ ಸಹ ಕುಜನ ಪ್ರಕಾರವೇ ೧೦-೨-೧-೮-೭-೧೧-೪-೩-೯- ಈ ಸ್ಥಾನಗಳಲ್ಲಿ ಗುರು ಶುಭ ಫಲವನ್ನು ಕೊಡುವನು. ಧೀಸ್ವನವ ದಿಗ್ಲಾಭಾರಿಗೋಭಾರ್ಗವಾತ್-ಶುಕ್ರನಿರುವ ಸ್ಥಾನದಿಂದ ೫-೨-೯-೧೦-೧೧-೬ ಈ ಸ್ಥಾನಗಳಲ್ಲಿ ಗುರು ಶುಭಕರನು. ಜ್ಯಾಯಾಯಾರ್ಥ ನವಾತ್ಮಜೇಷುಹಿಮಗೋಃ-ಚಂದ್ರನಿರುವ ರಾಶಿ ಮೊದಲುಗೊಂಡು ೭-೧೧-೨-೯-೫, ಈ ಸ್ಥಾನಗಳಲ್ಲಿ ಬೃಹಸ್ಪತಿಯು ಶುಭಕರನು. ಮಂದಾತ್ರಿಷಡ್ಢೀವ್ಯಯೇ-ಶನಿ ಇರುವ ಸ್ಥಾನದಿಂದ ೩-೬-೫-೧೨, ಈ ಸ್ಥಾನಗಳಲ್ಲಿ ಗುರು ಶುಭಕರನು, ದಿಗ್ಧೀಷಟ್ಸ್ವಸುಖಾಯ ಪೂರ್ವನವಗೋಜ್ಞಾತ್-ಬುಧನಿರುವ ರಾಶಿಯಿಂದ ೧೦-೫-೬-೨-೪-೧೧-೧-೯ ಈ ಸ್ಥಾನಗಳಲ್ಲಿ ಗುರು ಶುಭಕರನು, ಸಸ್ಮರ ಶ್ಚೋದಯಾತ್-ಲಗ್ನಸ್ಥಾನದಿಂದ ಬುಧನ ಸ್ಥಾನಗಳಂತೆಯೇ ಅಂದರೆ ೧೦-೫-೭-೨-೪-೧೧-೧-೯-೭ ಈ ಸ್ಥಾನಗಳಲ್ಲಿ ಬೃಹಸ್ಪತಿಯು ಶುಭಫಲವನ್ನು ಕೊಡುವನು. ಈ ವಿಷಯದಲ್ಲಿ ಜಾತಕಾಭರಣದಲ್ಲಿ ॥ಶ್ಲೋಕ॥ ಸ್ವಾತ್ಸ್ವಾಯಾಷ್ಟ ತ್ರಿಕೇಂದ್ರ ಸ್ವನವದಶ ಭವಾರಾತಿಧೀಸ್ಥಶ್ಚ ಶುಕ್ರಾಲ್ಲಗ್ನಾತ್ಕೇಂದ್ರಾಯ ಧೀಷಟ್ ಶ್ವನವಸುಖ ಕುಜಾತ್ ಸ್ವಾಷ್ಟಕೇಂದ್ರಾಯ ಈಜ್ಯಃ । ಇಂದೋರ್ದ್ಯೂನೋರ್ಥ ಕೋಣಾಪ್ತಿಷು ಸಹ ಜನವಾಷ್ಟಾಯ ಕೇಂದ್ರಾಷ್ಟಗೋರ್ಕಾಜ್ಜ್ಞಾತ್ಕೋಣದ್ವ್ಯಾಯ ಖಾದ್ಯಾಂಬು ಧಿರಿಪುಷುಶ ನೇಸ್ತ್ರ್ಯಂತ್ಯಧೀ ಷಟ್ಸುಶಸ್ತಃ ॥೯॥ ಈ ವಿಷಯದಲ್ಲಿ ವರರುಚಿ ವಾಕ್ಯ-

## ಗುರೋರಷ್ಟಕವರ್ಗ ಬಿಂದುನಿರ್ಣಯಃ-೫೬

೧. ಸೂರ್ಯನಿಂದ-ಪುತ್ರಲಾಭಸ್ಸದಾ ಧನಂಸ್ಯಾತ್ ೧-೨-೩-೪-೭-೮-೯-(೧೦-೧೧,

೨. ಚಂದ್ರನಿಂದ-ಗ್ರಾಮಸಾಧುಸ್ಯಾತ್ ೨-೫-೭-೯-೧೧

೩. ಕುಜನಿಂದ-ಪುತ್ರೋವಾ ಸೋಜನೋಯಂ ೧-೨-೪-೭-೮-೧೦-೧೧,

೪. ಬುಧನಿಂದ-ಪುತ್ರವಿಂಶತಿ ಧನಿನಃ ೧-೨-೪-೫-೬-೯-೧೦-೧೧,

೫. ಗುರುವಿನಿಂದ-ಪುತ್ರಲಾಭಃ ಸದಾನಿತ್ಯಂ ೧-೨-೩-೪-೭-೮-೧೦-೧೧,

೬. ಶುಕ್ರನಿಂದ-ಶ್ರೀಮತಿಧನಿನಃ-೨-೫-೬-೯-೧೦-೧೧,

೭. ಶನಿಯಿಂದ-ಗುಣೇಚಂದ್ರಃ-೩-೫-೬-೧೨,

೮. ಲಗ್ನದಿಂದ-ಪುತ್ರವಿಂಶತಿಃ ಸಾಧುನಿತ್ಯಂ-೧-೨-೪-೫-೬-೭-೯-೧೦-೧೧,

## ಇತಿ ಗುರ್ವಷ್ಟಕವರ್ಗಃ

## ಅಥ ಶುಕ್ರಾಷ್ಟಕವರ್ಗ ಬಿಂದುನಿರ್ಣಯಃ-ಬಿಂದು-೫೨

ಮೂಲ।। ಲಗ್ನಾದಾಸುತ ಲಾಭರಂದ್ರ ನವಗ್ಾಃಸ್ಸಾಂತ್ಯಃ ಶಶಾಂಕಾತ್ಸಿತಃ।
ಸ್ವಾತ್ಸಾಜ್ಞೇಷು ಸುಖತ್ರಿಧೀನವ ದಶಚ್ಛಿದ್ರಾಪ್ತಿಗಸ್ಸೂರ್ಯಜಾತ್।
ರಂಧ್ರಾಯವ್ಯಯ ಗೋರಪೇರ್ನವದಶ ಪ್ರಾಪ್ತ್ಯಷ್ಟಧೀಸ್ಥೋ ಗುರೋ।
ಜ್ಞಾರ್ದ್ಧೀತ್ರ್ಯಾಯ ನವಾರಿಗಸ್ತ್ರಿನವಷಟ್ ಪುತ್ರಾಗವಾಂತ್ಯಃ
ಕುಜಾತ್ ।।೬।।

ಟೀಕು।। ಶುಕ್ರಾಷ್ಟಕವರ್ಗವು ಹೇಳಲ್ಪಡುತ್ತೆ. ಲಗ್ನಾದಾಸುತಲಾಭರಂಧ್ರ ನವಗಾಃ-ಲಗ್ನ ಮೊದಲುಗೊಂಡು ೧-೨-೩-೪-೫-೧೧-೮-೯ ಈ ಸ್ಥಾನಗಳಲ್ಲಿದ್ದ, ಸಿತಃ-ಶುಕ್ರನು ಶುಭಕರನು. ಸಾಂತ್ಯಶ್ಶಶಾಂಕಾತ್ ಚಂದ್ರನಿರುವ ಸ್ಥಾನದಿಂದ ೧-೨-೩-೪-೫-೧೧-೮-೯-೧೨ ಈ ಸ್ಥಾನಗಳಲ್ಲಿ ಶುಕ್ರನು ಶುಭಕರನು, ಸ್ವಾತ್ಸಾಜ್ಞೇಷು ಶುಕ್ರನು ಜನ್ಮಕಾಲದಲ್ಲಿ ತಾನಿದ್ದ ರಾಶಿಸಹಿತ ೧-೨-೩-೪-೫-೧೧-೮-೯-೧೦ ಈ ಸ್ಥಾನಗಳಲ್ಲಿ ಶುಭಕರನು, ಸುಖತ್ರಿಧೀನವದಶ ಚ್ಛಿದ್ರಾಪ್ತಿಗಸ್ಸೂರ್ಯಜಾತ್-ಶನಿಯಿರುವ ಸ್ಥಾನದಿಂದ ೪-೩-೫-೯-೧೦-೮-೧೧ ಈ ಸ್ಥಾನಗಳಲ್ಲಿ ಶುಕ್ರನು ಶುಭಕರನು, ರಂಧ್ರಾಯವ್ಯಯಗೋರವೇ-ಸೂರ್ಯನಿರುವ ಸ್ಥಾನದಿಂದ ೮-೧೧-೧೨ ಈ ಸ್ಥಾನಗಳಲ್ಲಿ ಶುಕ್ರನು ಶುಭನು, ನವದಶ ಪ್ರಾಪ್ತ್ಯಷ್ಟಧೀಸ್ಥೋಗುರೋಃ - ಬೃಹಸ್ಪತಿ ಇರುವ ಸ್ಥಾನದಿಂದ ೯-೧೦-೧೧-೮-೫ ಈ ಸ್ಥಾನಗಳಲ್ಲಿ ಶುಕ್ರನು ಶುಭನು, ಜ್ಞಾದ್ಧೀತ್ರ್ಯಾಯನ ವಾರಿಗಃ-ಬುಧನಿರುವ ಸ್ಥಾನದಿಂದ ೫-೩-೧೧-೯-೬ ಈ ಸ್ಥಾನಗಳಲ್ಲಿ ಶುಕ್ರನು ಶುಭಕರನು, ತ್ರಿನವಷಟ್ ಪುತ್ರಾಗಮಾಂತ್ಯಃ ಕುಜಾತ್ ಕುಜನಿರುವ ಸ್ಥಾನದಿಂದ ೩-೯-೬-೫-೧೧-೧೨ ಈ ಸ್ಥಾನಗಳಲ್ಲಿ ಶುಕ್ರನು ಶುಭಫಲವನ್ನು ಕೊಡುವನು, ಈ ವಿಷಯದಲ್ಲಿ ಶ್ಲೋಕ ।।ಜಾ.ಭ.।। ಸಾಸ್ತಾಂತ್ಯಾಹಿತವರ್ಜಿತೇಷು ತನುತಃ ಶುಕ್ರೋವಿನಾಸ್ತಾರಿಖಂ । ಚಂದ್ರಾತ್ಸಾನ್ತ್ಯಮದನವ್ಯಯಾರಿರಹಿತೇ ಷರ್ಕಾದ್ವ್ಯಯಾಷ್ಟಾಪ್ತಿಷು ।। ಮಂದಾದ್ವ್ಯೇಕರಿಪುವ್ಯಯಾಸ್ತರಹಿತೇ ಷ್ವೀಜ್ಯಾನ್ನವಾಯಾಷ್ಟಧೀಖೇ ದ್ವಾಕ್ಕೋಣ ಭವತ್ರಿಷಟ್ ಸುಭವಧೀತ್ರ್ಯಂತ್ಯಾರಿ ಧರ್ಮೇಕುಜಾತ್ ।। ವರರುಚಿ ವಾಕ್ಯ-

## ಅಷ್ಟಕವರ್ಗಬಿಂದು-೫೨

೧. ರವಿಯಿಂದ-ಜಯಶ್ರೀಃ-೮-೧೧-೧೨-

೨. ಚಂದ್ರನಿಂದ-ಪುತ್ರಗಾಢಮದಾಧಿಪಶ್ರೀಃ- ೧-೨-೩-೪-೫-೮-೯-೧೧-೧೨

೩. ಕುಜನಿಂದ-ಸೋಮಾಂಸ್ತು ಧನ್ಯೋತ್ರ-೩-೫-೬-೯-೧೧-೧೨-

೪. ಬುಧನಿಂದ-ಗುಣೇಷು ಧನ್ಯಃ-೩-೫-೬-೯-೧೧-

೫. ಗುರುವಿನಿಂದ-ಮಹಾಧನಾಢ್ಯಃ-೫-೮-೯-೧೦-೧೧-

೬.ಶುಕ್ರನಿಂದ-ಪುತ್ರಗರ್ಭೋಮಹಾಧನಸ್ಯ ೧-೨-೩-೪-೫-೮-೯-೧೦-೧೧

೭. ಶನಿಯಿಂದ-ಲಾಭೋಮಹಾಧನಾನ್ನೈಃ-೩-೪-೫-೮-೯-೧೦-೧೧

೮. ಲಗ್ನದಿಂದ-ಪುತ್ರಲಾಭೋ ಮಹಾಧನ್ಯಃ-೧-೨-೩-೪-೫-೮-೯-೧೧

ಇತಿ ಶುಕ್ರಾಷ್ಟಕವರ್ಗಬಿಂದು ನಿರ್ಣಯಃ

## ಶನ್ಯಷ್ಟಕವರ್ಗಬಿಂದು ನಿರ್ಣಯಃ-ಬಿಂದು-೩೯

ಮೂಲ|| ಮಂದಸ್ಸ್ವಾತ್ರಿ ಸುತಾಯ ತ್ರುಷು ಶುಭಸ್ಸಾಜ್ಞಾಂತ್ಯಗೋ ಭೂಮಿಜಾ । ತ್ಕೇಂದ್ರಾಯಾಷ್ಟ ಧನ್ವೇಷ್ಟಿನಾದುಪಚಯೇಷ್ವಾದ್ಯೇ ಸುಖೇಚೋದಯಾತ್ ॥ ಧರ್ಮಯಾರಿದಶಾಂತ್ಯ ಮೃತ್ಯುಷು ಬುಧಾಚ್ಚಂದ್ರಾ ತ್ರಿಷಳ್ಳಾಭಗಃ । ಷಷ್ಠಾಯಾಂತ್ಯಗತಸ್ಸಿತಾತ್ಸುರ ಗುರೋಃ ಪ್ರಾಪ್ಯಂತ್ಯಧೀಶತ್ರುಷು ॥೭॥

ಟೀಕು|| ಶನ್ಯಷ್ಟಕವರ್ಗಬಿಂದು ನಿರ್ಣಯವು ಹೇಳಲ್ಪಡುತ್ತೆ । ಮಂದಸ್ಸ್ವಾತ್ರಿಸುತಾಯ ಶತ್ರುಷು ಶುಭಃ-ಶನೈಶ್ಚರನು ಜನ್ಮಕಾಲದಲ್ಲಿ ತಾನಿರುವ ಸ್ಥಾನದಿಂದ ೩-೫-೧೧-೬ ಈ ಸ್ಥಾನಗಳಲ್ಲಿ ಶುಭನು, ಸಾಜ್ಞಾಂತ್ಯಗೋ ಭೂಮಿಜಾತ್-ಕುಜನಿರುವ ಸ್ಥಾನದಿಂದ, ೩-೫-೧೧-೬-೧೦-೧೨ ಈ ಸ್ಥಾನಗಳಲ್ಲಿ ಶನಿಯು ಶುಭನು, ಕೇಂದ್ರಾಯಾಷ್ಟಧನೇಷ್ಟಿನಾತ್-ಸೂರ್ಯನಿರುವ ಸ್ಥಾನದಿಂದ ೧-೪-೭-೧೦-೧೧-೮-೨ ಈ ಸ್ಥಾನಗಳಲ್ಲಿ ಶನಿಯು ಶುಭನು, ಉಪಚಯೇಷ್ವಾದ್ಯೇ ಸುಖೇಚೋದಯಾತ್-ಜನ್ಮಲಗ್ನದಿಂದ ೩-೬-೧೦-೧೧- ೧-೪ ಈ ಸ್ಥಾನಗಳಲ್ಲಿ ಶನಿಯು ಶುಭಕರನು, ಧರ್ಮಾಯಾರಿ ದಶಾಂತ್ಯಮೃತ್ಯುಷು ಬುಧಾತ್-ಬುಧನಿರುವ ಸ್ಥಾನದಿಂದ, ೯-೧೧-೬-೧೦-೧೨-೮ ಈ ಸ್ಥಾನಗಳಲ್ಲಿ ಶನಿ ಶುಭಕರನು, ಚಂದ್ರಾತ್ರಿಷಳ್ಳಾಗಭಗಃ ಚಂದ್ರನಿರುವ ಸ್ಥಾನದಿಂದ ೩-೬-೧೧ರಲ್ಲಿ ಶನಿಯು

ಶುಭಕರನು, ಷಷ್ಠಾಯಾಂತ್ಯಗತಃಸ್ಸಿತಾತ್ ಶುಕ್ರನಿರುವ ಸ್ಥಾನದಿಂದ ೬-೧೧-೧೨ ಈ ಸ್ಥಾನಗಳಲ್ಲಿ ಶನಿಯು ಶುಭಕರನು, ಸುರಗುರೋಃ ಪ್ರಾಪ್ಯಂತ್ಯಧೀಶತ್ರುಷ-ಬೃಹಸ್ಪತಿಯು ಇರುವ ಸ್ಥಾನದಿಂದ-೧೧-೧೨-೫-೬ ಈ ಸ್ಥಾನಗಳಲ್ಲಿ ಶನಿಯು ಶುಭಕರನು, ಈ ವಿಷಯದಲ್ಲಿ ಜಾ, ಭ. ।।ಶ್ಲೋಕ।। ಸ್ವಾನ್ಮಂದ ಸ್ತ್ರಿಷಡಾಯಧೀಷು ರವಿತೋಷ್ಟಾಯಾದ್ಧಿಕೇಂದ್ರೇ ಶುಭೋ । ಭೌಮಾತ್ಸಾಯ ಷಡಂತ್ಯಧೀತ್ರಿಷುತನೋಃ ಖಾಯಾಂಬುಷಟ್ತ್ರ್ಯೇಕಗಃ ।। ಜ್ಞಾದಾಯಾರಿ ನವಾಂತ್ಯಖಾಷ್ಟಸು ಭೃಗೋರಂತ್ಯಾಯ ಷಟ್‌ಸಂಸ್ಥಿತ । ಶ್ಚಂದ್ರಾದಾಯರಿಪುತ್ರಿಗಃ ಸುರುಗುರೋರಂತ್ಯಾಯದೀ ಶತ್ರುಗಃ ।।೧।।

ವರರುಚಿ ವಾಕ್ಯಃ-

## ಶನ್ಯಷ್ಟಕವರ್ಗ ಬಿಂದು-೩೯

೧. ಸೂರ್ಯನಿಂದ-ಪುತ್ರವಾಸೋ ಜನಾಢ್ಯಂ-೧-೨-೪-೭-೮-೧೦-೧೧,
೨. ಚಂದ್ರನಿಂದ-ಗೀತಾಢ್ಯಃ-೩-೬-೧೧,
೩. ಕುಜನಿಂದ-ಲಕ್ಷ್ಮೀತನಯೋತ್ರ-೩-೫-೬-೧೦-೧೧-೧೨,
೪. ಬುಧನಿಂದ-ಧನಪಾತ್ರಂ ತೇಜೋ-೬-೮-೯-೧೦-೧೧-೧೨,
೫. ಗುರುವಿನಿಂದ-ಶೋಷೋನ್ನತ್ರ-೫-೬-೧೧-೧೨,
೬. ಶುಕ್ರನಿಂದ-ತಸ್ಯಶ್ರೀಃ-೬-೧೧-೧೨,
೭. ಶನಿಯಿಂದ-ಲಕ್ಷ್ಮೀಸ್ತಸ್ತಂ-೩-೫-೬-೧೧೧,
೮. ಲಗ್ನದಿಂದ-ಯೋಗವಿತ್ತನಯೇ-೧-೩-೪-೬-೧೦-೧೧,

ಇತಿ ಶನ್ಯಷ್ಟಕವರ್ಗಬಿಂದು ನಿರ್ಣಯಃ

## ಅಷ್ಟಕವರ್ಗ ಫಲನಿರ್ಣಯಃ

ಮೂಲ।। ಇತಿ ನಿಗದಿತಮಿಷ್ಟಂನೇಷ್ಟಮನ್ಯೇದ್ವಿಶೇಷಾ । ದಧಿಕಫಲವಿಪಾಕಂ ಜನ್ಮಭಾತ್ತತ್ರದದ್ಯುಃ ।। ಉಪಚಯಯಗೃಹ ಮಿತ್ರಸ್ವೋಚ್ಚಗೈಃ। ಪುಷ್ಟಮಿಷ್ಟಂ ತ್ವಪಚಯಗೃಹನೀ ಚಾರಾತಿಗೈರ್ನೇಷ್ಟಸಂಪತ್ ।।೮।।

ಅವತಾರಿಕೆ।। ಅಷ್ಟಕವರ್ಗ ಫಲನಿರ್ಣಯ ಮಾಡುವ ಕ್ರಮವು ಹೇಳಲ್ಪಡುತ್ತೆ.

ಟೀಕು।। ಇತಿ-ಈ ಪ್ರಕಾರವಾಗಿ, ನಿಗದಿತಂ-ಹೇಳಲ್ಪಟ್ಟ ಸ್ಥಾನಗಳಲ್ಲಿ ಇಷ್ಟಂ... ಶುಭಫಲಪ್ರದವು, ಅನ್ಯತ್-ಇತರವಾದ ಸ್ಥಾನಗಳು ಅಂದರೆ... ಅಷ್ಟಕ ವರ್ಗಬಿಂದುಗಳು, ಬಾರದೇ ಇರುವ ಸ್ಥಾನಗಳಲ್ಲಿ, ನೇಷ್ಟಂ... ಅಶುಭಫಲಪ್ರದ ವೆಂದು ತಿಳಿಯಬೇಕು. ಇದಕ್ಕೆ ಉದಾಹರಣೆ-ಸ್ವಾದರ್ಕಃ ಪ್ರಥಮಾಯ ಬಂದು

ನಿಧನದ್ವ್ಯಾಜ್ಞಾತಪೋದ್ಯೂನಗಃ ॥ ಇತ್ಯಾದಿ ಶ್ಲೋಕಗಳಲ್ಲಿ ಉಕ್ತವಾಗಿರುವಂತೆ ೧-೨-೪-೭-೮-೯-೧೦-೧೧ ಈ ಸ್ಥಾನಗಳಲ್ಲಿ ಸೂರ್ಯನು ಬಿಂದು ರೂಪಕವಾಗಿ ಶುಭಫಲವನ್ನು ಕೊಡುತ್ತಾನೆ. ಇಲ್ಲಿ ಅನುಕ್ತವಾದ ೩-೫-೬-೧೨ ಈ ಸ್ಥಾನಗಳಲ್ಲಿ ಸೂರ್ಯನು ತತ್ಕಾಲ ಸಂಚಾರ ಕಾಲದಲ್ಲಿ ರೇಖಾರೂಪವಾದ ಅಶುಭಫಲವನ್ನು ಕೊಡುತ್ತಾನೆ. ಜನ್ಮಭಾತ್-ಜನ್ಮಕಾಲದಲ್ಲಿ ಯಾವಯಾವ ಸ್ಥಾನದಲ್ಲಿ ಯಾವಯಾವ ಗ್ರಹಗಳಿರುವವೋ ಆಯಾಯ ಸ್ಥಾನವನ್ನು ಮತ್ತು ಜನ್ಮಲಗ್ನ ೧ ಅಂತು ೮ ಸ್ಥಾನಗಳು, ಆದರೆ ಇಲ್ಲಿ ಜನ್ಮಭ ಶಬ್ದವು ಭಚಕ್ರ ಸೂಚಕವಾಗಿರುತ್ತೆ. ಅಂದರೆ ಗ್ರಹಗಳು ಏಳು ಜನ್ಮಲಗ್ನ ಒಂದು ಅಂತು ಎಂಟು ಸ್ಥಾನಗಳಲ್ಲಿಯೇ ಒಂದೊಂದು ಸ್ಥಾನವೆಂದು ತಿಳಿಯತಕ್ಕದ್ದು. ತತ್ರ-ಆ ಅಷ್ಟಕವರ್ಗದಲ್ಲಿ ವಿಶೇಷಾತ್-ಇಷ್ಟಾನಿಷ್ಟಫಲ ಶೋಧನೆ ಮಾಡಿ, ಅಧಿಕ ಫಲ ವಿಪಾಕಂ-ಇಷ್ಟಸ್ಥಾನ ಅನಿಷ್ಟಸ್ಥಾನದಲ್ಲಿ, ಯಾವ ಫಲ ಹೆಚ್ಚಾಗಿರುವುದೋ, ಆ ಫಲವಿಪಾಕವನ್ನು, ದದ್ಯುಃ-ಗ್ರಹಗಳು ಕೊಡುವವು. ಅಂದರೆ-ರಾಶಿಚಕ್ರದಲ್ಲಿ ಜನ್ಮಕಾಲ ಗ್ರಹಸ್ಥಿತಿಯನ್ನು ಬರೆದು ಯಾವ ಗ್ರಹಾಷ್ಟಕದಲ್ಲಿ ಯಾವ ಸ್ಥಾನದಲ್ಲಿ ಶುಭಫಲಯುಕ್ತವಾಗಿರುವುದೋ ಆ ಸ್ಥಾನದಲ್ಲಿ, (೦) ಈ ಬಿಂದುವನ್ನು, ಅಶುಭಫಲವೆಂದು ಹೇಳಿರುವ ಸ್ಥಾನದಲ್ಲಿ (೧) ಈ ಸಂಜ್ಞೆಯನ್ನು ಬರೆಯಲಾಗಿ ಸೂರ್ಯಾದಿ ಸಪ್ತಗ್ರಹಗಳಿಗೂ, ಮತ್ತು ಲಗ್ನದಿಂದಲೂ ಬಿಂದುಗಳು ಬರುವಲ್ಲಿ (೦) ಬಿಂದು ಮೊದಲುಗೊಂಡು ೮ ಬಿಂದುವಿನವರಿಗೂ ಬರುತ್ತದೆ. ಆದರಲ್ಲಿ ೩ ಬಿಂದು ಮಾತ್ರ ಬಂದರೆ ಉಳಿದ ೫ ರೇಖೆಗಳೆಂದೂಹಿಸಬೇಕು. ಈ ರಾಶಿಯಲ್ಲಿ ಸೂರ್ಯಾದಿ ಗ್ರಹಗಳು ಗೋಚಾರದಲ್ಲಿ ೩ ಶುಭಫಲ ಕೊಡುತ್ತಾನೆಂದು ಅರ್ಥವು. ಉಳಿದ ೫ ರೇಖೆಗಳು ಅಶುಭಫಲವೆಂದರ್ಥ, ೫ ರೇಖೆಗಳಲ್ಲಿ ೩ ಬಿಂದುಗಳು ಹೋದರೆ ಉಳಿದ ೨ ರೇಖೆಗಳಿಗೆ ೧/೪ ಪಾಲು ಅಶುಭಫಲವೇ ಬರುತ್ತೆಂದು ತಿಳಿಯತಕ್ಕದ್ದು. ಇದನ್ನು ಮುಂದೆ ಉದಾಹರಣೆಯಲ್ಲಿ ಸ್ಪಷ್ಟಪಡಿಸಿರುತ್ತೆ. ಯಾವ ಗ್ರಹವಾಗಲಿ ೮ ಬಿಂದುಗಳೇ ಬಂದಿದ್ದರೆ ಸಂಪೂರ್ಣ ಶುಭಫಲ ಕೊಡುವನೆಂದರ್ಥ, ೭-ಬಿಂದುಗಳು ೧ ರೇಖೆಯು ಬಂದಿದ್ದರೆ ಏಳು ಬಿಂದುವಿನಲ್ಲಿ ೧ ರೇಖೆಯನ್ನು ಕಳೆದು ಉಳಿದ ೬ ಬಿಂದುಗಳಿಗೆ ೪ನೇ ೩ ಪಾಲು ಶುಭಫಲ ಬರುತ್ತೆಂದು ತಿಳಿಯತಕ್ಕದ್ದು. ೬ ಬಿಂದುಗಳು ೨ ರೇಖೆಗಳು ಬಂದರೆ, ೬ ಬಿಂದುವಿನಲ್ಲಿ ೨ ರೇಖೆಗಳು ಹೋಗಲಾಗಿ ಉಳಿದ ೪ ಬಿಂದುಗಳಿಗೆ ೨ನೇ ೧ ಪಾಲು ಶುಭಫಲ ಕೊಡುವನು. ೫ ಬಿಂದು ೩ ರೇಖೆ ಬಂದರೆ ೪ನೇ ೧ ಪಾಲು ಶುಭಫಲವೆಂದೂ ೪ ಬಿಂದು ೪ ರೇಖೆ ಬಂದರೆ ಶುಭಾಶುಭ ಫಲವಿಲ್ಲದೆ ಮಧ್ಯಮವಾಗುತ್ತೆ. ೮ ರೇಖೆಗಳು ಬಂದರೆ ಸಂಪೂರ್ಣ ಅಶುಭಫಲ, ೭ ರೇಖೆ

ಬಂದರೆ ೪ನೇ ೩ಪಾಲು ಅಶುಭಫಲ, ೬ ರೇಖೆ ಬಂದರೆ ೨ನೆ ೧ ಪಾಲು ಅಶುಭಫಲ, ೫ ರೇಖೆ ಬಂದರೆ ೪ನೇ ೧ ಪಾಲು ಅಶುಭಫಲ ಕೊಡುವನು. ಈ ಪ್ರಕಾರವಾಗಿಯೇ ಸೂರ್ಯಾದಿ ಸಪ್ತಗ್ರಹಗಳ ಅಷ್ಟಕವರ್ಗಗಳನ್ನು ತಿಳಿಯತಕ್ಕದ್ದು. ಈ ವಿಷಯದಲ್ಲಿ ಗ್ರಂಥಾಂತರದಲ್ಲಿನ ಅನೇಕ ಮಹರ್ಷಿಗಳ ಅಭಿಪ್ರಾಯವನ್ನು ಮುಂದಿನ ಉದಾಹರಣೆಯಲ್ಲಿ ಸ್ಪಷ್ಟಪಡಿಸಿರುತ್ತೆ.

ವಿಳಂಬಿ ಸಂವತ್ಸರದ ಆಶ್ವಯುಜ ಶುದ್ಧ ೮ ಶನಿವಾರ ಘಳಿಗೆ ೫೧-೩೬ ಉ-ಷಾ, ೩೯-೫೦ ಧೃತಿ ೪೦-೨೫ ಭದ್ರ ೨೪-೩೬, ದಿ ವಿ ೨-೪೦ ಅಹಸ್ಸು ೨೯-೬ ಅಸ್ಕ್ರಿ ಶುಭದಿವಸೇ ಉದಯಾದಿ ಜನನಕಾಲ ಘಟಿಕೆ ೧-೩೦ಕ್ಕೆ ಸಲ್ಲುವ ತುಲಾ ಲಗ್ನ ಮೀನ ನವಾಂಶೆಯಲ್ಲಿ ಪುಂ ಜನನ, ಚಿತ್ರ ೪ನೇ ಚರಣ ರವಿ, ಉ-ಷಾ ೨, ಚ, ಚಂದ್ರ ಪುಷ್ಯಮಿ, ೧, ಚ, ಕುಜ, ಸ್ವಾ, ೧, ಚ, ಬುಧ, ಚಿತ್ರ, ೩, ಚ, ಗುರು, ಜ್ಯೇಷ್ಠಾ, ೧, ಚ, ಶುಕ್ರ, ಜ್ಯೇಷ್ಠಾ, ೧, ಶನಿ, ಪೂಷಾ, ೨, ಚ, ರಾಹು ಆರಿದ್ರಾ, ೪, ಚ, ಕೇತು, ರವಿದಶಾ ಅವಶಿಷ್ಟ ವರ್ಷ ೪, ಮಾಸ ೧, ದಿನಾನಿ ೧೫ ಶಾಲಿವಾಹನ ಶಕಾಬ್ದ ೧೮೨೦ ತುಲಾಮಾಸಗತ ದಿನ ೬ ತುಲಾ ಮಾಸ, ೭ನೇ ತೇದಿ ದಿವಸಜನ್ಮ, ಈ ಜಾತಕಕ್ಕೆ ಅಷ್ಟಕವರ್ಗ ಉದಾಹರಣೆ :-

| | | | |
|---|---|---|---|
| | | | ಕೇ ೧೨ |
| | ರಾಶಿ ಭಾವಚಕ್ರ | | ಕು ೫ |
| ಚಂ ೧೦ | | | |
| ರಾ-೬ | ಶು ೯ ಶ ೯ | ೦೮ಲಗ್ನ ಗು೭ಬು೮ | |

| | | | |
|---|---|---|---|
| ೦೦೦೦ ೧೧೧೦ | ೦೦೦ ೧೧೧೧೧ | ೦೦೦೦ ೧೧೧೧ | ೦೦೦೦೦ ೧೧೧ |
| ೦೦೦೦ ೧೧೧೧ | ಸೂರ್ಯಾಷ್ಟಕ ವರ್ಗ ಬಿಂದು ೪೮ | | ೦೦೦೦೦ ೧೧೧ |
| ೦೦೦೧ ೧೧೧೧ | | | ೦೦೦೦೦ ೧೧೧೦ |
| ೦೦೧೧ ೧೧೧೧ | ೦೦೦೧ ೧೧೧೧ | ೦೦೦೦ ೦೧೧೧ | ೦೦೦೧ ೧೧೧೧ |

ಈ ಸೂರ್ಯಾಷ್ಟಕ ಕುಂಡಲಿಯಲ್ಲಿ ಮೇಷರಾಶಿಯಲ್ಲಿ ಸೂರ್ಯನು ಸಂಚರಿಸುವ ಕಾಲದಲ್ಲಿ ಶುಭಬಿಂದು ೩ ಅಶುಭರೇಖೆ ೫ ಇರುವುದರಿಂದ ೫ ರೇಖೆಯಲ್ಲಿ ೩ ಬಿಂದು ಕಳೆಯಲಾಗಿ ಎರಡು ರೇಖೆಗಳು ಉಳಿಯುತ್ತವೆ. ಆದ್ದರಿಂದ ೪ನೇ ೧ ಪಾಲು ಅಶುಭಫಲ ಕೊಡುವನು. ಆದರೆ ಸೂರ್ಯನಿಗೆ ಉಚ್ಚಸ್ಥಾನವಾದ್ದರಿಂದ ಹೆಚ್ಚು ಅಶುಭಫಲವನ್ನುಂಟುಮಾಡುವುದಿಲ್ಲ. ಮಿಶ್ರವಾಗಿ ಕೊಡುವನು.

ವೃಷಭ ರಾಶಿಯಲ್ಲಿ ೪ ಬಿಂದು ೪ ರೇಖೆ ಇರುವುದರಿಂದ ಶುಭ ಫಲವು ಮತ್ತು ಅಶುಭಫಲವು ಸಾಮ್ಯವಾದ್ದರಿಂದ ೨ನೆ ೧ಪಾಲು ಸುಖವನ್ನು ಕೊಟ್ಟು ೨ನೇ ೧ ಪಾಲು ಅನಿಷ್ಟ, ಫಲವನ್ನು ಕೊಡುವನು. ಒಂದಾನೊಂದುವೇಳೆ ಶುಭಾಶುಭ ಫಲವಿಲ್ಲದೆ ಇದ್ದಂತೆ ಇರುವುದು.

ಮಿಥುನ ರಾಶಿಯಲ್ಲಿ ೫ ಬಿಂದು ಇರುವುದರಿಂದ ೫ ಬಿಂದು-೩ ರೇಖೆ= ೨ ಬಿಂದು=೪ನೇ ೧ ಪಾಲು ಶುಭಫಲ ಕೊಡುವನು.

ಕರ್ಕಾಟಕ ರಾಶಿಯಲ್ಲಿ ಸೂರ್ಯನ ಸಂಚಾರ ಫಲಕ್ರಮವೇನೆಂದರೆ- ೫ ಬಿಂದು- ೩ ರೇಖೆ=೨ ಬಿಂದು=೪ನೇ ೧ ಪಾಲು ಶುಭಫಲವನ್ನು ಕೊಡುವನು.

ಸಿಂಹರಾಶಿಯಲ್ಲಿ ಸೂರ್ಯನು ಸಂಚರಿಸುವ ಕಾಲದಲ್ಲಿ ಫಲವೇನೆಂದರೆ- ೫ ಬಿಂದು-೩ ರೇಖೆ=೨ ಬಿಂದು=೪ನೇ ೧ ಪಾಲು ಶುಭಫಲವನ್ನು ಕೊಡುವನು.

ಕನ್ಯಾರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೩ ಬಿಂದು-೫ ರೇಖೆ ಆದ್ದರಿಂದ ೨ ರೇಖೆ ಉಳಿಯುತ್ತೆ. ೪ನೇ ೧ ಪಾಲು ಅನಿಷ್ಟ ಫಲವನ್ನು ಕೊಡುವನು.

ತುಲಾರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೫ ಬಿಂದು-೩ ರೇಖೆ=೨ ಬಿಂದು ಆದ್ದರಿಂದ ೪ನೇ ೧ ಪಾಲು ಶುಭಫಲವನ್ನು ಕೊಡುವನು.

ವೃಶ್ಚಿಕರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೩ ಬಿಂದು-೫ ರೇಖೆ ಆದ್ದರಿಂದ ೫-೩=೨ರೇಖೆ ೪ನೇ ೧ ಪಾಲು ಅನಿಷ್ಟಫಲವನ್ನು ಕೊಡುವನು.

ಧನೂರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೨ ಬಿಂದು ೬ ರೇಖೆ ಆದ್ದರಿಂದ ೬ ರೇಖೆ-೨ ಬಿಂದು=೪ ರೇಖೆ-೨ನೇ ೧ ಪಾಲು ಅಶುಭ ಫಲವನ್ನು ಕೊಡುವನು.

ಮಕರ ರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೩ ಬಿಂದು ೫ ರೇಖೆ, ೫ ರೇಖೆ-೩ ಬಿಂದು=೨ ರೇಖೆ=೪ನೇ ೧ ಪಾಲು ಅಶುಭಫಲವನ್ನು ಕೊಡುವನು.

ಕುಂಭರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೪ ಬಿಂದು ೪ ರೇಖೆ, ಆದ್ದರಿಂದ ಶುಭ ಪಾಪಫಲ ಸಮವಾಗಿ ಅಥವಾ ಯಾವುದೂ ಇಲ್ಲದೆ ಹೋಗುವುದು.

ಮೀನರಾಶಿಯಲ್ಲಿ ಸೂರ್ಯನ ಸಂಚಾರ ಫಲವೇನೆಂದರೆ-೫ ಬಿಂದು-೩ ರೇಖೆ=೨ ಬಿಂದು=೪ನೇ ೧ ಪಾಲು ಶುಭಫಲವನ್ನು ಕೊಡುವನು.

ಈ ವಿಷಯದಲ್ಲಿ ಉದಾಹರಣೆ ಕುಂಡಲಿಗಳನ್ನು ನೋಡಿದರೆ ಸ್ಪಷ್ಟವಾಗುತ್ತದೆ.

| | | | |
|---|---|---|---|
| ೪ನೇ ೧ | . . | * | ೪ನೇ ೧ |
| * | ಶುಭಫಲ ಚಕ್ರ ೧ ೨ನೇ೧ | | ೪ನೇ ೧ |
| . . | | | ೨ನೇ ೧ |
| . . | . . | ೪ನೇ ೧ | |

| | | | |
|---|---|---|---|
| . . | ೪ನೇ ೧ | * | |
| * | ಅಶುಭಫಲ ಚಕ್ರ ೧ ೨ನೇ೧ | | |
| ೪ನೇ ೧ | | | |
| ೨ನೇ ೧ | ೪ನೇ ೧ | | ೪ನೇ ೧ |

ಶುಭಫಲ ಚಕ್ರದಲ್ಲಿ ಸೂರ್ಯನು ಅಶುಭಫಲ ಕೊಡತಕ್ಕ ರಾಶಿಯಲ್ಲಿ (..) ಈ ಚಿನ್ಹೆ ಹಾಕಿರುತ್ತೆ. ಶುಭಾಶುಭ ಮಿಶ್ರಫಲ ಕೊಡತಕ್ಕ ರಾಶಿಯಲ್ಲಿ *ಈ ಚಿನ್ಹೆ ಹಾಕಿರುತ್ತೆ. ಉಳಿದ ಶುಭಫಲ ಕೊಡತಕ್ಕ ರಾಶಿಗಳಲ್ಲಿ ೪ನೇ ೧ ಮತ್ತು ೨ನೇ ೧ ಎಂಬುವ ಸಂಖ್ಯೆ ತೋರಿಸಿರುತ್ತೆ. ಇದೇ ಪ್ರಕಾರವಾಗಿಯೇ ಅಶುಭಫಲ ಕುಂಡಲಿಯಲ್ಲಿ ಆಯಾಯ ರಾಶಿಗಳಲ್ಲಿ ಅಶುಭಫಲವು ೪ನೇ ೧, ೨ನೇ ೧ ಈ ರೂಪವಾಗಿ ತೋರಿಸಿರುತ್ತೆ. ಈ ರೀತಿಯಾಗಿಯೇ ಮುಂದೆ ಹೇಳಲ್ಪಡುವ ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ಈ ಅಷ್ಟಕವರ್ಗದಲ್ಲಿ ನ್ಯಾಸ ಮಾಡಿಕೊಳ್ಳಬೇಕು. ಇಲ್ಲಿ ಮಾತ್ರವೇ ದಿಕ್ಪ್ರದರ್ಶಕವಾಗಿ ವಿವರಿಸಿರುತ್ತೆ.

ಈ ವಿಷಯದಲ್ಲಿ ಗೋಚಾರ (ತತ್ಕಾಲಗ್ರಹ ಸಂಚಾರ) ಕಾಲದಲ್ಲಿ ಚಂದ್ರನಿರುವ ಜನ್ಮರಾಶಿಯನ್ನು ಪ್ರಾರಂಭಿಸಿಕೊಂಡು ದ್ವಾದಶ ಭಾವಗಳಿಗೂ ಪ್ರತ್ಯೇಕ ಫಲವು ಹೇಳಲ್ಪಟ್ಟಿರುತ್ತೆ. ತ್ರಿಷಡ್ದಶ ಲಾಭಸ್ಥೋಭಾನುಃ ಎಂದು ಶುಭಫಲ ಸೂಚಕವಾಗಿ ಉಕ್ತವಾಗಿರುತ್ತೆ. ಈ ಪ್ರಕಾರವಾಗಿ ೩-೬-೧೦-೧೧ ರಲ್ಲಿ ಸೂರ್ಯನು ಶುಭನೆಂದರೆ. ಯಾವ ಫಲ ಕೊಡುತ್ತಾನೆಂದು ಹೇಳಬಹುದು. ಉಳಿದ ೧-೨-೪-೫-೭-೮-೯-೧೨ ಈ ರಾಶಿಯಲ್ಲಿ ಅಶುಭನೆಂದರ್ಥವಾಗುತ್ತೆ. ಈ ಅಶುಭಫಲ ವಿವರಣೆ ತಿಳಿಯಲಿಲ್ಲ. ಆದ್ದರಿಂದ ಈ ಅಷ್ಟಕವರ್ಗ ಬಿಂದು ಶೋಧನೆಮಾಡಿ ಶುಭಾಶುಭ ಫಲವನ್ನು ನಿಶ್ಚಯಿಸಿಕೊಂಡನಂತರ ಜನ್ಮರಾಶ್ಯಾದಿಯಾಗಿ ಫಲವನ್ನು ತಿಳಿಯಬೇಕು. ಕೆಲವರು ಸೂರ್ಯನು ೩-೬-೧೧ಕ್ಕೆ ಬರುತ್ತಾನೆ, ಆ ಕಾಲದಲ್ಲಿ ಸರ್ವಕಾರ್ಯ ಸಿದ್ಧಿಯೆಂದು ಹೇಳುತ್ತಾರೆ. ಇದು ಸಾಮಾನ್ಯವಾಗಿ ಉಕ್ತವಾದ ಫಲವು, ಜನ್ಮಕಾಲ ಗ್ರಹಸ್ಥಿತಿಯ ಪ್ರಕಾರ ಅಷ್ಟಕ ವರ್ಗದಲ್ಲಿ ಮೇಲೆ ಹೇಳಿದ ೩-೬-೧೧ರಲ್ಲಿ ಶುಭಫಲ ಸೂಚಕವಾದ ಬಿಂದು ಅಧಿಕವಾಗಿ ಬಂದಿದ್ದರೆ, ೩-೬-೧೧ರಲ್ಲಿ ಶುಭಫಲ ದೃಷ್ಟಾಂತಕ್ಕೆ ಬರುತ್ತೆ.

ಅನ್ಯಥಾ ಪಾಪಫಲರೇಖೆ ಬಂದಿದ್ದರೆ, ಸೂರ್ಯನು ೩-೬-೧೧ಕ್ಕೆ ತತ್ಕಾಲದಲ್ಲಿ ಬಂದಿದ್ದರೂ ಶುಭಫಲವಾಗುವುದಿಲ್ಲ, ಇದು ತೃಪ್ತಿಕರವಲ್ಲ. ಈ ವಿಷಯದಲ್ಲಿ ನಾರದೀಯ ಸಂಹಿತೆಯಲ್ಲಿ ಶ್ಲೋಕ॥

## ಜನ್ಮಾದಿ ದ್ವಾದಶ ರಾಶಿಸ್ಥಿತ ರವಿಫಲಂ

## ತತ್ರ ಜನ್ಮರಾಶಿಸ್ಥಿತ ರವಿಫಲಂ

ಶ್ಲೋಕ॥ ದೇಹಾರ್ತಿಂ ಸತ್ವಸಂತಾಪಂ ಕಾಲಾತಿಕ್ರಮಭೋಜನಂ । ಬಂಧು ಮಿತ್ರಸುಹೃದ್ವೈರಂ ಜನ್ಮರಾಶಿಗತೋರವಿಃ ॥೧೨॥ ದ್ವಿತೀಯಸ್ಥರವಿಫಲಂ-ಹೀನತ್ವಂ ದುಷ್ಟಸಂಸರ್ಗಂ ಮನಸ್ತಾಪಂ ಶಿರೋವ್ಯಥಾ । ನಿಷ್ಫಲಂ ಕೃಷಿವಾಣಿಜ್ಯಂ ಸ್ವಯಂ ಪೀಡಾ ದ್ವಿತೀಯಕೇ ॥೧೩॥ ತೃತೀಯಸ್ಥ ರವಿಫಲಂ-ಆರೋಗ್ಯಂ ನಿತ್ಯಸಂತೋಷಂ ಬಂಧುಮಿತ್ರಸಮಾಗಮಂ । ಅರ್ಥಲಾಭಾದಿ ಸನ್ಮಾನಂ ಇಷ್ಟಸಿದ್ಧಿಸ್ತೃತೀಯಕೇ ॥೧೪॥ ಚತುರ್ಥರಾಶಿಸ್ಥ ರವಿಫಲಂ-ಬಂಧುದ್ವೇಷಂ ಗೃಹಚ್ಛಿದ್ರಂ ಸೌಖ್ಯನಾಶಮ ಭೋಜನಂ । ಪ್ರಯಾಣೇ ವಿಘ್ನಮಾಪ್ನೋತಿ ಚತುರ್ಥೇರವಿಸಂಸ್ಥಿತೇ ॥೧೫॥ ಪಂಚಮಸ್ಥರ ವಿಫಲಂ-ದೇಹಾಲಸ್ಯಂ ಮನಸ್ತಾಪಂ ಸ್ವಯಂಕ್ಲೇಶಂ ಧನವ್ಯಯಂ । ಬುದ್ಧಿಚಾಂಚಲ್ಯ ಕಾರ್ಯಾಣಿ ಪಂಚಮೇ ರವಿಸಂಸ್ಥಿತೇ ॥೧೬॥ ಷಷ್ಠರಾಶಿಸ್ಥ ರವಿಫಲಂಷಷ್ಠೇರವೌ ಸುಸೌಖ್ಯಾರ್ಥಂ ಯತ್ನಕಾರ್ಯಾರ್ಥಸಾಧಕಂ । ದೇಹಾರೋಗ್ಯಾದಿ ಸಂತೋಷಂ ವಸ್ತ್ರಧಾನ್ಯಾದಿ ಲಾಭಕೃತ್ ॥೧೭॥ ಸಪ್ತಮಸ್ಥ ರವಿಫಲಂ-ಸಾಮಂತ ಜನವಿದ್ವೇಷಂ ದಾರಾಪೀಡಾ ಸದಾಮಯಂ । ಉತ್ಸಾಹಭಂಗ ಕಾರ್ಯಾಣಿ ಸಪ್ತಮೇ ರವಿಸಂಸ್ಥಿತೇ ॥೧೮॥ ಅಷ್ಟಮಸ್ಥ ರವಿಫಲಂ-ದೃಗ್ದೋಷಂ ಶತ್ರುಸಂವಾದಂ ಗಮನಾಗಮನೇವ್ಯಥಾ । ದುಃಖವಾರ್ತಾಶ್ರುಶ್ಚೈವ ಅಷ್ಟಮಸ್ಥೋಯದಾರವಿಃ ॥೧೯॥ ನವಮಸ್ಥ ರವಿಫಲಂ-ನಿರಾಪರಾಧ ಕಲಹಂ ದೃಗ್ದೋಷಂತನುಪೀಡನಂ । ಪುಣ್ಯಲೋಭಾದ್ವ್ಯರ್ಥಲಾಭಂ ವಿಕಾರಂ ನವಮೇರವಿಃ ॥೨೦॥ ದಶಮಸ್ಥ ರವಿಫಲಂ-ಸರ್ವಸಿದ್ಧಿಃ ಸದಾರೋಗ್ಯಂ ಬಂಧುಮಿತ್ರಂ ಸಮಾಗಮಃ । ರಾಜದರ್ಶನ ಸಲ್ಲಾಪಂ ಶುಭಶ್ಚ ದಶಮೇರವಿಃ ॥೨೧॥ ಏಕಾದಶಸ್ಥ ರವಿಫಲಂ-ಸೌಖ್ಯಾರ್ಥಂ ನಿತ್ಯಸಂತೋಷಂ ಕೀರ್ತಿಂ ತೇಜೋ ಧೃತಿಫಲಂ । ಯತ್ನಕಾರ್ಯಾನುಕೂಲಂಚ ಭೂಲಾಭಂ ಲಾಭಗೇರವೌ ॥೨೨॥ ದ್ವಾದಶಸ್ಥ ರವಿಫಲಂ-ಸ್ಥಾನನಾಶಂ ಮಹಾರೋಗಂ ಬಂಧುದ್ವೇಷಂ ಧನವ್ಯಯಂ । ಪ್ರಾಣಪರ್ಯಂತಮಾಪತ್ತಿಂ ಅವಮಾನಂ ವ್ಯಯೇ ರವೌ ॥೨೩॥

## ಇತಿ ರವಿ ಗೋಚಾರಫಲಂ

| | | | |
|---|---|---|---|
| ೦೦೦೦<br>೦೦೧೧ | ೦೦೦೦೦<br>೧೧೧ | ೦೦೦೦<br>೦೧೧೧ | ೦೧೧೧<br>೧೧೦೧ |
| ೦೦೧೧<br>೧೧೧೧ | ಚಂದ್ರಾಷ್ಟಕವರ್ಗ<br>೪೯ | | ೦೦೦೦<br>೦೦೧೧<br>ಕುಜ |
| ೦೦೦೦<br>೦೧೧೧<br>ಚಂದ್ರ | | | ೦೦೦೦<br>೦೦೧೧ |
| ೦೦೦೦<br>೧೧೧೧ | ೦೦೧೧<br>೧೧೧೧<br>ಶ.ಶು. | ೦೦೦೧<br>೧೧೧೧ | ೦೦೦೦<br>೧೧೧೧<br>ಲಗುಬುರ |

ಚಂದ್ರನು ಮೇಷರಾಶಿ ಸಂಚಾರ ಕಾಲದಲ್ಲಿ ೪ನೇ ೧, ವೃಷಭದಲ್ಲಿ ೪ನೇ ೧, ಕರ್ಕ ರಾಶಿಯಲ್ಲಿ ೨ನೇ ೧, ಸಿಂಹದಲ್ಲಿ ೨ನೇ ೧, ಮಕರದಲ್ಲಿ ೪ನೇ ೧, ಮೀನದಲ್ಲಿ ೨ನೇ ೧, ಈ ಪ್ರಕಾರ ಶುಭಫಲ ಕೊಡುತ್ತಾನೆ. ಮಿಥುನದಲ್ಲಿ ೪ನೇ ೩, ತುಲೆಯಲ್ಲಿ ೪ನೇ ೧, ವೃಶ್ಚಿಕ ದಲ್ಲಿ ೨ನೇ ೧, ಕುಂಭದಲ್ಲಿ ೨ನೇ ೧, ಅಶುಭಫಲವನ್ನು ಕೊಡುತ್ತಾನೆ. ಕನ್ಯಾ, ಧನೂ ರಾಶಿಗಳಲ್ಲಿ ಶುಭ ಪಾಪಮಿಶ್ರವಾಗಿ ಕೊಡುತ್ತಾನೆ.

## ಚಂದ್ರಗೋಚಾರಫಲಂ

ಜನ್ಮರಾಶಿಸ್ಥ ಚಂದ್ರಫಲಂ ॥೧॥ ಶರೀರಸೌಖ್ಯಮಾರೋಗ್ಯಂಸಂತೋಷಂ ಧನ ಮುನ್ನತಿಂ । ಮೃಷ್ಟಾನ್ನಂ ಸಜ್ಜನೈಸ್ಸಂಗಂ ಸನ್ಮಾನಂ ಜನ್ಮಗೋವಿಧುಃ ॥೨೪॥ ದ್ವಿತೀಯಸ್ಥ ಚಂದ್ರಫಲಂ ॥೨॥ ಅಂತಃಕ್ಲೇಶಂ ಧನಚ್ಛೇದಂ ವ್ಯಾಯಾಮಂ ಸರ್ವ ದೋಷಕೃತ್ । ಕುಭೋಜ್ಯಂ ದೇಹಜಾಡ್ಯಂಚ ಶಶಾಂಕೇ ಧನಸಂಸ್ಥಿತೇ ॥೨೫॥ ತೃತೀಯರಾಶಿಸ್ಥ ಚಂದ್ರಫಲಂ ॥೩॥ ಅರ್ಥಲಾಭಂ ಮನಃಸೌಖ್ಯಂ ಮಣಿವಸ್ತ್ರಾದಿ ಲಾಭತಃ । ಕಾಂತಾನಾಂ ಇಷ್ಟಸಲ್ಲಾಪಂ ತೃತೀಯಸ್ಥಾನಗೇವಿಧೌ ॥೨೬॥ ಚತುರ್ಥ ರಾಶಿಸ್ಥ ಚಂದ್ರಫಲಂ ॥೪॥ ಚಿತ್ತಭ್ರಂಶಂ ಬಂಧುವೈರಂ ಬುದ್ಧಿಸಂತಾನ ಮೇವಚ । ಕರ್ಮವೈಕಲ್ಯಕರ್ಶ್ಯಾಣಿ ಶೀತರಶ್ಮೌಚತುರ್ಥಗೇ ॥೨೭॥ ಪಂಚಮಸ್ಥಾನಸ್ಥ ಚಂದ್ರಫಲಂ ॥೫॥ ವಾತಾಧಿಕ್ಯಂ ಸದಾಲಸ್ಯ ಮನಃಪೀಡಾ ಭಯಂಸದಾ । ಇಷ್ಟಾರ್ಥ ನಾಶಂಕುರುತೇ ಪಂಚಮಸ್ಥೋಯದಾಶಶೀ ॥೨೮॥ ಷಷ್ಠರಾಶಿಸ್ಥ ಚಂದ್ರಫಲಂ- ಸ್ವಸ್ಥಾನಪ್ರಾಪ್ತಿಮಾರೋಗ್ಯಂ ಅರ್ಥಲಾಭಂ ಯಶಸ್ಕರಂ । ಸ್ತ್ರೀಸೌಖ್ಯಂ ಧರ್ಮಸಿದ್ಧಿ ಸ್ಸ್ಯಾತ್ ಷಷ್ಠಸ್ಥೇ ಮೃಗಲಾಂಛನೆ ॥೨೯॥ ಸಪ್ತಮಾಸ್ಥಾನಸ್ಥ ಚಂದ್ರಫಲಂ-॥೭॥ ಮನಸ್ಸೌಖ್ಯಂ ಯಶೋವೃದ್ಧಿಃ ಶತ್ರುನಾಶಂ ಧನಾಗಮಂ । ಸ್ತ್ರೀಸೌಖ್ಯಂ ದೇಹಪುಷ್ಟಿಂಚ ಸಪ್ತಮಸ್ಥೋಯದಾಶಶೀ ॥೩೦॥ ಅಷ್ಟಮರಾಶಿಸ್ಥ ಚಂದ್ರಫಲಂ ॥೮॥ ಅಜೀರ್ಣಾಮಯ ಸಂತಾಪಂ ಜಾನುಭ್ಯಾಂ ಸರ್ವಹಾನಿಧಃ । ಚೋರಪನ್ನಗಪಶ್ವಾದೇಃ ಪೀಡಾಸ್ಯಾದಷ್ಟಮೇವಿಧೌ ॥೩೧॥ ನವಮಸ್ಥ

ಚಂದ್ರಫಲಂ- ॥೮॥ ವಸ್ತ್ರನಾಶಂ ಸುಹೃದ್ವೈರಂ (ಪಾಠಾಂತರದಲ್ಲಿ ಪುತ್ರವೈರಂ) ಪ್ರವಾಸಂ ವ್ಯಾಧಿಪೀಡನಂ । ಉದ್ಯೋಗಭಂಗಂ ಕಲಹಂ ನವಮಸ್ಥೇನಿಶಾಕರೇ ॥೩೨॥ ದಶಮರಾಶಿಸ್ಥ ಚಂದ್ರಫಲಂ ॥೧೦॥ ಇಷ್ಟಸಿದ್ಧಿಸ್ಸದಾರೋಗ್ಯಂ ಸಂತೋಷಂ ಪ್ರಿಯಭೋಜನಂ । ದಶಮಸ್ಥೇಯದಾ ಚಂದ್ರೇ ಬಂಧುಮಿತ್ರ ಸಮಾಗಮಃ ॥೩೩॥ ಲಾಭರಾಶಿಸ್ಥ ಚಂದ್ರಫಲಂ-॥೧೧॥ ಮನಸ್ಸೌಖ್ಯಂ ಸದಾನಂದಂ ಇಷ್ಟಗೇಹಸುಭೋಜನಂ । ಧನಧಾನ್ಯಾದಿಲಾಭಂಚ ಚಂದ್ರಸ್ಯೈಕಾದಶೇಫಲಂ ॥೩೪॥ ವ್ಯಯರಾಶಿಸ್ಥ ಚಂದ್ರಫಲಂ ॥೧೨॥ ಸೌಖ್ಯಹಾನಿಂ ಮನಃಕ್ಲೇಶಂ ಕೃಷಿಭೋಜನಂ ಮಲ್ಪಶಃ । ನಿತ್ಯಂ ಸಂವಾದದಾರಿದ್ರ್ಯಂ ದ್ವಾದಶಸ್ಥೋ ಯದಾವಿಧುಃ ॥೩೫॥

## ಇತಿ ಚಂದ್ರಗೋಚಾರ ಫಲಂ

## ಕುಜಾಷ್ಟಕವರ್ಗ ಫಲಂ

<table>
<tr><td>೦೦೦೦<br>೦೧೧೧</td><td>೦೦೧೧<br>೧೧೧೧</td><td>೦೦೧೧<br>೧೧೧೧</td><td>೦೦೧೧<br>೧೧೧೧</td></tr>
<tr><td>೦೦೦೦<br>೧೧೧೧</td><td colspan="2" rowspan="2">ಕುಜ ೩೯</td><td>೦೦೦೦<br>೦೦೧೧</td></tr>
<tr><td>೦೧೧೧<br>೧೧೧೧</td><td>೦೦೦೦<br>೦೧೧೧</td></tr>
<tr><td>೦೦೦೧<br>೧೧೧೧</td><td>೦೦೧೧<br>೧೧೧೧</td><td>೦೦೦೧<br>೧೧೧೧</td><td>೦೦೦೦<br>೦೧೧೧</td></tr>
</table>

ಕುಜನು ಕರ್ಕಾಟಕ ರಾಶಿಯಲ್ಲಿ ೨ನೇ ೧, ಸಿಂಹದಲ್ಲಿ ೪ನೇ ೧, ಮೀನದಲ್ಲಿ ೪ನೇ ೧, ಶುಭಫಲ ಕೊಡುವನು. ಮತ್ತು ಮೇಷದಲ್ಲಿ ೨ನೇ ೧, ವೃಷಭದಲ್ಲಿ ೨ನೇ ೧, ಮಿಥುನದಲ್ಲಿ ೨ನೇ ೧, ತುಲೆಯಲ್ಲಿ ೪ನೇ ೧, ವೃಶ್ಚಿಕದಲ್ಲಿ ೨ನೇ ೧, ಧನುಸ್ಸಿನಲ್ಲಿ ೪ನೇ ೧, ಮಕರದಲ್ಲಿ ೨ನೇ ೧ ಪಾಲು ಅನಿಷ್ಟಫಲ ಕೊಡುವನು, ಕನ್ಯೆಯಲ್ಲಿ ಮತ್ತು ಕುಂಭದಲ್ಲಿ ಶುಭಾಶುಭ ಮಿಶ್ರಫಲ ಕೊಡುವನು, ಗೋಚಾರದಲ್ಲಿ ಅಂಗಾರಕನು ವಿಶೇಷ ಫಲ ಕೊಡುವನೆಂದು ದಶಾಫಲದಲ್ಲಿ ಹೇಳಿರುತ್ತೆ. ಪರಾಶರಃ॥ ಭೌಮದಶಾಯಾಮಾದೌ ಲಭತೇ ವಿವಿಧಾರ್ಥ ಮಾನಹಾನಿಂಚ । ಮಧ್ಯೇಗ್ನಿಭೂಪಚೋರೈರ್ಭೀತಿಂ ಶತ್ರೋಶ್ಚನಿರ್ದಿಶೇನ್ಮತ್ರಿರ್ಮಾ ॥೩೬॥ ಅಂತೇ ಭ್ರಾತೃವಿಯೋಗಂ ಸುತಧನದಾರಾಗ್ನಿ ಗುಲ್ಮಮೂತ್ರಾರ್ತಿಂ । ಭೌಮೇಪ್ಯೇ ವಂಚಲಭೇದ್ಗೋಚರಯುಕ್ತೋ ವಿಶೇಷತಃ ಕಥಯೇತ್ ॥ ಇತ್ಯಾದಿ ಗೋಚಾರ ಕಾಲದಲ್ಲಿ ಶುಭಸ್ಥಾನದಲ್ಲಿದ್ದರೆ, ಶುಭಫಲ ಪ್ರಾಪ್ತಿಯಾಗುವುದು. ಅಶುಭ ಸ್ಥಾನದಲ್ಲಿದ್ದರೆ ಅಶುಭಫಲ ಪ್ರಾಪ್ತಿಯಾಗುತ್ತೆ.

## ಅಥ ಕುಜಗೋಚಾರಫಲಂ

ಜನ್ಮರಾಶಿಸ್ಥ ಕುಜಫಲಂ-ಜ್ವರಖಡ್ಗ ವ್ರಣಂಚೈವ ಭಾರ್ಯಾಬಂಧು ವಿರೋಧಕೃತ್। ಯಕ್ಷರಾಕ್ಷಸ ಪೀಡಾಚ ಜನ್ಮೇಭೌಮಫಲಂಭವೇತ್ ॥೩೮॥ ಪುತ್ರಮಿತ್ರ ಕಳತ್ರಾದಿ ರಾಜಕೋಪಂಚ ಬಂಧನಂ । ಕಾರ್ಯನಾಶಂ ದೇಹಪೀಡಾ ಜನ್ಮೇ ಭೌಮಫಲಂಭವೇತ್

॥೩೯॥ ದ್ವಿತೀಯಸ್ಥ ಕುಜಫಲಂ-ಅಧೈರ್ಯಂ ಸತತಂ ಕ್ಲೇಶಂ ಸಂವಾದಂ ಸತತಂಭವೇತ್-ಸದಾದುರ್ಜನಸಂಗಶ್ಚ ಭೀತಿಶ್ಚ ಧನಗೇಕುಜೇ ॥೪೦॥ ತೃತೀಯಸ್ಥ ಕುಜಫಲಂ-ವಿಜಯಂಧನಮಾರೋಗ್ಯಂ ಇಷ್ಟಸಿದ್ಧಿಃ ಸುಭೋಜನಂ । ವಸ್ತ್ರಲಾಭಾದಿ ಸನ್ಮಾನಂ ತೃತೀಯಸ್ಥಾನಗೇಕುಜೇ ॥೪೧॥ ಚತುರ್ಥರಾಶಿಸ್ಥ ಕುಜಫಲಂ-ಭಾಗ್ಯಂಹಾನಿಂಭಯಂ ಪೀಡಾ ಬಂಧುವೈರಂ ಧನವ್ಯಯಂ । ರೋಗಪೀಡಾ ಕರಂಚೈವ ಚತುರ್ಥೇ ಭೂಮಿನಂದನೇ ॥೪೨॥ ಪಂಚಮರಾಶಿಸ್ಥಫಲಂ-ದ್ರವ್ಯಹಾನಿಂಚ ದಾರಿದ್ರ್ಯಂ ಕಾಲಾತಿಕ್ರಮಭೋಜನಂ । ದುರಿತಂಕರ್ಮ ಲೋಭಂಚಭೌಮೇ ಪಂಚಮ ಸಂಸ್ಥಿತೇ॥೪೩॥ ಷಷ್ಠರಾಶಿಸ್ಥ ಕುಜಫಲಂ ವಸ್ತ್ರಲಾಭಂ ಧಾನ್ಯಲಾಭಂ ದ್ರವ್ಯಲಾಭಂ ಸ್ವಧರ್ಮಕೃತ್ । ರಾಜಪೂಜ್ಯಂ ಸದಾರೋಗ್ಯಂ ಷಷ್ಠಸ್ಥೇ ಪಿಧರಾತ್ಮಜೇ ॥೪೪॥ ಸಪ್ತಮರಾಶಿಸ್ಥ ಕುಜಫಲಂ-ಅನ್ನವಸ್ತ್ರಾದಿ ರಾಹಿತ್ಯಂ ಸದಾವೈರಂಸ್ವ ಬಂಧುಭಿಃ । ಕಳತ್ರಪುತ್ರಭಾತೃಣಾಂ ವಿರೋಧಂ ಸಪ್ತಮೇಕುಜೇ ॥ ಅಷ್ಟಮಸ್ಥಾನಸ್ಥ ಕುಜಫಲಂ-ಗಮನೇ ಕಾರ್ಯಹಾನಿ ಸ್ಯಾತ್ಪ್ರವಾಸೇ ರೋಗಪೀಡನಂ । ಧಾನ್ಯನಾಶಂ ಧನಚ್ಛೇದನಂ ಅಷ್ಟಮಸ್ಥೇ ಧರಾಸುತೇ॥ ನವಮರಾಶಿಸ್ಥ ಕುಜಫಲಂ-ಅಶನಾಚ್ಛಾದನಂ ಕ್ಲೇಶಂ ಮೂರ್ಧದಂತಾಕ್ಷಿಪೀಡನಂ । ಪಿತಾಪುತ್ರವಿರೋಧಂಚ ನವಮಸ್ಥೇ ಧರಾಸುತೇ ॥೪೭॥- ನವಮರಾಶಿಸ್ಥ ಕುಜಫಲಂ-ನಿತ್ಯಕ್ಲೇಶಂ ಸದಾವ್ಯಾಧಿಂ ಕಲಾತಿಕ್ರಮ ಭೋಜನಂ। ಸದಾಸಂಚಾರ ಉದ್ಯೋಗಂ ದಶಮಸ್ಥೇ ಧರಾತ್ಮಜೇ ॥೪೮॥ ಲಾಭರಾಶಿಸ್ಥ ಕುಜಫಲಂ-ಆರೋಗ್ಯಮರ್ಥ ಸೌಭಾಗ್ಯಂ ಸಂತೋಷಂ ವಸ್ತ್ರಲಾಭಕೃತ್- ಯತ್ನಕಾರ್ಯಾನುಕೂಲಂಚ ಧೈರ್ಯಶ್ಚೇಲ್ಲಾಭಗೇ ಕುಜೇ ॥ ದ್ವಾದಶಸ್ಥ ಕುಜಫಲಂ ಪ್ರವಾಸಂ ದುರಿತಂ ಕ್ಲೇಶಂ ಬಂಧುವೈರಂ ಸದಾಮಯಂ । ದೇಹಪೀಡಾಚ ಸಂಚಾರಂ ದ್ವಾದಶಸ್ಥೇ ಧರಾಸುತೇ ॥೫೦॥

ಇತಿ ಕುಜಗೋಚಾರ ಫಲಂ

## ಬುಧಾಷ್ಟಕವರ್ಗ ಫಲಂ-(ಉದಾ)

<table>
<tr><td>೦೦೦೦<br>೦೧೧೧</td><td>೦೦೧೧<br>೧೧೧೧</td><td>೦೦೦೦<br>೧೧೧೧</td><td>೦೦೦೦<br>೦೧೧೧</td></tr>
<tr><td>೦೦೦೦<br>೦೦೧೧</td><td colspan="2" rowspan="2">ಬುಧಾಷ್ಟಕ<br>ವರ್ಗಬಿಂದು ೫೪</td><td>೦೦೦೦<br>೧೧೧೧</td></tr>
<tr><td>೦೦೦೧<br>೧೧೧೧</td><td>೦೦೦೦<br>೧೦೦೦</td></tr>
<tr><td>೦೦೦೧<br>೧೧೧೧</td><td>೦೦೦೦<br>೧೧೧೧</td><td>೦೦೦೦<br>೧೧೧೧</td><td>೦೦೦೦<br>೦೦೧೧</td></tr>
</table>

ಬುಧನು ವೃಷಭರಾಶಿ ಸಂಚಾರ ಕಾಲದಲ್ಲಿ ೪ನೇ ೧, ಸಿಂಹದಲ್ಲಿ ೪ನೇ ೩, ಕನ್ಯೆಯಲ್ಲಿ ೨ನೇ ೧, ಕುಂಭದಲ್ಲಿ ೨ನೇ ೧, ಮೀನದಲ್ಲಿ ೪ನೇ ೧, ಈ ಪ್ರಕಾರ ಶುಭಫಲ ಕೊಡುವನು. ಮೇಷದಲ್ಲಿ ೨ನೇ ೧, ಧನುಸ್ಸಿನಲ್ಲಿ ೪ನೇ ೧, ಮಕರದಲ್ಲಿ ೪ನೇ ೧, ಈ ಪ್ರಕಾರ ಅನಿಷ್ಟಫಲವನ್ನು ಕೊಡುವನು. ಕರ್ಕಾಟಕ, ತುಲಾ, ವೃಶ್ಚಿಕ ಈ ೩ ರಾಶಿಗಳಲ್ಲಿ ಶುಭಾಶುಭಫಲ ಮಿಶ್ರವಾಗಿ ಕೊಡುತ್ತಾನೆ.

## ಬುಧಜನ್ಮಾದಿ ದ್ವಾದಶರಾಶಿ ಸಂಚಾರಫಲಂ (ನಾರದಃ)

ಜನ್ಮರಾಶಿಸ್ಥ ಬುಧಫಲಂ-ಚಿತ್ತಕ್ಲೇಶಂ ವಾತರೋಗಂ ಕಾಲಾತಿ ಕ್ರಮ ಭೋಜನಂ। ವಿವಾದಂ ದುಷ್ಟಸಂಸರ್ಗಂ ಜನ್ಮಸ್ಥಾನ ಗತೇಬುಧೇ ॥೫೧॥ ದ್ವಿತೀಯಸ್ಥ ಬುಧಫಲಂ-ಮಣಿಜ್ಯೋಲಾದರ್ಥ ಲಾಭಂ ಕುಕ್ರಿಯಾಚರಣಂ ಶುಭಂ । ಮಾಧುರ್ಯವಸ್ತುಭೋಜ್ಯಂ ಸ್ಯಾದ್ದ್ವಿತೀಯಸ್ಥಾನಗೇ ಕುಜೇ ॥೫೨॥ ತೃತೀಯಸ್ಥ ಬುಧಫಲಂ-ಅರ್ಥಹಾನಿಂ ರಾಜಕೋಪಂ ಜ್ಞಾತಿವೈರಂ ತಪಶ್ಚ್ಯುತಿಃ ಬುದ್ಧಿ ಜಾಡ್ಯಂ ಮನಸ್ತಾಪಂ ತೃತೀಯೇ ಚಂದ್ರನಂದನೇ ॥೫೩॥-ಚತುರ್ಥರಾಶಿಸ್ಥ ಬುಧಫಲಂ-ನಿತ್ಯಸೌಖ್ಯಂ ಕಲಾಲಾಪಂ ಧನಧಾನ್ಯಾದಿ ಲಾಭದಂ । ಕಾರ್ಯ ವೃದ್ಧಿಂಚ ವಿಜ್ಞಾನಂ ಸಿದ್ಧಿಂ ಬಂಧುಗತೇ ಬುಧೇ ॥೫೪॥- ಪಂಚಮರಾಶಿಸ್ಥ ಬುಧಫಲಂ-ಸರ್ವಾಂಗ ಮುಷ್ಣಸಂತಾಪಂ ವ್ಯಾಯಾಮಂ ಸರ್ವದೋಷಕೃತ್ । ಆಲಸ್ಯಂ ಕಲಹಂಚೈವ ಪಂಚಮಸ್ಥೋಯದಾಬುಧಃ ॥೫೫॥ ಷಷ್ಠರಾಶಿಸ್ಥ ಬುಧಫಲಂ-ಧಾನ್ಯಲಾಭಂ ಪುತ್ರಲಾಭಂ ಧನಲಾಭಂ ಯಶೋದ್ಧೃತಿಃ । ವಿದ್ಯಾವಿನೋದ ಧರ್ಮಂಚ ಷಷ್ಠಸ್ಥಾನ ಗತೇಬುಧೆ ॥೫೬॥ ಸಪ್ತಮರಾಶಿಸ್ಥ ಬುಧಫಲಂ-॥೭॥ ದೌರ್ಭಾಗ್ಯಮಲ್ಪ ಲಾಭಂಚ ರಾಜಕೋಪಂಚ ವಾತುರಕ್ । ಸರ್ವಾಂಗಜಾಡ್ಯಂ ದುಃಖಾಪ್ತಿಂ ಸಪ್ತಮೇ ಶಶಿನಂದನೇ ॥೫೭॥ ಅಷ್ಟಮರಾಶಿಸ್ಥ ಬುಧಫಲಂ - ॥೮॥ ದೇಹಸೌಖ್ಯಂ ಸುವಿದ್ಯಾಪ್ತಿಂ ಸತ್ಕರ್ಮ ಪರಿಶೀಲನಂ । ಅರುಚಿರ್ಭೋಜನೈಶ್ಚಿಂತಾ ಅಷ್ಟಮಸ್ಥೇ ವಿಧೋಃಸುತೇ ॥೫೮॥ ನವಮರಾಶಿಸ್ಥ ಬುಧಫಲಂ ॥೯॥ ದೇಹಜಾಡ್ಯಂಚ ದೋಷಾಪ್ತಿಂ ನಿಸ್ಸತ್ವಂ ಚಾಲ್ಪಭೋಜನಂ । ಅತ್ಯಂತ ಭಯ ಮಲ್ಪಾರ್ತಿಂ ನವಮಸ್ಥೋ ಯದಾಬುಧಃ ॥೫೯॥ ದಶಮರಾಶಿಸ್ಥ ಬುಧಫಲಂ-ಅಪದಂಶೋಷಣಂ ನಿತ್ಯಂ ಅನ್ನಸೌಖ್ಯನಿರಾಕೃತಿಂ । ಸ್ವಬಂಧುಜನ ನೈಷ್ಠುರ್ಯಂ ದಶಮಸ್ಥೇ ಶಶಾಂಕಜೇ ॥೬೦॥ ಲಾಭರಾಶಿಸ್ಥ ಬುಧಫಲಂ-ಆರೋಗ್ಯಮರ್ಥ ಲಾಭಂಚ ಬಂಧುಪ್ರೀತಿಂಸುಖೋನ್ನತಿಂ ॥ ಮಿತ್ರಾಗಮಂ ಯಶೋವೃದ್ಧಿಂ ಬುಧಸ್ಯೈಕಾದಶೇಫಲಂ ॥೬೧॥ ದ್ವಾದಶಾಸ್ಥ ಬುಧಫಲಂ ॥೧೨॥ ಸೌಖ್ಯಹಾನಿಂ ಮನಃಕ್ಲೇಶಂ ಕೃಷಿಭೋಜನಮಲ್ಪಶಃ ॥ ನಿತ್ಯಸಂವಾದ ದಾರಿದ್ರ್ಯಂ ದ್ವಾದಶಸ್ಥೋ ಯದಾಬುಧಃ ॥೬೨॥

ಇತಿ ಬುಧಗೋಚಾರಫಲಂ.

## ಗುರೋರಷ್ಟಕವರ್ಗ, ಬಿಂದುಶೋಧನಂ

| | | | |
|---|---|---|---|
| ೦೦೦೦ ೧೧೧೧ | ೦೦೦೦ ೦೦೧೧ | ೦೦೦೦ ೧೧೧೧ | ೦೦೦ ೧೧೧೧ |
| ೦೦೦೧ ೧೧೧೧ | ಗುರು ಬಿಂದು | | ೦೦೦೦ ೦೦೦೧ |
| ೦೦೦೦ ೦೦೧೧ | ೫೬ | | ೦೦೦೦ ೦೦೧೧ |
| ೦೦೦೦ ೧೧೧೧ | ೦೦೦೦ ೧೧೦೧ | ೦೦೧೧ ೧೧೧೧ | ೦೦೧೧ ೧೧೧೧ |

ಗುರು ಮೇಶಾದಿ ರಾಶಿಸಂಚಾರ ಕಾಲದಲ್ಲಿ ಉಂಟಾಗುವ ಫಲವು ಹೇಳಲ್ಪಡುವುದುಃ- ಗುರುವಿಗೆ ಮೇಷ ರಾಶಿಯಲ್ಲಿ ೨ನೇ ೧ ಭಾಗ, ಕರ್ಕದಲ್ಲಿ ೪ರಲ್ಲಿ ೩ ಭಾಗ, ಸಿಂಹದಲ್ಲಿ ೨ನೇ ೧ ಭಾಗ, ತುಲೆಯಲ್ಲಿ ೪ರಲ್ಲಿ ೩ ಭಾಗ, ಮಕರದಲ್ಲಿ ೨ನೇ ೧ ಭಾಗ, ಈ ಪ್ರಕಾರ ಶುಭ ಫಲವನ್ನು ಕೊಡುತ್ತಾನೆ. ವೃಷಭ, ವೃಶ್ಚಿಕ, ಧನುಸ್ಸು ಕುಂಭ, ಮೀನ ಈ ಐದು ರಾಶಿಗಳಲ್ಲಿ ಶುಭಪಾಪ ಮಿಶ್ರಫಲವನ್ನು ಕೊಡುತ್ತಾನೆ. ಮಿಥುನದಲ್ಲಿ ೪ ರಲ್ಲಿ ೧ ಭಾಗ, ಕನ್ಯೆಯಲ್ಲಿ ೨ನೇ ೧ ಭಾಗ ಅನಿಷ್ಟಫಲವನ್ನು ಕೊಡುತ್ತಾನೆ.

## ಗುರುಜನ್ಮಾದಿ ದ್ವಾದಶರಾಶಿಸ್ಥ ಫಲಂ

ಜನ್ಮರಾಶಿಸ್ಥ ಗುರುಫಲಂ ॥೧॥ಶ್ಲೋಕ॥ ರಾಜಕೋಪಂ ಯಶೋಹಾನಿಂ ಬಂಧುಮಿತ್ರ ವಿರೋಧಕೃತ್ ॥೬೩॥ ಚಿತ್ತಭ್ರಾಂತಿಂ ಭಾಗ್ಯಹಾನಿಂ ಭಯಂ ಜನ್ಮಗತೇಗುರೌ ॥೬೪॥ ದ್ವಿತೀಯ ರಾಶಿಸ್ಥ ಗುರುಫಲಂ ॥೨॥ ಮನಸೌಖ್ಯಂ ಯಶೋವೃದ್ಧಿಂ ಸೌಭಾಗ್ಯಂಚ ಧನಾಗಮಂ । ಕೀರ್ತಿಲಾಭಂಚ ಧರ್ಮಾರ್ತಿಂ ದ್ವಿತೀಯಸ್ಥೋಯದಾಗುರುಃ ॥೬೫॥ ತೃತೀಯರಾಶಿಸ್ಥ ಗುರುಫಲಂ ॥೩॥ ಅತಿ ಕ್ಲೇಶಂ ಬುದ್ಧರಿಷ್ಟಂ ದಾರಿದ್ರ್ಯಂ ದೇಹಪೀಡನಂ । ಮಾನಹಾನಿಂಚ ಸಂಚಾರಂ ತೃತೀಯೇ ಸಂಸ್ಥಿತೇ ಗುರೌ ॥೬೬॥ ಚತುರ್ಥರಾಶಿಸ್ಥ ಗುರುಫಲಂ ॥೪॥ ವ್ಯಸನಂ ಬುದ್ಧಿಚಾಂಚಲ್ಯಂ ತೇಜೋಹಾನಿಂ ಸುಖಾತ್ಯಯಂ । ದೇಶತ್ಯಾಗಂಚ ಕಲಹಂ ಚತುರ್ಥಸ್ಥಾನಗೇರೌ ॥೬೭॥ ಪಂಚಮರಾಶಿಸ್ಥ ಗುರುಫಲಂ ॥೫॥ ರಾಜಸನ್ಮಾನಮೈಶ್ವರ್ಯಂ ಸ್ವಕರ್ಮರತಿಮೀಪ್ಸಿತಂ। ಸದಾಸಜ್ಜನಸಂಸರ್ಗಂ ಪಂಚಮಸ್ಥೋ ಯದಾಗುರುಃ ॥೬೮॥ ಷಷ್ಠಸ್ಥಾನಸ್ಥ ಗುರುಫಲಂ ॥೬॥ ದಾರಪುತ್ರ ವಿರೋಧಂಚ ಸ್ವಜನ್ಯೈ ಕಲಹಂಸದಾ । ವ್ರಣಚೋರಾಗ್ನಿಭೀತಿಶ್ಚಗುರೋಃ ಷಷ್ಠಸ್ಥಿತೇಃಫಲಂ ॥೬೯॥ ಸಪ್ತಮರಾಶಿಸ್ಥ ಗುರುಫಲಂ ॥೭॥ ರಾಜದರ್ಶನ ಮಾರೋಗ್ಯಂ ಗಾಂಭೀರ್ಯಂ ಗಾತ್ರಪೋಷಣಂ । ಅಭೀಷ್ಟಕಾರ್ಯಸಿದ್ಧಿಃ ಸ್ಯಾತ್ಸಪ್ತಮಸ್ಥೋ ಯದಾಗುರುಃ ॥೭೦॥ ಅಷ್ಟಮರಾಶಿಸ್ಥ ಗುರುಫಲಂ ॥೮॥ ಚೋರಾಗ್ನಿರ್ನೃಪಭೀತಿಶ್ಚ ಸರ್ವದಾಕ್ಲೇಶಜೀವನಂ । ನಿಷ್ಕಾರಂಸಾಹಸಂಕ್ರೋಧಂ ಅಷ್ಟಮಸ್ಥೋಯದಾಗುರುಃ ॥೭೧॥ ನವಮ ರಾಶಿಸ್ಥಗುರುಫಲಂ ॥೯॥ ಅರ್ಥಂಚಸ್ವ ಕುಲಾಂಚಾರಂ

ಗೃಹೈಸಿತ್ಯೋತ್ಸವಂಶುಭಂ । ನಿತ್ಯಂಮಧುರಭೋಜ್ಯಂಚ ನವಮಸ್ಥೋ ಯದಾಗುರುಃ ॥೭೨॥ ದಶಮಸ್ಥಾನಸ್ಥ ಗುರುಫಲಂ ॥೧೦॥ ಧಾನ್ಯಹಾನಿಂ ಮತಿ ಭ್ರಂಶಂ ರೋಗಂಸಂಚಾರಕೃದ್ಭಯಂ। ಸ್ವಜನೈರ್ದೂಷಣಂ ದುಃಖಂ ದಶಮಸ್ಥೋ ಯದಾಗುರುಃ ॥೭೩॥ ಏಕಾದಶಸ್ಥಾನಸ್ಥ ಗುರುಫಲಂ ॥೧೧॥ ಯಶೋವೃದ್ಧಿಂ ಬಲಂ ತೇಜಃ ಸರ್ವತ್ರವಿಜಯಂಸುಖಂ । ಶತ್ರುಶ್ಚ ಮಿತ್ರತಾಂಯಾತಿ ಗುರೋಶ್ಚೈಕಾದಶೇ ಫಲಂ ॥೭೪॥ ದ್ವಾದಶರಾಶಿಸ್ಥ ಗುರುಫಲಂ ॥೧೨॥ ಸ್ಥಾನಭ್ರಂಶಂ ಧನಚ್ಛೇದಂ ಪ್ರಾಣಸಂದೇಹಫಲಪ್ರದಂ। ವೃಥಾಸಂಚರಣಂ ದೈನ್ಯಂ ದ್ವಾದಶಸ್ಥೋ ಯದಾಗುರುಃ ॥೭೫॥

ಇತಿ ಗುರುಗೋಚಾರಫಲಂ

## ಶುಕ್ರಾಷ್ಟಕವರ್ಗ ಗೋಚಾರಫಲಂ

| ೦೦೦೦ ೧೧೧೧ | ೦೧೧೧ ೧೧೧೧ | ೦೦೦೦ ೦೧೧೦ | ೦೦೦೦ ೦೦೧೧ |
|---|---|---|---|
| ೦೦೦೦ ೦೦೧೧ | ಶುಕ್ರಾಷ್ಟಕ | | ೦೦೦೦ ೧೧೧೧ |
| ೦೦೦೦ ೧೧೧೧ | ವರ್ಗ ೫೨ | | ೦೦೦೦ ೦೦೧೧ |
| ೦೦೦೦ ೦೧೧೧ | ೦೦೦೦ ೧೧೧೧ | ೦೧೧೧ ೧೧೧೧ | ೦೦೦೦ ೦೧೧೧ |

ಶುಕ್ರಾಷ್ಟಕವರ್ಗ ಫಲ-ಶುಕ್ರನು ವೃಷಭದಲ್ಲಿ ೪ರಲ್ಲಿ ೧ ಭಾಗ, ಮಿಥುನದಲ್ಲಿ ೨ನೇ ೧ ಭಾಗಸಿಂಹದಲ್ಲಿ ೨ನೇ ೧ ಭಾಗ, ಕನ್ಯೆಯಲ್ಲಿ ೪ರಲ್ಲಿ ೧ಭಾಗ, ಕುಂಭದಲ್ಲಿ ೨ನೇ ೧ ಭಾಗ, ಮೀನದಲ್ಲಿ ೪ರಲ್ಲಿ ೧ ಭಾಗ, ಶುಭಫಲ ವನ್ನು ಕೊಡುತ್ತಾನೆ. ಮೇಷದಲ್ಲಿ ೪ರಲ್ಲಿ ೩ ಭಾಗ ತುಲೆಯಲ್ಲಿ ೪ರಲ್ಲಿ ೩ ಭಾಗ ಅನಿಷ್ಟಫಲವನ್ನೂ, ಕಟಕ, ವೃಶ್ಚಿಕ, ಮಕರ ಈ ಮೂರು ರಾಶಿಗಳಲ್ಲಿ ಶುಭಪಾಪಫಲ ಸಮವಾಗಿಯೂ ಕೊಡುತ್ತಾನೆ.

## ಶುಕ್ರಗೋಚಾರ ಫಲಂ

ಜನ್ಮರಾಶಿಸ್ಥಿತ ಶುಕ್ರಫಲಂ ॥೧॥ ಅರ್ಥಲಾಭಂ ಮಹತ್ಸೌಖ್ಯಂ ಪರಸ್ತ್ರೀ ಸಂಗಮಂತಥಾ । ನಿತ್ಯಂಸ್ತ್ರೀಮೂಲವಾಕ್ಯಾನಿ ಜನ್ಮಶುಕ್ರಫಲಂಭವೇತ್ ॥೭೬॥ ದ್ವಿತೀಯರಾಶಿಸ್ಥಿತ ಶುಕ್ರಫಲಂ ॥೨॥ ಕೀರ್ತಿಲಾಭಂ ಶುಭಸೌಖ್ಯಂ ಪ್ರತಿಜ್ಞಾ ಪರಿಪಾಲನಂ । ದೇಹಸೌಖ್ಯಂ ವಸ್ತ್ರಲಾಭಂ ದ್ವಿತೀಯೇಭೃಗುಸಂಸ್ಥಿತೇ ॥೭೭॥ ತೃತೀಯರಾಶಿಸ್ಥ ಶುಕ್ರಫಲಂ ॥೩॥ ಸ್ತ್ರೀ ಸೌಖ್ಯಂ ಮಣಿಲಾಭಂಚ ಧೈರ್ಯಂತೇಜೋ ಯಶೋಬಲಂ । ಸಂಗೀತಶ್ರವಣಂಚೈವ ಭಾರ್ಗವೇಚ ತೃತೀಯಕೇ ॥೭೮॥ ಚತುರ್ಥಸ್ಥಿತ ಶುಕ್ರಫಲಂ ॥೪॥ ಸದ್ಬುದ್ಧಿಂ ಬಂಧುಸನ್ಮಾನಂ ಸ್ತ್ರೀ ಸಂಭಾಷಣ ಸಂಪದಂ। ದೇವತಾದರ್ಶನಂ ಯಾತ್ರಾಂ ವಿದ್ಯಾಗೋಷ್ಠಿಸ್ಸುಖೇಭೃಗೌ ॥೭೯॥

ಪಂಚಮಸ್ಥ ಶುಕ್ರಫಲಂ ॥೫॥ ದಾಸೀಭೃತ್ಯ ಜನಾಲಾಭಂ ನಿತ್ಯಂಮೃಷ್ಟಾನ್ನ ಭೋಜನಂ ಧನಧಾನ್ಯ ಸುಭೂಷಾಪ್ತಿಂ ಪಂಚಮಸ್ಥೋಯದಾಭೃಗುಃ ॥೮೦॥ ಷಷ್ಠಸ್ಥಶುಕ್ರಫಲಂ ॥೬॥ ವಿರೋಧಂಶತ್ರುಪೀಡಾಚ ಜ್ಞಾತಿಮೂಲಾದ್ಧನಕ್ಷಯಂ । ದಾರಾಪುತ್ರಾದ್ವ್ಯಾಮಯಂಸ್ಯಾತ್ ಷಷ್ಠೇಭೃಗುಸುತೇಫಲಂ ॥೮೧॥ ಸಪ್ತಮಸ್ಥ ಶುಕ್ರಫಲಂ ॥೭॥ ತಾಪಕೋಪಂ ಮಹಾಭೀತಿಂ ಸರ್ವದಾಕ್ಲೇಶಸಂಭ್ರಮಂ । ಸ್ತ್ರೀಜಾಡ್ಯಂ ಮೇಹರೋಗಾದಿ ಸಪ್ತಮೇಸಂಸ್ಥಿತೇಭೃಗೌ ॥೮೨॥ ಅಷ್ಟಮಸ್ಥ ಶುಕ್ರಫಲಂ ॥೮॥ ದುಃಖನಾಶಂ ಮಹತ್ಸೌಖ್ಯಂ ಬಂಧುಮಿತ್ರ ಸಮಾಗಮಂ । ರಾಜಸನ್ಮಾನಮ್ಯದಾಪ್ತಿ ಮಷ್ಟಮಭೃಗುನಂದನೇ ॥೮೩॥ ನವಮಸ್ಥ ಶುಕ್ರಫಲಂ ॥೯॥ ವಸ್ತ್ರಲಾಭಮರೋಗತ್ವಂ ಗುರುಭಕ್ತಿಸ್ತಧರ್ಮಕೃತ್ । ಚಿತ್ತ ಶುದ್ಧಿಮಭಿಪ್ರಾನ್ನಂ ನವಮಸ್ಥೋಯದಾಭೃಗುಃ ॥೮೪॥ ದಶಮಸ್ಥ ಶುಕ್ರಫಲಂ ॥೧೦॥ ವ್ಯಾಕುಲಂಭೇದನಿಸ್ಸತ್ವಂ ಅರ್ಥಸಿದ್ಧಿರಿಪೋರ್ಭಯಂ । ಸ್ತ್ರೀಸೌಖ್ಯಂಗಾನವಿದ್ವಾಂಚ ದಶಮೇ ಭೃಗುನಂದನೇ ॥೮೫॥ ಲಾಭಸ್ಥ ಶುಕ್ರಫಲಂ ॥೧೧॥ ಪುಷ್ಟಿಂ ಕಾಂತಿಂ ತಥಾಕೀರ್ತಿ ಇಷ್ಟಕಾರ್ಯಾರ್ಥಸಿದ್ಧಿದಂ । ಸದಾಕ್ಷೀರಾನ್ನಭುಕ್ತಿಸ್ಯಾಚ್ಛುಕ್ರಸ್ಯೈ ಕಾದಶೇಫಲಂ ॥೮೬॥ ವ್ಯಯರಾಶಿಸ್ಥ ಶುಕ್ರಫಲಂ ॥೧೨॥ ಶತ್ರುಪೀಡಾ ಚೋರಭಾಧಾ ಅತಿಶೋಕಂ ಮಹದ್ಭಯಂ । ಕೃಷಿಕಾರ್ಯದಿನಾಶಂಸ್ಯಾ ದ್ವಾದಶಸ್ಥೋಯದಾಭೃಗುಃ ॥೮೭॥

ಇತಿ ಶುಕ್ರಗೋಚಾರಫಲಂ

## ಅಥ ಶನ್ಯಷ್ಟಕವರ್ಗಫಲಂ

| | | | |
|---|---|---|---|
| ೦೦೦೦<br>೦೧೧೧ | ೦೦೦<br>೧೧೧ | ೦೦೦೧<br>೧೧೧೧ | ೦೦೦೦<br>೧೧೧೧ |
| ೦೧೧೧<br>೧೧೧೧ | | | ೦೦೦೦<br>೧೧೧೧ |
| ೦೦೦೧<br>೧೧೧೧ | ೩೯ | | ೦೦೦೦<br>೧೧೧೧ |
| ೦೦೦೧<br>೧೧೧೧ | ೦೦೧೧<br>೧೧೧೧ | ೦೦೧೧<br>೦೧೧೧ | ೦೦೦೦<br>೦೧೧೧ |

ಶನಿಯು ಕನ್ಯಾ ಮೀನರಾಶಿಗಳ ಸಂಚಾರ ಕಾಲದಲ್ಲಿ ೪ ರಲ್ಲಿ ೧ ಭಾಗ ಶುಭಫಲವನ್ನು ಕೊಡುತ್ತಾನೆ. ವೃಷಭದಲ್ಲಿ ೪ರಲ್ಲಿ ೧ ಭಾಗ, ಕರ್ಕಾಟಕದಲ್ಲಿ ೪ರಲ್ಲಿ ೧ ಭಾಗ, ತುಲೆಯಲ್ಲಿ ೧ ಭಾಗ, ವೃಶ್ಚಿಕದಲ್ಲಿ ೧ ಭಾಗ, ಧನುಸ್ಸಿನಲ್ಲಿ ೪ ರಲ್ಲಿ ೧ ಭಾಗ, ಧನುಸ್ಸಿನಲ್ಲಿ ೪ ರಲ್ಲಿ ೧ ಭಾಗ, ಮಕರದಲ್ಲಿ ೪ರಲ್ಲಿ ೧ ಭಾಗ, ಕುಂಭದಲ್ಲಿ ೪ರಲ್ಲಿ ೩ ಭಾಗ, ಈ ಪ್ರಕಾರ ಅಶುಭಫಲವನ್ನು ಕೊಡುತ್ತಾನೆ. ಮೇಷ, ಸಿಂಹ, ಮಿಥುನ ಈ ಮೂರು ರಾಶಿಗಳಲ್ಲಿ ಶುಭ ಪಾಪಫಲಗಳನ್ನು ಮಿಶ್ರವಾಗಿ ಕೊಡುತ್ತಾನೆ.

## ಶನಿಗೋಚರ ದ್ವಾದಶರಾಶಿಸ್ಥ ಫಲಂ

ಜನ್ಮರಾಶಿಸ್ಥ ಶನಿಫಲಂ ॥೧॥ ತೇಜೋಹಾನಿಂ ಮತಿಭ್ರಂಶಂ ಮನಃ

ಪೀಡಾಂಜಯಂಸದಾ । ರೋಗಾರ್ತಿಂಬಂಧವೈರಂಚ ವ್ಯಸನಜನ್ಮಗೇರ್ಕಜೇ ॥ ದ್ವಿತೀಯಸ್ಥ ಶನಿಫಲಂ ॥೨॥ ಮತಿಭ್ರಂಶಂಮನಃಕ್ಲೇಶಂ ಸರ್ವಕಾರ್ಯವಿನಾಶಕೃತ್ । ದೇಹಾಲಸ್ಯಂ ಮನಸ್ತಾಪಂ ಸೂರ್ಯಪುತ್ರೇ ದ್ವಿತೀಯಕೇ ॥೮೯॥ ತೃತೀಯಸ್ಥ ಶನಿ ಫಲಂ ॥೩॥ ಸ್ತ್ರೀಭೋಗಂಚಮನಸೌಖ್ಯಂ ಬುದ್ಧಿಯತ್ನಾರ್ಥ ಸಿದ್ಧಿಕೃತ್। ಸಂತಾನ ಪ್ರಾಪ್ತಿಮಾರೋಗ್ಯಂ ಸೂರ್ಯಪುತ್ರೇ ತೃತೀಯಕೇ ॥೯೦॥ ಚತುರ್ಥರಾಶಿಸ್ಥ ಶನಿಫಲಂ ॥೪॥ ಶೂಲವಾತಧದಚ್ಛೇದಂ ಭಯಂ ಸ್ವಸ್ಥಾನಹಾನಿಕೃತ್ । ಮಸೂರಿಕಾ ದೇಹಪೀಡಾಂ ಸೂರ್ಯಪುತ್ರೇಚತುರ್ಥಕೇ ॥೯೧॥ ಪಂಚಮಸ್ಥ ಶನಿಫಲಂ ॥೫॥ ಕಾರ್ಯಹಾನಿಂಮನಸ್ತಾಪಂ ಜ್ಞಾತಿವ್ಯಾಜಕಲಾಪಕೃತ್ । ಹೀನಸ್ತ್ರೀಭೋಗಸಂತಾಪಂ ಪಂಚಮಸ್ಥೋಯದಾಶನಿಃ ॥೯೨॥ ಷಷ್ಟಸ್ಥ ಶನಿಫಲಂ ॥೬॥ ಧನಧಾನ್ಯಾಭಿವೃದ್ಧಿಂಚ ಬಂಧುಸಂತೋಷಮಾನದಂ । ಸ್ತ್ರೀಸೌಖ್ಯಂ ಗೃಹನಿರ್ಮಾಣಂ ಕುರ್ಯಾದ್ರಿಪುಗತೇಶನೌ ॥೯೩॥ ಸಪ್ತಮಸ್ಥ ಶನಿಫಲಂ ॥೭॥ ವ್ಯಾಧಿಪೀಡಾಪ್ರವಾಸಂಚ ಮನಃಕ್ಲೇಶು ಸಪಾತ್ಮಯಂ । ಅರ್ಥನಾಶಂದುಷ್ಟಚಿಂತಾಂ ಪೀಡಾರ್ಥಂಸಪ್ತಮೇಶನೌ ॥೯೪॥ ಅಷ್ಟಮಸ್ಥ ಶನಿಫಲಂ॥೮॥ ನಾನಾಕಾರ್ಯವಿನಾಶಂಚ ದೇಹಭಾದಾಂ ಧನಕ್ಷಯಂ। ಅಪಮೃತ್ಯು ಭಯಂಚೈವ ಅಷ್ಟಮಸ್ಥೋಯದಾಶನಿಃ ॥೯೫॥ ನವಮಸ್ಥ ಶನಿಫಲಂ ॥೯॥ ಶೋಕ ರೋಗಮಹಾ ದುಃಖಂ ಕ್ವಚಿದರ್ಥಂ ಕ್ವಚಿತ್ಸುಖಂ । ಜ್ವರಪೀಡಾಂಸುತಕ್ಲೇಶಂ ನವಮಸ್ಥೋಯದಾಶನಿಃ ॥೯೬॥ ದಶಮಸ್ಥ ಶನಿಫಲಂ ॥೧೦॥ ವ್ಯಾಕುಲಂ ಶೋಕ ಸಂತಾಪಂ ಪಾಪಮುದ್ಯೋಗವಿಘ್ನಕೃತ್ । ಕೃಷಿಕಾರ್ಯಾದಿನಾಶಂಸ್ಯಾ ದಶಮಸ್ಥೋಯದಾಶನಿಃ ॥೯೭॥ ಲಾಭಸ್ಥ ಶನಿಫಲಂ ॥೧೧॥ ಆರೋಗ್ಯಮರ್ಥಲಾಭಂಚ ಸ್ತ್ರೀಪುತ್ರ ಸುಖವರ್ಧನಂ । ಚಿತ್ತಶುದ್ಧಿ ಮಭೀಷ್ಟಾರ್ಥಂ ಲಾಭಸ್ಥೇ ಭಾಸ್ಕರಾತ್ಮಜೇ ॥೯೮॥ ವ್ಯಯಸ್ಥ ಶನಿಫಲಂ ॥೧೨॥ ಮಾನಹಾನಿಂಚ ಸಂಚಾರಂ ಕೃಷಿಭೋಜನಮಲ್ಪಕಃ । ನಿತ್ಯಂಸಂವಾದ ದಾರಿದ್ರ್ಯಂ ದ್ವಾದಶಸ್ಥೋಯದಾ ಶನಿಃ ॥೯೯॥ ಇತಿ ಶನಿಗೋಚರ ಫಲಂ.

ಈ ಪ್ರಕಾರವಾಗಿ ಸೂರ್ಯಾದಿ ಸಪ್ತಗ್ರಹಗಳಿಗೆ ಅಷ್ಟಕ ವರ್ಗೋದಾಹರಣೆಯನ್ನು ತೋರಿಸಿ, ಬಿಂದು ಶೋಧನ ಕ್ರಮವನ್ನು ಮಾಡಿರುತ್ತೆ. ಈ ವಿಷಯದಲ್ಲಿ ಬಾದರಾಯಣ ಸಂಹಿತೆಯಲ್ಲಿ ಶ್ಲೋಕ॥ ಏಕೇನ ಯಶ್ಶುಭಸ್ಸ್ಯಾತ್ತದ್ಬಿಸ್ಥಾನೈಸ್ಸ ಪಾಪದೋಭವತಿ । ಯಸ್ತುಚತುರ್ಭಿರ್ನೇಷ್ಟಃ ಸರ್ವತ್ರಫಲ ಕಲ್ಪನಾತ್ವೇವಂ ॥೧೦೦॥ ಈ ಪ್ರಕಾರವೇ ಅಷ್ಟಕವರ್ಗ ಫಲಬಿಂದು ಮೂಲವಾಗಿ ನಿರ್ಣಯಮಾಡತಕ್ಕದ್ದು. ಮತ್ತು (ಏಕಗ್ರಹಸ್ಯಸದೃಶೇ ಫಲಯೋರ್ವಿರೋಧೇಶ ನಾಶಂ ವದೇದ್ಯದಧಿಕಂ ಪರಿಪಚ್ಯತೇತತ್॥) ಎಂದು ಹೇಳಿರುವುದರಿಂದ- (ಇತಿನಿಗದಿತಮಿಷ್ಟಂ ನೇಷ್ಟಮನ್ಯದ್ವಿ-

ಶೇಷಾದಧಿಕಫಲವಿಪಾಕಂ ಜನ್ಮಭ್ರಾಸ್ಯತ್ರದದ್ಯು) ಎಂದುಕ್ತವಾಗಿರುವುದರಿಂದ ಇದರಲ್ಲಿ ಪುನರುಕ್ತಿ ಇರುವುದಕ್ಕೆ ಹೇಳಿರುವ ಅಭಿಪ್ರಾಯವೇನೆಂದರೆ-ದಶಾಂತರ್ದಶಾಧ್ಯಾಯದಲ್ಲಿ ಉದಾಹರಿಸಿರುವಂತೆ ಒಂದು ಗ್ರಹವು ಸುವರ್ಣಪ್ರದನಾಗಿ ಮತ್ತೊಂದು ಗ್ರಹವು ಸುವರ್ಣಾಪಹಾರಕನಾದರೆ, ಆಗ ಸುವರ್ಣಪ್ರಾಪ್ತಿಯು ಆಗದೆ ಫಲವು ದೃಷ್ಟಾಂತಕ್ಕೆ ಇರುವುದಿಲ್ಲ, ಮತ್ತು ಒಂದು ಗ್ರಹವು ಎರಡು ಕಾರಣಗಳಿಂದ ಸುರ್ವಣಪ್ರದನಾದರೆ, ಮತ್ತೊಂದು ಗ್ರಹವು ಒಂದು ಕಾರಣದಿಂದ ಸುವರ್ಣವ್ಯಯ ಉಂಟುಮಾಡತಕ್ಕವನಾದರೆ, ಆಗ ಸುವರ್ಣಲಾಭವಾಗಿ ಅದರಲ್ಲಿ ಒಂದು ಭಾಗ ವ್ಯಯವಾಗಿ, ಒಂದು ಭಾಗ ಉಳಿಯುವುದು. ಈವಿಷಯವನ್ನು ದಶಾಂತರ್ದಶಾ ಪ್ರಕರಣದಲ್ಲಿ ಹೇಳಿರುತ್ತೆ, ಮತ್ತು ಶುಭಫಲವೂ ಪಾಪಫಲವೂ ಸಮಾನ ಸಂಖ್ಯೆಯಾಗಿದ್ದರೆ ಆಗ ಪಾಪಫಲವೂ ಶುಭಫಲವನ್ನೇ ನಾಶಮಾಡಿ ಯಾವುದೂ ಕಾಣದೆ ಹೋಗುವುದು. ಯವನಾದಿಗಳು ನಿರ್ಣಯಿಸಿರುವ ಅಭಿಪ್ರಾಯವೇನೆಂದರೆ-ಅಷ್ಟಕವರ್ಗದಲ್ಲಿ ಶುಭ ಫಲಬಿಂದು ೬, ಪಾಪಫಲರೇಖೆ ೨, ಇದರಲ್ಲಿ ಶುಭಫಲ ಅಧಿಕವಾಗಿರುವುದರಲ್ಲಿ ೨ ಪಾಪಫಲ ರೇಖೆಯು ಹೋಗಲಾಗಿ ಉಳಿದ ೪ ಬಿಂದುವಿಗೂ ಶುಭಫಲಪ್ರಾಪ್ತಿ ಆಗುವುದೆಂತಲೂ, ಪಾಪಫಲ ಸೂಚಕವಾದ ರೇಖೆ ೫, ಶುಭಫಲಬಿಂದು ೩, ಇದರಲ್ಲಿ ಶುಭಫಲಬಿಂದು ೩ ಹೋದರೆ ಉಳಿದ ೨ ರೇಖೆಗಳು ಪಾಪಾಧಿಕ್ಯತೆಯಿಂದ ಕಂಡುಬರುವುದೆಂದು ಹೇಳುತ್ತಾರೆ. ಆದ್ದರಿಂದಲೇ ವರಾಹಮಿಹಿರಾಚಾರ್ಯರು ತಮ್ಮ ಅಷ್ಟಕವರ್ಗ ಪ್ರಕರಣದಲ್ಲಿ ಇದನ್ನೇ ಉದಹರಿಸಿರುತ್ತಾರೆ. ಶುಭಾಶುಭಫಲಗಳಲ್ಲಿ ಯಾವುದು ಅಧಿಕವಾಗಿರುವುದೋ ಅದೇ ಪ್ರಾಪ್ತಿಯಾಗುವುದು. ಈ ವಿಷಯದಲ್ಲಿ ಪ್ರಮಾಣ-ಶ್ಲೋಕ।। ಫಲಾಷ್ಟವರ್ಗೇ ಶುಭಪಾಪಲಕ್ಷ್ಯಾ ಸಮಾನ ಕಲ್ಪಾವಫಲೌಪ್ರದಿಷ್ಟೌ।। ಜಾಯಾಂಸ್ತುಯಸ್ತಸ್ಯಫಲಂವಿಚಾರ್ಯಂ ಯಾತ್ರಾವಿಧಾನ್ನೇನ ಸಮುದ್ಭವೇಚ ।।೧೦೧।। ಇತಿ ಯವನಾಚಾರ್ಯಃ ।। ಮತ್ತು ಬಾದರಾಯಣ ಸಂಹಿತೆಯಲ್ಲಿ-ಶ್ಲೋಕ।। ಕಷ್ಟಶ್ರೇಷ್ಠೇ ತುಲ್ಯಸಂಖ್ಯೇ ಫಲೇಚೇತ್ಸ್ಯಾ ತಾಂನಾಶಸ್ಸೂಭಯೋ ಸ್ತತ್ರವಾಚ್ಯಃ।। ವಾಚ್ಯಾಪತ್ತಿರ್ವ್ಯತಿರಿಕ್ತಂತುಯತ್ಸಾತ್ ಸ್ಥಾನೇಸ್ಥಾನೇ ಕಲ್ಪನೀಯಾ ಪ್ರದಿಷ್ಟಾ ।।೧೦೨।। ಇತಿ ಬಾದರಾಯಣ ಸಂಹಿತಾಯಾಂ ಉಕ್ತಂ । ಉಪಚಯಗೃಹ ಮಿತ್ರಸ್ವೋಚ್ಚಗೈಃ- ಲಗ್ನದಿಂದಾಗಲೀ ಚಂದ್ರನಿಂದಾಗಲೀ ಉಪಚಯಸ್ಥಾನದಲ್ಲಿ ತನ್ನ ಮಿತ್ರಕ್ಷೇತ್ರ ಸ್ವೋಚ್ಚಕ್ಷೇತ್ರ ಸ್ವಕ್ಷೇತ್ರ ಮೂಲತ್ರಿಕೋಣದಲ್ಲಿದ್ದ ಗ್ರಹವು, ಇಷ್ಟಂ-ಅಷ್ಟಕವರ್ಗದಲ್ಲಿ ಶುಭಫಲ ಕೊಡತಕ್ಕವನಾದರೆ ಆಗ, ಪಷ್ಠಂ-ಹೆಚ್ಚಾದ ಶುಭಫಲವನ್ನು ಕೊಡುವನು. ಈ ಅರ್ಥದಲ್ಲಿ ।।ಶ್ಲೋಕ।। ಲಗ್ನಾದುಪಚಯ

ಸಂಸ್ಥಶ್ಚಂದ್ರಾದ್ವಾ ಸ್ವಗೃಹಮೂಲ ತುಂಗಸ್ಥ॥ ಮಿತ್ರಕ್ಷೇತ್ರಗತೋವಾ ಫಲಮತಿ ಶಯಿತಂ ಶುಭಂದದ್ಯಾತ್ ॥೧೦೩॥ ಇತಿ ದೇವಕೀರ್ತಿಃ ॥ ಅಪಚಯಗೃಹನೀಚ ರಾಶಿಗೈ-ಲಗ್ನದಿಂದಾಗಲಿ, ಚಂದ್ರನಿಂದಾಗಲಿ ಅಪಚಯ ಸ್ಥಾನಗಳಲ್ಲಿ ಗ್ರಹಗಳು ತಮ್ಮತಮ್ಮ ನೀಚಸ್ಥಾನ ಶತ್ರುಕ್ಷೇತ್ರದಲ್ಲಿದ್ದರೆ ಅಷ್ಟಕವರ್ಗದಲ್ಲಿ ಶುಭಫಲವನ್ನು ಕೊಡತಕ್ಕವರಾದರೆ ಶುಭಫಲವನ್ನು ಅಧಿಕವಾಗಿ ಕೊಡುವುದಿಲ್ಲ. ಈಗ ಹೇಳಲ್ಪಟ್ಟಿರುವ ಅಷ್ಟಕವರ್ಗದಲ್ಲಿ ಅಶುಭಫಲವು ಕೊಡುವ ಗ್ರಹನೀಚ ಶತ್ರುಸ್ಥಾನದಲ್ಲಿದ್ದರೆ ಹೆಚ್ಚಾದ ಅಶುಭಫಲವನ್ನು ಕೊಡುವುದು. ಉಪಚಯ ಸ್ಥಾನಗಳಲ್ಲಿರುವ ಗ್ರಹಗಳು ಅಷ್ಟಕವರ್ಗದಿಂದ ಅಶುಭಫಲವನ್ನು ಕೊಡತಕ್ಕವರಾದರೆ ಅಶುಭಫಲವನ್ನು ಅಲ್ಪವಾಗಿ ಕೊಡುವರು. ಶುಭಫಲವನ್ನು ಕೊಡುವ ಗ್ರಹಗಳೂ ಅಪಚಯಸ್ಥಾನದಲ್ಲಿದ್ದರೆ ಅಪಚಯಸ್ಥಾನವೇ ನೀಚ ಶತ್ರು ಸ್ಥಾನಗಳಾಗಿದ್ದರೆ ಶುಭಫಲವನ್ನು ಅಲ್ಪವಾಗಿ ಕೊಡುವರು. ಇಲ್ಲಿ ಉಚ್ಚನೀಚಾದಿ ಸ್ಥಾನಗತ ಶುಭಾಶುಭಫಲ ಕಲ್ಪನೆಯನ್ನು ಜನ್ಮಕಾಲದಲ್ಲಿದ್ದ ಗ್ರಹಸ್ಥಿತಿಯಿಂದಲೇ ತಿಳಿಯತಕ್ಕದ್ದು ಈ ವಿಷಯದಲ್ಲಿ ದೇವಕೀರ್ತಿಯ ಮತ-ಶ್ಲೋಕ॥ ಅಪಚಯ ರಾಶೌನೀಚೇ ಶತ್ರುಕ್ಷೇತ್ರಚ ಜನ್ಮಕಾಲೇಸ್ಯಾತ್ । ಯಸ್ತುಸದದ್ಯಾತ್ಪಾಪಂ ಫಲಮತಿಶಯಿತಂ ಯಥಾಕಾಲಂ ॥೧೦೪॥ ಮತ್ತು ಯವನಾಚಾರ್ಯಃ ॥ಶ್ಲೋಕ॥ ಯಸ್ತುಸ್ವನೀ ಚಾರಿಗೃಹೋಪಗೋನ್ಯೈರ್ಜಿತೋರಿದೃಷ್ಟೋಲ್ಪತನುರ್ವಿವರ್ಣಃ । ಸೂತವಭೂಜನ್ಮಪತೌ ಬಲಸ್ಥೇ ಸಜನ್ಮಗೋ ಮಧ್ಯಫಲೋ ವಿಭಕ್ತಃ ॥೧೦೫॥ ಈಷತ್ತು ಹೃತ್ವೋಚ್ಚ ಬೃದಿಷ್ಟಭಾಗೇಮಿತ್ರರ್ಕ್ಷ ಜನ್ಮೋಪಚಯೇ ಬಲೀಯಾರ್ ಯೋಜಾತಕೇ ಭೂತ್ವತುಜನ್ಮಸಂಸ್ಥೋ ದದ್ಯಾಚ್ಛುಭಂಸತ್ವ ಶುಭೋಷ್ಯನಿಷ್ಟಂ ಮತ್ತು ಸತ್ಯಾಚಾರ್ಯರ ಸಮ್ಮತಿ-ಶ್ಲೋಕ॥ ಜನ್ಮನ್ಯುಪಚಯಭನೋಪ ಗಾಗ್ರಹಾಹ್ಯುಪಚಯೇಷು ಪುಷ್ಟಫಲಾಃ। ಅಪಚಯ ಭವನೋಪೇತಾಃ ಸ್ಥಿತ್ವಾಸ್ಥಾನೇಪ್ಯ ಪಚಯಾಯ ಫಲಕಾಲೇ॥೧೦೭॥ ಎಂದುಕ್ತವಾಗಿರುತ್ತೆ. ಚಂದ್ರವ್ಯತಿರಿಕ್ತ ಗ್ರಹಗಳು ಬಲಯುಕ್ತರಾಗಿದ್ದರೆ ಅವರವರಿಗೆ ಹೇಳಲ್ಪಟ್ಟಿರುವ ಶುಭಾಶುಭಫಲವನ್ನಧಿಕವಾಗಿ ಕೊಡುವರು. ಬಲಹೀನರಾಗಿದ್ದರೆ ಸ್ವಲ್ಪಫಲವನ್ನು ಕೊಡುವರು. ಚಂದ್ರನು ಬಲಹೀನನಾಗಿದ್ದರೆ ಅಶುಭಫಲವನ್ನು ಕೊಡುವರೇ ಹೊರತು ಶುಭಫಲವನ್ನು ಕೊಡಲಾರರು. ಚಂದ್ರನು ಬಲವಂತನಾಗಿದ್ದರೆ ಶುಭಫಲವನ್ನೇ ಕೊಡುವರು. ಈ ವಿಷಯದಲ್ಲಿ ॥ಶ್ಲೋಕ॥ ಪುಷ್ಟಮಪುಷ್ಟಂ ಸ್ವಫಲಂ ದದ್ಯಾತ್ಸಬಲೋ ಬಲೇನಹೀನಶ್ಚ॥ ಗ್ರಹಇವಸರ್ವಶ್ಚಂದ್ರಃ ಕಷ್ಟಫಲೋ ಬಲವಿಹೀನಸ್ತು ಎಂದು ದೇವಕೀರ್ತಿ ಹೇಳಿರುತ್ತಾನೆ. ಮತ್ತು ಈ ಗ್ರಹಗಳು ಯಾವಾಗ ಗೋಚಾರದಲ್ಲಿ ಫಲ ಕೊಡುತ್ತಾರೆಂದರೆ ಈ-ಕದಾ ಫಲದಾತೇತ್ಯಾಶಂಕಯಾಹ.

## ಗ್ರಹಾಣಾಂ ಫಲಕಾಲನಿರ್ಣಯಃ

ಶ್ಲೋಕ॥ ಇಳಾತನೂಜಶ್ಚ ಪತಿರ್ನಳಿನ್ಯಾಃ ಪ್ರವೇಶಕಾಲೇ ಫಲದಃಕಿಲಸ್ಯಾತ್। ರಾಶ್ಯರ್ಧಭೋಗೇ ಭೃಗುಜಾಮರೇಜ್ಯೌ ಪ್ರಾಂತ್ಯೇಶ ನೀಂದೂಚ ಸದೇಂದುಸೂನುಃ ॥೧೦೯॥ ಸೂರ್ಯಾಂಗಾರಕರು ರಾಶಿಪ್ರವೇಶಸಮಯದಲ್ಲಿ ಫಲವನ್ನು ಕೊಡುವರು. ಗುರುಶುಕ್ರರು ರಾಶಿಯನ್ನು ಅರ್ಧಭೋಗ ಮಾಡಿದನಂತರ ಫಲವನ್ನು ಕೊಡುವರು. ಶನಿಚಂದ್ರರು ರಾಶಿಯ ಅಂತ್ಯದಲ್ಲಿ ಫಲವನ್ನು ಕೊಡುವರು. ಬುಧನು ರಾಶಿಯಲ್ಲಿ ಯಾವಾಗ ಬರುತ್ತಾನೋ, ಆ ಮೊದಲುಗೊಂಡು ಅಲ್ಲಿರುವ ಪರ್ಯಂತವಾಗಿ ಫಲ ಕೊಡುತ್ತಾನೆ. ಈ ವಿಷಯದಲ್ಲಿ ಶ್ಲೋಕ॥ ರಾಶೇರಾದೌ ಕುಜಃ ಸುರ್ಯೋಮಧ್ಯೇ ಶುಕ್ರ ಬೃಹಸ್ಪತೇ । ಅಂತೇ ಚಂದ್ರಶನಿಜ್ಞೇಯೌಃ ಫಲದಃಸರ್ವದಾಬುಧಃ ॥೧೧೦॥

## ಅಥ ಅಂಗಾಧಿಪತ್ಯ ವಿಚಾರಃ

ಶ್ಲೋಕ॥ ಶಿರಃಪ್ರದೇಶೇವದನೇ ದಿನೇಶೋವಕ್ಷಸ್ಥಳೇ ಚಾಪಿಗಳೇ ಕಲಾರ್ವಾ। ಪೃಷ್ಠೋದರೇ ಭೂತನಯಃ ಪ್ರಭುತ್ವಂಕರೋತಿ ಸೌಮ್ಯಶ್ಚರಣೇಚಪಾಣೌ ॥೧೧೦॥ ಕಟಿಪ್ರದೇಶೇ ಜಘನೇಚಜೀವನಃ ಕವಿಸ್ತುಗುಹ್ಯೇ ಪಿಚುಮುಷ್ಕಯುಗ್ಮೇ । ಜಾನೂರು ದೇಶೇ ನಲಿನೀಶಸೂನುಶ್ಚಾರೇಣವಾಜನ್ಮನಿಚಿಂತನೀಯಂ ॥ ಯದಾಯದಾಸ್ಯಾತ್ತ್ರಿ ಕೂಲವರ್ತೀಸ್ವಾಂಗೇಸ್ವದೋಷೇಣ ಕರೋತಿಪೀಡಾಂ ಇದಂತುಪೂರ್ವಂ ಪ್ರವಿಚಾರ್ಯ ಸರ್ವಂ ಪ್ರಶ್ನಪ್ರಸೂತ್ಯಾದಿಷುಕಲ್ಪನೀಯಂ ॥೧೧೨॥ತಾ॥ ತಲೆ, ಬಾಯಿ, ಈ ಎರಡಕ್ಕೆ ಅಧಿಪತಿ ಸೂರ್ಯನು, ವಕ್ಷಸ್ಥಳ ಮತ್ತು ಎದೆ, ಕುತ್ತಿಗೆ ಈ ಮೂರಕ್ಕೆ ಅಧಿಪತಿ ಚಂದ್ರನು, ಬೆನ್ನು, ಹೊಟ್ಟೆ ಈ ಎರಡಕ್ಕೆ ಅಧಿಪತಿ ಮಂಗಳನು, ಹಸ್ತ ಮತ್ತು ಪಾದ ಈ ಎರಡಕ್ಕೆ ಅಧಿಪತಿ ಬುಧನು, ಸೊಂಟ (ಕಟಿ) ತೊಡೆ ಈ ಎರಡಕ್ಕೆ ಅಧಿಪತಿಗುರು. ಗುಹ್ಯ(ಮರ್ಮಸ್ಥಾನ) ಮತ್ತು ವೃಷಣ ಈ ಎರಡಕ್ಕೆ ಅಧಿಪತಿ ಶುಕ್ರ, ಮೊಣಕಾಲು ಕಣಕಾಲು ಈ ಎರಡಕ್ಕಧಿಪತಿ ಶನಿ. ಈ ಪ್ರಕಾರವಾಗಿ ಜನ್ಮಕಾಲ ಗೋಚಾರ ಕಾಲದಲ್ಲಿಯಾಗಲೀ, ಪ್ರಶ್ನೇಕಾಲದಲ್ಲಿಯಾಗಲೀ ಶುಭಾಶುಭ ಫಲವನ್ನು ಕೊಡುವರು. ಆ ಗ್ರಹಗಳು ಪಾಪಫಲವನ್ನು ಕೊಡತಕ್ಕವರಾದರೆ, ಆಯಾಯ ಅಂಗಗಳಲ್ಲಿ ಪೆಟ್ಟು ವ್ರಣ, ಹುಣ್ಣು, ಗಾಯ ಮತ್ತು ರೋಗ ಮೊದಲಾದವುಗಳನ್ನುಂಟು ಮಾಡುತ್ತಾರೆ. ಶುಭಫಲವನ್ನು ಕೊಡತಕ್ಕವರಾದರೆ ಆಯಾಯ ಅಂಗಗಳು ಆರೋಗ್ಯದಿಂದ ಪುಷ್ಟಿಯನ್ನೈದುತ್ತವೆ. ಈ ವಿಷಯವನ್ನು ಬಹು ಸೂಕ್ಷ್ಮವಾಗಿ ವಿಚಾರಮಾಡಿ ಬುದ್ಧಿವಂತರು ನಿರ್ಣಯಿಸಬೇಕು.

## ಅಥ ಗ್ರಹಾಣಾಂ ಫಲಕಾಲ ನಿರ್ಣಯಃ

ಶ್ಲೋಕ।। ಸೂರ್ಯಃ ಪಂಚದಿನಾತ್ಪೂರ್ವಂ ಶೀತರಶ್ಮಿರ್ಘಟೀತ್ರಯಾತ್ । ಭೌಮೋಘಸ್ರಾಷ್ಟಕಾದರ್ವಾಕ್ ಶುಕ್ರಜ್ಞೌ ಸಪ್ತವಾಸರಾತ್ ।। ಗುರುರ್ಮಾಸದ್ವಯಾ ಚ್ಚೈವ ಷಣ್ಮಾಸಾತು ಶನೈಶ್ಚರಃ ।।೧೧೩।।ತಾ।। ಸೂರ್ಯನು ರಾಶಿಪ್ರವೇಶಕ್ಕೆ ೫ ದಿನ ಮುಂಚಿತವಾಗಿ ಫಲವನ್ನು ಕೊಡುವನು. ಚಂದ್ರನು ಆ ರಾಶಿಯನ್ನು ಬಿಡುವಾಗ ೩ ಘಳಿಗೆ ಕಾಲದಲ್ಲಿ ಫಲವನ್ನು ಕೊಡುವನು. ಅಂಗಾರಕನು ೮ ದಿನ ಮುಂಚಿತವಾಗಿ ಫಲವನ್ನು ಕೊಡುವನು. ಚಂದ್ರನು ಆ ರಾಶಿಯನ್ನು ಬಿಡುವಾಗ ೩ ಘಳಿಗೆ ಕಾಲದಲ್ಲಿ ಫಲವನ್ನು ಕೊಡುವನು. ಅಂಗಾರಕನು ೮ ದಿನ ಮುಂಚಿತವಾಗಿ ಫಲವನ್ನು ಕೊಡುವನು. ಶುಕ್ರ ಬುಧರು ೭ ದಿನ ಮುಂಚಿತವಾಗಿ ಫಲವನ್ನು ಕೊಡುವರು. ಬೃಹಸ್ಪತಿಯು, ರಾಶಿಗೆ ಬಂದು ೨ ತಿಂಗಳಾದನಂತರ ಫಲವನ್ನು ಕೊಡುವನು. ಶನಿಯು, ರಾಶಿಗೆ ಬಂದು ೬ ತಿಂಗಳು ಕಳೆದ ಮೇಲೆ ಫಲವನ್ನು ಕೊಡುವನು.

## ಶನೈಶ್ಚರ ಚರಣವಿಚಾರಃ

ಶ್ಲೋಕ।। ಜನ್ಮಾಂಗರುದ್ರೇಷು ಸುವರ್ಣಪಾದಂ ದ್ವಿಪಂಚನಂ ದೈರಜತಸ್ಯ ಪಾದಂ।। ತ್ರಿಸಪ್ತದಿಕ್ ತಾಮ್ರಪದಂವದಂತಿ ವೇದಾಷ್ಟಮಾರ್ಕೇಷ್ವೀಹಲೋಹಪಾದಂ ।।೧೧೪।।ತಾ।। ಜನ್ಮ ೧, ಅಂಗ ೬, ರುದ್ರ ೧೧ ಈ ಸ್ಥಾನಗಳಲ್ಲಿದ್ದರೆ ಸುವರ್ಣಪಾದವೆಂದು ಸಂಜ್ಞೆ. ದ್ವಿ ೨, ಪಂಚ ೫ ನಂದ ೯ ಈ ಸ್ಥಾನಗಳಲ್ಲಿದ್ದರೆ ಬೆಳ್ಳಿ (ರಜತ) ಪಾದವೆಂದು ಸಂಜ್ಞೆ. ತ್ರಿ ೩ ಸಪ್ತ ೩, ದಿಕ್ ೧೦, ಈ ಸ್ಥಾನಗಳಲ್ಲಿದ್ದರೆ ತಾಮ್ರಪಾದವೆಂದು ಸಂಜ್ಞೆ. ವೇದ ೪, ಅಷ್ಟ ೮, ಅರ್ಕ ೧೨, ಈ ಸ್ಥಾನಗಳಲ್ಲಿದ್ದರೆ ಲೋಹಪಾದವೆಂದು ಸಂಜ್ಞೆ.

## ಶನೈಶ್ಚರ ಪಾದಫಲಂ

ಶ್ಲೋಕ।। ಲೋಹೇಧನಾವಿನಾಶಸ್ಸ್ಯಾ ತ್ಸರ್ವಸೌಖ್ಯಂಚಕಾಂಚನೇ । ತಾಮ್ರೇಚ ಸಮತಾಜ್ಞೇಯಾ ಸೌಭಾಗ್ಯಂ ರಾಜತೇಭವೇತ್ ।।೧೧೫।। ಶನಿಯು ಲೋಹಪಾದ ಗಳಾದ ಜನ್ಮರಾಶ್ಯಾದಿಯಾಗಿ ೪-೮-೧೨ನೇ ಸ್ಥಾನಗಳಲ್ಲಿದ್ದರೆ ಧನನಾಶವನ್ನುಂಟು ಮಾಡುವನು. ಸುವರ್ಣಪಾದ ಸ್ಥಾನಗಳಾದ ೧೧-೬-೧೧ನೇ ಸ್ಥಾನಗಳಲ್ಲಿದ್ದರೆ ಸರ್ವ ಸೌಖ್ಯವನ್ನುಂಟುಮಾಡುವನು. ತಾಮ್ರಪಾದ ಸ್ಥಾನಮಾದ ೩-೭-೧೦ನೇ ಸ್ಥಾನಗಳಲ್ಲಿದ್ದರೆ ಸುಖದುಃಖ, ಕಷ್ಟಸುಖ, ಲಾಭವ್ಯಯ, ರೋಗ ರೋಗನಾಶ ಸಮವಾಗಿರುವುದು. ರಜತಪಾದ ಸ್ಥಾನಗಳಾದ ೨-೩-೯ ಸ್ಥಾನಗಳಲ್ಲಿದ್ದರೆ ಸೌಭಾಗ್ಯವನ್ನು ಕೊಡುವನು. ಈ

ವಾದ ಫಲವನ್ನು ಅಷ್ಟಕವರ್ಗ ಫಲಪ್ರಾಪ್ತಿ ಕಾಲಕ್ಕೆ ಸೇರಿಸಿ ಫಲವನ್ನು ನಿರ್ಣಯ ಮಾಡತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಅಷ್ಟಕವರ್ಗಫಲ
ನಿರೂಪಣಂನಾಮ ನವಮ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ಅಷ್ಟಕವರ್ಗ ಬಿಂದು
ಶೋಧನಫಲಂ ನಿರೂಪಣಂ ನಾಮ
ನವಮ ಪ್ರಕರಣಂ

## ೧೦ನೇ ಕರ್ಮಾಜೀವ ಪ್ರಕರಣಂ

ಅವತಾರಿಕೆ ॥ ಜಾತಕನು ತನ್ನ ಜೀವಿತಕಾಲದಲ್ಲಿ ಯಾವ ವಿಧವಾದ ವೃತ್ತಿಯನ್ನು ಮಾಡಿ ಆ ಮೂಲಕ ಧನವನ್ನು ಸಂಪಾದಿಸುವನೋ ಅಂತಹ ವೃತ್ತಿಯ ಸ್ವಭಾವವನ್ನೂ ಮತ್ತು ಯಾವ ಕಾಲದಲ್ಲಿ ಆ ವೃತ್ತಿಯನ್ನು ಪ್ರಾರಂಭಿಸಿದರೆ ಧನ ಲಾಭವಾಗುತ್ತೆಂಬುದನ್ನು ಈ ಪ್ರಕರಣದಲ್ಲಿ ಹೇಳಲ್ಪಡುತ್ತೆ.

ಮೂಲ॥ ಅರ್ಥಾಪ್ತಿಃ ಪಿತೃಜನನೀ ಸಪತ್ನಮಿತ್ರಭ್ರಾತೃಸ್ತ್ರೀಭೃತಕಜನಾದ್ದಿವಾ
ಕರಾದ್ಯೈಃ। ಹೋರೇಂದ್ವೋರ್ದಶಮಗತೈರ್ವಿಕಲ್ಪನೀಯಾಭೇಂದ್ವ
ರ್ಕಾಸ್ಪದ ಪತಿರಂಶನಾಥವೃತ್ತ್ಯಾ ॥೧॥

ಹೋರೇಂದ್ವೋಃ-ಜನ್ಮಲಗ್ನ ಚಂದ್ರನಿಗೆ, ದಶಮಗತೈಃ-ದಶಮ ಸ್ಥಾನದಲ್ಲಿರುವ, ದಿವಾಕರಾದ್ಯೈಃ-ಸೂರ್ಯಾದಿ ಗ್ರಹಗಳ ದೆಸೆಯಿಂದ, ಅಂದರೆ ಲಗ್ನಕ್ಕಾಗಲೀ, ಚಂದ್ರನಿರುವ ರಾಶಿಗಳಿಗಾಗಲೀ ೧೦ನೇ ಸ್ಥಾನದಲ್ಲಿರುವ ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ಈ ಗ್ರಹಗಳಿಂದ ಅಂದರೆ ಲಗ್ನಕ್ಕೆ ದಶಮಸ್ಥಾನವನ್ನು ಕುರಿತು ವಿಚಾರ ಮಾಡುವಾಗ ಸೂರ್ಯಾದಿ ಸಪ್ತಗ್ರಹಗಳನ್ನು ಚಂದ್ರನಿಂದ ನೋಡುವಾಗ ಚಂದ್ರನನ್ನು ಬಿಟ್ಟು, ಆರು ಗ್ರಹಗಳ ಮೂಲವಾಗಿ ಕ್ರಮವಾಗಿ ಪಿತೃಜನನೀ ಸಪತ್ನ ಮಿತ್ರ ಭ್ರಾತೃ ಸ್ತ್ರೀ ಭೃತಕಜನಾತ್-ತಂದೆಯೇ ಮೊದಲಾದವರಿಂದ, ಅರ್ಥಾಪ್ತಿಃ- ದ್ರವ್ಯಪ್ರಾಪ್ತಿಯು, ವಿಕಲ್ಪನೀಯಾ-ಕಲ್ಪಿಸಲ್ಪಡಬೇಕು ಅದು ಹೇಗೆಂದರೆ-ಜನ್ಮ ಲಗ್ನಕ್ಕಾದರೂ, ಚಂದ್ರನಿರುವ ರಾಶಿಸ್ಥಾನಕ್ಕಾದರೂ ದಶಮಸ್ಥಾನದಲ್ಲಿ ಸೂರ್ಯನಿದ್ದರೆ, ಪಿತೃ-ತಂದೆಯಿಂದ, ಚಂದ್ರನಿದ್ದರೆ, ಜನನೀ-ತಾಯಿಯಿಂದ, ಕುಜನಿದ್ದರೆ, ಸಪತ್ನ-ಶತೃಗಳಿಂದ, ಬುಧನಿದ್ದರೆ, ಮಿತ್ರ-ಸ್ನೇಹಿತರಿಂದ, ಬೃಹಸ್ಪತಿಯಿದ್ದರೆ, ಭ್ರಾತೃ- ಸಹೋದರರಿಂದ, ಶುಕ್ರನಿದ್ದರೆ, ಸ್ತ್ರೀ-ಸ್ತ್ರೀಮೂಲಕವಾಗಿ, ಶನಿಯಿದ್ದರೆ, ಭೃತಕ-ಭೃತ್ಯರ ಮೂಲಕವಾಗಿ ಧನಪ್ರಾಪ್ತಿಯುಂಟಾಗುತ್ತದೆ. ಇಲ್ಲಿ ಚಂದ್ರನಿಂದ ನೋಡುವಾಗ ಚಂದ್ರನನ್ನು ಬಿಟ್ಟುಬಿಡತಕ್ಕದ್ದು. ಲಗ್ನಕ್ಕೆ ದಶಮಸ್ಥಾನದಲ್ಲೊಂದು ಗ್ರಹ, ಚಂದ್ರನಿಗೆ ದಶಮಸ್ಥಾನದಲ್ಲೊಂದು ಗ್ರಹವಿದ್ದರೆ ಆ ಗ್ರಹಗಳು ತಮ್ಮ ತಮ್ಮ ದಶಾಕಾಲದಲ್ಲಿ ಈ ಮೇಲೆ ಹೇಳಲ್ಪಟ್ಟವರ ಮೂಲಕವಾಗಿ ಧನಪ್ರಾಪ್ತಿಯನ್ನು ಉಂಟುಮಾಡುವರು. ಅಥವಾ ಲಗ್ನಕ್ಕಾಗಲೀ ಚಂದ್ರನಿಗಾಗಲೀ ದಶಮಸ್ಥಾನದಲ್ಲಿ ಅನೇಕ ಗ್ರಹಗಳು ಸೇರಿದ್ದರೆ

ಅವರವರ ಅಂತರ್ದಶೆ ಬಂದ ಕಾಲದಲ್ಲಿ ಮೊದಲು ಹೇಳಲ್ಪಟ್ಟ ಪ್ರಕಾರವಾಗಿ ಧನಲಾಭವಾಗುವುದು. ಈ ವಿಷಯದಲ್ಲಿ ಗರ್ಗಸಂಹಿತೆಯಲ್ಲಿ ।।ಶ್ಲೋಕ।। (ಉದಯಾದಿಂದುತೋವಾಪಿ ಯೇಗ್ರಹಾದಶಮಸ್ಥಿತಾಃ । ತೇ ಸರ್ವೇರ್ಥ ಪ್ರದಾಜ್ಞೇಯಾಃ ಸ್ವದಶಾಸುಯಥೋಚಿತಃ ।।೧।।ತಾ।। ಲಗ್ನಾಕ್ಕಾಗಲೀ ಚಂದ್ರನಿಗಾಗಲೀ ದಶಮದಲ್ಲಿರುವ ಗ್ರಹಗಳು ದಶೆಗಳಲ್ಲಿ ವರವರ ಶಕ್ತಿಗನುಗುಣವಾಗಿ ಧನವನ್ನು ಕೊಡುತ್ತಾರೆ. ಲಗ್ನಕ್ಕಾಗಲಿ ಚಂದ್ರನಿಗಾಗಲಿ. ದಶಮ ಸ್ಥಾನದಲ್ಲಿ ಯಾವ ಗ್ರಹವೂ ಇಲ್ಲದಿದ್ದರೆ ಭೇಂದ್ವರ್ಕಾಸ್ಪದ ಪತಿರಂಶನಾಥ ವೃತ್ಯಾ, ಭ-ಲಗ್ನಕ್ಕೆ, ಇಂದು-ಚಂದ್ರನಿಗೆ, ಅರ್ಕ-ಸೂರ್ಯನಿಗೆ, ಅಂದರೆ, ಲಗ್ನಚಂದ್ರ ಸೂರ್ಯರಿಂದ, ಆಸ್ಪದಪತಿಃ-ದಶಮಸ್ಥಾನಕ್ಕೆ ಅಧಿಪತಿಗಳು, ಅಂಶ ನವಾಂಶಕ್ಕೆ ನಾಥ-ಅಧಿಪತಿಯಾದ ಗ್ರಹದ, ವೃತ್ಯಾ-ವೃತ್ತಿಯಿಂದ, ಅರ್ಥಾಪ್ತಿಃ-ದ್ರವ್ಯಪ್ರಾಪ್ತಿ ಯಾಗುವುದು. ಅಂದರೆ ಲಗ್ನ ಚಂದ್ರಸೂರ್ಯರಿಗೆ ದಶಮಸ್ಥಾನಕ್ಕಧಿಪತಿಗಳಾದ ಗ್ರಹಗಳು ಯಾವ ಗ್ರಹದ ನವಾಂಶೆಯಲ್ಲಿರುವರೋ, ಆ ಅಧಿಪತಿಗಳ ಮೂಲಕವಾಗಿ (ಅರ್ಕಾಂಶೇ ತೃಣಕನಕೋರ್ಣಬೇಷಜಾದ್ಯೈಃ) ಇತ್ಯಾದಿ ಮುಂದೆ ಹೇಳಲ್ಪಡುವ ಶ್ಲೋಕ ಪ್ರಕಾರ ಮೇಲೆ ಹೇಳಲ್ಪಟ್ಟಿರುವುದರಿಂದ ಧನಪ್ರಾಪ್ತಿಯಾಗುವುದು. ಇದಕ್ಕೆ ಸಮ್ಮತಿ ಉದಾಹರಣೆ ಶ್ಲೋಕ।। ಲಗ್ನಾರ್ಕಾ ಮೃತಭಾನುಭ್ಯೋದಶಮಾಧಿ ಪತಿರ್ಗಹಃ । ಯಸ್ಮಿನ್ನವಾಂಶೇತತ್ಕಾಲಂ ವರ್ತತೇ ತಸ್ಯಯುಃಪತಿಃ ।।೨।। ತದ್ವೃತ್ತ್ಯಾ ಪ್ರವದೇದ್ವಿತ್ತಂ ಜಾತಸ್ಯಬಹವೋಯದಿ । ಭವಂತಿವಿತ್ತದಾಸ್ತೇಪಿ ಸ್ವದಶಾಸುವಿನಿಶ್ಚಿತಾಃ ।।೩।।ತಾ।। ಜಾತಕನಿಗೆ ಲಗ್ನ ಚಂದ್ರ ಸೂರ್ಯರಿಗೆ ದಶಮಾಧಿಪತಿಯಾದ ಗ್ರಹವು ಯಾವ ಗ್ರಹ ನವಾಂಶೆಯಲ್ಲಿ ಜನ್ಮಕಾಲದಲ್ಲಿರುತ್ತಾನೋ, ಆ ಗ್ರಹ ಗೋಚಾರಕಾಲದಲ್ಲಿ ಆ ನವಾಂಶೆಯನ್ನು ಹೊಂದಿದರೆ, ಆ ವೃತ್ತಿ ಮೂಲವಾಗಿ ಅವರವರ ದಶಾಭುಕ್ತಿಗಳಲ್ಲಿ ಧನಪ್ರದರಾಗುವುದು ನಿಶ್ಚಯವೆಂದರಿಯುವುದು. ಇದಕ್ಕೆ ಪರಾಶರ ಸಂಹಿತೆಯಲ್ಲಿ ಸಮ್ಮತಿ ಶ್ಲೋಕ।। ಅರ್ಥಾಪ್ತಿ ಕಥಯೇದ್ವಿ ಲಗ್ನಶಶಿನೋಃ ಪ್ರಾಬಲ್ಯತಃಖೇಚರೈ । ರ್ಮಾನಸ್ತೈಃಪಿತೃಮಾತೃಶತ್ರುಸಸುಹೃದ್ ಭ್ರಾತ್ರಾದಿಭಿಃಸ್ಯಾದ್ಧನಂ ।। ಬೃತ್ಯಾದ್ವಾದಿನಸಾಥ ಲಗ್ನಶಶಿನಾಂ ಮಧ್ಯೇಬಲೀಯಸ್ತತಃ । ಕರ್ಮೇಶಸ್ಥನವಾಂಶರಾಶಿ ಪವಶಾದ್ವೃತ್ತಿಂ ಜಗುಸ್ತದ್ವಿದಃ ।।೪।। ಲಗ್ನದಿಂದಾಗಲೀ, ಚಂದ್ರನಿಂದಾಗಲಿ ದಶಮಸ್ಥಾನದಲ್ಲಿದ್ದ ರವಿಫಲ-ಶ್ಲೋಕ।। ದಿವಾಮಣಿ ಕರ್ಮಣಿಚಂದ್ರತನ್ವೋಃ ದ್ರವ್ಯಾಣ್ಯನೇಕೋದ್ಯಮವೃತ್ತಿ ಯೋಗಾತ್ । ಸತ್ವಾಧಿಕತ್ವಂ ನರನಾಯಕತ್ವಂ ಪುಷ್ಟತ್ವಮಂ ಗೇ ಮನಸಃಪ್ರಸಾದಃ ।।೫।। ಲಗ್ನಚಂದ್ರರಿಂದ ದಶಮಸ್ಥಾನದಲ್ಲಿ ಸೂರ್ಯನಿದ್ದರೆ, ಅನೇಕ ವಿಧವಾದ ವೃತ್ತಿಯಿಂದ ಧನಲಾಭ, ಪರಾಕ್ರಮಿ, ಜನರಿಗೆಲ್ಲಾ ಮುಂದಾಳಾಗಿರುವಿಕೆ, ಪುಷ್ಟಿಯಾದ

ಶರೀರ, ಪ್ರಸನ್ನಚಿತ್ತವುಳ್ಳವನು ಆಗುವನು. ಲಗ್ನಚಂದ್ರರಿಂದ ದಶಮದಲ್ಲಿ ಕುಜನಿದ್ದಫಲ

ಶ್ಲೋಕ।। ಲಗ್ನೇಂದುತಃ ಕರ್ಮಣಿಚೇನ್ಮಹೀಜಃ ಸ್ಯಾತ್ಸಾಹಸಂ ಕ್ರೌರ್ಯನಿಷಾದವೃತ್ತಿಃ । ನೂನಂ ನರಾಣಾಂ ವಿಷಯಾಭಿಸಕ್ತಿ ದೂರೇನಿವಾಸಃ ಸಹಸಾಕದಾಚಿತ್ ।।೫।। ಮಂಗಳನಿದ್ದರೆ, ಆ ಪುರುಷನು ಮಹಾಸಾಹಸಿ, ಕ್ರೂರ, ವ್ಯಾಧವೃತ್ತಿ, ಅತ್ಯಂತ ನ್ಯೂನವಾದ ವಿಷಯಾಸಕ್ತಿ, ತಾನು ಜನ್ಮಿಸಿದ ದೇಶಕ್ಕೆ ದೂರದಲ್ಲಿ ವಾಸಮಾಡುವವನೂ ಆಗುತ್ತಾನೆ.

## ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ದಶಮಸ್ಥಾನದಲ್ಲಿ ಬುಧನಿದ್ದಫಲ

ಶ್ಲೋಕ।। ಲಗ್ನೇಂದುಭ್ಯಾಂ ಕರ್ಮಗೋರೌಹಿಣೇಯಃ ಕುರ್ಯಾದ್ದ್ರವ್ಯಂ ನಾಯಕತ್ವಂಬಹೂನಾಂ । ಶಿಲ್ಪೇಭ್ಯಾಸಃ ಸಾಹಸಂಸರ್ವಕಾರ್ಯೇವಿದ್ವದ್ವೃತ್ಯಾ ಜೀವಿತಂ ಮಾನವಾನಾಂ ।।೬।। ಬುಧನಿದ್ದರೆ, ಧನವಂತ, ಅನೇಕ ಜನರನ್ನು ಪಾಲಿಸುವನು, ಶಿಲ್ಪಕಾರ್ಯದಲ್ಲಿ ಪ್ರವೀಣ, ಸಮಸ್ತ ಕಾರ್ಯದಲ್ಲೂ ಸಾಹಸ ಪಡುವವನು, ಮತ್ತು ವಿದ್ವಾಂಸನಾಗಿ ಜೀವನ ಮಾಡುವನು.

## ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ದಶಮಸ್ಥಾನದಲ್ಲಿ ಬೃಹಸ್ಪತಿ ಇದ್ದಫಲ

ಶ್ಲೋಕ।। ವಿಲಗ್ನತಃ ಶೀತಮಯೂಖತೋವಾ ಮಾನೇ ಮಘೋನಃ ಸಚಿವೋ ಯದಾಸ್ಯಾತ್ । ನಾನಾಧನಾಭಾಗ್ಯಮನಾನಿಘಂಸಾ ವಿಚಿತ್ರವೃತ್ಯಾ ನೃಪಗೌರವಂಚ ।।೭।। ಲಗ್ನಚಂದ್ರರಿಂದ ದಶಮಸ್ಥಾನದಲ್ಲಿ ಬೃಹಸ್ಪತಿಯಿದ್ದರೆ, ಆ ಪುರುಷನು, ರಾಜಮಂತ್ರಿತ್ವ ಮಾಡುವನು, ಅನೇಕ ಪ್ರಕಾರವಾಗಿ ಧನವನ್ನು ಸಂಪಾದಿಸುವನು, ವಿಚಿತ್ರವಾದ ವೃತ್ತಿಗಳನ್ನು ಕಲ್ಪಿಸುತ್ತಾ ರಾಜಗೌರವವನ್ನು ಪಡೆದು ಜೀವಿಸುವನು.

## ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ದಶಮಸ್ಥಾನದಲ್ಲಿ ಶುಕ್ರನಿದ್ದಫಲ

ಶ್ಲೋಕ।। ಹೋರಾಯಾಶ್ಚ ನಿಶಾಕರಾದ್ಭೃಗುಸುತೋ ಮೇಷೂರಣೇ ಸಂಸ್ಥಿತೋನಾನಾಶಾಸ್ತ್ರ ಕಲಾಕಲಾಪವಿಲಸದ್ವೃತ್ಯಾದಿಶೇಜ್ಜೀವನಮ್ । ದಾನೇ ಸಾಧುಮತಿಂ ತಥಾವಿನಯತಾಂಕಾಮಂಧನಾಭಾಗ್ಯಮಂ ಮಾನಂಮಾನವನಾಯಕಾದ ವಿರಳಂ ಶೀಲಂ ವಿಶಾಲಂಯದಾ ।।೮।। ಶುಕ್ರನಿದ್ದರೆ, ಆ ಪುರುಷನು ಅನೇಕ ಪ್ರಕಾರವಾದ ಶಾಸ್ತ್ರಕಲೆಗಳನ್ನು ತಿಳಿದವನಾಗಿ ಉತ್ತಮಪ್ರಕಾರದಿಂದ ಜೀವನ ಮಾಡುವನು, ಪ್ರಸನ್ನಚಿತ್ತನಾಗಿ ದಾನಮಾಡುವನು, ನಮ್ರತೆಯುಳ್ಳವನು ಅತಿಶಯವಾಗಿ ಧನಶೇಖರಸುವವನು, ಮತ್ತು ಉತ್ತಮವಂಶಸ್ಥನೂ, ರಾಜರಿಂದ ನಿರಂತರ ಸನ್ಮಾನವನ್ನೂ ಹೊಂದುವನು.

## ಲಗ್ನಚಂದ್ರರಿಂದ ದಶಮದಲ್ಲಿ ಶನಿಯಿದ್ದಫಲ

ಶ್ಲೋಕ॥ ಹೋರಾಯಾಶ್ಚ ಸುಧಾಕರಾದ್ರವಿಸುತಃ ಸೂರಿಃಖ ಮಧ್ಯಸ್ಥಿ ತೋವೃತ್ತಿಂ ಹೀನತರಾಂನರಸ್ಯ ಕುರುತೇಕಾರ್ಶ್ಯಂಶರೀರೇಸದಾ । ಖೇದಂವಾದ ಭಯಂಚ ಧಾನ್ಯಧನಯೋರ್ಹೀನತ್ವ ಮುಚ್ಚೈರ್ಮನಶ್ಚಿತ್ತೋದ್ವೇಗಸಮುದ್ಭವೇನಚಪಲಂ ಶೀಲಂಚನೋ ನಿರ್ಮಲಂ ॥೯॥ ಲಗ್ನಚಂದ್ರರಿಂದ ದಶಮದಲ್ಲಿ ಶನಿ ಇದ್ದರೆ ಅತಿಶಯದರಿದ್ರ, ಕೃಶಶರೀರ, ಖೇದವನ್ನು ಹೊಂದುವನು, ವಿವಾಹದಲ್ಲಿ ಭಯವನ್ನು ಹೊಂದುವನು, ಧನಧಾನ್ಯಹೀನ, ಹೆಚ್ಚಿನ ಗೌರವವನ್ನು ಪಡೆಯುವನು, ಮನಸ್ಸಿನಲ್ಲಿ ಚಿಂತೆಯನ್ನು ಹೊಂದುವನು. ಆದರೆ ಶನಿಯು ಉಚ್ಚರಾಶಿಯಾಗಿ ಅಲ್ಲಿ ಶನಿಯಿದ್ದರೆ ಈ ಮೇಲೆ ಹೇಳಲ್ಪಟ್ಟ ಫಲಕ್ಕೆ ವಿರುದ್ಧವಾಗಿ ಶುಭಫಲವನ್ನೇ ಕೊಡುವನು.

## ದಶಮೇ ಗ್ರಹಶೂನ್ಯೇ ಫಲವಿಚಾರಃ

ಇದುವರಿಗೂ ಲಗ್ನಕ್ಕಾಗಲೀ, ಚಂದ್ರನಿಗಾಗಲೀ ದಶಮದಲ್ಲಿದ್ದ ಗ್ರಹದಿಂದ ಮನುಷ್ಯನ ವೃತ್ತಿಯನ್ನು ಹೇಳಿದಂತಾಯಿತು. ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ದಶಮದಲ್ಲಿ ಗ್ರಹವೇ ಇಲ್ಲದಿದದರೆ, ಅಂಥಹ ಕಾಲದಲ್ಲಿ ಹುಟ್ಟಿದವರು ಯಾವ ವೃತ್ತಿಯಿಂದ ಜೀವಿಸುತ್ತಾರೆಂಬುವುದು ನಿರ್ಣಯವಾಗಬೇಕು, ಈ ವಿಷಯವು ವಕ್ಷ್ಯಮಾಣ ಶ್ಲೋಕದಲ್ಲಿ ಸಂಕ್ಷೇಪವಾಗಿ ಹೇಳಿರುವುದು ಅದು ನನಗೆ ತೃಪ್ತಿಕರವಾಗಲಿಲ್ಲ. ಆದ್ದರಿಂದ ಪರಾಶರರ ಅಭಿಪ್ರಾಯವನ್ನು ವಿಶದವಾಗಿ ಉದಹರಿಸುತ್ತೇನೆ.

ಈ ಮುಂದೆ ಹೇಳಲ್ಪಡುವ ಫಲಗಳು, ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ದಶಮಸ್ಥಾನದಲ್ಲಿ ಗ್ರಹವಿರ್ಜಿತವಾದರೆ, ಆ ಲಗ್ನಚಂದ್ರರಿಗೆ ದಶಮಸ್ಥಾನಕ್ಕಧಿಪತಿಯಾದ ಗ್ರಹವು ಯಾವ ನವಾಂಶೆಯಲ್ಲಿರುತ್ತೋ, ಆ ಗ್ರಹದ ಅಂಶಾಧಿಪತಿಯ ವೃತ್ತಿಮೂಲವಾಗಿ ಜೀವಿಸುವ ವಿಷಯವನ್ನು ಉದಹರಿಸುತ್ತೇನೆ. ಲಗ್ನಚಂದ್ರರಲ್ಲಿ ಯಾವುದು ಬಲವುಳ್ಳದ್ದೋ ಅದನ್ನು ನಿಶ್ಚಯಮಾಡಿಕೊಂಡು ಆ ಬಲೀಯವಾದದ್ದರ ೧೦ನೆ ಸ್ಥಾನಕ್ಕಧಿಪತಿಯಾಗಿರುವ ಗ್ರಹದ ಅಂಶೆಗಳ ಮೇಲೆ ಫಲವನ್ನು ನಿರ್ಣಯಿಸಬೇಕು.

## ಸೂರ್ಯ-ನವಾಂಶೆಯಲ್ಲಿದ್ದ ಫಲ

ಶ್ಲೋಕ॥ ಭೈಷಜ್ಯ ಚಾಮಿಕರತೋಯ ಪಾನಪಣ್ಯೇನಮುಕ್ತಾಮಣಿ ವಿಪ್ರಲಂಭಾತ್ । ಅನ್ಯೋನ್ಯ ದ್ಯೂತಾಗಮವೃತ್ತಿಮಾರ್ಗಜ್ಜೀವತ್ಯಸೌವಾಸರನಾಯ ಕಾಂಶೇ ॥೧೦॥ ಲಗ್ನಚಂದ್ರರಲ್ಲಿ ಯಾರು ಬಲವುಳ್ಳವರೋ ಅವರಿಗೆ ದಶಮ

ಸ್ಥಾನಾಧಿಪತಿಯಾದ ಗ್ರಹವು ಸೂರ್ಯನವಾಂಶೆಯಲ್ಲಿದ್ದರೆ, ಔಷಧ ಕೊಡುವುದರ ಮೂಲವಾಗಿ ಅಂದರೆ-ಪಂಡಿತನಾಗಿ ವೈದ್ಯನಾಗುವಿಕೆ, ಸುವರ್ಣ ವ್ಯಾಪಾರ, ನೀರಿನ ಮೇಲೆ ಪ್ರಯಾಣ ಮಾಡುವಿಕೆ, ಮತ್ತು ರತ್ನ ಮೊದಲಾದ ವ್ಯಾಪಾರದಿಂದ ಅನ್ಯೋನ್ಯದ್ಯೂತ ಮೂಲದಿಂದ ಅಥವಾ ಆಗಮವಿದ್ಯ ಮೊದಲಾದ್ದರಿಂದ ಜೀವಿಸುವವನು ಮತ್ತು ।।ಶ್ಲೋಕ।। ಮಂತ್ರೋಪದೇಶರಸವಾದ ವಿನೋದಮಾರ್ಗೈರ್ವೃತ್ತಿಂಜಗುಸ್ಸಕಲ ಶಾಸ್ತ್ರ ಪುರಾಣಮಾರ್ಗೈಃ । ಜ್ಞಾನೋಪದೇಶ ಪಥಿಭಿಃಕ್ಷಿತಿಪಾಲಪೂಜ್ಯೋ ಜೀವತ್ಸಸೌಖಲು ಪೂರ್ಮಾ ದೀನನಾಯಕಾಂಶೇ ।।೧।। ಮಂತ್ರೋಪದೇಶ, ರಸವಾದ, ವಿನೋದವೃತ್ತಿ, ಸಕಲಶಾಸ್ತ್ರ ಪುರಾಣ ಮೊದಲಾದ್ದರಿಂದ ಪಂಡಿತನಾಗುವಿಕೆ, ಅಥವಾ ವೇದಾಂತ ಜ್ಞಾನೋಪದೇಶ ಮಾರ್ಗದಿಂದ, ರಾಜಪೂಜ್ಯತೆಯಿಂದ ಜೀವನವನ್ನು ಮಾಡುತ್ತಾನೆ.

## ಚಂದ್ರಾಂಶೆಯಲ್ಲಿದ್ದ ಫಲ

ಶ್ಲೋಕ।। ಜಲೋದ್ಭವಾನಾಂ ಕ್ರಯವಿಕ್ರಯೇಣಕೃಷೇಶ್ಚ ಮೃದ್ವಾರ ವಿನೋದ ಮಾರ್ಗಾತ್ ರಾಜಾಂಗನಾಸಂ ಶ್ರಯವೃತ್ತಿರೂಪಾನ್ನಿಶಾಕರಾಂಶೇ ವಸನಕ್ರಯಾಯಾಃ ।।೧೨।।ತಾ।। ಚಂದ್ರಾಂಶೆಯಲ್ಲಿದ್ದರೆ, ಜಲೋದ್ಭವ ವಸ್ತುಗಳೆಂದರೆ-ಶಂಖ ಮತ್ತು ಪ್ರವಾಳ ಮೊದಲಾದ ವ್ಯಾಪಾರದಿಂದಾಗಲೀ, ವ್ಯವಸಾಯದಿಂದ ಭೂಮೂಲಕವಾಗಿ-ಯಾಗಲೀ, ವಿನೋದಮಾರ್ಗವೆಂದರೆ-ಪರಿಹಾಸಕನಾಗುವಿಕೆಯಿಂದಾಗಲೀ, ಸರಸಕವಿತ್ವ ಮಾಡುವುದರಿಂದಾಗಲೀ, ಅಥವಾ ರಾಜಸ್ತ್ರೀಯರ ಆಶ್ರಯದಿಂದಾಗಲೀ, ರೇಷ್ಮೆ ತುಬಟ, ವಸ್ತ್ರ ಈ ಮೂಲಕ ಕ್ರಯವಿಕ್ರಯ ಕೌಶಲ್ಯದಿಂದಾಗಲೀ ಜೀವಿಸುವನು.

## ಅಂಗಾರಕಾಂಶೆಯಲ್ಲಿದ್ದ ಫಲ

ಶ್ಲೋಕ।। ಧಾತೋರ್ವಿವಾದೇನ ರಣಪ್ರಹಾರಾ ತ್ತಪ್ತಾಭಿವಾದಾತ್ಕಲಹ ಪ್ರವೃತ್ಯಾ। ಜೀವತ್ಯಸೌ ಸಾಹಸ ಮಾರ್ಗರೂಪಾದ್ಧರಾಸುತಾಂಶೇಯದಿಚೋರ ವೃತ್ಯಾ।।೧೩।। ಆ ನವಾಂಶಾಧಿಪತಿ ಅಂಗಾರಕನಾದರೆ ಸುವರ್ಣ, ರಜತ, ತಾಮ್ರ, ಕಂಚು ಮೊದಲಾದ ಮತ್ತು ಹರಿತಾಲಮನಃಶಿಲಾ ಇಂಗಳೀಕ ಗೈರಿಕಾದಿ ಧಾತುಗಳ ಕ್ರಯವಿಕ್ರಯದಿಂದ ಅಥವಾ ಯುದ್ಧ ಸಂಬಂಧವಾದ ಖಡ್ಗಚಕ್ರ ಅಸ್ತ್ರ ಶಸ್ತ್ರ ಮೊದಲಾದ ಆಯುಧ ಮೂಲವಾಗಿಯಾಗಲೀ, ಸೇನಾಪತಿಯಾಗಿಯಾಗಲೀ, ಕಲಹಪ್ರಿಯನಾಗಿಯಾಗಲೀ, ಸಾಹಸ ಮಾರ್ಗವೃತ್ತಿಯಿಂದಾಗಲೀ, ಚೋರತ್ವ, ಮೂಲದಿಂದಾಗಲೀ ಜೀವಿಸುವನು. ಇಲ್ಲಿ ತಿಳಿಯತಕ್ಕ ಅಂಶವೇನೆಂದರೆಃ- ಅಂಗಾರಕನು ಹೀನಬಲನಾದರೆ ಕಳ್ಳತನದಿಂದ,

ಅಲ್ಪಬಲನಾದರೆ ಶಸ್ತ್ರಾದಿ ನಿರ್ಮಾಣದಿಂದ, ಮಧ್ಯಬಲನಾದರೆ ಶಸ್ತ್ರ ಮೊದಲಾದ ಆಯುಧ ವ್ಯಾಪಾರದಿಂದ, ಮುಕ್ಕಾಲು ಬಲವುಳ್ಳವನಾದರೆ ಸೈನ್ಯದಲ್ಲಿ ಅಧಿಕಾರ ಮಾಡುವುದರಿಂದ, ಸಂಪೂರ್ಣ ಬಲವುಳ್ಳವನಾದರೆ ಸೇನಾಪತಿ (ಕಮ್ಯಾಂಡರ್ ಇನ್ ಚೀಫ್) ಸರ್ವ ಸೇನಾನಾಯಕನಾಗುವುದರಿಂದ ಜೀವಿಸುವನು. ಅಂಗಾರಕನ ಬಲಾಬಲ ವಿಚಾರದಿಂದ ಈ ಅಂಶವನ್ನು ನಿರ್ಣಯಿಸಬೇಕು.

## ಬುಧಾಂಶೆಯಲ್ಲಿದ್ದ ಗ್ರಹಫಲವು

ಶ್ಲೋಕ।। ಶಿಲ್ಪಾದಿಕಾವ್ಯಾಗಮಶಾಸ್ತ್ರಮಾರ್ಗಾ ಜ್ಯೋತಿರ್ಗಣಾಜ್ಞಾನವಶಾದ್ಬುಧಾಂಶೇ । ವೇದಾರ್ಥವೇದಾ ಧ್ಯಯನಾಜ್ಜಪಾಚ್ಚ ಪುರೋಹಿತ ವ್ಯಾಜವಶಾಚ್ಚ ವೃತ್ತಿಃ ।।೧೪।। ಬುಧಾಂಶೆಯಲ್ಲಿದ್ದರೆ ಚಿತ್ರ ಬರೆಯುವುದು, ಭೂಪಠ ಬರೆಯುವುದು, ಗ್ರಂಥನಿರ್ಮಾಣ ಮಾಡುವಿಕೆ, ಶಿಲ್ಪವಿದ್ಯದಿಂದ ಲಿಪಿವಿಶೇಷವಾದ ಅಕ್ಷರ. ನ್ಯಾಸ ಮಾಡುವುದರಿಂದ, ಗುಮಾಸ್ತ, ಅಕೌಂಟೆಂಟ್, ಮುನ್ಷೀಯಾಗುವಿಕೆ ಅಥವಾ ಗಣಿತಶಾಸ್ತ್ರ ಪಂಡಿತನಾಗುವಿಕೆ, ವೇದಾಂತಶಾಸ್ತ್ರ ಪಂಡಿತನಾಗುವಿಕೆ ಮತ್ತು ಬೋಧಿಸುವಿಕೆ, ವೇದದಲ್ಲಿ ಪಂಡಿತನಾಗುವಿಕೆ, ಅಧ್ಯಯನ ಅಧ್ಯಾಪನಾದಿ ವಿದ್ಯೆಗಳಿಂದ ಉಪಾಧ್ಯಾಯನಾಗುವಿಕೆ ಮತ್ತು ಪುರೋಹಿತನಾಗಿ ಯಜ್ಞಾದಿ ಕ್ರತುಗಳನ್ನು ಮಾಡುವಿಕೆ, ಮಾಡಿಸುವಿಕೆ ಮತ್ತು ಜ್ಯೋತಿಶ್ಶಾಸ್ತ್ರ ಪಂಡಿತನಾಗುವಿಕೆ ಈ ಮೊದಲಾದ ವೃತ್ತಿಯಿಂದ ಜೀವಿಸುವನು.

## ಬೃಹಸ್ಪತಿಯ ಅಂಶೆಯಲ್ಲಿದ್ದ ಗ್ರಹಫಲವು

ಜೀವಾಂಶಕೇ ಭೂಸುರ ದೇವತಾನಾ ಮುಪಾಸಕಾಧ್ಯಾಪಕ ಮಾರ್ಗರೂಪಾತ್। ಪುರಾಣಶಾಸ್ತ್ರಾಗಮನೀತಿ ಮಾರ್ಗಾಧರ್ಮೋಪದೇಶೇನ ಕುಸೀದಮಾಹುಃ ।।೧೫।। ಬೃಹಸ್ಪತಿಯ ನವಾಂಶೆಯಲ್ಲಿದ್ದರೆ ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗುವಿಕೆ, ದೇವತಾ ಉಪಾಸನೆ ಮಾಡುವಿಕೆ, ಮಂತ್ರಪಠನೆ, ಅಧ್ಯಯನ, ಘನಪಾಠಿಯಾಗಿ ಗೌರವವನ್ನು ಪಡೆಯುವಿಕೆ, ಪುರಾಣ, ಧರ್ಮಶಾಸ್ತ್ರ, ಪಾಂಚರಾತ್ರತಂತ್ರಶ್ಶೈವಾದ್ಯಾ ಗಮ ಪಂಡಿತನಾಗುವಿಕೆ, ರಾಜನೀತಿ, ಸಾಮಾನ್ಯ ನೀತಿಶಾಸ್ತ್ರ ತಿಳಿದವನಾಗಿ ಧರ್ಮೋಪದೇಶ ಮಾಡುವಿಕೆ ಇವೇ ಮೊದಲಾದ ಗೌರವವಾದ ವೃತ್ತಿಯಿಂದ ಜೀವಿಸುವನು.

## ಶುಕ್ರನವಾಂಶೆಯಲ್ಲಿದ್ದರೆ

ಶ್ಲೋಕ।। ಸುವರ್ಣಮಾಣಿಕ್ಯ ಗಜಾಶ್ವಮೂಲಾದ್ಗವಾಂಕ್ರಯಾಜ್ಜೀವನ ಮಾಹುರಾರ್ಯಾಃ ಗುಡೌದನಕ್ಷೀರದಧಿಕ್ರಯೇಣ ಸ್ತ್ರೀಣಾಂಪ್ರಲೋಭೇನ ಭೃಗೋಃ

ಸುತಾಂಶೇ ।।೧೬।। ಶುಕ್ರಾಂಶೆಯಲ್ಲಿದ್ದರೆ-ಸುವರ್ಣ, ರತ್ನ, ಗಜ, ಅಶ್ವ, ಗೋಮಹಿಷ್ಯಾದಿ ವಿಕ್ರಯ ಮೂಲವಾಗಿಯೂ ಮತ್ತು ಬೆಲ್ಲ, ಕ್ಷೀರ, ದಧಿ, ವಿಕ್ರಯ, ಕೌಶಲ್ಯದಿಂದ ಸ್ತ್ರೀಯರ ಮೇರೆ ಅಭಿಮತದಿಂದಲೂ ಸ್ತ್ರೀಮೂಲದಿಂದಲೂ ಜೀವಿಸುವನು.

## ಶನಿ ನವಾಂಶೆಯಲ್ಲಿದ್ದ ಫಲ

ಶ್ಲೋಕ।। ಶನ್ಯಂಶಕೇಕುಸ್ಸಿತಮಾರ್ಗವೃತ್ಯಾ ಶಿಲ್ಪಾದಿಭಿರ್ದಾರುಮಯೈರ್ವಧಾದ್ಯೈ। ವಿನ್ಯಸ್ತಭಾರಾಜ್ಞನ ವಿಪ್ರಲಂಭಾದನ್ಯೋನ್ಯವೈರೋದಯ ಮೂಲ ಮಾರ್ಗಾತ್ ।।೧೭।। ಕುತ್ಸಿತಮಾರ್ಗವೃತ್ತಿಯೆಂದರೆ-ಧಾತು ಮೊದಲಾದ ಅಥವಾ ಶಿಲ್ಪಕಾರ್ಯಮೂಲವಾಗಿ, ಮರಗೆಲಸ ಮೃಗಪಕ್ಷ್ಯಾದಿ ವಧೆಮಾಡುವ ನಿಷಾದವೃತ್ತಿಯಿಂದ, ಭಾರಹೊರುವಿಕೆ ಮೊದಲಾದ ಸಾಹಸ ಆಯಾಸಕಾರ್ಯ ಮೂಲವಾಗಿಯಾಗಲೀ, ಅನ್ಯೋನ್ಯ ಶತ್ರುತ್ವದ ಮೂಲವಾಗಿ ಅಂದರೆ- ಒಬರಿಗೊಬ್ಬರಿಗೆ ವೈರತ್ವ ಉಂಟುಮಾಡಿ ಕಲಹ ತಂದುಹಾಕುವುದರ ಮೂಲವಾಗಿ ಈ ವೃತ್ತಿಯನ್ನು ಅವಲಂಬಿಸಿ ಜೀವಿಸುವನು.

ಅ।। ಈ ಅಧ್ಯಾಯದ ಪ್ರಥಮಶ್ಲೋಕದಲ್ಲಿ 'ಭೇಂದ್ವರ್ಕಾಸ್ಪದಪತಿರಂಶ ನಾಥವೃತ್ಯಾ' ಎಂಬುವ ವಾಕ್ಯಕ್ಕೆ ಸಾರ್ಥಕವಾಗಿ ಈ ಎರಡು ಶ್ಲೋಕಗಳಿಂದ ಹೇಳುತ್ತಾನೆ.

ಮೂಲ।। ಅರ್ಕಾಂಶೇ ತೃಣಕನಕೋರ್ಣಭೇಷಜಾದ್ಯೈಃ । ಶ್ಚಂದ್ರಾಂಶೇಕೃಷಿ ಜಲಜಾಂಗನಾಕ್ರಿಯಾಶ್ಚ ।। ಧಾತ್ವಗ್ನಿ ಪ್ರಹರಣಸಾಹಸೈಃ ಕುಜಾಂಶೇ ಸೌಮ್ಯಾಂಶೇ ಲಿಪಿಗಣಿತಾದಿ ಕಾವ್ಯಶಿಲ್ಪೈಃ ।।೨।।

ಟೀಕು।। ಪೂರ್ವಶ್ಲೋಕದ ಅರ್ಥ ಪ್ರಯೋಜನಕ್ಕಾಗಿ ಈ ೨-೩ನೇ ಶ್ಲೋಕಗಳು ಹೇಳಲ್ಪಟ್ಟಿವೆ. ಲಗ್ನದಿಂದಾಗಲಿ, ಚಂದ್ರನಿಂದಲೂ, ದಶಮಸ್ಥಾನ ಗ್ರಹಶೂನ್ಯವಾಗಿದ್ದರೆ, ಆಗ ದಶಮಾಧಿಪತಿಯಾದ ಗ್ರಹವು ಯಾರ ನವಾಂಶೆಯಲ್ಲಿರುತ್ತಾನೋ, ಆ ಗ್ರಹದ ವೃತ್ತಿಯಿಂದ ಜಾತಕನು ಜೀವಿಸುವನು. ಆದ್ದರಿಂದ ಅರ್ಕಾಂಶೇ-ಸೂರ್ಯಂಶೆಯಲ್ಲಿದ್ದರೆ, ತೃಣಕನಕೋರ್ಣಭೇಷಜಾದ್ಯೈಃ, ತೃಣ-ಹುಲ್ಲು, ಕನಕ-ಸುವರ್ಣ ಊರ್ಣ (ಆವಿಕ)-ತುಬಟ, ಭೇಷಜ-ಔಷಧಿ, ಆದಿಪದ ಪ್ರಯೋಗದಿಂದ, ಆದ್ಯೈಃ-ಈ ಮೊದಲಾದವುಗಳ ಕ್ರಯವಿಕ್ರಯ ಮೂಲದಿಂದ ಧನಪ್ರಾಪ್ತಿಯುಂಟಾಗುವುದು. ಚಂದ್ರಾಂಶೇ-ಚಂದ್ರನವಾಂಶೆಯಲ್ಲಿದ್ದರೆ, ಕೃಷಿಜಲಜಾಂಗನಾಕ್ರಿಯಾಶ್ಚ, ಕೃಷಿ-ಭೂಮಿಯ ವ್ಯವಸಾಯ ಮೂಲವಾಗಿ, ಜಲಜ-ಜಲದಲ್ಲಿ ಹುಟ್ಟಿದ ಶಂಖ, ಮುತ್ತು

ಮೊದಲಾದವುಗಳು ವ್ಯಾಪಾರಾದಿಗಳಿಂದ. ಅಂಗನಾ-ಸ್ತ್ರೀಯರನ್ನಾಶ್ರಯಿಸುವುದರ ಮೂಲವಾದ, ಕ್ರಿಯಾಶ್ಚ-ಇವೇ ಮೊದಲಾದ ವೃತ್ತಿಗಳಿಂದ ಧನಲಾಭವಾಗುವುದು. ಕುಜಾಂಶೇ-ಅಂಗಾರಕಾಂಶೆಯಲ್ಲಿದ್ದರೆ, ದಾತ್ವಗ್ನಿಪ್ರಹರಣಸಾಹಸ್ಯೈ-ಧಾತು. ಮನಶ್ಶಿಲಾ. ಹರಿತಾಳ, ಗೈರಿಕ, ಇಂಗಳೀಕ ಮೊದಲಾದವುಗಳ ವ್ಯಾಪಾರಮೂಲದಿಂದ, ಅಗ್ನಿ-ಅಗ್ನಿ ಪ್ರಯುಕ್ತವಾದ ಕಾರ್ಯಮೂಲಕ. ಪ್ರಹರಣ-ಆಯುಧ, ಸಾಹಸ್ಯೈ- ಸಾಹಸ ಕೃತ್ಯಗಳನ್ನು ಮಾಡುವುದರ ಮೂಲವಾಗಿ ಧನ ಸಂಪಾದಿಸುವನು. ಅಂದರೆ-ಧಾತುಗಳ ಕ್ರಯವಿಕ್ರಯದಿಂದಲಾದರೂ ಸುವರ್ಣ, ರಜತ, ತಾಮ್ರ ಕಾಂಸ್ಯಾದಿ ಧಾತುಗಳನ್ನು ಕಾಯಿಸಿ ಬಡಿದು ಉಂಟುಮಾಡುವ ಕ್ರಿಯೆಗಳಿಂದಾದರೂ ಮತ್ತು ಆಯುಧಸಾಹಸ ಕೃತ್ಯ, ಮಂತ್ರೋಪಕರಣ, ಕಲ್ಪನೆ ಮಾಡಿ ನಡಿಸುವಿಕೆ. ಮೊದಲಾದ ವೃತ್ತಿಯಿಂದಾದರೂ ಜೀವನ ಮಾಡುವನು, ಸೌಮ್ಯಾಂಶೇ-ಬುಧ ನವಾಂಶೆಯಲ್ಲಿದ್ದರೆ, ಲಿಪಿಗಣಿತಾದಿ ಕಾವ್ಯಶಿಲ್ಪೈಃ. ಲಿಪಿ-ಅಕ್ಷರ, ವಿನ್ಯಾಸ-ಲೇಖಕನಾಗುವಿಕೆ, ಗಣಿತ-ಗಣಿತಶಾಸ್ತ್ರ ಪಾರಂಗತನಾಗಿ, ಆದಿಪದಪ್ರಯೋಗದಿಂದ ಗ್ರಹಗಣಿತ ಜ್ಯೋತಿಃ ಶಾಸ್ತ್ರಮೂಲವಾಗಿ, ಕಾವ್ಯ-ಕಾವ್ಯ ನಾಟಕ ಚಂಪು ಪ್ರಹಸನ ವ್ಯಾಯೋಗ ಮೊದಲಾದವುಗಳನ್ನು ರಚಿಸುವುದರಿಂದಾಗಲಿ, ಕಾವ್ಯಾದ್ಯಲಂಕಾರಶಾಸ್ತ್ರಮೂಲವಾಗಿ ಆಗಲಿ, ಶಿಲ್ಪೈ-ಶಿಲ್ಪಶಾಸ್ತ್ರ ಯಂತ್ರನಿರ್ಮಾಣ- ಗೃಹನಿರ್ಮಾಣ, ವಾಪೀಃ ಕೂಪತಟಾಕಾದಿ ನಿರ್ಮಾಣ-ಶಾಸ್ತ್ರಾದಿ ಪ್ರಯೋಜನ ಮೂಲವಾಗಿ ಧನಪ್ರಾಪ್ತಿಯಾಗುವುದು.

ಮೂಲ॥ ಜೀವಾಂಶೇ ದ್ವಿಜವಿಬುಧಾಕರಾದಿಧರ್ಮೈಃ । ಕಾವ್ಯಾಂಶೇ
ಮಣಿರಜತಾದಿ ಗೋಮಹಿಷ್ಯೈಃ॥ ಸೌರಾಂಶೇ ಶ್ರಮವಧಭಾರ
ನೀಚಶಿಲ್ಪೈಃ ಕರ್ಮೇಶಾಧ್ಯುಷಿತ ನವಾಂಶಕರ್ಮಸಿದ್ಧಿಃ ॥೩॥

ಟೀಕು। ಜೀವಾಂಶೇ-ಮೇಲೆ ಹೇಳಲ್ಪಟ್ಟ ದಶಮಾಧಿಪತಿಯಾದ ಗ್ರಹವು ಬೃಹಸ್ಪತಿ ನವಾಂಶೆಯಲ್ಲಿದ್ದರೆ ದ್ವಿಜವಿಬುಧಾಕರಾದಿಧರ್ಮೈಃ ದ್ವಿಜ-ಬ್ರಾಹ್ಮಣ, ಬ್ರಾಹ್ಮಣನಿಂದ, ವಿಬುಧ-ದೇವತೆಗಳನ್ನು ಪೂಜಿಸುವಿಕೆ, ಆಕರ-ಸುವರ್ಣ ಮೊದಲಾದ ಗಣಿಯ ಮೂಲವಾಗಿ, ಧರ್ಮೈಃ-ಧರ್ಮೋಪದೇಶ ಮಾಡುವಿಕೆ ಮೊದಲಾದ ವೃತ್ತಿಯಿಂದ ಧನಪ್ರಾಪ್ತಿಯುಂಟಾಗುವುದು. ಕಾವ್ಯಾಂಶೇ-ಶುಕ್ರನವಾಂಶೆಯಲ್ಲಿದ್ದರೆ, ಮಣಿ-ಮುಕ್ತಾ ಪ್ರವಾಳ, ರತ್ನಮೂಲವಾಗಿ, ರಜತಾದಿ-ಬೆಳ್ಳಿ, ಭಂಗಾರ ಮೊದಲಾದ ಧಾತುಗಳ ಮೂಲವಾಗಿ, ಗೋ-ಗೋವುಗಳ ಕ್ರಯವಿಕ್ರಯದಿಂದ, ಮಹಿಷ್ಯೈ-ಎಮ್ಮೆ ಮೊದಲಾದವುಗಳ ಕ್ರಯ ವಿಕ್ರಯ ಮೂಲವಾಗಿ ಧನಪ್ರಾಪ್ತಿಯಾಗುವುದು. ಸೌರಾಂಶೇ-ಶನಿಯು ನವಾಂಶೆಯಲ್ಲಿದ್ದರೆ, ಶ್ರಮ-ಆಯಾಸವಾಗುವ ಕೆಲಸದಿಂದ

ವಧ-ಪಕ್ಷಿ ಮೃಗಾದಿಗಳನ್ನು ವಧಿಸುವುದರಿಂದ, ಭಾರ-ಭಾರವಾದ ಪದಾರ್ಥಗಳ ಹೊರುವಿಕೆ ಮೊದಲಾದವುಗಳಿಂದ, ನೀಚಶಿಲ್ಪೈಃ- ನೀಚಶಿಲ್ಪವೆಂದರೆ-ಕಲ್ಲುಕೆಲಸ, ಮರದ ಕೆಲಸ, ವಾಹನ ಯಂತ್ರಾದ್ಯುಪಕರಣದಿಂದ ಧನಪ್ರಾಪ್ತಿಯಾಗುವುದು. (ಇಲ್ಲಿ ನೀಚಶಿಲ್ಪೈಃ ಎಂಬುವುದಕ್ಕೆ ಸ್ವಕುಲಾಚಾರಕ್ಕೆ ವಿರೋಧವಾದ ಶಿಲ್ಪದಿಂದ ಎಂದು ಅರ್ಥವನ್ನು ಕೆಲವರು ಕಲ್ಪಿಸಿರುವರು) ಕರ್ಮೇಶಾಧ್ಯುಷಿತ ನವಾಂಶ ಕರ್ಮಸಿದ್ಧಿ). ಕರ್ಮೇಶ-ಆ ಲಗ್ನ. ಚಂದ್ರರಿಗೆ ದಶಮಾಧಿಪತಿ, ಅಧ್ಯುಷಿತನವಾಂಶ-ಯಾರ ನವಾಂಶದಲ್ಲಿರುತ್ತಾನೋ. ನವಾಂಶಕರ್ಮಸಿದ್ಧಿ- ಆ ನವಾಂಶಾಧಿಪತಿಯ ಕರ್ಮವು ಸಿದ್ಧಿಸುವುದು. ಅಂದರೆ ಮೇಲೆ ಹೇಳಲ್ಪಟ್ಟ ನವಾಂಶಫಲ ಸಿದ್ಧಿಯಾಗುವುದು. ಇದಕ್ಕೆ ಜಾತಕಾಭರಣದಲ್ಲಿ ಶ್ರೀ ಧುಂಡೀರಾಜರು ಹೇಳಿರುವುದೇನೆಂದರೆ॥ ಶ್ಲೋಕ ॥ ಸೂರ್ಯಾದಿಭಿರ್ವ್ಯೋ ಮಚರೈಃ ವಿಲಗ್ನಾದಿಂದೋಃಸ್ವಪಾಕೇ ಕ್ರಮಶಃ ಪ್ರಕಲ್ಪ್ಯಾ॥ ಅರ್ಥೋಪಲಬ್ಧಿರ್ಜನ ಕಾಜ್ಞನನ್ಯಾಃ ಶತ್ರೋರ್ಹಿತಾ ದ್ಭ್ರಾತೃಕಲತ್ರಭೃತ್ಯಾತ್ ॥೧೮॥ತಾ॥ ಲಗ್ನದಿಂದಾಗಲಿ, ಚಂದ್ರನಿರುವ ರಾಶಿಯಿಂದಾಗಲಿ, ದಶಮಕ್ಕಧಿಪತಿಯಾದ ಗ್ರಹವು ಸೂರ್ಯನಾದರೆ ತಂದೆಯಿಂದ, ಚಂದ್ರನಾದರೆ ತಾಯಿಯಿಂದ, ಕುಜನಾದರೆ ಶತ್ರುಗಳಿಂದ, ಬುಧನಾದರೆ ಮಿತ್ರರಿಂದ. ಗುರುವಾದರೆ ಅಣ್ಣ ತಮ್ಮಂದಿರಿಂದ, ಶುಕ್ರನಾದರೆ ಹೆಂಡತಿ ಅಥವಾ ಸ್ತ್ರೀ ಮೂಲದಿಂದ. ಶನಿಯಾದರೆ ಭೃತ್ಯರಮೂಲದಿಂದ ಧನವನ್ನು ಕೊಡುವರು. ರವೀಂದುಲಗ್ನಾಸ್ಪದ ಸಂಸ್ಥಿತಾಂಶಪತೇಸ್ತುವೃತ್ಯಾ ಪರಿಕಲ್ಪಯೇತ್ತಾಮ್। ಸದೌಷಧಾರ್ಣಾದಿತೃರ್ಣೈಃ ಸುವರ್ಣ್ಯೈಃ ದಿವಾಮಣಿ ವೃರ್ತ್ತಿವಿಧಿಂವಿದಧ್ಯಾತ್ ॥೧೯॥ ಸೂರ್ಯ, ಚಂದ್ರ, ಲಗ್ನ ಈ ಮೂರರಿಂದ ದಶಮಾಧಿಪತಿಯಾದ ಗ್ರಹಗಳಲ್ಲಿ ಬಲಿಷ್ಠನಾದ ಗ್ರಹ, ಸೂರ್ಯನವಾಂಶೆಯಲ್ಲಿದ್ದರೆ ಔಷಧಿ, ತೃಣ, ಸುವರ್ಣ ಮೂಲಕವಾಗಿ ದ್ರವ್ಯವನ್ನು ಅವರವರ ದಶಾಭುಕ್ತಿ ಕಾಲಗಳಲ್ಲಿ ಕೊಡುವನು ಮತ್ತು ಮೇಲೆ ಹೇಳಿದ ಅರ್ಥಕ್ಕೆ ಶ್ಲೋಕ ॥ ನಕ್ಷತ್ರನಾಥೋತ್ರಕಲತ್ರತಶ್ಚ ಜಲಾಶ್ರಯೋತ್ಪನ್ನ ಕೃಷಿಕ್ರಿಯಾದೇಃ । ಕುಜೋಗ್ನಿ ಸತ್ಸಾಹಸಧಾತುಶಸ್ತ್ರೈ ಸ್ಸೋಮಾತ್ಮಜಃ ಕಾವ್ಯಕಲಾಕಲಾಪೈಃ ॥೨೦॥ ಜೀವೋದ್ವಿಜಾತ್ಮಾ ಕರದೇವಧರ್ಮಃ ಶುಕ್ರೋ ಮಹಷ್ಯಾದಿಕರೌಪ್ಯರತ್ನೈಃ । ಶನೈಶ್ಚರರೋನೀಚತರಪ್ರಕಾರ್ಯೈಃ ಕುರ್ಯಾನ್ನರಾಣಾಂ ಖಿಲಕರ್ಮವೃತ್ತಿಂ ॥೨೧॥ ಕರ್ಮಸ್ವಾಮಿ ಗ್ರಹೋಯಸ್ಯ ನವಾಂಶೇಪರಿವರ್ತತೇ । ತತ್ತುಲ್ಯಕರ್ಮಣಾವೃತ್ತಿಂ ನಿರ್ದಿಶಂತಿಮನೀಷಿಣಃ ॥೨೨॥ ಚಂದ್ರ ನವಾಂಶೆಯಲ್ಲಿದ್ದರೆ ಜಲಾಶ್ರಯದಿಂದ ಅಥವಾ ಭೂ ಕೃಷಿ ಮೂಲದಿಂದ, ಕುಜಾಂಶೆಯಲ್ಲಿದ್ದರೆ ಸುವರ್ಣಾದಿ ಧಾತುಗಳಿಂದ, ಅಥವಾ ಅಗ್ನಿಶಸ್ತ್ರಾಸ್ತ್ರಪ್ರಯೋಗ ಮೊದಲಾದ್ದರಿಂದ ಬುಧಾಂಶೆಯಲ್ಲಿದ್ದರೆ ಕಾವ್ಯಕಲಾ

ಶಿಲ್ಪಾದಿಗಳಿಂದ, ಗುರ್ವಂಶೆಯಲ್ಲಿದ್ದರೆ ಬ್ರಾಹ್ಮಣರಿಂದ ದೇವತಾ ಉಪಾಸನ ಧರ್ಮೋಪದೇಶದಿಂದ, ಶುಕ್ರಾಂಶೆಯಲ್ಲಿದ್ದರೆ ಚತುಷ್ಪದ ಗಜ, ಅಶ್ವ, ಮಹಿಷಿ, ಗೋ ಮತ್ತು ಸುವರ್ಣರೌಪ್ಯಾದಿಗಳ ಮೂಲದಿಂದ, ಶನ್ಯಂಶೆಯಲ್ಲಿದ್ದರೆ ನೀಚತರವಾದ ವೃತ್ತಿಯಿಂದ ಉಪಜೀವಿಸುವನು. ಕರ್ಮಾಧಿಪತಿ ಯಾರ ನವಾಂಶೆಯಲ್ಲಿರುವನೊ, ಆ ಗ್ರಹಕ್ಕೆ ಹೇಳಲ್ಪಡುವ ವೃತ್ತಿ ಯನ್ನನುಸರಿಸಿ ಜೀವಿಸುವನೆಂದು ತಾತ್ಪರ್ಯ.

ಇಲ್ಲಿ ಕೆಲವರ ಅಭಿಪ್ರಾಯವೇನೆಂದರೆ-ಲಗ್ನಕ್ಕೆ ದಶಮಾಧಿಪತಿಯಾದ ಗ್ರಹವು ಯಾರ ನವಾಂಶೆಯಲ್ಲಿರುತ್ತೋ ಆ ನವಾಂಶಾಧಿಪತಿಯ ಆ ರಾಶಿ ಮೂಲವಾಗಿ ಮೇಲೆ ಹೇಳಲ್ಪಟ್ಟ ಮೂಲವಾಗಿ ಆ ವೃತ್ತಿಯಿಂದ ಧನಪ್ರಾಪ್ತಿಯಾಗುವುದೆಂದು ಹೇಳುತ್ತಾರೆ. ಆ ನವಾಂಶಾಧಿಪತಿ ತನ್ನುಚ್ಚರಾಶಿಯಲ್ಲಿದ್ದರೆ ಅದಕ್ಕೆ ಉಕ್ತವಾದ ವೃತ್ತಿಯಿಂದ ಪ್ರಯತ್ನವಿಲ್ಲದೆ ಕಾರ್ಯಸಿದ್ಧಿಯಾಗುವುದು. ನೀಚರಾಶಿಯಲ್ಲಿದ್ದರೆ ಪ್ರಯತ್ನಪೂರ್ವಕ ಸ್ವಕೀಯ ಪೋಷಣಮಾತ್ರ ಫಲ ಸಿದ್ಧಿಯಾಗುವುದು. ಪರಮೋಚ್ಚಾಂಶೆಯಲ್ಲಿದ್ದರೆ ಸುಲಭವಾಗಿ ವಿಶೇಷ ಧನಪ್ರಾಪ್ತಿಯಾಗುವುದು. ಪರಮ ನೀಚಾಂಶೆಯಲ್ಲಿದ್ದರೆ ಪ್ರಯತ್ನ ಮೂಲಕ ಅಲ್ಪಫಲ ಪ್ರಾಪ್ತಿಯಾಗುವುದು. ನೀಚೋಚ್ಚ ಅಂತರಾಳದಲ್ಲಿದ್ದರೆ ತ್ರೈರಾಶಿಕ ಪ್ರಕಾರ ಈ ಫಲ ನಿರ್ಣಯಮಾಡಬೇಕು. ಈ ಅರ್ಥಕ್ಕೆ ॥ಶ್ಲೋಕ ॥ ಲಗ್ನ ಕರ್ಮಾಧಿಪೋ ಯಸ್ಮಿನ್ನವಾಂಶೇವರ್ತತೇಗ್ರಹಃ । ಚಾರಕ್ರಮೇಣ ತತ್ತುಲ್ಯಾಂ ಕರ್ಮಣಾಂಸಿದ್ಧಿಮಾದಿಶೇತ್ ॥೨೩॥ ಎಂದು ಗರ್ಗಸಂಹಿತೆಯಲ್ಲಿ ಹೇಳಲ್ಪಟ್ಟಿದೆ. ಆದರೆ ದಶಾಮಾಧಿಪತಿ ಇರುವ ನವಾಂಶಾಧಿಪತಿ ಚರರಾಶ್ಯಧಿಪತಿಯಾದರೆ ದೂರದೇಶದಲ್ಲೂ, ಸ್ಥಿರರಾಶಿಯಾದರೆ ಸ್ವದೇಶದಲ್ಲೂ, ದ್ವಿಸ್ವಭಾವರಾಶಿಯಾದರೆ ಸ್ವದೇಶ ಪರದೇಶಗಳಲ್ಲೂ ಧನಾಗಮವುಂಟಾಗುವುದು. ಈ ಅರ್ಥಕ್ಕೆ ಶ್ಲೋಕ ॥ ತದೀಶೇಚರಭಾಂಶೇ ಪ್ರವಾಸತೋರ್ಥಾಗಮಂ ಸುಖಂ ಲಭತೇ । ಸ್ಥಿರಭಾಂಶೇ ಸ್ವದೇಶಾ ದುಭಯಾಂಶಕೇ ಸರ್ವತೋರ್ಥಾಗಮಂಲಭತೇ॥ ಎಂದು ನಾರದೀಯ ಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತೆ. ಕರ್ಮೇಶಾಧ್ಯುಷಿತ ಸಮಾನ ಕರ್ಮಸಿದ್ಧಿಂ, ಎಂದು ಗ್ರಂಥಾಂತರದಲ್ಲುಕ್ತವಾಗಿರುತ್ತೆ. ಈ ಅರ್ಥವೇ ಮೇಲೆ ಹೇಳಲ್ಪಟ್ಟಿರುತ್ತೆ.

ಮೂಲ॥ ಮಿತ್ರಾರಿಸ್ವಗೃಹಗತೈ (ರ್ನಭೋಗೈ) ರ್ಗ್ರಹೈಸ್ತತೋರ್ಥಾಂ ತುಂಗಸ್ಥೇ
ಬಲಿನಿಚಭಾಸ್ಕರೇ ಸ್ವವೀರ್ಯಾತ್ ॥ ಆಯಸ್ಥೈರುದಯಧನಾಶ್ರಿತೈಶ್ಚ
ಸೌಮ್ಯೈಸ್ಸಂಚಿಂತ್ಯಂ ಬಲಸಹಿತೈರನೇಕಧಾಸ್ವಂ ॥೪॥

ಟೀಕು॥ ಮಿತ್ರಶತ್ರು ಮೊದಲಾದವರಿಂದ ಧನಪ್ರಾಪ್ತಿಯಾಗುವ ವಿಷಯವು ಹೇಳಲ್ಪಡುತ್ತೆ. ಲಗ್ನಚಂದ್ರರಿಗೆ ದಶಮಸ್ಥಾನದಲ್ಲಿದ್ದ ಗ್ರಹವಾಗಲೀ ಆ ದಶಮಸ್ಥಾನದಲ್ಲಿ ಗ್ರಹವರ್ಜಿತವಾದರೆ ದಶಮಾಧಿಪತಿಯಿರುವ ನವಾಂಶಾಧಿಪತಿಯಾದ ಗ್ರಹವಾಗಲೀ ಜನ್ಮಕಾಲದಲ್ಲಿ ಮಿತ್ರಾರಿ ಸ್ವಗೃಹಗತೈಃ-ಮಿತ್ರ ಶತ್ರು ಸ್ವಕ್ಷೇತ್ರದಲ್ಲಿದ್ದರೆ, ತತಸ್ತತಃ- ಆ ಮಿತ್ರ ಶತ್ರು ಸ್ವಕೀಯರುಗಳಿಂದ, ಅಂದರೆ-ಮಿತ್ರ ಕ್ಷೇತ್ರದಲ್ಲಿದ್ದರೆ-ಮಿತ್ರರಿಂದ, ಶತ್ರುಕ್ಷೇತ್ರದಲ್ಲಿದ್ದರೆ-ಶತ್ರುಗಳಿಂದ, ಸಮಕ್ಷೇತ್ರದಲ್ಲಿದ್ದರೆ-ತನಗೆ ಸಮಾನವಾದವರುಗಳಿಂದ, ಸ್ವಕ್ಷೇತ್ರದಲ್ಲಿದ್ದರೆ-ಸ್ವಜನಗಳಿಂದ, ಅಥವಾ ತನ್ನ ಮನೆಯಲ್ಲಿಯಾದರೂ ಧನಪ್ರಾಪ್ತಿಯಾಗುವುದು. ಜನ್ಮಕಾಲದಲ್ಲಿ ಪೂರ್ವೋಕ್ತವಾಗಿ ಧನಪ್ರದರಾದ ಗ್ರಹಗಳು. ಸ್ವವೀರ್ಯಾತ್-ತನ್ನ ವ್ಯಾಪಕತ್ವದಿಂದ ಧನಪ್ರಾಪ್ತಿ ಯಾಗುವುದು. ಜನ್ಮಕಾಲದಲ್ಲಿ, ಆಯಸ್ಥೈಃ-ಏಕದಶಸ್ಥಾನದಲ್ಲಿದ್ದರೆ, ಉದಯ ಧನಾಶ್ರಿತೈಃ-ಲಗ್ನದ್ವಿತೀಯದಲ್ಲಿದ್ದು, ಬಲಸಹಿತೈಃ-ಸ್ವೋಚ್ಚಾದಿ ಬಲಯುಕ್ತವಾಗಿದ್ದರೆ, ಸೌಮ್ಯೈಃ-ಶುಭಗ್ರಹಗಳಿಂದ, ಅನೇಕಧಾ-ಅನೇಕ ಪ್ರಕಾರವಾಗಿ, ಸ್ವಂ-ಧನಾಗಮವನ್ನು, ಸಂಚಿಂತ್ಯಂ-ಚಿಂತಿಸತಕ್ಕದ್ದು. ಈ ಅರ್ಥಕ್ಕೆ ಶ್ಲೋಕ ॥ ಗರ್ಗಸಂಹಿತೆಯಲ್ಲಿ ॥ ಧನದಾಜನ್ಮಸಮಯೇ ಮಿತ್ರಾರಿ ಸ್ವಗೃಹೋಪಗಾಃ । ಯಸ್ಯ ತಸ್ಯ ಧನಂದದ್ಯಾನ್ಮಿತ್ರಾರಿ ಸ್ವಗೃಹೋದ್ಭವಂ । ಧನದೋ ಭಾಸ್ಕರೋಯಸ್ಯ ತುಂಗೇಬಲಸಮನ್ವಿತಃ ॥೨೫॥ ಭವೇಜ್ಜನ್ಮನಿತಸ್ಯಸ್ಯಾದ್ವಿತ್ತಮಾತ್ಮೋ ದ್ಯಮಾರ್ಜಿತಂ । ಲಾಭಾರ್ಥಲಗ್ನಗೈಃ ಸೌಮ್ಯೈರ್ಯೇನಯೋನೈವಕರ್ಮಣಾ ॥೨೬॥ ಧನಾರ್ಜನಂ ಪ್ರಾರ್ಥಯತೇ ತೇನಯತ್ನಾತ್ಸಮಶ್ನುತೇ ॥ ಕೆಲವರು "ಅನೇಕಧಾಸ್ವಂ ಸಂಚಿಂತ್ಯಂ" ಅಂದರೆ ಅರ್ಕಾಂಶೆ ಇತ್ಯಾದಿ ಶ್ಲೋಕಗಳಿಂದ ಆಯಾಯ ಗ್ರಹಕ್ಕೆ ಉಕ್ತವಾಗಿರುವ ವೃತ್ತಿಗಳಿಂದ ಅನೇಕ ವಿಧವಾಗಿ ಧನಾಗಮವನ್ನು ಚೆನ್ನಾಗಿ ಮಾಡುತ್ತಾರೆಂದು ಉಕ್ತವಾಗಿರುತ್ತೆ. ಈ ವಿಷಯದಲ್ಲಿ ಧುಂಡಿರಾಜಪಂಡಿತರು ಅಭಿಪ್ರಾಯಪಡುವುದೇನೆಂದರೆ-ಶ್ಲೋಕ॥ ಮಿತ್ರಾರಿಗೇ ಹೋಪಗತೈರ್ನಭೋಗೈ ಸ್ತತಸ್ತತೋರ್ಥಃ ಪರಿಕಲ್ಪನೀಯಃ । ತುಂಗೇಪತಂಗೇ ಸ್ವಗೃಹೇ ತ್ರಿಕೋಣೇಸ್ಯಾದರ್ಥ ಸಿದ್ಧಿರ್ನಿಜ ಬಾಹುವೀರ್ಯಾತ್ ॥೨೭॥ ಲಗ್ನಾರ್ಥ ಲಾಭೋಪಗತೈಸ್ಸವೀರ್ಯೈಃ ಶುಭೈರ್ಭವೇದ್ಭೂಧನಸೌಖ್ಯಮುಚ್ಚೈಃ। ಇತೀರಿತಂ ಪೂರ್ವಮುನೀಂದ್ರವರ್ಯೈರ್ಬಲಾನು ಮಾನಾತ್ತರಿಚಿಂತನೀಯಂ ॥

ತಾತ್ಪರ್ಯ॥ ದಶಮಸ್ಥಾನದಲ್ಲಿದ್ದ ಗ್ರಹವು ತನ್ನ ಮಿತ್ರಕ್ಷೇತ್ರದಲ್ಲಿದ್ದರೆ ಆ ಪುರುಷನು ಮಿತ್ರರಿಂದ ಧನಸಹಾಯವನ್ನು ಹೊಂದಿ ಜೀವಿಸುತ್ತಾನೆ. ಶತ್ರುಕ್ಷೇತ್ರದಲ್ಲಿದ್ದರೆ ಶತ್ರುಗಳಿಂದಲೂ ಸ್ವಕ್ಷೇತ್ರದಲ್ಲಿ ಸ್ವಜನರಿಂದ ಧನವನ್ನು ಹೊಂದುತ್ತಾನೆ. ಸೂರ್ಯನು

ತನ್ನ ಉಚ್ಚಕ್ಷೇತ್ರದಲ್ಲಾಗಲಿ ಸ್ವಕ್ಷೇತ್ರದಲ್ಲಾಗಲೀ ಅಥವಾ ತ್ರಿಕೋಣ (೫-೯)ರಲ್ಲಿದ್ದರೆ ಆ ಮನುಷ್ಯನು ತನ್ನ ಬಾಹುಬಲದಿಂದ ಧನವನ್ನು ಸಂಪಾದಿಸುತ್ತಾನೆ. ಲಗ್ನ, ಧನ ಮತ್ತು ಲಾಭಸ್ಥಾನದಲ್ಲಿ ಬಲವಾದ ಶುಭಗ್ರಹವಿದ್ದರೆ ಆ ಗ್ರಹಗಳ ಜಾತಕನಿಗೆ ಭೂಮಿ, ಧನ, ಸೌಖ್ಯವನ್ನು ಕೊಡುತ್ತಾರೆ. ಈ ಪ್ರಕಾರವಾಗಿ ಪೂರ್ವದಲ್ಲಿ ಮಹರ್ಷಿಗಳಿಂದುಕ್ತವಾಗಿರುತ್ತದೆ. ಈ ವಿಷಯವನ್ನು ಯಾವಾಗಲೂ ಚೆನ್ನಾಗಿ ಪರಿಶೋಧಿಸಿ ನೋಡಿದರೆ ದೃಷ್ಟಾಂತವಾಗಿ ಅನುಭವಕ್ಕೆ ಬರುವುದು.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಕರ್ಮಜೀವ
ವಿಚಾರನಾಮ ದಶಮ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರೆ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ಕರ್ಮಾಜೀವವಿಚಾರನಾಮ
ದಶಮ ಪ್ರಕರಣಂ

## ೧೧ನೇ ರಾಜಯೋಗೋನಾಮ ಪ್ರಕರಣಂ

ಅವತಾರಿಕೆ ॥ ಇದುವರಿವಿಗೆ ಹೇಳಲ್ಪಟ್ಟ ಪ್ರಕರಣಗಳಲ್ಲಿ ಹುಟ್ಟಿದವನ ಜೀವನೋಪಾಯದವರಿವಿಗೆ ಹೇಳಲ್ಪಟ್ಟಿತು. ಮನುಷ್ಯರು ಮೂರು ಆಜ್ಞೆಗೆ ಒಳಪಟ್ಟವರಾಗಿರಬೇಕು. ೧ ದೈವಾಜ್ಞೆ, ೨ ಗುರ್ವಾಜ್ಞೆ, ೩ ರಾಜಾಜ್ಞೆ, ಗುರ್ವಾಜ್ಞೆಗೂ ದೈವಾಜ್ಞೆಗೂ ಪರಸ್ಪರ ಸಂಬಂಧವಿರುವುದು. ಈ ೨ಕ್ಕೂ ರಾಜಾಜ್ಞೆಗೂ ಅಷ್ಟು ಸಂಬಂಧವಿಲ್ಲ. ಗುರ್ವಾಜ್ಞೆಯಿಂದ ಧರ್ಮಾನುಸಾರ ನಡೆದುಕೊಳ್ಳುತ್ತಿರಲಾಗಿ ದೈವಾಜ್ಞೆಯನ್ನು ಅನುಸರಿಸಿದಂತಾಗುವುದು. ಆದ್ದರಿಂದ ಸದ್ವಿದ್ಯೆಯಿಂದ ದೈವವು ಗುರ್ವಾಜ್ಞೆ ಪ್ರಕಾರವಿರುವವನಿಗೆ ಕೇವಲ ಸಮೀಪಸ್ಥವಾಗಿರುವುದು. ಸದ್ವಿದ್ಯಾನಿಪುಣನಿಗೆ ರಾಜಾಜ್ಞೆ ಅಷ್ಟು ಅವಶ್ಯಕವಿಲ್ಲ. ಯಾತಕ್ಕೆಂದರೆ ವಿದ್ಯೆಯಿಂದ ಐಹಿಕಾಮುಷ್ಮಿಕ ಜ್ಞಾನವುಂಟಾಗುವುದು. ಐಹಿಕದಲ್ಲಿ ರಾಜಾಜ್ಞೆಯನ್ನು ಲ್ಲಂಘಿಸಲಾರದು. ಆದ್ದರಿಂದ ಪಂಡಿತನಿಗೆ ರಾಜಾಜ್ಞೆಯು ಶಕ್ತಿ ತಿಳಿದಿರುವುದು. ಆದರೆ ಪ್ರಪಂಚ ಧರ್ಮಕ್ಕನುಸಾರವಾಗಿ ಸರ್ವರೂ ವಿದ್ವಾಂಸರಾಗಿರುವುದಿಲ್ಲ. ವಿದ್ವಾಂಸರಲ್ಲದವರ ಅವಿವೇಕಗಳನ್ನು ತಿದ್ದಿ ನ್ಯಾಯಮಾರ್ಗಕ್ಕೆ ತರುವುದೇ ರಾಜಕರ್ತವ್ಯವಾಗಿರುತ್ತದೆ. *ಆದಕಾರಣ ಹುಟ್ಟಿದ ಪ್ರತಿ ಮನುಷ್ಯನು ರಾಜನಾಗಲಾರನು. ರಾಜನಾಗುವುದಕ್ಕೆ ಅನೇಕ ಗ್ರಹಗಳು ಬಲಿಷ್ಠರಾಗಿರುವ ಕಾಲಬೇಕು. ಯಾತಕ್ಕೆಂದರೆ, ಅನೇಕ ಪ್ರಾಣಿಕೋಟಿಗಳನ್ನು ಸಂರಕ್ಷಿಸುವ ಶಕ್ತಿಬೇಕು. ಆದಕಾರಣ ಗ್ರಹಗಳು ಬಲಿಷ್ಠರಾಗಿರಬೇಕು. ಒಂದು ವೇಳೆ ಗ್ರಹಗಳು ಬಲಿಷ್ಠರಾಗಿದ್ದರೂ, ಆ ಕಾಲದಲ್ಲಿ ಹುಟ್ಟಿದವನು ರಾಜನಾಗುವುದಿಲ್ಲ. ರಾಜಪುತ್ರನಾದವನು. (ಅಂದರೆ ರಾಜನ ಮಗನು) ರಾಜನಾಗುತ್ತಾನೆ. ಇತರರ ಮಗನಾದರೆ, ರಾಜಸದೃಶಶೌರ್ಯೌದಾರ್ಯ ಗಾಂಭೀರ್ಯಾದಿ ಗುಣಗಳಿಂದ ಶೋಭಿಸುವನು (ಕದಾಚಿತ್ ಇತರರ ಪುತ್ರನು ರಾಜನಾಗುವುದುಂಟು). ಈ ವಿಷಯವನ್ನೆಲ್ಲಾ ವರಾಹಮಿಹಿರಾಚಾರ್ಯರು ಸಂಗ್ರಹಿಸಿ, ಮಹರ್ಷಿಗಳ ಮತಕ್ಕನುಸಾರವಾಗಿ ಅತ್ಯಲ್ಪ ಸಂಖ್ಯಾತವಾದ ಪದ್ಯಗಳಿಂದ ಅರ್ಥ ಬಾಹುಳ್ಯವಿರುವಂತೆ ರಾಜಯೋಗ ವಿಷಯವನ್ನು ಈ ಪ್ರಕರಣದಲ್ಲಿ ಹೇಳಿರುತ್ತಾರೆ.

---

* ರಾಜನು ಪ್ರಜೆಗಳಿಂದ ರಾಜಾದಾಯವನ್ನು ಹೊಂದಿ ಅದರಿಂದ ಅವರಿಗೆ ಉಪಕಾರರೂಪವಾಗಿ ಸೌಖ್ಯವನ್ನು ಕಲ್ಪಿಸಿಕೊಡುವನು. (ಆತನು ಪೃಥ್ವೀ ಪತಿ)

ಈ ರಾಜಯೋಗಕ್ಕೆ ಮುಖ್ಯವಾದ ವಿಷಯಗಳೇನೆಂದರೆ - ಪರಾಶರರು ತಮ್ಮ ಶಿಷ್ಯರಾದ ಮೈತ್ರೇಯಋಷಿಗಳಿಗೆ ಉಪದೇಶಮಾಡಿದ್ದಾರೆ. ಅಥಾತಃ ಸಂಪ್ರವಕ್ಷ್ಯಾಮಿ ರಾಜಯೋಗಾನ್ ದ್ವಿಜೋತ್ತಮ । ಏಷಾಂ ವಿಜ್ಞಾನ ಮಾತ್ರೇಣ ನೃಪಾಣಾಂ ಪೂಜ್ಯಭಾಗ್ಭವೇತ್ ॥೧॥ ಯೇಯೇಯೋಗಾಃ ಪುರಾ ಶಂಭುಭಾಷಿತಾ-ಶ್ಶೈಲಜಾಗ್ರತಃ। ತೇಷಾಂ ಸರ್ವಮಹಂವಕ್ಷ್ಯೇತ ವಾಗ್ರೇದ್ವಿಜನಂದನ ॥ತಾ॥ ಎಲೈ ಬ್ರಾಹ್ಮಣ ಶ್ರೇಷ್ಠನೇ (ಮೈತ್ರೇಯನೆ) ಪೂರ್ವದಲ್ಲಿ ಪಾರ್ವತಿಗೋಸ್ಕರವಾಗಿ ಪರಮೇಶ್ವರನಿಂದ ಯಾವಯಾವ ರಾಜಯೋಗಗಳು ಹೇಳಲ್ಪಟ್ಟಿವೆಯೋ ಅವುಗಳೆಲ್ಲವನ್ನು ನಿನಗೆ ಹೇಳುತ್ತೇನೆ. ಈ ರಾಜಯೋಗಜ್ಞಾನದಿಂದ ಮಹಾರಾಜನಿಂದಲಾದರೂ ಪೂಜ್ಯತೆಯನ್ನು ಹೊಂದುತ್ತೀಯೆ। (ಎಂದು ಹೇಳಿರುತ್ತಾರೆ)

ಶ್ಲೋಕ॥ ಅಥ ಯೋಗಫಲಂಬ್ರೂಮೋ ಜ್ಞಾತವ್ಯಂಚ ವಿಶೇಷತಃ । ಲಕ್ಷ್ಮೀಸ್ಥಾನಂ ತ್ರಿಕೋಣಂ ಚ ವಿಷ್ಣುಸ್ಥಾನಂ ಚ ಕೇಂದ್ರಕಮ್ ತಯೋಃ ಸಂಬಂಧ ಮಾತ್ರೇಣ ರಾಜಯೋಗಾದಿಕಂ ಭವೇತ್ ॥೩॥ತಾ॥ ಲಗ್ನದಿಂದ ತ್ರಿಕೋಣ (೫-೯) ಲಕ್ಷ್ಮೀನಿವಾಸಸ್ಥಾನವೆಂತಲೂ, ಲಗ್ನದಿಂದ (೪-೭-೧೦) ವಿಷ್ಣುಸ್ಥಾನ ವೆಂತಲೂ, ಮುಖ್ಯಸಂಕೇತವು. ಈ ಲಕ್ಷ್ಮಿವಿಷ್ಣುಸ್ಥಾನಕ್ಕಧಿಪತಿಗಳಾದ ಗ್ರಹಗಳ ಸಂಬಂಧವುಂಟಾದರೆ, ರಾಜಯೋಗಾದಿಗಳುಂಟಾಗುತ್ತವೆ. ಈ ವಿಷಯವು ಮುಖ್ಯವಾಗಿ ತಿಳಿಯತಕ್ಕದ್ದಾಗಿರುತ್ತೆ. ಲಕ್ಷ್ಮೀಸ್ಥಾನವು ಸ್ತ್ರೀ, ವಿಷ್ಣುಸ್ಥಾನವು ಪುರುಷನು, ಆದ್ದರಿಂದ ಸ್ತ್ರೀಪುರುಷ ಸಂಯೋಗವು ಯಾವ ಯಾವ ಪ್ರಕಾರ ಫಲಪ್ರದವಾಗುವುದೋ ಹಾಗೆಯೇ ಆ ಅಧಿಪತಿಗಳ ಸಂಯೋಗ ಸಂಬಂಧ ಪರಸ್ಪರ ವೀಕ್ಷಣ, ಪರಸ್ಪರ ಸ್ಥಾನವೆಂಬ ೪ ವಿಧವಾದ ಸಂಬಂಧಗಳುಂಟಾದರೆ, ಯೋಗ ಫಲ ಉಂಟಾಗುವುದು. ಅರ್ಥಾತ್-ಕೇಂದ್ರ ಕೇಂದ್ರಾಧಿಪತಿಗಳು ಸೇರಿದರೂ, ಫಲವಿಲ್ಲ. ತ್ರಿಕೋಣ ತ್ರಿಕೋಣಾಧಿಪತಿಗಳು ಸೇರಿದರೂ ಫಲವಿಲ್ಲ. ಮತ್ತು ಕೇಂದ್ರ ಕೋಣಾಧಿಪತ್ಯ ಒಂದೇ ಗ್ರಹಕ್ಕೆ ಬಂದಿದ್ದರೆ, ಸ್ವತಂತ್ರವಾಗಿ ಫಲದಾಯಕನಾಗುವನು.

ಶ್ಲೋಕ॥ ಕೇಂದ್ರಪುತ್ರೇಶಯೋರ್ಯೋಗೇ ಯೋಗೋಮಾತ್ಯಾಭಿದೋಭವೇತ್। ಪಾರಿಜಾತಾದಿಕೇತೌಚ ತದಾತತ್ವಬಲಂ ಭವೇತ್ ॥ತಾ॥ ಕೇಂದ್ರ ೧-೪-೭-೧೦ನೆ ಅಧಿಪತಿಗಳಲ್ಲಿ ಯಾವ ಅಧಿಪತಿಯಾದರೂ ಪಂಚಮಾಧಿಪತಿಯೊಂದಿಗೆ ಸೇರಿದರೆ ರಾಜಮಂತ್ರಿಯಾಗುತ್ತಾನೆ. ಆ ಕೇಂದ್ರ ಪುತ್ರಾಧಿಪತಿಗಳೇ ಪಾರಿಜಾತಾದಿ ಅಂಶೆಯಲ್ಲಿದ್ದರೆ ಆಗ ಹೇಳಲ್ಪಟ್ಟ ಮಂತ್ರಿತ್ವಯೋಗವು ವಿಶೇಷ ಪ್ರಬಲವಾಗಿರುವುದು.

ಶ್ಲೋಕ।। ಲಗ್ನೇಶೇನ ಧನೇಶಾದ್ಯಾನ್ನೈವಯೋಗಃ ಸುಖಾದಿಪಾತ್ । ಮಂತ್ರೇಶೋ ಮಾತ್ರತಾಂಯಾಂತಿ ಸಪ್ತಮಾಧೀಶಯೋಗತಃ ।।೫।।ತಾ।। ಲಗ್ನೇಶನೂ, ಧನೇಶನೂ, ಸುಖಾಧಿಪತಿಯೂ, ಸೇರಿದರೆ ಯಾವ ಯೋಗವೂ ಇಲ್ಲ. ಇವರೊಂದಿಗೆ ಪಂಚಮಾಧಿಪತಿ ಸೇರಿದರೂ, ಪಂಚಮಾಧಿಪತಿಯೊಂದಿಗೆ ಸಪ್ತಮಾಧಿಪತಿ ಸೇರಿದರೂ, ರಾಜಮಂತ್ರಿಯಾಗುವನು.

ಶ್ಲೋಕ।। ಕರ್ಮೇಶಸ್ಯತು ಯೋಗೇನ ರಾಜಸಾಚಿವ್ಯತಾಮಿಯಾತ್ । ಕೇಂದ್ರಧರ್ಮೇಶಯೋರ್ಯೋಗೇ ರಾಜವೈರಾಜವಂದಿತಃ ।।೬।।ತಾ।। ಪಂಚಮಾಧಿಪತಿ ಕೇಂದ್ರಾಧಿಪತಿಗಳು ಸೇರಿದರೆ, ರಾಜ ಸಚಿವನಾಗುವನು ಕೇಂದ್ರಾಧಿಪತಿಗಳು ಧರ್ಮ (೯) ಸ್ಥಾನಾಧಿಪತಿ ಸೇರಿದರೆ, ರಾಜನಾಗಲೀ, ರಾಜವಂದಿತನಾದ ಚಕ್ರವರ್ತಿಯಾಗಲೀ ಆಗುವನು.

ಶ್ಲೋಕ।। ಧರ್ಮಕರ್ಮಾಧಿಪೌಚೈವ ವ್ಯತ್ಯಯೇತಾವುಭೌಸ್ಥಿತೌ । ಯುನಕ್ತಿ ಚೇತ್ತದಾವಾಚ್ಯಂ ಸರ್ವಸೌಖ್ಯಸಮನ್ವಿತು ।।೭।।ತಾ।। ಧರ್ಮಾಧಿಪತಿಯೆಂದರೆ ೯ನೆ ಅಧಿಪತಿ, ಕರ್ಮಾಧಿಪತಿಯೆಂದರೆ-೧೦ನೆ ಅಧಿಪತಿ. ಇವರಿಬ್ಬರ ವ್ಯತ್ಯಯ ಅಂದರೆ ೯ನೆ ಅಧಿಪತಿ ೧೦ನೆ ಸ್ಥಾನದಲ್ಲು ಇದ್ದರೆ, ಸರ್ವ ಸೌಖ್ಯವುಳ್ಳವನಾಗುವನು.

ಶ್ಲೋಕ।। ಪಾರಿಜಾತೇಸ್ಥಿತೌ ತೌತುನೃಪೋಲೋಕಾನುಶಿಕ್ಷಕಃ । ಉತ್ತಮೇ ಚೋತ್ತಮೋ ಭೂಪೋ ಗಜವಾಜಿ ರಥಾದಿರ್ಮಾ ।।೨।।ತಾ।। ಈ ಮೇಲೆ ಹೇಳಿದ ಧರ್ಮ ಕರ್ಮಾಧಿಪತಿಗಳು, ಪಾರಿಜಾತಾಂಶೆಯಲ್ಲಿದ್ದರೆ, ಲೋಕವನ್ನೆಲ್ಲಾ (ಪ್ರಪಂಚ) ತನ್ನಾಜ್ಞೆಯಲ್ಲಿಟ್ಟುಕೊಳ್ಳುವ ಚಕ್ರವರ್ತಿಯಾಗುವನು. ಉತ್ತಮಾಂಶೆಯಲ್ಲಿದ್ದರೆ ಗಜವಾಜಿ, ರಥಗಳಿಂದ ಕೂಡಿದ ಸರ್ವೋತ್ತಮನಾದ ರಾಜನಾಗುವನು.

ಶ್ಲೋಕ।। ಗೋಪುರೇ ನೃಪಶಾರ್ದೂಲೋ ನೃಪೈಶ್ಚಾಂಘ್ರಿಪ್ರಪೂಜಿತಃ । ಸಿಂಹಾಸನೇ ಚಕ್ರವರ್ತೀ ಸರ್ವಕ್ಷೋಣೀ ಪ್ರಪಾಲಕಃ ।।೯।।ತಾ।। ಆ ಧರ್ಮ ಕರ್ಮಾಧಿಪತಿಗಳೇ ಗೋಪುರಾಂಶೆಯಲ್ಲಿದ್ದರೆ ರಾಜರುಗಳಿಂದ ಪೂಜೆಯನ್ನು ಮಾಡಿಸಿಕೊಳ್ಳುವ ರಾಜಸಿಂಹನಾಗುವನು. ರಾಜಶಾರ್ದೂಲನೆಂದು ವಿಶೇಷಣ ।। ಸಿಂಹಶಾರ್ದೂಲನಾಗಾದ್ಯಾಃ ಪುಂಸಿಶ್ರೇಷ್ಠಾರ್ಥಗೋಚರಾಃ ।।ಇತ್ಯಮರಃ।। ಧರ್ಮಕರ್ಮಾಧಿಪತಿಗಳೇ ಸಿಂಹನವಾಂಶೆಯಲ್ಲಿದ್ದರೆ, ಸರ್ವಭೂಮಂಡಲವನ್ನು ಪಾಲಿಸತಕ್ಕ ಚಕ್ರವರ್ತಿಯಾಗುವನು.

ಶ್ಲೋಕ।। ಅಸ್ಮಿಯೋಗೇ ಹರಿಶ್ಚಂದ್ರೋ ಮಾನವಶ್ಚೋತ್ತಮಸ್ತಥಾ । ಬಲಿರ್ವೈಶ್ವಾನರೋರಾಜಾ ಅನ್ಯೇಚೈವತು ಚಕ್ರವಾಃ ।।೧೦।। ಕಲೌ ಯುಗೇಚ

ಭವಿತಾತಥಾರಾಜಾಯುಧಿಷ್ಠರಃ । ಭವಿತಾ ಶಾಲಿವಾಹಶ್ಚತಥಾ ವಿಜಯಾಭಿನಂದನಃ ॥೧೧॥ ನಾಗರ್ಜುನಸ್ತಥಾಭೂಪಸ್ತದನ್ಯೇಚೈವಗೋಪುರೇ ॥ತಾ॥ ಮೇಲೆ ಹೇಳಿದ ಧರ್ಮಕರ್ಮಾಧಿಪತಿಗಳೇ ಗೋಪುರಾಂಶೆಯಲ್ಲಿ ಹರಿಶ್ಚಂದ್ರನಿಗೂ, ಉತ್ತಮನೆಂಬುವ ಮನುವಿಗೂ, ಬಲಿಚಕ್ರವರ್ತಿಗೂ, ವೈಶ್ವಾನರನಿಗೂ ಮತ್ತು ಅನೇಕ ಚಕ್ರವರ್ತಿಗಳಿಗೂ ಈ ಯೋಗವಿತ್ತೆಂದು ಹೇಳುತ್ತಾರೆ. ಮುಂದೆ ಈ ಯೋಗದಲ್ಲಿ ಹುಟ್ಟತಕ್ಕವರಾರೆಂದರೆ-ಕಲಿಯುಗದಲ್ಲಿ ಯುದಿಷ್ಠರ ಚಕ್ರವರ್ತಿ, ಶಾಲಿವಾಹನ, ವಿಜಯಾಭಿನಂದನ, ನಾಗಾರ್ಜುನ, ಮೊದಲಾದವರುಗಳು. ಇವರನ್ನು ವಿನಾ ಇತರರು ಈ ಯೋಗದಲ್ಲಿ ಹುಟ್ಟುವುದಿಲ್ಲವೆಂದು ಮುಖ್ಯ ತಾತ್ಪರ್ಯವು.

ಶ್ಲೋಕ॥ ಪಾರಾವತಾಂಶಕೇನ್ಯೇಚ ಜಾತಾಮನ್ವಾದಯಸ್ತಥಾ ॥೧೨॥ ಮೇಲೆ ಹೇಳಿದ ಧರ್ಮಕರ್ಮಾಧಿಪತಿಗಳು ಪಾರಾವತಾಂಶೆಯಲ್ಲಿದ್ದ ಕಾಲದಲ್ಲಿ ಮನ್ವಾದಿಗಳು ಹುಟ್ಟಿದರು.

ಶ್ಲೋಕ॥ ದೇವಲೋಕೇಶು ಪ್ರಥಮೇ ಹರೇಶ್ಚೈವಾವತಾರಣಮ್ । ಮತ್ಸ್ಯಾದಿ ಕಲ್ಕಿಪರ್ಯಂತಾಃ ಸರ್ವೇವರ್ಗೋದ್ಭವಾಮತಾಃ ॥೧೩॥ತಾ॥ ಆ ಧರ್ಮ ಕರ್ಮಾಧಿಪತಿಗಳು ದೇವಲೋಕಾಂಶೆಯೆಂಬ ವರ್ಗದಲ್ಲಿದ್ದ ಕಾಲದಲ್ಲಿ ಮತ್ಸ್ಯಾವತಾರವನ್ನು ಶ್ರೀಮನ್ನಾರಾಯಣನು ಮಾಡಿದನು, ಮತ್ತು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ (ಬಲರಾಮ) ಕಲ್ಕಿ, ಈ ಮೊದಲಾದ ಅವತಾರಗಳು ಈ ಧರ್ಮಕರ್ಮಾಧಿಪತಿಗಳು ವ್ಯತ್ಯಯವಾಗಿದ್ದು ದೇವಲೋಕಾಂಶೆಯಲ್ಲಿದ್ದ ಕಾಲದಲ್ಲಿ ಹುಟ್ಟಿದವತಾರಗಳೆಂದು ತಿಳಿಯತಕ್ಕದ್ದು.

ಶ್ಲೋಕ॥ ದ್ವಿತೀಯೇ ದೇವಲೋಕೇಷು ಜ್ಞೇಯಾಶ್ಚಂದ್ರಾದಯಃಪರೇ । ಐರಾವತೇಚ ಪ್ರಥಮೇ ಜಾತಸ್ಸ್ವಾಯಂಭುವೋಮನುಃ ॥೧೪॥ತಾ॥ ಮತ್ತು ಎರಡನೇ ದೇವಲೋಕಾಂಶೆಯಲ್ಲಿ ಚಂದ್ರಾದಿಗಳು ಹುಟ್ಟಿದರು. ಐರಾವತಾಂಶೆಯಲ್ಲಿ ಆದಿಯಲ್ಲಿ ಸ್ವಾಯಂಭುವಮನು ಹುಟ್ಟಿದನು.

ಶ್ಲೋಕ॥ ಏವಂಸರ್ವಪ್ರಕಾರೇಣ ಜ್ಞಾತ್ವಾಚೈವವಿಚಕ್ಷಣಃ । ಕೋಣ ಕೇಂದ್ರಾದಿ ನಾಥಾನಾಂ ಯೋಗಃ ಸರ್ವವಿಧಾಯಕಃ ॥೧೫॥ ಚತುಃ ಕೇಂದ್ರಾಧಿಪೌದ್ವೌಚ ಕೋಣಪೌಚ ಧನಾಧಿಪಃ । ಐರಾವತಾದಿ ಸಂಸ್ಥಾಸ್ತೇ ಕುರ್ವನ್ ಲೋಕೋತ್ತರೋತ್ತರಂ । ಅನೇನೈವಪ್ರಕಾರೇಣ ವೇತ್ತಿಸರ್ವತ್ರಬುದ್ಧಿಮಾನ್ ॥೧೬॥ತಾ॥ ಕೇಂದ್ರಾಧಿಪತಿಗಳಿಂದಲೂ, ತ್ರಿಕೋಣಾಧಿಪತಿಗಳಿಂದಲೂ, ಯೋಗವುಂಟಾದರೆ,

ಸಮಸ್ತವಾದ ರಾಜಾಧಿರಾಜ ಯೋಗಗಳು ಹುಟ್ಟುತ್ತವೆಂದು ವಿಚಕ್ಷಣೆಯಿಂದ ತಿಳಿದುಕೊಳ್ಳಬೇಕು. ನಾಲ್ಕು ಕೇಂದ್ರಾದಿಪತಿಗಳೂ, ೨ ಕೋಣಾಧಿಪತಿಗಳೂ, ಧನಾಧಿಪತಿಯೂ, ಐರಾವತಾದಿ ಅಂಶೆಯಲ್ಲಿದ್ದರೆ, ಲೋಕೋತ್ತರರಾದ ಚಕ್ರವರ್ತಿಗಳು ಹುಟ್ಟುವರು. ಈ ಪ್ರಕಾರದಿಂದ ರಾಜಯೋಗಗಳನ್ನು ಜ್ಯೋತಿ ಶಾಸ್ತ್ರಪಾರಂಗತರು ತಿಳಿದುಕೊಳ್ಳಬೇಕೆಂದು ಪರಾಶರರ ಅಭಿಪ್ರಾಯವಾಗಿರುತ್ತೆ.

ಈ ಮೇಲೆ ಹೇಳಲ್ಪಟ್ಟ ಕಾರಣಗಳಿಂದಲೇ ಜ್ಯೋತಿಶ್ಶಾಸ್ತ್ರದಲ್ಲಿ ಪರಮೋತ್ಕೃಷ್ಟ ಜ್ಞಾನವುಳ್ಳ ವರಾಹಮಿಹಿರಾಚಾರ್ಯರು ಈ ಪ್ರಕರಣದಲ್ಲಿನ ರಾಜಯೋಗವನ್ನು ಹೇಳಿರುತ್ತಾರೆ. ಅದನ್ನು ಯಥಾಮತಿಯಾಗಿ ತಿಳಿದುಕೊಂಡು ಉದಾಹರಣ ಪೂರ್ವಕವಾಗಿ ಅನ್ಯಗ್ರಂಥ ಸಮಿತಿಯೊಡನೆ ತಿಳಿಯಪಡಿಸಿರುವೆನು. ಮತ್ತು ಈ ರಾಜಯೋಗ ಪ್ರಕರಣದಲ್ಲಿ ಹೇಳಲ್ಪಡುವ ರಾಜಯೋಗಗಳು ಹುಟ್ಟುವ ವಿಧಿಯನ್ನು ಹೇಳಿರುತ್ತವೆ. ಆ ರಾಜಯೋಗಗಳ ಪ್ರಾಬಲ್ಯವಿಶೇಷವನ್ನು ಉತ್ತಮಾಂಶಾದಿ ಭೇದಗಳ ಮೇಲೆ ತಿಳಿಯತಕ್ಕದ್ದು.

## ರಾಜಯೋಗ ವಿಚಾರಃ

ಮೂಲ॥ ಪ್ರಾಹುರ್ಯವನಾ ಸ್ವ‌ತುಂಗಗೈಃ ಕ್ರೂರೈಃ ಕ್ರೂರಮತಿರ್ಮಹೀಪತಿಃ ।
ಕ್ರೂರೈಸ್ತುನಜೀವಶರ್ಮಣಃ ಪಕ್ಷೇಕ್ಷಿತ್ಯಧಿಪಃ ಪ್ರಜಾಯತೇ ॥೧॥

ಅವತಾರಿಕೆ ॥ ಗ್ರಂಥಕರ್ತನು ಈ ಪ್ರಕರಣದಲ್ಲಿ ರಾಜಯೋಗವನ್ನು ಹೇಳಲು ಉಪಕ್ರಮಿಸಿ ಈ ಶ್ಲೋಕದಲ್ಲಿ ಯವನೇಶ್ವರ ಮತವನ್ನು ಜೀವಶರ್ಮ ಮತವನ್ನೂ ಹೇಳುತ್ತಾನೆ. ತ್ರಿಪ್ರಭೃತಿಗ್ರಹಗಳು ತಮ್ಮ ತಮ್ಮುಚ್ಚಸ್ಥಾನವನ್ನು ಹೊಂದಿದ್ದರೆ ಕ್ಷತ್ರಿಯವಂಶದಲ್ಲಿ ಹುಟ್ಟಿದವನು ರಾಜಾಧಿಪತಿಯಾಗುತ್ತಾನೆಂದು ಸಕಲ ಜ್ಯೋತಿಷ್ಯ (ಜಾತಕ) ಗ್ರಂಥಗಳಲ್ಲಿಯೂ ಪ್ರಸಿದ್ಧವಾಗಿರುತ್ತೆ.

ಟೀಕು॥ ಯವನಾಃ-ಯವನೇಶ್ವರಾದಿಗಳು. ಸ್ವತುಂಗಗೈಃ-ತಮ್ಮತಮ್ಮುಚ್ಚ ಸ್ಥಾನಗಳಲ್ಲಿರುವ, ಕ್ರೂರೈಃ-ರವಿ, ಕುಜ, ಶನಿಗಳಿಂದ, ಕ್ರೂರಮತಿಃ-ಪಾಪಬುದ್ಧಿ (ಕಠಿನವಾದ ಬುದ್ಧಿ)ಯುಳ್ಳ, ಮಹೀಪತಿಃ-ಪೃಥ್ವೀಪತಿ, ಪ್ರಜಾಯತೇ-ಹುಟ್ಟುತ್ತಾನೆಂದು, ಆಹುಃ-ಹೇಳಿದರು. ಈ ಪ್ರಕಾರ ಹೇಳುವುದರಿಂದ ಶುಭಗ್ರಹಗಳುಚ್ಚಂಗತರಾಗಿದ್ದರೆ ಸೌಮ್ಯಸ್ವಭಾವವುಳ್ಳ ಪೃಥ್ವೀಪತಿಗಳು, ಶುಭ ಪಾಪಗ್ರಹಗಳುಚ್ಚರಾಗಿದ್ದರೆ ಮಿತ್ರಸ್ವಭಾವವುಳ್ಳ ಮಹೀಪತಿಗಳು ಹುಟ್ಟುತ್ತಾರೆಂದು ಅಭಿಪ್ರಾಯವಾಗುತ್ತದೆ. ಈ

ವಿಷಯದಲ್ಲಿ-॥ಶ್ಲೋಕ॥ ಪಾಪೈಃ ಪಾಪಮತಿಃ ಸ್ವೋಚ್ಚಗತೈರಧರ್ಮವಾನ್ ಸೌಮ್ಯೈ। ವ್ಯಾಮಿಶ್ರೈರ್ಮಿಶ್ರಮತಿಃ ಪೃಥ್ವೀಶೋಜಾಯತೇ ಮನುಜಃ ॥೧೭॥ ಎಂದು ಯವನೇಶ್ವರನ ಮತ ॥ ಜೀವಶರ್ಮಣಃ-ಜೀವಶರ್ಮನ ಪಕ್ಷದಲ್ಲಿ ಉಚ್ಚಗತೈಃ-ಉಚ್ಚಸ್ಥಾನಗಳಲ್ಲಿರುವ ಕ್ರೂರೈಃ-ಪಾಪಗ್ರಹಗಳಿಂದ, ಕ್ಷಿತ್ಯಧಿಪಃ-ರಾಜ್ಯಾಧಿಪತಿಯು. ನಪ್ರಜಾಯತೇ-ಹುಟ್ಟುವುದಿಲ್ಲ. ಅಂದರೆ ಮೂರು ಪಾಪಗ್ರಹಗಳು ಉಚ್ಚಸ್ಥಾನಗಳಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು, ರಾಜ್ಯಾಧಿಪತಿಯಾಗದೆ ರಾಜ ಸಮಾನ ಧನವಂತನು, ಕ್ರೋಧಶೀಲನು, ಕಲಹ ಪ್ರಿಯನು ಆಗುವನೆಂದು ಜೀವಶರ್ಮಮತ-ಈ ವಿಷಯದಲ್ಲಿ ಜೀವಶರ್ಮ ॥ಶ್ಲೋಕ॥ ಪಾಪೈರುಚ್ಚಗತೈರ್ಜಾತಾ ನಭವಂತಿನೃಪಾನರಾಃ । ಕಿಂತುವಿತ್ತಾನ್ವಿತಾಸ್ತೇಸ್ಯುಃಕ್ರೋಧಿನಃ ಕಲಹಪ್ರಿಯಾಃ ॥೧೮॥ ಎಂದು ಹೇಳಿರುತ್ತಾನೆ. ಇದೇ ವಿಷಯಕ್ಕೆ ಲಘುಜಾತಕದಲ್ಲಿ-॥ಶ್ಲೋಕ॥ ತ್ರಿಪ್ರಭೃತಿಭಿರುಚ್ಚಸ್ಥೈರ್ನೃಪವಂಶ ಭವಾಭವಂತಿರಾಜಾನಃ । ಪಂಚಾದಿಭಿರನ್ಯ ಕುಲೋದ್ಭವಾಚ್ಚ ತದ್ವತ್ತ್ರಿಕೋಣಗತೈಃ ॥೧೯॥ ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ವರಾಹಮಿಹಿರಾಚಾರ್ಯರಿಗೆ ಯವನೋಕ್ತವೇ ಸಮ್ಮತಿಯೆಂದು ತಿಳಿಯಬರುತ್ತೆ. ಆದ್ದರಿಂದ ಯವನಾಚಾರ್ಯರ ಹೆಸರಿನಿಂದಲೇ ಈ ಶ್ಲೋಕದ ಮೊದಲು ಕರ್ತೃಪದಮೆಂದರ್ಥಕೊಡುತ್ತೆ. ವಕ್ರಾರ್ಕಜಾರ್ಕ, ಎಂಬುವ ಶ್ಲೋಕದಿಂದ ರಾಜಯೋಗ ಪ್ರಕರಣದಲ್ಲಿ ಸಾಧ್ಯವಾದಮಟ್ಟಿಗೂ, ಇವರ ಮತಕ್ಕನುಸಾರವಾಗಿರುವ ಶ್ಲೋಕಗಳನ್ನೇ ಹುಡುಕಿ ಆಯಾ ಶ್ಲೋಕಗಳಿಗೆ (ಯೋಗಗಳಿಗೂ) ಉದಾಹರಣೆಗಾಗಿ ಕೊಟ್ಟಿರುತ್ತೇನೆ. ಆದರಲ್ಲಿ ಯೋಗಕಾರಕ ಗ್ರಹಗಳ ಹೆಸರು ವ್ಯತ್ಯಾಸವಾಗಿರದೆ ಫಲಗಳು ಹೆಚ್ಚಾಗಿದ್ದೂ, ಪಂಡಿತರು ಸಮಂಜಸವಾಗಿ ತಿಳಿದುಕೊಳ್ಳಬೇಕೆಂದು ಪ್ರಾರ್ಥಿಸುವೆನು.

ಮೂಲ॥ ವಕ್ರಾರ್ಕಜಾರ್ಕಗುರುಭಿಸ್ಸಕಲೈಃ ಸ್ತ್ರಿಭಿಶ್ಚಸ್ವೋಚ್ಚೇಷು ಷೋಡಶನೃಪಾಃ
ಕಥಿತೈಕಲಗ್ನೇ । ದ್ವ್ಯೇಕಾಶ್ರಿತೇಷುಚ ತದೈಕತಮೇವಿಲಗ್ನೇ
ಸ್ವಕ್ಷೇತ್ರಗೇ ಶಶಿನಿ ಷೋಡಶ ಭೂಮಿಪಾಸ್ಯುಃ ॥೨॥

ಅವತಾರಿಕೆ॥ ಈ ಶ್ಲೋಕದಲ್ಲಿ ೩೨ ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ಸ್ವೋಚ್ಚೇಷು - ತಮ್ಮ ತಮ್ಮ ಉಚ್ಚಸ್ಥಾನಗಳನ್ನು ಹೊಂದಿರುವ ಕಥಿತೈಕಲಗ್ನೇ-ಹೇಳಲ್ಪಟ್ಟ ಒಂದು ಲಗ್ನದಲ್ಲಿ, ವಕ್ರಾರ್ಕಜಾರ್ಕಗುರುಭಿಃಸಕಲೈಃ- ಕುಜ, ಶನಿ, ರವಿ, ಗುರು. ಈ ನಾಲ್ಕು ಗ್ರಹಗಳಿಂದ ನಾಲ್ಕು ರಾಜಯೋಗಗಳಾಗುವುದು. ಈ ನಾಲ್ಕು ಗ್ರಹಗಳಲ್ಲಿ, ತ್ರಿಭಿಃ-ಉಚ್ಚಸ್ಥಾನಗಳಲ್ಲಿರುವ ಮೂರು ಲಗ್ನದಲ್ಲೊಂದು ಈ ಪ್ರಕಾರ ಮೂರು ಗ್ರಹಗಳಿಂದ ೧೨ ರಾಜಯೋಗಗಳು, ಈ ಪ್ರಕಾರ ಪೂರ್ವಾರ್ಧದಲ್ಲಿ

೧೬ ರಾಜಯೋಗಗಳು, ವಿವರಣೆ-ಕುಜ, ಶನಿ, ರವಿ, ಗುರು, ಈ ನಾಲ್ಕು ಗ್ರಹಗಳು, ತಮ್ಮ ತಮ್ಮ ಸ್ಥಾನದಲ್ಲಿ ಉಚ್ಚರಾಗಿ ಅದರಲ್ಲಿ ಉಚ್ಚಗ್ರಹವಿರುವರಾಶಿ ಲಗ್ನವಾದರೆ ನಾಲ್ಕು ಯೋಗಗಳು. ಇವರಲ್ಲಿ ಮೂರು ಗ್ರಹಗಳು ಉಚ್ಚಸ್ಥಾನಗಳಲ್ಲಿದ್ದು ಅದರಲ್ಲೊಂದು ರಾಶಿ ಜನ್ಮಲಗ್ನವಾದರೆ. ೧೨ ರಾಜಯೋಗಗಳುಂಟಾಗುತ್ತವೆ. ಅದು ಹೇಗೆಂದರೆ-ಮೇಷದಲ್ಲಿ ರವಿ, ಕರ್ಕದಲ್ಲಿ ಬೃಹಸ್ಪತಿ, ತುಲೆಯಲ್ಲಿ ಶನಿ, ಮಕರದಲ್ಲಿ ಕುಜ, (ಉಳಿದ ಗ್ರಹಗಳು ಯಾವರಾಶಿಗಳಲ್ಲಾದರೂ ಇರಬಹುದು) ಈ ಪ್ರಕಾರ ಗ್ರಹಗಳಿದ್ದರೆ, ಮೇಷಲಗ್ನವಾದರೆ ೧, ಕರ್ಕಲಗ್ನವಾದರೆ-೨, ತುಲಾಲಗ್ನಾದರೆ-೩, ಮಕರಲಗ್ನವಾದರೆ-೪, ಈ ಪ್ರಕಾರ ನಾಲ್ಕು ರಾಜ ಯೋಗಗಳು. ಮೂರು ಗ್ರಹಗಳು ಉಚ್ಚರಾಗಿರುವ ಕಾಲದಲ್ಲಿ ರಾಜಯೋಗವಿವರಣೆ ಹೇಗೆಂದರೆ-ಮೇಷದಲ್ಲಿ ರವಿ, ಕರ್ಕಾಟಕದಲ್ಲಿ ಗುರು, ತುಲೆಯಲ್ಲಿ ಶನಿ, ಈ ಪ್ರಕಾರ ಗ್ರಹವಿರುವಾಗ ಮೇಷಲಗ್ನವಾದರೆ-೧, ಕಟಕವಾದರೆ-೨, ತುಲೆಯಾದರೆ-೩, ಪೂರ್ವೋಕ್ತವಾದ ನಾಲ್ಕು ಮತ್ತು ಈ ಮೂರು ಸೇರಿ ೭ ರಾಜಯೋಗಗಳು. ಇವಲ್ಲದೆ ಕಟಕದಲ್ಲಿ ಗುರು, ತುಲೆಯಲ್ಲಿ ಶನಿ, ಮಕರದಲ್ಲಿ ಕುಜ, ಈ ವಿಧವಾಗಿ ಗ್ರಹಗಳಿರುವಾಗ ಕರ್ಕಟಲಗ್ನವಾದರೆ ೧, ತುಲಾಲಗ್ನವಾದರೆ-೨, ಮಕರಲಗ್ನವಾದರೆ ೩, ಅಂತು ೭+೩=೧೦ ರಾಜಯೋಗಗಳು. ಇವಲ್ಲದೆ ಮೇಷದಲ್ಲಿ ರವಿ, ತುಲೆಯಲ್ಲಿ ಶನಿ, ಮಕರದಲ್ಲಿ ಕುಜ, ಈ ಪ್ರಕಾರ ಗ್ರಹಗಳಿರುವಾಗ ಮೇಷಲಗ್ನವಾದರೆ ೧, ತುಲಾ ಲಗ್ನವಾದರೆ ೨, ಮಕರಲಗ್ನವಾದರೆ ೨, ಅಂತು ೧೦+೩=೧೩ ರಾಜಯೋಗಗಳು. ಇವಲ್ಲದೆ ಮೇಷದಲ್ಲಿ ರವಿ, ಕಟಕದಲ್ಲಿ ಗುರು, ಮಕರದಲ್ಲಿ ಕುಜ, ಈ ಪ್ರಕಾರ ಗ್ರಹಗಳಿರುವಾಗ ಮೇಷ ಲಗ್ನವಾದರೆ ೧, ಕಟಕ ಲಗ್ನವಾದರೆ ೨, ಮಕರಲಗ್ನವಾದರೆ ೩, ಅಂತು ೧೩+೩=೧೬, ಈ ಪ್ರಕಾರ ಈ ಶ್ಲೋಕದ ಪೂರ್ವಾರ್ಧದಲ್ಲಿ ೧೬ ರಾಜ ಯೋಗಗಳು ಹೇಳಲ್ಪಟ್ಟಿವೆ.

### ಚಂದ್ರನು ಸ್ವಕ್ಷೇತ್ರದಲ್ಲಿರುವಾಗ ೧೬ ರಾಜಯೋಗಗಳು ಹೇಗೆಂದರೆ

ಶಶಿನಿ-ಚಂದ್ರನು, ಸ್ವಕ್ಷೇತ್ರಗೇ-ಸ್ವಕ್ಷೇತ್ರವಾದ ಕರ್ಕಾಟಕದಲ್ಲಿರುವಾಗ, ದ್ವ್ಯೇಕಾಶ್ರಿತೇಷು=ಇಲ್ಲಿ ದ್ವ್ಯೇಕಾಶ್ರಿತೇಷು ಎಂಬುದಕ್ಕೆ ಬದಲಾಗಿ, ದ್ವ್ಯಾಶ್ರಿತೇಷು, ಏಕಾಶ್ರಿತೇಷು ಎಂಬಂತೆ ಪದ ಪ್ರತ್ಯೇಕವಾಗಿ ಸಂಭವವಾಗುತ್ತದೆ. ಮೊದಲು ಹೇಳಲ್ಪಟ್ಟ ಕುಜ, ಶನಿ, ರವಿ, ಗುರುಗಳಲ್ಲಿ ದ್ವ್ಯಾಶ್ರಿತೇಷು-ಎರಡು ಗ್ರಹಗಳು ಉಚ್ಚದಲ್ಲಿದ್ದು ಅದರಲ್ಲೊಂದು ಲಗ್ನವಾದರೆ-೧೨ ರಾಜಯೋಗಗಳಾಗುವುದು,

ಏಕಾಶ್ರಿತೇಷು-ಚಂದ್ರನು ಸ್ವಕ್ಷೇತ್ರದಲ್ಲಿದ್ದು, ಒಂದೇ ಗ್ರಹವು ಉಚ್ಚಸ್ಥಾನದಲ್ಲಿದ್ದರೆ ೪ ರಾಜಯೋಗಗಳಾಗುವುದು. ಅದು ಹೇಗೆಂದರೆ-ಮೇಷದಲ್ಲಿ ರವಿ, ಕರ್ಕದಲ್ಲಿ ಬೃಹಸ್ಪತಿ, ಚಂದ್ರ, ಈ ಪ್ರಕಾರ ಗ್ರಹಗಳಿದ್ದು ಲಗ್ನ ಮೇಷವಾದರೆ ೧, ಕಟಕವಾದರೆ ೨, ಮೇಷದಲ್ಲಿ ರವಿ, ಕಟಕದಲ್ಲಿ ಚಂದ್ರ, ತುಲೆಯಲ್ಲಿ ಶನಿ, ಈ ಪ್ರಕಾರ ಗ್ರಹಗಳಿರುವಾಗ ಲಗ್ನ ಮೇಷವಾದರೆ-೩. ತುಲೆಯಲ್ಲಿ-೪, ಮೇಷದಲ್ಲಿ ರವಿ, ಕಟಕದಲ್ಲಿ ಚಂದ್ರ, ಮಕರದಲ್ಲಿ ಕುಜ, ಈ ಪ್ರಕಾರ ಗ್ರಹವಿರುವಾಗ ಲಗ್ನಮೇಷವಾದರೆ-೫, ಮಕರವಾದರೆ-೬, ಕರ್ಕಾಟಕದಲ್ಲಿ ಚಂದ್ರ, ಗುರು, ತುಲೆಯಲ್ಲಿ ಶನಿ, ಈ ಪ್ರಕಾರ ಗ್ರಹಗಳಿರುವ ಲಗ್ನ ಕರ್ಕಟವಾದರೆ-೭, ತುಲೆಯಾದರೆ ೮, ಕರ್ಕಾಟಕದಲ್ಲಿ ಚಂದ್ರ, ಗುರು, ಮಕರದಲ್ಲಿ ಕುಜ, ಈ ಪ್ರಕಾರ ಗ್ರಹವಿರುವಾಗ, ಲಗ್ನ ಕರ್ಕಾಟಕವಾದರೆ ೯, ಮಕರವಾದರೆ ೧೦, ತುಲೆಯಲ್ಲಿ ಶನಿ, ಮಕರದಲ್ಲಿ ಕುಜ, ಕರ್ಕಾಟಕದಲ್ಲಿ ಚಂದ್ರ, ಈ ಪ್ರಕಾರ ಗ್ರಹವಿರುವಾಗ, ತುಲಾಲಗ್ನವಾದರೆ-೧೧, ಮಕರಲಗ್ನವಾದರೆ-೧೨, ಚಂದ್ರನು ಸ್ವಕ್ಷೇತ್ರದಲ್ಲಿದ್ದು, ಒಂದು ಗ್ರಹ ಉಚ್ಚಸ್ಥಾನದಲ್ಲಿದ್ದರೆ ಆ ಉಚ್ಚರಾಶಿ ಲಗ್ನವಾಗುವಾಗ ಯೋಗವಾಗುವುದು. ಹೇಗೆಂದರೆ-ಕರ್ಕದಲ್ಲಿ ಚಂದ್ರ, ಮೇಷದಲ್ಲಿ ರವಿ, ಈ ಪ್ರಕಾರವಿರುವಾಗ ಲಗ್ನಮೇಷವಾದರೆ-೧೩, ಕರ್ಕಾಟಕದಲ್ಲಿ ಚಂದ್ರ, ಬೃಹಸ್ಪತಿ ಗಳಿರುವಾಗ, ಲಗ್ನಕರ್ಕಾಟಕವಾದರೆ ೧೪, ಕರ್ಕಾಟಕದಲ್ಲಿ ಚಂದ್ರ, ತುಲೆಯಲ್ಲಿ ಶನಿ, ಈ ಪ್ರಕಾರ ಗ್ರಹವಿರುವಾಗ, ತುಲಾಲಗ್ನವಾದರೆ-೧೫, ಕರ್ಕದಲ್ಲಿ ಚಂದ್ರ, ಮಕರದಲ್ಲಿ ಕುಜನಿದ್ದು, ಮಕರಲಗ್ನವಾಗುವಾಗ ೧೬, ಈ ಪ್ರಕಾರ ಚಂದ್ರನು, ಸ್ವಕ್ಷೇತ್ರದಲ್ಲಿರುವಾಗ, ೧೬ ರಾಜಯೋಗಗಳು ಮತ್ತು ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ೧೬ ರಾಜಯೋಗಗಳೂ ಸೇರಿ ೩೨ ರಾಜಯೋಗಗಳಾಗುತ್ತವೆ. ಈ ವಿಷಯದಲ್ಲಿ ॥ಶ್ಲೋಕ॥ ಧುಂಡಿರಾಜಃ ॥ ಸ್ವೋಚ್ಚೇ ಸೂರ್ಯಶನೀಜ್ಯ ಭೂಮಿತನಯೈರ್ಯ ದ್ವಾತ್ರಿಭಿರ್ಲಗ್ನಗೈಸ್ತೇಷಾ ಮನ್ಯತಮೇಹಿ ಷೋಡಶಮಿತಾಃ ಶ್ರೀರಾಜಯೋಗಾಃ ಸ್ಮೃತಾಃ॥ ತನ್ಮಧ್ಯೇನಿ ಜತುಂಗಗೇ ಗ್ರಹಯುಗೇ ಯತ್ರೈಶ ಷೇಟೇವಿಧೌಸ್ವರ್ಕ್ಷೇತುಂಗ ಸಮಾಶ್ರಿತೈಕ ಖಚರೇಲಗ್ನೇ ಪರೇಷೋಡಶ ॥೨೦॥

❖❖❖

## ದ್ವಾತ್ರಿಂಶದ್ರಾಜಯೋಗ ಪ್ರಸ್ತಾರ ಪದಕ

| ಚಾತುರ್ಗ್ರಹ. ತ್ರಿಗ್ರಹೋಚ್ಚಕ್ಕೆ | | | | | ಚಂದ್ರಸ್ವಕ್ಷೇತ್ರದಲ್ಲಿದ್ದು ೧-೨ ಉಚ್ಚ | | | | |
|---|---|---|---|---|---|---|---|---|---|
| ಸಂ. | ಮೇಷ | ಕಟಕ | ತುಲ | ಮಕರ | ಸಂ. | ಮೇಷ | ಕಟಕ | ತುಲ | ಮಕರ |
| ೧ | ರವಿ ಲ | ಗುರು | ಶನಿ | ಕುಜ | ೧ | ರವಿ ಲ | ಚ ಗು | ೦ | ೦ |
| ೨ | ರವಿ | ಗು ಲ | ಶನಿ | ಕುಜ | ೨ | ರವಿ | ಚಗುಲ | ೦ | ೦ |
| ೩ | ರವಿ | ಗುರು | ಶ ಲ | ಕುಜ | ೩ | ರವಿ ಲ | ಚ | ಶ | ೦ |
| ೪ | ರವಿ | ಗುರು | ಶನಿ | ಕು ಲ | ೪ | ರವಿ | ಚ | ಶ ಲ | ೦ |
| ೫ | ರವಿ ಲ | ಗುರು | ಶನಿ | ೦ | ೫ | ರವಿ ಲ | ಚ | ೦ | ಕುಜ |
| ೬ | ರವಿ | ಗು ಲ | ಶನಿ | ೦ | ೬ | ರವಿ | ಚ | ೦ | ಕು ಲ |
| ೭ | ರವಿ | ಗುರು | ಶ ಲ | ೦ | ೭ | ೦ | ಚಗುಲ | ಶ | ೦ |
| ೮ | ೦ | ಗು ಲ | ಶನಿ | ಕುಜ | ೮ | ೦ | ಚಗು | ಶ ಲ | ೦ |
| ೯ | ೦ | ಗುರು | ಶ ಲ | ಕುಜ | ೯ | ೦ | ಚಗುಲ | ೦ | ಕುಜ |
| ೧೦ | ೦ | ಗುರು | ಶನಿ | ಕು ಲ | ೧೦ | ೦ | ಚಗು | ೦ | ಕು ಲ |
| ೧೧ | ರವಿ ಲ | ೦ | ಶನಿ | ಕುಜ | ೧೧ | ೦ | ಚ | ಶ ಲ | ಕು ಜ |
| ೧೨ | ರವಿ | ೦ | ಶ ಲ | ಕುಜ | ೧೨ | ೦ | ಚ | ಶ | ಕು ಲ |
| ೧೩ | ರವಿ | ೦ | ಶನಿ | ಕು ಲ | ೧೩ | ರವಿ ಲ | ಚ | ೦ | ೦ |
| ೧೪ | ರವಿ ಲ | ಗುರು | ೦ | ಕುಜ | ೧೪ | ೦ | ಚಗುಲ | ೦ | ೦ |
| ೧೫ | ರವಿ | ಗು ಲ | ೦ | ಕುಜ | ೧೫ | ೦ | ಚ | ಶ ಲ | ೦ |
| ೧೬ | ರವಿ | ಗುರು | ೦ | ಕು ಲ | ೧೬ | ೦ | ಚ | ೦ | ಕು ಲ |
| | ೪ | ೪ | ೪ | ೪ | ೩೨ | ೪ | ೪ | ೪ | ೪ |

ಈ ಪ್ರಕಾರ ೧೬+೧೬=೩೨ ರಾಜಯೋಗಗಳು.

## ವರ್ಗೋತ್ತಮ ಚಂದ್ರ, ಲಗ್ನರಾಜಯೋಗಾಃ

ಮೂಲ॥ ವರ್ಗೋತ್ತಮಗತೇಲಗ್ನೇ ಚಂದ್ರೇವಾಚಂದ್ರವರ್ಜಿತೇ । ಚತುರಾದ್ಯೈರ್ಗ್ರಹೈರ್ದೃಷ್ಟೇ ದ್ವಾವಿಂಶತಿನೃಪಾಸ್ಮೃತಾಃ ॥

ಅವತಾರಿಕೆ॥ ೪೪ ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ವರ್ಗೋತ್ತಮಗತೇ-ವರ್ಗೋತ್ತಮ ನವಾಂಶೆಯನ್ನು ಹೊಂದಿದ, ಲಗ್ನೇ-ಜನ್ಮಲಗ್ನವಾಗಲೀ, ಚಂದ್ರೇವಾ-ವರ್ಗೋತ್ತಮ ನವಾಂಶೆಯನ್ನು ಹೊಂದಿದ ಚಂದ್ರನಾಗಲೀ, ಚಂದ್ರವರ್ಜಿತ್ಯೈ-ಚಂದ್ರವ್ಯತಿರಿಕ್ತವಾದ, ಚತುರಾದ್ಯೈಃ-ನಾಲ್ಕು ಮೊದಲಾದ, ಗ್ರಹೈಃ-ಗ್ರಹಗಳಿಂದ, ದೃಷ್ಟೇಸತಿ-ನೋಡಲ್ಪಟ್ಟರೆ, ಆದಿಶಬ್ದದಿಂದ ಐದು ಗ್ರಹಗಳಿಂದಾಗಲೀ, ಆರು ಗ್ರಹಗಳಿಂದಾಗಲೀ ನೋಡಲ್ಪಟ್ಟರೆ, ದ್ವಾವಿಂಶತಿ ನೃಪಾಃ-ಇಪ್ಪತ್ತೆರಡು ನೃಪಯೋಗಗಳು. ಸ್ಮತಾಃ-ಹೇಳಲ್ಪಡುತ್ತೆ. ವರ್ಗೋತ್ತಮ ನವಾಂಶದಿಂದ ಹುಟ್ಟಿದ ರಾಜಯೋಗ ೨೨+ವರ್ಗೋತ್ತಮ ನವಾಂಶೆಯಲ್ಲಿದ್ದ ಚಂದ್ರನಿಂದ ಹುಟ್ಟಿದ ರಾಜಯೋಗ ೨೨ ಅಂತು ೪೪ ರಾಜಯೋಗಗಳೆಂದು ತಿಳಿಯತಕ್ಕದ್ದು.

### ವರ್ಗೋತ್ತಮ ರಾಜಯೋಗಾಃ೨೨

| ಲಗ್ನದಿಂದ ೨೨ | | ಚಂದ್ರನಿಂದ ೨೨=ಅಂತು ೪೪ |
|---|---|---|
| ನಾಲ್ಕು ಗ್ರಹಗಳಿಂದ ನೋಡಲ್ಪಟ್ಟರೆ | ಐದು ಗ್ರಹಗಳಿಂದ ನೋಡಲ್ಪಟ್ಟರೆ | ಆರು ಗ್ರಹಗಳಿಂದ ನೋಡಲ್ಪಟ್ಟರೆ |
| ೧೫ ರಾಜಯೋಗ ಲಗ್ನಕ್ಕೆ | ೬ ಯೋಗ ಲಗ್ನಕ್ಕೆ | ೧ ಯೋಗ ಲಗ್ನಕ್ಕೆ |
| ೧೫ ರಾಜಯೋಗ ಚಂದ್ರನಿಗೆ | ೬ ಯೋಗ ಚಂದ್ರನಿಗೆ | ೧ ಯೋಗ ಚಂದ್ರನಿಗೆ |
| ೩೦ + | ೧೨ + | ೨=೪೪ ಆಗುವುದು. |

೪೪ x ೧೨=೫೨೮=ರಾಜಯೋಗಗಳುಂಟಾಯಿತು.

ಈ ಮೇಲೆ ಹೇಳಿದ ೪೪ ರಾಜಯೋಗಗಳಿಂದ ೧೨ ಲಗ್ನಕ್ಕೂ ೫೨೮ ರಾಜಯೋಗಗಳುಂಟಾಗುತ್ತವೆ.

| ಯೋಗೋತ್ಪತ್ತಿ ವಿಕಲ್ಪ | | | ರಾಜಯೋಗಗಳು ೫೨೮ | | |
|---|---|---|---|---|---|
| ವಿಕಲ್ಪ | ಸಂಖ್ಯೆ | ೧೨ ಲಗ್ನ | ಅಂತು | ವರ್ಗೋತ್ತಮ ಲಗ್ನ | ವರ್ಗೋತ್ತಮ ಲಗ್ನ |
| ಚತುರ್ಗ್ರಹದ್ರಷ್ಟ ವಿಕಲ್ಪ | ೧೫ | ೧೨ | ೧೮೦ | ೧೮೦ | ೧೮೦ |
| ಪಂಚಗ್ರಹ ವಿಕಲ್ಪ | ೫ | ೧೨ | ೭೨ | ೭೨ | ೭೨ |
| ಷಡ್ಗ್ರಹ ವಿಕಲ್ಪ | ೨ | ೧೨ | ೧೨ | ೧೨ | ೧೨ |
| ಯೋಗ ಸಂಖ್ಯಾ | ೨೨ | ೦ | ೨೬೪ | ೨೬೪ | ೨೬೪ |

## ವರ್ಗೋತ್ತಮ ರಾಜಯೋಗ ಪ್ರಸಾರಪದಕಂ

| | ಯೋಗ ಸಂಖ್ಯಾ ವಿವರಣೆ | ವರ್ಗೋತ್ತಮಾಂಶೆಯಲ್ಲಿರುವ | | | |
|---|---|---|---|---|---|
| ಸಂ | ಗ್ರಹವಿಕಲ್ಪ | ಲಗ್ನ | ಚಂದ್ರ | ರಾಶಿಸಂಖ್ಯೆ | ಅಂತು ಯೋಗಗಳು |
| ೧ | ರವಿ-ಕುಜ-ಬುಧ-ಗುರ, | ೧ | ೧ | ೧೨ | ೨೪ |
| ೨ | ರವಿ-ಕುಜ-ಬುಧ-ಶುಕ್ರ, | ೧ | ೧ | ೧೨ | ೨೪ |
| ೩ | ರವಿ-ಕುಜ-ಬುಧ-ಶನಿ, | ೧ | ೧ | ೧೨ | ೨೪ |
| ೪ | ರವಿ-ಕುಜ-ಗುರು-ಶುಕ್ರ, | ೧ | ೧ | ೧೨ | ೨೪ |
| ೫ | ರವಿ-ಕುಜ-ಗುರು-ಶನಿ, | ೧ | ೧ | ೧೨ | ೨೪ |
| ೬ | ರವಿ-ಕುಜ-ಶುಕ್ರ-ಶನಿ, | ೧ | ೧ | ೧೨ | ೨೪ |
| ೭ | ರವಿ-ಬುಧ-ಗುರು-ಶುಕ್ರ, | ೧ | ೧ | ೧೨ | ೨೪ |
| ೮ | ರವಿ-ಬುಧ-ಗುರು-ಶನಿ, | ೧ | ೧ | ೧೨ | ೨೪ |
| ೯ | ರವಿ-ಬುಧ-ಶುಕ್ರ-ಶನಿ, | ೧ | ೧ | ೧೨ | ೨೪ |
| ೧೦ | ರವಿ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| ೧೧ | ಕುಜ-ಬುಧ-ಗುರು-ಶುಕ್ರ, | ೧ | ೧ | ೧೨ | ೨೪ |
| ೧೨ | ಕುಜ-ಬುಧ-ಗುರು-ಶನಿ, | ೧ | ೧ | ೧೨ | ೨೪ |
| ೧೩ | ಕುಜ-ಬುಧ-ಶುಕ್ರ-ಶನಿ, | ೧ | ೧ | ೧೨ | ೨೪ |
| ೧೪ | ಕುಜ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| ೧೫ | ಬುಧ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| | ಅಂತು ಚತುರ್ಗ್ರಹ ವಿಕಲ್ಪ | | | | ೩೬೦ |

| | | | | | |
|---|---|---|---|---|---|
| ೧ | ರವಿ-ಕುಜ-ಬುಧ-ಗುರು-ಶುಕ್ರ, | ೧ | ೧ | ೧೨ | ೨೪ |
| ೨ | ರವಿ-ಕುಜ-ಬುಧ-ಗುರು-ಶನಿ, | ೧ | ೧ | ೧೨ | ೨೪ |
| ೩ | ರವಿ-ಕುಜ-ಬುಧ-ಶುಕ್ರ-ಶನಿ, | ೧ | ೧ | ೧೨ | ೨೪ |
| ೪ | ರವಿ-ಕುಜ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| ೫ | ರವಿ-ಬುಧ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| ೬ | ಕುಜ-ಬುಧ-ಗುರು-ಶುಕ್ರ-ಶನಿ, | ೧ | ೧ | ೧೨ | ೨೪ |
| | ಅಂತು ಪಂಚಗ್ರಹ ವಿಕಲ್ಪ | | | | ೧೪೪ |
| ೧ | ರವಿ-ಕುಜ-ಬುಧ-ಗುರು-ಶುಕ್ರ-ಶನಿ ಷಡ್ಗ್ರಹವಿಕಲ್ಪ | ೧ | ೧ | ೧೨ | ೨೪ |
| | ಚತುರ್ಗ್ರಹ ವಿಕಲ್ಪ ೩೬೦<br>ಪಂಚರ್ಗ್ರಹ ವಿಕಲ್ಪ ೧೪೪<br>ಷಡ್ಗ್ರಹ ವಿಕಲ್ಪ ೨೪ } ೫೨೮ | ೨೨ | ೨೨ | ೨೨ | ೫೨೮ |

ಈ ವಿಷಯದಲ್ಲಿ ಮಾಂಡವ್ಯಃ ॥ ವಿಲಗ್ನಭವನಂಗತೇ ಬಲಯುತೇಚ ವರ್ಗೋತ್ತಮೇಚತುಃ ಪ್ರಭೃತಿಭಿಗ್ರಹೈಶ್ಚ ಶನಿನಾಸಮಾಲೋಕಿತೇ । ನಸಂ ಭವತಿ ಪಾರ್ಥಿವಃ ಪಟುಕೃಪಾಣಪಾಣೇರಣೇ ಕದಾಚಿದಪಿವೀಕ್ಷಿತೇರಿಪು ಜನೋ ನಯಸ್ಯಾನನ ॥೨೦॥ ಈ ಶ್ಲೋಕದಲ್ಲಿ ಹೇಳಿದ ಅರ್ಥದ ಪ್ರಕಾರ ಎರಡು ಯೋಗಗಳೇ ಆಗುತ್ತದೆ. ಅದು ಹೇಗೆಂದರೆ-ಚಂದ್ರನು ವರ್ಗೋತ್ತಮಾಂಶೆಯಲ್ಲಿದ್ದರೆ ೪ ಗ್ರಹಗಳಿಂದ ನೋಡಲ್ಪಟ್ಟರೆ ೧ ಯೋಗ, ಲಗ್ನ ವರ್ಗೋತ್ತಮಾಂಶೆಯಾಗಿ ಚತುಃ ಪ್ರಭೃತಿಗಳಿಂದ ನೋಡಲ್ಪಟ್ಟರೆ ೨ ಯೋಗ, ಅಂದರೆ ಶನಿ ನೋಡಿದರೆ ಯೋಗನಾಶವೆಂದು ಅಥವಾ ರಾಜನಾಗುವುದಿಲ್ಲವೆಂದು ಹೇಳಿರುತ್ತೆ. ವರಾಹಮಿಹಿರಾಚಾರ್ಯನು ಈ ವಿಷಯವನ್ನಂಗೀಕರಿಸಲಿಲ್ಲವೆಂದು ತಿಳಿಯಬರುತ್ತೆ. ಮತ್ತು ಇದೇ ವಿಷಯದಲ್ಲಿ ಧುಂಡಿರಾಜರ ಅಭಿಪ್ರಾಯ ॥ಶ್ಲೋಕ॥ ವರ್ಗೋತ್ತಮೇ ಮೃತಕರೇ ಯದಿವಾಶರೀರೆ ಸಂವೀಕ್ಷಿತೇ ಚ ಚತುರಾಧಿಭಿರಿಂದುಹೀನ್ಯೈಃ । ದ್ವಾವಿಂಶತಿ ಪ್ರಮಿತಯಃ ಖಲುಸಂಭವಂತಿಯೋಗಾಃ ಸಮುದ್ರವಲಯಕ್ಷಿತಿಪಾಲಕಾನಂ ॥ತಾ॥ ಚಂದ್ರನನ್ನು ಬಿಟ್ಟು ೪ ಮೊದಲ್ಗೊಂಡು ಗ್ರಹಗಳು ಚಂದ್ರನನ್ನಾಗಲೀ ಲಗ್ನವನ್ನಾಗಲೀ ನೋಡಿದರೆ ೨೨ ವಿಧವಾದ ರಾಜಯೋಗಗಳುಂಟಾಗಿ, ಅವರು ಸಮುದ್ರವಲಯ ಅಂದರೆ ಸಮುದ್ರದಿಂದ ಸುತ್ತಲ್ಪಟ್ಟ ಭೂಮಂಡಲಕ್ಕೆ ದೊರೆಗಳಾಗುವರೆಂದು ಹೇಳುತ್ತಾರೆ. ಗ್ರಹವಿಕಲ್ಪ ಭೇದದಿಂದ ೨೨ ಯೋಗಕ್ಕಿಂತಲೂ ಹೆಚ್ಚಾಗಿಯಾಗಲಿ ನ್ಯೂನವಾಗಿಯೇ ಆಗಲೀ ಆಗುವುದಿಲ್ಲ. ಈ ೨೨ ವಿಕಲ್ಪ ಸಂಖ್ಯೆಯಲ್ಲಿ ೧೬ ವಿಧದಲ್ಲಿ ಶನಿ ಸೇರಿ

ಯೋಗವಾಗುತ್ತಲಿದೆ. ಚತುರ್ಗ್ರಹವಿಕಲ್ಪದಲ್ಲಿ ೧೦ ವಿಧವಾಗಿ ಶನಿವೀಕ್ಷಣೆ ಯುಂಟಾಗುತ್ತದೆ. ಪಂಚಗ್ರಹ ವಿಕಲ್ಪದಲ್ಲಿ ೫ ಶನಿದೃಷ್ಟಯೋಗವುಂಟಾಗುತ್ತದೆ. ಷಡ್ಗ್ರಹ ವಿಕಲ್ಪದಲ್ಲಿ ಶನಿಯೂ ಸೇರಿರುವನು. ಈ ಪ್ರಕಾರ ೨೨ ಯೋಗದಲ್ಲಿ ೧೬ ಶನಿದೃಷ್ಟವಾದ ಯೋಗಗಳನ್ನು ಬಿಟ್ಟರೆ ೬ ಯೋಗಗಳೇ ಉಳಿಯುತ್ತವೆ. ಆದರೆ ಈ ಶ್ಲೋಕದಲ್ಲಾಗಲಿ ಯೋಗ ಸಂಖ್ಯಾವಾಚಕ ಪದವನ್ನು ಬಿಟ್ಟಿದ್ದರೆ, ಶನಿ ದೃಷ್ಟವಾದ ಯೋಗವು ರಾಜಯೋಗವಾಗುವುದಿಲ್ಲವೆಂದು ಹೇಳಬಹುದಾಗಿತ್ತು. ಹಾಗೆ ಹೇಳದೆ ಸಂಖ್ಯಾನಿರ್ದಿಷ್ಟವಾಚಕ ಪದಪ್ರಯೋಗದ ಬಲದಿಂದ ಶನಿದೃಷ್ಟಿ ಇದ್ದರೆ, ರಾಜಯೋಗಭಂಗವಿಲ್ಲದಂತಾಯಿತು. ಆದ್ದರಿಂದಲೇ ಶನಿ ಸಹಿತವಾಗಿ ನೋಡಿದರೆ ರಾಜಯೋಗವು ಪ್ರಬಲವಾಗಿರುವುದು.

## ರಾಜಯೋಗ ಪಂಚಕಮಂ

ಮೂಲ॥ ಯಮೇಕುಂಭೇರ್ಕೇಜೇಗವಿಶಶಿನಿ ತೈರೇವತನುಗೈರ್ನೃಯುಕ್ ಸಿಂಹಾಳಿಸ್ಥೈಃ ಶಶಿಜಗುರು ವಕ್ರೈರ್ನೃಪತಯಃ । ಯಮೇಂದೂ ತುಂಗೇ ಸವಿತೃಶಶಿಜೌ ಷಷ್ಠಭವನೇ ತುಲಾಜೇಂದುಕ್ಷೇತ್ರೈಃ ಸಸಿತ ಕುಜ ಜೀವೈಶ್ಚನರಪೌ ॥೪॥

ಅವತಾರಿಕೆ॥ ಪುನಃ ೫ ರಾಜಯೋಗಗಳು ಈ ಶ್ಲೋಕದಲ್ಲಿ ಹೇಳಲ್ಪಟ್ಟಿವೆ.

ಟೀಕು॥ ಯಮೇ-ಶನಿಯು, ಕುಂಭೇ-ಕುಂಭದಲ್ಲೂ, ಅರ್ಕೇ-ಸೂರ್ಯನು ಅಜೇ-ಮೇಷದಲ್ಲೂ, ಶಶಿನಿ-ಚಂದ್ರನು, ಗವಿ-ವೃಷಭದಲ್ಲೂ ಇದ್ದು ತೈರೇವತನುಗೈ- ಆ ಕುಂಭ ಮೇಷ ವೃಷಭರಾಶಿಗಳು ಜನ್ಮಲಗ್ನವಾಗಿರುವಾಗ, ನೃಯುಕ್ ಸಿಂಹಾಳಿಸ್ಥೈ-ಮಿಥುನ ಸಿಂಹ ವೃಶ್ಚಿಕರಾಶಿಗಳಲ್ಲಿ ಕ್ರಮವಾಗಿ, ಶಶಿಜಗುರುವಕ್ರೈ- ಬುಧ ಗುರು ಕುಜರು, ಮಿಥುನದಲ್ಲಿ ಬುಧ, ಸಿಂಹದಲ್ಲಿ ಗುರು, ವೃಶ್ಚಿಕದಲ್ಲಿ ಕುಜನಿದ್ದರೆ ೩ ರಾಜಯೋಗಗಳಾಗುತ್ತವೆ. ಅದು ಹೇಗೆಂದರೆ-(೧) ಕುಂಭಲಗ್ನವಾಗಿ ಕುಂಭದಲ್ಲಿ ಶನಿ, ಮೇಷದಲ್ಲಿ ರವಿ, ವೃಷಭದಲ್ಲಿ ಚಂದ್ರ, ಮಿಥುನದಲ್ಲಿ ಬುಧ, ಸಿಂಹದಲ್ಲಿ ಗುರು, ವೃಶ್ಚಿಕದಲ್ಲಿ ಕುಜ, ಈ ಪ್ರಕಾರ ಗ್ರಹಗಳಿದ್ದರೆ (೧) ರಾಜಯೋಗ, (೨) ಮೇಷಲಗ್ನವಾಗಿ ಮೇಷದಲ್ಲಿ ರವಿ, ವೃಷಭದಲ್ಲಿ ಚಂದ್ರ, ಮಿಥುನದಲ್ಲಿ ಬುಧ, ಸಿಂಹದಲ್ಲಿ ಗುರು, ವೃಶ್ಚಿಕದಲ್ಲಿ ಕುಜ, ಕುಂಭದಲ್ಲಿ ಶನಿ, ಈ ಪ್ರಕಾರ ಗ್ರಹಗಳಿದ್ದರೆ ೧ ರಾಜಯೋಗ, (೩) ವೃಷಭಲಗ್ನವಾಗಿ ವೃಷಭದಲ್ಲಿ ಚಂದ್ರ, ಮಿಥುನದಲ್ಲಿ ಬುಧ, ಸಿಂಹದಲ್ಲಿ ಗುರು, ವೃಶ್ಚಿಕದಲ್ಲಿ ಕುಜ, ಕುಂಭದಲ್ಲಿ ಶನಿ, ಮೇಷದಲ್ಲಿ ರವಿ, ಈ

ಪ್ರಕಾರ ಗ್ರಹಗಳಿದ್ದರೆ ೧ ರಾಜಯೋಗ. ಈ ಮೇಲೆ ಹೇಳಿದ ವಿಷಯದಲ್ಲಿ ಜಯದೇವಃ ।।ಶ್ಲೋಕ ।।ಶಿಖರಿಣೀ।। ಘಟಾರ್ಕ್ಕೌ ಲಗ್ನಸ್ಥೇ ಯುವತಿರಿಕೌರ್ಪ್ಯೈಃ ಕ್ರಮಗತೈರ್ಗ್ರಹೈರ್ವಿಜ್ಞೇವಾರ್ಯೈರ್ಭವತಿಮನುಜೋ ಮಾನವಪತಿಃ। ತನೌಮೇಷಸ್ಥೇರ್ಕೇ ಗದಿತಭಗತೈರ್ಜ್ಞಪ್ರಭೃತಿಭಿರ್ವೃಷೇಂದೌ ಲಗ್ನಸ್ಥೇ ಪುನರಪಿತಥಾ ತೈರ್ನರಪತಿಃ ।।೨೨।।

ಪುನಃ ೨ ರಾಜಯೋಗಗಳು ಹೇಳಲ್ಪಡುತ್ತೆ. ಯಮೇಂದೂ-ಶನಿ, ಚಂದ್ರರು, ತುಂಗೇ-ತಮ್ಮ ತಮ್ಮ ಉಚ್ಚಸ್ಥಾನವಾದ ತುಲಾ ವೃಷಭಗಳಲ್ಲಿದ್ದು, ಅಂಗೇ-ತುಲಾ ವೃಷಭಗಳಲ್ಲೊಂದು ಲಗ್ನವಾಗಿ, ಸವಿತೃಶಶಿಜೌ-ರವಿ, ಬುಧರು. ಷಷ್ಠಭವನೇ-ಕನ್ಯಾರಾಶಿಯಲ್ಲಿರುವಾಗ, (ಕ್ರಮವಾಗಿ) ಸಸಿತಕುಜಜೀವ್ಯೈ-ಶುಕ್ರ, ಕುಜ, ಗುರುಗಳು, ತುಲಾಜೇಂದುಕ್ಷೇತ್ರೈಃ-ತುಲಾ, ಮೇಷ, ಕರ್ಕಾಟಕದಲ್ಲಿದ್ದರೆ, ನರಪೌ-ಎರಡು ರಾಜಯೋಗಗಳು ಸಂಭವಿಸುತ್ತವೆ.

ಅದು ಹೇಗೆಂದರೆ :-

೧ ತುಲೆ ಲಗ್ನವಾಗಿ, ತುಲೆಯಲ್ಲಿ ಶನಿ, ವೃಷಭದಲ್ಲಿ ಚಂದ್ರ, ಕನ್ಯೆಯಲ್ಲಿ ರವಿ, ಬುಧರು, ತುಲೆಯಲ್ಲಿ ಶುಕ್ರ, ಮೇಷದಲ್ಲಿ ಕುಜ, ಕರ್ಕದಲ್ಲಿ ಗುರು, ಈ ಪ್ರಕಾರ ಗ್ರಹಗಳಿದ್ದರೆ ೧ ರಾಜಯೋಗವು.

೨ ಮೇಲೆ ಹೇಳಿದ ಗ್ರಹಗಳು ಆಯಾರಾಶಿಗಳಲ್ಲಿದ್ದು, ವೃಷಭಲಗ್ನವಾದರೆ ೧ ರಾಜಯೋಗವು.

ಈ ವಿಷಯದಲ್ಲಿ ।।ಜಯದೇವಃ।।ಶ್ಲೋಕ।। ಘಟಸ್ಥೌಲಗ್ನಾರ್ಕೀಯದಿ ಯುವತಿ ರಾಶೌ ರವಿಬುಧೌ ತುಲಾಜೇಂದು ಕ್ಷೇತ್ರೇಭೃಗುಜ ಕಜಜೀವೈರ್ನರಪತಿಃ । ತನೌಗೋಸ್ಥೇ ಚಂದ್ರೇಪುನರಪಿತಥಾ ಪೂರ್ವಗದಿತೈರ್ಗ್ರಹೇಂದ್ರೈಸ್ತ ತ್ರಸ್ಥೈರ್ಭವತಿ ಮನುಜಃ ಪುಂಗವಪತಿಃ- ।। ಈ ನಾಲ್ಕನೆ ಶ್ಲೋಕದ ಪೂರ್ವಾರ್ಧದಲ್ಲಿ ೩ ರಾಜಯೋಗಗಳು. ಉತ್ತರಾರ್ಧದಲ್ಲಿ ೨ ಅಂತು ೫ ರಾಜಯೋಗಗಳು ಹೇಳಲ್ಪಟ್ಟಿತು. ಕೆಲವರು "ಸವಿತೃಶಶಿಜೌ ಷಷ್ಠಭವನೇ" ಎಂಬುವಲ್ಲಿ ತುಲಾಲಗ್ನ ರಾಜಯೋಗವು ಹೇಳಲ್ಪಟ್ಟಿರುವುದರಿಂದ ತುಲೆಯಲ್ಲಿ ಶುಕ್ರನಿರುವಾಗ ಮೀನದಲ್ಲಿ ರವಿ, ಬುಧರಿರುವುದು ಅಸಂಗತವಾದ್ದರಿಂದ ಇದು ಅಯುಕ್ತವಾದದ್ದು ಷಷ್ಠಭವನೇ ಎಂಬುವುದಕ್ಕೆ ಕನ್ಯಾರಾಶಿಯೆಂದರ್ಥಮಾಡಿ, ಮುಂದೆ ಹೇಳುವ ರಾಜಯೋಗಗಳಲ್ಲಿ ಸೂರ್ಯನಿಂದ ೪ನೇ ಮನೆಯಲ್ಲಿ ಬುಧ ಶುಕ್ರರು ಹಾಗೆ ಇರುವುದಿಲ್ಲವೆಂದು ಪೂರ್ವಪಕ್ಷಸಿದ್ಧಾಂತ ಮಾಡಿರುವುದರಿಂದ ಇಲ್ಲಿ ಅರ್ಥ ಮಾಡಿರುವುದು ಸರಿಯಾಗಿದೆ.

ಈ ವಿಷಯದಲ್ಲಿ ಬಾದರಾಯಣರು ಹೇಳಿರುವ ವಚನ ॥ಶ್ಲೋಕ॥ ತುಲಾಲಗ್ನೇ ಸಿತಸೌರೌ ಮೇಷೇಭೌಮೇಗುರುಃ ಕುಳೀರಗತಃ । ಕನ್ಯಾಯಾಂ ರವಿಶಶಿಜೌ ಜಾತೋನೃಪತಿ ರ್ವೃಷೇಚ ಚಂದ್ರೇವಾ ॥೨೪॥ ಎಂದು ಈ ಶ್ಲೋಕದಿಂದ ಅರ್ಥವು ಸ್ಪಷ್ಟವಾಗಿರುತ್ತದೆ.

## ರಾಜಯೋಗತ್ರಯ ಮಾಹ

ಮೂಲ॥ ಕುಜೇತುಂಗೇರ್ಕೇಂದ್ವೋರ್ಧನುಷಿಯ ಮಲಗ್ನೇಚಕುಪತಿಃ । ಪತಿರ್ಭೂಮೇಶ್ಚಾನ್ಯಃ ಕ್ಷಿತಿಸುತವಿಲಗ್ನೇ ಸಶಶಿನಿ॥ ಸಚಂದ್ರೇಸೌರೇಸ್ತೇ ಸುರಪತಿಗುರೌಚಾಪಧರಗೇ। ಸ್ವತುಂಗಸ್ಥೇ ಭಾನಾವುದಯ ಮುಪಯಾತೇ ಕ್ಷಿತಿಪತಿಃ ॥೧೫॥

ಅವತಾರಿಕೆ॥ ಈ ಶ್ಲೋಕದಲ್ಲಿ ೩ ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ಕುಜೇ-ಕುಜನು. ತುಂಗೇ-ತನ್ನ ಉಚ್ಚಸ್ಥಾನವಾದ ಮಕರದಲ್ಲಿದ್ದು, ಅರ್ಕೇಂದ್ವೋಃ-ಸೂರ್ಯ ಚಂದ್ರರು, ಧನುಷೀ-ಧನುಸ್ಸಿನಲ್ಲೂ, ಯಮಲಗ್ನೇ-ಶನಿಯು ಜನ್ಮಲಗ್ನವಾದ ಮಕರದಲ್ಲಿದ್ದು ಮಕರಲಗ್ನಜಾತಕವಾದರೆ, ಕುಪತಿಃ- ರಾಜನಾಗುವನು. ಕೆಲವರು ಯಮಲಗ್ನೇ-ಎಂದ ಹೇಳಿರುವುದರಲ್ಲಿ ಶನಿ ಲಗ್ನದಲ್ಲಿಲ್ಲದಿದ್ದರೂ, ಶನಿರಾಶಿಗಳಾದ ಮಕರಕುಂಭಗಳಲ್ಲೊಂದು ಲಗ್ನವೆಂದು ಹೇಳುವರು. ಇದು ಯುಕ್ತವಲ್ಲ. ಈ ವಿಷಯದಲ್ಲಿ ॥ಶ್ಲೋಕ॥ ಲಗ್ನೇಸೌರಸ್ತುಂಗೇ ಭೌಮಶ್ಚಂದ್ರಾದಿ- ತ್ಯೌಚಾಪಪ್ರಾಪ್ತೌ ॥೨೫॥ ಎಂಬ ಬಾದರಾಯಣ ವಚನದಿಂದಲೂ, ಮತ್ತು ಆದಿತ್ಯಶ್ಚ ನಿಶಾಕರಶ್ಚಭವತೋ ವಾಗೀಶರಾಶೌ ಯದಾಸಾರ್ಧಂ ಭಾಸ್ಕರಿಣಾ ಸ್ವರಾಶಿ ಸಹಿತಃ ಪ್ರಾಪ್ತೋಮೃಗೇಮಂಗಳಃ । ಪ್ರಾಪ್ನೋತಿಪ್ರಭವಂತದಾ ಸಸುಕೃತೀಕ್ಷ್ಮಾ ಪಾಲ ಚೂಡಾಮಣಿಸ್ತಸ್ಯಾಂತೇ ಪರಿಪಂಥಿನೋರಣಮುಖೇಯಸಾತ್ಮ್ಯ ತಾಂತಾದಿವ ॥೨೬॥ ಎಂದು ಮಾಂಡವ್ಯ ವಚನದಿಂದ ಹೇಳಲ್ಪಟ್ಟಿರುವುದರಿಂದ ಮೊದಲು ಹೇಳಿದ ಮಕರಲಗ್ನವೇ ಸರಿಯೆಂದು ತಿಳಿಯತಕ್ಕದ್ದು. ಈ ಯೋಗದಲ್ಲಿ ಕ್ಷಿತಿಸುತವಿಲಗ್ನೇ-ಕುಜಸಹಿತವಾದ ಮಕರಲಗ್ನವು, ಸಶಶಿನಿ-ಚಂದ್ರನಿಂದೊಡಗೂಡಿ, ಧನುಸ್ಸಿನಲ್ಲಿ ಸೂರ್ಯಚಂದ್ರರಿದ್ದರೆ, ಆ ಕಾಲದಲ್ಲಿ ಹುಟ್ಟಿದವನು, ಭೂಮೇಃಪತಿಃ- ಭೂಪಾಲನಾಗುವನು. ಅಂದರೆ ಜನ್ಮಲಗ್ನವಾದ ಮಕರದಲ್ಲಿ ಚಂದ್ರಾಂಗಾರಕರು, ಧನುಸ್ಸಿನಲ್ಲಿ ಸೂರ್ಯನು ಇರುವ ಕಾಲದಲ್ಲಿ ಭೂಮಿಪತಿಯಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಭಾನುಶ್ಚಾಪೇ ಸೇಂದುರ್ಭೌಮಸ್ತುಂಗಪ್ರಾಪ್ತೋಲಗ್ನೇ ವಾಸ್ಯಾತ್ ॥೨೭॥ ಇತಿ ಬಾದರಾಯಣಃ ॥ ಸಚಂದ್ರೇ-ಚಂದ್ರಸಹಿತವಾದ, ಸೌರೇ-ಶನಿ,

ಅಸ್ತೇ-ಸಪ್ತಮದಲ್ಲು, ಸುರಪತಿಗುರೌ-ಬೃಹಸ್ಪತಿ, ಚಾಪಧರಗೇ- ಧನುಸ್ಸಿನಲ್ಲಿದ್ದು, ಭಾನೌ-ಸೂರ್ಯನು. ಸ್ವತುಂಗಸ್ಥೇ-ತನ್ನ ಉಚ್ಚರಾಶಿಯಲ್ಲಿ ಅಂದರೆ- ಮೇಷದಲ್ಲಿದ್ದು, ಉದಯಮುಪಯಾತೇ-ಅಂದರೆ, ಜನ್ಮಲಗ್ನ ಮೇಷವಾಗಿ, ಅಲ್ಲಿ ಸೂರ್ಯನು, ಧನುಸ್ಸಿನಲ್ಲಿ ಗುರು, ತುಲೆಯಲ್ಲಿ ಚಂದ್ರ ಶನಿಗಳು, ಈ ಪ್ರಕಾರ ವಿರುವಾಗ ಹುಟ್ಟಿದವನು, ಕ್ಷಿತಿಪತಿಃ-ಭೂಮ್ಯಧಿಪತಿಯಾಗುವನು.

## ರಾಜಯೋಗದ್ವಯಮಾಹ

ಮೂಲ॥ ವೃಷೇಸೇಂದೌ ಲಗ್ನೇಸವಿತೃಗುರುತೀಕ್ಷ್ಣಾಂಶು ತನಯೈಃ ಸುಹೃಜ್ಜ್ಞಾಯಾಖಸ್ಥೈರ್ಭವತಿ* ನಿಯಮಾನ್ಮಾನವಪತಿಃ॥ ಮೃಗೇಮಂದೇ ಲಗ್ನೇಸಹಜರಿಪುಧರ್ಮವ್ಯಯಗತೈ ಶ್ಶಶಾಂಕಾದ್ಯೈ **ರ್ಜಾತಃಪೃಥು ಗುಣಯಶಾಃ ಪುಂಗವಪತಿಃ ॥೬॥

ಅವತಾರಿಕೆ ॥ ಈ ಪದ್ಯದಲ್ಲಿ ಎರಡು ರಾಜಯೋಗಗಳು ಹೇಳಲ್ಪಟ್ಟಿರುತ್ತೆ.

ಟೀಕು॥ ಸೇಂದೌ-ಚಂದ್ರನೊಡಗೂಡಿದ, ವೃಷೇ-ವೃಷಭರಾಶಿಯು, ಲಗ್ನೇ-ಜನ್ಮ ಲಗ್ನವಾಗಿರುವಾಗ, ಸುಹೃಜ್ಜ್ಞಾಯಾಖಸ್ಥೈಃ-ಚತುರ್ಥ, ಸಪ್ತಮ, ದಶಮ ಸ್ಥಾನಗಳಲ್ಲಿ ಕ್ರಮವಾಗಿ, ಸವಿತೃಗುರುತೀಕ್ಷ್ಣಾಂಶುತನಯೈಃ-ಸೂರ್ಯ, ಗುರು, ಶನಿಗಳಿಂದ ಯುಕ್ತವಾಗಿರುವಾಗ ಹುಟ್ಟಿದವನು, ನಿಯಮಾತ್-ನಿಶ್ಚಯವಾಗಿ, ಮಾನವಪತಿಃ-ನರೇಂದ್ರನು. ಭವತಿ-ಆಗುತ್ತಾನೆ. ಅದು ಹೇಗೆಂದರೆ-ವೃಷಭ ಲಗ್ನವಾಗಿ ಅಲ್ಲಿ ಚಂದ್ರನು, ಸಿಂಹದಲ್ಲಿ ಸೂರ್ಯ ವೃಶ್ಚಿಕದಲ್ಲಿ ಗುರು, ಕುಂಭದಲ್ಲಿ ಶನಿ ಇದ್ದರೆ, ರಾಜಯೋಗ ॥೧॥ ಈ ವಿಷಯಕ್ಕೆ ಜಾತಕಾಭರಣದಲ್ಲಿ ಶ್ಲೋ॥ ವೃಷೇಶಶೀ ಲಗ್ನಗತೋಂಬು ಸಪ್ತಖಸ್ಥಾರವೀಜ್ಯಾರ್ಕ ಸುತಾಭವಂತಿ । ತದ್ದಂಡಯಾತ್ರಾ ಸುರಜೋಂಧಕಾರಾ ದಿನೇಪಿರಾತ್ರಿಂ ಕುರುತೇಪ್ರವೇಶಮ್ ॥೨೮॥ ಲಗ್ನೇ-ಲಗ್ನವಾದ, ಮೃಗೇ-ಮಕರದಲ್ಲಿ ಮಂದೇ-ಶನಿ ಇದ್ದು, ಸಹಜರಿಪುಧರ್ಮವ್ಯಯ ಗತೈಃ-ತೃತೀಯ, ಷಷ್ಠ, ನವಮ, ದ್ವಾದಶದಲ್ಲಿ, ಶಶಾಂಕಾದ್ಯೈಃ- ಚಂದ್ರ, ಕುಜ, ಬುಧ, ಗುರುಗಳು ಕ್ರಮವಾಗಿದ್ದರೆ, ಅಂದರೆ-ಮಕರಲಗ್ನವಾಗಿ, ಮಕರದಲ್ಲಿ ಶನಿ, ಮೀನದಲ್ಲಿ ಚಂದ್ರ, ಮಿಥುನದಲ್ಲಿ ಕುಜ, ಕನ್ಯೆಯಲ್ಲಿ ಬುಧ, ಧನುಸ್ಸಿನಲ್ಲಿ ಗುರು, ಈ ಪ್ರಕಾರ ಗ್ರಹಗಳಿರುವಾಗ, ಜಾತಃ-ಹುಟ್ಟಿದವನು. ಪೃಥುಗುಣಯಶಾಃ-ವಿಸ್ತಾರವಾದ

---

* ನಿಯತಾತ್ಮಾನರಪತಿಃ । ಎಂದು ಪಾಠಾಂತರ.

** ಶಂಶಾಂಕಾದ್ಯೈರ್ದಾತಃ-ಪಾ॥

ಗುಣವೆಂಬ ಕೀರ್ತಿಯಿಂದ ವ್ಯಾಪಿಸಿದ, ಪುಂಗವಪತಿಃ-ರಾಜಶ್ರೇಷ್ಠನಾಗುವನು. ಈ ವಿಷಯದಲ್ಲಿ ಮಾಂಡವ್ಯಃ- ಶ್ಲೋಕ।। ಮೃಗೇಲಗ್ನೇ ಸೌರಸ್ತ್ರಿಮಿಯುಗಗತ ಶ್ಶೀತಕಿರಣಾ। ಕುಜೇಯುಗ್ಮೇನಾರ್ಯಾಶ್ಶಶಧರಸುಶ್ಚಾಪಧರಗಃ।। ಗುರುರ್ದ್ಯೂತ್ಯೇಜ್ಯಾರ್ಕಾ ಪಭಿಮತಗತಾ ಚಾರವಶತಃ। ಪ್ರಸೂತೌಯಸ್ಯಾಸೌಭವತಿ ನರಪಶ್ಶಕ್ರಸದೃಶಃ ।।೨೯।। ಮತ್ತು ಜಯದೇವಃ- ।। ಶ್ಲೋಕ ।। ತನೌವಕ್ರಸ್ಥೇರ್ಕೌಝಷಮಿಥುನ ಕನ್ಯಾಹಯಗತೈಸ್ಚತುರ್ಭಿ ಶ್ಚಂದ್ರಾದ್ಯೈಃ ಪ್ರಥಿತಗುಣಕೀರ್ತ್ಯಾಸಹನರಃ ।।೩೦।। ಎಂದು ಹೇಳಲ್ಪಟ್ಟಿರುತ್ತೆ.

ಟಿಪ್ಪಣಿ ।। ನರಪಃಶಕ್ರಸದೃಶಃ ।। ಅಂದರೆ-ಇಂದ್ರತುಲ್ಯಪರಾಕ್ರಮವುಳ್ಳವನೆಂದು ತಿಳಿಯತಕ್ಕದ್ದು.

## ರಾಜಯೋಗತ್ರಯ ಮಾಹ

**ಮೂಲ।। ಹಯೇಸೇಂದೌಜೀವೇಮ್ಯಗಮುಖಗತೇ ಭೂಮಿತನಯೇ ಸ್ವತುಂಗಸ್ಥೌ ಲಗ್ನೇಭೃಗುಜಶಶಿಜಾವತ್ರನೃಪತೀ । ಸುತಸ್ಥೌವಕ್ರಾರ್ಕೀ ಗುರುಶಶಿಸಿತಾಶ್ಚಾಪಿಹಿಬುಕೇ ಬುಧೇ ಕನ್ಯಾಲಗ್ನೇಭವತಿಹಿ ನೃಪೋನ್ಯೋಪಿಗುಣವಾನ್ ।।೭।।**

ಅವತಾರಿಕೆ।। ಈ ಶ್ಲೋಕದಲ್ಲಿ ಮೂರು ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು।। ಹಯೇ-ಧನುಸ್ಸಿನಲ್ಲಿ, ಜೀವ-ಬೃಹಸ್ಪತಿಯು, ಸೇಂದೌ-ಚಂದ್ರ ಸಹಿತವಾಗಿದ್ದು, ಭೂಮಿತನಯೇ-ಕುಜನು, ಮೃಗಮುಖಗತೇ-ಮಕರದಲ್ಲಿದ್ದು, ಭೃಗುಜಶಶಿಜೌ-ಶುಕ್ರ, ಬುಧರು, ಸ್ವತುಂಗಸ್ಥೌ-ತಮ್ಮ ಉಚ್ಚಸ್ಥಾನಗತರಾಗಿದ್ದರೆ-೨, ರಾಜಯೋಗಗಳು ಉಂಟಾಗುವವು. ಅಂದರೆ-ಧನುಸ್ಸಿನಲ್ಲಿ ಗುರು, ಚಂದ್ರರು, ಮಕರದಲ್ಲಿ ಕುಜ, ಮೀನದಲ್ಲಿ ಶುಕ್ರನಿದ್ದು ಮೀನಲಗ್ನವಾದರೆ-೧ ಯೋಗ, ಧನುಸ್ಸಿನಲ್ಲಿ ಗುರು ಚಂದ್ರರು, ಮಕರದಲ್ಲಿ ಕುಜ, ಕನ್ಯಾಲಗ್ನವಾಗಿ ಲಗ್ನದಲ್ಲಿ ಬುಧನು ಉಚ್ಚದಲ್ಲಿದ್ದರೆ-೨ನೇ ಯೋಗ, ಈ ಎರಡು ಯೋಗದಲ್ಲಿ ಹುಟ್ಟಿದವರು, ನೃಪತೀ-ರಾಜರಾಗುವರು. ಈ ವಿಷಯದಲ್ಲಿ ।।ಶ್ಲೋಕ।। ಧನುಷಿ ಸವಿಧೌ ಜೀವೇನಕ್ರಾದ್ಯಭಾಗಗತೇ ಕುಜೇಝಷಭತನುಗೇ ಕಾವ್ಯೇಜಾತೋ ಭವೇತ್ಪೃಥಿವೀಪತಿಃ । ತನುಗಶಶಿಜೇಸ್ವೋಚ್ಚೇ ಪೂರ್ವೋಕ್ತಖೇಚರಸಂಸ್ಥಿತೌ ಭುವಿತಿನಿಯಮಾಜ್ಜಾತೋನ್ಯೂನಾಂ ಗುಣೇನಾಂಪ್ರಿಯಃ ।।೩೧।। ಮತ್ತು ಧುಂಡಿರಾಜಃ।। ತುಂಗಸ್ಥಿತೌ ಶುಕ್ರಬುಧೌ ವಿಲಗ್ನೇನಕ್ರೇಚ ವಕ್ರೋಧನುಷೀಜ್ಯ ಚಂದ್ರೌ। ಪ್ರಸೂತಿಕಾಲೇ ಕಿಲತೌಭವೇತಾ ಮಾಖಂಡಲೌ ಭೂಮಿತಲೇಪಿ ಸಂಸೌ ।।೩೨।। ವಕ್ರಾರ್ಕೀ-ಕುಜ ಶನಿಗಳು, ಸುತಸ್ಥೌ-ಪಂಚಮದಲ್ಲು, ಗುರು ಶಶಿಸಿತಾಃ-ಗುರು, ಚಂದ್ರ, ಶುಕ್ರರು,

ಹಿಬುಕೇ-ಚತುರ್ಥದಲ್ಲೂ, ಬುಧೇ-ಬುಧನು, ಕನ್ಯಾಲಗ್ನೇ-ಜನ್ಮಲಗ್ನವಾದ ಕನ್ಯೆಯಲ್ಲಿರುವಾಗ ಹುಟ್ಟಿದವನು, ಅನ್ಯೋಽಪಿ ಕ್ಷತ್ರಿಯ, ವ್ಯತಿರಿಕ್ತವಂಶದವನಾದರೂ, ಗುಣವಾನ್-ಸದ್ಗುಣವಂತನಾದ, ನೃಪತಿಃ- ರಾಜ್ಯಾಧಿಪತಿಯು, ಭವತಿ-ಆಗುತ್ತಾನೆ. ಬುಧನಿಂದೊಡಗೂಡಿದ ಕನ್ಯಾಲಗ್ನವಾಗಿ, ಮಕರದಲ್ಲಿ ಕುಜ, ಶನಿಗಳು, ಧನುಸ್ಸಿನಲ್ಲಿ ಗುರು, ಚಂದ್ರರು, ಈ ವಿಧವಾದ ಗ್ರಹಯೋಗವಿದ್ದರೆ, ಅನ್ಯಕುಲದವನಾದರೂ, ಗುಣವಂತನಾದ ರಾಜನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಜಯದೇವಃ ॥ ಸುತಸ್ಥಿತೌ ಕುಜಾರ್ಕಜೌ ಸುಖೇಂದುಜೀವಭಾರ್ಗವಾಃ । ಯದೋಚ್ಚರಾಶಿಗೋ ಬುಧಸ್ತನೌ ಯದಾಭವೇನ್ನೃಪಃ ॥೩೩॥ ಮತ್ತು ಧುಂಡಿರಾಜಃ ॥ ಸ್ವೋಚ್ಚೇ ಮೂರ್ತಿಗತೇ ಮೃತಾಂಶು ತನಯೇ ನಕ್ರೇಸುವಕ್ರೇಶನೌ । ಚಾಪೇವಾಗಧಿ ಪೇಂದುಭಾರ್ಗವಯುತೇ ಸ್ಯಾಜ್ಜನ್ಮಭೂಮಿಪತೇಃ। ಸ್ವಸ್ಥಾನೇನುಯಸ್ಯ ಭೂಮಿತುರಗೋ ಮತ್ತೇಭಮಾಲಾ ಮಿಲತ್ಸೇನಾಂದೋಳಿಕ ಭೂಮೀಗೋಲಕಲನಂ ದಿಗ್ದಂತಿನಃ ಕುರ್ವತೇ ॥೩೪॥ ಎಂದು ಈ ಯೋಗಕ್ಕೆ ಅತಿಶಯವಾದ ಫಲವನ್ನು ಹೇಳಿರುವರು.

## ಮೀನಲಗ್ನ ರಾಜಯೋಗ

ಮೂಲ॥ ಝಷೇಸೇಂದೌಲಗ್ನೇಘಟಮೃಗಮೃಗೇಂದ್ರೇಷು ಸಹಿತ್ಯೈರ್ಯಮಾರಾರ್ಕ್ಯೆ ರ್ಭೂಭೃತ್ಸಖಲು ಮನುಜಃಶಾಸ್ತಿವಸುಧಾಮ್ । ಅಜೇಸಾರೇ ಮೂರ್ತ್ತೌ ಶಶಿಗೃಹಗತೇ ಚಾಮರಗುರೌಸುರೇಜ್ಯೇವಾಲಗ್ನೇಧರಣಿ ಪತಿ ರನ್ಯೋಽಪಿಗುಣವಾನ್ ॥೮॥

ಅವತಾರಿಕೆ॥ ಈ ಪದ್ಯದಲ್ಲಿ ಮೂರು ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ಸೇಂದೌ-ಚಂದ್ರಸಹಿತವಾದ, ಝಷೇ-ಮೀನರಾಶಿಯು ಜನ್ಮಲಗ್ನವಾಗಿ, ಘಟ ಮೃಗ ಮೃಗೇಂದ್ರೇಷು-ಕುಂಭ ಮಕರ ಸಿಂಹರಾಶಿಗಳು, ಯಮ್ಯಾರಾರ್ಕ್ಯೈ- ಶನಿ ಕುಜ ಸೂರ್ಯರಿಂದ, ಸಹಿತ್ಯೈ-ಕ್ರಮವಾಗಿ, ಕುಂಭದಲ್ಲಿ ಶನಿ-ಮಕರದಲ್ಲಿ ಕುಜ, ಸಿಂಹದಲ್ಲಿ ರವಿ, ಈ ಪ್ರಕಾರ ಗ್ರಹಗಳಿರುವ ಕಾಲದಲ್ಲಿ ಹುಟ್ಟಿದ, ಮನುಜಃ-ಪುರುಷನು, ವಸುಧಾಂ-ಭೂಮಿಯನ್ನು, ಶಾಸ್ತಿ-ಪರಿಪಾಲಿಸುವನು. ಇದು ಮೀನಲಗ್ನ ರಾಜಯೋಗ । ಈ ವಿಷಯಕ್ಕೆ ಧುಂಡಿರಾಜಃ ॥ ಶ್ಲೋಕ॥ ದಿನಾಧಿರಾಜೇ ಮೃಗರಾಜಸಂಸ್ಥೇ ನಕ್ರೇಸವಕ್ರೇ ಕುಲಶೇರ್ಕಸೂನೌ ॥ ವಾರೀನಲಗ್ನೇ ಶಶಿನಾಸಮೇತೇ ಮಹೀಪತೇರ್ಜನ್ಮ ಮಹೌಜಸಸ್ಸ್ಯಾತ್ ॥೩೫॥ ಮತ್ತು ಜಯದೇವಃ ॥ ಸಮೀನಚಂದ್ರಮಾಸ್ತನೌ ಘಟೇಶನಿ ರ್ಮೃಗೇಕುಜಃ । ಯದಾಹರೌ ಪ್ರಭಾಕರ ಸ್ತದಾಚಲಾಪತಿನೃಪಃ ॥೩೬॥ ಇದು ನಾಗಸ್ವರೂಪಣೀ ವೃತ್ತ ॥ ಸಾರೇ-ಕುಜನಿಂದೊಡಗೂಡಿದ,

ಅಜೇ-ಮೇಷರಾಶಿಯು, ಮೂರ್ತೌ-ಲಗ್ನವಾಗಿ, ಅಮರಗುರೌ-ಬೃಹಸ್ಪತಿ, ಶಶಿಗೃಹಗತೇ-ಕರ್ಕಾಟಕದಲ್ಲಿರುವಾಗ ಹುಟ್ಟಿದವನು, ಅನ್ಯೋಪಿ-ಅನ್ಯವಂಶೋದ್ಭವನಾದರೂ, ಗುಣವಾನ್-ಸದ್ಗುಣವಂತನಾದ, ಧರಣಿಪತಿಃ- ಭೂಪತಿಯಾಗುವನು. ಅಥವಾ ಸುರೇಜ್ಯೇ-ಬೃಹಸ್ಪತಿ ಕರ್ಕಾಟಕದಲ್ಲಿದ್ದು, ಲಗ್ನೇ-ಜನ್ಮಲಗ್ನವಾದರೂ ಈ ಕುಜನು ಮೇಷದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಭೂಪಾಲನಾಗುವನು. ಈ ಶ್ಲೋಕದ ಉತ್ತರಾರ್ಧದಲ್ಲಿ ಮೇಷಲಗ್ನ ರಾಜಯೋಗ ೧, ಕುಳಲಗ್ನ ರಾಜಯೋಗ ೧, ಅಂತು ೨ ಯೋಗಗಳು ಹೇಳಲ್ಪಟ್ಟಿದೆ.

ಈ ಮೇಷಲಗ್ನಜಾತಕ ರಾಜಯೋಗಕ್ಕೆ ಸಮ್ಮತಿ ||ಶ್ಲೋಕ|| ಜ. ದೇ. ಸೌರಃಕ್ರಿಯೇ ಲಗ್ನಸಮಾಶ್ರಿತಶ್ಚೇತ್ಕರ್ಕೇ ಗುರುರ್ಭೂಮಿಪತಿರ್ಗುಣಾಢ್ಯಃ । ಮೇಷಾಶ್ರಿತೇ ಕ್ಷ್ಮಾತ್ರನಯೇ ರಿಪುಸ್ಥೇ ಕೀಟರ್ಕ್ಷಗೇ ದೇವಗುರೌ ನೃತಸ್ಸ್ಯಾತ್ || ಮತ್ತು ಇದೇ ವಿಷಯಕ್ಕೆ ||ಶ್ಲೋಕ|| ಮಹೀಸುತೇ ಮೇಷಗತೇ ತನುಸ್ಥೇ ಬೃಹಸ್ಪತೌವಾ ತನುಗೆಸ್ವತುಂಗೇ ಯೋಗದ್ವಯೇ ಸ್ಮಿನ್ನೃಪತೀ ಭವೇತಾಂ ಜಿತಾರಿ ಪಕ್ಷೌನ್ನಮಿತಿದಕ್ಷೌ ||೩೮||

## ಕರ್ಕಲಗ್ನ ರಾಜಯೋಗಾಃ

ಮೂಲ|| ಕರ್ಕಿಣಿಲಗ್ನೇತತ್ಸ್ಥೇ ಜೀವೇ ಚಂದ್ರಸಿತಜ್ಞ್ಯೈಃ- ರಾಯಪ್ರಾಪ್ತ್ಯೈಃ।
ಮೇಷಗತೇರ್ಕೇ ಜಾತಂ ವಿಂದ್ಯಾದ್ವಿಕ್ರಮಯುಕ್ತಂ ಪೃಥ್ವೀನಾಥಮ್ ||೯||

ಅವತಾರಿಕೆ|| ಕರ್ಕಾಟಕಲಗ್ನ ರಾಜಯೋಗಃ ||

ಟೀಕು|| ಕರ್ಕಿಣಿ-ಕರ್ಕಾಟಕವು, ಲಗ್ನೇ-ಲಗ್ನವಾಗಿ, ಜೀವೇ-ಬೃಹಸ್ಪತಿಯು ತತ್ಸ್ಥೇ- ಆ ಕರ್ಕಾಟಕದಲ್ಲಿದ್ದು, ಚಂದ್ರಸಿತಜ್ಞ್ಯೈ- ಚಂದ್ರ ಶುಕ್ರ ಬುಧರು, ಆಯಪ್ರಾಪ್ತ್ಯೈ-ಏಕಾದಶ ಸ್ಥಾನವಾದ ವೃಷಭದಲ್ಲಿದ್ದು, ಅರ್ಕೇ-ಸೂರ್ಯನು, ಮೇಷಗತೇ-ಮೇಷರಾಶಿಯಲ್ಲಿದ್ದರೆ, ಆ ಕಾಲದಲ್ಲಿ ಜಾತಃ-ಹುಟ್ಟಿದವನು, ವಿಕ್ರಮ ಯುಕ್ತಮ್-ಪರಾಕ್ರಮವುಳ್ಳ, ಪೃಥ್ವೀನಾಥಮ್-ಭೂಪತಿಯಾಗುವನೆಂದು, ವಿಂದ್ಯಾತ್-ತಿಳಿಯತಕ್ಕದ್ದು. ಈ ವಿಷಯಕ್ಕೆ || ಧುಂಡಿರಾಜಃ ||ಶ್ಲೋಕ|| ವಾಚಸ್ಪತಿಃ ಸ್ವೋಚ್ಚಗತೋ ವಿಲಗ್ನೇ ಮೇಷೇದಿನೇಶಃ ಶಶಿಶುಕ್ರಸೌಮ್ಯಾಃ । ಲಾಭಾಲಯಸ್ಥಾಃ ಕಿಲಭೂಮಿಪಾಲಂ ತಂಭೂತಲಸ್ಯಾಭರಣಂ ಗೃಣಂತಿ ||೩೯|| ತಾ|| ಜನ್ಮಲಗ್ನ ಕರ್ಕಾಟಕವಾಗಿ ಅಲ್ಲಿ ಬೃಹಸ್ಪತಿಯು, ಮೇಷದಲ್ಲಿ ಸೂರ್ಯ, ವೃಷಭದಲ್ಲಿ ಚಂದ್ರ ಬುಧ ಶುಕ್ರರು, ಈ ರೀತಿ ಗ್ರಹಗಳಿರುವ ಕಾಲದಲ್ಲಿ ಹುಟ್ಟಿದವನು ಭೂಪತಿಯಾಗುವನು. ||೯||

## ಮಕರಲಗ್ನ ರಾಜಯೋಗಃ

ಮೂಲ॥ ಮೃಗಮುಖೇರ್ಕತನಯಸ್ತನುಸಂಸ್ಥಃ ಕ್ರಿಯಕುಲೀರಹರಯೋಧಿಪಯುಕ್ತಾ।
ಮಿಥುನತೌಳಿಸಹಿತೌಬುಧಶುಕ್ರೌಯದಿತದಾ ಪೃಥುಯಶಾಃ ಪೃಥಿವೀಶಃ ॥೧೦॥

ಅವತಾರಿಕೆ॥ ಮಕರಲಗ್ನಜಾತಕನಿಗೆ ರಾಜಯೋಗವು.

ಟೀಕು॥ ಮೃಗಮುಖೇ-ಮಕರರಾಶಿಯಲ್ಲಿ, ಅರ್ಕತನಯೇ-ಶನಿಯು, ತನುಸಂಸ್ಥೇಮಕರವೇ ಜನ್ಮಲಗ್ನವಾಗಿದ್ದು ಕ್ರಿಯ, ಕುಲೀರಹರಯಃ-ಮೇಷ, ಕರ್ಕಟ, ಸಿಂಹರಾಶಿಗಳು, ಅಧಿಪಯುಕ್ತಾ-ಸ್ವಾಮಿಯುಕ್ತವಾದರೆ, ಅಂದರೆ ಕುಜನು ಮೇಷರಾಶಿಯುಲ್ಲು, ಕಟಕದಲ್ಲಿ ಚಂದ್ರನು, ಸಿಂಹದಲ್ಲಿ ಸೂರ್ಯನು, ಮಿಥುನತೌಳಿಸಹಿತೌಯದಿ-ಮಿಥುನ ತುಲಾರಾಶಿಗಳು, ಸ್ವಸ್ವಾಮಿಯುಕ್ತವಾದರೆ (ಮಿಥುನದಲ್ಲಿ ಬುಧ, ತುಲೆಯಲ್ಲಿ ಶುಕ್ರ) ಈ ಪ್ರಕಾರವಿದ್ದಕಾಲದಲ್ಲಿ ಹುಟ್ಟಿದವನು, ಪೃಥುಯಶಾಃ-ವಿಸ್ತಾರವಾದ ಕೀರ್ತಿಯುಳ್ಳ, ಪೃಥಿವೀಪತಿಃ-ಭೂಪತಿಯಾಗುವನು. ಈ ವಿಷಯದಲ್ಲಿ ॥ಧುಂಡಿರಾಜಃ॥ ಶ್ಲೋಕ॥ ಮಂದೋಯದಾನಕ್ರ ವಿಲಗ್ನವರ್ತೀ ಮೃಗೇಂದ್ರಯುಗ್ಮಾಜತುಲಾಕುಲೀರಾಃ । ಸ್ವಸ್ವಾಮಿಯುಕ್ತಾ ಜನಯಂತಿ ನಾಥಂ ಪಾಥೋನಿಧಿಪ್ರಾಂತ ಮಹೀತಲಸ್ಯ ॥೪೦॥

## ಕನ್ಯಾಲಗ್ನ ರಾಜಯೋಗಾಃ

ಮೂಲ॥ ಸ್ವೋಚ್ಚಸಂಸ್ಥೇ ಬುಧೇಲಗ್ನೇಭೃಗುವೋಷೂರಣಾಶ್ರಿತೇ ।
ಸಜೀವೇಸ್ತೇನಿಶಾನಾಥೇ ರಾಜಾಮಂದಾರಯೋಸ್ಸುತೇ ॥೧೧॥

ಅವತಾರಿಕೆ॥ ಕನ್ಯಾಲಗ್ನಕ್ಕೆ ರಾಜಯೋಗವು ಹೇಳಲ್ಪಡುತ್ತೆ.

ಟೀಕು॥ ಸ್ವೋಚ್ಚ ಸಂಸ್ಥೆ-ತನ್ನ ಉಚ್ಚಸ್ಥಾನವಾದ, ಕನ್ಯೆಯನ್ನು ಹೊಂದಿದ, ಬುಧೇ-ಬುಧನು, ಲಗ್ನೇ-ಆ ಕನ್ಯಾಲಗ್ನದಲ್ಲಿದ್ದು, ಭೃಗೌ-ಶುಕ್ರನು, ಮೇಷೂರಣಾಶ್ರಿತೇ-ಕನ್ಯಾಲಗ್ನಕ್ಕೆ ದಶಮಸ್ಥಾನವಾದ ಮಿಥುನದಲ್ಲಿದ್ದರೆ, ಸಜೀವೆ-ಬೃಹಸ್ಪತಿಯು ಕೂಡಿದ. ನಿಶಾನಾಥೇ-ಚಂದ್ರನು, ಅಸ್ತೇ-ಸಪ್ತಮರಾಶಿಯಾದ ಮೀನದಲ್ಲಿದ್ದರೆ, ಮಂದಾರಯೋಃ-ಶನಿಕುಜರು, ಸುತೇ-ಕನ್ಯಾಲಗ್ನಕ್ಕೆ ಪಂಚಮಸ್ಥಾನವಾದ ಮಕರದಲ್ಲಿದ್ದರೆ, ಈ ಯೋಗದಲ್ಲಿ ಹುಟ್ಟಿದವನು ರಾಜಾ ರಾಜ್ಯಾಧಿಪತಿಯಾಗುವನು, ಈ ವಿಷಯದಲ್ಲಿ ॥ಜಯದೇವಃ॥ಶ್ಲೋಕ॥ ಸ್ವೋಚ್ಚ ಸ್ಥಿತಜ್ಞೋಯದಿಲಗ್ನಸಂಸ್ಥೋದ್ಯೂನೇ ಶಶೀಜ್ಯೌ ದಶಮೇಭೃಗುಶ್ಚೇತ್। ಪುತ್ರಸ್ಥಿತೌ ಭೂತನಯಾರ್ಕಪುತ್ರೌ

ರಸಾಪತಿಸ್ಯಾದಿಹ ನಿಶ್ಚಯೇನ ॥೪೧॥ ಮತ್ತು ಈ ಯೋಗಕ್ಕೆ ಧುಂಡೀರಾಜರು ವಿಶೇಷಫಲವನ್ನು ಹೇಳಿರುವರು. ಶ್ಲೋ॥ ದ್ವಂದ್ವೇ ದೈತ್ಯಗುರೌ ನಿಶಾಕರ ಸುತೇ ಮೂರ್ತೌಸ್ವತುಂಗೇಸ್ಥಿತೇನಕ್ರೇವಕ್ರ ಶನೈಶ್ಚರೇಚ ಶಫರೇ ಚಂದಾಮರೇಚ್ಯೌಸ್ಥಿತೌ । ಯೋಗೋಯಂ ಪ್ರಭವೇ ತ್ಪ್ರಸೂತಿ ಸಮಯೇ ಯಸ್ಯಾವನೀಶೋಮಹಾನ್ವೈರಿವ್ರಾತ - ಮಹೋದ್ಧತೇಭದಳನೇ ಪಂಚಾನನಃ ಕೇವಲಮ್ ॥೪೨॥ ಈ ಯೋಗದಲ್ಲಿ ಹುಟ್ಟಿದವನು ಮಹಾರಾಜನಾಗಿ ವೈರಿಸಮೂಹವೆಂಬುವ ಆನೆಯನ್ನು ನಿರ್ಲಕ್ಷ್ಯವಾಗಿ ಜೈಸುವನು, ಇದು ಉಪಮಾಲಂಕಾರವಾಗಿರುತ್ತೆ.

## ರಾಜಯೋಗ ಫಲವಿಚಾರಃ

**ಮೂಲ॥ ಅಪಿಖಲಕುಲಜಾತಾ ಮಾನವಾರಾಜ್ಯಭಾಜಃ । ಕಿಮುತನೃಪಕುಲೋತ್ಥಾ ಪ್ರೋಕ್ತಭೂಪಾಲಯೋಗೈಃ ॥ ನೃಪತಿಕುಲಸಮುತ್ಥಾಃ ಪಾರ್ಥಿವಾವಕ್ಷ್ಯ ಮಾಣೈ । ರ್ಭವತಿ ನೃಪತಿತುಲ್ಯಸ್ತೇಷ್ವಭೂಪಾಲ ಪುತ್ರಃ ॥೧೨॥**

ಅವತಾರಿಕೆ॥ ಇದುವರಿಗೆ ಹೇಳಲ್ಪಟ್ಟ ರಾಜಯೋಗದಲ್ಲಿ ಹುಟ್ಟಿದವರು ಅನ್ಯವಂಶಸ್ಥರಾದರೂ ರಾಜ್ಯಭಾರಮಾಡುವ ದೊರೆಗಳಾಗುವರು. ಇನ್ನು ಮುಂದೆ ಹೇಳಲ್ಪಡುವ ರಾಜಯೋಗಗಳಲ್ಲಿ ಹುಟ್ಟಿದವರು ರಾಜವಂಶದಲ್ಲಿ ಹುಟ್ಟಿದವರಾದರೆ ಮಾತ್ರ ರಾಜ್ಯಾಧಿಪತಿಗಳಾಗುವರು. ಅನ್ಯವಂಶಸ್ಥರಾದರೆ ರಾಜರಾಗುವುದಿಲ್ಲ. ಆದರೆ ರಾಜ ಸಮಾನವಾದ ಗುಣಗಳಿಂದಲೂ, ಸೌಖ್ಯದಿಂದಲೂ, ರಾಜರುಗಳಲ್ಲಿ ಅಧಿಕಾರ ಮಾಡುವವರಾಗುವರು. ಈ ವಿಷಯುವನ್ನು ಈ ಶ್ಲೋಕದಿಂದ ವರಾಹಮಿಹಿರಾಚಾರ್ಯರು ಸ್ಪಷ್ಟಪಡಿಸುತ್ತಾರೆ.

ಪ್ರೋಕ್ತ ಭೂಪಾಲಯೋಗೈಃ-ಈ ಹೇಳಲ್ಪಟ್ಟ ರಾಜಯೋಗಗಳಲ್ಲಿ ಖಲಕುಲಜಾತಾ ಅಪಿ-ನೀಚವಂಶದಲ್ಲಿ ಹುಟ್ಟಿದವರಾದರೂ, ಮಾನವಾಃ-ಪುರುಷರು, ರಾಜ್ಯಭಾಜಃ-ರಾಜ್ಯಾಧಿಪತಿಗಳಾಗುವರು. ನೃಪಕುಲೋತ್ಥಾಃ-ರಾಜವಂಶದಲ್ಲಿ ಹುಟ್ಟಿದವರು, ಕಿಮುತ-ರಾಜರಾಗುತ್ತಾರೆಂದು ಹೇಳುವುದೇಕೆ, ಅಂದರೆ ನೀಚ ವಂಶದಲ್ಲಿ ಹುಟ್ಟಿದವರು ರಾಜ್ಯಾಧಿಕಾರಮಾಡುವಂಥಾ ಯೋಗದಲ್ಲಿ ರಾಜಪುತ್ರರಿಗೆ ರಾಜರಾಗುತ್ತಾರೆಂದು ಹೇಳುವುದು ಅನಾವಶ್ಯಕ, ಅವರು ರಾಜ್ಯಾಧಿಕಾರವನ್ನೇ ಮಾಡುತ್ತಾರೆ. ವಕ್ಷ್ಯಮಾಣೈಃ-ಇನ್ನು ಮೇಲೆ ಹೇಳಲ್ಪಡತಕ್ಕ ರಾಜಯೋಗಗಳಲ್ಲಿ, ನೃಪತಿಕುಲ ಸಮುತ್ಥಾಃ-ರಾಜವಂಶದಲ್ಲಿ ಹುಟ್ಟಿದವರು ಪಾರ್ಥಿವಾಃ- ರಾಜರಾಗುತ್ತಾರೆ, ತೇಷು-ಆ

ರಾಜಯೋಗಗಳಲ್ಲಿ, ಅಭೂಪಾಲ ಪುತ್ರಃ- ಭೂಪಾಲನಲ್ಲದವನಿಗೆ ಪುತ್ರನು ಹುಟ್ಟಿದರೆ, ನೃಪತಿತುಲ್ಯ ಃ- ಐಶ್ವರ್ಯಾದಿಗಳಿಂದ ರಾಜ ಸಮಾನನಾಗಿ, ಭವತಿ- ಆಗುವನು. ಈ ವಿಷಯದಲ್ಲಿ ಧುಂಡಿರಾಜಃ- ||ಶ್ಲೋಕ|| ಇತಿ ನಿಗದಿತಯೋಗೈಃ ನೀಚವಂಶೋದ್ಭವೋಪಿಸಭವತಿ ಪತಿರುರ್ವ್ಯಾಃಕಿಂಪುನಾ ರಾಜಸೂನುಃ । ನರಪತಿ ಕುಲಜಾತೋ ವಕ್ಷ್ಯಮಾಣೈಶ್ಚ ಯೋಗೈರ್ಭವತಿ ನೃಪತಿರೇವಂ ತತ್ಸಮೋನ್ಯಸ್ಯಸೂನುಃ ||೪೩|| ಮತ್ತು ಇದೇ ಅರ್ಥಕ್ಕೆ ಜಯದೇವಃ ||ಶ್ಲೋಕ|| ಅಪಿಹೀನಕುಲೇಜಾತಾಃ ಪ್ರೋಕ್ತಭೂಪಾಲ ಯೋಗಕೈ। ಭವಂತಿಭೂಮಿ ಪತಯಃ ಕಥಂನೋಭೂಪವಂಶಜಾಃ ||೪೪||

ಇದುವರಿಗೂ ಹೇಳಲ್ಪಟ್ಟ ರಾಜಯೋಗಗಳಲ್ಲಿ ಉಚ್ಚರಾಶಿಯಲ್ಲಿರಬೇಕಾದ ಗ್ರಹಗಳು ತಮ್ಮ ತಮ್ಮ ಉಚ್ಚಧ್ರುವಗಳಲ್ಲಿ ಇರಬೇಕೆಂತಲೂ, ಮೂಲತ್ರಿಕೋಣ-ಗಳಲ್ಲಿರಬೇಕಾದ ಗ್ರಹಗಳು ಮೂಲತ್ರಿಕೋಣ ಭಾಗಗಳೊಳಗೆ ಇರಬೇಕೆಂದೂ ಸಮನ್ವಯ ಮಾಡಿಕೊಳ್ಳಬೇಕು ||೧೨||

## ರಾಜಯೋಗ ರಾಜಸಮಾನ ಯೋಗಾಃ

ಮೂಲ|| ಸ್ವೋಚ್ಚಸ್ವತ್ರಿಕೋಣಗೈರ್ಬಲಸ್ಥೈಸ್ತ್ರ್ಯಾದ್ಯೈರ್ಭೂಪತಿ ವಂಶಜಾ ನರೇಂದ್ರಾಃ । ಪಂಚಾದಿಭಿರನ್ಯ ವಂಶಜಾತಾ ಹೀನೈರ್ವಿತ್ತಯುತಾನ ಭೂಮಿಪಾಲಾಃ ||೧೩||

ಟೀಕು|| ಸ್ವೋಚ್ಚ ಸ್ವತ್ರಿಕೋಣಗೈಃ- ತಮ್ಮ ತಮ್ಮ ಉಚ್ಚ ಮೂಲ ತ್ರಿಕೋಣಗಳನ್ನು ಹೊಂದಿರುವ, ಬಲಸ್ಥೈಃ-ಸ್ಥಾನಾದಿಗಾದಿ ಬಲಯುಕ್ತರಾದ ಸ್ತ್ರ್ಯಾದ್ಯೈಃ-ಮೂರು, ನಾಲ್ಕು ಗ್ರಹಗಳಿಂದ, ಭೂಮಿಪತಿ ವಂಶಜಾಃ-ರಾಜವಂಶದಲ್ಲಿ ಹುಟ್ಟಿದವರು. ನರೇಂದ್ರಾಃ-ರಾಜರುಗಳಾಗುತ್ತಾರೆ. ಪಂಚಾದಿಭಿಃ-ಉಚ್ಚಮೂಲ ತ್ರಿಕೋಣಸ್ಥಾನಗಳಲ್ಲಿ ಬಲಯುಕ್ತರಾದ ೫-೬ ಗ್ರಹಗಳಿಂದ, ಅನ್ಯ ವಂಶಜಾತಾಃ-ಭೂಪತಿ ವಂಶವ್ಯತಿರಿಕ್ತವಾದ ಅನ್ಯಕುಲದಲ್ಲಿ ಹುಟ್ಟಿದವರು ರಾಜ್ಯಾಧಿಪತಿಗಳಾಗುವರು. ಹೀನೈರ್ವಿತ್ತ ಯುತಾನಭೂಮಿಪಾಲಾಃ- ಅಂದರೆ ಮೂರು ಗ್ರಹಗಳು ಸ್ವೋಚ್ಚ ಮೂಲ ತ್ರಿಕೋಣಗಳಲ್ಲಿ ಸ್ಥಾನಾದಿ ಬಲಹೀನರಾಗಿ ೧-೨ ಗ್ರಹಗಳು ಸ್ಥಾನಾದಿ ಸ್ವೋಚ್ಚ ಮೂಲ ತ್ರಿಕೋಣಗಳಲ್ಲಿ ಬಲಯುಕ್ತರಾಗಿದ್ದರೆ, ಕ್ಷತ್ರಿಯ ವಂಶಜರು (ಹೆಚ್ಚಾದ) ಅಧಿಕವಾದ ಧನವುಳ್ಳವರಾಗುವರು. ಆದರೆ ರಾಜ್ಯಾಧಿಪತಿಗಳಾಗುವುದಿಲ್ಲ. ೫-೬ ಗ್ರಹಗಳು ಸ್ವೋಚ್ಚ ಮೂಲ ತ್ರಿಕೋಣಸ್ಥಾನಗಳಲ್ಲಿ ಬಲಹೀನರಾಗಿದ್ದರೂ ೩-೪ ಗ್ರಹಗಳು ಸ್ವೋಚ್ಚ ಮೂಲ ತ್ರಿಕೋಣಗಳಲ್ಲಿ ಬಲಯುಕ್ತರಾಗಿದ್ದರೂ ಕ್ಷತ್ರಿಯ ವ್ಯತಿರಿಕ್ತವಂಶೋದ್ಭವರು, ಅಧಿಕ ಧನವಂತರಾಗುವರು. ಆದರೆ

ರಾಜ್ಯಾಧಿಪತಿಗಳಾಗಲಾರರು. ಪೂರ್ವೋಕ್ತ ಸಂಖ್ಯಾತ ಗ್ರಹಗಳಲ್ಲಿ ಕೆಲವರು ಉಚ್ಚಸ್ಥಾನಗಳಲ್ಲೂ ಕೆಲವರು ಮೂಲತ್ರಿಕೋಣಸ್ಥಾನಗಳಲ್ಲೂ ಇದ್ದರೆ, ಈ ಮೇಲೆ ಹೇಳಲ್ಪಟ್ಟ ಯೋಗಕ್ಕಿಂತ ನ್ಯೂನವಾಗಿ ಯಥೋಕ್ತ ಫಲಪ್ರದರಾಗುವರು.

ಮೂಲ|| ಲೇಖಾಸ್ಥೇರ್ಕೇಜೇಂದೌಲಗ್ನೇ ಭೌಮೇಸ್ವೋಚ್ಚೇಕುಂಭೇಮಂದೇ|
ಚಾಪಪ್ರಾಪ್ತೇ ಜೀವೇರಾಜ್ಞಃ ಪುತ್ರಂವಿದ್ಯಾತ್ಪೃಥ್ವೀನಾಥಂ ||೧೪||

ಟೀಕು|| *ಲೇಖಾಸ್ಥೇ-ಉದಯಸುತ್ತಿರುವ, ಅರ್ಕೇ-ಸೂರ್ಯನು, ಅಜೇ-ಮೇಷದಲ್ಲೂ, ಇಂದೌ-ಚಂದ್ರನು, ಲಗ್ನೇ-ಮೇಷದಲ್ಲೂ, ಕುಜೇ-ಅಂಗಾರಕನು, ಸ್ವೋಚ್ಚೇ-ತನ್ನ ಉಚ್ಚಸ್ಥಾನವಾದ ಮಕರದಲ್ಲೂ, ಮಂದೇ-ಶನಿಯು, ಕುಂಭೇ-ಕುಂಭದಲ್ಲೂ, ಜೀವೇ-ಗುರುವು, ಚಾಪಪ್ರಾಪ್ತೇ-ಧನುಸ್ಸಿನಲ್ಲೂ, ಇರುವಾಗ ಹುಟ್ಟಿದ, ರಾಜ್ಞಃಪುತ್ರಂ-ರಾಜಕುಮಾರನು, ಭೂಮೇರ್ನಾಥಂ-ಪೃಥ್ವೀಪತಿಯೆಂದು, ವಿಂದ್ಯಾತ್-ತಿಳಿಯತಕ್ಕದ್ದು. ಈ ಯೋಗದಲ್ಲಿ ಅನ್ಯನು ಹುಟ್ಟಿದರೆ, ಧನವಂತನು ಮತ್ತು ರಾಜಸಮಾನನಾಗುವನು, ಈ ವಿಷಯದಲ್ಲಿ ಜಯದೇವಃ- ಶ್ಲೋಕ|| ಅರ್ಧೋದಿತೇರ್ಕೇಬ್ಜಯುತೇಜಲಗ್ನೇ ಸ್ವೋಚ್ಚೇ ಕುಜೇಕುಂಭಗತೇ-ರ್ಕಸೂನೌ | ಧನುರ್ಧರೇ ದೇವಗುರೌ ನೃಪಸ್ಯಸುತೋನರೇ ಶೋನ್ಯಸುತೋ ಧನಾಢ್ಯಃ ||೪೫|| ಅನ್ಯನು ಧನವಂತನಾಗುವನು.

ಮೂಲ|| ಸ್ವರ್ಕ್ಷೇಶುಕ್ರೇಪಾತಾಳಸ್ಥೇ ಧರ್ಮಸ್ಥಾನಂ ಪ್ರಾಪ್ತೇಚಂದ್ರೇ |
ದುಶ್ಚಿಕ್ಯಾಂಗಪ್ರಾಪ್ತಿಪ್ರಾಪ್ತ್ಯೈಃ ಶೇಷೈರ್ಜಾತಃ ಸ್ವಾಮೀಭೂಮೇ ||೧೫||

ಅವತಾರಿಕೆ|| ವೃಷಭ ತುಲಾರಾಶಿಗಳಲ್ಲಿ ಶುಕ್ರನು ಚತುರ್ಥಸ್ಥಾನಗತನಾದರೆ ರಾಜಯೋಗವು.

ಟೀಕು|| ಸ್ವರ್ಕ್ಷೇ-ಸ್ವಕ್ಷೇತ್ರಗಳಾದ ವೃಷಭ, ತುಲೆಗಳಲ್ಲಿ ಯಾವುದಾದರೊಂದು ರಾಶಿಯಲ್ಲಿ ಶುಕ್ರನಿದ್ದು, ಪಾತಾಳಸ್ಥೇ-ಚತುರ್ಥಭಾವವಾಗಿದ್ದು, ಚಂದ್ರನು, ಧರ್ಮಸ್ಥಾನಂ-ನವಮಸ್ಥಾನವನ್ನು, ಪ್ರಾಪ್ತೇ-ಹೊಂದಿ, ದುಶ್ಚಿಕ್ಯಾಂಗಪ್ರಾಪ್ತಿ ಪ್ರಾಪ್ತ್ಯೈ-ತೃತೀಯ ಲಗ್ನೈಕಾದಶವನ್ನು, ಶೇಷ್ಯೆ-ಉಳಿದ ರವಿ, ಕುಜ, ಬುಧ, ಗುರು, ಶನಿಗಳು, ೩-೧-೧೧ ರಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದವನು, ಭೂಮೇಃ- ಪೃಥ್ವಿಗೇ, ಸ್ವಾಮೀ-ರಾಜನಾಗುವನು, ೧ನೇ ಉದಾಹರಣೆ-ಕುಂಭಲಗ್ನಜಾತಕವಾಗಿ, ವೃಷಭದಲ್ಲಿ

* ಲೇಖಾಸ್ಥೇ-ಯಾವ ಪ್ರದೇಶವು ಆಕಾಶ-ಭೂಮಿ ಏಕಾಕಾರವಾಗಿರುವುದೋ ಆ ಕಾಲ ವಾಚ್ಯಶಬ್ದಕ್ಕೆ (ಲೇಖಾ) ಎಂದು ಹೆಸರು, ಆ ಲೇಖಾಪ್ರದೇಶ, ಆಕಾಶವೂ ಭೂಮಿಯೂ ಒಂದಾಗಿ ಕಾಣುವುದು. ಅಂದರೆ-ಉದಯಕಾಲ, ಲೇಯಸ್ಥೇರ್ಕೇ-ಪಾ||

ಶುಕ್ರ, ಚಂದ್ರನು ತುಲೆಯಲ್ಲಿ, ಉಳಿದ ಗ್ರಹಗಳು ಯಥಾಸಂಭವವಾಗಿ ಮೇಷ, ಕುಂಭ, ಧನುಸ್ಸು ಈ ಮೂರು ರಾಶಿಗಳನ್ನು ಹೊಂದಿದರೆ, ರಾಜಪುತ್ರನು ರಾಜನಾಗುವನು, ಅನ್ಯನು ಧನವಂತನಾಗುವನು. ೨ನೇ ಉದಾಹರಣೆ-ಕರ್ಕಾಟಲಗ್ನವಾಗಿ ತುಲೆಯಲ್ಲಿ ಶುಕ್ರ, ಮೀನದಲ್ಲಿ ಚಂದ್ರ ಉಳಿದ ಗ್ರಹಗಳು ಕನ್ಯಾ, ವೃಷಭ, ಕರ್ಕಾಟಕಗಳಲ್ಲಿದ್ದರೆ ಈ ಯೋಗವು ಸಂಭವಿಸುತ್ತದೆ. ಈ ವಿಷಯಕ್ಕೆ ॥ಶ್ಲೋಕ॥ ಸ್ವಗೇಹಶುಕ್ರೇ ಸುಖಗೇಥ ಚಂದ್ರೇ ಧರ್ಮಸ್ಥಿತೇ ಶೇಷನಭಶ್ಚರೈಸ್ತು । ಲಗ್ನಾಯದುಶ್ಚಿಕ್ಯ ಸಮಾಶ್ರಿತೈಶ್ಚ ಭೂಪೋದ್ಭವೋ ಭೂಪತಿರನ್ಯ ಇಭ್ಯಃ ॥೪೬॥ ಇದೇ ಅರ್ಥದಲ್ಲಿ ಜಯದೇವನು ಹೇಳಿರುವುದರಿಂದ ಇದು ವರಾಹಮಿಹಿರಾಚಾರ್ಯರ ಸಮ್ಮತಿಗನುಸಾರವಾಗಿದೆ.

ಮೂಲ॥ ಸೌಮ್ಯೇವೀರ್ಯಯುತೇ ತನುಯುಕ್ತೇ । ವೀರ್ಯಾಢ್ಯೇಚಶುಭೇ ಶುಭಯಾತೇ*॥ ಧರ್ಮಾರ್ಥೋಪಚಯೇಷ್ವವಶೇಷೈ । ಧರ್ಮಾತ್ಮಾನೃಪಜಃ ಪೃಥಿವೀಶಃ ॥೧೬॥

ಅವತಾರಿಕೆ॥ ಮತ್ತೊಂದು ವಿಧವಾದ ರಾಜಯೋಗವು ಹೇಳಲ್ಪಡುತ್ತೆ.

ಟೀಕು॥ ವೀರ್ಯಯುತೇ-ಬಲಿಷ್ಠನಾದ, ಸೌಮ್ಯೇ-ಬುಧನು, ತನುಯುಕ್ತೇ-ಲಗ್ನದಲ್ಲಿದ್ದು, ವೀರ್ಯಾಢ್ಯೇ-ಬಲಯುಕ್ತನಾದ, ಶುಭೇ-ಗುರು ಶುಕ್ರರಲ್ಲೊಂದು ಗ್ರಹವು, ಶುಭಯಾತೇ-ನವಮಸ್ಥಾನದಲ್ಲಿದ್ದು, ಧರ್ಮಾರ್ಥೋಪಚಯೇಷು ನವಮ, ದ್ವಿತೀಯ, ತೃತೀಯ, ಷಷ್ಠ, ದಶಮೈಕಾದಶ ಸ್ಥಾನಗಳಲ್ಲಿ ಯಥಾಸಂಭವವಾಗಿ, ಅವಶೇಷೈ-ಉಳಿದ ಗ್ರಹಗಳಿದ್ದರೆ, ಈ ರಾಜಯೋಗದಲ್ಲಿ ಹುಟ್ಟಿದ, ನೃಪಜಃ- ರಾಜಪುತ್ರನು, ಪೃಥಿವೀಶಃ-ಭೂಪತಿಯಾಗುವನು, ಅನ್ಯನು ಧನವಂತನಾಗುವನು. ಇಲ್ಲಿ ಶುಭಗ್ರಹಗಳಲ್ಲಿ ಗುರು ಶುಕ್ರರಲ್ಲಿ ಯಾರಾದರೂ, ನವಮ ಸ್ಥಾನಗಳಲ್ಲಿರಬೇಕೆಂದು ಹೇಳಿರುವುದರಿಂದ, ಬುಧನು ಲಗ್ನದಲ್ಲಿರಬೇಕೆಂದು ನಿರ್ದೇಶವಾಗಿರುವಾಗ ಶುಕ್ರನು ೯ರಲ್ಲಿರ ಬೇಕಾದದ್ದು. ಮುಂದೆ ವಜ್ರಾದಿ ಯೋಗಗಳಲ್ಲಿ ಇದು ಅಸಂಭವವೆಂದು ಹೇಳಿರುತ್ತೆ. ಆದರೆ ಇಲ್ಲಿ ಗುರು ಇರಬಹುದೆಂದು ಅರ್ಥಮಾಡಿದೆ. ಈ ವಿಷಯಕ್ಕೆ ಜಯದೇವಃ ॥ಶ್ಲೋಕ॥ ಸೌಮ್ಯೇಲಗ್ನಗತೇ ಸಬಲೇ ಚೇತ್ಸದ್ವಿರ್ಯೇಚ ಶುಭೇನವಮಸ್ಥೇ ॥ ಪುಣ್ಯಸ್ವೋಪಚಯೈರಿತರೈಶ್ಚಭೂಪಃ ಸ್ಯಾನ್ನೃಪಜೋಪಿ ವದಾನ್ಯಃ ॥

* ಶುಭೇಸುಖಯಾತೇ-ಪಾಠಾಂತರ ಮತ್ತು ಶುಭಗ್ರಹಗಳು ಸುಖಸ್ಥಾನದಲ್ಲಿರಬೇಕೆಂದು ತಿಳಿಯತಕ್ಕದ್ದು.

ಮೂಲ॥ ವೃಷೋದಯೇ ಮೂರ್ತಿಧನಾರಿ ಲಾಭಗೈಃ । ಶಶಾಂಕಜೀವಾರ್ಕ ಸುತಾಪರೈರ್ನೃಪಃ ॥ ಸುಖೇಗುರೌ ಖೇ ಶಶಿತೀಕ್ಷ್ಣದೀಧಿತೀ । ಯಮೋದಯೇ ಲಾಭಗತೈರ್ನೃಪೋಪರೈಃ ॥೧೭॥

ಅವತಾರಿಕೆ॥ ಪುನಃ ಎರಡು ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ವೃಷೋದಯೇ-ವೃಷಭಲಗ್ನವಾಗಿ, ಮೂರ್ತಿ ಧನಾರಿಲಾಭಗೈಃ-ಲಗ್ನ ದ್ವಿತೀಯ ಷಷ್ಠೈಕಾದಶಸ್ಥಾನಗಳಲ್ಲಿ ಕ್ರಮವಾಗಿ, ಶಶಾಂಕ ಜೀವಾರ್ಕ ಸುತಾಪರೈಃ, ಅಂದರೆ ಚಂದ್ರನು ಜನ್ಮಲಗ್ನವಾದ ವೃಷಭದಲ್ಲಿ, ಗುರು ಮಿಥುನದಲ್ಲಿ, ಶನಿ ತುಲೆಯಲ್ಲಿ ಉಳಿದ ರವಿ, ಕುಜ, ಬುಧ, ಶುಕ್ರ ಗ್ರಹಗಳು ಮೀನದಲ್ಲಿದ್ದರೆ ಈ ಯೋಗದಲ್ಲಿ ಹುಟ್ಟಿದ ರಾಜಪುತ್ರನು, ನೃಪಃ-ಪೃಥ್ವೀಶನಾಗುವನು. ಗುರೌ-ಬೃಹಸ್ಪತಿಯು, ಸುಖೇ- ಸುಖಸ್ಥಾನವಾದ ಚತುರ್ಥದಲ್ಲಿ, ಶಶಿತೀಕ್ಷ್ಣದೀಧಿತೀ-ಚಂದ್ರ ಸೂರ್ಯರು, ಖೇ- ದಶಮದಲ್ಲಿ, ಯಮೋದಯೇ-ಶನೈಶ್ಚರನು ಲಗ್ನದಲ್ಲಿ, ಲಾಭಗೈಃ-ಏಕಾದಶದಲ್ಲಿರುವ, ಅಪರೈಃ-ಉಳಿದ ಕುಜ ಬುಧ ಶುಕ್ರರು ಅಂದರೆ ಲಗ್ನದಲ್ಲಿ ಶನಿ, ಚತುರ್ಥದಲ್ಲಿ ಗುರು, ದಶಮದಲ್ಲಿ ರವಿಚಂದ್ರರು, ಏಕಾದಶದಲ್ಲಿ ಕುಜ, ಬುಧ, ಶುಕ್ರರು, ಈ ಪ್ರಕಾರ ಗ್ರಹವಿರುವಕಾಲದಲ್ಲಿ ಹುಟ್ಟಿದ ರಾಜಪುತ್ರನು, ನೃಪಃ-ರಾಜನಾಗುವನು. ಅನ್ಯಃ-ನೃಪಜ ವ್ಯತಿರಿಕ್ತನು ಧನವಂತನಾಗುವನು. ಈ ರಾಜಯೋಗಕ್ಕೆ ಲಗ್ನವಿಂಥಾದ್ದಾಗಬೇಕೆಂದು ನಿರ್ಣಯ ಮಾಡಲಿಲ್ಲವು. ಆದ್ದರಿಂದ ಈ ಯೋಗವು ೧೨ ಲಗ್ನಗಳಿಗೂ ಸಂಭವಿಸುತ್ತದೆ. ಇದು ಸಾಮಾನ್ಯರಾಜಯೋಗವು. ಈ ವಿಷಯದಲ್ಲಿ ॥ಶ್ಲೋಕ॥ಜಯದೇವಃ॥ ವೃಷೇಂದೌ ಲಗ್ನಸ್ಥೇ ದ್ರವಿಣಭಗುರೌ ಶತ್ರುಭಶನೌಪರೈ- ರಾಯಪ್ರಾಪ್ತೈ ರ್ಭವತಿ ನೃಪಪುತ್ರೋ ನರಪತಿಃ । ತನೌಸೌರೇಸೌಖ್ಯೇಸುರಪತಿಗುರೌ ಖೇರ್ಕಶಶಿನೌಪರೈಃ ಪ್ರಾಪ್ತಿಪ್ರಾಪ್ತೈರ್ನರಪತಿ-ಸುತಃಕ್ಷ್ಮಾ ಪ್ರತಿರಿಹ ॥೪೮॥ ಎಂದು ಹೇಳಿರುತ್ತೆ.

ಮೂಲ॥ ಮೇಷೂರಣಾಯ ತನಗಾ ಶ್ಯಶಿಮಂದ ಜೀವಜ್ಞಾರೌಧನೇಸಿತರವೀ ಹಿಬುಕೇ ನರೇಂದ್ರಂ ॥ ವಕ್ರಾಸಿತೌ ಶಶಿಸುರೇಜ್ಯಸಿತಾರ್ಕ ಸೌಮ್ಯಾಹೋರಾಸುಖಾಸ್ತ ಶುಭಖಾಪ್ತಿಗತಾಃ ಪ್ರಜೇಶಂ ॥೧೮॥

ಅವತಾರಿಕೆ॥ ಪುನಃ ಎರಡು ರಾಜಯೋಗಗಳು ಹೇಳಲ್ಪಡುತ್ತೆ.

ಟೀಕು॥ ಮೇಷೂರಣಾಯತನಗಾಃ-ದಶವ್ಯೈಕಾದಶಲಗ್ನದಲ್ಲಿ ಯಥಾಕ್ರಮವಾಗಿರುವ, ಶಶಿಮಂದಜೀವಾಃ-ಚಂದ್ರ ಶನಿ ಗುರುಗಳು, ಅಂದರೆ ದಶಮದಲ್ಲಿ ಚಂದ್ರ, ಏಕಾದಶದಲ್ಲಿ ಶನಿ, ಲಗ್ನದಲ್ಲಿ ಗುರು, ಧನೇ-ದ್ವಿತೀಯದಲ್ಲಿ, ಜ್ಞಾರೌ-ಬುಧ, ಕುಜರು, ಹಿಬುಕೇ-ಚತುರ್ಥದಲ್ಲಿ, ಸಿತರವೀ-ಶುಕ್ರ ಸೂರ್ಯರು, ಈ

ಪ್ರಕಾರವಿದ್ದರೆ, ಕ್ಷತ್ರಿಯವಂಶದಲ್ಲಿ ಹುಟ್ಟಿದವನು, ನರೇಂದ್ರಂ-ನರಪತಿಯಾಗುವನು, ಇದು ೧ ಯೋಗ, ವಕ್ರಾಸಿತೌ-ಕುಜ ಶನಿಗಳು, ಶಶಿ ಸುರೇಜ್ಯ ಸಿತಾರ್ಕ ಸೌಮ್ಯಾಃ-ಚಂದ್ರ, ಗುರು, ಶುಕ್ರ, ರವಿ, ಬುಧರು ಕ್ರಮವಾಗಿ, ಹೋರಾ ಸುಖಾಸ್ತ ಶುಭಖಾಪ್ತಿಗತಾಃ- ಲಗ್ನ ಚತುರ್ಥ ಸಪ್ತಮ ನವಮ ದಶಮೈಕಾದಶಸ್ಥಾನಗಳಲ್ಲಿದ್ದರೆ, ಅಂದರೆ ಲಗ್ನದಲ್ಲಿ ಕುಜ, ಶನಿಗಳು, ಚತುರ್ಥದಲ್ಲಿ ಚಂದ್ರ, ಸಪ್ತಮದಲ್ಲಿ ಗುರು, ನವಮದಲ್ಲಿ ಶುಕ್ರ, ದಶಮದಲ್ಲಿ ಸೂರ್ಯ, ಏಕಾದಶದಲ್ಲಿ ಬುಧ, ಈ ಪ್ರಕಾರವಿರುವಾಗ, ಹುಟ್ಟಿದ ರಾಜಪುತ್ರನು, ಪ್ರಜೇಶಃ-ನರಾಧಿಪನಾಗುವನು. ಈ ಎರಡು ಯೋಗಗಳಲ್ಲಿ ಅನ್ಯನು ಧನವಂತನಾಗಿ ರಾಜಸಮಾನನಾಗುವನು. ಈ ಅರ್ಥಕ್ಕೆ ॥ಶ್ಲೋಕ॥ ಧನೇಸೌಮ್ಯಾಂಗಾರೌ ಸುಖಭವನಗಾರ್ಕೇಜ್ಯಭೃಗುಜಾಭವೇಸೌರಿಃ ಖೇಂದುರ್ಭವತಿಯದಿಭೂಪೋದ್ಭವನೃಪಃ । ತನೌಮಂದಾಂಗಾರೌ ಸುಖಮದನ ಧರ್ಮಾಯ ದಶಮೇನಿಶೇಶಾ ಮರ್ತ್ಯೆಜಾಸುರಗುರುಬುಧಾರ್ಕಾಯದಿನೃಪಃ ॥

## ರಾಜ್ಯಪ್ರಾಪ್ತಿ ಕಾಲವಿಚಾರಃ

ಮೂಲ॥ ಕರ್ಮಲಗ್ನಯುತಪಾಕದಶಾಯಾಂ ರಾಜ್ಯಲಬ್ಧಿರಥವಾ ಪ್ರಬಲಸ್ಯ ಶತ್ರುನೀಚಗ್ರಹಯಾತ ದಶಾಯಾಂ ಛಿದ್ರಸಂಶ್ರಯಃ ದಶಾಪರಿ ಕಲ್ಪ್ಯಾ॥೧೯॥

ಅವತಾರಿಕೆ॥ ಈಗ ಹೇಳಲ್ಪಟ್ಟ ರಾಜಯೋಗಪ್ರಾಪ್ತಿಕಾಲವೂ ಪ್ರಾಪ್ತರಾಜ್ಯ ಭ್ರಂಶಾದಿಕಾಲವೂ ಈ ಶ್ಲೋಕದಿಂದ ಹೇಳಲ್ಪಡುತ್ತೆ.

ಟೀಕು॥ ರಾಜಯೋಗಗಳನ್ನು ಕೊಡುವ ಗ್ರಹಗಳಲ್ಲಿ, ಕರ್ಮಲಗ್ನಯುತ ಪಾಕದಶಾಯಾಂ, ಕರ್ಮ-ಲಗ್ನಕ್ಕೆ ದಶಮಸ್ಥಾನ, ಲಗ್ನ-ಜನ್ಮಲಗ್ನವನ್ನುಯುತ- ಕೂಡಿರುವ ಗ್ರಹದ, ಪಾಕದಶಾಯಾಂ-ಅಂತರ್ದಶೆಯಲ್ಲಿ, ರಾಜ್ಯಲಬ್ಧಿ- ರಾಜಯೋಗದಲ್ಲಿ ಹುಟ್ಟಿದವನಿಗೆ ರಾಜ್ಯಾಧಿಕಾರ ಪ್ರಾಪ್ತಿಯಾಗುವುದು. ಆ ಲಗ್ನ ದಶಮಗಳೆರಡರಲ್ಲಿ, ಒಂದು ಸ್ಥಾನದಲ್ಲೆರಡು ಗ್ರಹಗಳಿದ್ದರೂ, ಸ್ಥಾನದ್ವಯದಲ್ಲಿ ಅನೇಕ ಗ್ರಹಗಳಿದ್ದರೂ, ಆಗ ಬಲಾಧಿಕವಾದ ಗ್ರಹದ ಅಂತರ್ದಶೆಯಲ್ಲಿ ರಾಜ್ಯ ಪ್ರಾಪ್ತಿಯಾಗುವುದು. ಅಥವಾ ಹಾಗಾಗದಿದ್ದರೆ, ಲಗ್ನದಶಮಗಳಲ್ಲಿ ಗ್ರಹಗಳಿಲ್ಲದಿದ್ದರೆ, ಪ್ರಬಲಸ್ಯ-ಜನ್ಮಕಾಲದಲ್ಲಿ ಯಾವ ಗ್ರಹವು ಬಲಾಧಿಕವಾಗಿರುವುದೋ, ಆ ಗ್ರಹದ ಅಂತರ್ದಶೆಯಲ್ಲಿ ರಾಜ್ಯಪ್ರಾಪ್ತಿಯಾಗುವುದು, ಈ ಪ್ರಕಾರ ಅನೇಕಾಂತರ್ದಶೆಯಲ್ಲಿ ರಾಜ್ಯಪ್ರದವಾಗಿದ್ದರೆ, ಚಾರವಶದಿಂದ ಯಾವ ಗ್ರಹವು ಸ್ವಾದಂತರ್ದಶಾ ಕಾಲದಲ್ಲಿ ಅತಿಬಲಯುಕ್ತವಾಗಿರುವುದೋ ಆ ಗ್ರಹಾಂತರ್ದಶೆಯಲ್ಲಿ ರಾಜ್ಯಪ್ರಾಪ್ತಿಯಾಗುವುದು. ಈ ಪ್ರಕಾರ ರಾಜ್ಯಪ್ರಾಪ್ತಿಯನ್ನು ಹೇಳತಕ್ಕದ್ದು.

## ಪ್ರಾಪ್ತರಾಜ್ಯಭ್ರಂಶಯೋಗಃ (ಪದಚ್ಯುತಿ ಯೋಗಶ್ಚ)

ಜನ್ಮಕಾಲದಲ್ಲಿ ಶತ್ರುಕ್ಷೇತ್ರದಲ್ಲಾಗಲೀ, ನೀಚಕ್ಷೇತ್ರದಲ್ಲಾಗಲೀ, ಉಚ್ಚರಾಶಿಯಲ್ಲಿ ನೀಚನವಾಂಶೆಯಲ್ಲಾಗಲೀ, ಇರುವ ಗ್ರಹದ ಅಂತರ್ದಶೆಯಲ್ಲಿ, ಛಿದ್ರಸಂಶ್ರಯದಶಾ ಛಿದ್ರದಶಾ ರಾಜ್ಯಹರಣ ದಶೆಯಲ್ಲಿ, ಸಂಶ್ರಯದಶಾ-ಪರಾಶ್ರಯ ದಶೆಯಲ್ಲಿ, ಪರಿಕಲ್ಪ್ಯಾ-ರಾಜ್ಯತಪ್ಪಿಹೋಗುವುದೆಂದು ಅಥವಾ ಶತ್ರುಗಳಿಂದ ಅಪಹರಿಸಲ್ಪಡುವುದೆಂದು ತಿಳಿಯತಕ್ಕದ್ದು. ಅದು ಹೇಗೆಂದರೆ-ಜನ್ಮಕಾಲದಲ್ಲಿ ಶತ್ರು ಕ್ಷೇತ್ರದಲ್ಲಿಯಾಗಲೀ, ನೀಚಕ್ಷೇತ್ರದಲ್ಲಿಯಾಗಲೀ, ಇರುವ ಗ್ರಹವು ಬಲಯುಕ್ತವಾದರೆ ಆ ಗ್ರಹದ ಅಂತರ್ದಶಾಕಾಲದಲ್ಲಿ ರಾಜ್ಯವು ಹೋಗುವುದೆಂದೂ, ಹೀನಬಲವುಳ್ಳ ಅಂತರ್ದಶೆಯಕಾಲದಲ್ಲಿ ಅಪತ್ತು ಸಂಭವಿಸಿ, ಪರರ ಆಶ್ರಯದಿಂದ ರಾಜ್ಯ ನಿಲ್ಲುವುದೆಂದೂ ತಾತ್ಪರ್ಯವು. ಈ ವಿಷಯದಲ್ಲಿ ಗರ್ಗಸಂಹಿತೆಯಲ್ಲಿ ॥ಶ್ಲೋಕ॥ ಲಗ್ನಗಃ ಕರ್ಮಗೋವಾಸ್ಯಾದಥವಾಪ್ರಬಲೋಪಿಯಃ । ಸಸ್ಯಾತ್ಸ್ವಾಂತರ್ದಶಾಕಾಲೇ ರಾಜ್ಯದಃ ಪ್ರಬಲೋಯಥಾ ॥೫೦॥ ನೀಚಾರಿಗೃಹಸಂಸ್ಥಸ್ಯ ದಶಾಯಾಂ ಪ್ರಬಲಸ್ಯಚ । ಚ್ಯುತಿರ್ಬಲವಿಹೀನ ಸ್ಯತನ್ಮೋಕ್ಷಾಃ ಪರಸಂಶ್ರಯಾತ್ ॥೫೧॥ ಈ ಪ್ರಕಾರವೇ ರಾಜಸಮಾನಯೋಗಗಳಿಗೂ ಭಂಗವನ್ನೂ ತಿಳಿಯತಕ್ಕದ್ದು.

## ಭೋಗಿ, ಶಬರ, ತಸ್ಕರಾಧೀಶ ಯೋಗಾಃ

ಮೂಲ॥ ಗುರುಸಿತಬುಧಲಗ್ನೇ ಸಪ್ತಮಸ್ಥೇರ್ಕಪುತ್ರೇ । ವಿಯತಿದಿವಸನಾಥೇ ಭೋಗಿನಾಂಜನ್ಮವಿಂದ್ಯಾತ್ ॥ ಶುಭಬಲಯುತಕೇಂದ್ರೈಃ ಕ್ರೂರಭ ಸ್ಥೈಶ್ಚ । ಪಾಪೈರ್ವ್ರಜತಿಶಬರದಸ್ಯುಃ ಸ್ವಾಮಿತಾಮರ್ಥಭಾಕ್ತ ॥೨೦॥

ಅವತಾರಿಕೆ॥ ಈ ಶ್ಲೋಕದಲ್ಲಿ ಭೋಗವಂತನ ಜನನ ಮತ್ತು ಶಬರತಸ್ಕರಾಧೀಶ ಜನನಯೋಗವು ಹೇಳಲ್ಪಟ್ಟಿರುತ್ತೆ. ಗುರು ಬುಧ ಸೀತಲಗ್ನೇ-ಗುರು, ಬುಧ, ಶುಕ್ರರಲ್ಲಿ ಯಾವುದಾದರೂ ಒಂದು ಗ್ರಹವು ಲಗ್ನದಲ್ಲಿದ್ದು, ಅರ್ಕಪುತ್ರೇ-ಶನಿಯು, ಸಪ್ತಮಸ್ಥೇ-ಸಪ್ತಮಸ್ಥಾನದಲ್ಲಿದ್ದು, ದಿವಸನಾಥೇ-ಸೂರ್ಯನು, ವಿಯತಿ-ದಶಮ ಸ್ಥಾನದಲ್ಲಿದ್ದರೆ, ಭೋಗೀನಾಂ-ಧನಹೀನನಾಗಿದ್ದರೂ, ಹೇಗಾದರೂ ಭೋಗವುಳ್ಳವನ, ಜನ್ಮ-ಜನನವು, ವಿಂದ್ಯಾತ್-ಆಗುವುದೆಂದು ತಿಳಿಯತಕ್ಕದ್ದು. ಗುರು ಬುಧ ಸಿತಲಗ್ನೇ-ಎಂಬುವುದಕ್ಕೆ ಗುರು, ಬುಧ, ಶುಕ್ರ ಇವರುಗಳಲ್ಲಿ ಗುರುವಿರಬಹುದು, ಬುಧ ಶುಕ್ರರು ಜನ್ಮದಲ್ಲಿದ್ದರೆ, ಈ ಯೋಗಕ್ಕೆ ದಶಮದಲ್ಲಿ ಸೂರ್ಯನಿರಬೇಕೆಂದು ವಿಧಿಯಿರುವುದರಿಂದ, ಸೂರ್ಯನಿಂದ ಲಗ್ನವು ೪ನೆ ಸ್ಥಾನವಾಗಿರುವುದರಿಂದ, ಸೂರ್ಯನಿಂದ ನಾಲ್ಕನೇ ಸ್ಥಾನದಲ್ಲಿ ಬುಧ ಶುಕ್ರರು ಇರುವುದು ಸಂಗತವು ಮತ್ತು ಅಪ್ರಸಿದ್ಧವೆಂದು ವಜ್ರಾದಿಯೋಗದಲ್ಲಿ (ಈ ವಿಷಯದಲ್ಲಿ) ಪೂರ್ವಾಪರ ವಿರೋಧ ಬಂದಿರುವುದರಿಂದ ಈ ಯೋಗಕ್ಕೆ ಅರ್ಥವನ್ನು ಮತ್ತೊಂದು ವಿಧವಾಗಿ

ಕಲ್ಪಿಸಿರುವರು. ಅದೇನೆಂದರೆ - ಗುರು, ಬುಧ, ಸಿತಲಗ್ನ, ಗುರುಕ್ಷೇತ್ರಗಳಾದ ಧನುರ್ಮೀನ, ಬುಧಕ್ಷೇತ್ರಗಳಾದ ಮಿಥುನ ಕನ್ಯಾ, ಶುಕ್ರಕ್ಷೇತ್ರಗಳಾದ ವೃಷಭ ತುಲಾ, ಈ ರಾಶಿಗಳಲ್ಲಿ ಯಾವುದಾದರೂ ಒಂದು ಜನನಕಾಲ ಲಗ್ನವಾಗಿ ಸಪ್ತಮದಲ್ಲಿ ಶನಿ, ದಶಮದಲ್ಲಿ ಸೂರ್ಯನಿದ್ದರೆ, ಭೋಗವಂತನ ಜನನವಾಗುವುದೆಂದು ಹೇಳಬಹುದು. ಆದರೆ ಈ ಮೇಲೆ ಹೇಳಿದ ಲಗ್ನದಲ್ಲಿ ಹುಟ್ಟಿ, ಸಪ್ತಮದಲ್ಲಿ ಶನಿ, ದಶಮದಲ್ಲಿ ಸೂರ್ಯ ಮಾತ್ರನಿದ್ದರೆ, ಈ ಯೋಗವು ಹೇಳಿದಂತಾಯಿತು. ಆದರೆ ಇದು ಯುಕ್ತವಾಗಿಲ್ಲ. ಈ ವಿಷಯುದಲ್ಲಿ ಗರ್ಗಸಂಹಿತೆಯುಲ್ಲಿ ||ಶ್ಲೋಕ|| ಜೀವಜ್ಞಭಾರ್ಗವೈರ್ಲಗ್ನೇ ಸಪ್ತಮಸ್ಥೇರ್ಕನಂದನೇ । ದಶಮಸ್ಥೇರವೌಜಾತೋ ಭೋಗವಾನ್ಪುರುಷೋಭವೇತ್ ||೨|| ಎಂದು ಗರ್ಗಾಚಾರ್ಯರ ವಚನ ವಿರುವುದರಿಂದ ಪೂರ್ವಚಾರ್ಯರ ಮತವನ್ನನುಸರಿಸಿ ವರಾಹಮಿಹಿರಾಚಾರ್ಯರು ಈ ಯೋಗವನ್ನು ಹೇಳಿದರೆಂದು ತೋರುತ್ತದೆ. ಆದರೆ ಈ ಯೋಗವು ಹಿಂದಿನ ಮನ್ವಂತರಗಳಲ್ಲಿ ಬಂದ ಕಾರಣಗಳಿಂದ ಗರ್ಗಾದಿಗಳಿಂದುಕ್ತವಾಗಿರುತ್ತೆ. ಈ ಮನ್ವಂತರದಲ್ಲಿ ಸಂಭವಿಸುವುದಿಲ್ಲ. ಆದರೆ ಗುರು ಲಗ್ನದಲ್ಲಿ, ಸಪ್ತಮದಲ್ಲಿ ಶನಿ, ದಶಮದಲ್ಲಿ ಸೂರ್ಯನಿರುವ ಯೋಗವು ಸಂಭವಿಸುತ್ತದೆ.

## ಶಬರ ತಸ್ಕರಾಧೀಶಯೋಗಾಃ

ಶುಭ ಬಲಯುತ ಕೇಂದ್ರೈಃ ಶುಭ-ಶುಭಗ್ರಹ ಸಂಬಂಧದಿಂದ, ಬಲಯುತ-ಬಲಿಷ್ಠವಾದ, ಕೇಂದ್ರೈಃ-ಕೇಂದ್ರಸ್ಥಾನಗಳಲ್ಲಿ, ಕ್ರೂರಭಸ್ಥೈಃ-ಪಾಪಗ್ರಹ ಸಂಬಂಧವಾದ ರಾಶಿಯಲ್ಲಿ, ಪಾಪೈಃ-ಪಾಪಗ್ರಹಗಳಿಂದ ವ್ಯಾಪೃತವಾಗಿರುವ ಕಾಲದಲ್ಲಿ, ಶಬರದಸ್ಯುಸ್ವಾಮಿತಾಂ, ಶಬರ-ಕಿರಾತರಿಗೂ, ದಸ್ಯು-ಕಳ್ಳರಿಗೂ, ಸ್ವಾಮಿತಾಂ-ಅಧಿಪತಿತ್ವವನ್ನು, ವ್ರಜತಿ-ಹೊಂದುವನು, ಸಃ-ಅವನು, (ಈ ಯೋಗದಲ್ಲಿ ಹುಟ್ಟಿದವನು) ಅರ್ಥಭಾಕ್ಚ-ಧನವಂತನೂ ಆಗುವನು. ಚಕಾರ ಪ್ರಯೋಗವು ಸಮುಚ್ಚಯಾರ್ಥಕ್ಕೋಸ್ಕರ ಹೇಳಲ್ಪಟ್ಟಿರುತ್ತೆ ಮತ್ತು ಚೋರಾಧೀಶನೂ ಧನವಂತನೂ ಆಗುವನೆಂದು ಹೇಳಬೇಕಾಯಿತು. ನಿ|| ತುಹಿಚಸ್ಮಹ ವೈಪಾದ ಪೂರಣೇಸತಿ ||ಅಮರಃ|| ಇದರ ವಿವರಣೆ ಹೇಗೆಂದರೆಃ-ಶುಭಗ್ರಹ ಕ್ಷೇತ್ರವಾದ ವೃಷಭ, ಮಿಥುನ, ಕರ್ಕಟ, ಕನ್ಯಾ, ತುಲಾ, ಧನುರ್ಮೀನ ಈ ರಾಶಿಗಳು ಬಲವಂತವಾಗಿ ಕೇಂದ್ರಸ್ಥಾನಗಳಾಗಿ ಪಾಪಗ್ರಹ ಸಂಬಂಧವಾದ ಮೇಷ, ವೃಶ್ಚಿಕ, ಮಕರ, ಕುಂಭ, ಸಿಂಹ ಈ ರಾಶಿಗಳಲ್ಲಿ ಪಾಪಗ್ರಹಗಳಿದ್ದರೆ ಈ ರಾಶಿಗಳಲ್ಲಿ ರವಿ, ಕುಜ, ಶನಿಗಳಿಂದ, ೩ ರಾಶಿಗಳೂ ಅಧಿಷ್ಠಿತವಾದರೆ, ಆ ಕಾಲದಲ್ಲಿ ಹುಟ್ಟಿದವನು, ಶಬರತಸ್ಕರಾದಿಗಳಿಗೆ ದೊರೆಯಾಗಿಯೂ, ಧನವಂತನಾಗಿಯೂ, ಇರುವನೆಂದು

ತಿಳಿಯತಕ್ಕದ್ದು. ಕೆಲವರು ಈ ಯೋಗಕ್ಕೆ ಈ ವಿಧವಾಗಿ ಅರ್ಥಮಾಡಿರುವರು. ಶುಭಗ್ರಹ ಸಂಬಂಧವಾದ ಈ ರಾಶಿಗಳು ಕೇಂದ್ರಸ್ಥಾನಗಳಾಗಿ ಅಲ್ಲಿ ಶುಭಗ್ರಹಗಳಿಲ್ಲದೆ, ಪಾಪಗ್ರಹ ಸಂಬಂಧ ರಾಶಿಗಳಲ್ಲಿ ಪಾಪಗ್ರಹಗಳಿದ್ದರೆ ಈ ಯೋಗವು ಸಂಭವಿಸುವುದೆಂದು ಅಭಿಪ್ರಾಯ ಪಟ್ಟಿರುವರು, ಈ ಅರ್ಥವು ಗ್ರಾಹ್ಯಮಾಡತಕ್ಕದ್ದು. ಮತ್ತು ಕೆಲವರು ಯಾವ ರಾಶಿಗಳಾದರೂ ಕೇಂದ್ರ ಸ್ಥಾನಗಳಾಗಿ ಬಲಯುಕ್ತರಾದ ಶುಭಗ್ರಹಗಳಿಂದ ಕೂಡಿದರೆ ಈ ಯೋಗವು ಸಂಭವಿಸುವಂತೆ ಹೇಳುತ್ತಾರೆ. ಇದು ಗ್ರಾಹ್ಯವಲ್ಲ. ಆದ್ದರಿಂದ ಮೊದಲ ಹೇಳಲ್ಪಟ್ಟ ಪಾಪಗ್ರಹ ಕ್ಷೇತ್ರಗಳಲ್ಲಿ ಬಲಿಷ್ಠರಾದ ಪಾಪಗ್ರಹಗಳಿದ್ದು ಶುಭರಾಶಿಗಳು ಕೇಂದ್ರಸ್ಥಾನವಾಗಿ ಬಲಯುಕ್ತವಾಗಿದ್ದರೆ, ಆ ಕಾಲದಲ್ಲಿ ಚೋರಾಧಿಪತಿಯಾಗಿ ಹುಟ್ಟುವನೆಂದು ಹೇಳುವುದು ಸಮ್ಮತವಾದದ್ದು. ಈ ಅರ್ಥಕ್ಕೆ ॥ಶ್ಲೋಕ॥ ॥ಗರ್ಗಃ॥ ಪಾಪಕ್ಷೇತ್ರಗತೈಃಪಾಪೈಃ ಕೇಂದ್ರಸ್ಥೈಃಸೌಮ್ಯರಾಶಿಭಿಃ । ಸಬಲೈರ್ಯಸ್ಯವೈ ಜನ್ಮಸ್ಯಾದಸೌದಸ್ಯುನಾಯಕಃ ॥೫೩॥ ಈ ವಚನ ಪ್ರಮಾಣವಿರುತ್ತೆ. ಆದ್ದರಿಂದ ಈ ಅರ್ಥವೇ ಗ್ರಾಹ್ಯವಾದದ್ದೆಂದು ಭಾವವಾಗುತ್ತದೆ. ॥೨೦॥

## ರಾಜಯೋಗಗಳ ಸಂಖ್ಯಾನಿರೂಪಣ ಪದಕ

| ಸಂ | ರಾಜಯೋಗ | ಸಂ॥ | ಸಂ॥ | ರಾಜಯೋಗ | ಸಂ॥ |
|---|---|---|---|---|---|
| ೧ | ಅಖಂಡಸಾಮ್ರಾಜ್ಯಯೋಗ | | ೧೩ | ಸ್ವೋಚ್ಚ ಸ್ವತ್ರಿಕೋಣಸ್ಥೆ | ೧ |
| ೨ | ವಕ್ರಾರ್ಕಜಾರ್ಕ | ೩೨ | ೧೪ | ಲೇಖಾಸ್ಥೇರ್ಕೇಜೇಂದೌ | ೧ |
| ೩ | ವರ್ಗೋತ್ತಮಗತೇ | ೫೨೮ | ೧೫ | ಸ್ವರ್ಕ್ಷೇಶುಕ್ರೇಪಾತಾಳಸ್ಥೆ | ೨ |
| ೪ | ಯಮೇ ಕುಂಭೇರ್ಕಜೇ | ೫ | ೧೬ | ಸೌಮ್ಯೇ ವೀರ್ಯಯುತೆ | ೨ |
| ೫ | ಕುಜೇ ತುಂಗೇರ್ಕೇಂದ್ವೋ | ೩ | ೧೭ | ವೃಷೂದಯೇಮೂರ್ತಿ | ೧೨ |
| ೬ | ವೃಷೇ ಸೇಂದೌ | ೨ | ೧೮ | ಮೇಷೂರಣಾಯತನಗಾ | ೨ |
| ೭ | ಹಯೇ ಸೇಂದೌ | ೩ | ೧೯ | | |
| ೮ | ಝುಷೇ ಸೇಂದೌ | ೩ | | ಶಬರತಸ್ಕರಾಧೀಶಯೋಗ | |
| ೯ | ಕರ್ಕಿಣಿ ಲಗ್ನೇತತ್‌ಸ್ಥೇ | ೧ | ೨೦ | ಭೋಗಯೋಗಶ್ಚ | ೨೦ |
| ೧೦ | ಮೃಗ ಮುಖೇರ್ಕತನಯಃ | ೧ | | | |
| ೧೧ | ಸ್ವೋಚ್ಚಸಂಸ್ಥೇ ಬುಧೇ | ೧ | | ಗುರುಸಿತ ಬುಧ ಲಗ್ನೇ | ೨ |
| | ಏತೇಷಾಂ ಯೋಗಃ | ೫೭೯ | | ರಾಜಯೋಗಪ್ರಕರಣೋಕ್ತ ಯೋಗಾಃ | ೬೦೧ |
| ೧೨ | ರಾಜಯೋಗ ರಾಜಸಮಾನ ಯೋಗಾಃ | | | | |

## ಇತಿ ರಾಜಯೋಗ ವಿವರಣಂ
## ಪಂಚಮಹಾ ಪುರುಷಲಕ್ಷಣಾನಿ

ಶ್ಲೋಕ।। ಯೇಮಹಾಪುರುಷ ಸಂಜ್ಞಿಕಾನೃಪಾಃ ಪಂಚಪೂರ್ವಮುನಿಭಿಃ ಪ್ರಕೀರ್ತಿತಾಃ । ವಚ್ಮಿತಾನ್ಸು ಸರಲಾನ್ಮಹೋಕ್ತಿಭೀರಾಜಯೋಗ ವಿಧಿದರ್ಶನೇ ಚ್ಛಯಾ ।। ಸ್ವಗೇಹತುಂಗಾಶ್ರಯ ಕೇಂದ್ರಸಂಸ್ಥೈ ರಚ್ಚೋಪವರ್ಗಾ *ವನಿಸೂನ ಮುಖ್ಯೈ। ಕ್ರಮೇಣಯೋಗಾರುಚಕಾಖ್ಯ ಭದ್ರಹಂಸಾಖ್ಯಮಾಲವ್ಯ ಶಶಾಭಿಧಾನಾಃ ।।ತಾ।। ಮಹರ್ಷಿಗಳು ಮಹಾ ಪುರುಷಲಕ್ಷಣವನ್ನು ಸುಲಭರೀತಿಯಲ್ಲಿ ತಿಳಿದುಕೊಂಡು, ರಾಜಯೋಗವನ್ನು ತಿಳಿಯುವುದಕ್ಕೋಸ್ಕರ ರುಚಿಕ, ಭದ್ರಕ, ಹಂಸಕ, ಮಾಲವಕ, ಶಶಕವೆಂಬ ಐದು ಪುರುಷ ಲಕ್ಷಣಗಳು ಹೇಳಿರುತ್ತಾರೆ ।।೫೪।। ಅಂಗಾರಕನು, ಸ್ವಕ್ಷೇತ್ರಗಳಾದ ಮೇಷ, ವೃಶ್ಚಿಕಗಳಲ್ಲಾದರೂ, ಮಕರದಲ್ಲಿ ಉಚ್ಚನಾಗಿದ್ದು, ಆ ಸ್ಥಾನಗಳು ಲಗ್ನಕ್ಕೆ ಕೇಂದ್ರಗಳಾಗಿದ್ದರೆ, ರುಚಕವೆಂಬ ಹೆಸರಿನ ಯೋಗವಾಗುತ್ತದೆ. ಬುಧನು ತನ್ನ ಸ್ವಕ್ಷೇತ್ರಗಳಾದ ಮಿಥುನ, ಕನ್ಯೆಯಲ್ಲಿದ್ದು, ಲಗ್ನಕ್ಕೆ ಕೇಂದ್ರಸ್ಥಾನವಾಗಿದ್ದರೆ, ಭದ್ರಕವೆಂಬುವ ಯೋಗವು, ಗುರು ಸ್ವಕ್ಷೇತ್ರಗಳಾದ ಧನುಸ್ಸಿನಲ್ಲಾಗಲಿ, ಮೀನದಲ್ಲಿದ್ದರೂ, ಕರ್ಕಾಟಕದಲ್ಲಿ ಉಚ್ಚನಾಗಿದ್ದು, ಈ ಸ್ಥಾನಗಳು ಲಗ್ನಕ್ಕೆ ಕೇಂದ್ರಸ್ಥಾನಗಳಾದರೆ, ಹಂಸಕವೆಂಬುವ ಯೋಗವು. ಶುಕ್ರನು ಸ್ವಕ್ಷೇತ್ರಗಳಾದ ವೃಷಭ ತುಲೆಗಳಲ್ಲಿದ್ದರೂ, ಮೀನದಲ್ಲಿ ಉಚ್ಚದಲ್ಲಿದ್ದರೂ ಈ ಸ್ಥಾನಗಳು ಲಗ್ನಕ್ಕೆ ಕೇಂದ್ರಗಳಾದರೆ, ಮಾಲಕವೆಂಬ ಯೋಗವು. ಶನಿಯು ತನ್ನ ಸ್ವಕ್ಷೇತ್ರದಲ್ಲಿ ಅಂದರೆ-ಮಕರ ಕುಂಭಗಳಲ್ಲಿದ್ದರೂ, ತುಲಾರಾಶಿಯಲ್ಲಿ ಉಚ್ಚನಾಗಿದ್ದು, ಲಗ್ನಕ್ಕೆ ಕೇಂದ್ರಸ್ಥಾನವಾದರೆ, ಶಶಕವೆಂಬುವ ಯೋಗವು. ಈ ಕುಜ, ಬುಧ, ಗುರು, ಶುಕ್ರ, ಶನಿಗಳಿಂದ ಕ್ರಮವಾಗಿ ರುಚಕ, ಭದ್ರಕ, ಹಂಸಕ, ಮಾಲವಕ, ಶಶಕ ಎಂಬುವ ಪಂಚಮಹಾ ಪುರುಷ ಲಕ್ಷಣಗಳುಳ್ಳವರಾಗುವರು. ಈ ಯೋಗದಲ್ಲಿ ಹುಟ್ಟಿದವರ ಫಲಗಳು ಮುಂದೆ ಪ್ರತ್ಯೇಕವಾಗಿ ಹೇಳಲ್ಪಟ್ಟಿರುತ್ತೆ.

## ರುಚಕಯೋಗ ಜನ್ಮಫಲಂ

ಶ್ಲೋಕ।। ದೀರ್ಘಾಯುಃ ಸ್ವಚ್ಛಕಾಂತಿರ್ಬಹುರುಧಿರಬಲಃ ಸಾಹಸಾವಾಪ್ತ ಸಿದ್ಧಿಶ್ಚಾರುಭ್ರೂರ್ನೀಲಕೇಶಃ ಸಮಕರಚರಣೋ ಮಂತ್ರವಿಚ್ಚಾರ್ರುಕೀರ್ತಿಃ । ರಕ್ತಶ್ಯಾ ಮೋತಿಶೂರೋರಿಪು ಬಲಮಥನಃ ಕುಬುಕಂಠೋಮಹೌಜಾಃ ಕ್ರೂರೋಭಕ್ತೋ ಮರಾಣಾಂ ದ್ವಿಜಗುರುಃ ವಿನತಃ ಕ್ಷಾಮಜಾನೂರುಜಂಘಃ ।।೫೬।। ಖಟ್ವಾಂಗ ಪಾಶವೃಷ ಕಾರ್ಮುಕ ಚಕ್ರವೀಣಾ ವಜ್ರಾಂಕಹಸ್ತಚರಣಃ ಸರಲಾಂಗುಲಿಃಸ್ಯಾತ್।

* ಅವನಿಸೂನುಮುಖ್ಯೈಃ।। ಕುಜ, ಬುಧ, ಗುರು, ಶುಕ್ರ, ಶನಿ ಎಂದರ್ಥವು.

ಮಂತ್ರಾಭಿಚಾರಕುಶಲಸ್ತುಲಯೋ ತ್ವಹಸ್ರಂ ಮಧ್ಯಂಚ ತಸ್ಯಗದಿತಂ ಮುಖದೈರ್ಘ್ಯತುಲ್ಯಂ ||೫೭|| ಸಹ್ಯಸ್ಯವಿಂಧ್ಯಸ್ಯ ತಥೋಜ್ಜಯಿನ್ಯಾಃಪ್ರಭುಃ ಶರತ್ಸಪ್ತತಿ ಜೀವಿತೋಸೌ ಶಸ್ತ್ರಾಗ್ನಿಚಿನ್ಹೋ ರುಚಕಾಭಿಧಾನೇ ದೇವಾಲಯೇ ತನ್ನಿದನಂ ಪ್ರಯಾತಿ ||೫೮||

ತಾ|| ಯಾವ ಜಾತಕನು ರುಚಕವೆಂಬುವ ಯೋಗದಲ್ಲಿ ಜನ್ಮಿಸುವನೋ ಆ ಮಹಾಪುರುಷನು, ದೀರ್ಘಾಯೂ, ಉತ್ತಮನಾದ ಕಾಂತಿವಂತ, ಅತಿಬಲಿಷ್ಠ ಶರೀರದಲ್ಲಿ ಪುಷ್ಕಳರಕ್ತವಿರುವವನೂ, ಸಾಹಸವಾದ ಕಾರ್ಯಗಳನ್ನು ಮಾಡುವವನೂ, ಉತ್ತಮವಾದ ಹುಬ್ಬುಗಳುಳ್ಳವನೂ, ತಲೆಗೂದಲು ನೀಲವರ್ಣ ವಾಗಿರುವವನೂ, ಸಮವಾದ ಕರಚರಗಳುಳ್ಳವನೂ, ಮಂತ್ರವಿದ್ಯೆಯನ್ನು ತಿಳಿದವನೂ, ಒಳ್ಳೇ ಯಶಸ್ಸುಳ್ಳವನೂ, ಎಣ್ಣೆಗೆಂಪಾದ ಕರ್ಣಗಳುಳ್ಳವನೂ (ಶ್ಯಾಮಲವರ್ಣ) ಶೂರನೂ, ಶತ್ರುಸೈನ್ಯವನ್ನು ನಾಶಮಾಡುವವನೂ, ಶಂಖಾ ಕೃತಿಕಂಠವುಳ್ಳವನೂ, ಅತಿಶಯಪುರುಷಾರ್ಥಿ. ಕ್ರೂರವಾದ ಸ್ವಭಾವವುಳ್ಳವನೂ, ದೇವರಲ್ಲಿ ಭಕ್ತಿಯುಳ್ಳವನೂ, ಗುರು ಬ್ರಾಹ್ಮಣರಲ್ಲಿ ನಮ್ರತೆಯುಳ್ಳವನೂ, ಮೊಣಕಾಲು, ತೊಡೆ ಕೃಶವಾಗಿರುವವನೂ, ಖಡ್ಗ, ಪಾಶ, ವೃಷಭ, ಧನುಸ್ಸು, ಚಕ್ರ, ವೀಣಾ, ವಜ್ರ, ಮೊದಲಾದ ಚಿನ್ಹೆಗಳುಳ್ಳವನೂ, ಸರಳವಾದ ಬೆರಳುಗಳುಳ್ಳವನೂ, ಮಂತ್ರ ವಿದ್ಯೆ (ಅಭಿಚಾರ ಜಾರಣ ಮಾರಣ)ಯಲ್ಲಿ ಕುಶಲನೂ, ದೊಡ್ಡದಾದ ಬಾಯಿ ಮತ್ತು ಕಟಿಪ್ರದೇಶವುಳ್ಳವನೂ, ಸಹ್ಯಪರ್ವತ, ವಿಂಧ್ಯಾಚಲ, ಉಜ್ಜಯಿನೀ, ಈ ಪ್ರದೇಶಗಳಲ್ಲಿ ರಾಜ್ಯಭಾರ ಮಾಡುವವನೂ, ೭೦ ವರ್ಷದ ಆಯುಸ್ಸುಳ್ಳವನೂ, ಬೆಂಕಿ ಅಥವಾ ಶಸ್ತ್ರದಿಂದುಂಟಾದ ಶರೀರ ಚಿನ್ಹೆಯುಳ್ಳವನು ಮತ್ತು ದೇವಾಲಯದಲ್ಲಿ ಕಳೇಬರವನ್ನು ಬಿಡುವವನೂ ಆಗುತ್ತಾನೆ. ||೫೮|| ಇತಿ ರುಚಕಪುರುಷ ಲಕ್ಷಣಂ.

## ಭದ್ರಕಯೋಗ ಜನ್ಮಫಲಂ

ಶ್ಲೋಕ|| ಶಾರ್ದೂಲ ಪ್ರತಿಮಾನನೋ ದ್ವಿಪಗತಿಃ ಪೀನೋರು ವಕ್ಷ ಸ್ಥಳೋಲಂಬಾ ಪೀನಸುವೃತ್ತಬಾಹು ಯುಗಲಸ್ತ ತ್ತುಲ್ಯಮಾನೋಚ್ಛ್ರಯಃ || ಕಾಮೀಕೋಮಲ ಸೂಕ್ಷ್ಮರೋಮ ನೀಚಯೈಃ ಸುರುದ್ಧ ಗಂಡಸ್ಥಲ ಪ್ರಾಜ್ಞಃ ಪಂಕಜ ಗರ್ಭಪಾಣಿಚರಣ ಸ್ಸತ್ವಾಧಿಕೋಯೋಗವಿತ್ ||೫೯|| ಶಂಖಾಸಿ ಕುಂಜರಗದಾಕಂಸುಮೇಷು ಕೇತುಚಕ್ರಾಬ್ಜಲಾಂಗಲ ವಿಚಿನ್ಹಿತಪಾಣಿಪಾದಃ | ಯಾತ್ರಾಗಜೇಂದ್ರ ಮದವಾರಿಕೃತಾರ್ದ್ರಭೂಮಿಃ ಸತ್ಕುಂಕುಮ ಪ್ರತಿಮಗಂಧ ತನುಃ ಸುಘೋಷಃ || ಸದ್ರೂಪಗೋತಿ ಮತಿರ್ಮಾ ಖಲುಶಾಸ್ತ್ರವೇತ್ತಾ ಮಾನೋಪಭೋಗ

ಸಹಿತೋತಿ ನಿಗೂಢಗುಹ್ಯಃ । ಸತ್ಕುಕ್ಷಿಧರ್ಮನಿರತಃ ಸುಲಲಾಟಪಟ್ಟೋಧೀರೋ ಭವೇದಸಿತ ಕುಂಚಿತಕೇಶಪಾಶಃ ॥೬೦॥ತಾ॥ ಯಾವ ಮನುಷ್ಯನು ಭದ್ರಕಯೋಗದಲ್ಲಿ ಜನ್ಮಿಸುತ್ತಾನೋ ಆ ಮಹಾಪುರುಷನು ಸಿಂಹಸಮಾನನು. ದೊಡ್ಡದಾದ ಬಾಯಿಯುಳ್ಳವನು. ಗಜದಂತೆ ನಡಿಗೆಯುಳ್ಳವನು, ವಿಸ್ತಾರವಾದ ಪೃಷ್ಠಭಾಗವುಳ್ಳವನು, ವಿಶಾಲವಾದ ವಕ್ಷಸ್ಥಳವುಳ್ಳವನು, ಮೊಣಕಾಲುವರಿಗೂ ಗೋಳಾಕಾರವಾಗಿರುವನು, ಹಸ್ತ ಅತಿಶಯ ಉದ್ದವೂ ಗಿಡ್ಡವು ಇಲ್ಲದೆ ಸಮಾಕೃತಿಯುಳ್ಳವನು. ಅತಿಶಯವಿಷಯಾಶಕ್ತಿಯುಳ್ಳವನು, ಮೃದುವಾಗಿಯೂ ಮತ್ತು ತೆಳುವಾದಗಲ್ಲ (ಕಪೋಲ) ಉಳ್ಳವನು, ಬುದ್ಧಿವಂತ, ಕಮಲದ ದಳಗಳ ಒಳಗಿರುವಂತೆ ಕೆಂಪಾದ ಕರ (ಹಸ್ತ) ಚರಣಗುಳ್ಳಳವನು, ದೊಡ್ಡಪುರುಷಾರ್ಥಿಯು, ಅನೇಕಪ್ರಕಾರವಾದ ಯೋಗಗಳನ್ನು ತಿಳಿದವನು. ಶಂಖ, ಖಡ್ಗ, ಗಜ, ಗದಾ, ಪುಷ್ಪ, ಬಾಣ, ಧ್ವಜ, ಚಕ್ರ, ಕಮಲ, ಹಲ, ಇತ್ಯಾದಿ ಚಿನ್ಹೆಗಳಿಂದ ಕೂಡಿದ ಕರಚರಣಗಳುಳ್ಳವನು. ಯಾತ್ರಾಕಾಲದಲ್ಲಿ ಮದಿಸಿದಗಜದಂತೆ ಭೂಮಿಯನ್ನು ಆರ್ದ್ರವಾಗಿ ಮಾಡುವವನು. ಉತ್ತಮವಾದ ಕೇಸರವರ್ಣದಹಾಗಿರುವ ಶರೀರಕಾಂತಿಯುಳ್ಳವನು, ಉತ್ತಮವಾದ ಗಂಭೀರ ಧ್ವನಿಯುಳ್ಳವನು. ಅತಿಶಯರೂಪವಂತನೂ, ಬುದ್ಧಿವಂತನೂ, ಶಾಸ್ತ್ರವನ್ನು ಚೆನ್ನಾಗಿ ತಿಳಿದವನೂ, ಮಾನ ಮತ್ತು ಭೋಗಯುಕ್ತನೂ, ಅತಿಶಯವಾಗಿ ಅಂತರಂಗವಾದ ಮಾತುಗುಳುಳ್ಳವನು. ಸತ್ಕುಕ್ಷಿಯುಳ್ಳವನು, ಧರ್ಮದಲ್ಲಿ ನಿರತನೂ, ಸುಂದರವಾದ ಹಣೆಯುಳ್ಳವನೂ, ಧೀರನೂ, ಗುಂಗುರುಕೂದಲುಳ್ಳವನೂ, ಈ ಮೊದಲಾದ ಲಕ್ಷಣಾಗಳುಳ್ಳವನು ॥ಶ್ಲೋಕ॥ ಸ್ವತಂತ್ರಸ್ಸರ್ವಕಾರ್ಯೇಷು ಸ್ವಜನಂಪ್ರತಿನಕ್ಷಮೀ । ಭುಜ್ಯತೇವಿಭವಸ್ತಸ್ಯ ನಿತ್ಯಮರ್ಥಿಜನೈಃ ಪರೈಃ ॥೬೨॥ ಭಾಲೇತುಲಾಯಾಂತು ಭವೇತ್ಸುರತ್ನೈಃ ಶ್ರೀಕನ್ಯಕುಬ್ಜಾಧಿಪತಿರ್ಭವೇತ್ಸಃ । ಭದ್ರೋದ್ಭವಃ ಪುತ್ರಕಳತ್ರ ಸೌಖ್ಯೋಜೀವೇನ್ನೃಪಾಲಃಶರದಾಮಶೀತಿಮ್ ॥ ತಾ ॥ ಸರ್ವಕಾರ್ಯದಲ್ಲಿ ಸ್ವತಂತ್ರನೂ, ಸ್ವಜನರಲ್ಲಿ ಕ್ಷಮೆ ಇಲ್ಲದವನು, ಅನೇಕ ಯಾಚಕರಿಗೆ ವೈಭವದ ಭೋಗಕೊಡಲುಳ್ಳವನೂ, ತಲೆಯಮೇಲೆ ರತ್ನದಭೂಷಣಧಾರಣೆ ಮಾಡುವವನೂ, ಕನ್ಯಾಕುಬ್ಜ ದೇಶಕ್ಕೆ ರಾಜನಾಗಿ ಅತಿಶಯಪತ್ನೀ ಪುತ್ರಪೌತ್ರಾದಿ ಸಂಪತ್ತುಗಳಿಂದ ೮೦ ವರ್ಷಗಳವರಿಗೆ ಜೀವಿಸುವವನೂ ಆಗುತ್ತಾನೆ.

ಇತಿ ಭಧಕಯೋಗ ಪುರುಷಲಕ್ಷಣಂ

## ಹಂಸಕಯೋಗ ಜನ್ಮಫಲಂ

ಶ್ಲೋಕ॥ ರಕ್ತಾಸ್ಯೋನ್ನತನಾಸಿಕಃ ಸುಚರಣೋಪೇತಃ ಪ್ರಸನ್ನೇಂದ್ರಿಯಃಸ್ಸೌರಃ ಪೀನಕಪೋಲ ರಕ್ತಕರಜೋ ಹಂಸಸ್ಸನನಃ ಶ್ಲೇಷ್ಮಲಃ ॥ ಶಂಖಾಬ್ಜಾಂಕುಶ ಮತ್ಸ್ಯದಾಮಯುಗಲೈಃ ಖಟ್ವಾಂಗಮಾಲಾ ಘಟೈಶ್ಚಂಚತ್ಪಾದಕರಸ್ಥಲೋ ಮಧುನಿಭೇನೇತ್ರೇಸುವೃತ್ತಂ ಶಿರಃ ॥೬೪॥ ಜಲಾಶಯಪ್ರೀತಿರತೀವ ಕಾಮೀನಯಾತಿ ತೃಪ್ತಿಂ ವನಿತಾಸೂಸೂನಂ । ಉಚ್ಛೋಂಗುಲೈರ್ವ್ಯೆಷಡಶೀತಿ ತುಲ್ಯೈರಾಯುರ್ಭ ವೇತ್ಷಣ್ಣವತಿಪ್ರಮಾನಮ್ ॥೬೫॥ ಬಾಹ್ಲೀಕದೇಶಾಂತರ ಶೂರಸೇನಗಾಂಧರ್ವ ಗಂಗಾ ಯಮುನಾಂತರಾಲವನ್ । ಭಕ್ತಾವನಾಂತೇನಿಧನಂ ಪ್ರಯಾತಿ ಹಂಸೋಯಮುಕ್ತೋಮುನಿಭಿಃ ಪುರಣ್ಯೈಃ ॥೬೬॥ತಾ॥ ಯಾವ ಮನುಷ್ಯನು ಹಂಸಯೋಗದಲ್ಲಿ ಜನ್ಮಿಸುತ್ತಾನೆಯೋ ಆ ಮಹಾಪುರುಷನು, ಅರುಣವರ್ಣವಾದ ಶರೀರ ಕಾಂತಿಯುಳ್ಳವನು, ಉನ್ನತವಾದ ನಾಸಿಕವುಳ್ಳವನು, ಸುಂದರವಾದ ಪಾದಗಳುಳ್ಳವನು, ಪ್ರಸನ್ನವಾದ ಮನಸ್ಸುಳ್ಳವನು, ಸೌರವರ್ಣವಾದ ಕಪೋಲವುಳ್ಳವನು. ಕೆಂಪಾದ ಉಗುರುಗಳುಳ್ಳವನು, ಶಂಖ, ಕಮಲ, ಅಂಕುಶ, ಮತ್ಸ್ಯ, ಎರಡುರಜ್ಜು ಚಿನ್ಹೆಗಳುಳ್ಳವನು, ಖಟ್ವಾಂಗ (ಪರ್ಯಂಕ) ಮಾಲಾ, ಕಲಶ, ಇತ್ಯಾದಿಲಕ್ಷಣಗಳು ಕರಚರಣಗಳಲ್ಲಿ ಉಳ್ಳವನು. ಕಮಲದೋಪಾದಿಯಲ್ಲಿ ನೇತ್ರಗಳುಳ್ಳವನು, ದುಂಡಾದ ಶಿರಸ್ಸುಳ್ಳವನು, ಜಲಾಶಯದಲ್ಲಿ ಪ್ರೀತಿಯುಳ್ಳವನು. ಸ್ತ್ರೀವಿಷಯದಲ್ಲಿ ಇಚ್ಛೆಯೂ, ಯಾವಾಗಲೂ ತೃಪ್ತಿ ಹೊಂದದಿದ್ದವನು, ಉದ್ದವಾದ ಅಂಗುಲಿಗಳುಳ್ಳವನು ೯೬ ವರ್ಷ ಆಯುಸ್ಸುಳ್ಳವನು ಮತ್ತು ಬಾಹ್ಲೀಕ, ಶೂರಸೇನ, ಗಾಂದಾರದೇಶ ಮತ್ತು ಗಂಗಾ ಯಮುನಾ ಮಧ್ಯದೇಶಗಳಲ್ಲಿ ರಾಜ್ಯಭಾರಮಾಡುವವನು ಅರಣ್ಯದಲ್ಲಿ ದೇಹ ತ್ಯಾಗ ಮಾಡುವವನೂ ಆಗುತ್ತಾನೆಂದು ಪೂರ್ವದ ಋಷಿಗಳು ಹೇಳಿರುತ್ತಾರೆ. ॥೬೪-೬೫-೬೬॥

## ಮಾಲವ್ಯಯೋಗ ಜನ್ಮಫಲಂ

ಶ್ಲೋಕ॥ ಅಸ್ಥೂಲೋಷ್ಠೋಥಚ ವಿಷಮವಪುರ್ನೈವ ರಿಕ್ತಾಂಗಸಂಧಿ । ಮಧ್ಯೇ ಕ್ಷಾಮಃ ಶಶಧರರುಚಿ ರ್ಹಸ್ತಿನಾಸಃಸುಗಂದಃ ॥ ಸದ್ದೀಪ್ತಾಕ್ಷಃ ಸಮಸಿತರದೋ ಜಾನುದೇಶಾ ಪ್ತಪಾಣಿರ್ಮಾಲವ್ಯೋಯಂ ವಿಲಸತಿನೃಪಃ ಸಪ್ತತಿ ರ್ವತ್ಸರಾಣಾಂ ॥೬೭॥ ವಕ್ತ್ರಂತ್ರಯೋದಶಸಮಾಂಗುಮಸ್ಯದೀರ್ಘಂತಿರ್ಯಗ್ದ ಶಾಂಗುಲ ಮಿತಂಶ್ರವಣಾಂತರಾಲಮ್ । ಮಾಲವ್ಯಾಸಂಜ್ಞನೃಪತೇಃ ಸಭುನಕ್ತಿನೂನು ಲಲಾಟಾಂಶ್ಚ ಮಾಲವಕ ಸಿಂಧುಸಂಪಾರಿ ಯಾತ್ರಾನ್ ॥೬೮॥ತಾ॥ ಯಾವ ಮನುಷ್ಯನು ಮಾಲವ್ಯಯೋಗದಲ್ಲಿ ಹುಟ್ಟಿರುವನೋ ಆ ಮಹಾಪುರುಷನ ಲಕ್ಷಣಗಳು ಹೇಳಲ್ಪಡುತ್ತೆ.

ಮಾಲವ್ಯಯೋಗದಲ್ಲಿ ಹುಟ್ಟಿದವನು. ದೊಡ್ಡ ತುಟಿಗಳುಳ್ಳವನು. ಹೆಚ್ಚುಕಡಿಮೆಯಾಗಿ ಶರೀರಸಂಧಿಗಳುಳ್ಳವನು. ಪುಷ್ಟಿಕರವಾದ ಶರೀರವುಳ್ಳವನು, ಕ್ಷಾಮವಾದ ಕಟಿಪ್ರದೇಶವುಳ್ಳವನು, ಚಂದ್ರನೋಪಾದಿಯಲ್ಲಿ ಕಾಂತಿಯುಳ್ಳವನು, ಗಜದೋಪಾದಿಯಲ್ಲಿ ಮೂಗುಳ್ಳವನು. ಸುಂದರವಾದ ಕಂಠವುಳ್ಳವನು. ಹಸ್ತ, ನೇತ್ರಗಳು, ಪ್ರಕಾಶಮಾನವಾದ ಉಗುರುಳ್ಳವನು, ಶುಭ್ರವಾದ ದಂತಗಳುಳ್ಳವನು. ಅಜಾನುಬಾಹುವಾದವನು, ೬೦ ವರ್ಷ ಪರ್ಯಂತ ಆಯುಸ್ಸುಳ್ಳವನು ಮತ್ತು ೧೩ ಅಂಗುಲ ಮುಖವುಳ್ಳವನು, ಭ್ರೂಮಧ್ಯದಿಂದ ಕರ್ಣದವರಿಗೆ ೧೦ ಅಂಗುಲ ಅಗಲವಿರುವವನು, ವಿಶಾಲವಾದ ಹಣೆಯುಳ್ಳವನು ಮತ್ತು ಈತನು ಲಳಾಟ, ಮಾಲವದೇಶ, ಸಿಂಧುದೇಶ, ಪಾರಿಯಾತ್ರ ಮೊದಲಾದ ದೇಶದಲ್ಲಿ ರಾಜ್ಯಭಾರ ಮಾಡುವವನೂ ಆಗುವನು ॥೬೭-೬೮॥

## ಶಶಕಯೋಗ ಜನ್ಮಫಲಂ

ಶ್ಲೋಕ॥ ಲಘುದ್ವಿಜಾಸ್ಯೋದ್ರುತಗಃ ಸಕೋಪಃ ಶಠೋತಿಶೂರೋಪಿ ಜನಪ್ರಚಾರಃ ವನಾದ್ರಿದುರ್ಗೇಷು ನದೀಷುಸಕ್ತಃ ಪ್ರಿಯಾತಿಥಿರ್ನಾತಿ ಲಘುಪ್ರಸಿದ್ಧಃ ॥೬೯॥ ನಾನಾಸೇನಾನಿಚಯನಿರೋತ ದಂತುರಶ್ಚಾಪಿ ಕಿಂಚಿದ್ಧಾತೋರ್ವಾದೇ ಭವತಿ ಕುಶಲಶ್ಚಂಚಲಃ ಕೋಲನೇತ್ರಃ । ಸ್ತ್ರೀಸಂಸಕ್ತಃ ಪರಧನಹರೋ ಮಾತೃಭಕ್ತಃ ಸುಜಂಘೋಮಧ್ಯೇಕ್ಷಾಮಃ ಸುಲಲಿತಮತೀರಂಧ್ರವೇ ದೀಪರೇಷಾಂ ॥೭೦॥ ಪರ್ಯಂಕಶಂಖ ಶರಶಸ್ತ್ರ ಮೃದಂಗಮಾಲಾ ವೀಣೋಪಮಾಃ ಖಲುಕರೇಚರಣೇಚ ರೇಖಾಃ ವರ್ಷಾಣಿಸಪ್ತತಿಮಿತಾನಿಕರೋತಿರಾಜ್ಯಂ ಸಮ್ಯಕ್ಕಶಾಖ್ಯನೃಪತಿಃ ಕತಿಥೋ ಮುನೀಂದ್ರೈಃ ॥೭೧॥ ತಾ॥ ಶಶಕಯೋಗದಲ್ಲಿ ಹುಟ್ಟಿದ ಮನುಷ್ಯನು ಕೃಶವಾದ ಹಸ್ತವುಳ್ಳವನು, ಚಿಕ್ಕದಾದ ಬಾಯಿ ಉಳ್ಳವನು, ಜಾಗ್ರತೆಯಾಗಿ ನಡಿಗೆಯುಳ್ಳವನು, ಬಹು ಕೋಪಿಷ್ಠನು, ಬಹು ಸುಳ್ಳು ಹೇಳುವವನು, ಶೂರನು, ನಿರ್ಜನ ಪ್ರದೇಶದಲ್ಲಿ ವಾಸಿಸುವವನು, ಅರಣ್ಯ ಪರ್ವತ ನದಿನದ ಕೋಟೆ ಇವುಗಳ ಮಧ್ಯದಲ್ಲಿ ಸಂಚಾರ ಮಾಡುವವನು, ಅತಿಥಿಪ್ರಿಯನು, ಸ್ಥೂಲವಾದ ಶರೀರವುಳ್ಳವನು, ಜಗತ್ಪ್ರಸಿದ್ಧವಾಗಿ ಸೇನಾರಚನೆ ಮಾಡುವವನು, ಹಲ್ಲು ಮುಂದೆ ಇರುವವನು, ಧಾತುವಾದದಲ್ಲಿ ಕುಶಲನು, ಅತಿಶಯ ಚಂಚಲನು, ಅರಣ್ಯದ ಸೂಕರದಂತೆ ಕಣ್ಣುಗಳುಳ್ಳವನು, ಸ್ತ್ರೀಯರಲ್ಲಿ ಆಸಕ್ತಚಿತ್ತನು, ಪರರ ದ್ರವ್ಯ ನಾಶಮಾಡುವವನೂ, ಮಾತೃಭಕ್ತನೂ, ಸ್ಥೂಲವಾದ ತೊಡೆಗಳೂ, ಚಿಕ್ಕದಾದ ಕಟಿಪ್ರದೇಶವೂ ಉಳ್ಳವನು, ಚೆಲುವಾದ ಬುದ್ಧಿಶಕ್ತಿಯಿಂದ ಪರರ ಛಿದ್ರಗಳನ್ನು ತಿಳಿಯುವವನೂ, ಹಸ್ತಪಾದಗಳಮೇಲೆ ಶಯ್ಯಾ, ಶಂಖ, ಬಾಣ, ಶಸ್ತ್ರ, ಮೃದಂಗ,

ಮಾಲಾ, ವೀಣಾದಿ ಚಿನ್ಹೆಗಳುಳ್ಳವನ್ನು, ೭೦ ವರ್ಷ ಪರ್ಯಂತ ರಾಜ್ಯಭಾರ ಮಾಡುವವನೂ ಆಗುವನು ॥೭೧॥ ಇತಿ ಶಶಕ ಮಹಾಪುರುಷ ಲಕ್ಷಣಂ.

## ಪಂಚಮಹಾಪುರುಷ ಲಕ್ಷಣಭಂಗಃ

ಶ್ಲೋಕ॥ ಕೇಂದ್ರೋಚ್ಚಗಾಯದ್ಯಪಿ ಭೂಸುತಾದ್ಯಾಮಾರ್ತಾಂಡ ಶೀತಾಂಶಯುತಾಭವಂತಿ । ಕುರ್ವಂತಿ ನೋರ್ವೀಪತಿ ಮಾತ್ಮಪಾಕೇಯಚ್ಛಂತಿತೇ ಕೇವಲ ಸತ್ಫಲಾನಿ ॥೭೨॥ ಈ ಮೇಲೆ ಹೇಳಿದ ಪಂಚಮಹಾಪುರುಷಲಕ್ಷಣಗಳಲ್ಲಿ ಕುಜ, ಬುಧ, ಗುರು, ಶುಕ್ರ, ಶನಿ ಈ ೫ ಗ್ರಹಗಳು, ಕೇಂದ್ರದಲ್ಲಿ ಉಚ್ಚರಾಗಿದ್ದರೆ, ಫಲವು ಈ ಮೇಲೆ ಹೇಳಲ್ಪಟ್ಟಿದೆ. ಈ ಯೋಗಗಳಲ್ಲಿ ಹುಟ್ಟಿದರೂ ಅದೇ ಯೋಗದಲ್ಲಿಯೇ ರವಿ, ಚಂದ್ರರು ಏಕತ್ರ ಇದ್ದರೆ, ಅವರಿಗೆ ರಾಜಯೋಗ ಪ್ರಾಪ್ತಿಯಾಗುವುದಿಲ್ಲ. ಕೇವಲ ಧನಪ್ರಾಪ್ತಿಯಿಂದ ಸುಖವುಳ್ಳವರಾಗುವರು.

## ರಾಜಯೋಗಭಂಗ ವಿಚಾರಃ

ಅವತಾರಿಕೆ॥ ವರಾಹಮಿಹಿರಾಚಾರ್ಯರು ರಾಜಯೋಗವನ್ನು ಹೇಳಿದರೇ ಹೊರತು ರಾಜಯೋಗಭಂಗವನ್ನು ಹೇಳಲಿಲ್ಲ. ಇದರಿಂದ ಈ ಪ್ರಕರಣದ ಪ್ರಕಾರ ರಾಜಯೋಗಗಳು ಅನೇಕ ಜಾತಕಗಳಲ್ಲಿ ಕಂಡುಬರುತ್ತವೆ. ಆದರೆ ರಾಜತ್ವವು ಮಾತ್ರ ಪ್ರಾಪ್ತಿಯಾಗುವುದಿಲ್ಲ. ಇದಕ್ಕೆ ಕಾರಣವನ್ನು ತಿಳಿಯಬೇಕಾದದ್ದು ಅವಶ್ಯಕವಾಗಿರುತ್ತೆ. ಪರಾಶರರು ರಾಜಯೋಗಭಂಗ ಪ್ರಕರಣವನ್ನು ಸಮಗ್ರವಾಗಿ ಉದಹರಿಸಿರುತ್ತಾರೆ. ಅದು ಇಲ್ಲಿ ಅವಶ್ಯಕವಾಗಿ ತಿಳಿಯಪಡಿಸಬೇಕಾದ ವಿಷಯವಾಗಿರುತ್ತೆ. ಆದ್ದರಿಂದ ಶತ್ರುಕ್ಷೇತ್ರಗತಃ ಸರ್ವೈಃ ಎಂಬುವ ಶ್ಲೋಕದಿಂದ ಹನ್ನೊಂದು ಶ್ಲೋಕದವರಿಗೂ ಹೇಳಲ್ಪಟ್ಟಿರುತ್ತೆ.

ಶ್ಲೋಕ॥ ಶತ್ರುಕ್ಷೇತ್ರಗತೈ ಸ್ಸರ್ವೈಃ ವರ್ಗೋತ್ತಮಯುತೈರಪಿ । ರಾಜಯೋಗಾ ವಿನಶ್ಯಂತಿ ಬಹುಭಿರ್ನೀಚಗೈರ್ಗ್ರಹೈಃ ॥೭೩॥ತಾ॥ ಯಾರ ಕಾಲದಲ್ಲಿ ರಾಜಯೋಗ ಜಾತಕವಾಗಿರುತ್ತೋ ಪರಂತು ರಾಜಯೋಗಕಾರಕಗ್ರಹಗಳನ್ನು ಬಿಟ್ಟು ಉಳಿದ ಗ್ರಹಗಳು ಅವರವರ ವರ್ಗೋತ್ತಮಾಂಶೆಯಲ್ಲಿದ್ದಾಗ್ಯೂ ಶತ್ರುಕ್ಷೇತ್ರದಲ್ಲಾಗಲಿ ನೀಚ ಕ್ಷೇತ್ರದಲ್ಲಾಗಲಿ ಅಥವಾ ನೀಚಧ್ರುವದಲ್ಲಿದ್ದರೂ ರಾಜಯೋಗವನ್ನು ನಾಶಮಾಡುತ್ತಾರೆ. ॥೭೩॥

ಶ್ಲೋಕ॥ ಚಂದ್ರಂವಾಯದಿವಾಲಗ್ನಂ ಗ್ರಹೋನೈಕೋಪಿವೀಕ್ಷತೇ । ತಥಾಪಿ ರಾಜಯೋಗಾನಾಂ ಭಂಗಮಾಹ *ಮಹೀಪತೇಃ ॥೭೪॥ತಾ॥ ಯಾರ ಜನ್ಮ

* ಪರಾಶರಃ । ಇತಿ ಪಾ॥ ಜಾತಕಾಭರಣೇ

ಕಾಲದಲ್ಲಿ ರಾಜಯೋಗವಿರುತ್ತೋ ಅವರ ಜಾತಕದಲ್ಲಿ ಚಂದ್ರನಿಗಾಗಲೀ, ಜನ್ಮಲಗ್ನಕ್ಕಾಗಲಿ, ಯಾವುದಾದರೂ ಒಂದು ಗ್ರಹದ ದೃಷ್ಟಿಯಿಲ್ಲದೆ ಹೋದರೆ ರಾಜಯೋಗವು ಭಂಗವಾಗಿ ಹೋಗುತ್ತೆಂದು ಪರಾಶರರು ಹೇಳಿರುತ್ತಾರೆ.

ಶ್ಲೋಕ॥ ಸ್ವಾಂಶೇರವೌ ಶೀತಕರೇ ವಿನಷ್ಟೇ ದೃಷ್ಟೇಚ ಪಾಪೈಃ ಶುಭ ದೃಷ್ಟಿಹೀನೇ। ಕೃತ್ವಾಪಿರಾಜ್ಯಂಚ್ಯವತೇ ಮನುಷ್ಯಃ ಪಶ್ಚಾತ್ತು ದುಃಖಂ ಲಭತೇ ಹತಾಶಃ ॥೭೫॥ ಯಾರ ಜನ್ಮಲಗ್ನದಲ್ಲಿ ಸೂರ್ಯನು ಸ್ವ ನವಾಂಶೆಯಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟು ಶುಭಗ್ರಹಗಳಿಂದ ನೋಡಲ್ಪಡದಿದ್ದರೆ ಜಾತಕನು ರಾಜ್ಯಭಾರಮಾಡುವವನಾಗಿದ್ದರೂ ರಾಜ್ಯಭ್ರಷ್ಟನಾಗುತ್ತಾನೆ ಮತ್ತು ಪುನಃಪ್ರಾಪ್ತಿ ಆಗುವುದೆಂದು ಆಶಾರಹಿತನಾಗಿ ಅತಿಶಯ ದುಃಖವನ್ನು ಹೊಂದುವನು ॥೭೫॥

ಶ್ಲೋಕ॥ ಉಲ್ಕಾವ್ಯತೀಪಾತದಿನೇ ತಥೈವನೈರ್ಘಾತಿಕೇ ಕೇತು ಸಮುದ್ಭವೇವಾ। ಚೇದ್ರಾಜಯೋಗೇಪಿ ಚಯಸ್ಯ ಸೂತಿರ್ನರೋದರಿದ್ರೋತಿತರಾಂ ಭವೇತ್ಸಃ ॥೭೬॥ ಯಾರಜನ್ಮಕಾಲದಲ್ಲಿ ರಾಜಯೋಗವಿರುತ್ತದೋ ಆ ಮನುಷ್ಯನು ಉಲ್ಕಾಪಾತ ಅಥವಾ ವ್ಯತೀಪಾತ ಮತ್ತು ನಿರ್ಘಾತದಲ್ಲಿ ಅಥವಾ ಕೇತೋದಯದಲ್ಲಿ ಜನ್ಮವಾಗಿದ್ದರೆ ರಾಜಯೋಗ ನಾಶವಾಗಿ ದುಃಖವನ್ನು ಹೊಂದುತ್ತಾನೆ ॥೭೬॥

ಶ್ಲೋಕ॥ ತುಲಾಯಾಂ ನಲಿನೀ ನಾಥಃ ಪರಮಂ ನೀಚ ಮಾಶ್ರಿತಃ । ನಿರ್ದಿಷ್ಟ ರಾಜಯೋಗಾನಾಂ ದಲನಾಯಮಹೀಪತೇಃ ॥೭೭॥ತಾ॥ ಯಾರ ಜನ್ಮಕಾಲದಲ್ಲಿ ರಾಜಯೋಗವಿದ್ದಾಗ್ಯೂ ಸೂರ್ಯನು ತುಲಾರಾಶಿಯ ೯ನೇ ಭಾಗದಲ್ಲಿದ್ದರೆ ರಾಜಯೋಗವೆಲ್ಲವೂ ನಾಶವಾಗಿ ದರಿದ್ರನಾಗುವನು ॥೭೭॥

ಶ್ಲೋಕ॥ ಮೃಗಲಗ್ನೇ ಸುರಾಚಾರ್ಯಃ ಪರಮಂನೀಚಮಾಶ್ರಿತಃ । ರಾಜಯೋಗೋದ್ಭವಸ್ಯಾಪಿ ಕುರುತೇತಿ ದರಿದ್ರತಾಮ್ ॥೭೮॥ತಾ॥ ಮಕರರಾಶಿ ಯಲ್ಲಿ ಬೃಹಸ್ಪತಿಯು ಪರಮನೀಚಧ್ರುವದಲ್ಲಿ ೫ನೇ ಭಾಗದನಂತರ ಇದ್ದರೆ, ರಾಜಯೋಗವಿದ ಜಾತಕನಾದರೂ ಅತಿದರಿದ್ರನಾಗುವನು ॥೭೮॥

ಶ್ಲೋಕ॥ ವಾಚಸ್ಪತಾ ವಸ್ತಗತೇ ಗ್ರಹೇಂದ್ರಾಸ್ತ್ರಯೋಪಿ ನೀಚೇಷು ಘಟೇವಿಲಗ್ನೇ। ಏಕೋಪಿನೀಚೇ ದಶಮೇಪಿಪಾಪೋ ಭೂಪಾಲಯೋಗಾವಿಲಯಂ ಪ್ರಯಾಂತಿ ॥೭೯॥ತಾ॥ ಯಾರ ಜನ್ಮಕಾಲದಲ್ಲಿ ಬೃಹಸ್ಪತಿಯು ಅಸ್ತನಾಗಿದ್ದು ಮೂರು ಗ್ರಹಗಳು ನೀಚದಲ್ಲಿದ್ದು ಕುಂಭಲಗ್ನಜಾತಕವಾಗುವುದೋ ಅಥವಾ ಯಾವುದಾದರೂ ಒಂದು ಗ್ರಹವು ದಶಮದಲ್ಲಿ ನೀಚದಲ್ಲಿರುತ್ತಾನೋ ಆ ಜಾತಕನಿಗೆ ರಾಜಯೋಗವು ನಾಶವಾಗಿ ಹೋಗುವುದು.

ಶ್ಲೋಕ॥ ಪ್ರಸೂತೌ ದಾನವಾಮಾತ್ಯಃ ಪರಮಂ ನೀಚಮಾಶ್ರಿತಃ ॥ ಕರೋತಿ ಪತನಂ ನೂನಂ ಮಾನವಾನಾಂ ಮಹಾಪದಾತ್ ॥೮೦॥

ತಾ॥ ಜನನಕಾಲದಲ್ಲಿ ಶುಕ್ರನು ನೀಚನಾಗಿದ್ದು ರಾಜಯೋಗವಿದ್ದರೆ ಜಾತಕನೇ ರಾಜಪದವಿಯಲ್ಲಿದ್ದಾಗ್ಯೂ ರಾಜ್ಯಭ್ರಷ್ಟನಾಗಿ ಮಹದಾಪತ್ತಿಗೆ ಒಳಗಾಗುವನು ॥೮೦॥

ಶ್ಲೋಕ॥ ಯದಿತನುಭವ ಸಂಸ್ಥೋರಾಹುರಿಂದು ಪ್ರದೃಷ್ಟಃ ಸಹಜರಿಪು ಭವಸ್ಥಾ ಭಾನುಮಂದಾವನೇಯಾಃ । ಶುಭವಿರಹಿತ ಕೇಂದ್ರೈರಸ್ತಗೈರ್ವಾಪಿ ಸೌಮ್ಯೈರ್ಭವತಿ ನೃಪತಿಯೋಗೋವ್ಯರ್ಥ ಏವೇತಿ ಚಿಂತ್ಯಂ ॥೮೧॥ತಾ॥ ಯಾರ ಜನ್ಮಕಾಲದಲ್ಲಿ ರಾಹುಲಗ್ನದಲ್ಲಿ ಚಂದ್ರದೃಷ್ಟಿಯಿದ್ದು ಮತ್ತು ತೃತೀಯ, ಷಷ್ಠ, ಏಕಾದಶ, ಈ ಸ್ಥಾನಗಳಲ್ಲಿ ಎಲ್ಲಿಯಾದರೂ ರವಿ ಶನಿ ಕುಜರು ಸೇರಿದ್ದು, ಶುಭಗ್ರಹಗಳು ಅಸ್ತವಾಗಿ ಕೇಂದ್ರದಲ್ಲಿ ಒಂದಾದರೂ ಶುಭಗ್ರಹವಿಲ್ಲದಿದ್ದರೆ ರಾಜಯೋಗವಿದ್ದರೂ ವ್ಯರ್ಥವಾಗುವುದು ॥೮೧॥

ಶ್ಲೋಕ॥ ಸರ್ವೇಷು ಪಾಪಾ ಯದಿ ಕಂಟಕೇಷು ನೀಚಾರಿಗಾನೋ ಶುಭದೃಷ್ಟಿಯುಕ್ತಾಃ । ನೀಚಾರಿ ರಿಃಫೇಷುಚ ಸೌಮ್ಯಸಂಜ್ಞಾರಾಜ್ಞಾಂಹಿಯೋಗಾ ವಿಲಯಂ ಪ್ರಯಾಂತಿ ।।ತಾ॥ ಜನ್ಮಕಾಲದಲ್ಲಿ ಪಾಪಗ್ರಹಗಳು ಕೇಂದ್ರದಲ್ಲಿದ್ದರೂ ಅಥವಾ ನೀಚಗ್ರಹಗಳಿದ್ದರೂ, ಶತ್ರುಕ್ಷೇತ್ರದಲ್ಲಿದ್ದರೂ ಇವರ ಮೇಲೆ ಶುಭದೃಷ್ಟಿ ಇಲ್ಲದೆ ಶುಭಗ್ರಹವೂ ನೀಚದಲ್ಲಿದ್ದರೂ ಅಥವಾ ಶತ್ರುಕ್ಷೇತ್ರದಲ್ಲಿದ್ದರೂ ದ್ವಾದಶದಲ್ಲಿದ್ದರೂ ಜಾತಕನಿಗೆ ರಾಜಯೋಗ ಪ್ರಾಪ್ತಿಯಾಗುವುದಿಲ್ಲ.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ರಾಜಯೋಗ
ನಿರೂಪಣಂನಾಮ ಏಕಾದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ರಾಜಯೋಗ ಪಂಚಮಹಾ
ಪುರುಷಲಕ್ಷಣ ರಾಜಯೋಗಭಂಗ ನಿರೂಪಣಂ
ನಾಮ ಏಕಾದಶ ಪ್ರಕರಣಂ

## ೧೨ನೇ ನಾಭಸಯೋಗಾಖ್ಯ ಪ್ರಕರಣಂ

ಅವತಾರಿಕೆ ।। ಈ ಗ್ರಂಥಕರ್ತನು ಈ ನಾಭಸಯೋಗ ಪ್ರಕರಣದಲ್ಲಿ ಗ್ರಹಯೋಗ ವಿಕಲ್ಪದಿಂದ ಹುಟ್ಟುವ ಯೋಗಗಳ ಫಲಸಹಿತವಾಗಿ ಹೇಳಿರುವನು.

ಈ ನಾಭಸಯೋಗದಲ್ಲಿ ನಾಲ್ಕು ವಿಕಲ್ಪವಿದೆ. ೧ನೆಯದು ಆಕೃತಿಯೋಗವು. ೨ನೆಯದು ಆಕೃತಿಯೋಗ ಸಂಖ್ಯಾಗೋವು. ೩ನೆಯದು ಆಕೃತಿ ಸಂಖ್ಯಾಶ್ರಯ ಯೋಗವು. ೪ನೆಯದು ಆಕೃತಿ ಸಂಖ್ಯಾಶ್ರಯದಳಯೋಗವು, ಈ ಪ್ರಕಾರ ನಾಲ್ಕು ವಿಧವಾಗಿರುತ್ತೆ. ಆಕೃತಿಯೋಗ ೨೦, ಸಂಖ್ಯಾಯೋಗ ೭, ಆಶ್ರಯಯೋಗ ೩, ದಳಯೋಗ ೨, ಅಂತು ೩೨ ಯೋಗಗಳು.

೯, ೧೦, ೮, ನ್ನು ಕ್ರಮವಾಗಿ ೩, ೩, ೪ ರಿಂದ ಗುಣಿಸಿದರೆ ೨೭, ೩೦, ೩೨ ಆಗುತ್ತದೆ. ಅರ್ಥಾತ್ ದ್ವಿವಿಕಲ್ಪಕ್ಕೆ ೨೭, ತ್ರಿವಿಕಲ್ಪಕ್ಕೆ ೩೦, ಚತುರ್ವಿಕಲ್ಪಕ್ಕೆ ೩೨ ಮತ್ತು ಯವನಾಚಾರ್ಯನು ಈ ಯೋಗಗಳನ್ನು ೧೮೦೦ ಭೇದವಾಗಿ ಹೇಳಿರುವನು. ಮತ್ತು ಕೆಲವರು ಅಸಂಖ್ಯಾತವಾದ ಭೇದವಿರುವಂತೆ ಅಭಿಪ್ರಾಯಪಟ್ಟಿರುವರು. ಅವೆಲ್ಲವೂ ಈ ಗ್ರಂಥದಲ್ಲಿ ವಿಸ್ತಾರವಾಗಿಲ್ಲ. ೩೨ಕ್ಕೆ ಮಾತ್ರ ಫಲವನ್ನು ಹೇಳಿರುತ್ತಾರೆ. ೧೮೦೦ ಯೋಗಗಳಿಗೂ ಫಲವಿಲ್ಲ. ಆದ್ದರಿಂದ ಈ ಮೇಲೆ ಹೇಳಿದ ೩೨ ಯೋಗಗಳ ಅಂತರ್ಭಾವವಾಗಿರುವಂತೆ ಅಭಿಪ್ರಾಯಪಟ್ಟು ಈ ಚಿಕ್ಕದಾದ ಪ್ರಕರಣದಲ್ಲಿ ಅವೆಲ್ಲವನ್ನೂ ಗರ್ಭಿತಮಾಡಿರುತ್ತಾರೆ.

ಇನ್ನೂ ಕೆಲವರು ಮುಂದೆ ವಿವರಿಸಿರುವಂತೆ ನಾಭಸಯೋಗಗಳಿಗೆ ಅಭಿಪ್ರಾಯಪಟ್ಟಿರುವರು. ಆಕೃತಿಯೋಗ ೧ ವಿಕಲ್ಪ, ಆಕೃತಿಸಂಖ್ಯಾಯೋಗ ೨ ವಿಕಲ್ಪ, ಆಕೃತಿಸಂಖ್ಯಾಶ್ರಯಯೋಗ ೩ ವಿಕಲ್ಪ, ಆಕೃತಿಯೋಗ ಸಂಖ್ಯಾ ಯೋಗಾಶ್ರಯ ದಳಯೋಗ ೪ ವಿಕಲ್ಪ ಎಂಬುದಾಗಿ ನಾಲ್ಕು ವಿಕಲ್ಪಗಳಾಗಿರುತ್ತವೆ. ಇದರ ಸಂಖ್ಯಾವಿವರಣೆ ಹೇಗೆಂದರೆ :- (ಇದನ್ನು ವರಾಹಮಿಹಿರಾಚಾರ್ಯರು ಅಂಗೀಕರಿಸಿ ಉದಹರಿಸಿರುತ್ತಾರೆ.)

ಮೂಲ।। ನವದಿಗ್ವಸವಸ್ತ್ರಿಕಾಗ್ನಿವೇದೈಃ ಗುಣಿತಾದ್ವಿತ್ರಿಚತುರ್ವಿಕಲ್ಪಜಾಸ್ಯುಃ ।
ಯವನೈಸ್ತ್ರಿಗುಣಾಹಿ ಷಟ್ಶತೀಸಾ ಕಥಿತಾವಿಸ್ತರತೋಽತ್ರತತ್ಸಮಾಸಃ

ಟೀಕು।। ನವದಿಗ್ವಸವಃ-ನವ ೯, ದಿಕ್ ೧೦, ವಸವಃ ೮ (೯-೧೦-೮) ಈ ಸಂಖ್ಯೆಗಳನ್ನು ಕ್ರಮವಾಗಿ ತ್ರಿಕಾಗ್ನಿ ವೇದ್ಯೈಃ, ತ್ರಿಕಃ೩, ಅಗ್ನಿ-೩, ವೇದ-೪ (೩-೩-೪) ಈ ಸಂಖ್ಯೆಗಳಿಂದ, ಗುಣಿತಾಃ-ಗುಣಿಸಿದರೆ ದ್ವಿತ್ರಿಚತುರ್ವಿಕಲ್ಪಜಾಃ- ೨, ೩, ೪, ವಿಕಲ್ಪಗಳು. ೨೭, ೩೦ ೩೨ ಯೋಗಗಳು ಸ್ಯುಃ-ಆಗುತ್ತವೆ. ಅದು ಹೇಗೆಂದರೆಃ-೯x೩=೨೭. ಇದು ದ್ವಿವಿಕಲ್ಪಯೋಗ. ೧೦x೩=೩೦, ಇದು ತ್ರಿವಿಕಲ್ಪಯೋಗ, ೮x೪=೩೨, ಇದು ಚತುರ್ವಿಕಲ್ಪಯೋಗಗಳೆಂದು ೩೨ ಯೋಗಗಳು (೨೦+೭+೩+೨=೩೨) ಆಗುತ್ತವೆ. ಆಕೃತಿಯೋಗ ೨೦, ಸಂಖ್ಯಾಯೋಗ ೭ ಅಂತು ೨೭ ಇವು ದ್ವಿವಿಕಲ್ಪಯೋಗಗಳು. ಆಕೃತಿಯೋಗ ೨೦, ಸಂಖ್ಯಾಯೋಗ ೭ ಆಶ್ರಯಯೋಗ ೩, ದಳಯೋಗ ೨, ಈ ೩೨ ಚತುರ್ವಿಕಲ್ಪವು. ಈ ವಿಧವಾದ ೩೨ ಯೋಗಗಳು, ಯವನೈಃ-ಯವನಾಚಾರ್ಯರಿಂದ, ತ್ರಿಗುಣಾ-೩ ರಿಂದ ಗುಣಿಸಿದರೆ ಷಟ್ಪತೀಹಿ. ೧೮೦೦ ನಾಭಸಯೋಗಗಳು, ವಿಸ್ತರತಃ-ವಿಸ್ತಾರವಾಗಿ ಕಥಿತಾಃ-ಹೇಳಲ್ಪಟ್ಟಿವೆ. ಶುಚಿದ್ವಜನಿಂದ ।।ಶ್ಲೋಕ।। ಸಂಸ್ಥಾನ ಸಾದೃಶ್ಯಮನಂ ತಕಂಸ್ಯಾದ್ದ್ರ್ವ್ಯಾಣಿ ಸಾಸಾಪ್ರಕೃತೀನೀ ದೃಷ್ಟ್ವಾ ।। ಎಂದು ನಾಭಸಯೋಗಗಳನ್ನು ಹೇಳಿರುವುದಕ್ಕೆ ಯವನಾಚಾರ್ಯರು ೧೮೦೦ ಯೋಗ ಸಂಖ್ಯಾನಿರ್ಣಯವನ್ನು ಹೇಳಿದರು. ಸಕಲಗ್ರಹಗಳು ಚತುರ್ಥ, ಸಪ್ತಮಗಳಲ್ಲಿದ್ದರೆ ಶಂಖಯೋಗ, ಸಪ್ತಮ, ದಶಮಗಳಲ್ಲಿದ್ದರೆ ಬಭ್ರುಯೋಗ, ದಶಮ ಚತುರ್ಥದಲ್ಲಿದ್ದರೆ, ಧ್ವಜಯೋಗ ಈ ಮೂರು ಸ್ಥಾನಗಳಲ್ಲಿದ್ದರೆ ಆಕೃತಿಯೋಗ, ಇವೆಲ್ಲವೂ ಸೇರಿದರೆ ಆಕೃತಿಯೋಗ ೨೩, ಸಂಖ್ಯಾಯೋಗ ೧೨೭ ಅದು ಹೇಗೆಂದರೆಃ- ಏಕವಿಕಲ್ಪಜ *ಯೋಗ೭, ದ್ವಿವಿಕಲ್ಪಜ ೨೧, ತ್ರಿವಿಕಲ್ಪಜ ೩೫, ಚತುರ್ವಿಕಲ್ಪಜ ೩೫, ಪಂಚವಿಕಲ್ಪಜ ೨, ಷಡ್ವಿಕಲ್ಪಜ ೭, ಸಪ್ತವಿಕಲ್ಪಜ ೧. ಈ ವಿಕಲ್ಪಸುಘಾನಘಾದಿ ಯೋಗಗಳಲ್ಲಿ ಹೇಳಲ್ಪಟ್ಟಿರುತ್ತೆ. ಇದೇ ವಿವಾಹಪಟಲದಲ್ಲಿ ।।ಶ್ಲೋಕ।। ದ್ವಿತ್ರ್ಯಾದಿಯೋಗಾ ಪರಿಹೃತ್ಯತತ್‌ಸ್ಥಾನೋಕ್ತಂ ಶತಂ ಸತ್ರಿಘನಂ ವಿಲಗ್ನೇ ।। ಎಂದು ವರಾಹ ಮಿಹಿರಾಚಾರ್ಯರಿಂದ ಹೇಳಲ್ಪಟ್ಟಿರುತ್ತೆ. ಈ ಪ್ರಕಾರ ಪೂರ್ವೋಕ್ತವಾದ ಆಕೃತಿಯೋಗ ೧೫೦ ಆಯಿತು. ಈ ಸಂಖ್ಯೆಯನ್ನು ೧೨ ರಿಂದ ಗುಣಿಸಿದರೆ ದ್ವಾದಶರಾಶಿ ಲಗ್ನಜನಿತ ೧೮೦೦ ಯೋಗಗಳ ಪೂರ್ವಯವನರಿಂದ ಹೇಳಲ್ಪಟ್ಟಿರುತ್ತೆ. ಅತ್ರ-ಈ ಬೃಹಜ್ಜಾತಕದಲ್ಲಿ, ತತ್ಸಮಾಸಃ- ೧೮೦೦ ಯೋಗಗಳನ್ನು ಸಂಗ್ರಹಮಾಡಿ ೩೨ ಯೋಗಗಳಿಂದ ೧೮೦೦ ಯೋಗಗಳಲ್ಲಿ ಹೇಳಲ್ಪಟ್ಟ ಅರ್ಥವು ಹೇಳಲ್ಪಟ್ಟಿರುತ್ತೆ. ಈ ವಿಷಯವನ್ನು ಮುಂದೆ ಸ್ಪಷ್ಟಪಡಿಸಿರುತ್ತೆ.

* ವಿಕಲ್ಪವೆಂದರೆ ಗ್ರಹಸಂಯೋಗ ಪ್ರಕಾರಾಂತರ ಭೇದಗಳು.

| ವಿಕಲ್ಪ | ಯೋಗಭವಾಃ ಆಕೃತಿ | ಸಂಖ್ಯಾ | ಆಶ್ರಯ | ದಳ | ಅಂತು |
|---|---|---|---|---|---|
| ಏಕ ವಿಕಲ್ಪ | ೨೦ | ೦ | ೦ | ೦ | ೨೦ |
| ದ್ವಿ ವಿಕಲ್ಪ | ೨೦ | ೭ | ೦ | ೦ | ೨೭ |
| ತ್ರಿವಿಕಲ್ಪ | ೨೦ | ೭ | ೩ | ೦ | ೩೦ |
| ಚತುರ್ವಿಕಲ್ಪ | ೨೦ | ೭ | ೩ | ೨ | ೩೨* |
| ಏತೇಷಾಂ ಯೋಗ | ೮೦ | ೨೧ | ೬ | ೨ | ೮೯ |

| ಯವನಾಚಾರ್ಯೋಕ್ತನಾಭಸಯೋಗ ಪ್ರಸ್ತಾಪ ಪದಕಂ | | | |
|---|---|---|---|
| ಯೋಗವಿಕಲ್ಪನಾಮಾನಿ | ಯೋಗ ಸಂಖ್ಯಾ | [illegible] | ಅಂತು ಯೋಗ |
| ಆಕೃತಿ ಯೋಗ | ೨೩ | ೧೨ರಿಂದ ಗುಣದೆಸಿ | ೨೭೬ |
| ಏಕವಿಕಲ್ಪ | ೭ | ೧೨ | ೮೪ |
| ದ್ವಿವಿಕಲ್ಪ | ೨೧ | ೧೨ | ೨೫೨ |
| ತ್ರಿವಿಕಲ್ಪ | ೩೫ | ೧೨ | ೪೨೦ |
| ಚತುರ್ವಿಕಲ್ಪ | ೩೫ | ೧೨ | ೪೨೦ |
| ಪಂಚವಿಕಲ್ಪ | ೨೧ | ೧೨ | ೨೫೨ |
| ಷಡ್ವಿಕಲ್ಪ | ೭ | ೧೨ | ೮೪ |
| ಸಪ್ತವಿಕಲ್ಪ | ೧ | ೧೨ | ೧೨ |
| ಏತೇಷಾಂ | ೧೨೭ | ೧೨ | ೧೫೨೪ |

## ಅನ್ಯಮತ ಆಶ್ರಯ ದಳಯೋಗಾಃ

**ಮೂಲ|| ರುಜ್ಜುರ್ಮುಸಲಂ ನಲಶ್ಚರಾದ್ಯೈಃರಾದ್ಯೈಃ ಸತ್ಯಶ್ಚಾಶ್ರಯಜಾಞ್ಜಗಾದಯೋಗಾಞ್ । ಕೇಂದ್ರೈಃ ಸದಸದ್ಯುಕ್ತೈ ರ್ದಲಾಖ್ಯೋ ಸ್ರಕ್ಸರ್ಪೌ ಕಥಿತೌ ಪರಾಶರೇಣ ||೨||**

ಟೀಕು|| ಸತ್ಯಾಚಾರ್ಯ ಮತ್ತೋಕ್ತವಾದ ೩ ಆಶ್ರಯ ಯೋಗಗಳನ್ನು ಪರಾಶರೋಕ್ತವಾದ ೨ ದಳಯೋಗಗಳನ್ನು ಹೇಳುತ್ತಾರೆ. ಸತ್ಯಃ-ಸತ್ಯಾಚಾರ್ಯನು, ಚರಾದ್ಯೈಃ-ಸಕಲ ಗ್ರಹಗಳು ಚರರಾಶಿಯಲ್ಲಿದ್ದರೆ ೧ ಯೋಗ, ಸ್ಥಿರರಾಶಿಯಲ್ಲಿದ್ದರೆ ೧ ಯೋಗ, ದ್ವಿಸ್ವಭಾವರಾಶಿಯಲ್ಲಿದ್ದರೆ ೧ ಯೋಗ ಕ್ರಮವಾಗಿ, ರಜ್ಜುರ್ಮುಸಲಂ

ನಲಶ್ಚ-ರಜ್ಜು, ಮುಸಲ, ನಳವೆಂಬುವ ಮೂರು ಯೋಗಗಳು, ಆಶ್ರಯಜಾ-ಆಶ್ರಯವೆಂಬುವ, ಯೋಗಾ-ಯೋಗಗಳನ್ನು, ಜಗಾದ-ಹೇಳಿದನು, ಅಂದರೆ ಸಕಲಗ್ರಹಗಳು ಚರರಾಶಿಗಳಲ್ಲಿದ್ದರೆ ರಜ್ಜುಯೋಗ, ಆ ಗ್ರಹಗಳೇ ಸ್ಥಿರರಾಶಿಗಳಲ್ಲಿದ್ದರೆ ಮುಸಲಯೋಗ, ದ್ವಿಸ್ವಭಾವ ರಾಶಿಗಳಲ್ಲಿದ್ದರೆ ನಳಯೋಗ. ಇದರಲ್ಲಿ ವಿವರಣೆ-ಸಕಲಗ್ರಹಗಳು ಮೇಷ, ಕರ್ಕಾಟಕ, ತುಲಾ, ಮಕರ ರಾಶಿಗಳಲ್ಲಿದ್ದು ಉಳಿದರಾಶಿಗಳು ಗ್ರಹಶೂನ್ಯವಾಗಿದ್ದರೆ, ಯಾವ ಲಗ್ನವಾದರೂ ರಜ್ಜುಯೋಗವೆನ್ನಿಸಿಕೊಳ್ಳುವುದು. ವೃಷಭ, ಸಿಂಹ, ವೃಶ್ಚಿಕ, ಕುಂಭ, ಈ ನಾಲ್ಕು ರಾಶಿಗಳಲ್ಲಿ ಎಲ್ಲಿಯಾದರೂ ಗ್ರಹಗಳಿದ್ದು ಉಳಿದ ರಾಶಿಗಳು ಗ್ರಹಶೂನ್ಯವಾದರೆ ಅದು ಮುಸಲಯೋಗ. ಮಿಥುನ, ಕನ್ಯಾ, ಧನುರ್ಮೀನ, ಈ ನಾಲ್ಕುರಾಶಿಗಳು ಸಕಲ ಗ್ರಹಯುಕ್ತವಾಗಿ ಉಳಿದರಾಶಿಗಳು ಗ್ರಹಶೂನ್ಯವಾದರೆ ಇದು ನಳಯೋಗ. (ಆಶ್ರಯ ಜಾನಿಹಾಹಮೆಂದು ಪಾಠಾಂತರವಿರುತ್ತೆ. ಇಹ-ಈ ಪ್ರಕರಣದಲ್ಲಿ ಅಹ-ಹೇಳಿದನೆಂದು) ಕೆಲವರು ನಾಲ್ಕು ಚರರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ ರಜ್ಜುಯೋಗವೆಂತಲೂ, ನಾಲ್ಕು ಸ್ಥಿರ ರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ ಮುಸಲ ಯೋಗವೆಂತಲೂ, ನಾಲ್ಕು ದ್ವಿಸ್ವಭಾವ ರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ ನಳಯೋಗವೆಂತಲೂ ಹೇಳುವರು. ಇದಕ್ಕೆ ಗರ್ಗಸಂಹಿತೆಯಲ್ಲಿ ॥ಶ್ಲೋಕ॥ ಏಕೋದ್ವೌವಾತ್ರಯಸ್ಸರ್ವೇ ಸರ್ವೈರ್ಯುಕ್ತಾಯದಾಗ್ರಹೈಃ । ಚರಯೋಗಸ್ತದಾರಜ್ಜು ಶ್ಶೀರ್ಷಾಣಾಂ ಜನ್ಮದೋಭವೇತ್ ॥ ಸ್ಥಿರಶ್ಶೇನ್ಮುಸಲಂನಾಮ ಮಾನಿನಾಂ ಜನಕೃನ್ನೃಣಾಂ । ದ್ವಿಸ್ವಭಾವೋ ನಳಾಖ್ಯಸ್ತು ಬಲಿನಾಂ ಪರಿಕೀರ್ತಿತಃ ॥೩॥ ಎಂದು ಹೇಳಿರುತ್ತೆ. ಈ ಅರ್ಥವು ಗ್ರಾಹ್ಯವಲ್ಲ.

ಈ ಪ್ರಕಾರ ಸತ್ಯಾಚಾರ್ಯ ಮತಾನುಸಾರವಾಗಿ ಆಶ್ರಯಯೋಗತ್ರಯ ವ್ಯಾಖ್ಯಾನಮಾಡುವುದರಲ್ಲಿ ಈ ಅರ್ಥದಲ್ಲಿ ಶ್ಲೋಕ॥ ಸತ್ಯಾಚಾರ್ಯಃ ॥ ಚರರಾಶಿ ಗ್ರೈರ್ಗ್ರಹೇಂದ್ರೈರುಜ್ಜುಃ ಸ್ಥಿರರಾಶಿ ಗೈಸ್ತಥಾಮುಸಲಂ । ದ್ವಿಶರೀರಗತೈರ್ಯೋಗೋ ನಲ ಸಂಜ್ಞೋಮುನಿಭಿರುದ್ದಿಷ್ಟಃ ॥ ಎಂದುಕ್ತವಾಗಿರುತ್ತೆ. ಆದ್ದರಿಂದ ಪರಾಶರೇಣ-ಪರಾಶರರಿಂದ, ಸದಸದ್ಯುತ್ಯೈ-ಶುಭಪಾಪಗ್ರಹಗಳು ಕೂಡಿದ, ಕೇಂದ್ರೈಃ-ಮೂರು ಕೇಂದ್ರ ಸ್ಥಾನಗಳಾದ, ದಳಾಖ್ಯೌ-ದಳವೆಂಬುವ ಹೆಸರುಳ್ಳ, ಸ್ರಕ್ಸರ್ಪೌ-ಸ್ರಗ್ಯೋಗ, ಸರ್ಪಯೋಗಗಳು ಕಥಿತೌ-ಹೇಳ್ಪಲ್ಪಟ್ಟಿದೆ. ಅಂದರೆ ಕೇಂದ್ರತ್ರಯಗಳಲ್ಲೂ ಚಂದ್ರವ್ಯತಿ ರಿಕ್ತ ಶುಭಗ್ರಹಗಳಿದ್ದು ಒಂದು ಕೇಂದ್ರದಲ್ಲಿಯೂ ಪಾಪಗ್ರಹವಿಲ್ಲದಿದ್ದರೆ ದಳಾಖ್ಯ ಮಾಲಾಯೋಗವೆಂತಲೂ, ಕೇಂದ್ರತ್ರಯಗಳಲ್ಲಿ ಪಾಪಗ್ರಹಗಳಾದ ರವಿ, ಕುಜ, ಶನಿಗಳಿದ್ದು ಕೇಂದ್ರದಲ್ಲಿ ಶುಭಗ್ರಹವಿಲ್ಲದಿದ್ದರೆ, ದಳಾಖ್ಯವಾದ ಸರ್ಪಯೋಗ ವೆಂತಲೂ, ಪರಾಶರರಿಂದ ಹೇಳಲ್ಪಟ್ಟಿರುತ್ತೆಂದು ತಾತ್ಪರ್ಯವು. ಇಲ್ಲಿ ಕೇಂದ್ರೈಃ

ಸದಸದ್ಯು ತೈರ್ದಳಾಖ್ಯಾ-ಎಂದು-ಸಾಧಾರಣವಾಗಿ ಹೇಳಿರುತ್ತೆ. ಶುಕ್ಲ ಕೃಷ್ಣಪಕ್ಷದಲ್ಲಿ ಚಂದ್ರನಿಗೆ ಪೂರ್ಣತ್ವ ಕ್ಷೀಣತ್ವ ಸಂಭವಿಸುವುದರಿಂದ ಗ್ರಂಥಾಂತರ ವಚನಾನುಸಾರ ವಾಗಿ, ಚಂದ್ರ ವ್ಯತಿರಿಕ್ತ ಶುಭಗ್ರಹಗಳೆಂದು ಅರ್ಥವನ್ನು ಹೇಳಬಹುದು. ಆದರೆ ಮೂರು ಕೇಂದ್ರಗಳು ಶುಭಗ್ರಹಾಕ್ರಾಂತವಾಗಿರುವಾಗ ಚಂದ್ರನು ನಾಲ್ಕನೇ ಗ್ರಹವಾಗಿ ಕೇಂದ್ರದಲ್ಲಿದ್ದರೆ, ಮೂರು ಕೇಂದ್ರಗಳು ಪಾಪಗ್ರಹಗಳಾದ (ರವಿ, ಕುಜ, ಶನಿ) ನಾಲ್ಕನೇ ಕೇಂದ್ರದಲ್ಲಿ ಚಂದ್ರನಿದ್ದರೆ, ಈ ಯೋಗಕ್ಕೆ ಭಂಗವಿಲ್ಲವೆಂದು ತಿಳಿಯತಕ್ಕದ್ದು. ಕೇಂದ್ರಗಳು ನಾಲ್ಕಾಗಿರುವಾಗ ಮೂರು ಕೇಂದ್ರಗಳಲ್ಲೂ ಮೂರು ಶುಭಗ್ರಹಗಳಿದ್ದು, ಮೂರ ಕೇಂದ್ರದಲ್ಲೂ ಮೂರು ಪಾಪಗ್ರಹಗಳಿದ್ದರೂ, ಸರ್ಪಯೋಗಕ್ಕೆ ಭಂಗವಿಲ್ಲ. ಇತ್ಯಾದಿ ಶೇಷಾರ್ಥದಿಂದ ಹೇಳಲ್ಪಟ್ಟಿರುತ್ತೆ. ಈ ವಿಷಯದಲ್ಲಿ ಶ್ಲೋಕ॥ ಕೇಂದ್ರಗೈತಶ್ಚಯಮಾರಾರ್ಕೈಸ್ಸರ್ಪೋದುಃಖಿತಜನ್ಮದಃ । ಭೋಗಿಜನ್ಮಪ್ರದಾಮಾಲಾ ತದ್ವಜ್ಜೀವಸಿತೇಂದುಜೈಃ ॥೫॥ ಗರ್ಗಸಂಹಿತಾಯಾಂ ॥ಶ್ಲೋಕ॥ ಕೇಂದ್ರೇಷ್ವ ಪಾಪೇಷು ಸಿತಜ್ಞಜೀವೈ ಸ್ಸ್ವಕೇಂದ್ರಸಂಸ್ಥೈಃ ಕಥಯಂತಿಮಾಲಾಂ । ಸರ್ಪಸ್ತು ಸೌಮ್ಯೈಶ್ಚಯ ಮಾರಸೂರ್ಕೈರ್ಯೋಗಾದಿಮೌದ್ವಾಕಥಿತೌದಲಾಖ್ಯಾ ॥೬॥ ಎಂದುಕ್ತ ವಾಗಿರುತ್ತೆ, ಆದರೆ ಪೂರ್ವೋಕ್ತ ಪ್ರಕಾರವಾಗಿ ಅರ್ಥಮಾಡಬೇಕೆಂದು ತಿಳಿಯತಕ್ಕದ್ದು. ಈ ಯೋಗವು ಇತರರಿಂದ ಹೇಳಿರುವಾಗ ಪರಾಶರರಿಂದಲೇ ಹೇಳಲ್ಪಟ್ಟಿರುತ್ತೆಂದು ಗ್ರಹಿಸುವುದಕ್ಕೆ ಸಂಶಯವಿಲ್ಲ. ಅದಕ್ಕನುಸಾರವಾಗಿ ವರಾಹಮಿಹಿರಾಚಾರ್ಯರು ಹೇಳಿದರೆಂದು ಊಹಿಸತಕ್ಕದ್ದು.

ಮೂಲ॥ ಯೋಗವ್ರಜಂತ್ಯಾ ಶ್ರಯುಜಾಸಮತ್ವಂ ಯವಾಬ್ಜ ವಜ್ರಾಂಡ ಜಗೋಳಕಾದ್ಯೈಃ। ಕೇಂದ್ರೋಪಗ ಪ್ರೋಕ್ತಫಲೌದಲಾಖ್ಯಾವಿತ್ಯಾ ಹುರನ್ಯೇನ ಪೃಥಕ್ಫಲೌತೌ ॥೩॥

ಅವತಾರಿಕೆ॥ ಕೆಲವು ಗ್ರಂಥಕರ್ತರು ಪೂರ್ವೋಕ್ತವಾದ ಆಶ್ರಯಯೋಗತ್ರಯವನ್ನೂ, ದಳಯೋಗದ್ವಯವನ್ನೂ ಹೇಳಲಿಲ್ಲದುದಕ್ಕೆ ಕಾರಣ ಈ ಶ್ಲೋಕದಿಂದ ತಿಳಿಸಲ್ಪಡುತ್ತೆ.

ಟೀಕು॥ ಯವಾಬ್ಜ ವಜ್ರಾಂಡಜಗೋಳಕಾದ್ಯೈ-ಆಕೃತಿಯೋಗಗಳಾದ ಯವ, ಪದ್ಮ, ವಜ್ರ, ವಿಹಂಗಯೋಗಗಳನ್ನು ಆದಿ ಶಬ್ದದಿಂದ ಗದಾ ಶಕಟಾದಿ ಯೋಗಗಳನ್ನು ಸಂಖ್ಯಾಯೋಗಗಳಾದ ಗೋಳಕಶೂಲ ಕೇದಾರಯೋಗಗಳನ್ನು ಆಶ್ರಯುಜಾಃ-ಆಶ್ರಯಗಳಾದ, ಯೋಗಾಃ-ರಜ್ಜು, ಮುಸಲ, ನಲಿಯೋಗವನ್ನು, ಸಮತ್ವಂ-ಸಮಾನವಾಗಿ, ವ್ರಜಂತಿ-ಹೊಂದುತ್ತದೆ. ಆದ್ದರಿಂದ ಕೆಲವರು ಈ ಆಶ್ರಯಯೋಗವನ್ನು ಹೇಳಲಿಲ್ಲ. ಆದರೆ ಈ ಗ್ರಂಥದಲ್ಲಿ ಹೇಳಲ್ಪಟ್ಟ ರಜ್ವಾದಿ

ಯೋಗಗಳ ವ್ಯತಿರೇಕ್ತವಾಗಿ ಆಶ್ರಯಯೋಗಗಳಿಗೆ ಅವಕಾಶವಿಲ್ಲ. ಆದ್ದರಿಂದ ಈ ರಜ್ವಾದಿಯೋಗಗಳು ವರಾಹಮಿಹಿರಾಚಾರ್ಯರಿಂದ ಹೇಳಲ್ಪಡಲಿಲ್ಲವೆಂದು ತಿಳಿಯಬರುತ್ತೆ. ಈ ವಿವರಣವು ಈ ಪ್ರಕರಣಾಂತ್ಯದಲ್ಲಿ ಹೇಳಲ್ಪಡುತ್ತೆ. ಕೇಂದ್ರೋಪಗ ಪ್ರೋಕ್ತಫಲೌ-ಕೇಂದ್ರೋಪಗ-ಕೇಂದ್ರಸ್ಥಾನವನ್ನು ಹೊಂದಿದ್ದ ಗ್ರಹಗಳಿಗೆ, ಪ್ರೋಕ್ತಫಲೌ-ಕೇಂದ್ರೋಪಗ-ಕೇಂದ್ರಸ್ಥಾನವನ್ನು ಹೊಂದಿದ್ದ ಗ್ರಹಗಳಿಗೆ, ಪ್ರೋಕ್ತ-ಹೇಳಲ್ಪಟ್ಟ ಫಲಗಳೇ, ಫಲೌ-ಫಲಗಳಾಗಿರುವಾಗ, ದಳಾಖ್ಯೌ-ದಳನಾಮಕವಾದ, ತೌ-ಅಸ್ರಕ್ ಸರ್ಪಯೋಗಗಳು, ಪೃಥಕ್ಫಲೌ- ಭಿನ್ನಫಲಗಳನ್ನು, ನೇತಿ-ಹೊಂದುವವೆಂದು ಅನ್ಯೇ-ಕೆಲವರು, ಆಹುಃ-ಹೇಳುವರು ಅಂದರೆ ಃ-ಶ್ಲೋಕ ॥ ಕೇಂದ್ರತ್ರಿಕೋಣೇಷು ಶುಭಾ ಪ್ರಶಸ್ತಾಸ್ತೇಷ್ವೇವಪಾಪಾ ನಶುಭಪ್ರದಾಸ್ಸ್ಯುಃ ॥೭॥ ಎಂದು ವರಾಹ ಮಿಹಿರಾಚಾರ್ಯರಿಂದ ಹೇಳಲ್ಪಟ್ಟ ಪ್ರಕಾರವೇ ಕೇಂದ್ರಸ್ಥಾನಗಳಲ್ಲಿರುವ ಶುಭಗ್ರಹಗಳು ಶುಭಪ್ರದರೆಂದು ಸಕಲ ಜ್ಯೋತಿಷ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿರುತ್ತೆ. ಆ ಫಲಗಳೇ ಈ ಸ್ರಕ್ಸರ್ಪ ಯೋಗದಲ್ಲಿ ಹೇಳಲ್ಪಟ್ಟಿರುವುದೇ ಹೊರತು ವಿಶೇಷವೇನೂ ಹೇಳಲ್ಪಡಲಿಲ್ಲ. ಈ ದಳಾಖ್ಯಯೋಗಗಳಾದ ಸ್ರಕ್ಸರ್ಪಯೋಗಗಳೆರಡನ್ನು ಕೆಲವರು ಹೇಳಲಿಲ್ಲವೆಂದು ಮುಖ್ಯಾಶಯವು. ಆದರೆ ಈ ಗ್ರಂಥದಲ್ಲೇ ಹೇಳಿರುವುದರಿಂದ ಕೇಂದ್ರಸ್ಥಾನಗಳನ್ನು ಹೊಂದಿರುವ, ಗ್ರಹಗಳು ಸ್ವದಶಾಕಾಲದಲ್ಲಿ ಮಾತ್ರವೇ ಫಲಪ್ರದರೇ ಹೊರತು. ಸರ್ವದಶೆಯಲ್ಲೂ ಫಲಪ್ರದರಲ್ಲ. ನಾಭಸಯೋಗಗಳಲ್ಲಿ ಹೇಳಲ್ಪಟ್ಟ ಈ ಯೋಗಗಳು ಸರ್ವದಶೆಯಲ್ಲೂ ಫಲಪ್ರದವಾದದ್ದು. ಆದ್ದರಿಂದ ಪರಾಶರಾದ್ಯುಕ್ತ ಪ್ರಕಾರವಾಗಿ ವರಾಹಮಿಹಿರಾಚಾರ್ಯರಿಂದಲೂ ಹೇಳಲ್ಪಟ್ಟಿರುತ್ತೆ ॥೩॥

## ಗದಾ, ಶಕಟ, ವಿಹಂಗ, ಶೃಂಗಾಟಕ, ಹಲಯೋಗಾಃ

ಮೂಲ॥ ಆಸನ್ನಕೇಂದ್ರ ಭವನದ್ವಯಗೈರ್ಗದಾಖ್ಯಾ । ಸ್ತನ್ವಸ್ತಗೇಷುಶಕಟಂ
ವಿಹಗಃಖಬಂಧೋಃ ॥ ಶೃಂಗಾಟಕಂ ನವಮಪಂಚಮಲಗ್ನಸಂಸ್ಥೈ ।
ರ್ಲಗ್ನಾನ್ಯಗೈರ್ಹಲಮಿತಿಪ್ರವದಂತಿತಜ್ಞಾಃ ॥೪॥

ಅವತಾರಿಕೆ॥ ಆ ತೃತೀಯಯೋಗಗಳಲ್ಲಿ ಗದಾ, ಶಕಟ, ವಿಹಂಗ, ಶೃಂಗಾಟಕ, ಹಲಾಖ್ಯವೆಂಬುವ ಯೋಗಗಳು ವಿವರಿಸಲ್ಪಡುತ್ತೆ.

### ಗದಾಯೋಗಃ ॥೧॥

ಟೀಕು॥ಆಸನ್ನಕೇಂದ್ರಭವನ ದ್ವಯಗೈ-ಆಸನ್ನ-ಪರಸ್ಪರ ಸಮೀಪದಲ್ಲಿರುವ, ಕೇಂದ್ರಭವನದ್ವಯ-ಎರಡು ಕೇಂದ್ರಸ್ಥಾನಗಳನ್ನು, ಗತೈ-ಹೊಂದಿರುವ ಸರ್ವಗ್ರಹಗಳಿಂದ,

ಗದಾಖ್ಯಃ-ಗದಾಹ್ವಯ ಯೋಗವಾಗುವುದು. ಇದು ನಾಲ್ಕು ವಿಧವಾಗಿರುವುದು. ಅದು ಹೇಗೆಂದರೆ :- ಸಕಲ ಗ್ರಹಗಳು ಪರಸ್ಪರ ಆಸನ್ನಕೇಂದ್ರದಲ್ಲಿ ಅಂದರೆ:-ಲಗ್ನ ಚತುರ್ಥದಲ್ಲಿದ್ದರೆ ೧, ಚತುರ್ಥಸಪ್ತಮದಲ್ಲಿದ್ದರೆ ೨, ಸಪ್ತಮ ದಶಮದಲ್ಲಿದ್ದರೆ ೩, ದಶಮ ಲಗ್ನದಲ್ಲಿದ್ದರೆ ೪, ಈ ಪ್ರಕಾರ ಗದಾಯೋಗವು ನಾಲ್ಕು ಪ್ರಕಾರವಾಗಿರುವುದು.

## ಶಕಟಯೋಗಃ ॥೨॥

ತನ್ವಸ್ತಗೇಷು-ಸರ್ವಗ್ರಹಗಳ ಲಗ್ನಸಪ್ತಮಗಳಲ್ಲಿದ್ದರೆ ಶಕಟಂ-ಶಕಟ ಯೋಗವು.

## ವಿಹಂಗಯೋಗಃ ॥೩॥

ಖಬಂಧ್ವೋಃ-ದಶಮಚತುರ್ಥದಲ್ಲಿ ಸರ್ವಗ್ರಹಗಳಿದ್ದರೆ ವಿಹಂಗಯೋಗವು.

## ಶೃಂಗಾಟಕಯೋಗಃ ॥೪॥

ನವಮಪಂಚಮ ಲಗ್ನಸಂಸ್ಥೈಃ-ನವಮ ಪಂಚಮಲಗ್ನದಲ್ಲಿ ಸರ್ವಗ್ರಹಗಳಿದ್ದರೆ ಶೃಂಗಾಟಕಯೋಗ.

## ಹಲಯೋಗಃ ॥೫॥

ಲಗ್ನಾನ್ಯಗೈಃ-ಲಗ್ನವನ್ನು ಬಿಟ್ಟು ಇತರ ಸ್ಥಾನಗಳಲ್ಲಿ, ಯಥಾ-ಯಥಾ ಸಂಭವವಾಗಿ, ಸಕಲಗ್ರಹಗಳೂ ಪರಸ್ಪರ ತ್ರಿಕೋಣಸ್ಥಾನಗಳಲ್ಲಿದ್ದರೆ ಹಲಂ-ಹಲಯೋಗವು. ಇದು ಮೂರು ಪ್ರಕಾರವು. ಸಕಲ ಗ್ರಹಗಳೂ ದ್ವಿತೀಯ, ಷಷ್ಠ ದಶಮ ಸ್ಥಾನದಲ್ಲಿದ್ದರೆ ೧, ತೃತೀಯ ಸಪ್ತಮೈಕಾದಶದಲ್ಲಿದ್ದರೆ ೨, ಚತುರ್ತಾಷ್ಟಮ ದ್ವಾದಶದಲ್ಲಿದ್ದರೆ ೩, ಈ ಪ್ರಕಾರ ೫ ಯೋಗಗಳು, ತಜ್ಞಾಃ-ಹೋರಾ ಶಾಸ್ತ್ರಜ್ಞರು, ಪ್ರವದಂತಿ-ಹೇಳುತ್ತಾರೆ. ಈ ವಿಷಯಕ್ಕೆ ॥ಧುಂಡಿರಾಜಃ॥ ಆಸನ್ನಕೇಂದ್ರ ದ್ವಯಗೈರ್ಗದಾಖ್ಯೋಲಗ್ನಾಸ್ತಸಂಸ್ಥೈಃ ಶಕಟಸ್ಸಮಸ್ತೈಃ । ಖಬಂಧು ಯಾತೈರ್ವಿಹಗಃ ಪ್ರದಿಷ್ಟಃ ಶೃಂಗಾಟಕಂ ಲಗ್ನನವಾತ್ಮಜಸ್ಥೈಃ ॥೭॥ ಧನಾರಿಖಸ್ಥೈ ಸ್ತ್ರಿಮದಾಯಗೈರ್ವಾ ಚತುರ್ಥರಂಧ್ರವ್ಯಯಸಂಸ್ಥಿತೈರ್ವಾ । ನಭಸ್ಥಳಸ್ಥೈರ್ಹಲ ನಾಮಯೋಗಃ ಕಿಲೋದಿತೋಯಂ ನಿಖಿಲಾಗಮಜ್ಞೈಃ ॥ತಾ॥ ಹಲಯೋಗವು ಮೂರು ಪ್ರಕಾರವಾಗಿರುವುದು. ತೃತೀಯ, ಷಷ್ಠ, ದಶಮ ಸ್ಥಾನಗಳಲ್ಲಿ ಸಕಲ ಗ್ರಹಗಳಿದ್ದರೆ ಅಥವಾ ೩-೭-೧೧ನೇ ಸ್ಥಾನದಲ್ಲಿ ಸಕಲ ಗ್ರಹಗಳಿದ್ದರೂ, ಅಥವಾ ೪-೮-೧೨ನೇ ಸ್ಥಾನಗಳಲ್ಲಿ ಸಕಲ ಗ್ರಹಗಳಿದ್ದರೂ ಹಲಯೋಗವೆಂಬುವುದು ಉಂಟಾಗುತ್ತೆ.

## ವಜ್ರ, ಯವ, ಕಮಲ, ವಾಪಿಯೋಗಾಃ

ಮೂಲ॥ ಶಕಟಾಂಡಜ ವಚ್ಛುಭಾಶುಭೈರ್ವಜ್ರಂ ತದ್ವಿಪರೀತಗೈರ್ಯವಂ ।
ಕಮಲಂತುವಿಮಿಶ್ರಸಂಸ್ಥಿತೈರ್ವಾಪೀತದ್ಯದಿಕೇಂದ್ರಬಾಹ್ಯತಃ ॥೫॥

ಅವತಾರಿಕೆ॥ ಈ ಶ್ಲೋಕದಲ್ಲಿ ವಜ್ರ, ಯವ, ಕಮಲ, ವಾಪೀ, ಈ ೪ ಯೋಗಗಳ ಲಕ್ಷಣಗಳು ವಿವರಿಸಲ್ಪಡುತ್ತೆ.

ಟೀಕು॥ ಶಕಟಾಂಡಜವಚ್ಛುಭಾಶುಭೈ-ಅಂದರೆ, ಪೂರ್ವ ಶ್ಲೋಕದಲ್ಲಿ ತನ್ವಸ್ತ ಗೇಷುಶಕಟಂವಿಹಗಃ ಖಬಂಧ್ವೋಃ ಎಂದು ಶಕಟಯೋಗಕ್ಕೆ ಯಾವ ಸ್ಥಾನದಲ್ಲಿ ಗ್ರಹಗಳಿರಬೇಕೆಂದು ಹೇಳಲ್ಪಟ್ಟಿತೋ ಆ ಲಗ್ನಸಪ್ತಮ, ದಶಮಗಳಲ್ಲಿ ಶುಭಗ್ರಹಗಳು ವಿಹಗಯೋಗಕ್ಕೆ ಯಾವ ಸ್ಥಾನದಲ್ಲಿ ಗ್ರಹಗಳಿರಬೇಕೆಂದು ಹೇಳಲ್ಪಟ್ಟಿರುತ್ತೋ ಆ ದಶಮ, ಚತುರ್ಥಸ್ಥಾನಗಳಲ್ಲಿ ಪಾಪಗ್ರಹಗಳಿದ್ದು, ಉಳಿದ ಸ್ಥಾನಗಳಲ್ಲಿ ಶುಭಗ್ರಹಗಳಿಲ್ಲದಿದ್ದರೆ ವಜ್ರಂ-ವಜ್ರಯೋಗವಾಗುವುದು. ತದ್ವಿಪರೀತಗೈರ್ಯವಃ-ಅಂದರೆ-ಈ ವಜ್ರಯೋಗಕ್ಕೆ ಹೇಳಲ್ಪಟ್ಟ ಕ್ರಮಕ್ಕೆ ವ್ಯತ್ಯಾಸವಾಗಿ ಲಗ್ನ ಸಪ್ತಮಗಳಲ್ಲಿ ಪಾಪಗ್ರಹಗಳು, ದಶಮ, ಚತುರ್ಥದಲ್ಲಿ ಶುಭಗ್ರಹಗಳಿದ್ದು, ಉಳಿದ ಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ, ಯವಯೋಗವಾಗುವುದು. ವಿಮಿಶ್ರಸಂಸ್ಥಿತೈಃ- ಈ ನಾಲ್ಕು ಕೇಂದ್ರಗಳಲ್ಲೂ, ಶುಭಪಾಪಗ್ರಹಗಳು ಮಿಶ್ರವಾಗಿದ್ದರೆ-ಅಂದರೆ ಶುಭಗ್ರಹಗಳಿರಬೇಕಾದ ಲಗ್ನ, ಸಪ್ತಮದಲ್ಲೊಂದು ಸ್ಥಾನದಲ್ಲಿ ಶುಭಗ್ರಹ ಮತ್ತೊಂದು ಸ್ಥಾನದಲ್ಲಿ ಪಾಪಗ್ರಹ ಅಶುಭಗ್ರಹಗಳಿರಬೇಕಾದ ದಶಮ, ಚತುರ್ಥದಲ್ಲೊಂದು ಸ್ಥಾನದಲ್ಲಿ ಶುಭಗ್ರಹವು. ಮತ್ತೊಂದು ಸ್ಥಾನದಲ್ಲಿ ಪಾಪಗ್ರಹವು. ಈ ವಿಧವಾಗಿದು. ಉಳಿದ ಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ ಕಮಲಂ-ಕಮಲಯೋಗವಾಗುವುದು. ತತ್-ಆ ಕಮಲಯೋಗಕ್ಕೆ ಹೇಳಲ್ಪಟ್ಟ ಗ್ರಹಸ್ಥಿತಿ, ಕೇಂದ್ರಬಾಹ್ಯತೋಯದಿ-ಕೇಂದ್ರಗಳನ್ನು ಬಿಟ್ಟು ಮುಂದಿನ ರಾಶಿಗಳಾದ ಪಣಪರಸ್ಥಾನಗಳಲ್ಲಾಗಲೀ ಅಪೋಕ್ಲೀಮ ಸ್ಥಾನಗಳಲ್ಲಾಗಲೀ ಇದ್ದರೆ, ವಾಪೀ-ವಾಪೀಯೋಗವಾಗುವುದು. ಇದು ಎರಡು ವಿಧ, ಶುಭಾಶುಭಗ್ರಹಗಳು ಮಿಶ್ರವಾಗಿ ಪಣಪರಸ್ಥಾನಗಳಾದ ದ್ವಿತೀಯ, ಅಷ್ಟಮ, ಏಕಾದಶ ಪಂಚಮದಲ್ಲಿದ್ದರೆ ೧ ಯೋಗ, ಅಪೋಕ್ಲಿಮಸ್ಥಾನಗಳಾದ ತೃತೀಯ, ನವಮ, ದ್ವಾದಶಾಷ್ಟಮಗಳಲ್ಲಿದ್ದರೆ ೨ ಯೋಗ, ಜಾ. ಭ. ॥ ಲಗ್ನಸ್ಮರಸ್ಥಾನಗತೈಃ ಶುಭಾಖ್ಯೈಃ ಪಾಪೈಶ್ಚಮೇಷೂರಣ ಬಂಧುಯಾತೈಃ । ವಜ್ರಾಭಿಧಸ್ತೈರ್ವಿಪರೀತಸಂಸ್ಥೈರ್ಯವಶ್ಚ ಮಿಶ್ರೈಃಕಮಲಾಭಿ ಧೀನಃ ॥೮॥ ಅನ್ಯಮತೇವಜ್ರ ಯೋಗಯುವಯೋಗಾಃ ॥ಶ್ಲೋಕ॥ ವಿಲಗ್ನಪಾರ್ಶ್ವದ್ವಯವರ್ತಿನೀನೇಜ್ಞ ಶುಕ್ರಜಿವಾನ್ಯತಮೋ ವಿಲಗ್ನೇ । ಕುಜಾರ್ಕಿಚಂದ್ರಾಃ

ಖಜಲಸ್ಥರಸ್ಥಾ ಇಮೇ ವಿಲೋಮಾಚ್ಚಯವೋನಕಿಂವಾ ॥೯॥ ಲಗ್ನಚಂದ್ರಿಕಾ ಯಾಂ॥ ಲಗ್ನಾಸ್ತಯೋರ್ಗ್ರಹೈಸೌಮ್ಯೈಃ ಪಾಪೈಶ್ಚಸುಖಕರ್ಮಗೈಃ । ವಜ್ರಸ್ಸ್ಯಾದ್ವಿಪರೀತಸ್ಥೈರ್ಯವಃ ಪದ್ಮಂಚಮಿಶ್ರಿತೈಃ ॥೧೦॥ ವಾಪೀಯೋಗಕ್ಕೆ ॥ ಜಾ.ಭ. ॥ ತ್ಯಕ್ತ್ವಾಕೇಂದ್ರಾಣಿ ಚೇತ್ಖೇಟಾಃ ಶೇಷಸ್ಥಾನೇಷು ಸಂಸ್ಥಿತಾಃ । ವಾಪೀಯೋಗೋಭವೇದವಂ ಗದಿತಃ ಪೂರ್ವಸೂರಿಭಿಃ ॥೧೧॥ ಎಂದುಕ್ತವಾಗಿರುತ್ತೆ.

## ಆಚಾರ್ಯೋಕ್ತಿ ದರ್ಶನಂ

**ಮೂಲ॥ ಪೂರ್ವಾ ಶಾಸ್ತ್ರಾನುಸಾರೇಣ ಮಯಾವಜ್ರಾದಯಃ ಕೃತಾಃ ॥**
**ಚತುರ್ಥೇ ಭವನೇಸೂರ್ಯಾಜ್ಜಶುಕ್ರೌಭವತಃಕಥಮ್ ॥೬॥**

ಅವತಾರಿಕೆ॥ ವಜ್ರ, ಯವಯೋಗಗಳು ಪೂರ್ವಶಾಸ್ತ್ರಾನುಸಾರವಾಗಿ ಹೇಳಲ್ಪಟ್ಟಿರುತ್ತೆ. ಆದರೆ ಆ ಯೋಗಗಳು ಸಂಭವಿಸಲಾರವು.

ಟೀಕು॥ ಪೂರ್ವಶಾಸ್ತ್ರಾನುಸಾರೇಣ-ಮಯ ಯವನ ಪರಾಶರಾದ್ಯುಕ್ತ ಪೂರ್ವ ಶಾಸ್ತ್ರಾನುಸಾರವಾಗಿ, ಮಯಾ-ನನ್ನಿಂದ, ವಜ್ರಾದಯಃ-ವಜ್ರಯವಾದಿಯೋಗಗಳು, ಕೃತಾಃ-ರಚಿಸಲ್ಪಟ್ಟಿತು, ಸೂರ್ಯಾತ್-ಸೂರ್ಯನಿಗೆ, ಚತುರ್ಥಭವನೇ-ನಾಲ್ಕನೇ ರಾಶಿಯಲ್ಲಿ ಜ್ಞಶುಕ್ರೌ-ಬುಧಶುಕ್ರರು, ಕಥಂ-ಯಾವಾಗ, (ಹೇಗೆ) ಭವತಃ-ಇದ್ದಾರು. ತಾ॥ ವಜ್ರಯೋಗದಲ್ಲಿ ಶುಭಗ್ರಹಕ್ಕೂ, ಪಾಪಗ್ರಹಕ್ಕೂ,ಪರಸ್ಪರ ಚತುರ್ಥಸ್ಥಾನ ಸ್ಥಿತಿ ಹೇಳಲ್ಪಟ್ಟಿರುತ್ತೆ. ಆದ್ದರಿಂದ ಸೂರ್ಯನಿಗೆ ಚತುರ್ಥಸ್ಥಾನದಲ್ಲಿ ಬುಧ ಶುಕ್ರರಿಲ್ಲದಿದ್ದರೆ ಸಂಭವಿಸುವುದು. ಸೂರ್ಯೋದಯ-ಸೂರ್ಯಾಸ್ತಮಯ ಕಾಲದಲ್ಲಾಗಲಿ!, ಮಧ್ಯಾಹ್ನ ನಿಶೀಥಕಾಲದಲ್ಲಾಗಲೀ, ಬುಧಶುಕ್ರರು ಉದಯಾಸ್ತಮಯದಲ್ಲಿ ಸೇರುವುದರಿಂದ ಸೂರ್ಯನಿಗೆ ಚತುರ್ಥಸ್ಥಾನದಲ್ಲಿ ಬುಧಶುಕ್ರರಲ್ಲಿ ಒಂದು ಗ್ರಹವಿರಬಹುದು. ಆದ್ದರಿಂದಲೂ ಈ ವಜ್ರಯೋಗ ಸಂಭವಿಸಲಾರದು. ಆದರೆ ಈ ಯೋಗಗಳು ಇತರ ಮನ್ವಂತರಗಳಲ್ಲಿ ಸಂಭವಿಸುತ್ತಿದ್ದುದ್ದರಿಂದ ಪೂರ್ವಶಾಸ್ತ್ರದಲ್ಲಿ ಹೇಳಲ್ಪಟ್ಟಿತೆಂದು ತಿಳಿಯತಕ್ಕದ್ದು. ಈ ವಜ್ರಯೋಗವಿಷಯದಲ್ಲಿ ಜಾತಕಾಭರಣೇ ಶ್ಲೋ.। ಲಗ್ನಸ್ಮರ ಸ್ಥಾನಗತೈಃ ಶುಭಾಖ್ಯೈಃ ಪಾಪೈಶ್ಚಮೇಷೂರಣ ಬಂಧುಯಾತೈಃ । ವಜ್ರಾಭಿಧಸ್ತೈರ್ವಿ ಪರೀತ ಸಂಸ್ಥೈರ್ಯವಶ್ಚ ಮಿಶ್ರೈಃ ಕಮಲಾಭಿಧಾನಃ ॥೧೨॥ ಸೂರ್ಯಾಚ್ಚತುರ್ಥೇ ಭವನೇಸಿತಜ್ಞಾ ಕಥಂಭವೇತಾ ಮಿತಿನೈವಯುಕ್ತೌ । ಯವಾಖ್ಯ ವಜ್ರೌತ್ವಿದಮಾಮನಂತಿ ತತ್ರೋಪಪತ್ತಿಂ ಪರಿದರ್ಶಯಾಮಿ ॥೧೩॥ ವಿಲಗ್ನ ಪಾರ್ಶ್ವದ್ವಯವರ್ತಿ ನೀನೇ ಜ್ಞಶುಕ್ರಜೀವಾನ್ಯತಮೋ ವಿಲಗ್ನೇ । ಕುಜಾರ್ಕಿ ಚಂದ್ರಾಃ ಖಜಲರ್ಸರಸ್ಥಾ ವಜ್ರೇ ವಿಲೋಮಾಚ್ಚಯವೋನಕಿಂವಾ ॥೧೪॥ ಹಿಂದಿನ ಶ್ಲೋಕದ ಟೀಕೆಯಲ್ಲಿ ಈ

ಶ್ಲೋಕಗಳು ಹೇಳಿದ್ದರೂ, ಇಲ್ಲಿ ಪುನರುಕ್ತಿಯಾಗಿ ಯಾತಕ್ಕೋಸ್ಕರ ಹೇಳಿರುವುದೆಂದರೆ-ಜನ್ಮಕುಂಡಲಿಯಲ್ಲಿ ಲಗ್ನದಿಂದ ೨, ೧೨ರಲ್ಲಿ ಬುಧ, ಶುಕ್ರ ಅಥವಾ ಗುರು ಈ ಮೂರು ಗ್ರಹಗಳಲ್ಲಿ ಯಾರಾದರೂ ಇದ್ದು ದಶಮದಲ್ಲಿ ಮಂಗಳ, ಚತುರ್ಥದಲ್ಲಿ ಶನಿ, ಸಪ್ತಮದಲ್ಲಿ ಚಂದ್ರನಿದ್ದರೆ, ಇದು ವಜ್ರಯೋಗವಾಗುತ್ತೆ. ಇದರ ವಿಪರೀತಕ್ರಮವಾಗಿ ಯವಯೋಗ ಉಂಟಾಗುತ್ತೆ. ೧೨ನೇ ರಾಶಿಗೂ, ೧ನೇ ರಾಶಿಗೂ, ಭೇದವಾಗುವುದರಿಂದ ಈ ಯೋಗ ಹುಟ್ಟುತ್ತದೆಂದು ಯುಕ್ತಿಪ್ರದರ್ಶಕವಾಗಿರುವುದು.

## ಯೂಪ, ಶರ, ಶಕ್ತಿ, ದಂಡಯೋಗಾಃ

ಮೂಲ॥ ಕಂಟಕಾದಿಪ್ರವೃತ್ತೈಸ್ತು ಚತುರ್ಗೃಹಗತೈರ್ಗ್ರಹೈಃ । ಯೂಪೇಷು
ಶಕ್ತಿದಂಡಾಖ್ಯಾ ಹೋರಾದ್ಯೈಃ ಕಂಟಕೈಃ ಕ್ರಮಾತ್ ॥೭॥

ಅವತಾರಿಕೆ ॥ ಯೂಪ, ಶರ, ಶಕ್ತಿ, ದಂಡ, ಯೋಗಗಳ ವಿವರಣೆ ಹೇಳಲ್ಪಡುತ್ತೆ.

ಟೀಕು॥ ಕಂಟಕಾದಿ ಪ್ರವೃತ್ತೈಃ, ಕಂಟಕ-ಕೇಂದ್ರಸ್ಥಾನವೇ, ಆದಿ-ಮೊದಲುಗೊಂಡು, ಪ್ರವೃತ್ತೈ-ಬಿಡದೆ ಅನುಸರಿಸಿರುವ, ಚತುರ್ಗೃಹಗತೈ- ನಾಲ್ಕು ರಾಶಿಗಳನ್ನು ಹೊಂದಿರುವ, ಗ್ರಹೈಃ-ಸರ್ವಗ್ರಹಗಳಿಂದ, ಹೋರಾದ್ಯೈಃ-ಲಗ್ನ ಮೊದಲಾಗಲೀ, ಕಂಟಕೈಃ-ಕೇಂದ್ರ ಮೊದಲಾಗಲೀ ಕ್ರಮಾತ್-ಕ್ರಮವಾಗಿ, ಯೂಪೇಷುಶಕ್ತಿ ದುಂಡಾಖ್ಯಾಃ-ಯೂಪ, ಶರ, ಶಕ್ತಿ, ದುಂಡವೆಂಬುವ ೪ ಯೋಗಗಳು ಹುಟ್ಟುತ್ತವೆ. ಯೂಪಯೋಗಲಕ್ಷಣವೇನೆಂದರೆ ಲಗ್ನ, ದ್ವಿತೀಯ, ತೃತೀಯ ಚತುರ್ಥಗಳಲ್ಲಿ ಸಕಲ ಗ್ರಹಗಳಿದ್ದರೆ ಯೂಪಯೋಗ, ಶರಯೋಗ ಲಕ್ಷಣ-ಚತುರ್ಥ, ಪಂಚಮ, ಷಷ್ಠ, ಸಪ್ತಮಗಳಲ್ಲಿ ಸಕಲ ಗ್ರಹಗಳಿದ್ದರೆ ಶರಯೋಗ. ಶಕ್ತಿಯೋಗಲಕ್ಷಣ-ಸಪ್ತಮ, ಅಷ್ಟಮ, ನವಮ, ದಶಮ ಈ ನಾಲ್ಕುಸ್ಥಾನಗಳಲ್ಲಿ ಸರ್ವಗ್ರಹಗಳಿದ್ದರೆ, ಶಕ್ತಿಯೋಗ. ದುಂಡಯೋಗ ಲಕ್ಷಣ-ದಶಮ, ಏಕಾದಶ, ದ್ವಾದಶ, ಲಗ್ನ ಈ ನಾಲ್ಕು ಸ್ಥಾನಗಳಲ್ಲಿ ಸರ್ವ ಗ್ರಹಗಳಿದ್ದರೆ ದಂಡಯೋಗ. ಈ ವಿಷಯಕ್ಕೆ ॥ಶ್ಲೋಕ॥ಜಾ.ಭ.॥ ಲಗ್ನಾಚ್ಚತುರ್ಥಾತ್ಸ್ಮರತಃ ಖಮಧ್ಯಾಚ್ಚತುರ್ಗೃಹಸ್ಥೈ ರ್ಗಗನೇಚರೇಂದ್ರೈಃ ॥ ಕ್ರಮೇಣ ಯೂಪಶ್ಚ ಶರಶ್ಚಶಕ್ತಿಃ ದಂಡಃ ಪ್ರದಿಷ್ಟಃ ಖಲುಜಾತಕಜ್ಞೈಃ ॥೧೫॥ ಲಗ್ನಚಂದ್ರಿಕಾಯಾಂ ಶ್ಲೋಕ॥ ಲಗ್ನಮಾರಭ್ಯಕೇಂದ್ರೇಭ್ಯೋದ್ವಿತೀಯಸ್ಥೈಶ್ಚತುರ್ಗ್ರಹೈಃ । ಯೂಪಬಾಣೌ ಶಕ್ತಿದಂಡೌಚತ್ವಾರೋಮೀಸ್ತಥಾಬುಧೈಃ ॥೧೬॥

## ನೌ, ಕೂಟ, ಛತ್ರ, ಚಾಪ, ಅರ್ಧಚಂದ್ರಯೋಗಾಃ

ಮೂಲ॥ ನೌಕೂಟಛತ್ರಚಾಪಾನಿ ತದ್ವತ್ಸಪ್ತರ್ಕ್ಷಸಂಸ್ಥಿತೈಃ । ಅರ್ಧಚಂದ್ರಸ್ತು ನಾವಾದ್ಯೈಃ ಪ್ರೋಕ್ತಸ್ತ್ವನ್ಯರ್ಕ್ಷಸಂಸ್ಥಿತೈಃ ॥೮॥

ಅವತಾರಿಕೆ ॥ ನೌಕಾ, ಕೂಟ, ಛತ್ರ, ಚಾಪ, ಅರ್ಧಚಂದ್ರ ಈ ೫ ಯೋಗಗಳು ಹೇಳಲ್ಪಡುತ್ತೆ.

ಟೀಕು॥ ತದ್ವತ್-ಪೂರ್ವಶ್ಲೋಕೋಕ್ತಪ್ರಕಾರವಾಗಿ, ಲಗ್ನ-ಚತುರ್ಥ, ಸಪ್ತಮ, ದಶಮ, ಕೇಂದ್ರ ಮೊದಲುಗೊಂಡು, ಸಪ್ತರ್ಕ್ಷಸಂಸ್ಥಿತೈ-ಏಳು ರಾಶಿಗಳಲ್ಲಿ ಸರ್ವ ಗ್ರಹಗಳು ಇದ್ದರೆ *ನೌ ಕೂಟಛತ್ರಚಾಪಾಃ-ನೌ, ಕೂಟ, ಛತ್ರ, ಚಾಪ ಎಂಬುವ ೪ ಯೋಗಗಳು ಹುಟ್ಟುತ್ತವೆ. ಅದು ಹೇಗೆಂದರೆ-ಲಗ್ನದಿಂದ ದ್ವಿತೀಯ, ಚತುರ್ಥ, ಪಂಚಮ, ಷಷ್ಠ, ಸಪ್ತಮ ಈ ಸ್ಥಾನಗಳಲ್ಲಿ ಸಕಲ ಗ್ರಹಗಳಿದ್ದರೆ, ನೌಯೋಗ, ೪-೫-೬-೭-೮-೯-೧೦ ಈ ಸ್ಥಾನಗಳಲ್ಲಿ ಸಕಲ ಗ್ರಹಗಳಿದ್ದರೆ ಕೂಟಯೋಗ. ೭-೮-೯-೧೦-೧೧-೧೨-೧ ಈ ಸ್ಥಾನಗಳಲ್ಲಿ ಸರ್ವಗ್ರಹಗಳಿದ್ದರೆ, ಛತ್ರಯೋಗ. ೧೦-೧೧-೧೨-೧-೨-೩-೪ ಈ ಸ್ಥಾನಗಳಲ್ಲಿ ಸರ್ವಗ್ರಹಗಳಿದ್ದರೆ, ಚಾಪಯೋಗ. ನಾವಾದ್ಯೈಃ-ಈ ನೌಕಾಯೋಗದಿಂದ, ಪ್ರೋಕ್ತಾತ್-ಹೇಳಲ್ಪಟ್ಟ ಕ್ರಮದಿಂದ ಅನ್ಯರ್ಕ್ಷಸಂಸ್ಥಿತೈಃ-ಇತರ ಸ್ಥಾನವೆಂದರೆ-ಪಣಪರ ೨-೫-೮-೧೦ ಅಪೋಕ್ಲಿಮ, ೩-೬-೯-೧೨ ರಾಶ್ಯಾದಿಯಾದರೂ, ೭ ರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ, ಅರ್ಧಚಂದ್ರಃ, ಅರ್ಧಚಂದ್ರವೆಂಬುವ ಯೋಗ, ಅಂದರೆ-ಪಣಪರರಾಶ್ಯಾದಿ ಯಾಗಿಯಾದರೂ, ಅಪೋಕ್ತಿಮರಾಶ್ಯಾದಿಯಾಗಿಯಾದರೂ ೭ ರಾಶಿಗಳಲ್ಲಿ ಅವಿಚ್ಛಿನ್ನವಾಗಿ ಗ್ರಹಗಳಿದ್ದರೆ ಅರ್ಧ ಚಂದ್ರಯೋಗವೆಂದು ತಿಳಿಯತಕ್ಕದ್ದು. ಇದು ೮ ವಿಧವಾಗಿರುತ್ತೆ. ಅದು ಹೇಗೆಂದರೆ-ಸರ್ವಗ್ರಹಗಳು ೨-೩-೪-೫-೬-೭-೮ ಈ ಸ್ಥಾನ ಮೊದಲುಗೊಂಡು ೧ ಯೋಗ-ತೃತೀಯಾದಿ ನವಮಾಂತ ೨, ಪಂಚಮಾದ್ಯೇಕಾದ ಶಾಂತ ೩, ಷಷ್ಠಾದಿ ದ್ವಾದಶಾಂತ ೪, ಅಷ್ಟಮಾದಿ ದ್ವಿತೀಯಾಂತ ೫, ನವಮಾದಿ ತೃತೀಯಾಂತ ೬, ಏಕಾದಶಾದಿ ಪಂಚಮಾಂತ ೭, ದ್ವಾದಶಾದಿ ಷಷ್ಠಾಂತಸ್ಥಾನಗಳಲ್ಲಿ ಸರ್ವಗ್ರಹಗಳಿದ್ದರೆ ೮, ಈ ಪ್ರಕಾರ ೮-೯ ವಿಧವಾಗಿರುವುದು. ಈ ವಿಷಯಕ್ಕೆ ಶ್ಲೋಕ ॥ಜಾ.ಭ॥ ಲಗ್ನಾಚ್ಚತುರ್ಥಾತ್ತರತಃ ಖಮಧ್ಯಾತ್ಸಪ್ತರ್ಕ್ಷಗೈರ್ನೌರಥಕೂಟಸಂಜ್ಞಃ ॥ ಛತ್ರಂಧನುಶ್ಚಾನ್ಯಗ್ರಹ ಪ್ರವೃತ್ತೈರ್ನೌಪೂರ್ವಕೈರ್ಯೋಗ ಇಹಾರ್ಧಚಂದ್ರಃ ॥೧೭॥ ಲಗ್ನ ಚಂದ್ರಿಕೆಯಲ್ಲಿ ॥ಶ್ಲೋಕ॥ಕೇಂದ್ರಾದ್ದ್ವಿತೀಯಸ್ಥಾನಸ್ಥೈಃ ಸಪ್ತಋಕ್ಷಗತೈರ್ಗ್ರಹೈಃ ।

---

* ನೌ-ನೌಕಾಯೋಗ

ಅರ್ಧಚಂದ್ರೋಗ ದಾಪ್ರೋಕ್ತೋ ಕೇಂದ್ರಪಾರ್ಶ್ವದ್ವಯಸ್ಥಿತ್ಯೈಃ ॥೧೮॥ ಎಂದು ಅನ್ಯಗ್ರಂಥದಲ್ಲಿ ಉದಹರಿಸಿರುತ್ತಾರೆ.

ಮೂಲ॥ ಏಕಾಂತರಗತೈರರ್ಥಾ ತ್ಸಮುದ್ರಃಷಡ್ಗ್ರಹಾಶ್ರಿತೈಃ ।
ವಿಲಗ್ನಾದಿಸ್ಥಿತೈಶ್ಚಕ್ರ ಮಿತ್ಯಾಕೃತಿಜ ಸಂಗ್ರಹಃ ॥೯॥

ಅವತಾರಿಕೆ॥ ಸಮುದ್ರ ಚಕ್ರಯೋಗಗಳು ಹೇಳಲ್ಪಡುತ್ತೆ.

ಟೀಕು॥ ಅರ್ಥಾತ್-ದ್ವಿತೀಯಸ್ಥಾನ ಮೊದಲುಗೊಂಡು, ಏಕಾಂತರಗತೈ- ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯಲ್ಲಿ, ಷಡ್ಗ್ರಹಾಶ್ರಿತೈ- ಆರು ರಾಶಿಯನ್ನು ಹೊಂದಿದ ಸಕಲ ಗ್ರಹಗಳಿಂದ, ಅಂದರೆ ೨-೪-೬-೮-೧೦-೧೨- ಈ ರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ, ಸಮುದ್ರಃ-ಸಮುದ್ರಯೋಗ॥ ವಿಲಗ್ನಾದಿ ಸಂಸ್ಥಿತೈ-ಲಗ್ನ ಮೊದಲುಗೊಂಡು ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯಲ್ಲಿರುವ ೬ ರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ ಚಕ್ರಯೋಗ. ಈ ವಿಷಯದಲ್ಲಿ ಸಮುದ್ರಚಕ್ರಯೋಗ ಲಕ್ಷಣಗಳನ್ನು ಹೇಳಿರುತ್ತೆ. ॥ಶ್ಲೋಕ॥ ಕೇಂದ್ರಸ್ಥಾನಾ-ದ್ದ್ವಿತೀಯಸ್ಥೈರ್ಗ್ರಹೈ ರ್ಜಲಧಿರುಚ್ಯತೇ । ಕಂಟಕೇಭ್ಯಸ್ತೃತೀಯ ಸ್ಥೈಶ್ಚಕ್ರಂಸರ್ವೈರ್ಗ್ರಹೈಸ್ತತಂ ॥೧೯॥ ಲಗ್ನಚಂದ್ರಿಕಾಯಾಂ ॥ ಇಲ್ಲಿ ಸಮುದ್ರಯೋಗಕ್ಕೆ ಕೇಂದ್ರದಿಂದ ದ್ವಿತೀಯದಲ್ಲಿರಬೇಕೆಂದು ಹೇಳಲ್ಪಟ್ಟಿರುತ್ತೆ. (೨-೫-೮-೧೦) ಕೇಂದ್ರದಿಂದ ೩-೬-೯-೧೨ ರಲ್ಲಿದ್ದರೆ ಚಕ್ರಯೋಗವು. ಈ ವಿಷಯದಲ್ಲಿ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನ ಸಮ್ಮತಿಯಿಲ್ಲ. ಈ ವಿಷಯದಲ್ಲಿ ॥ಜಾತಕಾಭರಣೇ ಧುಂಡೀರಾಜಃ ॥ಶ್ಲೋಕ॥ ತನೋರ್ಧನಾಚ್ಚೈಕ ಗ್ರಹಾಂತರೇಣಸ್ಥುಃ ಸ್ಥಾನಷಟ್ಕೇ ಗಗನೇಚರೇಂದ್ರಾಃ । ಚಕ್ರಾಭಿದಾನಶ್ಚ ಸಮುದ್ರನಾಮಾಯೋಗಾ ಇತೀಹಾಕೃತಿಜಾಶ್ಚ ವಿಂಶತಿಃ ॥೨೦॥

ಆಕೃತಿಜಸಂಗ್ರಹಃ-ಆಕೃತಿಜ-ಆಕೃತಿಯೋಗವೆನ್ನುವ, ಸಂಗ್ರಹಃ-ಸಂಗ್ರಹವು, ಇತಿ-ಈ ಪ್ರಕಾರವಾಗಿ ಹೇಳಲ್ಪಟ್ಟಿತು. ಅಂದರೆ-ಅಸನ್ನ ಕೇಂದ್ರಭವನ್ಯೆಃ ಎಂಬುವ ಶ್ಲೋಕ ಮೊದಲುಗೊಂಡು ಈ ಶ್ಲೋಕದವರಿಗೆ ಆಕೃತಿಜವಾದ ಗದಾ ೧, ಶಕಟ ೨, ವಿಹಗ ೩, ಶೃಂಗಾಟಕ ೪, ಹಲ ೫, ವಜ್ರ ೬, ಯವ ೭, ಕಮಲ ೮, ವಾಪೀ ೯, ಯೂಪ ೧೦, ಶರ ೧೧, ಶಕ್ತಿ ೧೨, ದಂಡ ೧೩, ನೌಕ ೧೪, ಕೂಟ ೧೫, ಛತ್ರ ೧೬, ಚಾಪ ೧೭, ಅರ್ಧಚಂದ್ರ ೧೮, ಸಮುದ್ರ ೧೯, ಚಕ್ರ ೨೦-ಈ ೨೦ ಯೋಗಗಳು ಹೇಳಲ್ಪಟ್ಟಿತು.

## ಸಂಖ್ಯಾಯೋಗಾಃ

ಮೂಲ॥ ಸಂಖ್ಯಾಯೋಗಸ್ಸಪ್ತ ಸಪ್ತರ್ಕ್ಷಸಂಸ್ಥೈರೇಕಾಪಾಯಾದ್ವಲ್ಲಕೀದಾ ಮಿನೀಚ।
ಪಾಶಃಕೇದಾರಶೂಲಯೋಗೋ ಯುಗಂಚಗೋ-ಲಶ್ಚಾ
ನ್ಯಾನ್ಪೂರ್ವಮುಕ್ತಾನ್ವಿಹಾಯ ॥೧೦॥

ಅವತಾರಿಕೆ॥ ಸಂಖ್ಯಾಯೋಗಗಳು ಹೇಳಲ್ಪಡುತ್ತೆ.

ಟೀಕು॥ ಸಪ್ತರ್ಕ್ಷಸಂಸ್ಥೈ-ಏಳುಸ್ಥಾನಗಳಲ್ಲಿರುವ, ಏಳು ಗ್ರಹಗಳಿಂದ, ಏಕಾಪಾಯಾತ್-ಒಂದೊಂದು ರಾಶಿಯನ್ನು ತಗ್ಗಿಸುವುದರಿಂದ, ಕ್ರಮವಾಗಿ, ಸಪ್ತಸಂಖ್ಯಾಯೋಗಾಃ-ಏಳು ವಿಧವಾದ ಯೋಗಗಳು, ವಲ್ಲಕೀ-ವೀಣೆ, ದಾಮಿನೀ-ದಾಮಿನಿ ಎಂಬುವಯೋಗ, ಪಾಶಃ-ಪಾಶಯೋಗ, ಕೇದಾರಃ-ಕೇದಾರ ಯೋಗ, ಶೂಲಯೋಗಃ-ತ್ರಿಶೂಲಯೋಗ, ಯುಗಂ-ಯುಗಯೋಗ. ಗೋಲ-ಗೋಲಯೋಗ, ಎಂದು ೭ ಯೋಗಗಳು ಹುಟ್ಟುತ್ತವೆ. ಅದು ಹೇಗೆಂದರೆ- ದ್ವಾದಶ ರಾಶಿಗಳಲ್ಲಿಯೇ ಏಳುರಾಶಿಗಳಲ್ಲಿ ಸಕಲ ಗ್ರಹಗಳಿದ್ದರೆ ವಲ್ಲಕೀಯೋಗ, ಸಕಲ ಗ್ರಹಗಳು ೬ ರಾಶಿಗಳಲ್ಲಿದ್ದರೆ ದಾಮಿನೀಯೋಗ, ಸಕಲಗ್ರಹಗಳು ೫ ರಾಶಿಗಳಲ್ಲಿದ್ದರೆ ಪಾಶಯೋಗ. ಸಕಲಗ್ರಹಗಳು ೪ ರಾಶಿಗಳಲ್ಲಿದ್ದರೆ ಕೇದಾರವೆಂಬುವ ಹೆಸರಿನಯೋಗ, ಸಕಲಗ್ರಹಗಳು ೩ ರಾಶಿಗಳಲ್ಲಿದ್ದರೆ ತ್ರಿಶೂಲಯೋಗ. ಸಕಲ ಗ್ರಹಗಳು ೨ ರಾಶಿಗಳಲ್ಲಿದ್ದರೆ ಯುಗಯೋಗ. ಸಕಲ ಗ್ರಹಗಳು ೧ ರಾಶಿಯಲ್ಲಿದ್ದರೆ ಗೋಳಯೋಗ. ಈ ಪ್ರಕಾರ ಏಳು ವಿಧವಾದ ಸಂಖ್ಯಾಯೋಗವು ಹೇಳಲ್ಪಟ್ಟಿತು. ಪೂರ್ವಮುಕ್ತಾ-ಮೊದಲು ಹೇಳಿದ, ಅನ್ಯಾ-ಆಶ್ರಯದಳಾಕೃತಿಯೋಗಗಳನ್ನು, ವಿಹಾಯ-ಬಿಟ್ಟು, ಇವು ಸಂಖ್ಯಾಯೋಗಗಳೆಂದು ತಿಳಿಯತಕ್ಕದ್ದು. ಅಂದರೆ ಪೂರ್ವೋಕ್ತವಾದ ಯೋಗಗಳು ಕೇಂದ್ರಾದಿಸ್ಥಾನ ನಿಯಮದಿಂದ ಹೇಳಲ್ಪಟ್ಟಿರುವುದು ಆಶ್ರಯಯೋಗಗಳು. ಈ ಸಂಖ್ಯಾಯೋಗಗಳು ಆಶ್ರಯಯೋಗಗಳ ಸಾದೃಶ್ಯವನ್ನು ಹೊಂದಲಾರದು ಆದ್ದರಿಂದ ಆಶ್ರಯಾದಿಯೋಗಗಳೇ ಗ್ರಾಹ್ಯವಾದದ್ದೆಂದೂ, ಸಂಖ್ಯಾಯೋಗಗಳು ಗ್ರಾಹ್ಯವಲ್ಲವೆಂದೂ ತಿಳಿಯತಕ್ಕದ್ದು. ಈ ಪ್ರಕಾರ ೩೨ ಯೋಗಗಳು ಹೇಳಲ್ಪಟ್ಟಿದೆ. ॥೧೦॥

## ನಾಭಸಯೋಗ ಫಲಂ

ಮೂಲ॥ ಈರ್ಷುರ್ವಿದೇಶ ನಿರತೋಽಧ್ವರುಚಿಶ್ಚರಜ್ಜ್ವಾಂ ಮಾನೀಧನೀಚ*
ಮೂಸಲೇ ಬಹುಕೃತ್ಯಸಕ್ತಃ। ವ್ಯಂಗಸ್ಥಿರಾಢ್ಯನಿಪುಣೋನಲಜಃಸ್ವಗುತ್ಪೋ
ಭೋಗಾನ್ವಿತೋ ಭುಜಗಜೋ ಬಹು ದುಃಖಭಾಕ್ಸ್ಯಾತ್॥೧೧॥

* ಮುಸಲೇ ಬಹುಕೃತ್ಯಸಕ್ತಃ ॥ ಇತಿ ಪಾಠಾಂತರ.

ಅವತಾರಿಕೆ॥ ಈ ಮೇಲೆ ಹೇಳಲ್ಪಟ್ಟ ಆಶ್ರಯಯೋಗಗಳಲ್ಲಿ ಹುಟ್ಟಿದವರಿಗೆ ಲಭಿಸತಕ್ಕ ಫಲವು ಹೇಳಲ್ಪಡುತ್ತೆ.

ಟೀಕು॥ ರಜ್ವಾಂ-ರಜ್ಜುಯೋಗದಲ್ಲಿ ಜನ್ಮಿಸಿದವನು. ಈರ್ಷುಃ-ಪರಶ್ರೇಯಸ್ಸನ್ನು ಸಹಿಸಲಾರದೆ ಹೊಟ್ಟೇಕಿಚ್ಚುಪಡುವನು, ವಿದೇಶನಿರತಃ-ಪರದೇಶವಾಸಾಸಕ್ತನು, ಅಧ್ವರುಚಿಃ-ದಾರಿ ನಡೆಯುವುದರಲ್ಲಿ ಪ್ರೀತಿಯುಳ್ಳವನೂ, ಸ್ಯಾತ್-ಆಗುವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ಪರದೇಶದ್ರವ್ಯ ಭಾಗೀಸುರೂಪೋದಾನತತ್ಪರಃ । ಕ್ರೂರಃ ಖಲಸ್ವಾಭಾಶ್ಚರಜ್ಜು ಯೋಗೇ ಜನೋ ಭವೇತ್ ॥೨೧॥ ಮತ್ತು ಧುಂಡಿರಾಜಃ ॥ಶ್ಲೋಕ॥ ಚಂಚದ್ರೂಪೇಣಾನ್ವಿತಾಃ ಕ್ರೌರ್ಯಭಾಜೋಜಾತೋತ್ಸಾಹಾಃ ಕ್ರೂರಕಾರ್ಯೇನಿತಾಂತಮ್ । ರಜ್ಜ್ವ ಯೋಗೋತ್ಪನ್ನ ಮರ್ತ್ಯಾಃ ಸ್ವದೇಶೇ ಅನ್ಯಸ್ಮಿನ್ನೈ ಸಂಚರಂತರ್ಥಲುಬ್ಧಾ ॥೨೨॥

## ಮುಸಲಯೋಗ ಫಲಂ

ಮುಸಲೇ-ಮುಸಲಯೋಗದಲ್ಲಿ ಜನ್ಮಿಸಿದವನು, ಮಾನೀ-ಗರ್ವಿಷ್ಠನು, ಧನೀ-ಐಶ್ವರ್ಯವಂತನೂ, ಬಹುಕೃತ್ಯಸಕ್ತ-ಅನೇಕಕಾರ್ಯಶೀಲನೂ ಆಗುವನು. ಈ ವಿಷಯಕ್ಕೆ ॥ಶ್ಲೋಕ॥ ಲಗ್ನಚಂದ್ರಿಕೆಯಲ್ಲಿ ॥ ರಾಜಮಾನಧನೈರ್ಯುಕ್ತಃ ಖ್ಯಾತಃಪುತ್ರೀ ನೃಪಪ್ರಿಯಃ । ಮುಸಲೇಸ್ಥಿರಚಿತ್ತಶ್ಚ ಕರ್ಮೋದ್ಯುಕ್ತಶ್ಚಜಾಯತೇ ॥೨೩॥ ಮತ್ತು ಧುಂಡಿರಾಜಃ ॥ಶ್ಲೋಕ॥ ನಾನಾಮಾನ್ಯಜ್ಞಾನವಾ ನ್ಯೋಪಪನ್ನಃ । ಪುತ್ರೈರ್ಲಕ್ಷ್ಮ್ಯಾ ರಾಜತೇ ರಾಜತೇಜಾಃ । ಪೃಥ್ವೀಪಾಲಸ್ಯಾಶ್ರಿತಃ ಸ್ಯಾತ್ಸಹರ್ಷ ಈರ್ಷೋತ್ಕರ್ಷಾ ವಾಪ್ತಿ ಕೃನ್ಮೌಸಲೇಯಃ ॥೨೪॥

## ನಲಯೋಗ ಫಲಂ

ನಲಯೋಗದಲ್ಲಿ ಜನ್ಮಿಸಿದವರು, ವ್ಯಂಗಸ್ಥಿರಾಢ್ಯನಿಪುಣಾಃ-ವ್ಯಂಗ-ಅಂಗ ಹೀನರು, ಸ್ಥಿರ-ಧೃಡವಾದ ನಿಶ್ಚಯವುಳ್ಳವರು, ಆಢ್ಯ-ದ್ರವ್ಯವಂತರು, ನಿಪುಣಾಃ-ಸೂಕ್ಷ್ಮಬುದ್ಧಿಯುಳ್ಳವರಾಗುವರು. ಈ ಪ್ರಕಾರ ಗುಣವುಳ್ಳವರಾಗುತ್ತಾರೆಂದು ತಾತ್ಪರ್ಯವು. ಈ ವಿಷಯದಲ್ಲಿ ॥ಶ್ಲೋಕ॥ ಲಗ್ನಚಂದ್ರಿಕಾಯಾಂ ॥ ನ್ಯೂನಾತಿ ರಿಕ್ತದೇಹಶ್ಚನಿಪುಣೋಧನಸಂಚಯಃ । ಬಂಧುಪ್ರಿಯಸ್ಸುರೂಪಶ್ಚ ನಲಯೋಗೇ ಭವೇನ್ನರಃ ॥೨೫॥ ಮತ್ತು ಧುಂಡಿರಾಜಃ ॥ಶ್ಲೋಕ॥ ಶಶ್ವತ್ಪೂರ್ಣಾಃ ಪೂರ್ಣರತ್ನೈಃ ಸ್ವಗೇಹಾ ರಾಜಸ್ನೇಹಾಃ ಪುಣ್ಯದೇಹಾಶ್ಚಮರ್ತ್ಯಾಃ । ಕೀರ್ತ್ಯಾಯುಕ್ತಾಃ ಸರ್ವದಾತೇ ಸದೈವಾ ದೈವಾದ್ಯೇಷಾಂ ಜನ್ಮಕಾಲೇನ ಲಶ್ಚೇತ್ ॥೨೬॥ ಈ ರೀತಿಯಾಗಿ ಆಶ್ರಯತ್ರಯಯೋಗ ಫಲವು ಹೇಳಲ್ಪಟ್ಟಿದೆ.

## ಸ್ರಗ್ಯೋಗ ಫಲಂ

ಸ್ರಗುತ್ಥಃ-ಸ್ರಗ್ಯೋಗದಲ್ಲಿ ಜನ್ಮಿಸಿದವನು. ಭೋಗಾನ್ವಿತಃ-ಸುಖದಿಂದ ಕೂಡಿದವನಾಗುವನು. ಈ ವಿಷಯಕ್ಕೆ ॥ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ವಸ್ತ್ರ ವಾಹಾರ್ಥಭೋಗಾದ್ಯೈರ್ಯುಕ್ತಃ ಕಾಂತಾಸುಹೃತ್ಪ್ರಿಯಃ । ಮಾಲಾಯೋಗೇ ಸಮಂತ್ವನ್ನಃ ಸುಖೀಭವತಿ ಸರ್ವದಾ ॥೨೭॥ ಮತ್ತು ಧುಂಡಿರಾಜಃ ॥ಶ್ಲೋಕ॥ ಪುತ್ರೈರ್ಮಿತ್ರೈ ಶ್ಚಾರುಭೂಷಾ ವಿಶೇಷೈರ್ನಾನಾ ಯಾನೈರನ್ವಿತಾಸ್ತೇಭವಂತಿ (ಏಷಾಂ ಪುಂಸಾಂ ಸೂತಿಕಾಲೇಹಿ ಮಾಲಾ ಮಾಲಾ ದೋಲಾ ಕಾಮಿನೀಕೇಳಿಲೋಲಃ ॥೨೮॥

## ವ್ಯಾಳಯೋಗ ಫಲಂ

ಸರ್ಪಯೋಗಮಿತಿಜ್ಞೇಯಂ-ಭುಜಗಜಃ-ಸರ್ಪಯೋಗದಲ್ಲಿ ಹುಟ್ಟಿದವನು, ಬಹುದುಃಖಭಾಕ್-ನಾನಾವಿಧವಾದ ದುಃಖವನ್ನನುಭವಿಸುವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ಕ್ರೂರೋತಿನಿಃಸ್ವೋ ದುಃಖೀಚ* ಪರಾನ್ನೇ ನಿರತಃ ಸದಾಃ ದೀನಶ್ಚವಿಷಮೋ ಲೋಕಃ ಸರ್ಪಯೋಗೇ ಪ್ರಜಾಯತೇ ॥೨೯॥ ಮತ್ತು ಧುಂಡಿರಾಜಃ ॥ಶ್ಲೋಕ॥ ಭೋಕ್ತಾನ್ನಸ್ಯಾನ್ನಸ್ಯ ರೌದ್ರೋ ದರಿದ್ರೋ ನಿದ್ರೋತ್ಸಾಹ ಹೋರುಟ್ಸ ಮುದ್ರೋಷ್ಯಭದ್ರಃ । ದುರ್ದರ್ಪಃ ಸ್ಯಾಚ್ಚ್ಯಾಪಕಾರಾಯ ಸಾರ್ಪಃ ಸರ್ಪಃ ಸೂತೌಯಸ್ಯಮರ್ತ್ಯಸ್ಯಯೋಗಃ ॥ ಈ ಪ್ರಕಾರ ದಳಯೋಗ ಎರಡಕ್ಕೆ ಫಲವು ಹೇಳಲ್ಪಟ್ಟಿದೆ. ಅಂತು ಈ ಪದ್ಯದಲ್ಲಿ ಆಶ್ರಯಯೋಗ ೩, ದಳಯೋಗ ೨ಕ್ಕೆ ಫಲವು ಹೇಳಿರುತ್ತೆ.

## ಏಕಕಾಲೆ ಆಶ್ರಯಾದಿ ಯೋಗದ್ವಯಪ್ರಾಪ್ತೇ ಫಲವಿಚಾರಃ

ಮೂಲ॥ ಆಶ್ರಯೋಕ್ತಾಸ್ತು ವಿಫಲಾಭವಂತ್ಯನ್ಯೈರ್ವಿಮಿಶ್ರಿತಾಃ । ಮಿಶ್ರಾ ಯೈಸ್ತೇಫಲಂದದ್ಯುರಮಿಶ್ರಾಸ್ಸ್ವಫಲಪ್ರದಾಃ ॥೧೨॥

ಅವತಾರಿಕೆ॥ ಒಂದೇಕಾಲದಲ್ಲಿ ಆಶ್ರಯಯೋಗವೂ ಮತ್ತೊಂದು ಯೋಗವೂ ಪ್ರಾಪ್ತಿಯಾದರೆ ಆಗ ಆಶ್ರಯಯೋಗವು ವಿಫಲವಾಗುವುದೆಂದು ಹೇಳಲ್ಪಡುತ್ತೆ.

ಟೀಕು॥ ಆಶ್ರಯೋಕ್ತಾ-ಆಶ್ರಯಯೋಗವೆಂಬ ಹೆಸರಿನಿಂದ ಹೇಳಲ್ಪಟ್ಟ ಯೋಗಗಳು. ಅಂದರೆ :- ಆಶ್ರಯಯೋಗಗಳು, ಅನ್ಯವಿಮಿಶ್ರಿತಾಃ-ಇತರ ಯೋಗಗಳಾದ ಗದಾ ಮೊದಲಾದ ಯೋಗಗಳು ಕೂಡಿದರೆ, ವಿಫಲಾಃ-

* ಕ್ರೂರೋತಿನಿ ಸ್ವೋದುಃಖೀಚ॥ ಎಂದು ಪಾಠಾಂತರವಿರುವುದು.

** ಮಿಶ್ರಾಯೈಸ್ತೆಫಲಂತೇಷಾಂ ॥ ಎಂದು ಪಾಠಾಂತರ.

ಫಲವಿಲ್ಲದವುಗಳು, ಭವಂತಿ-ಆಗುತ್ತವೆ. ಆ ಕಾಲದಲ್ಲಿ ಆಶ್ರಯಯೋಗಗಳು, ಯೈ:-ಯಾವಯೋಗಗಳಿಂದ, ಮಿಶ್ರಾಃ-ಕೂಡಿಕೊಂಡಿರುವುದೋ, ತೇ-ಆ ಯೋಗಗಳು, ಫಲಂ-ಫಲಗಳನ್ನು, ದದ್ಯುಃ-ಕೊಡುವವು. **ಅಮಿಶ್ರಾಃ-ಆಶ್ರಯಯೋಗಗಳಲ್ಲಿ ಇತರ ಯೋಗಗಳು ಕೂಡದಿದ್ದರೆ, ಸ್ವಫಲಪ್ರದಾಃ-ಆಯಾ ಆಶ್ರಯ ಯೋಗಗಳಲ್ಲಿ ಹೇಳಲ್ಪಟ್ಟ ಫಲವೇ ಉಂಟಾಗುವುದು.

## ೧. ಗದಾದಿಯೋಗ ಫಲಂ

ಮೂಲ॥ *ಯಜ್ವಾರ್ಥಭಾಕ್ಸತತಮರ್ಥ ರುಚಿರ್ಗದಾಯಾಂ। ತದ್ವೃತ್ತಿಭುಕ್ಶಕಟಜಃ ಸಹಜಃ ಕುದಾರಃ । ದೂತೇಟನಃ ಕಲಹಕೃದ್ವಿಹಗೇ ಪ್ರದಿಷ್ಟಃ ಶೃಂಗಾಟಕೇ ಚಿರಸುಖೀ ಕೃಷಿವಿದ್ಧಲಾಖ್ಯೇ ॥೧೩॥

ಅವತಾರಿಕೆ॥ ಈ ಶ್ಲೋಕದಲ್ಲಿ ಗದಾಯೋಗ ೧, ಶಕಟಯೋಗ ೨, ವಿಹಗಯೋಗ ೩, ಶೃಂಗಾಟಕಯೋಗ ೪, ಹಲಯೋಗ ೫, ಈ ಯೋಗಗಳಲ್ಲಿ ಹುಟ್ಟಿದವನ ಸ್ವಭಾವವೂ ಫಲವೂ ಸಹ ಹೇಳಲ್ಪಡುತ್ತೆ.

ಟೀಕು॥ ಗದಾಯಾಂ-ಗದಾಯೋಗದಲ್ಲಿ ಜನ್ಮಿಸಿದವನು. ಯಜ್ವಾ-ಯಜನ ಶೀಲನು, ಅಂದರೆ-ಯಜ್ಞಾದಿ ಸತ್ಕರ್ಮ ಮಾಡುವನು. ಅರ್ಥಭಾಕ್-ಧನವಂತನೂ, ಸತತಂ-ಸರ್ವಕಾಲದಲ್ಲೂ, ಅರ್ಥರುಚಿಃ-ಧನಾರ್ಜನೋದ್ಯೋಗವುಳ್ಳವನೂ ಆಗುವನು. ಈ ವಿಷಯಕ್ಕೆ ॥ಶ್ಲೋಕ॥ ಲ.ಚ॥ ಶಾಸ್ತ್ರೇಯೋಗೇಪ್ರವೀಣಶ್ಚ ಸದ್ಯೋಯುಕ್ತಾರ್ಥತತ್ಪರಃ । ಯಜ್ಞಾಢ್ಯನೀ ಸುಪ್ರಸನ್ನೋ ಗದಾಯೋಗೇ ಭವೇನ್ನರಃ ॥೩೧॥ ಮತ್ತು ಧುಂಡಿರಾಜಃ ॥ಶ್ಲೋಕ॥ ನಾನಾಶಾಸ್ತ್ರಾನೇಕ ಮಂತ್ರಾನುರಕ್ತೋಗೀತೇವಾದ್ಯೇ ಕೋವಿದಶ್ಚಾಪಿಯಜ್ವಾ । ರೌದ್ರೋದ್ವೇಷೀ ದ್ವೇಷಿವರ್ಗೈರ್ವಿಯುಕ್ತಾಯುಕ್ತೋಯೋಷಾಭೂಷಣಾದ್ಯೈರ್ಗದಾಯಾಂ ॥

## ೨. ಶಕಟಯೋಗ ಫಲಂ

ಟೀಕು॥ ಶಕಟಜಃ-ಶಕಟಯೋಗದಲ್ಲಿ ಹುಟ್ಟಿದವನು, ತದ್ವೃತ್ತಿಭುಕ್-ಆ ಶಕಟಜ ವೃತ್ತಿಯಿಂದ ಜೀವಿಸುವನು, ಭಂಡಿ ಹೊಡೆಯುವುದು. ಹೇರಾಟ ಮಾಡುವುದು ಮೊದಲಾದ ವೃತ್ತಿಯಿಂದ ಜೀವಿಸುವನು, ಸರುಜಃ-ವ್ಯಾಧಿಪೀಡಿತನೂ, ಕುದಾರಃ-ಕುತ್ಸಿತವಾದ ಹೆಂಡತಿಯುಳ್ಳವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ಮುಖಿಃಕಂಭಾರ್ಯೋರೋಗಾರ್ತಃ ಶಕಟಪ್ರಾಪ್ತಜೀವಕಃ । ನಿಃಸ್ವೋಬಂಧುವಿಹೀನಶ್ಚ

* ಯಷ್ವಾರ್ಥಬಾಕ್ ಎಂದು ಪಾಠಾಂತರ.

ಶಕಟೇಜಾಯತೇನರಃ ॥೩೩॥ ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ದೀನೋಹೀನೋ ವೈಭವೇನಾರ್ಥ ಮಿತ್ರೈರ್ಯಸ್ಯೋತ್ಪತ್ತ್ಯಾವಾಪ್ತಕಾರ್ಶೋಽಪ್ಯವಶ್ಯಂ । ಯಾತಿಪ್ರೀತಿಂ ಪ್ರಾಪ್ಯಮರ್ತ್ಯಃ ಕುಯೋಷಾಂತ್ಯಕ್ತ್ವಾಯೋಗೇ ಶಾಕಟೀಯಸ್ಯಜನ್ಮ ॥

## ೩. ವಿಹಗಯೋಗ ಫಲಂ

ವಿಹಗೆ-ವಿಹಗಯೋಗದಲ್ಲಿ ಹುಟ್ಟಿದವನು, ದೂತಃ-ಹೇಳಿ ಕಳುಹಿಸಿದ ಮಾತನ್ನು ಹೇಳುವವನು, ಅಂದರೆ, ದೂತ ವೃತ್ತಿಯುಳ್ಳವನು, ಅಟನಃ-ಸ್ವೇಚ್ಛಾ ಚಾರಿಯಾಗಿ ತಿರುಗುವನು, ಕಲಹಕೃತ್-ಕಲಹ ಮಾಡುವನೆಂದು, ಪ್ರಾದಿಷ್ಟಃ- ಹೇಳಲ್ಪಡುತ್ತೆ. ಈ ವಿಷಯದಲ್ಲಿ ॥ಲ.ಚ॥ ಶ್ಲೋಕ ಭ್ರಮಣೇತಿರುಚಿರ್ಹೃಷ್ಟಃ ಸುರತಪ್ರಾಪ್ತಜೀವಿಕಃ । ನಿಕೃಷ್ಟಃ ಕಲಹಪ್ರೀತೋವಿಹಂಗೇ ಮಾನವೋ ಭವೇತ್ ॥೩೫॥ ಧುಂಡಿರಾಜಃ ॥ ಏಷಾಂಸೂತೌ ಮಾನವಾನಾಂ ವಿಯೋಗೋ ಭೋಗೋ ಯೋಗೋತ್ಪನ್ನಸೌಖ್ಯಂ ನತೇಷಾಂ । ಯಾನೇಪ್ರೀತಿರ್ನಿತ್ಯಮೇವ ಪ್ರವಾಸೇ ವಾಸೋರ್ಥಾನಾಮಲ್ಪತಾ ಜಲ್ಪತಾಯ್ಯೈಃ ॥೩೬॥

## ೪. ಶೃಂಗಾಟಕ ಯೋಗಫಲಂ

ಶೃಂಗಾಟಕೇ-ಶೃಂಗಾಟಕ ಯೋಗದಲ್ಲಿ ಜನಿಸಿದವನು, ಚಿರಸುಖೀ-ಅಂತ್ಯ ವಯಸ್ಸಿನಲ್ಲಿ ಸುಖವುಳ್ಳವನು, (ಕೆಲವರು ಬಹು ಕಾಲ ಸುಖವನ್ನನುಭವಿಸುವನೆಂದು ಅರ್ಥಮಾಡಿರುವರು ಃ ಈ ವಿಷಯದಲ್ಲಿ ॥ಶ್ಲೋಕ ॥ಗರ್ಗಃ॥ ಲಗ್ನಪಂಚಮ ಧರ್ಮಸ್ಥೈರ್ಯೋಗ ಶೃಂಗಾಟಕೋಮತಃ । ವಯೋಂತೇ ಸುಖಿನಾಂಜನ್ಮ ತತ್ರಸ್ಯಾತ್ಕಟುಭಾಷಿಣಾಂ ॥೩೭॥ ಎಂದು ಹೇಳಿರುವುದರಿಂದ ಅಂತ್ಯಕಾಲದಲ್ಲಿ ಸುಖವುಳ್ಳವನೆಂದು ಅರ್ಥಮಾಡಿದ್ದು ಯುಕ್ತವಾಗಿರುವುದು. ಮತ್ತು ಲಗ್ನ ಚಂದ್ರಿಕಾಯಾಂ ॥ಶ್ಲೋಕ॥ ಹಾಸ್ಯವಕ್ತ್ರ ಶುಭಾಚಾರೋ ನೃಪಭೀತಃಕಲಿ ಪ್ರಿಯಃ । ಧನಾಢ್ಯೋ ಯುವತೀಪ್ರೇಷ್ಯೋ ಯೋಗೇಶೃಂಗಾಟಕೇನರಃ ॥೩೮॥ ಮತ್ತು ಧುಂಡಿರಾಜಃ-ಶ್ಲೋಕ ॥ ಭೂಯೋತ್ಕರ್ಷಃ ಸಾಹಸೀ ಸಂಗರೇಚ್ಛಃ ಸೌಖ್ಯೈರ್ಯುಕ್ತೋತ್ಯಂತಬುದ್ಧಿರ್ನರಃಸ್ಯಾತ್ ॥ ಪ್ರೀತಿಂಗಚ್ಛೇತ್ಪೂರ್ವಪತ್ನ್ಯಾಃ ಸಪತ್ನ್ಯಾದ್ರೋಹಂಚೈವಂ ಶೃಂಗಪೂರ್ವೇ ಮುಖಾಟೇ ॥೩೯॥ ಇದರಲ್ಲಿ ವಿಶೇಷವೇನೆಂದರೇ-ಪೂರ್ವಪತ್ನ್ಯಾಃ-ಮೊದಲು ಹೆಂಡತಿಯಲ್ಲಿ ಪ್ರೀತಿಯುಳ್ಳವನು, ಸಪತ್ನ್ಯಾದ್ರೋಹಂ-ಎರಡನೆ ಹೆಂಡತಿಯಲ್ಲಿ ದ್ರೋಹ ಮಾಡುವನು.

## ೫. ಹಲಯೋಗ ಫಲಂ

ಹಲಾಖ್ಯೇ-ಹಲಯೋಗದಲ್ಲಿ ಹುಟ್ಟಿದವನು, ಕೃಷಿಕೃತ್-ವ್ಯವಸಾಯಾದಿ

ಕೃಷಿಮೂಲವಾಗಿ ಜೀವಿಸುವನು. ಈ ವಿಷಯದಲ್ಲಿ ।।ಶ್ಲೋಕ।।ಲ.ಚ. ।। ಬಹ್ವಾಶ್ರೀಚದರಿದ್ರೀಚ ಕರ್ಷಕೋ ಬಂಧುವರ್ಜಿತಃ । ಸೋದ್ವೇಗೋದುಃಖಿತಃ ಪ್ರೇಷ್ಯೋ ಹಲಯೋಗಭವೋನರಃ ।। ಮತ್ತು ಧುಂಡಿರಾಜರು ಈ ಅರ್ಥವನ್ನು ಅಂಗೀಕರಿಸಿರುವರು. ।।ಶ್ಲೋಕ।। ಪ್ರೇಷ್ಯೋಮುಕ್ತಃ ಸಾಧುಭಿರ್ಮಿತ್ರವರ್ಗೈಃ ಕೃಷ್ಯಾಜೀವೀದುಃಖಿತೋತ್ಯಂತಭುಕ್ಸ್ಯಾತ್ । ಉತ್ಪತ್ತಿಂಯೋ ಲಾಂಗಲಾಖ್ಯೇ ಪ್ರಯಾತಿಯಾತಿಕ್ಲೇಶಂ ನಿರ್ಧನತ್ವಂಪ್ರಕಾಮಂ ।।೪೧।। ಎಂದುಕ್ತವಾಗಿರುತ್ತೆ ।।೧೩।।

## ೧. ವಜ್ರಾದಿ ಯೋಗಫಲಂ

**ಮೂಲ।। ವಜ್ರೇಂತ್ಯಪೂರ್ವ ಸುಖಿತಃ ಸುಭಗೋತಿಶೂರೊ ವೀರ್ಯಾನ್ವಿತೋ ಪ್ಯಥಯವೇ ಸುಖಿನೋವಯೋಂತಃ । ವಿಖ್ಯಾತ ಕೀರ್ತ್ಯಮಿತಸೌಖ್ಯ ಗುಣಾಶ್ಚ ಪದ್ಮೇ ವಾಪ್ಯಾಂತನುಸ್ಥಿರಸುಖೀ ನಿಧಿಕೃನ್ನದಾತಾ ।।೧೪।।**

ಅವತಾರಿಕೆ।। ಈ ಶ್ಲೋಕದಲ್ಲಿ ವಜ್ರಯೋಗ ೧, ಯವಯೋಗ ೧, ಪದ್ಮಯೋಗ ೧, ವಾಪೀಯೋಗ ೧, ಈ ನಾಲ್ಕು ಯೋಗಗಳ ಫಲಗಳು ಹೇಳಲ್ಪಡುತ್ತೆ, ಟೀ।। ವಜ್ರೇವಜ್ರಯೋಗದಲ್ಲಿ ಹುಟ್ಟಿದವನು, ಅಂತ್ಯಪೂರ್ವಸುಖಿತಃ-ವಾರ್ಧಿಕ್ಯಬಾಲ್ಯ, ವಯಸ್ಸಿನಲ್ಲಿ ಸುಖವುಳ್ಳವನು, ಅಂದರೆ ಬಾಲ್ಯದಲ್ಲಿ ಸುಖೀ, ಯೌವನದಲ್ಲಿ ದುಃಖೀ, ವಾರ್ಧಿಕ್ಯದಲ್ಲಿ ಪುನಃ ಸುಖವುಳ್ಳವನೆಂದರ್ಥವು. ಸುಭಗಃ-ಸರ್ವಜನ ಮನೋಹರವಾಗಿರುವನು. ಅತಿಶೂರಃ-ಹೆಚ್ಚಾದ ಶೌರ್ಯವುಳ್ಳವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ।।ಶ್ಲೋಕ।। ಸುಖೀಚ ಸುಭಗಶ್ಶೂರೋ ಮಧ್ಯೇ ಭಾಗ್ಯೇನ ವರ್ಜಿತಃ । ನಿಸ್ನೇಹಶ್ಚವಿಬುದ್ಧಶ್ಚ ವಜ್ರಯೋಗೇ ಖಲೋನರಃ ।। ಮತ್ತು ಈ ವಿಷಯದಲ್ಲಿ ಧುಂಡಿರಾಜರು ಹೇಳಿರುವುದೇನೆಂದರೆ-।।ಶ್ಲೋಕ।। ಆದ್ಯೇಭಾಗೇ ಜೀವಿತಸ್ಯಾಂತಿ ಮೇಚಸೌಖ್ಯೋ ಪೇತೋ ಭಾಗ್ಯವಾನ್ಮಾನವಸ್ಯಾತ್ । ಮಧ್ಯೇ ಭಾಗೇ ಭಾಗ್ಯ ಹೀನಃ ಪ್ರಕಾಮಂ ಕಾಮಕ್ರೋಧೈರ್ವ್ಯನಿತೋ ವಜ್ರಯೋಗೇ ।।೪೩।।

## ೨. ಯವಯೋಗ ಫಲಂ

ಟೀಕು।। ಯವೇ-ಯವಯೋಗದಲ್ಲಿ ಜನ್ಮಿಸಿದವನು, ವೀರ್ಯಾನ್ವಿತಃ-ಪರಾಕ್ರಮ ವುಳ್ಳವನು, ವಯೋಂತಃ-ಮಧ್ಯಯವ್ವನದಲ್ಲಿ ಸುಖವುಳ್ಳವನು, ಕೆಲವರು ಶೌಚಾನ್ವಿ-ತೋಪ್ಯಥಯವೇ ಸುಖಿತೋ ವಯೋಂತ್ಯೇ ಎಂದು ಪಾಠಾಂತರವಾಗಿ ಪಠಿಸಿ ಶೌಚಾನ್ವಿತತ್ವ ವಜ್ರಯೋಗಫಲವೆಂದು ಹೇಳುವರು ಮತ್ತು ಯವಯೋಗ ಜಾತಕನು

ಮುದುಕತನದಲ್ಲಿ ಸುಖವುಳ್ಳವನೆಂದು ಹೇಳುವುದು ಯುಕ್ತವಲ್ಲ. ಈ ವಿಷಯದಲ್ಲಿ ॥ಶ್ಲೋಕ॥ ಲ.ಚ॥ ದಾತಾಚ ಸ್ಥಿರಚಿತ್ತಶ್ಚವ್ರತಾದಿ ನಿಯಮೈರ್ವೃತಃ । ಮಧ್ಯೇ ಸುಖಾರ್ಥ ಪುಣ್ಯಾಢ್ಯೋ ಯವಯೋಗೇ ಜನೋಭವೇತ್ ॥೪೪॥ ಮತ್ತು ಜಾತಕಾಭರಣೇ ॥ಶ್ಲೋಕ॥ ದಾಂತೋ ದಾತಾ ಧರ್ಮ ಕಾಮಾರ್ಥಸಂಪತ್ಸೌಖ್ಯೈ-ರ್ಯುಕ್ತಃ ಸ್ಯಾದ್ವಿನೀ ತೋವದಾನ್ಯಃ । ನಿತ್ಯೋತ್ಸಾಹಃ ಸದ್ವ್ರತೀತು ಪ್ರಶಾಂತಃ ಶಾಂತಕ್ರೋಧೋಯಃ ಪ್ರಸೂತೋ ಯವಾಖ್ಯೇ ॥

## ೩ ಪದ್ಮಯೋಗ ಫಲಂ

ಟೀಕು॥ ಪದ್ಮೇ-ಪದ್ಮಯೋಗದಲ್ಲಿ ಜನ್ಮಿಸಿದವನು, ವಿಖ್ಯಾತಕೀರ್ತ್ಯ, ಮೀಸೌಖ್ಯ ಗುಣಶ್ಚ-ಸರ್ವಜನ ಪ್ರಖ್ಯಾತವಾದ ಕೀರ್ತಿಯುಳ್ಳವನು, ಅಧಿಕ ಸೌಖ್ಯವುಳ್ಳವನು. ಅಧಿಕ ಗುಣವಂತನೂ ಆಗುವನು. ಈ ವಿಷಯಕ್ಕೆ ಲ.ಚ. ॥ಶ್ಲೋಕ॥ ಸ್ಥಿರಾಯುರ್ದೀರ್ಘಕೀರ್ತಶ್ಚ ಕಾಂತಃಶುಭ ಶತ್ಯೆರ್ಯುತ್ಯಃ । ಭೂಯೋಗುಣ ಮದೈರ್ಯುಕ್ತ ಪದ್ಮಯೋಗೇ ಜನೋಭವೇತ್ ॥೪೬॥ ಮತ್ತು ಜಾತಕಾಭರಣೇ ॥ಶ್ಲೋಕ॥ ನಿತ್ಯಂ ಹರ್ಷೋತ್ಕರ್ಷಶಾಲೀ ಬಲೀಯಾಂಶ್ಚಂಚತ್ಕಾಂತಿರ್ಗೀತಕೀರ್ತಿ- ರ್ಮನುಷ್ಯಃ । ಯೋಗೇಸೂತಿ ಶ್ಚೇತ್ಸರೋಜೇ ಸರಾಜಾ ರಾಜ್ಞೋವಂಶೇವಾ ಭವೇದ್ದೀರ್ಘಜೀವೀ ॥೪೭॥ ಇತಿ ಪದ್ಮಯೋಗ ಫಲ ವಿಚಾರಃ

## ೪ ವಾಪೀಯೋಗ ಫಲಂ

ವಾಪ್ಯಾಂ-ವಾಪೀಯೋಗದಲ್ಲಿ ಹುಟ್ಟಿದವನು, ತನುಸ್ಥಿರಸುಖೀ-ಶರೀರಕೆ ಯಾವಾಗಲೂ ಸೌಖ್ಯವುಳ್ಳವನು, ನಿಧಿಕೃತ್-ಭೂಮಿಯಲ್ಲಿ ಧನವನ್ನು ಹೂತಿಡುವನು. ನದಾತಾ-ದಾನಾವರ್ಜಿತನು, ಅಂದರೆ-ಲುಬ್ಧನಾಗುವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ನಿಪುಣೋನಿಧಿಕಾರ್ಯೇಷು ಸ್ಥಿರದ್ರವ್ಯಸ್ಸುಖೈರ್ಯುತ್ಯಃ । ಪ್ರಹೃಷ್ಟಮುಖನೇತ್ರಶ್ಚತೃಪ್ತೋವಾಪ್ಯಾಂ ನರಃಸದಾ॥ ಮತ್ತು ಜಾ.ಭ ॥ಶ್ಲೋಕ॥ ದೀರ್ಘಾಯುಃ ಸ್ಯಾದಾತ್ಮ ವಂಶಾವತಂಸಃ ಸೌಖ್ಯೋಪೇತೋತ್ಯಂತಧೀರೋ ಮನೀಷೀ-ಚಂಚದ್ವಾಕ್ಯಃ ಸನ್ಮನಾಪುಷ್ಟವಾಪೀ ವಾಪೀಯೋಗೆಯುಃ ಪ್ರಸೂತಃ ಪ್ರತಾಪೀ ॥೪೯॥

## ಯೂಪಾದಿಯೋಗ ಫಲಂ

ಮೂಲ॥ ತ್ಯಾಗಾತ್ಮವಾನ್ಕ್ರತು ವರ್ಯೈರ್ಯಜತೇಚ ಯೂಪೇ । ಹಿಂಸ್ರೇಥಗುಪ್ತ್ಯಧಿಕೃತಃ ಶತಕೃಚ್ಚರಾಖ್ಯೇ ॥ ನೀಚೋಲಸಃ ಸುಖಧನೈರ್ವಿಯುತಶ್ಚ ಶಕ್ತೌ । ದಂಡೇಪ್ರಿಯೈರ್ವಿರಹಿತಃ ಪುರುಷೋಂತ್ಯ ವೃತ್ತಿಃ ॥

ಅವತಾರಿಕೆ ॥ ಯೂಪಯೋಗ ೧, ಶರಯೋಗ ೧, ದಂಡಯೋಗ ೧, ಈ ನಾಲ್ಕು ಯೋಗಗಳಲ್ಲಿ ಹುಟ್ಟಿದವನ ಸ್ವಭಾವವು ಹೇಳಲ್ಪಡುತ್ತೆ.

## ೧ ಯೂಪದಿಯೋಗ ಫಲಂ

ಟೀಕು॥ ಯೂಪೇ-ಯೂಪಯೋಗದಲ್ಲಿ ಜನ್ಮಿಸಿದವನು, ತ್ಯಾಗಾತ್ಮವಾನ್‌ದಾನ ಮಾಡುವುದರಲ್ಲಿ ವಿತರಣೆಯುಳ್ಳ ಬುದ್ಧಿಯುಳ್ಳವನು, ಕ್ರತುವರ್ಯೈ-ವಾಜಪೇಯಾದಿ ಯಜ್ಞಗಳನ್ನು ಮಾಡುವನು ॥ ಯಜ್ಞಸ್ಸವೋಧ್ವರೋಯಾಗ ಸ್ಸಪ್ತತಂತುರ್ಮಖಃ ಕ್ರತುರಿತ್ಯಮರಃ ಯಜತೇ-ದೇವತೆಗಳನ್ನು ತೃಪ್ತಿಪಡಿಸುವನು. ಯಜ್‌ದೇವಾ ಪೂಜಾಸಂಗತಿ ಕರುಣಾದಾನೇಷು ಎಂದುಧಾತುವು. ಈ ಯೋಗ ವಿಷಯದಲ್ಲಿ ಲಗ್ನ ಚಂದ್ರಿಕೆಯಲ್ಲಿ ॥ಶ್ಲೋಕ॥ ಆತ್ಮರಕ್ಷಾ ರತಸ್ತ್ಯಾಗೀ ಸುಖಸತ್ಯವ್ರತೈರ್ಯುತಃ । ವಿಶಿಷ್ಟೋ ಮಂತ್ರವಾದೀಚ ಯೂಪಯೋಗೇ ನರೋಭವೇತ್ ॥ ಮತ್ತು ಇದೇ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಧೀರೋದಾರೋ ಯಜ್ಞ ಕರ್ಮಾನುಸಾರೋ ನಾನಾವಿದ್ಯಾ ಸದ್ವಿಚಾರೋ ನರೋವೈ । ಯಸ್ಯೋತ್ಪತ್ತೌ ವರ್ತತೇಯೂಪಯೋಗೋ ಲಕ್ಷ್ಮಾ ಜಾಯತೇ ತಸ್ಯನೂನಮ್ ॥

## ೨. ಶರಯೋಗ ಫಲಂ

ಶರಾಖ್ಯೇ-ಶರಯೋಗದಲ್ಲಿ ಜನ್ಮಿಸಿದವನು. ಹಿಂಸ್ರಃ-ಹಿಂಸೆ ಮಾಡುವವನು, ಗುಪ್ತ್ಯಧಿಕೃತಃ-ಬಂಧನಾಧಿಕಾರಿ *ಯಾಗುವನು. ಶರಕೃತ್-ಬಾಣಗಳನ್ನು ಮಾಡುವನು, ಗುಪ್ತ್ಯಧಿಕೃತ್-ರಾಜಗೃಹದಲ್ಲಿ ಗುಪ್ತವಾದ ಅಧಿಕಾರವುಳ್ಳವನೆಂದರ್ಥ ಹೇಳುವರು, ಶರಕೃತ್-ಶರಾಭ್ಯಾಸ ॥ಶ್ಲೋಕ॥ ಶರಕರ್ತಾದ ಸ್ಯುಸೇವೀ ಮಾಂಸಾದೋಮೃಗ ಭೇದನಃ । ಹಿಂಸಕಃ ಶಿಲ್ಪಕಾರೀಚಶರಯೋಗೋದ್ಭವೋಭವೇತ್ ॥೫೨॥ ಇದೇ ವಿಷಯ ಧುಂಡಿರಾಜಃ ॥ಶ್ಲೋಕ॥ ಹಿಂಸೋತ್ಯಂತಂಶಿಲ್ಪದುಃಖೈಃ ಪ್ರಾಪ್ತಾನಂದಃ ಕಾನನಾಂತೇಶರಜ್ಞಃ । ಮರ್ತ್ಯೋ ಯೋಗೇಯಃ ಶರೇಜಾತಜನ್ಮಾಜನ್ಮಾರಂಭಾ- ತ್ತಸ್ಯನ ಕ್ವಾಪಿಸೌಖ್ಯಂ ॥೫೩॥

## ೩. ಶಕ್ತಿಯೋಗ ಫಲಂ

ಶಕ್ತೌ-ಶಕ್ತಿಯೋಗದಲ್ಲಿ ಹುಟ್ಟಿದವನು, ನೀಚಃ-ಕುಲೋಚಿತ ವೃತ್ತಿಯನ್ನು ಬಿಟ್ಟು ಅಧಮಕೃತ್ಯಗಳನ್ನು ಮಾಡುವನು, ಆಲಸಃ-ಸೋಮಾರಿಯಾಗುವನು. ಸುಖಧನೈರ್ವಿಯುತಶ್ಚ-ಸುಖಧನವರ್ಜಿತನು ಆಗುವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ಜರಾಯುರ್ಯುದ್ಧ ದಕ್ಷಶ್ಚಾಸುಭಗಃ ಸಸ್ಥಿರೋಲಸಃ ।

* ಜೈಲ್ ಸೂಪರಿಂಟೆಂಡೆಂಟ್ ಅಥವಾ ಜೈಲರ್.

ನೀಚೋ ದುಃಖೀದರಿದ್ರಶ್ಚ ಶಕ್ತಿಯೋಗೇ ಭವೇನ್ನರಃ ॥೪॥ ಇದೇ ವಿಷಯದಲ್ಲಿ ಜಾತಕಾಭರಣೇ ॥ಶ್ಲೋಕ॥ ನೀಚೈರುಚ್ಚೈಃ ಪ್ರೀತಿಕೃತ್ಸುಲಸಶ್ಚ ಸೌಖ್ಯೈರರ್ಥೈರ್ವರ್ಜಿತೋ ನಿರ್ಬಲಶ್ಚ । ವಾದೇಯುದ್ಧೇ ತದ್ವಿಶುದ್ಧಿ ರ್ವಿಶಾಲಾಶಾಲಾಸೌಖ್ಯ ಸ್ಯಾಲ್ಪತಾಶಕ್ತಿ ಯೋಗೆ ॥೫೫॥

## ೪. ದಂಡಯೋಗ ಫಲಂ

ದಂಡೇ-ದಂಡಯೋಗದಲ್ಲಿ ಹುಟ್ಟಿದ, ಪುರುಷಃ-ಮನುಷ್ಯನು, ಪ್ರಿಯೈಃ-ಇಷ್ಟಜನರಿಂದ, ವಿರಹಿತಃ-ವಿಸರ್ಜಿಸಲ್ಪಡುವವನು. ಅಂತ್ಯ ವೃತ್ತಿಃ-ಅಧಮವೃತ್ತಿಯುಳ್ಳವನೂ ಆಗುವವನು. ಈ ವಿಷಯಕ್ಕೆ ॥ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ನಿಃಸ್ವೋನಷ್ಟಸುತಃ ಸ್ತ್ರೀಕೋಬಂಧುಬಾಹ್ಯಃ ಸುನಿರ್ಘೃಣಃ । ನೀಚೋಪ್ರೇಷ್ಯೋ ದುಃಖಿತಶ್ಚದಂಡಯೋಗೇ ಭವೇನ್ನರಃ ॥೫೬॥ ಇದೇ ವಿಷಯದಲ್ಲಿ ॥ ಜಾತಕಾಭರಣದಲ್ಲಿ ॥ಶ್ಲೋಕ॥ ದೀನೋಹೀನೋನ್ಯತ್ರಸಂಜಾತ ಸೌಖ್ಯಃ ಪ್ರೇಷ್ಯದ್ವೇಷಿಗೋತ್ರಜೈರ್ಜಾತವೈರಃ । ಕಾಂತಾಪುತ್ರೈರರ್ಥಿಭಿರ್ನೈವಹೀನೋ ಹೀನೋಬುಧ್ಯಾ ದಂಡಯೋಗಾನುಜನ್ಮಾ ॥೫೭॥ ಈ ಶ್ಲೋಕದಲ್ಲಿ ಯೂಪ, ಶರ, ಶಕ್ತಿ, ದಂಡ, ಈ ೪ ಯೋಗಗಳು ಹೇಳಲ್ಪಟ್ಟಿತು.

## ನೌಕಾದಿಯೋಗ ಫಲಂ

ಮೂ॥ಕೀರ್ತ್ಯಾಯುತಶ್ಚಲಸುಖಃ ಕೃಪಣಶ್ಚನೌಜಃ । ಕೂಟೇನೃತಪ್ಲವನ
ಬಂಧನಪಶ್ಚ ಜಾತಃ । ಛತ್ರೋದ್ಭವಃ ಸ್ವಜನಸೌಖ್ಯಕರೋಂತ್ಯ
ಸೌಖ್ಯಃ । ಶೂರಶ್ಚಕಾರ್ಮುಕಭವಃ ಪ್ರಥಮಾಂತ್ಯಸೌಖ್ಯಃ ॥೧೬॥

ಅ॥ ಈ ಶ್ಲೋಕದಲ್ಲಿ ನೌ, ಕೂಟ, ಛತ್ರ, ಧನುರ್ಯೋಗವೆಂಬ ಯೋಗಗಳ ಫಲವು ಹೇಳಲ್ಪಡುತ್ತೆ.

## ೧. ನೌಕಾಯೋಗಫಲಂ

ಟೀ॥ ನೌಜಃ-ನೌಕಾಯೋಗದಲ್ಲಿ ಹುಟ್ಟಿದವನು, ಕೀರ್ತ್ಯಾಯುತಃ-ಯಶಸ್ಸಿ ನಿಂದ ಕೂಡಿದವನು. ಚಲಸುಖಃ-ಅಸ್ಥಿರಾದ ಸುಖವುಳ್ಳವನು, (ಅಂದರೆ-ಸುಖವು ಸ್ಥಿರವಿಲ್ಲ). ಕೃಪಣಃ-ಲೋಭಿಯಾಗುವವನು. ಈ ವಿಷಯದಲ್ಲಿ ಶ್ಲೋಕ ॥ಲ.ಚ॥ ಅನ್ಯೋಪಿಜೀವವಿಭವೋಬಹ್ವಾಯುಃ ಖ್ಯಾತಕೀರ್ತಿರ್ಮಾ । ಕೃಪಣೋಮಲಿನೋ ಲುಬ್ಧೋ ನೌಯೋಗೇಚಂಚಲೋನರಃ ॥೫೮॥ ಮತ್ತು ಜಾ.ಭ.॥ಶ್ಲೋ॥ ಖ್ಯಾತೋ ಲುಬ್ಧೋ ಭೋಗಸೌಖ್ಯೈರ್ವಿಹೀನೋಯೋನೌ ಯೋಗೇ ಲಬ್ಧಜನ್ಮಾಮನುಷ್ಯಃ । ಕ್ಲೇಶೀಶಶ್ವಚ್ಚಂಚಲಸ್ವಾಂತವೃತ್ತಿರ್ವೃತ್ತಿಃ ಸ್ತೇಯೋದ್ಭೂತಧಾನ್ಯೇನತಸ್ಯ ॥೫೯॥

## ೨. ಕೂಟಯೋಗ ಫಲಂ

ಕೂಟೇ-ಕೂಟಯೋಗದಲ್ಲಿ, ಜಾತಃ-ಜನ್ಮಿಸಿದವನು. ಅನೃತಪ್ಲವಗ ಬಂಧನ ಪಕ್ಷ-ಸುಳ್ಳುಹೇಳುವುದೇ ತಪ್ಪದ ರೂಪವುಳ್ಳವನಾಗಿರುವನು, ಅಂದರೆ-ಸುಳ್ಳು ಹೇಳುವುದಕ್ಕೆ ಹಿಂಜರಿಯದವನು. ಬಂಧನಪಕ್ಷ-ಕಾರಾಗೃಹಾದ್ಯಧಿಕಾರಯಾಗುವನು. ಅನೃತಪ್ಲವನ *ಎಂದು ಪಾಠಾಂತರ, ಸತ್ಯದಲ್ಲಿ ಬುದ್ಧಿಯಿಲ್ಲದವನೆಂದು ಅರ್ಥವು ಪಕ್ಷಾಂತರದಲ್ಲಿ **ಅನೃತೀಕ್ಕಪಣ ಬಂಧನಪಃ- ಈ ಪಾಠದಲ್ಲಿ ಅಸತ್ಯವಾದಿಯು, ಕೃಪಣನೂ, ಕಾರಾಗೃಹಾಧಿಕಾರಿಯೂ ಆಗುವನೆಂದು ಅರ್ಥಮಾಡಿರುತ್ತಾರೆ. ಆದರೆ ಇದೇ ವಿಷಯದಲ್ಲಿ ॥ಲ.ಚ॥ಶ್ಲೋಕ॥ ಮಿಥ್ಯಾವ್ಯಾದೀಶಠಃ ಕ್ರೂರಃಕಿತವೋ ಬಂಧುಪಾಲಕಃ । ನಿಷ್ಕಿಂಚನಃಶೈಲವಾಸೀ ಕೂಟಯೋಗಿ ಭವೇನ್ನರಃ ॥೬೦॥ ದುರ್ಗಾರಣ್ಯಾವಾಸಶೀಲಶ್ಚಮಲ್ಲಭಿಲ್ಲ ಪ್ರೀತಿರ್ನಿರ್ಧನೋನಿಂದ್ಯ ಕರ್ಮಾ ಧರ್ಮಾಧರ್ಮಜ್ಞಾನ ಹೀನಶ್ಚಕೂಟಃ ಕೂಟಪ್ರಾಪ್ತೋತ್ಪತ್ತಿರೇವಂ ಮನುಷ್ಯಃ ॥

## ಛತ್ರಯೋಗಫಲಂ

ಛತ್ರೋದ್ಭವಃ-ಛತ್ರಯೋಗದಲ್ಲಿ ಜನ್ಮಿಸಿದವನು. ಸ್ವಜನ ಸೌಖ್ಯಪರಃ- ಬಂಧುಜನ ಸೌಖ್ಯಪರನು, ಅಂತ್ಯಸೌಖ್ಯಃ-ವೃದ್ಧಾವಸ್ಥೆಯಲ್ಲಿ ಸೌಖ್ಯವುಳ್ಳವನು, ಈ ವಿಷಯದಲ್ಲಿ ॥ಶ್ಲೋಕ ॥ಲ.ಚಂ॥ ಸಪ್ತಮಾಲ್ಲಗ್ನಪರ್ಯಂತ್ಯೈಃ ಖೇಟೈಃ ಸರ್ವೈಃ ಶ್ಶುಭಾಶುಭೈಃ । ಛತ್ರಯೋಗಸ್ಸಮಾಖ್ಯಾತೋ ಬ್ರಹ್ಮರುದ್ರಾದಿಭಿಸ್ಸುರೈಃ ॥೬೨॥ ಪ್ರಕೃಷ್ಟಧೀರ್ದಯಾಲುಶ್ಚ ದೀರ್ಘಾಯುಃಸ್ವಜನಾಶ್ರಯಃ । ವಯಸಿಪ್ರಥಮಂತ್ಯೇಚ ಸುಖೀ ಛತ್ರಪ್ರಿಯೋನರಃ ॥೬೩॥ ಮತ್ತು ಇದೇ ವಿಷಯದಲ್ಲಿ ಧುಂಡಿರಾಜಃ ॥ ॥ಶ್ಲೋಕ॥ ಪ್ರಾಜ್ಞೋ ರಾಜ್ಞೋಕಾರ್ಯಕರ್ತಾದಯಾಲುಃ ಪೂರ್ವಂ ಪಶ್ಚಾತ್ಸರ್ವ ಸೌಖ್ಯೈರುಪೇತಃ । ಯಸ್ಯೋತ್ಪತ್ತೌಛತ್ರಯೋಗೋಪಲಬ್ಧಿಸ್ತಸ್ಯಪ್ರಾಪ್ತಿಃ ಛತ್ರ ಸಚ್ಚಾಮರಾದೇಃ ॥೬೪॥

## ಕಾರ್ಮುಕಯೋಗ ಫಲಂ

ಕಾರ್ಮುಕಭವಃ-ಧನುರ್ಯೋಗದಲ್ಲಿ ಜನ್ಮಿಸಿದವನು. ಶೂರಃ-ಶೂರನು. ಪ್ರಥಮಾಂತ್ಯಸೌಖ್ಯಃ-ಆದಿವಯಸ್ಸು ಅಂತ್ಯವಯಸ್ಸಿನಲ್ಲಿ ಸೌಖ್ಯವುಳ್ಳವನು, ಅರ್ಥಾತ್ ಮಧ್ಯವಯಸ್ಸಿನಲ್ಲಿ ಸುಖವಿಲ್ಲದವನು ದುಃಖೀ ಎಂದು ತಿಳಿಯತಕ್ಕದ್ದು. ಈ ಜಾತಕನಿಗೆ ಆಯುರ್ದಾಯ ಮಾಡಿ ಅದರಲ್ಲಿ ೩ ಭಾಗಮಾಡಿ, ೧-೩ನೇ ಭಾಗಗಳಲ್ಲಿ ಸುಖವು, ೨ನೇ ಭಾಗದಲ್ಲಿ ದುಃಖವು ಹೇಳತಕ್ಕದ್ದು. ಅಂತ್ಯ ಸೌಖ್ಯವೆಂದು, ಆದಿಸೌಖ್ಯವೆಂದು

* ಅನೃತಪ್ಲವನ-ಪಾಠಾಂತರ.

** ಅನೃತೀಕ್ಕಪಣಬಂಧನಪಃ ಪಕ್ಷಾಂತರ.

ಹೇಳಿರುವ ಪ್ರಮೇಯಗಳಲ್ಲಿ ಈ ಪ್ರಕಾರವಾಗಿ ಕಾಲನಿರ್ದೇಶ ಮಾಡಿ ತಿಳಿಯತಕ್ಕದ್ದು. ಈ ಯೋಗವಿಷಯದಲ್ಲಿ ಲ.ಚಂ ||ಶ್ಲೋಕ|| ದಶಮಾಷ್ಟ ಚತುರ್ಥಾಂತ್ಯೈರ್ಗನೇಂದ್ರೈಃ ಶುಭಾಶುಭೈಃ । ಗತೈರ್ಯೋಗಃ ಕಾರ್ಮುಕಾಖ್ಯಃ ಖ್ಯಾತೋಸೌ ಪಂಡಿತೋತ್ತಮೈಃ ||೬೫|| ವಯೋಮಧ್ಯೇ ಭಾಗ್ಯಹೀನೋ ಗುಪ್ತಪಾಲೋವನೇರತಃ । ಮಿಥ್ಯಾವಾದೀಚಚೌರಶ್ಚ ಕಾರ್ಮುಕೇಜಾಯತೇನರಃ ||೬೬|| ಇದೇ ವಿಷಯದಲ್ಲಿ ಜಾ.ಭ.||ಶ್ಲೋಕ|| ಆದ್ಯೇಭಾಗೇಚಾಂತಿಮೇಜೀವಿತಸ್ಯ ಸೌಖ್ಯೋಪೇತಃಕಾನನಾದ್ರಿ ಪ್ರಚರಃ । ಯೋಗೇಜಾತಃ ಕಾರ್ಮುಕೇ ಸೋತಿಗರ್ವೋ ಗರ್ವೋನ್ನತ್ವಾಪತ್ತಿ ಕೃತ್ಕಾರ್ಮುಕಾಖ್ಯಃ ||೬೭|| ಕಾರ್ಮುಕಯೋಗದಲ್ಲಿ ಹುಟ್ಟಿದವನು ಆದಿ ಮತ್ತು ಅಂತ್ಯವಯಸ್ಸಿನಲ್ಲಿ ಸುಖವುಳ್ಳವನು, ವನಪರ್ವಗಳಲ್ಲಿ ಸಂಚರಿಸುವನು, ಗರ್ವಿಷ್ಠ, ಉನ್ನತ ಜನಗಳಿಗೆ ಸಂಕಟವನ್ನು ಉಂಟುಮಾಡುವನು, ನಿರಂತರ ಧನುರ್ಧಾರಿಯಾಗುವನು, ತನ್ನ ಅಹಂಕಾರದಿಂದ ವಿಪತ್ತುಂಟುಮಾಡಿಕೊಳ್ಳುವನೂ ಆಗುವನು.

## ಅರ್ಧಚಂದ್ರಾದಿ ಯೋಗಫಲಂ

ಮೂಲ|| ಅರ್ಧೇಂದುಜಸ್ಸುಭಗಕಾಂತವಪುಃ ಪ್ರಧಾನ|| ಸ್ತೋಯಾಲಯೇನರಪತಿ ಪ್ರತಿಮಸ್ತುಭೋಗೀ || ಚಕ್ರೇನರೇಂದ್ರಮಕುಟದ್ಯುತಿ ರಂಜಿತಾಂಘ್ರಿ । ರ್ವೀಣೋದ್ಭವಶ್ಚನಿಪುಣಃ । ಪ್ರಿಯಗೀತನೃತ್ಯಃ ||೧೭||

ಅವತಾರಿಕೆ|| ಈ ಶ್ಲೋಕದಲ್ಲಿ ಅರ್ಧಚಂದ್ರಯೋಗ ೧, ಸಮುದ್ರಯೋಗ ೧, ಚಕ್ರಯೋಗ ೧, ವಲ್ಲಕೀ (ವೀಣಾ) ಯೋಗ ೧, ಈ ೪ ಯೋಗಗಳಫಲವು ಹೇಳಲ್ಪಡುತ್ತೆ.

## ೧. ಅರ್ಧಚಂದ್ರಾದಿಯೋಗ ಫಲಂ

ಟೀಕು|| ಅರ್ಧೇಂದುಜಃ-ಅರ್ಧಚಂದ್ರಯೋಗದಲ್ಲಿ ಹುಟ್ಟಿದವನು, ಸುಭಗಕಾಂತವಪುಃ, ಸುಭಗ-ಮನೋಹರವಾದ, ಕಾಂತವಪುಃ-ಶರೀರವುಳ್ಳವನು, ಪ್ರಧಾನಃ-ಸರ್ವಜನಮುಖ್ಯನಾಗುವನು. ಈ ವಿಷಯದಲ್ಲಿ ||ಲ.ಚ.||ಶ್ಲೋಕ|| ಬಲೀರಾಜ ಪ್ರಿಯಃ ಕಾಂತೇ ಹೇಮರತ್ನೈರಲಂಕೃತಃ । ಅರ್ಧಚಂದ್ರೇಚಮೂನಾಥಃ ಸುಭಗೋ ಜಾಯತೇನರಃ ||೬೮|| ಇದೇ ವಿಷಯದಲ್ಲಿ ಧುಂಡಿರಾಜಃ||ಶ್ಲೋಕ|| ಭೂಮಿಪಾಲಾತ್ಪ್ರಾಪ್ತಚಂಚುತ್ತ್ರಿಷ್ಟಃಸೇನಾ ಭೂಷಣಾರ್ಥಾಂಬರಾಢ್ಯೈಃ। ಚೇದುತ್ಪತ್ತೌ ಯಸ್ಯಯೋಗೋರ್ಧಚಂದ್ರಃ ಸೋಯಂ ಸಾಕ್ಷಾದುತ್ಸವಾರ್ಥೀಜನಾನಾಂ ||೬೯||

## ೨. ಸಮುದ್ರಯೋಗ ಫಲಂ

ತೋಯಾಲಯೇ-ಸಮುದ್ರಯೋಗದಲ್ಲಿ ಜನ್ಮಿಸಿದವನು, ನರಪತಿ ಪ್ರತಿಮಃ-

ರಾಜಸಮಾನನಾಗುವನು, ಭೋಗೀ-ಪ್ರಪಂಚದ ವಿಷಯೋಪ ಭೋಗಗಳನ್ನನು ಭವಿಸುವನು. ಈ ವಿಷಯದಲ್ಲಿ ಲ.ಚ ||ಶ್ಲೋಕ|| ಬಹ್ವರ್ಥರತ್ನಸಂಪನ್ನಃ ಪುತ್ರೀಭೋಗೀಜನಪ್ರಿಯಃ । ಸುಶೀಲಃ ಸ್ಥಿರಚಿತ್ತಶ್ಚಜಲಧೌಜಾಯತೇನರಃ ||೭೦|| ಈ ಯೋಗಕ್ಕೆ ||ಜಾ.ಭ.||ಶ್ಲೋಕ|| ದಾನೀಧೀರಶ್ಚಾರುಶೀಲೋದಯಾಲುಃ ಪೃಥ್ವೀಪಾಲಪ್ರಾಪ್ತಸೌಖ್ಯಂ ಪ್ರಕಾಮಂ । ಯೋಗೇಜಾತೋ ಯಸ್ಸಮುದ್ರೇ ಸಧನ್ಯೋಧನ್ಯೋವಂಶಸ್ತೇನ ನೂನಂನರೇಣ ||೭೧||

## ೩. ಚಕ್ರಯೋಗ ಫಲಂ

ಚಕ್ರೇ-ಚಕ್ರಯೋಗದಲ್ಲಿ ಜನ್ಮಿಸಿದವನು, ನರೇಂದ್ರಮಕುಟರಂಜಿತಾಂಘ್ರೀಃ-ನರೇಂದ್ರ-ರಾಜರ, ಮಕುಟ-ಕಿರೀಟಗಳ ಅಂದರೆ ಶಿರೋರತ್ನಗಳ, ದ್ಯುತಿ-ಕಾಂತಿ ಯಿಂದ, ರಂಜಿತ-ಪ್ರಕಾಶಮಾನವಾಗಿ ಕಾಣಲ್ಪಡುವ, ಅಂಘ್ರೀಃ-ಪಾದವುಳ್ಳವನಾಗು ವುದು. ಅಂದರೆ ರಾಜಾಧಿರಾಜನಾಗುವನು (ಚಕ್ರವರ್ತೀಸಾರ್ವಭೌಮೋ । ಇತಿ ನಿಘಂಟುಃ) * ಮತ್ತು ತಪೋಜ್ಞಾನಾದಿ ಪ್ರಭಾವ ಯುಕ್ತನಾಗುವನು, ಮತ್ತು ರಾಜರುಗಳಿಂದ ವಂದನಾದ್ಯುಪಚಾರಗಳ ಮೂಲಕವಾಗಿ ಆದರಿಸಿಕೊಳ್ಳುವನು. ಈ ವಿಷಯಕ್ಕೆ ||ಲ.ಚ||ಶ್ಲೋಕ|| ಪ್ರಣತಾಶೇಷ ಪಾತಾಳಃ ಸತ್ಸೇವಿಶ ಪದಾಂಬುಜಃ ಚಕ್ರಯೋಗೇ ಸಮುತ್ಪನ್ನೋ ಮಹಾ ರಾಜೋಭವೇನ್ನರಃ ||೭೨|| ಇದೇ ಅರ್ಥಕ್ಕೆ ||ಜಾ.ಭ.||ಶ್ಲೋಕ|| ಶ್ರೀಮದ್ಭೂ‌ಪೋತ್ಕಂತ ಜಾತಪ್ರತಾಪೊಭೂಯೋಬೂಪೋ ಪಾಯನೈರನ್ವಿತ ಸ್ಸ್ಯಾತ್। ಯೋಗೇಜಾತಃ ಪೂರುಪೋಯಸ್ತು ಚಕ್ರೇ ಚಕ್ರೇ ಪ್ರಥ್ವ್ಯಾಃಶಾಲಿ ನೀತಿಸ್ಯಕೀರ್ತಿಃ ||೭೩||

ಈ ಪ್ರಕಾರವಾಗಿ ೨೦ ಆಕೃತಿಯೋಗ ಫಲಗಳು ಹೇಳಲ್ಪಟ್ಟಿವೆ. ಇನ್ನು ಮುಂದೆ ಸಂಖ್ಯಾಯೋಗ ಫಲವು ಹೇಳಲ್ಪಡುತ್ತೆ.

## ೪. ವೀಣಾಯೋಗ ಫಲಂ

ಟೀಕು|| ವೀಣೋದ್ಭವಃ-ವೀಣಾಯೋಗದಲ್ಲಿ ಹುಟ್ಟಿದವನು, ನಿಪುಣಃ-ಸೂಕ್ಷ್ಮ ಬುದ್ಧಿ ಕಾರ್ಯಚತುರತೆಯುಳ್ಳವನು, ಪ್ರಿಯಗೀತನೃತ್ಯಃ-ಗಾನದಲ್ಲೂ ನಾಟ್ಯದಲ್ಲೂ ಪ್ರೀತಿಯುಳ್ಳವನು. ಈ ವಿಷಯಕ್ಕೆ ||ಲ.ಚ.||ಶ್ಲೋಕ|| ನೃತ್ಯಗೀತ ಪ್ರಿಯೋನೇತಾ ಬಹುಭೃತ್ಯೋಧನೀಸುಖೀ । ಕಾರ್ಯೇಷುನಿಪುಣೋ ಲೋಕೇ ವೀಣಾಯೋಗೇಚಜಾಯತೇ ||೭೪|| ಇದೇ ಅರ್ಥಕ್ಕೆ ಧುಂಡಿರಾಜಃ||ಶ್ಲೋಕ|| ಅರ್ಥೋಪೇತಾಃ ಶಾಸ್ತ್ರಪಾರಂಗತಾಶ್ಚ ಸಂಗೀತಜ್ಞಾಃ ಪೋಷಕಾಸ್ಸ್ಯುರ್ಬಹೂನಾಂ ।

* ರಾಜರುಗಳಿಗೆ ಗುರುವಾಗುವನು.

ನಾನಾಸೌಖ್ಯೈರನ್ವಿತಾಸ್ಸು ಪ್ರವೀಣಾವೀಣಾಯೋಗೇ ಪ್ರಾಣಿನಾಂ ಜನ್ಮಯೇಷಾಂ ॥೭೫॥ ಈ ಪ್ರಕಾರವಾಗಿ ಹೇಳಲ್ಪಟ್ಟಿರುತ್ತೆ. ಈ ಶ್ಲೋಕದಲ್ಲಿ ಆಕೃತಿಯೋಗಕ್ಕೆ ಸೇರಿದ ೩ ಯೋಗಕ್ಕೂ, ಸಂಖ್ಯಾಯೋಗಕ್ಕೆ ಸೇರಿದ ೧ ಯೋಗಕ್ಕೂ ಫಲವು ಹೇಳಿರುತ್ತೆ ॥೧೭॥

## ದಾಮಯೋಗಾದಿ ಫಲಂ

ಮೂಲ॥ ದಾತಾನ್ಯಕಾರ್ಯನಿರತಃ ಪಶುಪಶ್ಚದಾಮ್ನಿ । ಪಾಶೇ ಧನಾರ್ಜನ
ವಿಶೀಲ ಸಭೃತ್ಯಬಂಧುಃ॥ ಕೇದಾರಜಃ ಕೃಷಿಕರಃ ಸಬಹೂಪ
ಯೋಜ್ಯಃ ಶೂರಃಕ್ಷತೋ ಧನುರುಚರ್ವಿಧನಶ್ಚ ಶೂಲೇ ॥೧೮॥

ಅವತಾರಿಕೆ ॥ ಈ ಶ್ಲೋಕದಲ್ಲಿ ದಾಮಯೋಗ ೧, ಪಾಶಯೋಗ ೧, ಕೇದಾರಯೋಗ ೧, ಶೂಲಯೋಗ ೧, ಈ ೪ ಯೋಗಗಳ ಫಲವು ಹೇಳಲ್ಪಡುತ್ತೆ.

## ೧. ದಾಮಯೋಗ ಫಲಂ

ಟೀಕು॥ ದಾಮ್ನಿ-ದಾಮಯೋಗದಲ್ಲಿ ಹುಟ್ಟಿದವನು, ದಾತೌ-ದಾನಶೀಲ ನಾಗುವನು. ಅನ್ಯಕಾರ್ಯನಿರತಃ-ಪರೋಪಕಾರ ಮಾಡುವುದರಲ್ಲಿ ಆಸಕ್ತನು, ಪಶುಪಃ-ಗೋರಕ್ಷಕನು, ಈ ವಿಷಯದಲ್ಲಿ ॥ಶ್ಲೋಕ॥ ಲಗ್ನಚಂದ್ರಿಕಾಯಾಂ ॥ ಉಪಕಾರೀ ಧನೀಮೂಢಃ ಪಶುಪುತ್ರ ಸಮೃದ್ಧಿರ್ಮಾ । ದಾಮಯೋಗಭವೋ ಲೋಕೇ ರತ್ನೈರ್ಭವತಿ ಪೂರಿತಃ॥ ಈ ಅರ್ಥಕ್ಕೆ ॥ಜಾ.ಭ.॥ಶ್ಲೋಕ॥ ಜಾತಾನುದೋ ನಂದನಾದ್ಯೈ ಸ್ಸುಧೀರೋ ವಿದ್ಯಾಭೂಷಾ ಕೋಶಸಂಜಾತ ತೋಷಃ । ಚಂಚಚ್ಚೀಲೋ ದಾರಬುದ್ಧಿಪ್ರಶಸ್ತಃ ಶಸ್ತಸ್ಸೂತೌದಾಮಿನೀ ಯಸ್ಯಯೋಗಃ॥೭೭॥

## ೨. ಪಾಶಯೋಗ ಫಲಂ

ಪಾಶೇ-ಪಾಶಯೋಗದಲ್ಲಿ ಜನಿಸ್ಸಿದವನು. ಧನಾರ್ಜನವಿಶೀಲ. ಸಭೃತ್ಯಬಂಧುಃ-ಸನ್ಮಾರ್ಗದಿಂದ ಧನಸಂಪಾಧನೆ ಮಾಡುವುದರಲ್ಲಿ ಅತಿ ಸಮರ್ಥನು, ಮತ್ತು ಭೃತ್ಯರಿಂದಲೂ ಬಾಂಧವರಿಂದಲೂ ವ್ಯಾಪೃತನಾಗಿರುವನು. ಈ ವಿಷಯದಲ್ಲಿ ॥ಜಾ.ಚಂ॥ಶ್ಲೋಕ॥ ಕಾರ್ಯೇದಕ್ಷಃ ಪ್ರಪಂಚಿಂಚ ಬಹುಭಾಷೀಚ ಬಂಧುಭಾಕ್ । ವಿಶೀಲೋ ಬಹು ಲಕ್ಷ್ಮೀಕಃ ಪಾಶೇ ಭೃತ್ಯ ಯುತೋಭವೇತ್ ॥ ಈ ಯೋಗಕ್ಕೆ ಜಾತಕಭರಣದಲ್ಲಿ ॥ಶ್ಲೋಕ॥ ದೀನಾಕಾರಾಸ್ತ ತ್ವರಾಶ್ಚಾಪಕಾರೇ ಬಂಧೇನಾರ್ತಾ ಭೂರಿಕಲ್ಪಾಸ್ಸಂದರ್ಭಾಃ । ನಾನಾಗರ್ಭಾಃ ಪಾಶಯೋಗೇ ಪ್ರಜಾತಾ ಜಾತಾರಣ್ಯಾ ಪ್ರೀತಯಃ ಸ್ಯುರ್ಮನುಷ್ಯಾಃ ॥೭೮॥ತಾ॥ ಪಾಶಯೋಗದಲ್ಲಿ ಹುಟ್ಟಿದವನು. ನೋಡುವುದರಲ್ಲಿ ರಿಕ್ತ, ಅಪಕಾರತತ್ಪರ, ಬಂಧನ ಹೊಂದುವನು, ಪುಷ್ಪಳವಾದ

ಹಾಸಿಗೆಯುಳ್ಳವನು. ಡಾಂಭಿಕ. ಅನೇಕ ಪ್ರಕಾರವಾದ ಅನರ್ಥಗಳನ್ನುಂಟು ಮಾಡುವವನು. ಅರಣ್ಯಸಂಚಾರದಲ್ಲಿ ಪ್ರೀತಿಯುಳ್ಳವನೂ ಆಗುತ್ತಾನೆ. ಈ ವಿಷಯ ವರಾಹಮಿಹಿರಾಚಾರ್ಯರ ಸಮ್ಮತಿಗೆ ವಿರೋಧವಾಗಿರುತ್ತೆ. ಅನೇಕ ಗ್ರಂಥಗಳಲ್ಲಿ ಈ ವಿಷಯವನ್ನು ಹೇಳಿರುವುದರಿಂದ ಇಲ್ಲಿ ಉದಹರಿಸಲ್ಪಟ್ಟಿರುತ್ತೆ.

## ೩. ಕೇದಾರಯೋಗ ಫಲಂ

ಕೇದಾರಜಃ-ಕೇದಾರಯೋಗದಲ್ಲಿ ಜನಿಸಿದವನು. ಕೃಷಿಕರ-ಕೃಷಿಮಾಡುವವನು. ಅಂದರೆ-ಭೂವ್ಯವಸಾಯದಲ್ಲಿ ಆಸಕ್ತಿಯುಳ್ಳವನು, ಸುಬಹೂಪಯೋಜ್ಯಃ-ಚೆನ್ನಾಗಿ ತನ್ನವರಿಗೂ ಪರರಿಗೂ ಉಪಕಾರ ಮಾಡುವನು. ಈ ವಿಷಯದಲ್ಲಿ ||ಜಾ.ಭ.|| ಶ್ಲೋಕ|| ಸತ್ಯೋಪೇತಾಶ್ಚಾರ್ಥ ವಂತೋವಿನೀತಾಃ ಕೃಷೌತ್ಸು ಕ್ಯಾಶ್ಚಾಪಕಾರಾದರಾಶ್ಚ| ಯೋಗೇಕೇದಾರೇ ನರಾಸ್ತೇಪಿ ಧೀರಾ ಧೀರಾ ಚಾರಾಶ್ಚಾಪಿತೇಷಾಂ ವಿಶೇಷಾತ್ ||೮೦|| ಮತ್ತು ಲ.ಚ.||ಶ್ಲೋಕ|| ಕೃಷೌರತಃ ಸತ್ಯವಾದೀ ಸ್ವಬಾಹುವಿಹಿತೋದಯಃ| ಧನೇಸುಖೀಚಂಚಲಾತ್ಮಾ ಕೇದಾರೋತ್ಥೋನರೋಭವೇತ್ ||೮೧||

## ೪. ಶೂಲಯೋಗ ಫಲಂ

ಶೂಲೇ-ಶೂಲಯೋಗದಲ್ಲಿ ಜನ್ಮಿಸಿದವನು. ಶೂರಃ-ಸಮರಧೀರನು ಅಂದರೆ ಯುದ್ಧದಲ್ಲಿ ಶೂರನು, ಕ್ಷತಃ-ಖಡ್ಗದ ಪೆಟ್ಟಿನ ಘಾಯವುಳ್ಳವನು, ವಿಧನಶ್ಚ-ದರಿದ್ರನೂ ಆಗುವವನು ವಧರುಚಿ ಎಂದು ಪಾಠಾಂತರವಿರುತ್ತೆ. ವಧರುಚಿಃ-ಪ್ರಾಣಿಹಿಂಸೆ ಮಾಡುವುದರಲ್ಲಿ ಆಸಕ್ತಿಯುಳ್ಳವನೂ ಆಗುವನು. ||ಜಾ.ಭ||ಶ್ಲೋಕ|| ಯುದ್ಧೇವಾದೇ ತತ್ಪರಶ್ಚಾತಿಶೂರಾಃ ಕ್ರೂರಾಸ್ವತಿನಿಷ್ಠುರಾ ನಿರ್ಧನಾಶ್ಚ । ಯೋಗೇಯೇಷಾಂ ಸೂತಿಕಾಲೇಹಿ ಶೂಲಃ ಶೂಲಪ್ರಾಯಸ್ಥೇ ಜನಾನಾಂ ಭ್ರಮಂತಿ ||೮೨||

## ಯುಗಯೋಗ ಗೋಲಯೋಗ ಫಲಂ

ಮೂಲ|| ಧನವಿರಹಿತಃಪಾಷಂಡೀಸ್ಯಾದ್ಯುಗೇತ್ವಥಗೋಲಕೇವಿಧನಮಲಿನೋ ಜ್ಞಾನೋಪೇತಃ ಕುಶಲ್ಕಲಸೋಟನಃ । ಇತಿ ನಿಗದಿತಯೋಗಾಃ ಸಾರ್ಧಂಪಲ್ಯೈ ರಿಹನಾಭಸಾಃ ನಿಯತಫಲದಾಶ್ಚಿಂತ್ಯಾಹ್ಯೇತೇ ಸಮಸ್ತದಶಾಸ್ವಪಿ ||೧೯||

ಅವತಾರಿಕೆ|| ಈ ಶ್ಲೋಕದಲ್ಲಿ ಯುಗಯೋಗ ೧, ಗೋಳಯೋಗ ೧-ಈ ಎರಡು ಯೋಗಗಳ ಫಲವು ಹೇಳಲ್ಪಡುತ್ತೆ. ಮತ್ತು ಈ ಸಮಸ್ತ ನಾಭಸಯೋಗಗಳು ಲಭಿಸುವ ದಶಾಕಾಲ ಸಹ ಹೇಳಲ್ಪಡುತ್ತೆ.

## ೧. ಯುಗಯೋಗ ಫಲಂ

ಟೀಕು॥ ಯುಗೆ-ಯುಗಯೋಗದಲ್ಲಿ ಜನ್ಸಿಸಿದವನು, ಧನವಿರಹಿತಃ-ಧನಹೀನನು, ಪಾಷಂಡೀ-ವೇದಬಾಹ್ಯನು, ಸ್ಯಾತ್-ಆಗುವನು, ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ಪಾಷಂಡಭಾಗ್ಯೋನಿರ್ದ್ರವ್ಯಃ ಪುತ್ರಮಾತೃ ವಿವರ್ಜಿತಃ। ಯುಗಯೋಗೇ ಧರ್ಮಹೀನೋಲೋಕ ನಿಂದ್ಯೋಪಿಜಾಯತೇ ॥೮೩॥ ಈ ವಿಷಯದಲ್ಲಿ ಜಾತಕಾಭರಣದಲ್ಲಿ ॥ಶ್ಲೋಕ॥ ಪಾಖಂಡೇ ನಾಖಂಡಿತ ಪ್ರೀತಿಭಾಜೋ ನಿರ್ಲಜ್ಜಾಃ ಸ್ಯುರ್ಧರ್ಮ ಕರ್ಮ ಪ್ರಮುಕ್ತಾಃ । ಪುತ್ರೈರರ್ಥೈಸ್ಸರ್ವ ಧಾತೇವಿಯುಕ್ತಾಯುಕ್ತಾ ಯುಕ್ತಜ್ಞಾನಶೂನ್ಯಾಯುಗಾಖ್ಯೇ ॥೮೪॥ ಎಂದುಕ್ತವಾಗಿರುತ್ತೆ.

## ೨. ಗೋಳಯೋಗ ಫಲಂ

ಗೋಳಕೇ-ಗೋಳಯೋಗದಲ್ಲಿ ಹುಟ್ಟಿದವನು, ವಿಧನಃ-ಅರ್ಥಹೀನನು, ಮಲಿನಃ-ಕೊಳಕನು, ಅಜ್ಞಾನೋಪೇತಃ-ಅಜ್ಞಾನವೆಂದರೆ-ತಿಳಿದೂ ತಿಳಿಯದಂತೆ ಇರುವ ಮೂರ್ಖನು ಅಂದರೆ-ಜ್ಞಾನಹೀನನು, ಕುಶಿಲ್ಪಃ-ಲೋಕನಿಂದ್ಯಕರವಾದ ಶಿಲ್ಪಿಕಾರ್ಯಮಾಡುವವನು, ಆಲಸಃ-ಮಂದಬುದ್ಧಿಯುಳ್ಳವನು, ಕೆಲವರು ಸೋಮಾರಿ ಯೆಂದು ಅರ್ಥ ಹೇಳುವರು. ಅಟನಃ-ಭುಕ್ತ್ಯರ್ಥವಾಗಿ ಸಂಚರಿಸುವನು. ಈ ವಿಷಯದಲ್ಲಿ ಲಗ್ನಚಂದ್ರಿಕೆಯಲ್ಲಿ ॥ಶ್ಲೋಕ॥ ವಿದ್ಯಾಹೀನೋಧನೈರ್ಹೀನೋ ಮಾನಹೀನೋತಿ ದುಃಖಿತಃ । ಗೋಲಯೋಗೆ ಸಮುತ್ಪನ್ನೋ ಮಲಿನೋ ಜಾಯತೇನರಃ ॥೮೫॥ ಮತ್ತು ಧುಂಡಿರಾಜಃ ॥ಶ್ಲೋಕ॥ ವಿದ್ಯಾಸತ್ವೌದಾರ್ಯ ಸಾಮರ್ಥ್ಯಹೀನಾ । ನಾನಾಯಾಸಾನಿತ್ಯಜಾತ ಪ್ರವಾಸಾಃ ॥ ಯೇಷಾಂಯೋಗಃ ಸಂಭವೆ ಗೋಲನಾಮಾ । ನಾನಾಸತ್ಯಪ್ರಿತಯೋ ನೀತಯಸ್ತೇ ॥೮೬॥ ಇತಿ ಗೋಲಯೋಗ ಫಲಂ.

## ನಾಭಸಾದಿಯೋಗ ಫಲಕಾಲಃ

ಇತಿ-ಈ ಪ್ರಕಾರವಾಗಿ ಇಹ-ಈ ಪ್ರಕರಣದಲ್ಲಿ ನಾಭಸಾಃ-ನಾಭಸವೆಂಬ ಹೆಸರುಳ್ಳ, ಯೋಗಾಃ-ಯೋಗಗಳು, ಫಲೈಸ್ಸಾರ್ಧಂ-ಫಲದಿಂದೊಡಗೂಡಿ, ನಿಗದಿತಾಃ-ಹೇಳಲ್ಪಟ್ಟಿದೆ. ಏತೇ-ಈ ನಾಭಸಯೋಗಗಳು, ಸಮಸ್ತ ದಶಾಸ್ವಪಿ-ಸಕಲ ದಶೆಯಲ್ಲು, ನಿಯತಫಲದಾಃ-ಸರ್ವಕಾಲದಲ್ಲೂ ಫಲಪ್ರದವಾಗುವುದೆಂದು, ಚಿಂತ್ಯಾಃ-ಪರ್ಯಾಲೋಚಿಸತಕ್ಕದ್ದು. ಯಾರಿಗಾದರೂ ಸುಖವಾಗಲಿ, ದುಃಖವಾಗಲಿ, ಯಾವಜ್ಜೀವವೂ ಏಕರೀತಿಯಾಗಿರುವುದಿಲ್ಲ. ಕೆಲವರು ಸುಖವಂತರೂ, ಮನೋದುಃಖಪೂರಿತರಾಗಿರುವರು. ಕೆಲವರು ಭಿಕ್ಷುಕರೂ ಸಂತುಷ್ಟರಾಗಿರುವರು. ಈ

ಪ್ರಕಾರವಿರುವಾಗ ಈ ನಾಭಸಯೋಗಗಳು ನಿಯತಫಲ ಹೇಗಾಗುತ್ತದೆಂದರೆ ಈ ಯೋಗಗಳು, ದಶಾಷ್ಟಕವರ್ಗಗಳನ್ನು ತೊಲಗಿಸಿ, ತಮ್ಮ ತಮ್ಮ ಫಲಗಳನ್ನು ಕೊಡಲಾರೆವು, ಆದ್ದರಿಂದ ಅಷ್ಟಕವರ್ಗಕ್ಕನುಸಾರವಾಗಿ ಶುಭಾಶುಭ ಫಲಗಳು ನಡೆಯುತ್ತಿರುವಾಗ ಈ ಯೋಗಗಳು ತತ್ಕಾಲೋಚಿತವಾಗಿ, ಸರ್ವದಶೆಯಲ್ಲೂ, ತಮ್ಮತಮ್ಮ ಫಲವನ್ನು ಕೊಡುವುವು, ಆದ್ದರಿಂದ ಸುಖದುಃಖ ಮಿಶ್ರಫಲಾನುಭವವು ಧನವಂತರಿಗೂ ದರಿದ್ರರಿಗೂ ಸಾಮಾನ್ಯವಾಗಿ ಸಂಭವಿಸುತ್ತೆಂದು ತಿಳಿಯತಕ್ಕದ್ದು. ಈ ಪ್ರಕರಣದ ಮೊದಲುಭಾಗದಲ್ಲಿ ಹೇಳಲ್ಪಟ್ಟ ದಳಯೋಗಾ ಕೃತಿಯೋಗಗಳು, ದಳಯೋಗಾಶ್ರಯಗಳು ಏಕಕಾಲದಲ್ಲಿ ಸಂಭವಿಸುವುವು. ದಳಯೋಗ ಸಂಖ್ಯಾಯೋಗಗಳೇಕಕಾಲದಲ್ಲಿ ಸಂಭವಿಸವು. ಆದ್ದರಿಂದ ದಳಯೋಗವೇ ಫಲಪ್ರದವುಳ್ಳದ್ದು. ಸಂಖ್ಯಾಯೋಗವು ಫಲಪ್ರದವಲ್ಲ. ಆಕೃತಿಯೋಗಾಶ್ರಯ ಯೋಗಗಳು ಕೂಡಿದರೂ ಆಕೃತಿ ಯೋಗಾಸಂಖ್ಯಾಯೋಗ ಕೂಡಿದರೂ, ಆಕೃತಿಯೋಗವೇ ಫಲಪ್ರದವುಳ್ಳದ್ದು. ಆದ್ದರಿಂದ ಉಳಿದ ಯೋಗಗಳು ವಿಫಲವಾದದ್ದು, ಆಶ್ರಯಯೋಗ, ಸಂಖ್ಯಾಯೋಗ ಕೂಡಿದರೆ ಆಗ ಸಂಖ್ಯಾಯೋಗ ಫಲಕೊಡುವುದಕ್ಕೆ ಅವಕಾಶವೇ ಇಲ್ಲ. ಅದು ಹೇಗೆಂದರೆ-ಚರ ಸ್ಥಿರ ದ್ವಿಸ್ವಭಾವ ರಾಶಿಗಳಲ್ಲಿ ಯಾವುದಾದರೂ ಒಂದು ರಾಶಿಯಲ್ಲಿ ಸರ್ವಗ್ರಹಗಳಿದ್ದರೆ, ಆಶ್ರಯಯೋಗವೇ ಆಗುತ್ತದೆ, ಆಗ ಸಂಖ್ಯಾಯೋಗಾಂತರ್ಗತವಾದ ಗೋಳ ಯೋಗಕ್ಕವಕಾಶವಿಲ್ಲ. ಆದ್ದರಿಂದ ಗೋಳಯೋಗ ಫಲಕ್ಕವಕಾಶವಿಲ್ಲದ್ದನ್ನು ಬುದ್ಧಿವಂತರು ಚೆನ್ನಾಗಿ ಯೋಚಿಸಿ ತಿಳಿಯತಕ್ಕದ್ದು. ಈ ವಿಷಯದಲ್ಲಿ ಧುಂಡಿರಾಜರು ಹೇಳಿರುವುದೇನೆಂದರೆ:-॥ಶ್ಲೋಕ॥ ಪ್ರೋಕ್ತೈರೇತೈರ್ನಾಭಸಾಖ್ಯೈಶ್ಚ ಯೋಗೈಃ ಸ್ಯಾತ್ಸರ್ವೇಷಾಂಪ್ರಾಣಿನಾಂ ಜನ್ಮಕಾಮಂ । ತಸ್ಮಾದೇತೇತ್ಯಂತಯ ತ್ವಾದಪೂರ್ವಾಃ ಪೂರ್ವಾಚಾರ್ಯೈರ್ಜಾತಕೇ ಸಂಪ್ರದಿಷ್ಟಾಃ॥ ಏವಂ ಯೋಗಾನಾಂ ಫಲಂ ಶಾಲಿನೀ ಸದ್ವೃತ್ತೈರ್ವ್ಯಕ್ತಂ ಯುಕ್ತಿಯುಕ್ತಂ ನಿರುಕ್ತಂ । ತಸ್ಮಾತ್ಪ್ರಾಜ್ಞೈಃ ಸತ್ಕವೀನಾಮ ನೂನಂ ಸೌಖ್ಯಂಚೈವಂ ಜಾತಕೇ ಕೋಮಲೋಕ್ತ್ಯಾ ॥೮೭॥ತಾ॥ ಈ ನಾಭಸಯೋಗಗಳಲ್ಲಿ ಹುಟ್ಟುವ (ಹುಟ್ಟಿದ) ಮನುಷ್ಯನು ಅತಿಶಯ ಅಪೂರ್ವವಾಗಿರುವನೆಂದು ಜ್ಯೋತಿಶ್ಶಾಸ್ತ್ರ ಪಾರಾಂಗತರ ಮತವಾಗಿದೆ. ಈ ಸರ್ವಯೋಗಗಳ ಫಲಗಳನ್ನು ಧುಂಡಿರಾಜರೆಂಬುವ ಆಚಾರ್ಯರು ಶಾಲಿನೀನಾಮಕ ವೃತ್ತದಿಂದ ಪೂರ್ವಾಚಾರ್ಯರಾದ ಮಯ, ಯವನ, ಪರಾಶರ, ಬಾದರಾಯಣ, ನಾರದ, ಗರ್ಗಾದಿಗಳ ಮತಕ್ಕನುಸಾರವಾಗಿ ಹೇಳಿರುತ್ತೇನೆಂದು ಪ್ರತಿಜ್ಞೆ ಮಾಡಿರುತ್ತಾರೆ.

ಟೀಕು॥ ಈ ಪ್ರಕರಣದಲ್ಲಿ ಹೇಳಲ್ಪಟ್ಟಿರುವ ನಾಭಸಯೋಗಗಳು ೩೨ನ್ನು ೧ ಪದಕಮಾಡಿ, ಆಶ್ರಯಯೋಗಗಳು ೩, ದಳಯೋಗಗಳು ೫,

ಆಕೃತಿಯೋಗಗಳು ೨೦, ಸಂಖ್ಯಾಯೋಗಗಳು ೪, ಅಂತು ೩೨ ಈ ಯೋಗಗಳು ಹುಟ್ಟುವ ರೀತಿಯನ್ನು ತೋರಿಸಿರುತ್ತೆ. ಈ ಪ್ರಕರಣವನ್ನೆಲ್ಲಾ ೧ ಸಾರಿ ಪಠಿಸಿ ಅನಂತರ ಅದನ್ನು ಅವಲೋಕನ ಮಾಡಿದರೆ ಈ ಯೋಗಗಳ ಉತ್ಪತ್ತಿ ಸುಲಭವಾಗಿ ಮನಸ್ಸಿಗೆ ತಿಳಿಯಬರುತ್ತದೆ. ॥೧೯॥

## ನಾಭಸಯೋಗ ಪದಕಂ

| ಸಂ॥ | ಮುಖ್ಯ ಭೇದಾಃ | ಯೋಗ ನಾಮಾನಿ | ಸರ್ವ ಗ್ರಹಗಳಿರಬೇಕಾದ ಸ್ಥಾನ |
|---|---|---|---|
| ೧ | ಆಶ್ರಯ ಯೋಗಾಃ | ರಜ್ಜು ಯೋಗ | ೧-೪-೭-೧೦ ಚರ |
| ೨ | | ಮುಸಲಯೋಗ | ೨-೫-೮-೧೧ ಸ್ಥಿರ |
| ೩ | | ನಳಯೋಗ | ೩-೬-೯-೧೨ ದ್ವಿಸ್ವ |
| ೪ | ದಳಯೋಗಾಃ | ಸ್ರಗ್ಯೋಗ | ಕೇಂದ್ರಗಳಲ್ಲಿ ೧-೪-೭-೧೦ |
| ೫ | | ಸರ್ಪಯೋಗ | ಕೇಂದ್ರಗಳಲ್ಲಿ ಪಾಪಗ್ರಹಗಳಿದ್ದರೆ |
| ೬ | | ಗದಾಯೋಗ | ೧(೧-೪)೨(೪-೭) ೩(೭-೧೦)೪(೧೦-೧) |
| ೭ | | ಶಕಟಯೋಗ | ಲಗ್ನ ೧ ಸಪ್ತಮ ೭ |
| ೮ | | ವಿಹಂಗಮಯೋಗ | ದಶಮ ೧೦ ಚತುರ್ಥ ೪ |
| ೯ | ಆಕೃತಿಯೋಗಾಃ | ಶೃಂಗಾಟಕಯೋಗ | ಲಗ್ನ ಪಂಚಮ ನವಮ ೧-೫-೬ |
| ೧೦ | | ಹಲಯೋಗ | ಲಗ್ನಾತ್ ೧(೨-೬-೧೦) ೨(೩-೭-೧೧) ೪-೮-೧೨ |
| ೧೧ | | ವಜ್ರಯೋಗ | ೧-೭-೧೦ ರಲ್ಲಿ ಶು । ೧೦-೪ ಪಾ |
| ೧೨ | | ಯವಯೋಗ | ೧-೭-೧೦ ರಲ್ಲಿ ಪಾ । ೧೦-೪ ಶು |
| ೧೩ | | ಕಮಲ '' | ೧೦-೪ ರಲ್ಲಿ ಶು । ೧-೭ ರಲ್ಲಿ ಪಾಪ |
| ೧೪ | | ವಾಪೀ '' | ೧(೨-೫-೮-೧೧) ೨(೩-೬-೯-೧೨) |
| ೧೫ | | ಯೂಪ '' | ಲಗ್ನದಿಂದ ೧-೨-೩-೪ |
| ೧೬ | | ಶರ '' | ಲಗ್ನದಿಂದ ೪-೫-೬-೭ |
| ೧೭ | | ಶಕ್ತಿ '' | ಲಗ್ನದಿಂದ ೭-೮--೧೦ |
| ೧೮ | | ದಂಡ '' | ಲಗ್ನದಿಂದ ೧೦-೧೧-೧೨-೧ |
| ೧೯ | | ನೌಕ '' | ಲಗ್ನದಿಂದ ೧-೨-೩-೪-೫-೬-೭ |
| ೨೦ | | ಕೂಟ '' | ಲಗ್ನದಿಂದ ೪-೫-೬-೭-೮-೯-೧೦ |
| ೨೧ | | ಚಕ್ರ '' | ಲಗ್ನದಿಂದ ೭-೮-೯-೧೦-೧೧-೧೨-೧ |
| ೨೨ | | ಚಾಪ '' | ಲಗ್ನದಿಂದ ೧೦-೧೧-೧೨-೧-೨-೩-೪ |

| | | | |
|---|---|---|---|
| ೨೩ | | ಅರ್ಧಚಂದ್ರಯೋಗ | ೧(೨ರಿಂದ ೫-೮-೧೧-೩-೬-೯-೧೨) |
| ೨೪ | | ಸಮುದ್ರಯೋಗ | ೨-೪-೬-೮-೧೦-೧೨ ಧನಾದಿಯಾಗಿ |
| ೨೫ | | ಚಕ್ರಯೋಗ | ೧-೩-೫-೭-೯-೧೧ ಲಗ್ನಾತ್ |
| ೨೬ | ಸಂಖ್ಯಾಯೋಗ | ವಲ್ಲಕೀಯೋಗ | ಏಳುರಾಶಿಗಳಲ್ಲಿ ತಪ್ಪದೆ ೭ ಗ್ರಹಗಳಿರಬೇಕು. |
| ೨೭ | | ದಾಮನೀಯೋಗ | ೬ ರಾಶಿಗಳಲ್ಲಿ ತಪ್ಪದೆ ೭ ಗ್ರಹಗಳಿರಬೇಕು. |
| ೨೮ | | ಪಾಶಯೋಗ | ೫ ರಾಶಿಗಳಲ್ಲಿ ,, |
| ೨೯ | | ಕೇದಾರಯೋಗ | ೪ ರಾಶಿಗಳಲ್ಲಿ ,, |
| ೩೦ | | ತ್ರಿಶೂಲಯೋಗ | ೩ ರಾಶಿಗಳಲ್ಲಿ ,, |
| ೩೧ | | ಯುಗಯೋಗ | ೨ ರಾಶಿಗಳಲ್ಲಿ ,, |
| ೩೨ | | ಗೋಳಯೋಗ | ೧ ರಾಶಿಯಲ್ಲಿ ,, |

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನಾಭಸಯೋಗ
ವಿಚಾರೋನಾಮ ದ್ವಾದಶ ಪ್ರಕರಣಂ

ಇತಿ ಶ್ರೀಮದೌತ್ತಮಾನ್ವಯ ಪಯಃಪಾರಾವಾರ ರಾಕಾ ಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ರಾಜಯೋಗ ಪಂಚಮಹಾ
ಪುರುಷಲಕ್ಷಣ ನಾಭಸಯೋಗ ವಿಚಾರೋನಾಮ
ದ್ವಾದಶ ಪ್ರಕರಣಂ

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತ ಬೃಹಜ್ಜಾತಕಾಖ್ಯ

## ೧೩ನೇ ಚಾಂದ್ರಯೋಗಾಖ್ಯ ಪ್ರಕರಣಂ

ಅವತಾರಿಕೆ ॥ ಜಾತಕದಲ್ಲಿ ಚಂದ್ರನ ಬಲಾಬಲಗಳ ಮೇಲೆ ಯೋಗವನ್ನು ಹೇಳುವುದಕ್ಕೆ (ಚಂದ್ರನಿಂದ ಯೋಗವುಂಟಾಗುವುದರಿಂದ) ಚಾಂದ್ರಯೋಗವೆಂದು ಹೆಸರಾಯಿತು. ಈ ವಿಷಯವನ್ನೆಲ್ಲಾ ಸಂಗ್ರಹಿಸಿ ಈ ಪ್ರಕರಣದಲ್ಲಿ ಹೇಳಲ್ಪಟ್ಟಿರುತ್ತೆ.

### ಚಾಂದ್ರಯೋಗಾಃ

ಮೂಲ॥ ಅಧಮಸಮವರಿಷ್ಠಾನ್ಯರ್ಕಕೇಂದ್ರಾದಿಸಂಸ್ಥೇ ಶಶಿನಿವಿನಯವಿತ್ತ
ಜ್ಞಾನಧೀನೈಪುಣಾನಿ। ಅಹನಿನಿಶಿಚಚಂದ್ರೇಸ್ವೇಧಿಮಿತ್ರಾಂಶಕೇವಾ
ಸುರಗುರುಸಿತದೃಷ್ಟೇವಿತ್ತವಾಂಸಾತ್ಸುಖೀಚ ॥೧॥

ಅವತಾರಿಕೆ॥ ಈ ಗ್ರಂಥಕರ್ತನು ಈ ಪ್ರಕರಣದಲ್ಲಿ ಚಂದ್ರಯೋಗ ಫಲವನ್ನು ಹೇಳುವುದಕ್ಕೆ ಉಪಕ್ರಮಿಸಿ ಮೊದಲು ಸೂರ್ಯನಿರುವ ಸ್ಥಾನ ಮೊದಲುಗೊಂಡು ಕೇಂದ್ರ ೧-೪-೭-೧೦ ಪಣಪರ ೨-೫-೮-೧೧ ಅಪೋಕ್ಲಿಮಸ್ಥಾನ ೩-೬-೯-೧೨ ಈ ಸ್ಥಾನಗಳಲ್ಲಿ ಚಂದ್ರನಿದ್ದರೆ, ಆ ಕಾಲದಲ್ಲಿ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಶಶಿನಿ-ಚಂದ್ರನು, ಅರ್ಕಕೇಂದ್ರಾದಿ ಸಂಸ್ಥೇ-ಸೂರ್ಯನ ಕೇಂದ್ರಪಣ ಪರ ಆಪೋಕ್ಲಿಮ ಸ್ಥಾನದಲ್ಲಿದ್ದರೆ, ವಿನಯವಿತ್ತಜ್ಞಾನಧೀನೈಪುಣಾನಿ, ವಿನಯ-ವಿನಯವು, ವಿತ್ತ-ಧನ, ಜ್ಞಾನ-ಜ್ಞಾನಶಾಸ್ತ್ರ, ಜನ್ಮ ವಿಶೇಷಜ್ಞಾನಧೀಬುದ್ಧಿ, ನೈಪುಣ್ಯ-ಕಾರ್ಯಗಳಲ್ಲಿ ಕುಶಲತೆ ಇವುಗಳ, ಅದಮಸಮವರಿಷ್ಠಾನಿನಿಕೃಷ್ಟ, ಮಧ್ಯಮೋತ್ಕೃಷ್ಟಗಳಾಗಿ, ಅಂದರೆ-ಜನ್ಮಕಾಲದಲ್ಲಿ ಸೂರ್ಯನಿಗೆ ಕೇಂದ್ರಸ್ಥಾನದಲ್ಲಿ ಚಂದ್ರನಿದ್ದರೆ, ಈ ಮೇಲೆ ಹೇಳಲ್ಪಟ್ಟ ಗುಣವು ಅಧಮವಾಗಿಯೂ, ಪಣಪರ ಸ್ಥಾನಗಳಲ್ಲಿದ್ದರೆ, ಮಧ್ಯಮವಾಗಿಯೂ, ಅಪೋಕ್ಲಿಮ ಸ್ಥಾನದಲ್ಲಿದ್ದರೆ ವಿಷಯಾದಿಗಳು ಅಧಿಕವಾಗಿರುತ್ತದೆಂದೂ ತಿಳಿಯತಕ್ಕದ್ದು. ಈ ವಿಷಯದಲ್ಲಿ ॥ಯವನಾಚಾರ್ಯರು ಹೇಳಿರುವುದೇನೆಂದರೆ-॥ ಶ್ಲೋಕ ॥ ಮೂರ್ಖಾರ್ಥದರಿದ್ರಾ ಶ್ಚಪಲಾನ್ವಿಶೀಲಾಂ ಶ್ಚಂದ್ರಃಪ್ರಸೂತೇರ್ಕಚತುಷ್ಟಯಸ್ಥಃ। ಆದ್ದರಿಂದ ಅಧಮ ಶಬ್ದಕ್ಕೆ ಅಭಾವವೆಂದರ್ಥವು, ಚಂದ್ರೇ-ಚಂದ್ರನು, ಸ್ವೇ-ತನ್ನ ನವಾಂಶದಲ್ಲಾಗಲೀ, ಅಧಿಮಿತ್ರಾಂಶಕೇವಾ-ತನ್ನ ಅಧಿಮಿತ್ರ ನವಾಂಶೆಯಲ್ಲಾಗಲೀ ಇದ್ದರೆ, ಅಹನಿ-ಹಗಲಿನಲ್ಲೂ, ನಿಶಿಚ-ರಾತ್ರಿಯಲ್ಲೂ, ಕ್ರಮವಾಗಿ, ಸುರಗುರುಸಿತದೃಷ್ಟೇ-ಗುರು ಶುಕ್ರರಿಂದ ನೋಡಲ್ಪಡುತ್ತಿರುವಾಗ ಹುಟ್ಟಿದವನು. ವಿತ್ತವಾ-ಧನವಂತನೂ, ಸುಖೀ-ಭೋಗವಂತನೂ ಆಗುವನು. ಅಂದರೆ ಚಂದ್ರನು ತನ್ನ ನವಾಂಶೆಯಲ್ಲಾಗಲೀ, ಅಧಿಮಿತ್ರ ನವಾಂಶೆಯಲ್ಲಾಗಲೀ ಇದ್ದು, ಬೃಹಸ್ಪತಿಯಿಂದ

ನೋಡಲ್ಪಡುವಾಗ ಹಗಲಿನಲ್ಲಿ ಹುಟ್ಟಿದರೆ ಧನವಂತನೂ, ಭೋಗವಂತನೂ ಆಗುವನು. ಚಂದ್ರನು ತನ್ನ ನವಾಂಶೆಯಲ್ಲಾದರೂ ಅಧಿಮಿತ್ರ ನವಾಂಶೆಯಲ್ಲಿದ್ದರೂ ಇದ್ದು ಶುಕ್ರನಿಂದ ನೋಡಲ್ಪಡುವಾಗ ರಾತ್ರಿಯಲ್ಲಿ ಹುಟ್ಟಿದರೆ ಧನವಂತನೂ ಭೋಗವಂತನು ಆಗುತ್ತಾನೆ. ಈ ವಿಷಯದಲ್ಲಿ ।।ಶ್ಲೋಕ।।ಗರ್ಗಃ।। ಸ್ವಾಂಶೇಧಿಮಿತ್ರಸ್ಯಾಂಶೇವಾ ಸಂಸ್ಥಿತೋ ದಿವಸೇ ಶಶೀ। ಗುರುಣಾದೃಶ್ಯತೇತತ್ರಜಾತೋ ವಿತ್ತಸುಖಾನ್ವಿತಃ।।೧।। ನಿಶ್ಯೇವಂ ಭೃಗುಣಾ ದೃಷ್ಟಃಶಶೀಜನ್ಮನಿಶಸ್ಯತೇ। ವಿಪರ್ಯಯಸ್ಥೇ ಶೀತಾಂಶೌಜಾ ಯಂತೇಲ್ಪ ಧನಾ ನರಾಃ ।।೨।। ಮತ್ತು ಯವನಾಚಾರ್ಯಃ ।। ಸ್ವಾಂಶೇಶಶೀಭಾರ್ಗವದೃಷ್ಟ ಮೂರ್ತಿರ್ನಿ ಶೀಶ್ವರೋದ್ಭೂತಿಕರ ಪ್ರದಿಷ್ಟಃ । ತದುತ್ತಮೋದ್ಭೂತಿಕರ ಸ್ವತುಸ್ಯಾದ್ಗೃಷ್ಟೇ ದಿವಾದೇವ ಪುರೋಹಿತೇನ ।।೩।। ಎಂದು ಹೇಳಲ್ಪಟ್ಟಿರುತ್ತೆ. ಜಾತಕಾ ಭರಣೇ ।।ಶ್ಲೋಕ।। ಕೇಂದ್ರಾದಿ ಗಾಮೀ ಯದಿಯಾಮಿನೀಶಃ ಸ್ಯಾತ್ಪದ್ಮಿ ನೀನಾಯಕತಃ ಕರೋತಿ । ವಿಜ್ಞಾನಮಾನಾನ್ಮತಿ ನೈಪುಣಾನಿ ಕನಿಷ್ಠ ಮಧ್ಯೋತ್ತಮತಾಯುತಾನಿ ।।೪।। ಈ ಪ್ರಕಾರವಾಗಿ ಹೇಳಲ್ಪಟ್ಟಿರುತ್ತೆ.

## ಅಧಿಯೋಗಃ

ಮೂಲ।। ಸೌಮ್ಯೈಸ್ಮರಾರಿ ನಿಧನೇಷ್ವದಿ ಯೋಗ ಇಂದೋ ಸ್ತಸ್ಮಿಂಶ್ವಮೂಪ ಸಚಿವಕ್ಷಿತಿ ಪಾಲಜನ್ಮ । ಸಂಪನ್ನಸೌಖ್ಯ ವಿಭವಾಹತ ಶತ್ರವಶ್ಚ ದೀರ್ಘಾಯುಷೋ ವಿಗತರೋಗಭಯಾಃ ಪ್ರಜಾತಾಃ ।।೨।।

ಅವತಾರಿಕೆ ।। ಈ ಶ್ಲೋಕದಲ್ಲಿ ಅಧಿಯೋಗ ಫಲಸಹಿತವಾಗಿ ಹೇಳಲ್ಪಡುತ್ತೆ. ಈ ಯೋಗವು ೭ ವಿಧವಾಗಿರುತ್ತೆ.

ಟೀ।। ಇಂದೋಃ-ಚಂದ್ರಸ್ಥಿತ ಸ್ಥಾನದಿಂದ, ಸ್ಮರಾರಿನಿಧನೇಷು-ಸಪ್ತಮಾ ಷ್ಟಮಷಷ್ಠ ಸ್ಥಾನಗಳಲ್ಲಿ, ಸೌಮ್ಯೈಃ-ಬುಧಗುರು ಶುಕ್ರರಿಂದ ಅಂದರೆ-ಸಪ್ತಮ, ಷಷ್ಠ, ಅಷ್ಟಮ ಸ್ಥಾನಗಳಲ್ಲಿ ಒಂದು ಸ್ಥಾನದಲ್ಲಾಗಲೀ ಎರಡು ಸ್ಥಾನದಲ್ಲಾಗಲೀ, ಮೂರು ಸ್ಥಾನದಲ್ಲಾಗಲೀ, ಸಕಲ ಶುಭಗ್ರಹಗಳಿದ್ದರೆ, ಅಧಿಯೋಗಃ-ಅಧಿಯೋಗವೆಂಬ ಹೆಸರಿನ ಯೋಗವುಂಟಾಗುವುದು. ಕೆಲವರು ಮೂರು ಸ್ಥಾನದಲ್ಲಿ ಮೂರು ಶುಭಗ್ರಹಗಳಿದ್ದರೆ ಅಧಿಯೋಗವೆಂದು ಹೇಳುವರು, ಇದು ಯುಕ್ತವಲ್ಲ. ಶ್ರುತಕೀರ್ತಿಃ ।। ನಿಧನಂದ್ಯೂನಂಷಷ್ಠಂ ಚಂದ್ರಸ್ಥಾ ನಾದ್ಯದಾಶುಭೈರ್ಯುಕ್ತಂ।। ಅಧಿಯೋಗಸ್ಯ ಪ್ರೋಕ್ತೋನ್ಯಾಸಕೃತೌ ಸಪ್ತಧಾಪೂರ್ವೈಃ ।।೫।। ಈ ವಚನದಿಂದ ಈ ಯೋಗವನ್ನು ೭ ವಿಧವಾಗಿ ಪೂರ್ವದಲ್ಲಿ ಋಷಿಗಳು ಏರ್ಪಡಿಸಿರುವರು. ಅದು ಹೇಗೆಂದರೆ- ಸಕಲ

ಶುಭಗ್ರಹಗಳು ಚಂದ್ರನಿಗೆ ಷಷ್ಠಸ್ಥಾನದಲ್ಲಿದ್ದರೆ ೧ನೇ ಯೋಗ, ಸಪ್ತಮದಲ್ಲಿದ್ದರೆ ೨ನೇ ಯೋಗ, ಅಷ್ಟಮದಲ್ಲಿದ್ದರೆ ೩ನೇ ಯೋಗ, ಷಷ್ಠಸಪ್ತಮದಲ್ಲಿದ್ದರೆ ೪ನೇ ಯೋಗ, ಷಷ್ಠಾಷ್ಟಮಗಳಲ್ಲಿದ್ದರೆ ೫ನೇ ಯೋಗ, ಸಪ್ತಮಾಷ್ಟಮದಲ್ಲಿದ್ದರೆ ೬ನೇ ಯೋಗ, ಷಷ್ಠಸಪ್ತಮಾಷ್ಟಮಗಳಲ್ಲಿದ್ದರೆ ೭ನೇ ಯೋಗ, ಈ ಪ್ರಕಾರವಾಗಿ ಅಧಿಯೋಗವು ೭ ವಿಧವಾಗಿರುವುದು. ಈಗ ಮೇಲೆ ಹೇಳಿದ ಪ್ರಕಾರವೇ ಪಾಪದಿಯೋಗವೂ ಸಹ ೭ ವಿಧವಾಗಿರುವುದು. ಶುಭಪಾಪ ಗ್ರಹಗಳು ಮಿಶ್ರವಾಗಿದ್ದರೆ ೭ ವಿಧವಾದ ಮಿಶ್ರಯೋಗ, ಅಂತು ಅಧಿಯೋಗ ೨೧ ವಿಧವಾಗಿರುವುದು. ಈ ಪ್ರಕಾರ ೧೨ ಲಗ್ನಗಳಿಗೆ ೨೫೨ ಯೋಗಭೇದ ವಾಗಿರುವುದು. ಇದರಲ್ಲಿ ಶುಭಾದಿಯೋಗ ೮೪, ಪಾದಿಯೋಗ ೮೪, ಮಿಶ್ರಾಧಿಯೋಗ ೮೪, ಅಂತು ೨೫೨ ಆಗುತ್ತೆ. ಈ ಪ್ರಕಾರ ಶ್ರುತಕೀರ್ತಿಯಿಂದ ಹೇಳಲ್ಪಡುತ್ತೆ.

ಶ್ಲೋಕ॥ ಷಟ್ಸಪ್ತಾಷ್ಟಮಸಂಸ್ಥೈಶ್ಚಂದ್ರಾತ್ಸೌಮ್ಯೈ ಶ್ಶುಭೋದಿಯೋಗಸ್ಸ್ಯಾತ್॥ ಪಾಪಾಃಪಾಪೈರೇವಂ ಮಿಶ್ರೈರ್ಮಿಶ್ರಸ್ತಥೈವೋಕ್ತಃ ॥೬॥ ಎಂದು ಹೇಳಲ್ಪಟ್ಟಿರುತ್ತೆ. ಜಾತಕಚಂದ್ರಿಕಾಯಾಂ ॥ ಚಂದ್ರಾದ್ವೈರಿ ಕಲತ್ರ ಮೃತ್ಯುಷು ಶುಭೈಶ್ಚಂದ್ರಾದಿ ಯೋಗಾಸ್ತ್ರಯಃ ಶಶ್ವತ್ಸೌಖ್ಯ ವಿಭೂತಯೋ ವಿರಿಪುಭಿರೋಗಾಶ್ಚ ದೀರ್ಘಾಯುಷಃ॥ ಏತಸ್ಮಿನ್ನಲಿ ಪೋಬವೇತ್ಸ ಸಚಿವೋ ಯೋಗದ್ವಯೇ ಭೂಪತಿ ರ್ಯೋಗಾನಾಂತ್ರಿತ ಯೇಲ ಸದ್ಗುಣಗಣೈಃ ಸ್ಯಾದಗ್ರ ಗಣ್ಯೋಭುವಿ ॥೭॥ ತಸ್ಮಿ-ಆ ಅಧಿಯೋಗದಲ್ಲಿ ಚಮೂಸಪಚಿವಕ್ಷಿತಿಪಾಲಜನ್ಮ-ಸೇನಾಪತಿ ಮಂತ್ರಿ ಭೂಪತಿ ಜನನವಾಗುವ ಯೋಗ ಅಂದರೆ ಬುಧ ಗುರು ಶುಕ್ರರಧಿಕ ಬಲಿಷ್ಠರಾಗಿದ್ದರೆ ಈ ಯೋಗದಲ್ಲಿ ಹುಟ್ಟಿದವನು ರಾಜನಾಗುವನು, ಮಧ್ಯಮ ಬಲಿಷ್ಠರಾಗಿದ್ದರೆ ಮಂತ್ರಿಯಾಗುವನು, ಹೀನಬಲವುಳ್ಳವರಾಗಿದ್ದರೆ ಸೇನಾಪತಿಯಾಗುವನು, ಪ್ರಜಾತಾಃ-ಈ ಯೋಗದಲ್ಲಿ ಹುಟ್ಟಿದವರು, ಸಂಪನ್ನ ಸೌಖ್ಯ ವಿಭವಾಃ-ಅತಿ ಸೌಖ್ಯೈಶ್ವರ್ಯ ಸಂಪನ್ನರಾಗಿಯೂ, ಹತಶತ್ರವಃ-ನಷ್ಟಂ ಶತ್ರುಗಳುಳ್ಳವರು, ದೀರ್ಘಾಯುಷಃ-ಪೂರ್ಣಾಯಸ್ಸುಳ್ಳವರು, ವಿಗತರೋಗ ಭಯಾಃರೋಗಭಯ ವರ್ಜಿತರಾಗಿಯೂ ಆಗುವರು. ಕೆಲವರು ಇದನ್ನೇ ರಾಜಯೋಗವೆಂದು ಗ್ರಹಿಸುವರು. ಅದು ಹೇಗೆಂದರೆ-ಮಾಂಡವ್ಯಃ ॥ ಸಾರಾವಳಿಯಲ್ಲಿ ॥ಶ್ಲೋಕ॥ ದ್ಯೂನಂಷಷ್ಠ ಮಥಾಷ್ಟಮಂ ಶಿಶಿರಗೋಃ ಪ್ರಾಪ್ತಸ್ಸಮಸ್ತಾ ಶ್ಶುಭಾಃ । ಕ್ರೂರಾಣಾಂ ಯದಿಗೋಚರೇ ನರಪತಿಸ್ಸೂರ್ಯಾ ಲಯಾದ್ದೂರತಃ ॥ ಭೂಪಾಲಃ ಪ್ರಭವೇತ್ಸ ಯಸ್ಯಜಲಧೇ ರ್ವೇಲಾವನಾಂತೋದ್ಭವೈ ಸ್ಸೇನಾಮತ್ತ ಕರೀಂದ್ರದಾನ ಸಲಿಲಂ ಭೃಂಗೈರ್ಮುಹುಃಪೀಯತೇ ॥೮॥ ಮತ್ತು ಶ್ಲೋಕ ॥ ಅಮಿತ್ರಂಜಾಮಿತ್ರಂ ನಿಧನ ಮಥವಾ ಶೀತರುಚಿತೋ ಗತಾಸ್ಸರ್ವೇ ಸೌಮ್ಯಾಸ್ತಮಿ

ಹಜನಯೇಯುರ್ನರಪತಿಂ । ಧೃತೇನ್ಯೈನಾಸೇಕಂ ಗತವತಿವಿಷಾದೇತು ಪಯಸಾ ಪ್ರತಾಪಾಗ್ನಿರ್ಯಸ್ಯ ಜ್ವಲತಿ ಹೃದಯೇ ಶತ್ರುಮಭೃಶಂ ॥೯॥

## ಚಾಂದ್ರಾದಿಯೋಗಪ್ರಸ್ತಾರ ಪದಕಂ

| ಸಂ॥ | ಸಮಸ್ತ ಶುಭಗ್ರಹಗಳು | | ಯೋಗಸ್ಥಾನ |
|---|---|---|---|
| ೧ | ಬುಧ+ಗುರು+ಶುಕ್ರ | ಚಂದ್ರನಿಗೆ | ಷಷ್ಠದಲ್ಲಿದ್ದರೆ |
| ೨ | ,, ,, ,, | ,, | ಸಪ್ತಮದಲ್ಲಿದ್ದರೆ |
| ೩ | ,, ,, ,, | ,, | ಅಷ್ಟಮದಲ್ಲಿದ್ದರೆ |
| ೪ | ,, ,, ,, | ,, | ಷಷ್ಠ ಸಪ್ತಮಗಳಲ್ಲಿದ್ದರೆ |
| ೫ | ,, ,, ,, | ,, | ಷಷ್ಠಾಷ್ಟಮಗಳಲ್ಲಿದ್ದರೆ |
| ೬ | ,, ,, ,, | ,, | ಸಪ್ತಮಾಷ್ಟಮಗಳಲ್ಲಿದ್ದರೆ |
| ೭ | ,, ,, ,, | ,, | ಷಷ್ಠ ಸಪ್ತಮಾಷ್ಟಮಗಳಲ್ಲಿದ್ದರೆ |

ಈ ಪ್ರಕಾರ ೭ ಯೋಗಗಳ ೧೨ ರಾಶಿಗಳಿಗೂ ೧೨x೭=೮೪ ಆಗುತ್ತದೆ. ೧೨x೮೪=೧೦೦೮ ದ್ವಾದಶಲಗ್ನಗಳಿಗೂ ೧೦೦೮ ಯೋಗವಾಗುವುದು, ಅಸೌಮ್ಯ ಗ್ರಹಗಳಿದ್ದರೆ ಪಾಪಾದಿಯೋಗ, ಈ ಗ್ರಹಗಳು ಇದ್ದು ಪಾಪಗ್ರಹಗಳೂ ಇದ್ದರೆ ಮಿಶ್ರಾದಿಯೋಗ. ಈ ಪ್ರಕಾರ ಶುಭಾದಿಯೋಗ ೧೦೦೮, ಪಾಪಾಧಿಯೋಗ ೧೦೦೮, ಮಿಶ್ರಾಧಿಯೋಗ ೧೦೦೮ ಅಂತು ೩೦೨೪ ಆಯಿತು. ಈ ಪ್ರಕಾರವಾಗಿ ಯೋಗೋತ್ಪತ್ತಿಯನ್ನು ತಿಳಿಯತಕ್ಕದ್ದು.

ವಿಶೇಷ ಸೂಚನೆ ॥ "ತಸ್ಮಿಂಚಮೂಪ ಸಚಿವಕ್ಷಿತಿಪಾಲಜನ್ಮ" ಎಂಬುವುದಕ್ಕೆ ಅನೇಕರು ವ್ಯಂಗ್ಯಾರ್ಥ ಮಾಡಿರುವರು, ಈ ವಿಷಯದಲ್ಲಿ ಈ ಯೋಗವಿರುವ ಜಾತಕನೇ ಮೊದಲು ಚಮೂಪತಿಯಾಗಿಯೂ, ಅನಂತರ ಮಂತ್ರಿಯಾಗಿಯೂ, ಅನಂತರ ರಾಜನಾಗಿಯೂ ಆಗುತ್ತಾನೆಂದು ಹೇಳುವುದು ಯುಕ್ತವಲ್ಲ. ಈ ಯೋಗಕಾರಕ ಗ್ರಹಗಳು ಅಲ್ಪ ಬಲಿಷ್ಠರಾಗಿದ್ದರೆ ಚಮೂಪತಿಯಾಗಿಯೂ, ಮಧ್ಯಬಲಿಷ್ಠರಾಗಿದ್ದರೆ ರಾಜಮಂತ್ರಿಯಾಗಿಯೂ, ಪೂರ್ಣಬಲಿಷ್ಠರಾಗಿದ್ದರೆ ರಾಜನೇ ಆಗುವನು. ಈ ವಿಷಯಕ್ಕೆ ಅನ್ಯಗ್ರಂಥ ಪ್ರಮಾಣದಲ್ಲಿ ॥ಶ್ಲೋಕ॥ ಶಶಿನಸ್ಸೌಮ್ಯಾಷ್ಷಷ್ಠೇ ದ್ಯೂನೇವಾ ನಿಧನಸಂಸ್ಥಿತಾವಾಸ್ಯುಃ। ಜಾತೋ ನೃಪತಿರ್ಜ್ಞೇಯೋ ಮಂತ್ರೀವಾ ಸೈನ್ಯಪೋಬಲತಃ ॥೧೦॥ ಬಲತಃ ಎಂಬುವುದರ ಮೇಲೆ ಅರ್ಥ ಮಾಡಿದರೆ ಶ್ಲೋಕಾರ್ಥವು ಸರಿಹೋಗುವುದು.

## ಸುನಫಾನಫಾಧುರಧುರಾ ಯೋಗಾಃ

ಮೂಲ॥ ಹಿತ್ವಾರ್ಕಂ ಸುನಫಾನಫಾಧುರಧುರಾ ಸ್ವಾಂತ್ಯೋಭಯಸ್ಥೈರ್ಗ್ರಹೈಃ। ಶೀತಾಂಶೋಃ ಕಥಿತೋನ್ಯಥಾತು ಬಹುಭಿಃ ಕೇಮದ್ರುಮೋನ್ಯೈಸ್ತ್ವಸೌ॥ ಕೇಂದ್ರೇಶೀತಕರೇಥವಾ ಗ್ರಹಯುತೇಕೇಮದ್ರುಮೋನೇಷ್ಯತೇ । ಕೇಚಿತ್ಕೇಂದ್ರ ನವಾಂಶಕೇಶುಚ ವದಂತ್ಯುಕ್ತಿಂ ಪ್ರಸಿದ್ಧಾನತೇ ॥೩॥

ಅವತಾರಿಕೆ ॥ ಈ ಶ್ಲೋಕದಿಂದ ಚಂದ್ರನಿಗೆ ದ್ವಿತೀಯ ದ್ವಾದಶಸ್ಥಾನಗಳಲ್ಲಿ ಕುಜಾದಿ ಪಂಚಗ್ರಹಗಳಿಂದ ಹುಟ್ಟುವ ಸುನಫಾ ಮತ್ತು ಅನಫಾ ಯೋಗವನ್ನು ಉಭಯ ಸ್ಥಾನಗಳಲ್ಲಿರುವ ಆ ಗ್ರಹಗಳಿಂದ ಹುಟ್ಟುವ ಧುರಧುರಾಯೋಗವನ್ನು ಮತ್ತು ಈ ಯೋಗಕ್ಕೆ ಸಂಬಂಧಪಡುವ ವಿಷಯಗಳನ್ನೂ ಸಹ ಪ್ರತಿಪಾದಿಸುತ್ತಾನೆ.

ಟೀಕು॥ ಅರ್ಕಂಹಿತ್ವಾ-ಸೂರ್ಯನನ್ನುಳಿದು, ಶೀತಾಂಶೋಃ-ಚಂದ್ರಗ್ರಹಕ್ಕೆ. ಸ್ವಾಂತ್ಯೋಭಯಸ್ಥೈ-ಧನಸ್ಥಾನ (೨)ದಲ್ಲಿಯೂ, ವ್ಯಯ (೧೨) ಸ್ಥಾನದಲ್ಲಿಯೂ ಮತ್ತು ದ್ವಿತೀಯ ದ್ವಾದಶಸ್ಥಾನಗಳಲ್ಲಿರುವ, ಗ್ರಹೈಃ-ಕುಜಾದಿ ಗ್ರಹಗಳಿಂದ (ಇಲ್ಲಿ ವಿಶೇಷವೇನೆಂದರೆ-ಈ ಯೋಗ ಹುಟ್ಟುವುದು ಚಂದ್ರನಿಂದ ಮತ್ತು ಸೂರ್ಯನನ್ನು ಬಿಡಬೇಕೆಂಬುದನ್ನು ಮೊದಲೇ ಹೇಳಿರುತ್ತೆ) ಉಳಿದ ಗ್ರಹಗಳಾದ ಕುಜ, ಬುಧ, ಗುರು, ಶುಕ್ರ, ಶನಿ ಈ ೫ ಗ್ರಹಗಳಿರುವುದರ ದೆಸೆಯಿಂದ ಕ್ರಮವಾಗಿ ಸುನಫಾನಫಾಧುರಧುರಾಃ-ಸುನಫಾಯೆಂಬುವ ಯೋಗವೂ, ಅನಫಾಯೆಂಬುವ ಯೋಗವೂ, ಈ ಎರಡು ಸ್ಥಾನಗಳಲ್ಲಿರುವುದರಿಂದ ಧುರಧುರಾ ಎಂಬುವ ಯೋಗವೂ, ಬಹುಭಿಃಕಥಿತಃ-ಅನೇಕ ಪೂರ್ವಾಚಾರ್ಯರಿಂದ ಹೇಳಲ್ಪಟ್ಟಿರುತ್ತೆ. ಅನ್ಯಥಾತು-ಈ ವಕ್ಷ್ಯಮಾಣ ಶ್ಲೋಕದ ಪ್ರಕಾರವಲ್ಲದೆ ಅಂದರೆ ೨ ಮತ್ತು ೧೨ರಲ್ಲಿ ಗ್ರಹಗಳಿಲ್ಲದಿರುವ ಸಂಭವದಲ್ಲಿ ಅಸೌ-ಈ ಲಕ್ಷಣಕ್ಕೆ ಕೇಮದ್ರುಮಃ- ಕೇಮದ್ರುಮ (ಕೇವಲ ದರಿದ್ರವಾದ) ಯೋಗವೆಂದು ಅನೇಕ ಆಚಾರ್ಯರಿಂದ ಹೇಳಲ್ಪಟ್ಟಿರುತ್ತೆ. ಅನ್ಯೈಸ್ತು-ಇನ್ನು ಕೆಲವು ಆಚಾರ್ಯರಿಂದಲಾದರೋ, ಕೇಂದ್ರೇವಾ- ಲಗ್ನಾದಿ ಕೇಂದ್ರಸ್ಥಾನಗಳಾದ ೪-೭-೧೦ ಈ ಸ್ಥಾನಗಳಲ್ಲಾದರೂ, ಚಂದ್ರಾದಿ ೪-೭-೧೦ನೇ ಸ್ಥಾನಗಳಲ್ಲಾದರೂ, ಗ್ರಹಯುತೇ (ಸತಿ) ಕುಜಾದಿ ಪಂಚಗ್ರಹ (ಕುಜ, ಬುಧ, ಗುರು, ಶುಕ್ರ, ಶನಿ)ಗಳಲ್ಲಿ ಒಂದು ಗ್ರಹದಿಂದಲಾದರೂ, ೨-೩-೪-೫ ಗ್ರಹಗಳಿಂದಲಾದರೂ ಕೂಡಿದ್ದಲ್ಲಿ ಕೇಮದ್ರುಮೋನೇಶ್ಯತೇ-ಕೇಮದ್ರುಮವೆಂಬುವ ದರಿದ್ರಯೋಗವಿರುತ್ತದೆಂದು ಒಪ್ಪಿಕೊಳ್ಳಲ್ಪಡುವುದಿಲ್ಲವೆಂದು, ಕಥಿತಃ-ಹೇಳಿರುತ್ತೆ. ಕೇಚಿತ್-ಕೆಲವು ಜ್ಯೋತಿಶ್ಶಾಸ್ತ್ರಾಚಾರ್ಯರು, ಕೇಂದ್ರ ನವಾಂಶಕೇಷುಚ-ಲಗ್ನಾದಿ ಚಂದ್ರಾದಿ ಕೇಂದ್ರ

ಸ್ಥಾನಗಳಲ್ಲಿಯೂ, ಕೇಂದ್ರಗಳ ನವಾಂಶೆಗಳ ೨-೧೨-೪-೧೦ನೇ ಸ್ಥಾನಗಳಲ್ಲಿ ಗ್ರಹಗಳಿದ್ದರೆ ಸುನಫಾನಫಾದಿ ಯೋಗಗಳ, ಉಕ್ತಿಂ-ವಚನವನ್ನು, ವದಂತಿ-ಹೇಳುತ್ತಾರೆ. ನತೇಪ್ರಸಿದ್ಧಾಃ - ಆ ಉಕ್ತಿಗಳು ಪ್ರಸಿದ್ಧವೂ ಅಲ್ಲ. ಮತ್ತು ಅಂಥಹ ಯುಕ್ತಿಯಿಂದ ಹೇಳಿದರೂ ಜಾತಕ(ರಿ)ನಿಗೆ ಸೌಖ್ಯವುಂಟಾಗದ ಕಾರಣದಿಂದ (ಫಲ ವಿಲ್ಲದ್ದರಿಂದ) ಪ್ರಯೋಜನವಿಲ್ಲವೆಂದು ತಿಳಿಯತಕ್ಕದ್ದು.

ತಾತ್ಪರ್ಯ।। ಸುನಫಾ, ಅನಫಾ ಯೋಗಗಳಲ್ಲಿ ಸೂರ್ಯನು ಈ ಯೋಗಕಾರಕನಾಗುವುದಿಲ್ಲವೆಂಬುವ ವಿಷಯವು ಈ ಶ್ಲೋಕದ ಮೊದಲನೇ ಪಾದದಲ್ಲಿ ಹೇಳಲ್ಪಟ್ಟಿರುತ್ತೆ. ಅಂದರೆ-ಸೂರ್ಯನಿಂದ ಈ ಯೋಗೋತ್ಪತ್ತಿ ಯಾಗುವುದಿಲ್ಲ. ಯೋಗಕಾರಕರಾದ ಗ್ರಹಗಳ ಸಂಗಡ ಸೂರ್ಯನು ಸೇರಿದಾಗ್ಯೂ ಈ ಸುನಫಾನಫಾಯೋಗಕ್ಕೆ ಭಂಗವಾಗುವುದಿಲ್ಲ. ಚಂದ್ರನಿರುವ ಸ್ಥಾನದಿಂದ ಕುಜನೇ ಮೊದಲಾದ ೫ ತಾರಾಗ್ರಹಗಳು (ಕುಜ, ಬುಧ, ಗುರು, ಶುಕ್ರ, ಶನಿ) ಇರುವಿಕೆಯ ಸ್ಥಿತಿಯಮೇಲೆ ಸುನಫಾ, ಅನಫಾ, ಧುರಧುರಾಯೋಗಗಳು ಹುಟ್ಟುತ್ತವೆ. ಅದು ಹೇಗೆಂದರೆ-ಚಂದ್ರನಿಗೆ ದ್ವಿತೀಯ ಸ್ಥಾನದಲ್ಲಿ ಕುಜಾದಿ ಗ್ರಹಗಳಲ್ಲಿ ಯಾರಾದರೂ ಇದ್ದರೆ, ಆಗ ಸುನಫಾಯೋಗವೆಂದು ಹೇಳಲ್ಪಡುತ್ತೆ. ಚಂದ್ರನಿಗೆ ದ್ವಾದಶಸ್ಥಾನದಲ್ಲಿ ಕುಜಾದಿ ಪಂಚಗ್ರಹಗಳಲ್ಲಿ ಯಾವ ಗ್ರಹವಾದರೂ ಇದ್ದರೆ ಅದು ಅನಫಾಯೋಗವೆಂದೆನ್ನಿಸಿಕೊಳ್ಳುತ್ತದೆ. ಚಂದ್ರಸ್ಫುಟ ಭಾಗದಿಂದ ಮುಂದೆ ೧೫ ಭಾಗಗಳನ್ನು ಬಿಟ್ಟು ೧೬ನೇ ಭಾಗ ಮೊದಲುಗೊಂಡು ೩೦ ಭಾಗದೊಳಗಾಗಿ ಪೂರ್ವ ದಿಕ್ಕಿನಲ್ಲಿ ದ್ವಿತೀಯ ಭಾಗದಲ್ಲಿ ತಾರಾಗ್ರಹವಿದ್ದರೆ ಅದೇ ಸುನಫಾಯೋಗವೆಂದು ಹೇಳುತ್ತಾರೆ. ಚಂದ್ರಸ್ಫುಟಕ್ಕೆ ಹಿಂದೆ (ಪಶ್ಚಿಮದಲ್ಲಿ) ೧೫ ಭಾಗದ ನಂತರ ಕುಜಾದಿ ಪಂಚಗ್ರಹದಲ್ಲಿ ಯಾರಾದರೂ ಇದ್ದರೆ, ಅದು ಅನಫಾಯೋಗವೆಂದು ಈ ಪ್ರಕಾರ ದ್ವಿತೀಯದಲ್ಲಿಯೂ ದ್ವಾದಶದಲ್ಲಿಯೂ ಕೂಡ, ಕುಜಾದಿ ತಾರಾಗ್ರಹಗಳಿದ್ದರೆ, ಅದು ಧುರಧುರಾಯೋಗವೆಂದೆಣಿಸತಕ್ಕದ್ದು. ಈ ರೀತಿಯಾಗಿ ಯೋಗವನ್ನು ನಿರ್ಣಯಮಾಡತಕ್ಕದ್ದು.

ಈ ಪ್ರಕಾರ ಗಣಿತ ಮೂಲವಾಗಿ ನಿರ್ಣಯ ಮಾಡತಕ್ಕದ್ದು ಯುಕ್ತವಾಗಿರುತ್ತೆ. ಈಮೇಲೆ ಹೇಳಿದ ಮೂರು ಪ್ರಕಾರವಾದ ಯೋಗಗಳಿಲ್ಲದಿದ್ದರೆ ಆಗ ಜಾತಕನಿಗೆ ಕೇಮದ್ರುಮಯೋಗವೆಂದು ಹೇಳತಕ್ಕದ್ದು. ಈ ವಿಷಯಕ್ಕೆ ಗರ್ಗಸಂಹಿತೆಯಲ್ಲಿ ।।ಶ್ಲೋಕ।। ವ್ಯಯಾರ್ಥ ಕೇಂದ್ರಗಶ್ಚಂದ್ರಾತ್ ವಿನಾಭಾನುಂನಚೇದ್ಗ್ರಹಃ । ಕಶ್ಚಿತ್ಸ್ಯಾದ್ವಾವಿನಾಚಂದ್ರಂ ಲಗ್ನ ಕೇಂದ್ರಗತೋಪಿವಾ ।।೧೧।। ಯೋಗಃ

ಕೇಮದ್ರುಮೋನಾಮ ತದಾಸ್ಯಾದ್ಯತ್ರಗ್ರಹೈರ್ಹಿತಾಃ ॥ ಭವಂತಿನಿಂದಿತಾ ಚಾರಾ ದಾರಿದ್ರ್ಯಾಪತ್ತಿಸಂಯುತಾಃ ॥ ಈ ಸುನಫಾದಿ ಯೋಗಗಳು ಭಾವಾಧಿಪಸ್ಥಿತ್ಯಾದಿ ಬಲಿಷ್ಠರಾದ ಶುಭಗ್ರಹಗಳಿಂದ ಉತ್ತಮಫಲ ಉಳ್ಳದ್ದಾಗಿಯೂ ಪಾಪಗ್ರಹಗಳಿಂದುಂಟಾಗಿದ್ದರೆ ಅಧಮವಾಗಿಯೂ, ಶುಭಪಾಪಗ್ರಹಗಳ ಮಿಶ್ರಸ್ಥಿತಿಯಿಂದ ಮಧ್ಯಮವಾಗಿ ಮಿಶ್ರಫಲ ಉಳ್ಳದ್ದಾಗಿಯೂ ಇರುತ್ತೆ. ಇದರ ಮೇಲೆ ಚಂದ್ರಾದ್ದ್ವಿತೀಯ ದ್ವಾದಶಗಳಲ್ಲಿ ಗ್ರಹಗಳಿಲ್ಲದಿದ್ದರೆ ಕೇಮದ್ರುಮವೆಂಬುವ ಯೋಗವನ್ನು ಹೇಳುವುದು ಅನೇಕ ಆಚಾರ್ಯರ ಸಮ್ಮತವಾದದ್ದು. ಆದಾಗ್ಯೂ ಲಗ್ನಾದಿ ಯಾವ ಕೇಂದ್ರದೊಳಗಾದರೂ, ಚಂದ್ರನ ಸಂಗಡಲಾದರೂ, ಚಂದ್ರ ಕೇಂದ್ರಗಳಲ್ಲಿಯಾದರೂ ಕುಜಾದಿ ಪಂಚ ತಾರಾಗ್ರಹಗಳಲ್ಲಿ ಯಾವ ಗ್ರಹವಾದರೂ ಇದ್ದರೆ ಕೇಮದ್ರುಮಯೋಗ ಸಂಭವವಿಲ್ಲವೆಂದು ಗರ್ಗಾದಿ ಮುನಿಗಳ ಮತವಾಗಿರುತ್ತೆ. ಇಲ್ಲಿ ಕೇಂದ್ರವೆಂದರೆ ಲಗ್ನದಿಂದ ೪-೭-೧೦ನೇ ಸ್ಥಾನವಲ್ಲ, ಚಂದ್ರಾದಿ ಕೇಂದ್ರವೆಂದು ತಿಳಿಯತಕ್ಕದ್ದು. ಅಂದರೆ ಚಂದ್ರನಿಂದ ೪ನೇ ಸ್ಥಾನದಲ್ಲಿ ಕುಜಾದಿ ಪಂಚ ಗ್ರಹಗಳಲ್ಲಿ ಯಾವ ಗ್ರಹವಾದರೂ ಇದ್ದರೆ ಸುನಫಾಯೋಗವು. ಚಂದ್ರನಿಂದ ೧೦ನೇ ಸ್ಥಾನದಲ್ಲಿ ಕುಜಾದಿ ಪಂಚಗ್ರಹಗಳಲ್ಲಿ ಯಾವ ಗ್ರಹವಾದರೂ ಇದ್ದರೆ ಅನಫಾ ಯೋಗವು, ಚತುರ್ಥ ದಶಮಗಳಲ್ಲಿದ್ದರೆ ಧುರಧುರಾಯೋಗ ವೆಂದಣಿಸುತ್ತಾರೆ. ಮತ್ತು ಚಂದ್ರನಿರುವ ನವಾಂಶರಾಶಿಗೆ ದ್ವಿತೀಯಸ್ಥಾನದಲ್ಲಿ ಮೇಲೆ ಹೇಳಿದ ಗ್ರಹವಿದ್ದರೆ ಸುನಫಾಯೋಗ, ಆ ಚಂದ್ರನಿರುವ ನವಾಂಶರಾಶಿಗೆ ದ್ವಾದಶದಲ್ಲಿ ಮೇಲೆ ಹೇಳಿದ ಗ್ರಹಗಳಲ್ಲಿ ಯಾರಾದರೂ ಇದ್ದರೆ ಅನಫಾಯೋಗ, ಚಂದ್ರನವಾಂಶ ರಾಶಿಗೆ ದ್ವಿತೀಯ ದ್ವಾದಶಗಳಲ್ಲಿ ಗ್ರಹಗಳಿದ್ದರೆ ಧುರಧುರಾಯೋಗವು ಮತ್ತು ಚಂದ್ರನವಾಂಶ ರಾಶಿಗೆ ದಶಮರಾಶಿಯಲ್ಲಿ ಗ್ರಹವಿದ್ದರೆ ಅನಫಾಯೋಗ, ಚತುರ್ಥದಶಮಗಳಲ್ಲಿ ಗ್ರಹಗಳಿದ್ದರೆ ಧುರಧುರಾಯೋಗವು. ಈ ಪ್ರಕಾರ ಚಂದ್ರನಿಂದ ೪-೧೦ ಚಂದ್ರನಿರುವ ನವಾಂಶ ರಾಶಿಯಿಂದ ೨-೧೨-೪-೧೦ ಈ ರಾಶಿಗಳಲ್ಲಿ ಗ್ರಹಗಳಿಲ್ಲದೆ ಹೋದರೆ, ಆಗ ಬಹು ಕಷ್ಟಕರವಾದ ಕೇಮದ್ರುಮವೆಂಬುವ ಮಹಾ ದುರ್ಯೋಗ ಪ್ರಾಪ್ತಿಯಾಗುವುದೆಂದು ಕೆಲವರ ಅಭಿಪ್ರಾಯವಿರುತ್ತೆ. ಈ ವಿಷಯಗಳ ಯೋಗಗಳೆಲ್ಲವೂ ಸರಿಬರುವುದಿಲ್ಲ. ಏಕೆಂದರೆ-ಈ ಮೇಲೆ ಉದಹರಿಸಿರುವ ಪ್ರಕಾರ ಗ್ರಹಗಳು ಚಂದ್ರರಾಶ್ಯಾದಿ ದ್ವಿತೀಯ ದ್ವಾದಶಗಳಲ್ಲಿ ಗ್ರಹಗಳಿಲ್ಲದೆ ಚಂದ್ರ ಕೇಂದ ದಲ್ಲಿಯಾಗಲೀ, ನವಾಂಶೆಯಿಂದಾಗಲಿ, ಗ್ರಹಗಳಿರುವ ಜಾತಕಗಳನ್ನು ನೋಡಿದ್ದರಲ್ಲಿ ಕೇಮದ್ರುಮಯೋಗವೇ ಅನುಭವಕ್ಕೆ ಬಂದಿರುತ್ತವೆ. ಈ ವಿಷಯದಲ್ಲಿ ಪರಾಶರ ಸಂಹಿತೆಯಲ್ಲಿ ॥ಶ್ಲೋಕ॥ ಚಂದ್ರಸ್ಯದ್ವಾದಶೇವಿತ್ತೇ ಕಶ್ಚಿತ್ತಾರಾಗ್ರಹೋನಚೇತ್।

ಯದಿಜಾತೋಪಿನಾಸೂರ್ಯಂ ನಿಃಸ್ವೋಭವತಿ ಜಾತಕಃ ॥೧೩॥ ಎಂದುಕ್ತ-ವಾಗಿರುತ್ತೆ. ಮತ್ತು ಈ ಮೇಲೆ ಹೇಳಿದ ವಿಷಯಕ್ಕೂ ಪ್ರಮಾಣವಿರುತ್ತೆ. ಸಾರಾವಳಿಯಲ್ಲಿ ॥ಶ್ಲೋಕ॥ ಸುನಫಾನಫಾ ಧುರಧುರಾಃ ಕ್ರಮೇಣ ಯೋಗಾಭವಂತಿ ರವಿರಹಿತೈಃ । ವಿತ್ತಾಂತ್ಯೋಭಯಸಂಸ್ಥೈಃ ಕೈರವವನ ಬಾಂಧವಾದ್ವಿಹಗೈಃ ॥೧೪॥ ಏತೇನ ಯದಾರ್ಯೋಗಾಃ ಕೇಂದ್ರಗ್ರಹವರ್ಜಿತಶ್ಚ ಶಾಂಕೋವಾ । ಕೇಮದ್ರುಮೋತಿಕಷ್ಟಃ ಶಶಿನಿಚಖೇಟೈರ್ಯುತೇದೃಷ್ಟೇ ॥೧೫॥ ಎಂದುಕ್ತವಾಗಿರುತ್ತೆ. ಶ್ರುತಕೀರ್ತಿಯ ಮತ॥ ಚಂದ್ರಾಚ್ಚತುರ್ಥೈಸ್ಸುನಫಾದಶ ಮಸ್ಥೈಃ ಕೀರ್ತಿತೋನಫಾವಿಹಗೈಃ । ಉಭಯ-ಸ್ಥಿತೈರ್ಧುರಧುರಾಕೇಮದ್ರುಮಸಂಜ್ಞ ಕೋನ್ಯಥಾಯೋಗಃ ॥೧೬॥ ಎಂದು ಶ್ರುತಕೀರ್ತಿಯ ಅಭಿಪ್ರಾಯವಾಗಿರುತ್ತೆ. ಜೀವಶರ್ಮ ಮತವೇನೆಂದರೆ ॥ಶ್ಲೋಕ॥ ಯದಾಶ್ರಿ ಸಂಜ್ಞೇ ಶೀತಾಂಶುರ್ನವಾಂಶೇ ಜನ್ಮನಿಸ್ಥಿತಃ। ತದ್ವಿತೀಯ ಸ್ಥಿತೈರ್ಯೋಗ-ಸ್ಸುನಫಾಖ್ಯಃ ಪ್ರಕೀರ್ತಿತಃ ॥೧೭॥ ದ್ವಾದಶೈರನಫಾಜ್ಞೇ ಯಾಗ್ರಹೈರ್ದ್ವಿದ್ವಾದಶಸ್ಥಿತೈಃ । ಪ್ರೋಕ್ತೋಧುರಧುರಾಯೋ ಗೋನ್ಯಥಾ ಕೇಮದ್ರುಮಸ್ಸ್ಮೃತಃ ॥೧೮॥ ಎಂಬುವದು ಈ ಮತವಾಗಿರುತ್ತೆ. ಆದರೆ ಚಂದ್ರನವಾಂಶದಿಂದ ನೋಡುವುದು ಜೀವಶರ್ಮನ ಅಭಿಪ್ರಾಯವಾಗಿರುತ್ತೆ. ಚಂದ್ರ ಕೇಂದ್ರದಿಂದ ನೋಡುವ ಮತ ಶ್ರುತಕೀರ್ತಿಯ ಅಭಿಪ್ರಾಯವಾಗಿರುತ್ತೆ. ಇದು ಪೂರ್ವಾಚಾರ್ಯರಿಗೆ ಸಮ್ಮತಿಯಲ್ಲವಾದ್ದರಿಂದ ಪ್ರಸಿದ್ಧಿಗೆ ಬರಲಿಲ್ಲ. ಗರ್ಗಾಚಾರ್ಯರ ಮತವೇ ಸರ್ವಸಾಧಾರಣವಾಗಿರುತ್ತೆ.

ಸತ್ಯಾಚಾರ್ಯರ ಮತವೇ ವರಾಹಮಿಹಿರಭಟ್ಟಾಚಾರ್ಯರಿಗೆ ಸಮ್ಮತವಾದ್ದರಿಂದ ಈ ಮತವೇ ಸಿದ್ಧಾಂತವಾಗಿರತಕ್ಕದ್ದು. ॥ಶ್ಲೋಕ॥ ಸುನಫಾನಫಾಖ್ಯ ಯೋಗೌಧೌರ ಧುರಶ್ಚಂದ್ರ ಸಂಸ್ಥಿತಕ್ಷೇತ್ರಾತ್ ॥ ಪ್ರಾಕ್ಪೃಷ್ಠತೋ ಗ್ರಹೇಂದ್ರೈರು ಭಯಗತೈಸ್ತೇಷುರವಿವರ್ಜಂ ॥೧೯॥ ಕೇಮದ್ರುಮೋತ್ರಯೋ ಗೋನ್ಯಥಾ ಭವೇದ್ಯತ್ರಗರ್ಹಿತಂಜನ್ಮ ಎಂದು ಸತ್ಯಾಚಾರ್ಯರ ಮತವಾಗಿರುತ್ತೆ. ಈ ಪ್ರಕಾರ ವರಾಹಮಿಹಿರಾಚಾರ್ಯರಿಂದಲೇ ಸೂಕ್ಷ್ಮ ಜಾತಕದಲ್ಲಿ ಕೂಡ ಹೇಳಲ್ಪಟ್ಟಿರುತ್ತೆ. ॥ಶ್ಲೋಕ॥ ರವಿವರ್ಜಂ ದ್ವಾದಶಗೈರನಫಾ ಚಂದ್ರಾ ದ್ವಿತೀಯಗೈಸ್ಸುನಫಾ। ಉಭಯಸ್ಥಿತೈರ್ಧುರಧುರಾಕೇ ಮದ್ರುಮಸಂಜ್ಞಕೋತೋನ್ಯಃ ॥ ಎಂದು ಹೇಳಿರುತ್ತೆ. ಈ ವಿಷಯದಲ್ಲಿ ಜಯದೇವನ ಅಭಿಪ್ರಾಯ ಶ್ಲೋಕ॥ ಹಿತ್ವಾರವಿಂವ್ಯಯ-ಗತೈರನಫಾಖ್ಯ ಯೋಗೋದ್ರವ್ಯಸ್ಥಿತೈ ಶ್ಶಶಧರಾತ್ಸುನಫಾಭಿದಃಸ್ಯಾತ್। ಸ್ವಾಂತ್ಯಸ್ಥಿತೈರ್ಧುರಧುರಾ ಕಿಲಜನ್ಮಕಾಲೇ ಕೇಮದ್ರುಮೋ ವ್ಯಯಧನೇ

ಯದಿಕೋಪಿನಸ್ಯಾತ್ ।।೨೧।। ಚಂದ್ರಮಾಗ್ರಹ ಯುಕ್ತಶ್ಚೇದಥವಾ ಕೇಂದ್ರಗೋಯದಾ । ಕೇಮದ್ರುವಿಪಾಕಶ್ಚ ನಭವಂತಿಹಿಜನ್ಮನಃ ।।೨೨।। ಎಂದು ಹೇಳಲ್ಪಟ್ಟಿರುತ್ತೆ. ಈ ಪ್ರಕಾರವಾಗಿಯೇ ಜಾತಕಾಭರಣದಲ್ಲಿ ಧುಂಡಿರಾಜರ ಅಭಿಮತ ।।ಶ್ಲೋಕ।। ದ್ವಿಜಪತೇರ್ಧನಗೈಸ್ಸುನಫಾಭವೇತ್ ವ್ಯಯಗತೈರನಫಾರವಿವರ್ಜಿತ್ತೈಃ । ದುರಧುರಾ ಖಚರೈ ರುಭಯುಸ್ಥಿತೈರ್ಮುನಿವರ್ಯೈಃ ಕಥಿತಾವುಹದಾದರಾತ್ ।।೨೩।। ನಿಶಾಕರಾಜ್ಜನ್ಮನಿಖೇಚರೇಂದ್ರಾಧನವ್ಯಯಸ್ಥಾನಗತಾ ನಚೇತ್ಸ್ಯುಃ । ವದಂತಿಕೇಮದ್ರುಮ ಯೋಗ ನಾಮಲಕ್ಷ್ಮೀವಿಯೋಗಂ ಕುರುತೇ ಸನೂನಂ ।।೨೪।। ಎಂದುಕ್ತವಾಗಿರುತ್ತೆ.

## ಕೇಮದ್ರುಮಯೋಗಭಂಗಃ

ಜಾತಕಾಭರಣೇ ।।ಶ್ಲೋಕ।। ಪ್ರಾಲೇಯರಶ್ಮಿ ಪರಿಸೂತಿಕಾಲೇ ನಿರೀಕ್ಷ್ಯ ಮಾಣ ಸ್ಸಕಲೈರ್ನಭೋಗೈಃ । ನರಂಚಿರಜೀವಿತ ಸಾರ್ವಭೌಮಂ ಕರೋತಿ ಕೇಮದ್ರುಮಮಾಶುಹತ್ವಾ ।।೨೫।। ಜನ್ಮಕಾಲದಲ್ಲಿ ಚಂದ್ರನು ಸಕಲ ಗ್ರಹಗಳಿಂದಲೂ ನೋಡಲ್ಪಟ್ಟರೆ, ಜಾತಕನನ್ನು ಚಿರಂಜೀವಿಯನ್ನಾಗಿಯೂ, ಸಾರ್ವಭೌಮನನ್ನಾಗಿಯೂ, ಮಾಡಿ ಕೇಮದ್ರುಮಯೋಗವನ್ನು ನಾಶಮಾಡುತ್ತಾನೆಂದು ಹೇಳುತ್ತಾರೆ. ಮತ್ತು ಚತುರ್ಷುಕೇಂದ್ರೇಷು ಭವಂತಿ ಖೇಟಾ ದುಷ್ಟೋಪಿ ಕೇಮದ್ರುಮ ಯೋಗ ಏಷಃ। ವಿಹಾಯಕೇ ಮದ್ರುಮ ತಾಂನಿತಾಂತಂ ಕಲ್ಪದ್ರುಮಸ್ಯಾತ್ಕಿಲಸತ್ಫಲಾಸ್ತೈಃ ।।೨೬।।ತಾ।। ಜನ್ಮಕಾಲದಲ್ಲಿ ಜನ್ಮಚಂದ್ರನಿಂದ ನಾಲ್ಕು ಕೇಂದ್ರಸ್ಥಾನಗಳಲ್ಲಿ ಕುಜಾದಿ ತಾರಾಗ್ರಹಗಳಿದ್ದರೆ, ಕೇಮದ್ರುಮಯೋಗ ಭಂಗವಾಗಿ ಸತ್ಫಲ ಪ್ರಾಪ್ತಿಯಾಗುವುದು. ಕೇಂದ್ರಾದಿಗಾಮೀಯದಿಯಾಮಿ ನೀಶಃ ಸ್ಯಾತ್ಸದ್ಮಿನೀ ನಾಯಕತಃ ಕರೋತಿ । ವಿಜ್ಞಾನಮಾನೋದ್ಧತಿನೈಪುಣಾನಿ ಕನಿಷ್ಠ ಮಧ್ಯೋತ್ತಮತಾಯುತಾನಿ ।।೨೭।। ಚಂದ್ರನು ಕೇಂದ್ರದಲ್ಲಿದ್ದು ಅವನಿಗೆ ಕೇಂದ್ರದಲ್ಲಿ ಸೂರ್ಯನಿದ್ದರೆ ಜಾತಕನು ಜ್ಞಾನಿ, ಮಾನವಂತ, ದೊಡ್ಡಸ್ತಿಕೆ, ಚತುರತೆ, ಈ ಗುಣಗಳುಳ್ಳವನಾಗುವನು. ಮತ್ತು ಕ್ಷಿತಿಸುತಯುತ ಜೀವೇ ಸೂತಿಕಾಲೇ ತುಲಾಯಾಂವಿಲಸತಿನಲಿನೀನಾಂ ನಾಯಕಃ ಕನ್ಯಕಾಯಾಂ । ವಿಧುರಪ್ರಿಯದಿಶೇಷೈರ್ನೇಕ್ಷಿತೋ ಮೇಷವರ್ತೀಜನಯತಿ ನೃಪತೀಂದ್ರಂ ಹಂತಿ ಕೇಮದ್ರುಮಂಚ ।।೨೮।। ಜನ್ಮಕಾಲದಲ್ಲಿ ಮಂಗಳನು ತುಲಾರಾಶಿಯಲ್ಲಿಯೂ, ಗುರುಯುಕ್ತನಾಗಿ ಸೂರ್ಯನು ಕನ್ಯಾರಾಶಿಯಲ್ಲಿಯೂ, ಮೇಷರಾಶಿಯಲ್ಲಿ ಚಂದ್ರನೂ ಇದ್ದು ಉಳಿದ ಯಾವ ಗ್ರಹಗಳಿಂದಲೂ ನೋಡಲ್ಪಡದಿದ್ದರೆ ಕೇಮದ್ರುಮಯೋಗ ಭಂಗವಾಗಿ ರಾಜಯೋಗ ಉಂಟಾಗುವುದು. ಮೀನೇನಿಶಾಕರಃ ಪೂರ್ಣಃ

ಸರ್ವಗ್ರಹನಿರೀಕ್ಷಿತಃ ಕರೋತಿ ಪೃಥಿವೀನಾಥಂ ಮತ್ತೇ ಭಪರಿವಾರಿತಂ ಮತ್ತು ಮೀನರಾಶಿಯಲ್ಲಿ ಚಂದ್ರನು ಪೂರ್ಣನಾಗಿದ್ದು ಸರ್ವಗ್ರಹಗಳಿಂದಲೂ ನೋಡಲ್ಪಟ್ಟರೆ, ಜಾತಕನು ಗಜಾಶ್ವಪರಿವಾರದಿಂದ ಕೂಡಿದ ಚಕ್ರವರ್ತಿಯಾಗುತ್ತಾನೆ. ಈ ಯೋಗದಲ್ಲಿ ಒಂದು ವಿಶೇಷವಿರುತ್ತೆ. ಮೀನರಾಶಿಯಲ್ಲಿ ಪೂರ್ಣಚಂದ್ರನಿರಬೇಕಾದರೆ, ಕನ್ಯೆಯಲ್ಲಿ ಸೂರ್ಯನಿರಬೇಕು. ಆದ್ದರಿಂದ ಭಾದ್ರಪದ ಮಾಸದ ಪೂರ್ಣಿಮಾಜನನವಾಗಿರ ಬೇಕೆಂದು ವಿವಕ್ಷಿತವಾಯಿತು. ಆದ್ದರಿಂದ ಚಂದ್ರನಿಗೆ ಸರ್ವಗ್ರಹ ದೃಷ್ಟಿಯಿರಬೇಕೆಂದು ಹೇಳಿರುವುದರಿಂದ ವಿಶೇಷದೃಷ್ಟಿ ಇಲ್ಲದಿರುವ ರವಿ, ಬುಧ, ಶುಕ್ರರು, ಕನ್ಯೆಯಲ್ಲಿರಬೇಕು. ಗುರು, ಕುಜ, ಶನಿಗಳು ಯಥಾಸ್ಥಾನಗಳಲ್ಲಿರಬಹುದು. ಆದ್ದರಿಂದ ರಾಜಯೋಗ ಪ್ರಕರಣದಲ್ಲಿ ಭಂಗ ಹೇಳಿರುವುದರಲ್ಲಿ-ಭೃಗೋಃ ಪುತ್ರೋ ಪೀನೀಚಸ್ಥ ರಾಜಯೋಗ ವಿನಾಶದಃ । ಎಂದು ಹೇಳಿರುವುದಕ್ಕೆ ವಿರೋಧವಾಗಿರುತ್ತೆ. ಆದ್ದರಿಂದಲೇ ಶುಕ್ರನು ಕನ್ಯೆಯಲ್ಲಿ (ರಾಶ್ಯಾದಿ ೫-೨೭-೦-೦) ಅನಂತರ ಇರಬೇಕೆಂದು ಮುಖ್ಯಾಶಯವಾಗಿರುತ್ತೆ. ಈ ಪ್ರಕಾರ ಗ್ರಹಗತಿಯಿರುವಾಗ ಚಂದ್ರನಿಂದ ದ್ವಿತೀಯ ದ್ವಾದಶಗಳಲ್ಲಿ ಯಾವ ಗ್ರಹವಾದರೂ ಇರಬೇಕಾದ ಸಂಭವವಿರುವುದಿಲ್ಲ. ಆದರೆ ಚಂದ್ರನಿಂದ ದ್ವಿತೀಯ ದ್ವಾದಶದಲ್ಲಿದ್ದ ಗ್ರಹಗಳು ಚಂದ್ರನನ್ನು ನೋಡಲು ಶಕ್ತರಾಗುವುದಿಲ್ಲ. ಆದರೆ ವಕ್ಷ್ಯಮಾಣ ಶ್ಲೋಕದಲ್ಲಿ ಚಂದ್ರನ ದ್ವಿತೀಯ ದ್ವಾದಶದಲ್ಲಿ ಕುಜಾದಿ ಪಂಚತಾರಾ ಗ್ರಹಗಳಿರದಿದ್ದರೆ ಕೇಮದ್ರುಮಯೋಗವನ್ನು ಹೇಳಬೇಕೆಂದು ಮೊದಲೇ ನಿಶ್ಚಿತವಾಗಿರುತ್ತೆ.

| ಚಂ ಲ | | | |
|---|---|---|---|
| | | | ಗುರು |
| ಶನಿ | | | ಕುಜ |
| | | | ರ ಬು ಶು |

ಆದ್ದರಿಂದ ಈ ಕುಂಡಲಿಯುಲ್ಲಿ ತೋರಿಸಿರುವ ಗ್ರಹಸ್ಥಿತಿಗೆ ಕೇಮದ್ರುಮ ಯೋಗವನ್ನು ಹೇಳಬೇಕೆ ? ಅಥವಾ ರಾಜಯೋಗವನ್ನು ಹೇಳಬೇಕೆ ? ಎಂದು ಅನುಮಾನ ಬರುತ್ತೆ. ಶ್ಲೋಕಾರ್ಥದ ಪ್ರಕಾರ ಕೇಮದ್ರುಮ ಯೋಗವಾದರೂ ಚಂದ್ರ ಕೇಂದ್ರದಲ್ಲಿ ಸೂರ್ಯನಿರುವುದರಿಂದ ೧ ವಿಧವಾಗಿ ಕೇಮದ್ರುಮಯೋಗವಾದರೂ ಚಂದ್ರ ಕೇಂದ್ರದಲ್ಲಿ ಸೂರ್ಯನಿರುವುದರಿಂದ ಒಂದು ವಿಧವಾಗಿ ಕೇಮದ್ರುಮಯೋಗ ಭಂಗ, ಮತ್ತು ಸರ್ವಗ್ರಹಗಳೂ ಚಂದ್ರನನ್ನು ನೋಡುವುದರಿಂದ ಕೇಮದ್ರುಮಯೋಗ ಭಂಗವನ್ನು ಹೇಳಿ ರಾಜಯೋಗ ಹೇಳಬೇಕು. ಇದಕ್ಕೆ ಮತ್ತೊಂದು ಉದಾಹರಣೆ-ಪರಾಶರಃ ॥ಶ್ಲೋಕ॥ ಸರ್ವೇಖೇಟಾಃ ಕೇಂದ್ರ ತುರ್ಯೇಷು ಸಂಸ್ಥಾಃದೂಷ್ಯೇಯೋಗಾಶ್ಚಾಪಿಕೇಮದ್ರುಮೋಯಂ॥

ದುಷ್ಟಂ ಸರ್ವಂಸ್ತಂಫಲಂ ಸಂವಿಹಾಯ ಕುರ್ಯ್ತ) ಪುಂಸಾಂ ಸತ್ಫಲಂ ವೈಪಿಚಿತ್ರಂ ॥೨೮॥ ಮತ್ತು ಚಂದ್ರನಿರುವ ಕೇಂದ್ರಚತುರ್ಥಗಳಲ್ಲಿ ಸರ್ವಗ್ರಹಗಳಿದ್ದರೆ ಕೇಮದ್ರುಮಯೋಗ ನಾಶಮಾಡಿ ಸತ್ಫಲವಾಗುವುದು. ಚಂದ್ರಕೇಂದ್ರದಲ್ಲಿ ಬೃಹಸ್ಪತಿ ಯಿದ್ದರೆ ಕೇಮದ್ರುಮಯೋಗ ನಾಶವಾಗುತ್ತೆಂಬುವುದಕ್ಕೆ ॥ಶ್ಲೋಕ ॥ ಕಿಂಕುರ್ವಂತಿ ಗ್ರಹಾಸ್ಸರ್ವೇ ಚಂದ್ರಕೇಂದ್ರೇ ಬೃಹಸ್ಪತೌ॥ ಮತ್ತು ಮಾತಂಗಯೂಥಾನಿ ಹರತ್ಯೇಕೋಪಿ ಕೇಸರೀ ॥೨೯॥ ಚಂದ್ರನಿಗೆ ಕೇಂದ್ರದಲ್ಲಿ ಬೃಹಸ್ಪತಿಯಿದ್ದರೆ ಜಾತಕನಿಗೆ ಇತರ ಗ್ರಹಗಳಿಂದುಂಟಾದ ದುರ್ಯೋಗವೆಂಬುವ ಆನೆಗಳ ಹಿಂಡನ್ನು ಸಿಂಹವು ನಾಶ ಮಾಡುವಂತೆ, ಸುಯೋಗಕಾರಕರಾದ ಚಂದ್ರ ಬೃಹಸ್ಪತಿಗಳು ನಾಶಮಾಡಿ ಸೌಖ್ಯಫಲವನ್ನೇ ಕೊಡುವರೆಂದು ತಾತ್ಪರ್ಯವು॥ ಈ ವಿಷಯದಲ್ಲಿ ಪರಾಶರೀಯ ಹೋರಾಸಾರದಲ್ಲಿ ॥ಶ್ಲೋಕ॥ ಕೇಂದ್ರಸ್ಥಿತೇ ದೇವಗುರೌ ಮೃಗಾಂಕಾ ದ್ಯೋಗಸ್ತದಾ ಹುರ್ಗಜಕೇಸರೀತಿ । ದೃಷ್ಟೇಯುತೇ ವೇಂದುಸುತಃ ಶಶಾಂಕೇ ನೀಚಾಸ್ತ ಹೀನೈರ್ಗಜಕೈಸರೀ ಸ್ಯಾತ್ ॥೩೦॥ ಬೃಹಸ್ಪತಿಯು ಚಂದ್ರನಿಗೆ ಕೇಂದ್ರದಲ್ಲಿದ್ದರೆ ಗಜಕೇಸರಿಯೋಗ, ಚಂದ್ರನು ಬುಧನ ಸಂಗಡ ಸೇರಿದರೂ, ನೋಡಲ್ಪಟ್ಟರೂ ನೀಚನಾಗಿಯಾಗಲೀ, ಅಸ್ತನಾಗಿಯಾಗಲೀ ಇಲ್ಲದಿದ್ದರೆ ಗಜಕೇಸರಿಯೆಂಬುವ ಯೋಗವು.

## ಗಜಕೇಸರಿ ಯೋಗಫಲಂ

ಗಜಕೇಸರಿ ಸಂಜಾತಸ್ತೇಜಸ್ವೀ ಧನವಾರ್ ಭವೇತ್ । ಮೇಧಾವೀ ಗುಣ ಸಂಪನ್ನೋ ರಾಜಪ್ರಿಯಕರೋ ಭವೇತ್ ॥೩೧॥ ಗಜಕೇಸರೀ ಯೋಗದಲ್ಲಿ ಹುಟ್ಟಿದವನು ತೇಜಸ್ವಿಯಾಗಿಯೂ, ಧನವಂತನಾಗಿಯೂ, ಬುದ್ಧಿಯಲ್ಲಿ ಅಗ್ರಗಣ್ಯನಾಗಿಯೂ, ಸುಗುಣ ಭರಿತನಾಗಿಯೂ, ರಾಜಪ್ರೀತಿಕರನಾಗಿಯೂ ಆಗುತ್ತಾನೆ.

ಈ ಪ್ರಕಾರ ಚಂದ್ರನಿಗೆ ದ್ವಿತೀಯ ದ್ವಾದಶಗಳಲ್ಲಿ ತಾರಾಗ್ರಹಗಳಿಲ್ಲದೆ ಹೋದರೆ ಕೇಮದ್ರುಮಯೋಗವೆಂದು ಹೇಳಲ್ಪಟ್ಟರೂ ಆ ಕೇಮದ್ರುಮಯೋಗ ಭಂಗವನ್ನು ಚೆನ್ನಾಗಿ ಪರಿಶೀಲನೆ ಮಾಡಿ ಭಂಗವಿಲ್ಲದೆ ಇರುವ ಜಾತಕಗಳಿಗೆ ಮಾತ್ರ ಕೇಮದ್ರುಮಯೋಗವನ್ನು ಹೇಳತಕ್ಕದ್ದು ಪೂರ್ವಾಚಾರ್ಯರ ಸಮ್ಮತಿಯಾಗಿರುತ್ತೆ. ಇದಕ್ಕೆ ಪ್ರಮಾಣ ॥ಪರಾಶರಃ॥ಶ್ಲೋಕ॥ ಸರ್ವೇಷು ಚಾಂದ್ರಯೋಗೇಷು ಚೇದಂಯತ್ನಾದ್ವಿಚಿಂತಯೇತ್ । ಕೇಮದ್ರುಮಾದಿಕಾ ಯೋಗಾ ಸಂಭವೇಸ್ಯಲಯಂ ಯಯುಃ ॥೩೨॥

## ಸುನಫಾನಫಾಧುರಧುರಾಯೋಗ ಸಂಖ್ಯಾ ನಿರ್ಣಯಃ

ಶ್ಲೋಕ॥ ತ್ರಿಂಶತ್ಸರೂಪಾಸ್ಸುನಫಾನಫಾಖ್ಯಾಷ್ಷತ್ರಯಂಧೌರಧುರಪ್ರಭೇದಃ ।
ಇಚ್ಛಾವಿಕಲ್ಪೈಃ ಕ್ರಮಶೋಭಿನೀಯ ನೀತೇಸಿವೃತ್ತಿಃ ಪುನರನ್ಯನೀತಿ ॥೪॥

ಅವತಾರಿಕೆ॥ ತ್ರಿಂಶತ್ಸರೂಪಾ ಎಂಬುವ ಶ್ಲೋಕದಿಂದ ಸುನಫಾಯೋಗ, ಅನಫಾಯೋಗ ಧುರಧುರಾಯೋಗ ಕಾರಣರಾದ ಕುಜ, ಬುಧ, ಗುರು, ಶುಕ್ರ, ಶನಿ ಈ ೫ ಭೇದದಿಂದ ಯೋಗಭೇದವು ಅನೇಕ ಪ್ರಕಾರವಾಗುವುದರಿಂದ, ಈ ಯೋಗಕಾರಕ ಗ್ರಹಗಳ ಸ್ಥಾನಾಧಿಪತ್ಯ ಸ್ಥಿತಿಭೇದದಿಂದ, ಅನೇಕ ಪ್ರಕಾರದಿಂದ ಫಲ ವಿಚಿತ್ರವಾಗುವುದರಿಂದ ಈ ಯೋಗಭೇದಗಳೂ ಸಹ ಹೇಳಲ್ಪಡುತ್ತೆ.

ಟೀಕು॥ ಸರೂಪಾಃ ತ್ರಿಂಶತ್ಸುನಫಾಃ, ಸರೂಪಾಃತ್ರಿಂಶತಾ-ಒಂದು ಸಂಖ್ಯೆ ಸಹಿತವಾದ ಮೂವ್ವತ್ತು ಅಂದರೆ ಮೂವ್ವತ್ತೊಂದು ಪ್ರಕಾರವಾದ ಸುನಫಾಃ-ಸುನಫಾಯೆಂಬುವ, ಯೋಗಗಳು, ಅನಫಾಖ್ಯಾಃ-ಅನಫಾ ಎಂಬುವ ಹೆಸರಿನ ಯೋಗವು ಮೂವ್ವತ್ತೊಂದು ಪ್ರಕಾರವಾಗಿಯೂ, ಧೌರಧುರಪ್ರಭೇಧಾಃ-ಧುರಧುರಾಯೆಂಬುವ ಯೋಗಗಳ ಭೇದಗಳು, ಷಷ್ಟಿತ್ರಯಂ, ಷಷ್ಟಿ-೬೦ಕ್ಕೆ ತ್ರಯಂ-ತ್ರಿಗುಣವಾಗಿ ಮಾಡಿದರೆ, ೬೦x೩=೧೮೦ ಭೇದಗಳಾಗಿರುತ್ತವೆ. ಈ ಯೋಗಗಳ ಭೇದಗಳು ತಿಳಿಯುವ ಬಗ್ಗೆ ಹೇಗೆಂದರೆ- ಇಚ್ಛಾವಿಕಲ್ಪೈಃ-ಈ ಯೋಗಕಾರಕರಾದ ಗ್ರಹಗಳ ಸಂಖ್ಯೆಯನ್ನಿಟ್ಟುಕೊಂಡು ಈ ವಿಕಲ್ಪಗಳಿಂದ ಕ್ರಮ ಶೋಭನೀಯ-ಕ್ರಮವಾಗಿ ಪ್ರಸ್ತಾರಗೊಳಿಸಿಕೊಂಡು, ನೀತೇ-ಅದು ಇಷ್ಟೇಯೆಂದು ಕೊನೆಮುಟ್ಟಿಸಿ, ಉಳಿದ ಗ್ರಹಗಳಿಗೂ ಈ ರೀತಿಯಾಗಿಯೇ ಮಾಡಿದರೆ ಯೋಗ ಭೇದಗಳು ತಿಳಿಯಬರುತ್ತವೆ.

ತಾ॥ ಈ ಮೇಲೆ ಹೇಳಿದ ಪ್ರಕಾರ ಮಾಡಿದರೆ ಏಕಗ್ರಹ ವಿಕಲ್ಪ ೫, ದ್ವಿಗ್ರಹ ವಿಕಲ್ಪ ೧೦, ಚತುರ್ಗ್ರಹವಿಕಲ್ಪ ೫, ಪಂಚಗ್ರಹವಿಕಲ್ಪ ೧, ತ್ರಿಗ್ರಹವಿಕಲ್ಪ ೧೦, [೫+೧೦+೫+೧+೧೦=೩೧] ಅಂತೂ ಮೂವತ್ತೊಂದು ಬಗೆಯಾಗಿ ಸುನಫಾ ಯೋಗಗಳಾಗುತ್ತವೆ ಈ ಪ್ರಕಾರವಾಗಿಯೇ ಅನಫಾಯೋಗ ವಿಕಲ್ಪಗಳು ೩೧, ಇಲ್ಲಿಗೆ "ತ್ರಿಂಶತ್ಸರೂಪಾಸ್ಸುನಫಾನಫಾಖ್ಯಾಃ" ಎಂಬುವಲ್ಲಿಗೆ ಸರಿಹೋಯಿತು.

ಗ್ರಹವಿಕಲ್ಪಕ್ಕೆ ನ್ಯಾಸವಿಧಿ-ಶ್ರುತಕೀರ್ತಿಃ॥ ಪ್ರತಿಲೋಮಂ ವಿನಿಕ್ಷಿಪ್ಯ ಚಾನುಲೋಮ ಮಧಃಕ್ಷಿಪೇತ್ । ಅನುಲೋಮಸಮೂಹಃಸ್ಯಾದಧಸ್ಥೇ ನವಿ ಭಾಜಯೇತ್ ॥೩೩॥
ಈ ಪ್ರಕಾರ ಅನುಲೋಮ ಸಂಖ್ಯೆಗಳು ೫-೪-೩-೨-೧, ಅದರಡಿಯಲ್ಲಿ

೧-೨-೩-೪-೫, ಈಪ್ರಕಾರ ನ್ಯಾಸಮಾಡಿದರೆ ೧ನೇ ೫, ೨ನೇ ೪, ೩ನೇ ೩, ೫ನೇ ೨, ೫ನೇ ೧ ಆಗುತ್ತದೆ. ಇಲ್ಲಿ ಅನುಲೋಮನ್ಯಾಸದಲ್ಲಿನ ಪ್ರಥಮ ಸಂಖ್ಯೆಯಾದ ೫÷೧=೫ ಆಗುತ್ತದೆ. ಇದು ಏಕಗ್ರಹವಿಕಲ್ಪ, ಈ ಪ್ರಥಮ ಸಂಖ್ಯೆಯಾದ ೫ನ್ನು ೨ನೇ ಸ್ಥಾನ ೪ರಿಂದ ಗುಣಿಸಿ ಅದರ ಕೆಳಗಿನ ೨ರಿಂದ ಭಾಗಿಸಿದರೆ, ನ್ಯಾಸ ೫ x ೪=೨೦÷೨=೧೦ ಆಯಿತು. ಇದು ದ್ವಿಗ್ರಹವಿಕಲ್ಪ, ಈ ೧೦ನ್ನು ೩ನೇ ಸ್ಥಾನದ ಅನುಲೋಮ ನ್ಯಾಸಾಂಕವಾದ ೩ರಿಂದ ಗುಣಿಸಿ ಅದರ ಭೇದವಾದ ೩ ರಿಂದ ಭಾಗಿಸಿದರೆ ಬರುವ ೧೦ ತ್ರಿಗ್ರಹವಿಕಲ್ಪ, ೧೦x೩=೩೦÷೩=೧೦, ಈ ೧೦ನ್ನು ಅನುಲೋಮ ಸಂಖ್ಯೆಯ ೪ನೇ ಸ್ಥಾನಾಂಕವಾದ ೨ರಿಂದ ಗುಣಿಸಿ ೪ ರಿಂದ ಭಾಗಿಸಿದರೆ ಚತುರ್ವಿಕಲ್ಪ, ೧೦x೨=೨೦÷೪=೫, ಅದನ್ನು ಅನುಲೋಮ ಪಂಚಮಸ್ಥಾನಾಂಕವಾದ ೧ ರಿಂದ ಗುಣಿಸಿ ವಿಲೋಮಸ್ಥಾನದ ೫ನೇ ಭೇದದಿಂದ ಭಾಗಿಸಿದರೆ ೫x೧=೫÷೫=೧ ಇದು ಪಂಚಗ್ರಹವಿಕಲ್ಪ. ಈ ಪ್ರಕಾರ ಮಾಡಿದರೆ ೩೧ ಆಗುತ್ತೆ.

## ಏಕತ್ರಿಂಶಯೋಗೋತ್ಪತ್ತಿ ಪ್ರಸ್ತಾರಕ್ರಮ

| ನ್ಯಾಸವಿಕಲ್ಪ | ೫, | ೪, | ೩, | ೨, | ೧ |
|---|---|---|---|---|---|
| | ೧, | ೨, | ೩, | ೪, | ೫ |
| ಏಕವಿಕಲ್ಪ | ೫ x ೧ = ೫ ÷ ೧ | | | = | ೫ |
| ದ್ವಿವಿಕಲ್ಪ | ೫ x ೪ = ೨೦ ÷ ೨ | | | = | ೧೦ |
| ತ್ರಿವಿಕಲ್ಪ | ೧೦ x ೩ = ೩೦ ÷ ೩ | | | = | ೧೦ |
| ಚತುರ್ವಿಕಲ್ಪ | ೧೦ x ೨ = ೨೦ ÷ ೪ | | | = | ೫ |
| ಪಂಚವಿಕಲ್ಪ | ೫ x ೧ = ೫ ÷ ೫ = | | | ೧ | |
| ಅಂತು ಯೋಗ ಸಂಖ್ಯಾ | | | | | ೩೧ |

ಈ ಪ್ರಕಾರದ ಚಂದ್ರನಿಂದ ದ್ವಿತೀಯದಲ್ಲಿ, ೩೧ ಸುನಫಾಯೋಗಗಳು ಈ ಪ್ರಕಾರದ, ೩೧ ಅನಫಾಯೋಗಗಳಾಗುತ್ತೆ.

## ಸುನಫಾ ನಫಾ ಭೇದಕ್ರಮಃ

ಇದರ ವಿಕಲ್ಪವೆಂತೆಂದರೆ :- ಚಂದ್ರನಿಗೆ ದ್ವಿತೀಯದಲ್ಲಿ ಮಂಗಲ, ಬುಧ, ಬೃಹಸ್ಪತಿ, ಶುಕ್ರ, ಶನಿ ಪ್ರಥಮ ವಿಕಲ್ಪ ೫ ಮಂಗಲ, ಬುಧ, । ಮಂಗಲ, ಬೃಹಸ್ಪತಿ, । ಮಂಗಲ, ಶುಕ್ರ, । ಮಂಗಲ, ಶನಿ ಬುಧ, ಬೃಹಸ್ಪತಿ, । ಬುಧ,

ಶುಕ್ರ, । ಬುಧ, ಶನೈಶ್ಚರ, । ಬೃಹಸ್ಪತಿ ಶುಕ್ರ, । ಬೃಹಸ್ಪತಿ, ಶನೈಶ್ಚರ, । ಶುಕ್ರ, ಶನೈಶ್ಚರ, ೨ನೇ ವಿಕಲ್ಪ ೧೦।। ಮಂಗಲ, ಬುಧ, ಶುಕ್ರ । ಮಂಗಲಂ, ಬುಧ, ಶನೈಶ್ಚರ, ೩ನೇ ವಿಕಲ್ಪ ೧೦ ।। ಮಂಗಲ, ಬುಧ, ಬೃಹಸ್ಪತಿ, ಶುಕ್ರ । ಮಂಗಲ ಬುಧ, ಬೃಹಸ್ಪತಿ, ಶನೈಶ್ಚರ, । ಮಂಗಲ, ಬೃಹಸ್ಪತಿ, ಶುಕ್ರ, ಶನೈಶ್ಚರ, । ಮಂಗಲ, ಬುಧ, ಶುಕ್ರ, ಶನೈಶ್ಚರ, ಬುಧ, ಬೃಹಸ್ಪತಿ, ಶುಕ್ರ, ಶನೈಶ್ಚರ, । ೪ನೇ ವಿಕಲ್ಪ, ೫। ಮಂಗಲ, ಬುಧ, ಬೃಹಸ್ಪತಿ, ಶುಕ್ರ, ಶನೈಶ್ಚರ, । ೫ನೇ ವಿಕಲ್ಪ ೧, ಈ ಒಟ್ಟು ೩೧ ಸುನಫಾ ಯೋಗದ ಭೇದಗಳು. ಈ ಪ್ರಕಾರವೇ ಅನಫಾಯೋಗಗಳ ಭೇದ ೩೧ ಆಗಿರುತ್ತದೆ.

## ಧುರಾಧುರಾ ಯೋಗ ಭೇದಕ್ರಮಃ

ಪೂರ್ವಪ್ರಸ್ತಾರಕ್ರಮದಿಂದ ಒಂದು ಗ್ರಹ ಎರಡರಲ್ಲಿ, ಎರಡು ಗ್ರಹ ಹನ್ನೆರಡರಲ್ಲಿ, ಒಂದು ಗ್ರಹ ಹನ್ನೆರಡರಲ್ಲಿ, ಎರಡು ಗ್ರಹ ಎರಡರಲ್ಲಿ, ಯಾವ ಪ್ರಕಾರವೆಂದರೆ-(ಮಂಗಲ, ಬುಧ) ೧। (ಬುಧ, ಮಂಗಲ) ೨। (ಮಂಗಲ, ಬೃಹಸ್ಪತಿ) ೩। (ಬೃಹಸ್ಪತಿ, ಮಂಗಲ) ೪। (ಮಂಗಲ, ಶುಕ್ರ) ೫। (ಶುಕ್ರ ಮಂಗಲ ೬। (ಮಂಗಲ, ಶನೈಶ್ಚರ) ೭। (ಶನೈಶ್ಚರ, ಮಂಗಲ) ೮। (ಬುಧ, ಬೃಹಸ್ಪತಿ) ೯। (ಬೃಹಸ್ಪತಿ, ಬುಧ) ೧೦ । (ಬುಧ, ಶುಕ್ರ) ೧೧ । (ಶುಕ್ರ, ಬುಧ) ೧೨ । (ಬುಧ, ಶನೈಶ್ಚರ) ೧೩ । (ಶನೈಶ್ಚರ; ಬುಧ) ೧೪। (ಬೃಹಸ್ಪತಿ, ಶುಕ್ರ ೧೫। (ಶುಕ್ರ, ಬೃಹಸ್ಪತಿ) ೧೬ । (ಬೃಹಸ್ಪತಿ, ಶನೈಶ್ಚರ) ೧೭। (ಶನೈಶ್ಚರ, ಬೃಹಸ್ಪತಿ) ೧೮। (ಶುಕ್ರ, ಶನೈಶ್ಚರ) ೧೯। (ಶನೈಶ್ಚರ ಶುಕ್ರ) ೨೦। ಈಗ ೧ ಗ್ರಹ ೨ರಲ್ಲಿ ೨ಗ್ರಹ ಹನ್ನೆರಡರಲ್ಲಿ ೨ ಗ್ರಹ, ಹನ್ನೆರಡರಲ್ಲಿ ೧ ಗ್ರಹ ಈ ಪ್ರಕಾರ (ಮಂಗಲ) (ಬುಧ, ಬೃಹಸ್ಪತಿ) ೧। (ಬುಧ) (ಬೃಹಸ್ಪತಿ, ಮಂಗಲ) ೨। (ಬೃಹಸ್ಪತಿ) (ಶುಕ್ರ, ಬುಧ) ೩। (ಬುಧ) (ಶುಕ್ರ, ಮಂಗಲ) ೪। (ಮಂಗಲ) (ಬುಧ, ಶನೈಶ್ಚರ) ೫। (ಬುಧ) (ಶನೈಶ್ಚರ, ಮಂಗಲ) ೬। (ಮಂಗಲ) (ಬೃಹಸ್ಪತಿ, ಶುಕ್ರ) ೭। (ಬೃಹಸ್ಪತಿ) (ಶುಕ್ರ, ಮಂಗಲ) ೮। (ಮಂಗಲ) (ಬೃಹಸ್ಪತಿ, ಶನೈಶ್ಚರ) ೯। (ಬೃಹಸ್ಪತಿ) (ಶನೈಶ್ಚರ, ಮಂಗಲ) ೧೦। (ಮಂಗಲ) (ಶುಕ್ರ, ಶನೈಶ್ಚರ) ೧೧। (ಶುಕ್ರ) (ಶನೈಶ್ಚರ, ಮಂಗಲ) ೧೨। (ಬುಧ) (ಮಂಗಲ, ಬೃಹಸ್ಪತಿ) ೧೩। (ಬೃಹಸ್ಪತಿ) (ಮಂಗಲ, ಬುಧ) ೧೪। (ಬುಧ) (ಮಂಗಲ, ಶುಕ್ರ) ೧೫। (ಮಂಗಲ) (ಶುಕ್ರ, ಬುಧ) ೧೬। (ಬುಧ) (ಮಂಗಲ, ಶನೈಶ್ಚರ) ೧೭। (ಮಂಗಲ) (ಬುಧ, ಶನೈಶ್ಚರ) ೧೮। (ಬುಧ) (ಬೃಹಸ್ಪತಿ, ಶುಕ್ರ)

೧೯। (ಬೃಹಸ್ಪತಿ) (ಶುಕ್ರ, ಬುಧ) ೨೦। (ಬುಧ) (ಬೃಹಸ್ಪತಿ, ಶನೈಶ್ಚರ) ೨೧। (ಬೃಹಸ್ಪತಿ) (ಶನೈಶ್ಚರ, ಬುಧ) ೨೨। (ಬುಧ) (ಶುಕ್ರ ಶನೈಶ್ಚರ) ೨೩। (ಶುಕ್ರ) (ಶನೈಶ್ಚರ, ಬುಧ) ೨೪। (ಬೃಹಸ್ಪತಿ) (ಮಂಗಲ, ಬುಧ) ೨೫। (ಮಂಗಲ) (ಬುಧ, ಬೃಹಸ್ಪತಿ) ೨೬। (ಬೃಹಸ್ಪತಿ) (ಮಂಗಲ, ಶುಕ್ರ) ೨೭। (ಮಂಗಲ) (ಶುಕ್ರ, ಬೃಹಸ್ಪತಿ) ೨೮। (ಬೃಹಸ್ಪತಿ) (ಮಂಗಲ, ಶನೈಶ್ಚರ) ೨೯। (ಮಂಗಲ) (ಶನೈಶ್ಚರ, ಬೃಹಸ್ಪತಿ) ೩೦। (ಬೃಹಸ್ಪತಿ) (ಬುಧ, ಶುಕ್ರ), ೩೧। (ಬುಧ) (ಶುಕ್ರ, ಬೃಹಸ್ಪತಿ) ೩೨। (ಬೃಹಸ್ಪತಿ) (ಬುಧ, ಶನಿ) ೩೩। (ಬುಧ) (ಶನೈಶ್ಚರ, ಬೃಹಸ್ಪತಿ) ೩೪। (ಬೃಹಸ್ಪತಿ) (ಶುಕ್ರ, ಶನೈಶ್ಚರ) ೩೫। (ಶುಕ್ರ) (ಶನೈಶ್ಚರ, ಬೃಹಸ್ಪತಿ) ೩೬। (ಶುಕ್ರ) (ಮಂಗಲ, ಬುಧ) ೩೭ । (ಮಂಗಲ) (ಬುಧ, ಶುಕ್ರ) ೩೮। (ಶುಕ್ರ) (ಮಂಗಲ, ಬೃಹಸ್ಪತಿ) ೩೯ । (ಮಂಗಲ, ಬೃಹಸ್ಪತಿ) (ಶುಕ್ರ) ೪೦। (ಶುಕ್ರ) (ಮಂಗಲ, ಶನೈಶ್ಚರ) ೪೧। (ಮಂಗಲ) (ಮಂಗಲ ಶನೈಶ್ಚರ) ಶುಕ್ರ ೪೨। (ಶುಕ್ರ) (ಬುಧ, ಬೃಹಸ್ಪತಿ) ೪೩। (ಬುಧ, ಬೃಹಸ್ಪತಿ) (ಶುಕ್ರ) ೪೪ । (ಶುಕ್ರ) (ಬುಧ, ಶನೈಶ್ಚರ) ೪೫ । (ಬುಧ, ಶನೈಶ್ಚರ) (ಶುಕ್ರ) ೪೬। (ಶುಕ್ರ) (ಬೃಹಸ್ಪತಿ, ಶನೈಶ್ಚರ) ೪೭। (ಬೃಹಸ್ಪತಿ, ಶನೈಶ್ಚರ) (ಶುಕ್ರ) ೪೮। (ಶನೈಶ್ಚರ) (ಮಂಗಲ) (ಬುಧ) ೪೯। (ಮಂಗಲ, ಬುಧ) (ಶನೈಶ್ಚರ) ೫೦ । (ಶನೈಶ್ಚರ, ಮಂಗಲ) (ಬೃಹಸ್ಪತಿ) ೫೧ । (ಮಂಗಲ, ಬೃಹಸ್ಪತಿ) (ಶನೈಶ್ಚರ) ೫೨ । (ಶನೈಶ್ಚರ) (ಮಂಗಲ, ಶುಕ್ರ) ೫೩ । (ಮಂಗಲ, ಶುಕ್ರ) (ಶನೈಶ್ಚರ) ೫೪। (ಶನೈಶ್ಚರ) (ಬುಧ, ಬೃಹಸ್ಪತಿ) ೫೫। (ಬುಧ, ಬೃಹಸ್ಪತಿ) (ಶನೈಶ್ಚರ ೫೬। (ಶನೈಶ್ಚರ) (ಬುಧ, ಶುಕ್ರ) ೫೭। (ಬುಧ, ಶುಕ್ರ) (ಶನೈಶ್ಚರ) ೩೮।। (ಶನೈಶ್ಚರ) (ಬೃಹಸ್ಪತಿ, ಶುಕ್ರ) ೫೬। (ಬೃಹಸ್ಪತಿ, ಶುಕ್ರ) (ಶನೈಶ್ಚರ) ೬೦ ಇದೆಲ್ಲಾ ೮೦ ಯೋಗಗಳು ಆಯಿತು. ೧ ಗ್ರಹ ದ್ವಿತೀಯದಲ್ಲಿ ೩ ಗ್ರಹ ದ್ವಾದಶದಲ್ಲಿ, ೩ ಗ್ರಹ ದ್ವಿತೀಯದಲ್ಲಿ ೧ ಗ್ರಹ ದ್ವಾದಶದಲ್ಲಿ ಈ ಪ್ರಕಾರವಾಗಿ ಚತುರ್ಗ್ರಹವಿಕಲ್ಪ.

(ಮಂಗಲ) (ಬುಧ, ಬೃಹಸ್ಪತಿ, ಶುಕ್ರ) ೧। (ಬುಧ, ಬೃಹಸ್ಪತಿ, ಶುಕ್ರ,) (ಮಂಗಲ) ೨। (ಮಂಗಲ), (ಬುಧ, ಬೃಹಸ್ಪತಿ, ಶನೈಶ್ಚರ) ೩। (ಬುಧ, ಬೃಹಸ್ಪತಿ, ಶನೈಶ್ಚರ) (ಮಂಗಲ) ೪। (ಮಂಗಲ) (ಬುಧ, ಶುಕ್ರ, ಶನೈಶ್ಚರ) ೫। (ಬುಧ, ಶುಕ್ರ, ಶನೈಶ್ಚರ) (ಮಂಗಲ) ೬। (ಮಂಗಲ) (ಬೃಹಸ್ಪತಿ, ಶುಕ್ರ, ಶನೈಶ್ಚರ) ೭। (ಬೃಹಸ್ಪತಿ, ಶುಕ್ರ, ಶನೈಶ್ಚರ) (ಮಂಗಲ) ೮। (ಬುಧ) (ಮಂಗಲ, ಬೃಹಸ್ಪತಿ, ಶುಕ್ರ) ೯। (ಮಂಗಲ, ಬೃಹಸ್ಪತಿ, ಶುಕ್ರ) (ಬುಧ) ೧೦। (ಬುಧ) (ಮಂಗಲ ಬೃಹಸ್ಪತಿ, ಶನೈಶ್ಚರ) ೧೧। (ಮಂಗಲ, ಬೃಹಸ್ಪತಿ, ಶನೈಶ್ಚರ) (ಬುಧ) ೧೨। (ಬುಧ) (ಮಂಗಲ, ಶುಕ್ರ ಶನೈಶ್ಚರ) ೧೩। (ಮಂಗಲ, ಶುಕ್ರ,ಶನೈಶ್ಚರ) (ಬುಧ) ೧೪। (ಬುಧ) ಬೃಹಸ್ಪತಿ, ಶುಕ್ರ,

ಶನೈಶ್ಚರ) ೧೫। (ಬೃಹಸ್ಪತಿ, ಶುಕ್ರ, ಶನೈಶ್ಚರ) (ಬುಧ) ೧೬। (ಬೃಹಸ್ಪತಿ) (ಮಂಗಲ, ಬುಧ, ಶುಕ್ರ) ೧೭। (ಮಂಗಲ, ಬುಧ, ಶುಕ್ರ) (ಬೃಹಸ್ಪತಿ) ೧೮। (ಬೃಹಸ್ಪತಿ) (ಮಂಗಲ, ಬುಧ, ಶನೈಶ್ಚರ) ೧೯। (ಮಂಗಲ, ಬುಧ, ಶನೈಶ್ಚರ) (ಬೃಹಸ್ಪತಿ) ೨೦। ಇವೆಲ್ಲವೂ ಸೇರಿ ೧೦೦ ಆಯಿತು. (ಬೃಹಸ್ಪತಿ) (ಮಂಗಲ, ಶುಕ್ರ, ಶನೈಶ್ಚರ) ೧। (ಮಂಗಲ, ಶುಕ್ರ, ಶನೈಶ್ಚರ) (ಬೃಹಸ್ಪತಿ) ೨। ಬೃಹಸ್ಪತಿ) (ಬುಧ, ಶುಕ್ರ, ಶನೈಶ್ಚರ) ೩। (ಬುಧ) (ಶುಕ್ರ, ಶನೈಶ್ಚರ, ಬೃಹಸ್ಪತಿ) ೪। (ಶುಕ್ರ, ಮಂಗಲ, ಬುಧ) (ಬೃಹಸ್ಪತಿ) ೫। (ಮಂಗಲ, ಬುಧ, ಬೃಹಸ್ಪತಿ) (ಶುಕ್ರ) ೬। (ಶುಕ್ರ) (ಮಂಗಲ, ಬುಧ, ಶನೈಶ್ಚರ) ೭। (ಮಂಗಲ, ಬುಧ, ಶನೈಶ್ಚರ) (ಶುಕ್ರ) ೮। (ಶುಕ್ರ) (ಮಂಗಲ, ಬೃಹಸ್ಪತಿ, ಶನೈಶ್ಚರ) ೯। (ಮಂಗಲ, ಬೃಹಸ್ಪತಿ, ಶನೈಶ್ಚರ) (ಶುಕ್ರ) ೧೦। (ಶುಕ್ರ) (ಬುಧ, ಬೃಹಸ್ಪತಿ, ಶನೈಶ್ಚರ) ೧೧। (ಬುಧ, ಬೃಹಸ್ಪತಿ, ಶುಕ್ರ) (ಶನೈಶ್ಚರ) ೧೨। (ಶನಿ) (ಮಂಗಲ, ಬುಧ, ಬೃಹಸ್ಪತಿ) ೧೩। (ಮಂಗಲ, ಬುಧ, ಬೃಹಸ್ಪತಿ) (ಶನಿ) ೧೪। (ಶನಿ) ಮಂಗಲ, ಬುಧ, ಶುಕ್ರ) ೧೫। (ಮಂಗಲ, ಬುಧ, ಶುಕ್ರ) (ಶನಿ) ೧೬। (ಶನೈಶ್ಚರ) (ಮಂಗಲ, ಬೃಹಸ್ಪತಿ, ಶುಕ್ರ) ೧೭, (ಮಂಗಲ, ಬುಧ, ಶುಕ್ರ) (ಶನೈಶ್ಚರ) ೧೮। (ಶನೈಶ್ಚರ) (ಬುಧ, ಬೃಹಸ್ಪತಿ, ಶುಕ್ರ) ೧೯॥ (ಬುಧ, ಬೃಹಸ್ಪತಿ, ಶುಕ್ರ) (ಶನೈಶ್ಚರ) ೨೦॥ ಇವೆಲ್ಲವೂ ಸೇರಿ ೧೨೦ ಆಯಿತು, ಇನ್ನು ದ್ವಿತೀಯದಲ್ಲಿ ೧ ಗ್ರಹ, ದ್ವಾದಶದಲ್ಲಿ ೪ ಗ್ರಹಗಳು, ದ್ವಿತೀಯದಲ್ಲಿ ೪ ಗ್ರಹ, ದ್ವಾದಶದಲ್ಲಿ ೧ ಗ್ರಹ ಈ ಪ್ರಕಾರವಾಗಿ-

(ಮಂಗಲ) (ಬುಧ, ಬೃಹಸ್ಪತಿ, ಶುಕ್ರ, ಶನೈಶ್ಚರ) ೧। (ಬುಧ, ಬೃಹಸ್ಪತಿ, ಶುಕ್ರ, ಶನೈಶ್ಚರ) (ಮಂಗಲ) ೨। (ಬುಧ) (ಮಂಗಲ, ಬೃಹಸ್ಪತಿ, ಶುಕ್ರ, ಶನೈಶ್ಚರ) ೩। (ಮಂಗಲ) (ಬೃಹಸ್ಪತಿ, ಶುಕ್ರ, ಶನೈಶ್ಚರ ಬುಧ) ೪। (ಬೃಹಸ್ಪತಿ) (ಮಂಗಲ, ಬುಧ, ಶುಕ್ರ, ಶನೈಶ್ಚರ) ೫। (ಮಂಗಲ, ಬುಧ, (ಶುಕ್ರ, ಶನೈಶ್ಚರ) (ಬೃಹಸ್ಪತಿ) ೬। (ಶುಕ್ರ) (ಮಂಗಲ, ಬುಧ, ಬೃಹಸ್ಪತಿ, ಶನೈಶ್ಚರ) ೭। (ಮಂಗಲ) (ಬುಧ, ಬೃಹಸ್ಪತಿ, ಶನೈಶ್ಚರ, ಶುಕ್ರ) ೮। (ಶನೈಶ್ಚರ) (ಮಂಗಲ, ಬುಧ, ಬೃಹಸ್ಪತಿ, ಶುಕ್ರ) ೯। (ಮಂಗಲ, ಬುಧ, ಬೃಹಸ್ಪತಿ, ಶುಕ್ರ) (ಶನೈಶ್ಚರ) ೧೦॥ ಇವೆಲ್ಲವು ಸೇರಿ ೧೩೦ ಆಯಿತು. ಇನ್ನು ಮೇಲೆ ೨ ಗ್ರಹ ದ್ವಾದಶದಲ್ಲಿ, ೨ ಗ್ರಹ ದ್ವಿತೀಯದಲ್ಲಿ ಈ ಪ್ರಕಾರವಾಗಿ- (ಮಂಗಲ, ಬುಧ) (ಬೃಹಸ್ಪತಿ, ಶುಕ್ರ) ೧। (ಬೃಹಸ್ಪತಿ, ಶುಕ್ರ) (ಮಂಗಲ, ಬುಧ) ೨। (ಮಂಗಲ) (ಬುಧ) (ಬೃಹಸ್ಪತಿ, ಶನೈಶ್ಚರ) ೩। (ಬೃಹಸ್ಪತಿ, ಶನೈಶ್ಚರ) (ಮಂಗಲ, ಬುಧ) ೪। (ಮಂಗಲ, ಬುಧ) (ಶುಕ್ರ, ಶನೈಶ್ಚರ) ೫। (ಶುಕ್ರ, ಶನೈಶ್ಚರ) (ಮಂಗಲ,

ಬುಧ) ೬। (ಮಂಗಲ, ಬೃಹಸ್ಪತಿ) (ಶುಕ್ರ, ಬುಧ) ೭। (ಶುಕ್ರ, ಬುಧ) (ಮಂಗಲ, ಬೃಹಸ್ಪತಿ) ೮। (ಮಂಗಲ, ಬೃಹಸ್ಪತಿ) (ಬುಧ, ಶನೈಶ್ಚರ) ೯। (ಬುಧ, ಶನಿ) (ಮಂಗಲ, ಬೃಹಸ್ಪತಿ) ೧೦। (ಮಂಗಲ, ಬೃಹಸ್ಪತಿ) (ಶುಕ್ರ, ಶನೈಶ್ಚರ) ೧೧। (ಶುಕ್ರ, ಶನೈಶ್ಚರ) (ಮಂಗಲ, ಬೃಹಸ್ಪತಿ) ೧೨। (ಮಂಗಲ, ಶುಕ್ರ) (ಬುಧ, ಬೃಹಸ್ಪತಿ) ೧೩। (ಬುಧ, ಬೃಹಸ್ಪತಿ) (ಮಂಗಲ, ಶುಕ್ರ) ೧೪। (ಮಂಗಲ, ಶುಕ್ರ) (ಬುಧ, ಶನೈಶ್ಚರ) ೧೫। (ಬುಧ, ಶನೈಶ್ಚರ) (ಮಂಗಲ, ಶುಕ್ರ) ೧೬। (ಮಂಗಲ, ಶುಕ್ರ) (ಬೃಹಸ್ಪತಿ, ಶನೈಶ್ಚರ) ೧೭। (ಬೃಹಸ್ಪತಿ, ಶನೈಶ್ಚರ) (ಮಂಗಲ, ಶುಕ್ರ) ೧೮। (ಬುಧ, ಬೃಹಸ್ಪತಿ) (ಮಂಗಲ, ಶನಿ) ೧೯। (ಮಂಗಲ, ಶನಿ) (ಬುಧ, ಬೃಹಸ್ಪತಿ) ೨೦।। ಇವೆಲ್ಲವೂ ೧೫೦ ಆಯಿತು.

(ಮಂಗಲ, ಶನೈಶ್ಚರ) (ಬುಧ, ಶುಕ್ರ) ೧। (ಬುಧ, ಶುಕ್ರ) (ಮಂಗಲ, ಶನೈಶ್ಚರ) ೨। ಮಂಗಲ, ಶನೈಶ್ಚರ) (ಬೃಹಸ್ಪತಿ, ಶುಕ್ರ) ೩। (ಬೃಹಸ್ಪತಿ, ಶುಕ್ರ) (ಮಂಗಲ, ಶನೈಶ್ಚರ) ೪। (ಬುಧ, ಬೃಹಸ್ಪತಿ) (ಶುಕ್ರ, ಶನೈಶ್ಚರ) ೫। (ಶುಕ್ರ, ಶನೈಶ್ಚರ) (ಬುಧ, ಬೃಹಸ್ಪತಿ) ೬। (ಬುಧ, ಶುಕ್ರ) (ಬೃಹಸ್ಪತಿ, ಶನೈಶ್ಚರ) ೭। (ಬೃಹಸ್ಪತಿ, ಶನೈಶ್ಚರ) (ಬುಧ, ಶುಕ್ರ) ೮। (ಬೃಹಸ್ಪತಿ,ಶುಕ್ರ) ೧೦। ಇವೆಲ್ಲವೂ ೧೬೦ ಆಯಿತು. ಇನ್ನು ೨ ಗ್ರಹ ದ್ವಿತೀಯದಲ್ಲಿ ೩ ಗ್ರಹ ದ್ವಾದಶದಲ್ಲಿ ೩ ಗ್ರಹ ದ್ವಿತೀಯದಲ್ಲಿ, ೨ ಗ್ರಹ ದ್ವಾದಶದಲ್ಲಿ (ಮಂಗಳ, ಬುಧ) (ಬೃಹಸ್ಪತಿ, ಶುಕ್ರ, ಶನೈಶ್ಚರ) ೧। (ಬೃಹಸ್ಪತಿ, ಶುಕ್ರ, ಶನೈಶ್ಚರ) (ಮಂಗಲ, ಬುಧ) ೨। (ಮಂಗಲ, ಬೃಹಸ್ಪತಿ) (ಬುಧ, ಶುಕ್ರ, ಶನೈಶ್ಚರ) ೩। (ಬುಧ, ಶುಕ್ರ ಶನೈಶ್ಚರ) (ಮಂಗಲ, ಬೃಹಸ್ಪತಿ) ೪। (ಮಂಗಲ, ಶುಕ್ರ) (ಬುಧ, ಬೃಹಸ್ಪತಿ ಶನೈಶ್ಚರ) ೫। (ಬುಧ, ಬೃಹಸ್ಪತಿ, ಶನೈಶ್ಚರ) (ಮಂಗಲ, ಶುಕ್ರ) ೬। (ಮಂಗಲ, ಶನೈಶ್ಚರ) (ಬುಧ, ಬೃಹಸ್ಪತಿ, ಶುಕ್ರ) ೭। (ಬುಧ, ಬೃಹಸ್ಪತಿ, ಶುಕ್ರ) (ಮಂಗಲ, ಶನೈಶ್ಚರ) ೮। (ಬುಧ, ಬೃಹಸ್ಪತಿ) (ಮಂಗಲ, ಶುಕ್ರ ಶನೈಶ್ಚರ) ೯। (ಮಂಗಲ, ಶುಕ್ರ, ಶನೈಶ್ಚರ) (ಬುಧ, ಬೃಹಸ್ಪತಿ) ೧೦। ಇವೆಲ್ಲವೂ ಸೇರಿ ೧೭೦ ಆಯಿತು (ಬುಧ, ಶುಕ್ರ) (ಮಂಗಲ, ಬೃಹಸ್ಪತಿ, ಶನೈಶ್ಚರ) ೧। (ಮಂಗಲ, ಬೃಹಸ್ಪತಿ, ಶನೈಶ್ಚರ) (ಬುಧ, ಶುಕ್ರ) ೨। (ಬುಧ, ಶನೈಶ್ಚರ) (ಮಂಗಲ, ಬೃಹಸ್ಪತಿ, ಶುಕ್ರ) ೩। (ಮಂಗಲ, ಬೃಹಸ್ಪತಿ, ಶುಕ್ರ) (ಬುಧ, ಶನೈಶ್ಚರ) ೪। (ಬೃಹಸ್ಪತಿ, ಶುಕ್ರ) (ಮಂಗಲ, ಬುಧ, ಶನೈಶ್ಚರ) ೫। (ಮಂಗಲ, ಬುದ, ಶನೈಶ್ಚರ) (ಬೃಹಸ್ಪತಿ, ಶುಕ್ರ) ೬। (ಬೃಹಸ್ಪತಿ, ಶನೈಶ್ಚರ) (ಮಂಗಲ, ಬುಧ, ಶುಕ್ರ) ೭। (ಮಂಗಲ, ಬುಧ, ಶುಕ್ರ) (ಬೃಹಸ್ಪತಿ, ಶನೈಶ್ಚರ) ೮। (ಶುಕ್ರ, ಶನೈಶ್ಚರ) (ಮಂಗಲ, ಬುಧ, ಬೃಹಸ್ಪತಿ) ೯।

(ಮಂಗಲ, ಬುಧ, ಬೃಹಸ್ಪತಿ) (ಶುಕ್ರ, ಶನೈಶ್ಚರ) ೧೦। ಇವೆಲ್ಲವೂ ಸೇರಿ ೧೮೦ ಪ್ರಕಾರವಾಗಿ ಧುರಧುರಾ ಯೋಗಗಳ ಭೇದಗಳು ಆಗುತ್ತವೆ.

## ಚಾಂದ್ರಯೋಗ ಪ್ರಸ್ತಾರ ಚಕ್ರಂ
## ಧುರಧುರಾ ಯೋಗಭೇದ

| ಸಂ॥ | ದ್ವಿತೀಯದಲ್ಲಿ | ದ್ವಾದಶದಲ್ಲಿ | ಯೋಗ ಸಂ॥ |
|---|---|---|---|
| ೧ | ೧ ಗ್ರಹ | ೧ ಗ್ರಹ | ೨೦ |
| ೨ | ೨ ಗ್ರಹ | ೧ ಗ್ರಹ | ೩೦ |
| ೩ | ೧ ಗ್ರಹ | ೨ ಗ್ರಹ | ೩೦ |
| ೪ | ೩ ಗ್ರಹ | ೧ ಗ್ರಹ | ೨೦ |
| ೫ | ೧ ಗ್ರಹ | ೩ ಗ್ರಹ | ೨೦ |
| ೬ | ೪ ಗ್ರಹ | ೧ ಗ್ರಹ | ೫ |
| ೭ | ೧ ಗ್ರಹ | ೪ ಗ್ರಹ | ೫ |
| ೮ | ೨ ಗ್ರಹ | ೨ ಗ್ರಹ | ೩೦ |
| ೯ | ೩ ಗ್ರಹ | ೨ ಗ್ರಹ | ೧೦ |
| ೧೦ | ೨ ಗ್ರಹ | ೩ ಗ್ರಹ | ೧೦ |
| | | ಯೋಗ ಸಂ॥ | ೧೮೦ |

## ಸುನಫಾನಫಾಯೋಗ ಫಲಂ

ಮೂಲ॥ ಸ್ವಯಂಮಧಿಗತವಿತ್ತಃ ಪಾರ್ಥಿವಸ್ತ ತ್ಸಮೋವಾಭವತಿಹಿ
ಸುನಫಾಯಾಂಧೀ ಧನಃಖ್ಯಾತಿಮಾಂಶ್ಚ । ಪ್ರಭುರಗದ
ಶರೀರಶ್ಶೀಲವಾನ್ಪ್ರಾ ್ಯತ ಕೀರ್ತಿರ್ವಿಷಯ ಸುಖ ಸುವೇಷೋ
ನಿರ್ವೃತಶ್ಚಾನ ಫಾಯಾಮ್ ॥೫॥

ಅವತಾರಿಕೆ॥ ಅನಫಾಸುನಫಾ ಯೋಗದಲ್ಲಿ ಹುಟ್ಟಿದವನ ಸ್ವರೂಪವು ಮತ್ತು ಫಲವು ಹೇಳಲ್ಪಡುತ್ತೆ.

ಟೀಕು॥ ಸುನಫಾಯಂ-ಸುನಫಾಯೋಗದಲ್ಲಿಹುಟ್ಟಿದ ಪುರುಷನು, ಸ್ವಯಮಧಿ ಗತವಿತ್ತಃ-ತನ್ನ ಬಾಹುಬಲದಿಂದ ಸಂಪಾದಿಸಿದ ಧನವುಳ್ಳವನು, ಪಾರ್ಥಿವಃ-ದೊರೆಯಾಗುವನು, (ಅಥವಾ ಹಾಗಾಗದಿದ್ದರೆ) ತತ್ಸಮಃ-ರಾಜತುಲ್ಯನಾದರೂ

ಆಗುವನು. ಧೀಧನಖ್ಯಾತಿಮಾಂಶ್ಚ-ಬುದ್ಧಿ ಧನಕೀರ್ತಿವಂತನು, ಭವತಿ- ಆಗುವನು, ಈ ವಿಷಯಕ್ಕೆ ಜಾ. ಭ ॥ಶ್ಲೋಕ॥ ನಿಜಭುಜಾರ್ಜಿತ ಮಾನಸಮುನ್ನತೋ ವಿಶದಕೀರ್ತಿ ಯತೋಮತಿಮಾನ್ಸುಖೀ ॥ ನನುನರಃ ಸುನಫಾಪ್ರಭವೋಭವೇನ್ನರಪತೇಃ ಸಚಿವಃ ಸುಕೃತೀಕೃತೀ ॥೩೪॥

## ಅನಫಾ ಯೋಗಫಲಂ

ಅನಫಾಯಾಂ-ಅನಫಾಯೋಗದಲ್ಲಿ ಹುಟ್ಟಿದವನು, ಪ್ರಭುಃ-ಅಪ್ರತಿಹತವಾದ ಆಜ್ಞೆ ಮಾಡಲುಳ್ಳ ಪ್ರಭುವಾಗುವನು. ಅಗದಶರೀರಃ-ರೋಗರಹಿತವಾದ ಶರೀರವುಳ್ಳವನು, ಶೀಲವಾನ್-ಶಾಂತಶೀಲಸ್ವಭಾವವುಳ್ಳವನು, ಖ್ಯಾತಕೀರ್ತಿಃ- ಪ್ರಸಿದ್ಧವಾದ ಕೀರ್ತಿಯುಳ್ಳವನು, ವಿಷಯಸುಖ ಸುವೇಷಃ-ವಿಷಯಸುಖ-ಶಬ್ದ ಸ್ಪರ್ಶಾದಿ ವಿಷಯಸುಖಗಳುಳ್ಳವನು, ಸುವೇಷಃ-ಅನುಲೇಪನ ಮಾಲ್ಯಾಭರಣ ಭೂಷಣಾದ್ಯಲಂಕಾರ ಉಳ್ಳವನು, ನಿರವೃತಃ-ಮನೋ ದುಃಖಗಳಿಲ್ಲದವನು, (ಭವತಿ-ಆಗುವನು), ಈ ವಿಷಯಕ್ಕೆ ॥ಶ್ಲೋಕ॥ ಉದಾರಪೂರ್ತಿರ್ಗುಣಕೀರ್ತಿ ಶಾಲೀಕಂದರ್ಪಕೇಳಿಃ ಶುಭವಾಗ್ವಿಲಾಸಃ ॥ ಸದ್ವೃತ್ತಯುಕ್ತ ಸತತಂ ವಿನೀತಃ ಪ್ರಭುರ್ನರಸ್ಯಾದನಫಾಭಿಧಾನೇ ॥೩೫॥ ಕಿಂಚ ॥ ಜಾತಕಚಂದ್ರಿಕಾಯಾಂ ॥ಜಯದೇವಃ ॥ ಅನಫಾಯಾಮಗದಃ ಸುಶೀಲವಾನ್ವಿಷಯಿಾ ಸೌಖ್ಯಕರಃ ಸುಕೀರ್ತಿಮಾನ್ । ಸುನಫಾಯಾಂ ಸ್ವಕೃತಾರ್ಥ ಸಂಜಯಃ ಪೃಥಿವೀಪಾಲವದೇವ ಕರ್ಮಸು ॥೩೬॥ ॥ಪರಾಶರಃ॥ಶ್ಲೋಕ॥ ಭೂಮಿಪತೇಶ್ಚಸಚಿವಃ ಸುಕೃತೀಕೃತಿಚನೂನಂ ಭವೇನ್ನಿಜಭುಜಾರ್ಜಿತ ವಿತ್ತಯುಕ್ತಃ। ಖ್ಯಾತ ಸದಾಖಿಲಜನೇಷು ವಿಸಾಲಕೀರ್ತ್ಯಾ ಬುಧ್ಯಾಧಿ ಕಶ್ಚಮನುಜಃ ಸುನಫಾಭಿಧಾನೇ ॥೩೭॥ ಪ್ರಭುರ್ವಿನೀತಃ ಶುಭವಾಗ್ವಿಲಾಸಃ ಸಚ್ಛೀಲಶಾಲೀ ಗುಣಪೂರ್ತಿಯುಕ್ತ । ಉದಾರಕೀರ್ತಿಃ ಸ್ಮರತುಷ್ಟಚಿತ್ತೋನಿತ್ಯಂ ನರಃಸ್ಯಾದನಫಾಭಿಧಾನೇ ॥೩೮॥ ಈ ಪ್ರಕಾರ ಈ ಯೋಗಗಳಿಗೆ ಫಲವನ್ನು ಹೇಳಿರುತ್ತಾರೆ.

## ಧುರಧುರಾ ಯೋಗಫಲಂ

ಮೂಲ॥ ಉತ್ಪನ್ನಭೋಗಸುಖ ಭುಗ್ಧನವಾಹನಾಢ್ಯ ಸ್ತ್ಯಾಗಾನ್ವಿತೋಧುರಧುರಾ ಪ್ರಭವಸ್ಸುಭೃತ್ಯಃ । ಕೇಮದ್ರುಮೇಮಲಿನದುಃಖಿತ ನೀಚ ನಿಸ್ವಾ ಃಪ್ರೇಷ್ಯಾಃ ಖಲಾಶ್ಚನೃಪತೇರಪಿವಂಶಜಾತಾಃ ॥೬॥

ಅವತಾರಿಕೆ॥ ಈ ಶ್ಲೋಕದಿಂದ ಧುರಧುರಾಯೋಗ ಫಲವೂ ಕೇಮದ್ರುಮಯೋಗ ಫಲವೂ ಸಹ ಹೇಳಲ್ಪಡುತ್ತೆ.

ಟೀಕು॥ ಧುರಧುರಾಪ್ರಭಾವಃ-ಧುರಧುರಾ ಯೋಗದಲ್ಲಿ ಜನ್ಮಿಸಿದವನು, ಉತ್ಪನ್ನಭೋಗ ಸುಖಭುಕ್-ಲೋಕದಲ್ಲಿ ಸಕಲವಿಧ ಸುಖಭೋಗಗಳನ್ನೂ ಉತ್ಪತ್ತಿಮಾಡಿ ಅನುಭವಿಸುವವನು, ಧನವಾಹನಾಢ್ಯಃ-ಧನವಾಹನದಿಂದ ಸಂಪೂರ್ಣವಾದವನಾಗುವನು, ತ್ಯಾಗಾನ್ವಿತಃ-ವಿತರಣೆಯಿಂದ ದಾನಮಾಡುವನು, ಸುಭೃತ್ಯಃ-ಆಜ್ಞಾ ಪರಿಪಾಲನೆ ಮಾಡುವಂಥಾ ಭೃತ್ಯವರ್ಗವುಳ್ಳವನು, ಈ ಮೇಲೆ ಹೇಳಿ ಫಲವನ್ನನುಭವಿಸುವವನು. ಈ ವಿಷಯದಲ್ಲಿ ಪರಾಶರಃ ॥ಶ್ಲೋಕ॥ ಸದ್ವಿತ್ತಸದ್ವಾರಣವಾಹಧಾತ್ರೀ ಸೌಖ್ಯಾಭಿಯುಕ್ತಃ ಸತತಂಹತಾರಿಃ । ಕಾಂತಾಸುನೇತ್ರಾಂಚಲಲಾಲಸಃ ಸ್ಯಾದ್ಯೋಗೇಸದಾಧೌರಧುರೇಮನುಷ್ಯಃ ॥೩೯॥ತಾ॥ ಪರಾಶರರು ಈ ಯೋಗ ಫಲ ಹೇಳಿರುವುದೇನೆಂದರೆ-ಸದ್ವಿತ್ತ-ಉತ್ತಮವಾದ ಗಜವಾಹನಾದಿಗಳ ಸೌಖ್ಯದಿಂದ ಕೂಡಿದವನು, ಯಾವಾಗಲೂ ಜೈಸಲ್ಪಟ್ಟ ಶತ್ರುಗಳುಳ್ಳವನು, ಸ್ತ್ರೀನೇತ್ರ ಕಟಾಕ್ಷದ ಕಾಂತಿಯುಳ್ಳವನು, ಜಾತಕಾಭರಣೇ ॥ಶ್ಲೋಕ॥ ಧುಂಡಿರಾಜಃ ॥ ದ್ರವಿಣವಾಹನವಾಹವ ಸುಂದರಾ ಸುಖಯುತಂ ಸತತಂಕುರುತೇನೃಪಂ ಧುರಧುರಾತಿತರಾಂ ಜಿತವೈರಿಣಂ ಸುನಯನಾನಯನಾಂಚಲಲಾಲಸಮಂ ॥೪೦॥ ಧುರಧುರಾ ಯೋಗಫಲವನ್ನು ಪರಾಶರರ ಮತಕ್ಕನುಸಾರವಾಗಿ ಹೇಳಿರುವರು.

## ಕೇಮದ್ರುಮಯೋಗ ಫಲಂ

ಕೇಮದ್ರುಮೇ-ಕೇಮದ್ರುಮ ಯೋಗದಲ್ಲಿ ಜಾತಾಃ-ಹುಟ್ಟಿದವರು, ನೃಪತೇಃ ರಾಜನ, ವಂಶಜಾತಾಅಪಿ-ಕುಲದಲ್ಲಿ ಹುಟ್ಟಿದವರಾದರೂ, (ರಾಜವಂಶಜರಾದರೂ) *ಮಲಿನ-ಮಲಿನರಾಗಿ, ಸ್ನಾನಾದಿಗಳನ್ನು ಮಾಡದೆ ಕೊಳಕರಾಗಿಯೂ, ಅಸಹ್ಯವಾದವರಾಗಿಯೂ, ದುಃಖಿತ-ಶರೀರ ದುಃಖಗಳನ್ನನುಭವಿಸತಕ್ಕವರಾಗಿಯೂ, ನೀಚ-ಅಧಮಕೃತ್ಯಗಳನ್ನು ಮಾಡತಕ್ಕವರಾಗಿಯೂ, ನಿಸ್ಸ್ವಾಃ-ದರಿದ್ರರಾಗಿಯೂ, ಪ್ರೇಷ್ಯಾಃ-ಪರಪ್ರೇಷ್ಯದಿಂದ ಕಾಲಹರಣ ಮಾಡತಕ್ಕವರಾಗಿಯೂ, ಖಲಾಶ್ಚ-ದುಷ್ಟ ನಡತೆಯುಳ್ಳವರಾಗಿಯೂ ಆಗುವರು. ಅಂದರೆ ರಾಜವಂಶೋತ್ಪನ್ನರೇ ಈ ಪ್ರಕಾರ ಆಗುವಲ್ಲಿ ಮಿಕ್ಕವರು ಅತ್ಯಂತ ಕಷ್ಟಜೀವಿಗಳಾಗುವರೆಂದು ತಾತ್ಪರ್ಯವು. ಈ ವಿಷಯಕ್ಕೆ ಪರಾಶರರ ಸಂಹಿತೆಯಲ್ಲಿ ॥ಶ್ಲೋಕ॥ ಸದ್ವಿತ್ತಸೂನು ವನಿತಾತ್ಮಜನೈರ್ವಿಹೀನಃ ಪ್ರೇಷ್ಯೋ ಭವೇತ್ತುಮನುಜೋಹಿ ವಿದೇಶವಾಸೀ । ನಿತ್ಯಂ ವಿರುದ್ಧಧಿಷಣೋ ಮಲಿನಃ ಕುವೇಷಃ ಕೇಮದ್ರುಮೇಚ ಮನುಜಾಧಿಪತೇಸ್ಸುತೋಪಿ ॥೪೧॥ ॥ತಾ॥ ಕೇಮದ್ರುಮಯೋಗದಲ್ಲಿಹುಟ್ಟಿದರಾಜಕುಮಾರನಾದರೂ ಸದ್ವಿತ್ತ,

* ಮಲಿನ-ಮನಸ್ಸು ನಿರ್ಮಲವಿಲ್ಲದೆ ಕಲ್ಮಷವಾದ ಬುದ್ಧಿಯುಳ್ಳವನು.

ಮಕ್ಕಳು, ಸ್ತ್ರೀ, ಆತ್ಮಜನ ಇವರುಗಳಿಲ್ಲದವನಾಗಿಯೂ, ಪ್ರೇಷ್ಯನಾಗಿಯೂ, ಪರದೇಶದಲ್ಲಿ ವಾಸಮಾಡತಕ್ಕವನಾಗಿಯೂ, ನಿತ್ಯವೂ ರಂಧ್ರಾನ್ವೇಷಣಾದಿ ದುರ್ಬುದ್ಧಿಯುಳ್ಳವನಾಗಿಯೂ, ಮಲಿನವಾಗಿಯೂ, ದುರ್ವೇಷಧಾರಿಯಾಗಿಯೂ ಆಗುವನು ಮತ್ತು ಜಯದೇವ ಕೃತಜಾತಕ ಚಂದ್ರಿಕಾಯಾಂ ||ಶ್ಲೋಕ|| ಧುರಧುರಾಕೇಮದ್ರುಮ ಯೋಗಫಲಂ|| ಸ್ವೇಷ್ಟಾರ್ಥಭಾಕ್ಸುಖವಾಹನ ಧಾನ್ಯಮಂಶ್ಚ ಸದ್ಭೃತ್ಯವಾ ಧುರಧುರಾಯದಿಜನ್ಮಕಾಲೇ । ಕೇಮದ್ರುಮೇತಿ ಮಲಿನೋವಿಸುಖೀಚನೀಚಃ ಪ್ರಷ್ಯಃಖಲಶ್ಚವಿಧನೋ ನೃಪಜೋಪಿಜಾತಃ ||೪೨||ಜಾ.ಭ|| ನಿಶಾಕರಾಜ್ಜನ್ಮ ನಿಖೇಚರೇಂದ್ರಾ ಧನವ್ಯಯಸ್ಥಾನಗತಾನಚೇತ್ಸ್ಯುಃ । ವದಂತಿಕೇಮದ್ರುಮನಾಮ ಯೋಗಂ ಲಕ್ಷ್ಮೀವಿಯೋಗಂ ಕುರುತೇಸನೂನಂ ||೪೩|| ವಿರುದ್ಧವೃತ್ತಿರ್ಮಲಿನಃ ಕುವೇಷಃ ಪ್ರೇಷ್ಯೋಮನುಷ್ಯೋಹಿ ವಿದೇಶವಾಸೀ । ಕಾಂತಾಸುಹೃತ್ಸೂನುಧನೈರ್ವಿಹೀನಃ ಕೇಮದ್ರುಮೇ ಭೂಮಿಪತೇಃಸುತೋಪಿ ||೪೪||

## ಪ್ರತ್ಯೇಕ ಗ್ರಹವಶಾತ್ ಸುನಫಾದಿಯೋಗಫಲಂ

ಮೂಲ|| ಉತ್ಸಾಹಶೌರ್ಯ ಧನವಾಹನವಾನ್ಮಹೀಜಃ । ಸೌಮ್ಯಃಪಟುಃ ಸುವಚನೋನಿಪುಣಾಃ ಕಲಾಸು || ಜೀವೋರ್ಥಧರ್ಮಸುಖಭುಙ್ನೃಪ ಪೂಜಿತಶ್ಚಕಾಮೀಭೃಗೇರ್ಬಹುಧನೋ ವಿಷಯೋಪಭೋಕ್ತಾ ||೭||

ಆ ಕುಜಾದಿ ಪಂಚಗ್ರಹಗಳಿಂದ ಪ್ರತ್ಯೇಕವಾಗಿ ಸುನಫಾ ಅನಫಾ ಧುರಧುರಾಯೋಗ ಫಲವು ಹೇಳಲ್ಪಟ್ಟು, ಈ ಮೇಲೆ ಹೇಳಿರುವ ಈ ಯೋಗಫಲಗಳು ಸಾಮಾನ್ಯವಾಗಿ ಹೇಳಿರುವುದರಿಂದ ಆಯಾಯ ಗ್ರಹಗಳ ಮೂಲವಾಗಿ ಉತ್ಪನ್ನವಾಗುವುದನ್ನು ತಿಳಿಯಪಡಿಸುತ್ತೆ.

ಟೀಕು|| ಮಹೀಜಃ-ಈ ಮೇಲೆ ವಕ್ಷ್ಯಮಾಣ ಶ್ಲೋಕಗಳಲ್ಲಿ ಹೇಳಲ್ಪಟ್ಟ ಮೂರು ಯೋಗಗಳಲ್ಲಿ ಯಾವ ಯೋಗದಲ್ಲಿಯೇ ಆಗಲಿ, ಯೋಗಕಾರಕನು ಅಂಗಾರಕನೇ ಆಗಿದ್ದರೆ, ಉತ್ಸಾಹಶೌರ್ಯ ಧನಸಾಹಸರ್ವಾ-ಉತ್ಸಾಹ, ಶೌರ್ಯ, ಧನ, ಸಾಹಸವುಳ್ಳವನಾಗುವನು, ಸೌಮ್ಯಃ-ಈ ಮೇಲೆ ಹೇಳಲ್ಪಟ್ಟ ಯೋಗಕರ್ತೃ ಬುಧನಾಗಿದ್ದರೆ, ಪಟುಃ-ಚಟುವಟಿಕೆಯುಳ್ಳವನು, ಸುವಚಃ-ಚೆನ್ನಾಗಿ ಮಾತನಾಡುವನು, (ವಾಕ್ಚಾತುರ್ಯ ಉಳ್ಳವನು) ಕಲಾಸು-ಗೀತಾವಾದ್ಯಾದಿ ಚತುಷ್ಷಷ್ಟಿ ವಿದ್ಯೆಯನ್ನು ತಿಳಿದವನು, ನಿಪುಣಃ-ಚೆನ್ನಾಗಿ ಬುದ್ಧಿ ತಿಳಿದವನಾಗುವನು, ಗುರುಃ- ಈ ಯೋಗಕರ್ತೃ ಗುರುವಾಗಿದ್ದರೆ, ಅರ್ಥಧರ್ಮಸುಖಭುಕ್-ದ್ರವ್ಯದಿಂದಲೂ,

ಧರ್ಮಪರಿಪಾಲನದಿಂದಲೂ ಸೌಖ್ಯವನ್ನು ಪಡೆಯುವನು, ನೃಪಪೂಜಿತಶ್ಚ- ರಾಜರಿಂದ ಗೌರವಪಡುವನೂ (ರಾಜಪೂಜಿತನೂ) ಆಗುವನು, ಭೃಗುಃ-ಈ ಯೋಗಕಾರಕನು ಶುಕ್ರನಾಗಿದ್ದರೆ, ಕಾಮೀ-ಸ್ತ್ರೀಲೋಲನು, ಬಹುಧನಃ- ಅನೇಕ ಧನವುಳ್ಳವನು, (ಸ್ವರ್ಣರತ್ನರಜತಾದಿ ಧನವುಳ್ಳವನು) ವಿಷಯೋಪಭೋಕ್ತಾ- ಗಂಧಮಾಲ್ಯಾದಿ ಇಂದ್ರಿಯಸುಖಗಳನ್ನು ಅನುಭವಿಸುವವನೂ ಆಗುವನು, ಈ ವಿಷಯಕ್ಕೆ ||ಶ್ಲೋಕ ||ಜಾ.ಚಂ||ಶಾ||ವಿ|| ಉತ್ಸಾಹೀಸಧನಃ ಪ್ರಚಂಡಮತಿರ್ಮಾ ಸಂದಿಗ್ಧ ಕರ್ಮಾನರಃ| ಶೌರ್ಯೋದಾರ್ಯತೋಯದಾಕ್ಷಿತಿ ಸಂತೋಯೋಗೇ ಪ್ರವೃತ್ತಸ್ಸದಾ || ಸೂಕ್ಷ್ಮಾ ತ್ಸೂಕ್ಷ್ಮ ವಿಚಾರವಿತ್ಪಟುಮತಿರ್ದ್ರವ್ಯಾನ್ವಿತೋಮಾನವಃ | ಸದ್ವಾಕ್ಯಃ ಪ್ರಥಿತೋಯದಾ ಶಶಿಸುತಸ್ತದ್ಯೋಗಕರ್ತಾಭವೇತ್ ||೪೫|| ಜೀವಶ್ಚೇದ್ಬಹುಧಾನ್ಯಧರ್ಮ ಭಾಗ್ಯಬಹು ಸೌಖ್ಯೋನೃಪ ಪೂಜಿತೋಭವೇತ್ | ವಿಷಯಾಸಕ್ತಮನಾರತಿಪ್ರಿಯೋ ಭೃಗುಜಶ್ಚೇದ್ಧನಸಂಚಯಾನ್ವಿತಃ ||೪೬||

**ಮೂ|| ಪರವಿಭವ ಪರಿಚ್ಛದೋಪಭೋಕ್ತಾ ರವಿತನಯೇ ಬಹುಕಾರ್ಯಕೃದ್ಗಣೇಶಃ | ಅಶುಭಕೃದುಡುಪೋಹ್ನಿ ದೃಶ್ಯಮೂರ್ತಿರ್ಗಳಿತನುಶ್ಚ ಶುಭೋನ್ಯಥಾನ್ಯದೂಹ್ಯಂ ||೮||**

ಅವತಾರಿಕೆ|| ಶನಿಯಿಂದ ಅನಫಾದಿ ಯೋಗಜಫಲವೂ ಮತ್ತು ದೃಶ್ಯಾದೃಶ್ಯ ಚಂದ್ರ ಫಲವೂ ಹೇಳಲ್ಪಡುತ್ತೆ.

ಟೀಕು|| ರವಿತನಯೇ-ಸುನಫಾನಫಾ ಧುರಧುರಾದಿಯೋಗ, ಯೋಗಕರ್ತೃ ಶನಿಯಾಗಿದ್ದರೆ, ಪರವಿಭವ ಪರಿಚ್ಛದೋಪಭೋಕ್ತಾ, ಪರರ-ಅನ್ಯರ, ವಿಭವ-ಐಶ್ವರ್ಯವನ್ನು, ಪರಿಚ್ಛದ-ಗೃಹ ವಸ್ತ್ರವಾಹನಾದಿಗಳನ್ನು ಉಪಭೋಕ್ತಾ-ಅನುಭವಿಸುವವನು, ಬಹು ಕಾರ್ಯಕೃತ್-ಅನೇಕ ಕಾರ್ಯಗಳನ್ನು ಮಾಡುವವನು, ಗಣೇಶಃ-ಸಜಾತೀಯವಾದ-ಜನರಲ್ಲಿ ಮುಖ್ಯನಾದವನು ಆಗುತ್ತಾನೆ. ಈ ರೀತಿಯಾಗಿ ಒಂದೊಂದು ಗ್ರಹಕ್ಕೆ ಫಲ ಹೇಳಿರುತ್ತೆ. ಅನೇಕ ಗ್ರಹಗಳು ಸೇರಿದ್ದರೆ ಯಾವ ಯಾವ ಗ್ರಹಗಳಿಂದ ಈ ಯೋಗ ಹುಟ್ಟಿರುತ್ತೋ ಆ ಗ್ರಹಗಳ ಫಲಗಳನ್ನೆಲ್ಲಾ ಬಲಾಬಲ ವಿಚಾರವಾಡಿ ಹೇಳತಕ್ಕದ್ದು. ಈ ವಿಷಯಕ್ಕೆ ||ಶ್ಲೋಕ||ಜಾ.ಚಂ|| ರವಿಜಶ್ಚೇತ್ಪರಭೂತಿ ಭಾಗ್ಯರೋಬಹುಕರ್ಮಾ ಸುಗಣೇಶ್ವರೋ ಭವೇತ್ | ಬಹುಖೇಟಾಯದಿಯೋಗಕಾರಕಃ ಖಲು ತತ್ತತ್ಸರಿ ಮೇಲನಾದ್ವದೇತ್ ||೪೭|| ಈ ಪ್ರಕಾರವಾಗಿ ಎರಡು ಮೂರು ನಾಲ್ಕು ಐದು ಗ್ರಹಗಳು ಈ ಯೋಗಕಾರಕರಾಗಿದ್ದರೆ ಅವೆಲ್ಲವನ್ನು ಮೇಳನಮಾಡಿ ತಿಳಿಯಬೇಕು. ಈ ಯೋಗಕಾರಕ ಗ್ರಹಗಳು ನೀಚ

ಶತ್ರುಕ್ಷೇತ್ರ ನವಾಂಶ ಸ್ಥಿತಿಯಲ್ಲಿದ್ದರೆ ಅವುಗಳನ್ನೆಲ್ಲಾ ಯೋಚಿಸಿ ಫಲ-ಹೇಳತಕ್ಕದ್ದು. ಅಹ್ನಿ-ಹಗಲಿನಲ್ಲಿ ಹುಟ್ಟಿದವನಿಗೆ, ಉಡುಪಃ-ಚಂದ್ರನು, ದೃಶ್ಯಮೂರ್ತಿಃ-ದೃಶ್ಯಚಕ್ರಾರ್ಧ ದಲ್ಲಿದ್ದರೆ, ಅಶುಭಕೃತ್-ದಾರಿದ್ರ್ಯಾದ ಶುಭಫಲವನ್ನು ಕೊಡುವನು. ಗಳಿತತನುಃ-ಅದೃಶ್ಯಾರ್ಧಚಕ್ರದಲ್ಲಿದ್ದರೆ ಹಗಲು ಹುಟ್ಟಿದವನಿಗೆ ಐಶ್ವರ್ಯಾದಿ ಶುಭಫಲವನ್ನು ಕೊಡುವನು. ಅನ್ಯಥಾ ಉಕ್ತಫಲ ವಿಪರೀತವಾಗಿ ಅನ್ಯತ್-ಉಕ್ತಫಲ ವ್ಯತಿರಿಕ್ತಫಲವನ್ನು, ಊಹ್ಯಂ-ಊಹಿಸಬೇಕು. ಅದು ಹೇಗೆಂದರೆ, ರಾತ್ರಿ ಹುಟ್ಟಿದವನಿಗೆ ದೃಶ್ಯಾರ್ಧಚಕ್ರದಲ್ಲಿ ಕಾಣಬರುವ ಚಂದ್ರನು ಶುಭಕರನು. ಅದೃಶ್ಯಾರ್ಧ ಚಕ್ರದಲ್ಲಿನ ಚಂದ್ರನು ಅಶುಭಕರನು. ಹಗಲು ಹುಟ್ಟಿದವರಿಗೆ ಅದೃಶ್ಯಾರ್ಧ ಚಕ್ರದಲ್ಲಿರುವ ಚಂದ್ರನು ಶುಭಕರನು. ದೃಶ್ಯಾರ್ಧ ಚಕ್ರದಲ್ಲಿ ಅಶುಭಕರನು, ಈ ಪ್ರಕಾರ ಫಲವಿವೇಚನೆ ಮಾಡತಕ್ಕದ್ದು.

## ವಸುಮದ್ಯೋಗಃ (ಅತ್ಯಂತ ಧನಯೋಗ)

ಮೂಲ॥ ಲಗ್ನಾದತೀವ ವಸುಮಾನ್ವಸುಮಾಂಚ್ಛಶಾಂಕಾತ್ಸೌಮ್ಯ ಗ್ರಹೈರುಪಚಯೋಪಗತೈಃಸಮಸ್ತೈಃ । ದ್ವಾಭ್ಯಾಂ ಸಮೋಲ್ಪವ ಸುಮಾಂಶ್ಚ ತದೂನತಾಯಾ ಮನ್ಯೇಷ್ವಸತ್ಸ್ವಪಿಫಲೇಷ್ವಿದ ಮತ್ಕಟೇನ ॥೯॥

ಅವತಾರಿಕೆ॥ ವಸುಮದ್ಯೋಗ ಲಕ್ಷಣವೂ ಫಲವೂ ಹೇಳಲ್ಪಡುತ್ತೆ. ಲಗ್ನಕ್ಕಾಗಲಿ, ಚಂದ್ರನಿಗಾಗಲೀ, ಉಪಚಯ ಸ್ಥಾನಗಳಲ್ಲಿದ್ದ ಶುಭಗ್ರಹಗಳ ಫಲವು ಹೇಳಲ್ಪಡುತ್ತೆ. ಅದು ಹೇಗೆಂದರೆ :-

ಟೀಕು॥ ಲಗ್ನಾತ್-ಲಗ್ನಕ್ಕೆ, ಉಪಚಯೋಪಗತೈಃ-ಉಪಚಯ ಸ್ಥಾನವನ್ನು ಹೊಂದಿರುವ, ಸಮಸ್ತೈಃ-ಸಕಲವಾದ, ಸೌಮ್ಯಗ್ರಹೈಃ-ಶುಭಗ್ರಹಗಳಿಂದ (ಬುಧ, ಗುರು, ಶುಕ್ರ) ಅತೀವವಸುರ್ಮಾ-ಹೆಚ್ಚಾದ ಧನವಂತನಾಗುವನು. ಶಶಾಂಕಾತ್-ಚಂದ್ರನಿರುವ ರಾಶಿಗೆ ಉಪಚಯ ಸ್ಥಾನಗಳಲಿರುವ, ಬುಧ, ಗುರು, ಶುಕ್ರರಿಂದ, ವಸುರ್ಮಾ-ಧನವಂತನಾಗುವನು, ದ್ವಾಭ್ಯಾಂ-ಜನ್ಮಲಗ್ನಕ್ಕಾದರೂ, ಚಂದ್ರಲಗ್ನಕ್ಕಾದರೂ ಉಪಚಯ ಸ್ಥಾನಗಳಲ್ಲಿ ಎರಡು ಶುಭಗ್ರಹಗಳಿಂದ, ಸಮಃ-ಸಾಧಾರಣ ಧನವಂತನಾಗುವನು, ಅಂದರೆ ಅಧಿಕ ಧನವಂತನಾಗುವುದಿಲ್ಲ, ತದೂನತಾಯಾಂ-ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ಉಪಚಯಸ್ಥಾನದಲ್ಲಿ ಒಂದು ಶುಭಗ್ರಹವಿದ್ದರೆ, ಅಲ್ಪಸುರ್ಮಾ-ಸ್ವಲ್ಪ ಧನವಂತನಾಗುವನು. ಈ ಪ್ರಕಾರ ಹೇಳಬಹುದಾದ ಉಪಚಯಸ್ಥಾನದಲ್ಲಿ ಒಂದು ಶುಭಗ್ರಹವೂ ಇಲ್ಲದಿದ್ದರೆ ದರಿದ್ರನಾಗುವನು. ಲಗ್ನೋಪಚಯ, ಚಂದ್ರೋಪಚಯ ಈ ಎರಡರಲ್ಲೂ

ಶುಭಗ್ರಹವಿದ್ದರೆ ಅಧಿಕ ಧನವಂತನಾಗುವನು. ಅನ್ಯೇಷು-ಇತರ ಯೋಗಜನಿತವಾದ, ಫಲಂ-ಫಲಗಳು, ಅಸತ್ಸ್ವಪಿ-ಅಶುಭಕರಗಳಾಗಿದ್ದರೂ, ಇದಂ-ಈ ಶ್ಲೋಕದಲ್ಲಿ ಹೇಳಿದ ಶುಭಫಲವು ಉತ್ಕಟೇನ-ಬಾಹುಳ್ಯವಾಗಿ ಆಗುತ್ತದೆ. ಅಂದರೆ ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ಉಪಚಯಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ, ಕೇಮದ್ರುಮಾದಿ ಅಶುಭಯೋಗಗಳಿದ್ದರೂ, ಆ ಫಲಗಳು ಕ್ಷೀಣವಾಗಿ ಈ ಶುಭಫಲಗಳೇ ಅಧಿಕವಾಗುವುದೆಂದು ತಾತ್ಪರ್ಯವು. ವ್ಯಾಖ್ಯಾನಂತರದಲ್ಲಿ "ಅನ್ಯೇಷು ಸತ್ಸುವಿಫಲೇಷ್ವಿದಮುತ್ಕಟೇನ" ಎಂದು ಹೇಳಿ ಅನ್ಯೇಷು ಅನುಪಚಯಸ್ಥಾನ ಗತಗ್ರಹಗಳಿಂದ ಪ್ರಾಪ್ತವಾದಯೋಗಗಳು, ವಿಫಲೇಷುಸತ್ಸುನಿಷ್ಫಲವಾಗುವಾಗ, ಇದಂ-ಈ ಉಪಚಯಸ್ಥಾನಾಂತ ಶುಭಗ್ರಹ ಫಲಗಳು, ಉತ್ಕಟೇನ-ಅಧಿಕವಾಗಿ ಉಂಟಾಗುವುದು. ಅಂದರೆ, ಅನುಪಚಯಸ್ಥಾನಾಸ್ಥ ಗ್ರಹಜನಿತಯೋಗವು ವಿಫಲವಾಗಿ ಉಪಚಯಸ್ಥಾನ ಸ್ಥಿತ ಗ್ರಹಯೋಗ ಫಲವೇ ಅಧಿಕವಾಗಿರುವುದು॥೯॥

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಚಾಂದ್ರಯೋಗಾಖ್ಯ
ತ್ರಯೋದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾ ಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ಚಾಂದ್ರಯೋಗಾಖ್ಯ
ತ್ರಯೋದಶ ಪ್ರಕರಣಂ

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತ ಬೃಹಜ್ಜಾತಕಾಖ್ಯೆ

## ೧೪ನೇ ದ್ವಿಗ್ರಹಾದಿಯೋಗ ಪ್ರಕರಣಂ

ಮೂಲ॥ ತಿಗ್ಮಾಂಶುರ್ಜನಯತ್ಯುಷೇಶ ಸಹಿತೋ ಯಂತ್ರಾಶ್ಮಕಾರಂನರಂ।
ಭೌಮೇನಾಘರತಂ ಬುಧೇನನಿಪುಣಂ ಧೀಕೀರ್ತಿ ಸೌಖ್ಯಾನ್ವಿತಂ ॥
ಕ್ರೂರಂ ವಾಕ್ಪತಿನಾನ್ಯ ಕಾರ್ಯನಿರತಂ ಕ್ರೂರೇಣ ರಂಗಾಯುಧೈ।
ರ್ಲಬ್ದಸ್ವಂ ರವಿಜೇನ ಧಾತು ಕುಶಲಂ ಬಾಂಡಪ್ರಕಾರೇಷುವಾ॥೧॥

ಅವತಾರಿಕೆ॥ ಈ ಗ್ರಂಥಕರ್ತನ ಈ ಪ್ರಕರಣದಲ್ಲಿ ೨ ಗ್ರಹಸಂಯೋಗದಿಂದ ಉಂಟಾದ ಫಲವನ್ನು ಹೇಳುತ್ತಾನೆ.

### ರವಿಚಂದ್ರಯುತಿ ಫಲಂ

ಟೀಕು॥ ತಿಗ್ಮಾಂಶು-ಸೂರ್ಯನು, ಉಷೇಶಸಹಿತಃ-ಚಂದ್ರನ ಸಹಿತವಾಗಿದ್ದರೆ, ಯಂತ್ರಾಶ್ಮಕಾರಂ-ನಾನಾವಿಧ ಯಂತ್ರಕರ್ಮಗಳನ್ನು ಪಾಷಾಣಾದಿ ಕಲ್ಲಿನ ಕೆಲಸ ಮಾಡುವ, ನರಂ-ಪುರುಷನನ್ನು, ಜನಯತಿ-ಹುಟ್ಟಿಸುತ್ತಾನೆ. ಈ ವಿಷಯಕ್ಕೆ ॥ಶ್ಲೋಕ॥ ಜಾತಕಾಭರಣೇ॥ ಪಾಷಾಣಯಂತ್ರಕ್ರಯ ವಿಕ್ರಯೇಷು ಕೂಟ ಕ್ರಿಯಾಯಾಂಚ ವಿಕ್ಷಣಃ ಸ್ಯಾತ್ । ಕಾಮೀ ಪ್ರಕಾಮೀ ಪುರುಷಃ ಸಗರ್ವಃ ಸರ್ವೌಷಧೀಶೇನರವೌಸಮೇತೇ ॥೧॥

### ರವಿಕುಜಯುತಿ ಫಲಂ

ಸೂರ್ಯನು ಅಂಗಾರಕನೊಡನೆ ಕೂಡಿದ ಫಲ-ಭೌಮೇನ-ಅಂಗಾರಕನಿಂದ ಕೂಡಿದ್ದರೆ. ಅಘರತಃ-ಪಾಪಸಕ್ತನಾದವನನ್ನು ಹುಟ್ಟಿಸುವನು, ಈ ವಿಷಯಕ್ಕೆ ಜಾ. ಭ ॥ಶ್ಲೋಕ॥ ಭವೇನ್ನಹೌಜಾಬಲವಾರ್ನ ವಿಮುಢೋಗಾಢೋದ್ದತೋ ಸತ್ಯವಚಾಮನುಷ್ಯಃ । ಸುಸಾಹಸಃ ಶೂರತರೋತಿ ಹಿಂಸೋದ್ರಿವಾಮಣೌ ಕ್ಷೋಣಿ ಸುತಾಭ್ಯುಪೇತೇ ॥೨॥ ಈ ಶ್ಲೋಕದ ತಾತ್ಪರ್ಯವು, ವರಾಹ ಮಿಹಿರಾಚಾರ್ಯರ ಮತಕ್ಕೆ ಹೆಚ್ಚಾಗಿರುವುದು ಕುಜರವಿಗಳು ಸೇರಿದ್ದರೆ, ದೊಡ್ಡ ಪುರುಷಾರ್ಥಿ, ಮೂರ್ಖ, ಉದ್ಧಟ, ಸುಳ್ಳು ಹೇಳುವನು, ಹೆಚ್ಚಾದ ಸಾಹಸಿ, ಅತಿಶಯ ಶೂರನು, ಜೀವಹಿಂಸೆ ಮಾಡುವನು, ಈ ಪ್ರಕಾರ ಗುಣವುಳ್ಳವನು ಪಾಪರತನೆಂಬುವುದಕ್ಕೆ ಸಂದೇಹವಿಲ್ಲ.

## ಸೂರ್ಯಬುಧಯುತಿ ಫಲಂ

ಬುಧೇ-ಬುಧನಿಂದ ಕೂಡಿದ್ದರೆ, ನಿಪುಣಂ-ಕಾರ್ಯದಲ್ಲಿ ಸೂಕ್ಷ್ಮಬುದ್ಧಿಯುಳ್ಳವನು, ಧೀಕೀರ್ತಿಸೌಖ್ಯಾನ್ವಿತಂ-ಬುದ್ಧಿಕೀರ್ತಿ ಸುಖದಿಂದ ಕೂಡಿದವನು. ಈ ವಿಷಯಕ್ಕೆ ।।ಶ್ಲೋಕ।। ಜಾ.ಭ।। ಪ್ರಿಯವಚಾಃ ಸಚಿವೋ ಬಹುಸೇವ ಯಾರ್ಜಿತಧನಶ್ಚ ಕಲಾಕುಶಲೋಭವೇತ್ । ಶ್ರುತಪಟುರ್ಹಿನರೋ ನಲಿನೀಪತೌ ಕುಮುದಿನೀಪತಿಸೂನು ಸಮನ್ವಿತೇ ।।೩।।

## ರವಿಗುರುಯುತಿ ಫಲಂ

ವಾಕ್ಪತಿನಾ-ಸೂರ್ಯನು ಗುರುಸಹಿತನಾದರೆ, ಕ್ರೂರಂ-ವಿಷಯ ಸ್ವಭಾವವುಳ್ಳವನು, ಅನ್ಯಕಾರ್ಯನಿರತಂ-ಇತರ ಕಾರ್ಯಗಳಲ್ಲಿ ಆಸಕ್ತಿಯುಳ್ಳವನು. ಈ ವಿಷಯಕ್ಕೆ ।।ಶ್ಲೋಕ।। ಜಾತಕಾಭರಣೇ।। ಪುರೋಹಿತತ್ವೇ ನಿಪುಣೋನೃಪಾಣಾಂ ಮಂತ್ರೀಚಮಿತ್ರಾಪ್ತಧನಸ್ಸಮೃದ್ಧಃ । ಪರೋಪಕಾರೇ ಚತುರೋದಿನೇಶೇ ವಾಚಾಮಧೀಶೇನಯುತೇನರಸ್ಯಾತ್ ।।೪।।

## ರವಿಶುಕ್ರಯುತಿಫಲಂ

ಶುಕ್ರೇಣ ರವಿ ಶುಕ್ರಸಂಯೋಗವಾಗಿದ್ದರೆ, ರಂಗಾಯುಧೈ-ರಂಗ ಮಲ್ಲಯುದ್ಧ ಮೊದಲಾದ ಕ್ರಿಯೆಗಳಿಂದ (ಕೆಲವರು ನಾಟ್ಯಕ್ರಿಯೆಗಳೆಂದು ಅರ್ಥಮಾಡಿರುವರು) ಆಯುಧೈ-ಖಡ್ಗಶಸ್ತ್ರಾದಿ ಆಯುಧಗಳಿಂದ, ಲಬ್ಧಸ್ವಂ-ಹೊಂದಿದ ರಸವುಳ್ಳವನಾಗುವನು. ಈ ವಿಷಯಕ್ಕೆ ।।ಶ್ಲೋಕ।। ಜಾತಕಾಭರಣೇ ।। ಸಂಗೀತ ವಾಧ್ಯಾಯುಧ ಚಾರುಬುದ್ಧಿರ್ಭವೇನ್ನರೋ ನೇತ್ರಬಲೇನಹೀನಃ । ಕಾಂತಾನಿಮಿತ್ತಾಪ್ತ ಸುಹೃತ್ಸಮಾಜಃ ಸಿತಾನ್ವಿತೇಜನ್ಮನಿಪದ್ಮಿನೀಶೇ ।।೫।।

## ರವಿಶನಿಯುತಿಫಲ

ರವಿಜೇನ-ಸೂರ್ಯನು ಶನಿಯೊಡನೆ ಕೂಡಿದ್ದರೆ, ಧಾತುಕುಶಲಂ-ತ್ರಾಮ ಸುವರ್ಣ ರಜತಾದಿಧಾತು ವಿಕ್ರಯ ಕುಶಲತೊ, ಗೈರಿಕಮಾಕ್ಷಿಕಾದಿಧಾತುಗಳ ಕ್ರಯ ವಿಕ್ರಯಗಳಲ್ಲಿ, ಕುಶಲಂ-ಸಮರ್ಥನಾಗುವನು, ಭಾಂಡಪ್ರಕಾರೇಷು ಸುವರ್ಣರಜತ ತಾಮ್ರಾದಿ ನಾನಾವಿಧ ಧಾತುಮಯವಾದ ಭಾಂಡಗಳ ಕ್ರಯವಿಕ್ರಯಗಳ ಮೂಲವಾಗಿಯೂ, ನಿಘಂಟು ।। ಭಾಂಡಂಪಾತ್ರೇವಣಙ್ಮೂಲ ಜಾತಕಾಭರಣದಲ್ಲಿ ।।ಶ್ಲೋಕ।। ಧಾತುಕ್ರಿಯಾಪಣ್ಯಮತಿರ್ಗುಣಜ್ಞೋಧರ್ಮಪ್ರಿಯಃ ಪುತ್ರಕಳತ್ರಸೌಖ್ಯಃ । ಸದಾಸಮೃದ್ಧೋತಿತರಾಂನರಃ ಸ್ಯಾತ್ಪದ್ಮೋತೇ ಭಾನುಸುತೇನಯುಕ್ತೇ ।।೬।।

## ಚಂದ್ರಕುಜಾದಿ ಷಡ್ಗ್ರಹಯುತಿಫಲಂ

ಮೂಲ॥ ಕೂಟಸ್ತ್ರ್ಯಾಸನಕುಂಭಪಣ್ಯಮಶಿವಂ ಮಾತುಃ ಸವಕ್ರೇ ಶಶೀ ।
ಸಜ್ಞಃಪ್ರಶ್ರಿತವಾಕ್ಯಮರ್ಥನಿಪುಣಂ ಸೌಭಾಗ್ಯಕೀರ್ತ್ಯಾನ್ವಿತಂ ॥
ವಿಕ್ರಾಂತಂ ಕುಲಮುಖ್ಯಮಸ್ಥಿರಮತಿಂ ವಿತ್ತೇಶ್ವರಂಸಾಂಗರೋ ।
ವಸ್ತ್ರಾಣಾಂಸಸಿತಕ್ರಿಯಾದಿಕುಶಲಂಸಾರ್ಕಿಃ ಪುನರ್ಭೂಸುತಂ ॥೨॥

ಅವತಾರಿಕೆ ॥ ಚಂದ್ರ ಕುಜಾದಿ ಗ್ರಹಸಂಯೋಗವಾದ ಫಲವು ಹೇಳಲ್ಪಡುತ್ತೆ.

## ಚಂದ್ರ, ಕುಜ ಸಂಯೋಗಫಲಂ

ಟೀಕು॥ ಸ್ರವಕಃ-ಕುಜನ ಸಂಗಡ ಚಂದ್ರನು ಸೇರಿದರೆ, ಕೂಟಸ್ತ್ರ್ಯಾಸವಕುಂಭ ಪಣ್ಯಂ, (ಇಲ್ಲಿ ಪಣ್ಯಶಬ್ದವು ಕೂಟಾದಿಗಳಲ್ಲಿ ಪ್ರತ್ಯೇಕ ಸಂಬಂಧವಿರುತ್ತೆ) ಯಾವ ಪ್ರಕಾರವೆಂದರೆ-ಕೂಟಪಣ್ಯಂ, ಸ್ತ್ರೀಪಣ್ಯಂ, ಅಸವಪಣ್ಯಂ, ಕುಂಭಪಣ್ಯಂ ಎಂದು ಹೇಳತಕ್ಕದ್ದು. ಕೂಟಪಣ್ಯಂ-ಒಂದು ವಸ್ತುವನ್ನು ಮತ್ತೊಂದು ವಸ್ತುವೆಂದು ಹೇಳಿ ವಿಕ್ರಯ ಮಾಡತಕ್ಕದ್ದು. ಸ್ತ್ರೀಪಣ್ಯಂ-ಸ್ತ್ರೀಯರನ್ನು ವಿಕ್ರಯ ಮಾಡುವುದು, ಅಸವಪಣ್ಯಂ-ಮದ್ಯ ಸುರಾದಿಗಳನ್ನು ವಿಕ್ರಯ ಮಾಡತಕ್ಕದ್ದು. ಕುಂಭಪಣ್ಯಂ-ಕುಂಭರಜತ ತಾಮ್ರಾದಿಗಳ ಭಾಂಡಗಳನ್ನು ವಿಕ್ರಯ ಮಾಡತಕ್ಕದ್ದು. ಮಾತುಃ-ತಾಯಿಗೆ, ಅಶಿವಃ-ಕೆಡಕೆಣಿಸತಕ್ಕವನು, ಅಂದರೆ ತಾಯಿಗೆ ಕೆಡಕೆಣಿಸಿ ಜೀವನ ಮಾಡುವವನು, ಕೂಟಪಣ್ಯವೆಂದರೆ-ನಾನಾವಿಧ ದ್ರವ್ಯಕ್ರಯವಿಕ್ರಯ ಕೌಶಲ್ಯವುಳ್ಳವನೆಂದು ಕೆಲವರು ಅರ್ಥಮಾಡಿರುವರು. ಈ ವಿಷಯಕ್ಕೆ ॥ಜಾ.ಭ॥ ॥ಶ್ಲೋಕ॥ ಆಚಾರಹೀನಃ ಕುಟಿಲಃ ಪ್ರತಾಪೀ ಪಣ್ಯಾನುಜೀವೀ ಕಲಹಪ್ರಿಯಶ್ಚ । ಸ್ಯಾನ್ಮಾತೃಶತ್ರುರ್ಮನುಜೋ ರುಜಾರ್ತಃ ಶೀತದ್ಯುತೌಭೂಸುತಸಂಯುತೋವೈ ॥೭॥ತಾ॥ ಕಲಹಜೀವಿ, ಮಾತೃಶತ್ರು, ಆಚಾರಹೀನ, ಕುಟಿಲ, ಪ್ರತಾಪೀ, ನಾನಾವಿಧ ವಸ್ತು ಕ್ರಯವಿಕ್ರಯ ಕೌಶಲ್ಯವುಳ್ಳವನಾಗುವನು.

## ಚಂದ್ರಬುಧಯುತಿಫಲಂ

ಸಜ್ಞಃಶಶೀ-ಚಂದ್ರನು ಬುಧನ ಸಂಗಡ ಕೂಡಿದರೆ, ಪ್ರಶ್ರಿತವಾಕ್ಯಂ-ಪ್ರಿಯಭಾಷಣಶೀಲನು, ಅರ್ಥನಿಪುಣಂ-ದ್ರವ್ಯಾರ್ಜನದಲ್ಲಿ ಸಮರ್ಥನೂ ಸೂಕ್ಷ್ಮ ದೃಷ್ಟಿಯುಳ್ಳವನೂ, ಸೌಭಾಗ್ಯಕೀರ್ತ್ಯಾನ್ವಿತಂ-ಸೌಭಾಗ್ಯಕೀರ್ತಿಯಿಂದ ಕೂಡಿದವನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಸದ್ವಾಗ್ವಿಲಾಸೋ ಧನುರ್ವಾ ಸುರೂಪಃ ಕೃಪಾರ್ತಚೇತಾಃ ಪುರುಷೋವಿನೀತಃ ॥ ಕಾಂತಾಪರಪ್ರೀತಿ ರತೀವವಕ್ತಾ ಚಂದ್ರೇಸಚಾಂದ್ರೇ ಬಹುಧರ್ಮಕೃತ್ಸ್ಯಾತ್ ॥೮॥

## ಚಂದ್ರಗುರುಯುತಿ ಫಲಂ

ಸಾಂಗಿರಃ-ಚಂದ್ರನು ಬೃಹಸ್ಪತಿಯೊಡಗೂಡಿದರೆ, ವಿಕ್ರಾಂತಂ-ಪರಾಕ್ರಮವಂತನು, ಕುಲಮುಖ್ಯಂ-ಬಂದು ಪ್ರಧಾನನು, ಅಸ್ಥಿರಮತಿಂ-ಚಪಲಚಿತ್ತನು, ವಿತ್ತೇಶ್ವರಂ-ಧನವಂತನೂ ಆಗುವನು. ಈ ವಿಷಯದಲ್ಲಿ ಶ್ಲೋಕ।। ಸದಾವಿನೀತಾ ದೃಢಗೂಢ-ಮಂತ್ರಃ ಸ್ವಧರ್ಮಕರ್ಮಾಭಿರತೋನರಃಸ್ಯಾತ್।। ಪರೋಪಕಾರಾದರತೈಕ ಚಿತ್ತಃ ಶೀತದ್ಯುತೌವಾಕ್ಪತಿನಾಸಮೇತೇ ।।೯।।

## ಚಂದ್ರಶುಕ್ರಯುತಿ ಫಲಂ

ಸಸಿತಃ-ಚಂದ್ರನು ಶುಕ್ರನು ಸಂಗಡ ಕೂಡಿದರೆ, ವಸ್ತ್ರಾಣಾಂ-ವಸ್ತ್ರಗಳ, ಕ್ರಿಯಾದಿ ಕುಶಲಂ-ಕ್ರಯವಿಕ್ರಯ ರುಜನಾದಿ ಕ್ರಿಯೆಗಳಲ್ಲಿ ಸಮರ್ಥನು ಈ ವಿಷಯದಲ್ಲಿ ।।ಶ್ಲೋಕ।। ವಸ್ತ್ರಾದಿಕಾನಾಂ ಕ್ರಯವಿಕ್ರಯೇಷು ದಕ್ಷೋನರಃ ಸ್ಯಾದ್ವ್ಯಸನೀವಿಧಿಜ್ಞಃ ।। ಸುಗಂಧ ಪುಷ್ಪೋತ್ತಮವಸ್ತ್ರವಿತ್ತೋ ದ್ವಿಜಾಧಿರಾಜೇ ಭೃಗುಜೇನಯುಕ್ತೇ ।।೧೦।।

## ಚಂದ್ರಶನಿ ಯುತಿಫಲಂ

ಸಾರ್ಕಿಃ-ಶನಿ ಚಂದ್ರರು ಕೂಡಿದ್ದರೆ *ಪುನರ್ಭೂಸುತಂ-ಎರಡನೆ ಮದುವೆ ಮಾಡಿಕೊಂಡವಳ ಮಗನು, ಪುನರ್ಭೂ ಅಂದರೆ-ಈ ವಿಷಯದಲ್ಲಿ ಶ್ಲೋಕ।। ಪರಣೀತಾಪತಿಂಹಿತ್ವಾ ಸವರ್ಣಂ ಕಾಮತಃಶ್ರಯೇತ್ । ಅಕ್ಷತಾನಕ್ಷತಾಚೈವ, ಪುನರ್ಭೂಸ್ಸಾಸ್ಮೃತಾಪುನಃ ।।೧೧।। ಎಂದು ಪುನರ್ಭೂಲಕ್ಷಣ।। ಪ್ರಕೃತದಲ್ಲಿ ಶನಿ ಚಂದ್ರರು ಕೂಡಿದರೆ ಆ ಕಾಲದಲ್ಲಿ ಹುಟ್ಟಿದವನು, ಅವಳ ತಾಯಿ ಮೊದಲು ಒಬ್ಬ ಗಂಡನನ್ನು ಮದುವೆ ಮಾಡಿಕೊಂಡಿದ್ದು ಆ ಗಂಡನನ್ನು ಬಿಟ್ಟು ಅವನು ಬದುಕಿರು ವಾಗ ಪುನಃ ಮದುವೆ ಮಾಡಿಕೊಂಡವಳ ಮಗನೆಂದು ಮುಖ್ಯ ತಾತ್ಪರ್ಯವು. ಈ ವಿಷಯದಲ್ಲಿ ।। ಧುಂಡಿರಾಜೀಯದಲ್ಲಿ ವಿಶೇಷ ಫಲವು ಹೇಳಿರುವುದು. ಅದೇ ನೆಂದರೆ-ನಾನಾಂಗನಾನಾಂ ಪರಿಸೇವನೇಚ್ಛೋರ್ವೈಶ್ಯಾನುವೃತ್ತಿ ಗ್ರತ ಸಾಧುಶೀಲಃ । ಪರಾತ್ಮಜಃಸ್ಯಾತ್ಪುರುಷಾರ್ಥಹೀನ ಇಂದೌಸಮಂದೇ ಪ್ರವದಂತಿ ಸಂತಃ ।।೧೨।।

ಮೂಲ।। ಮೂಲಾದಿ ಸ್ನೇಹಕೌಟ್ಯ ವ್ಯವಹರತಿವಣಿ ಗ್ವಾಹುಯೋದ್ಧಾ
ಸಸೌಮ್ಯೇ । ಪುರಾಧ್ಯಕ್ಷಸ್ಸಜೀವೇ ಭವತಿನರಪತಿಃ ಪ್ರಾಪ್ತವಿತ್ತೋ
ದ್ವಿಜೋವಾ ।। ಗೋಪ್ಯೋಮಲ್ಲೋಥದಕ್ಷಃ ಪರಯುವತಿರಜೋ

* ಪುನರ್ಭೂಸುತಃ-ಮೊದಲು ಒಂದು ವರನಿಗೆ ಕನ್ಯಾ ನಿಶ್ಚಯವಾಗಿ ಅನಂತರ ಅವನನ್ನು ಬಿಟ್ಟು ಮತ್ತೊಬ್ಬನಿಗೆ ವಿವಾಹವಾಗುವಿಕೆಯು ಈ ಅರ್ಥಕ್ಕೆ ಅನ್ವಯಿಸತಕ್ಕದ್ದು.

ದ್ಯೂತಕೃತ್ಸಾಸುರೇಜ್ಯೇ । ದುಃಖಾರ್ತೋ ಸತಸಂಧಸ್ಸಸವಿತೃತನಯೇ ಭೂಮಿಜೇನಿಂದಿತಶ್ಚ ॥೩॥

ಅವತಾರಿಕೆ॥ ಕುಜನು ಬುಧಾದಿ ಗ್ರಹಗಳಿಂದ ಕೂಡಿದ ಕಾಲದಲ್ಲಿ ಹುಟ್ಟಿದವನ ಸ್ವಭಾವವು ಹೇಳಲ್ಪಡುತ್ತೆ.

## ಕುಜಬುಧಯುತಿ ಫಲಂ

ಭೂಮಿಜೇ-ಕುಜನು, ಸಸೌಮ್ಯೇ-ಬುಧನ ಸಂಗಡ ಸೇರಿದ್ದರೆ, ವಣಿಕ್-ವರ್ತಕ ವ್ಯಾಪಾರಾದಿಗಳನ್ನು ಮಾಡುವನು. ಮೂಲಾದಿಸ್ನೇಹಕೂಟೈಃ, ಮೂಲ-ಕಂದಮೂಲಾದಿಗಳನ್ನು ಆದಿಶಬ್ದದಿಂದ ಫಲಪುಷ್ಪ ಮೊದಲಾದ್ದವನ್ನು, ಸ್ನೇಹ-ತೈಲಾದಿ ಘೃತಾದಿಗಳನ್ನು, ಕೂಟಃ-ಕೃತ್ರಿಮ ದ್ರವ್ಯಗಳನ್ನು ಕೊಂಡು ಇವುಗಳಿಂದ ವ್ಯವಹರತಿ-ವ್ಯಾಪಾರಮಾಡುವನು, ಬಾಹುಯೋದ್ಧಾ-ಮಲ್ಲಯುದ್ದದಲ್ಲಿ ಸಮರ್ಥನು. ಈ ವಿಷಯದಲ್ಲಿ ॥ಶ್ಲೋಕ॥ ಬಾಹುಯುದ್ಧ ಕುಶಲೋವಿಪುಲಸ್ತ್ರೀಲಾಲಸೋವಿವಿಧ ಭೇಷಜಪಣ್ಯಃ। ಹೇಮಲೋಹವಿಧಿಬುದ್ಧಿವಿಭಾವಃಸಂಭವೇಯದಿ ಕುಜೇಂದು ಯೋಗಃ॥೧೩॥

## ಕುಜಗುರುಯುತಿ ಫಲಂ

ಸಜೀವೇ-ಬೃಹಸ್ಪತಿಯು ಸಂಗಡ ಸೇರಿದ್ದರೆ, ಆ ಕಾಲದಲ್ಲಿ ಹುಟ್ಟಿದವನು, ಪುರಾಧ್ಯಕ್ಷ-ಪಟ್ಟಣಾಧಿಪತಿಯಾಗುವನು, ನರಪತಿಃ-ರಾಜ್ಯಾಧಿಪತಿಯಾದರೂ ಆಗುವನು, ಪ್ರಾಪ್ತವಿತ್ತ *ಲಬ್ಧವಾದವಿತ್ತವುಳ್ಳವನು, ದ್ವಿಜಃ-ಬ್ರಾಹ್ಮಣನಾಗುವನು, ಈ ಪುರಾಧ್ಯಕ್ಷತ್ವವು ಗ್ರಹಬಲಾಬಲದಿಂದ ಹೇಳತಕ್ಕದ್ದು. ಪ್ರಾಪ್ತವಿದ್ಯಃ-ವಿದ್ಯವನ್ನು ಹೊಂದುವನು, ಈ ವಿಷಯದಲ್ಲಿ ॥ಶ್ಲೋಕ॥ ಮಂತ್ರಾರ್ಥ ಶಾಸ್ತ್ರಾರ್ಥ ಕಲಾಕಲಾಪ ವಿವೇಕಶೀಲೋ ಮನುಜಃ ಕಿಲಸ್ಯಾತ್ । ಚಮೂಪತಿರ್ವಾ ನೃಪತಿಃ ಪುರೇಶೋ ಗ್ರಾಮೇಶ್ವರೋವಾ ಸಕುಜೇ ಸುರೇಜ್ಯೇ ॥೧೪॥ತಾ॥ ಕುಜ, ಗುರು, ಸಂಯೋಗವಾಗಿದ್ದರೆ, ಮಂತ್ರಾರ್ಥ ಶಾಸ್ತ್ರಾರ್ಥ ತಿಳಿದವನು, ಅನೇಕ ಕಲಾಶಾಸ್ತ್ರ ತಿಳಿದವನು, ವಿವೇಕಶೀಲ, ಚಮೂಪತಿ ಯಾಗಲೀ ರಾಜನಾಗಲೀ ಪಟ್ಟಣಾಧಿಪತಿ ಯಾಗಲೀ ಆಗುವನು. ಈ ಯೋಗವನ್ನು ಗ್ರಹಗಳ ಬಲಾಬಲ ವಿವೇಚನೆಯಿಂದ ತಿಳಿಯತಕ್ಕದ್ದು ॥೧೪॥

(ಕುಜ ಶುಕ್ರ ಯುತಿ ಫಲ)-ಸಾಸುರೇಜ್ಯೇ-ಅಂಗಾರಕನು, ಸಾಸುರೇಜ್ಯೇ- ಶುಕ್ರನ ಸಂಗಡ ಸೇರಿದರೆ, ಗೋಪಃ-ಗೋಪಾಲಕನು, ಅನೇಕ ಗೋವುಗಳನ್ನು ಸಂರಕ್ಷಿಸುವನು, ಕುಜ, ಶುಕ್ರರು ಬಲಿಷ್ಠರಾಗಿದ್ದರೆ, ಅನೇಕ ಗೋಪಾಲಕನಾಗುವನು. ನಿರ್ಬಲನಾಗಿದ್ದರೆ ಗೋವುಗಳ ಕಾಯುವವನಾಗುವನು, ಮಲ್ಲಃ-ಬಾಹುಯುದ್ಧ ಮಾಡುವವನು,

* ಪ್ರಾಪ್ತವಿದ್ಯಃ-ವಿದ್ಯಾವಂತ, ಪಂಡಿತನಾಗುವನು.

ದಕ್ಷಃ-ಸಮರ್ಥನು, ಪರಯುವತಿರತಿಃ-ಪರಸ್ತ್ರೀವಿಲಾಸ ಭೋಗವುಳ್ಳವನು, ದ್ಯೂತಕೃತ್-ಜೂಜು ಮೊದಲಾದ ಪಂದ್ಯಗಳನ್ನು ಆಡುವನು, ಕೆಲವರು ಸೂತಕೃತ್, ಎಂದು ಪರಿಸಿ ಹಡಗು, ದೋಣಿ, ನಾವೆ, ಹರಿಗೋಲು ಮೊದಲಾದ ಜಲಯಾನ ಗಳನ್ನು ನಡಿಸುವವನೆಂದು ಅರ್ಥ ಮಾಡಿರುವರು. ಈ ವಿಷಯದಲ್ಲಿ ।।ಶ್ಲೋಕ।। ನಾನಾಂಗನಾ ಭೋಗವಿಧಾನಚಿತ್ತೋ ದ್ಯೂತಾನೃತ ಪ್ರೀತಿರತಿ ಪ್ರಪಂಚಃ । ನರಃಸರ್ವಃ ಕೃತಸರ್ವ ವೈರೋ ಭೃಗೋಸ್ಸುತೇ ಭೂಸುತ ಸಂಯುತೇಸ್ಯಾತ್ ।।೧೫।।

## ಕುಜಶನಿಯುಕ್ತ ಫಲಂ

ಸಸವಿತೃ ತನಯೇ-ಕುಜ ಶನಿಗಳು ಏಕತ್ರವಿರುವಾಗ ಹುಟ್ಟಿದವನು, ದುಃಖಾರ್ತಃ-ಶರೀರ ವ್ಯಾಧಿಗಳಿಂದ ದುಃಖ ಪೀಡಿತನಾಗುವನು, ಅಸತ್ಯಸಂಧಃ-ಅನೃತವಚನದಲ್ಲಿ ಧುರೀಣನು, ಅಂದರೆ ಸುಳ್ಳಾಡುವುದರಲ್ಲಿ ಅತಿ ಸಮರ್ಥನು, ನಿಂದಿತಃ-ಜನನಿಂದತನು, ನಿಂದಿತನೆಂದರೆ, ಮಾಡಬಾರದ ಕಾರ್ಯಗಳನ್ನು ಮಾಡಿ ತನ್ಮೂಲಕ ನಿಂದಿಸಿಕೊಳ್ಳುವನು, ಈ ಲಕ್ಷಣಗಳಿಂದ ಕೂಡಿದವನಾಗುವನು. ಈ ವಿಷಯದಲ್ಲಿ ।। ಶ್ಲೋಕ ।। ಶಸ್ತ್ರಾಸ್ತ್ರವಿತ್ಸಂಗರ ಕರ್ಮಕರ್ತಾ ಸ್ತೇಯಾನೃತ ಪ್ರೀತಿಕರಃ ಪ್ರಕಾಮಂ । ಸೌಖ್ಯೇ ನಹೀನೋತಿ ತರಾಂನರಸ್ಯಾದ್ಧರಾಸುತೇ ಮಂದಯುತೇತಿ ನಿಂದ್ಯಃ ।।೧೫।।ತಾ।। ಜನ್ಮಕಾಲದಲ್ಲಿ ಶನಿ ಮಂಗಳರಂ ಏಕತ್ರಯಿವಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಶಸ್ತ್ರಾಸ್ತ್ರವಿದ್ಯೆ ತಿಳಿದವನು, ಕಲಹಪ್ರಿಯ, ಚೋರ, ಸುಳ್ಳು ಹೇಳುವನು, ಸುಖರಹಿತ, ಈ ಗುಣಗಳುಳ್ಳವನು ಆಗುವನು. ।।೧೬।।

ಮೂಲ।। ಸೌಮ್ಯೇರಂಗಚರೋಬೃಹಸ್ಪತಿಯುತೇಗೀತಪ್ರಿಯೋನೃತ್ಯವಿದ್ವಾಗ್ಮೀ ಭೂಗಣಪಸ್ಸಿತೇನ ಮೃದುನಾ ಮಾಯಾಪಟುರ್ಲಂಘಕಃ । ಸದ್ವಿದ್ಯೋ ಧನದಾರವಾ ಗೃಹಗುಣ ಶ್ಶುಕ್ರೇಣಯುಕ್ತೇ ಗುರೌಜ್ಞೇ ಯಃಶ್ಮಶ್ರು ಕರೋ ಸಿತೇನ ಘಟ ಕೃಜ್ಜಾತೋನ್ನಕಾರೋಪಿವಾ ।।೪।।

## ಬುಧಗುರುಯುತಿ ಫಲಂ

ಟೀಕು।। ಸಾಮ್ಯೇ-ಬುಧನು, ಬೃಹಸ್ಪತಿಯುತೇ-ಗುರುಯುಕ್ತನಾಗಿದ್ದರೆ, ಜಾತಃ-ಹುಟ್ಟಿದವನು, ರಂಗಚರಃ-ಮಲ್ಲಯುದ್ಧರಂಗದಲ್ಲಿ ಸಂಚರಿಸುವನು, ಗೀತಪ್ರಿಯಃ-ಗಾನಲೋಲನು, ನೃತ್ಯವಿತ್-ನಾಟ್ಯಶಾಸ್ತ್ರವನ್ನು ತಿಳಿದವನು. ಈ ವಿಷಯಕ್ಕೆ ಶ್ಲೋಕ।। ಸಂಗೀತವಿನ್ನೀತಿ ಪತಿರ್ವಿನೀತಃ ಸೌಖ್ಯಾನ್ವಿತೋತ್ಯಂತ ಮನೋಭಿರಾಮಃ ಧೀರೋನರಃ ಸ್ಯಾತ್ಸುಕರಃ ಪ್ರದಾರಃ ಸುಗಂಧಭಾಗ್ವಾಕ್ಪತಿ ಸೌಮ್ಯಯೋಗೇ ।।೧೭।।

(ಬುಧ ಶುಕ್ರಯುತಿ ಫಲಂ) ಬುಧಶುಕ್ರರು ಕೂಡಿದ ಕಾಲದಲ್ಲಿ ಹುಟ್ಟಿದವನ

ಫಲವು. ಟೀ।। ಬುಧನು ಸಿತೇನ-ಶುಕ್ರನ ಸಂಗಡ ಕೂಡಿದರೆ, ವಾಗ್ಮೀ-ಚೆನ್ನಾಗಿ ಮಾತನಾಡುವವನು, ಭೂಗಣಪಃ-ಭೂಮಿಗೂ ಸಭೆಗೂ ಅಧಿಪತಿಯಾಗುವನು, ಈ ವಿಷಯಕ್ಕೆ ।।ಶ್ಲೋಕ।। ತುಲಾಧಿಶಾಲೀ ಶುಭವಾಗ್ವಿಲಾಸಃ ಸದಾಸಹರ್ಷಃ ಪುರುಷಸ್ಸುವೇಷಃ ಭರ್ತಾಬಹೂನಾಂ ಗುಣವಾ ವಿವೇಕಿಸುಭಾರ್ಗವೇಜನ್ಮನಿ ಸೋಮ ಸೂನೌ।। (ಬುಧಶನಿ ಯುತಿಫಲಂ) ಮೃದುನಾ-ಬುಧನು ಶನಿಯುಕ್ತನಾಗಿದ್ದರೆ ಮಾಯಾಪಟುಃ-ಪರರಿಗೆ ಮೋಸಮಾಡುವುದರಲ್ಲಿ ಅತ್ಯಂತವಾದ ಚತುರ ಬುದ್ಧಿವುಳ್ಳವನು, ಲಂಘಕಃ-ಆಚಾರ್ಯಾದಿ ಗುರುಗಳ ಆಜ್ಞೆಯನ್ನು ಉಲ್ಲಂಘಿಸುವನು, ಈ ವಿಷಯದಲ್ಲಿ ।।ಶ್ಲೋಕ।। ಚಲಸ್ವಭಾವಶ್ಚ ಕಲಿಪ್ರಿಯೋಪಿ ಕಲಾಕಲಾಪೇ ಕುಶಲ ಸ್ಸುಶೀಲಃ । ಪುಮಾನ್ಬಹೂನಾಂ ಪ್ರತಿಪಾಲಕ ಶ್ಚೇದ್ಬವೇತ್ಸೂತೌ ಮಲಿನೋಜ್ಞಶನ್ಯೋಃ ।।೧೮।।

(ಗುರುಶುಕ್ರ ಯುತಿಫಲಂ) ಗುರೌ-ಬೃಹಸ್ಪತಿಯು, ಶುಕ್ರೇಣ-ಶುಕ್ರನೊಡನೆ, ಯುತೇ-ಕೂಡಿದ್ದರೆ, ಆ ಕಾಲದಲ್ಲಿ ಹುಟ್ಟಿದವನು, ಸದ್ವಿದ್ಯಾಧನದಾರವಾ-ವಿಶೇಷ ವಾದ ಧನಕಳತ್ರವುಳ್ಳವನು, ಅಂದರೆ-ಉತ್ತಮ ವಿದ್ಯೆಯುಳ್ಳವನು, ಅಧಿಕ ಧನವುಳ್ಳವನು, ಒಳ್ಳೆಯ ಹೆಂಡತಿಯುಳ್ಳವನು, ಬಹುಗುಣಃ-ಅನೇಕ ಗುಣಗಳುಳ್ಳವನು. ಈ ವಿಷಯಕ್ಕೆ ।।ಶ್ಲೋಕ।। ಜಾತಕಾಭರಣೇ ।। ವಿದ್ಯಯಾಭವತಿ ಪಂಡಿತಃ ಸದಾ ಪಂಡಿತೈರಪಿಕರೋತಿವಿವಾದಮ್ । ಪುತ್ರಮಿತ್ರಧನಸೌಖ್ಯಸಂಯುತೋ ಮಾನವಃ ಸುರಗುರೌ ಭೃಗುಯುಕ್ತೇ ।।೧೯।।

## ಗುರುಶನಿಯುತಿ ಫಲಂ

ಬೃಹಸ್ಪತಿ, ಅಸಿತೇನ-ಶನಿಯುಕ್ತನಾದರೆ, ಜಾತಃ-ಹುಟ್ಟಿದವನು, ಶ್ಮಶ್ರುಕರಃ-ಕ್ಷೌರಕನಾದರೂ, ಘಟಕೃತ್-ಕುಂಬಾರನಾರೂ ಆಗುವನು. ಅನ್ನಕೃತ್-ಪಾಕಜ್ಞ ನಾಗುವನು, ಅಂದರೆ-ಅಡಿಗೆ ಮಾಡುವವನು. (ದೂತೋನ್ನಕಾರೋಪಿವಾ) *ಎಂದು ಪಾಠಾಂತರವಿರುವುದು. ಈ ವಿಷಯದಲ್ಲಿ ।।ಶ್ಲೋಕ।।ಜಾ.ಭ.।। ಶೂರೋರ್ಥವಾ ಗ್ರಾಮಪುರಾಧಿನಾಥೋ ಭವೇದ್ಯಶಸ್ವೀಕುಶಲಃ ಕಲಾಸು । ಸ್ತ್ರೀಸಂಶಯಪ್ರಾಪ್ತಮನೋ ರಥಶ್ಚ ನರಃ ಸುರೇಜ್ಯೆ ರವಿಜೇನಯುಕ್ತೇ ।।೨೦।।

ಮೂಲ।। ಅಸಿತಸಿತ ಸಮಾಗಮೇಲ್ಪ ಚಕ್ಷುರ್ಯುವತಿ ಸಮಾಶ್ರಯಸಂ ಪ್ರವೃದ್ಧವಿತ್ತಃ । ಭವತಿ ಚ ಲಿಪಿಚಿತ್ರಕಾದಿವೇತ್ತಾ ಕಥಿತಫಲೈಃ ಪರತೋರಿಕಲ್ಪನೀಯಾಃ ।।೫।।

* ದ್ಯೂತೋನ್ನಕಾರೋಪಿವಾ ಎಂದು (ಔತ್ತರೀಯ ಪಾಠ)

ಅವತಾರಿಕೆ ॥ ಶುಕ್ರನು ಶನಿಯುಕ್ತನಾದ ಕಾಲದಲ್ಲಿ ಹುಟ್ಟಿದವನ ಸ್ವಭಾವವು ಹೇಳಲ್ಪಡುತ್ತೆ.

## ಶುಕ್ರ ಶನಿಯುತಿ ಫಲಂ

ಅಸಿತಸಿತಸಮಾಗಮೇ-ಶನಿ ಶುಕ್ರಯುತನಾಗಿರುವಾಗ ಹುಟ್ಟಿದವನು, ಅಲ್ಪಚಕ್ಷು *ಸ್ವಲ್ಪವಾದ ಕಣ್ಣುಳ್ಳವನು, ಅಂದರೆ-ಅಲ್ಪದೃಷ್ಟಿಯುಳ್ಳವನು, ಯುವತಿಸಮಾಶ್ರಯ ಸಂಪ್ರವೃದ್ಧವಿತ್ತಃ, ಯುವತಿಸಮಾಶ್ರಯ-ಸ್ತ್ರೀಯರನ್ನಾಶ್ರಯಿಸುವುದರಿಂದ, ಸಂಪ್ರವೃದ್ಧ-ಚೆನ್ನಾಗಿ ಅಭಿವೃದ್ಧಿಯಾಗುವ, ವಿತ್ತಃ-ಧನವುಳ್ಳವನು, ಲಿಪಿಚಿತ್ರಕಾದಿ ವೇತ್ತಾ-ಲಿಪಿ-ಪುಸ್ತಕವನ್ನು ಬರೆಯುವಿಕೆ, ಚಿತ್ರ-ಚಿತ್ರಗಳನ್ನು ಬರೆಯುವಿಕೆ, ಆದಿ-ಆದಿಶಬ್ದದಿಂದ, ಇನ್ನೂ ಅನೇಕ ಚಮತ್ಕಾರ ಕಾರ್ಯಗಳನ್ನು ಮಾಡುವನು, ಭವತಿ-ಆಗುತ್ತಾನೆ. ಈ ವಿಷಯದಲ್ಲಿ ಜಾ.ಭ॥ ಶ್ಲೋಕ॥ ಶಿಲ್ಪಲೇಖ್ಯವಿಧಿಜಾತಕೌತುಕೋದಾರುಣೋ ರಣಕರೋ ನರೋಭವೇತ್ । ಆತ್ಮಕರ್ಮಕುಶಲಶ್ಚ ಜನ್ಮನಿಭಾರ್ಗವೇ ರವಿಸುತೇನ ಸಂಯುತೇ ॥೨೧॥

ಇತಿ-ಈ ದ್ವಿಗ್ರಹಯೋಗಫಲಗಳು, ಜನ್ಮಕಾಲದಲ್ಲಿ ಎರಡು ಮೂರು ಸಂಭವಿಸಿದರೆ, ಆಯಾ ಯೋಗಫಲಗಳೆಲ್ಲವನ್ನೂ ಹೇಳತಕ್ಕದ್ದು. ಪರತಃ- ಇತರವಾದ ತ್ರಿಗ್ರಹ, ಚತುರ್ಗ್ರಹ, ಪಂಚಗ್ರಹ, ಷಡ್ಗ್ರಹ, ಸಪ್ತಗ್ರಹ, ಯೋಗಫಲಗಳು, ಈ ದ್ವಿಗ್ರಹ ಯೋಗಕ್ಕೆ ಹೇಳಿದ ಫಲಗಳ ಸಹಿತ, ಕಥಿತ ಫಲೈಃ- ಈಗ ಹೇಳಲ್ಪಟ್ಟ ಫಲಗಳ ಸಮೇತ, ವಿಕಲ್ಪನೀಯಾಃ-ಕಲ್ಪಿಸಿಕೊಂಡು ಹೇಳತಕ್ಕದ್ದು. ಅದು ಹೇಗೆಂದರೆಃ-ಒಂದು ರಾಶಿಯಲ್ಲಿ ರವಿ ಚಂದ್ರ ಕುಜರು ಕೂಡಿದ್ದರೆ, ಆ ಕಾಲದಲ್ಲಿ ರವಿ ಚಂದ್ರ ಯೋಗಫಲಗಳು, ರವಿಕುಜ ಯೋಗಫಲ, ಚಂದ್ರ ಕುಜಯೋಗಫಲ, ಈ ಮೂರು ಫಲಗಳನ್ನೂ ಕೂಡಿಸಿ ಹೇಳತಕ್ಕದ್ದು. ಉಳಿದ ಫಲಗಳನ್ನು ಈ ಪ್ರಕಾರ ಊಹಿಸಿ ತಿಳಿಯತಕ್ಕದ್ದು ॥೮॥

ಅಥತ್ರಿಗ್ರಹಯೋಗಾಃ-(ತತ್ರಾದೌ ರವಿತ್ರಿಗ್ರಹಯೋಗಾಃ)

## ರವಿ, ಕುಜ, ಬುಧಯುತಿ ಫಲಂ

ಶ್ಲೋಕ ॥ ಭಾನು ಭೌಮಬುಧೈರ್ಯೋಗೇಖ್ಯಾತಃ ಸಾಹಸಿಕೋನರಃ । ನಿಷ್ಠುರೋಗತಲಜ್ಜಶ್ಚಧನಸ್ತ್ರೀಪುತ್ರಪೀಡಿತಃ ॥೨೨॥ತಾ॥ ಜನ್ಮಕಾಲದಲ್ಲಿ ಸೂರ್ಯನು ಕುಜ,

* ಮಂದಚಕ್ಷುಸ್ಸೆಂದೂ ಮಂದ ದೃಷ್ಟಿಯುಳ್ಳವನೆಂದೂ ಅರ್ಥಮಾಡಿರುವರು

ಬುಧಯುಕ್ತನಾಗಿದ್ದರೆ, ಜಾತಕನು ಪ್ರಖ್ಯಾತನು, ಸಾಹಸವಂತನು, ನಿಷ್ಠುರಭಾಷಿಯು, ಲಜ್ಜಾಹೀನನು, ದ್ರವ್ಯ, ಸ್ತ್ರೀ, ಪುತ್ರರಿಂದ ಪೀಡಿಸಲ್ಪಡುವವನೂ ಆಗುವನು.

## ರವಿ, ಕುಜ ಗುರುಯುತಿ ಫಲಂ

ಶ್ಲೋಕ।। ಸೂರ್ಯಭೌಮೇಜ್ಯಸಂಯೋಗೇ ಪ್ರಚಂಡಸ್ಸತ್ಯಭಾಷಣಃ । ರಾಜಮಂತ್ರೀಚ ನಿರ್ವಾಪೀ ವಾಕ್ಯೇಚನಿಪುಣೋಭವೇತ್ ।।೨೩।।ತಾ।। ಜನ್ಮಕಾಲದಲ್ಲಿ ರವಿ, ಕುಜ, ಗುರುಯುತವಾಗಿದ್ದರೆ, ಜಾತಕನು ಪ್ರಚಂಡನೂ, ಸತ್ಯಭಾಷಿಯೂ, ರಾಜಮಂತ್ರಿಯೂ, ಮಾತನಾಡುವುದರಲ್ಲಿ ನಿಪುಣನೂ ಆಗುವನು.

## ರವಿ, ಕುಜ, ಶುಕ್ರಯುತಿ ಫಲಂ

ಶ್ಲೋಕ।। ಸೂರ್ಯಾರಶುಕ್ರಸಂಯೋಗೇ ಸುಭಗೇ ಭಜನಾತುರಃ । ಕುಲೀನೋ ವತ್ಸಲೋಲೋಕೇ ವಿಷಯಾಸಕ್ತ ಮಾನಸಃ ।।೨೪।।ತಾ।। ಜನ್ಮಕಾಲದಲ್ಲಿ ಸೂರ್ಯನು ಕುಜ, ಶುಕ್ರಯುತನಾದರೆ, ಜಾತಕನು ಭಾಗ್ಯವಂತನೂ, ಸ್ತೋತ್ರಪ್ರಿಯನೂ, ಸತ್ಕುಲಪ್ರಸೂತನೂ, ಪ್ರಪಂಚದಲ್ಲಿ ವಿಷಯೋಪಭೋಗಗಳನ್ನನುಭವಿಸಿಸುವನೂ ಆಗುವನು.

## ರವಿ, ಕುಜ, ಶನಿಯುತಿ ಫಲಂ

ಶ್ಲೋಕ।। ಸೂರ್ಯಾರಶನಿಸಂಯೋಗೇ ಮೂರ್ಖೋಗೋಧನವರ್ಜಿತಃ । ರೋಗಾರ್ತಃಸ್ವಜ ನೈರ್ಹೀನೋ ವಿಕಲಃ ಕಲಹಾತುರಃ ।।೨೫।।ತಾ।। ಜನ್ಮಕಾಲದಲ್ಲಿ ರವಿಯು ಕುಜಶನಿಯುಕ್ತನಾದರೆ, ಜಾತಕನು ಮೂರ್ಖನೂ, ಗೋಧನವರ್ಜಿತನೂ, ರೋಗಗ್ರಸ್ತನೂ, ಸ್ವಜನರಿಲ್ಲದವನೂ, ವಿಕಲಾಂಗನೂ, ಕಲಹ ಪ್ರಿಯನೂ ಆಗುವನು.

## ರವಿ, ಬುಧ, ಗುರುಯುತಿ ಫಲಂ

ಶ್ಲೋಕ।। ಸೂರ್ಯಸೌಮ್ಯೇಜ್ಯಸಂಯೋಗೇ ನೇತ್ರರೋಗೀಮಹಾಧನಃ । ಶಾಸ್ತ್ರಶಿಲ್ಪಕಲಾಭಿಜ್ಞೋಲಿಪಿ ಕರ್ತಾಭವೇನ್ನರಃ ।।೨೬।।ತಾ।। ಜನ್ಮಕಾಲದಲ್ಲಿ ರವಿಯು ಬುಧ, ಗುರುಯುಕ್ತನಾದರೆ, ಜಾತಕನು ನೇತ್ರರೋಗಿಯೂ, ಮಹಾಧನವಂತನೂ, ಶಾಸ್ತ್ರವನ್ನು ತಿಳಿದವನೂ, ಶಿಲ್ಪವನ್ನು ತಿಳಿದವನೂ, ಲಿಪಿಕರ್ತನೂ (ಲೇಖಕನೂ) ಆಗುವನು.

## ರವಿ, ಬುಧ, ಶುಕ್ರಯುತಿ ಫಲಂ

ಶ್ಲೋಕ।। ಸೂರ್ಯಜ್ಞ ಶುಕ್ರಸಂಯೋಗೇ ಗುರುವರ್ಗೇನಿರಾವೃತಃ । ಅಭಿಶಸ್ತೋ ದಿಶೋಯಾತಿ ಸ್ತ್ರೀಹೇತೋಃ ಸ್ತಪ್ತಮಾನಸಃ ।।೨೭।।ತಾ।। ಜನ್ಮಕಾಲದಲ್ಲಿ ರವಿಯು ಬುಧ, ಶುಕ್ರಯುತನಾದರೆ ಗುರುವರ್ಗದಲ್ಲಿ ವ್ಯಾಪಕನಲ್ಲದವನೂ, ಪ್ರಶಂಸೆಯುಳ್ಳವನೂ

ಮನಸ್ಸಿಗೆ ಬಂದ ಕಡೆಗೆ ಹೋಗುವವನು, ಸ್ತ್ರೀಹೇತುವಾಗಿ ಸಂಕಟ ಮನಸ್ಸುಳ್ಳವನೂ ಆಗುವನು.

## ರವಿ, ಬುಧ, ಶನಿಯುತಿ ಫಲಂ

ಶ್ಲೋಕ।। ಸೂರ್ಯಜ್ಞ ಶನಿಭಿರ್ಯೋಗೇ ದುರಾಚಾರಃ ಪರಾಜಿತಃ । ಬಂಧುಭಿಶ್ಚಪರಿತ್ಯಕ್ತೋ ವಿದ್ವೇಷಿಜಾಯತೇ ನರಃ ।।೨೮।।ತಾ।। ಜನ್ಮಕಾಲದಲ್ಲಿ ರವಿಯು ಬುಧ, ಶನಿಯುತನಾದರೆ, ಜಾತಕನು ದುರಾಚಾರವಂತನೂ, ಯುದ್ಧದಲ್ಲಿ ಪರಾಜಿತನೂ, ಬಂಧುಗಳಿಂದ ಬಿಡಲ್ಪಟ್ಟವನೂ ವಿದ್ವೇಷಕಾರಿಯೂ ಆಗುವನು.

## ರವಿ, ಗುರು, ಶುಕ್ರಯುತಿ ಫಲಂ

ಶ್ಲೋಕ। ಸೂರ್ಯೇಜ್ಯ ಶುಕ್ರಸಂಯೋಗೇ ರಾಜಮಂತ್ರೀಚ ನಿರ್ಧನಃ । ದುಷ್ಟ ಚಕ್ಷುರ್ಭವೇತ್ಕ್ರೂರಃಪ್ರಾಜ್ಞಶ್ಚ ಪರಕರ್ಮ ಕೃತ್ ।।೨೯।।ತಾ।। ಜನ್ಮಕಾಲದಲ್ಲಿ ಸೂರ್ಯನಿಗೆ ಗುರು, ಶುಕ್ರ ಸಂಯೋಗವಾಗಿದ್ದರೆ, ರಾಜಮಂತ್ರಿ ಆಗುವನು ಅಥವಾ ನಿರ್ಧನನು, ದುಷ್ಟವಾದ ಕಣ್ಣುಳ್ಳವನು, ಕ್ರೂರನು ಪರಕರ್ಮದಲ್ಲಿ ಪಾಂಡಿತ್ಯವುಳ್ಳವನೂ ಆಗುವನು.

## ರವಿ, ಗುರು, ಶನಿಯುತಿ ಫಲಂ

ಶ್ಲೋಕ।। ಸೂರ್ಯೇಜ್ಯಶನಿಭಿರ್ಯೋಗೇಪುತ್ರಮಿತ್ರ ಕಳತ್ರವಾನ್। ನಿರ್ಭಯೋನೃಪನಿಷ್ಠಶ್ಚ ದ್ವೇಷ್ಯೋಬಂಧುಜನಸ್ಯಚ ।।೩೦।।ತಾ।। ಜನ್ಮಕಾಲದಲ್ಲಿ ರವಿಯು, ಗುರು,ಶನಿಯುಕ್ತನಾದರೆ, ಪುತ್ರ ಮಿತ್ರ ಕಳತ್ರ ಸುಖನಿರ್ಭಯವುಳ್ಳವನೂ, ರಾಜ್ಯಕಾರ್ಯದಲ್ಲಿ ನಿಷ್ಠನೂ, ಬಂಧುಜನ ದ್ವೇಷಿಯೂ ಆಗುವನು.

## ರವಿ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಸೂರ್ಯ ಶುಕ್ರಾರ್ಕ ಸಂಯೋಗೇ ಕಲಾಮಾನವಿವರ್ಜಿತಃ । ಕುಷ್ಠೀ ಶತ್ರು ಜಯೋದ್ವಿಗ್ನೋ ದುರಾಚಾರೀ ಭವೇನ್ನರಃ ।।೩೧।।ತಾ।। ಜನ್ಮಕಾಲದಲ್ಲಿ ರವಿಯು ಶುಕ್ರ, ಶನಿಯುಕ್ತನಾದರೆ, ಜಾತಕನು, ಸೂಕ್ಷ್ಮಬುದ್ಧಿಯುಳ್ಳವನೂ, ಮಾನವಿಲ್ಲದವನೂ, ಕುಷ್ಠರೋಗಿಯೂ, ಶತ್ರುಗಳಲ್ಲಿ ಅಪಜಯ ಹೊಂದುವವನೂ, ದುರಾಚಾರವಂತನೂ ಆಗುವನು.

## ಚಂದ್ರ ತ್ರಿಗ್ರಯೋಗಃ-ಚಂದ್ರ, ಕುಜ, ಬುಧಯುತಿ ಫಲಂ

ಶ್ಲೋಕ।। ಚಂದ್ರಾರ ಬುಧ ಸಂಯೋಗೇ ತ್ವನಾಚಾರೀಚ ಪಾಪಕೃತ್ । ಅಜೀವಿತಾದಯಂಲೋಕೇ ಬಂಧುಹೀನಶ್ಚಜಾಯತೇ ।।೩೨।।ತಾ।। ಚಂದ್ರನು ಕುಜ

ಬುಧ ಸಂಯೋಗವಾದರೆ, ಜಾತಕನು ಅನಾಚಾರವಂತನೂ, ಪಾಪ ಕೆಲಸಗಳನ್ನು ಮಾಡುವವನೂ, ಯಾವಜ್ಜೀವವೂ ಬಂಧುಹೀನನೂ ಆಗುವನು.

## ಚಂದ್ರ, ಕುಜ, ಗುರುಯುತಿ ಫಲಂ

ಶ್ಲೋಕ।। ಚಂದ್ರಭೌಮೇಜ್ಯಸಂಯೋಗಃ ಸ್ತ್ರೀಲೋಲೋ ವ್ರಣಸಂಯುತಃ । ಕಾಂತಶ್ಚಸಮ್ಮತಃಸ್ತ್ರೀಣಾಂ ಚಂದ್ರತುಲ್ಯಮುಖೋಭವೇತ್ ।।೩೩।।ತಾ।। ಜನ್ಮಕಾಲದಲ್ಲಿ ಚಂದ್ರನು ಕುಜ, ಗುರುಯುತನಾಗಿದ್ದರೆ, ಜಾತಕನು ಸ್ತ್ರೀಲೋಲನೂ, ವ್ರಣದೇಹಿಯೂ, ಸ್ತ್ರೀಯರಿಗೆ ಸಮ್ಮತಿಯಾದವನೂ, ಚಂದ್ರನಂತೆ ಮುಖವುಳ್ಳವನೂ ಆಗುವನು.

## ಚಂದ್ರ, ಕುಜ, ಶುಕ್ರಯುತಿ ಫಲಂ

ಶ್ಲೋಕ।। ಚಂದ್ರಾರ ಭೃಗುಸಂಯೋಗೇ ದುಃಶೀಲಪತಿಸೂನಕಃ । ಸದಾಭ್ರಮಣಶೀಲಶ್ಚ ಶೀತಭೀತೋಪಿಜಾಯತೇ ।।೩೪।।ತಾ।। ಜನ್ಮಕಾಲದಲ್ಲಿ ಚಂದ್ರನು ಕುಜ, ಶುಕ್ರಯುತನಾಗಿದ್ದರೆ, ದುಃಶೀಲನಾದ ಗಂಡನುಳ್ಳ ಹೆಂಡತಿಯ ಮಗನೂ, ಸದಾ ಭ್ರಮಣಶೀಲನೂ, ಸೀತವುಳ್ಳವನೂ ಆಗುವನು.

## ಚಂದ್ರ, ಕುಜ, ಶನಿಯುತಿ ಫಲಂ

ಶ್ಲೋಕ।। ಚಂದ್ರಾರಶನಿಭಿರ್ಯೋಗೇ ಬಾಲ್ಯೇಚ ಮೃತಮಾತೃಕಃ । ಕ್ಷುದ್ರಶ್ಚಲೋಕವಿದ್ವಿಷ್ಟೋ ವಿಷಮೋಜಾಯತೇನರಃ ।।೩೫।।ತಾ।। ಜನ್ಮಕಾಲದಲ್ಲಿ ಚಂದ್ರನು ಕುಜ, ಶನಿಗಳ ಸಂಗಡ ಸೇರಿದ ಕಾಲದಲ್ಲಿ ಹುಟ್ಟಿದ ಜಾತಕನು, ಬಾಲ್ಯದಲ್ಲಿ ತಾಯಿ, ಇಲ್ಲದವನೂ, ಕ್ಷುದ್ರಗ್ರಹಗಳುಳ್ಳವನೂ, ಪ್ರಪಂಚದಲ್ಲಿ ಯಾರಿಗೂ ಪ್ರೀತಿಯಿಲ್ಲದವನೂ, ವಿಷಮವಾದ ಸ್ವಭಾವವುಳ್ಳವನೂ ಆಗುವನು.

## ಚಂದ್ರ, ಬುಧ, ಗುರುಯುತಿ ಫಲಂ

ಶ್ಲೋಕ।। ಚಂದ್ರಜ್ಞಜೀವೈಸಂಯೋಗೇ ಯಶಸ್ವಿಧನವಾನಪಿ । ಪುತ್ರಮಿತ್ರಾದಿ ಸಂಯುಕ್ತೋವಾಗ್ಮಿಖ್ಯಾತಶ್ಚ ಕೀರ್ತಿಮಾನ್ ।।೩೬।। ಜನ್ಮಕಾಲದಲ್ಲಿ ಚಂದ್ರನು ಬುಧ, ಗುರುಯುತನಾದರೆ, ಜಾತಕನು ಯಶಸ್ವಿಯೂ, ಧನವಂತನೂ, ಪುತ್ರಮಿತ್ರಾದಿಗಳಿಂದ ಯುಕ್ತನೂ, ವಾಗ್ಮಿಯೂ, ಪ್ರಖ್ಯಾತನೂ, ಕೀರ್ತಿವಂತನೂ ಆಗುವನು.

## ಚಂದ್ರ, ಬುಧ, ಶುಕ್ರಯುತಿ ಫಲಂ

ಶ್ಲೋಕ।। ಚಂದ್ರಜ್ಞಭಾರ್ಗವೈರ್ಯೋಗೇ ವಿದ್ಯಯಾಸಂಯುತೋನರಃ । ಸೇರ್ಷ್ಯೋಧನಾತಿಲೋಭೀಚ ನೀಚಾಚಾರಶ್ಚ ಜಾಯತೇ ।।೩೭।।ತಾ।। ಜನ್ಮಕಾಲದಲ್ಲಿ

ಚಂದ್ರ, ಬುಧ, ಶುಕ್ರರು ಸಂಯೋಗವಾದ ಕಾಲದಲ್ಲಿ ಜನ್ಮಿಸಿದವನು, ವಿದ್ಯೆಯಿಂದ ಕೂಡಿದವನೂ, ಈರ್ಷ್ಯೆಯುಳ್ಳವನೂ, ಧನವಂತನೂ, ಲೋಭಿಯೂ, ನೀಚವಾದ ಆಚಾರವುಳ್ಳವನೂ ಆಗುವನು.

## ಚಂದ್ರ, ಬುಧ, ಶನಿಯುತಿ ಫಲಂ

ಶ್ಲೋಕ।। ಚಂದ್ರಜ್ಞಶನಿಭಿರ್ಯೋಗೇ ಪ್ರಾಜ್ಞೋಭೂಪತಿಪೂಜಿತಃ । ಅತ್ಯುಚ್ಚೋ ವಿಲಾಂಗಶ್ಚಮಗ್ಮೀಭವತಿಮಾನವಃ ।।೩೮।।ತಾ.। ಜನ್ಮಕಾಲದಲ್ಲಿ ಚಂದ್ರನು ಬುಧ, ಶನಿಯುಕ್ತನಾಗಿದ್ದರೆ, ಜಾತಕನು ಪ್ರಾಜ್ಞನು ರಾಜಪೂಜಿತನು, ಅತ್ಯಂತ ಉದ್ದವಾದ ಶರೀರವುಳ್ಳವನೂ, ಪುಷ್ಟವಾದ ಶರೀರವುಳ್ಳವನೂ, ವಾಗ್ಮಿಯೂ ಆಗುವನು.

## ಚಂದ್ರ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಚಂದ್ರೇಜ್ಯಶುಕ್ರಸಂಯೋಗೇ ಸಾಧ್ವೀ ಪುತ್ರಶ್ಚ ಪಂಡಿತಃ । ಸಾಧುಃ ಸರ್ವಕಲಾಭಿಜ್ಞ ಸುಭಗೋಜಾಯತೇನರಃ ।।೩೯।।ತಾ।। ಜನ್ಮಲಗ್ನದಲ್ಲಿ ಚಂದ್ರನು ಬೃಹಸ್ಪತಿ, ಶುಕ್ರ ಸಂಯುತನಾಗಿದ್ದರೆ, ಜಾತಕನು ಸಾಧುವು, ಆತನ ಮಗನು ಪಂಡಿತನು, ಪತಿವ್ರತೆಯ ಪುತ್ರನೂ, ಸರ್ವಕಲಾಭಿಜ್ಞನೂ, ಸಂಪತ್ತುಳ್ಳುವನೂ ಆಗುವನು.

## ಚಂದ್ರ, ಗುರು, ಶನಿಯುತಿ ಫಲಂ

ಶ್ಲೋಕ।। ಚಂದ್ರೇಜ್ಯಶನಿರ್ಯೋಗೇ ನೀರೋಗಃ ಸ್ತ್ರೀರತೋನರಃ । ಶಾಸ್ತ್ರಾರ್ಥವಿಜ್ಞೋನೀತಿಜ್ಞೋ ಗ್ರಾಮಪತ್ತನಪಾಲಕಃ ।।೪೦।।ತಾ।। ಜನ್ಮಕಾಲದಲ್ಲಿ ಚಂದ್ರನು ಗುರು, ಶನಿಯುಕ್ತನಾಗಿದ್ದರೆ, ಜಾತಕನು ರೋಗರಹಿತನೂ, ಸ್ತ್ರೀರತನೂ, ಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿದವನೂ, ನೀತಿವಂತನೂ, ಗ್ರಾಮಪಾಲಕನಾಗಲಿ ಅಥಾ ಪಟ್ಟಣಪಾಲಕನಾಗಲಿ ಆಗುವನು.

## ಚಂದ್ರ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಚಂದ್ರಶುಕ್ರಾರ್ಕಿಭಿರ್ಯೋಗೇ ಲಿಪಿಕರ್ತಾಚವೇದವಿತ್ । ಪುರೋಹಿತ ಕುಲೋತ್ಪತ್ತಿಃ ಭವೇತ್ಪುಸ್ತಕ ವಾಚಕಃ ।।೪೧।।ತಾ।। ಜನ್ಮಕಾಲದಲ್ಲಿ ಚಂದ್ರನು ಶುಕ್ರ, ಶನಿಯುತನಾಗಿದ್ದರೆ, ಜಾತಕನು ವೇದಪಾಠಿಯೂ, ಲಿಪಿಕರ್ತ (ಲೇಖಕ) ಪುರೋಹಿತ ವಂಶದಲ್ಲಿ ಹುಟ್ಟಿದವನು, ಪುಸ್ತಕಗಳ ಪಾಠಮಾಡುವನೂ ಆಗುವನು. ಅಂದರೆ-ಪುಸ್ತಕವಿದ್ದರೆ ಓದಿ ಅರ್ಥವನ್ನು ಹೇಳುವವನೂ, ಪೌರಾಣಿಕನೂ ಆಗುವನೆಂದು ತಿಳಿಯತಕ್ಕದ್ದು.

## ಅಥ ಮಂಗಳ ತ್ರಿಗ್ರಹಯೋಗಾಃ

### ಮಂಗಳ, ಬುಧ, ಗುರುಯುತಿ ಫಲಂ

ಶ್ಲೋಕ।। ಭೌಮಜ್ಞ ಜೀವೈಸ್ಸಂಯೋಗೇ ಸುಕವಿರ್ಯುವತೀಪತೀ । ಪರೋಪಕಾರ ಕೃತ್ತೀಕ್ಷ್ಣೋ ಗಂಧರ್ವಕುಶಲೋನರಃ ।।೪೨।।ತಾ।। ಅಂಗಾರಕನು ಬುಧ, ಗುರುಯುತನಾಗಿದ್ದರೆ, ಜಾತಕನು ಸುಕವಿಯು, ಯೌವನಮತಿಯ ಗಂಡನೂ, ಪರೋಪಕಾರವುಳ್ಳವನೂ, ತೀಕ್ಷ್ಣಸ್ವಭಾವವುಳ್ಳವನೂ, ಗಾನಶಾಸ್ತ್ರದಲ್ಲಿ ಕುಶಲನೂ ಆಗುವನು.

### ಮಂಗಳ, ಬುಧ, ಶುಕ್ರಯುತಿ ಫಲಂ

ಶ್ಲೋಕ।। ಭೌಮಜ್ಞಭೃಗುಭಿರ್ಯೋಗೇ ವಿಕಲಾಂಗಶ್ಚಚುಂಚಲಃ । ಅಕುಲೀನಸ್ಸ-ದೋತ್ಸಾಹೀ ದೃಪ್ತಶ್ಚಮುಖರೋನರಃ ।।೪೩।।ತಾ।। ಜನ್ಮಕಾಲದಲ್ಲಿ ಕುಜನು ಬುಧ, ಶುಕ್ರಯುತನಾಗಿದ್ದರೆ, ಜಾತಕನು ವಿಕಲಾಂಗನೂ, ಚಂಚಲ ಸ್ವಭಾವವುಳ್ಳವನೂ, ಅಸತ್ಕುಲದಲ್ಲಿ ಹುಟ್ಟಿದವನೂ, ಸದಾ ಉತ್ಸಾಹವುಳ್ಳವನ್ನೂ ದರ್ಪವುಳ್ಳವನೂ, ಕೆಟ್ಟ ಮಾತುಳ್ಳವನೂ ಆಗುವನು.

### ಮಂಗಳ, ಬುಧ, ಶನಿಯುತಿ ಫಲಂ

ಶ್ಲೋಕ।। ಕುಜಜ್ಞಶನಿಭಿರ್ಯೋಗೇ ಪ್ರವಾಸೀ ನೇತ್ರ ರೋಗವಾನ್ ಪ್ರೇಷ್ಯೋವದನರೋಗೀಚ ಹಾಸ್ಯಲುಬ್ಧೋಭವೇನ್ನರಃ ।।೪೪।।ತಾ।। ಜನ್ಮಕಾಲದಲ್ಲಿ ಕುಜನು ಶನಿ ಬುಧರ ಸಂಗಡ ಸೇರಿದ್ದರೆ, ನಿತ್ಯಪ್ರವಾಸಿಯೂ, ನೇತ್ರರೋಗ ಉಳ್ಳವನೂ, ಪ್ರೇಷ್ಯನೂ, ಬಾಯಲ್ಲಿ ರೋಗವುಳ್ಳವನೂ, ಹಾಸ್ಯಾಸಕ್ತನೂ, ಲುಬ್ಧನೂ, ಆಗುವನು.

### ಮಂಗಳ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಕುಜೇಜ್ಯಭೃಗುಭಿರ್ಯೋಗೇ ದಿವ್ಯನಾರೀಯುತಃಸುಖೀ । ಸರ್ವಾನಂದ ಕರೋಲೋಕೇಜಾಯತ್ಯೆನೃಪತಿಪ್ರಿಯಃ ।।೪೫।।ತಾ।। ಜನ್ಮಕಾಲದಲ್ಲಿ ಅಂಗಾರಕನು ಗುರು, ಶುಕ್ರಯುತನಾದರೆ, ಜಾತಕನು ದೇವತಾಸ್ತ್ರೀ ಸಮಾನವಾದಂಥಾ ಸ್ತ್ರೀಯುಳ್ಳವನೂ, ಸುಖವಂತನೂ, ಸಮಸ್ತರಿಗೂ ಆನಂದವನ್ನುಂಟು ಮಾಡುವವನೂ, ರಾಜಪ್ರಿಯನೂ ಆಗುವನು.

### ಮಂಗಳ, ಗುರು, ಶನಿಯುತಿ ಫಲಂ

ಶ್ಲೋಕ।। ಭೌಮಜೀವಾರ್ಕಿಭಿರ್ಯೋಗೇ ಕ್ಷತಾಂಗೋರಾಜಸಮ್ಮತಃ । ನೀಚಾ ಚಾರೋನಿರ್ಘೃಶ್ಚ ಭವೇನ್ಮಿತ್ರೈರ್ವಿಗರ್ಹಿತಃ ।।೪೬।।ತಾ।। ಜನ್ಮಕಾಲದಲ್ಲಿ ಕುಜ, ಗುರು,

ಶನಿಗಳ ಸಂಯೋಗವಾದರೆ, ರಾಜನಿಗೆ ಪ್ರೀತಿಯುಳ್ಳವನೂ, ಘಾಯವಾದ ಶರೀರವುಳ್ಳವನೂ, ನೀಚಾಚಾರವುಳ್ಳವನೂ, ನಿರ್ಘೃಣನೂ, ಮಿತ್ರರಿಂದ ಬಿಡಲ್ಪಟ್ಟವನೂ ಆಗುವನು.

## ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಕುಜಶುಕ್ರಾರ್ಕಿಸಂಯೋಗೇ ದುಃಶೀಲಾಪತಿನಃಸುತಃ । ಪ್ರವಾಸ ಶೀಲೋದುಃಖೀಚ ಜಾಯತೇಜಾತಕಃಸದಾ ।।೪೭।।ತಾ।। ಜನ್ಮಲಗ್ನದಲ್ಲಿ ಕುಜ, ಶುಕ್ರ, ಶನಿಗಳು ಸಂಯೋಗವಾಗಿರುವ ಕಾಲದಲ್ಲಿ ಹುಟ್ಟಿದವನು, ದುಶ್ಶೀಲೆಯ ಪುತ್ರನು ಪ್ರವಾಸ ಶೀಲನು, ಸದಾ ದುಃಖಿಯೂ ಆಗುವನು.

## ಬುಧ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಬುಧೇಜ್ಯಭೃಗುಸಂಯೋಗೇ ಸುತರ್ನೃಪಪೂಜಿತಃ । ಕ್ಷತಾರಿರ್ಧೀರ ಕೀರ್ತಿಶ್ಚ ಸತ್ಯವಾದೀಭವೇನ್ನರಃ ।।೪೮।।ತಾ।। ಜನ್ಮಕಾಲದಲ್ಲಿ ಬುಧನಿಗೆ ಗುರು, ಶುಕ್ರರ ಸಂಯೋಗವಾದರೆ, ಹುಟ್ಟಿದವನು ಸುಕುಮಾರವಾದ ಶರೀರವುಳ್ಳವನು, ರಾಜರಿಂದ ಗೌರವಿಸತಕ್ಕವನು, ಸೋತುಹೋದ ಶತ್ರುಗಳುಳ್ಳವನು, ಅತ್ಯಂತ ಕೀರ್ತಿಯುಳ್ಳವನೂ, ಸತ್ಯವಾದಿಯೂ ಆಗುವನು.

## ಬುಧ, ಗುರು, ಶನಿಯುತಿ ಫಲಂ

ಶ್ಲೋಕ।। ಬುಧಜೀವಾರ್ಕಸಂಯೋಗೇ ಮುಖರಃಪರದಾರಕಃ । ಅಸಂಗತ ಕಲಾಭಿಜ್ಞಃ ಸ್ವದೇಶನಿರತೋ ಜನಃ ।।೪೯।।ತಾ।। ಬುಧ, ಶುಕ್ರ, ಶನಿಗಳ ಸಂಯೋಗವಾದ ಕಾಲದಲ್ಲಿ ಹುಟ್ಟಿದವನು ಮುಖರೌದ್ರ ಸ್ವಭಾವವುಳ್ಳವನು *ಪರರ ಹೆಂಡತಿಯರಲ್ಲಿ ಭೋಗವುಳ್ಳವನು, ಅಸಂಗತವಾದ ಶಾಸ್ತ್ರವನ್ನು ತಿಳಿದವನೂ, ಸ್ವದೇಶ ಪರನೂ ಆಗುವನು.

## ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಗುರುಶುಕ್ರಾರ್ಕಿಭಿರ್ಯೋಗೇ ರಾಜಾಭವತಿಕೀರ್ತಿಮಾನ್ । ನೀಚ ವಂಶೇಪಿಸಂಭೂತಃ ಶೀಲಯುಕ್ತೋನೃಪೋತ್ತಮಃ ।।೫೦।।ತಾ।। ಗುರು, ಶುಕ್ರ, ಶನಿಗಳು ಏಕತ್ರಸೇರಿದ ಕಾಲದಲ್ಲಿ ಹುಟ್ಟಿದವನು ಕೀರ್ತಿವಂತನಾದ ರಾಜನಾಗುವನು ಮತ್ತು ಈ ಗುರು, ಶುಕ್ರ ಶನಿಗಳು ಏಕತ್ರ ಸೇರಿದ ಕಾಲದಲ್ಲಿ ನೀಚವಂಶದಲ್ಲಿ ಹುಟ್ಟಿದವನಾದರೂ ಸುಶೀಲಯುಕ್ತನಾದ ರಾಜನಾಗುವನು.

## ರವಿ, ಚಂದ್ರ, ಪಾಪಗ್ರಹಯುತಿ ಫಲಂ

ಶ್ಲೋಕ।। ಪ್ರಾಯಃ ಪಾಪೈರ್ಯ್ರುತೇಚಂದ್ರೇ ಮಾತುರ್ನಾಶೋರವೌಪಿತುಃ ಶುಭಗ್ರಹೈಃ

* ನಿಷ್ಠುರವಾದ ಮಾತುಗಳನ್ನಾಡುವನು

ಶುಭಂವಾಚ್ಯಂ ಮಿಶ್ರೈರ್ಮಿಶ್ರಫಲಂವದೇತ್ ॥೫೧॥ತಾ॥ ಚಂದ್ರನು ಪಾಪಗ್ರಹಯುತನಾದರೆ ತಾಯಿಗೆ ನಾಶಕರವು, ಸೂರ್ಯನು ಪಾಪ ಗ್ರಹಯುತನಾದರೆ ಪಿತೃವಿಗೆ ನಾಶಕರವು, ಈ ಮೇಲೆ ಹೇಳಲ್ಪಟ್ಟ ಸೂರ್ಯ ಚಂದ್ರರಿಗೆ ಶುಭಗ್ರಹಸಂಯೋಗವಾಗಿದ್ದರೆ ಶುಭಫಲವು, ಪಾಪಗ್ರಹಯುತವಾಗಿದ್ದರೆ ಪಾಪಫಲವು, ಮಿಶ್ರಗ್ರಹಯುತವಾಗಿದ್ದರೆ ಆಯಾಯ ಭಾವಗಳಿಗೆ ರೋಗಪೀಡೆಯನ್ನೂ ಸಹ ಯೋಚಿಸಿ ಹೇಳತಕ್ಕದ್ದು.

## ಶುಭ, ಪಾಪ, ತ್ರಿಗ್ರಹಯುತಿ ಫಲಂ

ಶ್ಲೋಕ॥ ಶುಭಾಸ್ತ್ರಯೋ ಗ್ರಹಾಯುಕ್ತಾಃ ಕುರ್ವಂತಿ ಸುಖಿನಂನರಂ । ಪಾಪಾಸ್ತ್ರಯೋ ದುಃಖಿತಂಚ ದುರ್ವಿನೀತಂ ವಿಗರ್ಹಿತಂ ॥೫೨॥ತಾ॥ ಸೂರ್ಯನಿಗಾಗಲೀ, ಚಂದ್ರನಿಗಾಗಲೀ ಮೂರು ಶುಭಗ್ರಹಸಂಯೋಗವಾಗಿದ್ದರೆ, ಜಾತಕನನ್ನು ಸುಖವಂತನನ್ನಾಗಿ ಮಾಡುವುದು. ಹಾಗೆಯೇ ೩ ಪಾಪಗ್ರಹಗಳ ಯೋಗವಾಗಿದ್ದರೆ, ದುಃಖವಂತನನ್ನಾಗಿಯೂ, ಕೆಟ್ಟ ನಡತೆಯುಳ್ಳವನನ್ನಾಗಿಯೂ, ಗರ್ವಿತನನ್ನಾಗಿಯೂ ಮಾಡುವುದು.

ಇತಿ ತ್ರಿಗ್ರಹಾಯೋಗಾಃ

## ಅಥ ಚತುರ್ಗ್ರಹಯೋಗಾಃ

## ರವಿ, ಚಂದ್ರ, ಕುಜ, ಬುಧಯುತಿ ಫಲಂ

ಶ್ಲೋಕ॥ ಅರ್ಕೇಂದುಕುಜಸೌಮ್ಯಾನಾಂ ಯೋಗೇ ಲಿಪಿಕರೋಭವೇತ್ ತಸ್ಕರೋ ಮುಖರೋ ವಾಗ್ಮೀಮಾಯಾಯಾಂಕುಶಲೋಭಿಷಕ್ ॥೫೩॥ತಾ॥ ರವಿ, ಚಂದ್ರ, ಕುಜ, ಬುಧ, ಈ ನಾಲ್ಕು ಗ್ರಹಗಳು ಸೇರಿರುವ ಕಾಲದಲ್ಲಿ ಹುಟ್ಟಿದವನು, ಲಿಪಿಕಾರನಾಗಿಯೂ, ಕಳ್ಳತನದ ಗುಣವುಳ್ಳವನಾಗಿಯೂ, ವಾಗ್ಮಿಯಾಗಿಯೂ, ಮಾಯೆಯಲ್ಲಿ ಕೌಶಲ್ಯವುಳ್ಳವನಾಗಿಯೂ, ಕೆಟ್ಟ ಮಾತುಳ್ಳವನಾಗಿಯೂ, ವೈದ್ಯನಾಗಿಯೂ ಆಗುವನು.

## ರವಿ, ಚಂದ್ರ, ಕುಜ, ಗುರುಯುತಿ ಫಲಂ

ಶ್ಲೋಕ॥ ಸೂರ್ಯೇಂದು ಕುಜಜೀವಾನಾಂಸಂಯೋಗೇ ನಿಪುಣೋಧನೀ । ತೇಜಸ್ವೀ ಗತಶೋಕಶ್ಚ ನೀತಿಜ್ಞಶ್ಚ ಭವೇನ್ನರಃ ॥೫೪॥ತಾ॥ ರವಿ, ಚಂದ್ರ, ಕುಜ, ಗುರುಗಳೇಕತ್ರ ಸೇರಿದ ಕಾಲದಲ್ಲಿ ಹುಟ್ಟಿದ ಜಾತಕನು ನಿಪುಣನೂ, ಧನವಂತನೂ, ತೇಜಸ್ವಿಯೂ, ದುಃಖರಹಿತನೂ, ನೀತಿವಂತನೂ ಆಗುವನು.

## ರವಿ, ಚಂದ್ರ, ಕುಜ, ಶುಕ್ರಯುತಿ ಫಲಂ

ಶ್ಲೋಕ॥ ರವೀಂದ್ರ ಭೌಮ ಶುಕ್ರಾಣಾಂ ಯೋಗೋ ವಿದ್ಯಾರ್ಥ ಸಂಗ್ರಹಃ।

ಸುಖೀಪುತ್ರೀ ಕಳತ್ರೀಚ ವಾಗ್ವೃತ್ತಿರ್ಮನುಜೋಭವೇತ್ ॥೫೫॥ತಾ॥ ರವಿ, ಚಂದ್ರ, ಕುಜ, ಶುಕ್ರರು ಸಂಯೋಗವಾಗಿರುವ ಕಾಲದಲ್ಲಿ ಹುಟ್ಟಿದವನು ವಿಧೇಯನ್ನು ಧನವನ್ನೂ, ಸಂಗ್ರಹಿಸತಕ್ಕವನು, ಕಳತ್ರಪುತ್ರ ಸೌಖ್ಯವುಳ್ಳವನು, ವಾಗ್ವೃತ್ತಿಯಿಂದ ಜೀವಿಸತಕ್ಕವನೂ ಆಗುವನು.

## ರವಿ, ಚಂದ್ರ, ಕುಜ, ಶನಿಯುತಿ ಫಲಂ

ಶ್ಲೋಕ॥ ಅರ್ಕೇಂದು ಕುಜಮಂದಾನಾಂ ಯೋಗೋ ಮೂರ್ಖಶ್ಚ ನಿರ್ಧನಃ ಹ್ರಸ್ವೋವಿಷಮದೇಹಶ್ಚ ಭಿಕ್ಷಾವೃತ್ತಿರ್ಭವೇನ್ನರಃ ॥೫೬॥ತಾ॥ ರವಿ, ಚಂದ್ರ, ಕುಜ, ಶನಿಗಳೇ ಕತ್ರವಿರುವ ಕಾಲದಲ್ಲಿ ಹುಟ್ಟಿದವನು ಮೂರ್ಖನೂ, ನಿರ್ಧನನೂ, ಹ್ರಸ್ವವಾದ ಶರೀರವುಳ್ಳವನೂ ವಿಷಮವಾದ ಶರೀರವುಳ್ಳವನೂ, ಭಿಕ್ಷಾವೃತ್ತಿಯಿಂದ ಜೀವಿಸುವವನೂ ಆಗುವನು.

## ರವಿ, ಚಂದ್ರ, ಬುಧ, ಗುರುಯುತಿ ಫಲಂ

ಶ್ಲೋಕ॥ ಅರ್ಕೇಂದು ಬುಧಜೀವಾನಾಂ ಯೋಗೇ ಶಿಲ್ಪಕರೋಧನೀ । ಸೌವರ್ಣಿತ ಪ್ಲುತಾಕ್ಷಶ್ಚರೋಗ ಹೀನಶ್ಚಜಾಯತೇ ॥೫೭॥ತಾ॥ ರವಿ, ಚಂದ್ರ, ಬುಧ, ಗುರುಗಳೇಕತ್ರವಿರುವ ಕಾಲದಲ್ಲಿ ಹುಟ್ಟಿದವನು ಶಿಲ್ಪಕೆಲಸಗಳನ್ನು ಮಾಡುವವನೂ, ಧನಿಕನೂ, ಸೌವರ್ಣಿಕನೂ, ಮೆಳ್ಳಗಣ್ಣುಗಳುಳ್ಳವನೂ, ರೋಗಹೀನನೂ ಆಗುವನು.

## ರವಿ, ಚಂದ್ರ, ಬುಧ, ಶುಕ್ರಯುತಿ ಫಲಂ

ಶ್ಲೋಕ॥ ರವಿಚಂದ್ರಜ್ಞ ಶುಕ್ರಾಣಾಂ ಸಂಯೋಗೇ ಸುಭಗೋನರಃ ॥ ಭೃತ್ಯಂ ಸ್ವರಾಜ್ಯ ಮಾನ್ಯಶ್ಚವಾಗ್ಮೀಚ ವಿಕಲೋನರಃ ॥೫೮॥ತಾ॥ ರವಿ, ಚಂದ್ರ, ಬುಧ, ಶುಕ್ರರೇಕತ್ರಯಿಂರುವ ಕಾಲದಲ್ಲಿ ಹುಟ್ಟಿದವನು ಸಂಪತ್ತುಳ್ಳವನೂ, ಭೃತ್ಯರುಳ್ಳವನೂ, ಸ್ವರಾಜ್ಯದಲ್ಲಿ ಮಾನ್ಯನೂ, ವಾಗ್ಮಿಯೂ, ವಿಕಲಾಂಗನೂ ಆಗುವನು.

## ರವಿ, ಚಂದ್ರ, ಬುಧ, ಶನಿಯುತಿ ಫಲಂ

ಶ್ಲೋಕ॥ ರವಿಚಂದ್ರಜ್ಞ ಮಂದಾನಾಂ ಯೋಗೇ ಬಿಕ್ಷಾಶನೋನರಃ । ವಿಯುಕ್ತ ಪಿತೃಮಾತೃಭ್ಯಾಂ ವಿಕಲಾಕ್ಷಸ್ಚ ನಿರ್ಧನಃ ॥೫೯॥ತಾ॥ ರವಿ ಚಂದ್ರಬುಧ ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು. ಭಿಕ್ಷಾಶನದಿಂದ ಜೀವನ ಮಾಡುವವನೂ, ಪಿತೃಮಾತೃಗಳಿಂದ ಬಿಡಲ್ಪಟ್ಟವನೂ, ವಿಕಲಾಕ್ಷನೂ, ನಿರ್ಧನನೂ ಆಗುವನು.

## ರವಿ, ಚಂದ್ರ ಗುರು, ಶುಕ್ರಯುತಿ ಫಲಂ

ಶ್ಲೋಕ॥ ಸೂರ್ಯಚಂದ್ರೇಜ್ಯ ಶುಕ್ರಾಣಾಂ ಸಂಬಂಧೇ ರಾಜಪೂಜಿತಃ ಜಲಾರಣ್ಯ ಮೃಗಸ್ವಾಮೀ ನರಃ ಸ್ಯಾನ್ನಿಪುಣಃ ಸುಖೀ ॥೬೦॥ತಾ॥ ರವಿ, ಚಂದ್ರ, ಗುರು, ಶುಕ್ರರೇಕತ್ರಯಿರುವ ಕಾಲದಲ್ಲಿ ಹುಟ್ಟಿದವನು ರಾಜನಿಂದ ಗೌರವ

ಹೊಂದತಕ್ಕವನೂ, ಜಲಕ್ಕೂ ಅರಣ್ಯಕ್ಕೂ ಮೃಗಕ್ಕೂ ಅಧಿಪತಿಯಾಗುವನು, (*ಅಂದರೆ ಅರಣ್ಯಾಧಿಕಾರಿ) ಸುಖವಂತನೂ ಆಗುವನು.

### ಸೂರ್ಯ, ಚಂದ್ರ, ಗುರು, ಶನಿಯುತಿ ಫಲಂ

ಶ್ಲೋ॥ ಸೂರ್ಯ, ಚಂದ್ರೇಜ್ಯ ಮಂದಾನಾಂ ಮಾನ್ಯಶ್ಚ ವನಿತಾಪ್ರಿಯಃ । ಬಹುವಿತ್ತ ಸುತಸ್ತೀಕ್ಷ್ಣಃ ಸಮಾಕ್ಷಪ್ರಜಾಯತೇ ॥೬೧॥

ತಾ॥ ರವಿ, ಚಂದ್ರ, ಗುರು, ಶನಿಗಳೇಕತ್ರಯಿರುವ ಕಾಲದಲ್ಲಿ ಹುಟ್ಟಿದವನು ಮಾನ್ಯನೂ, ವನಿತಾಪ್ರಿಯನೂ, ಬಹುದ್ರವ್ಯವುಳ್ಳವನೂ, ಪುತ್ರಸಂಪತ್ತುಳ್ಳವನೂ, ತೀಕ್ಷ್ಣವಾದವನೂ, ಸಮವಾದ ನೇತ್ರಗಳುಳ್ಳವನೂ ಆಗುವನು.

### ರವಿ, ಚಂದ್ರ, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ರವೀಂದು ಬುಧಮಂದಾನಾಂ ಯೋಗೇನಾತ್ಯಂತದುರ್ಬಲೀ । ವನಿತಾ ಸದೃಶಾಚಾರೋ ಭೀರುರಗ್ರೇಸರೋನರಃ ॥೬೨॥ತಾ॥ ರವಿ, ಚಂದ್ರ, ಶುಕ್ರ, ಶನಿಗಳೇಕತ್ರಯಿರುವ ಕಾಲದಲ್ಲಿ ಹುಟ್ಟಿದವನು ಅತ್ಯಂತ ದುರ್ಬಲವಾದ ಶರೀರವುಳ್ಳವನು ಸ್ತ್ರೀಗೆ ಸದೃಶನಾದವನು ಮತ್ತು ಸ್ತ್ರೀಯ ಆಚಾರವುಳ್ಳವನು ಭಯಪಡುವುದರಲ್ಲಿ ಅಗ್ರೇಸರನೂ ಆಗುವನು.

### ರವಿ, ಕುಜ, ಬುಧ, ಗುರುಯುತಿ ಫಲಂ

ಶ್ಲೋಕ॥ ಅರ್ಕಭೌಮಬುಧೇಜ್ಯಾನಾಂಯೋಗೇ ಸೂತ್ರಕರೋನರಃ । ಪರದಾರರತಃ ಶೂರೋದುಃಖೀ ಚಕ್ರಧರೋ ಭವೇತ್ ॥೬೩॥ತಾ॥ ರವಿ ಕುಜ ಬುಧ ಗುರುಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಸೂತ್ರಕಾರನೂ, (ನೂಲನ್ನೂ ತಯಾರು ಮಾಡುವವನು) ಪರದಾರರತನೂ, ಶೂರನೂ, ದುಃಖವಂತನೂ, ಚಕ್ರಧರನೂ (ಕುಂಬಾರನೂ) ಆಗುವನು.

### ರವಿ, ಚಂದ್ರ, ಕುಜ, ಶುಕ್ರಯುತಿ ಫಲಂ

ಶ್ಲೋಕ॥ ರವೀಂದು ಕುಜ ಶುಕ್ರಾಣಾಂ ಸಂಯೋಗೇ ಪಾರದಾರಿಕಃ । ನಿರ್ಲಜ್ಜೋ ದುರ್ಜನಶ್ಚೌರೋ ವಿಷಮಾಂಗೋಜನೋಭವೇತ್ ॥೬೪॥ತಾ॥ ರವಿ, ಚಂದ್ರ, ಕುಜ, ಶುಕ್ರರೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಪರರ ಹೆಂಡತಿಯಲ್ಲಿ ಭೋಗವುಳ್ಳವನೂ, ಲಜ್ಜೆ ಇಲ್ಲದವನೂ, ದುರ್ಜನನೂ, ಕಳ್ಳನೂ, ವಿಷಮವಾದ ಭೋಗವುಳ್ಳವನೂ ಆಗುವನು.

---

* ಫಾರೆಸ್ಟ್ ಕನ್ಸರವೇಟರ್

## ರವಿ, ಮಂಗಳ ಬುಧ, ಶನಿಯುತಿ ಫಲಂ

ಶ್ಲೋಕ॥ ರವಿಭೌಮಜ್ಞ ಮಂದಾನಾಂ ಯೋಗೇ ಯೋದ್ಧಾಕವಿವರ್ಜನಃ। ಮಂತ್ರೀ ಚಮೂಪತಿ ಸ್ತೀಕ್ಷ್ಣೋ ನೀಚಾಚಾರಶ್ಚಜಾಯತೇ ॥೬೫॥ತಾ॥ ರವಿ, ಕುಜ, ಬುಧ, ಶನಿಗಳು ಸಂಯೋಗವಾಗಿರುವ ಕಾಲದಲ್ಲಿ ಹುಟ್ಟಿದವನು ಯುದ್ಧ ಮಾಡುವವನೂ, ಕವಿಯು, ಮಂತ್ರಿಯು ಚಮೂಪತಿಯೂ, ತೀಕ್ಷ್ಣಸ್ವಭಾವ ಉಳ್ಳವನೂ, ನೀಚಾಚಾರವುಳ್ಳವನೂ ಆಗುವನು.

## ರವಿ, ಕುಜ, ಗುರು, ಶುಕ್ರಯುತಿ ಫಲಂ

ಶ್ಲೋಕ॥ ರವಿ ಭೌಮೇಜ್ಯ ಶುಕ್ರಾಣಾಂ ಯೋಗೇಪೂಜ್ಯೋ ಧನೋಜಯಃ। ಸುಭಗೋ ನೃಪಮಾನ್ಯಶ್ಚಖ್ಯಾತೋಭವತಿ ನೀತಿಭಾಕ್ ॥೬೬॥ತಾ॥ ರವಿ, ಕುಜ, ಗುರು, ಶುಕ್ರರು ಸಂಯೋಗವಾಗಿರುವಕಾಲದಲ್ಲಿ ಹುಟ್ಟಿದವನು ಪೂಜ್ಯನೂ, ಧನವಂತನೂ, ಜಯುವಂತನೂ, (ಸುಭಗಃ) ಸೌಭಾಗ್ಯವುಳ್ಳವನೂ, ರಾಜಪ್ರೀತಿಯುಳ್ಳವನೂ, ನೀತಿವಂತನೂ, ಪ್ರಖ್ಯಾತನೂ ಆಗುವನು.

## ರವಿ, ಕುಜ, ಗುರು, ಶನಿಯುತಿ ಫಲಂ

ಶ್ಲೋಕ॥ ರವಿ ಭೌಮೇಜ್ಯಮಂದಾನಾಂ ಸಂಯೋಗೇ ಗಣನಾಯಕಃ। ಸೋನ್ಮಾದೋ ನೃಪಮಾನ್ಯಶ್ಚ ಸಿದ್ಧಾರ್ಥೋ ಜಾಯತೇನರಃ ॥೬೭॥ತಾ॥ ರವಿ, ಕುಜ, ಗುರು, ಶನಿಯುತರಾದ ಕಾಲದಲ್ಲಿ ಹುಟ್ಟಿದವನು (ಗಣ) ಸಮೂಹಕ್ಕಧಿಪತಿ ಯಾಗುವನು. ಉನ್ಮಾದಯುಕ್ತನೂ, ರಾಜಮಾನ್ಯನೂ, ಸಿದ್ಧಿ ಹೊಂದಿದ ದ್ರವ್ಯವುಳ್ಳವನೂ ಆಗುವನು.

## ರವಿ, ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ರವ್ಯಾರಶುಕ್ರಮಂದಾನಾಂ ಸಂಯೋಗೇ ಜಾಯತೇನರಃ । ಲೋಕ ದ್ವೇಷ್ಯಾಸಮಾಕ್ಷಶ್ಚ ನೀಚಾಚಾರೋ ಜಡಾಕೃತಿಃ ॥೬೮॥ತಾ॥ ರವಿ, ಕುಜ, ಶುಕ್ರ, ಶನಿಗಳ ಸಂಯೋಗವಾದ ಕಾಲದಲ್ಲಿ ಹುಟ್ಟಿದವನು, ಲೋಕದ್ವೇಷಿಯೂ, ಸಮವಾದ ಕಣ್ಣುಳ್ಳವನೂ, ಜಡನಂತೆ ಸ್ತಂಭೀಭೂತನಾಗಿರುವವನೂ, ನೀಚಾಚಾರವುಳ್ಳವನೂ ಆಗುವನು.

## ರವಿ, ಬುಧ, ಗುರು, ಶುಕ್ರಯುತಿ ಫಲಂ

ಶ್ಲೋಕ॥ ರವಿಜ್ಞಜೀವ ಶುಕ್ರಾಣಾಂ ಯೋಗೇ ಬಹುಮತಿರ್ನರಃ । ಧನೀಸುಖೀಚ ಸಿದ್ಧಾರ್ಥ ಪ್ರಕೃಷ್ಟಶ್ಚ ಪ್ರಜಾಯುತೇ ॥೬೯॥ತಾ॥ ರವಿ, ಬಧ, ಗುರು, ಶುಕ್ರರೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಬಹು ಬುದ್ಧಿಯುಳ್ಳವನು,

ದ್ರವ್ಯವಂತನೂ, ಸುಖಿಯೂ, ದ್ರವ್ಯಸಿದ್ಧಿಯುಳ್ಳವನೂ, ಪ್ರಕೃಷ್ಟನೂ ಆಗುವನು.

## ರವಿ, ಬುಧ, ಗುರು ಶನಿಯುತಿ ಫಲಂ

ಶ್ಲೋಕ॥ ಸೂರ್ಯಜ್ಞ ಗುರು ಮಂದಾನಾಂ ಸಂಯೋಗೇಜಾಯತೇ ನರಃ । ಭ್ರಾತೃಮಾನ್ಕಲಹೀ ಮಾನೀಕ್ಲೀಬಾಚಾರೀ ನಿರುದ್ಯಮಃ ॥೭೦॥ತಾ॥ ಸೂರ್ಯ, ಬುಧ, ಗುರು, ಶನಿಗಳೇಕತ್ರ ಇರುವಾಗ ಹುಟ್ಟಿದವನು ಭ್ರಾತೃವಂತನೂ, ಕಲಹ ಮಾಡುವ ಸ್ವಭಾವವುಳ್ಳವನೂ, ಮರ್ಯಾದಸ್ಥನೂ, ನಪುಂಸಕರಂತೆ ಆಚಾರವುಳ್ಳವನೂ, ನಿರುದ್ಯೋಗಿಯೂ ಆಗುವನು.

## ರವಿ, ಬುಧ, ಶುಕ್ರ ಶನಿಯುತಿ ಫಲಂ

ಶ್ಲೋಕ॥ ರವಿಜ್ಞಭೃಗುಮಂದಾನಾಂ ಯೋಗೇ ಮಿತ್ರಯತಶ್ಶುಚಿಃ । ಮುಖರಃ ಸುಭಗಃ ಪಾಜ್ಞೋಜಾಯತೇಚ ಸುಖೀನರಃ ॥೭೧॥ತಾ॥ ರವಿ ಬುಧ ಶುಕ್ರ-ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಮಿತ್ರರಿಂದ ಕೂಡಿದವನು ಶುಚಿಯಾದವನು, ಮನೋಹರವಾದ ಮುಖವುಳ್ಳವನು, ಭಾಗ್ಯವಂತನೂ ಪ್ರಾಜ್ಞನೂ ಆಗುವನು.

## ರವಿ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ರವೀಜ್ಯಭೃಗುಮಂದಾನಾಂ ಸಂಯೋಗೇ ಲೋಭಮಾನವಾ । ಕವಿಃಕಾರಕನಾಥಶ್ಚ ರಾಜಪ್ರೀತೋಭವೇನ್ನರಃ ॥೭೨॥ತಾ॥ ರವಿ, ಗುರು, ಶುಕ್ರರು, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಲೋಭಿಯೂ, ಮಾನವಂತನೂ, ಕವಿಯೂ, ರಾಜಪ್ರೀತಿಯುಳ್ಳವನಾಗುವನು.

## ಚಂದ್ರ, ಕುಜ, ಬುಧ, ಗುರುಯುತಿ ಫಲಂ

ಶ್ಲೋಕ॥ ಚಂದ್ರಾರಬುಧಜೀವಾನಾಂಯೋಗೇ ಶಾಸ್ತ್ರವಿಚಕ್ಷಣಃ । ನರೇಂದ್ರಸ ಕೃಪಾಪಾತ್ರೋ ಮಹಾಬುದ್ಧಿರ್ನರೋಭವೇತ್ ॥೭೩॥ತಾ॥ ಚಂದ್ರ, ಕುಜ, ಬುಧರು, ಗುರುಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಶಾಸ್ತ್ರದಲ್ಲಿ ವಿಚಕ್ಷಣೆಯುಳ್ಳವನು, ರಾಜಕೃಪೆ ಪಾತ್ರನಾದವನು, ಮಹಾ ಬುದ್ಧಿಯುಳ್ಳವನೂ ಆಗುವನು.

## ಚಂದ್ರ, ಕುಜ, ಬುಧ, ಶುಕ್ರಯುತಿ ಫಲಂ

ಶ್ಲೋಕ॥ ಚಂದ್ರಭೌಮಜ್ಞ ಶುಕ್ರಾಣಾ ಮನ್ವಯೇಬಂಧಕೀಪತಿಃ । ನಿದ್ರಾಳುಃ ಕಲಹೀನೀಚೋ ಬಂಧುದ್ವೇಷೀನರೋಭವೇತ್ ॥೭೪॥ತಾ॥ ಚಂದ್ರ, ಕುಜ, ಬುಧರು, ಶುಕ್ರಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಬಂಧಕಿಯ ಗಂಡನು, ಸದಾ ನಿದ್ರೆಯಲ್ಲಿ ಅಪೇಕ್ಷೆಯುಳ್ಳವನು, ಕಲಹಪ್ರಿಯನು, ನೀಚನು ಬಂಧುದ್ವೇಷಿಯೂ ಆಗುವನು.

## ಚಂದ್ರ, ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಚಂದ್ರಭೌಮಜ್ಞಮಂದಾನಾಂಯೋಗೇಶೂರಕುಲೋದ್ಭವಃ । ಪುತ್ರ ಮಿತ್ರ ಕಳತ್ರೀಚ ದ್ವಿಮಾತೃಪಿತೃಕೋಜನಃ ।।೭೫।।ತಾ।। ಚಂದ್ರ, ಕುಜ, ಶುಕ್ರರು, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು. ಪುತ್ರ ಮಿತ್ರ ಕಳತ್ರರುಳ್ಳವನು, ದ್ವಿಮಾತೃಗಳುಳ್ಳವನು, ಈ ಗುಣಗಳಿಂದ ಯುಕ್ತನಾದವನೂ ಆಗುವನು.

## ಚಂದ್ರ, ಕುಜ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಚಂದ್ರಾರಗುರುಶುಕ್ರಾಣಾಂ ಯೋಗೇಸಾಹಸಿಕೋನರಃ । ವಿಕಲಾಂಗೋ ಧನೀಪುತ್ರೀ ಮಾನೀಪ್ರಾಜ್ಞೋಪಿಜಾಯತೇ ।।೭೬।।ತಾ।। ಚಂದ್ರ, ಕುಜ, ಗುರು, ಶುಕ್ರರೇಕತ್ರ ಇದ್ದ ಕಾಲದಲ್ಲಿ ಹುಟ್ಟಿದವನು ಸಾಹಸವಂತನು, ವಿಕಲಾಂಗನೂ, ಧನವಂತನೂ, ಪುತ್ರವಂತನೂ, ಮಾನಿಯೂ, ಪ್ರಾಜ್ಞನೂ ಆಗುವನು.

## ಚಂದ್ರ, ಕುಜ, ಗುರು, ಶನಿಯುತಿ ಫಲಂ

ಶ್ಲೋಕ।। ಚಂದಾರರಜೀವಮಂದಾನಾಂ ಸಂಯೋಗೇಬಧಿರೋಧನಃ । ಸೋನ್ಮಾದಃಸ್ಥಿರವಾಕ್ಯಶ್ಚ ಶೂರೋವಜ್ಞೋಭವೇನ್ನರಃ ।।೭೭।।ತಾ।। ಚಂದ್ರ, ಕುಜ, ಗುರು, ಶನಿಗಳ ಸಂಯೋಗವಾದ ಕಾಲದಲ್ಲಿ ಹುಟ್ಟಿದವನು, ಕಿವುಡನೂ, ಧನವಂತನೂ, ಉನ್ಮತ್ತನೂ, ಸ್ಥಿರವಾದ ಮಾತುಳ್ಳವನೂ, ಶೂರನೂ, ತಿಳುವಳಿಕೆ ಇಲ್ಲದವನೂ ಆಗುವನು.

## ಚಂದ್ರ, ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಚಂದ್ರಾರಭೃಗುಮಂದಾನಾಂ ಮಿಲನೇಕುಲಟಾಪತಿಃ। ಸೋದ್ವೇಗಃ ಸರ್ಪತುಲ್ಯಾಕ್ಷಃ ಪ್ರಗಲ್ಭೋಜಾಯತೇನರಃ ।।೭೮।।ತಾ।। ಚಂದ್ರ, ಕುಜ, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ಕುಲಾಟಪತಿಯೂ, ಸದಾಕಾಲ ದಲ್ಲಿಯೂ ಕಾರ್ಯಾಸಕ್ತನೂ, ಹಾವಿನಂತೆ, ಕಣ್ಣುಳ್ಳವನೂ, ಪ್ರಗಲ್ಭಿಯೂ ಆಗುವನು.

## ಚಂದ್ರ, ಶುಕ್ರ, ಬುಧ, ಗುರುಯುತಿ ಫಲಂ

ಶ್ಲೋಕ।। ಚಂದ್ರಜ್ಞ ಜೀವಶುಕ್ರಾಣಾಂ ಮಿಲನೇಸುಭಗೋಧನೀ । ದ್ವಿಮಾತೃ ಪಿತ-ಕೋಪ್ರಾಜ್ಞೋ ಗತಾರಿರ್ಜಾಯತೇನರಃ ।।೭೯।।ತಾ।। ಚಂದ್ರ, ಶುಕ್ರ, ಬುಧ, ಗುರುಯುತರಾಗಿರುವ ಕಾಲದಲ್ಲಿ ಹುಟ್ಟಿದವನು. ಸುಭಗನೂ, ಧನವಂತನೂ, ದ್ವಿಮಾತೃಗಳುಳ್ಳವನೂ, ಪಿತೃಕನೂ, ಪ್ರಾಜ್ಞನೂ, ಶತೃಗಳಿಲ್ಲದವನೂ ಆಗುವನು.

## ಚಂದ್ರ, ಬುಧ, ಗುರು, ಶನಿಯುತಿ ಫಲಂ

ಶ್ಲೋಕ॥ ಚಂದ್ರಜ್ಞಗುರುಮಂದಾನಾಂ ಯೋಗೇಬಂಧುಪ್ರಿಯಃಕವಿಃ । ತೇಜಸ್ವೀರಾಜಮಂತ್ರೀಚ ಯುಶೋಧರ್ಮಯುತೋನರಃ ॥೮೦॥ತಾ॥ ಚಂದ್ರ, ಬುಧ, ಗುರು, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ಬಂಧುಗಳಿಗೆ ಪ್ರಿಯನೂ, ಕವಿಯೂ, ತೇಜಸ್ವಿಯೂ, ರಾಜಮಂತ್ರಿಯೂ, ಯಶೋವಂತನೂ, ಧನವಂತನೂ ಆಗುವನು.

## ಚಂದ್ರ, ಬುಧ, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ಇಂದುಜ್ಞಭೃಗುಮಂದಾನಾಂಯೋಗೇ ಮಾತ್ರಾವಿವರ್ಜಿತಃ । ತ್ವಗ್ದೋಷಿಸುಭಗೋದುಃಖೀ ಬಹುಭಾರ್ಯೋಭವೇನ್ನರಃ ॥೮೧॥ತಾ॥ ಚಂದ್ರ, ಬುಧ, ಶುಕ್ರ, ಶನಿಗ್ರಹಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ತಾಯಿ ಇಲ್ಲದವನು, ಚರ್ಮರೋಗವುಳ್ಳವನೂ, ಸೌಭಾಗ್ಯವಂತನೂ, ದುಃಖವುಳ್ಳವನೂ, ಅನೇಕ ಭಾರ್ಯೆಯರುಳ್ಳವನೂ ಆಗುವನು.

## ಚಂದ್ರ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ಚಂದ್ರೇಜ್ಯಸಿತಸೌರೀಣಾ ಮನ್ವಯೇಪಾರದಾರಿಕಃ । ಪ್ರಾಜ್ಞೋನಿರ್ದ್ರವ್ಯಬಂಧುಶ್ಚ ಸ್ಥೂಲಭಾರ್ಯೋಭವೇನ್ನರಃ ॥೮೨॥ ಚಂದ್ರ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ಯಾವ ವಂಶದಲ್ಲಿ ಹುಟ್ಟಿದನೋ ಆ ವಂಶವೇ ಪರದಾರಾಭಿಗಾಮಿ ವಂಶವೆಂದು ವಿಶೇಷ ಫಲವು ಹೇಳಲ್ಪಟ್ಟಿರುತ್ತೆ. ತಿಳುವಳಿಕೆಯುಳ್ಳವನೂ, ಧನವಿಲ್ಲದನೂ, ಸ್ಥೂಲವಾದ ಶರೀರವುಳ್ಳ ಹೆಂಡತಿಯುಳ್ಳವನೂ ಆಗುವನು.

## ಕುಜ, ಬುಧ, ಗುರು, ಶುಕ್ರಯುತಿ ಫಲಂ

ಶ್ಲೋಕ॥ ಭೌಮಜ್ಞ ಗುರುಶುಕ್ರಾಣಾಂ ಯೋಗೇಸ್ತ್ರೀಕಲಹಪ್ರಿಯಃ । ಧನೀ ಸುಶೀಲೋ ನಿರೋಗಿಲೋಕಪೂಜ್ಯೋಭವೇನ್ನರಃ ॥೮೩॥ತಾ॥ ಕುಜ, ಬುಧ, ಗುರು, ಶುಕ್ರರು ಏಕತ್ರ ಸೇರಿರುವ ಕಾಲದಲ್ಲಿ ಹುಟ್ಟಿದವನು, ಸ್ತ್ರೀಯರಲ್ಲಿ ಕಲಹ ಮಾಡುವುದರಲ್ಲಿ ಪ್ರೀತಿಯುಳ್ಳವನು, ಧನವಂತನು, ಸದಾಚಾರಶೀಲನು, ರೋಗರಹಿತನು, ಲೋಕಪೂಜ್ಯನು ಆಗುವನು.

## ಕುಜ, ಬುಧ, ಗುರು, ಶನಿಯುತಿ ಫಲಂ

ಶ್ಲೋಕ॥ ಭೌಮಜ್ಞ ಗುರುಸೌರೀಣಾಂ ಯೋಗೇಶೂರಶ್ಚ ನಿರ್ಧನಃ । ಸತ್ಯ ಶೌಚಯುತೋವಿದ್ವಾನ್ ವಾದೀವಾಗ್ಮೀ ನರೋಭವೇತ್ ॥೮೪॥ತಾ॥ ಕುಜ, ಬುಧ,

ಗುರು, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ಶೂರನೂ, ನಿರ್ದನನು, ಸತ್ವವಂತನು, ಆಚಾರಶೀಲನು, ವಿದ್ವಾಂಸನು, ವಿವಾದ ಮಾಡುವವನು, ವಾಗ್ಮಿಯೂ ಆಗುವನು.

## ಕುಜ, ಬುಧ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಭೌಮಜ್ಞ ಭೃಗುಮಂದಾನಾಂ ಸಾರಮೇಯರುಚಿರ್ಭವೇತ್ । ಮಲ್ಲೋನ್ಯಪುಷ್ಟಯೋದ್ಧಾಚ ದೃಢಾಂಗೋ ಜಾಯತೇನರಃ ।।೮೫।।ತಾ।। ಕುಜ, ಬುಧ, ಶುಕ್ರ ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ನಾಯಿಯನ್ನು ಸಾಕುವುದರಲ್ಲಿ ಅತ್ಯಂತ ಅಭಿಲಾಷೆಯುಳ್ಳವನು, ಮಲ್ಲನು ಅನ್ನರಿಂದ ಪುಷ್ಟಿಕರವಾದ ಶರೀರವುಳ್ಳವನಾಗಿ ಯುದ್ಧ ಮಾಡುವವನೂ, ದೃಢವಾದ ಶರೀರವುಳ್ಳವನೂ ಆಗುವನು.

## ಕುಜ, ಗುರು ಶುಕ್ರ ಶನಿಯುತಿ ಫಲಂ

ಶ್ಲೋಕ।। ಭೌಮೇಜ್ಯ ಭೃಗುಮಂದಾನಾಂ ಮಿಲನೇಸಾಹಸಪ್ರಿಯಃ । ಧನೀಸತೇಜಾಃ ಸ್ತ್ರೀಲೋಲಃ ಕಿತವೋಜಾಯತೇನರಃ ।।೮೬।।ತಾ।। ಕುಜ, ಗುರು, ಶುಕ್ರ, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು, ಸಾಹಸಿಕವಾದ, ಕಾರ್ಯದಲ್ಲಿ ಪ್ರೀತಿಯುಳ್ಳವನೂ, ಧನವಂತನೂ, ತೇಜಸ್ವಿಯೂ, ಸ್ತ್ರೀಲೋಲನೂ, ಕಿತವಃ- ಜೂಜುಗಾರನೂ ಆಗುವನು.

## ಬುಧ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಬುಧೇಜ್ಯ ಭೃಗುಮಂದಾನಾಂ ಯೋಗೇಕಾಮಾತುರೋ ಜನಃ । ವಿಧೇಯಭೃತ್ಯೋಮೇಧಾವೀ ತೀವ್ರಶಾಸ್ತ್ರರತೋಭವೇತ್ ।।೮೭।।ತಾ।। ಬುಧ, ಗುರು, ಶುಕ್ರ, ಶನಿಗಳೇಕತ್ರ ಸೇರಿರುವ ಕಾಲವಲ್ಲಿ ಹುಟ್ಟಿದವನು, ಕಾಮಾತುರನು, ವಿಧೇಯನಾದ ಭೃತ್ಯನು, ಬುದ್ಧಿವಂತನು, ಶಾಸ್ತ್ರದಲ್ಲಿ ತೀವ್ರವಾದ ಬುದ್ಧಿಯುಳ್ಳವನೂ ಆಗುವನು.

ಇತಿ ಚಾತುರ್ಗ್ರಹ ಯೋಗಾಃ

## ಅಥ ಪಂಚಗ್ರಹಯೋಗಾಃ

## ರವಿ, ಚಂದ್ರ, ಕುಜ, ಬುಧ, ಶುಕ್ರಯುತಿ ಫಲಂ

ಶ್ಲೋಕ।। ಬಹುಪ್ರಪಂಚೋ ದುಃಖೀಚಜಾಯಾವಿರಹತಾಪಿತಃ । ಕ್ಲೀಬಸ್ಯಚ- ಸುಖಾಸೂರ್ಯಚಂದ್ರಾರ ಬುಧಭಾರ್ಗವೈ ।।೮೮।।ತಾ।। ರವಿ, ಚಂದ್ರ, ಕುಜ, ಬುಧ ಶುಕ್ರರೇಕತ್ರ ಸೇರಿರುವ ಕಾಲದಲ್ಲಿ ಹುಟ್ಟಿದವನು ಪತ್ನಿಯ ವಿಯೋಗದಿಂದ

ವಿರಹತಾಪಿತನಾಗುವನು, ನಪುಂಸಕರ ಸ್ನೇಹವುಳ್ಳವನು, ಭಿನ್ನ ಭೇದಗಳನ್ನು ಮಾಡುವವನು, ದುಃಖಿಪಡುವವನೂ ಆಗುವನು.

### ರವಿ, ಚಂದ್ರ, ಕುಜ, ಬುಧ, ಶನಿಯುತಿ ಫಲಂ

ಶ್ಲೋಕ।। ಅಲ್ಪಾಯುರ್ವಿಕಲತ್ರಶ್ಚ ದುಃಖೀಸುತ ವಿವರ್ಜಿತಃ। ರವೀಂದ್ವಾರಜ್ಞ ಸೌರೀಣಾಂ ಯೋಗೋಬಂಧನಭಾಗಪಿ ।।೮೯।।ತಾ।। ರವಿ, ಚಂದ್ರ, ಕುಜ, ಬುಧ, ಶನಿಯುತರಾಗಿದ್ದರೆ ಜಾತಕನು ಅಲ್ಪಾಯು, ವಿಕಲಾಂಗವಾದ ಕಳತ್ರವುಳ್ಳವನು, ದುಃಖಿ, ಪುತ್ರಹೀನ ಮತ್ತು ಬಂಧನ ಭಾಗದಲ್ಲಿದ್ದರೆ ಬಂಧನ ಪ್ರಾಪ್ತಿಯೂ ಆಗುವನು.

### ರವಿ, ಚಂದ್ರ, ಕುಜ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಜಾತ್ಯಂಧೋ ಬಹುದುಃಖೀಚ ಪಿತೃಮಾತೃವಿವರ್ಜಿತಃ । ಗಾನ ಪ್ರೀತೋ ನರೋಭಾನು ಚಂದ್ರಾರಗುರುಭಾರ್ಗವೈಃ ।।೯೦।।ತಾ।। ರವಿ, ಚಂದ್ರ, ಕುಜ, ಗುರು, ಶುಕ್ರರೇಕತ್ರ ಸೇರಿರುವ ಕಾಲದಲ್ಲಿ ಹುಟ್ಟಿದವನು ಜಾತ್ಯಾಂಧನೂ, ಬಹುದುಃಖಿಯೂ, ಗಾನಪ್ರೀತಿಯುಳ್ಳವನೂ ಆಗವನು.

### ರವಿ, ಚಂದ್ರ, ಕುಜ, ಗುರು, ಶನಿಯುತಿ ಫಲಂ

ಶ್ಲೋಕ।। ಪರದ್ರವ್ಯಹರೋ ಯೋದ್ಧಾ ಪರತಾಪಕರಃ ಖಲಃ ಸಮರ್ಥೋ ಜಾಯತೇ ಸೂರ್ಯಚಂದ್ರಾರ ಗುರುಸೌರಿಭಿಃ ।।೯೧।।ತಾ।। ರವಿ, ಚಂದ್ರ, ಕುಜ, ಗುರು, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಯುದ್ಧ ಮಾಡುವವನು, ಪರದ್ರವ್ಯಾಪಹಾರ ಮಾಡುವುದರಲ್ಲಿಯೂ, ಪರರಿಗೆ ಸಂಕಟವನ್ನುಂಟು ಮಾಡುವುದರಲ್ಲಿಯೂ, ಸಮರ್ಥನೂ ದುರ್ಜನನೂ ಆಗುವನು.

### ರವಿ, ಚಂದ್ರ, ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಮಾನಾಚಾರ ಧನೈರ್ಹೀನಃ ಪರದಾರರತೋನರಃ । ವಿಕಸ್ಥೈರ್ಜಾಯತೇ ಭಾನುಚಂದ್ರಾರಭೃಗುಸೌರಿಭಿಃ।।೯೨।।ತಾ।। ರವಿ, ಚಂದ್ರ, ಕುಜ, ಶುಕ್ರ, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಮಾನವೂ, ಆಚಾರವೂ, ಧನವೂ ಇಲ್ಲದವನೂ, ಪರದಾರರತನೂ ಆಗುವನು.

### ರವಿ, ಚಂದ್ರ, ಬುಧ, ಶುಕ್ರ, ಗುರುಯುತಿ ಫಲಂ

ಶ್ಲೋಕ।। ರಾಜಮಂತ್ರೀಭೂರಿವಿತ್ತೋ ಯಂತ್ರಜ್ಞೋದಂಡನಾಯಕಃ । ಖ್ಯಾತೋಜನೋಯಶಸ್ವೀಚ ರವೀಂದ್ರಜ್ಞೇಜ್ಯಭಾರ್ಗವೈಃ ।।೯೩।।ತಾ।। ರವಿ, ಚಂದ್ರ, ಬುಧ, ಗುರು, ಶುಕ್ರರೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ರಾಜಮಂತ್ರಿಯೂ,

ಭೂರಿದ್ರವ್ಯವುಳ್ಳವನು, ಯಂತ್ರವಿಧಿ ತಿಳಿದವನು, ದಂಡನಾಧಿಪತಿ (ಮ್ಯಾಜಿಸ್ಟ್ರೇಟ್ ಅಥವಾ ಜಡ್ಜೀ), ಖ್ಯಾತಪುರುಷನು, ಯಶಸ್ವಿಯೂ ಆಗುವನು.

## ರವಿ, ಚಂದ್ರ, ಬುಧ, ಗುರು, ಶನಿಯುತಿ ಫಲಂ

ಶ್ಲೋಕ।। ಪರಾನ್ನಭೋಜೀಸೋನ್ಮಾದಃ ಪ್ರಿಯುತಪ್ತಶ್ಚವಂಚಕಃ । ಉಗ್ರೋಭೀರುರ್ನರಃ ಸೂರ್ಯಚಂದ್ರಜ್ಞ ಗುರುಸೌರಿಭಿಃ ।।೯೪।।ತಾ।। ರವಿ, ಚಂದ್ರ, ಗುರು, ಶನಿಗಳು ಏಕತ್ರ ಸೇರಿರುವ ಕಾಲದಲ್ಲಿ ಹುಟ್ಟಿದವನು ಪರಾನ್ನ ಭೋಜನ ಮಾಡುವುದರಲ್ಲಿ ನಿರತನೂ, ಉನ್ಮತ್ತನೂ, ಹೆಂಡತಿಯಿಂದ ಸಂಕಟಪಡುವವನೂ, ವಂಚನೂ, ಉಗ್ರಸ್ವಭಾವವುಳ್ಳವನೂ, ಭಯಗ್ರಸ್ತನೂ ಆಗುವನು.

## ರವಿ, ಚಂದ್ರ, ಬುಧ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಧನಪುತ್ರಸುಖೈರ್ಹೀನೋ ಮೃತ್ಯುತ್ಸಾಹೀಚಲೋಮಶಃ । ದೀರ್ಘೋಭಮತಿಸೂರ್ಯೇಂದು ಬುಧಶುಕ್ರಶನೈಶ್ಚರಃ ।।೯೫।।ತಾ।। ರವಿ, ಚಂದ್ರ, ಬುಧ, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಧನಪುತ್ರ ಸುಖ ಇವುಗಳಿಂದ ಬಾಹಿರನು, ಮೃತ್ಯುವನ್ನು ಹೊಂದುವುದಕ್ಕೆ ಉತ್ಸಾಹವುಳ್ಳವನು, ಶರೀರಮೇಲೆ ಅಧಿಕವಾಗಿ ರೋಮಗಳುಳ್ಳವನೂ, ದೀರ್ಘವಾದ ಶರೀರವುಳ್ಳವನೂ ಆಗುವನು.

## ರವಿ, ಚಂದ್ರ, ಬುಧ, ಶುಕ್ರ, ಶನಿಯುತಿ ಫಲಂ

ಶ್ಲೋಕ।। ತಂದ್ರೀಜಲರತೋವಾಗ್ಮೀ ಚಲಚಿತ್ತೋಂಗನಾಪ್ರಿಯಃ। ಪ್ರಾಯಶಃ ಶತ್ರುಭಿರ್ಭೀತೋ ರವೀಂದ್ವಿಜ್ಯಸಿತಾಸಿತೈ ।।೯೬।।ತಾ।। ರವಿ, ಚಂದ್ರ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ನಿದ್ರೆಯಲ್ಲಿ ನಿರತನೂ, ನೀರಿನಲ್ಲಿ ಆಸಕ್ತಿಯುಳ್ಳವನೂ, ವಾಗ್ಮಿಯೂ, ಚಪಲಚಿತ್ತನೂ, ಸ್ತ್ರೀಯರಲ್ಲಿ ಪ್ರೀತಿಯುಳ್ಳವನೂ,ಪ್ರಾಯಶಃ ಶತ್ರುಗಳಲ್ಲಿ ಭಯಪಡತಕ್ಕವನೂ ಆಗುವನು.

## ಸೂರ್ಯ, ಮಂಗಳ, ಬುಧ, ಗುರು, ಶುಕ್ರಯುತಿ ಫಲಂ

ಶ್ಲೋಕ।। ಸ್ಥಿತೋ ಬಹುಹಯಃಕಾಮೀನರೋ ಶೋಕಶ್ಚಮೂಪತಿಃ । ಸೂರ್ಯಾರಜ್ಞೇಜ್ಯಶುಕ್ರಾಣಾಂ ಯೋಗೇಭೂಪತಿವಲ್ಲಭಃ ।।೯೭।।ತಾ।। ರವಿ, ಕುಜ, ಬುಧ, ಗುರು ಶುಕ್ರಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಅಧಿಕವಾಗಿ ಅಶ್ವಗಳುಳ್ಳವನು, ಕಾಮಿ, ದುಃಖವನ್ನನುಭವಿಸದಿರುವನೂ, ಚಮೂಪತಿಯೂ, ರಾಜವಲ್ಲಭನೂ ಆಗುವನು.

## ರವಿ, ಕುಜ, ಬುಧ, ಗುರು, ಶನಿಯುತಿ ಫಲಂ

ಶ್ಲೋಕ।। ಭಿಕ್ಷಾಭೋಗೀಚರೋಗೀಚ ನಿತ್ಯೋದ್ವೇಗೀಮಲೀಮಸಃಜೀರ್ಣಾ-

ನರೋ ಭಾನುಭೌಮಜ್ಞಜೀವ ಶನಿರ್ಭವೇತ್ ॥೯೮॥ತಾ॥ ರವಿ, ಕುಜ, ಬುಧ, ಗುರು, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಭಿಕ್ಷೆಮಾಡುವವನೂ, ಭೋಗಪುರುಷನೂ, ರೋಗಿಯೂ, ನಿತ್ಯವೂ ಕಾರ್ಯವನ್ನು ಮಾಡುತ್ತಲೇ ಇರುವನೂ, ಮಲಿನನೂ, ಕೃಶಾಂಗನೂ ಆಗುವನು.

### ರವಿ, ಬುಧ, ಕುಜ, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ವ್ಯಾಧಿಭಿಃಶತ್ರುಭಿರ್ಗ್ರಸ್ತಃ ಸ್ಥಾನಭ್ರಷ್ಟೋಬುಭುಕ್ಷಿತಃ। ನರಸ್ಯಾದ್ವಿಕಲಃ ಸೂರ್ಯಕುಜ್ಞಜಭೃಗುಸೌರಿಭಿಃ ॥೯೯॥ತಾ॥ ರವಿ, ಕುಜ, ಬುಧ, ಶುಕ್ರತಿ ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ವ್ಯಾಧಿಗ್ರಸ್ಥನೂ, ಶತ್ರುಗಳಿಂದ ಆವಸರಿಸಲ್ಪಟ್ಟವನೂ, ಸ್ಥಾನಭ್ರಷ್ಠನೂ, ಭುಭುಕ್ಷಿತನೆಂದರೆ ಭೋಜನದಲ್ಲಿ ಅಪೇಕ್ಷೆಯುಳ್ಳವನೂ, ತೇಜೋಹೀನನೂ ಆಗುವನು.

### ರವಿ, ಕುಜ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ವಿಜ್ಞೋವಿಚಾರದೇಹೀಚ ಧಾತುಯಂತ್ರರಸಾಯನೇ । ನರಃಪ್ರಸಿದ್ಧೋ ರವ್ಯಾ ಗುರುಶುಕ್ರಾರ್ಕಿಭಿರ್ಯುತೈಃ॥೧೦೦॥ತಾ॥ ರವಿ, ಕುಜ, ಗುರು, ಶುಕ್ರ, ಶನಿಗಳೇಕತ್ರ ಸೇರಿರುವ ಕಾಲದಲ್ಲಿ ಹುಟ್ಟಿದವನು ವಿಶೇಷವಾಗಿ ತಿಳಿದವನು, ಧಾತು, ಯಂತ್ರ, ರಸಾಯನ ಮೊದಲಾದ ವಿದ್ಯೆಯಲ್ಲಿ ಪ್ರಸಿದ್ಧನೂ ಆಗುವನು.

### ರವಿ, ಬುಧ, ಗುರು, ಶುಕ್ರ ಶನಿಯುತಿ ಫಲಂ

ಶ್ಲೋಕ॥ ಮಿತ್ರಪ್ರಿಯಃ ಶಾಸ್ತ್ರವೇತ್ತಾ ಧಾರ್ಮಿಕೋಗುರುಸಮ್ಮತಃ । ದಯಾಲುಃ ಸೂರ್ಯಸೌಮ್ಯೇಜ್ಯ ಭೃಗುಪುತ್ರಶನೈಶ್ಚರೈಃ ॥೧೦೧॥ತಾ॥ ರವಿ, ಬುಧ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನನು, ಪ್ರೀತಿಯುಕ್ತನೂ, ಮಿತ್ರಪ್ರಿಯನೂ, ಶಾಸ್ತ್ರವನ್ನು ತಿಳಿದವನೂ, ಧರ್ಮವಂತನೂ, ಗುರುಗಳಿಗೆ ಸಮ್ಮತನಾದವನೂ, ದಯಾವಂತನೂ ಆಗುವನು.

### ಚಂದ್ರ, ಕುಜ, ಬುಧ, ಗುರು ಶುಕ್ರಯುತಿ ಫಲಂ

ಶ್ಲೋಕ॥ ಸಾಧುಃಕಲ್ಮಷಹೀನಶ್ಚ ಧನವಿದ್ಯಾಸುಖಾನ್ವಿತಃ । ಬಹುಮಿತ್ರೋ ನರಶ್ಚಂದ್ರ ಭೌಮಜ್ಞ ಗುರುಭಾರ್ಗವೈಃ ॥೧೦೨॥ತಾ॥ ಚಂದ್ರ, ಕುಜ, ಬುಧ, ಗುರು, ಶುಕ್ರರೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಧನ, ವಿದ್ಯಾ ಸುಖಾನ್ವಿತನೂ ಕಲ್ಮಷಹೀನನೂ, ಸಾಧುತ್ವವುಳ್ಳವನೂ, ಬಹುಮಿತ್ರರುಳ್ಳವನೂ ಆಗುವನು.

### ಚಂದ್ರ, ಕುಜ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ಪರಾನ್ನ ಪಾಚಕೋ ನಿಸ್ವೋ ಮಲಿನಸ್ತಿಮಿರಾಮಯೀ। ನರೋಭವತಿ

ಚಂದ್ರಾರ ಜೀವ ಶುಕ್ರ ಶನೈಶ್ಚರೈಃ ॥೧೦೩॥ತಾ॥ ಚಂದ್ರ, ಕುಜ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು, ಪರರ ಗೃಹದಲ್ಲಿ ಅಡಿಗೆ ಮಾಡುವವನೂ, (ಸ್ವಯಂಪಾಕೀ) ದರಿದ್ರನೂ, ಮಲಿನನೂ, ತಿಮಿರರೋಗವುಳ್ಳವನೂ, (ಅಂದರೆ ತಿಮಿರವೆಂಬ ಹುರುಪು ಕಜ್ಜಿಯ ರೋಗವುಳ್ಳವನೂ) ಸಹ ಆಗುವನು.

## ಚಂದ್ರ, ಕುಜ, ಬುಧ, ಶುಕ್ರ ಶನಿಯುತಿ ಫಲಂ

ಶ್ಲೋಕ॥ ಬಹುಮಿತ್ರಾರಿ ಪಕ್ಷಶ್ಚ ದುಃಶೀಲಃ ಪರಪೀಡಕಃ । ಮಾನೀನರಶ್ಚಂದ್ರಭೌಮ ಬುಧಶುಕ್ರಶನೈಶ್ಚರೈಃ ॥೧೦೪॥ ಚಂದ್ರ, ಕುಜ, ಬುಧ, ಶುಕ್ರ, ಶನಿಯುತರಾಗಿರುವ ಕಾಲದಲ್ಲಿ ಹುಟ್ಟಿದವನು ಬಹು ಮಿತ್ರರುಳ್ಳವನು, ಶತ್ರುಗಳುಳ್ಳವನು, ದುಶ್ಶೀಲನು, ಪರರಿಗೆ ಪೀಡೆಯನ್ನುಂಟುಮಾಡುವನೂ, ಮಾನವಂತನೂ ಆಗುವನು.

## ಚಂದ್ರ, ಬುಧ, ಗುರು, ಶುಕ್ರ ಶನಿಯುತಿ ಫಲಂ

ಶ್ಲೋಕ॥ ರಾಜಮಂತ್ರೀರಾಜತುಲ್ಯೋ ಲೋಕಪೂಜ್ಯೋಗಣಾಧಿಪಃ । ಚಂದ್ರಜ್ಞಗುರುಶುಕ್ರಾರ್ಕಿ ಯೋಗೇಜಾತೋಭವೇನ್ನರಃ ॥೧೦೫॥ತಾ॥ ಚಂದ್ರ, ಬುಧ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿವವನು ರಾಜನ ಮಂತ್ರಿಯೂ, ರಾಜಸಮಾನನೂ, ಲೋಕಪೂಜ್ಯನೂ, ಸಮೂಹಕ್ಕಧಿಪತಿಯೂ ಆಗುವನು.

## ಕುಜ, ಬುಧ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ॥ ಅಶೋಕಸ್ತಾ ಮಸೋನಿಸ್ವಃ ಸೋನ್ಮಾದೋ ರಾಜವಲ್ಲಭಃ । ನಿದ್ರಾತುರೋ ಭೌಮಬುಧಜೀವ ಶುಕ್ರಶನೈಶ್ಚರೈಃ ॥೧೦೬॥ತಾ॥ ಕುಜ, ಬುಧ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಶೋಕವಿಲ್ಲದವನೂ, ತಾಮಸನೂ, ದರಿದ್ರನೂ, ಉನ್ಮಾನವುಳ್ಳವನೂ, ರಾಜಪ್ರೀತಿಯುಳ್ಳವನೂ, ನಿದ್ರಾತುರನೂ ಆಗುವನು.

ಇತಿ ಪಂಚಗ್ರಹಯೋಗಾಃ

## ಅಥ ಷಡ್ಗ್ರಹಯೋಗಾಃ

## ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರಯುತಿ ಫಲಂ

ಶ್ಲೋಕ॥ ವಿದ್ಯಾಧರ್ಮ ಧನೈರ್ಯುಕ್ತೋ ಬಹುಭಾಷೀಚ ಭಾಗ್ಯವಾನ್ ಸೂರ್ಯಾದ್ಯೈಃ ಶುಕ್ರಪರ್ಯಂತೈರ್ಲಾಭೋ ಭವತಿ ಷಡ್ಗ್ರಹೈಃ ॥೧೦೭॥ತಾ॥ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರರೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ವಿದ್ಯಾವಂತನು, ಧರ್ಮಿಷ್ಠನು, ಧನಯುಕ್ತನು, ಬಹುಭಾಷಿಯ ಭಾಗ್ಯವಂತನೂ ಆಗುವನು.

## ರವಿ, ಚಂದ್ರ, ಕುಜ, ಬುಧ, ಗುರು, ಶನಿಯುತಿ ಫಲಂ

ಶ್ಲೋಕ।। ಪರಕಾರ್ಯರತೋದಾತಾ ಶುದ್ಧಾತ್ಮ ಚಂಚಲಾಕೃತಿ- । ಷಡ್ಭಿಗ್ರಹೈರ್ವಿನಾಶುಕ್ರೇ ರಮತೇ ವಿಜನೇಜನಃ ।।೧೦೮।।ತಾ।। ರವಿ, ಚಂದ್ರ, ಕುಜ, ಬುಧ, ಗುರು, ಶನಿಯುತರಾದರೆ ಜಾತಕನು ಪರಕಾರ್ಯರತನೂ, ಧಾತೃತ್ವವುಳ್ಳವನೂ, ಶುದ್ಧನಾದವನೂ, ಚಂಚಲವಾದ ಸ್ವಭಾವವುಳ್ಳವನೂ, ವಿಜನಪ್ರದೇಶದಲ್ಲಿ ವಾಸಮಾಡತಕ್ಕವನೂ ಆಗುವನು.

## ಸೂರ್ಯ ಚಂದ್ರ, ಮಂಗಳ, ಬುಧ, ಶುಕ್ರ ಶನಿಯುತಿ ಫಲಂ

ಶ್ಲೋಕ।। ಸಂಶಯೀ ಸುಭಗೊ ಮಾನೀ ಖ್ಯಾತೋಽಯುದ್ಧೇ ರಿಮರ್ದಕಃ । ವಿನಾಜೀವಾಂ ಗ್ರಹೈ ಷಡ್ಭಿರ್ವನಾದೌ ರಮತೇ ಜನಃ ।।೧೦೯।।ತಾ।। ಸೂರ್ಯ, ಚಂದ್ರ, ಕುಜ, ಬುಧ, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಸಂಶಯನಿವೃತ್ತಿ ಆಗದಿದ್ದವನೂ, ಸುಭಗನೂ, ಮಾನವಂತನೂ, ಖ್ಯಾತನೂ, ಯುದ್ಧದಲ್ಲಿ ಶತ್ರುಗಳಲ್ಲಿ ಜೈಸುವವನೂ ಆಗುವನು.

## ರವಿ, ಚಂದ್ರ, ಮಂಗಳ, ಗುರು, ಶುಕ್ರ ಶನಿಯುತಿ ಫಲಂ

ಶ್ಲೋಕ।। ಅರ್ಥಪ್ರಿಯೋರಣೋತ್ಸಾಹೀ ಪಿಶುನಃಕ್ರೋಧಲೋ ಭವಾರ್ಕ ಅರ್ಕೇಂದುಭೌಮಜೀವಾ ಸ್ಪುಜಿನ್ಮಂದೈಸ್ಸು ಭಗೋನರಃ ।।೧೧೦।।ತಾ।। ರವಿ, ಚಂದ್ರ, ಕುಜ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ದ್ರವ್ಯ ಸಂಪಾದಿಸುವವನೂ, ಯುದ್ಧದಲ್ಲಿ ಉತ್ಸಾಹವುಳ್ಳವನೂ, ಪಿಶುನನೂ, ಕ್ರೋಧಿಯೂ, ಯಶಸ್ಸುಳ್ಳವನೂ, ಲೋಭಿಯೂ ಆಗುವನು.

## ಸೂರ್ಯ ಚಂದ್ರ, ಬುಧ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಕಲತ್ರಹಿನೋ ನಿರ್ದ್ರವ್ಯೋ ರಾಜಮಂತ್ರೀಕ್ಷಮಾಯುತಃ ।। ರವೀಂದು ಬುಧ ಜೀವಾಸ್ಪುಜಿನ್ಮಂದೈ ಸ್ಸುಭಗೋನರಃ ।।೧೧೧।।ತಾ।। ಸೂರ್ಯ, ಚಂದ್ರ, ಬುಧ, ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಕಳತ್ರ ಹೀನನೂ, ದ್ರವ್ಯವನ್ನಿಡದವನೂ, ರಾಜಮಂತ್ರಿಯೂ, ಕ್ಷಮಾಗುಣವುಳ್ಳವನೂ, ಘನವಾದ ಯಶಸ್ಸುಳ್ಳವನೂ ಆಗುವನು.

## ರವಿ, ಮಂಗಳ, ಬುಧ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಧನದಾರ ಸುತೈರ್ಹೀನ ಸ್ತೀರ್ಥ ಗಾಮೀ ವನಾಶ್ರಿತಃ ಸೂರ್ಯಾರಜ್ಞೇ- ಜ್ಯಶುಕ್ರಾರ್ಕ ಪುತ್ರೈರ್ಯೋಗ ಭವೇನ್ನರಃ ।।೧೧೨।।ತಾ।। ಸೂರ್ಯ, ಕುಜ, ಬುಧ,

ಗುರು, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಧನ, ಪತ್ನಿ, ಸುತರಿಂದ ಹೀನನಾದವನೂ ಅಂದರೆ ದ್ರವ್ಯ, ಪತ್ನೀ, ಪುತ್ರರ ಸೌಖ್ಯವಿಲ್ಲದವನೂ, ತೀರ್ಥಯಾತ್ರೆ ಮಾಡುವವನೂ, ವನಾಂತರದಲ್ಲಿ ವಾಸ ಮಾಡುವವನೂ ಆಗುವನು.

## ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿಯುತಿ ಫಲಂ

ಶ್ಲೋಕ।। ಧನೀ ಪುತ್ರೀ ಶುಚಿರ್ಮಂತ್ರೀ ಬಹುಭಾರ್ಯೋ ನೃಪಪ್ರಿಯಃ । ವಿನಾ ಸೂರ್ಯಗ್ರಹೈಃ ಷಡ್ಭಿಃಪ್ರತಾಪೀ ಜಾಯತೇನರಃ ।।೧೧೩।।ತಾ।। ಚಂದ್ರ, ಕುಜ, ಬುಧ, ಬೃಹಸ್ಪತಿ, ಶುಕ್ರ, ಶನಿಗಳೇಕತ್ರ ಇರುವ ಕಾಲದಲ್ಲಿ ಹುಟ್ಟಿದವನು ಧನವಂತ, ಪುತ್ರರುಳ್ಳವನೂ, ಪರದಾರ ಪರದ್ರವ್ಯಾಭಿಲಾಷೆಯಿಲ್ಲದೆ ಶುಚಿಯಾಗಿರುವವನೂ ರಾಜಮಂತ್ರಿಯೂ, ಅನೇಕ ಪತ್ನಿಗಳುಳ್ಳವನೂ ರಾಜಪ್ರಿಯನೂ ಆಗುವನು.

## ಪಂಚಾದಿಗ್ರಹ ಯೋಗಫಲಂ

ಶ್ಲೋಕ।। ಪ್ರಾಯೋದರಿದ್ರೋಮೂರ್ಖಶ್ಚ ಷಡ್ಭಿರ್ವಾ ಪಂಚಭಿರ್ಗ್ರಹೈಃ । ಅನ್ಯೋನ್ಯದರ್ಶನಾತ್ತೇಷಾಂ ಫಲಮೇತತ್ಪ್ರಕೀರ್ತಿತಂ ।।೧೧೪।।

ಅವತಾರಿಕೆ।। ಇದುವರಿಗೆ ಹೇಳಲ್ಪಟ್ಟ ಪಂಚಗ್ರಹಯೋಗ ಷಡ್ಗ್ರಹಯೋಗ ಫಲಗಳನ್ನು ಪರ್ಯಾಯವಾಗಿ ಆಲೋಚಿಸಿ ನೋಡಲಾಗಿ ಪ್ರಾಯಶಃ ಪಂಚಗ್ರಹ ಯೋಗದಲ್ಲಿಯಾಗಲೀ, ಷಡ್ಗ್ರಹಯೋಗದಲ್ಲಿಯಾಗಲೀ ಹುಟ್ಟಿದವರು ದರಿದ್ರರಾಗಿಯೂ, ಮೂರ್ಖರಾಗಿಯೂ ಇರುತ್ತಾರೆ. ಸತ್ಫಲವಾದ ಯೋಗವು ಕೇವಲ ಕಡಿಮೆಯಾಗಿರುವುದು. ಈ ಪ್ರಕಾರವೇ ಗ್ರಹಗಳು ಪರಸ್ಪರ ನೋಡಿದರೂ ಈ ಫಲವನ್ನೇ ತಿಳಿಯತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ದ್ವಿಗ್ರಹಾದಿಯೋಗ ಚತುರ್ದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ದ್ವಿಗ್ರಹಾದಿಯೋಗಾಖ್ಯ ಚತುರ್ದಶ ಪ್ರಕರಣಂ.

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತ ಬೃಹಜ್ಜಾತಕಾಖ್ಯ

## ೧೫ನೇ ಸಂನ್ಯಾಸಯೋಗಾಖ್ಯ ಪ್ರಕರಣಂ

ಅವತಾರಿಕೆ।। ಜಾತಕನಿಗೆ ಇದುವರೆಗೆ ಹೇಳಲ್ಪಟ್ಟ ಯೋಗಗಳೆಲ್ಲವೂ ಇಹ ಲೋಕದ ಸುಖಕ್ಕಾಗಿರುವುದೇ ಹೊರತು ಪರಲೋಕ ಸಾಧನೆಗಲ್ಲ. ಆದರೆ-ಅಂಥಾ ಪರಲೋಕಸಾಧನವು ವೈರಾಗ್ಯದಿಂದುಂಟಾಗುವುದು. ಆ ವೈರಾಗ್ಯವು ಸಾಧಾರಣವಾಗಿ ಹುಟ್ಟಿದ ಪ್ರತಿ ಮನುಷ್ಯನಿಗೆ ಲಭ್ಯವಲ್ಲ. ಆ ವೈರಾಗ್ಯಯೋಗದಿಂದ ಸಂನ್ಯಾಸ ಯೋಗವಾಗುವುದು ಮತ್ತು ರಾಜಾದಿಯೋಗಗಳಿಗಿಂತ ಸಂನ್ಯಾಸಯೋಗವು ಪರಮ ಪೂಜ್ಯವಾಗಿಯೂ ಉತ್ಕೃಷ್ಟವಾಗಿರುವುದು. ಆ ಯೋಗದಿಂದಲೇ ಸಾಧನವುಂಟಾಗ ಸಂನ್ಯಾಸವನ್ನು ಹೊಂದುವನು. ಈ ವಿಷಯವನ್ನು ಬೃಹಜ್ಜಾತಕವೆಂಬ ಈ ಪುಸ್ತಕದಲ್ಲು, ಸರ್ವಾರ್ಥಚಿಂತಾಮಣಿ, ಪಾರಿಜಾತ ಮೊದಲಾದ ಕೆಲವು ಗ್ರಂಥಗಳಲ್ಲಿ ಹೇಳಿರುವರೇ ಹೊರತು ಇತರ ಜಾತಕ ಶಾಸ್ತ್ರಗಳಲ್ಲಿ ಹೇಳಲಿಲ್ಲ. ಒಂದು ವೇಳೆ ಹೇಳಿದ್ದರೂ ಅಮೂಲಾಗ್ರವಾಗಿ ಹೇಳಲಿಲ್ಲ. ಇದನ್ನೆಲ್ಲಾ ಈ ಸಂನ್ಯಾಸಯೋಗ ಪ್ರಕರಣದಲ್ಲಿ ಹೇಳುತ್ತೇನೆ. ಸಂನ್ಯಾಸಕ್ಕೆ ಪ್ರವಜ್ಯಾ ಯೋಗವೆಂತಲೂ ಹೆಸರಿದೆ.

### ಸಂನ್ಯಾಸಯೋಗ ವಿಚಾರಃ

ಮೂಲ।। ಏಕಸ್ಥೈಶ್ಚತುರಾದಿಭಿರ್ಬಲಯುತೈರ್ಜಾತಾಃ ಪೃಥಗ್ವೀರ್ಯಗೈಶ್ಶಾಕ್ಯಾ ಜೀವಭಿಕ್ಷುವೃದ್ಧಚರಕಾ ನಿರ್ಗ್ರಂಥವನ್ಯಾಶನಾಃ ।। ಮಾಯೆಯಜ್ಞ ಗುರುಕ್ಷಪಾಕರಸಿತ ಪ್ರಾಭಾಕರೀನೈಃ ಕ್ರಮಾತ್ಪ್ರವ್ರಜ್ಯಾಬಲಿಭಿಸ್ಸಮಾಃ ಪರಜಿತೈಸ್ತತ್ಸ್ವಾಮಿಭಿಃಪ್ರಚ್ಯುತಿಃ ।।೧।।

ಅವತಾರಿಕೆ।। ಸಂನ್ಯಾಸಯೋಗ ಲಕ್ಷಣವನ್ನೂ ಮತ್ತು ಯಾವ ಕಾಲದಲ್ಲಿ ಹುಟ್ಟಿದವರು ಸಂನ್ಯಾಸವನ್ನು ಕೈಗೊಳ್ಳುವರೋ ಆ ವಿಷಯವು ಹೇಳಲ್ಪಡುತ್ತೆ.

ಟೀಕು।। ಏಕಸ್ಥೈ-ಏಕರಾಶಿಗತರಾದ, ಬಲಯುತೈ-ಸ್ಥಾನಾದಿ ಬಲಿಷ್ಠರಾದ, ಚತುರಾದಿಭಿಃ-ನಾಲ್ಕು, ಐದು, ಆರು, ಏಳು ಗ್ರಹಗಳು, ಕೂಡಿರುವ ಕಾಲದಲ್ಲಿ ಜಾತಾಃ-ಹುಟ್ಟಿದವರು ಸಂನ್ಯಾಸವನ್ನು ಹೊಂದುವರು. ಅಂದರೆ-ಯಾವ ರಾಶಿಯಲ್ಲಾದರೂ, ಒಂದೇ ರಾಶಿಯಲ್ಲಿ ನಾಲ್ಕು ಮೊದಲುಗೊಂಡು ಗ್ರಹಗಳು ಸೇರಿ ಬಲಿಷ್ಠರಾಗಿದ್ದರೆ, ಆ ಗ್ರಹಗಳಲ್ಲಿ ಯಾವ ಯಾವ ಗ್ರಹಗಳು ಬಲಿಷ್ಠರಾಗಿರುವರೋ ಅಷ್ಟು ವಿಧವಾದ ಪ್ರವ್ರಜ್ಯೆಯನ್ನು ಮೇಲೆ ಹೇಳಲ್ಪಟ್ಟ ।।ಶ್ಲೋಕ।। ಪ್ರಕಾರ

ಹೊಂದುವರು. ಅದು ಯಾವ ಪ್ರಕಾರವೆಂದರೆ-ಪೃಥಕ್-ಪ್ರತ್ಯೇಕವಾಗಿ, ವೀರ್ಯಗೈಃ-ಬಲಿಷ್ಠರಾದ, ಮಾಹೇಯಜ್ಞ ಗುರುಕ್ಷಪಾಕರಸಿತ ಪ್ರಭಾಕರಿಣೈಃ, ಮಾಹೇಯ-ಕುಜ, ಜ್ಞ-ಬುಧ, ಗುರು-ಬೃಹಸ್ಪತಿ, ಕ್ಷಪಾಕರ-ಚಂದ್ರ, ಸಿತ-ಶುಕ್ರ, ಪ್ರಭಾಕರಿ-ಶನಿ, ಇನ-ಸೂರ್ಯ, (ಕುಜ, ಬುಧ, ಗುರು, ಚಂದ್ರ, ಶುಕ್ರ, ಶನಿ, ರವಿ) ಈ ಗ್ರಹಗಳಿಂದ ಕ್ರಮಾತ್-ಕ್ರಮವಾಗಿ ಶಾಕ್ಯಾಜೀವಕಾ ಭಿಕ್ಷುವೃದ್ಧಚರಕ ನಿರ್ಗ್ರಂಥವನ್ಯಾಶನಾಃ-ಶಾಕ್ಯ, ಆಜೀವಕ, ಭಿಕ್ಷು, ವೃದ್ಧ, ಚರಕ, ನಿರ್ಗ್ರಂಥ, ವನ್ಯಾಂಶವೆಂಬ ಏಳು ವಿಧವಾದ ಸಂನ್ಯಾಸ ಭೇದವನ್ನುಂಟುಮಾಡುವರು, ಅಂದರೆ-ಪ್ರತ್ಯೇಕವಾಗಿ ಲಕ್ಷಣವೇನೆಂದರೆ-ಶಾಕ್ಯ-ಕುಜನು ಬಲವಂತನಾಗಿದ್ದರೆ ಬುದ್ಧೋ ಪಾಸಕ ಸಂನ್ಯಾಸಿಯಾಗುವನು, ಅಜೀವಕ-ಬುಧನು ಬಲವಂತನಾಗಿದ್ದರೆ ಆ ಜೀವಕವೆಂಬ ಏಕದಂಡ ಸಂನ್ಯಾಸಿಯಾಗುವನು. ಬಿಕ್ಷು-ಗುರು ಬಲವಂತನಾಗಿದ್ದರೆ ಬಿಕ್ಷುವೆಂಬ ತ್ರಿದಂಡ ಸಂನ್ಯಾಸಿಯಾಗುವನು. ವೃದ್ಧ-ಚಂದ್ರನು ಬಲವಂತನಾಗಿದ್ದರೆ ವೃದ್ಧನೆಂಬ ವೃದ್ಧಶ್ರಾವಕ ಸಂನ್ಯಾಸಿಯಾಗುವನು, ಅಂದರೆ ಕಾಪಾಲಿಕ ಸಂನ್ಯಾಸಿ ಯಾಗುವನು. ಚರಕ-ಶುಕ್ರನು ಬಲವಂತನಾಗಿದ್ದರೆ ಚಕ್ರಚರಾಖ್ಯ ಸಂನ್ಯಾಸಿಯಾಗುವನು, ನಿರ್ಗ್ರಂಥ-ಶನಿ ಬಲವಂತನಾಗಿದ್ದರೆ ದಿಗಂಬರ ಸಂನ್ಯಾಸಿಯಾಗುವನು. ವನಾಶನ-ಸೂರ್ಯನು ಬಲವಂತನಾಗಿದ್ದರೆ ಕಂದಮೂಲಾದಿಗಳನ್ನು ಭಕ್ಷಿಸುವ ವನಚರ ತಾಪಸನಾಗುವನು. *ಪ್ರವ್ರಜ್ಯಾಬಲಿಭಿಃಸಮಾಃ-ಅಂದರೆ ಏಕರಾಶಿಗತರಾದ ಗ್ರಹಗಳಲ್ಲಿ ನಾಲ್ಕು ಮೊದಲುಗೊಂಡು ಎಷ್ಟು ಗ್ರಹಗಳು ಬಲವಂತರಾಗಿರುವರೋ ಅಷ್ಟು ವಿಧವಾದ ಲಕ್ಷಣವುಳ್ಳ ಸನ್ಯಾಸವು ಜಾತಕನಿಗೆ ಉಂಟಾಗುವುದು. ಆ ಬಲಯುಕ್ತ ಗ್ರಹಗಳಲ್ಲಿ ಅಧಿಕ ಬಲಯುಕ್ತವಾದ ಗ್ರಹಕ್ಕೆ ಹೇಳಲ್ಪಟ್ಟ ಪ್ರವ್ರಜ್ಯ ಮೊದಲುಂಟಾಗಿ ಬಲಾಧಿಕ ಗ್ರಹಪೂರ್ವಕವಾಗಿ ಉಳಿದಪ್ರವ್ರಜ್ಯೆಗಳು ನಂತರ ಉಂಟಾಗುವವು. ಈ ವಿಷಯಕ್ಕೆ ಲಘುಜಾತಕದಲ್ಲಿ ।।ಶ್ಲೋಕ।। ಚತುರಾದಿಭಿರೇಕಸ್ಥೈಃ ಪ್ರವ್ರಜ್ಯಾಂ ಸ್ವಾಂಗ್ರಹಃಕರೋತಿಬಲೀ । ಬಹುಭಿರ್ವೀರ್ಯೋಪೇತೈಃ ಪ್ರಥಮಾವೀರ್ಯಾಧಿಕಸ್ಯೇವ ।।೧।। ತಾಪಸವೃದ್ಧ ಶ್ರಾವಕರಕ್ತ ಪಟಾಜೀವಿಭಿಕ್ಷುಚರಕಾಣಾಂ । ನಿರ್ಗ್ರಂಥಾನಾಂ ಚಾರ್ಕಾತ್ಪರಾಜಿತೈಃ ಪ್ರಚ್ಯುತಿರ್ಬಲಿಭಿಃ ।।೨।। ಎಂದು ಹೇಳಲ್ಪಟ್ಟಿರುತ್ತೆ. ಏಕರಾಶಿಗತರಾದ ನಾಲ್ಕು ಮೊದಲಾದ ಗ್ರಹಗಳಲ್ಲಿ ಬಲಯುಕ್ತರಾದವರಿಲ್ಲದಿದ್ದರೆ, ಪ್ರವ್ರಜ್ಯಾಯೋಗವಿಲ್ಲ ವೆಂದರಿಯುವರು. ಪರಜಿತೈಃ ಗ್ರಹಯುದ್ಧದಲ್ಲಿ ಇತರ ಗ್ರಹಗಳಿಂದ ಜಯಿಸಲ್ಪಟ್ಟಿದ್ದರೆ, ತತ್ಸ್ವಾಮಿಭಿಃ-ಪ್ರವ್ರಜ್ಯಾಧಿಪತಿಯಾದ ಗ್ರಹದಿಂದ,

* ಯೋಗಕಾರಕರಾದವರಲ್ಲಿ ಬಲಿಷ್ಠವಾದ ಗ್ರಹಕ್ಕೆ ಸರಿಯಾದ ಸಂನ್ಯಾಸವೆಂದು ತಿಳಿಯತಕ್ಕದ್ದು.

ಚ್ಯುತಿಃ-ಸ್ವೀಕೃತ ಪ್ರವ್ರಜ್ಯೇಯುಭಂಗವಾಗುವುದು, ಅದೇ ಹೇಗೆಂದರೆಃ-ಜನನಕಾಲದಲ್ಲಿ ಏಕರಾಶಿಗತರಾದ ಪ್ರವ್ರಜ್ಯೆಯುಭಂಗವಾಗುವುದು, ಅದು ಹೇಗೆಂದರೆ :- ಜನನಕಾಲದಲ್ಲಿ ಏಕರಾಶಿಗತರಾದ ಪ್ರವ್ರಜ್ಯಾಯೋಗಾಧಿಪತಿಗಳಾದ ನಾಲ್ಕು ಮೊದಲ್ಗೊಂಡು ಗ್ರಹಗಳಲ್ಲಿ ಬಲಯುತಗ್ರಹವು ಯುದ್ಧದಲ್ಲಿ ಪರಾಜಿತನಾಗಿದ್ದರೆ ಆ ಗ್ರಹಸಂಬಂಧವಾದ ಸಂನ್ಯಾಸಯೋಗವನ್ನು ಸ್ವೀಕರಿಸಿ ಪುನಃ ಆ ಸಂನ್ಯಾಸವನ್ನು ಬಿಡುವನು. ಇಲ್ಲಿ ಅನೇಕ ಗ್ರಹಗಳು ಬಲಯುಕ್ತರಾಗಿ ಯುದ್ಧದಲ್ಲಿ ಪರಾಜಿತನಾಗಿದ್ದರೆ ಪರಾಜಿತ ಗ್ರಹಸಂಬಂಧವಾದ ಪ್ರವ್ರಜ್ಯೆಯುನ್ನು ಸ್ವೀಕರಿಸಿ ತಿರುಗಿಬಿಡುವನೆಂದೂ ಹಿಸತಕ್ಕದ್ದು. ಕಡೆಗೆ ಪರಾಜಿತಗ್ರಹ ಪ್ರವ್ರಜ್ಯೆಯನ್ನಾಶ್ರಯಿಸಿ ಆ ಪ್ರವ್ರಜ್ಯೆಯನ್ನು ಯಾವಜ್ಜೀವವೂ ಅನುಭವಿಸುವನೆಂದರ್ಥವು. ಬಲವಂತವಾದ ಗ್ರಹಗಳೆಲ್ಲರೂ ಪರಾಜಿತರಾಗಿದ್ದರೆ ಆ ಗ್ರಹಗಳು ಸಂಬಂಧವಾದ ಪ್ರವ್ರಜ್ಯೆಯುಂಟಾಗಿ ಅವೆಲ್ಲವೂ ಭ್ರಷ್ಟವಾಗಿ ಹೋಗುವುದು. ಪ್ರವ್ರಜ್ಯಾಪ್ರದರಾದ ಗ್ರಹಗಳಲ್ಲಿ ಅನೇಕ ಗ್ರಹಗಳು ಪರಾಚಿತರಾದರೆ ಅವರಲ್ಲಿ ಪ್ರಥಮ ಪ್ರವ್ರಜ್ಯಾದಾಯಕ ಗ್ರಹದ ಅಂತರ್ದಶೆಯಲ್ಲಿ ಮೊದಲು ಪ್ರವ್ರಜ್ಯೆಯನ್ನಾಶ್ರಯಿಸಿ ದ್ವಿತೀಯ ಪ್ರವ್ರಜ್ಯಾದಾಯಕ ಗ್ರಹದ ಅಂತರ್ದಶೆಯವರಿಗೂ ನಡೆದು ಆ ಅಂತರ್ದಶೆಯಲ್ಲಿ ಎರಡನೇ ವಿಧವಾದ ಪ್ರವ್ರಜ್ಯೆಯನ್ನಾಶ್ರಯಿಸುವನು. ಈ ಪ್ರಕಾರ ಎಷ್ಟು ಗ್ರಹಗಳು ಪ್ರವಜ್ಯಾಯೋಗಾ-ದಾಯಕರಾಗುವರೋ ಅಷ್ಟು ವಿಧವಾದ ಪ್ರವ್ರಜ್ಯೆಯನ್ನು ಕ್ರಮವಾಗಿ ಆಶ್ರಯಿಸಿ ಕಡಗೆ ಬರುವ ಪ್ರವ್ರಜ್ಯೆಯನ್ನು ಯಾವಜ್ಜೀವವೂ ಅನುಭವಿಸುವನು. ಈ ವಿಷಯದಲ್ಲಿ ಸತ್ಯಾಚಾರ್ಯಃ।। ತೇಶ್ವಧಿಕಬಲೀಜೀವಸ್ತ್ರಿದಂಡಿನಂ ಭಾರ್ಗವಶ್ಚರಕ ಮುಖ್ಯಂ । ನಗ್ನಕ್ರಮಣಂ ಸೌರೋಬುಧಸ್ತಥಾಜೀವಕಾಚಾರ್ಯಂ ।।೩।। ವೃದ್ಧಶ್ರಾವಕಮಿಂದು ರ್ದಿವಾಕರ ಸ್ತಾಪಸಂತಪೋ ಮುಖ್ಯಂ । ಶುಕ್ರಶ್ಯಾಕ್ಯಂ ಶ್ರಮಣಂ ಕ್ಷೇತ್ರಾಶ್ರಯಜಂ ಗುಣಾಂಶ್ಚೆ ತಾರ್ ।।೪।। ವಿರ್ಯೋಪೇತೇಲ್ಪ ತನಾವಾದೀಕ್ಷಿತಾ ಭಕ್ತಿ ವಾದಿನಸ್ತೇಷಾಮ್ । ಅನ್ಯೈಃ ಪರಾಜಿತಶ್ಚೇತ್ಪ್ರವ್ರಜ್ಯಾಪ್ರಚ್ಯುತಿಂ ಕುರ್ಯಾತ್ ।।೫।। ಯಾವಂತೋವೀರ್ಯ ಯುತಾಃ ಪ್ರವ್ರಜ್ಯಾಭವಂತಿತಾವಂತಃ । ಏಕರ್ಕ್ಷಗೇಷು ನಿಯಮಾತ್ತೇಷಾಮಾದ್ಯಾ ಬಲೋಪೇತಾತ್ ।।೬।।

## ಸಂನ್ಯಾಸ ಸದೃಶಯೋಗಾಃ

**ಮೂಲ।।** ರವಿಲುಪ್ತ ಕರೈರದೀಕ್ಷಿತಾ ಬಲಿಭಿಸ್ತದ್ಗತಭಕ್ತಯೋನರಾಃ ।
ಅಭಿಯಾಚಿತಮಾತ್ರದೀಕ್ಷಿತಾನಿ ಹತ್ಯೈರನ್ಯ ನಿರೀಕ್ಷಿತ್ಯೈರಪಿ ।।೨।।

ಅವತಾರಿಕೆ ।। ಪ್ರವ್ರಜ್ಯಾದಾಯಕ ಗ್ರಹಗಳು ಅಸ್ತಂಗತರಾದರೂ ಯುದ್ಧದಲ್ಲಿ

ಪರಾಜಿತರಾದರೂ ಅನ್ಯಗ್ರಹದೃಷ್ಟಿಯಿದ್ದರೆ ಪೂರ್ವ ಶ್ಲೋಕದಲ್ಲಿ ಹೇಳಲ್ಪಟ್ಟ ಸಂನ್ಯಾಸ ಯೋಗವು ತಪ್ಪಿ ಆ ಸಂನ್ಯಾಸ ಸದೃಶವಾದ ಭಕ್ತಿಯುಳ್ಳವನಾಗುವ ಯೋಗವು ಹೇಳಲ್ಪಡುತ್ತೆ.

ಟೀಕು॥ ರವಿಲುಪ್ತ ಕರ್ಸೈ-ಸೂರ್ಯನಿಂದ ಲೋಪಿಸಲ್ಪಟ್ಟ ಕಿರಣವುಳ್ಳ ಅಂದರೆ ಅಸ್ತಂಗತರಾದ, ಬಲಿಭಿಃ-ಬಲಯುಕ್ತರಾದ ಗ್ರಹಗಳಿಂದ, ನರಾಃ-ಪುರುಷರು, ಅದೀಕ್ಷಿತಾಃ-ಪ್ರವ್ರಜ್ಯೆಯೆಂಬುವ ದೀಕ್ಷಾರಹಿತರಾಗುವರು. ಆದರೆ ಏಕರಾಶಿಗತರಾದ ನಾಲ್ಕು ಮೊದಲಾದ ಗ್ರಹಗಳಲ್ಲಿ ಬಲಯುಕ್ತಗ್ರಹಗಳು ಪ್ರವಜ್ಯಾಯೋಗದಾಯಕ ರಾಗುವರೆಂದು ಹೇಳಿರುತ್ತೆ. ಆ ಬಲಿಯುಕ್ತ ಗ್ರಹಗಳಲ್ಲಿ ಯಾವ ಯಾವ ಗ್ರಹಗಳು ಅಸ್ತಂಗತರಾಗಿರುವರೋ ಅವರು ಪ್ರವ್ರಜ್ಯಾಯೋಗವನ್ನು ಕೊಡಲಾರರೆಂದು ತಾತ್ಪರ್ಯವು. ಮತ್ತೇನೆಂದರೆ-ನರಾಃ (ಬಲಯುಕ್ತ ಗ್ರಹಗಳು ಅಸ್ತಂಗತರಾಗಿರುವಾಗ ಹುಟ್ಟಿದ) ಪುರುಷರು ತದ್ಗತಭಕ್ತ್ಯುಃ-ಆ ಪ್ರವ್ರಜ್ಯೆಯನ್ನು ಹೊಂದಿದ ಸಂನ್ಯಾಸಿಗಳಲ್ಲಿ ಭಕ್ತಿಯುತರಾಗುವರು, ನಿಹತ್ಯೈಃ-ಏಕರಾಶಿಗತರಾದ ಚತುರಾದಿಗ್ರಹಗಳಲ್ಲಿ ಬಲಯುಕ್ತ ಗ್ರಹಗಳು, ಜನ್ಮಕಾಲದಲ್ಲಿ ಇತರ ಗ್ರಹಗಳ ಒಡನೆ ಯುದ್ಧ ಮಾಡಿ ಗೆದ್ದವರಾದರೆ ಆ ಸೋತ ಗ್ರಹಗಳು, ಅನ್ಯನಿರೀಕ್ಷಿತೈರಪಿ-ಇತರ ಗ್ರಹಗಳಿಂದ ನೋಡಲ್ಪಟ್ಟರೆ, ಅಭಿಯಾಚಿತಮಾತ್ರದೀಕ್ಷಿತಾಃ-ಸಂನ್ಯಾಸವಾಗಬೇಕೆಂದು ಕೋರುತ್ತಿರುವರೇ ಹೊರತು ಸಂನ್ಯಾಸಯೋಗವನ್ನು ಹೊಂದಲಾರರು. ಈ ವಿಷಯದಲ್ಲಿ ॥ಸತ್ಯಾಚಾರ್ಯಃ॥ ॥ಶ್ಲೋಕ॥ ಪ್ರವ್ರಜ್ಯಾಯಾಸ್ಸ್ವಾಮೀರವಿಮುಹಿತತನುರ್ನಿರೀಕ್ಷಿತೋವಾನ್ಯೈಃ। ಯಾಚಿತದೀಕ್ಷಾನಭವತಿ ಯವನಾಧಿಪತೇರ್ಯಥಾವಾಕ್ಯಂ ॥೭॥ ಎಂದುಕ್ತವಾಗಿರುತ್ತೆ ಪರಾಜಿತೈಸ್ಸತ್ವಾಮಿಭಿಃ ಪ್ರಚ್ಯುತಿಃ ಎಂದು ಮೊದಲೇ ಹೇಳಲ್ಪಟ್ಟಿರುವುದಕ್ಕೆ ಅಪಾಯವಾದ್ದರಿಂದ ಬಲಿಷ್ಠವಾದ ಗ್ರಹಯುದ್ಧದಲ್ಲಿ ಪರಾಜಿತನಾಗಿ ಇತರ ಗ್ರಹಗಳಿಂದ ನೋಡಲ್ಪಟ್ಟವನಾದರೆ ಆ ಪ್ರವ್ಯಜ್ಯೆಯನ್ನು ಸ್ವೀಕರಿಸಿ ಅನಂತರ ಪರಿತ್ಯಜಿಸುವನು. ಬಲಯುಕ್ತಗ್ರಹವು ಪರಾಜಿತವಾಗಿ ಇತರ ಗ್ರಹಗಳಿಂದ ನೋಡಲ್ಪಟ್ಟರೆ ಪ್ರವ್ರಜ್ಯಾ ಪ್ರಾರ್ಥನಪರನಾಗಿರುವನೇ ಹೊರತು ಪ್ರವ್ಯಜ್ಯೆಯನ್ನು ಸ್ವೀಕರಿಸಲಾರನು. ಇದಲ್ಲದಿದ್ದರೆ ಮತ್ತೊಂದು ಪ್ರಕಾರವಾಗಿ ಪರಾಶರರು ಹೇಳಿರುವುದೇನೆಂದರೆ ॥ಶ್ಲೋಕ॥ ದೀಕ್ಷಾದಾನ ಸಮರ್ಥೋಃಯೋಭವತಿ ತದಾಬಲೇನ ಸಂಯುಕ್ತಃ । ತಸ್ಯೈವದಶಾಕಾಲೇ ದೀಕ್ಷಾಂಲಭತೇ ನರೋಃವಶ್ಯಂ ॥ ಯಸ್ಯಚದೀಕ್ಷಾಚ್ಛವನಂತಸ್ಯೈವದಶಾವ ಸಾನೇಸ್ಯಾತ್ ॥೮॥ ಈ ಪ್ರಕಾರ ಜನ್ಮಕಾಲದಲ್ಲಿ ಗ್ರಹ ಬಲಾಬಲಗಳನ್ನನುಸರಿಸಿ ತಿಳಿಯತಕ್ಕದ್ದು. ಈ ಸಂನ್ಯಾಸಯೋಗಕಾರಕರಾದ ಗ್ರಹಗಳು ಸಂನ್ಯಾಸವನ್ನು ಕೊಡಲು ಅಸಮರ್ಥರಾದರೆ ಸಂನ್ಯಾಸದಲ್ಲಿಯಾಗಲೀ, ಸಂನ್ಯಾಸಿಗಳಲ್ಲಿ ಪ್ರೀತಿಯಾಗಲೀ, ಅಥವಾ

ವೈರಾಗ್ಯವನ್ನನುಭವಿಸತಕ್ಕವರಾಗಲೀ ಆಗುವರು. ಈ ಸಂನ್ಯಾಸಯೋಗವು ರಾಜಯೋಗಕ್ಕಿಂತ ಅಧಿಕವಾದ್ದರಿಂದ ಈ ಸಂನ್ಯಾಸವು ಲಭಿಸುವದು ಪರಮ ದುರ್ಲಭವಾದ್ದರಿಂದ ಈ ವಿಷಯದಲ್ಲಿ ಸಂನ್ಯಾಸಯೋಗವುಳ್ಳ ಜಾತಕಗಳಲ್ಲಿ ಚೆನ್ನಾಗಿ ಬಲಾಬಲಗಳನ್ನು ತಿಳಿದು ಈ ಯೋಗವನ್ನು ಹೇಳಬೇಕು.

## ಶನಿದೃಷ್ಟ ಸಂನ್ಯಾಸಯೋಗಾಃ

ಮೂಲ॥ ಜನ್ಮೇಶೋನ್ಯೈರ್ಯದ್ಯ ದೃಷ್ಟೋರ್ಕಪುತ್ರಂ ಪಶ್ಯತ್ಯಾರ್ಕಿರ್ಜನ್ಮ
ಪಂವಾಬಲೋನಂ ದೀಕ್ಷಾಂ ಪ್ರಾಪ್ನೋತ್ಯಾರ್ಕಿದ್ರೇಕ್ಕಾಣಸಂಸ್ಥೇ
ಭೌಮಾರ್ಕ್ಯಂಶೇ ಸೌರಿದೃಷ್ಟೇಚಚಂದ್ರೇ ॥೩॥

ಅವತಾರಿಕೆ॥ ಪೂರ್ವೋಕ್ತವಾದ ಚತುರಾದಿ ಗ್ರಹಗಳು ಏಕರಾಶಿಗತರಾದ ಸಂನ್ಯಾಸ ಯೋಗವಲ್ಲದೆ ಇತರವಾಗಿ ಮೂರು ವಿಧವಾದ ಸಂನ್ಯಾಸ ಯೋಗವು ಹೇಳಲ್ಪಡುತ್ತೆ.

ಟೀಕು॥ ಜನ್ಮೇಶಃ-ಜನ್ಮಕಾಲದಲ್ಲಿ ಚಂದ್ರನು ಯಾವ ರಾಶಿಯಲ್ಲಿರುವನೋ ಆ ರಾಶ್ಯಾಧಿಪತಿಯು ಜನ್ಮೇಶನೆಂದು ಸಂಕೇತವು. ಆ ಜನ್ಮೇಶನು, ಅನ್ಯೈಃ-ಇತರ ಗ್ರಹಗಳಿಂದ, ಅದೃಷ್ಟಸ್ಸ-ನೋಡಲ್ಪಡದೆ, ಅರ್ಕಪುತ್ರಂ-ಶನೈಶ್ಚರನನ್ನು ನೋಡಿದರೆ, ಜಾತಕನು, ದೀಕ್ಷಾ-ಶನೈಶ್ಚರನಿಗೆ ಹೇಳಲ್ಪಟ್ಟ ದಿಗಂಬರ ಸಂನ್ಯಾಸವನ್ನು, ಪ್ರಾಪ್ನೋತಿ-ಹೊಂದುವನು, ಈ ವಿಷಯದಲ್ಲಿ ॥ಶ್ಲೋಕ॥ ಯಸ್ಯೇಕ್ಷತೇರ್ಕಪುತ್ರಂ ಜನ್ಮ ಭನಾಥೋಗ್ರಹೈರ್ನಸಂದೃಷ್ಟಃ। ತಸ್ಯಹೀದೀಕ್ಷಾಲಂಭಸ್ತದ್ಬಲಯೋಗಾದ್ದಶಾಕಾಲೇ ॥೯॥ ಎಂದು ಜ್ಯೋತಿರ್ಭೂಷಣದಲ್ಲಿ ಹೇಳಿರುವರು. ವೆಂಕಟೇಶಃ ॥ ನವೀಕ್ಷತಶ್ಚೇದಿತ ರಗ್ರಹೇಂದ್ರೈರ್ಲಗ್ನಾಧಿಪಃ ಪಶ್ಯತಿ ಭಾನುಪುತ್ರಂ । ಲಗ್ನಾಧಿಪಂ ವಾಯದಿಭಾನು ಪುತ್ರಃ ಸಂನ್ಯಾಸಯೋಗೋಹಿ ಬಲೇನಹೀನಃ ಧುಂಡಿರಾಜಃ ॥ ಅನ್ಯಗ್ರಹಾಲೋಕನ ವರ್ಜಿತಶ್ಚೇಜ್ಜನ್ಮೇಶ್ವರೋ ನೈಮಶನಿಂ ಪ್ರಪಶ್ಯೇತ್ । ಮಂದೋಪಿನೋಜನ್ಮಪತಿಂ ವಿಸ್ತ್ವಂ ದೀಕ್ಷಾವಿವಕ್ಷಾಪ್ರಚುರೋನರಃಸ್ಯಾತ್ ॥೧೧॥ ತಾ॥ ಜನ್ಮಲಗ್ನಾಧಿಪತಿ ದೃಷ್ಟಿ ಶನಿಯಮೇಲೆ ಇಲ್ಲದಿದ್ದರೂ ಲಗ್ನಾಧಿಪತಿಯಮೇಲೆ ಇತರ ಗ್ರಹಗಳ ದೃಷ್ಟಿ ಇಲ್ಲದೆ ಇದ್ದು ಲಗ್ನಾಧಿಪತಿ ಬಲಹೀನನಾಗಿದ್ದರೆ, ಜಾತಕನು ವೈರಾಗ್ಯದಿಂದ ದೀಕ್ಷಿತನಾಗುವನು. ಅಂದರೆ-ಜನ್ಮಕಾಲದಲ್ಲಿ ಶನೈಶ್ಚರ ಮತ್ತು ಲಗ್ನಾಧಿಪತಿಗಳಲ್ಲಿ ಯಾರು ಬಲಾಧಿಕರಾಗಿರುವರೋ ಅವರ ದಶಾಕಾಲದಲ್ಲಿ ಪ್ರವ್ರಜ್ಯೆಯನ್ನು ಹೊಂದುವನೆಂದು ಹೇಳುವರು. ಅಥವಾ ಹಾಗಾಗದಿದ್ದರೆ, ಆರ್ಕಿಃ-ಶನೈಶ್ಚರನು ಬಲವಂತನಾಗಿದ್ದು,

ಬಲೋನಂ-ಹೀನಬಲನಾದ, ಜನ್ಮಪಂ-ಜನ್ಮಾಧಿಪತಿಯನ್ನು, ಪಶ್ಯತಿಯದಿ-ನೋಡಿದರೆ, ದೀಕ್ಷಾಂಪ್ರಾಪ್ನೋತಿ-ಶನೈಶ್ಚರನಿಗೆ ಹೇಳಲ್ಪಟ್ಟಂಥಾ ದಿಗಂಬರ ಸಂನ್ಯಾಸಿಯ ದೀಕ್ಷೆಯನ್ನು ಹೊಂದುವನು. ಈ ವಿಷಯದಲ್ಲಿ ಶ್ಲೋಕ॥ ಶನಿದೃಷ್ಟೇ ಬಲಹೀನೇ ಜನ್ಮನಿನಾಥೇ ವದೇಚ್ಛನಿರ್ಗ್ರಂಥಂ। ಎಂದು ಹೇಳಲ್ಪಟ್ಟಿರುತ್ತೆ. ಅರ್ಕಿದ್ರೇಕ್ಕಾಣ ಸಂಸ್ಥೇ-ಶನಿದ್ರೆಕ್ಕಾಣದಲ್ಲಿದ್ದ, ಚಂದ್ರೇ-ಚಂದ್ರನು, ಭೌಮಾರ್ಕ್ಯಂಶೇ-ಕುಜ, ಶನಿ, ನವಾಂಶೆಗಳಲ್ಲಿ ಒಂದು ನವಾಂಶೆಯಲ್ಲಿದ್ದು (ಇತರ ಗ್ರಹಗಳಿಂದ ನೋಡಲ್ಪಡದಿದ್ದರೆ) ಸೌರದೃಷ್ಟೇ-ಶನಿಯಿಂದ ನೋಡಲ್ಪಟ್ಟರೆ ತನಗೆ ಹೇಳಲ್ಪಟ್ಟ ದಿಗಂಬರ ಸಂನ್ಯಾಸಿಯಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಸೌರದ್ರೇಕ್ಕಾಣ ಸಂಸ್ಥೋಯದಿಭವತಿಶಶೀ ತದಂಶಸಂಸ್ಥಶ್ಚ । ವಕ್ರಾಂಶೇವಾದೃಷ್ಟಸ್ಸೌರೇಣ ತುಸರ್ವದರ್ಶನವಿಮುಕ್ತ ॥೧೨॥ ಎಂದು ಪರಾಶರೀಯದಲ್ಲಿ ಹೇಳಲ್ಪಟ್ಟಿರುತ್ತೆ. ಇದೇ ವಿಷಯದಲ್ಲಿ ॥ಶ್ಲೋಕ ॥ಜಾ.ಭ.॥ ಜನ್ಮಾಧಿರಾಜೋ ರವಿಜತ್ರಿಭಾಗೇ ಕುಜಾರ್ಕಜಾಂಶೇರ್ಕಜವೀಕ್ಷಿತಶ್ಚ। ಕರೋತಿಜಾತಂ ಕುಟಿಲಂ ಕುಶೀಲಂಪಾಖಂಡಿಕಂ ಮಂಡನತತ್ಪರಂವಾ ॥೧೩॥ ಜನ್ಮಲಗ್ನಸ್ವಾಮಿ ಶನಿ ದ್ರೇಕ್ಕಾಣದಲ್ಲಿದ್ದರೂ, ಇಂಥಾ ಜನ್ಮಾಧಿಪತಿಯಮೇಲೆ ಶನಿಯ ಪೂರ್ಣ ದೃಷ್ಟಿಯಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಅತ್ಯಂತವಾದ ಕುಟಿಲನಾಗಿಯೂ, ಕೆಟ್ಟ ಸ್ವಭಾವವುಳ್ಳವನಾಗಿಯೂ, ನಾಸ್ತಿಕಸ್ವಭಾವನಾಗಿಯೂ ಇರುವ ಸಂನ್ಯಾಸಿ ಆಗುವನೆಂದು ಜಾತಕಾಭರಣದಲ್ಲಿ ಹೇಳಲ್ಪಟ್ಟಿರುತ್ತೆ. ಇದೇ ಅರ್ಥಕ್ಕೆ ಸರ್ವಾರ್ಥ ಚಿಂತಾಮಣಿಯಲ್ಲಿ ॥ಶ್ಲೋಕ॥ ಶನಿದ್ರೇಕ್ಕಾಣೆ ಕುಮುದಾತ್ಮಬಂಧೌ ಮಂದೇಕ್ಷಿತೇತಾದೃಶಯೋಗಮಾಹುಃ । ಮಂದಾಂಶಕೇ ಭೂಮಿಸುತಾಂಶಕೇವಾ ಮಂದೇಕ್ಷಿತೇ ಚಂದ್ರಸುತೇತಥೈವ ॥೧೪॥

## ರಾಜಸಂನ್ಯಾಸಯೋಗ

ಮೂಲ॥ ಸುರಗುರುಶಶಿಹೋರಾ ಸ್ವಾರ್ಕಿದೃಷ್ಟಾಸುಧರ್ಮೇ ಗುರುರಥನೃಪತೀನಾಂ ಯೋಗಜಸ್ತೀರ್ಥಕೃತ್ಸ್ಯಾತ್ । ನವಮಭವನ ಸಂಸ್ಥೇ ಮಂದಗೇನ್ಯೈರದೃಷ್ಟೇಭವತಿ ನರಪಯೋಗೇದೀಕ್ಷಿತಃ ಪಾರ್ಥಿವೇಂದ್ರಃ ॥

ಅವತಾರಿಕೆ॥ ಯಾವ ಯೋಗದಲ್ಲಿ ಹುಟ್ಟಿದವನು ಪೃಥ್ವೀಪತಿಯಾದರೂ, ಶಾಸ್ತ್ರಕರ್ತನು ಅಥವಾ ಪರಿವ್ರಾಜಕನೆಂಬ ಸಂನ್ಯಾಸಿಯೂ ಆಗುವನೋ ಆ ಯೋಗದ್ವಯವು ಹೇಳಲ್ಪಡುತ್ತೆ.

ಟೀಕು॥ ಸುರಗುರುಶಶಿಹೋರಾಸು-ಗುರು, ಚಂದ್ರ, ಲಗ್ನ ಈ ಮೂರು ಅರ್ಕಿದೃಷ್ಟಾಸು-ಶನಿಯಿಂದ ನೋಡಲ್ಪಟ್ಟರೆ, ಧರ್ಮೇ-ನವಮಸ್ಥಾನದಲ್ಲಿ ಗುರುಃ-ಬೃಹಸ್ಪತಿ ಇದ್ದರೆ, ನೃಪತೀನಾಂಯೋಗಜಃ-ರಾಜಯೋಗದಲ್ಲಿ ಹುಟ್ಟಿದವನಾದರೂ, ತೀರ್ಥಕೃತ್-ಶಾಸ್ತ್ರಕರ್ತನಾಗುವನು, ನೀ ॥ ತೀರ್ಥಂಶಾಸ್ತ್ರಾ ದ್ವರಕ್ಷೇತ್ರೋ-ಪಾಯೋಪಾಧ್ಯಾಯಮಂತ್ರಿಷು ॥ಇತಿ ವಿಶ್ವಃ॥ ಈ ವಿಷಯದಲ್ಲಿ ॥ಶ್ಲೋಕ ಪರಾಶರಃ ಜೀವಾರಮಂದಲಗ್ನೇಷು ಮಂದದೃಷ್ಟಿಯುತೇ ಷುಚ । ಲಗ್ನಾದ್ಧರ್ಮಗತೇಜೀವೇ-ನೃಪಯೋ ಗೋಪಿತೀರ್ಥಕೃತ್ ॥೧೫॥ ಬ್ರಹ್ಮಗುಪ್ತಃ ಗುರುಶಶಿಲಗ್ನ ದ್ರಷ್ಟರಿಮಂದೇಯದಿ ನವಮಗೋಜೀವಃ । ನರನಾಥಜನ್ಮಜಾತ ಶ್ಯಾಸ್ತ್ರಕರೋಭವತಿ ಸಚನೃಪಃ ॥೧೬॥ ತಥಾಚ ॥ ಜಾತಕಾ ಭರಣದಲ್ಲಿ । ಹೋರಾಶೀತ ಕರಾಮರೇಂದ್ರ ಸಚಿವಾಃಸೌರೇಣ ಸಂವೀಕ್ಷಿತಾಃ ಪುಣ್ಯಸ್ಥೇ ಸುರಮಂತ್ರಿಣಿ ಪ್ರಣಯು ಕೃತ್ತೀರ್ಥಾಟನೈರ್ಯಾನವಃ । ಕೋಣೇ ಪುಣ್ಯಗ್ರಹಾಶ್ರಿತೇನ್ಯಖಚರೈರ್ನೋ ವೀಕ್ಷಿತೇ ದೀಕ್ಷಿತಃ ಸ್ಯಾನ್ನೂ ್ಯನಂ ಯದಪಿ ಪ್ರಸೂತಿಸಮಯೇ ಸದ್ರಾಜಯೋಗೋದ್ಭವಃ ॥೧೭॥ ಮತ್ತು ಈ ಮೇಲೆ ಹೇಳಿದ ಯೋಗವೂ ರಾಜಯೋಗವೂ ಕೂಡ ಇದ್ದರೆ, ಆ ಕಾಲದಲ್ಲಿ ಹುಟ್ಟಿದವರು ಜನಕರಾಶಿ ರಾಜಪ್ರಭೃತಿಗಳಂತೆ ರಾಜೇಂದ್ರರಾದರೂ ಕೇವಲ ಬ್ರಹ್ಮನಿಷ್ಠರೂ, ಶಾಸ್ತ್ರಕರ್ತರೂ ಆಗುವರು. ಅಂಥಾ ಯೋಗವು ಹೇಳಲ್ಪಡುತ್ತೆ. ಈ ವಿಷಯದಲ್ಲಿ ॥ಶ್ಲೋಕ ಅಸ್ಮಿನ್ಯೋಗೇಜಾ ನ್ಯೋನೃಪ ಯೋಗೋಭವ ತಿತ್ರಯೋಜಾತಃ॥ ಸಭವತಿಜನೇಂದ್ರ ತುಲ್ಯೋ ನರನಾಥಶ್ಯಾಸ್ತ್ರ ಕರ್ತಾಚ ॥೧೮॥ ಎಂದು ವಿಷ್ಣುಗುಪ್ತನು ಹೇಳಿರುವನು. ಇಲ್ಲಿ ಕೆಲವರು ಸುರ ಗುರು ಶಶಿರಾಶಿ ಎಂದರೆ ಧನುರ್ಮೀನ ಕರ್ಕ್ಯಾಟಕಗಳಲ್ಲಿ ಒಂದು ಲಗ್ನವಾಗಿ ಆ ಲಗ್ನವು ಶನಿಯಿಂದ ನೋಡಲ್ಪಟ್ಟರೆ, ಗುರು ನವಮಸ್ಥಾನದಲ್ಲಿದ್ದರೆ, ರಾಜಯೋಗ ಜಾತಕನಾದರೂ, ತೀರ್ಥಯಾತ್ರೆ ಮಾಡುವನೆಂದು ಹೇಳಿದರು. ನವಮ ಭಾವಸಂಸ್ಥೇ-ಲಗ್ನಕ್ಕೆ ನವಮಸ್ಥಾನದಲ್ಲಿರುವ, ಮಂದಗೇ-ಶನೈಶ್ಚರನು, ಅನ್ಯೈಃ-ಇತರ ಗ್ರಹಗಳಿಂದ, ಅದೃಷ್ಟೇಸತಿ-ನೋಡಲ್ಪಡದಿದ್ದರೆ, ನೃಪಯೋಗೇ-ರಾಜ ಯೋಗದಲ್ಲಿ ಹುಟ್ಟಿದವನಾದರೂ, ಪಾರ್ಥಿವೇಂದ್ರಃ-ರಾಜಾಧಿರಾಜನಾದರೂ, ದೀಕ್ಷಿತಃ-ಪ್ರವಜ್ಯೆಯನ್ನಾಶ್ರಯಿಸುವನು. ಇಲ್ಲಿ ರಾಜಯೋಗವಿಲ್ಲದೇ ಕೇವಲ ಸಂನ್ಯಾಸ ಯೋಗದಲ್ಲಿ ಹುಟ್ಟಿದವನು ಪ್ರವ್ರಾಜಿತ ನಾಗುವನು ಮತ್ತು ರಾಜಯೋಗವು ಸಂನ್ಯಾಸ ಯೋಗವು ಕೂಡ ಇದ್ದ ಕಾಲದಲ್ಲಿ ಹುಟ್ಟಿದವನು, ಸಕಲ ರಾಜಾಧೀಶ್ವರನಾದರೂ, ಪ್ರವ್ರಾಜಿತನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಪರಾಶರಃ॥ ನವಮಸ್ಥಾನೇ ಸೌರೋಯದಿಸ್ಥಿತಃ ಸರ್ವದರ್ಶನ ವಿಮುಕ್ತಃ । ನೃಪಯೋಗ ಸ್ಯಾಭಾವೇ ಸ್ಯಿದ್ದೀಕ್ಷಿತೋ ನರೋಜಾತಃ ॥೧೯॥ ನಿಸ್ಸಂದಿಗ್ಧ ಪ್ರವಮೇ

ದ್ಯೋಗಸಾಸ್ಯ ಪ್ರಭಾವೇನ ॥೯೩॥ ಈ ಪ್ರಕಾರವಾಗಿಯೇ ಸಕಲರಾಜಯುಕ್ತವಾದ ಪ್ರವ್ರಜ್ಯಾಯೋಗಗಳಿಗೂ ಫಲತಾರತಮ್ಯವನ್ನು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸಾರಾವಳಿಯಲ್ಲಿ ॥ಶ್ಲೋಕ॥ ಪ್ರಥಿತಮುನಿಪಯೋಗೇ ರಾಜಯೋಗೋ ಯದಿಸ್ಯಾದ ಶುಭಫಲವಿಪಾಕಂ ಸರ್ವಮುನ್ಮೂಲ್ಯಪಶ್ಚಾತ್ ॥ ಜನ್ಯಯತಿ ಪ್ರದೀಮೀಶಂ ಯೋಗಿನಂ ಸಾಧುಶೀಲಂ ಪ್ರಣತ ನೃಪ ಶಿರೋಮಣಿಜ್ಞ್ಯ ಲತ್ಪಾದಪದ್ಮಂ ॥೨೦॥ ಎಂದು ಹೇಳಲ್ಪಟ್ಟಿರುತ್ತೆ.

## ಅಥಸಂನ್ಯಾಸಯೋಗೇ ಪರಿಶಿಷ್ಟ ವಿಚಾರಃ

ಶ್ಲೋಕ॥ ಜಾತಃಪಂಚಚತುರ್ವಿಧಶ್ಚರವರ್ಯೈಃ ಕೇಂದ್ರೇತ್ರಿಕೋಣೇಸ್ಥಿತೈರೇ ಕಸ್ಮೈರ್ಬಲಿಭಿಃ ಪ್ರಧಾನಖಚರೈಃಖೇಟಾ ಶ್ರವುಸ್ಥಾಭವೇ । ಆದಿತ್ಯಾಸಿತ ಜೀವಶುಕ್ರಧರಣೀ ಪುತ್ರೇಂದುತಾರಾ ಸುತೈಃವಾನಪ್ರಸ್ಥ ವಿವಾಹಭಿಕ್ಷಚರಕಃ ಶಾಕ್ಯೋಗುರುರ್ಜೀವಕಃ ॥೨೧॥

೫ ಅಥವಾ ೪। ಗ್ರಹಗಳು ಕೇಂದ್ರ ತ್ರಿಕೋಣಗಳಲ್ಲಿ ಏಕತ್ರ ಸೇರಿರುವಾಗ ಹುಟ್ಟಿದವರು ಆ ಗ್ರಹಗಳಲ್ಲಿ ಯಾವ ಗ್ರಹವು ಬಲಿಷ್ಠವಾಗಿರುವುದೋ ಆ ಗ್ರಹದ ಸ್ವಭಾವವಾದಂಥಾ ಸಂನ್ಯಾಸಾಶ್ರಮವನ್ನು ಸ್ವೀಕರಿಸುವರು. ಸೂರ್ಯ, ಶನಿ, ಗುರು, ಶುಕ್ರ, ಕುಜ, ಚಂದ್ರ, ಬುಧ, ಈ ೭ ಗ್ರಹಗಳಿಂದ ಕ್ರಮವಾಗಿ ವಾನಪ್ರಸ್ಥ, ದಿಗಂಬರ ಭಿಕ್ಷು, ವಿವಾಹ, ಶಾಕ್ಯ , ಗುರು, ಅಜೀವಕವೆಂಬ ೭ ವಿಧವಾದ ಪ್ರವ್ರಜ್ಯಾಭೇದದಿಂದ ಆಶ್ರಮವನ್ನು ಸ್ವೀಕರಿಸುವರು.

ಶ್ಲೋಕ॥ ಕರ್ಮಸ್ಥಾಬಲನಕ್ರಯೋಗ ಗಗನಾಸ್ವ್ಯೋಚ್ಚಾರ್ವಸ್ಥಿತಾಃ । ಕರ್ಮೇಶಶ್ಚಬಲಾಧಿಕೋಯದಿ ಯತಿಸ್ತತ್ತುಲ್ಯಶಿಲೋಥವಾ ॥ ತದ್ಯೋಗ ಪ್ರದಖೇಚರೈರಿನಶನಿಕ್ಷೋಣೀ ಕುಮಾರಾನ್ವಿತೈಃ । ಸಂನ್ಯಾಸಂಸ ಮುಪೈತಿ ವಿತ್ತವಿನಯಸ್ತ್ರೀವರ್ಜಿತೋ ಮಾನವಃ ॥೨೨॥

ತಾ॥ ಜನ್ಮಕಾಲದಲ್ಲಿ ಲಗ್ನದಿಂದ ೧೦ನೇ ಸ್ಥಾನ (ಕರ್ಮ)ದಲ್ಲಿ ಬಲಿಷ್ಠರಾದ ಮೂರು ಗ್ರಹಗಳು ಸ್ವೋಚ್ಚ ಮೂಲತ್ರಿಕೋಣ ಮೊದಲಾದ ಷಡ್ವರ್ಗದಲ್ಲಿದ್ದು ಕರ್ಮಾಧಿಪತಿ ಇವರೆಲ್ಲಗಿಂತ ಬಲಿಷ್ಠನಾಗಿದ್ದರೆ, ಆ ಕಾಲದಲ್ಲಿ ಹುಟ್ಟಿದವನು ಸಂನ್ಯಾಸಿಯಾಗಲೀ ಅಥವಾ ಸಂನ್ಯಾಸಿಗಳು ಆಚರಿಸತಕ್ಕ ಆಚಾರನಿಷ್ಠನಾಗಲಿ ಆಗುತ್ತಾನೆ. ಈ ಮೇಲೆ ಹೇಳಲ್ಪಟ್ಟ ಯೋಗಕಾರಕರಾದ ಗ್ರಹಗಳು ರವಿ, ಶನಿ, ಕುಜರನ್ನು ಸೇರಿಕೊಂಡಿದ್ದರೆ, ದ್ರವ್ಯ, ವಿನಯಪತಿಗಳಿಂದ ವರ್ಜಿತರಾಗಿ ಸಂನ್ಯಾಸವನ್ನು ಹೊಂದುವರು.

ಶ್ಲೋಕ॥ ಸೌಮ್ಯಾಂಶೋಪಗತಃ ಸಹಸ್ರಕಿರಣಂ ತದ್ವಾ ್ಂತ ಭಾಗಸ್ಥಿತಂ ॥
ಖೇಟಂ ಪಶ್ಯತಿ ಯೌವನೇ ವಯಸಿವಾ ಬಾಲ್ಯೇಯತೀಶೋ ಭವೇತ್ ॥

ತಾ॥ ಈ ಮೇಲೆ ಹೇಳಲ್ಪಟ್ಟ ಯೋಗದಲ್ಲಿ ಸೂರ್ಯನು ಸೌಮ್ಯಗ್ರಹಾಂಶೆಯಲ್ಲಿದ್ದು ಆ ನವಾಂಶೆಯಲ್ಲಿರುವ ಗ್ರಹವನ್ನು ನೋಡಿದರೆ, ಯೌವನದಲ್ಲಾಗಲೀ, ಅಪರವಯಸ್ಸಿನಲ್ಲಾಗಲೀ, ಬಾಲ್ಯದಲ್ಲಿಯೇ ಆಗಲೀ ಸಂನ್ಯಾಸಿಯಾಗುವನು. ಹೇಗೆಂದರೆ-ಯೋಗಪ್ರದರಾದ ಗ್ರಹಗಳಲ್ಲಿ ಸೂರ್ಯನು ಸೌಮ್ಯ ಗ್ರಹಗಳ ನವಾಂಶೆಯಲ್ಲಿದ್ದು ಬಾಲ್ಯಾವಸ್ಥೆಯಲ್ಲಿರುವ ಗ್ರಹವು ನೋಡಿದರೆ ಬಾಲ್ಯದಲ್ಲೂ, ಯೌವನಾವಸ್ಥೆಯಲ್ಲಿರುವ ಗ್ರಹವು ನೋಡಿದರೆ ಯೌವನಾವಸ್ಥೆಯಲ್ಲೂ, ಅಪರಾವಸ್ಥಾ ಗ್ರಹವು ನೋಡಿದರೆ, ಅಪರವಯಸ್ಸಿನಲ್ಲಿ ಸಂನ್ಯಾಸವನ್ನೈದುವನು.

ಶ್ಲೋಕ॥ ಶುಕ್ರೇಂದು ಪ್ರವಿಲೋಕಿತೇ ಗತಬಲೇಲಗ್ನಾದಿಪೋ ನಿರ್ಧನೋ
ಭಿಕ್ಷುಸ್ಸ್ಯಾದ್ಯ ದಿತುಂಗ ಭಾಂಶಕಯುತೇತಾರಾಪತಿಂ ಪಶ್ಯತಿ ॥
ಏಕಸ್ಥೈ ರವಿಲೋಕಿತೇತು ಬಹುಭಿಃ ಲಗ್ನೇಶ್ವರೈ ದೀಕ್ಷಿತಃ
ತದ್ಯೋಗಪ್ರದಭಾವಕಾರಕ ದಶಾಭುಕ್ತೌ ತದೀಯಂ ಫಲಂ ॥೨೪॥

ತಾ॥ ಲಗ್ನಾಧಿಪತಿ ನಿರ್ಬಲನಾಗಿ ಶುಕ್ರೇಂದ್ರಗಳು ನೋಡಿದರೆ ನಿಧಾನವಾಗಿ ಸಂನ್ಯಾಸ ಹೊಂದುವನು. ಅದರಲ್ಲಿ ಲಗ್ನಾಧಿಪತಿ ಉಚ್ಚ ಭಾಗದಲ್ಲಿದ್ದು ಚಂದ್ರನನ್ನು ನೋಡಿದರೆ ಅಥವಾ ಏಕತ್ರ ಇದ್ದು ಅನೇಕ ಗ್ರಹಗಳಿಂದ ನೋಡಲ್ಪಟ್ಟರೂ, ಸಂನ್ಯಾಸ ಹೊಂದುವನು. ಈ ಯೋಗಪ್ರದರಾದ ದಶೆಯಲ್ಲಿ ನೋಡಲ್ಪಡುವ ಗ್ರಹಗಳ ಭುಕ್ತಿಯಲ್ಲಿ ಸಂನ್ಯಾಸ ಹೊಂದುವನು.

ಶ್ಲೋಕ॥ ನವಮುಸ್ಥಾನಗೇ ಚಂದ್ರೇದಭೋಗ್ಯೈ ರ್ನಾವಲೋಕಿತೇ ॥
ನೃಪಯೋಗೇಪಿ ಸಂಜಾತೋದೀಕ್ಷಿತೋ ನೃಪತಿರ್ಭವೇತ್ ॥೨೫॥

ಲಗ್ನದಿಂದ ೯ನೇ ಸ್ಥಾನದಲ್ಲಿ ಚಂದ್ರನಿದ್ದು ಯಾವ ಗ್ರಹಗಳಿಂದಲೂ, ನೋಡಲ್ಪಡದಿದ್ದರೆ ರಾಜಯೋಗದಲ್ಲಿ ಹುಟ್ಟಿದವನಾದರೂ ಸಂನ್ಯಾಸಿಯಾಗುವನು.

ಶ್ಲೋಕ॥ ಗ್ರಹೈಶ್ಚತುರ್ಭಿಸ್ಸಹಿತೇತದೀಶೇ ತ್ರಿಕೋಣಗೈಃ ಕೇಂದ್ರಗತೈಸ್ತು ಮುಕ್ತಃ॥ ಚತುರ್ಗ್ರಹೈಃ ಕರ್ಮಯುತೈಃ ಪ್ರವ್ರಜ್ಯಾಂ ವ್ಯಾಪ್ನೋತಿ ಜಾತಃಕಥಿತೋ ಮುನೀಂದ್ರೈಃ ॥೨೬॥

ತಾತ್ಪರ್ಯ॥ ದಶಮಾಧಿಪತಿ ತ್ರಿಕೋಣಸ್ಥಾನ ಗತನಾಗಿ ನಾಲ್ಕು ಗ್ರಹಗಳಿಂದ ಕೂಡಿದರೂ ಕೇಂದ್ರಸ್ಥಾನಗಳಲ್ಲಿ ಚತುರ್ಗ್ರಹ ಯುಕ್ತನಾದರೂ ಆ ಕಾಲದಲ್ಲಿ ಹುಟ್ಟಿದವನು ಜೀವನ್ಮುಕ್ತನಾಗುವನು ಮತ್ತು ನಾಲ್ಕು ಗ್ರಹಗಳ ಕರ್ಮಸ್ಥಾನಗಳಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಸಂನ್ಯಾಸವನ್ನು ಹೊಂದುವನು ॥೨೫॥

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸಂನ್ಯಾಸಯೋಗ
ವಿಚಾರನಾಮ ಪಂಚದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ಸಂನ್ಯಾಸಯೋಗೋ
ನಾಮ ಪಂಚದಶ ಪ್ರಕರಣಂ

# ಪೂರ್ವಭಾಗ ಸಂಪೂರ್ಣಂ.

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ

# ೧೬ನೇ ನಕ್ಷತ್ರಫಲ ಪ್ರಕರಣಂ

# ಉತ್ತರ ಭಾಗ

ಅವತಾರಿಕೆ-ಈ ನಕ್ಷತ್ರಫಲ ಪ್ರಕರಣವು, ಈ ಗ್ರಂಥದ ಉಪಸಂಹಾರಾದಿ ವಿವರಣೆ ಎಂಬುವ ಗ್ರಂಥಾನುಕ್ರಮಣಿಕಾ ಪ್ರಕರಣದಲ್ಲಿ ಸೇರಿಲ್ಲ. ಆದರೆ, ಈ ವಿಷಯ ಏತದ್ದೇಶಿಯ ಪುಸ್ತಕಗಳಲ್ಲಿ ಕಾಣಬರುವುದಿಲ್ಲ. ಉತ್ತರಪ್ರದೇಶದ ಪುಸ್ತಕಗಳಲ್ಲಿ ಗರ್ಭಿತವಾಗಿರುತ್ತೆ. ಕೆಲವರು ಈ ಪ್ರಕರಣವನ್ನು ವರಾಹ ಮಿಹಿರಾಚಾರ್ಯ ವಿರಚಿತವಲ್ಲವೆಂದು ಹೇಳುವರು. ಈ ಅಧ್ಯಾಯ ವರಾಹ ಮಿಹಿರಾಚಾರ್ಯ ರಚಿಸಿದರೂ ಸರಿ, ಅಥವಾ ತತ್ಸಮಾನ ಪಂಡಿತರಿಂದ ರಚಿಸಿದ್ದಾಗಿದ್ದರೂ ಸರಿ, ಪ್ರತ್ಯಕ್ಷಫಲ ನಿದರ್ಶನ ಬರುವುದರಿಂದಲೂ, ಯವನ, ಧುಂಡಿರಾಜ, ಗರ್ಗ ಮೊದಲಾದ ಸಂಹಿತಾ ಗ್ರಂಥಗಳಲ್ಲಿ ನಕ್ಷತ್ರಫಲ ಉಕ್ತವಾಗಿರುತ್ತೆ. ಈ ಗ್ರಂಥಕರ್ತರೂ ಮತ್ತು ವ್ಯಾಖ್ಯಾನ ಕರ್ತರಾದ ಭಟ್ಟೋತ್ಪಲಾಚಾರ್ಯರು, ಕೃಷ್ಣಭಟ್ಟಿಯ ವ್ಯಾಖ್ಯಾನಕರ್ತರು ಯವನಾಚಾರ್ಯರ ಗ್ರಂಥ ಶ್ಲೋಕಗಳನ್ನು ಉದಹರಿಸಿ ಗ್ರಾಹ್ಯಮಾಡಿರುತ್ತಾರೆ. ಆದ್ದರಿಂದ ನಕ್ಷತ್ರಫಲ ಪ್ರಕರಣವನ್ನು ಅನ್ಯಗ್ರಂಥ ಸಮ್ಮತ್ರಿಯಿಂದ ಉದಾಹರಿಸುವುದು ಯುಕ್ತವಾಗಿ ತೋರುತ್ತದೆ. ಈ ನಕ್ಷತ್ರಫಲ ಪ್ರಕರಣದಲ್ಲಿ ಮೂಲ ಶ್ಲೋಕಗಳಿಗೆ ಪ್ರತಿಪದ ಟೀಕಾಮಾಡಿ, ಉದಾಹರಣೆ ಮತ್ತು ಸಮ್ಮತ್ರಿಗೋಸ್ಕರ ಧುಂಡಿರಾಜ, ಯವನಾಚಾರ್ಯ, ಗರ್ಗ ಮೊದಲಾದವರ ಗ್ರಂಥದ ಶ್ಲೋಕಗಳನ್ನು ಯಥಾನುಕ್ರಮವಾಗಿ ಟೀಕೆಯಲ್ಲಿ ಉದಹರಿಸಿ ಅದಕ್ಕೂ ಸಾಧ್ಯವಾದಷ್ಟರಮಟ್ಟಿಗೆ ತಾತ್ಪರ್ಯವನ್ನು ಕೊಟ್ಟಿರುತ್ತೇನೆ. ಇದರಿಂದ ಈ ಶಾಸ್ತ್ರಾಭ್ಯಾಸಿಗಳ ಸಂಶಯ ನಿವಾರಣೆಯಾಗಬಹುದಾಗಿ ನಂಬಿರುವೆನು.

ನಕ್ಷತ್ರ ಫಲಗಳು ರಾಶಿಫಲ ಪ್ರಕರಣದಲ್ಲಿ ಸೇರಿಯೇ ಇರುತ್ತದೆಂದು ಅಭಿಪ್ರಾಯ ಪಡಬಹುದು. ೧ ರಾಶಿಗೆ ಮೂರು ನಕ್ಷತ್ರ ಸೇರುತ್ತಾದ್ದರಿಂದ ಮೂರು

ನಕ್ಷತ್ರಗಳ ಫಲ ಯಥಾಂಶವಾಗಿ ಸೇರಿರುತ್ತೆ, ಆದರೆ ಪ್ರತ್ಯೇಕ ನಕ್ಷತ್ರ ಜನ್ಮಫಲ ಹೇಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ನಕ್ಷತ್ರಫಲ ಅವಶ್ಯಕವಾಗಿರುತ್ತೆ. ಈ ನಕ್ಷತ್ರಫಲ ಇಂಥಾ ಕಾಲದಲ್ಲಿ ಪ್ರಾಪ್ತಿಯಾಗುತ್ತೆಂದು ಕುರೋಕ್ತವಾಗಿಲ್ಲ. ಆದರೆ ಜಾತಕನ ಸ್ವಭಾವ ಈ ಪ್ರಕಾರವಾಗಿರುತ್ತೆಂದು ಹೇಳುವುದಕ್ಕೆ ಉತ್ತಮವಾದ ಸಾಧನವಾಗಿರುತ್ತೆ. ಈ ನಕ್ಷತ್ರ ಫಲಾದೇಶವು ಚಂದ್ರನ ಪೂರ್ಣತ್ವ, ಮಧ್ಯತ್ವ, ದೀನತ್ವದಮೇಲೆ ಚಂದ್ರನಿಗೆ ಶುಭಮಿತ್ರ ದೃಷ್ಟಿ ಮೊದಲಾದ ಬಲೀಯಗಳಿಂದ ಉಕ್ತಫಲವನ್ನು ಅನ್ಯಥಾ ಯಥೋಕ್ತ, ಮಧ್ಯ, ಅಲ್ಪ, ಫಲಗಳನ್ನು ವಿವೇಚನೆ ಮಾಡಿ ಜಾತಕನ ಜೀವಮಾನದ ಸಮಷ್ಟೀ ಫಲ ಹೇಳಬಹುದು. ಈ ಫಲ ಸ್ವಭಾವಗಳು ಅನುಭವಕ್ಕೆ ನಿದರ್ಶನಗಳಾಗಿ ಬಂದಿರುತ್ತವೆ.

## ಅಶ್ವಿನ್ಯಾದಿ ನಕ್ಷತ್ರ ಜಾತಕಫಲಮ್

ಮೂಲ॥ ಪ್ರಿಯಭೂಷಣಂ ಸ್ವುರೂಪಃ ಸುಭಗೋ ದಕ್ಷೋಶ್ವಿನೀಷು ಮತಿ ಮಾಂಶ್ಚ ॥ ಕೃತನಿಶ್ಚಯ ಸನ್ಯಾ ರುಗ್ದಕ್ಷಸ್ಸುಖಿತಶ್ಚಭರಣೀಷು ॥೧॥

ಅವತರಣಿಕೆ-ಅಶ್ವಿನೀ, ಭರಣೀ, ನಕ್ಷತ್ರದಲ್ಲಿ ಹುಟ್ಟಿದವನ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಅಶ್ವಿನೀಷು-ಅಶ್ವಿನೀ ನಕ್ಷತ್ರದಲ್ಲಿ ಹುಟ್ಟಿದವನು, ಪ್ರಿಯಭೂಷಣಃ-ಅಲಂಕಾರಾದಿ ಪ್ರಿಯವುಳ್ಳವನು, ಸುರೂಪಃ-ಒಳ್ಳೇ ಸುಂದರನು, ಸುಭಗಃ- ಸರ್ವಜನ ಪ್ರಿಯನು, ದಕ್ಷಃ-ಸಮರ್ಥನು, ಮಾತಿರ್ಮಾ-ಬುದ್ಧಿವಂತನು ಆಗುವನು. ಇದಕ್ಕೆ ಜಾತಕಾಭರಣದಲ್ಲಿ ಉದಾಹರಣೆ ॥ಶ್ಲೋಕ॥ ಸದ್ದೈವಸೇವಾಭ್ಯುದಿತೋ ವಿನೀತಃ ಸತ್ಯಾನ್ವಿತಃ ಪ್ರಾಪ್ತ ಸಮಸ್ತ ಸಂಪತ್ । ಯೋಷಾವಿಭೂಷಾತ್ಮಜ ಭೂರಿತೋಷಃಸ್ಯಾ ದಶ್ವಿನೀ ಜನ್ಮನಿ ಮಾನವಸ್ಯ ॥೧॥ ಅಶ್ವಿನೀ ನಕ್ಷತ್ರದಲ್ಲಿ ಹುಟ್ಟಿದವನು ಸೇವೆಯಲ್ಲೂ ಧರ್ಮದಲ್ಲೂ ತತ್ಪರ, ನಮ್ರ, ಸತ್ಯವಾದ ಮಾತನ್ನಾಡುವನು, ಸರ್ವಪ್ರಕಾರದ ಸಂಪತ್ತುಳ್ಳವನು, ಸ್ತ್ರೀ-ಪುತ್ರ ಮತ್ತು ಧನ ಇವುಗಳಿಂದ ಸಂತೋಷವನ್ನು ಹೊಂದುವನು. ತಥಾಚ । ಯವನಾಚಾರ್ಯಃ ॥ ಅರ್ಥವಾಂಶ್ಚಾಪಿ ಶೂರಶ್ಚ ಸುಭಗೋ ಧನವಲ್ಲಭಃ ॥ ದಕ್ಷಕ್ರೂರೋಮಹಾಕಾಯಶ್ಚಾಶ್ವಿನ್ಯಾಂ ಜಾಯತೇನರಃ ॥ ಭರಣೀಷು-ಭರಣೀ ನಕ್ಷತ್ರದಲ್ಲಿ ಹುಟ್ಟಿದವನು, ಕೃತನಿಶ್ಚಯಃ-ಪ್ರಾರಂಭಿಸಿದ ಕಾರ್ಯವನ್ನು ನಿಶ್ಚಯವಾಗಿ ನೆರವೇರಿಸುವನು, ಸತ್ಯಃ-ಯತಾರ್ಥವಾದಿಯಾಗಿ ನಿಜವನ್ನೇ ಹೇಳುವವನು, ಆರುಕ್-ರೋಗವರ್ಜಿತನು,

ದಕ್ಷ-ಸಮರ್ಥನು ಚತುರನು, ಸುಖೀ-ದುಃಖವರ್ಜಿತನಾಗುವನು. ಈ ಅರ್ಥಕ್ಕೆ ಯವನಃ ।।ಶ್ಲೋ।। ಭರಣ್ಯಾಂಚ ಪ್ರವಕ್ತಾಚಹ್ಯ ರೋಗೀ ಸುಸ್ಥಿರೋ ಭವೇತ್ ।।ಸಪ್ರಾಜ್ಞೋ ಮತಿಮಾಂಶ್ಚೈವ ಸತ್ಯವಾಕ್ಯೋ ದೃಢವ್ರತಃ ।।೩।। ಭರಣೀ ನಕ್ಷತ್ರದಲ್ಲಿ ಹುಟ್ಟಿದವನು, ವಾಗ್ಮೀ, ಅರೋಗೀ, ಸತ್ಯವಂತ, ಬುದ್ಧಿವಂತ, ನಿಶ್ಚಯವಾದ ಮನಸ್ಸುಳ್ಳವನು ಆಗುವನು ।।೩।। ಇದೇ ಭರಣೀ ನಕ್ಷತ್ರದಲ್ಲಿ ಹುಟ್ಟಿದವನು ವಿರುದ್ಧ ಫಲವನ್ನು ಹೊಂದುವನೆಂದು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿರುತ್ತೆ. ಆ ಮತವು ಗ್ರಂಥ ಅಭಿಪ್ರಾಯಕ್ಕೂ ಯವನಾಚಾರ್ಯರ ಅಭಿಪ್ರಾಯಕ್ಕೂ ವಿರೋಧವಾಗಿರುವುದರಿಂದ ಆ ಮತವನ್ನು ಅಂಗೀಕರಿಸುವುದಿಲ್ಲ. ।।ಶ್ಲೋಕ।। ಸದಾಪಕೀರ್ತಿರ್ಹಿ ಮಹಾಪವಾದೈರ್ನಾನಾವಿನೋದೈಶ್ಚ ವಿನೀತಕಾಲಃ ।। ಜಲಾತಿ ಭೀರುಶ್ಚ ಫಲಃ ಖಲಶ್ಚ ಪ್ರಾಣೇಪ್ರಣೇತೋ ಭರಣೀ ಭಜಾತಃ ।।೪-೧।।

ಮೂಲ।। ಬಹುಭುಕ್ಪರದಾರರತ ಸ್ತೇಜಸ್ವೀ ಕೃತ್ತಿಕಾಸು ವಿಖ್ಯಾತಃ ।।
ರೋಹಿಣ್ಯಾಂ ಸತ್ಯಶುಚೀ ಪ್ರಿಯಂವದಶ್ಚಿರಮತಿ ಸ್ಸುರೂಪಶ್ಚ ।।೨।।

ಅವತಾರಿಕೆ।। ಕೃತ್ತಿಕಾ, ರೋಹಿಣೀ ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವವು ಹೇಳಲ್ಪಡುತ್ತೆ ।।ಟೀ।। ಕೃತ್ತಿಕಾಸು-ಕೃತ್ತಿಕಾ ನಕ್ಷತ್ರದಲ್ಲಿ ಹುಟ್ಟಿದವನು, ಬಹುಭುಕ್-ಅಧಿಕವಾಗಿ ಭೋಜನ ಮಾಡುವನು, ಪರದಾರರತಃ-ಪರರ ಹೆಂಡತಿಯಲ್ಲಿ ಆಸಕ್ತಿಯುಳ್ಳವನು, ತೇಜಸ್ವೀ-ಕಾಂತಿವಂತನು, ವಿಖ್ಯಾತಃ-ಪ್ರಸಿದ್ಧ ಪುರುಷನೂ ಆಗುವನು ।। ಇದೇ ಅರ್ಥಕ್ಕೆ ।।ಜಾ-ಭ।।ಶ್ಲೋ।। ಕ್ಷುಧಾಧಿಕಃ ಸತ್ವಧನೈರ್ವಿಹಿನೋ ವೃಥಾಟನೋತ್ಸನ್ನ ಮೃತಿಃ ಕೃತಘ್ನಃ ।। ಕಠೋರವಾಗ್ಗರ್ಹಿತಕರ್ಮ ಕೃತ್ಸ್ಯಾಚ್ಚೇತ್ಕೃತ್ತಿಕಾ ಜನ್ಮನಿ ಯಸ್ಯ ಜಂತೋಃ ।।೫।। ಕೃತ್ತಿಕಾ ನಕ್ಷತ್ರದಲ್ಲಿ ಹುಟ್ಟಿದವನು ಹೇರಳವಾಗಿ ಭೋಜನ ಮಾಡುವನು, ಸುಳ್ಳು ಹೇಳುವನು, ದರಿದ್ರನು, ನಿರರ್ಥಕವಾಗಿ ಸಂಚರಿಸುವವನು, ಕೃತಘ್ನ, ಕಠೋರವಾಕ್ಕುಳ್ಳವನು, ನಿಂದಕರ್ಮವನ್ನು ಮಾಡುವನು।। ಈ ನಕ್ಷತ್ರದಲ್ಲಿ ಹುಟ್ಟಿದವನು ಕೆಲವು ಸುಗುಣಗಳಿಂದ ಶೋಭಿಸುವನೆಂದು ಯವನಾಚಾರ್ಯರ ಮತವಿರುತ್ತೆ. ಆದ್ದರಿಂದ ಇಲ್ಲಿ ಉದಹರಿಸಿರುತ್ತೆ ।।ಶ್ಲೋ।। ತೇಜಸ್ವೀ ನೀತಿಮಾಂಶ್ಚೈವ ಬಹು ಭುಗ್ಜನ ವಲ್ಲಭಃ ।। ಗಂಭೀರಃ ಕುಶಲೋಮಾನೀ ವಹ್ನಿ ನಕ್ಷತ್ರಜಃ ಶುಚಿಃ. ।।೬।। ಕೃತ್ತಿಕಾ ನಕ್ಷತ್ರದಲ್ಲಿ ಹುಟ್ಟಿದವನು, ತೇಜಸ್ವೀ, ನೀತಿಯುಕ್ತ, ಹೊಟ್ಟೆಬಾಕ, ಬಹುಜನರಿಗೆ ಬೇಕಾಗಿರುವನು, ಗಂಭೀರನು, ಕುಶಲಬುದ್ಧಿ, ಬಹುಮಾನವಂತನು ಆಗುವನು ।। ರೋಹಿಣ್ಯಾಂ-ರೋಹಿಣೀ ನಕ್ಷತ್ರದಲ್ಲಿ ಹುಟ್ಟಿದವನು, ಸತ್ಯ-ಶುಚಿಃ-ಸತ್ಯ-ಯತಾರ್ಥವಾದಿ, ಶುಚಿಃ-ಪರದ್ರವ್ಯಾಪಹಾರಾದಿ ಪರದಾರ ಗಮನಾದಿಗಳಿಲ್ಲದೆ ಶುದ್ಧವಾಗಿರುವನು ಮತ್ತು

ಶಾಸ್ತ್ರಾಚಾರ ಅನುಷ್ಠಾನವನ್ನು ಮಾಡುವನು. ಪ್ರಿಯಂವದಃ-ಮಧುರ ವಾಕ್ ಉಳ್ಳವನು, ಸ್ಥಿರಮತಿಃ-ನಿಶ್ಚಯವಾದ ಬುದ್ಧಿಯುಳ್ಳವನು, ಸುರೂಪಃ-ಸೌಂದರ್ಯ ವುಳ್ಳವನೂ ಆಗುವನು.ಈ ವಿಷಯಕ್ಕೆ ಜಾ-ಭ ||ಶ್ಲೋಕ|| ಧರ್ಮ ಕರ್ಮ ಕುಶಲಃ ಕೃಷೀವಲಶ್ಚಾರುಶೀಲಪಿಲಸತ್ಕಳೇಬರಃ । ವಾಗ್ವಿಲಾಸ ಕಲಿತಾ ಖಿಲಾಶಯೋ ರೋಹಿಣೀ ಭವತಿ ಯಸ್ಯಜನ್ಮಭಂ ||೭||ತಾ|| ರೋಹಿಣೀ ನಕ್ಷತ್ರದಲ್ಲಿ ಜನ್ಮಿಸಿದ ಪುರುಷನು ಧರ್ಮಕರ್ಮದಲ್ಲಿ ದಕ್ಷಕೃಷಿ ಮೂಲಕ ಲಾಭವುಳ್ಳವನು, ಸುಂದರ, ತೇಜಸ್ವೀ, ವಾಚಾಲತ್ವದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುವನೂ ಆಗುವನು. ಇದೇ ಅರ್ಥವನ್ನೇ ಯವನಾಚಾರ್ಯರು ಸಹ ಹೇಳಿರುವರು. ||ಶ್ಲೋಕ|| ಸುರೂಪಃ ಸ್ಥಿರಧೀರ್ಮಾನಿ ಭೋಗಭಾಕ್ಸುರತಃಪ್ರಿಯಃ || ಪ್ರಿಯವಾಕ್ಚತುರೋ ದಕ್ಷಸ್ತೇಜಸ್ವೀ ಧಾತೃಧಿಷ್ಣ್ಯಜಃ ||೮||

**ಮೂಲ|| ಚಪಲಶ್ಚತುರೋ ಬೀರುಃಪಟುರುತ್ಸಾಹೀಧನೀ ಮೃಗೇಭೋಗೀ|**
**ಶಠಗರ್ವಿತೌ ಕೃತಘ್ನೌಹಿಂಸ್ರಃ ಪಾಪಶ್ಚರೌದ್ರರ್ಕ್ಷೇ ||೩||**

ಅವತಾರಿಕೆ|| ಮೃಗಶಿರ, ಅರಿದ್ರಾ ನಕ್ಷತ್ರದಲ್ಲಿ ಹುಟ್ಟಿದವರ ಸ್ವಭಾವ ಹೇಳಲ್ಪಡುತ್ತೆ.

ಟೀಕು|| ಮೃಗೇ-ಮೃಗಶಿರೋತ್ಪನ್ನನು, ಚಪಲಃ-ಚಪಲ ಸ್ವಭಾವವಾದ ಚಿತ್ತವುಳ್ಳವನು, ಚತುರಃ-ಚಮತ್ಕಾರ ಉಳ್ಳವನು, ಭೀರುಃ-ಭಯ ಉಳ್ಳವನು, ಪಟುಃ ಮಾತನಾಡುವುದರಲ್ಲಿ ತಡೆಯಿಲ್ಲದವನು, ಉತ್ಸಾಹೀ-ಉತ್ಸಾಹವಂತನು, ಧನೀ-ಧನವಂತನು, ಭೋಗಿ-ಭೋಗವಂತನೂ ಆಗುವನು|| ಈ ವಿಷಯಕ್ಕೆ ಜಾ-ಭ ||ಶ್ಲೋಕ|| ಶರಾಸನಾಭ್ಯಾಸ ರತೋವಿನೀತಃಸದಾನುರಕ್ತೋ ಗುಣಿನಾಂಗಣೇಷು । ಭೋಕ್ತಾನೃಪ ಸ್ನೇಹಭರೇಣ ಪೂರ್ಣಃ ಸನ್ಮಾರ್ಗವೃತ್ತೋ ಮೃಗಜಾತಜನ್ಮಾತಾ || ಮೃಗಶಿರಾ ನಕ್ಷತ್ರೋತ್ಪನ್ನನು, ಧನುರ್ವಿದ್ಯೆಯಲ್ಲಿ ಪಂಡಿತ ಅರ್ಥಾತ್-ಯುದ್ಧದಲ್ಲಿ ಪಂಡಿತನು, ನಮ್ರ, ಗುಣೀ ಅನೇಕರ ಗುಣಗಳನ್ನು ಗ್ರಹಿಸುವನು, ಉಪಯೋಗಗಳನ್ನನುಭವಿಸುವನು, ರಾಜಕೃಪೆ ಸಂಪೂರ್ಣವಾಗಿ ಉಳ್ಳವನು, ಸನ್ಮಾರ್ಗದಲ್ಲಿ ನಡೆಯುವನು|| ಇದೇ ಅರ್ಥಕ್ಕನುಸಾರವಾಗಿ ಯವನಾಚಾರ್ಯರು ಹೇಳಿರುವುದೇನೆಂದರೆ ||ಶ್ಲೋಕ|| ಉತ್ಸಾಹೀ ಚಪಲೋ ಭೀರುರ್ಧನೀಮಾನೀ ಪ್ರಿಯಃಶುಚಿಃ || ಆಗಮಜ್ಞ ಪ್ರಭುರ್ದಕ್ಷಶ್ಚಂದ್ರ ನಕ್ಷತ್ರಜೋನರಃ ||೧೦|| ರೌದ್ರರ್ಕ್ಷೇ-ಅರಿದ್ರಾನಕ್ಷತ್ರದಲ್ಲಿ ಹುಟ್ಟಿದವನು, ಶಠಗರ್ವಿತೌ-ಶಠಲಕ್ಷಣವೇನೆಂದರೆ || ಮನಸಾ-ವಚಾಯಶ್ಚ ದೃತ್ಯತ ಕಾರ್ಯತತ್ಪರಃ । ಕರ್ಮಣಾ ವಿಪರೀತಶ್ಚ ಸಶಠಸ್ಸದ್ಭಿರೀರ್ಯತೆ ||೧೧|| ಎಂದುಕ್ತವಾಗಿರುತ್ತೆ. ಇಂಥಾ ಶಠಲಕ್ಷಣದಿಂದ ಕೂಡಿ ಅಹಂಕಾರ ಪಡತಕ್ಕವನು

ಅಂದರೆ ಮನಸ್ಸಿನಲ್ಲೊಂದು, ಕಾರ್ಯದಲ್ಲೊಂದು, ಮಾತಿನಲ್ಲೊಂದು, ಕಾರ್ಯಮಾಡುವಾಗಲೊಂದು ವಿಧವಾಗಿ ನುಡಿಯತಕ್ಕವನೆ ಶಠನೆಂದು ವಿದ್ವಾಂಸರು ನಿಶ್ಚಯಿಸಿರುತ್ತಾರೆ॥ ವಚಸ್ಯೇಕಂ ಮನಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಂ। ವಚಸ್ಯೇಕಂ ಮನಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ॥೧೨॥ ಈ ಶ್ಲೋಕದಲ್ಲಿ ಪೂರ್ವಾರ್ಧ ಮಾತ್ರವೇ ಇಲ್ಲಿ ಅನ್ವಯಿಸುತ್ತದೆ. ಗರ್ವಿತೌ-ಅಹಂಕಾರವುಳ್ಳವನು, ಕೃತಘ್ನ-ಉಪಕಾರವನ್ನು ಮರೆಯುವವನು, ಹಿಂಸ್ರಃ-ಪ್ರಾಣಿಹಿಂಸಕನು, ಪಾಪಃ- ಪಾಪಕರ್ಮ ಉಳ್ಳವನಾಗುತ್ತಾನೆ॥ ಈ ಅರ್ಥಕ್ಕೆ ಜಾ-ಭ ಶ್ಲೋಕ ॥ ಕ್ಷುಧಾಧಿಕೊ ಖಿಕ್ಷಶರೀರಕಾಂತಿರ್ಬಂಧುಪ್ರಿಯಃ ಕೋಪಯುತಃ ಕೃತಘ್ನಃ । ಪ್ರಸೂತಿ ಕಾಲೇಚ ಭವೇತ್ಕಿಲಾರ್ದ್ರಾದಯಾರ್ದ್ರಚೇತಾ ನಭವೇನ್ಮನುಷ್ಯಃ ॥೧೩॥ತಾ॥ ಆರಿದ್ರಾ ನಕ್ಷತ್ರೋತ್ಪನ್ನನು-ಹೆಚ್ಚಾಗಿ ಭೋಜನ ಮಾಡುವವನು, ಕೃಶ ಶರೀರ ಉಳ್ಳವನು, ಬಂಧು ಜನಪ್ರಿಯನು ಕೋಪಿಷ್ಠನು, ಉಪಕಾರವನ್ನು ಸ್ಮರಿಸದೆ ಇರುವನು, ಕ್ರೂರಸ್ವಭಾವ ಉಳ್ಳವನು ಆಗುತ್ತಾನೆ॥ ಈ ಅರ್ಥಕ್ಕೆ ಯವನ ಸಂಹಿತೆಯಲ್ಲಿ ಶ್ಲೋಕ॥ ಅವಿಚಾರ ಪರಃಶೂರೋ ನಿಪುಣಃ ಕ್ರಯವಿಕ್ರಯೇ ॥ ಸವಿಹಿಂಸ್ರಃ ಕ್ರೂರತನುಃ ಕೃತಘ್ನಃ ಶಿವಧಿಷ್ಯಜಃ ॥೧೪॥

ಮೂಲ॥ ದಾಂತಃ ಸುಖೀ ಸುಶೀಲೋ ದುರ್ಮೇಧಾರೋಗಭಾಕ್ಪಿಪಾಸುಶ್ಚ ॥
ಅಲ್ಪೇನಚ ಸಂತುಷ್ಟಃ ಪುನರ್ವಸೌ ಜಾಯತೇ ಮನುಜಃ ॥೪॥

ಅವತಾರಿಕೆ॥ ಪುನರ್ವಸು ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವವು ಹೇಳಲ್ಪಡುತ್ತೆ.

ಟೀಕು॥ ದಾಂತಃ-ತಪಃ ಕ್ಲೇಶವನ್ನು ಸಹಿಸುವವನು, ಸುಖೀ-ಸುಖವಂತನು, ಸುಶೀಲ-ಸದಾಚಾರವುಳ್ಳವನು, ದುರ್ಮೇಧಾಃ-ಜಡಪ್ರಾಯನಾಗಿರುವನು, ರೋಗಭಾಕ್-ರೋಗಪೀಡಿತನು, ಪಿಪಾಸುಃ-ನೀರಡಿ ಉಳ್ಳವನು, ಅಲ್ಪೇನ-ಸ್ವಲ್ಪ ಲಾಭದಿಂದ, ಸಂತುಷ್ಟಃ-ಸಂತೃಪ್ತಿ ಹೊಂದುವನು, ಮನುಜಃ-ಪುರುಷನು, ಪುನರ್ವಸೌ- ಪುನರ್ವಸು ನಕ್ಷತ್ರದಲ್ಲಿ ಜಾಯತೆ-ಹುಟ್ಟುವನು. ಈ ವಿಷಯಕ್ಕೆ ಜಾ-ಭ ಶ್ಲೋಕ॥ ಪ್ರಭೂತಮಿತ್ರಃ ಕೃತಶಾಸ್ತ್ರ ಯತ್ನಃ ಸದ್ರತ್ನಚಾಮೀಕರ ಭೂಷಣಾಢ್ಯಃ । ದಾತಾ ಪ್ರತಾಪೀವ ಸುಧಾವಸುಶ್ಚ ಪುನರ್ವಸುರ್ಯಸ್ಯ ಭವೇತ್ಪ್ರಸೂತೌ ॥೧೫॥ತಾ॥ ಪುನರ್ವಸು ನಕ್ಷತ್ರದಲ್ಲಿ ಹುಟ್ಟಿದವನು ಅನೇಕ ಮಿತ್ರರಿಂದ ಕೂಡಿರುವನು, ಶಾಸ್ತ್ರದಲ್ಲಿ ನಂಬಿಕೆಯುಳ್ಳವನು, ಚೆನ್ನಾಗಿ ಸುವರ್ಣರತ್ನಾದಿಗಳಿಂದ ಅಲಂಕಾರ ಮಾಡಿಕೊಳ್ಳುವನು, ದಾತಾ, ಪರಾಕ್ರಮೀ ಭೂಮಿಯಿಂದ ಲಾಭವುಳ್ಳವನು ॥ ಈ ನಕ್ಷತ್ರದಲ್ಲಿ ಹುಟ್ಟಿದವನ ಫಲ ಯವನಾಚಾರ್ಯರ ಮತದಲ್ಲಿ ॥ಶ್ಲೋಕ॥

ದುರ್ಮೇಧಾಸೌದರ್ಶನೀಯ ಪರಸ್ತ್ರೀಕಾರ್ಯ ನೈಪುಣ್ಯಃ। ಸಹಿಷ್ಣುರಲ್ಪ ಸಂತುಷ್ಟಃ ಶೀಘ್ರಗೋದಿತಿಧಿಷ್ಣ್ಯಜಃ ॥೧೬॥ ಎಂದುಕ್ತವಾಗಿರುತ್ತೆ ॥೪॥

ಮೂಲ॥ ಶಾಂತಾತ್ಮಾ ಸುಭಗಃ ಪಂಡಿತೋ ಧನೀ ಧರ್ಮ ಸಂಶ್ರಿತಃ ಪುಷ್ಯೇ। ಶಠಸರ್ವ ಭಕ್ಷ ಪಾಪಾಃ ಕೃತಘ್ನ ಧೂರ್ತೌಚಭೌಂ ಜಂಗೇ ॥೫॥

ಅವತಾರಿಕೆ॥ ಪುಷ್ಯಾಶ್ಲೇಷಾ ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಪುಷ್ಯೇ-ಪುಷ್ಯ, ಮೀನ ನಕ್ಷತ್ರದಲ್ಲಿ ಜನ್ಮವಾದವನು, ಶಾಂತಾತ್ಮಾ-ಶಮ ದಮಾದಿ ಜಿತೇಂದ್ರಿಯ ಉಳ್ಳವನು, ಸುಭಗಃ-ಸರ್ವಜನಪ್ರಿಯನು, ಪಂಡಿತಃ-ವಿದ್ವಾಂಸನು, ಧನೀ-ಧನವಂತನು, ಧರ್ಮಸಂಶ್ರಿತಃ-ಧರ್ಮದಿಂದ ನುಡಿಯುವನಾಗುವನು ॥ ಈ ಅರ್ಥಕ್ಕೆ ಜಾ-ಭ ಶ್ಲೋಕ ॥ ಪ್ರಸನ್ನಗಾತ್ರಃ ಪಿತೃಮಾತೃಭಕ್ತಃ ಸ್ವಧರ್ಮಸಕ್ತೋ ವಿನಯಾಭಿಯುಕ್ತಃ ॥ ಭವೇನ್ಮನುಷ್ಯಃ ಖಲು ಪುಷ್ಯಜನ್ಮಾ ಸನ್ಮಾನನಾನಾಧನ ವಾಹನಾಢ್ಯಃ ॥೧೭॥

ಪುಷ್ಯಮೀ ನಕ್ಷತ್ರದಲ್ಲಿ ಹುಟ್ಟಿದವನು ಸುಂದರಪುರುಷ, ತಾಯಿತಂದೆಗಳಲ್ಲಿ ಭಕ್ತಿಯುಳ್ಳವನು, ಧರ್ಮದಲ್ಲಿ ಪ್ರೀತಿಯುಳ್ಳವನು, ವಿನಯದಿಂದ ಶೋಭಿಸುವವನು, ಅನೇಕಪ್ರಕಾರದ ವಾಹನಉಳ್ಳವನು, ದ್ರವ್ಯ ಮತ್ತು ಸನ್ಮಾನವನ್ನು ಸಂಪಾದಿಸುವನು. ಇದಕ್ಕೆ ಯವನಾಚಾರ್ಯ ಮತ॥ ಅತಿಕಾಮೀ ಸಂಪುಷ್ಪಶ್ಚ ಚಂಚಲು ಸ್ಥಿರಧೀಶ್ಶುಚಿಃ॥ ಪುಷ್ಯನಕ್ಷತ್ರ ಸಂಜಾತಃ ಸರ್ವಶಾಸ್ತ್ರ ವಿಶಾರದಃ ॥೧೮॥ ಭೌಂಜಂಗೆ-ಅಶ್ಲೇಷಾ ನಕ್ಷತ್ರದಲ್ಲಿ ಹುಟ್ಟಿದವನು, ಶಠಸರ್ವ ಭಕ್ಷಪಾಪಾ-, ಶಠ,-ಕುತ್ಸಿತನು, ಸರ್ವಭಕ್ಷಃ-ಭಾಗಾರ್ಹವಾದ್ದಕ್ಕಿಂತ ಹೆಚ್ಚಾಗಿ ಮೋಸದಿಂದಪಹರಿಸುವನು, ಪಾಪಃ-ಪಾಪಕರ್ಮಉಳ್ಳವನು, ಕೃತಘ್ನಃ-ಉಪಕಾರವನ್ನು ಮರೆಯುವವನೂ, ಧೂರ್ತಃ-ಪರರಿಗೆ ಹಿತಕರವಾದರೂ, ಅಹಿತಕರವಾದರೂ ಶಾಂತಕೋಪಾದಿ ಸಮಯಗಳಿಲ್ಲದೆ ನಿಷ್ಠುರವಾಗಿ ನುಡಿಯುವನು. ಇದಕ್ಕೆ ಯವನಾಚಾರ್ಯ ಮತ ॥ಶ್ಲೋಕ॥ ಸುರೂಪಸ್ಸುಭಗಃ ಕ್ರೂರಃ ಪರಸ್ತ್ರಿತತ್ಪರ ಶಠಃ । ಅವಕಾ ವ್ಯಸನಾಕ್ರಾಂತಃ ಸಾರ್ಪ ನಕ್ಷತ್ರಜೋನರಃ ॥೧೯॥ ಆಶ್ಲೇಷಾ ನಕ್ಷತ್ರೋತ್ಪನ್ನನು ಸುಂದರವಾದ ಶರೀರವುಳ್ಳವನು, ಕಾಂತಿವಂತನು ಕ್ರೂರಸ್ವಭಾವ ಉಳ್ಳವನು, ಪರಸ್ತ್ರೀಗಾಮೀ, ಶಠ, ಅನೇಕ ದುರ್ವ್ಯಸನ ಉಳ್ಳವನು ॥ ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ವೃಥಾಟನಃ ಸ್ಯಾದತಿದುಷ್ಟ ಚೇಷ್ಟಃ ಕಷ್ಟ ಪ್ರದಶ್ಚಾಪಿ ವೃಥಾ ಜನಾನಾಮ್ ॥ ಸಾರ್ಪೇಸದರ್ಥೋಹಿ ವೃಥಾರ್ಪಿತಾರ್ಥಃ ಕಂದರ್ಪಸಂತಪ್ತಮನಾ ಮನುಷ್ಯಃ ॥೨೦॥ತಾ॥ ವ್ಯರ್ಥವಾಗಿ

ಸಂಚರಿಸುವವನು, ದುಷ್ಕಕಾರ್ಯಗಳನ್ನು ಮಾಡುವವನು, ವ್ಯರ್ಥವಾಗಿ ಅನ್ಯರಿಗೆ ಕಷ್ಟಕೊಡುವವನು, ಧನವನ್ನು ವ್ಯರ್ಥವಾಗಿ ಖರ್ಚು ಮಾಡುವವನು, ನಿರಂತರ ವಿಷಯಾಸಕ್ತಿಯಿಂದ ಕಾಮಾಗ್ನಿಪೀಡಿತನು ಆಗುತ್ತಾನೆ ।।೫।।

ಮೂಲ।। ಬಹಭೃತ್ಯಧನೋ ಭೋಗೀ ಸುರಪಿತೃ ಭಕ್ತೋಮಹೋದ್ಯಮಃ ಪಿತ್ರ್ಯೇ।। ಪ್ರಿಯವಾಗ್ದಾತಾ ದ್ಯುತಿಮಾನಟನೋ ನೃಪಸೇವಕೋ ಭಾಗ್ಯೇ ।।೬।।

ಅವತಾರಿಕೆ।। ಮಖಾ-ಪುಬ್ಬಾ ನಕ್ಷತ್ರದಲ್ಲಿ ಹುಟ್ಟಿದವನ ಸ್ವರೂಪವು ಹೇಳಲ್ಪಡುತ್ತೆ.

ಟೀಕು।। ಪಿತ್ರ್ಯೇ-ಮಖಾ ನಕ್ಷತ್ರದಲ್ಲಿ ಹುಟ್ಟಿದವನು, ಬಹುಭೃತ್ಯ ಧನಃ-ಅನೇಕ ಸೇವಕರುಳ್ಳವನು, ಅಧಿಕ ಧನವಂತನು, ಭೋಗೀ-ಭೋಗವಂತನು, ಸುರಪಿತೃ *ಭಕ್ತಃ- ದೇವತೆಗಳಲ್ಲೂ, ಪಿತೃದೇವತೆಗಳಲ್ಲೂ, ಭಕ್ತಿಯುಳ್ಳವನು, ಮಹೋದ್ಯಮಃ** ಮಹೋತ್ಸಾಹ ಉಳ್ಳವನು. ಈ ವಿಷಯಕ್ಕೆ ಯವನಾಚಾರ್ಯರ ಸಮ್ಮತಿ ।।ಶ್ಲೋಕ।। ಕ್ರೂರಸ್ಥೂಲ ಹನುಃ ಕೋಪೀ ವಕ್ತಾಚಾರ್ಯಸಹಃ ಪ್ರಭುಃ ।। ಸುರಗುರ್ವರ್ಚನರಸ್ತೇ ಜಸ್ವೀ ಪಿತೃಧಿಷ್ಣ್ಯಜಃ ।।೨೨।।ತಾ।। ಕ್ರೂರ, ಸ್ಥೂಲವಾದ ಹನುಪ್ರದೇಶ ಉಳ್ಳವನು ೧।। ಗಂಡಕಪೋಲೌ ತತ್ಪರಾಹನುಃ ।ಇತ್ಯಮರಃ।। ಕೋಪಿಷ್ಟ, ವಾಚಾಳತ್ವ ಉಳ್ಳವನು, ಪ್ರಭುಃ-ದೇವದ್ವಿಜಾರ್ಚನರತ, ತೇಜಸ್ವೀ, ಈ ಮೊದಲಾದ ಗುಣಗಳಿಂದ ಕೂಡಿರುವನು ।।ಈ ವಿಷಯದಲ್ಲಿ।। ಜಾ-ಭ ಶ್ಲೋಕ।। ಕಠೋರಚಿತ್ತಃ ಪಿತೃಭಕ್ತಿಯುಕ್ತ ಸ್ತೀವ್ರ ಸ್ವಭಾವ ಸ್ಥನವದ್ಯವಿದ್ಯಃ ।। ಚೇಜ್ಜನ್ಮಭಂ ಯಸ್ಯ ಮಖಾನಘಃ ಸನ್ಮತಿ- ಸದಾರಾತಿ ವಿಘಾತದಕ್ಷಃ ।।೨೪।। ಮಖಾ ನಕ್ಷತ್ರೋತ್ಪನ್ನನು ಕಠೋರ ಮನಸ್ಸುಳ್ಳವನು, ಪಿತೃಭಕ್ತಿಯುಳ್ಳವನು, ತೀವ್ರಸ್ವಭಾವ ನಿಷ್ಕಳಂಕವಾದ ವಿದ್ಯೆಯುಳ್ಳವನು, ಒಳ್ಳೆಯ ಬುದ್ಧಿಯುಳ್ಳವನು, ಶತ್ರುಗಳನ್ನು ಜಯಿಸುವುದರಲ್ಲಿ ಸಮರ್ಥನು. ಇವೇ ಮೊದಲಾದ ಗುಣಗಳುಳ್ಳವನಾಗುವನು।। ಭಾಗ್ಯೇ-ಪೂರ್ವಾಫಲ್ಗುನೀ ನಕ್ಷತ್ರದಲ್ಲಿ ಹುಟ್ಟಿದವನು, ಪ್ರಿಯವಾಕ್-ಪ್ರಿಯವಾದ ಮಾತನಾಡುವನು, ದಾತಾ-ದಾನಶೀಲನು, ದ್ಯುತಿಮಾರ್-ಕಾಂತಿವಂತನು, ಅಟನಃ-ಸಂಚರಣ ಸ್ವಭಾವವುಳ್ಳವನು, ನೃಪಸೇವಕಃ-ರಾಜಸೇವಾನುರಕ್ತ, ಈ ಗುಣಗಳಿಂದ ಕೂಡಿದವನಾಗುತ್ತಾನೆ. ಇದೇ ಅರ್ಥಕ್ಕೆ ಯವನಜಾತಕ ಶ್ಲೋಕ।। ದ್ಯುತಿಮಾಂಶ್ಚಧನೀ ದಾತಾನೃತ್ಯ ಶಾಸ್ತ್ರವಿಶಾರದಃ।।ಕಾರ್ಯಾಕಾರ್ಯ ವಿಚಾರಜ್ಞೋಭಗ ನಕ್ಷತ್ರಜೋನರಃ

* ಪಿತೃವಾಕ್ಯ ಪರಿಪಾಲನು.

** ಮಹತ್ತರವಾದ ಕಾರ್ಯದಲ್ಲಿ ಪ್ರವರ್ತಕನೂ ಎಂದು ಅರ್ಥಮಾಡಿರುತ್ತಾರೆ.

॥೨೫॥ ಪುಬ್ಬಾ ನಕ್ಷತ್ರೋತ್ಪನ್ನನು ತೇಜಸ್ವೀ, ಧನವಂತ, ದಾತ, ನೃತ್ಯಶಾಸ್ತ್ರಪಂಡಿತ, ಕಾರ್ಯಾಕಾರ್ಯ ವಿಚಾರವುಳ್ಳವನು ಆಗುತ್ತಾನೆ. ಇದೇ ಅರ್ಥಕ್ಕೆ ಜಾ-ಭ. ದಲ್ಲಿ ॥ಶ್ಲೋಕ॥ ಶೂರಸ್ತ್ಯಾಗೀ ಸಾಹಸೀ ಭೂರಿಭರ್ತಾ ಕಾಮಾರ್ತೋ ಪಿಸ್ಯಾಚ್ಚಿರಾಲೋತಿಧಕ್ಷಃ ॥ ಧೂರ್ತಃ ಕ್ರೂರೋತ್ಯಂತ ಸಂಜಾತಗರ್ವಃ ಪೂರ್ವಾಫಲ್ಗುನ್ಯಸ್ತಿ ಚೇಜ್ಜನ್ಮಕಾಲೇ ॥೨೬॥ತಾ॥ ಶೂರ, ದಾನಮಾಡುವನು, ಸಾಹಸಿ, ಅನೇಕರ ಧನಕ್ಕೆ ಅಧಿಪತಿ, ವಿಷಯ ಪೀಡಿತ, ಅತಿಶಯ, ಧೂರ್ತ, ಅತ್ಯಂತ ಗರ್ವಿಷ್ಠ ಇತ್ಯಾದಿ ಲಕ್ಷಣಗಳಿಂದ ಕೂಡಿದವನಾಗುತ್ತಾನೆ ॥೨೬॥

ಮೂಲ॥ ಸುಭಗೋ ವಿದ್ಯಾಪ್ತಧನೋ ಭೋಗೀ ಸುಖಭಾಗ್ದ್ವಿತೀಯ ಫಲ್ಗುನ್ಯಾಮ್॥
ಉತ್ಸಾಹೀಧೃಷ್ಟಃ ಪಾನಪೋಘೃಣೀ ತಸ್ಕರೋಹಸ್ತೇ ॥೭॥

ಅವತಾರಿಕೆ ॥ ಉತ್ತರಾ, ಹಸ್ತ ನಕ್ಷತ್ರದಲ್ಲಿ ಹುಟ್ಟಿದವನ ಸ್ವರೂಪವು ಹೇಳಲ್ಪಡುತ್ತೆ ॥ಟೀ॥ ದ್ವಿತೀಯ ಫಲ್ಗುನ್ಯಾಂ-ಉತ್ತರಾ ನಕ್ಷತ್ರದಲ್ಲಿ ಹುಟ್ಟಿದವನು, ಸುಭಗಃ-ಸರ್ವಜನಪ್ರಿಯನು, ವಿದ್ಯಾಪ್ತಧನಃ-ವಿದ್ಯೆಯು ಬಲದಿಂದ ಧನ ಸಂಪಾದಿಸುವನು, ಭೋಗೀ-ಭೋಗವಂತನು, ಸುಖಭಾಕ್-ಸುಖವಂತನು ಆಗುತ್ತಾನೆ. ಈ ಅರ್ಥಕ್ಕೆ ಯವನಾಚಾರ್ಯರ ಮತ ॥ಶ್ಲೋಕ॥ ಜಿತಶತ್ರುಃ ಸುಖೀಭೋಗೀ ನಿತ್ಯಶಃ ಪ್ರಮದಾಪ್ರಿಯಃ ॥ಕಲಾಭಿಜ್ಞಃ ಸತ್ಯರತಃ ಸುವಿದ್ವಾ ನರ್ಯಮರ್ಕ್ಷಜಃ ॥೨೭॥ ಉತ್ತರಾ ನಕ್ಷತ್ರದಲ್ಲಿ ಹುಟ್ಟಿದವನು ಶತ್ರುಗಳನ್ನು ಜಯಿಸುವವನು, ಸುಖೀ-ವಿಷಯೋಪಭೋಗ ಉಳ್ಳವನು, ನಿತ್ಯವು ಪ್ರಮದಾಸ್ತ್ರೀಯರಲ್ಲಿ ಪ್ರೀತಿ ಉಳ್ಳವನು, ಕಲಾಶಾಸ್ತ್ರ ತಿಳಿದವನು, ಸತ್ಯ ತಪ್ಪದೆ ನುಡಿಯುವವನೂ ಆಗುವನು ॥ ಈ ವಿಷಯದಲ್ಲಿ ಜಾ-ಭ ॥ಶ್ಲೋಕ॥ ದಾತಾದಯಾಳುಃ ಸುತರಾಂ ಸುಶೀಲೋ ವಿಶಾಲಕೀರ್ತಿರ್ನೃಪತಿಃ ಪ್ರಧಾನಃ ॥ ಧೀರೋ ನರೋತ್ಯಂತಮೃದುರ್ನರ ಸ್ಯಾಚ್ಚೇದುತ್ತರಾ ಫಲ್ಗುನಿಕಾ ಪ್ರಸೂತೌ ॥೨೮॥

ತಾ॥ ಉತ್ತರಾ ನಕ್ಷತ್ರೋತ್ಪನ್ನನು ದಾತಾ, ದಯಾಳು, ಅತಿಶಯ ಸುಶೀಲ, ದೊಡ್ಡ ಯಶಸ್ವೀ, ರಾಜ, ಮಂತ್ರಿ, ಧೀರ, ಬಹು ಕೋಮಲ ಸ್ವಭಾವ ಉಳ್ಳವನು, ಹಸ್ತೇ-ಹಸ್ತ ನಕ್ಷತ್ರದಲ್ಲಿ ಹುಟ್ಟಿದವನು, ಉತ್ಸಾಹೀ-ಉತ್ಸಾಹವಂತನು, ಧೃಷ್ಟಃ-ದಿಟ್ಟತನ ಉಳ್ಳವನು, ಪಾನಪಃ-ಪೇಯುವಸ್ತುಗಳಲ್ಲಿ ವಿಶೇಷ ಆಸಕ್ತಿಯುಳ್ಳವನು, ಅಘೃಣೀ-ನಿರ್ದಯವುಳ್ಳವನು, ತಸ್ಕರಃ-ಕಳ್ಳನು ಆಗುತ್ತಾನೆ ॥ ಯವನ ಜಾತಕದಲ್ಲಿ ॥ಶ್ಲೋಕ॥ ಕೃತವಿದ್ಯಶ್ಚ ಸುಭಗೋ ಧನಾಢ್ಯಃ ಸಾಹಸೀ ಭವೇತ್ । ಪರೋಪಕಾರೀ ಸರ್ವಜ್ಞೋ ಹಸ್ತೇಜಾತೋ ನರೋಭವೇತ್ ॥೨೯॥ ಹಸ್ತನಕ್ಷತ್ರದಲ್ಲಿ ಹುಟ್ಟಿದವನು ವಿದ್ಯೆಯನ್ನು ತಿಳಿದವನು, ಸರ್ವಜನಪ್ರಿಯ, ಧನವಂತ, ಸಾಹಸೀ, ಪರೋಪಕಾರೀ,

ಎಲ್ಲಾ ವಿಷಯಗಳನ್ನು ತಿಳಿದವನಾಗುತ್ತಾನೆ ।।ಜಾ-ಭ।। ಶ್ಲೋಕ।। ದಾತಾ ಮನಸ್ವೀ ಸುತರಾಂ ಯಶಸ್ವೀ ಭೂದೇವದೇವಾರ್ಚನ ಕೃತ್ಪ್ರಯತ್ನಃ । ಪ್ರಸೂತಿಕಾಲೇ ಯದಿಯಸ್ಯ ಹಸ್ತೋ ಹಸ್ತೋದ್ಗತಾತಸ್ಯ ಸಮಸ ಸಂಪತ್ ।।೩೦।।ತಾ।। ಹಸ್ತ ನಕ್ಷತ್ರೋತ್ಪನ್ನನು, ದಾತಾ-ವಿಚಾರಶೀಲ, ಯಶಸ್ವೀ-ದೇವಬ್ರಾಹ್ಮಣಾರಾಧಕ, ಕೈಯಲ್ಲಿ ಸರ್ವಸಂಪತ್ತುಳ್ಳವನಾಗುವನು ।।೭।।

ಮೂಲ।। ಚಿತ್ರಾಂಬರ ಮಾಲ್ಯಾಧರಃ ಸುಲೋಚನಾಂಗಶ್ಚಭವತಿ ಚಿತ್ರಾಯಾಂ।
ದಾಂತೋ ವಣಿಕ್ಕೃಪಾಳುಃ* ಪ್ರಿಯವಾಗ್ಧರ್ಮಾಶ್ರಿತಃ ಸ್ವಾತೌ ।।೮।।

ಅವತಾರಿಕೆ।। ಚಿತ್ತಾ, ಸ್ವಾತೀನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು।। ಚಿತ್ರಾಯಾಂ-ಚಿತ್ತಾನಕ್ಷತ್ರದಲ್ಲಿ ಹುಟ್ಟಿದವನು, ಚಿತ್ರಮಾಲ್ಯಾಂಬರಧರಃ-ನಾನಾ ವಿಧವಾದ ಚಿತ್ರವಿಚಿತ್ರವಾದ ಮಾಲ್ಯವಸ್ತ್ರಾದಿಗಳ ಧಾರಣೆ ಮಾಡುವವನು, ಸುಲೋಚನಾಂಗಃ-ಸಮಾಚೀನವಾದ ನೇತ್ರಾವಯವ ಉಳ್ಳವನು, ಭವತಿ-ಆಗುವನು. ಈ ಅರ್ಥಕ್ಕೆ ಯವನಾಚಾರ್ಯ ಸಮ್ಮತಿ ।।ಶ್ಲೋಕ।। ಚಿತ್ರಮಾಲ್ಯಾಂಬರಧರಃ ಕಾಮಶಾಸ್ತ್ರ ವಿಶಾರದಃ । ದ್ಯುತಿರ್ಮಾನ್ ಧನವಾನ್ ಭೋಗೀ ಪಂಡಿತಸ್ತ್ವಾಷ್ಟ್ರಧಿಷ್ಣ್ಯಜಃ ।।೩೧।। ಚಿತ್ತಾನಕ್ಷತ್ರದಲ್ಲಿ ಜನ್ಮಿಸಿದವನು ಚಿತ್ರವಿಚಿತ್ರವಾದ ವಸ್ತ್ರ ಮಾಲ್ಯಾಭರಣ ಉಳ್ಳವನು, ಕಾಮಶಾಸ್ತ್ರ ತಿಳಿದವನು, ತೇಜಸ್ವೀ, ಧನವಂತ, ಭೋಗೀ ಮತ್ತು ಪಂಡಿತನು ಆಗುತ್ತಾನೆ ।। ಈ ಅರ್ಥಕ್ಕೆ ಜಾ-ಭ ।।ಶ್ಲೋಕ।। ಪ್ರತಾಪ ಸಂತಾಪಿತ ಶತ್ರುಪಕ್ಷೋನಯೇತಿ ದಕ್ಷಶ್ಚ ವಿಚಿತ್ರವಾಸಾಃ । ಪ್ರಸೂತಿಕಾಲೇ ಯದಿಯಸ್ಯ ಚಿತ್ರಾಬುದ್ಧಿರ್ವಿಚಿತ್ರಾಖಲುತುಸ್ಯಶಾಸ್ತ್ರೇ ।। ಚಿತ್ತಾ ನಕ್ಷತ್ರದಲ್ಲಿ ಜನ್ಮಿಸಿದವನು ಶತ್ರುಪಕ್ಷಕ್ಕೆ ಪರಾಕ್ರಮದಿಂದ ತೊಂದರೆ ಕೊಡುವನು, ನಾನಾಪ್ರಕಾರದ ವಸ್ತ್ರಮಾಲ್ಯಾಂಬರ ಧಾರಣೆ ಮಾಡುವವನು, ವಿನಯ ಉಳ್ಳವನು, ಶಾಸ್ತ್ರದಲ್ಲಿ ವಿಶಾಲವಾದ ಬುದ್ಧಿಯುಳ್ಳವನು ಆಗುವನು ।। ಸ್ವಾತಾ-ಸ್ವಾತೀ ನಕ್ಷತ್ರದಲ್ಲಿ ಹುಟ್ಟಿದವನು, ದಾಂತಃ-ನಯಯುಕ್ತ ಜಿತೇಂದ್ರಿಯನು, ವಣಿಕ್-ವ್ಯಾಪಾರಧರ್ಮ ತಿಳಿದವನು, ಕೃಪಾಳುಃ-ಕೃಪೆಯುಳ್ಳವನು, ಪಾಠಾಂತರದಲ್ಲಿ ತೃಷಾಳುಃ- ನೀರಡಿಕೆಯುಳ್ಳವನು, ಪ್ರಿಯವಾಕ್-ಪ್ರಿಯಭಾಷಣದಿಂದ ಸಂತೋಷ ಉಂಟುಮಾಡುವವನು, ಧರ್ಮಾಶ್ರಿತಃ-ಧರ್ಮರತನು, ಭವತಿ-ಆಗುತ್ತಾನೆ।। ಈ ಅರ್ಥಕ್ಕೆ ಸಮ್ಮತಿ ಯವನೇಶ್ವರಃ ।।ಶ್ಲೋಕ।। ಧಾರ್ಮಿಕಃ ಸತ್ಯವಾಕ್ ಶೂರಃಕ್ರಯವಿಕ್ರಯ ನೈಪುಣ್ಯಃ ।। ಕಾಮೀ ಬಹು ಕ್ರತುರ್ದಾನೀ ವಿದ್ಯಾವಾನ್ಮಾರುತರ್ಕ್ಷಜಃ ।।೩೩।।ತಾ।। ಸ್ವಾತೀ ನಕ್ಷತ್ರದಲ್ಲಿ ಜನ್ಮಿಸಿದವನು ಧರ್ಮಾತ್ಮಾ, ಸತ್ಯಸಂಧ, ಶೂರ, ವೀರ, ಕ್ರಯ ವಿಕ್ರಯದಲ್ಲಿ ಕುಶಲಬುದ್ಧಿಯುಳ್ಳವನು, ಕಾಮೀ, ಅನೇಕ ಯಜ್ಞ ಮಾಡುವವನು,

* ತೃಷಾಳುಃಯೆಂದು ಪಾಠಾಂತರ ।। (ನೀರಡಿಕೆ ಹೆಚ್ಚಾಗಿರುತ್ತೆಂದು)

ಆ ಯಜ್ಞಕ್ಕೆ ಸಹಕರಿಸುವವನು ಮತ್ತು ಘನ ವಿದ್ವಾಂಸನೂ ಸಹ ಆಗುತ್ತಾನೆ॥ ಇದಕ್ಕೆ ಸಮ್ಮತಿ ॥ಜಾ-ಭ॥ಶ್ಲೋಕ॥ ಕಂದರ್ಪರೂಪಃ ಪ್ರಭಯಾ ಸಮೇತಃ ॥ ಕಾಂತಾಪರಪ್ರೀತಿ ರತಿಪ್ರಸನ್ನಃ । ಸ್ವಾತೀ ಪ್ರಸೂತೌ ಮನುಜಸ್ಯಯಸ್ಯ ಮಹೀಪತಿ ಪ್ರಾಪ್ತವಿಭೂತಿ ಯುಕ್ತಃ ॥೩೪॥ತಾ॥ ಮನ್ಮಥನಂತೆ ರೂಪಉಳ್ಳವನು, ಕಾಂತಿಯುಕ್ತನು, ಸ್ತ್ರೀಯರಲ್ಲಿ ಪ್ರೀತಿಯುಳ್ಳವನು, ಸದಾ ಪ್ರಸನ್ನಚಿತ್ತನು, ರಾಜಮೂಲವಾಗಿ ಐಶ್ವರ್ಯ ಹೊಂದುವವನಾಗುವನು ॥೮॥

ಮೂಲ॥ ಈರ್ಷ್ಯುರ್ಲುಬ್ಧೋ ದ್ಯುತಿಮಾ । ನ್ವಚನ ಪಟುಃ ಕಲಹಕೃದ್ವಿಶಾ ಖಾಸು ॥ ಆಢ್ಯೋ ವಿದೇಶವಾಸೀ । ಕ್ಷುಧಾಳು ರಟನೋನು ರಾಧಾಸು ॥೯॥

ಅವತಾರಿಕೆ॥ ವಿಶಾಖಾನೂರಾಧಾನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ವಿಶಾಖಾಸು-ವಿಶಾಖೆಯಲ್ಲಿ ಜನ್ಮಿಸಿದವನು, ಈರ್ಷ್ಯುಃ-ಹೊಟ್ಟೆಕಿಚ್ಚುಳ್ಳವನು, (ಅಂದರೆ ಪರರ ಸಂಪತ್ತು ನೋಡಿ ಸಹನೆಯಿಲ್ಲದವನು) ಲುಬ್ಧಃ-ಜಿಪುಣನೂ, ದ್ಯುತಿರ್ಮಾ-ಕಾಂತಿವಂತನು, ವಚನಪಟುಃ-ವಾಚಾಲತ್ವದಲ್ಲಿ ಸಮರ್ಥನು, ಪಾಠಾಂತರದಲ್ಲಿ ಅರ್ಥಪಟಃ-ಧನಾರ್ಜನ ಸಮರ್ಥನು, ಕಲಹಕೃತ್-ಜಗಳಗಂಟೀ, ಈ ಗುಣಗಳಿಂದ ಕೂಡಿರುವನು. ಈ ಅರ್ಥಕ್ಕೆ ಯವನ ಸಮ್ಮತಿ ॥ಶ್ಲೋಕ॥ ಅಭ್ಯಸೂಯಾಪರಃ ಸೂಕ್ಷ್ಮಃ ಕೃಪಾಲು ರತಿನಿಂದಿತಃ ॥ ಜಿತೇಂದ್ರಿಯೋರ್ಧರ್ವಾ ಲುಬ್ಧೋ ವಿಖಾಖಾಧಿಷ್ಣ್ಯ ಸಂಭವಃ ॥೩೫॥ ವಿಶಾಖಾ ನಕ್ಷತ್ರದಲ್ಲಿ ಜನ್ಮಿಸಿದವನು, ಪ್ರತಿ ಪದಾರ್ಥಕ್ಕೂ ದೂಷಣೆ ಮಾಡುವವನು, ಸೂಕ್ಷ್ಮ ಬುದ್ಧಿಯುಳ್ಳವನು, ದಯಾಳು, ಅತಿನಿಂದಿತ, ಇಂದ್ರಿಯಗಳನ್ನು ಜಯಿಸುವನು, ಧನವಂತ ಮತ್ತು ಅತಿ ಲುಬ್ಧನೂ ಆಗುತ್ತಾನೆ ॥ ಜಾತಕಾಭರಣೆ ಧುಂಢೀರಾಜಃ ॥ಶ್ಲೋಕ॥ ಸದಾನು ರಕ್ತೋಗ್ನಿಸುರ ಕ್ರಿಯಾಯಾಂ ಧಾತು ಕ್ರಿಯಾಯಾ ಮಪಿಚೋಗ್ರ ಸೌಮ್ಯಃ ॥ ಯಸ್ಯಪ್ರಸೂತೌ ಚ ಭವೇ ದ್ವಿಶಾಖಾಸಖಾ ನ ಕಸ್ಯಾಪಿ ಭವೇನ್ಮನುಷ್ಯಃ ॥೩೬॥ತಾ॥ ವಿಶಾಖೆಯಲ್ಲಿ ಹುಟ್ಟಿದವನು ಯಾವಾಗಲು ಅಗ್ನಿ ಮತ್ತು ದೇವತಾರಾಧನಾತ್ಪರನು, ಧಾತುವಿಷಯವಾದ ಕ್ರಿಯೆ ತಿಳಿದವನು, ಕೆಲವು ಕಾಲ ಉಗ್ರ ಮತ್ತು ಸೌಮ್ಯಸ್ವಭಾವ ಉಳ್ಳವನು, ಯಾರಲ್ಲೂ ಸ್ನೇಹವಿಲ್ಲದವನೂ ಆಗುತ್ತಾನೆ. ಅನುರಾಧಾಸು-ಅನುರಾಧಾ ನಕ್ಷತ್ರದಲ್ಲಿ ಹುಟ್ಟಿದವನು, ಅಢ್ಯಃ-ಧನಿಕನಾಗುವನು, ವಿದೇಶವಾಸೀ-ಪರಿದಶದಲ್ಲಿ ವಾಸಿಸುವವನೂ, ಕ್ಷುಧಾಳು- ಅತ್ಯಂತವಾಗಿ ಕ್ಷುತ್ತುಳ್ಳವನು,

ಆಟನಃ-ಸದಾ ಸಂಚರಿಸುವ ಸ್ವಭಾವ ಉಳ್ಳವನೂ ಆಗುವನು. ಈ ವಿಷಯದಲ್ಲಿ ಯವನೇಶ್ವರ ।।ಶ್ಲೋಕ।। ನೃಪಕಾರ್ಯರತಃ ಶೂರೋ ವಿದೇಶಸ್ಥೋಂಗನಾ ಪ್ರಿಯಃ ।। ಸುರೂಪಶ್ಛಿನ್ನಪಾಪಶ್ಚ ಭವೇನ್ಮೈತ್ರಾಖ್ಯ ಧಿಷ್ಣ್ಯಜಃ ।।೩೭।। ಅನೂರಾಧಾ ನಕ್ಷತ್ರದಲ್ಲಿ ಜನ್ಮಿಸಿದವನು ರಾಜಕಾರ್ಯರತ, ಶೂರ, ಪರದೇಶದಲ್ಲಿ ವಾಸಿಸುವನು, ಸ್ತ್ರೀಯರಲ್ಲಿ ವಿಶೇಷ ಪ್ರೀತಿಯುಳ್ಳವನು, ಅಥವಾ ಸ್ತ್ರೀ ವಾಕ್ಯವರ್ತಿಯಾಗಿರುವನು, ಸುರೂಪೀ ಮತ್ತು ಪಾಪರಹಿತನಾಗುವನು. ಇದೇ ಅರ್ಥದಲ್ಲಿ ಜಾ-ಭರಣೆ ।।ಶ್ಲೋಕ।। ಸತ್ಕಾಂತಿ ಕೀರ್ತಿಶ್ಚ ಸದೋತ್ಸವಸ್ಯಾತ್ ಜೇತಾರಿಪೂಣಾಂಚ, ಕಲಾಪ್ರವೀಣಃ ।। ಸ್ಯಾತ್ಸಂಭವೇ ದುಸ್ಯ ಕಿಲಾನುರಾಧಾ ಸಂಪದ್ವಿಶಾಲಾ ವಿವಿಧಾಚತಸ್ಯ ।।೩೮।।ತಾ ಅನೂರಾಧಾ ನಕ್ಷತ್ರಜನು ಶಾಂತನೂ, ಕೀರ್ತಿಮಂತನೂ, ಯಾವಾಗ್ಯೂ ಆನಂದವುಳ್ಳವನು, ಶತೃಗಳನ್ನು ಗೆಲ್ಲುವನು, ಅನೇಕಕಾಲ ಕೌಶಲವುಳ್ಳವನು, ಅನೇಕ ವಿಧವಾದ ಸಂಪತ್ತುಳ್ಳವನು ಆಗುತ್ತಾನೆ.

**ಮೂಲ।। ಜ್ಯೇಷ್ಠಾ ಸುನಬಹುಮಿತ್ರಃ ಸಂತುಷ್ಟೋ ಧರ್ಮವಿತ್ಪ್ರಚುರ ಕೋಪಃ ಮೂಲೇ ಮಾನೀ ಧನವಾ್ ಸುಖೀನಹಿಂಸ್ರ ಸ್ಥಿರೋ ಭೋಗೀ ।।೧೦।।**

ಅವತಾರಿಕೆ।। ಜ್ಯೇಷ್ಠಾ-ಮೂಲಾ ನಕ್ಷತ್ರದಲ್ಲಿ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು।। ಜ್ಯೇಷ್ಠಾಸು-ಜ್ಯೇಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು, ನಬಹುಮಿತ್ರಃ-ಬಹುಮಿತ್ರರಿಲ್ಲದಿರುವನು, ಅಂದರೆ ಮಿತವಾದ ಮಿತ್ರರುಳ್ಳವನು, ಸಂತುಷ್ಟಃ-ಸಂತೋಷ ಉಳ್ಳವನು, ಧರ್ಮಕೃತ್-ಧರ್ಮಮಾಡುವನು, ಪ್ರಚುರ ಕೋಪಃ-ಅತ್ಯಂತಕೋಪವುಳ್ಳವನು ಆಗುವನು. ಈ ವಿಷಯದಲ್ಲಿ ।।ಶ್ಲೋಕ ।।ಜಾ-ಭ।। ಸತ್ಕೀರ್ತಿಕಾಂತಿ ರ್ವಿಭುತಾ, ಸಮೇತೋವಿತ್ತಾನ್ವಿತೋತ್ಯಂತಲಸತ್ ಪ್ರತಾಪಃ ।। ಶ್ರೇಷ್ಠಃ ಪ್ರತಿಷ್ಠೋ ವದತಾಂ ವರಿಷ್ಠೋಜ್ಯೇಷ್ಠೋದ್ಭವಸ್ಯಾತ್ಪುರುಷೋ ವೀಶೇಷಾತ್ ।।೩೯।।ತಾ।। ಜ್ಯೇಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು ಒಳ್ಳೆ ಕೀರ್ತಿವಂತ, ತೇಜಸ್ವೀ, ಸಂಪತ್ತುಳ್ಳವನು, ಅತಿಶಯ ಶ್ರೇಷ್ಠ, ಅತಿಪರಾಕ್ರಮೀ, ಬುದ್ಧಿವಂತ, ಜನಗಳಲ್ಲಿ ಶ್ರೇಷ್ಠತ್ವ ಹೊಂದುವನು, ಮಾತನಾಡುವುದರಲ್ಲಿ ಬಹುಬುದ್ಧಿವಂತನೂ ಸಹ ಆಗುವನು. ಯವನಾಚಾರ್ಯ ಮತ।। ಬಹು ವ್ಯಗ್ರಕರಃ ಕ್ಲೇಶ ಸಹ ಕಾಮೀದುರಾಸದಃ । ಕ್ರೂರಚೇಷ್ಟೋ ಮೃಷಾಭೀತೋ ಧನವಾನಿಂದ್ರ ಧಿಷ್ಣ್ಯಜಃ ।।೪೦।। ಅನೇಕ ಮನುಷ್ಯರಿಗೆ ವ್ಯಗ್ರತೆಯನ್ನುಂಟು

ಮಾಡುವವನು, ಕ್ಲೇಶವನ್ನು ಸಹಿಸುವವನು, ಕಾಮೀ-ಜಯಿಸಲು ಅಶಕ್ಯ ಉಳ್ಳವನು, ಕ್ರೂರಚೇಷ್ಟೆಗಳನ್ನು ಮಾಡುವವನು, ಸುಳ್ಳಿಗೆ ಹೆದರುವನು, ಸುಳ್ಳು ಜನರಿಗೆ ಭಯಪಡುವನು ಮತ್ತು ಧನವಂತನೂ ಆಗುತ್ತಾನೆ ॥೪೦॥ ಮೂಲೇ-ಮೂಲಾನಕ್ಷತ್ರದಲ್ಲಿ ಹುಟ್ಟಿದವನು, ಮಾನೀ-ಮಾನವಂತನು, ಧನವಾನ್-ದ್ರವ್ಯವುಳ್ಳವನು, ಸುಖೀ-ಯಾವಾಗಲೂ ಸೌಖ್ಯವನ್ನೇ ಕೋರುವನು. ನಹಿಂಸ್ರಃ-ಪ್ರಾಣಿಗಳನ್ನು ಹಿಂಸೆಮಾಡದವನೂ, ಸ್ಥಿರ- ಸ್ಥಿರಚಿತ್ತವುಳ್ಳವನು, ಭೋಗೀ-ಭೋಗವಂತನೂ, ಅರ್ಥಾತ್-ಅನ್ಯಸ್ತ್ರೀ ಭೋಗರತನೂ ಆಗುತ್ತಾನೆ. ಇದಕ್ಕೆ ಯವನಾಚಾರ್ಯ ಮತ ॥ಶ್ಲೋಕ॥ ಸಾಧುರ್ಮಾನೀಧನೀಭೋಗಿ ಪರಕಾರ್ಯೋಪಕಾರಕಃ॥ ಮಿಥ್ಯೋಪಚಾರಃ ಸ್ತ್ರೀಲೋಲಃ ಶ್ಲಕ್ಷ್ಣೋನಿರ್ಋತಿಧಿಷ್ಣ್ಯಜಃ ॥೪೧॥ ಮೂಲಾ ನಕ್ಷತ್ರದಲ್ಲಿ ಹುಟ್ಟಿದವನು ಸಾಧು, ಮಾನವಂತ, ಧನಿಕ, ಭೋಗೀ ಅಂದರೆ ಪರಸ್ತ್ರೀ ಭೋಗವುಳ್ಳವನು, ಪರೋಪಕಾರ ಮಾಡುವವನೂ, ಡಂಭಕ್ಕೋಸ್ಕರ ಉಪಚಾರ ಮಾಡುವವನು, ಡಾಂಭಿಕ, ಸ್ತ್ರೀಲೋಲ, ಸರಳಸ್ವಭಾವವುಳ್ಳವನು ಆಗುತ್ತಾನೆ. ಈ ವಿಷಯದಲ್ಲಿ ಜಾತಕಾಭರಣದಲ್ಲಿ ವಿಶೇಷ ಫಲ ಹೇಳಲ್ಪಟ್ಟಿದೆ.

## ಅಥ ಮೂಲಾ ನಕ್ಷತ್ರ ವಿಶೇಷ ಫಲವಿಚಾರಃ

ಶ್ಲೋಕ॥ ಮೂಲಂವಿರುದ್ಧಾ ವಯವಂ ಸಮೂಲಂ ಫಲಂ ಹರತ್ಯೇವ ವದಂತಿ ಸಂತಃ ॥ ಚೇದನ್ಯಥಾ ಸತ್ಕುರುತೇ ವಿಶೇಷಾತ್ಸೌಭಾಗ್ಯ ಮಾಯಶ್ಚಕುಲಾಭಿವೃದ್ಧಿಂ ॥೪೨॥ ತಾತ್ಪರ್ಯ-ಮೂಲಾನಕ್ಷತ್ರದಲ್ಲಿ ಹುಟ್ಟಿದ ಮನುಷ್ಯನು ಕೆಲವು ವಿಶೇಷಫಲಗಳು ಅನುಭವಿಸತಕ್ಕವನೆಂದು ಮಹರ್ಷಿಗಳಿಂದುಕ್ತವಾಗಿದೆ. ಅದೇನೆಂದರೆ-ಮೂಲಾ ನಕ್ಷತ್ರೋತ್ಪನ್ನನು ಹುಟ್ಟಿದ ವಂಶವನ್ನೇ ನಾಶಮಾಡುತ್ತಾನೆ, ಅಥವಾ ಆ ವಂಶದಲ್ಲಿ ಸೌಭಾಗ್ಯ ಅಭಿವೃದ್ಧಿಯಾಗುತ್ತೆ. ಹಾಗೂ ಆಗದಿದ್ದರೆ, ಹುಟ್ಟಿದವನು ದೀರ್ಘಾಯುವಾಗಿರುತ್ತಾನೆ ॥೪೨॥

## ಅಥ ಅಭುಕ್ತಮೂಲಾ ವಿಚಾರಃ

ಶ್ಲೋಕ॥ ಜ್ಯೇಷ್ಠಾಂತ್ಯ ಘಟಿಕೈಕಾಚ ಮೂಲಸ್ಯಾ ದ್ಯಘಟೀದ್ವಯಂ॥ ಅಭುಕ್ತಮೂಲಂ ಮಿತ್ಯುಕ್ತಂ ತತ್ರೋತ್ಪನ್ನ ಶಿಶೋರ್ಮುಖಂ ॥೪೩॥ ಅಷ್ಟವರ್ಷಾಣಿ ನಾಲೋಕ್ಯಂ ತಾತೇನ ಶುಭಮಿಚ್ಛತಾ ॥ ತದ್ದೋಷ ಪರಿಹಾರಾರ್ಥಂ ಶಾಂತಿಕಂ ಪ್ರೋಚ್ಯತೇಧುನಾ ॥೪೪॥ತಾ॥ ಜ್ಯೇಷ್ಠಾನಕ್ಷತ್ರದಲ್ಲಿ ೧ ಘಳಿಗೆ ಮೂಲಾನಕ್ಷತ್ರದಲ್ಲಿ ೨ ಘಳಿಗೆ ಕಾಲ ಅಭುಕ್ತಮೂಲವೆಂದು ಸಂಜ್ಞೆ, ಆ ಕಾಲದಲ್ಲಿ ಹುಟ್ಟಿದ ಶಿಶುವಿನ ಮುಖವನ್ನು ಶುಭಫಲವಾಗಬೇಕೆಂದಪೇಕ್ಷಿಸುವ ತಂದೆಯು ಎಂಟು

ವರ್ಷಗಳಾಗುವವರಿಗೂ ಅವಲೋಕನ ಮಾಡಬಾರದು ಅಥವಾ ಶಾಂತಿಯನ್ನು ಮಾಡಿ ಆ ಶಿಶುವಿನ ಮುಖಾವಲೋಕವನ್ನು ಮಾಡಬಹುದೆಂದು ಮಹರ್ಷಿ ಗಳಿಂದಾದ ಶಾಂತಿಕರ್ಮವು ವಿಧಿಸಲ್ಪಟ್ಟಿರುವದು ||೪೩-೪೪|| ರತ್ನೈ-ಶತೌಷಧೀ ಮೂಲೈ-ಸಪ್ತಮೃದ್ಭಿಃ ಪ್ರಪೂರಯೇತ್|| ಶತಚ್ಛಿದ್ರೋ ಘಟಸ್ತಸ್ಮಾನ್ನಿಸ್ಸೃ ತೇನಜಲೇನಹಿ ||೪೫|| ಬಾಲಕಾಂಬಾ ಪಿತೃಸ್ನಾನೇ ವಿಪ್ರೈಸ್ಸಂಪಾದಿತೇಸತಿ || ಜಪಹೋಮ ಪ್ರಧಾನೇಚ ಕೃತೇಸ್ಯಾನ್ಮಂಗಲಂ ಧ್ರುವಂ || ವಿರುದ್ಧಾವಯವೇ ಮೂಲೇ ವಿದಿರೇವಂ ಸ್ಮತೋಬುಧೈಃ || ಮುನೀನಾಂ ವಚನಂ ಸತ್ಯಂ-ಮಂತವ್ಯಂ ಕ್ಷೇಮಮೀಪ್ಸುಭಿಃ ||೯೭|| ಒಂದು ಮಡಿಕೆಗೆ (ಮಣ್ಣಿನ ಕುಂಭಕ್ಕೆ) ೧೦೦ ತೂತುಗಳನ್ನು ಮೇಲೆ ಇರುವ ಭಾಗದಲ್ಲಿ ಮಾಡಿ ಅದರಲ್ಲಿ ನೀರುತುಂಬಿ ನವರತ್ನ ಮತ್ತು ಶತೌಷಧಿಗಳ ಮೂಲಿಕೆಗಳು ಹಾಕಿ ಸಪ್ತಮೃತ್ತುಗಳನ್ನು ಹಾಕಬೇಕು ಆ ಕಲಶಕ್ಕೆ ಶಾಂತಿವಿಧಿಯಿಂದ ಪೂಜೆಮಾಡಿ, ಜಪ, ಹೋಮ ಬ್ರಾಹ್ಮಣರ ಮೂಲದಿಂದ ಆ ಮೂಲಾನಕ್ಷತ್ರದಲ್ಲಿ ಹುಟ್ಟಿದವನು (ಶಿಶು) ತಾಯಿ, ತಂದೆ ಸಹ ಸ್ನಾನಮಾಡಬೇಕು. ಅನಂತರದಲ್ಲಿ ಸ್ವಸ್ತಿ ಪುಣ್ಯಾಹವಾಚನಗಳಾದ ಮಂಗಳಾಶೀರ್ವಾದವನ್ನು ಹೊಂದಬೇಕು. ಮೂಲಾ ನಕ್ಷತ್ರದಲ್ಲಿ ವಿರುದ್ಧಾವಯವಗಳಲ್ಲಿ ಹುಟ್ಟಿದವರಿಗೆ ಈ ಶಾಂತಿ ಕರ್ಮ ಮಾಡಬೇಕೆಂದು ಮಹರ್ಷಿಗಳು ವಿಧಿಸಿರುತ್ತಾರೆ. ಈ ವಿಷಯವನ್ನು ಅವಶ್ಯಕವಾಗಿ ಕ್ಷೇಮ ಉಂಟಾಗಬೇಕೆಂದು ಅಪೇಕ್ಷಿಸುವವರು ನಿಶ್ಚಯವಾಗಿ ಆಚರಿಸಬೇಕು. ಈ ವಿಷಯ ಸತ್ಯವೆಂದುಕ್ತವಾಗಿದೆ ||೪೫-೪೬-೪೭||

## ಮೂಲಾ ನಕ್ಷತ್ರ ಪಾದಫಲಂ

ಮೂಲಸ್ಯಪಾದತ್ರಿತಯೇ ಕ್ರಮೇಣ ಪಿತುರ್ಜನನಾಶ್ಚ ಧನಸ್ಯರಿಷ್ಟಂ | ಚತುರ್ಥ ಪಾದಃ ಶುಭದೋನಿತಾಂತಂ ಸಾರ್ಪೇವಿಲೋಮಂ ಪರಿಕಲ್ಪನೀಯಂ ||ತಾ|| ಮೂಲನಕ್ಷತ್ರದ ೧-೨-೩-೪ನೇ ಪಾದಗಳು, ಕ್ರಮವಾಗಿ ತಂದೆ ತಾಯಿ ಧನ ಇವುಗಳಿಗೆ ಅರಿಷ್ಟ, ೪ನೇ ಪಾದ ಮಾತ್ರ ಶುಭಪ್ರದ. ಆಶ್ಲೇಷಾ ನಕ್ಷತ್ರದಲ್ಲಿ ಈ ಫಲ ವಿಲೋಮವಾಗಿ ಅನ್ವಯಿಸಬೇಕು. ಅಂದರೆ ಆಶ್ಲೇಷಾ ೧ನೆ ಪಾದ ಶುಭ ೨-೩-೪ನೇ ಪಾದಗಳು ಕ್ರಮವಾಗಿ ಧನ, ತಾಯಿ, ತಂದೆ ಇವರುಗಳಿಗೆ ಅರಿಷ್ಟ ||೪೮||

## ಅಥ ಮೂಲಾ ವೇಳಾ ಫಲಂ

ಶ್ಲೋಕ|| ಕೃಷ್ಣೇ ತೃತೀಯಾ ದಶಮೀ ವಲಕ್ಷೇಭೂತೋ ಮಹೀಜಾರ್ಕಿ ಬುಧೈಃ ಸಮೇತಃ | ಚೇಜ್ಜನ್ಮಕಾಲೇ ಕಿಲಯಸ್ಯ ಮೂಲಮುನ್ಮೂಲನಂ ತತ್ಕುರುತೆ ಕುಲಸ್ಯ ||೪೯|| ದಿವಾಸಾಯಂ ನಿಶಿಪ್ರಾತಃ ತಾತಸ್ಯಮಾತುಲಸ್ಯಚ | ಪಶೂನಾಂ ಮಿತ್ರವರ್ಗಸ್ಯ ಕ್ರಮಾನ್ಮೂಲ ಮನಿಷ್ಟದಂ ||೫೦||ತಾ|| ಕೃಷ್ಣಪಕ್ಷದ ತೃತೀಯಾ ದಿವಸ

ಮಂಗಳವಾರವಾಗಿ, ಮೂಲ ನಕ್ಷತ್ರವಿದ್ದರೆ ೧ ಯೋಗ, ಕೃಷ್ಣಪಕ್ಷದ ದಶಮೀ ಶನಿವಾರ ಮೂಲಾನಕ್ಷತ್ರ ೨ನೇ ಯೋಗ, ಹಾಗೆಯೇ ಶುಕ್ಲಪಕ್ಷದ ೧೪ ಬುಧವಾರ ಯುಕ್ತಮೂಲ ನಕ್ಷತ್ರ ೩ನೇ ಯೋಗ, ಈ ಮೇಲೆ ಹೇಳಲ್ಪಟ್ಟ ೩ ಯೋಗಗಳಲ್ಲಿ ಯಾವ ಯೋಗದಲ್ಲಿ ಬಾಲಕನು ಹುಟ್ಟುವನೋ ಅವನು ತನ್ನ ಕುಲವನ್ನು ನಾಶಮಾಡುತ್ತಾನೆ. ಹಗಲಿನಲ್ಲಿ ಮೂಲಾನಕ್ಷತ್ರವಿದ್ದು ಆ ಕಾಲದಲ್ಲಿ ಹುಟ್ಟಿದ ಬಾಲಕನು ತಂದೆಗೆ ಅರಿಷ್ಟವನ್ನುಂಟುಮಾಡುವನು. ಮೂಲಾನಕ್ಷತ್ರದಲ್ಲಿ ಸಾಯಂಕಾಲ ಜನ್ಮವಾದರೆ ಸೋದರಮಾವನಿಗೆ ಅರಿಷ್ಟ. ರಾತ್ರಿ ಮೂಲಾನಕ್ಷತ್ರವಿದ್ದು ಆ ಕಾಲದಲ್ಲಿ ಹುಟ್ಟಿದರೆ ಪಶುವರ್ಗಕ್ಕೆ ಅರಿಷ್ಟ, ಪ್ರಾತಃಕಾಲದಲ್ಲಿ ಮೂಲಾನಕ್ಷತ್ರದಲ್ಲಿ ಹುಟ್ಟಿದರೆ ಮಿತ್ರವರ್ಗಕ್ಕೆ ಅರಿಷ್ಟ ॥ ಇತಿ ಮೂಲಾವೇಳಾ ಫಲಂ ॥೪೫-೫೦॥

## ಅಥ ಪುರುಷಾಕೃತೌ ಮೂಲಾಶ್ಲೇಷಾ ಫಲಂ

ಶ್ಲೋಕ॥ ಮೂರ್ದ್ಧ್ನಿ ಪಂಚಮುಖೇ ಪಂಚಸ್ಕಂಧಯೋ ರ್ಘಟಿಕಾಷ್ಟಕಮ್ । ಗಜಾಶ್ವಭುಜಯೋ ರ್ಯುಗ್ಮಂ ಹಸ್ತಯೋ ಹೃದಯೇಷ್ಟಕಮ್ ॥ ಯಗ್ಮಂನಾಭೌ ದಿಶೋಗುಹ್ಯೆ ಷಟ್ಜಾನ್ವೋಃ ಷಟ್ಪಾದಯೋಃ ॥ ವಿನ್ಯಸ್ಯ ಪುರುಷಾಕಾರೆ ಮೂಲಸ್ಯ ಫಲಮಾದಿಶೇತ್ ॥ಅಥಫಲಂ॥ ಶ್ಲೋಕ॥ ಛತ್ರಲಾಭಃ ಶಿರೋದೇಶೇ ವದನೇಪಿತೃಘಾತನಂ । ಸ್ಕಂಧಯೋ ರ್ವಧೂಹರತ್ವಂಚ ಬಾಹುಯುಗ್ಮೆ ತ್ವಕರ್ಮಕೃತ್ ॥೫೩॥ ಹತ್ಯಾಕರಃ ಕರದ್ವಂದ್ವೇ ರಾಜ್ಯಾಪ್ತಿರ್ಹೃದಯೇ ಭವೇತ್॥ ಅಲ್ಪಾಯುರ್ನಾಭಿದೇಶೇಚ ಗುಹ್ಯೇಚ ಸುಖಮದ್ಭುತಂ ॥ ಜಂಘಾಯಾಂ ಭ್ರಮಣಪ್ರೀತಿಃ ಪಾದಯೋ ರ್ಜೀವಿತಾಲ್ಪತಾ । ಘಟೀಫಲಂ ಕಿಲಪ್ರೋಕ್ತಂ ಮೂಲಸ್ಯ ಮುನಿಪುಂಗವೈಃ ॥೫೫॥ ವಿಜ್ಞೇಯಂ ವಿಭುದೈಸ್ಸರ್ವಂ ಸಾರ್ಪೇತಚ್ಚ ವಿಪರ್ಯಯಾತ್॥

ತಾ॥ ಮೂಲಾನಕ್ಷತ್ರವನ್ನು ನರಾಕಾರವನ್ನಾಗಿ ಕಲ್ಪಿಸಿ ಅದರ ಮೇಲೆ ಆ ನಕ್ಷತ್ರ ಘಟಿಕೆಯನ್ನು ೧೦ ವಿಭಾಗ ಮಾಡಿ ಕೆಳಗೆ ವಿವರಿಸಿರುವ ಪ್ರಕಾರ ಫಲ ತಿಳಿಯಬೇಕು. ಮೂಲಾನಕ್ಷತ್ರದಲ್ಲಿ ಮೊದಲನೇ ೫ ಘಳಿಗೆ ಶಿರಸ್ಸು, ಎರಡನೇ ೫ ಘಳಿಗೆ ಮುಖ್ಯ ೩ನೇ ೮ ಘಳಿಗೆ ಸ್ಕಂಧಗಳೆರಡು, ನಾಲ್ಕನೇ ೮ ಘಳಿಗೆ ಘಟೀಬಾಹುಗಳು, ೫ನೇ ೨ ಘಳಿಗೆ ಕೈ, ೬ನೇ ೮ ಘಳಿಗೆ ಹೃದಯ, ೭ನೇ ೨ ಘಳಿಗೆ ನಾಭಿ, ೮ನೇ ೧೦ ಘಳಿಗೆ ಘಟೀ, ಗುಹ್ಯ, ೯ನೇ ೬ ಘಳಿಗೆ ತೊಡೆ, ೧೦ನೇ ೬ ಘಳಿಗೆ ಪಾದಗಳು. ಈ ಸ್ಥಾನಗಳಿಗೆ ಕ್ರಮವಾಗಿ ಫಲಗಳು, ಶಿರಸ್ಸಿನಲ್ಲಿ ಛಿತ್ರಲಾಭ, ವದನದಲ್ಲಿ ಪಿತೃಘಾತಕ, ಸ್ಕಂಧದಲ್ಲಿ ವಧೂಮರಣ, ಬಾಹುವಿನಲ್ಲಿ

ದುಷ್ಟಕಾರ್ಯಗಳು ಮಾಡುವುದು, ಎರಡು ಹಸ್ತದಲ್ಲಿ ಕೊಲ್ಲುವ ಸ್ವಭಾವ, ಹೃದಯದಲ್ಲಿ ರಾಜ್ಯಪ್ರಾಪ್ತಿ, ನಾಭಿಯಲ್ಲಿ ಅಲ್ಪಾಯುಷ್ಯ, ಗುಹ್ಯಸ್ಥಾನದಲ್ಲಿ ಅಧಿಕ ಸೌಖ್ಯ, ತೊಡೆಯಲ್ಲಿ ಸಂಚಾರಶೀಲ, ಕಾಲುಗಳಲ್ಲಿ ಅಲ್ಪಾಯುಸ್ಸು, ಈ ಪ್ರಕಾರವಾಗಿ ಮಹರ್ಷಿಗಳಿಂದ ಫಲ ತಾರತಮ್ಯ ನಿಶ್ಚೈಸಲ್ಪಟ್ಟಿರುವುದು. ಆಶ್ಲೇಷಾ ನಕ್ಷತ್ರಕ್ಕೂ ವ್ಯುತ್ಕ್ರಮವಾಗಿ ಇದೇ ಫಲವನ್ನು ತಿಳಿಯಬೇಕು. ಮೂಲನಕ್ಷತ್ರದ ೧ನೇ ಘಳಿಗೆಯಿಂದ ಗಣಿಸಬೇಕು. ಆಶ್ಲೇಷಾ ನಕ್ಷತ್ರ ೬೦ನೇ ಘಳಿಗೆಯಿಂದ ಹಿಂದಕ್ಕೆ ಗಣಿಸಬೇಕು.

| ಮೂಲಾ ನಕ್ಷತ್ರ | | | | ಆಶ್ಲೇಷಾ ನಕ್ಷತ್ರ | | | |
|---|---|---|---|---|---|---|---|
| ಸ್ಥಾನ ಘಟ | ಸ್ಥಾನ ನಾಮಾ | ಘಟಿಕಾ | ಫಲ | ಸ್ಥಾನ ಘಟಾ | ಸ್ಥಾನ ನಾಮಾ | ಘಟಿಕಾ | ಫಲ |
| ೫ | ಶಿರಸ್ಸು | ೧ ರಿಂದ ೫ | ಪುತ್ರ ಲಾಭ | ೫ | ಶಿರಸ್ಸು | ೬೦ ರಿಂದ ೫೫ | ಅಲ್ಪಾಯುಸ್ಸು |
| ೫ | ಮುಖ | ೬ ” ೧೦ | ಪಿತೃ ಘಾತುಕ | ೫ | ಮುಖ | ೫೪ ” ೪೯ | ಸಾಚಂರ |
| ೮ | ೨ ಭುಜ | ೧೧ ” ೧೮ | ವಧೂಮರಣ | ೮ | ೨ ಭುಜ | ೪೮ ” ೩೯ | ಅಧಿಕ ಸೌಖ್ಯ |
| ೮ | ೨ ಬಾಹು | ೧೯ ” ೨೬ | ದುಷ್ಕಾರ್ಯ | ೮ | ೨ ಬಾಹು | ೩೮ ” ೨೭ | ಅಲ್ಪಾಯುಷ್ಯ |
| ೨ | ೨ ಹಸ್ತ | ೨೭ ” ೨೮ | ಹತ್ಯಾಕರಣ | ೨ | ೨ ಹಸ್ತ | ೩೬ ” ೨೬ | ರಾಜ್ಯಲಾಭ |
| ೮ | ಹೃದಯ | ೨೯ ” ೩೬ | ರಾಜ್ಯಲಾಭ | ೮ | ಹೃದಯ | ೨೮ ” ೨೭ | ಹತ್ಯಾಕರಣ |
| ೨ | ನಾಭಿ | ೩೭ ” ೩೮ | ಅಲ್ಪಾಯುಸ್ಸು | ೨ | ನಾಭಿ | ೨೬ ” ೧೯ | ದುಷ್ಕಾರ್ಯ |
| ೧೦ | ಗುಹ್ಯ | ೩೯ ” ೪೮ | ಅಧಿಕಸೌಖ್ಯ | ೧೦ | ಗುಹ್ಯ | ೧೮ ” ೧೧ | ವಧೂಮರಣ |
| ೬ | ತೊಡೆ | ೪೯ ” ೫೪ | ಸಂಚರಣೆ | ೬ | ತೊಡೆ | ೧೦ ” ೬ | ಪಿತೃಘಾತಕ |
| ೬ | ೨ ಪಾದ | ೫೫ ” ೬೦ | ಅಲ್ಪಾಯುಸ್ಸು | ೬ | ೨ ಪಾದ | ೫ ” ೧ | ಛತ್ರಲಾಭ |

ಈ ಮೇಲೆ ಉದಾಹರಿಸಿರುವುದು ೬೦ ಘಳಿಗೆಗೆ ಮಾತ್ರ ತೋರಿಸಿರುತ್ತೆ. ನಕ್ಷತ್ರ ಪರಮ ೫೫-೩೦ ರಿಂದ ೬೬-೩೦ ರವರಿಗು ಬರುವುದರಿಂದ ಅದನ್ನು ೬೦ ರಿಂದ ಭಾಗಮಾಡಿ ಆ ಭಾಗಕ್ಕೆ ಎಷ್ಟು ಬರುತ್ತೋ ಅದನ್ನು ಆಯಾಯ ಭಾಗಗಳಿಗೆ ಹಂಚಿ ಹಾಕಿ ಫಲ ನಿಶ್ಚಯಿಸಬೇಕು.

## ಅಥ ಮೂಲಾಶ್ಲೇಷಾ ಮುಹೂರ್ತ ಫಲಂ

ಶ್ಲೋಕ।। ರಾಕ್ಷಸೋ ಯಾತುಧಾನಶ್ಚ ಸೋಮಃಶುಕ್ರಃಫಣೇಶ್ವರಃ । ಪಿತಾಮಾತಾಯಮಃ ಕಾಲೋವಿಶ್ವೇದೇವಾಮಹೇಶ್ವರಃ ।।೫೬।। ಶರ್ವಾಖ್ಯಶ್ಚ ಕುಬೇರಶ್ಚ ಶುಕ್ರೋ ಮೇಘೋದಿವಾಕರಃ ।। ಗಂಧರ್ವೊ ಯಮದೇವಶ್ಚ ಬ್ರಹ್ಮಾವಿಷ್ಣುರ್ಯಮಸ್ತಥಾ ।।೫೭।। ಈಶ್ವರೋ ವಿಷ್ಣುರಭ್ರಂಚ ಪವನೋಮುನಯ ಸ್ತಥಾ ಷಣ್ಮುಖೋ ಭಂಗೀರೀಟೀಚ ಗೌರೀನಾಮ್ನೀ ಸರಸ್ವತೀ ।।೫೮।। ಪ್ರಜಾಪತಿಶ್ಚ ಮೂಲಸ್ಯ ತ್ರಿಂಶದ್ವೈಕ್ಷಣನಾಯಕಾಃ ।। ವಿಪರೀತಾ ಪುನರ್ಜ್ಞೇಯಾ ಆಶ್ಲೇಷಾ ಜಾತಬಾಲಕೆ ।। ಪ್ರಥಮೇ ದ್ವಿತಯೇಷಷ್ಠೇ ಚಾಷ್ಟಮೇಷ್ಟಾದಶೆತಥಾ ।। ತ್ರಯೋವಿಂಶೇಚನವಮೇ ಕುಲಕ್ಷಯಕರಃ ಶಿಶುಃ।।೬೦।। ಇತಿ ಮೂಲಾಶ್ಲೇಷಾ ಮುಹೂರ್ತ ಫಲಂ.

ತಾ।। ಮೂಲಾ ನಕ್ಷತ್ರದ ೬೦ ಘಳಿಗೆಗಳನ್ನು ೨ ಘಳಿಗೆಗಳಿಗೆ ೧ ಮುಹೂರ್ತ ಪ್ರಕಾರ ೩೦ ಮುಹೂರ್ತಗಳಿಗೆ ಆಗುತ್ತದೆ. ಈ ಮುಹೂರ್ತಗಳಿಗೆ ಪ್ರತ್ಯೇಕ ಮುಹೂರ್ತಕ್ಕೆ ಅಧಿಷ್ಠಾನ ದೇವತೆಗಳು. ಇದಕ್ಕೆ ಪ್ರತ್ಯೇಕ ಫಲ ।। ೧ ರಾಕ್ಷಸ, ೨ ದಾನವ, ೩ ಚಂದ್ರ, ೪ ಶುಕ್ರ, ೫ ಶೇಷ, ೬ ಪಿತೃ, ೭ ಮಾತೃ, ೮ ಯಮ, ೯ ಕಾಲ, ೧೦ ವಿಶ್ವೇದೇವ, ೧೧ ಮಹೇಶ್ವರ, ೧೨ ಶರ್ವ, ೧೩ ಕುಬೇರ, ೧೪ ಶುಕ್ರ, ೧೫ ಮೇಘ, ೧೬ ಸೂರ್ಯ, ೧೭, ಗಂಧರ್ವ, ೧೮ ಯಮ, ೧೯ ಬ್ರಹ್ಮ ೨೦ ವಿಷ್ಣು, ೨೧ ಯಮ, ೨೨ ಈಶ್ವರ, ೨೩ ಆಕಾಶ, ೨೪ ವಾಯು, ೨೫ ಋಷಿ, ೨೬ ಕಾರ್ತಿಕೇಯ, ೨೭ ಭೃಂಗೀರೀಟೀ, ೨೮ ಗೌರೀ, ೨೯ ಸರಸ್ವತಿ, ೩೦ ಪ್ರಜಾಪತಿ ।। ಇದರಲ್ಲಿ ೧-೨-೬-೮-೧೮-೧೯-೨೩ ಈ ಮುಹೂರ್ತದಲ್ಲಿ ಹುಟ್ಟಿದ ಶಿಶುವು ವಂಶಕ್ಷಯಕರನಾಗುವನು. ಆಶ್ಲೇಷಾ ನಕ್ಷತ್ರ ಇದೇ ಮುಹೂರ್ತವನ್ನು ವ್ಯತ್ಕ್ರಮವಾಗಿ ಆಶ್ಲೇಷಾಂತ್ಯದಿಂದ ಆದಿವರಿವಿಗೆ ಮುಹೂರ್ತಾಧಿಪತಿಗಳಾಗುವರು ।।೬೦।। ಇತಿ ಮೂಲಾಶ್ಲೇಷಾ ಮುಹೂರ್ತ ಫಲಂ.

## ಮೂಲಾ ವೃಕ್ಷಫಲಂ

ಶ್ಲೋಕ।। ವೇದಾಃ ೪ ಸಪ್ತ ೭ಗಜಾಃ ೮ ಕಾಷ್ಠಾಃ ೧೧ ಖೇಟಾರ್ಬಾಣಶ್ಚ ೫ ಷಟ್ ೬ ಶಿವಾ- ।।೧೧।। ಮೂಲ ಸ್ತಂಭಸ್ತ್ವಚಃ ಶಾಖಾ ಪತ್ರಂ ಪುಷ್ಪಂಫಲಂ ಶಿಖಾ ।।೬೧।। ಮೂಲಾ ವೃಕ್ಷ ವಿಭಾಗೇಷು ಮಂಗಲಂ ಹಿಫಲೇದಲೆ ।। ಅಮಂಗಲಂ ಫಲಂವಿಂದ್ಯಾ ಚ್ಛೇಷಭಾಗೇಷು ನಿಶ್ಚಿತಂ ।।೬೨।।ತಾ।। ಮೂಲಾನಕ್ಷತ್ರದ ೬೦ ಘಳಿಗೆಗಳನ್ನು ವೃಕ್ಷರೂಪವಾಗಿ ವಿಭಾಗಿಸಬೇಕು. ೪+೭+೮+

೧೦+೯+೫+೬+೧೧=೬೦, ಸ್ತಂಭ, ತ್ವಕ್, ಶಾಖಾ, ಪತ್ರಂ, ಪುಷ್ಪಂ, ಫಲಂ ಶಿಖಾ, ಈ ಭಾಗಗಳಿಗೆ ಕ್ರಮವಾಗಿ ಈ ವೃಕ್ಷ ವಿಭಾಗಗಳಲ್ಲಿ, ಫಲ, ಪತ್ರ ಈ ೨ ಭಾಗಗಳ ಘಳಿಗೆಯಲ್ಲಿ ಶಿಶು ಹುಟ್ಟಿದರೆ ಶುಭ, ಉಳಿದ ಭಾಗಗಳು ಅಶುಭ ಫಲಪ್ರದವೆಂದರಿಯುವುದು ॥೬೧-೬೨॥

## ಮೂಲಾ ನಕ್ಷತ್ರಜಾತಸ್ಯ ಶುಭಾಶುಭತ್ವಜ್ಞಾನಮ್

ಶ್ಲೋಕ॥ ಪಾದೇಮುಹೂರ್ತೇ ವೇಳಾಯಾಂ ವೃಕ್ಷೇಚಪುರುಷಾಕೃತೌ । ಅನಿಷ್ಟಮ ಶುಭಾಧಿಕ್ಯೇ ಶುಭಾಧಿಕ್ಯೇ ಶುಭಂಫಲಂ ॥೬೩॥ ತಾತಸ್ಯಜನ್ಮ ಭೇಯಸ್ಯ ಪ್ರಸೂತಿ ರ್ಜಾಯತೇಯದಿ । ತಾತಂವಾಭ್ರಾತರಂ ಜ್ಯೇಷ್ಠಂ ರಿಷ್ಟಗಂ ಕುರುತೇ ಧ್ರುವಂ ॥೬೪॥ ಮೂಲವಚ್ಛಾಂತಿಕಂ ತತ್ರವಿಧೇಯಂ ಹಿವಿಚಕ್ಷಣೈಃ ॥ ಭೂಮಿ ರತ್ನಾನಿ ಹೇಮಾನ್ನಂದೇಯಂ ವಿಪ್ರೇಷು ಭುಕ್ತಿತಃ ॥೬೫॥ ಸುಖೇನಯುಕ್ತೋ ಧನವಾಹನಾಢ್ಯೋ ಹಿಂಸ್ರೋ, ಬಲಾಢ್ಯಃ ಸ್ಥಿರಕರ್ಮಕರ್ತಾ । ಪ್ರತಾಪಿತಾ ರಾತಿಜನೋ ಮನುಷ್ಯೋಮೂಲೆಕೃತಿಸ್ಸ್ಯಾ ಜನನಂ ಪ್ರಪನ್ನಃ ॥೬೬॥ತಾ॥ ಮೂಲಾನಕ್ಷತ್ರದ ಚರಣ ಮುಹೂರ್ತ ವೃಕ್ಷ, ಪುರುಷಾಕೃತಿ, ಈ ವಿಧವಾದ ೪ ಪ್ರತ್ಯೇಕವಾದ ಫಲದಲ್ಲಿ ಶುಭಾಶುಭ ನಿಶ್ಚಿತವಾಗಿರುತ್ತೆ. ಇದರಲ್ಲಿ ಶುಭಾಧಿಕ್ಯವಾದರೆ ಇಷ್ಟಫಲ ಪ್ರಾಪ್ತಿಯಾಗುವುದು. ಅಶುಭಫಲ ಅಧಿಕವಾಗಿದ್ದರೆ ಅಶುಭಫಲವೇ ಆಗುವುದು. ತಂದೆಯ ಅಥವಾ ಅಣ್ಣನ ಜನ್ಮನಕ್ಷತ್ರದಲ್ಲಿ ಯಾವನು ಹುಟ್ಟುವನೋ ಅವನು ತಂದೆಗೂ, ಅಣ್ಣನಿಗೂ ಅನಿಷ್ಟಕಾರಕನಾಗುವನು. ಅದಕ್ಕೋಸ್ಕರ ಮೂಲಾ ನಕ್ಷತ್ರದಂತೆ ಬುದ್ಧಿವಂತರು ಶಾಂತಿಕರ್ಮವನ್ನಾಚರಿಸಬೇಕು. ಶಾಂತಿ ಮಾಡುವುದರಲ್ಲಿ ಭೂಮಿ, ರತ್ನ, ಸುವರ್ಣ, ಅನ್ನ ಇವುಗಳನ್ನು ಬ್ರಾಹ್ಮಣರಿಗೆ ಭಕ್ತಿಯುಕ್ತವಾಗಿ ಕೊಡಬೇಕು. ಮೂಲಾ ನಕ್ಷತ್ರದಲ್ಲಿ ಹುಟ್ಟಿದವನಿಗೆ ಉತ್ತಮವಾಗಿರುವ ಪ್ರಕಾರ ಶಾಂತಿ ಮಾಡಿದರೆ ಆ ಬಾಲಕನು ಧನವಾನ, ಸುಖೀ, ವಾಹನಯುಕ್ತ, ಕ್ರೂರಿ, ಬಲಿಷ್ಠ, ಸ್ಥಿರಕರ್ಮ ಮಾಡುವವನು, ತನ್ನ ಪರಾಕ್ರಮದಿಂದ ಶತೃಗಳನ್ನು ಜಯಿಸುವವನು ಮತ್ತು ಪವಿತ್ರವಂತನೂ ಆಗುವವನೆಂದು ಮಹರ್ಷಿಗಳಿಂದ ಲೋಕೋಪಕಾರಕ್ಕೋಸ್ಕರ ಹೇಳಲ್ಪಟ್ಟಿರುತ್ತೆ. ಇದನ್ನು ಅಶ್ರದ್ಧೆ ಮಾಡದೆ ಮಾಡತಕ್ಕದ್ದು ॥೬೬॥

ಮೂಲ॥ ಇಷ್ಟಾನಂದ ಕಳತ್ರೋ ಮಾನೀ ಧೃಢಸೌಹೃದಶ್ಚ ಜಲದೈವವೇ ॥
ವೈಶ್ವೇವಿನೀತ ಧಾರ್ಮಿಕ ಬಹುಮಿತ್ರ ಕೃತಜ್ಞ ಸುಭಗಾಶ್ಚ ॥೧೧॥

ಅವತಾರಿಕೆ॥ ಪೂರ್ವಾಷಾಢಾ ಉತ್ತರಾಷಾಢ ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ. ಟೀ॥ ಜಲದೈವೇ-ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು,

ಇಷ್ಟಾನಂದ ಕಳತ್ರಃ-ಇಷ್ಟವಾಗಿಯೂ ಆನಂದವಾಗಿಯೂ ಇರುವ ಹೆಂಡತಿಯುಳ್ಳವನು, ಮಾನೀ-ಮರ್ಯಾದೆಯುಳ್ಳವನು, *ದೃಢಸೌಹೃದಃ-ಸ್ಥಿರವಾದ ಸ್ನೇಹವುಳ್ಳವನೂ ಆಗುವನು, ಇದಕ್ಕೆ ಯವನಾಚಾರ್ಯರ ಸಮ್ಮತಿ ॥ಶ್ಲೋಕ॥ ಸುಮುಖಸ್ಸುವಿನೀತಶ್ಚ ತ್ಯಾಗೀಸ್ಯಾ ದ್ಗೋಪ್ರುವತ್ಸಲಃ ॥ ಕ್ಲೇಶಭಾಗೀ ಯುವಾಮಾನೀ ಜಲನಕ್ಷತ್ರ ಸಂಭವಃ ॥ ಪೂರ್ವಾಷಾಢಾ ನಕ್ಷತ್ರದಲ್ಲಿ ಜನ್ಮಿಸಿದವನು ಸುಂದರಮುಖವುಳ್ಳವನು, ಅತಿ ನಮ್ರ, ತ್ಯಾಗಿ, ಗೋರಕ್ಷಕ, ಕ್ಲೇಶಭಾಕ್, ಯೌವನಸ್ಥ ಮತ್ತು ಬಹುಮಾನವುಳ್ಳವನೂ ಆಗುವನು. ಈ ವಿಷಯಕ್ಕೆ ಜಾತಕಾಭರಣೆ ॥ಶ್ಲೋಕ॥ ಭೂಯೋ ಭೂಯಸ್ತೋಯಪಾನಾನುರಕ್ತೋ ಭೋಕ್ತಾತಾವದ್ವಾಗ್ವಿಲಾಸಃ ಸುಶೀಲಃ। ನೂನಂ ಸಂಪಜ್ಜಾಯತೇತಸ್ಯ ಗಾಢಾ ಪೂರ್ವಾಷಾಢಾ ಜನ್ಮಭಂ ಯಸ್ಯ ಪುಂಸಃ ॥೬೮॥ ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು, ಅತ್ಯಂತ ಜಲಪಾನಾಸಕ್ತ, ಭೋಕ್ತಾ, ಚಂಚಲ, ಚತುರ ಭಾಷೀ, ಸುಶೀಲ, ನಿಃಸಂಶಯ, ಅಧಿಕಸಂಪತ್ತುಳ್ಳ ವನೂ ಆಗುವನು॥ ವೈಶ್ವೇಉತ್ತರಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು, ವಿನೀತಃ- ಸನ್ಮಾರ್ಗ ನೀತಿಯುಳ್ಳವನು, ಧಾರ್ಮಿಕಃ-ಧರ್ಮಿಷ್ಠ, ಬಹುಮಿತ್ರಃ-ಅನೇಕಮಿತ್ರರುಳ್ಳವನು, ಕೃತಜ್ಞಃ-ಪ್ರತ್ಯುಪಕಾರ ಸ್ಮರಣೆ ಮಾಡುವನು, ಸುಭಗಃ-ಸಂಪತ್ತುಳ್ಳವನೂ ಆಗುವನು. ಈ ವಿಷಯದಲ್ಲಿ ಯವನಾಚಾರ್ಯಃ ॥ಶ್ಲೋಕ॥ ದಾತಾದಯಾವಾ್ನ ವಿಜಯೀವಿನೀತಃ । ಸತ್ಕರ್ಮಕರ್ತಾ ವಿಭುತಾಸಮೇತಃ ॥ ಕಾಂತಾಸುತಾವಾಪ್ತ ಸುಖೋನಿತಾಂತಂ ವೈಶ್ವೇಸುವೇಷಃ ಪುರುಷೋಭಿಮಾನೀ ॥೬೯॥ ಉತ್ತರಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು, ದಾನಗಳನ್ನು ಮಾಡುವವನು, ದಯಾಳು, ವಿಜಯೀ, ನಮ್ರ, ಉತ್ತಮವಾದ ಕೆಲಸ ಮಾಡುವವನು, ಶ್ರೇಷ್ಠ ಪುತ್ರರಿಂದ ಸುಖಪಡುವನು ಮತ್ತು ಅಭಿಮಾನ ಉಳ್ಳವನೂ ಆಗುತ್ತಾನೆ. ॥ಜಾ-ಭರಣೆ॥ಶ್ಲೋಕ॥ ಕೃತಜ್ಞೋಧಾರ್ಮಿಕಃ ಶೂರೋ ಬಹುಪುತ್ರೋ ವಿನೀತವಾ್ನ ॥ ಸುಕಲತ್ರಸ್ಸುರೂಪಶ್ಚ ವೈಶ್ವನಕ್ಷತ್ರಸಂಭವಃ ॥೭೦॥ ಉತ್ತರಾಷಾಢಾ ನಕ್ಷತ್ರೋತ್ಪನ್ನನು, ಉಪಕಾರ ಮರೆಯದೆ ಇರುವವನು, ಧರ್ಮಾತ್ಮಾ, ಶೂರ, ಬಹುಪುತ್ರವಂತ, ನಮ್ರ, ಸುಂದರ ಮತ್ತು ಸೊಗಸಾದ ಹೆಂಡತಿಯುಳ್ಳವನಾಗುವನು ॥೧೧॥

ಮೂಲ॥ ಶ್ರೀಮಾ್ನಶ್ರವಣೆ ಶ್ರುತವಾನುದಾರ ದಾರೋ ಧನಾನ್ವಿತಃ ಖ್ಯಾತಃ॥
ದಾತಾ ಚಾಢ್ಯಃ ಶೂರೋ ಗೀತಪ್ರಿಯೋ ಧನಿಷ್ಠಾಸು ಧನಲುಬಃ॥

ಅವತಾರಿಕೆ॥ ಶ್ರವಣ ಧನಿಷ್ಠಾ ನಕ್ಷತ್ರದಲ್ಲಿ ಹುಟ್ಟಿದವರ ಸ್ವಭಾವ ಹೇಳಲ್ಪಡುತ್ತೆ.

---

* ದೃಢಸೌಹೃದಃ-ಯಾವಾಗ್ಯೂ ವ್ಯತ್ಯಾಸವಾಗದ ಹೃದಯ ಉಳ್ಳವನೆಂದು ಕೆಲವರು ಅಭಿಪ್ರಾಯ ಪಡುವರು.

ಟೀಕು॥ ಶ್ರವಣೆ-ಶ್ರವಣ ನಕ್ಷತ್ರದಲ್ಲಿ ಹುಟ್ಟಿದವನು, ಶ್ರುತರ್ವಾ-ಪಂಡಿತನು, ಶ್ರೀರ್ಮಾ-ಶ್ರೀಮಂತನು, ಉದಾರವಾದಃ-ಉದಾರ ಗುಣವಂತಳಾದ ಹೆಂಡತಿಯುಳ್ಳವನು, ಧನಾನ್ವಿತಃ-ಧನವಂತನು, ಖ್ಯಾತಃ-ಪ್ರಖ್ಯಾತ ಪುರುಷನು ಆಗುವನು ॥ ಈ ಅರ್ಥಕ್ಕೆ ನಾರದೀಯ ಸಂಹಿತೆಯಲ್ಲಿ ॥ಶ್ಲೋಕ॥ ಉದಾರಶ್ಶ್ಚ್ರುತರ್ವಾಧೀರೋವಿದ್ವಾನ್ವಕ್ರಾಧನಾನ್ವಿತಃ ॥ ಕಲಾರ್ವಾಸಕಲಾಭಿಜ್ಞೋಧಾರ್ಮಿಕಃ ಶ್ರವಣರ್ಕ್ಷಜಃ ॥೭೦॥ ಉದಾರಃ-ಉದಾರ ಗುಣವುಳ್ಳವನು, ಧೀರನು, ಪಂಡಿತ, ಬಹು ತಿಳುವಳಿಕೆಯುಳ್ಳವನು, ಧನವಂತ, ಕಲಾಶಾಸ್ತ್ರವನ್ನು ತಿಳಿದವನು, ಮತ್ತು ಸಕಲ ಶಾಸ್ತ್ರಾರ್ಥವನ್ನು ತಿಳಿದವನು, ಧರ್ಮಾಸಕ್ತನು ಆಗುತ್ತಾನೆ. ಧುಂಡಿರಾಜಃ ॥ಶ್ಲೋಕ॥ ಶಾಸ್ತ್ರಾನುರಕ್ತೋ ಬಹುಪುತ್ರಮಿತ್ರಃ ಸ್ವಾತ್ರಭಕ್ತಿರ್ವಿಜಿತಾರಿಪಕ್ಷಃ । ಪ್ರಾಣೇ ಪುರಾಣ ಶ್ರವಣ ಪ್ರವೀಣಶ್ಚೇಜ್ಜನ್ಮಕಾಲೇ ಶ್ರವಣಂಹಿಯಸ್ಯ ॥೭೧॥ತಾ॥ ಶ್ರವಣ ನಕ್ಷತ್ರದಲ್ಲಿ ಹುಟ್ಟಿದವನು ಶಾಸ್ತ್ರದಲ್ಲಿ ಅನುರಾಗವುಳ್ಳವನು, ಅನೇಕ ಪುತ್ರಮಿತ್ರಕಳತ್ರಾದಿಗಳುಳ್ಳವನು, ಸಜ್ಜನರಲ್ಲಿ ಭಕ್ತಿಯುಳ್ಳವನು, ಶತ್ರುಗಳನ್ನು ಗೆಲ್ಲುವನು, ಪುರಾಣಶ್ರವಣದಲ್ಲಿ ಪ್ರವೀಣ ಈ ಗುಣಗಳಿಂದ ಕೂಡಿದವನಾಗುವನು ॥೭೧॥ ಧನಿಷ್ಠಾಸು-ಧನಿಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು, ದಾತಾ-ದಾನತತ್ಪರನು, ಆಢ್ಯಃ-ಧನವಂತ, ಶೂರಃ-ರಣಶೂರನು, ಗೀತಪ್ರಿಯಃ-ಸಂಗೀತಪ್ರಿಯನು, ಧನಲುಬ್ಧಃ-ಅದಾತನು ಅಂದರೆ ಕೃಪಣನು ಆಗುವನು. ಈ ಅರ್ಥಕ್ಕೆ ನಾರದೀಯ ಸಂಹಿತೆಯಲ್ಲಿ ॥ಶ್ಲೋಕ॥ ಧರ್ಮಿಷ್ಠೋವ್ಯಸನೀ ಕ್ರೂರಃಕ್ಷಯರೋಗಯುತಃಶಠ । ಪರದಾರರತಃ ಶೂರೋ ಧನಿಷ್ಠಾಸಂಭವೋನರಃ ॥೭೨॥ತಾ॥ ಧನಿಷ್ಠಾನಕ್ಷತ್ರದಲ್ಲಿ ಹುಟ್ಟಿದವನು, ಧರ್ಮಿಷ್ಠ, ವ್ಯಸನವುಳ್ಳವನು, ಕ್ರೂರಸ್ವಭಾವವುಳ್ಳವನು, ಕ್ಷಯರೋಗದಿಂದ ಪೀಡಿತ, ಶಠ-ಶಠಲಕ್ಷಣದಿಂದ ಕೂಡಿದವನು, ಶಠಲಕ್ಷಣ ಮೊದಲೇ ಉಕ್ತವಾಗಿರುತ್ತೆ. ಪರದಾರರತ, ರಣಶೂರ ಈ ಮೊದಲಾದ ಗುಣಗಳಿಂದ ಕೂಡಿರುವನು ॥೭೨॥

ಮೂಲ॥ ಸ್ಫುಟವಾಗ್ವ್ಯಸನೀರಿಪುಹಾ ಸಾಹಸಿಕಶ್ಶತಭಿಷಜಿ ದುರ್ಗ್ರಾಹ್ಯಃ ।
ಬಾದ್ರಪದಾಸೂದ್ವಿಗ್ನಃ ಸ್ತ್ರೀವಿಜಿತ ಧನೀ ಪಟುರದಾತಾ ॥೧೩॥

ಅವತಾರಿಕೆ॥ ಶತಭಿಷಾ ಪೂರ್ವಾಭಾದ್ರಪದಾ ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಶತಭಿಷಜಿ-ಶತತಾರಾ ನಕ್ಷತ್ರದಲ್ಲಿ ಹುಟ್ಟಿದವನು, ಸ್ಫುಟವಾಕ್-ಸ್ಪಷ್ಟವಾಗಿ ಮಾತನಾಡುವನು, ವ್ಯಸನೀ-ಸ್ತ್ರೀದ್ಯೂತಾದಿ ವ್ಯಸನಭರಿತನು, ರಿಪುಹಾ-ಶತ್ರುಘಾತಕನು, ಸಾಹಸಿಕಃ-ಮಾಡಲಸಾಧ್ಯವಾದ ಕಾರ್ಯವನ್ನು ತನ್ನ ಸಾಹಸದಿಂದ ಮಾಡುವವನು,

ದುರ್ಗ್ರಾಹಃ-ದುರಾರಾಧ್ಯನು ಆಗುವನು. ಈ ಅರ್ಥಕ್ಕೆ ನಾರದೀಯ ಸಂಹಿತೆಯಲ್ಲಿ ॥ ಶ್ಲೋಕ ॥ ಶತತಾರಾ ಜನಿರ್ಯಸ್ಯ ಕುಲಶೀಲೋ ದಾರಲಂಬಪಟಃ । ಮಾಯಾವಾದೀ ವಿಶಾಲಾಕ್ಷಃ ಸೌಖ್ಯಭುಕ್ ಶಠಉಚ್ಯತೆ ॥೭೩॥ ಶತಭಿಷೆಯಲ್ಲಿ ಹುಟ್ಟಿದವನು, ದುಃಶೀಲನು, ವಿಷಯಾಸಕ್ತಿಯಿಂದ ದಾರಲಂಪಟನು, ಮಾಯಾವೀ, ವಿಶಾಲನೇತ್ರವುಳ್ಳವನು, ಸೌಖ್ಯವಂತ, ಶಠಸ್ವಭಾವಉಳ್ಳವನು ಆಗುತ್ತಾನೆ ॥ ಗರ್ಗಸಂಹಿತಾಯಾಂ ॥ ಶೀತಭೀರು ರತಿಸಾಹಸೀ ಸದಾ ನಿಷ್ಠುರೋಹಿ ಚತುರೋ ನರೋಭವೇತ್ ॥ ವೈರಿಣಾಮತಿ ಶಯೇನ ದಾರುಣೋ ವಾರುಣೋಡು ಯದಿ ಯಸ್ಯ ಸಂಭವೆ ॥ ಶತಭಿಷಾ ನಕ್ಷತ್ರಜನು ಶೀತರೋಗವುಳ್ಳವನು, ಅತಿ ಸಾಹಸೀ, ಸದಾನಿಷ್ಠುರ ಭಾಷೀ, ಚತುರ, ವೈರಿಗಳಿಗೆ ಯಮನಂತಿರುವವನು ಆಗುತ್ತಾನೆ. ಭಾದ್ರಪದಾಸು ಪೂರ್ವಾಭಾದ್ರಾ ನಕ್ಷತ್ರೋತ್ಪನ್ನನು ಉದ್ವಿಗ್ನ-ದುಃಖಿತ ಮನಸ್ಕನು, ಸ್ತ್ರೀವಿಜಿತಃ-ಸ್ತ್ರೀಯರಿಂದ ಸೋತವನು, ಧನೀ-ಧನವಂತನು, ಪಕ್ಷಾಂತರದಲ್ಲಿ ಸ್ತ್ರೀವಿಜಿತಧನೀ-ಹೆಂಗಸಿನಿಂದ ಜಯಿಸಲ್ಪಟ್ಟ ಧನವಂತನು, ಪಟುಃ-ಚಾತುರ್ಯದಿಂದ ಮಾತನಾಡುವನು, ಅದಾತಾ-ಕೃಪಣನು ಸಹಾ ಆಗುತ್ತಾನೆ. ಈ ಅರ್ಥಕ್ಕೆ ನಾರದೀಯ ಸಂಹಿತಾಯಾಂ॥ ಉದ್ವಿಗ್ನಸ್ತ್ರೀಜಿತಃ ಶಾಠ್ಯಃಪರನಿಂದಾ ಸುನೈಪುಣ್ಯಃ॥ ಅಧರ್ಮ ತತ್ಪರಃ ಶೂರಶ್ವಾಜ ಪಾದೇಚ ಸಂಭವಃ ॥೭೪॥ ದುಃಖಿತನು, ಸ್ತ್ರೀಯರಿಂದ ಜೈಸಲ್ಪಟ್ಟವನು, ಶಠ, ಪರರ ದೂಷಣೆ ಮಾಡುವುದರಲ್ಲಿ ಸಮರ್ಥನು, ಅಧರ್ಮತತ್ರ, ಶೂರನೂ ಆಗುತ್ತಾನೆ ॥ಗರ್ಗಃ॥ ಜಿತೇಂದ್ರಿಯಃ ಸರ್ವಕಲಾಸುದಕ್ಷೋ ಜಿತಾರಿಪಕ್ಷಃ ಖಲುತಸ್ಯನಿತ್ಯಮ್॥ ಭವೇನ್ಮನೀಷಾ ಸುತರಾಮ ಪೂರ್ವ ಪೂರ್ವಾಯದಾ ಭಾದ್ರಪದಾ ಪ್ರಸೂತೌ ॥೭೬॥ ಪೂರ್ವಾಭಾದ್ರಪದಾ ಪ್ರಸೂತೌ ॥೭೬॥ ಪೂರ್ವಾಭಾದ್ರೋತ್ಪನ್ನನು, ಜಿತೇಂದ್ರಿಯ, ಸಮಸ್ತ ಕಲೆಗಳನ್ನು ತಿಳಿದವನು, ಶತೃಗಳನ್ನು ಜಯಿಸುವವನು, ಅತಿಶಯವಾದ ವಿದ್ವಾಂಸನೂ ಆಗುವನು ॥೧೩॥

ಮೂಲ॥ ವಕ್ತಾ ಸುಖೀ ಪ್ರಜಾವಾನ್ ಜಿತಶತ್ರು ರ್ಧಾರ್ಮಿಕೋ ದ್ವಿತೀಯಾಸು॥
ಸಂಪೂರ್ಣಾಂಗ ಸ್ಸುಭಗ ಶ್ಶೂರಶ್ಶುಚಿ ರರ್ಥವಾನ್ ಪೌಷ್ಣೇ ॥೧೪॥

ಅವತಾರಿಕೆ॥ ಉತ್ತರಾಭಾದ್ರಾ ರೇವತಿ ನಕ್ಷತ್ರದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ದ್ವಿತೀಯಾಸು-ಉತ್ತರಭಾದ್ರಾ ನಕ್ಷತ್ರದಲ್ಲಿ ಹುಟ್ಟಿದವನು, ವಕ್ತಾ-ಸಭೆಯಲ್ಲಿ ಚೆನ್ನಾಗಿ ಮಾತನಾಡುವವನು, ಸುಖೀ-ಸುಖವಂತನು, ಪ್ರಜವಾನ್-ಪುತ್ರಪೌತ್ರಾದಿ ಪ್ರಜೆಯುಳ್ಳವನು, ಜಿತಶತ್ರುಃ-ಶತ್ರುಗಳನ್ನು ಜಯಿಸುವವನು, ಧಾರ್ಮಿಕಃ-ಧರ್ಮರಥನೂ ಆಗುವನು. ಈ ವಿಷಯಕ್ಕೆ ನಾರದೀಯ ಸಂಹಿತೆಯಲ್ಲಿ ॥ಶ್ಲೋಕ॥ ಪ್ರಜಾವಾನ್ ಧಾರ್ಮಿಕೋ ವಕ್ತಾ ಜಿತಶತ್ರು ಸ್ಸುಖಪ್ರದಃ ॥ ದೃಢವ್ರತಃ ಸದಾಕಾಮೀ ಅಹಿರ್ಬುಧ್ನ್ಯ,

ಸಮುದ್ಭವಃ ॥೭೭॥ ಉ-ಭಾದಲ್ಲಿ ಹುಟ್ಟಿದವನು ಪ್ರಜಾವಂತ, ಧಾರ್ಮಿಕ, ವಕ್ತಾ, ಶತ್ರುಹಂತಾ, ಸುಖಪ್ರದ, ನಿಶ್ಚಯವಾದ ಮನಸ್ಸುಳ್ಳವನು, ಸದಾಕಾಮೀ ॥ಗರ್ಗ॥ ಕುಲಸ್ಯಮಧ್ಯೇಧಿಕ ಭೂಷಣಂಚ ನಾತ್ಯುಚ್ಚದೇಹಃ ಶುಭಕರ್ಮ ಕರ್ತಾ ॥ ಯಸ್ಯೋತ್ತರಾ ಭಾದ್ರಪದಾಚ ಜನ್ಮಾಂ ಧನ್ಯಾಂ ಲಭೇತ್ ಸ್ವಾಂಚ ಭವೇದ್ವದಾನ್ಯಃ ॥೭೮॥ ಕುಲಮಧ್ಯದಲ್ಲಿ ಅಧಿಕಭೂಷಣ, ಅತಿ ಉದ್ದವಿಲ್ಲದ ಶರೀರ (ಸಮಾಂಗ), ಒಳ್ಳೇಕರ್ಮ ಮಾಡುವವನು, ಮತ್ತು ಧನ್ಯನು ಸಹಾ ಆಗುವನು. ಪೌಷ್ಣೇ-ರೇವತೀನಕ್ಷತ್ರದಲ್ಲಿ ಹುಟ್ಟಿದವನು, ಸಂಪೂರ್ಣಾಂಗಃ- ಸಂಪೂರ್ಣವಾದ ಶರೀರ ಉಳ್ಳವನು, ಸುಭಗಃ-ಸರ್ವಜನಪ್ರಿಯನು, ಶೂರಃ- ರಣಪಂಡಿತನು, ಶುಚಿಃ-ಪರಧನ ಪರಸ್ತ್ರೀಯರಲ್ಲಿ ಭೋಗವಿಲ್ಲದೆ ಇರುವನು, ಅರ್ಥವಾ-ಧನವಂತನು ಆಗುತ್ತಾನೆ. ನಾರದೀಯ ಸಂಹಿತಾಯಂ ॥ಶ್ಲೋಕ॥ ರೂಪವಾ ಧನವಾ ಭೋಗೀ, ಪಂಡಿತ ಶ್ಚಂಚಲೋರ್ಥ ಭಾಕ್ ॥ ಕಾಮೀ ದುರ್ಗ ಜಯೀಶೂರಃ ಪೌಷ್ಣಜಃ ಪರದೇಶಗಃ ॥೭೯॥ ರೇವತೀ ನಕ್ಷತ್ರದಲ್ಲಿ ಹುಟ್ಟಿದವನು ರೂಪವಂತ, ಧನವಂತ, ಭೋಗೀ, ವಿದ್ವಾಂಸ, ಸರ್ವಜನಪ್ರಿಯ, ಶೂರ, ರಣಪಂಡಿತ, ಕಲಹದಲ್ಲಿ ಪಂಡಿತ, ಚಂಚಲ, ದ್ರವ್ಯವಂತ, ಕಾಮೀ, ಸಂತೋಷಚಿತ್ತ, ಶೀಘ್ರಗಾಮೀ, ದುರ್ಗವನ್ನು ಗೆಲ್ಲುವನು ಆಗುತ್ತಾನೆ ॥ಗರ್ಗ॥ ಚಾರುಶೀಲ ವಿಭವೋ ಜಿತೇಂದ್ರಿಯಃ ಸದ್ಧನಾನು ಭವನೈಕ ಮಾನಸಃ ॥ ಮಾನವೊ ನನುಭವೇ ನ್ಮಹಾಮತೀ ರೇವತಿ ಭವತಿ ಯಸ್ಯಜನ್ಮಭಿಮ್ ॥ ರೇವತಿಯಲ್ಲಿ ಹುಟ್ಟಿದವನು ಸುಶೀಲವಿಭವ, ಜಿತೇಂದ್ರಿಯ, ಸದ್ಧನವನ್ನು ಅನುಭವಿಸುವವನು, ಏಕಮನಸ್ಸುಳ್ಳವನು, ಮಹಾಬುದ್ಧಿಯುಳ್ಳವನೂ ಆಗುವನು. ಈ ನಕ್ಷತ್ರ ಫಲಗಳು ಚಂದ್ರನ ಬಲಾಬಲದ ಮೇಲೆ ನಿರ್ಣಯಿಸಬೇಕು. ॥೧೪॥

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನಕ್ಷತ್ರಫಲದ
ವಿಚಾರನಾಮೋ ಷೋಡಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾಣ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಉದಾಹರಣ ಯುಕ್ತಾಯಾಂ ನಕ್ಷತ್ರಫಲದ
ನಾಮೋ ಷೋಡಶ ಪ್ರಕರಣಂ

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ

## ೧೭ನೇ ರಾಶಿಶೀಲ ಪ್ರಕರಣಂ

ಅವತಾರಿಕೆ॥ ಈ ಗ್ರಂಥದಲ್ಲಿ ಇದುವರೆವಿಗೂ ನಿರೂಪಿಸಿದ ಫಲಗಳಲ್ಲಿ ಚಂದ್ರ ರಾಶಿ ಫಲ ಪ್ರತ್ಯೇಕವಾಗಿ ಹೇಳಲ್ಪಡಲಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಚಂದ್ರನು ಮೇಷಾದಿ ರಾಶಿಗಳಲ್ಲಿದ್ದು ಚಂದ್ರನಿರುವ ರಾಶ್ಯಧಿಪತಿಯು ಮತ್ತು ಚಂದ್ರನಿರುವ ನವಾಂಶಾಧಿಪತಿಯು ಬಲಿಷ್ಠರಾಗಿದ್ದರೆ ಜಾತಕನ ಸ್ವಭಾವ ಯಾವ ಪ್ರಕಾರ ಇರುವುದೋ ಆ ವಿಷಯ ಸಂಪೂರ್ಣವಾಗಿ ಹೇಳಲ್ಪಟ್ಟಿರುತ್ತೆ.

### ಮೇಷದಲ್ಲಿ ಚಂದ್ರನಿದ್ದ ಫಲ

ಮೂಲ॥ *ವೃತ್ತಾ ತಾಮ್ರದೃಗುಷ್ಣಶಾಕ ಲಘುಭುಕ್ ಕ್ಷಿಪ್ರಪ್ರಸಾದೋಟನಃ ।
ಕಾಮೀದುರ್ಬಲಜಾನು ರಸ್ಥಿರ ಧನಶ್ಶೂರೋಂಗನಾ ವಲ್ಲಭಃ ॥
ಸೇವಾಜ್ಞಃ ಕುನಖೀ ವ್ರಣಾಂಕಿತ ಶಿರಾಮಾನೀ ಸಹೋತ್ಥಾ ಗ್ರಜಃ ।
ಶಕ್ತ್ಯಾಪಾಣಿ ತಲೇಙ್ಕಿತೋತಿ ಚಗಲಸ್ತೋಯೇತಿ ಭೀರುಃ ಕ್ರಿಯೆ ॥೧॥

ಅವತಾರಿಕೆ॥ ಚಂದ್ರ ಮೇಷರಾಶಿಯಲ್ಲಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ. ಟೀ॥ ಕ್ರಿಯೇ-ಮೇಷದಲ್ಲಿ ಚಂದ್ರನಿರುವಾಗ ಜನ್ಮಿಸಿದವನು, ವೃತ್ತಾ ತಾಮ್ರ ದೃಕ್-ವೃತ್ತ-ವರ್ತುಳಾಕಾರವಾಗಿರುವ, ಆತಾಮ್ರ-ಸಮಸ್ತವೂ ಕೆಂಪಾಗಿರುವ, ದೃಕ್-ನೇತ್ರಗಳುಳ್ಳವನು, ಉಷ್ಣಶಾಕ ಲಘುಭುಕ್-ಉಷ್ಣ ಪದಾರ್ಥ ಭೋಜನ ಮಾಡುವವನು, ಅಧಿಕಶಾಕ ಭಕ್ಷಕನು, ಅಲ್ಪವಾಗಿ ಭುಜಿಸುವವನು, ಕ್ಷಿಪ್ರಪ್ರಸಾದಃ-ಸಿಟ್ಟು ಬಂದ ಕಾಲದಲ್ಲಿ ಶೀಘ್ರವಾಗಿ ಶಾಂತನಾಗುವವನು. ಅಂದರೆ ಮುಂಗೋಪಿಯೆಂದರ್ಥ. ಈ ವಿಷಯಕ್ಕೆ ॥ಶ್ಲೋಕ॥ ಉತ್ತಮೇಸ್ಯಾತ್ಕ್ಷಣಂ ಕೋಪಃ ಮಧ್ಯಮೇ ಘಟಕಾದ್ವಯ। ಅಧಮೇಸ್ಯಾದ ಹೋರಾತ್ರಂ ಪಾಪಿಷ್ಠೇ ಮರಣಾಂತಕಃ ॥೧॥ ಆದ್ದರಿಂದ ಉತ್ತಮಪುರುಷನು ಅಟನಃ-ಹೆಚ್ಚಾಗಿ ಸಂಚಾರದಲ್ಲಿ ಪ್ರೀತಿಯುಳ್ಳವನು (ಸಂಚಾರ ಸ್ವಭಾವ ಉಳ್ಳವನು). ಕಾಮೀ-ಸ್ತ್ರೀಯರಲ್ಲಿ ಅಧಿಕವಾಗಿ ಭೋಗ ಉಳ್ಳವನು, ದುರ್ಬಲಜಾನುಃ-ಬಲವಿಲ್ಲದ ಮೊಣಕಾಲುಳ್ಳವನು, ಅಸ್ಥಿರಧನಃ-ದೀರ್ಘಕಾಲ ಧನವಿಲ್ಲದ ಸ್ವಭಾವ ಉಳ್ಳವನು (ಬಹುಕಾಲ ದ್ರವ್ಯನಿಲ್ಲುವುದಿಲ್ಲ), ಶೂರಃ-ಯುದ್ಧಪ್ರಿಯ (ಅಂದರೆ ಮಲ್ಲಯುದ್ಧಾದಿ

* ವ್ರಾತ್ತಾತಾಮ್ರದೃಕ್ ಪಾಠಾಂತರ. (ಉತ್ತರದೇಶದ ಪುಸ್ತಕದಲ್ಲಿರುತ್ತೆ)

ಪ್ರಿಯನೆಂದು ಕೆಲವರು ಅರ್ಥ ಹೇಳಿರುವರು), ಅಂಗನಾವಲ್ಲಭಃ-ಸ್ತ್ರೀಯರಿಗೆ ಪ್ರೀತಿಯುಳ್ಳವನು, ಸೇವಾಜ್ಞಃ-ಸೇವೆ ಮಾಡುವದನ್ನು ಚನ್ನಾಗಿ ತಿಳಿದಿರುವನು, ಕುದಖೀ-ಕುರೂಪ ನಖ ಉಳ್ಳವನು (ಅಂದರೆ ಗಂಟು ಗಿಡ್ಡಾದ ಉಗುರು-ಗಳುಳ್ಳವನು), ವ್ರಣಾಂಕಿತ ಶಿರಾಃ-ಶಿರಸ್ಸಿನಲ್ಲಿ ವ್ರಣಾದಿ ಛಾಯದ ಗುರ್ತುಳ್ಳವನು, ಮಾನೀ-ಬಹುಮಾನ ಉಳ್ಳವನು, ಸಹೋತ್ಥಾ-ಗ್ರಜಃ-ಸಹೋದರರಲ್ಲಿ ಹಿರಿಯನು, ಪಾಣಿತಲೆ ಶಕ್ತ್ಯಾಂಕಿತಃ, ಪಾಣಿತಲೆ-ಅಂಗೈಯಲ್ಲಿ, ಶಕ್ತ್ಯಾ-ಶಕ್ತಿರೇಖೆಯಿಂದ, ಅಂಕಿತಃ-ಚಿಹ್ನೆ (ಸಾಮುದ್ರಿಕಾ ಗುರ್ತಿನ ವಿಶೇಷ ಉಳ್ಳವನು,) ಅತಿಚಪಲಃ-ಹೆಚ್ಚಾದ ಚಪಲಚಿತ್ತನು, ತೋಯೇ-ನೀರಿನತ್ತ, ಭೀರುಃ-ಭಯ ಪಡುವವನು, ನೀರು-ಹಳ್ಳ-ಹೊಳೆ ಮೊದಲಾದವುಗಳಲ್ಲಿ ಧಾರಾಳವಾಗಿ ಪ್ರವೇಶಿಸುವುದಕ್ಕೆ ಅಂಜುವನು, ಪಾ॥ ಅತಿಭೀರುಃ-ಹೆಚ್ಚಾದ ಭಯ ಉಳ್ಳವನೆಂದು ಹೇಳಿರುವುದು ಮೇಷರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ವರ್ತುಳಾಕಾರವಾದ ಕೆಂಪುಕಣ್ಣುಳ್ಳವನಾಗಿಯೂ, ಉಷ್ಣಪದಾರ್ಥಗಳನ್ನು ಭಕ್ಷಿಸುವ ನಾಗಿಯೂ, ಶಾಕಾದಿಗಳನ್ನು ಅಧಿಕವಾಗಿ ತಿನ್ನತಕ್ಕವನಾಗಿಯೂ, ಅಲ್ಪಾಹಾರಿ ಯಾಗಿಯೂ, ಜಾಗ್ರತೆಯಾಗಿ ತನ್ನ ಕೋಪಶಮನ ಮಾಡಿಕೊಳ್ಳತಕ್ಕವನಾಗಿಯೂ, ಅತಿ ಸಂಚಾರಶೀಲನಾಗಿಯೂ, ಸ್ತ್ರೀಲೋಲನಾಗಿಯೂ, ಬಲಹೀನವಾದ ಮೊಣಕಾಲುಳ್ಳವ-ನಾಗಿಯೂ, ದೀರ್ಘಕಾಲ ಧನವಿಲ್ಲದವನಾಗಿಯೂ, ಯುದ್ಧಪ್ರಿಯನಾಗಿಯೂ, ಸ್ತ್ರೀಯರಿಗೆ ಪ್ರೀತಿಯುಳ್ಳವನಾಗಿಯೂ, ಸೇವೆಯ ಸ್ವಭಾವ ತಿಳಿದವನಾಗಿಯೂ, ಮೊಟಕಾದ ನಖವುಳ್ಳವನಾಗಿಯೂ ಶಿರಸ್ಸಿನಲ್ಲಿ ವ್ರಣಾಂಕಿತನಾಗಿಯೂ, ಅಹಂಕಾರವುಳ್ಳವನಾಗಿಯೂ, ಸಹೋದರರಲ್ಲಿ ಹಿರಿಯವನಾಗಿಯೂ, ಅಂಗೈಯಲ್ಲಿ ಸಾಮುದ್ರಿಕಾ ರೇಖೆಯಲ್ಲಿ ಸೇರಿದ ಶಕ್ತಿ ರೇಖಾ ಉಳ್ಳವನಾಗಿಯೂ, ಚಪಲಚಿತ್ತನಾಗಿಯೂ, ನೀರಿನಲ್ಲಿ ಭಯಪಡುವವನಾಗಿಯೂ ಅಥವಾ ಕಾತುರನಾಗಿಯೂ, ಏತಾದೃಶ ಲಕ್ಷಣ ಉಳ್ಳವನಾಗುವನೆಂದು ತಿಳಿಯತಕ್ಕದ್ದು ॥ ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಸ್ಥಿರಧನೋ ರಹಿತಃ ಸುಜನೈರ್ನರಃ ಸುತಯುತಃ ಪ್ರಮದಾ ವಿಜಿತೋ ಭವೇತ್ ॥ ಅಜಗತೋ ದ್ವಿಜರಾಜ ಇತೀರಿತಂ ವಿಭುತಯಾದ್ಭುತಯಾ ಸ್ವಸುಕೀರ್ತಿ ಭಾಕ್ ॥ ಇತಿ ಮೇಷರಾಶಿಸ್ಥಿತ ಚಂದ್ರ ಫಲಂ

## ಅಥ ವೃಷಭ ರಾಶಿಸ್ಥ ಚಂದ್ರ ಫಲಂ

ಮೂಲ॥ ಕಾಂತಃ ಖೇಲಗತಿಃ ಪೃಥೂರು ವದನಃ ಪೃಷ್ಠಾಸ್ಯ ಪಾರ್ಶ್ವೇಂಕಿತಃ।
ತ್ಯಾಗೀಕ್ಲೇಶ ಸಹಃ ಪ್ರಭುಃ ಕಕುದರ್ವಾಕನ್ಯಾಪ್ರಕಜಃ ಶ್ಲೇಷ್ಮಲಃ ।

ಪೂರ್ವೈರ್ಬಂಧು ಧನಾತ್ಮಜೈರ್ವಿರಹಿತಃ ಸೌಭಾಗ್ಯಯುಕ್ತಃಕ್ಷಮೀ ।
ದೀಪ್ತಾಗ್ನಿಃಪ್ರಮದಾಪ್ರಿಯಃಸ್ಥಿರಸುಹೃನ್ಮಧ್ಯಾಂತಸೌಖ್ಯೋಗವಿ ।

ಟೀಕು॥ ವೃಷಭರಾಶಿಯಲ್ಲಿ ಚಂದ್ರನಿದ್ದ ಕಾಲದಲ್ಲಿ ಹುಟ್ಟಿದವನ ಸ್ವರೂಪ ಫಲ ವಿಚಾರ ॥ ಗವಿ-ವೃಷಭ ರಾಶಿಯಲ್ಲಿ ಚಂದ್ರನಿರುವಾಗ ಜನನವಾದವನು, ಕಾಂತಃ-ಸುಂದರಪುರುಷನು, ಖೈಲಗತಿಃ-ವಿಲಾಸ ಉಳ್ಳವನು, ಅಂದರೆ ಸರಸದಲ್ಲಿ ಪ್ರೀತಿಯುಳ್ಳವನು, ಪೃಷ್ಠಾಸ್ಯಪಾರ್ಶ್ವೇಂಕಿತಃ ಪೃಷ್ಠಾಸ್ಯಪಾರ್ಶ್ವೇ-ಪೃಷ್ಠ-ಪಿರ್ರೆಗಳು ಮತ್ತು ಆಸ್ಯ-ಮುಖದ, ಪಾರ್ಶ್ವೇ-ಪಕ್ಕಗಳಲ್ಲಿ ಅಂಕಿತಃ-ಚಿಹ್ನೆಗಳುಳ್ಳವನು, ತ್ಯಾಗೀ-ದಾನಶೀಲನು, ಅಂದರೆ ದಾತೃತ್ವ, ಕ್ಲೇಶಸಹಃ-ದುಃಖವನ್ನು ಸಹಿಸತಕ್ಕವನು, ಪ್ರಭುಃ-ಅಪ್ರತಿಹತವಾದ ಆಜ್ಞೆ ಮಾಡುವನು, ಕಕುದರ್ವಾ-(ದಪ್ಪವಾದ) ಬಲಿಷ್ಠವಾದ ಹೆಗಲುಳ್ಳವನು, ಕನ್ಯಾಪ್ರಜಃ-ಸ್ತ್ರೀ ಪ್ರಜಾಸಂತತಿ ಹೆಚ್ಚಾಗುಳ್ಳವನು, ಶ್ಲೇಷ್ಮಲಃ-ಕಫಾಧಿಕ್ಯ ವುಳ್ಳವನು, ಪೂರ್ವೈಃ-ಆದಿಯಲ್ಲಿ, ಬಂಧು ಧನಾತ್ಮಜೈಃ-ಬಂಧು ಧನಪುತ್ರರುಗಳಿಂದ, ರಹಿತಃ-ಇಲ್ಲದಿರುವನು, ಸೌಭಾಗ್ಯಯುಕ್ತಃ-ಸೌಭಾಗ್ಯ ಸಂಪತ್ತುಳ್ಳವನು (ಸೌಭಾಗ್ಯವೆಂದರೇ-ಧನ, ಸ್ತ್ರೀ, ಪುತ್ರ, ಮಿತ್ರ) ಕ್ಷಮೀ-ಕ್ಷಮಾ ಗುಣ ಉಳ್ಳವನು (ಶಾಂತಗುಣವೆಂದು, ಕೆಲವರು), ದೀಪ್ತಾಗ್ನಿಃ-ಅಧಿಕವಾದ ಹಸಿವು ಉಳ್ಳವನು, ಪ್ರಮದಾಪ್ರಿಯಃ-(ಪ್ರಮದಾಮಾನಿನೀ) ಪ್ರಮದಾ ಎಂದರೆ ಮದಿಸಿದಂತೆ ಇರುವ ಸುಂದರ ಸ್ತ್ರೀ, ಅಂಥಾ ಪ್ರಮದಾ ಜನವಲ್ಲಭನು, ಸ್ಥಿರ ಸುಹೃತ್-ಸ್ಥಿರವಾದ ಮಿತ್ರರುಳ್ಳವನು, ಮಧ್ಯಾಂತ ಸೌಖ್ಯಃ-ಮಧ್ಯ ಮತ್ತು ಅಂತ್ಯ ಸೌಖ್ಯ ಉಳ್ಳವನು, (ಅಂದರೆ ಯೌವನ ವಾರ್ಧಿಕ್ಯಾವಸ್ಥೆಯಲ್ಲಿ ಸೌಖ್ಯ ಉಳ್ಳವನು) ಈ ಪ್ರಕಾರ ಅರ್ಥ ಮಾಡುವಲ್ಲಿ ಬಾಲ್ಯ ವಯಸ್ಸಿನಲ್ಲಿ ದುಃಖೀ ಎಂದು ಸ್ಪಷ್ಟವಾಗುತ್ತದೆ. ಮತ್ತು ಆದಿಯಲ್ಲಿ ಬಂಧುಜನಾತ್ಮಜರಿಂದ ರಹಿತನೆಂದು ಹೇಳಿರುವುದು ಮಧ್ಯಾಂತಸೌಖ್ಯಃ-ಎಂಬುವುದರಿಂದ ಮೇಲೆ ಹೇಳಿದ ಬಾಲ್ಯ ವಯಸ್ಸಿನಲ್ಲಿ ಸುಖವಿಲ್ಲವೆಂದು ಸ್ಥಾಪಿಸುತ್ತದೆ. ಆದಕ್ಕೆ ಆದಿಯಲ್ಲಿ ಬಂಧುಜನಾತ್ಮಜರಲ್ಲಿ ಅವಿಹಿತನಾಗಿರುವನೆಂದು ಅರ್ಥಮಾಡಿಕೊಳ್ಳತಕ್ಕದ್ದು. ಈ ವಿಷಯದಲ್ಲಿ ॥ಶ್ಲೋ॥ ಧುಂಡಿರಾಜಃ॥ ಸ್ಥಿರಗತಿಂ, ಸುಮತಿಂ, ಕಮನೀಯತಾಂ ಕುಶಲತಾಂ ಹಿನ್ನೃಣಾ ಮುಪಭೋಗತಾಂ ॥ ವೃಷಗತೋಹಿಮ ಗುರ್ಭ್ರಶಮಾದಿಶೇತ್ಸುಕೃತಿನಃ ಕೃತಿತಶ್ಚ ಸುಖಾನಿಚ ॥ಇ॥ತಾ॥ ವೃಷಭರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಸೌಂದರ್ಯವುಳ್ಳವನಾಗಿಯೂ, ವಿಲಾಸ ಉಳ್ಳವನಾಗಿಯೂ, ವಿಸ್ತರಿಸಿದ ಬಾಯಿಯು ತೊಡೆಗಳು ಉಳ್ಳವ ನಾಗಿಯೂ, ಪೃಷ್ಠ ಮುಖ ಪಕ್ಕಗಳಲ್ಲೆಲ್ಲಿಯಾದರೂ ಮಚ್ಚೆಯುಳ್ಳವನಾಗಿಯೂ, ದಾತೃತ್ವ ಗುಣವುಳ್ಳವನಾಗಿಯೂ, ದುಃಖವನ್ನು ಸಹಿಸತಕ್ಕವನಾಗಿಯೂ, ಬದಲಾವಣೆಯಾಗದ

ಆಜ್ಞೆ ಮಾಡತಕ್ಕ ಪ್ರಭುವಾಗಿಯೂ, ಬಲವಾದ ಹೆಗಲುಳ್ಳವನಾಗಿಯೂ, ಸ್ತ್ರೀ ಸಂತಾನವುಳ್ಳವನಾಗಿಯೂ, ವಾತ ಪಿತ್ಥ ಕಫವೆಂಬ ತ್ರಿಧಾತುಗಳಲ್ಲಿ (ಶ್ಲೇಷ್ಮವೇ ಕಫವೆಂದುಕ್ತವಾಗಿರುತ್ತೆ) ಅದರಲ್ಲಿ ಕಫ ಹೆಚ್ಚಾಗಿರುವವನಾಗಿಯೂ, ಆದಿಯಲ್ಲಿ ಪ್ರಾಪ್ತಿಯಾದ ಬಂಧುಜನಾತ್ಮಜರುಗಳಿಂದ ವಿರಹಿತನಾಗಿಯೂ, ಸೌಭಾಗ್ಯ ಮೊದಲಾದವುಗಳಿಂದ ಕೂಡಿದವನಾಗಿಯೂ, ಶಾಂತಗುಣ ಉಳ್ಳವನಾಗಿಯೂ ಹೆಚ್ಚಾದ ಕ್ಷುದ್ಬಾಧೆಯುಳ್ಳವನಾಗಿಯೂ, ಪ್ರಮದಾಜನಪ್ರಿಯನಾಗಿಯೂ, ದೃಢವಾದ ಸ್ನೇಹವುಳ್ಳವನಾಗಿಯೂ, ತನ್ನ ಪರಮಾಯುರ್ದಾಯ ವರ್ಷಗಳಲ್ಲಿ ೩ ಭಾಗಮಾಡಿ ಅದರಲ್ಲಿ ೧ನೇ ಭಾಗ ಕಳೆದ ಮೇಲೆ ೨-೩ನೇ ಭಾಗಗಳಲ್ಲಿ ಸೌಖ್ಯವುಳ್ಳವನಾಗಿಯೂ, ಆಗುವನು. ಏತಾದೃಶ ಲಕ್ಷಣಗಳು ಚಂದ್ರನು ಪೂರ್ಣವಾಗಿ ತನ್ನುಚ್ಚಭಾಗವಾದ ೩೦ರಲ್ಲಿದ್ದರೆ ಈ ಮೇಲೆ ಹೇಳಿದ ಫಲಗಳು ಸಂಪೂರ್ಣವಾಗಿಯೂ, ಉಚ್ಚದಿಂದ ಬಿಟ್ಟು ಉಳಿದ ೨೭ ಭಾಗಗಳಲ್ಲಿದ್ದರೆ ಈ ಫಲ ಲಕ್ಷಣಗಳು ಮಧ್ಯಮವಾಗಿಯೂ, ಚಂದ್ರನ ವೃದ್ಧಿ ಕ್ಷಯದ ತಾರತಮ್ಯಗಳ ಮೇಲೆ ನಿರ್ಣಯಿಸತಕ್ಕದ್ದು ॥೨॥

## ಮಿಥುನ ರಾಶಿಸ್ಥ ಚಂದ್ರಫಲಂ

ಮೂಲ॥ ಸ್ತ್ರೀಲೋಲ ಸ್ಸುರತೋಪಚಾರ ಕುಶಲ ಸ್ತಾಮ್ರೇಕ್ಷಣಶ್ಶಾಸ್ತ್ರವಿತ್ ।
ದೂತಃ ಕುಂಚಿತ ಮೂರ್ಧಜಃ ಪಟುಮತಿರ್ಹಾಸ್ಯೇಂಗಿತ ದ್ಯೂತವಿತ್ ॥ ಚಾರ್ವಂಗಃಪ್ರಿಯವಾಕ್ಯಭಕ್ಷಣ ರುಚಿರ್ಗೀತ ಪ್ರಿಯೋನೃತ್ಯವಿತ್ । ಕ್ಲೀಬೈರ್ಯಾತಿ ರತಿಂ ಸಮುನ್ನತನಸಶ್ಚಂದ್ರೇ ತೃತೀಯರ್ಕ್ಷಗೇ ॥೩॥

ಅವತಾರಿಕೆ॥ ಮಿಥುನರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಚಂದ್ರತೃತೀಯರ್ಕ್ಷಗೆ-ಮಿಥುನರಾಶಿಯುಲ್ಲಿ ಚಂದ್ರನಿರುವಾಗ ಹುಟ್ಟಿದವನು, ಸ್ತ್ರೀಲೋಲಃ-ಸ್ತ್ರೀಯರಲ್ಲಿ ವಿಶೇಷವಾದ ಆಸಕ್ತಿಯುಳ್ಳವನು, ಸುರತೋಪಚಾರ ಕುಶಲಃ-ವಾತ್ಸ್ಯಾಯನ ಋಷಿಪ್ರಣೀತ ಕಾಮಸೂತ್ರ, ಕಾಳಿದಾಸಕೃತಿ ರತಿಶಾಸ್ತ್ರಾದಿಕಲಾ ಕೌಶಲ್ಯವುಳ್ಳವನು, ತಾಮ್ರೇಕ್ಷಣಃ-ಕೆಂಪಾದ ನೇತ್ರಗಳುಳ್ಳವನು, ಕೆಲವರು ತಾಮ್ರೇಕ್ಷಣವೆಂದರೆ :-ಕಮಲದಳದ ವರ್ಣದಂತೆ ಕಮಲಾಯತಾಕ್ಷನೆಂದು ಹೇಳುವರು. ಶಾಸ್ತ್ರವಿತ್-ವಿದ್ವಾಂಸನು, ದೂತಃ-ಇತರರಿಗೆ ರಾಯಭಾರವನ್ನು ಮಾಡುವವನು, ಕುಂಚಿತ ಮೂರ್ಧಜಃ-ಗುಂಗುರು ಕೂದಲುಳ್ಳವನು. *(ಕೆಲವರು

* ಗುಂಗುರು ಕೂದಲುಳ್ಳವನು, ಮೆಟ್ಲು ಮೆಟ್ಲಾಗಿ ಕೂದಲುಳ್ಳವನು.

ಕುಂಚಿತ ಮೂರ್ಧಜವೆಂದರೆ ನೀಳವಾಗಿರದೆ ಡೊಂಕು ಡೊಂಕಾಗಿರುವ ತಲೆಗೂದಲು ಉಳ್ಳವನೆಂದು ಹೇಳುವರು) ಪಟುಮತಿಃ- ಚತುರ ಬುದ್ಧಿಯುಳ್ಳವನು, ಹಾಸ್ಯೇಂಗಿತ ದ್ಯೂತವಿತ್-ಹಾಸ್ಯ-ಅಪಹಾಸ್ಯ (ಅಣಕಿಸುವಿಕೆ). ಇಂಗಿತ-ಪರರ ಹೃದ್ಗತವಾದ ಭಾವವನ್ನು ತಿಳಿದವನು, ದ್ಯೂತ-ಜೂಜು ಪಂದ್ಯ, ಮೊದಲಾದವುಗಳ ಸಾರಾಂಶವನ್ನು, ವಿತ್-ಈ ಮೇಲೆ ಹೇಳಿದ ಹಾಸ್ಯ, ದ್ಯೂತಗಳ ಇಂಗಿತ ತಿಳಿದವನು (ಹಾಸ್ಯಾಂಚಿತಃ-ನಗೆ ಮೊಗದವನು, ದ್ಯೂತವಿತ್ -ಜೂಜಿನ ಸ್ವಭಾವ ತಿಳಿದವನು) ಈ ಪ್ರಕಾರ ಆಂಧ್ರ ದೇಶದ ಪುಸ್ತಕದಲ್ಲಿ ಪ್ರಯೋಗವಾಗಿರುತ್ತೆ. ಚಾರ್ವಂಗಃ-ಸುಂದರವಾದ ಶರೀರವುಳ್ಳವನು, ಪ್ರಿಯವಾಕ್-ಪ್ರಿಯಭಾಷಣನು. ಪ್ರಭಕ್ಷಣರುಚಿಃ-ಅತಿ ಭಕ್ಷಕನು, ಗೀತ ಪ್ರಿಯಃ-ಸಂಗೀತದಲ್ಲಿ ಪ್ರೀತಿಯುಳ್ಳವನು, ನೃತ್ಯವಿತ್-(ನಾಟ್ಯಶಾಸ್ತ್ರ) ಭರತಶಾಸ್ತ್ರಜ್ಞನು, ಸಮುನ್ನತನಸಃ-ಉನ್ನತವಾದ ಮೂಗುಳ್ಳವನು, ಅಂದರೆ ಗಿಣಿಯ ಕೊಕ್ಕಿನಂತೆ ಮೂಗುಳ್ಳವನು, ಕ್ಲೀಬೈಃ-ಷಂಡರ ಸಂಗಡ, ರತಿಂ-ವಿಕ್ರೀಡಿಸುವನು, ಅಂದರೆ-ಷಂಡಸ್ತ್ರೀಯರಲ್ಲಿ ಭೋಗವುಳ್ಳವನು, ಯಾತಿ-ಈ ಮೇಲೆ ಹೇಳಲ್ಪಟ್ಟ ಗುಣಗಳನ್ನು ಹೊಂದುವನು॥ ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಪ್ರಿಯಕರಃ ಕರಮತ್ಸಯುತೋನರಃ ಸುರತಸೌಖ್ಯಭರೋಯುವತಿಪ್ರಿಯಃ॥ ಮಿಥುನರಾಶಿ ಗತೋಹಿ ಮಗುರ್ಭವೇತ್ಸುಜನತಾ ಜನತಾಕೃತಗೌರವಃ ॥೪॥ ತಾ॥ ಮಿಥುನರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಸ್ತ್ರೀಲೋಲನೂ, ಕಾಮಶಾಸ್ತ್ರ ತಿಳಿದವನಾಗಿ ಕಲಾಕುಶಲನೂ, ಕಮಲಾಯತಾಕ್ಷನೂ, ಶಾಸ್ತ್ರವನ್ನು ತಿಳಿದ ಪಂಡಿತನೂ, ರಾಯಭಾರ ಮಾಡುವವನೂ, ಗುಂಗುರು ಕೂದಲುಳ್ಳವನೂ, ಚತುರ ಪ್ರಜ್ಞೆಯೂ ಬುದ್ಧಿಯೂ ಉಳ್ಳವನೂ, ಹಾಸ್ಯಪರಿಹಾಸಕಾದಿ ಪರರ ಇಂಗಿತಜ್ಞನೂ, ಅಥವಾ ನಗೆಮೊಗವುಳ್ಳವನೂ, ಸುಂದರವಾದ ಶರೀರಾವಯವ ಉಳ್ಳವನೂ, ಮೃದುವಾಗಿ ಮಾತನಾಡುವವನೂ, ಅತಿಯಾಗಿ ತಿಂಡಿ ತಿನ್ನುವ ತಿಂಡಿಪೋತನೂ, ಸಂಗೀತ ಪ್ರೀತಿಯುಳ್ಳವನೂ, ಭರತಶಾಸ್ತ್ರ ತಿಳಿದವನೂ ಉನ್ನತವಾದ ನಾಸಿಕ ಉಳ್ಳವನೂ, ಷಂಡಸ್ತ್ರೀಯರಲ್ಲಿ ರತಿ ಸುಖವನ್ನನುಭವಿಸುವವನೂ ಆಗುತ್ತಾನೆ ॥೩॥

## ಕರ್ಕಾಟಕ ರಾಶಿಸ್ಥ ಚಂದ್ರಫಲಂ

**ಮೂಲ॥** ಆವಕ್ರದ್ರುತಗಃಸಮುನ್ನತಕಟಃ ಸ್ತ್ರೀನಿರ್ಜಿತಃ ಸತ್ಸುಹೃದ್ದೈವಜಃ ।
ಪ್ರಚುರಾಲಯಃ ಕ್ಷಯಧನೈಃಸಂಯುಜ್ಯತೇ ॥ ಚಂದ್ರವತ್
ಹ್ರಸ್ವಃಪೀನಗಳಃ ಸಮೇತಿಚವಶಂ ಸಾಮ್ನಾಸುಹೃದ್ವತ್ಸಲ ।
ಸ್ತೋಯೋದ್ಯಾನರತಃ ಸ್ವವೇಶ್ಮಸಹಿತೇ ಜಾತಃ ಶಶಾಂಕೇನರಃ ॥೪॥

ಅವತಾರಿಕೆ॥ ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದ ಕಾಲದಲ್ಲಿ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ ॥ ಶಶಾಂಕೆ-ಚಂದ್ರನು, ಸ್ವವೇಶ್ಮ ಸಹಿತೇ-ಸ್ವಕ್ಷೇತ್ರವಾದ ಕರ್ಕಾಟಕ ರಾಶಿಯಲ್ಲಿರುವಾಗ, ಜಾತಃ-ಹುಟ್ಟಿದವನು, ಅವಕ್ರದ್ರುತಗಃ-ಕುಟಿಲದಿಂದ ಕೂಡಿದ ಜಾಗ್ರತೆಯಾದ ಗಮನವುಳ್ಳವನು, ಸಮುನ್ನತಕಟಿಃ-ಎತ್ತರವಾದ ಜಘನ ಪ್ರದೇಶ ಉಳ್ಳವನು, ಸ್ತ್ರೀನಿರ್ಜಿತಃ-ಕಾಮಿನಿಯರಿಂದ ಜೈಸಲ್ಪಟ್ಟವನು, ಸತ್ಸುಹೃತ್-ಉತ್ತಮವಾದ ಸ್ನೇಹಿತರುಳ್ಳವನು, ದೈವಜ್ಞಃ-ಜೋತಿಶ್ಶಾಸ್ತ್ರವೇತ್ತನು, ಪ್ರಚುರಾಲಯಃ-ಅನೇಕವಾದ ಗೃಹಗಳುಳ್ಳವನು, ಚಂದ್ರವತ್-ಚಂದ್ರನಂತೆ ಕ್ಷಯಧನೈಃ-ಧನಕ್ಷಯ ಧನವೃದ್ಧಿಯಾಗುವ ಸ್ವಭಾವದಿಂದ, ಸಂಯುಜ್ಯತೇ-ಸಂಯುಕ್ತನಾಗುವನು.

ಅದು ಹೇಗೆಂದರೆ :- ಶುಕ್ಲಪಕ್ಷದಲ್ಲಿ ಚಂದ್ರನು ಕಳಾವೃದ್ಧಿಯಾಗುವಂತೆ ಆ ರಾಶಿ ಜಾತಕನಿಗೆ ಧನಾಭಿಲಾಷೆಯುಂಟಾಗಿ ಕೃಷ್ಣಪಕ್ಷದಲ್ಲಿ ಚಂದ್ರಕಳೆಯು ಕ್ಷೀಣವಾಗುವಂತೆ, ಧನಹೀನವಾಗುವದು, ಇದು ಚಂದ್ರಾಧಿಪತ್ಯ ರಾಶಿಯಾದ್ದರಿಂದ, ಚಂದ್ರನ ವೃದ್ಧಿ ಕ್ಷಯದಂತೆ ಧನ ವೃದ್ಧಿಕ್ಷಯವನ್ನು ಹೊಂದುವದು, ಹ್ರಸ್ವಃ-ಗಿಡ್ಡವಾಗಿರುವನು, ಪೀನಗಳಃ-ಬಲಿತ ಕಂಠವುಳ್ಳವನು, ಸಾಮ್ನಾ ಒಳ್ಳೇ ನಡತೆಯಿಂದ, ವಶಂ-ವಶವನ್ನು, ಸಮೇತಿ-ಹೊಂದುವನು, ಸುಹೃದ್ವತ್ಸಲಃ-ಸ್ನೇಹಾನುರಕ್ತನು, ತೋಯೋದ್ಯಾನರತಃ-ತೋಯ-ಜಲದಲ್ಲೂ. ಉದ್ಯಾನ-ಉಪವನದಲ್ಲು, ಶತಃ ಆಸಕ್ತಿಯುಳ್ಳವನು ॥ ಈ ವಿಷಯಕ್ಕೆ ॥ಶ್ಲೋಕ॥ ಜಾ-ಭ ಶ್ರುತಕಲಾಬಲನಿರ್ಮಲವೃತ್ತಯಃ-ಕುಸುಮ ಗಂಧ ಜಲಾಶಯ ಕೇಳಯಃ ॥ ಕಿಲನರಾಸ್ತು ಕುಲೀರಗತೇ ವಿಧೌವಸುಮತೀ ಸುಮತೀಪ್ಸಿತಲಬ್ಧಯಃ ॥೫॥ತಾ॥ ಕಟಕಸ್ಥ ಚಂದ್ರಫಲಂ ॥ ಕರ್ಕಾಟಕ ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಕುಟಿಲವಾದ ಶೀಘ್ರಗಮನ ಉಳ್ಳವನು, ಉನ್ನತವಾದ ಜಘನ ಉಳ್ಳವನು, ಸ್ತ್ರೀಯರಿಂದ ಗೆಲ್ಲಲ್ಪಟ್ಟವನು, ಸತ್ಪುರುಷರ ಸ್ನೇಹ ಉಳ್ಳವನೂ, ಜ್ಯೋತಿಶಾಸ್ತ್ರವನ್ನು ಬಲ್ಲವನೂ, ಅನೇಕ ಮನೆಗಳುಳ್ಳವನೂ, ಚಂದ್ರನಂತೆ ದ್ರವ್ಯಕ್ಷಯ ವೃದ್ಧಿಯುಳ್ಳವನೂ, ಕುರುಚಾಗಿರುವವನೂ, ಬಲಿತಕಂಠ ಉಳ್ಳವನೂ, ಸಾಮೋಪಾಯದಿಂದ ವಶವರ್ತಿಯಾಗುವವನೂ, ನೀರಿನಲ್ಲಿಯೂ ಉದ್ಯಾನವನಗಳಲ್ಲಿಯೂ ಅಪೇಕ್ಷೆಯುಳ್ಳವನೂ ಆಗುತ್ತಾನೆ. ॥೪॥

## ಸಿಂಹರಾಶಿ ಸ್ಥಿತ ಚಂದ್ರಫಲಂ

ಮೂಲ॥ ತೀಕ್ಷ್ಣಸ್ಥೂಲ ಹನುರ್ವಿಶಾಲವದನಃ ಪಿಂಗೇಕ್ಷಣೋಲ್ಪಾತ್ಮಜಃ ।
ಸ್ತ್ರೀದ್ವೇಷೀಪ್ರಿಯ ಮಾಂಸಕಾನನನಗಃ ಕುಪ್ಯತ್ಯಕಾರ್ಯೇಚಿರಂ ॥

ಕ್ಷುತ್ತೃಷ್ಣೋದರದಂತ ಮಾನಸರುಜಾಸಂಪೀಡಿತಸ್ತ್ಯಾಗವಾ ।
ವಿಕ್ರಾಂತಸ್ಥಿರಧೀಸ್ಸುಗರ್ವಿತಮನಾಮಾತುರ್ವಿಧೇಯೋರ್ಕಭೇ ॥

ಅವತಾರಿಕೆ॥ ಸಿಂಹರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದವನ ಸ್ವಭಾವ ಹೇಳಲ್ಪಡುತ್ತೆ.॥ ಅರ್ಕಭೇ-ಸಿಂಹರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದವನು. ತೀಕ್ಷ್ಣ-ಕ್ರೋಧಶೀಲನು, (ಅಂದರೆ ಉಗ್ರಸ್ವಭಾವ ಉಳ್ಳವನು) ಸ್ಥೂಲಹನುಃ-ಉಬ್ಬಿದ ಹನುಪ್ರದೇಶ ಉಳ್ಳವನು (ಗಂಡಕಪೋಲೌ ತತ್ಪರಾಹನು-ರಿತ್ಯಮರಃ) ವಿಶಾಲ ವದನಃ-ವಿಶಾಲವಾದ ಮುಖ ಉಳ್ಳವನು, ಪಿಂಗೇಕ್ಷಣಃ-ಪಿಂಗಳವರ್ಣವಾದ ಕಣ್ಣುಗಳುಳ್ಳವನು, ಅಲ್ಪಾತ್ಮಜಃ-ಅಲ್ಪಸಂಖ್ಯಾತವಾದ ಸಂತಾನ ಉಳ್ಳವನು, ಸ್ತ್ರೀದ್ವೇಷೀ-ಸ್ತ್ರೀಯರಿಗೆ ಶತ್ರುವಾದವನು, ಪ್ರಿಯಮಾಂಸಕಾನನನಗಃ-ಮಾಂಸ, ಅರಣ್ಯ ಪರ್ವತಗಳಲ್ಲಿ ಪ್ರೀತಿವುಳ್ಳವನು, ಅಕಾರ್ಯೇ-ಮಾಡಬಾರದ ಕೆಲಸವನ್ನು ಮಾಡಲು, ಚಿರಂ-ಬಹುಕಾಲ ಸಾಹಸಪಡುವನು, ಕುಪ್ಯತಿ-ಅಕಾರ್ಯ ಮಾಡಲೆತ್ನಿಸಿ ಅದರ ಮೇಲೆ ಕೋಪಗೊಳ್ಳುವನು. ಪಾಠಾಂತರದಲ್ಲಿ ಅಕಾಂಡೇ-ಅಕಾಲದಲ್ಲಿ ಕೋಪಿಸಿಕೊಳ್ಳುವನು, ಕ್ಷುತ್-ಹಸಿವು, ತೃಷ್ಣಾ-ದಾಹ, ಉದರ-ಹೊಟ್ಟೆ, ದಂತ-ಹಲ್ಲು, ಮಾನಸ-ಮನಸ್ಸು, (ಈ ಕ್ಷುಧಾದಿಗಳಿಂದ ಹುಟ್ಟಿದ) ರುಜಾ-ಭಾದೆಯಿಂದ, ಸಂಪೀಡತಃ-ಪೀಡಿಸಲ್ಪಟ್ಟವನಾಗುವನು, ತ್ಯಾಗವಾ-ದಾತನು, ವಿಕ್ರಾಂತಃ-ಪರಾಕ್ರಮ ಉಳ್ಳವನು. ಸ್ಥಿರಧೀಃ-ನಿಶ್ಚಲ ಬುದ್ಧಿಯುಳ್ಳವನು, ಸುಗರ್ವಿತಮನಾಃ-ಅಹಂಕಾರ ಚಿತ್ತನು, ಮಾತುಃ-ತಾಯಿಗೆ ವಿಧೇಯಃ-ಹೇಳಿದಂತೆ ಕೇಳಿಕೊಂಡು ವಿಧೇಯತೆಯಿಂದಿರುವನು ಸಿಂಹ ರಾಶಿಯಲ್ಲಿ ಹುಟ್ಟಿದವನು ಈ ಮೇಲೆ ಹೇಳಿದ ಗುಣವುಳ್ಳವನು. ಈ ವಿಷಯದಲ್ಲಿ ॥ಶ್ಲೋಕ॥ ಧುಂಡಿರಾಜಃ ॥ ಅಚಲಕಾನನ ಯಾನಮನೋರಥಂ ಗೃಹಕಲಂಚ ಗಲೋದರಪೀಡನಂ ॥ ದ್ವಿಜಪತಿರ್ಮೃಗರಾಜ ಗತೋನ್ನೃಣಾಂ ವಿತನುತೇ ತನುಜಾವಿಹೀನತಾಮ್ ॥೬॥ತಾ॥ ಸಿಂಹರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಕೋಪವುಳ್ಳವನೂ, ಸ್ಥೂಲವಾದ ಹನುಪ್ರದೇಶ ಉಳ್ಳವನೂ, ವಿಶಾಲವಾದ ಮುಖವುಳ್ಳವನೂ, ಪಿಂಗಾಕ್ಷನೂ, ಅಲ್ಪಸಂತಾನ ಉಳ್ಳವನೂ, ಸ್ತ್ರೀಯರಿಗೆ ಶತ್ರುವಾದವನೂ, ಮಾಂಸ, ವನ, ಪರ್ವತ ಇವುಗಳಲ್ಲಿ ಪ್ರೀತಿಯುಳ್ಳವನೂ, ಮಾಡಕೂಡದ ಕೆಲಸಮಾಡಿದವರಲ್ಲಿ ಬಹುವಾಗಿ ಕೋಪಿಸುವವನೂ, ಬಾಯಾರಿಕೆ, ಹೊಟ್ಟೆ, ಹಲ್ಲು ಇವುಗಳಿಂದ ಹುಟ್ಟಿದ ರೋಗಗಳಲ್ಲಿ ಶ್ರಮಪಡುವವನು. ದಾತೃತ್ವ ಉಳ್ಳವನೂ, ಪರಾಕ್ರಮವಂತನೂ, ಸ್ಥಿರವಾದ ಬುದ್ಧಿಯುಳ್ಳವನೂ, ಅಹಂಕಾರಚಿತ್ತನೂ, ಮಾತೃವಾಕ್ಯಾನುಸಾರ ನಡೆಯುವವನೂ ಆಗುತ್ತಾನೆ ॥೫॥

## ಕನ್ಯಾರಾಶಿಸ್ಥಿತ ಚಂದ್ರಫಲಂ

ಮೂಲ॥ ವ್ರೀಡಾಮನ್ಥರಚಾರು ವೀಕ್ಷಣಗತಿಃ ಸ್ರಸ್ತಾಂಸಬಾಹುಃಸುಖೀ । ಶ್ಲಕ್ಷ್ಣಃ ಸತ್ಯರತಃ ಕಲಾಸುನಿಪುಣಃ ಶಾಸ್ತ್ರಾರ್ಥವಿದ್ಧಾರ್ಮಿಕಃ ॥ ಮೇಧಾವೀ ಸುರತಪ್ರಿಯಃ ಪರಗೃಹೈರ್ವಿತ್ತೈಶ್ಚಸಂಯುಜ್ಯತೇ । ಕನ್ಯಾಯಾಂ ಪರದೇಶಗಃ ಪ್ರಿಯವಚಾಃ ಕನ್ಯಾಪ್ರಜೋಽಲ್ಪಾತ್ಮಜಃ ॥೬॥

ಅವತಾರಿಕೆ॥ ಕನ್ಯಾರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ಕನ್ಯಾಯಾಂ-ಕನ್ಯಾರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದವನು, ವ್ರೀಡಾಮನ್ಥರ ಚಾರುವೀಕ್ಷಣಗತಿಃ-ವ್ರೀಡಾ-ಲಜ್ಜೆಯಿಂದ ಮನ್ಥರ-ಆಲಸ್ಯದಿಂದ, ಚಾರು-ಮನೋಹರವಾದ, ವೀಕ್ಷಣ-ನೋಟದ, ಗತಿಃ-ಗಮನ ಉಳ್ಳವನು. ಸ್ರಸ್ತಾಂಸಬಾಹುಃ-ಸ್ರಸ್ತಶಿಥಿಲವಾದ ಅಂ-ಭುಜ, ಬಾಹುಃ-ತೋಳುಗಳುಳ್ಳವನು ಸುಖೀ-ಸುಖಪುರುಷನು, ಶ್ಲಕ್ಷ್ಣಃ-ಮೃದುವಾದ ದೇಹಉಳ್ಳವನು, ಸತ್ಯರತಃ-ಸತ್ಯವಂತನು. ಕಲಾಸು-ನೃತ್ಯಗೀತ ವಾದ್ಯ ಪುಸ್ತಕ ಲೇಖನಾದಿ ಕ್ರಿಯೆಗಳಲ್ಲಿ, ನಿಪುಣಃ-ಸೂಕ್ಷ್ಮಬುದ್ಧಿಯುಳ್ಳವನು, ಶಾಸ್ತ್ರಾರ್ಥ ವಿತ್-ಶಾಸ್ತ್ರಾರ್ಥ ತಿಳಿದವನು, (ಪಂಡಿತನು) ಧಾರ್ಮಿಕಃ-ಧರ್ಮಾಸಕ್ತನು, ಮೇಧಾವೀ-ಧಾರಣಾಶಕ್ತಿಯಿರುವ ಬುದ್ಧಿಯುಳ್ಳವನು, ಸುರತಪ್ರಿಯಃ-ಕಾಮಕ್ರೀಡಾದಿ ಆಸಕ್ತಿಯುಳ್ಳವನು, ಪರಗೃಹೈಃ- ಅನ್ಯರ ಮನೆಯಲ್ಲಿಯೂ, ವಿತ್ತೈಃ-ಪರರ ವಿತ್ತದಲ್ಲು, ಸಂಯುಜ್ಯತೇ-ಸಂಯುಕ್ತ ನಾದವನು, ಪರದೇಶಗಃ-ಪರದೇಶ ಸಂಚರಿಸುವನು, ಪ್ರಿಯವಚಾಃ-ಪ್ರಿಯವಾಗಿ ಮಾತನಾಡುವನು, ಕನ್ಯಾಪ್ರಜಃ-ಹೆಣ್ಣುಮಕ್ಕಳುಳ್ಳವನು. ಅಲ್ಪಾತ್ಮಜಃ- ಅಲ್ಪಪುತ್ರರುಳ್ಳವನು. ಈ ವಿಷಯದಲ್ಲಿ ಧುಂಡಿರಾಜಃ॥ ಯುವತಿಗೇಶಶಿನಿ ಪ್ರಮದಾಜನ ಪ್ರಬಲಕೇಳೀವಿಲಾಸ ಕುತೂಹಲೈಃ॥ ವಿಮಲಶೀಲ ಸುತಾಜನನೋತ್ಸವೈಃ ಸುವಿಧಿನಾವಿಧಿನಾ ಸಹಿತಃ ಪುಮಾನ್ ॥೭॥

ತಾ॥ ಕನ್ಯಾರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಲಜ್ಜೆಯಿಂದುಂಟಾದ ಆಲಸ್ಯದಿಂದ ಸುಂದರವಾದ ಗಮನ ಉಳ್ಳವನು. ಉದ್ದವಾದ ಭುಜವೂ ತೋಳೂ ಉಳ್ಳವನು, ಸುಖವಂತನೂ, ಮೃದುವಾದ ಶರೀರ ಉಳ್ಳವನೂ, ಸತ್ಯವಂತನೂ, ಗೀತವಾದ್ಯ ಪುಸ್ತಕ ಲೇಖನಾದಿ ಕುಶಲತ್ವ ಉಳ್ಳವನೂ, ಶಾಸ್ತ್ರಾರ್ಥ ತಿಳಿದ ಪಂಡಿತನೂ, ಧರ್ಮಾಸಕ್ತಿಯುಳ್ಳವನೂ, ಧಾರಣಯುಕ್ತವಾದ ಶಕ್ತಿಯೂ ಬುದ್ಧಿಯು ಉಳ್ಳವನೂ, ಕಾಮಕ್ರೀಡಾಲೋಲನೂ, ಪರಗೃಹಗಳಲ್ಲಿಯೂ ಪರಧನಗಳಿಂದ ಕೂಡಿದವನೂ, ಪರದೇಶ ಸಂಚಾರಿಯೂ, ಪ್ರಿಯವಾದ ಮಾತುಳ್ಳವನೂ, ಕನ್ಯಾಪ್ರಜೆಯುಳ್ಳವನೂ, ಅಲ್ಪಪುತ್ರರುಳ್ಳವನೂ ಆಗುತ್ತಾನೆ ॥೬॥

## ತುಲಾರಾಶಿಸ್ಥ ಚಂದ್ರಫಲಂ

ಮೂಲ॥ ದೇವಬ್ರಾಹ್ಮಣ ಸಾಧುಪೂಜನರತಃಪ್ರಾಜ್ಞಃ ಶುಚಿಃ ಸ್ತ್ರೀಜಿತಃ ॥
ಪ್ರಾಂಶುಶ್ಚೋನ್ನತನಾಸಿಕಃ ಕೃಶಚಲದ್ಗಾತ್ರೋಽಟನೋಽರ್ಥಾನ್ವಿತಃ ॥
ಹೀನಾಂಗಃ ಕ್ರಯವಿಕ್ರಯೇಷು ಕುಶಲೋ ದೇವದ್ವಿನಾಮಾ ಸರುಕ್।
ಬಂಧೂನಾಮುಪಕಾರ ಕೃದ್ವಿರುಷಿತಸ್ತ್ಯಕ್ತಸ್ತು ತೈಃ ಸಪ್ತಮೇ ॥೭॥

ಅವತಾರಿಕೆ॥ ತುಲಾರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ. ಟೀ॥ ಸಪ್ತಮೇ-ತುಲಾರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದವನು, ದೇವಬ್ರಾಹ್ಮಣ ಸಾಧುಪೂಜನರತಃ-ದೇವ-ದೇವತೆಗಳ, ಬ್ರಾಹ್ಮಣ-ಬ್ರಾಹ್ಮಣರ, ಸಾಧು-ಸತ್ಪುರುಷರ, ಪೂಜನ-ಪೂಜಿಸುವುದರಲ್ಲಿ, ರತಃ-ಆಸಕ್ತನಾದವನು, ಪ್ರಾಜ್ಞಃ-ತಿಳುವಳಿಕೆಯುಳ್ಳವನು. (ಪ್ರಾಜ್ಞವೆಂಬರ್ಥಕ್ಕೆ ॥ಶ್ಲೋಕ॥ ಶುಭಾಶುಭ ವಿಚಾರಜ್ಞಾ ಪ್ರಜ್ಞಾಧೀರೈರುದಾಹೃತಾಃ॥ ಎಂದು ಪ್ರಜ್ಞಲಕ್ಷಣ॥) ಶುಚಿಃ-ಪರಸ್ತ್ರೀ ಅಭಿಲಾಷೆ ಇಲ್ಲದೆ ಪರಿಶುದ್ಧನಾಗಿರುವವನು. ಸ್ತ್ರೀಜಿತಃ-ಸ್ತ್ರೀವಶವರ್ತಿಯಾದವನು. ಪ್ರಾಂಶುಃ-ಉಚ್ಚಶರೀರವುಳ್ಳವನು. ಉನ್ನತ ನಾಸಿಕಃ-ಉಬ್ಬಿದ ಮೂಗುಳ್ಳವನು. (ಉನ್ನತವಾದ ಮೂಗುಳ್ಳವನು) ಕೃಶಚಲದ್ಗಾತ್ರಃ- ಕೃಶವಾಗಿ ತಿರುಗುವ ದೇಹವುಳ್ಳವನು, ಅಟನಃ-ತಿರುಗುವುದರಲ್ಲಿ ಘಟ್ಟಿಗನು, ಅರ್ಥಾನ್ವಿತಃ-ಧನದಿಂದ ಕೂಡಿದವನು. ಹೀನಾಂಗಃ-ಅಪರಿಪೂರ್ಣ ಶರೀರವುಳ್ಳವನು. (ಪಾಠಾಂತರದಲ್ಲಿ, ಪರಿ *ಪೂರ್ಣಾಂಗಃ-ಪರಿಪೂರ್ಣವಾದ ಅವಯವಗಳುಳ್ಳವನೆಂದು ಕೆಲವರು ಪಠಿಸುತ್ತಾರೆ.) ಕ್ರಯ ವಿಕ್ರಯೇಷು-ಕ್ರಯ ವಿಕ್ರಯ ಮಾಡುವುದರಲ್ಲಿ, ಕುಶಲಃ-ಕುಶಲಬುದ್ಧಿಯುಳ್ಳ ಸಮರ್ಥನು, ದೇವಾದ್ವಿನಾಮಾ-ಮೊದಲು ಜನ್ಮನಾಮ ನಂತರ ದೇವರ ಹೆಸರುಳ್ಳವನು, ಅಂದರೆ ಎರಡು ಹೆಸರುಳ್ಳವನು. ಸರುಕ್-ರೋಗದಿಂದ ಕೂಡಿದವನು, ಬಂಧೂನಾಂ-ಸ್ವಜನರಿಗೆ ಉಪಕಾರಕೃತ್- ಉಪಕಾರ ಮಾಡುವವನು, ತೈಃ-ಆ ಬಂಧುಗಳಿಂದ, ವಿರುಷಿತಃ-ತಿರಸ್ಕರಿಸಲ್ಪಡುವವನು, ತ್ಯಕ್ತಃ-ಅಂಥಾ ಬಂಧುಗಳಿಂದ ಬಿಡಲ್ಪಡುವನು. ಈ ವಿಷಯದಲ್ಲಿ ॥ಶ್ಲೋಕ॥ ಧುಂಡಿರಾಜಃ॥ ವೃಷತುರಂಗಮ ವಿಕ್ರಮ ವಿಕ್ರಮ ದ್ವಿಜಸುರಾರ್ಚನದಾನಮನಾಃ ಪುಮಾನ್॥ ಶಶಿನಿತೌಲಿಗತೇ ಬಹುದಾರಭಾಗ್ವಿಭವ ಸಂಭವ ಸಂಚಿತವಿಕ್ರಮಃ ॥೮॥ ತಾ॥ ತುಲೆಯಲ್ಲಿ ಚಂದ್ರನಿರುವಾಗ ಹುಟ್ಟಿದವನು, ದೇವಬ್ರಾಹ್ಮಣ ಸಾಧು ಜನರುಗಳ ಪೂಜೆಮಾಡುವವನೂ, ವಿವೇಕಜ್ಞಾನ ಉಳ್ಳವನೂ, ಪರದಾರಾದ್ಯಭಿಲಾಷೆ ಇಲ್ಲದೆ ಶುಚಿಯಾಗಿರುವವನೂ, ಸ್ತ್ರೀವಶವರ್ತಿಯೂ, ಉನ್ನತವಾದ ಶರೀರ ಉಳ್ಳವನೂ,

* ಪರಿಪೂರ್ಣಾಂಗಃ ॥ಪಾ॥

ಉಬ್ಬಾದ ಮೂಗು ಉಳ್ಳವನೂ, ಕೃಶವಾಗಿ ಸಂಚರಿಸುವ ದೇಹ ಉಳ್ಳವನೂ, ಸಂಚಾರಶೀಲನೂ, ಧನವಂತನೂ, ಹೀನಾಂಗನೂ, ಕ್ರಯ ವಿಕ್ರಯಗಳಲ್ಲಿ ಕುಶಲಬುದ್ಧಿಯುಳ್ಳವನೂ, ತನ್ನ ಹೆಸರಲ್ಲದೆ ದೇವರ ಹೆಸರಾದ ಬೇರೆ ಹೆಸರಿಟ್ಟುಕೊಳ್ಳುವವನೂ, ಬಂಧುಗಳಿಗೆ ಉಪಕಾರ ಮಾಡುವವನೂ, ಅವರಿಂದ ದೂಷಿಸಲ್ಪಟ್ಟವನೂ ಆಗುತ್ತಾನೆ ॥೭॥

## ವೃಶ್ಚಿಕ ರಾಶಿಸ್ಥಿತ ಚಂದ್ರಫಲಂ

ಮೂಲ॥ ಪೃಥುಲನಯನವಕ್ಷಾವೃತ್ತ ಜಂಘೋರುಜಾನು । ರ್ಜನಕಗುರು ವಿಯುಕ್ತಃ ಶೈಶವೇವ್ಯಾಧಿತಶ್ಚ ॥ ನರಪತಿ ಕುಲಪೂಜ್ಯಃಪಿಂಗಲಃ ಕ್ರೂರಚೇಷ್ಟೋ ಝುಷಕುಲಿಶಖಗಾಂಕ ಶ್ಛನ್ನಪಾಪೋಳಿಜಾತಃ ॥

ಅವತಾರಿಕೆ॥ ವೃಶ್ಚಿಕದಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ಅಳಿಜಾತಃ-ವೃಶ್ಚಿಕರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು, ಪೃಥುಲ ನಯನವಕ್ಷಾಃ-ವಿಶಾಲವಾದ ನೇತ್ರಗಳು ಮತ್ತು ವಕ್ಷಸ್ಥಲ ಉಳ್ಳವನು. ವೃತ್ತ ಜಂಘೋರುಜಾನುಃ-ವರ್ತುಳವಾದ ಪಿರ್ರೆಗಳು ಮೊಣಕಾಲುಗಳು ಮತ್ತು ತೊಡೆಗಳುಳ್ಳವನು, ಜನಕ ಗುರು ವಿಯುಕ್ತಃ-ಜನಕ-ತಂದೆ ತಾಯಿಗಳಿಂದಲೂ, ಗುರು-ಆಚಾರ್ಯರಿಂದಲೂ, ವಿಯುಕ್ತಃ-ಬಿಡಲ್ಪಟ್ಟವನು, ಶೈಶವೇ-ಬಾಲ್ಯದಲ್ಲಿ ವ್ಯಾಧಿತಶ್ಚ-ರೋಗ ಪೀಡಿತನಾದವನು, ನರಪತಿ ಕುಲಪೂಜ್ಯ-ರಾಜಪೂಜಿತನು, ಅಂದರೆ ರಾಜರಿಂದಲೂ ಅವರ ವಂಶದವರಿಂದಲೂ ಸನ್ಮಾನ ಹೊಂದುವವನು, ಪಿಂಗಳಃ-ಪಿಂಗಳವಾದ ಕಣ್ಣುಳ್ಳವನು, ಕ್ರೂರಚೇಷ್ಟಃ-ಕ್ರೂರವಾದ ಸ್ವಭಾವ ಉಳ್ಳವನು. ಝುಷಕುಲಿಶಖಗಾಂಕಃ-ಮತ್ಸ್ಯ, ವಜ್ರ, ಗರುಡರೇಖೆಗಳು ಹಸ್ತದಲ್ಲಿರುವವನು, ಛನ್ನಪಾಪಃ-ಗುಪ್ತವಾಗಿ ಪಾಪಮಾಡುವವನು. *ಪಾ॥ ಝುಷಕುಲಿಶ ಖಗಾಂ ಕಶ್ಛನ್ನಪಾದಃ-ಝುಷ, ವಜ್ರ, ಗರುಡರೇಖೆಗಳುಳ್ಳ ಪಾದ ಉಳ್ಳವನೆಂದು ಕೆಲವರು ಅರ್ಥ ಮಾಡಿರುವರು. ಈ ವಿಷಯದಲ್ಲಿ ॥ಶ್ಲೋಕ॥ ಶಶಧರೇಹಿಸರೀ ನೃಪಗೇನರೋ ನೃಪದುರೋ ದರಜಾತ ಧನಕ್ಷಯಃ । ಕಲಿರುಚಿರ್ವಿಬಲಃ ಖಿಲಮಾನಸಃ ಕೃಶಮನಾ ಶಮನಾ ಪರಹೋತಭವೇತ್ ॥೯॥ ಇವರು ವರಾಹಮಿಹಿರಾಚಾರ್ಯರ ಮತಕ್ಕೆ ವಿರೋಧವಾಗಿ ಹೇಳಿರುವರು. ಇದು ಚಂದ್ರನೀಚನಾಗಿದ್ದ ಭಾಗದ ಫಲವೆಂದರಿಯಬೇಕು. ತಾ॥ ವೃಶ್ಚಿಕ ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ವಿಶಾಲವಾದ ನೇತ್ರಗಳುಳ್ಳವನೂ, ದೊಡ್ಡದಾದ ವಕ್ಷಸ್ಥಳ ಉಳ್ಳವನೂ, ದುಂಡಾದ

* ಝುಷಕುಲಿ ಶಖಗಾಂಕ ಶ್ಛನ್ನಪಾದಃ॥ ಎಂದು ಆಂಧ್ರದೇಶದ ಪುಸ್ತಕದಲ್ಲಿರುತ್ತೆ.

ಅಂಡೂ, ತೊಡೆಯೂ, ಮೊಣಕಾಲುಗಳೂ ಉಳ್ಳವನೂ, ತಾಯಿ ತಂದೆ ಗುರುಹಿರಿಯರಿಂದ ಬಿಡಲ್ಪಟ್ಟವನೂ, ಬಾಲ್ಯಾವಸ್ಥೆಯಲ್ಲಿ ವ್ಯಾಧಿಗ್ರಸ್ತನೂ, ರಾಜಪೂಜ್ಯನೂ, ಪಿಂಗಳವಾದ ನೇತ್ರಗಳುಳ್ಳವನೂ, ಕ್ರೂರವಾದ ಸ್ವಭಾವ ಉಳ್ಳವನೂ, ಮತ್ಸ್ಯ, ವಜ್ರ, ಗರುಡ ಮೊದಲಾದ ರೇಖೆಗಳುಳ್ಳವನೂ, ಗುಪ್ತವಾದ ಪಾಪಿಯೂ ಆಗುತ್ತಾನೆ ॥೮॥

## ಧನೂ ರಾಶಿಸ್ಥಿತ ಚಂದ್ರಫಲಂ

ಮೂಲ॥ ವ್ಯಾದೀರ್ಘಾಸ್ಯಶಿರೋಧರಃ ಪಿತೃಧನಸ್ತ್ಯಾಗೀಕವಿರ್ವೀರ್ಯವಾನ್ । ವಕ್ತಾ
ಸ್ಥೂಲ ರದಶ್ರವೋ ಧರನಸಃ ಕರ್ಮೋದ್ಯತಃ ಶಿಲ್ಪವಿತ್ ॥
ಕುಬ್ಜಾಂಸಃ ಕುನಖೀಸಮಾಂಸಲಭುಜಃ ಪ್ರಾಗಲ್ಭ್ಯವಾನ್ಧರ್ಮವಿತ್ ।
ಬಂಧುದ್ವಿಟ್ ನಬಲಾತ್ಸಮೇತಿಚವಶಂ ಸಾಮ್ನೈಕ ಸಾಧ್ಯೋಶ್ವಜಃ ॥೯॥

ಅವತಾರಿಕೆ॥ ಧನೂರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ಅಶ್ವಜಃ-ಧನು ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು. ವ್ಯಾದೀರ್ಘಾಸ್ಯ ಶಿರೋಧರಃ-ವ್ಯಾದೀರ್ಘ-ಅತಿ ದೀರ್ಘವಾದ, ಅಸ್ಯ-ಮುಖಉಳ್ಳವನು, ಶಿರೋಧರಃ-ಕಂಠವುಳ್ಳವನು, ಪಾಠಾಂತರದಲ್ಲಿ ವ್ಯಾದೀರ್ಘಾಸ್ಯ ಶಿರೋರದಃ-ಅತಿ ದೀರ್ಘವಾದ, ಅಸ್ಯ-ಮುಖವು. ಶಿರಃ-ಶಿರಸ್ಸು, ರದಃ-ದಂತಗಳುಳ್ಳವನು, ಪಿತೃಧನಃ-ತಂದೆ ಸಂಪಾದಿಸಿದ ದ್ರವ್ಯ ಉಳ್ಳವನು, ತ್ಯಾಗೀ-ದಾತನು, ಕವಿಃ-ಕಾವ್ಯಕರ್ತನೂ, ವೀರ್ಯವಾನ್-ಬಲವಂತನು, ವಕ್ತಾ-ಮಾತನಾಡುವದರಲ್ಲಿ ಚಟುವಟಿಕೆಯುಳ್ಳವನೂ, ಸ್ಥೂಲರದ ಶ್ರವೋಧರ ನಸಃ-ಸ್ಥೂಲ-ದಪ್ಪವಾದ, ರದ-ದಂತಗಳು, (ರದನಾದಶನಾ ದಂತಾಃ । ಇತ್ಯಮರಃ) ಶ್ರವಃ-ಕಿವಿಗಳು, ಅಧರ-ತುಟಿಗಳು, ನಸಃ-ಮೂಗು ಇವುಗಳುಳ್ಳವನು, ಕರ್ಮೋದ್ಯತಃ-ಬಹುಕಾರ್ಯ ಮಾಡಲು ಯತ್ನಿಸುವವನೂ, ಶಿಲ್ಪವಿತ್-ಲಿಪಿ ಪುಸ್ತಕ ಪತ್ರ ಲೇಖನಾದಿಗಳನ್ನೂ, ಚಿತ್ರಕರ್ಮಗಳನ್ನು ತಿಳಿದವನು, ಕುಬ್ಜಾಂಸಃ-ಗಿಡ್ಡವಾದ ಭುಜಗಳುಳ್ಳವನೂ, ಕುನಖೀ-ಗಿಡ್ಡುಗುರುಳ್ಳವನು, ಸಮಾಂಸಲಭುಜಃ ದೃಢವಾದ ಭುಜಗಳುಳ್ಳವನು. ಪ್ರಾಗಲ್ಭ್ಯವಾನ್-ಹೆಚ್ಚಾದ ಪ್ರೌಢತ್ವದಿಂದ, ಧರ್ಮವಿತ್-ಧರ್ಮಾಧರ್ಮವನ್ನು ತಿಳಿದವನು, ಬಂಧುದ್ವಿಟ್-ಬಂಧುದ್ವೇಷವುಳ್ಳವನು, ಬಲಾತ್-ಬಲಾತ್ಕಾರದಿಂದ, ವಶಂ-ಆದೀನವನ್ನ, ನಸಮೇತಿ-ಹೊಂದುವುದಿಲ್ಲ. ಸಾಮ್ನೈಕಸಾಧ್ಯಃ-ಸಾಮೋಪಾಯದಿಂದ ಮಾತ್ರವೇ ವಶನಾಗುವವನು. ಈ ಮೇಲೆ ಹೇಳಿರುವ ಗುಣವಿಶಿಷ್ಟವುಳ್ಳವನಾಗಿರುವನು. ಇದೇ ವಿಷಯದಲ್ಲಿ॥ ಧುಂಡಿರಾಜಃ

॥ಶ್ಲೋಕ॥ ಬಹುಕಲಾಕುಶಲಃ ಪ್ರಬಲೋಮಹಾರ್ಽವಿಬಲತಾ ಕಲಿತಃ ಸರಲೋಕ್ತಿಭಾಕ್॥ ಶಶಧರೇತು ಧನುರ್ಧರಗೆ ನರೋ ಧನ ಕರೋನಕರೋತಿ ಬಹುವ್ಯಯಮ್ ॥೯॥ತಾ॥ ಧನುರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಅತಿ ದೀರ್ಘವಾದ ಮುಖವೂ ಕಂಠವೂ ಉಳ್ಳವನು, ಪಿತೃಧನ ಉಳ್ಳವನೂ, ಜಾದಾರ್ಯ ಗುಣವುಳ್ಳವನೂ, ಕವಿತ್ವಮಾಡುವ ಶಕ್ತಿಯುಳ್ಳವನೂ, ಬಲವಂತನೂ, ಚತುರವಾಗಿ ಮಾತನಾಡುವವನೂ, ದೊಡ್ಡದಾದ ಹಲ್ಲೂ, ತುಟಿಯೂ, ಮೂಗು ಉಳ್ಳವನೂ, ಕಾರ್ಯೋದ್ಯೋಗ ಲೀಲಾಶೀಲನೂ, ಲಿಪಿಚಿತ್ರಾದಿಗಳ ಬರೆಯುವ ಶಕ್ತಿಯುಳ್ಳವನೂ, ಗಿಡ್ಡಾದ ಉಗುರುಗಳುಳ್ಳವನೂ, ಪ್ರೌಢತ್ವವುಳ್ಳವನೂ, ಧರ್ಮವನ್ನು ತಿಳಿದವನೂ, ಬಂಧುದ್ವೇಷಿಯೂ, ಬಲಾತ್ಕಾರದಿಂದ ಸ್ವಾಧೀನ ಹೊಂದದವನೂ, ಸಾಮೋಪಾಯದಿಂದ ಸಾಧ್ಯನೂ ಆಗುತ್ತಾನೆ ॥೯॥

## ಮಕರ ರಾಶಿಸ್ಥಿತ ಚಂದ್ರಫಲಂ

ಮೂಲ॥ ನಿತ್ಯಂ ಲಾಲಯತಿಸ್ವದಾರತನಯರ್ಾ ಧರ್ಮಧ್ವಜೋಧಃಕೃತಃ ।
ಸ್ವಕ್ಷಃಕ್ಷಾಮಕಟಿರ್ಗೃಹೀತವಚನಃ ಸೌಭಾಗ್ಯಯುಕ್ತೋಽಲಸಃ ॥
ಶೀತಾಲುರ್ಮನುಜೋಟನಶ್ಚಮಕರೆ ಸತ್ವಾಧಿಕಃಕಾವ್ಯಕೃತ್ ॥
ಲುಬ್ಧೋಗಮ್ಯಜರಾಂಗನಾಸುನಿರತಃ ಸಂತ್ಯಕ್ತಲಜ್ಜೋಽಘೃಣಃ ॥೧೦॥

ಅವತಾರಿಕೆ॥ ಮಕರರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪವು ಹೇಳಲ್ಪಡುತ್ತೆ. ಟೀ॥ ಮಕರೇ-ಮಕರರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದ, ಮನುಜಃ-ನರನು, ಸ್ವದಾರತನಯರ್ಾ-ತನ್ನ ದಾರ ಪುತ್ರರನ್ನು, ನಿತ್ಯಂ-ಯಾವಾಗಲೂ, ಲಾಲ-ಯತಿ-ಲಾಲನೆ ಮಾಡುವನು,ಧರ್ಧ್ವಜಃ-ಧರ್ಮಮಾಡುತ್ತೇನೆಂದು ಧನ ಸಂಪಾದನೆ ಮಾಡುವನು. (ಧರ್ಮಸ್ಯಧ್ವಜಶ್ಚಿಹ್ನ ಮಸ್ಯೇತಿ ಧರ್ಮಧ್ವಜೀ॥ನಿ) ಅಧಃಕೃಶಃ- ತೊಡೆಗಳ ಕೆಳಭಾಗ ಕೃಶವಾಗಿರುವವನು, ಸ್ವಕ್ಷ-ಒಳ್ಳೇ ನೇತ್ರಗಳುಳ್ಳವನು, ಕ್ಷಾಮ ಕಟಿಃ-ಚಿಕ್ಕದಾದ ಸೊಂಟವುಳ್ಳವನು, ಗೃಹೀತವಚನಃ-ಹೇಳಿದ ಮಾತ್ರಕ್ಕೆ ತಿಳಿದುಕೊಳ್ಳುವವನು, ಸೌಭಾಗ್ಯಯುಕ್ತ-ಸೌಭಾಗ್ಯ ಸಂಪತ್ತುಳ್ಳವನು, ಅಲಸಃ-ಆಲಸ್ಯ ವಂತ, (ಸೋಮಾರಿ) ಶೀತಾಳುಃ-ಶೀತವನ್ನು ಸಹಿಸಲಾರದವನು, ಅಟನಃ-ತಿರುಗಾಡು ವದರಲ್ಲಿ ಆಸಕ್ತನು, ಸತ್ವಾಧಿಕಃ-ಬಲಾಧಿಕ ಉಳ್ಳವನು, (ಕೆಲವರು ಸತ್ವರಜಸ್ತಮೋ ಗುಣಗಳಲ್ಲಿ) ಸತ್ವಗುಣ ಪ್ರಧಾನವಾಗಿ ಉಳ್ಳವನು. (ಇಲ್ಲದಿದ್ದರೆ ಉದಾರಗುಣ ಉಳ್ಳವನು) ಕಾವ್ಯಕೃತ್-ಕವಿತ್ವ ಮಾಡುವ ಶಕ್ತಿಯುಳ್ಳವನು, ಲುಬ್ಧಃ-ಲೋಭಿಯು, ಆಗಮ್ಯಜರಾಂಗನಾಸು-ಅಗಮ್ಯ-ಹೀನಜಾತಿ ಸ್ತ್ರೀಯರಲ್ಲಿ, ಜರಾಂಗನಾಸು-ವೃದ್ಧ ಸ್ತ್ರೀಯರಲ್ಲಿಯೂ, ನಿರತಃ-ಆಸಕ್ತಿಯುಳ್ಳವನು, ಸಂತ್ಯಕ್ತಲಜ್ಜಃ-ನಾಚಿಕೆ ಬಿಟ್ಟವನು, ಅಘೃಣಃ-

ದಯವಿಲ್ಲದವನು॥ ಈ ವಿಷಯದಲ್ಲಿ ॥ಶ್ಲೋಕ॥ ಕಲಿತ ಶೀತಭಯಃ ಕಿಲಗೀತ ವಿತ್ತನುರುಷಾ ಸಹಿತೋಮದನಾತುರಃ॥ ನಿಜಕುಲೋತ್ತಮವೃತ್ತಿ ಕರಃ ಪರಂಹಿಮ ಕರೇ ಮಕರೇ ಪುರುಷೋಭವೇತ್ ॥೧೧॥ತಾ॥ ಮಕರರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು, ತನ್ನ ಹೆಂಡತಿ ಮಕ್ಕಳನ್ನು ಯಾವಾಗಲೂ ಲಾಲಿಸುತ್ತಿರುವವನೂ, ಧರ್ಮ ಮಾಡುತ್ತೇನೆಂದು ಸುಳ್ಳುಹೇಳಿ ದ್ರವ್ಯ ಸಂಪಾದಿಸುವವನೂ, ತೊಡೆಗಳ ಕೆಳಭಾಗಗಳು ಹ್ರಸ್ವವಾಗಿರುವವನೂ, ಸುಂದರವಾದ ಕಣ್ಣುಗಳುಳ್ಳವನೂ, ಕೃಶವಾದ ನಡು ಉಳ್ಳವನೂ, ಹೇಳಿದ ಮಾತ್ರದಿಂದಲೇ ಗ್ರಹಿಸುವವನೂ, ಸೌಭಾಗ್ಯ ಸಂಪತ್ತಿನಿಂದ ಕೂಡಿದವನೂ, ಆಲಸ್ಯವಂತನೂ, ಶೀತ ಶರೀರಉಳ್ಳವನೂ, ಸಂಚಾರ ಶೀಲನೂ, ಬಲವುಳ್ಳವನೂ, ಕವಿತ್ವ ಮಾಡುವವನೂ, ಅಗಮ್ಯಾಗಮನ ಉಳ್ಳವನೂ, ಹೀನಜಾತಿಯ ಸ್ತ್ರೀಯರಲ್ಲಿಯೂ, ನೀಚಸ್ತ್ರೀಯರಲ್ಲಿ ಆಸಕ್ತಿಯುಳ್ಳವನೂ, ನಾಚಿಕೆಯಿಲ್ಲದವನೂ, ನಿರ್ದಯನೂ ಆಗಿರುತ್ತಾನೆ ॥೧೦॥

## ಕುಂಭರಾಶಿಸ್ಥಿತ ಚಂದ್ರಫಲಂ

ಮೂಲ॥ ಕರಭಗಲಃ ಸಿರಾಳುಃ ಖರಲೋಮಶದೀರ್ಘ ತನುಃ ಪೃಥುಚರಣೋರು ಪೃಷ್ಠ ಜಘನಸ್ಯಾ ಕಟಿರ್ಬಧಿರಃ ॥ ಪರವನಿತಾರ್ಥ ಪಾಪನಿರತಃ ಕ್ಷಯವೃದ್ಧಿಯುತಃ । ಪ್ರಿಯಕುಸುಮಾನುಲೇಪನ ಸುಹೃತ್ ಘಟಜೋದ್ವಸಃ ॥೧೧॥

ಅವತಾರಿಕೆ॥ ಕುಂಭರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ಘಟಜಃ-ಕುಂಭರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು, ಕರಭಗಲಃ- ಒಂಟೆಯ ಕುತ್ತಿಗೆಯಂತೆ ಇರುವ ಕತ್ತುಳ್ಳವನು, ಸಿರಾಳುಖರಲೋಮಶದೀರ್ಘತನುಃ- ಸಿರಾಳು-ನರಗಳುಬ್ಬಿಕೊಂಡಿರವ, ಖರ-ಕಾಗೆಯ ಶರೀರದಂತೆಯೂ, ಲೋಮಶ ಹೆಚ್ಚಾದ ಕೂದಲುಳ್ಳವನಾಗಿ ದೀರ್ಘ-ಅತ್ಯುನ್ನತವಾದ, ತನುಃ-ಶರೀರ ಉಳ್ಳವನು, (ಕೆಲವರು ಸಿರಾಳು-ನರಗಳು ಕಾಣಿಸುವ ಶರೀರ ಉಳ್ಳವವನೆಂದರ್ಥ ಮಾಡಿರುತ್ತಾರೆ) ಖರಲೋಮಶ ದೀರ್ಘತನುಃ- ಕರ್ಕಶವಾದ ರೋಮಗಳು ವ್ಯಾಪಿಸಿರುವ ದೀರ್ಘ ಶರೀರವುಳ್ಳವನೆಂದು ಹೇಳುವರು, ಪೃಥುಚರಣೋರು ಪೃಷ್ಠಜಘನಾಸ್ಯಕಟಿಃ-ಪೃಥು-ದಪ್ಪವಾದ, ಚರಣ-ಪಾದಗಳುಳ್ಳವನು, ಊರ-ತೊಡೆಗಳು, ಪೃಷ್ಠ-ಅಂಡಗಳು, ಜಘನಃ-ನಿತಂಬಸ್ಥಾನವು, ಆಸ್ಯ-ಬಾಯಿ, ಕಟೀ-ಸೊಂಟ (ಟೊಂಕ) ಉಳ್ಳವನು, ಬಧಿರಃ-ಕಿವುಡನು, ಪರವನಿತಾರ್ಥ

ಪಾಪನಿರತಃ- ಪರಸ್ತ್ರೀ ಪರದ್ರವ್ಯಾದಿಗಳನ್ನನುಭವಿಸುವ, ಪಾಪ-ಪಾಪಕರ್ಮದಲ್ಲಿ, ನಿರತಃ-ಸತತವಾಗಿ ಆಸಕ್ತಿಯುಳ್ಳವನು, ಕ್ಷಯವೃದ್ಧಿಯುತಃ-ಕೆಲವುಕಾಲ ಧನಸಂಪತ್ಸೌಖ್ಯಾದಿಗಳಲ್ಲಿ ಹೀನನು, ಕೆಲವು ಕಾಲದಲ್ಲಿ ಸಂಪತ್ತುಳ್ಳವನು, ಪ್ರಿಯಕುಸುಮಾನುಲೇಪನ-ಸುಹೃತ್-ಪ್ರಿಯ-ತನಗಿಷ್ಟವಾದ, ಕುಸುಮ-ಪುಷ್ಪಗಳು, ಅನುಲೋಪನ ಗಂಧಮಾಲ್ಯಾದ್ಯನುಲೇಪನ ಉದ್ವರ್ತನಾದಿ ಚೂರ್ಣಗಳಿಂದಲೂ, ಸುಹೃತ್-ಸ್ನೇಹಿತರಲ್ಲಿ ಆಸಕ್ತಿಯುಳ್ಳವನು, ಅಧ್ವಸಃ-ಮಾರ್ಗದಲ್ಲಿ ಕ್ಲೇಶ ದುಃಖಾದಿಗಳ ಸಹಿಸತಕ್ಕವನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಅಲಸತಾ ಸಹಿತಸ್ಸುರತಪ್ರಿಯಃ ಕುಶಲತಾ ಲಲಿತೋತಿ ವಿಚಕ್ಷಣಃ ॥ ಕಲಶಗಾಮಿನಿ ಶೀತಕರೇ ನರಃಪ್ರಶಮಿತೋ ಶಮಿತೋರುರಿಪುವ್ರಜಃ ॥೧೨॥ತಾ॥ ಕುಂಭರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನು ಒಂಟೆಯ ಕುತ್ತಿಗೆಯಂತೆ ಡೊಂಕಾದ ಕುತ್ತಿಗೆಯುಳ್ಳವನು, ನರಗಳು ಉಬ್ಬಿಕೊಂಡು ಕಾಣುತ್ತಿರುವ ಶರೀರಉಳ್ಳವನು, ಬಹುರೋಮಗಳಿಂದ ಕೂಡಿ ಕಠಿಣವಾದ ಶರೀರ ಉಳ್ಳವನು; ದೊಡ್ಡದಾದ ಪಾದಗಳು, ಬೆನ್ನು, ಪಿರ್ರೆಗಳೂ, ಮುಖವೂ ಉಳ್ಳವನು, ಬಧಿರನೂ, ಪರದಾರ ಪರಧನಗಳಲ್ಲಿ ಆಸಕ್ತಿಯುಳ್ಳವನೂ, ಕೆಲವುಕಾಲ ವೃದ್ಧಿಯೂ, ಕೆಲವುಕಾಲ ಕ್ಷಯವೂ ಆಗಲುಳ್ಳವನು, ಹೂವು ಗಂಧ ವಸ್ತ್ರ ಮಾಲ್ಯಾದಿಗಳಲ್ಲಿ ಅಭಿರುಚಿಯುಳ್ಳವನೂ, ಸ್ನೇಹಿತರಲ್ಲಿ ಪ್ರೀತಿಯುಳ್ಳವನೂ, ದಾರಿ ನಡಿಯುವುದರಲ್ಲಿ ಪ್ರೀತಿಯುಳ್ಳವನೂ ಆಗುತ್ತಾನೆ. ॥೧೧॥

## ಮೀನರಾಶಿ ಸ್ಥಿತ ಚಂದ್ರಫಲಂ

ಮೂಲ॥ ಜಲಪರಧನಭೋಕ್ತಾ ದಾರವಾಸೋನುರಕ್ತಃ । ಸಮರುಚಿಶರೀರಃ ಸ್ತುಂಗನಾಸೋ ಬೃಹತ್ಕಃ॥ ಅಭಿಭವತಿ ಸಪತ್ನಾನ್ ಸ್ತ್ರೀಜಿತಶ್ಚಾರುದೃಷ್ಟಿ। ರ್ದ್ಯುತಿ ನಿಧಿ ಧನಭೋಗೀ ಪಂಡಿತಶ್ಚಾಂತ್ಯ ರಾಶೌ ॥೧೨॥

ಅವತಾರಿಕೆ॥ ಮೀನರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ಅಂತ್ಯರಾಶೌ-ಮೀನರಾಶಿಯಲ್ಲಿ, ಚಂದ್ರನಿರುವಾಗ ಜನ್ಸಿಸಿದವನು, ಜಲಪರಧನಭೋಕ್ತಾ-ಜಲ-ಉದಕದಲ್ಲಿ ಹುಟ್ಟಿದ ಶಂಖ, ಮುಕ್ತ-ಪ್ರವಾಳ, ಮತ್ಸ್ಯಾದಿಗಳ ಕ್ರಯ ವಿಕ್ರಯದಿಂದ ಧನ ಸಂಪಾದಿಸುವವನು. ಪರಧನ ಅನ್ಯರ ದ್ರವ್ಯಗಳನ್ನು ಭೋಕ್ತಾ-ಅನುಭವಿಸುವವನು, ದಾರವಾಸೋನುರಕ್ತಃ-ದಾರ-ಹೆಂಡತಿಯಲ್ಲಿಯೂ, ವಾಸಃ-ವಸ್ತ್ರಗಳಲ್ಲಿಯೂ, ಅನುರಕ್ತಃ-ಅನುರಾಗವುಳ್ಳವನು,

*ಸಮರುಚಿರ ಶರೀರಃ-ಸಮ-ಅನ್ಯೂನಾತಿರಿಕ್ತವಾದ, ರುಚಿರ-ಮನೋಹರವಾಗಿಯೂ, ಕಾಂತಿಯುಕ್ತವಾಗಿಯೂ ಇರುವ, ಶರೀರಃ-ದೇಹವುಳ್ಳವನು. (ನಿ॥ ಸುಂದರಂ ರುಚಿರಂ ಚಾರುಮನೋಜ್ಞಂ ಮಂಜು ಮಂಜುಳ ಮಿತ್ಯಮರಃ) ॥ ತುಂಗನಾಸಃ- ಉನ್ನತವಾದ ಮೂಗುಳ್ಳವನೂ, ಬೃಹತ್ಕ-ದೊಡ್ಡದಾದ ತಲೆಯುಳ್ಳವನು, ಸಪತ್ನಾನ್- ಶತ್ರುಗಳನ್ನು, ಅಭಿಭವತಿ-ಗೆಲ್ಲುವದರಿಂದ ತಿರಸ್ಕರಿಸುವವನು, ಸ್ತ್ರೀಜಿತಃ-ಸ್ತ್ರೀಯರಿಂದ ಗೆಲ್ಲಲ್ಪಟ್ಟವನು, ಚಾರುದೃಷ್ಟಿ-ಅಂದವಾದ ನೇತ್ರಗಳುಳ್ಳವನು, ದ್ಯುತಿನಿಧಿ ಧನಭೋಗೀ-ದ್ಯುತಿ-ಕಾಂತಿ, ನಿಧಿ-ನಿಕ್ಷೇಪ, ಧನ-ಧನವು, ಇವುಗಳ ಭೋಗೀ- ಅನುಭೋಗವುಳ್ಳವನು, ಪಂಡಿತಃ-ಶಾಸ್ತ್ರಜ್ಞನು, ಏತಾದೃಶ ಲಕ್ಷಣದಿಂದೊಡ ಗೂಡಿರುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಶಶಿನಿ ಮೀನಗತೇ ವಿಜಿತೇಂದ್ರಿಯೋ ಬಹುಗುಣಃ ಕುಶಲೋ ಜಲಲಾಲಸಃ ॥ ವಿಮಲಧೀಃ ಕಿಲಶಾಸ್ತ್ರ ಕಲಾದರಸ್ಸಬಲತಾ ಬಲತಾ ಕಲಿತೋರನಃ ॥೧೨॥ತಾ॥ ಮೀನರಾಶಿಯಲ್ಲಿ ಚಂದ್ರ ನಿರುವಾಗ ಹುಟ್ಟಿದವನು, ಸಮುದ್ರದಲ್ಲಿ ಹುಟ್ಟಿದ ಶಂಖಮುಕ್ತಾಪ್ರವಾಳ ಮೊದಲಾದ ವಸ್ತುಗಳ ಲಾಭವುಳ್ಳವನೂ, ಪರದ್ರವ್ಯವನ್ನು ಅನುಭವಿಸುವವನೂ, ಹೆಂಡತಿಯ ವಸ್ತ್ರ ಭೂಷಾದ್ಯಾಭರಣಗಳಲ್ಲಿ ಅತಿಶಯ ಪ್ರೀತಿಯುಳ್ಳವನು, ಕಾಂತಿಯುಕ್ತವಾದ ಶರೀರ ಉಳ್ಳವನೂ, ಮುಂದು ಕಾಣಬರುವ ಮೂಗುಳ್ಳವನೂ, ದೊಡ್ಡ ತಲೆಯುಳ್ಳವನು, ಶತ್ರುಗಳನ್ನು, ಗೆದ್ದು ತಿರಸ್ಕರಿಸುವವನೂ, ಸ್ತ್ರೀಯರಿಂದ ಕಾಮತಂತ್ರದಲ್ಲಿ ಸೋಲಲ್ಪಟ್ಟವನೂ, ಸುಂದರವಾದ ನೇತ್ರಗಳುಳ್ಳವನೂ, ಕಾಂತಿದ್ರವ್ಯದ ಮೂಲಸ್ಥಾನದ ಇವುಗಳ ಅನುಭವ ಉಳ್ಳ ಪಂಡಿತನು ಆಗುತ್ತಾನೆ ॥೧೨॥

## ಚಂದ್ರಾಧಿಷ್ಠಿತ ರಾಶಿ ಫಲ ನಿರ್ಣಯಃ

ಮೂಲ॥ ಬಲವತಿ ರಾಶೌತದಧಿಪತೌಚ । ಸ್ವಬಲಯುತಃ ಸ್ಯಾದ್ಯದಿತುಹಿನಾಂಶುಃ॥ ಕಥಿತಾ ಫಲಾನಾಮ ವಿಕಲದಾತಾ। ಶಶಿವದತೋನ್ಯೇ-ತ್ವನು ಪರಿಚಿಂತ್ಯಾಃ ॥೧೩॥

ಅವತಾರಿಕೆ॥ ಈ ಮೇಲೆ ಹೇಳಲ್ಪಟ್ಟ ಚಂದ್ರಾಧಿಷ್ಠಿತ ರಾಶಿ ಸ್ವಭಾವಗಳು-ಹೇಳಲಟ್ಟಿರುವುದು, ಮತ್ತು ಸೂರ್ಯಾಧಿಷ್ಠಿತ ರಾಶಿಫಲಗಳ ಪೂರ್ಣಾಪೂರ್ಣತ್ವವನ್ನು ಸ್ಪಷ್ಟಪಡಿಸುತ್ತೆ.

ಟೀಕು॥ ರಾಶೌ-ಜನ್ಮಕಾಲದಲ್ಲಿನ ಚಂದ್ರಸ್ಥಿತ ರಾಶಿಯೂ, ತದಧಿಪತೌ-ಆ ಚಂದ್ರನಿರುವ ರಾಶ್ಯಾಧಿಪತಿಯೂ, ಬಲವತಿಸತಿ-ಬಲವಂತವಾಗಿದ್ದರೆ, ತುಹಿನಾಂಶುಃ-

* ಪಾ॥ ದಾರವಾಸೋನುರಕ್ತ-ಪತ್ನಿಯು ಧಾರಣಮಾಡುವ ವಸ್ತ್ರಾದಿಗಳಲ್ಲಿ ವಿಶೇಷ ಅಭಿರುಚಿಯುಳ್ಳವನೆಂದು ಅರ್ಥಮಾಡಿರುತ್ತಾರೆ (ಅನುಭವಸಿದ್ಧ)

ಚಂದ್ರನು, ಸ್ವಬಲಯುತಸ್ಸ್ಯಾದ್ಯದಿ-ಪೂರ್ವೋಕ್ತವಾದ ಸ್ಥಾನಾದಿ ಬಲಗಳಿಂದ ಕೂಡಿದ್ದರೆ, ಕಥಿತಫಲಾನಾಂ-ಈ ಹೇಳಲ್ಪಟ್ಟ ಫಲಗಳು, ಅವಿಕಲದಾತಾ-ಸಂಪೂರ್ಣ ವಾಗಿ ಕೊಡುವನು, ಅಂದರೆ ಜನ್ಮಕಾಲದಲ್ಲಿ ಚಂದ್ರನಿರುವ ರಾಶಿಯು, ಚಂದ್ರಸ್ಥಿತ ರಾಶ್ಯಧಿಪತಿಯು, ಚಂದ್ರನೂ ಈ ಮೂರು ಬಲಯುಕ್ತವಾಗಿದ್ದರೆ, ಈ ಹೇಳಲ್ಪಟ್ಟ ರಾಶಿ ಸ್ವಭಾವಗಳು, ಸಂಪೂರ್ಣವಾಗಿರುವುದು. ಇವುಗಳಲ್ಲೆರಡು ಬಲಯುಕ್ತವಾಗಿದ್ದರೆ ಅಲ್ಪಸ್ವಲ್ಪ ಕಡಿಮೆಯಾಗಿರುವದು. ಒಂದು ಬಲಯುಕ್ತವಾಗಿ, ಎರಡು ಬಲಹೀನವಾಗಿದ್ದರೆ ರಾಶಿಸ್ವರೂಪ ಫಲಗಳು ಅಲ್ಪವಾಗಿರುವದು, ಅತಃ- ಈ ಚಂದ್ರರಾಶಿಗಿಂತ, ಅನ್ಯೇಪಿ-ಇತರಗಳಾದ ರವಿ, ಕುಜ, ಬುಧ, ಗುರು, ಶನಿ ಮೊದಲಾದ ಗ್ರಹಗಳು, ಶಶಿವತ್-ಚಂದ್ರನಂತೆ, ಅನುಪರಿಚಿಂತ್ಯಾಃ-ಅನುಸರಿಸಿ ಚಿಂತಿಸತಕ್ಕದ್ದು. ಅಂದರೆ ಬಲವತಿ ರಾಶೌತದಧಿಪತೌಚ-ಎಂಬುವ ಪ್ರಕಾರ ಕುಜ, ಗುರು, ಬುಧ, ಶುಕ್ರ, ಶನೈಶ್ಚರರು ಯಾವ ರಾಶಿಯಲ್ಲಿರೂವರೋ ಆ ರಾಶ್ಯಧಿಪತಿಯು, ಆ ರಾಶಿಯಲ್ಲಿ ತಾತ್ಕಾಲದಲ್ಲಿರುವ ಗ್ರಹಗಳು, ಈ ಮೂರು ಬಲಯುಕ್ತವಾಗಿದ್ದರೆ, ಹೇಳಲ್ಪಟ್ಟ ರವಿ ಕುಜಾಧಿಷ್ಠಿತ ರಾಶಿ ಸ್ವಭಾವಗಳು ಸಂಪೂರ್ಣವಾಗಿರುವುದು. ೧-೨ ಬಲಯುಕ್ತವಾಗಿದ್ದರೆ ಉಕ್ತಫಲ ಮಧ್ಯಮವಾಗಿಯೂ, ೧ ಬಲಯುಕ್ತವಾಗಿ ೨ ಬಲಹೀನವಾಗಿದ್ದರೆ ಉಕ್ತಫಲಗಳು ಅಲ್ಪವಾಗಿಯೂ, ೩ ಬಲಹೀನವಾಗಿದ್ದರೆ, ರಾಶಿ ಸ್ವಭಾವ ಫಲಗಳು ಯಾವುದೂ ಇಲ್ಲದೆಯೂ ಹೋಗುವುದು ಈ ಪ್ರಕಾರ ಚಂದ್ರನ ಕಲಾ ಪರಿಪೂರ್ಣತ್ವದಮೇಲೂ ತಿಳಿಯತಕ್ಕದ್ದು ॥೧೩॥

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಚಂದ್ರಾದಿಷ್ಠಿತ ರಾಶಿಫಲ
ವಿಚಾರನಾಮೋ ಸಪ್ತದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮ ತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ಚಂದ್ರಾದಿಷ್ಠಿತ ರಾಶಿಫಲ ವಿರೂಪಣಂನಾಮ
ಸಪ್ತದಶ ಪ್ರಕರಣ ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ

# ೧೮ನೇ ರಾಶಿ ಫಲ ಪ್ರಕರಣಂ

## ಮೇಷಾದಿರಾಶಿ ಸ್ಥಿತ ಸೂರ್ಯಫಲಂ

ಮೂಲ॥ ಪ್ರಥಿತಶ್ಚತುರೋಟನೋಲ್ಪವಿತ್ತಃ। ಕ್ರಿಯಗೆತ್ವಾಯುಧಭೃದ್ವಿತುಂಗಭಾಗೆ॥ ಗವಿವಸ್ತ್ರ ಸುಗಂಧಪಣ್ಯ ಜೀವೀ । ವನಿತಾದ್ವಿಟ್ ಕುಶಲಶ ಗೇಯವಾದ್ಯೆ ॥೧॥

ಅವತಾರಿಕೆ॥ ಈ ವೃಷಭಗಳಲ್ಲಿ ರವಿ ಇರುವಾಗ ಹುಟ್ಟಿದವನ ಸ್ವರೂಪ ವಿಚಾರ.

ಟೀಕು॥ ಮೇಷದಲ್ಲಿ ರವಿ ಇರುವಾಗ ಹುಟ್ಟಿದವನ ಫಲ ॥ ಕ್ರಿಯಗೆ-ಮೇಷ ದಲ್ಲಿ ರವಿ ಇರುವಾಗ ಹುಟ್ಟಿದವನು, ಪ್ರಥಿತಃ-ಪ್ರಖ್ಯಾತನು, ಚತುರಃ-ಸೂಕ್ಷ್ಮ ಬುದ್ಧಿಯುಳ್ಳವನು, ಅಟನಃ-ಸಂಚಾರಶೀಲನು, ಅಲ್ಪವಿತ್ತ-ಅಲ್ಪದ್ರವ್ಯ ಉಳ್ಳವನು, ಆಯುಧ ಭೃತ್-ಶಸ್ತ್ರಾಸ್ತ್ರ ಧರಿಸುವವನು. ಈ ಫಲಗಳು ಪರಮೋಚ್ಚಭಾಗದ ಹೊರಗೆ ಇರುವ ಸೂರ್ಯನಿಗೆ ಹೇಳಲ್ಪಡತಕ್ಕದ್ದು. ಸೂರ್ಯನು ಪರಮೋಚ್ಚದ ಒಳಗೆ ಇದ್ದರೆ ಬಹು ಧನವಂತನು, ಆಯುಧ ಧರಿಸುವುದರಿಂದ ಸೇವಿಸಲ್ಪಡುವವನು. ಪ್ರಖ್ಯಾತನು, ಸೂಕ್ಷ್ಮ ಬುದ್ಧಿಯುಳ್ಳವನಾಗವನೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಭವತಿ ಸಾಹಸಕರ್ಮಕರೋನರೋ ರುಧಿರಪಿತ್ತವಿಕಾರ ಕಲೇವರಃ ॥ ಕ್ಷಿತಿಪತಿರ್ಮತಿ ಮಾನ್ಸಹಿತಸ್ತದಾಸು ಮಹಸಾ ಮಹಸಾ ಮಧಿಪೇಕ್ರಿಯೇ ॥೧॥ ಜನ್ಮಕಾಲದಲ್ಲಿ ಮೇಷರಾಶಿಯಲ್ಲಿ ಸೂರ್ಯನಿದ್ದು ಯಾವ ಭಾವವಾಗಿರಲೀ, ಆ ಪುರುಷನು ಭೂಪತಿಯಾಗುವನು, ಅತಿಶಯ ಬುದ್ಧಿವಂತ, ಹಿತವನ್ನು ಬಯಸುವವನು, ಸಾಹಸೀ, ರಕ್ತವಿಕಾರ, ಪಿತ್ಥವಿಕಾರ ಇರುವವನು. ಇದರಲ್ಲಿ ಶುಭಫಲಗಳು ಪರಮೋಚ್ಚಗತನಾದ ಸೂರ್ಯನಿಗು, ಉಚ್ಚಚ್ಯುತಿಯಾದ ಸೂರ್ಯನಿಗೆ ಅನಿಷ್ಟಫಲ ತಿಳಿಯತಕ್ಕದ್ದು.

## ವೃಷಭರಾಶಿ ಸ್ಥಿತ ರವಿಫಲಂ

ರವಿ-ವೃಷಭದಲ್ಲಿ ಸೂರ್ಯನಿರುವಾಗ ಹುಟ್ಟಿದವನು, ವಸ್ತ್ರ ಸುಗಂಧ ಪುಣ್ಯ ಜೀವೀವಸ್ತ್ರಗಳು ಸುಗಂಧ ದ್ರವ್ಯಗಳು, ಮೊದಲಾದವುಗಳ ಕ್ರಯವಿಕ್ರಯದಿಂದ

ಜೀವಿಸುವನು, ವನಿತಾದ್ವಿಟ್-ಸ್ತ್ರೀ ದ್ವೇಷಿಯು, ಗೇಯವಾದ್ಯೇ-ಗಾನ ವಾದ್ಯಗಳಲ್ಲಿ, ಕುಶಲಃ-ಸಮರ್ಥತೆಯುಳ್ಳವನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ಶ್ಲೋಕ॥ ಪರಿಮಲೈರ್ವಿಮಲೈಃ ಕುಸುಮಾಶನೈ ಸುವಸನೈ ಪಶುಭಿಃ ಸುಖಮದ್ಭುತಮ್ । ರವಿ ಗತೋಹಿರವಿರ್ಜಲ ಭೀರುತಾಂ ವಿಹಿತಮಾಹಿತ ಮಾದಿಶತೇ ನೃಣಾಮ್ ॥೨॥ತಾ॥ ವೃಷಭರಾಶಿಯಲ್ಲಿ ಸೂರ್ಯನು (ಲಗ್ನಾದಿ ಯಾವ ಸ್ಥಾನವಾಗಿದ್ದರು) ಇರುವಾಗ ಹುಟ್ಟಿದವನು, ಸುಗಂಧದ್ರವ್ಯಗಳು, ನಿರ್ಮಲವಾದ ವಾಸನೆಯುಳ್ಳ ಪುಷ್ಪಗಳು, ಉತ್ತಮವಾದ ಭೋಜನ ವಸ್ತುಗಳು, ಅನೇಕ ಪ್ರಕಾರದ ಸುಂದರವಾದ ವಸ್ತ್ರಗಳು ಅನೇಕ ವಿಧವಾದ ಸುಖಪ್ರಾಪ್ತಿಯಾಗುತ್ತೆ. ಮತ್ತು ನೀರಿನಲ್ಲಿ ಭಯಪಡುವವನು, ಸ್ವಜನ ಹಿತಕಾರಕನು ಆಗುವನು, ಆದರೆ ಸೂರ್ಯನಿಗೆ ವರಾಹಮಿಹಿರಾಚಾರ್ಯರು

| | ಗುರು | ರವಿ ಬುಧ | ಶುಕ್ರ |
|---|---|---|---|
| | ಭಾವಕುಂಡಲಿ | | |
| ಕುಜ | | | ಲಚ |
| | | | |

ಹೇಳಿರುವ ಫಲಗಳಿಗೆ ವಿರೋಧವಾಗಿ ಫಲ ಹೇಳಲಿಲ್ಲ. ಆದರೆ ಸುಗಂಧಾದಿ ದ್ರವ್ಯಗಳನ್ನು ಸೇವಿಸುವನೆಂದು ತಾತ್ಪರ್ಯ ಕೊಡುತ್ತೆ, ಸ್ತ್ರೀ ದ್ವೇಷಿಯೆಂದು ಹೇಳಿರುತ್ತಾರೆ. ನಮ್ಮ ಅನುಭವದಲ್ಲಿ ಸ್ತ್ರೀ ದ್ವೇಷಿಯೆಂಬುವದು ಕಾಣಬರಲಿಲ್ಲ. ಆದ್ದರಿಂದ ಈ ಶ್ಲೋಕಾರ್ಥವನ್ನು ಗ್ರಹಿಸತಕ್ಕದ್ದಾಗಿರುತ್ತೆ. ಇಲ್ಲಿ ಭಾವಕುಂಡಲಿ ಸಹಿತವಾಗಿ ತೋರಿಸಿರುತ್ತೆ. ॥೧॥

ಮೂಲ॥ ವಿದ್ವಾನ್ ಜ್ಯೋತಿಷವಿತ್ತರ್ವಾ ಮಿಥುನಗೆ ಭಾನೌಕುಳೀರೇಸ್ಥಿತೇ।
ತೀಕ್ಷ್ಣೋಸ್ವಃ ಪರಕಾರ್ಯಕೃಚ್ಛ್ರಮಪಥಃ ಕ್ಲೇಶೈಶ್ಚಸಂಯುಜ್ಯತೇ ॥
ಸಿಂಹಸ್ಥೇ ವನಶೈಲ ಗೋಕುಲರತಿರ್ವೀರ್ನ್ವಿತೋಜ್ಞಃ ಪುಮಾನ್ ।
ಕಿನ್ಯಾಸ್ಥೇಲಿಪಿಲೇಖ್ಯ ಕಾವ್ಯಗಣಿತ ಜ್ಞಾನಾನ್ವಿತಃ ಸ್ತ್ರೀವಪುಃ ॥೨॥

ಅವತಾರಿಕೆ॥ ಈ ಶ್ಲೋಕದಲ್ಲಿ ಸೂರ್ಯನು ಮಿಥುನ, ಕರ್ಕಾಟಕ, ಸಿಂಹ, ಕನ್ಯಾರಾಶಿಗಳಲ್ಲಿದ್ದ ಕಾಲದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಟ್ಟಿರುತ್ತೆ. ಟೀ॥ ಭಾನೌ-ಸೂರ್ಯನು, ಮಿಥುನಗೆ-ಮಿಥುನ ರಾಶಿಯಲ್ಲಿರುವಾಗ ಹುಟ್ಟಿದವನು, ವಿದ್ವಾನ್-ವಿದ್ವಾಂಸ. (ಧರ್ಮಶಾಸ್ತ್ರಾದಿಗಳ ಪಂಡಿತನು) ಜ್ಯೋತಿಷವಿತ್ತರ್ವಾ- ಜ್ಯೋತಿಶಾಸ್ತ್ರ ಪಂಡಿತನು, ಧನ ಉಳ್ಳವನು ಆಗುತ್ತಾನೆ. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಗಣಿತಶಾಸ್ತ್ರಕಲಾಮಲ ಶೀಲತಾ, ಸುಲಲಿತಾದ್ಭುತವಾಕ್ ಪ್ರಥಿತೋಭವೇತ್ ॥ ದಿನಪತೌ ಮಿಥುನೇ ನನುಮಾನವೋ, ವಿನಯತಾ ನಯತಾತಿಶಯಾನ್ವಿತಃ ॥೩॥ ತಾ॥ ಮಿಥುನ ರಾಶಿಯಲ್ಲಿದ್ದರೆ, ಗಣಿತಶಾಸ್ತ್ರದಲ್ಲಿ ಕುಶಲನು, ಮನೋಹರವಾಗಿ

ಅದ್ಭುತಭಾಷಣೆ ಮಾಡುವವನು, ಅತಿಶಯ ವಿಷಯಯುಕ್ತ ನೀತಿ ತಿಳಿದವನು ಆಗುವನು.

## ಕರ್ಕಾಟಕರಾಶಿ ಸ್ಥಿತ ರವಿಫಲಂ

ಕುಳೀರೇಸ್ಥಿತೆ-ಜನ್ಮಕಾಲದಲ್ಲಿ ಕರ್ಕರಾಶಿಯಲ್ಲಿ ಸೂರ್ಯನಿದ್ದರೆ, ತೀಕ್ಷ್ಣಃಕ್ರೂರ-ಸ್ವಭಾವ ಉಳ್ಳವನು. ಅಸ್ವಃ-ದರಿದ್ರನು, ಪರಕಾರ್ಯಕೃತ್-ಅನ್ಯರ ಕಾರ್ಯ ಮಾಡುವನು. ಶ್ರಮಪಥಃ-ಶ್ರಮೆಯಿಂದ ದಾರಿನಡೆಯುವನು, ಕ್ಲೇಶೈಃ-ದುಃಖಗಳಿಂದ, ಸಂಯುಜ್ಯತೆ-ಕೂಡಿದವನು. ಈ ವಿಧವಾದ ಫಲ ಕೊಡುವನು, ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋ॥ ಸುನತಾರಹಿತಃ ಕಿಲಕಾಲ ವಿಜ್ಞನಕ ವಾಕ್ಯ ವಿಲೋಪಕರೋನರಃ ॥ ದಿನಕರೇಹಿ ಕುಲೀರಗತೆ ಭವೇತ್ಸಧನ ತಾ ಧನತಾ ಸಹಿತಾಧಿಕಃ ॥೪॥ ತಾ॥ ಕರ್ಕಾಟಕದಲ್ಲಿ ಸೂರ್ಯನಿದ್ದರೆ, ದುರ್ಜನ, ನಿಶ್ಚಯವಾಗಿ ಕಾಲಜ್ಞಾನ ತಿಳಿದವನು, ತಂದೆಯ ಮಾತು ಕೇಳದವನು, ಕುಬೇರನಿಗಿಂತಲೂ ಶ್ರೀಮಂತನು (ಧನವಂತ) ಆಗುವನು॥ ಈ ಅರ್ಥವು ವರಾಹ ಮಿಹಿರರ ಮತಕ್ಕೆ ಸ್ವಲ್ಪ ವಿರೋಧವಾಗಿರುತ್ತೆ. ಆದರೆ ಈ ಉದಾಹರಣ ಶ್ಲೋಕದ ಪ್ರಕಾರ ಅನುಭವ ಸಿದ್ಧವಾಗಿರುವದರಿಂದ ಇದನ್ನು ಸೇರಿಸಿಕೊಂಡು ಯೋಚಿಸಿ ಫಲ ಹೇಳತಕ್ಕದ್ದು.

## ಸಿಂಹರಾಶಿ ಸ್ಥಿತ ರವಿಫಲಂ

ಸಿಂಹಸ್ಥೇ-ಸಿಂಹದಲ್ಲಿ ಸೂರ್ಯನಿದ್ದ ಕಾಲದಲ್ಲಿ ಹುಟ್ಟಿದ. ಪುರುಷಃ-ಪುರುಷನು, ವನಶೈಲ ಗೋಕುಲ ರತಿಃ-ಅರಣ್ಯ, ಪರ್ವತ, ಗೋವುಗಳಿರತಕ್ಕ ಸ್ಥಳಗಳಲ್ಲಿ ಅನುರಾಗ ಉಳ್ಳವನು, ವೀರ್ಯಾನ್ವಿತಃ-ಬಲವಂತನಾಗುವನು, ಅಜ್ಞಃ-ಮೂರ್ಖ ನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಧುಂಡಿರಾಜಃ॥ ಸ್ಥಿರಮತಿಶ್ಚ ಪರಾಕ್ರಮತೋಧಿಕೋ ವಿಭುತಯಾದ್ಭುತಕೀರ್ತಿಸಮನ್ವಿತಃ ॥ ದಿನಕರೇ ಕರಿವೈರಿಗತೇ ನರೋ ನೃಪರತೋ ಪರತೋಷಕರೋ ಭವೇತ್ ॥೫॥ ತಾ॥ ರವಿ ಸಿಂಹರಾಶಿಯಲ್ಲಿದ್ದರೆ ಆ ಪುರುಷನು ಸ್ಥಿರಬುದ್ಧಿಯುಳ್ಳವನು, ಪರಾಕ್ರಮಿ, ಈಶ್ವರಾಂಶವಿರುವವನು. ಅದ್ಭುತವಾದ ಕೀರ್ತಿಯುಳ್ಳವನು, ರಾಜನಲ್ಲಿ ಪ್ರೀತಿಯುಳ್ಳವನು, ಎರಡನೆಯವರಿಗೆ ಸಂತೋಷ ಉಂಟುಮಾಡತಕ್ಕವನು-ಈ ವಿಧವಾದ ಗುಣವುಳ್ಳವನಾಗುವನು. ವರಾಹಮಿಹಿರಾಚಾರ್ಯರ ಮತಕ್ಕೂ ಈ ಮತಕ್ಕೂ ಸ್ವಲ್ಪ ವಿರೋಧವಿರುತ್ತೆ. ಪ್ರತ್ಯಕ್ಷಾನುಭವದಲ್ಲಿ ಈ ಉದಾಹರಣೆ ಶ್ಲೋಕದ ಅರ್ಥ ಪ್ರತ್ಯಕ್ಷ ನಿದರ್ಶನವಾಗಿರುತ್ತೆ.

| ಗು | | | ಶ |
|---|---|---|---|
| | ಉದಾಹರಣೆ | | |
| ಲಗ್ನ | ೧ ಭಾವಕುಂಡಲಿ | | ರ |
| | ಚ.ಕು | | ಬು.ಶು |

ಈ ಕುಂಡಲಿಯಲ್ಲಿ ಸೂರ್ಯನು ಸಿಂಹದಲ್ಲಿರುವುದರಿಂದ ಲಗ್ನಕ್ಕೆ ಅಷ್ಟಮ ವಾಗಿದ್ದಾಗ್ಯೂ ಸಿಂಹರಾಶಿಸ್ಥನಾದ್ದರಿಂದ ರಾಜಪ್ರಿಯನು, ಪ್ರಖ್ಯಾತ ಪುರುಷನು, ಬಲವಂತನು, ಬುದ್ಧಿವಂತನು ಆಗಿರುವನು.

| | | | |
|---|---|---|---|
| | ಭಾವಕುಂಡಲಿ | | ಚಂದ್ರ |
| | (೨) ಉದಾಹರಣೆ | | ರವಿ |
| | | ಲಗ್ನ ಗುರು | ಬುಧಶನಿ ಕುಜ ಶುಕ್ರ |

ಈ ಭಾವಕುಂಡಲಿಯಲ್ಲಿ ರವಿ ಲಾಭ ರಾಶಿಯಲ್ಲಿ ಸ್ವಕ್ಷೇತ್ರದಲ್ಲಿರುವುದರಿಂದ ವರಾಹಮಿಹಿರರ ಮತ ಪ್ರಕಾರ ಮೂರ್ಖನಾಗಿಲ್ಲ. ಪರೇಂಗಿತಜ್ಞನಾಗಿ ಸೂಕ್ಷ್ಮಬುದ್ಧಿಯುಳ್ಳವನಾಗಿ ಪ್ರಖ್ಯಾತ ನಾಗಿರುವನು.

## ಕನ್ಯಾರಾಶಿ ಸ್ಥಿತ ರವಿಫಲಂ

ಕನ್ಯಾಸ್ಥೇ-ಜನ್ಮಕಾಲದಲ್ಲಿ ಕನ್ಯಾರಾಶಿಯಲ್ಲಿ ಸೂರ್ಯನಿದ್ದರೆ, ಲಿಪಿಲೇಖ್ಯ ಕಾವ್ಯಗಣಿತ ಜ್ಞಾನಾನ್ವಿತಃ-ಲಿಪಿ-ಅಕ್ಷರ ನಿರಾಸ್ಯಮಾಡುವಿಕೆ, ಲೇಖ್ಯ-ಚಿತ್ರಗಳನ್ನು ಬರಿಯುವಿಕೆ. ಕಾವ್ಯ-ಕವಿತ್ವಮಾಡುವಿಕೆ. (ಅಲಂಕಾರಶಾಸ್ತ್ರ ಪಂಡಿತ), ಗಣಿತ-ಗಣಿತಶಾಸ್ತ್ರ ಪಂಡಿತ, ಜ್ಞಾನ-ಆತ್ಮಜ್ಞಾನ (ವೇದಾಂತಿ) ಈ ಗುಣಗಳಿಂದ, ಅನ್ವಿತಃ-ಕೂಡಿ, ಸ್ತ್ರೀವಪುಃ-ಸ್ತ್ರೀಯರ ಸಮಾನವಾದ ಶರೀರ ಉಳ್ಳವನಾಗುವನು. ಅಂದರೆ ಸ್ತ್ರೀಯರ ಶರೀರ ಯಾವಾಗಲೂ ಕೋಮಲವಾಗಿರುವುದೇ ಮುಖ್ಯ ಸ್ವಭಾವವಾಗಿರುವುದರಿಂದ, ಸ್ತ್ರೀವಪುಃ ಎಂಬುವ ಶಬ್ದಕ್ಕೆ ಕೋಮಲವಾದ ಸುಕುಮಾರವಾದ ಶರೀರವುಳ್ಳವನೆಂದು ಅರ್ಥ ಮಾಡಿಕೊಳ್ಳತಕ್ಕದ್ದು. ಈ ವಿಷಯದಲ್ಲಿ ॥ ಶ್ಲೋಕ ॥ ಧುಂಡಿರಾಜಃ ॥
ದಿನಪತೌ ಯುವತೌ ಸಮವಸ್ಥಿತೇ ನರಪತೇಂದ್ರರ್ವಿಣಂಹಿನರೋ ಭಜೇತ್ ॥
ಮೃದುವಚಾಃ ಶ್ರುತಗೇಯಪರಾಯಣಃ ಸುಮಹಿಮಾ ಮಹಿಮಾ ಪಹಿತಾಹಿತಃ ॥೬॥

ಮೂಲ॥ ಜಾತಸ್ತೌಳಿನಿಶೌಂಡಿಕೋಧ್ವರನಿರತೋ ಹೈರಣ್ಯಕೋ ನೀಚಕೃತ್ ।
ಕ್ರೂರಸ್ಸಾಹಸಿಕೋ ವಿಷಾರ್ಜಿತ ಧನ ಶ್ಶಾಸ್ತ್ರಾಂತಗೋಳಿಸ್ಥಿತೇ ॥
ಸತ್ಪೂಜ್ಯೋ ಧನವಾನ್ ಧನುರ್ಧರಗತೇ ತೀಕ್ಷ್ಣೋ ಭಿಷಕ್ಕಾರುಕೋ ।
ನೀಚೋಜ್ಞಃಕುವಣಿಜ್ಯ್ರಗೇಲ್ಪಧನವಾನ್ ಲುಬ್ಧೋನ್ಯಭಾಗ್ಯೋಪಭುಕ್ ॥೩॥

ತುಲಾ, ವೃಶ್ಚಿಕ, ಧನುರ್ಮಕರ ರಾಶಿಗಳಲ್ಲಿ ಸೂರ್ಯನಿರುವಾಗ ಹುಟ್ಟಿದವನ ಸ್ವರೂಪ ವಿಚಾರವು.

ಟೀಕು॥ ತುಲಾರಾಶಿಯಲ್ಲಿದ್ದ ಫಲ॥ ತೌಳಿನಿ-ತನ್ನ ನೀಚರಾಶಿಯಲ್ಲಿ ಸೂರ್ಯನಿರುವಾಗ, ಜಾತಃ-ಹುಟ್ಟಿದವನು, ಶೌಂಡಿಕ-ಮದ್ಯಪಾನಾಸಕ್ತನು, (ಕೆಲವರು ಮದ್ಯ ಮಾಡುವವನೆಂದು, ಮತ್ತು ಕೆಲವರು ಮದ್ಯ ವಿಕ್ರಯ ಕಾರಕನೆಂದು ಅರ್ಥಮಾಡಿರುವರು) ಅಧ್ವನಿರತಃ-ದಾರಿ ನಡೆಯುವದರಲ್ಲಿ ಆಸಕ್ತಿಯುಳ್ಳವನು, ಹೈರಣ್ಯಕಃ-ಸ್ವರ್ಣಕಾರನಾಗುವನು. ನೀಚವಾದ ಅನುಚಿತ ಕಾರ್ಯಗಳನ್ನು ಮಾಡುವನು, ಈ ತುಲಾರಾಶಿಯಲ್ಲಿದ್ದ ರವಿಗೆ ಧುಂಡಿರಾಜಃ ॥ ನರಪತೇರಿರತಿಭೀರು ರಹರ್ನಿಶಂ ಜನವಿರೋಧ ವಿಧಾನಮುಪೈಂದಿಶೇತ್ ॥ ಕಲಿಮನಾಃ ರತಿರ್ಧಟೇದಿ ನಮಣಿರ್ನಮಣಿ ದ್ರವಿಣಾದಿಕಮ್ ॥೭॥

## ವೃಶ್ಚಿಕರಾಶಿ ಸ್ಥಿತ ರವಿಫಲಂ

ಅಳಿಸ್ಥಿತೇ-ವೃಶ್ಚಿಕರಾಶಿಯಲ್ಲಿ ಸೂರ್ಯನಿರುವಾಗ ಹುಟ್ಟಿದವನು, ಕ್ರೂರಃ-ಉಗ್ರಸ್ವಭಾವ ಉಳ್ಳವನು, ಸಾಹಸಿಕಃ-ಯುಕ್ತಾಯುಕ್ತಾ ವಿಚಾರ ಮಾಡದೆ ಧೈರ್ಯದಿಂದ ಸಾಹಸಕಾರ್ಯಗಳನ್ನು ಮಾಡುವವನು, ವಿಷಾರ್ಜಿತ ಧನಃ-ವಿಷ ಪ್ರಯೋಗದಿಂದ ಸಂಪಾದಿಸಿಕೊಂಡ ಧನ ಉಳ್ಳವನು, ವೃಥಾರ್ಜಿತ ಧನಃ- ಇವನು ಸಂಪಾದಿಸಿದ ಧನವನ್ನು ಚೋರಾದಿಗಳಪಹರಿಸಿಕೊಂಡು ಹೋಗುವದರಿಂದ ಈ ಧನವು ವ್ಯರ್ಥವಾಗಿ ಸಂಪಾದಿಸಿದ ಧನವೆಂದು ಹೇಳಲ್ಪಡತಕ್ಕದ್ದು. ಶಾಸ್ತ್ರಾಂಗತಃ- ಶಾಸ್ತ್ರಾದಿ ವಿದ್ಯಾಪಾರಂಗತನು ॥ ಈ ವಿಷಯದಲ್ಲಿ ಧುಂಡಿರಾಜ ॥ಶ್ಲೋ॥ ಕೃಪಣತಾ ಕಲಹಂಚ ಭೃಶಂ ರುಷಂ ವಿಷಹುತಾಶನ ಶಸ್ತ್ರಭಯಂದಿಶೇತ್ ॥ಅಲಿಗತಃ ಪಿತೃಮಾತೃ ವಿರೋಧಿತಾಂ ದಿನಕರೋ ನಕರೋತಿ ಸಮುನ್ನತಿಮ್ ॥೮॥ತಾ॥ ಕೃಪಣ, ಜಗಳ ಗಂಟಿ, (ಕಲಹೀ) ಅತಿಶಯ ಕೋಪಿಷ್ಠ, ವಿಷ, ಶಸ್ತ್ರ, ಅಗ್ನಿ, ಇವುಗಳಿಗೆ ಭಯಪಡುವನು, ತಾಯಿತಂದೆಗಳಲ್ಲಿ ಪ್ರೀತಿ ಇಲ್ಲದವನು, ಅಭಿವೃದ್ಧಿಯಾಗಿ ಉನ್ನತ ಸ್ಥಿತಿಗೆ ಬರಲು ಯತ್ನವಿಲ್ಲದವನು ಆಗುವನು.

## ಧನುರಾಶಿಸ್ಥಿತ ರವಿಫಲಂ

ಧನುರ್ಧರಗತೇ-ಧನುರಾಶಿಯಲ್ಲಿ ರವಿ ಇರುವಾಗ ಹುಟ್ಟಿದವನು, ಸತ್ಪೂಜ್ಯ-ಸಜ್ಜನರಿಂದ ಪೂಜಿಸಲ್ಪಡತಕ್ಕವನು, ಧನವಾನ್-ದ್ರವ್ಯವಂತನು, ತೀಕ್ಷ್ಣ-ಕೋಪಿಷ್ಠನು. ಕಾರುಕಃ-ಶಿಲ್ಪಕರ್ಮ ತಿಳಿದವನು. ಈ ವಿಷಯದಲ್ಲಿ ಧುಂಡಿರಾಜರು ಹೇಳಿರುವುದೇನೆಂದರೆ ॥ಶ್ಲೋಕ॥ ಸ್ವಜನ ಕೋಪಮತೀವ ಮಹಾಸ್ವಿತಂ ಬಹುಧನಂಹಿ ದನುರ್ಧರ ಗೋರವಿಃ ॥ ಸುಜನ ಪೂಜನಮಾದಿಶತೇ ನೃಣಾಂ ಸುಮತಿತೋ ಮತಿತೋಷ ವಿವರ್ಧನಂ ॥೯॥ ತಾ॥ ಸ್ವಜನರಲ್ಲಿ ಕೋಪ ಮಾಡುವವನು, ದೊಡ್ಡವರಲ್ಲಿ ಯುಕ್ತನು, ದೊಡ್ಡಗುಣ, ಐಶ್ವರ್ಯವಂತ, ಸತ್ಪುರುಷರಲ್ಲಿ ಪ್ರೀತಿ ಮತ್ತು ಅವರನ್ನು ಸೇವಿಸತಕ್ಕವನು, ಒಳ್ಳೆ ಬುದ್ಧಿವಂತರಿಗೆ ಪ್ರೀತಿ ಪಡಿಸತಕ್ಕವನು, ಈ ಗುಣಗಳಿಂದ ಕೂಡಿದವನಾಗುವನು.

## ಮಕರ ಸ್ಥಿತ ರವಿಫಲಂ

ಮೃಗೆ-ಮಕರದಲ್ಲಿ ಸೂರ್ಯನಿರುವಾಗಿ ಹುಟ್ಟಿದವನು. ನೀಚ-ಕುಲೋಚಿತವಲ್ಲದ ಕಾರ್ಯ ಮಾಡುವನು. ಅಜ್ಞ-ಮೂರ್ಖನು, ಕುವಣಿಕ್-ಕುತ್ಸಿತವಾದ ವ್ಯಾಪಾರ ಮಾಡುವವನು, ಅಲ್ಪಧನವಾನ್-ಅಲ್ಪಧನವಂತನು, ಲುಬ್ಧ-ಲೋಭತ್ವ ಉಳ್ಳವನು, ಅನ್ಯಭಾಗ್ಯೋಪಭುಕ್-ಅನ್ಯರ ಭಾಗ್ಯವನ್ನು ಅನುಭವಿಸುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಅಟನತಾಂ ನಿಜಪಕ್ಷವಿಪಕ್ಷತಾ ಮಧನತಾಂ ಕುರುತೇಸತತಂ ನೃಣಾಮ್॥ ಮಕರರಾಶಿಗತೋ ವಿಗತೋತ್ಸವಂ ದಿನವಿಭುರ್ನವಿಭುತ್ವಸುಖಂದಿಶೇತ್ ॥೧೦॥ತಾ॥ ಸಂಚಾರಶೀಲ, ತನ್ನವರಲ್ಲಿ ವಿರೋಧ ಮಾಡುವವನು, ಧನಹೀನ, ಉತ್ಸಾಹಹೀನ ವೈಭವರಹಿತ, ಸುಖರಹಿತ ಈ ಗುಣಗಳಿಂದ ಕೂಡಿರುವನು ॥೩॥

ಮೂಲ॥ ನೀಚೋಘಟೇ ತನಯ ಭಾಗ್ಯಪರಿಚ್ಯುತೋ । ನೃಷ್ಟೋಯೋತ್ಥ-ಪಣ ವಿಭವೊ ವನಿತಾ ದ್ಯತೊಂತ್ಕೆ ॥ ಸಕ್ಷತ್ರ ಮಾನವತಸು ಪ್ರತಿಮೋ । ವಿಭಾಗೆ ಲಕ್ಷ್ಮಾದಿಶೇತ್ತುಹಿನರಶ್ಮಿದಿನೇಶಯುಕ್ತೆ ॥೪॥

ಅವತಾರಿಕೆ॥ ಕುಂಭಮೀನಗಳಲ್ಲಿ ಸೂರ್ಯನಿರುವಾಗ ಹುಟ್ಟಿದವನ ಸ್ವಭಾವವನ್ನು ಮತ್ತು ಸೂರ್ಯ ಚಂದ್ರರೇಕತ್ವವಿರವಾಗ ಹುಟ್ಟಿದವರ ಸ್ವರೂಪವನ್ನು ಸಹ ಹೇಳುತ್ತಾರೆ.

## ಕುಂಭರಾಶಿ ಸ್ಥಿತ ರವಿಫಲಂ

ಘಟಿ-ಕುಂಭರಾಶಿಯಲ್ಲಿ ರವಿ ಇರುವಾಗ ಹುಟ್ಟಿದವನು. ನೀಚ-ಅಧಮಕೃತ್ಯವನ್ನು ಮಾಡುವವನು, ತನಯ ಭಾಗ್ಯ ಪರಿಚ್ಯುತಃ ॥ ಪುತ್ರರಿಂದಲೂ ಭಾಗ್ಯದಿಂದಲೂ

ಬಿಡಲ್ಪಟ್ಟವನು, ಅಸ್ವಃ-ದರಿದ್ರನು ಆಗುವನು. ಈ ವಿಷಯದಲ್ಲಿ ದುಂಡಿರಾಜಃ ||ಶ್ಲೋಕ|| ಕಲಹಗಾಮಿನಿ ಪಂಕಜನೀಪತೌ ಶಠತರೋಹಿನರೋಗತಸೌಹೃದಃ || ಮಲಿನತಾ ಕಲಿತೋರಹಿತಃ ಸದಾಕರುಣಯಾ ಋಣಯಾತ್ತ ಸಖೋಭವೇತ್ ||೧|| ಈ ಪ್ರಕಾರ ಅನಿಷ್ಠ ಫಲವೇ ಹೇಳಿರುತ್ತಾರೆ.

## ಮೀನರಾಶಿ ಸ್ಥಿತ ರವಿಫಲಂ

ಅಂತ್ಯೇ-ಮೀನದಲ್ಲಿ ರವಿ ಇರುವಾಗ ಹುಟ್ಟಿದವನು, ತೋಯೋತ್ಥಪಣ್ಯ ವಿಭವಃ-ಉದಕದಲ್ಲಿ ಹುಟ್ಟಿದ ಶಂಖ, ಮುಕ್ತಾಪ್ರವಾಳ ಮೊದಲಾದವುಗಳ ಕ್ರಯ ವಿಕ್ರಯ ಮಾಡುವುದರಿಂದುಂಟಾದ ಐಶ್ವರ್ಯ ಉಳ್ಳವನು, ವನಿತಾದೃತಃ- ಸ್ತ್ರೀಯರಿಂದ ಆದರಿಸಲ್ಪಡುವವನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ||ಶ್ಲೋಕ|| ಬಹುಧನಂ ಕ್ರಯವಿಕ್ರಯತಃ ಸುಖಂ ನಿಜಜನಾದಪಿ ಗುಹ್ಯ ಮಹಾಭಯಮ್ || ದಿನಪತೌ ಗುರುಭೇ ಭಿಮತೋ ಭವೇತ್ಸಜನತೋ ಜನತೋಷದ ಸನ್ಮತಿಃ ||೧೨|| ತಾ|| ಶ್ರೀಮಂತ, ಕೊಡುವದರಲ್ಲಿ ತೆಗೆದುಕೊಳ್ಳುವುದರಲ್ಲಿ ನಿಪುಣ, ಆಪ್ತಸ್ವಕೀಯರಲ್ಲಿ ಭಯ ಉಳ್ಳವನು, ತನ್ನವರಿಗೆ ಸಂತೋಷ ಮಾಡುವವನು ಆಗುವನು.

## ಸೂರ್ಯ ಚಂದ್ರರೇಕರಾಶಿ ಸ್ಥಿತಫಲಂ

ತುಹಿನ ರಶ್ಮಿ ದಿನೇಶಯುಕ್ತಿ-ಚಂದ್ರ ಸೂರ್ಯರು ಏಕರಾಶಿಗತರಾಗಿರುವಾಗ ಯಾವ ರಾಶಿಯಲ್ಲಿ ಕೂಡಿರುವರೊ ಆ ರಾಶಿಯ, ನಕ್ಷತ್ರಮಾನದ ತನು ಪ್ರತಿಮೆ. (ನಕ್ಷತ್ರಮಾನವನೆಂದರೆ, ಕಾಲಪುರುಷನ ಶರೀರಕ್ಕೆ ಸಮವಾದ,) ವಿಭಾಗೆ-ಕಾಲಾಂಗಾನಿ ವರಾಂಗಮಾನ ಮಿತ್ಯಾದಿ ಶ್ಲೋಕೋಕ್ತವಾದ ಅಂಗ ವಿಭಾಗದಲ್ಲಿ, ಲಕ್ಷ್ಮ-ಚಿಹ್ನೆಯು, ಆದಿಶೇತ್-ಹೇಳತಕ್ಕದ್ದು. ಹೇಗೆಂದರೆ:-ಚಂದ್ರ ಸೂರ್ಯರು ಮೇಷದಲ್ಲಿದ್ದರೆ, ಮೇಷರಾಶಿ ಕಾಲಪುರುಷನ ಶಿರಸ್ಸಾದ್ದರಿಂದ ಶಿರಸ್ಸಿನಲ್ಲಿ ಮಚ್ಚೆ ಇರುವದೆಂದು, ಈ ಪ್ರಕಾರ ಕಾಲಪುರುಷನಿಗೆ ರಾಶಿ ಯಾವ ಅಂಗವಾಗಿರುವದೋ ಆ ಅಂಗದಲ್ಲಿ ಮಚ್ಚೆ ಇರುತ್ತೆಂದು ಹೇಳತಕ್ಕದ್ದು ||೧೩||

## ಅಂಗಾರಕ ಮೇಷಾದಿರಾಶಿ ಸ್ಥಿತಫಲಂ

ಮೂಲ|| ನರಪತಿ ಸತ್ಕೃತಾಟನ ಚಮೂಪವಣಿಕ್ಸಧನಾನ್ । ಕ್ಷತತನು ಚೋರ ಭೂರಿ ವಿಷಯಾಂಶ್ಚ ಕುಜಸ್ಸ್ವಗೃಹೇ|| ಯುವತಿಜಿತಾಂ

ತ್ಸ್ವಹೃತ್ಸ್ವವಿಷಮಾಸ್ನರದಾರರರ್ತಾ । ಕುಹಕ ಸುವೇಷಭೀರು
ಪುರುಷಾನ್ವಿತಭೇಜನಯೇತ್ ॥೫॥

ಅವತಾರಿಕೆ॥ ಮೇಷ ವೃಶ್ಚಿಕ ವೃಷಭ ತುಲ ಈ ರಾಶಿಗಳಲ್ಲಿ ಕುಜನಿರುವಾಗ ಹುಟ್ಟಿದವನ ಸ್ವಭಾವ ಫಲ.

## ಸ್ವಕ್ಷೇತ್ರ ಸ್ಥಿತ ಕುಜ ಫಲಂ (ಮೇಷ-ವೃಶ್ಚಿಕ)

ಟೀಕು॥ ಸ್ವಗೃಹೇ-ಮೇಷ ವೃಶ್ಚಿಕದಲ್ಲಿದ್ದ, ಕುಜಃ-ಅಂಗಾರಕನು, ನರಪತಿ ಸತ್ಕೃ-ತಾಟನೌ, ನರಪತಿ ಸತ್ಕೃತ-ರಾಜಪೂಜಿತನು, ಅಟನೌ-ಪರಿಭ್ರಮಣ (ಸಂಚಾರ) ಶೀಲನು, ಚಮೂಪ-ಸೇನಾಧಿಪತಿಯು, ವಣಿಕ್-ಕ್ರಯ ವಿಕ್ರಯದಿಂದ, ಸದರ್ಾ-ಧನವನ್ನು, ಕ್ಷತತನು-ಗಾಯ ಹೊಂದಿದ ಶರೀರ ಉಳ್ಳವನು, ಚೋರ-ಕಳ್ಳತನ, ಭೂರಿ ವಿಷಯರ್ಾ-ಅಧಿಕವಾದ ವಿಷಯಾಸಕ್ತಿ ಉಳ್ಳವನು, ಜನಯೇತ್- ಹುಟ್ಟಿಸುವವನು. ಈ ವಿಷಯದಲ್ಲಿ ಧುಂಡಿರಾಜರು, ಮೇಷ ಮತ್ತು ವೃಶ್ಚಿಕ ರಾಶಿಗಳಲ್ಲಿದ್ದ ಕುಜನಿಗೆ ಪ್ರತ್ಯೇಕ ಫಲ ಹೇಳಿರುತ್ತಾರೆ.

## ಮೇಷ ಸ್ಥಿತ ಕುಜಫಲಂ

ಶ್ಲೋಕ॥ ಕ್ಷಿತಿಪತೇಃ ಕ್ಷಿತಿಮಾನ ಧನಾಗಮೈಃ ಸುವಚಸಾ ಮಹಸಾ ಬಹು ಸಾಹಸೈಃ ॥ ಅವನಿಜಃ ಕುರತೆ ಸತತಂ ಯುತಂತ್ವಜಗತೋ ಜನತಾಭಿಮತಂ ನರಮ್ ॥೧೪॥ ಜನ್ಮಕಾಲದಲ್ಲಿ ಅಂಗಾರಕನು ಮೇಷ ರಾಶಿಯಲ್ಲಿದ್ದರೆ, ಆ ಮನುಷ್ಯನು ರಾಜಮೂಲವಾಗಿ ಸನ್ಮಾನ ಹೊಂದುವನು. ಧನವಂತ, ಸಂಪತ್ತುಳ್ಳ ವನು. ಚೆನ್ನಾಗಿ ಮಾತನಾಡುವವನು, ತೇಜಸ್ವೀ, ಅನೇಕ ವಿಧವಾದ ಸಾಹಸಕಾರ್ಯ ಮಾಡತಕ್ಕವನು, ಸಮಸ್ತರಲ್ಲೂ ಗೌರವ ಹೊಂದುವವನು ಆಗುತ್ತಾನೆ ॥೧೪॥

## ವೃಶ್ಚಿಕರಾಶಿ ಸ್ಥಿತ ಕುಜಫಲಂ

ಶ್ಲೋಕ॥ ವಿಷಹುತಾಶನ ಶಸ್ತ್ರ ಭಯಾನ್ವಿತಃ ಸುತಸುತಾ ವನಿತಾದಿ ಮಹಾಸುಖಃ । ವಸುಮತೀಸುತಭಾಜಿ ಸರೀಸೃಪೇ ನೃಪರತಃ ಪರತಶ್ಚ ಜಯಂ ವ್ರಜೇತ್ ॥೪॥ ತಾ॥ ಜನ್ಮಕಾಲದಲ್ಲಿ ವೃಶ್ಚಿಕದಲ್ಲಿ ಕುಜನಿದ್ದರೆ, ಆ ಮನುಷ್ಯನು ವಿಷ, ಶಸ್ತ್ರ, ಅಗ್ನಿ ಈ ಮೂಲವಾಗಿ ಭಯ ಹೊಂದುವನು, ಗಂಡು ಮಕ್ಕಳು, ಹೆಣ್ಣು ಮಕ್ಕಳು, ಸ್ತ್ರೀ ಇವರುಗಳಿಂದ ಹೆಚ್ಚಾದ ಸುಖವನ್ನು ಹೊಂದುವನು. ರಾಜನಲ್ಲಿ ಮಿತ್ರತ್ವವಿರುವವನು. ಸರ್ವಶತ್ರುಗಳಲ್ಲು ಜಯಹೊಂದುವವನಾಗುವನು.

## ವೃಷಭ ತುಲಾರಾಶಿ ಸ್ಥಿತಿ ಕುಜಫಲಂ

ಸಿತಭೇ-ಶುಕ್ರ ಕ್ಷೇತ್ರಗಳಾದ ವೃಷಭ ತುಲೆಗಳಲ್ಲಿರುವ ಅಂಗಾರಕನು, ಯುವತಿ ಜಿತರ್-ಸ್ತ್ರೀಯರಿಂದ ಜೈಸಲ್ಪಟ್ಟವನು, ಸುಹೃತ್ಸು-ಬಂಧು ಮಿತ್ರರಿಂದ, ವಿಷಮರ್-ಕ್ರೂರಸ್ವಭಾವ ಉಳ್ಳವನು, ಪರದಾರರತರ್-ಪರಸ್ತ್ರೀರತನು, ಕುಹಕ-ಇಂದ್ರಜಾಲಾದಿ ಕುಹಕ ವಿದ್ಯವುಳ್ಳವನು, ಕುಹಕವೆಂದರೆ ರಂಧ್ರಾನ್ವೇಷಣಪರನು, ಸುವೇಷ-ಒಳ್ಳೇ ವೇಷಧಾರಿಯಾದವನು, ಭೀರುಃ-ಭಯ ಉಳ್ಳವನು, ಪುರುಷರ್-ಮೈತ್ರಗುಣವಿಲ್ಲದವನು, (ಕೆಲವರು ಭಯ ಉಳ್ಳವರ ಸ್ನೇಹರಹಿತನಾದವನನ್ನು) ಜನಯೇತ್-ಹುಟ್ಟಿಸುವನು. ಈ ವಿಷಯದಲ್ಲಿ ಧುಂಡಿರಾಜರು ವೃಷಭ ತುಲಾರಾಶಿಯಲ್ಲಿದ್ದ ಕುಜನಿಗೆ ಪ್ರತ್ಯೇಕ ಫಲ ಹೇಳಿರುತ್ತಾರೆ.

## ವೃಷಭರಾಶಿ ಸ್ಥಿತ ಕುಜಫಲಂ

ಶ್ಲೋಕ। ಗೃಹಧನಾಲ್ಪ ಸುಖಂಚ ರಿಪೂದಯಂ ಪರಗೃಹಸ್ಥಿತಿಮಾದಿಶತೆ ನೃಣಾಮ್ । ಅವನ ಯಾಗ್ನಿ ಋಜೌ ವೃಷಭಸ್ಥಿತಃ ಕ್ಷಿತಿಸುತೋತಿ ಸುತೋದ್ಭವ ಪೀಡನಮ್ ॥೧೫॥ ತಾ॥ ಜನ್ಮಕಾಲದಲ್ಲಿ ವೃಷಭದಲ್ಲಿ ಕುಜನಿದ್ದರೆ ಆ ಮನುಷ್ಯನು ಧನ, ಸೌಖ್ಯ ಅಲ್ಪವಾದವನು, ಪುಷ್ಕಳ ಶತ್ರುಗಳಭಿವೃದ್ಧಿಯುಳ್ಳವನು, ಅನ್ಯರ ಗೃಹದಲ್ಲಿ ವಾಸಿಸುವನು, ನೀತಿಭ್ರಷ್ಟನು, ಅಗ್ನಿಭಯ ಹೊಂದುವನು, ನಿರಂತರ ರೋಗಪೀಡಿತನು, ಪುಷ್ಕಳ ಕನ್ಯಾಸಂತತಿಯಿಂದ ಪೀಡೆಯುಳ್ಳವನು ಆಗುತ್ತಾನೆ ॥೧೫॥

## ತುಲಾರಾಶಿ ಸ್ಥಿತ ಕುಜಫಲಂ

ಶ್ಲೋಕ॥ ಬಹುಧನ ವ್ಯಯತಾಂ ಗವಿಹೀನತಾ ಗತಗುರು ಪ್ರಿಯತಾ ಪರಿತಾಪಿತಃ । ವಣಿಜಿಭೂಮಿಸುತೇ ವಿಕಲಃ ಪುಮಾನವನಿತೋ ವನಿತೋದ್ಭವ ದುಃಖಿತಃ ॥೧೬॥ತಾ॥ ತುಲಾರಾಶಿಯಲ್ಲಿ ಕುಜನಿದ್ದರೆ, ಅವನು ಪುಷ್ಕಳ ದ್ರವ್ಯ ವ್ಯಯ ಮಾಡುವುದರಿಂದಾಗಲೀ, ಅಂಗಹೀನತ್ವದಿಂದಾಗಲೀ, ಜನರಲ್ಲಿ ಸ್ನೇಹಮಾಡಿ ಏಚ್ಛಿತ್ತಿ ಹೊಂದುವುದರಿಂದಾಗಲೀ, ಪೀಡಿತನಾಗುವನು, ಭೂಮಿಯಿಂದಲು, ಸ್ತ್ರೀಯಿಂದಲು ದುಃಖ ಹೊಂದುವವನಾಗುವನು ॥೧೬॥

ಮೂಲ॥ ಬೌಧೇ ಸಹಸ್ತನಯವಾರ್ ವಿಸುಹೃತ್ಕೃತಜ್ಞೋ । ಗಾಂಧರ್ವ ಯುದ್ಧ ಕುಶಲಃ ಕೃಪಣೋ ಭಯಾರ್ಥೀ ॥ ಚಾಂದ್ರೇರ್ಥವಾರ್

ಸಲಿಲಯಾನ ಸಮಾರ್ಜಿತಸ್ವಃ । ಪ್ರಾಜ್ಞಶ್ಚಭೂಮಿತನಯೇ ವಿಕಲಃ ಖಲಶ್ಚ ॥೬॥

ಅವತಾರಿಕೆ॥ ಮಿಥುನ ಕನ್ಯಾ ಕರ್ಕಾಟಕಗಳಲ್ಲಿ ಕುಜನಿರುವಾಗ ಹುಟ್ಟಿದವನ ಫಲ ॥ ಬೌಧೇ-ಬುಧಕ್ಷೇತ್ರಗಳಾದ ಮಿಥುನ ಕನ್ಯಾರಾಶಿಗಳಲ್ಲಿ, ಭೂಮಿತನಯೇ-ಅಂಗಾರಕ ನಿರುವಾಗ ಹುಟ್ಟಿದವನು, ಅಸಹಃ-ಪರರಿಗೆ ಸಹಿಸಲಶಕ್ಯವಾದ ತೇಜಸ್ಸುಳ್ಳವನು, ತನಯವಾ೯-ಗಂಡು ಮಗನುಳ್ಳವನು, ವಿಸುಹೃತ್-ಮಿತ್ರರಹಿತನು, ಕೃತಜ್ಞ-ಉಪಕಾರ ಮಾಡಿದವನಿಗೆ ಪ್ರತ್ಯೇಕವಾಗಿ ಉಪಕಾರ ಮಾಡುವನು. (ಪ್ರತ್ಯುಪಕಾರೀ) ಗಾಂಧರ್ವ-ಗಾಯನದಲ್ಲೂ, ಯುದ್ಧ-ಯುದ್ಧದಲ್ಲೂ, ಕುಶಲಃ-ಸಮರ್ಥನು, ಕೃಪಣಃ- ಕಾರ್ಪಣ್ಯ ಉಳ್ಳವನು, ಅಭಯಃ-ಭಯವಿಲ್ಲದವನು, ಅರ್ಥೀ-ಯಾಚಕನೂ ಆಗುವನು. ಈ ವಿಷಯದಲ್ಲಿ ಧುಂಡಿರಾಜರು ಮಿಥುನ ಕನ್ಯಾರಾಶಿಗಳಲ್ಲಿ ಕುಜನಿರುವ ಫಲ ಪ್ರತ್ಯೇಕವಾಗಿ ಹೇಳಿರುತ್ತಾರೆ.

## ಮಿಥುನರಾಶಿ ಸ್ಥಿತ ಕುಜಫಲಂ

ಶ್ಲೋಕ॥ ಬಹುಕಲಾ ಕಲನಂ ಕುಲಜೋತ್ಕಲಂ ಪ್ರಚಲನ ಪ್ರಿಯತಾಂಚ ನಿಜಸ್ಥಲಾತ್ ॥ ನನುನೃಣಾಂ ಕುರುತೇ ಮಿಥುನಸ್ಥಿತಃ ಕುತನಯಸ್ತನಯ ಪ್ರಮುಖಾ ಮುಖಂ ॥೧೭॥ತಾ॥ ಜನ್ಮಕಾಲದಲ್ಲಿ ಮಿಥುನ ರಾಶಿಯಲ್ಲಿ ಕುಜನಿದ್ದರೆ, ಆ ಮನುಷ್ಯನು ಅನೇಕ ಕಲಾಶಾಸ್ತ್ರ ತಿಳಿದವನು, ವಂಶಾನುರೂಪ ಕಲಹದಿಂದ ಪೀಡಿತನು, ಭ್ರಮಣ ಮಾಡುವುದರಲ್ಲಿ ಪ್ರೀತಿಯುಳ್ಳವನು, ದುಷ್ಪುತ್ರನುಳ್ಳವನು, ಪುತ್ರಾದಿಗಳಿಂದಲೂ, ಆಪ್ತರಿಂದಲೂ ಸುಖ ಹೊಂದದವನು ಆಗುವನು ॥೧೭॥

## ಕನ್ಯಾರಾಶಿ ಸ್ಥಿತ ಕುಜಫಲಂ

ಶ್ಲೋಕ॥ ಸುಜನ ಪೂಜನತಾ ಜನತಾಧಿಕೋ ಯಜನಯಾಜನ ಕರ್ಮರತೋ ಭವೇತ್ । ಕ್ಷಿತಿಸುತೇ ಸತಿಕನ್ಯಕಯಾನ್ವಿತೇ ತ್ವವನಿತೋ ವನಿತೋತ್ಸವತಃ ಸುಖೀ ॥೧೮॥ ತಾ॥ ಜನ್ಮಕಾಲದಲ್ಲಿ ಕುಜನು ಕನ್ಯಾರಾಶಿಯಲ್ಲಿದ್ದರೆ, ಜನರಿಂದ ಸತ್ಕಾರ ಹೊಂದುವನು. ಲೋಕಮಾನ್ಯಶ್ರೇಷ್ಠನೂ, ಯಜ್ಞಯಾಗಾದಿಗಳನ್ನು ಮಾಡುವುದರಲ್ಲಿ ಯಾವಾಗ್ಯು ತತ್ಪರನು, ಸ್ತ್ರೀಯಿಂದಲೂ, ಭೂಮಿಯಿಂದಲೂ ಸುಖ ಹೊಂದುವವನು ಆಗುವನು ॥೧೮॥

## ಕರ್ಕಾಟಕ ರಾಶಿಯಲ್ಲಿ ಕುಜನಿದ್ದ ಫಲ

ಚಾಂದ್ರೇ-ಕರ್ಕಾಟಕ ರಾಶಿಯಲ್ಲಿ ಕುಜನಿರುವಾಗ ಹುಟ್ಟಿದವನು. ಅರ್ಥವಾ-ಧನಿಕನಾಗುವನು, ಸಲಿಲಯಾನ ಸಮಾರ್ಜಿತಸ್ವಃ-ನೀರಿನ ಮೇಲೆ ಪ್ರಯಾಣಮಾಡಿ ಸಂಪಾದಿಸಿದ ದ್ರವ್ಯ ಉಳ್ಳವನು, ಪಕ್ಷಾಂತರದಲ್ಲಿ, ಸಲಿಲ-ಉದಕದಿಂದ, ಯಾನ-ದೇಶಾಂತರ ಗಮನದಿಂದ, ಸಮಾರ್ಜಿತಸ್ವಃ-ಆರ್ಜಿಸಿದ ಧನ ಉಳ್ಳವನು, ಪ್ರಾಜ್ಞಃ-ಪ್ರಜ್ಞೆಯುಳ್ಳವನು, ವಿಕಲಃ-ಅಂಗಹೀನನು, ಖಲಃ-ದುರ್ಜನನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ॥ ಪರಗೃಹ ಸ್ಥಿರತಾಮತಿ ದೀನತಾಂ ವಿಮತಿತಾಂ ಶಮತಾಂಚ ರಿಪೂದಯಂ । ಹಿಮಕರಾಲಯಗೆ ಕಿಲಮಂಗಲೆ ಪ್ರಬಲಯಾ ಬಲಯಾ ಕಲಹಂ ವ್ರಜೇತ್ ॥೧೯॥ ತಾ॥ ಜನ್ಮಕಾಲದಲ್ಲಿ ಕರ್ಕಾಟಕದಲ್ಲಿ ಕುಜನಿದ್ದರೆ ಆ ಮನುಷ್ಯನು ಎರಡನೇಯವರಲ್ಲಿ ವಾಸಮಾಡುವನು, ಅತಿಶಯದೀನ, ಬುದ್ಧಿಹೀನ, ಯಾರಿಗೆ ಶತ್ರುವಿರುವನೋ ಅಂಥಾ ಸ್ತ್ರೀ ಪ್ರಬಲವಾಗಿರುವುದರಿಂದ ಆವಳಿಂದ ಕಲಹಪೀಡಿತನಾಗುವನು. ಈ ಪ್ರಕಾರ ಧುಂಡಿರಾಜರು ದುಷ್ಟಫಲ ಹೇಳಿರುವರು. ವರಾಹಮಿಹಿರಾಚಾರ್ಯರು ದುಷ್ಟಫಲ ಹೇಳಲಿಲ್ಲ. ಕಾರಣವೇನೆಂದರೆ, ಕರ್ಕಾಟಕ ರಾಶಿಯು ಕುಜನಿಗೆ ನೀಚರಾಶಿಯಾದರು ಶತ್ರುಕ್ಷೇತ್ರವಲ್ಲವಾದ್ದರಿಂದ ಮಿತ್ರಕ್ಷೇತ್ರ ಫಲವನ್ನು ಪರಮ ನೀಚ ಧೃವವಾದ ೪-೨೮-೦-೦ ನಂತರವಿರುವ ಕುಜನಿಗೆ ಹೇಳಿರುವರು. ಪರಮ ನೀಚಕ್ಕೆ ದುಷ್ಟಫಲವನ್ನು ಅದರಿಂದ ಮುಂದೆ ಈ ಫಲವನ್ನು ಅನುಪಾತದಿಂದ ತಿಳಿಯತಕ್ಕದ್ದು ॥೬॥

ಮೂಲ॥ ನಿಃಸ್ವಃಕ್ಲೇಶಸಹೋ ವನಾಂತರಚರಃ ಸಿಂಹೇಲ್ಪದಾರಾತ್ಮಜೋ ।
ಜೈವೇನೈಕರಿಪುರ್ನರೇಂದ್ರಸಚಿವಃ ಖ್ಯಾತೋ ಭಯೋಲ್ಪಾತ್ಮಜಃ ॥
ದುಃಖಾರ್ತೋ$^{*}$ ನಿಧನೋಟನೋನೃತ ರತಸ್ತೀಕ್ಷ್ಣಶ್ಚ ಕುಂಭಸ್ಥಿತೇ ।
ಭೌಮೆ ಭೂರಿಧನಾತ್ಮಜೋ ಮೃಗಗತೇ ಭೂಪೋಥವಾತತ್ಸಮಃ ॥೭॥

ಅವತಾರಿಕೆ॥ ಸಿಂಹ, ಧನುರ್ಮೀನ, ಕುಂಭ, ಮಕರ ಈ ರಾಶಿಗಳಲ್ಲಿ ಕುಜನಿರುವಾಗ ಹುಟ್ಟಿದವನ ಸ್ವರೂಪ ಹೇಳಲ್ಪಡುತ್ತೆ.

## ಸಿಂಹರಾಶಿ ಸ್ಥಿತ ಕುಜಫಲಂ

ಟೀಕು॥ ಸಿಂಹೇ-ಸಿಂಹರಾಶಿಯಲ್ಲಿ ಕುಜನಿರುವಾಗ ಹುಟ್ಟಿದವನು, ನಿಃಸ್ವಃ-ದರಿದ್ರನಾಗುವನು. ಕ್ಲೇಶಸಹಃ-ಕ್ಲೇಶವನ್ನು ಸಹಿಸತಕ್ಕವನು, ವನಾಂತರಚರಃ- ಅರಣ್ಯದಲ್ಲಿ ಸಂಚರಿಸುವವನಾಗುವನು, ಅಭಯೋ ವನಚರಃ-ಅರಣ್ಯ ಸಂಚಾರದಲ್ಲಿ ನಿರ್ಭಯ

* ಅಭಯೋ ವನಚರಃ ॥ ಎಂದು ಆಂಧ್ರದೇಶ ಪಾಠವಿರುತ್ತೆ.

ಉಳ್ಳವನು. ಅಲ್ಪದಾರಾತ್ಮಜಃ-ಅಲ್ಪವಾದ ದಾರಾಪುತ್ರರುಳ್ಳವನು. ಈ ವಿಷಯಕ್ಕೆ ಢುಂಡಿರಾಜರ ಅಭಿಪ್ರಾಯ ॥ಶ್ಲೋಕ॥ ಅತಿತರಾಂ ಸುತದಾರ ಸುಖಾನ್ವಿತೋ ಹತರಿಪುರ್ವಿತತೋ ದ್ಯಮಸಾಹಸಃ । ಅವನಿಜೇ ಮೃಗರಾಜಗತೇ ಪುಮಾನನಯತಾ ನಯತಾಭಿಯುತೋಽಭವೇತ್ ॥೨೦॥ ತಾ॥ ಸೂರ್ಯಕ್ಷೇತ್ರವಾದ ಸಿಂಹರಾಶಿಯಲ್ಲಿ ಕುಜನಿರುವಾಗ ಹುಟ್ಟಿದವನು ಪುತ್ರ ಮತ್ತು ಹೆಂಡತಿ ಪತ್ನೀ ಮೊದಲಾದವರಿಂದ ಸೌಖ್ಯ ಹೊಂದುವನು ಶತ್ರುನಾಶ ಮಾಡುವನು. ನಿರರ್ಥಕವಾಗಿ ಉದ್ಯೋಗ ಮಾಡುವನು. ಅತಿಸಾಹಸವಂತನು ನೀತಿಭ್ರಷ್ಟ, ಅನ್ವತ ಕರ್ಮಮಾಡುವವನು ಆಗುವನು ॥೨೦॥ ಈ ವಿಷಯ ವರಾಹಮಿಹಿರರ ಮತಕ್ಕೆ ಸ್ವಲ್ಪ ವಿರೋಧವಾಗಿರುತ್ತೆ. ಆದರೆ ಪ್ರತ್ಯಕ್ಷವಾಗಿ ಅನುಭವಸಿದ್ಧವಾಗಿರುವುದರಿಂದ ಈ ವಿಷಯ ಗ್ರಾಹ್ಯ ಮಾಡತಕ್ಕದ್ದು.

## ಗುರುಕ್ಷೇತ್ರ ಸ್ಥಿತ ಕುಜಫಲಂ

(ಧನುಸ್ಸು, ಮೀನ) ಜೈವೇ-ಗುರುಕ್ಷೇತ್ರಗಳಾದ ಧನುರ್ಮೀನಗಳಲ್ಲಿ ಅಂಗಾರಕ ನಿರುವಾಗ ಹುಟ್ಟಿದವನು, ನೈಕರಿಪುಃ-ಬಹು ಜನ ಶತ್ರುಗಳುಳ್ಳವನು. ನರೇಂದ್ರ ಸಚಿವಃ-ರಾಜಮಂತ್ರಿಯಾಗುವನು. ಖ್ಯಾತಃ-ಪ್ರಖ್ಯಾತನಾದವನು. ಅಭಯಃ-ಭಯವಿಲ್ಲದವನು, ಅಲ್ಪಾತ್ಮಜಃ-ಅಲ್ಪ ಸಂಖ್ಯಾತರಾದ ಪುತ್ರರುಳ್ಳವನು, ಈ ವಿಷಯ ದಲ್ಲಿ ಢುಂಡಿರಾಜರು ॥ ಧನುಸ್ಸು, ಮೀನ ಈ ರಾಶಿಗಳಲ್ಲಿ ಅಂಗಾರಕನಿದ್ದ ಫಲ ಪ್ರತ್ಯೇಕವಾಗಿ ಹೇಳಿರುತ್ತಾರೆ ॥೨೧॥

## ಧನುರ್ಧರ ಸ್ಥಿತ ಕುಜಫಲಂ

ಶ್ಲೋಕ॥ ರಥತುರಂಗಮ ಗೌರವ ಸಂಯುತಃ ಪರಮರಾತಿ ತನುಕ್ಷತಿ ದುಃಖಿತಃ। ಭವತಿ ನಾವನಿಜೇ ಧನುಷಿಸ್ಥಿತೇ ಸುವನಿತಾ ವನಿತಾ ಭ್ರಮಣಪ್ರಿಯಃ ॥೨೧॥ತಾ॥ ಧನುರಾಶಿಯಲ್ಲಿ ಕುಜನಿರುವಾಗ ಹುಟ್ಟಿದವನು ರಥ, ಅಶ್ವ ಮೊದಲಾದ ವಾಹನ ಉಳ್ಳವನು. ಶತ್ರುವಿನಿಂದಲೂ, ಶರೀರ ವ್ಯಾಧಿಯಿಂದಲೂ, ಶರೀರ ದುಃಖ ಉಳ್ಳವನು, ಉತ್ತಮ ಸ್ತ್ರೀಯಲ್ಲಿ ಸ್ನೇಹ ಉಳ್ಳವನು, ಪ್ರಪಂಚದ ಮೇಲೆ ತಿರುಗಬೇಕೆಂಬ ಆಶೆಯುಳ್ಳವನು. ಈ ವಿಧವಾದ ಸ್ವಭಾವ ಉಳ್ಳವನಾಗುವನು.

## ಮಕರರಾಶಿ ಸ್ಥಿತ ಕುಜಫಲಂ

ಮೃಗಗತೇ-ಮಕರದಲ್ಲಿ ಕುಜನಿರುವಾಗ ಹುಟ್ಟಿದವನು. ಭೂರಿಧನಾತ್ಮಜಃ-ಬಹುಧನ ಮತ್ತು ಬಹು ಪುತ್ರರುಳ್ಳವನು, ಭೂಪಃ-ಭೂಪತಿಯಾಗುವನು, ಅಥವಾ ರಾಜನಾಗದಿದ್ದರೆ, ತತ್ಸಮಃ-ರಾಜಸಮಾನನಾಗುವನು. ಈ ವಿಷಯದಲ್ಲಿ ಢುಂಡಿರಾಜಃ

।।ಶ್ಲೋಕ।। ರಣಪರಾಕ್ರಮ ತಾವನಿತಾಸುಖಂ ನಿಜಜನ ಪ್ರತಿಕೂಲತಯಾ-ಶ್ರಮಃ ।
ವಿಭುವತಾ ಮನುಜಸ್ಯ ಧರಾತ್ಮಜೇ ಮಕರಗೇ ಕರಗೇ ಪರಮಾಭವೇತ್ ।।೨೪।।
ತಾ।। ಜನ್ಮಕಾಲದಲ್ಲಿ ಮಕರರಾಶಿಯಲ್ಲಿ ಕುಜನಿದ್ದರೆ ಆ ಮನುಷ್ಯನು ಯುದ್ಧ ಪ್ರಸಂಗದಲ್ಲಿ ಪರಾಕ್ರಮ ಮಾಡುವವನು. ಸ್ತ್ರೀಯರಿಂದ ಸುಖಹೊಂದುವವನು, ಆಪ್ತ ಸ್ವಕೀಯರು ಪ್ರತಿಕೂಲವಾಗಿರುವುದರಿಂದ ಶ್ರಮಹೊಂದುವನು, ಅನೇಕವಾದ ವೈಭವಯುಕ್ತನಾಗುವನು, ಹಸ್ತಗತವಾದ ಲಕ್ಷ್ಮೀಪ್ರಸನ್ನತೆಯುಳ್ಳವನು, (ಅಂದರೆ ಲಕ್ಷ್ಮಿಯನ್ನು ಧರಿಸಿರುವವನೆಂದು ಹೇಳುವರು) ಲಕ್ಷ್ಮೀಸಾನ್ನಿಧ್ಯ ಉಳ್ಳವನು ।।೨೨।।

## ಕುಂಭರಾಶಿ ಸ್ಥಿತ ಕುಜಫಲಂ

ಭೌಮೆ-ಕುಜನು, ಕುಂಭಸ್ಥಿತೇ-ಕುಂಭರಾಶಿಯಲ್ಲಿದ್ದಾಗ ಹುಟ್ಟಿದವನು, ದುಃಖಾರ್ತಃ-ಯಾವಾಗಲು ದುಃಖ ಪೀಡಿತನಾಗುವನು, ವಿಧನಃ-ಧನವಿಲ್ಲದವನು, ಅಟನಃ-ತಿರುಗಾಡುವವನಾಗುವನು, ಅನೃತರತಃ-ಸುಳ್ಳುಹೇಳುವವನಾಗುವನು, ತೀಕ್ಷ್ಣಶ್ಚ-ಉಗ್ರಸ್ವಭಾವ ಉಳ್ಳವನಾಗುವನು. ಈ ವಿಷಯದಲ್ಲಿ ಧುಂಡಿರಾಜಃ ।।ಶ್ಲೋಕ।। ವಿನಯತಾರಹಿತಂ ಸಹಿತಂ ರುಜಾನಿಜ ಜನಪ್ರತಿಕೂಲ ಮಲಂಖಲಮ್। ಪ್ರಕುರತೇ ಮನುಜಂ ಕಲಶಾಶ್ರಿತಃ ಕ್ಷಿತಿತೋತಿ ಸುತೋದ್ಭವ ದುಃಖಿತಂ ।।೨೩।।ತಾ।। ಕುಂಭರಾಶಿಯಲ್ಲಿ ಕುಜನಿರುವಾಗ ಹುಟ್ಟಿದವನು ವಿನಯವಿಲ್ಲದವನು, ನಿರಂತರ ರೋಗಿ, ಸ್ವಜನರಿಗೆ ಪ್ರತಿಕೂಲವಾಗಿರುವನು. ಅತಿಶಯ ದುಷ್ಟ, ಬಹು ಸಂತತಿ ಆದ್ದರಿಂದ ದುಃಖಪಡುವನು, ಈ ಪ್ರಕಾರ ಫಲಗಳುಳ್ಳವನಾಗುವನು.

## ಮೀನರಾಶಿ ಸ್ಥಿತ ಕುಜಫಲಂ

ಶ್ಲೋಕ।। ವ್ಯಸನತಾಂ ಖಲತಾ ಮದಯಾಲುತಾಂ ವಿಕಲತಾಂ ಚಲನಂ ಚ ನಿಜಾಲಯಾತ್ ।। ಕ್ಷಿತಿಸುವ ಸ್ತಿಮಿನಾಸು ಸಮನ್ವಿತೋ ವಿಮತಿನಾಮತಿ ನಾಶ ನಮಾದಿಶೇತ್ ।।೨೪।।ತಾ।। ದುರ್ವ್ಯಸನ ಉಳ್ಳವನು, ದುಷ್ಟ, ನಿರ್ದಯ, ಪೀಡಿತ ಪರದೇಶದಲ್ಲಿ ವಾಸಮಾಡುವನು, ದುಷ್ಟರೊಡನೆ ಸ್ನೇಹಮಾಡುವನು, ಈ ವಿಧವಾದ ಗುಣ ಉಳ್ಳವನು ।।೨೪।।

ಇತಿ ಮೇಷಾದಿ ರಾಶಿಸ್ಥಿತ ಕುಜಫಲಂ

## ಅಥ ಮೇಷಾದಿ ರಾಶಿ ಸ್ಥಿತ ಬುಧಫಲಂ

ಮೂಲ।। ದ್ಯೂತರ್ಣ ಪಾನರತನಾಸ್ತಿಕ ಚೋರನಿಸ್ವಾಃ । ಕುಸ್ತ್ರೀಕಕೂಟ ಕೃದ ಸತ್ಯರತಾಃ ಕುಜರ್ಕ್ಷೇ।। ಆಚಾರ್ಯಭೂರಿ ಸುತದಾರಧನಾರ್ಜನೇಷ್ಟಾ। ಶೌಕ್ರೇವದಾನ್ಯಗುರುಭಕ್ತಿರತಾಶ್ಚ ಸೌಮ್ಯೇ ।।೮।।

ಅವತಾರಿಕೆ।। ಬುಧನು-ಮೇಷ, ವೃಶ್ಚಿಕ, ವೃಷಭ, ತುಲಾ ಈ ನಾಲ್ಕು ರಾಶಿಗಳಲ್ಲಿರುವಾಗ ಹುಟ್ಟಿದವನ ಸ್ವರೂಪ ವಿಚಾರವು, ಸೌಮ್ಯೇ-ಬುಧನು, ಕುಜರ್ಕ್ಷೆ-ಅಂಗಾರಕ ಕ್ಷೇತ್ರವಾದ ಮೇಷ, ವೃಶ್ಚಿಕಗಳಲ್ಲಿರುವಾಗ ಹುಟ್ಟಿದವನು, ದ್ಯೂತಃ-ಜೂಜಾಡುವನು. ಋಣಃ-ಸಾಲಗಾರನಾಗುವನು. ಪಾನ-ಮದ್ಯಾದಿ ಪಾನ, ರತಃ-ಆಸಕ್ತಿಯುಳ್ಳವನು, ರತಃಶಬ್ದಃ-ದ್ಯೂತಾದಿ ಶಬ್ದತ್ರಯೇಷು ಪ್ರತ್ಯೇಕಂ ಸಂಬಧ್ಯತೇ ಯಥಾ-ದ್ಯೂತಃ ರತಃ, ಋಣರತಃ, ಪಾನರತಃ, ಯೌಗಿಕತ್ವಾತ್ ।। ನಾಸ್ತಿಕ-ವೇದ ಬಾಹ್ಯವಾದವನ್ನೂ ಪರಲೋಕವಿಲ್ಲವೆಂಬುವ ನಾಸ್ತಿಕವಾದವನ್ನೂ ಮಾಡುವನು, ಚೋರಃ-ಕಳ್ಳನು, ನಿಸ್ವಃ-ದರಿದ್ರನು, ಕುಸ್ತ್ರೀಕ-ದುಷ್ಟ (ಕೆಟ್ಟ) ಹೆಂಡತಿಯುಳ್ಳವನು, ಕೂಟಕೃತ್-ಕಪಟ ಉಳ್ಳವನು, ಅಸತ್ಯರತಾಃ-ಅಸತ್ಯರತನು, (ಅಂದರೆ ಅಪ್ರಾಮಾಣಿಕತೆಯುಳ್ಳವನು) ಈ ವಿಷಯದಲ್ಲಿ ಧುಂಡಿರಾಜರು ಮೇಷ ವೃಷಭರಾಶಿಗಳಲ್ಲಿದ್ದ ಬುಧನಿಗೆ ಪ್ರತ್ಯೇಕ ಫಲ ಹೇಳಿರುವರು.

## ಮೇಷರಾಶಿ ಸ್ಥಿತ ಬುಧಫಲಂ

ಶ್ಲೋಕ।। ಖಲಮತಿಃ ಕಿಲಚಂಚಲ ಮಾನಸೋ ಬಹುಲ ಭುಕ್ಕಲಹಾಕುಲಿ-ತೋನರಃ ।। ಅಕರುಣೋ ನ್ನಣವಾಂಶ್ಚ ಬುಧೇ ಭಮೇದ ವಿಗತೇ ವಿಗತೇಕ್ಷಿತ ಸಾಧನಃ ।।೨೫।। ತಾ।। ಜನ್ಮಕಾಲದಲ್ಲಿ ಬುಧನು ಮೇಷದಲ್ಲಿದ್ದರೆ ಆ ಮನುಷ್ಯನು ದುಷ್ಟಬುದ್ಧಿ, ಚಂಚಲ ಮನಸ್ಸು, ಬಹುಭುಕ್, ಅತಿಭೋಜನ, ನಿರಂತರ ಕಲಹಪ್ರಿಯ, ಅತಿ ನಿರ್ದಯ, ಸಾಲಗಾರ, ಸರ್ವಸಾಧನರಹಿತ, ಈ ಗುಣಗಳಿಂದ ಕೂಡಿದವನು.

## ವೃಶ್ಚಿಕರಾಶಿ ಸ್ಥಿತ ಬುಧಫಲಂ

ಶ್ಲೋಕ।। ಕೃಪಣತಾತಿರತಿ ಪ್ರಣಯಶ್ರಮೋವಿಹಿತ ಕರ್ಮಸುಖೋಪಹತಿ ರ್ಭವೇತ್।। ಧವಳ ಭಾನು ಸುತೇಲಿಗತೇಕ್ಷಿತಿಸ್ತಲಸತೋ ಲಸತೋಷಿಚವಾಸ್ತುನಃ ।।೨೬।।ತಾ।। ಯಾರ ಜನ್ಮಕಾಲದಲ್ಲಿ ವೃಶ್ಚಿಕರಾಶಿಯಲ್ಲಿ ಬುಧನಿರುತ್ತಾನೋ ಆ ಮನುಷ್ಯನು ಅತಿ ಕೃಪಣ, ಅತಿ ವಿಷಯೋಪಭೋಗದಿಂದ ಶ್ರಮ ಉಳ್ಳವನು, ಅನುಚಿತ ಕಾರ್ಯ ಮಾಡಿದ್ದರಿಂದ ಸುಖವಿಲ್ಲದವನು, ಆಲಸ್ಯಮಾಡುವುದರಿಂದ ಯಾವಾಗಲೂ ನಷ್ಟ ಹೊಂದುವನು, ಆಶೆಪಟ್ಟ ವಸ್ತು ಸಿಕ್ಕದವನು, ಈ ವಿಧವಾದ ಗುಣ ಉಳ್ಳವನಾಗುವನು.

## ಸಶುಕ್ರಕ್ಷೇತ್ರ ಸ್ಥಿತ ಬುಧಫಲಂ

(ವೃಷಭ ತುಲ) ಶೌಕ್ರೇ-ಶುಕ್ರಕ್ಷೇತ್ರಗಳಾದ ವೃಷಭ ತುಲಾ ರಾಶಿಗಳಲ್ಲಿ ಬುಧ ನಿರುವಾಗ ಹುಟ್ಟಿದವನು, ಆಚಾರ್ಯ-ಉಪದೇಶ-ಕರ್ತೃವಾಗುವನು, ಭೂರಿಸುತದಾರ-

ಬಹು ಪುತ್ರರು, ಬಹುಜನ ಪತ್ನಿಗಳುಳ್ಳವನು, ಧನಾರ್ಜನೇಚ್ಛು-ಧನ ಸಂಪಾದನೆಯ ಕಾರ್ಯದಲ್ಲಿ ಇಷ್ಟವುಳ್ಳವನು, ವದಾನ್ಯ-ವಾಗ್ಮೀಯು, ಗುರುಭಕ್ತಿ ರತಾಶ್ಚ-ಗುರುಭಕ್ತಿಯಲ್ಲಿ ಆಸಕ್ತಿಯುಳ್ಳವನು, (ಅಂದರೆ ಮಾತೃಪಿತೃ ಆಚಾರ್ಯಾದಿಗಳಲ್ಲಿ ಭಕ್ತಿಯುಳ್ಳವನು) ಈ ವಿಷಯದಲ್ಲಿ ಧುಂಡಿರಾಜರು ವೃಷಭ ತುಲಾ ರಾಶಿಸ್ಥಿತ ಬುಧನಿಗೆ ಪ್ರತ್ಯೇಕಫಲ ಹೇಳಿರುವರು.

## ವೃಷಭರಾಶಿ ಸ್ಥಿತ ಬುಧಫಲಂ

ಶ್ಲೋಕ|| ವಿತರಣಪ್ರಣಯಂ ಗುಣಿ ನಂದಿಶೇದ್ಬಹುಕಲಾ ಕುಶಲಂ ರತಿಲಾಲಸಂ| ಧನಿನ ಮಿಂದುಸುತೋ ವೃಷಭಸ್ಥಿತಸ್ತನುಜತೋ ನುಜತೋತಿ ಸುಖಿಂನರಮ್ ||೨೭|| ತಾ|| ವೃಷಭದಲ್ಲಿ ಬುಧನಿರುವಾಗ ಹುಟ್ಟಿದವನು, ಉದಾರ ಗುಣ ಉಳ್ಳವನು, ಗುಣವಂತ, ದಾತಾ, ಅನೇಕ ಕಲಾಕುಶಲ, ವಿಷಯೋಪಭೋಗಗಳಲ್ಲಿ ಪ್ರೀತಿಯುಳ್ಳವನು, ಧನವಂತ, ಬಂಧುಗಳು, ಪುತ್ರರು ಮೊದಲಾದವರಿಂದ ಸುಖವನ್ನು ಹೊಂದುವನು ||೨೭||

## ತುಲಾರಾಶಿ ಸ್ಥಿತ ಬುಧಫಲಂ

ಶ್ಲೋಕ|| ಅನೃತವಾಗ್ವ್ಯಯಭಾಕ್ ಖಲುಶಿಲ್ಪ ವಿತ್ಕುಚರಿತಾ ಭಿರತಿರ್ಬಹು-ಜಲ್ಪಕಃ | ವ್ಯಸನವಾನ್ಮನುಜಃ ಸಹಿತೇ ಬುಧೇತ್ರತುಲಯಾ ತುಲಯಾತ್ವ ಸತಾಯುತಃ ||೨೮|| ತಾ|| ತುಲಾರಾಶಿಯಲ್ಲಿ ಬುಧನಿರುವಾಗ ಹುಟ್ಟಿದವನು, ಸುಳ್ಳು ಹೇಳುವನು, ಖರ್ಚುಮಾಡುವನು, (ವ್ಯಯರತ) ಶಿಲ್ಪಿ ಕೆಲಸಗಾರ, ಸುಳ್ಳು ಚರಿತ್ರೆಯಲ್ಲಿ ಆಶೆಯುಳ್ಳವನು, ನಿರರ್ಥಕವಾಗಿ ಗಡಗಡನೆ ಮಾತನಾಡುವನು, ಅನೇಕ ವಿಧವಾದ ದುರ್ವ್ಯಸನವುಳ್ಳವನು, ದುರ್ಜನರಲ್ಲಿ ಪ್ರೀತಿಯುಳ್ಳವನು, ಈ ವಿಧವಾದ ಗುಣವುಳ್ಳವನೆಂದು ಧುಂಡಿರಾಜರು ಅಭಿಪ್ರಾಯಪಟ್ಟಿರುವರು. ವರಾಹಮಿಹಿರರ ಅಭಿಪ್ರಾಯಕ್ಕೆ ಇದು ಸ್ವಲ್ಪ ಭಿನ್ನವಾಗಿರುವುದರಿಂದ ಸಮಾಧಾನ ತೃಪ್ತಿಯಾಗಲಿಲ್ಲ. ಗ್ರಂಥಾಂತರ ಸಮ್ಮತಿ ನೋಡಿದಲ್ಲಿ ಉಚ್ಚಚ್ಯುತಿಯನ್ನು ಹೊಂದಿದ ಬುಧನು ತುಲಾರಾಶಿ ಮಿಶ್ರಕ್ಷೇತ್ರವಾದರು ಈ ಫಲ ಕೊಡುವನೆಂದು ಜಾಗೇಶ್ವರರು ಹೇಳಿರುತ್ತಾರೆ.

ಮೂಲ|| ಏಕತ್ವನಶಾಸ್ತ್ರಕಲಾವಿದಗ್ಧಃ | ಪ್ರಿಯಂವದಃ ಸೌಖ್ಯರತಃಸ್ತೃತೀಯೇ || ಜಲಾರ್ಜಿತಸ್ವಃ ಸ್ವಜನಸ್ಯಶತ್ರುಃ | ಶಶಾಂಕಜೇ ಶೀತಕ ರರ್ಕ್ಷಯುಕ್ತೇ ||೯||

ಟೀಕು|| ಮಿಥುನ ಕರ್ಕಾಟಕ ರಾಶಿಗಳಲ್ಲಿ ಬುಧನಿರುವಾಗ ಹುಟ್ಟಿದವನು ಸ್ವಭಾವ ಹೇಳಲ್ಪಡುತ್ತೆ.

## ಮಿಥುನ ಸ್ಥಿತ ಬುಧಫಲಂ

ಶಶಾಂಕಜ-ಬುಧನು, ತೃತೀಯೇ-ಮಿಥುನ ರಾಶಿಯಲ್ಲಿದ್ದಾಗ ಹುಟ್ಟಿದವನು, ವಿಕತ್ಥನ-ವಾಚಾಲಕನು, (ಅಂದರೆ ಅಸತ್ಯವಾದಿಯು) ಶಾಸ್ತ್ರ-ವ್ಯಾಕರಣಾದಿ ಶಾಸ್ತ್ರಗಳಲ್ಲಿಯೂ, ಕಲಾ-ಗೀತವಾದ್ಯಾದಿ ಶಾಸ್ತ್ರದಲ್ಲಿಯೂ, ವಿದಗ್ಧ-ಚಾತುರ್ಯ ಉಳ್ಳವನು, ಪ್ರಿಯಂವದಃ-ಕಿವಿಗಿಂಪಾಗಿ ಮಾತನಾಡುವವನು, ಸೌಖ್ಯರತಃ-ಸುಖಾಸಕ್ತನು ಆಗುವನು. ಈ ವಿಷಯದಲ್ಲಿ ಶ್ಲೋಕ॥ ಧುಂಡಿರಾಜಃ॥ ಪ್ರಿಯವಚೋ ರಚನಾಸು ವಿಚಕ್ಷಣೋ ದ್ವಿಜನನೀ ತನಯಃ ಶುಭವೇಷಭಾಕ್ ॥ ಮಿಥುನಗೇ ಜನನೇ ಶಶಿನಂದನೇ ಸದನತೋ ಧನತೋಽಪಿ ಸುಖೀನರಃ ॥೨೯॥ತಾ॥ ಮಿಥುನದಲ್ಲಿ ಬುಧನಿದ್ದಾಗ ಹುಟ್ಟಿದವನು ಪ್ರಿಯವಾಗಿ ಮಾತನಾಡುವವನು, ಚಮತ್ಕಾರ ಕಾರ್ಯ ರಚನೆಯಲ್ಲಿ ಕುಶಲತೆಯುಳ್ಳವನು, ದ್ವಿಮಾತೃ ಉಳ್ಳವನು, ಚೆನ್ನಾಗಿ ಅಲಂಕಾರ ಮಾಡುವವನು, ಮನೆ, ಭೋಜನ, ಇವುಗಳಲ್ಲಿ ಸೌಖ್ಯ ಉಳ್ಳವನು ಆಗುವನು.

## ಕರ್ಕರಾಶಿ ಸ್ಥಿತ ಬುಧಫಲಂ

ಶಶಾಂಕಜ-ಬುಧನು, ಶೀತಕರರ್ಕ್ಷಯುಕ್ತೆ-ಚಂದ್ರಗ್ರಹವಾದ ಕರ್ಕಾಟಕದಲ್ಲಿದ್ದರೆ, ಜಲಾರ್ಜಿತಸ್ವ-ಉದಕದಿಂದ ಹುಟ್ಟಿದ ವಸ್ತುಗಳಿಂದ ಸಂಪಾದಿಸಿದ ಧನವುಳ್ಳವನು, ಪಾಠಾಂತರ ॥ ಬಲಾರ್ಜಿತಸ್ವ-ಪರಾಕ್ರಮದಿಂದ ಸಂಪಾದಿಸಿದ ಧನವುಳ್ಳವನು, ಸ್ವಜನಸ್ಯ-ಬಂಧುಜನರಿಗೆ, ಶತ್ರುಃ-ಶತ್ರುವಾದವನು, ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಕುಚರಿತಾ ನಿಜಗೀತಕಥಾ ದರೋನೃಪರುಚಿಃ ಪರದೇಶ ಗತಿರ್ನೃಣಾಂ॥ ಕಿಲಕುಲೀರಗತೇ ಶಶಭೃತ್ಸುತೇ ಸುರತತತ್ಪರತಾ ನಿತರಾಂಭವೇತ್ ॥೩೦॥ತಾ॥ ಕರ್ಕಾಟಕ ರಾಶಿಯಲ್ಲಿ ಬುಧನಿರುವಾಗ ಹುಟ್ಟಿದವನು ಕುಚರಿತ್ರೆ ಉಳ್ಳವನು, ಗಾಯನದಲ್ಲಿ ಪ್ರೀತಿಯುಳ್ಳವನು, ರಾಜನಲ್ಲಿ ಸ್ನೇಹವುಳ್ಳವನು, ಪರದೇಶದಲ್ಲಿ ವಾಸಿಸುವನು, ವಿಷಯಸುಖದಲ್ಲಿ ನಿಮಗ್ನನಾಗಿರುವನು, ಈ ವಿಧವಾದ ಗುಣ ಉಳ್ಳವನಾಗುವನು ॥೯॥

ಮೂಲ॥ ಸ್ತ್ರೀದ್ವೇಷ್ಯೋ ವಿಧನಸುಖಾತ್ಮಜೋಽಟನೋಜ್ಞಃ । ಸ್ತ್ರೀಲೋಲಃ ಸ್ವಪರಿಭವ್ಯೋರ್ಕರಾಶಿಗೇಜ್ಞೇ ॥ ತ್ಯಾಗೀಜ್ಞಃ ಪ್ರಚುರಗುಣಃ ಸುಖೀಕ್ಷಮಾವಾನ್ ಯುಕ್ತಿಜ್ಞೋ ವಿಗತಭಯಶ್ಚ ಷಷ್ಠರಾಶೌ ॥೧೦॥

ಅವತಾರಿಕೆ॥ ಸಿಂಹ, ಕನ್ಯಾರಾಶಿಗಳಲ್ಲಿ ಬುಧನಿರುವಾಗ ಹುಟ್ಟಿದವನ ಸ್ವರೂಪ ವಿಚಾರ.

## ಸಿಂಹರಾಶಿಸ್ಥ ಬುಧಫಲಂ

ಟೀಕು॥ ಜ್ಞೇ-ಬುಧನು, ಅರ್ಕರಾಶಿಗೇ-ಸೂರ್ಯಕ್ಷೇತ್ರವಾದ ಸಿಂಹದಲ್ಲಿರುವಾಗ ಹುಟ್ಟಿದವನು, ಸ್ತ್ರೀದ್ವೇಷ್ಯಃ-ಸ್ತ್ರೀಯರಲ್ಲಿ ಇಷ್ಟವಿಲ್ಲದವನು, ವಿಧನಸುಖಾತ್ಮಜಃ- ಧನಸುಖ ಪುತ್ರವಿವರ್ಜಿತನು, ಆಟನಂ-ಸಂಚಾರಶೀಲನು, ಅಜ್ಞಃ-ಮೂರ್ಖನು, ಸ್ತ್ರೀಲೋಲಃ-ವನಿತಾಭಿಲಾಷಿಯು, (ಯಾವಾಗಲೂ ಸ್ತ್ರೀಯರಲ್ಲಿ ಆಲೋಚನೆ ಉಳ್ಳವನು), ಸುಪರಿಭವಃ-ಹೆಚ್ಚಾಗಿ ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟವನು, ಈ ವಿಧವಾದ ಗುಣವುಳ್ಳವನಾಗುವನು. ಈ ವಿಷಯಕ್ಕೆ ಧುಂಡಿರಾಜಃ ॥ ಶ್ಲೋಕ॥ ಅನೃತತಾ ಸಹಿತಂ ವಿಮತಿಂಪರಂ ಸಹಜ ವೈರಕರಂ ಕುರುತೇನರಂ ॥ ಯುವತಿ ಹರ್ಷಪರಂ ಶಶಿನಃ ಸುತೋಹರಿಗತೋ ರಿಗತೋನ್ನತಿ ದುಃಖಿತಂ ॥೩೧॥ ಬುಧನು ಸಿಂಹರಾಶಿಯಲ್ಲಿದ್ದಾಗ ಹುಟ್ಟಿದವನು ಸುಳ್ಳು ಹೇಳುವವನು, ದುಷ್ಟ ಬುದ್ಧಿಯಿಂದ ಕಾರಣವಿಲ್ಲದೆ ಸರ್ವರಿಗೂ ದ್ವೇಷಮಾಡುವವನು, ಸ್ತ್ರೀಯರ ಆಸಕ್ತಿ ಹಿಡಿಯುವವನು, ಶತ್ರುಗಳ ಉತ್ಕರ್ಷ ನೋಡಿ ದುಃಖ ಹೊಂದುವವನು ಈ ಗುಣಗಳಿಂದ ಕೂಡಿದವನಾಗುವನು ॥೩೧॥

## ಕನ್ಯಾರಾಶಿ ಸ್ಥಿತ ಬುಧಫಲಂ

ಷಷ್ಠರಾಶೌ-ಕನ್ಯಾರಾಶಿಯಲ್ಲಿ ಬುಧನಿರುವಾಗ ಹುಟ್ಟಿದವನು, ತ್ಯಾಗೀ-ದಾತನು, ಜ್ಞಃ-ಪಂಡಿತನು, ಪ್ರಚುರಗುಣಃ-ಅಧಿಕವಾದ ವಿದ್ಯೆಯುಳ್ಳವನು, ಪ್ರಚುರಗುಣವೆಂದರೆ, ಶೌರ್ಯೋದಾರ್ಯಾದಿ ಗುಣದಿಂದ ಪ್ರಕಾಶವಾಗಿರುವವನು, ಸುಖೀ-ಸುಖವಂತನು, ಕ್ಷಮಾವಾನ್-ಶಾಂತಗುಣ ಉಳ್ಳವನು, ಯುಕ್ತಿಜ್ಞಃ-ಯುಕ್ತಿವಂತನು ವಿಗತಭಯಶ್ಚ-ಭಯವಿಲ್ಲದವನು ಆಗುವನು. ಈ ವಿಷಯಕ್ಕೆ ಧುಂಡಿರಾಜಃ ॥ ಶ್ಲೋಕ॥ ಸುವಚನಾನು ರತಶ್ಚತುರೋ ನರೋಃಖಿಲನ ಕರ್ಮ ಪರೋಹಿವರೋನ್ನತಿಃ ॥ ಶಶಿಸುತೇ ಯುವತೌಚಗತೇ ಸುಖೀ ಸುನಯನಾ ನಯನಾಂ ಚಲಚೇಷ್ಟಿತೈಃ ॥೩೨॥೧೦॥

ಮೂಲ॥ ಪರಕರ್ಮ ಕೃದಸ್ವ ಶಿಲ್ಪಬುದ್ಧಿಃ । ಋಣವಾನ್ವಿಷ್ಟಿಕರೋ ಬುಧೇರ್ಕ-
ಜರ್ಕ್ಷೇ॥ ನೃಪಸತ್ಕೃತ ಪಂಡಿತಾಪ್ತವಾಕ್ಯೋ । ನವಮೇಂತ್ಯೇ
ಜಿತಸೇವಕೋನ್ತ್ಯಶಿಲ್ಪಃ ॥೧೧॥

ಅವತಾರಿಕೆ॥ ಬುಧನು, ಮಕರ, ಕುಂಭ, ಧನುರ್ಮೀನ ರಾಶಿಗಳಲ್ಲಿದ್ದಾಗ ಹುಟ್ಟಿದವನ ಭಾವ.

## ಮಕರ ಕುಂಭ ರಾಶಿಸ್ಥಿತ ಬುಧಫಲಂ

ಟೀಕು॥ ಅರ್ಕಜರ್ಕ್ಷೇ-ಶನಿಕ್ಷೇತ್ರವಾದ ಮಕರ ಕುಂಭರಾಶಿಯಲ್ಲಿ ಬುಧೇ-ಬುಧನಿರುವಾಗ ಹುಟ್ಟಿದವನು, ಪರಕರ್ಮಕೃತ್-ಪರರ ಚಾಕರನಾಗುವನು,

*ಪಾ।। ಪರಕರ್ಮಕೃತ್ (ಅಂದರೆ ಅನ್ಯರ ಕಾರ್ಯಗಳನ್ನು ಆದರಣೆಯಿಂದ ಮಾಡು ವವನೆಂದು ಕೆಲವರು ಅರ್ಥಮಾಡಿರುವರು) ಅಸ್ವಃ-ದ್ರವ್ಯವಿಲ್ಲದವನು, ಶಿಲ್ಪಬುದ್ಧಿಃ-ಶಿಲ್ಪಕರ್ಮಗಳಲ್ಲಿ ಆಸಕ್ತಿಯುಳ್ಳವನು, ಋಣವಾರ್ತ-ಸಾಲಮಾಡಿ ತೀರಿಸದೆ ಹೋಗುವವನು. *ಗುಣವಾರ್ತ ಎಂದು ಪಾಠಾಂತರ, ಗುಣವಾರ್ತ-ಗುಣವಂತನು, ವಿಷ್ಟಿಕರಃ-ಭಾರವನ್ನು ಹೊರುವವನು ಈ ಬುಧನು ಮಕರ ಕುಂಭರಾಶಿಗಳಲ್ಲಿದ್ದ ಫಲ ಧುಂಡಿರಾಜರು ಪ್ರತ್ಯೇಕವಾಗಿ ಹೇಳಿರುವರು.

## ಮಕರರಾಶಿ ಸ್ಥಿತ ಬುಧಫಲಂ

ಶ್ಲೋಕ।। ರಿಪುಭಯೇನಯುತಃ ಕುಮತಿರ್ನರಃ ಸ್ಮರವಿಹೀನತರಃ ಪರಕರಕೃತ್। ಮಕರಗೇ ಸತಿ ಶೀತಕರಾತ್ಮಜೇ ವ್ಯಸನತಃ ಸನತಃ ಪುರುಷೋಭವೇತ್ ।।ತಾ।। ಮಕರರಾಶಿಯಲ್ಲಿ ಬುಧನಿರುವಾಗ ಹುಟ್ಟಿದವನು ಶತೃಭಯವಿರುವವನು, ದುರ್ಬುದ್ಧಿ ಯುಳ್ಳವನು, ನಪುಂಸಕ ಮತ್ತು ನಪುಂಸಕನು ಮಾಡುವ ಕೆಲಸ ಮಾಡುವನು. (ಅಂದರೆ ಸ್ತ್ರೀಯರನ್ನು ವೇಶ್ಯಾಚಾರಕ್ಕೆ ತೆಗೆದುಕೊಂಡು ಹೋಗಿ ಕೊಡುವಿಕೆ) ವ್ಯಸನ ಯೋಗದಿಂದ ದುರ್ದೆಶೆಗೆ ಬರುವವನು ಆಗುತ್ತಾನೆ ।।೩೩।।

## ಕುಂಭರಾಶಿ ಸ್ಥಿತ ಬುಧಫಲಂ

ಶ್ಲೋಕ।। ಗೃಹಕಲಿಂ ಕಲಶೇ ಶಶಿನಂದನೋ ವಿತನುತೆ ತನುತಾಂ ನನುದೀನತಾಮ್ । ಧನಪರಾಕ್ರಮ ಧರ್ಮವಿಹೀನತಾಮ್ ವಿಮತಿತಾ ಮತಿತಾಪಿತ ಶತ್ರುಭಿಃ ।।೩೪।।ತಾ।। ಕುಂಭದಲ್ಲಿ ಬುಧನಿದ್ದರೆ, ಮನೆಯಲ್ಲಿ ನಿರಂತರ ಕಲಹ ಮಾಡುವನು. ದುರ್ಬಲ ಶರೀರ ಉಳ್ಳವನು, ದೀನ, ಧನಹೀನ, ಪರಾಕ್ರಮಹೀನ ಅಧರ್ಮಿ ಬುದ್ಧಿಹೀನ, ಶತ್ರುಗಳಿಂದ ದುಃಖ ಹೊಂದುವವನಾಗುವನು. ।।೩೪।।

## ಧನುರಾಶಿ ಸ್ಥಿತ ಬುಧಫಲಂ

ನವಮೇ-ಧನುರಾಶಿಯಲ್ಲಿ ಬುಧನಿರುವಾಗ ಹುಟ್ಟಿದವನು, ನೃಪಸತ್ಕೃತ-ರಾಜಪೂಜಿತನು, ಪಂಡಿತ-ವಿದ್ವಾಂಸನು, ಆಪ್ತವಾಕ್ಯಃ-ವ್ಯವಹಾರದಲ್ಲಿ ಆಪ್ತವಾಕ್ಯವನ್ನು ಕೇಳಿ ಅನುಕೂಲಪಡಿಸಿಕೊಳ್ಳುವವನಾಗುವನು. ಈ ವಿಷಯದಲ್ಲಿ ಧುಂಡಿರಾಜಃ ।।ಶ್ಲೋಕ।। ವಿತರಣ ಪ್ರಣಯೋ ಬಹು ವೈಭವಃ ಕುಲಪತಿಶ್ಚ ಕಲಾಕು ಶಲೋಭವೇತ್। ಶಶಿಸುತೇತ್ರ ಶರಾಸನ ಸಂಸ್ಥಿತೆ ವಿಹಿತಯಾ

* ಪರಕರಕೃತ್ ।।ಪಾ।। ಆಂಧ್ರದೇಶದ ಪುಸ್ತಕದಲ್ಲಿ.

** ಗುಣವಾರ್ತ ।।ಪಾ।। ದ್ರಾವಿಡದೇಶದ ಪಾಠವಿರುತ್ತೆ.

ಹಿತಯಾರಮಯಾನ್ವಿತಃ ॥೩೫॥ತಾ॥ ದಾನಪ್ರಿಯ, ಅನೇಕ ವೈಭವಸಂಪನ್ನ, ಕುಲಶ್ರೇಷ್ಠ, ಕಲಾಕುಶಲ, ಯೋಗ್ಯಹಿತಕಾರಕರ ಮಾತನ್ನು ಕೇಳಿ ಆಚರಿಸುವವನು, ಲಕ್ಷ್ಮಿಯಂಥಾ ಸ್ತ್ರೀಯನ್ನು ಉಳ್ಳವನು ಆಗುವನು ॥೩೫॥

## ಮೀನರಾಶಿಸ್ಥ ಬುಧಫಲಂ

ಅಂತೇ-ವಿಮಾನದಲ್ಲಿ ಬುಧನಿರುವಾಗ ಹುಟ್ಟಿದವನು, ಜಿತಸೇವಕಃ-ಪರಾಭಿಪ್ರಾಯವನ್ನು ತಿಳಿದು ವರ್ತಿಸುವ ಸೇವಕನಾಗುವನು. *ಜಿತಸೇವಕಃ-ಅಂದರೆ ಜೈಸುವಂಥ ಸೇವಕರುಳ್ಳವನೆಂದು ಕರ್ನಾಟಕ ದೇಶದಲ್ಲಿ ಪಾಠವಿರುವುದು, ಅಂತ್ಯ ಶಿಲ್ಪಿ-ಚರ್ಮಕಾರ ಪಾದುಕಾದಿಗಳನ್ನು ಮಾಡುವವನು, ಕೆಲವರು ನೀಚಶಿಲ್ಪವೆಂಬು ವುದಕ್ಕೆ ದಾರುಮಯ ಶಿಲಾಮಯ ಲೋಹಮಯವಾದ ಯಂತ್ರ ಮೊದಲಾದ ಶಿಲ್ಪ-ಚರ್ಮಕಾರ ಪಾದುಕಾದಿಗಳನ್ನು ಮಾಡುವವನು, ಕೆಲವರು ನೀಚಶಿಲ್ಪವೆಂಬು ವುದಕ್ಕೆ ಲೋಹ ಯಂತ್ರಾದಿ ವಿಷಯಕ್ಕನುವರ್ತಿಸುತ್ತದೆಂದು ಭಿನ್ನಾಭಿಪ್ರಾಯ ಮಾಡುವರು. ಈ ವಿಷಯಕ್ಕೆ ॥ಧುಂಡಿರಾಜಃ॥ಶ್ಲೋಕ॥ ಪರಧನಾಧಿಕ ರಕ್ಷಣ ತತ್ಪರೋದ್ವಿಜ ಸುರಾನುಚರೋಹಿನರೋ ಭವೇತ್ । ಶಶಿಸುತೇ ಪೃಥುಹೋಮ ಸಮಾಶ್ರಿತೇ ಸುವದನಾ ವದನಾವಿಲೋಕನಃ ॥೩೬॥ತಾ॥ ಬುಧನು ಮೀನರಾಶಿಯಲ್ಲಿರುವಾಗ ಹುಟ್ಟಿದವನು ಪರರ ಧನಾದಿ ಕೋಶಸ್ಥಾನ ರಕ್ಷಣೆ ಮಾಡುವುದರಲ್ಲಿ ತತ್ಪರ, ಬ್ರಾಹ್ಮಣ ಮತ್ತು ದೇವರ ಸೇವೆ ಮಾಡುವುದರಲ್ಲಿ ಆಸಕ್ತಿಯುಳ್ಳವನು, ನಿರಂತರ ಸ್ತ್ರೀ ಮುಖಾವಲೋಕನ ಮಾಡಿ ಸಂತೋಷ ಪಡುವವನು, ಈ ವಿಧವಾದ ಗುಣಗಳನ್ನು ಹೊಂದಿರುವನೆಂದು ತಾತ್ಪರ್ಯ.

ಇತಿ ಮೇಷಾದಿ ರಾಶಿಸ್ಥಿತ ಬುಧಫಲಂ

## ಮೇಷಾದಿ ರಾಶಿಸ್ಥಿತ ಗುರುಫಲಂ

ಮೂಲ॥ ಸೇನಾನೀರ್ಬಹುವಿತ್ತದಾರತನಯೋ ದಾತಾಸು ಭೃತ್ಯಃಕ್ಷಮೀ ।
ತೇಜೋದಾರಗುಣಾನ್ವಿತಃ ಸುರಗುರೌ ಖ್ಯಾತಃಪುಮಾನ್ ಕೌಜಭೇ
ಕಲ್ಯಾಂಗಃ ಸಸುಖಾರ್ಥ ಮಿತ್ರತನಯಸ್ತ್ಯಾಗೀಪ್ರಿಯಃಶೌಕ್ರಭೇ ।
ಬಾಧೇ ಭೂರಿಪಚ್ಛದಾತ್ಮಜ ಸುಹೃತ್ಸಾಚಿವ್ಯಯುಕ್ತಃಸುಖೀ ॥೧೨॥

ಅವತಾರಿಕೆ॥ ಗುರು ಕುಜಕ್ಷೇತ್ರವಾದ ಮೇಷ ವೃಶ್ಚಿಕಗಳಲ್ಲೂ, ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲೂ, ಬುಧಕ್ಷೇತ್ರಗಳಾದ ಕನ್ಯಾ ಮಿಥುನಗಳಲ್ಲೂ ಇದ್ದ ಕಾಲದಲ್ಲಿ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

* ಜಿತಸೇವಕಃ ॥ಪಾ॥ ಕರ್ನಾಟಕ ಪಾಠ.

## ಮೇಷ ವೃಶ್ಚಿಕ ರಾಶಿಸ್ಥಿತ ಗುರುಫಲಂ

ಟೀಕು।। ಸುರಗುರೌ-ಗುರುವು, ಕೌಜಭೇ-ಕುಜಕ್ಷೇತ್ರಗಳಾದ, ಮೇಷ, ವೃಶ್ಚಿಕ ಗಳಲ್ಲಿರುವಾಗ ಜನ್ಮಿಸಿದವನು. ಸೇನಾನೀಃ-ಸೇನಾನಾಯಕನಾಗುವನು, ಬಹುವಿತ್ತ ದಾರತನಯಃ-ಬಹು ಧನಪತ್ನೀ ಪುತ್ರರುಗಳುಳ್ಳವನು, ದಾತಾ-ದಾನಶೀಲನಾಗುವನು, ಸುಭೃತ್ಯಃ-ಒಳ್ಳೇ ಭೃತ್ಯರುಳ್ಳವನಾಗುವನು, ಕ್ಷಮೀ-ಶಾಂತಗುಣ ಉಳ್ಳವನು, ತೇಜೋದಾರ ಗುಣಾನ್ವಿತಃ-ತೇಜ-ಕಾಂತಿವಂತನು, ದಾರಗುಣೈಃ-ಕಳತ್ರ ಸೌಖ್ಯದಿಂದ, ಅನ್ವಿತಃ-ಕೂಡಿದವನು, (ಇಲ್ಲಿ ಉದಾರ ಗುಣಾನ್ವಿತಃ ಎಂದು ಪದಮಾಡಿ ಉದಾರಗುಣ ಉಳ್ಳವನೆಂದು ಅರ್ಥ ಹೇಳಿರುವರು) ಮೊದಲೇ ದಾತಾ ಎಂಬುವ ಶಬ್ದದಿಂದ ಉದಾರಗುಣವನ್ನು ಹೇಳಿರುವಾಗ ಪುನಃ ಅದೇ ಅರ್ಥ ಹೇಳುವುದು ಪುನರುಕ್ತಿಯಾಗಿರುವುದು ಬಾಧಕವಾಗಿರುವುದರಿಂದ ದಾರಗುಣಾನ್ವಿತಃ- ಎಂಬುವ ಅರ್ಥವೇ ಸರಿಯಾದದ್ದು, ಖ್ಯಾತಃ-ಪ್ರಸಿದ್ಧಪುರುಷನು. ಈ ವಿಷಯದಲ್ಲಿ ಧುಂಡಿರಾಜಃ।।

## ಮೇಷ ರಾಶಿಸ್ಥಿತ ಗುರುಫಲಂ

ಶ್ಲೋಕ।। ಬಹು ತರಾಂಕುರುತೇ ಸಮುದಾರತಾಂ ಸುರಚಿತಾಂ ನಿಜವೈರಿ ಸಮುನ್ನತಿಮ್ । ವಿಭವತಾಂ ಚಮರುತ್ಪತಿ ಪೂಜಿತಃ ಕ್ರಿಯಗತೊಯಗತೋ-ರುಮತಿಪ್ರದಃ ।।೩೭।।ತಾ।। ಜನ್ಮಕಾಲದಲ್ಲಿ ಗುರು ಮೇಷದಲ್ಲಿದ್ದರೆ ಅತಿಶಯ ಉದಾರ ಗುಣಉಳ್ಳವನು. ದೈವಾನುಗ್ರಹದಿಂದ ಶತ್ರುಗಳಲ್ಲಿ ಜಯವನ್ನು ಹೊಂದುವನು, ಅನೇಕ ಪ್ರಕಾರದಿಂದ ವೈಭಯುಕ್ತ. ಒಳ್ಳೆಯ ಬುದ್ಧಿವಂತ, ಈ ಗುಣಗಳುಳ್ಳವನಾಗುವನು ।।೩೭।।

## ವೃಶ್ಚಿಕ ರಾಶಿಸ್ಥಿತ ಗುರುಫಲಂ

ಶ್ಲೋಕ।। ಧನುವಿನಾಶನ ದೋಷಸಮುದ್ಭವೈಃ-ಕುಶತರೋ ಬಹು-ದಂಭಪರೋನರಃ । ಆಲಿಗತೇ ಸತಿವೇವ ಪುರೋಹಿತೇ ಭವನತೋ ವನತೋಪಿಚ ದುಃಖಭಾಕ್ ।।೩೮।।ತಾ।। ಜನ್ಮಕಾಲದಲ್ಲಿ ವೃಶ್ಚಿಕರಾಶಿಯಲ್ಲಿ ಬೃಹಸ್ಪತಿ ಇದ್ದರೆ, ಧನವ್ಯಯವಾದ ಅತ್ಯಂತ ದುರ್ಬಲ ಶರೀರವುಳ್ಳವನು, ದೊಡ್ಡ ಡಂಭ ಉಳ್ಳವನು ಮತ್ತು ಮನೆಯಲ್ಲಿದ್ದರೂ, ಅರಣ್ಯದಲ್ಲಿದ್ದರೂ ದುಃಖ ಹೊಂದುವನು. ವರಾಹಮಿಹಿರಾಚಾರ್ಯರ ಮತಕ್ಕೆ ಈ ಅರ್ಥ ವಿರೋಧ ವಾಗಿರುವುದು, ಆದರೆ ಈ ರಾಶಿ ವೃಶ್ಚಿಕವಾಗಿರುವುದರಿಂದ ಈ ದುಷ್ಫಲವೇ ಪ್ರತ್ಯಕ್ಷಾನುಭವವಾಗಿರುವದರಿಂದ ಈ ವಿಷಯ ಗ್ರಾಹ್ಯಮಾಡತಕ್ಕದ್ದು.

## ಶುಕ್ರಕ್ಷೇತ್ರ ಸ್ಥಿತ ಗುರುಫಲಂ

(ತುಲಾ-ವೃಷಭ), ಶೌಕ್ರರ್ಕ್ಷೇ-ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಗುರುವಿರುವಾಗ ಹುಟ್ಟಿದವನು. ಕಲ್ಯಾಂಗಃ-ಸ್ವಸ್ಥವಾದ ದೇಹ ಉಳ್ಳವನು. ಸಸುಖಾರ್ಥ ಮಿತ್ರತನಯಃ-ಸುಖ-ಧನ-ಮಿತ್ರ. ಪುತ್ರರಿಂದ ಸೌಖ್ಯಪಡುವನು. ತ್ಯಾಗೀ-ದಾನಮಾಡುವನು. ಪ್ರಿಯಃ-ಸರ್ವಜನ ಪ್ರೀತಿಯುಳ್ಳವನು ಆಗುತ್ತಾನೆ. ಈ ವಿಷಯದಲ್ಲಿ ಢುಂಡಿರಾಜರು ವೃಷಭ ತುಲಾ ರಾಶಿಗಳಲ್ಲಿದ್ದ ಬೃಹಸ್ಪತಿಗೆ ಪ್ರತ್ಯೇಕ ಫಲ ನಿರೂಪಿಸಿರುತ್ತಾರೆ.

## ವೃಷಭ ರಾಶಿಸ್ಥಿತ ಗುರುಫಲಂ

ಶ್ಲೋಕ॥ ದ್ವಿಜಸುರಾರ್ಚನ ಭಕ್ತಿವಿಭೂತಯೋ ದ್ರವಿಣ ವಾಹನಗೌರವ ಲಬ್ಧಯಃ । ಸುರಗುರೌ ವೃಷಭೇ ಬಹುವೈರಿಣಶ್ಚರಣಗಾರಣ ಗಾಢ ಪರಾಕ್ರಮೈಃ ॥೩೯॥ತಾ॥ ಜನ್ಮಕಾಲದಲ್ಲಿ ಬೃಹಸ್ಪತಿ ವೃಷಭರಾಶಿಯಲ್ಲಿದ್ದರೆ, ಆ ಮನುಷ್ಯನು ದೇವಬ್ರಾಹ್ಮಣಭಕ್ತಿಯುಳ್ಳವನು. ಅನೇಕ ಪ್ರಕಾರವಾದ ಐಶ್ವರ್ಯಯುಕ್ತನು, ದ್ರವ್ಯವಾಹನ ಮೊದಲಾದ ಪ್ರಾಪ್ತಿಯುಳ್ಳವನು, ಯುದ್ಧದಲ್ಲಿ ಪರಾಕ್ರಮದಿಂದ ಶತೃಗಳನ್ನು ಪಾದಾಕ್ರಾಂತರನ್ನಾಗಿ ಮಾಡಿಕೊಳ್ಳುವ ಶಕ್ತಿಯುಳ್ಳವನು ॥೩೯॥

## ತುಲಾರಾಶಿಸ್ಥಿತ ಗುರುಫಲಂ

ಶ್ಲೋಕ॥ ಶ್ರುತತಪೋ ಜಪಹೋಮ ಮಹೋತ್ಸವೋ ದ್ವಿಜಸುರಾರ್ಚನ ದಾನಮತಿರ್ಭವೇತ್ । ವಣಿಜಿಜನ್ಮನಿ ಚಿತ್ರಶಿಖಂಡಿಜೇ ಚತುರತಾ ತುರತಾ ಸಹಿತಾರಿತಾ ॥೪೦॥ತಾ॥ ಜನ್ಮಕಾಲದಲ್ಲಿ ಬೃಹಸ್ಪತಿ ತುಲಾರಾಶಿಯಲ್ಲಿದ್ದ ಕಾಲದಲ್ಲಿ ಹುಟ್ಟಿದವನು ಶಾಸ್ತ್ರ-ಜಪ, ತಪ, ಹೋಮ, ಯಾಗ ಮೊದಲಾದ್ದರಿಂದ ಮಹೋತ್ಸವ ಉಳ್ಳವನು. ದೇವ ಬ್ರಾಹ್ಮಣರ ಪೂಜೆ ಮಾಡುವುದರಲ್ಲಿ ಪ್ರೀತಿಯುಳ್ಳವನು. ಚತುರ ಬುದ್ಧಿಯುಳ್ಳವನು. ಆತುರ ಬುದ್ಧಿಯುಳ್ಳವನು. ಶತ್ರುಗಳಿಗೆ ಸಹಿಸಲಶಕ್ಯವಾದವನು. ಈ ವಿಧವಾದ ಗುಣಗಳುಳ್ಳವನೆಂದು ತಿಳಿಯತಕ್ಕದ್ದು.

## ಬುಧಕ್ಷೇತ್ರ ಸ್ಥಿತ ಗುರುಫಲಂ

ಶ್ಲೋಕ॥ ಬೌಧೇ-ಬುಧಕ್ಷೇತ್ರಗಳಾದ ಮಿಥುನ ಕನ್ಯಾರಾಶಿಗಳಲ್ಲಿ ಬೃಹಸ್ಪತಿ ಇರುವಾಗ ಹುಟ್ಟಿದವನು. ಭೂರಿಪರಿಚ್ಛದಾತ್ಮಜ ಸುಹೃತ್-ಭೂರಿ-ಅನೇಕವಾದ. ಪರಿಚ್ಛದಾತ್ಮಜ ಸುಹೃತ್-ಪರಿವಾರ ಪುತ್ರಮಿತ್ರರುಳ್ಳವನು. ಸಾಚಿವ್ಯಯುಕ್ತಃ-ಮಂತ್ರಿತ್ವದಲ್ಲಿ ನಿಯಮಿಸಲ್ಪಡುವವನು. ಸುಖೀ-ಸುಖವಂತನು ಆಗುವನು. ಈ

ವಿಷಯದಲ್ಲಿ ಧುಂಡಿರಾಜರು ಮಿಥುನ ಕನ್ಯಾರಾಶಿಯಲ್ಲಿದ್ದ ಬೃಹಸ್ಪತಿಗೆ ಪ್ರತ್ಯೇಕ ಫಲ ಹೇಳಿರುತ್ತಾರೆ.

## ಮಿಥುನರಾಶಿ ಸ್ಥಿತ ಗುರುಫಲಂ

ಶ್ಲೋಕ॥ ಕವಿತಯಾ ಸಹಿತಃ ಪ್ರಿಯವಾಕ್ಶುಚಿರ್ವಿಮಲಶೀಲ ರುಚಿರ್ನಿಪುಣಃ ಪುಮಾರ್ನ್ ಮಿಥುನಗೇ ಸತಿದೇವ ಪುರೋಹಿತೇ ಸಹಿತತಾ ಹಿತತಾ ಸಹಿತೈರ್ಭವೇತ್ ॥೪೧॥ ಜನ್ಮಕಾಲದಲ್ಲಿ ಮಿಥುನದಲ್ಲಿ ಬೃಹಸ್ಪತಿಯು ಇರುವಾಗ ಹುಟ್ಟಿದವನು, ಕವಿತ್ವದಲ್ಲಿ ಕುಶಲ, ಪ್ರಿಯವಾಗಿ ಮಾತನಾಡುವನು, ಶುದ್ಧನಾದವನು. ನಿರ್ಮಲ ಸ್ವಭಾವ ಉಳ್ಳವನು. ವಿದ್ಯೆಯಲ್ಲಿ ಪ್ರವೀಣ, ಹಿತಾಹಿತ ತಿಳಿದವನು. ಈ ಗುಣಗಳುಳ್ಳವನಾಗುವನು. ॥೪೧॥

## ಕನ್ಯಾರಾಶಿ ಸ್ಥಿತ ಬೃಹಸ್ಪತಿಫಲಂ

ಶ್ಲೋಕ॥ ಕುಸುಮಗಂಧ ಸದಂಬರಶಾಲಿತಾ ವಿಮಲತಾ ಧನಧಾನ್ಯಮತಿರ್ಭೃಶಂ। ಸುರಗುರೌ ಸುತಯಾನನು ಸಂಯುತೇ ರುಚಿರತಾ ಚಿರತಾ ಪಿತಶತ್ರುತಾ ॥೪೨॥ ತಾ॥ ಜನ್ಮಕಾಲದಲ್ಲಿ ಕನ್ಯಾರಾಶಿಯಲ್ಲಿ ಬೃಹಸ್ಪತಿ ಇದ್ದರೆ ಆ ಮನುಷ್ಯನು, ಪುಷ್ಪ, ಗಂಧ, ಸುವಸ್ತ್ರಗಳನ್ನು ಸೇರಿಸುವವನು. ಶುಚಿರ್ಭೂತ, ಧನ ಕೊಡುವವನು, ಬಹು ಕಾಲದವರೆಗೆ ತನ್ನ ಶತೃಗಳಿಗೆ ಸಂಕಟ ಕೊಡುವವನು. ಈ ವಿಧವಾದ ಸ್ವಭಾವ ಉಳ್ಳವನಾಗುವನು, ಮನೋಹರನಾದವನು, ಚಿರಂಜೀವಿ. ತಂದೆಗೆ ಆಗದವನು. ಈ ವಿಷಯ ವರಾಹಮಿಹಿರರು ಹೇಳಲಿಲ್ಲ. ಆದರೂ ಅವರ ಮತಕ್ಕೆ ವಿರೋಧ ವಿಲ್ಲದೆಯೂ, ಅನುಭವಸಿದ್ಧವಾಗಿರುವುದರಿಂದ ಗ್ರಾಹ್ಯ ಮಾಡತಕ್ಕದ್ದು ॥೪೨॥

ಮೂಲ॥ ಚಾಂದ್ರೇರತ್ನ ಸುತಸ್ವದಾರವಿಭವ ಪ್ರಜ್ಞಾಸುಖೈರನ್ವಿತಃ । ಸಿಂಹೇ
ಸ್ಯಾದ್ಬಲನಾಯಕಃ ಸುರಗುರೌ ಪ್ರೋಕ್ತಂಚ ಯಚ್ಚಂದ್ರಭೇ ॥
ಸ್ವರ್ಕ್ಷೇ ಮಾಂಡಲಿಕೋ ನರೇಂದ್ರ ಸಚಿವಃ ಸೇನಾಪತರ್ವಾಧನೀ ।
ಕುಂಭೇ ಕರ್ಕಟವತ್ ಫಲಾನಿ ಮಕರೇ ನೀಚೋಲ್ಪ ವಿತ್ತೋಸುಖೀ ॥

ಅವತಾರಿಕೆ॥ ಬೃಹಸ್ಪತಿಯು ಕರ್ಕಾಟಕ, ಸಿಂಹ, ಧನುರ್ಮೀನ, ಮಕರ, ಕುಂಭ ಈ ರಾಶಿಗಳಲ್ಲಿದ್ದಾಗ ಹುಟ್ಟಿದವರ ಸ್ವಭಾವ ಹೇಳಲ್ಪಡುತ್ತೆ.

## ಕರ್ಕಾಟಕರಾಶಿ ಸ್ಥಿತ ಬೃಹಸ್ಪತಿಫಲಂ

ಟೀಕು॥ ಸುರಗುರೌ-ಬೃಹಸ್ಪತಿ, ಚಾಂದ್ರೇ-ಚಂದ್ರಕ್ಷೇತ್ರವಾದ ಕರ್ಕಾಟಕದಲ್ಲಿರು ವಾಗ ಹುಟ್ಟಿದ ಮನುಷ್ಯನು, ರತ್ನಸುತಸ್ವದಾರ ಪ್ರಜಾಸುಖೈ-ರತ್ನ-ನವರತ್ನಗಳು, ಸುತ-ಪುತ್ರರು, ಸ್ವ-ಧನ, ದಾರ-ಪತ್ನೀ, ವಿಭವ-ಐಶ್ವರ್ಯ, ಪ್ರಜ್ಞಾ-ಒಳ್ಳೇಬುದ್ಧಿ (ಧೀಃ

ಪ್ರಜ್ಞಾಶೇಮುಷೀ ಮತಿಃ ರಿತ್ಯಮರಃ) ಸುಖ-ಸೌಖ್ಯ. ಇವುಗಳಿಂದ, ಅನ್ವಿತಃ-ಕೂಡಿದವನಾಗುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋ॥ ಬಹುಧನಾಗ ಮನೋ ಮದನೋನ್ನತಿರ್ವಿವಿಧ ಶಾಸ್ತ್ರಕಲಾ ಕುಶಲೋನರಃ ॥ ಪ್ರಿಯವಚಾಶ್ಚಾ ಕುಲೀರಗತೇ ಗುರೌ ಚತುರಗೈಸ್ತುರಗೈಃ- ಕರಭೈರ್ಯುತಃ ॥೪೩॥ ತಾ॥ ಜನ್ಮಕಾಲದಲ್ಲಿ ಕರ್ಕಾಟಕ ರಾಶಿಯಲ್ಲಿ ಬೃಹಸ್ಪತಿ ಇರುವಾಗ ಹುಟ್ಟಿದವನು ಅನೇಕ ಪ್ರಕಾರ ಧನಸಂಪತ್ತುಳ್ಳವನು ಅತಿಶಯ ವಿಷಯಾಸಕ್ತ. ಅನೇಕ ಶಾಸ್ತ್ರಕಲಾ ಕುಶಲನು, ಪ್ರಿಯವಾದ ಮಾತನಾಡುವವನು, ಉತ್ತಮವಾದ ರತಿ ಹೊಂದುವವನು, ಕುದುರೆ (ಅಶ್ವ) ಗಜ ಮೊದಲಾದ ಪ್ರಾಪ್ತಿಯುಳ್ಳವನು, ಈ ವಿಧವಾದ ಸುಗುಣ ಉಳ್ಳವನಾಗುವನು ॥೪೩॥

## ಸಿಂಹರಾಶಿ ಸ್ಥಿತ ಗುರುಫಲಂ

ಸಿಂಹೇ-ಸಿಂಹರಾಶಿಯಲ್ಲಿ ಗುರುವಿರುವಾಗ ಹುಟ್ಟಿದವನು. ಬಲನಾಯಕಃ-ಸೇನಾಧಿಪತಿಯಾಗುವನು. ಇದಲ್ಲದೆ ಚಂದ್ರಭೆ-ಕರ್ಕಾಟಕದಲ್ಲಿ ಚಂದ್ರನಿಗೆ, ಯತ್ಪ್ರೋಕ್ತಂ-ರತ್ನಸುತ ಸ್ವದಾರ ವಿಭವ ಪ್ರಜ್ಞಾಸುತೈರನ್ವಿತಃ-ಎಂದು ಹೇಳಲ್ಪಟ್ಟ ಫಲಗಳು, ಸಿಂಹದಲ್ಲಿ ಬೃಹಸ್ಪತಿ ಇರುವದಕ್ಕೆ ಹೇಳಲ್ಪಡತಕ್ಕದ್ದು ॥ ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಅಚಲದುರ್ಗವನ ಪ್ರಭುತೋರ್ಜಿತೋ ದೃಢತನುರ್ನನುದಾನಪರೋ ಭವೇತ್ ॥ ಅರಿವಿಭೂತಿ ಹರೋಹಿನರೋಯುತಃ ಸುವಚಸಾ ವಚಸಾಮಧಿಪೇಗುರೌ ॥೪೪॥ ತಾ॥ ಜನ್ಮಕಾಲದಲ್ಲಿ ಬೃಹಸ್ಪತಿ ಸಿಂಹರಾಶಿಯಲ್ಲಿದ್ದಾಗ ಹುಟ್ಟಿದವನು ಪರ್ವತ, ವನ ದುರ್ಗಗಳನ್ನು ಸಂಪಾದಿಸುವವನು, ದೃಢವಾದ ಶರೀರ ಉಳ್ಳವನು. ದಾನತತ್ಪರ, ಶತೃಗಳನ್ನು ಜೈಸುವುದರಲ್ಲಿ ಸಮರ್ಥನು.

## ಸ್ವಕ್ಷೇತ್ರಸ್ಥ ಬೃಹಸ್ಪತಿ ಫಲಂ

(ಧನುಸ್ಸು-ಮೀನ) ಸ್ವರ್ಕ್ಷೇ-ಸ್ವಕ್ಷೇತ್ರಗಳಾದ, ಧನುರ್ಮೀನಗಳಲ್ಲಿ ಬೃಹಸ್ಪತಿ ಇದ್ದಾಗ ಹುಟ್ಟಿದವನು. ಮಾಂಡಲಿಕಃ-ಮಂಡಲಾಧಿಪತಿ ಎಂಬುವ ರಾಜನಾದರೂ, ನರೇಂದ್ರಸಚಿವಃ-ರಾಜಮಂತ್ರಿಯಾದರೂ, ಅಥವಾ ಸೇನಾಪತಿರ್ವಾ-ಸೇನಾಧಿಪತಿ ಯಾದರು ಆಗುವನು. ಇದ್ಯಾವದೂ ಆಗದಿದ್ದರೆ, ಧನೀ-ಕೇವಲ ಧನವಂತ ನಾಗುವನು. ಈ ಮಂಡಲಾಧಿಪತಿ ಮೊದಲಾದ ತಾರತಮ್ಯಗಳು ಬಲಾಬಲ ಪ್ರಕಾರ ಊಹಿಸಿ ಹೇಳತಕ್ಕದ್ದು. ಈ ವಿಷಯದಲ್ಲಿ ಧನುರ್ಮೀನ ರಾಶಿಗಳಲ್ಲಿದ್ದ ಬೃಹಸ್ಪತಿಗೆ ಪ್ರತ್ಯೇಕ ಫಲ ಹೇಳಿರುವರು.

## ಧನುರಾಶಿ ಸ್ಥಿತ ಗುರುಫಲಂ

ಶ್ಲೋಕ।। ವಿತರಣಪ್ರಣಯೋ ಬಹುವೈಭವಂ ವಸುಧನಾನ್ಯಥ ವಾಹನ ಸಂಚಯಃ। ಧನುಷಿ ದೇವಗುರೌಹಿ ಮತಿರ್ಭವೇತ್ಸುರುಚಿರಾ ರುಚಿರಾ ಭರಣಾನಿಚ ।।೪೫।। ಜನ್ಮಕಾಲದಲ್ಲಿ ಧನುಸ್ಸಿನಲ್ಲಿ ಬೃಹಸ್ಪತಿ ಇದ್ದರೆ ಆ ಪುರುಷನು ದಾನತತ್ಪರ ಅನೇಕ ವಿಧವಾದ ವೈಭವಯುಕ್ತ, ಬಹು ಸಂಪತ್ತುಳ್ಳವನು, ವಾಹನಾದಿಗಳ ಪ್ರಾಪ್ತಿಯುಳ್ಳವನು, ಮನೋಹರವಾದ ಉತ್ತಮ ಬುದ್ಧಿಯುಳ್ಳವನು. ಭೂಷಣಾದ್ಯಲಂಕಾರ ಉಳ್ಳವನು, ಈ ರೀತಿಯಾದ ಗುಣವುಳ್ಳವನಾಗುತ್ತಾನೆ ।।೪೫।।

## ಮೀನರಾಶಿ ಸ್ಥಿತ ಗುರುಫಲಂ

ಶ್ಲೋಕ।। ನೃಪಕೃಪಾಪ್ತ ಧನೋ ಮದನೋನ್ನತಿಃ ಸದನ ಸಾಧನದಾನ ಪರೋನರಃ । ಸುರಗುರೌತಿ ಮೀನಾಸಹಿತೇ ಸತಾಮನುಮತೋ ನುಮತೋ-ತ್ತಮದೋಭವೇತ್ ।।೪೬।। ತಾ।। ಮೀನರಾಶಿಯಲ್ಲಿ ಬೃಹಸ್ಪತಿ ಇರುವಾಗ ಹುಟ್ಟಿದ ಪುರುಷನು ರಾಜಕೃಪೆಯಿಂದ ಧನಸಂಪತ್ತುಳ್ಳವನು, ವಿಷಯಾಸಕ್ತ, ಮನೆಕಟ್ಟುವುದರಲ್ಲಿ ಕುಶಲನು, ದಾನತತ್ಪರ, ಸಜ್ಜನರಲ್ಲಿ ಸೇರತಕ್ಕವನು, ವಾಂಛಿತಾರ್ಥವನ್ನು ಪರಿಪೂರ್ಣವಾಗಿ ಪ್ರಾಪ್ತಿಯಾಗಲುಳ್ಳವನು ।।೪೬।। ವರಾಹಮಿಹಿರಾಚಾರ್ಯರು ಸ್ವಕ್ಷೇತ್ರದಲ್ಲಿದ್ದ ಬೃಹಸ್ಪತಿಯು ಉತ್ತಮ ಬಲಿಷ್ಠನಾಗಿದ್ದರೆ ಮಂಡಲಾಧಿಪತಿ (ಸಾಮಂತರಾಜ), ಮುಕ್ಕಾಲು ಬಲಿಷ್ಠನಾಗಿದ್ದರೆ ನರೇಂದ್ರಸಚಿವ, ಅರ್ಧ ಬಲಿಷ್ಠನಾಗಿದ್ದರೆ ಸೇನಾಧಿಪತಿ, ಬಲಹೀನನಾಗಿದ್ದರೆ ಅಥವ ಅಲ್ಪ ಬಲವುಳ್ಳವನಾಗಿದ್ದರೆ ಧನವಂತನಾಗುವನೆಂದು ಹೇಳಿರುತ್ತಾರೆ. ಧುಂಡಿರಾಜರು ಅದೇ ಅಭಿಪ್ರಾಯವನ್ನೇ ಹೇಳಿರುವರು ।।೪೬।।

## ಕುಂಭರಾಶಿ ಸ್ಥಿತ ಗುರುಫಲಂ

ಕುಂಭೇ-ಕುಂಭದಲ್ಲಿ ಬೃಹಸ್ಪತಿ ಇರುವಾಗ ಹುಟ್ಟಿದವನು, ಕರ್ಕಾಟಕವತ್-ಕರ್ಕಾಟಕ ರಾಶಿಯಲ್ಲಿ ಗುರುವಿಗೆ ಹೇಳಿದಂತೆ, ಫಲಾನಿ-ಅತ್ಯಂತ ಸುಖಪ್ರಾಪ್ತಿ-ಯಾಗುವ, ರತ್ನಸುತದಾರ ವಿಭವ ಪ್ರಜ್ಞಾಸುತಾಃ-ಎಂಬುವ ಫಲಗಳನ್ನು ಕೊಡುತ್ತಾನೆ. ಈ ವಿಷಯದಲ್ಲಿ ಧುಂಡಿರಾಜಃ ।।ಶ್ಲೋಕ।। ಗದಯುತಃ ಕುಮತಿರ್ದ್ರು-ವಿಣೋಽಝ್ಝಿತಃ ಕೃಪಣತಾನಿರತಃ ಕೃತಕಿಲ್ಬಿಷಃ ।। ಘಟಿಗತೇ ಸತಿದೇವ ಪುರೋಹಿತ ಕದಶನೋ ದಶನೋದರಪೀಡಿತಃ ।।೪೭।।ತಾ।। ಗುರು ಕುಂಭರಾಶಿಯಲ್ಲಿರುವಾಗ ಹುಟ್ಟಿದವನು ರೋಗಿ, ದುರ್ಬುದ್ಧಿಯುಳ್ಳವ, ದರಿದ್ರ, ಕೃಪಣತ್ವ ಮಾಡುವವನು, ನಿರಂತರ ಕೆಟ್ಟ ಕಾರ್ಯಗಳನ್ನು ಮಾಡತಕ್ಕವನು, ಕುತ್ಸಿತ, ದಂತರೋಗೀ, ಹೊಟ್ಟೆಶೂಲೆ

ರೋಗವುಳ್ಳವನು ॥೪೭॥ ವರಾಹಮಿಹಿರಾಚಾರ್ಯರ ಮತಕ್ಕೆ ವಿರೋಧವಾಗಿರುತ್ತೆ. ಆದರೆ ಈ ಫಲ ಪ್ರತ್ಯಕ್ಷಾನುಭವವಾಗಿರುವುದು.

## ಮಕರರಾಶಿ ಸ್ಥಿತ ಗುರುಫಲಂ

ಮಕರೇ-ಮಕರರಾಶಿಯಲ್ಲಿ ಗುರುವಿರುವಾಗ ಹುಟ್ಟಿದವನು, ನೀಚಃ-ಕುಲಕ್ಕನುಚಿತ ಕಾರ್ಯಗಳನ್ನು ಮಾಡುವವನು, ಅಲ್ಪವಿತ್ತಃ-ಅಲ್ಪದ್ರವ್ಯ ಉಳ್ಳವನು, ಅಸುಖೀ-ಸುಖರಹಿತನು॥ ಈ ವಿಷಯದಲ್ಲಿ ಧುಂಡಿರಾಜಃ ॥ ಶ್ಲೋಕ॥ ಹತಮತಿಃ ಪರಕರ್ಮಕರೋ ನರೋಸ್ಮರವಿಹೀನತರೋ ಭಯರೋಷಭಾಕ್। ಸುರಗುರೌ ಮಕರೇ ವಿದಧಾತಿನೋ ಜನಮನೋ ನಮನೋ ರಥಸಾಧನಮ್ ॥೪೮॥ತಾ॥ ಜನ್ಮಕಾಲದಲ್ಲಿ ಮಕರದಲ್ಲಿ ಗುರುವಿರುವಾಗ ಹುಟ್ಟಿದವನು ಬುದ್ಧಿಹೀನ, ಎರಡನೇಯವರ ಕಾರ್ಯ ಮಾಡುವವನು, ನಪುಂಸಕ, ರಾಗದ್ವೇಷ ಉಳ್ಳವನು, ರೋಗಿ, ಯಾವಾಗಲು ಮನೋರಥಸಿದ್ಧಿ ಆಗದಿದ್ದವನು, ಈ ಪ್ರಕಾರ ದುಷ್ಟಫಲ ಹೊಂದುವನು.

## ಮೇಷಾದಿರಾಶಿಸ್ಥಿತ ಶುಕ್ರಫಲಂ

ಮೂಲ॥ ಪರಯುವತಿ ರತಸ್ತ ದರ್ಥವಾದ್ಯೈ । ಹೃತವಿಭವಃ ಕುಲಪಾಂಸನಃ ಕುಜರ್ಕ್ಷೇ॥ ಸ್ವಬಲಮತಿ ಧನೋ ನರೇಂದ್ರ ಪೂಜ್ಯಃ । ಸ್ವಜನವಿಭುಃ ಪ್ರಥಿತೋಭಯಃ ಸಿತೇಸ್ವೇ ॥೧೪॥

ಟೀಕು॥ ಕುಜಕ್ಷೇತ್ರಗಳಾದ ಮೇಷ ವೃಶ್ಚಿಕ ಶುಕ್ರ ಸ್ವಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಶುಕ್ರನಿರುವಾಗ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

## ಕುಜಕ್ಷೇತ್ರ ಸ್ಥಿತ ಶುಕ್ರಫಲಂ

(ಮೇಷ-ವೃಶ್ಚಿಕ) ಟೀಕೆ॥ ಸಿತೆ-ಶುಕ್ರನು ಕುಜರ್ಕ್ಷೇ-ಕುಜಕ್ಷೇತ್ರಗಳಾದ ಮೇಷ ವೃಶ್ಚಿಕಗಳಲ್ಲಿರುವಾಗ ಹುಟ್ಟಿದವನು, ಪರಯುವತಿರತಃ-ಪರರ ಯೌವನ ವತಿಯಾದ ಸ್ತ್ರೀಲೋಲನು (ಪದರಾರಾಸಕ್ತನು), ತದರ್ಥವಾದ್ಯೈ-ಆ ಪರಸ್ತ್ರೀ ಮೂಲವಾಗಿ ವಿವಾದದಲ್ಲಾಗಲಿ, ಪರಸ್ತ್ರೀ ಮಾತಿಗೆ ಬೆರಗಾಗಿಯಾಗಲಿ, ಹೃತ ವಿಭವ-ಅಪಹರಿಸಲ್ಪಟ್ಟ ಧನ ಕಳೆದುಕೊಂಡವನು, ಕುಲಪಾಂಸನಃ-ಕುಲನಿಂದಿತನು ಆಗುವನು. ಈ ವಿಷಯದಲ್ಲಿ ಧುಂಡಿರಾಜರು ಮೇಷ ವೃಶ್ಚಿಕಗಳಲ್ಲಿದ್ದ ಶುಕ್ರನಿಗೆ ಪ್ರತ್ಯೇಕ ಫಲ ನಿರೂಪಿಸಿರುವರು.

## ಮೇಷರಾಶಿ ಸ್ಥಿತ ಶುಕ್ರಫಲಂ

ಶ್ಲೋಕ॥ ಭವನ ವಾಹನಬೃಂದ ಪುರಾಧಿಪಃ ಪ್ರಚಲನ ಪ್ರಿಯತಾ ವಿಹಿತಾ ದರಃ। ಯದಿಚ ಸಂಜನನೇ ಹಿಭವೇತ್ಕ್ರಿಯೇ ಕವಿಯುತೋವಿಯುತೋ ರಿಪುಭಿ-

ರ್ನರಃ ॥೪೯॥ ಜನನಕಾಲದಲ್ಲಿ ಶುಕ್ರನು ಮೇಷದಲ್ಲಿದ್ದರೆ ಆ ಪುರುಷನು ಗೃಹ ವಾಹನ ಸಮುದಾಯ, ಪಟ್ಟಣಾಧಿಕಾರಿ, ಸಂಚಾರಶೀಲ ಆದರ ಉಳ್ಳವನು ಶತ್ರು-ರಹಿತ-ಈ ಗುಣ ಉಳ್ಳವನಾಗುತ್ತಾನೆ ॥೪೯॥

## ವೃಶ್ಚಿಕ ರಾಶಿಸ್ಥಿತ ಶುಕ್ರ ಫಲಂ

ಶ್ಲೋಕ॥ ಕಲಹ ಘಾತಮತಿಂ ಜನನಿಂದ್ಯತಾಂ ಪ್ರಜನನಾ ಮಯತಾಂ ನಿಯತಾಂ ನೃಣಾಂ । ವ್ಯಸನತಾಂ ಜನನೇಲಿಸಮಾಶ್ರಿತಃ ಕವಿರಲಂ ಪಿರಲಂ ಕುರುತೇಧನಮ್ ॥೫೦॥ ಜನನಕಾಲದಲ್ಲಿ ಶುಕ್ರನು ವೃಶ್ಚಿಕರಾಶಿಯಲ್ಲಿದ್ದರೆ ಆ ಪುರುಷನು, ಕಲಹಪ್ರಿಯ, ಘಾತುಕ, ಲೋಕನಿಂದೆಗೆ ಗುರಿಯಾದವನು. ಜನ್ಮ ಯೋಗೀ, ಅನೇಕ ಪ್ರಕಾರ ದುರ್ವ್ಯಸನ ಉಳ್ಳವನು, ದರಿದ್ರನು ಸಹ ಆಗುವನು॥

## ಸ್ವಕ್ಷೇತ್ರಸ್ಥ ಶುಕ್ರ ಫಲಂ

(ವೃಷಭ-ತುಲ) ಸ್ವೇ-ಸ್ವಕ್ಷೇತ್ರಗಳಾದ, ವೃಷಭ ತುಲೆಗಳಲ್ಲಿ ಶುಕ್ರನಿರುವಾಗ ಹುಟ್ಟಿದವನು, ಸ್ವಬಲಮತಿಧನಃ-ತನ್ನ ಭುಜಬಲದಿಂದಲೂ, ಬುದ್ಧಿಯಿಂದಲೂ, ಸಂಪಾದಿಸಿದ ಧನ ಉಳ್ಳವನು, ನರೇಂದ್ರ-ಪೂಜ್ಯ-ರಾಜಪೂಜ್ಯನು, ಸ್ವಜನವಿಭುಃ-ತನ್ನ ಬಂಧು ಜನಗಳಲ್ಲಿ ಮುಖ್ಯನಾದವನು, ಪ್ರಥಿತಃ-ಪ್ರಸಿದ್ಧ ಪುರುಷನು, ಅಭಯಃ-ನಿರ್ಭಯನು ಆಗುವನು, ಈ ವಿಷಯದಲ್ಲಿ ಧುಂಡಿರಾಜರು ಪ್ರತ್ಯೇಕ ಫಲ ಹೇಳಿರುವರು.

## ವೃಷಭ ರಾಶಿಸ್ಥಿತ ಶುಕ್ರ ಫಲಂ

ಶ್ಲೋಕ॥ ಬಹು ಕಲತ್ರಯುತೋತ್ಸವಗೌರವಂ ಕುಸುಮ ಗಂಧರುಚಿಃ ಕೃಷಿನಿರ್ಮಿತಿಃ । ವೃಷಗತೇ ಭೃಗುಜೆ ಕಮಲಾಭವೇದ ವಿರಲಾ ವಿರಳಾರಿಪು ಮಂಡಲೇ ॥೫೧॥ತಾ॥ ಜನನಕಾಲದಲ್ಲಿ ವೃಷಭದಲ್ಲಿ ಶುಕ್ರನಿದ್ದರೆ ಆ ಪುರುಷನು, ಅನೇಕ ಹೆಂಡತಿಗಳುಳ್ಳವನು, ಉತ್ಸಾಹ ಉಳ್ಳವನು, ಜನರಲ್ಲಿ ಗೌರವ ಉಳ್ಳವನು, ಪುಷ್ಪ ಮತ್ತು ಪರಿಮಳದ್ರವ್ಯದಲ್ಲಿ ವಿಶೇಷ ಆಸಕ್ತಿಯುಳ್ಳವನು, ಭೂಮಿಗಳುಳ್ಳವನು. ನಿರಂತರ ಲಕ್ಷ್ಮೀಯುಕ್ತನು ಮತ್ತು ಶತ್ರುರಹಿತನೂ ಆಗುವನು ॥೫೧॥

## ತುಲಾ ರಾಶಿಸ್ಥಿತ ಶುಕ್ರ ಫಲಂ

ಕುಸುಮವಸ್ತ್ರವಿಚಿತ್ರ ಧನಾನ್ವಿತೋ ಬಹುಗಮಾ ಗಮನೋ ನನುಮಾನವಃ । ಜನನಕಾಲ ತುಲಾ ಕಲನಂ ಯದಾಸು ಕವಿನಾ ಕವಿನಾಯಕ ತಾಂ ವ್ರಜೇತ್ ॥೫೨॥ ಜನನಕಾಲದಲ್ಲಿ ಶುಕ್ರನು ತುಲಾರಾಶಿಯಲ್ಲಿದ್ದ ಪುರುಷನು, ಪುಷ್ಪ, ವಸ್ತ್ರ, ಅನೇಕ ಪ್ರಕಾರ ಧನವಂತ, ನಿರಂತರ ದೇಶಸಂಚಾರ ಮಾಡುವವನು,

ಉತ್ತಮವಾದ ಕವಿತಾಗುಣ ಉಳ್ಳವನು, ಗೌರವವನ್ನು ಸಂಪಾದಿಸುವವನು. ಈ ಗುಣಗಳಿಂದ ಕೂಡಿದವನು ಆಗುವನು ॥೫೨-೧೪॥

ಮೂಲ॥ ನೃಪಕೃತ್ಯ ಕರೋರ್ಥವಾನ್ಕಲಾ ವಿನ್ಮಿಥುನೆ । ಷಷ್ಠಗತೇತಿ ನೀಚ ಕರ್ಮಾ॥ ರವಿಜರ್ಕ್ಷಗತೇ ಮರಾರಿ ಪೂಜ್ಯೋಸುಭಗಃ ಸ್ತ್ರೀ-ವಿಜಿತೋರತಃ ಕುನಾರ್ಯಾಂ ॥೧೫॥

ಅವತಾರಿಕೆ॥ ಶುಕ್ರನು ಮಿಥುನ, ಕನ್ಯಾ, ಮಕರ, ಕುಂಭಗಳಲ್ಲಿರುವಾಗ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

## ಮಿಥುನರಾಶಿ ಸ್ಥಿತ ಶುಕ್ರ ಫಲಂ

ಮಿಥುನೆ-ಮಿಥುನದಲ್ಲಿ ಹುಟ್ಟಿದವನು, ನೃಪಕೃತ್ಯಕರಃ-ರಾಜಕಾರ್ಯಗಳನ್ನು ಮಾಡುವವನು. ಅರ್ಥವಾನ್-ದ್ರವ್ಯವಂತನು. ಕಳಾವಿತ್-ಗೀತ ವಾದ್ಯಾದಿ ಕಲೆಗಳನ್ನು ತಿಳಿದವನು, ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋ॥ ಭೃಗುಸುತೇ ಜನನೇ ಮಿಥುನಸ್ಥಿತೇ ಸಕಲ ಶಾಸ್ತ್ರ ಕಲಾಮಲ ಕೌಶಲಂ। ಸರಳತಾ ಲಲಿತಾಕಿಲಭಾರತೀ ಸುಮಧುರಾಮ ಧುರಾನ್ನರುಚಿರ್ಭವೇತ್ ॥೫೩॥ ತಾ॥ ಜನನ ಕಾಲದಲ್ಲಿ ಶುಕ್ರನು ಮಿಥುನದಲ್ಲಿದ್ದರೆ, ಆ ಪುರುಷನು ಸರ್ವಶಾಸ್ತ್ರ ಕಲಾಕುಶಲನು, ಸರಳ ಸ್ವಭಾವ ಉಳ್ಳವನು, ಮಧುರಭಾಷಣ ಉಳ್ಳವನು. ಮಧುರಾನ್ನ ಭೋಜನ ಮಾಡುವವನು ಆಗುವನು ॥೫೩॥

## ಕನ್ಯಾರಾಶಿ ಸ್ಥಿತ ಶುಕ್ರಫಲಂ

ಷಷ್ಠಗತೇ-ಶುಕ್ರನು ಷಷ್ಠ ರಾಶಿಯಾದ ಕನ್ಯೆಯಲ್ಲಿದ್ದಾಗ ಹುಟ್ಟಿದವನು, ಅತಿ ನೀಚಕರ್ಮಾ- ಅತ್ಯಂತವಾದ ನೀಚಕೃತ್ಯ ಮಾಡುವವನಾಗುತ್ತಾನೆ॥ ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಭೃಗುಸುತೇ ಸತಿಕನ್ಯಕಯಾನ್ವಿತೇ ಬಹುಧನೀ ಖಲುತೀರ್ಥ ಮನೋರಥಃ। ಕಮಲಯಾ ಪುರುಷೋತಿ ವಿಭೂಷಿತ ಸ್ಥಮಿತಯಾ ಮಿತಯಾಪಿಗಿರಾನ್ವಿತಃ॥೫೪॥ತಾ॥ ಕನ್ಯಾರಾಶಿಯಲ್ಲಿ ಶುಕ್ರನಿದ್ದರೆ ಧನವಂತ, ತೀರ್ಥಯಾತ್ರೆ ಮಾಡಿ ಮನೋರಥವನ್ನು ಪೂರ್ತಿ ಮಾಡಿಕೊಳ್ಳುವವನು. ಅತಿಶಯ ಲಕ್ಷ್ಮೀ ಕಟಾಕ್ಷವುಳ್ಳವನು. ವಿದ್ವತ್ತುಳ್ಳವನೂ ಆಗುತ್ತಾನೆ ॥೫೪॥

## ಶನಿಕ್ಷೇತ್ರ ಸ್ಥಿತ ಶುಕ್ರಫಲಂ

(ಮಕರ-ಕುಂಭ) ರವಿಜರ್ಕ್ಷಗತೇ-ಶನಿಕ್ಷೇತ್ರಗಳಾದ ಮಕರ, ಕುಂಭಗಳಲ್ಲಿ ಶುಕ್ರನಿರುವಾಗ ಜನ್ಮಿಸಿದವನು. ಸುಭಗಃ-ಸರ್ವಜನ ಪ್ರಿಯನು, ಸ್ತ್ರೀವಿಜಿತಃ-ಸ್ತ್ರೀವಶವರ್ತಿಯಾಗಿರುವನು, ಕುನಾರ್ಯಾಂ-ದುಷ್ಟಸ್ತ್ರೀಯರಲ್ಲಿ ರತಃ-ರಮಿಸು ವವನಾಗುವನು. ಈ ವಿಷಯದಲ್ಲಿ ಧುಂಡಿರಾಜರು ಪ್ರತ್ಯೇಕಫಲ ಹೇಳಿರುವರು.

## ಮಕರರಾಶಿ ಸ್ಥಿತ ಶುಕ್ರಫಲಂ

ಶ್ಲೋಕ।। ಅಭಿರತಿಸ್ತು ಜರಾಂಗನಯಾನ್ನೃಣಾಂ ವ್ಯಯಭಯಂ ಕೃಶತಾಮತಿ ಚಿಂತಯಾ । ಭೃಗುಸುತೇ ಮೃಗರಾಜಗತೇ ಸದಾ ಕವಿಜನೇ ವಿಜನೇಪಿ ಮನೋಭವೇತ್ ।।೫೫।। ಜನ್ಮಕಾಲದಲ್ಲಿ ಮಕರರಾಶಿಯಲ್ಲಿ ಶುಕ್ರನಿದ್ದರೆ ಆ ಪುರುಷನು ವೃದ್ಧಸ್ತ್ರೀಯಲ್ಲಿ ಪ್ರೇಮವಿದ್ದವನು ದ್ರವ್ಯಚಿಂತೆಯಿಂದ ಅತಿಶಯ ಶರೀರ ದುರ್ಬಲ ಹೊಂದುವವನು. ಕವಿಜನರಲ್ಲೂ ಮತ್ತು ಅರಣ್ಯದಲ್ಲೂ ಕೂಡ ವಾಸಮಾಡಲು ಇಚ್ಛೆಯುಳ್ಳವನು ।।೫೫।।

## ಕುಂಭರಾಶಿ ಸ್ಥಿತ ಶುಕ್ರಫಲಂ

ಉಶನಃ ಕಲಶೇ ಜನುಷಿಸ್ಥಿತೌ ವಸನಭೂಷಣಭೋಗವಿಹೀನತಾ। ವಿಮಲಕರ್ಮ ಮಹಾಲಸತಾ ನೃಣಾಮುಪಗತಾ ಪಗತಾಪಿರಮಾ ಭವೇತ್ ।।೫೬।।ತಾ।। ಕುಂಭರಾಶಿಯಲ್ಲಿ ಶುಕ್ರನಿರುವಾಗ್ಗ ಹುಟ್ಟಿದವನು ವಸ್ತ್ರಭೂಷಣ ಭೋಗರಹಿತ, ಒಳ್ಳೆಯ ಕೆಲಸ ಮಾಡುವುದರಲ್ಲಿ ಆಲಸ್ಯ ಉಳ್ಳವನು, ಪ್ರಾಪ್ತವಾದ ಲಕ್ಷ್ಮೀ ಇಲ್ಲದಂತೆ ಆಗುವವನು ।।೫೬।।

ಮೂಲ।। ದ್ವಿಭಾರ್ಯೋರ್ಥೀ ಭೀರುಃ ಪ್ರಬಲ ಮದಶೋಕಶ್ಚ ಶಶಿಭೇ ।
ಹರೌಯೋಷಾಪ್ತಾರ್ಥಃ ಪ್ರವರಯುುವತಿರ್ಮಂದತನಯಃ ।।
ಗಣೈಪೂಜ್ಯಃ ಪಸ್ವಸ್ತುರಗ್ನ ಸಹಿತೇ ದಾನವ ಗುರೌ । ಝುಷೇ
ವಿದ್ವಾನಾಡ್ಯೋ ನೃಪ ಜನಿತ ಪೂಜೋತಿ ಸುಭಗಃ ।।೧೬।।

ಅವತಾರಿಕೆ।। ಶುಕ್ರನು ಕರ್ಕಾಟಕ, ಸಿಂಹ, ಧನಸ್ಸು, ಮೀನ ಈ ರಾಶಿಗಳಲ್ಲಿದ್ದಾಗ ಹುಟ್ಟಿದವನ ಫಲ ಹೇಳಲ್ಪಡುತ್ತೆ.

## ಕರ್ಕಾಟಕ ರಾಶಿಯಲ್ಲಿ ಶುಕ್ರಫಲವು

ಟೀಕು।। ದಾನವಗುರೌ-ರಾಕ್ಷಸರ ಗುರುವಾದ ಶುಕ್ರನು, ಶಶಿಭೇ-ಕರ್ಕಾಟಕದಲ್ಲಿ ಶುಕ್ರನಿದ್ದಾಗ ಹುಟ್ಟಿದವನು, ದ್ವಿಭಾರ್ಯಃ-ಎರಡು ಪತ್ನಿಗಳುಳ್ಳವನಾಗುವನು, ಅರ್ಥೀ-ಯಾಚಕನು. ಭೀರುಃ-ಭಯ ಉಳ್ಳವನು, ಪ್ರಬಲಮದ ಶೋಕಶ್ಚ-ಅಧಿಕವಾದ ಉನ್ಮತ್ತನೂ ದುಃಖಿತನೂ ಆಗುವನು ।। ಈ ವಿಷಯದಲ್ಲಿ ಧುಂಡಿರಾಜಃ ।।ಶ್ಲೋಕ।। ದ್ವಿಜಪತೇಃ ಸದನೇ ಭೃಗುನಂದನೇ ವಿಮಲಕರ್ಮ ಮತಿರ್ಗುಣ ಸಂಯುತಃ । ಜನಮಲಂ ಸಕುಲಂ ಕುರುತೇವಶಂ ಸುಕಲಯಾ ಕಲಯಾಪಿಗಿರಾನರಃ ।।೫೭।। ತಾ।। ಜನ್ಮಕಾಲದಲ್ಲಿ ಶುಕ್ರನು ಕರ್ಕಾಟಕರಾಶಿಯಲ್ಲಿದ್ದರೆ ಆ ಪುರುಷನು ಉತ್ತಮವಾದ ಕಾರ್ಯ ಮಾಡುವುದರಲ್ಲಿ ಬುದ್ಧಿ ಇರತಕ್ಕವನು, ಗುಣಸಂಪನ್ನ ಸರ್ವರನ್ನು

ವಶಮಾಡಿಕೊಳ್ಳತಕ್ಕವನು, ಅನೇಕ ಪ್ರಕಾರ, ಲಕ್ಷಣಶಾಸ್ತ್ರ ತಿಳಿದವನು, ಪ್ರಸಿದ್ಧನಾದ ವಿದ್ವಾಂಸನು ಆಗುವನು ॥೫೭॥

## ಸಿಂಹರಾಶಿ ಸ್ಥಿತ ಶುಕ್ರಫಲಂ

ಹರೌ-ಸಿಂಹರಾಶಿಯಲ್ಲಿ ಶುಕ್ರನಿರುವಾಗ ಹುಟ್ಟಿದವನು, ಯೋಷಾಪ್ತಾರ್ಥಃ-ಸ್ತ್ರೀಯಿಂದ ಲಬ್ಧವಾದ ಧನ ಉಳ್ಳವನು. ಪ್ರವರಯುವತಿಃ-ಉತ್ತಮವಾದ ವಂಶದಲ್ಲಿ ಹುಟ್ಟಿದ ಪತ್ನಿಯುಳ್ಳವನು. ಮಂದತನಯಃ-ಅಲ್ಪ ಪುತ್ರರುಳ್ಳವನು॥ ಈ ವಿಷಯದಲ್ಲಿ ಧುಂಡಿರಾಜಃ ಶ್ಲೋ॥ ಹರಿಗತೇ ಸುರವೈರಿ ಪುರೋಹಿತೇ ಯುವತಿತೋ ಧನಮಾನ ಸುಖಾನಿಚ । ನಿಜಜನ ವ್ಯಸನಾನ್ಯಪಿ ಮಾನವಸ್ತ್ವಹಿ ಹಿತತೋಷ ಮನುವ್ರಜೇತ್ ॥೫೮॥ತಾ॥ ಸಿಂಹರಾಶಿಯಲ್ಲಿ ಶುಕ್ರನಿರುವಾಗ ಹುಟ್ಟಿದ ಪುರುಷನು ಸ್ತ್ರೀ ನಿಮಿತ್ತದಿಂದ ದ್ರವ್ಯ, ಗೌರವ, ಸುಖ ಉಳ್ಳವನು, ತನ್ನ ವ್ಯಸನದಿಂದ ತಾನೆ ಸಂಕಟ ಪಡುವನು. ಶತ್ರುಗಳಿಂದ ಹಿತವನ್ನು ಸಂತೋಷವನ್ನು ಸಹ ಹೊಂದುವನು. ಈ ವಿಧವಾದ ಗುಣವುಳ್ಳವನಾಗುವನು ॥೫೮॥

## ಧನುರಾಶಿ ಸ್ಥಿತ ಶುಕ್ರಫಲಂ

ತುರಗಸಹಿತೇ-ಧನುಸ್ಸಿನಲ್ಲಿ ಶುಕ್ರನಿದ್ದಾಗ ಹುಟ್ಟಿದವನು. ಗುಣ್ಯೈಃ-ಸದ್ಗುಣಗಳಿಂದ, ಪೂಜ್ಯಃ-ಪೂಜಿಸಲ್ಪಡುವವನು. ಸಸ್ವಃ-ಧನಸಹಿತನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಯುವತಿಸೂನು ಧನಾಗಮನೋತ್ಸವಂ ಸಚಿವತಾಂ ನಿಯತಂ ಶುಭಶೀಲತಾಂ ॥ ಜನುಷಿ ಕಾರ್ಮುಕಗಃ ಕುರತೇ ಕವಿಃ ಕವಿರತಿಂ ವಿರತಿಂ ಚಿರತೋನೃಣಾಂ ॥೫೯॥ತಾ॥ ಧನುರಾಶಿಯಲ್ಲಿ ಶುಕ್ರನಿರುವಾಗ ಹುಟ್ಟಿದವನು ಸ್ತ್ರೀಯಿಂದಲೂ ಮಕ್ಕಳಿಂದಲೂ ಸುಖವುಳ್ಳವನು, ದ್ರವ್ಯವುಳ್ಳವನು, ರಾಜಮಂತ್ರಿತ್ವ ಮಾಡುವವನು, ಉತ್ತಮವಾದ ನಡತೆಯುಳ್ಳವನು, ಕನ್ಯಾಪ್ರಿಯನು, ವೈರಾಗ್ಯವಾದ ಮನಸ್ಸುಳ್ಳವನು ಆಗುವನು ॥೫೯॥

## ಮೀನರಾಶಿ ಸ್ಥಿತ ಶುಕ್ರಫಲಂ

ಝಷೇ-ಶುಕ್ರನು ಮೀನದಲ್ಲಿರುವಾಗ ಹುಟ್ಟಿದವನು ವಿದ್ವಾನ್-ಪಂಡಿತನು, ಆಢ್ಯಃ-ಧನವಂತನು, ನೃಪಜನಿತಪೂಜ್ಯಃ-ರಾಜಪೂಜಿತನು, ಅತಿ ಸುಭಗಃ-ಸರ್ವಜನ ಪ್ರೀತಿಯುಳ್ಳವನೂ ಆಗುವನು. ಈ ವಿಷಯದಲ್ಲಿ ಶ್ಲೋ॥ ಭೃಗುಸುತೇ ಸತಿ ಮೀನ ಸಮನ್ವಿತೇ ನರಪತೇರ್ವಿಭುತಾವಿತತಾ ಭವೇತ್॥ ರಿಪುಸಮಾಕ್ರಮಣಂ ದ್ರವಿಣಾ ಸಮೋ ವಿತರಣೆ ತರಣೇ ಪ್ರಣಯೋನೃಣಾಂ ॥೬೦॥ತಾ॥ ಜನ್ಮಕಾಲದಲ್ಲಿ ಮೀನದಲ್ಲಿ ಶುಕ್ರನಿದ್ದರೆ, ರಾಜನಿಂದಾ ಅಧಿಕವಾದ ವೈಭವವುಳ್ಳವನು, ದಾನ-

ಮಾಡುವುದರಲ್ಲಿ ದ್ರವ್ಯ ಖರ್ಚುಮಾಡುವವನು, ವಿಲಾಸವುಳ್ಳವನು ಆಗುವನು ॥೬೦॥ ಇತಿ ಶುಕ್ರಫಲಂ॥

## ಅಥ ಮೇಷರಾಶಿ ಸ್ಥಿತ ಶನಿಫಲಂ

ಮೂಲ॥ ಮೂರ್ಖೋಟನಃ ಕಪಟವಾ೯ ವಿಸುಹೃದ್ಯ ಮೇಜೇ । ಕೀಟೇತು ಬಂಧುವಧಭಾಕ್ ಚಪಲೋಘೃಣಾಶ್ಚ॥ ನಿರ್ಹ್ರೀ ಸುಖಾರ್ಥತನಯಃ ಸ್ಖಲಿತಶ್ಚಲೇಖ್ಯೇ । ರಕ್ಷಾಪತಿರ್ಭವತಿ ಮುಖ್ಯಪತಿಶ್ಚಬೌಧೇ ॥೧೭॥

ಅವತಾರಿಕೆ॥ ಈ ಶ್ಲೋಕದಲ್ಲಿ ಶನಿಯು ಮೇಷ, ವೃಶ್ಚಿಕ, ಕನ್ಯಾ, ಮಿಥುನ ರಾಶಿಗಳಲ್ಲಿದ್ದ ಕಾಲದಲ್ಲಿ ಹುಟ್ಟಿದವರ ಸ್ವಭಾವ ಹೇಳಲ್ಪಡುತ್ತೆ.

## ಮೇಷರಾಶಿ ಸ್ಥಿತ ಶನಿಫಲಂ

ಯಮೆ-ಶನೈಶ್ಚರನು, ಅಜೆ-ಮೇಷದಲ್ಲಿದ್ದಾಗ ಹುಟ್ಟಿದವನು, ಮೂರ್ಖಃ-ತಿಳಿಯದವನಾಗುವನು. ಅಟನಃ-ತಿರುಗಾಡುವ ಕೆಲಸ ಉಳ್ಳವನಾಗುವನು. ಕಪಟವಾ೯-ಕಪಟಗುಣ ಉಳ್ಳವನು. ವಿಸುಹೃತ್-ಸ್ನೇಹಿತರಿಲ್ಲದವನಾಗುವನು. ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಧನವಿಹೀನತಯಾ ತನುತಾತನೌ ಜನವಿರೋಧ- ತಯೇಪ್ಸಿತ ನಾಶನಮ್ । ಕ್ರಿಯಗತೇರ್ಕಸುತೇ ಸ್ವಜನೈರ್ಘಣಾಂ ವಿಷಮತಾ ಶಮತಾಶಮನು ಭವೇತ್ ॥೬೧॥ತಾ॥ ಮೇಷರಾಶಿಯಲ್ಲಿ ಶನಿಯಿರುವಾಗ ಹುಟ್ಟಿ ದವನು, ದರಿದ್ರ-ದುರ್ಬಲವಾದ ಶರೀರ ಉಳ್ಳವನು, ಸರ್ವರಲ್ಲು ವೈರಮಾಡು ವವನು, ವಾಂಛಿತ ಮನೋರಥ ಪೂರ್ಣವಾಗದಿದ್ದವನು, ಆಪ್ತೇಷ್ಟರನ್ನು ವಿಷಮ ಭಾವದಲ್ಲಿ ತಿಳಿಯುವವನು, ಮನಸ್ಸು ಶಾಂತತ್ವವಿಲ್ಲದವನು, ಈ ಪ್ರಕಾರ ಗುಣವುಳ್ಳವನಾಗುವನು.

## ವೃಶ್ಚಿಕರಾಶಿ ಸ್ಥಿತ ಶನಿಫಲಂ

ಕೀಟೇ-ವೃಶ್ಚಿಕರಾಶಿಯಲ್ಲಿ ಶನಿಯಿರುವಾಗ ಹುಟ್ಟಿದವನು, ಬಂಧುವಧಭಾಕ್-ಬಂಧುಗಳಿಂದ ವಧಾದಿ ಹಿಂಸೆ ಮಾಡಿಸಿಕೊಳ್ಳುವನು. ಚಪಲಃ-ಚಪಲ ಚಿತ್ತನು, ಅಘೃಣಃ-ದಯಾಶೂನ್ಯನು ಆಗುವನು ॥ ಈ ಅರ್ಥಕ್ಕೆ ॥ಶ್ಲೋಕ॥ ಧುಂಡಿರಾಜಃ॥ ವಿಷಹುತಾಶನಶಸ್ತ್ರ ಭಯಾನ್ವಿತೋ, ಧನವಿನಾಶನ ವೈರಿಭಯಾ*ರ್ದಿತಃ ॥ ವಿಕಲತಾ ಕಲಿತಾಚ ಸಮನ್ವಿತೇ ರವಿಸುತೇ ವಿಸುತೇಷ್ಟ ಸುಖೋನರಃ ॥೬೨॥ ತಾ॥ ವೃಶ್ಚಿಕ ರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು, ವಿಷ, ಅಗ್ನಿ, ಶಸ್ತ್ರ ಮೊದಲಾದವು ಗಳಿಂದ ಭೀತಿಯುಳ್ಳವನು, ಧನನಾಶ ಮಾಡುವವನು. ಅನೇಕ ರೋಗದಿಂದ ಪೀಡಿತ, ವಿಕಲ ಮತ್ತು ಪುತ್ರವಾಂಛಿತಾರ್ಥ ಫಲವಿಲ್ಲದವನು ಆಗುವನು ॥೬೨॥

* ವೈರಿಗದಾರ್ದಿತಃ ॥ಪಾಠಾಂತರ॥

## ಬುಧಕ್ಷೇತ್ರ ಸ್ಥಿತ ಶನಿಫಲಂ

(ಕನ್ಯಾ-ಮಿಥುನ) ಬೌಧೇ-ಬುಧಕ್ಷೇತ್ರಗಳಾದ ಕನ್ಯಾ ಮಿಥುನಗಳಲ್ಲಿ ಶನಿ ಇರುವಾಗ ಹುಟ್ಟಿದವನು. ನಿರ್ಹ್ರೀ ಸುಖಾರ್ಥ ತನಯಃ-ಲಜ್ಜಾ ಸುಖ, ಧನ, ತನಯಹೀನನು, ಲೇಖ್ಯೇ-ಚಿತ್ರ ಬರೆಯುವುದರಲ್ಲಿ, ಕುಶಲಶ್ಚ-ಕುಶಲನು, ಸ್ಖಲಿತಶ್ಚ ಲೇಖ್ಯೇ-ಚಿತ್ರ ಬರೆಯುವುದನ್ನು ಬಿಡಲ್ಪಡುವನೆಂದೂ, ರಕ್ಷಾಪತಿಃ-ರಕ್ಷಣಾಧಿಕಾರಿಯು, ರಕ್ಷಾಪತಿಃ ರಕ್ಷಃ-ಪತಿಯೆಂದರೆ ರಾಕ್ಷಸರಿಗೆ ಅಧಿಪತಿಯಾಗುವನೆಂದು ಕೆಲವರು ಅರ್ಥಮಾಡಿರುವರು. ಮುಖ್ಯಪತಿಃ-ಪ್ರಧಾನ ನಾಯಕನಾಗುವನು. ಈ ವಿಷಯದಲ್ಲಿ ಧುಂಡಿರಾಜರು ಪ್ರತ್ಯೇಕವಾಗಿ ಹೇಳಿರುವರು.

## ಮಿಥುನರಾಶಿ ಸ್ಥಿತ ಶನಿಫಲಂ

ಶ್ಲೋಕ॥ ಪ್ರಚಲನಂ ವಿಮಲತ್ವಮಹೀನತಾಂ ಭವನ ಬಾಹ್ಯವಿಲಾಸ ಕುತೂಹಲಂ। ವ್ರಜತಿನಾ ಮಿಥುನೋಪಗತೇಸುತೇ ದಿನವಿಭೋಃನವಿಭೋರ್ಲಭತೇ ಸುಖಂ ॥೬೩॥ ತಾ॥ ಮಿಥುನದಲ್ಲಿ ಶನಿ ಇರುವಾಗ ಹುಟ್ಟಿದವನು ದೇಶಾಟನ ಮಾಡುವವನು, ಅತಿಶಯ ಮಲಿನನು, ಶೋಬಚತನ ಉಳ್ಳವನು, ಮನೆಯನ್ನು ಬಿಟ್ಟು ಹೊರಗೆ ವಿಲಾಸ (ರತಿಸುಖವನ್ನು) ಮಾಡುವವನು, ಯಾವಾಗಲೂ ವಿಭವದಿಂದ ಸುಖವಿಲ್ಲದವನು ಆಗುತ್ತಾನೆ.

## ಕನ್ಯಾರಾಶಿ ಸ್ಥಿತ ಶನಿಫಲಂ

ಶ್ಲೋಕ॥ ವಿಹಿತ ಕರ್ಮಣಿ ಶರ್ಮಕದಾ ಪಿನೋವಿನಯತೋ ವಿಹತಿಶ್ಚಲ ಸೌಹೃದಮ್। ರವಿಸುತೇ ಸತಿ ಕನ್ಯಕಯಾನ್ವಿತೇ ವಿಬಲತಾ ಬಲತಾ ಸಹಿತೋ ಭವೇತ್ ॥೬೪॥ತಾ॥ ಜನ್ಮಕಾಲದಲ್ಲಿ ಕನ್ಯಾದಲ್ಲಿ ಶನಿಯಿದ್ದರೆ, ಆ ಪುರುಷನು ಉತ್ತಮವಾದ ಕಾರ್ಯಗಳನ್ನು ಯಾವಾಗ್ಯು ಮಾಡಲಾರದವನು, ವಿನಯರಹಿತನು, ಚಂಚಲ ಸುಹೃದಯ ಉಳ್ಳವನು ಮತ್ತು ದುರ್ಬಲ ಶರೀರ ಉಳ್ಳವನು ಆಗುವನು. ॥೬೪॥೧೭॥

ಮೂಲ॥ ವರ್ಷ್ಮ ಸ್ತ್ರೀಷ್ಟೋನ ಬಹುವಿಭವೋಭೂರಿಭಾರ್ಯೋ ವೃಷಸ್ಥೇ । ಖ್ಯಾತಃ
ಸ್ವೋಚ್ಚೇ ಗಣಪುರಬಲಗ್ರಾಮ ಪೂಜ್ಯೋರ್ಥವಾಂಶ್ಚ ॥
ಕರ್ಕಿಣ್ಯ-ಸ್ವೋ ವಿಕಲದಶನೋ ಮಾತೃಹೀನೋ ಸುತೋಜ್ಞಃ ।
ಸಿಂಹೇನಾರ್ಯೋ ವಿಸುಖತನಯೋ ವಿಷ್ಟಿಕೃತ್ಸೂರ್ಯಪುತ್ರೇ ॥೧೮॥

ಅವತಾರಿಕೆ॥ ಶನಿಯು ವೃಷಭ, ತುಲಾ, ಕರ್ಕಾಟಕ ಸಿಂಹರಾಶಿಗಳಲ್ಲಿದ್ದಾಗ ಹುಟ್ಟಿದವರ ಸ್ವಭಾವ ಹೇಳಲ್ಪಡುತ್ತೆ.

## ವೃಷಭರಾಶಿ ಸ್ಥಿತ ಶನಿಫಲಂ

ಸೂರ್ಯಪುತ್ರೇ-ಶನೈಶ್ಚರನು, ವೃಷಭಸ್ಥೇ-ವೃಷಭದಲ್ಲಿರುವಾಗ ಹುಟ್ಟಿದವನು, ವರ್ಜ್ಯಸ್ತ್ರೀಷ್ಟಃ-ಅಗಮ್ಯಾಗಮನ ಮಾಡುವುದರಲ್ಲಿ ಇಷ್ಟವುಳ್ಳವನು, (ಅಂದರೆ ವರ್ಜ್ಯ-ಸ್ತ್ರೀಷ್ಟವೆಂಬುವದಕ್ಕೆ ಅನೇಕಾರ್ಥ ಕಲ್ಪಿಸಬಹುದು, ಆದರೆ ವರ್ಜ್ಯಸ್ತ್ರೀ ಎಂಬುವದಕ್ಕೆ ಅಂತ್ಯಜಾತಿ ಚಂಡಾಲಿನಿಯರೆಂತಲೂ, ವಯೋಧಿಕಾದಿ ಸ್ತ್ರೀಯರೆಂತಲೂ, ಭಗಿನಿ, ಸ್ನುಷಾದಿ ತನಗಿಂತಲೂ ಪೂಜ್ಯರಾದ ಸ್ತ್ರೀಯರೆಂತಲೂ, ಅರ್ಥವಿಕಲ್ಪನೆ ಮಾಡಬಹುದಾಗಿರುತ್ತದೆ), ನಬಹು ವಿಭವಃ-ಅಲ್ಪೈಶ್ವರ್ಯ ಉಳ್ಳವನು, ಭೂರಿ ಭಾರ್ಯಃ-ಅನೇಕ ಹೆಂಡತಿಯರುಳ್ಳವನು, ಅಂದರೆ ಅನೇಕ ಸ್ತ್ರೀಯರ ಗಮನ ಮಾಡಿದ ವ್ಯಭಿಚಾರಶೀಲನು ಆಗುವನು ॥ ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋ॥ ಯುವತಿ ಸೌಖ್ಯ ವಿನಾಶತಾಂ ಭೃಶಂ ಪಿಶುನಸಂಗ ರುಚಿಂ ಮತಿವಿಚ್ಯುತಿಮ್। ತನುಭೃತಾಂ ಜನನೇ ವೃಷಭಸ್ಥಿತೋ ರವಿಸುತೋ ವಿಸುತೋತ್ಸವ ಮಾದಿಶೇತ್ ॥೬೫॥

## ತುಲಾರಾಶಿ ಸ್ಥಿತ ಶನಿಫಲಂ

ಸ್ವೋಚ್ಚೇ-ತನ್ನುಚ್ಚರಾಶಿಯಾದ ತುಲೆಯಲ್ಲಿ ಶನಿ ಇರುವಾಗ ಹುಟ್ಟಿದವನು, ಖ್ಯಾತಃ-ಪ್ರಸಿದ್ಧನು, ಗಣ ಪುರ ಬಲಗ್ರಾಮಪೂಜ್ಯಃ-ಗಣ-ಸಮೂಹದಲ್ಲು, ಪುರ-ಪಟ್ಟಣದಲ್ಲೂ, ಬಲ-ಸೈನ್ಯದಲ್ಲು, ಗ್ರಾಮ-ಗೃಹಸಮೂಹ ಕೂಡಿರುವುದರಲ್ಲು, ಪೂಜ್ಯಃ-ಪೂಜಿಸಲ್ಪಡುವನು ಅಂದರೆ ತನ್ನ ಜನಗಳಲ್ಲಿಯೂ, ಪಟ್ಟಣಾಧಿಕಾರಿಯಾಗಿಯಾದರೂ ಬಲ-ಸೈನ್ಯದಲ್ಲಿ ಅಧಿಕಾರಿಯಾಗಿಯೂ, ಗ್ರಾಮದಲ್ಲಿ ಸರ್ವರಿಂದ ಗೌರವಿಸಲ್ಪಡುತ್ತ ಅತ್ಯಂತ ಮರ್ಯಾದೆಯನ್ನು ಹೊಂದುವನು, ಅರ್ಥವಾಂಶ್ಚ-ಧನವಂತನು ಆಗುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋ॥ ನಿಜಕುಲೇ ವನಿಪಾಲ ಬಲಾನ್ವಿತಃ ಸ್ಮರಬಲಾ ಕುಲಿತೋ ಬಹುದಾನದಃ। ಜನಜನೀಶಸುತೇಹಿ ತುಲಾನ್ವಿತೇ ನೃಪಕೃತೋ ಪ್ರಕೃತೋಹಿ ನರೋಭವೇತ್ ॥೬೬॥ತಾ॥ ತುಲಾಶನಿಯು ಜಾತಕನಿಗೆ ತನ್ನ ವಂಶದಲ್ಲಿ ರಾಜನಂತೆ ಅಧಿಕ ಗೌರವಉಳ್ಳವನು, ಮದನ ವ್ಯಥೆಯಿಂದ ವ್ಯಾಕುಲನು, ಪುಷ್ಕಳ ದಾನ ಮಾಡುವನು, ಅಪಕಾರ ಮಾಡಿದವರಿಗೆ ಉಪಕಾರ ಮಾಡುವನು. ಈ ವಿಧವಾದ ಗುಣವುಳ್ಳವನಾಗುವನು ॥೬೬॥

## ಕರ್ಕರಾಶಿ ಸ್ಥಿತ ಶನಿಫಲಂ

ಕರ್ಕಿಣಿ-ಕರ್ಕಾಟಕ ರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು, ಅಸ್ವಃ-ದರಿದ್ರನು, ವಿಕಲದಶನಃ-ದಂತ ದೃಢವಿಲ್ಲದವನು, ಮಾತೃಹೀನಃ-ತಾಯಿಗೆ ಗಂಡ ದೋಷ ಉಳ್ಳವನು. ಅಂದರೆ ಕರ್ಕದಲ್ಲಿ ಶನಿ ಹುಟ್ಟಿದವನು, ಮಾತೃ-ಮೃತ್ಯು

ಎಂಬುವ ಗಂಡದೋಷ ಉಳ್ಳವನು, ಆದ್ದರಿಂದ ಮಾತೃಹೀನನು, ಅಸುತಃ-ಪುತ್ರ ಹೀನನು. ಅಜ್ಞಃ-ತಿಳುವಳಿಕೆ ಇಲ್ಲದವನು ಅಂದರೆ ಬುದ್ಧಿಯಿಲ್ಲದ ಮೂರ್ಖನು ಆಗುವನು।। ಈ ವಿಷಯದಲ್ಲಿ ಧುಂಡಿರಾಜಃ ।।ಶ್ಲೋಕ।। ಶಶಿನಿಕೇತನ ಗಾಮಿನಿ ಭಾನುಜೇ ತನು ಭೃತಾಂ ಕೃಶತಾಭೃಶಮಂಜಸಾ । ವರವಿಲಾಸ ಕರಾಕಮಲಾ ಭವೇದವಿಕಲಂ ವಿಕಲಂ ರಿಪುಮಂಡಲಂ ।।೬೭।। ಕರ್ಕದಲ್ಲಿ ಶನಿ ಇರುವಾಗ ಹುಟ್ಟಿದವನು, ಮಾತೃಸೌಖ್ಯ ಇಲ್ಲದವನು, ದುರ್ಬಲಶರೀರ ಉಳ್ಳವನು, ಅಧಿಕ ವಿಲಾಸ ಉಳ್ಳವನು, ನಿರಂತರ ಲಕ್ಷ್ಮೀಪ್ರಾಪ್ತಿಯುಳ್ಳವನು, ಅವನ ಶತ್ರುಗಳು ಹತಾಶೆಯಾದವರು, ಈ ಗುಣ ಉಳ್ಳವನಾಗುವನೆಂದು ವರಾಹಮಿಹಿರ ಭಟ್ಟರ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ಹೇಳಿರುತ್ತಾರೆ. ಇದು ಅನುಭವಸಿದ್ಧವಾಗಿರುತ್ತೆ ।।೬೭।।

## ಸಿಂಹರಾಶಿ ಸ್ಥಿತ ಶನಿಫಲಂ

ಸಿಂಹೇ-ಸಿಂಹದಲ್ಲಿ ಶನಿ ಇರುವಾಗ ಹುಟ್ಟಿದವನು, ಅನಾರ್ಯಃ-ಮೂರ್ಖನು, ವಿಸುಖ ತನಯಃ-ಸುಖಪುತ್ರ ವರ್ಜಿತನು, ವಿಷ್ಟಿಕೃತ್-ದ್ರವ್ಯವಿಲ್ಲದೆ ಭಾರ ಹೊರುವವನು ಆಗುವನು, ಈ ವಿಷಯದಲ್ಲಿ ಧುಂಡಿರಾಜ ।।ಶ್ಲೋಕ।। ಲಿಪಿಕಲಾ ಕುಶಲಶ್ಚ ಕಲಿಪ್ರಿಯೋ ವಿಮಲ ಶೀಲ ವಿಹೀನತರೋನರಃ ।। ರವಿಸುತೇ ರವಿವೇಶ್ಮನಿ ಸಂಸ್ಥಿತೇಹತ ನಯಸ್ತನಯ ಪ್ರಮದಾರ್ತಿಭಾಕ್ ।।೬೮।। ತಾ।। ಸಿಂಹರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು, ಲೇಖನ ಕಲಾಕುಶಲ, ಕಲಹಪ್ರಿಯ, ದುಷ್ಟಸ್ವಭಾವ ಉಳ್ಳವನು, ನೀತಿರಹಿತ, ಸ್ತ್ರೀ-ಪುತ್ರರಿಂದ ಸುಖವಿಲ್ಲದವನು, ಈ ಪ್ರಕಾರ ಸ್ವಭಾವ ಉಳ್ಳವನಾಗುವನು ।।೬೮।।

ಮೂಲ।। ಸ್ವಂತಃ ಪ್ರತ್ಯಯಿತೋ ನರೇಂದ್ರಭವನೇ ಸುತ್ಪುತ್ರಯಾಧನೋ ।
ಜೀವಕ್ಷೇತ್ರಗತೇರ್ಕಜೇ ಪುರಬಲ ಗ್ರಾಮಾಗ್ರ ನೇತ್ರಾರ್ಥವಾ।।
ಅನ್ಯಸ್ತ್ರೀ ಧನಸಂವೃತಃ ಪುರಬಲಗ್ರಾಮಾಗ್ರಣೀರ್ಮಂದದೃಕ್ । ಸ್ವಕ್ಷೇತ್ರ
ಮಲಿನಃ ಸ್ಥಿರಾರ್ಥವಿಭವೋ ಭೋಕ್ತಾಚಜಾತಃಪುಮಾರ್ ।।೧೯।।

ಅವತಾರಿಕೆ।। ಈ ಶ್ಲೋಕದಲ್ಲಿ ಶನಿಯು, ಧನುರ್ಮೀನ, ಮಕರ, ಕುಂಭ ರಾಶಿಗಳಲ್ಲಿರುವಾಗ ಹುಟ್ಟಿದವನ ಸ್ವಭಾವ ಹೇಳಲ್ಪಡುತ್ತೆ.

## ಗುರು ಕ್ಷೇತ್ರ ಸ್ಥಿತ ಶನಿಫಲಂ

ಟೀಕು।। ಅರ್ಕಜೇ-ಶನೈಶ್ಚರನು, ಜೀವಕ್ಷೇತ್ರಗತೇ-ಗುರುಕ್ಷೇತ್ರಗಳಾದ ಧನುರ್ಮೀನ ಗಳಲ್ಲಿರುವಾಗ ಹುಟ್ಟಿದವನು, ಸ್ವಾಂತಃ-ಉತ್ತಮವಾದ ಮರಣ ಉಳ್ಳವನು, ಪ।। ಸ್ವಂತಃ-ಅಂತ್ಯಕಾಲದಲ್ಲಿ ಸೌಖ್ಯ ಉಳ್ಳವನು, ನರೇಂದ್ರಭವನೇ-ರಾಜಗೃಹದಲ್ಲಿ,

ಪ್ರತ್ಯಯಿತಃ-ನಂಬಿಕೆಯುಳ್ಳವನು, ಸತ್ಪುತ್ರಜಾಯಾಧನಃ-ಸುಗುಣವುಳ್ಳ ಪುತ್ರರು, ಪತ್ನಿ, ಧನ ಉಳ್ಳವನು, ಪುರಬಲ ಗ್ರಾಮಾಗ್ರನೇತಾ-ಪುರ-ಪಟ್ಟಣ, ಬಲ-ಸೈನ್ಯಕ್ಕು, ಗ್ರಾಮ, ಗೃಹಗಳ ಚಿಕ್ಕ ಸಮುದಾಯ ಉಳ್ಳದ್ದು ಗ್ರಾಮ, ಅಂಥಾ ಗ್ರಾಮಕ್ಕೆ ಅಗ್ರನೇತ್ರಾ-ಪ್ರಧಾನ ನಾಯಕನು, ಅರ್ಥವಾ-ದ್ರವ್ಯವಂತನೂ ಆಗುವನು. ಈ ವಿಷಯದಲ್ಲಿ ಧುಂಡಿರಾಜರು ಮೀನ ಧನು ರಾಶಿಗಳಲ್ಲಿ ಶನಿ ಇದ್ದರೆ ಪ್ರತ್ಯೇಕ ಫಲ ಹೇಳಿರುವರು.

## ಧನೂರಾಶಿ ಸ್ಥಿತ ಶನಿಫಲಂ

ಶ್ಲೋಕ।। ರವಿಸುತೇ ನಯುತ್ತೇ ಸತಿಕಾರ್ಮುಕೆ ಸುತಗುಣ್ಯೈಃ ಪರಿಪೂರ್ಣ ಮನೋರಥಃ । ಪ್ರಥಿತಕೀರ್ತಿ ಸುವೃತ್ತ ಪರೋನರೋ ವಿಭವತೋ ಭವತೋಷ ಯುತೋ ಭವೇತ್ ।।೬೯।।ತಾ।। ಧನುರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು, ಪುತ್ರರಿಂದ ಪರಿಪೂರ್ಣ ಮನೋರಥ ಉಳ್ಳವನು, ಪ್ರಪಂಚದಲ್ಲಿ ಉತ್ತಮವಾದ ಪ್ರವರ್ತನೆಯಿಂದ ಪ್ರಖ್ಯಾತ ಪುರುಷನಾಗುವನು, ಪ್ರಾಪ್ತಿಯಾದ ಯಶಸ್ಸಿನಿಂದ ನಿರಂತರ ಸಂತುಷ್ಟ ಚಿತ್ತನಾಗಿರುವನು ಆಗುವನು ।।೬೯।।

## ಮೀನರಾಶಿ ಸ್ಥಿತ ಶನಿಫಲಂ

ಶ್ಲೋಕ।। ವಿನಯವರ್ನಾ ವ್ಯವಹಾರ ಸುಶೀಲತಾ ಸಕಲಲೋಕ ಗೃಹೀತ ಗುಣೋನರಃ । ಉಪಕೃತೌ ನಿಪುಣಸ್ತಿಮಿಸಂಶ್ರಿತೇ ರವಿಭವೇ ವಿಭವೇನ ಸಮನ್ವಿತಃ ।।೭೦।।ತಾ।। ಮೀನರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು, ವಿನಯಯುಕ್ತ, ವ್ಯವಹಾರ ಕುಶಲ, ಸರ್ವಜನರ ಗುಣಗ್ರಹಣ ಮಾಡಿ ಉಪಕಾರ ಮಾಡುವವನು, ಪರೋಪಕಾರ ಚತುರ ಅನೇಕ ಪ್ರಕಾರ ವೈಭವಯುಕ್ತನೂ ಆಗುವನು ।।೭೦।।

## ಸ್ವಕ್ಷೇತ್ರ ಸ್ಥಿತ ಶನಿಫಲಂ

ಸ್ವಕ್ಷೇತ್ರಗಳಾದಮಕರ, ಕುಂಭಗಳಲ್ಲಿ ಶನಿ ಇರುವಾಗ ಜಾತಃ-ಹುಟ್ಟಿದ, ಪುಮಾ-ಪುರುಷನು, ಅನ್ಯ ಸ್ತ್ರೀಧನ ಸಂಯುತಃ-ಪರಸ್ತ್ರೀ ಪರಧನದಿಂದ ಸಂಯುಕ್ತ ನಾದವನು, ಪರಬಲ ಗ್ರಾಮಾಗ್ರಣೀಃ-ಪಟ್ಟಣಕ್ಕು, ಸೈನ್ಯಕ್ಕು, ಗ್ರಾಮಗಳಿಗೂ ಪ್ರಧಾನನಾಯಕನಾಗುವನು, ಮಂದದೃಕ್-ಅಲ್ಪದೃಷ್ಟಿಯುಳ್ಳವನು, ಮಲಿನಃ-ಶೊಬಚಿಯು, ಸ್ಥಿರಾರ್ಥವಿಭವಃ-ಸ್ಥಿರವಾದ ಧನ ಸೌಖ್ಯ ಸಂಪತ್ತುಳ್ಳವನು, ಈ ವಿಧ ವಾದ ಗುಣ ಉಳ್ಳವನು।। ಧುಂಡಿರಾಜರು ಮಕರ ಕುಂಭಗಳಲ್ಲಿದ್ದ ಶನಿಗೆ ಪ್ರತ್ಯೇಕ ಫಲ ಹೇಳಿರುವರು ।।

## ಮಕರರಾಶಿ ಸ್ಥಿತ ಶನಿಫಲಂ

ಶ್ಲೋಕ।। ನರಪತೇ ರಿವಗೌರವಮಾ ವ್ರಜೇದ್ರ್ವಿಸುತೇ ಮೃಗರಾಶಿಗತೇನರಃ। ಅಗುರುಣಾ ಕುಸುಮೈರ್ಮೃಗ ಜಾತಯಾ ವಿಮಲಯಾ ಮಲಯಾಚಲಜೈಃ ಸುಖಮ್।। ।।೭೧।।ತಾ।। ಮಕರರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು ರಾಜನಂತೆ ಗೌರವ-ಯುಕ್ತ, ಅಗರು, ಪುಷ್ಪ, ಕಸ್ತೂರಿ, ಮಲಯ, ಚಂದನಾದಿಗಳಿಂದ ಉಪಯೋಗ ಉಳ್ಳವನು. ಈ ಪ್ರಕಾರ ಲೀಲಾವಿಲಾಸದಿಂದ ಸೌಖ್ಯಯುಕ್ತನಾಗುವನು ।।೭೧।।

## ಕುಂಭರಾಶಿ ಸ್ಥಿತ ಶನಿಫಲಂ

ಶ್ಲೋಕ।। ನನುಜಿತೋ ರಿಪುಭಿರ್ವ್ಯಸನಾನ್ವಿತೋ ವಿಹಿತಕರ್ಮಪರಾಙ್ಮುಖ ತಾನ್ವಿತಃ। ರವಿಸುತೇ ಕಲಶೇನ ಸಮನ್ವಿತೇ ಸುನಹಿತಃ ಸಹಿತಪ್ರಚಯೈರ್ನರಃ ।।೭೨।। ಕುಂಭರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು ಶತ್ರುಗಳಿಂದ ಪರಾಭವ ಹೊಂದುವನು, ಅನೇಕ ಪ್ರಕಾರದ ವ್ಯಸನ ಉಳ್ಳವನು, ಅನೃತವಾದಿಯು, ಸತ್ಕಾರ್ಯ ಗಳನ್ನು ಮಾಡದವನು. ಈ ವಿಧವಾದ ಗುಣ ಉಳ್ಳವನಾಗುವನು ।।೭೨।।

ಇನಿ ಶನಿ ಮೇಷಾದಿ ರಾಶಿಸ್ಥಫಲಂ

## ಚಂದ್ರಾಧಿಷ್ಠಿತಾದಿ ಫಲ ವಿಚಾರಃ

ಮೂಲ।। ಶಿಶಿರಕರ ಸಮಾಗಮೇ ಕ್ಷಣಾನಾಂ । ಸದೃಶಫಲಂ ಪ್ರವದಂತಿಲಗ್ನ ಜಾತಮ್ ।। ಫಲಮಧಿಕ ಮಿದಂ ಯದತ್ರಭಾವಾ । ಭವನ ಭನಾಥ ಗುಣೈರ್ವಿಚಿಂತನೀಯಾಃ ।।೨೦।।

ಅವತಾರಿಕೆ।। ಚಂದ್ರಾಧಿಷ್ಠಿತ ಮೇಷಾದಿರಾಶ್ಯುಕ್ತ ಸ್ವಭಾವಗಳನ್ನು ಮೇಷಾದಿ ಲಗ್ನಗಳಿಗೆ ಹೇಳಲ್ಪಡುತ್ತೆ.

ಟೀಕು।। ಶಿಶಿರಕರ ಸಮಾಗಮೇಕ್ಷಣಾನಾಂ-ಶಿಶಿರಕರ-ಚಂದ್ರನ, ಸಮಾಗಮೇಕ್ಷ-ಣಾನಾಂ-ಸಂಯೋಗ ವೀಕ್ಷಣಗಳಿಗೆ, ಸದೃಶಫಲಂ-ಸಮಾನವಾದ ಫಲವನ್ನೇ, ಲಗ್ನ ಜಾತಂ-ಆ ಲಗ್ನಗಳಿಗೆ ಪ್ರವದಂತಿ-ಹೇಳಿದರು, ಅದು ಹೇಗೆಂದರೆ:-ಮೇಷಕ್ಕೆ ವೃತ್ತಾತಾಮ್ರ ದೃಗುಷ್ಣಶಾಕ ಲಘುಭುಕ್ ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಪ್ರಕಾರವಾಗಿ ಚಂದ್ರ ಸಂಯೋಗ ಫಲವನ್ನು, ಚಂದ್ರೇ, ಭೂಪ ಬುಧೌ ನೃಪೋಪಮಗಣೆಸ್ತೇ-ನಾದ್ರಗಾಶ್ಚಜಗೆ ಎಂದು ಕುಜಾದಿ ರವ್ಯಂತ ದೃಷ್ಟಿ ಫಲಗಳನ್ನು, ಮೇಷಲಗ್ನ ಜಾತಕನಿಗೆ ಹೇಳಲ್ಪಡತಕ್ಕದ್ದು. ಈ ಪ್ರಕಾರವಾಗಿಯೇ ಮೇಷಾದಿ ಉಳಿದ ೧೧ ಲಗ್ನಗಳಿಗು ಊಹಿಸಿ ಹೇಳತಕ್ಕದ್ದು, ಮತ್ತು ವಿಶೇಷವೇನೆಂದರೆ-ಅತ್ರ-ಈ ಲಗ್ನ ದ್ವಿತೀಯಾದಿ-

ಗಳಲ್ಲಿ ಭಾವಾಃ-ತನು, ಧನ, ಕುಟುಂಬ, ಸಹೋತ್ಥ ಸುಖ ಮಾತೃವಿದ್ಯಾ, ಬುದ್ಧಿ, ರಿಪು, ಕಳತ್ರ, ಅಷ್ಟಮ, ಭಾಗ್ಯ, ಕರ್ಮ, ಲಾಭ, ವ್ಯಯ ಮೊದಲಾದ ದ್ವಾದಶ ಭಾವಗಳಿಗೆ, ಯತ್-ಯಾವ ಯಾವ ಫಲ ಹೇಳಬಹುದೋ, ತದಿದಂ ಫಲಂ-ಆಯಾಯ ಫಲವನ್ನು, ಅಧಿಕಂ-ಅಧಿಕವಾಗಿ (ತೆ-ಆ ಭಾವಗಳು) ಭವನ ಭನಾಥಗುಣೈ-ಭವನ-ತನ್ವಾದಿ ಭಾವಗಳ, ಭನಾಥ-ಭಾವಾಧಿಪತಿಯು, ಗುಣೈ-ಸ್ಥಾನಾದಿ ಷಡ್ಬಲಗಳಿಂದ, ವಿಚಿಂತನೀಯಾಃ-ಚಿಂತಿಸಿ ನಿರ್ಣಯ ಮಾಡತಕ್ಕದ್ದು.

ಅದು ಹೇಗೆಂದರೆಃ-ಲಗ್ನ ಬಲಯುಕ್ತವಾಗಿ ಲಗ್ನಾಧಿಪತಿಯು ಬಲಯುಕ್ತನಾದರೆ ಶರೀರ ಪುಷ್ಟಿಯಾಗುವುದು. ದ್ವಿತೀಯ ಸ್ಥಾನವು ಬಲಯುಕ್ತವಾಗಿ ದ್ವಿತೀಯ ಸ್ಥಾನಾಧಿಪತಿ ಬಲಯುಕ್ತನಾದರೆ ಧನ ಸಮೃದ್ಧಿಯಾಗಿರುವದು. ತೃತೀಯ ಭಾವವು ತೃತೀಯಾಧಿಪತಿಯು ಬಲಯುಕ್ತವಾಗಿದ್ದರೆ ಸಹೋದರಾದಿ ಭಾವಗಳಲ್ಲಿ ಸಮೃದ್ಧಿ ಯಾಗುವದು. ಈ ಪ್ರಕಾರವಾಗಿ ಉಳಿದ ಭಾವಗಳಿಗೂ ಯೋಚಿಸಿ ಹೇಳತಕ್ಕದ್ದು. ಭಾವ, ಭಾವಾಧಿಪತಿಗಳಲ್ಲಿ ಒಂದು ಮಾತ್ರ ಬಲಯುಕ್ತವಾಗಿದ್ದರೆ ಅರ್ಧಫಲ ಹೇಳತಕ್ಕದ್ದು. ಇಬ್ಬರು ಬಲಿಷ್ಠರಾಗಿದ್ದರೂ ಸಂಪೂರ್ಣವಾಗಿ ಫಲ ಹೇಳತಕ್ಕದ್ದು. ಭಾವಧಿಪತಿಯು, ಭಾವವು ಕಾರಕ ಗ್ರಹವು, ಬಲಿಷ್ಠರಾಗಿದ್ದರೆ ಸಂಪೂರ್ಣ ಫಲ ಹೇಳತಕ್ಕದ್ದು. ಪಿತೃಭಾವಾಧಿಪತಿ ಗುರು. ಈ ಗುರು ಕರ್ಕಾಟಕ ರಾಶಿಯಲ್ಲಿರುತ್ತಾನೆ. ಈ ಭಾವದಲ್ಲಿ ಚಂದ್ರನಿದ್ದಾನೆ ಮತ್ತು ಪಿತೃಕಾರಕ ಸೂರ್ಯನು ಸಿಂಹದಲ್ಲಿ ಸ್ವಕ್ಷೇತ್ರದ ಲ್ಲಿರುವದರಿಂದ, ಈ ಜಾತಕನಿಗೆ ಪಿತೃಸೌಖ್ಯ ಸಂಪೂರ್ಣ ಶುಭಕರವೆಂದು ಹೇಳತಕ್ಕದ್ದು॥ ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಬಲಾನ್ವಿತೇ ರಾಶಿಪತೌ ಚರಾಶೌ ಖೇಟೇಥವಾ ರಾಶಿಫಲಂ ಸಮಗ್ರಂ । ನೀಚೋಚ್ಚಗೇ ಹಾಸ್ತಮಯಾದಿ ಭಾವ್ಯೇ ನ್ಯೂನಾಧಿಕತ್ವಂ ಪರಿಕಲ್ಪನೀಯಂ ॥೭೩॥ ಇದೇ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ಬಲೇನಸಹಿತೇತ್ರ ಭೇತದಧಿಪೇಚತತ್ಸ್ಥೇಗ್ರಹೇ ಯಥೋಕ್ತ ಸಕಲಂ ಫಲಂ ಜನುಷಿಜಾತಕ್ಕು ಪ್ರಾಪ್ನುತೆ॥ ದ್ವಯೋರ್ಬಲವತೋಃ ಭವತಿ ಮಧ್ಯಮಂ ಚೈಕಕೇ ಭವೇಲ್ಲಘುಫಲಂ ನಕಿಂಚಿದಪಿ ಕೋಪಿನೋ ಚೇದ್ಬಲೀ ॥೭೪॥ ಈ ಪ್ರಕಾರ ಬಲಾಬಲ ವಿಚಾರಮಾಡಿ ಫಲ ನಿರ್ಣಯ ಮಾಡತಕ್ಕದ್ದು.

## ಮೇಷಲಗ್ನ ಜಾತಕಫಲಂ

ಶ್ಲೋಕ॥ ಮೇಷವಿಲಗ್ನೇ ಕುನಖೀ ಸುರೋಷಣೋ ಭೇದಕೃತ್ ಸ್ಖಲಿತ ವಾಕ್ಯಃ । ಪಿತ್ತಾನಿಲಭೂಯಿಷ್ಠಃ ಕೃಪಣೋತಿ ಬಹುವ್ಯಥಶ್ಚೈವ॥ ರಹಿತೋ ಬಾಲ್ಯೇ ಗುರುಭಿರ್ಮಂದ ಸುತಸ್ವಜನ ಸಹಜ ಹಿತಕರ್ತಾ । ಧರ್ಮಸ್ಥಿತೋ ವಿದೇಶೋಪಗಶ್ಚಕರ್ಮಾರಭತ್ಯಫಲಂ

॥೭೬॥ ನೀಚಾಂವಾ ಪಿಶುನಾಂವಾ ವಿಕಲಾಂ ಲಭತೇಸ್ಯ ಪೂರ್ವಿಕಾಂ ಭಾರ್ಯಾಂ । ಸಹಜ ಸಮಾನ್ಯಪಿ ಮಿತ್ರಾಣಿಚಾಸ್ಯ ಬಂಧುತ್ವ ಮುಪಯಾಂತಿ ॥೭೭॥ ಶಸ್ತ್ರೇಣ ವಾವಿಷೈರ್ವಾಮರಣಂ ಪಿತ್ತೋದ್ಭವೈರ್ವಿಕಾರೈರ್ವಾ। ಸ್ಯಾತ್ಸಕ್ಷಾದ್ಸ್ವ ನಾದ್ವಾವರ್ಷಾದ್ದುರ್ಗಾತ್ತ್ರ-ಪತನಾದ್ವಾ ॥೭೮॥

ತಾತ್ಪರ್ಯ॥ ಮೇಷಲಗ್ನದಲ್ಲಿ ಹುಟ್ಟಿದವನಿಗೆ ನಖಗಳು ಮೋಟಾಗಿರುವುದು, ನೀಳವಾಗಿರುವುದಿಲ್ಲ, ಗಂಟುಗುರೆಂದು ಅರ್ಥಮಾಡಿರುವರು, ಕೋಪ ಸ್ವಭಾವದವನು, ಸ್ನೇಹಿತರಲ್ಲಿ ಭೇದಮಾಡುತ್ತಾನೆ, ಆಡಿದ ಮಾತಿನಲ್ಲಿ ನಂಬಿಕೆ ಇಲ್ಲ. ಅಂದರೆ ಮೃಷಾಭಾಷೀ, ವಾಯುಪಿತ್ತ ಕೂಡಿದ ಶರೀರ ಸ್ಥಿತಿ ಇರುವುದು, ಲುಬ್ಧ ನಾಗುವನು, ಬಹುವಿಧವಾದ ಸಂಕಟಗಳನ್ನು ಅನುಭವಿಸುವನು, ಚಿಕ್ಕವಯಸ್ಸಿನಲ್ಲಿ ಸರಿಯಾದ ಪಾಲಕರಿಲ್ಲದೆ ಇರುವನು, ಅಲ್ಪಸಂಖ್ಯೆಯ ಪುತ್ರಸಂತಾನವುಳ್ಳವನು, ಬಂಧುಗಳಿಗೂ, ಅಣ್ಣ ತಮ್ಮಂದಿರಿಗೂ. ಅಕ್ಕತಂಗಿಯರಿಗೂ ಸೌಖ್ಯವನ್ನೂ ಬಯಸುವವನು; ಧರ್ಮದಲ್ಲಿ ಪ್ರವರ್ತಿಸುವ ಬುದ್ಧಿಯುಳ್ಳವನೂ, ಅತಿಶಯವಾದ ಕಾರ್ಯಗಳನ್ನು ಮಾಡುವವನು, ಅವನು ಮಾಡಿದ ಕಾರ್ಯಕ್ಕೆ ಪ್ರತಿಫಲವಿಲ್ಲದೆ ಹೋಗುವನು, ನೀಚ ಬುದ್ಧಿಯುಳ್ಳವನು, ಚಾಡಿ ಹೇಳುವ ಸ್ವಭಾವ ಉಳ್ಳವನು, ಅಥವಾ ಶರೀರ ವಿಕಲಾಂಗವಾದವಳು. ಶರೀರದ ಕಾಂತಿ ಇಲ್ಲದವಳು. ಅಥವಾ ದುರ್ಬುದ್ಧಿಯುಳ್ಳವಳು, ಇನ್ನೊಬ್ಬನಿಗೆ ವಿವಾಹ ನಿಷ್ಕರ್ಷೆ ಆಗಿದ್ದು ಅವನು ವಿವಾಹ ಮಾಡಿಕೊಳ್ಳದೆ ತಿರಸ್ಕರಿಸಲ್ಪಟ್ಟವಳು. ಇವುಗಳಲ್ಲಿ ಯಾವುದಾದರೂ ಗುಣವಿರುವ ಹೆಂಡತಿಯುಳ್ಳವನು; ಅವನಿಗೆ ಮಿತ್ರರು ಅಣ್ಣ ತಮ್ಮಂದಿರಂತೆ ಇದ್ದು ನಂತರ ಅವರುಗಳೇ ಬಂಧುವರ್ಗಕ್ಕೆ ಸೇರುತ್ತಾರೆ. ಆಯುಧ ಮೂಲವಾಗಿಯಾಗಲೀ, ವಿಷ ಪ್ರಯೋಗದ ಮೂಲವಾಗಿಯೇ ಆಗಲಿ, ನೀರಿನಲ್ಲಿ ಬೀಳುವುದರ ಮೂಲವಾಗಿಯಾಗಲೀ, ಬೆಂಕಿಯಿಂದುಂಟಾದ ಮೂಲವಾಗಿಯೇ ಆಗಲಿ. ಪಿತ್ತೋದ್ರೇಕದಿಂದಾಗಲೀ, ಉನ್ನತ ಸ್ಥಾನದಿಂದ ಬಿದ್ದು ಈ ಮೇಲೆ ಹೇಳಿದ ಯಾವ ಕಾರಣದಿಂದಾಗಲೀ, ಹದಿನೈದು ದಿವಸಗಳು ಸಂಕಟಪಟ್ಟು ಮರಣ ಹೊಂದುವನು ॥೭೫-೭೬-೭೭-೭೮॥

ಪರಾಶರೋಕ್ತ ಮೇಷಾದಿ ಲಗ್ನಫಲಂ

## ಮೇಷ ಲಗ್ನಫಲಂ

ಶ್ಲೋಕ॥ ಮಂದಸೌಮ್ಯ ಸಿತಾಃಪಾಪಾಃ ಶುಭೌಗುರು ದಿವಾಕರೌ । ನಶುಭಂ ಯೋಗಮಾತ್ರೇಣ ಪ್ರಭವೇತ್ಫಲ ನಿಜೀವಯೋಃ ॥೭೯॥ ಪರಂತುತೇನ ಜೀವಸ್ಯ ಪಾಪಾಪಿತ್ವಮಪಿನಿಶ್ಚಿತಂ ।

ಕವಿಸಾಕ್ಷಾನ್ನಹಂತಾಸ್ಯಾನ್ಮಾರಕತ್ವೇನ ಲಕ್ಷಿತಃ ॥೮೧॥ ಮಂದಾದಯೋ ನಿಹಂತಾರೋ ಭವೇಯುಃ ಪಾಪಿನೋಗ್ರಹಾಃ । ಶುಭಾಶುಭ ಫಲಾನ್ಯೇವಂ ಜ್ಞಾತವ್ಯಾ ನಿಕ್ರಿಯಾಭುವಃ ॥೮೧॥

ತಾತ್ಪರ್ಯ॥ ಮೇಷಲಗ್ನ ಜಾತಕನಿಗೆ ಸೂರ್ಯ ಬೃಹಸ್ಪತಿಗಳು ಶುಭಫಲ ಕೊಡತಕ್ಕವರು. ಶನಿಯು ಬೃಹಸ್ಪತಿಯು ಕೂಡಿದ್ದರೆ ಶುಭಫಲ ಕೊಡುವುದಿಲ್ಲ. ಮತ್ತು ಬೃಹಸ್ಪತಿಗೆ ೧೨ನೇ ಅಧಿಪತ್ಯ ಬಂದದ್ದರಿಂದ ಪಾಪತ್ವ ಸಿದ್ಧಿಯಾಗುತ್ತದೆ. ಶುಕ್ರನು ೨-೭ನೇ ಅಧಿಪತ್ಯ ಬಂದದ್ದರಿಂದ ಸಾಕ್ಷಾತ್ತಾಗಿ ಮಾರಕನಾಗುವುದಿಲ್ಲ. (ಮಾರಕರೊಂದಿಗೆ ಸೇರಿದರೆ ಮಾರಕನಾಗುತ್ತಾನೆ) ಶನಿಯೇ ಮೊದಲಾದ ಪಾಪಗ್ರಹಗಳು ಮಾರಕರಾಗುತ್ತಾರೆ. ಈ ಪ್ರಕಾರ ಮೇಷಲಗ್ನ ಜಾತಕನ ಫಲ ತಿಳಿಯಬೇಕೆಂದು ಪರಾಶರರು ಅಭಿಪ್ರಾಯ ಪಟ್ಟಿರುತ್ತಾರೆ. ಕೇರಳೀಯದಲ್ಲಿ ಈ ವಿಷಯಕ್ಕೆ ॥ಶ್ಲೋಕ॥ ಮೇಷೇ ಲಗ್ನೇ ಪ್ರಜಾತಸ್ಯ ಬುಧಮಂದೌಚ ಮಾರಕೌ । ಶುಕ್ರಸ್ಯಾಕ್ಷಾನ್ನಹಂತಸ್ಯಾ ದಿತಿಕೇರಳ ನಿರ್ಣಯಃ ॥೮೨॥ ಮೇಷಲಗ್ನ ಜಾತಕನಿಗೆ ಬುಧ ಶನಿಗಳು ಮಾರಕರಾಗುವರು, ಶುಕ್ರನು ಸಾಕ್ಷಾತ್ತಾಗಿ ಮಾರಕನಾಗುವುದಿಲ್ಲ. ಮಾರಕರೊಂದಿಗೆ ಸೇರಿದರೆ ಮಾರಕನಾಗುತ್ತಾನೆಂದು ಮುಖ್ಯ ಅಭಿಪ್ರಾಯವಾಗುತ್ತದೆ. ಈ ಮೇಷಲಗ್ನ ಜಾತಕನಿಗೆ ಉಂಟಾದ ಫಲಕ್ಕೆ ಉದಾಹರಣೆ.

| | | | |
|---|---|---|---|
| | ಲಗ್ನ | | |
| | | | |
| ಕುಜ | | | ಗುರು ಶನಿ |
| | | ಬುಧ | ರ.ಶು ಶನಿ |

ಈ ಜಾತಕನಿಗೆ ಗುರುದಶೆ ಶನಿಯ ಭುಕ್ತಿಯಲ್ಲಿ ರಾಜ್ಯ ಸಂಬಂಧವಾದ ಅಧಿಕಾರದಿಂದ ಚ್ಯುತಿಯೂ ಬುಧನ ಭುಕ್ತಿಯಲ್ಲಿ ಪ್ರಾಪ್ತಿಯೂ ಮತ್ತು ಬುಧ ಭುಕ್ತಿಯ ಅಂತ್ಯದಲ್ಲಿ ಮರಣವೂ ಸಂಭವಿಸುತ್ತದೆ, ಆದ್ದರಿಂದ ಇಲ್ಲಿ ತೋರಿಸಿರುತ್ತೆ.

ಇತಿ ಮೇಷಲಗ್ನ ಫಲಂ

## ವೃಷಭಲಗ್ನ ಜಾತಕಫಲಂ

ಶ್ಲೋಕ॥ ವೃಷಭಲಗ್ನೇ ಸ್ಥೂಲೋಷ್ಠ ಗಂಡನಾಸೋ ಮಹಾಲಲಾಟಶ್ಚ । ಶ್ಲೇಷ್ಮಾನಿಲಭೂಯಿಷ್ಠಸ್ತ್ಯಾಗೀ ಬಹುಶೋವ್ಯಯರತಶ್ಚ ॥೮೩॥ ಕನ್ಯಾಪ್ರಚೋಲ್ಪ ಪುತ್ರಃ ಪಿತುರ್ಜನನ್ಯಾಶ್ಚ ದೋಷಕೃದ್ಬಹುಶಃ । ಕರ್ಮಣಿ ಸತತಂ ಸಕ್ತೋ ವಿಧರ್ಮಯುಕ್ತೋರ್ಥ ಭಾಕ್ಚೈವ ॥೮೪॥ ನಿತ್ಯಂ ಕಳತ್ರ ಕಾಂಕ್ಷೀ ಶಸ್ತ್ರ ವಿಘಾತೀ ಸದಾ ಸ್ವಜನ

ಹರ್ತಾ । ಮೃತ್ಯುಂ ಶಸ್ತ್ರೈಃ ಪಾಶೈರ್ಮೃಗೈತ್ಯೆಶ್ಶಲಭತೇಸ್ಸ ದೇಶೇಷು ॥೮೫॥ ದೇಹಶ್ರಮೈ ರ್ಜಲೈರ್ವಾ ಶೂಪ್ಪಟನ ನಿರಸನೈಶ್ಶೈವ। ಪುರುಷಶ್ಚತುಷ್ಪದೈರ್ವಾ ಬಲಾನ್ವಿತಾನ್ಮೃತ್ಯು ಮುಪಯಾತಿ ॥೮೬॥

ತಾತ್ಪರ್ಯ॥ ವೃಷಭಲಗ್ನದಲ್ಲಿ ಹುಟ್ಟಿದ ಪುರುಷನು, ಸ್ಥೂಲವಾದ ತುಟಿಯುಳ್ಳ ವನಾಗಿಯೂ, ಉನ್ನತವಾದ ಕೆನ್ನೆಗಳೂ, ಅಗಲವಾದ ಹಣೆಯೂ ಉಳ್ಳವ ನಾಗಿಯೂ, ವಾತಪಿತ್ತ ಶೀತಪ್ರಕೃತಿ ಧಾತುಗಳಲ್ಲಿ ಶೀತ, ವಾತ, ಧಾತುವೇ ಅಧಿಕ ವಾಗಿ ಉಳ್ಳವನಾಗಿಯೂ, ಉದಾರಗುಣ ಉಳ್ಳವನಾಗಿಯೂ, ಸಮಯದಲ್ಲಿ ದುಂದುಗಾರಿಕೆ ಮಾಡತಕ್ಕವನಾಗಿಯೂ, ಅಧಿಕವಾದ ಸ್ತ್ರೀ ಸಂತತಿಯುಳ್ಳವನಾಗಿಯೂ ಅಲ್ಪ ಸಂಖ್ಯಾತವಾದ ಪುತ್ರ ಸಂತಾನ ಉಳ್ಳವನಾಗಿಯೂ, ತಂದೆ ತಾಯಿಗಳಿಗೆ ಪ್ರಾಯಶಃ ಪ್ರೀತಿ ಇಲ್ಲದವನಾಗಿಯೂ, ಸರ್ವಕಾಲದಲ್ಲಿಯೂ ಅಧರ್ಮವಾದ ಕಾರ್ಯ ಮಾಡುತ್ತಾ ದ್ರವ್ಯಾರ್ಜನೆ ಮಾಡತಕ್ಕವನಾಗಿಯೂ, ಸದಾಕಾಲದಲ್ಲೂ ಪತ್ನಿಯು ಸಮ್ಮುಖದಲ್ಲಿರಬೇಕೆಂದು ಅಪೇಕ್ಷಿಸತಕ್ಕವನಾಗಿಯೂ, ಸ್ವಜನರನ್ನು ಬಾಧೆಕೊಟ್ಟು ಅವರಿಂದ ದುರ್ನಾಮವನ್ನು ಹೊಂದತಕ್ಕ ಸ್ವಭಾವ ಉಳ್ಳವನಾಗಿಯೂ ಇರುವನು. ಶಸ್ತ್ರದಿಂದಾಗಲೀ, ನೇಣು ಹಾಕಿಕೊಳ್ಳುವುದರಿಂದಾಗಲೀ, ದೇಹಶ್ರಮದಿಂದಾಗಲೀ, ನೀರಿನಲ್ಲಿಯಾಗಲೀ, ಶೃಂಗವಿರುವ ಪಶುಜನ್ಮವಾಗಿಯಾಗಲೀ, ಶೂಲಜಾಡ್ಯವೆಂದರೆ, ಮೂಲವ್ಯಾಧಿ ಅರ್ಶರೋಗದ ಬಾಧೆಯಿಂದಾಗಲಿ, ಮುಳ್ಳು ತಗಲುವಿಕೆಯಿಂದಾಗಲಿ, ತಾನು ಜನ್ಮಸಿದ ದೇಶ ಬಿಟ್ಟು ಅನ್ಯ ದೇಶದಲ್ಲಿ ಮರಣ ಉಂಟಾಗುವುದು. ಇಲ್ಲಿ ಮರಣ ಕಾರಣಗಳು ಅನೇಕವಾಗಿ ಹೇಳುವುದು, ಏತ ಕ್ಕೆಂದರೆ, ವೃಷಭಲಗ್ನ ಜಾತಕವು ಗ್ರಹಯೋಗ ವೀಕ್ಷಣದಿಂದ ಯಾವುದಕ್ಕೆ ಅನ್ವಯಿ ಸುತ್ತೋ ಅದನ್ನು ನಿರ್ಣಯಮಾಡಿ ಹೇಳತಕ್ಕದ್ದು ॥೮೩-೮೪-೮೫-೮೬॥

## ಪರಾಶರೋಕ್ತ ವೃಷಭಲಗ್ನ ಜಾತಕಫಲಂ

ಶ್ಲೋಕ॥ ಜೀವಶುಕ್ರೇಂದವಃ ಶುಭೌ ಶನಿದಿವಾಕರೌ । ರಾಜಯೋಗ ಕರಸ್ಸಾಕ್ಷಾ ದೇಕಏವರವೇಃಸುತಃ ॥೮೭॥ ಜೀವಾದಯೋಗ್ರಹಾಃ ಪಾಪಾ ಹಂತಿಮಾರಕ ಲಕ್ಷಣಾಃ । ಬುಧೈಸ್ತತ್ರ ಫಲಾನ್ಯೇವಂಜ್ಞೇ- ಯಾನಿವೃಷ ಜನ್ಮನಃ ॥೮೮॥ ಈ ವಿಷಯಕ್ಕೆ ಕೇರಳೀಯ

ಶ್ಲೋಕ॥ ವೃಷೇಲಗ್ನೇ ಪ್ರಜಾತಸ್ಯ ವಿಧುಜೀವ ಸಿತಾಃಖಲಾಃ । ತೇಮಾರಕಾಹಿ ವಿಜ್ಞೇಯಾ ಜ್ಯೋತಿಶ್ಶಾಸ್ತ್ರವಿದುತ್ತಮೈಃ ॥೮೯॥

ತಾತ್ಪರ್ಯ॥ ಪರಾಶರರು ಹೇಳಿರುವ ಮುಖ್ಯ ಸಾರಾಂಶಾಭಿಪ್ರಾಯ ಏನೆಂದರೆ-

ವೃಷಭಲಗ್ನ ಜಾತಕನಿಗೆ ೮-೧೧ನೇ ಅಧಿಪತಿಯಾದ ಗುರು, ತೃತೀಯಾಧಿಪತಿಯಾದ ಚಂದ್ರ, ಲಗ್ನ ಷಷ್ಠಾಧಿಪತಿಯಾದ ಶುಕ್ರ, ಮೂರು ಗ್ರಹಗಳು ಪಾಪಿಗಳು; ಶನಿಯು ಸೂರ್ಯನು, ಶುಭಫಲ ಕೊಡತಕ್ಕವರು; ಸೂರ್ಯನ ಪುತ್ರನಾದ ಶನಿಯೊಬ್ಬನೇ ೯-೧೦ನೇ ಅಧಿಪತ್ಯ ಪಡೆದವನಾದ್ದರಿಂದ ರಾಜಯೋಗ ಕಾರಕನಾಗಿ ಸೌಖ್ಯ ಕೊಡುತ್ತಾನೆ. ಬೃಹಸ್ಪತಿಯೇ ಮೊದಲಾದ ಪಾಪಿಗಳು ಮಾರಕರಾಗುವರು. ಈ ಪ್ರಕಾರ ಫಲ ವಿಚಾರಮಾಡಿ ತಿಳಿಯಬೇಕೆಂದು ಭಾವವು. ಇದೇ ವಿಷಯದಲ್ಲಿ ಕೇರಳಶಾಸ್ತ್ರಿಯಾದ ನೀಲಕಂಠನೆಂಬುವ ಆಚಾರ್ಯನು ಹೇಳಿರುವುದೇನೆದರೆ-ವೃಷಭಲಗ್ನ ಜಾತಕನಿಗೆ ಚಂದ್ರ ಗುರು ಶುಕ್ರರು ಪಾಪಿಗಳು, ಈ ಪಾಪಿಗಳಲ್ಲಿ ಯಾರೇ ಆದರೂ, ಆಯುರ್ದಾಯದ ಕೊನೆಗಾಲದಲ್ಲಿ ದಶಾಭುಕ್ತ್ಯಧಿಪತಿಗಳಾದರೆ ಮಾರಕರಾಗಿ ಕೊಲ್ಲುತ್ತಾರೆ ॥೮೯॥

## ಉದಾಹರಣೆ

| ಗುರು | | ಲಗ್ನ | ಕುಜ<br>೧೨ |
|---|---|---|---|
| | | | ಶುಕ್ರ<br>೪ |
| ಚಂದ್ರ | | | ರಃಬು<br>೭ರಾ೨ |
| | ಶನಿ | | |

ಈ ಜಾತಕಕ್ಕೆ ಶನಿಯು ೯-೧೦ನೆ ಅಧಿಪತಿಯಾಗಿ ಸಪ್ತಮ ಸ್ಥಾನದಲ್ಲಿ ಕೀಟ ರಾಶಿಯಲ್ಲಿ ದಿಗ್ಬಲಯುಕ್ತನಾಗಿರುತ್ತಾನೆ. ಈ ದಶೆಯಲ್ಲಿ ರಾಜಯೋಗ ಪ್ರಾಪ್ತಿಯಾಗುತ್ತೆ.

| ಕುಜ<br>ಶುಕ್ರ | ರವಿ<br>ಚಂ.ಶ | ಬು.<br>ಲ | |
|---|---|---|---|
| | | | ರಾಹು |
| ಕೇತು | | | |
| | | | ಗುರು |

ಈ ಜಾತಕಕ್ಕೆ ಶನಿಯು ಸ್ವತಂತ್ರ ಯೋಗಕಾರಕನಾದಾಗ್ಯೂ ನೀಚನಾಗಿ ಚತುರ್ಥಾಧಿಪತಿಯೊಡನೆ ಸೇರಿರುವುದರಿಂದ ರಾಜಯೋಗ.

ಮತ್ತು ಲಗ್ನಾಧಿಪತಿಯು ೧೧ರಲ್ಲಿ ಉಚ್ಚನಾಗಿ ಲಾಭಾದಿಯಾದ ಗುರು ನೋಡುತ್ತಲಿರುವದರಿಂದ ಇದು ಅತಿಶಯವಾದ ಸೌಖ್ಯಯೋಗ ಈ ಪ್ರಕಾರ ನೋಡಿ ಕೊಳ್ಳತಕ್ಕದ್ದು.

## ಮಿಥುನಲಗ್ನ ಜಾತಕ ಸ್ವಭಾವಫಲಂ

ಶ್ಲೋಕ॥ ಪೂರ್ವವಿಲಗ್ನೇ ಮಿಥುನೇ ಹೀನಾಂಗಸ್ಸ್ಯೂಯತೇ ಧಿಕಾಂಗೋವಾ॥
ಪ್ರಿಯವಾಗ್ನಿ ಶಿಷ್ಟಕರ್ಮಾ ಮಿಶ್ರಪ್ರಕೃತಿರ್ದ್ವಿಜನನೀಕಃ ॥೯೦॥
ಅಲ್ಪಮತಿರಲ್ಪಕಾಯ ಸ್ಸತಾಂ ಚಮಹಿತೋ ಗುರೂಣಾಂಚ ।
ಅಲ್ಪಸಹಜೋಲ್ಪಚೇಷ್ಟಃ ಪರಾವಮರ್ದೀಗುಣಯುತಶ್ಚ ॥೯೧॥
ಕರ್ಮಸು ಬಹುಷ್ವಭಿರತೋಧರ್ಮಂ ಸಾಧಯತಿ ನತ್ವಧರ್ಮೇಣ।
ಪ್ರಾಪ್ತಾನ್ಲಾಭಾನ್ವಿವಿಧಾ ದೋಷೈಸ್ಸ್ವೈ ಸ್ವೈಶ್ಚನಾಶಯತಿ ॥೯೨॥
ಬಹ್ವೀಃ ಪತ್ನೀರ್ಲಭತೇ ರೋಗಾಂಶ್ಚ ಸುದಾರಣಾನ್ನಯತಿ ।
ವ್ಯಾಳಾದ್ವಿಷಾನ್ಮೃಗಾದ್ವಾಪ್ಯಕಾದ್ವಾ ಮೃತ್ಯುಮುಪಯಾತಿ ॥೯೩॥

ತಾ॥ ಮಿಥುನ ಲಗ್ನಕ್ಕೆ ಎರಡು ವಿಭಾಗ ಮಾಡಿ ಫಲ ಹೇಳಿರುತ್ತಾರೆ. ಮಿಥುನಲಗ್ನದಲ್ಲಿ ೧೫ ಭಾಗದವರಿಗೂ ಜನ್ಮಲಗ್ನವಾಗಿರುವಲ್ಲಿ ಜಾತಕನ ಶರೀರದ ಯಾವ ಅವಯುವದಲ್ಲಿ ಹೀನಾಂಗವಾದರೂ, ಅಧಿಕಾಂಗವಾದರೂ, ಗಿಡ್ಡಗಿರುವವನಾದರೂ ಆಗಿ ಹುಟ್ಟುವ ಗುಣವಿರುತ್ತೆ. ೧೬ ರಿಂದ ೩೦ ರ ವರೆಗಿನ ಭಾಗಗಳಲ್ಲಿ ಹುಟ್ಟಿದವರಿಗೆ ಈ ಮೇಲೆ ಹೇಳಿದ ದೋಷಗಳು ಸಂಭವಿಸುವುದಿಲ್ಲ. ಮಿಥುನ ಲಗ್ನದಲ್ಲಿ ಜನ್ಮಿಸಿದವನು, ಪರರಿಗೆ ಕೇಳುವುದಕ್ಕೆ ಇಷ್ಟವಾಗಿ ಮಾತನಾಡುವವನು, ಅತಿಶಯವಾದ ಕಾರ್ಯಮಾಡುವವನಾಗಿಯೂ, ವಾತಪಿತ್ತ, ಕಫಗಳೆಂಬ ತ್ರಿಧಾತು ಸಮವಾಗಿರುವ ಶರೀರ ಉಳ್ಳವನಾಗಿಯೂ, ದ್ವಿಮಾತೃಗಳುಳ್ಳವನಾಗಿಯೂ, ಅಲ್ಪಧೀಯುಳ್ಳವನಾಗಿಯೂ, ಚಿಕ್ಕಶರೀರ ಉಳ್ಳವನಾಗಿಯೂ, ದೊಡ್ಡವರಲ್ಲಿಯೂ, ಸಜ್ಜನರಲ್ಲಿಯೂ, ಪೂಜ್ಯನಾಗಿಯೂ, ಅಲ್ಪ ಸಹೋದರರುಳ್ಳವನಾಗಿಯೂ, ಅಲ್ಪ ಚೇಷ್ಟೆ ಮಾಡುವವನಾಗಿಯೂ, ಶತ್ರುಗಳನ್ನು ಜಯಿಸತಕ್ಕ ಶಕ್ತನಾಗಿಯೂ, ಶೌರ್ಯೌದಾರ್ಯಾದಿ ಸುಗುಣ ಉಳ್ಳವನಾಗಿಯೂ, ಬಹು ಕೆಲಸಗಳಲ್ಲಿ ಆಶೆಯುಳ್ಳವನಾಗಿಯೂ, ಧರ್ಮಕಾರ್ಯಗಳನ್ನು ಆಚರಿಸತಕ್ಕವನಾಗಿಯೂ, ಅಧರ್ಮಕ್ಕೆ ಬಾಹಿರನಾಗಿಯೂ, ಅನೇಕ ಪ್ರಕಾರವಾದ ಲಾಭವನ್ನು ತನ್ನ ಕೃತ್ಯಗಳಿಂದ ನಾಶಗೊಳಿಸುವವನಾಗಿಯೂ, ಅನೇಕ ಹೆಂಡತಿಯರನುಳ್ಳವನಾಗಿಯೂ, ಭಯಂಕರವಾದ ರೋಗಗಳ ದೆಶೆಯಿಂದ ಜೀವಿಸುವವನಾಗಿಯೂ, ವಿಷಜಂತು, ಹಾವು, ಚೇಳು, ಮೃಗ, ಜಲ ಈ ಮೊದಲಾದ ಗಂಡಗಳಿಂದ ಮರಣ ಹೊಂದತಕ್ಕವನಾಗುವನು ॥೯೩॥

## ಪರಾಶರೋಕ್ತ ಮಿಥುನ ಲಗ್ನಫಲಂ

ಶ್ಲೋಕ॥ ಭೌಮಜೀವಾ ರುಣಾಃಪಾಪಾ ಕವಿಃಶುಭಃ । ಶನೈಶ್ಚರೇಣ ಜೀವಸ್ಯ
ಯೋಗೋ ಮೇಷ ಭವ್ಯೋಯಥಾ ॥೯೪॥ ನಾಯಂಶಶೀ

ನಿಹಂತಾಸ್ಯಾದಫಲಂ ಪಾಪಿತಾಕ್ಯತಮ್ । ಜ್ಞಾತವ್ಯಾನಿ ದ್ವಂದ್ವ
ಜಸ್ಯಫಲಾನ್ಯೇತಾನಿ ಸೂರಿಭಿಃ ॥೯೫॥ ಮತ್ತು ಕೇರಳೀಯೇ॥
ಯುಗ್ಮಲಗ್ನೇ ಪ್ರಜಾತಸ್ಯ ರವಿ ಚಂದ್ರಕುಜಾಃ ಖಲಾಃ ।
ತೇಗ್ರಹಾ ಮಾರಕಾಧಿಕ್ಯಾಃ ಶನಿಸ್ವಾಕ್ಷಾನ್ನ ಮಾರಕಃ ॥೯೬॥

ತಾತ್ಪರ್ಯಃ-ಮಿಥುನ ಲಗ್ನದಲ್ಲಿ ಹುಟ್ಟಿದವನಿಗೆ ಕುಜ, ಗುರು, ರವಿ ಈ ಮೂರು ಗ್ರಹಗಳು ಪಾಪಿಗಳು, ಶುಕ್ರನೊಬ್ಬನೇ ಶುಭಕರನು, ಶನಿಯು, ಬೃಹಸ್ಪತಿಯು ಸೇರಿದರೆ ಮೇಷಲಗ್ನ ಜಾತಕನಿಗೆ ಹೇಳಿರುವಂತೆ ಯೋಗ ಭಂಗವಾಗುವುದು. ಚಂದ್ರನು ದ್ವಿತೀಯಾಧಿಪತ್ಯ ಬಂದವನಾದರೂ, ಮಾರಕನಾಗುವುದಿಲ್ಲ. ಈ ಪ್ರಕಾರ ಮಿಥುನಲಗ್ನ ಜಾತಕನ ಫಲ ತಿಳಿಯಬೇಕು. ಮತ್ತು ಕೇರಳೀಯದಲ್ಲಿ ಮಿಥುನಲಗ್ನ ಜಾತಕನಿಗೆ ರವಿ, ಚಂದ್ರ, ಕುಜ ಈ ಮೂರು ಗ್ರಹಗಳು ಮಾರಕರೆಂದು ಹೇಳಿರುತ್ತಾರೆ. ಗುರುವಿಗೆ ಮಾರಕತ್ವ ಹೇಳಲಿಲ್ಲ. ಯಾತಕ್ಕೆಂದರೆ-ಸ್ವಭಾವಸಿದ್ಧವಾಗಿ ಸಪ್ತಮಾಧಿಪತಿಗೆ ಮಾರಕ ಹೇಳಿರುವುದರಿಂದ ಇದು ಪ್ರಸಿದ್ಧವಾದ ವಿಷಯವಾದ್ದರಿಂದ ಹೇಳಲಿಲ್ಲ ॥೯೪-೯೫-೯೬॥

## ಉದಾಹರಣೆ-ಮಿಥುನಲಗ್ನ ಜಾತಕ

| ಕುಜ ಚಂದ್ರ | | ಶುಕ್ರ | ಬು.ಕೇ. ಲ |
|---|---|---|---|
| | | | ರವಿ |
| | | | ಶನಿ |
| ರಾಹು | | | ಗುರು |

ಈ ಜಾತಕವನ್ನು ಉದಾಹರಣಾರ್ಥವಾಗಿ ತೋರಿಸಿರುತ್ತೇನೆ. ಇದರಲ್ಲಿ ಕುಜ, ಚಂದ್ರರು ದಶಮದಲ್ಲಿದ್ದು ಗುರು ನೋಡುವುದರಿಂದ ಚಂದ್ರ ಮಂಗಳ ಯೋಗ. ಮಹಾಶುಭಯೋಗ ಮತ್ತು ಲಗ್ನದಿಂದ ೩ನೆ ಸ್ಥಾನದಲ್ಲಿ ಶನಿ ಸ್ವತಂತ್ರ ರಾಜಯೋಗ ಕಾರಕನಾಗಿರುತ್ತಾನೆ. ಮಿಥುನದಲ್ಲಿ ಬುಧನು ಸ್ವಕ್ಷೇತ್ರದಲ್ಲಿರುವುದರಿಂದ ಸ್ವದೇಶದಲ್ಲಿ ತಾನು ಜನ್ಮಿಸಿದ ದೇಶದಲ್ಲಿ ರಾಜ್ಯಾಧಿಕಾರದಲ್ಲಿ ಗೌರವದಿಂದ ಜೀವಿಸುವನು. ಸಪ್ತಮದಲ್ಲಿ ರಾಹು ಇರುವುದರಿಂದಲೂ, ಸಪ್ತಮಕ್ಕೆ ಶುಭದೃಷ್ಟಿ ಇಲ್ಲದಿರುವುದರಿಂದ ದ್ವಿಕಳತ್ರಯೋಗ ಮತ್ತು ಶುಕ್ರನೂ ಪಂಚಮಾಧಿಪತಿಯಾಗಿ ಗುರುದೃಷ್ಟಿಯುಕ್ತ ನಾಗಿರುವುದರಿಂದ ಸ್ತ್ರೀ ಪ್ರಜೆ ಹೆಚ್ಚು, ಪುಂಪ್ರಜೆ ಅಲ್ಪವಾಗಿರುತ್ತೆ. ಶುಕ್ರನು ವ್ಯಯಸ್ಥಾನದಲ್ಲಿ ಸ್ವಕ್ಷೇತ್ರದಲ್ಲಿರುವುದರಿಂದ ಆದಿ ವಯಸ್ಸಿನಲ್ಲಿ ಪುತ್ರಸಂತತಿ ಇಲ್ಲ. ಅಂತ್ಯವಯಸ್ಸಿನಲ್ಲಿ ಆಗುತ್ತದೆ. ತೃತೀಯದಲ್ಲಿರುವ ಶನಿಭ್ರಾತೃಸೌಖ್ಯ ಕೊಡುವವನಾಗುವುದಿಲ್ಲ. ಈ ರೀತಿ ತಿಳಿಯತಕ್ಕದ್ದು.

## ಕರ್ಕಾಟಕಲಗ್ನ ಜಾತಕಫಲಂ

ಶ್ಲೋಕ॥ ಕರ್ಕಿಣಿ ಪೂರ್ವವಿಗ್ನೇ ನೈಕಾಗ್ರೋ ಗುಹ್ಯರೋಗವಾರ್ಭೀರುಃ ।
ಉರಸಿಕೃತಾಭಿಜ್ಞಾನಃ ಕಫಾನಿಲಾತ್ಮಾ ದೃಢಗ್ರಾಹೀ ॥೯೭॥
ಪಾಪಾನಹಿತಾನ್ಭಜತೇ ಪರಸ್ವಮಪಿ ನಕ್ಷಿಪೇದ್ವ್ಯಯೇನ ಸಕೃತ್ ।
ಸ್ವಜನಾದ್ಯಪ್ತಃ ಸ್ವಜನೈರ್ವಿ ಭರ್ತ್ಸಿತೋಽಹ್ಯಸ್ಥಿರ ಪ್ರಸವಃ ॥೯೮॥
ತೀಕ್ಷ್ಣಂ ಕರ್ಮವಿದೇಶೇ ನಿತ್ಯಂಹ್ಯರ್ಥೋದಿತಃ ಪರಸ್ವಾಮೀ ।
ಅಸದೃಶದಾರೋ ರಿಪುನಿರ್ಜಿತಶ್ಚ ಪೂಜ್ಯಸ್ಸಮೂಹಾನಾಂ ॥೯೯॥
ಕಂಠಾಪೀಡಾದ್ವ್ಯಾಕಫೋದಯಾದಸ್ಥಿಭಂ ಜನಾದ್ಭೇದಾತ್ ।
ದೇಹಚ್ಛೇದಾದಥವಾ ಜಲೋದರಾನ್ಮೃತ್ಯುಮಾಪ್ನೋತಿ ॥೧೦೦॥

ತಾತ್ಪರ್ಯ॥ ಕರ್ಕಾಟಕಲಗ್ನ ಜಾತಕನಿಗೆ ಎರಡು ವಿಧವಾಗಿ ಫಲ ಹೇಳಿರುತ್ತೆ. ಪೂರ್ವಭಾಗದಲ್ಲಿ ಜನನವಾದರೆ ಬುದ್ಧಿ ಸ್ಥಿರವಿಲ್ಲ. ಮೇಹ, ಭಂಗದರ ಮೊದಲಾದ ಸ್ತ್ರೀ ಸಂಬಂಧವಾದ ಗುಹ್ಯರೋಗವಿರುತ್ತೆ, ಉತ್ತರಾರ್ಧಕ್ಕೆ ಈ ದೋಷವಿಲ್ಲ. ಸ್ವಾಭಾವಿಕವಾಗಿ ಕರ್ಕಾಟಕ ಲಗ್ನದಲ್ಲಿ ಹುಟ್ಟಿದ ಪುರುಷನು ಭಯಪಡುವವನಾಗಿಯೂ, ಉರಸ್ಥಳದಲ್ಲಿ ಚಿನ್ಹೆಯುಳ್ಳವನಾಗಿಯೂ, ತ್ರಿಧಾತುಗಳಲ್ಲಿ ಶೀತ, ವಾಯು, ಧಾತುವೇ ಅಧಿಕವಾಗಿರುವವನಾಗಿಯೂ, ತಾನು ಗ್ರಹಿಸಿದ್ದು ಎಂದಿಗೂ ಮರೆಯದವನಾಗಿಯೂ, ಹಟಹಿಡಿಯುವವನಾಗಿಯೂ, ಪಾಪಿಗಳಾಗಿಯೂ ತನಗೆ ಶತ್ರುಗಳಾಗಿಯೂ ಇರುವವರನ್ನು ಸೇವಿಸತಕ್ಕವನಾಗಿಯೂ, ಪರರ ದ್ರವ್ಯವನ್ನು ಖರ್ಚುಮಾಡಲು ಅಧಿಕಾರ ಹೊಂದಿದ್ದರೂ, ಅದನ್ನು ಹೆಚ್ಚಾಗಿ ವ್ಯಯ ಮಾಡದೆ ಉಪಯುಕ್ತ ಕಾರ್ಯಗಳಲ್ಲೇ ಮಿತವಾಗಿ ವ್ಯಯ ಮಾಡುವವನಾಗಿಯೂ, ತನ್ನವರಿಂದ ಅಹಂಕಾರ ಪಡುವವನಾಗಿಯೂ, ಸ್ವಜನರಿಂದ ದೂಷಿಸಲ್ಪಟ್ಟು ಬಿಡಲ್ಪಟ್ಟವನಾಗಿಯೂ, ಅಸ್ಥಿರವಾದ ಸಂತತಿಯುಳ್ಳವನಾಗಿಯೂ, ಪರದೇಶದಲ್ಲಿ ಶ್ರಮ ಸಹಿಸತಕ್ಕವನಾಗಿಯೂ, ಸದಾಕಾಲದಲ್ಲಿ ದ್ರವ್ಯಾರ್ಜನ ಪ್ರಯತ್ನವುಳ್ಳವನಾಗಿಯೂ, ಪರರ ಅಧಿಕಾರದಲ್ಲಿ ಸಿಕ್ಕಿ ನರಳುವವನಾಗಿಯೂ, ತನ್ನ ಗುಣ ಸೌಂದರ್ಯಾತಿಶಯಕ್ಕೆ ತಕ್ಕದ್ದಲ್ಲದ ಪತ್ನಿಯುಳ್ಳವನಾಗಿಯೂ, ಶತ್ರುಗಳಿಂದ ಸೋತು ಹೋದವನಾಗಿಯೂ, ಸಮೂಹದಲ್ಲಿ ಗೌರವಿಸತಕ್ಕವನಾಗಿಯೂ, ಲಾಳ ಸಂಕೋಲೆ ರೋಗದಿಂದಾಗಲೀ, ಶ್ಲೇಷ್ಮವ್ಯಾಧಿ, ಗೂರಲ್ಲು, ಉಬ್ಬಸ, ಕೆಮ್ಮು, ಶ್ವಾಸರೋಗ ಈ ರೋಗದಲ್ಲಿ ಯಾವ ರೋಗಗಳಿಂದಾಗಲೀ, ಎಲುಬು ಮುರಿಯುವುದರಿಂದಾಗಲೀ, ಶರೀರ ಅವಯವ ಮುರಿಯುವುದರಿಂದಾಗಲೀ. ಕುತ್ತಿಗೆ ಹಿಸುಕಿಕೊಳ್ಳುವುದರಿಂದಾ ಗಲೀ, ನೇಣುಹಾಕಿಕೊಳ್ಳುವುದರಿಂದಾಗಲೀ, ಜಲೋದರ ಮಹೋದರ ಮೊದಲಾದ ರೋಗಗಳಿಂದಾಗಲಿ ಮರಣ ಹೊಂದುವನು ॥೧೦೦॥ ॥೯೭-೯೮-೯೯೧೦೦॥

## ಪರಾಶರೋಕ್ತ ಕರ್ಕಾಟಕಲಗ್ನ ಜಾತಕಫಲಂ

ಶ್ಲೋಕ॥ ಭಾರ್ಗವೇಂದುಸುತೌ ಪಾಪೌ ಭೂಸುತಾಂಗಿರಸೌ ಶುಭೌ । ಏಕ ಏವಗ್ರಹಃ ಸಾಕ್ಷಾದ್ಭೂಸುತಸ್ತ್ಯೋಗ ಕಾರಕಃ ॥೧೦೧॥ ನಿಹಂತಾರ ವಿಜೋನ್ಯೇತು ಪಾಪಿನೋ ಮಾರಕಾಹ್ವಯಾಃ ॥ ಕುಲೀರಸಂ ಭವಸ್ಯೈವಂ ಫಲಾನ್ಯುಕ್ತಾನಿಸೂರಿಭಿಃ ॥೧೦೨॥ ಮತ್ತು ಕೇರಳೀಯೇ ॥ ಕರ್ಕಿಲಗ್ನೇ ಪ್ರಜಾತಸ್ಯ ಮಂದಸೌಮ್ಯ ಸಿತಾಃ ಖಲಾಃ । ರವಿಸ್ಸಾಕ್ಷಾನ್ನಹಂತಾಸ್ಯಾತ್ತೈಖಲಾ ಮಾರಕಾಸ್ತದಾ ॥೧೦೩॥

ತಾತ್ಪರ್ಯ॥ ಕರ್ಕಾಟಕಲಗ್ನ ಜಾತಕನಿಗೆ ಶುಕ್ರ ಬುಧರು ಪಾಪಿಗಳು, ಕುಜನು ಬೃಹಸ್ಪತಿಯೂ ಶುಭಫಲ ಕೊಡುವವರು, ಅಂಗಾರಕನೊಬ್ಬನೇ ರಾಜಯೋಗಕಾರಕ ನಾಗುವನು, ಮಾರಕರಾದ ಗ್ರಹಗಳೂ ಮತ್ತು ಶನಿಯು ಕೂಡ ಮಾರಕರಾಗುವರು. ಈ ವಿಧವಾಗಿ ಯೋಚಿಸಿ ವಿದ್ವಾಂಸರು ಕರ್ಕಾಟಕ ಲಗ್ನಜಾತಕನಿಗೆ ಫಲ ನಿರ್ಣಯ ಮಾಡತಕ್ಕದ್ದು. ಈ ವಿಷಯದಲ್ಲಿಯೇ ಕೇರಳ ಶಾಸ್ತ್ರದಲ್ಲಿ ಹೇಳಿರುವುದೇನೆಂದರೆಃ- ಕಟಕಲಗ್ನ ಜಾತಕನಿಗೆ ಶನಿ, ಬುಧ, ಶುಕ್ರ ಈ ಮೂರು ಗ್ರಹಗಳು ಪಾಪಿಗಳು ಮತ್ತು ಮಾರಕರು, ಸೂರ್ಯನು ದ್ವಿತೀಯಾಧಿಪತ್ಯ ಬಂದದ್ದರಿಂದ ಸಾಕ್ಷಾತ್ತಾಗಿ ಮಾರಕ ನಲ್ಲ, ಮಾರಕರೊಂದಿಗೆ ಸೇರಿದರೆ ಮಾರಕನಾಗುವನು ॥೧೦೧-೧೦೨- ೧೦೩॥

## ಸಿಂಹಲಗ್ನ ಜಾತಕಫಲಂ

ಶ್ಲೋಕ॥ ಸಿಂಹವಿಲಗ್ನೇ ಕಠಿನಃ ಪ್ರಿಯಾಮಿಷಃ ಪೈತ್ತಿಕೋ ವಿತತನಾಸಃ ।
ಬಹ್ವಾರಂಭ ಕುಟುಂಬಃ ಕೃಪಣಸ್ಸಧಸಮ್ಮತಃ ಖ್ಯಾತಃ ॥೧೦೪॥
ಸಹಜವಿಷಾದೀ ಸ್ವಜನಸ್ಯ ಘಾತುಕೋ ವಿಕ್ರಮೈಸ್ಸ್ವಕೈರ್ಯುಕ್ತಃ ।
ಅವಿಷಾದೀ ಕರ್ಮಕರೋ ವಿವಿಧೋಪಾಯೈಸ್ತ್ವಧರ್ಮಿಷ್ಠಃ ॥೧೦೫॥
ಭಾರ್ಯಾಬಹ್ವೀರ್ಲಭತೇ ವಿಂದ್ಯಾದ್ವಿವಿಧಾಃ ಕುಲೈರುಪೇತಾಶ್ಚ ।
ಕಟ್ಯಾಂರುಜಸ್ಚ ಬಹುಶೋ ಜಾನ್ವೋರ್ವ ಶನೇಷುಚಾಪ್ನೋತಿ ॥೧೦೬॥
ಮೃತ್ಯುಶ್ಚಸ್ತ್ರೈಃ ಪಾಷ್ಯೈರ್ವಿಷೈಶ್ಚ ಕಾಷ್ಯೈರಥಾ ಮಯೈಶ್ಚಾಪಿ
ಅಂಬುಚರೈರ್ವಾ ಸತ್ವೈರ್ಬು ಭುಕ್ಷಯಾ ಹ್ರಾಸಮುಪಯಾತಿ ॥೧೦೭॥

ತಾತ್ಪರ್ಯ॥ ಸಿಂಹಲಗ್ನದಲ್ಲಿ ಜನ್ಮಿಸಿದ ಪುರುಷನು ಉಗ್ರವಾದ ನಡವಳಿಕೆಯುಳ್ಳವ ನಾಗಿಯೂ, ಮಾಂಸ ಭೋಜನದಲ್ಲಿ ಪ್ರೀತಿಯುಳ್ಳವನಾಗಿಯೂ, ಪಿತ್ತರೋಗ ವಿಕಾರ ಉಳ್ಳವನಾಗಿಯೂ, ವಿಶಾಲವಾದ ನಾಸಿಕ ಉಳ್ಳವನಾಗಿಯೂ, (ಅಂದರೆ ಪಡಸಾಲೆ ಮೂಗುಳ್ಳವನೆಂದು ಪ್ರತೀತಿಯುಂಟು ಅನೇಕ ಕೆಲಸ ಮಾಡಲು ಆರಂಭಿಸುವವ ನಾಗಿಯೂ, ದೊಡ್ಡ ಕುಟುಂಬ ಉಳ್ಳವನಾಗಿಯೂ, ಲುಬ್ಧನಾಗಿಯೂ, ಸರ್ವಜನ

ಸಮ್ಮತಿಸತಕ್ಕ ನಡತೆಯುಳ್ಳವನಾಗಿಯೂ, ಪ್ರಸಿದ್ಧ ಪುರುಷನಾಗಿಯೂ, ಸ್ವಭಾವವಾಗಿ ವ್ಯಸನ ಪಡುವವನಾಗಿಯೂ, ತನ್ನ ಶೌರ್ಯವನ್ನು ತನ್ನವರಲ್ಲಿ ತೋರಿಸಿ ಘಾತಿಸುವವನಾಗಿಯೂ, ಪರಾಕ್ರಮಿಯಾಗಿಯೂ, ಕಾರ್ಯಮಾಡುವುದರಲ್ಲಿ ವ್ಯಸನ ರಹಿತನಾಗಿಯೂ, ಅನೇಕ ಯುಕ್ತಿ ಮೂಲವಾಗಿ ದ್ರವ್ಯ ಸಂಗ್ರಹ ಮಾಡುವವ-ನಾಗಿಯೂ, ಧರ್ಮದಲ್ಲಿ ಪ್ರವೇಶಿಸಿದ ಬುದ್ಧಿಯುಳ್ಳವನಾಗಿಯೂ, ಸತ್ಕುಲಪ್ರಸೂತಳಾದ ಪತ್ನಿಯುಳ್ಳವನಾಗಿಯೂ, ದಂತವಿಕಾರ, ದಂತರೋಗ, ಸೊಂಟನೋವು, ಮೊಣಕಾಲಿನಲ್ಲಿ ಬಲವಿಲ್ಲದೆ ದುಃಖಪಡುತ್ತಿರುವನಾಗಿಯೂ ಅಥವಾ ಈ ಮೇಲೆ ಹೇಳಿದ ಕಾರಣಗಳಲ್ಲಿ ಯಾವುದಾದರೂ ರೋಗದಿಂದ ಕೂಡಿದವನಾಗಿಯೂ, ಹರಿತವಾದ ಶಸ್ತ್ರಾಯುಧದಿಂದಾಗಲೀ, ವಿಷಪ್ರಯೋಗ ದಿಂದಾಗಲೀ, ತಿಳಿಯಲುಸಾಧ್ಯವಾದ ರೋಗದಿಂದಾಗಲೀ ಜಲಜಂತು ನೀರುಹಾವು ಮೊಸಳೆ ಮೊದಲಾದುದರ ಮೂಲವಾಗಿಯೇ ಆಗಲೀ, ದೊಣ್ಣೆಪೆಟ್ಟು ಬೀಳುವುದರಿಂದಾಗಲೀ ಕ್ಷುದ್ಬಾಧೆಯಿಂದಾಗಲೀ ಮೃತ್ಯುವಶವರ್ತಿಯಾಗುತ್ತಾನೆ. ॥೧೦೪-೧೦೭॥

## ಪರಾಶರೋಕ್ತ ಸಿಂಹಲಗ್ನ ಜಾತಕಫಲಂ

ಶ್ಲೋಕ॥ ರೌಹಿಣೇಯಂ ಸಿತೌಪಾಪೌ ಕುಜಜೀವೌ ಶುಭಾವಹೌ ।
ಪ್ರಭವೇ-ದ್ಯೋಗಮಾತ್ರೇಣ ನಶುಭಂ ಗುರುಶುಕ್ರಯೋಃ ॥೧೦೮॥
ಘ್ನಂತಿ ಸೌಮ್ಯದಯಃ ಪಾಪಾ ಮಾರಕತ್ವೇನ ಲಕ್ಷಿತಾಃ । ಏವಂ
ಫಲಾನಿ ವೇದ್ಯಾನಿ ಸಿಂಹೇಯಸ್ಯ ಜನುರ್ಭವೇತ್ ॥೧೦೯॥
ಮತ್ತು ಕೇರಳೀಯದಲ್ಲಿ ॥ಶ್ಲೋಕ॥ ಸಿಂಹಲಗ್ನೇ ಪ್ರಜಾತಸ್ಯ
ಶನಿಶುಕ್ರೌಚ ಮಾರಕೌ । ಬುಧಸ್ಸಾಕ್ಷಾನ್ನಹಂತಾಸ್ಯಾ ದಿತಿ ಕೇರಳ
ನಿರ್ಣಯಃ ॥೧೧೦॥

ತಾ॥ ಸಿಂಹಲಗ್ನ ಜಾತಕನಿಗೆ ಬುಧ ಶುಕ್ರರು ಪಾಪಿಗಳು, ಅಂಗಾರಕ ಬೃಹಸ್ಪತಿಗಳು ಶುಭಫಲ ಕೊಡತಕ್ಕವರು, ಗುರು ಶುಕ್ರರು ಸಂಯೋಗವಾದರೆ ಶುಭಫಲ ಕೊಡುವುದಿಲ್ಲ, ಶನಿಯೇ ಮೊದಲಾದ ಗ್ರಹಗಳು ಮಾರಕರೆಂದು ನಿರ್ಣಯಿಸಲ್ಪಟ್ಟು, ಶನಿ ಬುಧ ಶುಕ್ರರು ಮಾರಕ ಮಾಡುವರು. ಈ ಪ್ರಕಾರ ವಿದ್ವಾಂಸರು ನಿರ್ಣಯಿಸಬೇಕು. ಈ ವಿಷಯದಲ್ಲಿ ಕೇರಳೀಯ ಶ್ಲೋಕ ॥ ಸಿಂಹ ಲಗ್ನ ಜಾತಕನಿಗೆ ಶನಿಯೂ ಶುಕ್ರನೂ ಮಾರಕರು, ಬುಧನು ಸಾಕ್ಷಾತ್ತಾಗಿ ಮಾರಕನಾಗುವುದಿಲ್ಲ, ಮಾರಕರೊಂದಿಗೆ ಸೇರಿದರೆ ಮಾರಕನಾಗುತ್ತಾನೆ ॥೧೦೮-೧೧೦॥

## ಈ ಸಿಂಹಲಗ್ನ ಜಾತಕಕ್ಕೆ ಉದಾಹರಣೆ

| | ಗುರು | ರ.ಕೇ ಬುಧ | ಶುಕ್ರ |
|---|---|---|---|
| | | | |
| ಕುಜ ಶನಿ | | | ಚಂದ್ರ ಲಗ್ನ |
| | ರಾಹು | | |

(ಗತಾನುಗತ) ವಿಶ್ವಾವಸು ಸಂವತ್ಸರದ ಜ್ಯೇಷ್ಠಶುದ್ಧ ೮ ಮಖಾ ನಕ್ಷತ್ರ ೧ನೆ ಪಾದ ಸಿಂಹಲಗ್ನ ಮತ್ತು ಸಿಂಹರಾಶಿಯಲ್ಲಿ ಜನ್ಮ

ಈ ಜಾತಕನಿಗೆ ಅಷ್ಟಮಾಧಿಪತಿಯಾದ ಗುರು ದಶೆಯಲ್ಲಿ ಶನಿಯ ಭುಕ್ತಿಯು ಬಂದ ಒಡನೆ ಜ್ವರಾತಿಸಾರದಿಂದ ಮರಣವಾಗಿರುತ್ತೆ. ಸಿಂಹ ಲಗ್ನಜಾತಕನಿಗೆ ಮೇಲೆ ಹೇಳಿದ ರೀತಿಯಿಂದ ಗುರು ಕುಜರು ಯೋಗಕಾರಕ ರಾಗಿದ್ದಾಗ್ಯೂ, ಅಷ್ಟಮಾಧಿಪತಿಯಾಗಿರುವುದರಿಂದಲೂ ರುದ್ರಗ್ರಹವಾದ್ದರಿಂದ ಇದರಲ್ಲಿ ಆಯುರ್ಹರಣ ಉಂಟುಮಾಡಿರುವನು. ಈ ಅನುಭವ ಪ್ರಕಾರ ಗುರುವಿಗೆ ೮ನೆ ಅಧಿಪತ್ಯ ಬಂದದ್ದರಿಂದ ಅವನೇ ತನ್ನ ದೆಶೆಯಲ್ಲಿ ಶನಿಯ ಭುಕ್ತಿಯಲ್ಲಿ ಮರಣವನ್ನುಂಟುಮಾಡಿದನು. ಜಾತಕನು ಸ್ವಯಾರ್ಜಿತ ಧನದಿಂದ, ಗೌರವದಿಂದ ಜೀವಿಸುತ್ತಿದ್ದನು. ಈ ಪ್ರಕಾರ ತಿಳಿಯತಕ್ಕದ್ದು.

## ಕನ್ಯಾಲಗ್ನ ಜಾತಕ ಫಲಂ

ಶ್ಲೋಕ॥ ಷಷ್ಠವಿಲಗ್ನೇ ಪ್ರಿಯವಾಕ್ ತನುಚ್ಛ ವಿದೀರ್ಘ ಕರಚರಣಃ ।
ಮಿಶ್ರಪ್ರಕೃತಿಶ್ಚಾರ್ವಾ ಕೃತಿರ್ವ್ರಣೀ ಚಾರ್ಥವಾನ್ ಕೃಪಣಃ ॥೧೧೧॥
ಸ್ವಜನಸ್ಸೈಷ್ಟಃ ಕನ್ಯಾ ಬಹುಪ್ರಜೋ ಭ್ರಾತೃಭಿರ್ವಿರುದ್ಧಶ್ಚ ।
ಧರ್ಮಪ್ರಿಯೋಲ್ಪಲಾಭಃ ಕರ್ಮಣಿ ನಿಪುಣಸ್ಸಮಾಚರತಿ ॥೧೧೨॥
ವಿವಿಧಾಶ್ಚ ತುಷ್ಟದಗಣಾತ್ ಶಸ್ತ್ರಾತ್ಪಿತ್ತೋದ್ಭವಾದ್ರೋಗಾತಾ ।
ಶೋಕಾತ್ಸಂ ತಾಪಾದ್ವಾ ಮೃತ್ಯುಂಚಾಪ್ನೋತಿ ಪಾಶಾದ್ವಾ ॥೧೧೩॥

ತಾ॥ ಕನ್ಯಾಲಗ್ನವೇ ಜನ್ಮಲಗ್ನವಾಗಿರುವಾಗ ಹುಟ್ಟಿದವನು. ಸವಿಯಾದ ನುಡಿಗಳುಳ್ಳವನಾಗಿಯೂ, (ಅಂದರೆ ಕಿವಿಗಿಂಪಾದ ಮಾತುಳ್ಳವನಾಗಿಯೂ) ಅಲ್ಪವಾದ ಶರೀರ ಕಾಂತಿಯುಳ್ಳವನಾಗಿಯೂ, ಉದ್ದವಾದ ಕರಚರಣಗಳುಳ್ಳವ ನಾಗಿಯೂ, ವಾತ, ಪಿತ್ತ, ಶ್ಲೇಷ್ಮ ಈ ಮೂರು ಕೂಡಿ ಸಮಸೂತ್ರದಲ್ಲಿರುವ ಧಾತು ಪ್ರಕೃತಿಯುಳ್ಳವನಾಗಿಯೂ, ಸುಂದರಾಂಗನಾಗಿಯೂ, ವ್ರಣದಿಂದ ಕೂಡಿದವನಾಗಿಯೂ, ದ್ರವ್ಯವಂತನಾಗಿಯೂ, ಲುಬ್ಧನಾಗಿಯೂ, ಸ್ವಜನರಿಗೆ ಪ್ರೀತಿ ಯುಳ್ಳವನಾಗಿಯೂ. ಅತ್ಯಂತ ಸ್ತ್ರೀ ಸಂತತಿಯುಳ್ಳವನಾಗಿಯೂ, ಅಣ್ಣ ತಮ್ಮಂದಿರಲ್ಲಿ

ಮನಸ್ತಾಪವುಳ್ಳವನಾಗಿಯೂ, ಧರ್ಮಜ್ಞನಾಗಿಯೂ, ಧರ್ಮಮಾಡತಕ್ಕವನಾಗಿಯೂ, ಅಲ್ಪಕಾರ್ಯ ಮಾಡುವವನಾಗಿಯೂ, ಬುದ್ಧಿವಂತಿಕೆಯಿಂದ ಕಾರ್ಯ ಮಾಡುವವನಾಗಿಯೂ (ಪಶು) ಚತುಷ್ಪದ ಮೂಲವಾಗಿಯೇ ಆಗಲೀ, ಪಿತ್ತ ಉದ್ರೇಕದಿಂದ ರೋಗಗ್ರಸ್ತನಾಗಿಯಾಗಲೀ, ಶಸ್ತ್ರದಿಂದಾಗಲೀ. ದುಃಖಪಡುವುದರಿಂದಾಗಲೀ, ಆಯಾಸ ಪಡುವುದರಿಂದಾಗಲೀ, ನೇಣು ಹಾಕಿಕೊಳ್ಳುವುದರಿಂದಾಗಲೀ ನಿರ್ಯಾಣವನ್ನು ಹೊಂದುತ್ತಾನೆ. ಅಂದರೆ ಜಾತಕದಲ್ಲಿ ಯಾವ ವಿಷಯಕ್ಕೆ ಅನುಭವ ಬರುತ್ತೋ ಆ ಮೂಲದಿಂದ ಮರಣವನ್ನು ಹೇಳಬೇಕು ||೧೧೧-೧೧೩||

## ಪರಾಶರೋಕ್ತ ಕನ್ಯಾಲಗ್ನಫಲಂ

ಶ್ಲೋಕ|| ಕುಜಜೀವೇಂದವಃ ಪಾಪಾ ಏಕ ಭೃಗು ಶುಭಃ | ಭಾರ್ಗವೇಂದು ಸುತಾವೇವ ಭವೇತಾಂ ಯೋಗಕಾರಕೌ ||೧೧೪||
ನಹಂತಾ ಕವಿರನ್ಯೇತು ಮಾರಕಾಸ್ತು ಕುಜಾದಯಃ | ಪ್ರತೀಕ್ಷೇತ ಫಲಾನ್ಯುಕ್ತಾ ನ್ಯೇವಂ ಕನ್ಯಾಭವೇಬುಧ್ಯೆಃ ||೧೧೫|| ಕೇರಳೀಯೆ || ಕನ್ಯಾ ಲಗ್ನೇ ಪ್ರಜಾತಸ್ಯ ಗುರುಚಂದ್ರ ಕುಜಾಃಖಲಾಃ | ತೇಗ್ರಹಾ ಮಾರಕಾಧಿಕ್ಯಾ ಶ್ಶುಕ್ರಸ್ಸಾಕ್ಷಾನ್ನಮಾರಕಃ ||೧೧೬||

ತಾ|| ಕನ್ಯಾಲಗ್ನದಲ್ಲಿ ಹುಟ್ಟಿದವನಿಗೆ ಅಂಗಾರಕ ಬೃಹಸ್ಪತಿ ಚಂದ್ರರು ಪಾಪಿಗಳು, ಶುಕ್ರನೊಬ್ಬನೆ ಶುಭನು, ಶುಕ್ರ, ಬುಧರು, ರಾಜಯೋಗಕಾರಕ ರಾಗುವರು. ಶುಕ್ರನಲ್ಲದೆ ಉಳಿದ ಮಾರಕ ಗ್ರಹಗಳು ಅಂದರೆ, ಕುಜಾದಿಗಳು ಮಾರಕರಾಗುತ್ತಾರೆ. ಈ ಪ್ರಕಾರವಾಗಿ ಕನ್ಯಾಲಗ್ನ ಜಾತಕನಿಗೆ ವಿದ್ವಾಂಸರು ಫಲ ನಿರ್ಣಯ ಮಾಡತಕ್ಕದ್ದು. ಕೇರಳೀಯದಲ್ಲಿ ಹೇಳಿರುವುದೇನೆಂದರೆ :- ಕನ್ಯಾ ಲಗ್ನ ಜಾತಕನಿಗೆ ಗುರು ಚಂದ್ರಾಂಗಾರಕರು ಮಾರಕರು, ಈ ಗ್ರಹಗಳು ಮಾರಕತ್ವದಲ್ಲಿ ಪ್ರಬಲವಾದರೆ ಮಾರಕರಾಗುವರು. ಶುಕ್ರನು ಸಾಕ್ಷಾತ್ತಾಗಿ ಮಾರಕನಾಗುವುದಿಲ್ಲ. ಮಾರಕರೊಂದಿಗೆ ಸೇರಿದರೆ ಮಾರಕನಾಗುವನು ||೧೧೪-೧೧೬||

ಶ್ಲೋಕ|| ಸಪ್ತಮರಾಶೌ ಲಗ್ನೇ ವಿಷಮಾಂಗಸ್ಸೂಯತೆ ವಿಷಮಶೀಲಃ ಕಫಾವಾತಿಕ-ಸ್ಸುಚಪಲೋ ಹ್ರಸ್ವಗ್ರೀವಃ ಕೃತಜ್ಞಶ್ಚ ||೧೧೭||
ಅರ್ಥಾರ್ವಿಪುಲಾ ಲಭತೇ ವ್ಯಯನಸಂಪೂಜ್ಯತೇ ಯಶಃಪ್ರಾಯಃ ಗುರುಸೇವಾಯಾಂ ನಿರತಃ ಪಿತ್ರಸ್ಯ ಸ್ವಜನ ಸಹಜಸಂಪೂಜ್ಯಃ ||
ಅಧ್ವರುಚಿ ರ್ಧರ್ಮಿಷ್ಠೋ ವಿನಾಶಮಾಯಾತಿ ಪೀಡನೈಸ್ಸೈ ಸ್ಸೈಃ|

ಮೃತಭಾರ್ಯಃ ಕಲಹರುಚಿಃ ಬಹುಶಃ ಶೋಕಾದಿಭಿಃ ಕ್ಲಿಷ್ಟಃ ॥೧೧೯॥ ಮೃತ್ಯುಃ ಖ್ಯಾತಾತುರು ಷಾತ್ ಸ್ವಜನಾ ತ್ಪ್ರಾಮ್ಯಾಚ್ಚ ತುಷ್ಪದಾದ್ವಾಪಿ । ಸ್ವೇದಾಚ್ಚವಿಪ್ರಯೋಗಾದುಪವಾಸಾನ್ಮಾರ್ಗ-ಯೋಗಾದ್ವಾ ॥

ತಾತ್ಪರ್ಯ॥ ತುಲಾಲಗ್ನದಲ್ಲಿ ಜನ್ಮಿಸಿದವನು, ಸರ್ವಾಂಗವೂ ಸಮವಾಗಿರದೆ ಯಾವುದಾದರೂ ಒಂದು ಅಂಗ ಹೆಚ್ಚಾಗಿಯೂ ಮತ್ತೊಂದು ಅಂಗ ಹ್ರಸ್ವವಾಗಿಯೂ ಇರುವವನಾಗಿಯೂ, ಶೀತ, ವಾತ ಪ್ರಕೃತಿಯುಳ್ಳವನಾಗಿಯೂ, ಸ್ಥಿರಬುದ್ಧಿ ಇಲ್ಲದವನಾಗಿಯೂ, ಗಿಡ್ಡವಾದ ಕುತ್ತಿಗೆಯುಳ್ಳವನಾಗಿಯೂ, ಇತರರಿಂದ ಹೊಂದಿದ ಉಪಕಾರವನ್ನು ಸ್ಮರಿಸತಕ್ಕವನಾಗಿಯೂ, ಬಹು ದ್ರವ್ಯಾರ್ಜನೆಮಾಡಿ ಅದರಿಂದ ಪ್ರಯೋಜನ ಪಡೆಯುವವನಾಗಿಯೂ, ಅತಿಶಯವಾಗಿ ವ್ಯಯಮಾಡಿ ಪ್ರಖ್ಯಾತಿಯನ್ನು ಹೊಂದತಕ್ಕವನಾಗಿಯೂ, ಗುರುಹಿರಿಯರನ್ನು ಸೇವಿಸುವವನಾಗಿಯೂ, ತಂದೆಯನ್ನು ಬಿಟ್ಟು ಉಳಿದ ಬಂಧುಗಳಲ್ಲಿಯೂ, ಸಹೋದರರುಗಳಲ್ಲಿಯೂ, ಪೂಜ್ಯನಾಗಿಯೂ, ದಾರಿ ನಡೆಯುವುದರಲ್ಲಿ ಬುದ್ಧಿಯುಂಟಾದವನಾಗಿಯೂ, ಸಂಚಾರ ಪ್ರೀತಿಯುಳ್ಳವನಾಗಿಯೂ, ಧರ್ಮಿಷ್ಠನಾಗಿಯೂ, ತನ್ನವರಿಂದ (ಸ್ವಜನರಿಂದ) ಕ್ಷಯಿಸತಕ್ಕವನಾಗಿಯೂ, ಪತ್ನಿಗಂಡ ಅಂದರೆ ಅಪತ್ನಿಕನಾಗಿಯೂ, ಕಲಹಪ್ರಿಯ-ನಾಗಿಯೂ, ಪ್ರಾಯಶಃ ದುಃಖಾದಿಗಳಿಂದ ಸಂಕಟಪಡುವವನಾಗಿಯೂ, ಪ್ರಸಿದ್ಧ ಪುರುಷನ ಮೂಲದಿಂದಾಗಲಿ, ತನ್ನವರಿಂದಾಗಲೀ, ಚತುಷ್ಪದ ಮೂಲವಾಗಿ ಯಾಗಲೀ, ಗಂಡವನ್ನುಭವಿಸುವವನಾಗಿಯಾಗಲೀ, ತನ್ನವರನ್ನು ಬಿಟ್ಟು, ಉಪವಾಸ ದಿಂದಲೋ ಅಥವಾ ಮಾರ್ಗಶ್ರಮದಿಂದಲಾಗಲೀ ಬೆವರುಂಟಾಗಿ ನಿರ್ಯಾಣ ಹೊಂದುವನು ॥೧೧೭-೧೨೦॥

## ಪರಾಶರೋಕ್ತ ತುಲಾಲಗ್ನಫಲಂ

ಶ್ಲೋಕ॥ ಜೀವಾರ್ಕ ಮಹಿಜಾಃ ಪಾಪಾಃ ಶನೈಶ್ಚರ ಬುಧೌಶುಭೌ ।
ಭವೇತಾಂ ರಾಜಯೋಗಸ್ಯ ಕಾರಕೌ ಚಂದ್ರತತ್ಸುತೌ ॥೧೨೧॥
ಕುಜೋನಹಂತಿ ಜೀವಾದ್ಯಾಃ ಪರೇಮಾರಕ ಲಕ್ಷಣಾಃ ।
ನಿಹಂತಾರಃ ಫಲಾನ್ನೇವಂ ಕಾವ್ಯೋನತು ತುಲಾಭವಃ ॥೧೨೨॥
ಕೇರಳೀಯೇ॥ ತೌಳಿಲಗ್ನೇ ಪ್ರಜಾತಸ್ಯ ಭಾನುಜೀವೌಚ ಮಾರಕೌ।
ಕುಜಸ್ಸಾಕ್ಷಾನ್ನಹಂತಾಸ್ಯಾದಿತಿ ಕೇರಳ ನಿರ್ಣಯಃ ॥೧೨೩॥

ತಾತ್ಪರ್ಯ॥ ತುಲಾ ಲಗ್ನಜಾತಕನಿಗೆ ಬೃಹಸ್ಪತಿ ಸೂರ್ಯಾಂಗಾರಕರು ಪಾಪಿಗಳು, ಚಂದ್ರನೂ, ಬುಧನು ರಾಜಯೋಗ ಕಾರಕರಾಗುವರು. ಕುಜನು ಕೊಲ್ಲುವುದಿಲ್ಲ.

ಬೃಹಸ್ಪತಿಯೇ ಮೊದಲಾದ ಮಾರಕ ಲಕ್ಷಣಯುಕ್ತರಾದ ಗ್ರಹಗಳು ಮಾರಕರಾಗುವರು. ಈ ಪ್ರಕಾರ ತುಲಾಲಗ್ನ ಜಾತಕನಿಗೆ ಶುಭಾಶುಭ ಫಲ ನಿರ್ಣಯಮಾಡತಕ್ಕದ್ದು. ಕೇರಳೀಯದಲ್ಲಿ ಹೇಳಿರುವುದೇನೆಂದರೆ:-ತುಲಾಲಗ್ನ ಜಾತಕನಿಗೆ ರವಿ ಗುರುಗಳು ಮಾರಕರು, ಕುಜನು ಸಾಕ್ಷಾತ್ತಾಗಿ ಮಾರಕನಲ್ಲ. ಮಾರಕನೊಂದಿಗೆ ಸೇರಿ ಮಾರಕ ಸಂಬಂಧ ಪ್ರಬಲವಾದರೆ ಮಾರಕನಾಗುತ್ತಾನೆ ॥೧೨೧-೧೨೩॥

## ತುಲಾಲಗ್ನ ಜಾತಕಕ್ಕೆ ಉದಾಹರಣೆ

| | | | |
|---|---|---|---|
| | ಶನಿ ೯ | ಗುರು೧೧<br>ಕುಜ ೪<br>ಕೇತು ೪ | ಶುಕ್ರ ೩ |
| | ಭಾವಕುಂಡಲಿ (೨) ಉದಾಹರಣೆ | | ಚಂದ್ರ ೯ |
| | | | ರವಿ ೩<br>ಬುಧ ೧ |
| | ರಾಹು | ಲಗ್ನ | |

ಈ ಜಾತಕಕ್ಕೆ ಲಗ್ನಕ್ಕೆ ಅಧಿಪತಿಯಾದ ಶುಕ್ರನು ಭಾಗ್ಯದಲ್ಲೂ, ದಶಮಾಧಿಪತಿ ಯಾದ ಚಂದ್ರನು ಅಧಿಕಾರಿ ಸ್ಥಾನದಲ್ಲಿರುವುದರಿಂದಲೂ, ೫-೪ನೇ ಅಧಿಪತಿ ಶನಿಯು ಸಪ್ತಮ ದಲ್ಲಿರುವುದರಿಂದ ರಾಜಸಮಾನಯೋಗ, ಧನಸ್ಥಾನದಲ್ಲಿ ರಾಹುವಿರುವುದರಿಂದಲೂ, ಈ ರಾಹುವಿಗೆ ಆ ಅಧಿಪತಿಯಾದ ಕುಜನು ನೋಡುವುದರಿಂದ ಧನಯೋಗ ಮತ್ತು ವ್ಯಯಯೋಗ ಮತ್ತು ಆದಿಯಿಂದಲೇ ಅಧಿಕಾರ ಮಾಡುವನು.

## ವೃಶ್ಚಿಕಲಗ್ನ ಜಾತಕಫಲಂ

ಶ್ಲೋಕ॥ ಅಷ್ಟಮರಾಶೌ ಲಗ್ನೇವಿಶಾಲ ರಜ್ಞಾನನೋದರಃ ಕ್ರೂರಃ । ಪಿತ್ತ ಪ್ರಕೃತಿಃ ಪಿಂಗೇಕ್ಷಣೋ ಮೃದುದೃತಗತಿಃ ಪರಸ್ವಾಮೀ ॥೧೨೪॥ ಸ್ಥಿತಕುಟುಂಬ ಸ್ವಜನೋನ್ತ ಕರಶ್ಚ ಬಹುವ್ಯಯೋ ಬಹುಪ್ರಸವಃ। ಸುಖರಹಿತೋ ಭ್ರಾತೃವ್ಯೋ ನೃಪಸೇವೀ ಧರ್ಮಹೀನಶ್ಚ ॥೧೨೫॥ ಭಾರ್ಯಾನಿಮಿತ್ತ ವಿಮುಖೀ ಶತ್ರೋರ್ನಾರ್ಥಾನ್ ದದಾತಿ ಬಹುಶಶ್ಚ । ಸ್ವಕಲೋದ್ಭೂತಾಂ ಶ್ವತರ್ೂನ್ ಲಭತೇ ರೋಗಾಂಶ್ಚನೈಕವಿಧಾನ್ ॥ ಗಾತ್ರಚ್ಛೇದೈಶ್ಯತ್ರೋಃ ವಶಂಗತೊ ಬುಧನೈಃ ಪ್ರಹಾರೈಶ್ಚ । ರೋಗೈರ್ವಾ ಪಾಪಕೃತ್ಯೈಃ ಜ್ವಲನಾದ್ವಾಮೃತ್ಯುಮುಪಯಾತಿ ॥೧೨೬॥

ತಾ॥ ವೃಶ್ಚಿಕ ಲಗ್ನದಲ್ಲಿ ಜನ್ಮಿಸಿದವನು ವಿಶಾಲವಾದ ಬಾಯಿಯೂ, ಹೊಟ್ಟೆಯೂ ಉಳ್ಳವನಾಗಿಯೂ, ಉಗ್ರಸ್ವಭಾವ ಉಳ್ಳವನಾಗಿಯೂ, ವಾತ, ಪಿತ್ತ,

ಶ್ಲೇಷ್ಮ ಈ ಮೂರು ಧಾತುಗಳಲ್ಲಿ ವಾತಧಾತು ಅಧಿಕವಾಗಿರುವವನಾಗಿಯೂ, ಸ್ವಲ್ಪ ಅರಿಶಿನ ಕೆಂಪುಕೂಡಿದ ಕಣ್ಣುಗಳುಳ್ಳವನಾಗಿಯೂ, ಜಾಗ್ರತೆಯಾಗಿಯೂ ಸಾವಕಾಶವಾಗಿಯೂ, ಗಮನ ಸ್ವಭಾವ ಉಳ್ಳವನಾಗಿಯೂ, ಅನ್ಯರಿಗೆ ಅಧಿಪತಿಯಾಗಿಯೂ, ಕುಟುಂಬವರ್ಗದವರೂ, ಸ್ವಜನರೂ ಅಧಿಕವಾಗಿರುವವ ನಾಗಿಯೂ, ದ್ರವ್ಯವ್ಯಯ ಮಾಡತಕ್ಕವನಾಗಿಯೂ, ಅನೇಕವಾದ ಪ್ರಕಾರದಿಂದ ಸಂಪಾದಿಸತಕ್ಕವನಾಗಿಯೂ, ಅಧಿಕ ಸಂತತಿಯುಳ್ಳವನಾಗಿಯೂ, ಅಲ್ಪ ಸುಖವನ್ನನುಭವಿಸತಕ್ಕವನಾಗಿಯೂ, ಸಹೋದರರಿಗೆ ವಿರೋಧಿಯಾಗಿಯೂ, ಶೂದ್ರಾದಿಗಳನ್ನು ಸೇವಿಸತಕ್ಕವನಾಗಿಯೂ, ಧರ್ಮವನ್ನು ತ್ಯಜಿಸತಕ್ಕವನಾಗಿಯೂ, ಪತ್ನಿಮೂಲವಾಗಿ ಮುಖ ಕೆಟ್ಟು ಸೋತು ಪೆಚ್ಚಾಗಿರುವವನಾಗಿಯೂ, ಧನವನ್ನು ಮಿತವ್ಯಯ ಮಾಡತಕ್ಕವನಾಗಿಯೂ, ತನ್ನ ವಂಶದಲ್ಲಿ ಹುಟ್ಟಿದ ಶತ್ರುಗಳನ್ನನುಸರಿಸು ವವನಾಗಿಯೂ, ಅನೇಕ ವಿಧವಾದ ರೋಗಗ್ರಸ್ತನಾಗಿಯೂ, ಶರೀರಾವಯವಗಳಲ್ಲಿ ಘಾಯದ ಗುರ್ತುಗಳಿರುವವನಾಗಿಯೂ, ಶತ್ರುಗಳ ಕೈಗೆ ಸಿಕ್ಕುವಿಕೆ, ಬಂಧನಕ್ಕೆ ಸಿಕ್ಕಿ ಕಟ್ಟಿ ಬೀಳುವಿಕೆ ರೋಗದಿಂದಲಾದರೂ, ಪೆಟ್ಟು ಬೀಳುವುದರ ಮೂಲವಾಗಿ ಯಾದರೂ, ಅಗ್ನಿಕುಂಡ ಇವುಗಳ ಮೂಲದಲ್ಲಿ ಯಾವ ಕಾರಣದಿಂದಾದರೂ ಮರಣವನ್ನು ಹೊಂದುವನು. ॥೧೨೪-೧೨೭॥

## ಪರಾಶರೋಕ್ತ ವೃಶ್ಚಿಕಲಗ್ನಫಲಂ

ಶ್ಲೋಕ॥ ಸೌಮ್ಯಭೌಮ ಸಿತಾಃಪಾಪಾಃ ಶುಭೌ ಗುರು ನಿಶಾಕರೌ ।
ಸೂರ್ಯಾಚಂದ್ರ ಮಸಾವೇವ ಭವೇತಾಂ ಯೋಗಕಾರಕೌ ॥೧೨೮॥
ಜೀವ್ಯೋನಹಂತಾ ಸೌಮ್ಯಾದ್ಯಾಹಂತಾರೋ ಮಾರಕಾ ಹ್ವಯಾಃ ।
ತತ್ತತ್ಫಲಾನಿವಿಜ್ಞೇಯಾ ನ್ಯೇವಂ ವೃಶ್ಚಿಕ ಜನ್ಮನಃ ॥೧೨೯॥ ಮತ್ತು ಕೇರಳೀಯೆ ॥ ಕೀಟಲಗ್ನೇ ಪ್ರಜಾತಸ್ಯಾ ವಿಟ್‌ಸೂರ್ಯಸುತ ಭಾರ್ಗವಾಃ। ಮಾರಕಾ ಇತಿ ವಿಜ್ಞೇಯಾಃ ಜ್ಯೋತಿಶ್ಶಾಸ್ತ್ರೇ ಬುಧೋತ್ತಮ್ಯಃ ॥೧೩೦॥

ತಾತ್ಪರ್ಯ॥ ವೃಶ್ಚಿಕಲಗ್ನ ಜಾತಕನಿಗೆ ಬುಧ ಅಂಗಾರಕ ಶುಕ್ರರು ಪಾಪಿಗಳು, ಗುರು ಚಂದ್ರರು ಶುಭಫಲ ಕೊಡತಕ್ಕವರು, ಸೂರ್ಯಚಂದ್ರರು ಸೇರಿದರೆ ಯೋಗಕಾರಕ-ರಾಗುತ್ತಾರೆ. ಗುರು ತಾನೊಬ್ಬನೇ ಕೊಲ್ಲುವುದಿಲ್ಲ. ಬುಧನೇ ಮೊದಲಾದ ಪಾಪಿಗಳು ಅವರವರ ದಶಾಭುಕ್ತಿಗಳು ಬಂದಕಾಲದಲ್ಲಿ ಕೊಲ್ಲುತ್ತಾರೆ. ಈ ಜಾತಕಕ್ಕೆ ಗ್ರಹಸ್ಥಿತಿಗಳ ಮೇಲೆ ಶುಭಾಶುಭ ಫಲಗಳ ನಿರ್ಣಯ ಮಾಡತಕ್ಕದ್ದು. ಈ ಲಗ್ನ ಜಾತಕನ

ವಿಷಯದಲ್ಲಿ ಕೇರಳ ಶಾಸ್ತ್ರದಲ್ಲಿ ಬುಧ ಶನಿ ಶುಕ್ರರು ಮಾರಕ ಗ್ರಹಗಳು. ಅವರೇ ಮಾರಕರಾಗುತ್ತಾರೆಂದು ಸ್ಪಷ್ಟ ಪಡಿಸಿರುತ್ತಾರೆ ॥೧೨೮-೧೩೦॥

## ಧನುರ್ಲಗ್ನ ಜಾತಕಫಲಂ

ಶ್ಲೋಕ॥ ಸ್ಥೂಲೋಷ್ಠ ದಶನನಾಸೋ ನವಮೇ ಲಗ್ನೇಕಫಾನಿಲಪ್ರಕೃತಿಃ ।
ಮಾಂಸಲ ಗುಹ್ಯೋ ರುಭುಜಃ ಕುನಖೀ ಕರ್ಮೋದ್ಯತಶ್ಶೂರಃ ॥
ಕ್ಷುದ್ರಾನ್ನೀಚಾನ್ಭಜತೇ ಚೌರ್ಯಾದನಲಾ ನ್ನೃಪಾಚ್ಚ ನಷ್ಟಧನಃ ।
ವಿಜ್ಞೋನಾನಾ ಪ್ರಸವೊ ಬಹುಪೂಜ್ಯೋ ಭ್ರಾತೃಘಾತರುಚಿಃ ॥
ಕರ್ಮವಿದೇಶೇಷ್ವಿಷ್ಟಃ ಕುರುತೇ ಚಿತ್ತಾನಿಚಾರ್ಹತಿ ನೃಪೇಭ್ಯಃ ।
ಧರ್ಮೇತು ಮಧ್ಯಮಮತಿಃ ದಾರೈಶ್ಚ ವಿರೋಧಮುಪಯಾತಿ ॥೧೩೦॥ ರೋಗಾನ್ವದನೇ ಲಭತೇ ಚತುಷ್ಪದಾ-ಚ್ಚಾತ್ಮನಸ್ಸಮಾಪ್ನೋತಿ । ಮೃತ್ಯುಂ ಬಿಲೇಶಯಾ ದ್ವಾನ್ನೃಪಾಚ್ಚ ಬಂಧಾಜ್ಜನಾದ್ವಾಪಿ॥೧೩೨॥

ತಾತ್ಪರ್ಯ॥ ಧನುರ್ಲಗ್ನದಲ್ಲಿ ಜನ್ಮಿಸಿದವನು ಶೀತೋಷ್ಣ ಪ್ರಕೃತಿಯುಳ್ಳವನಾಗಿಯೂ, ಓಷ್ಠವೂ, ದಂತವೂ ಸ್ಥೂಲವಾಗಿರುವವನಾಗಿಯೂ, ತೊಡೆಗಳಲ್ಲಿಯೂ, ಭುಜಗಳಲ್ಲಿಯೂ, ಮಾಂಸಪುಷ್ಟಿಯಾಗಿ ಬಲಿತಿರುವವನಾಗಿಯೂ, ಮೊಟುಕಾದ ನಖಗಳುಳ್ಳವನಾಗಿಯೂ, ಕಾರ್ಯದಲ್ಲಿ ಬಹು ಪ್ರಯತ್ನಶಾಲಿಯಾಗಿಯೂ, ಯುದ್ಧದಲ್ಲಿ ಶೂರನಾಗಿಯೂ, ರುಧ್ರಾನ್ವೇಷಣ ತತ್ಪರರಾದ ನೀಚ ಜನರನ್ನು ಸೇವಿಸುವವನಾಗಿಯೂ, ಚೋರ ಮೂಲವಾಗಿಯೇ ಆಗಲೀ. ಅಗ್ನಿಮೂಲವಾಗಿಯೇ ಆಗಲೀ, ರಾಜದಂಡದ ಮೂಲವಾಗಿಯೇ ಆಗಲೀ, ದ್ರವ್ಯನಾಶವಾದವನಾಗಿಯೂ, ತಿಳುವಳಿಕೆಯುಳ್ಳ ಚತುರನಾಗಿಯೂ, ಅನೇಕ ಸಂತಾನವುಳ್ಳವನಾಗಿಯೂ, ಅನೇಕರಲ್ಲಿ ಪೂಜ್ಯತೆಯುಳ್ಳವನಾಗಿಯೂ, ದಾಯಾದಿಗಳನ್ನು ಹಿಂಸೆ ಮಾಡುವುದರಲ್ಲಿ ಸಮರ್ಥನಾಗಿಯೂ, ಪರದೇಶಗಳಲ್ಲಿ ತನಗಿಷ್ಟಬಂದಂತೆ ಕೆಲಸ ಮಾಡುವವನಾಗಿಯೂ, ರಾಜನ ಮನಸ್ಸಿಗೆ ತೃಪ್ತಿಪಡುವ ಹಾಗೆ ಕೆಲಸ ಮಾಡುವವನಾಗಿಯೂ, ಧರ್ಮದಲ್ಲಿ ಮಧ್ಯಮತರವಾದ ಬುದ್ಧಿಯುಳ್ಳವನಾಗಿಯೂ, ಪತ್ನಿಯಲ್ಲಿ ವಿರೋಧ ಮಾಡಿಕೊಳ್ಳುವವನಾಗಿಯೂ, ಬಾಯಿಯಲ್ಲಿ ರೋಗವಿರುವವನಾಗಿಯೂ, ಪಶುವಿನಿಂದಾಗಲೀ, ಹಾವುಕಚ್ಚಿಯಾಗಲೀ, ರಾಜಕೋಪದಿಂದ ಶಿಕ್ಷೆಯಾಗಿ ಆ ಮೂಲಕವಾಗಲೀ, ಬಂಧನದಿಂದಾಲೀ ಇವುಗಳಲ್ಲಿ ಯಾವುದಾದರೂ ಕಾರಣದಿಂದ ಮರಣ ಉಂಟಾಗುವುದು.

## ಪರಾಶರೋಕ್ತ ಲಗ್ನಫಲಂ

ಶ್ಲೋಕ॥ ಏಕಏವ ಕವಿಃ ಪಾಪಃ ಸೌಮ್ಯದಿವಾಕರೌ । ಯೋಗೋ ಭಾಸ್ಕರ ಸೌಮ್ಯಾಭ್ಯಾಂ ನಹಂತಾ ಭಾಸ್ಕತಃಸುತಃ ॥೧೩೩॥ ಇತಿ ಶುಕ್ರಾದಯಃ ಪಾಪಾ ಮಾರಕತ್ವೇನ ಲಕ್ಷಿತಾಃ । ಜ್ಞಾತವ್ಯಾನಿ ಫಲಾನ್ಯೇವಂ ಚಾಪಜಸ್ಯ ಮನೀಷಿಭಿಃ ॥೧೩೪॥ ಕೇರಳೀಯೇ ॥ ಚಾಪಲಗ್ನೇ ಪ್ರಜಾತಸ್ಯ ಚಂದ್ರಶುಕ್ರೌಚ ಮಾರಕೌ । ಶನಿಸ್ಸಾಕ್ಷಾನ್ನ-ಹಂತಾಸ್ಯಾ ದಿತಿಕೇರಳ ನಿರ್ಣಯಃ ॥

ತಾತ್ಪರ್ಯ॥ ಧನುರ್ಲಗ್ನ ಜಾತಕನಿಗೆ ಶುಕ್ರನೊಬ್ಬನೆ ಮುಖ್ಯಪಾಪಿಯು, ಬುಧ ಸೂರ್ಯರು ಶುಭಫಲ ಕೊಡತಕ್ಕವರು, ಬುಧ ಸೂರ್ಯರು ಏಕತ್ರ ಸೇರಿದರೆ ರಾಜಯೋಗಕಾರಕರಾಗುತ್ತಾರೆ. ಶನಿಯು ಮಾರಕನಾಗುವುದಿಲ್ಲ. ಶುಕ್ರನೇ ಮೊದಲಾದ ಮಾರಕ ಗ್ರಹಗಳು ಕೊಲ್ಲುತ್ತಾರೆ. ಈ ಪ್ರಕಾರ ಧನುರ್ಲಗ್ನ ಜಾತಕನ ಫಲಗಳನ್ನು ವಿದ್ವಾಂಸರು ನಿರ್ಣಯಿಸತಕ್ಕದ್ದು ॥ಕೇರಳೀಯೇ॥ ಧನುರ್ಲಗ್ನ ಜಾತಕನಿಗೆ ಚಂದ್ರ ಶುಕ್ರರೇ ಮಾರಕರು. ಶನಿಯು ಸಾಕ್ಷಾತ್ತಾಗಿ ಮಾರಕನಾಗುವುದಿಲ್ಲ. ಅಂದರೆ ಮಾರಕರೊಂದಿಗೆ ಸೇರಿದರೆ ಮಾರಕನಾಗುತ್ತಾನೆಂದು ನಿಶ್ಚೈಸಲ್ಪಟ್ಟಿದೆ ॥೧೩೩-೧೩೪॥

## ಮಕರಲಗ್ನ ಜಾತಕಫಲಂ

ಶ್ಲೋಕ॥ ದಶಮವಿಲಗ್ನೇ ತನುನಾಸಿಕಾ ಪುಟೋದೀರ್ಘ ವಕ್ತ್ರಕರಚರಣಃ। ವಾಯ್ವಾತ್ಮಕೋ ಮೃಗಾಸ್ಯೋ ಭೀರುಶ್ಚ ಪಲೋಥಬಂಧನಭಾಕ್॥ ಕ್ಷುದ್ರಕುಟುಂಬೋಲ್ಪಧನಃ ಕೃಪಣಃ ಕನ್ಯಾ ಪ್ರಜೋಮೃತಸ್ವ್ವಜನಃ। ಸಹಜ ಸಮೃದ್ಧಃ ಶೌರ್ಯಾನ್ನ ಪಾದರನ್ಯಾಚ್ಚ ಲಬ್ಧಧನಃ॥ ಉಪವಾಸ ವ್ರತಶ್ಶೀಲೋ ನೀಚಾವಿಷ್ಟಾವು ವಾಷ್ಟುಯಾದ್ಭಾರ್ಯಾಂ । ಬಹುವಿಗ್ರಹೋಲ್ಪಕೇಶೋ ದುರ್ಬಲಜಾನುಶ್ಚ ರೋಗಾರ್ತಃ ॥೧೩೬॥ ಬಾಲಾದನಿಲಾಚ್ಛಸ್ತ್ರಾತ್ ನೃಪಾದ್ವಿಪಾತ್ಪತನಾದ್ಗಜಾದ್ವಾಪಿ। ಪಿತ್ತೋದಯಾದಜೇರ್ಣಾತ್ ಮ್ರಿಯತೇವಾ ಮಾರ್ಗವಿಭ್ರಷ್ಟಃ ॥

ತಾ॥ ಮಕರಲಗ್ನದಲ್ಲಿ ಜನ್ಮಿಸಿದ ಪುರುಷನ ಮೂಗಿನ ಸೊಳ್ಳೆ ಚಿಕ್ಕದಾಗಿಯೂ, ಅಗಲವಾದ ಬಾಯಿಯೂ, ಕರಚರಣಗಳು ನೀಳವಾಗಿಯೂ, ತ್ರಿಧಾತುಗಳಲ್ಲಿ ವಾಯುಧಾತುವೇ ಪ್ರಧಾನವಾಗಿಯೂ, ಮೃಗದ ಆಕೃತಿ ಮುಖವುಳ್ಳವನಾಗಿಯೂ, ಭಯವಿರುವ ಸ್ವಭಾವ ಉಳ್ಳವನಾಗಿಯೂ, ಚಂಚಲ ಬುದ್ಧಿಯವನಾಗಿಯೂ, ಪರರ ಕಟ್ಟಿಗೆ ಸಿಕ್ಕುವವನಾಗಿಯೂ, ಕ್ಷುದ್ರಗುಣವುಳ್ಳ ಕುಟುಂಬ ಉಳ್ಳವನಾಗಿಯೂ, ಅಲ್ಪದ್ರವ್ಯ

ಉಳ್ಳವನಾಗಿಯೂ, ಜಿಪುಣನಾಗಿಯೂ, ಸ್ತ್ರೀ ಸಂತತಿಯುಳ್ಳವನಾಗಿಯೂ, ಸ್ವಂತ ಜನಗಳು ಮರಣ ಹೊಂದುವುದರಿಂದ ತನ್ನ ವರಿಲ್ಲದವನಾಗಿಯೂ, ಸಹೋದರವರ್ಗ ಉಳ್ಳವನಾಗಿಯೂ, ಶೌರ್ಯದಿಂದಲಾಗಲೀ ಅರಣ್ಯದ ಅಧಿಕಾರ ಮೂಲವಾಗಿಯಾಗಲೀ ದ್ರವ್ಯಾರ್ಜನೆ ಮಾಡುವವನಾಗಿಯೂ, ದುರ್ಗುಣಳಾಗಿಯೂ, ತನಗೆ ಇಷ್ಟಳಾಗಿಯೂ ಇರುವ ಪತ್ನಿ ಇರುವವನಾಗಿಯೂ, ಜಗಳಗಂಟನಾಗಿಯೂ, ತಲೆಯಲ್ಲಿ ಅಲ್ಪವಾದ ಕೇಶವಿರುವವನಾಗಿಯೂ, ಮೊಣಕಾಲು ದುರ್ಬಲ ಉಳ್ಳವನಾಗಿಯೂ, ವ್ಯಾಧಿಗ್ರಸ್ಥನಾಗಿಯೂ, ದುರ್ಬಲದಿಂದ ಲಾಗಲೀ, ವಾಯುರೋಗದಿಂದಾಗಲೀ, ಆಯುಧಮೂಲದಿಂದ ರಾಜಕೋಪದಿಂದಲಾಗಲೀ, ಎತ್ತರವಾದ ಸ್ಥಳದಿಂದ ಬೀಳುವುದರಿಂದಲಾಗಲೀ, ಆನೆಯಿಂದಲಾಗಲೀ, ಪಿತ್ತಾಜೀರ್ಣರೋಗೋದ್ಭವ-ದಿಂದಲಾಗಲೀ, ದಾರಿತಪ್ಪಿ ಬೀಳುವದರಿಂದಲಾಗಲೀ ಮರಣ ಹೊಂದುವನು.

## ಪರಾಶರೋಕ್ತ ಮಕರಲಗ್ನ ಜಾತಕಫಲಂ

ಶ್ಲೋಕ॥ ಕುಜಜೀವೇಂದವಃ ಪಾಪಾಃಶುಭೌ ಭಾರ್ಗವಚಂದ್ರಜೌ ।
ಸ್ವಯಂಚೈವ ನಹಂತಾಸ್ಯಾ ನ್ಮಂದೋ ಭೌಮಾದಯಃ ಪರೇ ॥
ತಲ್ಲಕ್ಷಣಾನಿ ಹಂತಾರಃ ಕವಿರೇಕಃ ಸುಯೋಗಕೃತ್ । ಜ್ಞಾತವ್ಯಾನಿ ಫಲಾನ್ಯೇವಂ ವಿಭುದೈರ್ಮೃಗ ಜನ್ಮನಃ ॥೧೩೯॥ ಕೇರಳೀಯೇ ॥
ಮೃಗೇ ಲಗ್ನೇ ಪ್ರಜಾ ತಸ್ಯ ಕುಜಜೀವ ನಿಶಾಕರಾಃ ।
ಮಾರಕಾ ಇತಿ ವಿಜ್ಞೇಯಾಃ ಜ್ಯೋತಿಶ್ಶಾಸ್ತ್ರೇ ಬುಧೋತ್ತಮೈಃ ॥೧೪೦॥

ತಾ॥ ಮಕರಲಗ್ನ ಜಾತಕನಿಗೆ ಕುಜ ಗುರು ಚಂದ್ರರು ಪಾಪಿಗಳು, ಶುಕ್ರ ಬುಧರು ಶುಭ ಫಲ ಕೊಡುತ್ತಾರೆ. ಶುಕ್ರನೊಬ್ಬನೇ ಸುಯೋಗಕಾರಕನು; ಶನಿಯು ತಾನೊಬ್ಬನೇ ಸಾಕ್ಷಾತ್ತಾಗಿ ಮಾರಕನಲ್ಲ. ಕುಜನೇ ಮೊದಲಾದ ಪಾಪಿಗಳು ಮಾರಕ ರಾಗುತ್ತಾರೆ. ಈ ಪ್ರಕಾರ ಮಕರಲಗ್ನ ಜನ್ಮನಿಗೆ ಶುಭಾ ಶುಭ ಫಲ ತಿಳಿಯತಕ್ಕದ್ದು॥ ಇದೇ ವಿಷಯದಲ್ಲಿ ಕೇರಳೀಯದಲ್ಲಿ ॥ ಮಕರಲಗ್ನ ಜಾತಕನಿಗೆ ಅಂಗಾರಕ, ಗುರು, ಚಂದ್ರರು ಪಾಪಿಗಳು. ಈ ಮಾರಕ ಗ್ರಹಗಳೇ ಮಾರಕರೆಂದು ನಿರ್ಣಯಿಸಿರುತ್ತೆ ॥೧೩೮-೧೩೯-೧೪೦॥

## ಕುಂಭಲಗ್ನ ಜಾತಕಫಲಂ

ಶ್ಲೋಕ॥ ಏಕಾದಶೇ ವಿಲಗ್ನೇಸ್ತಬ್ಧಃ ಕ್ರೂರಃ ಕುಲಾಗ್ರಜಃ ಪುರುಷಃ ।
ಪಿತ್ತಾ-ನಿಲಭೂಯಿಷ್ಠಃ ತಿಲಪುಷ್ಪ ಸಮಾನನಾಶಶ್ಚ ॥೧೪೧॥

ಪ್ರಾಪ್ತಾನ್ನಾಶ ಯತೇರ್ಥಾನ್ ಬಹುಭೃತ್ಯಃ ಸಾಧ್ಯತೇ ವ್ಯಯೈಶ್ಚಾಪಿ।
ಕ್ಷೀಣಸ್ಸ್ವ-ಗೋತ್ರ ಗುರುಜನ ಪರಪಕ್ಷ ಸುಹೃತ್ಸ್ವಜನಶತ್ರುಃ
॥೧೪೨॥ ಕರ್ಮಣಿ ಪಾಪೇಸಕ್ತಃ ತನುಶ್ಚಕಾಂತಾ ನವಾಪ್ನುಯಲ್ಲಾಭಾನ್।
ಧರ್ಮ ಧ್ವಜ ಪ್ರವೃತ್ತೌ ದೈವತಪೂಜಾಶ್ಚ ಕಾರಯತಿ ಭಾರ್ಯಾಂ
॥೧೪೩॥ ವಿಗ್ರಹಶೀಲಾಂ ಲಭತೇ ವಿವಿಧಾನ್ರೋಗಾನ್
ಕಪೋದ್ಭವಾನುರಸಿ। ಮ್ರಿಯತೇ ಜಾಠರ ರೋಗಾತ್ ವಮನಾತ್
ಸ್ತ್ರೀಣಾಂ ಪ್ರಯೋಗಾದ್ವಾ ॥೧೪೪॥

ತಾ॥ ಕುಂಭಲಗ್ನದಲ್ಲಿ ಹುಟ್ಟಿದ ಪುರುಷನು ಬುದ್ಧಿ ಸ್ತಂಭನವಾದವನಾಗಿಯೂ, ಉಗ್ರವಾದ ಗುಣವುಳ್ಳವನಾಗಿಯೂ, ವಂಶದಲ್ಲಿ ಪೂಜ್ಯನಾದವನಾಗಿಯೂ, ಅಣ್ಣನುಳ್ಳವನಾಗಿಯೂ, ಪಿತ್ತವಾತ ಶರೀರ ಉಳ್ಳವನಾಗಿಯೂ, 'ತಿಲಕುಸುಮ ಸುನಾಸಾ' ಅಂದರೆ ಎಳ್ಳಿನ ಹೂವಿನಂತೆ ಮೂಗುಳ್ಳವನಾಗಿಯೂ, ಅಂದರೆ (ಎಳ್ಳಿನ ಹೂವಿನಂತೆ ಮೂಗು ಇರುವದು ಶೃಂಗಾರಕ್ಕೆ ಲಕ್ಷಣವೆಂದು ಕಾಮಶಾಸ್ತ್ರದಲ್ಲಿ ಚಿತ್ತಿಣೀಜಾತಿ ಸ್ತ್ರೀಯರಿಗೆ ವರ್ಣಿಸಲ್ಪಟ್ಟಿರುತ್ತೆ) ಪ್ರಾಪ್ತವಾದ ಆದಾಯವನ್ನು ಕಳೆದುಕೊಳ್ಳುತಕ್ಕವನಾಗಿಯೂ, ಅನೇಕ ಭೃತ್ಯರುಳ್ಳವನಾಗಿಯೂ, ಕೃಶವಾದಶರೀರ ಉಳ್ಳವನಾಗಿಯೂ, ಸ್ವವಂಶದ ಹಿರಿಯರಿಗೂ, ಶತ್ರುಗಳಿಗೂ, ಸ್ವಜನರಿಗೆ ಶತ್ರುವಾಗಿರುವವನಾಗಿಯೂ, ಪಾಪಕಾರ್ಯಾಸಕ್ತನಾಗಿಯೂ, ಚಿಕ್ಕವನಾಗಿರುವಾಗಲೇ ಸುಂದರವಾದ ಪತ್ನಿಯನ್ನು ಹೊಂದುವವನಾಗಿಯೂ, ಡಂಬಾರ್ಥವಾಗಿ ಧರ್ಮ ಮಾಡುತ್ತೇನೆಂದು ದೇವತಾಸೇನೆ ಮಾಡುವವನಾಗಿಯೂ, ಜಗಳಗಂಟಿಯಾದ ಹೆಂಡತಿಯುಳ್ಳವನಾಗಿಯೂ, ಎದೆಯಲ್ಲಿ ಅನೇಕ ವಿಧವಾದ ಶ್ಲೇಷ್ಮವ್ಯಾಧಿಯುಳ್ಳವನಾಗಿಯೂ, ಉದರ ರೋಗದಿಂದಲಾಗಲೀ, ವಾಂತಿಯಿಂದಲಾಗಲೀ, ಸ್ತ್ರೀಯರ ಮೋಹದ ಔಷಧ ಪ್ರಯೋಗದಿಂದಲಾಗಲೀ, ತಂತ್ರಸೂನ್ಯಾದಿ ಪ್ರಯೋಗದಿಂದಾಗಲೀ ಮರಣವನ್ನು ಹೊಂದುತ್ತಾನೆ ॥೧೪೧ರಿಂದ೧೪೪॥

## ಪರಾಶರೋಕ್ತ ಕುಂಭಲಗ್ನ ಜಾತಕಫಲಂ

ಶ್ಲೋಕ॥ ಜೀವಚಂದ್ರಕುಜಾಃ ಪಾಪಾಃ ಏಕೋದ್ಯತ್ಕ ಗುರುಶ್ಶುಭಃ । ರಾಜ ಯೋಗ ಕರೋಭೌಮಃ ಕವಿಶ್ಚೈವ ಬೃಹಸ್ಪತಿಃ ॥೧೪೫॥ ನಹಂತಾ-ಘ್ನಂತಿ ಭೌಮಾದ್ಯಾಃ ಮಾರಕತ್ವೇನ ಲಕ್ಷಿತಾಃ । ಏವಮೇವ ಫಲಾನ್ಯೂಹ್ಯಾ ನ್ಯೇತಾನಿ ಘಟಜನ್ಮನಃ ॥೧೪೬॥ ಕೇರಳೀಯೆ ॥ ಕುಂಭಲಗ್ನೇ ಪ್ರಜಾತಸ್ಯ ಕುಜಚಂದ್ರೌ-ಚಮಾರಕೌ । ಗುರುಸ್ಸಾಕ್ಷಾನ್ನಹಂತಾಸ್ಯಾ ದಿತಿ ಕೇರಳ ನಿರ್ಣಯಃ ॥

ತಾ।। ಕುಂಭಲಗ್ನ ಜಾತಕನಿಗೆ ಗುರು ಚಂದ್ರ ಅಂಗಾರಕ ಈ ಮೂರು ಗ್ರಹಗಳು ಪಾಪಿಗಳು ಶುಕ್ರನೊಬ್ಬನೇ ರಾಜಯೋಗ ಕಾರಕನಾಗುವನು, ಅಂಗಾರಕನೂ ರಾಜಯೋಗಕಾರಕನಾಗುವನು. ಶುಕ್ರನೂ ಗುರುವೂ ಸಹ ರಾಜಯೋಗವನ್ನೇ ಕೊಡುವರು. ಕುಜನೇ ಮೊದಲಾದ ಪಾಪಗ್ರಹಗಳು ಮಾರಕರಾಗುವರು, ಈ ಪ್ರಕಾರ ಕುಂಭಲಗ್ನ ಜಾತಕನ ಫಲ ನಿರ್ಣಯಮಾಡಿ ತಿಳಿಯತಕ್ಕದ್ದು. ಕೇರಳೀಯದಲ್ಲಿ ।। ಕುಜ ಚಂದ್ರರು ಮಾರಕರು, ಗುರು ಸ್ವತಂತ್ರವಾಗಿ ಮಾರಕನಾಗುವುದಿಲ್ಲ. ಮಾರಕರೊಂದಿಗೆ ಸೇರಿದರೆ ಮಾರಕನಾಗುತ್ತಾನೆಂದು ಕೇರಳ ಶಾಸ್ತ್ರದಲ್ಲಿ ಹೇಳಿರುತ್ತೆ. ।।೧೪೫-೧೪೬।।

## ಮೀನಲಗ್ನ ಜಾತಕಫಲಂ

ಶ್ಲೋಕ।। ದ್ವಾದಶಗೇ ಪ್ರಾಗ್ಲಗ್ನೇ ಸ್ಥೂಲೋಷ್ಠೋ ಮೀನ ದೃಜ್ಮಹಾನಸಃ ।
ಕಫವಾತಿಕೋ ಮಹಾತ್ಮಾ ತ್ವಗ್ರೋಪೀ ನೈಕಮತಿಚೇಷ್ಟಃ ।।೧೪೭।।
ಶಿಷ್ಟಾಯವ್ಯ ಭೃತ್ಯೈಃ ಸ್ವಜನ ಸ್ತ್ರೀ ಪೂಜಿತಸ್ಸಹಜನಾಥಃ ಕರ್ಮಣಿ
ಧರ್ಮೇಯುಕ್ತಃ ಪೈತ್ರೋಪ ಚಯುಸ್ಸುದಾರಶ್ಚ ।।೧೪೮।।
ನೀಚಾಚಾರಾಂ ಭಾರ್ಯಾಂ ಲಭತೇಚ ರಿಪೂಂ ತ್ಸುದಾರುರ್ಣಾ
ಕ್ರೂರರ್ಾ । ರೋಗಾಶ್ಶೋಣಿತವೂಯಾತ್ ಶೂಲಾದ್ವಾವ್ಯಾಳ
ಸಿಂಹೇಭ್ಯಃ ।।೧೪೯।। ಮೃತ್ಯುಂ ಪುರುಷೈರ್ಗಣಬೃಂದ
ಪೂಜಿತೈ-ರ್ಗುಹ್ಯಜೈ ರ್ವಿಕಾರೈರ್ವಾ । ದಿವೌಷಧ ಪ್ರಯೋಗಾತ್
ಉಪವಾಸಾನ್ಮಾರ್ಗದೋಷಾದ್ವಾ ।।೧೫೦।।

ತಾ।। ಮೀನಲಗ್ನದಲ್ಲಿ ಜನ್ಮಿಸಿದವನು ಮೀನಿನಹಾಗೆ ಹೊಳೆಯುತ್ತಲಿರುವ ನೇತ್ರಗಳುಳ್ಳವನಾಗಿಯೂ, ತುಟಿಯೂ, ನಾಸಿಕವೂ ದಪ್ಪವಾಗಿರುವವನಾಗಿಯೂ, ಶ್ಲೇಷ್ಮ ವಾತ, ಧಾತು ಅಧಿಕವಾಗಿರುವ ಶರೀರ ಉಳ್ಳವನಾಗಿಯೂ, ಘನವಾದ ಮನಸ್ಸುಳ್ಳವನಾಗಿಯೂ, ಚರ್ಮರೋಗ ಉಳ್ಳವನಾಗಿಯೂ, ಚಂಚಲವಾದ ಬುದ್ಧಿಯುಳ್ಳವನಾಗಿಯೂ, ಅನೇಕ ಚೇಷ್ಟಾವಿಕಾರಗಳುಳ್ಳವನಾಗಿಯೂ, ಸತ್ಪುರುಷರಿಂದಲೂ, ಭೃತ್ಯರುಗಳಿಂದಲೂ ಆದಾಯ ವ್ಯಯ ಉಳ್ಳವನಾಗಿಯೂ, ಸ್ವಜನರಲ್ಲಿಯೂ ಸ್ತ್ರೀಯರಲ್ಲಿಯೂ ಪೂಜಿಸಲ್ಪಡತಕ್ಕವನಾಗಿಯೂ, ಸಹೋದರರ ಮೇಲೆ ಅಧಿಕಾರ ತೋರಿಸತಕ್ಕವನಾಗಿಯೂ, ಸಂಪೂರ್ಣ ಕಾರ್ಯದಲ್ಲಿ ಸಂಬಂಧ ಉಳ್ಳವನಾಗಿಯೂ, ತಂದೆಗಿಂತ ವೃದ್ಧಿ ಹೊಂದತಕ್ಕವನಾಗಿಯೂ, ಸುಗುಣೆಯಾದ ಹೆಂಡತಿ ಇದ್ದಾಗ್ಯೂ, ನೀಚವಾದ ಆಚಾರ ಉಳ್ಳವನಾಗಿಯೂ, ಕ್ರೂರಾತ್ಮರಾದ ಶತ್ರುಗಳುಳ್ಳವನಾಗಿಯೂ, ಮೂಲವ್ಯಾಧಿ ರೋಗವಿರುವವನಾಗಿಯೂ, ಸರ್ಪ, ಶುನಕ,

ಸಿಂಹ ಈ ಜಂತುಗಳಿಂದಾಗಲೀ, ಗ್ರಾಮಾಧಿಕಾರಿಗಳಾದ ಮನುಷ್ಯ ರಿಂದಾಗಲೀ, ರಹಸ್ಯಸ್ಥಾನದಲ್ಲಿ ಹುಟ್ಟಿದ ರೋಗದಿಂದಾಗಲೀ, ದೊಡ್ಡ ಮನುಷ್ಯರಿಂದಾಗಲೀ, ಉಪವಾಸದಿಂದಲಾಗಲೀ, ಮಾರ್ಗಾಯಾಸದಿಂದಲಾಗಲೀ, ತಾನು ಹುಟ್ಟಿದ ದೇಶವನ್ನು ಬಿಟ್ಟು ಪರದೇಶದಲ್ಲಿ ಮರಣ ಹೊಂದುತ್ತಾನೆ.

## ಪರಾಶರೋಕ್ತ ಮೀನಲಗ್ನ ಫಲಂ

ಮೂಲ॥ ಮಂದ ಶುಕ್ರಾಂಶುಮತ್ಸೌಮ್ಯಾಃ ಪಾಪಾ ಭೌಮವಿಧೂತುಭೌ ।
ಮಹಿಸುತ ಗುರೂಯೋಗ ಕಾರಿಣೌ ನೈವಭೂಸುತಃ ॥೧೫೧॥
ಮಾರಕೋಮಾರಕಾಭಿಖ್ಯಾಮಂದಾದ್ಯಾಫ್ಘಂತಿಪಾಪಿನಃ ।ಇತ್ಯೂ। ಹ್ನಾನಿ
ಬುಧೈಸ್ಸಮ್ಯ ಕ್ಫಲಾನಿರ್ಝಷಜನ್ಮನಃ ॥೧೫೨॥

ಮೀನಲಗ್ನ ಜಾತಕನಿಗೆ-ಶನಿ, ಶುಕ್ರ, ರವಿ, ಬುಧರು ಪಾಪಫಲ ಕೊಡತಕ್ಕವರು, ಚಂದ್ರಾಂಗಾರಕರು ಶುಭಫಲಪ್ರದರು, ಗುರು ಕುಜರು ಸೇರಿದರೆ ರಾಜಯೋಗ ಪ್ರದರಾಗುತ್ತಾರೆ. ಮತ್ತು ಶನಿಯೇ ಮೊದಲಾದ ಪಾಪಗ್ರಹಗಳು ಕೊಂದು ಬಿಡುತ್ತಾರೆ. ಈ ಪ್ರಕಾರ ಮೀನಲಗ್ನೋದ್ಭವನಿಗೆ ಶುಭಾಶುಭ ಫಲ ಕೊಡತಕ್ಕವರನ್ನು ತಿಳಿಯತಕ್ಕದ್ದು ।।ಕೇರಳೀಯದಲ್ಲಿ ಶ್ಲೋಕ।। ಮೀನಲಗ್ನೇಪಜಾತಸ್ಯ ವಿಟ್ಶುಕ್ರ ಶನಿ ಭಾನವಃ। ಮಾರಕಾ ಇತಿ ವಿಜ್ಞೇಯಾಃ ಜ್ಯೋತಿಶ್ಶಾಸ್ತ್ರೇ ಬುಧೋತ್ತಮೈ।। ಮೀನಲಗ್ನ ಜಾತಕನಿಗೆ ಬುಧ, ಶುಕ್ರ, ಶನಿ, ರವಿ ಈ ನಾಲ್ಕು ಗ್ರಹಗಳು ಮಾರಕ-ರೆಂದು ಪಂಡಿತರಿಂದ ನಿರ್ಣಯ ಮಾಡಲ್ಪಟ್ಟಿರುತ್ತೆ.

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ರವಿ ಕುಜಾಧಿಷ್ಠಿತ ರಾಶಿ ಫಲ
ನಿರೂಪಣಾಖ್ಯ ಅಷ್ಟಾದಶ ಪ್ರಕರಣಂ

ಇತಿ ಶ್ರೀಮದ್ಗೌತಮಾನ್ವಯ ಪಯಃಪಾರವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತ್ಮನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ
ರವ್ಯಾದಿಶನ್ಯಂತ ಗ್ರಹಾಧಿಷ್ಠಿತ ರಾಶಿ ಫಲ ನಿರೂಪಣಂ.
ಅಷ್ಟಾದಶ ಪ್ರಕರಣಂ ಸಂಪೂರ್ಣಂ.

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾಕಾಖ್ಯ ಹೋರಾಶಾಸ್ತ್ರೇ

# ೧೯ನೇ ದೃಷ್ಟಿ ಫಲ ಪ್ರಕರಣಂ

ಅವತಾರಿಕೆ - ಈ ಗ್ರಂಥಕರ್ತನು ಚಂದ್ರನಿಗೆ ದೃಷ್ಟಿ ಫಲವನ್ನು ಹೇಳುತ್ತಾನೆ.

ಮೂಲ॥ ಚಂದ್ರೇ ಭೂಪಬುಧೌನೃಪೋಮಪ ಗುಣೀಸ್ತೇನಾಧನಾಶ್ಚಾಜಗೇ ।
ನಿಸ್ವಸ್ತೇನ ನೃಮಾನ್ಯ ಭೂಪಧನಿನಃ ಪ್ರೇಷ್ಯಃ ಕುಜಾದ್ಯೈರ್ಗವಿ ॥
ನೃಸ್ಥೇಯೋ ವ್ಯವಹಾರಿಪಾರ್ಥಿವ ಬುದಾಭೀತಂತು ವಾಯಾಧನಾಃ॥
ಸ್ವರ್ಕ್ಷೇಯೋದ್ಧ ಕವಿಜ್ಞ ಭೂಮಿಪತಯೋ ಯೋಜೀವಿ ದೃಗ್ರೋ
ಗಿಣೌ ॥೧॥

ಅವತಾರಿಕೆ॥ ಈ ಶ್ಲೋಕದಿಂದ ಚಂದ್ರನು ಮೇಷ, ವೃಷಭ, ಮಿಥುನ, ಕರ್ಕಾಟಕ ಈ ನಾಲ್ಕು ರಾಶಿಗಳಲ್ಲಿದ್ದಾಗ ಕುಜಾದ್ರಿ ಗ್ರಹಗಳಿಂದ ನೋಡಲ್ಪಡುತ್ತಿದ್ದರೆ ಆ ಕಾಲ ದಲ್ಲಿ ಜನ್ಮಿಸಿದವರ ಸ್ವಭಾವಗಳು ಹೇಳಲ್ಪಡುತ್ತವೆ.

ಟೀಕು॥ ಅಜಗೆ-ಮೇಷರಾಶಿಯಲ್ಲಿರುವ, ಚಂದ್ರೇ-ಚಂದ್ರನು, ಕುಜಾದ್ಯೈ-ಕುಜನ ಮೊದಲುಗೊಂಡು ಸೂರ್ಯನೆ ಕೊನೆಯಾಗಿರುವ (ಅಂದರೆ-ಕುಜ, ಬುಧ, ಗುರು, ಶುಕ್ರ, ಶನಿ, ರವಿ) ಈ ಆರು ಗ್ರಹಗಳಿಂದ ನೋಡಲ್ಪಡುತ್ತಾ ಇದ್ದಾಗ ಜನ್ಮಿಸಿದವರು ಕ್ರಮವಾಗಿ, ಭೂಪ ಬುದೌ ನೃಪೋಪಮಗುಣೆಸ್ತೇನಾಧನಾಃ-ಭೂಪ-ಧೊರೆ, ಬುಧಃ-ಪಂಡಿತ, ನೃಪೋಪಮ-ರಾಜನ ಸಮಾನ ಗುಣ ಉಳ್ಳವನು. ಗುಣೀ-ಸುಗುಣವಂತ, ಸ್ತೇನ-ತಸ್ಕರ, ಅಧನಾಃ-ದರಿದ್ರ ಈ ಪ್ರಕಾರ ಆಗುವರು. ಈ ವಿಷಯದಲ್ಲಿ ಧುಂಡಿರಾಜನೆಂಬ ಜ್ಯೋತಿರ್ವಿದಾಚಾರ್ಯನು ಪ್ರತಿಗ್ರಹಕ್ಕೆ ಒಂದು ಶ್ಲೋಕದ ಪ್ರಕಾರ ಹೇಳಿರುತ್ತಾನೆ. ಅವುಗಳನ್ನು ಇಲ್ಲಿ ಉದಾಹರಣಾರ್ಥವಾಗಿ ಸ್ಪಷ್ಟಪಡಿಸಿರುತ್ತೇನೆ. ಮತ್ತು ಇಲ್ಲಿ ಚಂದ್ರನಿಗೆ ಹೇಳಿರುವ ಫಲವನ್ನೇ ಲಗ್ನಕ್ಕು ಅನ್ವಯಿಸತಕ್ಕದ್ದು.

## ಮೇಷಸ್ಥೇ ಚಂದ್ರೇ ಕುಜವೀಕ್ಷಿತಫಲಂ

ಚಂದ್ರೇ-ಚಂದ್ರನು ಕುಜನಿಂದ ನೋಡಲ್ಪಟ್ಟರೆ, ಭೂಪಃ-ಪೃಥ್ವೀಪತಿ ಯಾಗುವನು. ಈ ವಿಷಯಕ್ಕೆ ॥ಶ್ಲೋಕ॥ ಜಾ-ಭ। ವಿಷಾಗ್ನಿವಾತಾಸ್ತ್ರಭಯಂ

ಕದಾಚಿತ್ಸ್ಯಾನ್ಮೂತ್ರಕೃಚ್ಛ್ರಂ ಮಹದಾಶ್ರಯಶ್ಚ । ದಂತಾಕ್ಷಿಪೀಡಾ ನಿಬಿಡಾಜಡಾಂಶೌ ಮೇಷಸ್ಥಿತೇ ಭೂಮಿಸುತೇನದೃಷ್ಟೇ ॥ತಾ॥ ಮೇಷದಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟಟ್ರೆ ಜಾತಕನಿಗೆ ವಿಷ, ವಾಯು, ಅಗ್ನಿ ಮತ್ತು ಶಸ್ತ್ರ ಇವುಗಳಂದ ಭಯ, ಮೂತ್ರಕೃಚ್ಛ್ರ ಈ ರೋಗ ಪ್ರಾಪ್ತಿಯಾಗುತ್ತೆ ಮತ್ತು ದೊಡ್ಡವರ ಆಶ್ರಯಉಳ್ಳವನು; ಮತ್ತು ಹಲ್ಲುಗಳಿಗೂ, ನೇತ್ರಗಳಿಗೂ ರೋಗಪೀಡೆ ಉಂಟಾಗುತ್ತೆ ॥೧॥

## ಮೇಷಸ್ಥೇ ಚಂದ್ರೇ ಬುಧವೀಕ್ಷಣಫಲಂ

ಮೇಷದಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವರು ಬುಧೌ-ವಿದ್ವಾಂಸರಾಗುತ್ತಾರೆ ॥ಶ್ಲೋಕ॥ ವಿಲಸದಮ್ಯಕೀರ್ತಿಃ ಸರ್ವವಿದ್ಯಾ ಪ್ರವೀಣೋ ದ್ರವಿಣ ಗುಣಗಣಾಢ್ಯಃ ಸಮ್ಮತ ಸ್ಸಜ್ಜನಾನಾಮ್ । ಭವತಿನನು ಮನುಷ್ಯೋ ಮೇಷರಾಶೌ । ಶಶಾಂಕೇ ಶಶಿಧರಸುತ ದೃಷ್ಟೇ ಶ್ರೇಷ್ಠ ಸಂಪತ್ಪ್ರತಿಷ್ಠಃ ॥೨॥ ತಾ॥ ಮೇಷರಾಶಿಯಲ್ಲಿ ಚಂದ್ರನು, ಬುಧನಿಂದ ನೋಡಲ್ಪಡುತ್ತಿರುವಾಗ ಜನ್ಮಿಸಿದವನು ಪ್ರಸಿದ್ಧಪುರುಷನು, ಉತ್ತಮವಾದ ಯಶಸ್ವಿಯೂ, ಸರ್ವವಿದ್ಯಾಪ್ರವೀಣನು, ಧನವಂತನು, ಸಕಲಗುಣ ಸಂಪನ್ನನು ಸಜ್ಜನರಿಂದ ಗೌರವಿಸಲ್ಪಡತಕ್ಕವನು, ಶ್ರೇಷ್ಠನು, ಸಂಪದ್ಯುಕ್ತನು, ಪ್ರತಿಷ್ಠೆಯುಳ್ಳವನು, ಆಗುತ್ತಾನೆ ॥೨॥

## ಮೇಷಸ್ಥೇ ಚಂದ್ರೇ ಗುರುದೃಷ್ಟಿಫಲಂ

ನೃಪೋಪಮ-ಮೇಷರಾಶಿಯಲ್ಲಿದ್ದ ಚಂದ್ರನು ಬೃಹಸ್ಪತಿಯಿಂದ ನೋಡಲ್ಪಟ್ಟರೆ, ರಾಜಸಮಾನನಾಗುತ್ತಾನೆ॥ ಶ್ಲೋಕ ನೃಪಪ್ರಧಾನಃ ದೃತನಾ ಪತಿರ್ವಾಕುಲಾನು ಮಾನಾದ್ಬಹು ಸಂಪದಾಢ್ಯಃ । ಭವೇನ್ನರಃ ಕೈರವಿಣೀ ವನೇಶೇ ಮೇಷಸ್ಥಿತೇ ಗೀಷ್ಪತಿ ಸಾಪ್ರದೃಷ್ಟೇ ॥೩॥ ತಾ॥ ಮೇಷರಾಶಿಯಲ್ಲಿರುವ ಚಂದ್ರನು ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ರಾಜ, ಮಂತ್ರಿ ಅಥವಾ ಸೇನಾಧಿಪತಿಯಾಗುತ್ತಾನೆ. ಇದರಲ್ಲಿ ವಿಶೇಷವಿದೆ. ಬ್ರಾಹ್ಮಣನಾದರೆ ಅಥವಾ ಮಂತ್ರಿಯ ಮಗನಾದರೆ ರಾಜನ ಮಂತ್ರಿಯೇ ಆಗುವನು, ಸೇನಾನಾಯಕನ ಮಗ ನಾದರೆ ಅವನು ಸೇನಾಧಿಪತಿಯೇ ಆಗುತ್ತಾನೆ ಅನ್ಯನಾದರೆ ವಂಶಾನು ಮಾನವಾಗಿ ಬಹು ಸಂಪತ್ತುಳ್ಳವನಾಗುತ್ತಾನೆ. ಈ ಫಲ ಕುಲಾನುಮಾನವಾಗಿ ತಿಳಿಯತಕ್ಕದ್ದು ॥೩॥

## ಮೇಷಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಗುಣೀ-ಮೇಷರಾಶಿಯಲ್ಲಿರುವ ಚಂದ್ರನು ಶುಕ್ರನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು ಉತ್ತಮವಾದ ಸುಗುಣವಂತನಾಗುತ್ತಾನೆ ।।ಶ್ಲೋಕ।। ಯೋಷಾವಿಭೂಷಾ ಧನಸೂನು ಸೌಖ್ಯೋ ಭೋಕ್ತಾಸುಪಕ್ತಾ ಪರಿಭುಕ್ತರೋಷಃ । ಸ್ಯಾತ್ಪೂರುಷೋ ಮೇಷಗತೇಽ ಮೃತಾಂಶೌ ನಿರೀಕ್ಷ್ಯಮಾಣೆ ಭೃಗುಣಾಗುಣಜ್ಞಃ ।।೪।। ಮೇಷರಾಶಿಯಲ್ಲಿ ಚಂದ್ರನಿರುವಾಗ ಶುಕ್ರನಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವನಿಗೆ, ಸ್ತ್ರೀಸೌಖ್ಯ, ಆಭರಣಗಳ ಪ್ರಾಪ್ತಿ, ದ್ರವ್ಯ, ಪುತ್ರ, ಇವರುಗಳ ಸೌಖ್ಯ ಪ್ರಾಪ್ತಿಯಾಗಿ, ಚೆನ್ನಾಗಿ ಮಾತನಾಡುವವನು, ಶಾಂತಚಿತ್ತನು ಸಹ ಆಗುತ್ತಾನೆ. ।।೪।।

## ಮೇಷಸ್ಥೇ ಚಂದ್ರೇ ಶನಿದೃಷ್ಟಿಫಲಂ

ಸ್ತೇನ-ಮೇಷರಾಶಿಯಲ್ಲಿದ್ದ ಚಂದ್ರನನ್ನು ಶನಿ ನೋಡಿದ ಕಾಲದಲ್ಲಿ ಹುಟ್ಟಿದವನು ಕಳ್ಳನಾಗುತ್ತಾನೆ. ।।ಶ್ಲೋಕ।। ಗದಯುತಿಂ ಹತಚಿತ್ತ ಸಮುನ್ನತಿಂ ವಿಗತ ವಿತ್ತಮಸತ್ಯ ಮಸತ್ಸುತಮ್ । ಕ್ರಿಯಗತೋರ್ಕಸುತೇನ ನಿರೀಕ್ಷಿತೋ ಹಿಮಕೂರೇಹಿನರಂ ಕುರುತೆಖಲಂ ।।೫।।ತಾ।। ಮೇಷರಾಶಿಯಲ್ಲಿದ್ದ ಚಂದ್ರನನ್ನು ಶನಿಯು ನೋಡುತ್ತಾ ಇರುವಾಗ ಜನ್ಮಿಸಿದವನು ರೋಗಗ್ರಸ್ತನು, ಮಾನವಿಲ್ಲದವನು, ಧನಹೀನನು, ಸುಳ್ಳು ಹೇಳುವವನು, ದುಷ್ಟಸಂತತಿ ಇರುವವನು, ದುರ್ಜನನು ಆಗುತ್ತಾನೆ ।।೫।।

## ಮೇಷಸ್ಥೇ ಚಂದ್ರೇ ರವಿದೃಷ್ಟಿಫಲಂ

ಮೇಷರಾಶಿಯಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಅಧನಃ-ದರಿದ್ರನಾಗುತ್ತಾನೆ ।।ಶ್ಲೋಕ।। ಧುಂಡಿರಾಜಃ । ಉಗ್ರಸ್ವಭಾವೋಪಿ ಮೃದುರ್ನತಾನಾಂ ಧೀರೋಧರಾ ಧೀಶ್ವರಗೌರವಾಢ್ಯಃ । ನರೋಭವೇತ್ಸಂಗ-ರಭೀರುರೇವಮೇಷೇ ಶಶಾಂಕೇ ನಳನೀಶದೃಷ್ಟೇ ।।೬।।ತಾ।। ಮೇಷರಾಶಿಯಲ್ಲಿ ಚಂದ್ರನಿದ್ದು ರವಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಉಗ್ರವಾದ ಸ್ವಭಾವ ಉಳ್ಳವನು, (ವಿನಯ) ನಮ್ರತೆಯುಳ್ಳವನು, ಧೀರ, ರಾಜನಂತೆ ಗೌರವಯುಕ್ತ ಮತ್ತು ಯುದ್ಧದಲ್ಲಿ ಹೆದರಿಕೊಳ್ಳುವವನು ಆಗುತ್ತಾನೆ ।।೬।।

## ವೃಷಭಸ್ಥೇ ಚಂದ್ರೇ ಕುಜದೃಷ್ಟಿಫಲಂ

ಗವಿ-ವೃಷಭರಾಶಿಯಲ್ಲಿರುವ ಚಂದ್ರನು (ಅಥವಾ ವೃಷಭ ಲಗ್ನವಾಗಲೀ) ಕುಜನಿಂದ ನೋಡಲ್ಪಟ್ಟರೆ, ನಿಸ್ವ-ದ್ರವ್ಯವಿಲ್ಲದವನಾಗುತ್ತಾನೆ. ||ಶ್ಲೋಕ|| ಕಾಮಾತುರಶ್ಚಿತ್ತ ಹರೋಂಗನಾನಾಂ ಸ್ಯಾತ್ಸಾಧುಮಿತ್ರಃ ಸುತರಾಂಪವಿತ್ರಃ। ಪ್ರಸನ್ನಮೂರ್ತಿಶ್ಚ ನರೋವೃಷಸ್ಥೇ ಶೀತದ್ಯುತೌ ಭೂಮಿಸುತೇನದೃಷ್ಟೇ ||೭|| ವೃಷಭ ರಾಶಿಯಲ್ಲಿರುವ ಚಂದ್ರನನ್ನು ಅಂಗಾರಕನು ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದವನು ಕಾಮಾತುರನು, ಸ್ತ್ರೀಯರ ಚಿತ್ರವನ್ನು ಅಪಹರಿಸುವವನು, ಸಾಧು ಪುರುಷರಲ್ಲಿ ಸ್ನೇಹವಿರತಕ್ಕವನು, ಅತಿಶಯವಾಗಿ ಪವಿತ್ರನಾದವನು ಮತ್ತು ಪ್ರಸನ್ನಮೂರ್ತಿಯೂ ಆಗುತ್ತಾನೆ ||೭||

## ವೃಷಭಸ್ಥೇ ಚಂದ್ರೇ ಬುಧದೃಷ್ಟಿಫಲಂ

ವೃಷಭಲಗ್ನವನ್ನಾಗಲೀ ಅಥವಾ ವೃಷಭರಾಶಿಯಲ್ಲಿದ್ದ ಚಂದ್ರನನ್ನಾಗಲೀ, ಬುಧನು ನೋಡಿದ ಕಾಲದಲ್ಲಿ ಹುಟ್ಟಿದವನು, ಸ್ತೇನ-ಕಳ್ಳನಾಗುವನು. ||ಶ್ಲೋಕ|| ಪ್ರಾಜ್ಞಂ ವಿಧಿಜ್ಞಂ ಕೃಪಯಾ ಸಮೇತಂ । ಹರ್ಷಾನ್ವಿತಂ ಭೂತಹಿತೇ ರತಂಚ || ಗುಣಾಭಿರಾಮಂ ಮನುಜಂ ಪ್ರಕುರ್ಯಾ । ದ್ವೃಷೇ ಶಶಾಂಕಃ ಶಶಿಜೇನದೃಷ್ಟಃ ||೮|| ||ತಾ|| ವೃಷಭರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟಾಗ ಹುಟ್ಟಿದ ಮನುಷ್ಯನು ಬುದ್ಧಿವಂತ, ಜ್ಯೋತಿಷ್ಯ ತಿಳಿದವನು, ಕೃಪಾಳು, ಹರ್ಷಯುಕ್ತ, ಭೂತದಯಾ ಪಶ್ಚಾತ್ತಾಪ ಉಳ್ಳವನು, ಪ್ರಾಣಿಮಾತ್ರಕ್ಕೆ ನಿರಂತರದಲ್ಲೂ ಹಿತವನ್ನು ಕೋರುವವನು ಮತ್ತು ಸುಗುಣಕ್ಕೆ ಮಾತ್ರ ಸ್ಥಾನವಾದವನು || ವರಾಹ ಮಿಹಿರಾಚಾರ್ಯರ ಅಭಿಪ್ರಾಯಕ್ಕೆ ಇದು ವಿರೋಧವಾಗಿದೆ. ಆದರೆ ಇದನ್ನೇ ಯವನಾಚಾರ್ಯರು ಒಪ್ಪಿಕೊಂಡಿದ್ದಾರೆ ||೮||

## ವೃಷಭಸ್ಥೇ ಚಂದ್ರೇ ಗುರುದೃಷ್ಟಿಫಲಂ

ವೃಷಭರಾಶಿಯಲ್ಲಿರುವ ಚಂದ್ರನಾಗಲೀ, ವೃಷಭಲಗ್ನವಾಗಲೀ ಗುರುವಿನಿಂದ ನೋಡಲ್ಪಟ್ಟರೆ, ನೃಮಾನ್ಯಃ-* ರಾಜಪೂಜಿತನಾಗುವನು ||ಶ್ಲೋಕ|| ಜಾಯಾತ್ಮಜಾನಂದಯುತಂ ಸುಕೀರ್ತಿಂ ಧರ್ಮಕ್ರಿಯಾಯಾಂ ನಿರತಂಚ ಪಿತ್ರೋಃ । ಭಕ್ತೌಪ್ರಸಕ್ತಂ ಮನಜಂ ಪಕುರ್ಯಾದ್ವೃಷಸ್ಥಿತೇಂದುರ್ಗುರುಣಾಪ್ರದೃಷ್ಟಃ ||೬||ತಾ|| ವೃಷಭರಾಶಿಯಲ್ಲಿ ಚಂದ್ರನಿದ್ದಾಗ ಗುರುದೃಷ್ಟಿ ಇರುವ ಕಾಲದಲ್ಲಿ ಹುಟ್ಟಿದವನು ಸ್ತ್ರೀಪುತ್ರರ ಆನಂದ-ಯುಕ್ತನು, ಸತ್ಕೀರ್ತಿವಂತನು, ಧರ್ಮಕಾರ್ಯದಲ್ಲಿ ನಿರಂತರ ಆಸಕ್ತಿಯುಳ್ಳವನು, ತಾಯಿತಂದೆಗಳಲ್ಲಿ ಸದಾ ಕಾಲದಲ್ಲಿಯೂ ಭಕ್ತಿಯುಳ್ಳವನೂ ಆಗುವನು.

---

* ನೃಪಾಢ್ಯಃ-ರಾಜಶ್ರೇಷ್ಠನಾಗುವನು. ಉತ್ತರದೇಶದ ಪಾಠ.

## ವೃಷಭಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ವೃಷಭರಾಶಿಯಲ್ಲಿದ್ದ ಚಂದ್ರನನ್ನು ನೋಡಿದ ಕಾಲದಲ್ಲಿ ಹುಟ್ಟಿದ ಮನುಷ್ಯನು, ಭೂಪಃ-ರಾಜನಾಗುವನು. ।।ಶ್ಲೋಕ।। ಭೂಷಣಾಂಬರ ಗೃಹಾಸನ ಶಯ್ಯಾ ಗಂಧಮಾಲ್ಯ ಚತುರಂಘ್ರಿ ಸುಖಾನಿ । ಆತನೋತಿ ಸತತಂ ಮನುಜಾನಾಂ ಚಂದ್ರಮಾ ವೃಷಗತೋ ಭೃಗುದೃಷ್ಟಃ ।।೧೦।।ತಾ।। ವೃಷಭಸ್ಥ ಚಂದ್ರನನ್ನು ಶುಕ್ರನು ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದ ಪುರುಷನು ಭೂಷಣ, ವಸ್ತ್ರ, ಗೃಹ, ವಾಹನ, ಶಯನೋಪಕರಣ, ಸುಗಂಧದ್ರವ್ಯ, ಪುಷ್ಪಮಾಲಿಕಾದಿಗಳು, ಚತುಷ್ಪಾದ ಪಶುಗಳು, ಅರ್ಥಾತ್-ಗಜ, ಅಶ್ವ, ಗೋ, ಮಹಿಷ್ಯಾದಿಗಳು ಇವುಗಳಿಂದ ಸೌಖ್ಯವನ್ನು ಹೊಂದುವನು ।।೧೦।।

## ವೃಷಭಸ್ಥೇ ಚಂದ್ರೇ ಶನಿದೃಷ್ಟಿಫಲಂ

ವೃಷಭರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು ಧನೀ-ದ್ರವ್ಯವಂತನಾಗುವನು. ।।ಈ. ವಿ.ಶ್ಲೋ।। ಕಲಾನಿಧಿಃ ಪೂರ್ವದಳೇ ವೃಷಸ್ಯ ಶನೀಕ್ಷಿತಶ್ಚೇನ್ನಿಧನಂ ಜನನ್ಯಾಃ । ಕರೋತಿ ಸತ್ಯಂ ಮುನಿಭಿರ್ಯದುಕ್ತಂ ತಥಾಪರಾರ್ಧೇ ಖಲುತಾತುಘಾತಮ್ ।।೧೧।।ತಾ।। ವೃಷಭರಾಶಿಯಲ್ಲಿದ್ದ ಚಂದ್ರನನ್ನು ಶನಿ ನೋಡಿದರೆ ಆ ಕಾಲದಲ್ಲಿ ಅಂದರೆ ವೃಷಭರಾಶಿಯ ೧೫ ಭಾಗದೊಳಗೆ ಚಂದ್ರನಿದ್ದರೆ ತಾಯಿಯ ಮರಣವನ್ನುಂಟು ಮಾಡುವನು. ೧೭ ರಿಂದ ೩೦ರವರೆಗಿನ ಭಾಗಗಳಲ್ಲಿ ಚಂದ್ರನಿದ್ದರೆ ತಂದೆಗೆ ಮರಣವನ್ನುಂಟುಮಾಡುವನು. ವರಾಹಮಿಹಿರಾಚಾರ್ಯರ ಅಭಿಪ್ರಾಯಕ್ಕೆ ಇದು ವಿರೋಧವಾಗಿರುವುದು. ಆದರೆ ವರಾಹಮಿಹಿರರು ಧನವಂತನಾಗುವನೆಂದು ಹೇಳಿದರೇ ಹೊರತು ಮಾತಾ ಪಿತೃ ಗಂಡವನ್ನು ಹೇಳಿದವರಾಗಲಿಲ್ಲ. ।।೧೧।।

## ವೃಷಭಸ್ಥೇ ಚಂದ್ರೇ ರವಿದೃಷ್ಟಿಫಲಂ

ವೃಷಭರಾಶಿಯಲ್ಲಿ ಚಂದ್ರನು ಸೂರ್ಯನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು, ಪ್ರೇಷ್ಯಃ-ಪರಿಚಾರಕನಾಗುವನು ।।ಈ.ವಿ.ಶ್ಲೋ।। ಕೃಷಿ ಕ್ರಿಯಾಯಾಂ ನಿರತೋ ವಿಧಿಜ್ಞಃ ಸ್ಯಾನ್ಮಾಂತ್ರಿಕೋ ವಾಹನ ಧ್ಯಾನಯುಕ್ತಃ । ನರೋನಿತಾಂತಂ ಚತುರಸ್ವಕಾರ್ಯೇ ದೃಷ್ಟೇ ದಿನೇಶೇನ ವೃಷೇ ಶಶಾಂಕೇ ।।೧೨।।ತಾ।। ಜನ್ಮಕಾಲದಲ್ಲಿ ವೃಷಭದಲ್ಲಿದ್ದ ಚಂದ್ರನನ್ನು ಸೂರ್ಯನು ನೋಡಿದರೆ ಭೂಮಿ ವ್ಯವಸಾಯ ಮಾಡುವುದರಲ್ಲಿ ಚತುರನು, ಜ್ಯೋತಿಶ್ಶಾಸ್ತ್ರ, ಮಂತ್ರಶಾಸ್ತ್ರ ತಿಳಿದವನು, ವಾಹನಯುಕ್ತನು, ಧಾನ್ಯಸಮೃದ್ಧಿಯುಳ್ಳವನು, ತನ್ನ ಸ್ವಕಾರ್ಯದಲ್ಲಿ ಚತುರನೂ ಆಗುತ್ತಾನೆ ।।೧೨।।

## ಮಿಥುನಸ್ಥೇ ಚಂದ್ರೇ ಕುಜಾದಿಗ್ರಹ ದೃಷ್ಟಿಫಲಂ
## ಮಿಥುನಸ್ಥೇ ಚಂದ್ರೇ ಕುಜದೃಷ್ಟಿಫಲಂ

ನೃಸ್ಥೇ-ಮಿಥುನ ರಾಶಿಯಲ್ಲಿದ್ದ ಚಂದ್ರನನ್ನು ಅಂಗಾರಕ ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದವನು. ಅಯೋವ್ಯವಹಾರಿ-ಕಬ್ಬಿಣದ ಸಾಮಾನುಗಳ ಕ್ರಯವಿಕ್ರಯ ಮೂಲಕ ಜೀವಿಸುವವನು ಅಂದರೆ, ಉಕ್ಕು ಮೊದಲಾದವುಗಳಿಂದ ಮಾಡಲ್ಪಟ್ಟ ಶಸ್ತ್ರಾಸ್ತ್ರ ಮೊದಲಾದ ಯಂತ್ರೋಪಕರಣಗಳಿಂದ ಜೀವಿಸತಕ್ಕವನೆಂದು ಕೆಲವರು ವಿಶೇಷ ಅರ್ಥ ಮಾಡಿರುತ್ತಾರೆ. ||ಶ್ಲೋಕ|| ಜಾ-ಭ|| ಉದಾರದಾರಂ ಚತುರಂಚ ಶೂರಂ ಪ್ರಾಜ್ಞಂಚಸುಜ್ಞಂ ಧನವಾಹನಾಢ್ಯೈಃ । ಯುಕ್ತಂಪ್ರಕುರ್ಯಾನ್ಮಿಥುನಸ್ಥಿತೇಂದು-ರ್ನಿರೀಕ್ಷಿತೋ ಜನ್ಮನಿ ಭೂಸುತೇನ ||೧೩|| ತಾ|| ಜನ್ಮಕಾಲದಲ್ಲಿ ಮಿಥುನರಾಶಿಯಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಆ ಮನುಷ್ಯನು ಉದಾರಗುಣವುಳ್ಳವನು. ಸ್ತ್ರೀಯುಕ್ತ, ಚತುರ, ಶೂರ, ಬುದ್ಧಿವಂತ, ಸುಜ್ಞ, ಧನ ವಸ್ತ್ರ ವಾಹನಾದಿ ಯುಕ್ತನೂ ಸಹ ಆಗುವನು ||೧೩||

## ಮಿಥುನರಾಶಿಸ್ಥೇ ಚಂದ್ರೇ ಬುಧದೃಷ್ಟಿಫಲಂ

ಮಿಥುನ ರಾಶಿಯಲ್ಲಿದ್ದ ಚಂದ್ರನು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಪಾರ್ಥಿವಃ-ರಾಜನಾಗುವನು. ಈ ||ವಿ.ಶ್ಲೋಕ|| ಧೀರಂ ಸದಾಚಾರ ಮುದಾರಸಾರಂ ನರಂ ನರೇಂದ್ರಾಪ್ತಧನಂ ಕರೋತಿ । ನಿಶಾಧಿನಾಥೋ ಮಿಥುನಾದಿ ಸಂಸ್ಥೋ ನಿಶೀಥಿನೀನಾಥ ಸುತೇನದೃಷ್ಟಃ ||೧೪||ತಾ|| ಜನ್ಮಕಾಲದಲ್ಲಿ ಮಿಥುನ ದಲ್ಲಿದ್ದ ಚಂದ್ರನು ಬುಧನಿಂದ ನೋಡಲ್ಪಟ್ಟರೆ ಆ ಪುರುಷನು ಧೀರನು, ಸದಾಚಾರಯುಕ್ತ, ಬಲಯುಕ್ತ ಮತ್ತು ರಾಜನಿಂದ ದ್ರವ್ಯಸಂಪಾದನೆ ಮಾಡುವವನೂ ಆಗುತ್ತಾನೆ ||೧೪||

## ಮಿಥುನಸ್ಥೇ ಚಂದ್ರೇ ಗುರುದೃಷ್ಟಿಫಲಂ

ಮಿಥುನರಾಶಿಯಲ್ಲಿದ್ದ ಚಂದ್ರನನ್ನು ಗುರು ನೋಡಿದರೆ ಆ ಕಾಲದಲ್ಲಿ ಜನ್ಮಿಸಿದವನು ಬುಧಃ-ಪಂಡಿತನಾಗುವನು || ಈ ವಿ.ಶ್ಲೋಕ|| ಜಾ-ಭ|| ವಿದ್ಯಾವಿವೇಕಾನ್ವಿತ ಮರ್ಥವಂತಂ ಖ್ಯಾತಂ ವಿನೀತಂ ಸುತರಾಂ ಸುಪುಣ್ಯಂ । ಕರೋತಿ ಮರ್ತ್ಯಂ ಮಿಥುನೇಭಿಸಂಸ್ಥೋ ನಿಶೀಥಿನೀಶೋ ಗುರುಣಾಪ್ರದೃಷ್ಟಃ ||ತಾ|| ಜನ್ಮಕಾಲದಲ್ಲಿ ಮಿಥುನರಾಶಿಯಲ್ಲಿದ್ದ ಚಂದ್ರನನ್ನು ಬೃಹಸ್ಪತಿ ನೋಡಿದರೆ ಪುರುಷನು ವಿದ್ಯಾ ವಿವೇಕಯುಕ್ತನಾಗುವನು, ಧನವಂತ, ಪ್ರಖ್ಯಾತ ಪುರುಷನು, ಅತ್ಯಂತ ವಿಧೇಯತೆ ಉಳ್ಳವನು, ಪುಣ್ಯಕರ್ಮ ಸಂಪಾದನೆ ಮಾಡುವವನೂ ಆಗುತ್ತಾನೆ ||೧೫||

## ಮಿಥುನಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಮಿಥುನದಲ್ಲಿದ್ದ ಚಂದ್ರನನ್ನು ಶುಕ್ರನು ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದವನು ಅಭೀ-ಭಯವಿಲ್ಲದವನು, ॥ಈ ವಿ.ಶ್ಲೋಕ॥ ಜಾ-ಭ॥ ವಸ್ತ್ರಪ್ರಸೂನಾನ್ನ ವರಾಂಗನಾಭ್ಯಃ ಸದ್ವಾಹನೇಭ್ಯಶ್ಚ ವಿಭೂಷಣೇಭ್ಯಃ ಕರೋತಿಸೌಖ್ಯಂ ಹಿಸುಧಾಮಯೂಖೋ ದ್ವಂದ್ವಸ್ಥಿತೋ ಜನ್ಮನಿ ಶುಕ್ರದೃಷ್ಟಃ ॥೧೬॥ತಾ॥ ಮಿಥುನದಲ್ಲಿ ಚಂದ್ರನಿದ್ದು ಶುಕ್ರ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ಸುವಸ್ತ್ರಗಳುಳ್ಳವನು, ಪುಣ್ಯಸಂಪಾದನೆ ಮಾಡುವವನು, ಉತ್ತಮವಾದ ಅನ್ನವನ್ನು ಭೋಜನಮಾಡುವವನು. ಸತ್ಕುಲ ಪ್ರಸೂತಳಾದ ಹೆಂಡತಿಯುಳ್ಳವನು. ಉತ್ತಮವಾದ ವಾಹನಗಳ ಉಪಭೋಗ ಉಳ್ಳವನು ಮತ್ತು ಉತ್ತಮವಾದ ಭೂಷಣಾದ್ಯಲಂಕಾರ ಉಳ್ಳವನೂ ಆಗುತ್ತಾನೆ ॥೧೬॥

## ಮಿಥುನಸ್ಥೇ ಚಂದ್ರೇ ಶನಿದೃಷ್ಟಿಫಲಂ

ಮಿಥುನದಲ್ಲಿ ಚಂದ್ರನಿರುವಾಗ ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ತಂತುವಾಯ-ವಸ್ತ್ರನಿರ್ಮಾಣ ಮಾಡುವವನಾಗುತ್ತಾನೆ ॥ಈ. ವಿ. ಶ್ಲೋಕ॥ ಧನಾಂಗನಾ ವಾಹನ ನಂದನಾದ್ಯೈರ್ವಿಶ್ಲೇಷ ಮಾಯಾತಿವಿಗರ್ಹಿತತ್ವಂ । ನರೋ ಹಿನೀಹಾರಕರೇ ನೃಯುಗ್ಮೇ ನಿರೀಕ್ಷಿತೇ ಭಾನುಸುತೇನ ಸೂತೌ ॥೧೭॥ ತಾ॥ ಜನನ ಕಾಲದಲ್ಲಿ ಮಿಥುಸ್ಥನಾದ ಚಂದ್ರನನ್ನು ಶನಿ ನೋಡಿದರೆ ಆ ಮನುಷ್ಯನು ಧನವನ್ನು ಸ್ತ್ರೀಯನ್ನು, ಯಾನವಾಹನ ಮೊದಲಾದುಗಳನ್ನು, ಪುತ್ರರನ್ನು ವಿಯೋಗ ಮಾಡಿಕೊಂಡು ಮತ್ತು ಸರ್ವ ಜನರಿಂದಲೂ ನಿಂದಿತೂ ಆಗುವನು ॥೧೭॥

## ಮಿಥುನಸ್ಥೇ ಚಂದ್ರೇ ರವಿದೃಷ್ಟಿಫಲಂ

ಮಿಥುನದಲ್ಲಿ ಚಂದ್ರನಿದ್ದು ರವಿಯಿಂದ ನೋಡಲ್ಪಟ್ಟಾಗ ಹುಟ್ಟಿದ ಮನುಷ್ಯನು ಅಧನ-ದರಿದ್ರನಾಗುವನು. ॥ಈ. ವಿ. ಜಾ-ಭ॥ ಪ್ರಾಜ್ಞಂ ಸುಶೀಲಂ ದ್ರವಿಣೇನಹೀನಂ ಕ್ಲೇಶಾಭಿಭೂತಂ ಸತತಂ ಕರೋತಿ । ನರಂಚಸರ್ವೋತ್ಸವದಂ ಪ್ರಸೂತೌ ದ್ವಂದ್ವೇಸ್ಥಿತೋ ಭಾನುಮತಾಚ ದೃಷ್ಟಃ ॥೧೮॥ತಾ॥ ಜನ್ಮಕಾಲದಲ್ಲಿ ಮಿಥುನದಲ್ಲಿ ಚಂದ್ರನಿದ್ದು ರವಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಪ್ರಾಜ್ಞನೂ, ಒಳ್ಳೆಯ ನಡತೆಯುಳ್ಳವನೂ, ದ್ರವ್ಯರಹಿತನೂ, ಅನೇಕ ಪ್ರಕಾರವಾದ ಕ್ಲೇಶವನ್ನು ಸಹಿಸುವವನೂ, ಸರ್ವ ಜನರಿಗೂ ಆನಂದವನ್ನು ಉಂಟು ಮಾಡುವವನೂ ಆಗುತ್ತಾನೆ ॥೧೮॥

## ಕರ್ಕರಾಶಿಸ್ಥೇ ಚಂದ್ರೇ ಗ್ರಹದೃಷ್ಟಿಫಲಂ
## ಕರ್ಕಸ್ಥೇ ಚಂದ್ರೇ ಕುಜದೃಷ್ಟಿಫಲಂ

ಕರ್ಕಾಟಕ ರಾಶಿಯಲ್ಲಿ ಚಂದ್ರನಿರುವಾಗ ಕುಜನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ಯೋದ್ಧ-ಯುದ್ಧಮಾಡುವವನು, ॥ಈ.ವಿ. ಶ್ಲೋಕ॥ ದಕ್ಷಂಚಶೂರಂ ಜನನೀವಿರುದ್ಧಂ ಕ್ಷೀಣಾಂಗಯುಷ್ಟಿಂ ಮನುಜಂ ಕರೋತಿ । ಕುಳೀರ ಸಂಸ್ಥೇ ಪರಿಸೂತಿಕಾಲೇ ದೃಷ್ಟಃ ಕಲಾರ್ವಾ ಕಿಲಮಂಗಲೇನ ॥೧೯॥ತಾ॥ ಜನನ ಕಾಲದಲ್ಲಿ ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದು ಮಂಗಳನಿಂದ ನೋಡಲ್ಪಟ್ಟರೆ ಆ ಪುರುಷನು, ಚತುರನು, ಶೂರನು, ತಾಯಿಯ ಸಂಗಡ ವಿರೋಧ ಪಡೆದು ಕೊಳ್ಳುವವನು, ದುರ್ಬಲವಾದ ಶರೀರ ಉಳ್ಳವನೂ ಆಗುತ್ತಾನೆ ॥೧೯॥

## ಕರ್ಕಸ್ಥೇ ಚಂದ್ರೇ ಬುಧದೃಷ್ಟಿಫಲಂ

ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು, ಕವಿಃ-ಕವಿತ್ವಮಾಡುವಂಥಾ ಶಕ್ತಿಯುಳ್ಳವನು ಆಗುತ್ತಾನೆ. ॥ಈ. ವಿ. ಶ್ಲೋಕ॥ಜಾ-ಭ॥ ದಾರಾರ್ಥ ಪುತ್ರೋನ್ನತಿ ನೀತಿ ಸೌಖ್ಯಂ. ಸೇನಾಪತಿಂವಾ ಸಚಿವಂ ಮನುಷ್ಯಮ್ । ಕರ್ಕಾಧಿರೂಢಃ ಕುರುತೇಹಿಮಾಂಶು ರ್ಹಿಮಾಂಶು ಪುತ್ರೇಣ ನಿರೀಕ್ಷ್ಯಮಾಣಃ ॥೨೦॥ ತಾ॥ ಜನ್ಮಕಾಲದಲ್ಲಿ ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟರೆ ಆ ಮನುಷ್ಯನು ಹೆಂಡತಿ, ಮಕ್ಕಳು, ದ್ರವ್ಯ ಇವುಗಳಲ್ಲಿ ಅತ್ಯುತ್ತಮವಾದ ಸೌಖ್ಯವನ್ನು ಹೊಂದುವನು ಮತ್ತು ಸರ್ವ ಸೇನಾಪತಿ ಯಾದರೂ ಅಥವಾ ರಾಜನ ಮಂತ್ರಿಯಾದರೂ ಆಗುವನು ॥೨೦॥

## ಕರ್ಕಸ್ಥೇ ಚಂದ್ರೇ ಗುರುದೃಷ್ಟಿಫಲಂ

ಕರ್ಕರಾಶಿಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು. ಜ್ಞಃ-ವಿದ್ವಾಂಸನಾಗುವನು ॥ ಈ.ವಿ.ಶ್ಲೋಕ॥ ಜಾ-ಭ॥ ನೃಪಾಧಿಕಾರಂ ಗುಣಿನಂ ನಯಜ್ಞಂ ಸುಖಾನ್ವಿತಂ ಚಾರುಪರಾಕ್ರಮಂಚ । ಕರೋತಿಜಾತಂ ಯದಿಚಕ್ರವರ್ತೀ ಪೀಯೂಷಮೂರ್ತಿ ರ್ಗುರುಣೇಕ್ಷ್ಯಮಾಣಃ ॥ ತಾ॥ ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು. ರಾಜಾಧಿಕಾರಿ, ಸುಗುಣವಂತ, ನೀತಿಶಾಸ್ತ್ರದಲ್ಲಿ ನಿಪುಣ, ಸುಖೀ ಮತ್ತು ಬಲಯುಕ್ತನಾಗಿದ್ದರೆ ಚಕ್ರವರ್ತಿಯಾಗುತ್ತಾನೆ ॥೨೧॥

## ಕರ್ಕಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಕರ್ಕರಾಶಿಯಲ್ಲಿ ಚಂದ್ರನಿದ್ದು ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಭೂಪತಿ-ರಾಜನಾಗುವನು. ॥ಈ ವಿ.ಶ್ಲೋಕ॥ ಜಾ.ಭ॥ ಸದ್ರತ್ನ ಚಾಮೀಕರ ರತ್ನಭೂಷಾ ವರಾಂಗನಾ ಸೌಖ್ಯಯುತಂ ನಿತಾಂತಮ್॥ ನರಂ ನಿಜಾಗಾರರತಃ ಕರೋತಿ ಸುಧಾಕರಃ ಶುಕ್ರನಿರೀಕ್ಷ್ಯಮಾಣಃ ॥೨೨॥ ತಾ॥ ಕರ್ಕಾಟಕ ರಾಶಿಯಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ಒಳ್ಳೆರತ್ನಗಳು, ಸುವರ್ಣ ರತ್ನದ ಆಭರಣಗಳು, ಶ್ರೇಷ್ಠವಾದ ವಂಶದಲ್ಲಿ ಹುಟ್ಟಿದ ಹೆಂಡತಿಯ ಸೌಖ್ಯ ಇವುಗಳನ್ನು ಹೊಂದುವನು ॥೨೨॥

## ಕರ್ಕಸ್ಥೇ ಚಂದ್ರೇ ಶನಿದೃಷ್ಟಿಫಲಂ

ಕರ್ಕರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಅಯೋಜೀವಿ-ಕಬ್ಬಿಣವನ್ನು, ಆ ಸಂಬಂಧವಾದ ವಸ್ತುಗಳನ್ನು ಮಾರಿ ಅಥವಾ ಕ್ರಯವಿಕ್ರಯದಿಂದ ಜೀವಿಸುವನು ॥ ಈ. ವಿ. ಶ್ಲೋಕ ॥ ಜಾ. ಭ॥ ಸತ್ಯೇನ ಹೀನಂ ಜನನೀ ವಿರುದ್ಧ ಸದಾಟನಂ ಪಾಪರತಂ ಗತಾರ್ಥಮ್ । ಕರೋತಿಜಾತಂ ನಿಜಗೇ ಹಗಾಮೀ ಚೇದ್ಯಾಮಿನೀ ಶೋರವಿಜೇನದೃಷ್ಟಃ ॥೨೩॥ ತಾ॥ ಚಂದ್ರನು ಕರ್ಕಾಟಕ ರಾಶಿಯಲ್ಲಿದ್ದು ಶನೈಶ್ಚರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನನ್ನು ಸತ್ಯಹೀನನನ್ನಾಗಿಯೂ, ತಾಯಿಗೆ ವಿರುದ್ಧಾದವನನ್ನಾಗಿಯೂ, ಸದಾ ಸಂಚಾರಶೀಲನನ್ನಾಗಿಯೂ, ಪಾಪಕರ್ಮಾಚರಣೆ ಮಾಡುವವನ್ನಾಗಿಯೂ, ದ್ರವ್ಯನಾಶ ಮಾಡಿಕೊಂಡವನನ್ನಾಗಿಯೂ ಮಾಡುತ್ತಾನೆ.

## ಕರ್ಕಸ್ಥೇ ಚಂದ್ರೇ ರವಿದೃಷ್ಟಿಫಲಂ

ಕರ್ಕಾಟಕರಾಶಿಯಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟಾಗ ಹುಟ್ಟಿದವನು, ದೃಗ್ರೋಗೀ-ನೇತ್ರರೋಗ ಉಳ್ಳವನಾಗುತ್ತಾನೆ. ॥ಈ.ವಿ. ಶ್ಲೋಕ॥ ಜಾ-ಭ॥ ನಿರರ್ಥಕ ಕ್ಲೇಶಕರಂ ವಿಕೀರ್ಣ್ಯೆ ನೃಪಾಶ್ರಯಂ ದುರ್ಗಕೃತಾಧಿಕಾರಮ್ । ಕುರ್ಯಾತ್ಕಲಾವಾನ್ ಪರಿಸೂತಿಕಾಲೆ ಕುಲೀರಸಂಸ್ಥೋ ನಲಿನೀಶದೃಷ್ಟಃ ॥೨೪॥ ಚಂದ್ರನು ಕರ್ಕರಾಶಿಯಲ್ಲಿದ್ದು ಸೂರ್ಯನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ನಿರರ್ಥಕವಾಗಿ ಕ್ಲೇಶಮಾಡುವವನು, ರಾಜಾಶ್ರಯವಿರುವವನು ಮತ್ತು ದುರ್ಗಾಧಿಕಾರ ಉಳ್ಳವನೂ ಆಗುತ್ತಾನೆ ॥೨೪॥

ಮೂಲ॥ ಜ್ಯೋತಿರ್ಜ್ಞಾಢ್ಯ ನರೇಂದ್ರನಾಪಿತ ನೃಪಕ್ಷ್ಮೇಶಾ ಬುಧಾದ್ಯೈರ್ಹರಾ।
ತದ್ವದ್ಭೂಪ ಚಮೂಪನೈಪುಣಯುತಾಃ ಷಷ್ಠೇ ಶುಭೈಸ್ತ್ರಾಶ್ರಯಃ॥
ಜೂಕೇಭೂಪ ಸುವರ್ಣಕಾರವಣಿಜಶ್ಶೇಷೇಕ್ಷಿತೇನೈಕೃತಿಃ । ಕೀಟೇ
ಯುಗ್ಮ ಪಿತಾನತಸ್ತ ರಜಕೋ ವ್ಯಂಗೋಧನೋ ಭೂಪತಿಃ ॥೨॥

ಅವತಾರಿಕೆ॥ ಈ ಶ್ಲೋಕದಿಂದ ಚಂದ್ರನು ಸಿಂಹ, ಕನ್ಯಾ, ತುಲಾ ವೃಶ್ಚಿಕ ರಾಶಿ ಯಲ್ಲಿದ್ದು ಕುಜಾದಿ ಗ್ರಹಗಳಿಂದ ನೋಡಲ್ಪಟ್ಟರೆ ಜಾತಕನಿಗೆ ಉಂಟಾಗುವ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಹರೌ-ಸಿಂಹರಾಶಿಯಲ್ಲಿದ್ದ ಚಂದ್ರನು, ಬುಧಾದ್ಯೈಃ-ಬುಧನೇ ಮೊದಲುಗೊಂಡು ಅಂಗಾರಕಾಂತವಾಗಿ ಕ್ರಮವಾಗಿ ಆರು ಗ್ರಹಗಳಿಂದ ನೋಡಲ್ಪ-ಡುವಾಗ ಹುಟ್ಟಿದ ಮನುಷ್ಯರು ಕ್ರಮವಾಗಿ ಜ್ಯೋತಿರ್ಜ್ಞಾಢ್ಯ ನರೇಂದ್ರನಾಪಿತ ನೃಪಕ್ಷ್ಮೇಶಾಃ-ಜ್ಯೋತಿಷ್ಯ ಶಾಸ್ತ್ರ ಪಾರಂಗತ, ಧನವಂತ, ನರಪತಿ, ಕ್ಷೌರೀಕ, ಧೊರೆ ಭೂಪತಿ ಈ ಪ್ರಕಾರ ಆಗುತ್ತಾರೆ. ಈ ವಿಷಯದಲ್ಲಿ ಧುಂಡಿರಾಜನೆಂಬ ಜ್ಯೋತಿಷಾಚಾರ್ಯರು ಕ್ರಮವಾಗಿ ಪ್ರತ್ಯೇಕವಾಗಿ ವಿಶೇಷ ಫಲ ಹೇಳಿರುತ್ತಾರೆ.

## ಸಿಂಹಸ್ಥೇ ಚಂದ್ರೇ ಬುಧದೃಷ್ಟಿಫಲಂ

ಸಿಂಹರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಜ್ಯೋತಿರ್ಜ್ಞ-ಜ್ಯೋತಿಷ ಶಾಸ್ತ್ರ ಗೋಳವಿದ್ಯೆಯನ್ನು ತಿಳಿದ ಪಂಡಿತನಾಗುವನು ॥ಈ.ವಿ.ಶ್ಲೋಕ॥ ಧನಾಂಗನಾ ವಾಹನನಂದನೇಭ್ಯಃ ಸುಖಪ್ರಪೂರಂ ಹಿನರಂ ಕರೋತಿ । ದ್ವಿಜಾಧಿರಾಜೋ ಮೃಗರಾಜಸಂಸ್ಥೋ ದ್ವಿಜಾಧಿ ರಾಜಾತ್ಮಜ ಸಂಪ್ರದೃಷ್ಟಃ ॥೨೫॥ ಚಂದ್ರನು ಸಿಂಹರಾಶಿಯಲ್ಲಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ದ್ರವ್ಯವಂತನಾಗಿಯೂ, ಪರಿಪೂರ್ಣ ಸುಗುಣವತಿಯಾದ ಪತ್ನೀ ಸುಖವುಳ್ಳವನಾಗಿಯೂ, ಯಾನವಾಹನಗಳ-ಯುಕ್ತನಾಗಿಯೂ, ಪುತ್ರ ಸಂಪತ್ತುಳ್ಳವನಾಗಿಯೂ ಆಗುವನು ॥೨೫॥

## ಸಿಂಹಸ್ಥೇ ಚಂದ್ರೇ ಗುರುದೃಷ್ಟಿಫಲಂ

ಸಿಂಹರಾಶಿಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು, ಅಢ್ಯ-ಧನವಂತನಾಗುವನು॥ ಈ. ವಿ. ಶ್ಲೋಕ॥ ಬಹುಶ್ರುತಂ ವಿಸ್ಕೃತ ಸಾಧುವೃತ್ತಂ ಕುರ್ಯಾನ್ನರಂ ಭೂಮಿಪತೇಃ ಪ್ರಧಾನಮ್ । ಚಂದ್ರೋ ಮೃಗೇಂದ್ರೋಪಗತೋಮರೇಂದ್ರೋಪಾಧ್ಯಾಯ ದೃಷ್ಟಃ ಪರಿಸೂತಿಕಾಲೆ ॥೨೬॥ ತಾ॥ ಜನ್ಮಕಾಲದಲ್ಲಿ ಸಿಂಹರಾಶಿಯಲ್ಲಿದ್ದ ಚಂದ್ರನು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಬಹು ಶ್ರುತ, ಸಾಧುತ್ವರಹಿತನೂ, ರಾಜನ ಮಂತ್ರಿಯೂ ಆಗುವನು ॥೨೬॥

## ಸಿಂಹಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಸಿಂಹರಾಶಿಯಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಜನ್ಮಿಸಿದವನು ನರೇಂದ್ರ-ರಾಜನಾಗುತ್ತಾನೆ. ಈ ವಿಷಯದಲ್ಲಿ ।।ಶ್ಲೋಕ।। ಸ್ತ್ರೀ ವೈಭವಂ ವೈಗುಣಿನಂ ಗುಣಜ್ಞಂ ಪ್ರಾಜ್ಞಂ ವಿಧಿಜ್ಞಂ ಕುರುತೇ ಮನುಷ್ಯಂ । ಪಿಯ್ಯೂಷರಶ್ಮಿರ್ಜನನೇ ಯದಿಸ್ಯಾತ್ಪಂಚಾನನಸ್ಥೋ ಭೃಗುಸೂನ ದೃಷ್ಟಃ ।। ಜನ್ಮಕಾಲದಲ್ಲಿ ಸಿಂಹದಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟರೆ ಆ ಪುರುಷನು ಸ್ತ್ರೀ ವೈಭವಯುಕ್ತನು, ದೊಡ್ಡ ಗುಣವಂತನು, ಸುಗುಣಜ್ಞನು, ಬುದ್ಧಿವಂತ ಮತ್ತು ಜ್ಯೋತಿಷ್ಯ ತಿಳಿದ ಪಂಡಿತನೂ ಸಹ ಆಗುತ್ತಾನೆ ।।೨೭।।

## ಸಿಂಹಸ್ಥೇ ಚಂದ್ರೇ ಶನಿದೃಷ್ಟಫಲಂ

ಸಿಂಹರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ನಾಪಿತ-ಕೌರಿಕನಾಗುವನು. ಈ ವಿಷಯದಲ್ಲಿ ।।ಶ್ಲೋಕ।। ಕಾಂತಾವಿಯುಕ್ತಃ ಕೃಷಿಕರ್ಮದಕ್ಷೋ ದುರ್ಗಾಧಿಕಾರೋಹಿ ನರೋಲ್ಪಕಾರ್‍ಯಃ । ಸಿಂಹೋಪಯಾತೆ ಸತಿಶೀತ ಭಾನೌ ನಿರೀಕ್ಷಿತೇ ಸೂರ್ಯಸುತೇನಸೂತೌ ।।೨೮।। ತಾ।। ಜನ್ಮ ಕಾಲದಲ್ಲಿ ಸಿಂಹರಾಶಿಯಲ್ಲಿದ್ದ ಚಂದ್ರನು ಶನಿಯಿಂದ ನೋಡಲ್ಪಟ್ಟರೆ ಆ ಪುರುಷನು ಭಾರ್ಯಾವಿಯೋಗ ಉಳ್ಳವನು, ಭೂ ವ್ಯವಸಾಯದಲ್ಲಿ ಚತುರನು, ಕೋಟೆಗೆ ಅಧಿಕಾರಿಯಾಗುವನು, ಅಲ್ಪ ಧನವಂತನೂ ಸಹ ಆಗುತ್ತಾನೆ ।।೨೮।।

## ಸಿಂಹಸ್ಥೇ ಚಂದ್ರೇ ರವಿದೃಷ್ಟಿಫಲಂ

ಸಿಂಹರಾಶಿಯಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು ನೃಪ-ಧೊರೆಯಾಗುವನು. ಈ ವಿಷಯಕ್ಕೆ ।।ಶ್ಲೋಕ।। ಗುಣಯುತಂ ಸತತಂ ನೃಪತಿಪ್ರಿಯಂ ವರಪದಂಚ ವಿಲಂಘಿತ ಸಂತತಿಂ । ಹರಿಗತೋ ವಿತನೋತಿ ನಿಶಾಕರಃ ಖರಕರ ಪ್ರವಿಲೋಕ ನಸಂಯುತಃ ।।ತಾ।। ಸಿಂಹರಾಶಿಯಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ಗುಣವಂತನು, ಸರ್ವಕಾಲದಲ್ಲೂ ರಾಜನಿಗೆ ಪ್ರೀತಿಯುಳ್ಳವನು, ಉತ್ತಮವಾದ ಪಾದಗಳುಳ್ಳವನೂ ಮತ್ತು ಸಂತತಹೀನನೂ ಆಗುತ್ತಾನೆ ।।೨೯।।

## ಸಿಂಹಸ್ಥೇ ಚಂದ್ರೇ ಕುಜದೃಷ್ಟಿಫಲಂ

ಸಿಂಹರಾಶಿಯಲ್ಲಿ ಚಂದ್ರನಿರುವಾಗ ಅಂಗಾರಕನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಕ್ಷ್ಮೇಶ-ಭೂಪತಿಯಾಗುವನು. ಈ ವಿಷಯಕ್ಕೆ ।।ಶ್ಲೋಕ।। ನರಪತೇ ಸಚಿವೋ ಧನವಾಹನಾತ್ಮಜ ಕಲತ್ರಸುಖೋಹಿ ಭವೇನ್ನರಃ । ಹರಿಣೆ ಲಕ್ಷ್ಮಣೆ

ಕೇಸರಿಣಿಸ್ಥಿತೇ ಕ್ಷಿತಿಸುತೇನಸನುಪ್ರವಿಲೋಕಿತೇ ॥ತಾ॥ ಸಿಂಹರಾಶಿಯಲ್ಲಿ ಚಂದ್ರನಿದ್ದು ಕುಜನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ರಾಜಮಂತ್ರಿಯೂ, ಧನ ಮತ್ತು ವಾಹನ ಉಳ್ಳವನು, ಪುತ್ರ, ಪತ್ನೀ ಇವರುಗಳ ಸುಖವೂ ಉಳ್ಳವನಾಗುತ್ತಾನೆ ॥೩೦॥

## ಕನ್ಯಾಸ್ಥೇ ಚಂದ್ರೇ ಬುಧಾದಿ ಗ್ರಹದೃಷ್ಟಯಃ

ಷಷ್ಠೇ-ಕನ್ಯಾರಾಶಿಯಲ್ಲಿದ್ದ ಚಂದ್ರನು ಬುಧಾದಿ ಷಡ್ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಭೂಪಚಮೂಪ ನೈಪುಣಯುತಾ (ಷಷ್ಠೇ)ಸ್ತ್ವಾಶ್ರಯಃ-ಭೂಪತಿ-ಸೇನಾಪತಿ, ನಿಪುಣತ್ವ ಉಳ್ಳವನು ಪಾಪಗ್ರಹಗಳಿಂದ ನೋಡಲ್ಪಟ್ಟರೆ ಸ್ತ್ರೀಯರಿಂದ ಸಹಾಯ ಪಡೆದು ಜೀವಿಸುವವನು ಆಗುತ್ತಾನೆ, ಅದು ಹೇಗೆಂದರೆ :-

## ಕನ್ಯಾರಾಶಿಸ್ಥೇ ಚಂದ್ರೇ ಬುಧದೃಷ್ಟಿಫಲಂ

ಕನ್ಯಾರಾಶಿಯಲ್ಲಿದ್ದ ಚಂದ್ರನು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಭೂಪಃ-ಪೃಥ್ವೀಪತಿಯಾಗುವನು ॥ಈ.ವಿ.ಶ್ಲೋ॥ ಜ್ಯೋತಿರ್ವಿದ್ಯಾ ಕಾವ್ಯ ಸಂಗೀತವಿದ್ಯಂ ಪ್ರಾಜ್ಞಯುದ್ಧೇ ಲಬ್ಧಕೀರ್ತಿಂ ವಿನೀತಂ । ಕುರ್ಯಾನ್ನೂನಂ ಮಾನವಂ ಮಾನವಂತಂ ಕನ್ಯಾಸ್ಥಶ್ಚೇದಿಂದುಜೇನ ಪ್ರದೃಷ್ಟಃ ॥ತಾ॥ ಕನ್ಯಾರಾಶಿಯಲ್ಲಿದ್ದು ಚಂದ್ರನು ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದವನು, ರಾಜನ ಕೋಶಾಧಿಕಾರಿ, ಸ್ತ್ರೀರಹಿತ, ಗುರುಭಕ್ತಿಯುಳ್ಳವನು, ಉತ್ತಮವಾದ ನಡವಳಿಕೆಯುಳ್ಳವನೂ ಆಗುತ್ತಾನೆ ॥೩೧॥

## ಕನ್ಯಾಸ್ಥೇ ಚಂದ್ರೇ ಗುರುದೃಷ್ಟಿಫಲಂ

ಕನ್ಯೆಯಲ್ಲಿ ಚಂದ್ರನಿರುವಾಗ ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು. ಚಮೂಪ-ಚಮೂ ಅಂದರೆ ಸೈನ್ಯ ವಿಶೇಷ (ವಾಹಿನೀ ಪೃತನಾಚಮೂಃ ಅಮರಃ ॥) ಈ ವಿ. ಶ್ಲೋಕ॥ ಭೂರಿ ಬಂಧು ಮವನೀಪತಿಪ್ರೀಯಂ ಚಾರುವೃತ್ತ ಶುಭಕೀರ್ತಿ ಸಂಯುತಂ । ಮಾನವಂಹಿ ಕುರುತೇಂ ಗನಾಶ್ರಿತಶ್ಚಂದ್ರಮಾಃ ಸುರಪುರೋಹಿತೇಕ್ಷಿತಃ ॥೩೨॥ತಾ॥ ಕನ್ಯಾರಾಶಿಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದ ಪುರುಷನು, ಬಹುಕುಟುಂಬೀ, ರಾಜಪ್ರಿಯ ಮತ್ತು ಉತ್ತಮವಾದ ಆಚರಣೆಯಿಂದ ಸತ್ಕೀರ್ತಿಯನ್ನು ಹೊಂದುವವನೂ ಆಗುತ್ತಾನೆ ॥೩೨॥

## ಕನ್ಯಾಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಕನ್ಯಾರಾಶಿಯಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದ ಪುರುಷನು ನೈಪುಣಯುತ-ನಾಗರೀಕತೆಯಿಂದ ಕೂಡಿದ ಕರ್ಮಗಳನ್ನು ಮಾಡುವನು

॥ಈ.ವಿ. ಶ್ಲೋಕ॥ ವಿಲಾಸಿನೀ ಕೇಲಿವಿಲಾಸಚಿತ್ತಂ ಕಾಂತಾಶ್ರಿತಂ ಭೂಪತಿ ಲಬ್ಧವಿತ್ತಂ । ಕುರ್ಯಾನ್ನರು ಶೀತಕರಃ ಕುಮಾರ್ಯಾಂ ಸಂಸ್ಥಃ ಸಿತೇನ ಪ್ರವಿಲೋಕಿತಶ್ಚ ॥೩೩॥ ಕನ್ಯಾರಾಶಿಯಲ್ಲಿದ್ದ ಚಂದ್ರನನ್ನು ಶುಕ್ರನು ನೋಡಿದ ಕಾಲದಲ್ಲಿ ಹುಟ್ಟಿದ ಪುರುಷನು. ಸುಂದರವಾದ ವಿಲಾಸಿನೀಯರಾದ ಸ್ತ್ರೀಯರಲ್ಲಿ ವಿಲಾಸವಾಡ ಬೇಕೆಂಬುವ ಬುದ್ಧಿಯುಳ್ಳವನು, ಸ್ತ್ರೀಯ ಅಧೀನವಾಗಿರುವವನು ಮತ್ತು ರಾಜ ಮೂಲಕದಿಂದ ದ್ರವ್ಯಪ್ರಾಪ್ತಿಯನ್ನು ಹೊಂದುವನು ॥೩೩॥

## ಕನ್ಯಾಸ್ಥೇ ಚಂದ್ರೇ ಶನಿದೃಷ್ಟಿಫಲಂ

ಕನ್ಯೆಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದ ಪುರುಷನು, ಸ್ತ್ರ್ಯಾಶ್ರಯಃ-ಸ್ತ್ರೀಯನ್ನಾಶ್ರಯಿಸಿ ಜೀವಿಸುವವನು, (ರವಿ ಕುಜರಿಗೂ ಈ ಫಲವೇ ಹೇಳತಕ್ಕದ್ದು) ಧುಂಡಿರಾಜರಾದರೆ ಪ್ರತ್ಯೇಕಫಲ ಹೇಳಿರುತ್ತಾರೆ. ॥ಶ್ಲೋಕ॥ ನಿಷ್ಕಿಂಚನಂ ಹೀನಮತಿಂ ನಿತಾಂತಂ ಸ್ತ್ರೀಸಂಶ್ರಯಾದಾಪ್ತಧನಂ ಜನನ್ಯಾ । ಹೀನಂ ಪ್ರಕುರ್ಯಾತ್ಖಲು ಕನ್ಯಕಾಯಾಂಗತೋ ಮೃಗಾಂಕೋರ್ಕ ಸುತೇನ ದೃಷ್ಟಃ ॥೩೪॥ ಕನ್ಯಾರಾಶಿಯಲ್ಲಿದ್ದ ಚಂದ್ರನನ್ನು ಶನಿಯು ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದವನು ದರಿದ್ರನು, ಬುದ್ಧಿಯಿಲ್ಲದವನು, ಸ್ತ್ರೀಮೂಲದಿಂದ ದ್ರವ್ಯವನ್ನು ಸಂಪಾದಿಸುವವನು, ತಾಯಿಯಿಲ್ಲದವನು ಆಗುತ್ತಾನೆ ॥೩೪॥

## ಕನ್ಯಾಸ್ಥೇ ಚಂದ್ರೇ ರವಿದೃಷ್ಟಿಫಲಂ

ಕನ್ಯಾರಾಶಿಯಲ್ಲಿ ಚಂದ್ರನಿದ್ದು ರವಿಯಿಂದ ನೋಡಿದ ಕಾಲದಲ್ಲಿ ಹುಟ್ಟಿದವನು ಸ್ತ್ರ್ಯಾಶ್ರಯಃ-ಸ್ತ್ರೀಯರಿಂದ ದ್ರವ್ಯವನ್ನು ಅರ್ಜಿಸುವವನು ॥ ಈ.ವಿ.ಶ್ಲೋಕ॥ ಭೂಮೀಶ ಕೋಶಾಧಿಕೃತಂ ಸುವೃತ್ತಂ ಭಾರ್ಯಾವಿಮುಕ್ತಂ ಗುರುಭಕ್ತಿಯುಕ್ತಂ । ಜಾತಂಚಕನ್ಯಾ ಶ್ರಿತಶೀತರಶ್ಮಿ ಸ್ತನೋತಿಜಂತುಂ ಖರರಶ್ಮಿದೃಷ್ಟಃ ॥ತಾ॥ ಜನ್ಮ ಕಾಲದಲ್ಲಿ ಕನ್ಯಾರಾಶಿಗತನಾದ ಚಂದ್ರನು ಸೂರ್ಯನಿಂದ ನೋಡಲ್ಪಟ್ಟರೆ, ರಾಜನ ದ್ರವ್ಯಾಧಿಕಾರಿ, ಸ್ತ್ರೀರಹಿತ, ಗುರುಭಕ್ತಿಯುಳ್ಳವ ಮತ್ತು ಉತ್ತಮವಾದ ಆಚರಣೆ ಯುಳ್ಳವನೂ ಆಗುತ್ತಾನೆ ॥೩೫॥

## ಕನ್ಯಾಸ್ಥೇ ಚಂದ್ರೇ ಕುಜದೃಷ್ಟಿಫಲಂ

ಶ್ಲೋಕ॥ ಹಿಂಸಾಪರಂ ಶೂರತರಂ ಸಕೋಪಂ ನೃಪಾಶ್ರಿತಂ ಲಬ್ಧಜಯಂ ರಣಾದೌ । ಕುಮಾರಿಕಾ ಸಂಶ್ರಿತ ಶೀತಭಾನುಃ ಭೂಸೂನು ದೃಷ್ಟೋ ಮನುಜಂ ಕರೋತಿ ॥೩೬॥ತಾ॥ ಕನ್ಯಾರಾಶಿಯಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಹಿಂಸೆ ಮಾಡುವವನು, ಶೂರನು, ಕೋಪವುಳ್ಳವನು,

ರಾಜಾಶ್ರಯ ಮಾಡುವವನು. ಯುದ್ಧ ಮಾಡುವುದರಲ್ಲಿ ವಿಜಯವುಳ್ಳವನು ಆಗುತ್ತಾನೆ॥

## ತುಲಾರಾಶಿಸ್ಥೇ ಚಂದ್ರೇ ಗ್ರಹದೃಷ್ಟಿಫಲಂ

ಜೂಕೇ ಭೂಪ ಸುವರ್ಣಕಾರ ವಣಿಜಃ ಶೇಷೇಕ್ಷಿ ತೇನ್ಯೆ ಕೃತೀ-ತುಲಾರಾಶಿ ಯಲ್ಲಿ ಚಂದ್ರನಿದ್ದು ಬುಧ, ಗುರು, ಶುಕ್ರ, ಶನಿ, ರವಿ, ಕುಜರಿಂದ ನೋಡಲ್ಪಟ್ಟರೆ ಕ್ರಮವಾಗಿ ರಾಜ, ಸುವರ್ಣಕಾರ, ವ್ಯಾಪಾರಿ, ಪರಕಾರ್ಯ ವಿಮುಖನೂ ಆಗುವನು॥ ಅದು ಹೇಗೆಂದರೆ-

## ತುಲಾಸ್ಥೇ ಚಂದ್ರೇ ಬುಧದೃಷ್ಟಿಫಲಂ

ತುಲಾರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿ ದವನು ಭೂಪಃ-ರಾಜನಾಗುವನು, ॥ಈ.ವಿ.ಶ್ಲೋಕ॥ ಕಲಾವಿಧಿಜ್ಞಂ ಧನದಾನ್ಯ ಯುಕ್ತಂ ವಕ್ತೃತ್ವ ವಿದ್ಯಾವಿಭವೈಸ್ಸಮೇತಮ್ । ಕುರಾನ್ನರಂ ಶೀತಕರಸ್ತುಲಾಸ್ಥಃ ಪ್ರಸೂತಿಕಾಲೆ ಶಶಿಜೇನದೃಷ್ಟಃ ॥ತಾ॥ ತುಲಾರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಕಲಾಶಾಸ್ತ್ರ ತಿಳಿದವನು, ಧನಧಾನ್ಯಯುಕ್ತ ವಾಚಾಳಿ, ವಿದ್ಯಾವೈಭವಯುಕ್ತನೂ ಆಗುತ್ತಾನೆ ॥೩೭॥

## ತುಲಾಸ್ಥೇ ಚಂದ್ರೇ ಗುರುದೃಷ್ಟಿಫಲಂ

ತುಲಾರಾಶಿಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ, ಜಾತಕನು ಸುವರ್ಣಕಾರ-ಸುವರ್ಣ ವ್ಯಾಪಾರ ಮಾಡುವವನು ಆಗುತ್ತಾನೆ ॥ಈ.ವಿ.ಶ್ಲೋಕ॥ ವಿಚಕ್ಷಣೋ ವಸ್ತ್ರ ವಿಭೂಷಣೇಷು ಕ್ರಯೇಥವಾ ವಿಕ್ರಯತಾ ವಿಧಾನೆ । ತುಲಾಧರೇ ಶೀತಕರೇ ನರಃಸ್ಯಾದ್ದೃಷ್ಟೇಶನಾಸೀರ ಪುರೋಹಿತೇನ ॥೩೮॥ ತುಲೆಯಲ್ಲಿ ಚಂದ್ರನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು ವಸ್ತ್ರ ವಿಭೂಷಣಾದಿಗಳಲ್ಲಿ ವಿಚಕ್ಷಣೆ ತಿಳಿದವನಾಗುತ್ತಾನೆ. ಅಂದರೆ ಚಂದ್ರ ಬಲಿಷ್ಠನಾಗಿ ಗುರುವಿನಿಂದ ನೋಡಿದರೆ ಸುವರ್ಣ ವ್ಯಾಪಾರ, ಸುರ್ವಣಕಾರಾದಿ ಫಲಗಳು ಪ್ರಬಲವಾಗಿರುತ್ತವೆ ॥೩೮॥

## ತುಲಾಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ತುಲೆಯಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ವಣಿಜಃ-ವ್ಯಾಪಾರದಲ್ಲಿ ಶ್ರೇಷ್ಠನಾದವನಾಗುತ್ತಾನೆ. ॥ಈ.ವಿ.ಶ್ಲೋಕ॥ ಪ್ರಾಜ್ಞಸ್ತನೇಕೋ ದ್ಯಮಸಾಧಿತಾರ್ಥ ಸ್ಸ್ವಾತ್ವಾರ್ಥಿವಾನಾಂ ಕೃಪಯಾ ಸಮೇತಃ । ಹೃಷ್ಟೋನರಃ ಪ್ರೀತಕಲೇಬರಶ್ಚ ಜೂಕೆ ಮೃಗಾಂಕೆ ಭೃಗುಜೇನದೃಷ್ಟೇ ॥೩೯॥ ತುಲೆಯಲ್ಲಿ

ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಜ್ಞಾನ ಉಳ್ಳವನಾಗಿ ಅನೇಕ ಕಾರ್ಯಗಳನ್ನು ಮಾಡುವುದರಲ್ಲಿ ಸಾಧಿತಾರ್ಥ ಉಳ್ಳವನಾಗಿಯೂ, ರಾಜಕೃಪೆಯುಳ್ಳವನೂ, ಸುಕುಮಾರವಾದ ಶರೀರಉಳ್ಳವನೂ, ಸಂತೋಷಚಿತ್ತ ವುಳ್ಳವನೂ ಆಗುತ್ತಾನೆ ॥೩೯॥

## ತುಲಾಸ್ಥೇ ಚಂದ್ರೇ ಶನಿದೃಷ್ಟಿಫಲಂ

ತುಲಾದಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿ ದವನು, ಪರಕಾರ್ಯ ವಿಮುಖನಾಗುವನು. ಈ ಫಲ ಕುಜ ರವಿಗಳು ನೋಡಿ ದರೂ ಆಗುತ್ತದೆಂದು ವಕ್ಷ್ಯಮಾಣ ಶ್ಲೋಕದಲ್ಲಿ ಹೇಳಿರುತ್ತೆ. ಆದರೆ ಈ ಅಭಿಪ್ರಾಯಕ್ಕೆ ಪ್ರತಿಯಾಗಿ ಧುಂಡಿರಾಜರು ಪ್ರತ್ಯೇಕ ಪ್ರತ್ಯೇಕ ಫಲ ಹೇಳಿರುತ್ತಾರೆ. ಆದರೆ ಅದನ್ನು ಇಲ್ಲಿ ಉದಾಹರಿಸಿ ಇರುತ್ತೆ. ॥ಶ್ಲೋಕ॥ ಧುಂಡಿರಾಜಃ ॥ ಧನೈಶ್ಚ ಧಾನ್ಯೈರ್ವರ ವಾಹನೈಶ್ಚಯುತೋ ವಿಹೀನೋ ವಿಷಯೋಪಭೋಗ್ಯೈಃ । ಭವೇನ್ನರಸ್ತೌಲಿನಿ ಜನ್ಮಕಾಲೇ ಕಲಾನಿಧೌ ಭಾನುತನೂಜದೃಷ್ಟೇ ॥೪೦॥ ತುಲೆಯಲ್ಲಿ ಚಂದ್ರನಿದ್ದು ಶನಿದೃಷ್ಟಿಯಿದ್ದ ಕಾಲದಲ್ಲಿ ಹುಟ್ಟಿದರೆ ಆ ಮನುಷ್ಯನು ಧನಧಾನ್ಯ ಉತ್ತಮವಾದ ವಾಹನ ಸಾಮಗ್ರಿಗಳಿಂದ ಯುಕ್ತನಾಗುತ್ತಾನೆ ॥೪೦॥

## ತುಲಾಸ್ಥೇ ಚಂದ್ರೇ ರವಿದೃಷ್ಟಿಫಲಂ

ಶ್ಲೋಕ॥ ಸದಾಟನ ಸೌಖ್ಯಧನೈ ರ್ವಿಹೀನಃ ಸದಂಗನಾ ಸೂನು ಜನೈರ್ವಿ- ಹೀನಃ । ಮಿತ್ರೈರವಿತ್ರೈಶ್ಚ ನರೋತಿತಪ್ತಸ್ತುಲಾಧರೆ ಶೀತಕರೇರ್ಕದೃಷ್ಟೇ ॥ತಾ॥ ತುಲೆಯಲ್ಲಿ ಚಂದ್ರನಿರುವಾಗ ರವಿದೃಷ್ಟಿಯಿರುವ ಕಾಲದಲ್ಲಿ ಹುಟ್ಟಿದವನು ಸದಾ ಸಂಚಾರಿಯಾಗಿಯೂ, ಧನವೂ ಸೌಖ್ಯವೂ ಇಲ್ಲದವನಾಗಿಯೂ, ಸನ್ಮಾರ್ಗಿಗಳಾದ ಹೆಂಡತಿ ಮಕ್ಕಳು ಆಪ್ತಜನರು ಇಲ್ಲದವನಾಗಿಯೂ ಆಗುತ್ತಾನೆ. ಏತಕ್ಕೆಂದರೆ, ಶುಕ್ರಕ್ಷೇತ್ರವಾದರೂ ಸೂರ್ಯನು ನೀಚರಾಶಿಯಾದ್ದರಿಂದ ಅನಿಷ್ಟಫಲಗಳು ಪ್ರಾಪ್ತಿ ಯಾಗುತ್ತವೆ. ನೀಚಧ್ರುವವನ್ನು ಬಿಟ್ಟು ಉಳಿದ ೨೦ ಭಾಗಗಳಲ್ಲಿ ಚಂದ್ರನಿದ್ದರೆ ಫಲತಾರತಮ್ಯದಿಂದ ಹೇಳತಕ್ಕದ್ದು ॥೪೧॥

## ತುಲಾಸ್ಥೇ ಚಂದ್ರೇ ಕುಜದೃಷ್ಟಿಫಲಂ

ಶ್ಲೋಕ॥ ಬುಧ್ಯಾಪರಾರ್ಥಾಕರಣೈಕ ಚಿತ್ತಂ ಮಾಯಾ ಸಮೇತಂ ವಿಷಯಾಭಿ ತಪ್ತಮ್ । ಕರೋತಿಜಾತಂಹಿ ತುಲಾಗತೇಂದು ರ್ನಿರೀಕ್ಷ್ಯಮಾಣೋ ಧರಣೀ ಸುತೇನ ॥೪೨॥ತಾ॥ ತುಲೆಯಲ್ಲಿ ಚಂದ್ರನಿದ್ದು ಕುಜನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ತನ್ನ ಬುದ್ಧಿಪೂರ್ವಕವಾಗಿ ಅನ್ಯರಿಗೆ ಉಪಕಾರ ಮಾಡುವನು

ಮತ್ತು ಛಲಗಾರ, ವಿಷಯೋಪಭೋಗಗಳಲ್ಲಿ ಸಂಕಟ ಪಡತಕ್ಕವನೂ ಆಗುತ್ತಾನೆ ।।೪೨।।

## ವೃಶ್ಚಿಕಸ್ಥೇ ಚಂದ್ರೇ ಗ್ರಹದೃಷ್ಟಿಫಲಂ

ವೃಶ್ಚಿಕದಲ್ಲಿ ಚಂದ್ರನಿದ್ದು ಬುಧಾದಿ ೬ ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ, ಕೀಟೆಯುಗ್ಮಪಿತಾ* ನತಶ್ಚ ರಜಕೋ ವ್ಯಂಗೋಧನೋ ಭೂಪತಿಃ-ಅವಳಿ ಮಕ್ಕಳಿಗೆ ತಂದೆಯಾಗುವನು, ನಮ್ರಗುಣ ಉಳ್ಳವನು, ಅಗಸ ಅಥವಾ ಬಟ್ಟೆಯನ್ನು ಮಡಿಮಾಡುವ ಪರಿಚಾರಕನಾಗುವನು, ಅಂಗಹೀನನು, ದರಿದ್ರನಾಗುವನು, ಭೂಪತಿಯಾಗುವನೆಂದು ಆರು ಗ್ರಹಗಳಿಗೆ ಪ್ರತ್ಯೇಕ ತಿಳಿಯಬೇಕು ।।೪೨।।

## ವೃಶ್ಚಿಕಸ್ಥೇ ಚಂದ್ರೇ ಬುಧದೃಷ್ಟಿಫಲಂ

ವೃಶ್ಚಿಕರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು ಯುಗ್ಮಪಿತಃ-ಅವಳಿ ಮಕ್ಕಳುಳ್ಳವನಾಗುವನು. ಈ ವಿಷಯಕ್ಕೆ ।।ಶ್ಲೋಕ।। ಜಾ-ಭ।। ವಾಗ್ವಿಲಾಸ ಕುಶಲೋರಣ ಶೀಲೋಗೀತ ನೃತ್ಯನಿರತಶ್ಚ ನಿತಾಂತಂ । ಕೂಟಕರ್ಮಿಣೆ ನರೋನಿಪುಣಃ ಸ್ಯಾದ್ವೃಶ್ಚಿಕೆ ಶಶಿನಿ ಚಂದ್ರಜದೃಷ್ಟೇ ।।೪೩।। ವೃಶ್ಚಿಕ ರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಮಾತನಾಡುವುದರಲ್ಲಿ ಕುಶಲತ್ವ ಉಳ್ಳವನು, ಯುದ್ಧದಲ್ಲಿ ಸಮರ್ಥನು ಸಂಗೀತ ಮತ್ತು ನಾಟ್ಯಗಳಲ್ಲಿ ಅಭಿರುಚಿಯುಳ್ಳವನು, ಯಾವಾಗಲೂ ಕಪಟ ಕಾರ್ಯಗಳನ್ನು ಮಾಡುವವನು ಆಗುತ್ತಾನೆ ।।೪೩।।

## ವೃಶ್ಚಿಕಸ್ಥೇ ಚಂದ್ರೇ ಗುರುದೃಷ್ಟಿಫಲಂ

ವೃಶ್ಚಿಕದಲ್ಲಿ ಚಂದ್ರನಿದ್ದು ಗುರುವೀಕ್ಷಿತನಾದ ಕಾಲದಲ್ಲಿ ಹುಟ್ಟಿದವನು ನತಃ-ನಮ್ರತೆಯುಳ್ಳವನಾಗುವನು. ಈ ವಿಷಯಕ್ಕೆ ।।ಶ್ಲೋಕ।।ಜಾ-ಭ।। ಲೋಕಾನುರೂಪಃ ಸುತರಾಂ ಸುರೂಪಃ ಸತ್ಕರ್ಮ ಕೃದ್ವಿತ್ತವಿಭೂಷಣಾಢ್ಯಃ । ಸ್ಯಾನ್ಮಾನ್ಯವೊ ಜನ್ಮನಿಶೀತರಶ್ಮೌ ಸಂಸ್ಥೇಳಿನೀಜ್ಯೇನ ನಿರೀಕ್ಷ್ಯಮಾಣೆ ।।೪೪।। ವೃಶ್ಚಿಕದಲ್ಲಿದ್ದ ಚಂದ್ರನು ಗುರುವೀಕ್ಷಿತನಾದ ಕಾಲದಲ್ಲಿ ಹುಟ್ಟಿದ ಪುರುಷನು, ಲೋಕವಾಡಿಕೆಗೆ ಸರಿಯಾಗಿ ಕಾಲಕಾಲಕ್ಕೆ ತಕ್ಕ ಹಾಗೆ ನಡೆದುಕೊಳ್ಳತಕ್ಕವನು, ಸುಂದರವಾದ ಸ್ವರೂಪ ಉಳ್ಳವನು, ಸತ್ಕಾರ್ಯಗಳನ್ನು ಮಾಡುವವನು, ದ್ರವ್ಯವೂ ಭೂಷಣಗಳೂ ಉಳ್ಳವನಾಗುತ್ತಾನೆ ।।೪೪।।

---

* ಯುಗ್ಮಪಿತಾ ಎಂಬುವುದಕ್ಕೆ ಎರಡು ತಂದೆಗಳುಳ್ಳವನೆಂದು ಅರ್ಥಮಾಡಿ ಕೊಳ್ಳುತ್ತಾರೆ. ಜನಕ ತಂದೆ, ಸ್ವೀಕೃತ ತಂದೆ ಈ ಪ್ರಕಾರ ಅನ್ವಯಿಸಿಕೊಳ್ಳತಕ್ಕದ್ದು.

## ವೃಶ್ಚಿಕಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ವೃಶ್ಚಿಕರಾಶಿಯಲ್ಲಿ ಚಂದ್ರನು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ರಜಕಃ-ಅಗಸನಾಗುತ್ತಾನೆ. ಈ ವಿಷಯದಲ್ಲಿ ||ಶ್ಲೋಕ|| ಪ್ರಸನ್ನಮೂರ್ತಿಸ್ಸಮುದಾರ ಕೀರ್ತಿಃ ಕೂಟಕ್ರಿಯಾಜ್ಞೋ ಧನವಾಹನಾಢ್ಯಃ । ಕಾಂತಾಹತಾರ್ಥಃ ಪುರುಷೋಳಿ ಯಾತೆ ಶೀತದ್ಯುತೌ ದೈತ್ಯಗುರು ಪ್ರದೃಷ್ಟೇ ||೪೫|| ವೃಶ್ಚಿಕರಾಶಿಯಲ್ಲಿ ಚಂದ್ರನು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಮನುಷ್ಯನು ಪ್ರಸನ್ನಮೂರ್ತಿ, ದೊಡ್ಡ ಯಶಸ್ವಿಯಾದವನು. ಕಪಟಕರ್ಮ ತಿಳಿದವನು, ಧನ ಮತ್ತು ವಾಹನ ಇವುಗಳಿಂದ ಪರಿಪೂರ್ಣನಾದವನು. ಸ್ತ್ರೀ ಮೂಲವಾಗಿ ದ್ರವ್ಯ ಕಳೆದುಕೊಳ್ಳುವವನು ಆಗುತ್ತಾನೆ ||೪೫||

## ವೃಶ್ಚಿಕಸ್ಥೇ ಚಂದ್ರೇ ಶನಿದೃಷ್ಟಿಫಲಂ

ವೃಶ್ಚಿಕದಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ವ್ಯಂಗಃ-ಅಂಗಹೀನನಾಗುತ್ತಾನೆ. ಈ ವಿಷಯದಲ್ಲಿ ||ಶ್ಲೋಕ|| ಸ್ಥಾನಭ್ರಂಶಂ ದೈನ್ಯನಾಶಾಲ್ಪವಿತ್ತಂ ನೀಚಾಪತ್ಯಾ ಸತ್ವಯಕ್ಷ್ಮಪ್ರಕೋಪಮ್ । ಕುರ್ಯಾಚ್ಚಂದ್ರ, ಸ್ತೂತಿಕಾಲೇಳಿ ಸಂಸ್ಥೋ ಛಾಯಾಪುತ್ರಪ್ರೇಕ್ಷಣಂ ಸಂಪ್ರಯಾತಃ ||೪೬||ತಾ|| ವೃಶ್ಚಿಕರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು, ತಾನು ಹುಟ್ಟಿದ ದೇಶವನ್ನು ಬಿಟ್ಟು ಪರದೇಶದಲ್ಲಿ ವಾಸಮಾಡುವುದರಿಂದ ಸ್ಥಾನಭ್ರಷ್ಟತ್ವ ಹೊಂದುವವನು. ದೈನ್ಯಸ್ವಭಾವವಿಲ್ಲದವನು, ಅಲ್ಪ ದ್ರವ್ಯಉಳ್ಳವನು. ನೀಚರಾದಂಥ ಮಕ್ಕಳುಗಳುಳ್ಳವನು, ಅಲ್ಪವಾದ ಪರಾಕ್ರಮ ಉಳ್ಳವನು ಮತ್ತು ಕ್ಷಯರೋಗ ಪೀಡಿತನೂ ಆಗುತ್ತಾನೆ ||೪೬||

## ವೃಶ್ಚಿಕಸ್ಥೇ ಚಂದ್ರೇ ರವಿದೃಷ್ಟಿಫಲಂ

ವೃಶ್ಚಿಕರಾಶಿಯಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಅಧನಃ-ದರಿದ್ರನಾಗುವನು. ಈ ವಿಷಯದಲ್ಲಿ ||ಶ್ಲೋಕ|| ಸದ್ವೃತ್ತ-ಹೀನಂ ಧನಿನಂ ಜನಾನಾಂ ಮಸಹ್ಯ ಮತ್ಯಂತ ಕೃತಪ್ರಯಾಸಂ । ಬಲಾಧಿವಾಸಂ ಮನುಜಂ ಪ್ರಕುರ್ಯಾತ್ತಾರಾಧಿಪಃ ಕೌರ್ಪಗತೋರ್ಕದೃಷ್ಟಃ ||೪೭||ತಾ|| ಜನ್ಮಕಾಲದಲ್ಲಿ ವೃಶ್ಚಿಕದಲ್ಲಿ ಚಂದ್ರನಿದ್ದು ರವಿಯಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು ಸನ್ಮಾರ್ಗವನ್ನು ಬಿಟ್ಟವನು, ದ್ರವ್ಯವಂತನು ಪರರಿಗೆ ಸಂಕಟ ಕೊಡುವವನು, ಅತ್ಯಂತ ಪ್ರಯಾಸ ಪಡತಕ್ಕವನು ಮತ್ತು ಬಲಿಷ್ಠನೂ ಆಗುತ್ತಾನೆ ||೪೭||

## ವೃಶ್ಚಿಕಸ್ಥೇ ಚಂದ್ರೇ ಕುಜದೃಷ್ಟಿಫಲಂ

ವೃಶ್ಚಿಕರಾಶಿಯಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಭೂಪತಿಃ-ಭೂಮಿಯನ್ನು ಪಾಲಿಸತಕ್ಕ ದೊರೆಯಾಗುವನು. ॥ಈ.ವಿ.ಶ್ಲೋ॥ ರಣಾಂಗಣಾ ಪಾಪ್ತಯಶೋ ವಿಶೇಷೋ ಗಭೀರತಾ ಗೌರವ ಸಂಯುತಶ್ಚ । ಭೂಪಾನು ಕಂಪಾಸಮುಪಾತ್ತ ವಿತೋ ಸರೋಳಿನೀಂದಾೌಕ್ಷಿತಿಜೇಸದೃಷ್ಟೇ ॥ತಾ॥ ವೃಶ್ಚಿಕದಲ್ಲಿ ಚಂದ್ರನಿದ್ದು ಕುಜವೀಕ್ಷಣೆ ಇರುವಾಗ ಹುಟ್ಟಿದವನು ಯುದ್ಧದಲ್ಲಿ ಯಶಸ್ಸನ್ನು ಸಂಪಾದಿಸುವನು, ಗಾಂಭೀರ್ಯವುಳ್ಳವನು. ಗೌರವಯುಕ್ತ, ರಾಜಾನುಗ್ರಹದಿಂದ ದ್ರವ್ಯ ಸಂಪಾದನೆ ಮಾಡತಕ್ಕವನು ಆಗುತ್ತಾನೆ ॥೪೮॥೩॥

ಮೂಲ॥ ಜ್ಞಾತ್ಯುರ್ವೀಶ ಜನಾಶ್ರಯಾಶ್ಚತುರಗೆ ಪಾಪೈ ಸ್ಸದಂಭಶ್ಶಠ ।
ಶ್ಯಾತ್ಯುರ್ವೀಶನರೇಂದ್ರ ಪಂಡಿತ ಧನಿದ್ರವ್ಯೋ ನಭೂಪಾಮ್ಯಲಗೇ ॥
ಭೂಪೋ ಭೂಪನಮೋನ್ಯ ದಾರಿನಿರತ ಶ್ಯೇಷೈಶ್ಚ ಕುಂಬಸ್ಥಿತೇ ।
ಹಾಸ್ಯಜ್ಞೋ ನೃಪತಿ ರ್ಬುಧಶ್ಶರ್ಝುಷಗೇ ಪಾಪಶ್ಚಪಾಪೇಕ್ಷಿತೇ ॥೩॥

ಅವತಾರಿಕೆ-ಜನ್ಮಕಾಲದ ಲಗ್ನವಾಗಲೀ, ಚಂದ್ರನಾಗಲೀ ಧನುಸ್ಸು, ಮಕರ, ಕುಂಭ, ಮೀನ ಈ ೪ ರಾಶಿಗಳಾದರೆ ಆ ಕಾಲದಲ್ಲಿ ಆರು ಗ್ರಹಗಳಿಂದ ನೋಡಲ್ಪಟ್ಟರೆ ಜಾತಕನ ಫಲ ಹೇಳಲ್ಪಡುತ್ತೆ.

## ಧನುಸ್ಸಿನಲ್ಲಿನ ಚಂದ್ರನಿಗೆ ಕುಜಾದಿ ಗ್ರಹದೃಷ್ಟಿಫಲಂ

ಟೀಕು॥ ತುಂಗೆ-ಧನುರಾಶಿಯಲ್ಲಿ ಲಗ್ನವಾದರೂ ಅಥವಾ ಚಂದ್ರನಿದ್ದಾದರೂ ಆಗಿ, *ಜ್ಞಾತ್ಯುರ್ವೀಶ ಜನಾಶ್ರಯಶ್ಚ-ಜ್ಞಾತೀಶ-ಸ್ವಜನರಿಗೆಲ್ಲಾ ಯಜಮಾನನಾಗುವನು. ಉರ್ವೀಶ-ಭೂಪತಿಯಾಗುವನು, ಜನಾಶ್ರಯಾಶ್ಚ-ಜನಗಳಿಗೆ ಆಶ್ರಯಕೊಟ್ಟು ಸಂರಕ್ಷಿಸುವನು, ಪಾಪೈಃ ಸದಂಭಶ್ಶಠಃ-ಪಾಪಗ್ರಹಗಳಾದ ರವಿ ಕುಜ ಶನಿಗಳಿಂದ ನೋಡಲ್ಪಟ್ಟರೆ ಡಂಭವುಳ್ಳವನು, (ಹೆರರ ಮೆಚ್ಚಿಕೆಗೆ ಆಚಾರ ದಾನಾದಿಗಳನ್ನು ಮಾಡುವವನು) ಏವಂಚ ಪರರು ತಾನು ಸಜ್ಜನನೆಂದು ತಿಳಿದುಕೊಳ್ಳಬೇಕೆಂದು ಯಾವ ಕಾರ್ಯವನ್ನು ಮಾಡಿದರೂ ಡಂಭವಾಗುವುದು, ಶಠಃ-ಶಠಲಕ್ಷಣ ಹಿಂದೆಯೇ ಹೇಳಿರುತ್ತೆ.

## ಧನುರಾಶಿಸ್ಥೇ ಚಂದ್ರೇ ಬುಧದೃಷ್ಟಿಫಲಂ

ಧನುರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟರೆ, ಜ್ಞಾತೀಶ-ಸ್ವಜನರಿಗೆಲ್ಲಾ ಭರ್ತನಾಗುವನು. ॥ಈ.ವಿ.ಶ್ಲೋಕ॥ಧುಂಡಿರಾಜಃ॥ ಸದ್ವಾ-ಗ್ವಾಲಾಸಂ

* ಜ್ಞಾತ್ಯುರ್ವೀಶ-ಈಶ ಶಬ್ದ ? ಪ್ರತ್ಯೇಕಂ ಸಂಭಧ್ಯತೆ ಯಥಾ ಉರ್ವೀಶಃ ಜ್ಞಾತೀಶಃ ಇತ್ಯಾದಿ.

ಬಹುಭೃತ್ಯಯುಕ್ತಂ ಕುರ್ಯಾನ್ನರಂ ಜ್ಯೋತಿಷ ಶಿಲ್ಪವಿದ್ಯಂ । ತುರಂಗ ಜಂಘೇಹಿ ಕುರಂಗ ಜನ್ನಾಕುರಂಗ ಲಕ್ಷ ಪ್ರವೇನದೃಷ್ಟಃ ॥೪೯॥ ತಾ॥ ಧನುಸ್ಸಿನಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಒಳ್ಳೇ ವಾಗ್ವಿಲಾಸ ಉಳ್ಳವನು. ಅನೇಕ ಸೇವಕರುಳ್ಳವನು, ಜ್ಯೋತಿಷ್ಯ ತಿಳಿದವನು ಮತ್ತು ಶಿಲ್ಪಶಾಸ್ತ್ರ ತಿಳಿದವನೂ ಆಗುವನು ॥೪೯॥

## ಧನುಸ್ಥೇ ಚಂದ್ರೇ ಗುರುದೃಷ್ಟಿಫಲಂ

ಧನುಸ್ಸಿನಲ್ಲಿ ಚಂದ್ರನಿದ್ದು ಗುರುವಿನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು, ಊರ್ವೀಶ-ಮಹೀಪತಿಯಾಗುವನು ॥ಈ.ವಿ.ಶ್ಲೋ॥ ಮಹತ್ವದಸ್ಥೋ ಧನವಾರ್ ಸುವೃತ್ತೋ ಭವೇನ್ನರಶ್ಚಾರು ಶರೀರಯುಷ್ಟಿಃ । ಧನುರ್ಧರೇ ಶೀತಕರೇ ಪ್ರಯಾತೇ ನಿರೀಕ್ಷಿತೋ ಶುಕ್ರಪುರೋಹಿತೇನ ॥ತಾ॥ ಧನುಸ್ಸಿನಲ್ಲಿ ಚಂದ್ರನಿದ್ದು ಗುರು ವೀಕ್ಷಣೆ ಇರುವ ಕಾಲದಲ್ಲಿ ಹುಟ್ಟಿದವನು. ಮಹತ್ವದಸ್ಥ-ರಾಜಪದುವಿಯನ್ನು ಹೊಂದುವನು ಮತ್ತು ಸಚ್ಚರಿತ್ರೆ ನಡೆಯುಳ್ಳವನು ಮತ್ತು ಸುಂದರವಾದ ಶರೀರಕಾಂತಿ ಉಳ್ಳವನೂ ಆಗುವನು ॥೫೦॥

## ಧನುಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಧನುಸ್ಸಿನಲ್ಲಿ ಚಂದ್ರನಿದ್ದು ಶುಕ್ರವೀಕ್ಷಣೆಯುಳ್ಳ, ಕಾಲದಲ್ಲಿ ಹುಟ್ಟಿದವನು ಜನಾಶ್ರಯಃ-ಜನಗಳಿಗೆ ಆಶ್ರಯಭೂತನಾಗಿರುವನು ಅಂದರೆ ಜನರಿಗೆ ಉಪಕಾರ ದಾನಧರ್ಮಾದಿಗಳಿಂದ ಸಂತವಿಸುವಂಥಾವನಾಗುತ್ತಾನೆ. ॥ಈ.ವಿ. ಶ್ಲೋ॥ ಸಂತಾನಾರ್ಥಾತ್ಯಂತ ಸಂಜಾತ ಹರ್ಷಃ (ಧರ್ಮಃಪಾ॥) ಶಶ್ವತ್ಸೌಖ್ಯೇನಾನ್ವಿ ತೋ ಮಾನುಷಸ್ಸ್ಯಾತ್ । ತಾರಾಸ್ವಾಮೀ ಚಾಪಗಾಮೀ ಪ್ರಸೂತೌ ದೈತ್ಯಾಮಾತ್ಯ ಪ್ರೇಕ್ಷಣಂ ಸಂಪ್ರಯಾತಃ ॥೫೧॥ ಧನುಸ್ಸಿನಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು (ಸಂತಾನಾರ್ಥವಾಗಿ ಅತ್ಯಂತ ಸಂತೋಷದಿಂದಿರುವನೆಂದು ಅಥವಾ ಸಂತಾನಾರ್ಥವಾಗಿ ಧರ್ಮ ಮಾಡುವವನೆಂದು ಕೆಲವರು ಅರ್ಥ ಮಾಡಿರುವರು) ಒಳ್ಳೇ ಸೌಖ್ಯವನ್ನು ಹೊಂದುತ್ತಾನೆ ॥೫೧॥

## ಧನುಸ್ಥೇ ಚಂದ್ರೇ ಶನಿದೃಷ್ಟಿಫಲಂ

ಧನುಸ್ಸಿನಲ್ಲಿ ಚಂದ್ರನು ಶನಿದೃಷ್ಟಿಯನ್ನು ಹೊಂದಿದ ಕಾಲದಲ್ಲಿ ಹುಟ್ಟಿದವನು ಸದಂಭಶ್ಶಠಶ್ಚ-ಡಂಭವೂ ಶಠತ್ವವೂ ಉಳ್ಳವನಾಗುತ್ತಾನೆ. ಈ ಫಲವನ್ನೇ ಕುಜ ರವಿಗಳಿಗೂ ಏಕವಾಕ್ಯತೆಯಾಗಿ ಹೇಳಿರುತ್ತಾರೆ. ಆದರೆ ಪ್ರತ್ಯಕ್ಷಾನು ಭವದಲ್ಲಿ ಫಲ ಪ್ರತ್ಯೇಕವಾಗಿರುವುದು ಕಂಡುಬಂದಿರುತ್ತೆ. ॥ಶ್ಲೋಕ॥ಜಾ-ಭ॥ ಸತ್ವೋಪೇತಂ ನಿತ್ಯಾಕಾಶಾಸ್ತ್ರಾನುಕ್ತಂ ಸದ್ವಕ್ತಾರಂ ಮಾನವಂಚ ಪ್ರಚಂಡಂ । ಕೋದಂಡಸ್ಥ

ಸ್ತೀಕ್ಷ್ಣರಶ್ಮ್ಯಾತ್ಮಜೇನ ದೃಷ್ಟಃ ಸೂತೌ ಶೀತರಶ್ಮಿಃ ಕರೋತಿ ॥ತಾ॥ ಧನುರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಸ್ವಗುಣ ಉಳ್ಳವನು ಅಥವಾ ಬಲಾಧಿಕನು. ನಿತ್ಯವೂ ಶಾಸ್ತ್ರಾನುವಾದಿಯೂ ಮತ್ತು ಒಳ್ಳೆಯ ಮಾತನಾಡುವವನು ಮತ್ತು ಸಕಲ ಕಾರ್ಯಗಳಲ್ಲಿ ಅನುಭವವುಳ್ಳ ಪ್ರಚಂಡನೂ ಆಗುತ್ತಾನೆ ॥೫೨॥

## ಧನುಷಿಸ್ಥೇ ಚಂದ್ರೇ ಸೂರ್ಯದೃಷ್ಟಿಫಲಂ

ಶ್ಲೋಕ॥ ಪ್ರೌಢ ಪ್ರತಾಪೋತ್ತಮ ಕೀರ್ತಿಸಂಪತ್ ಸದ್ವಾಹನಾ ನ್ಯಾಹವಜಂ ಜಂಯ ಚ । ನೃಪಪ್ರಸಾದಂ ಕುರುತೇ ನರಾಣಾಂ ತಾರಾಧಿಪಶ್ಚಾಪ ಗತೋರ್ಕದೃಷ್ಟಃ ॥೫೩॥ ತಾ॥ ಜನ್ಮಕಾಲದಲ್ಲಿ ಧನುಸ್ಸಿನಲ್ಲಿ ಚಂದ್ರನಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಪ್ರೌಢವಾದ ಪ್ರತಾಪ ಉಳ್ಳವನು, ಉತ್ತಮವಾದ ಕೀರ್ತಿಯು, ಸಕಲೈಶ್ವರ್ಯದಿಂದ ಕೂಡಿದ ಸಂಪತ್ತುಳ್ಳವನು. ಉತ್ತಮವಾದ ವಾಹನ ಯಾನಗಳುಳ್ಳವನು, ಮತ್ತು ಯುದ್ಧದಲ್ಲಿ ಜಯವನ್ನು ಹೊಂದುವವನು, ರಾಜಪ್ರೀತಿಯುಳ್ಳವನೂ ಸಹ ಆಗುತ್ತಾನೆ ॥೫೩॥

## ಧನುಷಿಸ್ಥೇ ಚಂದ್ರೇ ಕುಜದೃಷ್ಟಿಫಲಂ

ಶ್ಲೋಕ॥ ಸೇನಾಪತಿತ್ವಂ ಚ ಮಹತ್ಪ್ರತಾಪಂ ಪದ್ಮಾಲಯಾಲಂ ಕರಣೋಪಲಬ್ಧಂ । ಕುರ್ಯಾನ್ನರಾಣಾಂ ಹರಿಣಾಂಕವಿಷಃ ಶರಾಸನಸ್ಥೋ ವನಿಜೇನ ದೃಷ್ಟಃ ॥೫೪॥ ತಾ॥ ಜನ್ಮಕಾಲದಲ್ಲಿ ಚಂದ್ರನು ಧನುಸ್ಸಿನಲ್ಲಿದ್ದು ಅಂಗಾರಕ ದೃಷ್ಟಿಯುಳ್ಳವನಾದರೆ ಪುರುಷನು, ಸೇನಾಧಿಪತಿಯು, ಮಹತ್ತರವಾದ ಪ್ರತಾಪ ಉಳ್ಳವನು. ಲಕ್ಷ್ಮಿಯ ಸಾನಿಧ್ಯವು, ಭೂಷಣಾದಿಗಳ ಸೌಖ್ಯವು ಉಳ್ಳವನಾಗುತ್ತಾನೆ ॥೫೪॥

## ಮಕರಸ್ಥೇ ಚಂದ್ರೇ ಬುಧಾದಿ ಗ್ರಹದೃಷ್ಟಿಫಲಂ

ಮೃಗೆ-ಮಕರರಾಶಿ ಸ್ಥಿತನಾದ ಚಂದ್ರನು ಬುಧಾದಿ ಷಡ್ಗ್ರಹಗಳಿಂದ ಕ್ರಮವಾಗಿ ನೋಡಲ್ಪಟ್ಟರೆ ಅತ್ಯುರ್ರ್ವೀಶ ನರೇಂದ್ರಪಂಡಿತ ಧನೀಂದ್ರವ್ಯೋನ ಭೂಪಾಃ-ಅತ್ಯುರ್ರ್ವೀಶ-ಚಕ್ರವರ್ತಿ, ನರೇಂದ್ರ-ನರಪತಿ, ಪಂಡಿತ-ಸಕಲ ಶಾಸ್ತ್ರವನ್ನು ತಿಳಿದ ಮಹಾಜ್ಞಾನಿ, ಧನೀ-ಧನವಂತ, ದ್ರವ್ಯೋನ-ದ್ರವ್ಯವಿಲ್ಲದವನು, ಭೂಪ-ಭೂಪತಿಯೂ ಈ ಪ್ರಕಾರ ಫಲ ಹೇಳಿರುತ್ತಾರೆ. ಇದಕ್ಕೆ ಧುಂಡಿರಾಜರು ಪ್ರತ್ಯೇಕವಾಗಿ ವಿಶೇಷ ಫಲವನ್ನು ಹೇಳಿರುತ್ತಾರೆ-ಅದು ಮುಂದೆ ಉದಹರಿಸಲ್ಪಡುತ್ತೆ.

## ಮಕರಸ್ಥೇ ಚಂದ್ರೇ ಬುಧದೃಷ್ಟಿಫಲಂ

ಮಕರದಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನು ಅತ್ಯುರ್ವೀಶ-ರಾಜಾಧಿರಾಜನಾದ ಚಕ್ರವರ್ತಿಯಾಗುತ್ತಾನೆ. ಜಾ-ಭರಣ।। ಶ್ಲೋಕ।। ಬುಧ್ಯಾಹೀನೋ ನಿರ್ಧನಸ್ತಕ್ತಗೇಹೋ ಗೇಹಿನ್ಯಾಹ್ಯೈರುಝ್ಝಿತಃ ಪೂರುಷಸ್ಸ್ಯಾತ್ । ಆಕೋಕೇರಃ ಸ್ಥಾವರೇ ಶೀತರಶ್ಮಾಪ್ರೀಯೂಷಾಂಶೋ ರಾತ್ಮಜೇನಪ್ರದೃಷ್ಟೇ ।।೫೫।। ತಾ।। ಜನ್ಮಕಾಲದಲ್ಲಿ ಚಂದ್ರನು ಮಕರರಾಶಿಯಲ್ಲಿ ಬುಧ ದೃಷ್ಟನಾದರೆ ಬುದ್ಧಿಹೀನ, ನಿರ್ಧನನು, ಮನೆಬಿಟ್ಟು ಹೋಗುವವನು ಅಥವಾ ಮನೆಯವರಿಂದ ಬಿಡಲ್ಪಡುವವನೂ ಆಗುತ್ತಾನೆ. ಆದರೆ ಈ ಶ್ಲೋಕದ ಅರ್ಥವು ವರಾಹ-ಮಿಹಿರಾಚಾರ್ಯರಿಗೆ ಸಮ್ಮತಿಯಲ್ಲವೆಂದು ಕಂಡು ಬಂದರೂ, ಯವನ ಮತಾನುಸಾರವಾಗಿ ಇಲ್ಲಿ ಉದಹರಿಸಿರುತ್ತೇನೆ ।।೫೫।।

## ಮಕರಸ್ಥೇ ಚಂದ್ರೇ ಗುರುದೃಷ್ಟಿಫಲಂ

ಜನ್ಮಕಾಲದಲ್ಲಿ ಮಕರ ರಾಶಿಯಲ್ಲಿದ್ದ ಚಂದ್ರನು ಬೃಹಸ್ಪತಿಯಿಂದ ನೋಡಲ್ಪಟ್ಟರೆ ನರೇಂದ್ರಃ-ರಾಜನಾಗುತ್ತಾನೆ।। ಈ.ವಿ. ಶ್ಲೋಕ।। ನೃಪಾತ್ಮಜಃ ಸತ್ಕುತೋ ಗುಣಜ್ಞಃ ಕಲತ್ರ ಪುತ್ರಾದಿಯುತೋ ನರಸ್ಸ್ಯಾತ್ । ಮೃಗಾನನೇ ಜನ್ಮನಿಯಾಮಿ ನೀಶೇ ವಾಚಾಮಧೀಶೇನ ನಿರೀಕ್ಷ್ಯಮಾಣೇ ।।೫೬।।ತಾ।। ಜನನ ಕಾಲದಲ್ಲಿ ಮಕರಸ್ಥನಾಗಿ ಗುರುವೀಕ್ಷಿತನಾದರೆ ರಾಜಪುತ್ರನು, ಸತ್ಯಯುಕ್ತನು, ಗುಣಗ್ರಹಣ ಮಾಡುವವನು, ಸ್ತ್ರೀ ಪುತ್ರಾದಿ ಯುಕ್ತನೂ ಆಗುವನು ।।೫೬।।

## ಮಕರಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಜನ್ಮಕಾಲದಲ್ಲಿ ಮಕರರಾಶಿಯಲ್ಲಿ ಚಂದ್ರನಿದ್ದು ಶುಕ್ರದೃಷ್ಟಿಯುಳ್ಳವನಾದರೆ, ಪಂಡಿತಃ-ವಿದ್ವಾಂಸನಾಗುತ್ತಾನೆ ।।ಈ.ವಿ.ಶ್ಲೋಕ।। ಸನಯನೋ ಧನವಾಹನ ಸಂಯುತಃ ಸುತವಿಭೂಷಣ ವಸ್ತ್ರ ಸುಖೋನರಃ । ಕುಮುದಿನೀದಯಿತೆ ಮೃಗಸಂಸ್ಥಿತೇ ಭೃಗುಸುತೇನಜನಾನನುವೀಕ್ಷಿತೆ ।।೫೭।।ತಾ।। ಮಕರರಾಶಿಯಲ್ಲಿ ಚಂದ್ರನಿದ್ದು ಶುಕ್ರದೃಷ್ಟಿ ಇರುವ ಕಾಲದಲ್ಲಿ ಹುಟ್ಟಿದ ಪುರುಷನು ಸುಂದರವಾದ ನೇತ್ರಗಳುಳ್ಳವನು ಧನ ಮತ್ತು ವಾಹನಗಳುಳ್ಳವನು, ಗಂಡುಮಕ್ಕಳುಳ್ಳವನು, ವಿಶೇಷವಾದ ಭೂಷಣಾದ್ಯಲಂಕಾರವೂ ವಸ್ತ್ರಧಾರಣಾದಿ ಸೌಖ್ಯವುಳ್ಳ ಪುರುಷನೂ ಆಗುತ್ತಾನೆ ।।೫೭।।

## ಮಕರಸ್ಥೇ ಚಂದ್ರೇ ಶನಿದೃಷ್ಟಿಫಲಂ

ಜನ್ಮಕಾಲದಲ್ಲಿ ಮಕರಸ್ಥ ಚಂದ್ರನು ಶನಿಯಿಂದ ನೋಡಲ್ಪಟ್ಟರೆ ಧನೀ-ಧನವಂತನಾಗುತ್ತಾನೆ।। ಈ ವಿ.ಶ್ಲೋಕ।। ಮಹಾಲಸೋ ಮಂದಧನಸ್ಥ

ಸತ್ಯೋಮಲೀಮಸ ಸ್ಸ್ಯಾದ್ವ್ಯಸನಾಭಿಭೂತಃ । ವೀಯೂಷಮೂರ್ತಿರ್ಯದಿ ನಕ್ರವರ್ತೀ ತ್ರಿಮೂರ್ತಿಪುತ್ರೇಣ* ನಿರೀಕ್ಷ್ಯಮಾಣಃ ॥೫೮॥ತಾ॥ ಮಕರರಾಶಿಯಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು ಅಲಸ್ಯ ಉಳ್ಳವನು (ಸೋಮಾರಿ) ಅಲ್ಪ ಧನವಂತ, ಸುಳ್ಳು ಹೇಳುವವನು, ಶ್ವಪಚನೂ ಅನೇಕ ವ್ಯಸನದಿಂದ ಕೂಡಿದವನೂ ಆಗುತ್ತಾನೆ ॥೫೮॥

## ಮಕರಸ್ಥೇ ಚಂದ್ರೇ ರವಿದೃಷ್ಟಿಫಲಂ

ಮಕರರಾಶಿಯಲ್ಲಿ ಚಂದ್ರನಿರುವಾಗ ರವಿ ನೋಡುತ್ತಿದ್ದ ಕಾಲದಲ್ಲಿ ಹುಟ್ಟಿದ ಪುರುಷನು, ಅಧನೀ-ಧನವಿಲ್ಲದವನು (ದರಿದ್ರ) ಆಗುತ್ತಾನೆ. ಈ ವಿಷಯಕ್ಕೆ ॥ಶ್ಲೋಕ॥ ಗತಧನೋ ಮಲಿನಶ್ಚಲನಪ್ರಿಯೋ ಹತಮತಿಃ ಖಲುದುಃಖಿತ ಮಾನಸಃ। ಹಿಮಕರೇ ಮಕರೇ ಚ ದಿವಾಕರೇ ಕ್ಷಿತಿತನೌಹಿ ನರಃ ಪ್ರಭವೇದ್ಯದಿ ॥೫೯॥ತಾ॥ ಜನ್ಮಕಾಲದಲ್ಲಿ ಮಕರರಾಶಿಯಲ್ಲಿದ್ದ ಚಂದ್ರನನ್ನು ಸೂರ್ಯನು ನೋಡುತ್ತಿರುವಾಗ ಹುಟ್ಟಿದವನು ದರಿದ್ರನೂ, ಮಲಿನನೂ, ಸಂಚಾರಶೀಲನೂ, ಪ್ರೀತಿಕರವಾದ ಬುದ್ಧಿಯಿಲ್ಲದವನೂ, ಸದಾಕಾಲದಲ್ಲೂ ದುಃಖಪಡುತ್ತಿರುವ ಮನಸ್ಸುಳ್ಳವನೂ ಆಗುತ್ತಾನೆ ॥೫೯॥

## ಮಕರಸ್ಥೇ ಚಂದ್ರೇ ಕುಜದೃಷ್ಟಿಫಲಂ

ಜನ್ಮಕಾಲವಲ್ಲಿ ಮಕರರಾಶಿಯಲ್ಲಿರುವ (ಶಶಾಂಕ) ಚಂದ್ರನನ್ನು ಅಂಗಾರಕನು ನೋಡಿದರೆ ಭೂಪಃ-ರಾಜನಾಗುತ್ತಾನೆ. ಈ.ವಿ. ಜಾ-ಭರಣೇ ॥ಶ್ಲೋಕ॥ ಅತಿಪ್ರಚಂಡೋ ಧನವಾಹನಾಢ್ಯಃ ಪ್ರಾಜ್ಞಶ್ಚ ದಾರಾತ್ಮಜ ಸೌಖ್ಯಯುಕ್ತಃ । ಸ್ಯಾನ್ಮಾನವೋ ವೈಭವ ಭಾಙ್ನಿತಾಂತಂ ಮೃಗೇ ಮೃಗಾಂಕೆ ಪನಿಸೂನು ದೃಷ್ಟೇ ॥೬೦॥ ತಾ॥ ಮಕರರಾಶಿಯಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು ಅತಿ ಪ್ರಚಂಡನಾಗಿಯೂ, ಧನ ಮತ್ತು ವಾಹನ ಉಳ್ಳವನಾಗಿಯೂ, ಚೆನ್ನಾಗಿ ತಿಳುವಳಿಕೆಯುಳ್ಳವನಾಗಿಯೂ, ಹೆಂಡತಿ ಮಕ್ಕಳುಗಳ ಸೌಖ್ಯ ಉಳ್ಳವನಾಗಿಯೂ ಮತ್ತು ಅನೇಕ ವಿಧವಾದ ವೈಭವ ಉಳ್ಳವನಾಗಿಯೂ ಆಗುತ್ತಾನೆ ॥೬೦॥

## ಕುಂಭಸ್ಥೇ ಚಂದ್ರೇ ಬುಧಾದಿ ಗ್ರಹದೃಷ್ಟಿಫಲಂ

ಕುಂಭಸ್ಥಿತೇ-ಜನ್ಮಕಾಲದಲ್ಲಿ ಕುಂಭರಾಶಿಯಲ್ಲಿ ಚಂದ್ರನಿದ್ದು ಬುಧಾದಿ ಷಡ್ಗ್ರಹಗಳಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಜನ್ಮಿಸಿದವನು. ಕ್ರಮವಾಗಿ ಭೂಪೋ ಭೂಪಸಮೋನ್ಯದಾರ

* ಉದಯ ಬ್ರಹ್ಮಸ್ವರೂಪೋ ಮಧ್ಯಾನ್ಹೇತು ಮಹೇಶ್ವರಃ । ಅಸ್ತಮಾನೇ ಸ್ವಯಂವಿಷ್ಣು ಸ್ತ್ರಯೀ ಮೂರ್ತಿ ದಿವಾಕರಃ ॥ ಸೂರ್ಯ ಸೂರ್ಯಪುತ್ರ-ಶನಿ.

ನಿರತಶ್ಯೇಷೈಶ್ಚ ॥ ರಾಜನು, ರಾಜಸಮಾನನು, ಅನ್ಯದಾರ ನಿರತನು, ಉಳಿದ ಶನಿ, ಕುಜ, ರವಿಗಳು ನೋಡಿದರೂ ಪರಸ್ತ್ರೀಲಂಪಟನೆಂದು ಹೇಳತಕ್ಕದ್ದು.

## ಕುಂಭಸ್ಥೇ ಚಂದ್ರೇ ಬುಧದೃಷ್ಟಿಫಲಂ

ಜನ್ಮಕಾಲದಲ್ಲಿ ಚಂದ್ರನು ಕುಂಭದಲ್ಲಿದ್ದು ಬುಧನಿಂದ ನೋಡಲ್ಪಟ್ಟರೆ, ಭೂಪಃ-ಭೂಮಿಗೆ ಅಧಿಪತಿ ಅಂದರೆ ರಾಜನಾಗುತ್ತಾನೆ. ॥ಈ.ವಿ.ಶ್ಲೋಕ ॥ಜಾ-೬॥ ವಿಷಯಸೌಖ್ಯರತೋ ಶನಸಂವಿಧೌ ರುಚಿರತೀವ ಶುಚಿಃ ಪ್ರಿಯ ಭಾಷಣಃ । ಯುವತಿ ಗೀತಸುನೀತಿ ಕೃತಾದರೊ ಘಟಗತೇಂದು ರಿಹಜ್ಞನಿರೀಕ್ಷಿತಃ ॥೬೧॥ತಾ॥ ಕುಂಭರಾಶಿಯಲ್ಲಿ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಧನ ಗೃಹ ವಿಷಯೋಪಭೋಗ ಇವುಗಳಲ್ಲಿ ಆಸಕ್ತನೂ, ಭೋಜನಪ್ರಿಯನೂ, ಅತ್ಯಂತ ಪವಿತ್ರನೂ ಅಂದರೆ ಪರಧನ ಪರದಾರಾದಿ ಗಮನ ದಿಂದುಂಟಾದ ಅಶುಚಿತ್ವವಿಲ್ಲದೆ ಇರುವಿಕೆಯೇ ಶುಚಿತ್ವವೆಂದು ಹೇಳಲ್ಪಡುವುದು, ಇದು ಈ ಪದಕ್ಕೆ ಸರಿಯಾದ ಗಂಭೀರಾರ್ಥವು. ಕೆಲವರು ಸ್ನಾನ ಪರಿಶುದ್ಧ ವಸ್ತ್ರಧಾರಣೆ ಮಾಡಿ ಕೊಂಡರೆ ಶುಚಿಯಲ್ಲವೇ ? ಎಂದು ಅಪೇಕ್ಷಿಸಬಹುದು. ಅಶುಚಿ ಬಾಹ್ಯವೆ ಹೊರ್ತು ಅಂತರಂಗವಾದ ಮನಶ್ಶುಚಿಗೆ ಅರ್ಥ ಮಾಡತಕ್ಕದಲ್ಲ. ಇಲ್ಲಿ ಪವಿತ್ರ ಶಬ್ದಕ್ಕೆ ಪ್ರಯೋಜನಕಾರಿಯಾದ ಮೊದಲನೇ ಅರ್ಥವೇ ಸರಿಯಾದದ್ದು. ಕೇಳುವವರಿಗೆ ಇಂಪಾಗಿ ಮಾತನಾಡುವವನು. ಸ್ತ್ರೀಯರಲ್ಲೂ, ಗಾಯನದಲ್ಲೂ ಪ್ರೀತಿಯುಳ್ಳವನೂ ಆಗುತ್ತಾನೆ. ॥೬೧॥

## ಕುಂಭಸ್ಥೇ ಚಂದ್ರೇ ಗುರುದೃಷ್ಟಿಫಲಂ

ಜನ್ಮಕಾಲದಲ್ಲಿ ಕುಂಭದಲ್ಲಿ ಚಂದ್ರನಿದ್ದು ಗುರುದೃಷ್ಟಿ ಯುಕ್ತನಾದರೆ ಭೂಪಸಮಃ-ರಾಜನ ಸಮಾನನಾಗುವನು ॥ಈ.ವಿ.ಶ್ಲೋ॥ ಯವನಾಚಾರ್ಯಃ॥ ಮಹೀಪುರ ಗ್ರಾಮ ಪುರಾದಿಸೌಖ್ಯಂ ಭೋಗಾನ್ವಿತಂ ಸಾಧುಜನ ಪ್ರವೃತ್ತಿಂ । ಕುರ್ಯಾನ್ನರಂ ಶ್ರೇಷ್ಠತರಂ ಘಟಸ್ಥೋನಿಶಾಕರ ಶ್ಶುಕ್ರಗುರು ಪ್ರದೃಷ್ಟಃ ॥೬೨॥ತಾ॥ ಜನ್ಮಕಾಲದಲ್ಲಿ ಕುಂಭರಾಶಿಯಲ್ಲಿದ್ದ ಚಂದ್ರನು ಗುರುದೃಷ್ಟಿಯುಳ್ಳವನಾದರೆ ಆ ಪುರುಷನು ಪೃಥ್ವೀ ನಗರ ಗ್ರಾಮ ಇವುಗಳಿಂದ ಸುಖಯುಕ್ತನು, ಉತ್ತಮವಾದ ಭೋಗವನ್ನು ಭೋಗಿಸುವನು, ಸಾಧುಜನರಲ್ಲಿ ಪ್ರೀತಿ ಇಡತಕ್ಕವನು, ಎಲ್ಲರಲ್ಲಿಯೂ ಅತಿಶಯವಾದ ಶ್ರೇಷ್ಠನೂ ಆಗುತ್ತಾನೆ ॥೬೨॥

## ಕುಂಭಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಜನ್ಮಕಾಲದಲ್ಲಿ ಕುಂಭದಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು, ಅನ್ಯದಾರ ನಿರತಃ-ಪರನ ಹೆಂಡತಿಯಲ್ಲಿ ಆಸಕ್ತಿಯುಳ್ಳವನು.

ಈ ಮೇಲೆ ಹೇಳಿದ ಪ್ರಕಾರವಾಗಿಯೇ ಶನಿ, ರವಿ, ಕುಜರಿಂದ ನೋಡಲ್ಪಟ್ಟರೆ ಪರದಾರರತನಾಗುತ್ತಾನೆಂದು ವರಾಹಮಿಹಿರಾಚಾರ್ಯರ ಅಭಿಪ್ರಾಯಕ್ಕೆ ಬೇರೆ ವಿಧವಾಗಿ ಧುಂಡಿರಾಜರು ಹೇಳಿರುತ್ತಾರೆ. ಅದನ್ನು ಮುಂದೆ ಉದಹರಿಸಿರುತ್ತೆ.

## ಕುಂಭಸ್ಥೇ ಚಂದ್ರೇ ಶುಕ್ರವೀಕ್ಷಣಫಲಂ

ಶ್ಲೋಕ|| ಮಿತ್ರಾತ್ಮಜ ಸ್ತ್ರೀಗೃಹಸೌಖ್ಯಹೀನೋ ದೀನೋ ಜನೋತ್ಪಾದಿತ ಗೌರವಸ್ಸ್ಯಾತ್। ನಿಶಾಕರೇ ಕುಂಭಗೃಹ ಪ್ರಸೂತೌ ಸಂವೀಕ್ಷಿತೇ ದಾನವಪೂಜಿತೇನ ||೬೩||ತಾ|| ಕುಂಭದಲ್ಲಿ ಚಂದ್ರನಿದ್ದು ಶುಕ್ರದೃಷ್ಟಿ ಇರುವಾಗ ಹುಟ್ಟಿದವನು ಮಿತ್ರ, ಪುತ್ರ, ಸ್ತ್ರೀ, ಗೃಹ ಇವುಗಳ ಸೌಖ್ಯಹೀನನೂ, ಅತಿ ದೀನನೂ, ಬಡತನದಿಂದ ತಿರಸ್ಕರಿಸಲ್ಪಡುವವನು ಅಂದರೆ ದಾರಿದ್ರ್ಯದಿಂದ ಯಾರು ಗೌರವ ಮಾಡುವುದಿಲ್ಲ ವೆಂದರ್ಥ ||

## ಕುಂಭಸ್ಥೇ ಚಂದ್ರೇ ಶನಿವೀಕ್ಷಿತಫಲಂ

ಶ್ಲೋಕ|| ನಖೋಷ್ಟ ಬಾಲಾಶ್ವತರಾದಿ ಲಾಭಂಕುಸ್ತ್ರೀರತಂ ಧರ್ಮವಿರುದ್ಧ ವೃತಿಂ। ಕರೋತಿಪುಂಸಾಂಹಿ ಘಟೇಧಿತಿಷ್ಠನ್ ನಿಶಾಕರೋ ಭಾಸ್ಕರ ಸೂನುದೃಷ್ಟಃ ||೬೪|| ಕುಂಭರಾಶಿಯಲ್ಲಿ ಶಶಧರನಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನಿಗೆ ನಖವಿರುವ ಪಶುಜೀವಜಂತು ಮೂಲಕವೂ, ಒಂಟೆಯಿಂದಲೂ, ಪಕ್ಷಿ ಮೂಲವಾಗಿಯೂ ಲಾಭವೂ, ದುಷ್ಟ ಸ್ತ್ರೀಯೊಂದಿಗೆ ನಿರಂತರ ಪ್ರೀತಿಯೂ, ಧರ್ಮಕ್ಕೆ ವಿರೋಧವಾಗಿ ಆಚರಿಸುವವನೂ ಆಗುತ್ತಾನೆ ||೬೪||

## ಕುಂಭಸ್ಥೇ ಚಂದ್ರೇ ರವಿದೃಷ್ಟಿಫಲಂ

ಶ್ಲೋಕ|| ಕೃಷೀವಲಃ ಕೈತಸಂಯುತಶ್ಚ ನೃಪಾಶ್ರಿತೋ ಧರ್ಮರತೋ ನರಸ್ಸ್ಯಾತ್ । ಪೀಯೂಷ ಮೂರ್ತಿರ್ಯದಿಕುಂಭಗಾಮೀತ್ಥಂ ಭೋಜನೀಸ್ವಾಮಿ ನಿರೀಕ್ಷ್ಯಮಾಣಃ ||೬೫|| ಜನ್ಮಕಾಲದಲ್ಲಿ ಕುಂಭರಾಶಿಯಲ್ಲಿ ಚಂದ್ರನು ಸೂರ್ಯನಿಂದ ನೋಡಲ್ಪಟ್ಟರೆ, ಭೂ ವ್ಯವಸಾಯ ಮಾಡುವನು, ಅಧಿಕವಾದ ಕಪಟ ಉಳ್ಳವನು, ರಾಜಾಶ್ರಯ ಉಳ್ಳವನು ಮತ್ತು ಧರ್ಮರತನೂ ಆಗುತ್ತಾನೆ ||೬೫||

## ಕುಂಭಸ್ಥೇ ಚಂದ್ರೇ ಕುಜದೃಷ್ಟಿಫಲಂ

ಶ್ಲೋಕ|| ಧನಭವನ ಜನಿತ್ರೀತಾತವಿಶ್ಲೇಷ ಯುಕ್ತೋ ವಿಷಮತಮ ಪದಾರ್ಥೋತ್ಪಾದಕೋ ನಲ್ಪಜಲ್ಪಃ। ಭವತಿ ಮಲಿನ ಚಿತ್ತೋತ್ಯಂತಧೂರ್ತೋಹಿಮರ್ತ್ಯಃ ಶಶಿನಿ ಕಲಶಯಾತೆ ವೀಕ್ಷಿತೇ ಭೂಸುತೇನ ||೬೬|| ತಾ|| ಜನ್ಮಕಾಲದಲ್ಲಿ ಕುಂಭರಾಶಿಯಲ್ಲಿ ಚಂದ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಆ ಪುರುಷನು ದ್ರವ್ಯ. ಗೃಹ, ತಾಯಿ, ತಂದೆ ಇವರುಗಳ ರಹಿತನೂ. ಅತಿಶಯ

ಅಲ್ಪಪದಾರ್ಥಗಳ ಉತ್ಪತ್ತಿಮಾಡುವವನೂ, ಅತ್ಯಂತವಾಗಿ ಸುಳ್ಳು ಹೇಳುವವನೂ ಮತ್ತು ದುಷ್ಟ ಮನಸ್ಸುಳ್ಳವನೂ ಆಗುತ್ತಾನೆ ॥೬೬॥

## ಮೀನಸ್ಥೇ ಚಂದ್ರೇ ಬುಧಾದಿಗ್ರಹ ದೃಷ್ಟಿಫಲಂ

ಝುಷಗೇ-ಮೀನರಾಶಿಯಲ್ಲಿರುವ ಚಂದ್ರನನ್ನು, ಬುಧಾದಿ ಷಡ್ಗ್ರಹಗಳು ನೋಡಿದರೆ ಹಾಸ್ಯಜ್ಞೋನೃಪತಿರ್ಬುಧಶ್ಚ-ಹಾಸ್ಯರಸಾಭಿಜ್ಞನೂ, ರಾಜನೂ ಪಂಡಿತನೂ, ಪಾಪಶ್ಚ ಪಾಪೇಕ್ಷಿತೆ ॥ ಪಾಪಗ್ರಹಗಳಾದ ಶನಿ, ರವಿ, ಕುಜರು ನೋಡಿದರೆ ಪಾಪಕಾರ್ಯದಲ್ಲಿ ಚತುರರೂ ಆಗುತ್ತಾರೆಂದು ಹೇಳತಕ್ಕದ್ದು.

## ಮೀನಸ್ಥೇ ಚಂದ್ರೇ ಬುಧದೃಷ್ಟಿಫಲಂ

ಜನ್ಮಕಾಲದಲ್ಲಿ ಮೀನರಾಶಿಯಲ್ಲಿರುವ ಚಂದ್ರನನ್ನು ಬುಧ ನೋಡಿದರೆ ಹಾಸ್ಯ ಜ್ಞ-ಹಾಸ್ಯ ಪರಿಹಾಸ್ಯಾದಿ ರಸಗಳಂ ತಿಳಿದ ಚತುರನಾಗುತ್ತಾನೆ ॥ ಈ.ವಿ.ಶ್ಲೋ॥ ಜಾ-ಭ॥ ವಾರಾಂಗನಾಸೂನು ಸುಖಾನಿನೂನಂ ಮಾನಂಧನಂ ಭೂಮಿಪತೇ ಪ್ರಸಾದಮ್ । ಕುರ್ಯಾನ್ನರಾಣಾಂ ಹರಿಣಾಂಕ ಏಷವೈಸಾರಿಣಸ್ಥೋಜ್ಞ ನಿರೀಕ್ಷ್ಯ-ಮಾಣಃ ॥೬೭॥ತಾ॥ ಮೀನರಾಶಿಯಲ್ಲಿ ಜನ್ಮಕಾಲದ ಚಂದ್ರನಿದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನು ವೇಶ್ಯಾಸ್ತ್ರೀಯಿಂದ ಸೌಖ್ಯವುಳ್ಳವನು, ಪುತ್ರಸುಖ, ಗೌರವ, ದ್ರವ್ಯ, ರಾಜ ಪ್ರಸನ್ನತೆ ಈ ಮೊದಲಾದ ಸರ್ವ ಸಂಪತ್ತುಳ್ಳವನೂ ಆಗುತ್ತಾನೆ ॥೬೭॥

## ಮೀನಸ್ಥೇ ಚಂದ್ರೇ ಗುರುದೃಷ್ಟಿಫಲಂ

ಜನ್ಮಕಾಲದಲ್ಲಿ ಚಂದ್ರನು ಮೀನರಾಶಿಯಲ್ಲಿ ಗುರುವಿನಿಂದ ನೋಡಲ್ಪಟ್ಟರೆ, ನೃಪತಿಃ-ರಾಜನಾಗುತ್ತಾನೆ. ॥ಈ.ವಿ.ಶ್ಲೋ॥ ಉದಾರದೇಹಂ ಸುಕುಮಾರರೂಪಂ ಸದ್ಗೇಹಿನೀ ಸೂನು ಧನಾದಿ ಸೌಖ್ಯಂ । ನೃಪಂ ವಿದಧ್ಯಾತ್ಪೃಥು ರೋಮಗಾಮಿ ತಮೀಪತಿರ್ವಾಕ್ಪತಿ ವೀಕ್ಷಿತಶ್ಚೇತ್ ॥ತಾ॥ ಮೀನರಾಶಿಯಲ್ಲಿ ಚಂದ್ರನು ಗುರುವಿನಿಂದ ನೋಡಲ್ಪಟ್ಟಿಡುವಾಗ ಹುಟ್ಟಿದವನು ಉದಾರಬುದ್ಧಿಯುಳ್ಳವನು, ಸುಕುಮಾರವಾದ ಶರೀರ, ಸತ್ಕುಲಪ್ರಸೂತಳಾದ ಹೆಂಡತಿ ಮತ್ತು ದ್ರವ್ಯಸುಖ ಉಳ್ಳವನು ಮತ್ತು ರಾಜನೂ ಆಗುತ್ತಾನೆ ॥೬೮॥

## ಮೀನಸ್ಥೇ ಚಂದ್ರೇ ಶುಕ್ರದೃಷ್ಟಿಫಲಂ

ಜನ್ಮಕಾಲದಲ್ಲಿ ಮೀನದಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು, ಬುಧ-ಪಂಡಿತನಾಗುವನು ॥ಈ.ವಿ.ಶ್ಲೋಕ॥ ಕರೋತಿಮರ್ತ್ಯಂ ತಿಮಿಯುಗ್ಮ ಸಂಸ್ಥೆ ಶೀತದ್ಯುತಿರ್ಜನ್ಮನಿ ಶುಕ್ರದೃಷ್ಟಃ । ಸದ್ಗೀತ ವಾದ್ಯಾಭಿರತಂ ಸುವೃತ್ತಂ ವಿಲಾಸಿನೀ

ಕೇಳಿವಿಲಾಸಶೀಲಂ ॥ತಾ॥ ಜನ್ಮಕಾಲದಲ್ಲಿ ಚಂದ್ರನು ಮೀನರಾಶಿಯಲ್ಲಿದ್ದು ಶುಕ್ರನಿಂದ ನೋಡಲ್ಪಟ್ಟರೆ ಒಳ್ಳೇ ಸಂಗೀತವಾದ್ಯಾದಿಗಳಲ್ಲಿ ಪ್ರೀತಿಯುಳ್ಳವನು, ಸದಾಚಾರ ಉಳ್ಳವನು, ವಿಲಾಸಿನಿಯಾದಂಥಾ ಸ್ತ್ರೀಯಲ್ಲಿ ರತಿವಿಲಾಸ ಉಳ್ಳವನು ಆಗುವನು ॥೬೯॥

## ಮೀನಸ್ಥೇ ಚಂದ್ರೇ ಶನಿದೃಷ್ಟಿಫಲಂ

ಶ್ಲೋಕ॥ ಕಾಮಾತುರಂ ದಾರಸುತೈರ್ವಿಹೀನಂ ನೀಚಾಂಗನಾ ಸಕ್ತಿಮ ವಿಕ್ರಮಂಚ । ನೀಹಾರರಶ್ಮಿಃಶಫರಂಪ್ರಪನ್ನೋರಂ ವಿದಧ್ಯಾದ್ರ್ವಿ ಸೂನುದೃಷ್ಟಃ ॥೭೦॥ ತಾ॥ ಮೀನರಾಶಿಯಲ್ಲಿ ಚಂದ್ರನಿದ್ದು ಶನಿದೃಷ್ಟಿಯಿರುವಾಗ ಹುಟ್ಟಿದ ಪುರುಷನು ನಿರಂತರ ಕಾಮಾತುರನು, ಸ್ತ್ರೀ, ಪುತ್ರರಹಿತನು, ನೀಚಜಾತಿಯವರಾದ ಸ್ತ್ರೀಯರಲ್ಲಿ ಪ್ರಿಯನೂ, ಪರಾಕ್ರಮಹೀನನೂ ಆಗುತ್ತಾನೆ ॥೭೦॥

## ಮೀನಸ್ಥೇ ಚಂದ್ರೇ ರವಿದೃಷ್ಟಿಫಲಂ

ಶ್ಲೋಕ॥ ಮನೋಭವೋ ತ್ಕರ್ಷಮತೀವಸೌಖ್ಯಂ ಸೇನಾಪತಿತ್ವಂ ಬಹುವಿತ್ತ ವೃದ್ಧಿಂ । ಸತ್ಕಾರ್ಯಸಿದ್ಧಿಂ ಕುರುತೆ ಹಿಮಾಂಶು ರ್ಝಷೇ ದಿನೇಶೇನ ನಿರೀಕ್ಷ್ಯಮಾಣಃ ॥೭೧॥ತಾ॥ ಜನ್ಮಕಾಲದಲ್ಲಿ ಚಂದ್ರನು ಮೀನರಾಶಿಯಲ್ಲಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ಅತ್ಯಂತ ವಿಷಯಾಸಕ್ತನು (ಕಾಮಾತುರನು), ಅತ್ಯಂತ ಸೌಖ್ಯವುಳ್ಳವನು, ಸೇನಾಪತಿಯೂ, ಸತ್ಕಾರ್ಯಸಿದ್ಧಿ ಸಹಾ ಉಳ್ಳವನಾಗುವನು, ಅನೇಕ ಪ್ರಕಾರವಾಗಿ ದ್ರವ್ಯ ಕೂಡಿಬರುವದು ॥೭೧॥

## ಮೀನಸ್ಥೇ ಚಂದ್ರೇ ಕುಜದೃಷ್ಟಿಫಲಂ

ಶ್ಲೋಕ॥ ಪರಾಭಿಭೂತಂ ಕುಲಟಾದಿ ಸಕ್ತಂ ಸೌಖ್ಯೋಜ್ಝಿತಂ ಪಾಪರತಂ ನಿತಾಂತಮ್ । ಕರೋತಿಜಾತಂ ಹಿನಿಧಿಃಕಲಾನಾಂ ಮೀನಸ್ಥಿತೋ ಭೂಮಿಸುತೇನ ದೃಷ್ಟಃ ॥೭೨॥ತಾ॥ ಮೀನರಾಶಿಯಲ್ಲಿ ಚಂದ್ರನಿದ್ದು ಕುಜನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ನಿರಂತರದಲ್ಲೂ ಶತ್ರುಗಳಿಂದ ತಲೆಯೆತ್ತದಂತೆ ಅಡಗಿರುವವನು, ಹಾದರಗಿತ್ತಿಯಾದ ಸ್ತ್ರೀಯಲ್ಲಿ ಸ್ನೇಹವುಳ್ಳವನು, ಸೌಖ್ಯಹೀನನೂ, ನಿರಂತರ ಪಾಪಕರ್ಮ ಮಾಡುವವನೂ ಆಗುತ್ತಾನೆ ॥೭೨॥

ಇಲ್ಲಿ 'ಶಿಶಿರಕರ ಸಮಾಗಮೇ ಕ್ಷಣಾನಾಂ ಸದೃಶಫಲಂ ಪ್ರವದಂತಿ ಲಗ್ನಜಾತಂ' ಎಂದು ಚಂದ್ರದೃಷ್ಟಿ ಸ್ವಭಾವ ಫಲವೇ ಲಗ್ನಕ್ಕೂ ದೃಷ್ಟಿಫಲ ಹೇಳಲ್ಪಡತಕ್ಕದ್ದು. ಇಲ್ಲಿ ಜನ್ಮ ಲಗ್ನಕ್ಕೆ ಚಂದ್ರದೃಷ್ಟಿ ಫಲವು ಹೇಳಲ್ಪಡಲಿಲ್ಲ. ಆದ್ದರಿಂದ "ಹೋರಾಸ್ವಾಮಿ ಗುರುಜ್ಞ ವೀಕ್ಷಿತ ಯುತಾನಾನ್ಯೈಶ್ಚ ವೀರ್ಯೋತ್ಕಟಾ" ಎಂಬುವ ವಚನವನ್ನನುಸರಿಸಿ ಕರ್ಕಾಟಕರಾಶಿಯನ್ನು ಬಿಟ್ಟು ಉಳಿದ ರಾಶಿಗಳು

ಜನ್ಮಕಾಲವಾದರೆ ಬಲಹೀನವಾಗುವುದರಿಂದ ಪಾಪಫಲಪ್ರದವೆಂದು ಊಹಿಸತಕ್ಕದ್ದು. ಈ ಪ್ರಕಾರವೇ ಯವನಾಚಾರ್ಯರಿಂದ ಚಂದ್ರರಾಶಿಯನ್ನು ಬಿಟ್ಟು ಫಲವು ಹೇಳಲ್ಪಟ್ಟಿರುತ್ತೆ. ।। ಶ್ಲೋಕ ।। ಮುಕ್ತ್ವಾತು ಚಂದ್ರಭವನಂ ಲಗ್ನಗತಂ ಶಿಶಿರ ಕಿರಣಸಂದೃಷ್ಟಃ । ಅಶುಭಫಲಂ ನಿರ್ದಿಷ್ಟಂ ಪೃಚ್ಛಾಯಾಂ ಜನ್ಮಸಮಯೇವಾ ।।೭೩।। ಎಂದುಕ್ತವಾಗಿರುತ್ತೆ. ।।೩।।

ಬೃಹಜ್ಜಾತಕದಲ್ಲಿ ಚಂದ್ರಾಧಿಷ್ಠಿತ ರಾಶಿಯಲ್ಲಿ ಕುಜನೇ ಮೊದಲಾದ ಆರು ಗ್ರಹಗಳು ನೋಡಿದರೆ ಜಾತಕನಿಗೆ ಉಂಟಾಗುವ ಫಲಗಳ ಸ್ವಭಾವ ಹೇಳಲ್ಪಟ್ಟಿರುತ್ತೆ. ಇದರಿಂದ ಮೇಷಾದಿ ದ್ವಾದಶರಾಶಿಗಳಲ್ಲಿ ಚಂದ್ರನಿದ್ದು ಈ ಮೇಲೆ ಹೇಳಿದ ಗ್ರಹಗಳು ನೋಡಿದ ಫಲವು ತಿಳಿದಂತಾಯಿತು. ಇದರಂತೆಯ ಸೂರ್ಯ, ಕುಜ, ಬುಧ, ಬೃಹಸ್ಪತಿ, ಶುಕ್ರ, ಶನಿ ಈ ಆರು ಗ್ರಹಗಳು ಇದ್ದು ಇವರುಗಳಿಗೆ ಇತರ ಗ್ರಹಗಳಿಂದ ಉಂಟಾದ ದೃಷ್ಟಿಫಲ ಹೇಳಲಿಲ್ಲ. ಆದ್ದರಿಂದ ಗ್ರಹಗಳ ದೃಷ್ಟಿಫಲ ಪೂರ್ತಿ ಆಗಲಿಲ್ಲ. ಆದ್ದರಿಂದ ಧುಂಡಿರಾಜೀಯು ಜಾತಕಾಭರಣ ಯವನ ವೃದ್ಧ ಯಾವನ ಈ ಗ್ರಂಥಗಳ ಆಧಾರಗಳಿಂದ ಇಲ್ಲಿ ಸೂರ್ಯಾದಿ ಗ್ರಹಗಳು ಮೇಷಾದಿ ದ್ವಾದಶ ರಾಶಿಗಳಲ್ಲಿ ಕುಜ, ಬುಧ, ಗುರು, ಶುಕ್ರ, ಶನಿ, ಚಂದ್ರ ಈ ಗ್ರಹಗಳಿಂದ ನೋಡಲ್ಪಟ್ಟ ಬಲವನ್ನು ಸಂಗ್ರಹಿಸಿರುತ್ತೇನೆ.

ಟಿಪ್ಪಣಿ-ಈ ಗ್ರಹಗಳಿಗೆ ದೃಷ್ಟಿಫಲ ಹೇಳುವಾಗ ಮೇಷ ವೃಶ್ಚಿಕಕ್ಕೆ ಕುಜನೆ ಅಧಿಪತಿಯಾದ್ದರಿಂದ ಕುಜಕ್ಷೇತ್ರಗಳಲ್ಲಿದ್ದ ಗ್ರಹಕ್ಕೆಂದು ನಿರ್ದೇಶ ಮಾಡಿಯೂ ಅನಂತರ ಶುಕ್ರಕ್ಷೇತ್ರವಾದ ವೃಷಭ ತುಲಾರಾಶಿಗಳಲ್ಲಿದ್ದ ಗ್ರಹಕ್ಕೂ, ಆಮೇಲೆ ಬುಧಕ್ಷೇತ್ರಗಳಾದ ಮಿಥುನ ಕನ್ಯಾರಾಶಿಸ್ಥಿತವಾದ ಗ್ರಹಕ್ಕೂ ಕಟಕ ಸಿಂಹರಾಶಿಗಳಿಗೆ ಪ್ರತ್ಯೇಕ ಫಲವು, ಗುರುಕ್ಷೇತ್ರಗಳಾದ ಧನುರ್ಮೀನಗಳಲ್ಲಿದ್ದ ಗ್ರಹಕ್ಕೂ, ಶನಿಕ್ಷೇತ್ರಗಳಾದ ಮಕರ ಕುಂಭಗಳಲ್ಲಿ ಸೂರ್ಯಾದಿ ಗ್ರಹಗಳಿಗೂ ಕ್ರಮವಾಗಿ ಹೇಳಿರುತ್ತೆ. ಆದ್ದರಿಂದ ಮೇಷಾದಿ ರಾಶಿಗಳು ಕ್ರಮವಾಗಿ ಬರುವುದಿಲ್ಲ. ಇದನ್ನು ವಾಚಕರು ಮುಂಚೆಯೇ ತಿಳಿದುಕೊಳ್ಳಬೇಕು.

## ಕುಜಕ್ಷೇತ್ರಸ್ಥ ರವೇಃ ಚಂದ್ರೇಕ್ಷಿತಫಲಂ

ಶ್ಲೋಕ।। ದಾನಧರ್ಮ ಬಹುಭೃತ್ಯ ಸಂಯುತಃ ಕೋಮಲಾಮಲ ತನುರ್ಗೃಹಪ್ರಿಯಃ । ಅವನೇಯ ಭವನೇ ವಿರೋಚನೇ ಶೀತದೀಧಿತ ನಿರೀಕ್ಷಿತೇಸತಿ ।।ತಾ।। ಕುಜಕ್ಷೇತ್ರಗಳಾದ ಮೇಷ ವೃಶ್ಚಿಕದಲ್ಲಿ ರವಿಯು ಚಂದ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ದಾನಧರ್ಮ ಮಾಡುವವನು, ಅನೇಕ ಸೇವಕರುಗಳುಳ್ಳವನು, ಕೋಮಲವಾಗಿಯೂ ಸುಕುಮಾರವಾಗಿಯೂ ಇರುವ

ಶರೀರ ಉಳ್ಳವನು ಮತ್ತು ಮನೆ (ಗೃಹ) ಮೇಲೆ ವಿಶೇಷ ಪ್ರೀತಿ ಉಳ್ಳವನೂ ಆಗುತ್ತಾನೆ ॥೭೪॥

## ಕುಜಗೇಹಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ॥ ಕ್ರೂರೋನರಃ ಸಂಗರಕರ್ಮಧೀರ ಶ್ಚಾರಕ್ತನೇತ್ರಾಂಘ್ರಿರಲಂ ಬಲೀ ಯರ್ಾ। ಭವೇದವಶ್ಯಂ ಕುಜಗೇಹ ಸಂಸ್ಥೇ ದಿವಾಮಣೌ ಕ್ಷೋಣಿಸುತೇನ ದೃಷ್ಟೇ ॥೭೫॥ ತಾ॥ ಅಂಗಾರಕ ಕ್ಷೇತ್ರಗಳಾದ (೧-೮)ರಲ್ಲಿ ಸೂರ್ಯನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಅತಿ ಕ್ರೂರ ಸ್ವಭಾವವುಳ್ಳವನು, ಧೀರ, ಅರಕ್ತಾಂತ ನೇತ್ರ ಗಳುಳ್ಳವನು, ಕಾಲುಗಳು ಕೆಂಪಾಗಿರುವವನು ಮತ್ತು ಬಲಿಷ್ಠನೂ ಆಗುತ್ತಾನೆ॥೭೫॥

## ಮೇಷ ವೃಶ್ಚಿಕಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ॥ ಸುಖೇನ ಸತ್ವೇನ ಧನೇನ ಹೀನಃ ಪ್ರೇಕ್ಷ್ಯಃ ಪ್ರವಾಸೀಮಲಿನಃ ಸದೈವ। ಭವೇದವಶ್ಯಂ ಪರರ್ವಾ ಮನುಷ್ಯಃ ಸಹಸ್ರರಶ್ಮೌಕುಜಭೇಜ್ಞದೃಷ್ಟೇ ॥ತಾ॥ ಕುಜಕ್ಷೇತ್ರ ಗಳಾದ ಮೇಷ ವೃಶ್ಚಿಕಗಳಲ್ಲಿ ರವಿಯಿದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನು ಸೌಖ್ಯ, ಶಕ್ತಿ, ಧನ ಇವುಗಳಿಂದ ಬಿಡಲ್ಪಟ್ಟವನು, ಪರಿಚಾರಕ ಅಥವಾ ದೂತಕರ್ಮ ಮಾಡುವವನು, ಸದಾ ತಿರುಗುವವನು, ಮಲಿನ ಸ್ವಭಾವ ಉಳ್ಳವನು, ಅಪರಾಕ್ರಮಿ ಈ ವಿಧವಾದ ಮನುಷ್ಯನಾಗುತ್ತಾನೆ ॥೭೬॥

## ಮೇಷ ವೃಶ್ಚಿಕಸ್ಥೋ ರವೌ ಗುರುದೃಷ್ಟಿಫಲಂ

ಶ್ಲೋಕ॥ ದಾತಾ ದಯಾಲುರ್ಬಹುಲಾರ್ಥ ಯುಕ್ತೋ ನೃಪಾಲಮಂತ್ರೀ ಕುಲ ಧುರ್ಯಮರ್ತ್ಯಃ । ಸ್ಯಾನ್ನನವೋ ಭೂತನಯಾ ಲಯಸ್ಥೇ ಪತ್ಯೌನಲಿನ್ಯಾಃ ಕಿಲಜೀವ ದೃಷ್ಟೇ ॥೭೭॥ತಾ॥ ಕುಜಕ್ಷೇತ್ರಸ್ಥನಾದ ರವಿಯು ಗುರುದೃಷ್ಟಿಯುಕ್ತನಾದರೆ ಜಾತಕನು ದಯಾವಂತನು, ದಾನಶೀಲನು, ಅತಿಶಯ ಸಂಪತ್ತುಳ್ಳವನೂ, ರಾಜಮಂತ್ರಿಯೂ, ಕುಲಶ್ರೇಷ್ಠನೂ ಆಗುತ್ತಾನೆ ॥೭೭॥

## ಮೇಷ ವೃಶ್ಚಿಕಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ॥ ಹೀನಾಂಗನಾ ಪ್ರೀತಿರತೀವದೀನೋ ಧನೇನಹೀನೋ ಮನುಜಃ ಕುಮಿತ್ರಃ । ತ್ವಗ್ದೋಷಯುಕ್ತಃ ಕ್ಷಿತಿಪುತ್ರಗೇಹೇ ಮಿತ್ರೇಧಿಸಂಸ್ಥೇ ಭೃಗುಪುತ್ರ ದೃಷ್ಟಃ ॥೭೮॥ತಾ॥ ಕುಜಕ್ಷೇತ್ರಗಳಾದ (೧-೮) ರಲ್ಲಿ ರವಿ, ಶುಕ್ರರಿಂದ ನೋಡಲ್ಪಟ್ಟರೆ ನೀಚ ಜಾತಿಯವರಾದ ಸ್ತ್ರೀಯರಲ್ಲಿ ಪ್ರೀತಿಯೂ, ಅತ್ಯಂತ ದೀನನೂ, ಧನ-ಹೀನನೂ, ದುಷ್ಟಮಿತ್ರರುಳ್ಳವನೂ, ಚರ್ಮದೋಷ ರೋಗ (ದದ್ರು ಮೊದಲಾದದ್ದು) ಉಳ್ಳವನೂ ಆಗುವನು ॥೭೮॥

## ಮೇಷ ವೃಶ್ಚಿಕಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ।। ಉತ್ಸಾಹ ಹೀನೋ ಮಲಿನೋತಿದೀನೋ ದುಃಖಾಭಿಭೂತೋ ವಿಮತಿರ್ನರಸ್ಯಾತ್। ಕಾಂತೇನಲಿನ್ಯಾಃ ಕ್ಷಿತಿಜಾಲಯಸ್ಥೇ ಪ್ರಸೂತಿಕಾಲೇ ರವಿಜೇನ ದೃಷ್ಟೇ ।।೭೯।।ತಾ।। ಅಂಗಾರಕ ಗ್ರಹಕ್ಷೇತ್ರಗಳಾದ (೧-೮)ರಲ್ಲಿ ರವಿಯಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಜಾತಕನು ಉತ್ಸಾಹಹೀನನು, ಮಲಿನನು, ಅತಿ ದೈನ್ಯವೃತ್ತಿಯುಳ್ಳವನು, ದುಃಖಾದಿಗಳಿಂದ ಸಂಕಟಪಡುವವನು, ಮಂದಬುದ್ಧಿಯುಳ್ಳವನೂ ಆಗುವನು ।।೭೯।।

## ವೃಷಭತುಲಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ।। ವಾರಾಂಗನಾ ಪ್ರೀತಿಕರೋ ನಿತಾಂತಂ ಸ್ಯಾದ್ಭೂರಿಭಾರ್ಯಃ ಸಲಿಲೋಪಜೀವೀ । ದೀನಾಧಿರಾಜೇ ಭೃಗುಜಾಲಯಸ್ಥೇ ಕಲಾನಿಧೌ ಪ್ರೇಕ್ಷಣತಾಂ ಪ್ರಯಾತೇ ।।೮೦।।ತಾ।। ಜನ್ಮಕಾಲದಲ್ಲಿ ರವಿಯು ವೃಷಭ ತುಲೆಗಳಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟರೆ, ಯಾವಾಗಲೂ ವಾರಸ್ತ್ರೀಯಲ್ಲಿ ಆಸಕ್ತಿ, ಪ್ರೀತಿ ಸಂಭೋಗ ಮೊದಲಾದ್ದರಿಂದಲೂ, ಅನೇಕ ಪತ್ನಿಗಳುಳ್ಳವನಾಗಿಯೂ, ನೀರಿನ ಮೂಲದಿಂದ ಜೀವನ ಮಾಡುವವನೂ ಆಗುತ್ತಾನೆ ।।೮೦।।

## ವೃಷಭತುಲಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ।। ಸಂಗ್ರಾಮ ಧೀರೋತಿತರಾಂ ಮಹೌಜಾಃ ಸುಸಾಹನ ಪ್ರಾಪ್ತ ಧನೋರುಕೀರ್ತಿಃ । ಕ್ಷೀಣೋನರಃ ಸ್ಯಾದ್ಭೃಗು ಮಂದಿರಸ್ಥೇ ಸಹಸ್ರರಶ್ಮೌಕುಸುತೇನ ದೃಷ್ಟೇ ।।೮೧।।ತಾ।। ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ರವಿ ಇದ್ದು ಅಂಗಾರಕ ನಿಂದ ನೋಡಲ್ಪಟ್ಟರೆ ಯುದ್ಧದಲ್ಲಿ ಧೀರನು ಪುರುಷಾರ್ಥಿ, ಅತ್ಯಂತ ತೇಜಸ್ಸುಳ್ಳವನು, ಸಾಹಸದಿಂದ ಧನವನ್ನು, ಯಶಸ್ಸನ್ನು ಸಂಪಾದಿಸುವವನೂ ಆಗುತ್ತಾನೆ ।।೮೧।।

## ವೃಷಭ ತುಲಾಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ।। ಸಂಗೀತ ಸತ್ಕಾವ್ಯಕಲಾ ಕಲಾಪೇಲೇಖ ಕ್ರಿಯಾಯಾಂ ಕುಶಲೋನರಸ್ಸ್ಯಾತ್ । ಪ್ರಸನ್ನಮೂರ್ತಿ ಭೃಗುವೇಶ್ಮಯಾತೆ ಪ್ರದ್ಯೋತನೇ ಸೋಮಸುತೇನದೃಷ್ಟೇ ।।೮೨।।ತಾ।। ಜನ್ಮಕಾಲದಲ್ಲಿ ಶುಕ್ರಕ್ಷೇತ್ರಗಳಾದ ವೃಷಭ ತುಲಾರಾಶಿಗಳಲ್ಲಿ ಎಲ್ಲಿಯಾದರೂ ಸೂರ್ಯನಿದ್ದು, ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಸಂಗೀತ, ಗಾನ, ನಾಟ್ಯ ಈ ಮೊದಲಾದ ಕಲೆಗಳನ್ನು ತಿಳಿದವನಾಗಿಯೂ, ಕಾವ್ಯರಚನೆ ಮಾಡುವುದು ಮತ್ತು ಕಾವ್ಯಪಾಠ ಹೇಳುವುದು

ಮೊದಲಾದವುಗಳಲ್ಲಿಯೂ, ಬರೆಯುವುದರಲ್ಲಿಯೂ ಶ್ರದ್ಧೆಯುಳ್ಳವನು ಮತ್ತು ಪ್ರಸನ್ನವಾದ ಶಾಂತ ಸ್ವಭಾವ ಉಳ್ಳವನೂ ಆಗುತ್ತಾನೆ ॥೮೨॥

## ವೃಷಭ ತುಲಾಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ॥ ವಂಶಾನುಮಾನಾ ನೃಪತಿ ಪ್ರಧಾನಃ ಸದ್ರತ್ನ ಭೂಷಾ ದ್ರವಿಣಾನ್ವಿತೋವಾ। ಭೀರುರ್ನರಶ್ಶುಕ್ರಗೃಹಂ ಪ್ರಪನ್ನೇ ದೃಷ್ಟೇರವೌ ದೇವ ಪುರೋಹಿತೇನ ॥೮೩॥ತಾ॥ ಜನ್ಮಕಾಲದಲ್ಲಿ ಶುಕ್ರಕ್ಷೇತ್ರಗಳಾದ ವೃಷಭದಲ್ಲಾಗಲೀ, ತುಲೆಯಲ್ಲಾಗಲೀ, ರವಿಯಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ವಂಶಾನುಮಾನವಾಗಿ ರಾಜನಾಗುವನು, ಅಥವಾ ತತ್ಸಮಾನನಾಗಲೀ ಮಂತ್ರಿಯೇ ಆಗಲಿ ಆಗುವನು ಅಂದರೆ ರಾಜನ ಮಗನಾದರೆ ರಾಜನೇ ಆಗುತ್ತಾನೆ, ಇತರ ವಂಶಸ್ಥನಾದರೆ ಪ್ರಧಾನನಾಗುವನು. ರತ್ನಗಳ ಆಭರಣದಿಂದಲೂ, ದ್ರವ್ಯದಿಂದಲೂ ಐಶ್ವರ್ಯವಂತನಾಗುವನು ಮತ್ತು ಭಯಪಡತಕ್ಕ ಸ್ವಭಾವ ಉಳ್ಳವನಾಗುವನು ॥೮೩॥

## ವೃಷಭ ತುಲಾಸ್ಥೇ ಶುಕ್ರದೃಷ್ಟಿಫಲಂ

ಶ್ಲೋಕ॥ ಸುಲೋಚನಃ ಕಾಂತವಪುಃ ಪ್ರಸನ್ನೋ ಮಿತ್ರೈ ರಮಿತ್ರೈಸ್ಸಹಿತಸ್ಸಚಿಂತಃ । ಭವೇನ್ನರೋ ದೈತ್ಯಗುರೋರ್ಗೃಹೇರ್ಕೇ ಸಂವೀಕ್ಷಿತೇ ದೈತ್ಯಪುರೋಹಿತೇನ ॥೮೪॥ತಾ॥ ಜನ್ಮಕಾಲದಲ್ಲಿ ಶುಕ್ರಕ್ಷೇತ್ರಗಳಾದ ವೃಷಭದಲ್ಲಾಗಲೀ, ತುಲೆಯಲ್ಲಾಗಲೀ ರವಿಯಿದ್ದು ಶುಕ್ರನಿಂದ ನೋಡಲ್ಪಟ್ಟರೆ ಪುರುಷನು ಸುನೇತ್ರಗಳುಳ್ಳವನು, ಸುಂದರವಾದ ಶರೀರವುಳ್ಳವನು, ರಾಜನ ಮಂತ್ರಿಯೂ, ಮಿತ್ರರು ಮತ್ತು ಶತ್ರುಗಳಿಂದಲೂ ಸಹ ಆವೃತನಾಗಿರುವನು ॥೮೪॥

## ವೃಷಭ ತುಲಾಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ॥ ದೀನೋರ್ಥ ಹೀನೋ ಲಸತಾಂ ಪ್ರಪನ್ನೋ ಭಾರ್ಯಾಮನೋವೃತ್ತಿ ವಿಭಿನ್ನವೃತ್ತ-। ಅಸಾಧುವೃತ್ತಾ ಮಯಯುಙ್ ನರಃ ಸ್ಯಾಚ್ಛುಕ್ರಾಲಯೇತ್ವರ್ಕಸುತೇನ ದೃಷ್ಟೇ ॥೮೫॥ತಾ॥ ಶುಕ್ರಕ್ಷೇತ್ರಗಳಾದ ವೃಷಭದಲ್ಲಾಗಲೀ, ತುಲೆಯಲ್ಲಾಗಲೀ ರವಿಯಿದ್ದು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ನಿರ್ಧನನು, ದೀನನು, ಆಲಸ್ಯ ಉಳ್ಳವನು (ಸೋಮಾರಿ) ಸ್ತ್ರೀಯರಲ್ಲಿ ಲೀನವಾದ ಮನಸ್ಸುಳ್ಳವನು, ಚಮತ್ಕಾರವಾದ ನಡವಳಿಕೆಯುಳ್ಳವನು, ದುರಾಚಾರಿ ಮತ್ತು ರೋಗಿಯೂ ಆಗುತ್ತಾನೆ ॥೮೫॥

## ಮಿಥುನ ಕನ್ಯಾಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ॥ ಮಿತ್ರೈರಮಿತ್ರೈಃ ಪರಿಪೀಡಿತಶ್ಚ ವಿದೇಶಯಾ ತೋಪಿಧನೇನ ಹೀನಃ। ನಿರಂತರೋ ದ್ವೇಗಕರೋ ನರಸ್ಸ್ಯಾತ್ಸೌಮ್ಯಾ ಲಯೇರ್ಕೇ ಹರಿಣಾಂಕದೃಷ್ಟೇ ॥೮೬॥

ತಾ।। ಜನ್ಮಕಾಲದಲ್ಲಿ ರವಿಯು ಮಿಥುನದಲ್ಲಾಗಲೀ, ಕನ್ಯೆಯಲ್ಲಾಗಲೀ ಇದ್ದು ಚಂದ್ರನಿಂದ ನೋಡಲ್ಪಟ್ಟರೆ, ಜಾತಕನು ಸ್ನೇಹಿತರಿಂದಲೂ, ಶತ್ರುಗಳಿಂದಲೂ ಪೀಡಿಸಲ್ಪಡುವನು, ದ್ರವ್ಯ ಸಂಪಾದನೆಗೋಸ್ಕರ ಪರದೇಶಕ್ಕೆ ಹೋದರೂ ದ್ರವ್ಯಲಾಭ ವಾಗದಿದ್ದವನೂ, ನಿರಂತರ ಕಾರ್ಯಾರಂಭಿಯಾಗಿದ್ದರೂ ಫಲವಿಲ್ಲದವನೂ ಆಗುವನು ।।೮೬।।

## ಮಿಥುನ ಕನ್ಯಾಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ।। ರಿಪುಭಯ ಕಲಹಾದ್ಯೈಃ ಸಂಯುತೋತ್ಯಂತ ದೀನೋ ರಣಜಯ ವಿಧಿಹೀನೋತ್ಯಂತ ಸಂಜಾತ ಲಗ್ನಃ । ಭವತಿ ನನು ಮನುಷ್ಯಃ ನಾಲಸಶ್ಚಾಪಿ ಹಂಸೇಬುಧ ಭವನ ನಿವಾಸೇ ಲೋಹಿತಾಂಗೇನ ದೃಷ್ಟೇ ।।೮೭।।ತಾ।। ಬುಧಕ್ಷೇತ್ರಗಳಾದ ಕನ್ಯಾ ಮಿಥುನಗಳಲ್ಲಿ ರವಿಯಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ರಿಪುಭಯ, ಶತ್ರುಗಳಲ್ಲಿ ಜಗಳ-ಈ ಮೊದಲಾದುದರಿಂದ ಕೂಡಿ ಅತ್ಯಂತ ದೀನನಾಗುವನು, ಯುದ್ಧದಲ್ಲಿ ಜಯವಿಲ್ಲದೆ ಬುದ್ಧಿ ಇಲ್ಲದೆ ಅತ್ಯಂತ ನಾಚಿಕೆಯುಳ್ಳವನೂ ಆಗುತ್ತಾನೆ ।।೮೭।।

## ಮಿಥುನ ಕನ್ಯಾಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ।। ಭೂಪ ಪ್ರಸಾದೋನ್ನತಿ ಮಾತ್ಮಜಾತಾಂ ಸಹಂತಿನೋ ಶತ್ರು ಜನಾಪ್ತಾ ಮಿತ್ರಾಃ । ಪ್ರಸೂತಿಕಾಲೇ । ನಲಿನೀವನೇಶೇ ಬುಧರ್ಕ್ಷ ಸಂಸ್ಥೇಚ ಬುಧೇನ ದೃಷ್ಟೇ ।।೮೮।। ತಾ।। ಜನ್ಮಕಾಲದಲ್ಲಿ ಮಿಥುನದಲ್ಲಾಗಲೀ ಕನ್ಯೆಯಲ್ಲಾಗಲೀ ರವಿಯಿದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನು ರಾಜಪ್ರಸಾದದಿಂದ ಉನ್ನತ- ದೆಶೆಗೆ ಬಂದು, ಪುತ್ರಾದಿಗಳು ಶತ್ರು ಮತ್ತು ಆಪ್ತಮಿತ್ರರುಗಳಿಂದ ಕೂಡಿದವನು ಮತ್ತು ಶತ್ರುಗಳನ್ನು ನಾಶಮಾಡುವವನು ಮತ್ತು ರಾಜಗೌರವ ಉಳ್ಳವನೂ ಆಗುತ್ತಾನೆ ।।೮೮।।

## ಮಿಥುನ ಕನ್ಯಾಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ।। ಸುಗುಪ್ತ ಮಂತ್ರೋತಿ ತರಾಂ ಸ್ವತಂತ್ರಃ ಕಲತ್ರ ಪುತ್ರಾದಿ ಜನೇಸ ವರ್ಗಃ । ಭವೇನ್ನರಃ । ಶೀತಕರಾತ್ಮಜರ್ಕ್ಷೇ ದಿವಾಕರೇ ದೇವಗುರು ಪ್ರದೃಷ್ಟೇ ।।೮೯।। ತಾ।। ಜನ್ಮಕಾಲದಲ್ಲಿ ಬುಧನ ಕ್ಷೇತ್ರಗಳಾದ ಮಿಥುನ ಕನ್ಯೆಗಳಲ್ಲಿ ಎಲ್ಲಿಯಾದರೂ ರವಿಯಿದ್ದು ಗುರುದೃಷ್ಟಿಯಿದ್ದ ಕಾಲದಲ್ಲಿ ಜನ್ಮಿಸಿದವನು ಯಾವುದಾದರೂ ಒಂದಾನೊಂದು ಸಂಗತಿಯನ್ನು ಗುಪ್ತವಾಗಿ ಇಡಬೇಕೆಂದು ಆಲೋಚಿಸಿದರೆ ಅದನ್ನು ಗುಪ್ತವಾಗಿಡುವನು, ಸ್ವತಂತ್ರನಾಗಿರುವನು, ಹೆಂಡತಿ ಮತ್ತು ಮಗ ಇವರುಗಳಲ್ಲಿ ಬಹು ಗರ್ವದಿಂದ ಇರುವನೂ ಆಗುತ್ತಾನೆ ।।೮೯।।

## ಮಿಥುನ ಕನ್ಯಾಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ॥ ವಿದೇಶವಾಸೀ ಚಪಲೋವಿಲಾಸೀ ವಿಷಾಗ್ನಿ ಶಸ್ತ್ರಾಂಕಿತ ಮೂರ್ತಿ ವರ್ತೀ । ಪೃಥ್ವೀಪತೇ ರ್ದೌತ್ಯಕರೋನರಃ ಸ್ಯಾ ದರ್ಕೇ ಬುಧರ್ಕ್ಷೇ ಭೃಗುಪುತ್ರದೃಷ್ಟೇ ॥೯೦॥ ಜನ್ಮಕಾಲದಲ್ಲಿ ಮಿಥುನ ಕನ್ಯಾರಾಶಿಗಳಲ್ಲಿ ರವಿಯಿದ್ದು ಶುಕ್ರನಿಂದ ನೋಡಲ್ಪಟ್ಟರೆ ಜನ್ಮಿಸಿದವನು ಪರದೇಶದಲ್ಲಿ ವಾಸಿಸುವನು, ಚಪಲ, ವಿಲಾಸವಾಗಿರುವವನು, ವಿಷ, ಶಸ್ತ್ರ, ಅಗ್ನಿ ಈ ಮೂಲದಿಂದ ದೇಹದಮೇಲೆ ಚಿನ್ಹೆ (ಮಚ್ಚೆ)ಯುಳ್ಳವನು ಮತ್ತು ರಾಜದೂತನೂ ಆಗುತ್ತಾನೆ ॥೯೦॥

## ಮಿಥುನ ಕನ್ಯಾಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ॥ ಧೂರ್ತೋತಿ ಭೃತ್ಯೋ ಗತಚಿತ್ತಬುದ್ಧಿರ್ನಿಜ್ಯೈಃ ಸದೋ ದ್ವಿಗ್ನಮನಾ ಮನುಷ್ಯಃ । ದಿವಾಕರೇ ಶೀತಕರಾತ್ಮಜರ್ಕ್ಷೇ ನಿರೀಕ್ಷಿತೇ ಭಾಸ್ಕರಿಣಾಪ್ರಸೂತೌ ॥೯೧॥ ಜನ್ಮಕಾಲದಲ್ಲಿ ಹುಟ್ಟಿದವನು ಅತಿ ಧೂರ್ತ, ಅಂದರೆ ದಾಕ್ಷಿಣ್ಯವಿಲ್ಲದೆ ಮಾತನಾಡುವವನು, ಅಧಿಕವಾಗಿ ಸೇವಕರುಗಳಿಂದ ಸೇವಿಸಲ್ಪಡುವವನು, ಬುದ್ಧಿಯಿಲ್ಲದವನು, ನಿರಂತತರ ಉದ್ವೇಗ ಉಳ್ಳವನು ಆಗುತ್ತಾನೆ ॥೯೧॥

## ಕರ್ಕಾಟಕ ರಾಶಿಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ॥ ಪುಣ್ಯೈಶ್ಚ ಪಾನೀಯ ಭವ್ಯೈರ್ಮಹಾರ್ಥೀ ಪೃಥ್ವೀಪತಿರ್ವಾ ಸಚಿವಶ್ಚರೌದ್ರಃ । ಭವೇನ್ನರೋ ಜನ್ಮನಿ ಚಂಡರಶ್ಮೌ ಕರ್ಕಾಟಕಸ್ಥೇ ಶಿಶಿರಾಂಶುದೃಷ್ಟೇ ॥೯೨॥ ಜನ್ಮನಿ-ಜನ್ಮಕಾಲದಲ್ಲಿ, ಚಂಡರಶ್ಮೌ-ರವಿಯು ಕರ್ಕಾಟಕಸ್ಥೇ-ಕರ್ಕಾಟಕ ರಾಶಿಯಲ್ಲಿದ್ದು, ಶಿಶಿರಾಂಶು ದೃಷ್ಟೇ-ಚಂದ್ರನಿಂದ ನೋಡಲ್ಪಟ್ಟರೆ, (ಜಾತಕನು) ಪುಣ್ಯೈಶ್ಚ-ಪುಣ್ಯಕಾರ್ಯಗಳು ಮಾಡುವುದರಿಂದಲೂ, ಪಾನೀಯ ಭವ್ಯೈ-ಪಾನೀಯವಾದ ವಸ್ತುಗಳಿಂದಲೂ, ಮಹಾರ್ಥೀ-ಅತ್ಯಂತವಾಗಿ ಅಪೇಕ್ಷಿಸಲ್ಪಡತಕ್ಕವನು. ಪೃಥ್ವೀಪತಿಃ-ರಾಜನೂ ಆಗುತ್ತಾನೆ, ಸಚಿವಶ್ಚ-ಅಥವಾ ಮಂತ್ರಿಯಾದರೂ, ಸನರಃ-ಆ ಮನುಷ್ಯನು, ರೌದ್ರಃ-ರೌದ್ರಾಕಾರ ಉಳ್ಳವನು, ಭವತಿ-ಆಗುತ್ತಾನೆ. ತಾ॥ ಕಟಕರಾಶಿಯಲ್ಲಿ ರವಿಯಿದ್ದು ಚಂದ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಪುಣ್ಯ ಸಂಪಾದನೆ ಮಾಡುವನು, ಪಾನೀಯ ವಸ್ತುಗಳಲ್ಲಿ ಪ್ರೀತಿಯೂ, ರಾಜನೂ ಅಥವಾ ಮಂತ್ರಿಯಾದರು ಆಗಿ, ಕ್ರೂರಸ್ವಭಾವ ಉಳ್ಳವನಾಗುತ್ತಾನೆ ॥೯೨॥

## ಕಟಕಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ॥ ಸ್ವಬಂಧುವರ್ಗೇ ಗತಚಿತ್ತಶುದ್ಧಿಃ ಶೋಫಾದಿ ರೋಗೈಶ್ಚ ಭಗಂಧರೈರ್ವಾ। ಪೀಡಾನರಾಣಾಂಹಿ ಕುಲೀರಸಂಸ್ಥೇ ದಿವಾಮಣೌ ಕ್ಷೋಣಿ ಸುತೇನದೃಷ್ಟೇ ॥೯೩॥ತಾ॥ ಜನ್ಮಕಾಲದಲ್ಲಿ ಕಟಕರಾಶಿಯಲ್ಲಿ ರವಿಯು ಕುಜನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ತನ್ನ ಬಂಧುವರ್ಗಕ್ಕೆ ಅಹಿತ ಮಾಡತಕ್ಕವನು, ಶೋಭೆ ಮೊದಲಾದ ರೋಗಗಳಿಂದ ಪೀಡಸಲ್ಪಟ್ಟವನು, ಭಂಗಧರ ಮೊದಲಾದ ರೋಗದಿಂದ ಶ್ರಮಪಡತಕ್ಕವನೂ ಆಗುವನು ॥೯೩॥

## ಕಟಕಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ ॥ ವಿದ್ಯಾಯಶೋ ಮಾನವಿರಾಜ ಮಾನೋ ಭೂಪಾನುಕಂಪಾಪ್ತ ಮನೋಭಿಲಾಷಃ । ನಿರಸ್ತಶತೃಶ್ಚ ಬುಧೇನದೃಷ್ಟೇ ಕರ್ಕಾಟಕಸ್ಥೇಃ ದ್ಯುಮಣೌ ನರಸ್ಸ್ಯಾತ್ ॥ ೯೪॥ತಾ॥ ಜನ್ಮಕಾಲದಲ್ಲಿ ಕಟಕರಾಶಿಯಲ್ಲಿ ರವಿ ಇದ್ದು ಬುಧ ನಿಂದ ನೋಡಲ್ಪಟ್ಟರೆ ಜಾತಕನು ವಿದ್ಯಾ, ಯಶಸ್ಸು, ಗೌರವ ಈ ವಿಷಯಗಳಲ್ಲಿ ಚೆನ್ನಾಗಿ ವಿರಾಜಿಸುತ್ತಿರುವನು, ರಾಜಾನುಗ್ರಹದಿಂದ ಇಚ್ಛಿಸಿದ ಫಲಪ್ರಾಪ್ತಿಯಾಗಲುಳ್ಳ ವನು ಮತ್ತು ಶತ್ರುಗಳನ್ನು ನಾಶಮಾಡತಕ್ಕವನೂ ಆಗುತ್ತಾನೆ ॥೯೪॥

## ಕಟಕಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ॥ ಕುಲಾಧಿಕಶ್ಚಾ ಮಲಕೀರ್ತಿಶಾಲೀ ಭೂಪಾಲ ಸಂಪ್ರಾಪ್ತ ಮಹತ್ವ ದಾರ್ಥಃ ॥ ಭವೇನ್ನರಃ ಶೀತಕರರ್ಕ್ಷಯಾತೆ ದಿವಾಮಣೌವಾಕ್ಪತಿ ವೀಕ್ಷ್ಯಮಾಣೆ ॥೯೫॥ತಾ॥ ಜನ್ಮಕಾಲದಲ್ಲಿ ಕಟಕರಾಶಿಯಲ್ಲಿ ರವಿಯು ಗುರುವಿನಿಂದ ನೋಡಲ್ಪಟ್ಟರೆ ಜಾತಕನು ತನ್ನ ವಂಶದಲ್ಲಿ ಅತಿಶಯವಾದ ಕೀರ್ತಿಯಿಂದ ಶೋಭಿತನೂ, ರಾಜನಿಂದ ದೊಡ್ಡ ಸನ್ಮಾನವನ್ನು ಹೊಂದುವನು, ದ್ರವ್ಯಲಾಭ ಉಳ್ಳವನೂ ಆಗುತ್ತಾನೆ ॥೯೫॥

## ಕಟಕಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ॥ ಸ್ತ್ರೀ ಸಂಶ್ರಯಾ ದ್ವಸ್ತ್ರಭನೋ ಪಲಬ್ಧಿಃ ಪರಸ್ಯಕೃತ್ಯೇ ಹೃದಯೇ ವಿಷಾದಃ । ನಿಶಾಕರಾ ಗಾರಕೃತಾಧಿಕಾರೆ ದಿವಾಕರೇ ಶುಕ್ರನಿರೀಕ್ಷ್ಯಮಾಣೆ ॥೯೬॥ ॥ತಾ॥ ಜನನಕಾಲದಲ್ಲಿ ಕಟಕರಾಶಿಯಲ್ಲಿ ರವಿಯು ಶುಕ್ರನಿಂದ ನೋಡಲ್ಪಟ್ಟರೆ ಸ್ತ್ರೀಸಂಬಂಧದಿಂದ ವಸ್ತ್ರ, ಧನವನ್ನು ಸಂಪಾದಿಸುವವನೂ, ಎರಡನೇಯವರ ಕಾರ್ಯ ನೋಡಿ ಮನಸ್ಸಿನಲ್ಲಿ ವಿಷಾದಪಡುವವನೂ ಆಗುತ್ತಾನೆ ॥೯೬॥

## ಕಟಕಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ॥ ಕಫಾನಿಲಾರ್ತಃ ಪಿಶುನೋನ್ಯಕಾರ್ಯೇ ಸಾದ್ಯಂತರಾಯ ಶ್ಚಪಲಸ್ವ್ವಭಾವಃ । ಕ್ಲೇಶೀನರಃ ಶೀತಕರರ್ಕ್ಷ ಸಂಸ್ಥ ದಿವಾಮಣೌ ಮಂದನಿರೀಕ್ಷ್ಯಮಾಣೇ ॥೯೭॥ ತಾ॥ ಜನ್ಮಕಾಲದಲ್ಲಿ ಕಟಕದಲ್ಲಿ ರವಿಯು ಶನಿಯಿಂದ ನೋಡಲ್ಪಟ್ಟರೆ ಜಾತಕನು ಶ್ಲೇಷ್ಮ, ವಾತಪ್ರಕೋಪದಿಂದ ರೋಗ ಉಳ್ಳವನು, ಪಿಶುನನು ಪರರ ಕಾರ್ಯದಲ್ಲಿ ಕಾರ್ಯೋ ನಡೆಯದಂತೆ ವಿಘಾತ ಮಾಡುವವನು, ಚಪಲಬುದ್ಧಿಯುಳ್ಳವನು ಕ್ಲೇಶಪಡತಕ್ಕವನೂ ಆಗುತ್ತಾನೆ ॥೯೭॥

## ಸಿಂಹಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ॥ ಧೂರ್ತೋ ಗಭೀರಃ-ಕ್ಷಿತಿಪಾಲಮಾನ್ಯೋ ಧನೋಪಲಬ್ಧಾರ್ಥಯುತಃ ಪ್ರಸಿದ್ಧಃ । ಮಿತ್ರೇ ನಿಜಕ್ಷೇತ್ರಯುತೇ ಪ್ರಸೂತಃ ನಕ್ಷತ್ರನಾಥೇನ ನಿರೀಕ್ಷ್ಯಮಾಣೇ ॥೯೮॥ತಾ॥ ಜನನಕಾಲದಲ್ಲಿ ರವಿಯು ಸಿಂಹರಾಶಿಯಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಧೂರ್ತಲಕ್ಷಣ ಉಳ್ಳವನು, ಅಂದರೆ ದಾಕ್ಷಿಣ್ಯ ನೋಡದೆ ಕೋಪ ಬರುವಂತೆ ಮಾಡುವವನು, ಗಂಭೀರವಾಗಿರುವವನು, ಕ್ಷಿತಿಪತಿ ಪೂಜ್ಯನೂ, ರಾಜರಿಂದ ಧನಪ್ರಾಪ್ತಿಯುಳ್ಳವನೂ, ಮತ್ತು ಸ್ವಚರಿತ್ರದಲ್ಲಿ ಪ್ರಸಿದ್ಧ ಪುರುಷನೂ ಆಗುತ್ತಾನೆ ॥೯೮॥

## ಸಿಂಹಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ॥ ನಾನಾಂಗನಾ ಪ್ರೀತಿರತೀವಧೂರ್ತಃ ಕಫಾತ್ಮಕ ಕ್ರೂರತರಶ್ಚಶೂರಃ । ಮಹೋದ್ಯ ಮಸ್ಸ್ಯಾನ್ಮನುಜ ಪ್ರಧಾನಃ ಸಿಂಹಸ್ಥಿ ತೇರ್ಕೆ ಕುಸುತೇನದೃಷ್ಟೇ ॥೯೯॥ ತಾ॥ ಜನನಕಾಲದಲ್ಲಿ ರವಿಯು ಸಿಂಹದಲ್ಲಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಅನೇಕ ಸ್ತ್ರೀಯರಲ್ಲಿ ಪ್ರೀತಿಯುಳ್ಳವನು, ಅತ್ಯಂತ ಧೂರ್ತಸ್ವಭಾವ ಉಳ್ಳವನು, ಕಫ ಧಾತುವೇ ಪ್ರಧಾನವಾಗಿ ಉಳ್ಳವನು, ಕ್ರೂರವಾದ ಗುಣ ಉಳ್ಳವನು ಮತ್ತು ಶೂರನೂ, ಅನೇಕ ಕಾರ್ಯಗಳಲ್ಲಿ ಮಹೋದ್ಯಮ ಉಳ್ಳವನೂ ಆಗುತ್ತಾನೆ ॥೯೯॥

## ಸಿಂಹಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ॥ ಧೂರ್ತೋ ನೃಪಾನು ವ್ರಜನಃ ಸುಸತ್ವೋ ವಿದ್ವತ್ಪ್ರಿಯೋ ಲೇಖನ ತತ್ಪರಶ್ಚ । ಭವೇನ್ನರಃ ಕೇಸರಣೇ ಪ್ರಯಾತೆ ದಿವಾಮಣೌ ಸೌಮ್ಯ ನಿರೀಕ್ಷ್ಯಮಾಣೆ ॥೧೦೦॥ ಜನನ ಕಾಲದಲ್ಲಿ ಸೂರ್ಯನು ಸಿಂಹರಾಶಿಯಲ್ಲಿ ಬುಧನಿಂದ ನೋಡಲ್ಪಟ್ಟರೆ ಜಾತಪುರುಷನು ಧೂರ್ತನು, ರಾಜಾನುಯಾಯಿ ವಿದ್ವಾಂಸನು ಮತ್ತು ವಿದ್ವಾಂಸರಿಗೆ ಪ್ರೀತಿಯುಳ್ಳವನು, ಲೇಖನ ಕುಶಲನು ಆಗುತ್ತಾನೆ ॥೧೦೦॥

## ಸಿಂಹಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ॥ ದೇವಾಲಯಾರಾಮ ತಟಾಕವಾಪೀ ನಿರ್ಮಾಣಕರ್ತಾ ಸ್ವಜನ ಪ್ರಿಯಶ್ಚ । ಭವೇನ್ನರೋ ದೇವಪುರೋಹಿತೇನ ನಿರೀಕ್ಷಿತೈರ್ಕೆ ಮೃಗರಾಜಸಂಸ್ಥೆ ॥ ತಾ॥ ಜನ್ಮಕಾಲದಲ್ಲಿ ರವಿಯು ಸಿಂಹದಲ್ಲಿದ್ದು ಗುರುವಿನಿಂದ ನೋಡಲ್ಪಟ್ಟರೆ ದೇವಾಲಯ, ಉಪವನ, ಕೆರೆ, ಕೊಳ, ಭಾವಿ ಇವುಗಳ ನಿರ್ಮಾಣಕರ್ತನು, ಸ್ವಜನರಿಗೆ ಪ್ರೀತಿಯುಳ್ಳವನೂ ಆಗುತ್ತಾನೆ ॥೧೦೧॥

## ಸಿಂಹಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ॥ ತ್ವಗ್ದೋಷ ರೋಷಾಪಯ ಶೋಭಿಭೂಯೋ ಗತೋತ್ಸವ-ಸ್ತ್ರೀಯತೋ ಜನೋಝಿತಶ್ಚ । ಸ್ಯಾನ್ಮಾನವ ಸ್ಸತ್ಯದಯಾ ವಿಹೀನಃ ಪಂಚಾನನೇರ್ಕೇ ಭೃಗುಜೇನ ದೃಷ್ಟೇ ॥೧೦೨॥ತಾ॥ ಸಿಂಹರಾಶಿಯಲ್ಲಿ ಸೂರ್ಯನು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಚರ್ಮದೋಷವಾದ ರೋಗಗ್ರಸ್ತನೂ, ರೋಷವಂತನೂ, ಅಪಯಶಸ್ಸಿನಿಂದ ವ್ಯಾಪ್ತನಾಗಿ ಉತ್ಸವ ಹೀನನಾಗಿಯೂ, ತನ್ನ ಜನರಿಂದ ಬಿಡಲ್ಪಟ್ಟವನೂ, ಸತ್ಯವೂ ಭೂತದಯೆಯೂ ಇಲ್ಲದವನೂ ಆಗುತ್ತಾನೆ ॥೧೦೨॥

## ಸಿಂಹಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ॥ ಶಠೋನರಃಕಾರ್ಯವಿಘಾತ ಕರ್ತಾ ಸಂತಾಪಯೇದಾತ್ಮ ಜನಾಂಶ್ಚ ನೂನಂ । ನರೋ ಮೃಗೇಂದ್ರೋಪಗತೇ ದಿನೇಶೆ ದಿನೇಶಪುತ್ರೇಣ ನಿರೀಕ್ಷ್ಯಮಾಣೆ ॥೧೦೩॥ತಾ॥ ಜನ್ಮಕಾಲದಲ್ಲಿ ಸಿಂಹದಲ್ಲಿ ರವಿಯು ಶನಿಯಿಂದ ನೋಡಲ್ಪಟ್ಟರೆ ಜಾತಕನು ಶಠನು, (ಶಠಲಕ್ಷಣ ನಕ್ಷತ್ರಫಲ ಪ್ರಕರಣದಲ್ಲಿ ಹೇಳಿರುತ್ತೆ) ಯಾವ ಕಾರ್ಯವಾರೂ ಮಾಡುತ್ತಾ ಇದ್ದರೆ ಅದರಲ್ಲಿ ಪ್ರವೇಶಮಾಡಿ ಆ ಕಾರ್ಯ ನಡೆಯದಂತೆ ಮಾಡುವವನು, ತನ್ನ ಸ್ವಜನರಿಗೆ ಸಂಕಟ ಕೊಡುವವನೂ ಆಗುವನು ॥೧೦೩॥

## ಧನುರ್ಮೀನಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ॥ ಕಾಯಕಾಂತಿ ಸುತಸೌಖ್ಯ ಸಮೇತೋ ವಾಗ್ವಿಲಾಸ ಕುಶಲಃ ಕುಲಶಾಲೀ । ಸ್ಯಾನ್ನರಃ ಸುರ ಪುರೋಹಿತ ಸ್ಥಳೇ ಭಾಸ್ಕರೇ ಹಿಮಕರೇಣಹಿ ದೃಷ್ಟೇ ॥೧೦೪॥ತಾ॥ ಗುರುಕ್ಷೇತ್ರಗಳಾದ ಧನುಸ್ಸು, ಮೀನ ಈ ರಾಶಿಗಳಲ್ಲಿ ಎಲ್ಲಿಯಾದರೂ ರವಿಯು ಚಂದ್ರನಿಂದ ನೋಡಲ್ಪಟ್ಟರೆ ಜಾತಕನು ಉತ್ತಮವಾದ ಕಾಂತಿಮಂತನು, ಪುತ್ರ ಸುಖಯುಕ್ತನು, ಮಾತನಾಡುವುದರಲ್ಲಿ ಚತುರನು, ಸದ್ವಂಶದಲ್ಲಿ ಹುಟ್ಟಿದವನೂ ಆಗುತ್ತಾನೆ ॥೧೦೪॥

## ಧನುರ್ಮೀನಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ।। ಸಂಗ್ರಾಮ ಸಂತಪ್ತಯಶೋ ವಿಶೇಷೋ ವಕ್ತಾ ವಿಮುಕ್ತಾನು ಜನಾನುಸಂಗಃ । ಸ್ಥಿರಾಶ್ರಯೋ ಜೀವಗ್ರಹ ಸ್ಥಿತೇರ್ಕೆ ಭೌಮೇನದೃಷ್ಟೇ ಪುರುಷಃ ಪ್ರಚಂಡಃ ।।೧೦೫।।ತಾ।। ಜನನಕಾಲದಲ್ಲಿ ಧನುರ್ಮೀನ ರಾಶಿಗಳಲ್ಲಿ ರವಿಯು ಅಂಗಾರಕವೀಕ್ಷಿತನಾದರೆ ಜಾತಕನು ಪ್ರಚಂಡನು, ಯುದ್ಧದಲ್ಲಿ ಕಷ್ಟಪಟ್ಟು ವಿಶೇಷ ವಾದ ಕೀರ್ತಿಯನ್ನು ಸಂಪಾದಿಸುವವನು, ಚೆನ್ನಾಗಿ ಮಾತನಾಡುವವನು, ಜೀವನ್ಮುಕ್ತರಾಗುವಂಥಾ ದೊಡ್ಡವರಲ್ಲಿ ಸ್ನೇಹಮಾಡುವವನೂ ಆಗುತ್ತಾನೆ ।।೧೦೫।।

## ಧನುರ್ಮೀನಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ।। ಧಾತುಕ್ರಿಯಾ ಕಾವ್ಯಕಲಾ ಕಥಾಜ್ಞಃ ಸದ್ವಾಕ್ಯಮಂತ್ರಾದಿ ವಿಧಿಪ್ರವೀಣಃ । ಸತಾಂಮತಃ ಸ್ಯಾತ್ಪುರುಷೋ ದಿನೇಶೇ ಸೌಮ್ಯೇಕ್ಷಿತೇ ಜೀವಗೃಹಂ ಪ್ರಯಾತೆ ।।೧೦೬।।ತಾ।। ಜನ್ಮಕಾಲದಲ್ಲಿ ಧನುರ್ಮೀನಗಳಲ್ಲಿ ರವಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಧಾತುಕ್ರಿಯಗಳನ್ನು ಮಾಡುವವನು, ಕಾವ್ಯಕಲಾ ಕುಶಲತೆ ಯುಳ್ಳವನು ಮತ್ತು ಕಥಾಸ್ವಾರಸ್ಯ ತಿಳಿದವನು, ಮಾತನಾಡುವುದರಲ್ಲಿ ಚತುರನು, ಮಂತ್ರಶಾಸ್ತ್ರದಲ್ಲಿ ಪ್ರವೀಣನೂ, ಸತ್ಪುರುಷರಿಗೆ ಮಾನ್ಯನೂ ಆಗುತ್ತಾನೆ ।।೧೦೬।।

## ಧನುರ್ಮೀನಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ।। ನೃಪಾಲಮೈತ್ರೀ ಕುಲಭೂಮಿಪಾಲಃ ಕಲಾವಿಧಿಜ್ಞೋ ಧನಧಾನ್ಯ ಯುಕ್ತ । ವಿದ್ವಾನ್ ಪುಮಾನ್ಭಾನುಮತೀ ಜ್ಯಗೇಹೇ ಸಂದೃಷ್ಟದೇಹೇಮರಪೂಜಿತೇನ ।।೧೦೭।।ತಾ।। ಜನ್ಮಕಾಲದಲ್ಲಿ ಧನುರ್ಮೀನಗಳಲ್ಲಿ ರವಿಯಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು ರಾಜನ ಮಿತ್ರತ್ವ ಉಳ್ಳವನು, ತನ್ನ ವಂಶದಲ್ಲಿ ಮುಖ್ಯನು ಮತ್ತು ಭೂಮಿಯನ್ನು ಪಾಲಿಸುವವನು, ಕಲಾಶಾಸ್ತ್ರ ತಿಳಿದವನು, ದ್ರವ್ಯ ಮತ್ತು ಧಾನ್ಯಯುಕ್ತನೂ, ದೊಡ್ಡ ವಿದ್ವಾಂಸನೂ ಅಂದರೆ ಮಹಾ ಮಹೋಪಾಧ್ಯಾಯನೂ ಆಗುತ್ತಾನೆ ।।೧೦೭।।

## ಧನುರ್ಮೀನಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ।। ಸುಗಂಧ ಮಾಲ್ಯಾಂಬರೆ ಚಾರುವೇಷಾ ಭೂಷಾ ವಿಶೇಷಾನು ಭವಾಪ್ತ ಸೌಖ್ಯಃ । ಭವೇನ್ನರೋ ದೇವಪುರೋಹಿತರ್ಕ್ಷೇ ಪ್ರದ್ಯೋತನೇ ದಾನವವಂದ್ಯ ದೃಷ್ಟೇ ।।೧೦೮।।ತಾ।। ಜನ್ಮಕಾಲದಲ್ಲಿ ಧನುರ್ಮೀನ ರಾಶಿಗಳಲ್ಲಿ ರವಿಯು ಶುಕ್ರದೃಷ್ಟನಾದರೆ ಜಾತಕನು ಸುಗಂಧಯುಕ್ತವಾದ ಪುಷ್ಪಮಾಲಿಕೆ ಗಳಿಂದಲೂ, ಉತ್ತಮ ವಸ್ತ್ರಗಳಿಂದಲೂ, ಉತ್ತಮ ಸ್ತ್ರೀಯಿಂದಲೂ ಮತ್ತು ಅನೇಕ ವಿಧವಾದ ಭೂಷಣಾದ್ಯಲಂಕಾರ ವಿಶೇಷಗಳಿಂದಲೂ, ಸುಖಭೋಗಿಸುವವನು ಆಗುತ್ತಾನೆ ।।೧೦೮।।

## ಧನುರ್ಮೀನಸ್ಥೇ ರವೌ ಶನಿದೃಷ್ಟಿಫಲಂ

ಶ್ಲೋಕ॥ ಪರಾನ್ನಭೋಕ್ತಾ ಚತುರಃ ಪ್ರವೃತ್ತಶ್ಚತುಷ್ಪದ ಪ್ರೀತಿಧರೋ ನರಸ್ಸ್ಯಾತ್। ಸೂರ್ಯೇ ಸುರಾಚಾರ್ಯಗೃಹಂ ಪ್ರಯಾತೆ ನಿರೀಕ್ಷಿತೇ ಭಾನುಸುತೇನನೂನಂ ॥೧೦೯॥ತಾ॥ ಜನ್ಮಕಾಲದಲ್ಲಿ ಸೂರ್ಯನು ಧನುರ್ಮೀನಗಳಲ್ಲಿ ಶನಿಯಿಂದ ನೋಡಲ್ಪಟ್ಟರೆ, ಪರಾನ್ನ ಭೋಜನ ಮಾಡುವವನು, ಚತುರನು, ಅಯೋಗ್ಯ ಮನುಷ್ಯರಲ್ಲಿ ಸ್ನೇಹ ಮಾಡುವವನು, ಚತುಷ್ಪದ ಜೀವ ಜಂತುಗಳಲ್ಲಿ ಪ್ರೀತಿಯುಳ್ಳವನೂ ಆಗುತ್ತಾನೆ ॥೧೦೯॥

## ಮಕರ ಕುಂಭಸ್ಥೇ ರವೌ ಚಂದ್ರದೃಷ್ಟಿಫಲಂ

ಶ್ಲೋಕ॥ ನಾರಿಪ್ರಸಂಗೇನ ಗತಾರ್ಥಸೌಖ್ಯೋ ಮಾಯಾಪಟುಶ್ಚಂಚಲಚಿತ್ತ-ವೃತ್ತಿಃ। ಭವೇನ್ಮನುಷ್ಯಃ ಶನಿವೇಶ್ಮ ಸಂಸ್ಥೇ ಸಹಸ್ರರಶ್ಮೌಹಿಮರಶ್ಮಿದೃಷ್ಟೇ ॥೧೧೦॥ ತಾ॥ ಜನ್ಮಕಾಲದಲ್ಲಿ ಮಕರ ಕುಂಭರಾಶಿಗಳಲ್ಲಿ ರವಿಯು ಚಂದ್ರೇಕ್ಷಿತನಾದರೆ ಸ್ತ್ರೀ ಮೂಲದಿಂದ ದ್ರವ್ಯವ್ಯಯ ಮಾಡುವವನೂ, ಸೌಖ್ಯನಾಶ ಮಾಡಿಕೊಳ್ಳುವವನೂ, ದೊಡ್ಡ ಅಂತಃಕರಣ ಉಳ್ಳವನು ಮತ್ತು ಚಂಚಲಬುದ್ಧಿಯುಳ್ಳವನೂ ಆಗುತ್ತಾನೆ ॥೧೧೦॥

## ಮಕರ ಕುಂಭಸ್ಥೇ ರವೌ ಕುಜದೃಷ್ಟಿಫಲಂ

ಶ್ಲೋಕ॥ ಪರಕಲಹ ಹತಾರ್ಥೋವ್ಯಾಧಿ ವೈರಿಪ್ರತಪ್ತಸ್ತ್ವತಿವಿಕಲ ಶರೀರೋತ್ಸಂತ ಚಿಂದಾ ಸಮೇತಃ । ಭವತಿ ನನುಮನುಷ್ಯಃ ಸಂಭವೇ ತಿಗ್ಮರಾಶೌ ಗತವತಿ ಸುತಗೇಹಂ ದೃಷ್ಟದೇಹೇ ಕುಜೇನ ॥೧೧೧॥ತಾ॥ ಜನನ ಕಾಲದಲ್ಲಿ ಮಕರ ಕುಂಭರಾಶಿಗಳಲ್ಲಿ ರವಿಯು ಕುಜದೃಷ್ಟನಾದರೆ ಎರಡನೇಯವರ ವ್ಯಾಜ್ಯಕ್ಕೋಸ್ಕರ ತನ್ನ ದ್ರವ್ಯನಾಶ ಮಾಡಿಕೊಳ್ಳುವವನು, ವ್ಯಾಧಿಯುಕ್ತ, ಶತ್ರುಗಳಿಂದ ಸಂತಾಪಗೊಂಡು ಕಷ್ಟಪಡುವವನು, ವಿಕಲ ಮತ್ತು ಚಿಂತಾಯುಕ್ತನೂ ಆಗುತ್ತಾನೆ ॥೧೧೧॥

## ಮಕರ ಕುಂಭಸ್ಥೇ ರವೌ ಬುಧದೃಷ್ಟಿಫಲಂ

ಶ್ಲೋಕ॥ ಕ್ಲೀಬ *ಸ್ವಭಾವಃ ಪರಚಿತ್ತಹಾನೀ ಸಾಧೂಝ್ಝಿತಃ ಶೂರತರೋ ನರಃಸ್ಯಾತ್ । ದಿವಾಕರೇ ಶೀತಕರಾತ್ಮಜೇನ ದೃಷ್ಟೇಪ್ರಸೂತೌ ಶನಿಮಂದಿರಸ್ಥೇ

---

* ನಪುಂಸಕ ಲಕ್ಷಣ ೬ ಸ್ವಭಾವವಾಗಿರುತ್ತೆ. ಅದರಲ್ಲಿ ಪುರುಷಾಕೃತಿಯಾಗಿದ್ದರೂ ನಪುಂಸಕನ ಹಾಗೆ ಇರುವುದು ಒಂದು ಪ್ರಕಾಶ.

॥೧೧೨॥ ತಾ॥ ಮಕರ ಕುಂಭರಾಶಿಗಳಲ್ಲಿ ರವಿಯು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ನಪುಂಸಕ ಸ್ವಭಾವ ಉಳ್ಳವನು, ಎರಡನೇಯವರ ಮನಸ್ಸನ್ನಪಹಾರ ಮಾಡುವವನು, ಸಾಧುಜನರಿಂದ ಬಿಡಲ್ಪಟ್ಟವನು ಮತ್ತು ದೊಡ್ಡ ಶೂರನೂ ವೀರನೂ ಆಗುತ್ತಾನೆ ॥೧೧೨॥

## ಮಕರ ಕುಂಭಸ್ಥೇ ರವೌ ಗುರುದೃಷ್ಟಿಫಲಂ

ಶ್ಲೋಕ॥ ಸತ್ಕರ್ಮಕರ್ತಾ ಮತಿಮಾನ್ನೃಹೂನಾಂ ಸಮಾಶ್ರಯಶ್ಚಾರುಯಶಾ ಮನಸ್ವೀ । ಸ್ಯಾನ್ಮಾನವೋ ಭಾನುಸುತಾ ಲಯಸ್ಥೇ ಭಾನೌಚ ವಾಚಸ್ಪತಿನಾ ಪ್ರದೃಷ್ಟೇ ॥೧೧೩॥ತಾ॥ ಜನ್ಮಕಾಲದಲ್ಲಿ ಮಕರ ಕುಂಭ ರಾಶಿಗಳಲ್ಲಿ ರವಿಯು ಗುರುದೃಷ್ಟನಾದರೆ ಜಾತಕನು ದೊಡ್ಡ ಸತ್ಕಾರ್ಯಗಳನ್ನು ಮಾಡುವನು, ಬುದ್ದಿರ್ಮಾ- ಅನೇಕ ಜನರಿಗೆ ಆಶ್ರಯಭೂತನಾಗಿರುವನು, ಪವಿತ್ರನು, ಯಶಸ್ಸನ್ನು ಸಂಪಾದಿಸುವನು ಮತ್ತು ಅತಿ ಗಂಭೀರವಾದ ಬುದ್ಧಿಯುಳ್ಳವನೂ ಆಗುತ್ತಾನೆ ॥೧೧೩॥

## ಮಕರ ಕುಂಭಸ್ಥೇ ರವೌ ಶುಕ್ರದೃಷ್ಟಿಫಲಂ

ಶ್ಲೋಕ॥ ಶಂಖ ಪ್ರವಾಳಾಮಲರತ್ನವಿತ್ತಂ ವಾರಾಂಗನಾಭ್ಯೋಪಿ ಧನೋಪ ಲಬ್ಧಿಮ್ । ಕರೋತಿಭಾನುರ್ನನುಮಾನವಾನಾಂ ಶನ್ಯಾಲಯಸ್ಥೋ ಭೃಗುಜೇನದೃಷ್ಟಃ ॥೧೧೪॥ತಾ॥ ಜನ್ಮಕಾಲದಲ್ಲಿ ರವಿಯು ಮಕರದಲ್ಲಾಗಲೀ, ಕುಂಭದಲ್ಲಾಗಲೀ ಶುಕ್ರವೀಕ್ಷಿತನಾದರೆ, ಶಂಖ ಪ್ರವಾಳ ಮತ್ತು ರತ್ನಗಳ ವ್ಯಾಪಾರ ಮೂಲದಿಂದ ಧನ ಸಂಪಾದಿಸುವನು, ವಾರಾಂಗನೆಯಿಂದ (ಸೂಳೆಯರಿಂದ) ದ್ರವ್ಯ ಸಂಪಾದಿಸುವನು, ಕೆಲವರು ವಾರಸ್ತ್ರೀಯರಿಗೆ ದ್ರವ್ಯ ಕೊಡುವರು, ಇವನು ಹಾಗಲ್ಲವು, ಅವರಲ್ಲಿ ಭೋಗಿಸಿ ಅವರಿಂದಲೇ ದ್ರವ್ಯವನ್ನು ತೆಗೆದುಕೊಳ್ಳುವನು ॥೧೧೪॥

## ಮಕರ ಕುಂಭಸ್ಥೇ ರವೌ ಶನಿದೃಷ್ಟಿ ಫಲಂ

ಶ್ಲೋಕ॥ ಪ್ರೌಢಪ್ರತಾಪಾ ದ್ವಿಜಿತಾರಿಪಕ್ಷಃ ಕ್ಷೋಣೀಪತಿ ಪ್ರೀತಿಮಹಾ ಪ್ರತಿಷ್ಠ। ಪ್ರಸನ್ನಮೂರ್ತಿಃ ಪ್ರಭವೇನ್ಮನುಷ್ಯಃ ಶನ್ಯಾಲಯೇರ್ಕೇ ಶನಿನಾಪ್ರದೃಷ್ಟೇ ॥೧೧೫॥ತಾ॥ ಜನ್ಮಕಾಲದಲ್ಲಿ ಮಕರ ಕುಂಭ ರಾಶಿಗಳಲ್ಲಿ ರವಿಯು ಶನಿಯಿಂದ ನೋಡಲ್ಪಟ್ಟರೆ ತನ್ನ ಪ್ರತಾಪದಿಂದ ಶತ್ರುಗಳ ಪಕ್ಷವನ್ನು ಜಯಿಸುವವನು, ರಾಜರಿಂದ ಪ್ರೀತಿಯನ್ನು ಹೊಂದುವನು, ಪ್ರಸನ್ನವಾದ ಶಾಂತವಾದ ಆಕೃತಿಯುಳ್ಳವನು, ಮಹಾ ಪ್ರತಿಷ್ಠೆಯುಳ್ಳವನೂ ಆಗುತ್ತಾನೆ ॥೧೧೫॥

ಇತಿ ಮೇಷಾದಿ ಗೃಹೇರವೌ ದೃಷ್ಟಿಫಲಂ

ಅಥ ಮೇಷಾದಿಗ್ರಹೇ ಕುಜೇ ದೃಷ್ಟಿಫಲಂ

## ಮೇಷ ವೃಶ್ಚಿಕಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ।। ಪ್ರಾಜ್ಞಃ ಸುವಕ್ತಾ ಪಿತೃಮಾತೃಭಕ್ತೋ ಧನೀಪ್ರಧಾನೋತಿತರೌ ಮುದಾರಃ । ನರೋಭವೇ ದಾತ್ಮಗೃಹೇ ಮಹೀಜೇ ಸರೋಜಿನೀ ರಾಜ ನಿರೀಕ್ಷ್ಯ ಮಾಣೆ ।।೧೧೬।। ತಾ।। ಜನ್ಮಕಾಲದಲ್ಲಿ ಕುಜನು ತನ್ನ ಸ್ವಕ್ಷೇತ್ರಗಳಾದ ಮೇಷರಾಶಿ ಯಲ್ಲಿ ಅಥಾ ವೃಶ್ಚಿಕರಾಶಿಯಲ್ಲಿದ್ದು ಸೂರ್ಯನಿಂದ ನೋಡಲ್ಪಟ್ಟರ ಜಾತಕನು ಒಳ್ಳೇ ತಿಳುವಳಿಕೆಯುಳ್ಳವನು, ಸವಿನುಡಿಗಳನ್ನು ಮಾತನಾಡುವವನು ಅಥವಾ ಚೆನ್ನಾಗಿ ವ್ಯಾಕರಣ ಶಾಸ್ತ್ರೀಯವಾಗಿ ಮಾತನಾಡುವವನು, ತಾಯಿ ತಂದೆಗಳಲ್ಲಿ ಭಕ್ತಿ ಯುಳ್ಳವನು, ಧನವಾನ್, ರಾಜಮಂತ್ರೀ, ಅತ್ಯಂತ ಉದಾರನೂ ಆಗುತ್ತಾನೆ ।।೧೧೬।।

## ಮೇಷ ವೃಶ್ಚಿಕಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ।। ಅನ್ಯಾಂಗನಾಸಕ್ತ ಮತೀವಶೂರಂ ಕೃಪಾವಿಹೀನಂ ಹತಚೋರವರ್ಗಂ। ನರಂ ಪ್ರಕುರ್ಯಾನ್ನಿಜಧಾಮಗಾಮೀ ಭೂಮೀತನೂಜೊ ದ್ವಿಜರಾಜದೃಷ್ಟಃ ।।೧೧೭।। ತಾ।। ಸ್ವಕ್ಷೇತ್ರಗಳಾದ ಮೇಷ ವೃಶ್ಚಿಕ ರಾಶಿಗಳಲ್ಲಿ ಅಂಗಾರಕನಿದ್ದು ಚಂದ್ರನಿಂದ ನೋಡಲ್ಪಟ್ಟರೆ ಪರಸ್ತ್ರೀಯರಲ್ಲಿ ಲಂಪಟೆಯುಳ್ಳವನು, ಶೂರನು, ಕೃಪೆ ಇಲ್ಲದವನು, ಶತ್ರುಗಳನ್ನು ಕಳ್ಳರನ್ನು ಕೊಲ್ಲುವವನೂ ಆಗುತ್ತಾನೆ ।।೧೧೭।।

## ಮೇಷ ವೃಶ್ಚಿಕಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ।। ಪಣಾಂಗನಾಲಂಕರಣೈಕ ವೃತ್ತಿರ್ವಿಚಕ್ಷಣೋನ್ಯ ದ್ರವಿಣಾಪಹಾರೀ । ಭವೇನ್ನರಸ್ಸ್ವರ್ಕ್ಷಗತೇ ಪ್ರಸೂತೌ ಕ್ಷೋಣೀಸುತೇ ಸೋಮಸುತೇನ ದೃಷ್ಟೇ ।।೧೧೮।। ತಾ।। ಮೇಷ ವೃಶ್ಚಿಕಗಳಲ್ಲಿ ಅಂಗಾರಕನು ಬುಧನಿಂದ ನೋಡಲ್ಪಟ್ಟರೆ ಜಾತಕನು ವೇಶ್ಯಾಸ್ತ್ರೀಗೆ ಅಲಂಕಾರ ಮಾಡಿ ಅದರ ಮೂಲವಾಗಿ ಉಪಜೀವನ ಮಾಡುವವನು ಚತುರನು, ಎರಡನೇಯವರ ದ್ರವ್ಯವನ್ನು ವ್ಯರ್ಥವಾಗಿ ಹಾಳುಮಾಡಿ ತನ್ಮೂಲಕ ಸೌಖ್ಯ ಪಡುವವನೂ ಆಗುತ್ತಾನೆ ।।೧೧೮।।

## ಮೇಷ ವೃಶ್ಚಿಕಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ।। ವಂಶೇವನೀಶೋ ಧನವಾನ್ ಸಕೋಪೋ ನೃಪೋಪಚಾರಃ ಕೃತ ಚೋರಸಖ್ಯಃ । ಆರೇನಿಜಾ ಗಾರಗತೇ ನರಸ್ಸ್ಯಾತ್ ಸೂತೌ ಸುರಾಚಾರ್ಯ ನಿರೀ-ಕ್ಷ್ಯಮಾಣೇ ।।೧೧೯।।ತಾ।। ಜನನಕಾಲದಲ್ಲಿ ಮೇಷ ವೃಶ್ಚಿಕಗಳಲ್ಲಿ ಅಂಗಾರಕ ನಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು ತಾನು ಹುಟ್ಟಿದ ವಂಶದಲ್ಲಿ

ರಾಜನೂ, ಧನಸಂಪತ್ತಿಯುಕ್ತನೂ, ಕೋಪ ಉಳ್ಳವನೂ, ರಾಜೋಪಚಾರಾದಿ ಸುಖ ಪ್ರಾಪ್ತಿಯುಳ್ಳವನೂ ಮತ್ತು ಚೋರರ ಸಂಗಡ ಸ್ನೇಹ ಉಳ್ಳವನೂ ಆಗುತ್ತಾನೆ ॥೧೧೯॥

## ಮೇಷವೃಶ್ಚಿಕಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ॥ ಭೂಯೋ ಭೂಯೋ ಭೂಜನೌತ್ಸುಕ್ಯಸಕ್ತಿ ಕಾಂತಾಹೇ ತುರ್ಯಾ ನಚಿಂತಾ ನಿತಾಂತಂ । ಪಾಣೇ ಪುಣ್ಯೇ ಕರ್ಮಣಿಪ್ರೀತಿಮಾನ್ಸ್ಯಾತ್ಸ್ವರ್ಕ್ಷೇ ಭೌಮೇ ಭಾರ್ಗವೇಣ ಪ್ರದೃಷ್ಟೇ ॥೧೨೦॥ತಾ॥ ಜನನಕಾಲದಲ್ಲಿ ಕುಜನು ಮೇಷ ವೃಶ್ಚಿಕ ಗಳಲ್ಲಿದ್ದು ಶುಕ್ರನಿಂದ ನೋಡಲ್ಪಟ್ಟರೆ ಪುನಃಪುನಃ ಭೋಜನ ಮಾಡಬೇಕೆಂದು ಅಪೇಕ್ಷಿಸುವವನು, ಸ್ತ್ರೀಯ ಇಚ್ಛೆಯಿಂದ ನಿರಂತರ ಯಾತ್ರೆ ಮಾಡಬೇಕೆಂಬ ಚಿಂತಾಯುಕ್ತನು, ಪುಣ್ಯ ಕಾರ್ಯಗಳಲ್ಲಿ ಪ್ರೀತಿಯುಳ್ಳವನು ಆಗುತ್ತಾನೆ ॥೧೨೦॥

## ಮೇಷ ವೃಶ್ಚಿಕಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ॥ ಮಿತ್ರೋಜ್ಝಿತಂ ಮಾತೃವಿಯೋಗತಪ್ತಂ ಕೃಶಾಂಗಯುಷ್ಟಿಂ ವಿಷಮಂ ಕುಟುಂಬೇ । ಈರ್ಷ್ಯಾವಿಶೇಷಂ ಪುರುಷಂವಿದಧ್ಯಾತ್ಕುಜಃ ಸ್ವಭೇಸ್ಥೋರ್ಕಸುತೇನ ದೃಷ್ಟಃ ॥೧೨೧॥ತಾ॥ ಮೇಷ ವೃಶ್ಚಿಕಗಳಲ್ಲಿ ಕುಜನು ಶನಿಯಿಂದ ನೋಡಲ್ಪಟ್ಟರೆ ಮಿತ್ರರಿಂದ ಬಿಡಲ್ಪಟ್ಟವನು, ಮಾತೃವಿಯೋಗದಿಂದ ದುಃಖ ಉಳ್ಳವನು, ಕೃಶವಾದ ಶರೀರ ಉಳ್ಳವನು, ಕುಟುಂಬದಲ್ಲಿ ಚಮತ್ಕಾರ ಉಳ್ಳವನು, ಹೊಟ್ಟೆಕಿಚ್ಚು (ಈರ್ಷ್ಯೆ) ಉಳ್ಳವನೂ ಆಗುತ್ತಾನೆ ॥೧೨೧॥

ಅಥ ಶುಕ್ರ ಗೃಹಸ್ಥೇ ಭೌಮೇ ಖೇಟದೃಷ್ಟಯಃ

## ವೃಷಭ ತುಲಾಸ್ಥೇ ಕುಜೇ ರವಿದೃಷ್ಟಿಫಲಂ

ಶ್ಲೋಕ॥ ಕಾಂತಮನೋವೃತ್ತಿ ವಿಹೀನ ಮುಚ್ಚೈರ್ವನಾದ್ರಿ ಸಂಸ್ಥಾನ ರುಚಿಂ ವಿಪಕ್ಷಂ । ಪ್ರಚಂಡಕೋಪಂ ಕುರುತೇ ಮನುಷ್ಯಂ ಕುಜಃ ಸ್ಥಿತಾ ಗಾರ ಗತೋರ್ಕ ದೃಷ್ಟಂ ॥೧೨೨॥ ತಾ॥ ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಕುಜನು ರವಿಯಿಂದ ನೋಡಲ್ಪಟ್ಟರೆ ಜಾತಕನು ಸ್ತ್ರೀಯಮೇಲೆ ಪ್ರೇಮವನ್ನು ಇಡದವನು, ವನದಲ್ಲೂ ಪರ್ವತದಲ್ಲೂ ವಾಸಮಾಡಲು ಆಶೆಯುಳ್ಳವನು, ಅತ್ಯಂತ ಕೋಪ ಉಳ್ಳವನೂ ಆಗುತ್ತಾನೆ ॥೧೨೨॥

## ವೃಷಭ ತುಲಾಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ॥ ಅಂಬಾವಿರುದ್ಧಃ ಖಲುಯುದ್ಧ ಭೀರುರ್ಬಹ್ವಂಗನಾ ನಾ ಮಪಿ ನಾಯಕಶ್ಚ । ಸ್ನಾನ್ಯಾನ್ನವೋ ಭೂತನಯೇ ಸಿತರ್ಕ್ಷೇ ನಕ್ಷತ್ರನಾಥೇನ ನಿರೀಕ್ಷ್ಯ ಮಾಣೇ

॥೧೨೩॥ ತಾ॥ ವೃಷಭ ತುಲೆಗಳಲ್ಲಿ ಕುಜನು ಚಂದ್ರನಿಂದ ನೋಡಲ್ಪಟ್ಟರೆ ಜಾತಕನು ತಾಯಿಗೆ ವಿರೋಧಿ, ಯುದ್ಧದಲ್ಲಿ ಭಯಪಡುವವನೂ, ಅನೇಕ ಸ್ತ್ರೀಯರಿಗೆ ಪತಿಯಾದವನೂ ಆಗುತ್ತಾನೆ ॥೧೨೩॥

## ವೃಷಭ ತುಲಾಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ॥ ಶಾಸ್ತ್ರಪ್ರವೃತ್ತಿಃ ಕಲಹಪ್ರಿಯಃಸ್ಯಾ ಧನಲ್ಪಜಲ್ಪೋಲ್ಪಧನಾಗಮಶ್ಚ । ಸತ್ಕಾಯಕಾಂತಿಃ ಪರಿಸೂತಿಕಾಲೇ ಸಿತಾಲಯಸ್ಥೇಶಶಿಜೇನ ದೃಷ್ಟೇ ॥ತಾ॥ ಜನನ ಕಾಲದಲ್ಲಿ ಕುಜನು ಶುಕ್ರಕ್ಷೇತ್ರಗಳಾದ ತುಲಾ ವೃಷಭಗಳಲ್ಲಿ ಎಲ್ಲಿಯಾದರೂ ಇದ್ದು ಬುಧದೃಷ್ಟನಾದರೆ ಜಾತಕನು ಶಾಸ್ತ್ರಜ್ಞನು, ಜಗಳಗಂಟನು, ಅಧಿಕ ಪ್ರಸಂಗಿಯು, (ಹರಟೆ ಹರಟುವವನು) ಅಲ್ಪ ಧನವಂತನು ಮತ್ತು ಉತ್ತಮ ಕಾಂತಿಯುಕ್ತನೂ ಆಗುತ್ತಾನೆ ॥೧೨೪॥

## ವೃಷಭ ತುಲಾರಾಶಿಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ॥ ಬಂದು ಪ್ರಿಯಸ್ಸ್ಯಾನ್ನಿರತೋತಿ ಭಾಗ್ಯಃ ಸದ್ಗೀತ ನೃತ್ಯಾದಿ ವಿಧಿ ಪ್ರವೀಣಃ । ಕ್ಷೋಣೀ ತನೂಜೇ ಭೃಗುಜಕ್ಷಯಾತೇ ಸಂವೀಕ್ಷಿತೇ ವಾಕ್ಪತಿನಾ ಪ್ರಸೂತೌ ॥೧೨೫॥ತಾ॥ ಜನನ ಕಾಲದಲ್ಲಿ ವೃಷಭ ತುಲೆಗಳಲ್ಲಿ ಕುಜನು ಬೃಹಸ್ಪತಿ ಯಿಂದ ನೋಡಲ್ಪಟ್ಟರೆ ಜಾತಕನು ಬಂಧು ಜನರಿಗೆ ಪ್ರೀತಿಯುಳ್ಳವನು, ಅಧಿಕ ಭಾಗ್ಯವಂತನು, ನೃತ್ಯಗಾನ ಈ ವಿದ್ಯೆಗಳಲ್ಲಿ ಕುಶಲನೂ ಆಗುತ್ತಾನೆ ॥೧೨೫॥

## ವೃಷಭ ತುಲಾಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋಕ॥ ಸುಶ್ಲಾಘ್ಯನಾಮಾಕ್ಷಿತಿ ಪಾಲಮಂತ್ರೀ ಸೇನಪತಿರ್ವಾ ಬಹುಸೌಖ್ಯ ಯುಕ್ತ । ಸ್ಯಾನ್ನಾನ್ರವಃ ಶುಕ್ರಗೃಹೋ ಪಯಾತೇ ನಿರೀಕ್ಷಿತೇ ಭೂಮಿಸುತೇ ಸಿತೇನ ॥೧೨೬॥ತಾ॥ ವೃಷಭ ತುಲೆಗಳಲ್ಲಿ ಕುಜನು ಶುಕ್ರದೃಷ್ಟನಾದರೆ ಜಾತಕ ಪುರುಷನು ಪ್ರಶಂಸೆ ಮಾಡಲು ಯೋಗ್ಯನು, ರಾಜಮಂತ್ರಿ ಅಥವಾ ಸೈನ್ಯಾಧಿಪತಿ ಮತ್ತು ಅತಿಶಯ ಸುಖ ಪಡುವವನೂ ಆಗುವನು ॥೧೨೬॥

## ವೃಷಭ ತುಲಾಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ॥ ಖ್ಯಾತೋ ವಿನೀತೋ ಧನಾರ್ವಾ ಸುಮಿತ್ರಃ ಪವಿತ್ರಬುದ್ಧಿಃಕೃತ ಶಾಸ್ತ್ರಯತ್ನಃ। ನರಃ ಪುರಗ್ರಾಮಪತಿಃ ಸಿತರ್ಕ್ಷೇ ಭೂನಂದನೇ ಬಾನುಸುತೇನ ದೃಷ್ಟೇ ॥೧೨೭॥ ತಾ॥ ಜನನ ಕಾಲದಲ್ಲಿ ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಕುಜನು ಶನಿಯಿಂದ ನೋಡಲ್ಪಟ್ಟರೆ ಜಾತಕನು ಪ್ರಖ್ಯಾತ ಪುರುಷನು ಶ್ರೇಷ್ಠವಾದ

ನೀತಿಯುಳ್ಳವನು, ಧನವಂತ, ಉತ್ತಮವಾದ ಮಿತ್ರರುಳ್ಳವನು, ಶಾಸ್ತ್ರಾಭ್ಯಾಸದಿಂದ ಪವಿತ್ರವಾದ ಬುದ್ಧಿಯುಳ್ಳವನು, ಗ್ರಾಮಕ್ಕಾಗಲೀ ಪಟ್ಟಣಕ್ಕಾಗಲೀ ಅಧಿಕಾರಿ ಆಗುವನು ||೧೨೭||

ಅಥ ಬುಧ ಭವನಸ್ಥೇ ಭೌಮೇ ಖೇಟದೃಷ್ಟಯಃ

## ಮಿಥುನ ಕನ್ಯಾರಾಶಿಸ್ಥೇ ಕುಜೇ ರವಿದೃಷ್ಟಿಫಲಂ

ಶ್ಲೋಕ|| ವಿದ್ಯಾ ಧನೈಶ್ವರ್ಯಯುತಃ ಸುಸತ್ವ ಮರಣ್ಯದುರ್ಗಾಚಲ ಕೇಲಿಶೀಲಂ| ಕುರ್ಯಾನ್ನರು ಸೋಮಸುತಾ ಲಯಸ್ಥಃ ಕ್ಷೋಣೀಸುತಃ ಸೂರ್ಯ ನಿರೀಕ್ಷ್ಯಮಾಣಃ ||೧೨೮||ತಾ|| ಬುಧಕ್ಷೇತ್ರಗಳಾದ ಮಿಥುನ ಕನ್ಯೆಗಳಲ್ಲಿ ಕುಜನು ರವಿಯಿಂದ ನೋಡಲ್ಪಟ್ಟರೆ ವಿದ್ಯೆಯಿಂದಲೂ, ಧನದಿಂದಲೂ ಉಂಟಾದ ಐಶ್ವರ್ಯದಿಂದ ಕೂಡಿರುವನು ಮತ್ತು ಒಳ್ಳೆ ಬಲಿಶಾಲಿಯೂ ಅರಣ್ಯದಲ್ಲಿಯಾಗಲೀ, ದುರ್ಗ-ದಲ್ಲಾಗಲೀ, ಪರ್ವತದಲ್ಲಾಗಲೀ ವಾಸಮಾಡಲು ಆಸಕ್ತಿಯುಳ್ಳವನೂ ಆಗುತ್ತಾನೆ ||೧೨೮||

## ಮಿಥುನ ಕನ್ಯಾರಾಶಿಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ|| ಸಂರಕ್ಷಣೇ ಭೂಪತಿನಾನಿಯುಕ್ತಂ ಕಾಂತಾರತಿಂ ಸತ್ವಯುತಂ ಸಂತೋಷಂ । ಭೂಮಿಸುತಃ ಸಂಜನಯೇನ್ಮನುಷ್ಯಂ ಬುಧರ್ಕ್ಷಸಂಸ್ಥಃ ಶಶಿನಾಪ್ರದೃಷ್ಟಃ ||೧೨೯||ತಾ|| ಬುಧಕ್ಷೇತ್ರಗಳಾದ ಮಿಥುನ ಕನ್ಯಾರಾಶಿಗಳಲ್ಲಿ ಕುಜನಿದ್ದು ಚಂದ್ರ ನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ರಾಜನಿಂದ ನೇಮಿಸಲ್ಪಟ್ಟ ಆಜ್ಞೆಯ ಮೂಲಕ ರಕ್ಷಿಸಲ್ಪಡುವನು, ಸ್ತ್ರೀಯರಲ್ಲಿ ವಿಲಾಸ ಮಾಡುವವನೂ, ಸತ್ವಯುಕ್ತನು ಮತ್ತು ಸಂತೋಷಚಿತ್ತನೂ ಆಗುವನು. ಇಲ್ಲಿ ರಾಜನಿಂದ ನೇಮಿಸಲ್ಪಟ್ಟ ರಕ್ಷಕನೆಂದರೆ ಶೆರೆಸಾಲೆ (ಬಂದೀಖಾನೆ) ಎಂದು ಅರ್ಥ ಮಾಡುವರು. ಈ ರೀತಿ ಅರ್ಥ ಮಾಡ ಕೂಡದು, ರಾಜನು ಪ್ರೀತಿಯಿಂದ ಸಂರಕ್ಷಿಸುವನೆಂದು ತಿಳಿಯತಕ್ಕದ್ದು ||೧೨೯||

## ಮಿಥುನ ಕನ್ಯಾರಾಶಿಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ|| ಅನಲ್ಪಜಲ್ಪಂ ಗಣಿತ ಪ್ರಗಲ್ಭಂ ಕಾವ್ಯಪ್ರಿಯಂ ಚಾನೃತ ಚಾರು ವಾಕ್ಯಂ । ದೌತ್ಯೇ ಪ್ರಯಾತ್ಯೈಃ ಸಹಿತಂ ಪ್ರಕುರ್ಯಾದ್ಧರಾತನೂಜೋಜ್ಞ ಗೃಹೇಜ್ಞ ದೃಷ್ಟಃ ||೧೩೦||ತಾ|| ಜನ್ಮಕಾಲದಲ್ಲಿ ಮಿಥುನ ಕನ್ಯಾರಾಶಿಗಳಲ್ಲಿ ಕುಜನಿದ್ದು ಬುಧ ದೃಷ್ಟಿಯುಕ್ತಾದರೆ ಜಾತಕನು ಅತಿಶಯವಾಗಿ ಮಾತನಾಡುವವನು, ಗಣಿತ ವಿದ್ಯೆ ಯಲ್ಲಿ ಪಂಡಿತನೂ, ಕಾವ್ಯ ಪ್ರಿಯನು, ಸುಳ್ಳು ಮತ್ತು ಅಭಿರುಚಿಯಾದ ಮಾತನಾಡುವವನು, ದೂತಕಾರ್ಯಗಳಲ್ಲಿ ಪ್ರಯತ್ನ ಮಾಡುವವನೂ ಆಗುತ್ತಾನೆ ||೧೩೦||

## ಮಿಥುನ ಕನ್ಯಾರಾಶಿಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ।। ಅನ್ಯದೇಶಗಮನಂ ವ್ಯಸನಾದ್ಯೈಸಂಯುತಂ ಹಿತಕುರುತೇ ನರಮುಚ್ಚೈಃ । ಸೋಮಸೂನು ಭವನೇ ವನಿಸೂನು ರ್ದಾನವಾರಿ ಸಚಿವೇನ ಸದೃಷ್ಟಃ ।।೧೩೧।।ತಾ।। ಜನ್ಮಕಾಲದಲ್ಲಿ ಕುಜನು ಕನ್ಯಾ ಮಿಥುನಗಳಲ್ಲಿ ಗುರುವಿನಿಂದ ನೋಡಲ್ಪಟ್ಟರೆ ಜಾತಕನು, ಪರದೇಶ ಸಂಚಾರ ಮಾಡುವವನು, ತನ್ಮೂಲಕ ಸಂಕಟಾದಿಗಳನ್ನು ಅನುಭವಿಸುವವನೂ ಆಗುತ್ತಾನೆ ।।೧೩೧।।

## ಮಿಥುನ ಕನ್ಯಾರಾಶಿಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋಕ।। ವಸ್ತ್ರಾನ್ನಪಾನೀಯ ಸುಖೈಸ್ಸಮೇತಂ ಕಾಂತಾ ಪ್ರಸಕ್ತಂ ಸುತರಾಂ ಸಮೃದ್ಧಂ । ಕುರ್ಯಾನ್ನರೋ ಭೂಮಿಸುತೋ ಬುಧರ್ಕ್ಷ ಸಂಸ್ಥಃ ಪ್ರದೃಷ್ಟೋ ಭೃಗು ನಂದನೇನ ।।೧೩೨।।ತಾ।। ಜನ್ಮಕಾಲದಲ್ಲಿ ಮಿಥುನ ಕನ್ಯೆಯಲ್ಲಿ ಕುಜನು ಶುಕ್ರ ವೀಕ್ಷಿತನಾದರೆ ವಸ್ತ್ರ, ಅನ್ನ ಇವುಗಳ ಸೌಖ್ಯವನ್ನು ಹೊಂದುವನು, ಸ್ತ್ರೀ ಲಂಪಟ ಮತ್ತು ಸಮೃದ್ಧಿ (ಸಂತುಷ್ಟಿ) ಹೊಂದಿದವನು ಆಗುತ್ತಾನೆ ।।೧೩೨।।

## ಮಿಥುನ ಕನ್ಯಾರಾಶಿಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ।। ಅತೀವಶೂರೋ ಮಲೀನೋಲಸಶ್ಚ ದುರ್ಗಾಚಲಾರಣ್ಯ ವಿಲಾಸಶೀಲಃ । ಭವೇನ್ನರೋ ಭಾಸ್ಕರ ಸೂನುದೃಷ್ಟೇ ಧರಾಸುತೇ ಸೋಮಸುತಾ-ಲಯಸ್ಥೇ ।।೧೩೪।।ತಾ।। ಜನ್ಮಕಾಲದಲ್ಲಿ ಕನ್ಯಾ ಮಿಥುನರಾಶಿಯಲ್ಲಿ ಕುಜನು ಶನಿಯಿಂದ ನೋಡಲ್ಪಟ್ಟರೆ ಅತಿಶಯವಾದ ಶೂರ, ಮಲಿನ, ಆಲಸ್ಯ ಉಳ್ಳವನು, ಸೋಮಾರಿ, ಕೋಟೆ, ಪರ್ವತ, ವನ ಇವುಗಳಲ್ಲಿ ಕ್ರೀಡಾವಿಲಾಸ ಮಾಡುವವನೂ ಮತ್ತು ಅದನ್ನು ಇಚ್ಚಿಸುವವನು ಆಗುತ್ತಾನೆ ।।೧೩೪।।

ಅಥ ಕರ್ಕಸ್ಥೇ ಭೌಮೇ ಖೇಟದೃಷ್ಟಯಃ

## ಕರ್ಕರಾಶಿಸ್ಥೇ ಕುಜದೃಷ್ಟಿಫಲಂ

ಶ್ಲೋಕ।। ಪಿತ್ತಪ್ರಕೋ ಪಾರ್ತಿಯುತೋತಿ ಧೀರೋ ದಂಡಾಧಿಕಾರೀ ಸುತರಾಂ ಮಹೌಜಾಃ । ಭವೇನ್ನರಃ ಕರ್ಕಗತೇ ಮಹೀಜೇ ನಿರೀಕ್ಷ್ಯಮಾಣೇ ರವಿಣಾ ಪ್ರಸೂತೌ ।।೧೩೫।।ತಾ।। ಜನನಕಾಲದಲ್ಲಿ ಕರ್ಕಾಟಕ ರಾಶಿಯಲ್ಲಿ ಕುಜನು ರವಿದೃಷ್ಟಿಯುಕ್ತನಾದರೆ ಜಾತಕನು ಪಿತ್ತಪ್ರಕೋಪದಿಂದ ರೋಗಯುಕ್ತನು, ದೊಡ್ಡ ಧೈರ್ಯಶಾಲಿಯೂ, ದಂಡಾಧಿಕಾರಿಯೂ (ಜಡ್ಜ್) ಮತ್ತು ಪುರುಷಾರ್ಥಿ (ಮಹಾ ತೇಜಸ್ಸುಳ್ಳವನು) ಆಗುತ್ತಾನೆ ।।೧೩೫।।

## ಕರ್ಕರಾಶಿಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ॥ ಗದಾಭಿಭೂತೋ ಗತವಸ್ತುಶೋಕೋ ವಿಹೀನವೇಷೋ ಗತಸಾಧು ವೃತ್ತಿಃ । ಭವೇನ್ನರಃ ಕರ್ಕಟಗೇ ಮಹೀಜೇ ಸೋಮೇನಸೂತೌಚ ನಿರೀಕ್ಷ್ಯಮಾಣೇ ॥೧೩೫॥ತಾ॥ ಕರ್ಕಾಟಕ ರಾಶಿಯಲ್ಲಿ ಅಂಗಾರಕನು ಚಂದ್ರ ವೀಕ್ಷಿತನಾದರೆ ಜಾತಕನು ರೋಗಪೀಡಿತನೂ, ಹೋದ ವಸ್ತುವಿಗೆ ಶೋಕಪಡುವವನು, ಕೆಟ್ಟ ವೇಷಧಾರಿಯೂ ಸಾಧುವೃತ್ತಿರಹಿತನೂ ಆಗುತ್ತಾನೆ ॥೧೩೫॥

## ಕರ್ಕಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ॥ ಮಿತ್ರೈರ್ವಿಮುಕ್ತೋಲ್ಪ ಕುಟುಂಬಭಾರಃ ಪಾಪಪ್ರಚಾರಃ ಖಲಚಿತ ವೃತ್ತಿಃ। ಬುಧೇನದೃಷ್ಟೇ ಸತಿ ಕರ್ಕಟಸ್ಥೇ ಭೌಮೇನರಃ ಸ್ಯಾದ್ವ್ಯಸ ನಾಭಿಭೂತಃ ॥೧೩೬॥ತಾ॥ ಜನ್ಮಕಾಲದಲ್ಲಿ ಕುಜನು ಕರ್ಕರಾಶಿಯಲ್ಲಿ ಬುಧನಿಂದ ದೃಷ್ಟನಾದರೆ ಜಾತಕನು ಮಿತ್ರರಹಿತನು, ಚಿಕ್ಕ ಕುಟುಂಬ ಉಳ್ಳವನು, ಪಾಪಪ್ರವೃತ್ತನೂ, ದುಷ್ಟ ಮನಸ್ಸುಳ್ಳವನೂ ಮತ್ತು ವ್ಯಸನಿಯೂ ಆಗುತ್ತಾನೆ ॥೧೩೬॥

## ಕರ್ಕಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ॥ ನರೇಂದ್ರ ಮಂತ್ರೀ ಗುಣಗೌರವಾಢ್ಯೋ ಮಾನ್ಯೋವದಾನ್ಯೋ ಮನುಜಃ ಪ್ರಸಿದ್ಧಃ । ಕುಳೀರಸಂಸ್ಥೇ ತನಯೇ ಧರಿತ್ರ್ಯಾ ನಿರೀಕ್ಷಿತೇ ಚಿತ್ರಶಿಖಂಡಿ ಜೇನ ॥೧೩೭॥ತಾ॥ ಜನ್ಮಕಾಲದಲ್ಲಿ ಕರ್ಕರಾಶಿಯಲ್ಲಿ ಅಂಗಾರಕನು ಗುರುವೀಕ್ಷಿತ ನಾದರೆ ಜಾತಕನು ರಾಜಮಂತ್ರಿ ಗುಣಗೌರವದಿಂದ ಪರಿಪೂರ್ಣನು, ಮಾನ್ಯನು, ದಾನಶೀಲನು, ಪ್ರಸಿದ್ಧ ಪುರುಷರಲ್ಲಿ ಮುಖ್ಯನಾದವನೂ ಆಗುತ್ತಾನೆ ॥೧೩೭॥

## ಕರ್ಕಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋಕ॥ ಅರ್ಥಕ್ಷಯೋ ದುರ್ವ್ಯಸನೇನ ನೂನಂ ನಿರಂತರಾನರ್ಥ ಸಮುದ್ಭವಃ ಸ್ಯಾತ್ । ಭವೇನ್ನರಾಣಾಂ ಭೃಗುಣಾ ಪ್ರದೃಷ್ಟೇತ್ವಂಗಾರಕೇ ಕರ್ಕಟರಾಶಿಸಂಸ್ಥೇ ॥೧೩೮॥ತಾ॥ ಜನ್ಮಕಾಲದಲ್ಲಿ ಅಂಗಾರಕನು ಕರ್ಕಾಟಕ ರಾಶಿಯಲ್ಲಿದ್ದು ಶುಕ್ರವೀಕ್ಷಿತ ನಾದರೆ ಜಾತಕನು ದ್ರವ್ಯಕ್ಷಯ ಉಳ್ಳವನು, ನಿರಂತರವೂ ಅನರ್ಥ ಉಳ್ಳವನೂ ಆಗುತ್ತಾನೆ ॥೧೩೮॥

## ಕರ್ಕಸ್ಥೇ ಕುಜೇ ಶನಿವೀಕ್ಷಿತಫಲಂ

ಶ್ಲೋಕ॥ *ಕೀಲಾಲ ಧಾನ್ಯಾದಿ ಧನಸ್ಸು ಕಾಂತಿರ್ಮಹೀನುತಿ ಪ್ರಾಪ್ತಧನೋ

---

* ಕೀಲಾಲ ಜಲಜ (ಧ್ಯಾನಂ) ಪರ್ಯ ಕೀಲಾಲ ಮಮೃತಮಿತ್ಯಮರಃ ॥

ಮನುಷ್ಯಃ । ಮಹೀಸುತೇ ಕರ್ಕಟ ರಾಶಿಯತೇ ನಿರೀಕ್ಷಿತೇ ಸೂರ್ಯ ಸುತೇನ ಸೂತೌ ॥೧೩೯॥ ತಾ॥ ಜನನ ಕಾಲದಲ್ಲಿ ಕರ್ಕಾಟಕರಾಶಿಯಲ್ಲಿ ಅಂಗಾರಕನು ಶನಿವೀಕ್ಷಿತ ನಾದರೆ ಜಾತಕನು ಜಲಧಾನ್ಯಯುಕ್ತನೂ, ಕಾಂತಿಯುಕ್ತನೂ ಮತ್ತು ರಾಜಮೂಲವಾಗಿ ಧನಪ್ರಾಪ್ತಿಯುಳ್ಳವನೂ ಆಗುತ್ತಾನೆ ॥೧೩೯॥

ಇತಿ ಕರ್ಕಾಟಕರಾಶಿಸ್ಥೇ ಭೌಮೇ ಗ್ರಹದೃಷ್ಟಿಫಲಂ
ಅಥ ಸಿಂಹಸ್ಥೇ ಕುಜೇ ಖೇಟ ದೃಷ್ಟಯಃ

## ಸಿಂಹಸ್ಥೇ ಕುಜೇ ರವಿದೃಷ್ಟಿಫಲಂ

ಶ್ಲೋಕ॥ ಹಿತಪ್ರಕರ್ತಾಭಿ ಮತೇಷುನೂನಂ ದ್ವಿಷಜ್ಜನಾನಾ ಮಹಿತಪ್ರದಾತಾ। ವನಾದ್ರಿಕುಂಜೇಷು ಕೃತಪ್ರಚಾರಃ ಸಿಂಹೇ ಮಹೀಜೇ ರವಿಣೇ ಪ್ರದೃಷ್ಟೇ ॥೧೪೦॥ ತಾ॥ ಜನ್ಮಕಾಲದಲ್ಲಿ ಸಿಂಹರಾಶಿಯಲ್ಲಿ ಕುಜನಿದ್ದು ರವಿವೀಕ್ಷಿತನಾದರೆ ಜಾತಕನು ತನ್ನ ಪ್ರಿಯರಾದ ಮನುಷ್ಯರಿಗೆ ಹಿತವನ್ನುಂಟುಮಾಡತಕ್ಕವನು, ಶತ್ರುಗಳಿಗೆ ಅಹಿತಮಾಡತಕ್ಕವನು, ವನ, ಪರ್ವತ, ಬೆಟ್ಟದ ಜರಿಗಳಲ್ಲಿ ಕ್ರೀಡಾವಿಹಾರ ಮಾಡತಕ್ಕವನೂ ಆಗುತ್ತಾನೆ ॥೧೪೦॥

## ಸಿಂಹಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ॥ ಪ್ರಪುಷ್ಟಮೂರ್ತಿಃ ಕಠಿನಃ ಸ್ವಭಾವಶ್ಚಾಂಬಾವಿನೀತೋ ನಿಪುಣಸ್ಸ್ವ ಕಾರ್ಯೇ । ತೀವ್ರಃ ಪುಮಾಂಶ್ಚಾರುಮತಿಃ ಪ್ರಸೂತೌ ಸಿಂಹೇ ಮಹೀಜೇ ದ್ವಿಜರಾಜ ದೃಷ್ಟೇ ॥೧೪೧॥ತಾ॥ ಸಿಂಹರಾಶಿಯಲ್ಲಿ ಕುಜನಿದ್ದು ಚಂದ್ರದೃಷ್ಟನಾದರೆ, ಜಾತಕನು ಅತಿಶಯ ಪುಷ್ಟಿಯಾದ ಶರೀರ ಉಳ್ಳವನು, ನಿರ್ದಯ ಸ್ವಭಾವದವನು, ಮಾತೃಭಕ್ತ, ಸ್ವಕಾರ್ಯ ದಕ್ಷ, ತೀಕ್ಷ್ಣ ಸ್ವಭಾವದವನು, ಉತ್ತಮವಾದ ಬುದ್ಧಿಯುಳ್ಳ ವನೂ ಆಗುತ್ತಾನೆ ॥೧೪೧॥

## ಸಿಂಹಸ್ಥೇ ಕುಜೇ ಬುಧದೃಷ್ಟಿ ಫಲಂ

ಶ್ಲೋಕ॥ ಸತ್ಕಾವ್ಯಶಿಲ್ಪಾದಿ ಕಲಾಕಲಾಪೇಭಿಜ್ಞೋಪಿ ಲುಬ್ಧಶ್ಚಂಚಲ-ಚಿತ್ತವೃತ್ತಿಃ। ಸ್ವಕಾರ್ಯಸಿದ್ಧೌ ನಿಪುಣೋ ನರಸ್ಯಾತ್ಸಿಂಹೇ ಮಹೀಜೇ ಶಶಿಜೇನದೃಷ್ಟೇ ॥ತಾ॥ ಜನ್ಮ ಕಾಲದಲ್ಲಿ ಸಿಂಹರಾಶಿಯಲ್ಲಿ ಅಂಗಾರಕನಿದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನು ಉತ್ತಮವಾದ ಕಾವ್ಯಗಳು, ಶಿಲ್ಪಶಾಸ್ತ್ರ ಕಲಾವಿದನು ಮತ್ತು ದೊಡ್ಡ ಲೋಭಿಯೂ, ತನ್ನ ಕಾರ್ಯದಲ್ಲಿ ನಿಪುಣನೂ, ಚಂಚಲವಾದ ಸ್ವಭಾವದವನೂ ಆಗುತ್ತಾನೆ ॥೧೪೨॥

## ಸಿಂಹಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ॥ ಪ್ರಶಸ್ತ ಬುದ್ಧಿ ರ್ನೃಪತೇಃ ಸುಹೃಚ್ಚಸೇನಾಧಿ ನಾಥೋಭಿ ಮತೋ

ಬಹೂನಾಂ। ವಿದ್ಯಾಪ್ರವೀಣೋಹಿನರಃ ಪ್ರಸೂತೌ ಜೀವೇಕ್ಷಿತೇ ಸಿಂಹಗತೇ ಮಹೀಜೇ ॥೧೪೩॥ತಾ॥ ಜನ್ಮಕಾಲದಲ್ಲಿ ಸಿಂಹರಾಶಿಯಲ್ಲಿ ಅಂಗಾರಕನು ಗುರುವೀಕ್ಷಿತನಾದರೆ ಜಾತಕನು ಉತ್ತಮವಾದ ಬುದ್ಧಿಯುಳ್ಳವನು, ರಾಜ ಮಿತ್ರನೂ, ಸೇನಾಪತಿ, ಬಹುಜನರಿಗೆ ಮಾನ್ಯನು, ವಿದ್ಯೆಯಲ್ಲಿ ಪ್ರವೀಣನೂ ಆಗುತ್ತಾನೆ ॥೧೪೩॥

## ಸಿಂಹಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋಕ॥ ಗರ್ವಾನ್ವಿತೋತ್ಯಂತ ಶರೀರ ಕಾಂತಿಃ ನಾನಾಂಗನಾ ಭೋಗಯುತಃ ಸಮೃದ್ಧ । ಭೂಮಿಸುತೇ ಸಿಂಹಗತೇ ಪ್ರಸೂತೌ ನಿರೀಕ್ಷಿತೇ ದೈತ್ಯ ಪುರೋಹಿತೇನ ॥೧೪೪॥ತಾ॥ ಜನನ ಕಾಲದಲ್ಲಿ ಸಿಂಹರಾಶಿಯಲ್ಲಿ ಕುಜನು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ಗರ್ವಿಷ್ಠನು, ತೇಜಸ್ವಿ, ಅನೇಕ ಸ್ತ್ರೀಯರಲ್ಲಿ ಭೋಗಪಡುವವನೂ, ಸಂಪತ್ತುಳ್ಳವನೂ ಆಗುತ್ತಾನೆ ॥೧೪೪॥

## ಸಿಂಹಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ॥ ಭವಂತಿ ದಾಸೋನ್ಯ ಗೃಹೇತಿ ಚಿಂತಾ ವೃದ್ಧಾಕೃತಿತ್ವಂ ದ್ರವಿಣೋಜ್ಝಿತತ್ವಂ । ಭವೇನ್ನರಾಣಾಂ ಧರಣೇ ತನೂಜೇ ಸಿಂಹಸ್ಥಿತೇ ಭಾನುಸುತೇನ ದೃಷ್ಟೇ ॥೧೪೫॥ ಜನ್ಮಕಾಲದಲ್ಲಿ ಕುಜನು ಸಿಂಹರಾಶಿಯಲ್ಲಿ ಶನಿಯಿಂದ ನೋಡಲ್ಪಟ್ಟರೆ ಜಾತಕನು, ಅನ್ಯರಮನೆಯಲ್ಲಿ ದಾಸನಾಗುವನು, ಅತಿ ಚಿಂತಾತುರನು, ವೃದ್ಧರ ಆಕೃತಿಯಾಗಿರುವನು, ದ್ರವ್ಯಹೀನನೂ ಆಗುತ್ತಾನೆ ॥೧೪೫॥

ಅಥ ಜೀವ ಗೃಹಸ್ಥೇ ಕುಜೇ ಗ್ರಹದೃಷ್ಟಯಃ

## ಧನುರ್ಮೀನಸ್ಥೇ ಕುಜೇ ರವಿದೃಷ್ಟಿಫಲಂ

ಶ್ಲೋಕ॥ ವನಾದ್ರಿ ದುರ್ಗೇಷು ಕೃತಾದಿವಾಸಂ ಕ್ರೂರಂ ಸಭಾಗ್ಯಂ ಜನ ಪ್ರೂಜಿತಂಚ । ಕರೋತಿಜಾತಂ ಧರಣೀತನೂಜೋ ಜೀವರ್ಕ್ಷಯಾ ತಸ್ತರಣಿ ಪ್ರದೃಷ್ಟಃ ॥೧೪೬॥ ಜನನ ಕಾಲದಲ್ಲಿ ಧನುರ್ಮೀನ ರಾಶಿಗಳಲ್ಲಿ ಕುಜನಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ವನ, ಪರ್ವತ, ದುರ್ಗ ಇವುಗಳಲ್ಲಿ ಸ್ಥಳವನ್ನು ಮಾಡಿಕೊಂಡು ವಾಸಮಾಡುವವನು, ಕ್ರೂರಸ್ವಭಾವ ಉಳ್ಳವನು, ಬಹು ಜನಗಳಿಂದ ಪೂಜಿಸಲ್ಪಡತಕ್ಕವನು ಆಗುವನು ॥೧೪೬॥

## ಧನುರ್ಮೀನಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ॥ ವಿದ್ವದ್ವಿಧಿಜ್ಞಂ ನೃಪತೇರಸಹ್ಯಂ ಕಲಿಪ್ರಿಯಂ ಸರ್ವನಿರಾಕೃತಂಚ । ಪ್ರಾಜ್ಞಂ ಪ್ರಕುರ್ಯಾನ್ಮನುಜಂ ಧರಾಜೋಜೀವರ್ಕ್ಷಗಃ ಶೀತಕರ ಪ್ರದೃಷ್ಟಃ ॥೧೪೭॥

ತಾ|| ಜನ್ಮಕಾಲದಲ್ಲಿ ಕುಜನು ಧನುರ್ಮೀನಗಳಲ್ಲಿ ಚಂದ್ರ ದೃಷ್ಟನಾದರೆ ವಿದ್ವಾಂಸನೂ ಜ್ಯೋತಿಷ ತಿಳಿದವೂ, ರಾಜನಿಗೆ ಅಸಹ್ಯನೂ, ಜಗಳಗಂಟಿಗನು, ಸರ್ವರನ್ನೂ ತಿರಸ್ಕಾರ ಮಾಡುವವನೂ ಮತ್ತು ಬುದ್ಧಿವಂತನೂ ಆಗುವನು ||೧೪೭||

## ಧನುರ್ಮೀನಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ|| ಪ್ರಾಜ್ಞಂಚಶಿಲ್ಪೇ ನಿಪುಣಂ ಸುಶೀಲಂ ಸಮಸ್ತ ವಿದ್ಯಾಕುಶಲಂ ವಿನೀತಂ । ಕರೋತಿಜಾತಂ ಖಲುಲೋಹಿತಾಂಗಃ ಸೌಮ್ಯೇನದೃಷ್ಟೋ ಗುರುಗೇಹ ಯಾತಃ ||೧೪೮||ತಾ|| ಜನನಕಾಲದಲ್ಲಿ ಧನುರ್ಮೀನಗಳಲ್ಲಿ ಕುಜನಿದ್ದು, ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದ ಪುರುಷನು ತಿಳುವಳಿಕೆಯುಳ್ಳ ಪ್ರಾಜ್ಞನು, ಶಿಲ್ಪ ವಿದ್ಯೆಯಲ್ಲಿ ನಿಪುಣನು, ಸನ್ಮಾರ್ಗನು, ಸಮಸ್ತ ವಿದ್ಯಾ ಕುಶಲನು, ನಮತ್ರೆಯುಳ್ಳವನೂ ಆಗುವನು ||೧೪೮||

## ಧನುರ್ಮೀನಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ|| ಕಾಂತಾತಿ ಚಿಂತಾಸಹಿತಂ ನಿತಾಂತ ಮರಾತಿವರ್ಗೈಃ ಕಲಹಾನು ರಕ್ತಂ। ಸ್ಥಾನಚ್ಯುತಂ ಭೂಮಿಸುತಃ ಪ್ರಕುರ್ಯಾಜ್ಜೀವೇಕ್ಷಿತೋ ಜೀವಗೃಹಾಧಿ ಸಂಸ್ಥಃ ||೧೪೯||ತಾ|| ಬೃಹಸ್ಪತಿ ಕ್ಷೇತ್ರಗಳಾದ ಧನುರ್ಮೀನಗಳಲ್ಲಿ ಕುಜನು ಬೃಹಸ್ಪತಿ ಯಿಂದ ನೋಡಲ್ಪಟ್ಟರೆ ಜಾತಕನು ಸ್ತ್ರೀವಿಷಯವಾದ ಚಿಂತಾಯುಕ್ತನು, ಶತ್ರುಗಳಲ್ಲಿ ನಿರಂತರ ಜಗಳವಾಡುವವನು, ಸ್ಥಾನಭ್ರಷ್ಟತ್ವವನ್ನು ಹೊಂದುವವನು ಆಗುತ್ತಾನೆ ||೧೪೯||

## ಧನುರ್ಮೀನಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋಕ|| ಉದಾರಚೇತಾ ವಿಷಯಾನುರಕ್ತೋ ವಿಚಿತ್ರ ಭೂಷಾಪರಿಭೂಷಿತಶ್ಚ। ಬಾಗ್ಯಾನ್ವಿತಃ ಸ್ಯಾತ್ಪುರುಷೋ ವನೀಜೇ ಜೀವರ್ಕ್ಷಗೇ ದಾನವ ಪೂಜ್ಯದೃಷ್ಟೇ ||೧೫೦|| ತಾ|| ಧನುರ್ಮೀನಗಳಲ್ಲಿ ಕುಜನು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು ಉದಾರವಾದ ಬುದ್ಧಿಯುಳ್ಳವನು, ವಿಷಯಲಂಪಟನು, ನಾನಾ ಪ್ರಕಾರ ಗಳಾದ ಭೂಷಣದಿಂದ ಭೂಷಿತನೂ ಮತ್ತು ದೊಡ್ಡ ಭಾಗ್ಯವಂತನೂ ಆಗುವನು ||೧೫೦||

## ಧನುರ್ಮೀನಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ|| ಕಾಯಕಾಂತಿರಹಿತಶ್ಚ ನಿತಾಂತಂ ಸ್ಥಾನಚಂಚಲ ರತೋಪಿಚ ದುಃಖೀ । ಅನ್ಯಕರ್ಮ ನಿರತಶ್ಚನರಸ್ಸ್ಯಾಜ್ಜೀವಧಾಮ್ನಿ ಕುರುತೇರ್ಕಜದೃಷ್ಟೇ || ಧನುರ್ಮೀನಗಳಲ್ಲಿ ಕುಜನು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಕಾಂತಿರಹಿತವಾದ ಶರೀರ ಉಳ್ಳವನು, ಯಾವ ಸ್ಥಳದಲ್ಲಿಯೂ ನಿಲ್ಲದೆ ಸಂಚಾರ

ಮಾಡುವವನು, ಅತಿ ದುಃಖವುಳ್ಳವು, ಇತರರ ಕಾರ್ಯ ಮಾಡುವುದರಲ್ಲಿ ಆಸಕ್ತಿಯುಳ್ಳವನೂ ಆಗುತ್ತಾನೆ ||೧೫೧||

ಅಥ ಶನ್ಯಾಗಾರಗತೇ ಕುಜೇ ಗ್ರಹದೃಷ್ಟಯಃ

## ಮಕರ ಕುಂಭಸ್ಥೇ ಕುಜೇ ರವಿದೃಷ್ಟಿಫಲಂ

ಶ್ಲೋಕ|| ಕಲತ್ರ ಪುತ್ರಾರ್ಥ ಸುಖೈಸ್ಸಮೇತಂ ಶ್ಯಾಮಂ ಸುತೀಕ್ಷ್ಣಂ ಸುತರಾಂಚ ಶೂರಂ । ಕುರ್ಯಾನ್ನರಂ ಭೂತನಯೋರ್ಕ ದೃಷ್ಟಶ್ಚಾರ್ಕಾತ್ಮಜಾಗಾರ ಗತಃ ಪ್ರಸೂತೌ ||೧೫೨|| ಜನನ ಕಾಲದಲ್ಲಿ ಕುಜನು ಮಕರದಲ್ಲಾಗಲೀ, ಕುಂಭದಲ್ಲಾಗಲೀ ಇದ್ದು ಸೂರ್ಯನಿಂದ ನೋಡಲ್ಪಟ್ಟರೆ ಹೆಂಡತಿ, ಪುತ್ರಾದಿಗಳು, ದ್ರವ್ಯ ಇವುಗಳಿಂದ ಸೌಖ್ಯಪಡುವನು, ಶ್ಯಾಮಲವಾದ ವರ್ಣ ಉಳ್ಳವನಾಗಿ ಉಗ್ರ ಸ್ವಭಾವ ಉಳ್ಳವನು ಮತ್ತು ಶೂರರಲ್ಲಿ ಅಗ್ರೇಸರನೂ ಆಗುವನು ||೧೫೨||

## ಮಕರ ಕುಂಭಸ್ಥೇ ಕುಜೇ ಚಂದ್ರದೃಷ್ಟಿಫಲಂ

ಶ್ಲೋಕ|| ಸದ್ಭೂಷಣಂ ಮಾತೃಸುಖೇನ ಹೀನಂ ಸ್ಥಾನಚ್ಯುತಂ ಚಂಚಲ ಸೌಹೃದಂಚ । ಉದಾರಚಿತ್ತಂ ಪ್ರಕರೋತಿಜಾತಂ ಕುಜೋರ್ಕಜಸ್ಥೇ ಶಶಿನಾ ಪ್ರದೃಷ್ಟಃ ||೧೫೩|| ಜನನ ಕಾಲದಲ್ಲಿ ಅಂಗಾರಕನು ಮಕರ ಕುಂಭಗಳಲ್ಲಿ ಚಂದ್ರ ದೃಷ್ಟನಾದರೆ ಜಾತಕನು ಉತ್ತಮ ಭೂಷಣಯುಕ್ತನೂ, ಮಾತೃಸುಖ ರಹಿತನು, (ಮಾತೃಗಂಡ) ಸ್ಥಾನಚ್ಯುತಿಯನ್ನು ಹೊಂದುವವನು, ತಾನು ಹುಟ್ಟಿದ ಸ್ಥಳವನ್ನು ಬಿಟ್ಟು ಪರದೇಶದಲ್ಲಿ ಜೀವಿಸುವವನು, ಚಂಚಲ ಬುದ್ಧಿಯುಳ್ಳ ಮಿತ್ರರುಳ್ಳವನು ಮತ್ತು ಉದಾರ ಬುದ್ಧಿಯುಳ್ಳವನೂ ಆಗುತ್ತಾನೆ ||೧೫೩||

## ಮಕರ ಕುಂಭಸ್ಥೇ ಕುಜೇ ಬುಧದೃಷ್ಟಿಫಲಂ

ಶ್ಲೋಕ|| ಪ್ರಿಯೋಕ್ತಿ ಯುಕ್ತೋಟನಲಬ್ಧವಿತ್ತಃ ಸತ್ವಾನ್ವಿತಃಕೈತವ ಸಂಯುತಶ್ಚ । ಅಭೀರ್ನರೋ ಮಂದಗೃಹಂ ಪ್ರಯಾತೇ ಪೃಥ್ವೀಸುತೇ ಚಂದ್ರಸುತೇನ ದೃಷ್ಟೇ ||೧೫೪|| ಜನನಕಾಲದಲ್ಲಿ ಕುಜನು ಮಕರ ಕುಂಭರಾಶಿಗಳಲ್ಲಿ ಬುಧನಿಂದ ನೋಡಲ್ಪಟ್ಟರೆ ಪ್ರಿಯವಾಗಿ ಮಾತನಾಡುವವನು, ದೇಶಾಟನಮಾಡಿ ದ್ರವ್ಯ ಸಂಪಾದನೆ ಮಾಡುವವನು ಮತ್ತು ಪುರುಷಾರ್ಥಿಯೂ, ನಿರ್ಭಯವುಳ್ಳವನೂ, ಕಪಟಿಯೂ ಆಗುವನು ||೧೫೪||

## ಮಕರ ಕುಂಭಸ್ಥೇ ಕುಜೇ ಗುರುದೃಷ್ಟಿಫಲಂ

ಶ್ಲೋಕ|| ದೀರ್ಘಾಯುಷಂ ಭೂಪ ಕೃಪಾಗುಣಾಡ್ಯಂ ಬಂಧುಪ್ರಿಯ ಚಾರುಶರೀರ ಕಾಂತಿಂ । ಕಾರ್ಶ್ಯಪ್ರಲಾಪಂ ಜನಯೇನ್ಮನುಷ್ಯಂ ಜೀವೇಕ್ಷಿತೋ ಮಂದಗೃಹೇ ಮಹೀಜಃ

॥೧೫೫॥ ತಾ॥ ಜನನ ಕಾಲದಲ್ಲಿ ಮಕರ ಕುಂಭರಾಶಿಗಳಲ್ಲಿ ಕುಜನಿದ್ದು ಗುರು-ವೀಕ್ಷಿತನಾದರೆ ದೀರ್ಘಾಯುಸ್ಸುಳ್ಳವನೂ, ರಾಜಕೃಪೆಯುಳ್ಳವನೂ, ಗುಣವಂತನೂ, ದ್ರವ್ಯವಂತನೂ, ಬಂಧುಗಳಲ್ಲಿ ಪ್ರೀತಿಯುಳ್ಳವನೂ, ಸುಂದರವಾದ ಶರೀರಕಾಂತಿ-ಯುಳ್ಳವನು. (ಇಲ್ಲಿ ಬಂಧುಪ್ರಿಯನೆಂದರೆ ದ್ರವ್ಯವಂತ ನಾದವನನ್ನು ಬಂಧುಗಳು ಪ್ರೀತಿಸುವರು ಎಂಬುವದು ಸಾಮಾನ್ಯವಾಗಿ ಲೋಕದ ವಾಡಿಕೆಯಾಗಿರುತ್ತೆ. ಇದು ಹಾಗಲ್ಲ, ಅವನೇ ಬಂಧುಗಳನ್ನು ಪ್ರೀತಿಸುವನೆಂದು ಅರ್ಥಮಾಡಿರುತ್ತೆ) ॥೧೫೫॥

## ಮಕರ ಕುಂಭಸ್ಥೇ ಕುಜೇ ಶುಕ್ರದೃಷ್ಟಿಫಲಂ

ಶ್ಲೋ॥ ಸದ್ಭೋಗ ಸೌಭಾಗ್ಯ ಸುಖೈಸ್ಸಮೇತಃ ಕಾಂತಾಪ್ರಿಯೋತ್ಯಂತ ಕಲಿಪ್ರಿಯಶ್ಚ । ಕ್ಷೋಣೀಸುತೇ ಮಂದಗೃಹಂ ಪ್ರಯಾತೇ ನಿರೀಕ್ಷ್ಯಮಾಣೇ ಭೃಗುಣಾ ನರಃಸ್ಯಾತ್ ॥೧೫೬॥ತಾ॥ ಜನನಕಾಲದಲ್ಲಿ ಕುಜನು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ಸದ್ಭೋಗ ಸೌಭಾಗ್ಯ ಸುಖದಿಂದ ಕೂಡಿದವನಾಗಿಯೂ, ಸ್ತ್ರೀಯರಲ್ಲಿ ಪ್ರೀತಿಯುಳ್ಳವನು ಮತ್ತು ವ್ಯವಹಾರಶೀಲನೂ (ಜಗಳಗಂಟ) ಆಗುತ್ತಾನೆ ॥೧೫೬॥

## ಮಕರ ಕುಂಭಸ್ಥೇ ಕುಜೇ ಶನಿದೃಷ್ಟಿಫಲಂ

ಶ್ಲೋಕ॥ ನೃಪಾಪ್ತವಿತ್ತೋ ವನಿತಾ ವಿಷಾದೋ ಬಹುಶ್ರುತೋತ್ಯಂ ತಮತಿಃ ಸಂಕಷ್ಟಃ । ರಣಪ್ರಿಯಃ ಸ್ಯಾದ್ದರಣೀ ತನೂಜೇ ಮಂದೇಕ್ಷಿತೇ ಮಂದಗೃಹಂ ಪ್ರಯಾತೇ ॥೧೫೭॥ತಾ॥ ಜನನಕಾಲದಲ್ಲಿ ಅಂಗಾರಕನು ಮಕರ ಕುಂಭಗಳಲ್ಲಿದ್ದು ಶನಿಯಿಂದ ನೋಡಲ್ಪಟ್ಟರೆ ಜಾತಕನು ರಾಜನಿಂದ ಲಭ್ಯವಾದ ದ್ರವ್ಯ ಉಳ್ಳವನು, ಸ್ತ್ರೀಯಿಂದ ದುಃಖ ಹೊಂದುವವನು, ಬಹುಶ್ರುತ (ಅನೇಕ ಧರ್ಮಾಧರ್ಮವನ್ನು ತಿಳಿದವನು) ಅತಿಶಯ ಬುದ್ಧಿವಂತ ಕಷ್ಟಪಡುವವನೂ, ಯುದ್ಧಪ್ರಿಯನೂ ಆಗುತ್ತಾನೆ ॥೧೫೭॥

ಇತಿ ಶನಿಗೃಹಗತೇ ಕುಜೇ ಖೇಟದೃಷ್ಟಯಃ
ಅಥ ಕುಜಕ್ಷೇತ್ರಗತೇ ಬುಧೇ ಖೇಟದೃಷ್ಟಯಃ

## ಮೇಷ ವೃಶ್ಚಿಕಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ಬಂಧುಪ್ರಿಯ ಸತ್ಯವಚೋ ವಿಲಾಸಂ ನೃಪಾಲ ಸದ್ಗೌರವ ಸಂಯುತಂಚ । ಕರೋತಿಜಾತಂ ಕ್ಷಿತಿಸೂನುಗೇಹೇ ಸಂಸ್ಥೋ ಬುಧೋ ಭಾನು ಮತಾ ಪ್ರದೃಷ್ಟಃ ॥೧೫೮॥ತಾ॥ ಮೇಷದಲ್ಲಾಗಲೀ, ವೃಶ್ಚಿಕದಲ್ಲಾಗಲೀ, ಬುಧನಿದ್ದು ಸೂರ್ಯನಿಂದ ಅವಲೋಕಿತನಾದ ಕಾಲದಲ್ಲಿ ಹುಟ್ಟಿದವನು, ಬಂಧುಗಳಲ್ಲಿ ಪ್ರೀತಿಯುಳ್ಳವನು, ಸತ್ಯವಾಗಿ ಮಾತನಾಡುವವನು ಮತ್ತು ವಿಲಾಸವುಳ್ಳವನು, ರಾಜನಿಂದ ಗೌರವ ಪಡೆಯುವವನು ಆಗುತ್ತಾನೆ ॥೧೫೮॥

## ಮೇಷ ವೃಶ್ಚಿಕಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಸದ್ಗೀತ ನೃತ್ಯಾದಿ ರುಚಿಃಪ್ರಕಾರಮಂ ಕಾಂತಾರತಿರ್ವಾಹನಭೃತ್ಯ ಯುಕ್ತಃ। ಕೌಟಿಲ್ಯಭಾಕ್ ಸ್ಯಾನ್ಮನುಜಃ ಕುಜರ್ಕ್ಷೇ ಸೋಮಾತ್ಮಜೇ ಶೀತಕರ ಪ್ರದೃಷ್ಟೇ ॥೧೫೯॥ತಾ॥ ಜನನಕಾಲದಲ್ಲಿ ಬುಧನು ಮೇಷವೃಶ್ಚಿಕಗಳಲ್ಲಿ ಚಂದ್ರಾವಲೋಕಿತನಾದರೆ ಜಾತಕನು ಉತ್ತಮವಾದ ಸಂಗೀತ ನೃತ್ಯಾದಿಗಳಲ್ಲಿ ಅಭಿರುಚಿಯುಳ್ಳವನು, ಸ್ತ್ರೀ ಲಂಪಟನು, ವಾಹನ ಮತ್ತು ಸೇವಕರಿಂದ ಯುಕ್ತನು, ಕುಟಿಲವಾದ ಮನಸ್ಸುಳ್ಳವನೂ ಆಗುತ್ತಾನೆ ॥೧೫೯॥

## ಮೇಷ ವೃಶ್ಚಿಕಸ್ಥೇ ಬುಧೇ ಕುಜದೃಷ್ಟಿಫಲಂ

ಶ್ಲೋಕ॥ ಭೂಪಪ್ರಿಯಂ ಭೂರಿಧನಂಚಶೂರಂ ಕಲಾಪ್ರವೀಣಂ ಕಲಹೋದ್ಯತಂಚ । ಕ್ಷುಧಾನ್ವಿತಂ ಸಂಜನಯೇನ್ಮನುಷ್ಯಂ ಸೌಮ್ಯಃ ಕುಜರ್ಕ್ಷೇ ಕುರುತೇನ ದೃಷ್ಟಃ ॥೧೬೦॥ತಾ॥ ಜನನ ಕಾಲದಲ್ಲಿ ಬುಧನು ಕುಜಕ್ಷೇತ್ರಗಳಲ್ಲಿದ್ದು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ರಾಜಪ್ರಿಯನೂ, ಭೂರಿಧನವುಳ್ಳವನೂ, ಯುದ್ಧದಲ್ಲಿ ಶೂರನೂ, ಕಲಾಶಾಸ್ತ್ರ ಪ್ರವೀಣನೂ, ಕಲಹವನ್ನು ತೆಗೆಯತಕ್ಕವನೂ (ಅಂದರೆ ಕೆಣಕಿ ಜಗಳ ತೆಗೆಯುವವನೂ) ಆಗುತ್ತಾನೆ ॥೧೬೦॥

## ಮೇಷ ವೃಶ್ಚಿಕಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ॥ ಸುಖೋಪಪನ್ನಂ ಚತುರಂ ಸುವಾಕ್ಯಂ ಕಾಂತಾ ಸುತಾದ್ಯೈಃ ಸಹಿತಂ ಪ್ರಸನ್ನಂ ಕರೋತಿಮರ್ತ್ಯಂ ಕುಜಗೇಹಗಾಮೀ ಸೋಮಾತ್ಮಜೋ ವಾಕ್ಪತಿನಾ ಪ್ರದೃಷ್ಟಃ ॥೧೬೧॥ತಾ॥ ಜನ್ಮಕಾಲದಲ್ಲಿ ಮೇಷ ವೃಶ್ಚಿಕಗಳಲ್ಲಿ ಬುಧನು ಗುರುದೃಷ್ಟನಾದರೆ ಸುಖವುಳ್ಳವನು,ಚತುರನು, ಮಧುರ ಭಾಷಣ ಉಳ್ಳವನು, ಸ್ತ್ರೀ, ಪುತ್ರಾದಿಯುಕ್ತನೂ, ನಿರಂತವೂ ಪ್ರಸನ್ನನಾದವನು (ಹಸನ್ಮುಖಿ ಎಂದು ಕೆಲವರು) ಈ ಗುಣಗಳಿಂದ ಕೂಡಿದವನಾಗುವನು ॥೧೬೧॥

## ಮೇಷ ವೃಶ್ಚಿಕಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ॥ ಕಾಂತಾವಿಲಾಸಂ ಗುಣಗೌರವಾಢ್ಯಂ ಸುಹೃತ್ಪ್ರಿಯಂ ಚಾರುಮತಿಂ ವಿನೀತಂ। ಕರೋತಿಜಾತಂ ಶಶಿಜಃ ಕುಜರ್ಕ್ಷೇ, ಸಂಸ್ಥಶ್ಚ ಶುಕ್ರೇಣ ನಿರೀಕ್ಷ್ಯಮಾಣಃ ॥೧೬೨॥ತಾ॥ ಜನನಕಾಲದಲ್ಲಿ ಮೇಷ ವೃಶ್ಚಿಕಗಳಲ್ಲಿ ಬುಧನು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು, ಸ್ತ್ರೀಯರಲ್ಲಿ ಅತಿಶಯ ವಿಲಾಸ ಉಳ್ಳವನು, ಸುಗುಣಗಳಿಂದ ಗೌರವವನ್ನು ಹೊಂದಿದವನು, ಆಪ್ತಜನರಿಗೆ ಪ್ರಿಯನು ಪವಿತ್ರನು (ಪರಧನ ಪರದಾರಾದಿ ಸಂಗವಿಲ್ಲದವನು) ಮತ್ತು ವಿನಯವುಳ್ಳವನೂ ಆಗುತ್ತಾನೆ ॥೧೬೨॥

## ಮೇಷ ವೃಶ್ಚಿಕಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಸುಸಾಹಸಂ ಚೋಗ್ರತರ ಸ್ವಭಾವಂ ಕುಲೋತ್ಕಲಿ ಪ್ರೀತಿಮ ಸಾಧು ವೃತ್ತಿಂ । ಕರೋತಿಮರ್ತ್ಯಂ ಹರಿಣಾಂಕ ಸೂನುರ್ಭೌಮರ್ಕ್ಷಸಂಸ್ಥಃ ಶನಿನಾಪದೃಷ್ಟಃ ॥೧೬೩॥ತಾ॥ ಜನನಕಾಲದ ಮೇಷ ವೃಶ್ಚಿಕಗಳಲ್ಲಿ ಬುಧನು ಶನಿಯಿಂದ ನೋಡಲ್ಪಟ್ಟರೆ ಜಾತಕನು ದೊಡ್ಡ ಸಾಹಸಿ, ಕ್ರೂರ ಸ್ವಭಾವ ಉಳ್ಳವನು, ತನ್ನ ವಂಶದ ಅಧಿಕೃತೆಯನ್ನು ಹೊಂದುವವನು, ಸುಳ್ಳು ಹೇಳಿಕೊಂಡು ಜೀವಿಸುವವನು. ಈ ಗುಣಗಳಿಂದ ಕೂಡಿದವನಾಗುವನು ॥೧೬೩॥

ಇತಿ ಕುಜಗೇಹಸ್ಥೇ ಬುಧೇ ಖೇಟದೃಷ್ಟಿಫಲಂ

## ಶುಕ್ರಕ್ಷೇತ್ರೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ದಾರಿದ್ರ್ಯದುಃಖಾ ಮಯತಪ್ರದೇಹಂ ಪರೋಪಕಾರಾಭಿರತಂ ನಿತಾಂತಮ್ । ಶಾಂತಂ ಸುಚಿತ್ರಂ ಪುರುಷಂ ಪ್ರಕುರ್ಯಾ ತ್ಸೌಮ್ಯೋ ಭೃಗುಕ್ಷೇತ್ರ ಗತೋರ್ಕದೃಷ್ಟಃ ॥೧೬೪॥ತಾ॥ ಜನನಕಾಲದಲ್ಲಿ ವೃಷಭ ತುಲೆಗಳಲ್ಲಿ ರವಿ ದೃಷ್ಟ ನಾದರೆ ಜಾತಕನು ದರಿದ್ರ, ದುಃಖ, ರೋಗ ಇವುಗಳಿಂದ ಕೂಡಿದವನು, ಪರೋಪಕಾರ ಮಾಡುವುದರಲ್ಲಿ ಇಚ್ಛೆಯುಳ್ಳವನು, ಶಾಂತ ಚಿತ್ತನು, ಒಳ್ಳೆಯ ಅವಯವಗಳಿಂದ ಕೂಡಿದ ಶರೀರ ಉಳ್ಳವನು, (ಅಂದರೆ ಸರ್ವಾಂಗ ಸುಂದರನು) ಈ ಗುಣಗಳಿಂದ ಕೂಡಿರುವನು ॥೧೬೪॥

## ವೃಷಭ ತುಲಾರಾಶಿಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಬಹುಪ್ರಪಂಚಂ ಧನಧಾನ್ಯಯುಕ್ತಂ ದೃಢವ್ರತಂ ಭೂಮಿಪತಿ ಪ್ರಧಾನಂ। ಖ್ಯಾತಂ ಪ್ರಕುರ್ಯಾನ್ಮನುಜಂ ಹಿಸೌಮ್ಯಃ ಶುಕ್ರರ್ಕ್ಷ ಸಂಸ್ಥಃ ಶನಿನಾಪ್ರದೃಷ್ಟಃ ॥೧೬೫॥ತಾ॥ ಜನನಕಾಲದಲ್ಲಿ ವೃಷಭ, ತುಲೆಗಳಲ್ಲಿ ಬುಧನು ಚಂದ್ರ ದೃಷ್ಟನಾದರೆ ಅನೇಕರಿಗೆ ಅನೇಕ ಪ್ರಕಾರ ಗುಣವುಳ್ಳವನು, ಅಂದರೆ ಯಾರ್‍ಯಾರು ಯಾವ ಪ್ರಕಾರ ಇರುವರೋ ಅವರಂತೆ ನಡಿಯುವವನು, ಇದಕ್ಕೆ ಪ್ರಪಂಚ ಬಹುತ್ವ ಉಳ್ಳವನೆಂದು ಹೇಳುವರು. ಕೆಲವರು ಪ್ರಪಂಚದಲ್ಲಿ ಒಬ್ಬರಿಗೊಂದು ಇನ್ನೊಬ್ಬರಿಗೊಂದು ಮಾಡುವವನು ಪ್ರಪಂಚಗುಣ ಉಳ್ಳವನೆಂದು ಹೇಳುವರು. ಧನ ಮತ್ತು ಧಾನಯುಕ್ತನು, ನಿಶ್ಚಯವಾದ ಬುದ್ಧಿಯುಳ್ಳವನು (ದೃಢವ್ರತವೆಂದರೆ ಏಕಪತ್ನೀವ್ರತ ಉಳ್ಳವನೆಂದು ಅರ್ಥ ಮಾಡಿರುವರು) ಭೂಮಿಪತಿಗೆ ಅಂದರೆ ಮಹಾರಾಜನಿಗೆ ಮಂತ್ರಿಯಾಗಿರುವನು ಅಂದರೆ ರಾಜಮಂತ್ರಿಯಾಗಬೇಕಾದರೆ ಅವನಿಗೆ ರಾಜನಿಗಿಂತ ಅಧಿಕವಾದ ಸುಗುಣಗಳಿರಬೇಕು. ಅಂಥವನೆ ಮಂತ್ರಿಶ್ರೇಷ್ಠನೆನಿಸುವನು ಮತ್ತು ಯಶಸ್ವಿಯಾಗಿರುವನು ಅಂದರೆ ಪ್ರಖ್ಯಾತ

ಪುರುಷನೆಂದು ಭಾವವು. ಈ ಮೇಲೆ ಹೇಳಿದ ಸುಗುಣಗಳಿಂದ ಕೂಡಿದವ ನಾಗುವನು ॥೧೬೫॥

## ವೃಷಭ ತುಲಾರಾಶಿಸ್ಥೇ ಬುಧೇ ಕುಜದೃಷ್ಟಿಫಲಂ

ಶ್ಲೋಕ॥ ರಾಜಾಪಮಾನಾದಿಗದಾ ಪತಪ್ತಂ ತ್ಯಕ್ತಂ ಸುಹೃದ್ಭಿರ್ವಿಷಯೈಶ್ಚ ನೂನಮ್। ಕುರ್ಯಾನ್ನರಂ ಚಂದ್ರಸುತಃ ಸಿತರ್ಕ್ಷೇ ಸಂಸ್ಥೋಧರಾಪುತ್ರ ನಿರೀಕ್ಷ್ಯಮಾಣಃ ॥೧೬೬॥ತಾ॥ ಜನ್ಮಕಾಲದಲ್ಲಿ ವೃಷಭ, ತುಲೆಗಳಲ್ಲಿ ಬುಧನು ಅಂಗಾರಕ ವೀಕ್ಷಿತನಾದರೆ, ಜಾತಕನು ರಾಜನಿಂದ ಅವಮಾನ ಹೊಂದುವನು, ರೋಗಪೀಡಿತನೂ, ಆಪ್ತಜನಗಳಿಂದ ಬಿಡಲ್ಪಟ್ಟವನೂ ಆಗುವನು, ವಿ-ತಾ॥ ಈ ಫಲವು ಯಾವುದರಿಂದಲೆಂದರೆ-ಬುಧನು, ಕುಜನು ಪರಸ್ಪರ ಶತ್ರುಗಳು * ಮತ್ತು ಗ್ರಹ ಯುದ್ಧದಲ್ಲಿ ಕುಜನೇ ಜಯವುಳ್ಳವನು, ಕದಾಜಿತ್ ಬುಧನಿಗೂ ಜಯುಂಟಾಗುವುದುಂಟು. ಆದ್ದರಿಂದ ಶತ್ರುತ್ವ ಸಂಬಂಧಕ್ಕೆ ಈ ಫಲ ಹೇಳಿರುವುದು ಸಮ್ಮತ ವಾಗಿರುತ್ತೆ ॥೧೬೬॥

## ವೃಷಭ ತುಲಾರಾಶಿಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ॥ ದೇಶೋತ್ತಮ ಗ್ರಾಮ ಪುರಾಧಿರಾಜಂ ಪ್ರಾಜ್ಞಂ ಗುಣಜ್ಞಂ ಗುಣಿನಂ ಸುಶೀಲಂ । ಕುರ್ಯಾನ್ನರಂ ಚಂದ್ರಸುತಃ ಸಿತರ್ಕ್ಷೇ ಸಂಸ್ಥಸ್ಸುರಾಚಾರ್ಯ ನಿರೀಕ್ಷ್ಯಮಾಣಃ ॥೧೬೭॥ತಾ॥ ಜನನಕಾಲದಲ್ಲಿ ವೃಷಭ ತುಲೆಗಳಲ್ಲಿ ಬುಧನಿದ್ದು ಗುರು ದೃಷ್ಟಿಯುಕ್ತನಾದರೆ ಜಾತಕನು, ಉತ್ತಮವಾದ ದೇಶಾಧಿಪತಿಯಾಗಲೀ ಅಥವಾ ನಗರಾಧಿಪತಿಯಾಗಲೀ ಆಗುವನು ಮತ್ತು ಸುಗುಣಗಳಿಂದ ಶೋಭಿಸುವವನು, ಧರ್ಮಾಧರ್ಮದ ತಿಳುವಳಿಕೆಯುಳ್ಳನು, ಸುಗುಣಿಗಳಲ್ಲಿ ಅಗ್ರೇಸರನು, ಸದಾಚಾರವುಳ್ಳವನೂ ಆಗುತ್ತಾನೆ. ಗುರು ಬುಧರು ಪರಸ್ಪರರಾಗಿ ನೋಡುತ್ತಲಿದ್ದರೆ ರಾಜನೇ ಆಗುತ್ತಾನೆಂದು ರಾಜಯೋಗ ಪ್ರಕರಣದಲ್ಲಿ ಹೇಳಿರುತ್ತೆ. ಇಲ್ಲಿ ಗುರು ಬುಧನ್ನು ನೋಡಿದರೆ ಮಾತ್ರ ಫಲಾದೇಶ ಮಾಡಿರುತ್ತೆ. ॥೧೬೭॥

## ವೃಷಭ ತುಲಾರಾಶಿಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ॥ ಅತಿ ಸುಲಿತವೇಷಂ ವಸ್ತ್ರಭೂಷಾ ವಿಶೇಷೈರ್ಯುವತಿ ಜನ ಮನೋಜ್ಞಂ ಮನ್ಮಥೋತ್ಕರ್ಷಹರ್ಷಂ । ಅತಿಚತುರ ಮುದಾರಂ ಚಾರುಭಾಗ್ಯಂ ಪ್ರಕಾರ್ಯದ್ಭಗು ಗೃಹಗತಸೌಮ್ಯೋ ಭಾರ್ಗವೇನಪ್ರದೃಷ್ಟಃ ॥೧೬೮॥ತಾ॥ ಬುಧನು ವೃಷಭ ತುಲೆಗಳಲ್ಲಿ ಶುಕ್ರನಿಂದ ಅವಲೋಕಿತನಾದರೆ ಜಾತಕನು ಅತ್ಯುತ್ತಮವಾದ

*. ರಾಮಾಯಣ ಯುದ್ಧಕಾಂಡ ರಾಮ ರಾವಣರ ಯುದ್ಧವನ್ನು (ಬುಧಾಂಗಾ-ರಕಯೋರಿವ) ಎಂದು ವರ್ಣಿಸಿರುತ್ತಾರೆ.

ಭೂಷಣಾದ್ಯಲಂಕಾರಗಳಿಂದ ಅಲಂಕರಿಸಿಕೊಳ್ಳುವನು, ಯೌವನವತಿಯರಿಗೆ ಪ್ರೀತಿ ಯುಳ್ಳವನು. ವಿಷಯೋಪಭೋಗಗಳನ್ನು ಅನುಭವಿಸುವವನು, ಅತ್ಯಂತ ಚತುರನು, ಅತಿಶಯವಾದ ಉದಾರನು ಮತ್ತು ಅಧಿಕೈಶ್ವರ್ಯವಂತನೂ ಆಗುತ್ತಾನೆ ॥೧೬೮॥

## ವೃಷಭ ತುಲಾರಾಶಿಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಕಳತ್ರ ಪುತ್ರಾತ್ಮಜ ಯಾನಪೀಡಾ ಸಂತಪ್ತ ಚಿತ್ತಂ ಸುಖವಿತ್ತ ಹೀನಂ। ಕುರ್ಯಾನ್ನರಂ ಶತ್ರುಜನಾಭಿಭೂತಂ ಮಂದೇಕ್ಷಿತೋಜ್ಞಃ ಸಿತಧಾಮಗಾಮೀ ॥೧೬೯॥ತಾ॥ ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳಲ್ಲಿ ಬುಧನು ಶನಿಯಿಂದ ನೋಡಲ್ಪಟ್ಟರೆ, ಜಾತಕನು ಪತ್ನಿ, ಪುತ್ರ, ಪೌತ್ರ ಮತ್ತು ಯಾನ, ವಾಹನ ಇವುಗಳಿಂದ ಪೀಡಿಸಲ್ಪಟ್ಟವನು, ಯಾವಾಗಲೂ ಮನಸ್ಸು ವ್ಯಾಕುಲ ಪಡುತ್ತಲಿರುವನು, ಸೌಖ್ಯವೂ, ದ್ರವ್ಯವೂ ಇಲ್ಲದಿರುವವನೂ ಆಗುತ್ತಾನೆ ॥೧೬೯॥

## ಅಥ ಸ್ವಕ್ಷೇತ್ರಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ಸತ್ಯೋಪೇತಂ ಚಾರುಲೀಲಾ ವಿಲಾಸಂ ಭೂಮಿ ಪಾಲಾತ್ಪ್ರಾಪ್ತ ಮಾನೋನ್ನತಿಂಚ । ಚಂಚತ್ಕೀರ್ತಿಂ ಚಾಪಿಕುರ್ಯಾನ್ಮನುಷ್ಯಂ ಸ್ವಕ್ಷೇತ್ರಸ್ಥಃ ಚಂದ್ರ ಪುತ್ರೋರ್ಕದೃಷ್ಟಃ ॥೧೭೦॥ತಾ॥ ಬುಧನು ಮಿಥುನದಲ್ಲಿಯಾಗಲೀ, ಕನ್ಯೆಯಲ್ಲಾಗಲೀ ರವಿಯಿಂದ ನೋಡಲ್ಪಟ್ಟರೆ ಜಾತಕನು ನಿಜವನ್ನೇ ಹೇಳುವವನು, ಲೀಲಾಯುಕ್ತನು, ವಿಲಾಸವುಳ್ಳವನು, ರಾಜಮೂಲವಾಗಿ ಮಾನವನ್ನು ದ್ರವ್ಯವನ್ನು ಅಧಿಕ್ಯತೆಯನ್ನು ಹೊಂದುವವನೂ ಆಗುವನು ॥೧೭೦॥

## ಮಿಥುನ ಕನ್ಯಾರಾಶಿಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಅನಲ್ಪಜಲ್ಪೋ ಮೃತತುಲ್ಯಭಾಷೀ ಕಲಿಪ್ರಿಯೋ ರಾಜಸಮೀಪವರ್ತೀ। ಭವೇನ್ನರಸ್ಸೋಮಸುತೇ ಸ್ವಗೇಹೇ ನಿರೀಕ್ಷ್ಯಮಾಣೋ ಮೃಗಲಾಂಛನೇನ ॥೧೭೧॥ತಾ॥ ಮಿಥುನ, ಕನ್ಯೆಗಳಲ್ಲಿ ಬುಧನು ಚಂದ್ರಾವಲೋಕಿತನಾದರೆ ಅತಿಶಯವಾಗಿ ಮಾತನಾಡುವವನು (ಅತಿಭಾಷಿ), ಮಧುರವಾಗಿ ಮಾತನಾಡುವವನು, ಜಗಳದಲ್ಲಿ ಪ್ರೀತಿಯುಳ್ಳವನು, ನಿರಂತದಲ್ಲಿಯೂ ರಾಜಾಶ್ರಯದಲ್ಲಿರುವವನೂ ಆಗುತ್ತಾನೆ ॥೧೭೧॥

## ಮಿಥುನ ಕನ್ಯಾರಾಶಿಸ್ಥೇ ಬುಧೇಕುಜದೃಷ್ಟಿಫಲಂ

ಶ್ಲೋಕ॥ ಪ್ರಸನ್ನಗಾತ್ರಂ ಕುಟಿಲಂ ಕಲಾಜ್ಞಂ ನರೇಂದ್ರಕೃತ್ಯೇ ಸುತರಾಂ ಪ್ರವೀಣಂ । ಜನಪ್ರಿಯಂ ಸಂಜನಯೇನ್ಮನುಷ್ಯಂ ಭೌಮೇಕ್ಷಿತೋಜ್ಞಃ ಸ್ವಗೃಹೇಧಿ ಸಂಸ್ಥಃ ॥೧೭೨॥ತಾ॥ ಬುಧನು ಮಿಥುನ ಕನ್ಯೆಗಳಲ್ಲಿ ಕುಜನಿಂದ ನೋಡಲ್ಪಟ್ಟರೆ

ಜಾತಕನು ಪ್ರಸನ್ನವಾದ ಶರೀರವುಳ್ಳವನು (ಸುಶರೀರನು), ಕುಟಿಲ ವಿದ್ಯೆಯುಳ್ಳವನು, ಗೀತವಾದ್ಯಾದಿ ಕಲಾಶಾಸ್ತ್ರವನ್ನು ತಿಳಿದವನೂ, ರಾಜಕಾರ್ಯದಲ್ಲಿ ಕುಶಲತೆ-ಯುಳ್ಳವನೂ, ಸರ್ವಜನಪ್ರಿಯನೂ ಆಗುವನು ॥೧೭೨॥

## ಮಿಥುನ ಕನ್ಯಾರಾಶಿಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ॥ ಬಹ್ವರ್ಥ ಸಾಮರ್ಥ್ಯ ವಿರಾಜಮಾನಂ ಸದ್ರಾಜಮಾನಾಪ್ತ ಪದಾಧಿಕಾರಂ । ಶ್ರುತಂ ಪ್ರಕುರ್ಯಾ ನ್ನಿಜಮಂದಿರಸ್ಥಃ ಸೌಮ್ಯಃ ಪ್ರದೃಷ್ಟಃ ಸುರಪೂಜಿತೇನ ॥೧೭೩॥ತಾ॥ ಬುಧನು ಮಿಥುನ ಕನ್ಯೆಗಳಲ್ಲಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು, ಬಹುದ್ರವ್ಯ ಮತ್ತು ಸಾಮರ್ಥ್ಯ (ವಿದ್ಯಾಬುದ್ಧಿ ಸಾಮರ್ಥ್ಯ) ಇವುಗಳಿಂದ ವಿಶೇಷವಾಗಿ ಪ್ರಕಾಶವಾಗುವನು, ಮಹಾರಾಜನಿಂದ ಬಹುಮಾನ ಸಮೇತವಾಗಿ ಹೊಂದಿದ ಉತ್ತಮವಾದ ಅಧಿಕಾರವುಳ್ಳವನು. ೮೨ನೇ ಪುಟದಲ್ಲಿ ತೋರಿಸಿರುವ ಕುಂಡಲಿಯಲ್ಲಿ ಕನ್ಯೆಯಲ್ಲಿದ್ದ ಬುಧನನ್ನು ಮೀನದಲ್ಲಿದ್ದ ಬೃಹಸ್ಪತಿಯು ನೋಡುತ್ತಲಿರುವನು, ಆದ್ದರಿಂದ ಆ ಜಾತಕನಿಗೆ ಈ ಶ್ಲೋಕದಲ್ಲಿನ ಅರ್ಥವುಳ್ಳ ಬಹುಮಾನವೂ ರಾಜಪದವೂ ಪ್ರಾಪ್ತಿಯಾಗಿರುತ್ತೆ ॥೧೭೩॥

## ಮಿಥುನ ಕನ್ಯಾರಾಶಿಸ್ಥೇ ಬುಧೇ ಶುಕ್ರದೃಷಿಫಲಂ

ಶ್ಲೋಕ॥ ನರೇಂದ್ರದೂತೇ ವಿಜಿತಾರಿವರ್ಗಃ ಸಂಧಿಕ್ರಿಯಾ ಮಾರ್ಗವಿಧಿ ಪ್ರಗಲ್ಭಃ । ವಾರಾಂಗನಾಸಕ್ತ ಮನೋಭಿಲಾಷಃ ಶುಕ್ರೇಕ್ಷಿತಜ್ಞೇ ನಿಜಭೇ ನರಸ್ಯಾತ್ ॥೧೭೪॥ತಾ॥ ಬುಧನು ಮಿಥುನ, ಕನ್ಯಾರಾಶಿಗಳಲ್ಲಿದ್ದು ಶುಕ್ರದೃಷ್ಟನಾದರೆ ರಾಜದೂತನೂ, ಶತ್ರುಗಳನ್ನು ಜಯಿಸುವವನೂ, ಸಾಮೋಪಾಯದಲ್ಲಿ ಅತಿಶಯ ಚತುರನೂ, ವೇಶ್ಯಾಸ್ತ್ರೀಯರಲ್ಲಿ ವಿಶೇಷ ಭೋಗಾಭಿಲಾಷೆಯುಳ್ಳವನೂ, ಭೋಗಿಯೂ ಆಗುತ್ತಾನೆ ॥೧೭೪॥

## ಮಿಥುನ ಕನ್ಯಾರಾಶಿಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಪ್ರಾರಂಭಸಿದ್ಧಿಂ ವಿನಯಂ ವಿಶೇಷಾ ತ್ತದ್ವಸ್ತ್ರಭೂಷಣಾದಿ ಸಮೃದ್ಧಿ ಮುಚ್ಚೈಃ। ಕುರ್ಯಾನ್ನರಾಣಾಮಮೃತಾಂಶುಜನ್ಮಾ ಸ್ವಮಂದಿರಸ್ಥೋ ರವಿಸೂನು ದೃಷ್ಟಃ ॥೧೭೫॥ತಾ॥ ಮಿಥುನ ಕನ್ಯೆಗಳಲ್ಲಿ ಬುಧನು ಶನಿಯಿಂದ ನೋಡಲ್ಪಟ್ಟರೆ ಜಾತಕನು ಪ್ರಾರಂಭಿಸಿದ ಕಾರ್ಯವನ್ನು ಕೊನೆಗಾಣಿಸುವವನು, ವಿನಯಯುಕ್ತನೂ,

---

* ಸಂಧಿಕ್ರಿಯಾ-ಸಾಮ, ದಾನ, ಭೇದ, ದಂಡ ಈ ನಾಲ್ಕು ಉಪಾಯಗಳು ಅದರಲ್ಲಿ ಸಾಮೋಪಾಯವೇ ಶ್ರೇಷ್ಠವಾದದ್ದು.

ಉತ್ತಮವಾದ ವಸ್ತ್ರಗಳನ್ನು ಧರಿಸುವವನೂ, ಅತ್ಯುನ್ನತ ದಶೆಗೆ ಬರುವವನೂ ಮತ್ತು ಸಂಪದ್ಯುಕ್ತನೂ ಆಗುತ್ತಾನೆ ॥೧೭೫॥

ಅಥ ಕುಳೀರಗಾಮಿನಿ ಬುಧೇ ಖೇಟದೃಷ್ಟಯಃ

## ಕರ್ಕಾಟಕಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ವಸ್ತ್ರಾದಿಶುದ್ಧೌ ಮಣಿಸಂಗ್ರಹೇಚ ಗೃಹಾದಿ ನಿರ್ಮಾಣವಿಧೌ ಪ್ರವೀಣಃ । ಪ್ರಸೂನಮಾಲಾ ಗ್ರಥನೇಪಿಮರ್ತ್ಯಃ ಕುಳೀರಗೇಜ್ಞೇ ನಳಿನೀಶ ದೃಷ್ಟೇ ॥೧೭೬॥ತಾ॥ ಕರ್ಕಾಟಕ ರಾಶಿಯಲ್ಲಿ ಬುಧನು ಸೂರ್ಯನಿಂದ ನೋಡಲ್ಪಟ್ಟರೆ ಆ ಪುರುಷನು ಶುದ್ಧವಾದ ವಸ್ತ್ರಗಳನ್ನು ಧರಿಸುವವನು, ರತ್ನಾದಿಗಳನ್ನು ಸಂಗ್ರಹ ಮಾಡುವುದರಲ್ಲಿಯೂ, ಗೃಹನಿರ್ಮಾಣ ಶಾಸ್ತ್ರದಲ್ಲಿಯೂ, (ಗೃಹಶಿಲ್ಪ ಶಾಸ್ತ್ರ) ಪುಷ್ಪ ಮಾಲಿಕೆಗಳನ್ನು ಕಟ್ಟುವುದರಲ್ಲಿಯೂ ನಿಪುಣೂ ಆಗುವನು ॥೧೭೬॥

## ಕರ್ಕಾಟಕಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಕಾಂತಾ ನಿಮಿತ್ತಾಪ್ತ ಮಹದ್ವಳೀಕೋ ದ್ರವ್ಯವ್ಯಯಾತ್ಯಂತ ಕೃಶಾಂಗಯುಷ್ಟಿಃ । ಬಹೂಪಸರ್ಗೋ ವಿಬವೇನ್ಮನುಷ್ಯಃ ಕುಳೀರಗೇಜ್ಞೇ ಶಶಿನಾ ಪ್ರದೃಷ್ಟೇ ॥೧೭೭॥ತಾ॥ ಕರ್ಕಾಟಕ ರಾಶಿಯಲ್ಲಿ ಬುಧನು ಚಂದ್ರನಿಂದ ನೋಡಲ್ಪಟ್ಟರೆ ಸ್ತ್ರೀ ಮೂಲವಾಗಿ ದುಃಖವನ್ನು ಹೊಂದುವನು, ದ್ರವ್ಯ ವ್ಯಯಮಾಡಿ ಆ ವ್ಯಸನದಿಂದ ಕೃಶವಾದ ಶರೀರವುಳ್ಳವನು, ಅನೇಕ ಕಷ್ಟಗಳಿಂದ ತಪ್ತಪಡುವವನು ಆಗುವನು ॥೧೭೭॥

## ಕರ್ಕಾಟಕಸ್ಥೇ ಬುಧೇ ಕುಜದೃಷ್ಟಿಫಲಂ

ಶ್ಲೋಕ॥ ಸ್ವಲ್ಪಶ್ರುತಂ ಚಾರ್ತರತಂಚ ಶೂರಂ ಪ್ರಿಯಂವದಂ ಕೂಟವಿಧೌ ಪ್ರವೀಣಂ । ಕುರ್ಯಾನ್ನರಂ ಶೀತಕರಸ್ಯ ಸೂನು- ಕುಲೀರಸಂಸ್ಥೋವನಿ ಸೂನು ದೃಷ್ಟಃ ॥೧೭೮॥ತಾ॥ ಕರ್ಕಾಟಕ ರಾಶಿಯಲ್ಲಿ ಬುಧನು ಕುಜನಿಂದ ನೋಡಲ್ಪಟ್ಟರೆ ಜಾತಕನು ಸ್ವಲ್ಪ ತಿಳುವಳಿಕೆಯುಳ್ಳವವನು, ದ್ರವ್ಯಪರನು, ಶೂರನು, ಪ್ರಿಯವಾಗಿ ಮಾತನಾಡುವವನು. ಕೂಟ ಕೂಡಿಸುವುದರಲ್ಲಿ ಪ್ರವೀಣನು, ಅಂದರೆ ಗುಂಪು ಮಾಡುವುದರಲ್ಲಿ ಚತುರನೂ ಆಗುವನು ॥೧೭೮॥

## ಕರ್ಕಾಟಕಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ॥ ಪ್ರಾಜ್ಞೋ ವಿಧಿನಾತಿಶಾಲೀ ಸದ್ವಾಗ್ವಿಲಾಸೋ ವನಿಪಾಲಮಾನ್ಯಃ । ಸ್ಯಾನ್ಮಾನವೋ ಜನ್ಮನಿ ಸೋಮಸೂನೌ ಕುಳೀರಗಾಮಿ ನ್ಯಮರೇಜ್ಯ ದೃಷ್ಟೇ

॥೧೭೯॥ತಾ॥ ಜನ್ಮಕಾಲದಲ್ಲಿ ಬುಧನು ಕರ್ಕಾರಾಶಿಯಲ್ಲಿ ಗುರುದೃಷ್ಟಿಯುಕ್ತನಾದರೆ ಆ ಮನುಷ್ಯನು ಅತ್ಯಂತ ತಿಳುವಳಿಕೆಯುಳ್ಳವನು. ವಿಧಿಜ್ಞನೆಂದರೆ ಧರ್ಮಶಾಸ್ತ್ರ ವಿಧಿಯನ್ನು ಹೀಗೆಂದು ನುಡಿಯತಕ್ಕವನು ಮತ್ತು ಜ್ಯೋತಿಶ್ಶಾಸ್ತ್ರ ತಿಳಿದವನು, ಪ್ರಾರಬ್ಧ ಕರ್ಮವನ್ನು ತಿಳಿಸುವವನು, ಒಳ್ಳೇ ಮಾತುಗಳನ್ನಾಡಿ ಸಂತೋಷ ಪಡಿಸುವವನು ಮತ್ತು ಭೂಪತಿಮಾನ್ಯನೂ ಆಗುವನು ॥೧೭೯॥

## ಕರ್ಕಾಟಕಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ॥ ಪ್ರಿಯಂ ವದಶ್ಚಾರು ಶರೀರಭಾಕ್ಚ ಸದ್ಗೀತವಾದ್ಯಾದಿ ವಿಧೌಪ್ರವೀಣಃ। ಸ್ಯಾನ್ಮಾನವೋ ದಾನವಮಂದ್ಯ ದೃಷ್ಟೇ ಕರ್ಕಾಟಕಸ್ಥೇ ಮೃತಭಾನೂಸೂನೌ ॥೧೮೦॥ ತಾ॥ ಕರ್ಕಾಟಕ ರಾಶಿಯಲ್ಲಿ ಬುಧನು ಶುಕ್ರವೀಕ್ಷಿತನಾದರೆ ಜಾತಕನು, ಪ್ರಿಯವಾಗಿ ಮಾತನಾಡುವವನು, ಸುಂದರವಾದ ಶರೀರ ಉಳ್ಳವನು, ಒಳ್ಳೆ ಗೀತ ವಾದ್ಯಾದಿಗಳಲ್ಲಿ ಪ್ರವೀಣನೂ ಆಗುತ್ತಾನೆ ॥೧೮೦॥

## ಕರ್ಕಾಟಕಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಗುಣೈರ್ವಿಹೀನಂ ಸ್ವಜನೈರ್ವಿಯುಕ್ತ ಮಲೀಕದಂ ಭಾನುರತಂ ಕೃತಘ್ನಂ । ಕರೋತಿ ಮರ್ತ್ಯಂ ಪರಿಸೂತಿಕಾಲೇ ಕುಲೀರಗೋಜ್ಞೋ ರವಿಸೂನು ದೃಷ್ಟಃ ॥೧೮೧॥ತಾ॥ ಕರ್ಕಾಟಕ ರಾಶಿಯಲ್ಲಿ ಬುಧನು ಶನಿವೀಕ್ಷಿತನಾದರೆ ಸದ್ಗುಣ ವಿಹೀನನು, ಸ್ವಜನರಿಂದ ಬಿಡಲ್ಪಟ್ಟವನು, ಕೊಳಕನೂ, ಡಂಭ ಉಳ್ಳವನು ಮತ್ತು ಕೃತಘ್ನನೂ ಆಗುವನು ॥೧೮೧॥

ಸಿಂಹರಾಶಿಸ್ಥೇ ಬುಧೇ ಗ್ರಹದೃಷ್ಟಿಫಲಂಃ

## ಅಥ ಸಿಂಹರಾಶಿಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ಕೃಪಾವಿಹೀನಂಚ ಚಲಸ್ವಭಾವಂ ಸೇರ್ಷ್ಯಂಚ ಹಿಂಸಾಭಿರತಂಚ ರೌದ್ರಂ । ಕ್ಷುದ್ರಂ ಪ್ರಕುರ್ಯಾನ್ಮನುಜಂ ಪ್ರಸೂತೌ ಬುಧೋರ್ಕದೃಷ್ಟೋ ಮೃಗರಾಜ ಸಂಸ್ಥಃ ॥೧೮೨॥ತಾ॥ ಸಿಂಹರಾಶಿಯಲ್ಲಿ ಬುಧನು ರವಿಯಿಂದ ನೋಡಲ್ಪಟ್ಟರೆ ಕೃಪಾವಿಹೀನನು, ಚಂಚಲವಾದ ಸ್ವಭಾವವುಳ್ಳವನು, ಈರ್ಷ್ಯೆಯೂ, ಅಸೂಯೆಯೂ, ಹಿಂಸೆಯೂ ಇವುಗಳಲ್ಲಿ ಅಭಿರುಚಿಯುಳ್ಳವನೂ ಆಗುವನು ॥೧೮೨॥

## ಸಿಂಹಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ರೂಪಾನ್ವಿತಂ ಚಾರುಮತಿಂ ವಿನೀತಂ ಸಂಗೀತನೃತ್ಯಾಭಿರತಂ ನಿತಾಂತಮ್। ಸದ್ವೃತ್ತವೃತ್ತಂ ಕುರುತೇಚಮರ್ತ್ಯಂ ಚಂದ್ರೇಕ್ಷಿತ ಸ್ಸಿಂಹಗತೋ ಬುಧಾಖ್ಯಃ ॥೧೮೩॥ತಾ॥ ಸಿಂಹರಾಶಿಯಲ್ಲಿ ಬುಧನು ಚಂದ್ರದೃಷ್ಟನಾದರೆ, ಜಾತಕನು

ರೂಪವಂತನು, ಸುಂದರವಾದ ಶರೀರವುಳ್ಳವನು, ಸಮದ್ಬುದ್ಧಿಯುಳ್ಳವನು, ನಮ್ರತೆಯುಳ್ಳವನು. ಸಂಗೀತ, ನೃತ್ಯ ಮೊದಲಾದವುಗಳನ್ನು ತಿಳಿದವನು, ಯಾವಾಗಲೂ ಸದ್ವೃತ್ತಿಯುಳ್ಳವನೂ ಆಗುವನು ॥೧೮೩॥

## ಸಿಂಹಸ್ಥೇ ಬುಧೇ ಕುಜದೃಷ್ಟಿಫಲಂ

ಶ್ಲೋಕ॥ ಕಂದರ್ಪ ಸತ್ವೋಜ್ಝಿತ ಮುಕ್ತವೃತ್ತಂ ಕ್ಷತಾಂಕಿತಂ ಹೀನಮತಿಂ ವಿಚಿತ್ರಂ । ಸದುಃಖಿತಂ ಸಂಜನಯೇತ್ಪಮಾಸಂ ಭೌಮೇಕ್ಷಿತಃ ಸಿಂಹಗತಃ ಶಶೀಜಃ ॥೧೮೪॥ತಾ॥ ಸಿಂಹರಾಶಿಯಲ್ಲಿ ಬುಧನು ಅಂಗಾರಕವೀಕ್ಷಿತನಾದರೆ ಜಾತಕನು ಮನ್ಮಥ ಸತ್ವವಿಲ್ಲದವನು (ನಪುಂಸಕನು), ಗಾಯಗಳಿಂದ ಬಾಧೆಪಡುವವನು, ವಿಚಿತ್ರ ವಾದ ದುರ್ಬುದ್ಧಿಯುಳ್ಳವನೂ ಆಗುವನು ॥೧೮೪॥

## ಸಿಂಹಸ್ಥೇ ಬುಧೇ ಗುರುದೃಷ್ಟಿ ಫಲಂ

ಶ್ಲೋಕ॥ ಕೋಮಲಾಮಲರುಚಿಃ ಕುಲವರ್ಯಶ್ಚಾರು ಲೋಚನಯುತಶ್ಚ ಸಮರ್ಥಃ । ವಾಹನೋತ್ತಮಧನೋ ಮನುಜಸ್ಯಾ ದಿಂದುಜೇ ಹರಿಗತೇ ಗುರುದೃಷ್ಟೇ ॥೧೮೫॥ತಾ॥ ಸಿಂಹರಾಶಿಗತನಾದ ಬುಧನು ಗುರುದೃಷ್ಟಿಯುಕ್ತನಾದರೆ ಕೋಮಲ ಮತ್ತು ನಿರ್ಮಲ ಕಾಂತಿಯುಕ್ತವಾದ ಶರೀರವುಳ್ಳನನು, ಕುಲಶ್ರೇಷ್ಠನು, ಸುಂದರವಾದ ಕಮಲಾಯತ ನೇತ್ರಗಳುಳ್ಳವನು, ಸರ್ವಕಾರ್ಯಗಳಲ್ಲಿ ದಕ್ಷನೂ, ಉತ್ತಮ ವಾಹನಯುಕ್ತನೂ, ಧನವಂತನೂ ಆಗುವನು ॥೧೮೫॥

## ಸಿಂಹಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ॥ ಸದ್ರೂಪಶಾಲೀ ಪ್ರಿಯವಾಗ್ವಿಲಾಸೋ ನೃಪಾಶ್ರಿತೋ ವಾಹನವಿತ್ತ ಯುಕ್ತಃ । ಭವೇನ್ನರಃ ಸೋಮಸುತೇ ಪ್ರಸೂತೌ ಸಿಂಹಸ್ಥಿತೇ ದಾನವವಂದ್ಯ ದೃಷ್ಟೇ ॥೧೮೬॥ತಾ॥ ಸಿಂಹರಾಶಿಯಲ್ಲಿ ಬುಧನು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ಸದ್ರೂಪ ಉಳ್ಳವನು, ಪ್ರಿಯವಾಗಿ ಮಾತನಾಡುವವನು, ರಾಜಾಶ್ರಿತನಾದ ಧನವಾಹನ ಯುಕ್ತನಾಗಿ ಪರಿಪೂರ್ಣ ಸಂಪತ್ತುಳ್ಳವನೂ ಆಗುವನು ॥೧೮೬॥

## ಸಿಂಹಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಸ್ವೇದೋದ್ಗಮೋದ್ಭೂತ ಮಹೋಗ್ರಗಂಧವಿಸ್ತೀರ್ಣಗಾತ್ರಂಚ ಕುರೂಪಮುಗ್ರಂ॥ ಸುಖೇನಹೀನಂ ಮನುಜಂ ಪ್ರಕುರ್ಯಾನ್ಮಂದೇಕ್ಷಿತ ಸ್ಸಿಂಹಗತೋ ಯದಿಜ್ಞಃ ॥೧೮೭॥ತಾ॥ ಸಿಂಹರಾಶಿಯಲ್ಲಿ ಬುಧನು ಶನಿವೀಕ್ಷಿತನಾದರೆ ವಿಸ್ತೀರ್ಣ ವಾದ ದೇಹ ಉಳ್ಳವನಾಗಿಯೂ, ಸಹಿಸುವುದಕ್ಕೆ ಅಸಾಧ್ಯವಾದ ದುರ್ವಾಸನೆಯುಳ್ಳ ಬೆವರುಳ್ಳವನಾಗಿಯೂ, ಉಗ್ರವಾದ ಕುರೂಪದೇಹ ಉಳ್ಳವನಾಗಿಯೂ ಆಗುತ್ತಾನೆ ॥೧೮೭॥

ಗುರು ಭವನಸ್ಥೇ ಬುಧೇ ಗ್ರಹದೃಷ್ಟಯಃ

## ಧನುರ್ಮೀನಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ಶೂಲಾಶ್ಮರೀ ಮೇಹನಿ ಪೀಡಿತಾಂಗೋ ಭಂಗೋಜ್ಜಿತಃ ಶಾಂತಿ ಮುಪಾಗತಶ್ಚ । ಸ್ಯಾತ್ಪೌರುಷೋ ಗೀಷ್ಪತಿ ವೇಶ್ಮಸಂಸ್ಥೋ ನಿಶೀಥಿನೀ ಸ್ವಾಮಿ ಸುತೇರ್ಕದೃಷ್ಟೇ ॥೧೮೮॥ತಾ॥ ಗುರುಕ್ಷೇತ್ರಗಳಾದ ಧನುರ್ಮೀನಗಳಲ್ಲಿ ಬುಧನು ರವಿ ದೃಷ್ಟನಾದರೆ ಜಾತಕನು ಶೂಲರೋಗ, ಅಶ್ಮರಿರೋಗ, ಭಗಂದರ, ಮೇಹರೋಗ ಗಳಿಂದ ಪೀಡಿಸಲ್ಪಟ್ಟವನು, ಶರೀರ ಭಂಗವಾದವನೂ, ಅದರಿಂದ ಶಾಂತಿ ಹೊಂದದವೂ ಆಗುವನು ॥೧೮೮॥

## ಧನುರ್ಮೀನಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಲೇಖಕ್ರಿಯಾಯಾಂ ಸುತರಾಂ ಪ್ರವೀಣಃ ಸುಸಂಗತಃ ಸಾಧು ಸುಹೃಜ್ಜನಾನಾಂ । ನರಃಸುಖೀ ಶೀತಮಯೂಖ ಪುತ್ರೇ ಚಂದ್ರೇಕ್ಷಿತೇ ಜೀವಗೃಹಂ ಪ್ರಯಾತೇ ॥೧೮೯॥ತಾ॥ ಧನುರ್ಮೀನಗಳಲ್ಲಿ ಬುಧನಿದ್ದು ಚಂದದೃಷ್ಟನಾದರೆ ಜಾತಕನು ಬರೆಯುವುದರಲ್ಲಿ ಅತಿ ಸಮರ್ಥನು, ಸಾಧು ಸುಹೃಜ್ಜನರ ಸ್ನೇಹವುಳ್ಳವನು ಮತ್ತು ಸುಖವುಳ್ಳವನೂ ಆಗುವನು ॥೧೮೯॥

## ಧನುರ್ಮೀನಸ್ಥೇ ಬುಧೇ ಕುಜದೃಷ್ಟಿಫಲಂ

ಶ್ಲೋಕ॥ ಪರಂಪರಾ ಚೋರವನ ಸ್ಥಿತಾನಾ ಸ್ಯಾಲ್ಲೇಖಕೋ ಧ್ಯಾನ ಧನೈರ್ವಿ-ಹೀನಃ। ನರಸ್ತುನೀ ಹಾರಕರ ಪ್ರಸೂತೌ ಜೀವಾಲಯೇ ಮಂಗಲ ದೃಷ್ಟೇದೇಹೇ ॥೧೯೦॥ತಾ॥ ಬುಧನು ಧನುರ್ಮೀನಗಳಲ್ಲಿದ್ದು ಕುಜದೃಷ್ಟಿಯುಕ್ತನಾದರೆ ಪರಂಪರಾ ಪ್ರಾಪ್ತವಾದ ಚೋರರಿಗೆ ಗುರುವಾದವನು, ಧನಧಾನ್ಯಹೀನನೂ ಆಗುವನು ॥೧೯೦॥

## ಧನುರ್ಮೀನಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ॥ ವಿಜ್ಞಾನಶಾಲೀ ಸ್ವಕುಲಾವತಂಸೋ ನೃಪಾಲ ಕೋಶಾಧಿಪ ಲೇಖ ಕರ್ತಾ। ಭರ್ತಾ ಬಹೂನಾಂ ಮನುಜಸ್ತುಸೌಮ್ಯೇ ಜೀವೇಕ್ಷಿತೇ ಜೀವ ಗೃಹಂ ಪ್ರಯಾತೇ ॥೧೯೧॥ತಾ॥ ಧನುರ್ಮೀನ ರಾಶಿಗಳಲ್ಲಿ ಬುದನಿದ್ದು ಗುರುದೃಷ್ಟಿಯುಕ್ತ ನಾದರೆ ವಿಶೇಷವಾದ ಜ್ಞಾನವುಳ್ಳವನು, ಕುಲಶ್ರೇಷ್ಠನೂ, ರಾಜನ ಭಂಡಾರದ ಅಧಿಕಾರಿಯೂ, ಅನೇಕ ಜನರನ್ನು ಪಾಲಿಸತಕ್ಕ ಅಧಿಕಾರವುಳ್ಳವನೂ ಆಗುವನು ॥೧೯೧॥

## ಧನುರ್ಮೀನಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ॥ ಭೂಪಾಮಾತ್ಯಾ ಪತ್ಯಲೇಖಾಧಿಕಾರಂ ಚೌರ್ಯಾಸಕ್ತಂ ಸೌಕು-ಮಾರ್ಯೇಣಯುಕ್ತಂ। ದ್ರವ್ಯೋಪೇತಂ ಮಾನವಂ ಸೋಮಸೂನುರ್ಜೀವರ್ಕ್ಷಸ್ಥಃ

ಶುಕ್ರದೃಷ್ಟಃ ಕರೋತಿ ॥೧೯೨॥ತಾ॥ ಬುಧನು ಧನುರ್ಮೀನಗಳಲ್ಲಿದ್ದು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ರಾಜಮಂತ್ರಿಯೂ, ರಾಜ ಮತ್ತು ಮಂತ್ರಿಯ ಮಗನ ವಿದ್ಯಾಗುರು, ಕಳವು ಮಾಡುವುದರಲ್ಲಿ ಆಸಕ್ತನು, ಸುಕುಮಾರವಾದ ಶರೀರವುಳ್ಳವನು ಮತ್ತು ದೊಡ್ಡ ಧನವಂತನೂ ಆಗುವನು ॥೧೯೨॥

## ಧನುರ್ಮೀನಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ॥ ಬಹ್ವನ್ನಭೋಕ್ತಾ ಮಲಿನಃ ಕುವೃತ್ತಃ ಕಾಂತಾರದುರ್ಗಾಚಲವಾಸಶೀಲಃ। ಕಾರ್ಯೋಪಯುಕ್ತೋ ನಭವೇನ್ಮನುಷ್ಯೋ ಜೀವರ್ಕ್ಷಗೇಜ್ಞೇರ್ಕ ಸುತೇನದೃಷ್ಟೇ ॥೧೯೩॥ತಾ॥ ಧನುರ್ಮೀನಗಳಲ್ಲಿ ಬುಧನು ಶನಿದೃಷ್ಟಿಯುಕ್ತನಾದರೆ ಜಾತಕನು ಹೇರಳವಾಗಿ ಅನ್ನವನ್ನು ತಿನ್ನುವವನೂ, ಕೊಳಕನೂ, ದುರ್ಮಾರ್ಗಿಯೂ, ವನ, ಮಹಾರಣ್ಯ ಮತ್ತು ಪರ್ವತಗಳಲ್ಲಿ ವಾಸಮಾಡುವವನೂ, ಯಾವ ಕಾರ್ಯಕ್ಕೂ ಉಪಯೋಗವಿಲ್ಲದವನೂ (ಅಪ್ರಯೋಜಕನೂ) ಆಗುವನು ॥೧೯೩॥

ಅಥ ಶನ್ಯಾಲಯಸ್ಥೇ ಬುಧೇ ಗ್ರಹದೃಷ್ಟಯಃ

## ಮಕರ ಕುಂಭಸ್ಥೇ ಬುಧೇ ರವಿದೃಷ್ಟಿಫಲಂ

ಶ್ಲೋಕ॥ ಪ್ರಾರಬ್ಧಕಾರ್ಯಾ ಕಲಿತಪ್ರತಾಪಂ ಸನ್ಮಲ್ಲ ವಿದ್ಯಾ ಕುಶಲಂ ಕುಶೀಲಂ। ಕುಟುಂಬಿನಂ ಸಂಜನಯೇನ್ಮನುಷ್ಯಂ ಬುಧಶ್ಶನಿಕ್ಷೇತ್ರ ಗತೋರ್ಕ ದೃಷ್ಟಂ ॥೧೯೪॥ ತಾ॥ ಮಕರ ಕುಂಭಗಳಲ್ಲಿ ಬುಧನಿದ್ದು ರವಿದೃಷ್ಟಿಯಿಂದ ಯುಕ್ತನಾದರೆ ಹೆಚ್ಚಾದ ದೈವ ಸಹಾಯ ಉಳ್ಳವನು, ಪ್ರತಾಪ ಉಳ್ಳವನು, ಮಲ್ಲವಿದ್ಯೆಯಲ್ಲಿ ಕುಶಲತ್ವವುಳ್ಳವನು, ದುಷ್ಟ ಸ್ವಭಾವವುಳ್ಳವನು, ಕುಟುಂಬಿಯೂ ಆಗುವನು ॥೧೯೪॥

## ಮಕರ ಕುಂಭಸ್ಥೇ ಬುಧೇ ಚಂದ್ರದೃಷ್ಟಿಫಲಂ

ಶ್ಲೋಕ॥ ಜಲೋಪಜೀವಿ ಧನವಾಂಶ್ಚಭೀರುಃ ಪ್ರಸೂನಕಂದೋ ದ್ಯಮತತ್ಪರಶ್ಚ। ಪುಮಾನ್ಭವೇದ್ಭಾನುಸುತಾಲಯಸ್ಥೇ ಬುಧೇ ಸುಧಾರಶ್ಮಿ ನಿರೀಕ್ಷ್ಯಮಾಣೇ ॥೧೯೫॥ ಮಕರ ಕುಂಭ ರಾಶಿಗಳಲ್ಲಿ ಬುಧನು ಚಂದ್ರ ನಿರೀಕ್ಷಿತನಾದರೆ ಜಾತಕನು ಜಲಾಶ್ರಯ ಮೂಲವಾಗಿ ಉಪಜೀವನ ಮಾಡುವವನು, ಅತಿಶಯ ಧನವಂತನು, ಅತಿ ಭಯವುಳ್ಳವನು, ಹೂವು, ಗಂಧ, ಕಂದಮೂಲ ಇವುಗಳಲ್ಲಿ ತತ್ಪರನೂ ಆಗುವನು. ಈ ಶ್ಲೋಕದ ಮುಖ್ಯಾರ್ಥವೇನೆಂದರೆ ನೀರಿನ ಆಸರೆಯಲ್ಲಿ ಉದ್ಯಾನವನವನ್ನು ಮಾಡಿ ಅದರಲ್ಲಿ ಫಲ ಪುಷ್ಪ ಕಂದಮೂಲಗಳನ್ನು ಬೆಳಸಿ ಆ ಮೂಲದಲ್ಲಿ ಅತಿಶಯ ಧನವಂತನಾಗುವನೆಂದು ಹೇಳಬೇಕು ॥೧೯೫॥

## ಮಕರ ಕುಂಭಸ್ಥೇ ಬುಧೇ ಕುಜದೃಷ್ಟಿ ಫಲಂ

ಶ್ಲೋಕ।। ವ್ರೀಡಾಲಸಃ ಸ್ತಬ್ಧತರ ಸ್ವಭಾವಃ ಸೌಮ್ಯಃ ಸುಖೀವಾಕ್ಚಪಲೋರ್ಥ ಯುಕ್ತಃ । ಸ್ಯಾನ್ಮಾನವೋ ಭಾನುಸುತರ್ಕ್ಷಸಂಸ್ಥೇ ದೃಷ್ಟೇಬ್ಜಸೂನೌ ಕ್ಷಿತಿನಂದನೇನ ।।೧೯೬।।ತಾ।। ಬುಧನು ಮಕರ ಕುಂಭಗಳಲ್ಲಿದ್ದು ಕುಜನಿಂದ ನೋಡಲ್ಪಟ್ಟರೆ ನಾಚಿಕೆಯುಳ್ಳವನು, ಅಲಸ್ಯವಂತನೂ, ಅತಿಶಯ ನಮ್ರತೆಯುಳ್ಳವನು, ಬಹು ಸೌಮ್ಯಗುಣ ಉಳ್ಳವನು, ಸುಖಪುರುಷನೂ, ಮಾತನಾಡುವುದರಲ್ಲಿ ಚಂಚಲವಿರುವವನು, ಧನವಂತನೂ ಆಗುವನು ।।೧೯೬।।

## ಮಕರ ಕುಂಭಸ್ಥೇ ಬುಧೇ ಗುರುದೃಷ್ಟಿಫಲಂ

ಶ್ಲೋಕ।। ಧಾನ್ಯವಾಹನ ಧನಾನ್ವಿತಃ ಸುಖೀ ಗ್ರಾಮ ಪತ್ತನಪತಿರ್ಮಹಾಮತಿಃ । ಭಾನುಸೂನು ಭವನೇಬ್ಜನಂದನೇ ದೇವದೇವ ಸಚಿವೇಕ್ಷಿತೇನರಃ ।।ತಾ।। ಮಕರ ಕುಂಭಗಳಲ್ಲಿ ಬುಧನು ಗುರುದೃಷ್ಟಿಯುಕ್ತನಾದರೆ ಜಾತಕನು ಧಾನ್ಯ, ವಾಹನ, ಧನ ಇವುಗಳಿಂದ ಯುಕ್ತನು, ಸುಖವಂತನು, ಅತಿ ಬುದ್ಧಿವಂತನಾಗಿ ಗ್ರಾಮಕ್ಕಾಗಲೀ, ಪಟ್ಟಣಕ್ಕಾಗಲೀ ಅಧಿಪತಿಯಾಗಿರುವನು ।।೧೯೭।।

## ಮಕರ ಕುಂಭಸ್ಥೇ ಬುಧೇ ಶುಕ್ರದೃಷ್ಟಿಫಲಂ

ಶ್ಲೋಕ।। ಬಹುಪ್ರಜಾ ಸಂಜನಕಂ ಕುರೂಪಂ ಪ್ರಾಜ್ಞೋಜ್ಝಿತಂ ನೀಚಜನಾನು-ಯಾತಂ। ಕಾಮಾಧಿಕಂ ಸಂಜನಯೇನ್ಮನುಷ್ಯಂ ಶುಕ್ರೇಕ್ಷಿತೋಜ್ಞಃ ಶನಿಗೇಹ ಸಂಸ್ಥಃ ।।೧೯೮।।ತಾ।। ಮಕರ ಕುಂಭರಾಶಿಗಳಲ್ಲಿ ಬುಧನು ಶುಕ್ರೇಕ್ಷಿತನಾದರೆ ಜಾತಕನು ಪುಷ್ಕಳ ಸಂತತಿಯುಳ್ಳವನು, ಕ್ರೂರನು, ಅತ್ಯಂತ ಕಾಮೋಪಭೋಗವುಳ್ಳವನೂ ಆಗುವನು ।।೧೯೮।।

## ಮಕರ ಕುಂಭಸ್ಥೇ ಬುಧೇ ಶನಿದೃಷ್ಟಿಫಲಂ

ಶ್ಲೋಕ।। ಸುಖೋಜ್ಝಿತಂ ಪಾಪರತಂಚ ದೀನ ಮ ಕಿಂಚನಂ ಹೀನಜ ನಾನು ಯಾತಂ । ಕರೋತಿಮರ್ತ್ಯಂ ಶನಿಧಾಮಗಾಮೀ ಸೌಮ್ಯಸ್ತಮೋಹಂತ್ರ ಸುತೇನ ದೃಷ್ಟಃ ।।೧೯೯।।ತಾ।। ಮಕರ ಕುಂಭರಾಶಿಗಳಲ್ಲಿ ಬುಧನು ಶನಿಯಿಂದ ಅವಲೋಕಿತನಾದರೆ ಜಾತಕನು ಸುಖವರ್ಜಿತನು, ಪಾಪಕಾರ್ಯದಲ್ಲಿ ಆಸಕ್ತನು, ದೀನನು, ದರಿದ್ರನು, ದುಷ್ಟರಲ್ಲಿ ಮಿತ್ರತ್ವವುಳ್ಳವನೂ ಆಗುವನು ।।೧೯೯।।

ಇತಿ ಮೇಷಾದಿಗೃಹೇ ಬುಧೇ ಗ್ರಹದೃಷ್ಟಿಫಲಂ

## ಅಥ ಮೇಷಾದಿಗೃಹೇ ಗೃಹದೃಷ್ಟಯಃ

## ಮೇಷ ವೃಶ್ಚಿಕಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ।। ಅಸತ್ಕಭೀರುರ್ಬಹುಧರ್ಮಕರ್ತಾ ಖ್ಯಾತಶ್ಚ ಸದ್ಭಾಗ್ಯಯುತೋ ವಿನೀತಃ । ಭವೇನ್ನರೋ ದೇವಗುರೌ ಪ್ರಯಾತೇ ಭೌಮಸ್ಯಗೇಹೇ ರವಿದೃಷ್ಟದೇಹೇ ।।೨೦೦।।ತಾ।। ಬೃಹಸ್ಪತಿಯು ಮೇಷ ವೃಶ್ಚಿಕ ರಾಶಿಗಳಲ್ಲಿ ರವಿ ದೃಷ್ಟಿಯುಕ್ತನಾದರೆ ಜಾತಕನು ಕೆಟ್ಟ ಕಾರ್ಯಗಳನ್ನು ಮಾಡಲು ಭಯಪಡುವವನು, ಬಹು ಧರ್ಮಕಾರ್ಯಗಳ ಮಾಡುವವನು ಪ್ರಖ್ಯಾತನೂ, ಒಳ್ಳೆಯ ಭಾಗವುಳ್ಳವನು, ನಮ್ರತೆಯುಳ್ಳವನೂ ಆಗುವನು ।।೨೦೦।।

## ಮೇಷ ವೃಶ್ಚಿಕಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ।। ಖ್ಯಾತೋ ವಿನೀತೋ ವನಿತಾನುಯಾತಃ ಸತಾಂಮತೋಧರ್ಮರತಃ ಪ್ರಶಾಂತಃ । ಜಾತೋಭವೇದ್ಭೂಮಿಸುತರ್ಕ್ಷಯಾತೇ ವಾಚಾಂಪತೌ ಶೀತಕರೇಣ ದೃಷ್ಟೇ ।।೨೦೧।।ತಾ।। ಮೇಷ ವೃಶ್ಚಿಕಗಳಲ್ಲಿ ಬೃಹಸ್ಪತಿಯು ಚಂದ್ರದೃಷ್ಟಿಯುಳ್ಳವ ನಾದರೆ ಜಾತಕನು ಪ್ರಖ್ಯಾತ ಪುರುಷನು, ನಮ್ರತೆಯುಳ್ಳವನು, ಸ್ತ್ರೀಯರ ವಶ ವರ್ತಿಯೂ ಸಜ್ಜನರಿಂದ ಗೌರವಿಸಲ್ಪಡತಕ್ಕವನು, ಧರ್ಮ ಮಾಡುವುದರಲ್ಲಿ ಆಸಕ್ತನೂ, ಶಾಂತಚಿತ್ತನೂ ಆಗುವನು ।।೨೦೧।।

## ಮೇಷ ವೃಶ್ಚಿಕಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ।। ಕ್ರೂರೋತಿಧೂರ್ತಃ ಪರಗರ್ವಹರ್ತಾ ನೃಪಾಶ್ರಯಾಜ್ಜೀವನವೃತ್ತಿ ಕರ್ತಾ । ಭಕ್ತಾ ಬಹೂನಾಂ ನನುಮಾನವಃಸ್ಯಾತ್ ಜೀವೇ ಕುಜರ್ಕ್ಷೇಚ ಕುಜೇನ ದೃಷ್ಟೇ ।।೨೦೨।।ತಾ।। ಜನನ ಕಾಲದಲ್ಲಿ ಬೃಹಸ್ಪತಿಯು ಮೇಷ ವೃಶ್ಚಿಕಗಳಲ್ಲಿ ಕುಜ ದೃಷ್ಟನಾದರೆ ಜಾತಕನು ಕ್ರೂರ ಸ್ವಭಾವವುಳ್ಳವನು, ಧೂರ್ತನು, ಪರರ ಅಹಂಕಾರ ವನ್ನು ಮುರಿಯುವವನು, ರಾಜನ ಆಶ್ರಯದಿಂದ ಜೀವನ ಮಾಡುವವನು. ಈ ವಿಧವಾದ ಗುಣಗಳಿಂದ ಕೂಡಿದವನಾಗುವನು ।।೨೦೨।।

## ಮೇಷ ವೃಶ್ಚಿಕಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ।। ಸದ್ವೃತ್ತ ಸತ್ಯೋತ್ತಮ ವಾಗ್ವಿಹೀನಶ್ಛಿದ್ರಪ್ರತೀಕ್ಷೀ ಪ್ರಣತಾನುಯಾತಃ। ಮರ್ತ್ಯೋಭವೇತ್ಕೃತವ ಸಂಪ್ರಯುಕ್ತಾ ವಾಚಸ್ಪತೌ ಭೌಮ ಗೃಹೇಜ್ಞದೃಷ್ಟೇ ।।೨೦೩।। ತಾ।। ಮೇಷ ವೃಶ್ಚಿಕ ರಾಶಿಗಳಲ್ಲಿ ಬೃಹಸ್ಪತಿಯು ಬುಧ ದೃಷ್ಟಿಯುಕ್ತನಾದರೆ ಜಾತಕನು ಸತ್ಯವಾದ ನಡವಳಿಕೆಯಿಲ್ಲದವನು, ಸುಳ್ಳು ಹೇಳುವವನು, ಎರಡನೇ ಯವರ ತಪ್ಪುಗಳನ್ನೇ ಅನ್ವೇಷಣಮಾಡತಕ್ಕವನು, (ರಂಧ್ರಾನ್ವೇಷಣ ತತ್ಪರ) ತನ್ನನ್ನೇ ಶರಣು ಹೊಂದಿದವರ ಮೇಲೆ ದಯವುಳ್ಳವನೂ ಆಗುವನು ।।೨೦೩।।

## ಮೇಷ ವೃಶ್ಚಿಕರಾಶಿಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ॥ ಗಂದಮಾಲ್ಯ ಶಯನಾಸನ ಭೂಷಾ ಯೋಷಿದಂಬರ ನಿಕೇತನ ಸೌಖ್ಯಂ । ಸಂಪ್ರಯಚ್ಛತಿ ನೃಣಾಂ ಭೃಗುಣಾಟೇ ದ್ವೀಕ್ಷಿತಃ ಸುರಗುರುಃ ಕುಜ ಸಂಸ್ಥೆ ॥೨೦೪॥ತಾ॥ ಮೇಷ ವೃಶ್ಚಿಕಗಳಲ್ಲಿ ಬೃಹಸ್ಪತಿಯು ಶುಕ್ರ ವೀಕ್ಷಿತನಾದರೆ ಜಾತಕನಿಗೆ ಸುಗಂಧ ದ್ರವ್ಯಗಳಿಂದಲೂ, ಪುಷ್ಪ ಮಾಲಿಕಾದಿಗಳಿಂದಲೂ, ಶಯನಕ್ಕೆ ಬೇಕಾದ ಮಂಚ (ಕುರ್ಚಿ ಸೋಫಾ) ಮೊದಲಾದ ಶಯನ, ಆಸನೋಪಕರಣ ವಸ್ತುಗಳಿಂದಲೂ, ಭೂಷಣಾದ್ಯಲಂಕಾರ ವಸ್ತುಗಳಿಂದಲೂ, ಭೂಷಣಾದ್ಯಲಂಕಾರ ವಸ್ತುಗಳಿಂದಲೂ, ಸ್ತ್ರೀಯ ಸೌಖ್ಯದಿಂದಲೂ, ಶ್ರೇಷ್ಠವಾದ ಮನೆಯಿಂದಲೂ ಸೌಖ್ಯವನ್ನು ಕೊಡುತ್ತಾನೆ ॥೨೦೪॥

## ಮೇಷ ವೃಶ್ಚಿಕರಾಶಿಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ॥ ಲುಬ್ಧಂ ರೌದ್ರಂ ಸಾಹಸೈಸ್ಸಂಯುತಂಚ ಮಿತ್ರಾಪತ್ಯೋದ್ಭೂತ ಸೌಖ್ಯೋಜ್ಝಿತಂಚ । ಕುರ್ಯಾನ್ಮಂತ್ರೇ ನಿಷ್ಠುರಂ ದೇವ ಮಂತ್ರೀ ಧಾತ್ರೀ ಪುತ್ರಕ್ಷೇತ್ರ ಗೋಮಂದದೃಷ್ಟಃ ॥೨೦೫॥ ಮೇಷ ವೃಶ್ಚಿಕ ರಾಶಿಗಳಲ್ಲಿ ಬೃಹಸ್ಪತಿಯು ಮಂದೇಕ್ಷಿತನಾದರೆ ಜಾತಕನು ಅತಿ ಲೋಭಿಯೂ, ಕ್ರೂರನೂ, ಸಾಹಸವುಳ್ಳವನೂ, ಪುತ್ರ, ಮಿತ್ರ ಇವರುಗಳಿಂದ ಸುಖವರ್ಜಿತನೂ, ಒಂದಾನೊಂದು ಕಾಲದಲ್ಲಿ ಆಲೋಚನೆ ಹೇಳುವಾಗ ನಿಷ್ಠುರ ಪಡೆದುಕೊಳ್ಳುವವನೂ ಆಗುವನು ॥೨೦೫॥

## ವೃಷಭ ತುಲಾರಾಶಿಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ॥ ಸಂಗತಪ್ತ ವಿಜಯಂ ಕ್ಷತಗಾತ್ರಂ ಸಾಮಯಂಚ ಬಹುವಾಹನ ಭೃತ್ಯಂ । ಮಂತ್ರಿಣಾಂಹಿ ಕುರುತೇ ಸುರ ಮಂತ್ರೀ ದೈತ್ಯಮಂತ್ರಿ ಗೃಹಗೋ ರವಿದೃಷ್ಟಃ ॥೨೦೬॥ತಾ॥ ವೃಷಭ ತುಲೆಗಳಲ್ಲಿ ಬೃಹಸ್ಪತಿಯು ರವಿಯಿಂದ ನೋಡ ಲ್ಪಟ್ಟರೆ ಜಾತಕನು ಶತ್ರುಗಳು ಪ್ರಾಪ್ತಾದ ಒಡನೆಯೇ ಗೆಲ್ಲುವವನು. ಅನೇಕ ಗಾಯಗಳಿಂದ ಯುಕ್ತವಾದ ಶರೀರವುಳ್ಳವನು, ರೋಗಗ್ರಸ್ತನೂ, ಅನೇಕ ವಿಧವಾದ ವಾಹನೋಪಕರಣಗಳಿಂದಲೂ, ಭೃತ್ಯರುಗಳಿಂದಲೂ ಕೂಡಿ ಸೇವಿಸಲ್ಪಡುವವ ನಾಗುವನು ॥೨೦೬॥

## ವೃಷಭ ತುಲಾರಾಶಿಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ॥ ಸತ್ಯೇನಯುಕ್ತಂ ಸತತಂ ವಿನೀತಂ ಪರೋಪಕಾರಾಭಿರತಂ ಸುಚಿತ್ತಂ। ಸದ್ಭಾಗ್ಯಭಾಜಂ ಕುರುತೇ ಮನುಷ್ಯಂ ಜೀವಃ ಸಿತರ್ಕ್ಷೇ ಮೃತರಶ್ಮಿ ದೃಷ್ಟಃ॥೨೦೭॥ ತಾ॥ ವೃಷಭ ತುಲಾರಾಶಿಗಳಲ್ಲಿ ಬೃಹಸ್ಪತಿಯು ಚಂದ್ರನಿಂದ ನೋಡಲ್ಪಟ್ಟರೆ

ಜಾತಕನನ್ನು ಸತ್ಯವಂತನನ್ನಾಗಿಯೂ, ಯಾವಾಗಲೂ ನಮ್ರತೆಯುಳ್ಳವನನ್ನಾಗಿಯೂ, ಪರೋಪಕಾರದಲ್ಲಿ ಆಸಕ್ತನಾದವನನ್ನಾಗಿಯೂ, ನಿರ್ಮಲವಾದ ಮನಸ್ಸುಳ್ಳವ ನನ್ನಾಗಿಯೂ, ಸದ್ಭಾಗ್ಯ ಸಂಪತ್ತುಳ್ಳವನನ್ನಾಗಿಯೂ ಮಾಡುತ್ತಾನೆ ॥೨೦೭॥

## ವೃಷಭ ತುಲಾರಾಶಿಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ॥ ಭಾಗ್ಯೋಪಪನ್ನಂ ಸುತಸೌಖ್ಯಭಾಜಂ ಪ್ರಿಯಂವದಂ ಭೂಪತಿ-ಲಬ್ಧಮಾನಂ । ನರಂ ಸದಾಚಾರಪರಂ ಕರೋತಿ ಭೌಮೇಕ್ಷಿತೇಜ್ಯೋ ಕ್ಷಿತಿಜಾಲಯಸ್ಥಃ ॥೨೦೮॥ತಾ॥ ವೃಷಭರಾಶಿಗಳಲ್ಲಿ ಬೃಹಸ್ಪತಿಯು ಕುಜನಿಂದ ನೋಡಲ್ಪಟ್ಟರೆ ಜಾತಕನನ್ನು ಭಾಗ್ಯವಂತನನ್ನಾಗಿಯೂ, ಪುತ್ರಸೌಖ್ಯವುಳ್ಳವನ ನ್ನಾಗಿಯೂ, ಪ್ರಿಯವಾಗಿ ಮಾತನಾಡುವವನನ್ನಾಗಿಯೂ, ರಾಜನಿಂದ ಪ್ರಾಪ್ತವಾದ ಗೌರವವುಳ್ಳವನನ್ನಾಗಿಯೂ, ಸದಾಚಾರ ಸಂಪನ್ನನನ್ನಾಗಿಯೂ ಮಾಡುತ್ತಾನೆ ॥೨೦೮॥

## ವೃಷಭ ತುಲಾರಾಶಿಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ॥ ಸನ್ಮಂತ್ರವಿದ್ಯಾ ನಿರತಂ ನಿತಾಂತಂ ಭಾಗ್ಯಾನ್ವಿತಂ ಭೂಪತಿ ಲಬ್ಧ ವಿತ್ತಂ । ಚಂಚತ್ಕಲಾಜ್ಞಂ ಪುರುಷಂ ಪ್ರಕುರ್ಯಾ ದ್ದುರುರ್ಬುಧೇಗು ಕ್ಷೇತ್ರಗತೋಜ್ಞ ದೃಷ್ಟಃ ॥೨೦೯॥ತಾ॥ ವೃಷಭ ತುಲಾರಾಶಿಗಳಲ್ಲಿ ಬೃಹಸ್ಪತಿಯು ಬುಧನಿಂದ ನೋಡಲ್ಪಟ್ಟರೆ ಜಾತಕನನ್ನು ಸನ್ಮಂತ್ರ ವಿದ್ಯಾ ನಿಪುಣನನ್ನಾಗಿಯೂ (ಮಂತ್ರಶಾಸ್ತ್ರ ವೆಂಬುವದು ಎರಡು ಬಗೆ ಆಗಿರುತ್ತೆ, ೧ನೇ ದಕ್ಷಿಣಾಚಾರ, ೨ನೇ ವಾಮಾಚಾರ, ಇದರಲ್ಲಿ ದಕ್ಷಿಣಾಚಾರವೇ ಸನ್ಮಂತ್ರಮಾರ್ಗ. ವಾಮಾಚಾರವೆಂಬುವದು ಕರ್ಮನಿಷ್ಠರಿಗೆ ಯೋಗ್ಯವಾದದ್ದಲ್ಲ. ಆದ್ದರಿಂದ ಸನ್ಮಂತ್ರವೆಂದರೆ ದಕ್ಷಿಣಾಚಾರದ ಉತ್ತಮವಾದ ಮಂತ್ರಗಳೆಂದು ತಿಳಿಯತಕ್ಕದ್ದು) ಯಾವಾಗಲೂ ಭಾಗ್ಯದಿಂದ ಕೂಡಿದವನನ್ನಾಗಿಯೂ, ಮಹಾರಾಜನಿಂದ ಪ್ರಾಪ್ತವಾದ ವಿತ್ತವುಳ್ಳವನನ್ನಾಗಿಯೂ, ಚಂಚಲವಾದ ವನನ್ನಾಗಿಯೂ, ಗೀತವಾದ್ಯಾದಿ ಕಲಾವಿದನನ್ನಾಗಿಯೂ ಮಾಡುತ್ತಾನೆ ॥೨೦೯॥

## ವೃಷಭ ತುಲಾರಾಶಿಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ॥ ಧನಾನ್ವಿತಂ ಚಾರುವಿಭೂಷಣಾಢ್ಯಂ ಸದ್ವೃತ್ತವಿತ್ತಂ ವಿಭವೈಸ್ಸಮೇತಂ। ಕರೋತಿಮರ್ತ್ಯಂ ಸುರರಾಜಮಂತ್ರೀ ಶುಕ್ರಾಲಯಸ್ಥೋ ಭೃಗುಜೇನ ದೃಷ್ಟಃ ॥೨೧೦॥ತಾ॥ ವೃಷಭ ತುಲಾರಾಶಿಗಳಲ್ಲಿ ಗುರುವು ಶುಕ್ರನಿಂದ ನೋಡಲ್ಪಟ್ಟರೆ ಜಾತಕನನ್ನು ಧನಾನ್ವಿತನನ್ನಾಗಿಯೂ, ಸುಂದರವಾದ ವಸ್ತ್ರ ಆಭರಣ ವಿಭೂಷಣ ಉಳ್ಳವನನ್ನಾಗಿಯೂ, ಉತ್ತಮವಾದ ವೃತ್ತಿಯಿಂದ ದ್ರವ್ಯಲಾಭ ಉಳ್ಳವನನ್ನಾಗಿಯೂ, ಅನೇಕ ವಿಧವಾದ ವೈಭವ ಉಳ್ಳವವನ್ನಾಗಿಯೂ ಮಾಡುತ್ತಾನೆ ॥೨೧೦॥

## ವೃಷಭ ತುಲಾಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ॥ ಸತ್ಪುತ್ರದಾರಾದಿ ಸುಖೈರುಪೇತಂ ಪ್ರಾಜ್ಞಂ ಪುರಗ್ರಾಮ ಭವೋತ್ಸವಾಢ್ಯಂ। ನರಂ ಪ್ರಕುರ್ಯಾಚ್ಚತುರಂ ಸುರೇಜ್ಯೋ ದೈತ್ಯೇಜ್ಯ ಭಸ್ಥೋರ್ಕ ಸುತೇನದೃಷ್ಟಃ ॥೨೧೧॥ತಾ॥ ವೃಷಭ ತುಲಾರಾಶಿಯಲ್ಲಿ ಬೃಹಸ್ಪತಿಯು ಶನಿಯ ದೃಷ್ಟಿಯುಕ್ತನಾದರೆ ಜಾತಕನನ್ನು ಸುತ್ಪುತ್ರ ಪತ್ನೀ ಮೊದಲಾದವರಿಂದುಂಟಾದ ಸೌಖ್ಯದಿಂದ ಕೂಡಿದವನನ್ನಾಗಿಯೂ, ಪ್ರಾಜ್ಞನನ್ನಾಗಿಯೂ, ಪುರಗ್ರಾಮಗಳ ಅಧಿಕಾರಿ ಯನ್ನಾಗಿಯೂ, ಧನವಂತನನ್ನಾಗಿಯೂ ಮಾಡುತ್ತಾನೆ ॥೨೧೧॥

ಬುಧವೇಶ್ಮಸಂಸ್ಥೇ ಗುರೌ ಖೇಟದೃಷ್ಟಯಂ

## ಮಿಥುನ ಕನ್ಯಾರಾಶಿಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ॥ ಸತ್ಪುತ್ರದಾರಂ ಧನಮಿತ್ರಸೌಖ್ಯಂ ಶ್ರೇಷ್ಠ ಪ್ರತಿಷ್ಠಾಪ್ತ ವಿರಾಜಮಾನಂ। ನರಂ ಪ್ರಕುರ್ಯಾತ್ಸುರರಾಜಮಂತ್ರಿ ರವಿಪ್ರದೃಷ್ಟೋ ಬುಧ ವೇಶ್ಮ ಸಂಸ್ಥಃ ॥೨೧೨॥ ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಬೃಹಸ್ಪತಿಯು ರವಿದೃಷ್ಟನಾದರೆ ಜಾತಕನನ್ನು ಸತ್ಪುತ್ರ, ಪತ್ನೀ, ದ್ರವ್ಯ, ಮಿತ್ರ ಇವರುಗಳಿಂದ ಸೌಖ್ಯವಂತನನ್ನಾಗಿಯೂ, ತನ್ನ ವಂಶದಲ್ಲಿ ಶ್ರೇಷ್ಠವಾದವನನ್ನಾಗಿಯೂ, ಪ್ರತಿಷ್ಠೆಯಿಂದ ವಿಶೇಷವಾಗಿ ಪ್ರಕಾಶಮಾನ ವಾದವನನ್ನಾಗಿಯೂ ಮಾಡುತ್ತಾನೆ ॥೨೧೨॥

## ಮಿಥುನ ಕನ್ಯಾಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ॥ ಗುಣಾನ್ವಿತಂ ಗ್ರಾಮ ಪರೋಪಕಾರಂ ವಿರಾಜಮಾನಂ ಬಹುಗೌರ ವೇಣ । ಕುರ್ಯಾನ್ನರಂ ದೇವಗುರು ರ್ಬುಧರ್ಕ್ಷೇ ಸಂಸ್ಥೋನಿಶಾನಾಥ ನಿರೀಕ್ಷ್ಯಮಾಣಃ ॥೨೧೩॥ತಾ॥ ಕನ್ಯಾ ಮಿಥುನ ರಾಶಿಗಳಲ್ಲಿ ಬೃಹಸ್ಪತಿ ಚಂದ್ರನಿಂದ ನೋಡಲ್ಪಟ್ಟರೆ ಜಾತಕನು ಸುಗುಣದಿಂದ ಕೂಡಿದವನಾಗಿಯೂ, ಗ್ರಾಮಾಧಿಪತಿಯಾಗಿಯೂ, ಪರೋಪಕಾರದಿಂದ ವಿರಾಜಮಾನನಾದವನಾಗಿಯೂ, ಬಹು ಗೌರವ ಉಳ್ಳವನಾಗಿಯೂ ಆಗುವನು ॥೨೧೩॥

## ಮಿಥುನ ಕನ್ಯಾಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ॥ ಸಂಗ್ರಾಮ ಸಂಪ್ರಾಪ್ತ ಜಯಂಕ್ಷತಾಂಗಂ ಧನೇನ ಸಾರೇಣ ಸಮನ್ವಿತಂಚ । ಕರೋತಿಜಾತಂ ವಿಬುಧೇಂದ್ರಮಂತ್ರೀ ಬುಧಾಲಯಸ್ಥಃ ಕ್ಷಿತಿಸೂನು ದೃಷ್ಟಃ ॥೨೧೪॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಬೃಹಸ್ಪತಿಯು ಅಂಗಾರಕ ವೀಕ್ಷಿತನಾದರೆ ಜಾತಕನಿಗೆ ಯುದ್ಧದಲ್ಲಿ ವಿಜಯಪ್ರಾಪ್ತಿಯಾಗುವುದಿಂದುಂಟಾದ ಗಾಯವಾದ ಶರೀರವನ್ನುಳ್ಳವನಾಗಿಯೂ, ಧನದಿಂದಲೂ, ಧನದ ಮುಖ್ಯಾಂಶಗಳಿಂದ ಕೂಡಿದವನಾಗಿಯೂ ಮಾಡುತ್ತಾನೆ ॥೨೧೪॥

## ಮಿಥುನ ಕನ್ಯಾಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ।। ಸನ್ಮಿತ್ರದಾರಾತ್ಮಜ ಮಿತ್ರ ಸೌಖ್ಯೋ ದಕ್ಷೋ ಭವೇತ್ ಜ್ಯೋತಿಷ ಶಿಲ್ಪವೇತ್ತಾ। ಸಚ್ಚಾರು ಭಾಷೀ ಪುರುಷಃ ಪ್ರಕಾಮಂಜೀವೇ ಬುಧರ್ಕ್ಷೇಚ ಬುಧೇನ ದೃಷ್ಟೇ ।।೨೧೬।।ತಾ।। ಮಿಥುನ ಕನ್ಯೆಗಳಲ್ಲಿ ಗುರು ಬುಧನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು ಸುಗುಣವುಳ್ಳ ಮಿತ್ರರಿಂದಲೂ, ಪತ್ನೀ, ಪುತ್ರರಿಂದಲೂ ಸೌಖ್ಯವನ್ನು ಹೊಂದುವನು. ಜ್ಯೋತಿಷ್ಯ, ಶಿಲ್ಪಶಾಸ್ತ್ರದಲ್ಲಿ ಮಹಾಪಂಡಿತನೂ, ದಾನಶೂರನೂ, ಸಜ್ಜನರು ಮೆಚ್ಚುವಂತೆ ಸುಂದರವಾಗಿ ಮಾತನಾಡುವವನು ಮತ್ತು ಅಭಿವೃದ್ಧಿಯುಳ್ಳವನೂ ಆಗುವನು ।।೨೧೬।।

## ಮಿಥುನ ಕನ್ಯಾಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ।। ಧನಾಂಗನಾ ಸೂನು ಸುಖೈರುಪೇತಃ ಪ್ರಾಸಾದವಾಪೀ ಕೃಷಿಕರ್ಮ ಚಿತ್ತಃ। ಭವೇತ್ಪ್ರಸನ್ನಃ ಪುರುಷಃ ಸುರೇಜ್ಯೇ ದೈತ್ಯೇಜ್ಯದೃಷ್ಟೇ ಬುಧವೇಶ್ಮ ಸಂಸ್ಥೇ ।।೨೧೭।।ತಾ।। ಮಿಥುನ ಕನ್ಯಾರಾಶಿಗಳಲ್ಲಿ ಬೃಹಸ್ಪತಿಯು ಶುಕ್ರನಿರೀಕ್ಷಿತನಾದರೆ ಜಾತಕನು ಧನವೂ, ಪತ್ನಿಯೂ, ಮಗನೂ ಇವರುಗಳಿಂದ ಸೌಖ್ಯಪಡುವವನೂ, ಮಹಡೀ, ಪ್ರಾಸಾದ, ಗೋಪುರ, ಬಾವಿ ಕೊಳ ಮೊದಲಾದ್ದನ್ನು ನಿರ್ಮಾಣಕರ್ತನೂ, ಕೃಷಿ ಕರ್ಮದಲ್ಲಿ ಚತುರನೂ, ಸದಾಕಾಲ ಕೃಷ್ಯಭಿವೃದ್ಧಿ ಮಾಡುವ ಮನಸ್ಸುಳ್ಳವನೂ ಆಗುವನು ।।೨೧೭।।

## ಮಿಥುನ ಕನ್ಯಾಸ್ಥೇ ಬೃಹಸ್ಪತೌ ಶನಿದೃಷ್ಟಿಫಲಂ

ಶ್ಲೋಕ।। ನರೇಂದ್ರ ಸದ್ಗೌರವ ಸಂಪ್ರಯುಕ್ತಂ ನಿತ್ಯೋತ್ಸವಂ ಪೂರ್ಣ ಗುಣಾಭಿರಾಮಂ । ನರಂಪುರ ಗ್ರಾಮಪತಿಂ ಕರೋತಿ ಗುರುರ್ಜ್ಞಗೇಹೇ ಶನಿನಾಪ್ರದೃಷ್ಟಃ ।।೨೧೮।।ತಾ।। ಮಿಥುನ ಕನ್ಯಾರಾಶಿಗಳಲ್ಲಿ ಬೃಹಸ್ಪತಿಯು ಶನಿವೀಕ್ಷಿತನಾದರೆ ಜಾತಕನು ರಾಜನಿಂದ ಉತ್ತಮವಾದ ಗೌರವವನ್ನು ಅದರಿಂದ ನಿತ್ಯೋತ್ಸವವನ್ನು ಸಂಪೂರ್ಣವಾದ ಗುಣಗಳಿಂದ ಪ್ರಕಾಶಿಸುವವನೂ, ಪುರಕ್ಕಾಗಲೀ ಗ್ರಾಮಕ್ಕಾಗಲೀ ಅಧಿಪತ್ಯ ಉಂಟಾದವನು ಸಹ ಆಗುವನು ।।೨೧೮।।

### ಅಥ ಕರ್ಕಸ್ಥೇ ಗುರೌ ಖೇಟದೃಷ್ಟಯಃ

## ಕರ್ಕಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ।। ದಾರಾತ್ಮಜೋರ್ಥೋದ್ಭವ ಸೌಖ್ಯಹಾನಿಃ ಪೂರ್ವಂಚ ಪಶ್ಚಾತ್ಪಲುತತ್ಸುಖಾನಿ । ಕುರ್ಯಾನ್ನರಾಣಾಂ ಹಿ ಗುರುಃ ಸುರಾಣಾಂ ಕುಲೀರ ಸಂಸ್ಥೇ

ರವಿಣಾ ಪ್ರದೃಷ್ಟಃ ॥೨೧೯॥ತಾ॥ ಕರ್ಕಾಟಕರಾಶಿಯಲ್ಲಿ ಗುರುವಿದ್ದು ಸೂರ್ಯನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು ಪ್ರಥಮ ಭಾರ್ಯೆಯ ಪ್ರಥಮ ಪುತ್ರನು ಬದುಕುವುದಿಲ್ಲ. ದ್ವಿತೀಯ ಭಾರ್ಯಾ ಪುತ್ರರಿಂದ ಸೌಖ್ಯವು, ಸಂಪತ್ತು ಕೂಡಾ ಹೊಂದುತ್ತಾನೆ ॥೨೧೯॥

## ಕರ್ಕಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ॥ ನರೇಂದ್ರ ಕೋಶಾಧಾಕೃತಿಂ ಸುಕಾಂತಿಂ ಸದ್ವಾಹನಾರ್ಥಾದಿ ಸುಖೋಪಪನ್ನಂ । ಸದ್ವೃತ್ತಚಿತ್ತಂ ಜನಯೇನ್ಮನುಷ್ಯಂ ಕರ್ಕಸ್ಥಿತೇಜ್ಯೋ ಶಶಿನಾ ಪ್ರದೃಷ್ಟಃ ॥೨೨೦॥ತಾ॥ ಕರ್ಕಾಟಕರಾಶಿಯಲ್ಲಿ ಬೃಹಸ್ಪತಿಯು ಚಂದ್ರನಿಂದ ನೋಡಲ್ಪಟ್ಟರೆ ಜಾತಕನು ರಾಜನ ಭಂಡಾರಕ್ಕಧಿತಿಯಾಗುವನು, ಸುಂದರವಾದ ಕಾಂತಿಯುಳ್ಳವನು, ಉತ್ತಮವಾದ ವಾಹನಾದಿಗಳುಳ್ಳವನು, ಸೌಖ್ಯ ಉಳ್ಳವನು, ಒಳ್ಳೇ ವೃತ್ತಿಯಿಂದ ಜೀವನ ಮಾಡುವವನು ಆಗುವನು ॥೨೨೦॥

## ಕರ್ಕಸ್ಥೇ ಗುರೌ ಕುಜದೃಷ್ಟಿ ಫಲಂ

ಶ್ಲೋಕ॥ ಕುಮಾರದಾರಾಂಬರ ಚಾರುಭೂಷಾ ವಿಶೇಷ ಭಾಜಂ ಗುಣಿನಂಚ ಶೂರಂ । ಪ್ರಾಜ್ಞಂ ಕ್ಷತಾಂಗಂ ಕುರುತೇ ಮನುಷ್ಯಂ ಕರ್ಕಸ್ಥಿತೇಜ್ಯೋ ವನಿಜೇನ ದೃಷ್ಟಃ ॥೨೨೧॥ತಾ॥ ಕರ್ಕರಾಶಿಯಲ್ಲಿ ಬೃಹಸ್ಪತಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಪುತ್ರ, ಹೆಂಡತಿ, ಉತ್ತಮವಾದ ಪೀತಾಂಬರಗಳು, ಸುಂದರವಾದ ಆಭರಣಗಳು ಇವುಗಳ ಸೌಖ್ಯ ಹೊಂದುವನು ಮತ್ತು ಗುಣಾಢ್ಯರಲ್ಲಿ ಮುಖ್ಯನಾಗಿರುವನು, ಶೂರನು, ಪ್ರಾಜ್ಞನು, ತಿಳುವಳಿಕೆಯುಳ್ಳವನು, ಈ ಗುಣಗಳಿಂದ ಕೂಡಿರುವವನಾಗುವನು ॥೨೨೧॥

## ಕರ್ಕಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ॥ ಮಿತ್ರಾಶ್ರಯೋತ್ಪಾದಿತ ಸರ್ವಸಿದ್ಧಿಃ ಸದ್ವೃತ್ತಬುದ್ಧಿಂ ವಿಲಸತ್ಪ್ರತಾಪಃ । ಮಂತ್ರೀನರಃ ಕರ್ಕಟರಾಶಿಸಂಸ್ಥೇ ಗೀರ್ವಾಣ ವಂದ್ಯೇ ಶಶಿಸೂನುದೃಷ್ಟೇ । ಮಂತ್ರೀನರಃ ಕರ್ಕಟರಾಶಿಸಂಸ್ಥೇ ಗೀರ್ವಾಣ ವಂದ್ಯೇ ಶಶಿಸೂನು ದೃಷ್ಟೇ ॥೨೨೨॥ ತಾ॥ ಕರ್ಕರಾಶಿಯಲ್ಲಿ ಗುರು ಬುಧನಿಂದ ನೋಡಲ್ಪಟ್ಟರೆ ಜಾತಕನು ಮಿತ್ರರಿಂದ ಉತ್ಪನ್ನವಾದ ಸರ್ವಸಿದ್ಧಿಯುಳ್ಳವನು, ಸದ್ವೃತ್ತಿಯುಳ್ಳವನು, ಬುದ್ಧಿಯಲ್ಲಿ ಅಧಿಕನಾದವನು, ಪ್ರಕಾಶಮಾನವಾದ ಕೀರ್ತಿ, ಪ್ರತಾಪಉಳ್ಳಂಥ ಮಂತ್ರಿಯೂ ಆಗುವನು ॥೨೨೨॥

## ಕರ್ಕಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ।। ಬಹ್ವಂಗನಾ ವೈಭವ ಮಂಗನಾನಾಂ ನಾನಾ ಸುಖಾನಾಮುಪ ಲಬ್ಧಯಸ್ಯುಃ । ಕುಲೀರಯಾತೆ ವಚನಾಮಧೀಶೇ ನಿರೀಕ್ಷಿತೇ ದೈತ್ಯಪುರೋಹಿತೇನ ।।೨೨೩।।ತಾ।। ಕರ್ಕರಾಶಿಯಲ್ಲಿ ಗುರು ಶುಕ್ರನಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಪುರುಷನು, ಬಹು ಸ್ತ್ರೀ ವೈಭವ ಉಳ್ಳವನು, ಬಹು ಸ್ತ್ರೀಭೋಗ ಉಳ್ಳವನು, ಸುಖವುಳ್ಳವನು ಆಗುತ್ತಾನೆ ।।೨೨೩।।

## ಕರ್ಕಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ।। ಸನ್ಮಾನ ಭೂಷಾ ಗುಣಚಾರು ಶೀಲಃ ಸೇನಾ ಪುರಗ್ರಾಮ ಪತಿರ್ನರಸ್ಯಾತ್ । ಅನಲ್ಪಜಲ್ಪಃ ಖಲುಕರ್ಕಟಸ್ಥೇ ವಾಚಸ್ಪತೌ ಸೂರ್ಯಸುತೇನ ದೃಷ್ಟೇ ।।೨೨೪।।ತಾ।। ಕರ್ಕಾಟಕರಾಶಿಯಲ್ಲಿ ಗುರು ಶನಿಯಿಂದ ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು ಸನ್ಮಾನದಿಂದಲೂ, ಭೂಷಣಗಳಿಂದಲೂ, ಸುಗುಣಗಳಿಂದಲೂ, ಸದಾಚಾರ ಶೀಲಗಳಿಂದಲೂ ಕೂಡಿರುವನು, ಸೇನಾಪತಿಯಾಗಲೀ, ಅಥವಾ ಪುರಕ್ಕಾಗಲೀ, ಗ್ರಾಮಕ್ಕಾಗಲೀ ಅಧಿಪತಿಯೂ ಆಗುವನು ।।೨೨೪।।

## ಅಥ ಸಿಂಹಗತ್ಯೇಜ್ಯೇ ಗ್ರಹದೃಷ್ಟಯಃ

ಶ್ಲೋಕ।। ಜಾಯಾನ್ವಿತಂ ಖ್ಯಾತಮತೀವಧೂರ್ತಂ ನೃಪಾಪ್ತವಿತ್ತಂ ಶುಭಕರ್ಮಚಿತ್ತಂ। ನರಂ ಪ್ರಕುರ್ಯಾತ್ಸುರರಾಜಪೂಜ್ಯಃ ಸೂರ್ಯೇಣದೃಷ್ಟೋ ಮೃಗರಾಜ ಸಂಸ್ಥಃ ।।೨೨೫।।ತಾ।। ಸಿಂಹರಾಶಿಯಲ್ಲಿ ಗುರು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ಪತ್ನಿಯ ಸಂಗಡ ಇರುವವನು, ಪ್ರಖ್ಯಾತ ಪುರುಷನು, ಅತಿಧೂರ್ತ ಲಕ್ಷಣವುಳ್ಳವನು, ಮಹಾರಾಜನಿಂದ ಕೊಡಲ್ಪಟ್ಟ ವಿತ್ತವುಳ್ಳವನು, ಶುಭಕಾರ್ಯ ಮಾಡುವುದರಲ್ಲಿ ಮನಸ್ಸುಳ್ಳವನೂ ಆಗುವನು ।।೨೨೫।।

## ಸಿಂಹಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ।। ಪ್ರಸನ್ನ ಮೂರ್ತಿಗತಚಿತ್ತಶುದ್ಧಿಂ ಸ್ತ್ರೀಹೇತು ಸಂಪ್ರಾಪ್ತ ಧನಂವ ದಾನ್ಯಂ । ಕುರ್ಯಾತ್ಪುಮಾಂ ಸಂವಚಸಾಮಧೀಶಃ ಶಶಾಂಕದೃಷ್ಟಃ ಕರಿವೈರಿ ಸಂಸ್ಥಃ ।।೨೨೬।। ಸಿಂಹರಾಶಿಯಲ್ಲಿ ಬೃಹಸ್ಪತಿಯು ಚಂದ್ರ ದೃಷ್ಟಾನಾದರೆ ಯಾವಾಗಲೂ ನೋಡುವುದಕ್ಕೆ ಪ್ರಸನ್ನನಾದವನು, ಮನಶ್ಶುದ್ಧಿ ಇಲ್ಲದವನು, ಸ್ತ್ರೀ ಸಂಬಂಧದಿಂದ ದ್ರವ್ಯಪ್ರಾಪ್ತಿ ಮಾಡಿಕೊಳ್ಳುವವನು ಮತ್ತು ಉದಾರಿಯು ಆಗುವನು ।।೨೨೬।।

## ಸಿಂಹಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ।। ಮಾನ್ಯೋ ಗುರೂಣಾಂ ಗುರುಗೌರವೇಣ ಸತ್ಕರ್ಮನಿರ್ಮಾಣವಿಧೌ

ಪ್ರವೀಣಃ । ಪ್ರಾಣೇಭವೇತ್ಕೇಸರಿಣಿಸ್ಥಿತೇಸ್ಮಿ ಗೀರ್ವಾಣವಂದ್ಯೇ ವನಿಜೇನ ದೃಷ್ಟೇ ॥೨೨೭॥ತಾ॥ ಸಿಂಹರಾಶಿಯಲ್ಲಿ ಗುರು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಗುರುಗಳಿಂದ ಗೌರವ ಹೊಂದುವವನು, ಮಾನ್ಯನು ಮತ್ತು ಸತ್ಕರ್ಮದಲ್ಲಿ ಕುಶಲನೂ ಆಗುವನು ॥೨೨೭॥

## ಸಿಂಹಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ॥ ಗೃಹಾದಿ ನಿರ್ಮಾಣವಿಧೌ ಪ್ರವೀಣೋ ಗುಣಾಗ್ರಣೀಃ ಸ್ಯಾತ್ಸಚಿವೋ ನೃಪಾಣಾಂ । ವಾಣೀವಿಲಾಸೇ ಚತುರೋ ನರಸ್ಯಾತ್ಸಿಂಹಸ್ಥಿತೇ ದೇವ ಗುರೌಜ್ಞದೃಷ್ಟೇ ॥೨೨೯॥ತಾ॥ ಸಿಂಹರಾಶಿಯಲ್ಲಿ ಬೃಹಸ್ಪತಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಮನೆಕಟ್ಟುವ ವಿಧಿ (ಗೃಹಶಿಲ್ಪ) ಶಾಸ್ತ್ರದಲ್ಲಿ, ಪ್ರವೀಣನೂ, ಗುಣಗಳಲ್ಲಿ ಅತಿಶಯ ಅಗ್ರಶ್ರೇಷ್ಠನೂ, ರಾಜನ ಮಂತ್ರಿಯೂ, ಮಾತನಾಡುವುದರಲ್ಲಿ ಅತಿ ಚತುರನೂ ಆಗುವನು ॥೨೨೯॥

## ಸಿಂಹಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ॥ ಭೂಮೀಪತಿ ಪ್ರಾಪ್ತ ಮಹತ್ವದಸ್ಥಃ ಕಾಂತಾಜನ ಪ್ರೀತಿಕರೋ ಗುಣಜ್ಞಃ । ಭವೇನ್ನರೋ ದೇವಗುರೌ ಹರಿಸ್ಥೇ ನಿರೀಕ್ಷಿತೇಚಾ ಸುರಪೂಜಿತೇನ ॥ ತಾ॥ ಸಿಂಹರಾಶಿಯಲ್ಲಿರುವ ಗುರುವು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ರಾಜನಿಂದ ಪ್ರಾಪ್ತವಾದ ಮಹದಧಿಕಾರವುಳ್ಳವನು, ಹಿತವಾಗಿ ಕಾಂತಾಜನರುಗಳಿಂದ ಪ್ರೀತಿಗೊಳಿಸುತ್ತಲಿರುವನು, ಸುಗುಣವನ್ನು ತಿಳಿದವನು, ಈ ಗುಣಗಳಿಂದ ಕೂಡಿದವನೂ ಆಗುವನು ॥೨೩೦॥

## ಸಿಂಹಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ॥ ಸುಖೇನ ಹೀನಂ ಮಲಿನಂ ಸುವಾಚಂ ಕೃಶಾಂಗಯುಷ್ಟಿಂ ವಿಗತೋತ್ಸವಂಚ । ಕರೋತಿ ಮರ್ತ್ಯಂ ಮರುತಾಮಮಾತ್ಯಃ ಸಿಂಹಸ್ಥಿತಃ ಸೂರ್ಯಸುತೇನ ದೃಷ್ಟಃ ॥೨೩೧॥ತಾ॥ ಸಿಂಹರಾಶಿಯಲ್ಲಿ ಬೃಹಸ್ಪತಿಯು ಶನಿದೃಷ್ಟ ನಾದರೆ ಜಾತಕನು ಸುಖಹೀನನೂ, ಮಲಿನನೂ, ಒಳ್ಳೆ ಮಾತನಾಡುವವನು, ಕೃಶವಾದ ಶರೀರ ಉಳ್ಳವನೂ, ಉತ್ಸಾಹವಿಲ್ಲದವನೂ ಆಗುವನು ॥೨೩೧॥

## ಧನುರ್ಮೀನಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ॥ ರಾಜ್ಞಾ ವಿರುದ್ಧತ್ವ ಮತೀವನೂನಂ ಸುಹೃಜ್ಜನೇನಾಪಿಚ ವೈಮನಸ್ಯಂ। ಶತ್ರೂದ್ಗಮಃ ಸ್ಯಾನ್ನಿಯತಂ ನರಾಣಾಂ ಜೀವೇರ್ಕದೃಷ್ಟೇ ಸ್ವಗೃಹಂ ಪ್ರಯಾತೇ ॥೨೩೨॥ತಾ॥ ಧನುರ್ಮೀನಗಳಲ್ಲಿ ಬೃಹಸ್ಪತಿಯು ಸೂರ್ಯನಿಂದ ನೋಡಲ್ಪಟ್ಟರೆ

ಜಾತಕನು ರಾಜನೊಂದಿಗೆ ಅತಿಶಯ ವಿರೋಧಮಾಡಿಕೊಳ್ಳುವವನು, ತನ್ನ ಅಪ್ತೇಷ್ಟ ರಲ್ಲಿ ವೈಮನಸ್ಯವುಳ್ಳವನು, ನಿರಂತರದಲ್ಲೂ ಶತ್ರುಗಳು ಅಭಿವೃದ್ಧಿ ಹೊಂದುತ್ತಲೇ ಇರುವವನೂ ಸಹ ಆಗುವನು ॥೨೩೨॥

## ಧನುರ್ಮೀನಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ॥ ಸುಗರ್ವಿತಂ ಭಾಗ್ಯಧನಾಭಿವೃದ್ಧ್ಯಾ ಪ್ರಿಯಾಪ್ರಿಯತ್ವಾಭಿಮತಂ ವಿಶೇಷಾತ್ । ಕರೋತಿಜಾತಂ ಸುಖಿನಂವಿನೀತಂ ಚಂದ್ರೇಕ್ಷಿತೋ ದೇವಗುರುಸ್ಸ್ವ ಭಸ್ಥೇ ॥೨೩೩॥ತಾ॥ ಬೃಹಸ್ಪತಿಯು ಸ್ವಕ್ಷೇತ್ರಗಳಾದ ಧನುರ್ಮೀನ ರಾಶಿಗಳಲ್ಲಿ ಚಂದ್ರ ದೃಷ್ಟಿಯುಕ್ತನಾದರೆ ಭಾಗ್ಯ, ಧನಾಭಿವೃದ್ಧಿಯಿಂದ ಅಹಂಕಾರ ಪಡತಕ್ಕವನು, ವಿಶೇಷ ವಾಗಿ ಪತ್ನಿಗೆ ಪ್ರೀತಿ ಮಾಡುವವನು, ನಿರಂತರ ಸುಖಿಪುರುಷನು ಮತ್ತು ವಿನಯ ನಮ್ರತ್ವಾದಿ ಗುಣಗಳುಳ್ಳವನೂ ಆಗುವನು ॥೨೩೩॥

## ಧನುರ್ಮೀನಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ॥ ವ್ರಣಾಂಕಿತಂ ಸಂಗರಕರ್ಮದಕ್ಷಂ ಹಿಂಸಾಪರಂ ಕ್ರೂರತಂ ಸ್ವಭಾವಂ ಪರೋಪಕಾರಾಭಿರತಂ ಪ್ರಕುರ್ಯಾದ್ಗುರುಸ್ಸ್ವಭಸ್ಥಃ ಕ್ಷಿತಜೇನದೃಷ್ಟಃ ॥೨೩೪॥ತಾ॥ ಧನುರ್ಮೀನ ರಾಶಿಗಳಲ್ಲಿ ಬೃಹಸ್ಪತಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಯುದ್ಧಕಾರ್ಯದಲ್ಲಿ ಅತಿ ಪ್ರಚಂಡನು, ಗಾಯವಾದ ಶರೀರವುಳ್ಳವನು, ಹಿಂಸೆ ಮಾಡುವವನು, ಕ್ರೂರವಾದ ಸ್ವಭಾವ ಉಳ್ಳವನು, ಪರೋಪಕಾರದಲ್ಲಿ ಆಸಕ್ತಿಯುಳ್ಳ ವನೂ ಆಗುವನು ॥೨೩೪॥

## ಧನುರ್ಮೀನಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ॥ ನೃಪಾಶ್ರಯಪ್ರಾಪ್ತ ಮಹಾಧಿಕಾರೋ ದಾರಾಧನೈಶ್ವರ್ಯ ಸುಖೋಪ-ಪನ್ನಃ । ಪರೋಪಕಾರಾದರ ತೈಕಚಿತ್ತೋ ನರೋಗುರೌ ಸ್ವರ್ಕ್ಷಗತೇಜ್ಞ ದೃಷ್ಟೇ ॥೨೩೫॥ ಧನುರ್ಮೀನಗಳಲ್ಲಿ ಬೃಹಸ್ಪತಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ರಾಜಾಶ್ರಯ ಮೂಲದಿಂದ ದೊಡ್ಡದಾದ ಅಧಿಕಾರವುಳ್ಳವನು, ಹೆಂಡತಿ, ಧನ, ಐಶ್ವರ್ಯ, ಸೌಖ್ಯ ಇವುಗಳುಳ್ಳವನೂ, ಪರೋಪಕಾರ, ಆದರೆ ಇವುಗಳಲ್ಲಿ ಏಕಾಗ್ರಚಿತ್ತವುಳ್ಳವನೂ ಆಗುವನು ॥೨೩೫॥

## ಧನುರ್ಮೀನಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ॥ ಸುಖೋಪಪನ್ನಂ ವಿಧನಂ ಪ್ರಸನ್ನಂ ಪ್ರಾಜ್ಞಂ ಸದೈಶ್ವರ್ಯ ವಿರಾಜಮಾನಂ । ನೂನಂ ಪ್ರಕುರ್ಯಾನ್ಮನುಜಂ ಸುರೇಜ್ಯೋ ದೈತೇಜ್ಯದೃಷ್ಟೋ ನಿಜಮಂದಿರಸ್ಥಃ ॥೨೩೬॥ತಾ॥ ಧನುರ್ಮೀನಗಳಲ್ಲಿ ಬೃಹಸ್ಪತಿಯು ಶುಕ್ರದೃಷ್ಟನಾದರೆ

ಜಾತಕನು ಸುಖವಂತನು, ನಿರ್ಧನನು, ನಿರಂತರ ಪ್ರಸನ್ನನಾದವನು, ಬುದ್ಧಿವಂತನೂ, ನಿರಂತರ ಐಶ್ವರ್ಯದಿಂದ ವಿರಾಜಮಾನನೂ ಆಗುವನು, ಇಲ್ಲಿ ಪೂರ್ವಾಪರ ವಿರೋಧ ಬರುವಂತೆ ತೋರುತ್ತದೆ ವಿಧನನೆಂದು ಹೇಳಿರುವುದು. ಅಂದರೆ ಜಾತಕನು ಐಶ್ವರ್ಯಯುಕ್ತನಾದರೂ ಧನವನ್ನು ಕೂಡಿಡಲಾರನು. ದ್ರವ್ಯವೂ ಮಾತ್ರ ಇರುವುದಿಲ್ಲವೆಂದು ತಿಳಿಯತಕ್ಕದ್ದು ॥೨೩೬॥

## ಧನುರ್ಮೀನಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ॥ ಪದಚ್ಯುತಂ ಸೌಖ್ಯ ಸುತೈರ್ವಿಹೀನಂ ಸಂಗ್ರಾಮ ಸಂಜಾತ ಪರಾಭವಂಚ । ಕರೋತಿದೀನಂ ಸ್ವಗೃಹೇ ಸುರೇಜ್ಯಃ ಸೂರ್ಯಾತ್ಮಜೇನ ಪ್ರವಿಲೋಕ್ಯಮಾನಃ ॥೨೩೭॥ ಧನುರ್ಮೀನಗಳಲ್ಲಿ ಬೃಹಸ್ಪತಿಯು ಶನಿವೀಕ್ಷಿತನಾದರೆ ಜಾತಕನು ಪದಚ್ಯುತನು, ಸೌಖ್ಯದಿಂದಲೂ, ಪುತ್ರನಿಂದಲೂ ಹೀನನಾದವನು, ಯುದ್ಧದಲ್ಲಿ ಪರಾಭವವುಳ್ಳವನೂ, ದೀನಸ್ವಭಾವದವನು ಆಗುವನು. ಬೃಹಸ್ಪತಿಗೆ ಶನಿವೀಕ್ಷಣೆ ಧನುಸ್ಸಿನಲ್ಲಾಗಲೀ ಮೀನದಲ್ಲಾಗಲೀ ಇದ್ದರೆ ಜಾತಕನು ತನ್ನ ಅಧಿಕಾರವನ್ನು ತಾನಾಗಿಯೇ ಬಿಟ್ಟು ಬಿಡುವನು, ಸೌಖ್ಯವಿಲ್ಲದವನು, ಸುತೈರ್ವಿಹೀನಂ ಎಂಬಲ್ಲಿ ಸೌಖ್ಯ ಸುತೈರ್ವಿಹೀನಂ ಅಂದರೆ ಪುತ್ರನಿಂದ ಸೌಖ್ಯಪಡೆಯದವನೂ, ಯುದ್ಧದಲ್ಲಿ ಜಗಳದಲ್ಲಿ ವಿಜಯವಿಲ್ಲದವನು, ದೈನ್ಯವೃತ್ತಿ ಉಳ್ಳವನಾಗುವನೆಂದು ತಿಳಿಯತಕ್ಕದ್ದು ॥೨೩೭॥

ಅಥ ಮಂದಗೃಹಂ ಪ್ರಯಾತೇ ಗುರೌ ಗ್ರಹದೃಷ್ಟಯಃ

## ಮಕರ ಕುಂಭಸ್ಥೇ ಗುರೌ ರವಿದೃಷ್ಟಿಫಲಂ

ಶ್ಲೋಕ॥ ಪ್ರಸನ್ನಕಾಂತಿ ಶುಭವಾಗ್ವಿಲಾಸಂ ಪರೋಪಕಾರಾದರತಾ ಸಮೇತಂ। ಕುಲೇನೃಪಾಲಂ ಕುರುತೇ ಸುರೇಜ್ಯೋ ಮಂದಾಲಯಸ್ಥೋ ಯದಿಭಾನುದೃಷ್ಟಃ ॥೨೩೮॥ತಾ॥ಮಕರ ಕುಂಭದಲ್ಲಿ ಗುರುವು ರವಿದೃಷ್ಟಿಯುಕ್ತನಾದರೆ ಶರೀರ ಕಾಂತಿ ಯುಳ್ಳವನು, ಚೆನ್ನಾಗಿ ಮಾತನಾಡುವವನು, ಆದರಯುಕ್ತನು, ಪರೋಪಕಾರ ಮಾಡುವವನು, ತನ್ನ ವಂಶದಲ್ಲಿ ರಾಜನಂತೆ ಪ್ರಕಾಶಿಸುವವನೂ ಆಗುವನು ॥೨೩೮॥

## ಮಕರ ಕುಂಭಸ್ಥೇ ಗುರೌ ಚಂದ್ರದೃಷ್ಟಿಫಲಂ

ಶ್ಲೋಕ॥ ಕುಲೋದ್ವಹಸ್ತೀವ್ರಮತಿಃ ಸುಶೀಲೋ ಧರ್ಮಕ್ರಿಯಾಯಂ ಸುತರಾ ಮುದಾರಃ। ನರೋಭಿಮಾನೀ ಪಿತೃಮಾತೃಭಕ್ತೋ ಜೀವೇ ಶನಿಕ್ಷೇತ್ರ ಗತೇಂದು ದೃಷ್ಟೇ ॥೨೩೯॥ತಾ॥ ಮಕರ ಕುಂಭಗಳಲ್ಲಿ ಬೃಹಸ್ಪತಿಯು ಚಂದ್ರದೃಷ್ಟನಾದರೆ ಜಾತಕನನ್ನು ತಾನು ಹುಟ್ಟಿದ ಕುಲದ ಅಭಿವೃದ್ಧಿಯುಳ್ಳವನನ್ನಾಗಿಯೂ, ಅತಿ ತೀವ್ರ ಬುದ್ಧಿಯುಳ್ಳವನನ್ನಾಗಿಯೂ, ಒಳ್ಳೆ ಸ್ವಭಾವವುಳ್ಳವನನ್ನಾಗಿಯೂ, ಧರ್ಮಕಾರ್ಯ

ಮಾಡುವುದರಲ್ಲಿ ಬಹು ಉದಾರಗುಣ ಉಳ್ಳವನನ್ನಾಗಿಯೂ, ದೊಡ್ಡ ಅಭಿಮಾನ ವುಳ್ಳವನನ್ನಾಗಿಯೂ, ಮಾತಾಪಿತೃ ಭಕ್ತಿಯುಳ್ಳವನನ್ನಾಗಿಯೂ ಮಾಡುವನು ॥೨೩೯॥

## ಮಕರ ಕುಂಭಸ್ಥೇ ಗುರೌ ಕುಜದೃಷ್ಟಿಫಲಂ

ಶ್ಲೋಕ॥ ಸ್ಯಾದರ್ಥ ಸಿದ್ಧಿರ್ನೃಪತೇಃ ಪ್ರಸಾದಾತ್ ಕೀರ್ತೇಃ ಸುಖಾನಂ ಮುಪಲಬ್ಧಿರೇವ । ಸೂತೌ ಸುರೇಜ್ಯೇ ಶನಿಮಂದಿರಸ್ಥೇ ನಿರೀಕ್ಷ್ಯಮಾಣೇ ಧರಣೀ ಸುತೇನ ॥೨೪೦॥ತಾ॥ ಮಕರ ಕುಂಬ ರಾಶಿಗಳಲ್ಲಿ ಬೃಹಸ್ಪತಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ರಾಜಪ್ರಸಾದದಿಂದ ದ್ರವ್ಯ ಪ್ರಾಪ್ತಿಯುಳ್ಳವನಾಗಿಯೂ, ಸತ್ಕೀರ್ತಿಯುಳ್ಳವನಾಗಿಯೂ, ಸುಖವುಳ್ಳವನಾಗಿಯೂ ಆಗುವನು ॥೨೪೦॥

## ಮಕರ ಕುಂಭಸ್ಥೇ ಗುರೌ ಬುಧದೃಷ್ಟಿಫಲಂ

ಶ್ಲೋಕ॥ ಶಾಂತಂ ನಿತಾಂತಂ ವನಿತಾನುಕೂಲಂ ಧರ್ಮಕ್ರಿಯಾರ್ಥಂ ನಿರತಂ ನಿತಾಂತಂ । ಕರೋತಿಮರ್ತ್ಯಂ ಮರುತಾಂ ಪುರೋಧಾ ಬುಧೇನದೃಷ್ಟಃ ಶನಿಮಂದಿರಸ್ಥಃ ॥೨೪೧॥ತಾ॥ ಮಕರ ಕುಂಭರಾಶಿಗಳಲ್ಲಿ ಗುರು ಬುಧನಿಂದ ನೋಡಲ್ಪಟ್ಟರೆ ಜಾತಕನು ಯಾವಾಗಲೂ ಶಾಂತ ಸ್ವಭಾವವುಳ್ಳವನು ಮತ್ತು ಸ್ತ್ರೀಯರಿಗೆ ಅನುಕೂಲನಾದವನು, ಧರ್ಮಕಾರ್ಯ ಮಾಡುವುದರಲ್ಲಿ ನಿರತನೂ ಆಗುವನು ॥೨೪೧॥

## ಮಕರ ಕುಂಭಸ್ಥೇ ಗುರೌ ಶುಕ್ರದೃಷ್ಟಿಫಲಂ

ಶ್ಲೋಕ॥ ವಿದ್ಯಾವಿವೇಕಾರ್ಥ ಗುಣೈಸ್ಸಮೇತಃ ಪೃಥ್ವೀಪತಿ ಪ್ರಾಪ್ತ ಮನೋಭಿಲಾಷಃ । ಸ್ಯಾತ್ಪೂರುಷಃ ಸೂರ್ಯಸುತರ್ಕ್ಷಸಂಸ್ಥೇ ಜೀವೇ ಪ್ರಸೂತೌ ಭೃಗುಜೇನದೃಷ್ಟೇ ॥೨೪೨॥ತಾ॥ ಮಕರ ಕುಂಭರಾಶಿಗಳಲ್ಲಿ ಗುರು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ವಿದ್ಯಾ, ವಿವೇಕ, ದ್ರವ್ಯ, ಸುಗುಣಗಳಿಂದ ಭರಿತನಾಗಿರುವನು, ಆತನ ಮನಸ್ಸಿನ ಅಭಿಲಾಷೆಯು ಮಹಾರಾಜನಿಂದ ಪೂರ್ತಿ ಮಾಡಲ್ಪಟ್ಟದ್ದಾಗುವುದು ॥೨೪೨॥

## ಮಕರ ಕುಂಭಸ್ಥೇ ಗುರೌ ಶನಿದೃಷ್ಟಿಫಲಂ

ಶ್ಲೋಕ॥ ಕಾಮಂ ಸ ಕಾಮಂ ಸುಗುಣಾಭಿರಾಮಂ ಸುಪ್ರಾಪ್ತ ಸದ್ಮಂಧನ ಧಾನ್ಯಯುಕ್ತಂ । ಖ್ಯಾತಂ ವಿನೀತಂ ಕುರುತೇ ಮನುಷ್ಯಂ ಮಂದೇಕ್ಷಿತೋ ಮಂದ ಗೃಹಸ್ಥಜೀವಃ ॥೨೪೩॥ತಾ॥ ಮಕರ ಕುಂಭರಾಶಿಗಳಲ್ಲಿ ಬೃಹಸ್ಪತಿಯಿದ್ದು ಶನಿಯಿಂದ ನೋಡಲ್ಪಟ್ಟರೆ ಜಾತಕನು ಅತಿಶಯ ವಿಷಯೋಭೋಗದಲ್ಲಿ ಆಸಕ್ತನು, ಸುಗುಣಗಳಿಂದ ಅಲಂಕರಿಸಲ್ಪಟ್ಟವನು, ಮಹಡಿ (ಚಂದ್ರಶಾಲೆ) ಮೊದಲಾದ

ವಿಚಿತ್ರವಾದ ಮನೆಕಟ್ಟುವವನು, ಧನದಿಂದಲೂ, ಧಾನ್ಯದಿಂದಲೂ ಪೂರ್ಣನಾದವನು, ಪ್ರಖ್ಯಾತನೂ ವಿನಯವುಳ್ಳವನೂ ಆಗುವನು ॥೨೪೩॥

ಇತಿ ಶನಿಕ್ಷೇತ್ರಸ್ಥೇ ಗುರೌ ಗ್ರಹದೃಷ್ಟಿಫಲಂ
ಅಥ ಮೇಷಾದಿರಾಶಿಸ್ಥೇ ಶುಕ್ರೇ ಗ್ರಹದೃಷ್ಟಯಃ

## ಮೇಷ ವೃಶ್ಚಿಕಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ಕೃಪಾವಿಶೇಷಂ ನೃಪತೇರ್ನಿತಾಂತ ಮತೀವಜಾಯಾ ಜನಿತವ್ಯಳೀಕಂ। ಕುರ್ಯಾನ್ನರಾಣಾಂ ತರಣಿಪ್ರದೃಷ್ಟಃ ಶುಕ್ರೋಹಿವಕ್ರಸ್ಯಗೃಹಂ ಪ್ರಯಾತಃ ॥೨೪೪॥ತಾ॥ ಮೇಷ ವೃಶ್ಚಿಕ ರಾಶಿಗಳಲ್ಲಿ ಶುಕ್ರನು ಕುಜನಿಂದ ನೋಡಲ್ಪಟ್ಟರೆ ಜಾತಕನು ರಾಜ ದಯೆವುಳ್ಳವನು, ಸ್ತ್ರೀಯ ಮೂಲವಾಗಿ ಭಯ ಉಂಟಾಗಿ ದುಃಖಪಡುವವನೂ ಆಗುವನು ॥೨೪೪॥

## ಮೇಷ ವೃಶ್ಚಿಕಸ್ಥೇ ಶುಕ್ರೇ ಚಂದ್ರದೃಷ್ಟಿಫಲಂ

ಶ್ಲೋಕ॥ ಶ್ರೇಷ್ಠಂ ಪ್ರತಿಷ್ಠಂ ಚಲಚಿತ್ತವೃತ್ತಿಂ ಕಾಮಾತುರತ್ವಾದಿಕೃತಿಂ ಪ್ರಯಾತಂ । ಕರೋತಿಮರ್ತ್ಯಂ ಕುಜಗೇಹಯಾತೋ ಭೃಗೋಸ್ಸುತಃ ಶೀತಕರೇಣ ದೃಷ್ಟಃ ॥೨೪೫॥ತಾ॥ ಮೇಷ ವೃಶ್ಚಿಕ ರಾಶಿಗಳಲ್ಲಿ ಶುಕ್ರನು ಚಂದ್ರದೃಷ್ಟಿಯುಳ್ಳವ ನಾದರೆ ಜಾತಕನು ತನ್ನವರಲ್ಲಿ ಶ್ರೇಷ್ಠನು, ಇತರರಲ್ಲಿ ಪ್ರತಿಷ್ಠೆಯನ್ನು ಹೊಂದುವವನು, ಚಂಚಲವಾದ ಮನೋವೃತ್ತಿಯುಳ್ಳವನು, ಕಾಮಾತುರತ್ವದಿಂದ ವಿಕಾರ ಹೊಂದಿದವನೂ ಆಗುವನು ॥೨೪೫॥

## ಮೇಷ ವೃಶ್ಚಿಕಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ಧನೇನ ಮಾನೇನ ಸುಖೇನಹೀನಂ ದೀನಂ ವಿಶೇಷಾನ್ಮಲಿನಂ ಕರೋತಿ । ನೂನಂ ಧರಿತ್ರೀತನಯಾ ಲಯಸ್ಥಃ ಶುಕ್ರೋಧರಿತ್ರೀ ತನಯೇನ ದೃಷ್ಟಃ ॥೨೪೬॥ತಾ॥ ಮೇಷ ವೃಶ್ಚಿಕರಾಶಿಗಳಲ್ಲಿ ಶುಕ್ರನು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಧನ, ಮಾನ, ಸುಖ ಇವುಗಳಿಂದ ಬಿಡಲ್ಪಟ್ಟವನು, ದೀನನೂ, ಅತಿಶಯ ಕೊಳಕೂ ಆಗುವನು ॥೨೪೬॥

## ಮೇಷ ವೃಶ್ಚಿಕಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ಅನಾರ್ಯ ಮರ್ಥಾತ್ಮಜನೈರ್ವಿಹೀನಂ ಸ್ವಬುದ್ಧಿ ಸಾಮರ್ಥ್ಯ ಪರಾಙ್ಮು- ಖಂಚ । ಕ್ರೂರಂ ಪದಾರ್ಥವಹರಂ ನರಂಹಿಕರೋತಿ ಶುಕ್ರಃ ಕುಜಭೇಜ್ಞ ದೃಷ್ಟಃ ॥೨೪೭॥ತಾ॥ ಮೇಷ ವೃಶ್ಚಿಕದಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು

ತಿಳುವಳಿಕೆಯಿಲ್ಲದವನು (ಅಡಾಣಿ) ದರಿದ್ರನು, ಆಪ್ತರಿಲ್ಲದವನು, ಬುದ್ಧಿಹೀನನು, ಕ್ರೂರನು, ಎರಡನೆಯವರ ದ್ರವ್ಯಹರಣ ಮಾಡುವವನೂ ಆಗುವನು ॥೨೪೭॥

## ಮೇಷ ವೃಶ್ಚಿಕಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ಕಲತ್ರಪುತ್ರಾದಿ ಸುಖೈಸ್ಸಮೇತಂ ಸತ್ಕಾಯಕಾಂತಿಂ ಸುತರಾಂ ವಿನೀತಂ । ಉದಾರಚಿತ್ತಂ ಪ್ರಕರೋತಿಮರ್ತ್ಯಂ ಜೀವೇಕ್ಷಿತೋ ದೈತ್ಯಗುರುಃ ಕುಜರ್ಕ್ಷೇ ॥೨೪೮॥ತಾ॥ ಕುಜಕ್ಷೇತ್ರಗಳಾದ ಮೇಷ ವೃಶ್ಚಿಕಗಳಲ್ಲಿ ಶುಕ್ರನು ಗುರು ದೃಷ್ಟಿಯುಕ್ತನಾದರೆ ಜಾತಕನು ಕಲತ್ರ ಪುತ್ರರು ಮೊದಲಾದವರ ಸುಖದಿಂದ ಕೂಡಿ ದವನು, ಒಳ್ಳೆಯ ಶರೀರ ಕಾಂತಿಯುಳ್ಳವನು, ಬಹಳ ನಮ್ರತೆಯುಳ್ಳವನು, ಉದಾರ ವಾದ ಬುದ್ಧಿಯುಳ್ಳವನು ಆಗುವನು ॥೨೪೮॥

## ಮೇಷ ವೃಶ್ಚಿಕಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ಸುಗುಪ್ತ ವಿತ್ತಾಭಿಮತಂ ಪ್ರಶಾಂತಂ ಮಾನ್ಯಂವದಾನ್ಯಂ ಸ್ವಜನಾನು- ಯಾತಂ । ಕರೋತಿಜಾತಂ ಕ್ಷಿತಿಪುತ್ರಗೇಹೇ ಶುಕ್ರಸ್ಥಿತೋ ಭಾನುಸುತೇನದೃಷ್ಟಃ ॥೨೪೯॥ತಾ॥ ಮೇಷ ವೃಶ್ಚಿಕಗಳಲ್ಲಿ ಶುಕ್ರನು ಶನಿಯಿಂದ ನೋಡಲ್ಪಟ್ಟರೆ ಜಾತಕನು ಗುಪ್ತವಾಗಿ ದ್ರವ್ಯವನ್ನು ಶೇಖರ ಮಾಡಿಡುವವನು, ಶಾಂತಸ್ವಭಾವ ಉಳ್ಳವನು, ಲೋಕದಲ್ಲಿ ಮಾನ್ಯನು, ದಾನಶೀಲನೂ ಮತ್ತು ಆಪ್ತಜನರಲ್ಲಿ ಅನುಸರಿಸಿದ ನಡವಳಿಕೆಯುಳ್ಳವನೂ ಆಗುವನು ॥೨೪೯॥

ಇತಿ ಮೇಷಸ್ಥೇ ಶುಕ್ರೇ ಗ್ರಹದೃಷ್ಟಿಫಲಂ
ಅಥ ನಿಜವೇಶ್ಮಯಾತೇ ಶುಕ್ರೇ ಖೇಟದೃಷ್ಟಯಃ

## ವೃಷಭ ತುಲಾಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ವರಾಂಗನಾಭ್ಯೋ ಧನವಾಹನೇಭ್ಯಃ ಸುಖಾನಿನೂನಂ ಲಭತೇ ಮನುಷ್ಯಃ । ಪ್ರಸೂತಿಕಾಲೇ ನಿಜವೇಶ್ಮಯಾತೇ ಸಿತೇ ಪತಂಗೇನ ನಿರೀಕ್ಷ್ಯಮಾಣೇ ॥೨೫೦॥ತಾ॥ ಶುಕ್ರನು ವೃಷಭ ತುಲಾರಾಶಿಗಳಲ್ಲಿ ರವಿದೃಷ್ಟಿಯುಕ್ತನಾದರೆ ಉತ್ತಮ ಸ್ತ್ರೀಯರಿಂದಲೂ, ಧನದಿಂದಲೂ, ವಾಹನಗಳಿಂದಲೂ ಸುಖವನ್ನು ಪ್ರಕಾಶಮಾನ ನಾಗಿ ಹೊಂದುವನು ॥೨೫೦॥

## ವೃಷಭ ತುಲಾರಾಶಿಸ್ಥೇ ಶುಕ್ರ ಚಂದ್ರದೃಷ್ಟಿಫಲಂ

ಶ್ಲೋಕ॥ ವಿಲಾಸಿನೀ ಕೇಲಿವಿಲಾಸಸಕ್ತ ಕುಲಾಧಿಪಾಲೋ ಮಲಬುದ್ಧಿ- ಶಾಲೀ । ನರಃ ಸುಶೀಲಃ ಶುಭವಾಗ್ವಿಲಾಸಃ ಸ್ವೀಯಾಲಯಸ್ಥಾಸ್ಫುಜಿದೇಂದು ದೃಷ್ಟೇ ॥೨೫೧॥ ವೃಷಭ ತುಲಾ ರಾಶಿಗಳಲ್ಲಿ ಶುಕ್ರನು ಚಂದ್ರದೃಷ್ಟಿಯುಕ್ತನಾದರೆ ಜಾತಕನು

ವಿಲಾಸಿನೀಯಳಾದವಳಲ್ಲಿ ವಿಲಾಸ ಕ್ರೀಡೆಗಳುಳ್ಳವನು, ತನ್ನ ವಂಶದವರನ್ನು ಪಾಲನೆ ಮಾಡುವವನು, ನಿರ್ಮಲವಾದ ಬುದ್ಧಿಶಾಲಿಯೂ, ಶುಭವಾದ ಮಾತುಗಳುಳ್ಳವನೂ ಮತ್ತು ಸದ್ವಾಚಾರ ಸಂಪನ್ನನೂ ಆಗುವನು ॥೨೫೧॥

## ವೃಷಭ ತುಲಾರಾಶಿಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ಗೃಹಾದಿ ಸೌಖ್ಯೋಪಹತಂ ನಿತಾಂತಂ ಕಲಿಪ್ರಸಂಗಾಭಿಭವೋ ಪಲಬ್ಧಿಂ । ಕುರ್ಯಾನ್ನರಾಣಾಂ ದನುಜೇಂದ್ರ ಮಂತ್ರೀ ಸ್ವಕ್ಷೇತ್ರಸಂಸ್ಥೇ ಕ್ಷಿತಿ ಪುತ್ರದೃಷ್ಟೇ ॥೨೫೨॥ತಾ॥ ವೃಷಭ ತುಲಾರಾಶಿಗಳಲ್ಲಿ ಶುಕ್ರನು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಮನೆ ಮೊದಲಾದವುಗಳಲ್ಲಿ ಸುಖವಿಲ್ಲದವನು, ನಿರಂತರ ಕಲಹವುಳ್ಳವನೂ ಆಗುವನು ॥೨೫೨॥

## ವೃಷಭ ತುಲಾರಾಶಿಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ಗುಣಾಭಿರಾಮಂ ಸುಭಗಂ ಪ್ರಕಾಮಂ ಸೌಮ್ಯಂ ಸುಸತ್ವಂ ಧೃತಿಸಂಯುತಂಚ । ಸ್ವಕ್ಷೇತ್ರಗೋ ದೈತ್ಯಗುರುಃ ಪ್ರಕುರ್ಯಾನ್ನರಂತುಷಾರಾಂಶು ಸುತೇನದೃಷ್ಟಃ ॥೨೫೩॥ತಾ॥ ವೃಷಭ ತುಲಾರಾಶಿಗಳಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು ಗುಣಸಂಪನ್ನ ರೂಪವಂತ, ಸೌಮ್ಯ, ಉತ್ತಮ ಪರಾಕ್ರಮವುಳ್ಳವನು ಮತ್ತು ಧೈರ್ಯವಂತನೂ ಆಗುವನು ॥೨೫೩॥

## ವೃಷಭ ತುಲಾರಾಶಿಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ಸದ್ವಾಹನಾನಾಂ ಗೃಹಿಣೀ ಸುತಾನಾಂ ಸುಮಿತ್ರಪುತ್ರ ದ್ರವಣಾದಿ ಕಾನಾಂ। ಕರೋತಿಲಬ್ದಿಂ ನಿಜವೇಶ್ಮಯಾತಃ ಸಿತಃ ಸುರಾಚಾರ್ಯ ನಿರೀಕ್ಷಿತಶ್ಚೇತ್ ॥೨೫೪॥ತಾ॥ ವೃಷಭ ತುಲಾರಾಶಿಗಳಲ್ಲಿ ಶುಕ್ರನು ಬೃಹಸ್ಪತಿಯ ದೃಷ್ಟಿಯುಕ್ತನಾದರೆ ಜಾತಕನಿಗೆ ಉತ್ತಮವಾದ ವಾಹನ, ಪ್ರಸೂತಳಾದ ಪತ್ನಿಯೂ ಮಕ್ಕಳುಗಳು. ಸುಮಿತ್ರರು, ಪುತ್ರರು, ದ್ರವ್ಯ ಮೊದಲಾದ ಲಾಭಗಳನ್ನುಂಟುಮಾಡುತ್ತಾನೆ ॥೨೫೪॥

## ವೃಷಭ ತುಲಾರಾಶಿಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ಗದಾಭಿಭೂತೋ ಹೃತಸಾಧುವೃತ್ತಃ ಸೌಖ್ಯಾರ್ಥ ಹೀನೋ ಮನುಜೋತಿ ದೀನಃ । ಭವೇತ್ಪಸೂತೌ ನಿಜವೇಶ್ಮಯಾತೇ ಭೃಗೋಸ್ಸುತೇ ಭಾನು ಸುತೇನ ದೃಷ್ಟೇ ॥೨೫೫॥ತಾ॥ ಜನನ ಕಾಲದಲ್ಲಿ ಶುಕ್ರನು ವೃಷಭ ತುಲಾ ರಾಶಿಗಳಲ್ಲಿದ್ದು ಶನಿವೀಕ್ಷಿತನಾದರೆ ಜಾತಕನು ರೋಗದಿಂದ ತಪ್ತನಾದವನು, ಸಾಧುಮಾರ್ಗವನ್ನು ಬಿಡಲ್ಪಟ್ಟವನು, ಸೌಖ್ಯವೂ ಅರ್ಥವೂ (ದ್ರವ್ಯ) ಇಲ್ಲದವನು ಮತ್ತು ದೈನ್ಯವೃತ್ತಿಯುಳ್ಳವನು ಆಗುವನು ॥೨೫೫॥

## ಅಥ ಬುಧರ್ಕ್ಷಸ್ಥೇ ಖೇಟದೃಷ್ಟಯಃ

## ಮಿಥುನ ಕನ್ಯಾಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ನೃಪಾವರೋಧಾಧಿಕೃತಂ ವಿನೀತಂ ಗುಣಾನ್ವಿತಂ ಶಾಸ್ತ್ರಕೃತ ಪ್ರವೇಶಂ। ಕುರ್ಯಾನ್ನರಂ ದೈತ್ಯಗುರುಃ ಪ್ರಸೂತೌ ಸೌಮ್ಯರ್ಕ್ಷ ಸಂಸ್ಥೋ ರವಿಣಾ-ಪ್ರದೃಷ್ಟಃ ॥೨೫೬॥ತಾ॥ ಜನನಕಾಲದಲ್ಲಿ ಮಿಥುನ ಕನ್ಯಾರಾಶಿಗಳಲ್ಲಿ ಶುಕ್ರನು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ರಾಜನ ದ್ರವ್ಯದ ಅಧಿಕಾರವುಳ್ಳವನು. ನಮ್ರತೆಯುಳ್ಳವನು, ಒಳ್ಳೆಯ ಗುಣಗಳಿಂದ ಶೋಭಿಸುವನು, ಶಾಸ್ತ್ರವಿಷಯದಲ್ಲಿ ಪ್ರವೇಶಮಾಡುವವನು ಆಗುವನು. ಮಿಥುನ ಕನ್ಯೆಗಳಲ್ಲಿ ಶುಕ್ರನಿಗೆ ರವಿದೃಷ್ಟಿಇದ್ದರೆ ಜಾತಕನು ಶಾಸ್ತ್ರ ಪಂಡಿತನೂ, ಸುಗುಣವಂತನೂ, ನಮ್ರತೆಯುಳ್ಳವನು ಮತ್ತು ತಾಲ್ಲೂಕು ಖಜಾನೆ ಶಿರಸ್ತೇದಾರ ಡಿಸ್ಟ್ರಿಕ್ಟ್ ಖಜಾಂಚಿ ಹೂಜೂರು ಖಜಾನಾ ಅಧಿಕಾರಿಯೂ, ಅವನೇ ಉತ್ತಮ ಬಲಿಷ್ಠನಾಗಿದ್ದರೆ ಆ ಅಧಿಕಾರಿಯು ಮುಖ್ಯೇಸರನೂ ಆಗುವನು ॥೨೫೬॥

## ಮಿಥುನ ಕನ್ಯಾಸ್ಥೇ ಶುಕ್ರೇ ಚಂದ್ರದೃಷ್ಟಿಫಲಂ

ಶ್ಲೋಕ॥ ಸದನ್ನವಸ್ತ್ರಾದಿ ಸುಖೋಪಪನ್ನಂ ನೀಲೋತ್ಪಲ ಶ್ಯಾಮಲಚಾರ ನೇತ್ರಂ। ಸುಕೇಶಪಾಶಂ ಮನುಜಂ ಪ್ರಕುರ್ಯಾತ್ಸೌಮ್ಯರ್ಕ್ಷಸಂಸ್ಥೋ ಭೃಗುರಿಂದು ದೃಷ್ಟಃ ॥೨೫೭॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶುಕ್ರನು ಚಂದ್ರನಿಂದ ನೋಡ ಲ್ಪಟ್ಟರೆ ಜಾತಕನು ಉತ್ತಮವಾದ ಅನ್ನ, ವಸ್ತ್ರಾದಿ ಸೌಖ್ಯವುಳ್ಳವನು, ಸುಂದರವಾದ ನೀಲೋತ್ಪಲ ಶ್ಯಾಮಲ ವರ್ಣವಾದ ಕಣ್ಣುಗಳುಳ್ಳವನು, ಮನೋಹರವಾದ ಕೇಶಪಾಶಗಳುಳ್ಳವನೂ ಆಗುವನು ॥೨೫೭॥

## ಮಿಥುನ ಕನ್ಯಾಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ಭಾರ್ಯಾನ್ವಿತಃ ಕಾಮವಿಧಿ ಪ್ರವೀಣ ಕಾಂತಾನಿಮಿತ್ತಂ ದ್ರವಿಣ ವ್ಯಯಸ್ಯಾತ್ । ನರೋಹಿ ನೀ ಹಾರಕರಾತ್ಮಜರ್ಕ್ಷೇ ಸ್ಥಿತೇಸಿತೇ ಭೂಮಿಸುತೇನ ದೃಷ್ಟೇ ॥೨೫೮॥ತಾ॥ ಕನ್ಯಾ ಮಿಥುನ ರಾಶಿಗಳಲ್ಲಿ ಶುಕ್ರನು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಪತ್ನಿಸಹಿತವಾದವನು, ಕಾಮಶಾಸ್ತ್ರದಲ್ಲಿ ಅತಿಶಯ ನಿಪುಣನೂ, ಕಾಂತಾನಿಮಿತ್ತವಾಗಿ ದ್ರವ್ಯವ್ಯಯ ಮಾಡುವವನೂ ಆಗುವನು ॥೨೫೮॥

## ಮಿಥುನ ಕನ್ಯಾಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ಪ್ರಜ್ಞಾಬಲಂ ವಾಹನವಿತ್ತ ವೃದ್ಧಿಂ ಸೇನಾಪತಿತ್ವಂ ಪರಿವಾರ ಸೌಖ್ಯಂ। ಕುರ್ಯಾನ್ನರಾಣಾ ಮುಶನಾ ಪ್ರಕಾಮಂ ಬುಧರ್ಕ್ಷಸಂಸ್ಥಶ್ಚ ಬುಧೇನ ದೃಷ್ಟಃ ॥೨೫೯॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ

ಜಾತಕನು ಪ್ರಜ್ಞಾಧಿಕನು, ವಾಹನ ಸಾಮಗ್ರಿಗಳುಳ್ಳವನು, ದ್ರವ್ಯವುಳ್ಳವನು, ದಿನೇ ದಿನೇ ಅಭಿವೃದ್ಧಿಯುಳ್ಳವನು, ಸೇನಾನಾಯಕನೂ ಆಗಿಯೂ ಪರಿವಾರದಿಂದ ಸೌಖ್ಯ ವುಳ್ಳವನಾಗಿಯೂ ಆಗುವನು ॥೨೫೯॥

## ಮಿಥುನ ಕನ್ಯಾಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ಸದ್ಬುದ್ಧಿವೃದ್ಧಿರ್ಬಹುವೈಭವಾಢ್ಯಃ ಪ್ರಸನ್ನಚೇತಾಃ ಸುತರಾಂ ವಿನೀತಃ। ಮರ್ತ್ಯೋ ಭವೇತ್ಸೌಮ್ಯ ಗೃಹೋಪಯಾತೇ ದೃಷ್ಟೇಸಿತೇ ದೇವ ಪುರೋಹಿತೇನ ॥೨೬೦॥ ಮಿಥುನ ಕನ್ಯಾರಾಶಿಗಳಲ್ಲಿ ಶುಕ್ರನು ಬೃಹಸ್ಪತಿ ವೀಕ್ಷಿತನಾದರೆ ಜಾತಕನು ಸದ್ಬುದ್ಧಿ ವೃದ್ಧಿಯಿಂದ ಅನೇಕ ಪ್ರಕಾರವಾದ ವೈಭವಗಳುಳ್ಳವನು, ಪ್ರಸನ್ನವಾದ ಮನಸ್ಸುಳ್ಳವನು ಮತ್ತು ನಮ್ರತೆಯುಳ್ಳವನು ಆಗುವನು ॥೨೬೦॥

## ಮಿಥುನ ಕನ್ಯಾಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ಪರಾಭಿಭೂತಂ ಚಪಲಂ ವಿವಿಕ್ತಂ ಸುದುಃಖಿತಂ ಸರ್ವಜನೋಜ್ಝಿ-ತಂಚ । ಮರ್ತ್ಯಂಕರೋ ತ್ಯೇವಭೃಗೋ ಸ್ತನೂಜಃ ಸೋಮಾತ್ಮಜರ್ಕ್ಷೇ ರವಿಜೇನ ದೃಷ್ಟಃ ॥೨೬೧॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶುಕ್ರನು ಶನಿಯಿಂದ ನೋಡ ಲ್ಪಟ್ಟರೆ ಜಾತಕನು ಅನ್ಯರಿಂದ ತಿರಸ್ಕಾರ ಹೊಂದುವನು, ಬಹು ಚಂಚಲನೂ, ಏಕಾಂತದಲ್ಲಿರಲು ಅಪೇಕ್ಷೆಯುಳ್ಳವನು, ದುಃಖಿತನೂ ಆಗುವನು ॥೨೬೧॥

ಇತಿ ಬುಧರ್ಕ್ಷಗೇ ಶುಕ್ರೇ ಖೇಟದೃಷ್ಟಯಃ

ಅಥ ಕರ್ಕಸ್ಥೇ ಶುಕ್ರೇ ಖೇಟದೃಷ್ಟಿಯಃ

## ಕರ್ಕಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ಸರೋಷಯೋಷಾ ಕೃತಹರ್ಷನಾಶಃ ಸ್ಯಾತ್ಪೂರುಷಶ್ಶತ್ರು ಜನಾಭಿ-ಭೂತಃ । ದೈತ್ಯಾರ್ಚಿತೇ ಕರ್ಕಟರಾಶಿಯಾತೇ ನಿರೀಕ್ಷಿತೇಽಹರ್ಪತಿನಾಪ್ರಸೂತೌ ॥೨೬೨॥ತಾ॥ ಕರ್ಕರಾಶಿಯಲ್ಲಿ ಶುಕ್ರನು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ರೋಷವುಳ್ಳ (ಅಂದರೆ ಕೋಪಿಯು) ಸ್ತ್ರೀಯಿಂದ ದುಃಖವುಳ್ಳವನು, ಶತ್ರುಜನರಿಂದ ಸೋಲಲ್ಪಟ್ಟವನೂ ಆಗುವನು ॥೨೬೨॥

## ಕರ್ಕರಾಶಿಸ್ಥೇ ಶುಕ್ರೇ ಚಂದ್ರೇಕ್ಷಿತಫಲಂ

ಶ್ಲೋಕ॥ ಕನ್ಯಾಪ್ರಜಾ ಪೂರ್ವಕ ಪುತ್ರಲಾಭ ಅಂಬಾಂ ಸಪತ್ನೀಂ ಬಹು ಗೌರವಾಢ್ಯಾಂ । ಕುರ್ಯಾನ್ನರಾಣಾಂ ಹರಿಣಾಂಕ ದೃಷ್ಟಃ ಕುಲೀರಗೋ ಭಾರ್ಗವ ನಾಮಧೇಯಃ ॥೨೬೩॥ತಾ॥ ಕರ್ಕಟರಾಶಿಯಲ್ಲಿ ಶುಕ್ರನು ಚಂದ್ರಾವಲೋಕಿತ ನಾದರೆ ಜಾತಕನು ಹೆಣ್ಣು ಸಂತತಿ ಹುಟ್ಟಿದನಂತರ ಪುಂಸಂತತಿಯುಳ್ಳವನು (ಅಂದರೆ

ಅವನ ಮಕ್ಕಳುಗಳಲ್ಲಿ ೧ನೆಯದು ಹೆಣ್ಣು, ೨ನೆಯದು ಗಂಡು ಈ ಪ್ರಕಾರ) ಮತ್ತು ಅವನ ತಾಯಿಯು ಬಹು ಗೌರವವುಳ್ಳವಳು, ಅಂಬಾಂ ಸಪತ್ನೀಂ ಬಹು ಗೌರವಾಢ್ಯಂ ಎಂಬುವುದರಿಂದ ಆತನಿಗೆ ಬಲತಾಯಿಯು ಅತಿ ಮರ್ಯಾದೆಯುಳ್ಳ ಸಚ್ಚರಿತ್ರಳೆಂದು ಹೇಳತಕ್ಕದ್ದು ॥೨೬೩॥

## ಕರ್ಕರಾಶಿಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ಕಲಾಸುದಕ್ಷೋ ಹತಶತ್ರು ಪಕ್ಷೋ ಬುಧ್ಯಾಚ ಸೌಖ್ಯೇನಯುತೋ ಮನುಷ್ಯಃ । ಪರಂತು ಕಾಂತಾ ಕೃತಚಿಂತಯಾರ್ತೋ ಭೌಮೇಕ್ಷಿತೇ ಕರ್ಕಟಗೇ ಸಿತೇಸ್ಯಾತ್ ॥೨೬೪॥ತಾ॥ ಕರ್ಕಾಟಕರಾಶಿಯಲ್ಲಿ ಶುಕ್ರನು ಕುಜವೀಕ್ಷಿತನಾದರೆ ಜಾತಕನು ಸಂಗೀತ, ನೃತ್ಯವಾದಿಗಳಲ್ಲಿ ಅತಿಶಯ ಪರಿಶ್ರಮವುಳ್ಳ ಪಂಡಿತನು, ಶತ್ರುಗಳನ್ನು ಹತಮಾಡಿದವನು, ಬುದ್ಧಿಯಿಂದ ಸೌಖ್ಯವನ್ನು ಕಲ್ಪಿಸಿಕೊಂಡವನು ಮತ್ತು ಸ್ತ್ರೀಯ ಮೂಲವಾಗಿ ಚಿಂತೆಯಿಂದ ಕೊರಗುತ್ತಲೇ ಇರುವನು ಆಗುವನು ॥೨೬೪॥

## ಕರ್ಕರಾಶಿಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ವಿದ್ಯಾಪ್ರವೀಣಂ ಗುಣಿನಂ ಗುಣಜ್ಞಂ ಕಲತ್ರಪುತ್ರೋದ್ಭವ ದುಃಖ ತಪ್ತಂ । ಜನೋಜ್ಝಿತಂ ಚಾಪಿಕರೋತಿಮರ್ತ್ಯಂ ಕಾವ್ಯಃ ಕುಲೀರಾನು ಗತೋಜ್ಞ ದೃಷ್ಟಃ ॥೨೬೫॥ತಾ॥ ಕರ್ಕಾಟಕರಾಶಿಯಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು ಅನೇಕ ವಿದ್ಯಾನಿಪುಣನು, ಗುಣವಂತರಲ್ಲಿ ಶ್ರೇಷ್ಠನು ಮತ್ತು ಸುಗುಣದ ಮುಖ್ಯಾಂಶ ತಿಳಿದವನು, ಹೆಂಡತಿ ಮಕ್ಕಳು (ಪುತ್ರಾದಿಗಳಿಂದ) ದುಃಖಹೊಂದಿ ತಪ್ತವಾದ ಶರೀರ ಉಳ್ಳವನು ಮತ್ತು ಸರ್ವರಿಂದಲೂ ಬಿಡಲ್ಪಟ್ಟವನೂ ಆಗುವನು ॥೨೬೫॥

## ಕರ್ಕಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ಅತಿ ಚತುರ ಮುದಾರಂ ಚಾರುವೃತ್ತಿಂ ವಿನೀತಂ ಮತಿವಿಭವ ಸಮೇತಂ ಕಾಮಿನೀಸೂನು ಸೌಖ್ಯಂ । ಪ್ರಿಯವಚನ ವಿಲಾಸಂ ಮಾನುಷಂ ಸಂವಿಧತ್ತೇ ಸುರಪತಿ ಗುರುದೃಷ್ಟೋ ಭಾರ್ಗವಃ ಕರ್ಕಸಂಸ್ಥಃ ॥೨೬೬॥ತಾ॥ ಕರ್ಕಾಟಕ ರಾಶಿಯಲ್ಲಿ ಶುಕ್ರನು ಗುರುವೀಕ್ಷಿತನಾದರೆ ಜಾತಕನು ಅತಿಶಯ ಚತುರನು, ಉದಾರನು ಸದ್ವೃತ್ತಿಯುಳ್ಳವನು, ವಿನಯವಂತನು, ವಿಶಾಲ ಬುದ್ಧಿಯುಳ್ಳವನು, ಪತ್ನೀಪುತ್ರರಿಂದ ಸೌಖ್ಯವುಳ್ಳವನು, ಪ್ರಿಯವಾಗಿ ಮಾತನಾಡುವವನೂ ಆಗುವನು ॥೨೬೬॥

## ಕರ್ಕಸ್ಥೇ ಶುಕ್ರೇ ಶನಿವೀಕ್ಷಿತಫಲಂ

ಶ್ಲೋಕ॥ ಸದ್ವೃತ್ತಸೌಖ್ಯೋಪಹೃತಂ ಗತಾರ್ಥಂ ವ್ಯರ್ಥಪ್ರಯತ್ನಂ ವನಿತಾ ಜಿತಂಚ। ಸ್ಥಾನಚ್ಯುತಂ ಸಂಜನಯೇನ್ಮನುಷ್ಯಂ ಮಂದೇಕ್ಷಿತಃ ಕರ್ಮಗತಃ ಸಿತಾಖ್ಯಃ ॥೨೬೭॥ತಾ॥ ಕರ್ಕಾಟಕರಾಶಿಯಲ್ಲಿ ಶುಕ್ರನಿದ್ದು ಶನಿವೀಕ್ಷಿತನಾದರೆ ಜಾತಕನು ಸದ್ವೃತ್ತಿ, ಸೌಖ್ಯ ಇವುಗಳಿಂದ ಬಿಡಲ್ಪಟ್ಟವನು, ದ್ರವ್ಯ ಸಂಚಯ ಮಾಡಿಕೊಂಡದ್ದು ಕಳೆದುಕೊಂಡದ್ದು ಕಳೆದುಕೊಳ್ಳುವನು, ಪ್ರಯತ್ನಮಾಡಿದ ಕಾರ್ಯವು ವ್ಯರ್ಥವಾಗುವುದು, ಸ್ತ್ರೀಯರಿಂದ ಸೋತು ಹೋದವನು, ಸ್ಥಾನಚ್ಯುತಿ ಹೊಂದಿದವನೂ ಆಗುವನು ॥೨೬೭॥

## ಸಿಂಹಸ್ಥೇ ಶುಕ್ರೇ ಗ್ರಹದೃಷ್ಟಯಃ

ಶ್ಲೋಕ॥ ಸ್ಪರ್ಧಾತಿ ಸಂವರ್ಧಿತ ಚಿತ್ತವೃತ್ತಿಃ ಕಾಂತಾಶ್ರಯೋತ್ಪನ್ನ ಧನೋಮನುಷ್ಯಃ । ಕ್ರಮೇಲಕಾದ್ಯೈರ್ಯದಿವಾಯುತಃ ಸ್ಯಾದರ್ಕೇಕ್ಷಿತೇ ಸಿಂಹಗತೇ ಸಿತಾಖ್ಯೇ ॥೨೬೮॥ತಾ॥ ಶುಕ್ರನು ಸಿಂಹರಾಶಿಯಲ್ಲಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ಎರಡನೆಯವರ ಸಂಗಡ ಸ್ಪರ್ಧೆಮಾಡುವನು, ಸ್ತ್ರೀಯರ ಆಸರೆಯಿಂದ ಧನಾರ್ಜನೆ ಮಾಡುವನು, ಚತುಷ್ಪದ ಪಶು (ಒಂಟೆ ಮೊದಲಾದುವು) ಮೂಲವಾಗಿ ಧನ ಸಂಪಾದಿಸುವನೂ ಆಗುವನು ॥೨೬೮॥

## ಸಿಂಹಸ್ಥೇ ಶುಕ್ರೇ ಚಂದ್ರೇಕ್ಷಿತಫಲಂ

ಶ್ಲೋಕ॥ ನೂನಂ ಜನಾನ್ಯಾಶ್ಚಭವೇತ್ಸಪತ್ನೀ ಪತ್ನೀ ವಿರೋಧೋ ವಿಭವೋ-ದ್ಭವಶ್ಚ ॥ ಯಸ್ಯಪ್ರಸೂತೌ ದನುಜೇಂದ್ರ ಮಂತ್ರೀ ಚಂದ್ರೇಕ್ಷಿತಃ ಸಿಂಹಗತೋ ಯದಿಸ್ಯಾತ್ ॥೨೬೯॥ತಾ॥ ಸಿಂಹರಾಶಿಯಲ್ಲಿ ಶುಕ್ರನು ಚಂದ್ರದೃಷ್ಟನಾದರೆ ಜಾತಕನು ತಾಯಿ, ಪತ್ನೀ ಇವರಲ್ಲಿ ವಿರೋಧ ಉಳ್ಳವನೂ, ಸಂಪತ್ತುಂಟಾದರೂ ಭಯವುಳ್ಳವನೂ ಆಗುವನು ॥೨೬೯॥

## ಸಿಂಹಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ನೃಪಪ್ರಿಯಂ ಧಾನ್ಯಧನೈರುಪೇತಂ ಕಂದರ್ಪಜಾದ ವ್ಯಸನಾಭಿ ಭೂತಂ । ಕರೋತಿ ಮರ್ತ್ಯಂ ಮೃಗರಾಜಸಂಸ್ಥೋ ಭೃಗೋಸ್ತನೂಜೋ ವನಿಜೇನ ದೃಷ್ಟಃ ॥೨೭೦॥ತಾ॥ ಸಿಂಹರಾಶಿಯಲ್ಲಿ ಶುಕ್ರನಿದ್ದು ಅಂಗಾರಕನಿಂದ ನೋಡಲ್ಪಟ್ಟರೆ, ಜಾತಕನು ರಾಜಪ್ರೀತಿಯುಳ್ಳವನು, ಧಾನ್ಯದಿಂದಲೂ ಧನದಿಂದಲೂ ಕೂಡಿದವನು, ಮನ್ಮಥ ವಿಕಾರದಿಂದ ವ್ಯಸನವುಳ್ಳವನೂ ಆಗುವನು ॥

## ಸಿಂಹಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ಧನಾನ್ವಿತಂ ಸಂಗ್ರಹಚಿತ್ತವೃತ್ತಿಂ ಲುಬ್ಧಂ ಸ್ಮರಾಧಿಕ್ಯ ವಿಕಾರನಿಂದ್ಯಂ।

ದೈತ್ಯೇಂದ್ರ ಮಂತ್ರೀ ಕುರುತೇ ಮನುಷ್ಯಂ ಸಿಂಹಸ್ಥಿತಃ ಸೋಮ ಸುತೇನ ದೃಷ್ಟಃ ॥೨೭೧॥ತಾ॥ ಸಿಂಹರಾಶಿಯಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು ಧನದಿಂದ ಕೂಡಿದವನು, ಧನ ಸಂಗ್ರಹಮಾಡಬೇಕೆಂಬುವ ಮನಸ್ಸಿನ ವೃತ್ತಿಯುಳ್ಳ ವನು, ಲುಬ್ಧನೂ, ಮನ್ಮಥವಿಕಾರ (ವಿರಹತಾಪದಿಂದ ಉಂಟಾದ) ಉಳ್ಳವನೂ, ಇದರಿಂದ ನಿಂದಿಸಲ್ಪಡುವವನೂ ಆಗುವನು ॥೨೭೧॥

## ಸಿಂಹಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ನರೇಂದ್ರಮಂತ್ರೀ ಧನವಾಹವಾಢ್ಯೋ ಬಹ್ವಂಗನಾ ನಂದನ ಭೃತ್ಯ ಸೌಖ್ಯಃ । ವಿಖ್ಯಾತ ಕರ್ಮಾಚ ಭೃಗೋಸ್ತನೂಜೇ ಜೀವೇಕ್ಷಿತೇ ಸಿಂಹಗತೇ ನರಸ್ಸ್ಯಾತ್ ॥೨೭೨॥ತಾ॥ ಸಿಂಹರಾಶಿಯಲ್ಲಿ ಶುಕ್ರನು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು ರಾಜನ ಮಂತ್ರಿಯೂ, ಧನ, ವಾಹನಗಳಿಂದಲೂ ಬಹು ಸ್ತ್ರೀಯರಿಂದಲೂ ಪುತ್ರರಿಂದಲೂ, ಭೃತ್ಯರಿಂದಲೂ ಸೌಖ್ಯಪಡುವನು, ಪ್ರಖ್ಯಾತವಾದ ಕಾರ್ಯಗಳನ್ನು ಮಾಡುವವನೂ ಆಗುವನು ॥೨೭೨॥

## ಸಿಂಹಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ನೃಪೋಪಮಂ ಸರ್ವಸಮೃದ್ಧಿಭಾಜಂ ದಂಡಾಧಿಕಾರೇ ಪೃಥದಾನಿ ಯುಕ್ತಂ । ಕರೋತಿಮರ್ತ್ಯಂ ಮೃಗರಾಜವರ್ತೀ ದೈತ್ಯಾರ್ಚಿತಃ ಸೂರ್ಯಸುತೇನ ದೃಷ್ಟಃ ॥೨೭೩॥ ಸಿಂಹರಾಶಿಯಲ್ಲಿ ಶುಕ್ರನು ಶನಿವೀಕ್ಷಿತನಾದರೆ ಜಾತಕನು ರಾಜಸಮಾನ ನಾಗಿಯೂ, ಸರ್ವ ಸಮೃದ್ಧಿಯುಳ್ಳವನಾಗಿಯೂ, ದಂಡಾಧಿಕಾರ ಉಳ್ಳವನಾಗಿಯೂ (ದಂಡಾಧಿಕಾರಿ-ಮ್ಯಾಜಿಸ್ಟ್ರೇಟ್, ಜಡ್ಜಿ ಅಥವಾ ನ್ಯಾಯಾಧಿಪತಿ) ಆಗುವನು ಅಥವಾ ಹಾಗೆ ಆಗದೆಯಿದ್ದರೆ, ಆ ಅಧಿಕಾರದಲ್ಲಿ ನಿಯುಕ್ತನಾಗಿರುವಿಕೆ ಮೊದಲಾದ ಕೆಲಸಗಳು ಉಂಟಾಗುತ್ತದೆಂದು ಹೇಳತಕ್ಕದ್ದು ॥೨೭೩॥

ಇತಿ ಸಿಂಹಸ್ಥೇ ಶುಕ್ರ ಗ್ರಹದೃಷ್ಟಿಫಲಂ

## ಅಥ ಗುರುಕ್ಷೇತ್ರಸ್ಥೇ ಶುಕ್ರೇ ಗ್ರಹದೃಷ್ಟಯಃ

## ಧನುರ್ಮೀನಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ರೌದ್ರಂ ಪ್ರಾಜ್ಞಂ ಭಾಗ್ಯಸೌಭಾಗ್ಯಯುಕ್ತಂ ಸತ್ಪೋಪೇತಂ ವಿತ್ತವಂತಂ ವಿಶೇಷಾತ್ । ನಾನಾದೇಶ ಪ್ರಾಪ್ತಯಾನಂ ಮನುಷ್ಯಂ ಕುರ್ಯಾಚ್ಛುಕ್ರೋ ಜೀವಭೇ ಭಾನುದೃಷ್ಟಃ ॥೨೭೪॥ತಾ॥ ಧನುರ್ಮೀನ ರಾಶಿಗಳಲ್ಲಿ ಶುಕ್ರನು ಬೃಹಸ್ಪತಿ ವೀಕ್ಷಿತನಾದರೆ ಜಾತಕನು ರೌದ್ರ ಸ್ವಭಾವ ಉಳ್ಳವನಾಗಿಯೂ, ವಿಶೇಷ ತಿಳುವಳಿಕೆಯುಳ್ಳವನಾಗಿಯೂ, ಧನವಂತನಾಗಿಯೂ, ಪತ್ನೀ ಪುತ್ರಾದಿ ಸೌಭಾಗ್ಯ

ಸಂಪತ್ತುಳ್ಳವನಾಗಿಯೂ, ಬಲವಂತನಾಗಿಯೂ, ವಿಶೇಷವಾದ ದ್ರವ್ಯವಂತನಾಗಿಯೂ, ನಾನಾದೇಶದಲ್ಲಿ ಪಡೆದ ವಾಹನ ಪ್ರಾಪ್ತಿಯುಳ್ಳವನಾಗಿಯೂ ಆಗುತ್ತಾನೆ ॥೨೭೪॥

## ಧನುರ್ಮೀನಸ್ಥೇ ಶುಕ್ರೇ ಚಂದ್ರದೃಷ್ಟಿಫಲಂ

ಶ್ಲೋಕ॥ ಸದ್ರಾಜ ಮಾನೇನ ವಿರಾಜಮಾನಂ ಖ್ಯಾತಂ ವಿನೀತಂ ಬಹು ಭೋಗಯುಕ್ತಂ । ಧೀರಂ ಸಸಾರಂಹಿ ನರಂಕರೋತಿ ಭೃಗುರ್ಗುರುಕ್ಷೇತ್ರಗತೋಬ್ಜ ದೃಷ್ಟಃ ॥೨೭೫॥ತಾ॥ ಧನುರ್ಮೀನ ರಾಶಿಗಳಲ್ಲಿ ಶುಕ್ರನಿದ್ದು ಚಂದ್ರದೃಷ್ಟಿಯುಕ್ತನಾದರೆ ಜಾತಕನು ಉತ್ತಮವಾದ ರಾಜಮರ್ಯಾದೆಗಳಿಂದ ವಿಶೇಷವಾಗಿ ಪ್ರಕಾಶವಂತ-ನಾಗಿಯೂ, ಕೀರ್ತಿವಂತನಾಗಿಯೂ, ಪ್ರಖ್ಯಾತ ಪುರುಷನಾಗಿಯೂ, ನಮ್ರತೆ-ಯುಳ್ಳವನಾಗಿಯೂ, ಅನೇಕ ವಿಧವಾದ ಭೋಗವುಳ್ಳವನಾಗಿಯೂ, ಧೀರನಾಗಿಯೂ ಶಕ್ತಿವಂತನಾಗಿಯೂ ಆಗುವನು ॥೨೭೫॥

## ಧನುರ್ಮೀನಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ದ್ವಿಷಾಮಸಹ್ಯಂ ಧನಿನಂ ಪ್ರಸನ್ನಂ ಕಾಂತಾಕೃತ ಪ್ರೇಮಭರಂ ಸುಪುಣ್ಯಂ । ಸದ್ವಾಹನಾಢ್ಯಂ ಕುರುತೇಮನುಷ್ಯಂ ಭೌಮೇಕ್ಷಿತೇಜ್ಯಾ ಲಯಗಾಮಿ ಶುಕ್ರಃ ॥೨೭೬॥ತಾ॥ ಧನುರ್ಮೀನರಾಶಿಗಳಲ್ಲಿ ಶುಕ್ರನು ಕುಜನಿಂದ ನೋಡಲ್ಪಟ್ಟರೆ ಜಾತಕನು ಶತ್ರುಗಳಿಗೆ ಸಹಿಸಲಶಕ್ಯನಾದವನು, ಧನವಂತನು, ಪ್ರಸನ್ನತೆಯುಳ್ಳವನು, ಸ್ತ್ರೀಯರಿಗೆ ಬಹು ಪ್ರೀತಿಯುಳ್ಳವನು, ಪುಣ್ಯ ಕರ್ಮಾಚರಣೆ ಮಾಡುವವನು, ಉತ್ತಮವಾದ ವಾಹನಯುಕ್ತನೂ ಆಗುವನು ॥೨೭೬॥

## ಧನುರ್ಮೀನಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ಸದ್ವಾಹನಾರ್ಥಾಂಬರ ಭೂಷಣಾನಾಂ ಲಾಭಂ ಸದನ್ನಾನಿ ಸುಖಾನಿ ನೂನಂ । ಕುರ್ಯಾನ್ನರಾಣಾಂ ಗುರುಮಂದಿರಸ್ಥೋ ದೈತ್ಯಾರ್ಚಿತಃ ಸೋಮಸುತೇನ ದೃಷ್ಟಃ ॥೨೭೭॥ತಾ॥ ಧನುರ್ಮೀನರಾಶಿಗಳಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು ಒಳ್ಳೇ ವಾಹನೋಪಕರಣದಿಂದಲೂ, ದ್ರವ್ಯದಿಂದಲೂ, ಪಟ್ಟವಸ್ತ್ರ ಭೂಷಣಾದಿಗಳಿಂದಲೂ ಶೋಭಿಸುವನು, ಮೃಷ್ಟಾನ್ನ, ಭೋಜನ, ಸೌಖ್ಯವನ್ನೂ ಸಹ ಹೊಂದುವನು ॥೨೭೭॥

## ಧನುರ್ಮೀನಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ತುರಂಗ ಹೇಮಾಂಬರ ಭೂಷಣಾನಾಂ ಮಹಾಗಜಾನಾಂವನಿತಾ ಸುಖಾನಾಂ । ಕರೋತ್ಯವ್ಯಾಪ್ತಿಂ ಭೃಗುಜಃಪ್ರಸೂತೌ ಜೀವೇಕ್ಷಿತೋ ಜೀವಗೃಹಾ ಶ್ರಿತಶ್ಚ ॥೨೭೮॥ತಾ॥ ಧನುರ್ಮೀನ ರಾಶಿಗಳಲ್ಲಿ ಶುಕ್ರನು ಬೃಹಸ್ಪತಿ ದೃಷ್ಟಿಯುಳ್ಳವ-

ನಾದರೆ ಜಾತಕನು ಅಶ್ವ ಹೇಮಾಂಬರ, ಸುವರ್ಣ ವಸ್ತ್ರಗಳು ಮೊದಲಾದ ಭೂಷಣ ಸಾಮಗ್ರಿಗಳೂ, (ಮಹಾಗಜ) ದೊಡ್ಡ ಆನೆಗಳು, ಸ್ತ್ರೀಯರ ಸೌಖ್ಯವೂ ಇವುಗಳನ್ನು ಹೊಂದುತ್ತಾನೆ ॥೨೭೮॥

## ಧನುರ್ಮೀನಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ಸದ್ಭೋಗ ಸೌಖ್ಯೋತ್ತಮಕರ್ಮಭಾಜಂ ನಿತ್ಯೋತ್ಸವೋತ್ಕರ್ಷಯುತಂ ಸುವಿತ್ತಂ । ಕರೋತಿ ಮರ್ತ್ಯಂ ಗುರುಗೇಹಯಾತೋ ದೈತ್ಯಾರ್ಚಿತೋ ಭಾನು ಸುತೇಕ್ಷಿತಶ್ಚ ॥೨೭೯॥ತಾ॥ ಧನುರ್ಮೀನರಾಶಿಗಳಲ್ಲಿ ಶುಕ್ರನು ಶನಿದೃಷ್ಟಿಯುಳ್ಳವನಾದರೆ ಜಾತಕನು ಉತ್ತಮವಾದ ಸುಖವನ್ನನುಭವಿಸುವವನು, ನಿರಂತರ ಉತ್ಸವದಿಂದ ಉತ್ಕರ್ಷವುಳ್ಳವನಾಗಿರುವನು. ಧನವನ್ನು ಸನ್ಮಾರ್ಗದಿಂದ ಸಂಪಾದಿಸುವವನೂ ಆಗುವನು ॥೨೭೯॥

ಇತಿ ಗುರುಕ್ಷೇತ್ರಸ್ಥೇ ಶುಕ್ರೇ ಗ್ರಹದೃಷ್ಟಯಃ

ಅಥ ಶನಿಕ್ಷೇತ್ರಸ್ಥಿತೇ ಶುಕ್ರೇ ಗೃಹದೃಷ್ಟಯಃ

## ಮಕರ ಕುಂಭಸ್ಥೇ ಶುಕ್ರೇ ರವಿದೃಷ್ಟಿಫಲಂ

ಶ್ಲೋಕ॥ ಸ್ಥಿರಸ್ವಭಾವಂ ವಿಭವೋಪಪನ್ನಂ ಮಹಾಧನಂ ಸಾರವಿರಾಜಮಾನಂ। ಕಾಂತಾವಿಲಾಸೈಃ ಸಹಿತಂ ಪ್ರಕುರ್ಯಾದ್ಭೃಗು ಶ್ಶನಿಕ್ಷೇತ್ರಗತೋರ್ಕದೃಷ್ಟಃ ॥೨೮೦॥ತಾ॥ ಶನಿಕ್ಷೇತ್ರಗಳಾದ ಮಕರ ಕುಂಭ ರಾಶಿಗಳಲ್ಲಿ ಶುಕ್ರನಿದ್ದು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ಸ್ಥಿರವಾದ ಸ್ವಭಾವದಿಂದಲೂ, ಸ್ವಾರ್ಜಿತವಾದ ಧನಕನಕಾದಿ ವೈಭವ ಗಳಿಂದ ಮಹಾ ಧನವಂತನಾಗಿ ಕಾಂತಾ ವಿಲಾಸಗಳಿಂದ ಸೌಖ್ಯಪಡುವವನು ಆಗುವನು ॥೨೮೦॥

## ಮಕರ ಕುಂಭಸ್ಥೇ ಶುಕ್ರೇ ಚಂದ್ರದೃಷ್ಟಿಫಲಂ

ಶ್ಲೋಕ॥ ಓಜಸ್ವಿನಂ ಚಾರು ಶರೀರ ಯುಷ್ಟಿಂ ಪ್ರಕೃಷ್ಟಸತ್ವಂ ಧನವಾಹ ನಾಢ್ಯಂ । ಕರೋತಿಮರ್ತ್ಯಂ ಶನಿಗೇಹಯಾತೋ ಭೃಗೋಸ್ಸುತಃ ಶೀತಕರೇಣದೃಷ್ಟಃ ॥೨೮೧॥ತಾ॥ ಮಕರ ಕುಂಭರಾಶಿಗಳಲ್ಲಿ ಶುಕ್ರನು ಚಂದ್ರದೃಷ್ಟಿಯುಕ್ತನಾದರೆ ಜಾತಕನು ತೇಜಸ್ವಿಯಾಗಿಯೂ, ಸುಂದರವಾದ ಶರೀರವುಳ್ಳವನಾಗಿಯೂ, ಶಕ್ತಿವಂತ ನಾಗಿಯೂ, ಧನ, ವಾಹನ ಇವುಗಳಿಂದ ಯುಕ್ತನಾದವನಾಗಿಯೂ ಆಗುವನು ॥೨೮೧॥

## ಮಕರ ಕುಂಭಸ್ಥೇ ಶುಕ್ರೇ ಕುಜದೃಷ್ಟಿಫಲಂ

ಶ್ಲೋಕ॥ ಶ್ರಮಾಮಯಾಭ್ಯಾ ಮತಿತಪ್ತಮೂರ್ತಿನ್ ಮನರ್ಥತೋರ್ಥ ಕ್ಷತಿ ಸಂಯುತಂಚ । ಕರ್ಯಾನ್ನರಂ ದಾನವರಾಜಪೂಜ್ಯಃ ಕುಜೇಕ್ಷಿತಃ ಸೂರ್ಯಸುತಾಲಯಸ್ಥೇ

॥೨೮೨॥ತಾ॥ ಮಕರ ಕುಂಭರಾಶಿಗಳಲ್ಲಿ ಶುಕ್ರನು ಕುಜನಿಂದ ನೋಡಲ್ಪಟ್ಟರೆ ಜಾತಕನು ಶ್ರಮದಿಂದಲೂ, ರೋಗದಿಂದಲೂ, ಅತಿಯಾಗಿ ತಪ್ತವಾದ ಶರೀರವುಳ್ಳವನು ಅಂದರೆ ಕಷ್ಟಜೀವಿ, ರೋಗಗ್ರಸ್ತನು, ಅನ್ಯಾಯವಾಗಿ ದ್ರವ್ಯವನ್ನು ವ್ಯಯಮಾಡಿಕೊಳ್ಳುವನು ಆಗುವನು ॥೨೮೨॥

## ಮಕರ ಕುಂಭಸ್ಥೇ ಶುಕ್ರೇ ಬುಧದೃಷ್ಟಿಫಲಂ

ಶ್ಲೋಕ॥ ವಿದ್ವದ್ವಿಧಿಜ್ಞಂ ಧನಿನಂ ಸುತುಷ್ಟಂ ಪ್ರಾಜ್ಞಂ ಸುಸತ್ವಂ ಬಹುಳ ಪ್ರಪಂಚಂ । ಸದ್ವಾಗ್ವಿಲಾಸಂ ಮನುಜಂ ಪ್ರಕುರ್ಯಾದ್ಭೃಗುಃ ಶನಿಕ್ಷೇತ್ರಗತೋಜ್ಞದೃಷ್ಟಃ ॥೨೮೩॥ತಾ॥ ಮಕರ ಕುಂಭರಾಶಿಗಳಲ್ಲಿ ಶುಕ್ರನು ಬುಧನಿಂದ ನೋಡಲ್ಪಟ್ಟರೆ ಜಾತಕನು ವಿದ್ವಾಂಸನು, ಜ್ಯೋತಿಷ ತಿಳಿದವನು, ಧನವಂತನು, ತೃಪ್ತಿಹೊಂದಿದ ಚಿತ್ತವುಳ್ಳವನು, ತಿಳುವಳಿಕೆಯುಳ್ಳವನು, ಪ್ರಪಂಚಧರ್ಮವನ್ನು ಚೆನ್ನಾಗಿ ತಿಳಿದವನು, ಸದ್ವಾಗ್ವಿಲಾಸವುಳ್ಳವನೂ ಆಗುವನು ॥೨೮೩॥

## ಮಕರ ಕುಂಭಸ್ಥೇ ಶುಕ್ರೇ ಗುರುದೃಷ್ಟಿಫಲಂ

ಶ್ಲೋಕ॥ ಸದ್ಗಂಧಮಾಲ್ಯಾಂಬರ ಚಾಮರವಾದ್ಯ ಸಂಜಾತ ಸಂಗೀತರುಚಿಃ ಶುಚಿತ್ವ । ಸ್ಯಾನ್ಮಾನವೋ ದಾನವರಾಜ ಪೂಜ್ಯೇ ಸುರೇಜ್ಯ ದೃಷ್ಟೇ ಶನಿಮಂದಿರಸ್ಥೇ ॥೨೮೪॥ ಮಕರ ಕುಂಭರಾಶಿಗಳಲ್ಲಿ ಶುಕ್ರನು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು ಉತ್ತಮವಾದ ಸುಗಂಧ ಪುಷ್ಪಮಾಲಿಕಾದಿಗಳು, ಸುಂದರವಾದ ವಸ್ತ್ರ ಭೂಷಣಾದಿಗಳು, ಉತ್ತಮವಾದ ವಾದ್ಯಗಳಿಂದ ಹುಟ್ಟಿದ ಸಂಗೀತ ಇವುಗಳಲ್ಲಿ ಅಭಿರುಚಿಯುಳ್ಳವನು ಮತ್ತು ಪರದಾರ, ಪರಧನ ಮೊದಲಾದವುಗಳ ಸಂಪರ್ಕವಿಲ್ಲದೆ ಶುಚಿಯಾದವನೂ ಆಗುವನು ॥೨೮೪॥

## ಮಕರ ಕುಂಭಸ್ಥೇ ಶುಕ್ರೇ ಶನಿದೃಷ್ಟಿಫಲಂ

ಶ್ಲೋಕ॥ ಪ್ರಸನ್ನಗಾತ್ರಂಚ ವಿಜಿತ್ರಲಾಭಂ ಧನಾಂಗನಾ ವಾಹನಸೂನು ಸೌಖ್ಯಂ । ಕುರ್ಯಾನ್ನರಂ ದಾನವ ವೃಂದದೇವೇ ಮಂದೇಕ್ಷಿತೋ ಮಂದಗೃಹಾಧಿ ಸಂಸ್ಥಃ ॥೨೮೫॥ ಮಕರ ಕುಂಭರಾಶಿಗಳಲ್ಲಿ ಶುಕ್ರನು ಶನಿಯಿಂದ ನೋಡಲ್ಪಟ್ಟರೆ ಜಾತಕನು ಪ್ರಸನ್ನಗಾತ್ರನೂ, ಅನೇಕ ಪ್ರಕಾರವಾದ ಲಾಭಯುಕ್ತನು, ಧನ, ಸ್ತ್ರೀ, ವಾಹನ, ಪುತ್ರ, ಇವರುಗಳ ಸೌಖ್ಯಯುಕ್ತನೂ ಆಗುವನು ॥೨೮೫॥

ಇತಿ ಶನಿಕ್ಷೇತ್ರಸ್ಥೇ ಗ್ರಹದೃಷ್ಟಿಫಲಂ

## ಭೌಮಾಲಯಸ್ಥೇ ಶನೌ ರವಿದೃಷ್ಟಿಫಲಂ

ಶ್ಲೋಕ॥ ಲುಲಾಯ ಗೋಜಾವಿ ಸಮೃದ್ಧಿಭಾಜಂ ಕೃಷಿಕ್ರಿಯಾಯಾಂ ನಿರತಂ

ಸದೈವ। ಸತ್ಕರ್ಮ್ಸಕ್ತಂ ಜನಯೇನ್ಮನುಷ್ಯಂ ಭೌಮಾಲಯಸ್ಥಃ ಶನಿರರ್ಕ-ದೃಷ್ಟಃ ॥೨೮೬॥ತಾ॥ ಕುಜಕ್ಷೇತ್ರಗಳಾದ ಮೇಷ, ವೃಶ್ಚಿಕಗಳಲ್ಲಿ ಶನಿಯಿದ್ದು ರವಿ ನೋಡಿದ್ದರೆ ಜಾತಕನಿಗೆ ಎಮ್ಮೆ ಹಸು, ಕುರಿ, ಮೇಕೆ ಮೊದಲಾದ ಚತುಷ್ಪದ ಸಮೃದ್ಧಿಯಾಗುತ್ತದೆ ಮತ್ತು ಆ ಮನುಷ್ಯನು ಭೂ ವ್ಯವಸಾಯದಲ್ಲಿ ನಿರಂತರದಲ್ಲೂ ತತ್ಪರನು, ಸತ್ಕರ್ಮವನ್ನು ಆಚರಿಸತಕ್ಕವನೂ ಆಗುವನು ॥೨೮೬॥

## ಮೇಷ ವೃಶ್ಚಿಕಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ನೀಚಾನುಯಾತಂ ಚಪಲಂ ಕುಶೀಲಂ ಖಲಂ ಸುಖಾರ್ಥೈಃ ಪರಿವರ್ಜಿತಂಚ। ಕುರ್ಯಾದವಶ್ಯಂ ರವಿಜೋಮನುಷ್ಯಂ ಶಶೀಕ್ಷಿತೋ ಭೂಸುತವೇಶ್ಮ ಸಂಸ್ಥಃ ೨೮೭॥ತಾ॥ ಮೇಷ ವೃಶ್ಚಿಕರಾಶಿಗಳಲ್ಲಿ ಶನಿಗೆ ಚಂದ್ರನ ದೃಷ್ಟಿಯುಂಟಾದರೆ ಜಾತಕನು ತುಚ್ಛ ಮನುಷ್ಯರ ಸಂಗಡ ಮಿತ್ರತ್ವವುಳ್ಳವನು, ಚಪಲ ಬುದ್ಧಿಯುಳ್ಳವನು, ದುಷ್ಟಸ್ವಭಾವದವನು, ದರಿದ್ರನು, ಸುಖರಹಿತನೂ ಆಗುವನು ॥೨೮೭॥

## ಮೇಷ ವೃಶ್ಚಿಕಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ॥ ಅನಲ್ಪಜಲ್ಪಂ ಗತಸತ್ವರಾರ್ಥಂ ಕಾರ್ಯಕ್ಷತಿಂ ಜಾತವಿಶೇಷವಿತ್ತಂ । ಕರೋತಿಜಾತಂ ನನುಭಾನುಸೂನುಃ ಕುಜೇನದೃಷ್ಟಃ ಕುಜವೇಶ್ಮಸಂಸ್ಥ ॥೨೮೮॥ ಮೇಷ ವೃಶ್ಚಿಕ ರಾಶಿಗಳಲ್ಲಿ ಶನಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಅತಿಶಯ ವಾಚಾಲಕನು, ಪರೋಪಕಾರ ಮಾಡುವ ವಿಷಯದಲ್ಲಿ ಸುಳ್ಳು ಹೇಳುವವನು, ಕಾರ್ಯನಾಶ ಮಾಡುವವನು ಮತ್ತು ಬಹು ಧನವಂತನೂ ಆಗುವನು ॥೨೮೮॥

## ಮೇಷ ವೃಶ್ಚಿಕಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ಚೌರ್ಯಕರ್ಮಕಲಹಾದಿ ತತ್ಪರಂ ಕಾಮಿನೀ ಜನಗತೋತ್ಸವಂನರಂ। ಜ್ಞೇಕ್ಷಿತೋಹಿ ಕುರುತೇರ್ಕ ನಂದನೋ ಭೂಮಿಸೂನು ಭವನಾದಿಸಂಸ್ಥಿತಃ ॥೨೮೯॥ ತಾ॥ ಮೇಷ ವೃಶ್ಚಿಕ ರಾಶಿಗಳಲ್ಲಿ ಶನಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಕಳ್ಳತನ ಮಾಡುವನು, ಜಗಳಗಂಟನು, ಸ್ತ್ರೀಯರಿಂದ ಉದಾಸೀನ ಮಾಡಲ್ಪಟ್ಟವನು. (ಕಾಮವುಳ್ಳ ಸ್ತ್ರೀಯರಿಗೆ ಆನಂದದಾಯಕನಾಗದೆ ಅವರ ಉತ್ಸಾಹ ಭಂಗ ಮಾಡುವಂಥ ಸ್ವಭಾವ ಉಳ್ಳವನೆಂದು) ಈ ಪ್ರಕಾರವಾದ ಗುಣಗಳುಳ್ಳವನಾಗುವನು ॥೨೮೯॥

## ಮೇಷ ವೃಶ್ಚಿಕರಾಶಿಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ॥ ಸುಖಧನ್ಯಸ್ಸಹಿತಂ ನೃಪಮಂತ್ರಿಣಂ ನೃಪಮಾಶ್ರಿತ ಮುಖ್ಯ ಕಥಾನ್ವಿತಂ। ಸುರಪುರೋಹಿತ ವೀಕ್ಷಿತಭಾನುಜೋ ವನಿಜವೇಶ್ಮಗತಃ ಕುರುತೇ ನರಂ ॥೨೯೦॥

ಮೇಷ ವೃಶ್ಚಿಕಗಳಲ್ಲಿ ಶನಿಯು ಬೃಹಸ್ಪತಿ ವೀಕ್ಷಿತನಾದರೆ ಜಾತಕನು ಸೌಖ್ಯದಿಂದಲೂ, ಧನದಿಂದಲೂ ಕೂಡಿದವನು. ರಾಜನ ಮಂತ್ರಿಯಾಗುವನು. ರಾಜಾಶ್ರಯದಿಂದ ಗೌರವ ಹೊಂದತಕ್ಕವನು ಈ ಪ್ರಕಾರ ಫಲ ಹೊಂದತಕ್ಕವನು ॥೨೯೦॥

## ಮೇಷ ವೃಶ್ಚಿಕಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ॥ ಬಹು ಪ್ರಯಾಣಾಭಿರತಂ ವಿಕಾಂತಿ ಪಾಪಾಂಗನಾಸಕ್ತಮತಿಂ ವಿಚಿತ್ತಂ । ಕರೋತಿಮರ್ತ್ಯಂ ಕ್ಷಿತಿಜಾಲಯಸ್ಥೋ ಭಾನೋಸ್ತನೂಜೋ ಭೃಗುಜೇನ ದೃಷ್ಟಃ ॥೨೯೧॥ತಾ॥ ಮೇಷ ವೃಶ್ಚಿಕರಾಶಿಗಳಲ್ಲಿ ಶನಿಯು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ನಿರಂತರ ಯಾತ್ರೆ ಮಾಡುವವನು (ಪ್ರತಿ ದಿನವೂ ಸಂಚಾರ ಮಾಡುವುದರಲ್ಲಿ ನಿರತನು) ಕಾಂತಿರಹಿತನು, ಪಾಪಿಷ್ಠರಾದ ಸ್ತ್ರೀಯರಲ್ಲಿ ಕ್ರೀಡಾವಿಲಾಸವುಳ್ಳವನು, ಜ್ಞಾನಶೂನ್ಯನೂ ಸಹ ಆಗುವನು ॥೨೯೧॥

ಅಥ ಶುಕ್ರಕ್ಷೇತ್ರಸ್ಥೇ ಶನೌ ಗ್ರಹದೃಷ್ಟಯಃ

## ವೃಷಭ ತುಲಾಸ್ಥೇ ಶನೌ ಸೂರ್ಯದೃಷ್ಟಿಫಲಂ

ಶ್ಲೋಕ॥ ವಿದ್ಯಾವಿಚಾರೇ ಪ್ರಚುರೋತಿವಕ್ತಾ ಪರಾನ್ನಭೋಕ್ತಾ ವಿಧನಶ್ಚ ಶಾಂತಃ। ಭವೇನ್ನರಸ್ತಿಗ್ಮಕರೇಣ ದೃಷ್ಟೇ ಸೂರ್ಯಾತ್ಮಜೇ ಭಾರ್ಗವವೇಶ್ಮ ಸಂಸ್ಥೇ ॥೨೯೨॥ತಾ॥ ವೃಷಭ ತುಲಾರಾಶಿಗಳಲ್ಲಿ ಶನಿಯು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನು ವಿದ್ಯಾವಿಚಾರದಲ್ಲಿ ಅತಿ ಪ್ರಚುರವಾದ ಜ್ಞಾನವುಳ್ಳವನು, ಅತಿ ಭಾಷಿಯೂ, ಪರಾನ್ನವನ್ನು ಭುಜಿಸುವವನು, ದರಿದ್ರನು, ಶಾಂತಚಿತ್ತನೂ ಆಗುವನು ॥೨೯೨॥

## ವೃಷಭ ತುಲಾಸ್ಥೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ॥ ನೃಪಪ್ರಸಾದಾಪ್ತ ಮಹಾಧಿಕಾರಂ ಯೋಷಾ ವಿಭೂಷಾಂಬರ ಜಾತ ಸೌಖ್ಯಂ । ಬಲಾನ್ವಿತಂ ಸಂಜನಯೇನ್ಮನುಷ್ಯಂ ಮಂದಸ್ಸಿತರ್ಕ್ಷೇ ಹರಿಣಾಂಕದೃಷ್ಟಃ ॥೨೯೩॥ ವೃಷಭ ತುಲಾರಾಶಿಗಳಲ್ಲಿ ಶನಿಯು ಚಂದ್ರದೃಷ್ಟನಾದರೆ ಜಾತಕನು ಮಹಾ ರಾಜನಿಂದ ಆದರ ಪುರಸ್ಸರವಾಗಿ ಕೊಟ್ಟಂಥ ಮಹಾಧಿಕಾರ ಉಳ್ಳವನು, ಸ್ತ್ರೀ, ಆಭರಣ, ಪಟ್ಟವಸ್ತ್ರಾದಿಗಳಿಂದುಂಟಾದ ಸೌಖ್ಯವಂತನೂ, ಬಲಾನ್ವಿತನೂ ಆಗುವನು ॥೨೯೩॥

## ವೃಷಭ ತುಲಾಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ॥ ಸಂಗ್ರಾಮ ಕಾರ್ಯಾಭಿರತಂ ನಿತಾಂತ ಮನಲ್ಪಜಲ್ಪಂಚ ಮಹತ್ಪ್ರಸಾದಂ । ಕುರ್ಯಾನ್ನರಂ ತಿಗ್ಮಕರಸ್ಯಸೂನು ರ್ಭೂಸೂನುದೃಷ್ಟೋ ಭೃಗುಜಾಲಯಸ್ಥಃ

॥೨೩೪॥ತಾ॥ ವೃಷಭ ತುಲಾರಾಶಿಗಳಲ್ಲಿ ಶನಿಯು ಅಂಗಾರಕನಿಂದ ನೋಡಲ್ಪಟ್ಟರೆ, ಜಾತಕನು ಯುದ್ಧಮಾಡುವ ಕಾರ್ಯದಲ್ಲಿ ನಿರತನು, ಯಾವಾಗಲೂ ಬಹು ಹರಟುವವನು (ವಾಜಾಳಿ) ಯಾವಾಗಲೂ ಪ್ರಸನ್ನಚಿತ್ತವುಳ್ಳವನೂ ಆಗುವನು ॥೨೯೪॥

## ವೃಷಭ ತುಲಾಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ಕಾಂತಾರತೋ ನೀಚಜನಾನುಯಾತೋ ವಿನೋದಹಾಸ್ಯಾಭಿರತೋ ಗತಾರ್ಥಃ । ಕ್ಲೀಬಾದಿ ಸಖ್ಯಶ್ಚ ಭವೇನ್ಮನುಷ್ಯಃ ಶನೌಸಿತರ್ಕ್ಷೇ ಶನಿಸೂನುದೃಷ್ಟೇ ॥೨೯೫॥ತಾ॥ ವೃಷಭ ತುಲಾರಾಶಿಗಳಲ್ಲಿ ಶನಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಸ್ತ್ರೀರತನೂ (ಯಾವಾಗಲೂ ಸ್ತ್ರೀ ಲಂಪಟನು), ನೀಚ ಜನರ ಸಂಗಡ ಸೇರಿ ಕೊಂಡಿರುವನು, ವಿನೋದ ಹಾಸ್ಯಾದಿಗಳಲ್ಲಿ ಅತಿ ಪ್ರೀತಿಯುಳ್ಳವನು, ದ್ರವ್ಯವನ್ನು ಕಳೆದುಕೊಂಡವನೂ ಮತ್ತು ನಪುಂಸಕರ ಸ್ನೇಹವುಳ್ಳವನು ಆಗುವನು ॥೨೯೫॥

## ವೃಷಭ ತುಲಾಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ॥ ಪರೋಪಕಾರೇ ಕೃತಚಿತ್ತವೃತ್ತಿಃ ಪರಸ್ಯದುಃಖೇನ ಸುದೃಖಿತಶ್ಚ । ದಾತೋದ್ಯಮೀ ಸರ್ವಜನ ಪ್ರಿಯಶ್ಚಮಂದೇ ಸಿತರ್ಕ್ಷೇ ಗುರುಣಾಪ್ರದೃಷ್ಟೇ ॥೨೯೬॥ ತಾ॥ ವೃಷಭ ತುಲಾರಾಶಿಗಳಲ್ಲಿ ಶನಿಯು ಗುರುವೀಕ್ಷಿತನಾದರೆ ಜಾತಕನು ಯಾವಾಗಲೂ ಪರೋಪಕಾರದಲ್ಲಿ ಚಿತ್ತವೃತ್ತಿಯುಳ್ಳವನು, ಪರರ ದುಃಖವನ್ನು ತನ್ನ ದುಃಖವನ್ನಾಗಿ ತಿಳಿದುಕೊಂಡು ತಾನು ಪಶ್ಚಾತ್ತಾಪದಿಂದ ದುಃಖಪಡುವವನು, ದಾನಶೀಲನೂ, ಸರ್ವಕಾರ್ಯೋದ್ಯಮಿಯೂ, ಸರ್ವಜನಪ್ರಿಯನೂ ಆಗುವನು ॥೨೯೬॥

## ವೃಷಭ ತುಲಾರಾಶಿಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ॥ ರತ್ನಾತಿಲಾಭಂ ವನಿತಾವಿಲಾಸಂ ಬಲಾಧಿಕತ್ವಂ ನೃಪಗೌರವಾಪ್ತಿಂ । ಕುರ್ಯಾನ್ನರಾಣಾಂ ತರಣೇ ಸ್ತನೂಜಃ ಶುಕ್ರೇಕ್ಷಿತ ಶುಕ್ರಗ್ರಹಂ ಪ್ರಯಾತಃ ॥೨೯೭॥ ತಾ॥ ವೃಷಭ ತುಲಾರಾಶಿಗಳಲ್ಲಿ ಶನಿಯು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ರತ್ನಾದಿ ಲಾಭವನ್ನು, ವನಿತಾ ವಿಲಾಸವನ್ನು, ಬಲಾಧಿಕ್ಯವನ್ನು, ರಾಜನಿಂದುಂಟಾದ ಗೌರವವನ್ನು ಹೊಂದುತ್ತಾನೆ ॥೨೯೭॥

### ಅಥ ಬುಧರ್ಕ್ಷೇ ಶನೌ ಗ್ರಹದೃಷ್ಟಯಃ

## ಮಿಥುನ ಕನ್ಯಾಸ್ಥೇ ಶನೌ ರವಿದೃಷ್ಟಿಫಲಂ

ಶ್ಲೋಕ॥ ಸುಖೋಜ್ಝಿತಂ ನೀಚರತಂ ಸಂಕೋಪಮ ಧಾರ್ಮಿಕಂ ದ್ರೋಹಕರಂ

ಸುಧೀರಂ। ಕುರ್ಯಾನ್ನರಂತಿಗ್ಮ ಕರಸ್ಯ ಸೂನುರ್ಭೂನು ಪ್ರದೃಷ್ಟೋ ಬುಧ ಮಂದಿರಸ್ಥಃ ॥೨೯೮॥ ಬುಧ ಕ್ಷೇತ್ರಗಳಾದ ಮಿಥುನ ಕನ್ಯಾರಾಶಿಗಳಲ್ಲಿ ಶನಿಯು ಸೂರ್ಯನಿಂದ ನೋಡಲ್ಪಟ್ಟರೆ ಹುಟ್ಟಿದ ಮನುಷ್ಯನನ್ನು ಸುಖದಿಂದ ಬಿಡಲ್ಪಟ್ಟರೆವನನ್ನಾಗಿಯೂ, ನೀಚ ಜನರ ಹತ್ತಿರ ಸಹವಾಸವುಳ್ಳವನನ್ನಾಗಿಯೂ, ಕೋಪಿಷ್ಠನನ್ನಾಗಿಯೂ, ಅಧರ್ಮವಂತನನ್ನಾಗಿಯೂ, ಪರರಿಗೆ ದ್ರೋಹ ಮಾಡುವವನನ್ನಾಗಿಯೂ, ಧೀರನನ್ನಾಗಿಯೂ ಮಾಡುತ್ತಾನೆ ॥೨೯೮॥

## ಮಿಥುನ ಕನ್ಯಾಸ್ಥೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ॥ ಪ್ರಸನ್ನಮೂರ್ತಿರ್ನೃಪತಿ ಪ್ರಸಾದ ಪ್ರಾಪ್ತಾಧಿಕಾರೋನ್ನತಿ ಕಾರ್ಯ ವೃತ್ತಿಃ । ಕಾಂತಾಧಿಕಾರೋ ಯದಿವನರಃಸ್ಯಾನ್ಮಂದೇಜ್ಞಭಸ್ಥೇ ಮೃತರಶ್ಮಿ ದೃಷ್ಟೇ ॥೨೯೯॥ ಮಿಥುನ ಕನ್ಯಾರಾಶಿಗಳಲ್ಲಿ ಶನಿಯು ಚಂದ್ರವೀಕ್ಷಿತನಾದರೆ ಜಾತಕನನ್ನು ಪ್ರಸನ್ನವಾದ ಶರೀರವುಳ್ಳವನನ್ನಾಗಿಯೂ, ರಾಜ ಪ್ರಸಾದದಿಂದ ಪ್ರಾಪ್ತವಾದ ಉನ್ನತವಾದ ಅಧಿಕಾರವುಳ್ಳವನನ್ನಾಗಿಯೂ, ದೊಡ್ಡ ದೊಡ್ಡ ಕಾರ್ಯ ಮಾಡುವುದರಲ್ಲಿ ನಿಪುಣನನ್ನಾಗಿಯೂ, ಸ್ತ್ರೀಯರ ಮೇಲೆ ಅಧಿಕಾರವುಳ್ಳವನನ್ನಾಗಿಯೂ ಮಾಡುವನು ॥೨೯೯॥

## ಮಿಥುನ ಕನ್ಯಾಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ॥ ಪ್ರಕೃಷ್ಟಬುದ್ಧಿಂ ಸುತರಾಂ ವಿಧಿಜ್ಞಂ ಖ್ಯಾತಂ ಗಭೀರಂಚ ನರಂ ಕರೋತಿ । ಸೋಮಾತ್ಮಜ ಕ್ಷೇತ್ರಗತೋರ್ಕ ಸೂನು ರ್ಭೂಸೂನು ದೃಷ್ಟಃ ಪರಿಸೂತಿಕಾಲೇ ॥೩೦೦॥ತಾ॥ ಮಿಥುನ ಕನ್ಯಾರಾಶಿಗಳಲ್ಲಿರುವ ಶನಿಯು ಅಂಗಾರಕ ಗ್ರಹವೀಕ್ಷಿತನಾದರೆ ಜಾತಕನು ಗಂಭೀರವಾದ ದೊಡ್ಡ ಬುದ್ಧಿಯುಳ್ಳವನು, ಜ್ಯೋತಿ-ಶ್ಶಾಸ್ತ್ರ ಪಂಡಿತನು, ಪ್ರಖ್ಯಾತನೂ, ಗಾಂಭೀರ್ಯವಂತನೂ ಆಗುವನು ॥೩೦೦॥

## ಮಿಥುನ ಕನ್ಯಾಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ಧನಾನ್ವಿತಂ ಚಾರುಮತಿಂ ವಿನೀತಂ ಗೀತಪ್ರಿಯಂ ಸಂಗರಕರ್ಮ ದಕ್ಷಂ । ಶಿಲ್ಪೇಷ್ವಭಿಜ್ಞಂ ಮನುಜಂಪ್ರಕುರ್ಯಾತ್ಸೌಮ್ಯೇಕ್ಷಿತಃ ಸೌಮ್ಯಗೃಹಸ್ಥ ಮಂದಃ ॥೩೦೧॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶನಿಯು ಬುಧದೃಷ್ಟನಾದರೆ ಜಾತಕನನ್ನು ಧನಾನ್ವಿತನನ್ನಾಗಿಯೂ, ಉತ್ತಮವಾದ ಬುದ್ಧಿಯುಳ್ಳವನ್ನಾಗಿಯೂ, ನಮ್ರತ್ವಾದಿ ಸುಗುಣವುಳ್ಳವನನ್ನಾಗಿಯೂ, ಸಂಗೀತದಲ್ಲಿ ಪ್ರೀತಿಯುಳ್ಳವನನ್ನಾಗಿಯೂ, ಯುದ್ಧಕಾರ್ಯದಲ್ಲಿ ಅತಿ ಪ್ರೌಢಿಮೆಯುಳ್ಳವನನ್ನಾಗಿಯೂ, ಶಿಲ್ಪ ಶಾಸ್ತ್ರ ತಿಳಿದವನನ್ನಾಗಿಯೂ ಮಾಡುತ್ತಾನೆ ॥೩೦೧॥

## ಮಿಥುನ ಕನ್ಯಾರಾಶಿಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ॥ ರಾಜಾಶ್ರಿತಶ್ಚಾರುಗುಣೈ ಸ್ಸಮೇತಃ ಪ್ರಿಯಃ ಸತಾಗುಪ್ತಧನೋ ಮನಸ್ವೀ । ಭವೇನ್ನರೋ ಮಂದಚರೋ ಯದಿಸ್ಯಾತ್‌ಜ್ಞ ರಾಶಿಸಂಸ್ಥಃ ಸುರಪೂಜ್ಯ ದೃಷ್ಟಃ ॥೩೦೨॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶನಿಯು ಗುರುವೀಕ್ಷಿತನಾದರೆ ಜಾತಕನನ್ನು ರಾಜಾಶ್ರಯವುಳ್ಳವನನ್ನಾಗಿಯೂ, ಉತ್ತಮವಾದ ಗುಣಗಳಿಂದ ಕೂಡಿದವನನ್ನಾಗಿಯೂ, ಸತ್ಪುರುಷರಿಗೆ ಪ್ರೀತಿಪಾತ್ರನನ್ನಾಗಿಯೂ, ಗುಪ್ತವಾದ ಧನವಂತನನ್ನಾಗಿಯೂ, ವಿದ್ವಾಂಸನನ್ನಾಗಿಯೂ ಮಾಡುತ್ತಾನೆ. ಗುಪ್ತ ಧನವೆಂದರೆ ಅವನು ತನ್ನಲ್ಲಿದ್ದ ಧನವನ್ನು ಯಾವ ಲೋಕೋಪಕಾರವಾದ ಕಾರ್ಯಗಳಿಗೂ ಉಪಯೋಗಿಸದೆ ಮುಚ್ಚಿಟ್ಟುಕೊಂಡು ಅಷ್ಟರಿಂದ ಮಾತ್ರವೇ ಸಂತೋಷ ಹೊಂದತಕ್ಕವನೆಂದು ಮಹಾರಾಷ್ಟ್ರ ಭಾಷಾ ಟೀಕಾಕಾರರು ಅಭಿಪ್ರಾಯಪಟ್ಟಿರುತ್ತಾರೆ ॥೩೦೨॥

## ಮಿಥುನ ಕನ್ಯಾಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ॥ ಯೋಷಾ ವಿಭೂಷಾ ಕರಣೇ ಪ್ರವೀಣಂ ಸತ್ಕರ್ಮ ಧರ್ಮಾನು ರತಂ ನಿತಾಂತಂ । ಸ್ತ್ರೀಸಕ್ತ ಚಿತ್ತ ಪ್ರಕರೋತಿಮರ್ತ್ಯಂ ಸಿತೇಕ್ಷಿತೋ ಭಾನು ಸುತೋಜ್ಞಗೇಹೇ ॥೩೦೩॥ತಾ॥ ಮಿಥುನ ಕನ್ಯಾರಾಶಿಗಳಲ್ಲಿ ಶನಿಯು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ಸ್ತ್ರೀಯರಿಗೆ ಶೃಂಗಾರ ಮಾಡಬಲ್ಲ ಪ್ರವೀಣನೂ, ಅಂದರೆ ಹೆಂಡತಿಗೆ ಅಲಂಕಾಮಾಡಿ ನೋಡಿ ನೋಡಿ ಸಂತೋಷ ಪಡತಕ್ಕವನು, ಸತ್ಕಾರ್ಯ ಗಳನ್ನು ಮಾಡತಕ್ಕವನು, ಯಾವಾಗಲೂ ಧರ್ಮವನ್ನನುವರ್ತಿಸಿ ನಡೆಯತಕ್ಕವನು, ಸ್ತ್ರೀಯರಲ್ಲಿ ಲೀನವಾದ ಮನಸ್ಸುಳ್ಳವನೂ ಆಗುವನು ॥೩೦೩॥

### ಅಥ ಕರ್ಕರಾಶೀ ಮಂದೇ ಗ್ರಹದೃಷ್ಟಿಫಲಂ

## ಕಟಕಸ್ಥೇ ಶನೌ ರವಿದೃಷ್ಟಿಫಲಂ

ಶ್ಲೋಕ॥ ಆನಂದದಾರ ದ್ರವಿಣೈರ್ವಿಹೀನಃ ಸದಾನ್ನಭೋಗೈ ರಪಿವ್ರೋಜ್ಝಿತಶ್ಚ । ಮಾತುರ್ಮಹಾ ಕ್ಲೇಶಕರೋ ನರಸ್ಸ್ಯಾನ್ಮಂದೇ ಕುಲೀರೋಪಗತೋರ್ಕ ದೃಷ್ಟಃ ॥೩೦೪॥ ಕರ್ಕಾಟಕ ರಾಶಿಯಲ್ಲಿ ಶನಿಯು ಸೂರ್ಯನಿಂದ ನೋಡಲ್ಪಟ್ಟವನಾದರೆ ಜಾತಕನು ಆನಂದ ಹೆಚ್ಚುವ ಸೌಖ್ಯಾತಿಶಯವೇ ಇಲ್ಲದವನು, ಪತ್ನಿ, ದ್ರವ್ಯ ಇವು ಇಲ್ಲದವನು, ಮೃಷ್ಟಾನ್ನಭೋಜನ ಇಲ್ಲದವನು, (ಅಂದರೆ ಕದನ್ನ ಕುತ್ಸಿತಾನ್ನ ಉಳ್ಳವನು) ತಾಯಿಗೆ ಅತಿ ಸಂಕಟ ಉಂಟು ಮಾಡುವವನೂ ಆಗುವನು ॥೩೦೪॥

## ಕಟಕಸ್ಥೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ।। ನಿಪೀಡನಂ ಬಂಧುಜನೈರ್ಜನನ್ಯಾ ನೂನಂಧನಾನಾಮಭಿವರ್ಧನಂಚ । ಕುರ್ಯಾನ್ನರಾಣಾಂ ದ್ಯುಮಣೇ ಸ್ತನೂಜಃ ಕುಳೀರಸಂಸ್ಥೋ ದ್ವಿಜರಾಜದೃಷ್ಟಃ ।।೩೦೫।। ತಾ।। ಕರ್ಕಾಟಕ ರಾಶಿಯಲ್ಲಿ ಶನಿಯು ಚಂದ್ರನಿಂದ ನೋಡಲ್ಪಟ್ಟರೆ ಜಾತಕನು ಬಂಧು ಜನರಿಗೂ, ಹೆತ್ತ ತಾಯಿಗೂ ಕೂಡ ಪೀಡೆಯನ್ನು ಕೊಡುವವನು, ಧನಾಭಿವೃದ್ಧಿ ಉಂಟುಮಾಡುವವನು ಸಹ ಆಗುವನು ।।೩೦೫।।

## ಕಟಕಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ।। ಗಲದ್ಬಲ ಕ್ಷೀಣಕಲೇ ವರಶ್ಚ ನೃಪಾರ್ಪಿತಾರ್ಥೋತ್ತಮ ವೈಭವೋಪಿ। ಸ್ಯಾನ್ಮನವೋ ಭಾನುಸುತೇ ಪ್ರಸೂತೌ ಕರ್ಕಸ್ಥಿತೇ ಕ್ಷೋಣಿಸುತೇನ ದೃಷ್ಟೇ ।।೩೦೬।। ತಾ।। ಕಟಕ ರಾಶಿಯಲ್ಲಿ ಶನಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ದುರ್ಬಲವಾದ ಶರೀರವುಳ್ಳವನು, ರಾಜನ ಮೂಲವಾಗಿ ಪ್ರಾಪ್ತಿಯಾದ ದ್ರವ್ಯವುಳ್ಳವನು, ಉತ್ತಮವಾದ ಉಪಭೋಗಗಳನ್ನು ಅನುಭವಿಸುವವನೂ ಆಗುವನು ।।೩೦೬।।

## ಕಟಕಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ।। ವಾಗ್ವಿಲಾಸ ಕಠಿನೋಟನ ಬುದ್ಧಿಶ್ಶೇಷ್ವತ್ವೈ ರ್ಬಹುವಿದ್ಯೈರಪಿಯುಕ್ತ । ದಂಭವೃತ್ತಿ ಚತುರೋಪಿ ನರಸ್ಸ್ಯಾತ್ಕರ್ಕಗಾಮಿನಿ ಶನೌ ಬುಧದೃಷ್ಟೇ ।।೩೦೭।।ತಾ।। ಕರ್ಕರಾಶಿಯಲ್ಲಿ ಶನಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಕಠಿಣವಾದ ಮಾತುಗಳಾಡತಕ್ಕವನಾಗಿಯೂ, ಸಂಚಾರಮಾಡತಕ್ಕ ಸ್ವಭಾವ ಉಳ್ಳವನಾಗಿಯೂ, ಅನೇಕ ಪ್ರಕಾರವಾದ ಕಾರ್ಯಗಳನ್ನು ಮಾಡತಕ್ಕವನು, ಚತುರನು, ಪರಂತು ಡಂಭವುಳ್ಳವನೂ ಸಹ ಆಗುವನು ।।೩೦೭।।

## ಕಟಕಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ।। ಕ್ಷೇತ್ರಪುತ್ರ ಗೃಹಗೇಹಿನೀ ಧನ್ಯೈ ರತ್ನವಾಹನ ವಿಭೂಷಣೈರಪಿ । ಸಂಯುತೋ ಭವತಿ ಮಾನವೋ ಜನೌ ಜೀವದೃಷ್ಟಿಯುಜಿ ಕರ್ಕಗೇಶನೌ ।।೩೦೮।।ತಾ।। ಕರ್ಕರಾಶಿಯಲ್ಲಿ ಶನಿಯು ಗುರುದೃಷ್ಟಿಯುಕ್ತನಾದರೆ ಜಾತಕನು ಕ್ಷೇತ್ರ, ಪುತ್ರ, ಮನೆ ಕುಟುಂಬಿನಿಯಾದ ಸ್ತ್ರೀ (ಹೆಂಡತಿ), ಧನ, ರತ್ನ, ವಾಹನ, ಭೂಷಣಾದ್ಯಲಂಕಾರ ವಸ್ತುಗಳು ಈ ಮೊದಲಾದ್ದರಿಂದ ಕೂಡಿರುವನೂ ಆಗುವನು ।।೩೦೮।।

## ಕಟಕಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ।। ಉದಾರತಾ ಗೌರವ ಚಾರುಮಾನ್ಯೈಃ ಸೌಂದರ್ಯವರ್ಯಾ ಮಲವಾಗ್ವಿಲಾಸೈಃ । ನೂನಂ ವಿಹೀನಾ ಮನುಜಾಭವೇಯುಃ ಶುಕ್ರೇಕ್ಷಿತೇ

ಕರ್ಕಗತೇರ್ಕ-ಸೂನೌ ॥೩೦೯॥ತಾ॥ ಕರ್ಕರಾಶಿಯಲ್ಲಿ ಶನಿಯು ಶುಕ್ರೇಕ್ಷಿತನಾದರೆ ಜಾತಕನು ತುಚ್ಛನು, ಲೋಭಿ, ಮರ್ಯಾದೆ ಸಂಪಾದನೆ ಮಾಡದವನು, ಕುರೂಪಿ, ದೊಡ್ಡಸ್ತಿಕೆ ಯಿಲ್ಲದವನು, ಚೆನ್ನಾಗಿ ಮಾತನಾಡದೆ ಇರುವವನು, (ವಾಚಾಳಿಯಲ್ಲ) ಅಂಜಿಕೆಯಿಂದ ಮಾತನಾಡದಿರುವನು (ಸಭಾಕಂಪ) ಈ ವಿಧವಾದ ದುರ್ಗುಣಗಳುಳ್ಳವನೂ ಆಗುವನು ॥೩೦೯॥

ಅಥ ಸಿಂಹೋಪಯಾತೇ ಶನೌ ಗ್ರಹದೃಷ್ಟಯಃ

## ಸಿಂಹಗತೇ ಶನೌ ರವಿದೃಷ್ಟಿಫಲಂ

ಶ್ಲೋಕ॥ ಧನೇನ ಧಾನ್ಯೇನಚ ವಾಹನೇನ ಸದ್ವೃತ್ತ ಸತ್ಕೋತ್ತಮ ಚೇಷ್ಟಿತೈಶ್ಚ । ಭವೇದ್ವಿಹೀನೋ ಮನುಜಃ ಪ್ರಸೂತೌ ಸಿಂಹಸ್ಥಿತೇ ಭಾನು ಸುತೇರ್ಕ ದೃಷ್ಟೇ ॥೩೧೦॥ತಾ॥ ಸಿಂಹರಾಶಿಯಲ್ಲಿ ಶನಿಯು ಸೂರ್ಯದೃಷ್ಟನಾದರೆ ಜಾತಕನು ದರಿದ್ರನು, ದಾನ ಮಾಡುವ ಬುದ್ಧಿಯಿಲ್ಲದವನು, ವಾಹನವಿಲ್ಲದವನು, ಸದಾಚಾರ ವೃತ್ತಿಯಿಲ್ಲದವನು, ಉತ್ತಮವಾದ ಯಾವ ನಡತೆಗಳೂ ಇಲ್ಲದವನೂ ಆಗುವನು ॥೩೧೦॥

## ಸಿಂಹಗತೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ॥ ಸದ್ರತ್ನ ಭೂಷಾಂಬರ ಚಾರುಕೀರ್ತಿ ಕಲತ್ರ ಮಿತ್ರಾತ್ಮಜ ಸೌಖ್ಯ-ಪೂರ್ತಿಂ । ಪ್ರಸನ್ನಮೂರ್ತಿಂ ಕುರುತೇರ್ಕ ಸೂನುರ್ನರಂ ಹರಿಸ್ಥೋ ಹರಿಣಾಂಕ ದೃಷ್ಟಃ ॥೩೧೧॥ತಾ॥ ಸಿಂಹರಾಶಿಯಲ್ಲಿ ಶನಿಯು ಚಂದ್ರದೃಷ್ಟಿ ಯುಕ್ತನಾದರೆ ಜಾತಕನು ಉತ್ತಮವಾದ ರತ್ನದ ಆಭರಣಗಳನ್ನು, ಪಟ್ಟೆ ಪೀತಾಂಬರ ಮೊದಲಾದ ಶ್ರೇಷ್ಠವಾದ ವಸ್ತ್ರಗಳನ್ನು ನಿರ್ಮಲವಾದ ಯಶಸ್ಸನ್ನು, ಪತ್ನಿ, ಮಿತ್ರವರ್ಗ, ಪುತ್ರ ಇವರುಗಳ ಸೌಖ್ಯವನ್ನು ಪ್ರಸನ್ನತೆಯನ್ನು ಸಹ ಹೊಂದುವನೂ ಆಗುವನು ॥೩೧೧॥

## ಸಿಂಹಗತೇ ಶನೌ ಕುಜದೃಷ್ಟಿಫಲಂ

ಶ್ಲೋಕ॥ ಸಂಗ್ರಾಮ ಕಾರ್ಯೇ ನಿಪುಣೋಪಲಬ್ಧಿ ಕಾರುಣ್ಯ ಹೀನೋ ಮನುಜಃ ಸಂಕೋಪಃ । ಕ್ರೂರಸ್ವಭಾವೋ ನನುಭಾನು ಸೂನೌ ಪಂಚಾನನಸ್ಥೇ ವನಿಸೂನು ದೃಷ್ಟೇ ॥೩೧೨॥ತಾ॥ ಸಿಂಹರಾಶಿಯಲ್ಲಿ ಶನಿಯು ಕುಜನಿಂದ ನೋಡಲ್ಪಟ್ಟರೆ ಜಾತಕನು ಯುದ್ಧದಲ್ಲಿ ಕುಶಲತೆಯುಳ್ಳವನು, ಅತಿ ನಿರ್ದಯ ವುಳ್ಳವನು, ಬಹು ಕೋಪಿಷ್ಟನೂ, ಕ್ರೂರಸ್ವಭಾವವುಳ್ಳವನೂ ಆಗುವನು ॥೩೧೨॥

## ಸಿಂಹಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ಧನಾಂಗನಾ ಸೂನು ಸುಖೇನ ಹೀನಂ ದೀನಂಚ ನೀಚ ವ್ಯಸನಾಭಿ ಭೂತಂ। ಕರೋತಿಜಾತಂ ತಪನಸ್ಯಸೂನುಃ ಸಿಂಹಸ್ಥಿತಃ ಸೋಮಸತೇಕ್ಷಿತಶ್ಚ ॥ ॥೩೧೩॥ತಾ॥ ಸಿಂಹರಾಶಿಯಲ್ಲಿ ಶನಿಯು ಬುಧದೃಷ್ಟಿಯುಕ್ತನಾದರೆ ಜಾತಕನು ದ್ರವ್ಯ, ಸ್ತ್ರೀ, ಪುತ್ರ ಇವರುಗಳ ಸೌಖ್ಯವಿಲ್ಲದವನು, ನೈಜವಾದ ವೃತ್ತಿಯುಳ್ಳವನು, ನೀಚವಾದ ಕಾರ್ಯಗಳನ್ನು ಮಾಡಬೇಕೆಂದು ವ್ಯಸನಭರಿತನಾಗಿರುವನು, ದೀನನೂ ಸಹ ಆಗುವನು ॥೩೧೩॥

## ಸಿಂಹಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ॥ ಸನ್ಮಿತ್ರಪುತ್ರಾದಿ ಗುಣೈರುಪೇತನಂ ಖ್ಯಾತಂ ಸುವೃತ್ತಂ ಸುತರಾಂ ವಿನೀತಂ । ನರಂ ಪುರಗ್ರಾಮಪತಿಂ ಕರೋತಿ ಸೌರಿರ್ಹರಿಸ್ಥೋ ಗುರುಣಾ-ಪ್ರದೃಷ್ಟಃ ॥೩೧೪॥ತಾ॥ ಸಿಂಹರಾಶಿಯಲ್ಲಿ ಶನಿಯು ಬೃಹಸ್ಪತಿ ದೃಷ್ಟಿಯುಳ್ಳವನಾದರೆ ಜಾತಕನು ಸನ್ಮಿತ್ರರನ್ನು, ಪುತ್ರಪೌತ್ರಾದಿಗಳನ್ನು, ಸುಗುಣಗಳನ್ನು ಹೊಂದುವನು ಮತ್ತು ಪ್ರಖ್ಯಾತನಾಗಿಯೂ, ಸದ್ವೃತ್ತಿಯುಳ್ಳವನಾಗಿಯೂ, ಬಹು ನಮ್ರತೆಯುಳ್ಳ ಸ್ವಭಾವದವನಾಗಿಯೂ, ಗ್ರಾಮಾಧಿಪತಿಯಾಗಿಯಾದರೂ ಅಥವಾ ಬಲಾಧಿಕನಾದರೆ ಪಟ್ಟಣಕ್ಕಧಿಪತಿಯಾಗಿಯಾದರೂ, ಮುಖ್ಯಸ್ಥನಾದರೂ ಆಗುವನು ॥೩೧೪॥

## ಸಿಂಹಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ॥ ಧನೈಶ್ಚಧಾನ್ಯೈರಪಿವಾಹನೈಶ್ಚ ಸುಖೈರುಪೇತಂ ವನಿತಾಪ್ರತಪ್ತಂ । ಕುರ್ಯಾನ್ಮನುಷ್ಯಂ ತಪನಸ್ಯಸೂನುಃ ಪಂಚಾನನಸ್ಥೋ ಭೃಗುಸೂನುದೃಷ್ಟಃ ॥೩೧೫॥ ತಾ॥ ಸಿಂಹರಾಶಿಯಲ್ಲಿ ಶನಿಯು ಶುಕ್ರದೃಷ್ಟಿಯುಕ್ತನಾದರೆ ಜಾತಕನು ಧನವನ್ನು, ಧಾನ್ಯವನ್ನು, ವಾಹನಗಳನ್ನು ಹೊಂದಿ ಸೌಖ್ಯವನ್ನನುಭವಿಸುವನು ಮತ್ತು ಸ್ತ್ರೀ ಮೂಲವಾಗಿ ಮಾತ್ರವೇ ಸಂಕಟಕ್ಕೆ ಗುರಿಯಾದವನೂ ಆಗವನು ॥೩೧೫॥

ಇತಿ ಸಿಂಹಸ್ಥೇ ಶನೌ ಖೇಟದೃಷ್ಟಿಃ

ಅಥ ಗುರುಕ್ಷೇತ್ರಗತೇ ಶನೌ ಗ್ರಹದೃಷ್ಟಯಃ

## ಧನುರ್ಮೀನಸ್ಥೇ ಶನೌ ರವಿದೃಷ್ಟಿಫಲಂ

ಶ್ಲೋಕ॥ ಖ್ಯಾತಿಂ ಧನಾಪ್ತಿಂ ಬಹು ಗೌರವಾಣಿ ಸ್ನೇಹಪ್ರವೃತ್ತಿಂ ಪರನಂದ ನೇಷು । ಭವೇನ್ನರೋ ದೇವಗುರೋ ರಗಾರೇ ಶನೈಶ್ಚರೇ ನೀರಜನಾಥ ದೃಷ್ಟೇ ॥೩೧೬॥ತಾ॥ ಧನುರ್ಮೀನ ರಾಶಿಗಳಲ್ಲಿ ಶನಿಯು ಸೂರ್ಯದೃಷ್ಟಿಯುಳ್ಳವನಾದರೆ ಜಾತಕನು ಪ್ರಖ್ಯಾತನು, ಬಹು ಗೌರವವುಳ್ಳವನು, ಪರರ ಪುತ್ರರಲ್ಲಿ ವಿಶ್ವಾಸವನ್ನು

ಬೆಳಸುವವನು, (ಅಂದರೆ ಪರಪುತ್ರರಲ್ಲಿ ಅಷ್ಟು ಅಧಿಕವಾಗಿ ಸ್ನೇಹವಾಗಿರುವಾಗ ತನ್ನ ಪುತ್ರರಲ್ಲಿ ಕೇಳತಕ್ಕದ್ದೇನು ? ಅತಿಶಯೋಕ್ತಿ) ಈ ಪ್ರಕಾರ ಹಿಂದುಸ್ಥಾನಿ ಭಾಷೆಯಲ್ಲಿ ಟೀಕಾ ಮಾಡಿರುವರು. ಈ ಸುಗುಣಗಳಿಂದ ಕೂಡಿದವನಾಗುವನು ಎಂದು ಬರೆದಿರುವರು ॥೩೧೬॥

## ಧನುರ್ಮೀನಸ್ಥೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ॥ ಸದ್ವೃತ್ತಶಾಲೀ ಜನನೀ ವಿಯುಕ್ತೋ ನಾಮದ್ವಯಾಲಂಕರಣ ಪ್ರಯಾತಃ । *ಸುಖಾರ್ಥಭಾರ್ಯಾ ಸುಖಭಾಙ್ನರಸ್ಯಾ ತ್ಸೌರೇ ಸುರೇಜ್ಯಾಲಯಗೇಬ್ಜದೃಷ್ಟೇ ॥೩೧೭॥ತಾ॥ ಧನುರ್ಮೀನರಾಶಿಗಳಲ್ಲಿ ಶನಿಯು ಚಂದ್ರ ದೃಷ್ಟಿಯುಳ್ಳವನಾದರೆ ಜಾತಕನು ಸದಾಚಾರ ಸಂಪನ್ನನು, ತಾಯಿ ಇಲ್ಲದವನು ಎರಡು ಹೆಸರಿನಿಂದ ಪ್ರಕಾಶಗೊಳ್ಳುವನು, ಪತ್ನಿ ಮತ್ತು ದ್ರವ್ಯ ಇವುಗಳ ಸೌಖ್ಯವನ್ನು ಸಹ ಹೊಂದುವವನೂ ಆಗುವನು ॥೩೧೭॥

## ಧನುರ್ಮೀನಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ॥ ವಾತಾನ್ವಿತಂ ಲೋಕವಿರುದ್ಧ ಚೇಷ್ಟಂ ಪ್ರವಾಸಿನಂ ದೀನತರಂ ಕರೋತಿ । ನರಂಧರಾ ಸೂನು ನಿರೀಕ್ಷ್ಯಮಾಣೋ ಮಾರ್ತಾಂಡಪುತ್ರ ಸ್ಸುರಮಂತ್ರಿಗೇಹೇ ॥೩೧೮॥ ಧನುರ್ಮೀನ ರಾಶಿಗಳಲ್ಲಿ ಶನಿಯು ಅಂಗಾರಕ ದೃಷ್ಟಿ ಯುಕ್ತನಾದರೆ ಜಾತಕನು ವಾತಾಧಿಕ್ಯವಾದ ರೋಗವುಳ್ಳವನು, ಲೋಕಕ್ಕೆ ವಿರುದ್ಧ ವಾದ ನಡವಳಿಕೆಯುಳ್ಳವನು, ನಿರಂತರವೂ ತಿರುಗುವವನು, ದೀನನೂ ಆಗುವನು ॥೩೧೮॥

## ಧನುರ್ಮೀನಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ॥ ಗುಣಾಭಿರಾಮೋ ಧನವಾನ್ಸಕಾಮಂ ನರಾಧಿರಾಜಾಪ್ತ ಮಹಾಧಿಕಾರಃ । ನರಃ ಸದಾಚಾರ ವಿರಾಜಮಾನಃ ಶನೌಜ್ಞದೃಷ್ಟೇ ಗುರುಮಂದಿರಸ್ಥೇ ॥ ॥೩೧೯॥ತಾ॥ ಧನುರ್ಮೀನ ರಾಶಿಗಳಲ್ಲಿ ಶನಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಕೇವಲ ಸುಗುಣಕ್ಕೆ ನಿವಾಸಸ್ಥಾನನಾದವನೂ, ಶ್ರೀಮಂತ ಅಥವಾ ರಾಜನ ಮೂಲವಾಗಿ ಧನವನ್ನೂ, ದೊಡ್ಡ ಅಧಿಕಾರವನ್ನೂ ಹೊಂದಿ, ಸದಾಚಾರಗಳಿಂದ ಶೋಭಿಸುವವನೂ ಆಗುವನು ॥೩೧೯॥

* ಪುತ್ರಾರ್ಥ ಭಾರ್ಯಾ ಸುಖಭಾಙ್ನರಸ್ಯಾತ್ ಎಂದು ಪಾಠಾಂತರ.

** ಇದು ಕಲ್ಕತ್ತಾನಗರದಲ್ಲಿ ಮದ್ರಿಸಲ್ಪಟ್ಟ ದೇವನಾಗರೀ ಪುಸ್ತಕದಲ್ಲಿ ಹೇಳಿರುತ್ತದೆ.

## ಧನುರ್ಮೀನಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ।। ನೃಪಪ್ರದಾನಃ ಪೃತನಾ ಪತಿರ್ವಾ ಸರ್ವಾಧಿಕಾರೀ ಬಲವಾನ್ಸುಶೀಲಃ। ಸ್ಯಾನ್ಮಾನವೋ ಭಾನುಸುತೇ ಪ್ರಸೂತೌ ಜೀವೇಕ್ಷಿತೇ ಜೀವಗೃಹಂ ಪ್ರಯಾತೇ ।।೩೨೦।।ತಾ।। ಧನುರ್ಮೀನ ರಾಶಿಗಳಲ್ಲಿ ಶನಿಯು ಗುರು ದೃಷ್ಟಿಯುಕ್ತನಾದರೆ ಜಾತಕನು ನೃಪನ ಮಂತ್ರಿಯಾಗಿರುವನು ಅಥವಾ ಬಲಾಧಿಕ್ಯನಾಗಿದ್ದರೆ ಸರ್ವ ಸೇನಾಪತಿಯಾಗುವನು ಮತ್ತು ಬಲವಂತನಾಗಿಯೂ, ಸದಾಚಾರ ಸಂಪನ್ನನಾಗಿಯೂ ಆಗುವನು ।।೩೨೦।।

## ಧನುರ್ಮೀನಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ।। ವಿದೇಶವಾಸೀ ಬಹುಕಾರ್ಯಸಕ್ತೋ ದ್ವಿಮಾತೃ ಪುತ್ರಃ ಸುತರಾಂ ಪವಿತ್ರಃ । ಸ್ಯಾನ್ಮಾನವೋ ದಾನವಮಂತ್ರಿದೃಷ್ಟೇ ಮಂದೇಮರಾಚಾರ್ಯ ಗೃಹಂ ಪ್ರಯಾತೇ ।।೩೨೧।।ತಾ।। ಧನುರ್ಮೀನ ರಾಶಿಗಳಲ್ಲಿ ಶನಿಯು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ತಾನು ಜನ್ಮಿಸಿದ ದೇಶವನ್ನು ಬಿಟ್ಟು ಪರದೇಶದಲ್ಲಿ ವಾಸಿಸುವನಾಗಿಯೂ, ಅನೇಕ ಕಾರ್ಯಗಳಲ್ಲಿ ಆಸಕ್ತನಾಗಿಯೂ, ದ್ವಿಮಾತೃ ಪುತ್ರಃ ಅಂದರೆ ಪ್ರಸವಿಸಿದ ತಾಯಿಯೊಬ್ಬಳು, ಸ್ತನ್ಯವನ್ನು ಕೊಟ್ಟು ಸಾಕಿದ ತಾಯಿಯೊಬ್ಬಳು ಈ ಪ್ರಕಾರ ಎರಡು ತಾಯಿಯರಿಗೆ ಮಗನಾಗಿಯೂ, ನಿಜವಾಗಿ ಪರಸತಿ, ಪರದ್ರವ್ಯಾದಿ ಸಂಸರ್ಗಗಳಿಲ್ಲದೆ ಪವಿತ್ರ (ಶುಚಿ) ನಾದವನಾಗಿಯೂ ಆಗುವನು. ಆದರೆ ದ್ವಿಮಾತೃ ಪುತ್ರನೆಂಬುವದು ಉತ್ತರದೇಶದ ಹಿಂದುಸ್ಥಾನಿ ಭಾಷೆಯ ಟೀಕೆಯಲ್ಲಿ ಅವನ ತಂದೆಗೆ ಇಬ್ಬರು ಪತ್ನಿಗಳಿರುವುದರಿಂದ ಅವರಲ್ಲಿ ಒಬ್ಬ ಹೆಂಡತಿಯು ಮಗನಾಗಿರುವುದರಿಂದ ದ್ವಿಮಾತೃ ಪುತ್ರನೆಂದು ಉದಾಹರಿಸಿರುತ್ತಾರೆ ।।೩೨೧।।

### ಅಥ ನಿಜಾಗಾರಗತೇ ಮಂದಂ ಪ್ರತಿ ಗ್ರಹದೃಷ್ಟಯಃ

## ಮಕರ ಕುಂಭಸ್ಥೇ ಶನೌ ರವಿದೃಷ್ಟಿಫಲಂ

ಶ್ಲೋಕ।। ಕುರೂಪ ಭಾರ್ಯಾಶ್ಚ ಪರಾನ್ನ ಭೋಕ್ತಾ ನಾನಾ ಪ್ರಯಾಸಾಮಯ ಸಂಯುತಶ್ಚ । ವಿದೇಶವಾಸೀ ಪ್ರಭವೇನ್ಮನುಷ್ಯೋ ಮಂದೇನಿಜಾಗಾರ ಗತೇರ್ಕ ದೃಷ್ಟೇ ।।೩೨೨।।ತಾ।। ಮಕರ ಕುಂಭರಾಶಿಗಳಲ್ಲಿ ಶನಿಯು ಸೂರ್ಯನಿಂದ ನೋಡಲ್ಪಟ್ಟರೆ ಜಾತಕನಿಗೆ ಕುರೂಪಿಯಾಗಿರುವ ಹೆಂಡತಿಯೂ, ನಿತ್ಯವೂ ಪರಾನ್ನ ಭೋಜನವೂ, ನಾನಾ ವಿಧವಾದ ಪ್ರಯಾಸವೂ, ರೋಗವೂ, ಪರದೇಶ ವಾಸವೂ ಸಹ ಉಂಟಾಗುವುದು ।।೩೨೨।।

## ಮಕರ ಕುಂಭಸ್ಥೇ ಶನೌ ಚಂದ್ರದೃಷ್ಟಿಫಲಂ

ಶ್ಲೋಕ|| ಧನಾಂಗನಾಢ್ಯಂ ವೃಜಿನಾನುಯಾತಂ ಚಲತ್ಸ್ವಭಾವಂ ಜನನೀ ವಿರುದ್ಧಂ । ಕಾಮಾತುರಂಚಾಪಿನರಂ ಪ್ರಕುರ್ಯಾನ್ಮಂದ ಸ್ವಭಸ್ಥೋಷ್ಪ ಮೃತಾಂಶು ದೃಷ್ಟಃ ||೩೨೩||ತಾ|| ಮಕರ ಕುಂಭರಾಶಿಗಳಲ್ಲಿ ಶನಿಯಿದ್ದು ಚಂದ್ರನ ದೃಷ್ಟಿ ಇದ್ದರೆ ಜಾತಕನಿಗೆ ಧನವತಿಯಾದ ಹೆಂಡತಿಯೂ, ತಾನೂ ಧನವಂತನಾಗಿರುವಿಕೆಯೂ, ಪಾಪಕರ್ಮಾಚರಣೆಯುಳ್ಳ ಸ್ವಭಾವವೂ, ತಾಯಿಗೆ ವಿರೋಧವಾಗಿರುವಿಕೆಯೂ ಸಹ ಉಂಟಾಗುವುದು ||೩೨೩||

## ಮಕರ ಕುಂಭಸ್ಥೇ ಶನೌ ಕುಜದೃಷ್ಟಿಫಲಂ

ಶ್ಲೋಕ|| ಶೂರಃ ಕ್ರೂರಃ ಸಾಹಸೀಃ ಸದ್ಗುಣಾಢ್ಯಃ ಸರ್ವೋತ್ಕೃಷ್ಟಃ ಸರ್ವದಾ ಹರ್ಷಚಿತ್ತಃ । ಖ್ಯಾತೋ ಮರ್ತ್ಯಶ್ಚಾತ್ರಜಸ್ಥೇರ್ಕಪುತ್ರೇ ಧಾತ್ರೀ ಪುತ್ರ ಪ್ರೇಕ್ಷಣಾತ್ವಂ ಪ್ರಯಾತೇ ||೩೨೪||ತಾ|| ಮಕರ ಕುಂಭರಾಶಿಗಳಲ್ಲಿ ಶನಿಯು ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು ಶೂರನಾಗಿಯೂ, ಕ್ರೂರನಾಗಿಯೂ, ಸಾಹವಂತ ನಾಗಿಯೂ, ಸದ್ಗುಣಗಳಿಂದ ತುಂಬಿದವನಾಗಿಯೂ, ಸರ್ವೋತ್ಕೃಷ್ಟನಾಗಿಯೂ, ಸರ್ವದಾ ಹರ್ಷದಿಂದಿರುವ ಮನಸ್ಸುಳ್ಳವನಾಗಿಯೂ, ಪ್ರಖ್ಯಾತನಾಗಿಯೂ, ಆಗುವನು ||೩೨೪||

## ಮಕರ ಕುಂಭಸ್ಥೇ ಶನೌ ಬುಧದೃಷ್ಟಿಫಲಂ

ಶ್ಲೋಕ|| ವಾಗ್ವಿಲಾಸ ಕಠಿನೋಟಿನ ಬುದ್ಧಿಶ್ಲೇಷ್ಟಿತೈಃ ಬಹುವಿಧೈರಪಿಯುಕ್ತಃ । ದಂಭವೃತ್ತಿ ಚತುರೋಪಿನರಃ ಸ್ಯಾತ್ಕರ್ಮ ಗಾಮಿನಿ ಶನೌ ಬುಧದೃಷ್ಟೇ ||೩೨೫|| ತಾ|| ಮಕರ ಕುಂಭರಾಶಿಗಳಲ್ಲಿ ಶನಿಯು ಬುಧನಿಂದ ನೋಡಲ್ಪಟ್ಟರೆ ಜಾತಕನು ಅತಿಶಯವಾಗಿ ಕಠೋರವಾಗಿ ಮಾತನಾಡುವವನು, ಬಹು ಸಂಚಾರಶೀಲನು, ಅನೇಕ ವಿಧವಾದ ಕಾರ್ಯಗಳನ್ನು ಮಾಡುವವನು, ಪರಂತು ದೊಡ್ಡ ಡಂಭಾಚಾರ ಉಳ್ಳವನೂ ಆಗುವನು ||೩೨೫||

## ಮಕರ ಕುಂಭಸ್ಥೇ ಶನೌ ಗುರುದೃಷ್ಟಿಫಲಂ

ಶ್ಲೋಕ|| ಗುಣಾನ್ವಿತಂ ಕ್ಷೋಣಿಪತಿ ಪ್ರಧಾನಂ ನಿರಾಮಯಂ ಚಾರು ಶರೀರಯಷ್ಟಿಂ । ಕುರ್ಯಾನ್ನರಂ ದೇವಗುರು ಪ್ರದೃಷ್ಟಶ್ಚಂಡಾಂಶು ಸೂನುರ್ನಿಜವೇಶ್ಮಸಂಸ್ಥಃ ||೩೨೬||ತಾ|| ಮಕರ ಕುಂಭರಾಶಿಗಳಲ್ಲಿ ಶನಿಯು ಗುರುದೃಷ್ಟಿಯುಕ್ತನಾದರೆ ಜಾತಕನು ಗುಣಾನ್ವಿತನಾಗಿಯೂ, ರಾಜನ ಮಂತ್ರಿಯಾಗಿಯೂ, ರೋಗ ರಹಿತನಾಗಿಯೂ, ಸುಂದರವಾದ ಶರೀರವುಳ್ಳವನಾಗಿಯೂ ಆಗುವನು ||೩೨೬||

## ಮಕರ ಕುಂಭಸ್ಥೇ ಶನೌ ಶುಕ್ರದೃಷ್ಟಿಫಲಂ

ಶ್ಲೋಕ॥ ಕಾಮಾತುರಂ ಸನ್ನಿಮೇನ ಹೀನಂ ಭಾಗ್ಯೋಪಪನ್ನಂ ಸುಖಿನಂ ದನಾಢ್ಯಂ । ಭೋಕ್ತಾರ ಮೀಶಂ ಕುರುತೇ ಸ್ವಭಸ್ಥೋರವೇಃ ಸುತೋ ಭಾರ್ಗವ ಸೂನು ದೃಷ್ಟಃ ॥೩೨॥ತಾ॥ ಮಕರ ಕುಂಭರಾಶಿಗಳಲ್ಲಿ ಶನಿಯು ಶುಕ್ರನಿಂದ ನೋಡಲ್ಪಟ್ಟರೆ ಜಾತಕನು ಕಾಮಾತುರನಾಗಿಯೂ, ಸಚ್ಚರಿತ್ರ ಹೀನನಾಗಿಯೂ, ಭಾಗ್ಯೋಪಪನ್ನನಾಗಿಯೂ, ಸುಖವಂತನಾಗಿಯೂ, ಧನವಂತನಾಗಿಯೂ, ಭೋಕ್ತೃ ಪುರುಷನಾಗಿಯೂ ಆಗುತ್ತಾನೆ ॥೩೨॥

ಅವತಾರಿಕೆ॥ ಈ ಶ್ಲೋಕದಿಂದ ಚಂದ್ರನು ಹೋರಾದ್ರೇಕ್ಕಾಣ ದ್ವಾದಶಾಂಶೆ ಗಳಲ್ಲಿದ್ದರೆ ಯಾವ ಗ್ರಹಗಳು ನೋಡುತ್ತೊ ಅದರಿಂದುಂಟಾಗುವ ಫಲ ಸ್ವಭಾವವು ಹೇಳಲ್ಪಡುತ್ತೆ.

ಮೂಲ॥ ಹೋರೇ ಶರ್ಕ್ಷದಳಾಶ್ರಿತ್ಯೆ ಶ್ಯುಭಕರೋ ದೃಷ್ಯಶ್ಶಶೀ ತದ್ಗತಃ ।
ತ್ರ್ಯಂಶೇ ತತ್ಪತಿಭಿ ಸ್ಸುಹೃದ್ಭವನಗೈರ್ವಾ ವೀಕ್ಷತಃ ಶಸ್ಯತೇ ॥
ಯತ್ರೋಕ್ತಂ ಪ್ರತಿರಾಶಿವೀಕ್ಷಣಫಲಂ ತದ್ವಾದಶಾಂಶೇ ಸ್ಮೃತಂ
ಸೂರ್ಯಾದ್ಯರವಲೋಕಿತೇ ಶಶಿನಿವಿಜ್ಞೇಯಂ ನವಾಂಶೇಷ್ವತಃ ॥೪॥

ಟೀಕು॥ ಹೋರೇಶರ್ಕ್ಷದಳಾಶ್ರಿತ್ಯೇ-ಹೋರೇಶ-ಹೋರಾ ಅಂದರೆ ೩೦ ಭಾಗ ವೆಂದು ರೂಢವಾಗಿರುತ್ತೆ. ಇಲ್ಲಿ ಮಾತ್ರ ಹೋರಾ ಶಬ್ದಕ್ಕೆ ೩೦ ಭಾಗಗಳಲ್ಲಿ ಅರ್ಧವಾದ ೧೫ ಭಾಗಕ್ಕೆ ಹೋರಾ ಎಂದು ಸಂಕೇತಾ ಮಾಡಿದ್ದಾರೆ ೩೦÷೨=೧೫ ಇದು ಹೋರಾ (ರಾಶ್ಯರ್ಧವೇ ಹೋರಾ) ಆ ಹೋರಾಧಿಪತಿಯ, ಋಕ್ಷದಳಂ-ಈ ಮೇಲೆ ವಿವರಿಸಲ್ಪಟ್ಟ ರಾಶ್ಯರ್ಧವನ್ನು, ಅಶ್ರಿತ್ಯೆ-ಹೊಂದಿಕೊಂಡಿರುವ ಗ್ರಹಗಳಿಂದ, ತದ್ಗತಃ-ಆ ಹೋರೆಯಲ್ಲಿರುವ, ಶಶೀ-ಚಂದ್ರನು, ದೃಷ್ಟಃ-ಈಕ್ಷಿಸಲ್ಪಟ್ಟರೆ, ಶುಭಕರಃ-ಇಷ್ಟಕರವಾದ ಫಲಪ್ರದನಾಗುವನು, ಅಂದರೆ ಮೇಷಾದಿ ಯಾವ ರಾಶಿಯಲ್ಲಾದರೂ, ರವಿ ಹೋರೆಯಲ್ಲಿರುವ ಚಂದ್ರನು ಮೇಷಾದಿ ಯಾವ ರಾಶಿಯಲ್ಲಾದರೂ, ಸೂರ್ಯ ಹೋರೆಯಲ್ಲಿರುವ ಗ್ರಹಗಳಿಂದ ನೋಡಲ್ಪಟ್ಟರೆ ಶುಭಕರನೆಂದು ಇಷ್ಟ ಫಲಪ್ರದನಾಗುವನು. ಈ ಮೇಲೆ ಹೇಳಿದ ಪ್ರಕಾರವಲ್ಲದೆ ರವಿಹೋರೆಯ್ಲಲಿರುವ ಚಂದ್ರನು, ಚಂದ್ರ ಹೋರೆಯಲ್ಲಿರುವ ಗ್ರಹಗಳಿಂದ ಈಕ್ಷಿಸಲ್ಪಟ್ಟಾಗ್ಯೂ, ಸ್ವಹೋರೆಯಲ್ಲಿರುವ ಚಂದ್ರನು ರವಿ ಹೋರೆಯಲ್ಲಿರುವ ಗ್ರಹಗಳಿಂದ ನೋಡಲ್ಪಟ್ಟಾಗ್ಯೂ ಪಾಪಫಲಪ್ರದನಾಗುವನು. ಈ ಮೇಲೆ ಹೇಳಿದ ವಿಧಿ ಪ್ರಕಾರವಾಗಿಯೇ ಜನನಕಾಲ ಲಗ್ನದಲ್ಲಿ ರವಿ ಚಂದ್ರ ಹೋರೆಗಳಲ್ಲಿ ಯಾವ ಹೋರೆ ಉದಯಿಸುವದೋ ಆ ಹೋರೆಯಲ್ಲಿರುವ ಗ್ರಹಗಳಿಂದ ಜನ್ಮಲಗ್ನ

ವೀಕ್ಷಿಸಲ್ಪಟ್ಟರೆ ಇಷ್ಟಫಲಪ್ರದವಾಗುವದು. ಉಳಿದ ಹೋರೆಗಳಲ್ಲಿರುವ ಗ್ರಹಗಳಿಂದ ಜನ್ಮಲಗ್ನವು ಈಕ್ಷಿಸಲ್ಪಟ್ಟರೆ ಪಾಪಫಲಪ್ರದವಾಗುವುದು.

## ದ್ರೇಕ್ಕಾಣಸ್ಥೇ ಚಂದ್ರ ಫಲ ವಿಚಾರಃ

ತ್ರ್ಯಂಶೇ ತತ್ಪತಿಭಿಃ-ಮೇಷಾದಿ ಯಾವ ರಾಶಿಯಲ್ಲಾದರೂ ಯಾವ ದ್ರೇಕ್ಕಾಣದಲ್ಲಿ ಚಂದ್ರನಿರುವನೋ ಆ ದ್ರೇಕ್ಕಾಣಕ್ಕಧಿಪತಿಯಾದ ಗ್ರಹದಿಂದ ಚಂದ್ರನು ಈಕ್ಷಿಸಲ್ಪಟ್ಟರೆ ಶಸ್ಯತೇ-ಶುಭಫಲಪ್ರದನಾಗುವನು. ಪತಿಭಿಃ-ಎಂಬುವ ಬಹುವಚನ ಸ್ವಾರಸ್ಯದಿಂದ ನವಾಂಶ, ದ್ವಾದಶಾಂಶ, ತ್ರಿಂಶಾಂಶಕ್ಕೆ ಅಧಿಪತಿಗಳಾದ ಗ್ರಹಗಳನ್ನು ಹೇಳುವುದಾದ್ದರಿಂದ, ಅವರಿಂದ ನೋಡಲ್ಪಟ್ಟ ಶಶಿಯೂ ಇಷ್ಟ ಫಲಪ್ರದನಾಗುವನು. ಈ ವಿಧಿ ಪ್ರಕಾರವೇ ಲಗ್ನಕ್ಕೂ ಫಲವನ್ನು ತಿಳಿಯತಕ್ಕದ್ದು ಇಲ್ಲಿ ಸಾಧಾರಣವಾಗಿ ಹೇಳಿದರೂ, ಸೂಕ್ಷ್ಮ ಜಾತಕದಲ್ಲಿ ಕ್ಷೇತ್ರಾಧಿಪ ಸಂದೃಷ್ಟೆ ಶಶಿನಿ ನೃಪಸ್ತತ್ಸುಹೃದ್ಭಿರಪಿ ಧನರ್ವಾ । ದ್ರೇಕ್ಕಾಣಾಂಶಕ ಪೈರ್ವಾ ಪ್ರಾಯಸ್ಸೌಮ್ಯೈ ಶ್ಯುಭಂನಾನ್ಯೈಃ ॥೩.೨೮॥ ಎಂದುಕ್ತವಾಗಿದೆ. ಆದ್ದರಿಂದ ಶುಭಗ್ರಹ ದ್ರೇಕ್ಕಾಣಾಧಿಪತಿಗಳಿಂದ ಈಕ್ಷಿಸಲ್ಪಟ್ಟರೆ ಶುಭಪ್ರದವೆಂತಲೂ, ಕ್ರೂರ ಗ್ರಹಗಳಾದ ದ್ರೇಕ್ಕಾಣಾಧಿಪತಿಗಳಿಂದ ನೋಡಲ್ಪಟ್ಟರೆ ಮಧ್ಯಸ್ಥವಾದ ಫಲವೆಂತಲೂ ನಿರ್ಣಯಿಸತಕ್ಕದ್ದು. ಸುಹೃದ್ಭವನ್ಯೈಃ-ಮಿತ್ರಕ್ಷೇತ್ರಸ್ಥವಾದ ಗ್ರಹಗಳಿಂದಲಾದರೂ, ವಾಶಬ್ದ ಪ್ರಯೋಗವಾಗಿರುವುದರಿಂದ ಸ್ವಕ್ಷೇತ್ರಸ್ಥವಾದ ಗ್ರಹಗಳಿಂದಲೂ ವೀಕ್ಷಿತಃ-ನೋಡಲ್ಪಟ್ಟ ಶಶಿಯು, ಶಸ್ಯತೇ-ಶುಭವಾದ ಇಷ್ಟ ಫಲಪ್ರದನಾಗುವನು. ಈ ರೀತಿ ಹೇಳಲ್ಪಟ್ಟದ್ದರಿಂದ ಶತ್ರುಕ್ಷೇತ್ರಸ್ಥವಾದ ಗ್ರಹಗಳಿಂದ ಈಕ್ಷಿಸಲ್ಪಟ್ಟರೆ ಪಾಪಫಲಪ್ರದನೆಂದು ನಿಶ್ಚಯಿಸತಕ್ಕದ್ದು. ಈ ವಿಧಿ ಪ್ರಕಾರವಾಗಿಯೇ ಲಗ್ನಕ್ಕೂ ನಿಶ್ಚಯಿಸತಕ್ಕದ್ದು ॥೩.೨೮॥

## ಚಂದ್ರ ದ್ವಾದಶಾಂಶ ವಿಚಾರಃ

ಪ್ರತಿರಾಶಿ-ಮೇಷಾದಿಯಾಗಿ ಹನ್ನೆರಡು ರಾಶಿಗಳಲ್ಲಿ ಚಂದ್ರನಿರುವಾಗ, ಯತ್-ಯಾವ ದೃಕ್ಫಲವು, ಪ್ರೋಕ್ತಂ-(ಚಂದ್ರೇ ಭೂಪ ಬುಧೌ, ಇವೇ ಮೊದಲಾದ ಶ್ಲೋಕಗಳಿಂದ) ಹೇಳಲ್ಪಟ್ಟಿತೋ, ತತ್-ಆ ಫಲವು, ದ್ವಾದಶಾಂಶೇ-ಮೇಷಾದಿ ಮೀನಾಂತ್ಯ ದ್ವಾದಶಾಂಶೆಯಲ್ಲಿರುವ ಜನ್ಮಕಾಲದ ಚಂದ್ರನಿಗೂ, ಸ್ಮೃತಂ-ಸ್ಮರಿಸಲ್ಪಟ್ಟಿತು. ಈ ವಿಧಿ ಪ್ರಕಾರವಾಗಿಯೇ ಲಗ್ನಕ್ಕೂ ನಿಶ್ಚಯಿಸತಕ್ಕದ್ದು.

## ಚಂದ್ರ ನವಾಂಶ ವಿಚಾರಃ

ಶಶಿನಿ-ಚಂದ್ರನು, ನವಾಂಶೇಷು-ಮೇಷ ವೃಷಭಾದಿ ನವಾಂಶೆಗಳನ್ನು ಹೊಂದಿದವನಾಗಿ, ಸೂರ್ಯಾದ್ಯೈಃ-ಸೂರ್ಯನೆ ಮೊದಲಾದ ಗ್ರಹಗಳಿಂದ, ಅವಲೋಕಿತೇ ಸತಿ-ವೀಕ್ಷಿಸಲ್ಪಡುತ್ತಿರುವಾಗ, ಅತಃ-ಈ ಉತ್ತರ ಶ್ಲೋಕದಲ್ಲಿ ತಿಳಿಸುವ "ಆರಕ್ಷಕೋ ವಧುರುಚಿ" ಇತ್ಯಾದಿ ಶುಭಾಶುಭ ಫಲಗಳು, ವಿಜ್ಞೇಯಂ-ವಿಶೇಷವಾಗಿ ತಿಳಿಯತಕ್ಕದ್ದು ॥೪॥

## ನವಾಂಶಸ್ಥ ಚಂದ್ರೇ ದೃಷ್ಟಿಫಲಂ

ಮೂಲ॥ ಭೌಥೇಹಿ ರಂಗಚೋರ ಕವೀಂದ್ರಮಂತ್ರಿ । ಗೇಯಜ್ಞ
ಶಿಲ್ಪನಿಪುಣಾಶ್ಶಶಿನಿಸ್ಥಿತೇಂಶೇ ॥ ಸ್ವಾಂಶೇಲ್ಪಗಾತ್ರ ಧನಲುಬ್ಧ
ತಪಸ್ವಿಮುಖ್ಯ। ಸ್ತ್ರೀಪ್ರೇಹ್ಯ ಕೃತ್ಯ ನಿರತಾಶ್ಚ ನಿರೀಕ್ಷ್ಯಮಾಣೇ ॥೫॥

ಅವತಾರಿಕೆ॥ ಬೌಧೇಹಿ ರಂಗಚರವೆಂಬುವ ಶ್ಲೋಕದಿಂದ ಮಿಥುನ, ಕನ್ಯಾ, ಕರ್ಕಟಕ ನವಾಂಶೆಯಲ್ಲಿ ಹೊಂದಿದ ಚಂದ್ರನು ಸೂರ್ಯಾದಿ (ಚಂದ್ರವ್ಯತಿರಿಕ್ತ) ಗ್ರಹಗಳಿಂದ ನೋಡಲ್ಪಡುತ್ತಾ ಇರುವಾಗ ಜನ್ಮಿಸಿದವರ ಸ್ವಭಾವವನ್ನು ಹೇಳಿರುತ್ತಾರೆ. ಅದು ಹೇಗೆಂದರೆಃ-

ಟೀಕು॥ ಬೌಧೇಂಶೇ-ಬುಧನ ನವಾಂಶಗಳಾದ ಮಿಥುನ, ಕನ್ಯಾ ನವಮಾಂಶಗಳಲ್ಲಿ, ಸ್ಥಿತೇ-ಹೊಂದಿರುವಂಥಾ, ಶಶಿನಿ-ಚಂದ್ರನು, ನಿರೀಕ್ಷ್ಯಮಾಣೇ-ಸೂರ್ಯನಿಂದ ವೀಕ್ಷಿಸಲ್ಪಟ್ಟರೆ, ರಂಗಚರ ಮಲ್ಲಯುದ್ಧ ಮಾಡುವ ಜಟ್ಟಿಯಾಗುವನು, ಅಂಗಾರಕನಿಂದ ನೋಡಲ್ಪಟ್ಟರೆ, ಚೋರಃ-(ಕಳ್ಳ) ತಸ್ಕರನಾಗುವನು, ಬುಧನಿಂದ ನೋಡಲ್ಪಟ್ಟರೆ, ಕವೀಂದ್ರ-ಕವಿತ್ವ ಮಾಡುವವರಿಗೆ ಅಧಿಪತಿಯಾಗುವನು, ಬೃಹಸ್ಪತಿಯಿಂದ ನೋಡಲ್ಪಟ್ಟರೆ, ಮಂತ್ರಿ-ರಾಜನ ಪ್ರಧಾನನಾಗುವನು, ಶುಕ್ರನಿಂದ ವೀಕ್ಷಿಸಲ್ಪಟ್ಟರೆ, ಗೇಯಜ್ಞ-ಸಂಗೀತ ತಿಳಿದವನಾಗುವನು, ಶನೈಶ್ಚರನಿಂದ ನೋಡಲ್ಪಟ್ಟರೆ, ಶಿಲ್ಪನಿಪುಣಾ-ಶಿಲ್ಪಶಾಸ್ತ್ರದಲ್ಲಿ ಪಂಡಿತನು (ಇಂಜಿನೀರ್) ಆಗುವನು, ಸ್ವಾಂಶೇ-ತನ್ನ ನವಾಂಶವಾದ ಕಟಕಾಂಶೆಯಲ್ಲಿರುವ ಚಂದ್ರನನ್ನು, ರವಿ ನೋಡಿದರೆ, ಅಲ್ಪಗಾತ್ರಃ-ಬಡಕಲಾದ ಶರೀರವುಳ್ಳವನಾಗುವನು, ಅಂಗಾರಕನು ನೋಡಿದರೆ, ಧನಲುಬ್ಧ-ದ್ರವ್ಯಾಭಿಲಾಷಿಯಾಗುವನು, ಬುಧನು ನೋಡಿದರೆ, ತಪಸ್ವೀ-ತಪಸ್ಸು ಮಾಡುವ ಮುನಿಯಾಗುವನು, ಬೃಹಸ್ಪತಿ ನೋಡಿದರೆ, ಮುಖ್ಯಃ-ಮುಖ್ಯಸ್ಥನಾಗುವನು. ಶುಕ್ರನು ನೋಡಿದರೆ, ಸ್ತ್ರೀ ಪ್ರೇಷ್ಯ-ಹೆಂಗಸರಿಂದ ಪೋಷಿಸಲ್ಪಡುವವ-

ನಾಗುವನು. ಶನೈಶ್ಚರ ನೋಡಿದರೆ, ಕೃತ್ಯನಿರತಾಃ-ಕೆಲಸ ಮಾಡಲು ಆಸಕ್ತಿಯುಳ್ಳವ ನಾಗುವನು.

ಮೂಲ॥ ಅರಕ್ಷಕೋ ವಧರುಚಿಃ ಕುಶಲೋನಿಯುದ್ದೇ। ಭೂಪೋರ್ಥವಾ ಕಲಹಕೃತ್ ಕ್ಷಿತಿಜಾಂಶ ಸಂಸ್ಥೇ ॥ ಮೂರ್ಖೋನ್ಯದಾರ ನಿರತಃ ಸುಕ ವಿಸ್ಸಿತಾಂಶೇ। ಸತ್ಕಾವ್ಯ ಕೃತ್ಸುಖ ಪರೋನ್ಯ ಕಳತ್ರಗಶ್ಚ ॥೬॥

ಅವತಾರಿಕೆ॥ ಮೇಷ, ವೃಶ್ಚಿಕ, ವೃಷಭ, ತುಲಾ ಈ ರಾಶಿ ನವಾಂಶೆ ಗಳಲ್ಲಿರುವ ಚಂದ್ರನನ್ನು ಸೂರ್ಯಾದಿ ಶನ್ಯಂತವಾಗಿ ಆರು ಗ್ರಹಗಳು ನೋಡಿದರೆ ಜಾತಕನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಕ್ಷಿತಿಜಾಂಶಸ್ಥೇ-ಅಂಗಾರಕಾಂಶೆಗಳಾದ ಮೇಷಾಂಶೆ, ವೃಶ್ಚಿಕಾಂಶೆ ಗಳಲ್ಲಿರುವ ಚಂದ್ರನು ರವಿಯಿಂದ ನೋಡಲ್ಪಟ್ಟರೆ ಜಾತಕನು, ಆರಕ್ಷಕಃ- ಪಟ್ಟಣಕ್ಕೆ ರಕ್ಷಾಧಿಕಾರಿಯಾಗುವನು, ಅಂಗಾರಕನಿಂದ ನೋಡಲ್ಪಟ್ಟರೆ ಜಾತಕನು, ವಧರುಚಿಃ- ಪ್ರಾಣಿಗಳನ್ನು ಕೊಲ್ಲುವುದರಲ್ಲಿ ಅಭಿರುಚಿಯುಳ್ಳವನಾಗುವನು, ಬುಧನಿಂದ ನೋಡಲ್ಪಟ್ಟರೆ ಜಾತಕನು ನಿಯುದ್ಧೇ-ಮಲ್ಲಯುದ್ಧದಲ್ಲಿ, ಕುಶಲಃ-ನಿಪುಣನಾಗುವನು, ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನು, ಭೂಪಃ-ಭೂಮಿಯನ್ನು ಪಾಲಿಸತಕ್ಕ ರಾಜನಾಗುವನು, ಶುಕ್ರನಿಂದ ನೋಡಲ್ಪಟ್ಟರೆ ಜಾತಕನು, ಅರ್ಥವಾ-ದ್ರವ್ಯವುಳ್ಳವ ನಾಗುವನು. ಶನೈಶ್ಚರನಿಂದ ನೋಡಲ್ಪಟ್ಟರೆ ಕಲಹಕೃತ್-ಜಗಳ ಮಾಡುವವ ನಾಗುವನು.

ಸಿತಾಂಶೇ-ಶುಕ್ರ ನವಾಂಶಗಳಾದ ತುಲಾ ವೃಷಭಾಂಶಗಳಲ್ಲಿರುವ ಚಂದ್ರನನ್ನು ರವಿ ನೋಡಿದರ, ಮೂರ್ಖಃ-ತಿಳಿದೂ ತಿಳಿಯದವನು (ಮೊಂಡನಾಗುವನು), ಅಂಗಾರಕನು ನೋಡಿದರೆ, ಅನ್ಯದಾರನಿರತಃ-ಪರರ ಹೆಂಡರಲ್ಲಿ ಆಸಕ್ತನಾಗುವನು, ಬುಧನು ನೋಡಿದರೆ, ಸುಕವಿಃ-ಉತ್ತಮವಾದ ಕವನ ಮಾಡುವವನಾಗುವನು, ಬೃಹಸ್ಪತಿಯು ನೋಡಿದರೆ, ಸತ್ಕಾವ್ಯಕೃತ್-ಸತ್ಕಾವ್ಯ ಮಾಡುವವನಾಗುವನು, ಶುಕ್ರನು ನೋಡಿದರೆ, ಸುಖಪರಃ-ಸುಖವನ್ನು ಅಪೇಕ್ಷಿಸುವವನಾಗುವನು, ಶನೈಶ್ಚರನು ನೋಡಿದರೆ, ಅನ್ಯಕಳತ್ರಗಃ-ಪರರ ಪತ್ನಿಯಲ್ಲಿ ಕ್ರೀಡಿಸುವವನಾಗುವನು ॥೬॥

ಮೂಲ॥ ಸಕ್ರೋಧೋನರಪತಿ ಸಮ್ಮತೋ ನಿಧೀಶ। ಸ್ಸಿಂಹಾಂಶೇ ಪ್ರಭುರ ಸುತೋತಿ ಹಿಂಸ್ರಕರ್ಮಾ ॥ ಜೈವಾಂಶೇ ಪ್ರಥಿತ ಬಲೋ ರಣೋಪದೇಷ್ಟಾ। ಹಾಸ್ಯಜ್ಞಃ ಸಚಿವ ವಿಕಾಮವೃದ್ಧಶೀಲಾಃ ॥೭॥

ಅವತಾರಿಕೆ॥ ಈ ಶ್ಲೋಕದಲ್ಲಿ ಸಿಂಹ, ಧನುಸ್ಸು, ಮೀನ ಈ ಮೂರು ನವಾಂಶೆ ಗಳಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಜಾತಕನ ಸ್ವಭಾವ ಹೇಳಲ್ಪಡುತ್ತೆ.

ಟೀಕು॥ ಸಿಂಹಾಂಶೇ-ಸಿಂಹರಾಶಿಯ ನವಾಂಶೆಯಲ್ಲಿರುವ ಜನ್ಮಕಾಲದ ಚಂದ್ರನನ್ನು ಸೂರ್ಯನು ನೋಡಿದರೆ, ಸಕ್ರೋಧಃ-ಕೋಪಯುಕ್ತನಾಗುವನು, ಅಂಗಾರಕನು ನೋಡಿದರೆ, ನರಪತಿ ಸಮ್ಮತಃ-ದೊರೆಗೆ ಸಮಾಧಾನವುಳ್ಳವನು, ಅಂದರೆ ರಾಜನಿಗೆ ಇಷ್ಟವುಳ್ಳವನಾಗುವನು, ಬುಧನು ನೋಡಿದರೆ, ನಿಧೀಶಃ-ಧನಾಧೀಶ ನಾಗುವನು. ಬೃಹಸ್ಪತಿಯು ನೋಡಿದರೆ, ಪ್ರಭುಃ-ತನ್ನ ಆಜ್ಞೆಗೆ ಚ್ಯುತಿಯಲ್ಲದಂಥಾ ಆಜ್ಞೆ ಮಾಡುವಂಥಾ ರಾಜನಾಗುವನು, ಅಂದರೆ ರಾಜಾಜ್ಞೆಗೆ ಪ್ರತಿಯಿಲ್ಲವೆಂದೂ, ನಿಷ್ಕೃಷ್ಟೋಕ್ತಿ ಮತ್ತು ರಾಜನಾದವನು ಸಕಲ ಧರ್ಮವನ್ನೂ ತಿಳಿದವನಾಗಬೇಕೆಂದು ಮತ್ತು ರಾಜಯೋಗ ಪ್ರಕರಣದ ಪೀಠಿಕೆಯಲ್ಲಿ ರಾಜನ ಅಧಿಕಾರವನ್ನು ಕುರಿತು ಉದಹರಿಸಿರುವನು. ಆದ್ದರಿಂದ ರಾಜನು ಆಜ್ಞೆ ಮಾಡುವಾಗ ಆ ಆಜ್ಞೆಯು ಶಾಸ್ತ್ರದೃಷ್ಟವಾಗಿರಬೇಕು. ಶುಕ್ರನು ನೋಡಿದರೆ, ಅಸುತಃ-ಪುತ್ರ ಸಂತಾನ ವರ್ಜಿತನಾಗುವನು, ಶನಿ ನೋಡಿದರೆ, ಅತಿ ಹಿಂಸ್ರಕರ್ಮಾ- ಅತ್ಯಂತ ಪ್ರಾಣಹಿಂಸೆ ಮಾಡುವವನಾಗುವನು (ಅಂದರೆ ಕಟುಕರವನು). ಈ ಪ್ರಕಾರ ಸಿಂಹಾಂಶೆಯಲ್ಲಿದ್ದ ಚಂದ್ರನ ಫಲವನ್ನು ತಿಳಿಯತಕ್ಕದ್ದು.

ಜೀವಾಂಶೇ-ಬೃಹಸ್ಪತಿ ನವಾಂಶೆಗಳಾದ ಧನೂರಾಶಿ ಮತ್ತು ಮೀನರಾಶಿ ನವಾಂಶೆಗಳಲ್ಲಿ ಜನ್ಮಕಾಲದಲ್ಲಿ ಚಂದ್ರನಿದ್ದು ಸೂರ್ಯಾದಿ ಗ್ರಹಗಳು ನೋಡಿದರೆ, ಜಾತಕನ ಸ್ವಭಾವವು ಹೇಳಲ್ಪಡುತ್ತೆ. ಧನುರ್ಮೀನ ನವಾಂಶೆಗಳಲ್ಲಿದ್ದ ಚಂದ್ರನನ್ನು ರವಿ ನೋಡಿದರೆ ಪ್ರಥಿತಬಲಃ-ಪ್ರಖ್ಯಾತನಾದ ಬಲವುಳ್ಳವನಾಗುವನು, ಅಂದರೆ ಭುಜಬಲ ಪರಾಕ್ರಮಿಯೆಂದು ಪ್ರಸಿದ್ಧನಾಗುವನು. ಕುಜನು ನೋಡಿದರೆ, ರಣೋಪ-ದೇಷ್ಟಾ-ಯುದ್ಧ ಮಾಡುವ ಶಾಸ್ತ್ರವನ್ನು ಹೇಳುವವನಾಗುವನು, ಅಂದರೆ ಯುದ್ಧ ಶಾಸ್ತ್ರಾಚಾರ್ಯ (ಅಂದರೆ ಉದಾಹರಣೆಗೋಸ್ಕರ ಸ್ಮರಿಸಲ್ಪಡುತ್ತೆ. ದ್ರೋಣಾ-ಚಾರ್ಯನಂತೆ ಧನುರ್ವೇದಾಚಾರ್ಯನಾಗುವನು), ಬುಧನು ನೋಡಿದರೆ, ಹಾಸ್ಯಜ್ಞಃ-ಹಾಸ್ಯ ಪರಿಹಾಸ್ಯ ಶಾಸ್ತ್ರವನ್ನು ತಿಳಿದವನಾಗುವನು (ಅಂದರೆ ತೆನಾಲಿಯ ರಾಮಕೃಷ್ಣ) ಗುರುವು ನೋಡಿದರೆ, ಸಚಿವ-ರಾಜಮಂತ್ರಿಯಾಗುವನು. ಶುಕ್ರನು ನೋಡಿದರೆ, ವಿಕಾಮ-ಗಂಡಸುತನವಿಲ್ಲದವನಾಗುವನು ಅಂದರೆ ನಪುಂಸಕ ನಿರ್ಬೀಜಿ ಇತ್ಯಾದಿ. ಶನಿಯು ನೋಡಿದರೆ, ವೃದ್ಧಶೀಲ-ಧರ್ಮಾಚರಣೆ ಮಾಡುವವನಾಗುವನು. ಈ ಪ್ರಕಾರ ಗುರ್ವಂಶೆಗಳಲ್ಲಿದ್ದ ಚಂದ್ರನಿಗೆ ಫಲ ವಿಚಾರ ಮಾಡತಕ್ಕದ್ದು ॥೭॥

ಮೂಲ|| ಅಲ್ಪಾಪತ್ಯೋದುಃಖಿತಸ್ಸತ್ಯಪಿ ಸ್ವೇ । ಮಾನಾಸಕ್ತಃ ಕರ್ಮಣಿಸ್ವೇನು ರಕ್ತಃ|| ದುಷ್ಟಸ್ತ್ರೀಷ್ಟಃ ಕ್ರೋಧನಶ್ಚಾರ್ಕಿಭಾಗೇ । ಚಂದ್ರೇಭಾನೌ ತದ್ವದಿಂದ್ವಾದಿದೃಷ್ಟೇ ||೮||

ಅವತಾರಿಕೆ|| ಈ ವೃತ್ತಿದಿಂದ ಜನ್ಮಕಾಲದ ಚಂದ್ರನು ಯಾವ ರಾಶಿಯಲ್ಲಾದರೂ, ಮಕರ, ಕುಂಭರಾಶಿ ನವಾಂಶೆಗಳಲ್ಲಿದ್ದು ಸೂರ್ಯಾದಿ ಗ್ರಹಗಳು ನೋಡಿದರೆ ಪ್ರತ್ಯೇಕ ಫಲ ಹೇಳಲ್ಪಡುತ್ತೆ.

ಟೀಕು|| ಅರ್ಕಿಭಾಗೇ-ಶನ್ಯಂಶಗಳಾದ ಮಕರ ನವಾಂಶ, ಕುಂಭ ನವಾಂಶ ಗಳಲ್ಲಿರುವ, ಚಂದ್ರೇ-ಚಂದ್ರನನ್ನು, ಸೂರ್ಯನು ನೋಡಿದರೆ, ಅಲ್ಪಾಪತ್ಯ- ಅಲ್ಪ ಸಂಖ್ಯಾತವಾದ ಪುತ್ರರುಳ್ಳವನಾಗುವನು, ಕುಜನು ನೋಡಿದರೆ, ಸತ್ಯಪಿಸ್ವೇ-ದ್ರವ್ಯ ವಂತನಾದಾಗ್ಯೂ, ದುಃಖಿತಃ-ದುಃಖಪಡುವವನಾಗುವನು, ಬುಧನು ನೋಡಿದರೆ, ಮಾನಾಸಕ್ತ-ಮರ್ಯಾದೆಯಲ್ಲಿ ತುಂಬಾ ಇಷ್ಟವುಳ್ಳವನಾಗುವನು. ಗುರುವು ನೋಡಿದರೆ, ಸ್ವೇಕರ್ಮಣಿ-ತನ್ನ ಮತಾಚಾರ ಕರ್ಮಗಳಲ್ಲಿ, ಅನುರಕ್ತ-ಆಸಕ್ತಿಯುಳ್ಳವನಾಗುವನು, ಅಂದರೆ, ಧರ್ಮಿಷ್ಠನು, ಶುಕ್ರನು ನೋಡಿದರೆ, ದುಷ್ಟಸ್ತ್ರೀಷ್ಟಃ-ದುಷ್ಟಸ್ತ್ರೀಯರಲ್ಲಿ ಆಸಕ್ತಿಯುಳ್ಳವನು. (ಪಾ|| ಲೋಭಿಯಾಗುವನು.) ಕ್ರೋಧನಃ-ಕೋಪವುಳ್ಳವನು, ಈ ವಿಧಿಪ್ರಕಾರ ಜನ್ಮಲಗ್ನ ನವಾಂಶಕ್ಕೂ ಗ್ರಹಗಳ ದೃಷ್ಟಿ ಫಲಗಳನ್ನು ಲಗ್ನಕ್ಕೂ ಹೇಳಬೇಕು. ಕರ್ಕರಾಶಿಯ ನವಾಂಶೆಯನ್ನು ಬಿಟ್ಟು ಉಳಿದ ನವಾಂಶೆಗಳಿಗೆ ಚಂದ್ರನ ದೃಷ್ಟಿ ಅಶುಭಕರವೆಂದು ಹೇಳಬೇಕು.

ಭಾನೌ-ಸೂರ್ಯನು, ಇಂದ್ವಾದಿದೃಷ್ಟೇ-ಚಂದ್ರನೆ ಆದಿಯಾಗಿ, ಗ್ರಹಗಳಿಂದ ನೋಡಲ್ಪಟ್ಟಾಗ್ಯೂ, ತದ್ವತ್-ಮೊದಲು ಹೇಳಲ್ಪಟ್ಟ ಪ್ರಕಾರವೇ ದೃಷ್ಟಿ ಫಲ ಪರಿಪಾಕವು ಹೇಳಲ್ಪಡತಕ್ಕದ್ದು. ಅದು ಯಾವ ಪ್ರಕಾರವೆಂದರೆ, ಯಾವುದಾದರೂ ಒಂದು ರಾಶಿಯಲ್ಲಿ ಯಾವಯಾವ ರಾಶಿಯ ನವಾಂಶದಲ್ಲಾದರೂ ಚಂದ್ರನು ಸೂರ್ಯನೇ ಮೊದಲಾದ ಗ್ರಹಗಳಿಂದ ನೋಡಲ್ಪಡುತ್ತಿರುವಾಗ ಯಾವ ಶುಭಾಶುಭ ಫಲ ಪ್ರಾಪ್ತಿಯೆಂದುಕ್ತವಾಗಿರುತ್ತೋ ಆ ಶುಭಾಶುಭ ಫಲವೇ, ಯಾವ ರಾಶಿ ನವಾಂಶದಲ್ಲಾದರೂ ಇರುವ ಸೂರ್ಯನು ಚಂದ್ರನೇ ಮೊದಲಾದ ಆರು ಗ್ರಹಗಳಿಂದ ನೋಡಲ್ಪಟ್ಟಾಗ ಹೇಳಬೇಕು. ಅದು ಹೇಗೆಂದರೆ : ಒಂದಾನೊಂದು ರಾಶಿ ನವಾಂಶೆಯೊಳಗಿರುವ ಸೂರ್ಯನಿಗೆ, ನಕ್ಷತ್ರ ಗ್ರಹಗಳೆಂಬುವ ಕುಜ, ಬುಧ, ಗುರು, ಶುಕ್ರ, ಶನಿ ಈ ಐದು ಗ್ರಹಗಳ ದೃಷ್ಟಿಯಿಂದುಂಟಾದ ಫಲವು ಸಮವಾಗಿಯೇ ಇರುತ್ತೆ ಮತ್ತು ಇದರಲ್ಲಿ ವಿಶೇಷವೇನೆಂದರೆ ಸೂರ್ಯದೃಷ್ಟಿಯಿಂದ ಚಂದ್ರನಿಗೆ ಯಾವ ಪ್ರಕಾರ ಫಲ ಕಲ್ಪಿಸಲ್ಪಟ್ಟಿರುತ್ತೋ ಆ ಫಲವೇ ಚಂದ್ರನ

ದೃಷ್ಟಿಯಿಂದ ಸೂರ್ಯನಿಗೂ ಹೇಳಲ್ಪಡಬೇಕು. ವಿವರಣೆ:-ಮೇಷ ವೃಶ್ಚಿಕಾಂಶೆಗಳಲ್ಲಿ ಸೂರ್ಯನಿದ್ದು ಚಂದ್ರದೃಷ್ಟಿಯಿದ್ದರೆ ಜಾತಕನು ಆರಕ್ಷಕನಾಗುತ್ತಾನೆಂದು ಹೇಳಬೇಕು. ವೃಷಭ ತುಲಾಂಶಗಳಲ್ಲಿರುವ ಸೂರ್ಯನು ಚಂದ್ರನಿಂದ ನೋಡಲ್ಪಟ್ಟರೆ ಅಂಗಚರನಾಗುವನು. ಸಿಂಹಾಂಶೆಯಲ್ಲಿ ರವಿಯಿದ್ದು ಚಂದ್ರನಿಂದ ನೋಡಲ್ಪಟ್ಟರೆ ಕೋಪಿಷ್ಠನಾಗುವನು. ಧನುರ್ಮೀನ ರಾಶಿಗಳ ನವಾಂಶೆಯಲ್ಲಿ ಸೂರ್ಯನಿದ್ದು ಚಂದ್ರನು ನೋಡಿದರೆ ಯಶಸ್ವಿಯಾಗುವನು. ಮಕರ ಕುಂಭರಾಶಿಗಳ ಅಂಶೆಯಲ್ಲಿ ಸೂರ್ಯನಿದ್ದು ಚಂದ್ರನು ನೋಡಿದರೆ ಅಲ್ಪಸಂತತಿಯುಳ್ಳವನಾಗುವನು, ಕರ್ಕಾಟಕ ರಾಶಿಯ ನವಾಂಶೆಯಲ್ಲಿ ರವಿಯಿದ್ದು ಚಂದ್ರನಿಂದ ನೋಡಲ್ಪಟ್ಟರೆ ಶರೀರವು ಕೃಶವಾಗುವದು. ಈ ಪ್ರಕಾರವಾಗಿ ತಿಳಿಯತಕ್ಕದ್ದು ॥ ಇಲ್ಲಿ ದಿಕ್ಪ್ರದರ್ಶಕವಾಗಿ ತೋರಿಸಿದೆ. ಆದರೆ ಇದು ಸುಲಭವಾಗಿ ತಿಳಿಯುವಂತೆ ಇಲ್ಲ. ಆದ್ದರಿಂದ ಈ ವಿಷಯದಲ್ಲಿ ಯವನಾಚಾರ್ಯ ಮತಾನುಸಾರವಾಗಿ ಧುಂಡಿರಾಜರು ಪ್ರತಿರಾಶಿಯಲ್ಲಿ ಸರ್ವಗ್ರಹಗಳಿಗೂ ದೃಷ್ಟಿಫಲವನ್ನು ಹೇಳಿರುವರು, ಇಲ್ಲಿ ಉದಾಹರಣಾರ್ಥವಾಗಿ ೭೪ನೇ ಶ್ಲೋಕ ಮೊದಲುಗೊಂಡು ೩೨೪ರ ವರೆಗೆ ತಾತ್ಪರ್ಯ ಸಹಿತವಾಗಿ ಬರೆದಿರುತ್ತೆ ॥೯॥

## ದೃಷ್ಟಿಫಲ ತಾರತಮ್ಯ ವಿಚಾರಃ

ಮೂಲ॥ ವರ್ಗೋತ್ತಮ ಸ್ವಪರಗೇಷು ಶುಭಂ ಯದುಕ್ತಂ । ತತ್ಪುಷ್ಟ ಮಧ್ಯ ಲಘುತಾ ಶುಭಮುತ್ಕ್ರಮೇಣ ॥ ವೀರ್ಯಾನ್ವಿತೋಂಶಕ ಪತಿರ್ನಿರುಣದ್ಧಿಪೂರ್ವಂ । ರಾಶೀಕ್ಷಸ್ವಫಲಮಂಶ ಫಲಂದದಾತಿ ॥೯॥

ಇತಿ ಅವಂತಿಕಾಚಾರ್ಯವರ್ಯ ವರಾಹಮಿಹಿರ ವಿರಚಿತೇ ಬೃಹಜ್ಜಾತಕೇ
ದೃಷ್ಟಿ ಫಲ ಪ್ರಕರಣಂ

ಅವತಾರಿಕೆ॥ ಈ ಶ್ಲೋಕದಿಂದ ವರ್ಗೋತ್ತಮಾಂಶ ಪರನವಾಂಶಗಳಿಗೆ ಫಲ ತಾರತಮ್ಯವು ಹೇಳಲ್ಪಡುತ್ತೆ ॥

"ವರ್ಗೋತ್ತಮ ಸ್ವಪರಗೇಷು ಶುಭಂ ಯದುಕ್ತಂ ತತ್ಪುಷ್ಟ ಮಧ್ಯಲಘುತಾ" ನವಾಂಶೆಯಲ್ಲಿರುವ ಚಂದ್ರನಿಗೆ ಆರಕ್ಷಕ, ವಧರುಚಿ ಮೊದಲಾದ ಫಲಗಳು, ಈ ಪ್ರಕಾರ ಗ್ರಹವೀಕ್ಷಣದಿಂದ ಎರಡು ಬಗೆಗಳಾಗಿ ಉಂಟಾದ ಫಲವು ಹೇಳಲ್ಪಟ್ಟಿರುತ್ತೆ ಈ ಫಲದಲ್ಲಿ ತಾರತಮ್ಯಗಳಿರುತ್ತೆ. ಏಕಪ್ರಕಾರವಾಗಿರುವದಿಲ್ಲ. ಚಂದ್ರನು ಯಾವ ರಾಶಿ ನವಾಂಶೆಯಲ್ಲಿರುತ್ತಾನೋ ಆ ನವಾಂಶೆ ಆ ರಾಶಿ ಸಂಬಂಧವಾದದ್ದೇ

ಆಗಿದ್ದರೆ, ಅದಕ್ಕೆ ವರ್ಗೋತ್ತಮ ನವಾಂಶವೆಂದು ಹೆಸರು. ಈ ವರ್ಗೋತ್ತಮಾಂಶ ಯಾವ ರೀತಿಯಾಗಿ ತಿಳಿಯಬರುತ್ತೆಂಬುವದನ್ನು ಈ ಪುಸ್ತಕದ ರಾಶಿಭೇದ ಪ್ರಕರಣದಲ್ಲಿ ೧೬ನೇ ಪುಟವನ್ನು ನೋಡಿ ಗ್ರಹದೃಷ್ಟಿಯಿಂದುತ್ಪನ್ನವಾದ ಫಲವು, ಪುಷ್ಟ- ಉತ್ತಮವಾಗಿ ಪುಷ್ಟೀಕರವಾಗಿಯೂ, ಅದೇ ಚಂದ್ರನೇ ಸ್ವನವಾಂಶೆಯಲ್ಲಿದ್ದರೆ ಮಧ್ಯ-ಮಧ್ಯವೆಂದರೆ ಉತ್ತಮ, ಮಧ್ಯಮ, ಅಧಮವೆಂಬುವ ಮೂರು ವಿಧಗಳಲ್ಲಿ ಮಧ್ಯದ ತರಗತಿಯುಳ್ಳದ್ದಾಗಿಯೂ, ಅನ್ಯಗ್ರಹ ನವಾಂಶ ಅನ್ಯರಾಶಿ ನವಾಂಶದೊಳಗಿದ್ದರೆ, ಲಘುತಾ-ಅಲ್ಪವಾಗಿಯೂ ಆಗುವುದು; ಅದು ಹೇಗೆಂದರೆ-ವರ್ಗೋತ್ತಮ ನವಾಂಶೆಯಲ್ಲಿದ್ದ ಚಂದ್ರನು ೧೦ $^{3}/_{8}$ ಭಾಗ ಶುಭಫಲ ಕೊಡುತ್ತಾನೆಂತಲೂ, ಅದೇ ಚಂದ್ರನೇ ಪರಕ್ಷೀಯ ನವಾಂಶೆಗಳಲ್ಲಿದ್ದರೆ ಅಧಮ (ಲಘುತಾ) ಅಂದರೆ ೫ $^{7}/_{8}$ ಭಾಗ ಕೊಡುತ್ತಾನೆಂತಲೂ, ಅಶುಭಮುತ್ಕ್ರಮೇಣ ವಧರುಚಿ-ಎಂದು ಹೇಳಿದಂಥಾ ಪಾಪಫಲಗಳು ಹೇಳಿದ್ದಕ್ಕೆ ವಿಪರೀತವಾಗುವದು. ವಿವರಣೆ-ಪರನವಾಂಶೆಯಲ್ಲಿರುವ ಚಂದ್ರನಿಗೆ ಹೇಳಲ್ಪಟ್ಟ ಅಶುಭವೆಂದರೆ ಅನಿಷ್ಟಫಲವು; ಪುಷ್ಟಂ-ಅತಿ ಹೆಚ್ಚಾಗಿಯೂ, ಸ್ವನವಾಂಶೆಯಲ್ಲಿ ಹೇಳಿದ ಫಲವು ಮಧ್ಯ-ಮೇಲೆ ಹೇಳಿದಂತೆ ಅನಿಷ್ಟಫಲವು, ಲಘುತಾ-ಅಲ್ಪ (ಕನಿಷ್ಠವಾಗಿಯೂ) ಅತ್ಯಲ್ಪವಾಗಿಯೂ ಆಗುವದು।। ಈ ವಿಧಿಪ್ರಕಾರವಾಗಿಯೇ ಲಗ್ನಕ್ಕೂ ಸೂರ್ಯನಿಗೂ, ಗ್ರಹಗಳ ದೃಷ್ಟಿಫಲವನ್ನು ನಿರ್ಣಯಿಸತಕ್ಕದು ।। ವೀರ್ಯಾನ್ವಿತೋಂಶಕಪತಿಃ-ಯಾವ ರಾಶಿ ನವಾಂಶೆಯಲ್ಲಿ ಜನ್ಮಕಾಲದ ಚಂದ್ರನಿರುವನೋ ಆ ನವಾಂಶಕ್ಕಧಿಪತಿಯು ಯಾವ ಗ್ರಹವೋ ಆ ಗ್ರಹವು ಬಲಿಷ್ಠನಾದರೆ, ಪೂರ್ವಂ-ಈ ಮೇಲೆ ಹೇಳಿದ, ರಾಶೀಕ್ಷಣಸ್ಯಫಲಂ-ರಾಶಿಯಲ್ಲಿದ್ದ ಚಂದ್ರನ ದೃಷ್ಟಿ ಫಲವು, ನಿರುಣದ್ಧಿ-ಆಗದಂತ ಮಾಡುವನು, ಅದು ಹೇಗೆಂದರೆ-ಅಂಶಫಲಂ-ನವಾಂಶದಲ್ಲಿದ್ದ ಚಂದ್ರನ ಗ್ರಹದೃಷ್ಟಿ ಫಲವನ್ನು, ದದಾತಿ-ಕೊಡುತ್ತಾನೆ ।।ಈ ಪ್ರಕಾರವೇ ಹೋರಾದ್ರೇಕ್ಕಾಣ, ದ್ವಾದಶಾಂಶದಲ್ಲಿದ್ದ ಚಂದ್ರನ ಗ್ರಹದಷ್ಟಿಫಲವು ಮೇಲೆ ಹೇಳಿದಂತೆಯೇ ಆಗುತ್ತದೆ. ನವಾಂಶಾಧಿಪತಿ ಬಲವಿಲ್ಲದವನಾಗಿ ಹೀನಬಲನಾಗಿದ್ದರೆ ರಾಶಿದೃಷ್ಟಿ, ನವಾಂಶದೃಷ್ಟಿ ಈ ಎರಡು ಫಲಗಳು ಅಲ್ಪವಾಗಿ ಆಗುವವು, ಈ ಪ್ರಕಾರವಾಗಿಯೇ ಚಂದ್ರನಿಗೂ ಲಗ್ನಕ್ಕೂ ಫಲ ಹೇಳಬೇಕು, ಸೂರ್ಯನಿಗೆ ರಾಶಿದೃಷ್ಟಿ ಫಲವು ಇಲ್ಲಿ ಉಕ್ತವಾಗಿಲ್ಲ, ಆದ್ದರಿಂದ ನವಾಂಶಸ್ಥಿತ ಫಲವನ್ನೇ ಹೇಳಬೇಕು ।।೯।।

ಮೇಷಾದಿ ೧೨ ರಾಶಿಗಳಲ್ಲಿ ಚಂದ್ರನಿದ್ದು ಗ್ರಹಗಳಿಂದ ನೋಡಲ್ಪಟ್ಟ ಫಲದ ಪದಕ

| ಚಂದ್ರನಿರುವ ರಾಶಿ | ನೋಡಲ್ಪಡುವ ಗ್ರಹಗಳು | ಬೃಹಜ್ಜಾತಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣೋಕ್ತ ಫಲ | ಉ.ಹ. ಶ್ಲೋ. |
|---|---|---|---|---|
| ವೃಷಭ ೧ ಅಥವಾ ಲಗ್ನ | ಕುಜ | ಭೂಪತಿ | ವಿಷ, ವಾಯುರೋಗ, ಅಗ್ನಿಭಯ, ಶಸ್ತ್ರಭಯ, ಮೂತ್ರಕೃಚ್ಛ್ರ, ಮಹದಾಶ್ರಯ, ದಂತಾಕ್ಷಿಪೀಡೆ | ೧ |
| | ಬುಧ | ಪಂಡಿತ | ಪ್ರಸಿದ್ಧ ಪುರುಷ, ಯಶಸ್ವಿ, ಸಕಲ ವಿದ್ಯಾಪ್ರವೀಣ, ಧನವಂತ, ಶ್ರೇಷ್ಠ ಸಂಪದ್ಯುಕ್ತ ಪ್ರತಿಷ್ಠಾವಂತ | ೨ |
| | ಗುರು | ರಾಜ ಸಮಾನ | ರಾಜಮಂತ್ರಿ, ಸೇನಾಪತಿ, ಅನ್ಯನಾದರೆ ಸಂಪತ್ತುಳ್ಳವನು | ೩ |
| | ಶುಕ್ರ | ಗುಣವಂತ | ಸ್ತ್ರೀಸೌಖ್ಯ, ಆಭರಣ ಉಳ್ಳವ, ದ್ರವ್ಯ, ಪುತ್ರ, ಶಾಂತಚಿತ್ತ, ವಾಚಾಲ | ೪ |
| | ಶನಿ | ಚೋರ | ರೋಗಗ್ರಸ್ತ, ಮಾನವಿಲ್ಲದವ, ಧನಹೀನ, ಸುಳ್ಳು ಹೇಳುವವ, ದುಷ್ಟ ಸಂತತಿ | ೫ |
| | ರವಿ | ದರಿದ್ರ | ಉಗ್ರಸ್ವಭಾವ, ನಮ್ರತೆಯುಳ್ಳವ, ಧೀರ, ರಾಜನಂತೆ ಗೌರವವುಳ್ಳವನು ಯುದ್ಧದಲ್ಲಿ ಭಯಪಡುವನು | ೬ |

| ಚಂದ್ರ- ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾ- ಭರಣೋಕ್ತ ಫಲ | ಉ.ಹ. ಶ್ಲೋ. |
|---|---|---|---|---|
| ವೃಷಭ ೨ ಅಥವಾ ಲಗ್ನ | ಕುಜ | ದರಿದ್ರ | ಕಾಮಾತುರ, ಸ್ತ್ರೀ ಚಿತ್ತಾಪಹಾರಿ, ಸ್ವಜ್ಜನಮಿತ್ರ, ಪವಿತ್ರವಾದವನು ಪ್ರಸನ್ನಮೂರ್ತಿ | ೭ |
| | ಬುಧ | ಕಳ್ಳ | ಜ್ಯೋತಿಷ ತಿಳಿದವನು, ಕೃಪಾಳು ಹರ್ಷಯುಕ್ತ, ಪಶ್ಚಾತಾಪವುಳ್ಳವ, ಸುಗುಣಕ್ಕೆ ಮಾತೃಸ್ಥಾನವಾದವನು | ೮ |
| | ಗುರು | ರಾಜಶ್ರೇಷ್ಠ ಸರ್ವಜನ ಮಾನ್ಯ | ಆನಂದಯುಕ್ತ, ಸ್ತ್ರೀ ಸೌಖ್ಯ ಸತ್ಕೀರ್ತವಂತ, ಧರ್ಮರತ, ಮಾತಾ ಪಿತೃಭಕ್ತಿಯುಳ್ಳವನು | ೯ |
| | ಶುಕ್ರ | ಭೂಪತಿ | ಭೂಷಣವಂತ, ವಸ್ತ್ರ, ಗೃಹ, ಶಯ್ಯೋಪಕರಣ ಉಳ್ಳವನು, ಸುಗಂಧ ದ್ರವ್ಯ, ಪುಷ್ಪ, ಚತುಷ್ಪದ ಸೌಖ್ಯ ವುಳ್ಳವನು | ೧೦ |
| | ಶನಿ | ಧನವಂತ | ೧ ರಿಂದ ೧೫ ಭಾಗದವರಿಗೆ ಮಾತೃ ಗಂಡ ೧೬ ರಿಂದ ೩೦ ಭಾಗದವರಿಗೆ ಪಿತೃಗಂಡ. | ೧೧ |
| | ರವಿ | ಪರಿಚಾರಕ | ವ್ಯವಸಾಯ ಚತುರ, ಜ್ಯೋತಿಷ್ಯ ತಿಳಿದವ, ಮಂತ್ರವಾದಿ, ವಾಹನ ಯುಕ್ತ, ಧನಧಾನ್ಯ ಸಮೃದ್ಧಿ, ಸ್ವಕಾರ್ಯ ಧುರೀಣ | ೧೨ |

| ಚಂದ್ರ-ನಿರುವ ರಾಶಿ | ನೋಡಲ್ಪಡುವ ಗ್ರಹಗಳು | ಬೃಹಜ್ಜಾತಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾ-ಭರಣೋಕ್ತ ಫಲ |
|---|---|---|---|
| ಮಿಥುನ ಅಥವಾ ಲಗ್ನ | ಕುಜ | ಅಯೋ ವ್ಯವಹಾರಿ (ಕಬ್ಬಿಣದ ಮಾರಾಟ ಮಾಡುವನು) | ಉದಾರಗುಣ, ಸ್ತ್ರೀಯುಕ್ತ, ಚತುರ, ಶೂರ, ಬುದ್ಧಿವಂತ, ಧನಧಾನ್ಯ ಸಮೃದ್ಧಿ |
| | ಬುಧ | ಪಾರ್ಥಿವ ರಾಜನಾಗುವನು | ಧೀರನು, ಸದಾಚಾರಯುಕ್ತ, ಬಲಿಷ್ಠ, ರಾಜದ್ರವ್ಯ ಪ್ರಾಪ್ತಿ |
| | ಗುರು | ವಿದ್ವಾಂಸನಾಗುವನು | ವಿದ್ಯಾವಿವೇಕಯುಕ್ತ, ಧನವಂತ, ಪ್ರಖ್ಯಾತ, ನಮ್ರತೆಯುಳ್ಳವನು |
| | ಶುಕ್ರ | ನಿರ್ಭಯಸ್ತನಾಗುವನು | ಸುವಸ್ತ್ರಧಾರಿ, ಪುಣ್ಯವಂತ, ಮೃಷ್ಟಾನ್ನಭೋಜಿ, ಸತ್ಪತ್ನೀವಂತ, ಅಲಂಕಾರವುಳ್ಳವನು |
| | ಶನಿ | ನೇಯ್ಗೆಯವನಾಗುವನು | ಧನಹೀನ, ಪುತ್ರಹೀನ, ಸ್ತ್ರೀಹೀನ ಯಾನವಾಹನ ಹೀನನು, ನಿಂದಿತನು. |
| | ರವಿ | ದರಿದ್ರನಾಗುವನು | ಪ್ರಾಜ್ಞ, ಸುಶೀಲ, ದ್ರವ್ಯವಂತ, ಕ್ಲೇಶವನ್ನು ಸಹಿಸುವನು, ಆನಂದದಾಯಕನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಕಟಕ ಅಥವಾ ಲಗ್ನ | ಕುಜ | ಯುದ್ಧ ಮಾಡುವನು | ಚತುರ, ಶೂರ, ಮಾತೃವಿರೋಧಿ ದುರ್ಬಲ ಶರೀರ |
| | ಬುಧ | ಕವಿಯಾಗು ವನು | ಪತ್ನೀ, ಪುತ್ರ, ದ್ರವ್ಯ ಇವುಗಳ ಸುಖ ವಂತ, ಸೇನಾಪತಿ ಅಥವಾ ಮಂತ್ರಿಯಾಗುವನು. |
| | ಗುರು | ಪಂಡಿತ ನಾಗುವನು | ರಾಜನಾಗುವನು, ಸುಗುಣಾಗ್ರೇಸರ ಸುಖಾನ್ವಿತ, ಪರಾಕ್ರಮವಂತ ಅಥವಾ ಚಕ್ರವರ್ತಿಯಾದರೂ ಆಗುವನು. |
| | ಶುಕ್ರ | ಭೂಪತಿ ಯಾಗುವನು | ರತ್ನಗಳು, ರತ್ನಾಭರಣಗಳು, ಸತ್ಕುಲ ಪ್ರಸೂತಳಾದ ಹೆಂಡತಿಯುಳ್ಳ ವನಾಗುವನು |
| | ಶನಿ | ಆಯುಧಜೀವಿ ಯಾಗುವನು | ಸತ್ಯಹೀನ, ಮಾತೃವಿರೋಧಿ, ಸಂಚಾರ ಶೀಲ, ಪಾಪರತ, ದ್ರವ್ಯವ್ಯಯ. |
| | ರವಿ | ನೇತ್ರವ್ಯಾಧಿ ಪೀಡಿತನು | ನಿರರ್ಥಕ ಕ್ಲೇಶಕಾರಿ, ದುರ್ಗಾಧಿಕಾರಿ ರಾಜಾಶ್ರಯವಿರುವವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಸಿಂಹ ರಾಶಿ ಅಥವಾ ಲಗ್ನ | ಕುಜ | ಭೂಪತಿ ಯಾಗುವನು | ರಾಜಮಂತ್ರಿ, ಧನವಾಹನಯುಕ್ತ ಕಲತ್ರ ಸುಖವಂತ |
| | ಬುಧ | ಜ್ಯೋತಿಷಜ್ಞ ನಾಗುವನು | ಧನವಂತ, ಪತ್ನೀ, ಪುತ್ರ ಸೌಖ್ಯವುಳ್ಳ ವನು, ಯಾನ ವಾಹನಗಳುಳ್ಳವನು. |
| | ಗುರು | ಆಢ್ಯಃ-ಧನಿಕ ನಾಗುವನು | ಬಹು ಶ್ರುತ, ಸಾಧುವೃತ್ತಿ ರಹಿತ ರಾಜಸ ಮಂತ್ರಿಯಾಗುವನು. |
| | ಶುಕ್ರ | ರಾಜನಾಗು ವನು | ಸ್ತ್ರೀ ವೈಭವಯುಕ್ತ, ಅತಿಶಯ ಗುಣ ವಂತ, ಬುದ್ಧಿರ್ಮಾ-ಜ್ಯೋತಿಷ ತಿಳಿದವನು |
| | ಶನಿ | ಕ್ಷೌರಿಕ ನಾಗುವನು | ಕೃಷಿಕರ್ಮದಕ್ಷ, ದುರ್ಗಾಧಿಕಾರಿ, ಅಲ್ಪ ಕಾರ್ಯಾಸಕ್ತ, ಕಾಂತಾ ವಿಯೋಗದಿಂದ ದುಃಖಪಡುವನು. |
| | ಸೂರ್ಯ | ಅರಸ ನಾಗುವನು | ಗುಣವಂತ, ಸರ್ವಕಾಲದಲ್ಲಿ ರಾಜಪ್ರೀತಿ ಯುಳ್ಳವನು, ಉತ್ತಮವಾದ ಪಾದವುಳ್ಳ ವನು, ಸಂತತಿಹೀನ. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಕನ್ಯಾ ರಾಶಿ ಅಥವಾ ಲಗ್ನ | ಕುಜ | ಸ್ತ್ರೀಯರ ನ್ನಾಶ್ರಯಿಸಿ ಜೀವಿಸುವನು | ಹಿಂಸಕ, ಶೂರ, ಕೋಪಿಷ್ಠ, ರಾಜಾ-ಶ್ರಯ ಉಳ್ಳವನು, ಯುದ್ಧದಲ್ಲಿ ಜಯ ಉಳ್ಳವನು. |
| | ಬುಧ | ರಾಜನಾಗು ವನು | ಜ್ಯೋತಿರ್ವಿದ್ಯಾ ಪಂಡಿತ, ಸಂಗೀತ ವಿದ್ಯಾ ನಿಪುಣ, ಪ್ರಾಜ್ಞ, ಯುದ್ಧದಲ್ಲಿ ಕೀರ್ತಿವಂತ, ಗೌರವಯುಕ್ತ |
| | ಗುರು | ಸೇನಾಪತಿ ಯಾಗುವನು | ಬಹು ಕುಟುಂಬಿ, ರಾಜಪ್ರಿಯ ಸುಶೀಲನು, ಸತ್ಕೀರ್ತಿವಂತ. |
| | ಶುಕ್ರ | ಚಮತ್ಕಾರ ಉಳ್ಳವ ನಾಗುವನು | ಸುಂದರವಾದ ಸ್ತ್ರೀಯರಲ್ಲಿ ಭೋಗ ಉಳ್ಳವನು, ಕಾಂತಾಶ್ರಿತ, ರಾಜದ್ರವ್ಯ ಪ್ರಾಪ್ತಿ, ಸ್ತ್ರೀಯರ ಅಧೀನ. |
| | ಶನಿ | ಸ್ತ್ರೀಯರ ಆಶ್ರಯದಿಂದ ಜೀವಿಸುವನು | ದರಿದ್ರ, ಬುದ್ಧಿಹೀನ, ಸ್ತ್ರೀ ಮೂಲ ದಿಂದ ದ್ರವ್ಯವನ್ನು ಸಂಪಾದಿಸುವನು. |
| | ಸೂರ್ಯ | ಸ್ತ್ರೀಮೂಲ ದಿಂದ ಜೀವಿಸುವನು | ರಾಜ ದ್ರವ್ಯಾಧಿಕಾರಿ, ಸ್ತ್ರೀರಹಿತ, ಗುರು ಭಕ್ತಿಯುಳ್ಳವನು, ಸುಶೀಲ. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ತುಲಾ ರಾಶಿ ಅಥವಾ ಲಗ್ನ | ಬುಧ | ಅರಸನಾಗು ವನು | ಕಲಾಶಾಸ್ತ್ರ ತಿಳಿದವನು, ಧನ, ಧಾನ್ಯ ವಂತ, ವಾಚಾಳಿ, ವಿದ್ಯಾವೈಭವಯುಕ್ತ |
| | ಗುರು | ಸುವರ್ಣ ವ್ಯಾಪಾರಿ ಯಾಗುತ್ತಾನೆ | ವಸ್ತ್ರ, ಆಭರಣ, ಕ್ರಯ ವಿಕ್ರಯಗಳಲ್ಲಿ ಕುಶಲ, ಸುವರ್ಣ ವ್ಯಾಪಾರ ಮಾಡುತ್ತಾನೆ |
| | ಶುಕ್ರ | ವ್ಯಾಪಾರ ದಿಂದ ಜೀವಿಸುವನು | ಜ್ಞಾನವುಳ್ಳವನು, ಅನೇಕ ಕಾರ್ಯಗಳನ್ನು ಸಾಧಿಸಿ ದ್ರವ್ಯವಂತನಾಗುವನು, ರಾಜಕೃಪೆ, ಸುಕುಮಾರವಾದ ಶರೀರ ಉಳ್ಳವನು, ಸಂತೋಷಚಿತ್ತ. |
| | ಶನಿ | ಪರಕಾರ್ಯ ವಿಮುಖಿ ನಾಗುವನು | ಧನವಂತ, ಧಾನ್ಯವಂತ, ವಾಹನ ಸಾಮಗ್ರಿಯುಳ್ಳವನು, ವಿಷಯೋಪ ಭೋಗಗಳಲ್ಲಿ ಪ್ರಯೋಜನ ಹೊಂದದವನು. |
| | ರವಿ | ಪರಕಾರ್ಯ ವಿಮುಖಿ ನಾಗುವನು | ಸದಾ ಚಂಚಲ, ಸಂಚಾರಶೀಲ, ಧನ ಧಾನ್ಯಹೀನ, ದುರ್ಭಾಗಿಗಳಾದ ಪತ್ನೀ ಪುತ್ರರುಳ್ಳವನು. |
| | ಕುಜ | ಪರಕಾರ್ಯ ವಿಮುಖಿ ನಾಗುವನು | ಬುದ್ಧಿಪೂರ್ವಕವಾಗಿ ಅಪಕಾರ ಮಾಡು ವನು, ಹಟ ಹಿಡಿಯತಕ್ಕವನು, ವಿಷಯೋಪ ಭೋಗಗಳಲ್ಲಿ ಸಂಕಟ ಪಡತಕ್ಕವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗೃಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ವೃಶ್ಚಿಕ ರಾಶಿ ಅಥವಾ ಲಗ್ನ | ಬುಧ | ಇಬ್ಬರು ತಂದೆ ಯುಳ್ಳವನು | ವಾಗ್ಮಿ, ಯುದ್ಧದಲ್ಲಿ ಸಮರ್ಥ, ಯಾವಾಗಲೂ ಕಪಟದಿಂದ ಕಾರ್ಯ ಮಾಡುವನು. |
| | ಗುರು | ವಿನಯ ಯುಕ್ತ ನಾಗುವನು | ಲೋಕ ವಾಡಿಕೆಗೆ ಸರಿಯಾಗಿರುವನು ಸುಂದರವಾದ ಸ್ವರೂಪವುಳ್ಳವನು ಸತ್ಕಾರ್ಯಗಳನ್ನು ಮಾಡುವವನು. ದ್ರವ್ಯವು ಭೂಷಣವುಳ್ಳವನು. |
| | ಶುಕ್ರ | ರಜಕ ನಾಗುವನು | ಪ್ರಸನ್ನವಾದವನು, ಅಧಿಕ ಯಶಸ್ವಿ ಕಪಟ ಕರ್ಮ ತಿಳಿದವನು, ಧನ ಮತ್ತು ವಾಹನಗಳಿಂದ ಪರಿಪೂರ್ಣನಾದವನು. |
| | ಶನಿ | ಅಂಗಹೀನ ನಾಗುವನು | ಪರದೇಶದಲ್ಲಿ ವಾಸಿಸುವನು, ದೈನ್ಯ ಸ್ವಭಾವದವನು, ಅಲ್ಪದ್ರವ್ಯ ಉಳ್ಳವನು, ನೀಚರಾದ ಮಕ್ಕಳುಳ್ಳವನು, ಅಲ್ಪವಾದ ಪರಾಕ್ರಮವುಳ್ಳವನು, ಕ್ಷಯರೋಗಿ. |
| | ರವಿ | ದರಿದ್ರ ನಾಗುವನು | ದುರ್ಮಾರ್ಗಿ, ಪರರಿಗೆ ಸಂಕಟ ಕೊಡುವನು, ಬಲಿಷ್ಠನು, ಅತ್ಯಂತ ಪ್ರಯಾಸಪಡತಕ್ಕವನು. |
| | ಕುಜ | ಭೂಪತಿ ಯಾಗುವನು | ಯುದ್ಧದಲ್ಲಿ ಯಶಸ್ಸಂಪಾದಿಸುವನು. ಗೌರವಯುಕ್ತ, ಗಂಭೀರವಾದವನು ರಾಜಾನುಗ್ರಹದಿಂದ ದ್ರವ್ಯ ಸಂಪಾದಿಸುವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಕನ್ಯಾ ರಾಶಿ ಅಥವಾ ಲಗ್ನ | ಬುಧ | ಸ್ವಜನರಭರ್ತ ನಾಗುವನು ಕುಲಪತಿ ಯಾಗುವನು | ಒಳ್ಳೆ ವಾಗ್ವಿಲಾಸವುಳ್ಳವನು, ಅನೇಕ ಸೇವಕರುಳ್ಳವನು. ಜ್ಯೋತಿಷ್ಯ ಮತ್ತು ಶಿಲ್ಪಶಾಸ್ತ್ರ ತಿಳಿದವನು |
| | ಗುರು | ರಾಜನಾಗು ವನು | ರಾಜ ಪದವಿಯನ್ನು ಹೊಂದುವನು. ಸಚ್ಚರಿತ್ರನು, ಕೋಮಲವಾದ ಶರೀರ ಉಳ್ಳವನು |
| | ಶುಕ್ರ | ಜನರಿಗೆ ಆಶ್ರಯಭೂತ ನಾಗುವನು | ಪುತ್ರಸಂತಾನಾರ್ಥವಾಗಿ ಅತ್ಯಂತ ವ್ಯಯ ಮಾಡುವವನು. ಧರ್ಮಮಾಡು ವವನು, ಸೌಖ್ಯವಂತ. |
| | ಶನಿ | ಡಾಂಭಿಕನು ಪರಕಾರ್ಯ ವಿಮುಖನು | ಸತ್ವಗುಣವುಳ್ಳವನು. ಬಲಾಧಿಕನು ಶಾಸ್ತ್ರಾನುವರ್ತಿಯಾಗಿ ನಡೆಯುವವನು ಕಿವಿಗಿಂಪಾಗಿ ಮಾತನಾಡುವವನು. ಸಕಲ ಕಾರ್ಯಗಳಲ್ಲಿ ಅನುಭವ ಉಳ್ಳವನು ಪ್ರಚಂಡ. |
| | ರವಿ | ಡಾಂಭಿಕನು ಪರಕಾರ್ಯ ವಿಮುಖನು | ಪ್ರತಾಪ, ಕೀರ್ತಿಯುಳ್ಳವನು, ಸಕಲೈ-ಶ್ವರ್ಯದಿಂದ ಕೂಡಿದವನು, ಉತ್ತಮ ವಾದ ವಾಹನ ಉಳ್ಳವನು. ಯುದ್ಧದಲ್ಲಿ ಜಯವಂತ, ರಾಜಪ್ರೀತಿಯುಳ್ಳವನು. |
| | ಕುಜ | ಡಾಂಭಿಕನು ಪರಕಾರ್ಯ ವಿಮುಖನು | ಅತಿಶಯ ಕೀರ್ತಿವಂತನಾದ ಸೇನಾಪತಿ ಲಕ್ಷ್ಮಿಯ ಸಾನ್ನಿಧ್ಯವುಳ್ಳವನು. ವಸ್ತ್ರಾಭರಣ ಭೂಷಣವುಳ್ಳವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಮಕರ ರಾಶಿ ಅಥವಾ ಲಗ್ನ | ಬುಧ | ಚಕ್ರವರ್ತಿ ಯಾಗುವನು | ಬುದ್ಧಿಹೀನ, ನಿರ್ಧನ, ಮನೆ ಬಿಟ್ಟು ಹೋಗುವನು |
| | ಗುರು | ರಾಜನಾಗು ವನು | ರಾಜಪುತ್ರ, ಸತ್ಯವಂತ, ಗುಣಗ್ರಹಣ ಮಾಡುವನು, ಸ್ತ್ರೀಪುತ್ರಾದಿ ಸಂಪದ್ಯುಕ್ತನು |
| | ಶುಕ್ರ | ವಿದ್ವಾಂಸ ನಾಗುವನು | ವಿಶಾಲವಾದ ನೇತ್ರಗಳುಳ್ಳವನು, ಧನ ವಂತ, ವಾಹನವುಳ್ಳವನು. ಪುತ್ರವಂತ, ವಿಶೇಷವಾದ ವಸ್ತ್ರಾಭರಣವುಳ್ಳವನು. |
| | ಶನಿ | ಧನವಂತ ನಾಗುವನು | ಆಲಸ್ಯವುಳ್ಳವನು. ಅಲ್ಪ ಧನವಂತ ಸುಳ್ಳು ಹೇಳುವವನು. ಅನೇಕ ದುರ್ವ್ಯಸನ ಗಳುಳ್ಳವನು. |
| | ರವಿ | ದರಿದ್ರ ನಾಗುವನು | ದರಿದ್ರ, ಮಲಿನ, ಸಂಚಾರಶೀಲ, ಕರುಣಾರಸದ ಬುದ್ಧಿ ಇಲ್ಲದವನು, ಸದಾ ದುಃಖಪಡುವವನು. |
| | ಕುಜ | ಭೂಪತಿ ಯಾಗುವನು | ಅತಿಪ್ರಚಂಡ, ಧನ, ಧಾನ್ಯ ಸಮೃದ್ಧಿ ಯುಳ್ಳವನು, ಚೆನ್ನಾಗಿ ತಿಳುವಳಿಕೆಯುಳ್ಳ ವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ಕುಂಭ ರಾಶಿ ಯಲ್ಲಿ ಅಥವಾ ಲಗ್ನ | ಕುಜ | ಭೂಪತಿ ಯಾಗುವನು | ಧನ, ಗೃಹ, ವಿಷಯೋಪಭೋಗಯುಕ್ತ, ಭೋಜನಪ್ರಿಯ ಅತ್ಯಂತ ಪವಿತ್ರ |
| | ಬುಧ | ಭೂಪ ಸಮಾನ ನಾಗುವನು | ಪೃಥ್ವೀ, ನಗರ, ಗ್ರಾಮ, ಇವುಗಳ ಅಧಿಪತಿ, ಉತ್ತಮವಾದ ಭೋಗವುಳ್ಳ ವನು, ಅತಿಶಯ ಶ್ರೇಷ್ಠನು. |
| | ಗುರು | ಪರಸ್ತ್ರೀಯಾಸಕ್ತ ನಾಗುವನು | ಪರದಾರಲಂಪಟ, ಪುತ್ರ, ಗೃಹ, ಸ್ತ್ರೀ ಈ ಸಂಪತ್ತುಗಳಿಲ್ಲದವನು, ಗೌರವಹೀನ. |
| | ಶುಕ್ರ | ಪರದಾರ ರತನು | ನಖವಿರುವ ಜಂತುವಿನಿಂದ ಸೌಖ್ಯ, ಚತುಷ್ಪದ ಸೌಖ್ಯವುಳ್ಳವನು. ಧರ್ಮ ಬಾಹ್ಯನು, ದುಷ್ಟ ಸ್ತ್ರೀಯಲ್ಲಿ ಪ್ರೀತಿಯುಳ್ಳವನು. |
| | ಶನಿ | ಪರದಾರ ರತನು | ಭೂ ವ್ಯವಸಾಯ ಮಾಡುವುದರಲ್ಲಿ ಲಾಭವುಳ್ಳವನು, ಕಪಟಿ, ರಾಜಾಶ್ರಯ ಉಳ್ಳವನು, ಧರ್ಮರತ. |
| | ಸೂರ್ಯ | ಪರಸ್ತ್ರೀಯಾಸಕ್ತ ನಾಗುವನು | ಮನೆ, ತಾಯಿ, ತಂದೆ ಇವುಗಳಿಂದ ರಹಿತನು ಸುಳ್ಳು ಹೇಳುವನು, ದುಷ್ಟ ಮನಸ್ಸುಳ್ಳವನು. |

| ಚಂದ್ರ ನಿರುವ ರಾಶಿ | ನೋಡ ಲ್ಪಡುವ ಗ್ರಹಗಳು | ಬೃಹಜ್ಜಾತ ಕೋಕ್ತ ಫಲ | ಧುಂಡಿರಾಜೋಕ್ತ ಜಾತಕಾಭರಣದಲ್ಲಿ ಫಲ |
|---|---|---|---|
| ವೃಷಭ ೧ ಅಥವಾ ಲಗ್ನ | ಬುಧ | ಹಾಸ್ಯಜ್ಞ ನಾಗುವನು | ವೇಶ್ಯಾ ಸ್ತ್ರೀ ಸುಖವುಳ್ಳವನು,ಪುತ್ರ ಸುಖ, ರಾಜಗೌರವ, ಮೊದಲಾದ ಸೌಖ್ಯ ವುಳ್ಳವನು. |
| | ಗುರು | ನೃಪತಿ ಯಾಗುವನು | ಉದಾರ ಬುದ್ಧಿ, ಸುಕುಮಾರವಾದ ಶರೀರ, ಸತ್ಕುಲಪ್ರಸೂತಳಾದ ಪತ್ನಿ ದ್ರವ್ಯಸುಖ ಮತ್ತು ರಾಜನೂ ಆಗುವನು. |
| | ಶುಕ್ರ | ಪಂಡಿತ ನಾಗುವನು | ಸಂಗೀತ ವಾದ್ಯಾದಿಗಳಲ್ಲಿ ಪ್ರೀತಿ ಯುಳ್ಳವನು, ಸದಾಚಾರವಂತ, ವಿಲಾಸಿನಿ ಯರಲ್ಲಿ ವಿಲಾಸ ಉಳ್ಳವನು. |
| | ಶನಿ | ಪಾಪಕರ್ಮಿ | ನಿರಂತರ ಕಾಮಾತುರ, ಸ್ತ್ರೀ ಪುತ್ರ ರಹಿತ |
| | ರವಿ | ಪಾಪಿಷ್ಠ | ವಿಷಯಾಸಕ್ತನು, ಅತ್ಯಂತ ಸೌಖ್ಯ, ಸೇನಾಪತಿ ಅನೇಕ ವಿಧವಾಗಿ ದ್ರವ್ಯ ಬರುವುದು. |
| | ಕುಜ | ಪಾಪಮನಸ್ಸು ಉಳ್ಳವನು | ಶತ್ರುಗಳಿಂದ ಅಭಿವೃದ್ಧಿಗೆ ಕುಂದಕ ವಾದವನು, ಸೌಖ್ಯಹೀನ, ವ್ಯಭಿಚಾರಿ ಯಲ್ಲಿ ಮಿತ್ರತ್ವ ಉಳ್ಳವನು |

ಹೋರಾ, ದ್ರೇಕ್ಕಾಣ, ದ್ವಾದಶಾಂಶ, ತ್ರಿಂಶಾಂಶಸ್ಥ ಚಂದಸ್ಥ ಗ್ರಹದೃಷ್ಟಿ ಫಲಂ

| ಅಂಶ | ಚಂದ್ರನು ಯಾವ ಅಂಶೆಯಲ್ಲಿದ್ದರೆ | ಯಾವ ಹೋರೆಯಲ್ಲಿದ್ದ ಗ್ರಹಗಳು ನೋಡಿದರೆ | ಉಂಟಾಗತಕ್ಕ ಸ್ವಭಾವ (ಫಲ) |
|---|---|---|---|
| ಹೋರಾ (೧) | ಚಂದ್ರ ಹೋರೆಯಲ್ಲಿ | ಚಂದ್ರ ಹೋರೆಯಲ್ಲಿ | ಶುಭಫಲ |
| | ಸೂರ್ಯ ಹೋರೆಯಲ್ಲಿ | ಸೂರ್ಯ ಹೋರೆಯಲ್ಲಿ | ಶುಭಫಲ |
| | ಚಂದ್ರ ಹೋರೆಯಲ್ಲಿ | ಸೂರ್ಯ ಹೋರೆಯಲ್ಲಿ | ಶುಭಫಲ |
| | ಸೂರ್ಯ ಹೋರೆಯಲ್ಲಿ | ಚಂದ್ರ ಹೋರೆಯಲ್ಲಿ | ಅಶುಭಫಲ |
| ದ್ರೇಕ್ಕಾಣ (೨) | ಯಾವ ದ್ರೇಕ್ಕಾಣ ದಲ್ಲಿರುವ | ಆ ದ್ರೇಕ್ಕಾಣಾಧಿಪತಿಯಿಂದ ನೋಡಲ್ಪಟ್ಟರೆ | ಶುಭಕರನು |
| | " | ಅನ್ಯದ್ರೇಕ್ಕಾಣದಲ್ಲಿದ್ದ ಗ್ರಹಗಳು ನೋಡಿದರೆ | ಅಶುಭಕರನು |
| | " | ಶುಭಗ್ರಹ ದ್ರೇಕ್ಕಾಣಾಧಿಪತಿ ಗಳಾಗಿ ನೋಡಿದರೆ | ಶುಭಫಲ |
| | " | ಪಾಪಗ್ರಹಗಳು ದ್ರೇಕ್ಕಾಣಾ ಧಿಪತಿಗಳಾಗಿ ನೋಡಿದರೆ | ಅಶುಭಫಲ |
| ದ್ವಾದಶಾಂಶ (೩) | ಯಾವ ದ್ವಾದಶಾಂಸೆಯಲ್ಲಿ ಚಂದ್ರನಿರುನು | ಶುಭಗ್ರಹ ದ್ವಾದಶಾಂಶೆ ಯಲ್ಲಿದ್ದು ನೋಡಿದರೆ | ಶುಭಫಲ |
| | " | ಪಾಪಗ್ರಹ ದ್ವಾದಶಾಂಶೆ ಯಲ್ಲಿದ್ದು ನೋಡಿದರೆ | ಅಶುಭಫಲ |
| ತ್ರಿಂಶಾಂಶ (೪) | ತ್ರಿಂಶಾಂಶೆಯಲ್ಲಿದ್ದ ಚಂದ್ರ | ಆ ತ್ರಿಂಶಾಂಶಾಧಿಪತಿ ನೋಡಿದರೆ | ಶುಭಫಲ |
| | ಶುಭ ತ್ರಿಶಾಂಶೆಯಲ್ಲಿದ್ದ ಚಂದ್ರನನ್ನು | ಶುಭತ್ರಿಂಶಾಂಶೆಯಲ್ಲಿದ್ದ ಗ್ರಹಗಳು ನೋಡಿದರೆ | ಶುಭಫಲ |
| | ಪಾಪ ತ್ರಿಂಶಾಂಶೆಯಲ್ಲಿದ್ದ ಚಂದ್ರನನ್ನು | ಪಾಪತ್ರಿಂಶಾಂಶೆಯಲ್ಲಿದ್ದ ಗ್ರಹಗಳು ನೋಡಿದರೆ | ಪಾಪಫಲ |

ಮೇಷಾದಿ ದ್ವಾದಶ ರಾಶಿ ನವಾಂಶಸ್ಥ ಚಂದ್ರನನ್ನು ಸೂರ್ಯಾದಿ ಗ್ರಹಗಳ ದೃಷ್ಟಿಫಲ

| ಸಂಖ್ಯೆ | ನವಾಂಶದಲ್ಲಿದ್ದ ಚಂದ್ರನು | ನೋಡುವ ಗ್ರಹಗಳು | ಫಲ ಸ್ವಭಾವ |
|---|---|---|---|
| | ಯಾವ ರಾಶಿಯಲ್ಲಾ | ಸೂರ್ಯನಿಂದ | ನಗರ ರಕ್ಷಾಧಿಕಾರಿ |
| | ದರೂ ಮೇಷ ವೃಶ್ಚಿಕ | ಕುಜ " | ಪ್ರಾಣಿ ಹಿಂಸಕ |
| ೧ | ನವಾಂಶೆಯಲ್ಲಿದ್ದು | ಬುಧ " | ಬಹು ಯುದ್ಧ ಕುಶಲ |
| | | ಗುರು " | ಭೂಪತಿ |
| | | ಶುಕ್ರ " | ಧನವಂತ |
| | | ಶನಿ " | ಕಲಹಪ್ರಿಯ |
| | ಯಾವ ರಾಶಿಯಲ್ಲಾ | ಸೂರ್ಯನಿಂದ | ಮೂರ್ಖ |
| | ದರೂ ವೃಷಭತುಲಾ | ಕುಜ " | ಅನ್ಯದಾರರತ |
| | ನವಾಂಶೆಯಲ್ಲಿದ್ದು | ಬುಧ " | ಸುಕವಿ |
| ೨ | | ಗುರು " | ಸತ್ಕಾವ್ಯ ಮಾಡುವನು |
| | | ಶುಕ್ರ " | ಸುಖಾಸಕ್ತ |
| | | ಶನಿ " | ಅನ್ಯ ಕಳತ್ರಗಾಮಿ |
| | ಯಾವ ರಾಶಿಯಲ್ಲಾ | ಸೂರ್ಯನಿಂದ | ಮುಷ್ಟಿಯುದ್ಧ ಮಾಡುವನು |
| | ದರೂ ಮಿಥುನ | ಕುಜ " | ಚೋರ |
| ೩ | ಕನ್ಯಾ | ಬುಧ " | ಕವೀಂದ್ರ |
| | ನವಾಂಶೆಯಲ್ಲಿದ್ದು | ಗುರು " | ಮಂತ್ರಿ |
| | | ಶುಕ್ರ " | ಯಜ್ಞ ಮಾಡುವನು |
| | | ಶನಿ " | ಶಿಲ್ಪನಿಪುಣ |

| ಸಂಖ್ಯೆ | ನವಾಂಶದಲ್ಲಿದ್ದ ಚಂದ್ರನು | ನೋಡುವ ಗ್ರಹಗಳು | ಫಲ ಸ್ವಭಾವ |
|---|---|---|---|
| ೪ | ಯಾವ ರಾಶಿಯಲ್ಲಾದರೂ ಕರ್ಕಾಟಕ ನವಾಂಶೆಯಲ್ಲಿದ್ದು | ಸೂರ್ಯನಿಂದ | ಕೃಶಶರೀರ |
| | | ಕುಜ " | ಅರ್ಥಾಭಿಲಾಷಿ (ಅಲ್ಪಧನಿ) |
| | | ಬುಧ " | ತಪಸ್ವಿ |
| | | ಗುರು " | ಮುಖ್ಯ ಪ್ರಧಾನ |
| | | ಶುಕ್ರ " | ಸ್ತ್ರೀಪೋಷ್ಯ |
| | | ಶನಿ " | ಕಾರ್ಯಾಸಕ್ತಿಯುಳ್ಳವ |
| ೫ | ಯಾವರಾಶಿಯಲ್ಲಾದರೂ ಸಿಂಹನವಾಂಶೆಯಲ್ಲಿದ್ದು | ಸೂರ್ಯನಿಂದ | ಕ್ರೋಧವುಳ್ಳವನು |
| | | ಕುಜ " | ರಾಜಪ್ರಿಯ |
| | | ಬುಧ " | ನಿಧೀಶ |
| | | ಗುರು " | ಪ್ರಭು |
| | | ಶುಕ್ರ " | ಪುತ್ರಹೀನ |
| | | ಶನಿ " | ಅತಿ ಹಿಂಸಾಕರ |
| ೬ | ಯಾವ ರಾಶಿಯಲ್ಲಾದರೂ ಧನುರ್ಮಿನ ನವಾಂಶೆಯಲ್ಲಿದ್ದ ಚಂದ್ರನು | ಸೂರ್ಯನಿಂದ | ಪ್ರಖ್ಯಾತವಾದ ಬಲವುಳ್ಳವ |
| | | ಕುಜ " | ಯುದ್ಧದಲ್ಲಿ ಚತುರ |
| | | ಬುಧ " | ಹಾಸ್ಯಜ್ಞ |
| | | ಗುರು " | ರಾಜಮಂತ್ರಿ |
| | | ಶುಕ್ರ " | ನಪುಂಸಕ |
| | | ಶನಿ " | ಧರ್ಮಬುದ್ಧಿಯುಳ್ಳವನು |

| ಸಂಖ್ಯೆ | ನವಾಂಶದಲ್ಲಿದ್ದ ಚಂದ್ರನು | ನೋಡುವ ಗ್ರಹಗಳು | ಫಲ ಸ್ವಭಾವ |
|---|---|---|---|
| | ಮಕರ ಕುಂಭ ನವಾಂಶ ಸ್ಥಿತ ಚಂದ್ರನು | ಸೂರ್ಯನಿಂದ | ಅಲ್ಪಪುತ್ರರುಳ್ಳವನು |
| | | ಕುಜ " | ಧನಿಕ ಮತ್ತು ದುಃಖಭಾಗಿ |
| | | ಬುಧ " | ಮಾನಾಸಕ್ತ ಅಹಂಕಾರಿ |
| | | ಗುರು " | ಕುಲಾಚಾರಾನುರಕ್ತ |
| | | ಶುಕ್ರ " | ದುಷ್ಟಸ್ತ್ರೀಸಂಸಕ್ತ |
| | | ಶನಿ " | ರೋಷವುಳ್ಳವನು |

| ಸಂಖ್ಯೆ | ಸೂರ್ಯನಿರತಕ್ಕ ರಾಶಿ | ಸೂರ್ಯನಿರತಕ್ಕ ನವಾಂಶ | ಫಲ ಸ್ವಭಾವ |
|---|---|---|---|
| | ಯಾವರಾಶಿಯಲ್ಲಾದರೂ, ಸೂರ್ಯನು ಚಂದ್ರನಿಂದ ನೋಡಲ್ಪಟ್ಟರೆ | ೧ ಕುಜಾಂಶೆಯಲ್ಲಿದ್ದರೆ | ಗ್ರಾಮರಕ್ಷಣಾಧಿಕಾರಿ |
| | | ೨ ಶುಕ್ರಾಂಶೆಯಲ್ಲಿದ್ದರೆ | ಮೂರ್ಖನಾಗುವನು |
| | | ೩ ಬುಧಾಂಶೆಯಲ್ಲಿದ್ದರೆ | ಮಲ್ಲಯುದ್ಧದಲ್ಲಿ ಚತುರನು |
| | | ೪ ಸ್ವನವಾಂಶೆಯಲ್ಲಿದ್ದರ | ಕ್ರೋಧಸಹಿತನು |
| | | ೫ ಗುರುನವಾಂಶೆಯಲ್ಲಿದ್ದರೆ | ಪ್ರಖ್ಯಾತಯಶಸ್ವಿ |
| | | ೬ ಶನಿನವಾಂಶೆಯಲ್ಲಿದ್ದರೆ | ಅಲ್ಪಪುತ್ರರುಳ್ಳವನು |
| | | ೭ ಕರ್ಕಾಟಕಾಂಶೆಯಲ್ಲಿದ್ದರೆ | ಕೃಶವಾದ ಶರೀರವುಳ್ಳವನು |

ಇತಿ ಶ್ರೀ ಅವಂತಿಕಾಚಾರ್ಯವರಾಹ ಮಿಹಿರಭಟ್ಟ ವಿರಚಿತೇ ಬೃಹಜ್ಜಾತ-
ಕಾಖ್ಯೇ ಹೋರಾಶಾಸ್ತ್ರೇ ಸೂರ್ಯಾದಿ ಗ್ರಹಾಣಾಂ ದೃಷ್ಟಿ ಫಲ
ನಿರೂಪಣಾಖ್ಯ ಏಕೋನವಿಂಶತಿ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ಏಕೋನವಿಂಶತಿ ಪ್ರಕರಣಂ ಸಂಪೂರ್ಣಂ

## ೨೦ನೇ ಭಾವ ಫಲ ಪ್ರಕರಣಂ

ಅವತಾರಿಕೆ - ಈ ಗ್ರಂಥಕರ್ತರು ಇದುವರೆವಿಗೆ ಹೇಳಲ್ಪಟ್ಟ ಪ್ರಕರಣಗಳಲ್ಲಿ ಲಗ್ನಾದಿ ದ್ವಾದಶ ಭಾವಗಳಲ್ಲಿ ಸೂರ್ಯಾದಿ ಗ್ರಹಗಳ ಫಲವನ್ನು ಹೇಳಲಿಲ್ಲ. ಈ ವಿಷಯವು ಹೋರಾಶಾಸ್ತ್ರಕ್ಕೆ ಅವಶ್ಯಕವಾಗಿರುವುದಾಗಿದೆ. ಏಕೆಂದರೆ, ಈ ಭಾವಗಳಲ್ಲಿರತಕ್ಕ ಗ್ರಹಗಳು ಯಾವ ಯಾವ ಫಲ ಕೊಡಲು ಅವರಿಗೆ ಯೋಗ್ಯತೆ ಯುಂಟೋ ಆ ಫಲಗಳನ್ನೂ ಈ ದ್ವಾದಶಭಾವಗಳಲ್ಲಿ ಕೊಡತಕ್ಕವರೆಲ್ಲರನ್ನೂ ಅವರವರ ದಶಾಕಾಲಗಳಲ್ಲೂ ಭುಕ್ತಿಕಾಲಗಳಲ್ಲು ಕೊಡುವರು.

ಮೂಲ॥ ಶೂರಸ್ತಬ್ಧೋವಿಕಲನಯನೋ ನಿರ್ಘೃಣೋರ್ಕೇತನುಸ್ಥೇ । ಮೇಷೇ ಸಸ್ವಸ್ತಿಮಿರನಯನ ಸ್ಸಿಂಹಸಂಸ್ಥೇ ನಿಶಾಂಧಃ ॥ ನೀಚೇಂಧೋಃ ಸ್ವಶ್ಚ ಶಿಗ್ರುಹಗತೇ ಬುದ್ಬುದಾಕ್ಷಃ ಪತಂಗೇ । ಭೂರಿದ್ರವ್ಯೋ ನೃಪಹೃತಧನೋ ವಕ್ತ್ರರೋಗೀ ದ್ವಿತೀಯೇ ॥೧॥

ಅವತಾರಿಕೆ॥ ಈ ಶ್ಲೋಕದಲ್ಲಿ ಸೂರ್ಯನು ತನುಭಾವ ಮತ್ತು ಧನಭಾವದಲ್ಲಿದ್ದ ಫಲವು ಹೇಳಲ್ಪಡುತ್ತೆ.

### ತನುಭಾವಸ್ಥಿತ ಸೂರ್ಯಫಲಂ

ಟೀಕ॥ ಅರ್ಕೇ-ಸೂರ್ಯನು, ತನುಸ್ಥೇ ಜನ್ಮಲಗ್ನದಲ್ಲಿದ್ದರೆ, ಶೂರಃ-ಯುದ್ಧದಲ್ಲಿ ಸಮರ್ಥನು, ಸ್ತಬ್ಧಃ-ಪಶುಗಳಂತೆ ಅಲ್ಪದಿಂದಿರುವವನು, ವಿಕಲನಯನಃ-ಓರೆದೃಷ್ಟಿ ಯುಳ್ಳವನು, ನಿರ್ಘೃಣಃ-ನಿರ್ದಯವುಳ್ಳವನು. ಈ ಫಲಗಳು ಸೂರ್ಯನಿರುವ ಜನ್ಮ ಲಗ್ನಕ್ಕೆ ಸಾಮಾನ್ಯಫಲಗಳು, ಮೇಷ, ಸಿಂಹ, ತುಲಾ, ಕರ್ಕಟಕಗಳಲ್ಲಿ ಯಾವುದಾದರೂ ಲಗ್ನವಾಗಿ ಆ ಲಗ್ನದಲ್ಲಿ ಸೂರ್ಯನಿದ್ದರೆ ಈ ಫಲವನ್ನು ಹೇಳಕೂಡದು. ಆ ರಾಶಿ ಲಗ್ನಗಳಾದರೆ ವಿಶೇಷವೆಂದರೆ, ಮೇಷೇ-ಮೇಷರಾಶಿಯು ಲಗ್ನವಾಗಿ ಅಲ್ಲಿ ಸೂರ್ಯನಿದ್ದರೆ ಸಸ್ವ-ಧನವಂತನು, ತಿಮಿರನಯನಃ-ಕತ್ತಲೆಗಣ್ಣು, (ಬಾಡಿಗಣ್ಣುಳ್ಳವನು), ಸಿಂಹಸ್ಥೇ- ಸಿಂಹರಾಶಿ ಲಗ್ನವಾಗಿ ಅಲ್ಲಿ ಸೂರ್ಯನಿದ್ದರೆ, ನಿಶಾಂಧಃ-ರಾತ್ರಿ ಕಣ್ಣು ಕಾಣದವನು, ನೀಚೇ-ತುಲಾರಾಶಿ ಲಗ್ನವಾಗಿ ಅದರಲ್ಲಿ ಸೂರ್ಯನಿದ್ದರೆ ಅಂಧಃ-ಕುರುಡನಾಗುವನು. ಅಸ್ವಃ-ದರಿದ್ರನಾಗುವನು, ಶಿಗ್ರುಹೇ-ಕರ್ಕಟಕ ಲಗ್ನವಾಗಿ ಸೂರ್ಯನಿದ್ದರೆ, ಬುದ್ಬುದಾಕ್ಷಃ- ಹೂಗಣ್ಣುಳ್ಳವನಾಗುವನು. ಈ ಲಗ್ನದಲ್ಲಿ ಸೂರ್ಯನಿದ್ದರೆ, ನಾರಾಯಣಭಟ್ಟಃ। ॥ಶ್ಲೋಕ॥ ತನುಸ್ಥೋ ರವಿಸ್ತುಂಗಯುಕ್ತೋ ವಿಧತ್ತೇ ಮನಃ ಸಂತಪೇದ್ದಾರ ದಾಯಾದ ವರ್ಗಾತ್। ವಪುಃ ಪೀಡ್ಯತೇ ವಾತಪಿತ್ತೇನ ನಿತ್ಯಂ

## ಚತುರ್ಥಭಾವಸ್ಥಿತ ರವಿಫಲಂ

ಚತುರ್ಥೇ-ಚತುರ್ಥ ಭಾವದಲ್ಲಿ ಸೂರ್ಯನಿರುವಾಗ ಹುಟ್ಟಿದವನು ವಿಸುಖಃ-ಸುಖಹೀನನು. ಪೀಡಿತ ಮಾನಸಃ-ಸಂಕಟ ಪಡುವ ಮನಸ್ಸುಳ್ಳವನಾಗುವನು. ಈ ವಿಷಯದಲ್ಲಿ ॥ಶ್ಲೋ॥ ನಾರಾಯಣಭಟ್ಟಃ॥ ತುರೀಯೇ ದಿನೇಶೇತಿ ಶೋಭಾದಿ ಕಾರೀ ಜನಃಸಂಲಭೇ ದ್ವಿಗ್ರಹಂ ಬಂಧುತೋಪಿ ॥ ಪ್ರವಾಸೀವಿಪಕ್ಷಾಹವೇ ಮಾನಭಂಗಂ ಕದಾಚಿನ್ನಶಾಂತಂ ಭವೇತ್ತ ಸ್ವಚೇತಃ ॥೭॥ ಮತ್ತು ಧುಂಡಿರಾಜನು॥ ಸೌಖ್ಯೇನ ಯಾನೇನ ಧನೇನಹೀನಂ ತಾತಸ್ಯ ವಿತ್ತೋಪಹತಿ ಪ್ರವೃತ್ತಂ । ಚಲನ್ನಿವಾಸಂ ಕುರುತೇ ಪುಮಾಂಸಂ ಪಾತಾಳಶಾಲೀ ನಲಿನೀವಿಲಾಸೀ ॥೮॥

## ಸೂರ್ಯನ ಪಂಚಮಭಾವಸ್ಥ ಫಲವು

ತ್ರಿಕೋಣೇ-ಪಂಚಮ ಭಾವದಲ್ಲಿ ರವಿಯಿದ್ದರೆ, ಅಸುತಃ-ಪುತ್ರಹೀನನು, ಧನವರ್ಜಿತಃ-ಧನವಿಲ್ಲದವನು ಆಗುವನು. ಈ ವಿಷಯದಲ್ಲಿ ॥ಶ್ಲೋ॥ ನಾ-ಭ॥ ಸುತಸ್ಥಾನಗೇ ಪೂರ್ವಜಾ ಪತ್ಯತಾಪೀ ಕುಶಾಗ್ರಾಮತಿರ್ಭಾಸ್ಕರೇ ಮಂತ್ರ ವಿದ್ಯಾ । ರತಿರ್ವಂಚನೇ ಸಂಚಕೋಪಿ ಪ್ರಮಾದೀ ಮೃತಿಃ ಕ್ರೋಡರೋಗಾದಿಜಾ ಭಾವನೀಯಾ ॥೯॥ ಈ ವಿಷಯಕ್ಕೆ ಧುಂಡಿರಾಜಃ ॥ ಸ್ವಲ್ಪಾಪತ್ಯಂ ಶೈಲ ದುರ್ಗೇಶ ಭಕ್ತಂ ಸೌಖ್ಯಾಯುಕ್ತಂ ಸತ್ಕ್ರಿಯಾರ್ಥೈರ್ವಿಮುಕ್ತಂ । ಭ್ರಾಂತಸ್ವಾಂತಂ ಮಾನವಂ ಹಿ ಪ್ರಕುರ್ಯಾತ್ಸೂನುಸ್ಥಾನೇ ಭಾನುಮಾನ್ವರ್ತಮಾನಃ ॥೧೦॥

## ಷಷ್ಠಭಾವಸ್ಥ ರವಿಫಲಂ

ಶತ್ರುಯಾತೇ-ಷಷ್ಠ ಸ್ಥಾನದಲ್ಲಿ ರವಿಯಿದ್ದರೆ ಬಲವಾನ್-ಬಲವಂತನು, ಶತ್ರು ಜಿತಃ-ಶತ್ರುಗಳಿಂದ ಜಯಿಸಲ್ಪಟ್ಟವನು, ಕೆಲವರು "ಷಷ್ಠೇರೋಗಶೋಕಘ್ನಃ ಎಂಬುವ ಸತ್ಯಾಚಾರ್ಯೋಕ್ತಿಯನ್ನು ಅನುಸರಿಸಿ (ಬಲವಾನ್ ನಷ್ಟರಿಪುಶ್ಚ ಶತ್ರುಯಾತೇ)* ಎಂದು ಪಠಿಸುವರು. ಈ ಗ್ರಂಥಕರ್ತರು ಷಷ್ಠಾ ಶ್ರಿತೋರ್ಕೋ ರಿಪುವನ್ನನುಸರಿಸಿ, ಷಷ್ಠಸ್ಥಾನಸ್ಥಿತಸೂರ್ಯನಿಗೆ ಅನಿಷ್ಟಫಲವನ್ನು ಹೇಳುವರು, ಇದು ಯುಕ್ತವಲ್ಲ. ಈ ವಿಷಯಕ್ಕೆ ॥ಶ್ಲೋಕ॥ನಾ-ಭ॥ ರಿಪುಧ್ವಂಸ ಕೃದ್ಭಾಸ್ಕರೋಯಸ್ಯ ಷಷ್ಠೇ ತನೋತಿವ್ಯಯಂರಾಜತೋ ಮಿತ್ರತೋವಾ । ಕುಲೇಮಾತುರಾಪ ಚತುಷ್ಪಾದ ತೋವಾಪ್ರಯಾಣೈ ರ್ನಿಷಾದೈ ರ್ವಿಷಾದಂ ಕರೋತಿ ॥೧೧॥ ಮತ್ತು ಧುಂಡಿರಾಜಃ॥ ಶಶ್ವತ್ಸೌಖ್ಯೇ ನಾನ್ವಿತೋ ಶತ್ರುಹಂತಾ ಸತ್ವೋಪೇತಶ್ಚಾರುಯಾನೋ ಮಹೌಜಾಃ । ಪೃಥ್ವೀಭರ್ತುಃ ಸ್ಯಾದಮರ್ತ್ಯೋ ಹಿಮರ್ತ್ಯಃ ಶತ್ರುಕ್ಷೇತ್ರೋ ಮಿತ್ರಸಂಸ್ಥೋ ಯದಿಸ್ಯಾತ್ ॥೧೨-೨॥

---

* ಪಾಠಾಂತರ

ಮೂಲ॥ ಸ್ತ್ರೀಭಿರ್ಗತಃ ಪರಿಭವಂ ಮದಗೇ ಪತಂಗೇ । ಸ್ವಲ್ಪಾತ್ಮಜೋ ನಿಧನಗೇ ವಿಕಲೇಕ್ಷಣಶ್ಚ ॥ ಧರ್ಮೇಸುತಾರ್ಥ ಸುಖಭಾಕ್ ಸುಖಶೌರ್ಯ ಭಾಕ್ಖೇ । ಲಾಭೇ ಪ್ರಭೂತಧನವಾನ್ ಪತಿತಸ್ತುರಿಃಫೇ ॥೩॥

ಅವತಾರಿಕೆ॥ ಈ ಶ್ಲೋಕದಲ್ಲಿ ಸೂರ್ಯನು ಸಪ್ತಮ, ಅಷ್ಟಮ, ನವಮ, ದಶಮ, ಏಕಾದಶ, ದ್ವಾದಶ ಸ್ಥಾನಗಳಲ್ಲಿದ್ದ ಫಲವು ಹೇಳಲ್ಪಟ್ಟಿರುತ್ತೆ॥

## ಸಪ್ತಮಸ್ಥ ರವಿಫಲಂ

ಟೀಕು॥ ಪತಂಗೇ-ಸೂರ್ಯನು ಮದಗೇ-ಸಪ್ತಮ ಭಾವದಲ್ಲಿದ್ದರೆ ಜಾತಕನು, ಸ್ತ್ರೀಭೀ-ಸ್ತ್ರೀಯರಿಂದ, ಪರಿಭವಂ-ತಿರಸ್ಕಾರವನ್ನು, ಗತಃ-ಹೊಂದುವನು. ಈ ವಿಷಯಕ್ಕೆ ॥ಶ್ಲೋ॥ನಾ-ಭ॥ ದ್ಯುನಾಥೋ ಯದಾ ದ್ಯೂನಯಾತೋ ನರಸ್ಯ ಪ್ರಿಯಾ ತಾಪನಂ ಪಿಂಡಪೀಡಾಚ ಚಿಂತಾಃ । ಭವೇತ್ತುಚ್ಚಲಬ್ಧಿಃ ಕ್ರಯೇ ವಿಕ್ರಯೇಪಿ ಪ್ರತಿಸ್ಪರ್ಧಯಾ ನೈತಿ ನಿದ್ರಾಂ ಕದಾಚಿತ್ ॥೧೩॥ ಧುಂಡಿರಾಜಃ॥ ಶ್ರಿಯಾ ವಿಮುಕ್ತೋ ಹತಕಾಯಕಾಂತಿರ್ಭಯಾ ಮಯಾಭ್ಯಾಂ ಸಹಿತಃ ಕುಶೀಲಃ । ನೃಪ ಪ್ರಕೋಪಾರ್ತಿ ಕೃಶೋ ಮನುಷ್ಯಃ ಸೀಮಂತಿನೀ ಸದ್ಮನಿ ಪದ್ಮಿನೀಶೇ ॥೧೪॥

## ಅಷ್ಟಮಸ್ಥಾನ ಸ್ಥಿತ ರವಿಫಲಂ

ನಿಧನಗೇ-ಅಷ್ಟಮಭಾವದಲ್ಲಿ ಸೂರ್ಯನಿದ್ದರೆ, ಸ್ವಲ್ಪಾತ್ಮಜಃ-ಅಲ್ಪಪುತ್ರ ಸಂತತಿ ಯುಳ್ಳವನು, ವಿಕಲೇಕ್ಷಣಶ್ಚ-ದೃಷ್ಟಿಹೀನನೂ ಆಗುವನು. ಈ ವಿಷಯದಲ್ಲಿ ನಾ.ಭ. ॥ಶ್ಲೋಕ॥ ಕ್ರಿಯಾಲಂಪಟಂ ತ್ವಷ್ಟಮೇ ಕಷ್ಟಭಾಜಂ ವಿದೇಶಿಯ ದಾರಾ ಭಜೇದ್ವಾಷ್ಟ್ಯವಸ್ತು ॥ ವಸುಕ್ಷೀಣ ತಾದಸ್ಯುತೋವಾವಿಲಂಬಾ ದ್ವಿಪ ದ್ವಹ್ಯತಾ ಭಾನುರುಗ್ರಂವಿಧತ್ತೇ ॥೧೫॥ ಮತ್ತು ಧುಂಡಿರಾಜಃ ॥ಶ್ಲೋಕ॥ ನೇತ್ರಾಲ್ಪತ್ವಂ ಶತ್ರುವರ್ಗಾಭಿವೃದ್ಧಿಃ ಬುದ್ಧಿಭ್ರಂಶಃ ಪುರುಷಸ್ಯಾತಿ ರೋಷಃ ॥ ಅರ್ಥಾಲ್ಪತ್ವಂ ಕಾರ್ಶ್ಯಮಂಗೇ ವಿಶೇಷಾ ದಾಯುಃ ಸ್ಥಾನೇ ಪದ್ಮಿನೀ ಪ್ರಾಣನಾಥೇ ॥೧೬॥

## ನವಮ ಭಾವಸ್ಥಿತ ರವಿಫಲಂ

ಧರ್ಮೇ-ನವಮಭಾವದಲ್ಲಿ ಸೂರ್ಯನಿದ್ದರೆ, ಸುತಾರ್ಥ ಸುಖಭಾಕ್, ಸುತ ಪುತ್ರರು, ಅರ್ಥ-ಧನ, ಸುಖ-ಸಂಪತ್ಸೌಖ್ಯಗಳನ್ನು, ಭಾಕ್-ಹೊಂದುವನು, ಈ ವಿಷಯಕ್ಕೆ ॥ಶ್ಲೋಕ॥ ನಾ.ಭ. ದಿವಾನಾಯಕೇದುಷ್ಟ ತಾಕೋಣಯಾತೇ ನಚಾಪ್ನೋತಿಚಿಂತಾವಿರಾಮೋಸ್ಯ ಚೇತಃ ॥ ತಪಶ್ಚರ್ಯಯಾ ನಿಶ್ಚಯಾಪಿ ಪ್ರಯಾತಿ ಕ್ರಿಯಾತುಂಗ ತಾಂತಪ್ಯತೇ ಗೋದರೇಣ ॥೧೭॥ ಇವರು ನವಮ ಭಾವದಲ್ಲಿದ್ದ ಸೂರ್ಯನಿಗೆ ದುಷ್ಟ ಫಲ ಹೇಳಿರುವರು. ಇದು ವರಾಹಮಿಹಿರಾಚಾರ್ಯರ ಮತಕ್ಕೆ ಸಮ್ಮತಿಯಲ್ಲ. ಆದುದರಿಂದ ಈ ಮತವು ಗ್ರಾಹ್ಯವಲ್ಲ. ಈ ವಿಷಯಕ್ಕೆ ॥ ಧುಂಡಿ-

ರಾಜಃ ॥ಶ್ಲೋಕ॥ ಧರ್ಮಕರ್ಮ ನಿರತಶ್ಚ ಸನ್ಮತಿಃ ಪುತ್ರ ಮಿತ್ರಜ ಸುಖಾನ್ವಿತಃ ಸದಾ। ಮಾತೃವರ್ಗವಿಷಯೋ ಭವೇನ್ನರ ಸ್ತ್ರಿಕೋಣ ಭವನೇ ದಿವಾಮಣೌ ॥೧೮॥

## ದಶಮ ಭಾವಸ್ಥ ರವಿಫಲಂ

ಖೇ-ದಶಮಭಾವದಲ್ಲಿ ಸೂರ್ಯನಿದ್ದರೆ, ಸುಖಶೌರ್ಯಭಾಕ್-ಸುಖವನ್ನು ಶೌರ್ಯ ವನ್ನು ಹೊಂದುವನು. ಈ ವಿಷಯಕ್ಕೆ ॥ಶ್ಲೋಕ॥ ನಾ.ಭ. ಪ್ರಯಾತೇಂಶುರ್ಮಾ ಯಸ್ಯ ಮೇಷೂರಣೇಸ್ಯ ಶ್ರಮಸ್ಸಿದ್ಧಿರ್ದ್ದೋ ರಾಜತುಲ್ಯೇಃ ನರಸ್ಯ । ಜನನ್ಯಾಸ್ತಥಾ ಯಾತನಾ ಮಾತನೋತಿ ಕ್ಲಮಸ್ಸು ಕ್ಲಮೇ ದ್ವಲ್ಲಭೈರ್ವಿ ಪ್ರಯೋಗಃ ॥೧೯॥ ಮತ್ತು ಧುಂಡಿರಾಜಃ ॥ಶ್ಲೋಕ॥ ಸದ್ಬುದ್ಧಿವಾಹನ ಧನಾಗಮನಾನಿ ನೂನಂ ಭೂಪಪ್ರಸಾದಸುತ ಸೌಖ್ಯ ಸಮನ್ವಿತ್ವಾನಿ । ಸಾಧೂಪಕಾರ ಕರಣಂ ಮಣಿ ಭೂಷಣಾನಿ ಮೇಷೂರಣೇ ದಿನಪತಿಃ ಕುರುತೇನರಾಣಾಂ ॥೨೦॥

## ಏಕಾದಶ ಭಾವಸ್ಥ ರವಿ ಫಲಂ

ಲಾಭೇ-ಏಕಾದಶ ಸ್ಥಾನದಲ್ಲಿ ಸೂರ್ಯನಿದ್ದರೆ ಪ್ರಭೂತ ಧನರ್ವಾ-ಅಧಿಕ ಧನವುಳ್ಳವನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ನಾ.ಭ. ರವೌಸಂಲಭೇ-ತ್ಸ್ವಂಚ ಲಾಭೋಪಯಾತೇ ನೃಪದ್ವಾರತೋರಾಜ ಮುದ್ರಾಧಿಕಾರಾತ್ ॥ ಪ್ರತಾಪಾನಲೇ ಶತ್ರವಃಸಂಪತಂತಿ ಶ್ರಿಯೋನೇ ಕಧಾದುಃಖಭಂಗೋದ್ಭವಾನಾಮ್ ॥೨೧॥ ಮತ್ತು ಧುಂಡಿರಾಜಃ ॥ಶ್ಲೋಕ॥ ಗೀತಪ್ರೀತಿಂ ಚಾರುಕರ್ಮಪ್ರವೃತ್ತಿಂ ಚಂಚತ್ಕೀರ್ತಿಂ ವಿತ್ತಪೂರ್ತಿಂ ನಿತಾಂತಮ್ ॥ ಭೂಪಾತ್ಪ್ರಾಪ್ತಿಂನಿತ್ಯಮೇವ ಪ್ರಕುರ್ಯಾತ್ಪ್ರಾಪ್ತಿಸ್ಥಾನೇ ಭಾನುಮಾನ್ಮಾನವಾನಾಂ ॥೨೨॥

## ವ್ಯಯಭಾವಸ್ಥಿತ ರವಿಫಲಂ

ರಿಃಫೇ-ದ್ವಾದಶದಲ್ಲಿ ಸೂರ್ಯನಿದ್ದರೆ ಪತಿತಃ-ಸ್ವಧರ್ಮಭ್ರಷ್ಟನಾಗುತ್ತಾನೆ. ಈ ವಿಷಯದಲ್ಲಿ ॥ಶ್ಲೋಕ॥ ನಾ.ಭ.॥ ರವಿರ್ದ್ವಾದಶೇ ನೇತ್ರರೋಗಂ ಕರೋತಿ ವಿಪಕ್ಷಾಹವೇ ಜಾಯತೇನಾಜಯಶ್ರೀಃ ॥ ಸ್ಥಿತಿರ್ಲಬ್ಧ ಯಾಲೀಯತೇ ದೇಹದುಃಖಂ ಪಿತೃವ್ಯಾಪದೋಹಾ ನಿರರ್ಥಪ್ರದೇಶೇ ॥೨೩॥ ಈ ವಿಷಯದಲ್ಲಿ ॥ಧುಂಡಿರಾಜಃ॥ ಶ್ಲೋಕ॥ ತೇಜೋವಿಹೀನೇ ನಯನೇ ಭವೇತಾಂ ತಾತೇನಸಾ ಕಂಗತಚಿತ್ತ ವೃತ್ತಿ॥ ವಿರುದ್ಧ ಬುದ್ಧಿರ್ವ್ಯಯಭಾವ ಯಾತೇ ಕಾಂತೇ ನಲಿನ್ಯಾ ಫಲಮುಕ್ತ ಮಾರ್ಯೈಃ ॥೨೩॥

## ಇತಿ ರವಿತನ್ವಾದಿ ಭಾವಸ್ಥಿತಫಲಂ

ಮೂಲ॥ ಮೂಕೋನ್ಮತ್ತಜಡಾಂಧಹೀನಬಧಿರಪ್ರೇಷ್ಯಾಶಶಾಂಕೋದಯೇ।
ಸ್ವರ್ಕ್ಷಾಜೋಚ್ಚಗತೇ ಧನೀ ಬಹುಸುತಃ ಸಸ್ವಃ ಕುಟುಂಬೀ ಧನೇ॥
ಹಿಂಸ್ರೋ ಭ್ರಾತೃಗತೇ ಸುಖೇಸತನಯೇ ತತ್ಪ್ರೋಕ್ತಭಾವಾನ್ವಿತೋ।
ನೈಕಾರಿರ್ಮೃದುಕಾಯ ವನ್ಹಿ ಮದನಸ್ತೀಕ್ಷ್ಣೋಲಸಶ್ಚಾರಿಗೇ ॥೪॥

## ತನ್ವಾದಿಭಾವಸ್ಥಿತ ಚಂದ್ರಫಲಂ

ಅವತಾರಿಕೆ।। ಈ ಶ್ಲೋಕದಲ್ಲಿ ಚಂದ್ರನು, ಜನ್ಮ ದ್ವಿತೀಯ, ತೃತೀಯ, ಚತುರ್ಥ ಪಂಚಮ, ಷಷ್ಠ ಈ ೬ ಭಾವಗಳಲ್ಲಿದ್ದ ಕಾಲದಲ್ಲಿ ಹುಟ್ಟಿದವನ ಸ್ವರೂಪವು ಹೇಳಲ್ಪಡುತ್ತೆ ।।ಟೀ।। ಶಶಾಂಕೋದಯೇ-ಚಂದ್ರನು ಜನ್ಮಲಗ್ನದಲ್ಲಿರುವಾಗ ಹುಟ್ಟಿದವನು, ಮೂಕಃ-ಮೂಕನು, ಉನ್ಮತ್ತ-ಉನ್ಮತ್ತನು, ಜಡಃ-ಮೂರ್ಖನು, ಅಂಧಃ-ಕುರುಡನು, ಹೀನಃ-ನೀಚಕೃತ್ಯಗಳ ಮಾಡುವವನು, ಬಧಿರಃ-ಕಿವುಡನೂ, ಪ್ರೇಷ್ಯಃ-ಪರಿಚಾರಕನೂ, *ಆಗುವನು, ಮತ್ತು ಈ ಫಲವು ಮೇಷ, ವೃಷಭ, ಕರ್ಕಾಟಕ, ವ್ಯತಿರಿಕ್ತ, ಲಗ್ನಕ್ಕೆ ಹೇಳಲ್ಪಟ್ಟಿರುತ್ತದೆ. ಈ ಲಗ್ನಗಳಿಗೆ ವಿಶೇಷ ಫಲ ಹೇಳಿರುತ್ತಾರೆ. ಸ್ವರ್ಕ್ಷೇ-ಕರ್ಕಾಟಕ ಲಗ್ನವಾಗಿ ಅಲ್ಲಿಯೇ ಚಂದ್ರನಿದ್ದರೆ, ಧನೀ-ಧನವಂತನಾಗುವನು. ಅಜೇ-ಮೇಷಲಗ್ನವಾಗಿ ಅಲ್ಲಿ ಚಂದ್ರನಿದ್ದರೆ, ಬಹುಸುತಃ-ಅನೇಕ ಪುತ್ರರುಳ್ಳವನು, ಉಚ್ಚಗತೇ-ತನ್ನ ಉಚ್ಚರಾಶಿಯಾದ ವೃಷಭ ದಲ್ಲಿದ್ದು ಲಗ್ನವಾದರೆ, ಸಸ್ವಃ-ಧನಸಹಿತನಾಗುವನು. ಈ ಲಗ್ನದಲ್ಲಿ ಚಂದ್ರನಿದ್ದ ವಿಷಯಕ್ಕೆ ।।ಶ್ಲೋಕ।। ಧುಂಡಿರಾಜ।। ದಾಕ್ಷಿಣ್ಯರೂಪಧನಭೋಗ ಗುಣೈರ್ವರೇಣ್ಯ-ಶ್ಚಂದ್ರೇಕುಳೀರವೃಷಭಾಜಗತೇ ವಿಲಗ್ನೇ।। ಉನ್ಮತ್ತ ನೀಚ ಬಧಿರೋ ವಿಕಲೋಥ ಮೂಕಃ ಶೇಷೇಷುನಾಭವತಿ ಹೀನತನೌ ವಿಶೇಷಾತ್ ।।೨೫।। ಇದೇ ಅರ್ಥಕ್ಕೆ ।।ಶ್ಲೋಕ।।ನಾ.ಭ.।। ವಿಧುರ್ಗೋ ಕುಲೀರಾಜಗಃ ಸನ್ವಪುಸ್ಥೋಧನಾಧ್ಯಕ್ಷ ಲಾವಣ್ಯ-ಮಾನಂದ ಪೂರ್ಣಂ। ವಿಧತ್ತೇಧನಂ ಕ್ಷೀಣದೇಹಂ, ದರಿದ್ರಂ, ಜಡಂ, ಶ್ರೋತ್ರಹೀನಂ ನರಂಶೇಷಲಗ್ನೇ ।।೨೬।।

## ಧನಭಾವಸ್ಥಿತ ಚಂದ್ರಫಲಂ

ಧನೇ-ಲಗ್ನಕ್ಕೆ ದ್ವಿತೀಯಸ್ಥಾನದಲ್ಲಿ ಚಂದ್ರನಿದ್ದರೆ, ಕುಟುಂಬೀ-ಪುತ್ರಪೌತ್ರಾದ್ಯನೇಕ ಕುಟುಂಬವುಳ್ಳವನು । ನಾ.ಭ.।। ಈ ವಿಷಯಕ್ಕೆ ಹೇಳಿರುವದೇನೆಂದರೆ ।।ಶ್ಲೋಕ।। ಹಿಮಾಂಶೌ ವಸುಸ್ಥಾನಗೇ ಧಾನ್ಯಲಾಭಃ ಶರೀರೇತಿ ಸೌಖ್ಯಂ ವಿಲಾಸೋಂಗನಾನಾಮ್ ।। ಕುಟುಂಬೇರತಿರ್ಜಾಯತೇ ತಸ್ಯತುಚ್ಛಂ ನರಂದರ್ಶನೇ ಯಾತಿ ದೇವಾಂಗನಾಪಿ ।।೨೭।। ಚಂದ್ರನು ದ್ವಿತೀಯದಲ್ಲಿದ್ದರೆ, ಜಾತಕನು ಶರೀರ ಸುಖವುಳ್ಳವನು, ಸ್ತ್ರೀಯರ ರತಿವಿಲಾಸ ಸೌಖ್ಯವುಳ್ಳವನು, ಕುಟುಂಬದಲ್ಲಿ ಅಲ್ಪ ಪ್ರೀತಿ ಮತ್ತು ಸುಂದರ ಪುರುಷನು ಮತ್ತು ದ್ವಿತೀಯದಲ್ಲಿ ಚಂದ್ರನಿದ್ದಲ್ಲಿ ಪುರುಷನು ಅತಿ ಸುಂದರ ಪುರುಷನಾದ್ದರಿಂದ ದೇವತಾ ಸ್ತ್ರೀಯರಾದವರೂ ಮೋಹಿಸಿ ವಶವಾಗುವರು. ಅಂದರೆ ದೇವತಾ ಸ್ತ್ರೀಯರೇ ಇವನ ವಶರಾಗುವಲ್ಲಿ ಮನುಷ್ಯ ಸ್ತ್ರೀಯರು ವಶರಾಗುವದರಲ್ಲಿ ಸಂದೇಹವಿಲ್ಲ. ಧನವಂತ, ಸಂಪತ್ತುಳ್ಳವನು, ಪ್ರೀತಿಯಾದ ಮಾತನ್ನು ಹೇಳುವನು.

---

* ಈ ಹೇಳಲ್ಪಟ್ಟ ಫಲಗಳಲ್ಲಿ ಯಾವುದಾದರೂ ಆಗುವನು.

ದೇವಬ್ರಾಹ್ಮಣರ ಭಕ್ತ, ದೊಡ್ಡ ಪ್ರತಾಪ ಉಳ್ಳವನು ಮತ್ತು ಮಿತ್ರರೊಡ-ಗೂಡಿದವನು. ಈ ವಿಷಯಕ್ಕೆ ।।ಧುಂಡಿರಾಜಃ ।।ಶ್ಲೋಕ।। ಸುಖಾತ್ಮಜ ದ್ರವ್ಯಯುತೋ ವಿನೀತೋ ಭವೇನ್ನರಃ ಪೂರ್ಣ ವಿಧೌ ದ್ವಿತೀಯೇ।। ಕ್ಷೀಣೇ ಸ್ಖಲದ್ವಾಕ್ ವಿಧನೋಲ್ಪ ಬುದ್ಧಿ ರ್ನ್ಯೂನಾಧಿಕತ್ವೇ ಫಲತಾರ ತಮ್ಯಮ್ ।।೨೮।। ಎಂದು ಫಲವಿಶೇಷ ಹೇಳಿರುತ್ತಾರೆ.

## ತೃತೀಯ ಭಾವಸ್ಥಿತ ಚಂದ್ರಫಲಂ

ಭ್ರಾತೃಗತೇ-ಭ್ರಾತೃಸ್ಥಾನವಾದ ತೃತೀಯದಲ್ಲಿ ಚಂದ್ರನಿದ್ದರೆ ಹಿಂಸ್ರಃ-ಪ್ರಾಣಿ ಹಿಂಸಕನಾಗುವನು ।। ಈ ಅರ್ಥಕ್ಕೆ ನಾರಾಯಣ ಭಟ್ಟರು ವಿರೋಧವಾಗಿ ಶುಭಫಲ ಹೇಳಿರುವರು ।।ಶ್ಲೋಕ।। ವಿಧೌವಿಕ್ರಮೇ ವಿಕ್ರಮಣ್ಯೆತಿ ವಿತ್ತಮ್ ತಪಸ್ವೀ ಭವೇದ್ಭಾಮಿನೀ ರಂಜಿತೋಪಿ ।। ಕಿಯಚ್ಚಿಂತಯೇತ್ಸಾಹಜಂತಸ್ಯಶರ್ಮ ಪ್ರತಾಪೋಜ್ವಲೋ ಧರ್ಮಿಣೋ ವೈಜಯಂತ್ಯಾ ।।೨೯।। ಚಂದ್ರನು ಲಗ್ನಕ್ಕೆ ತೃತೀಯ ಭಾವದಲ್ಲಿದ್ದರೆ, ವಿಕ್ರಮದಿಂದ ಧನಸಂಪತ್ತುಳ್ಳವನು, ಒಳ್ಳೇ ರೂಪವಂತನುಃ ಅವನ ಹೆಂಡತಿ, ತನ್ನ ರೂಪಲಾವಣ್ಯಗಳಿಂದಲೂ, ಯೌವನ ಮದದಿಂದಲೂ ಮರುಳು ಮಾಡುವಳು ಮತ್ತು ಜಿತೇಂದ್ರಿಯ, ತಪಸ್ವೀ, ಧರ್ಮಾತ್ಮ ಧರ್ಮಲೋಭಾದಿಗಳ ಜಿತಮಾಡಿ ನಡೆಮಾಡಿ ನಡೆಯುವನು, ಯಶಸ್ವಿ, ಪ್ರತಾಪವುಳ್ಳವನೂ, ಅಣ್ಣತಮ್ಮಂದಿರಲ್ಲಿ ಅತಿಶಯ ಸುಖವುಳ್ಳವನು, ರೂಪವಂತಳು, ಭಾಗ್ಯಶಾಲಿನಿ ಮತ್ತು ರಮಣೀಯವಾದ ಸ್ತ್ರೀವುಳ್ಳವನೂ ಮತ್ತು ಅವಳಿಗೆ ಪ್ರಿಯವಾದವನು, ಸಮಸ್ತ ಕಲಾ (ವಿದ್ಯೆ) ತಿಳಿದವನು, ಸಂತಾನದಲ್ಲಿ ಪ್ರೀತಿಯುಳ್ಳವನು ಮತ್ತು ಹೆಣ್ಣುಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳುಳ್ಳವನು. ಜಾತಕಾಭರಣದಲ್ಲಿ ।।ಶ್ಲೋಕ।। ಹಿಂಸ್ರಃ ಸಗರ್ವಃ ಕೃಪಣೋಲ್ಪ ಬುದ್ಧಿರ್ಭವೇನ್ನರೋ ಬಂಧು ಜನಾಶ್ರಯಶ್ಚ ।। ದಯಾಭಯಾಭ್ಯಾಂ ಪರಿವರ್ಜಿತಶ್ಚ ದ್ವಿಜಾಧಿರಾಜೇ ಸಹಜೇ ಪ್ರಸೂತೌ ।।೩೦।। ತೃತೀಯದಲ್ಲಿ ಚಂದ್ರನಿದ್ದರೆ, ಜೀವಹಿಂಸೆ ಮಾಡುವನು, ಅಹಂಕಾರಿ, ಕೃಪಣ, ಅಲ್ಪಬುದ್ಧಿ, ತನ್ನ ಬಂಧು ಜನರಿಗೆ ಆಶ್ರಯವಾಗಿರುವನು, ನಿರ್ದಯನು, ನಿರ್ಭಯವುಳ್ಳವನು, ಈ ಚಂದ್ರನ ಫಲ ಕಲ್ಪಿಸುವಾಗ ಚಂದ್ರನ ಪೂರ್ಣ ಮಧ್ಯಾಲ್ಪತ್ವಗಳ ಮೂಲವಾಗಿ ಪೂರ್ಣ ಚಂದ್ರನಿದ್ದರೆ ಪೂರ್ಣ ಫಲವನ್ನು ಮಧ್ಯ ಚಂದ್ರನಾದರೆ ಮಧ್ಯಮ ಫಲವನ್ನು, ಕ್ಷೀಣ ಚಂದ್ರನಿಗೆ ಈ ಹಿಂಸ್ರಾದಿ ದುಷ್ಟಫಲವನ್ನು ತಿಳಿಯಬೇಕು.

## ಚತುರ್ಥ ಭಾವಸ್ಥಿತ ಚಂದ್ರಫಲಂ

ಪಂಚಮ ಭಾವಫಲಂಚ ।।ಸುಖೀಸತನಯೇ-ಚತುರ್ಥ ಪಂಚಮಗಳಲ್ಲಿ ಚಂದ್ರನಿದ್ದರೆ ತತ್ಪ್ರೋಕ್ತಭಾವಾನ್ವಿತಃ-ಆ ಚತುರ್ಥ ಭಾವಫಲವೇ ಪಂಚಮ ಭಾವಕ್ಕೂ

ಹೇಳತಕ್ಕದ್ದೆಂದು ತಾತ್ಪರ್ಯ, ಅಂದರೆ ಚತುರ್ಥಭಾವದಲ್ಲೇ ಚಂದ್ರನಿದ್ದರೆ, ಸುಖ ಬಂಧು ಗೃಹಾದಿಯುಕ್ತನಾಗುವನು. ಪಂಚಮಭಾವದಲ್ಲಿ ಚಂದ್ರನಿದ್ದರೆ, ಪುತ್ರ ಪ್ರತಿಭಾದಿ ಬುದ್ಧಿ ವಿದ್ಯೆಯುಳ್ಳವನಾಗುವನು ।। ಈ ವಿಷಯಕ್ಕೆ ।।ಶ್ಲೋಕ।।ನಾ.ಭ।। ಯದಾಬಂಧು ಗೋಬಾಂಧವೈರಾತ್ರಿ ಜನ್ಮ ನೃಪದ್ವಾರಸರ್ವಾಧಿಕಾರೀ ಸದೈವ।। ವಯಸ್ಯಾದಿ ಮೇತಾದೃಶಂನ್ಯೆವ ಸೌಖ್ಯಂ ಸುತಸ್ತ್ರೀಗಣಾತ್ತೋಷಮಾಯಾತಿ ಸಮ್ಯಕ್ ।।೩೧।। ಚಂದ್ರನು ಚತುರ್ಥಭಾವದಲ್ಲಿದ್ದರೆ, ಬಾಂಧವರು ಇಷ್ಟಮಿತ್ರರಿಂದ ಸುಖಹೊಂದುವನು. ಮತ್ತು ಸ್ತ್ರೀ ಪುತ್ರರಿಂದ ಸಂತೋಷಗೊಂಡಿರುವನು. ಯಾವಾಗಲೂ ಪ್ರಸನ್ನನಾಗಿರುವನು ಮತ್ತು ರಾಜದ್ವಾರದಲ್ಲಿ ಸರ್ವಾಧಿಕಾರಿಯಾಗಿ ರುವನು (ಸಮಸ್ತ ಕಾರ್ಯದಲ್ಲೂ ಪ್ರವೇಶ ಮಾಡುವ ಅಧಿಕಾರಿ). ಐಶ್ವರ್ಯದಿಂದ ಉನ್ನತನು, ಡಾಂಭಿಕನು, ಜಗಳಗಂಟ, ಪ್ರಥಮಾವಸ್ಥೆಯಲ್ಲಿ ೨೦-೨೫ ವರ್ಷದವರೆಗೆ ಈ ಫಲ ಹೊಂದಲಾರನು. ಎರಡನೆ ಅವಸ್ಥೆಯಲ್ಲಿ ಈ ಫಲವನ್ನು ಸಂಪೂರ್ಣವಾಗಿ ಹೊಂದುವನು ಮತ್ತು ಬಹು ಸುಖ ಅನುಭವಿಸುವನೂ, ಪ್ರಖ್ಯಾತ ಪುರುಷ, ಸ್ತ್ರೀಯರಲ್ಲಿ ಪ್ರೀತಿ (ಅಥವಾ) ಸ್ತ್ರೀಯರಿಂದ ಪ್ರೀತಿಸಲ್ಪಡುವನು, ಗುರು ದೇವತಾಭಕ್ತನು ನಮ್ರನು, ನಿರೋಗಿ, ಶತ್ರುಗಳಿಲ್ಲದವನು।। ಈ ವಿಷಯಕ್ಕೆ।। ಧುಂಡಿರಾಜಃ ।। ಶ್ಲೋಕ ಜಲಾಶ್ರಯೋತ್ಪನ್ನ ಧನೋಪಲಬ್ಧಿಂ ಕೃಷ್ಯಂಗನಾವಾಹನ ಸೂನು ಯುಕ್ತಂ ।। ಪ್ರಸೂತಿಕಾಲೇ ಕುರುತೇ ಕಲಾವಾನ್ ಪಾತಾಳ ಸಂಸ್ಥೋ ದ್ವಿಜದೇವಭಕ್ತಿಮ್ ।।೩೨।। ಇದರಲ್ಲಿ ಕೃಷ್ಯಾದಿ ವಿಷಯ ಹೆಚ್ಚಾಗಿ ಹೇಳಿರುತ್ತಾರೆ.

## ಪಂಚಮಭಾವಸ್ಥಿತ ಚಂದ್ರಫಲಂ

ನಾ.ಭ.।। ಯಾದಾಪಂಚಮೇಯಸ್ಯ ನಕ್ಷತ್ರನಾಥೋ ದದಾತೀಹ ಸತಾನ ಸಂತೋಷಮೇವ ।। ಮತಿಂ ನಿರ್ಮಲಾಂ ರತ್ನ ಲಾಭಂಚಭೂಮಿಂ ಕುಸೀದೇನ ನಾನಾಪ್ತಯೋವ್ಯಾಮಸಾಯಾತ್ ।।೩೩।। ಚಂದ್ರನು ಪಂಚಮಭಾವದಲ್ಲಿದ್ದರೆ, ಸಂತಾನ ಸೌಖ್ಯವು, ಬುದ್ಧಿ ನಿರ್ಮಲವಾಗಿರುವದು, ರತ್ನಾದಿಲಾಭವಾಗುವದು, ರಾಜಸೇವೆ ಮಾಡುವನು ಮತ್ತು ಭೂಪ್ರಾಪ್ತಿಯುಳ್ಳವನು, ಯಾವ ಕಾರ್ಯವಾದರೂ ಮಾಡಬಲ್ಲನು ಮತ್ತು ಆದರಿಂದ ನೇಕ ಪ್ರಕಾರ ಲಾಭವುಳ್ಳವನು, ಪುತ್ರವಂತ, ವಿದ್ಯಾವಂತ, ದೇವಬ್ರಾಹ್ಮಣ ಭಕ್ತ, ನಿಷ್ಕಪಟಿ, ಪ್ರಿಯವಾಗಿ ಮಾತನಾಡುವನು, ರಾಜಪ್ರಿಯ, ಶತ್ರುರಹಿತನು. ಈ ವಿಷಯಕ್ಕೆ ।।ಶ್ಲೋಕ।। ಧುಂಡಿರಾಜಃ । ಸುಸಂಗ್ರಹೀ ಸ್ಯಾನ್ಮನುಜಃ ಸುಶೀಲಃ ಪ್ರಸೂತಿಕಾಲೇ ತನಯಾಲಯೇಬ್ಜೇ ।।೩೩।।

## ಷಷ್ಠಮಭಾವಸ್ಥಿತ ಚಂದ್ರಫಲಂ

ಅರಿಗೇ-ಷಷ್ಠಸ್ಥಾನದಲ್ಲಿ ಚಂದ್ರನಿದ್ದರೆ, ನೈಕಾರಿಃ-ಅನೇಕ ಶತ್ರುಗಳುಳ್ಳವನು.

ಮೃದುಕಾಯಿಃ-ಮೃದುವಾದ ಶರೀರವುಳ್ಳವನು, ಮೃದುವಹ್ನಿಃ-ಅಗ್ನಿಮಾಂದ್ಯ ಉಳ್ಳವನು, ಮೃದುಮದನಃ-ಅಲ್ಪವಾದ ಕಾಮಕ್ರೀಡೆಗಳುಳ್ಳವನು. ತೀಕ್ಷ್ಣಃ-ಕ್ರೂರವಾದ ಸ್ವಭಾವವುಳ್ಳವನು, ಅಲಸಃ-ಪಶುವಿನಂತೆ ಮಂದಬುದ್ಧಿಯುಳ್ಳವನು. ಈ ವಿಷಯದಲ್ಲಿ ||ಶ್ಲೋಕ|| ನಾ.ಭ. ರಿಪೌರಾಜಿತೇ ವಿಗ್ರಹೇಣಾಪಿರಾಜಾ ಜಿತಾಸ್ತೇಪಿ ಭೂಯೋವಿಧೌ ಸಂಭವಂತಿ। ತದಗ್ರೇರಯೋನಿಷ್ಟಭಾಭೂಯ ಸೋಪಿ ಪ್ರತಾಪೋಜ್ವಲೋ ಮಾತೃಶೀಲೋನತದ್ವತ್ ||೩೫|| ಟೀ|| ಚಂದ್ರನು ಷಷ್ಠ ಸ್ಥಾನದಲ್ಲಿದ್ದರೆ ಜಾತಕನು ಅನೇಕ ಶತ್ರುಗಳುಳ್ಳವನು, ರಾಜನು ಕೂಡ ಶತ್ರುವಾಗುವನು, ಆದರೂ ಇವನ ಪ್ರತಾಪ ಉಜ್ವಲಿತವಾಗಿರುವದು. ಮತ್ತು ತನ್ನ ಪ್ರಭಾವದಿಂದ ಶೋಭಾಯಮಾನವಾಗಿರುವನು : ಮತ್ತು ಸರ್ವ ಶತ್ರುಗಳೂ ಪರಾಜಿತರಾಗುವರು. ಯಾವಾಗಲೂ ಶತ್ರುವಿನಿಂದ ಸೋಲಿಸಲಶಕ್ಯವಾದವನು, ಯಾವಾಗಲೂ ಶತ್ರುವಿನ ಮೇಲೆ ಪರಾಕ್ರಮಮಾಡುವನು, ಮಾತೃಭಕ್ತಿ ಇಲ್ಲದವನು, ಪ್ರಧಾನ ಪುರುಷ, ರೋಗಿ, ನಿರಂತರ ಶತ್ರು ದುಃಖವುಳ್ಳವನು, ಕುರೂಪಿ, ದುರ್ಬುದ್ಧಿ, ಸುಖವಿಲ್ಲದವನು, ಎರಡನೆಯವರಿಗೆ ಮೋಸ ಮಾಡುವನು, ಈ ಗುಣಗಳು ಹೇಳಲ್ಪಟ್ಟಿರುತ್ತೆ. ಮತ್ತು ಈ ವಿಷಯಕ್ಕೆ ದುಂಡಿರಾಜಃ ||ಶ್ಲೋಕ|| ಮಂದಾಗ್ನಿ ಸ್ಸ್ಯಾನ್ನಿರ್ದರ್ಯಃ ಕ್ರೌರ್ಯಯುಕ್ತೋನಾಲ್ಪಾ ಲಸ್ಯೋನಿಷ್ಠುರೋ ದುಷ್ಟಚಿತ್ತಃ । ರೋಷಾವೇಶಾತ್ಯಂತ ಸಂಜಾತಶತ್ರುಃ ಶತ್ರುಕ್ಷೇತ್ರೇ ರಾತ್ರಿನಾಥೇ ನರಸ್ಯಾತ್ ||

ಮೂಲ|| ಈರ್ಷುಸ್ತೀವ್ರಮದೋ ಮದೇ ಬಹುಮತಿರ್ಶ್ಯಾಧ್ಯರ್ದಿತಶ್ಚಾಷ್ಟ-
ಮೇ। ಸೌಭಾಗ್ಯಾತ್ಮಜಮಿತ್ರಬಂಧುಧನಭಾಕ್ ಧರ್ಮಸ್ಥಿತೇಶೀತಗೌ||
ನಿಷ್ಪತ್ತಿಂ ಸಮುಪೈತಿಧರ್ಮ ಧನಧೀ ಶೌರ್ಯೈಯುತಃ ಕರ್ಮಗೇ।
ಖ್ಯಾತೋಭಾವ ಗುಣಾನ್ವಿತೋ ಭವಗತೇ ಕ್ಷುದ್ರೋಗ ಹೀನೋ
ವ್ಯಯೇ ||೫||

ಅವತಾರಿಕೆ|| ಈ ಶ್ಲೋಕದಿಂದ ಚಂದ್ರನು ಸಪ್ತಮ, ಅಷ್ಟಮ, ನವಮ, ದಶಮ, ಲಾಭ, ವ್ಯಯ ಈ ಆರು ಭಾವಗಳಲ್ಲಿದ್ದ ಫಲವು ಹೇಳಲ್ಪಡುತ್ತೆ.

## ಸಪ್ತಮ ಭಾವಸ್ಥಿತ ಚಂದ್ರಫಲಂ

ಶೀತಗೌ-ಚಂದ್ರನು, ಮದೇ-ಸಪ್ತಮಸ್ಥಾನದಲ್ಲಿದ್ದಾಗ ಹುಟ್ಟಿದವನು, ಈರ್ಷುಃ-ಪರರ ಸಂಪತ್ತನ್ನು ನೋಡಿ ಸಹಿಸಲಾರದೆ ಹೊಟ್ಟೆಕಿಚ್ಚು ಪಡುವನು, ತೀವ್ರ ಮದಃ-ಅಧಿಕವಾದ ಮನ್ಮಥವಿಕಾರ (ವಿರಹತಾಪ) ವುಳ್ಳವನು. ಈ ವಿಷಯದಲ್ಲಿ ||ಶ್ಲೋಕ|| ನಾ.ಭ.|| ವದೇದ್ದಾರಶಂ ಸಪ್ತಮೇ ಶೀತರಶ್ಮಿರ್ದನಿತ್ವಂ ಭವೇದದ್ಧ ವಾಣಿಜ್ಯತೋಪಿ। ರತಿಂ ಸ್ತ್ರೀಜನೇನಿಷ್ಟಭುಗ್ಲುಬ್ಧಚೇತಾಃ ಕೃಶಃಕೃಷ್ಣಪಕ್ಷೇ ವಿಪಕ್ಷಾಭಿಭೂತಃ ||೩೬||ತಾ||

ಸಪ್ತಮಭಾವದಲ್ಲಿ ಚಂದ್ರನಿದ್ದರೆ ಸ್ತ್ರೀ ಸುಖ ಕೊಡುವನು, ದೇಶಾಂತರ ಸಂಚಾರ-ದಿಂದುಂಟಾದ ವ್ಯಾಪಾರ ಮೂಲಕ ಧನಲಾಭವಾಗುವದು. ಸ್ತ್ರೀ ಸಂಗವನ್ನು ವಿಶೇಷವಾಗಿ ಕೊಡುತ್ತಾನೆ. ಕೃಷ್ಣಪಕ್ಷ ಚಂದ್ರನಾದರೆ, ಸ್ತ್ರೀಯರ ಸಂಗಡ ಪ್ರೇಮ ವಾರ್ತಾಲಾಪದೃಷ್ಟಿ ಮಾತ್ರ ಪ್ರೇಮಮಾತ್ರವನ್ನು ಕೊಡುವನು. ಪರಂತು ರತಿಸುಖವಿಲ್ಲ. ಶುಕ್ಲ ಪಕ್ಷ ಚಂದ್ರನಾಗಿದ್ದರೆ ರತಿಸುಖವು ಉಂಟಾಗುತ್ತೆ. ಕ್ಷಾರಪದಾರ್ಥದಲ್ಲಿ ಅತಿ ಪ್ರೀತಿ ಮತ್ತು ಅತಿ ಲೋಭಿಯಾಗುವನು, ಕೇವಲ ಕ್ಷೀಣಚಂದ್ರನಾದರೆ ಸದಾ ಶತ್ರುಗಳ ಸಂಗಡ ವಿವಾದಮಾಡುತ್ತಲಿರುವನು ॥೩೭॥ ಈ ವಿಷಯಕ್ಕೆ ಧುಂಡಿರಾಜಃ ॥ ಮಹಾಭಿಮಾನೀ ಮದನಾತುರಶ್ಚ ನರೋ ಭವೇತ್ ಕ್ಷೀಣ ಕಳೇವರಶ್ಚ ॥ ಧನೇನಹೀನೋ ವಿನಯೇನಚಂದ್ರೇ ಚಂದ್ರಾನನಾ ಸ್ಥಾನವಿರಾಜ ಮಾನೇ ॥ತಾ॥ ಚಂದ್ರನು ಪೂರ್ಣನಾದರೆ ಮಹಾ ಗರ್ವಿಷ್ಠ, ಕಾಮಾತುರನು, ಕ್ಷೀಣ ಚಂದ್ರನಾದರೆ ಧನಹೀನ, ವಿನಯ ರಹಿತ ಈ ಮೊದಲಾದ ಫಲವನ್ನು ಕೊಡುವನು.

## ಅಷ್ಟಮಭಾವಸ್ಥಿತ ಚಂದ್ರಫಲಂ

ಅಷ್ಟಮೇ-ಲಗ್ನದಿಂದ ಅಷ್ಟಮ ಭಾವದಲ್ಲಿ ಚಂದ್ರನಿದ್ದರ, ಬಹುಮತಿಃ-ಅನೇಕ ವಿಧವಾದ ಬುದ್ಧಿಯುಳ್ಳವನು, ಅಂದರೆ ಚಪಲ ಬುದ್ಧಿಯುಳ್ಳವನೆಂದು ತಾತ್ಪರ್ಯ ॥ ವ್ಯಾಧ್ಯರ್ದಿತಃ-ರೋಗಪೀಡಿತನಾಗುವನು. ಈ ವಿಷಯಕ್ಕೆ ॥ಶ್ಲೋಕ॥ ನಾ.ಭ.॥ ಸಭಾವಿದ್ಯತೇ ಭೈಷಜೀತಸ್ಯಗೇಹೇ ಪಚೇತ್ಯರ್ಹಿ ಚಿತ್ಕ್ವಾರ್ಥಮುದ್ಗೋದಕಾನಿ ॥ ಮಹಾವ್ಯಾಧಯೋ ಭೀತಯೋ ವಾರಿಭೂತಾಃ ಶಶೀಕ್ಲೇಶ ಕೃತ್ಸಂಕಟಾ ನಷ್ಟಮಸ್ಥಃ ॥೩೮॥ತಾ॥ ಯಾರ ಜಾತಕದಲ್ಲಿ ಅಷ್ಟಮದಲ್ಲಿ ಚಂದ್ರನಿರುವನೋ ಅವರ ಮನೆಗಳಲ್ಲಿ ರೋಗಪರಿಹಾರಕ್ಕೂ ಸಹ ವೈದ್ಯರ ಸಭೆ ಸೇರುವುದು, ಏಕೆಂದರೆ-ವ್ಯಾಧಿಗ್ರಸ್ತನಾದವನಿಗೆ ವೈದ್ಯರ ಮೇಲೆ ಪ್ರೀತಿಯಿಂದ ವೈದ್ಯರು ಬರುವಿಕೆ, ಜಲದಿಂದ ಭೀತಿ, ಅನೇಕ ಸಂಕಟ, ದುರ್ಜನರಿಂದ ವಿಪತ್ತು, ಕಷಾಯ, ಮುದ್ಗೋದಕ ಮೊದಲಾದದ್ದನ್ನು ಯಾವಾಗಲೂ ಪಾಕ ಮಾಡುತ್ತಲಿರುವರು. ಚಂದ್ರನು ಸ್ವಭಾವತಃ ಅಷ್ಟಮ ಭಾವದಲ್ಲಿ ಕಷ್ಟಫಲ ಕೊಡುವನು ॥೩೮॥

ಈ ವಿಷಯದಲ್ಲಿ ಜಾತಕಾಭರಣದಲ್ಲಿ ಶ್ಲೋಕ॥ ನಾನಾರೋಗ ಕ್ಷೀಣ ದೇಹೋತಿ ನಿಸ್ವಃ ಚೋರಾರಾತಿಕ್ಷೋಣಿ ಪಾಲಾಭಿತಪ್ತಃ ಚಿತ್ತೋದ್ವೇಗೈರ್ವ್ಯಾಕುಲೋ ಮಾನವಸ್ಸ್ಯಾ ದಾಯುಃಸ್ಥಾನೇ ವರ್ತಮಾನೇಹಿಮಾಂಶೌ ॥೩೯॥

## ನವಮಭಾವಸ್ಥಿತ ಚಂದ್ರಫಲಂ

ಧರ್ಮಸ್ಥಿತೇ-ಚಂದ್ರನು ಧರ್ಮಸ್ಥಾನದಲ್ಲಿರುವಾಗ ಹುಟ್ಟಿದವನು, ಸೌಭಾಗ್ಯಾತ್ಮ ಜಮಿತ್ರಬಂಧು ಧನಭಾಕ್-ಸೌಭಾಗ್ಯ-ಸರ್ವಜನಾನುರಾಗ ಸಕಲ ಸೌಖ್ಯ,

ಆತ್ಮಜ-ಪುತ್ರರು, ಮಿತ್ರ-ಸ್ನೇಹಿತರು, ಬಂಧು-ಸ್ವಜನಗಳು, ಧನ-ದ್ರವ್ಯವು ಇವುಗಳನ್ನು ಭಾಕ್-ಹೊಂದುವವನಾಗುವನು. ಈ ವಿಷಯದಲ್ಲಿ ।।ಶ್ಲೋಕ ।।ನಾ.ಭ.।। ತಪೋಭಾವಗಸ್ತಾರ ಕೇಶೋಜನಸ್ಯ, ಪ್ರಜಾಶ್ಚದ್ವಿಜಾ ಬಂದಿನ ಸ್ತಂಭವಂತಿ ।। ಭವತ್ಯೇವ ಭಾಗ್ಯಾಧಿಕೋ ಯೌವನಾದೇಃ ಶರೀರೇಸುಖಂ ಚಾಂದ್ರವತ್ಸಾಹಸಂಚ ।।೪೦।। ತಾ।। ದಶಮ ಭಾವದಲ್ಲಿ ಚಂದ್ರನಿದ್ದರೆ, ಸ್ತುತಿ ಮಾಡಿಸಿಕೊಳ್ಳುವಂಥಾ ಪುರುಷನಾಗುತ್ತಾನೆ. (ಬ್ರಹ್ಮ ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಮತ್ತು ಸೂತಮಾಗಧರು ಹೊಗಳುತ್ತಿರುವರು) ಧನ ಯೌವನ ಮತ್ತು ಸಮಸ್ತ ಸಂಪತ್ತಿನಿಂದ ವ್ಯಾಪಾರದಿಂದ ಭಾಗ್ಯಶಾಲಿಯಾಗುವನು, ಶರೀರ ಸುಖವುಳ್ಳವನು, ಚಂದ್ರನಂತೆ ದರ್ಶನೀಯನಾಗಿರುವನು, ಚಂದ್ರನಂತೆ ಕೆಲವು ವೃದ್ಧಿಕ್ಷಯವನ್ನು ಹೊಂದುವನು ।।೪೦।। ಈ ವಿಷಯಕ್ಕೆ ಧುಂಡಿರಾಜಃ ।।ಶ್ಲೋಕ।। ಕಲತ್ರ ಪುತ್ರ ದ್ರವಿಣೋಪಪನ್ನಃ ಪುರಾಣ ವಾರ್ತಾ ಶ್ರವಣಾನುರಕ್ತಃ । ಸುಕರ್ಮಸತ್ತೀರ್ಥ ಕರೋನರಸ್ಯಾದ್ಯದಾಕಲಾವಾನ್ನವ ಮಾಲಯಸ್ಥಃ ।।೪೧।।

## ದಶಮಭಾವಸ್ಥಿತ ಚಂದ್ರಫಲಂ

ಕರ್ಮಗೇ-ದಶಮಸ್ಥಾನದಲ್ಲಿ ಚಂದ್ರನಿರುವಾಗ ಹುಟ್ಟಿದವನು ನಿಷ್ಪತ್ತಿಂ-ಫಲ ನಿಷ್ಪತ್ತಿಯನ್ನು, ಸಮುಪೈತಿ-ಹೊಂದುವನು, ಧರ್ಮಧನಧೀ ಶೌರ್ಯೈಃ-ಧರ್ಮ ಧನ ಬುದ್ಧಿ ಪರಾಕ್ರಮದಿಂದ, ಯುತಃ-ಕೂಡಿದವನಾಗುವನು. ಈ ವಿಷಯದಲ್ಲಿ ।।ಶ್ಲೋಕ।। ನಾ.ಭ.।। ಸುಖಂಬಾಂಧವೇಭ್ಯಃ ಖಗೇಧರ್ಮ ಕರ್ಮಾ ಸಮುದ್ರಾಂಗಜೇಶಂ ನರೇಶಾದಿ ತೋಪಿ । ನವೀನಾಂಗನಾವೈಭವೇ ಸುಪ್ರಿಯತ್ವಂ ಪುರೋಜಾತಕೇ ಸೌಖ್ಯಮಲ್ಪಂಕರೋತಿ।।೪೨।। ಚಂದ್ರನು ದಶಮ ಭಾವದಲ್ಲಿದ್ದರೆ, ಆ ಜಾತಕನು ಪುಣ್ಯಕರ್ಮ ಮಾಡುವನು, ಬಾಂಧವರಿಂದ ಸೌಖ್ಯವುಳ್ಳವನು, ರಾಜ, ಮಹಾರಾಜ, ಶ್ರೀಮಂತರುಗಳಿಂದ ಲಕ್ಷ್ಮೀಪ್ರಾಪ್ತಿಯಾಗುವುದು, (ನವಂ ನವಂಯಾತಿ) ಹೊಸ ಹೊಸ ಸ್ತ್ರೀಯರಿಂದ ಸ್ವಾಮಿತ್ವಪ್ರಾಪ್ತಿಯಾಗುವುದು, ಅಂದರೆ ನವಯೌವನ ಸ್ತ್ರೀಯರ ಹಾಸ್ಯ ವಿಲಾಸಾದಿ ಸುಖವುಂಟಾಗುವುದು, ಪ್ರಥಮ ಪುತ್ರನಿಂದ ಅಲ್ಪಸುಖ ಹೊಂದುವನು, ತನ್ನ ಚಾಕರರಿಂದ ಅಲ್ಪಸುಖ ಹೊಂದುವನು ।।೪೨।। ಮತ್ತು ಧುಂಡಿರಾಜಃ ।।ಶ್ಲೋಕ।। ಕ್ಷೋಣೀಫಲಾದರ್ಥ ಲಬ್ಧಿರ್ವಿಶಾಲಾ ಕೀರ್ತಿಮೂರ್ತಿಃ ಸತ್ವಸಂತೋಷಯುಕ್ತಃ ।। ಚಂಚಲ್ಲಕ್ಷ್ಮೀಃ ಶೀಲಸಂಶಾಲಿನೀ ಸ್ಯಾನ್ಮಾನಸ್ಥಾನೇ ಯಾಮಿನೀನಾಥಕಶ್ಚೇತ್ ।।

ತಾ।। ರಾಜಮೂಲದಿಂದ ದ್ರವ್ಯಪ್ರಾಪ್ತಿ, ವಿಶಾಲವಾದ ಕಾಂತಿಮಂತ, ಬಲವಂತ, ಸಂತೋಷವುಳ್ಳವನು, ಅಸ್ಥಿರವಾದ ಐಶ್ವರ್ಯವುಳ್ಳವನು, ಸುಶೀಲಸ್ವಭಾವುಳ್ಳವನು

॥೪೪॥ ಮತ್ತು ಲಗ್ನದಿಂದ ದಶಮಭಾವದಲ್ಲಿ ಚಂದ್ರನು ವೃಷಭ ಕರ್ಕಾಟಕ ರಾಶಿಯಾಗಿದ್ದರೆ ದಿಕ್ಕುದಿಕ್ಕಿಗೂ ವಿಸ್ತರಿಸುವ ಯಶಸ್ವಿಯಾಗುವನೆಂದು ಉಕ್ತವಾಗಿರುತ್ತೆ.

## ಲಾಭರಾಶಿಸ್ಥಿತ ಚಂದ್ರಫಲಂ

ಭವಗತೇ-ಚಂದ್ರನು, ಏಕಾದಶೇ-ಏಕಾದಶ (ಲಾಭ) ಭಾವದಲ್ಲಿದ್ದರೆ, ಖ್ಯಾತಃ-ಪ್ರಸಿದ್ಧನಾಗುವನು. ಭಾವಗುಣಾನ್ವಿತಃ-ಲಾಭಭಾವಕ್ಕೆ ಉಕ್ತವಾದಂತೆ ಸಂಪತ್ತುಳ್ಳವನಾಗುವನು, ಅಂದರೆ ಸಕಲ ಲಾಭಗಳುಂಟಾಗುವುದು. ಲಾಭಸ್ಥಾನದಿಂದ ತಿಳಿಯಬೇಕಾದ ವಿಷಯವೇನೆಂದರೆ ॥ಧುಂಡಿರಾಜಃ॥ ಗಜಾಶ್ವಹೇಮಾಂಬರ ರತ್ನಜಾತ ಮಾಂದೋಲಿಕಾ ಮಂಗಲಮಂನಾನಿ ॥ಲಾಭಃ ಕಿಲೈಷಾಮುಖಿಲಂ ವಿಚಾರ್ಯ ಮೇತತ್ತು ಲಾಭಸ್ಯಗೃಹೇಗ್ರಹಜ್ಞೈಃ ॥೪೫॥ ಆದರೆ, ಈ ಗುಣಪ್ರಾಪ್ತಿ ಉಂಟಾಗುವುದು. ಮತ್ಽತ ಚಂದ್ರೇಣಾಯುಕ್ತಂಚ ವಿಲೋಕಿತೇವಾ ಲಾಭಾಲಯೇ ಚಂದ್ರಗಣಾಶ್ರಿತಂಚೇತ್ ॥ ಜಲಾಶ್ರಯ ಸ್ತ್ರೀಗಜವಾಜಿ ವೃದ್ಧಿಃ ಪೂರ್ಣೇಭವೇತ್ ಕ್ಷೀಣತರೇ ವಿಲೋಮಂ ॥೪೬॥ ಸನ್ಮಾನನಾನಾವಿಧಮಾ ಹನಾಪ್ತಿಃ ಕೀರ್ತಿಶ್ಚ ಸದ್ಭೋಗ ಗುಣೋಪಲಬ್ಧಿಃ ॥ ಪ್ರಸನ್ನತಾ ಲಾಭ ವಿರಾಜಮಾನೇ ತಾರಾಧಿರಾಜೇಮನುಜಸ್ಯ ನೂನಂ ॥೪೭॥ ಚಂದ್ರನು ಲಾಭಸ್ಥಾನದಲ್ಲಿದ್ದ ಕಾಲದಲ್ಲಿ ಹುಟ್ಟಿದವನಿಗೆ ಜಲಾಶ್ರಯ, ಶಂಖ, ಮುಕ್ತಾ, ಪ್ರವಾಳ ಮೊದಲಾದ ಜಲಸಂಬಂಧವಾದ ವಸ್ತುಗಳು, ಆರಾಮ, ಉದ್ಯಾನವನಾದಿಗಳು, ಜಲಭೂಮಿಜ ವೃಕ್ಷಾದಿಗಳ ಮೂಲಕವಾಗಿಯೂ ಲಾಭವಾಗುವದು ಮತ್ತು ಗೋವು, ಮಹಿಷ, ಗಜ, ತುರಗ, ಅಂದೋಳಿಕಾ (ಪಲ್ಲಕ್ಕಿ) ಮೊದಲಾದ ವಾಹನಸಂಬಂಧಗಳು, ವಿಶಾಲವಾದ ಉಪವನಾದಿಗಳು, ಪ್ರಾಪ್ತಿಯಾಗುತ್ತವೆ. ಅನೇಕ ಸನ್ಮಾನ, ಕೀರ್ತಿ, ಅನೇಕ ವಿಷಯೋಪಭೋಗಗಳು, ಸರ್ವಕಾಲದಲ್ಲಿಯೂ, ಪ್ರಸನ್ನಚಿತ್ತನಾಗಿರುವಿಕೆ ಈ ಮೊದಲಾದ ಸೌಖ್ಯಗಳುಂಟಾಗುತ್ತೆ. ಪೂರ್ಣ ಚಂದ್ರನಾಗಿದ್ದರೆ ಈ ಫಲ ಪೂರ್ಣವಾಗಿಯೂ, ಮಧ್ಯಚಂದ್ರನಾಗಿದ್ದರೆ ಮಧ್ಯಮವಾಗಿಯೂ, ಕ್ಷೀಣಚಂದ್ರನಾಗಿದ್ದರೆ ಅಲ್ಪವಾಗಿಯೂ, ಕಲಾಹೀನನಾಗಿದ್ದರೆ ಉಕ್ತಫಲ ವಿಪರೀತವಾಗಿಯೂ ಫಲತಾರತಮ್ಯವನ್ನು ವಿಚಾರಮಾಡಿಕೊಳ್ಳತಕ್ಕದ್ದು. ಈ ವಿಷಯದಲ್ಲಿ ನಾ.ಭ. ॥ಶ್ಲೋಕ॥ ಲಭೇದ್ಭೂಮಿ ಪಾದಿಂದುಗಾ ಲಾಭಗೇನ ಪ್ರತಿಷ್ಠಾಧಿಕಾರಾಮ್ಬು ರಾಣಿ ಕ್ರಮೇಣ ॥ ಶ್ರಿಯೋಥ ಸ್ತ್ರಿಯೋಂತಃ ಪುರೇ ವಿಶ್ರಮಂತಿ-ಕ್ರಿಯಾ ವೈ ಕೃತಿಃಕನ್ಯಕಾವಸ್ತು ಲಾಭಃ ॥೪೮॥ತಾ॥ ಚಂದ್ರನು ಲಾಭ ಭಾವದಲ್ಲಿದ್ದರೆ ರಾಜನಿಂದ ಕ್ರಮಪೂರ್ವಕ (ಮರ್ಯಾದಾ ಪೂರ್ವಕವಾಗಿ) ವಸ್ತ್ರ ಧನ, ಅಧಿಕಾರ ಇವುಗಳ ಪ್ರಾಪ್ತಿ, ಅಂತಃಪುರದಲ್ಲಿ ಸ್ತ್ರೀಯರು ಧನಾದಿ ಸಂಪನ್ನ

ರಾಗಿ, ಪ್ರಸನ್ನತೆಯಿಂದ ಸ್ಥಿರವಾಗಿರುವರು,ಅನೇಕ ಪದಾರ್ಥಗಳಿಂದಲೂ, ವ್ಯಾಪಾರಾದಿಗಳಿಂದಲೂ ಅೇಕ ಲಾಭಪ್ರಾಪ್ತಿಯಾಗುವದು, ಕನ್ಯಾ ಲಾಭ ಉಂಟಾಗುವದು ॥

## ವ್ಯಯಭಾವಸ್ಥಿತ ಚಂದ್ರಫಲಂ

ವ್ಯಯೇ-ದ್ವಾದಶದಲ್ಲಿ ಚಂದ್ರನಿದ್ದರೆ, ಕ್ಷುದ್ರಃ-ರುಧ್ರಾನ್ವೇಷಣೆ ತತ್ಪರನಾಗುವನು (ಚಾಡಿಕೋರನೆಂದು ಕೆಲವರು), ಅಂಗಹೀನಃ-ಅವಯವಹೀನನಾಗುವನು ॥ ಈ ವಿಷಯಕ್ಕೆ ॥ಶ್ಲೋಕ॥ ನಾ.ಭ.॥ ಶಶೀದ್ವಾದಶೇಶತ್ರು ನೇತ್ರಾದಿ ಚಿಂತಾ ವಿಚಿಂತ್ಯಃ ಸದಾಸದ್ವ್ಯಯೋ ಮಂಗಲೇನ ॥ ಪಿತೃವ್ಯಾದಿ ಮಾತ್ರಾದಿ ತೋಂತರ್ವಿಷಾದೋ ನಚಾಪ್ನೋತಿಕಾಮಂ ಪ್ರಿಯಾಲ್ಪ ಪ್ರಿಯತ್ವಮ್ ॥೪೯॥ ಮತ್ತು ಧುಂಡಿರಾಜಃ ॥ ಹೀನತ್ವಂ ವೈ ಚಾರುಶೀಲೇ ನಮತ್ರ್ಯೈರ್ವೈಕಲ್ಪಂಸ್ಯಾನ್ನೇತ್ರಯೋಃ ಶತ್ರುವೃದ್ಧಿಃ । ರೋಷಾವೇಶಃ ಪೂರುಷಾಣಾಂ ವಿಶೇಷಾತ್ಪೀಯೂ ಷಾಂಶೌದ್ವಾದಶೇವೇಶ್ಮನೀಹ ॥೫೦॥

ಮೂಲ॥ ಲಗ್ನೇಕುಜೇಕ್ಷತತನುರ್ಧನಗೇಕದನ್ನೋ । ಧರ್ಮೇಥವಾನ್ದಿನಕರಪ್ರತಿ
ಮೋನ್ಯಸಂಸ್ಥಃ ॥ ವಿದ್ವಾರ್ಧನೀ ಪ್ರಬಲಪಂಡಿಮಂತ್ರ್ಯ ಶತ್ರು ।
ಧರ್ಮಜ್ಞ ವಿಶ್ರುತಗುಣಾಃ ಪರತೋರ್ಕವತ್ಜ್ಞೇ ॥೬॥

## ಕುಜದ್ವಾದಶ ಭಾವಸ್ಥಿತ ಬುಧಫಲಂಚ

ಅವತಾರಿಕೆ॥ ಈ ಶ್ಲೋಕದಲ್ಲಿ ಕುಜನು ಲಗ್ನಾದಿ ದ್ವಾದಶಭಾವಗಳಲ್ಲಿದ್ದ ಫಲವನ್ನು ಮತ್ತು ಬುಧ ಲಗ್ನಾದಿ ದ್ವಾದಶಭಾವಗಳಲ್ಲಿದ್ದ ಫಲವನ್ನು ಸಹ ಹೇಳಲ್ಪಡುತ್ತೆ.

**ಟೀಕು॥** ಕುಜೇ-ಅಂಗಾರಕನು, ಲಗ್ನೇ-ತನುಭಾವದಲ್ಲಿದ್ದರೆ, ಕ್ಷತತನುಃ-ಗಾಯವುಳ್ಳ ಶರೀರವುಳ್ಳವನು. ಈ ವಿಷಯಕ್ಕೆ-ಶ್ಲೋಕ॥ ನಾ.ಭ. ವಿಲಗ್ನೇ ಕುಜೇದಂಡ ಲೋಹಾಗ್ನಿ ಭೀತಿ (ಲೋಹಾದಿಭೀತಿ) ಸ್ತಪೇನ್ನಾನ್ನಸಂ ಕೇಸರೀಕಿಂದ್ವಿತೀಯಃ । ಕಲತ್ರಾದಿಘಾತಃ ಶಿರೋನೇತ್ರಪಿಡಾ ವಿಪಾಕೇಫಲಾನಾಂ ಸದೈವೋಪಸರ್ಗಃ ॥೫೧॥ತಾ॥ ಕುಜನು ಜನ್ಮ ಲಗ್ನವಾದ ತನು ಭಾವದಲ್ಲಿದ್ದರೆ ದಂಡ, ಕಬ್ಬಿಣ, ಕಟ್ಟಿನ ದೊಣ್ಣೆ, ಶೂಲ ಮೊದಲಾದ್ದರಿಂದ ಗಾಯವಾಗಿ ಭಯ, ಸ್ತ್ರೀಪುತ್ರಾದಿ ನಾಶ, ತಲೆ ಮತ್ತು ನೇತ್ರ ಇವುಗಳಿಗೆ ರೋಗಪೀಡೆ, ಯಾವ ಕಾರ್ಯವನ್ನಾದರೂ ಮಾಡುವುದಕ್ಕೆ ಉಪಕ್ರಮಿಸಿದರೆ ವಿಘ್ನವಾಗುವಿಕೆ ಇದರಿಂದ ಸಂತಪ್ತವಾಗುವಿಕೆ, ಮತ್ತು ಕಾರ್ಯೋದ್ಯಮೀ, ಸಿಂಹಸ್ವರೂಪನಾಗಿರುವನು॥ ಈ ವಿಷಯಕ್ಕೆ-ಶ್ಲೋಕ॥

ಅತಿಮತಿಭ್ರಮತಾಚಕಲೇವರಂ ಕ್ಷತಯುತಂ ಬಹುಸಾಹಸಮುಗ್ರತಾಮ್।
ತನುಭೃತಾಂ ಕುರುತೇ ತನುಸಂಸ್ಥಿತೋ ವನಿಸುತೋಗಮನಾಗಮನಾನಿಚ ॥೫೨॥
ಎಂದುಕ್ತವಾಗಿರುತ್ತೆ.

## ಧನ ಭಾವಸ್ಥಿತ ಕುಜ ಫಲಂ

ಧನಗೇ-ದ್ವಿತೀಯ ಭಾವದಲ್ಲಿದ್ದರೆ, ಕದನ್ನಃ-ಕುತ್ಸಿತಾನ್ನವನ್ನು ಭೋಜನ ಮಾಡುವನು. ಈ ವಿಷಯದಲ್ಲಿ ॥ಶ್ಲೋಕ॥ನಾ.ಭ.॥ ಭವೇತ್ತಸ್ಯಕಿಂ ವಿದ್ಯಮಾನೇ ಕುಟುಂಬೇ ಧನೇಂಗಾರಕೋಯಸ್ಯ ಲಬ್ಧೇಧನೇಕಿಂ । ಯಥಾತ್ರಾಯತೇ ಮರ್ಕಟಃ ಕಂಠಹಾರಂ ಪುನಸ್ಸನ್ಮುಖಂ ಕೋಭವೇದ್ವಾದಭಗ್ನಃ ॥೫೩॥ತಾ॥ ದ್ವಿತೀಯ ಭಾವದಲ್ಲಿ ಮಂಗಳನಿದ್ದರೆ ಅವನಿಗೆ ಧನವೂ ಮತ್ತು ದನಾಗಮವೂ ಆಗುವುದು, ತನಗೆ ಉಕ್ತವಾದ ಧನ ಬರುವುದಿಲ್ಲ. ಮುತ್ತ ಮಕಟವು ಮುತ್ತಿನ ಹಾರವನ್ನು ತನ್ನ ಕಂಠಕ್ಕೆ ಹಾಕಿಕೊಂಡು ಪ್ರಸನ್ನವಾಗಿ ಪುನಃ ಹೇಗೆ ರಕ್ಷಣೆ ಮಾಡುತ್ತದೋ ಆ ಪ್ರಕಾರ ನೋಡಿ ಸಂತೋಷಪಟ್ಟ ಧನವನ್ನು ಕೂಡಿಡುವನು ಮತ್ತು ಅವನ ಸಂಗಡ ವಾಗ್ವಾದದಲ್ಲಿ ಯಾರೂ ಗೆಲಲ್ಲಾರರು ಮತ್ತು ಈ ವಿಷಯಕ್ಕೆ ಧುಂಡಿರಾಜಃ ॥ ಶ್ಲೋಕ॥ ಅಧನತಾಂ ಕುಜನಾಶ್ರಯತಾಂ ತಥಾ ವಿಮತಿತಾಂ ಕೃಪಯಾತಿ ವಿಹೀ- ನತಾಂ॥ ತನುಭೃತಂ ವಿದಯಾತಿ ವಿರೋಧಿತಾಂ ಧನನಿಕೇತನ ಗೋವನಿನಂದನಃ ॥೫೪॥ತಾ॥ ಧನಹೀನ, ದುಷ್ಟರಾದ ಮಿತ್ರರು, ನಾಸ್ತಿಕ ಬುದ್ಧಿ, ನಿರ್ದಯ, ಸರ್ವರಲ್ಲಿಯೂ ದ್ವೇಷಮಾಡುವನು ॥೫೪॥ ಇದು ಬಲಹೀನ ಫಲ॥

## ತೃತೀಯಸ್ಥಾನಸ್ಥ ಕುಜಫಲಂ

(ಸೂರ್ಯನಿಗೆ ಹೇಳಿರುವಂತೆ ಫಲ) ನಾ.ಭ.॥ಶ್ಲೋಕ॥ ಕುತೋಬಾಹುವೀರ್ಯಂ ಕುತೋ ಬಾಹುಲಕ್ಷ್ಮೀ ಸ್ತೃತೀಯೋನಚೇನ್ಮಂಗಲಂ ಮಾನವಾನಾಂ । ಸಹೋತ್ಥವ್ಯಥಾಭಗ್ನ್ಯಾತೇ ಕೇನತೇಷಾಂ ತಪಶ್ಚರ್ಯಯಾಚೋಪಹಾಸ್ಯಂ ಕಥಂಸ್ಯಾತ್ ॥೫೫॥ತಾ॥ ಮಂಗಳನು ತೃತೀಯ ಭಾವದಲ್ಲಿದ್ದಾಗ ಹುಟ್ಟಿದವನು ಭುಜಬಲ ಪರಾಕ್ರಮ ಉಳ್ಳವನು ಮತ್ತು ಭುಜಬಲವೆಂಬ ಧೈರ್ಯಲಕ್ಷ್ಮಿಯು ಅವನಿದ್ದಲ್ಲಿರುವಳು. ಅವನ ತಮ್ಮಂದಿರಿಂದ ಸುಖ ಹೊಂದುವನು. ತಪಸ್ಸು ಭಂಗವಾಗಿ ಎಲ್ಲರಿಂದಲೂ ಅಪಹಾಸ್ಯಕ್ಕೆ ಈಡಾಗುವನು. ಈ ವಿಷಯಕ್ಕೆ ಧುಂಡಿರಾಜಃ ॥ ಶ್ಲೋಕ ॥ ಭೂಪ ಪ್ರಸಾದೋತ್ತಮಸೌಖ್ಯ ಮುಚ್ಚೈರುದಾರತಾಚಾರಂ ಪರಾಕ್ರಮಶ್ಚ । ಧನಾನಿಚ ಭ್ರಾತೃಸುಖೋಜ್ಝಿ ತತ್ವಂ ಭವೇನ್ನರಾಣಾಂ ಸಹಜೇಮಹೀಜೆ ॥೫೬॥

## ಚತುರ್ಥಭಾವಸ್ಥಿತ ಕುಜಫಲಂ

(ಸೂರ್ಯನಿಗೆ ಹೇಳಿರುವ ಫಲವೇ ಹೇಳಿರುತ್ತೆ) ನಾ.ಭ.॥ಶ್ಲೋಕ॥ ಯದಾ ಭೂಸುತಃ ಸಂಭವೇತ್ತುರ್ಯಭಾವೇತದಾ ಕಿಂಗ್ರಹಾಃ ಸಾನುಕೂಲಾ ಜನಾನಾಮ್ ॥ ಸುಹೃದ್ವರ್ಗಸೌಖ್ಯಂ ನಕಿಂಚಿದ್ವಿಚಿಂತ್ಯಂ ಕೃಪಾವಸ್ತ್ರಭೂಮಿಂ ಲಭೇದ್ಭೂಮಿ ಪಾಲಾತ್ ॥೫೭॥ತಾ॥ ಅಂಗಾರಕನು ಚತುರ್ಥದಲ್ಲಿದ್ದ ಜಾತಕನಿಗೆ ಅನ್ಯಗ್ರಹಗಳು ಶುಭಫಲ ಕೊಡಲು ಸಮರ್ಥರಾಗಿದ್ದರೂ ಅಂಗಾರಕನು ಸುಖಭಾವದಲ್ಲಿರುವದರಿಂದ ವ್ಯರ್ಥ ವಾಗುವದು, ಅವನಿಗೆ ಬಂಧುಗಳು, ಮಿತ್ರರು, ತಾಯಿ ಮೊದಲಾದವರ ಸುಖವು ಸ್ವಲ್ಪವೂ ಇಲ್ಲದೆ ಹೋಗುವದು. ರಾಜಮೂಲವಾಗಿ ಕೃಪೆ, ವಸ್ತ್ರ, ಭೂಮಿ ಮೊದಲಾದದ್ದು ಮಾತ್ರವೇ ಲಾಭವಾಗುವದು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ದುಃಖಂ ಸಂಹೃದ್ವಾಹನತಃ ಪ್ರವಾಸೋ ಕಲೇವರೇ ಖುಗ್ಬಲಿತಾಬಲತ್ವಂ। ಪ್ರಸೂತಿಕಾಲೇ ಕಿಲಮಂಗಲಾಖ್ಯೇ ರಸಾತಲಸ್ಥೇ ಫಲಮುಕ್ತ ಪೂರ್ವೈಃ ॥೫೮॥

## ಪಂಚಮಭಾವಸ್ಥ ಕುಜಫಲಂ (ಸೂರ್ಯನಿಗೆ ಹೇಳಿರುವಂತೆ)

ನಾ.ಭ. ॥ಶ್ಲೋಕ॥ ಕುಜೇ ಪಂಚಮೇ ಜಾಠರಾಗ್ನಿರ್ಬಲೀಯಾನ್ನಜಾತಂ ನುಜಾತಂ ನಿಹಂತ್ಯೇಕಏವ । ತದಾನೀಮನಲ್ಪಾಮತಿಃ ಕಿಲ್ಬಿಷೇಪಿ ಸ್ವಯಂದುಗ್ಧ ವತ್ತಪ್ಯತೇಂತಃ ಸದೈವ ॥೫೯॥ತಾ॥ ಪಂಚಮ ಭಾವದಲ್ಲಿ ಕುಜನಿರುವಾಗ ಹುಟ್ಟಿದವನಿಗೆ ಉದರಾಗ್ನಿ ಪ್ರಬಲವಾಗಿರುವದು, ಕ್ಷುಧಾ ಮತ್ತು ಪಚನಶಕ್ತಿ ಹೆಚ್ಚಾಗಿರುವದರಿಂದ ಕ್ಷುದ್ಬಾಧೆಯನ್ನು ತಡೆಯಲಾರದವನು, ಪಾಪಕರ್ಮ ಅಭಿವೃದ್ಧಿ ಯಾಗುವದು. ಬೆರಣಿಯ ಬೆಂಕಿಯಲ್ಲಿ ಹಾಲು ಕಾಯುವಂತೆ ಸರ್ವದಾ ಮನೋರೋಗದಿಂದ ಸಂತಪ್ತನಾಗಿರುವನು ಮತ್ತು ಪಂಚಮ ಮಂಗಲ ಯಾರಿಗೆ ಇರುವದೋ ಅವನಿಗೆ ಮಕ್ಕಳು ಹುಟ್ಟುವದು, ಸಾಯುವದು ಈ ಪ್ರಕಾರ ಹುಟ್ಟಿದ ಮಕ್ಕಳೆಲ್ಲವೂ ಸಾಯುವವು, ಅರ್ಥಾತ್-ಸಂತಾನಹೀನನಾಗುವನು. ಮತ್ತು ಈ ಅರ್ಥಕ್ಕೆ ಧುಂಡಿರಾಜಃ ॥ಶ್ಲೋಕ॥ ಕಫಾನಿಲಾದ್ವ್ಯಾಕುಲತಾ ಕಳತ್ರಾನ್ಮಿತ್ರಾಚ್ಚ ಪುತ್ರಾದಪಿಸೌಖ್ಯಹಾನಿಃ । ಮತಿರ್ವಿಲೋಲಾ ವಿಪುಲಾತ್ಮ ಜೇಸ್ಮಿನ್ಪ್ರಸೂತಿಕಾಲೇ ತನಯಾಲಯಸ್ಥೇ ॥೬೦॥

## ಷಷ್ಠಭಾವಸ್ಥ ಕುಜಫಲಂ (ಸೂರ್ಯನಿಗುಕ್ತವಾದ ಫಲದಂತೆ)

ನಾ.ಭ. ॥ಶ್ಲೋಕ॥ ನತಿಷ್ಠಂತಿ ಷಷ್ಠೇರಯೋಂಗಾರಕೇ ವೈತದಂಶೈರಿತಾಃ ಸಂಗರೇ ಶಕ್ತಿಮಂತಃ । ಮನೀಷಾಸುಖೀಮಾತುಲೇ ಯೋನತದ್ವದ್ವಿಲೀಯೇತ ವಿತ್ತಂ ಲಭೇತ್ಕ್ವಾಪಿಭೂರಿ ॥೬೧॥ತಾ॥ ಯಾರ ಜಾತಕದಲ್ಲಿ ಲಗ್ನದಿಂದ ಷಷ್ಠಭಾವದಲ್ಲಿ

ಕುಜನಿರುವನೋ ಅವನಿಗೆ ಶತ್ರುಗಳು ಭಯಪಟ್ಟು ಓಡಿಹೋಗುವರು ಮತ್ತು ಅವನ ಸಮ್ಮುಖದಲ್ಲಿ ನಿಲ್ಲುವದಕ್ಕೆ ಭಯಪಡುವರು. ಅಥವಾ ಅವನು ರಾಜನಾಗಲಿ, ರಾಜಮಂತ್ರಿಯಾಗಲಿ ಆಗುವನು, ಮತ್ತು ರಾಜನಾದರೆ ಅವನ ಸಮ್ಮುಖದಲ್ಲಿ ಮಂತ್ರಿಗಳು ನಿಲ್ಲಲಾರರು ಮತ್ತು ಚತುರ ಬುದ್ಧಿಯುಳ್ಳವನು, ಅವನ ಸೋದರಮಾವನ ಮಗ ಸುಖವಾಗಿರುವುದಿಲ್ಲ. ಧನ ಒಂದು ಸಾರಿ ನಷ್ಟವಾಗಿ ಪುನಃ ಧನವಂತನಾಗುವನು, ಶತ್ರುಗಳುಂಟಾಗುವುದಿಲ್ಲ. ಹುಟ್ಟಿದ ಕುಲದಲ್ಲಿ ಮುಖ್ಯನಾಗುವನು, ಮತ್ತು ಸುಂದರ ಪುರುಷನೂ, ದರ್ಶನೀಯನೂ ಆಗುತ್ತಾನೆ. ಸಜ್ಜನರಲ್ಲಿ ಇವನ ಪ್ರಶಂಸೆಯುಂಟಾಗುವದು, ನಮ್ರನಾಗಿರುವನು, ಉತ್ತಮವಾದ ಶೀಲಸ್ವಭಾವ ಉಳ್ಳವನಾಗುವನು. ಈ ಷಷ್ಠ ಭಾವದಲ್ಲಿ ಅಂಗಾರಕನಿರುವ ಜಾತಕನ ವಿಷಯದಲ್ಲಿ ।। ಧುಂಡಿರಾಜರು ಹೇಳಿರುವದೇನೆಂದರೆ, ಶ್ಲೋಕ।। ಪ್ರಾಬಲ್ಯಂ ಸ್ಯಾಜ್ಜಾಠರಾಗ್ನೇರ್ವಿಶೇಷಾದ್ದ್ವೇಷಾವೇಶಃ ಶತ್ರುವರ್ಗೋಪಶಾಂತಿಃ । ಸದ್ಭಿಃ ಸಂಗೋನಂಗವೃದ್ಧಿರ್ನರಾಣಾಂಗೋತ್ರಾಃ ಪುತ್ರೇ ಶತ್ರುಸಂಸ್ಥೇ ಪ್ರಸೂತೌ ।।೬೨।।

## ಸಪ್ತಮಭಾವಸ್ಥಿತ ಕುಜಫಲಂ (ಸೂರ್ಯನಿಗೆ ಹೇಳಿರುವಂತೆ)

ನಾ.ಭ. ।।ಶ್ಲೋಕ।। ಅನುದ್ವಾರ ಭೂತೇನ ಪ್ರಾಣಗ್ರಹೇಣ ಪ್ರಯಾಣೇನ ವಾಣಿಜ್ಯತೋನೋನಿವೃತ್ತಿಃ । ಮುಹುರ್ಭಂಗದಃ ಸ್ಪರ್ಧಿನಾ ಮೇದಿನೀಜಃ ಪ್ರಹಾರಾರ್ದನ್ಯೈಃ ಸಪ್ತಮೇದಂಪತಿಘ್ನಃ ।।೬೩।। ಸಪ್ತಮ ಭಾವದಲ್ಲಿ ಮಂಗಳನಿದ್ದರೆ ಜಾತಕನಿಗೆ ಶಶ್ರುಗಳಿಂದ ಪ್ರಹರವುಂಟಾಗಿ ಪುನಃ ಪುನಃ ಪೀಡಿಸಲ್ಪಡುವನು, ಪುರುಷ ಜಾತಕದಲ್ಲಿದ್ದರೆ ಸಪ್ತಮಾಂಗಾರಕನು ಸ್ತ್ರೀನಾಶ ಮಾಡುವನು, (ಸ್ತ್ರೀ ಜಾತಕದಲ್ಲಿದ್ದರೆ ಪುರುಷನ ನಾಶವುಂಟಾಗುವದು) ಏವಂಚ ದಂಪತಿಗಳಲ್ಲಿ ಯಾರಾದರೂ ನಾಶಹೊಂದುವರು. ಅವನಿಗೆ ವಿವಾಹಕೃತ್ಯ ಮಾಡತೊಡಗಿದಾಗ ವಿಘ್ನವುಂಟಾಗುವದು, ವ್ಯಾಪಾರ ಮಾಡುವುದರಲ್ಲೂ ಗಮನಾದಿಗಳಲ್ಲೂ ಕಠಿನವಾಗುವದು. ಸುಲಭ ಸಾಧ್ಯವಾಗುವುದಿಲ್ಲ. ಅಂದರೆ ವ್ಯಾಪಾರಕ್ಕೂ ವಿವಾಹಕ್ಕೂ ಪರದೇಶದಲ್ಲಿ ಬಹುಕಾಲ ವಾಸಮಾಡುವನು, ವಿದೇಶ ವಾಸದಿಂದ ಜೀವನ, ಅವನ ಹೆಂಡತಿ (ಸ್ತ್ರೀ) ಸನ್ಮಾರ್ಗಳಲ್ಲ, ದುರ್ಮಾರ್ಗಗಳು, ಕಲಹ ಮಾಡುವಳು, ಅನೇಕ ಶತ್ರುಗಳುಳ್ಳವನು, ಜನರಲ್ಲಿ ಅನುರಾಗವಿರುವನು, ಸಾಹಸಿಯೂ ಆಗುವನು. ಈ ವಿಷಯಕ್ಕೆ ದುಂಡಿರಾಜರ ಅಭಿಪ್ರಾಯ ।।ಶ್ಲೋಕ।। ನಾನಾರ್ಥೈರ್ವ್ಯರ್ಥ ಚಿಂತೋಪಸರ್ಗೈ-ರ್ವೈರಿವ್ರಾತ್ರೈರ್ಮಾನಮ ಹೀನದೇಹಂ । ದಾರಾಗಾರಾತ್ಯಂತ ದುಃಖಪ್ತತಪ್ತಮ್ ದಾರಾ ಗಾರೇಂಗಾರಕೋಯಂ ಕರೋತಿ ।।೬೪।।

## ಅಷ್ಟಮಭಾವಸ್ಥಿತ ಕುಜಫಲಂ (ಸೂರ್ಯನಂತೆ)

ನಾ.ಭ. ।।ಶ್ಲೋಕ।। ಶುಭಸ್ತಸ್ಯಕಿಂ ಖೇಚರಾಃ ಕುರ್ಯುರನ್ಯೇ ವಿಧಾನೇ ಪಿಚೇದಷ್ಟಮೇ ಭೂಮಿಸೂನುಃ ।। ಸಖಾಕಿಂ ನಶತ್ರೂಯತೇ ಸತ್ಕೃತೋಪಿ ಪ್ರಯತ್ನೇ ಕೃತೇಭೂಯತೇ ಚೋಪಸರ್ಗ್ಯೆಃ ।।೬೫।।ತಾ।। ಯಾರಿಗೆ ಮಂಗಳನು ಅಷ್ಟಮಭಾವದಲ್ಲಿರುತ್ತಾನೋ ಅವನಿಗೆ ಇತರ ಗ್ರಹಗಳು ಶುಭವನ್ನು ಕೊಡಲು ಶಕ್ತರಾಗಿದ್ದರೂ ಈ ಅಂಗಾರಕನು ಅಷ್ಟಮದಲ್ಲಿರೋಣದರಿಂದುಟಾದ ಬಲದಿಂದ ಶುಭಪ್ರದರಾಗುವುದಿಲ್ಲ. ಅವರೆಲ್ಲರನ್ನೂ ಬಲಹೀನಮಾಡಿ ತಾನೂ ದುಷ್ಟಫಲವನ್ನು ಕೊಡುವನು ಮತ್ತು ತನಗೆ ಪರಮ ಮಿತ್ರನು ಸತ್ಕಾರ ಮಾಡಿದರೂ ಅವನು ಶತ್ರುವಾಗುತ್ತಾನೆ, ಅವನು ಯಾವುದಾದರೂ ಕಾರ್ಯಾರಂಭ ಮಾಡಿದರೆ ವಿಘ್ನದಿಂದ ಕೆಟ್ಟು ಹೋಗುವದು. ಈ ವಿಷಯದಲ್ಲಿ ಧುಂಡಿರಾಜರ ಅಭಿಪ್ರಾಯ ।।ಶ್ಲೋಕ।। ವೈಕಲ್ಯಂಸ್ಯಾನ್ನೇತ್ರಯೋದುರ್ಭಗತ್ವಂ ರಕ್ತಾತ್ತೀಡಾ ನೀಚಕರ್ಮ ಪ್ರವೃತ್ತಿಃ ।। ಬುದ್ಧೇರಾಧ್ಯಂ ಸಜ್ಜನಾನಾಂಚನಿಂದಾ ರಂಧ್ರಸ್ಥಆನೇಮೇದಿನೀ ನಂದನೇಸ್ಮಿನ್ ।।೬೬।।

## ನವಮಭಾವಸ್ಥಿತ ಕುಜಫಲಂ

ಧರ್ಮೇ-ನವಮಸ್ಥಾನದಲ್ಲಿ ಅಂಗಾರಕನಿದ್ದರೆ, ಅಘವಾ‌ನ್-ಪಾಪಿಷ್ಠನು, ಅನ್ಯಸಂಸ್ಥೇ-ಇತರ ಸ್ಥಾನಗಳಾದ ೩-೪-೫-೬-೭-೧೦-೧೨- ಈ ಸ್ಥಾನದಲ್ಲಿ ಸೂರ್ಯನಿಗೆ ಹೇಳಲ್ಪಟ್ಟ ಫಲವೇ ಅಗಾರಕನಿಗೂ ಹೇಳತಕ್ಕದ್ದು ।। ನವಮ ಸ್ಥಾನದಲ್ಲಿದ್ದ ಕುಜನಫಲ । ನಾ.ಭ।।ಶ್ಲೋಕ।। ಮಹೋಗ್ರಾಮತಿರ್ಭಾಗ್ಯವಿತ್ತಂ ಮಹೋಗ್ರಂ ತಪೋ ಭಾವ ಗೋಮಂಗಲಸ್ತಂಕರೋತಿ ।। ಭವೇನ್ನಾದಿಮಃ ಶ್ಯಾಲಕಃ ಸೋದರೋವಾ ಕುತೋವಿಕ್ರಮಸ್ತುಚ್ಛ ಲಾಭೋವಿಪಾಕೇ ।।೬೭।। ಜನ್ಮಕಾಲವಲ್ಲಿ ಅಂಗಾರಕನು ಭಾಗ್ಯಸ್ಥಾನದಲ್ಲಿದ್ದರೆ, ಭಾಗ್ಯವಂತನಾಗಿಯೂ, ಧನವಂತನಾಗಿಯೂ, ತೇಜಸ್ವಿಯಾಗಿಯೂ ಆಗುವನು. ಮತ್ತು ಕ್ರೂರವಾದ ಬುದ್ಧಿಯುಳ್ಳವನು ಅವನ ಜ್ಯೇಷ್ಠಭ್ರಾತೃ, ಜ್ಯೇಷ್ಠಶಾಲಕ, ಇವರಿಬ್ಬರೂ ಇರುವದಿಲ್ಲ. ಯಾವ ಕಾರ್ಯಕ್ಕೆ ಉಪಕ್ರಮಿಸುತ್ತಾನೋ, ಆ ಕಾರ್ಯದ ಪರಿಣಾಮವಾಗಿ ಲಾಭಸಮಯದಲ್ಲಿ ಅಲ್ಪ ಪ್ರಾಪ್ತಿಯಾಗುವದು. ಈ ವಿಷಯದಲ್ಲಿ ಧುಂಡಿರಾಜರ ಅಭಿಪ್ರಾಯ ।।ಶ್ಲೋಕ।। ಹಿಂಸಾವಿಧಾನೇಮನಸಃ ಪ್ರವೃತ್ತಿಂ ಭೂಮೀಪತೇಗೌರವ ತೋರ್ಥಲಬ್ಧಿಂ । ಕ್ಷೀಣಂಚ ಪುಣ್ಯಂದ್ರವಿಣಂ ನರಾಣಾಂ ಪುಣ್ಯಸ್ಥಿತಃ ಕ್ಷೋಣಿಸುತಃ ಕರೋತಿ ।।೬೮।।

## ದಶಮಭಾವಸ್ಥಿತ ಕುಜಫಲಂ (ಸೂರ್ಯನಿಗೆ ಫಲ ಹೇಳಿರುವಂತ)

ನಾ.ಭ. ಶ್ಲೋಕ।। ಕುಲೇಸತ್ಯಕಿಂಮಂಗಲೋ ಮಂಗಲೋನೋಜನ್ಯೆ-ರ್ಭೂಯತೇಮಧ್ಯಭಾವೇಯದಿಸ್ಯಾತ್ ।। ಸ್ವತಃ ಸಿದ್ದ ಏವಾವತಂಸೀಯತೇಸೌವರಾ ಕೋಪಿ ಕಂಠೀರವಃ ಕಿಂದ್ವಿತೀಯ ।।೬೯।।ತಾ।। (ಅತಿಶಯೋಕ್ತಿ) ಯಾರಿಗೆ ದಶಮ ಭಾವದಲ್ಲಿ ಅಂಗಾರಕನಿರುವದಿಲ್ಲವೊ ಅವನ ವಂಶದಲ್ಲಿ ಮಂಗಲ ಹೇಗೆ ಉಂಟಾದೀತು ? ಅರ್ಥಾತ್ ದಶಮ ಮಂಗಳನು ಸಕಲ ಶುಭಕರ್ಮಗಳುಂಟು ಮಾಡುವನು. ಭೃತ್ಯರು ಅನೇಕರುಂಟಾಗುವರು. ತಾನು ಸ್ವತಃ ಪ್ರಯತ್ನಮಾಡಿ ಕಾರ್ಯಸಿದ್ಧಿಯಾಗಿ (ಜನರಲ್ಲಿ) ಪ್ರಕಾಶಮಾನವಾಗಿರುವನು, ಹೀನಕುಲದಲ್ಲಿ ಉತ್ಪನ್ನನಾದವನಾದರೂ ಸಿಂಹದ ಹಾಗೆ ಪರಾಕ್ರಮವುಳ್ಳವನಾಗುತ್ತಾನೆ. ಮನುಷ್ಯರೂಪೀ ಸಿಂಹನೆಂದು ತಿಳಿಯತಕ್ಕದ್ದು. ಪ್ರಕಾರಾಂತರದಲ್ಲಿ ಗ್ರಂಥಾಂತರದ ಅಭಿಪ್ರಾಯ. ರಾಜಮೂಲವಾಗಿ ಧನಾದಿಗಳಿಂದ ತೃಪ್ತನಾಗುವನು, ಶತ್ರು ನಾಶಮಾಡುವನು, ತನ್ನ ಬಂಧು ಜನಗಳಿಂದ ಗೌರವ ಹೊಂದುವನು ಮತ್ತು ಅವನ ಚರಿತ್ರೆ ಅತಿ ಪ್ರಶಂಸನೀಯವಾಗಿರುವುದು. ಆತನ ಅಭಿಮಾನವು ಪ್ರಖ್ಯಾತವಾದದ್ದಾಗಿರುವುದು. ।।೬೯।। ಈ ವಿಷಯಕ್ಕೆ ।। ಧುಂಡಿರಾಜಿಯದಲ್ಲಿ-ಶ್ಲೋಕ।। ವಿಶ್ವಂಭರಾಪತಿ ಸಮತ್ವ-ಮತೀವತೋಷಂ ಸತ್ಸಾಹಸಂ ಪರಾಜನೋಪ ಕೃತೌಪ್ರಯತ್ನಂ। ಚಂಚದ್ವಿಭೂಷಣ ಮಣೇದ್ವಿವಿಧಾಗಮಂಚ ಮೇಷೂರಣೇ ಧರಣೀ ಕುರುತೇ ನರಾಣಾಂ ।।೭೦।।

## ಲಾಭಭಾವಸ್ಥಿತ ಕುಜಫಲಂ (ಸೂರ್ಯನಂತೆ ಫಲ ತಿಳಿಯತಕ್ಕದ್ದು)

ನಾ.ಭ. ।।ಶ್ಲೋಕ।। ಕುಜಃಪೀಡಯೇಲ್ಲಾಭಗೋಪತ್ಯಶತ್ರೂರ್ಭವೇತ್ಸಮ್ಮುಖೋ ದುರ್ಮುಖೋಪಿಪ್ರತಾಪಾತ್ ।। ಧನಂವರ್ಧತೇಗೋಧನ್ಯೆರ್ವಾಹನ್ಯೆರ್ವಾ ಸಕೃಚೂನ್ಯ ತಾರ್ಥೇಚ ಪೈಶೂನ್ಯಭಾವಾತ್ ।।೭೧।।ತಾ।। ಲಾಭಭಾವದಲ್ಲಿ ಕುಜನಿದ್ದರೆ ಪುತ್ರರಿಗೂ, ಶತ್ರುಗಳಿಗೂ ಭಯವುಂಟುಮಾಡುವನು ಮತ್ತು ಅವನ ಮುಖವು ಕ್ರೂರವಾಗಿರುವದು. ತನ್ನ ಪ್ರತಾಪದಿಂದ ಸರ್ವಸಾಧಾರಣವಾಗಿ ದರ್ಶನೀಯನು (ಸೂರೂಪಿಯು) ಶತ್ರುಗಳು ಈತನ ಮಾತು ಕೇಳಿದ ಮಾತ್ರದಿಂದಲೇ (ಪ್ರತಾಪಕ್ಕೆ) ಅಂಜಿಕೊಂಡು ಶರಣಾಗತರಾಗುವರು ಮತ್ತು ಗೋ, (ವೃಷಭ) ಮಹಿಷ, ಅಶ್ವ, ಗಜ, ಒಂಟೆ ಮೊದಲಾದುವುಗಳು ಯಾವಾಗಲೂ ವಿರಾಜಿಸುತ್ತಿರುವುದು. ವ್ಯಾಪಾರಮೂಲದಿಂದ ಧನಸಂಚಯ ಮಾಡುತ್ತಾನೆ. ಈ ವಿಷಯದಲ್ಲಿ ಧುಂಡಿರಾಜಃ।। ತಾಮ್ರಪ್ರವಾಲ ವಿಲಸತ್ಕಲ ಧೌತರಕ್ತ ವಸ್ತ್ರಾಗಮಂಸು ಲಲಿತಾನಿಚವಾಹನಾನಿ । ಭೂಪಪ್ರಸಾದ ಸುಕೂತೂಹಲ ಮಂಗಲಾನಿ ದದ್ಯಾದವಾಪ್ತಿಭವನೇ ಹಿ ಸದಾವನೇಯಃ

॥೭೨॥ತಾ॥ ತಾಮ್ರ, ಪ್ರವಾಳ, ಸುವರ್ಣ, ರೌಪ್ಯ, ರಕ್ತವಸ್ತ್ರ, ಇವುಗಳ ಪ್ರಾಪ್ತಿಯನ್ನೂ, ಉತ್ತಮವಾದ ಮನೋಹರವಾದ ವಾಹನಗಳನ್ನು ಕೊಡುವನು. ರಾಜಪ್ರಸನ್ನತೆಯಿಂದ ವಿಲಾಸಮಾಡುವನು, ಸರ್ವ ಮಂಗಲದಾಯಕನು ಆಗುವನು ॥೭೨॥ ಈ ಪ್ರಕಾರ ಅಂಗಾರಕನಿಗೆ ಲಾಭ ಸ್ಥಾನದಲ್ಲಿ ಶುಭಫಲಗಳನ್ನು ಹೇಳಿರುತ್ತೆ.

## ವ್ಯಯಭಾವಸ್ಥಿತ ಕುಜಫಲಂ (ಸೂರ್ಯನಿಗೆ ಹೇಳಿರುವ ಫಲದಂತೆ)

ನಾ.ಭ. ॥ಶ್ಲೋಕ॥ ಶತಾಕ್ಷೋಽಪಿ ತತ್ಸಕ್ಷತೋ ಲೋಹ ಘಾಹತ್ಯೈಃ ಕುಜೋದ್ವಾದಶೇತ್ವರ್ಥನಾಶಂಕರೋತಿ ॥ ಮೃಷಾಕಂವದಂತೀ ಭಯಂದಸ್ಯುತೋಽವಾ ಕಲಿಂ ಪಾಪಧೀಹೇತುದುಃಖಂ ವಿಚಿಂತ್ಯಮ್ ॥೭೩॥ತಾ॥ ಮಂಗಳನು ದ್ವಾದಶದಲ್ಲಿದ್ದರೆ, ಧನವ್ಯಯ, ಇಂದ್ರನ ಶರೀರದಂಥಾ ಶರೀರವುಳ್ಳವನಾದರೂ, ಲೋಹಶಸ್ತ್ರದ ಕಾಯವಾಗುವುದು (ಅಂದರೆ ಮನುಷ್ಯ ಮಾತ್ರದವನಿಗೆ ಹೇಳತಕ್ಕದ್ದೇನು) ಅತಿಶಯೋಕ್ತಿ ॥ ಶತ್ರುವಿನಿಂದ ಹತನಾಗುವನು. ಇವನಿಗೆ ಜನರು ಸುಳ್ಳುನಿಂದ ಹೊರಿಸುವರು. ಸಿಂಹ ವ್ಯಾಘ್ರ, ಸರ್ಪಾದಿಗಳ ಭಯ ಪ್ರಾಪ್ತಿಯಾಗುತ್ತೆ, ಕಲಹಕಾರಿ, ಅವನ ಭೃತ್ಯರಿಂದಲೇ ದುಃಖಪ್ರಾಪ್ತಿಯಾಗುವದು ಸಿದ್ಧವಾಗಿರುತ್ತೆ. ಈ ವಿಷಯಕ್ಕೆ ಧುಂಡಿರಾಜರು ಹೇಳಿರುವ ॥ಶ್ಲೋಕ॥ ಸ್ವಮಿತ್ರವೈರಂ ನಯನಾತಿಬಾಧಾ ಕ್ರೋಧಾಭಿಭೂತಂ ವಿಕಲತ್ವ ಮಂಗೇ । ಧನವ್ಯಯಂ ಬಂಧನಮಲ್ಪತೇಜೋ ವ್ಯಯೇಧರಾಜೋಽವಿದಧಾತಿನೂನಂ ॥೭೪॥ ಈ ಪ್ರಕಾರ ಅನಿಷ್ಟಫಲವನ್ನು ಹೇಳಿರುವರು.

ಇತಿ ದ್ವಾದಶಭಾವಸ್ಥಿತ ಕುಜಫಲಂ

ಲಗ್ನಾದಿ ದ್ವಾದಶಭಾವಸ್ಥಿತ ಬುಧಫಲಂ

## ತತ್ರತನು ಭಾವಸ್ಥಿತ ಬುಧಫಲಂ

ಜ್ಞೇ-ಬುಧನು ಲಗ್ನದಲ್ಲಿದ್ದರೆ ವಿದ್ವಾಂ-ಪಂಡಿತನಾಗುವನು ಈ ವಿಷಯಕ್ಕೆ ನಾ.ಭ. ॥ಶ್ಲೋಕ॥ ಬುಧೋ ಮೂರ್ತಿಗೋ ಮಾರ್ಜಯೇದತ್ಯರಿಷ್ಟಂ ವರಿಷ್ಠಾಧಿಯೋ ವೈಖರೀ ವೃತ್ತಿಭಾಜಃ । ಜನಾದಿವ್ಯಚಾಮೀಕರೀ ಭೂತದೇಹಾಶ್ಚಿ ಕಿತ್ಸಾ ವಿದೋದುಶ್ಚಿಕಿತ್ಸಾ ಖಭವಂತಿ ॥ತಾ॥ ಬುಧನು ಜನ್ಮಲಗ್ನದಲ್ಲಿದ್ದರೆ, ಬುಧವ್ಯತಿರಿಕ್ತ ಗ್ರಹಗಳಿಂದು ಉಂಟಾದ ಅರಿಷ್ಟ ದೋಷ ಭಂಗಮಾಡುವನು, ಬುದ್ಧಿಶ್ರೇಷ್ಠವಾದವನಾಗುವನು ಮತ್ತು ಸುವರ್ಣ ಸಮಾನವಾದ ಶರೀರ-ವುಳ್ಳವನಾಗುವನು, ವೈದ್ಯವಿದ್ಯೆಯಲ್ಲಿ ಚತುರನಾಗುವನು, ಅಲ್ಲದೆ ಚಿತ್ರಾದಿಗಳನ್ನು

ಬರೆಯುವುದರಲ್ಲೂ ಶಿಲ್ಪವಿದ್ಯೆಯಲ್ಲೂ ಚತುರನಾಗುವನು. ಕುಟುಂಬಪೋಷಣಾದಿ ಗುಣವುಳ್ಳವನು, ಕುಟಿಲತೆಯಲ್ಲಿ ನಿಪುಣನಾಗುವನು, ಯಾರಿಗೂ ವಶನಾಗುವುದಿಲ್ಲ. ಯಾರ ವಶವರ್ತಿಯಾಗುವುದಕ್ಕೂ ಅಸಾಧ್ಯ. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಶಾಂತೋ ವಿನೀತಃ ಸುತರಾಮುದಾರೋನರಃ ಸದಾಚಾರ ಪರೋತಿ ಧೀರಃ । ವಿದ್ವಾನ್ ಕಲಾಜ್ಞೋ ವಿಪುಲಾತ್ಮಜಶ್ಚ ಶೀತಾಂಶು ಸೂನೌ ಜನನೇ ತನುಸ್ಥೇ ॥೭೬॥ ಶಾಂತಗುಣವುಳ್ಳವನು, ನಮ್ರ, ಅತ್ಯಂತ ಉದಾರಿ, ಸದಾಚಾರ ತತ್ಪರ, ಧೀರ, ವಿದ್ವಾಂಸ, ಕಲಾ ಕುಶಲ, ಪುಷ್ಕಳ ಪುತ್ರಸಂತತಿಯುಳ್ಳವನು ಈ ವಿಧವಾದ ಗುಣದಿಂದ ಕೂಡಿರುವನು ॥೭೬॥

## ದ್ವಿತೀಯಭಾವಸ್ಥ ಬುಧಫಲಂ

ಬುಧನು ದ್ವಿತೀಯದಲ್ಲಿದ್ದರೆ, ಧನೀ-ಧನವಂತನಾಗುವನು, ಈ ವಿಷಯಕ್ಕೆ ಚ. ಚಿ॥ ಶ್ಲೋಕ॥ ಧನೇಬುದ್ಧಿರ್ಮಾ ಬೋಧನೆ ಬಾಹುತೇಜಾಃ ಸಭಾಸಂಗತೋ ಭಾಸತೇವ್ಯಾಸವಿವ । ಪೃಥೂದಾರತಾ ಕಲ್ಪವೃಕ್ಷಸ್ಯ ತದ್ವ ತ್ಸದಾಭಣ್ಯತೇ ಭೋಗತಃ ಷಟ್ಪದೋಯಮ್ ॥೭೭॥ತಾ॥ ಯಾರ ಜಾತಕದಲ್ಲಿ ದ್ವಿತೀಯಭಾವದಲ್ಲಿ ಬುಧನಿರುವನೋ ಆ ಪುರುಷನು ಬುದ್ಧಿವಂತನು, ಸ್ವಬಾಹು ಬಲದಿಂದ ದ್ರವ್ಯ ಸಂಪಾದಿಸುವವನು, ಪಂಡಿತ, ಜನರ ಸಮೂಹದಲ್ಲಿ ವ್ಯಾಸನಂತೆ ಶೋಭಾಯ-ಮಾನನಾಗಿರುವನು, ಭೋಗ ವಿಷಯದಲ್ಲಿ ಸಕಲ ಭೋಗಗಳನ್ನನುಭವಿಸುವನು, ಭ್ರಮರದೋಪಾದಿಯಲ್ಲಿ ಸದ್ಗುಣವನ್ನು ಗ್ರಹಿಸುವವನು, ದಾನಮಾಡತಕ್ಕದ್ದರಲ್ಲಿ ಕಲ್ಪವೃಕ್ಷ ಸಮಾನನಾಗಿ ಉದಾರನಾಗಿರುವನು, ಅಂದರೆ ಬೇಡಿದ್ದನ್ನು ಕೊಡುವನು, ಧನವಂತನು, ಪ್ರಿಯವಾಗಿ ಮಾತನಾಡುವವನು, ದೇವಬ್ರಾಹ್ಮಣ ಭಕ್ತನು, ಪಂಡಿತನು, ಸರ್ವದಾ ಕೀರ್ತಿವಂತನು, ತನ್ನ ಜನಗಳಲ್ಲಿ ಅನುರಾಗವುಳ್ಳವನು ಆಗುವನು. ಈ ವಿಷಯದಲ್ಲಿ ಜಾತಕಾಭರಣೇ ॥ಶ್ಲೋಕ॥ ವಿಮಲ ಶೀಲಯುತೋ ಗುರುವತ್ಸಲಃ ಕುಶಲತಾ ಕಲಿತಾರ್ಥ ಮಹತ್ಸುಖಃ । ವಿಪುಲಕಾಂತಿ ಸುಮುನ್ನತಿಸಂಯುತೋ ಧನನಿಕೇತನಗೇ ಶಶಿನಂದನೇ ॥೭೮॥

## ತೃತೀಯಭಾವಸ್ಥಿತ ಬುಧಫಲಂ

ಬುಧನು ತೃತೀಯದಲ್ಲಿದ್ದರೆ, ಪ್ರಖಲಃ-ಹೆಚ್ಚಾದ ದುರ್ಜನನಾಗುವನು. ಈ ವಿಷಯದಲ್ಲಿ ಜಾತಕಾಭರಣೇ ॥ಶ್ಲೋಕ॥ ಸಾಹಸೇ ನಿಜಜನ್ಯೈಃ ಪರಿಯುಕ್ತಶ್ಚಿತ್ತ ಶುದ್ಧಿರಹಿತೋ ಹತಸೌಖ್ಯಃ । ಮಾನವಃ ಕುಶಲತೇಪ್ಸಿತ ಕರ್ತಾಶೀತ ಭಾನುತನ ಯೇನುಜಸಂಸ್ಥೇ ॥೭೯॥ತಾ॥ ಜನ್ಮಲಗ್ನದಿಂದ ತೃತೀಯದಲ್ಲಿ ಬುಧನಿದ್ದರೆ ಸ್ವಜನರ ಸಹಾಯದಿಂದ ಸಾಹಸವಾದ ಕಾರ್ಯ ಮಾಡುವವನು ಸುಖಹೀನನು, ಅತಿಶಯ

ಚತುರನು, ಉದ್ದೇಶಿಸಿದ ಕಾರ್ಯವನ್ನು ಕಡೆಯವರೆಗೂ ತಿಳಿದು ಪ್ರಾರಂಭಿಸುವನೂ ಆಗುತ್ತಾನೆ ॥೭೯॥ ಈ ವಿಷಯದಲ್ಲಿ ಚಯಚಿ॥ ವಣಿಜ್ಮಿತ್ರತಾ ಪಣ್ಯಕೃದ್ವೃತ್ತಿ ಶೀಲೋವಶಿತ್ವಂ ಧಿಯೋದುರ್ವಶಾನಾಮುಪೈತಿ। ವಿನೀತೋತಿ ಭೋಗಂ ಭಜೇತ್ಸನ್ಯಸೇದ್ವಾ ತೃತೀಯೇನುಜೈರಾಶ್ರಿತೋಜ್ಞೇಲತಾರ್ವಾ॥೮೦॥ತಾ॥ ತೃತೀಯ ಭಾವದಲ್ಲಿ ಬುಧನಿದ್ದರೆ ವ್ಯಾಪಾರಮಾಡತಕ್ಕವರಲ್ಲಿ ಮಿತ್ರತ್ವ ಉಳ್ಳವನು, ಮತ್ತು ವ್ಯಾಪಾರದಿಂದ ಜೀವನವುಳ್ಳವನು, ನಮ್ರಸ್ವಭಾವ ಉಳ್ಳವನು, ಸನ್ಮಾರ್ಗಿಯು, ಯಾರ ವಶವೂ ಆಗದಿರುವವನು ಅಂದರೆ ತನ್ನ ಸ್ವೇಚ್ಛಾ ವಿಲಾಸವುಳ್ಳವನು, ಸಹೋದರಯುಕ್ತನು, ಲತಾವೇಷ್ಟಿತವಾದಂತೆ ಬಂಧುವರ್ಗದವ ರಿಂದಲೂ ಮಿತ್ರರಿಂದಲೂ ಆವೃತನಾಗಿ ಸಕಲ ಭೋಗವನ್ನನುಭವಿಸುವನು ಮತ್ತು ಜಾತಕನು ನಾಲ್ಕನೆಯ ವಯಸ್ಸಿನಲ್ಲಿ (ಅಂದರೆ ಆಯುಃ ಪ್ರಮಾಣದ ನಾಲ್ಕನೆಯ ಭಾಗದಲ್ಲಿ) ಸಂನ್ಯಾಸಾಶ್ರಮವನ್ನವಲಂಬಿಸಿ ಈಶ್ವರಾರಾಧನೆ ಮಾಡುವವನೂ ಆಗುತ್ತಾನೆ ॥೮೦॥

## ಚತುರ್ಥಭಾವಸ್ಥಿತ ಬುಧಫಲಂ

ಬುಧನು ಚತುರ್ಥಭಾವದಲ್ಲಿದ್ದರೆ ಪಂಡಿತಃ-ವಿದ್ವಾಂಸನಾಗುವನು, ಈ ವಿಷಯದಲ್ಲಿ ॥ಶ್ಲೋಕ ಚ.ಚಿಂ.॥ ಚತುರ್ಥೇಚರೇ ಚಂದ್ರಜಶ್ಚಾರುಮಿತ್ರೋ ವಿಶೇಷಾಧಿಕೃದ್ಭೂಮಿ ನಾಥಾಂಗಣಸ್ಯ । ಭವೇಲ್ಲೇಖಕೋಲಿಖ್ಯತೇವಾತದುಕ್ತಂ ತದಾ ಶಾಪರ್ಯೈಃ ಪೈತೃಕನ್ನೋಧನಂಚ ॥ತಾ॥ ಬುಧನು ಚತುರ್ಥಭಾವದಲ್ಲಿದ್ದರೆ, ಅವನು ಚೆನ್ನಾಗಿ ಅಭಿವೃದ್ಧಿ ಹೊಂದುವನು, ರಾಜದ್ವಾರದಲ್ಲಿ ರಾಜಕೀಯ ಕಾರ್ಯಗಳಲ್ಲಿ ಪೂರ್ಣಾಧಿಕಾರವುಳ್ಳವನು, ಅವನ ಬರವಣಿಗೆಯು ರಾಜದ್ವಾರದಲ್ಲಿ ನಿರ್ಭಯ ನಾಗಿರುವದು ಅಂದರೆ ಆತನ ಆಜ್ಞೆಯನ್ನು ಇತರರು ಪ್ರಮಾಣವಾಗಿ ಎಣಿಸುವರು ಮತ್ತು ಆತನ ತಂದೆಯ ದ್ರವ್ಯ ಲಭಿಸದವನು, ತನ್ನ ಸಂಪಾದನೆಯಿಂದ ದ್ರವ್ಯವಂತನು, ಶರೀರಪುಷ್ಟಿಯುಳ್ಳವನು ಮತ್ತು ನಿರೋಗಿಯಾಗಿರುವನು, ಕೃಷಿ ಮೊದಲಾದುದರಲ್ಲಿ ಲಾಭವುಳ್ಳವನು, ವ್ಯಾಪಾರದಲ್ಲಿ ಲಾಭವುಳ್ಳವನು ಆಗುವನು ॥೮೧॥ ಈ ವಿಷಯಕ್ಕೆ ಜಾತಕಾಭರಣ ಶ್ಲೋಕ॥ ಸದ್ವಾಹನೈರ್ಧಾನ್ಯಧನೈಸ್ಸಮೇತೋ ಸಂಗೀತ ನೃತ್ಯಾಭಿರುಚಿರ್ಮನುಷ್ಯಃ । ವಿದ್ಯಾವಿಭೂಷಾಗಮನಾದಿಶಾಲೀ ಪಾತಾಳಗೇ ಶೀತಳಭಾನುಸೂನೌ ॥೮೨॥ತಾ॥ ಚತುರ್ಥದಲ್ಲಿ ಬುಧನಿದ್ದರ ಉತ್ತಮವಾದ ವಾಹನ, ದ್ರವ್ಯ, ಧಾನ್ಯ ಇವುಗಳುಳ್ಳವನು, ಸಂಗೀತ ವಿದ್ಯೆ ತಿಳಿದವನು, ವಿದ್ಯೆಯಿಂದ ಭೂಷಣಯುಕ್ತನು, ದೇಶಾಂತರ ಸಂಚರಿಸತಕ್ಕವನು ಆಗುವನು ॥೮೨॥

## ಪಂಚಮ ಭಾವಸ್ಥಿತ ಬುಧಫಲಂ

ಚತುರ್ಥ ಸ್ಥಾನದಲ್ಲಿ ಬುಧನಿದ್ದರೆ, ಮಂತ್ರಿ-ರಾಜನ ಮಂತ್ರಿಯಾಗುವನು. ಈ ವಿಷಯಕ್ಕೆ ||ಶ್ಲೋಕ|| ಚ.ಚಿಂ|| ವಯಸ್ಸಾನಿಮೇ ಪುತ್ರಗರ್ಭೋನತಿಷ್ಠೇ ದ್ಧವೇತ್ತಸ್ಯ ಮೇದಾರ್ಥ ಸಂಪಾದಯಿತ್ರೀ । ಬುಧೈರ್ಭಣ್ಯತೇ ಪಂಚಮೇ ರೌಹಿಣೇಯೇ ಕಿಯದ್ವಿದ್ಯತೇಕೈತವಸ್ಯಾಭಿಚಾರಂ ||೮೩||ತಾ|| ಬಾಧನು ಪಂಚಮಭಾವದಲ್ಲಿದ್ದರೆ, ೨೦ ವರ್ಷಗಳ ವಯಸ್ಸಿನೊಳಗೆ ಪುತ್ರನು ಹುಟ್ಟಿದರೆ ಜೀವಸಲಾರನು. ಕನ್ಯಾ ಪ್ರಜೆಯಾದರೆ ಜೀವಿಸುವುದು. ಅಂದರೆ ೨೦ ವರ್ಷದನಂತರ ಪುತ್ರಸಂಪತ್ತುಳ್ಳವನು, ಉತ್ತಮವಾದ ಬುದ್ಧಿವಂತನು, ಅರ್ಥಾತ್-ತನ್ನ ಬುದ್ಧಿಯಿಂದ ಧನಾರ್ಜನೆ ಮಾಡುವನು, ಮಂತ್ರಶಾಸ್ತ್ರ ತಿಳಿದವನು. ಸಂತಾನ ಅಲ್ಪವಾದವನು, ಅಲ್ಪಧಾತು ಉಳ್ಳವನು (ಅಂದರೆ ಸ್ತ್ರೀ ಜಿತನು), ನಿತ್ಯವೂ ಕ್ಷುದ್ಬಾಧೆಯಿಂದ ಪೀಡಸಲ್ಪಡುವವನು. ಇಷ್ಟಜನರಿಂದ ರಹಿತನೂ ಆಗುವನು ||೮೩|| ಇದೇ ವಿಷಯದಲ್ಲಿ ಜಾತಕಾಭರಣೇ ||ಶ್ಲೋಕ|| ಪುತ್ರಸೌಖ್ಯಸಹಿತಂ ಬಹುಮಿತ್ರಂ ಮಂತ್ರವಾದ ಕುಶಲಂಚ ಸುಶೀಲಂ । ಮಾನವಂಕಿಲ ಕರೋತಿ ಸಲೀಲಂ ಶೀತದೀ ಧಿತಿಸುತಃ ಸುತಸಂಸ್ಥಃ ||೮೪||ತಾ|| ಪಂಚಮಭಾವದಲ್ಲಿ ಬುಧನಿದ್ದರೆ ಆ ಪುರುಷನು ಪುತ್ರಸೌಖ್ಯಯುಕ್ತನು, ಪುಷ್ಕಳ ಮಿತ್ರರುಳ್ಳವನೂ, ಮಂತ್ರನಾದವನ್ನು ತಿಳಿದವನೂ, ಕ್ರೀಡಾವಿಲಾಸವುಳ್ಳವನೂ ಆಗುವನು ||೮೪||

## ಷಷ್ಠಭಾವಸ್ಥಿತ ಬುಧಫಲಂ

ಷಷ್ಠಸ್ಥಾನದಲ್ಲಿ ಬುಧನಿದ್ದರೆ, ಅಶತ್ರು-ಶತ್ರುರಹಿತನಾಗುವನು, ಈ ವಿಷಯದಲ್ಲಿ ||ಶ್ಲೋಕ ||ಚ.ಚಿಂ|| ವಿರೋಧೋ ಜನಾನಾಂ । ನಿರೋಧೋರಿಪೂಣಾಂ ಪ್ರಬೋಧೋ ಯತೀನಾಂಚರೋಧೋನಿಲಾನಾಂ । ಬುಧೇಸದ್ವ್ಯಯೇವ್ಯಾವಹಾರೋ ನಿಧೀರ್ವಾ ಬಲಾದರ್ಥ ಕೃತ್ಯೋ ಭವೇಚ್ಚತು ಭಾವೇ ||೮೫||ತಾ|| ಬುಧನು ಷಷ್ಠಭಾವದಲ್ಲಿದ್ದರೆ ಬಹು ಜನರಲ್ಲಿ ವಿರೋಧವುಳ್ಳವನು, ಶತ್ರುಗಳಮೇಲೆ ನಿತ್ಯವೂ ಹಟವನ್ನೇ ಹಿಡಿದಿರುವವನು, ಸಂನ್ಯಾಸಿಗಳಲ್ಲಿ ಜ್ಞಾನಬೋಧೆಯುಳ್ಳವನು, ದ್ರವ್ಯವನ್ನು ಶುಭಕಾರ್ಯದಲ್ಲಿ ವ್ಯಯಮಾಡುವವನು, ಉತ್ತಮವಾದ ವ್ಯವಹಾರ ಜ್ಞಾನವುಳ್ಳವನು, ತನ್ನ ಸಾಮರ್ಥ್ಯದಿಂದ ಧನಾರ್ಜನೆ ಮಾಡುವವನೂ ಆಗುವನು ||೮೫|| ಮತ್ತು ಜಾ.ಭ. ||ಧುಂಡಿರಾಜಃ|| ವಾದಪ್ರೀತಿಸ್ಸಾಮಯೋ ನಿಷ್ಠುರಾತ್ಮಾ ನಾನಾರಾತಿವ್ರಾತ ಸಂತಪ್ತಚಿತ್ತಃ । ನಿತ್ಯಾಲಸ್ಯವ್ಯಾಕುಲಃ ಸ್ಯಾನ್ಮನುಷಃ ಶತ್ರುಕ್ಷೇತ್ರೇ ರಾತ್ರಿನಾಥಾತ್ಮಜೇಸ್ಮಿ ||೮೬||ತಾ|| ಷಷ್ಠದಲ್ಲಿ ಬುಧನಿದ್ದರೆ ಕಲಹಪ್ರಿಯನು, ರೋಗಿ, ನಿಷ್ಠುರವಾದ

ಮನಸ್ಸುಳ್ಳವನೂ ಆಗುವನು. ಇಲ್ಲಿ ವರಾಹ ಮಿಹಿರಾಚಾರ್ಯರ ಅಭಿಪ್ರಾಯಕ್ಕೆ ಸ್ವಲ್ಪ ವಿರೋಧವಾಗಿ ಫಲವನ್ನು ಹೇಳಿರುವರು. ಇದು ಅನುಭವ ಸಿದ್ಧವಾಗಿರುವುದರಿಂದ ಉದಾಹರಿಸಿರುತ್ತೆ ॥೮೬॥

## ಸಪ್ತಮಭಾವಸ್ಥಿತ ಬುಧಫಲಂ

ಸಪ್ತಮದಲ್ಲಿ ಬುಧನಿದ್ದರೆ ಧರ್ಮಜ್ಞ-ಧರ್ಮ ಸೂಕ್ಷ್ಮವನ್ನು ತಿಳಿದವನಾಗುವನು. ಈ ವಿಷಯದಲ್ಲಿ ಜಾ.ಭ. ॥ಶ್ಲೋಕ॥ ಚಾರುಶೀಲವಿಭವೈರಲಂ ಕತ್ಯಃ ಸತ್ಯವಾಕ್ಯನಿರತೋ ನರೋಭವೇತ್ । ಕಾಮಿನೀ ಕನಕಸೂನು ಸಂಯುತಃ ಕಾಮಿನೀ ಭವನಗಾಮಿನೀಂದುಜೇ ॥೮೭॥ತಾ। ಲಗ್ನದಿಂದ ಸಪ್ತಮದಲ್ಲಿ ಬುಧನಿದ್ದರೆ, ಮಾತನಾಡುವವನು, ಉತ್ತಮವಾದ ಸ್ತ್ರೀ ಮತ್ತು ಪುತ್ರಯುಕ್ತನೂ ಆಗುವನು. ಈ ವಿಷಯಕ್ಕೆ ಚ.ಚಿಂ. ॥ಶ್ಲೋಕ॥ ಸುತಃ ಶೀತಗೋಃ ಸಪ್ತಮೇ ಸಂಯುವತ್ಯಾ ವಿಧತ್ತೇ ತಥಾತುಚ್ಛವೀರಂಚ ಭೋಗೇ । ಅನಸ್ತಂಗತೋ ಹೇಮವದ್ದೇಹಶೋಭಾಂ ನಶಕ್ನೋತಿ ತತ್ಸಂಪದೋವಾನುಕರ್ತುಂ ॥೮೮॥ತಾ॥ ಸಪ್ತಮದಲ್ಲಿ ಬುಧನು ಅಸ್ತನಾಗದೇ ಇದ್ದರೆ, ಸ್ತ್ರೀಸುಖ ವಿಶೇಷವಾಗಿರುವದು, ರತಿವಿಲಾಸಕಾಲದಲ್ಲಿ ವೀರ್ಯವು ಜಾಗ್ರತೆಯಾಗಿ ಸ್ಖಲನವಾಗುವದು, ಸುವರ್ಣಸಮಾನ ದೇಹಕಾಂತಿ ಉಳ್ಳವನು, ದ್ರವ್ಯ, ಮತ್ತು ದೇಹಶೋಭೆಯಲ್ಲಿ ಯಾರಿಗೂ ಕಡಿಮೆಯಾಗದವನು. ಅರ್ಥಾತ್-ಕಾಂತಿಯುಕ್ತವಾದ ಶರೀರವುಳ್ಳವನು. ಈ ಮೇಲೆ ಹೇಳಿದ ಫಲಗಳು ಬುಧನು ಅಸ್ತನಾಗಿದ್ದರೆ ವ್ಯತಿರಿಕ್ತವಾಗಿಯೂ, ಅಲ್ಪವಾಗಿಯೂ ಆಗುವದು ॥೮೮॥

## ಅಷ್ಟಮಭಾವಸ್ಥಿತ ಬುಧಫಲಂ

ಬುಧನು ಅಷ್ಟಮದಲ್ಲಿದ್ದರೆ ವಿಶ್ರುತಗುಣಃ-ವಿಖ್ಯಾತವಾದ ಗುಣವುಳ್ಳವನಾಗುವನು. ಈ ವಿಷಯದಲ್ಲಿ ॥ಶ್ಲೋಕ॥ ಚ.ಚಿಂ.॥ ಶತಂಜೀವಿನೋರಂಧ್ರಗೇರಾಜ ಪುತ್ರೇ ಭವಂತೀಹ ದೇಶಾಂತರೇ ವಿಶ್ರುತಾಸ್ತೇ । ನಿಧಾನಂ ನೃಪಾದ್ವಿಕ್ರಯಾದ್ವಾ ಲಭಂತೇ ಯುವತ್ಯುದ್ಭವಂ ಕ್ರೀಡವಂ ಪ್ರೀತಿಮಂತಃ ॥ತಾ॥ ಬುಧನು ಅಷ್ಟಮಭಾವದಲ್ಲಿದ್ದರೆ ದೀರ್ಘಾಯುರ್ಯೋಗ, ತನ್ನ ದೇಶದಲ್ಲೂ, ಪರದೇಶದಲ್ಲೂ, ವಿಖ್ಯಾತನಾಗುವನು, ರಾಜನಿಂದಲೂ, ವ್ಯವಹಾರದಿಂದಲೂ, ದ್ರವ್ಯಸಂಪಾದನೆ ಮಾಡುವನು, ಸ್ತ್ರೀಸಂಗದ ಸೌಖ್ಯವನ್ನು ಪ್ರಕಟವಾಗಿ ಅನೇಕವಾಗಿ ಅನುಭವಿಸುತ್ತಾನೆ, ಕಫ ಮತ್ತು ವಾಯು ರೋಗದಿಂದ ಶರೀರ ಪೀಡೆಯುಳ್ಳವನು, ಕುರೂಪ ಶರೀರಾಕೃತಿಯುಳ್ಳವನು ಮತ್ತು ವಂಶಘಾತಕನು ಆಗುವನು ॥೮೯॥ ಇದೇ ವಿಷಯದಲ್ಲಿ ಜಾ.ಭ. ॥ಶ್ಲೋಕ॥ ಭೂಪಪ್ರಸಾದಪ್ತ ಸಮಸ್ತಸಂಪನ್ನರೋ ವಿರೋಧೀ ಸುತರಾಂ ಸುವರ್ಗಃ ।

ಸರ್ವಪ್ರಯತನ್ನಾನ್ಯಕೃತಾಪಹರ್ತಾ ರಂಧ್ರೇ ಭವೇಚ್ಚಂದ್ರ ಸುತೇ ಪ್ರಸೂತೌ ॥೯೦॥
ತಾ॥ ಅಷ್ಟಮದಲ್ಲಿ ಬುಧನಿದ್ದರೆ, ರಾಜಾನುಗ್ರಹದಿಂದ ಸಮಸ್ತ ಸಂಪತ್ತುಳ್ಳ-ವನಾಗುವನು, ಸರ್ವರಲ್ಲೂ ವಿರೋಧ ಮಾಡುವವನೂ, ಅಹಂಕಾರಿಯೂ, ಪ್ರಯತ್ನ-ಮೂಲವಾಗಿ ಇತರರ ದ್ರವ್ಯವನ್ನು ಅಪಹರಣ ಮಾಡುವವನೂ ಆಗುವನು ॥೯೦॥

## ನವಮ ಭಾವಸ್ಥಿತ ಬುಧಫಲಂ

ನವಮದಲ್ಲಿ ಬುಧನಿದ್ದರೆ (ಸೂರ್ಯನಂತೆ ಫಲ) ಈ ವಿಷಯದಲ್ಲಿ ಜಾತಕಾಭರಣದಲ್ಲಿ ॥ಶ್ಲೋಕ॥ ಉಪಕೃತಿಕೃತಿವಿದ್ಯಾ ಚಾರುಜಾತಾದರಃ ಸ್ಯಾದನುವರ ಧನ ಸೂನು ಪ್ರಾಪ್ತಹರ್ಷೋಽವಿಶೇಷಾತ್ । ವಿತರಣ ಕರಣೋದ್ಯನ್ಮಾನಸೋ ಮಾನವಶ್ಚೇದ ವ್ರತಕಿರಣಜನ್ಮಾ ಪುಣ್ಯಾಧಾಮಾಗಮೋಯಮ್ ॥ತಾ॥ ಲಗ್ನದಿಂದ ನವಮ ಸ್ಥಾನದಲ್ಲಿ ಬುಧನಿದ್ದರೆ, ಇವರುಗಳಿಂದ ಹರ್ಷಯುಕ್ತನು, ದಾನಮಾಡುವುದರಲ್ಲಿ ಮನಸ್ಸುಳ್ಳವನೂ ಆಗುವನು ॥೯೧॥ ಚ.ಚಿಂ.॥ಶ್ಲೋಕ॥ ಬುಧೇ ಧರ್ಮಗೇ ಧರ್ಮ ಶೀಲೋ ತಿಧೀರ್ಮಾ ಭವೇದ್ದೀಕ್ಷಿತಃ ಸ್ವರ್ಧುನೀಸ್ನಾತಕೋವಾ । ಕುಲೋದ್ಯೋತ ಕೃದ್ಭಾನುದ್ಭೂ ಪಾಲಾತ್ತ್ವತಾಪಾಧಿಕೋ ಬಾಧಕೋ ದುರ್ಮುಖಾನಾಂ ॥೯೨॥ತಾ॥ ನವಮ ಭಾವದಲ್ಲಿ ಬುಧನಿದ್ದರೆ, ಅತಿಯಾಗಿ ಶೋಭಿಸುವವನು, ಅತಿ ಧನವಂತನು ಧರ್ಮದಲ್ಲಿ ಬುದ್ಧಿಯುಳ್ಳವನು, ದೀಕ್ಷಿತನು ಗುರುಮುಖವಾಗಿ ದೀಕ್ಷಾ ಸಂಸ್ಕಾರ ಹೊಂದಿ ಉಪವಾಸಕನಾಗುವನು, ಅರ್ಥಾತ್ ಸೋಮಯಾಜಿಯಾಗುವನು, ಗಂಗಾ ಸ್ನಾನದಲ್ಲಿ ಮನಸ್ಸುಳ್ಳವನು ಮತ್ತು ವ್ರತಾನುಷ್ಠಾನವುಳ್ಳವನು, ತನ್ನ ವಂಶದಲ್ಲಿ ಸೂರ್ಯಸಮಾನ ತೇಜಸ್ವಿಯಾಗುವನು, ರಾಜಕೃಪೆಯಿಂದ ವಿಶೇಷ ಪ್ರತಾಪವುಳ್ಳವನು, ದುರ್ಜನರ ಭಂಜನೆ ಮಾಡುವವನು, ಜಿತೇಂದ್ರಿಯಾಗುವನು, ಕೃಷಿಕರ್ಮದಲ್ಲಿ ಲಾಭವುಳ್ಳವನೂ ಆಗುವನು ॥೯೨॥

## ದಶಮಭಾವಸ್ಥ ಬುಧಫಲಂ

ದಶಮದಲ್ಲಿ ಬುಧನಿದ್ದರೆ (ಸೂರ್ಯನು ಕೊಡುವ ಫಲಗಳಂತೆ) ॥ಶ್ಲೋಕ॥ ಚ.ಚಿಂ॥ ಮಿತಂ ಸಂವದೇನ್ನೋಮಿತಂ ಸಂಲಭೇತ್ ಪ್ರಸಾದಾದಿವ್ಯೈ ಕಾರ್ಯ ಸೌರಾಜವೃತ್ತಿಃ ॥ ಬುಧೇ ಕರ್ಮಗೇ ಪೂಜನೀಯೋ ವಿಶೇಷಾ ತ್ರಿತುಃ ಸಂಪದೋ ನೀತಿ ದಂಡಾಧಿಕಾರಾತ್ ॥೯೩॥ತಾ॥ ಯಾರಿಗೆ ದಶಮಭಾವದಲ್ಲಿ ಬುಧನಿರುತ್ತಾನೋ ಅವನು ತಂದೆಯ ಸಂಪತ್ತನ್ನು ಹೊಂದುತ್ತಾನೆ, ವಿಶೇಷತಃ ಸರ್ವಲೋಕದಲ್ಲಿಯೂ ಪೂಜ್ಯನು, ನೀತಿವಿದ್ಯೆ ತಿಳಿದವನು (ದಂಡಾಧಿಕಾರ), ರಾಜ

ಸಂಬಂಧವಾದ ಅಧಿಕಾರವುಳ್ಳವನು, ನಿಗ್ರಹಾನುಗ್ರಹ ಶಕ್ತಿಯುಳ್ಳ ಅಧಿಕಾರ ಮಾಡುವನು. ದ್ರವ್ಯಾದಿಗಳನ್ನು ಕೊಡುವ ಸಾಮರ್ಥ್ಯವುಳ್ಳವನು, ರಾಜ್ಯಾಧಿಕಾರದಲ್ಲಿ ರಾಜ್ಯ ವ್ಯವಹಾರಶೀಲನು, ಅತಿ ವಾಚಾಲ ಮತ್ತು ಆತನ ಮಾತುಗಳು ಯಾವುದೂ ವ್ಯರ್ಥವಾಗಲಾದು, ಕುದುರೆ, ಆನೆ, ರಥ ಮೊದಲಾದ ರಾಜ ಸಂಪತ್ತುಗಳ ಭೋಗವನ್ನನುಭವಿಸುವನು, ರೂಪವಾನ್, ಭಾಗ್ಯವಾನ್, ಶೀಲವಾನ್ ಉತ್ತಮವಾದ ವಸ್ತ್ರ ವಾಹನಾದಿಗಳಿಂದ ಪರಿಪೂರ್ಣನಾಗಿರುವನು, ಸ್ತ್ರೀಯರಿಗೆ ಪ್ರೀತಿಯುಳ್ಳವನೂ, ನಮ್ರತೆಯುಳ್ಳವನೂ ಸಹಾ ಆಗುವನು ॥೯೩॥ ಇದೇ ವಿಷಯದಲ್ಲಿ ಜಾ.ಭ॥ಶ್ಲೋಕ॥ ಜ್ಞಾನಪ್ರಜ್ಞಃ ಶ್ರೇಷ್ಠಕರ್ಮಾಮನುಷ್ಯೇ ನಾನಾ ಸಂಪತ್ಸಂಯುತೋ ರಾಜಮಾನ್ಯಃ । ಚಂಚಲ್ಲೀಲಾ ವಾಗ್ವಿಲಾಸಾಧಿಶಾಲೀ ಮಾನಸ್ಥಾನೇ ಮೋಧನೇ ವರ್ತಮಾನೇ ॥೯೪॥ತಾ॥ ದಶಮದಲ್ಲಿ ಬುಧನಿದ್ದರೆ, ಆ ಮನುಷ್ಯನು ವಿಶೇಷಜ್ಞಾನವೂ, ಪ್ರಜ್ಞೆಯೂ ಉಳ್ಳವನು, ದೊಡ್ಡ ಕರ್ಮಗಳ ಮಾಡುವನು, (ದೊಡ್ಡದಾದ ಅಧಿಕಾರ ಮಾಡುವನು) ನಾನಾ ಪ್ರಕಾರ ಸಂಪದ್ಯುಕ್ತನು, ರಾಜಪೂಜನು, ಸುಂದರವಾದ ಲೀಲಾವಿಲಾಸವುಳ್ಳವನು, ಮಧುರವಾಗಿ ಮಾತನಾಡುವನು, ಅತಿಶಯವಾಗಿ ಶೋಭಿಸತಕ್ಕವನು ಈ ಮೊದಲಾದ ಅತಿಶಯವಾದ ಫಲವನ್ನು ಕೊಡುತ್ತಾನೆ ॥೯೪॥

## ಏಕಾದಶಭಾವಸ್ಥಿತ ಬುಧಫಲಂ

ಬುಧನು ಏಕಾದಶದಲ್ಲಿದ್ದರೆ (ಸೂರ್ಯನಂತೆ ಫಲ) ॥ಶ್ಲೋಕ॥ ಜಾತಕಭರಣೇ॥ ಭೋಗಸಕ್ತೋತ್ಯಂತ ವಿತ್ತೋ ವಿನೀತೋ ನಿತ್ಯಾನಂದಶ್ಚಾರು-ಲೀಲೋ ಬಲಿಷ್ಠಃ । ನಾನಾ ವಿದ್ಯಾಭ್ಯಾಸ ಕೃನ್ಮಾನವಸ್ಯಾಲ್ಲಾಭಸ್ಥಾನೇ ನಂದನೇ ಶೀತಾಭಾನೋಃ ॥೯೫॥ ತಾ॥ ಏಕಾದಶಸ್ಥಾನದಲ್ಲಿ ಬುಧನಿದ್ದರೆ ಭೋಗಾಸಕ್ತನು, ಅತ್ಯಂತ ಧನವಂತನು, ಅತಿಶಯ ನಮ್ರನು, ಸದಾ ಪ್ರಸನ್ನತೆಯುಳ್ಳವನು, ಒಳ್ಳೆ ಸ್ವಭಾವವುಳ್ಳವನು, ಬಲಿಷ್ಠನೂ, ಅನೇಕ ವಿದ್ಯಾವಂತನೂ ಆಗುತ್ತಾನೆ ॥ ಇದೇ ವಿಷಯಕ್ಕೆ ॥ಶ್ಲೋಕ॥ ಚ.ಚಂ॥ ವಿನಾಲಾಭ ಭಾವಸ್ಥಿತಂಭೇಶಜಾತಂ ನಲಾಭೋನಲಾವಣ್ಯ ಮಾನ್ಯಣ್ಯಮಸ್ತಿ । ಕುತಃ ಕನ್ಯಕೋ ದ್ವಾಹದಾನಂಚದೇಯಂ ಕಥಂ ಭೂಸುರಾಸ್ತೃಪ್ತ ತೃಷ್ಣಾಘಮಂತಿ ॥೯೬॥ತಾ॥ ಲಾಭ ಭಾವದಲ್ಲಿ ಬುಧನಿದ್ದರೆ ಫಲವ ಹೇಳಲ್ಪಡುತ್ತೆ. ಲಾಭದಲ್ಲಿ ಬುಧನಿಲ್ಲದಿದ್ದರೆ ದ್ರವ್ಯವು, ಸುಂದರತ್ವವು ಹೇಗ ಬಂದೀತು. ಋಣರಹಿತನು ಹೇಗೆ ಆದಾನು ಮತ್ತು ಆತನ ಪುತ್ರೀ ವಿವಾಹದಲ್ಲಿ ದಕ್ಷಿಣೆಯಿಂದ ಬ್ರಾಹ್ಮಣರು ಹೇಗೆ ತೃಪ್ತರಾದಾರು. ಮತ್ತು ದಾನವನ್ನು ಯಾರು ಕೊಟ್ಟಾರು ? ಮತ್ತು ಬ್ರಾಹ್ಮಣರು ಬೇಕೆಂದು ಅಪೇಕ್ಷಿಸುವ ಇಚ್ಛೆಯನ್ನು ಯಾವಾಗ ಬಿಟ್ಟಾರು ಅಂದರೆ

ಅರ್ಥಾತ್, ಬುಧನು ಲಾಭಭಾವದಲ್ಲಿದ್ದರೆ, ಆ ಮನುಷ್ಯನು ಈ ಮೇಲೆ ಹೇಳಿದ ಕಾರ್ಯಗಳಲ್ಲಿ ಸಮರ್ಥನಾಗುವನು, ಸುಂದರ ದರ್ಶನೀಯ, ಪಂಡಿತ, ಕವಿರಮಣೀಯ, ರೋಗರಹಿತ, ಅಭಿಮಾನಿ ಮತ್ತು ರಾಜಕಾರ್ಯವಲ್ಲಿ ಸಮರ್ಥನು, ಚತುರನೂ ಆಗುವನು.

## ವ್ಯಯಭಾವಸ್ಥಿತ ಬುಧಫಲಂ

ವ್ಯಯಭಾವದಲ್ಲಿ ಬುಧನಿದ್ದರೆ (ಸೂರ್ಯನಂತೆ ಫಲದಂತೆ ಶ್ಲೋಕ॥ಚ.ಚಿಂ॥ ನಚೇದ್ವಾದಶೇ ಯಸ್ಯಶೀತಾಂಶುಜಾತಃ ಕಥಂತದ್ಗೃಹಂ ಭೂಮಿದೇವಾಭಜಂತಿ । ರಣೇ ವೈರಿಣೋ ಭೀತಿಮಾಯಾಂತಿಕಸ್ಮಾದ್ಧಿರಣ್ಯಾದಿ ಕೋಶಂ ಶಠಃ ಕೋನುಭೂ ಯಾತ್ ॥೯೭॥ತಾ॥ ಬುಧನು ದ್ವಾದಶಸ್ಥಾನದಲ್ಲಿಲ್ಲದಿದ್ದರೆ ಬ್ರಾಹ್ಮಣರು ಆತನ ಮನೆಗೆ ಹೇಗೆ ಬಂದಾರು, ಯುದ್ಧದಲ್ಲಿ ಶತ್ರುಗಳು ಹೇಗೆ ಭಯಪಟ್ಟು ಓಡಿ ಹೋದಾರು, ಯಾವನು ಸುವರ್ಣಾದಿ ರತ್ನಗಳನ್ನೇ ಖರ್ಚುಮಾಡಿಯಾನು, ಅರ್ಥಾತ್ ಯಾರಿಗೆ ದ್ವಾದಶದಲ್ಲಿ ಬುಧನಿರುತ್ತಾನೋ ಆ ಮನುಷ್ಯನು, ದಾನಮಾಡುವುದರಲ್ಲಿ ದಕ್ಷನು, ಶತ್ರುಗಳಿಗೆ ಭಯಪ್ರದನೂ, ದುಷ್ಟಸ್ವಭಾವವಿಲ್ಲದವನೂ, ದ್ರವ್ಯವನ್ನು ಧರ್ಮಕಾರ್ಯದಲ್ಲಿ ವಿನಿಯೋಗಿಸತಕ್ಕವನೂ ಆಗುವನು ॥ ಈ ವಿಷಯದಲ್ಲಿ ಜಾ.ಭ॥ಶ್ಲೋಕ॥ (ಇದಕ್ಕೆ ವಿರೋಧವಾಗಿ ಹೇಳಿರುತ್ತಾರೆ) ಕಲಾವಿಹೀನಃ ಸುಜನೋ-ಜ್ಝಿತಶ್ಚ ಸ್ವಕಾರ್ಯದಕ್ಷೋಪಿ ಜಿತಾತ್ಮಪಕ್ಷಃ । ಧೂರ್ತೋನಿತಾಂತಂ ಮಲಿನೋನರಸ್ಸ್ಯಾದ್ವ್ಯಯೋಪಪನ್ನೇದ್ವಿಜ ರಾಜಸೂನೌ ॥೯೮॥ತಾ॥ ದ್ವಾದಶದಲ್ಲಿ ಬುಧನಿದ್ದರೆ ಆ ಪುರುಷನು ಜ್ಞಾನಹೀನ, ಸಜ್ಜನರನ್ನು ಬಿಟ್ಟವನು, ತನ್ನ ಕಾರ್ಯದಲ್ಲಿ ದಕ್ಷನು, ತನ್ನ ಪಕ್ಷವನ್ನೇ ಗೆದ್ದುಕೊಳ್ಳುವವನು, ಧೂರ್ತನು, ಅತಿ ಮಲಿನನೂ ಆಗುತ್ತಾನೆ ॥೯೮॥

ಇತಿ ಬುಧ ದ್ವಾದಶಭಾವಫಲಂ

## ಅಥ ಗುರೋಸ್ತನ್ವಾದಿ ದ್ವಾದಶಭಾವಫಲಂ

ಮೂ॥ ವಿದ್ವಾನ್ಸುವಾಕ್ಯಃ ಕೃಪಣಃ ಸುಖೀಚ ಧೀಮಾನ ಶತ್ರುಃಪಿತೃಶೋಧಿತಶ್ಚ । ನೀಚಸ್ತಪಸ್ವೀನ ಧನಸ್ಸಲಾಭಃ ಖಲಶ್ಚಜೀವೇ ಕ್ರಮಶೋ ವಿಲಗ್ನಾತ್ ॥೭॥

ಅವತಾರಿಕೆ॥ ಈ ಗ್ರಂಥಕರ್ತನು ಬೃಹಸ್ಪತಿಯು ತನ್ವಾದಿ ದ್ವಾದಶ ಭಾವಗಳಲ್ಲಿದ್ದ ಫಲವನ್ನು ಸಂಕ್ಷೇಪವಾಗಿ ಹೇಳಿರುತ್ತಾನೆ. ಇದು ಮುಖ್ಯಫಲ ಸಾರಾಂಶವೇ ಆದಾಗ್ಯೂ ವಿಶೇಷ ಫಲಗಳು ತಿಳಿಯಲು ಅಸಾಧ್ಯವಾಗಿರುವದರಿಂದ ಜಾತಕಾಭರಣದಿಂದ

ಪ್ರತಿಭಾವಕ್ಕು ೧ ಶ್ಲೋಕದ ಪ್ರಕಾರ ವಿಸ್ತಾರವಾಗಿ ತಿಳಿಸಿ ಅದಕ್ಕೆ ಸಮ್ಮತಿ ಮತ್ತು ಫಲಭೇದವನ್ನು ಚ.ಚಂ।। ಗ್ರಂಥಶ್ಲೋಕವನ್ನು ಉದಾಹರಿಸಿರುತ್ತೆ.

## ಗುರು ತನುಭಾವಸ್ಥಫಲಂ

ಗುರು ತನುಭಾವದಲ್ಲಿದ್ದರೆ, ವಿದ್ವಾ-ಪಂಡಿತನಾಗುವನು. ಈ ವಿಷಯದಲ್ಲಿ ।।ಶ್ಲೋಕ।।ನಾ.ಭ।। ವಿದ್ಯಾಸಮೇತೋಭಿ ಮತೋಹಿರಾಜ್ಞಾಂ ಪ್ರಾಜ್ಞಃ ಕೃತಜ್ಞೋತಿತ-ರಾಮುದಾರಃ। ನರೋಭವೇಚ್ಚಾರುಕಲೇ ವರಿಷ್ಟತನುಸ್ಥಿತೇ ಚಿತ್ರ ಶಿಖಂಡಿಸೂನೌ ।।೯೯।। ತಾ।। ಗುರು ಲಗ್ನಭಾವದಲ್ಲಿದ್ದರೆ ಆ ಪುರುಷನು ವಿದ್ವಾಂಸನು, ರಾಜನ ಅಭಿಮತ ವನ್ನನುಸರಿಸಿ ಅಧಿಕಾರ ಮಾಡುವನು, ಬುದ್ಧಿರ್ಮಾ-ಉಪಕಾರವನ್ನು ತಿಳಿದವನು, ಅತಿಶಯ ಉದಾರ, ಸುಕುಮಾರವಾದ ಶರೀರ ಉಳ್ಳವನು, ಈ ಮೊದಲಾದ ಸುಲಕ್ಷಣಗಳಿಂದ ಕೂಡಿದವನಾಗುವನು. ಜಾ.ಭ.।।ಶ್ಲೋಕ।। ಗುರುತ್ವಂ ಗುಣೈರ್ಲಗ್ನಗೇ ದೇವಪೂಜ್ಯೇ ಸುವೇಷೀಸುಖೀ ದಿವ್ಯದೇಹೋಲ್ಪವೀರ್ಯಃ । ಗತಿರ್ಭಾವಿನೀ ಪಾರಲೌಕೀ ವಿಚಿಂತ್ಯಾ ವಸೂನಿವ್ಯಯಂ ಸಂಬಲೇನ ವ್ರಜಂತಿ ।।೧೦೦।।ತಾ।। ಬೃಹಸ್ಪತಿ ಜನ್ಮಲಗ್ನದಲ್ಲಿದ್ದರೆ, ಆ ಮನುಷ್ಯ ಉತ್ತಮವಾದ ಭೂಷಣಗಳಿಂದ ಶೋಭಿಸುವ ಶರೀರಕಾಂತಿಯುಳ್ಳವನು, ಸುಖಿ, ವಿಷಾದರಹಿತನು, ವೀರ್ಯ ಅಲ್ಪವಾಗಿರುವವನು, ಪಂಡಿತನು, ಜನಗಳ ಪ್ರಸನ್ನತೆಯಿಂದ ಗೌರವವನ್ನು ಹೊಂದುವನು, ಅಂತ್ಯಕಾಲದಲ್ಲಿ ಸ್ವರ್ಗಪ್ರಾಪ್ತಿಯು ಮತ್ತು ದ್ರವ್ಯವನ್ನು ವ್ಯಯಮಾಡಿ ಸೌಖ್ಯವನ್ನು ಅನುಭವಿಸುವವನು, ಈ ಗುಣಗಳಿಂದ ಕೂಡಿದವನಾಗುವನು ।।೧೦೦।।

## ದ್ವಿತೀಯಭಾವಸ್ಥ ಗುರುಫಲಂ

ಗುರು ಧನಭಾವದಲ್ಲಿದ್ದರೆ ಸುವಾಕ್ಯಃ-ಚೆನ್ನಾಗಿ ಕಿವಿಗಿಂಪಾಗಿ ಮಾತನಾಡುವನು. ।।ಶ್ಲೋಕ।।ಕವಿತ್ವೇ ಮತಿರ್ದಂಡನೇ ಕೃತ್ಯಶಕ್ತಿರ್ಮುಖೇ ದೋಷದೃಕ್ ಶೀಘ್ರ ಭೋಗಾರ್ತ ಏವ। ಕುಟುಂಬೇ । ಗುರೌಕಷ್ಟತೋದ್ರವ್ಯಲಬ್ಧಿಃ ಸದಾಸೋ ಧನಂ ವಿಶ್ರಮೇದ್ಯತ್ನ ತೋಪಿ ।।೧೦೧।।ತಾ।। ಬೃಹಸ್ಪತಿಯು ಧನಭಾವದಲ್ಲಿದ್ದರೆ, ಕಾವ್ಯಾದಿ ರಚನೆ ಮಾಡುವ ಸಾಮರ್ಥ್ಯವುಳ್ಳವನು, ದಂಡನಾಧಿಕಾರಿ, ವಾಚಾಳಿ, ಪರಂತು ಮುಖದಲ್ಲಿ ರೋಗವುಳ್ಳವನು. ರತಿಕ್ರೀಡೆಯಲ್ಲಿ ಆಸಕ್ತನು, ಕಾಮಾರ್ತ ಮತ್ತು ಅಲ್ಪ ವೀರ್ಯ ವುಳ್ಳವನು, ಧನಪ್ರಾಪ್ತಿ ಕಷ್ಟದಿಂದುಂಟಾಗುವದು, ಪ್ರಯತ್ನಮಾಡಿದರೂ ಧನ ಸಂಗ್ರಹವಾಗದಿರುವವನೂ ಆಗುವನು ।।೧೦೧।।ಜಾ.ಭ.।। ಸದ್ರೂಪವಿದ್ಯಾಗುಣ ಕೀರ್ತಿಯುಕ್ತಃ ಸಂಸಕ್ತ ವೈರೋಪಿ ನರೋಗರೀಯಾನ್ । ತ್ಯಾಗೀ ಸುಶೀಲೋ ದ್ರವಿಣೇನ ಪೂರ್ಣೋ ಗೀರ್ವಾಣವಂದ್ಯೇ ದ್ರವಿಣೋಪಯಾತೇ ।।೧೦೨।।ತಾ।।

ಬೃಹಸ್ಪತಿಯು ಧನ ಸ್ಥಾನದಲ್ಲಿದ್ದರೆ, ಆ ಪುರುಷನು ಸುಂದರನು, ವಿದ್ಯಾ, ಗುಣ, ಸತ್ಕೀರ್ತಿ ಇವುಗಳಿಂದ ಯುಕ್ತನು, ಯಾರಲ್ಲಿಯೂ ವೈರಮಾಡದವನು, ಅತಿಶಯ ಶ್ರೇಷ್ಠನು, ತ್ಯಾಗಿಯೂ, ಸನ್ಮಾರ್ಗದ ನಡತೆಯುಳ್ಳವನೂ, ಧನವಂತನೂ ಆಗುವನು ॥೧೦೨॥

## ತೃತೀಯಸ್ಥಾನಸ್ಥ ಗುರುಫಲಂ

ತೃತೀಯಭಾವದಲ್ಲಿ ಗುರುವಿದ್ದಕಾಲದಲ್ಲಿ ಹುಟ್ಟಿದವನು, ಕೃಪಣಃ-ಲೋಭಿ ಯಾಗುವನು. ಈ ವಿಷಯಕ್ಕೆ ಜಾ.ಭ.॥ಶ್ಲೋಕ॥ ಸೌಜನ್ಯಹೀನಃ ಕೃಪಣಃ ಕೃತಘ್ನಃ ಕಾಂತಾ ಸುತಪ್ರೀತಿವಿವರ್ಜಿತಶ್ಚ । ನರೋಗ್ನಿ ಮಾಂದ್ಯಾ ಬಲತಾ ಸಮೇತಃ ಪರಾಕ್ರಮೀ ಶುಕ್ರಪುರೋಹಿತೇಸ್ಮಿ ॥೧೦೩॥ ತೃತೀಯದಲ್ಲಿ ಬೃಹಸ್ಪತಿ ಇದ್ದರೆ, ಕೃಪಣನು, ಕೃತಘ್ನನು, ದುಷ್ಟನು, ಸ್ತ್ರೀ, ಪುತ್ರರಮೇಲೆ ಪ್ರೀತಿಯಿಲ್ಲದವನು, ಅಗ್ನಿ ಮಾಂದ್ಯದಿಂದ ಶರೀರ ದುರ್ಬಲನಾದವನೂ ಆಗುವನು॥ ನಾ.ಭ॥ ಭವೇದ್ಯಸ್ಸುದುಶ್ಚಿಕ್ಯಗೋದೇವ ಮಂತ್ರೀಲಘೂನಾಂ ಲಘೀಯಾನ್ ಸುಖೀ ಸೋದರಾಣಾಂ । ಕೃತಘ್ನೋ ಭವೇನ್ಮಿತ್ರಸಾರ್ಥೇನಮೈತ್ರ್ಯಂ ಲಲಾಟೋದಯೇ ವ್ಯರ್ಥಲಾಭೋನತದ್ವತ್ ॥೧೦೪॥ತಾ॥ ಬೃಹಸ್ಪತಿಯು ತೃತೀಯ ಭಾವದಲ್ಲಿದ್ದರೆ, ಶೂದ್ರರ ಮಧ್ಯದಲ್ಲಿ ಅತಿ ಶೂದ್ರನಾಗುತ್ತಾನೆ. ಅಣ್ಣತಮ್ಮಂದಿರ ಸೌಖ್ಯವುಳ್ಳವನು, ಕೃತಘ್ನನು ಮಿತ್ರರಲ್ಲಿ ಮಿತ್ರತ್ವ ಇಲ್ಲದವನು, ಭಾಗ್ಯೋದಯುವಾದರೂ ಮನೋನುಕೂಲದಿಂದ ಧನಲಾಭವಾಗದಿರುವವನು. ಭಾಗ್ಯೋದಯದಿಂದ ರಾಜಸಭೆಯನ್ನು ಪ್ರವೇಶಮಾಡುವವನು (ಪ್ರ) ಸುಖೀ-ಬುದ್ಧಿಮಾನ್, ರಾಜಪ್ರಿಯ, ಅತಿಥಿ ಪೂಜಾತತ್ಪರ, ಬಂಧುಜನರ ಮಾನ್ಯನೂ ಆಗುವನು ॥೧೦೪॥

## ಚತುರ್ಥಭಾವಸ್ಥಿತ ಗುರುಫಲಂ

ಚತುರ್ಥಭಾವದಲ್ಲಿ ಗುರುವಿರುವಾಗ ಹುಟ್ಟಿದವನು, ಸುಖೀ-ಸೌಖ್ಯವಂತ ನಾಗುವನು, ನಾ.ಭ॥ಶ್ಲೋಕ॥ ಗೃಹದ್ವಾರತಃ ಶ್ರೂಯತೇ ವಾಜಿಹೇಷಾ ದ್ವಿಜೋ-ಚ್ಚಾರಿತೋ ವೇದಘೋಷೋಪಿತದ್ವತ್ । ಪ್ರತಿಸ್ಪರ್ಧಿನಃ ಕುರ್ವತೇ ಪಾರಿಚರ್ಯಂ ಚತುರ್ಥೇಗುರೌ ತಪ್ತಮಂತರ್ಗತಂಚ ॥೧೦೫॥ತಾ॥ ಬೃಹಸ್ಪತಿ ಚತುರ್ಥದಲ್ಲಿದ್ದರೆ ಆತನ ಮನೆಯ ಬಾಗಿಲಲ್ಲಿ ಅಶ್ವದ ಹೇಷಾರವ (ಖಿನಖಿನಾಟ ಶಬ್ದ) ನಿತ್ಯವೂ ಕೇಳಿಸುತ್ತಲಿರುವದು. ಬ್ರಾಹ್ಮಣರ ಮುಖೋದ್ಗತವಾದ ವೇದಮಂತ್ರದ ಆಶೀರ್ವಾದವನ್ನು ಕೇಳುತ್ತಲಿರುವನು. ಆತನ ಶತ್ರುಗಳೂ ಕೂಡಾ ದಾಸರಾಗಿ ಸೇವಿಸುತ್ತಲಿರುವರು. ಮತ್ತು ಈ ಶುಭ ಫಲಗಳಿದ್ದರೂ ತನ್ನ ಮನಸ್ಸು ಅಂತರ್ಗತವಾದ

ಆಲೋಚನೆಯಿಂದ । ತಪಿಸುತ್ತಲಿರುವವನೂ ಆಗುವನು. ಜಾ.ಭ. ॥ಶ್ಲೋಕ॥ ಸನ್ಮಾನನಾನಾಧನವಾದನಾದ್ಯೈಃ ಸಂಜಾತ ಹರ್ಷಃ ಪುರುಷಃ ಸದೈವ । ನೃಪಾನುಕಂಪಾ ಸಮುಪಾತ್ತ ಸಂಪದ್ದಂಭೋಲಿ ಭೃನ್ಮಂತ್ರಿಣಿ ಭೂತಲಸ್ಥೇ ॥೧೦೬॥ ತಾ॥ ಚತುರ್ಥದಲ್ಲಿ ಗುರುವಿದ್ದರೆ, ಆ ಪುರುಷನು ನಿರಂತರವೂ ಸನ್ಮಾನ ಹೊಂದುವನು, ಅನೇಕ ಪ್ರಕಾರವಾಗಿ, ಧನ, ವಾಹನ, ಮೊದಲಾದವುಗಳಿಂದ ಹರ್ಷಿತನು, ರಾಜಾನುಗ್ರಹದಿಂದ ಸಂಪತ್ತು ಹೊಂದುವನು ಈ ಮೊದಲಾದವುಗಳಿಂದ ಸೌಖ್ಯ ಫಲವನ್ನು ಹೊಂದುವನು ॥೧೦೬॥

## ಪಂಚಮಭಾವಸ್ಥ ಗುರುಫಲಂ

ಪಂಚಮ ಭಾವದಲ್ಲಿ ಗುರುವಿದ್ದರೆ ಧೀಮಾ-ಪಂಡಿತನು, ಬುದ್ಧಿವಂತನು ಆಗುವನು, ಈ ವಿಷಯಕ್ಕೆ ॥ಶ್ಲೋಕ॥ಜಾ.ಭ.॥ ಸನ್ಮಿತ್ರ ಪುತ್ರೋತ್ತಮ ಮಂತ್ರಶಾಸ್ತ್ರ ಮುಖ್ಯಾನಿ ನಾನಾ ಧನವಾಹನಾನಿ । ದದ್ಯಾದ್ಗುರುಃ ಕೋಮಲವಾಗ್ವಿಲಾಸಂ ಪ್ರಸೂತಿಕಾಲೇ ತನಯಾಲಯಸ್ಥಃ ॥೧೦೭॥ತಾ॥ ಪಂಚಮ ಸ್ಥಾನದಲ್ಲಿ ಬೃಹಸ್ಪತಿಯಿದ್ದರೆ, ಉತ್ತಮವಾದ ಆಚಾರವುಳ್ಳ ಮಿತ್ರರು ಪುತ್ರರುಳ್ಳವನು, ಮಂತ್ರ ಶಾಸ್ತ್ರ ತಿಳಿದವನು, ನಾನಾಪ್ರಕಾರದ ಸಂಪತ್ತುಳ್ಳವನು, ವಾಹನಯಾನ ಉಳ್ಳವನು, ಮೃದುಭಾಷಣೆಯುಳ್ಳವನೂ ಆಗುವನು. ॥೧೦೭॥ ಈ ವಿಷಯಕ್ಕೆ ॥ಶ್ಲೋಕ॥ ನಾ.ಭ.॥ ವಿಲಾಸೇ ಮತಿರ್ಬುದ್ಧಿಗೇ ದೇವಪೂಜ್ಯೇ ಭವೇಜ್ಜಲ್ಪಕಃ ಕಲ್ಪಕೋಲೇ ಖಕೋವಾ । ನಿದಾನೇಸುತೇ ವಿದ್ಯಮಾನೇಪಿ ಭೂತಿಃ ಫಲೋಪದ್ರವಃ ಪಕ್ವ ಕಾಲೇಫಲಸ್ಯ ॥ತಾ॥ ಪಂಚಮದಲ್ಲಿ ಬೃಹಸ್ಪತಿಯಿದ್ದ ಕಾಲದಲ್ಲಿ ಹುಟ್ಟಿದ ಪುರುಷನಿಗೆ ಭೋಗವಿಲಾಸದಲ್ಲಿ ಬುದ್ಧಿಯು, ಬಹು ಮಾತನಾಡುವನು, ನ್ಯಾಯಶಾಸ್ತ್ರ ತಿಳಿದವನು, ತರ್ಕಶಾಸ್ತ್ರ ಪಂಡಿತನು, ಊಹಾಪೋಹಜ್ಞಾನವುಳ್ಳವನು. ಬರೆಯುವುದರಲ್ಲಿ ಚತುರನು, ಅಥವಾ ದಿವ್ಯ ಸುಂದರವಾದ ಅಕ್ಷರಗಳನ್ನು ನಿರ್ಮಿಸುವವನು, ಯಾವುದಾದರೂ ಕಾರ್ಯ ಮಾಡಿದರೆ ಫಲಪ್ರಾಪ್ತಿ ಕಾಲದಲ್ಲಿ ವಿಘ್ನವುಳ್ಳವನು, ಪುತ್ರ ಸಹಾಯದಿಂದ ಧನ ಸಂಪಾದಿಸುವವನು, ಕಾರ್ಯಾನುಸಾರ ನುಡಿಯುವವನು, ಬಹುಪುತ್ರರುಳ್ಳವನು, ನಿರ್ಮಲವಾದ ಬುದ್ಧಿಯುಳ್ಳವನು, ಪ್ರಿಯವಾಗಿ ಮಾತನಾಡುವವನು, ಬ್ರಾಹ್ಮಣರ ಪೂಜೆಮಾಡುವವನೂ ಆಗುವನು ॥೧೦೮॥

## ಷಷ್ಠಭಾವಸ್ಥ ಗುರುಫಲಂ

ಬೃಹಸ್ಪತಿಯು ಷಷ್ಠಭಾವದಲ್ಲಿದ್ದರೆ ಅಶತ್ರುಃ-ಶತ್ರುರಹಿತನಾಗುವನು, ಈ ವಿಷಯಕ್ಕೆ ॥ಶ್ಲೋಕ॥ಚ.ಚಿಂ॥ ರುಗಾರ್ತೋ ಜನನ್ಯಾಂ ರುಜಃ ಸಂಭವೇಯುಃ

ರಿಪೌವಾಕ್ಪತೌ ಶತ್ರುಹಂತೃತ್ವಮೇತಿ। ಬಲಾದುದ್ಧತಃ ಕೋರಣೇ ತಸ್ಯಜೇತಾ ಮಹಿಷ್ಯಾದಿ ಶರ್ಮಾನತನಾಮಾತುಲಾನಾಂ ॥೧೦೯॥ತಾ॥ ಬೃಹಸ್ಪತಿಯು ಷಷ್ಠ ಭಾವದಲ್ಲಿದ್ದರೆ ರೋಗಪೀಡಿತನಾಗುವನು ಆದರೂ ಶತ್ರುಗಳನ್ನು ಸಂಹರಿಸುವುದರಲ್ಲಿ ಶಕ್ತನು, ಯುದ್ಧದಲ್ಲಿ ಸಮರ್ಥನು ಮತ್ತು ಯಾರೂ ಗೆಲ್ಲಲು ಅಸಾಧ್ಯನಾದವನು. ಪಶು, ಮಹಿಷ, ಅಶ್ವ, ಗೋವು ಮೊದಲಾದುವುಗಳ ಸೌಖ್ಯವುಳ್ಳವನು, ಸೋದರ ಮಾವನಿಂದ ಸುಖವಿಲ್ಲದವನು, ತಾಯಿಯೂ ರೋಗಿಯಾಗಿರುವಳು. ಅನೇಕ ಶತ್ರುಗಳುಳ್ಳವನು ಮತ್ತು ರೋಗಗ್ರಸ್ಥನೂ ಪರದೇಶದಲ್ಲಿ ವಾಸಮಾಡುವವನೂ ಆಗುವನು ॥೧೦೯॥ಜಾ.ಭ.॥ಶ್ಲೋಕ॥ ಸಂಗೀತವಿದ್ಯಾ ಹತಚಿತ್ತ ವೃತ್ತಿಃ ಕೀರ್ತಿಪ್ರಿಯೋರಾತಿ ಜನಪ್ರಹರ್ತಾ । ಪ್ರಾರಬ್ಧಕಾರ್ಯಾ ಲಸಕೃನ್ನ ರಸ್ಯಾತ್ಸುರೇಂದ್ರ ಮಂತ್ರೀ ಯದಿಶತ್ರುಸಂಸ್ಥಃ ॥೧೧೦॥ತಾ॥ ಷಷ್ಠಭಾವದಲ್ಲಿ ಗುರುವಿದ್ದರೆ ನಿರಂತದಲ್ಲಿ ಸಂಗೀತಶಾಸ್ತ್ರದಲ್ಲಿ ಲೀನವಾದ ಚಿತ್ತವುಳ್ಳವನು, ಕೀರ್ತಿ ಪ್ರಿಯನು, ಶತ್ರುಗಳನ್ನು ನಾಶಮಾಡುವವನು, ಪ್ರಾರಂಭಮಾಡಿದ ಕಾರ್ಯದಲ್ಲಿ ಆಲಸ್ಯವುಳ್ಳವನು ಆಗುವನು ॥೧೧೦॥

## ಸಪ್ತಮಭಾವಸ್ಥಿತ ಗುರುಫಲಂ

ಸಪ್ತಮಭಾವದಲ್ಲಿ ಬೃಹಸ್ಪತಿಯಿದ್ದರೆ ಪಿತೃಶೋಧಿಕಃ-ತಂದೆಗಿಂತ ಅಧಿಕ ಗುಣವುಳ್ಳವನು, ಈ ವಿಷಯದಲ್ಲಿ ॥ಶ್ಲೋ॥ಜಾ.ಭ॥ ಶಾಸ್ತ್ರಾಭ್ಯಾಸಾಸಕ್ತಚಿತ್ತೋ ವಿನೀತಃ ಕಾಂತಾ ಚಿತ್ತಾತ್ಯಂತ ಸಂಜಾಂತಹರ್ಷಃ । ಮಂತ್ರೀಮರ್ತ್ಯಃ ಕಾವ್ಯಕರ್ತಾ ಪ್ರಸೂತೌ ಜಾಯಾಭಾವೇ ದೇವದೇವಾಧಿದೇವೇ ॥೧೧೧॥ತಾ॥ ಲಗ್ನದಿಂದ ಸಪ್ತಮದಲ್ಲಿ ಬೃಹಸ್ಪತಿಯಿದ್ದರೆ, ಶಾಸ್ತ್ರಾಭ್ಯಾಸಾಸಕ್ತ ಚಿತ್ತನು, ನಮ್ರತೆಯುಳ್ಳವನು, ಸ್ತ್ರೀ, ಪುತ್ರ, ಧನ ಇವುಗಳ ಯುಕ್ತನು, ರಾಜನ ಮಂತ್ರಿಯೂ, ಕವಿತ್ವ ಮಾಡುವವನೂ ಆಗುವನು ॥೧೧೧॥ ಇದೇ ವಿಷಯದಲ್ಲಿ ನಾ.ಭ.॥ಶ್ಲೋ॥ ಮತಿಸ್ತಸ್ಯಬಹ್ವೀ ವಿಭೂತಿಶ್ಚಬಹ್ವೀ ರತಿರ್ವೈಭವೇದ್ಭಾಮಿನೀ ನಾಮಬಹ್ವೀ । ಗುರುರ್ವರ್ಗರ್ಗ ಕೃದ್ಯಸ್ಯಜಾಮಿತ್ರಭಾವೇ ಸ ಪಿಂಡಾಧಿಕೋಖಂಡ ಕಂದರ್ಪಏವ ॥೧೧೨॥ ॥ತಾ॥ ಸಪ್ತಮಭಾವದಲ್ಲಿ ಬೃಹಸ್ಪತಿಯಿದ್ದರೆ, ಬಹುಬುದ್ಧಿಯುಳ್ಳವನು, ವಿಚಾರಶೀಲನು, ಚತುರನು, ಧನ ಸಮೃದ್ಧಿಯುಳ್ಳವನು ಮತ್ತು ಅಲ್ಪವಾದ ಸ್ತ್ರೀಸಂಗ ಉಳ್ಳವನು, ಗರ್ವಿ ಅಂದರೆ ಬಹು ಮಾನವಂತನು, ತನ್ನ ವಂಶದ ಜನರಲ್ಲಿ ಮುಖ್ಯಸ್ಥನು, ಬಲವಂತನು, ಮನ್ಮಥನ ಸಮಾನವಾದ ಶರೀರಾಕೃತಿಯುಳ್ಳವನು, ಕಾಮಾತುರನು, ಪಾಪರಹಿತನು, ನಿಜವನ್ನು ಹೇಳುವನು, ದೇವತಾ ಗುರುಭಕ್ತಿ ಉಳ್ಳವನು ಆಗುವನು ॥೧೧೨॥

## ಅಷ್ಟಮಭಾವಸ್ಥಿತ ಗುರುಫಲಂ

ಅಷ್ಟಮಭಾವದಲ್ಲಿ ಗುರುವಿದ್ದರೆ, ನೀಚ-ತನ್ನ ಕುಲಕ್ಕುಚಿತವಾದ ಕಾರ್ಯ ಗಳನ್ನು ಮಾಡುವನು. ಈ ವಿಷಯದಲ್ಲಿ ।।ಶ್ಲೋಕ।। ಜಾ.ಭ.।। ಪ್ರೇಷ್ಯೋಮನುಷ್ಯೋ ಮನಿನೋತಿದೀನೋ ವಿವೇಕಹೀನೋ ವಿನಯೋಜ್ಝಿತಶ್ಚ । ನಿತ್ಯಾಲಸಃ ಕ್ಷೀಣ ಕಳೇವರಸ್ಯಾ ದಾಯುರ್ವಿಶೇಷೋ ವಚಸಾಮಧೀಶೇ ।।೧೧೩।। ತಾ।। ಅಷ್ಟಮ ಭಾವದಲ್ಲಿ ಬೃಹಸ್ಪತಿಯಿದ್ದರೆ, ದಾಸವೃತ್ತಿ ಮಾಡುವನು, ಅತಿಶಯ ಮಲಿನನು, ಅತಿಶಯ ಅಹಂಕಾರಿ, ಜ್ಞಾನಶೂನ್ಯನೂ, ವಿನಯರಹಿತನೂ ಆಗುವನು ।।೧೧೩।। ಇದೇ ವಿಷಯದಲ್ಲಿ ನಾರಾಯಣಭಟ್ಟನು ಹೇಳಿರುವುದೇನೆಂದರೆ, ।।ಶ್ಲೋಕ।। ಚಿರನ್ನೋವಸೇತ್ಪೈತೃಕೇಚೈವಗೇಹೇ ಚಿರಸ್ಥಾಯಿನೀ ತದ್ಗ್ರಹಂ ತಸ್ಯದೇಹಂ । ಚಿರನ್ನೋಭವೇತಸ್ಯ ನೀರೋಗಮಂಗಂ ಗುರುರ್ಮೃತ್ಯುಗೋಯಸ್ಯ ವೈಕುಂಠಗಂತಾ ।।೧೧೪।।ತಾ।। ಬೃಹಸ್ಪತಿಯು ಅಷ್ಟಮದಲ್ಲಿದ್ದ ಕಾಲದಲ್ಲಿ ಜನ್ಮಿಸಿದವನು ತಂದೆಯ ಮನೆಯಲ್ಲಿ ಬಹುಕಾಲ ವಾಸಮಾಡುವುದಿಲ್ಲ, ಆತನ ಶರೀರವು ಬಹುಕಾಲ ರೋಗ ರಹಿತವಾಗಿರುವದಿಲ್ಲ. ಆಗಾಗ್ಯೆ ರೋಗಗ್ರಸ್ಥನಾಗುವನು, ಅಂತ್ಯಕಾಲದಲ್ಲಿ ಸ್ವರ್ಗವಾಸವಾಗುವದು ಮತ್ತು ಮೋಕ್ಷವಾಗುವದು. ನೈರ್ಯಾಣಿಕ ಪುರಾಣದಲ್ಲಿ "ಗತಿರಪಿ ರಿಪುರಂಧ್ರಪೋ" ಎಂಬುವ ಶ್ಲೋಕದ ಅರ್ಥವನ್ನು ನೋಡಿ ।।೧೧೪।।

## ನವಮಭಾವಸ್ಥಿತ ಗುರುಫಲಂ

ನವಮಭಾವದಲ್ಲಿ ಬೃಹಸ್ಪತಿಯಿದ್ದರೆ ತಪಸ್ವೀ-ತಪಸ್ಸನ್ನು ಮಾಡುವವನಾಗುವನು. ಈ ವಿಷಯದಲ್ಲಿ ।।ಶ್ಲೋಕ।। ಜಾ.ಭ.।। ನರಪತೇಃ ಸಚಿವಃ ಸುಕೃತೀ ಕೃತೀ ಸಕಲಶಾಸ್ತ್ರ ಕಲಾಕಲನಾದರಃ । ವ್ರತಕರೋಹಿ ನರೋ ದ್ವಿಜತತ್ಪರಃ ಸುರಪುರೋಧಸಿ ವೈತಪಸಿಸ್ಥಿತೇ ।।೧೧೫।।ತಾ।। ನವಮದಲ್ಲಿ ಗುರುವಿದ್ದರೆ, ಆ ಮನುಷ್ಯನು ರಾಜನ ಮಂತ್ರಿಯಾಗುವನು, ಉತ್ತಮವಾದ ಕಾರ್ಯಗಳನ್ನು ಮಾಡುವನು, ಸರ್ವ ಶಾಸ್ತ್ರವನ್ನು ಆದರಣೆಯಿಂದ ಅಭ್ಯಾಸ ಮಾಡುವನು, ಅನೇಕ ವ್ರತಾಚರಣೆ ಮಾಡುವನು, ದೇವಬ್ರಾಹ್ಮಣರ ಸೇವೆ ಮಾಡುವನೂ ಆಗುವನು ।।೧೧೫।। ಚ.ಚಿಂ । ಚತುರ್ಭೂಮಿಕಂ ತದ್ಗೃಹಂ ತಸ್ಯ ಭೂಮಿಪತೇರ್ವಲ್ಲಭೋ ವಲ್ಲಭಾ ಭೂಮಿದೇವಾಃ ಗುರೌಧರ್ಮಗೇ ಬಾಂಧವಾಃ ಸ್ನುರ್ವಿನೀತಾಃ ಸದಾಲಸ್ಯತೋ ಧರ್ಮವೈಗುಣ್ಯಕಾರೀ ।।೧೧೬।।ತಾ।। ನವಮದಲ್ಲಿ ಗುರುವಿದ್ದರೆ, ಜಾತಕ ಪುರುಷನು ರಾಜಪ್ರೀತಿಕರನು ಮತ್ತು ಪ್ರಮಾದದಿಂದ ನಿತ್ಯಕರ್ಮ ಲೋಪವಾಗಲುಳ್ಳ ವನು, ಭೂಮಿಗೆ ಅಧಿಕಾರವುಳ್ಳವನು, ಬ್ರಾಹ್ಮಣರಿಗೆ ಆಶ್ರಯವುಳ್ಳವನು, ನಮ್ರಸ್ವಭಾವ ಉಳ್ಳವನು,

ಧರ್ಮಾತ್ಮನು, ಸತ್ಯವಾದಿಯು, ದಯಾವಂತನು, ಧನವಂತನು, ಬಂಧುಜನ ಸಂಯುಕ್ತನೂ, ದೊಡ್ಡ ಪ್ರತಾಪಿಯೂ ಆಗುವನು.

## ದಶಮಭಾವಸ್ಥಿತ ಗುರುಫಲಂ

ದಶಮದಲ್ಲಿ ಬೃಹಸ್ಪತಿ ಇದ್ದರೆ, ಸಧನಃ-ಧನಸಹಿತನಾಗುವನು, ಜಾ.ಭ|| ಶ್ಲೋಕ|| ಸದ್ರಾಜ ಚಿನ್ಹೋತ್ತಮವಾಹನಾನಿ ಮಿತ್ರಾತ್ಮಜ ಶ್ರೀರಮಣೀ ಸುಖಾನಿ| ಯಶೋಭಿವೃದ್ಧಿಂ ಬಹುಧಾವಿಧತ್ತೇ ರಾಜ್ಯೇಸುರೇಜ್ಯೋ ವಿಜಯಂ ನರಾಣಾಂ || ತಾ|| ದಶಮದಲ್ಲಿ ಬೃಹಸ್ಪತಿಯಿದ್ದರೆ, ರಾಜಚಿನ್ಹೆಯುಳ್ಳವನು, ಉತ್ತಮವಾದ ವಾಹನ, ಸ್ನೇಹಿತರು, ಪುತ್ರರು, ಸ್ತ್ರೀ ಸೌಖ್ಯ, ಯಶಸ್ಸು, ಅಭಿವೃದ್ಧಿಯಾಗುವಿಕೆ, ಈ ಮೊದಲಾದ ಗೌರವವಾದ ಫಲಗಳು ವೃದ್ಧಿಯಾಗಿ ಕೀರ್ತಿವಂತನಾಗುವನು ||೧೧೭|| ಮತ್ತು ಚ.ಚಿಂ ||ಶ್ಲೋಕ|| ಧ್ವಜಾಮಂಡಪೇ ಮಂಡಲಂ ಚಿತ್ರ ಶಾಲಂ ಪಿತುಃ ಪೂರ್ವಜೇಭ್ಯೋ ಪಿತೇಜೋಧಿಕತ್ವಾತ್ | ನತುಷ್ಟೋ ಭವೇಚ್ಛರ್ಮಣಾ ಪುತ್ರಕಾಣಾಂ ಪಚೇತ್ ಪ್ರತ್ಯಹಂ ಪ್ರಸ್ಥಸಾಮುದ್ರಮನ್ನಮ್ ||೧೧೮||ತಾ|| ದಶಮದಲ್ಲಿ ಬೃಹಸ್ಪತಿ ಇದ್ದರೆ, ಜಾತಕನ ಮಂದಿರವು ಧ್ವಜ, ಪತಾಕೆಗಳಿಂದ ಸುಶೋಭಿತವಾಗಿರುವದು, ಅನೇಕ ಚಿತ್ರಕೆಲಸಗಳಿಂದ ಅಲಂಕೃತವಾಗಿರುವದು ಮತ್ತು ಚಿತ್ರ ವಿಚಿತ್ರಗಳಿಂದ ಪ್ರಕಾಶಗೊಳ್ಳುತ್ತಿರುವದು, ತಂದೆಗಿಂತಲೂ ಅಧಿಕ ತೇಜಸ್ವಿಯಾಗುವನು, ಪುತ್ರ ಸುಖದಿಂದ ಸಂತುಷ್ಟನಾಗುವುದಿಲ್ಲ, ಪ್ರತಿ ದಿವಸವೂ ೧ ಪ್ರಸ್ಥ, ಅಂದರೆ ೧೬ ಫಲಪ್ರಮಾಣ ಉಪ್ಪು ಆತನ ಗೃಹಕೃತ್ಯಕ್ಕೆ ವ್ಯಯ ವಾಗುತ್ತಿರುವದು, ಅಂದರೆ ದೊಡ್ಡ ಕುಟುಂಬಿಯೆಂದು ಆಶಯವು.

## ಲಾಭಸ್ಥಿತ ಗುರುಫಲಂ

ಲಾಭಭಾವದಲ್ಲಿ ಬೃಹಸ್ಪತಿ ಇದ್ದರೆ ಜಾತಕನು ಲಾಭ-ಲಾಭವನ್ನು ಹೊಂದು ವನು, ಈ ವಿಷಯಕ್ಕೆ ||ಶ್ಲೋಕ|| ಜಾ.ಭ|| ಸಾಮರ್ಥ್ಯ ಮರ್ಥಾಗಮನಾನಿನೂನಂ ಸದ್ರತ್ನ ವಸ್ತ್ರೋತ್ತಮ ವಾಹನಾನಿ | ಭೂಪಪ್ರಸಾದಂ ಕುರುತೇ ನರಾಣಾಂ ಗೀರ್ವಾಣವಂದ್ಯೋಯದಿಲಾಭಸಂಸ್ಥಃ ||೧೧೯||ತಾ|| ಸ್ವಸಾಮರ್ಥ್ಯ ಉಳ್ಳವನು, ದ್ರವ್ಯದಾಯಕ, ಉತ್ತಮ ರತ್ನ, ವಸ್ತ್ರ ಮತ್ತು ವಾಹನಾದಿಗಳ ಪ್ರಾಪ್ತಿಯುಳ್ಳವನು, ರಾಜ ಪ್ರಸನ್ನತೆಯುಳ್ಳವನು ಆಗುವನು, ಕೆಲವರು ರಾಜ ಪ್ರಸನ್ನತೆಯಿಂದ ಸರ್ವಸ್ವವೂ ಲಾಭವಾಗುವದೆಂದು ಅರ್ಥಮಾಡಿರುವರು ||೧೧೯|| ಈ ವಿಷಯದಲ್ಲಿ ಚಮತ್ಕಾರ ಚಿಂತಾಮಣಿಯಲ್ಲಿ ||ಶ್ಲೋಕ| ಅಕುಪ್ಯಂಚಲಾಭೇ ಗುರೌ ಕಿನ್ನಲಭ್ಯಂ ವದಂತ್ಯಷ್ಟಧೀಮಂತಮನ್ಯೇ ಮುನೀಂದ್ರಾಃ| ಪಿತುರ್ಭಾರ ಭ್ರತ್ಯೋಗ ಜಾಸ್ತ್ಯ ಪಂಚಿ ಪರಾರ್ಥಸ್ತದರ್ಥೋನಚೇದ್ವೈಭವಾಯ ||ತಾ|| ಬೃಹಸ್ಪತಿಯು ಲಾಭಭಾವದಲ್ಲಿದ್ದರೆ,

ಜಾತಕನು ಸುವರ್ಣ, ರಜತಗಳ ಲಾಭ ಹೊಂದುವದರಲ್ಲಿ ಸಂದೇಹವಿಲ್ಲ. ಅರ್ಥಾತ್-ಧನವಂತನಾಗುವನು, (ಈ ಫಲ ಎಂಟು ಎಂದು ಋಷಿಗಳು ಮತ್ತು ವೈಯ್ಯಾಕರಣ ಪಂಡಿತರು ಹೇಳಿರುತ್ತಾರೆ. ಅಥವಾ ವಕ್ಷ್ಯಮಾಣ ಶ್ಲೋಕದಲ್ಲಿ ಹೇಳಿರುವ ಪ್ರಕಾರ ಋಷಿಗಳಿಗೆ ಸಮಾನವಾದ ಪಂಡಿತನಾಗುತ್ತಾನೆ) ತಂದೆಯನ್ನು ಸಂರಕ್ಷಣೆ ಮಾಡುವನು, ಅಥವಾ ತಂದೆಯ ಕಾರ್ಯಭಾಗಗಳನ್ನು ತಿಳಿದು ನಡೆದುಕೊಳ್ಳುವವನಾಗುತ್ತಾನೆ. ಮತ್ತು ಸುಪುತ್ರರು ಐದುಜನರಾಗುತ್ತಾರೆ, ಧನ ಪುತ್ರಾದಿಗಳಿಂದಲೂ, ಗಜ, ಅಶ್ವಗೋ ಮಹಿಷ್ಯಾದಿಗಳಿಂದಲೂ ಪತ್ನಿಯೂ ಇರುವವನಾಗುವನು ||೧೨೦||

## ದ್ವಾದಶಸ್ಥ ಗುರುಫಲಂ

ದ್ವಾದಶಸ್ಥಾನದಲ್ಲಿ ಬೃಹಸ್ಪತಿ ಇದ್ದರೆ ಜಾತಕನು, ಖಲಃ-ದುರ್ಜನನಾಗುತ್ತಾನೆ. ಈ ವಿಷಯದಲ್ಲಿ ಜಾ.ಭ|| ಶ್ಲೋಕ||ಕ ನಾನಾಚಿಂತೋದ್ವೇಗ ಸಂಜಾತ ಕೋಪಂ ಪಾಪಾತ್ಮನಂ ಸಲಸಂತ್ಯಕ್ತಲಜ್ಜಮ್ । ಬುಧ್ಯಾಹೀನಂ ಮಾನವಂ ಮಾನಹೀನಂ ವಾಗೀಶೋಯಂ ದ್ವಾದಶಸ್ಥ ಕರೋತಿ ||೧೨೧||ತಾ|| ದ್ವಾದಶದಲ್ಲಿ ಬೃಹಸ್ಪತಿ ಇದ್ದರೆ ನಾನಾ ಪ್ರಕಾರದ ಚಿಂತಾಯುಕ್ತ, ಯಾವಾಗಲೂ ಕೋಪಯುಕ್ತ, ಪಾಪಚಿಂತಾ ಮನಸ್ಸುಳ್ಳವನು, ನಿರ್ಲಜ್ಜ, ಬುದ್ಧಿಹೀನ, ಆಲಸ್ಯಮಂತ, ಮಾನಹೀನ ಈ ಪ್ರಕಾರವಾದ ಗುಣವುಳ್ಳವನಾಗುವನು ||೧೨೧|| ಇದೇ ವಿಷಯಕ್ಕೆ ನಾ.ಭ ||ಶ್ಲೋಕ|| ಯಶಃ ಕೀದೃಶಂ ಸದ್ವ್ಯಯೇಸಾಭಿಮಾನೇ ಮತಿಃ ಕೀದೃಶೇವಂಚನಾ ಚೇತ್ಪರೇಷಾಂ । ವಿಧಿಃಕೀದೃಶೋರ್ಥಸ್ಯ ನಾಶೋಹಿಯೇನ ತ್ರಯಸ್ತೇ ಭವೇಯುರ್ವ್ಯಯೇಯಸ್ಯಜೀವಃ ||೧೨೨||ತಾ|| ವ್ಯಯಸ್ಥಾನದಲ್ಲಿ ಬೃಹಸ್ಪತಿ ಇದ್ದರೆ, ಜಾತಕ ಪುರುಷನು ಧನವನ್ನು ಸದ್ವ್ಯಯ ಮಾಡುವವನಾಗುವದಕ್ಕೆ ಬುದ್ಧಿ ಯಾವ ರೀತಿ ಬರುತ್ತೆ, ಅರ್ಥಾತ್ ದುರ್ವ್ಯಯ ಮಾಡುವನು, ಅಪಯಶಸ್ಸುಳ್ಳವನು, ಯಾವ ಕಾರ್ಯಮಾಡಿದರೂ ದ್ರವ್ಯವೂ ಅನ್ಯಾಯವಾಗಿಯೇ ವ್ಯಯವಾಗುವದು. ಇಹಲೋಕದಲ್ಲಿ ಈ ಅಪಯಶಸ್ಸುಂಟಾದ ಮೇಲೆ ಪರಲೋಕದಲ್ಲಿ ಯಾವ ರೀತಿ ಉತ್ತಮಗತಿ ಬಂದೀತು, ಯಶಸ್ಸು, ಬುದ್ಧೀ, ವಿಧಿ ಈ ಮೂರಕ್ಕೂ ವಿರುದ್ಧವಾದ ಗತಿಯೇ ಪ್ರಾಪ್ತಿಯಾಗುವದು, (ಪ್ರ) ಬಹು ಜನರಲ್ಲಿ ದ್ವೇಷವುಳ್ಳವನು, ಪರರ ಧನದಲ್ಲಿ ಅತಿ ಲೋಭವುಳ್ಳವನು, ಹಿಂಸೆ ಮಾಡುವವನು, ಪಾಪಿ ಮನುಷ್ಯರ ಸಹವಾಸ ಉಳ್ಳವನು ಮತ್ತು ಮಂದಶರೀರವುಳ್ಳವನು ಕೃತಘ್ನನೂ ಮತ್ತು ಮೋಸಗಾರನೂ ಆಗುತ್ತಾನೆ ||೧೨೨||

ಇತಿ ಗುರುಫಲಂ

## ಲಗ್ನಾದಿ ದ್ವಾದಶಭಾವಸ್ಥಿತ ಶುಕ್ರಫಲಂ

ಮೂಲ॥ ಸ್ಮರನಿಪುಣಃ ಸುಖಿತಶ್ಚ ವಿಲಗ್ನೇ । ಪ್ರಿಯ ಕಲಹೋಸ್ತಗತ ಸುರ ತೇಪ್ಸುಃ ॥ ತನಯಗತೇ ಸುಖಿತೋ ಭೃಗುಪುತ್ರೇ । ಗುರುವದ ತೋನ್ಯಗೃಹೇ ಸಧನೋಂತ್ಯೇ ॥೮॥

ಅವತಾರಿಕೆ ॥ ಶುಕ್ರನು ಜನ್ಮಲಗ್ನ, ಸಪ್ತಮ, ಪಂಚಮ, ದ್ವಾದಶ ಈ ನಾಲ್ಕು ಭಾವಗಳಲ್ಲಿದ್ದರೆ, ಕ್ರಮಪ್ರಕಾರ ಫಲವನ್ನು ನಿರೂಪಿಸಿ ಉಳಿದ ೨-೩-೪-೬-೮-೯-೧೦-೧೧ ಈ ಎಂಟು ಸ್ಥಾನಗಳಲ್ಲಿ ಹಿಂದಿನ ಶ್ಲೋಕದಲ್ಲಿ ಬೃಹಸ್ಪತಿಗೆ ಹೇಳಿದಂತೆಯೇ ಫಲ ಹೇಳಿರುತ್ತಾನೆ. ಆದರೆ ಶುಕ್ರನು ಅನುಕ್ತ ಸ್ಥಾನಗಳಲ್ಲಿ ಬೃಹಸ್ಪತಿಯು ಕೊಡುವ ಫಲಕ್ಕೆ ವಿರೋಧವಾಗಿ ಪ್ರತ್ಯೇಕ ಫಲದಾಯಕನಾಗಿರುವದು, ಅನುಭವದೃಷ್ಟಾಂತವಾಗಿರುವದರಿಂದ ಈ ವಿಷಯದಲ್ಲಿ ಜಾತಕಾಭರಣ ಗ್ರಂಥದಿಂದ ಉದಾಹರಣಾರ್ಥವಾಗಿ ಫಲ ನಿರೂಪಿಸಿರುತ್ತೇನೆ.

ಟೀ॥ ಭೃಗುಪುತ್ರೇ-ಭೃಗುಋಷಿಗಳ ಮಗನಾದ ಶುಕ್ರನು, ವಿಲಗ್ನೇ-ಜನ್ಮಲಗ್ನ ಅಂದರೆ ತನುಭಾವದಲ್ಲಿದ್ದರೆ, ಸ್ಮರನಿಪುಣಃ-ವಾತ್ಸಾಯನ ಋಷಿಪ್ರೋಕ್ತವಾದಂಥಾ-ಕಾಮಶಾಸ್ತ್ರ ಕಲಾಕುಶಲನು, ಈ ವಿಷಯಕ್ಕೆ ಜಾ.ಭ॥ ಶ್ಲೋಕ॥ ಬಹುಕಲಾ ಕುಶಲೋ ವಿಮಲೋಕ್ತಿ ಕೃತ್ಸುವದನೋ ಮದನೋನುಭವಃ ಪುಮಾನ್ । ಅವನಿ ನಾಯಕ ಮಾನಧನಾನ್ವಿತೋ ಭೃಗುಸುತೇ ತನುಭಾವಗತೇ ಸತಿ ॥೧೨೩॥ತಾ॥ ಜನ್ಮ ಲಗ್ನದಲ್ಲಿ ಶುಕ್ರನಿದ್ದರೆ, ಕಲಾಕುಶಲನು, ಶುದ್ಧ ಭಾಷಣ ಮಾಡುವನು, ಸುಂದರವಾದ ಮುಖ ಉಳ್ಳವನು, ವಿಷಯಾಸಕ್ತ, ರಾಜನಿಂದ ಮಾನ, ಧನ ಸಂಪತ್ತು ಹೊಂದುವವನೂ ಆಗುವನು ॥೧೨೩॥ ಈ ವಿಷಯಕ್ಕೆ (ಜಗನ್ಮೋಹನೇ) ವಶಿಷ್ಠಃ ॥ಶ್ಲೋಕ॥ ಸಮೀಚೀನಮಂಗಂ ಸಮೀಚೀನಸಂಗಃ ಸಮೀಚೀನ ಬಹ್ವಂಗನಾ ಭೋಗಯುಕ್ತಃ। ಸಮೀಚೀನ ಕರ್ಮಾ ಸಮೀಚೀನ ಶರ್ಮಾ ಸಮೀಚೀನ ಶುಕ್ರೋ ಯದಾಲಗ್ನವರ್ತೀ ॥೧೨೪॥ತಾ॥ ಲಗ್ನಭಾವದಲ್ಲಿ ಲಗ್ನಸ್ಥಾನಾದಿ ಬಲಯುಕ್ತನಾದ ಶುಕ್ರನು ಶುದ್ಧನಾಗಿದ್ದರೆ ಜಾತಕನಿಗೆ, ಆತನ ಪ್ರತಿ ಅಂಗವು ಸುಂದರವಾಗಿರುವದು, ಸಜ್ಜನರ ಸಹವಾಸ ಉಂಟಾಗುತ್ತದೆ. ಸೌಂದರ್ಯವತಿಯರಾದ ಬಹು ಸ್ತ್ರೀಯರ ಭೋಗ ಉಂಟಾಗುತ್ತದೆ. ಮತ್ತು ಆತನು ಸತ್ಕಾರ್ಯಗಳನ್ನು ಮಾಡುವವನು ಮತ್ತು ಪ್ರಖ್ಯಾತವಾದ ಹೆಸರುಳ್ಳವನು, ಈ ವಿಧವಾದ ಸುಗುಣವುಳ್ಳವನಾಗುವವನೆಂದು ಶುಕ್ರನ ಬಲಾಬಲದಮೇಲೆ ಹೇಳಬೇಕು. ಶುಕ್ರನು ನೀಚ ಶತ್ರುಕ್ಷೇತ್ರಗತನಾದರೆ ಈ ಫಲ ಪ್ರಾಪ್ತಿಯಾಗುವದಿಲ್ಲ ॥೧೨೪॥

## ದ್ವಿತೀಯಭಾವಸ್ಥ ಶುಕ್ರಫಲಂ

।।ಶ್ಲೋಕ।। ಸದನ್ನಪಾನಾಭಿರತಂ ನಿತಾಂತಂ ಸದ್ವಸ್ತ್ರ ಭೂಷಾಧನ ವಾಹನಾಢ್ಯಂ। ವಿಚಿತ್ರವಿದ್ಯಂ ಮನುಜಂ ಪ್ರಕುರ್ಯಾದ್ಧನೋಪಪ್ನೋ ಭೃಗುನಂದನೋಯಂ ।।೧೨೫।। ತಾ।। ಧನಸ್ಥಾನದಲ್ಲಿ ಶುಕ್ರನಿದ್ದರೆ ಉತ್ತಮವಾದ ಅನ್ನಪಾನಗಳಲ್ಲಿ ನಿರತನು, ನಿರಂತರ ದಲ್ಲಿಯೂ ಧನ, ಭೂಷಣ, ವಾಹನದಿಂದಲೂ ಪರಿಪೂರ್ಣನು ಮತ್ತು ಧನವಂತನೂ, ವಿಚಿತ್ರವಾದ ವಿದ್ಯವನ್ನು ತಿಳಿದ ಪಂಡಿನೂ ಆಗುವನು ।।೧೨೫।। ಇದೇ ವಿಷಯಕ್ಕೆ ವಸಿಷ್ಠ ।।ಶ್ಲೋಕ।। ಮುಖಂ ಚಾರುಭಾಷಂ ಮನೀಷಾಪಿ ಚಾರ್ವೀ ಮುಖಂ ಚಾರು ಚಾರೂಣಿವಾಸಾಂ ಸಿತಸ್ಯ । ಕುಟುಂಬ ಸ್ಥಿತೇಃಪೂರ್ವ ದೇವಸ್ಯಪೂಜ್ಯಃ ಕುಟುಂಬೇನ ಚಾರುಸ್ಸಭಾರ್ವಂಗಿಕಾಮಃ ।।೧೨೬।।ತಾ।। ದ್ವಿತೀಯದಲ್ಲಿ ಶುಕ್ರನಿದ್ದರೆ ಜಾತಕನಿಗೆ ಮುಖವು ಸೌಂದರ್ಯವುಳ್ಳದ್ದಾಗಿರುವದು, ಬುದ್ಧಿಯಲ್ಲಿ ಚತುರನು, ಧರ್ಮಿಷ್ಠನು, ರಮಣೀಯವಾದ ಮಾತುಳ್ಳವನು, ಸುಂದರವಾದ ವಸ್ತ್ರಗಳನ್ನು ಧರಿಸುವನು, ಆತನ ಕುಟುಂಬದಲ್ಲಿಯೂ ಸುಲಕ್ಷಣವಿದ್ದು ಸೌಖ್ಯ ಉಂಟಾಗುವದು, ಸುಂದರಿಯರಾದ ರಮಣಿಯರ ಸೌಖ್ಯವುಂಟಾಗುವುದು, ಪ್ರಥಮ ಮತ್ತು ದ್ವಿತೀಯದಲ್ಲಿದ್ದ ಶುಕ್ರನು ಅನೇಕ ಪ್ರಕಾರದಿಂದ ಧನವನ್ನು ಕೊಡುವನು, ಸಜ್ಜನರ ಸಹವಾಸ ಕೊಡುವನು, ಚಿನ್ನ, ಮುತ್ತು, ರತ್ನ, ವಸ್ತ್ರ ಮೊದಲಾದ ಲಾಭವನ್ನು ಕೊಡುತ್ತಾನೆ. ಶರೀರವು ರೋಗ ರಹಿತವಾದದ್ದಾಗಿಯೂ, ಸದಾಚಾರ ಸಂಪನ್ನನಾಗಿಯೂ ಇರುತ್ತಾನೆಂದು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿರುತ್ತೆ.

## ತೃತೀಯಭಾವಸ್ಥಿತ ಶುಕ್ರಫಲಂ

ಶ್ಲೋಕ।। ಕೃಶಾಂಗಯಷ್ಟಿಃ ಕೃಪಣೋದುರಾತ್ಮಾ ದ್ರವ್ಯೇಣಹೀನೋ ಮದನಾ-ಸುತಪ್ತಃ । ಸತಾಮನಿಷ್ಟೋ ಬಹುದುಷ್ಟಚೇಷ್ಟೋ ಭೃಗೋಸ್ತನೂಜೇ ಸಹಜೇನ ರಸ್ಸ್ಯಾತ್ ।।೧೨೭।।ತಾ।। ತೃತೀಯದಲ್ಲಿ ಶುಕ್ರನಿದ್ದರೆ ಜಾತಕನು ಶರೀರದಾರ್ಢ್ಯವಿಲ್ಲ ದವನಾಗಿಯೂ, ಕೃಪಣನಾಗಿಯೂ, ದುರಾತ್ಮನಾಗಿಯೂ, ದ್ರವ್ಯಹೀನವಾಗಿಯೂ, ಕಾಮಾತುರನಾಗಿಯೂ, ಸಜ್ಜನರಿಗೆ ಅನಿಷ್ಟನಾಗಿಯೂ, ಬಹು ಕೆಟ್ಟ ನಡತೆಯುಳ್ಳವನಾಗಿಯೂ ಆಗುವನು ।।೧೨೭।। ಇದೇ ವಿಷಯಕ್ಕೆ ಶ್ಲೋಕ।। ವಸಿಷ್ಠ ಜ.ಮೋ।। ರತಿಸ್ತ್ರೀಜನೇತಸ್ಯನೋ ಬಂಧುನಾಶೋ ಗುರುರ್ಯಸ್ಯ ದುಶ್ಚಿಕ್ಯ ಗೋದಾನವಾನಾಂ । ನಪೂರ್ಣೋಭವೇತ್ಪುತ್ರ ಸೌಖ್ಯೇಪಿಸೇನಾಪತಿಃ ಕಾತರಾದಾನ ಸಂಗ್ರಾಮಕಾಲೇ ।।೧೨೮।। ತೃತೀಯದಲ್ಲಿ ಶುಕ್ರನಿದ್ದರೆ ಸ್ತ್ರೀಯರಲ್ಲಿ ಪ್ರೀತಿಯಿಲ್ಲದವನು, ಬಂಧುನಾಶವಿಲ್ಲದವನು ಅಂದರೆ ಸಹೋದರ ಸೌಖ್ಯವುಳ್ಳವನು, ಪುತ್ರಸುಖವಿದ್ದರೂ

ಸಂತಾನದಲ್ಲಿ ತೃಪ್ತನಾಗದವನು, ಸೇನಾಪತಿಯು, ದಾನಕೊಡುವವನು, ಸಂಗ್ರಾಮ ಥಲ್ಲಿ ಆತುರನು (ಭಯಪಡುವವನು) ಆಗುವನು, (ಪ್ರ) ಶತ್ರುಗಳಾದರೂ ಕೈ ಮುಗಿದು ಪ್ರಾರ್ಥನೆ ಮಾಡುವರು, ಸುಪುತ್ರರುಳ್ಳವನು, ಉದಾರನು, ತೇಜಸ್ವಿ, ದಯಾವಂತ, ಸುಂದರವಾದ ಅವಯವ ಉಳ್ಳವನು, ನಮ್ರತೆಯುಳ್ಳವನು ಆಗುವನು ||೧೨೮||

## ಚತುರ್ಥಭಾವಸ್ಥಿತ ಶುಕ್ರಫಲಂ

ಶ್ಲೋಕ|| ಮಿತ್ರಕ್ಷೇತ್ರ ಗ್ರಾಮ ಸದ್ವಾಹನಾನಾಂ ನಾನಾಸೌಖ್ಯಂ ವಂದನಂ ದೇವತಾನಾಂ | ನಿತ್ಯಾನಂದಂ ಮಾನವಾನಾಂ ಪ್ರಕುರ್ಯಾದ್ದೈತ್ಯಾಚಾರ್ಯಸ್ತುರ್ಯಭಾವಸ್ಥಿತೋಯಂ ||೧೨೯||ತಾ|| ಶುಕ್ರನು ಚತುರ್ಥಭಾವದಲ್ಲಿದ್ದರೆ ಸ್ನೇಹಿತರು, ಕ್ಷೇತ್ರ, ಗ್ರಾಮ, ಉತ್ತಮವಾದ ವಾಹನ ಇವುಗಳಿಂದ ಸೌಖ್ಯವಂತನು, ದೇವತಾ ಉಪಾಸನೆಯುಳ್ಳವನು, ನಿರಂತರ ಆನಂದವುಳ್ಳವನು ಆಗುವನು ಮತ್ತು "ಶುಕ್ರಶ್ಚತುರ್ಥಗೋಯಸ್ಯ ಗಾನವಿದ್ಯಾ ವಿಶಾರದಃ" ಶುಕ್ರನು ಚತುರ್ಥದಲ್ಲಿದ್ದರೆ ಸಂಗೀತ ವಿದ್ಯೆಯಲ್ಲಿ ಪಂಡಿತನಾಗುವನು. ಈ ವಿಷಯಕ್ಕೆ ವಸಿಷ್ಠಃ ||ಶ್ಲೋಕ|| ಮಹತ್ವೇಧಿಕೋಯಸ್ಯ ತುರ್ಯಸ್ಸುರೇಜ್ಯೋ ಜನ್ಯೈಃ ಕಿಂಜನ್ಯೈಶ್ಚಾ ಪರ್ಯೆರುಷ್ಟತುಷ್ಟೈಃ | ಕಿಯತ್ಪ್ರೋಷಯೇಜ್ಜನ್ಮತಃ ಸಂಜನನ್ಯಾ ಅಧೀನಾರ್ಪಿತೋಪಾಯ ನ್ಯೆರೇವಪೂರ್ಣಃ ||೧೩೦||ತಾ|| ಶುಕ್ರನು ಚತುರ್ಥದಲ್ಲಿದ್ದರೆ ಜಾತಕ ಪುರಷನು ಪೂಜಾ ಉತ್ಸವಗಳಲ್ಲಿ ಮನಸ್ಸುಳ್ಳವನು, ಯಾವ ಪುರುಷನಾದರೂ, ಸ್ತ್ರೀಯಾದರೂ, ಪ್ರಸನ್ನನಾದರೂ, ಅಪ್ರಸನ್ನನಾದರೂ ಆದರ ಪೂರ್ವಕವಾಗಿ ಕಾಣುವನು, ತನ್ನ ಜನರಿಗೆ ಕೊಟ್ಟು ತೃಪ್ತಿ ಹೊಂದುವನು, ಜನ್ಮಾರಭ್ಯ ತಾಯಿಗೆ ಶ್ರೇಯಸ್ಸುಳ್ಳವನು ಮತ್ತು ತಾಯಿಯನ್ನು ಪೋಷಿಸುವವನೂ ಆಗುವನು ||೧೩೦||

## ಪಂಚಮಭಾವಸ್ಥಿತ ಶುಕ್ರಫಲಂ

ತನಯಗತೇ-ಪಂಚಮದಲ್ಲಿ ಶುಕ್ರನಿದ್ದರೆ ಸುಖಿತಃ-ಸುಖವುಳ್ಳವನಾಗುವನು. ಈ ವಿಷಯಕ್ಕೆ ||ಶ್ಲೋಕ|| ಸಕಲಕಾವ್ಯ ಕಲಾಭಿರಲಂ ಕೃತಸ್ತನಯವಾಹನ ಧಾನ್ಯ ಸಮನ್ವಿತಃ | ನರಪತೇರ್ಗುರು ಗೌರವ ಭಾಜ್ಞರೋ ಭೃಗುಸುತೇ ಸುತ ಸದ್ಮನಿ ಸಂಸ್ಥಿತೇ ||೧೩೧||ತಾ|| ಪಂಚಮದಲ್ಲಿ ಶುಕ್ರನಿದ್ದರೆ ಸಮಸ್ತವಾದ ಕಾವ್ಯ ಕಲಾಲಂಕೃತನು, ಪುತ್ರ, ವಾಹನ, ಧನ, ಧಾನ್ಯಯುಕ್ತನು, ರಾಜನಿಂದ ಸತ್ಕಾರ ಹೊಂದುವನೂ ಆಗುವನು. ಇದೇ ವಿಷಯಕ್ಕೆ ವಸಿಷ್ಠಃ || ಸುಪುತ್ರೇಪಿಕಿಂ ಯಸ್ಯ ಶುಕ್ರೋನಪುತ್ರೋ ಪ್ರಯಾಸೇನಕಿಂ ಯತ್ನ ಸಂಪಾದಿತಾರ್ಥಃ | ವೃದರ್ಕಾಂವಿನಾ ಮಂತ್ರಮಿಷ್ಟಾಸನಾಭ್ಯಾಮಧೀತೇನಂ ಕಿಂಚೀತ್ಕವಿತ್ವೇನಶಕ್ತಿಃ ||೧೩೨||ತಾ|| ಪಂಚಮಭಾವದಲ್ಲಿ ಶುಕ್ರನಿದ್ದರೆ

ಜಾತಕನು ಸುಪುತ್ರನಾಗುವನು, ಕಾವ್ಯರಚನಾ ಸಾಮರ್ಥ್ಯವುಳ್ಳವನು, ಅರ್ಥಾತ್-ಕವಿ, ಧನವಂತನು, ಸಮಸ್ತ ಸುಗುಣವುಳ್ಳ ಪುತ್ರನೂ, ವಿದ್ಯಾಮಂತನೂ, ಚತುರನೂ ಆಗುವನು ||೧೩೨||

## ಷಷ್ಠಭಾವಸ್ಥಿತ ಶುಕ್ರಫಲಂ

ಶ್ಲೋಕ|| ಅಭಿಮತೋ ನಭವೇತ್ತಮದಾಜನೇ ನನುಮನೋಭವ ಹೀನತ-ರೋನರಃ । ವಿಬಲತಾ ಕಲಿತಃ ಕಿಲಸಂಭವೇ ಭೃಗುಸುತೇ ರಿಗತೇರಿ ಭಯಾನ್ವಿತಃ ||೧೩೩||ತಾ|| ಷಷ್ಠದಲ್ಲಿ ಶುಕ್ರನಿದ್ದರೆ ಆ ಪುರುಷನು ಸ್ತ್ರೀಜನರಿಗೆ ಅಪ್ರಿಯನು, ಅತ್ಯಂತ ಕ್ಷೀಣವೀರ್ಯನು, ನಿರ್ಬಲನು, ಶತ್ರುಭಯವುಳ್ಳವನೂ ಆಗುವನು ||೧೩೩|| ಈ ವಿಷಯಕ್ಕೆ ||ಶ್ಲೋಕ ಚ.ಚಿಂ|| ಸದಾದಾನವೇಜ್ಯೇ ಸುಧಾಸಿಕ್ತ ಶತ್ರುರ್ವ್ಯಯಃ ಶತ್ರುಗೇ ಚೋತ್ತಮೌ ತೌಭವೇತಾಮ್ । ವಿಪದ್ಯೇತ ಸಂಪಾದಿತಂ ಚಾಪಿಕೃತ್ಯಂ ತಪೋಸ್ಮಂತ್ರತಃ ಪೂಜ್ಯಸೌಖ್ಯಂನಧತ್ತೆ ||೧೩೪||ತಾ|| ಷಷ್ಠದಲ್ಲಿ ಶುಕ್ರನಿದ್ದರೆ ಜಾತಕನು ಅಮೃತಪಾನಮಾಡಿದ ದೇವತೆಗಳಂತೆ ಬಲಿಷ್ಠನಾಗಿ ಸಂಗ್ರಾಮದಲ್ಲಿ ದೃಢನಾಗಿ ನಿಲ್ಲುವನು, ಉತ್ತಮಕಾರ್ಯದಲ್ಲಿ ಧನ ವ್ಯಯಮಾಡುವನು, ಯಾವ ಕಾರ್ಯ ಮಾಡಿದರೂ ಸಲವಾಗದಿದ್ದವನೂ, ಕುಮಂತ್ರ (ದುಷ್ಟಬುದ್ಧಿಯಿಂದ ಸಂತಾಪ ಹೊಂದುವನೂ), ಗುರುಜನರಿಂದ ಸೌಖ್ಯ ಹೊಂದುವವನೂ ಆಗುವನು ||೧೩೪||

## ಸಪ್ತಮ ಭಾವಸ್ಥಿತ ಶುಕ್ರಫಲಂ

ಸಪ್ತಮದಲ್ಲಿದ್ದ ಶುಕ್ರಫಲ|| ಅಸ್ತಗತೇ-ಶುಕ್ರನು ಸಪ್ತಮದಲ್ಲಿದ್ದರೆ ಸುರತೇಷ್ಟು, ಕಾಮಕ್ರೀಡಾವಿಲಾಸವುಳ್ಳವನು ಅತಿಕಾಮೀ-ಅತಿಕಾಮಿಯಾಗುವನು, ಈ ವಿಷಯದಲ್ಲಿ ಶ್ಲೋಕ|| ಜಾ.ಭ. ಬಹುಕಲಾಕುಶಲೇ ಜಲಕೇಳಿಕೃದ್ಗತಿ ವಿಲಾಸವಿಧಾನ ವಿಚಕ್ಷಣಃ| ಅತಿತರಾಂನಟಿನೀ ಕೃತ ಸೌಹೃದಃ ಸುನಯನಾಭವನೇ ಭೃಗುನಂದನೆ ||೧೩೫||ತಾ|| ಸಪ್ತಮದಲ್ಲಿ ಶುಕ್ರನಿದ್ದರೆ ಕಾಮಶಾಸ್ತ್ರ ತಿಳಿದ ಕುಶಲನೂ ಮತ್ತು ಜಲಕೇಳೀ ವಿಲಾಸವುಳ್ಳವನು, ರತಿಕೇಳಿಯಲ್ಲಿ ಮರ್ಗ್ರಹಣಮಾಡತಕ್ಕವನು. ಸ್ತ್ರೀಯರಲ್ಲಿ ಬಹುಸ್ನೇಹವುಳ್ಳವನು. ಈ ವಿಧವಾದ ಗುಣವುಳ್ಳವನಾಗುವನು. ಇದೇ ವಿಷಯಕ್ಕೆ ||ಶ್ಲೋಕ|| ಜಗನ್ಮೋಹನೇ ವಸಿಷ್ಠ|| ಕಲತ್ರೇಕಲತ್ರಾತ್ತುಖಂನೋ ಕಲತ್ರಾತ್ಕಲತ್ರಂತು ಶುಕ್ರೇಭವೇದ್ವ್ಯತ್ನಗರ್ಭಮ್। ವಿಲಾಸಾಧಿಕೋಗಣ್ಯತೇಚಪ್ರವಾಸೀ ಪ್ರಯಾಸಾಲಕಃ ಕೇನಮುಹ್ಯಂ ತಿತಸ್ಮಾತ್ ||೧೩೬||ತಾ|| ಯಾರಿಗೆ ಸಪ್ತಮಭಾವದಲ್ಲಿ ಶುಕ್ರನಿರುತ್ತಾರೋ ಆ ಪುರುಷನಿಗೆ ಕಳತ್ರಸುಖವುಂಟಾಗದು. (ಕಳತ್ರಂಶ್ರೋಣ-

ಭಾರ್ಯಯೋಃ) ಕಟಿಸ್ಥಾನದಲ್ಲಿ ಪೀಡಿತನಾಗುವನು ಅರ್ಥಾತ್ ಕಟಿರೋಗವುಳ್ಳವನು. ಆತನ ಪತ್ನಿಯು (ರತ್ನಗರ್ಭಾ) ಸುಪುತ್ರನನ್ನು ಪ್ರವಿಸುವವಳು ಆಗುವಳು, ಅತಿಕಾಮಿಯಾಗುವವನು. ನಿತ್ಯಪ್ರವಾಸಿ ಯಾಗಿರುವನು (ಸ್ವಲ್ಪೋದ್ಯಮೀ) ಆಲಸ್ಯವುಳ್ಳವನು, ಶ್ರಮ ವಿಶೇಷ ಪಡೆದವನ ಸರ್ವರನ್ನು ಮೋಹಪಡಿಸುವನು, (ಪ) ರೂಪವಂತ ಗುಣದಿಂದ ವಿಖ್ಯಾತನು, ಸುಲಕ್ಷಣವಾದ ಸ್ತ್ರೀಯುಳ್ಳವನು, ನಿಜವನ್ನು ಹೇಳುವನು ದಯಾವಂತನು, ಸಜ್ಜನರಲ್ಲಿ ಪ್ರಶಂಸನೀಯನೂ ಆಗುವನು.

## ಅಷ್ಟಮಭಾವಸ್ಥಿತ ಶುಕ್ರಫಲಂ

ಶ್ಲೋಕ।। ಜಾ.ಭ.।। ಪ್ರಸನ್ನಮೂರ್ತಿರ್ನೃಪಲಬ್ಧಮಾನಃ ಶಠೋತಿನಿಃಶ್ಶಂ ಕತರಃ ಸವರ್ಗ । ಸ್ತ್ರೀಪುತ್ರ ಚಿಂತಾಸಹಿತಃ ಕದಾಚಿನ್ನರೋಷ್ಟಮಸ್ಥಾನಗತೇ ಸತಾಕ್ಷ್ಯೇ ।।೧೩೭।।ತಾ।। ಶುಕ್ರನು ಅಷ್ಟಮಸ್ಥಾನದಲ್ಲಿದ್ದರೆ, ಆ ಪುರುಷನು ಪ್ರಸನ್ನ ಚಿತ್ತನು, ರಾಜಮೂಲದಿಂದ ಗೌರವವನ್ನು ಹೊಂದುವನು, ಧೂರ್ತನು ಅತ್ಯಂತ ನಿಶ್ಶಂಕನು, ದೊಡ್ಡ ಗರ್ವಿಷ್ಠನು, ಪತ್ನೀಪುತ್ರರಿಂದ ಯಾವಾಗಲೂ ಚಿಂತಾಯುಕ್ತನೂ ಆಗುವನು ।।೧೩೭।। ಈ ವಿಷಯಕ್ಕೆ ವಸಿಷ್ಠಃ ।।ಶ್ಲೋಕ।। ಜನಕ್ಷುದ್ರವಾದೀ ಚಿರಂಚಾರುಜೀವೇ ಚ್ಚತುಷ್ಪಾತ್ಸುಖಂ ದೈತ್ಯಪೂಜ್ಯೋ ದದಾತಿ । ಜನುಷ್ಯಷ್ಟಮೇಕಷ್ಟಸಾಧ್ಯೋ ಜಯಾರ್ಥಃ ಪುನರ್ವರ್ದ್ಧತೆ ದೀಯಮಾನಂ ಧನರ್ಣಮ್ ।।೧೩೮।। ತಾ।। ಜನ್ಮಕಾಲದಲ್ಲಿ ಅಷ್ಟಮದಲ್ಲಿ ಶುಕ್ರನಿದ್ದರೆ, ಜಾತಕನಿಗೆ (ಪಶು) ಆನೆ, ಕುದುರೆ, ಗೋವು, ಮಹಿಷ ಮೊದಲಾದವುಗಳಿಂದ ಸುಖ ಕೊಡುತ್ತಾನೆ. ಮತ್ತು ಆ ಮನುಷ್ಯನು ಕ್ಷುದ್ರನು, ಸುಖಪೂರ್ವಕ ಬಹುಕಾಲ ಜೀವಿಸುತ್ತಾನೆ. ಋಣವನ್ನು ತೆಗೆದುಕೊಳ್ಳುವನು. ತೀರಿಸುವನು ಈ ಪ್ರಕಾರ ಪುನಃ ಪುನಃ ಮಾಡುವವನಾಗುವನು, ಈ ವಿಧವಾದ ಗುಣಗಳುಳ್ಳವನಾಗುವನು.

## ನವಮಭಾವಸ್ಥಿತ ಶುಕ್ರಫಲಂ

ಶ್ಲೋಕ।। ಜಾ.ಭ.।। ಅತಿಥಿ ಗುರುಸುರಾರ್ಚಾ ತೀರ್ಥಯಾತ್ರಾರ್ಪಿತಾರ್ಥಃ ಪ್ರತಿದಿನ ಧನಯಾಗಾತ್ಯಂತ ಸಂಜಾತಹರ್ಷಃ। ಮುನಿಜನ ಸಮವೇಶಃ ಪೂರುಷ ಸ್ತ್ಯಕ್ತ ರೋಷೋ ಭವತಿ ನವಮಭಾವೇ ಸಂಭವೇ ಭಾರ್ಗವೇಸ್ಮಿ ।।೧೩೯।। ತಾ।। ಜನ್ಮಲಗ್ನದಿಂದ ನವಮದಲ್ಲಿ ಶುಕ್ರನಿದ್ದರೆ, ಆ ಪುರುಷನು ಅತಿಥಿ, ದೇವತಾ ಮತ್ತು ಗುರು, ಇವರುಗಳ ಪೂಜೆ ಮಾಡುವನು, ತೀರ್ಥಯಾತ್ರೆಯಲ್ಲಿ ದ್ರವ್ಯವನ್ನು ವ್ಯಮಾಡುವನು, ಯಾವಾಗಲೂ ವನದಲ್ಲಿ ಸಂಚರಿಸುವ ಆಶೆಯುಳ್ಳವನು, ಅತ್ಯಂತ ಹರ್ಷಿತನು, ಋಷಿವೇಷಧಾರಣೆ ಮಾಡಿಕೊಂಡಿರುವನು. ಕ್ರೋಧರಹಿತನಾಗುವನು

||೧೩೯|| ಇದೇ ವಿಷಯಕ್ಕೆ ||ವಸಿಷ್ಠಃ|| ಶ್ಲೋಕ|| ಭೃಗೌತ್ರಿತ್ರಿಕೋಣೇ ಪುರೇಕೇನ ಪೌರಾಃ ಕುಸೀದೇನಯೇೀವೃದ್ಧಿಮಸ್ಮೈದಧೀರನ್ || ಗೃಹೇಜಾಯತೇ ತಸ್ಯಧರ್ಮಧ್ವಜಾದೇಃ ಸಹೋತ್ಥಾದಿಸೌಖ್ಯಂ ಶರೀರೇ ಸುಖಂಚ ||೧೪೦||ತಾ|| ನವಮಸ್ಥಾನದಲ್ಲಿ ಶುಕ್ರನಿದ್ದ ಕಾಲದಲ್ಲಿ ಹುಟ್ಟಿದವನು, ಧನಿಕನು, ಅಂದರೆ ಅವನು ಹುಟ್ಟಿದ ನಗರನಿವಾಸಿಗಳು ಸರ್ವರೂ ವೃದ್ಧಿ ದ್ರವ್ಯವನ್ನು ಕೊಡುವರು. ಯಾರೂ ಆತನಲ್ಲಿ ಋಣಸ್ಥರಾಗದಿದ್ದವರು ಇಲ್ಲವೇ ಇಲ್ಲ, ಆತನು ಬ್ರಾಹ್ಮಣಾದಿಗಳಿಗೆ ಮಧ್ಯಾಹ್ನಕಾಲ ಸೋಪಸ್ಕರವನ್ನು ಕೊಡುವುದರಿಂದ ಸಮಸ್ತರಲ್ಲೂ ಪ್ರಸಿದ್ಧಿ ಹೊಂದಿರುವನು, ಸಹೋದರರಿಂದಲೂ, ಸೇವಕರಿಂದಲೂ ಸೌಖ್ಯವನ್ನು ಹೊಂದುವವನು, ಐಶ್ವರ್ಯವಂತನೂ, ಲಾಭವಂತನೂ ಆಗುವನು ||೧೪೦||

## ದಶಮಭಾವಸ್ಥ ಶುಕ್ರಫಲಂ

ಶ್ಲೋಕ|| ಜಾ.ಭ.|| ಸೌಭಾಗ್ಯಸನ್ಮಾನ ವಿರಾಜಮಾನಃ ಸ್ನಾನಾರ್ಚನ ಧ್ಯಾನ ಮನಾಧನಾಢ್ಯಃ|| ಕಾಂತಾಸುತ ಪ್ರೀತಿರತೀವನಿತ್ಯಂ ಭೃಗೋಃ ಸುತೇ ರಾಜ್ಯಗತೇ ನರಃಸ್ಯಾತ್ ||೧೪೧||ತಾ|| ಶುಕ್ರನು ದಶಮಭಾವದಲ್ಲಿದ್ದಾಗ ಹುಟ್ಟಿದ ಪುರುಷನು, ಸೌಭಾಗ್ಯ, ಸನ್ಮಾನ, ಇವುಗಳಿಂದ ಪ್ರಕಾಶಗೊಳಿಸುತ್ತಲಿರುವನು, ಸ್ನಾನ, ದೇವತಾಪೂಜೆ, ತಪಸ್ಸು ಇವುಗಳಲ್ಲಿ ಮನಸ್ಸುಳ್ಳವನು, ಧನಾಢ್ಯನು, ಗೋ ಪತ್ನೀ ಪುತ್ರರುಗಳಲ್ಲಿ ಯಾವಾಲೂ ಅತಿ ಪ್ರೀತಿಯುಳ್ಳವನಾಗುವನು ||೧೪೧|| ಈ ವಿಷಯಕ್ಕೆ ||ಶ್ಲೋಕ|| ವಸಿಷ್ಠಃ|| ಭೃಗುಃ ಕರ್ಮಗೋ ಗೋತ್ರವೀರ್ಯೋೀ ಋಣಾದ್ಧಿ ಕ್ಷಯಾರ್ಥಂಭ್ರಮಃ ಕಿನ್ನ ಆತ್ಮೀಯಮೇವ | ತುಲಾ ಮಾನತೋ ಹಾಟಕಂ ವಿಪ್ರವೃತ್ಯಾಜನಾಡಂಬರೈಃ ಪ್ರತ್ಯಹಂವಾವಿವಾದಾತ್ ||೧೪೨||ತಾ|| ದಶಮದಲ್ಲಿ ಶುಕ್ರನಿದ್ದರೆ, ಸಂತಾನಸೌಖ್ಯವುಳ್ಳವನು, ಅಂದರೆ ಬಹು ಪುತ್ರರುಳ್ಳವನು, ಧನಹಾನಿ ಯಾಗುವ ವಿಷಯದಲ್ಲಿ ಬ್ರಹ್ಮವೃತ್ತಿಗೆ ಅಥವಾ ಮಿತವಾದ ಕ್ರಮದಲ್ಲಿ ದ್ರವ್ಯ ವ್ಯಯವುಳ್ಳವನು. ೧೦೦ ಫಲ ಸುವರ್ಣವನ್ನು ಜನಗಳು ಹೊಗಳಲೆಂದು ಬ್ರಾಹ್ಮಣರಿಗೆ ಕೊಡುವನು ಅಂದರೆ ಡಾಂಭಿಕಾಚಾರವುಳ್ಳವನು, ತಂದೆಗಿಂತಲೂ ಅಧಿಕವಾದ ಅಧಿಕಾರವುಳ್ಳವನು, ಅವನ ತಂದೆಯೂ ಅಧಿಕ ಧನವಂತನೇ ಆಗಿರುವನು ||೧೪೨||

## ಲಾಭಭಾವಸ್ಥಿತ ಶುಕ್ರಫಲಂ

ಶ್ಲೋಕ|| ಜಾ.ಭ.|| ಸಂಗೀತ ನೃತ್ಯಾದರತಾ ನಿತಾಂತಂ ನಿತ್ಯಂಚ ಚಿಂತಾ ಗಮನಾನಿನೂನಂ| ಸತ್ಕರ್ಮಧರ್ಮಾಗಮ ಚಿತ್ತವೃತ್ತಿರ್ಭೃಗೋಃ ಸುತೋ ಲಾಭಗತೋ ಯದಿಸ್ಯಾತ್ ||೧೪೩||ತಾ|| ಶುಕ್ರನು ಲಾಭದಲ್ಲಿದ್ದ ಕಾಲದಲ್ಲಿ ಹುಟ್ಟಿದವನು,

ನಿತ್ಯದಲ್ಲೂ ಸಂಗೀತ ನೃತ್ಯಗಳಲ್ಲಿ ಪ್ರೀತಿಯುಳ್ಳವನು, ಯಾವಾಗಲೂ ಗಮನ ಚಿಂತೆಯುಳ್ಳವನು. ಸತ್ಕರ್ಮ, ಧರ್ಮಶಾಸ್ತ್ರ ಇವುಗಳಲ್ಲಿ ಮನಸ್ಸಿಡತಕ್ಕವನೂ ಆಗುವನು ।।೧೪೩।। ಇದೇ ವಿಷಯಕ್ಕೆ ।।ಶ್ಲೋಕ।। ಜ.ಮೋ।। ಭೃಗುರ್ಲಾಭಗೋ ಲಾಭದೋಯಸ್ಯ ಲಗ್ನಾತ್ಸುರೂಪಂ ಮಹೀಪಂಚ ಕುರ್ಯಾಚ್ಚ ಸಮ್ಯಕ್ । ಲಸತ್ಕೀರ್ತಿ ಸತ್ಯಾನುರಾಗಂ ಗುಣಾಢ್ಯಂ ಮಹಾಭೋಗಮೈಶ್ವರ್ಯ ಯುಕ್ತಂ ಸುಶೀಲಂ ।।೧೪೪।।ತಾ।। ಶುಕ್ರನು ಏಕಾದಶದಲ್ಲಿ ಯಾರ ಜನ್ಮ ಕಾಲದಲ್ಲಿರುತ್ತಾನೋ ಆ ಮನುಷ್ಯನು ಸುಗುಣವುಳ್ಳವನು, ಎಲ್ಲ ಕಡೆಗೂ ವಿಸ್ತರಿಸುವ ಕೀರ್ತಿಯುಳ್ಳವನು, ರೂಪವಂತನು, ಸರ್ವ ಸಾಮರ್ಥ್ಯಯುಕ್ತನು, ರಾಜನಾಗಲೀ, ರಾಜಸಮಾನನಾಗಲೀ ಯಾವ ಪ್ರಕಾರ ಶುಕ್ರನು ಬಲಿಷ್ಠನಾಗಿರುತ್ತಾನೋ ಆ ಪ್ರಕಾರ ಅಧಿಕವಾದ ಪದವಿಯುಳ್ಳವನೂ, ಸನ್ಮಾರ್ಗಿಯೂ ಆಗುವನು ।।೧೪೪।।

## ವ್ಯಯಭಾವಸ್ಥಿತ ಶುಕ್ರಫಲಂ

ಅಂತ್ಯೇ-ಶುಕ್ರನು ವ್ಯಯಸ್ಥಾನದಲ್ಲಿರುವಾಗ ಹುಟ್ಟಿದವನು, ಸಧನಃ-ಧನ ಸಹಿತನಾಗುವನು. ಕೆಲವರು "ಗುರುವದತೋ ಝಷಗೇದ್ರವಿಣಂಸ್ಯಾತ್" ಎಂದು ಮೀನರಾಶಿಯೇ ೧೨ನೇ ಸ್ಥಾನದಲ್ಲಿ ಅಲ್ಲಿ ಶುಕ್ರನಿದ್ದರೆ ಈ ಫಲವೆಂದು ಅಭಿಪ್ರಾಯ ಪಡುತ್ತಾರೆ. ಈ ವಿಷಯದಲ್ಲಿ ।।ಶ್ಲೋಕ।। ಜಾ.ಭ।। ಸಂತ್ಯಕ್ತ ಸತ್ಕರ್ಮ ಗತಿರ್ವಿರೋಧೀ ಮನೋಭವಾರಾಧನ ಮಾನಸಶ್ಚ । ದಯಾಯುತಃ ಸತ್ಯವಿವರ್ಜಿತ ಸ್ಯಾತ್ಕಾವ್ಯೇ ಪ್ರಸೂತೌ ವ್ಯಯಭಾವಯಾತೇ ।।೧೪೫।।ತಾ।। ಯಾರ ಜನ್ಮಕಾಲದಲ್ಲಿ ವ್ಯಯಭಾವದಲ್ಲಿ ಶುಕ್ರನಿರುವನೋ ಆ ಪುರುಷನು ಒಳ್ಳೇ ಕಾರ್ಯಗಳು ಮಾಡುವುದನ್ನು ತ್ಯಾಗಮಾಡುವನು ಸರ್ವರಲ್ಲೂ ವಿರೋಧ ಮಾಡುವನು. ಯಾವಾಗಲೂ ವಿಷಯಾಸಕ್ತಿಯುಳ್ಳವನು. ನಿರ್ದಯವುಳ್ಳವನು. ಸತ್ಯರಹಿತನೂ ಆಗುವನು ।।೧೪೫।। ಇದೇ ವಿಷಯಕ್ಕೆ ।।ಶ್ಲೋಕ।। ಚ.ಚಿಂ।। ಕದಾವ್ಯೇತಿ ವಿತ್ತಿಂ ವಿಲೀಯೇತಪಿತ್ತಂ ಸಿತೋದ್ವಾದಶೇಕೇಲಿ ಸತ್ಕರ್ಮಶರ್ಮಾ । ಗುಣಾನಾಂಚಕೀರ್ತಿ ಕ್ಷಯಂ ಮಿತ್ರವೈರಂ ಜನಾನಾಂ ವಿರೋಧಂ ಸಿದಾಸೌಕರೋತಿ ।।ತಾ।। ಶುಕ್ರನು ವ್ಯಯಭಾವದಲ್ಲಿದ್ದರೆ ಜಾತಕ ಪುರುಷನು ಕೌತುಕಾದಿ (ಕ್ರೀಡಾ)ಗಳಿಂದ ಮತ್ತು ಧರ್ಮಕರ್ಮಾದಿಗಳಿಂದ ಧನವ್ಯಯಮಾಡಿ ಅದರಿಂದ ಯಶಸ್ಸನ್ನು ಕಳೆದುಕೊಳ್ಳುವನು. ಸರ್ವರಲ್ಲೂ ವಿರೋಧಮಾಡುವನು. ಮಿತ್ರರಲ್ಲಿ ವೈರವನ್ನು ಬೆಳೆಯಿಸುವನು, ಆಗಾಗ್ಗೆ ಧನವನ್ನು ಹೊಂದುವನು. ವ್ಯಯಾಧಿಕ್ಯತೆಯಿಂದ ಧನನಾಶವನ್ನು ಹೊಂದುವನು. ಪಿತ್ತ ಮತ್ತು ಧಾತುಕ್ಷಯದಿಂದ ಕಫ ರೋಗ ವೃದ್ಧಿಯಾಗುವದು (ಪ), ಧನವನ್ನು ವ್ಯರ್ಥವಾಗಿ

ವ್ಯಯಮಾಡುವನು, ಪರಾಕ್ರಮಹೀನನು, ದುರ್ಬಲ ಶರೀರವುಳ್ಳವನು. ಧನರಹಿತನು, (ದರಿದ್ರನು) ನಿರ್ದಯವುಳ್ಳವನು, ಕ್ರೂರಸ್ವಭಾವವುಳ್ಳವನೆಂದು ಗ್ರಂಥಾಂತರದಲ್ಲಿ ಹೇಳಿರುತ್ತೆ. ಅನುಭವದಲ್ಲಿ ದ್ವಾದಶ ಶುಕ್ರನು ಸೌಖ್ಯ ಫಲದಾಯಕನಲ್ಲ. ಮತ್ತು ರಾಜ್ಯಾಧಿಕಾರದಲ್ಲಿದ್ದರೆ ಅಧಿಕಾರದಲ್ಲಿ ದ್ರವ್ಯ ಕಡಿಮೆಯಾಗಿ ಅವಮಾನ ಪಡಿಸುತ್ತಾನೆ ॥೧೪೬॥

ಇತಿ ಶುಕ್ರದ್ವಾದಶ ಭಾವಫಲಂ

## ಅಥ ಶನೇಸ್ತನ್ವಾದಿ ದ್ವಾದಶ ಭಾವಫಲಂ

ಅವತಾರಿಕೆ॥ ಶನಿಯು ತನ್ವಾದಿ ದ್ವಾದಶ ಭಾವಗಳಲ್ಲಿದ್ದ ಫಲವನ್ನು "ಅದೃಷ್ಟಾರ್ಥೋರೋಗೀ" ಎಂಬುವ ಶ್ಲೋಕದಿಂದ ಹೇಳುತ್ತಾನೆ. ಆದರೆ ತನ್ವಾದಿ ದ್ವಾದಶ ಭಾವಗಳಿಗೂ ಸಂಪೂರ್ಣ ಫಲ ಹೇಳಿದೆ. ದಿನಕರಸಮಃ ಎಂದು ಹೇಳಿರುವದರಿಂದ ಅನ್ಯಗ್ರಂಥಗಳಲ್ಲಿ ದಿನಕರಸಮಃ ಎಂಬುವದಕ್ಕೆ ವಿರುದ್ಧವಾಗಿ ಫಲವನ್ನು ಹೇಳಿಯೂ ಮತ್ತು ಆ ಫಲಗಳು ಅನುಭವದೃಷ್ಟಾಂತವಾಗಿರುವದರಿಂದ ಜಾತಕಾಭರಣದಿಂದ ಉದಾಹರಣಾರ್ಥವಾಗಿ ಪ್ರತಿ ಭಾವಕ್ಕೂ ದೃಷ್ಟಾಂತ ತೋರಿಸಿರುತ್ತೆ.

ಮೂಲ॥ ಅದೃಷ್ಟಾರ್ಥೋ ರೋಗೀ ಮದನವಶಗೋತ್ಯಂತಮಲಿನಃ ।
ಶಿಶುತ್ವೇ ಪೀಡಾರ್ತಸ್ಸವಿತೃ ಸುತಲಗ್ನೇತ್ಯಲಸವಾಕ್ ॥ ಗುರುಃ
ಸ್ವಕ್ರೋರ್ಣೀಚಸ್ಥೇ ನೃಪತಿ ಸದೃಶೋ ಗ್ರಾಮಪುರತ। ಸ್ಸುವಿದ್ವಾನ್
ಚ್ಛಾರ್ವಂಗೋ ದಿನಕರಸಮೋ ನ್ಯತ್ರಕಥಿತಃ ॥೯॥

ಟೀಕು॥ ಶನಿಯು ತನುಭಾವದಲ್ಲಿದ್ದ ಫಲ, ಸವಿತೃ ಸುತಲಗ್ನೇ-ಶನಿಯು ಲಗ್ನದಲ್ಲಿದ್ದರೆ, ಅದೃಷ್ಟಾರ್ಥಃ-ನಿತ್ಯ ದರಿದ್ರನಾಗುವನು, ರೋಗೀ-ನಿತ್ಯ ರೋಗಿಯಾಗುವನು, ಮದನವಶಗಃ-ಮನ್ಮಥವಿಕಾರ ಅಂದರೆ ಕಾಮಾತುರನಾಗುವನು. ಅತ್ಯಂತ ಮಲಿನಃ-ಅತಿ ಮಲಿನನಾಗುವನು. ಶಿಶುತ್ವೇ-ಶೈಶವಾವಸ್ಥೆಯಲ್ಲಿ, ಪೀಡಾರ್ಥಃ-ವ್ಯಾಧಿಪೀಡಿತನಾಗುವನು. ಅತ್ಯಲಸವಾಕ್-ಹೆಚ್ಚಾದ ಅವ್ಯಕ್ತಭಾಷಿಯಾಗುವನು. ಈ ಫಲವು ತುಲ, ಧನಸ್ಸು, ಮಕರ, ಕುಂಭ, ಮೀನ ಈ ೫ ರಾಶಿಗಳು ಲಗ್ನವಾದರೆ ಹೇಳಿಕೂಡದು. ಈ ಮೇಲೆ ಹೇಳಿದ ೫ ರಾಶಿಗಳು ಲಗ್ನವಾಗಿ ಅಲ್ಲಿ ಶನಿಯು ಬಲಿಷ್ಠನಾಗಿದ್ದರೆ ನೃಪತಿ ಸದೃಶಃ-ರಾಜನಿಗೆ ಸಮಾನನಾಗುವನು, ಗ್ರಾಮಪುರುಷಃ-ಗ್ರಾಮಗಳಿಗೂ, ಪುರಗಳಿಗೂ ಅಧಿಪತಿಯೂ, ಸುವಿದ್ವಾನ್-ಉತ್ತಮವಾದ ವಿದ್ವಾಂಸನೂ, ಚಾರ್ವಂಗಃ-ಸುಂದರವಾದ ಶರೀರವುಳ್ಳವನು

ಆಗುವನು. ಇದೇ ವಿಷಯದಲ್ಲಿ ಸಾರಾವಳಿಯಲ್ಲಿ ಶ್ಲೋಕ।। ಸ್ವೋಚ್ಚೇ ಸ್ವಜೀವಭವನೇ ಕ್ಷಿತಿಪಾಲ ತುಲ್ಯೋ ಲಗ್ನೇರ್ಕಜೇಭವತಿ ದೇಶನರಾಧಿನಾಥಃ । ಶೇಷೇಷು ದುಃಖಗದಪೀಡಿತ ಏವಬಾಲ್ಯೇ ದಾರಿದ್ರ್ಯ ಕಾಮವಶಗೋ ಮಲಿನೋಲಸಶ್ಚ ।। ಎಂದುಕ್ತವಾಗಿರುತ್ತೆ. ಆದ್ದರಿಂದ "ಸುಹೃತ್ಸ್ವರ್ಕ್ಷೋಚ್ಚಸ್ಥೇ" ಎಂಬುವುದು ಸಾಮಾನ್ಯ ಪಾಠವು, ಅನ್ಯತ್ರ-ದ್ವಿತೀಯಾದಿ ಸ್ಥಾನಗಳಲ್ಲಿರುವ ಶನಿಯು, ದಿನಕರ ಸಮಃ-ಸೂರ್ಯನು ಕೊಡತಕ್ಕ ಫಲಕ್ಕೆ ಸಮಾನ ವಾಗಿಯೇ ಇರುವದು. ಅಂದರೆ ದ್ವಿತೀಯ,ತೃತೀಯ, ಚತುರ್ಥ, ಪಂಚಮ, ಷಷ್ಠ, ಸಪ್ತಮ, ಅಷ್ಟಮ, ನವಮ, ದಶಮ, ಲಾಭ, ಏಕಾದಶ, ದ್ವಾದಶ ಈ ೧೧ ಭಾವಗಳಲ್ಲಿ ಸೂರ್ಯನಿಗೆ ಯಾವ ಫಲ ನಿರೂಪಿಸಿದೆಯೋ ಅದೇ ಫಲಗಳೇ ಎಂದು ತಿಳಿಯತಕ್ಕದ್ದೆಂದು ಈ ಗ್ರಂಥಕರ್ತರಾದ ವರಾಹಮಿಹಿರಾಚಾರ್ಯರ ಅಭಿಪ್ರಾಯವಾಗಿರುವುದು. ಇತರ ಸ್ಥಾನಗಳಲ್ಲಿ ಶನಿಯು ಶುಭಫಲದಾಯಕನಲ್ಲವೇ ಎಂದರೆ ಫಲದಾಯಕನಲ್ಲವೆಂದು ಹೇಳಕೂಡದು "ಪಾಪಗ್ರಹಾಲಗ್ನಗತೇ ರಾಜ್ಯಭಾಗ್ಯಾಧಿಪೌವಿನಾ" ಎಂದು ಗ್ರಂಥಾಂತರದಲ್ಲಿ ಹೇಳಿರುತ್ತೆ. ಶನಿಯು ಪಾಪಗ್ರಹ, ವೃಷಭ ಲಗ್ನ ಜಾತಕನಿಗೆ ಶನಿಯು ೯-೧೦ನೆ ಅಧಿಪತಿಯಾಗುತ್ತಾನೆ, ಮೇಷ ಲಗ್ನಕ್ಕೆ ೧೦ನೇ ಅಧಿಪತಿಯಾಗುತ್ತಾನೆ, ಮಿಥುನ ಲಗ್ನಕ್ಕೆ ೯ನೆ ಅಧಿಪತಿಯಾಗುತ್ತಾನೆ. ಆದರೆ ಈ ಲಗ್ನಜಾತಕಗಳಲ್ಲಿ ಮೇಷವನ್ನು ಬಿಟ್ಟು ಉಳಿದ ರಾಶಿಗಳು ಲಗ್ನವಾಗಿ ಅಲ್ಲಿಯೇ ಶನಿ ಇದ್ದರೂ ದ್ವಿತೀಯಾದಿ ಯಾವ ಸ್ಥಾನಗಳಾಗಿ ಅಲ್ಲಿಯೇ ಶನಿ ಇದ್ದರೂ ಸೂರ್ಯ ವ್ಯತಿರಿಕ್ತ ಫಲವನ್ನು ಕೊಡುತ್ತಾನೆ ಆದ್ದರಿಂದ ಜಾತಕಾಭರಣದ ಅಭಿಪ್ರಾಯವನ್ನು ಇಲ್ಲಿ ಉದಾಹರಿಸುವುದು ಅವಶ್ಯಕವಾಗಿರುತ್ತೆ.

## ತನುಭಾವಸ್ಥ ಶನಿಫಲಂ

ಶ್ಲೋಕ।। ಪ್ರಸೂತಿಕಾಲೇ ನಲಿನೀಶಸೂನುಃ ಸ್ವೋಚ್ಚತ್ರಿಕೋಣರ್ಕ್ಷಗತೋ ವಿಲಗ್ನೇ। ಕುರ್ಯಾನ್ನರಂದೇಶ ಪುರಾಧಿನಾಥಂ ಶೇಷೇಷ್ವಭದ್ರಂಸರುಜಂ ದರಿದ್ರಂ ।।೧೪೮।। ಮತ್ತು ಚ.ಚಿ।। ಧನೇನಾತಿ ಪೂರ್ಣೋತಿತೃಷ್ಣೋ ವಿಷಾದೀ ತನುಸ್ಥೇರ್ಕಜೇ ಸ್ಥೂಲ ದೃಷ್ಟಿರ್ನರಃಸ್ಯಾತ್ । ವಿಷಂದೃಷ್ಟಿ ಜಂತ್ವಾದಿಕೃದ್ವ್ಯಾಧಿಬಾಧಾ ಸ್ವಯಂಪೀಡಿತೋ ಮತ್ಸರಾವೇಶಏವ ।।೧೪೯।।ತಾ।। ಜನ್ಮಕಾಲದಲ್ಲಿ ಶನಿಯು ಉಚ್ಚ ಸ್ವಕ್ಷೇತ್ರ ಮೂಲ ತ್ರಿಕೋಣ ರಾಶಿಗಳು (ತುಲಾ, ಮಕರ, ಕುಂಭ) ಅಲ್ಲಿ ಶನಿಯಿದ್ದರೆ, ಜಾತಕನನ್ನು ದೇಶಾಧಿಪತಿಯಾಗಿಯೂ, ಉಳಿದ ರಾಶಿಗಳು ಲಗ್ನಗಳಾಗಿ ಅಲ್ಲಿ ಶನಿಯಿದ್ದರೆ ದರಿದ್ರನಾಗಿಯೂ, ರೋಗಿಯನ್ನಾಗಿಯೂ ಮಾಡುತ್ತಾನೆ ।।೧೪೮।। ಲಗ್ನದಲ್ಲಿ ಶನಿಯಿದ್ದರೆ, ಧನೇಚ್ಛಾ ಪೂರ್ತಿಯಾಗುವುದಿಲ್ಲ, ಸಂತೋಷವನ್ನು ಹೊಂದುವುದಿಲ್ಲ,

ಯಾವಾಗಲೂ ಪ್ರಸನ್ನವಾಗಿರುವುದಿಲ್ಲ. ಸೂಕ್ಷ್ಮ ವಿಚಾರ ಮಾಡುವುದಿಲ್ಲ, ಶತ್ರುಗಳು ಇವನನ್ನು ನೋಡಿದರೆ ನಷ್ಟ ಹೊಂದುತ್ತಾರೆ, ಮನೋವ್ಯಥೆ ನಿರಂತರದಲ್ಲೂ ಇರುವುದಿಲ್ಲ, ಕದಾಚಿತ್ ನೇತ್ರರೋಗದಿಂದ ಪೀಡಿಸಲ್ಪಡುವನು, ಈರ್ಷ್ಯೆಯುಳ್ಳವನು, ಮಂದಮತಿ, ನೀಚಾಶ್ರಯದಲ್ಲಿರುವನು ಸುಳ್ಳು ಹೇಳುವನೂ ಆಗುವನು ॥೧೪೯॥

## ಧನಭಾವಸ್ಥ ಶನಿಫಲಂ

ಶ್ಲೋಕ॥ ಅನ್ಯಾಲಯಸ್ಥೋ ವ್ಯಸನಾಭಿಭೂತೇ ಜನೋಜ್ಝಿತಸ್ಸ್ಯಾನ್ಮನುಜಶ್ಚ ಪಶ್ಚಾತ್। ದೇಶಾಂತರೇ ವಾಹನರಾಜಮಾನೋ ಧನಾಭಿಧಾನೇ ಭವನೇರ್ಕಸೂನೌ ॥೧೫೦॥ ಚ.ಚಿಂ॥ ಸುಖಾಪೇಕ್ಷಯಾ ವರ್ಜಿತೋ ಸೌಕುಟುಂಬಾತ್ಕುಟುಂಬೀಶನೌ ವಸ್ತುಕಿಂಕಿನ್ನಭುಙ್ಕ್ತೇ । ಸಮಂ ವಕ್ತಿ ಮಿತ್ರೇಣತಿಕ್ತುವಚೋಪಿ ಪ್ರಸಕ್ತಿಂವಿನಾ ಲೋಹಕಂ ಕೋಲಭೇತ ॥೧೫೧॥ತಾ॥ ಶನಿಯು ತುಲಾ, ಮಕರ ಕುಂಭ ಈ ಮೂರು ರಾಶಿಗಳನ್ನು ಬಿಟ್ಟು ಉಳಿದ ೯ ರಾಶಿಗಳು ಧನಸ್ಥಾನವಾಗಿ ಅಲ್ಲಿ ಶನಿಯಿದ್ದರೆ, ತನ್ನ ಮನೆ ಬಿಟ್ಟು ಅನ್ಯರ ಮನೆಯಲ್ಲಿ ವಾಸಿಸುವನು, ಅನೇಕ ವ್ಯಸನಯುಕ್ತನು, ಮಿತ್ರರು ಯಾರೂ ಇರುವದಿಲ್ಲ. ದೇಶಾಂತರದಲ್ಲಿ ವಾಸಿಸುವಾಗುವನು, ಮೇಲಿನ ಮೂರು ರಾಶಿಗಳಾಗಿದ್ದರೆ, ರಾಜಮಾನವನ್ನು ಹೊಂದುತ್ತಾನೆ ॥೧೫೦॥ ಕುಟುಂಬಸ್ಥಾನದಲ್ಲಿ ಶನಿಯಿದ್ದರೆ ಜಾತಕನು ಸುಖಕ್ಕೋಸ್ಕರ ಕುಟುಂಬವನ್ನು ಸೇರಿದರೂ ಸುಖವುಂಟಾಗದಿರುವುದು, ಕುಟುಂಬ ತ್ಯಾಗ ಮಾಡಿ ದೇಶಾಂತರ ವಾಸಮಾಡುವನು, ಭೋಗ ಪದಾರ್ಥ ಸರ್ವವನ್ನೂ ಭೋಗಿಸುವನು, ಲೋಹಪದಾರ್ಥ ಲಾಭವುಳ್ಳವನು, ಮಿತ್ರರೊಡನೆ ಕಠಿನೋಕ್ತಿ ಮಾತನಾಡುವನು. ಧನರಹಿತನು, ಅನೇಕ ವ್ಯಸನಯುಕ್ತನು, ಕೃಶವಾದ ಶರೀರವುಳ್ಳವನೂ ಆಗುವನು ॥೧೫೧॥

## ತೃತೀಯಸ್ಥ ಶನಿಫಲಂ

ಶ್ಲೋಕ॥ ರಾಜಮಾನ ಶುಭವಾಹನ ಯುಕ್ತೋ ಗ್ರಾಮಪೋ ಬಹು ಪರಾಕ್ರಮ ಶಾಲಿ । ಪಾಲಕೋ ಭವತಿ ಭೂರಿಜನಾನಾಂ ಮಾನವೋಹಿ ರವಿಜೇ ಸಹಜಸ್ಥೇ ॥೧೫೨॥ ಚ.ಚಿಂ॥ ತೃತೀಯೇ ಶನೌ ಶೀತಲಂನೈವಚಿತ್ತಂ ಜನಾದ್ಯುದ್ಯ ಮಾಜ್ಞಾಯತೇ ಯುಕ್ತಭಾಷೀ । ಅವಿಘ್ನಂಭವೇತ್ ಕರ್ಹಿಚಿನ್ನೈವಭಾಗ್ಯಂ ದೃಢಾಶಃ ಸುಖೀ ದುರ್ಮುಖಃ ಸತ್ಕೃತೋಪಿ ॥೧೫೩॥ ಶನಿಯು ತೃತೀಯದಲ್ಲಿದ್ದರೆ ಆ ಪುರುಷನು ರಾಜಮೂಲವಾಗಿ ಗೌರವ ಹೊಂದುವನು, ಒಳ್ಳೆ ವಾಹನಗಳುಳ್ಳವನು, ಗ್ರಾಮದ ಪಾಲಕನು, ಅತಿ ಪರಾಕ್ರಮವಂತನೂ, ಬಹುಜನರ ಸಂರಕ್ಷಣೆ

ಮಾಡುವವನೂ ಆಗುವನು ॥೧೫೩॥ ತೃತೀಯದಲ್ಲಿ ಶನಿಯಿದ್ದರೆ ಜಾತಕನು, ಸಹೋದರರಲ್ಲಿ ಪರಾಕ್ರಮಮಾಡಿ ಶಾಂತವಾಗದಿದ್ದವನು, ಐಶ್ವರ್ಯವೂ, ಲಾಭವೂ ನಿರ್ವಿಘ್ನವಾಗಿ ಆಗದಿದ್ದವನು, ಅಂದರೆ ಐಶ್ವರ್ಯ ಲಾಭಕಾಲದಲ್ಲಿ ವಿಘ್ನಸಂಭವಿಸಿ ಲಾಭವನ್ನು ಹೊಂದದವನು. ಅಲ್ಪವಾಗಿ ಮಾತನಾಡುವನು ಆತನ ತೃಷೆಯು ಯಾವಾಗಲೂ ಚಲಿಸುವುದಿಲ್ಲ, ಯಾವದಕ್ಕೂ ತೃಪ್ತಿಹೊಂದುವದಿಲ್ಲ, ಈ ಕಾರಣದಿಂದ ಯಾವಾಗಲೂ ಸುಖವಿಲ್ಲದವನು, ಇವನಿಗೆ ಯಾರೂ ಸತ್ಕಾರ ಮಾಡಿದರೂ ತನ್ನ ದುಷ್ಟತ್ವನ್ನು ಬಿಡದೆ ಕೆಟ್ಟ ಮಾತನ್ನೇ ನುಡಿಯುವವನೂ ಆಗುವನು. ಮೊದಲು ಹೇಳಿದ ಫಲಕ್ಕೆ ಈ ಫಲವು ವಿರೋಧವಾಗಿರುತ್ತೆ. ಆದರೆ ವರಾಹಮಿಹಿರಾಚಾರ್ಯರು ಸೂರ್ಯನಂತೆ ಫಲವನ್ನು ಹೇಳಿರುತ್ತಾರೆ. ಆದರೆ ಸೂರ್ಯನು ತೃತೀಯದಲ್ಲಿದ್ದರೆ, ಶುಭ ಫಲವನ್ನು ಹೇಳಿರುತ್ತಾನೆ. ನಮ್ಮ ಅನುಭವದಲ್ಲಿ ೧೫೩ನೇ ಶ್ಲೋಕದ ಅರ್ಥವು ಅನುಭವಿಸಿದ್ದ ವಾಗಿರುವದು, ಇದರಿಂದ ಈ ಫಲವನ್ನು ಜಿಜ್ಞಾಸುಗಳು ಆಲೋಚಿಸಿ ತಿಳಿಯತಕ್ಕದ್ದು ॥೧೫೩॥

## ಚತುರ್ಥಸ್ಥ ಶನಿಫಲಂ

ಶ್ಲೋಕ॥ ಪಿತ್ತಾನಿಲಕ್ಷೀಣಬಲಂ ಕುಶೀಲಮಾಲಸ್ಯಯುಕ್ತಂ ಕಲಿದುರ್ಬಲಾಂಗಮ್ । ಮಾಲಿನ್ಯಭಾಜಂ ಮನುಜಂ ವಿದಧ್ಯಾದ್ರಸಾತಲಸ್ಥೋ ನಲಿನೀಶ ಜನ್ಮಾ ॥೧೫೪॥ ಚ.ಚಿಂ॥ ಚತುರ್ಥೇಶನೌ ಪೈತೃಕಂ ಯಾತಿದೂರಂ ಧನಂ ಮಂದಿರಂ ಬಂಧುವರ್ಗಾಪವಾದಃ। ಪಿತುಶ್ಚಾಪಿಮಾತುಶ್ಚ ಸಂತಾಪಕಾರೀ ಗೃಹೇ ವಾಹನೇ ಹಾನಯೋವಾತರೋಗೀ ॥೧೫೪॥ತಾ॥ ಚತುರ್ಥದಲ್ಲಿ ಶನಿ ಇದ್ದರೆ ಜಾತಕನು, ವಾತ ಪಿತ್ತ ರೋಗದಿಂದ ಬಲಹೀನನೂ, ಸುಳ್ಳು ಹೇಳುವ ಸ್ವಭಾವದವನು, ಸೋಮಾರಿಯೂ, ಜಗಳದಲ್ಲಿ ದುರ್ಬಲನು, ಮಲಿನನೂ ಆಗುವನು ॥೧೫೪॥ ತಂದೆಯ ದ್ರವ್ಯ ಮತ್ತು ಮನೆಯೂ ಸಿಕ್ಕುವುದಿಲ್ಲ, ಬಂಧು ವರ್ಗದಲ್ಲಿ ಅಪವಾದವನ್ನು ಹೊಂದುವನು, ಮಂದಿರದ ಮತ್ತು ವಾಹನದ ವಿಷಯದಲ್ಲಿ ಹಾನಿಯುಂಟಾದವನು, ತಾಯಿತಂದೆಗೆ ದುಃಖದಾಯಕನೂ ವಾತ ರೋಗಿಯೂ ಆಗುವನು ॥೧೫೫॥

## ಪಂಚಮಭಾವಸ್ಥ ಶನಿಫಲಂ

ಶ್ಲೋಕ॥ ಸದಾಗದಾಕ್ಷೀಣತರಂ ಶರೀರಂ ಧನೇನಹೀನತ್ವಮನಂಗಹಾನಿಮ್ ॥ ಪ್ರಸೂತಿಕಾಲೇನಲಿನೀಶಪುತ್ರಃ ಪುತ್ರಸ್ಥಿತಃ ಪುತ್ರಭಯಂಕರೋತಿ ॥೧೫೬॥ ಚ.ಚಿಂ.॥ ಶನೌಪಂಚಮೇತು ಪ್ರಜಾಹೇತು ದುಃಖೀ ವಿಭೂತಿ ಶ್ಚಲಾ ತಸ್ಯಬುದ್ಧಿರ್ನಶುದ್ಧಾ ॥

ರತಿರ್ದೈವತೇ ಶಬ್ದ ಶಾಸ್ತ್ರೇತನದ್ವತ್ಕಲಿರ್ಮಿ ತ್ರತೋ ಮಂತ್ರತಃ ಕ್ರೋಡ ಪೀಡಾ ||೧೫೭||ಟಾ|| ಶನಿಯು ಪಂಚಮದಲ್ಲಿದ್ದರೆ, ರೋಗದಿಂದ ಯಾವಾಗಲೂ, ಶರೀರ ದುರ್ಬಲವುಳ್ಳವನು, ದರಿದ್ರನು, ಅಲ್ಪವೀರ್ಯವುಳ್ಳವನು, ಪುತ್ರ ಭಯವುಳ್ಳವನು, ಅಂದರೆ, ಪುತ್ರದುಃಖಿತನೂ ಆಗುವನು ||೧೫೬|| ಶನಿಯ ಪಂಚಮಭಾವದಲ್ಲಿದ್ದರೆ, ಸಂತಾನದ ನಿಮಿತ್ತ ನಿತ್ಯದುಃಖಿಯಾಗುವನು, ಐಶ್ವರ್ಯವು ಆಗಾಗ್ಗೆ ಅಭಿವೃದ್ಧಿ ಯಾಗುತ್ತಲೂ, ಕ್ಷಯಿಸುತ್ತಲೂ ಇರುವದು, ಬುದ್ಧಿಯು ನಿಷ್ಕಪಟವಾಗಿರುವದಿಲ್ಲ. ಕುಟಿಲ ಬುದ್ದಿಯುಳ್ಳವನು, ಧರ್ಮಶಾಸ್ತ್ರ, ವೇದ, ಉಪನಿಷತ್ತುಗಳಲ್ಲಿ ಯಾವವಿಧವಾದ ಪ್ರೀತಿಯಿರಬೇಕೋ ಆ ಬುದ್ಧಿಯು ಇರುವುದಿಲ್ಲ, ಕುಟಿಲನೂ ಆಗುವನು, ಸ್ನೇಹಿತರೊಡನೆ ಕಲಹಮಾಡುವನು, ತನ್ನ ಬುದ್ಧಿಯಿಂದಲೇ ಕುಕ್ಷಿರೋಗ ಉಂಟಾಗುವದು, ಮಂತ್ರದಲ್ಲಿ ಸಿದ್ಧಿಯೂ ಉಂಟಾಗುವದಿಲ್ಲ, ಈ ವಿಧವಾದ ದುರ್ಗುಣಗಳುಳ್ಳವನಾಗುವನು ||೧೫೭||

## ಷಷ್ಠಭಾವಸ್ಥ ಶನಿಫಲಂ

ಶ್ಲೋಕ|| ವಿನಿರ್ಜಿತಾರಾತಿಗಣೋಗುಣಜ್ಞಃ ಸುಜ್ಞಾಬ್ಯನುಜ್ಞಾಪರಿಪಾಲಕಃ ಸ್ಯಾತ್|| ಪುಷ್ಟಾಂಗಯುಷ್ಟಿಃ ಪ್ರಬಲೋದರಾಗ್ನಿರ್ನರೋರ್ಕಪುತ್ರೇ ಸತಿಶತ್ರು ಸಂಸ್ಥೇ ||೧೫೮|| ಚ.ಚಿಂ|| ಅರೌಭೂರ್ಪತೇ ಶ್ಚೌರ್ಯತೋ ಭೀತಯಃ ಕಿಂ ಯದೀನಸ್ಯ ಪುತ್ರೋ ಭವೇದ್ಯಸ್ಯಶತ್ರೌ || ನಯುದ್ಧೇ ಭವೇತ್ಸಮುಖೇ ತಸ್ಯಯೋದ್ಧಾ ಮಹಿಷ್ಯಾದಿಕೇ ಮಾತುಲಾನಾಂ ವಿನಾಶಃ ||೧೫೯|| ಷಷ್ಠದಲ್ಲಿ ಶನಿಯಿದ್ದರೆ, ಶತ್ರುಗಳ ಜಯಿಸುವನು. ಗುಣವನ್ನು ಪರಿಶೋಧಿಸಿ ತಿಳಿಯತಕ್ಕವನು, ಸುಜ್ಞನು ಪ್ರಪಂಚ ಧರ್ಮವನ್ನು ಪಾಲಿಸತಕ್ಕವನು, ಪುಷ್ಟಿಯಾದ ಶರೀರವುಳ್ಳವನು, ಉದರಾಗ್ನಿ ಪ್ರದೀಪ್ತವಾಗಿರುವನು (ಹಸಿವು ಹೆಚ್ಚಾಗಿ ಉಳ್ಳವನೂ) ಆಗುವನು ||೧೫೮|| ಷಷ್ಠಭಾವದಲ್ಲಿ ಶನಿಯಿದ್ದರೆ (ಜಾತಕನಿಗೆ ರಾಜಭಯವೂ ಚೋರಭಯವೂ, ಯಾವ ರೀತಿ ಬಂದೀತು ಅರ್ಥಾತ್) ರಾಜ ಚೋರಭಯವಿಲ್ಲದವನು, ಯುದ್ಧದಲ್ಲಿ ಸಮರ್ಥನಾದ ಭಟನು, ಎದುರು ಬಿದ್ದು ಕಾದಾಡುವನು, ಯಾರೂ ಅವನ ಸಮ್ಮುಖದಲ್ಲಿದ್ದು ಯುದ್ಧಮಾಡಲಾರರು, ಸಂಗ್ರಾಮದಲ್ಲಿ ಯಾರೂ ಅವನನ್ನು ಗೆಲ್ಲಲಾರರು, ಗೋಮಹಿಷ್ಯಾದಿ ಪಶುಗಳ ಸೌಖ್ಯವುಳ್ಳವನೂ ಆಗುವನು ಮತ್ತು ಸೋದರ ಮಾವನಿಗೆ ಆಗದವನೂ, ದ್ವೇಷಿಯೂ ಆಗುವನು ||೧೫೯||

## ಸಪ್ತಮಭಾವಸ್ಥ ಶನಿಫಲಂ

ಶ್ಲೋಕ।। ಆಮಯೇನಬಲಹೀನತಾಂ ಗತೋ ಹೀನವೃತ್ತಿಜನ ಚಿತ್ತಸಂಸ್ಥಿತಿಃ।। ಕಾಮಿನೀ ಭವನಧಾನ್ಯದುಃಖಿತಃ ಕಾಮಿನೀ ಭವನಗೇಶನೈಶ್ಚರೇ ।।೧೬೦।। ಚ.ಚಿಂ।। ಸುದಾರಾಶ್ಚಮಿತ್ರಂ ಚಿರಂಚಾರುವಿತ್ತಂ ಶನೌದ್ಯೂನಗೇ ದಂಪತೀ ರೋಗಯುಕ್ತೌ।। ಅನುತ್ಸಾಹ ಸಂತಪ್ತಕೃದ್ದೀನ ಚೇತಾಃ ಕುಶೋಽವೀರ್ಯರ್ವಾ ವಿಹ್ವಲೋಲೋಲುಪಃ ಸ್ಯಾತ್ ।।೧೬೧।।ತಾ।। ಸಪ್ತಮ ಭಾವದಲ್ಲಿ ಶನಿಯಿದ್ದರೆ, ಜಾತಕನು ರೋಗದಿಂದ ಬಲ ಹೀನನು, ತುಚ್ಛ ಜನಗಳಲ್ಲಿ ಸ್ನೇಹಮಾಡುವವನೂ, ಧಾನ್ಯಹೀನ, ಕಾಮಿನೀಹೀನ, ಆಲಸ್ಯವುಳ್ಳವನೂ ಆಗುವನು ।।೧೬೦।। ಸಪ್ತಮದಲ್ಲಿ ಜನಿಸಿದ ಪುರುಷನಿಗೆ ಸುಂದರಳಾದ ಪತ್ನಿಯು, ಮಿತ್ರನಿಗೆ ಹಿತಕಾರಿಯಲ್ಲದ ಬುದ್ಧಿಯು, ನ್ಯಾಯವಾದ ಧನವೂ ಬರದಿರುವುದಿಲ್ಲ, ಅನ್ಯಾಯಾರ್ಜನೆಯು, ಬಹುಕಾಲದವರಿಗೆ ಈ ವಸ್ತುಗಳ ಫಲವು ಸಿಕ್ಕದಿರೋಣವೂ, ದಂಪತಿಗಳು ನಿರಂತರ ರೋಗ ಪೀಡಿತರಾಗಿರುವಿಕೆಯೂ ಆಗುವುದು, ನಿರಂತತರ ಉತ್ಸಾಹಹೀನನೂ, ಆಲಸ್ಯವುಳ್ಳವನೂ, ಮಲಿನನೂ, ವಿಹ್ವಲನೂ, ಅತಿ ಲೋಭಿಯೂ, ಗರ್ವಿತನು, ವಸ್ತುಗಳಲ್ಲಿ ಲೋಭಮಾಡುವವನು, ಬಲವಂತನೂ, ದುಷ್ಟಸ್ತ್ರೀಯಲ್ಲಿ ಆಸಕ್ತಿಯುಳ್ಳವನು, ಚತುರ ಬುದ್ಧಿಯುಳ್ಳವನು, ಪಾಪದಲ್ಲಿ ಮನಸ್ಸಿಡುವವನು, ಉದ್ದತನೂ, ಸಜ್ಜನ ಸಹವಾಸವುಳ್ಳವನೂ, ಶಾಸ್ತ್ರಜ್ಞಾನ ರಹಿತನೂ ಆಗುವನು ।।೧೬೧।।

## ಅಷ್ಟಮಭಾವಸ್ಥಿತ ಶನಿಫಲಂ

ಶ್ಲೋಕ।। ಕೃಶತನುರ್ನನುದದ್ರುವಿಚರ್ಚಿಕಾ ಪ್ರಭವತೋಭಯತೋಷ ವಿವರ್ಜಿತಃ ।। ಅಲಸತಾಸಹಿತೋಹಿ ನರೋಭವೇನ್ನಿಧನವೇಶ್ಮನಿ ಭಾನುಸುತೇಸ್ಥಿತೇ ।।೧೬೨।।ಚ.ಚಿಂ।। ವಿಯೋಗೋಜನಾನಾಂತ್ವನೌ ಪಾಧಿಕಾನಾಂ ವಿನಾಶೋಧನಾನಾಂ ಸಕೋಪಸ್ಯನಸ್ಯಾತ್ ।। ಶನೌ ರಂಧ್ರಗೇವ್ಯಾಧಿತಃ ಕ್ಷುದ್ರದರ್ಶೀ ತದಗ್ರೇಜನಃ ಕೃತವಂ ಕಿಂಕರೋತು ।।೧೬೨।।ತಾ।। ಜನ್ಮಲಗ್ನದಿಂದ ಅಷ್ಟಮಭಾವದಲ್ಲಿ ಶನಿಯಿದ್ದರೆ, ಜಾತಕನು ಕೃಶಶರೀರದವನು, ಕುಷ್ಠರೋಗ, ಕಜ್ಜಿ, ತುರಿ, ಮೊದಲಾದ ವಿಚರ್ಚಿಕಾರೋಗ ಪೀಡಿತನೂ, ನಿರ್ಭಯವುಳ್ಳವನೂ, ಅಸಂತೋಷಿಯು, ಆಲಸ್ಯವುಳ್ಳವನೂ ಆಗುವನು ।।೧೬೨।। ಅಷ್ಟಮಭಾವದಲ್ಲಿ ಶನಿಯು ಇರುವಾಗ ಹುಟ್ಟಿದವನು, ಉಪಾಧಿ ರಹಿತನೂ ಸತ್ಸಂಗವುಳ್ಳವನು, ಜ್ಞಾನವುಳ್ಳವನು, ಜ್ಞಾನವುಳ್ಳ ಮನುಷ್ಯರು ಸಿಕ್ಕದೇ ಪೇಚಾಡುವವನು. ದುಷ್ಟಸಹಸವಾಸವುಳ್ಳವನು, ಸ್ವಜನರ ವಿಯೋಗವುಳ್ಳವನು, ಅಷ್ಟಮಶನಿ ಇರುವ ಮನುಷ್ಯರಿಂದ ಧನನಾಶವಾಗದಿರುವನು,

ರೋಗವುಳ್ಳವನೂ, ಪರಚ್ಛಿದ್ರ ದೋಷಗಳನ್ನು ಹುಡುಕುತ್ತಲಿರುವನು, ಧೂರ್ತನೂ, ಮಂದಬುದ್ಧಿಯುಳ್ಳವನೂ ಆಗುವನು ॥೧೬೩॥

## ನವಮಭಾವಸ್ಥಿತ ಶನಿಫಲಂ

ಶ್ಲೋಕ॥ ಧರ್ಮಕರ್ಮ ಸಹಿತೋವಿಕಲಾಂಗೋ ದುರ್ಮತಿರ್ಹಿಮನು ಜ್ಯೋತಿ ಮನೋಜ್ಞಃ॥ ಸಂಭವಸ್ಯಸಮಯೇ ಯದಿಕೋಣಸ್ತ್ರಿಕೋಣ ಭವನೇ ಯದಿಸಂಸ್ಥೇ ॥೧೬೪॥ ಚ.ಚಿಂ॥ ಮತಿಸ್ತಸ್ಯತಿಕ್ರಾನತಿಕ್ತಂ.ಕುಶೀಲಂ ರತಿರ್ಯೋಗ ಶಾಸ್ತ್ರೇಗುಣೋ ರಾಜಸಃಸ್ಯಾತ್ ॥ ಸುಹೃದ್ವರ್ಗತೋ ದುಃಖಿತೋ ದೀನಬುಧ್ಯಾ ಶನಿರ್ಧರ್ಮಗಃ ಧರ್ಮ ಕೃತ್ಯಂನ್ಯಸೇದ್ವಾ ॥೧೬೫॥ತಾ॥ ನವಭಾವದಲ್ಲಿ ಶನಿಯಿದ್ದರೆ, ಜಾತಕನು ಧರ್ಮಕಾರ್ಯ ಮಾಡುವವನು, ಪೂರ್ಣಅವಯವವುಳ್ಳವನು, ದುಷ್ಟಬುದ್ಧಿಯುಳ್ಳವನು ಸರ್ವರಮನಸ್ಸಿನ ಸಂಗತಿಗಳನ್ನು ತಿಳಿಯುವವನೂ ಆಗುವನು ॥೧೬೪॥ ನವಮದಲ್ಲಿ ಶನಿಯಿದ್ದರೆ, ಸುಬುದ್ಧಿಯು, ವಿಷಯವಾಸನೆಯಲ್ಲಿ ವಿರಕ್ತನೂ (ಶೀಲ) ಸ್ವಭಾವಾಚರಣ (ಕಟುತ್ವ) ಕಹಿಯಾದವನು, ಯೋಗಶಾಸ್ತ್ರಾಭ್ಯಾಸದಲ್ಲಿ ಪ್ರೀತಿಯುಳ್ಳವನು ರಜೋ ಗುಣಾಧಿಕವಾಗಿ ಉಳ್ಳವನು, ಮಿತ್ರಬಾಂಧವರಲ್ಲಿ ದುಃಖಿತನೂ, ಅರ್ಥಾತ್ ದಯಾರ್ವಾ, ಆದಕಾರಣದಿಂದ ದುಃಖವನ್ನು ನೋಡಿ ಖಿನ್ನನಾದವನು, ಸಕಲರಿಗೂ ಶುಭನಾದ ಸಂನ್ಯಾಸಿಯೂ ಆಗುವನು ॥೧೬೫॥

## ದಶಮಭಾವಸ್ಥ ಶನಿಫಲಂ

ಶ್ಲೋಕ॥ ರಾಜ್ಞಃ ಪ್ರಧಾನಮತಿ ನೀತಿಯುತಂವಿನೀತಂ ಸದ್ಗ್ರಾಮವೃಂದಪುರ ಭೇದನಕಾಧಿಕಾರಂ । ಕುರ್ಯಾನ್ನರಂ ಸುಚತುರಂ ದ್ರವಿಣೇನ ಪೂರ್ಣಂ ಮೇಷೂರಣೇ ಹಿ ತರಣೇಸ್ತನುಜಃ ಕರೋತಿ ॥೧೬೬॥ಚ.ಚಿಂ॥ ಅಜಾತಸ್ಯ ಮಾತಾಪಿತಾ ಬಾಹುರೇವ ವೃಥಾಸರ್ವತೋದುಷ್ಟಕರ್ಮಾಧಿಪತ್ಯಾತ್ । ಶನ್ಯೆರೇಧತೇಕರ್ಮಗಃ ಶರ್ಮವಂದೋ ಜಯೋ ವಿಗ್ರಹೇಜೀವಿಕಾನಾಂತು ಯಸ್ಯ ॥೧೬೭॥ ಶನೌವ್ಯೋಮಗೇವಿಂದತೇಕಿಂಚ ಮಾತಾ ಸುಖಂಶೈಶವಂ ದೃಶ್ಯತೇಕಿಂತುಪಿತ್ರಾ । ನಿಧಿಃ ಸ್ಥಾಪಿತೋವ್ಯಾಪಿತಾವಾಕ್ಯಷಿಶ್ಚ ಪ್ರಣಶ್ಯೇದ್ಧ್ರುವಂ ದೃಶ್ಯತೇದೈವತೋವಾ॥ ತಾ॥ ದಶಮದಲ್ಲಿ ಶನಿಯಿದ್ದರೆ, ಜಾತಕ ಪುರುಷನು ರಾಜನ ಪ್ರಧಾನನಂ, ನೀತಿವಂತನು, ಬಹು ನಮ್ರತೆಯುಳ್ಳವನು, ಗ್ರಾಮ ಸಮುದಾಯಕ್ಕೂ, ನಗರಕ್ಕೂ

* 'ಶನಾವಷ್ಟಮಸಂಯುಕ್ತೇ ಪೂರ್ಣಾಯುರ್ಯೋಗಮಾದಿಶೇತ್' (ಗ್ರಂಥಾಂತರ) ಸಂಹಿತ ವಚನವಿರುತ್ತೆ.

ಪಟ್ಟಣಾಧಿಕಾರಿಯೂ, ಬಹುಚತುರನೂ, ಧನವಂತನೂ ಆಗುವನು ॥೧೬೬॥ ದಶಮದಲ್ಲಿ ಶನಿಯಿದ್ದರೆ, ಮೇಲೆ ರಾಜಯೋಗವು ಹೇಳಲ್ಪಟ್ಟಿದೆ. ಆದರೆ ಉತ್ತರ ಅವಸ್ಥೆಗಳನ್ನು ಹೇಳಲಿಲ್ಲ, ಆದ್ದರಿಂದ ಹೇಳಲ್ಪಡುತ್ತೆ. ದಶಮದಲ್ಲಿ ಶನಿಯಿರುವುದರಿಂದ ಕೇವಲ ಶೈಶವಾವಸ್ಥೆಯಲ್ಲಿ ತಾಯಿಯು ಸತ್ತುಹೋಗುವಳು ಮಾತೃಗಂಡ, ಈ ಶಿಶುವಿಗೆ ಮೇಕೆಯ ಹಾಲು ಹಾಕಿ ಸಾಕುವರು (ಅಜಾಮಾತಾ) ಮತ್ತು ಬಾಲ್ಯಾದಿ ಅವಸ್ಥೆಯಲ್ಲಿ ತಂದೆಯು ಮೃತಿಹೊಂದುವದರಿಂದ ತಾನೇ ಸ್ವತಂತ್ರಿಸಿ ಧನಸಂಪಾದಿಸಿ ಜೀವಿಸುವನು ಮತ್ತು ಅಧಿಕಾರ ಸಿಕ್ಕವದರಿಂದ ನಿಷ್ಪ್ರಯೋಜನವಾಗಿ ಸರ್ವ ಜನರಿಗೆ ತಾಡನಾದಿಗಳಿಂದ ಕ್ರಮವಾಗಿ ಯುದ್ಧ ಮಾಡುವದರಿಂದ ಗೆಲ್ಲುವನು, ತದನಂತರ ಸುಖವನ್ನು ಹೊಂದುವನು, ಆ ಜೀವನ ವೃತ್ತಿಯು ಅಲ್ಪತರವಾಗಿರುವದು (ಪ್ರ) ಸತ್ಕರ್ಮಿ, ಸುಲಕ್ಷಣವಾದ ಸ್ತ್ರೀಯುಳ್ಳವನು, ಸ್ಥಿರಚಿತ್ತನೂ, ನಮ್ರನೂ, ರಾಜಪೂಜ್ಯನೂ, ಪ್ರತಾಪಿಯೂ ಆಗುವನು ॥೧೬೭॥ ಮತ್ತು ದಶಮದಲ್ಲಿ ಶನಿಯಿದ್ದರೆ ಮಾತ್ರ ಸುಖವುಳ್ಳವನು, ತಂದೆಯು ಈತನ ಬಾಲಲೀಲೆಯನ್ನು ನೋಡುವನಾಗುವದಿಲ್ಲ, ಪಿತೃ ಮರಣ ಹೊಂದುವನು, ತಂದೆಯ ಮನೆಯು, ನಿಧಿಯು, ಭೂಮಿಯು, ರತ್ನಾದಿಗಳು, ಸಮಸ್ತವು ಅನ್ಯರಿಂದ ಆಕ್ರಮಿಸಲ್ಪಡುವುವು ಮತ್ತು ಜಲ, ಅಗ್ನಿಭಯದಿಂದ ನಷ್ಟವಾಗುವುವೆಂದು ತಿಳಿಯತಕ್ಕದ್ದು.

## ಲಾಭಸ್ಥಿತ ಶನಿಫಲಂ

ಶ್ಲೋಕ॥ ಕೃಷ್ಣಾಶ್ವಾನಾ ಮಿಂದ್ರನೀಲೋರ್ಮಿಕಾನಾಂ ನಾನಾ ಚಂಚದ್ವಸ್ತು ದಂತಾವಲಾನಾಂ । ಪ್ರಾಪ್ತಿಂ ಕುರ್ಯಾನ್ಮಾನವಾನಾಂ ಬಲೀಯಾನ್ ಪ್ರಾಪ್ತಿಸ್ಥಾನೇ ವರ್ತಮಾನೇರ್ಕಸೂನೌ ॥೧೬೮॥ಚ.ಚಿಂ॥ ಸ್ಥಿರಂವಿತ್ತಮಾಯುಃ ಸ್ಥಿರಂಮಾನಸಂಚ ಸ್ಥಿರಾನ್ಯೆವ ರೋಗಾದಯೋಂನ ಸ್ಥಿರಾಣಿ । ಅಪತ್ಯಾನಿಶೂರಃ ಶತಾದೇಕ ಏವ ಪ್ರಪಂಚಾಧಿಕೋ ಲಾಭಗೇ ಭಾನುಪುತ್ರೇ॥ ॥೧೭೦॥ತಾ॥ ಏಕಾದಶಭಾವದಲ್ಲಿ ಶನಿಯು ಬಲಿಷ್ಠನಾಗಿದ್ದರೆ, ಆ ಪುರುಷನಿಗೆ ಕರಿಯ ಅಶ್ವಗಳು, ಇಂದ್ರನೀಲ ಮಣಿಯು, ಶಾಲಿಧಾನ್ಯವೂ ಇದಲ್ಲದೆ ಅನೇಕ ಉತ್ತಮ ವಸ್ತುಗಳು, ಗಜ, ದಂತ ಮೊದಲಾದವುಗಳ ಪ್ರಾಪ್ತಿಯನ್ನುಂಟುಮಾಡಿಕೊಡುತ್ತಾನೆ ॥೧೬೯॥ ಲಾಭಸ್ಥಾನದಲ್ಲಿ ಶನಿಯಿದ್ದರೆ, ಧನ ಸ್ಥಿರವಾಗಿ ನಿಲ್ಲುವದು, ಆಯಸ್ಸು ವೃದ್ಧಿಯಾಗುವದು ಅಂದರೆ ದೀರ್ಘಾಯುರೋಗ್ಯವುಳ್ಳವನು, ಸ್ಥಿರವಾದ ಬುದ್ಧಿಯುಳ್ಳವನು, ರೋಗವು ಶರೀರದಲ್ಲಿ ದೀರ್ಘವಾಗಿ ನಿಲ್ಲುವದಿಲ್ಲ, ಸಂತಾನ ನಾಶವಾದ ದುಃಖವನ್ನು ನೋಡುವನು, ಆದರಲ್ಲಿ ಉಳಿದ ಒಬ್ಬನು ಶೂರನಾಗಿಯೂ, ರಾಗದ್ವೇಷಾದಿಗಳಲ್ಲಿ ನಿಪುಣನಾಗಿಯೂ

ಆಗುವನು. ಪ್ರ|| ಅನೇಕ ಪ್ರಕಾರದ ಲಾಭವುಳ್ಳವನು, ಶಾಸ್ತ್ರದಲ್ಲಿ ಅನುರಾಗವುಳ್ಳವನು, ಶತ್ರುಗಳನ್ನು ಗೆಲ್ಲುವನು, ಸಜ್ಜನರಲ್ಲಿ ಪ್ರಶಂಸನೀಯನೂ ಆಗುವನು ||೧೭೧||

## ವ್ಯಯಭಾವಸ್ಥಿತ ಶನಿಫಲಂ

ಶ್ಲೋಕ|| ದಯಾವಿಹೀನೋ ವಿಧನೋ ವ್ಯಯಾರ್ತಃ ಸದಾಲಸೋ ನೀಚ ಜನಾನುಯಾತಃ|| ನರೋಗಭಂಗೋಜ್ಝಿತಃ ಸರ್ವಸೌಖ್ಯೋವ್ಯಯಸ್ಥಿತೇ ಭಾನುಸುತೇ ಪ್ರಸೂತೌ ||೧೭೧|| ಚ.ಚಿಂ|| ವ್ಯಯಸ್ಥೇ ಯದಾಸೂರ್ಯ ಸೂನೌ ನರಸ್ಯಾದ ಶೂರೋಥವಾ ನಿಸ್ತ್ರಪೋಮಂದನೇತ್ರಃ|| ಪ್ರಸನ್ನೋ ಬಹಿರ್ನೋ ಗೃಹೇ ಲಗ್ನಪಶ್ಚ ವ್ಯಯಸ್ಥೋರಿಪುಧ್ವಂಸ ಕೃದ್ಯಜ್ಞ ಭೋಕ್ತಾ ||೧೭೨|| ದ್ವಾದಶ ಸ್ಥಾನದಲ್ಲಿ ಶನಿಯಿದ್ದರೆ, ದಯಾಶೂನ್ಯನು, ನಿರ್ಧನನು, ವ್ಯಯದಸ್ವಭಾವವುಳ್ಳವನು, ನಿರಂತರ ಆಲಸ್ಯವುಳ್ಳವನು, ನೀಚ, ತುಚ್ಛ, ಜನರಲ್ಲಿ ಸ್ನೇಹವುಳ್ಳವನು, ಶರೀರ ಹೀನವಾದ್ದರಿಂದ ಸರ್ವಸೌಖ್ಯಕ್ಕೂ ಭಂಗವಾಗಿರುವನೂ ಆಗುವನು ||೧೭೧|| ಶನಿಯು ದ್ವಾದಶದಲ್ಲಿದ್ದರೆ, ಭಯಸ್ಥನು, ನಿರ್ಲಜ್ಜನು, ನೇತ್ರದೃಷ್ಟಿ ಅಲ್ಪವಾದವನು, ಪರದೇಶದಲ್ಲಿ ಪೂಜ್ಯತೆ, ಪ್ರಸನ್ನತೆಯುಳ್ಳವನು, ಮನೆಯಲ್ಲಿ ಸಂತೋಷವಿಲ್ಲದವನು, ಮತ್ತು ಲಗ್ನಾಧಿಪತಿಯೇ ಶನಿಯಾಗಿ ದ್ವಾದಶದಲ್ಲಿದ್ದರೆ, ಶತ್ರುಗಳನ್ನು ನಾಶಮಾಡುವನು, ಯಜ್ಞ, ದ್ರವ್ಯದಿಂದ ಸಮೃದ್ಧಿಯುಳ್ಳವನು, ಐಶ್ವರ್ಯವುಳ್ಳವನು, ತಲೆಯಲ್ಲಿ ಕೂದಲು ಉದರಿ ಹೋದವನು, (ಅಂದರೆ ಖರ್ವಾಟ), ರೋಗಿ, ಕುಮಿತ್ರರುಳ್ಳವನು, ಶರೀರ ಪೀಡೆಯುಳ್ಳವನು, ಸಜ್ಜನರಹಿತನೂ, ಕಲಹಪ್ರಿಯನೂ ಆಗುವನು ||೧೭೨||

ಇತಿ ಬುಧದ್ವಾದಶ ಭಾವಫಲಂ

## ಅಥ ಸಮುದಾಯ ಭಾವಫಲಂ

ಅವತಾರಿಕೆ-ವರಾಹಮಿಹಿರಾಚಾರ್ಯನು ತನ್ವಾದಿ ೧೨ ಭಾವ ಫಲವನು, ಸಂಕ್ಷೇಪವಾಗಿ ಹೇಳಿದನೆ ಹೊರತು ವಿಶದವಾಗಿ ಹೇಳಲಿಲ್ಲ. ಏಕೆಂದರೆ ಭೂಯೋಭಿಃ ಎಂಬುವ ಶ್ಲೋಕದಿಂದ ಸ್ವಲ್ಪವಾದ ವೃತ್ತಗಳಿಂದ ಅರ್ಥ ಬಾಹುಳ್ಯವಾಗಿ ಹೇಳುತ್ತೇನೆಂದು ಪ್ರತಿಜ್ಞೆ ಮಾಡಿರುವುದರಿಂದ, ಈ ಅಧ್ಯಾಯಕ್ಕೆ ವಿಶದವಾಗಿ ಅನ್ಯಗ್ರಂಥೋದಾಹರಣೆಗಳಿಂದ ಜಿಜ್ಞಾಸುಗಳ ಸಂಶಯವನ್ನು ಪರಿಹರಿಸಬೇಕೆಂಬುವದೇ ಅವಶ್ಯಕವಾದ ಕರ್ತವ್ಯವಾಗಿರುತ್ತೆ.

ಶ್ಲೋಕ|| ಹೋರಾಲಂಕಾರ ಮುಖ್ಯ ಪ್ರಭವಶುಭ ಫಲಾದೀನಿ ಸರ್ವಾಣಿ ಪುಂಸಾಂ| ತತ್ತದ್ಭಾವೋ ದ್ಭವಾನಿದ್ಯುಚರ ಬಲವಶಾದ್ಯಾನಿ

ತಾನಿಪ್ರವಚ್ಮೆ॥ ಯೋಯೋಭಾವಾಃ ಸಿತಜ್ಞಾಮರ ಗುರುಪತಿಭಿಃ ಸಂಯುತಾ ವೀಕ್ಷಿತಾವಾ । ನಾನ್ಸ್ಯೈ ದೃಷ್ಟಾನಯುಕ್ತಾ ಯದಿಶುಭ ಫಲದಾ ಮೂರ್ತಿಭಾವಾದಿಕೇಷು ॥೧೭೦॥

ತಾ॥ ಜಾತಕರಿಗೆ ಸಮಸ್ತ ಶುಭಾಶುಭ ಫಲಗಳನ್ನು ಗ್ರಹಗಳು ಸ್ಥಾನಾದಿ ಷಡ್ಬಲಯುಕ್ತರಾದ ಸ್ಥಾನದಲ್ಲಿದ್ದದ್ದನ್ನನುಸರಿಸಿ ಹೇಳತಕ್ಕದ್ದು. ತನ್ವಾದಿ ದ್ವಾದಶ ಭಾವಗಳಿಗೆ ಶುಕ್ರ, ಬುಧ, ಗುರು ಮತ್ತು ಆಯಾಯ ಭಾವಾದಿ ಪತಿಗಳಿಂದ ಯುಕ್ತವಾಗಿಯಾಗಲಿ ಅಥವಾ ನೋಡಲ್ಪಡಲೀ ಇತರ ಪಾಪಗ್ರಹಗಳು ಯುಕ್ತವಾಗ ದೆಯೂ, ಪಾಪಗ್ರಹಗಳಿಂದ ನೋಡಲ್ಪಡದೆಯೂ ಇದ್ದರೆ ಆಯಾಯ ಭಾವಗಳಿಗೂ ಶುಭ ಫಲವನ್ನು ಹೇಳತಕ್ಕದ್ದು ॥೧೭೩॥

ಶ್ಲೋಕ॥ ತನ್ವಾದಿಭಾವೇಷು ಶುಭೋದಯೇಷುತದ್ಭಾವನಾಥೋಪಗತೇಕ್ಷಿತೇಷು । ತದ್ಭುಕ್ತ ಭಾವಸ್ಥ ಸಮೃದ್ಧಿರುಕ್ತಾ ಸಪಾಪಖೇಟೇಕ್ಷಿತ ಸಂಯು-ತೇಷು ॥೧೭೪॥

ತಾ॥ ತನ್ವಾದಿ ದ್ವಾದಶಭಾವಗಳಿಗೆ ಶುಭಗ್ರಹರಾಶಿಗಳೇ ಭಾವಗಳಾಗಿ ಆ ಭಾವಾಧಿಪತಿಯೊಂದಿಗೆ ಕೂಡಿದರೂ ಅಥವಾ ಆ ಭಾವಾಧಿಪತಿಗಳಿಂದ ನೋಡಲ್ಪಟ್ಟರೂ ಆಯಾಯಾ ಭಾವಮಧ್ಯದಲ್ಲಿ ಗ್ರಹಗಳಿದ್ದು ಪಾಪಗ್ರಹಗಳಿಂದ ಯುಕ್ತ ವಾಗದೆಯೂ ನೋಡಲ್ಪಡದೆಯೂ ಇದ್ದರೆ ಆ ಮೇಲೆ ಹೇಳಲ್ಪಟ್ಟ ಭಾವಗಳಿಗೆ ಉಕ್ತವಾದ ಫಲಗಳನ್ನು ಪುಷ್ಟಿಯಾಗಿ ಹೇಳಬೇಕೆಂದು ಮುಖ್ಯ ಅಭಿಪ್ರಾಯವು ॥೧೭೪॥

ಶ್ಲೋಕ॥ ನೀಚಸ್ಥೋ ರಿಪುರಾಶಿಸ್ಥಃ ಖೇಟೋಭಾವ ವಿನಾಶಕಃ । ಮೂಲ ಸ್ವತುಂ ಗಮಿತ್ರಸ್ಥೋ ಭಾವವೃದ್ಧಿ ಕರೋಭವೇತ್ ॥೧೭೫॥

ತಾತ್ಪರ್ಯ॥ ಯಾವ ಭಾವಕ್ಕಧಿಪತಿಯಾದ ಗ್ರಹವು ನೀಚ ರಾಶಿಯಲ್ಲಿದ್ದರೂ, ಶತ್ರು ಕ್ಷೇತ್ರದಲ್ಲಿದ್ದರೂ, ಆ ಭಾವಕ್ಕೆ ವಿನಾಶಫಲವನ್ನೇ ಹೇಳಬೇಕು ಯಾವ ಭಾವಾದಿಪತಿ ಯಾದ ಗ್ರಹವು ತನ್ನುಚ್ಚ ರಾಶಿಯೊಳಗೆ *ಉಕ್ತವಾದ ಉಚ್ಚಭಾಗದೊಳಗಿದ್ದರೂ ಆ ಗ್ರಹದ ಮೂಲ ತ್ರಿಕೋಣದಲ್ಲಿದ್ದರೂ, ಸ್ವಕ್ಷೇತ್ರದಲ್ಲಿದ್ದರೂ, ಮಿತ್ರ ಕ್ಷೇತ್ರದಲ್ಲಿದ್ದರೂ ಆ ಭಾವಕ್ಕೆ ವೃದ್ಧಿ (ಪುಷ್ಟಿ) ಫಲವನ್ನೇ ಹೇಳಬೇಕು ॥೧೭೫॥

---

* ರವಿ-೧೦ ಚಂ-೩ ಕುಜ-೨೮ ಬು-೧೫ ಗು-೫ ಶು-೨೭ ಶನಿ-೨೦ ಇವು ಉಕ್ತಭಾಗಗಳು (ಇವುಗಳೇ ಪರಮೋಚ್ಚಧ್ರುವವೆಂದು ತಿಳಿಯತಕ್ಕದ್ದು)

ಶ್ಲೋಕ।। ಯದ್ಭಾವನಾಥೋ ರಿಪುರಂಧ್ರರಿಃಫೇ ದುಃಸ್ಥಾನಪೋಯದ್ಭವನಸ್ಥಿತೋವಾ। ತದ್ಭಾವನಾಶಂ ಕಥಯಂತಿ ತಜ್ಞಾಃಶುಭೇಕ್ಷಿತಶ್ಚೇತ್ಫಲಮನ್ಯಥಾಸ್ಯಾತ್ ।।೧೭೬।।

ತಾ।। ಯಾವ ಭಾವಾದಿಪತಿಯು, ಷಷ್ಠಾಷ್ಟಮ್ಯಯಸ್ಥಾನಗಳಲ್ಲಿ ಯಾವರಾಶಿಯನ್ನು ಹೊಂದಿದರೂ ಈ ಮೇಲೆ ಹೇಳಿದ ೬-೮-೧೨ನೇ ಅಧಿಪತಿಗಳು ಆ ಭಾವವನ್ನು ಹೊಂದಿದರೂ ಆ ಭಾವಕ್ಕೆ ನಾಶವನ್ನೇ ಹೇಳಬೇಕು, ಒಂದು ವೇಳೆ ಆ ಮೇಲೆ ಹೇಳಿದ ಭಾವಗಳಿಗೆ ಶುಭಗ್ರಹವೀಕ್ಷಣೆಯಿದ್ದರೆ, ದುಷ್ಟಫಲ ಹೇಳದೆ ಶುಭ ಫಲವನ್ನೇ ಹೇಳತಕ್ಕದ್ದು ।।೧೭೬।।

ಶ್ಲೋಕ।। ಯದ್ಭಾವಪಃ ಕೇಂದ್ರಗತೋ ವಿಲಗ್ನಾತ್ ತ್ರಿಕೋಣ ಗೇವಾ ಯದಿ ಸೌಮ್ಯದೃಷ್ಟಃ ।। ತುಂಗಾದಿ ವರ್ಗೋಪಗತೋಬಲಾಢ್ಯಸ್ತದ್ಭಾವಪುಷ್ಟಿಂ ಫಲಮಾಹುರಾರ್ಯಾಃ ।।೧೭೭।।

ತಾ।। ಯಾವ ಭಾವಾದಿಪತಿಯು ಲಗ್ನದಿಂದ ಕೇಂದ್ರಸ್ಥಾನಗಳನ್ನು ಹೊಂದಿದರೂ ಅಥವಾ ತ್ರಿಕೋಣ ಸ್ಥಾನಗಳನ್ನು ಹೊಂದಿದರೂ ಮತ್ತು ಶುಭಗ್ರಹದಿಂದ ನೋಡಲ್ಪಟ್ಟರೂ ಅಥವಾ ಉಚ್ಚ ಮಿತ್ರ ಷಡ್ವರ್ಗದಲ್ಲಿದ್ದೂ, ಸ್ಥಾನಾದಿ ಷಡ್ಬಲಯುಕ್ತನಾಗಿದ್ದರೆ, ಆ ಭಾವಕ್ಕೆ ಪುಷ್ಟಿ (ವೃದ್ಧಿಕಾರ) ಫಲವನ್ನು ಹೇಳಬಹುದೆಂದು ಮಹರ್ಷಿಗಳು ಅಭಿಪ್ರಾಯ ಪಡುತ್ತಾರೆ ।।೧೭೭।।

ಶ್ಲೋಕ।। ತತ್ತದ್ಭಾವಾ ಸ್ತ್ರಿಕೋಣೇ ಸುಖಮದನಗೃಹೇವಾಸ್ಪದೇ ಸೌಮ್ಯಯುಕ್ತೇ । ಪಾಪಾನಾಂದೃಷ್ಟಿ ಹೀನೇ ಭವನ ಪಸಹಿತೇ ಪಾಪಖೇಟೈರ್ವಿಯುಕ್ತೇ ।। ಭಾವಾನಾಂ ಪುಷ್ಟಿಮಾಹುಸ್ಸಕಲ ಶುಭಕರೀಮನ್ಯಥಾ ಚೇತ್ತ್ವನಾಶಂ । ಮಿಶ್ರಂ ಮಿಶ್ರಗ್ರಹೇಂದ್ರೈಸ್ಸ ಕಲಮುಪಿಫಲಂ ಮೂರ್ತಿ ಭಾವಾದಿಕಾನಾಂ ।।೧೭೮।।

ಆಯಾಯ ಭಾವಗಳ ಪಂಚಮ ನವಮಗಳಲ್ಲು, ಚತುರ್ಥ, ಸಪ್ತಮ, ದಶಮಗಳಲ್ಲು, ಶುಭಗ್ರಹಯುಕ್ತವಾಗಿ ಪಾಪಗ್ರಹಗಳ ದೃಷ್ಟಿಯಿಲ್ಲದೆ ಆಯಾಯ ಭಾವಾಧಿಪತಿಗಳು ಪಾಪಗ್ರಹಯುಕ್ತರಾಗದೆ ಇದ್ದರೆ ಆಯಾಯ ಭಾವಗಳಿಗೆ ಸಕಲ ಶುಭಫಲಗಳು ಪುಷ್ಟಿಯಾಗಿ ಹೇಳಬೇಕು. ಅನ್ಯಥಾ (ಅಂದರೆ) ಈ ಮೇಲೆ ಹೇಳಿದ ವಿಧಿಗೆ ವಿರೋಧವಾಗಿ ೫-೯-೪-೭-೧೦ರಲ್ಲಿ ಪಾಪಗ್ರಹ ಯುಕ್ತವಾಗಿ ಪಾಪ ದೃಷ್ಟಿಯಿದ್ದರೆ ಮತ್ತು ಆಯಾಯ ಭಾವಾದಿಪತಿಗಳು ಪಾಪಗ್ರಹ ಯುಕ್ತವಾಗಿದ್ದರೆ ಆಯಾಯ ಭಾವಗಳಿಗೆ ಫಲನಾಶವನ್ನೇ ಹೇಳಬೇಕು. ಹಾಗಿಲ್ಲದೆ ೫-೯-೪೭-೧೦ ರಲ್ಲಿ ಶುಭಪಾಪಗ್ರಹಗಳು ಮಿಶ್ರವಾಗಿದ್ದರೂ, ಶುಭಗ್ರಹಗಳೂ, ಪಾಪಗ್ರಹಗಳೂ

ನೋಡಿದರೂ ಭಾಧಿಪತಿಗಳಿಗೆ ಶುಭಪಾಪಗ್ರಹಗಳೆರಡರ ಸಂಬಂಧವಿದ್ದರೂ, ಮಿಶ್ರಫಲ (ಕೆಲವು ವೃದ್ಧಿ ಕೆಲವು ನಾಶ)ವನ್ನು ಹೇಳಬೇಕು ॥೧೭೯॥

ಶ್ಲೋಕ॥ ನಾಶಸ್ಥಾನಗತೋದಿವಾಕರ ಕರಚ್ಛನ್ನಸ್ತು ಯದ್ಭಾವಪೋ । ನೀಚಾ ರಾತಿ ಗತೋಥವಾ ಯತಿಶುಭೈಃ ಖೇಟೈರಯುಕ್ತೇಕ್ಷಿತಃ ॥ ತದ್ಭಾವಸ್ಯವಿನಾಶನಂ ಮುನಿಗಾಃಶಂಸಂತಿ ಖೇಟೈರ್ಯುತೋ ಯದ್ಯತ್ರಾಪಿ ಫಲ ಪ್ರದೋನಹಿತಥಾ ಮೂರ್ತ್ಯಾದಿಭಾನಾಂ ಕ್ರಮಾತ್ ॥೧೮೦॥

ತಾ॥ ಮತ್ತು ಯಾವ ಭಾವಾದಿಪತಿಯು ಸೂರ್ಯನಿಂದ ಅಸ್ತಂಗತನಾಗಿರು ಮನೋ ಅಥವಾ ನೀಚ ಶತ್ರುಕ್ಷೇತ್ರಗಳಲ್ಲಿದ್ದು ಆ ಭಾವದಲ್ಲಿ ಶುಭಗ್ರಹವಿಲ್ಲದೆ, ಅಥವಾ ಶುಭದೃಷ್ಟಿ ಸಹಾ ಇಲ್ಲದಿದ್ದರೆ, ಆ ಭಾವಕ್ಕೆ ವಿನಾಶವನ್ನೇ ಹೇಳಬೇಕು, ಈ ಮೇಲೆ ಹೇಳಿದ ವಿಧಿಗೆ ವ್ಯತಿರಿಕ್ತವಾಗಿ ಶುಭಗ್ರಹಯುಕ್ತವಾದ ಮಾತ್ರಕ್ಕೆ ಶುಭಫಲಕೊಡುವುದಕ್ಕೆ ಶಕ್ತಿ ಸಾಲದ್ದಾಗಿರುವದು. ಈ ಪ್ರಕಾರವೇ ತನ್ವಾದಿ ದ್ವಾದಶಭಾವಗಳಿಗೆ ಫಲಪ್ರಾಪ್ತಿಯನ್ನು ಹೇಳುವಾಗ ಈ ವಿಷಯವನ್ನು ಚೆನ್ನಾಗಿ ಶೋಧಿಸಿ ಫಲವನ್ನು ನಿಶ್ಚಯಿಸಬೇಕೆಂದು ಮಹರ್ಷಿಗಳು ಅಭಿಪ್ರಾಯ ಪಡುತ್ತಾರೆ ॥೧೮೧॥

ಶ್ಲೋಕ॥ ದುಃಸ್ಥಾನೇ ವಾರಿಗೇ ಮೂಢೇ ದುರ್ಬಲೇ ಭಾವನಾಯಕೇ ಭಾವಸ್ಯ ಸಂಪದಂಕರ್ತುಂ ನಶಕ್ತಾಭಾವಮಾಶ್ರಿತಾಃ ॥೧೮೧॥

ತಾ॥ ಯಾವ ಭಾವಾಧಿಪತಿಯು ದುಸ್ಥಾನ (೬-೮-೧೨ರಲ್ಲಿದ್ದರೂ) ಶತ್ರು ಕ್ಷೇತ್ರದಲ್ಲಿದ್ದರೂ, ಸೂರ್ಯನಿಂದ ಅಸ್ತಂಗತನಾಗಿದ್ದರೂ ಮತ್ತು ಬಲಹೀನನಾಗಿದ್ದರೂ, ಆ ಭಾವದಲ್ಲಿದ್ದ ಗ್ರಹಗಳು ಭಾವವೃದ್ಧಿಯನ್ನುಂಟು ಮಾಡಲು ಶಕ್ತರಾಗುವುದಿಲ್ಲ ॥೧೮೧॥

ಶ್ಲೋಕ॥ ದುಷ್ಟಸ್ಥಿತೋವಾಪಿ ಯದಾನುಭೋಗಃ ಪಾಪಾರಿನೀಚಾಂಶಕ ಸಂಯು-ತೋಯಃ । ಸ್ವತುಂಗ ಮಿತ್ರಾಂಶಕ ರಾಶಿಯುಕ್ತಃ ಶುಭೇಕ್ಷಿತೋವಾಯದಿ ಶೋಭನಃ ಸ್ಯಾತ್ ॥೧೮೨॥

ತಾ॥ ಯಾವ ಭಾವಾಧಿಪತಿಗಳು ದುಷ್ಟಸ್ಥಾನಗಳಲ್ಲಿದ್ದರೂ, ಪಾಪಗ್ರಹವಾಂಶ, ಶತ್ರುನವಾಂಶ, ನೀಚನವಾಂಶದೊಳಗಿದ್ದರೂ, ಉಚ್ಚಮಿತ್ರಸ್ವಕ್ಷೇತ್ರ ನವಾಂಶೆಯಲ್ಲಿದ್ದ ಶುಭಗ್ರಹಗಳಿಂದ ನೋಡಲ್ಪಟ್ಟರೆ, ಶೋಭನ (ಶುಭಫಲ)ವನ್ನೇ ಹೇಳಬೇಕು ॥೧೮೨॥

ಶ್ಲೋಕ॥ ಭಾವೇಶಾಕ್ರಾಂತರಾಶೀಶೇ ದುಃಸ್ಥಭಾವಸ್ಯ ದುರ್ಬಲಂ । ಸ್ವೋಚ್ಚ ಮಿತ್ರಸ್ಯ ರಾಶಿಸ್ಥೇ ಭಾವ ಪುಷ್ಟಿಂ ವದೇದ್ಬುಧಃ ॥೧೮೩॥

ತಾ।। ಯಾವ ಭಾವಾಧಿಪತಿ ಯಾವರಾಶಿಯಲ್ಲಿರುವನೋ ಆ ರಾಶಿಗಧಿಪತಿ ಯಾದ ಗ್ರಹವು, ೬-೮-೧೨ ರಲ್ಲಿದ್ದರೆ ಆ ಭಾವಕ್ಕೆ ದುರ್ಬಲವನ್ನು ಹೇಳಬೇಕು, ಯಾವಭಾವಾಧಿಪತಿ ಯಾವ ರಾಶಿಯಲ್ಲಿರುವನೋ ಆ ಭಾವಾಧಿಪತಿಯು, ಉಚ್ಚ ಮಿತ್ರಸ್ವಕ್ಷೇತ್ರಗಳಿದ್ದರೆ, ಆ ಭಾವಕ್ಕೆ ಶುಭಫಲವನ್ನು ಹೇಳಬೇಕು ।।೧೮೩।।

ಶ್ಲೋಕ।। ಯದ್ಭಾವಲಾಭ ಧನವಿಕ್ರಮ ರಾಶಿಯಾತಾಃ ಯದ್ಭಾವನಾಥ ಸುಹೃದಸ್ತ ತದುಚ್ಚನಾಥಃ । ತದ್ಭಾವಪುಷ್ಟಿ ಬಲಮಂಬರಚಾರಿಣಸ್ತೇ ಕುರ್ವಂತಿ ಮೂಢರಿಪುನೀಚ ವಿವರ್ಜಿತಾಶ್ಚೇತ್ ।।೧೮೪।।

ತಾ।। ಯಾವ ಭಾವಾಧಿಪತಿಯು, ೨-೧೧-೩ ಈ ರಾಶಿಗಳಲ್ಲಿರುವರೋ, ಆ ಭಾವಾಧಿಪತಿಗಳು, ಮಿತ್ರಕ್ಷೇತ್ರ, ಸ್ವಕ್ಷೇತ್ರ, ಉಚ್ಚಕ್ಷೇತ್ರಗಳಾಗಿದ್ದು ಆ ಭಾವಾಧಿಪತಿಗಳು, ಅಸ್ತ, ಶತ್ರುಕ್ಷೇತ್ರ, ನೀಚಕ್ಷೇತ್ರದೊಳಗಿರದಿದ್ದರೆ, ಆ ಭಾವಕ್ಕೆ ಪುಷ್ಟಿಕರಾಗಿ ಶುಭಫಲವನ್ನು ಹೇಳಬೇಕು ।।೧೮೪।।

ಶ್ಲೋಕ।। ಭಾವಾಂಶತುಲ್ಯಃ ಖಲುವರ್ತಮಾನ ಭಾವೋದ್ಭವಂ ಪೂರ್ಣಫಲಂ ವಿಧತ್ತೇ। ಭಾವೋನಕೇ ಚಾಭ್ಯಧಿಕೇ ಚಖೇಟೇ ತ್ರೈರಾಶಿಕೇನಾತ್ರ ಫಲಂ ವಿಚಾರ್ಯಮ್ ।।೧೮೫।।

ತಾ।। ಈ ಮೇಲೆ ಹೇಳಿದ ಫಲವು ತಿಳಿಯಬೇಕಾದರೆ, ಮುಖ್ಯವಾಗಿ ತಿಳಿಯಬೇಕಾದ ಅಂಶವೇನೆಂದರೆ, ದೃಕ್ಸಿದ್ಧಗ್ರಹಸ್ಪುಟ, ಲಗ್ನಾದಿಭಾವಸ್ಪುಟ, ಸಸಂಧಿ ಇವುಗಳನ್ನು ದೃಢಪಡಿಸಿಕೊಂಡು, ಅನಂತರ ಆ ಗ್ರಹವು ಭಾವದ ಆದಿಯಲ್ಲಿದ್ದು, ಆ ಭಾವದಲ್ಲಿ ಎಷ್ಟನೇ ನವಾಂಶೆಯಲ್ಲಿರುತ್ತಾನೋ, ಆಗ ಅಲ್ಪ ಫಲವನ್ನು ಕೊಡುವನು, ಗ್ರಹವು ಭಾವಮಧ್ಯದಲ್ಲಿದ್ದರೆ ಪೂರ್ಣಫಲ ಕೊಡುವನು, ಭಾವಾಂತ್ಯದಲ್ಲಿದ್ದರೆ ಅತ್ಯಲ್ಪವಾಗಿ ಫಲಕೊಡುವನು, ದಳದಲ್ಲಿದ್ದರೆ ಫಲವಿಲ್ಲ, ಭಾವಸಂಧಿಯಲ್ಲಿದ್ದರೂ, ಶುಭಫಲವಾದರೂ, ಪಾಪಫಲವಾದರೂ, ಕೊಡಲು ಶಕ್ತನಾಗುವದಿಲ್ಲ ।।೧೮೫।।

ವಿಶೇಷತಾತ್ಪರ್ಯ ।। ಮೇಷಾದಿ ೧೨ ರಾಶಿಗಳ ಕುಂಡಲಿಯನ್ನೇ ಇಟ್ಟು ಕೊಂಡು, ಈ ಶಾಸ್ತ್ರದ ಆಧಾರದಮೇಲೆ ಫಲವನ್ನು ಹೇಳುತ್ತಾರೆ. ಮೇಷಾದಿ ರಾಶಿಗಳೇ ಪೂರ್ಣವಾಗಿ, ತನ್ವಾದಿ ದ್ವಾದಶಭಾವಗಳಾಗುವುದಿಲ್ಲ. ಯಾವಲಗ್ನದಲ್ಲಿ ಎಷ್ಟನೇ ಭಾಗದಲ್ಲಿ ಜನ್ಮವಾಗುವದೋ ಆ ಅಂಶಕ್ಕೆ (ಆ ಪಾಯಿಂಟ್‌ನಿಂದ) ಹಿಂದಕ್ಕೆ ೧೫ ಭಾಗದಲ್ಲಿ ತನುಭಾವಕ್ಕೂ ವ್ಯಯಭಾವಕ್ಕೂ ಸಂಧಿಯಿರುತ್ತೆ. ಅಲ್ಲಿಂದ ಮುಂದೆ ೧೫ ಭಾಗದಲ್ಲಿ ತನುಭಾವಕ್ಕೂ ಧನುಭಾವಕ್ಕೂ ಸಂಧಿಯಿರುತ್ತೆ ಈ ಪ್ರಕಾರ ಭಾವಸ್ಪುಟ ಮಾಡುವುದರಲ್ಲಿ ಮೇಷಾದಿ ರಾಶಿಸ್ಥರಾದ ಗ್ರಹಗಳು, (ರಾಶಿ ಕುಂಡಲಿಯಲ್ಲಿ

ತೋರ್ಪಡುವ ಗ್ರಹಗಳು) ಕೆಲವು ವೇಳೆಯಲ್ಲಿ ಹಿಂದಕ್ಕೂ ಮುಂದಕ್ಕೂ ಸೇರುವುದುಂಟು. ಇದರಿಂದ ರಾಶಿ ಕುಂಡಲಿಯಮೇಲೆ ಹೇಳುವ ಫಲಗಳು ನಿದರ್ಶನಕ್ಕೆ ಬರದೆ ಸುಳ್ಳಾಗುವುದು, ಆದುದರಿಂದ ಫಲ ಶಾಸ್ತ್ರಜ್ಞರಾದರೂ ಗಣಿತ ಸೂಕ್ಷ್ಮವನ್ನು ತಿಳಿಯಲಾರದೆ ಸೋಮಾರಿ ಜೋಯಿಸರ ಮಾತು ಹುಸಿಯಾಗಿ ಈ ಅಸದೃಶವಾದ ಜ್ಯೋತಿಶ್ಶಾಸ್ತ್ರಕ್ಕೆ ಅಪ್ರಮಾಣಿಕತೆ ಬಂದಿರುವುದು. ಮಹೀನೀಯರಾದ ಜ್ಯೋತಿಶ್ಶಾಸ್ತ್ರ ಪಾರಂಗತರುಗಳೇ, ಈ ಭಾವಸ್ಪುಟ ದೃಕ್ಸಿದ್ಧ ಗ್ರಹಗಳನ್ನು ಮಾಡಿಟ್ಟುಕೊಂಡು ಇವರ ಮೇಲೆ ಶಾಸ್ತ್ರದೃಷ್ಟಿವಾದ ಫಲವನ್ನು ಹೇಳಿದರೆ, ಜ್ಯೋತಿಶ್ಶಾಸ್ತ್ರದ ಪ್ರಾಮಾಣಿಕತ್ವವು ಕಂಡುಬಂದು ತಮ್ಮ ವಾಕ್ಕು ಫಲಿಸುವುದರಿಂದ ತಮಗೆ ಪೂಜ್ಯತೆಯುಂಟುಮಾಡಲಾರದೆ ಇರದು.

## ಇತಿ ಲಗ್ನೇಶ ತನ್ವಾದಿ ದ್ವಾದಶಭಾವಸ್ಥಿತಫಲಂ

## ಲಗ್ನೇಶ ಲಗ್ನಸ್ಥಿತಫಲಂ।। ಲೋಮಶಃ ।। ಪರಾಶರಃ।।

ಅವತಾರಿಕೆ-ಇದುವರಿಗೆ ಹೇಳಲ್ಪಟ್ಟ ಭಾವಫಲಗಳು ತೃಪ್ತಿಕರವಾಗದೆ ಲಗ್ನಾದಿ ದ್ವಾದಶಭಾವದಲ್ಲಿ ಲಗ್ನಾಧಿಪತಿಯಿದ್ದರೆ ಜಾತಕನಿಗೆ ಪ್ರಾಪ್ತವಾಗುವ ಗುಣವನ್ನು ಪರಾಶರರು ಮತ್ತು ಲೋಮಶರು ಕೂಡ ಏಕ ವಾಕ್ಯತೆಯಾಗಿ ಹೇಳಿರುತ್ತಾರೆ. ಅದನ್ನು ಜಿಜ್ಞಾಸುಗಳ ಸಂಶಯ ನಿವೃತ್ತಿಗಾಗಿ ಫಲ ಪೂರಣೆಯಾಗುವುದಕ್ಕೋಸ್ಕರ ಹೇಳಿರುತ್ತೇನೆ.

ಶ್ಲೋಕ।। ಲಗ್ನೇಶೇ ಲಗ್ನಗೇಪಂಸಃ* ಸ್ವದೇಹ ಸ್ವಭುಜಾಕ್ರಮೀ । ಮನಸ್ವೀ ಚಾತಿ ಜಾಂಚಲ್ಯೋದ್ವಿಭಾರ್ಯಃ ಪರಗೋಽಪಿವಾ ।।೧೮೫।।

ತಾ।। ಯಾವ ಮನುಷ್ಯನ ಜನ್ಮ ಲಗ್ನಾಧಿಪತಿಯಾದ ಯಾವ ಗ್ರಹವಾದರೂ ಜನ್ಮಲಗ್ನ (ತನುಭಾವ) ದಲ್ಲಿದ್ದರೆ ತನ್ನ ಭುಜಬಲದಿಂದಲೂ, ಪರಾಕ್ರಮದಿಂದಲೂ ಧನ ಸಂಪಾದಿಸಿಕೊಂಡು ಜೀವಿಸುತ್ತಾನೆ ಮತ್ತು ತನ್ನ ಮನಸ್ಸಿಗೆ ಬಂದ ಕಾರ್ಯಗಳನ್ನು ಮಾಡುವವನಾಗಿಯೂ, ದ್ವಿಭಾರ್ಯರುಳ್ಳವನಾದರೂ ಅಥವಾ ಒಬ್ಬಳು ಪತ್ನಿ ಮತ್ತೊಬ್ಬಳು ಪರಸ್ತ್ರೀ ಈ ಪ್ರಕಾರ ಸ್ತ್ರೀ ಸಂಸರ್ಗವುಳ್ಳವನಾಗಿಯಾದರೂ ಆಗುವನು ।।೧೮೫।।

## ಲಗ್ನೇಶ ದ್ವಿತೀಯ ಲಾಭಸ್ಥಿತಫಲಂ

ಶ್ಲೋಕ।। ಲಗ್ನೇಶೇ ಧನಗೇ ಲಾಭೇಸಲಾಭಃ ಪೀಡಿತೋನರಃ। ಸುಶೀಲೋ ಧರ್ಮ ವಿನ್ಮಾನೀ ಬಹೂದಾರ ಗುಣೈರ್ಯುತಃ ।।೧೮೬।।

* ಸ್ವಭುಜಾರ್ಜಿತವಿತ್ತರ್ವಾ-ಇತಿಲೋಮಶ ಸಂಹಿತಾಯಾಂ ।।

ತಾ|| ಲಗ್ನಾಧಿಪತಿಯಾದ ಗ್ರಹವು ಧನಭಾವದಲ್ಲಾದರೂ, ಲಾಭಭಾವದಲ್ಲಾದರೂ ಇದ್ದರೆ (ಜಾತಕನು) ಲಾಭವುಳ್ಳವನಾಗುವನು ಮತ್ತು ದುಷ್ಟರಿಂದ ಪೀಡಿಸಲ್ಪಟ್ಟವನಾಗಿಯೂ, ಸದಾಚಾರವಂತನಾಗಿಯೂ, ಧರ್ಮಪರನಾಗಿಯೂ, ಬಹು ಮರ್ಯಾದೆಯುಳ್ಳವನಾಗಿಯೂ, ಅತ್ಯಂತ ಉದಾರಗುಣ (ದಾತೃತ್ವ) ವುಳ್ಳವನಾಗಿಯೂ ಆಗುವನು ||೧೮೬||

## ಲಗ್ನಾಧಿಪತಿ ತೃತೀಯ ಷಷ್ಠಸ್ಥಫಲಂ

ಶ್ಲೋಕ|| ಲಗ್ನೇಶೇ ಸಹಜೇ ಷಷ್ಠೇ ಸಿಂಹತುಲ್ಯ ಪರಾಕ್ರಮೀ । ಸರ್ವಸಂಪ
ದ್ಯುತೋ ಮಾನೀ ದ್ವಿಭಾರ್ಯೋ ಮತಿಮಾನ್ ಸುಖೀ ||೧೮೭||

ತಾ|| ಲಗ್ನಾಧಿಪತಿ ತೃತೀಯಭಾವದಲ್ಲಾಗಲೀ, ಷಷ್ಠಭಾವದಲ್ಲಾಗಲೀ ಇದ್ದರೆ, ಜಾತಕನು ಸಿಂಹಕ್ಕೆ ಸದೃಶವಾದ ಪರಾಕ್ರಮವುಳ್ಳವನೂ, ಸಕಲ ಸಂಪತ್ತುಳ್ಳವನೂ, ಗೌರವವತಂನೂ, ಇಬ್ಬರು ಪತ್ನಿಯರುಳ್ಳವನೂ, ಬುದ್ಧಿವಂತನೂ, ಸೌಖ್ಯವಂತನೂ ಆಗುವನು. ದ್ವಿಭಾರ್ಯರೆಂದರೆ, ಒಂದು ಕಳೆದ ನಂತರ ಮತ್ತೊಂದು, ಈ ಪ್ರಕಾರ ಆಗುವುದೆಂದು ಅನ್ವಯಿಸತಕ್ಕದ್ದು, ೨ನೇ ಪ್ರಕರಣದಲ್ಲಿ ಉದಹರಿಸಿರುವ ಮಕರಲಗ್ನ ಜಾತಕವನ್ನು ನೋಡಿ ಲಗ್ನಾಧಿಪತಿಯಾದ ಶನಿ ಮಿಥುನ ಲಗ್ನದಲ್ಲಿರುವುದರಿಂದ ಈ ಫಲವು ದೃಷ್ಟಾಂತಕ್ಕೆ ಸಿದ್ಧವಾಗಿರುತ್ತೆ ||೧೮೭||

## ಲಗ್ನೇಶ ಚತುರ್ಥ ದಶಮಸ್ಥಫಲಂ

ಶ್ಲೋಕ|| ಲಗ್ನೇಶೇ ದಶಮೇ ತುರ್ಯೇ ಪಿತೃಮಾತೃಸುಖಾನ್ವಿತಃ । ಬಹು
ಭ್ರಾತೃಯುತಃ ಕಾಮೀ ಗುಣಸೌಂದರ್ಯ ಸಂಯುತಃ ||೧೮೮||

ತಾ|| ಲಗ್ನಾಧಿಪತಿಯು ದಶಮಭಾವದಲ್ಲಾಗಲೀ, ಚತುರ್ಥಭಾವದಲ್ಲಾಗಲೀ ಇದ್ದರೆ ಜಾತಕನು ತಾಯಿ ತಂದೆಗಳ ಸೌಖ್ಯವನ್ನು ಅನುಭವಿಸುವನು, ಅನೇಕ ಅಣ್ಣ ತಮ್ಮಂದಿರುಳ್ಳವನು, ವಿಷಯೋಪಭೋಗವಂತನು, ಸುಗುಣದಿಂದಲೂ, ಶರೀರ ಪುಷ್ಟಿ ಮೊದಲಾದ ಆರೋಗ್ಯ ದೃಢಕಾಯ ಸೌಂದರ್ಯಾತಿಶಯದಿಂದಲೂ ಸುಖವಂತನೂ ಆಗುವನು ||೧೮೮||

## ಲಗ್ನೇಶ ಪಂಚಮಸ್ಥಫಲಂ

ಶ್ಲೋಕ|| ಲಗ್ನೇಶೇ ಪಂಚಮೇಮಾನೀ ಸುತಸೌಖ್ಯಂಚ ಮಧ್ಯಮಂ ।
ಪ್ರಥಮಾ ಪತ್ಯನಾಶಃ ಸ್ಯಾತ್ರೋ ಽಧೀರಾಜ ಪ್ರವೇಶಕಃ ||೧೮೯||

ತಾ|| ಲಗ್ನಾಧಿಪತಿಯಾದ ಗ್ರಹವು ಪಂಚಮಭಾವದಲ್ಲಿದ್ದರೆ ಪುತ್ರನು

ಬದುಕುವುದಿಲ್ಲ. ಮಧ್ಯಮವಾದ ಪುತ್ರಸೌಖ್ಯವುಳ್ಳವನು. ಕೋಪಿಷ್ಠು, ರಾಜಸೇವಕನು ಅಥವಾ ರಾಜದ್ವಾರದಲ್ಲಿ ಅಧಿಕಾರವುಳ್ಳವನು ಆಗುವನು ॥೧೮೯॥

## ಲಗ್ನೇಶ ಸಪ್ತಮಸ್ಥಫಲಂ

ಶ್ಲೋಕ॥ ಲಗ್ನೇಶಃ ಸಪ್ತಮೇಯಸ್ಯ ಭಾರ್ಯಾತಸ್ಯನಜೀವತಿ । ವಿರಕ್ತೋವಾ
ಪ್ರವಾಸೀವಾ ದರಿದ್ರೋವಾ ನೃಪೋಪಿವಾ ॥೧೯೦॥

ತಾ॥ ಲಗ್ನಾಧಿಪತಿ ಸಪ್ತಮಭಾವದಲ್ಲಿದ್ದರೆ, ಆತನ ಪತ್ನಿ ಜೀವಿಸುವುದಿಲ್ಲ. ವಿವಾಹಮಾಡಿಕೊಳ್ಳುವುದು ವ್ಯರ್ಥವಾಗುವುದು, ಈ ಫಲವೇ ಆಗುತ್ತೆ ಮತ್ತು ವಿರಕ್ತನಾಗಲೀ (ವೈರಾಗ್ಯ) ಸದಾಸಂಚಾರವಂತನಾಗಲೀ, ದರಿದ್ರನಾಗಲೀ ಅಥವಾ ರಾಜನಾಗಲೀ ಆಗುವನು ॥೧೯೦॥

## ಲಗ್ನೇಶ ಅಷ್ಟಮ ದ್ವಾದಶಸ್ಥಫಲಂ

ಶ್ಲೋಕ॥ ಲಗ್ನೇಶೇ ವ್ಯಯಗೇ ಚಾಷ್ಟೇ ಸಿದ್ಧವಿದ್ಯಾವಿಶಾರದಃ । ದ್ಯೂತೀ
ಚೋರೋ ಮಹಾಕ್ರೋಧೀ ಪರನಾರ್ಯತಿ ಭೋಗಕೃತ್ ॥೧೯೧॥

ತಾ॥ ಲಗ್ನಾಧಿಪತಿಯು ಅಷ್ಟಮಭಾವದಲ್ಲಾಗಲೀ, ವ್ಯಯಭಾವದಲ್ಲಾಗಲಿ ಇದ್ದರೆ (ಜಾತಕನು) ವಿದ್ಯೆಯಲ್ಲಿ ಪಂಡಿತನು, ಸಿದ್ಧವಿದ್ಯೆಯುಳ್ಳವನು, ಜೂಜುಗಾರನು, ಕಳ್ಳತನ ಮಾಡುವವನೂ, ಮಹಾಕೋಪಿಷ್ಠನೂ, ಪರಸ್ತ್ರೀಯಲ್ಲಿ ಬಹಳ ಸುಖಪಡುವವನೂ ಆಗುವನು ॥೧೯೧॥

## ಲಗ್ನೇಶ ನವಮಸ್ಥಫಲಂ

ಶ್ಲೋಕ॥ ಲಗ್ನೇಶೇ ನವಮೇ ಪುಂಸೋ ಭಾಗ್ಯವಾನ್ ಜನವಲ್ಲಭಃ ।
ವಿಷ್ಣುಭಕ್ತಃ ಪಟುರ್ವಾಗ್ಮೀ ಪುತ್ರದಾರಧನೈರ್ಯುತಃ ॥೧೯೨॥

ತಾ॥ ಲಗ್ನಾಧಿಪತಿಯು ಭಾಗ್ಯ (೯) ಭಾವದಲ್ಲಿದ್ದರೆ, (ಜಾತಕನು) ಭಾಗ್ಯ ವಂತನೂ, ಬಹು ಜನರನ್ನು ಪೋಷಿಸತಕ್ಕವನೂ, ವಿಷ್ಣುಭಕ್ತನೂ, ಪಟುತರವಾಗಿ ಮಾತನಾಡುವವನೂ, ಪುತ್ರ, ಪತ್ನೀ ಮತ್ತು ಧನವಂತನೂ ಸಹ ಆಗುವನು ॥೧೯೨॥

ಇತಿ ಲಗ್ನೇಶದ್ವಾದಶ ಭಾವಸ್ಥಿತಫಲಂ

## ಧನೇಶ ಧನ ಭಾವಸ್ಥಿತಫಲಂ

ಶ್ಲೋಕ॥ ಧನೇಶೇ ಧನಗೇ ಸೋಥ ಧನವಾನ್ ಗರ್ವಸಂಯುತಃ ।
ಭಾರ್ಯಾದ್ವಯಂ ತ್ರಯಾಂವಾಪಿ ಸಂತಹೀನಃ ಪ್ರಜಾಯತೇ ॥೧೯೩॥

ತಾ|| ಧನವತಿಯಾದ ಗ್ರಹವು, ಧನಭಾವದಲ್ಲಿದ್ದರೆ ಧನವಂತನು, ಗರ್ವಪಡತಕ್ಕವನು, (ಗರ್ವೋಭಿಮಾನೋ ಹಂಕಾರ ಇತ್ಯಮರಃ) ಅಹಂಕಾರಿ ಮತ್ತು ಪತ್ನೀದ್ವಯವಾದರೂ, ತ್ರಯವಾದರೂ ಮಾಡಿಕೊಳ್ಳುವನು, ಅಂದರೆ ಎರಡು ಅಥವಾ ಮೂರು ವಿವಾಹಗಳನ್ನು ಮಾಡಿಕೊಳ್ಳುವವನು ಆಗುವನು, ಎಷ್ಟು ವಿವಾಹ ಮಾಡಿಕೊಂಡರೂ (ಪುತ್ರರಿಲ್ಲ) ಅಪುತ್ರವಂತನಾಗುವನು ||೧೯೩||

## ಧನೇಶ ತೃತೀಯ ಚತುರ್ಥ ಭಾವಸ್ಥಿತಫಲಂ

**ಶ್ಲೋಕ||** ಧನೇಶೇ ಸಹಜೇತುರ್ಯೇ ವಿಕ್ರಮೀಮತಿರ್ಮಾಗುಣೀ । ಪರದಾರಾಭಿ
ಗಾಮೀಚ ಲೋಭೀವಾ ದೇವನಿಂದಕಃ ||೧೯೪||

ತಾ|| ಧನಭಾವಾಧಿಪತಿ ತೃತೀಯಭಾವದಲ್ಲಾದರೂ, ಚತುರ್ಥಭಾವ ದಲ್ಲಾದರೂ ಇದ್ದರೆ, ಧೈರ್ಯವುಳ್ಳವನು, ಬುದ್ಧಿವಂತ, ಸುಗುಣವುಳ್ಳವನು ಮತ್ತು ಪರದಾರಾದಿ ವಿಷಯಾಸಕ್ತಿಯುಳ್ಳವನು, ಅಥವಾ ಕೃಪಣನು, ದೇವನಿಂದನೂ ಅಥವಾ ನಾಸ್ತಿಕನಾದರೂ ಆಗುವನು ||೧೯೪||

## ಧನೇಶ ಷಷ್ಠಸ್ಥ ಫಲಂ

**ಶ್ಲೋಕ||** ಧನೇಶೇರಿಪುಗೇಶತ್ರೋರ್ಧನಂ ಪ್ರಾಪ್ನೋತಿ ನಿಶ್ಚಿತಂ । ಶತ್ರುತೋ
ವಿತ್ತ ನಾಶಃ ಸ್ಯಾದ್ಗುದೇ ಚೋರ್ವೋರ್ಭವೇಚ್ಚರುಕ್ ||೧೯೫||

ತಾ|| ಧನಾಧಿಪತಿ ಶತ್ರುಭಾವದಲ್ಲಿದ್ದರೆ ನಿಶ್ಚಯವಾಗಿ ಶತ್ರುಗಳಿಂದ ಧನಪ್ರಾಪ್ತಿ ಯಾಗುವುದು, ಶತ್ರುಮೂಲವಾಗಿ ದ್ರವ್ಯವ್ಯಯವೂ ಆಗುವುದು ಮತ್ತು ಆಸನದಲ್ಲಿ ಯಾಗಲಿ ತೊಡೆಗಳಲ್ಲಿಯಾಗಲಿ ರೋಗವುಳ್ಳವನಾಗುವನು ||೧೯೫||

## ಧನೇಶ ಸಪ್ತಮಸ್ಥ ಫಲಂ

**ಶ್ಲೋಕ||** ಧನೇಶೇಸಪ್ತಮೇ ವೈದ್ಯಃ ಪರಜಾಯಾಭಿಗಾಮೀಕಂ । ಜಾಯಾತಸ್ಯ
ಬವೇದ್ವೇಶ್ಯಾ ಮಾತಾಪಿ ವ್ಯಭಿಚಾರಿಣೀ ||೧೯೬||

ತಾ|| ಧನಾಧಿಪತಿ ಸಪ್ತಮಭಾವದಲ್ಲಿದ್ದರೆ, ವೈದ್ಯನೂ, ಪರದಾರಗಾಮಿಯೂ ಆಗುವನು ಮತ್ತು ಅವನ ಹೆಂಡತಿಯೂ ವೇಶ್ಯಾಸ್ತ್ರೀಯೇ ಆಗಿರುವಳು ಅಥವಾ ಅವನ ಹೆಂಡತಿಯೇ ವೇಶ್ಯಾಸ್ತ್ರೀಯಂತೆ ಇರುವಳು, ತಾಯಿಯು ವ್ಯಭಿಚಾರಿಣಿ ಯಾದವಳೆಂದು ತಿಳಿಯತಕ್ಕದ್ದು ||೧೯೬||

## ಧನೇಶ ಅಷ್ಟಮಸ್ಥ ಫಲಂ

**ಶ್ಲೋಕ||** ಧನೇಶೇಮೃತ್ಯುಗೇಹಸ್ಥೇ ಭೂಮಿದ್ರವ್ಯಂ ಲಭೇದ್ಧ್ರುವಂ । ಜಾಯಾ
ಸೌಖ್ಯಂ ಭವೇತ್ಸ್ವಲ್ಪಂ ಜ್ಯೇಷ್ಠ ಭ್ರಾತೃ ಸುಖಂನಹಿ ||೧೯೭||

ತಾ|| ಧನಾಧಿಪತಿ ಅಷ್ಟಮದಲ್ಲಿದ್ದರೆ, ಭೂಸ್ಥಾಪಿತ ದ್ರವ್ಯಪ್ರಾಪ್ತಿಯಾಗುವುದು. ಅಲ್ಪವಾದ ಪತ್ನೀಸೌಖ್ಯವುಳ್ಳವನು, ಜ್ಯೇಷ್ಠಭ್ರಾತೃ (ಹಿರೀಅಣ್ಣನ) ಸೌಖ್ಯವಿಲ್ಲ ||೧೯೭||

## ಧನೇಶ ಭಾಗ್ಯ ಲಾಭಸ್ಥಿತ ಫಲಂ

ಶ್ಲೋಕ|| ಧನೇಶೇನವಮೇ ಲಾಭೇ ಧನವಾನುದ್ಯಮೀಪಟುಃ |
ಬಾಲ್ಯರೋಗೀಸುಖೀ ಪಶ್ಚಾದ್ಯಾವದಾಯುಃ ಸಮಾಪ್ಯತೇ ||೧೯೮||

ಧನೇಶನು ನವಮದಲ್ಲಾಗಲಿ, ಲಾಭಸ್ಥಾನದಲ್ಲಾಗಲಿ ಇದ್ದರೆ, ಧನವಂತನು ಕಾರ್ಯೋದ್ಯಮವುಳ್ಳವನು, ಚತುರನು, ಬಾಲ್ಯಾವಸ್ಥೆಯಲ್ಲಿ ರೋಗಗ್ರಸ್ಥನೂ, ಅನಂತರದಲ್ಲಿ ಯಾವಜ್ಜೀವಪರ್ಯಂತವೂ ಸುಖವಂತನೂ ಆಗುವನು ||೧೯೮||

## ಧನೇಶ ದಶಮಸ್ಥ ಫಲಂ

ಶ್ಲೋಕ|| ಧನೇಶೇದಶಮೇ ಯಸ್ಯಕಾಮೀ ಮಾನೀಚ ಪಂಡಿತಂ |
ಬಹುವಾರಧನೈ-ರ್ಯುಕ್ತಃ ಸುಖಹೀನೋಪಿ ಜಾಯತೇ ||೧೯೯||

ತಾ|| ಧನಾಧಿಪತಿ ಯಾರ ಜಾತಕದಲ್ಲಿ ದಶಮಭಾವದಲ್ಲಿರುವನೋ ಆ ಜಾತಕನು ವಿಷಯಾಸಕ್ತಿಯುಳ್ಳವನು, ಗೌರವವಂತನು, ಪಂಡಿತನೂ, ಅನೇಕ ಹೆಂಡತಿಯರುಳ್ಳವನು, ಧನಯುಕ್ತನೂ ಮತ್ತು ಪುತ್ರಹೀನನೂ ಆಗುವನು ||೧೯೯||

## ಧನೇಶ ಲಗ್ನ ಪಂಚಮಸ್ಥಿತ ಫಲಂ

ಶ್ಲೋಕ|| ಧನೇಶೇಚತನೌ ಪುತ್ರೀಸ್ವಕುಟುಂಬಸ್ಯ ಕಂಟಕಃ | ಧನವಾನ್ನಿಷ್ಠುರಃ
ಕಾಮೀ ಪರಕಾರ್ಯೇಷು ತತ್ಪರಃ ||೨೦೦||

ತಾ|| ಧನಾಧಿಪತಿ ಲಗ್ನದಲ್ಲಾಗಲಿ, ಪಂಚಮದಲ್ಲಾಗಲಿ ಇದ್ದರೆ ಸ್ವಕುಟುಂಬಕ್ಕೆ ಕಂಟಕನು, ಧನವಂತ, ನಿಷ್ಠುರವಾಗಿ ಮಾತನಾಡುವನು, ವಿಷಯಾಸಕ್ತಿಯುಳ್ಳವನು, ಪರಾಕಾರ್ಯನಿರತನೂ ಆಗುವನು ||೨೦೦||

## ಧನೇಶ ದ್ವಾದಶಸ್ಥ ಫಲಂ

ಶ್ಲೋಕ|| ಧನೇಶೇ ವ್ಯಯಗೇಮಾನೀ ಸಾಹಸೀ ಧನವರ್ಜಿತಃ |
ಜೀವಿಕಾನೃಪಗೇ ಹಾಚ್ಚ ಜ್ಯೇಷ್ಠಪುತ್ರಸುಖಂ ನಹಿ ||೨೦೧||

ತಾ|| ಧನಾಧಿಪತಿ ದ್ವಾದಶದಲ್ಲಿದ್ದರೆ ಮಾನವಂತ, ಸಾಹಸಿ, ನಿರ್ಧನ, ರಾಜ ಮೂಲವಾಗಿ ಜೀವನವುಳ್ಳವನು, ಜ್ಯೇಷ್ಠಪುತ್ರ ಸುಖವಿಲ್ಲದವನೂ ಆಗುವನು ||೨೦೧||

ಅಥ ತೃತೀಯೇಶ ದ್ವಾದಶಭಾವಸ್ಥಿತ ಫಲಂ

## ತೃತೀಯೇಶ ತೃತೀಯೆಸ್ಥಫಲಂ

ಶ್ಲೋಕ॥ ತೃತೀಯೇಶೇ ತೃತೀಯಸ್ಥೇ ವಿಕ್ರಮೀಸುತ ಸಂಯುತಃ ।
ಧನಯುಕ್ತೋ ಮಹಾಹೃಷ್ಟೋ ಭುನಕ್ತಿ ಸುಖಮದ್ಭುತಂ ॥೨೦೨॥

ತಾ॥ ತೃತೀಯಾಧಿಪತಿ ತೃತೀಯದಲ್ಲಿದ್ದರೆ, ಪರಾಕ್ರಮವುಳ್ಳವನು, ಪುತ್ರ ಸಮೇತನು, ಧನವಂತನು, ಮಹಾ ಸಂತೋಷಚಿತ್ತನು, ಅದ್ಭುತವಾದ ಸೌಖ್ಯವನ್ನು ಅನುಭವಿಸುವವನೂ ಆಗುವನು ॥೨೦೨॥

## ತೃತೀಯೇಶೇ ಚತುರ್ಥ ಪಂಚಮ ದಶಮಸ್ಥಫಲಂ

ಶ್ಲೋಕ॥ ತೃತೀಯೇಶೇ ಸುಖೇಕರ್ಮೇ ಪಂಚಮೇ ವಾಸುಖೀಸದಾ ॥ ಅತಿ
ಕ್ರೂರಾಭವೇದ್ಭಾರ್ಯಾ ಧನಾಢ್ಯೋ ಮತಿರ್ಮಾ ಭವೇತ್ ॥೨೦೩॥

ತಾ॥ ತೃತೀಯಾಧಿಪತಿ, ಚತುರ್ಥ, ಪಂಚಮ, ದಶಮ ಸ್ಥಾನಗಳಲ್ಲಿದ್ದರೆ, ಸದಾಸುಖಿವುಳ್ಳವನು, ಅತಿ ಕ್ರೂರಳಾದ ಹೆಂಡತಿಯುಳ್ಳವನು, ಧನವಂತನು, ಬುದ್ಧಿವಂತನೂ ಆಗುವನು ॥೨೦೩॥

## ತೃತೀಯೇಶ ಷಷ್ಠಸ್ಥ ಫಲಂ

ಶ್ಲೋಕ॥ ತೃತೀಯೇಶೋ ರಿಪೌಯಸ್ಯ ಭ್ರಾತಾ ಶತ್ರುರ್ಮಹಾಧನೀ ಮಾತು
ಲಾನಾಂ ಸುಖಂನಸ್ಯಾತ್ ಮಾತುಲ್ಯಾಂಭೋಗಮಿಚ್ಛತಿ ॥೨೦೪॥

ತಾ॥ ತೃತೀಯಾಧಿಪತಿ ಷಷ್ಠಸ್ಥಾನದಲ್ಲಿದ್ದರೆ ಭ್ರಾತೃದ್ವೇಷವುಳ್ಳವನು, ಮಹಾ ಧನವಂತನು, ಸೋದರಮಾವನ ಸುಖವಿಲ್ಲದವನು, ಮಾತುಲ ನಿಲಯದ ಭೋಗ ಅಪೇಕ್ಷಿಸುವನೂ ಆಗುವನು ॥೨೦೪॥

## ತೃತೀಯೇಶಭಾಗ್ಯ ವ್ಯಯಸ್ಥಿತಫಲಂ

ಶ್ಲೋಕ॥ ತೃತೀಯೇಶೇ ವ್ಯಯೇ ಭಾಗ್ಯೇ ಸ್ತ್ರೀಭಿರ್ಭಾಗ್ಯೋದಯೋಭವೇತ್॥
ಪಿತಾತಸ್ಯ ಮಹಾಚೋರಃ *ಸುಖೇ ದುಃಖಪ್ರದರ್ಶಕಃ ॥೨೦೫॥

ತಾ॥ ತೃತೀಯಾಧಿಪತಿ ವ್ಯಯದಲ್ಲಿಯಾಗಲೀ, ಭಾಗ್ಯಸ್ಥಾನದಲ್ಲಿಯಾಗಲೀ, ಇದ್ದರೆ, ಜಾತಕನಿಗೆ ಸ್ತ್ರೀಯಿಂದ ಭಾಗ್ಯಪ್ರಾಪ್ತಿಯಾಗುತ್ತದೆ, ತಂದೆಯು ಕಳ್ಳನಾಗುವನು ಮತ್ತು ಸುಖಪ್ರಾಪ್ತಿಯಾಗುವ ಕಾಲದಲ್ಲಿ ದುಃಖವೇ ಪ್ರಾಪ್ತಿಯಾಗುತ್ತದೆ. ಈ ವಿಷಯದಲ್ಲಿ ಲೋಮಶಸಂಹಿತೆಯಲ್ಲಿ ಪಿತಾತ್ಯಸ್ಯ ಮಹಾಧೀರಃ- ಎಂದು ಪಾಠಾಂತರವಿದೆ. ಧೀರಃ-ಶಕ್ತನಾಗುವನು. ॥೨೦೫॥

* ಪಿತಾತಸ್ಯಮಹಾಧೀರಃ-ಪಾ । ಲೋಮಶಸಂಹಿತಾ

## ತೃತೀಯೇಶ ಅಷ್ಟಮ ಸಪ್ತಮಸ್ಥಫಲಂ

ಶ್ಲೋಕ|| ತೃತೀಯೇಶೇಷ್ಟಮೇ ದ್ಯೂನೇ ರಾಜದ್ವಾರೇ ಮೃತಿರ್ಭವೇತ್ ।
ಚೋರೋ ವಾಪರಗಾಮೀವಾ ಬಾಲ್ಯೇ ಕಷ್ಟಂ ದಿನೇದಿನೇ||೨೦೬||

ತಾ|| ತೃತೀಯಾಧಿಪತಿ ಅಷ್ಟಮಭಾವದಲ್ಲಾಗಲೀ, ಸಪ್ತಮದಲ್ಲಾಗಲೀ ಇದ್ದರೆ, ಜಾತಕನಿಗೆ ರಾಜಮೂಲವಾಗಿ ಮರಣಪ್ರಾಪ್ತಿಯಾಗುತ್ತದೆ ಮತ್ತು ಕಳ್ಳನಾಗಲೀ, ಪರಸ್ತ್ರೀ ಆಸಕ್ತನಾಗಲೀ ಆಗುವನು, ಬಾಲ್ಯವಯಸ್ಸಿನಲ್ಲಿ ದಿನೇ ದಿನೇ ಕಷ್ಟವನ್ನನುಭವಿಸುವನು ||೨೦೬||

## ತೃತೀಯೇಶ ಲಗ್ನ ಲಾಭಸ್ಥಿತಫಲಂ

ಶ್ಲೋಕ|| ತೃತೀಯೇಶೇ ತನೌ ಲಾಭೇ ಸ್ವಭುಜಾರ್ಜಿತ ವಿತ್ತವಾನ್।
ಮೂರ್ಖಃ ಕೃಶೋಮಹಾರೋಗೀ ಸಾಹಸೀ ಪರಸೇವಕಃ||೨೦೭||

ತಾ|| ತೃತೀಯಾಧಿಪತಿ ಜನ್ಮ ಲಗ್ನಭಾವದಲ್ಲಾಗಲೀ ಲಾಭಭಾವದಲ್ಲಾಗಲೀ ಇದ್ದರೆ, ತನ್ನ ಭುಜಬಲದಿಂದ ಸಂಪಾದಿಸಿದ ಧನವುಳ್ಳವನು, ಮೂರ್ಖನು, ಕೃಶವಾದ ಶರೀರವುಳ್ಳವನು, ಮಹಾರಾಜಯಕ್ಷ್ಮಾ ದಿ ರೋಗಪೀಡಿತನೂ, ಸಾಹಸವಂತನೂ ಮತ್ತು ಪರರ ಸೇವಾವೃತ್ತಿಮಾಡುವವನೂ ಆಗುವನು ||೨೦೭||

## ತೃತೀಯೇಶ ಧನಭಾವಸ್ಥಫಲಂ

ಶ್ಲೋಕ|| ಗುದಭಂಜನಿತಃ ಸ್ಥೂಲಃ ಪರಭಾರ್ಯಾ ಧನೇರುಚಃ || ಸ್ವಲ್ಪಾರಂಭೀ
ಸುಖೀನಸ್ಯಾತ್ ತೃತೀಯೇಶೇ ಧನೇಗತೇ ||೨೦೮||

ತಾ|| ತೃತೀಯಾಧಿಪತಿ ಧನಭಾವದಲ್ಲಿದ್ದರೆ, ಗುದಸ್ಥಾನದಲ್ಲಿ ರೋಗಾದಿ ಪೀಡೆಯಿಂದ ಘಾಯಮಾಡಲ್ಪಟ್ಟವನು (ಶಸ್ತ್ರಚಿಕಿತ್ಸೆ), ಪರಭಾರ್ಯಾ ಧನಗಳಲ್ಲಿ ಅಭಿರುಚಿಯುಳ್ಳವನು, ಅಲ್ಪಕಾರ್ಯಗಳನ್ನು ಪ್ರಾರಂಭಿಸುವವನೂ, ಸುಖರಹಿತನೂ ಆಗುವನು || ಗುದಭಂಜನಿತಃ ಎಂಬುದಕ್ಕೆ ಗುದಮೈಥುನಾದಿ ಅಸಹಜವಾದ ಕಾರ್ಯಗಳನ್ನು ಮಾಡಿಕೊಳ್ಳುವನು ಎಂದು ವ್ಯಾಖ್ಯಾನ ಮಾಡಿರುತ್ತಾರೆ ||೨೦೮||

### ಚತುರ್ಥೇಶ ದ್ವಾದಶ ಭಾವಸ್ಥಿತಫಲಂ

## ಚತುರ್ಥೇಶ ಚತುರ್ಥಸ್ಥ ಫಲಂ

ಶ್ಲೋಕ|| ತುರ್ಯೇಶೇ ತುರ್ಯಗೇ ಮಂತ್ರೀ ಭವೇತ್ಸರ್ವ ಧನಾಧಿಪಃ। ಚತುರಃ
ಶೀಲವಾನ್ ಮಾನೀ ಧನಾಢ್ಯಃಸ್ತ್ರೀ ಪ್ರಿಯಃಸುಖೀ ||೨೦೯||

ತಾ|| ಚತುರ್ಥಭಾವಾಧಿಪತಿ ಚತುರ್ಥಭಾವದಲ್ಲಿದ್ದರೆ ಜಾತಕನು ಧನಾಧಿ-

ಪತಿಯೂ, ಆಚಾರಶೀಲನೂ, ಗೌರವಯುಕ್ತನೂ, ಧನವಂತನೂ, ಸ್ತ್ರೀಪ್ರಿಯನೂ, ಸುಖವಂತನೂ ಆಗುವನು ॥೨೦೯॥

## ಚತುರ್ಥೇಶ ಪಂಚಮಭಾಗ್ಯಸ್ಥ ಫಲಂ

ಶ್ಲೋಕ॥ ತುರ್ಯೇಶೇ ಪಂಚಮೇ ಭಾಗ್ಯೇ ಸುಖೀಸರ್ವ ಜನಪ್ರಿಯಃ ।
ವಿಷ್ಣುಭಕ್ತಿರತೋ ಮಾನೀ ಸ್ವಭುಜಾರ್ಜಿತವಿತ್ತವಾನ್ ॥೨೧೦॥

ತಾ॥ ಚತುರ್ಥಾಧಿಪತಿ ಪಂಚಮದಲ್ಲಿದ್ದರೂ, ಭಾಗ್ಯದಲ್ಲಿದ್ದರೂ, ಜಾತಕನು ಸುಖವಂತನು, ಸರ್ವಜನಪ್ರಿಯನು, ವಿಷ್ಣುಭಕ್ತಿಯುಳ್ಳವನು, ಗೌರವಯುಕ್ತನೂ, ತನ್ನ ಭುಜಬಲದಿಂದ ಸಂಪಾದಿಸಿದ ದ್ರವ್ಯವುಳ್ಳವನೂ ಆಗುವನು ॥೨೧೦॥

## ಚತುರ್ಥೇಶ ಶತ್ರುಸ್ಥ ಫಲಂ

ಶ್ಲೋಕ॥ ಸುಖೇಶೇ ಶತ್ರುಗೇಹಸ್ಥೇ ತದಾಸ್ಯಾದ್ಬಹುಯಾತ್ರಕಃ । ಕ್ರೋಧೀ
ಚೌರೋಭಿ ಚಾರೀಚ ದುಷ್ಟಚಿತ್ತೋ ಮನಸ್ವ್ಯಪಿ ॥೨೧೧॥

ತಾ॥ ಚತುರ್ಥಾಧಿಪತಿಯು ಶತ್ರುಭಾವದಲ್ಲಿದ್ದರೆ, ಜಾತಕನು ಬಹು ಸಂಚಾರ ಮಾಡುವವನು, ಕೋಪಿಷ್ಠನೂ, ಕಳ್ಳನೂ, ಅಭಿಚಾರ (ಮಂತ್ರಗಾರ), ದುಷ್ಟಚಿತ್ತವುಳ್ಳವನೂ, ದುಷ್ಟಮನಸ್ಸಿನಿಂದ ಮನಸ್ವಿಯಾಗಿರುವವನೂ ಆಗುವನು ॥೨೧೧॥

## ಚತುರ್ಥೇಶ ಸಪ್ತಮ ಲಗ್ನಸ್ಥಿತ ಫಲಂ

ಶ್ಲೋಕ॥ ಸುಖೇಶೇಸಪ್ತಮೇ ಲಗ್ನೇ ಬಹುವಿದ್ಯಾಸಮನ್ವಿತಃ । ಪಿತ್ರಾರ್ಜಿತಧನ
ತ್ಯಾಗೀ ಸಭಾಯಾಂ ಮೂಕವದ್ಭವೇತ್ ॥೨೧೨॥

ತಾ॥ ಚತುರ್ಥಾಧಿಪತಿಯು ಸಪ್ತಮಭಾವದಲ್ಲಾಗಲೀ, ಲಗ್ನ (ತನುಭಾವ) ದಲ್ಲಾಗಲೀ ಇದ್ದರೆ, ಜಾತಕನು ಅತ್ಯಂತ ವಿದ್ಯಾಪಂಡಿತನೂ, ಪಿತ್ರಾರ್ಜಿತ ಧನವನ್ನು ಕಳೆದುಕೊಂಡವನು, ವಿದ್ಯಾವಂತನಾಗಿದ್ದರೂ ಸಭೆಯಲ್ಲಿ ಮೂಕನಂತೆ ಸಭಾಕಂಪವುಳ್ಳವನಾಗಿ ಸುಮ್ಮನಿರುವವನೂ ಆಗುವನು ॥೨೧೨॥

## ಚತುರ್ಥೇಶ ವ್ಯಯ ರಂಧ್ರಸ್ಥಿತ ಫಲಂ

ಶ್ಲೋಕ॥ ಸುಖೇಶೇವ್ಯಯ ರಂಧ್ರಸ್ಥೇ ಸುಖಹಾನಿರ್ಭವೇನ್ನರಃ । ಪಿತೃಸೌಖ್ಯಂ
ಭವೇದಲ್ಪಂ ಕ್ಲೀಬೋವಾ ಜಾರಜೋಪಿವಾ ॥೨೧೩॥

ತಾ॥ ಸುಖಾಧಿಪತಿಯಾದ ಗ್ರಹವು ವ್ಯಯಭಾವದಲ್ಲಾದರೂ, ಅಷ್ಟಮ ದಲ್ಲಾದರೂ ಇದ್ದರೆ, ಸುಖಹಾನಿಯುಂಟಾಗುವುದು, ತಂದೆಯ ಸೌಖ್ಯವು ಅಲ್ಪ ಕಾಲವೇ ಇರುತ್ತೆ ಮತ್ತು ನಪುಂಸಕನಾದರೂ, ಜಾರಜನಾದರೂ ಆಗುವನು ॥೨೧೩॥

## ಚತುರ್ಥೇಶ ದಶಮಭಾವಸ್ಥಿತ ಫಲಂ

ಶ್ಲೋಕ॥ ಸುಖೇಶೇ ಕರ್ಮಗೇಹಸ್ಥೇ ರಾಜಮಾನ್ಯೋಭವೇನ್ನರಃ ॥
ರಸಾಯನೀ ಮಹಾಹೃಷ್ಟೋ ಭುನಕ್ತಿ ಸುಖಮದ್ಭುತಮ್ ॥೨೧೪॥

ತಾ॥ ಸುಖಸ್ಥಾನಾಧಿಪತಿ ದಶಮಭಾವದಲ್ಲಿದ್ದರೆ, ಜಾತಕನು ರಾಜಮಾನ್ಯನಾಗುವನು, ರಸಾಯನಶಾಸ್ತ್ರ ತಿಳಿದವನು, ಮಹಾಸಂತೋಷಚಿತ್ತನೂ, ಅತ್ಯದ್ಭುತವಾದ ಸುಖವನ್ನನುಭವಿಸುವನೂ ಆಗುವನು ॥೨೧೪॥

## ಚತುರ್ಥೇಶ ತೃತೀಯ ಲಾಭಸ್ಥಿತ ಫಲಂ

ಶ್ಲೋಕ॥ ಸುಖೇಶೇ ಸಹಜೇಲಾಭೋ ನಿತ್ಯರೋಗೀ ಭವೇನ್ನರಃ ಉದಾರೋ
ಗುಣವಾನ್ ದಾತಾಸ್ವಭುಜಾರ್ಜಿತ ವಿತ್ತರ್ವಾ ॥೨೧೫॥

ತಾ॥ ಚತುರ್ಥಾಧಿಪತಿ ತೃತೀಯದಲ್ಲಾಗಲಿ, ಲಾಭದಲ್ಲಾಗಲಿ, ಇದ್ದರೆ ಜಾತಕನು ನಿತ್ಯರೋಗಿಯಾಗುವನು, ಅಂದರೆ ಯಾವಾಗಲೂ ರೋಗಗ್ರಸ್ತನಾಗಿರು ವನು, (ಸುಖವಾಗಿದ್ದೇನೆ ಎಂದು ಹೇಳಿದ ದಿವಸವೇ ಇಲ್ಲ) ಉದಾರಗುಣವುಳ್ಳವನು, ಗುಣವಂತನ, ಧಾತೃತ್ವವಿರುವವನು ಮತ್ತು ಸ್ವಭುಜಾರ್ಜಿತವಾದ ದ್ರವ್ಯವುಳ್ಳವನೂ ಆಗುವನು ॥೨೧೫॥

## ಚತುರ್ಥೇಶ ಧನ ಸ್ಥಿತಫಲಂ

ಶ್ಲೋಕ॥ ಸರ್ವಸಂಪದ್ಯುತೋ ಮಾನಿ ಸಾಹಸೀ ಕುಹಕಾನ್ವಿತಃ ॥ ಕುಟುಂಬ
ಯುತೋ ಭೋಗೀ ಸುಖೇಶೇಚ ಧನಂ ಗತೇ ॥೨೧೬॥

ತಾ॥ ಚತರ್ಥಸ್ಥಾನಾಧಿಪತಿಯಾದ ಗ್ರಹವು ಧನಸ್ಥಾನದಲ್ಲಿದ್ದರೆ, ಜಾತಕನು ಸರ್ವಸಂಪದ್ಯುಕ್ತನಾಗುವನು, ಸಾಹಸವಂತನು, ಕುಹಕಗುಣವುಳ್ಳವನು, ಕುಟುಂಬ-ಯುಕ್ತನು, ಸೌಖ್ಯಭೋಗವುಳ್ಳವನೂ ಆಗುವನು ॥೨೧೬॥

ಇತಿ ಚತುರ್ಥೇಶ ದ್ವಾದಶ ಭಾವಫಲಂ
ಪಂಚಮೇಶ ದ್ವಾದಶಸ್ಥಿತಫಲಂ

## ಸುತೇಶ ಪಂಚಮ ಭಾವಸ್ಥಿತಫಲಂ

ಶ್ಲೋಕ॥ ಸುತೇಶಃಪಂಚಮೇ ಯಸ್ಯ ತಸ್ಯಪುತ್ರೋ ನಜೀವತಿ । ಕ್ಷಣಿಕಃ
ಕ್ರೂರ ಭಾಷೀಚ ದಾರ್ಮಿಕೋ ಮತಿರ್ಮಾ ಭವೇತ್ ॥೨೧೭॥

ತಾ॥ ಪಂಚಮಾಧಿಪತಿ ಪಂಚಮದಲ್ಲಿದ್ದರೆ, ಆತನ ಮಗನು ಬದುಕುವುದಿಲ್ಲ. ಕ್ಷಣಿಕನು (ಅಂದರೆ) ಆಡಿದಮಾತಿನಂತೆ ನಡೆಯುವುದಿಲ್ಲ. ಗಳಿಗೆಗೆ ಒಂದು ವಿಧ

ಬುದ್ಧಿಯುಳ್ಳವನು, ಕ್ರೂರವಾಗಿ ಮಾತನಾಡುವನು, ಧರ್ಮವನ್ನು ತಿಳಿದಾಚರಣೆ ಮಾಡುವನು ಮತ್ತು ವಿದ್ವಾಂಸನಾಗುವನು ॥೨೧೭॥

## ಪಂಚಮೇಷ ಷಷ್ಠಸ್ಥಿತಫಲಂ

ಶ್ಲೋಕ॥ ಸುತೇಶೇಷಷ್ಠರಿಃಫಸ್ಥೇ ಪುತ್ರಃಶತ್ರುತ್ವಮಾಪ್ನುಯಾತ್ । ಮೃತ್ಯು
ಕೋಗ್ರಾಹ್ಯ ಪುತ್ರೋವಾ ಧನಪುತ್ರೋವಾಭವೇತ್ ॥೨೧೮॥

ತಾ॥ ಪಂಚಮಾಧಿಪತಿ ಷಷ್ಠದಲ್ಲಾಗಲೀ, ದ್ವಾದಶದಲ್ಲಾಗಲೀ ಇದ್ದರೆ ಜಾತಕನಿಗೆ ಪುತ್ರನೇ ಶತ್ರುವಾಗುವನು, ಅಥವಾ ಪುತ್ರೋತ್ಪತ್ತಿಯಾಗದಿದ್ದರೆ, ಸ್ವೀಕೃತ ಪುತ್ರನನ್ನಾಗಲೀ, ಧನಹಾರಿಯಾದ (ಕ್ರಯದ) ಪುತ್ರನನ್ನಾಗಲೀ ಪಡೆಯುವವನು ॥೨೧೮॥

## ಪಂಚಮೇಷ ಸಪ್ತಮಸ್ಥಿತ ಫಲಂ

ಶ್ಲೋಕ॥ ಸುತೇಶೇ ಕಾಮಗೇಮಾನೀ ಸರ್ವಧರ್ಮ ಸಮನ್ವಿತಃ ।
ತುಂಗಯುಷ್ಠಿತಸುಃ ಸ್ವಾಮಿ ಭಕ್ತಿಯುಕ್ತ್ಯೈಕತೇಜಸಾ ॥೨೧೯॥

ತಾ॥ ಪಂಚಮಾಧಿಪತಿ ಸಪ್ತಮದಲ್ಲಿದ್ದರೆ ಗೌರವಯುಕ್ತನು, ಸರ್ವಧರ್ಮವನ್ನು ತಿಳಿದವನು, ಉನ್ನತವಾದ ಶರೀರವುಳ್ಳವನು, ಸ್ವಾಮಿಭಕ್ತಿಯುಳ್ಳವನು, ತೇಜಸ್ವಿಯೂ ಆಗುವನು ॥೨೧೯॥

## ಪಂಚಮೇಷ ಅಷ್ಟಮ ದ್ವಿತೀಯಸ್ಥಿತಫಲಂ

ಶ್ಲೋಕ॥ ಸುತೇಶೆ ಅಷ್ಟಮೇವಿತ್ತೇ ಬಹುಪುತ್ರೀನಸಂಶಯಃ । ಕಾಸಶ್ವಾಸೀ
ಸುಖೀನ ಸ್ಯಾತ್ ಕ್ರೋಧಯುಕ್ತೋಧನಾನ್ವಿತಃ ॥೨೨೦॥

ತಾ॥ ಪಂಚಮಾಧಿಪತಿಯು ಅಷ್ಟಮದಲ್ಲಾಗಲೀ ದ್ವಿತೀಯದಲ್ಲಾಗಲೀ ಇದ್ದರೆ ಬಹು ಮಕ್ಕಳುಳ್ಳವನು, ಕಾಸಶ್ವಾಸರೋಗವುಳ್ಳವನು, ಸುಖವಿಲ್ಲದವನೂ, ಕೋಪಿಷ್ಟನೂ, ಧನವಂತನೂ ಸಹ ಆಗುವನು ॥೨೨೦॥

## ಪಂಚಮೇಷ ನವಮ ದಶಮಸ್ಥಿತಫಲಂ

ಶ್ಲೋಕ॥ ಸುತೇಶೇ ನವಮೇ ಕರ್ಮೇ ಪುತ್ರೋಭೂಪ ಸಮೋಭವೇತ್ ।
ಅಥವಾ ಗ್ರಂಥಕರ್ತಾಚ ವಿಖ್ಯಾತಃಕುಲದೀಪಕಃ ॥೨೨೧॥

ತಾ॥ ಪಂಚಮಾಧಿಪತಿ ನವಮದಲ್ಲಾಗಲೀ, ದಶಮದಲ್ಲಾಗಲೀ ಇದ್ದರೆ, ಜಾತಕನು ಮಗನು ರಾಜಸಮಾನನಾಗುವನು ಅಥವಾ ಗ್ರಂಥಕರ್ತನಾಗುವನು, ಪ್ರಖ್ಯಾತ ಪುರುಷನಾಗಿ ವಂಶದಲ್ಲಿ ಅತ್ಯಂತ ಶ್ರೇಷ್ಠನಾಗುವನು ॥೨೨೧॥

## ಪಂಚಮೇಷ ಲಾಭಸ್ಥಿತ ಫಲಂ

ಶ್ಲೋಕ॥ ಸುತೇಶೇ ಲಾಭಭವನೇ ಪಂಡಿತೋಜನವಲ್ಲಭಃ । ಗ್ರಂಥಕರ್ತಾ
ಮಹಾದಕ್ಷೋ ಬಹುಪುತ್ರ ಧನಾನ್ವಿತಃ ॥೨೨೨॥

ತಾ॥ ಪಂಚಮಾಧಿಪತಿ ಲಾಭಭಾವದಲ್ಲಿದ್ದರೆ ಜಾತಕನು ಪಂಡಿತನು, ಬಹು ಜನರನ್ನು ಸಂರಕ್ಷಿಸುವವನು, ಗ್ರಂಥಕರ್ತನು, ದಕ್ಷನು, ಬಹುಪುತ್ರರುಳ್ಳವನು, ಧನವಂತನು ಆಗುವನು ॥೨೨೨॥

## ಪಂಚಮೇಷ ಲಗ್ನ ತೃತೀಯಸ್ಥಿತಫಲಂ

ಶ್ಲೋಕ॥ ಸುತೇಶೇ ಲಗ್ನ ಸಹಜೇ ಮಾಯಾವೀ ಪಿಶುನೋಮಹಾ ।
ಲೋಷ್ಟಂತು ದತ್ತವಾನ್ನೈವ ಕಚ್ಚಿದ್ರವ್ಯಸ್ಯಕಾ ಕಥಾ ॥೨೨೩॥

ತಾ॥ ಪಂಚಮಾಧಿಪತಿ ಲಗ್ನದಲ್ಲಾಗಲಿ, ತೃತೀಯದಲ್ಲಾಗಲಿ ಇದ್ದರೆ ಜಾತಕನು ಚಾಡಿಕೋರನು ಮತ್ತು ಮಣ್ಣುಗಡ್ಡೆಯನ್ನಾದರೂ ಕೊಡದವನು ಹೇಗೆ ದ್ರವ್ಯವನ್ನು ಕೊಡುತ್ತಾನೆಂದು ಹೇಳತಕ್ಕದ್ದು ॥೨೨೩॥

## ಪಂಚಮೇಷ ಸುಖಸ್ಥಿತಫಲಂ

ಶ್ಲೋಕ॥ ಸುತೇಶೇ ಮಾತೃಭವನೇ ಚಿರಂಮಾತೃ ಸುಖಂ ಭವೇತ್ ।
ಲಕ್ಷ್ಮೀಯುಕ್ತಸ್ಸುಬುದ್ಧಿಶ್ಚ ಸಚಿವೋಽಪ್ಯಥವಾಗುರುಃ ॥೨೨೪॥

ತಾ॥ ಪಂಚಮಾಧಿಪತಿ ಮಾತೃಸ್ಥಾನದಲ್ಲಿದ್ದರೆ ಬಹುಕಾಲ ಮಾತೃಸುಖ ಅನುಭವಿಸುವನು, ಲಕ್ಷ್ಮೀಯುಕ್ತನು, ಸುಬುದ್ಧಿಯುಳ್ಳವನು, ರಾಜನ ಮಂತ್ರಿಯಾಗಲಿ, ಅಥವಾ ರಾಜನ ಗುರುವಾಗಲಿ ಆಗುವನು ॥೨೨೪॥

ಇತಿ ಪಂಚಮೇಷ ದ್ವಾದಶಭಾವಸ್ಥ ಫಲಂ

ಅಥ ಷಷ್ಠೇಶ ದ್ವಾದಶಭಾವಫಲಂ

## ಷಷ್ಠೇಷ ಷಷ್ಠಸ್ಥ ಫಲಂ

ಶ್ಲೋಕ॥ ಷಷ್ಠೇಶೇ ರಿಪುಭಾವಸ್ಥೇ ಸ್ವಜ್ಞಾತಿಃ ಶತ್ರುವದ್ಭವೇತ್ ।
ಪರಜಾತಿರ್ಭವೇನ್ಮಿತ್ರಂ ಭೂಮೌ ನಚಲತಿಧ್ರುವಂ ॥೨೨೫॥

ತಾ॥ ಷಷ್ಠಾಧಿಪತಿ ಷಷ್ಠಭಾವದಲ್ಲಿದ್ದರೆ ಸ್ವಜಾತಿಗಳೇ ಶತ್ರುಗಳಾಗುವರು, ಪರಜಾತಿಯವರು ಮಿತ್ರರಾಗಿ, ಭೂಮಿಯಲ್ಲಿ ಸಂಚರಿಸಿದರೆ ಮಾಸಿ ಹೋಗುತ್ತಾನೆಂದು ಪ್ರೀತಿಸುತ್ತಲಿರುವರು ॥೨೨೫॥

## ಷಷ್ಠೇಷ ಸಪ್ತಮಲಾಭ ಲಗ್ನಸ್ಥಿತಫಲಂ

ಶ್ಲೋಕ॥ ಷಷ್ಠೇಶೇಸಪ್ತಮೇ ಲಾಭೇ ಲಗ್ನೇವಾ ಕೀರ್ತಿಮಾರ್ಭವೇತ್ ।
ಧನವಾರ್ ಗುಣವಾರ್ ಮಾನೀ ಸಾಹಸೀ ಪುತ್ರವರ್ಜಿತಃ ॥೨೨೬॥

ತಾ॥ ಷಷ್ಠಾಧಿಪತಿ ಸಪ್ತಮ, ಲಾಭ, ಈ ಸ್ಥಾನಗಳಲ್ಲಿದ್ದರೆ ಕೀರ್ತಿವಂತನೂ, ಧನವಂತನೂ, ಗುಣವಂತನೂ, ಸಾಹಸಿಯೂ, ಪುತ್ರಹೀನನೂ ಆಗುವನು ॥೨೨೬॥

## ಷಷ್ಠೇಷ ಅಷ್ಟಮ ದ್ವಾದಶಸ್ಥಿತ ಫಲಂ

ಶ್ಲೋಕ॥ ಷಷ್ಠೇಶೇಷ್ಟಮ ರಿಃಫಸ್ಥೇರೋಗೀ ಶತ್ರುರ್ಮನೀಷಿಣಾಂ ।
ಪರಿಜಾಯಾಭಿಗಾಮಿಚ ಜೀವಹಿಂಸಾಸು ತತ್ಪರಃ ॥೨೨೭॥

ತಾ॥ ಷಷ್ಠಾಧಿಪತಿ ಅಷ್ಟಮ ದ್ವಾದಶಸ್ಥಾನಗಳಲ್ಲಿದ್ದರೆ, ಜಾತಕನು ರೋಗಿ, ಪಂಡಿತರಿಗೆ ಶತ್ರು, ಪರರ ಹೆಂಡತಿಯಲ್ಲಿ ಸಂಭೋಗವುಳ್ಳವನು ಮತ್ತು ಜೀವಹಿಂಸೆ ಮಾಡುವುದರಲ್ಲಿ ಆಸಕ್ತನೂ ಆಗುವನು ॥೨೨೭॥

## ಷಷ್ಠಾಧಿಪತಿ ನವಮಸ್ಥಿತಫಲಂ

ಶ್ಲೋಕ॥ ಷಷ್ಠೇಶೇ ನವಮೇಯಸ್ಯ ಕಾಷ್ಠ ಪಾಷಾಣವಿಕ್ರಯೀ । ವ್ಯವಹಾರೇ ಕ್ವಚಿದ್ಧಾನಿಃ ಕ್ವಚಿದ್ವೃದ್ಧಿರ್ಭವೇತ್ಕಿಲ ॥೨೨೮॥

ತಾ॥ ಷಷ್ಠಾಧಿಪತಿ ನವಮಭಾವದಲ್ಲಿದ್ದರೆ, ಜಾತಕನು ಕಲ್ಲು, ಮರ ಮೊದಲಾದುದನ್ನು ಕ್ರಯ ವಿಕ್ರಯಮಾಡುವನು, ವ್ಯವಹಾರದಲ್ಲಿ ಕ್ವಚಿತ್ ಹಾನಿಯೂ ಸ್ವಲ್ಪ ವೃದ್ಧಿಯೂ ಆಗಲುಳ್ಳವನು ॥೨೨೮॥

## ಷಷ್ಠೇಶ ಧನಕರ್ಮಸ್ಥಿತ ಫಲಂ

ಶ್ಲೋಕ॥ ಷಷ್ಠೇಶೇ ಕರ್ಮವಿತ್ತಸ್ಥೇ ಸಾಹಸೀ ಕುಲವಿಶ್ರುತಃ । ಪರದೇಶ ಸುಖೀವಕ್ತಾ ಸ್ವಕರ್ಮಣ್ಯೇಕನಿಷ್ಠಿತಃ ॥೨೨೯॥

ತಾ॥ ಷಷ್ಠಾಧಿಪತಿ ದಶಮ ಮತ್ತು ಧನ ಈ ಭಾವಗಳಲ್ಲಿದ್ದರೆ, ಜಾತಕನು ಸಾಹಸಿಯೂ, ಕುಲವಿಶ್ರುತನೂ, ಪರದೇಶದಲ್ಲಿ ಸುಖಪಡುವವನೂ, ವಾಚಾಲಕನೂ, ಸ್ವಕರ್ಮದಲ್ಲಿ ನಿರತನೂ ಆಗುವನು ॥೨೨೯॥

## ಷಷ್ಠೇಶ ತೃತೀಯ ಚತುರ್ಥಸ್ಥಿತ ಫಲಂ

ಶ್ಲೋಕ॥ ಷಷ್ಠೇಶೇ ಸಹಜೇತುರ್ಯೇ ಕ್ರೋಧೀ ನಾ ರಕ್ತಲೋಚನಃ ।
ಮನಸ್ವೀ ಪಿಶುನೋ ದ್ವೇಷೀ ಚಲಚಿತ್ತೋತಿವಿತ್ತವಾನ್ ॥೨೩೦॥

ತಾ|| ಷಷ್ಠಾಧಿಪತಿ ತೃತೀಯ ಅಥವಾ ಚತುರ್ಥ ಭಾವದಲ್ಲಿದ್ದರೆ, ಕೋಪದಿಂದ ಕೆಂಪಾದ ಕಣ್ಣುಳ್ಳವನು, ತನ್ನ ಮನಸ್ಸಿಗೆ ಬಂದ ಕೆಲಸವನ್ನು ಮಾಡುವವನು, ಪಿಶುನು, ದ್ವೇಷವನ್ನೇ ಎಣಿಸತಕ್ಕವನು, ಚಂಚಲ ಚಿತ್ತನು, ಅತಿ ಧನವಂತನೂ ಆಗುವನು ||೨೩೦||

## ಷಷ್ಠೇಶ ಪಂಚಮಸ್ಥಿತ ಫಲಂ

ಶ್ಲೋಕ|| ಷಷ್ಠೇಶೇ ಪಂಚಮೇಯಸ್ಯ ಚಲಮಿತ್ರಧನಾಧಿಕಂ । ದಯಾಯುಕ್ತ।
ಸುಖೀಸೌಮ್ಯಃ ಸ್ವಕಾರ್ಯೇ ಚತುರೋಮಹಾ ||೨೩೧||

ತಾ|| ಷಷ್ಠಾಧಿಪತಿ ಪಂಚಮಭಾವದಲ್ಲಿದ್ದರೆ ಮಿತ್ರರು, ದ್ರವ್ಯ, ಇವುಗಳು ಸ್ಥಿರವಾಗಿ ನಿಲ್ಲುವುದಿಲ್ಲ, ದಯಾಯುಕ್ತನೂ, ಸುಖವಂತನೂ, ಸೌಮ್ಯ ಸ್ವಭಾವ ಉಳ್ಳವನೂ, ಸ್ವಕಾರ್ಯದಲ್ಲಿ ಅತಿ ಚತುರನೂ ಆಗುವನು ||೨೩೧||

ಇತಿ ಷಷ್ಠೇಶ ದ್ವಾದಶಸ್ಥಫಲಂ

ಅಥ ಸಪ್ತಮೇಶ ದ್ವಾದಶಸ್ಥಫಲಂ

## ಸಪ್ತಮೇಷ ಲಗ್ನ ಸಪ್ತಮಸ್ಥಿತ ಫಲಂ

ಶ್ಲೋಕ|| ಸಪ್ತಮೇಶೇತನೌಕಾಮೇ ಪರಜಾಯಾಸುಲಂಪಟಃ । ದುಷ್ಟೋ
ವಿಚಕ್ಷಣೋ ಧೀರೋ ವಾತರುಕ್ ಸ್ಥಿಯತೇಹೃದಿ ||೨೩೨||

ತಾ|| ಸಪ್ತಮಾಧಿಪತಿ ಲಗ್ನದಲ್ಲಾದರೂ, ಸಪ್ತಮಭಾವದಲ್ಲಾದರೂ ಇದ್ದರೆ ಜಾತಕನು ಪರಸ್ತ್ರೀಯಲ್ಲಿ ಆಸಕ್ತನಾಗುವನು, ದುಷ್ಟನು, ಸ್ಥೂಲ ಸೂಕ್ಷ್ಮ ತಿಳಿದ ವಿಚಕ್ಷಣೆಯುಳ್ಳವನು, ಧೀರನು, ಶರೀರದಲ್ಲಿ ವಾತಾಧಿಕ್ಯವಾದ ರೋಗವುಳ್ಳವನೂ ಆಗುವನು ||೨೩೨||

## ಸಪ್ತಮೇಷ ಷಷ್ಠ ಅಷ್ಟಮಸ್ಥಿತ ಫಲಂ

ಶ್ಲೋಕ|| ಜಾಯೇಶೇ ಚಾಷ್ಟಮೇಷಷ್ಠೇ ಸರೋಗಾ ಕಾಮಿನೀಭವೇತ್।
ಕ್ರೋಧಯುಕ್ತೋ ಭವೇದ್ವಾಪಿ ನಸುಖಂ ಲಭತೇಕ್ವಚಿತ್ ||೨೩೩||

ತಾ|| ಸಪ್ತಮಾಧಿಪತಿಯು ಅಷ್ಟಮಭಾವದಲ್ಲಾಗಲಿ, ಷಷ್ಠಭಾವದಲ್ಲಾಗಲಿ ಇದ್ದರೆ, ಜಾತಕನ ಪತ್ನಿಯು ರೋಗಿಷ್ಠೆಯಾಗಿರುವಳು ಮತ್ತು ಕ್ರೋಧಯುಕ್ತನು, ಆ ಸ್ತ್ರೀಯಿಂದ ಸ್ವಲ್ಪವಾದರೂ ಸುಖವನ್ನು ಹೊಂದುವುದಿಲ್ಲ ||೨೩೩||

## ಸಪ್ತಮೇಶ ದ್ವಿತೀಯ ನವಮಸ್ಥಿತ ಫಲಂ

ಶ್ಲೋಕ|| ದ್ಯೂನೇಶೇ ನವಮೇ ವಿತ್ತೇ ನಾನಾಸ್ತ್ರೀಭಿಃ ಸಮಾಗಮ- ।
ಆರಂಭೇದೀರ್ಘ ಸೂತ್ರೀಚ ಸ್ತ್ರೀಷುಚಿತ್ತಂಹಿ ಕೇವಲಂ ||೨೩೪||

ತಾ|| ಸಪ್ತಮಾಧಿಪತಿಯಾದ ಗ್ರಹವು, ದ್ವಿತೀಯದಲ್ಲಾಗಲೀ, ನವಮದಲ್ಲಾಗಲೀ ಇದ್ದರೆ, ನಾನಾಜಾತಿಯ ಸ್ತ್ರೀಯರಲ್ಲಿ ಸಂಗಮವುಳ್ಳವನೂ, ಆರಂಭ ಶೂರನೂ, ದೀರ್ಘಾಲೋಚನೆಯಿಂದ ಕಾರ್ಯಾಲಸ್ಯಮುಳ್ಳವನೂ, ಕೇವಲವಾಗಿ ಸ್ತ್ರೀಯರಲ್ಲಿ ಲೀನವಾದ ಮನಸ್ಸುಳ್ಳವನೂ ಆಗುವನು ||೨೩೪||

## ಸಪ್ತಮೇಷ ಚತುರ್ಥ ದಶಮಸ್ಥಿತಫಲಂ

ಶ್ಲೋಕ|| ದ್ಯೂನೇಶೇ ದಶಮೇತುರ್ಯೇ ನಾಸ್ಯಜಾಯಾಪತಿವ್ರತಾ ||
ಧರ್ಮಾತ್ಮಾಸತ್ಯ ಸಂಯುಕ್ತಃ ಕೇವಲಂ ದಂತರೋಗವಾನ್ ||೨೩೫||

ತಾ|| ಸಪ್ತಮಾಧಿಪತಿಯು ಚತುರ್ಥದಲ್ಲಾಗಲಿ, ದಶಮದಲ್ಲಾಗಲಿ ಇದ್ದರೆ, ಜಾತಕನ ಹೆಂಡತಿಯು ಪತಿವ್ರತೆಯಲ್ಲ (ಹಾದರಗಿತ್ತಿ), ಧರ್ಮಾತ್ಮನು, ಸತ್ಯಕ್ಕೆ ಅನುಸರಿಸಿರುವವನು, ಕೇವಲ ದಂತರೋಗವುಳ್ಳವನೂ ಆಗುವನು ||೨೩೫||

## ಸಪ್ತಮಮೇಷ ತೃತೀಯ ಲಾಭಸ್ಥಿತಫಲಂ

ಶ್ಲೋಕ|| ದ್ಯೂನೇಶೇ ಸಹಜೇಲಾಭೇಮೃತಪುತ್ರಃ ಪ್ರಜಾಯತೇ |
ಕದಾಚಿಜ್ಜೀವತೀ ಕನ್ಯಾ ಯತ್ನಾತ್ಪುತ್ರೋಽಪಿಜಾಯತೇ ||೨೩೬||

ತಾ|| ಸಪ್ತಮಾಧಿಪತಿ ತೃತೀಯದಲ್ಲಾಗಲಿ, ಏಕಾದಶಭಾವದಲ್ಲಾಗಲಿ ಇದ್ದರೆ, ಜಾತಕನಿಗೆ ಮೃತಪುತ್ರರೇ ಹುಟ್ಟುವರು, ಕದಾಚಿತ್ ಹೆಣ್ಣು ಮಗು ಹುಟ್ಟಿದರೆ ಬದುಕುವುದು ಮತ್ತು ದೇವತಾರಾಧನಾದಿ ಯತ್ನದಿಂದ ಪುತ್ರನೂ ಹುಟ್ಟುವನು ||೨೩೬||

## ಸಪ್ತಮೇಷ ದ್ವಾದಶಸ್ಥಿತಫಲಂ

ಶ್ಲೋಕ|| ದ್ವಾದಶಸ್ಥೇ ಸಪ್ತಮೇಷೇ ದರಿದ್ರಃ ಕೃಪಣೋಮಹಾನ್ |
ಜಾರಕನ್ಯಾಭವೇದ್ಭಾರ್ಯಾ ವಸ್ತ್ರ ಜೀವೀಚನಿರ್ಧನೀ ||೨೩೭||

ತಾ|| ಸಪ್ತಮಾಧಿಪತಿ ದ್ವಾದಶದಲ್ಲಿದ್ದರೆ ಜಾತಕನ ಹೆಂಡತಿಯು ಜಾರಕನ್ಯೆಯಾಗಿರುವಳು (ಅಂದರೆ ಸೇವಕನ ಪುತ್ರೀ), ದರಿದ್ರನೂ, ಕೃಪಣನೂ, ವಸ್ತ್ರಜೀವಿಯೂ, ನಿರ್ಧನಿಯೂ ಆಗುವನು ||೨೩೭||

## ಸಪ್ತಮೇಷ ಪಂಚಮಸ್ಥಿತ ಫಲಂ

ಶ್ಲೋಕ|| ಗುಣ ಸರ್ವಯುತೋಮಾನಿ ಭವೇತ್ಸರ್ವಜನಾಧಿಪಃ ಸದೈವಹರ್ಷ ಸಂಯುಕ್ತಃ ಸಪ್ತಮಪೇ ಸುತೇ ಸ್ಥಿತೇ ||೨೩೮||

ತಾ|| ಸಪ್ತಮಾಧಿಪತಿಯಾದ ಗ್ರಹವು ಪಂಚಮಸ್ಥಾನದಲ್ಲಿದ್ದರೆ, ಜಾತಕನ

ಸರ್ವಗುಣ ಸಂಪತ್ತುಳ್ಳವನೂ, ಮಾನವಂತನೂ, ಸರ್ವಜನರಿಗೂ ಬೇಕಾಗಿರುವ ಅಧಿಪತಿಯಾಗಿರುವನು, ಯಾವಾಗಲೂ ಹರ್ಷಯುಕ್ತನೂ ಆಗುವನು ॥೨೩೮॥

ಇತಿ ಸಪ್ತಮೇಷ ದ್ವಾದಶಸ್ಥಿತಫಲಂ

## ಅಷ್ಟಮೇಷ ದ್ವಾದಶಭಾವಸ್ಥಿತಫಲಂ

## ಅಷ್ಟಮೇಷ ಅಷ್ಟಮಸ್ಥಿತಫಲಂ

**ಶ್ಲೋಕ॥** ದ್ಯೂತೀಚೋರೋ ನೃಥಾವಾದೀ ಗುರುನಿಂದಾಸುತತ್ಪರಃ ।
ಅಷ್ಟಮೇ ಹ್ಯಷ್ಟಮಸ್ಥಾನೇ ಭಾರ್ಯಾ ಪರರತಾಭವೇತ್ ॥೨೩೯॥

ತಾ॥ ಅಷ್ಟಮಾಧಿಪತಿಯು ಅಷ್ಟಮಭಾವದಲ್ಲಿದ್ದರೆ, ಜಾತಕನು ಜೂಜು ಆಡುವವನು, ಕಳ್ಳತನು, ವಿತಂಡವಾವುಳ್ಳವನು, ಗುರುನಿಂದೆ ಮಾಡತಕ್ಕವನು ಮತ್ತು ಆತನ ಹೆಂಡತಿಯು ಪರಪುರುಷರಲ್ಲಿ ಭೋಗವುಳ್ಳವಳು ಅಂದರೆ ಹಾದರಗಿತ್ತಿಯಾದ ಹೆಂಡತಿಯುಳ್ಳವನೂ ಆಗುವನು ॥೨೩೯॥

## ಅಷ್ಟಮೇಷ ನವಮಸ್ಥಿತಫಲಂ

**ಶ್ಲೋಕ॥** ಅಷ್ಟಮೇಷೇ ತಪಸ್ಥಾನೀ ಮಹಾಪಾಪೀಚ ನಾಸ್ತಿಕಃ । ಸುತಹಾಹ್ಯ
ಧವಾವಂಧ್ಯಃ ಪರಭಾರ್ಯಾ ಧನೇರುಚಿಃ ॥೨೪೦॥

ತಾ॥ ಅಷ್ಟಮಾಧಿಪತಿ ನವಮದಲ್ಲಿದ್ದರೆ, ಜಾತಕನು ಮಹಾಪಾಪಿಯೂ, ನಾಸ್ತಿಕನೂ, ಮೃತಪುತ್ರ ದುಃಖವುಳ್ಳವನೂ ಅಥವಾ ಸಂತಾನವಿಲ್ಲದವನೂ, ಪರಸ್ತ್ರೀ ಪರಧನಗಳಲ್ಲಿ ಅಭಿರುಚಿಯುಳ್ಳವನೂ ಆಗುವನು ॥೨೪೦॥

## ಅಷ್ಟಮೇಷ ಚತುರ್ಥದಶಮಸ್ಥಿತಫಲಂ

**ಶ್ಲೋಕ॥** ಅಷ್ಟಮೇಷೇ ಸುಖೇಕರ್ಮೇ ಪಿಶುನೋ ಬಂಧುವರ್ಜಿತಃ ।
ಮಾತಾಪಿತ್ರೋರ್ಭವೇನ್ಮೃತ್ಯುಃ ಸ್ವಲ್ಪಕಾಲೇನ ಭೀತಿಯುಕ್ ॥೨೪೧॥

ತಾ॥ ಅಷ್ಟಮಾಧಿಪತಿ ಚತುರ್ಥ ದಶಮ ಸ್ಥಾನಗಳಲ್ಲಿದ್ದರೆ, ಜಾತಕನು ಪಿಶುನನು, ಬಂಧುವರ್ಜಿತನೂ, ತಾನು ಹುಟ್ಟಿದ ಸ್ವಲ್ಪಕಾಲದ ಮಾತೃರಿಷ್ಟ ಪಿತೃರಿಷ್ಟವುಳ್ಳವನೂ ಆಗುವನು ಅಂದರೆ ಅತ್ಯಲ್ಪ ಕಾಲದಲ್ಲಿಯೇ ತಂದೆ ತಾಯಿಗಳು ಪರಲೋಕವನ್ನು ಹೊಂದುವರು ॥೨೪೧॥

## ಅಷ್ಟಮೇಷ ಪಂಚಮ ಲಾಭಸ್ಥಿತಫಲಂ

**ಶ್ಲೋಕ॥** ಅಷ್ಟಮೇಶೇ ಸುತೇಲಾಭೇ ತಸ್ಯವೃದ್ಧಿರ್ನಜಾಯತೇ। ದ್ರವ್ಯಂ
ನಶ್ಯೀಯತೇ ಗೇಹೇ ಸ್ಥಿರಬುದ್ಧಿರ್ಭವೇಜ್ಜನಃ ॥೨೪೨॥

ತಾ॥ ಅಷ್ಟಮಾಧಿಪತಿ ಪಂಚಮದಲ್ಲಾಗಲಿ, ಲಾಭಭಾವದಲ್ಲಾಗಲಿ ಇದ್ದರೆ, ಜಾತಕನು ವೃದ್ಧಿಹೊಂದುವುದಿಲ್ಲ, ದ್ರವ್ಯವು ಸ್ಥಿರವಾಗಿರುವುದಿಲ್ಲ ಮತ್ತು ಸ್ಥಿರವಾದ ಬುದ್ಧಿಯುಳ್ಳವನೂ ಆಗುವನು ॥೨೪೨॥

## ಅಷ್ಟಮೇಷವ್ಯಯ ಷಷ್ಠಸ್ಥಿತ ಫಲಂ

ಶ್ಲೋಕ॥ ಅಷ್ಟಮೇಶೇ ವ್ಯಯೇಷಷ್ಠೇ ನಿತ್ಯಂರೋಗೀಪ್ರಜಾಯತೇ ।
ಜಲಸರ್ಪಾದಿಕಾದ್ಭಾತೋ ಭವೇತಸ್ಯಚಶೈಶವೇ ॥೨೪೩॥

ತಾ॥ ಅಷ್ಟಮಾಧಿಪತಿಯು ದ್ವಾದಶದಲ್ಲಾಗಲೀ, ಷಷ್ಠಸ್ಥಾನದಲ್ಲಾಗಲೀ, ಇದ್ದರೆ ಜಾತಕನು ನಿತ್ಯರೋಗಿಯಾಗುವನು, ಬಾಲ್ಯದಲ್ಲಿ ಜಲದಿಂದಲೂ, ಸರ್ಪದಿಂದಲೂ ಆಪತ್ತುಳ್ಳವನೂ ಆಗುವನು ॥೨೪೩॥

## ಅಷ್ಟಮೇಷಲಗ್ನ ಸಪ್ತಮಸ್ಥಿತಿ ಫಲಂ

ಶ್ಲೋಕ॥ ಅಷ್ಟಮೇಷೇತನೌ ಕಾಮೇಭಾರ್ಯಾಯುಗ್ಮಂ ಸಮಾದಿಶೇತ್ ।
ವಿಷ್ಣುದ್ರೋಹ ರತೋನಿತ್ಯಂ ವ್ರಣರೋಗೀ ಪ್ರಜಾಯುತೇ॥೨೪೪॥

ತಾ॥ ಅಷ್ಟಮಾಧಿಪತಿ ಲಗ್ನ ಮತ್ತು ಸಪ್ತಮಗಳಲ್ಲಿದ್ದರೆ, ಜಾತಕನು ದ್ವಿಭಾರ್ಯೆಯರುಳ್ಳವನು, ವಿಷ್ಣುದ್ರೋಹರಹಿತನು, ನಿತ್ಯದಲ್ಲೂ ವ್ರಣರೋಗಿಯೂ ಆಗುವನು ॥೨೪೪॥

## ಅಷ್ಟಮೇಷ ದ್ವಿತೀಯಸ್ಥಿತ ಫಲಂ

ಶ್ಲೋಕ॥ ಅಷ್ಟಮೇಷೇ ಧನೇಬಾಹು ಬಲಹೀನಃ ಪ್ರಜಾಯುತೇ ।
ಧನಂತಸ್ಯ ಭವೇತ್ಸ್ವಲ್ಪಂ ಗತವಿತ್ತಂ ನಲಭ್ಯತೇ ॥೨೪೫॥

ತಾ॥ ಅಷ್ಟಮಾಧಿಪತಿಯು ಧನಸ್ಥಾನದಲ್ಲಿದ್ದರೆ, ಬಾಹುಬಲಹೀನನೂ, ಅಲ್ಪ ಧನವುಳ್ಳವನೂ ಮತ್ತು ಕಳೆದ ದ್ರವ್ಯ ಸಿಕ್ಕದೇ ಇರುವವನೂ ಆಗುವನು ॥೨೪೫॥

ಇತಿ ಅಷ್ಟಮೇಷ ದ್ವಾದಶ ಭಾವಸ್ಥಿತ ಫಲಂ

## ಭಾಗ್ಯೇಶೇ ದ್ವಾದಶ ಭಾವಸ್ಥಿತ ಫಲಂ

## ಭಾಗ್ಯೇಶೇ ನವಮಸ್ಥಿತ ಫಲಂ

ಶ್ಲೋಕ॥ ಧನಧಾನ್ಯಯುತೋಧೀರಃ ಗುಣಸೌಂದರ್ಯ ಸಂಯುತಃ ಬಹುಭ್ರಾತೃ
ಸುಖೈರ್ಯುಕ್ತ ಭಾಗ್ಯೇಶೇ ನವಮೇಸ್ಥಿತೇ ॥೨೪೬॥

ತಾ॥ ಭಾಗ್ಯಾಧಿಪತಿ ಭಾಗ್ಯಭಾವದಲ್ಲಿದ್ದರೆ, ಧನಧಾನ್ಯಯುಕ್ತನು, ನಿತ್ಯ ಸುಖವಂತ, ಸುಗುಣದಿಂದಲೂ, ಸೌಂದರ್ಯಾತಿಶಯದಿಂದಲೂ ಕೂಡಿರುವನು, ಅನೇಕ ಅಣ್ಣತಮ್ಮಂದಿರಿಂದ ಸೌಖ್ಯಪಡತಕ್ಕವನೂ ಆಗುವನು ॥೨೪೬॥

## ಭಾಗ್ಯೇಶೇ ಚತುರ್ಥದಶಮಸ್ಥಿತಫಲಂ

ಶ್ಲೋಕ॥ ಭಾಗ್ಯೇಶೇ ದಶಮೇ ತುರ್ಯೇ ಮಂತ್ರೀ ಸೇನಾಪತಿರ್ಭವೇತ್ ।
ಪುಣ್ಯವಾನ್ಕೀರ್ತಿಮಾನ್ವಾಗ್ಮೀ ಸಾಹಸೀ ಕೋಧವರ್ಜಿತಃ ॥೨೪೭॥

ತಾ॥ ಭಾಗ್ಯಾಧಿಪತಿಯು ಚತುರ್ಥದಲ್ಲಾಗಲೀ, ದಶಮದಲ್ಲಾಗಲೀ ಇದ್ದರೆ ರಾಜನ ಮಂತ್ರಿ ಅಥವಾ ಸೇನಾಧಿಪತಿಯಾಗುವನು. ಪುಣ್ಯಕಾರ್ಯಗಳನ್ನು ಮಾಡುವನು. ಒಳ್ಳೇ ಯಶಸ್ಸುಂಟಾದವನು (ವಾಗ್ಮಿ) ಪಟುತರವಾಗಿ ಮಾತನಾಡುವವನು, ಸಾಹಸದಿಂದ ಕಾರ್ಯಗಳನ್ನು ಮಾಡತಕ್ಕವನು ಮತ್ತು ಕ್ರೋಧ ಸಹಿತನೂ ಆಗುವನು ॥೨೪೯॥

## ಭಾಗ್ಯೇಶ ಪಂಚಮ ಲಾಭಸ್ಥಫಲಂ

ಶ್ಲೋಕ॥ ಭಾಗ್ಯೇಶೇ ಪಂಚಮೇಲಾಭೇ ಭಾಗ್ಯವಾನ್ ಜನವಲ್ಲಭಃ । ಗುರು
ಭಕ್ತಿರತೋ ಮಾನೀ ಧೈರ್ಯೋ ದಾರ್ಯಗುಣ್ಯೈರ್ಯುತಃ ॥೨೫೦॥

ತಾ॥ ಭಾಗ್ಯಾಧಿಪತಿಯು ಪಂಚಮದಲ್ಲಾಗಲೀ, ಲಾಭದಲ್ಲಾಗಲೀ ಇದ್ದರೆ ಜಾತಕನು ಭಾಗ್ಯವಂತನು, ಬಹುಜನರನ್ನು ಪೋಷಿಸತಕ್ಕವನು, ಗುರುಭಕ್ತಿವಂತನು ಮಾನವೇ ಮುಖ್ಯವಾಗಿ ಉಳ್ಳವನು, ಧೀರನು ಉದಾರಗುಣವುಳ್ಳವನು ಸಹ ಆಗುವನು ॥೨೫೦॥

## ಭಾಗ್ಯೇಶ ಷಷ್ಠಾಷ್ಟ ದ್ವಾದಶಸ್ಥಫಲಂ

ಶ್ಲೋಕ॥ ಭಾಗ್ಯೇಶೇತುತುಲೇರಿಃಫ್ಥೇ ಭಾಗ್ಯಹೀನೋ ಭವೇತ್ಸಿತ್ವಾ* ।
ಮಾತುಲಸ್ಯ ಸುಖಂನಸ್ಯಾತ್ ಜ್ಯೇಷ್ಠಭ್ರಾತೃಸುಖಂತಥಾ ॥೨೫೧॥

ತಾ॥ ಭಾಗ್ಯಾಧಿಪತಿಯು ಷಷ ಅಷ್ಟಮ, ದ್ವಾದಶಗಳಲ್ಲಿದ್ದರೆ ಭಾಗ್ಯವಿಲ್ಲದವನು (ದರಿದ್ರನು) ಸೌಭಾಗ್ಯರಹಿತನು, ಸೋದರಮಾವ, ಜ್ಯೇಷ್ಠ ಭ್ರಾತೃ ಇವರುಗಳ ಸುಖವಿಲ್ಲದವನೂ ಆಗುವನು ॥೨೫೧॥

## ಭಾಗ್ಯೇಶೇ ಸಪ್ತಮಸ್ಥಿತಫಲಂ

ಶ್ಲೋಕ॥ ಭಾಗ್ಯೇಶೇಚ ಮದೇಕಲ್ಯೇ ಗುಣವಾನ್ ಕೀರ್ತಿಮಾನ್ ಭವೇತ್।
ಕದಾಚಿತ್ಸ ಭವೇತ್ಸಿದ್ಧಂ ಯತ್ಕಾರ್ಯಂ ಕರ್ತುಮಿಚ್ಛತಿ ॥೨೫೨॥

ತಾ॥ ಭಾಗ್ಯಾಧಿಪತಿಯು ಸಪ್ತಮದಲ್ಲಾಗಲಿ, ಲಗ್ನದಲ್ಲಾಗಲಿ ಇದ್ದರೆ, ಜಾತಕನು ಗುಣವಂತನು, ಒಳ್ಳೆ ಯಶಸ್ಸುಳ್ಳವನೂ ಆಗುವನು. ಮತ್ತು ಯಾವ ಕಾರ್ಯ

---

* ಭಾಗ್ಯಹೀನೋ ಭವೇದ್ಧ್ರುವಂ. ಇತಿ ಲೋಮಶ ಸಂಹಿತಾ ॥

ಮಾಡಬೇಕೆಂದು ಅಪೇಕ್ಷಿಸುವನೋ ಆ ಕಾರ್ಯವನ್ನು ಮಾಡಿಯೇ ಮುಗಿಸುವನು. ಈ ಪ್ರಕಾರ ಗುಣವುಳ್ಳವನಾಗುವನು ॥೨೫೨॥

## ಭಾಗ್ಯೇಶೇ ತೃತೀಯ ಧನಸ್ಥಿತಫಲಂ

ಶ್ಲೋಕ॥ ಭಾಗ್ಯೇಶೇ ಸಹಜೇವಿತ್ತೇ ಸದಾ ಭಾಗ್ಯಾನುಚಿಂತಕಃ । ಧನವಾ್ನ
ಗುಣವಾ್ನ ಕಾಮೀ ಪಂಡಿತೋ ಜನವಲ್ಲಭ ॥೨೫೩॥

ತಾ॥ ಭಾಗ್ಯಾಧಿಪತಿಯು, ದ್ವಿತೀಯದಲ್ಲಾಗಲಿ, ತೃತೀಯದಲ್ಲಾಗಲಿ ಇದ್ದರೆ, ಸದಾಕಾಲದಲ್ಲಿಯೂ ಭಾಗ್ಯವನ್ನೇ ಕುರಿತು ಚಿಂತೆಪಡುವನು, ಧನವಂತ, ಸುಗುಣವಂತ, ಕಾಮಿ (ವಿಷಯೋಪಭೋಗವುಳ್ಳವನು) ಪಂಡಿತನೂ ಬಹು ಜನರಿಗೆ ಪ್ರೀತಿ ಪಡಿಸಿ ಅವರೆಲ್ಲರಿಗೂ ಬೇಕಾಗಿರುವನೂ ಆಗುವನು ॥೨೫೩॥

ಇತಿ ಭಾಗ್ಯೇಶ ದ್ವಾದಶ ಭಾವಸ್ಥಫಲಂ
ದಶಮೇಷ ದ್ವಾದಶ ಭಾವಸ್ಥಫಲಂ

## ದಶಮೇಷ ಚತುರ್ಥ ದಶಮಸ್ಥ ಫಲಂ

ಶ್ಲೋಕ॥ ದಶಮೇಷೇ ಸುಖೇ ಕರ್ಮೇ ಜ್ಞಾನವಾ್ನ ಸುಖವಿಕ್ರಮಾ ।
ಗುರು ದೇವಾರ್ಚನ ರತೋ ಧರ್ಮಾತ್ಮಾ ಸತ್ಯಸಂಯುತಃ॥೨೫೪॥

ತಾ॥ ದಶಮಾಧಿಪತಿ ಚತುರ್ಥ ಅಥವಾ ದಶಮಸ್ಥಾನದಲ್ಲಿದ್ದರೆ ಜಾತಕನು ಐಹಿಕಾಮುಷ್ಮಿಕ ಜ್ಞಾನವುಳ್ಳವನಾಗುವನು, ಸುಖವಂತನೂ, ಪರಾಕ್ರಮವುಳ್ಳವನೂ, ಗುರು, ದೇವರು ಇವರುಗಳ ಪೂಜೆಯನ್ನು ಮಾಡತಕ್ಕವನು, ಧರ್ಮಿಷ್ಠನು. ಸತ್ಯಕ್ಕೆ ತಪ್ಪದೆ ನಡೆಯುವನು ಸಹ ಆಗುವನು ॥೨೫೪॥

## ದಶಮೇಷ ಪಂಚಮ ಲಾಭಸ್ಥ ಫಲಂ

ಶ್ಲೋಕ॥ ದಶಮೇಷೇ ಸುತೇಲಾಭೇ ಧನವಾನ್ಪುತ್ರವಾನ್ಭವೇತ್ । ಸರ್ವದಾ
ಹರ್ಷ ಸಂಯುಕ್ತಃ ಸತ್ಯವಾದೀ ಸುಖೀನರಃ ॥೨೫೫॥

ತಾ॥ ದಶಮಾಧಿಪತಿ ಪಂಚಮದಲ್ಲಾಗಲೀ ಲಾಭದಲ್ಲಾಗಲೀ ಇದ್ದರೆ ಧನವಂತನು, ಪುತ್ರವಂತನೂ ಸರ್ವ ಕಾಲದಲ್ಲೂ ಸಂತೋಷಚಿತ್ತನೂ, ಸತ್ಯವಾದಿಯೂ, ಸುಖವಂತನೂ ಸಹ ಆಗುವನು ॥೨೫೫॥

## ದಶಮೇಷ ಷಷ್ಠ ವ್ಯಯಸ್ಥಫಲಂ

ಶ್ಲೋಕ॥ ಕರ್ಮಶೋ ರಿಪ್ವಯೋ ಯಶ್ಯ ಶತ್ರುಭಃ ಪರಿಪೀಡಿತಃ ।
ಚಾತುರ್ಯ ಗುಣ ಸಂಪನ್ನಃ ಕ್ವಚಿಚ್ಚನ ಸುಖೀನರಃ ॥೨೫೬॥

ತಾ|| ದಶಮಾಧಿಪತಿ ಷಷ್ಠ ಮತ್ತು ದ್ವಾದಶ ಸ್ಥಾನದಲ್ಲಿದ್ದರೆ ಜಾತಕನು ಶತ್ರುಗಳಿಂದ ಪೀಡಿಸಲ್ಪಡುವನು. ಚಾತುರ್ಯ ಗುಣ ಸಂಪನ್ನನು, ಸ್ವಲ್ಪಕಾಲ ಸುಖವಿಲ್ಲದವನು ಆಗುವನು ||೨೫೬||

## ದಶಮೇಷ ಲಗ್ನಸ್ಥಿತ ಫಲಂ

ಶ್ಲೋಕ|| ದಶಮಾಧಿಪತೌ ಲಗ್ನೇ ಕವಿತಾ ಗುಣಸಂಯುತಃ| ಬಾಲ್ಯೇ-
ರೋಗೀ ಸುಖೀಪಶಾದರ್ಥವೃದ್ಧಿರ್ದಿನೇದಿನೇ ||೨೫೭||

ತಾ|| ದಶಮಾಧಿಪತಿ ಲಗ್ನದಲ್ಲಿದ್ದರೆ ಜಾತಕನು ಕವಿತ್ವ ಮಾಡುವನು, ಬಾಲ್ಯ ವಯಸ್ಸಿನಲ್ಲಿ ರೋಗಿಯೂ, ಅನಂತರ ದಿನೇ ದಿನೇ ದ್ರವ್ಯದ ಅಭಿವೃದ್ಧಿಯುಳ್ಳವನೂ ಆಗುವನು ||೨೫೭||

## ದಶಮೇಷ ಧನ ಸಪ್ತಮ ತೃತೀಯಸ್ಥ ಫಲಂ

ಶ್ಲೋಕ|| ಧನೇ ಮದೇಚ ಸಹಜೇ ಕರ್ಮೇಶೋ ಯದಿ ಸಂಸ್ಥಿತಃ |
ಮನಸ್ವೀಗುಣ ವಾನ್ವಾಗ್ಮೀ ಸತ್ಯಧರ್ಮ ಸಮನ್ವಿತಃ ||೨೫೭||

ತಾ|| ದಶಮಾಧಿಪತಿ ಧನಸ್ಥಾನದಲ್ಲಾದರೂ, ಸಪ್ತಮದಲ್ಲಾದರೂ, ತೃತೀಯ ಸ್ಥಾನದಲ್ಲಾದರೂ ಇದ್ದರೆ ಜಾತಕನು ಮನಸ್ವಿಯಾಗಿರುವನು. ಗುಣವಂತನು, ವಾಚಾಲಕನು, ಸತ್ಯ, ಧರ್ಮ ಇವುಗಳಿಂದ ಕೂಡಿದವನೂ ಆಗುವನು ||೨೫೮||

## ದಶಮೇಷ ಅಷ್ಟಮಸ್ಥಫಲಂ

ಶ್ಲೋಕ|| ಧರ್ಮೇಶೋ ನಿಧನೇಯಸ್ಯ ದ್ವಿಭಾರ್ಯೋ ಮತಿರ್ಮಾ ಸುಖೀ|
ದುರ್ಗಾ ರಣ್ಯಾಧಿಕಾರೀಸ್ಯಾ ನ್ನಾಸ್ತಿಕೋ ದೇವ ದೂಷಕಃ ||೨೫೯||

## ದಶಮೇಷ ಭಾಗ್ಯಸ್ಥಫಲಂ

ಶ್ಲೋಕ|| ದಶಮೇಶೇತು ಭಾಗ್ಯಸ್ಥೇ ಮಂತ್ರೀ ಸೇನಾಪತಿರ್ಭವೇತ್ (ಅಥವಾ)
ಮಂಡಲಾಧೀಶೋ ಸತ್ಯಧರ್ಮ ಸಮನ್ವಿತ ||೨೬೦||

ತಾ|| ದಶಮಾಧಿಪತಿಯು ಭಾಗ್ಯಸ್ಥಾನದಲ್ಲಿದ್ದರೆ ರಾಜನ ಮಂತ್ರಿ ಸೇನಾಪತಿ ಅಥವಾ ಮಂಡಲಾಧೀಶ್ವರನೂ, ಸತ್ಯಧರ್ಮ ಸಮನ್ವಿತನೂ ಆಗುವನು ||೨೬೦||

ಇತಿ ದಶಮೇಷ ದ್ವಾದಶ ಭಾವಸ್ಥಫಲಂ

ಅಥ ಲಾಭೇಶ ದ್ವಾದಶ ಭಾವಸ್ಥಫಲಂ

## ಲಾಭೇಷ ಲಾಭಸ್ಥಫಲಂ

ಶ್ಲೋಕ॥ ಲಾಭೇಶೇ ಸಂಸ್ಥಿತೇ ಲಾಭೇ ಸವಾಙ್ಮ ಜಾಯತೇ ಧ್ರುವಮ್।
ಪಾಂಡಿತ್ಯಂ ಕವಿತಾಚ್ಛೈವ ವರ್ಧತೇಚ ದಿನೇದಿನೇ ॥೨೬೧॥

ತಾ॥ ಲಾಭಾಧಿಪತಿ ಲಾಭದಲ್ಲಿದ್ದರೆ ಆ ಮನುಷ್ಯನು ವಾಚಾಲಕನಾಗುವನು. ಪಾಂಡಿತ್ಯವು, ಕವಿತ್ವವು ದಿನೇದಿನೇ ಹೆಚ್ಚುವದು ಮತ್ತು ಲಾಭಸ್ಥಾನಕ್ಕುಕ್ತವಾದ ಶುಭ ಫಲಗಳುಂಟಾಗುವುದೆಂದು ಲಾಭಾದಿಪತಿ ಬಲದ ಮೇಲೆ ಸರ್ವವೂ ಅನ್ವಯಿಸ ತಕ್ಕದ್ದು ॥೨೬೧॥

## ಲಾಭೇಶ ವ್ಯಯಭಾವಸ್ಥ ಫಲಂ

ಶ್ಲೋಕ॥ ಪ್ರಾಪ್ತಿ ಸ್ಥಾನಾಧಿಪೇ ರಿಃಫೇಮ್ಲೇಚ ಸಂಸರ್ಗಕಾರಕಃ । ಕಾಮುಕೋ
ಬಹುಕಾಂತಶ್ಚ ಕ್ಷಣಿಕೋ ಲಂಪಟಸ್ತಥಾ ॥೨೬೧॥

ತಾ॥ ಲಾಭಾಧಿಪತಿ ದ್ವಾದಶದಲ್ಲಿದ್ದರೆ ಜಾತಕನು ಮ್ಲೇಚ್ಛ ಸಂಸರ್ಗ ಮಾಡುವನು, ಕಾಮಿ, ಅನೇಕ ಜನ ಪತ್ನಿಗಳುಳ್ಳವನು, ಕ್ಷಣಿಕನು, ಸ್ತ್ರೀ ಲಂಪಟನೂ ಸಹ ಆಗುವನು ॥೨೬೨॥

## ಲಾಭೇಶ ಲಗ್ನಸ್ಥಿತಫಲಂ

ಶ್ಲೋಕ॥ ಲಾಭೇಶೇ ಸಂಸ್ಥಿತೇ ಲಗ್ನೇ ಧನವಾ‍ಸಾತ್ವಿ ಕೋಮಹಾ‍ ।
ಸಮದೃಷ್ಟಿರ್ಮಹಾವಕ್ತಾ ಕೌತುಕೀ ಚ ಭವೇತ್ಸದಾ ॥೨೬೩॥

ತಾ॥ ಲಾಭಾಧಿಪತಿಯು ಲಗ್ನದಲ್ಲಿದ್ದರೆ ಜಾತಕನು ಧನವಂತ, ಅತಿ ಸಾತ್ವಿಕ ಸ್ವಭಾವವುಳ್ಳವನು, ಸರ್ವತ್ರ ಸಮವಾಗಿ ನೋಡತಕ್ಕವನು, ಮಹಾ ವಾಙ್ಮಯಿ, ಕೌತುಕಿಯೂ, ಸದಾ ಚಮತ್ಕಾರವುಳ್ಳವನೂ ಆಗುವನು ॥೨೬೩॥

## ಲಾಭೇಶ ಧನ ಪಂಚಮಸ್ಥಿತಫಲಂ

ಶ್ಲೋಕ॥ ಲಾಭೇಶೇಚ ಧನೇಪುತ್ರೇ ನಾನಾಸುಖ ಸಮನ್ವಿತಃ । ಪುತ್ರವಾ‍
ಧಾರ್ಮಿಕ ಶ್ಚೈವ ಸರ್ವಸಿದ್ಧಿಪ್ರದಾಯಕಃ ॥೨೬೪॥

ತಾ॥ ಲಾಭಾಧಿಪತಿ ದ್ವಿತೀಯದಲ್ಲಾಗಲೀ, ಪಂಚಮದಲ್ಲಾಗಲೀ ಇದ್ದರೆ ನಾನಾ ವಿಧ ಸೌಖ್ಯವುಳ್ಳವನು, ಪುತ್ರವಂತನು, ಧರ್ಮವುಳ್ಳವನು, ಸರ್ವಸಿದ್ಧಿಯುಳ್ಳವನೂ ಆಗುವನು ॥೨೬೪॥

## ಲಾಭೇಶ ತೃತೀಯ ಚತುರ್ಥಸ್ಥಿತಿಫಲಂ

ಶ್ಲೋಕ॥ ಲಾಭೇಶೇ ಸಹಜೇತುರ್ಯೇ ತೀರ್ಥಾದೌತತ್ಪರೋಮಹಾ‍ ।
ಕುಶಲಃ ಸರ್ವಕಾರ್ಯೇಷು ಕೇವಲಂ ಶೂಲರೋಗವಾ‍ ॥೨೬೫॥

ತಾ|| ಲಾಭಾಧಿಪತಿಯು ತೃತೀಯ ಚತುರ್ಥಸ್ಥಾನಗಳಲ್ಲಿ ಇದ್ದರೆ, ಜಾತಕನು, ಪುಣ್ಯ ತೀರ್ಥಗಳಲ್ಲಿ ಸಂಚರಿಸುವನು. ಸರ್ವ ಕಾರ್ಯದಲ್ಲಿ ಕುಶಲತೆಯುಳ್ಳವನು, ಶೂಲರೋಗವುಳ್ಳವನೂ ಆಗುವನು ||೨೬೫||

## ಲಾಭೇಶ ಷಷ್ಠಸ್ಥ ಫಲಂ

ಶ್ಲೋಕ|| ಲಾಭೇಶೇ ಷಷ್ಠಭವನೇ ನಾನಾರೋಗ ಸಮನ್ವಿತಃ ।
ಸರ್ವಂಸುಖಂ ಭವೇತ್ತಸ್ಯ ಪ್ರವಾಸೀ ಪರಸೇವಕಃ ||೨೬೬||

ತಾ|| ಲಾಭಾಧಿಪತಿಯು ಷಷ್ಠದಲ್ಲಿ ಇದ್ದರೆ ನಾನಾ ವಿಧವಾದ ರೋಗದಿಂದ ಕೂಡಿದವನು. ಸರ್ವ ಸುಖವುಳ್ಳವನು, ಪ್ರವಾಸಿಯು ಪರರ ಚಾಕರನೂ (ದೂತ) ಆಗುವನು ||೨೬೬||

## ಲಾಭೇಶ ಸಪ್ತಮ ರಂಧ್ರಸ್ಥಫಲಂ

ಶ್ಲೋಕ|| ಲಾಭೇಶೇ ಸಪ್ತಮೇರಂಧ್ರೇ ಭಾರ್ಯಾತಸ್ಯ ನಜೀವತಿ । ಉದಾರೋ ಗುಣವಾ಼ ಕರ್ಮೀ಼ ಮೂರ್ಖೋ಼ ಭವತೀ ನಿಶ್ಚಿತಮ್
||೨೬೭||

ತಾ|| ಲಾಭಾಧಿಪತಿಯು ಸಪ್ತಮದಲ್ಲಾಗಲೀ, ಅಷ್ಟಮದಲ್ಲಾಗಲೀ, ಇದ್ದರೆ ಹೆಂಡತಿ ಬದುಕುವುದಿಲ್ಲ, ಉದಾರನು, ಗುಣವಂತನು ಕರ್ಮಶ್ರದ್ಧೆಯುಳ್ಳವನು ಮತ್ತು ಖಂಡಿತವಾಗಿ ಮೂರ್ಖನಾಗುವನು ||೨೬೭||

## ಲಾಭೇಶ ನವಮ ದಶಮಸ್ಥಿತಫಲಂ

ಶ್ಲೋಕ|| ಲಾಭೇಶೇ ಗಗನೇಧರ್ಮೇ ರಾಜಪೂಜ್ಯೋ ಧನಾಧಿಪಃ । ಚತುರಃ ಸತ್ಯ ವಾದೀಚ ನಿಜಧರ್ಮ ಸಮನ್ವಿತಃ ||೨೬೮||

ತಾ|| ಲಾಭಾಧಿಪತಿ ದಶಮದಲ್ಲಾಗಲೀ, ನವಮದಲ್ಲಾಗಲೀ ಇದ್ದರೆ ರಾಜ ಪೂಜ್ಯನು, ಧನಾಧಿಪತಿಯು, ಚತುರನು, ಸತ್ಯವಾದಿಯು, ಸ್ವಧರ್ಮದಿಂದ ನಡೆಯು ವವನೂ ಆಗುವನು ||೨೬೮||

ಇತಿ ಲಾಭೇಶ ತನ್ವಾದಿ ದ್ವಾದಶಭಾವಸ್ಥಿತಫಲ
ವ್ಯಯೇಶ ತನ್ವಾದಿ ದ್ವಾದಶ ಭಾವಸ್ಥಿತಫಲಂ

## ವ್ಯಯೇಶ ಷಷ್ಠಾಷ್ಟಸ್ಥ ಫಲಂ

ಶ್ಲೋಕ|| ವ್ಯಯೇಶೇರಿ ವ್ಯಯೇಪಾಪಿ ಮಾತುರ್ಮೃತ್ಯುವಿಚಿಂತಕಃ । ಕ್ರೋಧೀ ಸಂತಾನದುಃಖೀಚ ಪರಜಾಯಾಸುಲಂಪಟಃ ||೨೬೯||

ತಾ|| ವ್ಯಯಾಧಿಪತಿಯು ಷಷ್ಠದಲ್ಲಾಗಲೀ, ದ್ವಾದಶದಲ್ಲಾಗಲೀ ಇದ್ದರೆ

ಪಾಪಿಯು, ಮಾತೃಮೃತ್ಯು ಚಿಂತೆಯುಳ್ಳವನು, ಕೋಪವುಳ್ಳವನು, ಸಂತಾನದ ವಿಷಯದಲ್ಲಿ ದುಃಖವುಳ್ಳವನೂ, ಪರಸ್ತ್ರೀಯರಲ್ಲಿ ಭೋಗವುಳ್ಳವನೂ ಆಗುವನು ||೨೬೯||

## ವ್ಯಯೇಶ ಸಪ್ತಮ ಲಗ್ನಸ್ಥಿತಫಲಂ

ಶ್ಲೋಕ|| ವ್ಯಯೇಶೇ ಮದನೇಲಗ್ನೇ ಜಾಯಾಸೌಖ್ಯಂ ಭವೇನ್ನಹಿ ।
ದುರ್ಬಲಃ ಕಫ ರೋಗೀಚ ಧನವಿದ್ಯಾವಿವರ್ಜಿತಃ ||೨೭೦||

ತಾ|| ವ್ಯಯಾಧಿಪತಿಯು ಸಪ್ತಮದಲ್ಲಾಗಲೀ, ಲಗ್ನ ಕೇಂದ್ರದಲ್ಲಾಗಲೀ, ಇದ್ದರೆ ಪತ್ನೀ ಸೌಖ್ಯವಿಲ್ಲದವನು, ದುರ್ಬಲ ಶರೀರವುಳ್ಳವನು, ಕಫರೋಗಿಯೂ, ಧನ, ವಿದ್ಯೆ ಈ ಎರಡರಿಂದಲೇ ಸೋಲಲ್ಪಟ್ಟವನೂ (ಇಲ್ಲದವನು) ಆಗುವನು ||೨೭೦||

## ವ್ಯಯೇಶ ಧನ ರಂಧ್ರಸ್ಥಫಲಂ

ಶ್ಲೋಕ|| ವ್ಯಯೇಶೇ ದ್ವಿತಯೋ ರಂಧ್ರೇ ವಿಷ್ಣುಭಕ್ತಿ ಸಮನ್ವಿತಃ ।
ಧಾರ್ಮಿಕಃ ಪ್ರಿಯವಾದೀಚ ಸರ್ವದ್ಗುಣ ಸಂಯುತಃ ||೨೭೧||

ತಾ|| ವ್ಯಯಾಧಿಪತಿ ದ್ವಿತೀಯದಲ್ಲಾಗಲೀ, ಅಷ್ಟಮದಲ್ಲಾಗಲೀ ಇದ್ದರೆ ವಿಷ್ಣು ಭಕ್ತಿಯುಳ್ಳವನು. ಧರ್ಮಿಷ್ಟನು, ಪ್ರಿಯವಾಗಿ ಮಾತನಾಡುವನು, ಸಕಲ ಗುಣವಂತನೂ ಆಗುವನು ||೨೭೧||

## ವ್ಯಯೇಶ ತೃತೀಯ ನವಮಸ್ಥಿತಫಲಂ

ಶ್ಲೋಕ|| ವ್ಯಯೇಶೇ ಸಹಜೇಧರ್ಮೇ ಸ್ವಶರೀರಸ್ಯ ಪೋಷಕಃ ।
ಭಾರ್ಯಾದ್ವೇಷೀ ಪ್ರಿಯದ್ವೇಷೀ ಗುರುದ್ವೇಷೀ ಭವೇನ್ನರಃ ||೨೭೨||

ತಾ|| ವ್ಯಯಾಧಿಪತಿ ತೃತೀಯದಲ್ಲಾಗಲೀ, ನವಮದಲ್ಲಾಗಲೀ ಇದ್ದರೆ, ಸ್ವಶರೀರಕ್ಕೆ ಪೋಷಣೆ ಮಾಡಿಕೊಳ್ಳುವುದರಲ್ಲಿ ಚತುರನು, ಹೆಂಡತಿ, ಸ್ನೇಹಿತ, ಗುರು ಈ ಮೂರು ಜನಗಳಲ್ಲಿಯೂ ದ್ವೇಷವುಳ್ಳವನು ಆಗುವನು ||೨೭೨||

## ವ್ಯಯೇಶ ದಶಮ ಲಾಭಸ್ಥಫಲಂ

ಶ್ಲೋಕ|| ವ್ಯಯೇಶೇ ದಶಮೇಲಾಭೇ ಪುತ್ರಸೌಖ್ಯಂ ಭವೇನ್ನಹಿ ।
ಮಣಿಮಾಣಿಕ್ಯ ಮುಕ್ತಾನಿ ಧತ್ತೇ ಕಿಂಚಿತ್ಸಮಾಲಾಭೇತ್ ||೨೭೩||

ತಾ|| ವ್ಯಯಾಧಿಪತಿ ದಶಮದಲ್ಲಾಗಲೀ, ಲಾಭಸ್ಥಾನದಲ್ಲಾಗಲೀ ಇದ್ದರೆ ಪುತ್ರಸೌಖ್ಯವಿಲ್ಲ, ರತ್ನ ಮಾಣಿಕ್ಯ, ಮುತ್ತು ಮೊದಲಾದವುಗಳಿಂದ ಕಿಂಚಿತ ಲಾಭ ಉಂಟಾದವನೂ ಆಗುವನು ||೨೭೩||

## ವ್ಯಯೇಶ ಚತುರ್ಥ ಪಂಚಮಸ್ಥಫಲಂ

ಶ್ಲೋಕ॥ ವ್ಯಯೇಶೇ ಪಂಚಮೇತುರ್ಯೇ ಕ್ಷೇತ್ರಸೌಖ್ಯಂ ಭವೇನ್ನಹಿ। ಪುತ್ರಸೌಖ್ಯಂ ಭವೇದಲ್ಪಂ ಮಾತೃಸೌಖ್ಯಂತು ಕಾ ಕಥಾ ॥೨೭೪॥

ತಾ॥ ವ್ಯಯಾಧಿಪತಿಯು ಚತುರ್ಥದಲ್ಲಾಗಲೀ, ಪಂಚಮದಲ್ಲಾಗಲೀ ಇದ್ದರೆ ಭೂಮಿಯಿಂದ ಸೌಖ್ಯವಿಲ್ಲದವನೂ ಆಗುವನು ॥೨೭೪॥

ಇತಿ ವ್ಯಯೇಶ ತನ್ವಾದಿ ದ್ವಾದಶಭಾವಸ್ಥಿತ ಫಲಂ

## ಗ್ರಹಾಣಾಂಫಲಾಫಲ ವಿಚಾರಃ

ಶ್ಲೋಕ॥ ಗ್ರಹೇ ಪೂರ್ಣಬಲೇಪ್ರಾಪ್ತೇ ಫಲಂ ಪೂರ್ಣಂ ಸಮಾದಿಶೇತ್।
ಅರ್ಧ ಮರ್ಧಂ ಪಾದಹೀನೇ ತತ್ರೇದಂ ಪಾದಮಂಘ್ರಿಣಾಂ
ಭಾವಾನಾಂ ದ್ವಾದಶಾನಾಂಚ ಸರ್ವೇಷಾಂ ಫಲಮಾದಿಶೇತ್ ।
ಭಾವಸ್ಥಾನಾಂ ಗ್ರಹಾಣಾಂಚ ಫಲಂತೇ ಕಥಿತಂಮಯಾ ॥೨೭೫॥

ಏತತ್ತೇಕಥಿತಂ ವಿಪ್ರಭಾವಾನಾಂಚ ಫಲಾಫಲಂ । ಬಲಾಬಲವಿವೀಕೇನ ಸರ್ವೇಷಾಂ ಫಲಮಾದಿಶೇತ್ ॥೨೭೫॥

ತಾ॥ ಈ ಮೇಲೆ ಹೇಳಲ್ಪಟ್ಟ ತನ್ವಾದಿದ್ವಾದಶ ಭಾವಾಧಿಪತಿಗಳು ಯಾವ ಯಾವ ಭಾವದಲ್ಲಿದ್ದರೆ ಯಾವ ಯಾವ ಫಲಕೊಡುತ್ತಾರೆಂದು ಹೇಳಿರುತ್ತೋ ಅವುಗಳನ್ನು ಗ್ರಹಗಳು ಆ ಭಾವದಲ್ಲಿದ್ದು, ಬಲಿಷ್ಠರಾಗಿದ್ದರೆ ಪೂರ್ಣಫಲ ಕೊಡುತ್ತಾರೆ, ಅರ್ಧಬಲವುಳ್ಳವರಾಗಿದ್ದರೆ, ಅರ್ಧಬಲಕ್ಕೆ ತಕ್ಕಫಲವನ್ನು, ಅಲ್ಪಬಲವುಳ್ಳವರಾಗಿದ್ದರೆ ಪಾದಾಂಶಫಲವನ್ನು ಬಲಾಬಲ ವಿವೇಕವನ್ನು ತಿಳಿದುಕೊಂಡು ಹೇಳಬೇಕೆಂದು ಪರಾಶರರು ಮೈತ್ರೇಯ ಋಷಿಗಳಿಗೆ ಉಪದೇಶಿಸಿರುತ್ತಾರೆ ॥೨೭೫॥

ಸೂಚನೆ-ಇದುವರಿಗೂ ನಿರೂಪಿಸಿದ ತನ್ವಾದಿ ದ್ವಾದಶ ಭಾವಾದಿಪತಿಗಳು, ಯಾವ ಯಾವ ಭಾವದಲ್ಲಿರುತ್ತಾರೋ ಆ ಫಲಗಳನ್ನು ಆ ಭಾವದಲ್ಲಿ ಗ್ರಹವಿದ್ದ ಮಾತ್ರಕ್ಕೆ ಹೇಳಕೂಡದು. ಉಚ್ಚ, ಪರಮೋಚ್ಚ, ಮೂಲತ್ರಿಕೋಣ, ಸ್ವಕ್ಷೇತ್ರ, ಮಿತ್ರಕ್ಷೇತ್ರ, ಸಮಕ್ಷೇತ್ರ, ಶತ್ರುಕ್ಷೇತ್ರ, ಈ ವಿಧವಾದ ತಾರತಮ್ಯಗಳನ್ನಾಲೋಚಿಸಿ ಫಲನಿರ್ಣಯ ಮಾಡಬೇಕು ॥೨೭೫॥

## ಅಥ ತನುಭಾವ ಫಲಂ ॥ಪರಾಶರಃ॥

ಶ್ಲೋಕ॥ ದೇಹಾಧಿಪಃ ಪಾಪಯುತೋಽಷ್ಟಮಷ್ಠೋ ವ್ಯಯಾರಿಗೋವಾಂಗ ಸುಖಂ ನಿಹಂತಿ । ಸರ್ವತ್ರಭಾವೇಷು ಚಯೋಜನೀಯಂಬಲಂ ಬುಧೈರ್ಭಾವ ವಶಾತ್ಫಲಂಹಿ ॥೨೭೬॥

ತಾ।। ಲಗ್ನಭಾವವೇ ತನುಭಾವವೆಂದು ಸಂಕೇತವು. ಲಗ್ನಾಧಿಪತಿಯು ಪಾಪ ಗ್ರಹಯುತನಾಗಿ ಷಷ್ಠಾಷ್ಟಮವ್ಯಯದಲ್ಲಿದ್ದರೆ (೬-೮-೧೨) ಶರೀರಸೌಖ್ಯವುಂಟಾಗು ವುದಿಲ್ಲ. ಈ ಪ್ರಕಾರವಾಗಿ ತನ್ವಾದಿ ೧೨ ಭಾವಗಳಿಗೂ ವಿದ್ವಾಂಸರುಗಳು ಫಲವನ್ನಾಲೋಚನೆಮಾಡಿ ಭಾವಗಳ ಮೂಲವಾಗಿ ತಿಳಿಯತಕ್ಕದು, ಅದು ಯಾವ ಪ್ರಕಾರವಂದರೆ-ಧನಾಧಿಪತಿ ಪಾಪಯುಕ್ತನಾಗಿ ೬-೮-೧೨ನೆಯ ಭಾವಗಳಲ್ಲಿದ್ದರೆ ದ್ರವ್ಯಸೌಖ್ಯವಿರುವದಿಲ್ಲ, ತೃತೀಯಾಧಿಪತಿ ಪಾಪಯುತನಾಗಿ ೬-೮-೧೨ ರಲ್ಲಿದ್ದರೆ; ಭ್ರಾತೃಸೌಖ್ಯವಿರುವದಿಲ್ಲ. ಚತುರ್ಥಭಾವಾಧಿಪತಿ ಪಾಪಯುತನಾಗಿ ೬-೮-೧೨ ಭಾವದಲ್ಲಿದ್ದರೆ, ಮಾತೃಗೃಹ, ಭೂಮಿ, ವಿದ್ಯೆ ಈ ಸೌಖ್ಯವಿರುವದಿಲ್ಲ, ಪುತ್ರಸ್ಥಾನಾಧಿಪತಿ ಪಾಪಯುತನಾಗಿ ೬-೮-೧೨ರಲ್ಲಿದ್ದರೆ, ಪುತ್ರ, ಬುದ್ಧಿ, ಮಂತ್ರಿತ್ವಕ್ಕೆ ಸರಿಯಾದ ಆಲೋಚನಾಶಕ್ತಿ, ಇವೇ ಮೊದಲಾದ ಫಲಗಳುಂಟಾಗುವುದಿಲ್ಲ. ಷಷ್ಠಾಧಿಪತಿ ಪಾಪಯುತನಾಗಿ ೬-೮-೧೨ರಲ್ಲಿದ್ದರೆ, ಶತ್ರುಗಳು ಹೆಚ್ಚುವರು. ರೋಗಪೀಡೆ, ಸಾಲವು ಹುಟ್ಟುವದಿಲ್ಲ ಇವೇ ಮೊದಲಾದ ಫಲಗಳುಂಟಾಗುತ್ತವೆ. ಸಪ್ತಮಾಧಿಪತಿ ೬-೮-೧೨ರಲ್ಲಿದ್ದರೆ, ಪತ್ನೀ ಸೌಖ್ಯವಿಲ್ಲ, ಅಷ್ಟಮಾಧಿಪತಿ ಅಷ್ಟಮಸ್ಥಾನವನ್ನು ಬಿಟ್ಟು ಉಳಿದ ಸ್ಥಾನ ೬-೧೨ರಲ್ಲಿದ್ದರೆ, ಆಯುರ್ಯೋಗವಿಲ್ಲ, ನವಮಾಧಿಪತಿ ೬-೮-೧೨ರಲ್ಲಿದ್ದರೆ, ಪಿತೃ, ಭಾಗ್ಯ, ಮೊದಲಾದ ಶುಭಪುಣ್ಯ ಕರ್ಮಗಳಿಲ್ಲದವನಾಗುವನು. ದಶಮಾಧಿಪತಿ ೬-೮-೧೨ನೇ ಸ್ಥಾನಗಳಲ್ಲಿದ್ದರೆ, ರಾಜ್ಯ, ಅಧಿಕಾರ, ಜೀವನೋಪಾಯ, ಈ ಪ್ರಕಾರ ಶುಭಫಲವಿರುವದಿಲ್ಲ. ದಶಮಾಧಿಪತಿ ಷಷ್ಠಾಷ್ಟಮವ್ಯಯದಲ್ಲಿದ್ದರೆ ಜೀವನೋಪಾಯ, ವ್ಯಾಪಾರ, ಆಜ್ಞೆ, ಮೊದಲಾದ ಫಲಗಳನ್ನು ನ್ಯೂನವಾಗಿಯೂ, ಪ್ರತಿಕೂಲವಾಗಿಯೂ, ಮಾಡುವನು. ಲಾಭಾಧಿಪತಿಯು ೬-೮-೧೨ರಲ್ಲಿದ್ದರೆ ಲಾಭಶೂನ್ಯವಾಗಿಯೂ, ವ್ಯಯಾಧಿಪತಿಯು, ವ್ಯಯಸ್ಥಾನವನ್ನು ಬಿಟ್ಟು ೬-೮ರಲ್ಲಿದ್ದರೆ ವ್ಯಯವಿಲ್ಲದೆಯೂ, ವ್ಯಯದಲ್ಲಿಯೇ ಪಾಪಗ್ರಹಯುತನಾದರೆ, ದುರ್ವ್ಯಯವುಳ್ಳವನಾಗಿಯೂ, ನರಕಪ್ರಾಪ್ತಿಯುಳ್ಳವನಾಗಿಯೂ ಈ ಪ್ರಕಾರ ಅಶುಭಫಲವನ್ನು ಕೊಡುವನು. ಅಂದರೆ, ಭಾವಾಧಿಪತಿ, ಭಾವಸ್ಥಗ್ರಹ, ಭಾವಕ್ಕೆ ವೀಕ್ಷಿಸುವ ಗ್ರಹ, ಈ ವಿಧವಾದ ಬಲಾಬಲಗಳನ್ನು ನೋಡಿ ಫಲವನ್ನಾ-ಲೋಚಿಸಿ ನಿರ್ಣಯ ಮಾಡಬೇಕು ।।೨೭೬।।

ಶ್ಲೋಕ।। ಏವಂತೃತೀಯೇಽಪಿಚ ಸಪ್ತಮೇಽಪಿ ವಿಮೃಶ್ಯಂಕೃತಿಭಿಃಪ್ರಯಾತ್ನಾತ್।
ತಥಾವ್ಯಯೇಚಾಪಿತಥಾರಿಪೌ ಮೃತೇ ಸ್ಥಿತೇ ವಿಲಗ್ನಾಧಿಪತೌ ಫಲಂಸ್ಯಾತ್ ।।೨೭೬।।

ತಾ।। ಈ ಮೇಲೆ ಹೇಳಲ್ಪಟ್ಟ ಪ್ರಕಾರವಾಗಿಯೇ ತೃತೀಯ, ಸಪ್ತಮ, ಭಾವ

ಗಳಿಗೆ ಫಲವನ್ನು ನೋಡಿ ತಿಳಿಯತಕ್ಕದ್ದು. ಮತ್ತು ವ್ಯಯ, ಷಷ್ಠ, ಅಷ್ಟಮ ಈ ಮೂರು ರಾಶಿಗಳು ಆ ಗ್ರಹಕ್ಕೆ ಮಿತ್ರರಾಶಿಗಳಾಗಿದ್ದು, ಅಲ್ಲೇ ಲಗ್ನಾಧಿಪತಿ ಇದ್ದರೆ ಶುಭ ಫಲವನ್ನೇ ಕೊಡುವನು ॥೨೭೭॥

ಶ್ಲೋಕ॥ ಪಾಪೋವಿಲಗ್ನಾಧಿಪತಿರ್ವಿಲಗ್ನೇ ಚಂದ್ರೇವಿಗ್ನೇಯದಿಬಾಲಕಃ ಸ್ಯಾತ್।
ತದಾತಿರೋಗಂ ಸಹಿಕೇಂದ್ರಸಂಸ್ಥಃ ತ್ರಿಕೋಣಲಾಭೇಷು ಗದಂ ನಿಹಂತಿ ॥೨೭೮॥

ತಾ॥ ಲಗ್ನಾಧಿಪತಿ ಪಾಪಗ್ರಹವಾಗಿ ಲಗ್ನದಲ್ಲಿದ್ದರೂ, ಚಂದ್ರನೇ ಲಗ್ನಾಧಿಪತಿ ಯಾಗಿ ಲಗ್ನದಲ್ಲಿದ್ದರೂ ಬಾಲನು ರೋಗಿಯಾಗುವನು, ಈ ಮೇಲೆ ಹೇಳಲ್ಪಟ್ಟ ಗ್ರಹಗಳೇ ೪೭೧೦೯೫೧೧ ರಲ್ಲಿದ್ದರೆ ರೋಗಿಯಾಗುವದಿಲ್ಲ. ಸುಖಾರೋಗ್ಯ ವುಳ್ಳವನಾಗುತ್ತಾನೆ ॥೨೭೮॥

ಶ್ಲೋಕ॥ ದೇಹಾಧಿಪಶ್ಚಂದ್ರ ಗೃಹಾಧಿಪೋವಾ ತೃತೀಯರಿಃಫಾ ರಿಗತೋ ಬಲೀಸ್ಯಾತ್ । ನೀಚಾಸ್ತಗದ್ವ್ಯಷ್ಟಗೃಹೇ ಸ್ಥಿತೋವಾ ಕಾರ್ಶ್ಯಂ ಶರೀರೇತಿ ಗದಂ ಕರೋತಿ ॥೨೭೯॥

ತಾ॥ ದೇಹಾಧಿಪತಿಯಾಗಲೀ, ಚಂದ್ರ ಗೃಹಾಧಿವತಿಯಾಗಲೀ ಬಲಿಷ್ಠನಾಗಿ, ತೃತೀಯ, ಷಷ್ಠ, ಅಷ್ಟಮ, ವ್ಯಯ ಈ ನಾಲ್ಕು ಸ್ಥಾನಗಳಲ್ಲಿ ಯಾವ ಸ್ಥಾನಗಳಲ್ಲಿದ್ದರೂ ನೀಚನಾಗಲೀ, ಅಸ್ತನಾಗಲೀ ಆಗಿದ್ದರೆ ಅಥವಾ ಉಳಿದ ರಾಶಿಗಳಲ್ಲಿ ನೀಚಸ್ಥನಾಗಿ ದ್ದರೂ, ಶರೀರ ಕೃಶತ್ವವನ್ನೂ, ರೋಗವನ್ನೂ ಉಂಟುಮಾಡುತ್ತಾನೆ ॥೨೭೯॥

## ಶರೀರ ಸೌಖ್ಯಯೋಗಃ

ಶ್ಲೋಕ॥ ಲಗ್ನಾಧಿಪೋವಾ ಜೀವೋವಾ ಶುಕ್ರೋವಾ ಯದಿಕೇಂದ್ರಗಃ ।
ತಸ್ಯ ಪುತ್ರಸ್ಯ ದೀರ್ಘಾಯುರ್ಧನವಾನ್ರಾಜವಲ್ಲಭಃ ॥೨೮೦॥

ತಾ॥ ಲಗ್ನಾಧಿಪತಿಯಾಗಲೀ, ಗುರುಶುಕ್ರರಾಗಲೀ, ಲಗ್ನದಿಂದ ಕೇಂದ್ರ (ತ್ರಿಕೋಣ) ಸ್ಥಾನಗಳಲ್ಲಿದ್ದರೆ ದೀರ್ಘಾಯುಸ್ಸು, ಸಂಪತ್ತು, ರಾಜಪ್ರೀತಿ ಸಹ ಉಂಟಾಗುವದು ॥೨೮೦॥

ಶ್ಲೋಕ॥ ಲಗ್ನಾಧಿಪೋನ್ನತಬಲೈಶ್ಚ ಶುಭೈರ್ನವಕೇನ ದೃಷ್ಟಸ್ಯ । ಕೇಂದ್ರಸ್ಥಿತೇ ಶುಭಾವಲೋಕೋ ಮೃತ್ಯುಹೀನೋಪಿ ದೀರ್ಘಾಯುಃ ॥೨೮೧॥

ತಾ॥ ಲಗ್ನಾಧಿಪತಿಯು ಉಚ್ಚದಲ್ಲಿದ್ದರೂ, ಅತ್ಯಂತ ಬಲಿಷ್ಠನಾಗಿ, ಕೇಂದ್ರ ಸ್ಥಿತನಾಗಿ ಶುಭಗ್ರಹದ ನವಾಂಶೆಯಲ್ಲಿದ್ದು, ಶುಭಗ್ರಹವೀಕ್ಷಿತನಾದರೆ, ಅಕಾಲ ಮೃತ್ಯುಹೀನನಾಗಿ ದೀರ್ಘಾಯುವಾಗಿರುವನು ॥೨೮೧॥

ಶ್ಲೋಕ॥ ಕೇಂದ್ರತ್ರಿಕೋಣಭವನೇಷು ನಯಸ್ಯ ಪಾಪಾ ಲಗ್ನಾಧಿಪಸ್ಸುರಗುರು ಶ್ಚತುರಷ್ಟಮಸ್ಥಃ । ಭುಕ್ತ್ವಾಸುಖಾನಿ ವಿವಿಧಾನಿಚ ಪುಣ್ಯಕರ್ಮಾ ಜೀವೇತ್ತು ವರ್ಷಶತಮೇವ ವಿಮುಕ್ತರೋಗಃ ॥೨೮೨॥

ತಾ॥ ಕೇಂದ್ರ ತ್ರಿಕೋಣಗಳಲ್ಲಿ ಪಾಪಗ್ರಹಗಳಿಲ್ಲದೆ ಲಗ್ನಾಧಿಪತಿ ಚತುರ್ಥದಲ್ಲು, ಬೃಹಸ್ಪತಿ ಅಷ್ಟಮದಲ್ಲೂ ಇದ್ದರೆ ಜಾತಕನು ಪುಣ್ಯಕಾರ್ಯಗಳನ್ನು ಮಾಡುವವನಾಗಿಯೂ, ರೋಗರಹಿತನಾಗಿಯೂ, ಶತಸಂವತ್ಸರ ಜೀವಿಸುವವ ನಾಗುವನು ॥೨೮೨॥

## ದೇಹಪುಷ್ಟಿ ಯೋಗಃ

ಶ್ಲೋಕ॥ ಲಗ್ನೇಶೇ ಚರರಾಶಿಸ್ಥೇ ಶುಭಗ್ರಹನಿರೀಕ್ಷಿತೇ । ಕೀರ್ತಿ ಶ್ರೀಮಾನ್ಮಹಾ ಭೋಗೀ ದೇಹಪುಷ್ಟಿ ಸಮನ್ವಿತಃ ॥೨೮೩॥

ತಾ॥ ಲಗ್ನಾಧಿಪತಿ ಚರರಾಶಿಯಲ್ಲಿದ್ದು ಶುಭಗ್ರಹದಿಂದ ನೋಡಲ್ಪಟ್ಟಿದ್ದರೆ ಜಾತಕನು ದೇಹಪುಷ್ಟಿಯುಳ್ಳವನಾಗಿಯೂ, ಶ್ರೀಮಂತನಾಗಿಯೂ ಮಹಾ ಭೋಗಿಯಾಗಿಯೂ ಸೌಖ್ಯವಂತನಾಗುವನು ॥೨೮೩॥

## ರಾಜಲಕ್ಷಣ ಯೋಗಃ

ಶ್ಲೋಕ॥ ಜೀವಃ ಶುಕ್ರೋ ಬುಧಶ್ಚಂದ್ರೋ ಲಗ್ನೇಶಶಿ ಸಮನ್ವಿತಃ । ಲಗ್ನಾತ್ಕೇಂದ್ರ ಗತಶ್ಚೈವ ರಾಜಲಕ್ಷಣ ಸಂಯುತಃ ॥೨೮೪॥

ತಾ॥ ಲಗ್ನಕೇಂದ್ರದಲ್ಲಿ ಗುರು, ಶುಕ್ರ, ಬುಧ, ಚಂದ್ರರಿದ್ದರೆ ೧ ಯೋಗ, ಅಥವಾ ಲಗ್ನದಿಂದ ಕೇಂದ್ರ ಸ್ಥಾನಗಳಲ್ಲಿದ್ದರೂ, ರಾಜಲಕ್ಷಣಗಳಿಂದ ಯುಕ್ತನಾಗಿರುವನು ॥೨೮೪॥

## ದೇಹ ಕಷ್ಟಯೋಗಃ

ಶ್ಲೋಕ॥ ಲಗ್ನೇಶ್ವರಃ ಕ್ರೂರ ಸಮನ್ವಿತಶ್ಚೇದೇಹಸ್ಯ ಸೌಖ್ಯಾದಿ ವಿನಾಶಮಾಹುಃ। ತಾದೃಕ್ಫಲಂ ನಾಶಗತಸ್ತು ಸೋಪಿ ಶುಭೇಕ್ಷಿತಶ್ಚೇತ್ಫಲ ಮನ್ಯತಾ ಸ್ಯಾತ್ ॥೨೮೫॥

ತಾ॥ ಲಗ್ನಾಧಿಪತಿ ಪಾಪಗ್ರಹ ಸಮನ್ವಿತನಾದರೆ ದೇಹಸೌಖ್ಯ ಹೀನನಾಗುವನು, ಮತ್ತು ಲಗ್ನಾಧಿಪತಿ ಅಷ್ಟಮವನ್ನು ಹೊಂದಿದರೂ ದೇಹಸೌಖ್ಯ ಹೀನನಾಗುವನು. ಆದರೆ ಶುಭಗ್ರಹದಿಂದ ನೋಡಲ್ಪಟ್ಟರೆ ದೇಹಸೌಖ್ಯಹೀನನಾಗುವುದಿಲ್ಲ ॥೨೮೫॥

## ರೋಗಗ್ರಸ್ತಯೋಗಃ

ಶ್ಲೋಕ॥ ದುಃಸ್ಥಾನಪೇನಾತಿ ವಿಲಗ್ನನಾಥೇ ಯುತೇ ವಿಲಗ್ನೇ ತನುರೋಗ ಭಾಕ್ಸ್ಯಾತ್। ಪಾಪೇವಿಲಗ್ನೇತು ಬಲೈರ್ವಿಹೀನೇ ಲಗ್ನೇಶ್ವರೋ ರೋಗ ನಿಪೀಡಿತಃ ಸ್ಯಾತ್ ॥೨೮೬॥

ತಾ॥ ಲಗ್ನಾಧಿಪತಿ ಷಷ್ಠಾಷ್ಟಮ ದ್ವಾದಶಾಧಿಪತಿಗಳನ್ನು ಕೂಡಿ ಲಗ್ನದಲ್ಲಿದ್ದರೆ ವ್ಯಾಧಿಗ್ರಸ್ತನಾಗುವನು ಅಥವಾ ಲಗ್ನಾಧಿಪತಿ ಬಲಹೀನನಾಗಿ ಲಗ್ನದಲ್ಲಿ ಪಾಪಗ್ರಹ ವಿದ್ದರೆ ರೋಗಗ್ರಸ್ತನಾಗುವನು ॥೨೮೬॥

ಶ್ಲೋಕ॥ ಬಲೈರ್ವಿಹೀನೇ ಸತಿಲಗ್ನನಾಥೇ ಕೇಂದ್ರತ್ರಿಕೋಣೇ ಸತಿರೋಗ ಭಾಕ್ಸ್ಯಾತ್ । ಲಗ್ನೇಶ್ವರಾಧಿಷ್ಠಿತ ರಾಶಿನಾಥೋ ದುಃಸ್ಥಾನಗೋ ದುರ್ಬಲ ದೇಹಭಾಕ್ಸ್ಯಾತ್ ॥೨೮೭॥

ತಾ॥ ಲಗ್ನಾಧಿಪತಿ ಬಲಹೀನನಾಗಿ ಕೇಂದ್ರ ತ್ರಿಕೋಣಗಳಲ್ಲಿದ್ದರೂ ಜಾತಕನು ರೋಗಗ್ರಸ್ತನಾಗುವನು. ಲಗ್ನಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶ್ಯಾಧಿಪತಿಯು ೯-೮-೧೨ರಲ್ಲಿದ್ದರೆ ದುರ್ಬಲವಾದ ಶರೀರವುಳ್ಳವನಾಗುವನು ॥೨೮೭॥

ಶ್ಲೋಕ॥ ತತ್ತದ್ಗ್ರಹಾಧಿಷ್ಠಿತ ರಾಶಿನಾಥೈರ್ದುಸ್ಥೈರ್ವಿಲಗ್ನಾದಿ ವಿನಾಶಮಾಹುಃ ॥

ತಾ॥ ಯಾವ ಯಾವ ಭಾವಾಧಿಪತಿಗಳು ಯಾವ ಯಾವ ರಾಶಿಯಲ್ಲಿ-ರುವರೋ ಆ ರಾಶ್ಯಧಿಪತಿಗಳು ೬-೮-೧೨ನೆ ರಾಶಿಗಳಲ್ಲಿದ್ದರೆ ಆಯಾಯ ಭಾವಕ್ಕೆ ಹೀನತ್ವ ಉಂಟಾಗುವದು.

## ವಾಚನ ಚೋರಭೀತಿಯೋಗಃ

ಶ್ಲೋಕ॥ ಪಾಪೇ ವಿಲಗ್ನೇ ಗುಳಿಕೇ ತ್ರಿಕೋಣೇ ಕೇಂದ್ರಾದಿನಾಥೇ ಗುಳಿಕೇನ ಯುಕ್ತೇ । ಲಗ್ನೇಶ್ವರೇ ಪಾಪಯುತೇ ವಿಲಗ್ನೇ ರಾಹುರ್ಯದಾ ವಂಚನ ಚೋರಭೀತಿಃ । ಶನೇಸ್ತುಯೋಗಾ ತ್ತದ್ವಿಲೋಕನಾದ್ವಾ ಭೀತಿರ್ಧ್ರುವಾ ವಂಚನ ಚೋರಭೀತಿಃ ॥೨೮೮॥

ತಾ॥ ಜಾತಕನಿಗೆ ವಂಚನ ಚೋರಬೀತಿ ಯೋಗವು ಹೇಳಲ್ಪಡುತ್ತೆ. ಪಾಪ ಗ್ರಹವು ಲಗ್ನದಲ್ಲಿದ್ದು ಗುಳಿಕ ತ್ರಿಕೋಣದಲ್ಲಿದ್ದರೂ, ಕೇಂದ್ರ ತ್ರಿಕೋಣಾಧಿಪತಿಗಳು ಗುಳಿಕಯುಕ್ತರಾದರೂ, ಲಗ್ನಾಧಿಪತಿ ಪಾಪಗ್ರಹಯುತನಾಗಿ ಲಗ್ನದಲ್ಲಿದ್ದು ರಾಹು ಯುಕ್ತನಾದರೂ, ಲಗ್ನಾಧಿಪತಿ ಶನಿಯುಕ್ತನಾಗಿದ್ದರೂ, ಅಥವಾ ಶನಿಯಿಂದ ನೋಡಲ್ಪಟ್ಟರೂ ವಂಚನೆಯಿಂದ ಚೋರರಿಂದ ಭೀತಿಯುಳ್ಳವನಾಗುವನು ॥೨೮೮॥

## ಬೃಹದ್ಬೀಜ ಯೋಗಃ

ಶ್ಲೋಕ॥ ರಾಹುರ್ವಿಲಗ್ನೇ ಸಕುಜೇರ್ಕಪುತ್ರೇ ಸ್ಥಿತೇ ಬೃಹದ್ಬೀಜ ಮುದಾಹರಂತಿ । ಲಗ್ನೇಶ್ವರ ಮೃತ್ಯುಗತೇ ಸರಾಹೌ ರಂಧ್ರೇ ಸಪಾಪೇತುತಥೈವಬಾಧಾ ॥

ತಾ॥ ಲಗ್ನದಲ್ಲಿ ರಾಹು ಕುಜ ಶನಿಗಳ ಯುಕ್ತನಾದರೂ, ಲಗ್ನಾಧಿಪತಿ

ಅಷ್ಟಮದಲ್ಲಿ ಪಾಪಗ್ರಹದಿಂದ ಕೂಡಿ ರಾಹುಯುಕ್ತನಾದರೂ ಜಾತಕನಿಗೆ ಬೀಜಗಳು (ತರಡುಗಳು) ಸ್ವಭಾವಕ್ಕಿಂತ ಹೆಚ್ಚು ದಪ್ಪವಾಗಿರುತ್ತವೆಂದು ನಿಶ್ಚಯಿಸತಕ್ಕದ್ದು ॥೨೮೮॥

ಶ್ಲೋಕ॥ ಲಗ್ನೇ ಸರಾಹೌ ಗುಳಿಕೇತ್ರಿಕೋಣೇ ಕೇಂದ್ರೇ ಕುಜೇ ಮಾಂದಿಯುತೇ ತಥೈವ ಲಗ್ನೇಶ್ವರಾಕ್ರಾಂತ ತದಂಶನಾಥೋ ರಾಹ್ವಾರಮಾಂದ್ಯಾದಿ ಭಿರನ್ವಿತಶ್ಚೇತ್ ॥೨೮೯॥

ತಾ॥ ಲಗ್ನದಲ್ಲಿ ರಾಹು ತ್ರಿಕೋಣಗಳಲ್ಲಿ ಗುಳಿಕನಿದ್ದರೂ, ಲಗ್ನಾತ್ಕೇಂದ್ರಗಳಲ್ಲಿ ಕುಜನು ಮಾಂದಿಯುತನಾಗಿದ್ದರೂ, ಲಗ್ನಾಧಿಪತಿ ಯಾರ ನವಾಂಶೆಯಲ್ಲಿರುವನೋ ಅನವಾಂಶಾಧಿಪತಿಯು ರಾಹು, ಕುಜ, ಶನಿ, ಮಂದ್ಯಾದಿ ಗ್ರಹಯುಕ್ತನಾಗಿದ್ದರೂ, ಜಾತಕನು ಬೃಹದ್ಬೀಜಗಳುಳ್ಳವನಾಗುವನು ॥೨೮೯॥

ಶ್ಲೋಕ॥ ಅಸ್ಮಿನ್ ಬೃಹದ್ಬೀಜ ಮಿಹಾಷ್ಟಮೇಶ ಸಂಯುಕ್ತರಾಶ್ಯಂಶ ಪತಿಸ್ಸರಾಹುಃ । ಲಗ್ನೇಶ್ವರೇ ಭೂಮಿಸುತೇ ತನುಸ್ಥೇ ಪಾಪಾನ್ವಿತೇ ಪಾಪವಿಲೋಕಿತೇವಾ ॥೨೯೦॥

ತಾ॥ ಅಷ್ಟಮಾಧಿಪತಿ ಯಾರ ನವಾಂಶದಲ್ಲಿರುವನೋ ಆ ಅಂಶಾಧಿಪತಿ ರಾಹುಯುಕ್ತನಾದರೂ, ಲಗ್ನಾಧಿಪತಿ ಅಂಗಾರಕನು ಸಹ ಲಗ್ನದಲ್ಲಿದ್ದು ಪಾಪಗ್ರಹ ಯುತನಾದರೂ, ಪಾಪಗ್ರಹದೃಷ್ಟನಾದರೂ, ಬೃಹದ್ಬೀಜವುಳ್ಳವನಾಗುವನು ॥೨೯೦॥

## ಶಿರಸಿಶಿಲಾ ಪ್ರಹಾರಯೋಗಃ

ಶ್ಲೋಕ॥ ಶಿಲಾಪ್ರಹಾರೈ ರ್ವ್ರಣಮುತ್ತಮಾಂಗೇ ಖಡ್ಗಾದಿಭಿರ್ವಾಕಥಯಂತಿ ತಜ್ಞಾಃ । ಶನೌತಥಾಚೇದ್ವ್ರಣಮುತ್ತಮಾಂಗೇ ದಾವಾಗ್ನಿ ಶಸ್ತ್ರೈಃ ಪತಿತೇನವಾಪಿ ॥೨೯೧॥

ತಾ॥ ಲಗ್ನದಲ್ಲಿ ಅಂಗಾರಕನು, ಪಾಪಗ್ರಹಯುತನಾದರೂ, ದೃಷ್ಟನಾದರೂ, ಲಗ್ನದಲ್ಲಿ ಶನಿಯು ಪಾಪಗ್ರಹಯುತ ದೃಷ್ಟನಾದರೂ, ತಲೆಯ ಮೇಲೆ ಶಸ್ತ್ರದಿಂದ ಲಾಗಲಿ, ದೊಣ್ಣೆಯ ಪೆಟ್ಟಿನಿಂದಾಗಲಿ ಘಾಯವಾಗುವುದು ॥೨೯೧॥

## ಕೃಶಾಂಗ ಯೋಗಃ

ಶ್ಲೋಕ॥ ಯದಾಭವೇತ್ತಂಚ ಘಟೀ ವಿಲಗ್ನೇ ಶುಭಂ ಯದಾದೇಹಕೃಶತ್ವ ಮಾಹುಃ । ಶುಷ್ಕೇಖಗೇ ಲಗ್ನಗತೇ ವಿಲಗ್ನೇ ಶುಷ್ಕೇಣ ಖೇಟೇನ ನಿರೀಕ್ಷಿತೇವಾ ॥೨೯೨॥

ತಾ॥ ದೇಹಕೃಶವಾಗಿರುವುದಕ್ಕೆ ಕಾರಣವನ್ನು ಆಯೋಗಭೇದಗಳನ್ನು ಹೇಳುತ್ತಾನೆ. ೫ ಗಳಿಗೆ ಪ್ರಮಾಣವಿರುವ ಲಗ್ನದಲ್ಲಿ ಹುಟ್ಟಿದ ಜಾತಕನು, ಶುಭ ಫಲವನ್ನು

ಅನುಭವಿಸುವನು, ಮತ್ತು ಕೃಶವಾದ ಶರೀರವುಳ್ಳವನಾಗುವನು, ಪಾಪಗ್ರಹದಲ್ಲಿದ್ದರೂ ಲಗ್ನವನ್ನು ಪಾಪಗ್ರಹವು ನೋಡಿದರೂ ಜಾತಕನ ಶರೀರವು ಕೃಶವಾಗಿರುವುದು ॥೨೯೨॥

ಶ್ಲೋ॥ ಲಗ್ನೇಶ್ವರೇ ಶುಷ್ಕಗತೇತಥೈವ ಶುಷ್ಕಗ್ರಹಾಣಾಂ ಭವನೇ ಸ್ಥಿತೇವಾ। ಲಗ್ನಾಧಿಪೇ ನಾಶಗತೇಪಿ ಶುಷ್ಕರಾಶೌತನೋಃ ಕೃಚ್ಛ್ರಮತೀವಕಷ್ಟಂ॥

ತಾ॥ ಲಗ್ನಾಧಿಪತಿ ಶುಷ್ಕಗ್ರಹಗಳ ರಾಶಿಯಲ್ಲಿದ್ದರೂ ನಿರ್ಜಲರಾಶಿ ಯಲ್ಲಿದ್ದರೂ, ಶುಷ್ಕ ಗ್ರಹಗಳ ಸಂಗಡ ಸೇರಿದ್ದರೂ, ಲಗ್ನಾಧಿಪತಿ ಅಷ್ಟಮವನ್ನು ಹೊಂದಿ ಆ ರಾಶಿ ಶುಷ್ಕ ಗ್ರಹ ರಾಶಿಯಾಗಿದ್ದರೂ ಶರೀರಕ್ಕೆ ಅತಿಕಷ್ಟವೂ ಕೃಶತ್ವವೂ ಪ್ರಾಪ್ತಿಯಾಗುವದು ॥೨೯೩॥

ಶ್ಲೋಕ॥ ಲಗ್ನಾಧಿಪಸ್ಥಾಂಶಪರಾಶಿನಾಥ ಶುಷ್ಕಗ್ರಹಸ್ಥಸ್ತು ಸುಶುಷ್ಕಮಾಹುಃ। ಶುಷ್ಕೇ ವಿಲಗ್ನೇಬಹುಪಾಪ ಯುಕ್ತೇ ತತ್ರಾಪಿದೇಹಸ್ಯ ಕೃಶತ್ವ ಮಾಹುಃ ॥೨೯೪॥

ತಾ॥ ಲಗ್ನಾಧಿಪತಿ ಯಾವ ನವಾಂಶೆಯಲ್ಲಿರುವನೋ ಆ ನವಾಂಶ ರಾಶ್ಯಧಿ ಪತಿಯು ಶುಷ್ಕಗ್ರಹನಾದರೂ, ಪಾಪಗ್ರಹ ಲಗ್ನದಲ್ಲಿದ್ದು ಬಹುಪಾಪ ಗ್ರಹಗಳಿಂದ ಕೂಡಿದರೂ ದೇಹವು ಕೃಶವಾಗಿರುವದು ॥೨೯೪॥

## ದೇಹಸ್ಥೌಲ್ಯ ಯೋಗಃ

ಶ್ಲೋಕ॥ ಲಗ್ನೇ ಜಲರ್ಕ್ಷೇ ಶುಭಖೇಚರೇಂದ್ರೈರ್ಯುಕ್ತೇತನೋಃ ಸ್ಥೌಲ್ಯ ಮುದಾಹರಂತಿ । ಲಗ್ನಾಧಿಪೇತೋಯ ಖಗೇ ಬಲಾಢ್ಯೇ ಸೌಮ್ಯಾನ್ವಿತೇ ಚೇತ್ತನು ಪುಷ್ಟಿಮಾಹುಃ ॥೨೯೫॥

ತಾ॥ ಲಗ್ನವು ಜಲರಾಶಿಯಾಗಿ ಶುಭಗ್ರಹಗಳು ಲಗ್ನದಲ್ಲಿದ್ದರೆ ಸ್ಥೂಲ ಶರೀರ ವುಳ್ಳವನು ಮತ್ತು ಲಗ್ನಾಧಿಪತಿ ಜಲಗ್ರಹವಾಗಿ ಬಲಿಷ್ಠನಾಗಿ ಶುಭಗ್ರಹಯುಕ್ತನಾದರೆ ಶರೀರಪುಷ್ಟಿಯುಳ್ಳವನಾಗುವನು ॥೨೯೫॥

ಶ್ಲೋಕ॥ ಲಗ್ನಾಧಿಪೇ ಚೇಜ್ಜಲರಾಶಿ ಸಂಸ್ಥೇ ಶುಭಾನ್ವಿತೇ ತೋಯ ಖಗೈಃ ಪ್ರದೃಷ್ಟೇ। ಲಗ್ನೇ ಶುಭಕ್ಷೇತ್ರಗತೇಪಿಚೈವಂ ಲಗ್ನೇಶಸಂಸ್ಥಾಂಶಪತೌ ಜಲರ್ಕ್ಷೇ ॥೨೯೬॥

ತಾ॥ ಲಗ್ನಾಧಿಪತಿ ಜಲರಾಶಿಯಲ್ಲಿದ್ದು ಶುಭಗ್ರಹಯುತನಾಗಿ ಶುಭಗ್ರಹದಿದಂ ನೋಡಲ್ಪಟ್ಟರೂ ಅಥವಾ ಲಗ್ನವು ಶುಭಗ್ರಹರಾಶಿಯಾಗಿ ಲಗ್ನಾಧಿಪತಿ ಯಾರ ನವಾಂಶೆಯಲ್ಲಿರುವನೋ ಆ ನವಾಂಶಾಧಿಪತಿ ಜಲರಾಶಿಯಲ್ಲಿದ್ದರೂ ಸ್ಥೂಲವಾದ ಶರೀರವುಳ್ಳವನಾಗುವನು ॥೨೯೬॥

ಶ್ಲೋಕ॥ ಲಗ್ನೇಗುರೌತೇನನಿರೀಕ್ಷಿತೇವಾ ಜಲರ್ಕ್ಷಗೇಣಾಪಿಜಲೇ ವಿಲಗ್ನೇ।

ಸೌಮ್ಯಾನ್ವಿತೇ ಶೋಭನನ ಖೇಚರೇಂದ್ರೇ ದೃಷ್ಟೇತ್ವತಿಸ್ಥೂಲ ಮದಾಹರಂತಿ।೨೯೭।

ತಾ॥ ಜನ್ಮಲಗ್ನದಲ್ಲಿ ಬೃಹಸ್ಪತಿಯಿದ್ದರೂ, ಜಲರಾಶಿಗತವಾದ ಗುರು ಲಗ್ನ ವನ್ನು ನೋಡಿದರೂ, ಜಲರಾಶಿ ಲಗ್ನವಾಗಿ ಶುಭಗ್ರಹಗಳು ಲಗ್ನದಲ್ಲಿದ್ದರೂ ಶರೀರವು ಅತಿಸ್ಥೂಲವಾಗಿರುವದು ॥

### ಪಿಶಾಚ ಬಾಧಾಯೋಗಃ

ಶ್ಲೋಕ॥ ಲಗ್ನೇಶನೌ ರಾಹುಯುತೇ ಥವಾಸ್ಯಾತ್ಪಿಶಾಚ ಬಾಧಾಂ ಪ್ರವದಂತಿ ಸಂತಃ ॥೨೯೮॥

ತಾ॥ ಲಗ್ನದಲ್ಲಿ ಶನಿಯು ರಾಹು ಯುಕ್ತನಾದರೆ ಪಿಶಾಚ ಹಿಡಿದು ಬಾಧೆ ಪಡುವನು.

### ಶ್ವಾಸಕ್ಷಯ ಯೋಗಃ

ಶ್ಲೋಕ॥ ಲಗ್ನೇರವಿರ್ಭೂಮಿ ಸುತೇನ ದೃಷ್ಟೇ ಶ್ವಾಸಕ್ಷಯೋವಿದ್ರಧಿಗುಲ್ಮ ಮೂಲಾತ್ ॥೨೯೮॥

ತಾ॥ ಲಗ್ನದಲ್ಲಿ ರವಿಯು ಕುಜನಿಂದ ನೋಡಲ್ಪಟ್ಟರೆ ಶ್ವಾಸ, ಕ್ಷಯ, ವಿದ್ರಧಿ ಗುಲ್ಮರೋಗ ಉಳ್ಳವನಾಗುವನು ॥೨೯೮॥

### ಮಸೂರಿಕಾ ಪೀಡಾಯೋಗಃ

ಶ್ಲೋಕ॥ ಭೌಮೇವಿಲಗ್ನೇ ಶನಿ ಸೂರ್ಯದೃಷ್ಟೇ ಮಸೂರಿಭಿಃ ಪಾಲಿತದೇಹ ಭಾಕ್ಸ್ಯಾತ್

ತಾ॥ ಲಗ್ನದಲ್ಲಿ ಕುಜನಿದ್ದು ಶನಿ ಸೂರ್ಯನಿಂದ ನೋಡಲ್ಪಟ್ಟರೆ, ಸ್ಫೋಟಕ ವ್ರಣಾದಿಗಳಿಂದ ಪೀಡಿಸಲ್ಪಟ್ಟವನಾಗುವನು.

### ಪಿಶಾಚಚೋರ ಪೀಡಾಯೋಗಃ

ಶ್ಲೋಕ॥ ಶನೌವಿಲಗ್ನೇ ಬಹುಪಾಪದೃಷ್ಟೇ ಪಿಶಾಚ ಚೋರೈರ್ಭವತಿ ಪ್ರಪೀಡಾ

ತಾ॥ ಲಗ್ನದಲ್ಲಿ ಶನಿಯಿದ್ದು ಬಹು ಪಾಪಗ್ರಹಗಳು ನೋಡಿದರೆ, ಪಿಶಾಚ ದಿಂದಲೂ, ಚೋರರಿಂದಲೂ, ಪೀಡೆಯುಂಟಾಗುವುದು ॥೨೯೯॥

### ಸದಾಸಂಚಾರ ಯೋಗಃ

ಶ್ಲೋಕ॥ ಲಗ್ನೇಶ್ವರೇ ತದ್ಭವನೇಶ್ವರೇವಾ ಚರೇ ಸ್ಥಿತೇ ಸಂಚರತಿ ಪ್ರಜಾತಃ। ಸಂಚಾರ ಶೀಲಶ್ಶುಭೇ ವಿಲಗ್ನೇ ಲಗ್ನಾಂಶಕೇ ಚೈವಮುದಾಹರಂತಿ॥

ತಾ॥ ಲಗ್ನಾಧಿಪತಿಯಾದರೂ, ಲಗ್ನಾಧಿಪತಿ ಇರುವ ರಾಶ್ಯಾಧಿಪತಿಯಾದರೂ

ಚರರಾಶಿಯಲ್ಲಿದ್ದರೆ, ಜಾತಕನು ಸಂಚಾರಶೀಲನಾಗುವನು. ಮತ್ತು ಲಗ್ನಚರ ರಾಶಿಯಾದರೂ, ಲಗ್ನದಲ್ಲಿ ಚರನವಾಂಶ ಉದಯವಾದರೂ ಜಾತಕನು ಸಂಚಾರಶೀಲನಾಗುವನು ॥೩೦೦॥

## ಭಾಗ್ಯಯೋಗಃ

ಶ್ಲೋಕ॥ ವಿದೇಶಭಾಗ್ಯಶ್ಚರಭೇ ವಿಲಗ್ನೇ ಚರೇತದೀಶೇ ಚರಖೇಟ ದೃಷ್ಟೇ।
ಸ್ಥಿರೇಸ್ವದೇಶೇಬಹುಭಾಗ್ಯಯುಕ್ತಃ ಸ್ಥಿರಗ್ರಹೈರ್ಭೂಮಿಧನಾನ್ವಿತರಃ ಸ್ಯಾತ್ ॥೩೦೧॥

ತಾ॥ ಚರರಾಶಿಲಗ್ನವಾಗಿ ಲಗ್ನಾಧಿಪತಿ ಚರರಾಶಿಯಲ್ಲಿದ್ದು ಚರಗ್ರಹಗಳಿಂದ ನೋಡಲ್ಪಟ್ಟರೆ ಪರದೇಶದಲ್ಲಿ ಭಾಗ್ಯಪ್ರಾಪ್ತಿಯಾಗಿ ಅಲ್ಲಿರುವನು, ಲಗ್ನವು ಸ್ಥಿರರಾಶಿ ಯಾಗಿ ಲಗ್ನಾಧಿಪತಿ ಸ್ಥಿರರಾಶಿಯಲ್ಲಿದ್ದು ಸ್ಥಿರಗ್ರಹಗಳಿಂದ ಯುಕ್ತನಾಗಿದ್ದರೆ, ಸ್ವದೇಶದಲ್ಲಿ ಭೂಮಿ, ಧನ ಮೊದಲಾದವುಗಳಿಂದ ಕೂಡಿದವನಾಗುವನು ॥೩೦೧॥

## ಗಂಭೀರಾದಿ ಗುಣವಿಚಾರಃ

ಶ್ಲೋಕ॥ ಮಿತ್ರಗ್ರಹೈಸ್ಸಂಯುತ ಭಾಗ್ಯಕೀರ್ತಿಃ ತದೇಕಪ್ರಚುರಃ ಕ್ರಮೇಣ ।
ಲಗ್ನೇಶ್ವರೇ ವೀರ್ಯಯುತೇ ಸ್ವತುಂಗೇ ಗಂಭೀರಗಾಮೀ ಪುರುಷೋ ನರಃಸ್ಯಾತ್॥೩೦೨॥

ತಾ॥ ಲಗ್ನಾಧಿಪತಿ ಬಲಿಷ್ಠನಾಗಿದ್ದರೂ, ತನ್ನಚ್ಚದಲ್ಲಿದ್ದರೂ, ಜಾತಕನು ಗಂಭೀರ ಪುರುಷನಾಗುವನು. ಲಗ್ನಾಧಿಪತಿಯು ಮಿತ್ರಗ್ರಹಗಳಿಂದ ಕೂಡಿದರೆ, ಭಾಗ್ಯ, ಕೀರ್ತಿ ಮೊದಲಾದವುಗಳಿಂದ ಕೂಡಿದವನಾಗುವನು. ಲಗ್ನಾಧಿಪತಿ ನೀಚ ನಾಗಿದ್ದರೂ ನೀಚ, ಶತ್ರು, ಪಾಪಗ್ರಹಗಳಿಂದ ಕೂಡಿದ್ದರೂ, ಅಪಕೀರ್ತಿ ಕಷ್ಟ, ಸುಖವಿದ್ದಂತೆ ತೋರ್ಪಟ್ಟರೂ ಸುಖವಿಲ್ಲದಿರುವಿಕೆ ಈ ಮೊದಲಾದ ದುಷ್ಟಫಲ ಉಳ್ಳವನಾಗುವನು ॥೩೦೨॥

ಶ್ಲೋಕ॥ ಹೀನೇ ತದೀಶೇ ಸಜಲೈಶುಭೈಸ್ತು ದೃಷ್ಟೇಯುತೇವಾಪಿತಥಾವಿಧಂತು।
ಲಗ್ನೇಶುಭೇ ಶೋಭದೃಷ್ಟಿಯುಕ್ತೇ ಬಾಲ್ಯೇ ಸುಖೀಸ್ಯಾನ್ನಹಿ ಪಾಪ ಯೋಗಾತ್ ॥೩೦೩॥

ಲಗ್ನಾಧಿಪತಿಯು ಬಲಹೀನನಾದರೂ, ಜಲರಾಶಿಯಲ್ಲಿದ್ದು, ಶುಭ ಗ್ರಹಗಳಿಂದ ಯುಕ್ತನಾದರೂ ಅಥವಾ ನೋಡಲ್ಪಟ್ಟರೂ ಪಾಪಗ್ರಹಗಳು ಯುಕ್ತವಾಗದಿದ್ದರೆ ಬಾಲ್ಯವಯಸ್ಸಿನಲ್ಲಿ ಸೌಖ್ಯವಂತನಾಗುವನು ॥೩೦೩॥

## ಇತಿ ತನುಭಾವಃ

ಅವತಾರಿಕೆ॥ ಈ ಗ್ರಂಥಕರ್ತನಾದ ವರಾಹಮಿಹಿರಾಚಾರ್ಯನು ಭಾವಫಲ

ಪ್ರಕರಣದಲ್ಲಿ ಪ್ರತ್ಯೇಕವಾಗಿ ಭಾವಫಲವನ್ನು ಹೇಳಲಿಲ್ಲವಾದ್ದರಿಂದ ಅನುಕ್ತಮನ್ಯತೋ ಗ್ರಾಹ್ಯಂ ಎಂಬುವ ವಚನದ ಪ್ರಕಾರ ಇಲ್ಲಿ ಜಿಜ್ಞಾಸುಗಳಿಗೆ ಸುಲಭವಾಗುವುದ-ಕ್ಕೋಸ್ಕರ ಹೇಳಲ್ಪಡುತ್ತೆ.

ಪರಾಶರಃ-ಶ್ಲೋಕ।। ರುದ್ರೇಣ ಯತ್ಪುರಾಪ್ರೋಕ್ತಂ ತನ್ಮಯಾ ಗದಿತಂದ್ವಿಜ । ದೇಯಂ ಸ್ವಶಿಷ್ಯಪುತ್ರೇಭ್ಯೋ ನದೇಯಂ ಯಸ್ಯಕಸ್ಯಚಿತ್ ।।೩೦೪।। ಕಪುತ್ರಾಯ ಕುಶಿಷ್ಯಾಯ ಪ್ರಾಣಾಂತೇನಪ್ರಕಾಶಯೇತ್ । ಗುಹ್ಯಾದ್ಗುಹ್ಯ ಮಿದಂಶಾಸ್ತ್ರಂ ಪ್ರಾಪ್ತಂ ಶಂಭು ಪ್ರಸಾದತಃ ।।೩೦೫।। ಪರಾಶರಮಹರ್ಷಿಗಳು ತಮ್ಮ ಪ್ರೀತಿಪಾತ್ರರಾದ ಮೈತ್ರೇಯ ಋಷಿಗಳಿಗೆ ಈ ಜ್ಯೋತಿಶಾಸ್ತ್ರವು ಅತ್ಯಂತ ಗೂಢವಾದದ್ದು. ಈ ಶಾಸ್ತ್ರವು ಲೋಕಾನುಗ್ರಹಕ್ಕಾಗಿ ಪರಮೇಶ್ವರನಿಂದ ತಮಗೆ ಪ್ರಾಪ್ತವಾಗಿರುವಂಥಾದ್ದು. ಇದನ್ನು ಸನ್ಮಾರ್ಗಾವಲಂಬಿಯಾದ ಪುತ್ರನಿಗೂ ಸಚ್ಛಿಷ್ಯನಿಗೂ ಮಾತ್ರವೇ ಉಪದೇಶ ಮಾಡಬೇಕು. ದುಷ್ಪುತ್ರನಿಗೂ ದುಷ್ಟನಾದ ಶಿಷ್ಯನಿಗೂ ಪ್ರಾಣಾಂತಕಾಲದಲ್ಲಿಯಾದರೂ ಉಪದೇಶಮಾಡಕೂಡದು. ಈ ವಿಷಯವು ತಮ್ಮಿಂದ ಮೊದಲೇ ಹೇಳಲ್ಪಟ್ಟಿರು ತ್ತೆಂದು ಹೇಳಿರುವರು ।।೩೦೫।।

## ಅಥ ಧನಯೋಗ ವಿಚಾರಃ

ಶ್ಲೋಕ।। ಅಥಾತಃ ಸಂಪ್ರವಕ್ಷ್ಯಾಮಿ ಧನಯೋಗಂ ವಿಶೇಷತಃ। ಪಂಚಮೇತು ತಸ್ಮಿನ್ಶುಕ್ರೇಣಸಂಯುತೇ । ಲಾಭೇ ಶನ್ಯೈಶ್ಚರಯುತೇ ಬಹುದ್ರವ್ಯಸ್ಯ ನಾಯಕಃ ।।೩೦೬।।ತಾ।। ಅನಂತರದಲ್ಲಿ ಧನಯೋಗವನ್ನು ವಿಶೇಷವಾಗಿ ಹೇಳುತ್ತೇವೆ. ಲಗ್ನ (ತನುಭಾವದಿಂದ) ಪಂಚಮಭಾವವು ಶುಕ್ರಕ್ಷೇತ್ರವಾಗಿ ಅಲ್ಲಿಯೇ ಶುಕ್ರನಿದ್ದು ಲಾಭಭಾವದಲ್ಲಿ ಶನೈಶ್ಚರನಿದ್ದರೆ ಜಾತಕನು ಬಹು ದ್ರವ್ಯಾಧಿಪತಿಯಾಗುವನು ವಿ.ತಾ।। ಈ ಯೋಗವು ಮಕರ ಲಗ್ನ ಜಾತಕವಾಗಿ ಪಂಚಮಸ್ಥಾನವಾದ ವೃಷಭದಲ್ಲಿ ಶುಕ್ರನು, ಲಾಭಸ್ಥಾನವಾದ ವೃಶ್ಚಿಕದಲ್ಲಿ ಶನಿ ಇದ್ದರೆ ೧ ಯೋಗ: ಮಿಥುನ ಲಗ್ನ ಜಾತಕವಾಗಿ ಪಂಚಮವಾದ ತುಲೆಯಲ್ಲಿ ಶುಕ್ರನು, ಲಾಭಸ್ಥಾನವಾದ ಮೇಷದಲ್ಲಿ ಶನೈಶ್ಚರನು ಇದ್ದರೆ ೧ ಯೋಗ; ಅಂತು ೨ ಯೋಗಗಳು ।।೩೦೬।। ಶ್ಲೋಕ।। ಪಂಚಮೇತು ಬುಧಕ್ಷೇತ್ರೇ ತಸ್ಮಿನ್ಸೌಮ್ಯಯುತೇಯದಿ । ಲಾಭೇಚ ಚಂದ್ರಭೌಮೌತು ಬಹುದ್ರವ್ಯನಾಯಕಃ ।।೩೦೭।।ತಾ।। ಲಗ್ನದಿಂದ ಪಂಚಮ ಸ್ಥಾನವು ಬುಧಕ್ಷೇತ್ರವಾಗಿ ಅಲ್ಲಿಯೇ ಬುಧನಿದ್ದು ಲಾಭಸ್ಥಾನದಲ್ಲಿ ಚಂದ್ರ, ಮಂಗಳರಿದ್ದರೆ, ಜಾತಕನು ಬಹುದ್ರವ್ಯಕ್ಕಧಿಪತಿಯಾಗುವನು. ವಿ ತಾ।। ಕುಂಭಲಗ್ನಜಾತಕಕ್ಕೆ ಪಂಚಮವಾದ ಮಿಥುನದಲ್ಲಿ ಬುಧನು ಲಾಭಸ್ಥಾನವಾದ ಧನುಸ್ಸಿನಲ್ಲಿ ಚಂದ್ರಮಂಗಳರಿದ್ದರೆ, ಯೋಗ, ವೃಷಭಲಗ್ನ ಜಾತಕವಾಗಿ ಪಂಚಮವಾದ ಮಿಥುನದಲ್ಲಿ ಬುಧನು ಲಾಭಸ್ಥಾನವಾದ

ಧನುಸ್ಸಿನಲ್ಲಿ ಚಂದ್ರಮಂಗಳರಿದ್ದರೆ, ಯೋಗ, ವೃಷಭಲಗ್ನ ಜಾತಕವಾಗಿ ಪಂಚಮವಾದ ಕನ್ಯೆಯಲ್ಲಿ ಬುಧನು ಲಾಭಸ್ಥಾನವಾದ ಮೀನದಲ್ಲಿಚಂದ್ರಾಗಾರಕರಿದ್ದರೆ, ೧ ಯೋಗ ಅಂತು ೨ ಯೋಗಗಳು ॥೩೦೭॥

ಶ್ಲೋಕ॥ ಪಂಚಮೇತು ಶನಿಕ್ಷೇತ್ರ ತಸ್ಮಿ ಸೂರ್ಯಸುತೋಯದಿ । ಲಾಭೇಸೋಮಾತ್ಮಸ್ತೇವಾ ಬಹು ದ್ರವ್ಯಸ್ಯನಾಯಕಃ ॥೩೦೮॥ತಾ॥ ಪಂಚಮ ರಾಶಿಯು ಶನಿಕ್ಷೇತ್ರವಾಗಿ ಅಲ್ಲಿಯೇ ಶನಿಯಿದ್ದು ಲಾಭಸ್ಥಾನದಲ್ಲಿ ಬುಧನಿದ್ದರೆ ಜಾತಕನು ಬಹು ದ್ರವ್ಯಕ್ಕೆ ನಾಯಕನು ವಿ.ತಾ॥ ತುಲಾಲಗ್ನ ಜಾತಕವಾಗಿ ಕುಂಭದಲ್ಲಿ ಶನಿ, ಸಿಂಹದಲ್ಲಿ ಬುಧ ೧ ಯೋಗ, ಕನ್ಯಾಲಗ್ನ ಜಾತಕವಾಗಿ ಮಕರದಲ್ಲಿ ಶನಿ, ಕರ್ಕಾಟಕದಲ್ಲಿ ಬುಧ ೧ ಯೋಗ ಅಂತು ೨ ಯೋಗಗಳು ॥

ಶ್ಲೋಕ॥ ಪಂಚಮೇತು ರವಿಕ್ಷೇತ್ರೇ ತಸ್ಮಿರವಿಯುತೇ ಯದಿ । ಲಾಭೇ ಚಂದ್ರೇಂದ್ರ ಪೂಜ್ಯಸೇ ಬಹು ದ್ರವ್ಯಸ್ಯ ನಾಯಕಃ ॥೩೦೯॥ತಾ॥ ಪಂಚಮ ಸ್ಥಾನವು ಸಿಂಹರಾಶಿಯಾಗಿ ಅಲ್ಲಿ ರವಿಯಿದ್ದು ಲಾಭಸ್ಥಾನದಲ್ಲಿ ಚಂದ್ರ ಬೃಹಸ್ಪತಿಗಳಿದ್ದರೆ, ಜಾತಕನು ಬಹು ದ್ರವ್ಯಕ್ಕೆ ನಾಯಕನಾಗುವನು ಈ ಯೋಗ ಮೇಷಲಗ್ನ ಜಾತಕ ವಾಗಿ ಸಿಂಹದಲ್ಲಿ ರವಿ, ಕುಂಭದಲ್ಲಿ ಗುರು ಚಂದ್ರರಿದ್ದರೆ ೧ ಯೋಗ ॥೩೦೯॥

ಶ್ಲೋಕ॥ ಪಂಚಮೇತು ಶನಿಕ್ಷೇತ್ರೇ ತಸ್ಮಿಶನಿಯುತೇಯದಿ । ಲಾಭೇ ಭೌಮೇನ ಸಂಯುಕ್ತೇ ಬಹು ದ್ರವ್ಯಸ್ಯ ನಾಯಕಃ॥ ॥೩೧೦॥ತಾ॥ ಪಂಚಮ ರಾಶಿಯು ಶನಿಕ್ಷೇತ್ರವಾಗಿ ಅಲ್ಲಿ ಶನಿಯಿದ್ದು ಲಾಭಸ್ಥಾನದಲ್ಲಿ ಅಂಗಾರಕನಿದ್ದರೆ, ಜಾತಕನು ಬಹು ದ್ರವ್ಯಕಪತಿಯಾಗುವನು. ವಿ.ತಾ॥ ಕನ್ಯಾಲಗ್ನವಾಗಿ ಮಕರದಲ್ಲಿ ಶನಿ, ಕರ್ಕಾಟಕದಲ್ಲಿ ಕುಜನಿದ್ದರೆ, ೧ ಯೋಗ, ತುಲಾಲಗ್ನ ಜಾತಕವಾಗಿ ಕುಂಭದಲ್ಲಿ ಶನಿ ಸಿಂಹದಲ್ಲಿ ಅಂಗಾರಕನಿದ್ದರೆ, ೧ ಯೋಗ ಅಂತು ೨ ಯೋಗಗಳು ॥೩೧೦॥

ಶ್ಲೋಕ॥ ಪಂಚಮೇತು ಗುರುಕ್ಷೇತ್ರ ತಸ್ಮಿಗುರುಯುತೇಯದಿ॥ ಲಾಭೇತು ಚಂದ್ರ ಭೌಮೌಚೇ ದ್ಬಹುದ್ರವ್ಯಸ್ಯ ನಾಯಕಃ ॥೩೧೦॥ತಾ॥ ಪಂಚಮಸ್ಥಾನವು ಬೃಹಸ್ಪತಿಕ್ಷೇತ್ರವಾಗಿ ಬೃಹಸ್ಪತಿಯಿಂದೊಡಗೂಡಿ ಏಕಾದಶದಲ್ಲಿ ಚಂದ್ರಾಂಗಾರಕರಿದ್ದರೆ, ಜಾತಕನು ಬಹು ದ್ರವ್ಯಾಧೀಶ್ವರನಾಗುವನು ವಿ.ತಾ॥ ಸಿಂಹಲಗ್ನ ಜಾತಕವಾಗಿ ಧನುಸ್ಸಿನಲ್ಲಿ ಗುರುವಿದ್ದು ಮಿಥುನದಲ್ಲಿ ಚಂದ್ರಾಂಗಾರಕರಿದ್ದರೆ ೧ ಯೋಗ, ವೃಶ್ಚಿಕ ಲಗ್ನ ಜಾತಕವಾಗಿ ಮೀನದಲ್ಲಿ ಬೃಹಸ್ಪತಿಯಿದ್ದು ಕನ್ಯಾರಾಶಿಯಲ್ಲಿ ಚಂದ್ರಾಂಗಾರಕ ರಿದ್ದರೆ ೧ ಯೋಗ ಅಂತು ೨ ಯೋಗಗಳು ॥೩೧೧॥

ಶ್ಲೋಕ॥ ಭಾನುಕ್ಷೇತ್ರ ಗತೇತಸ್ಮಿ ಲಗ್ನೇಭಾನೌ ಸ್ಥಿತೇಯದಿ । ಭೌಮೇನ ಗುರುಣಾಯುಕ್ತೋ ದೃಷ್ಟಿರ್ವಾಸ್ಯಾದ್ಯುತೋಧನೀ ॥೩೧೨॥ತಾ॥ ಸಿಂಹರಾಶಿಯು

ಲಗ್ನವಾಗಿ ಸೂರ್ಯನು ಅಲ್ಲಿದ್ದು, ಅಂಗಾರಕ ಬೃಹಸ್ಪತಿಗಳು ಕೂಡಿದ್ದರೂ ಅಥವಾ ನೋಡಲ್ಪಟ್ಟರೂ, ಜಾತಕನು ದ್ರವ್ಯದಿಂದ ಕೂಡಿದವನಾಗುವನು. ಈಯೋಗವು ಸಿಂಹಲಗ್ನಜಾತಕನಿಗೆ ಮಾತ್ರ ಅನ್ವಯಿಸುತ್ತದೆ. ಸಿಂಹಲಗ್ನಜಾತಕನಿಗೆ ಅಲ್ಲಿ ಸೂರ್ಯನಿದ್ದು, ಬೃಹಸ್ಪತಿ ಕುಜರು ಕೂಡಿದರೆ ೧ ಯೋಗ, ಸಿಂಹಲಗ್ನದಲ್ಲಿ ಸೂರ್ಯನಿದ್ದು ಧನುಸ್ಸಿನಲ್ಲಿ ಗುರು, ಮಕರದಲ್ಲಿ ಅಂಗಾರಕನಿದ್ದರೆ ೧ ಯೋಗ ಮತ್ತು ಧನುಸ್ಸಿನಲ್ಲಿ ಗುರು, ಕುಂಭದಲ್ಲಿ ಅಂಗಾರಕನಿದ್ದರೆ ೧ ಯೋಗ, ಕುಂಭರಾಶಿಯಲ್ಲಿ ಗುರ್ವಂಗಾರಕರಿದ್ದರೆ ೧ ಯೋಗ. ಮೇಷದಲ್ಲಿ ಗುರು, ವೃಷಭದಲ್ಲಿ ಅಂಗಾರಕನಿದ್ದರೆ ೧ ಯೋಗ ಪ್ರಕಾರ ಸಿಂಹಲಗ್ನ ಜಾತಕನಿಗೆ ಸೂರ್ಯನು ಸ್ವಕ್ಷೇತ್ರದಲ್ಲಿದ್ದು, ಗುರ್ವಂಗಾರಕ ವೀಕ್ಷಣೆಯಿಂದ ಈ ಯೋಗವನು ತಿಳಿಯತಕ್ಕದ್ದು ॥೩೧೨॥

ಶ್ಲೋಕ॥ ಚಂದ್ರಕ್ಷೇತ್ರಗತೇ ಲಗ್ನೇ ತಸ್ಮಿನ್ ಚಂದ್ರಯುತೇಯದಿ। ಜೀವಭೌಮ ಯತೇಯಸ್ತು ದೃಷ್ಟೇಜಾತೋ ಧನೀಭವೇತ್ ॥೩೧೩॥ತಾ॥ ಕರ್ಕಾಟಕ ಲಗ್ನಜಾತಕವಾಗಿ ಚಂದ್ರನು ಅಲ್ಲಿಯೇ ಇದ್ದು, ಗುರು ಕುಜರಿಂದ ಕೂಡಿದರೂ ಅಥವಾ ಕುಜ ಗುರುಗಳಿಂದ ಕರ್ಕಾಟಕಸ್ಥನಾದ ಚಂದ್ರನು ನೋಡಲ್ಪಟ್ಟರೂ ಜಾತಕನು ಧನವಂತನಾಗುವನು ॥೩೧೩॥

ಶ್ಲೋಕ॥ ಭೌಮಕ್ಷೇತ್ರಗತೇ ಲಗ್ನೇ ತಸ್ಮಿನ್ ಭೌಮಯುತೇಯದಿ । ಸೋಮಶುಕ್ರಾರ್ಕಜೈರ್ಯುಕ್ತೇ ದೃಷ್ಟೇ ಶ್ರೀಮಾನ್ನರೋಭವೇತ್ ॥೩೧೪॥ತಾ॥ ಅಂಗಾರಕ ಗ್ರಹಕ್ಷೇತ್ರಗಳಾದ ಮೇಷ ವೃಶ್ಚಿಕ ರಾಶಿಗಳು ಲಗ್ನವಾಗಿ ಅಲ್ಲಿಯೇ ಕುಜನಿದ್ದು ಚಂದ್ರ ಶುಕ್ರ ಶನಿ ಈ ಮೂರು ಗ್ರಹಗಳಿಂದ ಕೂಡಲ್ಪಟ್ಟರೂ ಇವರಿಂದ ನೋಡಲ್ಪಟ್ಟರೂ ಜಾತಕನು ಧನವಂತನಾಗುವನು. ವಿ.ತಾ॥ ಮೇಷಲಗ್ನ ಜಾತಕವಾಗಿ ಮೇಷದಲ್ಲಿ ಅಂಗಾರಕನಿದ್ದು ಚಂದ್ರ ಶುಕ್ರ ಶನಿಗಳಿಂದ ಕೂಡಿದರೆ ೧ ಯೋಗ ಈ ಮೂರು ಗ್ರಹಗಳಿಂದ ನೋಡಲ್ಪಟ್ಟರೆ, ೧ ಯೋಗ (ಇದರಲ್ಲಿ ದೃಷ್ಟಿ ಭೇದದಿಂದ ಅನೇಕ ಯೋಗಗಳು ಹುಟ್ಟುತ್ತವೆ) ವೃಶ್ಚಿಕಲಗ್ನ ಜಾತಕನಿಗೆ ಅಲ್ಲಿ ಅಂಗಾರಕನಿದ್ದು ಚಂದ್ರ, ಶುಕ್ರ, ಶನಿ ಇವರುಗಳಿಂದ ಕೂಡಿದರೆ, ೧ ಯೋಗ, ನೋಡಲ್ಪಟ್ಟರೆ ೧ ಯೋಗ, ಈ ಯೋಗವು ದೃಷ್ಟಿವಿಕಲ್ಪದಿಂದ ಅನೇಕ ಪ್ರಕಾರವಾಗುವದು. ಇದನ್ನು ಊಹಿಸತಕ್ಕದ್ದು ॥೩೧೪॥

ಶ್ಲೋಕ॥ ಗುರು ಕ್ಷೇತ್ರಗತೇಲಗ್ನೇ ತಸ್ಮಿನ್ ಗುರುಯುತೇಯದಿ । ಸೌಮ್ಯ ಭೌಮಯುತೇ ದೃಷ್ಟೇ ಜಾತೋಯಸ್ತು ಧನೀನರಃ ॥೩೧೫॥ತಾ॥ ಬೃಹಸ್ಪತಿ ಕ್ಷೇತ್ರಗಳಾದ ಧನುರ್ಮೀನುಗಳು ಲಗ್ನಗಳಾಗಿ ಅಲ್ಲಿಯೇ ಬೃಹಸ್ಪತಿಯಿದ್ದು ಬುಧಾಂಗಾರಕರಿಂದ ಕೂಡಿದರೂ, ಅಥವಾ ಬುಧಾಂಗಾರಕರಿಂದ ನೋಡಲ್ಪಟ್ಟರೂ

ಜಾತಕನು ಧನಾಧಿಪತಿಯಾಗುವನು. ಮೀನಲಗ್ನ ಜಾತಕವಾಗಿ ಮೀನದಲ್ಲಿ ಬೃಹಸ್ಪತಿಯು ಬುಧಾಂಗರಕರಿಂದ ಕೂಡಿದರೆ ೧ ಯೋಗ ಇವರಿಂದ ನೋಡಲ್ಪಟ್ಟರೆ ೧ ಯೋಗ ಈ ಪ್ರಕಾರ ಮುಖ್ಯವಾಗಿ ೪ ಯೋಗಗಳು ಹುಟ್ಟುತ್ತವೆ. ಬುಧಾಂಗಾರಕರಿಂದ ನೋಡಲ್ಪಟ್ಟ ಯೋಗಗಳು ಮಾತ್ರವೇ ದೃಷ್ಟಿ. ಅಂಗಾರಕನು ೪-೮-೭ನೇ ದೃಷ್ಟಿಯುಳ್ಳವನಾದ್ದರಿಂದ ಧನುರ್ಲಗ್ನಕ್ಕೆ ೩-೬ ಪ್ರಕಾರವಾಗಿರುವದು ॥೩೧೫॥

ಶ್ಲೋಕ॥ ಬುಧಕ್ಷೇತ್ರಗತೇಲಗ್ನೇ ತಸ್ಮಿನ್ ಸೌಮ್ಯಯುತೇಯದಿ । ಶನಿ ಶುಕ್ರಯುತೇ ದೃಷ್ಟೇ ಜಾತೋಯಸ್ತು ಧನೀನರಃ ॥೩೧೬॥ ಬುಧಕ್ಷೇತ್ರಗಳಾದ ಕನ್ಯಾ ಮಿಥುನ ರಾಶಿಗಳು ಲಗ್ನಗಳಾಗಿ ಅಲ್ಲಿ ಬುಧನಿದ್ದು ಶನಿ ಶುಕ್ರರಿಂದ ಕೂಡಿದರೂ, ನೋಡಲ್ಪಟ್ಟರೂ, ಜಾತಕನು ಧನವಂತನಾಗುವನು. ಕನ್ಯಾಲಗ್ನ ಜಾತಕವಾಗಿ, ಕನ್ಯೆಯಲ್ಲಿ ಬುಧನು ಶನಿ, ಶುಕ್ರರಿಂದ ಕೂಡಿದರೆ ೧ ಯೋಗ, ಶನಿ ಶುಕ್ರರಿಂದ ನೋಡಲ್ಪಟ್ಟರೆ ೩ ಯೋಗ, ಮಿಥುನ ಲಗ್ನ ಜಾತಕವಾಗಿ ಮಿಥುನದಲ್ಲಿ ಬುಧನು ಶನಿ ಶುಕ್ರರಿಂದ ಕೂಡಿದರೆ ೧ ಯೋಗ, ಶನಿ ಶುಕ್ರರಿಂದ ನೋಡಲ್ಪಟ್ಟರೆ ೩ ಯೋಗಗಳು ಉಂಟಾಗುತ್ತವೆ ॥೩೧೬॥

ಶ್ಲೋಕ॥ ಭೃಗುಕ್ಷೇತ್ರಗತೇ ಲಗ್ನೇ ತಸ್ಮಿನ್ಭೃಗುಯುತೇ ಯದಿ । ಶನಿಸೌಮ್ಯ ಯುತೇ ದೃಷ್ಟೇಜಾತೋ ಯಸ್ತು ಧನೀನರಃ ॥೩೧೭॥ತಾ॥ ಶುಕ್ರಕ್ಷೇತ್ರಗಳಾದ ವೃಷಭ ತುಲೆಗಳು ಲಗ್ನಗಳಾಗಿ ಅಲ್ಲಿಯೇ ಶುಕ್ರನಿದ್ದು ಶನಿ ಬುಧರಿಂದ ಕೂಡಿದರೆ, ಜಾತಕನು ಧನವಂತನಾಗುವನು. ವೃಷಭಲಗ್ನಜಾತಕವಾಗಿ ಲಗ್ನದಲ್ಲಿ ಶುಕ್ರನು ಬುಧಶನಿಗಳಿಂದ ಕೂಡಿದರೆ ೧ ಯೋಗ, ಬುಧಶನಿಗಳಿಂದ ನೋಡಲ್ಪಟ್ಟರೆ ೩ ಯೋಗ, ತುಲಾಲಗ್ನ ಜಾತಕವಾಗಿ ತುಲೆಯಲ್ಲಿ ಶುಕ್ರನು ಬುಧಶನಿಗಳಿಂದ ಕೂಡಿದರೆ ೧ ಯೋಗ, ಬುಧ ಶನಿಗಳಿಂದ ನೋಡಲ್ಪಟ್ಟರೆ ೩ ಯೋಗ ಅಂತು ೮ ಯೋಗಗಳು ॥

ಸ॥ ಚಿಂ॥ ಶ್ಲೋಕ॥ ಲಗ್ನೇಶ್ವರೇಣ ಸಹಿತೇ ಧನರಾಶಿನಾಥೇ ಕೇಂದ್ರಸ್ಥಿತೇ ಪರಮತುಂಗ ನವಾಂಶ ಗೇಪಿ । ವೈಶೇಷಿಕಾಂಶಕಯುತೇ ಶುಭದೃಷ್ಟಿಯುಕ್ತೆ ಜಾತಸ್ಯ ಭೂರಿ ಧನಲಾಭ ಮಿಹಾಹುರಾರ್ಯಾಃ ॥೩೧೮॥

ತಾ॥ ಜನ್ಮಲಗ್ನಾಧಿಪತಿಯು ಧನಾಧಿಪತಿಯ ಸಂಗಡ ಸೇರಿ ಕೇಂದ್ರಸ್ಥಾನವನ್ನು ಹೊಂದಿ ತನ್ನ ಪರಮೋಚ್ಚನವಾಂಶದಲ್ಲಿದ್ದರೂ, ವೈಶೇಷಿಕಾಂಶದಲ್ಲಿದ್ದರೂ ಶುಭದೃಷ್ಟಿ ಯುಕ್ತನಾಗಿದ್ದರೆ, ಜಾತಕನು ಭೂರಿಸಂಖ್ಯಾಧನಲಾಭವನ್ನು ಹೊಂದುವನೆಂದು ಆರ್ಯರು ಹೇಳಿರುವರು ॥೩೧೮॥

## ಬಾಲ್ಯೇ ಧನಯೋಗಃ

ಶ್ಲೋಕ।। ಕರ್ಮಾಧಿಪೇನ ಸಹಿತೇ ಧನರಾಶಿನಾಥೇ ಲಗ್ನೇಶವರಸ್ಥಿತನ ವಾಂಶಪತೀಶ್ವರೇಣ । ದೃಷ್ಟೇಚತುಷ್ಟಯಗತೇ ಶುಭದೃಷ್ಟಿಯುಕ್ತೇ ಜಾತೋನರಃ ಫಲಮುಪೈತ್ಯಚಿರೇಣಬಾಲ್ಯೇ ।।೩೧೯।।

ತಾ।। ಧನಾಧಿಪತಿಯು ಕರ್ಮಾಧಿಪತಿ ಸಹಿತನಾಗಿ ಲಗ್ನಾಧಿಪತಿ ಯಾವ ನವಾಂಶೆಯಲ್ಲಿರುವನೋ ಆ ನವಾಂಶಕ್ಕಧಿಪತಿಯಾದ ಗ್ರಹದಿಂದ ನೋಡಲ್ಪಟ್ಟ ಚತುಷ್ಟಯ (೧-೪-೭-೧೦ನೆ) ಸ್ಥಾನಗಳಲ್ಲಿ ಯಾವಸ್ಥಾನಗಳಲ್ಲಿ ಯಾವಸ್ಥಾನದಲ್ಲಿ ಯಾದರೂ ಇದ್ದು ಶುಭದೃಷ್ಟಿಯುಕ್ತನಾದರೆ, ಬಾಲ್ಯದಲ್ಲಿಯೇ ಧನವಂತನಾಗುವನು ।।೩೧೯।।

ಶ್ಲೋಕ।। ಲಗ್ನಾರ್ಥಲಾಭಭವನೇ ಶುಭಖೇಚರೇಂದ್ರೇ ಸ್ವೋಚ್ಚೇಸುಹೃದ್ಗ್ರಹ ಗತೇಪಿ ವಿಶೇಷ ಕಾಂಶೇ । ತುಂಗಾಂಶಕೇ ಧನಪತಿಸ್ಥ ನವಾಂಶನಾಥ ದೃಷ್ಟೇ ಧನಾದಿ ಬಹುಲಾಭಮುಪೈತಿಬಾಲ್ಯೇ ।।೩೧೯।।ತಾ।। ಲಗ್ನದಲ್ಲೂ ಲಾಭದಲ್ಲೂ ಧನಸ್ಥಾನದಲ್ಲೂ ಶುಭಗ್ರಹಗಳು ಉಚ್ಚಸ್ಥಾನದಲ್ಲಾದರೂ ಮಿತ್ರಕ್ಷೇತ್ರದಲ್ಲಿ ವೈಶೇಷಿಕಾಂಶದಲ್ಲಾದರೂ ಉಚ್ಚಾಂಶೆಯಲ್ಲಾದರೂ ಇದ್ದು ಧನಾಧಿಪತಿ ಯಾವ ನವಾಂಶೆದಲ್ಲಿರುವನೋ ಆ ನವಾಂಶಾಧಿಪತಿಯಿಂದ ನೋಡಲ್ಪಟ್ಟರೆ, ಜಾತಕನು ಬಾಲ್ಯದಲ್ಲಿಯೇ ಧನವಂತನಾಗುವನು ।।೩೧೯।।

## ಬಹುದ್ರವ್ಯಾರ್ಜನ ಯೋಗಾಃ

ಶ್ಲೋಕ।। ಲಗ್ನೇಶೇ ಧನರಾಶಿಸ್ಥೇ ಧನೇಶೇ ಲಾಭರಾಶಿಗೇ । ಲಾಭೇಶೇ ವಾಪಿ ಲಗ್ನಸ್ಥೇ ಬಹುದ್ರವ್ಯಾರ್ಜಿತಂ ಭವೇತ್ ।।೩೨೦।। ತಾ।। ಲಗ್ನಾಧಿಪತಿ ದ್ವಿತೀಯದಲ್ಲೂ ದ್ವಿತೀಯಾಧಿಪತಿ ಲಾಭದಲ್ಲೂ ಲಾಭಭಾವಾಧಿಪತಿ ಲಗ್ನದಲ್ಲೂ ಇದ್ದರೆ, ಜಾತಕನು ಬಹು ದ್ರವ್ಯಾರ್ಜನೆ ಮಾಡುವನು.

## ಸ್ವವೀರ್ಯಾದ್ಧನ ಲಾಭಯೋಗಾಃ

ಶ್ಲೋಕ।। ಸರ್ವಗ್ರಹಾದತಿ ಬಲೀಯದಿ ಲಗ್ನನಾಥೇ ಕೇಂದ್ರಸ್ಥಿತೇತ್ತಿದರ ಪೂಜಿತ ಸಂಯುತಶ್ಚೇತ್ । ವೈಶೇಷಿಕಾಂಶಕಯುತೇ ಧನ ರಾಶಿನಾಥೋ ವಿತ್ತಂ ಸ್ವವೀರ್ಯ ಬಲ ಸಾಧಿತ ಮಾಹುರಾರ್ಯಾಃ ।।೩೨೧।।

ತಾ।। ಲಗ್ನಾಧಿಪತಿಯಾದ ಗ್ರಹವು ಸರ್ವಗ್ರಹಗಳಿಗಿಂತಲೂ ಅಧಿಕ ಬಲವಂತನಾಗಿ ಲಗ್ನದಿಂದ ಕೇಂದ್ರಸ್ಥಾನಗಳಲ್ಲಿ ಬೃಹಸ್ಪತಿಯುಕ್ತನಾಗಿದ್ದು, ಧನಾಧಿಪತಿ ವೈಶೇಷಿಕಾಂಶದಲ್ಲಿದ್ದರೆ ಜಾತಕನು ಸ್ವಬಾಹು ಬಲದಿಂದ ದ್ರವ್ಯವನ್ನು ಅರ್ಜನೆ ಮಾಡುವನು ।।೩೨೧।।

ಶ್ಲೋಕ।। ಲಗ್ನೇಶಸಂಯುತ ನವಾಂಶ ಪತಿಸ್ಥರಾಶಿನಾಥೋ ಬಲೇನ ಸಹಿತೋ ಧನಪಸ್ಯ ಮಿತ್ರಂ । ಕೇಂದ್ರತ್ರಿಕೋಣ ಸಹಿತಃ ಸ್ವಗೃಹೇಥವಾಪಿ ಜಾತಂಸ್ವವೀರ್ಯ ಧನಮೇತಿ ಬಹುಪ್ರಕಾರೈಃ ।।೩೨೨।।

ತಾ।। ಲಗ್ನಾಧಿಪತಿ ಇರುವ ನವಾಂಶಕ್ಕೆ ಯಾರು ಅಧಿಪತಿಯೋ ರಾಶ್ಯಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶ್ಯಧಿಪತಿ ಬಲವಂತನಾಗಿ ದ್ವಿತೀಯಾಧಪಿತಿಗೆ ಕೇಂದ್ರ ತ್ರಿಕೋಣದಲ್ಲಾಗಲೀ, ಉಚ್ಚಸ್ವಕ್ಷೇತ್ರದಲ್ಲಾಗಲೀ ಇದ್ದರೆ ಜಾತಕನು ಸ್ವಬಾಹುಬಲದಿಂದ ಅನೇಕ ಪ್ರಕಾರವಾಗಿ ಧನವನ್ನು ಹೊಂದುವನು ।।೩೨೨।।

ಶ್ಲೋಕ।। ಲಗ್ನೇಶ್ವರಸ್ಯ ಧನರಾಶಿಪತಿಸ್ಥಕೋಣೆ ಕೇಂದ್ರೇಥವಾಬಲಯುತಃ ಶ್ಶುಭಖೇಚರೇಂದ್ರಾಃ । ಉಚ್ಚೀಚಖೇಚರಯುತಃ ಪರಮೋಚ್ಚೇವಾ ಜಾತಸ್ವ- ವೀರ್ಯ ಧನಮೇತಿ ಬಹುಪ್ರಕಾರೈಃ ।।೩೨೩।।

ತಾ।। ದ್ವಿತೀಯಾಧಿಪತಿಯು ಲಗ್ನಾಧಿಪತಿಗೆ ಕೇಂದ್ರತ್ರಿಕೋಣಗಳಲ್ಲಿದ್ದರೆ, ೧ ಯೋಗ ಅಥವಾ ದ್ವಿತೀಯಾಧಿಪತಿಯು ಶುಭಗ್ರಹವಾಗಿ, ಉಚ್ಚಗ್ರಹಯುಕ್ತವಾದರೂ ಅಥವಾ ಪರಮೋಚ್ಚಾಂಶದಲ್ಲಿದ್ದರೂ, ಜಾತಕನು ಸ್ವವೀರ್ಯದಿಂದ ಬಹುಪ್ರಕಾರವಾಗಿ ಧನವನ್ನು ಹೊಂದುವನು ।।೩೨೩।।

## ಮಧ್ಯೇ ವಯಸಿ ಧನಪ್ರಾಪ್ತಿಯೋಗಃ

ಶ್ಲೋಕ।। ವಿತ್ತೇಶ್ವರೋ ಲಾಭವಿಲಗ್ನ ಪಾಭ್ಯಾಂ ಯುಕ್ತಸ್ತ್ರಿಕೋಣೇಯದಿ ಕೇಂದ್ರರಾಶೌ । ಶುಭೇಕ್ಷಿತಃ ಕಾಲಬಲಾನ್ವಿತಶ್ಚೇ ಜ್ಞಾತಸ್ಯವೀರ್ಯಾದ್ಧನ ಮೇತಿಮಧ್ಯೇ ।।೩೨೪।।ತಾ।। ಜಾತಕನ ಮಧ್ಯವಯಸ್ಸಿನಲ್ಲಿ ಧನಪ್ರಾಪ್ತಿ ಹೇಳಲ್ಪಡುತ್ತೆ. ದ್ವಿತೀಯ ಭಾವಾಧಿಪತಿ ಲಾಭಾಧಿಪತಿ ಲಗ್ನಾಧಿಪತಿಯೊಡನೆ ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹ ವೀಕ್ಷಿತನಾಗಿ ಕಾಲಬಲಾನ್ವಿತನಾದರೆ ಜಾತಕನು ಮಧ್ಯವಯಸ್ಸಿನಲ್ಲಿ ಸ್ವವೀರ್ಯದಿಂದ ಧನವನ್ನು ಹೊಂದುವನು ।।೩೨೪।।

## ಅಂತ್ಯವಯಸಿ ಧನಯೋಗಃ

ಶ್ಲೋಕ।। ಅಂತೇಧನಂಯಾತಿ ಧನೇಶಯುಕ್ತ ರಾಶೌ ವಿಲಗ್ನೇಶ ಯುತೇನ ಸೌಮ್ಯೇ । ತದೀಶ್ವರೇ ಲಗ್ನಗತೇ ಬಲಾಢ್ಯೇ ಲಾಭೇಶ್ವರಾದೇವ ಮುದಾರಂತಿ ।।೩೨೫।।ತಾ।। ಜಾತಕನ ಅಂತ್ಯ ವಯಸ್ಸಿನಲ್ಲಿ ಧನಪ್ರಾಪ್ತಿಯಾಗುವ ಯೋಗವು ಹೇಳಲ್ಪಡುತ್ತೆ. ಧನಾಧಿಪತಿಯಿರುವ ರಾಶಿಯಲ್ಲಿ ಲಗ್ನಾಧಿಪತಿ ಮತ್ತೊಂದು ಸೌಮ್ಯ ಗ್ರಹ ಯುಕ್ತನಾಗಿ ಈ ಮೂರು ಗ್ರಹಗಳಿರುವ ರಾಶ್ಯಾಧಿಪತಿ ಲಗ್ನದಲ್ಲಿ

ಬಲಿಷ್ಠನಾಗಿದ್ದರೆ ಜಾತಕನು ಬಹು ಪ್ರಕಾರವಾಗಿ ಅಂತ್ಯವಯಸ್ಸಿನಲ್ಲಿ ಧನವನ್ನು ಹೊಂದುವನು. ಮತ್ತು ಲಾಭಾಧಿಪತಿಯ ಸಂಗಡ ಲಗ್ನಾಧಿಪತಿ ಇದ್ದು ಮತ್ತೊಂದು ಶುಭಗ್ರಹವು ಸೇರಿದ್ದು ಈ ಗ್ರಹಗಳಿದ್ದ ರಾಜ್ಯಧಿಪತಿಯು ಲಗ್ನದಲ್ಲಿ ಬಲಿಷ್ಠನಾಗಿದ್ದರೆ ಜಾತಕನು ಅಂತ್ಯವಯಸ್ಸಿನಲ್ಲಿ ಧನವನ್ನು ಹೊಂದುವನು ॥೩೨೫॥

## ಭ್ರಾತೃಮೂಲ ಧನಪ್ರಾಪ್ತಿಯೋಗಃ

ಶ್ಲೋಕ॥ ತೃತೀಯ ರಾಶೌ ಧನಲಗ್ನನಾಥೌ ಬಲಾನ್ವಿತೌ ಸದ್ಗ್ರಹದೃಷ್ಟಿ ಯುಕ್ತೌ। ತದೀಶ್ವರೇಣಾಪಿ ಪ್ರದೃಷ್ಟೌ ಭ್ರಾತುರ್ಧನಂಯಾತಿ ವಿಶೇಷಾಂಶೇ ॥೩೨೬॥ತಾ.। ಭ್ರಾತೃಮೂಲದಿಂದ ಧನಪ್ರಾಪ್ತಿಯೋಗವು ಹೇಳಲ್ಪಡುತ್ತೆ. ತೃತೀಯ ರಾಶಿಯಲ್ಲಿ ಧನಾಧಿಪತಿ ಲಗ್ನಾಧಿಪತಿಗಳಿದ್ದು ಶುಭಗ್ರಹದಿಂದ ನೋಡಲ್ಪಟ್ಟರು, ತೃತೀಯಾಧಿಪತಿ ವಿಶೇಷಾಂಶದಲ್ಲಿದ್ದು ನೋಡಿದರೂ ಅಥವಾ ಭ್ರಾತೃಸ್ಥಾನದಲ್ಲಿ ಧನ ಲಗ್ನಾಧಿಪತಿಗಳ ಸಂಗಡಲೇ ಇದ್ದರೂ ಜಾತಕನಿಗೆ ಸಹೋದರರಿಂದ ಧನಲಾಭವಾಗುವದು. ॥೩೨೬॥ ಶ್ಲೋಕ॥ ತೃತೀಯಭಾವಾಧಿಪತೌ ಧನಸ್ಥೇ ತತ್ರಸ್ಥಿತೇ ಕಾರಕ ಖೇಚರೇಂದ್ರೇ । ದೃಷ್ಟೇಯುತೇವಾ ತನುಪೇನಜಾತೋ ಭ್ರಾತುರ್ಧನಂಯಾತಿ ವಿಶೇಷಕಾಂಶೇ ॥೩೨೭॥ತಾ॥ ಭ್ರಾತೃಧನಪ್ರಾಪ್ತಿ ಯೋಗವು ಹೇಳಲ್ಪಡುತ್ತೆ. ತೃತೀಯಾಧಿಪತಿ ಧನರಾಶಿಯಲ್ಲಿದ್ದು ಧನಕಾರಕ (ಗುರು)ನಿದ್ದು ವಿಶೇಷಕಾಂಶದಲ್ಲಿದ್ದು ಲಗ್ನಾಧಿಪತಿಯಿಂದ ಕೂಡಿದರೂ ನೋಡಲ್ಪಟ್ಟರೂ ಜಾತಕನಿಗೆ ಅಣ್ಣತಮ್ಮಂದಿರ ಮೂಲಕವಾಗಿ ಧನಲಾಭವಾಗುವದು ॥೩೨೭॥

## ಮಾತ್ರಾದಿ ಮೂಲಾದ್ಧನಯೋಗಾಃ

ಶ್ಲೋಕ॥ ದೃಷ್ಟೇಯುತೇ ವಿತ್ತಪತೌ ಬಲಾಢ್ಯೇ ಸುಖೇಶ್ವರೇಣಾಪಿ ಧನಂಜನನ್ಯಾಃ। ಬಂಧೋಸ್ಸಕಾಶಾದಥವಾ ಕೃಷೇಶ್ಚ ಧನಂಪ್ರಯಾತ್ಯತ್ರ ವಿಶೇಷಕಾಂಶೇ ॥೩೨೮॥

ತಾ॥ ಮಾತೃಮೂಲವಾಗಿಯೂ, ಬಂಧುಗಳ ಮೂಲವಾಗಿಯೂ ಅಥವಾ ಕೃಷಿಮೂಲವಾಗಿಯೂ, ಧನಪ್ರಾಪ್ತಿಯೋಗವು ಹೇಳಲ್ಪಡುತ್ತೆ । ಧನಾಧಿಪತಿಯು ವಿಶೇಷಾಂಶೆಯಲ್ಲಿದ್ದು ಮಾತೃಸ್ಥಾನಾಧಿಪತಿಯುಕ್ತನಾಗಿಯೂ ಅಥವಾ ನೋಡಲ್ಪಟ್ಟರೂ ಜಾತಕನಿಗೆ ಮಾತೃಮೂಲವಾಗಿ ಧನಪ್ರಾಪ್ತಿಯಾಗುವದು ಅಥವಾ ಬಂಧು ಮೂಲದಿಂದಾಗಲೀ, ಕೃಷಿಮೂಲದಿಂದಾಗಲೀ ಧನಪ್ರಾಪಿಯಾಗುವದು ॥೩೨೯॥

## ಪುತ್ರಮೂಲಾದ್ಧನಯೋಗಃ

ಶ್ಲೋಕ॥ ಪುತ್ರೇಶ ತತ್ಕಾರಕ ಖೇಚರಾಭ್ಯಾಂ ತಥಾವಿಧೇ ವಿತ್ತಪತೌ ಬಲಾಢ್ಯೇ। ವೈಶೇಷಿಕಾಂಶೇಯದಿ ಲಗ್ನನಾಥೇ ಜಾತಸ್ಸ್ವ ಪುತ್ರಾರ್ಜಿತ ವಿತ್ತಮೇತಿ ॥೩೩೦॥

ತಾ।। ಪುತ್ರಮೂಲದಿಂದ ಧನಪ್ರಾಪ್ತಿಯೋಗವು ಹೇಳಲ್ಪಡುತ್ತೆ ಧನಾಧಿಪತಿಯು ಬಲವಂತನಾಗಿ ಪಂಚಮಾಧಿಪತಿ (ಪುತ್ರಕಾರಕ ಗುರು) ಇವರುಗಳ ಸಂಗಡ ಇದ್ದು ಸ್ಥಾನಾದಿ ಷಡ್ಬಲಯುಕ್ತನಾಗಿ ಲಗ್ನಾಧಿಪತಿ ವಿಶೇಷಾಂಶೆಯಲ್ಲಿದ್ದರೆ, ಪುತ್ರನು ಸಂಪಾದಿಸಿದ ಧನವುಳ್ಳವನಾಗುವನು ।।೩೩೦।।

## ಶತ್ರುಮೂಲಾದ್ಧನ ಯೋಗಃ

ಶ್ಲೋಕ।। ಷಷ್ಠೇಶ ತತ್ಕಾರಕ ಖೇಚರಾಭ್ಯಾಂ ತಥಾವಿಧೇವಿತ್ತಪತೌಬಲಾಢ್ಯೇ। ಶತ್ರೋಸ್ಸಕಾಶಾಚ್ಚಧನಂ ಪ್ರಯಾತಿ ವೈಶೇಷಿಕೇ ಲಗ್ನಪತೌ ಬಲಾಢ್ಯೇ ತಾ।। ಶತ್ರು ಮೂಲದಿಂದ ಧನಪ್ರಾಪ್ತಿಯಾಗುವ ಯೋಗವು ಹೇಳಲ್ಪಡುತ್ತೆ ।। ದ್ವಿತೀಯಾಧಿಪತಿ ಬಲವಂತನಾಗಿ ಶತ್ರುಸ್ಥಾನಾಧಿಪತಿ (ಶತ್ರುಕಾರಕ) (ಕುಜ) ನೊಡನೆ ಸೇರಿದರೂ ಅಥವಾ ನೋಡಲ್ಪಟ್ಟರೂ ಲಗ್ನಾಧಿಪತಿ ಬಲಿಷ್ಠನಾಗಿ ವೈಶೇಷಿಕಾಂಶೆಯಲ್ಲಿದ್ದರೆ, ಜಾತಕನು ಶತ್ರುಗಳಿಂದ ಧನವನ್ನು ಹೊಂದುವನು ।।೩೩೧।।

## ಕಳತ್ರ ಮೂಲಾದ್ಧನ ಯೋಗಃ (ಗುರುಮೂಲಾದ್ಧನ ಯೋಗಶ್ಚ)

ಶ್ಲೋಕ।। ಕಳತ್ರ ತತ್ಕಾರಿಕ ಯೋಸ್ತಥೈವ ವಿತ್ತಂ ಕಳತ್ರಾಲ್ಲಭ ತೇಹಿಜಾತಃ । ಪಿತುರ್ಧನಂ ಕಾರಕಭಾವಪಾಭ್ಯಾಂ ಗುರೋಸ್ಸಕಾಶಾದಪಿ ಧರ್ಮಮೂಲಾತ್ ।।೩೩೨।। ತಾ।। ಕಳತ್ರ, ಪಿತೃ, ಗುರು, ಧರ್ಮ ಈ ನಾಲ್ಕರ ಮೂಲಕವಾಗಿ ಧನಪ್ರಾಪ್ತಿ ಯೋಗವು ಹೇಳಲ್ಪಡುತ್ತೆ. ದ್ವಿತೀಯಾಧಿಪತಿ ಬಲವಂತನಾಗಿ ಕಳತ್ರಾಧಿಪತಿ ಮತ್ತು ಕಳತ್ರಕಾರಕ (ಶುಕ್ರ)ನ ಸಂಗಡ ಸೇರಿದರೂ ಅಥವಾ ನೋಡಲ್ಪಟ್ಟರೂ, ಲಗ್ನಾಧಿಪತಿ ಬಲಿಷ್ಠನಾಗಿದ್ದರೆ ಜಾತಕನು ಪತ್ನೀಮೂಲದಿಂದ ಧನವನ್ನು ಹೊಂದುವನು, ಈ ಪ್ರಕಾರವಾಗಿಯೇ ಪಿತೃಸ್ಥಾನಾಧಿಪತಿಯೂ ಪಿತೃಕಾರಕ (ಸೂರ್ಯನು) ಸಹ ಧನಾಧಿಪತಿಯ ಸಂಗಡ ಇದ್ದರೂ ಅಥವಾ ನೋಡಲ್ಪಟ್ಟರೂ, ಪಿತೃಮೂಲದಿಂದ ಧನಪ್ರಾಪ್ತಿಯಾಗುವದು, ನವಮಾಧಿಪತಿ ಗುರು ಸಹ ಧನಾಧಿಪತಿಯನ್ನು ನೋಡಿದರೂ ಕೂಡಿದರೂ ಗುರುಮೂಲದಿಂದ ಧನಲಾಭವಾಗುವದು. ಮತ್ತು ಧರ್ಮಮೂಲವಾಗಿ ಧನ ಪ್ರಾಪ್ತಿಯಾಗುವುದು ।।೩೩೨।।

## ಧನಯೋಗ ವಿಚಾರಃ ।।ವೈದ್ಯನಾಥಃ।।

ಶ್ಲೋಕ।। ವಿತ್ತಾಯೋದಯರಾಶಯಃ ಪತಿಯುತಾ ವಿತ್ತಾಧಿಕೋ ಜಾಯತೇ। ಲಾಭಸ್ಥೌ ಧನಲಾಭಪೌ ನಿಜಸುಹೃತ್ತುಂಗಾದಿಗೌ ಚೇತ್ತಥಾ । ತದ್ವಲ್ಲಾಭ ಧನಾ ಧಿಪೌ ತನುಗತಾ ಮನ್ಯೋನ್ಯ ಮಿಷ್ಟಗ್ರಹೌ । ಲಗ್ನೇಶೇ ಧನ ಲಾಭರಾಶಿಪಯುತೇ ಲಗ್ನೇ ಬಹುದ್ರವ್ಯವಾನ್ ।।೩೩೩।।

ತಾ।। ಈ ಶ್ಲೋಕದಿಂದ ೪ ಧನಯೋಗಗಳು ಹೇಳಲ್ಪಡುತ್ತೆ. ಧನಸ್ಥಾನ ಲಾಭಸ್ಥಾನ, ಲಗ್ನ ಈ ಮೂರು ಬಾವಗಳು ಆಯಾಯ ಅಧಿಪತಿಗಳಿಂದ ಯುಕ್ತವಾಗಿದ್ದರೆ, ದ್ರವ್ಯ ಅಧಿಕವಾಗಿ ಪ್ರಾಪ್ತಿ ಆಗುತ್ತದೆ. ಲಾಭಸ್ಥಾನದಲ್ಲಿ ಧನಾಧಿಪತಿಯು, ಲಾಭಾಧಿಪತಿ ಯುಕ್ತವಾಗಿದ್ದರೆ, ಆ ಲಾಭಸ್ಥಾನವು ಧನಲಾಭಾಧಿಪತಿ ಗಳಿಗೆ ಸ್ವಕ್ಷೇತ್ರ, ಮಿತ್ರಕ್ಷೇತ್ರ, ಉಚ್ಚಕ್ಷೇತ್ರವಾಗಿದ್ದರೆ ಧನವಂತನಾಗುವನು ಮತ್ತು ಲಾಭಾಧಿಪತಿಯು, ಧನಾದಿಪತಿಯು, ಲಗ್ನವನ್ನು ಹೊಂದಿದರೆ ಧನವಂತನಾಗುವನು, ಮತ್ತು ಲಗ್ನಾಧಿಪತಿ ಧನಲಾಭಾಧಿಪತಿಗಳ ಯುಕ್ತನಾಗಿ ಲಗ್ನದಲ್ಲಿದ್ದರೆ ಅಧಿಕ ಧನವಂತನಾಗುವನು ।।೩೩೩।।

## ಅಮರಣಾಂತ ಧನಯೋಗಃ

ಶ್ಲೋಕ।। ಕುಟುಂಬಭಾವೇ ಬಹುಖೇಟಯುಕ್ತೇ ಧನಪ್ರದವ್ಯೋಮಚರೇ ಬಲಾಢ್ಯೇ । ಸ್ವತುಂಗಮಿತ್ರ ಸ್ವಗೃಹೋಪಗೇವಾ ಧನಂ ಸಮೇತ್ಯಾ ಮರಣಾಂತ ಮಾಹುಃ ।।೩೩೪।।ತಾ।। ಯಾವಜ್ಜೀವವೂ ಧನಯೋಗವು ಹೇಳಲ್ಪಡುತ್ತೆ. ದ್ವಿತೀಯ ಸ್ಥಾನದಲ್ಲಿ ಬಹು ಗ್ರಹಗಳಿದ್ದು ಧನಪ್ರದ ಗ್ರಹಗಳು ಬಲಿಷ್ಠರಾಗಿದ್ದರೆ ಅಥವಾ ಅವರು ಗಳು ಉಚ್ಚಸ್ವಕ್ಷೇತ್ರ ಮಿತ್ರಕ್ಷೇತಗಳಾಗಿ ಅಲ್ಲಿದ್ದರೂ, ಜಾತಕನು ಅಮರಣಾಂತವಾಗಿ ಧನವುಳ್ಳವನಾಗುವನು ।।೩೩೪।।

## ಧನಪ್ರಾಪ್ತಿ ಕಾಲವಿಚಾರಃ

ಶ್ಲೋಕ।। ಅರ್ಥಾಧೀಶೋ ಯತ್ರಸಂಸ್ಥೋ ನರಾಣಾಂ ತಸ್ಮಿನ್ಕಾಲೇ ತತ್ರ ವೃದ್ಧಿರ್ವಿಶೇಷಾತ್ । ತದ್ಭಾಗೇಚ ದ್ರವ್ಯಲಾಭಂ ಕರೋತಿ ವಕ್ರಃಸ್ವೋಚ್ಚೇದಿಕ್ಷಂ ಸರ್ವಾರ್ಥಸಿದ್ಧಿಃ ।।೩೩೫।।

ಅವತಾರಿಕೆ-ಜಾತಕನಿಗೆ ಅರ್ಥಯೋಗವನ್ನು ಹೇಳಿದೆ ಆದರೆ ಆ ಕಾಲವನ್ನು ಹೇಳದಿದ್ದರೆ ಪ್ರಯೋಜನವಿಲ್ಲ ಆದ್ದರಿಂದ ಈ ಶ್ಲೋಕದಿಂದ ಅರ್ಥ ಪ್ರಾಪ್ತಿಕಾಲ ಮತ್ತು ದಿಕ್ಕು ಸಹ ಹೇಳಲ್ಪಡುತ್ತೆ.

ತಾ।। ದ್ವಿತೀಯಾಧಿಪತಿ ಯಾವ ದಿಕ್ಕಿನಲ್ಲಿರುವನೋ ಅವನ ದಶಾ ಕಾಲದಲ್ಲೂ ಭುಕ್ತಿ ಕಾಲದಲ್ಲು ದ್ರವ್ಯ ವೃದ್ಧಿಯುಂಟಾಗುತ್ತೆ, ವಕ್ರಗತಿ ಬಂದ ಗ್ರಹಕ್ಕೆ ಯಾವ ದಿಕ್ಕಿನಲ್ಲಿ ವಕ್ರಗತಿ ಹುಟ್ಟಿರುತ್ತೋ ಆ ದಿಕ್ಕಿನಲ್ಲಿ ದ್ರವ್ಯ ಪ್ರಾಪ್ತಿಯುಂಟಾಗುತ್ತೆಂದು ತಿಳಿಯಬೇಕು ।।೩೩೫।।

## ಧನಪ್ರಾಪ್ತಿ ಕಾರಣವಿಚಾರಃ

ಶ್ಲೋಕ।। ವಿತ್ತಾಧೀಶೇ ಲಗ್ನಗೇ ಲಗ್ನನಾಥೇ ವಿತ್ತಸ್ಥಾನೇ ಯತ್ನತೋ ವಿತ್ತಮೇವ । ಯದ್ಭಾವಸ್ಥೌ ಲಗ್ನ ವಿತ್ತೇಶ್ವರೌ ಚೇತ್ತನ್ಮೂಲಾಹಿದ್ರವ್ಯ ವೃತ್ತಿರ್ನರಾಣಾಂ ।।೩೩೬।।

## ಅಯತ್ನಾದ್ಧನಲಾಭ ಯೋಗಃ

ತಾ॥ ಧನಾಧಿಪತಿಯು ಲಗ್ನಾಧಿಪತಿಯು ಪರಸ್ಪರ ಸ್ಥಾನಗಳಲ್ಲಿದ್ದರೆ ಅಂದರೆ, ಲಗ್ನಾಧಿಪತಿ ದ್ವಿತೀಯದಲ್ಲೂ, ದ್ವಿತೀಯಾಧಿಪತಿ ಲಗ್ನದಲ್ಲೂ ಇದ್ದರೆ ಯತ್ನವಿಲ್ಲದೆ ದ್ರವ್ಯವನ್ನು ಹೊಂದುತ್ತಾನೆ.

## ಧನಲಾಭ ಮೂಲವಿಚಾರಃ

ಲಗ್ನಾಧಿಪತಿ ಧನಾಧಿಪತಿಗಳು ಯಾವಯಾವ ಭಾವದಲ್ಲಿರುತ್ತಾರೋ ಆ ಮೂಲವಾಗಿ ಧನಪ್ರಾಪ್ತಿಯನ್ನು ಹೇಳತಕ್ಕದ್ದು, ಲಗ್ನ ಧನಾಧಿಪತಿಗಳು ತೃತೀಯಾಧಿ-ಪತಿಯೊಡಗೂಡಿ, ತೃತೀಯದಲ್ಲಿದ್ದರೆ ಅಣ್ಣತಮ್ಮಂದಿರಿಂದಲೂ ಚತುರ್ಥದಲ್ಲಿ ಮಾತೃಮೂಲ, ಬಂಧುಗಳ ಮೂಲದಿಂದಲೂ, ಪಂಚಮದಲ್ಲಿದ್ದರೆ, ಪುತ್ರಮೂಲ-ವಾಗಿಯೂ ಅಥವಾ ಬುಧ, ಮಂತ್ರಿ ಮೂಲದಿಂದಲೂ, ಷಷ್ಠದಲ್ಲಿದ್ದರೆ ಶತ್ರು ಮೂಲದಿಂದಲೂ, ಸಪ್ತಮದಲ್ಲಿದ್ದರೆ ಹೆಂಡತಿಮೂಲದಿಂದಲೂ, ನವಮದಲ್ಲಿದ್ದರೆ ಪಿತೃಮೂಲದಿಂದಲೂ, ದಶಮದಲ್ಲಿದ್ದರೆ ರಾಜಮೂಲದಿಂದಲೂ, ಏಕಾದಶದಲ್ಲಿದ್ದರೆ ನಾನಾ ವಿಧವಾಗಿಯೂ ಧನಪ್ರಾಪ್ತಿಯಾಗಬೇಕೆಂದು ಹೇಳಬೇಕು.

ಇದರಲ್ಲಿ ತಿಳಿಯತಕ್ಕ ವಿಶೇಷವೇನೆಂದರೆ ಯಾವ ಭಾವದಲ್ಲಿ ಧನ ಲಗ್ನಾಧಿ ಪತಿಗಳು ಯಾವ ಭಾವಾಧಿಪತಿಯಿಂದ ನೋಡಲ್ಪಡುವರೋ ಅಥವಾ ಯುಕ್ತರಾಗಿರುವರೋ, ಆ ಭಾವಾಧಿಪತಿಯಿಂದ ಕೂಡಿದರೂ ನೋಡಲ್ಪಟ್ಟರೂ, ಆಯಾಯ ಮೂಲವಾಗಿ ಧನಪ್ರಾಪ್ತಿ ಹೇಳಬೇಕು. ಈ ವಿಷಯಕ್ಕೆ ॥ಶ್ಲೋಕ॥ ವಿತ್ತಾಧೀಶೇ ಸೋದರೇಶೇ ನಯುಕ್ತೇ ಲಗ್ನಸ್ಥೇಚ ಭ್ರಾತೃವಿತ್ತಂ ಸ್ಥಮೇತಿ । ಮಾತೃಸ್ಥಾನ ಸ್ವಾಮಿನಾ ಮಾತೃವಿತ್ತಂ ಯದ್ಭಾವೇಶೇನಾನ್ವಿತಂ ತದ್ಧನಂಸ್ಯಾತ್ ॥೩೩೬॥ ಚಂದ್ರಃ ಕುಟುಂಬ ಭವನೇ ನಿರೀಕ್ಷಿತಃ ಪ್ರದಾತಾಚ । ಸೌಮ್ಯೇ ಶುಭಸಂದೃಷ್ಟೇ ಸಏವಧನವಾ‌ನ್ ಸದಾಜ್ಞೇಯಃ ॥೩೩೭॥

## ಅಥ ದಾರಿದ್ರ್ಯಯೋಗಃ ॥ಪರಾಶರಃ॥

ಶ್ಲೋಕ॥ ಲಗ್ನೇಶೇ ವೈರಿಃಪ್ಪಗತೇ ರಿಪ್ಪೇಶೇ ಲಗ್ನಮಾಗತೇ । ಮಾರ ಕೇಶಯುತೇದೃಷ್ಟೇ ಜಾತಃ ಸ್ಯಾನ್ನಿರ್ಧನೋನರಃ ॥೩೩೮॥ತಾ॥ ಲಗ್ನಾಧಿಪತಿ ೧೨ನೆ ಭಾವದಲ್ಲಿ, ದ್ವಾದಶಸ್ಥಾನಾಧಿಪತಿ ಲಗ್ನದಲ್ಲಿದ್ದು ಮಾರಕಸ್ಥಾನಾಧಿಪತಿಯೊಂದಿಗೆ ಕೂಡಿದರೂ, ಅಥವಾ ನೋಡಲ್ಪಟ್ಟರೂ ಜಾತಕನು ನಿರ್ಧನನಾಗುವನು ॥೩೩೮॥

ಶ್ಲೋಕ॥ ಲಗ್ನಾಧಿಪೇ ಶತ್ರುಗೃಹಂಗತೇವಾ ಷಷ್ಠೇಶ್ವರೇ ಲಗ್ನಗತೇಪಿ ವಾಚೇತ್। ವಿಲಗ್ನಪೇ ಮಾರಕನಾಥದೃಷ್ಟೇ ಜಾತೋಭವೇನ್ನಿರ್ಧನಿಕೋಪಿ ಮುಖ್ಯಃ ॥೩೪೦

।।ತಾ।। ಲಗ್ನಾಧಿಪತಿಯಾದ ಗ್ರಹವು ಷಷ್ಠಸ್ಥಾನದಲ್ಲಿದ್ದರೂ ಷಷ್ಠಾಧಿಪತಿ ಲಗ್ನದಲ್ಲಿದ್ದರೂ, ವಿಲಗ್ನಾಧಿಪತಿ (ಚಂದ್ರ ಲಗ್ನಾಧಿಪತಿ) ಮಾರಕ ಸ್ಥಾನಾಧಿ ಪತಿಯಿಂದ ನೋಡಲ್ಪಟ್ಟರೆ ಜಾತಕನು ನಿರ್ಧನವಂತರಲ್ಲಿ ಮುಖನಾಗುವನು ।।೩೪೦।।

ಶ್ಲೋಕ।। ಲಗ್ನೇಂದು ಕೇತುಯುಕ್ತೋವಾ ಲಗ್ನೇಶೇನಿಧನಂಗತೇ । ಮಾರಕೇಶಯುತೇದೃಷ್ಟೇ ಜಾತೋವೈನಿರ್ಧನೋಭವೇತ್ ।।೩೪೧।।ತಾ।। ಲಗ್ನ ಚಂದ್ರ ಕೇತು ಸಂಯುಕ್ತನಾಗಿದ್ದರೂ ಅಥವಾ ಲಗ್ನಾಧಿಪತಿಯಾದ ಗ್ರಹವು ಅಷ್ಟಮಸ್ಥಾನವನ್ನು ಹೊಂದಿ ಮಾರಕಸ್ಥಾನಾಧಿಪತಿಯುಕ್ತವಾದರೂ ಅಥವಾ ನೋಡಿದರೂ ಜಾತಕನು ನಿರ್ಧನನಾಗುವನು ।।೩೪೧।।

ಶ್ಲೋಕ।। ಷಷ್ಠಾಷ್ಟಮ ವ್ಯಯಗತೇ ಲಗ್ನೇಶೇ ಪಾಪಸಂಯುತೇ । ಮಾರಕೇಶಯುತೇ ದೃಷ್ಟೇ ರಾಜವಂಶ್ಯೋಪಿನಿರ್ಧನಃ ।।೩೪೨।।

ತಾ।। ಲಗ್ನಾಧಿಪತಿಯು ಪಾಪಯುಕ್ತನಾಗಿ ಷಷ್ಠ, ಅಷ್ಟಮ, ದ್ವಾದಶ ಈ ಮೂರು ಸ್ಥಾನಗಳಲ್ಲಿ ಎಲ್ಲಿದ್ದರೂ ಮಾರಕಸ್ಥಾನಾಧಿಪತಿಯಿಂದ ಕೂಡಿದರೂ ಅಥವಾ ನೋಡಲ್ಪಟ್ಟರೂ, ರಾಜವಂಶದಲ್ಲಿ ಹುಟ್ಟಿದವನಾದರೂ ನಿರ್ಧನನಾಗುವನು. ಇತರರಾದರೆ ಹೇಳತಕ್ಕದ್ದೇನು ?

ಶ್ಲೋಕ।। ವಿಲಗ್ನನಾಥೇ ರವಿನಾಶ ರಿಃಫ ನಾಥೇನಯುಕ್ತೇ ಯದಿಪಾಪದೃಷ್ಟೇ। ಮಂತ್ರಾತ್ಮಜೇ ನಾಥಯುತೇಪಿದೃಷ್ಟೇ ಶುಭೈರ್ನದೃಷ್ಟೇ ಸಭವೇದ್ದರಿದ್ರಃ ।।೩೪೩।। ತಾ।। ಲಗ್ನಾಧಿಪತಿಯಾದ ಗ್ರಹವು ಷಷ್ಠ, ಅಷ್ಟಮ, ದ್ವಾದಶ ಈ ಮೂರು ಸ್ಥಾನಾಧಿತಿಗಳಲ್ಲಿ ಯಾರಿಂದ ಸೇರಿದರೂ, ಪಾಪದೃಷ್ಟವಾದರೆ, ಅಥವಾ ಪಂಚಮಾಧಿಪತಿಯೊಡನೆ ಈ ಮಾರಕ ಸ್ಥಾನಾಧಿಪತಿಗಳು ಸೇರಿದರೂ, ಈ ಎರಡು ಯೋಗಗಳಲ್ಲಿಯೂ ಶುಭ ಗ್ರಹವು ನೋಡದಿದ್ದರೆ ಜಾತಕನು ದರಿದ್ರನಾಗುವನು ।।೩೪೩।।

ಶ್ಲೋಕ।। ಮಿತ್ರೇಶೋ ಧರ್ಮನಾಥಶ್ಚ ಷಷ್ಠಕರ್ಮಸಿತೌಕ್ರಮಾತ್ । ದೃಷ್ಟೌ ಚೇನ್ಮಾರಕೇಶೇನ ಜಾತಸ್ಸ್ಯಾನ್ನಿರ್ಧನೋನರಃ ।।೩೪೪।।ತಾ।। ಪಂಚಮಾಧಿಪತಿಯು ಷಷ್ಠ ಕರ್ಮಸ್ಥಾನಗಳಲ್ಲಿದ್ದು ಮಾರಕಸ್ಥಾನಾಧಿಪತಿಯಿಂದ ನೋಡಲ್ಪಟ್ಟರೆ ಜಾತಕನು ನಿರ್ಧನನಾಗುವನು ।।೩೪೪।।

ಶ್ಲೋಕ।। ಪಾಪಗ್ರಹೇ ಲಗ್ನಗತೇ ರಾಜ್ಯಧರ್ಮಾಧಿಪೌವಿನಾ। ಮಾರಕೇಶಯುತೇ ದೃಷ್ಟೇ ಜಾತಃಸ್ಯಾನ್ನಿರ್ಧನೋನರಃ ।।೩೪೫।।ತಾ।। ಪಾಪಗ್ರಹಗಳು ೯-೧೦ನೇ

* ಮಾರಕಸ್ಥಾನ ೨-೭, ವಿಶೇಷ ಮಾರಕಸ್ಥಾನ ೩-೬-೧೧ ಮತ್ತು ೮-೧೨

ಅಧಿಪತ್ಯ ಹೊಂದಿದವರೆಲ್ಲದವರಾಗಿ ಲಗ್ನದಲ್ಲಿದ್ದು, ಮಾರಕಸ್ಥಾನಾಧಿಪತಿ ಯೊಂದಿಗೆ ಕೂಡಿದರೂ ಅಥವಾ ನೋಡಲ್ಪಟ್ಟರೂ, ಜಾತಕನು ನಿರ್ಧನನಾಗುವನು ॥೩೪೫॥

ಶ್ಲೋಕ॥ ಯದ್ಭಾವೇಶೋ ರಂಧ್ರರಿ- ಫಾರಿಸಂಸ್ಥೋ ಯದ್ಭಾವಸ್ಥಾಃ ರಂಧ್ರರಿಃಫಾರಿಭೇಶಾಃ । ಪಾಪೈರ್ದೃಷ್ಟಾ ಮಂದದೃಷ್ಟಾರ್ಥವಾಚೇ ದ್ದುಃಖಾಕ್ರಾಂತ-ಶ್ಚಂಚಲೋ ನಿರ್ಧನಃಸ್ಯಾತ್ ॥೩೪೬॥

ತಾ॥ ಯಾವ ಭಾವಾಧಿಪತಿಗಳು ಷಷ್ಠಾಷ್ಟಮ ವ್ಯಯಸ್ಥಾನಗಳನ್ನು ಹೊಂದುತ್ತಾರೋ ಅವರುಗಳು ಪಾಪದೃಷ್ಟಿಯುಕ್ತರಾದರೂ, ಅಥವಾ ಶನಿಯಿಂದ ನೋಡಲ್ಪಟ್ಟರೂ, ಜಾತಕನು ದುಃಖದಿಂದ ಕೂಡಿ ಚಂಚಲ ಬುದ್ಧಿಯುಳ್ಳವ ನಾಗಿಯೂ ನಿರ್ಧನನಾಗಿಯೂ ಆಗುವನು ॥೩೪೬॥

ಶ್ಲೋಕ॥ ವಿಲಗ್ನೇಶ ನವಾಂಶೇಶೌ ರಿಪ್ಫಷಷ್ಠಾಷ್ಟಗೌಯದಿ । ಮಾರಕೇಶ ಯುತೌದೃಷೌ ಜಾತಃಸ್ಯಾನ್ನಿರ್ಧನೋನರಃ ॥೩೪೭॥ತಾ॥ ಲಗ್ನಾಧಿಪತಿಯು ಲಗ್ನ ನವಾಂಶಾಧಿಪತಿಯು ಷಷ್ಠ, ಅಷ್ಟಮ, ದ್ವಾದಶ ಈ ಮೂರು ಸ್ಥಾನಗಳಲ್ಲಿ ಎಲ್ಲಿದ್ದರೂ, ಮಾರಕ ಸ್ಥಾನಾಧಿಪತಿಗಳಿಂದ ಇವರಿಬ್ಬರೂ ನೋಡಲ್ಪಟ್ಟರೂ, ಅಥವಾ ಸಂಯುಕ್ತರಾದರೂ, ಜಾತಕನು ನಿರ್ಧನನಾಗುವನು ॥೩೪೭॥

## ಅಥ ವಿದ್ಯಾಭಿವೃದ್ಧಿಯೋಗಃ

ಶ್ಲೋಕ॥ ವಾಗಿಶೋಪಿ ಬಲಾನ್ವಿತ ಶ್ಶುಭಯುತೋ ವರ್ಗೋತ್ತಮಾಂಶೇಪಿವಾ ವಾಗ್ಮಿಸ್ಯಾದ್ಭುವನೇಶ್ವರೋ ಗುರುಯುತಃ ಪಾರಾವತಾಂಶೇ ಪಿವಾ । ತನ್ನಾಥೇ ಬೃಗುಣಾಬುಧೇನಸಹಿತೇ ತ್ವೈರಾವತಾಂಶೇ ತಥಾ ಸ್ವೋಚ್ಚಸ್ವರ್ಕ್ಷ ಸುಹೃದ್ಗೃಹೇ ಧನಪತೌ ವಾಕ್ಸಾ ನಕೋಲಾಹಲಃ ॥೩೪೭॥ ಅವತಾರಿಕೆ॥ ಮಹಾವಾಗ್ಮಿ ಯೋಗ ಗಳು ಹೇಳಲ್ಪಡುತ್ತೆ. ತಾ॥ ಬೃಹಸ್ಪತಿಯು ಬಲವಂತನಾಗಿ ಶುಭಗ್ರಹಯುಕ್ತನಾಗಿ ವರ್ಗೋತ್ತಮಾಂಶೆಯಲ್ಲಿದ್ದರೆ ೧ ಯೋಗ, ದ್ವಿತೀಯಾಧಿಪತಿ ಗುರುಯುಕ್ತನಾಗಿ ಪಾರಾವತಾಂಶೆಯಲ್ಲಿದ್ದರೂ, ದ್ವಿತೀಯಾಧಿಪತಿ ಶುಕ್ರ ಬುಧರ ಯುಕ್ತನಾಗಿ ಐರಾವ ತಾಂಶದಲ್ಲಿದ್ದರೂ, ಈ ಮೇಲೆ ಹೇಳಿದ ಮೂರು ಯೋಗಗಳಲ್ಲೂ ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರಗಳಲ್ಲಿದ್ದರೆ ಜಾತಕನು ಮಹಾ ಸಭೆಯಲ್ಲಿಯಾದರೂ ಕೋಲಾಹಲವಾಗಿ ಮಾತನಾಡುವವನು, ಉಪನ್ಯಾಸ ಮಾಡುವವನೂ ಆಗುವನು ॥೩೪೭॥

ಶ್ಲೋಕ॥ ವಾಚಾಟಿಕಃಕೇಂದ್ರಗತೇ ತದೀಶೇ ಪಾರಾವತಾಂಶೇಪರಮೋಚ್ಚ ಭಾಗೇ ಸಿಂಹಾಸನೇ ದೇವಗುರೌ ಬೃಗೌವಾ ವರ್ಗೋತ್ತಮೇ ಸೋಮಸುತೇನ

ಯುಕ್ತೇ ॥೩೪೮॥ತಾ॥ ವಾಗ್ಮಿ ಯೋಗಗಳು ಹೇಳಲ್ಪಡುತ್ತೆ॥ ದ್ವಿತೀಯಾಧಿಪತಿಯು ಕೇಂದ್ರಸ್ಥಾನಗಳನ್ನು ಹೊಂದಿ ಪರಮೋಚ್ಚಭಾಗದಲ್ಲಾದರೂ ಪಾರಾವತಾಂಶದಲ್ಲಾದರೂ ಇದ್ದು ಸಿಂಹಾಸನಾಂಶೆಯಲ್ಲಿ ಗುರುವಾಗಲೀ, ಶುಕ್ರನಾಗಲೀ ಇದ್ದು ವರ್ಗೋತ್ತ ಮಾಂಶೆಯಲ್ಲಿ ಬುಧಯುಕ್ತನಾಗಿದ್ದರೆ ಜಾತಕನು ವಾಚಾಲಕನು, ಉಪನ್ಯಾಸಾದಿಗಳನ್ನು ಮಾಡುವುದರಲ್ಲಿ ಶಕ್ತನೂ ಆಗುವನು ॥೩೪೮॥ಶ್ಲೋಕ॥ ವಾಗೀಶಸ್ಥಾಂಶಪೇ ಸೌಮ್ಯೇ ಸ್ವೋಚ್ಚೇವಾಶುಭವೀಕ್ಷಿತೇ । ಗೋಪುರಾಂಶಗತೇವಾಪಿ ವಾಗ್ಮೀ ಪಟು ತರೋಭವೇತ್ ॥೩೪೯॥ತಾ॥ ಪುನಃ ಪಟುತರ ವಾಗ್ಮೀಯೋಗವು ಹೇಳಲ್ಪಡುತ್ತೆ॥ ದ್ವಿತೀಯಾಧಿಪತಿಯಿರುವ ನವಾಂಶಾಧಿಪತಿಯು ಬುಧನು ತನ್ನುಚ್ಚ ಸ್ಥಾನಗಳಲ್ಲಿದ್ದು ಶುಭಗ್ರಹ ದೃಷ್ಟಿಯಿದ್ದರೆ ಗೋಪುರಾಂಶೆಗಳಲ್ಲಿದ್ದರೂ ಜಾತಕನು ಮಾಹ ಉತ್ಸಾಹ ದೊಡನೆ ಕೂಡಿದ ವಾಗ್ಮಿಯಾಗುವನು. ಈ ವಿಷಯದಲ್ಲಿ ವೈದ್ಯನಾಥ ಪಂಡಿತರು 'ವಾಕ್ಸ್ಥಾನಪೇಸೌಮ್ಯಯುತೇ ತ್ರಿಕೋಣೇ ಕೇಂದ್ರಸ್ಥಿತೇವಾ ಶುಭದೇಚವಾಗ್ಮೀ' ಎಂದು ಹೇಳಿರುವರು ॥೩೪೯॥

## ಜ್ಯೋತಿಶ್ಶಾಸ್ತ್ರಜ್ಞ ಯೋಗಃ

ಶ್ಲೋಕ॥ ಕೇಂದ್ರೇ ಬುಧೇವಾ ಗಧಿಪೇಬಲಾಢ್ಯೇ ಶುಕ್ರಧನೇ ಭ್ರಾತೃಗತೇಚ ಸೌಮ್ಯೇ । ಸ್ವೋಚ್ಚೇಧನೇ ಧಾನವಪೂಜಿತೇವಾ ಜ್ಯೋತಿರ್ವಿದಾಂಶ್ರೇಷ್ಠತಮೋ ನರಸ್ಯಾತ್ ॥೩೫೦॥ತಾ॥ ಜ್ಯೋತಿರ್ವಿತ್ಪಂಡಿತ ಯೋಗವು ಹೇಳಲ್ಪಡುತ್ತೆ. ಕೇಂದ್ರ ಗಳಲ್ಲಿ ಬುಧನು ದ್ವಿತೀಯದಲ್ಲಿ ಶುಕ್ರನು, ತೃತೀಯದಲ್ಲಿ ಮತ್ತೊಂದು ಶುಭಗ್ರಹವು (ಗುರುಚಂದ್ರ) ಇದ್ದರೆ ೧ ಯೋಗ, ಉಚ್ಚಸ್ಥಾನದಲ್ಲಿ ಶುಕ್ರನಿದ್ದು ಲಗ್ನಕ್ಕೆ ದ್ವಿತೀಯವಾಗಿ ದ್ವಿತೀಯಾಧಿಪತಿಯಾದ ಗುರು ಎಲ್ಲಾ ಗ್ರಹಗಳಿಗಿಂತಲೂ ಬಲಿಷ್ಠನಾದರೆ ಜಾತಕನು ಜ್ಯೋತಿಶ್ಶಾಸ್ತ್ರದಲ್ಲಿ ಪಂಡಿತನಾಗುವನು ॥೩೫೦॥

## ಗಣಿತಜ್ಞ ಯೋಗಃ

ಶ್ಲೋಕ॥ ಗಣಿತಜ್ಞೋ ಭವೇಜ್ಞಾತೋ ವಾಗ್ಭಾವೇ ಭೂಮಿನಂದನೇ ಸಸೋಮೇ ಬುಧದೃಷ್ಟೇವಾ ಕೇಂದ್ರೇವಾ ಸೋಮನಂದನೇ ॥

ತಾ॥ ಗಣಿತಶಾಸ್ತ್ರ ಪಂಡಿತಯೋಗ ಹೇಳಲ್ಪಡುತ್ತೆ. ದ್ವಿತೀಯದಲ್ಲಿ ಅಂಗಾರಕನು ಬಲಿಷ್ಠನಾಗಿ ಚಂದ್ರಬುಧಯುಕ್ತನಾದರೂ, ಕೇಂದ್ರದಲ್ಲಿ ಬುಧನು ಚಂದ್ರ ಅಂಗಾರಕಯುಕ್ತನಾದರೂ ಜಾತಕನು ಗಣಿತಶಾಸ್ತ್ರ ಪಂಡಿತನಾಗುವನು ॥೩೫೧॥

ಶ್ಲೋಕ॥ ವಾಗ್ಭಾವಪೇಬುಧೇಸ್ವೋಚ್ಚೇ ಲಗ್ನೇ ದೇವೇಂದ್ರ ಪೂಜಿತೇ । ಶನಾವಷ್ಟಮ ಸಂಯುಕ್ತೇ ಗಣಿತಜ್ಞೋ ಭವೇನ್ನರಃ ॥೩೫೨॥

ತಾ॥ ದ್ವಿತೀಯಾಧಿಪತಿಯಾದ ಬುಧನು ತನ್ನ ಉಚ್ಚದಲ್ಲಿದ್ದು, ಲಗ್ನದಲ್ಲಿ ಬೃಹಸ್ಪತಿಯು, ಅಷ್ಟಮದಲ್ಲಿ ಶನಿಯಿದ್ದರೆ, ಜಾತಕನು ಗಣಿತಶಾಸ್ತ್ರದಲ್ಲಿ ಪಂಡಿತ ನಾಗುವನು ॥೩೫೨॥

ಶ್ಲೋಕ॥ ಕೇಂದ್ರತ್ರಿಕೋಣಗೇ ಜೀವೇ ಶುಕ್ರೇ ಸ್ವೋಚ್ಚಸ್ಥಿತೇಸತಿ । ವಾಗ್ಭಾವ ಪೇಂದು ಪುತ್ರೇವಾ ಗಣಿತಜ್ಞೋ ಭವೇನ್ನರಃ ॥೩೫೩॥

ತಾ॥ ದ್ವಿತೀಯಾಧಿಪತಿ ಬುಧನಾಗಿ ಕೇಂದ್ರತ್ರಿಕೋಣದಲ್ಲಾಗಲಿ, ಬೃಹಸ್ಪತಿ ಯಿದ್ದು ಶುಕ್ರನು ಉಚ್ಚದಲ್ಲಿದ್ದರೆ ಜಾತಕನು ಗಣಿತಶಾಸ್ತ್ರಜ್ಞನಾಗುವನು ॥೩೫೩॥

## ತರ್ಕಶಾಸ್ತ್ರಜ್ಞ ಯೋಗಃ

ಶ್ಲೋಕ॥ ವಾಗ್ಭಾವಪೇರವೌ ಭೌಮೇ ಗುರು ಶುಕ್ರನಿರೀಕ್ಷಿತೇ । ಪಾರಾವತಾಂಶಕೇವಾಪಿ ತರ್ಕಯುಕ್ತಿ ಪರಾಯಣಃ ॥೩೫೪॥

ತಾ॥ ತರ್ಕಶಾಸ್ತ್ರಪಂಡಿತ ಯೋಗ ಹೇಳಲ್ಪಡುತ್ತೆ. ದ್ವಿತೀಯಾಧಿಪತ್ಯವನ್ನು ಹೊಂದಿದ ರವಿಯಾದರೂ ಕುಜನಾದರೂ ಗುರುಶುಕ್ರರಿಂದ ನೋಡಲ್ಪಟ್ಟು ಪಾರಾವತಾಂಶದಲ್ಲಿದ್ದರೆ ತರ್ಕಶಾಸ್ತ್ರಜ್ಞನಾಗುವನು ॥೩೫೪॥

ಶ್ಲೋಕ॥ ಗುರು ಶುಕ್ರೌ ಧನೇಶೌ ಚೇಂದ್ರವಿಭೌಮ ನಿರೀಕ್ಷಿತೌ । ಮೂಲ ತ್ರಿಕೋಣತುಂಗೇವಾ ತರ್ಕಶಾಸ್ತ್ರ ವಿದಾಂವರಃ ॥೩೫೫॥

ತಾ॥ ಗುರುವಾಗಲಿ, ಶುಕ್ರನಾಗಲೀ, ಧನಾಧಿಪತಿಯಾಗಿ, ರವಿ, ಕುಜರಿಂದ ನೋಡಲ್ಪಟ್ಟು ಮೂಲತ್ರಿಕೋಣದಲ್ಲಾದರೂ, ಉಚ್ಚದಲ್ಲಾದರೂ ಇದ್ದರೆ ಜಾತಕನು ತರ್ಕಶಾಸ್ತ್ರಜ್ಞನಾಗುವನು ॥೩೫೫॥

## ವೈಯ್ಯಾಕರಣಿ ಯೋಗಃ

ಶ್ಲೋಕ॥ ಸಂಪೂರ್ಣ ಬಲಸಂಯುಕ್ತೇ ಗುರೌ ತದ್ಭವನೇಶ್ವರೇ ॥ ದಿನೇಶೇ ಗುರುಸಂಯುಕ್ತೇ ಶಾಬ್ದಿಕೋಯಂ ನರೋಭವೇತ್ ॥೩೫೬॥

ತಾ॥ ವೈಯ್ಯಾಕರಣಿಯೋಗವು ಹೇಳಲ್ಪಡುತ್ತೆ. ದ್ವಿತೀಯಾಧಿಪತಿಯು, ಬೃಹಸ್ಪತಿಯು ಸಂಪೂರ್ಣ ಬಲಯುಕ್ತರಾಗಿದ್ದು ಅವರಲ್ಲಿ ರವಿಯು ಬೃಹಸ್ಪತಿ ಯುಕ್ತನಾಗಿದ್ದರೆ ಜಾತಕನು ವ್ಯಾಕರಣಶಾಸ್ತ್ರದಲ್ಲಿ ಪಂಡಿತನಾಗುವನು ॥೩೫೬॥

## ಯುಕ್ತಿ ಸಮನ್ವಿತ ವಾಗ್ಮಿ ಯೋಗಃ

ಶ್ಲೋಕ॥ ವಾಕ್ಸ್ಥಾನಪೇ ಸೌಮ್ಯಯುತೇ ತ್ರಿಕೋಣೇ ಕೇಂದ್ರಸ್ಥಿತೇ ತುಂಗ ಸಮನ್ವಿತೇವಾ । ಶುಭೇಕ್ಷಿತೇಪುಂಗ್ರಹ ಸೌಮಯುಕ್ತೇ ವಾಗ್ಮೀ ಭವೇದ್ಯುಕ್ತಿ ಸಮನ್ವಿತೋ ಸೌ ॥೩೫೭॥

ತಾ।। ದ್ವಿತೀಯಾಧಿಪತಿ ಸೌಮ್ಯನ ಸಂಗಡ ಕೇಂದ್ರಗಳಲ್ಲಾದರೂ (೧-೪-೭-೧೦) ತ್ರಿಕೋಣಗಳಲ್ಲಾದರೂ (೫-೯) ಅಥವಾ ತನ್ನುಚ್ಚದಲ್ಲಾದರೂ ಇದ್ದು ಶುಭಗ್ರಹಗಳಿಂದ ನೋಡಲ್ಪಟ್ಟು (ಪುಂಗ್ರಹವೂ ಶುಭನೂ ಆದವನು) ಬೃಹಸ್ಪತಿಯಿಂದ ಕೂಡಿದ್ದರೆ, ಜಾತಕನು ಯುಕ್ತಿಯುಕ್ತವಾದ ವಾಗ್ಮಿಯಾಗುವನು ।।೩೫೭।।

## ವೇದಾಂತಜ್ಞ ಯೋಗಃ

ಶ್ಲೋಕ।। ವಾಗ್ಭಾವಪೇ ಬುಧೇಸ್ವೋಚ್ಚೇ ಗೋಪುರಾಂಶ ಗತೇಶನೌ । ಸಿಂಹಾಸನೇ ಗುರೌವಾಪಿ ವೇದಾಂತಜ್ಞೋ ಭವೇನ್ನರಃ ।।೩೫೮।।

ತಾ।। ದ್ವಿತಿಯಾಧಿಪತಿಯಾದ ಬುಧನು ಸ್ವೋಚ್ಚಸ್ಥಾನದಲ್ಲಿರುವಾಗ ಶನಿಯು ಗೋಪುರಾಂಶಗತನಾಗಿಯೂ ಅಥವಾ ಸಿಂಹಾಸನಾಂಶೆಯಲ್ಲಿ ಗುರುವಿದ್ದರೆ ಜಾತಕನು ವೇದಾಂತ ಶಾಸ್ತ್ರವನ್ನು ತಿಳಿದವನಾಗುವನು ।।೩೫೮।।

ಶ್ಲೋಕ।। ವೇದಾಂತ ಪರಿಶೀಲಸ್ಯಾತ್ಕೇಂದ್ರಕೋಣೇಗುರೌಸತಿ । ಬುಧೇನ ಭೃಗುಣಾ ದೃಷ್ಟೋ ಶನೌ ಪಾರಾವತಾಂಶಗೇ ।।೩೫೯।।ತಾ।। ಕೇಂದ್ರ ತ್ರಿಕೋಣ ಸ್ಥಾನಗಳಲ್ಲಿ ಬೃಹಸ್ಪತಿಯು ಬುಧನಿಂದಾಗಲೀ, ಶುಕ್ರನಿಂದಾಗಲೀ ನೋಡಲ್ಪಟ್ಟು ಶನಿಪಾರಾವತಾಂಶೆಯಲ್ಲಿದ್ದರೆ ಜಾತಕನು ವೇದಾಂತಶಾಸ್ತ್ರ ಪರಿಶೀಲನೆ ಮಾಡುವನು ।।೩೫೯।।

ಶ್ಲೋಕ।। ಉತ್ತಮಾಂಶೇ ಭೃಗೌ ಲಗ್ನೇ ಕೇಂದ್ರೇವಾಸಂಗತೇಗುರೌ । ದೇವಲೋಕಂ ಗತೇಚಂದ್ರೇ ವೇದಾಂತಜ್ಞೋ ಭವೇನ್ನರಃ ।।೩೬೦।।

ತಾ।। ಉತ್ತಮಾಂಶೆಯಲ್ಲಿ ಶುಕ್ರನು ಲಗ್ನ ಕೇಂದ್ರದೊಳಗಿದ್ದರೂ, ಕೇಂದ್ರಗಳಲ್ಲಿ ಬೃಹಸ್ಪತಿಯಿದ್ದರೂ, ದೇವಲೋಕಾಂಶೆಯಲ್ಲಿ ಚಂದ್ರನಿದ್ದರೆ ಜಾತಕನು ವೇದಾಂತಜ್ಞನಾಗುವನು ।।೩೬೦।।

## ಷಟ್‌ಶಾಸ್ತ್ರ ವಲ್ಲಭಯೋಗಃ

ಷಟ್ಶಾಸ್ತ್ರವಲ್ಲಭಃಕೇಂದ್ರೇ ಜೀವೇದಾನವ ಪೂಜಿತೇ । ಸಿಂಹಾಸನೇ ಗೋಪುರಾಂಶೇ ವಾಗ್ಭಾವಸ್ಥಾಂಶವೇಬುಧೇ ।।೩೬೧।।ತಾ।। ಷಟ್ ಶಾಸ್ತ್ರಪಂಡಿತ ಯೋಗವು ಹೇಳಲ್ಪಡುತ್ತೆ. ಗುರು ಶುಕ್ರರು ಕೇಂದ್ರಗತರಾಗಿ ಸಿಂಹಾಸನಾಂಶೆ ಗೋಪುರಾಂಶೆಗಳಲ್ಲಿದ್ದು ವಾಗ್ಭಾವಕ್ಕಧಿಪತಿಯಿರುವ ನವಾಂಶಾಧಿಪತಿ ಬುಧನಾದರೆ ಆರು ಶಾಸ್ತ್ರಗಳಿಗೆ ಅಧಿಪತಿಯಾಗುವನು ।।೩೬೧।।

ಶ್ಲೋಕ।। ಗುರೌಬಲಾಢ್ಯೇ ಧನರಾಶಿಯುಕ್ತೇ ತದೀಶ್ವರಾಕ್ರಾಂತನವಾಂಶ ನಾಥೇ। ಕೇಂದ್ರೇ ತ್ರಿಕೋಣೇ ಶುಭವೀಕ್ಷಿತೇವಾ ವೇದಾಂತವಿಚ್ಛಾಸ್ತ್ರ ಪರಾಯಣಶ್ಚ ।।೩೬೨।। ತಾ।। ಬೃಹಸ್ಪತಿಯು ಬಲಿಷ್ಠನಾಗಿ ದ್ವಿತೀಯಾಧಿಪತಿ ಯಾರ ನವಾಂಶದಲ್ಲಿರುವನೋ

ಆ ನವಾಂಶಾಧಿಪತಿ ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹ ದೃಷ್ಟಿ ಯುಕ್ತನಾಗಿದ್ದರೆ ಜಾತಕನು ವೇದಾಂತ ಶಾಸ್ತ್ರ ಪರಾಯಣನಾಗುವನು ॥೩೬೨॥

ಶ್ಲೋಕ॥ ಲಗ್ನೇಶ್ವರೇ ಧನಸ್ಥೇ ಲಗ್ನೇವಾ ಸೌಮ್ಯಸಂಯುತೇತುಂಗೇ ಪಾರಾವತೇತದೀಶೇ ಜಾತೋ ನಿಗಮಾಂತ ವಿದ್ವ್ಯಯೇ ಶುಕ್ರೇ ॥೩೬೩॥ತಾ॥ ಲಗ್ನಾಧಿಪತಿ ದ್ವಿತೀಯದಲ್ಲಿದ್ದರೂ ಅಥವಾ ಲಗ್ನದಲ್ಲಿ ಶುಭಗ್ರಹ ಉಚ್ಚನಾಗಿದ್ದು, ಲಗ್ನಾಧಿಪತಿ ಪಾರಾವತಾಂಶೆಯಲ್ಲಿದ್ದು ವ್ಯಯಸ್ಥಾನದಲ್ಲಿ ಶುಕ್ರನಿದ್ದರೆ ಜಾತಕನು ನಿಗಮಾಂತ ಪಂಡಿತನಾಗುವನು ॥೩೬೩॥

## ಪಂಡಿತ ರಾಜಯೋಗಃ

ಶ್ಲೋಕ॥ ಲಗ್ನೇಶ್ವರಸ್ಥಾಂಶ ಪತಿಸ್ಥರಾಶಿ ನಾಥಸ್ಥಿತಾಂಶಾಧಿಪತೌಬಲಾಢ್ಯೇ। ವೇಶೇಷಿ ಕಾಂಶೇಯದಿತುಂಗಭಾಗೇ ಧನಾಧಿಪೇತುಸ್ಥಪತಿತ್ವಮೇತಿ ॥

ತಾ॥ ಲಗ್ನೇಶ್ವರನು ಯಾವರಾಶಿ ನವಾಂಶದಲ್ಲಿರುವನೋ ಆ ಅಂಶಾಧಿಪತಿ ಇರುವ ನವಾಂಶಾಧಿಪತಿಯು ಬಲಿಷ್ಠನಾಗಿದ್ದು ಧನಾಧಿಪತಿಯು ತನ್ನ ಉಚ್ಚದಲ್ಲಿ ವೈಶೇಷಿಕಾಂಶೆಯಲ್ಲಿದ್ದರೆ ಜಾತಕನು ರಾಜತ್ವ ಮಾಡುವವನಾದರೂ ಬೃಹಸ್ಪತಿಯಂತೆ ವಾಕ್ಚಾತುರ್ಯ ಉಳ್ಳವನಾದರೂ ಆಗುವನು ॥೩೬೪॥

## ಪರಿಹಾಸಕ ಯೋಗಃ

ಶ್ಲೋಕ॥ ಪರಿಹಾಸಕರೋನಿತ್ಯಂ ಭಾನುಸ್ಥಿತನವಾಂಶಪೇ । ವಾಗ್ಭಾವಸ್ಥೇ ಬಲಾಢ್ಯೇತು ತಸ್ಮಿನ್ವೈಶೇಷಿಕಾಂಶಗೇ ॥೩೬೫॥ತಾ॥ ಸೂರ್ಯನು ಯಾವ ನವಾಂಶದಲ್ಲಿರುವನೋ ಆ ನವಾಂಶಧಿಪತಿಯು ದ್ವಿತೀಯದಲ್ಲಿದ್ದು ವೈಶೇಷಿಕಾಂಶೆ ಯಲ್ಲಿದ್ದರೆ ಪರಿಹಾಸಕನಾಗುವನು ॥೩೬೫॥

## ಅಸತ್ಯವಾದಿ ಯೋಗಃ

ಸಶ್ಲೋಕ॥ ವಿಪ್ರಲಂಭೋ ಧನೇಶಸ್ಥೇ ರಾಶೀಶಸ್ಥಾಂಶಪೇಶನೌ । ಸಪಾಪೇ ಕೇಂದ್ರ ಕೋಣೇವಾ ಭೌಮೇಷ್ಟೇವಂ ವಿನಿರ್ದಿಶೇತ್ ॥೩೬೬॥ ತಾ॥ ಧನಾಧಿಪತಿ ಇರುವ ರಾಶ್ಯಧಿಪತಿಯು ಶನಿಯಾದರೂ ಅಥವಾ ಅಂಗಾರಕನಾದರೂ ಆಗಿ, ಕೇಂದ್ರ ತ್ರಿಕೋಣಗಳಲ್ಲಿ ಪಾಪಗ್ರಹಯುಕ್ತನಾದರೆ ಅಸತ್ಯವಾದಿಯಾಗುವನು ॥೩೬೬॥

## ಸಭಾ ಜಿತಯೋಗಃ ಜಡಯೋಗಶ್ಚ

ಶ್ಲೋಕ॥ ಸಭಾಜಿತೋವಾ ಗಧಿಪಸ್ಯಪಾಪಃ ಕರ್ಮಸ್ಥಿತೋ ನೀಚಗತೋರ್ಕ ಯುಕ್ತಃ । ಮಾಂದ್ಯನ್ವಿತೇ ತದ್ಭವನೇರ್ಕಯುಕ್ತೇ ಪಾಪೈಸ್ಸುದೃಷ್ಟೇ ಜಡತೋತ್ರಜಾತಃ

॥೩೬೭॥ತಾ॥ ಅವತಾರಿಕೆ-ಈ ಶ್ಲೋಕದಿಂದ ಸಭಾಜಿತಯೋಗ ೧ ಮತ್ತು ಜಡಯೋಗ ೧ ಹೇಳಲ್ಪಡುತ್ತೆ. ದ್ವಿತೀಯಾಧಿಪತಿಯು ದಶಮ ರಾಶಿಯಲ್ಲಿ ಪಾಪಯುಕ್ತನಾಗಿದ್ದರೂ, ಸೂರ್ಯಯುಕ್ತನಾಗಿದ್ದರೂ ಸಭಾಜಿತನಾಗುವನು. ದ್ವಿತೀಯದಲ್ಲಿ ಮಾಂದಿಗ್ರಹವಿದ್ದು ಸೂರ್ಯಯುಕ್ತನಾಗಿದ್ದರೆ ಜಡನಾಗುವನು ॥೩೬೭॥

## ಮೂಕ ಯೋಗಃ

ಶ್ಲೋಕ॥ ವಾಕ್ಸ್ಥಾನಪೇದೇವ ಪುರೋಹಿತೇನ ಯುಕ್ತೇ ತಥಾ ನಾಶಗತೇತ್ರ ಮೂಕಃ । ಪಿತ್ರಾದಿ ಕಾನಾಮಿಯಮೇವರೀತಿ ರುಕ್ತಾ ಮುನೀಂದ್ರೈರ್ಬಹುಶಾಸ್ತ್ರ ವಿದ್ಭಿಃ ॥೩೬೮॥ತಾ॥ ದ್ವಿತೀಯಾಧಿಪತಿಯು ಬೃಹಸ್ಪತಿಯುಕ್ತನಾಗಿ ಅಷ್ಟಮವನ್ನು ಪಿಡಿದರೆ, ಜಾತಕನು ಮೂಕನಾಗುವನು. ಈ ಪ್ರಕಾರವಾಗಿ ಪಿತೃಭ್ರಾತೃಮಾತ್ರಾದಿ ಭಾವಗಳಿಗೂ ಫಲವನ್ನು ತಿಳಿಯಬೇಕು. ಈ ವಿಷಯಕ್ಕೆ ವೈದ್ಯನಾಥಪಂಡಿತರು ॥ಶ್ಲೋಕ॥ ವಾಗ್ಭಾವೇಶೇ ಗುರುಯುತೇ ನಾಶಸ್ಥೇ ಮೂಕತಾಭವೇತ್ । ದೋಷಕೃನ್ನತು ಸರ್ವತ್ರ ಸ್ವೋಚ್ಚಸ್ವರ್ಕ್ಷಗತೋಗ್ರಹಃ ॥೩೬೮॥ತಾ.। ಆ ಅಷ್ಟಮ ಸ್ಥಾನವು ಬೃಹಸ್ಪತಿಗೆ ಉಚ್ಚ ಸ್ವಕ್ಷೇತ್ರಗಳಾಗಿದ್ದರೆ, ಮೂಕನಾಗುವುದಿಲ್ಲವೆಂದು ತಿಳಿಯಬೇಕು. ಇದೇ ವಿಷಯದಲ್ಲಿ ಪರಾಶರಃ॥ಶ್ಲೋಕ॥ ವಾಗೀಶವಾಗ್ಗ್ರಹಾಧೀಶೌ ಷಡಾದಿತ್ರಯ ಸಂಸ್ಥಿತಃ। ಕುರ್ವಂತಿತೇಷಾಂ ಮೂಕತ್ವಮೇವ ಮೂಹ್ಯಂ ಮನೀಷಿಭಿಃ॥ ಅರ್ಥವು ಸ್ಪಷ್ಟವಾಗಿರುತ್ತೆ. ಮತ್ತು ಗಣಪತಿಃ ॥ಶ್ಲೋಕ॥ ವಾಕ್ಸ್ಥಾನೇಶೋ ಗುರುರ್ವಾ ವ್ಯಯರಿಪು ವಿಲಯಸ್ಥಾನ ಗೋವಾ ಸ್ವಹೀನ । ಶ್ಚೈವಂ ಪಿತ್ರಾದಿಕಾನಾಂ ಪತಯ ಇಹಯುತಾ ಮೂಕ ತಾಸ್ಯಾಚ್ಚತಾಭ್ಯಾಮ್ ಇತಿ ॥೩೬೮॥

## ಅವಿದ್ಯಾಯೋಗಃ

ಶ್ಲೋಕ॥ ವಾಗೀಶ ಬುಧ ಜೀವೇಷು ನಿರ್ವಿದ್ಯೋ ನಾಶಗೇಷುಚ । ಕೇಂದ್ರೇ ಷುತೇ ತ್ರಿಕೋಣೇವಾ ಸ್ವರ್ಕ್ಷೇವಾ ವಿದ್ಯಯಾನ್ವಿತಃ ॥೩೬೯॥

ತಾ॥ ದ್ವಿತೀಯಾಧಿಪತಿಯು, ಬುಧ, ಗುರು ಇವರು ಮೂರು ಗ್ರಹಗಳು ನಾಶ ಸ್ಥಾನವನ್ನು ಹೊಂದಿದರೆ ವಿದ್ಯೆ ಬರುವುದಿಲ್ಲ. ಮತ್ತು ಮೇಲೆ ಹೇಳಿದ ಗ್ರಹಗಳೇ ಕೇಂದ್ರ ತ್ರಿಕೋಣಗಳಲ್ಲಿದ್ದರೆ, ಜಾತಕನು ವಿದ್ಯಾವಂತನಾಗುವನು ಅಥವಾ ಅವರಿರುವ ಸ್ಥಾನಗಳು ಉಚ್ಚ ಸ್ವಕ್ಷೇತ್ರಗಳಾದರೂ ವಿದ್ಯಾವಂತನಾಗುವನು ॥ ಅರ್ಥಾತ್ ನೀಚ ಶತ್ರುಕ್ಷೇತ್ರಗಳಾದರೆ ವಿದ್ಯಾಹೀನನಾಗುವನು ॥೨೬೯॥

## ನೇತ್ರ ವಿಚಾರಃ

ಶ್ಲೋಕ॥ ಶುಕ್ರೇಣಯುಕ್ತೋ ಯದಿನೇತ್ರನಾಥಃ ಶುಕ್ರಸ್ಯ ಸ್ವರ್ಕ್ಷಾದಿ ಗ್ರಹತ್ರಯಸ್ಥ।

ಸಂಬಂಧವಾರ್ಣ ಸ್ಯಾದ್ಯದಿದೇಹವೇನ ನೇತ್ರಂ ವಿಧತ್ತೇ ವಿಪರೀತಭಾವಮ್ ॥ ॥೩೭೦॥ತಾ॥ ದ್ವಿತೀಯಾಧಿಪತಿಯು ಶುಕ್ರಯುತನಾಗಿ ಲಗ್ನಾಧಿಪತಿಯ ಸಂಬಂಧನಾಗಿ ಉಚ್ಚ ಮಿತ್ರ ಸ್ವಕ್ಷೇತ್ರಗಳಲ್ಲಿದ್ದರೆ ವಿಶಾಲವಾದ ನೇತ್ರವುಳ್ಳವನಾಗುವನು. ಈ ಮೇಲೆ ಹೇಳಿದ್ದಕ್ಕೆ ವಿಪರೀತವಾಗಿ ನೀಚ; ಶತ್ರು ಅಸ್ತಕ್ಷೇತ್ರಗಳಲ್ಲಿದ್ದರೆ, ನೇತ್ರ ಪಟುತ್ವ ನ್ಯೂನವಾದವನು, ನೇತ್ರರೋಗಿಯೂ ಆಗುವನು ॥೩೭೦॥

ಶ್ಲೋಕ॥ ತತ್ರಸ್ಥಿತೌ ಚಂದ್ರಬುಧೌನಿ ಶಾಂಧ್ಯಂ ಜಾತ್ಯಂ ಧನಾಂನೇತ್ರಪದೇಹ ಪಾರ್ಕಾಃ । ಪೈತ್ರ ೄರ್ಕ್ಷನಾಥೇನ ಯುತಾಸ್ತದಾಂಧ್ಯಂ ಕುರ್ವಂತಿ ಮಾತ್ರಾದಿ ಫಲಂ ತಥೇದೃಕ್ ॥೩೭೧॥ತಾ॥ ದ್ವಿತೀಯದಲ್ಲಿ ಚಂದ್ರ ಬುಧರಿದ್ದರೆ, ನಿಶಾಂಧನಾಗುವನು. ದ್ವಿತೀಯಾಧಿಪತಿ ಲಗ್ನಾಧಿಪತಿ ಮತ್ತು ರವಿಯೂ ಕೂಡ ದ್ವಿತೀಯದಲ್ಲಿದ್ದರೆ, ಹುಟ್ಟು ಕುರುಡುನಾಗುವನು, ಪಿತೃಸ್ಥಾನಕ್ಕೆ ದ್ವಿತೀಯದಲ್ಲಿ ಈ ಮೇಲೆ ಹೇಳಲ್ಪಟ್ಟ ಗ್ರಹಗಳದ್ದರೆ, ಜಾತಕನ ತಂದೆಗೆ ಈ ಫಲವನ್ನು ಈ ಮೇಲೆ ಹೇಳಿದ ಯೋಗವಿದ್ದರೆ, ತಾಯಿಗೆ ಈ ಫಲವನ್ನು ಭ್ರಾತೃಕಳತ್ರಾದಿ ಭಾವಗಳಿಗೆ ಈ ಫಲವನ್ನು ಆಲೋಚಿಸಿ ತಿಳಿಯತಕ್ಕದ್ದು ॥೩೭೧॥

## ರಾಜಕೋಪಾತ್ ನೇತ್ರನಾಶಯೋಗಃ

ಶ್ಲೋಕ॥ ರಾಜ್ಯಾರಿನಾಥೌ ತನುಭಾವಸಂಸ್ಥೌಸ್ಯಾಚ್ಚಾರ್ಥಪೋ ಭೂಮಿಪತೇಃ ಪ್ರಕೋಪಾತ್ । ಉತ್ಪಾಟತಂ ನೇತ್ರಮುಶಂತಿತಜ್ಞಾಃ ನೀಚಾಂಶಗೌಪಾಪ ಯುತೌ ತಥೈವ ॥೩೭೨॥ತಾ॥ ದಶಮ ಷಷ್ಠಾಧಿಪತಿಗಳು ಲಗ್ನಭಾವದಲ್ಲಿದ್ದು ದ್ವಿತೀಯಾಧಿ-ಪತಿಯನ್ನು ಕೂಡಿಕೊಂಡಿದ್ದರೆ, ರಾಜಕೋಪದಿಂದ ಕಣ್ಣು ನಾಶವಾಗುವುದು ಮತ್ತು ದಶಮಾಧಿಪತಿಯು ಲಗ್ನದಲ್ಲಿದ್ದು ಪಾಪಗ್ರಹಯುಕ್ತನಾಗಿ ನೀಚಾಂಶೆಯಲ್ಲಿದ್ದರೆ, ರಾಜಕೋಪದಿಂದ ನೇತ್ರಗಳು ನಾಶವಾಗುವದು ॥೩೭೨॥

ಶ್ಲೋಕ॥ ರಾಜ್ಯಾರಿನಾಥ ಸ್ಥಿತಭಾಂಶಕೇಶೌ ದುಸ್ಥೌ ವಿಲಗ್ನೇಶಯುತೌ ತಥೈವ। ಸಹಾಕ್ಷಿಪೌ ನಾಶಗತೌ ತಥೈವ ಶುಭೈರ್ನದೃಷ್ಟೇ ನಯನಪ್ರಮಾದಃ॥

ತಾ॥ ದಶಮಾಧಿಪತಿ ಷಷ್ಠಾಧಿಪತಿಗಳಿರುವ ನವಾಂಶಾಧಿಪತಿಗಳು ದುಃಸ್ಥಾನ ದಲ್ಲಿ ಲಗ್ನಾಧಿಪತಿಯುಕ್ತನಾಗಿದ್ದರೂ ಅಥವಾ ೧೦-೬ನೇ ಅಧಿಪತಿಗಳಿದ್ದ ನವಾಂಶಾಧಿಪತಿಗಳು ದ್ವಿತೀಯಾಧಿಪತಿಯುಕ್ತನಾಗಿ ಅಷ್ಟಮದಲ್ಲಿದ್ದರೂ ಶುಭದೃಷ್ಟಿ-ಯಿಲ್ಲದಿದ್ದರೆ, ರಾಜಕೋಪದಿಂದ ನೇತ್ರನಾಶವಾಗುವುದು ॥೩೭೩॥

## ಸುಮುಖಯೋಗಃ

ಶ್ಲೋಕ।। ಮುಖಶೇ ಕೇಂದ್ರಭಾವಸ್ಥೇ ಶುಭಗ್ರಹನಿರೀಕ್ಷಿತೇ । ಮುಖೇ ಸೌಮ್ಯಯುತೇವಾಪಿ ಸಮುಖಸ್ಸನರೋಭವೇತ್ ।।೩೭೪।।ತಾ।। ಮುಖಸ್ಥಾನಾಧಿ ಪತಿಯು ಲಗ್ನದಿಂದ ಕೇಂದ್ರಗಳಲ್ಲಿದ್ದು ಶುಭಗ್ರಹಗಳಿಂದ ನೋಡಲ್ಪಟ್ಟರೂ, ಮುಖ ಸ್ಥಾನದಲ್ಲಿ ಶುಭಗ್ರಹವಿದ್ದರೂ ಜಾತಕನ ಮುಖವೂ ಸುಮುಖವಾಗಿರುವುದು ।।೩೭೪।।

ಶ್ಲೋಕ।। ಪ್ರಫುಲ್ಲವದನ ಶ್ರೀಮಾರ್ ಕೇಂದ್ರೇಮುಖಪತೌಸತಿ । ಸ್ವೋಚ್ಚ ಮಿತ್ರಸ್ವವರ್ಗಸ್ಥೇ ತನ್ನಾಥೇ ಗೋಪುರಾಂಶಕೇ ।।೩೭೫।।ತಾ।। ಕೇಂದ್ರಸ್ಥಾನದಲ್ಲಿ ಮುಖಪತಿಯಿದ್ದು ಆ ಸ್ಥಾನಗಳು ಉಚ್ಚ ಸ್ವಕ್ಷೇತ್ರ ಮಿತ್ರಕ್ಷೇತ್ರಗಳಾಗಿ ಆ ಕೇಂದ್ರಾಧಿ ಪತಿಯು ಗೋಪುರಾಂಶೆಯಲ್ಲಿದ್ದರೆ, ಜಾತಕನು ವಿಕಾಸವಾದ ಮುಖವುಳ್ಳ ವನಾಗುವನು ।।೩೭೫।।

## ದುರ್ಮುಖ ಯೋಗಃ

ಶ್ಲೋಕ।। ಪಾಪೈರ್ಯುತೇ ಮುಖಸ್ಥಾನೇ ತನ್ನಥೇ ಪಾಪಸಂಯುತೇ । ನೀಚರಾಶಿಗತೇವಾಪಿ ದುರ್ಮುಖಃ ಪಾಪವೀಕ್ಷಿತೇ ।।೩೭೬।।ತಾ।। ಮುಖಸ್ಥಾನದಲ್ಲಿ ಪಾಪಗ್ರಹವಿದ್ದು ಆ ದ್ವಿತೀಯಾಧಿಪತಿಯು ಪಾಪಗ್ರಹಯುತನಾಗಿದ್ದರೂ, ನೀಚರಾಶಿಯಲ್ಲಿದ್ದರೂ ಪಾಪಗ್ರಹದಿಂದ ನೋಡಲ್ಪಟ್ಟರೂ, ಜಾತಕನ ಮುಖವು ದುರ್ಮುಖವಾಗಿರುವುದು ।।೩೭೬।।

## ಕ್ರೋಧ ಯೋಗಃ

ಶ್ಲೋಕ।। ಕ್ರೋಧಯುಕ್ತನರಃ ಪಾಪೇತದೀಶೇ ಗುಳಿಕಾನ್ವಿತೇ । ಪಾಪಯೋಗ ಚಹುತವೇಸ್ಮಿ ನೀ ಚಶತ್ರಂಶಕೇಸ್ಮಿತೇ ।।೩೭೭ತಾ।। ದ್ವಿತೀಯಾಧಿಪತಿ ಪಾಪಗ್ರಹ ವಾಗಿ ಗುಳಿಕಯುಕ್ತನಾಗಿ ಪಾಪಯೋಗದಿಂದಿದ್ದರೂ ಮತ್ತು ನೀಚ ಶತ್ರುನವಾಂಶ ದಲ್ಲಿದ್ದರೂ ಯಾವಾಗಲೂ ಕ್ರೋಧಯುಕ್ತನಾಗಿರುವನು ।।೩೭೭।।

## ದಂತರೋಗ ಯೋಗಃ

ಶ್ಲೋಕ।। ವಾಕ್ಸ್ಥಾನಪೇ ಷಷ್ಠಗತೇಸ ರಾಹೌ ರಾಹುಸ್ಥಿತರ್ಕ್ಷಾಧಿಪ ಸಂಯುತೇವಾ । ದಂತಸ್ಯರೋಗಃ ಪತನಂಚತೇಷಾಂ ಭಕ್ತೌತಯೋರ್ವಾ ಪ್ರವದಂತಿ ತಜ್ಞಾಃ ।।೩೭೮।।ತಾ।। ವಾಕ್ಸ್ಥಾನಾಧಿಪತಿಯು ಷಷ್ಠದಲ್ಲಿ ರಾಹುಯುಕ್ತನಾದರೂ, ರಾಹುವು ಯಾವ ಕ್ಷೇತ್ರದಲ್ಲಿರುವನೋ ಆ ಕ್ಷೇತ್ರಾಧಿಪತಿಯನ್ನು ಕೂಡಿಕೊಂಡಿದ್ದರೂ ಅವರ ದಶಾಭುಕ್ತಿಗಳಲ್ಲಿ ದಂತರೋಗವೂ, ದಂತಪತನವೂ ಲಭಿಸುವುದು ।।೩೭೮।।

ಶ್ಲೋಕ।। ವಾಗ್ಭಾವಪೇನಾಪಿಯುತರ್ಕ್ಷನಾಥ ಸ್ತದ್ಭಾವಪಸ್ಥಾಂಶಪಸಂಯುತೇವಾ। ಷಷ್ಠೇಶ್ವರೇಣಾಪಿ ಯುತಸ್ಸುಭುಕ್ತೌ ದಂತರೋಗಃ ಪತನಂಚತೇಷಾಂ ।।೩೭೯।। ತಾ।। ವಾಗ್ಭಾವಾಧಿಪತಿಯುತನಾಗಿರುವ ಗ್ರಹವು ಯಾವುದೋ ಆ ಗ್ರಹಾಧಿಪತಿಯು ಷಷ್ಠಾಧಿಪತಿಯುತನಾದರೆ ಅವನ ದಶೆಯ ಭುಕ್ತಿಯಲ್ಲಿ ದಂತರೋಗವೂ, ದಂತಪತನವೂ ಆಗುವುದು ।।೩೭೯।।

## ಭೋಜನಪಾತ್ರ ವಿಚಾರಃ

ಶ್ಲೋಕ।। ಭುಕ್ತೀಶ್ವರೇ ಶುಕ್ರ ನಿಶಾಕರಾಭ್ಯಾಂ ಕೇಂದ್ರೇಯುತೇ ರಾಜತ-ಮತ್ರಪಾತ್ರಂ । ಸಚಂದ್ರ ಶುಕ್ರಾಮರಪೂಜಿತೇತು ಕೇಂದ್ರಸ್ಥಿತೇ ಭುಕ್ತಿಪತೌ ಹಿರಣ್ಯಂ।।೩೮೦।।ತಾ।। ಭುಕ್ತಿ ಸ್ಥಾನಾಧಿಪತಿ ಕೇಂದ್ರ ಸ್ಥಾನದಲ್ಲಿ ಚಂದ್ರ ಶುಕ್ರರ ಸಂಗಡ ಸೇರಿದರೆ ಜಾತಕನು ಬೆಳ್ಳಿಯ ಪಾತ್ರೆಯಲ್ಲಿ ಭೋಜನವನ್ನು ಮಾಡುವನು, ಭುಕ್ತಿಪತಿಯು ಚಂದ್ರ ಶುಕ್ರ ಗುರುಯುಕ್ತನಾಗಿದ್ದರೆ ಸುವರ್ಣಪಾತ್ರೆಯಲ್ಲಿ ಭುಜಿಸುವನು ।।೩೮೦।।

ಶ್ಲೋಕ।। ತದೀಶ್ವರೇ ಕೋಣ ಚತುಷ್ಟಯೇವಾ ವೈಶೇಷಿಕಾಂಶೇ ಯದಿತಾದ ಶಂಚತತ್ । ಮೃದ್ವಂಶಕೇವಾ ಪರಮೋಚ್ಚಕಾಂಶೇ ಸ್ಥಿತೇತದೀಶೇ ಯದಿತಾದೃ ಶಂಹಿತತ್ ।।೩೮೧।।ತಾ।। ಭುಕ್ತಿ ಸ್ಥಾನಾಧಿಪತಿ ಕೇಂದ್ರ ತ್ರಿಕೋಣಗಳಲ್ಲಿ ವೈಶೇಷಿ-ಕಾಂಶೆಯಲ್ಲಿದ್ದರೂ ಭುಕ್ತೀಶ್ವರನು ಪರಮೋಚ್ಚ ಭಾಗದಲ್ಲಿದ್ದು ಮೃದ್ವಂಶಾದಿಗಳಲ್ಲಿದ್ದರೆ ಹಿರಣ್ಯಪಾತ್ರೆಯಲ್ಲಿ ಭೋಜನ ಮಾಡುವನು ।।೩೮೧।।

ಶ್ಲೋಕ।। ಸ್ವಸ್ವಾಂಶಕಾನಾಂ ಪರಮೋಚ್ಚಕಾಂತೇ ಶಶಾಂಕಜೀವಾಬ್ಜ ವಿಶೋಯದಂಶೇ । ವೀರ್ಯಾನ್ವಿತೋ ಭುಕ್ತಿಪತಿಸ್ತದಂಶೇ ಭುಕೌ ಸುಪಾತ್ರಂ ಬಹು ಭುಕ್ತಿಕಾಲೇ ।।೩೮೨।।ತಾ।। ಚಂದ್ರ, ಶುಕ್ರ, ಗುರು, ಬುಧರು ಪರಮೋಚ್ಚದಲ್ಲಿ ಸ್ವನವಾಂಶದಲ್ಲಿದ್ದರೆ ಆ ನವಾಂಶದಲ್ಲಿ ಭುಕ್ತೀಶ್ವರನು ಬಲವಂತನಾಗಿದ್ದರೆ ದೃಢವಾದ ಸುವರ್ಣಪಾತ್ರೆಯಲ್ಲಿ ಭೋಜನ ಮಾಡುವನು ।।೩೮೨।।

## ಕಾಂಸ್ಯಪಾತ್ರೇ ಭೋಜನಯೋಗಃ

ಶ್ಲೋಕ।। ಮೃದ್ವಂಶಕೇ ಭುಕ್ತಿಪತೌ ವಿಶೇಷಾತ್ಪಾರಾವತಾಂಶೇ ಬಲಪೂರ್ಣ ಯುಕ್ತೇ । ಕೇಂದ್ರಸ್ಥಿತೇ ಮಿತ್ರಶುಭೇಕ್ಷಿತೇ ವಾಶ್ಯಾತ್ಕಾಂಸ್ಯಪಾತ್ರಂ ಬಹುಭುಕ್ತಿಕಾಲೇ ।।೩೮೩।।ತಾ।। ಭುಕ್ತಿಸ್ಥಾನಾಧಿಪತಿಯು ಕೇಂದ್ರದಲ್ಲಿ ಮೃದ್ವಂಶೆಯಲ್ಲಿಯಾಗಲೀ ಪಾರಾವತಾಂಶೆಯಲ್ಲಿಯಾಗಲೀ ಇದ್ದು ಮಿತ್ರನಾಗಿಯೂ, ಶುಭನಾಗಿಯೂ ಇದ್ದ ಗ್ರಹದಿಂದ ನೋಡಲ್ಪಟ್ಟರೆ, ಕಂಚಿನಪಾತ್ರೆಯಲ್ಲಿ ಭೋಜನ ಮಾಡುವನು ।।೩೮೩।।

## ವಿಚಿತ್ರಪಾತ್ರೆ ಭೋಜನಯೋಗಃ

ಶ್ಲೋಕ॥ ವಿಚಿತ್ರಪಾತ್ರಂ ಪ್ರವದಂತಿತಜ್ಞಾಃ ಭುಕ್ತೀಶ್ವರಃ ಕೇಂದ್ರ ಗತೋಬಲಾಢ್ಯೇ। ಶುಕ್ರಾಮರೇಜ್ಯೇಂದು ಸುತೌ ಬಲಾಢ್ಯಾಃತೈರೇವಯುಕ್ತೋಥ ವಿಶೇಷಕಾಂಶೇ ॥೩೮೪॥ತಾ॥ ಭುಕ್ತಿ ಸ್ಥಾನಾಧಿಪತಿಯು ಬಲಿಷ್ಠನಾಗಿ ಕೇಂದ್ರದಲ್ಲಿದ್ದು ಶುಕ್ರ, ಗುರು, ಬುಧರು ಬಲಿಷ್ಠರಾಗಿ ವಿಶೇಷಾಂಶೆಯಲ್ಲಿದ್ದರೆ ಜಾತಕನು ವಿಚಿತ್ರವಾದ ಪಾತ್ರೆಯಲ್ಲಿ ಭೋಜನ ಮಾಡುವನು ॥೩೮೪॥

## ಆಯುಃಪಾತ್ರೇ ಭೋಜನಯೋಗಃ

ಶ್ಲೋಕ॥ ಭುಕ್ತೀಶಮಂದೌ ತನುಪೇನಯುಕ್ತೌ ಷಷ್ಠಿಸ್ಥಿತೌ ಚೇತ್ಪ್ರವದಂತಿ ಲೋಹಂ ॥೩೮೫॥ತಾ॥ ಭುಕ್ತಿಸ್ಥಾನಾಧಿಪತಿಯೂ ಶನಿಯೂ ಲಗ್ನಾಧಿಪತಿಯುಕ್ತ ನಾಗಿ ಷಷ್ಠದಲ್ಲಿದ್ದರೆ ಜಾತಕನು ಕಬ್ಬಿಣದ ಪಾತ್ರೆಯಲ್ಲಿ ಭೋಜನ ಮಾಡುವನು ॥೩೮೫॥

## ಧಾತುದ್ವಯಪಾತ್ರೇ ಭೋಜನಯೋಗಃ

ಶ್ಲೋಕ॥ ಧಾತುದ್ವಯಯುತಂ ಪಾತ್ರಂ ಭುಕ್ತೀಶಸ್ಥಾಂಶರಾಶಿಪೇ । ಪಾಪ ಗ್ರಹೇಣ ಸಂದೃಷ್ಟೇ ಕಾರಕೇ ಬಲವರ್ಜಿತೇ ॥೩೮೬॥ತಾ॥ ಭುಕ್ತಿಸ್ಥಾನಾಧಿಪತಿ ಇರುವ ರಾಶ್ಯಾಧಿಪತಿಯು ಪಾಪಗ್ರಹದಿದಂ ನೋಡಲ್ಪಟ್ಟು, ಬಲಹೀನನಾಗಿ ಕಾರಕನು ಬಲಹೀನನಾಗಿದ್ದರೆ, ಎರಡು ಧಾತುವಿನಿಂದ ಮಾಡಿದ ಪಾತ್ರೆಯಲ್ಲಿ ಭೋಜನ ಮಾಡುವನು ॥೩೮೬॥

ಶ್ಲೋಕ॥ ಪಾತ್ರಂ ತದೀಶ್ವರಯುತೌ ಯದಿವಾ ವಿನಾಶಸ್ಥಾನರ್ಕ್ಷಗೌಸು ದೃಢಮತ್ರತುಲೋಹಪಾತ್ರಂ । ಕಾಂಸ್ಯಂ ವದಂತಿ ಕಿಲಭುಕ್ತಿಪತೌ ಬಲಾಢ್ಯೇ ವೈಶೇಷಿಕಾಂಶ ಸಹಿತೇ ಸತಿಸೌಮ್ಯದೃಷ್ಟೇ ॥೩೮೭॥ತಾ॥ ಭುಕ್ತಿ ಸ್ಥಾನಾಧಿಪತಿಯು ಅಷ್ಟಮದಲ್ಲಿದ್ದು ಶನಿ ಸಂಬಂಧವುಂಟಾದರೆ, ಲೋಹಪಾತ್ರೆಯಲ್ಲಿ ಭೋಜನ ಮಾಡುವನು. ಮತ್ತು ಭುಕ್ತ್ಯಧಿಪತಿಯು ಬಲಿಷ್ಠನಾಗಿ ವಿಶೇಷಕಾಂಶದಲ್ಲಿದ್ದು ಸೌಮ್ಯದಿಂದ ನೋಡಲ್ಪಟ್ಟರೆ ಕಾಂಸಪಾತ್ರೆಯಲ್ಲಿ ಭೋಜನಮಾಡುವನು ॥೩೮೭॥

ಶ್ಲೋಕ॥ ಭುಕ್ತೀಶ್ವರಸ್ಥಿತ ನವಾಂಶಪತಿರ್ಯದಂಶೇತದ್ರಾಶಿಪಃ ಶುಭಯುತೋಪಿ ತಥೈವವಾಹುಃ । ಪಾಪಗ್ರಹೇಣ ಸಹಿತೇ ಸತಿಭುಕ್ತಿರಾಶೌ ತದ್ರಾಶಿ ನಾಥಯುಥ ಭಾವಪತಿರ್ಯದಂಶೇ ॥೩೮೮॥ತಾ॥ ಭುಕ್ತಿಸ್ಥಾನಾಧಿಪತಿ ಯಾವ ನವಾಂಶೆಯಲ್ಲಿರುವನೋ ಆ ರಾಶಿ ನವಾಂಶಾಧಿಪತಿ ಇರುವ ರಾಶ್ಯಧಿಪತಿ ಶುಭಯುತನಾದರೆ, ಕಂಚಿನ ಪಾತ್ರೆಯಲ್ಲಿ ಭೋಜನ ಮಾಡುವನು ಮತ್ತು ಭುಕ್ತಿ ಸ್ಥಾನವು

ಪಾಪಗ್ರಹಯುತವಾಗಿ ಆ ರಾಶ್ಯಧಿಪತಿಯು ಯಾವ ನವಾಂಶೆಯಲ್ಲಿರು ವನೋ ಅವನೂ ಶುಭಯುತನಾದರೆ ಕಂಚಿನ ಪಾತ್ರೆಯಲ್ಲಿ ಭೋಜನ ಮಾಡುವುದು ॥೩೮೮॥

## ಬಹ್ವಾಶನ ಯೋಗಃ

ಶ್ಲೋಕ॥ ಬಹ್ವಾಶನೋಭುಕ್ತಿ ಪತೌಸ ಪಾಪೇ ದಾವಾಗ್ನಿ ದಂಡಾಯುಧಕಾಲ ಭಾಗೇ। ನೀಚಾಂಶಕೇ ಪಾಪನಿರೀಕ್ಷಿತೇ ವಾಶುಭೈರ್ನದೋಷಸ್ಸಹಿತೇ ಕ್ಷಣಾಭ್ಯಾಂ ॥೩೮೩॥ತಾ॥ ಭುಕ್ತಿಸ್ಥಾನಾಧಿಪತಿಯು ಪಾಪಗ್ರಹಯುಕ್ತನಾಗಿ ದಾವಾಗ್ನಿ, ದಂಡಾಯುಧ, ಕಾಲ ಈ ನವಾಂಶಗಳಲ್ಲಿ ಯಾವ ಅಂಶದಲ್ಲಿದ್ದರೂ ನೀಚಾಂಶೆ-ಯಲ್ಲಿದ್ದು ಪಾಪ ಗ್ರಹಗಳಿಂದ ನೋಡಲ್ಪಟ್ಟರೆ, ಶುಭಗ್ರಹದಿಂದ ನೋಡಲ್ಪಟ್ಟರೆ ಜಾತಕನು ಬಹ್ವಾ ಶನಿಯಾಗುವನು ॥೩೮೯॥

## ಸುಖ ಭೋಜನಯೋಗಃ

ಶ್ಲೋಕ॥ ಭುಕ್ತಿಸ್ಥಾನೇ ಶುಭಯುತೇ ತದೀಶೇ ಶುಭಸಂಯುತೇ । ಶುಭಗ್ರಹೇಣ ಸಂದೃಷ್ಟೇ ಸುಖಭುಕ್ಸನರೋಭವೇತ್ ॥೩೯೦॥ತಾ॥ ಭುಕ್ತಿಸ್ಥಾನದಲ್ಲಿ ಶುಭಗ್ರಹವಿದ್ದು ಭುಕ್ತಿಸ್ಥಾನಾಧಿಪತಿ ಶುಭಗ್ರಹಯುತನಾಗಿ ಶುಭಗ್ರಹದಿಂದ ನೋಡಲ್ಪಟ್ಟರೆ ಜಾತಕನು ಸುಖವಾಗಿ ಭೋಜನ ಮಾಡುವನು ॥೩೯೦॥

## ಭೋಜನ ಸೌಖ್ಯಯೋಗಃ

ಶ್ಲೋಕ॥ ಭುಕ್ತಿಸೌಖ್ಯಯುತಃ ಶ್ರೀಮಾನ್ ಭುಕ್ತೀಶೇ ಬಲಸಂಯುತೇ । ವೈಶೇಷಿಕಾಂಶಕೇ ವಾಪಿಶುಕ್ರಜೀವನಿರೀಕ್ಷಿತೇ ॥೩೯೧॥ತಾ॥ ಭುಕ್ತಿಸ್ಥಾನಾಧಿಪತಿ ಬಲಿಷ್ಠನಾಗಿ ವಿಶೇಷಾಂಶೆಯಲ್ಲಿದ್ದು ಶುಕ್ರ ಗುರುಗಳ ದೃಷ್ಟಿಯುತನಾಗಿದ್ದರೆ ಜಾತಕನು ಶ್ರೀಮಂತನೂ, ಭೋಜನ ಸೌಖ್ಯವುಳ್ಳವನೂ ಆಗುವನು ॥೩೯೧॥

ಶ್ಲೋಕ॥ ಭುಕ್ತೌಸ್ತೋಚ್ಚೇ ತ್ರಿಕೋಣೇವಾ ತದೀಶೇವಾ ಬಲಾನ್ವಿತೇ । ಕಾರಕೇತು ವಿಶೇಷಾಂಶೇ ಶುಭದೃಷ್ಟೇ ಶುಭಾಶನೀ ॥೩೯೨॥ತಾ॥ ಭುಕ್ತಿಸ್ಥಾನದಲ್ಲಿ ಉಚ್ಚಗ್ರಹವಿದ್ದರೂ, ತ್ರಿಕೋಣ ಸ್ಥಾನಗಳಲ್ಲಿ ಭುಕ್ತಿ ಸ್ಥಾನಾಧಿಪತಿ ಉಚ್ಚನಾಗಿದ್ದರೂ ಕಾರಕನು ವಿಶೇಷಾಂಶೆಯಲ್ಲಿದ್ದು ಶುಭಗ್ರಹ ದೃಷ್ಟಿಯುಳ್ಳವನಾದರೆ ಶುಭಾಶನವುಳ್ಳವ ನಾಗುವನು ॥೩೯೨॥

## ಕಾಲೋಚಿತ ಭೋಜನಯೋಗಃ

ಶ್ಲೋಕ॥ ಕಾಲೋಚಿತಾಶನೀ ಭುಕ್ತಿನಾಥೇ ದೇಹೇಶವೀಕ್ಷಿತೇ । ಪಾಪಗ್ರಹೇಣ ಸಂದೃಷ್ಟೇ ನೀಚಾರೀಶ ಯುತೇಪಿವಾ ॥೩೯೩॥ತಾ॥ ಭುಕ್ತಿಸ್ಥಾನಾಧಿಪತಿಯು

ಲಗ್ನಾಧಿಪತಿಯಿಂದ ನೋಡಲ್ಪಟ್ಟ ಪಾಪಗ್ರಹದಿಂದಲೂ ನೋಡಲ್ಪಟ್ಟರೂ ನೀಚ ಶತ್ರುಗ್ರಹಯುತನಾದರೂ ಜಾತಕನು ಸಮಯೋಚಿತವಾದ ಆಹಾರಗಳಿಂದ ಭೋಜನ ವನ್ನು ಮಾಡುವನು ॥೩೯೩॥

## ಅನ್ನದಾನ ಯೋಗಃ

ಶ್ಲೋಕ॥ ಅನ್ನಪ್ರದೋ ದ್ವಿತೀಯೇಶೇ ಗುರುಸೌಮ್ಯಯುತೇಕ್ಷಿತೇ। ವೈಶೇಷಿಕಾಂ ಶಕಯುತೇ ಮೃದ್ವಂಶಾದಿ ಯುತೇಪಿವಾ ॥೩೯೪॥ ತಾ॥ ದ್ವಿತೀಯಾಧಿಪತಿ ಗುರು ಬುಧಯುಕ್ತನಾದರೂ, ದೃಷ್ಟನಾದರೂ, ವೈಶೇಷಿಕಾಂಶೆಯಲ್ಲಿ ಯಾದರೂ ಮೃದ್ವಂಶೆಯಲ್ಲಿಯಾದರೂ ಇದ್ದರೆ ಜಾತಕನು ಅನ್ನದಾತನಾಗುವನು ॥೩೯೪॥

ಶ್ಲೋಕ॥ ಗುರುಶುಕ್ರಯುತೇ ಭುಕ್ತಿನಾಥೇಶುಭ ನಿರೀಕ್ಷಿತೇ । ವೈಶೇಷಿಕಾಂಶಕ ಗತೇ ಕೇಂದ್ರೇತೂಪಚಯೇಪಿವಾ ॥೩೯೫॥ತಾ॥ ಭುಕ್ತಿಸ್ಥಾನಾಧಿಪತಿಯು ಗುರು ಶುಕ್ರನಾದರೂ ಶುಭಗ್ರಹವೀಕ್ಷಿತನಾದರೂ; ವೈಶೇಷಿಕಾಂಶೆಯಲ್ಲಿಯಾದರೂ ಮೃದ್ವಂಶೆ ಯಲ್ಲಿಯಾದರೂ ಇದ್ದರೆ ಜಾತಕನು ಅನ್ನದಾತನಾಗುವನು ॥೩೯೪॥

ಶ್ಲೋಕ॥ ಮಧ್ಯೆ ಸ್ವೋಚ್ಚೇ ಭುಕ್ತಿಪತೌ ಮಿತ್ರಸೌಮ್ಯ ನಿರೀಕ್ಷಿತೇ । ಬಲಿ ಯುಕ್ತೇ ಶುಭಯುತೇತ್ವನ್ನದಾತಾ ಭವೇನ್ನಃ ॥೩೯೬॥ತಾ॥ ಭುಕ್ತಿ ಸ್ಥಾನಾದಿ ಪತಿಯು ೧೦ನೇ ಮನೆಯಲ್ಲಿದ್ದರೂ ಉಚ್ಚದಲ್ಲಿದ್ದರೂ, ಮಿತ್ರನಾಗಿಯೂ, ಶುಭನಾಗಿಯೂ ಇರುವ ಗ್ರಹದಿಂದ ನೋಡಲ್ಪಟ್ಟರೂ ಬಲಿಷ್ಠನಾಗಿ ಶುಭಗ್ರಹಯುತ ನಾದರೆ ಜಾತಕನು ಅನ್ನದಾತನಾಗುವನು ॥೩೯೬॥

## ಅಲ್ಪಾಶನ ಯೋಗಃ

ಶ್ಲೋಕ॥ ನಾಥೇ ವೈಶೇಷಿಕಾಂಶೇತು ಸುಖಭುಕ್ತಿ ಪ್ರದೋಭವೇತ್ । ಅಲ್ಪಾಶಿ ರುಚಿಕಾಮೀಸ್ಯಾದ್ಭುಕ್ತಿನಾಥೇ ಶುಭಗ್ರಹೇ ॥೩೯೭॥ತಾ॥ ಭುಕ್ತಿನಾಥನು ವಿಶೇಷಾಂಶೆ ಯಲ್ಲಿದ್ದು, ಭುಕ್ತಿನಾಥನು ಶುಭಗ್ರಹವಾದರೆ ಸುಖಭುಕ್ತನಾಗಿಯೂ, ಅಲ್ಪಾಯುಷಿ ಯಾಗಿಯೂ ಆಗುವನು ॥೩೯೭॥

## ಶೀಘ್ರಭುಗ್ಯೋಗಃ

ಶ್ಲೋಕ॥ ಸ್ವೋಚ್ಚೇತುಶುಭಸಂದೃಷ್ಟೇ ಮೃದ್ವಂಶಾದಿಸಮನ್ವಿತೇ । ತದೀಶೇ ಬಲಸಂಯುಕ್ತೇ ಶೀಘ್ರಭುಕ್ಸನರೋಭವೇತ್ ॥೩೯೮॥ತಾ॥ ಭುಕ್ತಿ ಸ್ಥಾನಾಧಿಪತಿ ಸ್ವೋಚ್ಚದಲ್ಲಿದ್ದು ಶುಭಗ್ರಹದಿಂದ ನೋಡಲ್ಪಟ್ಟು, ಮೃದ್ವಂಶಾದಿ ಶುಭ ಷಷ್ಟ್ಯಂಶೆ ಯಲ್ಲಿದ್ದರೆ ಜಾತಕನು ಶೀಘ್ರವಾಗಿ ಭೋಜನ ಮಾಡುವನು ॥೩೯೮॥

## ಪರಾನ್ನ ಭೋಜನಯೋಗಃ

ಶ್ಲೋಕ॥ ಪರಾನ್ನ ಭುಕ್ತಜೀವೀಸ್ಯಾನ್ನೀಚಶತ್ರಂಶ ಸಂಯುತೇ । ನೀಚ ಖೇಚರ ಸಂದೃಷ್ಟೇ ಸ ದೂಷಣ ಪರೋಭವೇತ್ ॥೩೯೯॥ತಾ॥ ಭುಕ್ತಿಸ್ಥಾನಾಧಿ ಪತಿಯು ನೀಚ ಶತ್ರುನವಾಂಶೆಯಲ್ಲಿದ್ದರೆ ನಿತ್ಯವೂ ಪರಾನ್ನ ಭೋಜನದಿಂದ ಜೀವಿಸುವನು ಮತ್ತು ನೀಚಗ್ರಹದಿಂದ ನೋಡಲ್ಪಟ್ಟರೆ ಅನ್ನದೂಷಣೆ ಮಾಡುವನು ॥೩೯೯॥

## ಶ್ರಾದ್ಧಾನ್ನ ಭೋಕ್ತ್ರುಯೋಗಃ

ಶ್ಲೋಕ॥ ಭುಕ್ತಿ ಸ್ಥಾನಾಧಿಪೇ ಮಂದೇತದೀಶೇ ಮಂದ ಸಂಯುತೇ । ನೀಚೇರ್ಕಸೂನುನಾ ದೃಷ್ಟೇ ಶ್ರಾದ್ಧಭುಕ್ಸತತಂ ನರಃ ॥೪೦೦॥ತಾ॥ ಭುಕ್ತಿ ಸ್ಥಾನಾಧಿಪತಿ ಶನಿಯಾದರೂ, ಭುಕ್ತಿ ಸ್ಥಾನಾಧಿಪತಿ ಶನಿಯುತನಾದರೂ, ಭುಕ್ತಿ ಸ್ಥಾನ ವನ್ನು ನೀಚನಾದ ಶನಿ ನೋಡಿದರೂ ಜಾತಕನು ಶ್ರಾದ್ಧನ್ನದಿಂದಲೇ ಜೀವಿಸುವನು ॥೪೦೦॥

## ಕದನ್ನ ಭೋಜನಯೋಗಃ

ಶ್ಲೋಕ॥ ಕುಭೋಜೀ ಭುಕ್ತಿನಾಥೇತು ಶನ್ಯಾರಗುಳಿಕಾನ್ವಿತೇ। ನೀಚ ಶತ್ರು ಯಮಾಂಶಾದೌ ಶುಭದೃಷ್ಟಿವಿವರ್ಜಿತೇ ॥೪೦೧॥ತಾ॥ ಭುಕ್ತಿಸ್ಥಾನಾಧಿಪತಿಯು ಶನಿ ಕುಜ ಗುಳಿಕಯುಕ್ತನಾಗಿ ನೀಚಶತ್ರು ನವಾಂಶೆಯಲ್ಲಿದ್ದರೂ, ಯಮಾಂಶೆಯಲ್ಲಿದ್ದರೂ ಶುಭದೃಷ್ಟಿ ವರ್ಜಿತನಾದರೆ ಕದನ್ನ ಭೋಜಿಯಾಗುವನು ॥೪೦೧॥

## ಸುಭೋಜನಯೋಗಃ

ಶ್ಲೋಕ॥ ದ್ವಿತೀಯೇ ಶುಭರಾಶೌವಾ ಶುಭಖೇಚರ ಸಂಯುತೇ । ತದೀಶೇ ಶುಭರಾಶೌವಾ ಭುಕ್ತೌ ವಾತಾ ದೃಶೇಗ್ರಹೇ ॥೪೦೨॥ತಾ॥ ದ್ವಿತೀಯವು ಶುಭಗ್ರಹ ರಾಶಿಯಾದರೂ, ದ್ವಿತೀಯದಲ್ಲಿ ಶುಭಗ್ರಹವಿದ್ದರೂ, ದ್ವಿತೀಯಾಧಿಪತಿ ಶುಭರಾಶಿ ಯಲ್ಲಿದ್ದು ದ್ವಿತೀಯದಲ್ಲಿ ಶುಭಗ್ರಹವಿದ್ದರೂ ಜಾತಕನು ಸುಭೋಜನ ಮಾಡುವವನಾಗುವನು ॥೪೦೨॥

## ಚಿರಭೋಕ್ತ್ರು ಅನ್ನದೂಷಣಯೋಗ

ಶ್ಲೋಕ॥ ತಾದೃಶೇಹ್ಯಶುಭೈರ್ಯುಕ್ತೇ ಚಿರಾದ್ಭೋಕ್ತಾತು ದೂಷಕಃ । ತನ್ನಾಥೇ ಪಾಪಾರಾಶಿಸ್ಥೇ ಚಿರಭುಕ್ತಿ ಪರೋಭವೇತ್ ॥೪೦೩॥ತಾ॥ ದ್ವಿತೀಯದಲ್ಲಿ ಅಶುಭಗ್ರಹಗಳಿದ್ದು ದ್ವಿತೀಯಾಧಿಪತಿ ಪಾಪಗ್ರಹ ಕ್ಷೇತ್ರದಲ್ಲಿದ್ದರೆ ಚಿರಭೋಜಿಯೂ ಅನ್ನ ದೂಷಕನೂ ಆಗುವನು ॥೪೦೩॥

## ಸ್ಫೋಟಾಗ್ನಿ ಭೀತಿಯೋಗಃ

ಶ್ಲೋಕ।। ವಿಲಗ್ನ ಸಪ್ತಾಷ್ಟಮ ವಿತ್ತರಾಶೌ ದಿನೇಶಯುಕ್ತೇ ಕ್ಷಿತಸೂನು ದೃಷ್ಟೇ ಭೌಮೇನವಾ ವಾಸರನಾಥದೃಷ್ಟೋ ಸ್ಫೋಟಾಗ್ನಿ ಭೀತಿಃ ಪ್ರಭವೇನ್ನರಾಣಾಂ ।।೪೦೪।। ತಾ।। ಲಗ್ನ ಸಪ್ತಮ ಅಷ್ಟಮ ಧನರಾಶಿಗಳಲ್ಲಿ ಸೂರ್ಯನಿದ್ದು ಕುಜನಿಂದ ನೋಡಲ್ಪಟ್ಟರೂ ಅಥವಾ ಅಂಗಾರಕನಿದ್ದು ಸೂರ್ಯನಿಂದ ನೋಡಲ್ಪಟ್ಟರೂ ಜಾತಕನು ಸ್ಫೋಟಕ ಮತ್ತು ಅಗ್ನಿಭೀತಿಯಿಂದ ಸಂಕಟಪಡುವನು ।।೪೦೪।।

## ಅಕೃತ್ಯಕೃತ್ಯ ಯೋಗಃ

ಶ್ಲೋಕ।। ಲಗ್ನಾಂತ್ಯ ಶತ್ರು ಭವನೇ ಯದಿಭೂಮಿಪ್ತ್ರೇ ಮಂದಾನ್ವಿತೇ ಕಮಲ ಬಂಧು ನಿರೀಕ್ಷಿತೇವಾ । ಮೂಢಾರಿನೀಚ ಭವನೇ ಯದಿವಾಥರಾಜೇ ತ್ಯಾಜ್ಯಾಸ್ಪದಾದಿ ಸಹಿತಸ್ಸಭವೇತ್ತದಾನೀಂ ।।೪೦೫।।ತಾ।। ಲಗ್ನ, ದ್ವಾದಶ, ಶತ್ರು ಈ ಮೂರು ಸ್ಥಾನಗಳಲ್ಲಿ ಕುಜನು ಶನಿಯುಕ್ತನಾಗಿ ಸೂರ್ಯನಿಂದ ನೋಡಲ್ಪಟ್ಟರೂ, ಅಸ್ತ, ನೀಚ, ಶತ್ರುಕ್ಷೇತ್ರಗಳಲ್ಲಿ ಕುಜನಿದ್ದು ಸೂರ್ಯನಿಂದ ನೋಡಲ್ಪಟ್ಟರೂ ಜಾತಕನು ಅಕ್ರಮವಾದ ಕೃತ್ಯಗಳನ್ನು ಮಾಡುವನು ।।೪೦೫।।

ಶ್ಲೋಕ।। ಮಂದಾತ್ಮಜೇನ ಸಹಿತೇ ಯದಿಭೂಮಿಪುತ್ರೇ ವಿತ್ತೇಥವಾನಿ ಧನ ರಾಶಿ ಮುವಾಗತೇವಾ । ತೇನೈವ ವೀಕ್ಷಿತಯುತೇ ಧನಭಾವನಾಥೇ ತ್ಯಾಜ್ಯಸ್ಸ್ರಗಾದಿ ನಿಯತಿಂಚ ವನಂತಿತಜ್ಞಾ।।೪೦೬।।ತಾ।। ದ್ವಿತೀಯದಲ್ಲಾದರೂ ಅಷ್ಟಮದಲ್ಲಾದರೂ ಅಂಗಾರಕನು ಗುಳಿಕಯುತನಾಗಿದ್ದರೂ ಅಥವಾ ಧನಾಧಿಪತಿ ಅವರಿಂದ ವೀಕ್ಷಿತನಾದರೂ ಯುಕ್ತನಾದರೂ ಜಾತಿಗೆ ವಿರೋಧವಾದ ಕಾರ್ಯಗಳನ್ನು ಮಾಡುವವನೂ, ವ್ಯಾಧಿಗ್ರಸ್ತನೂ ಆಗುವನು ।।೪೦೬।।

## ಶ್ವಾನ ದೃಷ್ಯಯೋಗಃ

ಶ್ಲೋಕ।। ಪಾಪೇಕ್ಷಿತೇ ರವಿಸುತೇ ಧನರಾಶಿ ಸಂಸ್ಥೇ ಪಾಪಾನ್ವಿತೇ ಶುನಕ ಭೀತಿ ಮುಪೈತಿಜಾತಃ । ತದ್ಭಾವನಾಥ ಸಹಿತೇ ದಿನನಾಥ ಪುತ್ರೇ ದೃಷ್ಟೇಥವಾ ಶುನಕ ಭೀತಿ ಮುಪೈತಿ ಜಾತಃ ।।೪೦೭।।ತಾ।। ಈ ಶ್ಲೋಕದಿಂದ ನಾಯಿಗಳಿಂದ ಕಚ್ಚಿಸಿಕೊಳ್ಳುವ ಎರಡು ಯೋಗಗಳು ಹೇಳಲ್ಪಡುತ್ತದೆ. ದ್ವಿತೀಯದಲ್ಲಿ ಶನಿಯಿದ್ದು ಪಾಪಗ್ರಹಯುತನಾದರೂ, ಪಾಪಗ್ರಹ ದೃಷ್ಟನಾದರೂ, ದ್ವಿತೀಯಾಧಿಪತಿ ಶನಿಯುಕ್ತನಾದರೂ ಅಥವಾ ನೋಡಲ್ಪಟ್ಟರೂ ಜಾತಕನು ನಾಯಿಯಿಂದ ಕಚ್ಚಿಸಿ ಕೊಳ್ಳುವನು ।।೪೦೭।।

## ಸರ್ಪಗಂಡ ಯೋಗಃ

ಶ್ಲೋಕ।। ರಾಹೌ ದ್ವಿತೀಯೇ ಗುಳಿಕೇನಯುಕ್ತೇ ದೃಷ್ಟೇಥವಾ ಸರ್ಪಭಯಂ

ವದಂತಿ । ಕದನ್ನಭುಗ್ಭೂಮಿಸೇತೇತ್ರಯುಕ್ತೇ ಪಿತ್ರಾದಿಕಾನಾಂ ಫಲಮೇವ ಮಾಹುಃ ॥೪೦೮॥ತಾ॥ ರಾಹು ದ್ವಿತೀಯದಲ್ಲಿ ಗುಳಿಕನಿಂದ ಯುತದೃಷ್ಟನಾದರೆ ಸರ್ಪಗಂಡ, ಅಂಗಾರಕ ಯುಕ್ತನಾದರೆ ಕದನ್ನಭೋಜಿಯಾಗುವನು, ಈ ಪ್ರಕಾರವಾಗಿ ಪಿತ್ರಾದಿ ಭಾವಗಳಿಗೂ ಫಲ ನಿರ್ಣಯವನ್ನು ಮಾಡತಕ್ಕದ್ದು ॥೪೦೮॥

## ವಾಕ್ಚಲನ ಯೋಗಃ

ಶ್ಲೋಕ॥ ಟಗ್ನೇಶ್ವರೇ ಶೋಬನಖೇಚರೇಂದ್ರೇ ನಿಧ್ಯಾದಿಲಾಭಂ ಧನಭಾವ ಯುಕ್ತೇ । ಸೌಮ್ಯೇದ್ವಿತೀಯೇ ಯದಿಸತ್ವಹೀನೇ ಪಾಪೇಕ್ಷಿತೇ ವಾಕ್ಚಲನಂ ತದಾಹುಃ ॥೪೦೯॥ತಾ॥ ಲಗ್ನಾಧಿಪತಿ ಶುಭಗ್ರಹನಾಗಿ ಧನಭಾವದಲ್ಲಿದ್ದರೆ, ನಿಧ್ಯಾದಿ ಲಾಭವನ್ನು ಹೊಂದುವನು. ದ್ವಿತೀಯದಲ್ಲಿ ಶುಭಗ್ರಹ ಬಲಹೀನನಾಗಿದ್ದು ಪಾಪಗ್ರಹ ವೀಕ್ಷಿತನಾದರೆ ವಾಕ್ಚಲನವಾಗುವುದು (ಬಿಕ್ಕಲು ಯೋಗ) ॥೪೦೯॥

ಶ್ಲೋಕ॥ ವಾಕ್ಸ್ಥಾನಪೋಸೌ ಯದಿಸತ್ವಹೀನ। ಕ್ರೂರಾಂಶಗಃ ಪಾಪಖಗೋ ಯದಿಸ್ಯಾತ್ । ವಾಕ್ಸ್ಥಾನಪೇ ಸೌಮ್ಯದೃಶಾವಿಹೀನೇ ಪಾಪೇಕ್ಷಿತೇ ವಾಕ್ಚಲನಂ ತದಾಹುಃ ॥೪೧೦॥ತಾ॥ ವಾಕ್ಸ್ಥಾನಕ್ಕಧಿಪತಿ ಪಾಪಗ್ರಹವಾಗಿ ಕ್ರೂರಾಂಶದಲ್ಲಿದ್ದು ವಾಕ್ಸ್ಥಾನಕ್ಕಾಗಲೀ, ವಾಕ್ಸ್ಥಾನಾಧಿಪತಿಗಾಗಲೀ, ಶುಭದೃಷ್ಟಿ ಇಲ್ಲದೆ ಪಾಪವೀಕ್ಷಣೆ ಇದ್ದರೆ, ವಾಕ್ಚಲನವುಳ್ಳವನೂ ಆಗುವನು ॥೪೧೦॥

## ವಿಷಪ್ರಯೋಗ ಯೋಗಃ

ಶ್ಲೋಕ॥ ಪಾಪೇಧನೇಪಾಪನಿರೀಕ್ಷಿತೇವಾ ಕ್ರೂರಾಂಶಕೇ ಪಾಪಯುತೇ ವಿಶೇಷಾತ್ । ತತ್ಸ್ಥಾನಪೇ ಪಾಪನಿರೀಕ್ಷಿತೇಪಿ ವಿಷಪ್ರಯೋಗಾತ್ಖಲು ವಂಚನಾದ್ವಾ ॥೫೧೧॥ತಾ॥ ಧನಸ್ಥಾನದಲ್ಲಿ ಪಾಪಗ್ರಹವಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೂ, ಧನಾಧಿಪತಿ ಕ್ರೂರಾಂಶೆಯಲ್ಲಿದ್ದು ಪಾಪಗ್ರಹದಿಂದ ಕೂಡಲ್ಪಟ್ಟರೂ, ದ್ವಿತೀಯಾಧಿಪತಿ ಪಾಪಗ್ರಹನಿರೀಕ್ಷಿತನಾದರೂ, ವಂಚನೆಯಿಂದ ವಿಷಪ್ರಯೋಗವಾಗುವುದು ॥೪೧೧॥

ಇತಿ ಸುಬ್ರಹ್ಮಣ್ಯಶರ್ಮ ಕೃತ ಸಂಗ್ರಹೇ
ಭಾವಫಲಪ್ರಕರಣೇ ದ್ವಿತೀಯಭಾವಃ

## ತೃತೀಯ ಭಾವಫಲಂ

ಪರಾಶರಃ॥ಶ್ಲೋಕ॥ ಸಭೌಮೋ ಭ್ರಾತೃಭಾವೇಶಃ ಷಡಾದಿತ್ರಯ ಸಂಸ್ಥಿತಃ। ಭ್ರಾತೃಕ್ಷೇತ್ರಗತೋಪಾಪಿ ಭ್ರಾತೃಭಾವಂ ವಿನಿರ್ದಿಶೇತ್ ॥೪೧೨॥ತಾ॥ ಅಂಗಾರಕನೂ

ತೃತೀಯಾಧಿಪತಿಯೂ ಸಹ ಷಷ್ಠ, ಅಷ್ಟಮ, ವ್ಯಯ, (೬-೮-೧೨) ದಲ್ಲಿದ್ದರೂ, *ಭ್ರಾತೃಸ್ಥಾನವನ್ನು ಹೊಂದಿದರೂ ಭ್ರಾತೃಭಾವವುಂಟೆಂದು ತಿಳಿಯತಕ್ಕದ್ದು ॥೪೧೨॥

ಶ್ಲೋಕ॥ ತೌಪಾಪಯೋಗತಃ ಪಾಪಕ್ಷೇತ್ರಯೋಗೇನ ವಾಪುನಃ । ಉತ್ಪಾಟ್ಯ ಸಹಜಾನ್ಸದ್ಯೋ ನಿಹಂತಾ ಶಾಸ್ತ್ರನಿಶ್ಚಯಾತ್ ॥೪೧೩॥

ತಾ॥ ಮೇಲೆ ಹೇಳಿದ ಭ್ರಾತೃಸ್ಥಾನಾಧಿಪತಿಯು ಭ್ರಾತೃಕಾರಕ (ಕುಜನು) ಪಾಪಗ್ರಹಗಳ ಸಂಗಡ ಸೇರಿದರೂ, ಪಾಪಕ್ಷೇತ್ರದಲ್ಲಿದರೂ, ಆ ಜಾತಕನು (ಭ್ರಾತ ಭಾವದ ಅಭಿವೃದ್ಧಿಗೆ) ಭ್ರಾತೃಗಳನ್ನೇ ನಾಶಮಾಡುವವನೂ ಆಗುವನು ॥೪೧೩॥

ಶ್ಲೋಕ॥ ಸ್ತ್ರೀಗ್ರಹೋ ಭ್ರಾತೃಭಾವೇಶಃ ಸ್ತ್ರೀಗ್ರಹೋಭ್ರಾತೃಗೋಪಿವಾ । ಭಗಿನೀಸ್ಯಾತ್ತದಾಭ್ರಾತಾಪುಂಗ್ರಹೇ ಪುಂಗ್ರಹೋಯದಿ । ಮಿಶ್ರೇ ಮಿಶ್ರಫಲಂ ಚಾತ್ರ ಬಲಾಬಲ ವಿನಿರ್ಣಯಃ ॥೪೧೪॥ತಾ॥ ಸ್ತ್ರೀಗ್ರಹವು ಭ್ರಾತೃಸ್ಥಾನಕ್ಕೆ ಅಧಿಪತಿಯಾಗಿ ಭ್ರಾತೃಸ್ಥಾನದಲ್ಲಿ ಸ್ತ್ರೀಗ್ರಹವಿದ್ದರೆ, ಆತನಿಗೆ ಸೋದರೀಭಾವ ಅಭಿವೃದ್ಧಿಯಾಗುವದೆಂದು ತಿಳಿಯತಕ್ಕದ್ದು॥ ಭ್ರಾತೃಭಾವಕ್ಕೆ ಪುಂಗ್ರಹ ಅಧಿಪತಿಯಾಗಿದ್ದು ಭ್ರಾತೃಸ್ಥಾನದಲ್ಲಿ ಪುಂಗ್ರಹವಿದ್ದರೆ, ಭ್ರಾತೃಭಾವ ಅಭಿವೃದ್ಧಿಯಾಗುವುದೆಂದು ತಿಳಿಯತಕ್ಕದ್ದು ॥ ಭ್ರಾತೃಭಾವಕ್ಕೆ ಪುಂಗ್ರಹ ಅಧಿಪತಿಯಾಗಿ ಭ್ರಾತೃಭಾವದಲ್ಲಿ ಸ್ತ್ರೀಗ್ರಹವಿದ್ದರೂ ಭ್ರಾತೃಭಾವಕ್ಕೆ ಸ್ತ್ರೀಗ್ರಹ ಅಧಿಪತಿಯಾಗಿ ಭ್ರಾತೃಭಾವದಲ್ಲಿ ಪುಂಗ್ರಹವಿದ್ದರೂ, ಸ್ತ್ರೀಪುರುಷಗ್ರಹಗಳ ಬಲಾಬಲಗಳ ಮೇಲೆ ಅಣ್ಣತಮ್ಮಂದಿರನ್ನು ಅಕ್ಕ ತಂಗಿಯರನ್ನು ಮಿಶ್ರವಾಗಿ ಹೇಳತಕ್ಕದ್ದು. ॥ಭ್ರಾತೃಭಾವಕ್ಕೆ ಸ್ತ್ರೀಪುಂಗ್ರಹಗಳ ದೃಷ್ಟಿಯಿಂದಲೂ ಸಹ ಹೇಳತಕ್ಕದ್ದು ॥೪೧೪॥

## ಸೋದರನಾಶಯೋಗಃ

ಶ್ಲೋಕ॥ ನಾಶಸ್ಥಿತೌ ಸೋದರನಾಥ ಭೌಮ್ಯೌ ಪಾಪೇಕ್ಷಿತೇ ಸೋದರನಾಶ ಮಾಹುಃ । ಪಾಗೇಕ್ಷಿತೌ ಪಾಪಸಮಾಗಮೌವಾ ತ್ರಿಸಪ್ತವಿದ್ಯಾ ಪ್ರವಿನಾಶಹೇತುಃ ॥೪೧೫॥ತಾ॥ ಭ್ರಾತೃನಾಶಯೋಗವು ಹೇಳಲ್ಪಡುತ್ತೆ । ತೃತೀಯಾಧಿ ಪತಿಯೂ ಅಂಗಾರಕನು ನಾಶಸ್ಥಾನ (೮)ದಲ್ಲಿದ್ದರೂ ಪಾಪಗ್ರಹ ದೃಷ್ಟಿಯುಳ್ಳವರಾದರೆ, ಸಹೋದರ ನಾಶವನ್ನು ನಿಶ್ಚೈಸತಕ್ಕದ್ದು ॥ ಆ ಮೇಲೆ ಹೇಳಲ್ಪಟ್ಟ ಗ್ರಹಗಳೇ ತ್ರಿ-೩, ಸಪ್ತ-೭, ವಿದ್ಯಾ-೪, ಈ ಸ್ಥಾನಗಳಲ್ಲಿದ್ದು, ಪಾಪಗ್ರಹಯುತವಾದರೂ, ದೃಷ್ಟವಾದರೂ, ಸಹೋದರ ನಾಶವನ್ನೇ ಹೇಳತಕ್ಕದ್ದು ॥೫೧೫॥

* ಭ್ರಾತೃಸ್ಥಾನವೆಂದರೆ-(೨-೯-೧೧-೭)

## ಭ್ರಾತೃವೃದ್ಧಿ ಯೋಗಃ

ಶ್ಲೋಕ।। ಭ್ರಾತೃಭೇಕಾರಕೇವಾಪಿ ಶುಭಯುಕ್ತ ನಿರೀಕ್ಷಿತೇ । ಭಾವೇವಾ ಹಲ ಸಂಪೂರ್ಣೇ ಭ್ರಾತ್ರೂಣಾಂ ವರ್ಧನಂ ಭವೇತ್ ।।೪೧೬।।

ತಾ।। ಭ್ರಾತೃಸ್ಥಾನವಾಗಲೀ, ಭ್ರಾತೃಕಾರಕನಾದ ಕುಜನೇ ಆಗಲಿ, ಶುಭಗ್ರಹ ಯುತರಾದರೂ ಶುಭಗ್ರಹದೃಷ್ಟಿಯುಳ್ಳವರಾದರೂ ಭ್ರಾತೃಸ್ಥಾನವು ಸಂಪೂರ್ಣ ಬಲಿಷ್ಠರಾಗಿದ್ದರೆ, ಅಣ್ಣತಮ್ಮಂದಿರ ಅಭಿವೃದ್ಧಿಯನ್ನೂ ಅವರ ಸೌಖ್ಯವನ್ನೂ ಸಹ ಹೇಳತಕ್ಕದ್ದು ।।೪೧೬।।

ಶ್ಲೋಕ।। ಕೇಂದ್ರತ್ರಿಕೋಣಗೇವಾಪಿಸ್ವೋಚ್ಚಮಿತ್ರಸ್ವವರ್ಗಗೇ । ನಾಥೇವಾ ಕಾರಕೇವಾಪಿ ಭ್ರಾತೃಲಾಭಂ ವದೇದ್ಬುಧಃ ।।೪೧೭।।ತಾ।। ಭ್ರಾತೃಸ್ಥಾನಾಧಿಪತಿ ಯಾಗಲೀ, ಕಾರಕನಾಗಲೀ, ಕೇಂದ್ರ ತ್ರಿಕೋಣಗಳಲ್ಲಿದ್ದರೂ, ಸ್ವೋಚ್ಚ ಮಿತ್ರ ಸ್ವಕ್ಷೇತ್ರ ಮೂಲತ್ರಿಕೋಣಗಳಲ್ಲಿದ್ದರೂ ಮಿತ್ರ ಷಡ್ವರ್ಗದಲ್ಲಿದ್ದರೂ, ಭ್ರಾತೃವೃದ್ಧಿಯನ್ನು ಹೇಳತಕ್ಕದ್ದು. ಇಲ್ಲಿ ತಿಳಿಯತಕ್ಕ ಅಂಶವೇನೆಂದರೆ. ಈಗ ಹುಟ್ಟಿದ ಜಾತಕವಾದರೆ, ಬಲಾಬಲಗಳನ್ನು ನೋಡಿ ಇವನಿಗಿಂತ ಪೂರ್ವಭವರು ಇದ್ದಾರೆ ಎಂತಲೂ, ಮುಂದೆ ಉಂಟಾಗುವರೆಂತಲೂ ಹಿಂದಿನ ಜಾತಕವಾಗಿದ್ದರೆ, ಅಣ್ಣ ತಮ್ಮಂದಿರು ಇದ್ದಾರೆಂತಲೂ ನಿಶ್ಚೈಸತಕ್ಕದ್ದು ।।೪೧೭।।

## ಏಕಭಗಿನೀ ಯೋಗಃ

ಶ್ಲೋಕ।। ಭ್ರಾತೃಭೇ ಬುಧ ಸಂಯುಕ್ತೇ ತದೀಶೇ ಚಂದ್ರಸಂಯುತೇ । ಕಾರಕೇ ಮಂದಸಂಯುಕ್ತೇ ಭಗಿನ್ಯೇಕಾಗ್ರತೋಭವೇತ್ ।।೪೧೮।।ತಾ।। ಭ್ರಾತೃಸ್ಥಾನದಲ್ಲಿ ಬುಧನಿದ್ದು ಭ್ರಾತೃಸ್ಥಾನಾಧಿಪತಿಯು ಚಂದ್ರನ ಸಂಗಡ ಇದ್ದು ಭ್ರಾತೃಕಾರಕನು (ಕುಜನು) ಶನಿಯ ಸಂಯೋಗದಲ್ಲಿದ್ದರೆ ಏಕಭಗಿನೀ ಯೋಗವು ।।೪೧೮।।

## ಪಶ್ಚಾತ್ಸಹೋದರ ಮೃತಿಯೋಗಃ

ಶ್ಲೋಕ।। ಪಶ್ಚಾತ್ಸಹೋದರೇ ಷ್ಯೇತತ್ತೃತೀಯಸ್ತುಮೃತಂಭವೇತ್ ।।೪೧೯।। ತಾ।। ಈ ಮೇಲೆ ಹೇಳಲ್ಪಟ್ಟ ಯೋಗದಲ್ಲಿಯೇ ಈತನ ನಂತರ ಹುಟ್ಟಿದ ಸಹೋದರರು ಮೃತಿ ಹೊಂದುವನು ।೪೧೯।।

## ದ್ವಾದಶ ಸಹೋದರ ಯೋಗಃ

ಶ್ಲೋಕ।। ಭ್ರಾತೃಸ್ಥಾನಾಧಿಪೇ ಕೇಂದ್ರೇಕಾರಕೇತತ್ರಿಕೋಣಗೇ । ಜೀವೇನ ಸಹಿತ ಸ್ವೋಚ್ಚೇಸಂಖ್ಯಾದ್ವಾದಶಸೋದರಾಃ ।।೪೨೦।। ಶೇಷಾಃ ಸಹೋದರಾ ದೀರ್ಘಾಃ ಷಡ್ಭಾರ್ಯಾ ಯಮಲೋಭವೇತ್। ಅಯಂ ತೃತೀಯ ಗರ್ಭಷ್ಯ ಪ್ರಥಮಾಚ್ಚ-ತೃತೀಯಕೇ।। ಸಪ್ತಮಶ್ಚೈವ ನವಮ ದ್ವಾದಶಶ್ಚ ಮೃತಿಪದಃ ।।೪೨೦।।

ತಾ।। ಈ ಶ್ಲೋಕಗಳಿಂದ ಜಾತಕನು ೧೨ಜನ ಸಹೋದರರಲ್ಲಿ ಮೂರನೆ ಯವನಾಗಿ ಜನ್ಮಿಸುವ ಯೋಗವು ಹೇಳಲ್ಪಡುತ್ತೆ ।। ಭ್ರಾತೃಸ್ಥಾನಾಧಿಪತಿಯು ಕೇಂದ್ರ ದಲ್ಲಿದ್ದು, ಅವನಿಗೆ ತ್ರಿಕೋಣಸ್ಥಾನದಲ್ಲಿ ಭ್ರಾತೃಕಾರಕನು, ಬೃಹಸ್ಪತಿ ಸಹಿತನಾಗಿ ಉಚ್ಚದಲ್ಲಿದ್ದರೆ, ಅವನು ೧೨ ಜನ ಸಹೋದರರಲ್ಲಿ ಮೂರನೆಯವನಾಗಿ ಜನಿಸುತ್ತಾನೆ।। ಮತ್ತು ಇವರಲ್ಲಿ ೭-೯-೧೨ನೆಯವರುಗಳು ಬದುಕುವುದಿಲ್ಲ, ಉಳಿದವರು ದೀರ್ಘಾಯುಸ್ಸುಳ್ಳವರಾಗುವರು ।। ಇವನು ಆರು ಜನ ಪತ್ನಿಯರುಳ್ಳವನಾಗುವನು ।।೪೨೦-೪೨೧।।

## ಸಪ್ತಸಂಖ್ಯಾಸಹೋದರ ಯೋಗಃ

ಶ್ಲೋಕ।। ವ್ಯಯೇಶೇನಯುತೇ ಭೌಮೇಗುರುಣಾಸಹಿತೇಪಿವಾ । ಭ್ರಾತೃಸ್ಥಾನೇ ಶಶಿಯುತೇ ಸಪ್ತ ಸಂಖ್ಯಾಸ್ತು ಸೋದರಾಃ ।।೪೨೨।। ಏತೇಷಾಂ ದ್ವಿಪ್ರಜಾನಾಥಃ ಶುಕ್ರಯುಕ್ತೇಕ್ಷಿತೇ ನಹಿ ।।

ತಾ।। ವ್ಯಯಾಧಿಪತಿಯ ಸಂಗಡ ಕುಜನು ಸೇರಿ ಬೃಹಸ್ಪತಿ ಯುಕ್ತನಾಗಿ ಭ್ರಾತೃಸ್ಥಾನದಲ್ಲಿ ಚಂದ್ರನಿದ್ದು ಶುಕ್ರನಿಂದ ನೋಡಲ್ಪಡದೆಯೂ ಕೂಡಲ್ಪಡದೆಯೂ ಇದ್ದರೆ, ೭ ಜನ ಸಹೋದರರಾಗುವರು ।।೪೨೨।।

## ಪರಾಕ್ರಮ ಯೋಗಃ

ಶ್ಲೋಕ।। ಸಿಂಹಾಸನಾಂಶಕಂ ಪ್ರಾಪ್ತೇತ್ವರ್ಕೇ ಬಲಿನಿವಿಕ್ರಮಃ । ಕಾರಕಾದ್ವಿ-ಕ್ರಮೇಶಾದ್ವಾ ವಿಕ್ರಮೋಸ್ತೀತಿನಿರ್ದಿಶೇತ್ ।।೪೨೩।।ತಾ।। ಸೂರ್ಯನು ಬಲಿಷ್ಠನಾಗಿ ದ್ದರೆ, ಜಾತಕನು ಪರಾಕ್ರಮವುಳ್ಳವನಾಗುವನು ।। ಮತ್ತು ವಿಕ್ರಮಕಾರಕನೂ ತೃತೀಯಾಧಿಪತಿಯು ಬಲಿಷ್ಠನಾಗಿದ್ದರೆ, ಅವರ ಬಲಾಬಲದ ಮೇಲೆ ವಿಕ್ರಮವನ್ನು ಹೇಳತಕ್ಕದ್ದು ।।೪೨೩।।

## ಧೀರಯೋಗಃ

ಶ್ಲೋಕ।। ಶೌರ್ಯಾಧಿಪೇ ತುಂಗಯುತೇ ಬಲಾಢ್ಯೇ ಕೇಂದ್ರೇತ್ರಿಕೋಣೇ ಸತಿ ಸೌಮ್ಯದೃಷ್ಟೇ । ಮೂಲ ತ್ರಿಕೋಣೇ ಸ್ವಗೃಹೇಷ್ವಗೇಹೇ ವೈಶೇಷಿಕಾಂಶೇ ಪುರುಷಸ್ಯ ಧೀರಃ ।।೪೨೪।।ತಾ।। ತೃತೀಯಾಧಿಪತಿ ಉಚ್ಚನಾಗಿ ಬಲಿಷ್ಠನಾಗಿ ಕೇಂದ್ರ ತ್ರಿಕೋಣಗಳಲ್ಲಿದ್ದು ಶುಭಗ್ರಹವೀಕ್ಷಿತನಾದರೂ, ಮೂಲತ್ರಿಕೋಣಸ್ಥನಾದರೂ ಸ್ವಕ್ಷೇತ್ರ ಮಿತ್ರಕ್ಷೇತ್ರದಲ್ಲಾದರೂ ಇದ್ದು ವೈಶೇಷಿಕಾಂಶೆಯನ್ನು ಹೊಂದಿದ್ದರೆ ಜಾತಕನು ಧೀರನಾಗುವನು ।।೪೨೪।।

## ಧೈರ್ಯ ಯೋಗಃ

ಶ್ಲೋಕ॥ ಧೀರೋಭವೇ ದ್ವಿಕ್ರಮರಾಶಿನಾತೇ ಸೌಮ್ಯಗ್ರಹಾಂಶೇ ಶುಭಖೇಟ ಯುಕ್ತೇ । ತದ್ವೈವ ತತ್ಕಾರಕ ಖೇಚರೇಂದ್ರೇ ಸೌಮ್ಯಗ್ರಹಾಣಾಂ ಭವನೇತು ಶೌರ್ಯೇ ॥೪೨೪॥ತಾ॥ ತೃತೀಯ ಭಾವಾಧಿಪತಿ ಸೌಮ್ಯನವಾಂಶೆಯಲ್ಲಿದ್ದು ಶುಭಗ್ರಹಯುಕ್ತನಾಗಿ ಮತ್ತು ಧೈರ್ಯಕಾರಕನು ಶುಭಗ್ರಹಗಳ ರಾಶಿಯಲ್ಲಿದ್ದರೆ, ಜಾತಕನು ಧೈರ್ಯವಂತನಾಗುವನು ॥೪೨೫॥

## ಯುದ್ಧ ಪ್ರವೀಣ ಯೋಗಃ

ಶ್ಲೋಕ॥ ಧೈರ್ಯಾನ್ವಿತೋ ವಿಕ್ರಮರಾಶಿನಾಥ ಸಂಯುಕ್ತರಾಶ್ಯಂಶ ಪತಿರ್ಯ ದಂಶೇ। ತದಂಶನಾಥೇ ಸ್ವಗೃಹಾದಿವರ್ಗೇ ಯುದ್ಧೇ ವಿದಗ್ಧಃ ಕಲಹ ಪ್ರವೀಣಃ ॥೪೨೬॥ತಾ॥ ವಿಕ್ರಮಸ್ಥಾನಾಧಿಪತಿ ಇರುವ ನವಾಂಶಾಧಿತಿ ಯಾವನವಾಂಶೆ ಯಲ್ಲಿರುವನೋ ಆ ನವಾಂಶಾಧಿಪತಿಯು ಸ್ವಕ್ಷೇತ್ರ ಮೊದಲಾದ ಷಡ್ವರ್ಗದಲ್ಲಿದ್ದರೆ ಜಾತಕನು ಯುದ್ಧದಲ್ಲಿ ಸಮರ್ಥನೂ ಕಲಹಪ್ರಿಯನೂ ಆಗುವನು॥೪೨೬॥

## ಯುದ್ಧಾತ್ಪೂರ್ವ ದೃಢಚಿತ್ತಯೋಗಃ

ಶ್ಲೋಕ॥ ವಿಕ್ರಮಾಧಿಪತೌ ಸ್ವೋಚ್ಚ ರಾಶಿಸ್ಥೇ ಪಾಪಸಂಯುತೇ । ಚರ ಖೇಚರರಾಶ್ಯಂಶೇ ಯುದ್ಧಾತ್ಪೂರ್ವಂ ದೃಢೋಭವೇತ್ ॥೪೨೭॥ತಾ॥ ವಿಕ್ರಮಾಧಿಪತಿ ಉಚ್ಚನಾಗಿ ಪಾಪಗ್ರಹ ಸಂಯೋಗದಲ್ಲಿದ್ದು ಚರರಾಶಿ ನವಾಂಶೆಯಲ್ಲಿದ್ದರೆ ಯುದ್ಧಾತ್ಪೂರ್ವದಲ್ಲಿ ದೃಢವಾಗಿರುವನು ॥೪೨೭॥

## ಯುದ್ಧ ಪಶ್ಚಾದ್ದೃಡಯೋಗಃ

ಶ್ಲೋಕ॥ ಸ್ಥಿರಭೇ ಸ್ಥಿರರಾಶ್ಯಂಶೇ ಯುದ್ಧೇ ಪಶ್ಚಾದ್ದೃಡೋಭವೇತ್ । ಕ್ರೂರ ಷಷ್ಠ್ಯಂಶಕೇವಾಪಿ ತದೀಶೇ ನೀಚರಾಶಿಗೇ ॥೪೨೮॥ತಾ॥ ತೃತೀಯಾಧಿಪತಿಯು ಸ್ಥಿರ ರಾಶಿಯಲ್ಲಿ ಸ್ಥಿರನವಾಂಶೆಯಲ್ಲಿ ಕ್ರೂರ ಷಷ್ಠ್ಯಂಶದಲ್ಲಿದ್ದು ಆ ರಾಶ್ಯಧಿಪತಿಗಳು ನೀಚರಾಶಿಯಲ್ಲಿದ್ದರೆ ಯುದ್ಧವಾದನಂತರ ದೃಢಮನಸ್ಸುಳ್ಳವನಾಗುವನು ॥೪೨೮॥

## ಯುದ್ಧೇ ಪರಾಚಿತಯೋಗಃ

ಶ್ಲೋಕ॥ ಪಾಪಯುಕ್ತೇಥವಾದೃಷ್ಟೇ ಯುದ್ಧೇಮಂದೋ ಭವೇನ್ನರಃ । ಯುದ್ಧೇಪರಾಜಿತಸ್ವೋಚ್ಚೇ ವಿಕ್ರಮೇಶೇ ವಿನಾಶಭೇ ॥೪೨೯॥ತಾ॥ ವಿಕ್ರಮಾಧಿಪತಿ ವ್ಯಯದಲ್ಲಿ ಉಚ್ಚನಾಗಿ ಯುದ್ಧದಲ್ಲಿ ಪರಾಜಿತನಾಗಿದ್ದು ಪಾಪಗ್ರಹಯುತ ದೃಷ್ಟನಾದರೆ ಜಾತಕನು ಯುದ್ಧದಲ್ಲಿ ಓಡಿಹೋಗುವನು ॥೪೩೯॥

## ಯುದ್ಧೇ ಮಂದಯೋಗಃ

ಶ್ಲೋಕ।। ಕಾರಕೇ ಬಲಹೀನೇವಾ ಕ್ರೂರಷಷ್ಠ್ಯಂಶಸಂಯುತೇ । ತಥಾವಿಧೇ ತದೀಶೇತು ಯುದ್ಧೇಮಂದೋ ಭವೇನ್ನರಃ ।।೪೩೦।।ತಾ।। ಯುದ್ಧಕಾರಕನಾದ ಅಂಗಾರಕನು ಬಲಹೀನನಾಗಿ ಕ್ರೂರಷಷ್ಠ್ಯಂಶದಲ್ಲಿದ್ದು ತೃತೀಯಾಧಿಪತಿಯು ಕ್ರೂರ ಷಷ್ಠ್ಯಂಶೆಯಲ್ಲಿದ್ದರೆ ಯುದ್ಧದಲ್ಲಿ ಮಂದನಾಗಿ ಸ್ತಂಭೀಭೂತನಾಗಿರುವನು ।।೪೩೦।।

## ಯುದ್ಧವಿದ್ಯಾ ವಿಶಾರದಯೋಗಃ

ಶ್ಲೋಕ।। ಸಿಂಹಾಸನಾಂಶೇ ಸತಿವಿಕ್ರಮೇಶೇ ಪಾರವತೇ ಗೋಪುರ ಭಾಗಯುಕ್ತೇ ಮೃದ್ವಂಶಕೇವಾ ಶುಭದೃಷ್ಟಿ ಯುಕ್ತೇ ಮಹೋತ್ಸವೋ ಯುದ್ಧವಿಶಾರದ ಸ್ಯಾತ್ ।।೪೩೧।।ತಾ।। ತೃತೀಯಾಧಿಪತಿ ಸಿಂಹಾಸನಾಂಶೆಯಲ್ಲಿದ್ದರೂ ಗೋಪಾರಾಂಶೆ ಮೃದ್ವಂಶೆಯಲ್ಲಿದ್ದರೂ ಶುಭದೃಷ್ಟಿಯುಕ್ತನಾಗಿದ್ದರೆ ಜಾತಕನು ಸರ್ವ ಸೇನಾಪತಿ-ಯಾಗಿಯೂ ಯುದ್ಧ ವಿದ್ಯೆಯಲ್ಲಿ ಪಂಡಿತನಾಗಿಯೂ ಆಗುವನು.

ಶ್ಲೋಕ।। ಯುದ್ಧಾಭಿಲಾಷೀ ಸಮರಪ್ರವೀಣೋ ವೀರ್ಯೇಶ್ವರೇಸೌಮ್ಯಯತೇ । ಸ್ವತುಂಗೇ ವೃಶೇಷಿಕಾಂಶೀ ಬಲಪೂರ್ಣಯುಕ್ತೇ ಮೃದ್ವಂಶಕೇವಾ ಬಲಪೂರ್ಣ ಮನ್ವತ್ ।।೪೩೨।।ತಾ।। ತೃತೀಯಾಧಿಪತಿ ಸೌಮ್ಯಗ್ರಹಯುತನಾಗಿ ತನ್ನುಚ್ಚಸ್ಥಾನ ದಲ್ಲಿದ್ದು ವೈಶೇಷಿಕಾಂಶೆಯಲ್ಲಿ ಬಲಪೂರ್ಣನಾಗಿದ್ದರೂ, ಮೃದ್ವಂಶೆಯಲ್ಲಿ ಬಲಪೂರ್ಣ ನಾಗಿದ್ದರೂ, ಯುದ್ಧಾಭಿಲಾಷಿಯಾಗಿಯೂ ಸಮರ ಪ್ರವೀಣನಾಗಿಯೂ ಆಗುವನು ।।೪೩೨।।

## ತೃತೀಯಾಧಿಪತಿ ರವ್ಯಾದಿಗ್ರಹಯುತ ಫಲಂ

ಶ್ಲೋಕ।। ಶೌರ್ಯಾಧಿಪೇಭಾನುಯುತೇತ್ರಭೀರುಶ್ಚಂದ್ರಾನ್ವಿತೇಮಾನಸ ಧೈರ್ಯ ಜಾತಃ । ಬಾಹ್ಯೇಜಡೋ ಭೌಮಯುತೇ ಪ್ರಕೋಪೀ ಸೌಮ್ಯಾನ್ವಿತೇ ಸಾಕ್ಷಿತಬುದ್ಧಿ ಯುಕ್ತ ।।೪೩೨।।ತಾ।। ತೃತೀಯಾಧಿಪತಿಯು ಸೂರ್ಯನಿಂದ ಕೂಡಿದರೆ ಭಯವುಳ್ಳವನು, ಚಂದ್ರಯುಕ್ತನಾಗಿದ್ದರೆ ಮನಸ್ಸಿನಲ್ಲಿ ಧೈರ್ಯವುಳ್ಳವನು, ಅಂಗಾರಕ ಯುಕ್ತನಾದರೆ ಬಾಹ್ಯದಲ್ಲಿ ಜಡನಂತೆಯೂ ಕೋಪಿಯಾಗಿಯೂ, ಬುಧಾನ್ವಿತಾದರೆ ಸಾತ್ವಿಕಬುದ್ಧಿಯುಳ್ಳವನಾಗಿಯೂ ಆಗುವನು ।।

ಶ್ಲೋಕ।। ಜೀವಾನ್ವಿತೇಧೀರತಯಾ ಸಮೇತಶ್ಯಾತ್ಸರ್ವಶಾಸ್ತ್ರಾರ್ಥ ವಿಶಾರದಶ್ಚ ಕಾಮಾನ್ವಿತಸ್ಸ್ಯಾ ಸ್ಪುಜಕಾನ್ವಿತೇಸ್ಯಾ ತ್ತನ್ಮೂಲಕೋಪಾತ್ಕಲಹ ಪ್ರವೀಣಃ ।।೪೩೩।। ತಾ।। ತೃತೀಯಾಧಿಪತಿಯು ಗುರುಯುಕ್ತನಾದರೆ ಸರ್ವಶಾಸ್ತ್ರವಿಶಾರದನಾಗಿಯೂ

ಧೀರತ್ವವುಳ್ಳವನಾಗಿಯೂ, ಶುಕ್ರಾನ್ವಿತನಾದರೆ ಕಾಮುಚಿತ್ತನೂ ತನ್ಮೂಲಕ ಕೋಪವುಳ್ಳವನೂ ಕಲಹಪ್ರಿಯನೂ ಆಗುವನು ||೪೩೩||

ಶ್ಲೋಕ|| ಜಡೋಭವೇದ್ವಾಸರನಾಥ ಪುತ್ರಯುತೇ ಫಣಿನಾಮಧಿಪೇನ ಯುಕ್ತೇ| ಬಹಿರ್ದೃಡೋ ಹೃದ್ಗತಜಾಡ್ಯಯುಕ್ತಃ ಕೇತವನ್ವಿತೋ ಮಾಂದಿಯುತೇ ತಥೈವ ||೪೩೪||ತಾ||ತೃತೀಯಾಧಿಪತಿಯು ಶನಿಯುಕ್ತನಾದರೆ ಜಡನಾಗುವನು, ರಾಹುಕೇತು ಮಾಂದಿ ಯುಕ್ತನಾದರೂ ಬಾಹ್ಯದಲ್ಲಿ ದೃಢಚಿತ್ತನೂ ಅಂತರಂಗದಲ್ಲಿ ಜಾಡ್ಯಯುಕ್ತನೂ ಆಗುವನು ||೪೩೪||

## ಚತುಷ್ಪದ ಭೀತಿಯೋಗಃ

ಶ್ಲೋಕ|| ಲಗ್ನೇಗುರೌ ವಿಕ್ರಮನಾಥಯುಕ್ತೇ ಚತುಷ್ಪದೇಭ್ಯಃ ಪ್ರವದಂತಿ ಭೀತಿಂ| ಗವಾಭಯಂವಾ ಜಲರಾಶಿಮಗ್ನೋ ಜಲಪ್ರಮಾದೋ ಭವತಿ ಧ್ರುವಂತು ||೪೩೫|| ತಾ|| ಲಗ್ನದಲ್ಲಿ ಗುರು ತೃತೀಯಾಧಿಪತಿಯುಕ್ತನಾದರೆ, ಚತುಷ್ಪದ ಜಂತುವಿನಿಂದ ಭೀತಿಯುಳ್ಳವನು ತೃತೀಯಾಧಿಪತಿ ಕೂಡಿದ ಬೃಹಸ್ಪತಿ ಜಲರಾಶಿಯಲ್ಲಿದ್ದರೆ, ನಿಶ್ಚಯವಾಗಿ ಗೋವಿನಿಂದಲೂ ನೀರಿನಿಂದಲೂ ಗಂಡವುಳ್ಳವನೂ ಆಗುವನು ||೪೩೫||

## ಸರ್ಪಭಯಗಳ ಯೋಗ ವಿಚಾರಃ

ಶ್ಲೋಕ|| ವೀರ್ಯಾಧಿಪೇನಾಪಿ ಸಮೇತರಾಶಿನಾಥಾನ್ವಿತೇ ರಾಹುಯುತೇ ವಿಲಗ್ನೇ| ಸರ್ಪಾದ್ಭಯಂ ವಿಕ್ರಮರಾಶಿನಾಥೇ ಬುಧೇನಯುಕ್ತೇಗಳರೋಗಮತ್ರ ||೪೩೬||ತಾ|| ತೃತೀಯಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶ್ಯಧಿಪತಿಯು ರಾಹು-ಯುಕ್ತನಾಗಿ ಲಗ್ನದಲ್ಲಿದ್ದರೆ, ಸರ್ಪದಿಂದ ಗಂಡ ಮತ್ತು ವಿಕ್ರಮಾಧಿಪತಿಯು ಬುಧನಿಂದ ಕೂಡಿದರೆ, ಕಂಠರೋಗ ಉಳ್ಳವನೂ ಆಗುವನು ||೪೩೬||

## ಗಳರೋಗ ವಿಷಪ್ರಯೋಗ ಯೋಗಃ

ಶ್ಲೋಕ|| ನೀಚೇತೃತಿಯ್ಯೇರಿಗ್ರಹೇಪಿ ಮೂಢೇ ಪಾಪೇಕ್ಷಿತೇವಾದಿಗಳ ರೋಗ ಮಾಹುಃ| ವಿಷಪ್ರಯೋಗಾದ್ವಿಷಭಕ್ಷಣಾದ್ವಾತೇಷಾಮಭಾವೇ ತ್ರವಿನಿಶ್ಚಿತಾರ್ಥಃ ||೪೩೭||ತಾ|| ತೃತೀಯದಲ್ಲಿ ನೀಚಗ್ರಹವಿದ್ದು ಷಷ್ಠದಲ್ಲಿ ಅಸ್ತಗ್ರಹವಿದ್ದು ಪಾಪ ಗ್ರಹವೀಕ್ಷಣೆಯುಳ್ಳವನಾದರೆ, ಗಳರೋಗ ಪ್ರಾಪ್ತಿಯಾಗುವದು. ಈ ಯೋಗದಲ್ಲಿಯೇ ವಿಷಪ್ರಯೋಗದಿಂದಲಾದರೂ, ವಿಷಭಕ್ಷಣದಿಂದಲಾದರೂ, ಭೀತಿಯುಂಟಾಗುವದು ||೪೩೭||

## ಗಳಕರ್ಣಯೋಗಃ

ಶ್ಲೋಕ।। ಪಾಪೇತೃತೀಯೇ ಗಳರೋಗ ಮತ್ರವದಂತಿ. ಮಾಂದ್ಯಾದಿಯುತೇ ವಿಶೇಷಾತ್ । ಭೌಮಾನ್ವಿತೇ ಪ್ರೇತಪುರೀಶ ಭಾಗೇ ತೃತೀಯರಾಶೌ ಸತಿಕರ್ಣ ರೋಗಃ ।।೪೩೮।।ತಾ।। ತೃತೀಯದಲ್ಲಿ ಪಾಪಗ್ರಹವಿದ್ದರೆ ಗಳರೋಗ ಮತ್ತು ರಾಹು ಮಾಂದಿಯುತನಾದರೂ, ಅಂಗಾರಕಯುಕ್ತನಾಗಿ ಪ್ರೇತಪುರೀಶವೆಂಬ ಷಷ್ಠಾಂಶದಲ್ಲಿ ದ್ದರೆ, ಕರ್ಣರೋಗ ಪ್ರಾಪ್ತಿಯಾಗುವುದು ।।೪೩೮।।

## ಗಳರೋಗ . ವಿಚಾರಃ

ಶ್ಲೋಕ।। ರಾಹುಣಾ ಫಣಿನಾಕ್ರಾಂತ ಭೇಶೇನಾಪಿಯುತೇಸತೀ। ಸಬುಧೇ ವಿಕ್ರಮಪತೌ ಗಳರೋಗಂವದಂತಿಹಿ ।।೪೩೯।।ತಾ।। ತೃತೀಯಾಧಿಪತಿ ರಾಹುಕೇತು ಯುಕ್ತನಾದ ರಾಶ್ಯಧಿಪತಿಯುಕ್ತನಾಗಿ ಬುಧಯುಕ್ತನಾದರೆ ಕಂಠರೋಗ ಪ್ರಾಪ್ತಿಯಾಗುವುದು ।।೪೩೯।।

## ಕರ್ಣರೋಗ ವಿಚಾರಃ

ಶ್ಲೋಕ।। ಪಾಪನ್ವಿತೇ ನಿರೀಕ್ಷಿತೇವಾ ವದಂತಿ ಕರ್ಣೋದ್ಭವರೋಗ ಮತ್ರ। ಕ್ರೂರಾದಿಷಷ್ಠ್ಯಂಶಯುತೇ ತದೀಶೇ ಕರ್ಣಸ್ಯರೋಗಂ ಕಥಯಂತಿ ತಜ್ಞಾಃ ।।೪೪೦।।ತಾ।। ತೃತೀಯರಾಶಿ ಪಾಪಗ್ರಹದಿಂದ ಕೂಡಿದರೂ, ಪಾಪಗ್ರಹದಿಂದ ನೋಡಲ್ಪಟ್ಟರೂ, ತೃತೀಯಾಧಿಪತಿ ಕ್ರೂರ ಷಷ್ಠ್ಯಂಶದಲ್ಲಿದ್ದರೂ, ಕರ್ಣರೋಗ ಪ್ರಾಪ್ತಿಯಾಗುವುದು ।।೪೪೦।।

## ಕರ್ಣಭೂಷಣ ವಿಚಾರಃ

ಶ್ಲೋಕ।। ಸೌಮ್ಯಯುಕ್ತೇ ತೃತೀಯೇವಾ ಸೌಮ್ಯಖೇಚರವೀಕ್ಷಿತೇ । ತದೀಶೇ ಶುಭಸಂಯುಕ್ತೇ ಕರ್ಣಯೋ ಭೂಷಣಂವದೇತ್ ।।೪೪೧।।ತಾ।। ತೃತೀಯದಲ್ಲಿ ಶುಭಗ್ರಹವಿದ್ದರೂ, ಶುಭಗ್ರಹದಿಂದ ನೋಡಲ್ಪಟ್ಟರೂ, ತೃತೀಯಾಧಿಪತಿ ಶುಭಗ್ರಹ ಯುತನಾದರೂ, ಜಾತಕನಿಗೆ ಕರ್ಣಭೂಷಣ ಪ್ರಾಪ್ತಿಯಾಗುವುದು ।।೪೪೧।।

ಶ್ಲೋಕ।। ಭಾನೋಸ್ತು ಸಂಬಂಧಯುತೇ ತೃತೀಯೇ ತದ್ರಕ್ತಿಮಂ ನೀಲಮಯಂ ಹಿಮಾಂದೇ । ಶುಕ್ರೇ ತೃತೀಯೇ ಸತಿಮೌಕ್ತಿಕಂಸ್ಯಾಜ್ಜೀವೇ ಸುವರ್ಣಾಭರಣಂ ವದಂತಿ ।।೪೪೨।।ತಾ।। ತೃತೀಯಕ್ಕೆ ಸೂರ್ಯ ಸಂಬಂಧವಾದರೆ ರಕ್ತಮಯ ರತ್ನದ ಆಭರಣವೂ, ಶನಿಸಂಬಂಧವಾದರೆ ನೀಲರತ್ನದ ಆಭರಣವೂ ಶುಕ್ರ ತೃತೀಯದಲ್ಲಿದ್ದರೆ ಮುತ್ತಿನ ಆಭರಣವೂ, ಗುರು ಸಂಬಂಧವಾದರೆ ಸುವರ್ಣಾಭರಣವೂ ಪ್ರಾಪ್ತಿಯಾಗುವುದು ।।೪೪೨।।

ಶ್ಲೋಕ॥ ಚಂದ್ರೇ ಬಹುತ್ವಾಭರಣಂಹಿಸೌಮ್ಯೇ ಶ್ಯಾಮಂಭವೇತ್ತತ್ರಿಕ್ಷಿತಿ ಸೂನುರಾಶೌ। ಭೌಮೇ ವಿಚಿತ್ರಾಭರಣಂ ತಥೈವಪಾಪೇಕ್ಷಿತೇ ತಲ್ಲಯಮ್ಮಾಹು ರಾರ್ಯಾಃ ॥೪೪೩॥ತಾ॥ ಚಂದ್ರನು ತೃತೀಯದಲ್ಲಿದ್ದರೆ ಬಹುಮಾನದಿಂದುಂಟಾದ ಆಭರಣಗಳೂ, ಬುಧನು ತೃತೀಯದಲ್ಲಿದ್ದರೆ ಶ್ಯಾಮವರ್ಣದ ಆಭರಣಗಳೂ, ತೃತೀಯವು ಕುಜಕ್ಷೇತ್ರವಾಗಿ ಕುಜನಿದ್ದರೆ ವಿಚಿತ್ರವಾದ ಆಭರಣಗಳೂ ಪ್ರಾಪ್ತಿಯಾಗುತ್ತವೆ, ಪಾಪಗ್ರಹವು ನೋಡಿದರೆ ಕರ್ಣಾಭರಣ ನಾಶವಾಗುವುದು ॥೪೪೩॥

## ಸತ್ಕಥಾಶ್ರವಣಾದಿ ಯೋಗಃ

ಶ್ಲೋಕ॥ ಶುಭಗ್ರಹಾಣಾಂ ಭವನೇತುತಸ್ಮಿ ಶುಭಾಂಶಕೇವಾ ಶ್ರವಣಂ ಕಥಾನಾಂ । ಪುಣ್ಯಾದಿಕಾನಾಂ ಯದಿ ಪಾಪರಾಶೌ ವಕ್ತುಂಚ ತತ್ಕರ್ಣ ಕಠೋರ ಮಾಹುಃ ॥೪೪೪॥ತಾ॥ ತೃತೀಯರಾಶಿಯು ಶುಭಗ್ರಹರಾಶಿಯಾಗಿ ಅಲ್ಲಿ ಶುಭಗ್ರಹ ವೀಕ್ಷಣೆಯಿದ್ದರೆ, ಶುಭಾಂಶದಲ್ಲಿ ತೃತಿಯಾಧಿಪತಿಯಿದ್ದರೆ ಸತ್ಕಥಾಶ್ರವಣ ಮಾಡುವನು ಮತ್ತು ಪುಣ್ಯ ಕಥೆಗಳನ್ನು ಕೇಳುವನು. ಪಾಪಗ್ರಹವಿದ್ದರೆ ಕರ್ಣಕಠೋರವಾದ ವಾರ್ತೆಗಳಲ್ಲಿ ಪ್ರೀತಿಯುಳ್ಳವನು ॥೪೪೪॥

ಇತಿ ಸುಬ್ರಹ್ಮಣ್ಯಶರಕೃತ ಸಂಗ್ರಹೇ
ಭಾವ ಪ್ರಕರಣೇ ತೃತೀಯಭಾವಃ

## ಅಥ ಬಂಧುಭಾವಃ ಗೃಹಲಭ್ಯಾಲಭ್ಯ ಯೋಗಃ

ಶ್ಲೋಕ॥ ಪರಾಶರಃ॥ ಗೇಹಾಧಿನಾಥೇನಯುತೇತು ಗೇಹೇ ದೇಹಾಧಿಪೇನಾಪಿ ಗೃಹಾಭಿಲಬ್ಧಿಃ ।ಯುತೇಷಡಾದೌತು ವಿಪರ್ಯ ಯಸ್ಯಾದ್ಗೃಹಾಧಿಪೇ ದೇಹ ಪತೌಚತದ್ವತ್ ॥೪೪೫॥ತಾ॥ ಚತುರ್ಥಭಾವಾಧಿಪತಿ ಚತುರ್ಥದಲ್ಲಿದ್ದೂ ಲಗ್ನಾಧಿಪತಿ ಚತುರ್ಥಸ್ಥಾನವನ್ನು ಹೊಂದಿದ್ದರೂ, ಜಾತಕನಿಗೆ ಮನೆ ಮೊದಲಾದವುಗಳ ಪ್ರಾಪ್ತಿಯುಂಟೆಂದು ತಿಳಿಯತಕ್ಕದ್ದು. ಹಾಗಿಲ್ಲದೆ ಚತುರ್ಥ ಸ್ಥಾನಾಧಿಪತಿಯಾಗಲೀ ಲಗ್ನಾಧಿಪತಿಯಾಗಲೀ ಷಷ್ಠಾಷ್ಟಮವ್ಯಯವನ್ನು ಪಡೆದರೆ ಜಾತಕನಿಗೆ ಗೃಹವೇ ಇರುವುದಿಲ್ಲ ॥೪೪೫॥

## ಉತ್ತಮಗೃಹ ಯೋಗಃ

ಶ್ಲೋಕ॥ ಕೇಂದ್ರತ್ರಿಕೋಣೇಷು ಶುಭಗ್ರಹೇಣಯುತೇ ಸಮೀಚೀನ ಗೃಹಾಭಿಲಬ್ಧಿ ॥೪೪೬॥ತಾ॥ ಗ್ರಹಾಧಿಪತಿಯು ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹಯುಕ್ತನಾಗಿದ್ದೆ ಉತ್ತಮವಾದ ಮನೆಯುಳ್ಳವನಾಗುವನು ॥೪೪೬॥

## ವಿಚಿತ್ರಸೌಧ ಪ್ರಾಕಾರಯೋಗಃ

ಶ್ಲೋಕ|| ವಿಚಿತ್ರಸೌಧ ಪ್ರಾಕಾರಮಂಡಿತಂ ಗೃಹಮಾದಿಶೇತ್ । ಕರ್ಮಾಧಿ ಪೇನ ಸಹಿತೇನಾಥೇ ಚಂದ್ರಾರ್ಕಸೂನುನಾ ||೪೪೭||ತಾ|| ಚತುರ್ಥಾಧಿಪತಿಯು ದಶಮಾಧಿಪತಿ ಸಹಿತವಾಗಿ ಚಂದ್ರ ಶನಿಗಳ ಸಂಗಡ ಸೇರಿದ್ದರೆ ವಿಚಿತ್ರವಾದ ಚಂದ್ರ ಶಾಲೆಗಳುಳ್ಳ ಮಹಡೀಮನೆಯುಳ್ಳವನಾಗುವನು ||೪೪೭||

## ವಾದ್ಯಯುಕ್ತ ಗೃಹಯೋಗಃ

ಶ್ಲೋಕ|| ಸ್ವಕೀಯೇ ಸ್ವಾಂಶಗೇ ಸ್ವೋಚ್ಚೇ ಸುತಸ್ಥಾನಾಸ್ಥಿತೋಽಯದಿ । ಸುಖೀವಾಹನ ವೃದ್ಧಿಸ್ಯಾ ಚ್ಛಂಖಭೇರ್ಯಾದಿ ವಾದ್ಯಯುಕ್ ||೪೪೮||ತಾ|| ಚತುರ್ಥಾಧಿ ಪತಿಯು ಸ್ವಕ್ಷೇತ್ರದಲ್ಲಿ ಸ್ವನವಾಂಶೆಯನ್ನು ಹೊಂದಿದ್ದರೂ, ತನ್ನುಚ್ಚಸ್ಥಾನದಲ್ಲಿದ್ದರೂ, ಆ ಸ್ಥಾನವು ಪಂಚಮ ತ್ರಿಕೋಣವಾಗಿದ್ದರೆ ಜಾತಕನು ಶಂಖ ಭೇರಿ ಮೊದಲಾದ ವಾದ್ಯಯುಕ್ತವಾದ ಗೃಹವುಳ್ಳವನಾಗುವನು ||೪೪೮||

## ಅಯತ್ನಗ್ರಹ ಪ್ರಾಪ್ತಿಯೋಗಃ

ಶ್ಲೋಕ|| ಲಗ್ನೇಶ್ವರೇ ಲಗ್ನಗತೇ ಸುಖೇಸ್ತನಾಥೇನಯುಕ್ತೇ ಯದಿಗೇಹಲಾಭಃ| ಅಯತ್ನತಃಸ್ಯಾಚ್ಛುಭದೃಷ್ಟಿಯೋಗೇ ಸ್ವೋಚ್ಚೇಸ್ವಮಿತ್ರ ಸ್ವಗೃಹೇಬಲಾಢ್ಯೇ ||೪೪೯|| ತಾ|| ಈ ಶ್ಲೋಕದಲ್ಲಿ ಪ್ರಯತ್ನಮೂಲಕ ಗೃಹಲಾಭಯೋಗ ಒಂದು, ಪ್ರಯತ್ನವಿಲ್ಲದೆ ಗೃಹಲಾಭವಾಗುವ ಯೋಗ ಒಂದು ಹೇಳಲ್ಪಡುತ್ತೆ. ಸಪ್ತಮಾಧಿಪತಿಯನ್ನು ಕೂಡಿದ ಲಗ್ನಾಧಿಪತಿಯು ಲಗ್ನದಲ್ಲಾದರೂ, ಚತುರ್ಥದಲ್ಲಾದರೂ ಇದ್ದರೆ ಪ್ರಯತ್ನಮೂಲದಿಂದ ಗೃಹಪ್ರಾಪ್ತಿಯಾಗುವದು. ಈ ಮೇಲೆ ಹೇಳಲ್ಪಟ್ಟ ಗ್ರಹಗಳೇ ಸ್ವೋಚ್ಚ ಸ್ವಕ್ಷೇತ್ರ ಮಿತ್ರಕ್ಷೇತ್ರಗಳಲ್ಲಿ ಬಲಿಷ್ಠರಾಗಿದ್ದು ಶುಭವರ್ಗ ಅಥವಾ ಶುಭದೃಷ್ಟಿ ಸಂಯೋಗವಿದ್ದರೆ ಯತ್ನವಿಲ್ಲದೆ ಗೃಹಲಾಭವಾಗುವದು ||೪೪೯||

ಶ್ಲೋಕ|| ಗೇಹಾಧಿಪೇ ಕೇಂದ್ರಗತೇ ಬಲಾಢ್ಯೇ ಸೌಮ್ಯೇಕ್ಷಿತೇ ಮಂದಿರಲಾಭ ಮಾಹುಃ । ವೈಶೇಷಿಕಾಂಶೇ ಪರಮೋಚ್ಚಭಾಗೇ ಗೇಹೇಶ್ವರೇ ಮಂದಿರ ಲಾಭಮಾಹುಃ ||೪೫೦||ತಾ|| ಚತುರ್ಥಾಧಿಪತಿಯು ಲಗ್ನದಿಂದ ಕೇಂದ್ರಸ್ಥಾನವನ್ನು ಹೊಂದಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ಮಂದಿರ ಲಾಭವಾಗುವದು ಮತ್ತು ಚತುರ್ಥಸ್ಥಾನಾಧಿಪತಿಯು ಪರಮೋಚ್ಚದಲ್ಲಿದ್ದು ವೈಶೇಷಿಕಾಂಶೆಯುಲ್ಲಿದ್ದರೆ ಮಂದಿರಲಾಭವಾಗುವದು ||೪೫೦||

ಶ್ಲೋಕ|| ಗೃಹಸ್ಥಾನಾಧಿಪಸ್ಥಾಂಶನಾಥ ಸಂಯುಕ್ತರಾಶಿಪಃ| ತದಂಶಾಧಿ ಪತೌಕೇಂದ್ರೇ ಗೃಹಲಾಭ ಮುದೀರಯೇತ್ ||೪೫೧||ತಾ|| ಗೃಹಸ್ಥಾನಾಧಿಪತಿ

ಇರುವ ನವಾಂಶಾಧಿಪತಿಯು ಯಾವ ಗ್ರಹದ ಸಂಯೋಗದಲ್ಲಿರುತ್ತಾನೋ, ಆ ಅಂಶಾಧಿಪತಿಯೂ ಸಹ ಕೇಂದ್ರದಲ್ಲಿದ್ದರೆ, ಗೃಹಲಾಭವಾಗುವುದು ॥೪೫೧॥

## ವಿಚಿತ್ರ ಗೃಹಲಾಭಯೋಗಃ

ಶ್ಲೋಕ॥ ಭಾಗ್ಯೇಶೇ ಕೇಂದ್ರಭಾವಸ್ಥೇ ಗೃಹೇಶೇ ಸ್ವೋಚ್ಚಮಿತ್ರಭೇ । ಗೃಹರಾಶಿಗತೇಖೇಟೇ ಸ್ವೋಚ್ಚೇ ಬಹುವಿಚಿತ್ರಕಂ ॥೪೫೨॥ತಾ॥ ಭಾಗ್ಯಾಧಿಪತಿ ಲಗ್ನಾದಿ ಕೇಂದ್ರದಲ್ಲಿದ್ದು ಗೃಹಾಧಿಪತಿ ಉಚ್ಚ ಮೂಲ ತ್ರಿಕೋಣಸ್ವಕ್ಷೇತ್ರ ಮಿತ್ರ ಕ್ಷೇತ್ರದಲ್ಲಿದ್ದು, ಗೃಹರಾಶಿಯು ಉಚ್ಚಭಾವವಾಗಿದ್ದರೆ, ಜಾತಕನಿಗೆ ವಿಚಿತ್ರವಾದ ಮನೆಯುಂಟಾಗುವುದು ॥೪೫೨॥

## ಹರ್ಮ್ಯಪ್ರಾಕಾರಮಂಡಿತ ಗೃಹಯೋಗಃ

ಶ್ಲೋಕ॥ ತೃತೀಯೇ ಸೌಮ್ಯಸಂಯುಕ್ತೇ ಗೇಹಾಧೀಶೇ ಬಲಾನ್ವಿತೇ । ತದೀಶೇ ಬಲಸಂಪೂರ್ಣೇ ಹರ್ಮ್ಯಪ್ರಾಕಾರ ಮಂಡಿತಂ ॥೪೫೩॥ತಾ॥ ತೃತೀಯದಲ್ಲಿ ಶುಭಗ್ರಹವಿದ್ದು ಚತುರ್ಥಾಧಿಪತಿ ಬಲಿಷ್ಠನಾಗಿದ್ದು ತೃತೀಯಾಧಿಪತಿ ಪೂರ್ಣ ಬಲಿಷ್ಠನಾಗಿದ್ದರೆ ಸೌಧಪ್ರಾಕಾರ ಪ್ರಕಾಶಮಾನವಾದ ಗೃಹವಾಗುವುದು ॥೪೫೩॥

ಶ್ಲೋಕ॥ ಸಿಂಹಾಸನಾಂಶಕೇವಾಪಿ ಗೇಹೇಶೇ ಗೋಪುರಾಂಶಕೇ। ಮೃದ್ವಂಶಾದಿಯುತೇವಾಪಿ ತದ್ಗೃಹಂ ಸೌಧಮಂಡಿತಂ ॥೪೫೪॥ತಾ॥ ಗೃಹಾಧಿಪ ಸಿಂಹಾಸನಾಂಶೆಯಲ್ಲಿದ್ದರೂ, ಗೋಪುರಾಂಶೆಯಲ್ಲಿದ್ದರೂ, ಮೃದ್ವಂಶಾದಿಗಳಲ್ಲಿದ್ದರೂ, ಸೌಧ ಪ್ರಾಕಾರದಿಂದೊಡಗೂಡಿದ ಗೃಹವುಳ್ಳವನಾಗುವನು ॥೪೫೪॥

ಶ್ಲೋಕ॥ ಪಾರಾವತಾಂಶಗೇ ಗೇಹ ನಾಥೇಗುರ್ವಿಂದು ವೀಕ್ಷಿತೇ । ಗೋಪುರಾದ್ಯಂಶಕೇವಾಪಿ ದೈವಿಕಂ ಗೃಹಮಾಧಿಶೇತ್ ॥೪೫೫॥ತಾ॥ ಗೃಹಾಧಿಪತಿ ಪಾರಾವತಾಂಶದಲ್ಲಿ ಗುರು ಚಂದ್ರರಿಂದ ನೋಡಲ್ಪಟ್ಟರೂ, ಗೋಪುರಾದ್ಯಂಶ ಗಳಲ್ಲಿದ್ದರೂ ದಿವ್ಯ ಭವನವುಳ್ಳವನಾಗುವನು ॥೪೫೫॥

ಶ್ಲೋಕ॥ ವಿಚಿತ್ರ ಸೌಧಪ್ರಾಕಾರ ಮಂಡಿತಂ ಗೇಹಮಾದಿಶೇತ್ । ಕರ್ಮೇಶ ಸಹಿತೇಗೇಹ ನಾಥೇಕೇಂದ್ರೇರ್ಕಜೇಪಿಚ ॥೪೫೬॥ತಾ॥ ಚತುರ್ಥಾಧಿಪತಿಯು ಕರ್ಮಾಧಿಪತಿಯು ಶನಿಸಹಿತ ಕೇಂದ್ರದಲ್ಲಿದ್ದರೆ ವಿಚಿತ್ರ ಪ್ರಾಕಾರ ಮಂಡಿತ ಗೃಹ ವುಳ್ಳವನಾಗುವನು ॥೪೫೬॥

## ಗೃಹನಾಶಯೋಗಃ

ಶ್ಲೋಕ॥ ಗೇಹಾಧಿಪೋ ನಾಶಗತೋ ಯದಿಸ್ಯಾ ತ್ಪಾಪೇಕ್ಷಿತಸ್ತದ್ಗೃಹ ನಾಶಮಾಹುಃ। ಗೇಹೇಶ ಸಂಯುಕ್ತ ನವಾಂಶನಾಥೋ ನಾಶಸ್ಥಿತಃಸ್ಯಾದ್ಯದಿ

ಗೇಹನಾಶಂ ॥೪೫೭॥ತಾ॥ ಗೃಹಸ್ಥಾನಾಧಿಪತಿ ನಾಶಸ್ಥಾನವನ್ನು ಹೊಂದಿ ಪಾಪಗ್ರಹ ವೀಕ್ಷಿತನಾದರೂ ಚತುರ್ಥಾಧಿಪತಿ ಯಾವ ನವಾಂಶೆಯಲ್ಲಿರುವನೋ ಆ ನವಾಂಶಾಧಿಪತಿಯು ನಾಶಸ್ಥಾನವನ್ನು ಪಡೆದರೂ ಜಾತಕನಿಗೆ ಗೃಹನಾಶಯೋಗವು ಹೇಳಲ್ಪಡತಕ್ಕದ್ದು ॥೪೫೭॥

## ಬಂಧುಪೂಜ್ಯ ಯೋಗಃ

ಶ್ಲೋಕ॥ ಬಂಧುಸ್ಥಾನೇಶ್ವರೇ ಸೌಮ್ಯೇ ಶುಭಗ್ರಹ ನಿರೀಕ್ಷಿತೇ। ಶಶಿಜೇ ಲಗ್ನ ಸಂಯುಕ್ತೇ ಬಂಧುಪೂಜ್ಯೋ ಭವೇನ್ನರಃ ॥೪೫೮॥ತಾ॥ ಚತುರ್ಥಾಧಿಪತಿಯು ಸೌಮ್ಯ ಗ್ರಹವಾಗಿ ಶುಭಗ್ರಹದಿಂದ ನೋಡಲ್ಪಟ್ಟ ಬುಧನು ಲಗ್ನದಲ್ಲಿದ್ದರೆ ಜಾತಕನು ಬಂಧುಗಳಲ್ಲಿ ಪೂಜ್ಯತೆ ಹೊಂದುವನು ॥೪೫೮॥ ಈ ವಿಷಯಕ್ಕೆ ॥ಶ್ಲೋಕ॥ ಬಂಧುಸ್ಥಾನೇಶ್ವರೇ ಸೌಮ್ಯೇ ಶುಭಗ್ರಹ ನಿರೀಕ್ಷಿತೇ । ತತ್ಕಾರಕೇ ಬಲಾಢ್ಯೇವಾ ಬಂಧುಪೂಜ್ಯೋ ಭವೇನ್ನರಃ ॥೪೫೯॥

## ಬಂಧೂಪಕಾರ ಯೋಗಃ

ಶ್ಲೋಕ॥ ಬಂಧೂಪಕರ್ತಾ ತನಾಥೇ ಕೇಂದ್ರಕೋಣಾಯಸಂಸ್ಥಿತೇ। ವೈಶೇಷಿ ಕಾಂಶ ಸಂಯುಕ್ತೇ ಪಾಪದೃಗ್ಯೋಗವರ್ಜಿತೇ ॥ತಾ॥ ಚತುರ್ಥಾಧಿಪತಿಯು ಲಗ್ನದಿಂದ ಕೇಂದ್ರ ತ್ರಿಕೋಣಗಳಲ್ಲಿದ್ದು ವೈಶೇಷಿಕಾಂಶೆಯನ್ನು ಪಡೆದು ಪಾಪಗ್ರಹ ಸಂಯೋಗವೂ ದೃಷ್ಟಿಯೂ ಇಲ್ಲದವನಾಗಿದ್ದರೆ ಜಾತಕನು ಬಂಧುಗಳಿಗೆ ಉಪಕಾರ ಮಾಡುವವನಾಗುವನು ॥೪೬೦॥

## ಬಂಧುಶ್ರೇಷ್ಠಯೋಗಾಃ

ಶ್ಲೋಕ॥ ಬಂಧುಸ್ಥಾನಗತೇಜೀವೇ ತನ್ನಾಥೇ ಗುರುಸಂಯುತೇ । ಗುರುದೃಷ್ಟಿ ಯುತೇವಾಪಿ ಬಂಧುಶ್ರೇಷ್ಠೋ ಭವೇನ್ನರಃ ॥೪೬೧॥ತಾ॥ ಬಂಧುಸ್ಥಾನದಲ್ಲಿ ಬೃಹಸ್ಪತಿಯಿದ್ದರೂ, ಬಂಧುಸ್ಥಾನಾಧಿಪತಿ ಗುರುಯುಕ್ತನಾದರೂ, ಅಥವಾ ಗುರುದೃಷ್ಟಿ ಯುಳ್ಳವನಾದರೂ, ಜಾತಕನು ಬಂಧುಶ್ರೇಷ್ಠನಾಗುವನು ॥೪೬೧॥

## ಬಂಧೂಪಕಾರಿ ಯೋಗಾಃ

ಶ್ಲೋಕ॥ ಬಂಧೂನಾಮುಪಕಾರೀ ಸ್ಯಾದ್ಬಂಧೌಗುರ್ವಿಂದು ಸೋಮಜಾಃ। ತೇಷಾಂ ಗ್ರಹೈರ್ಯುತೇ ದೃಷ್ಟೇ ಮೃದ್ವಂಶಾದಿ ಸಮನ್ವಿತೇ ॥೪೬೨॥ತಾ॥ ಬಂಧು ಸ್ಥಾನದಲ್ಲಿ ಗುರು, ಚಂದ್ರ, ಬುಧರಿದ್ದರೂ, ಇವರಿಂದ ನೋಡಲ್ಪಟ್ಟರೂ ಮೃದ್ವಂ-ಶಾದಿಗಳಲ್ಲಿದ್ದರೆ, ಬಂಧುಗಳಿಗೆ ಉಪಕಾರಿಯಾಗುವನು ॥೪೬೩॥

## ಬಂಧುಭಿಸ್ತ್ಯಕ್ತಯೋಗಃ

ಶ್ಲೋಕ॥ ಬಂಧುಭಿಸ್ತ್ಯಕ್ತಪುರುಷಃ ತದೀಶೇ ಪಾಪಸಂಯುತೇ ಕ್ರೂರ ಷಷ್ಠ್ಯಂಶಕೇವಾಪಿ ನೀಚಾರಾತಿ ಗೃಹೇಥವಾ ತಾ॥ ಬಂದುಸ್ಥಾನಾಧಿಪತಿಯು ಪಾಪ ಗ್ರಹಯುತನಾದರೂ, ಕ್ರೂರಷಷ್ಠ್ಯಂಶದಲ್ಲಿದ್ದರೂ, ನೀಚಶತ್ರುಕ್ಷೇತ್ರಗಳಲ್ಲಿದ್ದರೆ ಬಂಧು ಗಳಿಂದ ಬಿಡಲ್ಪಡುವನು ॥೪೬೪॥

## ಬಂಧುಕುತ್ಸಿತ ಯೋಗಃ

ಶ್ಲೋಕ॥ ಬಹುಪಾಪಸಮಾಯುಕ್ತೇ ಬಂಧುನಾಥೇ ತಥೈವಚ । ತತ್ಕಾರಕೇ ತಥೈವಾತ್ರ ಬಂಧೂನಾಂ ಕುತ್ಸಿತೋಭವೇತ್ ॥೪೬೫॥ತಾ॥ ಬಂಧುಸ್ಥಾನದಲ್ಲಿ ಬಹು ಪಾಪಗ್ರಹಗಳಿದ್ದರೂ, ಅಥವಾ ಬಂಧುಸ್ಥಾನಾಧಿಪತಿ ಪಾಪಗ್ರಹಯುತ ನಾದರೂ, ಬಂಧುಕಾರಕನು ಪಾಪಗ್ರಹಯುತನಾದರೂ, ಬಂಧುಗಳಲ್ಲಿ ಕುತ್ಸಿತನಾಗುವನು ॥೪೬೬॥

## ಮಾತೃದೀರ್ಘಾಯುರ್ಯೋಗಃ ॥ಪರಾಶರಃ॥

ಶ್ಲೋಕ॥ ಮಾತೃಸ್ಥಾನೇ ಶುಭಯುತೇತದೀಶೇಸ್ವೋಚ್ಚರಾಶಿಗೇ । ಕಾರಕೇ ಬಲಸಂಯುಕ್ತೇ ಮಾತೃದೀರ್ಘಾಯುರಾದೀಶೇತ್ ॥೪೬೭॥ತಾ॥ ಮಾತೃಸ್ಥಾನದಲ್ಲಿ ಶುಭಗ್ರಹವಿದ್ದು ಮಾತೃಸ್ಥಾನಾಧಿಪತಿ ಉಚ್ಚನಾಗಿ ಮಾತೃಕಾರಕನಾದ ಚಂದ್ರನು ಬಲಿಷ್ಠನಾಗಿದ್ದರೆ, ಮಾತೃದೀರ್ಘಾಯುರ್ಯೋಗ ॥೪೬೭॥

ಶ್ಲೋಕ॥ ಚಂದ್ರೇ ಬಲಿಷ್ಠೇಯದಿ ವಾಚ್ಯಗೌವಾ ಸೌಮ್ಯೇಕ್ಷಿತೇಶೋಭ ನಭಾಗ-ಯುಕ್ತೇ । ಚತುಷ್ಟಯೇ ಮಾತೃಗೃಹಾ ಚ್ಛುಭಾಢ್ಯೇ ಮಾತುಶ್ಚದೀರ್ಘಾಯುರುದಾ ಹರಂತಿ ॥೪೬೮॥

ಶ್ಲೋಕ॥ ಭಾಗ್ಯೇಶಸಂಯುಕ್ತ ನವಾಂಶನಾಥ ಯುಕ್ತಾಂಶಪೇಕೇಂದ್ರಗತೇ ಬಲಾಢ್ಯೇ । ತಸ್ಮಿನ್ ಶಶಾಂಕಾದ್ಯದಿ ಕೇಂದ್ರರಾಶೌ ಮಾತುಶ್ಚ ದೀರ್ಘಾಯುರುದಾ ಹರಂತಿ ॥೪೭೦॥ತಾ॥ ಮಾತೃಸ್ಥಾನಾಧಿಪತಿ ಇರುವ ನವಾಂಶ ರಾಶ್ಯಧಿಪತಿ ಲಗ್ನಕ್ಕೆ ಕೇಂದ್ರಸ್ಥಾಗಳಲ್ಲಿ ಬಲಿಷ್ಠನಾಗಿದ್ದು ಆ ರಾಶಿಯು ಚಂದ್ರನಿಗೆ ಕೇಂದ್ರರಾಶಿಯಾಗಿದ್ದರೆ ಮಾತೃ ದೀರ್ಘಾಯುರ್ಯೋಗವು ॥೪೭೦॥

## ಮಾತೃನಾಶಯೋಗಃ

ಶ್ಲೋಕ॥ ಪಾಪಾಂತರೇ ಪಾಪಯುತೇಶಶಾಂಕೇ ಪಾಪೇಕ್ಷಿತೇ ಮಾತೃವಿನಾಶ ಮಾಹುಃ । ಪಾಪೇಕ್ಷಿತೇಚೇ ದಚಿರೇಣನಾಶಂ ಪಾಪಗ್ರಹಾಣಾಂ ಭವನೇತಥೈವ ॥೪೭೧॥ತಾ॥ ಚಂದ್ರನು ಪಾಪಗ್ರಹಗಳ ಮಧ್ಯದಲ್ಲಿದ್ದರೂ ಪಾಪಗ್ರಹಯುಕ್ತನಾದರೂ ಪಾಪ ವೀಕ್ಷಿತನಾದರೆ ಮಾತೃನಾಶಯೋಗ ಮತ್ತು ಚಂದ್ರನು ಪಾಪಗ್ರಹರಾಶಿಯಲ್ಲಿದ್ದು

ಪಾಪವೀಕ್ಷಿತನಾದರೆ, ಜಾಗ್ರತೆಯಾಗಿ ಮಾತೃನಾಶವಾಗುವುದು ॥೪೭೨॥

ಶ್ಲೋಕ॥ ಪಾಪಾನ್ವಿತೇ ಮಾತೃವಿನಾಶ ಮೇತಿ ಶುಭೇಕ್ಷಿತೇಸ್ಯಾಚ್ಚಿರಕಾಲ ಮೃತ್ಯುಃ। ಉದಾಹರಂತ್ಯತ್ರ ಮಹಾನುಭಾವಾದೈವಜ್ಞವರ್ಯಾ ಇತಿ ನಿಶ್ಚಯೇನ ॥೪೭೩॥ ತಾ॥ ಚಂದ್ರನು ಪಾಪಗ್ರಹವೀಕ್ಷಿತನಾದರೆ, ಮಾತೃವಿನಾಶಯೋಗ ಮತ್ತು ಶುಭವೀಕ್ಷಿತನೂ ಆದರೆ ಬಹುಕಾಲ ಕಳೆದ ನಂತರ ಮಾತೃ ಮೃತ್ಯುಯೋಗವೆಂದು ಜೋತಿಷ್ಯವರ್ರ್ಯರು ನಿಶ್ಚಯಮಾಡಿರುವರು ॥೪೭೪॥

ಶ್ಲೋಕ॥ ಮಾತೃಸ್ಥಾನಾಧಿಪಸ್ಥಾಂಶ ರಾಶೀಶೋಯಂ ನವಾಂಶಕೇ । ತದಂಶಾಧಿಪತಿರ್ದುಸ್ಥೋ ಮಾತೃನಾಶನ ಮೇವಹಿ ॥೪೭೫॥ತಾ॥ ಮಾತೃಸ್ಥಾನಾಧಿಪತಿ ಇರುವ ನವಾಂಶ, ರಾಶ್ಯಧಿಪತಿ ಯಾವ ನವಾಂಶೆಯಲ್ಲಿರುನೋ ಆ ನವಾಂಶ, ರಾಶ್ಯಧಿಪತಿ ಲಗ್ನಕ್ಕೆ ಷಷ್ಠಾಷ್ಟಮವ್ಯಯ ಸ್ಥಾನಗಳಲ್ಲಿದ್ದರೆ, ಮಾತೃನಾಶ ಯೋಗ ॥೪೭೫॥

ಶ್ಲೋಕ॥ ಚಂದ್ರೇವಿಮೂಢೇ ನಿಗ್ರಹೇತಿ ನೀಚೇ ನೀಚಾಂಶಕೇಮಾತೃವಿನಾಶ ಮೇತಿ । ಪಾಪಾಂತರೇ ಪಾಪದೃಶಾಸಮೇತೇ ಶೋಕಂ ತಥೈವ ಪ್ರವದಂತಿ ಸಂತಃ ॥೪೭೬॥ತಾ॥ ಚಂದ್ರನು ಅಸ್ತನಾಗಿ ಪಾಪಗ್ರಹರಾಶಿಯಲ್ಲಿದ್ದು ಪರಮನೀಚ ದಲ್ಲಿದ್ದರೂ, ನೀಚನವಾಂಶೆಯಲ್ಲಿದ್ದರೂ, ಮಾತೃನಾಶಯೋಗ ಮತ್ತು ಪಾಪಗ್ರಹಗಳ ಮಧ್ಯದಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೆ, ಮಾತೃವಿನಾಶಯೋಗಃ ॥೪೭೬॥

ಶ್ಲೋಕ॥ ತತ್ಸ್ಥಾನ ಪಾದಾಕಥಯಂತ್ಯ ಶೇಷನಿಶಾಕರಾತ್ಪಾಪಯುತೇ ಸ್ಥಿತೇವಾ । ಭೃಗೋಸ್ತಥೈವಂ ಜನನೀ ವಿನಾಶಂ ವದಂತಿ ತತ್ಕಾಲವಿದಃ ಪುರಾಣಾಃ ॥೪೭೭॥ತಾ॥ ಮಾತೃಸ್ಥಾನಾಧಿಪತಿಯಾದರೂ, ಚಂದ್ರನಾದರೂ, ಶುಕ್ರನಾದರೂ, ಪಾಪಗ್ರಹ ಮಧ್ಯದಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೆ ಮಾತೃನಾಶಯೋಗ ॥೪೭೭॥

## ಮಾತೃಗಾಮಿ ಯೋಗಾಃ

ಶ್ಲೋಕ॥ ಕೇಂದ್ರಸ್ಥಿತೇ ರಾತ್ರಿಕರೇಭೃಗೌವಾ ಪಾಪಾನ್ವಿತೇ ಪಾಪನಿರೀಕ್ಷಿತೇವಾ। ಪಾಪೇಕ್ಷಿತೇವಾಪಯುತೇ ಶಶಾಂಕೇ ದಿವಾಕರೇವಾ ಯದಿಕೇಂದ್ರರಾಶೌ ॥ ಕ್ರೂರೇ ಸುಖೇವಾ ಯದಿಪಾಪದೃಷ್ಟೇ ಜಾತೋನರಸ್ಯಾದಿಹ ಮಾತೃಗಾಮಿ ॥೪೭೮॥ತಾ॥ ಚಂದ್ರನಾಗಲಿ, ಶುಕ್ರನಾಗಲಿ ಕೇಂದ್ರದಲ್ಲಿದ್ದು, ಪಾಪಗ್ರಹಯುಕ್ತನಾಗಿ ಪಾಪವೀಕ್ಷಿತ ನಾದರೂ, ಚಂದ್ರನಾಗಲಿ, ಸೂರ್ಯನಾಗಲಿ ಕೇಂದ್ರದಲ್ಲಿದ್ದು ಪಾಪಗ್ರಹಯುತನಾಗಿ

ಪಾಪವೀಕ್ಷಿತನಾದರೂ, ಕ್ರೂರಗ್ರಹವು ಮಾತೃಸ್ಥಾನದಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೂ, ಜಾತಕನು ಮಾತೃಗಾಮಿಯಾಗುವನು ॥೪೭೮॥ ಮಾತೃ ಎಂಬುವದಕ್ಕೆ ಅರ್ಥವಿವರಣೆ-ರಾಜಪತ್ನೀ ಗುರೋಃಪತ್ನಿ ಭ್ರಾತೃಪತ್ನೀ ತಥೈವಚ । ಪತ್ನೀ ಮಾತಾಸ್ವಮಾತಾಚಪಂಚೈತೇಮಾತರಸ್ಮೃತಾಃ ॥೪೭೯॥

## ಮಾತೃಸಮಾನ ಗಾಮಿಯೋಗಾಃ

ಶ್ಲೋಕ॥ ಪಾಪೇಕ್ಷಿತೇವಾ ಸುಖಭಾವನಾಥೇ ಪಾಪಾನ್ವಿತೇ ಸೌಮ್ಯ ದೃಶಾ ವಿಹೀನೇ । ದಾರೇಶ್ವರಾಲ್ಲಗ್ನಪತೌ ವಿಹೀನೇ ಜಾತೋನರೋಮಾತೃ ಸಮಾನ ಗಾಮೀ ॥೪೮೦॥ತಾ॥ ಸುಖಾಧಿಪತಿ ಪಾಪಗ್ರಹಯುತನಾಗಿ ಶುಭಗ್ರಹ ವೀಕ್ಷಣೆ ಯಿಲ್ಲದವನಾಗಿ ಸಪ್ತಮಾಧಿಪತಿಗಿಂತ ಲಗ್ನಾಧಿಪತಿ ಬಲಹೀನನಾದರೆ, ಜಾತಕನು ಮಾತೃಸಮಾನ ಸ್ತ್ರೀಯರಲ್ಲಿ ಭೋಗವುಳ್ಳವನಾಗುವನು ॥೪೮೦॥

## ಸಹೋದರೀ ಸಂಗಮಯೋಗಾಃ

ಶ್ಲೋಕ॥ ಸಹೋದರೀ ಸಂಗಮ ಮಾಹುರಸ್ಯದಾರೇಶ್ವರೇ ಶುಕ್ರಯುತೇ ಸುಖಸ್ಥೇ । ಪಾಪೇಕ್ಷಿತೇ ಪಾಪಯುತೇ ತಥೈವ ಕ್ರೂರಾದಿ ಷಷ್ಠ್ಯಂಶ ಸಮನ್ವಿತೇವಾ ॥೪೮೨॥ ಸುಖೇಶನೌ ಪಾಪನಿರೀಕ್ಷಿತೇವಾ ಪಾಪಾನ್ವಿತೇ ತಾದೃಶ ಪಾಪಯುಕ್ತಾಃ॥ ತಾ॥ ಸಪ್ತಮಾಧಿಪತಿಯೂ ಶುಕ್ರನೂ ಸಹ ಚತುರ್ಥದಲ್ಲಿದ್ದು, ಪಾಪಗ್ರಹಯುತ ನಾದರೂ, ಪಾಪಗ್ರಹದಿಂದ ನೋಡಲ್ಪಟ್ಟರೂ, ಕ್ರೂರಷಷ್ಠ್ಯಂಶೆಯಲ್ಲಿದ್ದರೂ, ಚತುರ್ಥದಲ್ಲಿ ಶನಿಯು ಪಾಪಗ್ರಹದಿಂದ ಯುಕ್ತನಾದರೂ ಪಾಪಗ್ರಹದಿಂದ ನೋಡಲ್ಪಟ್ಟರೂ, ಜಾತಕನು ಸಹೋದರಿಯಲ್ಲಿ ಸಂಗಮ ಮಾಡುವನು ॥೪೮೨॥

ಶ್ಲೋಕ॥ ಪಾಪಗ್ರಹಾಣಾಂಭವನೇ ಸುಖೇತು ಕ್ರೂರಾದಿಷಷ್ಠ್ಯಂಶಯುತೇ ತಥೈವ। ಷಷ್ಠೇಶಭೂನಂದನ ಸಂಯುತೇಬ್ಜೇ ಸುಖಸ್ಥಿತೇ ಪಾಪನಿರೀಕ್ಷಿತೇವಾ॥ತಾ॥ ಸುಖಸ್ಥಾನವು ಪಾಪಗ್ರಹದ ರಾಶಿಯಾಗಿ ಕ್ರೂರಷಷ್ಠ್ಯಂಶಯುಕ್ತವಾದರೆ, ಸಹೋದರೀ ಸಂಗಮ ಮಾಡುವನು ॥ ಷಷ್ಠಾಧಿಪತಿಯು ಕುಜನು ಚಂದ್ರಯುತನಾಗಿ ಚತುರ್ಥ ದಲ್ಲಿದ್ದು ಪಾಪವೀಕ್ಷಣೆಯಿದ್ದರೆ ಸಹೋದರೀ ಸಂಗಮ ಮಾಡುವನು ॥೪೮೩॥

## ಕಪಟಯೋಗಾಃ

ಶ್ಲೋಕ॥ ಹೃದಯೇ ಪಾಪಸಂಯುಕ್ತೇ ಪಾಪದೃಷ್ಟೇ ತದೀಶ್ವರೇ । ಪಾಪಾಂತರೇವಾ ಹೃದಯೇ ಹೃತ್ಕಾಪಟ್ಯಂ ವಿನಿರ್ದಿಶೇತ್ ॥೪೮೪॥ತಾ॥ ಚತುರ್ಥ ಸ್ಥಾನದಲ್ಲಿ ಪಾಪಗ್ರಹವಿದ್ದು ಆ ಅಧಿಪತಿಯು ಪಾಪಗ್ರಹದಿಂದ ನೋಡಲ್ಪಟ್ಟರೂ, ಪಾಪಗ್ರಹಗಳ ಮಧ್ಯದಲ್ಲಿದ್ದರೂ, ಜಾತಕನು ಕಪಟಿಯಾಗುವನು ॥೪೮೪॥

ಶ್ಲೋಕ।। ಶನ್ಯಾರರಾಹುಸಂಯುಕ್ತೇ ಹೃದಯೇ ಶುಭವರ್ಜಿತೇ । ಪಾಪೇ ಕರ್ಮೇಶ್ವರೇ ಸೌಖ್ಯೇ ಕಪಟೀ ಪಾಪವೀಕ್ಷಿತೇ ।।೪೮೫।।ತಾ।। ಚತುರ್ಥದಲ್ಲಿ ಶನಿ, ಕುಜ, ರಾಹುಗಳಿದ್ದು ಶುಭಗ್ರಹಗಳಿಲ್ಲದೆ ದಶಮಾಧಿಪತಿಯು ಪಾಪಗ್ರಹವಾಗಿ ಸುಖಸ್ಥಾನದಲ್ಲಿದ್ದು ಪಾಪವೀಕ್ಷಿತನಾದರೆ ಜಾತಕನು ಕಪಟಿಯಾಗುವನು.

ಶ್ಲೋಕ।। ತಥೈವ ತದ್ಭಾವನಾಥೇ ಮಂದಮಾಂದ್ಯಗು ಸಂಯುತೇ। ಪಾಪೈರ್ನಿರೀಕ್ಷಿತ ಯುತೇ ಹೃತ್ಕಾಪಟ್ಯಂ ವಿನಿರ್ದಿಶೇತ್ ।।೪೮೫।।ತಾ।। ಚತುರ್ಥಾಧಿ ಪತಿಯು ಶನಿ, ಮಾಂದಿ, ರಾಹು ಇವರುಗಳನ್ನು ಕೂಡಿ ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಜಾತಕನು ಕಪಟಿಯಾಗುವನು ।।೪೮೫।।

ಶ್ಲೋಕ।। ಸಪಾಪೇ ರಂಧ್ರಪೇ ಸೌಖ್ಯೇ ಕಪಟೀ ಪಾಪವೀಕ್ಷಿತೇ । ಶುಭದೃಷ್ಟಿ ವಿಹೀನೇಚ ಸೌಖ್ಯೇ ಪಾಪಸಮನ್ವಿತೇ ।।೪೮೬।।ತಾ।। ಅಷ್ಟಮಾಧಿಪತಿ ಪಾಪಗ್ರಹ-ಯುಕ್ತನಾಗಿ ಪಾಪವೀಕ್ಷಿತನಾಗಿ ಚತುರ್ಥದಲ್ಲಿದ್ದರೂ ಮತ್ತು ಚತುರ್ಥವು ಶುಭಗ್ರಹ ದೃಷ್ಟಿಯಿಲ್ಲದೆ ಪಾಪಗ್ರಹಯುಕ್ತವಾದರೆ, ಜಾತಕನು ಕಪಟಿಯಾಗುವನು ।।೪೮೬।।

## ಕ್ಷಣಮಾತ್ರ ಕಪಟ ಯೋಗಃ

ಶ್ಲೋಕ।। ಭಾನುನಾಕ್ಷೀಣ ಚಂದ್ರೇಶೆ ಸಹಿತೆ ಹೃದಯೇತಥಾ । ಕಪಟೀ ಕ್ಷಣಮಾತ್ರಂತು ನಿಷ್ಕಾಪಟ್ಯಂತ ದೂರ್ಧ್ವತಃ ।।೪೮೭।।ತಾ।। ಸೂರ್ಯನಾಗಲಿ, ಕ್ಷೀಣಚಂದ್ರನಾಗಲೀ, ಚತುರ್ಥದಲ್ಲಿದ್ದರೆ ಕ್ಷಣ ಮಾತ್ರ ಕಪಟಿಯಾಗಿ ಅನಂತರ ನಿಷ್ಕಪಟನಾಗುವನು ।।೪೮೭।।

## ನಿಷ್ಕಪಟ ಯೋಗಃ

ಶ್ಲೋಕ।। ಹೃದಯೇ ಶುಭಸಂಯುಕ್ತೇ ಸ್ವೋಚ್ಚಮಿತ್ರಗ್ರಹಾನ್ವಿತೇ । ಶುಭ ಗ್ರಹಾಣಾಂ ಕ್ಷೇತ್ರೇವಾ ನಿಷ್ಕಾಪಟ್ಯಂ ವಿನಿರ್ದಿಶೇತ್ ।।೪೮೮।।ತಾ।। ಚತುರ್ಥದಲ್ಲಿ ಶುಭಗ್ರಹವಿದ್ದರೂ ಉಚ್ಚಕ್ಷೇತ್ರ, ಮಿತ್ರಕ್ಷೇತ್ರ, ಸ್ವಕ್ಷೇತ್ರವಾದ ಗ್ರಹವಿದ್ದರೂ, ಅಥವಾ ಚತುರ್ಥವು ಶುಭಗ್ರಹಗಳ ಕ್ಷೇತ್ರವಾದರೂ ಜಾತಕನು ನಿಷ್ಕಪಟಿಯಾಗುವನು ।೪೮೮।।

ಶ್ಲೋಕ।। ವಿಶುದ್ಧಹೃದಯೋ ಜಾತೋ ಹೃದಯೇಶೇ ಬಲಾನ್ವಿತೇ ಗೋಪುರಾದ್ಯಂಶಕೇವಾಪಿ ಮಿತ್ರಸ್ವಾಂಶಗತೇಪಿವಾ ।।೪೮೯।।ತಾ।। ಚತುರ್ಥಾಧಿ ಪತಿಯು ಬಲಿಷ್ಠನಾಗಿ ಗೋಪುರಾದ್ಯಂಶಗಳಲ್ಲಾದರೂ, ಮಿಶ್ರಾಂಶ ಸ್ವನವಾಂಶ ದಲ್ಲಾದರೂ, ಇದ್ದರೆ ಜಾತಕನು ಶುದ್ಧವಾದ ಹೃದಯವುಳ್ಳವನಾಗುವನು ।।೪೮೯।।

ಶ್ಲೋಕ॥ ಲಗ್ನೇಶ್ವರೇ ಹೃದ್ಗತೇವಾ ಶುಭಯುಕ್ತೇ ಕ್ಷಿತೇಪಿವಾ । ಪಾರಾವತಾದಿ ಭಾಗಸ್ಥೇ ನಿಷ್ಕಾಪಟ್ಯಂ ವಿನಿರ್ದಿಶೇತ್ ॥೪೯೦॥ತಾ॥ ಲಗ್ನಾಧಿಪತಿಯು ಚತುರ್ಥ ಸ್ಥಾನದಲ್ಲಿದ್ದು ಶುಭಯುಕ್ತನಾದರೂ, ಶುಭವೀಕ್ಷಿತನಾದರೂ ಪಾರಾವತಾದಿ ಉತ್ತಮಾಂಶಗಳಲ್ಲಿದ್ದರೆ ಜಾತಕನು ನಿಷ್ಕಪಟಿಯಾಗುವನು ॥೪೯೦॥

ಶ್ಲೋಕ॥ ಲಗ್ನೇ ಗುರೌ ದಾನವ ಪೂಜಿತೇನಯುಕ್ತೇ ತದಾತಸ್ಯವಿಶುದ್ಧ ಚಿತ್ತಂ। ಸುಖೇ ಶುಭೇ ತದ್ಭವನಾಧಿನಾಥೇ ಶುಭಾನ್ವಿತೇ ತಸ್ಯವಿಶುದ್ಧಚಿತ್ತಂ ॥೪೯೧॥

ತಾ॥ ಜನ್ಮಲಗ್ನದಲ್ಲಿ ಗುರುವಿದ್ದು ಶುಕ್ರನ ಸಂಗಡ ಕೂಡಿದ್ದರೂ, ಚತುರ್ಥದಲ್ಲಿ ಶುಭಗ್ರಹವಿದ್ದು ಚತುರ್ಥಾಧಿಪತಿಯು ಶುಭಗ್ರಹಯುತನಾದರೆ ಜಾತಕನು ಶುದ್ಧಚಿತ್ತ ನಾಗುವನು ॥೪೯೧॥

## ಅಂತಃಕಪಟ ಯೋಗಃ

ಶ್ಲೋಕ॥ ರಾಹೌ ಸುಖೇ ಪಾಪ ದೃಶಾಸಮೇತೇ ಬಹಿರ್ವಿಶುದ್ಧಿಸ್ಥಿತಿರತ್ರಭಾತಿ । ಅಂತರ್ಗತಂ ತತ್ಕಪಟಂ ವದಂತಿ ಪಾಪಗ್ರಹೈಶ್ಚೇ ಚ್ಛುಭರಾಶಿಸಂಸ್ಥೈಃ । ॥೪೯೨॥

ತಾ॥ ಸುಖಸ್ಥಾನದಲ್ಲಿ ರಾಹುವಿದ್ದು ಪಾಪಗ್ರಹ ದೃಷ್ಟಿಯುಳ್ಳವನಾಗಿದ್ದರೆ ಅಂತರ್ಗತವಾದ ಕಪಟ ಉಳ್ಳವನಾಗಿಯೂ ಬಹಿಃಪ್ರಕಾಶ ಪಡಿಸದವನಾಗಿಯೂ ಆಗುವನು. ಮತ್ತು ಚತುರ್ಥರಾಶಿಯು ಶುಭರಾಶಿಯಾಗಿ ಅಲ್ಲಿ ಪಾಪಗ್ರಹಗಳಿದ್ದರೆ ಅಂತಃ ಕಪಟವುಳ್ಳವನಾಗುವನು ॥೪೯೨॥

## ಮಾತೃಸ್ನೇಹ ಯೋಗಃ

ಶ್ಲೋಕ॥ ಯದಾ ಲಗ್ನ ಸುಖೈಕೋವಾ ಮಿತ್ರಭೂತೌಪರಸ್ಪರಂ । ಶುಭೇ ಕ್ಷಿತೌ ಶುಭೈರ್ಯುಕ್ತೌ ಮಾತೃಸ್ನೇಹಂ ವಿನಿರ್ದಿಶೇತ್ ॥೪೯೩॥ ತಾ॥ ಲಗ್ನಕ್ಕೂ ಚತುರ್ಥಕ್ಕೂ ಅಧಿಪತಿಗಳಾದ ಗ್ರಹಗಳಿಗೆ ಏಕಾಧಿಪತ್ಯವಾಗಿ ಪರಸ್ಪರ ಮಿತ್ರತ್ವವಿದ್ದು ತತ್ಕಾಲ ಮೈತ್ರತ್ವವಿದ್ದರೂ, ಶುಭಗ್ರಹಯುಕ್ತರಾದರೂ, ಶುಭಗ್ರಹದಿಂದ ನೋಡಲ್ಪಟ್ಟರೂ ತಾಯಿಗೂ ಮಗನಿಗೂ ಪ್ರೀತಿಪೂರ್ವಕವಾದ ವಿಶ್ವಾಸವಿರುವುದು ॥೪೯೩॥

ಶ್ಲೋಕ॥ ಲಗ್ನೇಶ್ವರೇಣ ಸಂದೃಷ್ಟೇ ಮಾತೃನಾಥೇ ಚತುಷ್ಟಯೇ । ಶುಭಗ್ರಹಾನ್ವಿತೇದೃಷ್ಟೇ ಮಾತೃಸ್ನೇಹಂ ವಿನಿರ್ದಿಶೇತ್ ॥೪೯೪॥ತಾ॥ ಮಾತೃ ಸ್ಥಾನಾಧಿ ಪತಿಯು ಕೇಂದ್ರಗಳಲ್ಲಿದ್ದು ಲಗ್ನಾಧಿಪತಿಯಿಂದ ನೋಡಲ್ಪಟ್ಟರೂ ಶುಭಗ್ರಹದೊಂದಿಗೆ ಸೇರಿದರೂ ದೃಷ್ಟಿಯಿದ್ದರೂ ಮಾತೃಸ್ನೇಹವುಳ್ಳವನಾಗುವನು ॥೪೯೪॥

## ಮಾತೃಶತುತ್ವ ಯೋಗಃ

ಶ್ಲೋಕ।। ಬುಧಶ್ಚೇನ್ನಾತ್ರುನಾಥಸ್ಯಾ ಲಗ್ನಭಾವಾಧಿಪೋಯದಿ । ಪಾಪೇ ಕ್ಷಿತೇ ಪಾಪಯುತೇ ತಚ್ಛತೃತ್ವಂ ವಿನಿರ್ದಿಶೇತ್ ।।೪೯೫।।ತಾ।। ಬುಧನು ಲಗ್ನ ಚತುರ್ಥಕ್ಕೆರಡಕ್ಕೂ ಅಧಿಪತಿಯಾಗಿ ಪಾಪಗ್ರಹಯುತನಾದರೂ ದೃಷ್ಟನಾದರೂ ಮಾತೃವಿಗೂ ಪುತ್ರನಿಗೂ ಶತ್ರುತ್ವವುಂಟಾಗುವುದು ।।೪೯೫।।

## ವಾಹನ ಯೋಗಃ

ಶ್ಲೋಕ।। ವಾಹನೇಶೇ ಬಲಯುತೇ ವಾಹನೇ ಬಲಸಂಯುತೇ । ಶುಭ ಗ್ರಹೇಣ ಸಂದೃಷ್ಟೇ ವಾಹನಾದಿ ಫಲಂಭವೇತ್ ।।೪೯೬।।ತಾ।। ಚತುರ್ಥ ಸ್ಥಾನವು ಬಲಿಷ್ಠವಾಗಿದ್ದು ಚತುರ್ಥಾಧಿಪತಿ ಬಲಿಷ್ಠನಾಗಿ ಶುಭಗ್ರಹದಿಂದ ನೋಡಲ್ಪಟ್ಟರೆ, ವಾಹನವೇ ಮೊದಲಾದವುಗಳುಳ್ಳವನಾಗುನು ।।೪೯೬।।

## ಅಶ್ವವಾಹನ ಯೋಗಃ

ಶ್ಲೋಕ।। ಸುಗಂಧ ವಸ್ತ್ರಾಭರಣಾದಿಯಾನಂ ಶುಕ್ರಾದ್ವದೇದ್ವಾ ಸುಖ ರಾಶಿ ತೋವಾ । ಸೇಂದೌ ಚತುರ್ಥಾಧಿಪತೌ ವಿಲಗ್ನೇ ಲಗ್ನೇಶ್ವರೇಣಾಪಿಯುತೇಶ್ವ ಲಾಭಃ ।।೪೯೭।।ತಾ।। ಶುಕ್ರನಿಂದಲಾಗಲೀ, ಚತುರ್ಥರಾಶಿಸ್ಥವಾದ ಗ್ರಹದಿಂದಲಾಗಲೀ, ಸುಗಂಧ, ವಸ್ತ್ರ, ಆಭರಣ, ವಾಹನ ಈ ಮೊದಲಾದವುಗಳನ್ನು ತಿಳಿಯತಕ್ಕದ್ದು. ಚತುರ್ಥಾಧಿಪತಿ ಚಂದ್ರಯುಕ್ತನಾಗಿ ಲಗ್ನಾಧಿಪತಿಯೂ ಕೂಡಿದರೆ, ಜಾತಕನಿಗೆ ಅಶ್ವವಾಹನ ಯೋಗವೆಂದರಿಯುವುದು ।।೪೯೭।।

## ನರವಾಹನ ಯೋಗಃ

ಶ್ಲೋಕ।। ಶುಕ್ರೇಣಯುಕ್ತೇ ಯದಿವಾಹನೇಶೇ ದೇಹಾನ್ವಿತೇವಾ ನರವಾಹನಾದಿ। ದೇವೇಂದ್ರ ಪೂಜ್ಯೇನಯುತೇ ವಿಲಗ್ನೇ ವದಂತಿ ಸಂತಶ್ಚತುರಂತಯಾನಂ ।।೪೯೮।। ತಾ।। ಚತುರ್ಥಾಧಿಪತಿಯು ಶುಕ್ರಯುಕ್ತನಾಗಿ ಲಗ್ನದಲ್ಲಿದ್ದರೆ ನರವಾಹನ ಯೋಗವು, ಅಂದರೆ ಪಲ್ಲಕ್ಕಿ, ಮೇನ ಇವುಗಳಲ್ಲಿ ಕೂಡುವನೆಂದು ತಿಳಿಯತಕ್ಕದ್ದು, ಚತುರ್ಥಾಧಿಪತಿಯು ಲಗ್ನಾಧಿಪತಿಯನ್ನು ಕೂಡಿ ಲಗ್ನದಲ್ಲಿದ್ದರೆ ಚತುರಂಗಯಾನವು, ಅಂದರೆ ಚತುಶ್ಚಕ್ರಯುಕ್ತವಾದ ಗಾಡಿಯ ವಾಹನವೆಂದು ತಿಳಿಯಬೇಕು ।।೪೯೮।।

## ವಾಹನತ್ರಯ ಯೋಗಃ

ಶ್ಲೋಕ।। ಚಂದ್ರಾಮರೇಜ್ಯಾ ಮರಶತ್ರುಪೂಜ್ಯೈರುಕ್ತೇ ತನೌವಾಯದಿ ವಾಹನೇಶೇ। ಪ್ರೋಕ್ತಂತ್ರಯಂ ವಾಹನಮಾಹುರಾರ್ಯಾಃ ನೀಚಾರಿ ಮೂಢಾದಿ ವಿಹೀನ ಖೇಟೈಃ ।।೪೯೯।।ತಾ।। ಚತುರ್ಥಾಧಿಪತಿಯು ಚಂದ್ರ ಗುರುಶುಕ್ರಯುಕ್ತರಾಗಿ ಲಗ್ನದಲ್ಲಿದ್ದರೆ,

ನೀಚ ಮೂಢ ಶತ್ರುಕ್ಷೇತ್ರಗಳಲ್ಲದೆ ಹೋದರೆ ವಾಹನತ್ರಯವುಳ್ಳವನಾಗುವನು ॥೪೯೯॥

## ದೇಶಾಂತರ ವಾಹನಯೋಗಃ

ಶ್ಲೋಕ॥ ಭಾಗ್ಯಸ್ಥಿತೇ ವಾಹನರಾಶಿನಾಥೇ ಸ ಶುಕ್ರಜೀವೇ ಸುಖರಾಶಿಯುಕ್ತೇ। ಭಾಗ್ಯಾಧಿಪೇ ಕೋಣ ಚತುಷ್ಟಯೇವಾ ಹ್ಯನೇಕದೇಶಾಭರಣಾರ್ಥಯಾನಂ ॥೫೦೦॥ ತಾ॥ ಚತುರ್ಥಸ್ಥಾನಾಧಿಪತಿ ಭಾಗ್ಯಸ್ಥಾನದಲ್ಲಿದ್ದು ಶುಕ್ರಸಹಿತನಾಗಿ ಬೃಹಸ್ಪತಿಯು ಚತುರ್ಥದಲ್ಲಿದ್ದು ಭಾಗ್ಯಾಧಿಪತಿ ಕೇಂದ್ರದಲ್ಲಿದ್ದರೆ ಅನೇಕ ದೇಶದಲ್ಲಿ ಮಾಡಿದ ವಾಹನವುಳ್ಳವನಾಗುವನು ॥೫೦೦॥

## ಧನವಾಹನ ಯೋಗಃ

ಶ್ಲೋಕ॥ ಭಾಗ್ಯಾಧಿಪೇನಸಹಿತೇ ಸತಿವಾಹನೇಶೇ ಜೀವೇಕ್ಷಿತೇ ತನುಗತೇ ಬಲಪೂರ್ಣಯುಕ್ತೇ । ಸ್ವರ್ಕ್ಷೇ ಸ್ವತುಂಗಸಹಿತೇ ಯದಿವಾ ತ್ರಿಕೋಣೇ ಭೂನಾಥ ಮಾನಸದನಾದ್ಧನ ವಾಹನಾದಿ ॥೫೦೧॥ತಾ॥ ಚತುರ್ಥಾಧಿಪತಿ ನವಮಾಧಿಪತಿ ಸಹಿತವಾಗಿ ಲಗ್ನದಲ್ಲಿದ್ದು ಬೃಹಸ್ಪತಿ ದೃಷ್ಟಿಯುಳ್ಳವನಾಗಿ ಸ್ವಕ್ಷೇತ್ರ ಮೂಲತ್ರಿಕೋಣ ಉಚ್ಚಸ್ಥಾನಗಳಲ್ಲಿ ಎಲ್ಲಿದ್ದಾಗ್ಯೂ ರಾಜಸನ್ಮಾನದಿಂದ ಸಕಲಸಂಪತ್ತು ವಾಹನ ಮೊದಲಾದದ್ದು ಪ್ರಾಪ್ತಿಯಾಗುವುದು ॥೫೦೧॥

## ಸಿಂಹಾಸನ ಯೋಗಃ

ಶ್ಲೋಕ॥ ಭಾಗ್ಯೇಶ ಲಗ್ನೇಶ ಚತುರ್ಥನಾಥಾ ಮೂಢಾದಿ ಹೀನಾಶ್ಚಹಿ ಕರ್ಮ ಸಂಸ್ಥಾಃ । ಕರ್ಮೇಶ್ವರೇಣಾಪಿ ಯುತೇವಿಲಗ್ನೇ ಸಿಂಹಾಸನಪ್ರಾಪ್ತಿ ಮುದಾಹರಂತಿ ॥೫೦೨॥ತಾ॥ ಭಾಗ್ಯಾಧಿಪತಿ ಲಗ್ನಾಧಿಪತಿ ಚತುರ್ಥಾಧಿಪತಿ ಈ ಮೂರು ಗ್ರಹಗಳು ಅಸ್ತ ನೀಚಾದಿ ಹೀನ ಬಲಿಷ್ಠರಲ್ಲದೆ ಬಲಪೂರ್ಣವಾಗಿ ದಶಮದಲ್ಲಿದ್ದು ದಶಮಾಧಿಪತಿ ಲಗ್ನದಲ್ಲಿದ್ದರೆ ಜಾತಕನಿಗೆ ಸಿಂಹಾಸನಪ್ರಾಪ್ತಿಯಾಗುವುದು ॥೫೦೨॥

## ಭಾಗ್ಯವಾಹನ ಯೋಗಃ

ಶ್ಲೋಕ॥ ಭಾಗ್ಯಶ್ವರೇಣಾಪಿ ಯುತೇಸುಖೇಶೇ ಯತ್ರಸ್ಥಿತೇಪಶ್ಯತಿವಾಸುಖರ್ಕ್ಷಂ ವೈಶೇಷಿಕಾಂಶೇ ಯದಿವಾ ಬಲಾಢ್ಯೇ ಸರ್ವಾರ್ಥಭಾಗ್ಯಾನ್ವಿತ ವಾಹನಸ್ಯಾತ್ ॥೫೦೩॥

ತಾ॥ ಚತುರ್ಥಾಧಿಪತಿಯು ಭಾಗ್ಯಾಧಿಪತಿಯುತನಾಗಿ ಯಾವ ರಾಶಿಯಲ್ಲಿ ದ್ದರೂ ಸುಖಸ್ಥಾನವನ್ನು ನೋಡಿ ವಿಶೇಷಕಾಂಶೆಯಲ್ಲಿದ್ದು ಬಲಿಷ್ಠನಾಗಿದ್ದರೆ ಸರ್ವ ಸಿದ್ಧಿಯೂ ಧನವೂ ವಾಹನವೂ ಪ್ರಾಪ್ತಿಯಾಗುವುದು ॥೫೦೩॥

## ದುರ್ವಾಹನ ಯೋಗಃ

ಶ್ಲೋಕ॥ ದುಃಸ್ಥೇತಿಮೂಢೇ ಸತಿವಾಹನೇಶೇ ಭೌಗೇಶ್ವರೇಣಾಪಿಸಮಿಕ್ಷಿತೇವಾ। ದುರ್ವಾಹನಂ ಚಂಚಲವಾಹನಂವಾ ಸೌಖ್ಯಾಧಿಪೇ ಶೋಭನ ಖೇಚರೇಂದ್ರೇ ॥೫೦೫॥ ತಾ॥ ಚತುರ್ಥಾಧಿಪತಿ ದುಃಸ್ಥಾನದಲ್ಲಿದ್ದು ಅಸ್ತ ನೀಚರಾಶಿಗಳಲ್ಲದ ಭಾಗ್ಯಾಧಿಪತಿಯ ದೃಷ್ಟಿಯುಳ್ಳವನಾಗಿದ್ದರೆ, ಚತುರ್ಥಾಧಿಪತಿ ಶುಭಗ್ರಹವಾಗಿದ್ದರೆ, ಚಂಚಲವಾದ ವಾಹನವಾಗಲೀ, ದುರ್ವಾಹನವಾಗಲೀ, (ಮೋಟಾರ್, ಬೈಸಿಕಲ್) ಮೊದಲಾದ ಅಪಾಯಕರ ವಾಹನಗಳುಳ್ಳವನಾಗುವನು ॥೫೦೫॥

## ಸೇನಾಸಮೇತ ಯೋಗಃ

ಶ್ಲೋಕ॥ ಸೇನಾಬಹುತ್ವಂ ಸಮುಪೈತಿ ಜಾತೋ ಹ್ಯನೇಕದೇಶಾ ಭರಣಾರ್ಥ ಯಾನಂ । ಭಾಗ್ಯೇಶ್ವರಲ್ಲಾಭ ಗತೇ ವಿಲಗ್ನನಾಥೇ ಸುಖೇಶೇ ಯದಿಭಾಗ್ಯರಾಶೌ ॥೫೦೬॥ತಾ॥ ಸುಖಾಧಿಪತಿ ಭಾಗ್ಯರಾಶಿಯಲ್ಲಿದ್ದು ಭಾಗ್ಯಾಧಿಪತಿ ಇರುವ ರಾಶಿಗೆ ಲಾಭರಾಶಿಯಲ್ಲಿ ವಿಲಗ್ನಾಧಿಪತಿಯು ಇದ್ದ ಕಾಲದಲ್ಲಿ ಹುಟ್ಟಿದವನು ಅನೇಕ ದೇಶದಲ್ಲಿ ಹುಟ್ಟಿದ ಆಭರಣ, ದ್ರವ್ಯ ಮತ್ತು ಸೇನಾಸಮೇತನಾಗಿಯೇ ಹುಟ್ಟುವನು. ಇದೇ ಆಗರ್ಭಸೇನಾಸಮೇತ ಯೋಗವು ॥೫೦೬॥

## ಅಸಂಖ್ಯಾತ ವಾಹನಯೋಗಃ

ಶ್ಲೋಕ॥ ಸುಖಾಯಭಾಗ್ಯೇ ತನುನಾಯಕೇವಾ ಅಸಂಖ್ಯಯಾನಾದಿಯುತಃ ಪ್ರಸಿದ್ಧಃ। ಸುಖೇಶ್ವರೇ ಕೇಂದ್ರಗತೇ ತದೀಶೇ ಲಾಭಾನ್ವಿತೇವಾ ಬಹುವಾಹನಾಢ್ಯಃ ॥೫೦೭॥ತಾ॥ ಸುಖ, ಲಾಭ, ಭಾಗ್ಯ ಈ ಸ್ಥಾನಗಳಲ್ಲಿ ಲಗ್ನಾಧಿಪತಿಯಿದ್ದರೆ, ಅಸಂಖ್ಯಾತವಾದ ವಾಹನ ಯೋಗವು, ಸುಖಾಧಿಪತಿಯು ಕೇಂದ್ರದಲ್ಲಿದ್ದು ಈ ಕೇಂದ್ರಾಧಿಪತಿ ಲಾಭದಲ್ಲಿದ್ದರೆ ಬಹುವಾಹನಯೋಗ ॥೫೦೭॥

## ಶಸ್ತ್ರ ಅಶ್ವಕೋಶಾಧಿಪತಿಯೋಗಾಃ

ಶ್ಲೋಕ॥ ಕರ್ಮೇಶ್ವರೇ ಲಗ್ನಗತೇ ತದೀಶೇ ಕರ್ಮಸ್ಥಿತೇವಾ ಬಹುವಾಹನಾಢ್ಯಃ। ಸುಖೇಶ್ವರೇ ಕರ್ಮಯುತೇ ಶುಭಸ್ತೈಶಸ್ತ್ರಾಕೋಶಾಧಿಪತಿರ್ಭವಂತಿ ॥೫೦೮॥ತಾ॥ ದಶಮಾಧಿಪತಿ ಲಗ್ನದಲ್ಲೂ, ಲಗ್ನಾಧಿಪತಿ ಕರ್ಮಸ್ಥಾನದಲ್ಲೂ ಇದ್ದರೆ ಬಹುವಾಹನ ಉಳ್ಳವನು, ಮತ್ತು ಸುಖಾಧಿಪತಿಯು ದಶಮಸ್ಥಾನದಲ್ಲಿ ಮೂರು ಶುಭಗ್ರಹದೊಡನೆ ಕೂಡಿಕೊಂಡಿದ್ದರೆ ಶಸ್ತ್ರ ಅಶ್ವಕೋಶ ಇವುಗಳಿಗೆಲ್ಲಾ ಅಧಿಪತಿಯಾಗುವನು ॥೫೦೮॥

## ರಾಜ್ಯಾರ್ಥ ಸೌಖ್ಯಾಭರಣಯೋಗಃ

ಶ್ಲೋಕ॥ ಕ್ಷೇತ್ರೇಶ್ವರೇ ಲಾಭಗತೇ ಬಲಾಢ್ಯೇ ಬಂಧುಸ್ಥಿತೇವಾಕ್ಷಿತಿ ಸೂನುಯುಕ್ತೇ।

ಭೂಸೂನುರಾಶೌ ಯದಿವಾ ಸುಖೇಶೇ ರಾಜಾರ್ಥ ಸೌಖ್ಯಾ- ಭರಣಾರ್ಥಯಾನಂ ||೫೦೯||ತಾ|| ಚತುರ್ಥಾಧಿಪತಿಯು ಲಾಭದಲ್ಲಿ ಬಲಿಷ್ಠನಾಗಿ ದ್ದರೂ ಚತುರ್ಥದಲ್ಲಿ ಅಂಗಾರಕ ಯುಕ್ತನಾದರೂ ಅಥವಾ ಅಂಗಾರಕ ಕ್ಷೇತ್ರಗಳಲ್ಲಿ (ಮೇಷ, ವೃಶ್ಚಿಕ) ಸುಖಾಧಿಪತಿ ಇದ್ದರೂ ಜಾತಕನು ಶಸ್ತ್ರ, ಅಶ್ವ, ಅರ್ಥ, ಕೋಶಾಧಿಪತಿಯೂ ಆಗುವನು ||೫೦೯||

## ಗೃಹಯೋಗಃ ವಾಹನಾಧಿಪತಿಯೋಗಶ್ಚ

ಶ್ಲೋಕ|| ಅಷ್ಟಮಸ್ಥೇ ಗೃಹೇಶೇತು ಸ್ವಯಂ ಸಂಪಾದಯೇದ್ಗೃಹಂ । ಗೃಹೇಶೇ ಧನಭಾವಸ್ಥೇ ಕರ್ಮೇಶೇ ಧನಸಂಯುತೇ ವಾಹನೇಶೇಸ್ವೋಚ್ಚರಾಶೌ ವಾಹನಾಧಿಪತಿ-ರ್ಭವೇತ್ ||೫೧೦||ತಾ|| ಚತುರ್ಥಾಧಿಪತಿಯು ಅಷ್ಟಮದಲ್ಲಿದ್ದರೆ ಗೃಹವನ್ನು ಸ್ವಯಂ ಸಂಪಾದಿಸುತ್ತಾನೆ. ಚತುರ್ಥಾಧಿಪತಿ ದ್ವಿತೀಯದಲ್ಲಿದ್ದು ಕರ್ಮಾಧಿಪತಿಯು ಧನ ಭಾವದಲ್ಲಿದ್ದರೆ ಗೃಹಲಾಭಯೋಗವು ಮತ್ತು ವಾಹನಾಧಿಪತಿಯೂ ಆಗುವನು ||೫೧೦||

## ವಾಹನಾಧಿಪತಿ ಯೋಗಃ

ಶ್ಲೋಕ|| ವಾಹನಸ್ಥೇ ಲಾಭನಾಥೇ ಕರ್ಮನಾಥೇ ನವೀಕ್ಷಿತೇ । ಲಗ್ನನಾಥೇ ನವಾದೃಷ್ಟೇ ವಾಹನಾಧಿಪತಿರ್ಭವೇತ್ ||೫೧೧||ತಾ|| ಲಾಭಾಧಿಪತಿ ಚತುರ್ಥದಲ್ಲಿ ಇದ್ದು ದಶಮಾಧಿಪತಿಯಿಂದಾಗಲೀ ಲಗ್ನಾಧಿಪತಿಯಿಂದಾಗಲೀ ನೋಡಲ್ಪಟ್ಟರೆ ವಾಹನಾಧಿಪತಿಯಾಗುವನು ||೫೧೧||

ಶ್ಲೋಕ|| ಲಗ್ನವಾಹನ ಭಾಗ್ಯೇಶಃ ಅನ್ಯೋನ್ಯಂ ಕೇಂದ್ರಮಾಶ್ರಿತಾಃ । ಲಗ್ನಾಧಿಪೇ ಬಲಾಢ್ಯೇವಾ ವಾಹನಾಧಿಪತಿರ್ಭವೇತ್ ||೫೧೨||ತಾ|| ಲಗ್ನಾಧಿ ಪತಿಯು ಚತುರ್ಥಾಧಿಪತಿಯು ಭಾಗ್ಯಾಧಿತಿಗಳು ಅನ್ಯೋನ ಕೇಂದ್ರಗಳಲ್ಲಿದ್ದು ಲಗ್ನಾಧಿಪತಿ ಬಲಿಷ್ಠನಾಗಿದ್ದರೆ ವಾಹನಾಧಿಪತಿಯಾಗುವನು ||೫೧೨||

ಶ್ಲೋಕ|| ದನಾಧಿಪೇನ ಸಂಯುಕ್ತೇ ವ್ಯಯೇಶೇ ಸ್ವೋಚ್ಚರಾಶಿಗೇ । ಭಾಗ್ಯಾದಿವೇನ ಸಂದೃಷ್ಟೇ ವಾಹನಾಧಿಪ ಯುಕ್ತನಾಗಿ ವ್ಯಯಾಧಿಪತಿ ಉಚ್ಚನಾಗಿದ್ದು ಭಾಗ್ಯಾಧಿಪತಿಯಿಂದ ನೋಡಲ್ಪಟ್ಟರೆ ವಾಹನಾಧಿಪತಿಯಾಗುವನು ||೫೧೩||ಶ್ಲೋಕ|| ಗೋಪುರಾದ್ಯಂಶಕೇ ವಾಪಿ ವಾಹನೇಶೇ ಬಲಾನ್ವಿತೇ । ಲಾಭಕರ್ಮ ಶುಭಾದೀಶೇ ದೃಷ್ಟೇ ವಾಹನ ಸಂಯುತಃ ||೫೧೪||ತಾ|| ವಾಹನಾಧಿಪತಿಯು ಬಲಿಷ್ಠನಾಗಿ ಗೋಪುರಾಂಶೆಯಲ್ಲಿದ್ದು ಲಾಭಕರ್ಮ ಶುಭಾಧಿಪತಿಗಳಿಂದ ನೋಡಲ್ಪಟ್ಟರೆ ವಾಹನಯುಕ್ತನಾಗುವನು ||೫೧೪||

## ದೇಶಯುಕ್ತ ವಾಹನಯೋಗಃ

ಶ್ಲೋಕ।। ಪರಮೋಚ್ಚಾಂಶಕಾದಿಸ್ಥೇ ಭಾಗ್ಯೇಶೇ ಕೇಂದ್ರಮಾಶ್ರಿತೇ ಗೃಹದ್ವಯೇ ತುಂಗಯುತೇ ಬಹುಮಾನ ದೇಶಾಭಾಕ್ ।।೫೧೫।।ತಾ।। ಭಾಗ್ಯಾಧಿಪತಿ ಕೇಂದ್ರದಲ್ಲಿ ಪರಮೋಚ್ಚಾಂಶೆಯಲ್ಲಿದ್ದು ಉಳಿದವರಲ್ಲಿ ಯಾವುದಾದರೂ ಎರಡು ಗ್ರಹಗಳು ಉಚ್ಚರಾಗಿದ್ದರೆ ಬಹುವಾಹನ ಮತ್ತು ದೇಶವಂತನಾಗುವನು ।।೫೧೫।।

ಶ್ಲೋಕ।। ಕರ್ಮಾಧಿಪೇ ಚತುರ್ಥಸ್ಥೇ ಲಾಭನಾಥೇನ ಸಂಯುತೇ । ಭಾಗ್ಯನಾಥೇನವಾಯುಕ್ತೇ ಬಹುವಾಹೇನ ದೇಶಬಾಕ್ ।।೫೧೬।।ತಾ।। ಕರ್ಮಾಧಿ ಪತಿ ಚತುರ್ಥದಲ್ಲಿದ್ದು ಲಾಭಾಧಿಪತಿ ಅಥವಾ ಭಾಗ್ಯಾಧಿಪತಿಯುಕ್ತವಾದರೂ ಬಹುವಾಹನ ಮತ್ತು ದೇಶವಂತನಾಗುವನು ।।೫೧೬।।

ಶ್ಲೋಕ।। ಸಿಂಹಾಸನಾಂಶಕಯುತೌ ಕರ್ಮವಾಹನರಾಶಿಪೌ । ಲಗ್ನೇಶ್ವರೇಣ ಸಂದೃಷ್ಟೌ ಬಹುವಾಹನದೇಶಭಾಕ್ ।।೫೧೭।।ತಾ।। ಕರ್ಮ ಚತುರ್ಥಾದಿಪತಿಗಳು ಸಿಂಹಾಸನಾಂಶೆಯಲ್ಲಿದ್ದು ಲಗ್ನಾಧಿಪತಿಯಿಂದ ನೋಡಲ್ಪಟ್ಟರೆ ಬಹು ವಾಹನವೂ ಮತ್ತು ದೇಶವುಳ್ಳವನೂ ಆಗುವನು ।।೫೧೭।।

## ಬಲಾರ್ಥ ವಾಹನಯೋಗಃ

ಶ್ಲೋಕ।। ವಾಹನಾರ್ಥ ತೃತೀಯೇಷು ಭಾಗ್ಯಕರ್ಮ ಗೃಹಾಧಿಪಾಃ । ಸ್ಥಿತಾಬಲಾರ್ಥ ಯಾನಾದಿ ಸಂಯುತೋ ನಿಧನೇ ಶುಭೇ ।।೫೧೮।।ತಾ।। ಚತುರ್ಥ ದ್ವಿತೀಯ ತೃತೀಯ ಸ್ಥಾನಗಳಲ್ಲಿ ಭಾಗ್ಯ ಕರ್ಮ ಚತುರ್ಥಾಧಿಪತಿಗಳಿದ್ದು ಅಷ್ಟಮದಲ್ಲಿ ಶುಭಗ್ರಹವಿದ್ದರೆ ಬಲ ಅರ್ಥ ವಾಹನವುಳ್ಳವನಾಗುವನು ।।೫೧೮।।

## ವಾಹನ ತ್ರಯಯೋಗಃ

ಶ್ಲೋಕ।। ಸ್ವೋಚ್ಚೇಸುಖೇಶೇ ತನ್ನಾಥೇ ಕೇಂದ್ರಕೋಣ ಸಮನ್ವಿತೇ । ವಾಹನೇ ತುಂಗ ಸಂಯುಕ್ತೇ ವಾಹನತ್ರಯ ಯಾನಯುತ್ ।।೫೧೯।।ತಾ।। ಚತುರ್ಥಾಧಿಪತಿ ಉಚ್ಚನಾಗಿ ಆ ಉಚ್ಚಸ್ಥಾನಾಧಿಪತಿ ಕೇಂದ್ರತ್ರಿಕೋಣಗಳಲ್ಲಿದ್ದರೆ ವಾಹನಸ್ಥಾನದಲ್ಲಿ ಉಚ್ಚಗ್ರಹವಿದ್ದರೆ ವಾಹನತ್ರಯವುಳ್ಳವನಾಗುವನು ।।೫೧೯।।

## ವಾದ್ಯಘೋಷಯುಕ್ತ ವಾಹನಯೋಗಃ

ಶ್ಲೋಕ।। ಪರಮೋಚ್ಚಾಂಶಕೇ ಶುಕ್ರೇ ಕರ್ಮೇಶಗೃಹ ಸಂಯುತೇ । ಸಂಭವೇತ್ತಾದೃಶೇಯೋಗೇ ವಾದ್ಯಘೋಷಾದಿರ್ಭಿಯುತಃ ।।೫೨೦।।ತಾ।। ಪರ ಮೋಚ್ಚದಲ್ಲಿ ಶುಕ್ರನಿದ್ದು ಚತುರ್ಥದಲ್ಲಿ ಕರ್ಮಾಧಿಪತಿ ಇದ್ದರೆ ಜಾತಕನಿಗೆ ವಾದ್ಯ ಘೋಷಯುಕ್ತವಾಹನ ಪ್ರಾಪ್ತಿಯಾಗುವುದು ।।೫೨೦।।

ಶ್ಲೋಕ।। ಶಂಖವಾದಿತ್ರವಾದ್ಯೈಶ್ಚ ಸಂಯುತೋ ಭಾಗ್ಯಪೋಸುಖೇ । ಕೇಂದ್ರೇಶೇ ಕೋಣಗೇವಾಪಿ ಕರ್ಮೇಶೇ ವಾಹನಾನ್ವಿತೇ ।।೫೨೧।।ತಾ।। ಕೇಂದ್ರಾಧಿ ಪತಿ ತ್ರಿಕೋಣಗಳಲ್ಲಿದ್ದು ದಶಮಾಧಿಪತಿ ಚತುರ್ಥದಲ್ಲಿದ್ದರೂ,ಭಾಗ್ಯಾಧಿಪತಿಯು ಸುಖಸ್ಥಾನದಲ್ಲಿದ್ದರೂ ಶಂಖ ಮೃದಂಗಾದಿಯುತ ವಾಹನಯೋಗವು ।।೫೨೧।।

ಶ್ಲೋಕ।। ಶಶಿನಾ ಸಂಯುತೇಕರ್ಮನಾಥೇ ಕೇಂದ್ರಶುಭಾನ್ವಿತೇ । ಲಗ್ನೇಶೇ ವೃತ್ತಿಭಂಯಾತೇ ಪಣವಾದಿರವೈರ್ಯುತಃ ।।೫೨೨।। ತಾ।। ಕರ್ಮಾಧಿಪತಿಯು ಚಂದ್ರನ ಸಂಗಡ ಸೇರಿ ಕೇಂದ್ರದಲ್ಲಿ ಶುಭಗ್ರಹಯುಕ್ತನಾದರೆ ಲಗ್ನಾಧಿಪತಿಯು ಉಪಚಯಗಳಲ್ಲಿದ್ದರೆ (೩-೬-೧೦-೧೧) ಪಣವಾದಿವಾದ್ಯ ಘೋಷಯುಕ್ತನಾಗು ವನು ।।೫೨೨।।

## ಅಸಂಖ್ಯಾವಾದ್ಯಘೋಷ ಯೋಗಃ

ಶ್ಲೋಕ।। ಕಾಮಷಟ್‌ಸೋದರ ಭಾಗ್ಯಲಗ್ನ ವ್ಯಯೇಶ್ವರಾಃ । ಸುತಾಧಿಪೇನ ಸಹಿತಾಸ್ತು ಸಂಖ್ಯಂ ಘೋಷದೇಶಭಾಕ್ ।।೫೨೩।।ತಾ।। ಲಗ್ನದಿಂದ ೭-೬-೩-೯-೧-೧೨ನೇ ಅಧಿಪತಿಗಳು ಪಂಚಮಾಧಿಪತಿಯನ್ನು ಕೂಡಿದ್ದರೆ ಜಾತಕನು ಅಸಂಖ್ಯಾತವಾದ ವಾದ್ಯಘೋಷಗಳಿಂದ ಪ್ರಕಾಶಿಸುವನು ।।೫೨೩।।

## ಸುಖವಾದ್ಯಯೋಗಃ

ಶ್ಲೋಕ।। ಸುಖೇ ಶುಭಯುತೇ ನಾಥೇ ಕೇಂದ್ರಕೋಣಕೋಚ್ಚ ಸಂಯುತೇ ಭಾಗ್ಯೇಶೇ ಪರಮೋಚ್ಚಾಂಶೇ ಸುಖತುರ್ಯಾದಿ ಲಾಭಕೃತ್ ।।೫೨೪।।

ಶ್ಲೋಕ।। ಸುಖಸ್ಥಾನದಲ್ಲಿ ಶುಭಗ್ರಹವಿದ್ದು ಸುಖಾಧಿಪತಿ ಕೇಂದ್ರ ತ್ರಿಕೋಣ ಗಳಲ್ಲಿ ಉಚ್ಚನಾಗಿ ಭಾಗ್ಯಾಧಿಪತಿ ಪರಮೋಚ್ಚ ಧ್ರುವದಲ್ಲಿದ್ದರೆ ಕಿವಿಗಿಂಪಾಗಿಯೂ ಸುಖವಾಗಿಯೂ ಇರುವ ವಾದ್ಯದಿಂದ ಪ್ರಕಾಶಪಡಿಸುವನು ।।೫೨೪।।

ಶ್ಲೋಕ।। ಮಾನೇಶೇ ಸುಖರಾಶಿಸ್ಥೇ ಲಾಭೇಶೇ ಸುಖಸಂಯುತೇ । ಲಗ್ನೇ ಶುಭೇನ ಸಂದೃಷ್ಟೇ ಬಹುತೂರ್ಯಾದಿಲಾಭಕೃತ್ ।।೫೨೫।।ತಾ।। ದಶಮಾಧಿಪತಿ ಚತುರ್ಥದಲ್ಲಿದ್ದು ಲಾಭಾಧಿಪತಿ ಸುಖದಲ್ಲಿದ್ದು ಲಗ್ನವನ್ನು ಶುಭಗ್ರಹವು ನೋಡಿದರೆ ಬಹುತೂರ್ಯಾದಿ ವಾದ್ಯಘೋಷಗಳುಳ್ಳವನಾಗುವನು ।।೫೨೫।।

## ಮೃದಂಗ ಭೇರೀ ಯೋಗಃ

ಶ್ಲೋಕ।। ಮೃದಂಗ ಭೇರೀ ಶಂಖಾದ್ಯೈಃ ಕಹಳಾದಿರವೈರ್ಯುತಃ। ರಾಜಯೋಗ ಸಮುದ್ಭೂತೋ ಕರ್ಮಪೇವಾತಥಾನ್ವಿತೇ ।।೫೨೬।।ತಾ।। ರಾಜಯೋಗದಲ್ಲಿ ಹುಟ್ಟಿದ

ಜಾತಕನಿಗೆ ದಶಮಾಧಿಪತಿ ಚತುರ್ಥದಲ್ಲಿದ್ದರೆ, ಮೃದಂಗ, ಭೇರಿ, ಶಂಖ, ಮೊದಲಾದ ವಾದ್ಯಯುಕ್ತನಾಗುವನು ॥೫೨೬॥

ಇತಿ ಶ್ರೀ ಬೃಹಜ್ಜಾತಕೇ ಭಾವಫಲ
ಪ್ರಕರಣೆ ಬಂಧು ಭಾವ ಫಲಂ

## ಅಥ ಪಂಚಮಭಾವ ಫಲಂ

### ಅಥ ಪ್ರಾಣಿನಾಂ ಪೂರ್ವಜನ್ಮ ಶಾಪದ್ಯೋತಕಂ

ಪಾರ್ವತ್ಯುವಾಚ ॥ ದೇವ ದೇವ ಜಗನ್ನಾಥ ಶೂಲಪಾಣೇ ವೃಷಧ್ವಜ । ಕೇನಯೋಗೇನ ಮರ್ತ್ಯಾನಾಂ ಬಾಲಾಖ್ಯ ಶಿಶುನಾಶನಮ್ ॥೫೨೭॥ ತತ್ಸರ್ವಮತ್ರ ಯೋಗೇನ ಬ್ರೂಹಿಮೇಶಶಿಶೇಖರ । ಶಾಪಮೋಕ್ಷಂಚಕೃಪಯಾ ಪ್ರಾಣಿನಾಮಲ್ಪ ಮೇಧಸಾಮ್ ॥೫೨೮॥

ತಾ॥ ಪಾರ್ವತಿಯ ಪ್ರಶ್ನೆ-ದೇವರಿಗೆಲ್ಲಾ ದೇವನಾದಂಥಾ, ತ್ರಿಶೂಲಪಾಣಿ ಯಾದಂಥಾ, ವೃಷಭಧ್ವಜನಾದಂಥಾ, ಚಂದ್ರಶೇಖರನಾದಂಥಾ ಶಂಕರನೇ, ಅಲ್ಪ ಬುದ್ಧಿಯುಳ್ಳ ಮನುಷ್ಯರಿಗೆ ಯಾವ ಯಾವ ಕಾರಣದಿಂದ ಬಾಲ್ಯದಲ್ಲಿರುವಾಗಲೂ, ಶಿಶುತ್ವದಲ್ಲಿಯು ಮೃತಿ ಹೊಂದುತ್ತವೆ, ಮತ್ತು ಯಾವ ಶಾಪದಿಂದ ಈ ದೋಷ ಪ್ರಾಪ್ತಿಯಾಗುತ್ತದೆ, ಮತ್ತು ಈ ದೋಷ ಯಾವ ದೇವ ಆರಾಧನೆ ಮಾಡಿ ಶಾಂತಿ ಮಾಡಿದರೆ, ದೋಷಪರಿಹಾರವಾಗಿ ಸಂತಾನಾಭಿವೃದ್ಧಿಯಾಗುತ್ತದೆ. ಇವುಗಳೆಲ್ಲವನ್ನು ಸಮಗ್ರವಾಗಿ ಹೇಳು (ಎಂದು ಪಾರ್ವತಿಯು ಕೇಳಿಕೊಳ್ಳುತ್ತಾಳೆ) ॥೫೨೮॥

ಶಂಕರ ಉವಾಚ॥ ಸಾಧುಪೃಷ್ಟತ್ವಯಾದೇವಿ ಕಥಯಾಮಿ ಸವಿಸ್ತರಾತ್ । ಶೃಣುಷ್ವೇಕ ಮನಾಭೂತ್ವಾ ಬಲಾಬಲವಶಾದಪಿ ॥೫೨೯॥ ಜ್ಞೇಯಂ ಸುನಿಶ್ಚಿತಂ ಸರ್ವಂ ರಾಶಿಚಕ್ರೇ ವಿಶೇಷತಃ ಮೇಷಾದಿ ಮೀನ ಪರ್ಯಂತಂ ಮೂರ್ತ್ಯಾದಿ ದ್ವಾದಶ ಕ್ರಮಾತ್ ॥೫೩೦॥ ಭಾವಂಚ ಭಾವಂ ಜ್ಞಾತ್ವಾಫಲಂ ಬ್ರೂಯಾದಿಚಕ್ಷಣಃ । ತನುರ್ವಿತ್ತಂ ಬಂಧುಮಾತೃ ಪುತ್ರಶತ್ರು ಸ್ಮರೋಮೃತಿಃ ॥೫೩೧॥ ಪಿತೃಕರ್ಮಚ ಲಾಭಂಚ ವ್ಯಯಾಂತಾಭಾವ ಸಂಜ್ಞಕಾಃ ॥

ತಾ॥ ಈಶ್ವರನ ಉತ್ತರ-ಎಲೈ ದೇವಿಯೇ ನೀನು ಕೇಳಿದ ಪ್ರಶ್ನೆ ಸರ್ವೋತ್ಕೃಷ್ಟವಾದದ್ದು. ಒಂದೇ ಮನಸ್ಸಿನಿಂದ ಕೇಳು. ವಿಸ್ತಾರವಾಗಿ ಹೇಳುತ್ತೇನೆಂದು ನಿರೂಪಿಸಿದನು. ಅದೇನೆಂದರೆ-ಸೂರ್ಯಾದಿ ನವಗ್ರಹಗಳು ಯಾವ ಯಾವ ಸ್ಥಾನದಲ್ಲಿರುವವೋ ಅವನ್ನು ಸಿದ್ಧಾಂತ ಶಾಸ್ತ್ರದಿಂದ ದೃಕ್ಸಿದ್ಧವಾಗಿ ಸ್ಪಷ್ಟಮಾಡಿಕೊಂಡು

ಮೇಷಾದಿ ಆಯಾಯ ರಾಶಿಗಳಲ್ಲಿ ಸ್ಥಾಪಿಸಿ, ಲಗ್ನಾದಿಯಾಗಿ ತನ್ವಾದಿ ದ್ವಾದಶ ಭಾವಗಳ ಸ್ಫುಟಮಾಡಿಕೊಂಡು ಸ್ಥಾನಾದಿ ಬಲಗಳನ್ನು ತಿಳಿದುಕೊಂಡು ವಿಚಕ್ಷಣೆಯಿಂದ ೧-ತನುಭಾವ, ೨-ಧನಭಾವ, ೩-ಸಹಜಭಾವ, ೪-ಸುಖಭಾವ, ೫-ಪುತ್ರಭಾವ, ೬-ಶತ್ರುಭಾವ, ೭-ಕಳತ್ರಭಾವ, ೮-ಆಯುರ್ಭಾವ, ೯-ಪಿತೃಭಾವ, ೧೦-ಕರ್ಮಜೀವಭಾವ, ೧೧-ಲಾಭಭಾವ, ೧೨-ವ್ಯಯಭಾವ ಈ ಪ್ರಕಾರ ದ್ವಾದಶ ಭಾವಗಳನ್ನು ಕಲ್ಪಿಸಿಕೊಳ್ಳಬೇಕು. ಅನಂತರ ಫಲ ವಿಚಾರ ಮಾಡಬೇಕು ॥೫೩೧॥

## ಅನಪತ್ಯ ಯೋಗಃ

ಶ್ಲೋಕ॥ ಗುರುರ್ಲಗ್ನೇಶ ದಾರೇಶ ಪುತ್ರಸ್ಥಾನಾಧಿಪೇಷುಚ । ಸರ್ವೇಷು ಬಲಹೀನೇಷು ವಕ್ತವ್ಯಾತ್ವನಪತ್ಯತಾ ॥೫೩೨॥ತಾ॥ ಬೃಹಸ್ಪತಿಯು, ಲಗ್ನಾಧಿಪತಿಯು ಸಪ್ತಮಸ್ಥಾನಾಧಿಪತಿಯೂ, ಪುತ್ರಸ್ಥಾನಾಧಿಪತಿಯೂ ಸಹ ಬಲಹೀನರಾಗಿದ್ದರೆ, (ಜಾತಕನಿಗೆ) ಸಂತಾನವಿಲ್ಲವೆಂದು ಹೇಳಬೇಕು ॥೫೩೨॥

ಶ್ಲೋಕ॥ ರವ್ಯಾರರಾಹುಶನಯಃ ಪುತ್ರಸ್ಥಾಃ ಬಲಸಂಯುತಾಃ । ಕಾರಕಾ ದ್ಯಾತ್ಕ್ಷೀಣಬಲಾ ದನಪತ್ಯತ್ವ ಮಾದಿಶೇತ್ ॥೫೩೩॥ತಾ॥ ಪುತ್ರಸ್ಥಾನವಾದ ಪಂಚಮದಲ್ಲಿ ಸೂರ್ಯ, ಕುಜ, ರಾಹು, ಶನಿ, ಈನಾಲ್ಕು ಗ್ರಹಗಳಿದ್ದು ಬಲಿಷ್ಠರಾಗಿ ಪುತ್ರಕಾರಕನಾದ ಬೃಹಸ್ಪತಿಯು ಬಲಹೀನನಾದರೆ, ಸಂತಾನಾಭಾವ ಯೋಗವೆಂದು ಹೇಳತಕ್ಕದ್ದು ॥೫೩೩॥

## ಸರ್ಪಶಾಪ ಯೋಗಃ

ಶ್ಲೋಕ॥ ಪುತ್ರಸ್ಥಾನ ಗತೇರಾಹೌ ಕುಜೇನಾಪಿ ನಿರೀಕ್ಷಿತೇ । ಕುಜಕ್ಷೇತ್ರಗತೇ ವಾಪಿ ಸರ್ಪಶಾಪಾತ್ಸುತಕ್ಷಯಃ ॥೫೩೪॥ ಪಂಚಮದಲ್ಲಿ ರಾಹುವಿದ್ದು ಕುಜನಿಂದ ನೋಡಲ್ಪಟ್ಟರೂ, ಕುಜನ ಕ್ಷೇತ್ರಗಳಾದ ಮೇಷ ವೃಶ್ಚಿಕಗಳು ಪಂಚಮಭಾವಗಳಾಗಿ ರಾಹುವಿದ್ದರೂ, ಸರ್ಪಶಾಪದಿಂದ ಸುತಕ್ಷಯವಾಗುವದು ॥೫೩೪॥

ಶ್ಲೋಕ॥ ಪುತ್ರೇಶೇ ರಾಹುಸಂಯುಕ್ತೇ ಪುತ್ರಸ್ಥೇ ಭಾನುನಂದನೇ । ಚಂದ್ರ ದೃಷ್ಟೇ ಯುತೇವಾಪಿ ಸರ್ಪಶಾಪಾತ್ಸುತಕ್ಷಯಃ ॥೫೩೫॥ತಾ॥ ಪಂಚಮಾಧಿಪತಿ ಯುಕ್ತನಾಗಿ ಪುತ್ರಸ್ಥಾನದಲ್ಲಿ ಶನಿ ಇದ್ದು ಚಂದ್ರ ದೃಷ್ಟನಾದರೂ, ಚಂದ್ರಯುಕ್ತ ನಾದರೂ, ಸರ್ಪಶಾಪದಿಂದ ಸುತಕ್ಷಯವಾಗುವುದು ॥೫೩೫॥

ಶ್ಲೋಕ॥ ಕಾರಕೇ ರಾಹುಸಂಯುಕ್ತೇ ಪುತ್ರೇಶೇ ಬಲವರ್ಜಿತೇ । ವಿಲಗ್ನೇಶೇ ಭೌಮಯುತೇ ಸರ್ಪಶಾಪಾತ್ಸುತಕ್ಷಯಃ ॥೫೩೬॥ತಾ॥ ಪುತ್ರಕಾರಕ (ಗುರು) ರಾಹು

ಯುಕ್ತನಾಗಿ ಪಂಚಮಾಧಿಪತಿ ಬಲಹೀನನಾಗಿ ಲಗ್ನಾಧಿಪತಿ ಅಂಗಾರಕಯುಕ್ತನಾದರೆ ಸರ್ಪಶಾಪದಿಂದ ಸುತಕ್ಷಯವಾಗುವುದು ॥೫೩೬॥

ಶ್ಲೋಕ॥ ಕಾರಕೇ ಭೌಮಸಂಯುಕ್ತೇ ಲಗ್ನೇಚೇದ್ರಾಹುಸಂಯುತೇ । ವಿಲಗ್ನೇಶೇ ಭೌಮಯುತೇ ಸರ್ಪಶಾಪಾತ್ಸುತಕ್ಷಯಃ ॥೫೩೭॥

ತಾ॥ ಪುತ್ರಕಾರಕ (ಗುರು) ಅಂಗಾರಕಯುಕ್ತನಾಗಿ ಲಗ್ನದಲ್ಲಿ ರಾಹುವಿದ್ದು ಲಗ್ನಾಧಿಪತಿಯು ಅಂಗಾರಕಯುಕ್ತನಾದರೆ ಸರ್ಪಶಾಪದಿಂದ ಸುತಕ್ಷಯವಾಗವದು ॥೫೩೭॥

ಶ್ಲೋಕ॥ ಕಾರಕೇ ಭೌಮಸಂಯುಕ್ತೇ ಲಗ್ನೇಚೇದ್ರಾಹುಸಂಯುತೇ । ಪುತ್ರ ಸ್ಥಾನೇಶ್ವರೇ ದುಃಸ್ಥೇ ಸರ್ಪಶಾಪಾತ್ಸುತಕ್ಷಯಃ ॥೫೩೮॥ತಾ॥ ಗುರು ಅಂಗಾರಕ ಯುಕ್ತನಾಗಿ ಲಗ್ನದಲ್ಲಿ ರಾಹುವಿದ್ದು ಪಂಚಮಾಧಿಪತಿಯು ೬-೮-೧೨ನೇ ಸ್ಥಾನಗಳಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನಿಗೆ ಸರ್ಪಶಾಪದಿಂದ ಸುತಕ್ಷಯ ವಾಗುವದು ॥೫೩೮॥

ಶ್ಲೋಕ॥ ಭೌಮಾಂಶೇ ಭೌಮಸಂಯುಕ್ತೇ ಪುತ್ರೇಶೇ ಸೋಮನಂದನೇ । ರಾಹುಮಾಂದಿಯುತೇ ಲಗ್ನೇ ಸರ್ಪಶಾಪಾತ್ಸುತಕ್ಷಯಃ ॥೫೩೯॥ತಾ॥ ಪಂಚಮಾಧಿ ಪತಿಯು ಬುಧನಾಗಿ ಅಂಗಾರಕಾಂಶೆಯಲ್ಲಿದ್ದು ಅಂಗಾರಕಯುಕ್ತನಾಗಿ ಲಗ್ನದಲ್ಲಿ ರಾಹು ಮಾಂದಿಯುಕ್ತನಾದರೆ ಸರ್ಪಶಾಪದಿಂದ ಪುತ್ರನಾಶವಾಗುವದು ॥೫೩೯॥

ಶ್ಲೋಕ॥ ಪುತ್ರಸ್ಥಾನೇ ಕುಜಕ್ಷೇತ್ರ ಪುತ್ರೇರಾಹುಸಮನ್ವಿತೇ । ಸೌಮ್ಯದೃಷ್ಟೇ ಯುತೇವಾಪಿ ಸರ್ಪಶಾಪಾತ್ಸುತಕ್ಷಯಃ ॥೫೪೦॥ತಾ॥ ಪುತ್ರಸ್ಥಾನವಾದ ಪಂಚಮವು ಕುಜಕ್ಷೇತ್ರಗಳಾದ ಮೇಷ ವೃಶ್ಚಿಕಗಳಾಗಿ ಅಲ್ಲಿ ರಾಹುವಿದ್ದು ಬುಧ ಯುಕ್ತನಾದರೂ ಅಥವಾ ಬುಧದೃಷ್ಟನಾದರೂ ಸರ್ಪಶಾಪದಿಂದ ಸುತಕ್ಷಯವಾಗುವದು ॥೫೪೦॥

ಶ್ಲೋಕ॥ ಪುತ್ರಸ್ಥಾ ಭಾನುಮಂದಾರಾಃ ಸ್ವರ್ಭಾನು ಶಶಿಜೋಂಗಿರಾಃ । ನಿರ್ಬಲೌ ಪುತ್ರಲಗ್ನೇಶೌ ಸರ್ಪಶಾಪಾತ್ಸುತಕ್ಷಯಃ ॥೫೪೧॥ ಪಂಚಮದಲ್ಲಿ ರವಿ, ಶನಿ, ಕುಜರಿದ್ದು ರಾಹು ಬುಧ ಗುರುವಿದ್ದರೂ ಪಂಚಮಾಧಿಪತಿ ಲಗ್ನಾಧಿಪತಿಗಳು ಬಲಹೀನರಾಗಿದ್ದರೆ ಸರ್ಪಶಾಪದಿಂದ ಸುತಕ್ಷಯವಾಗುವದು ॥೫೪೧॥

ಶ್ಲೋಕ॥ ಲಗ್ನೇಶೇ ರಾಹು ಸಂಯುಕ್ತೇ ಪುತ್ರೇಶೇ ಭೌಮ ಸಂಯುತೇ । ಕಾರಕೇ ರಾಹು ಸಂದೃಷ್ಟೇ ಸರ್ಪಶಾಪತ್ಸುತಕ್ಷಯಃ ॥೫೪೨-೫೪೩॥ತಾ॥ ಲಗ್ನಾಧಿ ಪತಿ ರಾಹುಯುಕ್ತನಾಗಿ ಪಂಚಮಾಧಿಪತಿ ಅಂಗಾರಕನನ್ನು ಕೂಡಿ ಪುತ್ರಕಾರಕನಾದ ಬೃಹಸ್ಪತಿಯು ರಾಹುಯುಕ್ತನಾದರೂ ರಾಹುದೃಷ್ಟನಾದರೂ ಸರ್ಪಶಾಪದಿಂದ ಪುತ್ರನಾಶವಾಗುವದು ॥೫೪೨-೫೪೩॥

## ಸರ್ಪಶಾಪೇ ಶಾಂತಿವಿಧಿಃ

ಶ್ಲೋಕ॥ ತದ್ದೋಷ ಪರಿಹಾರಾರ್ಥಂ ನಾಗಪೂಜಾಂ ಸಮಾರಭೇತ್ ಸ್ವಗೃಹ್ಯೋಕ್ತ ವಿಧಾನೇನ ಪ್ರತಿಷ್ಠಾಂಕಾರಯೇತ್ಸುಧೀಃ ॥೫೪೪॥ ನಾಗಮೂರ್ತಿಂ ಸುವರ್ಣೇನ ಕೃತ್ವಾ ಪೂಜಾಂ ಸಮಾರಭೇತ್ । ಗೋಭೂತಿಲ ಹಿರಣ್ಯಾದಿದದ್ವಾದ್ವಿ- ತ್ತಾನು ಸಾರತಃ । ಏವಂಕೃತೇತು ನಾಗೇಂದ್ರಪ್ರಸಾದಾದ್ವರ್ಧತೇಕುಲಂ ॥೫೪೫॥

ತಾ॥ ಈ ಮೇಲೆ ಹೇಳಲ್ಪಟ್ಟಿರುವ ಸರ್ಪಶಾಪ ಪರಿಹಾರಕ್ಕೋಸ್ಕರ ಸ್ವಗೃಹ್ಯ-ಸೂತ್ರದಲ್ಲಿ ವಿಧಿಸಿರುವ ಪ್ರಕಾರ ಸುವರ್ಣದಿಂದ ನಾಗಮೂರ್ತಿಯನ್ನು ಮಾಡಿಸಿ ನಾಗಪ್ರತಿಷ್ಠೆಯನ್ನು ಮಾಡಿ ಪೂಜೆಮಾಡಿ, ಗೋವು, ಭೂಮಿ, ತಿಲ, ಸುವರ್ಣ, ಮೊದಲಾದ ದಾನಗಳನ್ನು ಮಾಡಿದರೆ ನಾಗರಾಜನು ಸುಪ್ರೀತನಾಗಿ, ಆತನ ಪ್ರಸಾದದಿಂದಲೇ ವಂಶಾಭಿವೃದ್ಧಿಯುಂಟಾಗುತ್ತದೆ ॥೫೪೪-೫೪೫॥

## ಪಿತೃಶಾಪಾತ್ಸುತಕ್ಷಯ ಯೋಗಃ

ಶ್ಲೋಕ॥ ಪುತ್ರಸ್ಥಾನಗತೇ ಭಾನೌ ನೀಚೇ ಮಂದಾಂಶಕಸ್ಥಿತೇ। ಪಾರ್ಶ್ವಯೋಃ ಕ್ರೂರಸಂಬಂಧೇ ಪಿತೃಶಾಪಾತ್ಸುತಕ್ಷಯಃ ॥೫೪೬॥ತಾ॥ ಪುತ್ರಸ್ಥಾನವಾದ ಪಂಚಮದಲ್ಲಿ ಸೂರ್ಯನು ನೀಚನಾಗಿದ್ದರೂ ಮಕರ ಕುಂಭಾಂಶಗಳಲ್ಲಿದ್ದರೂ ಪಾಪಾರ್ಗಲೆಯಲ್ಲಿದ್ದರೆ, ಪಿತೃಶಾಪದಿಂದ ಪುತ್ರಕ್ಷಯ ಯೋಗವೆಂದರಿಯುವುದು ॥೫೪೬॥

ಶ್ಲೋಕ॥ ಪುತ್ರಸ್ಥಾನಾಧಿಪೇ ಭಾನೌ ತ್ರಿಕೋಣೇ ಪಾಪಸಂಯುತೆ। ಕ್ರೂರಾಂತರೇ ಪಾಪದೃಷ್ಟೇ ಪಿತೃಶಾಪತ್ಸುತಕ್ಷಯಃ ॥೫೪೭॥ತಾ॥ ಪುತ್ರಸ್ಥಾನಾಧಿಪತಿಯೇ ಸೂರ್ಯನಾಗಿ ೫-೯ರಲ್ಲಿದ್ದು ಕ್ರೂರಗ್ರಹಗಳ ಮಧ್ಯದಲ್ಲಿದ್ದರೂ ಪಾಪಗ್ರಹಯುಕ್ತನಾದರೂ ಅಥವಾ ನೋಡಲ್ಪಟ್ಟರೂ ಪಿತೃಶಾಪದಿಂದ ಪುತ್ರನಾಶವಾಗುವದು ॥೫೪೭॥

ಶ್ಲೋಕ॥ ಭಾನುರಾಶಿಸ್ಥಿತೇ ಜೀವೇಪುತ್ರೇಶೇ ಭಾನುಸಂಯುತೇ । ಪುತ್ರೇ ಲಗ್ನೇ ಪಾಪಯುತೇ ಪಿತೃಶಾಪತ್ಸುತಕ್ಷಯಃ ॥೫೪೮॥ತಾ॥ ಸಿಂಹದಲ್ಲಿ ಬೃಹಸ್ಪತಿ ಯಿದ್ದರೆ ಪಂಚಮಾಧಿಪತಿ ಸೂರ್ಯಯುಕ್ತನಾಗಿದ್ದರೆ ಪುತ್ರಸ್ಥಾನದಲ್ಲು ಲಗ್ನದಲ್ಲು ಪಾಪಗ್ರಹವಿದ್ದರೆ, ಪಿತೃಶಾಪದಿಂದ ಪುತ್ರನಾಶವಾಗುವದು ॥೫೪೮॥

ಶ್ಲೋಕ॥ ಲಗ್ನೇಶೇ ದುರ್ಬಲೇ ಪುತ್ರೇಪುತ್ರೇಶೇ ಭಾನು ಸಂಯುಕ್ತೆ । ಪುತ್ರೇಲಗ್ನೇ ಪಾಪಯುತೇ ಪಿತೃಶಾಪಾತ್ಸುತಕ್ಷಯಃ ॥೫೪೯॥ತಾ॥ ಲಗ್ನಾಧಿಪತಿಯು ಬಲಹೀನನಾಗಿ ಪಂಚಮದಲ್ಲಿದ್ದ, ಪಂಚಮಾಧಿಪತಿ ಸೂರ್ಯಯುಕ್ತನಾಗಿದ್ದರೆ ಪಂಚಮ,

ಲಗ್ನಗಳಲ್ಲಿ ಪಾಪಗ್ರಹಗಳಿದ್ದರೆ, ಪಿತೃಶಾಪದಿಂದ ಸುತಕ್ಷಯವಾಗುವುದು ॥೫೪೯॥

ಶ್ಲೋಕ॥ ಪಿತೃಸ್ಥಾನಾಧಿಪೋಭೌಮಃ ಪುತ್ರೇಶೇನ ಸಮನ್ವಿತಃ । ಲಗ್ನೇ ಪುತ್ರೇಪಿತೃ ಸ್ಥಾನೇ ಶಾಪಾತ್ಸಂತತಿ ನಾಶನಂ ॥೫೫೦॥ತಾ॥ ಪಿತೃಸ್ಥಾನಾಧಿ ಪತಿಯು ಅಂಗಾರಕನಾಗಿ ಪಂಚಮಾಧಿಪತಿಯುಕ್ತನಾಗಿ ಲಗ್ನ, ಪಂಚಮ, ನವಮದಲ್ಲಿ (೧-೫-೯) ಪಾಪಗ್ರಹಗಳಿದ್ದರೆ, ಪಿತೃಶಾಪದಿಂದ ಪುತ್ರನಾಶವಾಗುವುದು ॥೫೫೦॥

ಶ್ಲೋಕ॥ ಪಿತೃಸ್ಥಾನಾಧಿಪೇ, ದುಃಸ್ತೇಕಾರಕೇ ಪಾಪರಾಶಿಗೇ । ಪುತ್ರೇ ಲಗೇ ಶ್ವರೇ ಪಾಪೇ ಪಿತೃಶಾಪಾತ್ಸುತಕ್ಷಯಃ ॥೫೫೧॥ತಾ॥ ಪಿತೃಸ್ಥಾನ(೯)ಕ್ಕಧಿಪತಿ ಯಾದ ಗ್ರಹವು ೯-೮-೧೨ರಲ್ಲಿದ್ದು, ಬೃಹಸ್ಪತಿಯು ಪಾಪಗ್ರಹಗಳ ರಾಶಿಯಲ್ಲಿದ್ದು, ಲಗ್ನಾಧಿಪತಿ ಪಂಚಮದಲ್ಲಿದ್ದು ಪಾಪಗ್ರಹವಿದ್ದರೆ ಪಿತೃಶಾಪದಿಂದ ಪುತ್ರನಾಶ ವಾಗುವುದು ॥೫೫೧॥

ಶ್ಲೋಕ॥ ಲಗ್ನಪಂಚಮಭಾವಸ್ಥಾಃ ಭಾನುಭೌಮಷನೈಶ್ಚರಾಃ । ರಂಧ್ರೇ ರಿಃಫೇ ರಾಹು ಜೀವೌ ಪಿತೃಶಾಪಾತ್ಸುತಕ್ಷಯಃ ॥೫೫೨॥ತಾ॥ ಲಗ್ನ, ಪಂಚಮ ಈ ಭಾವಗಳಲ್ಲಿ ಸೂರ್ಯ, ಕುಜ, ಶನಿಗಳಿದ್ದು ಅಷ್ಟಮದಲ್ಲಿ ರಾಹು, ದ್ವಾದಶದಲ್ಲಿ ಗುರುವಿದ್ದರೆ, ಪಿತೃಶಾಪದಿಂದ ಪುತ್ರನಾಶವಾಗುವುದು ॥೫೫೨॥

ಶ್ಲೋಕ॥ ಲಗ್ನಾದಷ್ಟಮಕ್ಕೆಭಾನೌ ಪುತ್ರಸ್ಥೇ ಭಾನುನಂದನೇ । ಪುತ್ರೇಶೇ ರಾಹು ಸಂಯುಕ್ತೆ ಲಗ್ನೇಪಾಪೇ ಸುತಕ್ಷಯಃ ॥೫೫೩॥ತಾ॥ ಅಷ್ಟಮದಲ್ಲಿ ಸೂರ್ಯ, ಪಂಚಮದಲ್ಲಿ ಶನಿಯು, ಪಂಚಮಾಧಿಪತಿ ರಾಹು ಸಂಯುಕ್ತನಾಗಿ ಲಗ್ನದಲ್ಲಿ ಪಾಪಗ್ರಹವಿದ್ದರೆ ಪುತ್ರನಾಶವಾಗುವುದು ॥೫೫೩॥

ಶ್ಲೋಕ॥ ವ್ಯಯೇಶೇ ಲಗ್ನಭಾವಸ್ಥೇ ರಂಧ್ರೇಶೇ ಪುತ್ರರಾಶಿಗೇ। ಪಿತೃ-ಸ್ಥಾನಾಧಿಪೇ ರಂಧ್ರೇ ಪಿತೃಶಾಪಾತ್ಸುತಕ್ಷಯಃ ॥೫೫೪॥ತಾ॥ ವ್ಯಯಾಧಿಪತಿ ಲಗ್ನದಲ್ಲೂ, ಅಷ್ಟಮಾಧಿಪತಿ ಪಂಚಮದಲ್ಲೂ, ನವಮಾಧಿಪತಿ ಅಷ್ಟಮದಲ್ಲಿಯೂ ಇದ್ದರೆ, ಪಿತೃಶಾಪದಿಂದ ಪುತ್ರನಾಶವಾಗುವುದು ॥೫೫೪॥

ಶ್ಲೋಕ॥ ರೋಗೇಶೇ ಪುತ್ರಭಾವಸ್ಥೇ ಪಿತೃಸ್ಥಾನಾಧಿಪೇತಥಾ । ಕಾರಕೇ ರಾಹು ಸಂಯುಕ್ತ ಪಿತೃಶಾಪಾತ್ಸುತಕ್ಷಯಃ ॥೫೫೫॥ತಾ॥ ಷಷ್ಠಾಧಿಪತಿ ಪಂಚಮದಲ್ಲಿದ್ದು ಮತ್ತು ನವಮಾಧಿಪತಿಯು ಪಂಚಮದಲ್ಲಿದ್ದು ಗುರು ರಾಹುಯುಕ್ತನಾದರೆ ಪಿತೃಶಾಪದಿಂದ ಪುತ್ರನಾಶವಾಗುವುದು ॥೫೫೫॥

## ಪಿತೃಶಾಪ ಶಾಂತಿ ವಿಧಿಃ

ಶ್ಲೋಕ॥ ತದ್ದೋಷ ಪರಿಹಾರಾರ್ಥಂ ಗಯಾಶ್ರಾದ್ಧಂಚ ಕಾರಯೇತ್ ।

ಬ್ರಾಹ್ಮಣಾರ್ ಭೋಜಯೇದತ್ರ ಅಯುತಂವಾ ಸಹಸ್ರಕಂ ।।ಕನ್ಯಾದಾನಂ ತತಃ ಕೃತ್ವಾಗಾಂಚ ದದ್ಯಾತ್ಸವತ್ಸಕಾಂ । ಏವಂ ಕೃತೇ ಪಿತು- ಶಾಪಾನ್ಮುಕ್ತೀತೇನಾತ್ರ ಸಂಶಯಃ ।।೫೫೭।। ವರ್ಧತೇಚ ಕುಲಂತಸ್ಯ ಪುತ್ರಪೌತ್ರಾದಿಭಿಸ್ಸದಾ । ದೃಷ್ಟಿಯೋಗವದ್ಯೈಃ ಸರ್ವಂಫಲಂಬ್ರೂಯಾದ್ವಿಚಕ್ಷಣಾಃ ।।೫೫೮।।

ತಾ।। ಪಿತೃಶಾಪನಿವಾರಣೆಗೋಸ್ಕರ ಗಯಾದಲ್ಲಿ ಶ್ರಾದ್ಧದಲ್ಲಿ ಮಾಡಿ ಅಲ್ಲಿ ೧೦ ಸಾವಿರ ಬ್ರಾಹ್ಮಣರಿಗಾಗಲಿ, ೧ ಸಾವಿರ ಬ್ರಾಹ್ಮಣರಿಗಾಗಲಿ ಭೋಜನ ಮಾಡಿಸಬೇಕು ಅಥವಾ ಕನ್ಯಾದಾನಮಾಡಿ ವತ್ಸಯುಕ್ತವಾದ ಗೋದಾನ ಮಾಡಬೇಕು. ಈ ಪ್ರಕಾರವಾಗಿ ಮಾಡಿದರೆ ಪಿತೃಶಾಪದಿಂದ ಮುಕ್ತನಾಗಿ ಪಿತೃ ಪ್ರಸಾದದಿಂದ ಪುತ್ರಪೌತ್ರಾದಿಗಳ ಅಭಿವೃದ್ಧಿಯುಂಟಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ ।।೫೫೬-೫೫೭-೫೫೮।।

ಸೂಚನೇಃ-ಈ ಪಿತೃಶಾಪ ವಿಷಯವು ಮೇಲೆ ಹೇಳಿರುವ ಗ್ರಹಗಳ ಯೋಗ ವೀಕ್ಷಣೆಯಿಂದಲೂ ಪಿತೃಶಾಪವುಂಟು ಅಥವಾ ಇಲ್ಲವೆಂದು ನಿರ್ಣಯಿಸಿಕೊಳ್ಳತಕ್ಕದ್ದು

## ಭ್ರಾತೃ ಶಾಪಾತ್ಸುತಕ್ಷಯ ಯೋಗಃ

ಶ್ಲೋಕ।। ಅತಃಪರಂ ಪ್ರವಕ್ಷ್ಯಾಮಿ ಭ್ರಾತಾದೌ ಶಾಪಕಾರಣಂ । ಪಾಪ ಯೋಗೇನ ಭಾವೇನ ಕಾರಕೇಣ ಬಲಾಬಲ ।।೫೫೯।।ತಾ।। ಅನಂತರದಲ್ಲಿ ಜಾತಕನಿಗೆ ಸಹೋದರರಿಂದುಂಟಾದ ಶಾಪಕಾರಣವನ್ನು ತೃತೀಯಾಧಿತಿ ತೃತೀಯ ಪಂಚಮಾಧಿಪತಿಗಳು ಪುತ್ರಕಾರಕದಿಂದ ಹೇಳುತ್ತೇನೆ ।।೫೫೯।।

ಶ್ಲೋಕ।। ಭ್ರಾತೃಸ್ಥಾನಾಧಿಪೇ ಪುತ್ರೇ ಕುಜರಾಹುಸಮನ್ವಿತೇ । ಪುತ್ರಲಗ್ನೇ ಶ್ವರೌ ರಂಧ್ರೇ ಭ್ರಾತೃಶಾಪಾತ್ಸುತಕ್ಷಯಃ ।।೫೬೦।।ತಾ।। ಪುತ್ರಸ್ಥಾನಾಧಿಪತಿಯು ಲಗ್ನಾಧಿಪತಿಯು ಸಹ ಅಷ್ಟಮದಲ್ಲಿದ್ದು ತೃತೀಯಾಧಿಪತಿಯು ಪಂಚಮದಲ್ಲಿ ಕುಜ ರಾಹುಯುಕ್ತನಾದರೆ ಭ್ರಾತೃಶಾಪದಿಂದ ಪುತ್ರನಾಶವಾಗುವದು ।।೫೬೦।।

ಶ್ಲೋಕ।। ಲಗ್ನೇಸುತೇ ಕುಜೇಮಂದೇಭ್ರಾತೃಪೇ ಭಾಗ್ಯರಾಶಿಗೇ । ಕಾರಕೇ ನಾಶರಾಶಿಸ್ಥೇ ಭ್ರಾತೃಶಾಪಾತ್ಸುತಕ್ಷಯಃ ।।೫೬೧।।ತಾ।। ಲಗ್ನದಲ್ಲಿ ಕುಜನು, ಪಂಚಮದಲ್ಲಿ ಶನಿಯು, ಭಾಗ್ಯರಾಶಿಯಲ್ಲಿ ತೃತೀಯಾಧಿಪತಿಯು ಇದ್ದು ಭ್ರಾತೃ ಕಾರಕನು ವ್ಯಯವನ್ನು ಪಡೆದರೆ ಭ್ರಾತೃಶಾಪದಿಂದ ಪುತ್ರನಾಶವಾಗುವದು ।।೫೬೧।।

ಶ್ಲೋಕ।। ಭ್ರಾತೃಸ್ಥಾನೇ ಸುತೌನೀಚೇ ಮಾಂದ ಪಂಚಮಗೋಯದಿ । ನಾಶಸ್ಥೌ ಸತುಪುಣ್ಯಾರೌ ಭ್ರಾತೃಶಾಪತ್ಸುತಕ್ಷಯಃ ।।೫೬೨।।ತಾ।। ವೃಶ್ಚಿಕ ಲಗ್ನ ಜಾತಕವಾಗಿ

ಮಕರದಲ್ಲಿ ಗುರು, ಮೀನದಲ್ಲಿ ಶನಿ, ಅಷ್ಟಮದಲ್ಲಿ ಭ್ಯಾಗ್ಯಾಧಿಪತಿಯು ಕುಜನೂ ಇದ್ದರೆ ಭ್ರಾತೃಶಾಪದಿಂದ ಪುತ್ರನಾಶವಾಗುವದು ।।೫೬೨।।

ಶ್ಲೋಕ।। ಮೂರ್ತಿಸ್ಥಾನಾಧಿಪೇ ರಿಃಫೇ ಭೌಮ ಪಂಚಮ ಗೋಯದಿ। ಪುತ್ರೇಶೇ ರಂಧ್ರಭಾವಸ್ಥೇ ಭ್ರಾತೃಶಾಪಾತ್ಸುತಕ್ಷಯಃ ।।೫೬೩-೫೬೪।।ತಾ।। ಲಗ್ನಾಧಿಪತಿ ೧೨ರಲ್ಲೂ ಕುಜನು ಪಂಚಮದಲ್ಲು ಪಂಪಮಾಧಿಪತಿಯು ಅಷ್ಟಮ ದಲ್ಲಿಯೂ ಇದ್ದರೆ ಭ್ರಾತೃಶಾಪದಿಂದ ಸುತಕ್ಷಯವಾಗುವದು ।।೫೬೩-೫೬೪।।

ಶ್ಲೋಕ।। ಪಾಪ ಮಧ್ಯಗತೇಲಗ್ನೇ ಸುತಭೇ ಪಾಪಮಧ್ಯಗೇ । ನಾಥೌಚ ಕಾರಕೇದುಃಸ್ತೇ ಭ್ಯಾತೃಶಾಪಾತ್ಸುತಕ್ಷಯಃ ।।೫೬೫।।ತಾ।। ಲಗ್ನವು ಪಾಪಗ್ರಹಗಳ ಮಧ್ಯದಲ್ಲಿರುವ ಪುತ್ರಭಾವವು ಪಾಪಗ್ರಹಗಳ ಮಧ್ಯದಲ್ಲಿರುವ ಕಾರಕನು ತೃತೀಯಾಧಿ ಪತಿಯು ೬-೮-೧೨ರಲ್ಲಿದ್ದರೆ ಭ್ರಾತೃಶಾಪದಿಂದ ಪುತ್ರನಾಶವಾಗುತ್ತದೆ।।೫೬೬।।

ಶ್ಲೋಕ।। ಕರ್ಮೇಶೇ ಭ್ರಾತೃಭಾವಸ್ಥೇ ಪಾಪಯುಕ್ತೆ ಸುತೇಶುಭೇ ।। ಪುತ್ರೇಚ ಕುಜಸಂಯುಕ್ತೇ ಭ್ರತೃಶಾಪತ್ಸುತಕ್ಷಯಃ ।।೫೬೭।।ತಾ।। ಕರ್ಮಾಧಿಪತಿ ತೃತೀಯದಲ್ಲಿ ಪಾಪಗ್ರಹಯುಕ್ತನಾಗಿದ್ದು ಪಂಚಮದಲ್ಲಿ ಶುಭಗ್ರಹವಿದ್ದು ಪಂಚಮದಲ್ಲಿ ಕುಜನಿದ್ದರೆ, ಭ್ರಾತೃಶಾಪದಿಂದ ಪುತ್ರನಾಶವಾಗುವದು ।।೫೬೭।।

ಶ್ಲೋಕ।। ಪುತ್ರಸ್ಥಾನೇ ಬುಧಕ್ಷೇತ್ರೇ ಶನಿರಾಹು ಸಮನ್ವಿತೇ। ರಿಃಫೇ ವಿದಾರೌ ಶಾಪಾತ್ವಾದ್ಭ್ರಾತೃ ಶಾಪಾತ್ಸುತಕ್ಷಯಃ ।।೫೬೮।।ತಾ।। ಪುತ್ರಸ್ಥಾನವು ಕನ್ಯಾ ಮಿಥುನದಲ್ಲಿ ಯಾವುದಾದರೂ ಆಗಿ ಶನಿ ರಾಹುಗಳಿದ್ದು ಕಾರರಕನು ದ್ವಾದಶ ದಲ್ಲಿದ್ದರೆ, ಪತ್ನೀ ಹೀನನಾಗಿ ಸುತಕ್ಷಯವಾಗುವದು ।।೫೬೮।।

ಶ್ಲೋಕ।। ಲಗ್ನೇಶೇ ಭ್ರಾತೃರಾಶಿಸ್ಥೇ ಭ್ರಾತೃಸ್ಥಾನಾಧಿಪೇಸುತೇ । ಲಗ್ನಭ್ರಾತೃಸುತೇ ಪಾಪೇ ಭ್ರಾತೃಶಾಪಾತ್ಸುತಕ್ಷಯಃ ।।೫೬೯।।ತಾ।। ಲಗ್ನಾಧಿಪತಿ ತೃತೀಯದಲ್ಲೂ, ತೃತೀಯಾಧಿಪತಿ ಪಂಚಮದಲ್ಲಿದ್ದು ಲಗ್ನ ತೃತೀಯ ಪಂಚಮಗಳಲ್ಲಿ ಪಾಪಗ್ರಹಗಳಿದ್ದರೆ, ಭ್ರಾತೃಶಾಪದಿಂದ ಪುತ್ರನಾಶವಾಗುವದು ।।೫೬೯।।

ಶ್ಲೋಕ।। ಭ್ರಾತ್ರೇಶೇ ನಾಸುರಾಶಿಸ್ತೇ ಕಾರಕೇತಥಾ । ರಾಹು ಮಾಂದಿಯುತೇ ದೃಷ್ಟೇ ಭ್ರಾತೃಶಾಪಾತ್ಸುತಕ್ಷಯಃ ।।೫೭೦।।ತಾ।। ತೃತೀಯಾಧಿಪತಿಯು ಅಷ್ಟಮ ದಲ್ಲಿದ್ದು ಪಂಚಮದಲ್ಲಿ ಕುಜನಿದ್ದು ರಾಹುಮಾಂದಿಯುಕ್ತನಾದರೂ ದೃಷ್ಟನಾದರೂ ಭ್ರಾತೃಶಾಪದಿಂದ ಸಂತಾನಕ್ಷಯವಾಗುವದು ।।೫೭೦।।

ಶ್ಲೋಕ।। ನಾಶಸ್ಥಾನಾಧಿಪೇ ಪುತ್ರೇ ಭ್ರಾತೃನಾಥೇನ ಸಂಯುತೇ । ರಂಧ್ರೇ ಅರಾರ್ಕಿ ಸಂಯುಕ್ತ ಭ್ರಾತೃಶಾಪಾತ್ಸುತಕ್ಷಯಃ ।।೫೭೧।।

ತಾ।। ಅಷ್ಟಮಾಧಿಪತಿಯು ಪಂಚಮದಲ್ಲಿದ್ದು ತೃತೀಯಾಧಿಪತಿಯೊಡನೆ ಕೂಡಿದ್ದು ಅಷ್ಟಮದಲ್ಲಿ ಕುಜನೂ ಶನಿಯೂ ಇದ್ದರೆ ಭ್ರಾತೃಶಾಪದಿಂದ ಪುತ್ರ ನಾಶವಾಗುವುದು ।।೫೭೧।।

## ಭ್ರಾತೃಶಾಪ ವಿಮೋಚನವಿಧಿಃ

ಶ್ಲೋಕ।। ಭ್ರಾತೃಶಾಪ ವಿಮೋಕ್ಷಾರ್ಥಂ ಶ್ರವಣಂ ವಿಷ್ಣುಕೀರ್ತನಂ । ಚಂದ್ರಾಯಣಂ ಚರೇತ್ಪಶ್ಚಾತ್ ಕಾವೇರ್ಯಾಂ ವಿಷ್ಣುಸನ್ನಿಧೌ ।।೫೭೨।। ಅಶ್ವತ್ಥ ಸ್ಥಾಪನಂ ಕಾರ್ಯಂ ದಶದೇನೂಃ ಪ್ರದಾಪಯೇತ್ । ಪ್ರಜಾಪತ್ಯಂಚರೇತ್ತತ್ರ ಭೂಮಿಂದ-ದ್ಯಾತ್ಫಲಾನ್ವಿತಾಮ್ । ಏವಂ ಯಃ ಕುರುತೇ ಭಕ್ತ್ಯಾ ಪುತ್ರವೃದ್ಧಿಃ ಪ್ರಜಾಯತೇ ।।೫೭೩।।

ತಾ।। ಭ್ರಾತೃಶಾಪ ಪರಿಹಾರಾರ್ಥವಾಗಿ ವಿಷ್ಣು ಸಂಬಂಧವಾದ ಪುರಾಣ ಶ್ರವಣ ಮಾಡಬೇಕು. ಚಂದ್ರಾಯಣ ವ್ರತವನ್ನು ಮಾಡಿ ಕಾವೇರಿ ತೀರದಲ್ಲಾಗಲಿ, ವಿಷ್ಣು ಸನ್ನಿಧಿಯಲ್ಲಾಗಲಿ ಅಶ್ವತ್ಥ ಸ್ಥಾಪನೆಯನ್ನು ಮಾಡಿ ವಿವಾಹೋಪನಯನವನ್ನು ಮಾಡಿರಬೇಕು. ಮತ್ತು ೧೦ ಗೋದಾನ ಮಾಡಬೇಕು. ಪ್ರಜಾಪತ್ಯವ್ರತವನ್ನು ಮಾಡಿ ಫಲ ವೃಕ್ಷಗಳಿರತಕ್ಕ ಭೂಮಿಯನ್ನು ದಾನಮಾಡಬೇಕು. ಈ ಪ್ರಕಾರವಾಗಿ ಶಾಂತಿಕರ್ಮವನ್ನಾಚರಿಸಿದ ಬಳಿಕ ಸಂತತಿ ಅಭಿವೃದ್ಧಿಯಾಗುತ್ತೆ ।।೫೭೨-೫೭೩।।

ವಿಶೇಷ ತಾತ್ಪರ್ಯ-ಭ್ರಾತೃಶಾಪವೆಂಬುದು ಬಹುಶಃ ಸುಲಭೋಪಾಯದಲ್ಲಿ ಪ್ರಾಪ್ತಿಯಾಗುತ್ತದೆ. ಅದು ಹೇಗೆಂದರೆ, ಅಣ್ಣತಮ್ಮಂದಿರಿಗ ದ್ರವ್ಯವನ್ನು ವಂಚಿಸಬೇಕಂದು ಯುಕ್ತಿಯುಕ್ತವಾಗಿ ಮೋಸ ಮಾಡುವುದರಿಂದ ಅವರುಗಳು ಸಂಕಟಪಟ್ಟು ಶಪಿಸುವುದರಿಂದ ಆ ಶಾಪವೇ ಭ್ರಾತೃಶಾಪವೆಂದು ತಿಳಿಯತಕ್ಕದ್ದು. ಈ ಕಾರಣದಿಂದ ಅಣ್ಣತಮ್ಮಂದಿರಿಗೆ ಪರಸ್ಪರ ವಂಚನೆ ಮಾಡಿ ಬಂದು ಈ ವಿಷಯವನ್ನು ಈ ಗ್ರಂಥ ಪಾಠಕರು ಅಂಥಾ ದುರ್ಬುದ್ಧಿಗಳಿಗೆ ಉಪದೇಶ ಮಾಡಿ ಸನ್ಮಾರ್ಗಕ್ಕೆ ತರಲು ಅನುಕೂಲವಾಗಿರುವುದು.

ಇತಿ ಭ್ರಾತೃಶಾಪ ವಿಚಾರಃ

## ಮಾತೃಶಾಪತ್ಸುತಕ್ಷಯ ಯೋಗಃ

ಶ್ಲೋಕ।। ಪುತ್ರಸ್ಥಾನಾಧಿಪೇಚಂದ್ರೇ ನೀಚೇವಾ ಪಾಪಮಧ್ಯಗೇ । ಹಿಬುಕೆ ಪಂಚಮೇಪಾಪೇ ಮಾತೃಶಾಪಾತ್ಸುತಕ್ಷಯಃ ।।೫೭೪।।ತಾ।। ಪುತ್ರಸ್ಥಾನಾಧಿಪತಿಯು ಚಂದ್ರನಾಗಿ ನೀಚನಾಗಿದ್ದರೂ ಅಥವಾ ಪಾಪಗ್ರಹಗಳ ಅರ್ಗಳೆಯಲ್ಲಿದ್ದರೂ ಚತುರ್ಥ

ದಲ್ಲಿ ಮತ್ತು ಪಂಚಮದಲ್ಲಿ ಪಾಪಗ್ರಹವಿದ್ದರೆ, ಮಾತೃಶಾಪದಿಂದ ಪುತ್ರನಾಶವಾಗು ವುದು ॥೫೭೪॥

ಶ್ಲೋಕ॥ ಲಾಭೇ ಮಂದಸಮಾಯೋಗೇ ಮಾತೃಸ್ಥಾನೇ ಶುಭೇತರೇ । ನೀಚೇ ಪಂಚಮಗೇ ಚಂದ್ರೆ. ಮಾತೃಶಾಪಾತ್ಸುತಕ್ಷಯಃ ॥೫೭೫॥ತಾ॥ ಪಂಚಮದಲ್ಲಿ ಚಂದ್ರನು ನೀಚರಾಶಿಯಲ್ಲಿದ್ದು ಏಕಾದಶದಲ್ಲಿ ಶನಿಯು ಮಾತೃಸ್ಥಾನದಲ್ಲಿ ಪಾಪ ಗ್ರಹಗಳಿದ್ದರೆ ಮಾತೃ ಶಾಪದಿಂದ ಪುತ್ರನಾಶವಾಗುವುದು ॥೫೭೫॥

ಶ್ಲೋಕ॥ ಪುತ್ರಸ್ಥಾನಾಧಿಪೇದುಃಸ್ಥೇ ಚಂದ್ರೇ ಪಾಪಾಂಶ ಸಂಯುತೇ । ಲಗ್ನೇ ಪುತ್ರೇ ಪಾಪಯುತೇ ಮಾತೃಶಾಪತ್ಸುತಕ್ಷಯಃ ॥೫೭೬॥ತಾ॥ ಪುತ್ರಸ್ಥಾನಾಧಿ ಪತಿಯು ೬-೮-೧೨ರಲ್ಲಿದ್ದು, ಚಂದ್ರನು ಪಾಪಗ್ರಹಗಳ ನವಾಂಶದಲ್ಲಿದ್ದು ಲಗ್ನದಲ್ಲಿಯೂ ಪಂಚಮದಲ್ಲಿಯೂ ಪಾಪಗ್ರಹವಿದ್ದರೆ, ಮಾತೃಶಾಪದಿಂದ ಪುತ್ರನಾಶ ವಾಗುವುದು ॥೫೭೬॥

ಶ್ಲೋಕ॥ ಪುತ್ರಸ್ಥಾನಾದಿಪೇದುಃಸ್ಥೇ ಲಗ್ನೇಶೇ ನೀಚರಾಶಿಗೇ । ಚಂದ್ರೇ ಪಾಪ ಸಮಾಯೋಗೇ ಮಾತೃಶಾಪಾತ್ಸುತಕ್ಷಯಃ ॥೫೭೭॥ ತಾ॥ ಪಂಚಮಾರಿಪತಿಯು ೬-೮-೧೨ರಲ್ಲಿದ್ದು ಲಗ್ನಾಧಿಪತಿ ನೀಚನಾಗಿ ಚಂದ್ರನು ಪಾಪಗ್ರಹಯುಕ್ತನಾದರೆ ಮಾತೃಶಾಪದಿಂದ ಪುತ್ರನಾಶವಾಗುವುದು ॥೫೭೭॥

ಶ್ಲೋಕ॥ ಪುತ್ರಸ್ಥಾನಧಿಪೇಚಂದ್ರೇ ಮಂದಾರಾಹ್ವಾರಸಂಯುತೇ । ಭಾಗ್ಯೇವಾ ಪುತ್ರರಾಶೌವಾ ಕಾರಕೇ ಪುತ್ರನಾಶನಮ್ ॥೫೭೮॥ತಾ॥ ಪುತ್ರಸ್ಥಾನಾಧಿಪತಿಯಾದ ಚಂದ್ರನು ಭಾಗ್ಯದಲ್ಲಾಗಲೀ, ಪಂಚಮದಲ್ಲಾಗಲೀ, ಶನಿ, ರಾಹು, ಅಂಗಾರಕ ಯುಕ್ತ ನಾಗಿ ಅಲ್ಲಿ ಗುರು ಸಹ ಇದ್ದರೆ ಮಾತೃಶಾಪದಿಂದ ಪುತ್ರನಾಶವಾಗುವುದು ॥೫೭೮॥

ಶ್ಲೋಕ॥ ಮಾತೃಸ್ಥಾನಾಧಿಪೇಭೌಮೇ ಶನಿ ರಾಹು ಸಮನ್ವಿತೇ । ಭಾನು ಚಂದ್ರ ಯುತೇಪುತ್ರೇ ಲಗ್ನೇ ಸಂತತಿನಾಶನಮ್ ॥೫೭೯॥ತಾ॥ ಮಾತೃಸ್ಥಾನಾಧಿ ಪತಿ ಕುಜನಾಗಿ, ಶನಿ ರಾಹುಯುಕ್ತನಾಗಿ, ಸೂರ್ಯನು ಲಗ್ನದಲ್ಲು, ಚಂದ್ರನು ಪಂಚಮದಲ್ಲು ಇದ್ದರೆ ಮಾತೃಶಾಪದಿಂದ ಪುತ್ರನಾಶವಾಗುವುದು ॥೫೭೯॥

ಶ್ಲೋಕ॥ ಲಗ್ನಾತ್ಮಜೇಶೌ ಶತುಸ್ಥೌ ರಂದ್ರೇ ಮಾತ್ರಾಧಿಪೇಸ್ಥಿತೇ । ಪಿತೃ ನಾಶಾಧಿಪೌ ಲಗ್ನೇ ಮಾತೃಶಾಪಾತ್ಸುತಕ್ಷಯಃ ॥೫೮೦॥ತಾ॥ ಲಗ್ನಪಂಚಮಾಧಿಪತಿ ಗಳು ಷಷ್ಠದಲ್ಲೂ, ಮಾತೃಸ್ಥಾನಾಧಿಪತಿ ಅಷ್ಟಮದಲ್ಲೂ, ಭಾಗ್ಯ ಅಷ್ಟಮಾಧಿಪತಿಗಳು ಲಗ್ನದಲ್ಲಿದ್ದರೆ ಮಾತೃಶಾಪದಿಂದ ಪುತ್ರನಾಶವಾಗುವುದು ॥೫೮೦॥

ಶ್ಲೋಕ।। ಷಷ್ಠಾಷ್ಟಮೇಶೌ ಲಗ್ನಸ್ಥೌ ವ್ಯಯೇ ಮಾತ್ರಾಧಿಪೇಸುತೇ । ಚಂದ್ರೇ ಜೀವೇಪಾಪಯುತೇ ಮಾತೃಶಾಪಾತ್ಸುತಕ್ಷಯಃ ।।೫೮೧।।ತಾ।। ಷಷ್ಠಾಷ್ಟಮಾಧಿಪತಿಗಳು ಲಗ್ನದಲ್ಲೂ, ಮಾತೃಸ್ಥಾನಾಧಿಪತಿ ವ್ಯಯದಲ್ಲೂ, ಪಂಚಮದಲ್ಲಿ ಚಂದ್ರನೂ, ಬೃಹಸ್ಪತಿಯೂ ಪಾಪಗ್ರಹಯುಕ್ತನಾದರೆ ಮಾತೃಶಾಪದಿಂದ ಪುತ್ರನಾಶವಾಗುವುದು ।।೫೮೧।।

ಶ್ಲೋಕ।। ಪಾಪಮಧ್ಯಗತೇಲಗ್ನೇ ಕ್ಷೀಣಚಂದ್ರೇಚಸಪ್ತಮೇ । ಮಾತೃಪುತ್ರೇ ರಾಹುಮಂದೌ ಮಾತೃಶಾಪಾತ್ಸುತಕ್ಷಯಃ ।।೫೮೨।।ತಾ।। ಪಾಪಗ್ರಹಗಳ ಮಧ್ಯದಲ್ಲಿ ಲಗ್ನವಿದ್ದು ಅಂದರೆ ದ್ವಿತೀಯ ದ್ವಾದಶದಲ್ಲಿ ಪಾಪಗ್ರಹವಿದ್ದು ಕ್ಷೀಣಚಂದ್ರನು ಸಪ್ತಮದಲ್ಲಿಯೂ ರಾಹು ಚತುರ್ಥದಲ್ಲಿಯೂ ಇದ್ದು ಪಂಚಮದಲ್ಲಿ ಮಾಂದಿಗ್ರಹ ವಿದ್ದರೆ ಮಾತೃಶಾಪದಿಂದ ಪುತ್ರನಾಶವಾಗುವುದು ।।೫೮೨।।

ಶ್ಲೋಕ।। ನಾಶಸ್ಥಾನಾಧಿಪೇ ಪುತ್ರೇ ಪುತ್ರೇಶೇ ನಾಶರಾಶಿಗೇ । ಚಂದ್ರ ಮಾತೃ ಪುತ್ರೌದುಃಖೇ ಮಾತೃಶಾಪಾತ್ಸುತಕ್ಷಯಃ ।।೫೮೩।।ತಾ।। ಅಷ್ಟಮಾಧಿಪತಿ ಪಂಚಮ ದಲ್ಲೂ, ಪಂಚಮಾಧಿಪತಿ ಅಷ್ಟಮದಲ್ಲೂ, ಚಂದ್ರನು ಮಾತೃಸ್ಥಾನಾಧಿಪತಿಯು ಷಷ್ಠ ದಲ್ಲೂ ಇದ್ದರೆ ಮಾತೃಶಾಪದಿಂದ ಪುತ್ರನಾಶವಾಗುವುದು ।।೫೮೩।।

ಶ್ಲೋಕ।। ಚಂದ್ರಕ್ಷೇತ್ರೇ ಯದಾಲಗ್ನೇ ಕುಜರಾಹು ಸಮನ್ವಿತೇ । ಚಂದ್ರಮಂದೌ ಪುತ್ರ ಸಂಸ್ಥೌ ಮಾತೃಶಾಪಾತ್ಸುತಕ್ಷಯಃ ।।೫೮೪।।ತಾ।। ಕರ್ಕರಾಶಿಯು ಜನ್ಮಲಗ್ನವಾಗಿ ಕುಜರಾಹುಗಳಿದ್ದು ಚಂದ್ರನು ಶನಿಯು ವೃಶ್ಚಿಕದಲ್ಲಿದ್ದರೆ ಮಾತೃಶಾಪ ದಿಂದ ಪುತ್ರನಾಶಯೋಗವು ।।೫೮೪।।

ಶ್ಲೋ।। ಲಗ್ನೇಪುತ್ರೆ ರಂಧ್ರರಿಃಫಾ ಅರರಾಹುರವಿಃಶನಿಃ । ಮಾತೃಲಗ್ನಾಧಿಪೌ ದುಃಸ್ಥೌ ಮಾತೃಶಾಪಾತ್ಸುರಕ್ಷಯಃ ।।೫೮೫।।ತಾ।।ಲಗ್ನದಲ್ಲಿ ಕುಜ, ಪಂಚಮದಲ್ಲಿ ರಾಹು, ಅಷ್ಟಮದಲ್ಲಿ ಸೂರ್ಯ, ದ್ವಾದಶದಲ್ಲಿ ಶನಿ ಇದ್ದು ಮಾತೃಸ್ಥಾನಾಧಿಪತಿಯು ಲಗ್ನಾಧಿಪತಿಯು ದುಃಸ್ಥಾನದಲ್ಲಿದ್ದರೆ ಮಾತೃಶಾಪದಿಂದ ಪುತ್ರನಾಶ ವಾಗುವುದು ।।೫೮೫।।

ಶ್ಲೋಕ।। ನಾಶಸ್ಥಾನಂಗತೇಜೀವೇ ಕುಜರಾಹು ಸಮನ್ವಿತೇ । ಪುತ್ರಸ್ಥಾನೇ ಮಂದಚಂದ್ರೌ ಮಾತೃಶಾಪಾತ್ಸುತಕ್ಷಯಃ ।।೫೮೬।।ತಾ।। ಅಷ್ಟಮದಲ್ಲಿ ಬೃಹಸ್ಪತಿಯು ಕುಜರಾಹು ಯುಕ್ತನಾಗಿದ್ದು ಪಂಚಮದಲ್ಲಿ ಶನಿಚಂದ್ರರಿದ್ದರೆ ಮಾತೃಶಾಪದಿಂದ ಪುತ್ರನಾಶಯೋಗ ।।೫೮೬।।

ಶ್ಲೋಕ।। ಗ್ರಹಯೋಗವಶಾದೇವಂ ಫಲಂಭ್ರೂಯಾದ್ವಿಚಕ್ಷಣಃ । ಶುಭೇ ಸೌಖ್ಯಂ ವಿನಿರ್ದಿಷ್ಟಂ ಪ್ರಕೀರ್ತಿತಂ ।।೫೮೭।।ತಾ।। ಈ ಮೇಲೆ ಹೇಳಲ್ಪಟ್ಟ

ಮಾತೃಶಾಪಯೋಗಗಳೆಲ್ಲವೂ ಶುಭಗ್ರಹಯೋಗ ವೀಕ್ಷಣೆಯುಳ್ಳದ್ದಾದರೆ ಸಂತಾನಾಭಿವೃದ್ಧಿಯಾಗುವುದು. ಶುಭಪಾಪಗ್ರಹಯೋಗ ವೀಕ್ಷಣೆಯುಳ್ಳದ್ದಾದರೆ ಮಿಶ್ರಫಲವಾಗುವುದು ॥೫೮೭॥

## ಮಾತೃಶಾಪ ಶಾಂತಿವಿಧಿಃ

ಶ್ಲೋಕ॥ ಸೇತುಸ್ನಾನಂ ಪ್ರಕುರ್ವೀತ ಗಾಯತ್ರೀ ಲಕ್ಷಸಂಜ್ಞಕೆ । ಗೃಹದಾನಂಚ ಕರ್ತವ್ಯಂ ರೌಪ್ರಯಾತ್ರೆ ಪಯಸ್ಥಿತಂ ॥೫೮೮॥ ಬ್ರಾಹ್ಮಣಾನ್ಭೋಜಯೇತ್ತದ್ವ ದಶ್ವತಸ್ಯ ಪ್ರದಕ್ಷಿಣಂ। ಕರ್ತವ್ಯಂ ಭಕ್ತಿಯುಕ್ತೇನ ಚಾಷ್ಟವಿಂಶತ್ಸಹಸ್ರಕಂ ॥೫೮೯॥ ಏವಂಕೃತೇ ಯದಾದೇವಿಶಾಪಾನ್ಮೋಕ್ಷೋ ಭವಿಷ್ಯತಿ । ಸತ್ಪುತ್ರಂಲಭತೇ ಪಶ್ಚಾದ್ವ್ರಸ್ಯಾತ್ತಸ್ಯ ಸಂತತೇ ॥೫೯೦॥

ತಾ॥ ಎಲೈ ಪಾರ್ವತಿಯೇ, ಮಾತೃಶಾಪ ವಿಮೋಚನೆಗೋಸ್ಕರ ಸೇತುಸ್ನಾನ ವನ್ನಾದರೂ, ಲಕ್ಷಗಾಯತ್ರೀ ಜಪವನ್ನಾದರೂ, ಗೃಹದಾನವನ್ನಾದರೂ ಮಾಡಿ ಅಥವಾ ೨೩ ಸಹಸ್ರ ಅಶ್ವತ್ಥ ಪ್ರದಕ್ಷಿಣೆ ಮಾಡಿದರೆ ಅನಂತರ ಸತ್ಪುತ್ರನುಂಟಾಗಿ ವಂಶಾಭಿವೃದ್ಧಿಯಾಗುವುದು ॥೫೮೮-೫೮೯-೬೯೦॥

## ಮಾತುಲ ಶಾಪವಶಾತ್ ಸುತಕ್ಷಯ ಯೋಗಃ

ಶ್ಲೋಕ॥ ಪುತ್ರಸ್ಥಾನೇ ಬುಧೇಜೀವೇ ಕುಜರಾಹು ಸಮನ್ವಿತೇ । ಲಗ್ನೇ ಮಂದ ಸಮಾಯೋಗೇ ಮಾತುಲಾತ್ಸುತನಾಶನಮ್ ॥೫೮೧॥ತಾ॥ ಪಂಚಮದಲ್ಲಿ ಗುರು ಬುಧರಿದ್ದು ಕುಜರಾಹು ಸಂಯೋಗವಾಗಿ ಲಗ್ನದಲ್ಲಿ ಶನಿಯಿದ್ದರೆ ಜಾತಕನಿಗೆ ಮಾತುಲ ಶಾಪದಿಂದ ಪುತ್ರನಾಶವಾಗುವದು ॥೫೯೧॥

ಶ್ಲೋಕ॥ ಲಗ್ನಪುತ್ರೇಶ್ವರೌ ಪುತ್ರೇ ಬುಧಭೌಮಸಮನ್ವಿತೇ । ಮಂದೇ ಮಾತುಲ ಶಾಪಾತ್ಪುತ್ರಸಂತತಿ ನಾಶನಂ ॥೫೬೨॥ತಾ॥ ಲಗ್ನಾಧಿಪತಿಯು ಪಂಚಮಾಧಿಪತಿಯು ಪಂಚಮದಲ್ಲಿದ್ದು ಬುಧಾಂಗಾರಕ ಶನಿಗಳನ್ನು ಕೂಡಿದ್ದರೆ ಮಾತುಲ ಶಾಪದಿಂದ ಪುತ್ರಸಂತತಿ ನಾಶವಾಗುವುದು ॥೫೯೨॥

ಶ್ಲೋಕ॥ ಲುಪ್ತೇಪುತ್ರಾಧಿಪೇ ಲಗ್ನೇಸಪ್ತಮೇ ಭಾನು ನಂದನೇ । ಲಗ್ನೇಶೇ ಬುಧಸಂಯುಕ್ತೇ ತಸ್ಯಸಂತತಿ ನಾಶನಂ ॥೫೯೩॥ತಾ॥ ಲಗ್ನದಲ್ಲಿ ಪಂಚಮಾಧಿ ಪತಿಯು ಅಸ್ತನಾಗಿ ಸಪ್ತಮದಲ್ಲಿ ಶನಿ, ಲಗ್ನಾಧಿಪತಿ ಬುಧಯುಕ್ತನಾದರೆ (ಜಾತಕನಿಗೆ) ಮಾತುಲ ಶಾಪದಿಂದ ಪುತ್ರಸಂತತಿ ನಾಶವಾಗುವುದು ॥೫೬೩॥

ಶ್ಲೋಕ॥ ಲಗ್ನಪುತ್ರೇಶ್ವರೌ ಲಗ್ನೇ ವ್ಯಯೇಶೇನ ಸಮನ್ವಿತೇ । ಶಶಿಸೌಮ್ಯ, ಕುಜೇಪುತ್ರೇ ತಸ್ಯಸಂತತಿ ನಾಶನಮ್ ॥೫೯೪॥ತಾ॥ ಷಷ್ಠಾಧಿಪತಿ ಲಗ್ನದಲ್ಲಿ

ವ್ಯಯಾಧಿಪತಿಯುಕ್ತನಾಗಿ ಪಂಚಮದಲ್ಲಿ ಶನಿ ಬುಧ ಕುಜರಿದ್ದರೆ, ಮಾತುಲ ಶಾಪದಿಂದ ಪುತ್ರಸಂತತಿ ನಾಶವಾಗುವುದು ॥೫೯೪॥

## ಮಾತುಲಶಾಪ ಪರಿಹಾರವಿಧಿಃ

ಶ್ಲೋಕ॥ ತದ್ದೋಷ ಪರಿಹಾರಾರ್ಥಂ ವಿಷ್ಣುಂಸ್ಥಾಪನಮುಚ್ಯತೇ। ವಾಪಿಕೂಪ-ತಟಾಕಾದಿ ಬಂಧನಂ ಸೇತುದರ್ಶನಂ ॥೫೯೫॥ ಪುತ್ರವೃದ್ಧಿರ್ಭವೇತ್ತಸ್ಯ ಸಂಪದ್ವೃದ್ಧಿಃ ಪ್ರಜಾಯತೇ । ಇದಂ ಯೋಗಗ್ರಹೇಣೈವ ಫಲಂಭ್ರೂಯಾ. ದ್ವಿಚಕ್ಷಣಃ ॥೫೯೬॥

ತಾ॥ ಮಾತುಲಶಾಪ ಪರಿಹಾರಾರ್ಥವಾಗಿ ವಿಷ್ಣು ಸ್ಥಾಪನೆ ಮಾಡಬೇಕು. ಬಾವಿ, ಕುಂಟೆ, ಕೊಳ, ಕೆರೆ ಮೊದಲಾದ ಜಲಾಧಾರಾಗಳನ್ನು ನಿರ್ಮಾಣ ಮಾಡಬೇಕು ಅಥವಾ ಸೇತುಸ್ತಾನ ಮಾಡಬೇಕು. ಅನಂತರ ಮಾತುಲಶಾಪ ಪರಿಹಾರವಾಗಿ ಸಂಪತ್ತೂ ಪುತ್ರವೃದ್ಧಿಯೂ ಉಂಟಾಗುತ್ತದೆಂದೂ ಪರಾಶರರು ಮೈತ್ರೇಯರಿಗೆ ಉಪದೇಶವನ್ನು ಮಾಡಿರುತ್ತಾರೆ ॥೫೯೫-೫೯೬॥

## ಬ್ರಾಹ್ಮಣಶಾಪವಶಾತ್ ಪುತ್ರನಾಶ ಯೋಗಃ

ಶ್ಲೋಕ॥ ಗುರುಕ್ಷೇತ್ರೇದಾರಾಹುಃ ಪುತ್ರೇಜೇವಾರಭಾನುಜಾಃ । ಧರ್ಮ ಸ್ಥಾನಾಧಿಪೇ ನಾಶೇ ಬ್ರಹಶಾಪಾತ್ಸುತಕ್ಷಯಃ ॥೫೯೭॥ತಾ॥ ಬೃಹಸ್ಪತಿ ಕ್ಷೇತ್ರಗಳಾದ ಧನುರ್ಮೀನಗಳಲ್ಲಿ ರಾಹುವಿದ್ದು ಪಂಚಮಭಾವದಲ್ಲಿ ಗುರು ಕುಜ ಶನಿಗಳಿದ್ದು ೯ನೆ ಅಧಿಪತಿ ೧೨ನೆ ಸ್ಥಾನದಲ್ಲಿದ್ದರೆ, ಬ್ರಹ್ಮಶಾಪದಿಂದ ಪುತ್ರಕ್ಷಯವಾಗುವುದು ॥೫೯೭॥

## ಬ್ರಹ್ಮಶಾಪ ನಿಮಿತ್ತಮ್

ಶ್ಲೋಕ॥ ವಿದ್ಯಾಗರ್ವೇಣಯೋ ಮರ್ತ್ಯೋ ಬ್ರಾಹ್ಮಣಾನವಮನ್ಯತೇ । ತದ್ದೋಷ ಬ್ರಹ್ಮಶಾಪತ್ವಾತ್ಸಂತತೇಸ್ತಸ್ಯನಾಶನಮ್ ॥೫೯೮॥ತಾ॥ ಯಾವನು ವಿದ್ಯಾವಂತನಾಗಿರುತ್ತೇನೆಂಬ ಅಹಂಕಾರದ ಮೇಲೆ ಬ್ರಾಹ್ಮಣನನ್ನು ಅವಮಾನ ಪಡಿಸುತ್ತಾನೋ ಆ ದೋಷವೇ ಬ್ರಹ್ಮಶಾಪರೂಪವಾಗಿ ಸಂಘಟಿಸುತ್ತದಾದ್ದರಿಂದ ಅವನಿಗೆ ಸಂತತಿ ನಾಶವಾಗುವುದು ॥೫೯೮॥

## ಬ್ರಾಹ್ಮಣ ಶಾಪಾತ್ಸುತನಾಶಯೋಗಃ

ಶ್ಲೋಕ॥ ಧರ್ಮೇಶೇ ಪುತ್ರಭಾವಸ್ಥೇ ಪುತ್ರೇಶೇನಾಶರಾಶಿಗೇ । ಜೇವಾರ ರಾಹು ಮೃತ್ಯುಸ್ಥೇ ಬ್ರಹ್ಮಶಾಪಾತ್ಸುತಕ್ಷಯಃ ॥೫೯೯॥ತಾ॥ ನವಮಾಧಿಪತಿ ಪಂಚಮದಲ್ಲಿದ್ದು, ಪಂಚಮಾಧಿಪತಿ ಅಷ್ಟಮದಲ್ಲಿದ್ದು ಗುರು ರಾಹು ಕುಜರು ಸೇರಿಸಿಕೊಂಡಿದ್ದರೆ, ಬ್ರಹ್ಮಶಾಪದಿಂದ ಪುತ್ರನಾಶವಾಗುವುದು ॥೫೯೯॥

ಶ್ಲೋಕ|| ಧರ್ಮಾಧಿಪೇ ನೀಚಗತೇ ವ್ಯಯೇಶೇ ಪುತ್ರರಾಶಿಗೇ । ರಾಹು ಯುಕ್ತೇಕ್ಷಿತೇ ವಾಪಿ ಬ್ರಹ್ಮಶಾಪಾತ್ಸುತಕ್ಷಯಃ ||೬೦೦||ತಾ|| ಭಾಗ್ಯಾಧಿಪತಿ ನೀಚನಾಗಿ ವ್ಯಯಾಧಿಪತಿ ಪಂಚಮದಲ್ಲಿದ್ದು ರಾಹುಯುಕ್ತನಾದರೂ ಅಥವಾ ರಾಹು ದೃಷ್ಟಿಯುಳ್ಳವನಾದರೂ ಬ್ರಹ್ಮಶಾಪದಿಂದ ಸಂತತಿ ನಾಶವಾಗುವುದು ||೬೦೦||

ಶ್ಲೋಕ|| ಜೀವೇ ನೀಚಗತೇ ರಾಹುರ್ಲಗ್ನೇವಾ ಪುತ್ರರಾಶಿಗೇ । ಪುತ್ರಸ್ಥಾನಾಧಿಪೇ ದುಃಸ್ಥೇ ಬ್ರಹ್ಮಶಾಪಾತ್ಸುತಕ್ಷಯ ||೬೦೧||ತಾ|| ಬೃಹಸ್ಪತಿಯು ನೀಚನಾಗಿದ್ದು ಲಗ್ನದಲ್ಲಿಯಾಗಲೀ ಪಂಚಮದಲ್ಲಿಯಾಗಲೀ ಇದ್ದು ಪಂಚಮಾಧಿಪತಿ ದುಃಸ್ಥಾನದಲ್ಲಿದ್ದರೆ, ಬ್ರಹ್ಮಶಾಪದಿಂದ ಪುತ್ರನಾಶವಾಗುವುದು ||೬೦೧||

ಶ್ಲೋಕ|| ಪುತ್ರಸ್ಥಾನಾಧಿಪೆಜೀವೇ ರಂಧ್ರೇ ಪಾಪಸಮನ್ವಿತೇ । ಪುತ್ರೇಶಾ ರವಿ ಚಂದ್ರೌವಾ ಬ್ರಹ್ಮಶಾಪಾತ್ಸುತಕ್ಷಯಃ ||೬೦೧||ತಾ||ಪುತ್ರಸ್ಥಾನಾಧಿಪತಿ ಬೃಹಸ್ಪತಿಯಾಗಿ ಅಷ್ಟಮದಲ್ಲಿಪಾಪಗ್ರಹಗಳ ಯುಕ್ತನಾಗಿದ್ದರೆ, ಪುತ್ರಸ್ಥಾನಾಧಿಪತಿಯು ಚಂದ್ರನಾದರೂ ರವಿಯಾದರೂ, ಆದರೆ, ಬ್ರಹ್ಮಶಾಪದಿಂದ ಪುತ್ರನಾಶ ವಾಗುವುದು ||೬೦೨||

ಶ್ಲೋಕ|| ಮಂದಾಂಶೇ ಮಂದಸಂಯುಕ್ತೇ ಜೀವೇಭೌಮ ಸಮನ್ವಿತೇ । ಪುತ್ರೇಶೇ ವ್ಯಯರಾಶಿಸ್ಥೇ ಬ್ರಹ್ಮಶಾಪಾತ್ಸುತಕ್ಷಯಃ ||೬೦೩||ತಾ|| ಶನಿಯು ಸ್ವನವಾಂಶೆಯಲ್ಲಿದ್ದು ಗುರುವು ಅಂಗಾರಕಯುಕ್ತನಾಗಿ ಪಂಚಮಾಧಿಪತಿಯು ದ್ವಾದಶದಲ್ಲಿದ್ದರೆ ದ್ವಿಜಶಾಪದಿಂದ ಸುತನಾಶವು ||೬೦೩||

ಶ್ಲೋಕ|| ಲಗ್ನೇ ಗುರುಯುತೇ ಮಂದೇ ಭಾಗ್ಯೇ ರಾಹು ಸಮನ್ವಿತೇ । ವ್ಯಯೇ ಗುರುಸಮಾಯೋಗೇ ಬ್ರಹ್ಮಶಾಪಾತ್ಸುತಕ್ಷಯಃ ||೬೦೪||

ತಾ|| ಲಗ್ನದಲ್ಲಿ ಗುರುವು ಶನಿಯುಕ್ತನಾಗಿ ಭಾಗ್ಯಸ್ಥಾನದಲ್ಲಿ ರಾಹುವಿದ್ದರೂ ಅಥವಾ ದ್ವಾದಶದಲ್ಲಿ ಗುರುವು ಇದ್ದರೂ ಈ ಎರಡು ಯೋಗಗಳಿದ್ದರೂ ದ್ವಿಜಶಾಪದಿಂದ ಸುತನಾಶವಾಗುವುದು ||೬೦೪||

## ಬ್ರಾಹ್ಮಣಶಾಪ ಶಾಂತಿವಿಧಿಃ

ಶ್ಲೋಕ|| ತದ್ದೋಶಪರಿಹಾರಾರ್ಥಂ ಕುರ್ಯಾಚ್ಚಾಂದ್ರಾಯಣಂನರಃ । ಬ್ರಹ್ಮ ಕೂರ್ಚತ್ರಯಂಕೃತ್ವಾ ಧೇನುಂದದ್ಯಾತ್ಸದಕ್ಷಿಣಾಂ ||೬೦೫|| ಪಂಚರತ್ನಾನಿದೇ ಯಾನಿ ಸುವರ್ಣೇನ ಸಮನ್ವಿತಮ್ । ಅನ್ನದಾನಂ ತತ ಕುರ್ಯಾದಯುತಂವಾ ಸಹಸ್ರಕಂ ||೬೦೬|| ಏವಂ ಕೃತೇತು ಸತ್ಪುತ್ರಂ ಲಭತೇನಾತ್ರಸಂಶಯ । ಮುಕ್ತಶಾಪೋ ವಿಶುದ್ಧಾತ್ಮಾ ಸಪುಮಾನ್ಸುಖಮೇಧತೇ ||೬೦೭||

ತಾ|| ದ್ವಿಜಶಾಪದೋಷ ಪರಿಹಾರಾರ್ಥವಾಗಿ ಚಾಂದ್ರಾಯಣ ವ್ರತವನ್ನು ಬ್ರಹ್ಮಕೂರ್ಚತ್ರಯವನ್ನು, ದಕ್ಷಿಣಾಯುಕ್ತವಾಗಿ ಗೋದಾನವನ್ನು ಪಂಚರತ್ನ ದಾನವನ್ನು,

ಸುವರ್ಣದಾನವನ್ನು ಮಾಡಬೇಕು. ೧೦ ಸಾವಿರ ಅಥವಾ ೧ ಸಾವಿರ ದ್ವಿಜನರಿಗೆ ಭೋಜನ ಮಾಡಿಸಿದರೆ ಬ್ರಹ್ಮಶಾಪ ಪರಿಹಾರವಾಗಿ ಸತ್ಪುತ್ರಸಂತಾನ ಪ್ರಾಪ್ತಿಯಾಗುವುದಲ್ಲದೆ ಸೌಖ್ಯವನ್ನು ಹೊಂದುವನು ॥೬೦೫-೬೦೬-೬೦೭॥

## ಪತ್ನೀಶಾಪಾತ್ಸುತಕ್ಷಯ ಯೋಗಃ

ಶ್ಲೋಕ॥ ದಾರೇಶೇ ಪುತ್ರಭಾವಸ್ಥೆ ದಾರೇಶತ್ತಾಂಶಪೇಶನೌ । ಪುತ್ರೇಶೇ ನಾಶರಾಶಿಸ್ಥೇ ಪತ್ನೀಶಾಪಾತ್ಸುತಕ್ಷಯಃ ॥೬೦೮॥ತಾ॥ ಸಪ್ತಮಾಧಿಪತಿಯು ಪಂಚಮ ದಲ್ಲಿದ್ದರೆ ಆ ಸಪ್ತಮಾಧಿಪತಿಯು ಶನಿ ನವಾಂಶದಲ್ಲಿದ್ದು ಪಂಚಮಾಧಿಪತಿ ಅಷ್ಟಮ ದಲ್ಲಿದ್ದರೆ (ಜಾತಕನಿಗೆ) ಪತ್ನೀಶಾಪದಿಂದ ಸುತನಾಶವಾಗುವುದು ॥೬೦೮॥

ಶ್ಲೋಕ॥ ಕಲತ್ರೇಶೇ ನಾಶಸಂಸ್ಥೇ ರಿಃಫೇಶೇ ಪುತ್ರರಾಶಿಗೇ । ಕಾರಕೇ ಪಾಪಸಂಯುಕ್ತೇ ಪತ್ನೀಶಾಪಾತ್ಸುತಕ್ಷಯಃ ॥೬೦೯॥ತಾ॥ ಸಪ್ತಮಾಧಿಪತಿ ಅಷ್ಟಮ ದಲ್ಲು, ವ್ಯಯಾಧಿಪತಿ ಪಂಚಮದಲ್ಲಿಯೂ ಇದ್ದು ಬೃಹಸ್ಪತಿಯು ಪಾಪಗ್ರಹಯುಕ್ತ ನಾದರೆ ಪತ್ನೀಶಾಪದಿಂದ ಸುತ ನಾಶವಾಗುವುದು ॥೬೦೯॥

ಶ್ಲೋಕ॥ ಪುತ್ರಸ್ಥಾನೇಗತೇಶುಕ್ರೇ ಕಾಮಪೇರಂಧ್ರಮಾಶ್ರಿತೇ । ಕಾರಕೇ ಪಾಪಸಂಯುಕ್ತೇ ಪತ್ನೀಶಾಪಾತ್ಸುತಕ್ಷಯಃ ॥೬೧೦॥ತಾ॥ ಶುಕ್ರನು ಪುತ್ರಸ್ಥಾನದಲ್ಲೂ ಸಪ್ತಮಾಧಿಪತಿ ಅಷ್ಟಮದಲ್ಲೂ ಇದ್ದು ಬೃಹಸ್ಪತಿಯು ಪಾಪಗ್ರಹಯುಕ್ತನಾದರೆ, ಪತ್ನೀಶಾಪದಿಂದ ಪುತ್ರಕ್ಷಯವಾಗುವುದು ॥೬೧೦॥

ಶ್ಲೋಕ॥ ಕುಟುಂಬೇ ಪಾಪಸಂಬಂಧೇ ಕಾಮೇಸೇ ನಾಶರಾಶಿಗೇ । ಪುತ್ರೇ ಪಾಪಗ್ರಹೈರ್ಯುಕ್ತೇ ಪತ್ನಿಶಾಪಾತ್ಸುತಕ್ಷಯಃ ॥೬೧೧॥ತಾ॥ ದ್ವಿತೀಯದಲ್ಲಿ ಪಾಪಗ್ರಹವಿದ್ದು ಸಪ್ತಮಾಧಿಪತಿ ಅಷ್ಟಮದಲ್ಲಿದ್ದು ಪಂಚಮದಲ್ಲಿ ಪಾಪಗ್ರಹಗಳಿದ್ದರೆ ಪತ್ನೀಶಾಪದಿಂದ ಪುತ್ರನಾಶವಾಗುವುದು ॥೬೧೧॥

ಶ್ಲೋಕ॥ ಭಾಗ್ಯಸ್ಥಾನಗತೇ ಶುಕ್ರೇದಾರೇಶೇ ನಾಶರಾಶಿಗೇ । ಲಗ್ನೇ ಪಾಪೇ ಸುತೇ ಪಾಪೇ ಪತ್ನೀಶಾಪಾತ್ಸುತಕ್ಷಯಃ ॥೬೧೨॥ತಾ॥ ಭಾಗ್ಯಸ್ಥಾನದಲ್ಲಿ ಶುಕ್ರನು, ಸಪ್ತಮಾಧಿಪತಿ ಅಷ್ಟಮದಲ್ಲೂ ಇದ್ದು ಲಗ್ನಪಂಚಮಗಳಲ್ಲಿ ಪಾಪಗ್ರಹಗಳಿದ್ದರೆ, ಪತ್ನೀಶಾಪದಿಂದ ಪುತ್ರಕ್ಷಯವಾಗುವದು ॥೬೧೨॥

ಶ್ಲೋಕ॥ ಭಾಗ್ಯಸ್ಥಾನಾಧಿಪೇ ಶುಕ್ರೇಪುತ್ರೇಶೇ ಶತ್ರುರಾಶಿಗೇ । ಗುರು ಲಗ್ನೇಶ ದಾರೇಶಾ ದುಸ್ಥಾಃ ಸಂತತಿ ನಾಶನಂ ॥೬೧೩॥ತಾ॥ ಭಾಗ್ಯ ಸ್ಥಾನಾಧಿಪತಿಯು ಶುಕ್ರನಾಗಿ ಪಂಚಮಾಧಿಪತಿಯು ಷಷ್ಠದಲ್ಲೂ ಇದ್ದು ಲಗ್ನಸಪ್ತಮಾಧಿಪತಿಗಳು

ದುಃಸ್ಥಾನ (೩-೮-೧೨) ಗಳಲ್ಲಿದ್ದರೆ ಪತ್ನೀಶಾಪ ಮೂಲದಿಂದ ಪುತ್ರ ನಾಶವಾಗುವುದು ॥೬೧೩॥

## ಸ್ತ್ರೀಶಾಪಾತ್ಸುತಕ್ಷಯಃ

ಶ್ಲೋಕ॥ ಪುತ್ರಸ್ಥಾನೇ ಭೃಗುಕ್ಷೇತ್ರೇ ರಾಹುಚಂದ್ರ ಸಮನ್ವಿತೇ । ವ್ಯಯೇ ಲಗ್ನೇ ಧನೇಪಾಪೇ ಸ್ತ್ರೀಶಾಪಾತ್ಸುತನಾಶನಮ್ ॥೬೧೪॥ತಾ॥ ಪಂಚಮಸ್ಥಾನವು ಶುಕ್ರಕ್ಷೇತ್ರವಾಗಿ ಅಲ್ಲಿ ರಾಹು ಚಂದ್ರರಿದ್ದು ವ್ಯಯ, ಲಗ್ನ, ಧನ, ಈ ೩ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ, ಸ್ತ್ರೀಶಾಪದ ದೆಸೆಯಿಂದ ಸುತಕ್ಷಯವಾಗುವುದು ॥೬೧೪॥

## ಪತ್ನಿಶಾಪಾತ್ಸುತಕ್ಷಯ ಯೋಗಾಃ

ಶ್ಲೋಕ॥ ಸಪ್ತಮೇ ಮಂದ ಶುಕ್ರೌಚ ರಂಧ್ರೇಶೇ ಪುತ್ರಭೇರವೌ । ಲಗ್ನೇ ರಾಹು ಸಮಾಯೋಗೇ ಪತ್ನೀಶಾಪಾತ್ಸುತಕ್ಷಯಃ ॥೬೧೫॥ತಾ॥ ಸಪ್ತಮದಲ್ಲಿ ಶನಿ ಶುಕ್ರರು, ಅಷ್ಟಮಾಧಿಪತಿಯಾದ ಸೂರ್ಯನು ಪಂಚಮದಲ್ಲಿದ್ದು ಲಗ್ನದಲ್ಲಿ ರಾಹುವಿದ್ದರೆ ಪತ್ನೀಶಾಪದ ದೆಸೆಯಿಂದ ಪುತ್ರನಾಶವಾಗುವುದು ॥೬೧೫॥

ಶ್ಲೋಕ॥ ಧನೇಕುಜೇವ್ಯಯೇಜೀವೇ ಪುತ್ರಸ್ಥೇ ಭೃಗುನಂದನೇ। ರಾಹುಯುಕ್ತೇ ಕ್ಷತೇವಾಪಿ ಪತ್ನಿಶಾಪಾತ್ಸುತಕ್ಷಯಃ ॥೬೧೬॥ತಾ॥ ಧನಸ್ಥಾನದಲ್ಲಿ ಅಂಗಾರಕನು, ದ್ವಾದಶದಲ್ಲಿ ಬೃಹಸ್ಪತಿಯು, ಪತ್ನೀ ಶಾಪದ ದೆಸೆಯಿಂದ ಪುತ್ರ ಕ್ಷಯವಾಗುವುದು ॥೬೧೬॥

ಶ್ಲೋಕ॥ ನಾಶಸ್ಥೌ ವಿತ್ತದಾರೇಶೌ ಪುತ್ರೇಲಗ್ನೇ ಕುಜೇಶನೌ । ಕಾರಕೇ ಪಾಪಸಂಯುಕ್ತೇ ಪತ್ನೀಶಾಪತ್ಸುತಕ್ಷಯಃ ॥೬೧೭॥ತಾ॥ ಅಷ್ಟಮದಲ್ಲಿ ೨-೭ನೇ ಅಧಿಪತಿಗಳಿದ್ದು ಪಂಚಮದಲ್ಲಿ ಕುಜ, ಲಗ್ನದಲ್ಲಿ ಶನಿಯಿದ್ದು ಬೃಹಸ್ಪತಿಯು ಪಾಪಯುತನಾದರೆ, ಪತ್ನೀಶಾಪದಿಂದ ಪುತ್ರನಾಶವಾಗುವುದು ॥೬೧೭॥

ಶ್ಲೋಕ॥ ಲಗ್ನಪಂಚಮ ಭಾಗ್ಯಸ್ಥಾ ರಾಹುಮಂದಕುಜಾಃ ಕ್ರಮಾತ್ । ರಂಧ್ರಸ್ಥೌ ಪುತ್ರಧಾರೇಶಾ ಪತ್ನೀಶಾಪತ್ಸುತಕ್ಷಯಃ ॥೬೧೮॥ತಾ॥ ಲಗ್ನ, ಪಂಚಮ, ನವಮಗಳಲ್ಲಿ ಕ್ರಮವಾಗಿ ರಾಹು ಶನಿ ಕುಜರಿದ್ದು ಅಷ್ಟಮದಲ್ಲಿ ೫-೭ನೇ ಅಧಿಪತಿಗಳಿದ್ದರೆ, ಪತ್ನೀಶಾಪದಿಂದ ಪುತ್ರನಾಶಯೋಗವೆಂದು ತಿಳಿಯತಕ್ಕದ್ದು ॥೬೧೮॥

## ಪತ್ನೀಶಾಪ ಶಾಂತಿವಿಧಿಃ

ಶ್ಲೋಕ॥ ತಸ್ಯದೋಷಸ್ಯ ಶಾಂತ್ಯರ್ಥಂ ಕನ್ಯಾದಾನಂ ಸಮಾಚರೇತ್ । ಲಕ್ಷ್ಮೀನಾರಾಯಣಂ ದೇವಂ ಸರ್ವಾಭರಣ ಭೂಷಿತಮ್ ॥೬೧೮॥ ಮೂರ್ತಿ

ದಾನಂಚ ಕರ್ತವ್ಯಂ ದಶಧೇನೂಃ ಪ್ರದಾಪಯೇತ್ । ಶಯಾಂಚಭೂಷಣಂಚೈವ ದಾಂಪತ್ಯೋರ್ದಾಪಯೇತ್ಸುಧೀಃ ॥೬೧೯॥ತಾ॥ ಪತ್ನೀಶಾಪವಿಮೋಚನಕ್ಕೋಸ್ಕರ ವಾಗಿ ಕನ್ಯಾದಾನ ಮಾಡಬೇಕು. ಅಥವಾ ಸರ್ವಭೂಷಿತವಾದ ಲಕ್ಷ್ಮೀನಾರಾಯಣ ಮೂರ್ತಿಯನ್ನು ದಾನಮಾಡಿ ೧೦ ಗೋದಾನ ಮಾಡಬೇಕು. ಮತ್ತು ಯೋಗ್ಯ ರಾದ ದಂಪತಿಗಳಿಗೆ ವಸ್ತ್ರಾಭರಣ ಶಯ್ಯಾದಾನವನ್ನು ಮಾಡಬೇಕು ॥೬೧೯॥

ಶ್ಲೋಕ॥ ಪುತ್ರಂ ಪ್ರಸೂಯತೇತಸ್ಯ ಭಾಗ್ಯವೃದ್ಧಿಶ್ಚ ಜಾಯತೇ । ಮುಕ್ತ ಶಾಪವಿಶುದ್ಧಾತ್ಮಾ ಸಪುಮಾನ್ಸುಖಮೇಧತೇ ॥೬೨೦॥ತಾ॥ ಈ ಮೇಲೆ ಹೇಳಲ್ಪಟ್ಟ ದಾನಮಾಡಿದರೆ ಪುತ್ರಪ್ರಾಪ್ತಿಯಾಗಿ ಭಾಗ್ಯವೃದ್ಧಿಯೂ ಆಗಿ ಶಾಪದಿಂದ ಬಿಡಲ್ಪಟ್ಟವನಾಗಿ ಸೌಖ್ಯವನ್ನು ಹೊಂದುವನು ॥೬೨೦॥

ಇತಿ ಪತ್ನೀಶಾಪವಿಚಾರಃ

## ಅಥ ಪ್ರೇತಶಾಪವಿಚಾರಃ

ಶ್ಲೋಕ॥ ಮಂತ್ರಶಾಪಮಿದಂ ಮರ್ತ್ಯಃ ಪಿಶಾಚಂ ಬಾಧ್ಯತೇಸದಾ । ಕರ್ಮ ಲೋಪಂ ಪಿತೃಭ್ಯಸ್ತತಛ್ಛಾಪಾದ್ವಂಶ ನಾಶನಮ್ ॥೬೨೧॥ತಾ॥ ಪ್ರೇತಶಾಪ ಪ್ರಾಪ್ತಿಗೆ ಕಾರಣವನ್ನು ಹೇಳುತ್ತಾರೆ. ಪಿತೃಗಳಿಗೆ ಮರಣಕಾಲದಲ್ಲಿ ಸರಿಯಾದ ಕರ್ಮ ಮಾಡದೆ ಲೋಪಮಾಡಿದ್ದರಿಂದ ಅವರಿಗೆ ಪ್ರೇತತ್ವ ವಿಮೋಚನೆಯಾಗದೆ ಪಿಶಾಚತ್ವ ಪ್ರಾಪ್ತಿಯಾಗುವದರಿಂದಲೂ, ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡದ ಕಾರಣದಿಂದಲೂ ಪ್ರೇತಶಾಪವುಂಟಾಗುತ್ತದೆ. ಆದ್ದರಿಂದ ಪಿಶಾ ಬಾಧೆಯೂ, ವಂಶನಾಶವೂ ಸಹ ಆಗುತ್ತದೆ ॥೬೨೧॥

## ಪ್ರೇತಶಾಪ ಯೋಗಃ

ಶ್ಲೋಕ॥ ಪುತ್ರಸ್ಥಿತೌ ಮಂದಸೂರೌ ಕ್ಷೀಣಚಂದ್ರಸ್ತು ಸಪ್ತಮೇ । ಲಗ್ನೇ ವ್ಯಯೇ ರಾಹುಜಿವೌ ಪ್ರೇತಶಾಪತ್ಸುತಕ್ಷಯಃ ॥೬೨೨॥ತಾ॥ ಪಂಚಮದಲ್ಲಿ ಶನಿಸೂರ್ಯರು, ಸಪ್ತಮದಲ್ಲಿ ಕ್ಷೀಣಚಂದ್ರನು, ಲಗ್ನದಲ್ಲಿ ರಾಹು, ದ್ವಾದಶದಲ್ಲಿ ಗುರು ಈ ಪ್ರಕಾರ ಗ್ರಹಗಳು ಭಾವಕುಂಡಲಿಯಲ್ಲಿದ್ದರೆ, ಪ್ರೇತಶಾಪದಿಂದ ಸುತ ಕ್ಷಯವಾಗುವದು ॥೬೨೨॥

ಶ್ಲೋಕ॥ ಪುತ್ರಸ್ಥಾನಾಧಿಪೇ ಮಂದೇನಾಶಸ್ಥೇ ಲಗ್ನಗೇ ಕುಜೇ । ಕಾರಕೇ ನಾಶರಾಶಿಸ್ಥೇ ಪ್ರೇತಶಾಪತ್ಸುತಕ್ಷಯಃ ॥೬೨೩॥ತಾ॥ ಪಂಚಮಾಧಿಪತ್ಯವನ್ನು ಹಿಡಿದ ಶನಿಯು ಅಷ್ಟಮದಲ್ಲೂ, ಲಗ್ನದಲ್ಲಿ ಕುಜನು ಇದ್ದು ಬೃಹಸ್ಪತಿಯು ಅಷ್ಟಮದಲ್ಲಿದ್ದರೆ, ಪ್ರೇತಶಾಪದಿಂದ ಪುತ್ರನಾಶವಾಗುವದು ॥೬೨೩॥

ಶ್ಲೋಕ।। ಲಗ್ನೇಪಾಪೇವ್ಯಯೇಭಾನೌ ಸುತೇಚಾರಾರ್ಕಿ ಸೋಮಜಾಃ । ಪುತ್ರೇಶೇರಂಧ್ರಭಾವಸ್ಥೇ ಪ್ರೇತಶಾಪಾತ್ಸುತಕ್ಷಯಃ ।।೬೨೪।।ತಾ।। ಲಗ್ನದಲ್ಲಿ ಪಾಪಗ್ರಹವಿದ್ದು ದ್ವಾದಶದಲ್ಲಿಸೂರ್ಯನು, ಪಂಚಮದಲ್ಲಿ ಕುಜ, ಶನಿ, *ಬುಧರಿದ್ದು, ಪಂಚಮಾಧಿಪತಿ ಅಷ್ಟಮದಲ್ಲಿದ್ದರೆ, ಪ್ರೇತಶಾಪದಿಂದ ಪುತ್ರಕ್ಷಯಯೋಗವೆಂದು ಹೇಳತಕ್ಕದ್ದು ।।೬೨೪।।

ಶ್ಲೋಕ।। ಲಗ್ನೇರಾಹುಸಮಾಯೋಗೇ ಪುತ್ರಸ್ಥೇ ಭಾನುನಂದನೇ ಕಾರಕೇ ನಾಶರಾಶಿಸ್ಥೇ ಪ್ರೇತಶಾಪಾತ್ಸುತಕ್ಷಯಃ ।।೬೨೫।।ತಾ।। ಲಗ್ನದಲ್ಲಿ ರಾಹು, ಪಂಚಮದಲ್ಲಿ ಶನಿ (ಗುರು), ಪುತ್ರಕಾರಕನು ಅಷ್ಟಮದಲ್ಲಿದ್ದರೆ, ಪ್ರೇತಶಾಪದಿಂದ ಪುತ್ರನಾಶವಾಗುವುದು ।।೬೨೫।।

ಶ್ಲೋಕ।। ಲಗ್ನೇರಾಹೌಚಶುಕ್ರೇಜ್ಯೇ ಚಂದ್ರೇಮಂದಯುತೇತಥಾ । ಲಗ್ನೇಶೇ ಮೃದುರಾಶಿಸ್ಥೇ ಪ್ರೇತಶಾಪಾತ್ಸುತಕ್ಷಯಃ ।।೬೨೫।।ತಾ।। ಲಗ್ನದಲ್ಲಿ ರಾಹು, ಪಂಚಮದಲ್ಲಿ ಶನಿ (ಗುರು), ಪುತ್ರಕಾರಕನು ಅಷ್ಟಮದಲ್ಲಿದ್ದರೆ, ಪ್ರೇತಶಾಪದಿಂದ ಪುತ್ರನಾಶವಾಗುವುದು ।।೬೨೫।।

ಶ್ಲೋಕ।। ಲಗ್ನೇರಾಹೌಚಶುಕ್ರೇಜ್ಯೇ ಚಂದ್ರೇಮಂದಯುತೇತಥಾ । ಲಗ್ನೇಶೇ ಮೃದುರಾಶಿಸ್ಥೇ ಪ್ರೇತಶಾಪಾತ್ಸುತಕ್ಷಯಃ ।।೬೨೭।।ತಾ।। ಲಗ್ನದಲ್ಲಿ ರಾಹು, ಪಂಚಮದಲ್ಲಿ ಶನಿಯು ಕುಜಯುಕ್ತನಾದರೂ, ಅಥವಾ ನೋಡಲ್ಪಟ್ಟರೂ, ಪ್ರೇತ ಶಾಪದಿಂದ ಸುತನಾಶವಾಗುವುದು ।।೬೨೭।।

ಶ್ಲೋ।। ಕಾರಕೇ ನೀಚರಾಶಿಸ್ಥೇ ಪುತ್ರಸ್ಥಾನಾದಿಪೇ ಸ್ಥಿರೇ । ನೀಚದೃಷ್ಟೇ ನೀಚಯುತೇ ಪ್ರೇತಶಾಪಾತ್ಸುತಕ್ಷಯಃ ।।೬೨೭।।ತಾ।। ಲಗ್ನದಲ್ಲಿ ರಾಹು, ಪಂಚಮದಲ್ಲಿ ಶನಿಯು ಕುಜಯುಕ್ತನಾದರೂ, ಅಥವಾ ನೋಡಲ್ಪಟ್ಟರೂ, ಪ್ರೇತಶಾಪದಿಂದ ಸುತನಾಶವಾಗುವುದು ।।೬೨೭।।

ಶ್ಲೋ।। ಕಾರಕೇ ನೀಚರಾಶಿಸ್ಥೇ ಪುತ್ರಸ್ಥಾನಾದಿಪೇ ಸ್ಥಿರೇ । ನೀಚದೃಷ್ಟೇ ನೀಚಯುತೇ ಪ್ರೇತಶಾಪಾತ್ಸುತಕ್ಷಯಃ ।।೬೨೮।।ತಾ।। ಸುತಕಾರಕನಾದ ಗುರುವು ನೀಚನಾಗಿ, ಸುತಸ್ಥಾನಾಧಿಪತಿ ಸ್ಥಿರರಾಶಿಯಲ್ಲಿದ್ದು, ನೀಚಗ್ರಹಯುತನಾದರೂ ಅಥವಾ ನೀಚಗ್ರಹದೃಷ್ಟನಾದರೂ ಪ್ರೇತಶಾಪದಿಂದ ಸುತನಾಶವಾಗುವುದು ।।೬೨೮।।

ಶ್ಲೋಕ।। ಲಗ್ನೇಮಂದೇ ಸುತೇರಾಹೌ ರಂಧ್ರೇ ಭಾನು ಸಮನ್ವಿತೇ । ಮಂದ ಮಾಂದಿ ಯುತೇಲಗ್ನೇ ಪ್ರೇತಶಾಪಾತ್ಸುತಕ್ಷಯಃ ।।೬೨೯।।ತಾ।। ಲಗ್ನದಲ್ಲಿ ಶನಿಯು, ಪಂಚಮದಲ್ಲಿ ರಾಹು, ಅಷ್ಟಮದಲ್ಲಿ ರವಿಯು, ಲಗ್ನದಲ್ಲಿ ಶನಿಯು ಮಾಂದಿಯುಕ್ತನಾದರೆ, ಪ್ರೇತಶಾಪದಿಂದ ಸುತನಾಶವಾಗುವುದು ।।೬೨೯।।

* ವಜ್ರಾದಿ ಯೋಗಗಳಲ್ಲಿ ಬುಧಸೂರ್ಯರ ಸಾಮೀಪ್ಯದೂರ ವಿಮರ್ಶೆ ಮಾಡಿರುತ್ತೆ ಬುಧನಿಲ್ಲದೆ ಈ ಯೋಗವು ಪ್ರಾಪ್ತಿಯಾಗುತ್ತೆ.

ಶ್ಲೋಕ।। ಕಾಮಸ್ಥಾನಾಧಿಪೆ ದುಃಸ್ಥೆ ಪುತ್ರೇಚಂದ್ರಸಮನ್ವಿತೇ । ಮಂದ ಮಾಂದಿಯುತೇ ಲಗ್ನೇ ಪ್ರೇತಶಾಪಾತ್ಸುತಕ್ಷಯಃ ।।೬೩೦।।ತಾ।। ಸಪ್ತಮಾಧಿ ಪತಿಯು ೬-೮-೧೨ರಲ್ಲೂ ಎಲ್ಲಿಯಾದರೂ ಇದ್ದು ಪಂಚಮದಲ್ಲಿ ಚಂದ್ರನು, ಲಗ್ನದಲ್ಲಿ ಶನಿ ಮತ್ತು ಮಾಂದಿಯು ಸಹ ಇದ್ದರೆ ಪ್ರೇತಶಾಪದಿಂದ ಸುತನಾಶ ಯೋಗವು ।।೬೩೦।।

ಶ್ಲೋಕ।। ಭಾಧಾಸ್ಥಾನಾಧಿಪೇಪುತ್ರೇ ಶನಿಶುಕ್ರೇ ಸಮನ್ವಿತೇ । ಕಾರಕೇ ನಾಶ ರಾಶಿಸ್ಥೇ ಪ್ರೇತಸಾಪಾತ್ಸುತಕ್ಷಯಃ ।।೬೩೧।।ತಾ।। ಷಷ್ಠಾಧಿಪತಿಯು ಪಂಚಮದಲ್ಲಿದ್ದು ಶನಿ ಶುಕ್ರಯುತನಾಗಿ ಪತ್ರಕಾರನು ಅಷ್ಟಮದಲ್ಲಿದ್ದರೆ ಜಾತಕನಿಗೆ ಪ್ರೇತಶಾಪದಿಂದ ಸುತನಾಶವಾಗುವದು ।।೬೩೧।।

## ಪ್ರೇತಶಾಪ ಪರಿಹಾರ ವಿಧಿಃ

ಶ್ಲೋಕ।। ತದ್ದೋಷಸ್ಯ ಪ್ರಶಾಂತ್ಯರ್ಥಂ ವಿಷ್ಣುಶ್ರಾದ್ಧಂಚಕಾರಯೇತ್ । ರುದ್ರಸ್ನಾನಂ ಪ್ರಕುರ್ವೀತ ಬ್ರಹ್ಮಮೂರ್ತಿಂ ಪ್ರದಾಯೇತ್ ।।ಧೇನೂರಜತ ಪಾತ್ರಂಚ ನೀಲಂಚೈವ ಪ್ರದಾಪಯೇತ್ । ಏತತ್ಕರ್ಮ ಕೃತೇ ತತ್ರ ಶಾಪಮೋಕ್ಷ ಪ್ರಜಾಯತೇ ಪುತ್ರಪ್ರಾಪ್ತಿರ್ಭವೇತ್ತಸ್ಯವಿಪ್ರೇಭ್ಯೋ ದಕ್ಷಿಣಾಂದಿಶೇತ್ ।।೬೩೨-೬೩೪।।

ತಾ।। ಪ್ರೇತಶಾಪ ಪರಿಹಾರರ್ಥ ವಿಷ್ಣುಶ್ರಾದ್ಧವನ್ನು ಮಾಡಬೇಕು. ಅನಂತರ ರುದ್ರಸ್ನಾನವನ್ನು ಮಾಡಿ ಬ್ರಹ್ಮಮೂರ್ತಿಯನ್ನು ದಾನ ಮಾಡಬೇಕು. ಗೋದಾನ ರಜತಪಾತ್ರದಾನ, ನೀಲರತ್ನದಾನ ಮಾಡಿದರೆ, ಪ್ರೇತಶಾಪ ವಿಮೋಚನೆಯಾಗಿ ಸಂತಾನವು ಅಭಿವೃದ್ಧಿಯಾಗುವುದು ।।೬೩೨-೬೩೪।।

## ಪುತ್ರ ಪ್ರತಿಬಂಧಕ ಶಾಂತಿಃ

ಶ್ಲೋಕ।। ಹರಿವಂಶೋ ರವಿಣಾಶಶೀ ತ್ರಿಪುರಾಹಾ ಭೌಮೇಚರುದ್ರೀಕ್ರಿಯಾ । ಸೌಮ್ಯೇ ಸಂಪುಟಕಾಂಸ್ಯಪಾತ್ರ ವಿಧಿವಜ್ಜೀವೇಚಪೈತ್ರ್ಯಾತಿಥಿಃ ।। ಶುಕ್ರೇ ಗೋಪ್ರತಿ-ಪಾಲನಂಚ ಕಥಿತಂ ಮಂದೇಚ ಮೃತ್ಯುಂಜಯಃ । ಕನ್ಯಾದಾನ ಭುಜಂಗಕೇತು ಕಪಿಲಾ ಸಂತಾನಸೌಖ್ಯಪ್ರದಾ ।।೬೩೫।।

ತಾ।।ಸಂತಾನ ಪ್ರತಿಬಂಧಕರಾದ ಗ್ರಹಗಳಿಗೆ ಶಾಂತಿಯು ಹೇಳಲ್ಪಡುತ್ತೆ. ಪುತ್ರಸಂತತಿಗೆ ವಿಘ್ನಕಾರಿ ಸೂರ್ಯನಾಗಿದ್ದರೆ ಹರಿವಂಶ ಪಾರಾಯಣವನ್ನು,ಚಂದ್ರನಾದರೆ ಈಶ್ವರಾರಾಧನೆಯನ್ನು, ಕುಜನಾದರೆ ಏಕಾದಶ ರುದ್ರಾಭಿಷೇಕವನ್ನು, ಬುಧನಾದರೆ ಕಾಂಸ್ಯಪಾತ್ರದಲ್ಲಿ ಕ್ಷೀರದಾನವನ್ನು, ಬೃಹಸ್ಪತಿಯಾದರೆ ಅತಿಥಿ ಸತ್ಕಾರವನ್ನು, ಪಿತೃದೇವತೆಗಳಿಗೆ ಆರಾಧನೆಯನ್ನು, ಶುಕ್ರನಾದರೆ ಗೋಪೂಜಾ ಗೋಪಾಲನೆಯನ್ನು,

ಶನಿಯಾದರೆ ಮಹಾ ಮೃತ್ಯುಂಜಯ ಜಪವನ್ನು ರಾಹುವಾದರೆ ಕನ್ಯಾ ದಾನವನ್ನು, ಕೇತುವಾದರೆ ಕಪಿಲಾ ಗೋದಾನವನ್ನು ಮಾಡಬೇಕೆಂತಲೂ ಪರಾಶರರು ಅಪ್ಪಣೆ ಕೊಡಿಸುತ್ತಾರೆ ॥೬೩೫॥

## ಬಹುಪುತ್ರ ಯೋಗಃ

ಶ್ಲೋ॥ ಪುತ್ರೇರಾಹೂರವಿಃ ಸೌಮ್ಯಾಃ ಕಾರಕೇ ಶುಭಸಂಯುತೇ । ಶುಭೇನ ವೀಕ್ಷಿತೇವಾಪಿ ಬಹುಪುತ್ರತ್ವಮಾದಿಶೇತ್ ॥೬೩೬॥ತಾ॥ ಪಂಚಮದಲ್ಲಿ ರಾಹು, ರವಿ ಮತ್ತು ಶುಭಗ್ರಹಗಳು ಯಾರಾದರೂ ಇದ್ದು ಪುತ್ರಕಾರಕನಾದ ಬೃಹಸ್ಪತಿಯು ಶುಭಗ್ರಹ ಸಂಯುತನಾದರೂ, ಶುಭವೀಕ್ಷಿತನಾದರೂ, ಬಹು ಪುತ್ರರುಂಟಾಗುವರು ॥೬೩೬॥

ಶ್ಲೋಕ॥ ಪುತ್ರೇಶೇ ಶುಭರಾಶಿಸ್ಥೇ ಶುಭದೃಷ್ಟಿ ಸಮನ್ವಿತೇ । ಕಾರಕೇ ಕೇಂದ್ರ ಭಾವಸ್ಥೇ ಬಹುಪುತ್ರ ಸಮಾದಿಶೇತ್ ॥೬೩೭॥ತಾ॥ ಪುತ್ರಸ್ಥಾನಾಧಿಪತಿಯು ಶುಭಗ್ರಹಗಳಲ್ಲಿದ್ದು ಶುಭಗ್ರಹಗಳ ದೃಷ್ಟಿಯುಕ್ತನಾಗಿ ಪುತ್ರಕಾರಕನು ಲಗ್ನಕೇಂದ್ರ ತ್ರಿಕೋಣಗಳಲ್ಲಿದ್ದರೆ ಬಹುಪುತ್ರರುಂಟಾಗುವರು ॥೬೩೭॥

ಶ್ಲೋಕ॥ ಲಗ್ನೇಶೇ ಪುತ್ರರಾಶಿಸ್ಥೇ ಪುತ್ರೇಶೇ ಲಗ್ನಮಾಶ್ರಿತೇ । ಕೇಂದ್ರತ್ರಿಕೋಣ ಗೇಜೀವೇ ಬಹುಪುತ್ರಂ ಸಮಾದಿಶೇತ್ ॥೬೩೮॥ತಾ॥ ಲಗ್ನಾಧಿಪತಿ ಪಂಚಮದಲ್ಲಿ, ಪಂಚಮಾಧಿಪತಿ ಲಗ್ನದಲ್ಲಿ ಇದ್ದು ಕೇಂದ್ರ ತ್ರಿಕೋಣಗಳಲ್ಲಿ ಬೃಹಸ್ಪತಿ ಇದ್ದರೆ ಬಹುಪುತ್ರರುಂಟಾಗುವರು ॥೬೩೮॥

ಶ್ಲೋಕ॥ ಪುತ್ರಸ್ಥಾನಗತೇರಾಹೌ ಮಂದಾಂಶಕ ವಿವರ್ಜಿತೇ । ಬಹುಪುತ್ರಂ ನರಂವಿಂದ್ಯಾಚ್ಛುಭಗ್ರಹನಿರೀಕ್ಷಿತೇ ॥೬೩೯॥ತಾ॥ ಪುತ್ರಸ್ಥಾನದಲ್ಲಿ ರಾಹು ಶನಿ ನವಾಂಶವನ್ನು ಬಿಟ್ಟು ಉಳಿದ ಯಾವ ಗ್ರಹದ ನವಾಂಶೆಯಲ್ಲಿದ್ದರೂ ಶುಭಗ್ರಹ ದೃಷ್ಟಿಯಿದ್ದರೆ ಪುತ್ರರು ಅನೇಕರಾಗುವರೆಂದು ತಿಳಿಯತಕ್ಕದ್ದು ॥೬೩೯॥

ಶ್ಲೋಕ॥ ಪುತ್ರಸ್ಥಾನಾಧಿಪೇಸ್ವೋಚ್ಚೇ ಲಗ್ನೇಶೇ ಶುಭಸಂಯುತೇ । ಕಾರಕೇ ಶುಭಸಂಯುಕ್ತ ಬಹುಪುತ್ರಂ ಸಮಾದಿಶೇತ್ ॥೬೪೦॥ತಾ॥ ಪುತ್ರಸ್ಥಾನಾಧಿಪತಿ ಉಚ್ಚನಾಗಿ ಲಗ್ನಾಧಿಪತಿಯು ಶುಭಗ್ರಹಯುಕ್ತನಾಗಿ ಕಾರಕನೂ ಶುಭಗ್ರಹಯುತನಾದರೆ ಬಹುಪುತ್ರರಾಗುವರು ॥೬೪೦॥

ಶ್ಲೋಕ॥ ಪುತ್ರಸ್ಥಾನೇ ತದೀಶೋವಾ ಗುರೌವಾ ಶುಭವೀಕ್ಷಿತೇ । ಶುಭೇನ ಸಹಿತೇವಾಪಿ ಬಹುಪುತ್ರಂ ಸಮಾದಿಶೇತ್ ॥೬೪೧॥ತಾ॥ ಪುತ್ರಸ್ಥಾನದಲ್ಲಿ ಪುತ್ರ ಸ್ಥಾನಾಧಿಪತಿಯಾಗಲೀ, ಬೃಹಸ್ಪತಿಯಾಗಲೀ, ಶುಭವೀಕ್ಷಿತನಾದರೂ, ಶುಭಗ್ರಹ ಯುತನಾದರೂ ಆದರೆ ಬಹುಪುತ್ರರಾಗುವರು ॥೬೪೧॥

ಶ್ಲೋಕ|| ಪರಿಪೂರ್ಣಬಲೇಜೀವೇ ಲಗ್ನೇಶೇ ಪುತ್ರರಾಶಿಗೇ । ಪುತ್ರೇಶೇ ಬಲ ಸಂಯುಕ್ತೇ ಬಹುಪುತ್ರಂ ಸಮಾದಿಶೇತ್ ||೬೪೨||ತಾ|| ಬೃಹಸ್ಪತಿಯೂ ಪೂರ್ಣ ಬಲಿಷ್ಠನಾಗಿ ಲಗ್ನಾಧಿಪತಿ ಪುತ್ರಸ್ಥಾನದಲ್ಲಿದ್ದು ಪುತ್ರಸ್ಥಾನಾಧಿಪತಿ ಬಲಿಷ್ಠನಾಗಿದ್ದರೆ, ಬಹುಪುತ್ರರಾಗುವರು ||೬೪೨||

ಶ್ಲೋಕ|| ಪುತ್ರಸ್ಥಾನಗತೇ ಜೀವೇ ಪರಿಪೂರ್ಣಬಲಾನ್ವಿತೇ । ಲಗ್ನೇಶೇ ಬಲಸಂಯುಕ್ತೇ ಪುತ್ರಯೋಗಾ ಇಮೇಸ್ಮತಾ, ||೬೪೩||ತಾ|| ಪುತ್ರಸ್ಥಾನದಲ್ಲಿ ಬೃಹಸ್ಪತಿ ಬಲಿಷ್ಠನಾಗಿದ್ದು ಲಗ್ನಾಧಿಪತಿ ಬಲಿಷ್ಠನಾಗಿದ್ದರೆ, ಪುತ್ರಪ್ರಾಪ್ತಿಯೋಗವೆಂದು ಹೇಳತಕ್ಕದ್ದು ||೬೪೩||

ಶ್ಲೋಕ|| ವರ್ಗೋತ್ತಮಾಂಶಗೇ ಜೀವೇ ಲಗ್ನೇಶಸ್ಥಾಂಶಪೇಶುಭೇ । ಪುತ್ರೇ ಶೇನಯುತೇ ದೃಷ್ಟೇ ಪುತ್ರಯೋಗಾ ಇಮೇಸ್ಮತಾಃ ||೬೪೪||ತಾ|| ವರ್ಗೋತ್ತಮಾಂಶೆಯಲ್ಲಿ ಬೃಹಸ್ಪತಿಯು ಇದ್ದು ಲಗ್ನಾಧಿಪತಿಯು ಶುಭಗ್ರಹ ನವಾಂಶೆ ಯಲ್ಲಿದ್ದು ಪುತ್ರಸ್ಥಾನಾಧಿಪತಿಯುತನಾದರೂ, ದೃಷ್ಟನಾದರೂ ಪುತ್ರಪ್ರಾಪ್ತಿಯೋಗ ವೆಂದು ಹೇಳತಕ್ಕದ್ದು ||೬೪೪||

ಶ್ಲೋಕ|| ವಿತ್ತೇಶೇ ಪುತ್ರಭಾವಸ್ಥೇ ಪರಿಪೂರ್ಣ ಬಲಾನ್ವಿತೇ । ವೈಶೇಷಿ ಕಾಂಶಕೇ ಜೀವೇಪುತ್ರಯೋಗಾ ಇಮೇಸ್ಮತಾಃ ||೬೪೫||ತಾ|| ದ್ವಿತೀಯಾಧಿಪತಿ ಬಲಿಷ್ಠನಾಗಿ ಪಂಚಮಭಾವದಲ್ಲಿದ್ದು ವೈಶೇಷಿಕಾಂಶೆಯಲ್ಲಿ ಬೃಹಸ್ಪತಿ ಇದ್ದರೆ ಪುತ್ರಯೋಗವೆಂದು ತಿಳಿಯತಕ್ಕದ್ದು ||೬೪೫||

ಶ್ಲೋಕ|| ಲಗ್ನಾತ್ಪುತ್ರಾಧಿಪೇಸ್ವೋಚ್ಚೇ ಅನ್ಯೋನ್ಯತ್ವಾದಿ ವೀಕ್ಷಿತೇ । ಪರಸ್ಪರ ಸ್ಥಾನಗತೇ ಪುತ್ರಯೋಗಾ ಇಮೇಸ್ಮತಾಃ ||೬೪೬||ತಾ|| ಪುತ್ರಸ್ಥಾನಾಧಿಪತಿ ಉಚ್ಚನಾಗಿ ಲಗ್ನಾಧಿಪತಿ ಪರಸ್ಪರವಾಗಿ ನೋಡುತ್ತಲಿದ್ದರೂ ಲಗ್ನಾಧಿಪತಿ ಪಂಚಮದಲ್ಲೂ ಪಂಚಮಾಧಿಪತಿ ಲಗ್ನದಲ್ಲಿದ್ದರೂ ಪುತ್ರಯೋಗವೆಂದು ತಿಳಿಯತಕ್ಕದ್ದು ||೬೪೬||

ಶ್ಲೋಕ|| ಪುತ್ರಸ್ಥಾನಾಧಿಪಸ್ಥಾಂಶ ರಾಶೀಶೇ ಶುಭಸಂಯುತೇ । ಶುಭೇನ ವಿಕ್ಷಿತೇವಾಪಿ ಪುತ್ರಯೋಗಾ ಇಮೇಸ್ಮತಾಃ ||೬೪೭||ತಾ|| ಪುತ್ರಸ್ಥಾನಾಧಿಪತಿಯು ಯಾವ ನವಾಂಶೆಯಲ್ಲಿರುವನೋ ಆ ನವಾಂಶಾಧಿಪತಿ ಶುಭಗ್ರಹಯುಕ್ತನಾದರೂ, ಶುಭಗ್ರಹವೀಕ್ಷಿತನಾದರೂ ಪುತ್ರಯೋಗವೆಂದು ತಿಳಿಯಬೇಕು ||೬೪೭||

ಶ್ಲೋಕ|| ಲಗ್ನಪುತ್ರಾಧಿಪೌಕೇಂದ್ರೇ ಶುಭಗ್ರಹಸಮನ್ವಿತೇ । ಕುಟುಂಬೇಶೇ ಬಲಾಢ್ಯೇತು ಪುತ್ರಯೋಗಾ ಇಮೇಸ್ಮತಾಃ ||೬೪೮||ತಾ|| ಲಗ್ನಪುತ್ರಾಧಿಪತಿಗಳು

ಶುಭಗ್ರಹಯುತರಾಗಿ ಕೇಂದ್ರಗಳಲ್ಲಿದ್ದು, ಕುಟುಂಬಾಧಿಪತಿ ಬಲಿಷ್ಠನಾಗಿದ್ದರೆ, ಪುತ್ರಯೋಗವೆಂದು ತಿಳಿಯತಕ್ಕದ್ದು ॥೬೪೮॥

ಶ್ಲೋಕ॥ ಲಗ್ನೇಶೇದಾರಭಾವಸ್ಥೇ ದಾರೇಶೇ ಲಗ್ನಮಾಶ್ರಿತೇ । ದ್ವಿತೀಯೇಶೇ ವಿಲಗ್ನಸ್ಥೇ ಪುತ್ರಯೋಗಾ ಇಮೇಸ್ಮೃತಾಃ ॥೬೪೯॥ತಾ॥ ಲಗ್ನಾಧಿಪತಿ ಸಪ್ತಮದಲ್ಲೂ ಸಪ್ತಮಾಧಿಪತಿ ಲಗ್ನದಲ್ಲೂ ಇದ್ದು ದ್ವಿತೀಯಾಧಿಪತಿ ಲಗ್ನದಲ್ಲಿದ್ದರೆ, ಪುತ್ರ ಯೋಗವೆಂದು ತಿಳಿಯತಕ್ಕದ್ದು ॥೬೪೯॥

ಶ್ಲೋಕ॥ ದಾರೇಶ ಗ್ರಹಸಂಯುಕ್ತ ನವಾಂಶ ಭವನಾಧಿಪೇ । ಪುತ್ರವಿತ್ತ ವಿಲಗ್ನಸ್ಥೇ ಪುತ್ರಯೋಗಾ ಇಮೇಸ್ಮೃತಾಃ ॥೬೫೦॥ತಾ॥ ಸಪ್ತಮಾಧಿಪತಿಯುಕ್ತವಾದ ಗ್ರಹದ ನವಾಂಶಾಧಿಪತಿಯು ಪಂಚಮ ದ್ವಿತೀಯ ಲಗ್ನ ಇವುಗಳಲ್ಲಿ ಎಲ್ಲಿದ್ದರೂ ಪುತ್ರಯೋಗವೆಂದು ತಿಳಿಯತಕ್ಕದ್ದು ॥೬೫೦॥

## ಚಿರಾತ್ಪುತ್ರ ಯೋಗಾಃ

ಶ್ಲೋಕ॥ ಲಗ್ನಾಧಿಪೇ ಕುಜೇ ಸ್ವೋಚ್ಚೇ ರಂಧ್ರೇ ಮಂದಯುತೇ ರವೌ । ಶುಭದೃಷ್ಟಿ ಸಮಾಯೋಗೇ ಚಿರಾತ್ಪುತ್ರ ಮುಪೈತಿಸಃ ॥೬೫೧॥ತಾ॥ ಲಗ್ನಾಧಿಪತಿ ಯಾದ ಕುಜನು ಉಚ್ಚದಲ್ಲಿದ್ದು ಅಷ್ಟಮದಲ್ಲಿ ಶನಿ, ಸೂರ್ಯರು ಶುಭದೃಷ್ಟಿ ಯುಳ್ಳವರಾದರೆ ಬಹುಕಾಲಾನಂತರ ಪುತ್ರಪ್ರಾಪ್ತಿಯಾಗುವುದು ॥೬೫೧॥

ಶ್ಲೋಕ॥ ರಗ್ನೇ ಮಂದೇ ಗುರೌರಂಧ್ರೇ ವ್ಯಯೇ ಭೌಮಸಮನ್ವಿತೇ । ಶುಭದ್ರಷ್ಟೇಸ್ವತುಂಗೇವಾ ಚಿರಾತ್ಪುತ್ರಮುಪೈತಿಸಃ ॥೬೫೨॥ತಾ॥ ಲಗ್ನದಲ್ಲಿ ಶನಿ, ಅಷ್ಟಮದಲ್ಲಿ ಗುರು, ವ್ಯಯದಲ್ಲಿ ಕುಜನಿದ್ದು ಶುಭದೃಷ್ಟಿಯುಕ್ತರಾದರೂ ಸ್ವಕ್ಷೇತ್ರ ಉಚ್ಚಕ್ಷೇತ್ರದಲ್ಲಿದ್ದರೂ, ಕಾಲಾನಂತರ ಪುತ್ರಪ್ರಾಪ್ತಿಯಾಗುವುದು ॥೬೫೨॥

ಶ್ಲೋಕ॥ ಪುತ್ರಸ್ಥಾಃ ಮಂದಜೀವಲಗ್ನಾಲಗ್ನೇಪುತ್ರಾಧಿಪೇಶುಭೇ । ಪುತ್ರೇಶೇ ಶುಭರಾಶಿಸ್ಥೇ ಚಿರಾತ್ಪುತ್ರ ಮುಪೈತಿಸಃ ॥೬೫೩॥ತಾ॥ ಪುತ್ರಸ್ಥಾನದಲ್ಲಿ ಶನಿ, ಗುರು, ಬುಧರು, ಲಗ್ನಪಂಚಮಾಧಿಪತಿಗಳು ಶುಭಗ್ರಹಗಳಾಗಿ ಪಂಚಮಾಧಿಪತಿ ಶುಭಗ್ರಹ ರಾಶಿಯಲ್ಲಿದ್ದರೆ ಚಿರಕಾಲದಲ್ಲಿ ಪುತ್ರಪ್ರಾಪ್ತಿಯಾಗುವುದು ॥೬೫೩॥

ಶ್ಲೋಕ॥ ಸುತೇ ರಾಹ್ವರ್ಕಶುಕ್ರೇಜ್ಯಾಃ ಶುಭರ್ಕ್ಷೇ ಶುಭವೀಕ್ಷಿತೇ । ಪುತ್ರೇಶೇ ಶುಭರಾಶಿಸ್ಥೇ ಚಿರಾತ್ಪುತ್ರ ಮುಪೈತಿಸಃ ॥೬೫೩॥ತಾ॥ ಪಂಚಮದಲ್ಲಿ ರಾಹು, ಸೂರ್ಯ, ಶುಕ್ರ ಗುರುಗಳಿದ್ದು ಶುಭರಾಶಿಗಳಲ್ಲಿ ಶುಭಗ್ರಹವೀಕ್ಷಣೆಯುಳ್ಳವರಾಗಿ ಪುತ್ರೇಶನು ಶುಭರಾಶಿಯಲ್ಲಿದ್ದರೆ ಚಿರಕಾಲದಲ್ಲಿ ಸುತಪ್ರಾಪ್ತಿಯಾಗುವುದು ॥೬೫೪॥

ಶ್ಲೋಕ|| ಲಗ್ನೇ ಸೌಮ್ಯಧನೇಪಾಪೇ ತೃತೀಯೇ ಪಾಪಖೇಚರೇ । ಪುತ್ರೇಶೇ ಪುತ್ರರಾಶಿಸ್ಥೇ ಚಿರಾತ್ಪುತ್ರಮುಪೈತಿಸಃ ||೬೫೫||ತಾ|| ಲಗ್ನದಲ್ಲಿ ಶುಭಗ್ರಹ, ದ್ವಿತೀಯದಲ್ಲಿ ತೃತೀಯದಲ್ಲಿ ಪಾಪಗ್ರಹವಿದ್ದು, ಸುತಸ್ಥಾನಾಧಿಪತಿ ಶುಭಗ್ರಹಗಳ ರಾಶಿಯಲ್ಲಿದ್ದರೆ ಅಪರ ವಯಸ್ಸಿನಲ್ಲಿ ಸುತಪ್ರಾಪ್ತಿಯಾಗುವುದು ||೬೫೫||

## ಅಥ ದತ್ತಪುತ್ರ ಯೋಗಾಃ

ಶ್ಲೋಕ|| ಪುತ್ರಸ್ಥಾನೇ ಕುಜೇಮಂದೇ ಬುಧಕ್ಷೇತ್ರೇ ವಿಲಗ್ನಪೇ । ಬುಧದೃಷ್ಟೇ ಯುತೇವಾಪಿ ತದಾದತ್ತಾಃಸುತಾದಯಃ ||೬೫೬||ತಾ|| ಪುತ್ರಸ್ಥಾನದಲ್ಲಿ ಶನಿ ಕುಜರಿದ್ದು ಲಗ್ನಾಧಿಪತಿ ಬುಧನ ಕ್ಷೇತ್ರದಲ್ಲಿದ್ದು ಬುಧಯುಕ್ತನಾದರೂ ದೃಷ್ಟನಾದರೂ ದತ್ತಪುತ್ರನಿಂದ ಸಂತತಿಯಾಗುವುದು ||೬೫೬||

ಶ್ಲೋಕ|| ಪುತ್ರಸ್ಥಾನೇ ಬುಧಕ್ಷೇತ್ರ ಮಂದಕ್ಷೇತ್ರೇಥವಾಪುನಃ । ಮಂದ ಮಾಂದಿಯುತೇ ದೃಷ್ಟೇತದಾದತ್ತಾಃ ಸುತಾದಯಃ ||೬೫೭||ತಾ|| ಪುತ್ರಸ್ಥಾನವು ಮಕರ ಕುಂಭ ಮಿಥುನ ಕನ್ಯಾ ರಾಶಿಗಳಾಗಿ ಅದನ್ನು ಶನಿಮಾಂದಿಗಳು ನೋಡಿದರೂ ಅಲ್ಲಿಯೇ ಇದ್ದರೂ ದತ್ತಪುತ್ರಪ್ರಾಪ್ತಿಯಾಗುವುದು ||೬೫೭||

ಶ್ಲೋಕ|| ಪುತ್ರಸ್ಥಾನೇ ಬುಧಕ್ಷೇತ್ರ ಬುಧಸ್ತೇ ವೀಕ್ಷಿತೇಪಿವಾ । ಲಗ್ನಾಧಿಪೇ ಶನೌವಾಪಿ ದತ್ತವಾಪಿ ದತ್ತಪುತ್ರಾ ಭವಂತಿಹಿ ||೬೫೮||ತಾ|| ಸುತಸ್ಥಾನ ಬುಧಕ್ಷೇತ್ರ ವಾಗಿ ಅಲ್ಲಿ ಬುಧನಿದ್ದರೂ ಬುಧನಿಂದ ನೋಡಲ್ಪಟ್ಟರೂ ಲಗ್ನಾಧಿಪತಿ ಶನಿಯಾಗಿ ದ್ದರೆ ದತ್ತಸುತಪ್ರಾಪ್ತಿಯಾಗುವುದು ||೬೫೮||

ಶ್ಲೋಕ|| ಪುತ್ರೇಶೇ ಮಂದಸಂಯುಕ್ತೇ ಕುಜಸೌಮ್ಯ ನಿರೀಕ್ಷಿತೇ । ಲಗ್ನಾಧಿಪೇ ಬುಧಾಂಶೇವಾ ದತ್ತಪುತ್ರಾ ಭವಂತಿಹಿ ||೬೫೯||ತಾ|| ಸುತಸ್ಥಾನಕ್ಕಧಿಪತಿಯಾದ ಗ್ರಹವು ಶನಿಯುಕ್ತನಾಗಿ ಕುಜನಿಂದ ಮತ್ತು ಬುಧನಿಂದ ನೋಡಲ್ಪಟ್ಟರೆ ಅಥವಾ ಲಗ್ನಾಧಿಪತಿ ಬುಧ ನವಾಂಶೆಯಲ್ಲಿದ್ದರೂ ದತ್ತಸುತರು ಲಭಿಸುವರು ||೬೫೯||

ಶ್ಲೋಕ|| ಕಾಮೇಶೇ ಲಾಭಭಾವಸ್ಥೇ ಪುತ್ರೇಶೇ ಶುಭಸಂಯುತೇ । ಪುತ್ರೇ ಮಂದೇ ಬುಧೇವಾಪಿ ದತ್ತಪುತ್ರಾಭವಂತಿಹಿ ||೬೬೦||ತಾ|| ಸಪ್ತಮಾಧಿಪತಿ ಲಾಭ ಭಾವದಲ್ಲಿದ್ದು ಪಂಚಮಾಧಿಪತಿ ಶುಭಗ್ರಹಯುಕ್ತನಾಗಿ ಪಂಚಮದಲ್ಲಿ ಬುಧನಾಗಲೀ ಶನಿಯಾಗಲಿ ಇದ್ದರೆ ಜಾತಕನಿಗೆ ದತ್ತಸುತರು ಲಭಿಸುವರು ||೬೬೦||

ಶ್ಲೋಕ|| ಪುತ್ರೇಶೇ ಭಾಗ್ಯಭಾವಸ್ಥೇ ಭಾಗ್ಯೇಶೇ ಕರ್ಮರಾಶಿಗೇ । ಪುತ್ರೇ ಮಂದಜ ದೃಷ್ಟೇತು ದತ್ತಪುತ್ರಾ ಭವಂತಿಹಿ ||೬೬೧||ತಾ|| ಸುತ ಸ್ಥಾನಾಧಿಪತಿ

ಭಾಗ್ಯಭಾವದಲ್ಲೂ ಭಾಗ್ಯಾಧಿಪತಿ ಕರ್ಮರಾಶಿಯಲ್ಲೂ ಇದ್ದು ಪುತ್ರಸ್ಥಾನಕ್ಕೆ ಮಾಂದಿಗ್ರಹದೃಷ್ಟಿಯಿದ್ದರೆ ದತ್ತಸುತರು ಲಭಿಸುವರು ॥೬೬೧॥

ಶ್ಲೋಕ॥ ಲಗ್ನಾಧಿಪೇಭೃಗೌಸ್ವೋಚ್ಚೇ ಪುತ್ರೇಮಂದ ಸಮನ್ವಿತೇ । ಕಾರಕೇ ಬಲಸಂಯುಕ್ತೆ ದತ್ತಪುತ್ರಾಭವಂತಿಹಿ ॥೬೬೨॥ತಾ॥ ಲಗ್ನಾಧಿಪತಿಯಾದ ಶುಕ್ರನು ತನ್ನುಚ್ಚದಲ್ಲಿದ್ದು ಪಂಚಮದಲ್ಲಿ ಶನಿಯಿದ್ದು ಸುತಕಾರಕನು ಬಲಿಷ್ಠನಾಗಿದ್ದರೆ ದತ್ತ ಸುತರು ಲಭಿಸುವರು ॥೬೬೨॥

ಶ್ಲೋಕ॥ ಪುತ್ರಸ್ಥಾನಾದಿಪೇಚಂದ್ರೇ ಲಗ್ನೆಪುತ್ರೇ ಶನೈಶ್ಚರೇ । ಪರಿಪೂರ್ಣ ಬಲೇಜೀವೇ ದತ್ತಪುತ್ರಾತ್ಸುಭವೇತ್ ॥೬೬೩॥ತಾ॥ ಪಂಚಮಾಧಿಪತಿಯಾದ ಚಂದ್ರನು ಲಗ್ನದಲ್ಲಿಯೂ ಪಂಚಮದಲ್ಲಿ ಶನಿಯು ಬೃಹಸ್ಪತಿಯು ಬಲಿಷ್ಠನಾಗಿದ್ದರೆ ದತ್ತುಸುತನಿಂದ ಸಂತತಿಯಾಗುವುದು ॥೬೬೩॥

ಶ್ಲೋಕ॥ ಲಗ್ನಾಧಿಪೇ ಬುಧೇ ಪುತ್ರೇ ಕುಜದೃಷ್ಟಿ ಸಮನ್ವಿತೇ । ಕಾರಕೇ ಲಾಭರಾಶಿಸ್ಥೇ ದತ್ತಪುತ್ರಾತ್ಸುತೋಭವೇತ್ ॥೬೬೪॥ತಾ॥ ಲಗ್ನಾಧಿಪತಿಯಾದ ಬುಧನು ಪಂಚಮದಲ್ಲಿದ್ದು ಅಂಗಾರಕದೃಷ್ಟಿಯುಳ್ಳವನಾಗಿದ್ದು ಮತ್ತು ಸುತಕಾರಕನು ಲಾಭರಾಶಿಯಲ್ಲಿದ್ದರೆ ದತ್ತುಸುತನ ಸಂತತಿಯಾಗುವುದು ॥೬೬೪॥

ಶ್ಲೋಕ॥ ಲಗ್ನಾದಿಪೇ ಗುರೌ ಪುತ್ರೇ ಶನಿದೃಷ್ಟಿ ಸಮನ್ವಿತೇ । ಪುತ್ರೇಶೇ ಭೌಮರಾಶಿಸ್ಥೇ ದತ್ತಪುತ್ರಾ ಭವಂತಿಹಿ ॥೬೬೫॥ತಾ॥ ಲಗ್ನಾಧಿಪತಿಯಾದ ಗುರು ಪಂಚಮದಲ್ಲಿದ್ದು ಶನಿದೃಷ್ಟಿ ಇದ್ದು ಪಂಚಮಾಧಿಪತಿ ಅಂಗಾರಕ ಕ್ಷೇತ್ರದಲ್ಲಿದ್ದರೆ ದತ್ತಸುತ ಸಂತತಿಯಾಗುವುದು ॥೬೬೫॥

## ಸಂತಾನಾಭಾವ ಯೋಗಃ

ಶ್ಲೋಕ॥ ಪುತ್ರವಿತ್ತಕಳತ್ರೇಶಾಃ ಸಂಯುಕ್ತ ನವಭಾಗಪಾಃ । ಪಾಪಾಂಶಕಾಃ ಪಾಪಯುತಾ ಅನಪತ್ಯತ್ವಮಾದಿಶೇತ್ ॥೬೬೬॥ತಾ॥ ಪಂಚಮ, ದ್ವಿತೀಯ, ಸಪ್ತಮ ಈ ಮೂರು ಸ್ಥಾನಾಧಿಪತಿಗಳು ಯಾರ ನವಾಂಶೆಯಲ್ಲಿರುವರೋ ಆ ನವಾಂಶಾಧಿಪತಿಗಳು ಪಾಪಗ್ರಹಯುತರಾದರೂ ಪಾಪಗ್ರಹದೃಷ್ಟಿಯುಳ್ಳವರಾದರೂ ಅನಪತ್ಯತ್ವಯೋಗ ಅಂದರೆ-ಸಂತಾನಾಭಾವಯೋಗವೆಂದು ಹೇಳತಕ್ಕದ್ದು ॥೬೬೬॥

ಶ್ಲೋಕ॥ ಗುರುರ್ಲಗ್ನೇಶ ದಾರೇಶ ಪುತ್ರಸ್ಥಾನಾದಿಪೇಷುಚ । ಸರ್ವೇಷು ಬಲಹೀನೇಷು ವಕ್ತವ್ಯಾತ್ವನಪತ್ಯತಾ ॥೬೬೭॥ತಾ॥ ಬೃಹಸ್ಪತಿಯು ಲಗ್ನಾಧಿಪತಿಯು ಸಪ್ತಮಾಧಿಪತಿಯೂ ಮತ್ತು ಪುತ್ರಸ್ಥಾನಾಧಿಪತಿಯೂ ಸಹ ಬಲಹೀನವಾಗಿದ್ದರೆ ಸಂತಾನಾಭಾವಯೋಗವೆಂದು ತಿಳಿಯತಕ್ಕದ್ದು ॥೬೬೭॥

ಶ್ಲೋಕ।। ವ್ಯಯೇಶ ಸಂಯುತಾಂಶೇಶೇ ಮೃತ್ಯುರಾಶೌ ಸ್ಥಿತೇಯದಿ । ಪುತ್ರೇಶೇ ಕ್ರೂರಷಷ್ಠಂಶೇ ಅನುಪತ್ಯತ್ವಮಾದಿಶೇತ್ ।।೬೬೮।।ತಾ।। ವ್ಯಯಾಧಿಪತಿ ಇರುವ ಅಂಶಾಧಿಪತಿಯು ಅಷ್ಟಮದಲ್ಲಿದ್ದು ಪಂಚಮಾಧಿಪತಿಯು ಕ್ರೂರಷಷ್ಠ್ಯಂಶದಲ್ಲಿದ್ದರೆ ಸಂತಾನಾಭಾವಯೋಗವೆಂದು ತಿಳಿಯತಕ್ಕದ್ದು ।।೬೬೮।।

ಶ್ಲೋಕ।। ಕ್ರೂರಷಷ್ಠ್ಯಂಶಕೇ ಜೀವೇ ಪುತ್ರಸ್ಥೇ ನಾಶರಾಶಿಗೇ । ಪುತ್ರೇಶೇ ನಾಶರಾಶಿಸ್ಥೇ ಪ್ಯನಪತ್ಯತ್ವಮಾಧಿಶೇತ್ ।।೬೬೯।।ತಾ।। ಕ್ರೂರಷಷ್ಠ್ಯಂಶದಲ್ಲಿ ಬೃಹಸ್ಪತಿಯಿದ್ದು ಪಂಚಮವನ್ನಾಗಲಿ ಅಥವಾ ಅಷ್ಟಮವನ್ನು ಹೊಂದಿದ್ದರೂ, ಪುತ್ರ ಸ್ಥಾನಾಧಿಪತಿ ಅಷ್ಟಮದಲ್ಲಿದ್ದರೂ, ಅನಪತ್ಯತ್ವ (ಸಂತಾನಾಭಾವ) ಯೋಗವೆಂದು ತಿಳಿಯತಕ್ಕದ್ದು ।।೬೬೯।।

## ಅಥ ಪುತ್ರನಾಶ ಯೋಗಃ

ಶ್ಲೋಕ।। ಪಾಪದೃಷ್ಟೇತು ತದ್ಭಾವೇ ತದೀಶೇ ಪಾಪಸಂಯುತೇ । ಕಾರಕೇ ಪುತ್ರಸಂಯುಕ್ತೇ ಪುತ್ರನಾಸಂ ವದೇತ್ವದಾ ।।೬೭೦।।ತಾ।। ಪುತ್ರಸ್ಥಾನಕ್ಕೆ ಪಾಪಗ್ರಹ ದೃಷ್ಟಿಯಿದ್ದು ಪುತ್ರಸ್ಥಾನಾಧಿಪತಿ ಪಾವಗ್ರಹಯುಕ್ತನಾಗಿದ್ದು ಕಾರಕನು ಪುತ್ರ ಸ್ಥಾನಾಧಿಪತಿಯು ಸಂಗಡ ಇದ್ದರೆ ಪುತ್ರನಾಶಯೋಗ ।।೬೭೦।।

ಶ್ಲೋಕ।। ವಿತ್ತಾಧಿಪಕಳತ್ರೇಶ ಸಂಯುಕ್ತ ನವಭಾಗಪೌ । ಪಾಪಾಂಶಗೌ ಪಾಪಯುತೌ ಪುತ್ರನಾಶಂ ವದೇತ್ತದಾ ।।೬೭೧।।ತಾ।। ದ್ವಿತೀಯಾಧಿಪತಿಯು ಸಪ್ತಮಾಧಿಪತಿ ಇರುವ ನವಾಂಶಾಧಿಪತಿಗಳು ಪಾಪಗ್ರಹಗಳಾಗಿದ್ದರೂ, ಪಾಪಯುಕ್ತ-ರಾಗಿದ್ದರೂ ಪುತ್ರನಾಶಯೋಗ ।।೭೧।।

ಶ್ಲೋಕ।। ಕ್ರೂರಾಂಶ ಪುತ್ರಭಾವೇಷೇ ನೀಚಮೂಢ ಸಮನ್ವಿತೇ । ಪಾಪೈ-ರ್ದೃಷ್ಟೇಥವಾದುಃಸ್ಥೇ ಪುತ್ರನಾಶಂ ವದಂತಿಹಿ ।।೬೭೨।।ತಾ।। ಸುತಸ್ಥಾನಾಧಿಪತಿ ಕ್ರೂರಗ್ರಹಗಳ ನವಾಂಶೆಯಲ್ಲಿದ್ದರೂ, ನೀಚನಾಗಿದ್ದರೂ ಅಸ್ತನಾಗಿದ್ದರೂ ಇರುವ ಗ್ರಹಗಳೊಡನೆ ಸೇರಿ ಪಾಪಗ್ರಹಗಳಿಂದ ನೋಡಲ್ಪಟ್ಟರೂ, ಅಥವಾ ದುಃಸ್ಥಾನಗಳಲ್ಲಿದ್ದು ನೋಡಲ್ಪಟ್ಟರೂ ಈ ಯೋಗದಲ್ಲಿ ಹು[illegible]ವನಿಗೆ ಸುತನಾಶವನ್ನು ಹೇಳತಕ್ಕದ್ದು ।।೬೭೨।।

## ಅಪುತ್ರಯೋಗಃ

ಶ್ಲೋಕ।। ಷಡಾದಿತ್ರ[illegible]ಸಂಸ್ಥೇತು ಸುತಾಧೀಶೇತ್ವಪುತ್ರತಾ ।।೬।।

ತಾ।। ಸುತಸ್ಥಾನಾಧಿಪತಿ ಷಷ್ಠಾಷ್ಟಮವ್ಯಯಗಳಲ್ಲಿದ್ದರೆ ಅಪುತ್ರಯೋಗ.

## ಪುತ್ರಲಾಭಾದಿ ಯೋಗಃ

ಶ್ಲೋಕ।। ಕೇಂದ್ರತ್ರಿಕೋಣ ಸಂಸ್ಥೇತು ಪುತ್ರಲಾಭಾಧಿಸಂಭವಃ ।।೬೭೩।।

ತಾ।। ಸುತಸ್ಥಾನಾಧಿಪತಿಯು ಕೇಂದ್ರತ್ರಿಕೋಣಗಳಿದ್ದರೆ ಸುತಲಾಭವಾಗುವುದು ।।೬೭೩।।

## ಸತ್ಪುತ್ರ ಲಾಭಯೋಗಃ

ಶ್ಲೋಕ।। ಸತ್ಪುತ್ರಲಾಭಃ ಸುತಪೇಸುರೇಜ್ಯೇ ಶುಭೇಷುಗೇಹೇಷುಗತೇಚಭಾನೌ ।।೬೭೪।।ತಾ।। ಪಂಚಮಾಧಿಪತಿ ಬೃಹಸ್ಪತಿಯಾಗಿ ಶುಭಸ್ಥಾನದಲ್ಲಿ (೯) ಸೂರ್ಯನಿದ್ದರೆ ಜಾತಕನ ಮಗನು ಸತ್ಪುತ್ರನಾಗುವನು ।।೬೭೪।।

## ಏಕಪುತ್ರ ಯೋಗಃ

ಶ್ಲೋಕ।। ಏಕಸ್ಥಿರಃಸ್ಯಾತ್ಪುಏಕ ಏವ ಸ್ಥಿತಃ ಶುಭಃ ಕೇಂದ್ರನವಾತ್ಮಜಸೇತ್ ।।೬೭೫।।ತಾ।। ಪುತ್ರಸ್ಥಾನಾಧಿಪತಿಯು ಕೇಂದ್ರತ್ರಿಕೋಣ ನವಾತ್ಮಜ ಸ್ಥಾನಗಳಲ್ಲಿದ್ದರೆ ಏಕಪುತ್ರಯೋಗಃ ।।೬೭೫।।

## ಕಾಕಾ ವಂಧ್ಯಾಯೋಗಃ

ಶ್ಲೋಕ।। ಅಸ್ತಂಗತೇ ಪಂಚಮೇಶೇ ಪಾಪಾಕ್ರಾಂತೇಚದುರ್ಬಲೇ । ಷಷ್ಠೇ ನೀಚೇ ಸುತಾಧೀಶೇ ಕಾಕವಂಧ್ಯಾವಿಶೇಷತಃ ।।೬೭೬।।ತಾ।। ಪಂಚಮಾಧಿಪತಿ ಅಸ್ತಂಗತನಾಗಿದ್ದರೂ ಪಾಪಗ್ರಹ ರಾಶಿಯಲ್ಲಿ ದುರ್ಬಲನಾಗಿದ್ದರೂ ಪಂಚಮಾಧಿಪತಿ ಷಷ್ಠದಲ್ಲಿದ್ದರೂ ನೀಚದಲ್ಲಿದ್ದರೂ ಕಾಕವಂಧ್ಯಾಯೋಗ ।।೬೭೬।।

ಶ್ಲೋಕ।। ಷಷ್ಠಸ್ಥಾನೇ ಸುತಾಧೀಶೇ ಲಗ್ನೇಶೇ ಕುಜವೇಶ್ಮನಿ ಮ್ರಿಯತೇ ಪ್ರಥಮಾಪತ್ಯಂ ಕಾಕವಂಧ್ಯಾತ್ವಮಾಪ್ನುಯಾತ್ ।।೬೭೭।।ತಾ।। ಷಷ್ಠಸ್ಥಾನದಲ್ಲಿ ಕುಜಕ್ಷೇತ್ರದಲ್ಲಿ ಪಂಚಮಾಧಿಪತಿ ಇದ್ದರೂ ಲಗ್ನಾಧಿಪತಿ ಅಂಗಾರಕ ಕ್ಷೇತ್ರದಲ್ಲಿದ್ದರೆ ಪ್ರಥಮಾಪತ್ಯನಾಶವಾಗಿ ಅನಂತರದಲ್ಲಿ ಸಂತತಿಯಿಲ್ಲದೆ ಹೋಗುವುದು ।।೬೭೭।।

ಶ್ಲೋಕ।। ಸುತಾಧೀಶೋಹಿ ನೀಚಸ್ಥಃ ಷಡಾದಿತ್ರಯಸಂಸ್ಥಿತಃ । ಕಾಕವಂಧ್ಯಾ ಭವೇನ್ನಾರೀ ಸುತೇಕೇತು ಬುಧೌ ಯದಿ ।।೬೭೮।।ತಾ।। ಪಂಚಮಾಧಿಪತಿ ನೀಚಸ್ಥನಾಗಿದ್ದರೂ, ಷಷ್ಠಾಷ್ಟಮವ್ಯಯದಲ್ಲಿದ್ದರೂ, ಪುತ್ರಸ್ಥಾನದಲ್ಲಿ ಬುಧ ಕೇತುಗಳಿದ್ದರೆ ಆತನ ಪತ್ನಿಯು ಕಾಕವಂಧ್ಯೆಯಾಗುವಳು ।।೬೭೮।।

ಶ್ಲೋಕ।। ಸುತೇಶೋ ನೀಚಗೋಯತ್ರ ಸುತಸ್ಥಾಂ ನಪಶ್ಯತಿ । ತತ್ರಸೌರಿ ಬುಧೌಸ್ಯಾತಾಂ ಕಾಕಮಧ್ಯಾತ್ವಮಾಪ್ನುಯಾತ್ ।।೬೭೮।।ತಾ।। ಪುತ್ರಸ್ಥಾನಾಧಿಪತಿ ನೀಚನಾಗಿದ್ದು ಪುತ್ರಸ್ಥಾನವನ್ನು ನೋಡದೆ ಪಂಚಮದಲ್ಲಿ ಶನಿ ಬುಧರಿದ್ದರೆ ಕಾಕವಂಧ್ಯಾಯೋಗ ।।೬೭೯।।

## ಕಷ್ಟಾತ್ಪುತ್ರಯೋಗಃ

ಶ್ಲೋಕ॥ ಭಾಗ್ಯೇಶೋ ಮೂರ್ತಿವರ್ತೀಚಸುತೇಶೋ ನೀಚಗೋಯದಿ । ಸುತೇ ಕೇತುಬುಧೌ ಸ್ಯಾತ್ಯಾಂ ಕಷ್ಟಾತ್ಪುತ್ರ ವಿನಿರ್ದಿಶೇತ್ ॥೬೮೦॥ತಾ॥ ಭಾಗ್ಯಾಧಿಪತಿ ಲಗ್ನದಲ್ಲಿದ್ದು ಪಂಚಮಾಧಿಪತಿ ನೀಚದಲ್ಲಿದ್ದು ಪಂಚಮದಲ್ಲಿ ಕೇತು ಬುಧರಿದ್ದರೆ ಕಷ್ಟದಿಂದ ಪುತ್ರವಂತನಾಗುವನು ॥೬೮೦॥

ಶ್ಲೋಕ॥ ಷಡಾದಿತ್ರಸಂಸ್ಥೇಪಿ ನೀಚೋವಾಪ್ಯರಿ ಸಂಸ್ಥಿತಃ । ಪಾಪಾಕ್ರಾಂತೇ ಸುತಸ್ಥಾನೇ ಪುತ್ರ ಕಷ್ಟಾದ್ವಿನಿರ್ದಿಶೇತ್ ॥೬೮೧॥ತಾ॥ ಪುತ್ರಸ್ಥಾನಾಧಿಪತಿ ಷಷ್ಠ, ಅಷ್ಟಮ, ವ್ಯಯ ಸ್ಥಾನಗಳಲ್ಲಿದ್ದರೂ ನೀಚಶತ್ರುಕ್ಷೇತ್ರಗಳಲ್ಲಿದ್ದರೂ, ಸುತಸ್ಥಾನದಲ್ಲಿ ಪಾಪಗ್ರಹವಿದ್ದರೆ, ಕಷ್ಟದಿದಂ ಪುತ್ರಲಾಭವಾಗುವುದು ॥೬೮೧॥

## ಕನ್ಯಾಜನನ ಯೋಗಃ

ಶ್ಲೋ॥ ಸುತೇಶೇ ಶಶಿಯುಕ್ತೇಚ ತ್ರಿರಾಶ್ಯಂಶಗತೇಪಿಚ । ತಥೈವಕನ್ಯಕಾ ಲಾಭಂ ಪ್ರವದೇನ್ಮತಿಮಾನ್ನರಃ ॥೬೮೨॥ತಾ॥ ಪಂಚಮಾಧಿಪತಿ ಚಂದ್ರಯುಕ್ತನಾಗಿ ಪಂಚಮ ದ್ರೇಕ್ಕಾಣದಲ್ಲಿದ್ದರೆ ಕನ್ಯಾಲಾಭವಾಗುವುದು ॥೬೮೨॥

## ಕಾಲನಿರ್ದೇಶಾತ್ಪುತ್ರ ಯೋಗಃ

ಶ್ಲೋಕ॥ ಪುತ್ರಸ್ಥಾನಂಗತೇ ಜೀವೇ ತದೀಶೇ ಭೃಗುಸಂಯುತೇ । ದಾತ್ರಿಂಶೇಚ ತ್ರಯ ಸ್ತ್ರಿಂಶೇವೆತ್ಸರೇಪುತ್ರ ಲಾಭಕೃತ್ ॥೬೮೩॥ತಾ॥ ಪುತ್ರಸ್ಥಾನದಲ್ಲಿ ಬೃಹಸ್ಪತಿಯಿದ್ದು, ಪಂಚಮಾಧಿಪತಿ ಶುಕ್ರಯುಕ್ತನಾದರೆ ಮುವ್ವತ್ತೆರಡನೇ ಅಥವಾ ಮುವ್ವತ್ತುಮೂರನೇ ಸಂವತ್ಸರದಲ್ಲಿ ಪುತ್ರಲಾಭವಾಗುವುದು ॥೬೮೩॥

ಶ್ಲೋಕ॥ ಲಗ್ನಾದ್ಭಾಗ್ಯ ಗತೇಜೀವೇ ಜೀವಾದ್ಭಾಗ್ಯಗತೇ ಭೃಗೌ । ಲಗ್ನೇಶೇ ಭೃಗುಸಂಯುಕ್ತೆ ಚತ್ವಾರಿಂಶೇ ತ್ಸುತಂಲಭೇತ್ ॥೬೮೪॥ತಾ॥ಲಗ್ನದಿಂದ ಭಾಗ್ಯ ಸ್ಥಾನದಲ್ಲಿ ಬೃಹಸ್ಪತಿಯಿದ್ದು ಗುರುವಿನಿಂದ ಭಾಗ್ಯಸ್ಥಾನದಲ್ಲಿ ಶುಕ್ರನಿದ್ದು ಲಗ್ನಾಧಿಪತಿ ಸೇರಿದ್ದರೆ ಜಾತಕನಿಗೆ ನಲವತ್ತನೇ ಸಂವತ್ಸರದಲ್ಲಿ ಪುತ್ರಲಾಭವಾಗುವುದು ॥೬೮೪॥

## ಕಾಲನಿರ್ದೇಶಾತ್ಪುತ್ರನಾಶ ಯೋಗಃ

ಶ್ಲೋಕ॥ ಪುತ್ರಸ್ಥಾನಂ ಗತೋರಾಹು ಸ್ತದೀಶೇ ಪಾಪಸಂಯುತೇ । ನೀಚರಾಶಿ ಗತೇಜೀವೇ ದ್ವಾತ್ರಿಂಶೆ ಪುತ್ರಮೃತ್ಯುದಃ ॥೬೮೫॥ತಾ॥ ಪುತ್ರಸ್ಥಾನದಲ್ಲಿ ರಾಹುವಿದ್ದು ಪಂಚಮಾಧಿಪತಿ ಪಾಪಗ್ರಹಯುತನಾಗಿ ಬೃಹಸ್ಪತಿ ನೀಚನಾಗಿದ್ದರೆ ಜಾತಕನಿಗೆ ಮೂವತ್ತರಡನೇ ವರ್ಷದಲ್ಲಿ ಪುತ್ರನಾಶವಾಗುವುದು ॥೬೮೫॥

ಶ್ಲೋಕ|| ಜೀವಾತ್ಪಂಚ ಮಗೇಪಾಪೇ ಲಗ್ನಾತ್ಪುತ್ರಂ ಗತೇವಿಚ । ಷಡ್ವಿಂ ಶೇಚತ್ರಯಸ್ತ್ರಿಂಶೇ ಚತ್ವಾರಿಂಶೇ ಸುತಕ್ಷಯಃ ||೬೮೬||ತಾ|| ಬೃಹಸ್ಪತಿಯಿಂದ ಪಂಚಮದಲ್ಲಿ ಪಾಪಗ್ರಹವಿದ್ದರೂ, ಲಗ್ನಾತ್ಪಂಚಮದಲ್ಲಿ ಪಾಪಗ್ರಹವಿದ್ದರೂ, ೨೬-೩೩-೪೦ನೇ ವರ್ಷಗಳಲ್ಲಿ ಪುತ್ರನಾಶವಾಗುವದು ||೬೮೬||

ಶ್ಲೋಕ|| ಲಗ್ನೇಮಾಂದಿ ಸಮಾಯುಕ್ತೇ ಲಗ್ನೇಶೇ ನೀಚರಾಶಿಗೇ । ಷಟ್ಸಂಚಾ-ಶದ್ವ ಶಾಬ್ದೇಷು ಪುತ್ರಶೋಕಸಮಾಕುಲಃ || ಚತುರ್ಥೇ ಪಾಪಸಂಯುಕ್ತೇ ಷಷ್ಠೇ ಪಾಪ ಸಮನ್ವಿತೇ ||೬೮೭||ತಾ|| ಲಗ್ನದಲ್ಲಿ ಮಾಂದಿಗ್ರಪವಿದ್ದು ಲಗ್ನಾಧಿಪತಿ ನೀಚನಾಗಿದ್ದರೆ ಷಷ್ಠ ಚತುರ್ಥಗಳಲ್ಲಿ ಪಾಪಗ್ರಹವಿದ್ದರೆ ೫೬ನೇ ವರ್ಷದಲ್ಲಿ ಪುತ್ರಶೋಕವುಂಟಾಗುವದು ||೬೮೭||

## ದಶಪುತ್ರಯೋಗಃ

ಸಶ್ಲೋಕ|| ಸುತೇಶೇ ಪರಮೋಚ್ಚಸ್ಥೇ ಲಗ್ನೇಶೇನ ಸಮನ್ವಿತೇ ಕಾರಕೇ ಶುಭಸಂಯುಕ್ತೇ ದಶಸಂಖ್ಯಾಸ್ತು ಸೂನವಃ ||೬೮೮||ತಾ|| ಪಂಚಮಾಧಿಪತಿಯು ಪರಮೋಚ್ಚದಲ್ಲಿ ಲಗ್ನಾಧಿಪತಿಯನ್ನು ಕೂಡಿ ಪುತ್ರಕಾರಕನಾದ ಬೃಹಸ್ಪತಿಯು ಬಲಿಷ್ಠನಾಗಿದ್ದರೆ ದಶಪುತ್ರರಾಗುವರು ||೬೮೮||

## ನವಪುತ್ರ ಯೋಗಃ

ಶ್ಲೋಕ|| ಪರಮೋಚ್ಚಗತೇಜೀವೇ ಧನೇಶೇ ರಾಹುಸಂಯುತೇ । ಭಾಗ್ಯೇಶೇ ಭಾಗ್ಯಸಂಯುಕ್ತೇ ಸಂಖ್ಯಾತಾನವ ಸೂನವಃ ||೬೮೯||ತಾ|| ಬೃಹಸ್ಪತಿಯು ಪರಮೋಚ್ಚದಲ್ಲಿದ್ದು ೨ನೇ ಅಧಿಪತಿ ರಾಹುಯುಕ್ತನಾಗಿ ನವಮಾಧಿಪತಿ ನವಮದಲ್ಲಿದ್ದರೆ ನವಸಂಖ್ಯಾಪುತ್ರರಾಗುವರು ||೬೮೯||

## ಅಷ್ಟಪುತ್ರ ಯೋಗಃ

ಶ್ಲೋಕ|| ಪುತ್ರಭಾಗ್ಯಗತೇಜೀವೇ ಸುತೇಶೇ ಬಲಸಂಯುತೇ । ಧನೇಶೇ ಕರ್ಮರಾಶಿಸ್ಥೇ ವಸುಸಂಖ್ಯಾಸ್ತು ಸೂನವಃ ||೬೯೦||ತಾ|| ಪುತಸ್ಥಾನದಲ್ಲಿಯಾಗಲೀ ಭಾಗ್ಯಸ್ಥಾನದಲ್ಲಿಯಾಗಲೀ ಬೃಹಸ್ಪತಿಯಿದ್ದು ಪಂಚಮಾಧಿಪತಿ ಬಲಿಷ್ಠನಾಗಿ ದ್ವಿತೀಯಾಧಿಪತಿ ದಶಮದಲ್ಲಿದ್ದರೆ ಅಷ್ಟಪುತ್ರಯೋಗ ||೬೯೦||

## ಸಪ್ತಸಂಖ್ಯಾ ಪುತ್ರಯೋಗಃ

ಶ್ಲೋಕ|| ಪಂಚಮಾತ್ಪಂಚಮೇಮಂದೇ ಸುತಸ್ಥೇಚ ತದೀಶ್ವರೇ । ಸೂನವಃ ಸಪ್ತಸಂಖ್ಯಾಶ್ಚದ್ವಿ ಗರ್ಭೇಯ ಮಲಂಭವೇತ್ ||೬೯೧||ತಾ|| ಪಂಚಮಾತ್ಪಂಚಮ ದಲ್ಲಿ ಶನಿ ಇದ್ದು, ಪಂಚಮದಲ್ಲಿ ಪಂಚಮಾಧಿಪತಿ ಇದ್ದರೆ ಸಪ್ತಸಂಖ್ಯಾಸುತರಾಗು ವರು. ಮತ್ತು ಎರಡು ಗರ್ಭಗಳಲ್ಲಿ ಯಮಳಜನನವಾಗುವದು ||೬೯೦||

## ಷಟ್ಪುತ್ರ ಯೋಗಃ

ಶ್ಲೋಕ॥ ವಿತ್ತೇಶೇ ಪಂಚಮಸ್ಥೇಚ ಸುತಸ್ಥೇ ಪಂಚಮಾಧಿಪೇ। ಷಟ್ಸಂಖ್ಯಾಕ ಸುತಪ್ರಾಪ್ತಿ ಸ್ತೇಷಾಂಚ ತ್ರಿಪ್ರಜಾಮೃತಿಃ ॥೬೯೨॥ತಾ॥ ದ್ವಿತೀಯಾಧಿಪತಿ ಪಂಚಮದಲ್ಲಿದ್ದು ಪಂಚಮಾಧಿಪತಿಯು ಅಲ್ಲಿಯೇ ಇದ್ದರೆ ಆರು ಸುತರಾಗಿ ಅವರಲ್ಲಿ ಮೂವರು ನಷ್ಟವಾಗುವರು ॥೬೯೨॥

## ಏಕಪುತ್ರ ಯೋಗಃ

ಶ್ಲೋಕ॥ ಲಗ್ನಾತ್ಪಂಚಮಗೇ ಜೀವೇ ಜೀವಾತ್ಪಂಚಮಗೇಶನೌ । ಮಂದಾತ್ಪಂಚಮಗೇ ರಾಹೌ ಪುತ್ರಮೇಕಂವಿನಿರ್ದಿಶೇತ್ ॥೬೯೩-೬೯೪॥ತಾ॥ ಲಗ್ನಾತ್ಪಂಚಮದಲ್ಲಿ ಬೃಹಸ್ಪತಿಯು ಇದ್ದು ಬೃಹಸ್ಪತಿಗೆ ಪಂಚಮಸ್ಥಾನದಲ್ಲಿ ಶನಿ ಇದ್ದು ಶನಿಯಿಂದ ಪಂಚಮದಲ್ಲಿ ರಾಹುವಿದ್ದರೆ ಏಕಸುತ ಯೋಗವು ॥೬೯೩-೬೯೪॥

## ಕಳತ್ರಾಂತರ ಪುತ್ರಯೋಗಃ

ಶ್ಲೋ॥ ಪಂಚಮೇ ಪಾಪಸಂಯುಕ್ತೆ ಗುರೋಃ ಪಂಚಮಗೇಶನೌ । ಕಳತ್ರಾಂತರೇ ಪುತ್ರಲಾಭಂ ಕಲತ್ರತ್ರಯಭಾಗ್ಭವೇತ್ ॥೬೯೫॥ತಾ॥ ಪಂಚಮದಲ್ಲಿ ಪಾಪಗ್ರಹವಿದ್ದು ಬೃಹಸ್ಪತಿಯಿಂದ ಪಂಚಮದಲ್ಲಿ ಶನಿ ಇದ್ದರೆ ಕಳತ್ರಾಂತರದಲ್ಲಿ ಸುತಲಾಭವಾಗುವುದು ಮತ್ತು ಮೂವರು ಹೆಂಡತಿಗಳುಳ್ಳವನಾಗುವನು ॥೬೯೫॥

## ಜಾತಂ ಜಾತಂ ವಿನಾಶಯೋಗಃ

ಶ್ಲೋಕ॥ ಪಂಚಮೇ ಪಾಪಸಂಯುಕ್ತೇ ಗುರೋಃ ಪಂಚಮಗೇಶನೌ । ಪಂಚಮೇ ಭೌಮ ಸಂಯುಕ್ತೇ ಲಗ್ನೇಶೇಚ ಧನಂಗತೇ । ಜಾತಂ ಜಾತಂ ವಿನಾಶಂಚ ದೀರ್ಘಾಯುಶ್ಚೈವ ಮಾನಸಃ ॥೬೯೬॥ತಾ॥ ಪಂಚಮದಲ್ಲಿ ಪಾಪಗ್ರಹವಿದ್ದು, ಬೃಹಸ್ಪತಿಯಿಂದ ಪಂಚಮದಲ್ಲಿ ಶನಿಯಿದ್ದು, ಪಂಚಮದಲ್ಲಿ ಕುಜನು, ಲಗ್ನಾಧಿಪತಿಯು ದ್ವಿತೀಯದಲ್ಲೂ ಇದ್ದರೆ ಹುಟ್ಟಿದ ಮಕ್ಕಳೆಲ್ಲವು ಸಾಯುವರು. ಕಡೆಗೆ ಒಂದು ನಿಲ್ಲುವುದು ಕಷ್ಟತರವಾಗುವುದು ॥೬೯೬॥

## ಸರ್ಪದಷ್ಟಾತ್ಸುತಕ್ಷಯ ಯೋಗಃ

ಶ್ಲೋಕ॥ ಪುತ್ರಸ್ಥಾನಗತೇರಾಹೌ ಪುತ್ರೇಶ ಸಹಿತೇಸತಿ । ಶುಭೈರವೀಕ್ಷಿತೇ ವಿಂದ್ಯಾತ್ಸರ್ಪದಷ್ಟಾತ್ಸುತಕ್ಷಯಃ ॥೬೯೭॥ತಾ॥ ಸುತಸ್ಥಾನದಲ್ಲಿ ಸುತಸ್ಥಾನಾಧಿಪತಿಯೊಂದಿಗೆ ರಾಹುವಿದ್ದು ಶುಭಗ್ರಹವಿದ್ದು ನೋಡಲ್ಪಡದಿದ್ದರೆ ಜಾತಕನ ಮಗನು ಹಾವುಕಚ್ಚಿ ಮೃತನಾಗುವನು ॥೬೯೭॥

## ಬುದ್ಧಿಮತ್ತ್ವ ಯೋಗಃ

ಶ್ಲೋಕ|| ಬುದ್ಧಿಸ್ಥಾನಾಧಿಪೇಸೌಮ್ಯೇ ಶುಭದೃಷ್ಟಿ ಸಮನ್ವಿತೇ । ಶುಭಗ್ರಹಣಾಂ ಕ್ಷೇತ್ರೇವಾ ಬುದ್ಧಿರ್ಮಾ ನೀತಿರ್ಮಾಭವೇತ್ ||೬೯೮||

ತಾ|| ಪಂಚಮಾಧಿಪತಿ ಶುಭಗ್ರಹವಾಗಿ ಶುಭಗ್ರಹ ದೃಷ್ಟಿಯಲ್ಲಿದ್ದರೂ ಅಥವಾ ಶುಭಗ್ರಹದ ಕ್ಷೇತ್ರವಾದರೂ ಅಥವಾ ಶುಭಗ್ರಹವು ಪಂಚಮದಲ್ಲಿದ್ದರೂ ಬುದ್ಧಿವಂತನೂ, ನೀತಿವಂತನೂ ಆಗುವನು ||೬೯೮||

## ತೀವ್ರಬುದ್ಧಿಯೋಗಃ

ಶ್ಲೋಕ|| ಪರಮೋಚ್ಚಾಂಶಕೇ ಬುದ್ಧಿನಾಥೇ ಸೌಮ್ಯನಿರೀಕ್ಷಿತೇ । ಶುಭ ಗ್ರಹಾಣಾಂ ಮಧ್ಯಸ್ಥೇ ತೀವ್ರಬುದ್ಧಿಂ ಸಮಾಧಿಶೇತ್ ||೬೯೯||ತಾ|| ಬುದ್ಧಿ ಸ್ಥಾನಾಧಿಪತಿ ಪರಮೋಚ್ಚಾಂಶದಲ್ಲಿದ್ದು ಸೌಮ್ಯಗ್ರಹದಿಂದ ನೋಡಲ್ಪಟ್ಟರೆ ಅಥವಾ ಬುದ್ಧಿಸ್ಥಾನದಲ್ಲಿ ಶುಬಗ್ರಹಗಳ ಮಧ್ಯದಲ್ಲಿದ್ದರೂ ಜಾತಕನು ತೀವ್ರ ಬುದ್ಧಿಯುಳ್ಳವ ನಾಗುವನು ||೬೯೯||

ಶ್ಲೋಕ|| ಬುದ್ಧಿ ಸ್ಥಾನಾಧಿಪಸ್ಥಾಂಶ ರಾಶೀಶೇ ಶುಭವೀಕ್ಷಿತೇ । ಬುದ್ಧಿ ಸ್ಥಾನಾಧಿಪೇಸೌಮ್ಯೆ ತೀವ್ರಬುದ್ಧಿಂ ಸಮಾದಿಶೇತ್ ||೭೦೦||ತಾ|| ಬುದ್ಧಿಸ್ಥಾನಾಧಿಪತಿ ಯಾರ ನವಾಂಶೆಯಲ್ಲಿರುವನೋ ಆ ನವಾಂಶಾಧಿಪತಿ ಸೌಮ್ಯಗ್ರಹದ ವೀಕ್ಷಣೆಯುಳ್ಳ ವನಾಗಿ ಬುದ್ಧಿಸ್ಥಾನಾಧಿಪತಿ ಶುಭಗ್ರಹವಾಗಿದ್ದರೆ ಜಾತಕನು ತೀವ್ರ ಬುದ್ಧಿಯುಳ್ಳವ ನಾಗುವನು ||೭೦೦||

## ಧಾರಣಾದಿ ಸಮರ್ಥಬುದ್ಧಿ ಯೋಗಃ

ಶ್ಲೋಕ|| ಕಾರಕಸ್ಥಿತರಾಂಶ್ಯಶನಾಥೇ ಕೇಂದ್ರತ್ರಿಕೋಣಗೇ । ಬುದ್ಧೀಶ್ವರೇಣ ಸಂದೃಷ್ಟೇ ಧಾರಣಾದಿ ಪಟುರ್ಭವೇತ್ ||೭೦೧-೭೦೨||ತಾ|| ಬುದ್ಧಿಕಾರಕನಾದ ಬೃಹಸ್ಪತಿಯು ಇರುವ ಅಂಶನಾಥನು ಕೇಂದ್ರ ತ್ರಿಕೋಣದಲ್ಲಿದ್ದು ಬುದ್ಧಿಸ್ಥಾನಾಧಿ ಪತಿಯಿಂದ ನೋಡಲ್ಪಟ್ಟರೆ ಜಾತಕನು ಧಾರಣಾದಿಗಳಲ್ಲಿ ಸಮರ್ಥವಾದ ಬುದ್ಧಿ ಯುಳ್ಳವನಾಗುವನು ||೭೦೧-೭೦೨||

## ಪರೇಂಗಿತಜ್ಞ ಯೋಗಃ

ಶ್ಲೋಕ|| ಪರೇಂಗಿತಜ್ಞೋಮೇಧಾವೀ ಕಾರಕಸ್ಥಿತ ಭಾಗಪೇ । ಕೇಂದ್ರತ್ರಿಕೋಣ ಸಂಯುಕ್ತೇ ಕಾರಕ ಗ್ರಹವೀಕ್ಷಿತೇ ||೭೦೩||ತಾ|| ಬುದ್ಧಿಕಾರಕನಾದ ಬೃಹಸ್ಪತಿ ಇರುವ ನವಾಂಶಾಧಿಪತಿಯು ಕೇಂದ್ರ ತ್ರಿಕೋಣಗಳಲ್ಲಿದ್ದು ಬುದ್ಧಿಕಾರಕನಿಂದ ನೋಡಲ್ಪಟ್ಟರೆ, ಜಾತಕನು ಪರರ ಇಂಗಿತವನ್ನರಿವವನಾಗುವನು ||೭೦೩||

ಶ್ಲೋಕ।। ನಾಥಕಾರಕ ಸಂಯುಕ್ತತ್ರ್ಯಂಶ ಭಾಗಪತೌ ಶುಭೇ । ಚತುಷ್ಟಯೇ ತ್ರಿಕೋಣೇವಾ ಚೇಂಗಿತಜ್ಞಶ್ಶುಕ್ಷಿತೇ ।।೭೦೪।।ತಾ।। ಬುದ್ಧಿಸ್ಥಾನಾಧಿಪತಿಯು ಬುದ್ಧಿಕಾರಕನು ಇರುವ ದ್ರೇಕ್ಕಾಣಾಧಿಪತಿಗಳು ಶುಭಗ್ರಹಗಳಾಗಿ ಕೇಂದ್ರ ತ್ರಿಕೋಣ ಗಳಲ್ಲಿದ್ದರೆ, ಇಂಗಿತಜ್ಞನಾಗುವನು ।।೭೦೪।।

## ಬುದ್ಧಿ ನಾಶಯೋಗಃ

ಶ್ಲೋಕ।। ಪಂಚಮೇ ಪಾಪಸಂಯುಕ್ತೇ ತದೀಶೇ ಪಾಪಸಂಯುತೇ । ಕ್ರೂರ ಷಷ್ಠ್ಯಂಶಗೇ ವಾಪಿ ಬುದ್ಧಿನಾಶೋ ಭವೇತ್ತದಾ ।।೭೦೫।।ತಾ।। ಪಂಚಮದಲ್ಲಿ ಪಾಪಗ್ರಹವಿದ್ದು ಪಂಚಮಾಧಿಪತಿಯು ಪಾಪಗ್ರಹದ ಸಂಯೋಗದಲ್ಲಿದ್ದರೂ, ಕ್ರೂರ ಷಷ್ಠ್ಯಂಶದಲ್ಲಿದ್ದರೂ, ಜಾತಕನ ಬುದ್ಧಿಯು ನಾಶವಾಗುವುದು ।।೭೦೫।।

ಶ್ಲೋಕ।। ನೀಚ ಮೂಢಾರಿಗೇ ಹಸ್ಥೇ ಪಾಪಖೇಚರ ವೀಕ್ಷಿತೇ । ಕ್ರೂರ ಷಷ್ಠ್ಯಂಶಸಂಯುಕ್ತೇ ಬುದ್ಧಿನಾಶೋ ಭವೇತ್ತದಾ ।।೭೦೬।।ತಾ।। ಪಂಚಮಾಧಿ ಪತಿಯು ನೀಚನಾದರೂ, ಅಸ್ತನಾದರೂ, ಶತ್ರುಕ್ಷೇತ್ರಗಳಲ್ಲಿದ್ದರೂ, ಪಾಪಗ್ರಹ ವೀಕ್ಷಿತನಾದರೂ ಅಥವಾ ಕ್ರೂರ ಷಷ್ಠ್ಯಂಶೆಯಲ್ಲಿದ್ದರೂ ಬುದ್ಧಿಯು ನಾಶವಾಗುವುದು ।।೭೦೬।।

## ಬುದ್ಧಿ ಜಾಡ್ಯಯೋಗಃ

ಶ್ಲೋಕ।। ಪಂಚಮೇ ಮಂದ ಸಂಯುಕ್ತೇ ಲಗ್ನೇಶೇ ಮಂದವೀಕ್ಷಿತೇ । ತದೀಶೇ ಪಾಪಸಂಯುಕ್ತೇ ಬುದ್ಧಿಜಾಡ್ಯಂ ಸಮಾದಿಶೇತ್ ।।೭೦೭।।ತಾ।। ಪಂಚಮ ದಲ್ಲಿ ಶನಿಯಿದ್ದು ಲಗ್ನಾಧಿಪತಿಯು ಶನಿಗೆ ೩-೭-೧೦ರಲ್ಲಿದ್ದು ಪಂಚಮಾಧಿಪತಿಯು ಪಾಪಗ್ರಹ ಸಂಯೋಗದಲ್ಲಿದ್ದರೆ ಜಾತಕನು ಬುದ್ಧಿಜಾಡ್ಯವುಳ್ಳವನಾಗುವನು ।।೭೦೬।।

## ವಿಸ್ಮೃತಿ ಯೋಗಃ

ಶ್ಲೋಕ।। ಮಂದಮಾದ್ಯಸು ಸಂಯುಕ್ತೇ ಪಂಚಮೇಶುಭವರ್ಜಿತೇ । ತದೀಶೇ ಪಾಪಸಂದೃಷ್ಟೇ ವಿಸ್ಮೃತಿ ಪ್ರಾಯಶೋ ಭವೇತ್ ।।೭೦೮।।ತಾ।। ಪಂಚಮದಲ್ಲಿ ಶುಭಗ್ರಹವಿಲ್ಲದೆ ಶನಿ, ಮಾಂದಿ, ರಾಹುಗಳಿದ್ದು ಪಂಚಮಾಧಿಪತಿಯು ಪಾಪಗ್ರಹ ದಿಂದ ನೋಡಲ್ಪಟ್ಟರೆ ಜಾತಕನು ಪ್ರಾಯಶಃ ವಿಸ್ಮೃತಿಯುಳ್ಳವನಾಗುವನು.

ಶ್ಲೋಕ।। ಬುದ್ಧಿವಿಸ್ಮೃತಿ ಪೂರ್ವಾಸ್ಯಾತ್ಕಾರಕೇ ಪಾಪಸಂಯುತೇ । ತದೀಶೇ ಪಾಪಸಂಯುಕ್ತೇ ಕ್ರೂರಷಷ್ಠ್ಯಂಶಕೇ ಪಿವಾ ।।೭೦೯।।ತಾ।। ಬುದ್ಧಿಕಾರಕನು ಪಾಪಸಂಯುಕ್ತನಾಗಿ ಪಂಚಮಾಧಿಪತಿಯು ಪಾಪಗ್ರಹಯುತನಾದರೂ ಕ್ರೂರ ಷಷ್ಠ್ಯಂಶೆಯಲ್ಲಿದ್ದರೂ ವಿಸ್ಮೃತಿಯುಳ್ಳವನಾಗುವನು ।।೭೦೯।।

## ಬುದ್ಧಿದ ಯೋಗಃ

ಶ್ಲೋಕ॥ ಸೌಮ್ಯೇಚ ಬುದ್ಧಿಭಾವಸ್ಥೇ ಗುರುಶುಕ್ರನಿರೀಕ್ಷಿತೇ । ತಾದೃಶೇ ಬುದ್ಧಿನಾಥೇವಾ ಸರ್ವೇಷಾಂ ಬುದ್ಧಿದೋಭವೇತ್ ॥೭೧೦॥ತಾ॥ ಶುಭಗ್ರಹವು ಪಂಚಮದಲ್ಲಿದ್ದು ಗುರುಶುಕ್ರರಿಂದ ನೋಡಲ್ಪಟ್ಟರೂ ಪಂಚಮಾಧಿಪತಿಯು ಗುರು ಶುಕ್ರರಿಂದ ನೋಡಲ್ಪಟ್ಟರೂ ಸರ್ವರಿಗೂ ಬುದ್ಧಿ ಹೇಳುವವನಾಗುವನು ॥೭೧೦॥

## ಊಹಾಪೋಹ ಸಾಮರ್ಥ್ಯ ಯೋಗಃ

ಶ್ಲೋಕ॥ ಊಹಾಪೋಹ ಸಮರ್ಥಃಸ್ಯಾತ್ತದೀಶೇ ಗೋಪುರಾಂಶಗೇ । ಕಾರಕ ಸ್ಥಿತರಾಶೀಶೇ ಲಗ್ನನಾಥೇನ ವೀಕ್ಷಿತೇ ॥೭೧೧॥ತಾ॥ ಪಂಚಮಾಧಿಪತಿಯು ಗೋಪುರಾಂಶೆಯಲ್ಲಿದ್ದು ಬುದ್ಧಿಕಾರಕನಿದ್ದ ರಾಶೀಶನು ಲಗ್ನಾಧಿಪತಿಯಿಂದ ನೋಡಲ್ಪಟ್ಟರೆ, ಜಾತಕನು ಊಹಾಪೋಹ ಜ್ಞಾನವುಳ್ಳವನಾಗುವನು ॥೭೧೧॥

## ರಾಜಮಂತ್ರಿತ್ವ ಯೋಗಃ

ಶ್ಲೋಕ॥ ರಾಜಮಂತ್ರೀಭವೇಜ್ಜಾತೋವಾಕ್ಪತೌಬಲಸಂಯುತೇ । ಬುದ್ಧೀಶ್ವರೇಣ ಸಂದೃಷ್ಟೇ ಗೋಪುರಾದ್ಯಂಶಗೇಪಿವಾ ॥೭೧೨॥ತಾ॥ ಬೃಹಸ್ಪತಿಯು ಬಲಿಷ್ಠನಾಗಿ ಬುದ್ಧಿಸ್ಥಾನಾಧಿಪತಿಯಿಂದ ನೋಡಲ್ಪಟ್ಟರೂ, ಗೋಪುರಾಂಶೆಯಲ್ಲಿದ್ದರೂ ರಾಜಮಂತ್ರಿಯಾಗುವನು ॥೭೧೨॥

## ಆಗಾಮಿಸೂಚಕ ಮಂತ್ರಿತ್ವ ಯೋಗಃ

ಶ್ಲೋಕ॥ ಆಗಾಮಿಸೂಚಕಮಂತ್ರಿಕಾರಕಃ ಕೇಂದ್ರಕೋಣಗಃ । ಭೃಗು ಸೌಮ್ಯಸಮಾಯುಕ್ತೇ ದೃಷ್ಟೇತಾಭ್ಯಾಂ ಶುಭಾನ್ವಿತೇ ॥೭೧೩॥ತಾ॥ ಮಂತ್ರಿಕಾರಕನು ಕೇಂದ್ರತ್ರಿಕೋಣಗಳಲ್ಲಿದ್ದು ಶುಕ್ರಬುಧರಿಂದ ಕೂಡಿದರೂ, ಅಥವಾ ನೋಡಲ್ಪಟ್ಟರೂ ಜಾತಕನು ಆಗಾಮಿಸೂಚಕನಾದ ಮಂತ್ರಿಯಾಗುವನು ॥೭೧೩॥

## ತ್ರಿಕಾಲಜ್ಞ ಯೋಗಃ

ಶ್ಲೋಕ॥ ತ್ರಿಕಾಲಜ್ಞೋ ಭವೇಜ್ಜೀವೇ ಸ್ವಾಂಶೇ ಮೃದ್ವಂಶಸಂಯುತೇ । ಗೋಪುರಾದ್ಯಂಶಕೇವಾಪೀ ಶುಭಾಂಶೇ ಶುಭವೀಕ್ಷಿತೇ ॥೭೧೪॥ತಾ॥ ಬೃಹಸ್ಪತಿಯು ಸ್ವನವಾಂಶೆಯಲ್ಲಿ ಮೃದ್ವಂಶೆಯಲ್ಲಿದ್ದರೂ, ಗೋಪುರಾಂಶೆಯಲ್ಲಿದ್ದರೂ, ಶುಭಾಂಶೆಯಲ್ಲಿದ್ದು ಶುಭವೀಕ್ಷಿತನಾದರೂ ಜಾತಕನು ತ್ರಿಕಾಲಜ್ಞನಾಗುವನು ॥೭೧೪॥

## ಪ್ರಥಮಪುತ್ರ ಪ್ರಾಪ್ತಿವಿಚಾರಃ

ಶ್ಲೋಕ॥ ಪುಂಗ್ರಹೇ ಪುಂಗ್ರಹಂ ಪ್ರಾಪ್ತೇ ಪುಂಭಾಗೇ ಪುತ್ರನಾಯಕೇ । ಪ್ರಾಕ್ಪುತ್ರಜನನಂ ವಿಂದ್ಯಾದ್ವಿದ್ವದ್ಭಿರ್ನಾತ್ರಸಂಶಯಃ ॥೭೧೫-೭೧೬॥ತಾ॥ ಪುತ್ರ ಸ್ಥಾನಾದಿಪತಿಯು ಪುರುಷ ಗ್ರಹವಾಗಿ ಪುಂರಾಶಿಯಲ್ಲಿದ್ದು ಪುಂಗ್ರಹ ನವಾಂಶೆಯಲ್ಲಿ

ಪುತ್ರಸ್ಥಾನಾಧಿಪತಿಯಿದ್ದರೆ, ಜಾತಕನಿಗೆ ಪ್ರಥಮದಲ್ಲಿ ಪುತ್ರಸಂತಾನವಾಗುವದು ॥೭೧೫-೭೧೬॥

## ಪ್ರಥಮ ಕನ್ಯಾಪ್ರಾಪ್ತಿ ವಿಚಾರಃ

ಶ್ಲೋಕ॥ ಸ್ತ್ರೀಗ್ರಹೇಸ್ತ್ರೀಗ್ರಹಂಪ್ರಾಪ್ತೇ ಸ್ತ್ರೀಭಾಗೇ ಪುತ್ರನಾಯಕೇ । ಬಾಲಿಕಾಂ ಪ್ರಥಮಂ ವಿಂದ್ಯಾತ್ ಷಂಡಾಂಶೇ ಷಂಡಮಾದಿಶೇತ್ ॥೭೧೭॥

ತಾ॥ ಪುತ್ರಸ್ಥಾನವು ಸ್ತ್ರೀರಾಶಿಯಾಗಿ ಅಲ್ಲಿ ಸ್ತ್ರೀಗ್ರಹವಿದ್ದು ತದಧಿಪತಿಯು ಸ್ತ್ರೀಗ್ರಹ ನವಾಂಶೆಯಲ್ಲಿದ್ದರೆ, ಪ್ರಥಮದಲ್ಲಿ ಕನ್ಯಾಸಂತತಿಯಾಗುವದು. ಇವೆಲ್ಲವೂ ನಪುಂಸಕ ಗ್ರಹದ ಸಂಬಂಧವಾಗಿದ್ದರೆ ನಪುಂಸಕನಾಗುವನು ॥೭೧೭॥

## ಪಿತೃಪುತ್ರಯೋರ್ಮೈತ್ರತ್ವ ವಿಚಾರಃ

ಶ್ಲೋಕ॥ ಲಗ್ನಪುತ್ರೇಶ್ವರಾಭ್ಯಾಂತು ಮಿತ್ರತ್ವೇ ನೈವ ಮಿತ್ರತಾ । ಶತೃತ್ವೇ ಶಾತ್ರವಂ ಪ್ರೋಕ್ತಂ ಸಮತ್ವೇ ಸಮತಾಭವೇತ್ ॥೭೧೮॥ತಾ॥ ಲಗ್ನಾಧಿಪತಿಗೂ, ಪಂಚಮಾಧಿಪತಿಗೂ ಮಿತ್ರತ್ವವಿದ್ದು ತತ್ಕಾಲಮೈತ್ರತ್ವವಿದ್ದರೆ ಪಿತೃಪುತ್ರರಿಗೆ ಮೈತ್ರತ್ವವುಂಟಾಗಿರುವದು. ಸಮವಾಗಿದ್ದರೆ ಸಮಾನವಾಗಿಯೂ, ಶತ್ರುವಾಗಿದ್ದರೆ ಶತ್ರುವಾಗಿಯೂ ಇರುತ್ತೆಂದು ತಿಳಿಯತಕ್ಕದ್ದು ॥೭೧೮॥

## ಪಿತೃವಶಾನುಗ ಯೋಗಃ

ಶ್ಲೋಕ॥ ವಿಲಗ್ನಪುತ್ರನಾಥೌತು ಪರಸ್ಪರ ನಿರೀಕ್ಷಿತೌ । ಪರಸ್ಪರಗೃಹಾಂಶಸ್ಥೌ ಪಿತುರುಕ್ತಂಹಿ ಕಾರಯೇತ್ ॥೭೧೯॥ತಾ॥ ಲಗ್ನಾಧಿಪತಿ ಪುತ್ರಾಧಿಪತಿಗಳು ಪರಸ್ಪರ ನೋಡುತ್ತಲಿದ್ದರೂ, ಪರಸ್ಪರ ನವಾಂಶೆಯಲ್ಲಿದ್ದರೂ ಜಾತಕನ ಮಗನು ತಂದೆ ಹೇಳಿದಂತೆ ನಡೆಯುವವನಾಗುವನು ॥೭೧೯॥

ಶ್ಲೋಕ॥ ಲಗ್ನಂ ಪಶ್ಯತಿವಾ ಪುತ್ರನಾಥೇ ಪುತ್ರಾನ್ವಿತೇಪಿವಾ । ಲಗ್ನೇಶ್ವರೇ ಸುತಸ್ಥೇವಾ ಪಿತೃವಾಕ್ಯವಶಾನುಗಃ ॥೭೨೦॥ತಾ॥ ಪುತ್ರಸ್ಥಾನಾಧಿಪತಿ ಲಗ್ನವನ್ನು ನೋಡಿದರೂ, ಪಂಚಮದಲ್ಲಿದ್ದರೂ, ಲಗ್ನಾಧಿಪತಿ ಪಂಚಮದಲ್ಲಿದ್ದರೂ ಜಾತಕನ ಮಗನು ಪಿತೃವಶವರ್ತಿಯಾಗಿರುವನು ॥೭೨೦॥

## ಪಿತೃದೂಷಣ ಯೋಗಃ

ಶ್ಲೋಕ॥ ಪುತ್ರಸ್ಥಾನೇಶ್ವರೇ ದುಃಸ್ಥೇಲಗ್ನೇಶೇನಾಪಿವೀಕ್ಷಿತೇ । ಸಂದೃಷ್ಟೇ ಕುಜರಾಹುಭ್ಯಾಂ ನಿತ್ಯಂ ಪಿತೃವಿದೂಷಕಃ ॥೭೨೧॥ತಾ॥ ಪುತ್ರಸ್ಥಾನಾಧಿಪತಿಯು ದುಷ್ಟಸ್ಥಾನದಲ್ಲಿದ್ದು ಲಗ್ನಾಧಿಪತಿಯ ದೃಷ್ಟಿಯಿಲ್ಲದೆ ಕುಜರಾಹುಯುಕ್ತನಾದರೂ ನೋಡಲ್ಪಟ್ಟರೂ, ಜಾತಕನು ನಿತ್ಯದಲ್ಲೂ ಪಿತೃದೂಷಕನಾಗುವನು ॥೭೨೧॥

ಶ್ಲೋಕ॥ ಪಂಚಮೇ ಗುರುಶುಕ್ರಾಭ್ಯಾಂ ಸವಿಜ್ಞ್ಯಾಂ ಸಹಿತೇಥವಾ । ಏತೇಷಾಂ ಭವನೇವಾಪಿ ಸೋಯಂಭೋಜಯಿತಾಭವೇತ್ ॥೭೨೨॥ತಾ॥ ಪಂಚಮದಲ್ಲಿ ಗುರು ಶುಕ್ರರಿದ್ದರೂ ಅಥವಾ ಬುಧನೊಡನೆ ಕೂಡಿದ್ದರೂ ಅಥವಾ ಈ ಗ್ರಹಗಳ ಕ್ಷೇತ್ರವೇ ಆಗಿ ಅಲ್ಲಿ ಅವರಿದ್ದರೂ ಪುತ್ರನ ಸುಖವನ್ನು ಅನುಭವಿಸುವನು, ಪುತ್ರನೊಡನೆ ಸಂತೋಷದಿಂದ ಭೋಜನ ಮಾಡುವನು ॥೭೨೨॥

## ಅನ್ನದಾನ ಯೋಗಃ

ಶ್ಲೋಕ॥ ತೃತೀಯೇಶೇ ತೃತೀಯಸ್ಥೇ ಪಂಚಮೇಶೇ ಸುಖಂಗತೇ । ಸುಖೇಶೇ ಸ್ವೋಚ್ಚಗೇಕೇಂದ್ರೇ ಭುಕ್ತಿಶೇಪ್ಯನ್ನವಾನದಃ ॥೭೨೩॥ತಾ॥ (ಅನ್ನದಾನಯೋಗವು ಹೇಳಲ್ಪಡುತ್ತೆ.) ತೃತೀಯಾಧಿಪತಿ ತೃತೀಯದಲ್ಲೂ ಪಂಚಮಾಧಿಪತಿ ಚತುರ್ಥದಲ್ಲೂ ಇದ್ದು ಚತುರ್ಥಾಧಿಪತಿ ಉಚ್ಚನಾಗಿ ದ್ವಿತೀಯಾಧಿಪತಿ ಕೇಂದ್ರದಲ್ಲಿದ್ದರೆ, ಅಂಥಾ ಕಾಲದಲ್ಲಿ ಜನ್ಮಿಸಿದವನು ಅನ್ನದಾನಪರನಾಗುವನು ॥೭೨೩॥

ಇತಿ ಪಂಚಮ ಭಾವಃ

ಅಥ ಷಷ್ಠಭಾವ ಪ್ರಾರಂಭಃ

## ವ್ರಣ ಯೋಗಃ

ಶ್ಲೋಕ॥ ಷಷ್ಠಾಧಿಪೋಪಿ ಪಾಪಶ್ಚೇ ದ್ದೇಹೇವಾಷ್ಟಮೇಸ್ಥಿತಃ । ತದಾವ್ರಣೋ ಭವೇದ್ದೇಹೇ ಕರ್ಮಸ್ಥಾನೇಪ್ಯಯಂವಿಧಿಃ ॥೭೨೪॥ತಾ॥ ಷಷ್ಠಾಧಿಪತಿಯು ಪಾಪಗ್ರಹವಾಗಿ ಲಗ್ನ, ಅಷ್ಟಮ, ಕರ್ಮ ಈ ಸ್ಥಾನಗಳಲ್ಲಿದ್ದರೆ ಜಾತಕನು ವ್ರಣಪೀಡಿತನಾಗುವನು ॥೭೨೪॥

## ವ್ರಣಪ್ರದ ಗ್ರಹಾಃ

ಶ್ಲೋಕ॥ ತೇಷಾಮಪಿ ವ್ರಣಂವಾಚ್ಯಮಾದಿತ್ಯೇನ ಶಿರೋವ್ರಣಂ । ಇಂದು ನಾಚಮುಖೇ ಕಂಠೇ ಭೌಮೇನಜ್ಞೇನನಾಭಿಷು ॥೭೨೫॥ ಗುರೂಣಾನಾಸಿಕಾಯಾಂಚ ಭೃಗುಣಾನಯನೇಪದೇ । ಶನಿನಾ ರಾಹುಣಾಕುಕ್ಷೌ ಕೇತುನಾಚ ತಥಾಭವೇತ್ ॥೭೨೬॥ತಾ॥ ಸೂರ್ಯಾದಿ ಗ್ರಹಗಳಿಂದ ವ್ರಣಸ್ಥಾನಗಳು ಹೇಳಲ್ಪಡುತ್ತೆ. ಸೂರ್ಯನಿಂದ ತಲೆಯಲ್ಲೂ, ಚಂದ್ರನಿಂದ ಮುಖದಲ್ಲೂ, ಅಂಗಾರಕನಿಂದ ಕಂಠದಲ್ಲೂ, ಬುಧನಿಂದ ನಾಭಿಯಲ್ಲೂ, ಗುರುವಿನಿಂದ ಮೂಗಿನಲ್ಲೂ, ಶುಕ್ರನಿಂದ ಕಣ್ಣುಗಳಲ್ಲೂ, ಶನಿಯಿಂದ ಕಾಲುಗಳಲ್ಲೂ, ರಾಹುಕೇತುಗಳಿಂದ ನಾಭಿಯಲ್ಲೂ, ಹೊಟ್ಟೆಯಲ್ಲೂ ವ್ರಣಪ್ರಾಪ್ತಿಯಾಗುತ್ತೆಂದು ಹೇಳಲ್ಪಡುತಕ್ಕದ್ದು ॥೭೨೫-೭೨೬॥

ಶ್ಲೋಕ॥ ಷಷ್ಠೇಶ್ವರೇ ಕ್ರೂರಯುತೇ ವಿಲಗ್ನೇ ರಂಧ್ರಸ್ಥಿತೇವಾ ವ್ರಣದಶ್ಶರೀರೇ। ಕರ್ಮಸ್ಥಿತೇತಾ ದೃಶಖೇಚರೇಂದ್ರೇ ವ್ರಣಪ್ರದೋಂಗೇ ಶುಭದೃಷ್ಟಿ ಯೋಗೇ ॥೭೨೭॥ತಾ॥ ಷಷ್ಠಾಧಿಪತಿ ಪಾಪಗ್ರಹಯುತನಾಗಿ ಲಗ್ನ, ಅಷ್ಟಮ, ದಶಮ ಈ ಮೂರು ಸ್ಥಾನಗಳಲ್ಲಿ ಎಲ್ಲಿದ್ದರೂ ಶುಭದೃಷ್ಟಿ ಇಲ್ಲದಿದ್ದರೆ ಜಾತಕನ ಶರೀರದಲ್ಲಿ ವ್ರಣವನ್ನುಂಟುಮಾಡುತ್ತಾನೆ ॥೭೨೭॥

## ರಾಶಿವಶಾತ್ ವ್ರಣಸ್ಥಾನಾನಿ

ಶ್ಲೋಕ॥ ಶಿರೋಮೇಷಾನ್ಮುಖಂ ಕಂಠಂ ಶ್ರೋತ್ರಂ ನಾಸಾಂಚಗುಹ್ಯಕಂ । ಪಾಣಿಪಾರ್ಶ್ವದೃಶೌ ಪಾದೌ ಪ್ರಪದೇ ಕುಕ್ಷಿಮಾದಿಶೇತ್ ॥೭೨೮॥

ತಾ॥ ಮೇಷ-ಶಿರಸ್ಸು, ವೃಷಭ-ಮುಖ, ಮಿಥುನ-ಕಂಠ, ಕಟಕ-ಶ್ರೋತ್ರ, ಸಿಂಹ-ನಾಸಿಕ, ಕನ್ಯಾ-ಗುಹ್ಯಸ್ಥಾನ, ತುಲಾ-ಹಸ್ತ, ವೃಶ್ಚಿಕ-ಪಾರ್ಶ್ವ, ಧನುಸ್ಸು- ನೇತ್ರಗಳು, ಮಕರ-ಪಾದಗಳು, ಕುಂಭ-ಮೊಣಕಾಲು, ಮೀನ-ಕುಕ್ಷಿ ಈ ಪ್ರಕಾರ ಆಯಾಯ ಭಾವಗಳು ರೋಗಸ್ಥಾನವಾದರೆ ರೋಗವನ್ನು ವ್ರಣವನ್ನು ನಿಶ್ಚೈಸ ತಕ್ಕದ್ದು ॥೭೨೮॥

## ಲಗ್ನಸ್ಥ ಗ್ರಹವಶಾತ್ ರೋಗ ವಿಚಾರಃ

ಶ್ಲೋಕ॥ ಲಗ್ನೇ ಷಷ್ಠಾಷ್ಟಮಾಧೀಶೌ ರವಿಣಾಯದಿ ಸಂಸ್ಥಿತೌ। ಜ್ವರಗಂಡಃ ಕುಜೇಗ್ರಂಥಿಃ ಶಸ್ತ್ರವ್ರಣಮಥಾಪಿವಾ ॥೭೨೯॥ ಬುಧೇನಪಿತ್ತಂ ಗುರುಣಾ ರೋಗ ಭಾವಂ ವಿನಿರ್ದಿಶೇತ್ ॥ ಸ್ತ್ರೀಭಿಶ್ಶುಕ್ರೇಣ ಶನಿನಾ ವಾಯುನಾ ಸಂಯುತೋಯದಿ ॥೭೩೦॥ ಗಂಡಶ್ಚಂಡಾಲತೋನಾಭೌ ತಮಃಕೇತ್ವೋರ್ಗೃಹೇಬಯಂ । ಚಂದ್ರೇಣ ಗಂಡಸಲಿಲೈಃ ಕಫಃ ಶ್ಲೇಷ್ಮಾದಿನಾಭವೇತ್ ॥೭೩೧॥ ಏವಂ ಪಿತ್ರಾದಿ ಭಾವಾನಾಂ ತತ್ತತ್ಕಾರಕಯೋಗತಃ । ಗಂಡೇತೇಷಾಂ ಭವೇದೇವ ಮೂಹ್ಯಮತ್ರಮನೀಷಿಭಿಃ ॥೭೩೨॥

ತಾ॥ ಲಗ್ನಷಷ್ಠಾಷ್ಟಮಾಧಿಪತಿಗಳು ಸೂರ್ಯನ ಸಂಗಡ ಸೇರಿದರೆ ಜ್ವರ ಗಂಡ, ಕುಜನ ಸಂಗಡ ಸೇರಿದರೆ ಗ್ರಂಥಿರೋಗ ಅಥವಾ ಶಸ್ತ್ರಗಂಡ, ಬುಧನೊಡನೆ ಸೇರಿದರೆ ಪಿತ್ಥರೋಗ, ಬೃಹಸ್ಪತಿಯ ಸಂಗಡ ಸೇರಿದರೆ ರೋಗನಾಶ, ಅಥವಾ ರೋಗಭಾವ, ಶುಕ್ರನ ಸಂಗಡ ಸೇರಿದರೆ ಸ್ತ್ರೀ ಹೇತುವಾದ ಗಂಡ, ಶನಿಯ ಸಂಗಡ ಸೇರಿದರೆ ವಾಯುರೋಗ, ರಾಹುವಿನ ಸಂಗಡ ಸೇರಿದರೆ (ಚಂಡಾಲರಿಂದ) ನಾಭಿಯಲ್ಲಿ ರೋಗ, ಕೇತು ಸಂಗಡ ಸೇರಿದರೆ ಮನೆಯಲ್ಲಿ ಭಯ, ಚಂದ್ರನ ಸಂಗಡ ಸೇರಿದರೆ ಜಲಗಂಡ ಅಥವಾ ಕಫರೋಗ ಪ್ರಾಪ್ತಿಯಾಗುತ್ತೆ. ಈ ಪ್ರಕಾರವಾಗಿ ಪಿತೃ, ಭ್ರಾತೃ, ಮಾತೃ

ಭಾವಗಳಿಗೆ ಆಯಾಯ ಕಾರಕಗ್ರಹಗಳಿಂದ ರೋಗಗಂಡಗಳನ್ನು ತಿಳಿಯುತಕ್ಕದ್ದು ॥೭೨೯ ರಿಂದ ೭೩೨॥

## ದೀರ್ಘ ರೋಗಃ

ಶ್ಲೋಕ॥ ರೋಗಸ್ಥಾನಗತೇಪಾಪೇ ತದೀಶೇ ಪಾಪಸಂಯುತೇ ।ರಾಹುಣಾ ಸಂಯುತೇ ಮಂದೇ ಸರ್ವದಾ ರೋಗಸಂಯುತಃ ॥೭೩೩॥ತಾ॥ ರೋಗಸ್ಥಾನದಲ್ಲಿ ಪಾಪಗ್ರಹವಿದ್ದು ಆ ಅಧಿಪತಿ ಪಾಪಗ್ರಹಯುತನಾಗಿ ರಾಹು ಶನಿಗಳೇಕತ್ರ ಸೇರಿದರೆ ಸರ್ವದಾ ರೋಗಪೀಡಿತನಾಗುವನು ॥೭೩೩॥

## ಜ್ವರರೋಗಃ

ಶ್ಲೋಕ॥ ರೋಗಸ್ಥಾನಗತೇಭೌಮೇ ತದೀಶೇ ರಂಧ್ರಸಂಯುತೇ । ಷಡ್ವರ್ಷ್ ದ್ವಾದಶೇ ವರ್ಷೇಜ್ವರರೋಗೀ ಭವೇನ್ನರಃ ॥೭೩೪॥ತಾ॥ ರೋಗಸ್ಥಾನದಲ್ಲಿ ಕುಜ ನಿದ್ದು ಆ ಅಧಿಪತಿಯು ಅಷ್ಟಮದಲ್ಲಿದ್ದರೆ ೬ ಮತ್ತು ೧೨ನೇ ವರ್ಷದಲ್ಲಿ ಜ್ವರದಿಂದ ಗಂಡ ಪ್ರಾಪ್ತಿಯಾಗುವುದು ॥೭೩೪॥

## ಶಿರೋವ್ಯಾಧಿ-ಶಿಶ್ನಪೀಡಾಯೋಗಃ

ಶ್ಲೋಕ॥ ಸ ರಾಹುಕೇತೂ ಶಿರಸಿಪ್ರಪೀಡಾ ಚೋರಾಗ್ನಿ ಭಿರ್ವಾತಭಯಾತ್ತಮಾದುಃ। ಷಷ್ಠೇಶ್ವರಶ್ಚಂದ್ರಸುತೇನಯುಕ್ತಸ್ತ್ವಾ ಹುರ್ವಿಲಗ್ನೇ ಭಯಮತ್ರ ಶಿಶ್ನೇ ॥೭೩೩॥ತಾ॥ ಲಗ್ನಷಷ್ಠಾಧಿಪತಿಗಳು ರಾಹುಕೇತುಗಳನ್ನು ಕೂಡಿದರೆ ಶಿರೋ ಯಾಧಿಯು, ಚೋರಾಗ್ನಿಭೀತಿ, ವಾತಭಯ ಗಂಡವು ಪ್ರಾಪ್ತಿಯಾಗುವುದು. ಷಷ್ಠಾಷ್ಟಮಾಧಿಪತಿಗಳು ಬುಧನೊಡನೆ ಕೂಡಿ ಲಗ್ನದಲ್ಲಿರುವಾಗ ಹುಟ್ಟಿದರೆ, ಶಿಶ್ನದಲ್ಲಿ ವ್ಯಾಧಿಯುಂಟಾಗುವುದು ॥೭೩೫॥

ಶ್ಲೋಕ॥ ಛಿನ್ನತ್ತ್ಯಸೌಸೌಮ್ಯದೃಶಾ ವಿಹೀನೇ ಸಸೂರ್ಯಪುತ್ರೋಯದಿ ಲಿಂಗ ಮಾಹುಃ ॥೭೩೬॥ತಾ॥ ಮೇಲೆ ಹೇಳಿದ ಷಷ್ಠಾಷ್ಟಮಾಧಿಪತಿಗಳು ಶನಿಯೊಡನೆ ಲಗ್ನದಲ್ಲಿ ಸೇರಿ ಶುಭದೃಷ್ಟಿಯಿಲ್ಲದ್ದರೆ, ಲಿಂಗದಲ್ಲಿ ರೋಗವುಂಟಾಗಿ ಶಸ್ತ್ರದಿಂದ ಕತ್ತರಿಸಬೇಕಾಗಿ ಬರುವುದರಿಂದ ಶ್ರಮಪಡುವನು ॥೭೩೬॥

## ಸ್ಫೋಟಕಭೀತಿಯೋಗಃ

ಶ್ಲೋಕ॥ ಷಷ್ಠೇಶ್ವರೋ ಭೂಮಿಸುತೇನಯುಕ್ತಃ ವ್ರಣಾದ್ಭಯಂ ಸ್ಫೋಟಕ ಭೀತಿಮಾಹುಃ ॥೭೩೭॥ತಾ॥ ಷಷ್ಠಾಧಿಪತಿ ಕುಜಯುಕ್ತನಾಗಿದ್ದರೆ, ಸ್ಫೋಟಕ ವ್ರಣಾದಿರೋಗಭೀತಿಯುಂಟಾಗುವುದು ॥೭೩೭॥

## ಕಳತ್ರಷಂಡಯೋಗಃ

ಶ್ಲೋಕ॥ ಕಾಮೇಶ್ವರಃ ಶುಕ್ರಯುತೋ ರಿಪುಸಃ ಕಳತ್ರಷಂಡತ್ವಮುದೀರಯಂತಿ

॥೭೩೮॥ತಾ॥ ಸಪ್ತಮಾಧಿಪತಿಯು ಶುಕ್ರಯುತನಾಗಿ ಷಷ್ಠದಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದವನ ಪತ್ನಿಯು ನಪುಂಸಕಳಾಗುವಳು ॥೭೩೮॥

## ಗ್ರಂಥಿಮೇಹ ಯೋಗಃ

ಶ್ಲೋಕ॥ ರಂಧ್ರಾಂಶೇ ರಾಹುಸಂಯುಕ್ತೇ ತದಂಶೇ ರಂಧ್ರಕೋಣಗೇ । ದ್ವಾವಿಂಶೇಷ್ವಾದಶೇ ವರ್ಷೇಗ್ರಂಥಿಮೇಹಾದಿ ಪೀಡನಂ ॥೭೩೯॥ತಾ॥ ರಂಧ್ರಾಂಶೆಯಲ್ಲಿ ರಾಹುವಿದ್ದು ಆ ಅಂಶವು ಅಷ್ಟಮಕ್ಕೆ ತ್ರಿಕೋಣಗಳಾಗಿದ್ದರೆ, ಜಾತಕನು ೧೮ ಮತ್ತು ೨೨ನೆ ವರ್ಷದಲ್ಲಿ ಗ್ರಂಥಿಮೇಹಾದಿ ರೋಗದಿಂದ ಪೀಡಿತನಾಗುವನು ॥೭೩೯॥

## ಕುಷ್ಠರೋಗ ಯೋಗಃ

ಶ್ಲೋಕ॥ ಲಗ್ನೇಶ ಭೂಪುತ್ರಶಶಾಂಕಪುತ್ರೌ ಸಹಸ್ಥಿತಾ ಸೌಖ್ಯಗೃಹೇ ವ್ಯಯೇವಾ॥ ಅಪಾನರೋಗಂ ತ್ವಥವಾ ಪವಿತ್ರಂ ಶ್ವೇತಂತುಕುಷ್ಟಂ ಮುನಯೋ ವದಂತಿ ॥೭೪೦॥ತಾ॥ ಜನ್ಮಲಗ್ನಾಧಿಪತಿಯು ಕುಜನು ಬುಧನು ಸಹ ಸೇರಿ ಚತುರ್ಥದಲ್ಲಾಗಲೀ, ದ್ವಾದಶದಲ್ಲಾಗಲೀ, ಇದ್ದರೆ ಜಾತಕನಿಗೆ ಅಪಾನವ್ಯಾಧಿ, ಪಾಂಡುರೋಗ ಕುಷ್ಠವ್ಯಾಧಿ ಇವುಗಳಲ್ಲಿ ಯಾವುದಾದರೂ ಪ್ರಾಪ್ತಿಯಾಗುವುದು ॥೭೪೦॥

ಶ್ಲೋಕ॥ ಶಶಾಂಕ ತತ್ಸುತ ವಿಲಗ್ನನಾಥಾಸ್ಸರಾಹುಣಾರ್ಕೇಣಯುತಾಸ್ತ ದಂಶೇ॥ ಶ್ಯಾಮಂತು ಕುಷ್ಠಂ ಕುಜಸಂಯುತೇಷು ನೈಲ್ಯಂಭವೇನ್ಮಂದ ಸಮನ್ವಿತೇಷು ॥೭೪೧॥ ರಕ್ತಂತದಾ ಸೂರ್ಯಸಮನ್ವಿತೇಚ ಗ್ರಹೋತ್ತದೇಶೇ ನಿಯಮಂತ ದಾಹು ॥೭೪೨॥

ತಾ॥ ಚಂದ್ರ ಬುಧ ಲಗ್ನಾಧಿಪತಿ ಈ ಮೂರು ಗ್ರಹಗಳು ರಾಹು ಸಹಿತವಾಗಿ ಸೂರ್ಯನ ಸಂಗಡ ಸೇರಿದರೆ ಶ್ಯಾಮವರ್ಣದ ಕುಷ್ಠ ಮೇಹವ್ಯಾಧಿಯುತ್ಪತ್ತಿಯಾಗುವುದು ॥ ಆ ಪ್ರಕಾರ ಸೂರ್ಯನವಾಂಶದಲ್ಲಿ ಮೂರು ಗ್ರಹಗಳಿದ್ದರೆ ಅಂಥಾ ವ್ಯಾಧಿಯೇ ಉಂಟಾಗುವುದು, ಆ ಮೂರು ಗ್ರಹಗಳು ಕುಜನ ಸಂಗಡ ಸೇರಿದರೆ, ಕುಷ್ಠರೋಗ ಪ್ರಾಪ್ತಿಯಾಗುವುದು. ಶನಿಯೊಡನೆ ಕೂಡಿದರೆ ನೀಲವರ್ಣದ ಕುಷ್ಠರೋಗ ಪ್ರಾಪ್ತಿಯಾಗುವುದು ॥೭೪೧-೭೪೨॥

ಈ ವಿಷಯಕ್ಕೆ ಉದಾಹರಣೆ-ಲೋಮಶಃ ॥ ಲಗ್ನಾಧಿಪೌ ಕುಜಬುಧೌ ಚಂದ್ರೇಣಯದಿ ಸಂಸ್ಥಿತೌ । ರಾಹುರ್ವಾಶನಿ ನಾಸಾರ್ಥಂ ಕುಷ್ಠಂ ತತ್ರವಿನಿರ್ದಿ ಶೇತ್ ॥೭೪೩॥ ಲಗ್ನಾಧಿಪತಿ ವಿನಾಲಗ್ನೇ ಸ್ಥಿತಶ್ಚೇತ್ತಮಸಾಶಶೀ ॥ ಶ್ವೇತಕುಷ್ಠಂತದೌ ಕೃಷ್ಣ

ಕುಷ್ಠಂಚಶಿನಾಸಹ ॥೭೪೪॥ ಕುಜೇನ ಕರ್ತ ಕುಷ್ಠಂಸ್ಯಾತ್ತತ್ತ ದೇವಂ ವಿಚಾರಯೇತ್। ಷಷ್ಠಸ್ಥಾನಗತೇ ಜೀವೇ ತದ್ಗ್ರಹೇ ಚಂದ್ರಸಂಯುತೇ ದ್ವಾವಿಂಶೈಕೋ ನವಿಂಶೇಬ್ದೇ ಕುಷ್ಠರೋಗಂ ವಿನಿರ್ದಿಶೇತ್ ॥೭೪೫॥ತಾ॥ ಷಷ್ಠಸ್ಥಾನದಲ್ಲಿ ಬೃಹಸ್ಪತಿ ಚಂದ್ರರಿದ್ದರೆ, ೧೯ ಮತ್ತು ೨೨ ವರ್ಷಗಳು ಜಾತಕನಿಗೆ ಬಂದ ಕಾಲದಲ್ಲಿ ಕುಷ್ಠರೋಗ ಬರುವುದು ॥೬೪೫॥

ಶ್ಲೋಕ॥ ರಿಪುಸ್ಥಾನಗತೇ ಜೀವೇ ಶನಿನಾಸಂಯುತೇ ಯದಿ । ಪಂಚಪಂಚಾ ಶಕಾಬ್ದೇಷು ರಕ್ತಕುಷ್ಠಂವಿನಿರ್ದಿಶೇತ್ ॥೭೪೬॥ತಾ॥ ರಿಪುಸ್ಥಾನದಲ್ಲಿ ಚಂದ್ರನು ಶನಿ ಯುಕ್ತನಾದರೆ ೫೫ನೆ ವರ್ಷದಲ್ಲಿ ರಕ್ತ ಕುಷ್ಠರೋಗ ಪ್ರಾಪ್ತಿಯಾಗುವುದು ॥೭೪೬॥

## ಕ್ಷಯರೋಗ ವಿಚಾರಃ

ಶ್ಲೋಕ॥ ರೋಗಸ್ಥಾನಂ ಗತೋರಾಹುಃಕೇಂದ್ರೇ ಮಾಂದಿಸಮನ್ವಿತಃ। ಲಗ್ನೇಶೇ ದಾಶರಾಶಿಸ್ಥೇ ಷಡ್ವಿಂಸೇ ಕ್ಷಯರೋಗಭಾಕ್ ॥೭೪೭॥ತಾ॥ ರೋಗಸ್ಥಾನದಲ್ಲಿ ರಾಹುಲಗ್ನದಿಂದ ಕೇಂದ್ರಗಳಲ್ಲಿ ಮಾಂದಿ ಲಗ್ನಾಧಿಪತಿ ಅಷ್ಟಮದಲ್ಲಿದ್ದರೆ ೨೬ನೆ ವರ್ಷದಲ್ಲಿ ಕ್ಷಯರೋಗವು ಬರುವುದು ॥೭೪೭॥

ಶ್ಲೋಕ॥ ಷಷ್ಠೇ ಬುಧೇಕುಜಯುತೇ ಭೃಗು ಚಂದ್ರನಿರೀಕ್ಷಿತೇ । ಕ್ರೂರಾಂ ಶಕ ಸಮಾಯುಕ್ತೇ ಕ್ಷಯರೋಗಂ ವದಂತಿಹಿ ॥೭೪೮॥ತಾ॥ ಷಷ್ಠದಲ್ಲಿ ಬುಧನು ಕುಜನ ಸಂಗಡ ಸೇರಿ ಶುಕ್ರಚಂದ್ರರಿಂದ ನೋಡಲ್ಪಟ್ಟು ಕ್ರೂರಾಂಶೆಯಲ್ಲಿದ್ದರೆ ಕ್ಷಯ ರೋಗ ಪ್ರಾಪ್ತಿಯಾಗುವುದು ॥೭೪೮॥

ಶ್ಲೋಕ॥ ಶನ್ಯಾರ ಸಹಿತೇಷಷ್ಠೇ ರವಿರಾಹು ನಿರೀಕ್ಷಿತೇ । ಶುಭೈರದೃಷ್ಟ ಯುಕ್ತೇವಾ ಶ್ವಾಸ ಕಾಸ ಕ್ಷಯಾದಿ ಯುಕ್ ॥೭೪೯॥ತಾ॥ ಶನ್ಯಂಗಾರರು ಷಷ್ಠ ದಲ್ಲಿದ್ದು ರವಿರಾಹುಗಳಿಂದ ನೋಡಲ್ಪಟ್ಟ ಶುಭಗ್ರಹಗಳಿಂದ ನೋಡಲ್ಪಡದೆಯೂ ಕೂಡಲ್ಪಡದೆಯೂ ಇದ್ದರೆ ಕಾಸ, ಶ್ವಾಸ, ಕ್ಷಯ ಈ ರೋಗಗಳು ಬರುತ್ತವೆ॥೭೪೯॥

## ಬಂಧನ ಯೋಗಃ

ಶ್ಲೋಕ॥ ಷಷ್ಠೇಶಲಗ್ನಾಧಿಪತಿ ಸಮಂದೌ ಕೇಂದ್ರ ತ್ರಿಕೋಣೇ ಯದಿ ಬಂಧನಂಸ್ಯಾತ್ । ಸರಾಹುಕೇತೂ ಯದಿಕೇಂದ್ರ ಕೋಣೇ ವದಂತಿತಜ್ಞಾನಿ ಗಳಂತದಾನೀಂ ॥೭೫೦॥ತಾ॥ ಷಷ್ಠಾಧಿಪತಿ ಲಗ್ನಾಧಿಪತಿಗಳು ಶನಿಯುಕ್ತರಾಗಿ ಕೇಂದ್ರತ್ರಿಕೋನಗಳಲ್ಲಿದ್ದರೆ ಬಂಧನದಲ್ಲಿ ಸಿಕ್ಕುವನು, ಷಷ್ಠಾಧಿಪತಿ ಲಗ್ನಾಧಿಪತಿಗಳು ರಾಹು ಕೇತು ಯುಕ್ತರಾಗಿ ಕೇಂದ್ರ ತ್ರಿಕೋನಗಳಲ್ಲಿದ್ದರೆ ಸಂಕೋಲೆ ಸಹಿತ ಬಂಧನಪ್ರಾಪ್ತಿಯಾಗುವುದು ॥೭೫೦॥

## ಕರಚ್ಛೇದ ಯೋಗಃ

ಶ್ಲೋಕ।। ಧರ್ಮೇಶನೌ ದೇವಗುರೌ ತೃತೀಯೇ ಕರಚ್ಛಿದಸ್ಯಾನ್ನಿಧನೇ ವ್ಯಯೇವಾ । ವಿಧೌ ಕಳತ್ರೇ ನಿಧನಾನ್ವಿತೇವಾ ಕುಜೇನಯುಕ್ತೇ ಯದಿವಾಸಜೀವೇ ।।೭೫೧।।ತಾ।। ನವಮದಲ್ಲಿ ಶನಿ, ತೃತೀಯದಲ್ಲಿ ಗುರು ಅಥವಾ ಅಷ್ಟಮದಲ್ಲಿ ಶನಿ, ವ್ಯಯದಲ್ಲಿ ಗುರು ಇರುವ ಜಾತಕನಿಗೆ ಕೈ ಕತ್ತರಿಸಿಹೋಗುವುದು. ಚಂದ್ರನು ಸಪ್ತಮದಲ್ಲಾಗಲೀ, ಅಷ್ಟಮದಲ್ಲಾಗಲೀ ಕುಜಯುಕ್ತನಾದರೂ, ಗುರುಯುಕ್ತನಾದರೂ ಕರಚ್ಛೇದಯೋಗ, ಕರಸ್ಥಿತಾಶ್ಚೇದ್ಯದಿ ರಾಹುಮಂದಸೌಮ್ಯಾಃ ಕರಚ್ಛೇದಯುತೋತ್ರಜಾತಃ ।। ರಾಹು ಶನಿ ಬುಧರು ದಶಮದಲ್ಲಿದ್ದರೆ ಕರಚ್ಛೇದ ಯೋಗ ।।೭೫೧।।

## ಶಿರಚ್ಛೇದ ಯೋಗಃ

ಶ್ಲೋಕ।। ಶುಕ್ರೇಣಯುಕ್ತೇ ಯದಿವಾರಿನಾಥೇ ರವೌ ಶನೌವಾ ಫಣಿನಾಥ ಯುಕ್ತೇ । ಕ್ರೂರಾದಿ ಷಷ್ಠ್ಯಂಶ ಸಮನ್ವಿತೇವಾ ವಿಚ್ಛೇದನಂ ತಚ್ಛಿರಸೋವದಂತಿ ।।೭೫೨।।ತಾ।। ಷಷ್ಠಾಧಿಪತಿ ಶುಕ್ರನ ಸಂಗಡ ಸೇರಿ ಸೂರ್ಯನಾಗಲಿ, ಶನಿಯಾಗಲಿ, ರಾಹುಯುಕ್ತನಾಗಿ ಕ್ರೂರ ಷಷ್ಠ್ಯಂಶೆಯಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದವನು ಶಿರಶ್ಛೇದನದಿಂದ ಮೃತಿಹೊಂದುವನು ।।೭೫೨।।

## ದುರ್ಮರಣ ಯೋಗಃ

ಶ್ಲೋಕ।। ಷಷ್ಠಾಷ್ಟಮ ವ್ಯಯೇಚಂದ್ರೇ ಲಗ್ನನಾಥೇನವೀಕ್ಷಿತೇ । ಮಂದ ಮಾದ್ಯಸುಸಂಯುಕ್ತೇ ತಸ್ಯದುರ್ಮರಣಂ ವದೇತ್ ।।೭೫೩।।ತಾ।। ಷಷ್ಠ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿ ಚಂದ್ರನು, ಶನಿ, ಮಾಂದಿ, ರಾಹುಯುಕ್ತನಾಗಿದ್ದರೆ ಜಾತಕನಿಗೆ ದುರ್ಮರಣವಾಗುವುದು ।।೭೫೩।।

## ಉದ್ಬಂಧನ ಮರಣಯೋಗಃ

ಶ್ಲೋಕ।। ರಂಧ್ರೇಶ್ವರ ಸ್ಥಿತತ್ರ್ಯಂಶೇ ಪಾಶಸರ್ಪಾದಿ ಸಂಯುತೇ । ದೃಗಾಣೇ ನಿಗಳಾದ್ವಾಪಿ ಉದ್ಬಂಧಾನ್ಮರಣಂವದೇತ್ ।।೭೫೪।।ತಾ।। ಅಷ್ಟಮಾಧಿಪತಿಯು ಪಾಶ, ಸರ್ಪ, ನಿಗಳ ದ್ರೇಕ್ಕಾಣಗಳಲ್ಲಿದ್ದರೆ, ಉದ್ಬಂಧದಿಂದ ಮರಣವಾಗುವುದು ।।೭೫೪।।

ಶ್ಲೋಕ।। ಮದಂಮಾಂದ್ಯ ಸುಸಂಯುಕ್ತೇ ರಂಧ್ರೇಶಸ್ತ್ರಿಭಾಗಪೇ । ತಥಾವಿ ರ್ಧೇರ್ಕಪುತ್ರೇತು ಉದ್ಬಂಧಾನ್ಮರಣಂವದೇತ್ ।।೭೫೫।।ತಾ।। ಅಷ್ಟಮಾಧಿಪತಿ ಶನಿ, ಮಾಂದಿ, ರಾಹುಯುಕ್ತನಾದರೆ ಪಾಶದಿಂದ ಮರಣ, ಈ ವಿಧವಾಗಿಯೇ ಶನಿಯಿದ್ದರೆ, ಪಾಶದಿಂದ ಉದ್ಬಂಧನವಾಗಿ ಮರಣವಾಗುವುದು ।।೭೫೫।।

## ಯುದ್ಧೇ ಮರಣಯೋಗಃ

ಶ್ಲೋಕ|| ಷಷ್ಠಾಷ್ಟಮೇಶೇಭೌಮೇವಾ ವಿಕ್ರಮೇಶ ಸಮನ್ವಿತೇ || ಮಂದ ಮಾಂದ್ಯಸುಸಂಯುಕ್ತೇ ಕ್ರೂರಾಂಶೇಯುದ್ಧತೋಮೃತಿಃ ||೭೫೬||ತಾ|| ಅಂಗಾರಕನು ಷಷ್ಠಾಷ್ಟಮಾದಿಪತಿಯಾಗಿ ತೃತಿಯಾಧಿಪತಿಯ ಸಂಗಡ ಸೇರಿ ಶನಿ, ಮಾಂದಿ, ರಾಹುಸಂಯುಕ್ತನಾಗಿ ಕ್ರೂರಾಂಶೆಯಲ್ಲಿದ್ದರೆ, ಜಾತಕನು ಯುದ್ಧದಲ್ಲಿ ಮರಣ ಹೊಂದುವನು ||೭೫೬||

ಶ್ಲೋಕ|| ಯುದ್ಧೇನ ಮರಣಂ ಬ್ರೂಯಾಚ್ಛನಿಯುಕ್ತ ತ್ರಿಭಾಗಗೇ| ಕುಜೇನ ವೀಕ್ಷಿತಯುತೇ ಭೌಮಕ್ಷೇತ್ರೇ ತದಂಶಕೇ ||೭೫೭||ತಾ|| ಶನಿಯಿರುವ ದ್ರೇಕ್ಕಾಣಾದಿ ಪತಿ ಕುಜಕ್ಷೇತ್ರದಲ್ಲಾಗಲೀ, ಕುಜನವಾಂಶೆಯಲ್ಲಾಗಲೀ ಕುಜನಿಂದ ನೋಡಲ್ಪಟ್ಟರೆ, ಜಾತಕನು ಯುದ್ಧದಲ್ಲಿ ಮೃತಿ ಹೊಂದುವನು ||೭೫೭||

## ದ್ವಂದ್ವಯುದ್ಧ ಮರಣಯೋಗಃ

ಶ್ಲೋಕ|| ರವಿಭೌಮೌಯದಾನ್ಯೋನ್ಯಂ ಪರಸ್ಪರ ನಿರೀಕ್ಷಿತೌ | ಪರಸ್ಪರ ಗೃಹಾಂಶಸ್ಥೌದ್ವಂದ್ವಯುದ್ಧಾನ್ಮತಿರ್ಭವೇತ್ ||೭೫೮||ತಾ|| ಸೂರ್ಯಾಂಗಾರಕರು. ಅನ್ಯೋನ್ಯವಾಗಿ ಸೂಯನು ಕುಜನವಾಂಶೆಯಲ್ಲೂ ಅಂಗಾರಕನು ಸೂರ್ಯ ನವಾಂಶೆಯಲ್ಲೂ ಇದ್ದರೆ, ಅನ್ಯೋನ್ಯಕ್ಷೇತ್ರಗಳಲ್ಲಿದ್ದರೂ, (ಪರಸ್ಪರಕ್ಷೇತ್ರಗಳಲ್ಲಿದ್ದರೂ), ಅಂಥಾಕಾಲದಲ್ಲಿ ಹುಟ್ಟಿದವನು ದ್ವಂದ್ವಯುದ್ಧದಲ್ಲಿ ಮೃತಿಹೊಂದುವನು ||೭೫೮||

## ಸಂಘಾತಮರಣಯೋಗಃ

ಶ್ಲೋಕ|| ಅಷ್ಟಮೇಬಹವಃ ಪಾಪಾಃ ಭೌಮರಾಶಿಗತಾಂಶಪಾಃ |ಕ್ರೂರ ಷಷ್ಠ್ಯಂಶಕಯುತಾ ಸ್ಸಂಘಾತಾನ್ಮರಣಂ ವದೇತ್ ||೭೫೯||ತಾ|| ಅಷ್ಟಮದಲ್ಲಿ ಬಹುಪಾಪಗ್ರಹಗಳು ಕುಜನವಾಂಶವನ್ನು ಪಡೆದು ಕೂರ್ರ ಷಷ್ಠ್ಯಂಶೆಯಲ್ಲಿದ್ದರೆ ಅಂಥಾ ಜಾತಕನು ಸಂಘಾತಮರಣವನ್ನು ಹೊಂದುವನು ||೭೫೯||

ಶ್ಲೋಕ|| ನೀಚಮೂಢಾರಿ ಗೇಹಸ್ಥಾಃ ಸೌಮ್ಯಾ ಸ್ಸರ್ವೇ ಪರಾಜಿತಾಃ ಪಾಪಾಂಶಕಾಃ ಪಾಪಯುತಾಃ ಮೃತಿಸ್ಸಾಂಘಾತಿಕೀ ಭವೇತ್ ||೭೬೦||ತಾ|| ಶುಭಗ್ರಹಗಳೆಲ್ಲರೂ ನೀಚ, ಅಸ್ತ, ಶತ್ರುಕ್ಷೇತ್ರದಲ್ಲಿದ್ದು ಗ್ರಹಯುದ್ಧದಲ್ಲಿ ಪರಾಜಿತರಾಗಿ ಪಾಪಗ್ರಹದ ನವಾಂಶೆಯಲ್ಲಿದ್ದರೂ ಪಾಪಗ್ರಹಯುಕ್ತರಾಗಿದ್ದರೂ, ಅಂಥಾ ಜಾತಕನು ಸಾಂಘಾತಿಕವಾದ ಮರಣವನ್ನು ಹೊಂದುವನು ||೭೬೦||

ಶ್ಲೋಕ|| ಸಂಘೇಸ್ಯಾನ್ಮರಣಂ ತಸ್ಯ ಶನಿರಾಹು ಧರಾಧಿಪಾಃ | ರಂಧ್ರೇ ಶವೀಕ್ಷಿತಾಸ್ಸರ್ವೇ ಕ್ರೂರಾಂಶಾಮೂಢಸಂಯುತಾಃ ||೭೬೧||ತಾ|| ಶನಿ, ರಾಹು,

ಸೂರ್ಯ ಈ ಮೂರು ಗ್ರಹಗಳು ಅಷ್ಟಮಾಧಿಪತಿಯಿಂದ ನೋಡಲ್ಪಟ್ಟು ಕ್ರೂರಾಂಶಗತರಾದರೂ, ಅಸ್ತರಾದರೂ, ಅಂಥಾಕಾಲದಲ್ಲಿ ಹುಟ್ಟಿದವನು ಸಂಘಾತಿಕ ಮರಣವನ್ನು ಹೊಂದುವನು ॥೭೬೧॥

## ಮೂತ್ರಕೃಚ್ಛ್ರ ರೋಗಃ

ಶ್ಲೋಕ॥ ಜಲರಾಶಿಗತೇ ಚಂದ್ರೇ ಷಷ್ಠೇ ತದ್ಭವನಾಧಿಪೇ। ಜಲರ್ಕ್ಷಸ್ಥ ವಿಶಾದೃಷ್ಟೇ ಮೂತ್ರಕೃಚ್ಛ್ರಾದಿರೋಗಭಾಕ್ ॥೭೬೨॥ತಾ॥ ಚಂದ್ರನು ಜಲ ರಾಶಿಯಾದ ಷಷ್ಠದಲ್ಲಿದ್ದು ಆ ಚಂದ್ರರಾಶ್ಯಾಧಿಪತಿಯು ಜಲರಾಶಿಯಲ್ಲಿದ್ದು ಬುಧನಿಂದ ನೋಡಲ್ಪಟ್ಟರೆ, ಜಾತಕನು ಮೂತ್ರಕೃಚ್ಛ್ರರೋಗವುಳ್ಳವನಾಗುವನು ॥೭೬೨॥

## ಪೀನಸರೋಗಃ

ಶ್ಲೋಕ॥ ಷಷ್ಠೇಚಂದ್ರೇಶ ನೌರಂಧ್ರೇ ವ್ಯಯೇಪಾಪೇ ವಿಲಗ್ನಪೇ । ಪಾಪಾಂಶಕ ಸಮಾಯುಕ್ತೇ ಪೀನಸಂ ರೋಗಮಾದಿಶೇತ್ ॥೭೬೩॥ತಾ॥ ಷಷ್ಠದಲ್ಲಿ ಚಂದ್ರನು, ಅಷ್ಟಮದಲ್ಲಿ ಶನಿಯು ದ್ವಾದಶದಲ್ಲಿ ಪಾಪಗ್ರಹವಿದ್ದು ಲಗ್ನಾಧಿಪತಿ ಪಾಪಗ್ರಹ ನವಾಂಶೆಯಲ್ಲಿದ್ದರೆ, ಜಾತಕನಿಗೆ ಪೀನರೋಗಬರುವುದು ॥೭೬೩॥

## ಪಿತ್ತರೋಗಃ

ಶ್ಲೋಕ॥ ರೋಗಸ್ಥಾನಗತೇ ಸೂರ್ಯೇ ತದ್ಭಾವೇ ಪಾಪಸಂಯುತೇ । ಕ್ರೂರದೃಷ್ಟಿಯುತೇಭಾನೌ ಪೈತ್ಯಕೋಲ್ಬಣಮಾದಿಶೇತ್ ॥೭೬೪॥ತಾ॥ ರೋಗ ಸ್ಥಾನದಲ್ಲಿ ಸೂರ್ಯನಿದ್ದು ಅಲ್ಲಿ ಮತ್ತೊಂದು ಪಾಪಗ್ರಹಯುತ್ತವಾಗಿ ಸೂರ್ಯನಿಗೆ ಕ್ರೂರದೃಷ್ಟಿಯಿದ್ದರೆ ಪಿತ್ತರೋಗವು ಬರುವುದು ॥೭೬೪॥

ಇತಿ ಷಷ್ಠಭಾವಃ

## ಅಥ ಸಪ್ತಮಭಾವಫಲಂ

ಶ್ಲೋಕ॥ ಯಾತ್ರಪುತ್ರ ಕಳತ್ರ ಸೌಖ್ಯಮಖಿಲಂ ಸಂಚಿಂತಯೇತ್ಸಪ್ತ ಮಾತ್ । ಉಕ್ತಂ ಪುತ್ರಸುಖಾ ಸುಖಾಗಮಫಲಂ ಸರ್ವಂಚ ಯತ್ತದ್ವದೇತ್ ॥ ಜಾರಃಕಾಮಗತೇ ಸಿತೇಮದನಪೇ ಸಾಹಿದ್ವಜೇವಾತಥಾ । ಕಾಮೇಜೀವಯುತೇ ಕ್ಷಿತೇ ಶುಭಗೃಹೇ ಜಾತೋನಜಾರೋ ಭವೇತ್ ॥೭೬೫॥

ಅವತಾರಿಕೆ-ಸಪ್ತಮಭಾವ ಮೂಲಕವಾಗಿ ಜಾತಕನಿಗೆ ಉಂಟಾಗುವ ಫಲವು ಹೇಳಲ್ಪಡುತ್ತೆ. ಸಪ್ತಮಾಭಾವದಿಂದ ತಿಳಿಯಬೇಕಾದ ವಿಷಯಗಳು ಯಾವುದೆಂದರೆ ಯಾತ್ರೆ, (ಸಂಚಾರ) ಸುತ, ಭಾರ್ಯ, ಸೌಖ್ಯ, ಸುತ ಸುಖ, ಮತ್ತು ವಿರೋದ, ಆಗಮ ಫಲ ಈ ವಿಷಯವು ಹೇಳಲ್ಪಡುತ್ತೆ, ಮತ್ತು ಸಂಜ್ಞಾಪ್ರಕರಣದಲ್ಲಿ ಹೇಳಿರುವ

ಫಲಗಳೆಲ್ಲವೂ ತಿಳಿಯತಕ್ಕದ್ದು. ಈ ಶ್ಲೋಕದ ಉತ್ತರಾರ್ಧದಿಂದ ಜಾರರೋಗ ೧ ಏಕಪತ್ನೀ ಯೋಗ ೧ ಅಂತು ೨ ಯೋಗವು ಹೇಳಲ್ಪಡುತ್ತದೆ.

ತಾ।। ಲಗ್ನದಿಂದ ಸಪ್ತಮಭಾವದಲ್ಲಿ ಶುಕ್ರನು, ಅಥವಾ ಸಪ್ತಮಾಧಿಪತಿ ಮತ್ತು ರಾಹುಕೇತುಗಳು ಸಪ್ತಮಸ್ಥಾನವನ್ನು ಹೊಂದಿದ್ದರೆ ಜಾತಕನು ವ್ಯಭಿಚಾರಿ ಯಾಗುವನು. ಮತ್ತು ಸಪ್ತಮಸ್ಥಾನದಲ್ಲಿ ಗುರುವಿದ್ದರೂ ಗುರುವಿನಿಂದ ನೋಡಲ್ಪಟ್ಟರೂ, ಶುಭ ಗ್ರಹಗಳಿದ್ದರೂ ಜಾತಕನು ವ್ಯಭಿಚಾರಿಯಾಗುವುದಿಲ್ಲ ಅಂದರೆ, ಸಪ್ತಮಸ್ಥಾನದಲ್ಲಿ ಶುಕ್ರನು ಸಪ್ತಮಾಧಿಪತಿಯಿದ್ದರೆ ೧ ಯೋಗ, ಸಪ್ತಮಾಧಿಪತಿಯು ಸಪ್ತಮದಲ್ಲಿ ರಾಹುಕೇತುಗಳ ಸಂಯುಕ್ತನಾದರೆ ೨ ಯೋಗ ಈ ಮೂರು ಜಾರಯೋಗಗಳು. ಸಪ್ತಮದಲ್ಲಿ ಗುರುವಿದ್ದರೆ, ೧ ಗುರು ನೋಡಿದರೆ ೧ ಶುಭ ಗ್ರಹಗಳಲ್ಲಿ ಯಾರಿದ್ದರು ೧ ಅಂತು ಮೂರು ಶುಚಿಯೋಗ - ಅಂತು ೬ ಯೋಗಗಳು ಈ ಯೋಗಗಳು ೧೨x೬=೭೨ ಆಗುತ್ತದೆ ।।೭೬೫।।

## ಅತಿ ಕಾಮಿ ಯೋಗಃ ಶ್ವೇತಚ್ಛತ್ರ ಯೋಗಶ್ಚ

ಅವತಾರಿಕೆ-ದುಃಸ್ಥೇ ಕಾಮಪತೌ, ಎಂಬುವ ಶ್ಲೋಕದಿಂದ ಸಪ್ತಮಸ್ಥಾನದ ಫಲಗಳ ಶುಭಾಶುಭತ್ವಗಳು, ಅತಿಕಾಮಿಯೋಗ ಶ್ವೇತಚ್ಛತ್ರಯೋಗ ಸಹ ಹೇಳಲ್ಪಡುತ್ತದೆ.

ಶ್ಲೋಕ।। ದುಃಸ್ಥೇ ಕಾಮಪತೌತು ಪಾಪಗೃಹಗೇ ಪಾಪೇಕ್ಷಿತೇತದ್ಯುತೇ ।। ತಜ್ಞಾಯಾ ಭವನಸ್ಯ ಮಧ್ಯಮಫಲಂ ಸರ್ವಶುಭಂ ಚಾನ್ಯಥಾ ।। ಕಾಮಸ್ಥಾನಪತೌ ಸಿತೇನಸಹಿತೇ ಪಾಪರ್ಕ್ಷಗೇಕಾದುದಿಃ । ಸೌಮ್ಯರ್ಕ್ಷೇ ಶುಭಖೇಟ ವೀಕ್ಷಿತಯುತೇ ಜಾತಸ್ಸಿತಚ್ಛತ್ರವಾರ್ನ ।।ತಾ।। ಸಪ್ತಮಾಧಿಪತಿಯು ದುಃಸ್ಥಾನಗಳಾದ ೬-೮-೧೨ ರಲ್ಲಿದ್ದು ಆ ಕ್ಷೇತ್ರಗಳು ಪಾಪಗ್ರಹಗಳ ರಾಶಿಯಾಗಿ ಪಾಪಗ್ರಹಗಳ ಸಂಗಡ ಇದ್ದರೂ ಅಥವಾ ಪಾಪವೀಕ್ಷಿತನಾದರೂ ಸಪ್ತಮಭಾವದ ಮುಖ್ಯ ಫಲವಾದ ಕಳತ್ರಸುಖವೂ ಭಂಗವಾಗಿ ಮಧ್ಯಮವಾಗಿರುವುದು. ಹಾಗಿಲ್ಲದೆ ಅನ್ಯಥಾ ಕೇಂದ್ರತ್ರಿಕೋಣಗಳಲ್ಲಿ (೧-೪-೭-೧೦-೯-೫)ರಲ್ಲಿದ್ದು ಆ ಭಾವಗಳು ಶುಭಗ್ರಹರಾಶಿಗಳಾಗಿ ಶುಭಗ್ರಹ ಸಂಯುಕ್ತನಾದರೂ ಅಥವಾ ಶುಭಗ್ರಹಗಳಿಂದ ನೋಡಲ್ಪಟ್ಟರೂ ಜಾತಕನಿಗೆ ಕಳತ್ರ ಸಂಬಂಧವಾದ ಫಲಗಳು ಇಷ್ಟಕರವಾಗಿ ಉಂಟಾಗುತ್ತವೆ. ಮತ್ತು ಸಪ್ತಮಾಧಿಪತಿಯು ಶುಭಗ್ರಹಯುಕ್ತನಾಗಿ ಪಾಪಗ್ರಹದಿಂದ ನೋಡಲ್ಪಟ್ಟರೆ ಮಿಶ್ರವಾಗಿ ಕೆಲವು ಕಾಲ ಸುಖವಾಗಿಯೂ, ಕೆಲವು ಕಾಲ ದುಃಖಕರವಾಗಿಯೂ ಅಥವಾ ಸುಖ ದುಃಖ ಮಿಶ್ರವಾಗಿಯೂ ಉಂಟಾಗುತ್ತದೆ. ಸಪ್ತಮಾಧಿಪತಿಯು ಶುಕ್ರನ ಸಂಗಡ ಪಾಪಗ್ರಹ

ರಾಶಿಗಳಾದ ೧೦-೧೧-೧-೮-೫ ಈ ಸ್ಥಾನಗಳಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೂ ಯುಕ್ತನಾದರೂ ಕಾಮಾತುರನಾಗುವನು. ಸಪ್ತಮಾಧಿಪತಿಯು ಶುಭಗ್ರಹಗಳ ರಾಶಿಗಳಲ್ಲಿದ್ದು ಶುಭಗ್ರಹಯುತ ಅಥವಾ ದೃಷ್ಟನಾದರೆ ಪತ್ನೀಪುತ್ರ ಸುಖ ಸಂಪೂರ್ಣವಾಗಿ ಪ್ರಾಪ್ತಿಯಾಗುವುದಲ್ಲದೆ ಶ್ವತಛತ್ರವು ಸಹ ಪ್ರಾಪ್ತಿಯಾಗುತ್ತೆ.

## ಜಾರ ಯೋಗಃ

ಶ್ಲೋಕ।। ಜಾರಃ ಕರ್ಮಧನಾಸ್ತಪಾ ದಶಮಗಾಃ ಪುತ್ರಾಧಿಕಾರಗ್ರಹಾಃ । ದುಃಸ್ಥಾಧೀಗುರುಕಾಮಪಾಃ ಸುತಗೃಹೇ ಪಾಪೇಕ್ಷಿತೇನಾತ್ಮಜಃ ।। ಜೀವಜ್ಞೌಯದಿ ಪಾನಿಶಾಕರಸಿತೌ ಕಾಮೇಬಹುಸ್ತ್ರೀರತಃ । ಶುಕ್ರೇ ಮನ್ಮಥರಾಶಿಗೇ ಬಲಸ್ತ್ರೀಣಾಂಬ ಹೂನಾಂಪತಿಃ ।।೭೬೭।।

ಅವತಾರಿಕೆ।। ಈ ಶ್ಲೋಕದಿಂದ ನಾಲ್ಕು ಪಾರದಾರಿಕ ಯೋಗವು ಹೇಳಲ್ಪ ಡುತ್ತೆ. ದಶಮಾಧಿಪತಿ, ದ್ವಿತೀಯಾಧಿಪತಿ, ದ್ಯೂನಸ್ಥಾನಾಧಿಪತಿ, ಈ ಮೂರು ಗ್ರಹಗಳು ದಶಮದಲ್ಲಿದ್ದರೆ, ಆ ಕಾಲದಲ್ಲಿ ಹುಟ್ಟಿದವನು, ತನ್ನ ಹೆಂಡತಿಯಲ್ಲದವ ರಲ್ಲಿ ಸಂಗಮಮಾಡುತ್ತಾನೆ. ಇದು ೧ ಯೋಗ, ಪಂಚಮಾಧಿಪತಿ, ನವಮಾಧಿಪತಿ, ಈ ಎರಡು ಗ್ರಹಗಳು ದುಃಸ್ಥಾನಗಳಲ್ಲಿದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಜಾತಕನು ಸಂತತಿ ಹೀನನೂ ಆಗುವನು. ಇದು ೧ ಯೋಗ, ಗುರುಬುಧರು ಅಥವಾ ಚಂದ್ರಶುಕ್ರರು ಸಪ್ತಮದಲ್ಲಿದ್ದರೆ ಬಹು ಸ್ತ್ರೀಯರಲ್ಲಿ ಭೋಗವುಳ್ಳವನಾಗುವನು. ಇದು ಮೂರನೆ ಯೋಗ. ಶುಕ್ರನು ಸಪ್ತಮರಾಶಿಯಲ್ಲಿ ಬಲಿಷ್ಠನಾಗಿದ್ದರೆ ಅನೇಕ ಸ್ತ್ರೀಯರಿಗೆ ಪತಿಯಾಗುವನು. ಇದು ೪ನೆ ಯೋಗ. ಈ ಪ್ರಕಾರ ನಾಲ್ಕು ಯೋಗಗಳ ಫಲವನ್ನು ತಿಳಿಯತಕ್ಕದ್ದು ।।೭೬೭।।

ಶ್ಲೋಕ।। ಶುಕ್ರಾರೌ ಮದಗೌಕಲತ್ರರಹಿತೌಧರ್ಮಾತ್ಮಜಸ್ಥೌತಥಾ। ಶತ್ರುಸ್ಥಾನಗತೌ ನಿಶಾಕರಸಿತೌ ಯದ್ಯೇಕಪುತ್ರೋಭವೇತ್ ।। ಲಗ್ನಾಸ್ತವ್ಯಯಗೇಷುಪಾ ಪಖಚರೇಷ್ವಿಂದೋ ಸುತೇದುರ್ಬಲೇ ।। ವಂಧ್ಯಾಸ್ತ್ರೀಪತಿರೇವ ಜಾತಮನುಜೋ ಜಾಯಾ ವಿಹೀನೋಥವಾ ।।೭೬೮।।

ಅವತಾರಿಕೆ-ಈ ಶ್ಲೋಕದಿಂದ ಕಲತ್ರರಹಿತಯೋಗ ೧, ಏಕಪುತ್ರಯೋಗ ೧, ವಂಧ್ಯಾಸ್ತ್ರೀಪತಿಯೋಗ ಅಥವಾ ಜಾಯಾಹೀನಯೋಗ ೧, ಈ ಯೋಗಗಳ ಫಲವು ಹೇಳಲ್ಪಡುತ್ತೆ. ತಾ।। ಶುಕ್ರನು ಅಂಗಾರಕನು ಸಪ್ತಮದಲ್ಲಿದ್ದರೆ ವಿವಾಹ ಹೀನನಾಗುವನು. ಮತ್ತು ನವಮದಲ್ಲಿ ಶುಕ್ರಾಂಗಾರಕರಿದ್ದರೆ ೧ ಯೋಗ, ಪಂಚಮದಲ್ಲಿದ್ದರೆ ೧ ಯೋಗ, ಚಂದ್ರ ಶುಕ್ರರು ಷಷ್ಠದಲ್ಲಿದ್ದರೆ ಏಕಪುತ್ರಯೋಗ.

ಪಾಪಗ್ರಹಗಳು ಲಗ್ನ, ಸಪ್ತಮ, ದ್ವಾದಶದಲ್ಲಿದ್ದರೆ, ಪಂಚಮದಲ್ಲಿ ಚಂದ್ರನಿದ್ದರೆ, ಬಂಜೆಯಗಂಡನಾಗಲಿ, ಅಥವಾ ವಿವಾಹವಿಲ್ಲದವನಾಗಲೀ ಆಗುತ್ತಾನೆ ॥೭೬೮॥

## ಪರಸ್ತ್ರೀರತಯೋಗಃ

ಶ್ಲೋಕ॥ ವಿತ್ತಾಸ್ತಾ ಪಿರಭಾರ್ಗವಾಸ್ತಾನುಗತಾಃ ಪಾಪನ್ವಿತಾಃ ಕಾಮುಕಃ । ಪಾಪವ್ಯೋಮಚರಾನ್ವಿತೌ ತನುರಿಪುಸ್ಥಲನಾಧಿಪೌಚೇತ್ತಥಾ ॥ ಕಾಮಸ್ಥೇರಿಪುವಿತ್ತ ಲಗ್ನಪಯುತೇ ಪಾಪೇಪರಸ್ತ್ರೀರತಃ । ಪಾಪಾರಾತಿ ಕಲತ್ರಪಾನಮಮಗಾಃ ಕಾಮಾತುರೋ ಜಾಯತೇ ॥೭೬೯॥

ಅವತಾರಿಕೆ ॥ ವಿತ್ತಾಸ್ತಾರಿಪವೆಂಬ ಶ್ಲೋಕದಿಂದ ೪ ಪರಸ್ತ್ರೀರತ ಅಥವಾ ಕಾಮಾತುರ ಯೋಗವು ಹೇಳಲ್ಪಡುತ್ತೆ. ಲಗ್ನಕ್ಕೆ ದ್ವಿತೀಯ, ಸಪ್ತಮ, ಷಷ್ಠ, ಈ ಮೂರು ಸ್ಥಾನಕ್ಕಧಿಪತಿಗಳಾದ ಗ್ರಹಗಳು ಲಗ್ನ ಕೇಂದ್ರದಲ್ಲಿದ್ದು, ಪಾಪಗ್ರಹ ಯುಕ್ತಾದರೆ ಕಾಮಾತುರನಾಗುವನು. ಇದು ೧ ಯೋಗ, ಲಗ್ನದಿಂದ ೬ನೆ ಸ್ಥಾನಾಧಿಪತಿಯು, ಲಗ್ನಾಧಿಪತಿಯು, ಶುಕ್ರನೂ ಪಾಪಗ್ರಹಗಳ ಯುಕ್ತನಾದರೆ ಕಾಮಾತುರನಾಗುವನು. ಇದು ೨ನೆಯೋಗ. ದ್ವಿತೀಯಾಧಿಪತಿ ಲಗ್ನಾಧಿಪತಿ ಷಷ್ಠಾಧಿಪತಿಗಳು ಸಪ್ತಮದಲ್ಲಿದ್ದರೆ ಪರಸ್ತ್ರೀರತನಾಗುವನು. ಇದು ೩ನೆ ಯೋಗ. ಷಷ್ಠಾಧಿಪತಿ ಸಪ್ತಮಾಧಿಪತಿಗಳು ನವಮಸ್ಥಾನದಲ್ಲಿದ್ದರೆ ಕಾಮಾತುರನಾಗುವನು ಇದು ೪ನೆ ಯೋಗ. ಈ ವಿಷಯಕ್ಕೆ ಸರ್ವಾರ್ಥಚಿಂತಾಮಣಿಯಲ್ಲಿ ಶ್ಲೋಕ॥ ಲಗ್ನಸ್ಥಿತಾ ವಿತ್ತಕಲತ್ರ ನಾಥಾಃ ಕೇಂದ್ರೇ ಸಶುಕ್ರಾಯದಿ ಪಾಪಯುಕ್ತಾಃ । ಜಾತಃಪರಸ್ತ್ರೀಷುರತಃ ಕುಮಾರ್ಗೀ ಶುಭೇಕ್ಷಿತಶ್ಚೇನ್ನತಥಾ ಭವೇಚ್ಚ ॥೭೭೦॥ ಲಗ್ನಾರಿಪೌಪಾಪಯುತೌ ಯದಿಸ್ಯಾಜ್ಜಾತಃ ಪರಸ್ತ್ರೀಷುರತಃ ಕುಮಾರ್ಗೀ । ಲಗ್ನೇಶ್ವರೇ ಶತ್ರುಕುಟುಂಬನಾಥೇ ಪಾಪೈರ್ಯುತೇವಾ ಯದಿದಾರರಾಶೌ ॥೭೭೦॥

ಶ್ಲೋಕ॥ ವಂಧ್ಯಾಪತಿಃ ಸಿತರವೀ ಮದನೋದಯಸ್ಥೌ । ಚಂದ್ರೋದಯೇ ಸಮಗೃಹೇ ಲಲಾನಕೃತಿಸ್ಯಾತ್ ॥ ಪುಂರಾಶಿಗೇ ಪುರುಷಭಾವಯುತಂ ಕಲತ್ರಂ । ಸ್ತ್ರೀಪುಂಗ್ರಹೇ ಕ್ಷಿತಿಯುತೇ ಸತಿಮಿಶ್ರರೂಪಂ ॥೭೭೧॥

ಅವತಾರಿಕೆ ॥ ಈ ಶ್ಲೋಕದಿಂದ ವಂಧ್ಯಾಪತಿಯೋಗ ೧, ಲಲನಾಪತಿ ಯೋಗ ೧, ಪುರುಷಾಕೃತಿ ಕಳತ್ರಯೋಗ ೧, ಮಿಶ್ರಸ್ವಭಾವ ಪತ್ನಿಯೋಗ ೧ ಅಂತು ೪ ಯೋಗಗಳು ಹೇಳಲ್ಪಡುತ್ತೆ. ಶುಕ್ರ ಮತ್ತು ಸೂರ್ಯ, ಸಪ್ತಮ ಲಗ್ನದಲ್ಲಿದ್ದರೆ, ಬಂಜೆಯ ಗಂಡನಾಗುವನು, ಅಂದರೆ ವಂಧ್ಯಾಪತಿಯೋಗ, ಸಮರಾಶಿಗಳಾದ

೨-೪-೮-೬-೧೦-೧೨ ರಲ್ಲಿ ಚಂದ್ರನಿದ್ದರೆ ಮತ್ತು ಲಗ್ನವು ಸಮರಾಶಿಯಾಗಿದ್ದರೆ ಜಾತಕನು ಹೆಂಡತಿಯು ಸಾಧಾರಣ ಸ್ತ್ರೀಯಾಗಿಯೇ ಇರುವಳು. ಪುರುಷಗ್ರಹರಾಶಿಯು ಲಗ್ನವಾಗಿ, ಚಂದ್ರನು ವಿಷಯ ರಾಶಿಯಲ್ಲಿದ್ದರೆ ಆತನ ಹೆಂಡತಿಯು ಪುರುಷಸ್ವಭಾವವುಳ್ಳವಳಾಗಿರುವಳು. ಪುರುಷರಾಶಿ ಲಗ್ನವಾಗಿ ಸ್ತ್ರೀರಾಶಿಯಲ್ಲಿ ಚಂದ್ರನಿದ್ದು ಸ್ತ್ರೀ ಗ್ರಹಗಳೂ ಪುರುಷ ಗ್ರಹಗಳೂ ನೋಡಿದರೆ ಮಿಶ್ರವಾದ ಸ್ವಭಾವವುಳ್ಳವಳಾಗುವಳು ॥೭೭೨॥

## ದಾಸೀಪತ್ನಿಯೋಗೋ ಬಾಲವೈಧವ್ಯಯೋಗಶ್ಚ

ಶ್ಲೋಕ॥ ಭೌಮಾಂಶೇವಾ ಭೌಮರಾಶೌ ವಿಲಗ್ನಾತ್ ಕಾಮಸ್ಥಾನೇ ಜನ್ಮ ಭೇವಾ ವಧೂನಾಮ್ ॥ ಜಾಯಾದಾಸೇ ನೀಚ ಮೂಢಗ್ರಹಾಂಶೇ ದುಷ್ಟಾವಾಸ್ಯಾ ದ್ಯೌವನೇ ಭರ್ತೃಹೀನಾ ॥೭೭೩॥

ತಾ॥ ಲಗ್ನದಿಂದ ಸಪ್ತಮಭಾವವಾಗಲೀ, ಸಪ್ತಮಭಾವ ನವಾಂಶವಾಗಲೀ, ಸ್ತ್ರೀ ಜಾತಕದಲ್ಲಿ ಜನ್ಮಲಗ್ನವಾಗಲೀ, ಜನ್ಮನವಾಂಶವಾಗಲೀ, ಅಂಗಾರಕ ಗ್ರಹ ಕ್ಷೇತ್ರವಾದ ಮೇಷ, ವೃಶ್ಚಿಕರಾಶಿ ಸಂಬಂಧವಾದದ್ದಾಗಿದ್ದರೆ ಜಾತಕನ ಹೆಂಡತಿಯು ದಾಸಿಯಾದವಳಾಗಿರುವಳು. ಸ್ತ್ರೀ ಜಾತಕದಲ್ಲಿ ಜನ್ಮಲಗ್ನವಾದರೂ ಜನ್ಮನವಾಂಶವಾದರೂ ಕುಜಸಂಬಂಧವಾದದ್ದಾಗಿದ್ದು ನೀಚ, ಅಸ್ತಗ್ರಹಗಳು ಸಂಬಂಧವಾಗಿದ್ದರೆ, ಯೌವನದಲ್ಲಿ ಗಂಡನಿಲ್ಲದವಳಾಗುವಳು ॥೭೭೩॥

## ಸತ್ಕಳತ್ರಯೋಗಃ ಪತಿಘ್ನಿಯೋಗಶ್ಚ

ಶ್ಲೋಕ॥ ಶುಭಾಂಸರಾಶೌಯದಿಸದ್ಗುಣಾಢ್ಯಾ ಶುಭೇಕ್ಷಿತೇ ಚಾರುತರಂ ಕಳತ್ರಂ॥ ಚಂದ್ರಾಂಶಕೇ ದುರ್ಬಲಚಂದ್ರ ರಾಶೌ ಜಾತಾಪತಿಘ್ನೀ ಸಬಲೇತು ಸಾಧ್ವೀ ॥೭೭೪॥ತಾ॥ ಶುಭಗ್ರಹಗಳ ರಾಶಿಗಳಾದ ೨-೩-೬-೭-೯-೧೨ ಈ ರಾಶಿಗಳು ಸಪ್ತಮಭಾವಗಳಾದರೂ, ಸಪ್ತಮಭಾವದಲ್ಲಿ ಈ ನವಾಂಶ ಉದಯವಾದರೂ ಜಾತಕನ ಪತ್ನಿಯು ಸೌಂದರ್ಯ ಗುಣಾತಿಶಯವುಳ್ಳವಳಾಗುವಳು. ಸ್ತ್ರೀ ಜಾತಕದಲ್ಲಿ ಲಗ್ನವಾಗಲಿ, ಲಗ್ನದಲ್ಲಿ ಉದಯವಾದರೆ ಶುಭರಾಶಿಯಾದಾಗ್ಯೂ ಚಂದ್ರಕ್ಷೇತ್ರವಾಗಿ ಚಂದ್ರನು ದುರ್ಬಲನಾಗಿದ್ದರೆ ಗಂಡನನ್ನು ಕೊಲ್ಲುವಳಾಗುವಳು, ಚಂದ್ರನು ಬಲಿಷ್ಠನಾಗಿದ್ದರೆ ಪತಿವ್ರತೆಯಾಗುವಳು ॥೭೭೪॥

ಶ್ಲೋಕ॥ ಅರ್ಕಾಂಶೇ ಕುಲಟಾನಿ ಚೊಚ್ಚಗೃಹಪೇ ಸಾಧ್ವೀಶ ಭಾಲೋಕಿತೇ॥ ಲಗ್ನೇ ಶೀತಕರೇಥವಾ ಮದನಭೇ ನೀಚಾರಿ ಮೂಢಾನ್ವಿತೇ ॥ ಪಾಪವ್ಯಾಳವಿಹಂಗ ಪಾಶನಿಗಳ ದ್ರೇಕ್ಕಾಣ ಭಾಸಾನ್ವಿತೇ ॥ ಸಂಧ್ಯಂಶೇವಿಗತ ವ್ರತಾಚ ವಿಧವಾ ಜಾತ

ಸ್ವಜಾಯಾಭವೇತ್ ॥೭೭೫॥ತಾ॥ ಲಗ್ನದಲ್ಲಿಯಾದರೂ ಸಪ್ತಮದಲ್ಲಿಯಾದರೂ, ಚಂದ್ರನಿದ್ದು ಸೂರ್ಯನವಾಂಶೆಯಾಗಿದ್ದರೆ ಅವನ ಹೆಂಡತಿಯು ವ್ಯಭಿಚಾರಿಣಿ ಯಾಗುವಳು. ಉಚ್ಚಸ್ವಕ್ಷೇತ್ರಗಳಾದ ಮೇಷ ಸಿಂಹರಾಶಿ ನವಾಂಶವಾಗಿದ್ದು ಶುಭಗ್ರಹ ದೃಷ್ಟಿ ಇದ್ದರೆ ಜಾತಕನ ಹೆಂಡತಿಯು ಪತಿವ್ರತೆಯಾಗುವಳು. ಲಗ್ನ ಸಪ್ತಮಗಳಲ್ಲಿ ನೀಚ, ಅಸ್ತ, ಶತ್ರುಕ್ಷೇತ್ರ ಗ್ರಹಗಳಿದ್ದರೂ ಸಪ್ತಮಭಾವದ್ರೇಕ್ಕಾಣವು ಪಾಪಗ್ರಹ ದ್ರೇಕ್ಕಾಣ, ಸರ್ಪದ್ರೇಕ್ಕಾಣ, ಪಕ್ಷಿದ್ರೇಕ್ಕಾಣ, ಪಾಶದ್ರೇಕ್ಕಾಣ, ಬಂಧನದ್ರೇಕ್ಕಾಣ, ಇವುಗಳಾಗಿದ್ದರೆ ಜಾತಕನ ಹೆಂಡತಿಯು ಪತಿವ್ರತಾಭಂಗ ಉಳ್ಳವಳಾಗಿಯೂ, ವಿಧವೆಯಾಗಿಯೂ ಇರುವಳು ॥೭೭೫॥

## ಪತ್ನೀ ವಂಶವಿಚಾರಃ

ಶ್ಲೋಕ॥ ಕಾಮಸ್ಥೇ ತನುಪೇ ಶುಭಗ್ರಹಯುತೇ ಸದ್ವಂಶಜಾಮೃಚ್ಛತಿ । ಕ್ರೂರರ್ಕ್ಷೇ ಮದಗೇ ವಿಲಗ್ನ ರಮಣೇ ದುರ್ವಂಶ ಜಾತಾಂಗನಾಂ ॥ ವರ್ಣಂರೂಪ ಗುಣಾಕೃತಿಂಚ ಸಕಲಂಯತ್ತದ್ಗ್ರಹೋಕ್ತಂ ವದೇತ್ ॥ ದುರ್ವ್ಯಾಪಾರ ಕರಗ್ರಹಾ ಕೃತಿ ನರಪ್ರೀತಿಂ ಪ್ರಯಾತ್ಯಂಗನಾ ॥೭೭೬॥ತಾ॥ ಲಗ್ನಾಧಿಪತಿಯು ಸಪ್ತಮದಲ್ಲಿದ್ದು ಶುಭಗ್ರಹಯುಕ್ತನಾಗಿದ್ದರೆ ಜಾತಕನ ಹೆಂಡತಿಯು ಸದ್ವಂಶದಲ್ಲಿ ಹುಟ್ಟಿದವಳಾಗುವಳು. ಪಾಪಗ್ರಹ ರಾಶಿಗಳು ಸಪ್ತಮಭಾವವಾಗಿ ಲಗ್ನಾಧಿಪತಿಯೂ ಇದ್ದರೆ ಹೆಂಡತಿಯೂ ದುಷ್ಟವಂಶದಲ್ಲಿ ಹುಟ್ಟಿದವಳಾಗುವಳು ಮತ್ತು ಇಲ್ಲಿ ತಿಳಿಯತಕ್ಕ ವಿಶೇಷವೇನೆಂದರೆ- ಜಾತಕನ ಸಪ್ತಮಭಾವದಲ್ಲಿ ಯಾವ ಗ್ರಹಗಳಿರು ತ್ತಾರೋ ಆ ಗ್ರಹಗಳಿಗೆ ಅನುಸಾರವಾದ ಸಂಜ್ಞಾಪ್ರಕರಣದಲ್ಲಿ ಗ್ರಹಗಳಿಗೆ ಹೇಳಿದ ಪ್ರಕಾರ ಗುಣ ರೂಪಲಕ್ಷಣಾತಿಶಯಗಳನ್ನು ವಿಚಾರಮಾಡಿ ತಿಳಿಯತಕ್ಕದ್ದು॥೭೭೬॥

ಶ್ಲೋಕ॥ ಪಾಪಪ್ರಕಾಶಸಂಯುಕ್ತೇ ಕಳತ್ರೇದೃಷ್ಟಚಾರಿಣೀ । ರವೌವಂಧ್ಯಾತು ಶೀತಾಂಶೌ ಕ್ಷೀಣೇತು ವ್ಯಭಿಚಾರಿಣೀ ॥೭೭೭॥ತಾ॥ ಜಾತಕನ ಸಪ್ತಮಭಾವದಲ್ಲಿದ್ದ ಗ್ರಹಗಳ ಶುಭಪಾಪತ್ವದ ಮೂಲವಾಗಿ ಪತ್ನೀಫಲ ಸ್ವರೂಪವು ಹೇಳಲ್ಪಡುತ್ತೆ. ಸಪ್ತಮಭಾವದಲ್ಲಿ ಪಾಪಗ್ರಹಗಳಿದ್ದರೆ, (ಕುಜ, ಶನಿ, ಪಾಪಯುಕ್ತ ಬುಧ) ದುಷ್ಟಳಾದ ಹೆಂಡತಿಯಾಗುವಳು. ಸೂರ್ಯನಿದ್ದರೆ, ಬಂಜೆಯಾಗುವಳು. ಕ್ಷೀಣಚಂದ್ರನಿದ್ದರೆ ವ್ಯಭಚಾರಿಣಿಯಾಗುವಳು. ಪೂರ್ಣಚಂದ್ರನಿದ್ದರೆ ಪತಿವ್ರತೆ ಆಗುವಳು. ॥೭೭೭॥

ಶ್ಲೋಕ॥ ಕುಜೇತು ಮ್ರಿಯತೇ ಮಂದೇ ದುರ್ಭಗಾ ರಾಹುಸಂಯುತೇ । ಪರದಾರ ರತಿಸ್ವಾಯಾಂ ನಿಷೇಕಾ ಭಾವಕೋಸುತಃ ॥೭೭೮॥ತಾ॥ ಲಗ್ನದಿಂದ ಸಪ್ತಮಭಾವದಲ್ಲಿ ಕುಜನಿದ್ದರೆ ಪತ್ನಿ ಮರಣ ಹೊಂದುವಳು, ಶನಿ ಇದ್ದರೆ

ದೌರ್ಭಾಗ್ಯವತಿಯಾಗುವಳು. (ಅಂದರೆ ದರಿದ್ರಳೂ ಮುಂಡೆಯೂ ಆಗುವಳು) ರಾಹುವಿದ್ದರೆ ಪರದಾರ ರತಿಯುಳ್ಳವನಾಗುವನು. ಮತ್ತು ಆತನ ಹೆಂಡತಿಯು ನಿಷೇಕವಿಲ್ಲದೆ ಇರುವ ಕಾಲದಲ್ಲಿ ಪರಪುರುಷನಿಂದ ಗರ್ಭಧಾರಣೆ ಹೊಂದಿ ಪುತ್ರನನ್ನು ಪಡೆಯುವಳು ॥೭೭೮॥

ಶ್ಲೋಕ॥ *ಧೂಮೇ ವಿವಾಹ ಹೀನಃ ಸ್ಯಾನ್ಮ್ರಿಯತೇ ಕಾರ್ಮುಕೇಸತಿ । ಪರಮೇಷತುದುಃ ಶೀಲಾ ಕೇತೌ ವಂಧ್ಯಾಸತೀ ಭವೇತ್ ॥೭೭೯॥ತಾ॥ ಜಾತಕನ ಸಪ್ತಮಭಾವದಲ್ಲಿ ಧೂಮಗ್ರಹವಿದ್ದರೆ ವಿವಾಹಹೀನನಾಗುವನು. ಧನಸ್ಸಾದರೆ ಅವನ ಹೆಂಡತಿಯು ಅವನ ಜೀವಿತಕಾಲದಲ್ಲಿಯೇ ಮರಣ ಹೊಂದುವಳು. ಪರಿವೇಷವಿದ್ದರೆ ದುರಾಚಾರವುಳ್ಳವಳಾಗುವಳು. ಕೇತುಗ್ರಹವಿದ್ದರೆ ಬಂಜೆಯಾಗುವಳು ॥೭೭೯॥

## ದಾರ ಭಂಗಯೋಗಃ

ಶ್ಲೋಕ.। ಕಾಲೇವಿದಾರು ಪಾಪೇತು ಗರ್ಭಸ್ರಾವೇಣ ಸಂಯುತಾ । ಸುಶೀಲಾ ಸ್ತ್ರೀಪ್ರಸೂತಾಚ ಪೂರ್ಣಮಾಣೇ ಸುಧಾಕರೇ ॥೭೮೦॥ತಾ॥ ಪಾಪಗ್ರಹಗಳು ಸಪ್ತಮ ಭಾವದಲ್ಲಿದ್ದರೆ, ಅವರವರ ದಶಾಭುಕ್ತಿ ಕಾಲದಲ್ಲಿ ದಾರಹಾನಿ ಮಾಡುವರು. ಮತ್ತು ಗರ್ಭಸ್ರಾವವನ್ನುಂಟುಮಾಡುತ್ತಲಿರುವರು. ಶುಭಗ್ರಹಗಳಲ್ಲಿ ಚಂದ್ರನು ಸಂಪೂರ್ಣ ಕಳೆಯುಳ್ಳವನಾಗಿದ್ದರೆ, ಸಚ್ಚರಿತ್ರಳಾದ ಹೆಂಡತಿಯುಳ್ಳವನಾಗುವನು ಮತ್ತು ಹೆಣ್ಣುಮಕ್ಕಳನ್ನು ಪ್ರಸವಿಸುವಳು ॥೭೮೧॥

ಶ್ಲೋಕ॥ ಬುಧೇ ಸುಪುತ್ರಾವಾಗೀಶೇ ಗುಣಯುಕ್ತಾ ಸುಪುತ್ರಿಣೇ । ಶುಕ್ರೇ ಸೌಭಾಗ್ಯ ಸಂಯುಕ್ತಾ ಶ್ರೀಮತೀಚ ಬಲಾನ್ವಿತೇ ॥೭೮೨॥ತಾ॥ ಸಪ್ತಮಭಾವದಲ್ಲಿ ಬುಧನಿದ್ದರೆ, ಜಾತಕನ ಹೆಂಡತಿಯಲ್ಲಿ ಸುಪುತ್ರನು ಜನಿಸುವನು. ಬೃಹಸ್ಪತಿಯಿದ್ದರೆ ಗುಣಯುಕ್ತಳಾಗಿ ಸುಪುತ್ರವತಿಯಾಗುವಳು. ಶುಕ್ರನಿದ್ದರೆ ಸೌಭಾಗ್ಯಯುಕ್ತಳಾಗುವಳು. ಶುಕ್ರ ಬಲಿಷ್ಠನಾಗಿದ್ದರೆ ಐಶ್ವರ್ಯವತಿಯಾಗುವಳು ॥೭೮೨॥

## ಜಾರಜಪುತ್ರಯೋಗಃ ಅಪುತ್ರಯೋಗಶ್ಚ

ಶ್ಲೋಕ॥ ಸ್ತ್ರೀಪುತ್ರಪೇ ಒಲಿನಿಶೋಭನ ಖೇಟದೃಷ್ಟೇ ಷಷ್ಠಾಧಿಪೇನಸಹಿತೇ ಸತಿವೀಕ್ಷಿತೇವಾ । ಜಾರೇಣ ಪುತ್ರಜನಿಲಾಭಮುಪೈತಿಜಾಯಾ ತಸ್ಯಾಧವೋ ಬಹುಕ ಲತ್ರಯುತೋಪ್ಯಪುತ್ರಃ ॥೭೮೩॥ತಾ॥ ಈ ಶ್ಲೋಕದಲ್ಲಿ ಜಾರಜ ಪುತ್ರಯೋಗ

* ಧೂಮಾದಿ ಚಾತುರ್ಗ್ರಹಸ್ಫುಟ ಮಾಡುವ ಕ್ರಮವು ಈ ಪುಸ್ತಕದ ಪರಿಶಿಷ್ಟ ಪ್ರಕರಣದಲ್ಲಿ ಹೇಳಿರುತ್ತೆ. ಅದನ್ನು ಅಲ್ಲಿ ನೋಡುವುದು.

ಅಪುತ್ರಯೋಗ ಸಹ ಹೇಳಲ್ಪಡುತ್ತೆ. ಜನ್ಮಲಗ್ನದಿಂದ ಪಂಚಮಾಧಿಪತಿಯಾಗಲಿ ಸಪ್ತಮಾಧಿಪತಿಯಾಗಲೀ ಷಷ್ಠಾಧಿಪತಿಯುಕ್ತರಾಗಿ ಬಲಿಷ್ಠರಾಗಿದ್ದು ಶುಭಗ್ರಹಗಳಿಂದ ನೋಡಲ್ಪಟ್ಟರೆ, ಅಥವಾ ಷಷ್ಠಾಧಿಪತಿಯಿಂದ ನೋಡಲ್ಪಟ್ಟು ಶುಭಗ್ರಹಗಳಿಂದ ನೋಡಲ್ಪಟ್ಟರೂ ಆತನ ಪತ್ನಿಯು ವ್ಯಭಿಚಾರ ಮೂಲದಿಂದ ಪುತ್ರರನ್ನು ಪಡೆಯುವಳು. ಅವಳ ಗಂಡನು ಅನೇಕ ಹೆಂಡತಿಯರುಳ್ಳವನೂ ಅಪುತ್ರವಂತನೂ ಆಗುವನು ॥೭೮೩॥

ಶ್ಲೋಕ॥ ನೀಚೇಗುರೌಮದನಗೇ ಸತಿನಷ್ಟದಾರೋ ॥ ಮೀನೇ ಕಳತ್ರಭವನೇ ರವಿಜೇ ತಥೈವ ॥ ಮಂದಾರ ರಾಶಿ ನವ ಭಾಗಗತೇ ಸುರೇಜ್ಯೇ ॥ಜಾರೋಭವೇ ದಿನ ಸುತಾರಸಮನ್ವಿತೇವಾ ॥೭೮೪॥

ಅ॥ ಈ ಶ್ಲೋಕದಲ್ಲಿ ನಷ್ಟ ಪತಿಯೋಗ ೨, ಮತ್ತು ಜಾರಯೋಗ ಸಹ ಹೇಳಲ್ಪಡುತ್ತೆ. ತಾ॥ ಸಪ್ತಮರಾಶಿ ಮಕರವಾಗಿ ಅಲ್ಲಿ ಬೃಹಸ್ಪತಿ ಇದ್ದು ನೀಚಧ್ರುವವಾದ ರಾ-೯, ಭಾ-೫, ಕ-೦, ಇದರ ಅಂಶದಲ್ಲಿದ್ದರೆ ಜಾತಕನ ಹೆಂಡತಿಯು ಅವನ ಜೀವಿತಕಾಲದಲ್ಲಿಯೇ ಮೃತಿ ಹೊಂದುವಳು. ಮೀನರಾಶಿ ಸಪ್ತಮಭಾವವಾಗಿ ಅಲ್ಲಿ ಶನಿಯಿದ್ದರೆ, ಮೇಲೆ ಉಕ್ತವಾದ ಫಲವೇ ಆಗುವುದು. ಬೃಹಸ್ಪತಿ ಶನಿ ಅಥವಾ ಕುಜರ ನವಾಂಶೆಗಳನ್ನು ಪಡೆದು ಶನ್ಯಂಗಾರಕರ ಸಂಯುಕ್ತ ವಾಗಿದ್ದರೆ, ಜಾತಕನು ವ್ಯಭಿಚಾರಿ ಯಾಗುವನು ॥೭೮೫॥

## ಕಳತ್ರಾಂತರ ಯೋಗಃ

ಶ್ಲೋಕ॥ ಸಪ್ತಮೇ ಚಾಷ್ಟಮೇ ಪಾಪೇ ವ್ಯಯಸ್ಥೇ ಧರಣೀಸುತೇ ॥ ಅದೃಶ್ಯೇಯದಿ ತನ್ನಾಥೇ ಕಲತ್ರಾಂತರ ಭಾಗ್ಭವೇತ್ ॥೭೮೬॥ತಾ॥ ಸಪ್ತಮದಲ್ಲಿ ಯಾ ಅಷ್ಟಮದಲ್ಲಿ ಪಾಪಗ್ರಹವಿದ್ದು ದ್ವಾದಶದಲ್ಲಿ ಕುಜನಿದ್ದು ಈ ಭಾವಗಳು ಆ ಅಧಿಪತಿಯಿಂದ ನೋಡಲ್ಪಡದಿದ್ದರೆ ತನ್ನ ಹೆಂಡತಿಯಲ್ಲದೆ ಮತ್ತೊಂದು ಹೆಂಡತಿ ಯುಳ್ಳವನಾಗುವನು, ಅಂದರೆ ದ್ವಿ ಕಳತ್ರಯೋಗವೆಂದು ಹೇಳತಕ್ಕದ್ದು ॥೭೮೬॥

ಶ್ಲೋಕ॥ ಸುಪಕ್ಷಜಾತಂ ಪ್ರಥಮಂ ಕಳತ್ರಂ ಲಗ್ನೇಶ್ವರೋ ದಾರಸಂಯುತ ಶ್ಚೇತ್ । ದಿನೇಶಕಾಂತ್ಯಾಭಿಹತಸ್ತದಾನೀಂ ಸುರೂಪಹೀನಾಂ ಸುತರಾಂ ವದಂತಿ ॥೭೮೭॥ತಾ॥ ಲಗ್ನಾಧಿಪತಿಯು ಸಪ್ತಮಾಧಿಪತಿಯ ಸಂಗಡಲ್ಲೇ ಇದ್ದರೆ ಜಾತಕನ ಹೆಂಡತಿಯು ಉತ್ತಮವಾದ ವಂಶದಲ್ಲಿ ಹುಟ್ಟಿದವಳು, ಈಕೆಯು ಪ್ರಥಮ ಪತ್ನಿ ಯಾಗುವಳು. ಈ ಲಗ್ನ ಸಪ್ತಮಾಧಿಪತಿಗಳೇ ಸೂರ್ಯನಿಂದ ಅಸ್ತರಾಗಿದ್ದರೆ, ರೂಪ ಲಕ್ಷಣ ಗುಣಹೀನಳಾಗುವಳು. ಪ್ರಥಮಂ ಕಳತ್ರಂ ಎಂದು ನಿರ್ದೇಶ

ಮಾಡಿರುವುದರಿಂದ ಈ ಯೋಗವಿರುವ ಜಾತಕನಿಗೆ ದ್ವಿಕಳತ್ರ ಯೋಗವು ಹೇಳಲ್ಪಡತಕ್ಕದ್ದು ॥೭೮೭॥

## ತ್ರಿಕಳತ್ರ ಯೋಗಃ

ಶ್ಲೋಕ॥ ವಿತ್ತೇ ಪಾಪ ಬಹುತ್ವೇಚ ಕಲತ್ರೇಶೇ ತಥಾಸ್ಥಿತೇ । ಪಾಪ ಗ್ರಹೇಣ ಸಂದೃಷ್ಟೇ ಕಳತ್ರತ್ರಯ ಭಾಗ್ಭವೇತ್ ॥೭೮೮॥ತಾ॥ ಪುನಃ ಕಳತ್ರಾಂತರ ಯೋಗವು ಹೇಳಲ್ಪಡುತ್ತೆ. ದ್ವಿತೀಯ ಸ್ಥಾನದಲ್ಲಿ ಪಾಪಗ್ರಹಗಳಿದ್ದು ಕಳತ್ರಸ್ಥಾನಕ್ಕಧಿಪತಿಯು ಪಾಪಗ್ರಹಯುಕ್ತನಾಗಿದ್ದರೆ, ಜಾತಕನಿಗೆ ತ್ರಿಕಳತ್ರ ಪ್ರಾಪ್ತಿಯಾಗುವುದು ॥ ಇದೇ ವಿಷಯಕ್ಕೆ ಸರ್ವಾರ್ಥ ಚಿಂತಾಮಣಿಯಲ್ಲಿ-

ಶ್ಲೋಕ॥ ವಿತ್ತೇ ಪಾಪ ಬಹುತ್ವೇತು ಕಳತ್ರೇವಾ ತಥಾಸ್ಥಿತೇ । ತದೀಶೇ ಪಾಪಸಂದೃಷ್ಟೇ ಕಳತ್ರತ್ರಯ ಭಾಗ್ಭವೇತ್ ॥೭೮೯॥ತಾ॥ ದ್ವಿತೀಯದಲ್ಲಿ ಬಹು ಪಾಪಗ್ರಹಗಳಿದ್ದರೂ ಆ ಪ್ರಕಾರವೇ ಸಪ್ತಮದಲ್ಲಿದ್ದರೂ ಸಪ್ತಮಾಧಿಪತಿ ಪಾಪ ಗ್ರಹಯುಕ್ತನಾದರೂ ಅಥವಾ ನೋಡಲ್ಪಟ್ಟರೂ, ಜಾತಕನು ತ್ರಿಕಳತ್ರವುಳ್ಳವನಾಗುವನು ॥೭೮೯॥

## ತ್ರಿಕಳತ್ರ ಯೋಗಃ

ಶ್ಲೋಕ॥ ಸ-ಚಿ॥ ಲಗ್ನೇಕುಟುಂಬೇ ದಾರೇವಾ ಪಾಪಖೇಚರ ಸಂಯುತೇ । ದಾರೇಶೇ ನೀಚಮೂಢಾದೌ ಕಳತ್ರತ್ರಯವಾರ್ ಭವೇತ್ ॥೭೯೦॥ತಾ॥ ಜನ್ಮಲಗ್ನ ದಲ್ಲಾದರೂ ದ್ವಿತೀಯದಲ್ಲಾದರೂ, ಸಪ್ತಮದಲ್ಲಾದರೂ ಪಾಪಗ್ರಹಗಳಿದ್ದು ಸಪ್ತಮಾಧಿ ಪತಿಯು ನೀಚನಾಗಿದ್ದರೂ, ಅಸ್ತನಾಗಿದ್ದರೂ ಕಳತ್ರತ್ರಯ ವಿವಾಹವಾಗುತ್ತದೆಂದು ಹೇಳತಕ್ಕದ್ದು ॥೭೯೦॥

## ಬಹು ಸ್ತ್ರೀಯೋಗಃ

ಶ್ಲೋಕ॥ ಕೇಂದ್ರ ತ್ರಿಕೋಣೇ ದಾರೇಶೇ ಸ್ವೋಚ್ಚಮಿತ್ರಸ್ವವರ್ಗಗೇ । ಕಮಾಧಿಪೇನವಾ ದೃಷ್ಟೇ ಬಹುಸ್ತ್ರೀ ಸಹಿತೋ ಭವೇತ್ ॥ತಾ॥ ಸಪ್ತಮಾಧಿ ಪತಿಯು ಕೇಂದ್ರಸ್ಥಾನಗಳಲ್ಲಾಗಲಿ, ತ್ರಿಕೋಣಸ್ಥಾನಗಳಲ್ಲಾಗಲಿ, ಉಚ್ಚ, ಸ್ವಕ್ಷೇತ್ರ, ಮಿತ್ರವರ್ಗದಲ್ಲಿದ್ದು ಅಥವಾ ಕರ್ಮಾಧಿಪತಿಯಿಂದ ನೋಡಲ್ಪಟ್ಟರೆ ಜಾತಕನು ಬಹು ಸ್ತ್ರೀಯರ ಪತಿಯಾಗುವನು.

## ಬಹು ಸ್ತ್ರೀಯೋಗಃ

ಶ್ಲೋಕ॥ ವ್ಯಯಾರ್ಥೇಶಾ ತೃತೀಯಸ್ಥೌ ಗುರುಣಾಚ ನಿರೀಕ್ಷಿತೌ । ಭಾಗ್ಯ ನಾಥೇನವಾ ದೃಷ್ಟೌ ಬಹುಸ್ತ್ರೀ ಸಹಿತೋ ಭವೇತ್ ॥೭೯೧॥ತಾ॥ ವ್ಯಯಾಧಿಪತಿ. ದ್ವಿತೀಯಾಧಿಪತಿಗಳು ತೃತೀಯದಲ್ಲಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೂ, ಅಥವಾ

ಭಾಗ್ಯಾಧಿಪತಿಯಿಂದ ನೋಡಲ್ಪಟ್ಟರೂ ಜಾತಕನು ಬಹುಸ್ತ್ರೀ ಪತಿಯಾಗುವನು ||೭೯೧||

ಶ್ಲೋಕ|| ಲಗ್ನದಾರೇಶರೌ ಯುಕ್ತೌ ಪರಸ್ಪರ ನಿರೀಕ್ಷಿತೌ || ಬಲಾಢ್ಯೌ ತೌತ್ರಿಕೋಣಸ್ಥೌ ಬಹುದಾರ ಸಮನ್ವಿತಃ ||೭೯೨||ತಾ|| ಲಗ್ನ ಸಪ್ತಮಾಧಿಪತಿಗಳು ಅನ್ಯೋನ್ಯ ಯುಕ್ತರಾಗಿದ್ದರೂ, ಪರಸ್ಪರ ನೋಡುತ್ತಲಿದ್ದರೂ ಅಥವಾ ಪರಸ್ಪರ ತ್ರಿಕೋಣಗಳಲ್ಲಿದ್ದರೂ ಜಾತಕನು ಬಹುಸ್ತ್ರೀ ಪತಿಯಾಗುವನು ||೭೯೨||

ಶ್ಲೋಕ|| ಭಾಗ್ಯೇಶೇ ದಾರರಾಶಿಸ್ಥೇ ದಾರೇಶೇ ಸುಖ ಭಂಗತೇ | ಭಾವೇಶೇ ಲಾಭನಾಥೇವಾ ಕೇಂದ್ರೇಬಹು ಕಳತ್ರಭಾಕ್ ||೭೯೩||ತಾ|| ಭಾಗ್ಯಾಧಿಪತಿ ಸಪ್ತಮ ದಲ್ಲಿದ್ದು ಸಪ್ತಮಾಧಿಪತಿ ಚತುರ್ಥದಲ್ಲಿಯೂ ಜನ್ಮಲಗ್ನಕ್ಕಧಿಪತಿಯಾದ ಗ್ರಹವಾದರೂ ಲಾಭಾಧಿಪತಿಯಾದರೂ ಕೇಂದ್ರದಲ್ಲಿದ್ದ ಕಾಲದಲ್ಲಿ ಹುಟ್ಟಿದವನು ಬಹು ಪತ್ನಿಯರುಳ್ಳವನಾಗುವನು ||೭೯೩||

## ಶತಸ್ತ್ರೀಣಾಂ ಪತಿಯೋಗಃ

ಶ್ಲೋಕ|| ದಾರೇಶ ಸಂಯುಕ್ತೇ ನವಾಂಶನಾಥ ಯುಕ್ತಾಂಶನಾತೇಯದಿ ಸೌಮ್ಯ ಯುಕ್ತೇ | ಪಾರಾವತಾಂಶಾದಿ ಗತೇಬಲಾಢ್ಯೇ ಜಾತಶ್ಯತಸ್ತ್ರೀಸಹಿತೋ ನರಸ್ಯಾತ್ ||೭೯೪||ತಾ|| ಶತಸ್ತ್ರೀ ಪತಿಯೋಗವು ಹೇಳಲ್ಪಡುತ್ತೆ. ಸಪ್ತಮಾಧಿಪತಿ ಇರುವ ನವಾಂಶಾಧಿಪತಿ ಯಾರ ನವಾಂಶೆಯಲ್ಲಿರುವನೋ ಆ ನವಾಂಶಾಧಿಪತಿಯು ರಾಶಿಚಕ್ರದಲ್ಲಿ ಶುಭಗ್ರಹಯುಕ್ತನಾಗಿ ಬಲಿಷ್ಠನಾಗಿ ಪಾರಾವತಾಂಶಾದಿಗಳಲ್ಲಿದ್ದರೆ ಜಾತಕನು ಶತಸಂಖ್ಯಾಕ ಸ್ತ್ರೀಯರಿಗೆ ಪತಿಯಾಗುವನು ||೭೯೪||

## ದ್ವಿಶತಸ್ತ್ರೀಣಾಂ ಪತಿಯೋಗಃ

ಶ್ಲೋಕ|| ಕುಟುಂಬುನಾಥಸ್ಥಿತ ರಾಶಿನಾಥ ಸಂಯುಕ್ತ ಷಷ್ಟ್ಯಂಶಪತೌ ಬಲಾಢ್ಯೇ ಮೃದ್ವಂಶಕೇ ಗೋಪುರಭಾಗ ಯುಕ್ತೇ ಜಾತಶ್ಯತಸ್ತ್ರೀ ದ್ವಿಗುಣಂ ಕಳತ್ರಂ ||೭೯೫||ತಾ|| ಶತದ್ವಯ ಸ್ತ್ರೀಪತಿ ಯೋಗವು || ದ್ವಿತೀಯಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶ್ಯಾಧಿಪತಿಯಿರುವ ಷಷ್ಟ್ಯಂಶಾಧಿಪತಿಯು ಬಲಿಷ್ಠನಾಗಿ ಮೃದ್ವಂಶದಲ್ಲಿ ಗೋಪುರಾಂಶೆಯಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಇನ್ನೂರು ಪತ್ನಿಗಳುಳ್ಳವನೆಂದು ಹೇಳತಕ್ಕದ್ದು ||೭೯೫||

## ಅಸಂಖ್ಯಾತ ಸ್ತ್ರೀಣಾಂ ಪತಿಯೋಗಃ

ಶ್ಲೋಕ|| ದಾರೇಶೇ ಕರ್ಮ ರಾಶಿಸ್ಥೇ ಕರ್ಮೇಶೇ ದಾರರಾಶಿಗೇ | ತಥಾ ವಿಧೇ ಕುಟುಂಬೇಶೇತ್ವಸಂಖ್ಯಕ ಕಳತ್ರಭಾಕ್ ||೭೯೬||ತಾ|| ಅಸಂಖ್ಯಾತವಾದ ಕಳತ್ರಯೋಗವು ಹೇಳಲ್ಪಡುತ್ತೆ. ಸಪ್ತಮಾಧಿಪತಿಯು ದಶಮದಲ್ಲಿದ್ದು ದಶಮಾಧಿ-

ಪತಿಯು ಸಪ್ತಮದಲ್ಲಿದ್ದು ಕುಟುಂಬ (ದ್ವಿತೀಯ)ಸ್ಥಾನಾಧಿಪತಿಯು ಸಪ್ತಮಾಧಿಪತಿಯನ್ನಾದರೂ ಕೂಡಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಅಸಂಖ್ಯಾತವಾದ ಪತ್ನಿಗಳುಳ್ಳವನಾಗುವನು ॥೭೯೬॥

## ಅಥ ಪತ್ನೀಗುಣ ರೂಪವಿಚಾರಃ

ಶ್ಲೋಕ॥ ದಾರೇಶೇಪಾಪ ಸಂಯುಕ್ತೇ ದಾರೇವಾ ಪಾಪಸಂಯುತೇ । ದಾರೇಶಸ್ಥಾಂಶಪೇವಾಪಿ ಕುಸ್ತ್ರೀ ಭಾಕ್ಸನರೋ ಭವೇತ್ ॥ ಕ್ರೂರಷಷ್ಠ್ಯಂಶಕೇ ದಾರನಾಥೇ ಕುಸ್ತ್ರೀಯುತೋಭವೇತ್ ॥೭೯೭॥ತಾ॥ ಸಪ್ತಮಾಧಿಪತಿ ಪಾಪಸಂಯುಕ್ತನಾದರೂ ಸಪ್ತಮ ಭಾವದಲ್ಲಿ ಪಾಪಗ್ರಹವಿದ್ದರೂ, ಸಪ್ತಮಾಧಿ ಪತಿಯಿರುವ ನವಂಶಾಧಿಪತಿಯಾದರೂ ಕುಸ್ತ್ರೀ ಪತಿಯಾಗುವನು. ಮತ್ತು ಸಪ್ತಮಾಧಿಪತಿ ಕ್ರೂರಷಷ್ಠ್ಯಂಶದಲ್ಲಿದ್ದರೂ ಕುಸ್ತ್ರೀ ಪತಿಯಾಗುವನು ॥೭೯೭॥

ಶ್ಲೋಕ॥ ನೀಚಾಂಶೇ ನೀಚಸಂಯುಕ್ತೇ ದಾರನಾಥೇಥ ಕಾರಕೇ । ಕುಸ್ತ್ರೀಯುತೋ ಭವೇಜ್ಜಾತ ಶ್ಶುಭದೃಷ್ಟಿ ಯುತೇನಹಿ ॥೭೯೮॥ತಾ॥ ಸಪ್ತಮಾಧಿಪತಿ ನೀಚ ನವಾಂಶೆಯಲ್ಲಿದ್ದರೂ, ಅಥವಾ ನೀಚಗ್ರಹದ ಸಂಗಡ ಸೇರಿದ್ದರೂ, ಕಾರಕ (ಶುಕ್ರ)ನು ನೀಚ ಅಂಶೆಯಲ್ಲಿದ್ದರೂ, ನೀಚಗ್ರಹಯುಕ್ತನಾದರೂ ಕುಸ್ತ್ರೀಪತಿಯಾಗುವನು. ಈ ಸಪ್ತಮಾಧಿಪತಿ ಕಳತ್ರಕಾರಕರಿಗೆ ಶುಭದೃಷ್ಟಿಯಿದ್ದರೆ ಆತನ ಹೆಂಡತಿಯು ದುಷ್ಟಳಾಗುವುದಿಲ್ಲ ॥೭೯೮॥

## ಸತ್ಕಳತ್ರಯೋಗಃ

ಶ್ಲೋಕ॥ ಕಳತ್ರಾಧಿಪತೌ ಕೇಂದ್ರೇ ಶುಭಗ್ರಹ ನಿರೀಕ್ಷಿತೇ ಶುಭಾಂಶೇ ಶುಭರಾಶೌವಾ ಪತ್ನೀವ್ರತ ಪರಾಯಣಾ ॥೭೯೯॥ತಾ॥ ಸಪ್ತಮಾಧಿಪತಿಯು ಕೇಂದ್ರಸ್ಥಾನಗಳಲ್ಲಿದ್ದು ಶುಭಗ್ರಹದಿಂದ ನೋಡಲ್ಪಟ್ಟರೂ, ಶುಭರಾಶಿಯಲ್ಲಿ ಶುಭನವಾಂಶೆಯಲ್ಲಿದ್ದರೂ ಜಾತಕನ ಹೆಂಡತಿಯು ವ್ರತನಿಷ್ಠಳಾಗುವಳು. ಅಂದರೆ ಪತಿವ್ರತಾದಿ ಶುಭಸದ್ಗುಣವುಳ್ಳವಳಾಗುವಳು ॥೭೯೯॥

ಶ್ಲೋಕ॥ ದಾರೇಶೇ ಶುಭಸಂಯುಕ್ತೇ ಸತ್ಕಳತ್ರ ಸಮನ್ವಿತಃ । ಸ್ವೋಚ್ಚ ಮಿತ್ರ ಸ್ವವರ್ಗಸ್ಥೇ ಗೋಪುರಾದ್ಯಂಶಕೇಪಿವಾ ॥೮೦೦॥ತಾ॥ ಸಪ್ತಮಾಧಿಪತಿ ಶುಭಗ್ರಹ ಸಂಯುಕ್ತನಾದರೂ, ತನ್ನ ಉಚ್ಚರಾಶಿಯಲ್ಲಿದ್ದರೂ, ಮಿತ್ರಸ್ವಕ್ಷೇತ್ರ ಷಡ್ವರ್ಗದಲ್ಲಿದ್ದರೂ, ಗೋಪುರಾದಿ ಶುಭಾಂಶದಲ್ಲಿದ್ದರೂ, ಜಾತಕನ ಪತ್ನಿಯು ಸುಗುಣವತಿಯಾಗುವಳು ॥೮೦೦॥

ಶ್ಲೋಕ॥ ಗುರುಣಾಸತಿಸಂದೃಷ್ಟೇ ದಾರನಾಥೇಬಲಾನ್ವಿತೇ ॥ ಮೃದುಷಷ್ಠ್ಯಂಶ ಭಾಗಸ್ಥೇ ಸತ್ಕಳತ್ರ ಸಮನ್ವಿತಃ ॥೮೦೧॥ತಾ॥ ಸಪ್ತಮಾಧಿಪತಿಯು ಬಲಿಷ್ಠನಾಗಿ

ಗುರುದೃಷ್ಟಿಯುಳ್ಳವನಾಗಿ ಮೃದುಷಷ್ಠ್ಯಂಶದಲ್ಲಿದ್ದರೆ ಸತ್ಕಳತ್ರ ಸಮನ್ವಿತನಾಗುವನು ॥೮೦೧॥

ಶ್ಲೋಕ॥ ಕಾರಕೇವಾ ತಥಾಭೂತೇ ಸತ್ಕಳತ್ರ ಪರಾಯಣಃ । ಕಳತ್ರೇಶೇ ಭೃಗೌವಾಪಿ ಗುರುಸೌಮ್ಯನಿರೀಕ್ಷಿತೇ ॥೮೦೨॥ತಾ॥ ಕಳತ್ರ ಸ್ಥಾನಾಧಿಪತಿ ಶುಕ್ರ ನಾದರೂ, ಕಳತ್ರಕಾರಕನು ಶುಕ್ರನಾದರೂ, ಗುರು ಬುಧರ ದೃಷ್ಟಿಯುಳ್ಳವನಾದರೆ ಜಾತಕನ ಹೆಂಡತಿಯು ಸುಗುಣವತಿಯಾಗುವಳು ॥೮೦೨॥

ಶ್ಲೋಕ॥ ಗುರುಯುಕ್ತೇ ಕಳತ್ರೇವಾ ಧರ್ಮಶೀಲಾ ಪತಿವ್ರತಾ । ಕಳತ್ರಾದಿ ಪತೌ ಕೇಂದ್ರೇ ॥ ಶುಭಗ್ರಹ ನಿರೀಕ್ಷಿತೇ । ಶುಭಾಂಶೇ ಶುಭರಾಶೌವಾ ಭವೇತ್ಪತ್ನೀ ಪವಿವ್ರತಾ ॥೮೦೩॥ತಾ॥ ಸಪ್ತಮ ಭಾವದಲ್ಲಿ ಗುರುವಿದ್ದರೆ ಧರ್ಮಿಷ್ಠಳೂ ಪತಿ ವ್ರತೆಯೂ ಆದ ಪತ್ನಿಯುಳ್ಳವನಾಗುವನು. ಕಳತ್ರಾಧಿಪತಿಯು ಕೇಂದ್ರದಲ್ಲಿದ್ದು ಶುಭಗ್ರಹದಿಂದ ನೋಡಲ್ಪಟ್ಟರೂ ಶುಭರಾಶಿಯಲ್ಲಿ ಶುಭನವಾಂಶದಲ್ಲಿದ್ದರೂ ಜಾತಕನ ಹೆಂಡತಿಯು ಪತಿವ್ರತೆಯಾಗುವಳು ॥೮೦೩॥

## ಸೂರ್ಯಕಳತ್ರಾಧಿಪ ಪಾಪಫಲಂ

ಶ್ಲೋಕ॥ ಕಳತ್ರೇಶೇ ರವೌವಾಪಿ ಪಾಪರಾಶ್ಯಂಶ ಸಂಯುತೇ । ಪಾಪನ್ವಿತೇ ಪಾಪದೃಷ್ಟೇ ಪತ್ನೀಪಾಪಪರಾಯಣಾ । ಪಾಪಾಂಶಕೇವಾ ದಾರೇಶೇ ತಥಾ ಭೂತಾಂ ವದೇದ್ಬುದಃ ॥೮೦೪॥ತಾ॥ಸಪ್ತಮಾಧಿಪತಿಯು ಸೂರ್ಯನಾಗಿ ಪಾಪ ರಾಶಿಯ ನವಾಂಶೆಯಲ್ಲಿದ್ದರೂ, ಪಾಪಗ್ರಹಯುತನಾದರೂ ಪಾಪಗ್ರಹದೃಷ್ಟನಾದರೂ ಆತನ ಹೆಂಡತಿಯು ಪಾಪಕೃತ್ಯಮಾಡುವಲು ಮತ್ತು ಸಪ್ತಮಾಧಿಪತಿಯು ಪಾಪರಾಶ್ಯಂಶೆಯಲ್ಲಿದ್ದರೂ ಆತನ ಹೆಂಡತಿಯು ಪಾಪಪರಾಯಣಳೇ ಆಗುವಳು ॥೮೦೪॥

## ಸೂರ್ಯಕಳತ್ರಾಧಿಪ ಶುಭಫಲಂ

ಶ್ಲೋಕ॥ ಭಾನೌಕಳತ್ರಾಧಿಪತೌ ಬಲಾಢ್ಯೇ ಶುಭಾನ್ವಿತೇ ಶೋಭನರಾಶಿ ಭಾಗೇ। ಶುಭಗ್ರಹೇಣಾಪಿ ನಿರೀಕ್ಷಿತೇವಾ ಲಗ್ನೇಶ ಮಿತ್ರೇಪತಿಭಕ್ತಿಯುಕ್ತಾ ॥೮೦೫॥

ತಾ॥ ಸೂರ್ಯನು ಸಪ್ತಮಾಧಿಪತಿಯಾಗಿ ಬಲಿಷ್ಠನಾಗಿ ಶುಭಗ್ರಹಯುಕ್ತ ವಾದರೂ ಶುಭಗ್ರಹ ನವಾಂಶೆಯಲ್ಲಿದ್ದರೂ ಶುಭಗ್ರಹದಿಂದ ನೋಡಲ್ಪಟ್ಟರೂ, ಲಗ್ನಾಧಿಪತಿಗೆ ಮಿತ್ರನಾಗಿದ್ದರೆ, ಆತನ ಹೆಂಡತಿಯು ಪತಿಭಕ್ತಿಯುಳ್ಳವಳಾಗಿ ಪತಿವ್ರತೆಯಾಗಿರುವಳು ॥೮೦೫॥

## ಕಳತ್ರಾಧಿಪೇ ಚಂದ್ರೇಪಾಪ ಫಲಂ

ಶ್ಲೋಕ॥ ದಾರೇಶ್ವರೇವಾ ಕುಮುದಾತ್ಮ ಬುಧೌ ಪಾಪನ್ವಿತೇ ಪಾಪ ರೀಕ್ಷಿತೇವಾ। ಪಾಪಂಶಗೇ ಪಾಪಗೃಹಾಂತರಸ್ಥೇ ಕುಮಾರ್ಗಧಾರಾಕರಿಣಾಪರಾಧಾ ॥೮೦೬॥ತಾ॥

ಚಂದ್ರನು ಸಪ್ತಮಾಧಿಪತಿಯಾಗಿ ಪಾಪಗ್ರಹಯುಕ್ತನಾದರೂ, ಪಾಪಗ್ರಹ ವೀಕ್ಷಣೆಯುಳ್ಳವನಾಗಿದ್ದರೆ ಪಾಪಗ್ರಹ ನವಾಂಶೆಯಲ್ಲಿದ್ದರೂ ಪಾಪಗ್ರಹಗಳ ರಾಶಿಯಲ್ಲಿದ್ದರೂ ಆತನ ಹೆಂಡತಿಯು ದುರ್ಮಾರ್ಗಳಾಗಿಯೂ, ಕಠಿಣವಾದ ಸ್ವಭಾವದವಳಾಗಿಯೂ ತಪ್ಪುಗಳನ್ನು ಮಾಡತಕ್ಕವಳಾಗಿಯೂ ಆಗುವಳು ॥೮೦೬॥

## ಕಳತ್ರಾಧಿಪೇ ಚಂದ್ರೇ ಶುಭಫಲಂ

ಶ್ಲೋಕ॥ ಸೌಮ್ಯಾಂಶಗೇ ಸೌಮ್ಯಗೃಹಾಂತರೇವಾಮಿತ್ರೋಚ್ಚಗೇಹೇ ಮೃದು ಭಾಗಯುಕ್ತೇ । ಚಂದ್ರೇ ಕಳತ್ರಾಧಿಪತೌ ಚ ಶುಕ್ರಸಂಪುಣ್ಯಶೀಲಾ ಸಚರಿತ್ರ ಯುಕ್ತಾ ॥೮೦೭॥ತಾ॥ ಚಂದ್ರನು ಸಪ್ತಮಾಧಿಪತಿಯಾಗಿ ಶುಭಗ್ರಹ ನವಾಂಶೆಯಲ್ಲಿದ್ದರೂ ಶುಭಗ್ರಹ ರಾಶಿಗಳಲ್ಲಿದ್ದರೂ ಮಿತ್ರ, ಉಚ್ಚ, ಸ್ವಕ್ಷೇತ್ರಗಳಲ್ಲಿ ಮೃದು ಷಷ್ಠಾಂಶ ಗಳಲ್ಲಿದ್ದರೂ ಶುಕ್ರನು ಈ ಪ್ರಕಾರವೇ ಇದ್ದರೆ, ಜಾತಕನ ಹೆಂಡತಿಯು ಒಳ್ಳೆ ಪುಣ್ಯವತಿಯಾಗಿಯೂ, ಸದಾಚಾರಸಂಪದ್ಯುಕ್ತಳಾಗಿಯೂ, ಸಚ್ಚರಿತ್ರಯುಕ್ತಳಾಗಿಯೂ, ಆಗುವಳು ॥೮೦೭॥

## ಕಳತ್ರಾಧಿಪೇ ಕುಜೇ ಪಾಪಫಲಂ

ಶ್ಲೋಕ॥ ದಾರಾಂಶಪೇ ಹೀನಬಲೇ ಧರಾಜೇ ಕ್ರೂರಾದಿಷಷ್ಠ್ಯಂಶ ಸಮನ್ವಿತೇವಾ । ನೀಚಾರಿ ಮೂಢೇ ವಿಹಗಾರಿ ಭಾಗೇ ದುಷ್ಟಾನ್ಯಸಕ್ತಾ ಮತಿ ಕರ್ಕಶಾಸ್ಯಾತ್ ॥೮೦೮॥ತಾ॥ ಅಂಗಾರಕನು ಸಪ್ತಮಾಧಿಪತಿಯಾಗಿ ಬಲಹೀನನಾಗಿ ಕ್ರೂರ ಷಷ್ಠಂಶದಲ್ಲಿದ್ದರೂ, ನೀಚ, ಶತ್ರು ಅಸ್ತಸ್ಥಿತಿಯಲ್ಲಿದ್ದರೂ, ಪಕ್ಷಿ, ಸರ್ಪ, ಶತ್ರು ದ್ರೇಕ್ಕಾಣಗಳಲ್ಲಿದ್ದರೂ ಜಾತಕನ ಹೆಂಡತಿಯು ದುಷ್ಟಳಾಗಿಯೂ ಪರಪುರುಷ ರತಳಾಗಿಯೂ ಕರ್ಕಶಿಯಾಗಿಯೂ ಆಗುವಳು ॥೮೦೮॥

## ಕಳತ್ರಾಧಿಪೇ ಕುಜೇ ಶುಭಫಲಂ

ಶ್ಲೋಕ॥ ಮಿತ್ರೋಚ್ಚ ವರ್ಗೇಸತಿ ದಾರನಾಥೇ ಶುಭಾನ್ವಿತೇ ಸೌಮ್ಯ ದೃಶಾಸಮೇತೇ। ಪಾರಾವತಾಂಶಾದಿ ಗತೇಬಲಾಢ್ಯೇ ಕ್ರೂರಾಪಿಪತ್ಯುರ್ಗುಣ ಮಾರ್ಗವೃತ್ತಿಃ ॥೮೦೯॥ತಾ॥ ಸಪ್ತಮಾಧಿಪತಿಯಾದ ಕುಜನು ಶುಭಗ್ರಹಯುಕ್ತ ನಾದರೂ ಶುಭಗ್ರಹವೀಕ್ಷಿತನಾದರೂ, ಬಲಿಷ್ಠನಾಗಿ ಪಾರಾವತಾಂಶಾದಿ ಶುಭವರ್ಗ ದಲ್ಲಿದ್ದರೆ ಕ್ರೂರಸ್ವಭಾವದವಳಾದಾಗ್ಯೂ ಪತಿಯ ಗುಣವನ್ನೇ ಅನುಸರಿಸಿದ ವಳಾಗುವಳು. ॥೮೦೯॥

## ಕಳತ್ರಾಧಿಪೇ ಬುಧೇ ಪಾಪಫಲಂ

ಶ್ಲೋಕ.। ಭಾರ್ಯಾಧಿಪೇ ಸೋಮಸುತೇ ಸಪಾಪೇ ನೇಚಾರಿಮೂಢೇಸನಾಶ ಭಾವೇ । ಪಾಪಾಂತರೇ ಪಾಪದೃಶಾ ಸಮೇತೇ ನಾರೀಪತಿಘ್ನೀ ಕುಲ ನಾಶಕರ್ತ್ರೀ

॥೮೧೦॥ತಾ॥ ಬುಧನು ಸಪ್ತಮಾಧಿಪತಿಯಾಗಿ ಪಾಪಗ್ರಹಯುಕ್ತನಾದರೂ, ನೀಚ, ಶತ್ರು ಆಸಕ್ತನಾಗಿದ್ದರೂ, ಪಾಪಗ್ರಹಗಳ ಮಧ್ಯದಲ್ಲಿದ್ದರೂ ಅಷ್ಟಮದಲ್ಲಿದ್ದರೂ ಪಾಪಗ್ರಹಗಳ ದೃಷ್ಟಿಯುಕ್ತನಾಗಿದ್ದರೂ, ಜಾತಕನ ಹೆಂಡತಿಯು ಅವನನ್ನೇ ಕೊಂದು ವಂಶವನ್ನೇ ನಾಶಮಾಡುವವಳಾಗುವಳು ॥೮೧೦॥

## ಕಳತ್ರಾದಿಪ ಬುಧಶುಭಫಲಂ

ಶ್ಲೋಕ॥ ಭಾರ್ಯಾಧಿಪೇ ಸೋಮಸುತೇ ಶುಭಾಂಶೇ ಮಿತ್ರೋಚ್ಚವರ್ಗೇ ಶುಭದೃಷ್ಟಿಯುಕ್ತೇ । ಪಾರಾವತಾಂಶೇ ಪರಮೋಚ್ಚಭಾಗೇ ಕಲಾವಿಧಿಜ್ಞಾಪತಿ ಭಕ್ತಿಯುಕ್ತಾ ॥೮೧೧॥ತಾ॥ ಕಳತ್ರಾಧಿಪತಿ ಬುಧನಾಗಿ ಶುಭಾಂಶ, ಮಿತ್ರ, ಉಚ್ಚ, ಷಡ್ವರ್ಗದಲ್ಲಿದ್ದು ಶುಭದೃಷ್ಟಿಯುಕ್ತವಾಗಿದ್ದರೂ, ಪರಮೋಚ್ಚದಲ್ಲಿ ಪಾರಾವತಾಂಶೆಯನ್ನು ಹೊಂದಿದ್ದರೂ ಜಾತಕನ ಪತ್ನಿಯು ಕಲಾಶಾಸ್ತ್ರ ವಿಧಿಯನ್ನು ತಿಳಿದವಳಾಗಿಯೂ ಪತಿಭಕ್ತಿಯುಳ್ಳವಳಾಗಿಯೂ ಆಗುವಳು ॥೮೧೧॥

## ಕಳತ್ರಾಧಿಪ ಗುರುಫಲಂ

ಶ್ಲೋಕ॥ ಸುಪುತ್ರಸೌಮ್ಯಾದಿ ಸುಧರ್ಮಾಶೀಲಾ ವ್ರತೋಪವಾಸಾದಿವಿ ಶುದ್ಧಭಾವಾ । ಗುರೌಕಳತ್ರಾಧಿಪತೌ ಬಲಾಢ್ಯೇ ಮಿತ್ರೋಚ್ಚವರ್ಗೇಯದಿ ಗೋಪು ರಾಂಶೇ॥೮೧೨॥ತಾ॥ ಸಪ್ತಮಾಧಿಪತಿಯಾದ ಬೃಹಸ್ಪತಿಯು ಬಲಿಷ್ಠನಾಗಿ ಮಿತ್ರ ಉಚ್ಚ ವರ್ಗದಲ್ಲಿದ್ದರೂ, ಗೋಪುರಾಂಶೆಯಲ್ಲಿದ್ದರೂ ಜಾತಕನ ಹೆಂಡತಿಯು ವ್ರತ ಉಪವಾಸಾದಿಗಳನ್ನೂ ಮಾಡುತ್ತಾ ಶುದ್ಧವಾದ ಧರ್ಮವನ್ನಾಚರಿಸತಕ್ಕವಳಾಗಿ ಪರಿಶುದ್ಧಳಾಗಿರುವಳು ॥೮೧೨॥

ಶ್ಲೋಕ॥ ಭಾನೌ ಕಳತ್ರಾಧಿಪತೌ ಬಲಾಢ್ಯೇ ಶುಭಾನ್ವಿತೇ ಶೋಭನರಾಶಿ ಭಾಗೇ। ಶುಭಗ್ರಹೇಣಾಪಿ ನಿರೀಕ್ಷಿತೇವಾ ಲಗ್ನೇಶಮಿತ್ರೇ ಪತಿಭಕ್ತಿಯುಕ್ತಾ ॥೮೧೩॥

ತಾ॥ ಸೂರ್ಯನು ಸಪ್ತಮಾಧಿಪತಿಯಾಗಿ ಬಲಿಷ್ಠನಾಗಿ ಶುಭಗ್ರಹಯುಕ್ತ ನಾಗಿದ್ದರೂ, ಶುಭರಾಶಿ ನವಾಂಶೆಯಲ್ಲಿದ್ದರೂ, ಶುಭಗ್ರಹಗಳಿಂದ ನೋಡಲ್ಪಟ್ಟರೂ, ಲಗ್ನಾಧಿಪತಿಗೆ ಸಪ್ತಮಾಧಿಪತಿ ಮಿತ್ರನಾಗಿದ್ದರೆ ಪತ್ನಿಯು ಪತಿಭಕ್ತಿ ಉಳ್ಳವಳಾಗುವಳು॥೮೧೩॥

ಶ್ಲೋಕ॥ ಸೌಮ್ಯಾಂಶಗೇ ಸೌಮ್ಯಗೃಹಾಂತರೇವಾ ಮಿತ್ರೋಚ್ಚಗೇಹೇ ಮೃದುಭಾಗಯುಕ್ತೇ । ಚಂದ್ರೇ ಕಳತ್ರಾಧಿಪತೌಚ ಶುಕ್ರೇಸಾ ಪುಣ್ಯಶೀಲಾ ಸುಚರಿತ್ರಯುಕ್ತಾ ॥೮೧೪॥ತಾ॥ ಸಪ್ತಮಾಧಿಪತಿಯಾದ ಚಂದ್ರನು ಅಥವಾ ಶುಕ್ರನೂ, ಶುಕ್ರನೂ ಶುಭಗ್ರಹ ನವಾಂಶೆಯಲ್ಲಿದ್ದರೂ, ಶುಭಗ್ರಹ ಕ್ಷೇತ್ರದಲ್ಲಿದ್ದು, ಮಿತ್ರ

ಉಚ್ಚ, ಸ್ವಕ್ಷೇತ್ರಗಳಲ್ಲಿದ್ದರೂ ಮೃದು ಷಷ್ಠ್ಯಂಶದಲ್ಲಿದ್ದರೆ ಅಂಥಾ ಜಾತಕನ ಪತ್ನಿಯು ಪುಣ್ಯವತಿಯಾಗಿಯೂ, ಧರ್ಮಪರಳಾಗಿಯೂ, ಸುಚರಿತ್ರಾರ್ಹಳಾಗಿಯೂ ಇರುವ ಪತ್ನಿಯುಳ್ಳವನಾಗುವನು ॥೮೧೪॥

## ಕಳತ್ರಾಧಿಪ ಶುಕ್ರಪಾಪಫಲಂ

ಶ್ಲೋಕ॥ ಭೃಗೋಸ್ಸುತೇ ದಾರಪತೌ ಸಪಾಪೇ ಪಾಪೇಕ್ಷಿತೇ ನೀಚಭ ಶತ್ರುಗೇಹೇ। ಕ್ರೂರಾದಿಷಷ್ಠ್ಯಂಶ ಸಮನ್ವಿತೇವಾ ವೇಶ್ಯಾಸಮಾನಕಠಿನಾಪಿಚೋರಾ ॥೮೧೫॥ತಾ॥ ಶುಕ್ರನು ಸಪ್ತಮಾಧಿಪತಿಯಾಗಿ ಪಾಪಗ್ರಹಯುಕ್ತನಾದರೂ, ಪಾಪಗ್ರಹದೃಷ್ಟಿಯುಳ್ಳವನಾದರೂ, ನೀಚ ಶತ್ರುಕ್ಷೇತ್ರಗಳಲ್ಲಿದ್ದರೂ ಕ್ರೂರ-ಷಷ್ಠ್ಯಂಶೆಯಲ್ಲಿದ್ದರೂ ಜಾತಕನ ಪತ್ನಿಯು ವೇಶ್ಯೆಯಂತೆ ನಟಿಸುವಳು, ಕಠಿಣಸ್ವಭಾವವುಳ್ಳವಳು, ಕಳ್ಳತನ ಮಾಡುವವಳು ಆಗುವಳು ॥೮೧೫॥

## ಶುಕ್ರ ಕಳತ್ರಾಧಿಪ ಶುಭಫಲಂ

ಶ್ಲೋಕ॥ ಶುಕ್ರೇ ಕಳತ್ರಾಧಿಪತೌ ಬಲಾಢ್ಯೇ ಶುಭನ್ವಿತೇ ಶೋಭನಖೇಚರಾಂಶೇ। ಮಿತ್ರೋಚ್ಚವರ್ಗೇ ಸ್ವಗೃಹೇ ಮೃದುಸ್ಥೇ ವಾಚಾಟಕೀಪುತ್ರವತೀ ಗುಣಾಢ್ಯಾ ॥೮೧೬॥ತಾ॥ ಶುಕ್ರನು ಸಪ್ತಮಾಧಿಪತಿಯಾಗಿ ಬಲಿಷ್ಠನಾಗಿ ಶುಭಗ್ರಹಯುತ-ನಾದರೂ, ಶುಭಗ್ರಹನವಾಂಶೆಯಲ್ಲಿದ್ದರೂ, ಮಿತ್ರ, ಉಚ್ಚಸ್ವಕ್ಷೇತ್ರ ಮೂಲ ತ್ರಿಕೋಣ ಷಡ್ವರ್ಗದಲ್ಲಿದ್ದರೂ, ಮೃದು ಷಷ್ಠ್ಯಂಶೆಯಲ್ಲಿದ್ದರೂ ಜಾತಕನ ಪತ್ನಿಯು ಚೆನ್ನಾಗಿ ಮಾತನಾಡುವವಳೂ, ಪುತ್ರವತಿಯೂ, ಸುಗುಣಭರಿತಳೂ ಆಗುವಳು ॥೮೧೬॥

## ಶನಿಕಳತ್ರಾಧಿಪ ಫಲಂ

ಶ್ಲೋಕ॥ ಜಾರಾಚದುಷ್ಟಾ ಕುಲದೂಷಕೀ ಸ್ಯಾನ್ಮಂದೇ ಕಳತ್ರಾಧಿಪತೌ ಸಪಾಪೇ। ನೀಚಾಂಶಗೇ ನೀಚ ಗೃಹೇರಿಗೇಹೇ ಪಾಪೇಕ್ಷಿತೇ ಪಾಪವಿಯಾಚ್ಚರಾಂಶೇ ॥೮೧೭॥ತಾ॥ ಶನಿಯು ಕಳತ್ರಾಧಿಪತಿಯಾಗಿ ಪಾಪಗ್ರಹಯುತನಾದರೂ, ನೀಚಾಂಶೆಯಲ್ಲಿದ್ದರೂ, ನೀಚರಾಶಿಯಲ್ಲಿದ್ದರೂ, ಶತ್ರುಗೃಹದಲ್ಲಿದ್ದರೂ, ಪಾಪಗ್ರಹ ನವಾಂಶೆಯಲ್ಲಿದ್ದರೂ, ಪಾಪಗ್ರಹ ವೀಕ್ಷಿತನಾದರೂ ಜಾತಕನ ಪತ್ನಿಯು ವ್ಯಭಿಚಾರಿಣಿಯಾಗಿಯೂ, ದುಷ್ಟಳಾಗಿಯೂ, ಕುಲದೂಷಕಿಯಾಗುವಳು ॥೮೧೭॥

ಶ್ಲೋಕ॥ ಶುಭೇಕ್ಷಿತೇ ಧರ್ಮಯುತಾ ಸುಶೀಲಾ ಮಂದೇ ಕಳತ್ರಾಧಿಪತೌ ಬಲಾಢ್ಯೇ। ಪರೋಪಕರ್ತ್ರೀ ದ್ವಿಜದೇವ ಭಕ್ತಾಸ್ತ್ರೀ ಬ್ರಹ್ಮಸಕ್ತಾ ಗುರು ದೃಷ್ಟಿಯುಕ್ತೇ ॥೮೧೮॥ತಾ॥ ಶನಿಯು ಕಳತ್ರಾಧಿಪತಿಯಾಗಿ ಬಲಿಷ್ಠನಾಗಿ ಶುಭಗ್ರಹ ವೀಕ್ಷಿತನಾದರೆ

ಜಾತಕನ ಪತ್ನಿಯು ಧರ್ಮಯುತಳಾಗಿಯೂ ಸದಾಚಾರ ವುಳ್ಳವಳಾಗಿಯೂ, ಪರೋಪಕಾರ ಮಾಡುವವಳಾಗಿಯೂ, ದೇವಬ್ರಾಹ್ಮಣ ಭಕ್ತಿಯುಳ್ಳವಳಾಗಿಯೂ ಆಗುವಳು ಮತ್ತು ಗುರುದೃಷ್ಟಿ ಇದ್ದರೆ ಬ್ರಹ್ಮಜ್ಞಾನ ನಿಷ್ಠ ಳಾಗುವಳು ॥೮೧೮॥

## ಕಳತ್ರ ಸ್ಥಾನಸ್ಥ ರಾಹುಕೇತುಫಲಂ

ಶ್ಲೋಕ॥ ಸರಾಹು ಕೇತೌ ಮದರಾಶಿಸಂಸ್ಥೇ ಪಾಪೇಕ್ಷಿತೇ ಪಾಪಯುತಾ ಕುಶೀಲಾ। ಕ್ರೂರಾಂಶಕೇ ಭತೃವಿಷಪ್ರದಾಸ್ಯ ಲ್ಲೋಕಾಪವಾದಾನ್ವಿತ ಕಷ್ಟ ಶೀಲಾ॥೮೧೯॥ತಾ॥ ರಾಹುಕೇತುಗಳು ಸಪ್ತಮಸ್ಥಾನದಲ್ಲಿದ್ದು ಪಾಪಗ್ರಹಯುತ ನಾದರೂ, ಪಾಪಗ್ರಹದಿಂದ ನೋಡಲ್ಪಟ್ಟರೂ, ಕೆಟ್ಟನಡತೆಯುಳ್ಳವಳಾಗುವಳು. ಆ ರಾಹು ಕೇತುಗಳೇ ಕ್ರೂರಾಂಶೆಯಲ್ಲಿದ್ದರೆ ಗಂಡನಿಗೆ ವಿಷವನ್ನು ಕೊಟ್ಟು ಕೊಲ್ಲುವಳು. ಮತ್ತು ಲೋಕಪವಾದದಿಂದ ನಿಂದಿತಳೂ, ಕಷ್ಟಪಡುವವಳೂ ಆಗುವವಳು ॥೮೧೯॥

## ಬಾಲ್ಯೇ ವಿವಾಹಯೋಗಃ

ಶ್ಲೋಕ॥ ದಾರೇಶ್ವರೇ ಸನ್ನಿಹಿತೇ ವಿಲಗ್ನನಾಥಸ್ಯಬಾಲ್ಯೇ ಪರಿಣೀತಿಮಾಹುಃ। ಲಗ್ನಾತ್ಕಳತ್ರಾಚ್ಛುಭ ಖೇಚರೇಂದ್ರೇ ಸಮೀಪರಾಶೌ ಯದಿಸಾ ತಥೈವ॥೮೨೦॥ತಾ॥ ಸಪ್ತಮಾಧಿಪತಿಯು ಲಗ್ನಾಧಿಪತಿಗೆ ಸಮೀಪದಲ್ಲಿದ್ದರೂ, ಲಗ್ನದಿಂದಾದರೂ, ಸಪ್ತಮದಿಂದಾದರೂ, ಶುಭಗ್ರಹಗಳು ಸಮೀಪದಲ್ಲಿದ್ದರೆ ಬಾಲ್ಯದಲ್ಲಿ ವಿವಾಹವಾಗುವುದು ॥೮೨೦॥

ಶ್ಲೋಕ॥ ಲಗ್ನೇ ಕುಟುಂಬೇಯದಿ ದಾರರಾಶೌ ಶುಭಾನ್ವಿತೇ ಶೋಭನ ವರ್ಗಯುಕ್ತೇ । ತದೀಶ್ವರೋಶೋಭನದೃಷ್ಟಿಯುಕ್ತೇ ಬಾಲ್ಯೇವಿವಾಹಾದಿಕ ಮಾಹುರಾರ್ಯಾಃ॥೮೨೧॥ತಾ॥ ಲಗ್ನ, ಕುಟುಂಬ ಸಪ್ತಮ, ಈ ರಾಶಿಗಳಲ್ಲಿ ಶುಭಗ್ರಹಗಳಿದ್ದರೂ, ಮತ್ತು ಅಲ್ಲಿದ್ದ ಗ್ರಹಗಳು ಶುಭಷಡ್ವರ್ಗದಲ್ಲಿದ್ದರೂ, ಆ ಅಧಿಪತಿಗಳು ಶುಭಗ್ರಹದಿಂದ ನೋಡಲ್ಪಟ್ಟರೆ, ಬಾಲ್ಯದಲ್ಲಿಯೇ ವಿವಾಹ ವಾಗುವುದು॥೮೨೧॥

ಶ್ಲೋಕ॥ ಪಾರಾವತಾಂಶಾದಿ ಗತೇಕಳತ್ರನಾಥೇ ಕುಟುಂಬಾಧಿಪತೌ-ಬಲಾಢ್ಯೇ॥ ಮೃದ್ವಂಶಭಾಗೇ ತನುಭಾವನಾಥೇ ಬಾಲ್ಯೇ ವಿವಾಹಂಮುನಯೋ ವದಂತಿ ॥೮೨೨॥

ತಾ॥ ಕುಟುಬಾಧಿಪತಿಯು ಬಲಿಷ್ಠನಾಗಿ ಸಪ್ತಮಾಧಿಪತಿ ಪಾರಾವತಾಂಶೆ ಯಲ್ಲಿದ್ದು ಲಗ್ನಾಧಿಪತಿ ಮೃದ್ವಂಶೆಯಲ್ಲಿದ್ದರೆ, ಬಾಲ್ಯದಲ್ಲಿ ವಿವಾಹವಾಗುವುದು ॥೮೨೨॥

## ವಿವಾಹಾತ್ಪರ ಭಾಗ್ಯಯೋಗಃ

ಶ್ಲೋಕ।। ಭಾಗ್ಯಂ ವಿವಾಹಾತರತೋವದಂತಿ ಶುಕ್ರೇಸ್ತಗೇ ಚೋಪಚಯಾನ್ವಿತೇವಾ। ಕುಟುಂಬಪೇತಾದ್ಯಶ ಭಾವಯುಕ್ತೇ ಲಗ್ನೇಶ್ವರೇವಾ ಶುಭದೃಷ್ಟಿ ಯುಕ್ತೇ ।।೮೨೩।।ತಾ।। ಶುಕ್ರನು ಸಪ್ತಮದಲ್ಲಿದ್ದರೂ, ಉಪಚಯಸ್ಥಾನ ೩-೬-೧೦-೧೧ರಲ್ಲಿದ್ದರೂ ಕುಟುಂಬ ಭಾವಾಧಿಪತಿಯು ಹಾಗೆಯೇಯಿದ್ದು ಲಗ್ನಾಧಿಪತಿಯು ಶುಭಗ್ರಹದೃಷ್ಟಿಯುಕ್ತನಾದರೆ ಜಾತಕನಿಗೆ ವಿವಾಹವಾದ ನಂತರ ಭಾಗ್ಯಪ್ರಾಪ್ತಿಯಾಗುವುದು ।।೮೨೩।।

## ವಿವಾಹಾಂತ ಭಾಗ್ಯಯೋಗಃ

ಶ್ಲೋಕ।। ತತ್ಕಾರಕೇದಾರಪತೌ ಕುಟುಂಬನಾಥೇ ವಿಲಗ್ನಾಧಿಪತೌಚದುಃಸ್ಥೇ। ನೀಚಾರಿಮೂಢಾಂಶಗತೇ ಸಪಾಪೇ ಭಾಗ್ಯಂ ವಿವಾಹಾಂತಮುಪೈತಿಜಾತಃ।।೮೨೪।।

ತಾ।। ಕಳತ್ರಕಾರಕನು ಸಪ್ತಮಾಧಿಪತಿಯು ಕುಟುಂಬಾಧಿಪತಿಯು ವಿಲಗ್ನಾಧಿಪತಿಯು ದುಃಸ್ಥಾನಗಳಲ್ಲಿದ್ದರೂ, ನೀಚ, ಶತ್ರು ಅಸ್ತರಾಗಿ ಪಾಪಗ್ರಹಯುತರಾಗಿದ್ದರೂ ಅಂಥಾ ಜಾತಕನಿಗೆ ವಿವಾಹಾತ್ಪರದಲ್ಲಿ ಭಾಗಯನಾಶವಾಗುವುದು ।।೮೨೪।।

## ನಾಶಾತ್ಪರ ಭಾಗ್ಯಯೋಗಃ

ಶ್ಲೋಕ।। ಕ್ರೂರಾದಿ ಷಷ್ಠ್ಯಂಶ ಸಮನ್ವಿತೇವಾ ತತ್ಕಾರಕೇತಾದ್ಯಶಖೇಚರೇಂದ್ರೇ। ಶುಭಾನ್ವಿತೇಶೋಭನ ದೃಷ್ಟಿಯುಕ್ತೇ ನಾಶಾತ್ಪರಂ ಭಾಗ್ಯಮುಪೈತಿ ಜಾತಃ।।೮೨೫।।ತಾ।। ಕಳತ್ರಕಾರಕನೂ, ಕಳತ್ರಾಧಿಪತಿಯೂ ಕ್ರೂರಷಷ್ಠ್ಯಂಶೆಯಲ್ಲಿದ್ದು ಶುಭಗ್ರಹಯುತರಾದರೂ ಶುಭಗ್ರಹದೃಷ್ಟಿಯುಕ್ತರಾದರೂ ವಿವಾಹಾತ್ಪರದಲ್ಲಿ ಭಾಗ್ಯನಾಶವಾಗಿ ಮರಳಿ ಪ್ರಾಪ್ತಿಯಾಗುವುದು ।।೮೨೫।।

## ದೂರೇ ವಿವಾಹ ಯೋಗಃ

ಶ್ಲೋಕ।। ಕ್ರೂರೇಕಳತ್ರೇಶ ಯುತೇತ್ರಿಕೋಣೇತತ್ಕಾರಕೇ ಪಾಪಸಮನ್ವಿತೇವಾ। ಕುಟುಂಬರಾಶೌ ಯದಿವಾತ್ರಜಾತಃ ದೂರೇವಿವಾಹಂಕಥಯಂತಿಸಂತಃ ।।೮೨೬।।

ತಾ।। ಸಪ್ತಮಾಧಿಪತಿಯು ಕೇಂದ್ರತ್ರಿಕೋಣಗಳಲ್ಲಿ ಕ್ರೂರಗ್ರಹಯುತನಾಗಿದ್ದರೂ, ಕಾರಕನು, ಕಳತ್ರಕ್ರೂರಗ್ರಹಯುತನಾಗಿ ಕೇಂದ್ರತ್ರಿಕೋಣಗಳಲ್ಲಿದ್ದರೂ, ಕುಟುಂಬ ರಾಶಿಯಲ್ಲಿದ್ದರೂ ಜಾತಕನಿಗೆ ಬಾಲ್ಯವಯಸ್ಸು ಕಳೆದ ನಂತರದಲ್ಲಿ ವಿವಾಹವಾಗುವುದು ।।೮೨೬।।

ಶ್ಲೋಕ।। ಮಾನೇಸಪಾಪೇಯದಿವಾ ಕುಟುಂಬೇ ಭಾಗ್ಯೇಥವಾಪಾಪಯುತೇ ಕಳತ್ರೇ । ಕ್ರೂರಾಂಶಗೇ ಕ್ರೂರನಿರೀಕ್ಷಿತೇವಾ ದೂರೇ ವಿವಾಹಂ ಕಥಯಂತಿ ಸಂತಃ

॥೮೨೭॥ತಾ॥ ಲಗ್ನದಿಂದ ೧೧ನೇ ಸ್ಥಾನ ಅಥವಾ ದ್ವಿತೀಯ ಸ್ಥಾನ, ಭಾಗ್ಯಸ್ಥಾನ ಅಥವಾ ಕಳತ್ರಸ್ಥಾನದಲ್ಲಿ ಪಾಪಗ್ರಹವಿದ್ದು ಪಾಪಗ್ರಹ ವೀಕ್ಷಣೆಯಿದ್ದು ಕ್ರೂರಾಂಶೆಯಲ್ಲಿದ್ದರೆ, ಜಾತಕನಿಗೆ ದೂರದಲ್ಲಿ ವಿವಾಹವಾಗುವುದು ॥೮೨೭॥

## ನಿಕೃಷ್ಟಜಾತೌ ಕಳತ್ರಲಾಭ ಯೋಗಃ

ಶ್ಲೋಕ॥ ಲಗ್ನೇಶ್ವರಾದ್ದೀನ ಬಲೇಕಳತ್ರನಾಥೇ ಅರಿಭಾಗಾಂಶಯುತೇ ವಿಮೂಢೇ। ನೀಚಾಂಶಗೇ ನೀಚಸಮನ್ವಿತೇವಾ ನಿಕೃಷ್ಟಜಾತೌಹಿ ಕಳತ್ರಲಾಭ ॥೮೨೮॥ತಾ॥ ಲಗ್ನಾಧಿಪತಿಗಿಂತಲೂ, ಸಪ್ತಮಾಧಿಪತಿ ಬಲಹೀನನಾಗಿ ಶತ್ರು ನವಾಂಶ. ಅಸ್ತ, ನೀಚಾಂಶೆ ಅಥವಾ ನೀಚಗ್ರಹಯುತನಾದರೆ ಜಾತಕನಿಗೆ ಹೀನವಾದ ಜಾತಿಯ ಕಳತ್ರ ಪ್ರಾಪ್ತಿಯೆಂದು ತಿಳಿಯತಕ್ಕದ್ದು ॥೮೨೮॥

## ಉತ್ಕೃಷ್ಟಜಾತೌ ಕಳತ್ರಲಾಭಯೋಗಃ

ಶ್ಲೋಕ॥ ಲಗ್ನೇಶ್ವರಾತ್ಪೂರ್ಣಬಲೇ ಕಳತ್ರನಾಥೇ ಶುಭಾಂಶೇಶುಭದೃಷ್ಟಿ ಯೋಗೇ॥ ವೈಶೇಷಿಕಾಂಶೇ ಪರಮೋಚ್ಚಭಾಗೇ ಚೋತ್ಕೃಷ್ಟಜಾತೌತು ಕಳತ್ರ ಲಾಭಃ ॥೮೨೯॥ತಾ॥ ಲಗ್ನಾಧಿಪತಿಗಿಂತಲೂ ಸಪ್ತಮಾಧಿಪತಿ ಬಲಪೂರ್ಣನಾಗಿ ಶುಭ ನವಾಂಶೆ ಅಥವಾ ಶುಭಗ್ರಹದೃಷ್ಟಿ ಅಥಾ ವೈಶೇಷಿಕಾಂಶೆಯಲ್ಲಿದ್ದರೂ, ಸಪ್ತಮಾಧಿಪತಿ ಪರಮೋಚ್ಚದಲ್ಲಿದ್ದರೂ ಉತ್ಕೃಷ್ಟಜಾತಿಯಲ್ಲಿ ಕಳತ್ರ ಲಾಭವಾಗುವುದು ॥೮೨೯॥

## ಕಳತ್ರಜಾತ್ಯಪೇಕ್ಷಯಾಸ್ವಯಂ ಹೀನಜಾತಿಯೋಗಃ

ಶ್ಲೋಕ॥ ಲಗ್ನೇಶ್ವರೇ ಹೀನಬಲೇ ಕಳತ್ರನಾಥಾತ್ಸಪಾಪೇ ಯದಿ ನೀಚ ಭಾಗೇ। ನಾಶಸ್ಥಿತೌವಾ ತ್ವವರೋಹ ಭಾಗೇ ಕಳತ್ರಜಾತೇಃ ಸ್ವಯಂ ಮಂತ್ರ ಹೀನಃ ॥೮೩೦॥ತಾ॥ ಸಪ್ತಮಾಧಿಪತಿಗಿಂತಲೂ, ಲಗ್ನಾಧಿಪತಿ ಹೀನ ಬಲನಾಗಿ ನೀಚಾಂಶೆಯಲ್ಲಿದ್ದರೂ, ಅಷ್ಟಮದಲ್ಲಿದ್ದರೂ, ಅವರೋಹ ಭಾಗದಲ್ಲಿದ್ದರೂ ಕಳತ್ರ ಜಾತಿಗಿಂತಲೂ ತಾನು ಹೀನಜಾತಿಯವನಾಗುವನು ॥೮೩೦॥

## ಸ್ವಶ್ರೇಷ್ಠತ್ವ ಯೋಗಃ

ಶ್ಲೋಕ॥ ತಸ್ಮಾದ್ಬಲಾಢ್ಯೇಹಿ ವಿಲಗ್ನನಾಥೇ ತ್ವಾರೋಹ ಭಾಗೇಪರಮೋಚ್ಚ ಕಾಂಶೇ । ಕೇಂದ್ರ ತ್ರಿಕೋಣೇ ಯದಿವಾಸಸಾಮ್ಯೇ ಶ್ರೇಷ್ಠಃ ಕಳತ್ರಾತ್ಸ್ವಯ ಮತ್ರಜಾತಃ ॥೮೩೧॥ತಾ॥ ಸಪ್ತಮಾಧಿಪತಿಗಿಂತಲೂ ಲಗ್ನಾಧಿಪತಿಯು ಉಚ್ಚಾರೋಹಿ ಯಾಗಿದ್ದರೂ, ಪರಮೋಚ್ಚದಲ್ಲಿದ್ದರೂ ಅಥವಾ ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹ- ಯುತನಾಗಿದ್ದರೂ, ಕಳತ್ರಜಾತಿಗಿಂತಲೂ ತಾನು ಶ್ರೇಷ್ಠನಾಗಿರುವನು ॥೮೩೧॥

## ಸಮಾನ ಜಾತೌ ಕಳತ್ರಲಾಭ ಯೋಗಃ

ಶ್ಲೋಕ।। ಕಳತ್ರನಾಥಾದ್ಯದಿವಾ ಕಳತ್ರ ರಾಶೇಃ ಕುಟುಂಬಾಧಿಪತೇರ್ಭ ವೇದ್ಯಾ।। ಬಲೇನ ಸಾಮ್ಯೇ ಸಮಜಾತಿ ಮಾಹುಃ ಸ್ತ್ರೀಯಂ ಸುಶೀಲಾಂ ಪತಿಭಕ್ತಿ ಯುಕ್ತಾಂ ।।೮೩೨।।ತಾ।। ಸಪ್ತಮಾಧಿಪತಿಯಾಗಲೀ, (ಕಳತ್ರರಾಶಿಯಿಂದಾದರೂ) ಕುಟುಂಬಾಧಿಪತಿಗೆ ಬಲಸೌಮ್ಯವಾಗಿದ್ದರೆ, ಜಾತಕನಿಗೆ ಸಮಾನಜಾತಿಯವರಲ್ಲಿ ಕಳತ್ರ ಲಾಭವಾಗುವುದು ।।೮೩೨।।

## ಸಮಾನದಾಂಪತ್ಯಾನುಕೂಲ ಯೋಗಃ

ಶ್ಲೋಕ।। ಲಗ್ನೇಶ್ವರಸ್ಯಾಪಿ ಕಳತ್ರನಾಥೇ ಶತ್ರೌ ಸಶತ್ರೌ ರಿಪುಭಾವಮೇತಿ। ಮಿತ್ರೇಹಿಮಿತ್ರಂಚಸಮೇಸಮತ್ವ ಮಿತ್ಯಾದಿಕಂ ವೀಕ್ಷ್ಯವದೇತ್ಸುವಿದ್ವಾ।।೮೩೩।।

ತಾ।। ಲಗ್ನಾಧಿಪತಿಗೂ ಕಳತ್ರಾಧಿಪತಿಗೂ ಮಿತ್ರತ್ವ ಶತ್ರುತ್ವ ಸಮತ್ವವನ್ನು ಅವರವರ ಮಿತ್ರತ್ವವನ್ನು ನೋಡಿ ತಿಳಿಯತಕ್ಕದ್ದು ಅದು ಹೇಗೆಂದರೆ-ಲಗ್ನಾಧಿಪತಿಗೆ ಸಪ್ತಮಾಧಿಪತಿಯು ಮಿತ್ರನಾಗಿದ್ದರೆ, ಅವರಿಬ್ಬರೂ ಮಿತ್ರತ್ವದಿಂದಿರುವರು।।೮೩೩।।

## ಕಳತ್ರಶೋಕ ಯೋಗಃ

ಶ್ಲೋಕ।। ಕಳತ್ರನಾಥೇ ರಿಪುನೀಚಸಂಸ್ಥೇ ಮೂಢೇಥವಾ ಪಾಪನಿರೀಕ್ಷಿತೇವಾ।। ಪಾಪೈರ್ಯುತೇ ಸೌಮ್ಯದೃಶಾ ವಿಹೀನೇಕಳತ್ರ ಶೋಕಂ ಪ್ರವದಂತಿ ಸಂತಃ ।।೮೩೪।।ತಾ।। ಸಪ್ತಮಾಧಿಪತಿಯು ಶತ್ರುಕ್ಷೇತ್ರದಲ್ಲಿದ್ದರೂ, ನೀಚನಾಗಿದ್ದರೂ, ಅಸ್ತನಾಗಿದ್ದರೂ, ಪಾಪವೀಕ್ಷಿತನಾಗಿದ್ದರೂ, ಪಾಪವೀಕ್ಷಿತನಾಗಿದ್ದರೂ, ಪಾಪಗ್ರಹಯುತನಾಗಿದ್ದರೂ, ಶುಭಗ್ರಹ ದೃಷ್ಟಿಯಿಲ್ಲದಿದ್ದರೆ ಜಾತಕನಿಗೆ ಕಳತ್ರಶೋಕ ಪ್ರಾಪ್ತಿಯಾಗುವುದು ।।೮೩೪।।

## ಕಳತ್ರವರ್ಣ ವಿಚಾರಃ

ಶ್ಲೋಕ।। ಕಳತ್ರಾಧಿಪತೇರ್ವರ್ಣಂ ರಾಶೇರ್ವಾ ಕಾರಕಸ್ಯವಾ।। ಸರ್ವೋತ್ತಮ ಬಲಸ್ಯೈವತೇಷಾಂ ಮಧ್ಯೇ ವಿನಿರ್ದಿಶೇತ್ ।।೮೩೫।।ತಾ।। ಕಳತ್ರಾಧಿಪತಿವರ್ಣ ಕಳತ್ರರಾಶಿವರ್ಣ, ಕಳತ್ರಕಾರಕನ ವರ್ಣ, ಈ ಮೂರರಲ್ಲಿ ಯಾವುದು ಬಲಾಧಿಕ ವಾಗಿರುವುದೋ ಅದನ್ನನುಸರಿಸಿ ಜಾತಕನ ಪತ್ನಿಯ ವರ್ಣವನ್ನು ಹೇಳತಕ್ಕದ್ದು ।।೮೩೫।।

## ಕಳತ್ರಗುಣವಿಚಾರಃ

ಶ್ಲೋಕ।। ಗುರುಣಾರೂಪಸಂಪನ್ನಾ ತಸ್ಮಿಞ್ಶುಭನಿರೀಕ್ಷಿತೇ।। ಪಾಪೇಕ್ಷಿತೇ ಕುರೂಪಾ ದುರ್ಗಣಾಭವೇತ್ ।।೮೩೬।।ತಾ।। ಕಳತ್ರಸ್ಥಾನದಲ್ಲಿ ಗುರುವಿದ್ದರೂ,

ಅಥವಾ ಕಳತ್ರ ಸ್ಥಾನಕ್ಕೆ ಶುಭಗ್ರಹವೀಕ್ಷಣೆರಯಿದ್ದರೂ, ಜಾತಕನ ಪತ್ನಿಯು ಸುಗುಣೆಯಾಗಿಯೂ ರೂಪವಂತಳಾಗಿಯೂ ಇರುವಳು ॥ ಸಪ್ತಮಸ್ಥಾನದಲ್ಲಿ ಪಾಪಗ್ರಹವಿದ್ದರೂ ಪಾಪವೀಕ್ಷಿತನಾದರೂ ಜಾತಕನ ಪತ್ನಿಯು ದುರ್ಗುಣೆಯಾಗಿಯೂ, ಕುರೂಪಿಣೆಯಾಗಿಯೂ ಇರುವಳು ॥೮೩೬॥

## ಕಳತ್ರರಾಶಿ ನಿರ್ಣಯಃ

ಶ್ಲೋಕ॥ ಕಳತ್ರನಾಥಾಂಶ ಪತೇಸ್ತದೀಯಂ ರಾಶಿಂ ಕಳತ್ರಸ್ಯ ವಿದುರ್ಮಹಾಂತಃ। ತಸ್ಯೋಚ್ಚರಾಶಿಂ ಯದಿವಾ ಕಳತ್ರಂ ರಾಶಿಂತದಂಶಂತ್ರಿತಯೇ ತದೀಯಂ ॥೮೩೭॥ತಾ॥ ಕಳತ್ರಾಧಿಪತಿ ಯಾವ ರಾಶಿ ನವಾಂಶದಲ್ಲಿರುವನೋ ಆ ನವಾಂಶಾಧಿಪತಿಯ ರಾಶಿ ಕಳತ್ರರಾಶಿಯೆಂದು ತಿಳಿಯತಕ್ಕದ್ದು. ಅಥವಾ ಕಳತ್ರಾಧಿಪತಿಗೆ ಉಚ್ಚರಾಶಿ ಯಾವುದೋ ಆ ರಾಶಿಯಾಗಲಿ, ಕಳತ್ರರಾಶಿ ಯಾವ ನವಾಂಶ ಉದಯದಲ್ಲಿರುವುದೋ ಆ ನವಾಂಶಾಧಿಪತಿ ರಾಶಿಯಾಗಲಿ ಈ ಮೂರರಲ್ಲಿ ಯಾವದು ಬಲಾದಿಕವಾಗಿರುವುದೋ ಆ ರಾಶಿ ಕಳತ್ರರಾಶಿಯೆಂದು ತಿಳಿಯತಕ್ಕದ್ದು ॥೮೩೭॥

## ಕಳತ್ರಮೂಲಾತ್ ಪುತ್ರವಿಚಾರಃ

ಶ್ಲೋಕ॥ ಕಳತ್ರ ರಾಶಿ ತ್ರಿತಯೇಥವಾಸ್ಯತ್ತದೀಯ ಸಂಯುಕ್ತ ಭಕೋಣ ರಾಶೌ। ಕಳತ್ರರಾಶಿಂ ಸಮುದಾಹರಂತಿ ತತ್ಪ್ರೋಕ್ತರಾಶೌ ಯದಿ ನಾಸ್ತಿ ಪುತ್ರಃ ॥೮೩೮॥ತಾ॥ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಮೂರು ವಿಧವಾದ ಕಳತ್ರ ರಾಶಿ ಗಳು ಅಥವಾ ಕಳತ್ರರಾಶಿಗೆ ಪಂಚಮ ನವಮ ರಾಶಿಗಳು, ಕಳತ್ರ ಸ್ಥಾನಕ್ಕೆ ಜನ್ಮರಾಶಿ ಎಂದು ಮಹರ್ಷಿಗಳು ನಿಶ್ಚಯಿಸಿರುವರು. ಈ ರಾಶಿಗಳಿಗೆ ತಪ್ಪಿ ಇತರ ರಾಶಿಗಳಾದರೆ, ಜಾತಕನಿಗೆ ಪುತ್ರಭಾವಯಾದರೆ ತಿಳಿಯತಕ್ಕದ್ದು ॥೮೩೮॥

## ಕಳತ್ರರಾಶಿವಶಾತ್ಪುತ್ರಯೋಗಃ

ಶ್ಲೋಕ॥ ಗೋಸಿಂಹಕನ್ಯಾಳಿಷು ಜನ್ಮರಾಶೌ ಸ್ತ್ರೀಣಾಂಭವೇ ಜ್ಜನ್ಮನಿಚಾಲ್ಪ ಪುತ್ರಾಃ ಶುಭಗ್ರಹೈ ರಾಕ್ರಮಿತೇಷುತೇಷು ಸುತಾನ್ವದೇತ್ತತ್ರಬಹೂರ್ ಗುಣಾಢ್ಯಾರ್ ॥೮೩೯॥ತಾ॥ ಸ್ತ್ರೀಯರಿಗೆ ವೃಷಭ, ಸಿಂಹ, ಕನ್ಯಾ, ವೃಶ್ಚಿಕ ಈ ರಾಶಿಗಳು ಜನ್ಮರಾಶಿಯಾದರೆ ಅಲ್ಪಪುತ್ರರಾಗುವರು ಈ ರಾಶಿಗಳಲ್ಲಿ ಶುಭಗ್ರಹಯುತವಾದರೆ, ಆ ಸ್ತ್ರೀಯರಿಗೆ ಸುಗುಣವಂತರಾದ ಪುತ್ರರಾಗುವರು ॥೮೩೯॥

## ವ್ಯಭಿಚಾರ ಸ್ತ್ರೀವಿಚಾರಃ

ಶ್ಲೋಕ।। ವಂಧ್ಯಾ ಸಂಗೋಮದೇ ಭಾನೌ ಚಂದ್ರೇದಾಸೀಸಮಾಶ್ರಯಃ। ಕುಜೇರಜಸ್ವಲಾಸಂಗಃ ವಂಧ್ಯಾಸಂಗಶ್ಚ ಕೀರ್ತಿತಃ ।।೮೪೦।। ಬುಧೇ ವೇಶ್ಯಾರ್ಥ ಹೀನಾಸ್ಯಾ ದ್ವಣಿಕ್ ಸ್ತ್ರೀವಾ ಪ್ರಕೀರ್ತಿತಾ। ಗುರೌ ಬ್ರಾಹ್ಮಣಭಾರ್ಯಾಸ್ಯಾದ್ಗ ರ್ಭಿಣೀ ಸಂಗಮೋ ಭೃಗೌ ।।೮೪೦।। ಹೀನಾಂಂವಾ ಪುಷ್ಪಿಣೀಂ ವಾಚ್ಯಾ ಮಂದಕೇತು ಫಣೀಶ್ವರೈಃ ।। ಹೀನಾಂಂವಾ ಪುಷ್ಪಿಣೀಂ ವಾಚ್ಯಾಮಂದಕೇತು ಫಣೀಶ್ವರೈಃ। ರಾಹೌಚಗರ್ಭಿಣೀಸಂಗಃ ಕೃಷ್ಣಯಾ ಕುಬ್ಜಯಾಶನೌ।। ಏವಂ ಸುಖಸ್ಥಿತೈರೀದೃಕ್ ಸ್ತ್ರೀಸಂಗಮೂಹ್ಯತೇ ।।೮೪೨।।

ತಾ।। ಜಾತಕನಿಗೆ ಯಾವಯಾವ ಸ್ತ್ರೀಯರಲ್ಲಿ ವ್ಯಭಿಚಾರದಿಂದ ಸಂಗಮ ವಾಗುವುದೋ ಆ ವಿಷಯವು ಹೇಳಲ್ಪಡುತ್ತೆ।। ಸಪ್ತಮಸ್ಥಾನದಲ್ಲಾದರೂ, ಚತುರ್ಥ ಸ್ಥಾನದಲ್ಲಾದರೂ, ಸೂರ್ಯನಿದ್ದರೆ ಬಂಜೆ ಸಂಗವಾಗುವುದು, ಚಂದ್ರನಿದ್ದರೆ ದಾಸಿಯಾಗಲೀ, ಸಮಾನಳಾದ ಸ್ತ್ರೀಯ ಸಂಗವಾಗಲೀ ಆಗುವುದು ।। ಕುಜನಿದ್ದರೆ ರಜಸ್ವಲಾ ಸ್ತ್ರೀಯಾದರೂ, ಅಥವಾ ಬಂಜೆಯ ಸಂಗವಾದರೂ ಆಗುವುದು, ಬುಧನಿದ್ದರೆ, ವೇಷ್ಯಾಸ್ತ್ರೀಯಾಲೀ ಅರ್ಥಹೀನಳಾದ ಸ್ತ್ರೀಯಾಗಲೀ, ವರ್ತಕ ಸ್ತ್ರೀಯ ಸಂಗವಾಗಲೀ, ಆಗುವುದು, ಗುರುವಿದ್ದರೆ ಬ್ರಾಹ್ಮಣಸ್ತ್ರೀ ಸಂಗವಾಗುವುದು, ಅಥವಾ ರಾಹು ಇವರಲ್ಲಿ ಯಾರಾದರೂ ಇಬ್ಬರಿದ್ದರೆ ಹೀನಜಾತಿಯ ಸ್ತ್ರೀಯಾಗಲೀ, ಮುಟ್ಟಾದ ಸ್ತ್ರೀಸಂಗವಾಗಲಿ ಆಗುವುದು, ರಾಹುವಿದ್ದರೆ ಗರ್ಭಿಣಿ ಸಂಗವಾಗುವುದು ಶನಿಯಿದ್ದರೆ ಕಪ್ಪಾದ ಕುಬ್ಜೆಯ ಸಂಗವಾಗುವುದು ।।೮೪೦-೮೪೧-೮೪೨।।

## ಭೋಗಗ್ರಹ ನಿರ್ಣಯಃ

ಶ್ಲೋಕ।। ಸೂರ್ಯಾದ್ಯೈಸುಖಗೈರ್ವಾಚ್ಯೋ ಭೋಗಗ್ರಹ ವಿನಿರ್ಣಯಃ। ವನಂ ಗೃಹಂಚಕುಡ್ಯಂಚ ವಿಹಾರೋ ದೇವತಾಲಯಃ। ಜಲಮಶ್ವಗಜಸ್ಥಾನಂ ಮರುಸ್ಥಾನಂ ನಿರೂಷ್ಯತಾಂ ।।೮೪೩।।ತಾ।। ಸೂರ್ಯಾದಿಗ್ರಹಗಳು ಜಾತಕನ ಚತುರ್ಥ ಸ್ಥಾನದಲ್ಲಿದ್ದರೆ ಮುಂದೆ ವಿವರಿಸುವ ಪ್ರಕಾರ ಭೋಗಗ್ರಹ ನಿರ್ಣಯ ಮಾಡತಕ್ಕದ್ದು. ಚತುರ್ಥದಲ್ಲಿ ಸೂರ್ಯನಿದ್ದರೆ ವನ ಉಪವನದಲ್ಲೂ ಚಂದ್ರನಿದ್ದರೆ ಗೃಹದಲ್ಲೂ, ಕುಜನಿದ್ದರೆ ಗೋಡೆಯ ಸಮಿಪದಲ್ಲೂ, ಬುಧನಿದ್ದರೆ ವಿಹಾರಸ್ಥಾನದಲ್ಲೂ, ಗುರುವಿದ್ದರೆ ದೇವಸ್ಥಾನದಲ್ಲೂ, ಶುಕ್ರನಿದ್ದರೆ ಜಲಸ್ಥಾನದಲ್ಲೂ, ಶನಿಯಿದ್ದರೆ ಅಶ್ವಾದಿಸ್ಥಾನದಲ್ಲೂ, ರಾಹುವಿದ್ದರೆ ಗಜಸ್ಥಾನದಲ್ಲೂ, ಕೇತುವಿದ್ದರೆ ಊಷರಕ್ಷೇತ್ರದಲ್ಲೂ, ಕ್ರಮವಾಗಿ ಭೋಗಸ್ಥಾನವೆಂದು ನಿರ್ಣಯಿಸತಕ್ಕದ್ದು ।।೮೮೪।।

## ಮೈಥುನ ಲಕ್ಷಣವಿಚಾರಃ

ಶ್ಲೋಕ।। ಪಾಪಯುಕ್ತೆ ಚತುಷ್ಕೇಂದ್ರೇ ಚತುಷ್ಪಾನ್ಮೈಥುನಂವದೇತ್। ಪಾಪದೃಷ್ಟೇಷು ಸರ್ವೇಷು ಕೇಂದ್ರೇಷ್ವೇವಂ ವಿನಿರ್ದಿಶೇತ್ ।।೮೪೪।। ಕೇಂದ್ರ ತ್ರಿಕೇ ಪಾಪಯುತೇ ಪಶುವನ್ಮೈಥುನಂಭವೇತ್। ರಾಹೌಕಳತ್ರೇ ಭೌಮೇವಾ ಸುಖೇತಾ ದೃಶ ಮೈಥುನಂ।।೮೪೪।।ತಾ।। ನಾಲ್ಕು ಕೇಂದ್ರಗಳಲ್ಲು ಪಾಪಗ್ರಹಗಳಿದ್ದರೆ, ಚತುಷ್ಪದ ಜಂತುವಿನ ಮೈಥುನದಂತೆ ಮೈಥುನ ಕ್ರಮವೂ ಮತ್ತು ಚತುಷ್ಕೇಂದ್ರಗಳಿಗೆ ಪಾಪದೃಷ್ಟಿಯಿದ್ದರೆ ಮೇಲೆ ಹೇಳಿದಂತೆ ಮೈಥುನ ಕ್ರಮವೂ ಹೇಳಲ್ಪಡತಕ್ಕದ್ದು ।।೮೪೪।। ಮೂರು ಕೇಂದ್ರಗಳಲ್ಲಿ ಪಾಪಗ್ರಹಗಳಿದ್ದರೆ ಪಶುವಿನಂತೆ ರಸತಿಳಿಯದೆ ಕಾಮಕ್ರೀಡೆ ಮಾಡುವನು. ಸಪ್ತಮದಲ್ಲಿ ಸೂರ್ಯನು ಚತುರ್ಥದಲ್ಲಿ ಅಂಗಾರಕನಿದ್ದರೆ ಪಶುವಿನಂತೆ ಕ್ರೀಡಿಸುವನು. ರಾಹು ಸಪ್ತಮದಲ್ಲಿದ್ದು ಚತುರ್ಥದಲ್ಲಿ ಕುಜನಿದ್ದರೆ ಪಶುವಿನಂತೆ ಕ್ರೀಡಿಸುವನು ।।೮೪೫।।

## ಭಗ ಚುಂಬನ ಯೋಗಃ

ಶ್ಲೋಕ।। ಮದೇಶೇ ಸುಖರಾಶಿಸ್ಥೇ ಭೃಗುಣಾ ಸಹಿತೇಥವಾ । ಭೃಗುಕ್ಷೇತ್ರಗತೇಪಾಪಿ ಭಗಚುಂಬನ ಮಾದಿಶೇತ್ ।।೮೪೬।। ಲಗ್ನೇಶೇ ನೀಚರಾಶ್ಯಂಶೇ ಸ್ಥಿತೇತಾದೃಶಚುಂಬನಂ ।।ತಾ।। ಸಪ್ತಮಾಧಿಪತಿ ಸುಖರಾಶಿ ಯಲ್ಲಿದ್ದರೂ ಶುಕ್ರ ಸಹಿತನಾಗಿದ್ದರೂ ಅಥವಾ ಶುಕ್ರಕ್ಷೇತ್ರದಲ್ಲಿದ್ದರೂ, ಭಗಚುಂಬನ ಯೋಗವು ಲಗ್ನಾಧಿಪತಿ ನೀಚನಾಗಿದ್ದರೂ ನೀಚಾಂಶೆಯಲ್ಲಿದ್ದರೂ ಭಗಚುಂಬನಯೋಗ ।।೮೪೬।।

## ಸ್ತ್ರೀಣಾಂ ಸ್ತನ ವಿಚಾರಃ

ಶ್ಲೋಕ।। ಕೃಶಸ್ತನೀ ಕುಜೇಮಂದೇ ರಾಹ್ವಾರೌಲಂಬಿತಸ್ತನೀ । ಕಠಿನೋರ್ಧ್ವಕ ಕುಚಾಭಾನೌ ಶೇಷಾಸ್ತ್ರೀಚೋತ್ತಮಸ್ತೀ ।।೮೪೭।।ತಾ।. ಸಪ್ತಮದಲ್ಲಿ ಶನಿಯಿದ್ದರೆ ಜಾತಕನ ಪತ್ನಿಯು ಕೃಶವಾದ ಸ್ತನವುಳ್ಳವಳಾಗುವಳು. ಶನಿ ರಾಹುಗಳಿದ್ದರೆ ಲಂಬಸ್ತನವುಳ್ಳವಳು. ಸೂರ್ಯನಿದ್ದರೆ ಕಠಿಣವಾದ ಊರ್ಧ್ವ ಕುಚಗಳುಳ್ಳವಳಾಗುವಳು. ಶೇಷಗ್ರಹಗಳಾದ ಚಂದ್ರ, ಬುಧ, ಶುಕ್ರ, ಗುರು ಈ ಗ್ರಹಗಳು ಇದ್ದರೆ ಶ್ರೇಷ್ಠವಾದ ಉತ್ತಮ ಸ್ತನಗಳುಳ್ಳವಳಾಗುವಳು ।।೮೪೭।।

ಶ್ಲೋಕ।। ಪಾಪೇ ನೈಕೇನ ಸಹಿತೇ ವೈಲಕ್ಷ್ಣಯ ಸ್ತನಿಭವೇತ್। ದಾರೇಶೇ ಪಾಪಖೇಟೇವಾ ಶುಭೇವಾ ತಾದೃಶಸ್ತನೀ ।।೮೪೮।।ತಾ।। ಸಪ್ತಮದಲ್ಲಿ ಒಂದು ಪಾಪಗ್ರಹ ಮತ್ತೊಂದು ಶುಭಗ್ರಹಯುಕ್ತವಾಗಿದ್ದರೆ ಒಂದು ಚಿಕ್ಕದು, ಮತ್ತೊಂದು ದೊಡ್ಡದು ಈವಿಧವಾಗಿ ವಿಲಕ್ಷಣ ಕುಚವುಳ್ಳ ಹೆಂಡತಿಯುಳ್ಳವನಾಗುವನು.

ಸಪ್ತಮಾಧಿಪತಿ ಪಾಪಗ್ರಹವಾದರೂ, ಶುಭಗ್ರಹವಾದರೂ, ಶುಭ ಪಾಪ ಸಂಬಂಧವಿದ್ದರೆ, ವೈಲಕ್ಷಣ್ಯವಾದ ಕುಲವುಳ್ಳ ಭಾರ್ಯೆಯುಳ್ಳವನಾಗುವನು॥೮೪೮॥

ಶ್ಲೋಕ॥ ಶುಭದ್ವಯೇ ಸಹಿತೇ ದಾರೇಶೇಪಿ ತಥಾವಿಧೇ । ಸಮಸ್ತನೀ ಭವೇತ್ಪತ್ನೀ ಪಾಪಯೋಗೇನ್ಯಥಾಭವೇತ್ ॥೮೪೯॥ತಾ॥ ಸಪ್ತಮಾಧಿಪತಿ ಶುಭ ಗ್ರಹಗಳೆರಡರ ಸಂಗಡ ಇದ್ದರೆ, ಸಮವಾದ ಸ್ತನವುಳ್ಳ ಪತ್ನಿಯೆಂತಲೂ, ಪಾಪ ಗ್ರಹಯೋಗವಿದ್ದರೆ ಅನ್ಯಥಾ ವಿಲಕ್ಷಣಾ ಕುಚವನ್ನು ಹೇಳತಕ್ಕದ್ದು ॥೮೪೯॥

## ಅತಿಸ್ಥೂಲಸ್ತನಪತ್ನಿಯೋಗಃ

ಶ್ಲೋಕ॥ ಅತಿಸ್ಥೂಲಸ್ಥನೀಪತ್ನೀ ಸಶುಭೇದಾರನಾಯಕೇ। ಜಲಗ್ರಹೇ ಜಲರ್ಕ್ಷಸ್ಥೇ ಗುರುಣಾಪಿ ನಿರೀಕ್ಷಿತೇ ॥೮೫೦॥ತಾ॥ ಸಪ್ತಮಾಧಿಪತಿಯು ಶುಭಗ್ರಹವಾಗಿ, ಜಲಗ್ರಹವಾಗಿ ಜಲರಾಶಿಯಲ್ಲಿದ್ದು ಗುರುವಿನಿಂದ ನೋಡಲ್ಪಟ್ಟರೆ, ಅತಿ ಸ್ಥೂಲವಾದ ಸ್ತನಗಳುಳ್ಳ ಪತ್ನಿಯುಳ್ಳವನಾಗುವನು ॥೮೫೦॥

## ಭಗದೈರ್ಘ್ಯ ಯೋಗಃ

ಶ್ಲೋಕ॥ ರವೌವಾ ಭೂಮಿಪುತ್ರೇವಾ ಮಂದಮಾಂದ್ಯಸುಸಂಯುತೇ। ದಾರೌಧಿಪೇ ಪಾಪಭಾಗೇ ಭಗದೈರ್ಘ್ಯಂ ವಿನಿರ್ದಿಶೇತ್ ॥೮೫೦॥ತಾ॥ ಸಪ್ತಮಾಧಿಪತಿಯು ಸೂರ್ಯ, ಕುಜ, ಶನಿ, ಮಾಂದಿ, ರಾಹು, ಕೇತು, ಈ ಗ್ರಹಗಳ ಸಂಯೋಗದಿಂದ ಪಾಪಾಂಶದಲ್ಲಿದ್ದರೆ, ಜಾತಕನ ಪತ್ನಿಯು ಭಗದೈರ್ಘ್ಯ ಉಳ್ಳವಳಾಗುವಳು ॥೮೫೧॥

## ಸಮಭಗ ಯೋಗಃ

ಶ್ಲೋಕ॥ ತದೀಶೌ ಗುರಶುಕ್ರೌವಾ ಶುಭಾಂ ಸಹಿತೌ ಯದಿ। ಸಮಂಭಗಂ ಭವೇತ್ತಸ್ಯಾಃ ಪಾಪಯುಕ್ತೌತುದೈರ್ಘ್ಯಕಂ ॥೮೫೨॥ತಾ॥ ಸಪ್ತಮಾಧಿಪತಿಯು ಗುರು ಅಥವಾ ಶುಕ್ರನಾಗಲೀ ಆಗಿ, ಶುಭಾಂಶೆಯಲ್ಲಿದ್ದರೂ, ಶುಭಗ್ರಹಯುಕ್ತವಾಗಿದ್ದರೂ ಜಾತಕನ ಪತ್ನಿಯು ಸಮವಾದ ಭಗವುಳ್ಳವಳಾಗುವಳು. ಆ ಗುರು ಶುಕ್ರರೇ ಪಾಪಗ್ರಹಯುಕ್ತರಾಗಿದ್ದರೆ, ಜಾತಕನ ಪತ್ನಿಯು ದೀರ್ಘವಾದ ಭಗವುಳ್ಳವಳಾಗುವಳು ॥೮೫೨॥

ಶ್ಲೋಕ॥ ಶನಿಚಂದ್ರ ವಿದಾಂಮಧ್ಯೇ ಯತ್ರೈ ಕಸ್ಮಿಮದೇಶ್ವರೇ । ಹ್ರಸ್ವಂ ಭಗಂ ಸಮಂದೀರ್ಘಂ ಸ್ತ್ರೀಯಾಮೇವಂ ವಿನಿರ್ದಿಶೇತ್ ॥೮೫೩॥ತಾ॥ ಶನಿಚಂದ್ರ ಬುಧರಲ್ಲಿ ಯಾರಾದರು ಸಪ್ತಮಾಧಿಪತಿಯಾಗಿ ಆ ಜಾತಕನಿಗೆ ಸ್ತ್ರೀಯ ಜಾತಕದಲ್ಲಿಯೂ

ಸಪ್ತಮಾಧಿಪತಿಯಾಗಿದ್ದರೆ ಹ್ರಸ್ವವಾದ ಭಗವುಳ್ಳವಳಾಗುವಳು ಚಂದ್ರನಾದರೆ ಸಮವಾಗಿರುವುದು. ಬುಧನಾದರೆ ಭಗದೀರ್ಘವಾಗಿರುವುದು ||೮೫೩||

## ಸದಾ ಗುಹ್ಯಾದ್ರ ಯೋಗಃ

ಶ್ಲೋಕ|| ಕಳತ್ರೇಶೇ ಜಲರ್ಕ್ಷಸ್ಥೇಕಾರಕೇವಾ ತಥಾವಿಧೇ | ಜಲರ್ಕ್ಷೇದಾರ ಭಾವೇವಾ ಪೂರ್ಣಚಂದ್ರನಿರೀಕ್ಷಿತೇ ||೮೫೪|| ಚಂದ್ರೇ ಜಲರ್ಕ್ಷೇ ದಾರಸ್ಥೇ ಜಲರ್ಕ್ಷ ಭೃಗುವೀಕ್ಷಿತೇ | ಜಲರ್ಕ್ಷಸ್ಥ ವಿದಾದೃಷ್ಟೇ ಸದಾಗುಹ್ಯಾರ್ದ್ರತಾಭವೇತ್ ||೮೫೫||

ತಾ|| ಸಪ್ತಮಾಧಿಪತಿ ಜಲರಾಶಿಯಲ್ಲಿದ್ದರೂ, ಶುಕ್ರನು ಜಲರಾಶಿಯಲ್ಲಿದ್ದರೂ, ಸಪ್ತಮಭಾವವು ಜಲರಾಶಿಯಾಲ್ಲಿದ್ದರೂ, ಪೂರ್ಣಚಂದ್ರನು ಸಪ್ತಮಭಾವವನ್ನು ನೋಡಿದರೂ, ಜಲರಾಶಿಯಲ್ಲಿ ಸಪ್ತಮಾಧಿಪತಿಯಿದ್ದು, ಜಲರಾಶಿಯಲ್ಲಿದ್ದ ಶುಕ್ರನು ನೋಡಿದರೂ ಅಥವಾ ಜಲರಾಶಿಯಲ್ಲಿದ್ದ ಬುಧನೂ ಜಾತಕನ ಪತ್ನಿಯ ಮರ್ಮಸ್ಥಾನವು ಸದಾ ಆರ್ದ್ರವಾಗಿರುವುದು ||೮೫೫||

ಶ್ಲೋಕ|| ಪೂರ್ಣೇ ಶಶಾಂಕೇ ದಾರಸ್ಥೇ ಜಲರಾಶ್ಯಂಶಕೇ ಪಿವಾ | ಜಲರ್ಕ್ಷೇ ಗುರುಣಾ ದೃಷ್ಟೇ ಸದಾಗುಹ್ಯಾರ್ದ್ರತಾಭವೇತ್ ||೮೫೬||ತಾ|| ಪೂರ್ಣಚಂದ್ರನು ಸಪ್ತಮದಲ್ಲಿದ್ದರೂ ಅಥವಾ ಜಲರಾಶಿ ನವಾಂಶೆಯಲ್ಲಿದ್ದರೂ ಜಲರಾಶಿಯಲ್ಲಿದ್ದ ಬೃಹಸ್ಪತಿಯಿಂದ ನೋಡಲ್ಪಟ್ಟರೂ, ಜಾತಕನ ಪತ್ನಿಯ ಗುಹ್ಯವು ಸದಾರ್ದ್ರವಾಗಿರುವುದು ||೮೫೬||

## ಮೈಥುನೇ ಗುಹ್ಯಾರ್ದ್ರ ಯೋಗಃ

ಶ್ಲೋಕ|| ಪರಮೋಚ್ಚಾಂಶಕೇ ಶುಕ್ರೇ ಜಲರಾಶಿ ಗತೇಪಿವಾ | ಭಾನುನಾ ಸಂಯುತೇ ವಾಪಿ ಮೈಥುನೇತ್ವಾರ್ದ್ರತಾ ಭವೇತ್ ||೮೫೭||ತಾ|| ಶುಕ್ರನು ಪರಮೋಚ್ಚಾಂಶೆಯಲ್ಲಿದ್ದರೂ ಅಥವಾ ಜಲರಾಶಿಯಲ್ಲಿದ್ದರೂ ಸೂರ್ಯನಿಂದ ನೋಡಲ್ಪಟ್ಟರೂ ಕೂಡಿದರೂ ಮೈಥುನಕಾಲದಲ್ಲಿ ಆತನ ಪತ್ನಿಯ ಮರ್ಮ ಸ್ಥಾನವು ಆರ್ದ್ರವಾಗಿರುವುದು ||೮೫೭||

## ಅನಾರ್ದ್ರ ಗುಹ್ಯಯೋಗಃ

ಶ್ಲೋಕ|| ದಾರೇಶೇ ಶುಷ್ಕ ರಾಶಿಸ್ಥೇದಾರೇವಾಶುಷ್ಕ ಸಂಜ್ಞಿತೇ | ಶುಷ್ಕ ಗ್ರಹೇಣ ಸಂಯುಕ್ತೆ ತ್ವನಾರ್ದ್ರಂಗುಹ್ಯ ಮಾದಿಶೇತ್ ||೮೫೮||ತಾ|| ಸಪ್ತಮಾಧಿಪತಿಯು ನಿರ್ಜಲರಾಶಿಯಲ್ಲಿದ್ದರೂ ಸಪ್ತಮರಾಶಿ ನಿರ್ಜಲರಾಶಿಯಾಗಿ ಶುಷ್ಕ ಗ್ರಹವಿದ್ದರೂ ಜಾತಕನ ಪತ್ನಿಯ ಗುಹ್ಯಸ್ಥಾನವು ಯಾವಾಗಲು ಅನಾರ್ದ್ರವಾಗಿರುವುದು ||೮೫೮||

ಶ್ಲೋಕ।। ಪಾಪೇಕ್ಷಿತೇ ಪಾಪಮಧ್ಯೇ ದಾರೇಶೇಪಿ ತಥಾವಿದೇ। ಪಾಪ ದೃಗ್ಯೋಗ ಸಂಜಾತೇಹ್ಯನಾರ್ದ್ರಂ ಗುಹ್ಯಮಾದಿಶೇತ್ ।।೮೫೯।।ತಾ।। ಸಪ್ತಮ ರಾಶಿಯು ಪಾಪ್ಗರಹ ದೃಷ್ಟವಾದರೂ, ಪಾಪಗ್ರಹಗಳ ಮಧ್ಯದಲ್ಲಿ ಸಪ್ತಮರಾಶಿಯು ಪಾಪಗ್ರಹ ದೃಷ್ಟವಾದರೂ, ಪಾಪಗ್ರಹಗಳ ಮಧ್ಯದಲ್ಲಿ ಸಪ್ತಮರಾಶಿಯಿದ್ದರೂ ಸಪ್ತಮಾಧಿಪತಿಯು ಪಾಪಮಧ್ಯದಲ್ಲಿದ್ದರೂ ಪಾಪಗ್ರಹ ದೃಷ್ಟಿಯುಳ್ಳವನಾಗಿದ್ದರೂ ಜಾತಕನ ಪತ್ನಿಯ ಗುಹ್ಯವು ಅನಾದ್ರವವಾಗಿರುವುದು ।।೮೫೯।।

ಶ್ಲೋಕ।। ದಾರಸ್ಥೇ ಪಾಪಖೇಟೇತು ಜಲಸಂಬಂಧ ಸಂಯುತೇ। ಜಲಗ್ರಹೇಣ ಸಂದೃಷ್ಟೇ ತಾದೃಶಂ ಗುಹ್ಯಮಾದಿಶೇತ್ ।।೮೬೦।।ತಾ।। ಸಪ್ತಮಸ್ಥಾನದಲ್ಲಿ ಪಾಪಗ್ರಹವಿದ್ದರೂ ಸಪ್ತಮವು ಜಲರಾಶಿಯಾದರೂ ಜಲಗ್ರಹದಿಂದ ನೋಡಲ್ಪಟ್ಟರೂ ಜಾತಕನ ಪತ್ನಿಯ ಗುಹ್ಯಸ್ಥಾನವು ಅನಾದ್ರವವಾಗಿಯೇ ಇರುವುದು ।।೮೬೦।।

## ಸೂಪದಧ್ಯಾಜ್ಯ ಭೋಜನಯೋಗಃ

ಶ್ಲೋಕ।। ಗುರು ದೃಷ್ಟೇ ಸಪ್ತಮೇಶೇ ಶೋಭನವಾಂಶ ಸಮನ್ವಿತೇ। ಸೌಮ್ಯಾಂಶೇ ಸೌಮ್ಯಸಂದೃಷ್ಟೇ ಸೂಪ ದಧ್ಯಾಜ್ಯ ಭಾಗ್ಭವೇತ್ ।।೮೬೧।।ತಾ।। ಸಪ್ತಮಾಧಿಪತಿಯು ಗುರುವಿನಿಂದ ನೋಡಲ್ಪಟ್ಟರೂ ಶುಭಗ್ರಹನವಾಂಶೆಯಲ್ಲಿದ್ದರೂ ಶುಭಗ್ರಹ ನವಾಂಶೆಯಲ್ಲಿದ್ದು ಶುಭಗ್ರಹ ನೋಡಿದರೂ ಜಾತಕನು ಸೂಪದಧಿ ಘೃತ ಮೊದಲಾದುದ್ದನ್ನು ಭುಜಿಸುವನು ।।೮೬೦।।

ಶ್ಲೋಕ।। ಸಪ್ತಮಸ್ಥೇ ಬುಧೇದೃಷ್ಟೇ ಗುರುಣಾ ಬಲಸಂಯುತೇ। ಭುಕ್ತೀ ಶೇನಾಪಿ ಸಂದೃಷ್ಟೇ ಸೂಪದಧ್ಯಾಜ್ಯಭಾಗ್ಭವೇತ್ ।।೮೬೨।।ತಾ।। ಸಪ್ತಮದಲ್ಲಿ ಬುಧನಿದ್ದು, ಬಲಿಷ್ಠನಾದ ಬೃಹಸ್ಪತಿ ನೋಡಿದರೂ ಭುಕ್ತಿಸ್ಥಾನಾಧಿಪತಿಯಿಂದ ನೋಡಲ್ಪಟ್ಟರೂ, ಜಾತಕನು ಸೂಪ, ದಧಿ, ಘೃತ ಮೊದಲಾದುದ್ದನ್ನು ಭುಜಿಸುವನು ।।೮೬೨।।

## ಕದಾಚಿದ್ದಧಿಸೂಪ ಭೋಜನಯೋಗಃ

ಶ್ಲೋಕ।। ರವೌವಾ ಭೂಮಿಪುತ್ರೇವಾ ಸಪ್ತಮೇಶೇ ಶುಭೇಕ್ಷಿತೇ। ಬುದ್ಧಿ ಸ್ಥಾನಗತೇವಾಪಿ ಕದಾಚಿದ್ದಧಿ ಸೂಪಭಾಕ್ ।।೮೬೩।।ತಾ।। ಸಪ್ತಮಾದಿ ಪತ್ಯವನ್ನು ಪಡೆದ ರವಿಕುಜರು ಶುಭಗ್ರಹದಿಂದ ನೋಡಲ್ಪಟ್ಟರೂ, ಪಂಚಮದಲ್ಲಿದ್ದರೂ, ಕದಾಚಿದ್ದಧಿಸೂಪ ಭೋಜನ ಮಾಡುವನು ।।೮೬೩।।

## ಕ್ಷೀರಾಜ್ಯಭೋಜನ ವರ್ಜ್ಯ ಯೋಗಃ

ಶ್ಲೋಕ।। ಪಾಪೇವಾಪಾಪಮಧ್ಯಸ್ಥೇ ತದೀಶೇ ಪಾಪವೀಕ್ಷಿತೇ। ಕ್ರೂರ ಷಷ್ಠ್ಯಂಶಗೇವಾಪಿ ನಕ್ಷೀರಘೃತ ಸೂಪಭಾಕ್ ।।೮೬೪।।ತಾ।। ಸಪ್ತಮಾಧಿಪತಿಯು

ಪಾಪವೀಕ್ಷಿತನಾಗಿ ಸಪ್ತಮಭಾವವು ಪಾಪಗ್ರಹಮದ್ಯದಲ್ಲಿದ್ದು, ಆ ಅಧಿಪತಿ ಕ್ರೂರಷಷ್ಟ್ಯಂಶಯಲ್ಲಿದ್ದರೆ, ಯಾವಾಗಲೂ ಘೃತ, ಸೂಪ, ಕ್ಷೀರ ಮೊದಲಾದದ್ದನ್ನು ಭಜಿಸಲಾರನು ॥೮೬೪॥

## ಕ್ಷೀರಪಾನಯೋಗಃ

ಶ್ಲೋಕ॥ ಚಂದ್ರಗುರೌವಾ ದಾರೇಶೇಜಲರಾಶ್ಯಂಶ ಸಂಭವೇ । ಜಲಗ್ರಹೇಣ ಸಂದೃಷ್ಟೇ ಕ್ಷೀರಪಾನಾದಿ ಭಾಗ್ಭವೇತ್ ॥೮೬೫॥ತಾ॥ ಸಪ್ತಮಾಧಿಪತ್ಯ ವನ್ನು ಪಡೆದು ಚಂದ್ರಗುರುಗಳು ಜಲರಾಶಿಯ ಅಂಶವನ್ನು ಹೊಂದಿ ಜಲಗ್ರಹದಿಂದ ನೋಡಲ್ಪಟ್ಟರೆ, ಹೆಚ್ಚಾಗಿ ಕ್ಷೀರಪಾನವನ್ನು ಮಾಡುವನು ॥೮೬೫॥

ಶ್ಲೋಕ॥ ಸಪ್ತಮೇಶಸ್ಥಿತಾಂಶೇಶೇ ಶುಭದೃಷ್ಟಿ ಸಮನ್ವಿತೇ । ಶುಭ ಗ್ರಹಾಂಶಕೇ ವಾಪಿ ಗುಡಕ್ಷೀರಾದಿ ಪಾನಭಾಕ್ ॥೮೬೬॥ತಾ॥ ಸಪ್ತಮಾಧಿಪತಿಯಿರುವ ನವಾಂಶಾಧಿಪತಿಯು ಶುಭದೃಷ್ಟಿಯುತನಾಗಿ ಶುಭ ನವಾಂಶೆದಲ್ಲಿದ್ದರೆ, ಗುಡಕ್ಷೀರೆ ಮೊದಲಾದ ಪಾನವನ್ನು ಮಾಡುವನು ॥೮೬೬॥

## ಸರ್ವದಾ ಶರೀರಕೃಶತ್ವ ಯೋಗಃ

ಶ್ಲೋಕ॥ ಸಪ್ತಮೇ ಬಹವಃ ಪಾಪಾ ಷಷ್ಠೇವಾ ರಂಧ್ರಭೇಪಿವಾ ।ಕ್ರೂರ ಷಷ್ಟ್ಯಂಶ ಸಂಯುಕ್ತಾ ಸರ್ವದಾ ಕೃಶಭಾಗ್ಭವೇತ್ ॥೮೬೭॥ತಾ॥ ಸಪ್ತಮ, ಅಷ್ಟಮ ಷಷ್ಠ ಈ ಮೂರುಸ್ಥಾನಗಳಲ್ಲಿ ಎಲ್ಲಿಯಾದರೂ ಬಹುಪಾಪಗ್ರಹಗಳಿದ್ದು ಕ್ರೂರ ಷಷ್ಟ್ಯಂಶೆಯಲ್ಲಿದ್ದರೆ, ಜಾತಕನ ಶರೀರವು ಸರ್ವದಾ ಕೃಶವಾಗಿರುವುದು ॥೮೬೭॥

## ಸರ್ಪದಷ್ಟ ವಧೂಮರಣ ಯೋಗಃ

ಶ್ಲೋಕ॥ ಕುಟುಂಬಸ್ಥಾನಗೋರಾಹುಃ ಕಳತ್ರೇ ಭೌಮ್ಯಸಂಯುತೇ । ಪಾಣಿ ಗ್ರಹೇಚ ತ್ರಿದಿನೇಸರ್ಪದಷ್ಟೇ ವಧೂಮೃತಿಃ ॥೮೬೮॥ತಾ॥ ಕುಟುಂಬ ಸ್ಥಾನದಲ್ಲಿ ರಾಹುಸಪ್ತಮದಲ್ಲಿ ಅಂಗಾರಕನಿದ್ದರೆ ಜಾತಕನಿಗೆ ವಿವಾಹವಾದ ಮೂರನೇ ದಿವಸವೇ ಸರ್ಪದಷ್ಟವಾಗಿ ಪತ್ನೀ ಮರಣವನ್ನು ಹೊಂದುವಳು ॥೮೬೮॥

## ಏಕಾದಶ ವರ್ಷೇ ವಿವಾಹಯೋಗಃ

ಶ್ಲೋಕ॥ ಲಗ್ನಕೇಂದ್ರಗತೇ ಶುಕ್ರೇ ಲಗ್ನೇಶೇಮದರಾಶಿಗೇ ವತ್ಸರೇಕಾದಶೇ ಪ್ರಾಪ್ತೇ ವಿವಾಹಂ ಲಭತೇನರಃ ॥೮೬೯॥ತಾ॥ ಲಗ್ನಕೇಂದ್ರದಲ್ಲಿ ಶುಕ್ರನು ಸಪ್ತಮದಲ್ಲಿ ಲಗ್ನಾಧಿಪತಿ ಇದ್ದರೆ ಜಾತಕನ ಹನ್ನೊಂದನೆ ವರ್ಷದಲ್ಲಿ ವಿವಾಹವಾಗುವುದು ॥೮೬೯॥

## ಸೌಭಾಗ್ಯ ಯೋಗ್ಯಃ

ಶ್ಲೋಕ।। ದಾರಾಧಿಪಃ ಪುಣ್ಯಗ್ರಹೇಣ ಯುಕ್ತೋಃ ದೃಷ್ಟೋಪಿವಾಪೂರ್ಣ ಬಲಃ ಪ್ರಸನ್ನಃ। ಸೌಭಾಗ್ಯಯುಕ್ತೋ ಗುಣವಾನ್ವಭಶ್ಚದಾತಾ ವಿಭೋಗ್ಯಂ ಬಹುಧಾನ್ಯಮಾಹುಃ ।।೮೭೦।।ತಾ।। ಸಪ್ತಮಾಧಿಪತಿಯು ಶುಭಗ್ರಹಯುಕ್ತನಾದರೂ, ನೋಡಲ್ಪಟ್ಟರೂ ಪೂರ್ಣಬಲಿಷ್ಠನಾಗಿ ಶಾಂತನಾಗಿದ್ದರೆ ಜಾತಕನು ಸೌಭಾಗ್ಯಯುಕ್ತನಾಗಿಯೂ, ಗುಣವಂತನೂ, ದಾತನೂ, ಪ್ರಭುವೂ, ಧನಧಾನ್ಯಯುಕ್ತನೂ ಆಗುವನು ।।೮೭೦।।

ಇತಿ ಸಪ್ತಮಭಾವಃ

## ಅಷ್ಟಮಭಾವ ಫಲಂ

ಶ್ಲೋಕ।। ನದ್ಯುತ್ತಾರಾತ್ಯಂತ ವೈಷಮದುರ್ಗಂ ಶಾಸ್ತ್ರಂಚಾಯುಃ ಸಂಕಟೇ ಚೇತಿಸರ್ವಂ। ರಂಧ್ರಸ್ಥಾನೇ ಸರ್ವದಾ ಕಲ್ಪನೀಯಂ ಪ್ರಾಚೀನಾನಾಮಾಜ್ಞಯಾಜಾತಕಜ್ಞೈಃ ।।೮೭೧।।ತಾ।। ಅಷ್ಟಮಭಾವದಿಂದ ತಿಳಿಯಬೇಕಾದ ವಿಷಯಗಳು ಮುಂಚೆಯೇ ಹೇಳಲ್ಪಟ್ಟಿರುತ್ತೆ. ಆದರೆ ಭಾವಫಲಪ್ರಕರಣದಲ್ಲಿ ಅಷ್ಟಮಭಾವ ವಿಷಯವು ಸಂಕ್ಷೇಪ್ತವಾಗಿ ಹೇಳಲ್ಪಟ್ಟಿರುತ್ತೆ. ಆದರೆ ಭಾವಫಲಪ್ರಕರಣದಲ್ಲಿ ಅಷ್ಟಮಭಾವ ವಿಷಯವು ಸಂಕ್ಷೇಪವಾಗಿ ಹೇಳಲ್ಪಟ್ಟಿರುತ್ತೆ. ।।೮೭೧।। ನದಿಯನ್ನು ದಾಟುವಿಕೆ, ಬಹು ಕಷ್ಟವಾದ ದುರ್ಗವನ್ನು ದಾಟುವಿಕೆ, ಶಸ್ತ್ರ, ಆಯುಷ್ಯ, ಸಂಕಟ ಈ ವಿಷಯ ಗಳನ್ನು ಅಷ್ಟಮಭಾವದಿಂದ ನೋಡಿಕೊಳ್ಳತಕ್ಕದ್ದು. ಆದರೆ ಈ ಪುಸ್ತಕದಲ್ಲಿ ಬಾಲಾರಿಷ್ಟ ಪ್ರಕರಣ, ಆಯುರ್ದಾಯ ಪ್ರಕರಣ, ನೈರ್ಯಾಣಿಕ ಪ್ರಕರಣದಲ್ಲಿ ವಿಸ್ತಾರವಾಗಿ ಹೇಳಿರುವುದರಿಂದ ಇಲ್ಲಿ ಹೇಳಲಿಲ್ಲ ।।೮೭೧।।

## ದೀರ್ಘಾಯುರ್ಯೋಗಃ

ಶ್ಲೋಕ।। ಸ್ವಕ್ಷೇತ್ರಗ್ರೇವಾ ಯದಿರಂಧ್ರನಾಥೇ ದೀರ್ಘಾಯುರಸ್ತೀತಿವದಂತಿ ಸಂತಃ। ಮಂದೇರವಾಚಿಂತ್ಯಮಶೇಷಮಾಯುಃ ಸ್ವಕ್ಷೇತ್ರ ಮಿತ್ರೋಚ್ಛ ಗೃಹ ಸ್ಥಿತೇನ ।।೮೭೨।।ತಾ।। ಅಷ್ಟಮಾಧಿಪತಿ ಸ್ವಕ್ಷೇತ್ರದಲ್ಲಿದ್ದರೆ ದೀರ್ಘಾಯುರ್ಯೋಗ।। ಶನಿಯು ಸ್ವಕ್ಷೇತ್ರ, ಉಚ್ಛಮಿತ್ರ, ಮೂಲತ್ರಿಕೋಣ ಕ್ಷೇತ್ರಗಳಲ್ಲಿದ್ದರೆ ದೀರ್ಘಾಯುರ್ಯೋಗ ಉಂಟಾಗುವುದು ।।೮೭೨।।

ಶ್ಲೋಕ।। ರಂಧ್ರೇಶ್ವರೇಣಾಪಿಯುತೇ ವಿಲಗ್ನನಾಥೇ ರಿಪೌವಾ ವ್ಯಯರಾಶಿ ಯುಕ್ತೇ । ಷಷ್ಠಾಂತ್ಯವೇವಾಯದಿ ಲಗ್ನಯುಕ್ತೇ ದೀರ್ಘಾಯುರಸ್ಯೇತಿ ಶುಭೇಕ್ಷಿತಶ್ಚೇತ್ ।।೮೭೩।।ತಾ।। ಅಷ್ಟಮಾಧಿಪತಿಯೊಡಗೂಡಿದ ಲಗ್ನಾಧಿಪತಿಯು ಷಷ್ಠದಲ್ಲಿದ್ದರೂ, ದ್ವಾದಶದಲ್ಲಿದ್ದರೂ, ಷಷ್ಠಾಧಿಪತಿಯಾಗಲೀ, ವ್ಯಯಾಧಿಪತಿಯಾಗಲೀ, ಲಗ್ನದಲ್ಲಿದ್ದು ಶುಭವೀಕ್ಷಿತನಾದರೆ ದೀರ್ಘಾಯುರ್ಯೋಗ ಉಂಟಾಗುವುದು ।।೮೭೩।।

ಶ್ಲೋಕ।। ಕರ್ಮೇಶ್ವರೇಣಾಪಿ ವಿಚಿಂತ್ಯಮಾಯುಃ ದೀರ್ಘಾ ಸುಹೃತ್ಸ್ವೋಚ್ಚ ಯುತೇನ ತೇನ। ಕೇಂದ್ರಸ್ಥಿತೌ ಕರ್ಮವಿಲಗ್ನನಾಥೌ ತಥೈವ ದೀರ್ಘಾಯುರುದಾ ಹರಂತಿ ।।೮೭೪।।ತಾ।। ದಶಮಾಧಿಪತಿಯು ಮಿತ್ರಸ್ವೋಚ್ಚ ಸ್ವಕ್ಷೇತ್ರಗಳಲ್ಲಿದ್ದರೆ, ಆ ದಶಮಾಧಿಪತಿಯಿಂದ ದೀರ್ಘಾಯುರ್ಯೋಗವನ್ನು ತಿಳಿಯತಕ್ಕದ್ದು. ದಶಮಾಧಿಪತಿ ಲಗ್ನಾಧಿಪತಿಗಳಿಬ್ಬರೂ ಜನ್ಮಲಗ್ನಕ್ಕೆ ಕೇಂದ್ರಸ್ಥಾನಗಳಿದ್ದರೆ ದೀರ್ಘಾಯುರ್ಯೋಗ ।।೮೭೪।।

ಶ್ಲೋಕ।। ಪ್ರೋಕ್ತೈರ್ಗುಣ್ಯೈ ರ್ಧ್ಯೋಮಚರೈಸ್ತ್ರಿಭಿರ್ವಾ ಸಭಾನುಜೈಃ ಕೇಂದ್ರಗತೈ ಸ್ತಥೈವ । ಸ್ವಕ್ಷೇತ್ರಕೋಣಾದಿಗತೈರ್ವಿಶೇಷಾದ್ವದಂತಿ ದೀರ್ಘಾಯುರು ದಾಹರಂತಿ ।।೮೭೫।।ತಾ।। ಮೇಲೆ ಹೇಳಲ್ಪಟ್ಟ ಜನ್ಮಲಗ್ನಾಧಿಪತಿ, ಅಷ್ಟಮಾಧಿಪತಿ, ದಶಮಾಧಿಪತಿ, ಈ ಮೂರುಗ್ರಹಗಳು ಸೂರ್ಯನ ಸಂಗಡ ಕೇಂದ್ರಗಳಲ್ಲಿದ್ದರೆ, ದೀರ್ಘಾಯುರ್ಯೋಗ ಆ ಲಗ್ನ, ಅಷ್ಟಮ, ದಶಮಾಧಿಪತಿಗಳು ಉಚ್ಚ ಮೂಲ, ತ್ರಿಕೋಣ ಸ್ವಕ್ಷೇತ್ರಗಳಲ್ಲಿದ್ದರೆ ಧೀರ್ಘಾಯುರ್ಯೋಗ ।।೮೭೫।।

## ಪೂರ್ಣಾಯುರ್ಯೋಗ

ಶ್ಲೋಕ।। ಚತುರಶ್ರೇ ಶುಭೈರ್ಯುಕ್ತೇ ಲಗ್ನೇಶೇ ಶುಭಸಂಯುತೇ । ಗುರುಣಾ ದೃಷ್ಟಿಸಂಯುಕ್ತೇ ಪೂರ್ಣಮಾಯುರ್ವಿನಿರ್ದಿಶೇತ್ ।।೮೭೬।।ತಾ।। ಕೇಂದ್ರಸ್ಥಾನಗಳಲ್ಲಿ ಶುಭಗ್ರಹಗಳಿದ್ದು, ಲಗ್ನಾಧಿಪತಿ ಶುಭಗ್ರಹಯುತನಾಗಿ ಗುರುದೃಷ್ಟಿಯುಕ್ತನಾಗಿದ್ದರೆ ಪೂರ್ಣಾಯುರ್ಯೋಗ ।।೮೭೬।।

ಶ್ಲೋಕ।। ರಂಧ್ರಾಧಿಪೇ ವಿಲಗ್ನಸ್ಥೇ ಗುರುಶುಕ್ರನಿರೀಕ್ಷಿತೇ । ಲಗ್ನೇಶೇ ಕೇಂದ್ರಭಾವೇವಾ ಪೂರ್ಣಮಾಯುರ್ವಿನಿರ್ದಿಶೇತ್ ।।೮೭೭।।ತಾ।। ಲಗ್ನಾಧಿಪತಿ ಕೇಂದ್ರದಲ್ಲಿದ್ದು ಅಷ್ಟಮಾಧಿಪತಿಯು ಲಗ್ನದಲ್ಲಿದ್ದು ಗುರುಶುಕ್ರರಿಂದ ನೋಡಲ್ಪಟ್ಟರೆ, ಜಾತಕನು ದೀರ್ಘಾಯುರ್ಯೋಗವುಳ್ಳವನು ।।೮೭೭।।

## ಮಧ್ಯಾಯುರ್ಯೋಗಃ

ಶ್ಲೋಕ।। ಬಲಹೀನೇವಿಲಗ್ನೇಶೇ ಜೀವೇಕೇಂದ್ರತ್ರಿಕೋಣಗೇ । ಷಷ್ಠಾಷ್ಟಮ ವ್ಯಯೇ ಪಾಪಮಧ್ಯ ಮಾಯುರುದಾಹೃತಂ ।।೮೭೮।।ತಾ।। ಲಗ್ನಾಧಿಪತಿ ಬಲಹೀನನಾಗಿ ಗುರು ಕೇಂದ್ರ ತ್ರಿಕೋಣಗಳಲ್ಲಿದ್ದು ೬-೮-೧೨ ರಲ್ಲಿ ಪಾಪಗ್ರಹ ಗಳಿದ್ದರೆ ಮಧ್ಯಾಯುರ್ಯೋಗ ।।೮೭೮।।

ಶ್ಲೋಕ।। ಶುಭಾಃ ಕೇಂದ್ರತ್ರಿಕೋಣಸ್ಥಾಶ್ಚನೌ ಬಲಸಮನ್ವಿತೇ । ಷಷ್ಠೇ ವಾಪ್ಯಷ್ಟಮೇ ಪಾಪೇ ಮಧ್ಯಮಾಯುರುದಾಹೃತಂ ।।೮೭೦।।

ತಾ॥ ಶುಭಗ್ರಹಗಳು ಕೇಂದ್ರತ್ರಿಕ್ಕೋನಗಳಲ್ಲಿದ್ದು ಶನಿಯು ಬಲಿಷ್ಠನಾಗಿದ್ದು ೬-೮ರಲ್ಲಿ ಪಾಪಗ್ರಹಗಳಿದ್ದರೆ ಮಧ್ಯಾಯುರ್ಯೋಗ ॥೮೭೯॥

ಶ್ಲೋಕ॥ ಲಗ್ನತ್ರಿಕೋಣ ಕೇಂದ್ರೇವಾ ಮಧ್ಯಮಾಯಾಯಶ್ಚಮಿಶ್ರಿತೇ॥

ತಾ॥ ಲಗ್ನದಿಂದ ಕೇಂದ್ರ ತ್ರಿಕೋನಗಳಲ್ಲಿ ಶುಭ ಪಾಪಗ್ರಹಗಳಿದ್ದರೆ ಮಧ್ಯಾ ಯುರ್ಯೋಗ ॥೮೮೦॥

## ಅಲ್ಪಾಯುರ್ಯೋಗಃ

ಶ್ಲೋಕ॥ ಷಷ್ಠಾಷ್ಟಮವ್ಯಯೇಪಾಪೇ ಲಗ್ನೇಶೇ ದುರ್ಬಲೇಸತಿ। ಅಲ್ಪಾಯುರನಪತ್ಯೋವಾ ಶುಭದೃಗ್ಯೋಗ ವರ್ಜಿತೇ ॥೮೮೦॥ತಾ॥ ಲಗ್ನಾಧಿಪತಿ ದುರ್ಬಲನಾಗೀ ೬-೮-೧೨ರಲ್ಲಿ ಪಾಪ ಗ್ರಹಗಳಿದ್ದು ಶುಭಗ್ರಹ ದೃಷ್ಟಿಯಿಲ್ಲದಿದ್ದರೆ ಅಲ್ಪಾಯುರ್ಯೋಗ ॥೮೮೧॥

ಶ್ಲೋಕ॥ ಅಲ್ಪಾಯುರ್ದಿನನಾಥಸ್ಯ ಶತ್ರೌ ಲಗ್ನಾಧಿಪೇ ಸತಿ ॥ತಾ॥ ಲಗ್ನಾಧಿ ಪತಿಯುಸೂರ್ಯನಿಗೆ ಶತ್ರುವಾಗಿದ್ದರೆ ಜಾತಕನಿಗೆ ಅಲ್ಪಾಯುರ್ಯೋಗವು ॥೮೮೧॥

## ಆಯುರ್ಯೋಗ ಪ್ರಮಾಣ

ಶ್ಲೋಕ॥ ಆಯುರ್ಯೋಗಾ ಸ್ತ್ರಿಧಾಪ್ರೋಕ್ತಾ ಸ್ವಲ್ಪ ಮಧ್ಯಶ್ಚಿರಾಯುಷಃ॥ ದ್ವಾತ್ರಿಂಶತ್ಪೂರ್ವ ಮಲ್ಪಾಯುಧರ್ಮಧ್ಯಮಾಯುಸ್ತತೋಭವೇತ್॥ ಸಪ್ತತ್ಯಾ ಪ್ರಾಕ್ತತೋನೂನಂ ಪೂರ್ಣಮಾಯುರ್ವಿನಿರ್ದಿಶೇತ್ ॥೮೮೨॥ತಾ॥ ಆಯುರ್ಯೋಗವು ಮೂರು ವಿಧವಾಗಿರುವುದು ಅಲ್ಪಾಯುರ್ಯೋಗ ೩೨ ವರ್ಷದವರಿಗೆ, ೭೦ ವರ್ಷದವಳಗೆ ಮಧ್ಯಾಯುರ್ಯೋಗ, ೭೦ ಅನಂತರ ಪೂರ್ಣಾಯುರ್ಯೋಗವೆಂದು ತಿಳಿಯತಕ್ಕದ್ದು ॥೮೮೨॥

ಶ್ಲೋಕ॥ ಅಲ್ಪಾಯುರ್ಯೋಗ ಜಾತಾನಾಂ ವಿಪತ್ಪಾಕೋ ಮೃತಿಪ್ರದಃ॥ ಮಧ್ಯಮೇ ಪ್ರತ್ಯರಿದಶಾಮೃತಿಂದದ್ಯಾ ದ್ವಿಶೇಷತಃ ॥೮೮೩॥ ವಧಭೇಶ ದಶಾ ಕಷ್ಟಾ ಪೂರ್ಣಾಯುರ್ಯೋಗ ಸಂಜ್ಞಕೇ । ಯೋಗಾಯುರಪಿ ನಿಶ್ಚಿತ್ಯ ಜಾತಸ್ಯೈವ ವದೇ ದ್ಬುಧಃ॥೮೮೪॥ ಅಲ್ಪಾಯುರ್ಯೋಗದಲ್ಲಿ ಹುಟ್ಟಿದವರಿಗೆ ವಿಪತ್ತಾರಾದಶೆಯಲ್ಲಿ ಮರಣ ಸಂಭವಿಸುವುದು ಮಧ್ಯಾಯರ್ಯೋಗದಲ್ಲಿ ಹುಟ್ಟಿದವರಿಗೆ ಪ್ರತ್ಯಕ್ತಾರಾ ದಶೆಯಲ್ಲಿ ಮರಣ ಸಂಭವಿಸುವುದು ಈ ಪ್ರಕಾರ ಜಾತಕನಿಗೆ ಆಯುರ್ಯೋಗವನ್ನು ನಿರ್ಣಯಮಾಡತಕ್ಕದ್ದು ॥೮೮೪॥

## ಇತ್ಯಷ್ಟಮ ಭಾವಃ

### ಭಾಗ್ಯಭಾವಪ್ರಾರಂಭಃ

## ಭಾಗ್ಯ ಭಾವವಿಚಾರವಿಷಯಾಣಿ

ಶ್ಲೋಕ।। ಧರ್ಮಕ್ರಿಯಾ ಯಾಂಹಿ ಭವೇತ್ಪ್ರವೃತ್ತಿರ್ಭಾಗ್ಯೋಪಪತ್ತಿರ್ವಿಮಲಂಚ ಶೀಲಂ । ತೀರ್ಥಪ್ರಯಾಣಂ ಪ್ರಣಯಃ ಪುರಾಣೈಃ ಪುಣ್ಯಾಲಯೇ ಸರ್ವಮಿದಂ ಪ್ರದಿಷ್ಟಮ್ ।।೮೮೫।।ತಾ।। ಧರ್ಮಕರ್ಮಗಳಲ್ಲಿ ಪ್ರವೃತ್ತಿ ಭಾಗ್ಯಪ್ರಾಪ್ತಿ ಶುದ್ಧಸ್ವಭಾವ, ತೀರ್ಥಯಾತ್ರೆ, ಸ್ನೇಹ, ಪುಣ್ಯಸ್ಥಾನ ಈ ಸರ್ವ ವಿಷಯಗಳು ಭಾಗ್ಯಸ್ಥಾನದಿಂದ ತಿಳಿಯತಕ್ಕದ್ದು ।।೮೮೫।।

ಶ್ಲೋಕ।। ವಿಹಾಯಸರ್ವಂ ಗಣಕೈರ್ವಿಚಿಂತ್ಯಂ ಭಾಗ್ಯಾಲಯಂ ಕೇವಲ ಮತ್ರಯತ್ನಾತ್ ।। ಆಯುಶ್ಚ ಮಾತಾಚ ಪಿತಾಂಚ ವಂಶೋಭಾಗ್ಯಾನ್ವಿತೇನ್ಯೆವ ಭವಂತಿ ಧನ್ಯಾಃ ।।೮೮೬।।ತಾ।। ಈ ನವಮ ಸ್ಥಾನದಿಂದ ಸರ್ವಜ್ಯೋತಿಷ್ಕರೂ ಸಮಸ್ತ ವಿಚಾರವನ್ನು ಬಿಟ್ಟು ಕೇವಲ ಆಯುಸ್ಸು, ಮಾತಾಪಿತೃಭಾಗ್ಯ ವಿಚಾರವನ್ನೇ ಮಾಡಬೇಕು. ಕಾರಣವೇನೆಂದರೆ-ತಾಯಿತಂದೆ ಉತ್ತಮ ವಂಶಭಾಗ್ಯ ಇವುಗಳು ಯಾರಿಗೆ ಇರುತ್ತದೋ ಅವರೇ ಧನ್ಯರೆಂದು ತಿಳಿಯತಕ್ಕದ್ದು ।।೮೮೬।।

### ಭಾಗ್ಯಯೋಗಃ

ಶ್ಲೋಕ।। ಮೂರ್ತೇಶ್ಚಾಪಿ ನಿಶಾಪತೇಶ್ಚನವಮಂ ಭಾಗ್ಯಾಲಯೇ ಕೀರ್ತಿತಂ। ತತ್ತತ್ಸ್ವಾಮಿಯುತೇಕ್ಷಿತಂ ಪ್ರಕುರತೇ ಭಾಗ್ಯಂ ಸ್ವದೇಶೋದ್ಭವಂ ।। ಚೇದನ್ಯೇ ವಿಷಯಾಂತರೇತ್ರ ಶುಭದಾಃ ಸ್ವೋಚ್ಚಾಧಿಪಾಃಸರ್ವದಾ। ಕುರ್ಯುಭಾರ್ಗ್ಯಮ ಸಾಧವೋತಿ ವಿಬಲಾ ದುಃಖೋಪಲಬ್ಧಿಂಪರಾಂ ।।೮೮೭।।ತಾ।। ಲಗ್ನದಿಂದಾಗಲೀ, ಚಂದ್ರನಿಂದಾಗಲಿ, ನವಮಸ್ಥಾನವು ಭಾಗ್ಯಸ್ಥಾನವೆಂದು ವಿದ್ವಾಂಸರು ಹೇಳಿರುತ್ತಾರೆ ಈ ಎರಡು ಸ್ಥಾನಗಳು ಆ ಅಧಿಪತಿಗಳಿಂದ ಯುಕ್ತವಾದರೂ ಅಥವಾ ಆ ಅಧಿಪತಿ ಗಳಿಂದ ನೋಡಲ್ಪಟ್ಟರೂ, ಆ ಪುರುಷನು ಸ್ವದೇಶದಲ್ಲಿ ಭಾಗ್ಯವಂತನಾಗುವನು. ಮತ್ತು ಆ ಸ್ಥಾನದಲ್ಲಿ ಶುಭಗ್ರಹವಿದ್ದರೂ, ಅಥವಾ ಶುಭಗ್ರಹನೋಡಿದರೂ ಅನ್ಯದೇಶಕ್ಕೆ ಹೋಗಿ ಭಾಗ್ಯವಂತನಾಗುವನು ಮತ್ತು ಆ ಗ್ರಹಗಳು ಸ್ವಕ್ಷೇತ್ರದಲ್ಲಿದ್ದರೂ ಆ ಸ್ಥಾನಕ್ಕೆ ಅಧಿಪತಿಯಾಗಿ ಉಚ್ಚನಾಗಿದ್ದರೂ, ಸರ್ವದೇಶದಲ್ಲೂ ಸರ್ವಕಾಲದಲ್ಲೂ ಭಾಗ್ಯದಾಯಕನಾಗುವನು ಮತ್ತು ಭಾಗ್ಯಸ್ಥಾನದಲ್ಲಿ ಪಾಪಗ್ರಹವಿದ್ದು ನಿರ್ಬಲನಾಗಿದ್ದರೆ ಅತಿ ದುಃಖದಾಯಕನಾಗುವನು ।।೮೮೮।।

ಶ್ಲೋಕ।। ಭಾಗ್ಯೇಶ್ವರೋ ಭಾಗ್ಯಮತೋಽಸ್ತಿ ಕಿಂವಾ ಸುಸ್ಥಾನಗಃ ಸಾರವಿರಾಜಮಾನಃ। ಭಾಗ್ಯಶ್ರಿತಃ ಕೋಽಸ್ತಿವಿಚಾರ್ಯಸರ್ವ ಮತ್ಯಲ್ಪ ಮಲ್ಪಂ ಪರಿಕಲ್ಪನೀಯಂ ।।೮೮೯।।ತಾ।। ಭಾಗ್ಯಸ್ಥಾನಾಧಿಪತಿ ಭಾಗ್ಯಸ್ಥಾನದಲ್ಲಿದ್ದರೂ, ಅಥವಾ ಇತರ ಶುಭಸ್ಥಾನದಲ್ಲಿದ್ದರೂ, ಬಲವಂತನಾಗಿದ್ದರೆ ಅಥವಾ ಭಾಗ್ಯಸ್ಥಾನದಲ್ಲಿ ಶುಭಗ್ರಹವಿದ್ದರೆ ಶುಭಫಲ, ಅಶುಭಗ್ರಹವಿದ್ದರೆ ಅಶುಭಫಲ, ಇವುಗಳ ಬಲಾಬಲಗಳನ್ನು ವಿಚಾರಮಾಡಿ ಫಲವನ್ನು ತಿಳಿಯತಕ್ಕದ್ದು ।।೮೮೯।।

ಶ್ಲೋಕ।। ತನುತ್ರಿಸೂನೋ ಪಗತೋ ಗ್ರಹಶ್ಚೇ ದ್ಯೋವಾಧಿವೀರ್ಯೋ ನವಮಂ ಪ್ರಪಶ್ಯೇತ್। ಯಸ್ಯಪ್ರಸೂತೌ ಸತುಭಾಗ್ಯಶಾಲೀವಿಲಾಸಶೀಲೋ ಬಹುಲಾರ್ಥಯುಕ್ತ ।।೮೯೦।।ತಾ।। ಲಗ್ನ, ತೃತೀಯ ಮತ್ತು ಪಂಚಮಸ್ಥಾನಗಳಲ್ಲಿ ಯಾವಗ್ರಹವಿದ್ದರೂ, ಆ ಗ್ರಹ ಬಲಿಷ್ಠವಾಗಿದ್ದು ಭಾಗ್ಯಸ್ಥಾನವನ್ನು ನೋಡುತ್ತಲಿದ್ದರೆ, ಆ ಪುರುಷನು ಅಧಿಕ ಭಾಗ್ಯವಂತನೂ, ವಿಲಾಸಪುರುಷನು, ಪುಷ್ಕಳಸಂಪತ್ತುಳ್ಳವನೂ ಆಗುವನು ।।೮೯೦।।

ಶ್ಲೋಕ।। ಚೇದ್ಭಾಗ್ಯಗಾಮೀ ಖಚರಃಸಗೇಹ್ಯೇ ಸೌಮ್ಯೇಕ್ಷಿತೋ ಯಸ್ಯ ನರಸ್ಯಸೂತೌ। ಭಾಗ್ಯಾಧಿ ಶಾಲೀ ಸ್ವಕುಲಾವತಂಸೋ ಹಂಸೋ ಯಥಾಮಾನಸ ರಾಜಮಾನಃ ।।೮೯೧।।ತಾ।। ಭಾಗ್ಯಸ್ಥಾನದಲ್ಲಿದ್ದ ಗ್ರಹ ಸ್ವಕ್ಷೇತ್ರದಲ್ಲಿದ್ದು ಸೌಮ್ಯ ಗ್ರಹದಿಂದ ನೋಡಲ್ಪಟ್ಟರೆ, ಆ ಪುರುಷನು ಯಾವ ಪ್ರಕಾರ ಹಂಸವು ಮಾನಸ ಸರೋವರದಲ್ಲಿ ಶೋಭಿಸುವುದೋ ಆ ಪ್ರಕಾರ ತನ್ನ ವಂಶದಲ್ಲಿ ಅತಿಶಯ ಭಾಗ್ಯವಂತನಾಗಿ ಶ್ರೇಷ್ಠನಾಗಿ ಪ್ರಕಾಶಿಸುವನು ।।೮೯೧।।

ಶ್ಲೋಕ।। ಪೂರ್ಣೇಂದು ಯುಕ್ತೌ ರವಿಭೂಮಿಪುತ್ರೌ ಭಾಗ್ಯಸ್ಥಿತೌ ಸತ್ವ ಸಮನ್ವಿತೌಚ । ವಂಶಾನುಮಾನಾತ್ ಸಚಿವಂ ನೃಪಂವಾ ಕುರ್ವಂತಿತೇ ಸೌಮ್ಯ ದೃಶಂವಿಶೇಷಾತ್ ।।೮೯೨।।ತಾ। ಶನಿ ಮಂಗಳರು ಪೂರ್ಣಚಂದ್ರಯುಕ್ತರಾಗಿ ಭಾಗ್ಯಸ್ಥಾನದಲ್ಲಿ ಬಲಿಷ್ಠರಾಗಿದ್ದರೆ ಆ ಪುರುಷನು ವಂಶಾನು ವಂಶವಾಗಿ ರಾಜನ ಮಂತ್ರಿಯಾಗುವನು ಅಥವಾ ರಾಜನಾಗುವನು ಮತ್ತು ವಿಶೇಷವಾಗಿ ಸೌಮ್ಯದೃಷ್ಟಿ ಉಳ್ಳವನೂ ಆಗುವನು ।।೮೯೨।।

ಶ್ಲೋಕ।। ಸ್ವೋಚ್ಚೋಪಗೋ ಭಾಗ್ಯಗೃಹೇ ನಭೋಗೋ ನರಸ್ಯಯೋಗಂ ಕುರುತೇ ಸುಲಕ್ಷ್ಮಾ । ಸೌಮ್ಯೇಕ್ಷಿತೋ ಸೌಯದಿಸೌಮ್ಯ ಪಾಲಂ ದಂತಾವ ಲೋತ್ಕೃಷ್ಟ ವಿಲಾಸಶೀಲಃ ।।೮೯೩।।ತಾ।। ಜನ್ಮಕಾಲದಲ್ಲಿ ನವಮಸ್ಥಾನದಲ್ಲಿ ಉಚ್ಚ ಗ್ರಹವಿದ್ದು ಶುಭಗ್ರಹದಿಂದ ನೋಡಲ್ಪಟ್ಟರೆ ಆ ಪುರುಷನನ್ನು ಪೂರ್ಣ ಧನವಂತನನ್ನಾಗಿಯೂ ಮತ್ತು ಗಜಾಂತ ಐಶ್ವರ್ಯವಂತನಾಗಿಯೂ ಮಾಡುವುದು ।।೮೯೩।।

## ಬಹು ಭಾಗ್ಯ ಯೋಗಃ

ಶ್ಲೋಕ।। ಭಾಗ್ಯಸ್ಥಿತೇ ವಾಹನರಾಶಿ ನಾಥೇ ಶುಕ್ರೇಚ ಜೀವೇ ಶುಭರಾಶಿ ಯುಕ್ತೇ । ಭಾಗ್ಯಾಧಿಪೇ ಕೋಣಚತುಷ್ಟಯೇವಾ ಬಹುತ್ವದೇಶಾ ಭರಣಂಚಯಾನಂ ।।೯೪।।ತಾ।। ಭಾಗ್ಯಸ್ಥಾನದಲ್ಲಿ ಚತುರ್ಥಸ್ಥಾನಾಧಿತಿಯು ಇದ್ದು ಶುಕ್ರ ಬೃಹಸ್ಪತಿಗಳು ಶುಭರಾಶಿಯಲ್ಲಿದ್ದು ಭಾಗ್ಯಾಧಿಪತಿ ಕೇಂದ್ರ ತ್ರಿಕೋಣಗಳಲ್ಲಿದ್ದರೆ ಬಹುದೇಶದ ಆಭರಣಗಳೂ ವಾಹನಗಳೂ ಉಳ್ಳವನಾಗುವನು ।।೯೪।।

## ಪಿತೃಭಾಗ್ಯಯೋಗಃ

ಶ್ಲೋಕ।। ಭಾಗ್ಯೇಶೇ ಬಲಸಂಯುಕ್ತೇ ಭಾಗ್ಯೇ ಬೃಗು ಸಮನ್ವಿತೇ । ಲಗ್ನಾತ್ಕೇಂದ್ರ ಗತೇಜೀವೇ ಪಿತೃಭಾಗ್ಯ ಸಮನ್ವಿತಃ ।।೯೫।।ತಾ।। ಭಾಗ್ಯಾಧಿಪತಿ ಬಲಯುಕ್ತನಾಗಿ ಭಾಗ್ಯಸ್ಥಾನದಲ್ಲಿ ಶುಕ್ರನಿದ್ದು ಲಗ್ನದಿಂದ ಕೇಂದ್ರಗಳಲ್ಲಿ ಗುರುವಿದ್ದರೆ ಪಿತೃಭಾಗ್ಯವುಳ್ಳವನಾಗುವನು ।।೯೫।।

ಶ್ಲೋಕ।। ಭಾಗ್ಯೇಶೇ ಕೇಂದ್ರಭಾವಸ್ಥೇ ಗುರುಣಾಚಸಮನ್ವಿತೇ। ತತ್ಪಿಕಾ ವಾಹನೈರ್ಯುಕ್ತೋ ರಾಜಾವಾ ತತ್ಸಮೋಪವಾ ।।೯೬।।ತಾ।। ಭಾರ್ಯಧಿಪತಿ ಕೇಂದ್ರ ಭಾವದಲ್ಲಿದ್ದು ಬೃಹಸ್ಪತಿಯಿಂದ ನೋಡಲ್ಪಟ್ಟರೆ ಜಾತಕನ ತಂದೆಯು ರಾಜನಾದ ಅಥವಾ ತತ್ಸಮನಾದರೂ ಆಗುವನು ।।೯೬।।

## ಕೀರ್ತಿಮತ್ಪಿತೃ ಯೋಗಃ

ಶ್ಲೋಕ।। ಭಾಗ್ಯೇಶೇ ಕರ್ಮಭಾವಸ್ಥೇ ಕರ್ಮೇಶೇ ಭಾಗ್ಯರಾಶಿಗೇ । ಕರ್ಮೇಶೇಚ ಧನಾಢ್ಯಶ್ಚ ಕೀರ್ತಿಮಾಂಸ್ತತ್ಪಿತಾಭವೇತ್ ।।೯೭।।ತಾ।। ಭಾಗ್ಯಾಧಿಪತಿ ೧೦ ರಲ್ಲೂ ಕರ್ಮಾಧಿಪತಿ ಭಾಗ್ಯದಲ್ಲೂ ಅನ್ಯೋನ್ಯಪರಿವರ್ತನವಾಗಿದ್ದರೆ ಜಾತಕನ ತಂದೆಯು ಧನವಂತನೂ ಕೀರ್ತಿವಂತನೂ ಆಗುವನು ।।೯೭।।

ಶ್ಲೋಕ।। ಪರಮೋಚ್ಚಾಂಶಗೇ ಸೂರ್ಯೇ ಭಾಗ್ಯೇಶೇ ಲಾಭಸಂಸ್ಥಿತೇ । ಧರ್ಮಿಷ್ಠೋನೃಪವಾತ್ಸಲ್ಯಃ ಪಿತೃಪುಣ್ಯೋ ಭವೇನ್ನರಃ ।।೯೮।।ತಾ।। ಪರಮೋಚ್ಚಾಂಶೆಯಲ್ಲಿ ಸೂರ್ಯನಿದ್ದು ಭಾಗ್ಯಾಧಿಪತಿ ಲಾಭದಲ್ಲಿದ್ದರೆ ಜಾತಕನು ಧರ್ಮಿಷ್ಟನಾಗಿರುವನು ಮತ್ತು ಆತನ ತಂದೆಯು ನೃಪಪ್ರೀತಿಯುಳ್ಳವನು ಪುಣ್ಯವಂತನೂ ಆಗುವನು ।।೯೮।।

## ಪಿತೃನಿರ್ಧನ ಯೋಗಃ

ಶ್ಲೋಕ।। ಭಾಗ್ಯಸ್ಥಾನಾದ್ದ್ವಿತೀಯೇವಾ ಸುಖೇಭೌಮ ಸಮನ್ವಿತೇ । ಭಾಗ್ಯೇಶೇ ನೀಚರಾಶಿಸ್ಥೇ ಪಿತೃನಿರ್ಧನವಿವಸಃ ।।೯೯।।ತಾ।। ಭಾಗ್ಯಸ್ಥಾನದಿಂದ ದ್ವಿತೀಯ-

ದಲ್ಲಾಗಲೀ ಚತುರ್ಥದಲ್ಲಾಗಲೀ ಅಂಗಾರಕನಿದ್ದು ಭಾಗ್ಯಾಧಿಪತಿ ನೀಚನಾಗಿದ್ದರೆ ಜಾತಕನ ತಂದೆಯು ನಿರ್ಧನನಾಗುವನು ॥೮೯೯॥

## ಪಿತೃದೀರ್ಘಾಯುರ್ಯೋಗಃ

ಶ್ಲೋಕ॥ ಭಾಗ್ಯೇಶೇ ಪರಮೋಚ್ಚಸ್ಥೇ ಭಾಗ್ಯಾಂಶೇಜೀವಸಂಯುತೇ। ಲಗ್ನಾಚ್ಚ ತುಷ್ಟಯೇ ಶುಕ್ರೇಪಿತಾ ದೀರ್ಘಾಯುರಾದಿಶೇತ್ ॥೯೦೦॥ತಾ॥ ಭಾಗ್ಯಾಧಿಪತಿ ಪರಮೋಚ್ಚದಲ್ಲಿದ್ದು ಭಾಗ್ಯಾಂಶೆಯಲ್ಲಿ ಗುರುವಿದ್ದು ಲಗ್ನದಿಂದ ೪-೭-೧೦ರಲ್ಲಿ ಎಲ್ಲಿ ಯಾದರೂ ಶುಕ್ರನಿದ್ದರೆ ಜಾತಕನ ತಂದೆಯು ದೀರ್ಘಾಯುವಾಗಿರುವನು ॥೯೦೦॥

## ಪಿತೃಸೌಖ್ಯ ಯೋಗಃ

ಶ್ಲೋಕ॥ ಪಿತೃಸ್ಥಾನೇಶ್ವರೇ ಸೌಮ್ಯೇಕಾರಕೇ ಶುಭಸಂಯುತೇ। ಭಾವೇವಾ ಶುಭಸಂಯುಕ್ತೇ ಪಿತೃಸೌಖ್ಯಂ ವಿನಿರ್ದಿಶೇತ್ ॥೯೦೧॥ತಾ॥ ಪಿತೃಸ್ಥಾನಾಧಿಪತಿ ಶುಬಗ್ರಹವಾಗಿ ಪಿತೃಕಾರಕನು ಶುಭಗ್ರಹಯುಕ್ತನಾಗಿ ಭಾಗ್ಯಸ್ಥಾನದಲ್ಲಿ ಶುಭಗ್ರಹವಿದ್ದರೆ ಜಾತಕನು ಪಿತೃಸೌಖ್ಯವುಳ್ಳವನಾಗುವನು ॥೯೦೧॥

ಶ್ಲೋಕ॥ ಪಾರವತಾದೌ ತನ್ನಾಥೇ ಕಾರಕೇಚ ತಥಾವಿಧೇ । ಸ್ವೋಚ್ಚ ಮಿತ್ರಾಂಶಗೇವಾಪಿ ಪಿತೃಸೌಖ್ಯಂ ವಿನಿರ್ದಿಶೇತ್ ॥೯೦೨॥ತಾ॥ ಪಿತೃಸ್ಥಾನಾದಿ ಪತಿಯು ಸೂರ್ಯನು ಸಹ ಪಾರವತಾದಿ ಅಂಶೆಗಳಿದ್ದರೂ, ಸ್ವೋಚ್ಚಮಿತ್ರನವಾಂಶೆ ಯಲ್ಲಿದ್ದರೂ ಜಾತಕನಿಗೆ ಪಿತೃಸೌಖ್ಯವನ್ನು ಹೇಳತಕ್ಕದ್ದು ॥೯೦೨॥

## ಜನನಾತ್ಪೂರ್ವಂ ಪಿತೃಮರಣಯೋಗಃ

ಶ್ಲೋಕ॥ ಷಷ್ಠಾಷ್ಟಮವ್ಯಯೇಸೂರ್ಯೇ ರಂಧ್ರೇಶೇ ಭಾಗ್ಯಸಂಯುತೇ। ವ್ಯಯೇಶೇ ಲಗ್ನರಾಶಿಸ್ಥೇ ಷಷ್ಠೇಶೇ ಪಂಚಮಸ್ಥಿತೇ ॥ ಜಾತಸ್ಯಜನನಾತ್ಪೂರ್ವಂ ಜನಕಸ್ಯಮೃತಿರ್ಭವೇತ್ ॥೯೦೩॥ತಾ॥ ಸೂರ್ಯನು ೬೮೧೨ ವ್ಯಯಗಳಲ್ಲಿಯೂ ರಂಧ್ರೇಶ್ವರನು ಭಾಗ್ಯಾಧಿಪತಿಯ ಸಂಗಡವೂ ವ್ಯಯಸ್ಥಾನಾಧಿಪತಿಯು ಲಗ್ನದಲ್ಲಿಯೂ ಷಷ್ಠಸ್ಥಾನಾಧಿಪತಿಯು ಪಂಚಮದಲ್ಲಿದ್ದರೂ ಅಂಥವನು ಮಾತೃಗರ್ಭದಲ್ಲಿರುವಾಗಲೇ ಪಿತೃವಿಗೆ ಮರಣ ಸಂಭವಿಸುವುದು ॥೯೦೩॥

## ಸಂವತ್ಸರಮಧ್ಯೇ ಪಿತೃಮರಣ ಯೋಗಃ

ಶ್ಲೋಕ॥ ರಂಧ್ರಸ್ಥಾನಗತೇ ಸೂರ್ಯೇ ರಂಧ್ರೇಶೇ ಭಾಗ್ಯನಾಯಕೇ ಜಾತಸ್ಯ ಪ್ರಥಮಾಬ್ದೇತು ಪಿತುರ್ಮ್ರಣಮಾದಿಶೇತ್ ॥೯೦೪॥ತಾ॥ ಅಷ್ಟಮದಲ್ಲಿ ರವಿ, ಅಷ್ಟ ಮಾಧಿಪತಿಯೇ ಭಾಗ್ಯಾಧಿಪತಿಯಾಗಿ*ದ್ದರೆ ಜಾತಕನು ಹುಟ್ಟಿದ ಮೊದಲನೇ ವರ್ಷದಲ್ಲಿಯೇ ಪಿತೃಮರಣಯೋಗವು ॥೯೦೪॥

* ಮಿಥುನ ಲಗ್ನಜಾತಕಕ್ಕೆ ಮಾತ್ರ ಅನ್ವಯವಾಗುತ್ತದೆ.

ಶ್ಲೋಕ।। ವ್ಯಯೇಶೇಭಾಗ್ಯರಾಶಿಸ್ಥೇ ನೀಚಾಂಶೇ ಭಾಗ್ಯನಾಯಕೇ । ತೃತೀಯೇ ಷೋಡಶೇವರ್ಷೇ ಜನಕಸ್ಯಮೃತಿರ್ಭವೇತ್ ।।೯೦೫।।ತಾ।। ವ್ಯಯಾಧಿಪತಿ ಭಾಗ್ಯದಲ್ಲಿದ್ದು ಭಾಗ್ಯಾಧಿಪತಿ ನೀಚಾಂಶೆಯಲ್ಲಿದ್ದರೆ, ಜಾತಕನ ಮೂರನೇ ಅಥವಾ ಹದಿನಾರನೇ ವರ್ಷದಲ್ಲಿ ಪಿತೃಮರಣಯೋಗವು ।।೯೦೫।।

ಶ್ಲೋಕ।। ಲಗ್ನೇಶೇ ನಾಶರಾಶಿಸ್ಥೇರಂಧ್ರೇಶೇ ಭಾನು ಸಂಯುತೇ । ದ್ವಿತೀಯೇ ದ್ವಾದಶೇವರ್ಷೇ ಪಿತೃಮರಣಮಾದಿಶೇತ್ ।।೯೦೬।।ತಾ।। ಲಗ್ನಾಧಿಪತಿ ಅಷ್ಟಮದಲ್ಲು ಅಷ್ಟಮಾಧಿಪತಿ ಸೂರ್ಯನ ಸಂಗಡ ಇದ್ದರೆ, ೨ನೇ ಅಥವಾ ೧೨ನೇ ವರ್ಷದಲ್ಲಿ ತಂದೆಗೆ ಮರಣವಾಗುವುದು ।।೯೦೬।।

ಶ್ಲೋಕ।। ಭಾಗ್ಯಾದ್ರಂಧ್ರಗತೇರಾಹೌ ಭಾಗ್ಯಾದ್ಭಾಗ್ಯಗತೇರವೌ । ಷೋಡ ಶೇಷ್ವಾದಶೇವರ್ಷೇ ಜನಕಸ್ಯ ಮೃತಿರ್ಭವೇತ್ ।।೯೦೭।।ತಾ।। ಭಾಗ್ಯಸ್ಥಾನದಿಂದ ೮ರಲ್ಲಿ ರಾಹು, ಭಾಗ್ಯಸ್ಥಾನದಿಂದ ೯ರಲ್ಲಿ ರವಿ ಇದ್ದರೆ ೧೬ ಅಥವಾ ೧೮ನೇ ವರ್ಷದಲ್ಲಿ ತಂದೆಗೆ ಮರಣ ಪ್ರಾಪ್ತಿಯಾಗುವುದು ।।೯೦೭।।

ಶ್ಲೋಕ।। ರಾಹುಣಾ ಸಹಿತೇ ಸೂರ್ಯೇ ಚಂದ್ರಾದ್ಭಾಗ್ಯಗತೇಶನೌ । ಸಪ್ತಮ್ಯೈ ಕೋನವಿಂಶಾಬ್ದೇ ಜಾತಸ್ಯಮರಣಂ ಧೃವಂ ।।೯೦೮।।ತಾ।। ರವಿರಾಹುಯುಕ್ತನಾಗಿ ಚಂದ್ರನಿಂದ ೯ರಲ್ಲಿ ಶನಿ ಇದ್ದರೆ, ಜಾತಕನ ೭ನೇ ಅಥವಾ ೧೯ನೇ ವರ್ಷದಲ್ಲಿ ತಂದೆಗೆ ಮರಣವಾಗುವುದು ।।೯೦೮।।

ಶ್ಲೋಕ।। ಭಾಗ್ಯೇಶೇ ವ್ಯಯರಾಶಿಸ್ಥೇ ವ್ಯಯೇಶೇ ಭಾಗ್ಯರಾಶಿಗೇ ಚತುಶ್ಚತ್ವಾರಿ ವರ್ಷಾಚ್ಚ ಪಿತುರ್ಮರಣ ಮಾದಿಶೇತ್ ।।೯೦೯।।ತಾ।। ೧೨ನೇ ಅಧಿಪತಿ ೯ರಲ್ಲು ೯ನೇ ಅಧಿಪತಿ ೧೨ ರಲ್ಲು ಇದ್ದರೆ ಜಾತಕನ ೪೪ ನೆ ವರ್ಷದಲ್ಲಿ ತಂದೆಗೆ ಮರಣವಾಗುವುದು ।।೯೦೯।।

ಶ್ಲೋಕ।। ರವ್ಯಂಶೇಚ ಸ್ಥಿತೇಚಂದ್ರೇ ಲಗ್ನೇಶೇ ರಂಧ್ರ ಸಂಯುತೇ । ಪಂಚತ್ರಿಂಶೈಕ ಚತ್ವಾರಿ ವತ್ಸರೇ ಪಿತೃನಾಶನಂ ।।೯೧೦।।ತಾ।। ಚಂದ್ರನು ಸೂರ್ಯ ನವಾಂಶೆಯಲ್ಲಿದ್ದು ಲಗ್ನಾಧಿಪತಿ ಅಷ್ಟಮದಲ್ಲಿದ್ದರೆ, ಜಾತಕನ ೩೫ ಅಥವಾ ೪೧ನೇ ವರ್ಷದಲ್ಲಿ ಪಿತೃಮರಣವಾಗುವುದು ।।೯೧೦।।

ಶ್ಲೋಕ।। ಪಿತೃಸ್ಥಾನಾಧಿಪೇ ಸೂರ್ಯೇ ಮಂದ*ಭೌಮಸಮನ್ವಿತೇ । ಪಂಚಾಶದ್ವತ್ಸರೇ ಪ್ರಾಪ್ತೇ ಜನಕಸ್ಯ ಮೃತಿರ್ಭವೇತ್ ।।೯೧೧।।ತಾ।। ಪಿತೃಸ್ಥಾನಾಧಿಪತಿ ಸೂರ್ಯನಾಗಿ ಶನಿ, ಕುಜರ ಸಂಗಡ ಇದ್ದರೆ ೫೦ನೇ ವರ್ಷದಲ್ಲಿ ಪಿತೃವಿಗೆ ಮರಣವಾಗುವುದು ।।೯೧೧।।

* ಚಂದ್ರ ಭೌಮ-ಪಾ।।

ಶ್ಲೋಕ।। ಭಾಗ್ಯತ್ಸಪ್ತಮಗೇ ಸೂರ್ಯೇ ಭ್ರಾತೃ ಸಪ್ತಮಗಸ್ತಮಃ। ಷಷ್ಠಭೇ ಪಂಚವುಂಶಾಬ್ದೇ ಪಿತುರ್ಮರಣಮಾದಿಶೇತ್ ।।೯೧೨।।ತಾ।। ಭಾಗ್ಯದಿಂದ ೭ರಲ್ಲಿ ರವಿ ತೃತೀಯದಿಂದ ೭ ರಲ್ಲಿ ರಾಹುವಿದ್ದರೂ ಅಥವಾ ೬ ರಲ್ಲಿ ರಾಹುವಿದ್ದರೂ ಜಾತಕನ ೨೫ನೇ ವರ್ಷದಲ್ಲಿ ತಂದೆಗೆ ಮರಣ ।।೯೧೨।।

ಶ್ಲೋ।। ರಂಧ್ರಾಜ್ಞಾ ಮಿತ್ರಗೇಮಂದೇ ಮಂದಾಜ್ಞಾ ಮಿತ್ರಗೇರವೌ।। ತ್ರಿಂಶೈ ಕವಿಂಶೇಷಡ್ವಿಂಶೇ ಜನಕಸ್ಯ ಮೃತಿರ್ಭವೇತ್ ।।೯೧೩।।ತಾ।। ಅಷ್ಟಮದಿಂದ ಸಪ್ತಮದಲ್ಲಿ ಶನಿ, ಶನಿಯಿಂದ ಸಪ್ತಮದಲ್ಲಿ ರವಿ ಇದ್ದರೆ ಜಾತಕನ ೩೦, ೨೧ ಅಥವಾ ೨೬ನೇ ವರ್ಷದಲ್ಲಿ ತಂದೆಗೆ ಮರಣ ಪ್ರಾಪ್ತಿಯಾಗುವುದು ।।೯೧೩।।

ಶ್ಲೋಕ।। ಭಾಗ್ಯೇಶೇ ನೀಚರಾಶಿಸ್ಥೇ ತದೀಶೇ ಭಾಗ್ಯರಾಶಿಗೇ । ಷಡ್ವಿಂಶಕೇ ತ್ರಯಸ್ತ್ರಿಂಶೇ ಪಿತೃಮರಣಮಾದಿಶೇತ್ ।।೯೧೪।।ತಾ।। ಭಾಗ್ಯಾಧಿಪತಿ ನೀಚನಾಗಿ ಆ ನೀಚ ರಾಶ್ಯಾಧಿಪತಿ ಭಾಗ್ಯದಲ್ಲಿದ್ದರೆಜಾತಕನ ೨೬ ಅಥವಾ ೩೩ನೆ ವರ್ಷದಲ್ಲಿ ತಂದೆಗೆ ಮರಣವಾಗುವುದು ।।೯೧೪।।

## ಧರ್ಮಾಧ್ಯಕ್ಷ ಯೋಗಃ

ಶ್ಲೋಕ।। ಗುರೌವಾಭೃಗುಪುತ್ರೋವಾ ಸ್ವೋಚ್ಚಮಿತ್ರಾಂಶಗೇ ಶುಭೇ। ಧರ್ಮಾಧಿಪೇನ ಸಂಯುಕ್ತೇ ಧರ್ಮಾಧ್ಯಕ್ಷೋ ಭವೇನ್ನರಃ ।।೯೧೫।।ತಾ।। ಗುರು ವಾಗಲೀ, ಶುಕ್ರನಾಗಲೀ, ಭಾಗ್ಯಸ್ಥಾನದಲ್ಲಿ ಸ್ವಚೋಚಮಿತ್ರಾಂಶೆಯನ್ನು ಪಡೆದು ಧರ್ಮಾಧಿಪತಿಯ ಸಂಗಡ ಇದ್ದರೆ ಜಾತಕನು ಧರ್ಮಾಧ್ಯಕ್ಷನಾಗುವನು ।।೯೧೫।।

## ಧರ್ಮಯೋಗಃ

ಶ್ಲೋಕ।। ಗುರುಶುಕ್ರಬುಧಾಂಶಸ್ಥೇ ಧರ್ಮನಾತೇ ಶುಭೇಕ್ಷಿತೇ ಶುಭ ಗ್ರಹಾಣಾಂ ಮಧ್ಯಸ್ಥೇ ಧರಕೃತ್ಸನರೋಭವೇತ್ ।।೯೧೬।।ತಾ।। ಧರ್ಮಾಧಿಪತಿಯು ಗುರು, ಶುಕ್ರ ಬುಧ ಈ ನವಾಂಶಗಳಲ್ಲಿ ಯಾವುದಾದರೂ ನವಾಂಶೆಯಲ್ಲಿದ್ದು ಶುಭ ಗ್ರಹದಿಂದ ನೋಡಲ್ಪಟ್ಟರೂ, ಶುಭಗ್ರಹಗಳ ಮಧ್ಯದಲ್ಲಿದ್ದರೂ, ಜಾತಕನು ಧರ್ಮ ಮಾಡುವನು ।।೯೧೬।।

## ಡಾಂಭಿಕ ಧರ್ಮಯೋಗಃ

ಶ್ಲೋಕ।। ಸೌಮ್ಯಾನ್ವಿತೇ ಧರ್ಮಗೃಹೇತಸ್ಮಿ ಪಾಪಾಂಶ ಸಂಯುತೇ । ಕ್ರೂರಷಷ್ಠ್ಯಂಶಕೇವಾಪಿ ಡಂಭ ಧರ್ಮಪರಾಯಣಃ ।।೯೧೭।।ತಾ।। ಧರ್ಮಸ್ಥಾನದಲ್ಲಿ ಶುಭಗ್ರಹಗಳು ಪಾಪನವಾಂಶೆಯಲ್ಲಿದ್ದರೂ, ಕ್ರೂರ ಷಷ್ಠ್ಯಂಶೆಯಲ್ಲಿದ್ದರೂ ಜಾತಕನು ಧರ್ಮಮಾಡುತ್ತೇನೆಂದು ಡಂಭ ಕೊಚ್ಚುವನು ।।೯೧೭।।

## ಪಿತೃವಶಾನುಗ ಯೋಗಃ

ಶ್ಲೋಕ।। ಲಗ್ನೇಶೇ ಪಿತೃಭಾವೇಶೇ ಸಂಪೂರ್ಣ ಬಲಿಸಂಯುತೇ । ಕಾರಕೇಚ ಶುಭೈರ್ದೃಷ್ಟೇ ಜಾತಃಪಿತೃವಶಾನುಗಃ ।।೯೧೮।।ತಾ।। ಲಗ್ನಾಧಿಪತಿಯು ಪಿತೃಭಾವಾಧಿಪತಿಯು ಸಂಪೂರ್ಣ ಬಲಿಷ್ಠರಾಗಿ ಸೂರ್ಯನು ಶುಭದೃಷ್ಟಿಯುಳ್ಳವನಾದರೆ ಜಾತಕನು ಪಿತೃವಶಾನುವರ್ತಿಯಾಗುವನು ।।೯೧೮।।

## ಪಿತೃಕರ್ಮಸಮಾಪನ ಯೋಗಃ

ಶ್ಲೋಕ।। ಪಿತೃಜನ್ಮಾಷ್ಟಮೇ ಜಾತಃತದೀಶೇ ಲಗ್ನಗೇಪಿವಾ । ತೇನೈವ ಪಿತೃಕಾರ್ಯಾಣಿ ಕರ್ಮಶೇಷಂ ಸಮಾಪಯೇತ್ ।।೯೧೯।।ತಾ।। ಪಿತೃಜನ್ಮರಾಶಿಗೆ ಅಷ್ಟಮ ರಾಶಿಯಲ್ಲಿ ಹುಟ್ಟಿದವನೂ ೮ ನೆ ಅಧಿಪತಿ ಲಗ್ನದಲ್ಲಿದ್ದರೆ ಅಥವಾ ಜಾತಕನೂ ಪಿತೃಕರ್ಮವನ್ನು ಸಾಂಗವಾಗಿ ಮಾಡುವನು ।।೯೧೯।।

## ಪಿತೃತುಲ್ಯಗುಣ ಯೋಗಃ

ಶ್ಲೋಕ।। ಪಿತೃಕರ್ಮಗೃಹೇಜಾತಃ ಪಿತೃತುಲ್ಯಗುಣಾನ್ವಿತಃ। ಪಿತೃಜನ್ಮ ತೃತೀಯರ್ಕ್ಷೇ ಜಾತಃ ಪಿತೃಧನಾಶ್ರಿತಃ ।।೯೨೦।।ತಾ।। ಪಿತೃ ಜನ್ಮರಾಶಿಗೆ ಅಷ್ಟಮ ರಾಶಿಯಲ್ಲಿ ಹುಟ್ಟಿದವನೂ ೮ ನೆ ಅಧಿಪತಿ ಲಗ್ನದಲ್ಲಿದ್ದರೆ ಅಥವಾ ಜಾತಕನೂ ಪಿತೃಕರ್ಮವನ್ನು ಸಾಂಗವಾಗಿ ಮಾಡುವನು ।।೯೧೯।।

## ಪಿತೃದೂಷಕ ಯೋಗಃ

ಶ್ಲೋಕ।। ಪಿತೃಕರ್ಮಗೃಹೇಜಾತಃ ಪಿತೃದೂಷ್ಯೋ ಭವೇನ್ನರಃ । ಪಿತೃ ಧರ್ಮಾಯ ವಿತ್ತೇಷುಜಾತಃ ಪಿತೃವಶಾನುಗಃ ।।೯೨೧।।ತಾ।। ಪಿತೃವಿನ ಜನ್ಮ ಲಗ್ನಕ್ಕೆ ೬-೮ನೇ ಲಗ್ನದಲ್ಲಿ ಹುಟ್ಟಿದವನು ಪಿತೃದೂಷಕನಾಗುವನು. ಪಿತೃವಿನ ಜನ್ಮಲಗ್ನದಿಂದ ೯-೧೧-೨ ನೇ ಲಗ್ನಗಳಲ್ಲಿ ಹುಟ್ಟಿದುವನು ತಂದೆಯ ವಶವರ್ತಿಯಾಗಿರುವನು ।।೯೨೧।।

## ಪಿತುರ್ದೀಕ್ಷಾ ಯೋಗಃ

ಶ್ಲೋಕ।। ಪಿತ್ರಷ್ಟಮೇಷು ನಕ್ಷತ್ರತೃತೀಯೇ ಯಸ್ತುಜಾಯತೇ। ಸಕರೋತಿ ಪಿತುರ್ದೀಕ್ಷಾಂ ಪುತ್ರಪೌತ್ರ ಸಮನ್ವಿತಃ ।।೯೨೨।।ತಾ।। ಪಿತೃಜನ್ಮ ನಕ್ಷತ್ರಕ್ಕೆ ೮-೯-೧೦ನೇ ನಕ್ಷತ್ರಗಳಲ್ಲಿ ಹುಟ್ಟಿದವನು ಪುತ್ರಪೌತ್ರರಿಂದೊಡಗೂಡಿ ತಂದೆಯು ಮಾಡತೊಡಗಿದ ಕಾರ್ಯ ಮಾಡುವನು ಮತ್ತು ಪಿತೃಕರ್ಮವನ್ನು ಸಾಂಗವಾಗಿ ಮಾಡುವನು ।।೯೨೨।।

## ದೇಶಾಂತರಗತಾದ್ದುಃಖಯೋಗಃ

ಶ್ಲೋಕ|| ಪಿತೃಜನ್ಮಂತ ಭೇಶರ್ಕ್ಷ ತೃತೀಯೇ ಜಾಯತೇ । ಸಕರೋತಿ ಪಿತುರ್ದುಃಖಂ ದೂರದೇಶಗತೋಭವೇತ್ ||೯೨೩||ತಾ|| ಪಿತೃ ಜನ್ಮ ನಕ್ಷತ್ರಕ್ಕೆ ಅಂತ್ಯ ನಕ್ಷತ್ರದಲ್ಲಿ ಹುಟ್ಟಿದವನೂ ೧೦-೧೨-೧೩ನೇ ನಕ್ಷತ್ರದಲ್ಲಿ ಹುಟ್ಟಿದವನೂ ತಾನು ದೇಶಾಂತರ ಹೋಗುವುದರಿಂದ ತಂದೆಗೆ ದುಃಖದಾಯಕನಾಗುವನು ||೯೨೩||

## ಬ್ರಹ್ಮನಿಷ್ಠ ಯೋಗಃ

ಶ್ಲೋಕ|| ದೇವಲೋಕಾಂಶಸ್ಥೇವಾ ಕರ್ಮೇಶೇ ಭಾಗ್ಯಪೇಥವಾ| ಪಾರವತಾಂಶಗೇ ಸೌಮ್ಯೇ ದೃಷ್ಟೇ ಬ್ರಹ್ಮಣಿ ನಿಷ್ಠಿತಃ ||೯೨೪||ತಾ|| ಕರ್ಮಾಧಿಪತಿ ದೇವ ಲೋಕಾಂಶೆಯಲ್ಲಿದ್ದು ಭಾಗ್ಯಾಧಿಪತಿ ಪಾರವತಾಂಶೆಯಲ್ಲಿದ್ದು ಶುಭಗ್ರಹದಿಂದ ನೋಡಲ್ಪಟ್ಟರೆ, ಜಾತಕನು ಬ್ರಹ್ಮನಿಷ್ಠನಾಗುವನು ||೯೨೪||

## ದಾತೃತ್ವ ಯೋಗಃ

ಶ್ಲೋಕಃ ದಾನಸ್ಥಾನಾಧಿಪೇ ಸ್ವೋಚ್ಚೆ ಶುಭಗ್ರಹ ನಿರೀಕ್ಷಿತೇ । ತತ್ಸ್ಥಾನೇ ಶುಭ ಸಂಯುಕ್ತೇ ದಾನಕೃತ್ಸನರೋಭವೇತ್ ||೯೨೫||ತಾ|| ದಾನ (೯) ಸ್ಥಾನಾಧಿಪತಿ ಉಚ್ಚನಾಗಿ ಶುಭಗ್ರಹ ವೀಕ್ಷಣೆಯುಳ್ಳವನಾಗಿ ಭಾಗ್ಯದಲ್ಲಿ ಶುಭಗ್ರಹವಿದ್ದರೆ ಜಾತಕನು ದಾನಮಾಡುವವನಾಗುವನು ||೯೨೫||

## ಮಹಾದಾನಯೋಗಃ

ಶ್ಲೋಕ|| ಪಾರಾವತಾದಿ ಭಾಗಸ್ಥೇ ದಾನೇಶೇ ಗುರುವೀಕ್ಷಿತೇ । ಲಗ್ನೇಶೇ ಗುರಸಂದೃಷ್ಟೇ ಮಹಾದಾನಕರೋಭವೇತ್ ||೯೨೬||ತಾ|| ಭಾಗ್ಯಾಧಿಪತಿ ಪಾರವತಾದಿ ಅಂಶೆಯಲ್ಲಿದ್ದು ಗುರುವಿನಿಂದ ನೋಡಲ್ಪಟ್ಟು ಲಗ್ನಾಧಿಪತಿಯು ಗುರುವಿನಿಂದ ನೋಡಲ್ಪಟ್ಟರೆ, ಜಾತಕನು ಮಹಾದಾನ ಮಾಡುವನು ||೯೨೬||

ಶ್ಲೋಕ|| ದಾನಾಧಿಪೇನ ಸಂದೃಷ್ಟೇ ಲಗ್ನೇತನ್ನಾಯಕೇಪಿವಾ| ತಸ್ಮಿ೯ಕೇಂದ್ರ ತ್ರಿಕೋಣಸ್ಥೇ ಮಹಾದಾನ ಕರೋಭವೇತ್ ||೯೮೭||ತಾ|| ಲಗ್ನವೂ, ಲಗ್ನಾಧಿಪತಿಯೂ, ೯ನೇ ಅಧಿಪತಿಯಿಂದ ನೋಡಲ್ಪಟ್ಟು, ಭಾಗ್ಯಾಧಿವತಿ ಕೇಂದ್ರ ತ್ರಿಕೋಣಗಳಲ್ಲಿದ್ದ ಕಾಲದಲ್ಲಿ ಹುಟ್ಟಿದನು ಮಹಾದಾನ ಮಾಡುವನು ||೯೨೭||

ಶ್ಲೋಕ|| ಸಿಂಹಾಸನ್ನಾಂಶಕೇದಾನ ನಾಥೇಲಗ್ನೇಶ ವೀಕ್ಷಿತೇ । ಕರ್ಮೇಶೇನಾಪಿ ಸಂದೃಷ್ಟೇ ಮಹಾದಾನಕರೋಭವೇತ್ ||೯೨೮||ತಾ|| ದಾನಸ್ಥಾನಾಧಿಪತಿ *ಸಿಂಹಾಸನಾಂಶೆಯಲ್ಲಿದ್ದು ಲಗ್ನಾಧಿಪತಿಯಿಂದ ನೋಡಲ್ಪಟ್ಟರೂ, ಕರ್ಮಾಧಿಪತಿಯಿಂದ ನೋಡಲ್ಪಟ್ಟರೂ ಜಾತಕನು ಮಹಾದಾನವನ್ನು ಮಾಡುವನು ||೯೨೮||

* ದಾನಸ್ಥಾನವೆಂದರೆ ೯ನೇ ಸ್ಥಾನ.

ಶ್ಲೋಕ|| ಚತುರ್ಥೇ ದಾನಭಾವೇಶೇ ಕರ್ಮೇಶೇ ಕೇಂದ್ರ ಮಾಶ್ರಿತೇ। ವ್ಯಯೇಶೇ ಗುರುಸಂಯುಕ್ತೇ ಮಹಾದಾನಕರೋಭವೇತ್ ||ತಾ|| ಚತುರ್ಥದಲ್ಲಿ ಭಾಗ್ಯಾಧಿಪತಿಯಿದ್ದು ದಶಮಾಧಿಪತಿ ಕೇಂದ್ರದಲ್ಲಿದ್ದು ವ್ಯಯಾಧಿಪತಿ ಗುರು ದೃಷ್ಟಿ ಯುಕ್ತನಾದರೆ ಜಾತಕನು ಮಹಾದಾನ ಮಾಡುವನು ||೯೨೮||

ಶ್ಲೋಕ|| ಭಾಗ್ಯೆಶೇನಾಪಿಸಂದೃಷ್ಟೇ ಸ್ವೋಚ್ಚಸ್ಥೇ ಸೋಮನಂದನೇ। ಲಾಭೇಶೇ ಕೇಂದ್ರಭಾವಸ್ಥೇ ಮಹಾದಾನಕರೋಭವೇತ್ ||೯೨೯||ತಾ|| ಬುಧನು ಉಚ್ಚನಾಗಿ ಭಾಗ್ಯಾಧಿಪತಿಯಿಂದ ನೋಡಲ್ಪಟ್ಟು ಲಾಭಾಧಿಪತಿ ಕೇಂದ್ರಗಳಲ್ಲಿದ್ದರೆ ಜಾತಕನು ಮಹಾದಾನಮಾಡುವನು ||೯೨೯||

## ಮಹಾದಾನ ಗ್ರಹಣಯೋಗಃ

ಶ್ಲೋಕ|| ಲಾಭೇಶೇ ಲಾಭರಾಶಿಸ್ಥೇ ಕರ್ಮೇಶೇ ಬಲಸಂಯುತೇ। ದಾನಾಧಿ ಪೇನ ಸಂದೃಷ್ಟೇ ದಾನಗ್ರಹಣಮೇಷ್ಯತಿ ||೯೩೦||ತಾ|| ಮೇಲೆ ಮಹಾ ದಾನವು ಹೇಳಲ್ಪಟ್ಟಿರುತ್ತೆ. ಈ ಮಹಾದಾನದ ಸಾರ್ಥಕಕ್ಕೋಸ್ಕರವಾಗಿ ದಾನ ಪರಿಗ್ರಹ ಯೋಗವು ಹೇಳಲ್ಪಡುತ್ತೆ. ಲಾಭಾಧಿಪತಿ ಲಾಭದಲ್ಲಿದ್ದು ಕರ್ಮಾಧಿಪತಿ ಬಲಿಷ್ಠನಾಗಿ ಭಾಗ್ಯಾಧಿಪತಿಯಿಂದ ನೋಡಲ್ಪಟ್ಟರೆ ಜಾತಕನು ಮಹಾದಾನಾದಿಗಳನ್ನು ಪರಿಗ್ರಹಿಸುವನು ||೯೩೦||

## ಗುರುಭಕ್ತಿ ಯೋಗಃ

ಶ್ಲೋಕ|| ಗುರುಸ್ಥಾನೇ ಶುಭಯುತೇ ಗುರುಸಂಬಂಧಮಾಶ್ರಿತೇ । ತದೀಶೇ ಗುರುಭಾವಸ್ಥೇ ಗುರುಭಕ್ತಿಯುತೋ ನರಃ ||೯೩೧||ತಾ|| ಗುರುಸ್ಥಾನದಲ್ಲಿ ಶುಭಗ್ರಹ ವಿದ್ದು ಗುರುಸಂಬಂಧ*ವಿದ್ದರೆ, ಗುರುಸ್ಥಾನಾಧಿಪತಿ ಮೃದುಭಾವದಲ್ಲಿದ್ದರೆ, ಜಾತಕನು ಗುರುಭಕ್ತಿಯುಳ್ಳವನಾಗುವನು ||೯೩೧||

ಶ್ಲೋಕ|| ಗುರುಸ್ಥಾನೇಶ ಸಂಯುಕ್ತ ನವಾಂಶಾಧಿಗತೌಯದಾ। ಗುರು ಶುಕ್ರೇಕ್ಷಿತೇವಾಪಿ ಗುರುಭಕ್ತಿಯುತೋಭವೇತ್ ||೯೩೨||ತಾ|| ಗುರುಸ್ಥಾನಾಧಿಪತಿ ಇದ್ದ ನವಾಂಶಾಧಿಪತಿಯು ಗುರುಶುಕ್ರರಿಂದ ನೋಡಲ್ಪಟ್ಟರೆ, ಜಾತಕನು ಗುರುಭಕ್ತಿ ಯುಳ್ಳವನಾಗುವನು ||೯೩೨||

ಇತಿ ಭಾವಫಲಪ್ರಕರಣೇ ಭಾಗ್ಯಭಾವಃ

ದಶಮ ಭಾವಪ್ರಾರಂಭಃ

## ಯಜ್ಞಫಲ ಪ್ರಾಪ್ತಿಯೋಗಃ

ಶ್ಲೋಕ|| ಕರ್ಮೇಶವಾಗೀಶ ಶಶಾಂಕಪುತ್ರಾ ವೀರ್ಯಾನ್ವಿತಾಯಜ್ಞ ಕರಾ ಭವಂತಿ।

* ಚತುರ್ವಿಧ ಸಂಬಂಧ೧. ಕ್ಷೇತ್ರ ಸಂಬಂಧ೨. ಸ್ಥಾನಸಂಬಂಧ ೩. ಸಂಯೋಗ ಸಂಬಂಧ-೪ ಪರಸ್ಪರ ದೃಷ್ಟಿಸಂಬಂಧ.

ಶುಭಗ್ರಹೈರ್ದೃಷ್ಟಿಸಮನ್ವಿತೈಸ್ತೈ ರ್ವೀರ್ಯಾನ್ವಿತೈರ್ಯಜ್ಞ ವಿಶೇಷಮಾಹುಃ ॥೯೩೩॥ತಾ॥ ಕರ್ಮೇಶ, ಬೃಹಸ್ಪತಿ, ಬುಧ ಈ ಮೂರು ಗ್ರಹಗಳು ಬಲಿಷ್ಠರಾಗಿದ್ದರೆ ಜಾತಕನು ಯಜ್ಞಫಲವನ್ನು ಹೊಂದುವನು. ಆ ಮೇಲೆ ಹೇಳಿದ ಕರ್ಮಾಧಿಪತಿ, ಗುರು, ಬುಧರು ಶುಭದೃಷ್ಟಿಯುಕ್ತರಾಗಿ ಬಲಿಷ್ಠರಾಗಿದ್ದರೆ ಯಜ್ಞದಲ್ಲಿ ವಿಶೇಷವಾದದ್ದನ್ನು ಮಾಡುವನು ॥೯೩೩॥

## ಕರ್ಮವೈಕಲ್ಯ ಯೋಗಃ

ಶ್ಲೋಕಃ ಕರ್ಮಾಧಿಪೇ ಹೀನಬಲೇ ಸಪಾಪೇ ಕರ್ಮಾದಿವೈಕಲ್ಯ ಮುಶಂತಿ ತಜ್ಞಾಃ। ದುಃಸ್ಥಾಢಶಶಾಂಕಾರ್ಕಜ ಜೀವಶುಕ್ರಾಃ ಪಾಪೇಕ್ಷಿತಾಃ ಕರ್ಮವಿನಾಶದಾಸ್ತು ॥೯೩೪॥ತಾ॥ ಕರ್ಮಾಧಿಪತಿ ಬಲಹೀನನಾಗಿ ಪಾಪಗ್ರಹಯುಕ್ತನಾಗಿದ್ದರೆ ಕರುವೈಕಲ್ಯ ವಾಗುವುದು ಬುಧ, ಗುರು, ಶುಕ್ರರು ದುಃಸ್ಥಾನಗಳಲ್ಲಿದ್ದು ಪಾಪಗ್ರಹದೃಷ್ಟಿಯುಳ್ಳವ ನಾದರೆ ಕರ್ಮವಿನಾಶವಾಗುವುದು ॥೯೩೪॥

## ಗಂಗಾಸ್ನಾನ ಯೋಗಃ

ಶ್ಲೋಕ॥ ನಾಶಸ್ಥಿತಾ ಸ್ತತ್ರತದಂಸನಾಥಾ ಸ್ತೈರ್ಯುಕ್ತರಾಶೇ ರಧಿಪಾಚ್ಚ ನಾಶಂ। ರಾಹೌಚಕೇತೌ ಯದಿವಾದಿನೇಶೇ ಭಾಗೀರಥೀಸ್ನಾನ ಫಲಾದಿಭಾಕ್ಸ್ಯಾತ್ ॥೯೩೫॥ ತಾ॥ ಮೇಲೆ ಹೇಳಲ್ಪಟ್ಟ ಬುಧ, ಗುರು, ಶುಕ್ರರು ಅಷ್ಟಮ ಸ್ಥಾನದಲ್ಲಿದ್ದರೂ, ಆ ಗುರು ಬುಧ ಶುಕ್ರರಿರುವ ನವಾಂಶಾಧಿಪತಿಗಳು ಜನ್ಮಲಗ್ನಕ್ಕಷ್ಟಮ ಸ್ಥಾನದಲ್ಲಿದ್ದರೆ, ಪುಣ್ಯಕರ್ಮ ವಿನಾಶಮಾಡುವರು. ದಶಮದಲ್ಲಿ ರಾಹುಕೇತುಗಳು ಸೂರ್ಯಯುಕ್ತರಾದರೆ ಗಂಗಾಸ್ನಾನ ಮಾಡುವನು ॥೯೩೫॥

## ಮುಕ್ತಿಯೋಗೋ ಗಂಗಾಸ್ನಾನ ಯೋಗಶ್ಚ

ಶ್ಲೋಕ॥ ಮಾನೇಚಮೀನೇ ಯದಿವಾಸಸೌಮ್ಯೇ ಭೌಮಾನ್ವಿತೇವಾ ಭವಿತಾಚಮುಕ್ತಿಃ। ಜಲರ್ಕ್ಷಗೌ ಪೂರ್ಣಶಶಾಂಕ ಜೀವೌ ಮಾನಸ್ಥಿತೌ ಗಂಗಾಜಲಾಭಿ ಪೂತಃ॥೯೩೬॥ತಾ॥ ದಶಮಭಾವವು ಮೀನರಾಶಿಯಾಗಿ ಬುಧಯುಕ್ತವಾದರೂ, ಕುಜಯುಕ್ತವಾದರೂ, ಜಾತಕನಿಗೆ ಜಲರಾಶಿ ದಶಮವಾಗಿ ಪೂರ್ಣಚಂದ್ರ ಗುರು ಅಲ್ಲಿದ್ದರೆ ಜಾತಕನಿಗೆ ಗಂಗಾಸ್ನಾನವಾಗುವುದು ॥೯೩೬॥

## ಗಂಗಾಸದೃಶ ಸ್ನಾನಯೋಗಃ

ಶ್ಲೋಕ॥ ಮಾನೇಶ್ವರೇ ಶುಕ್ರಯುತೇಚ ಕೇಂದ್ರೇ ಸ್ವೋಚ್ಚಸ್ಥಿತೇತಾ ದೃಶತೋಯಪೂತಃ ವ್ಯಯೇ ಬುಧೇವಾ ಯದಿವಾತದೀಶೇ ಸ್ವೋಚ್ಚಾನ್ವಿತೇತಾ ದೃಶತೋಯಪೂತಃ ॥೯೩೭॥ತಾ॥ ದಶಮಾಧಿಪತಿ ಶುಕ್ರನೊಡಗೂಡಿ ಕೇಂದ್ರದಲ್ಲಿ ಉಚ್ಚನಾಗಿದ್ದರೆ ಗಂಗಾನದಿಗೆ ಸಮಾನವಾದ ನದಿಯಲ್ಲಿ ಶುದ್ಧನಾಗುವನು.

ಬುಧನಾಗಲೀ ದಶಮಾಧಿಪತಿಯಾಗಲೀ ದ್ವಾದಶದಲ್ಲಿ ಉಚ್ಚನಾಗಿದ್ದರೆ ಜಾತಕನು ಗಂಗಾಸದೃಶ ನದಿಯಲ್ಲಿ ಪರಿಶುದ್ಧನಾಗುವನು ॥೯೩೭॥

## ಗೋಪುರ ಮಂಟಪಾದಿ ಜೀರ್ಣೋದ್ಧಾರಯೋಗಃ

ಶ್ಲೋಕ॥ ಬುಧೇ ಸಜೀವೇ ಯದಿವಾಸಸೌಮ್ಯೇ ಪ್ರಕಾರ ಸದ್ಗೋಪುರ ಮಂಟಪಾದೀನ್ । ಮಾನಸ್ಥಿತೇ ತದ್ಗೃಹನಾಥಯುಕ್ತೇ ಕರೋತಿ ಜೀರ್ಣೋದ್ಧಾರ ಣಾದಿಕಂತು ॥೯೩೮॥ತಾ॥ ಬುಧನು ಬೃಹಸ್ಪತಿಯನ್ನು ಕೂಡಿದರೂ, ಶುಕ್ರನನ್ನು ಕೂಡಿದರೂ ದಶಮದಲ್ಲಿದ್ದರೆ ಜಾತಕನು ಪ್ರಾಕಾರ, ಗೋಪುರ ಮಂಟಪ ಮೊದಲಾದ ಸತ್ಕಾರ್ಯಗಳನ್ನು ಮಾಡುವನು. ಬುದನು ದಶಮಾಧಿಪತಿಯೊಡಗೂಡಿ ದಶಮದಲ್ಲಿದ್ದರೆ ಜೀರ್ಣವಾದ ದೇವಾಲಯವನ್ನು ಮರಳಿ ಕಟ್ಟಿಸುವನು ॥೯೩೮॥

## ತಟಾಕ ಸರೋವರ ನಿರ್ಮಾಣಯೋಗಃ

ಶ್ಲೋಕ॥ ಕರೋತಿ ಕೂಪಾದಿ ತಟಾಕ ಮತ್ರಕರ್ಮೇಶ್ವರೇ ಗೋಪುರ ಭಾಗ ಯುಕ್ತೇ । ಮೃದ್ವಂಶಕೇವಾ ಶುಭದೃಷ್ಟಿಯುಕ್ತೇ ಬಾಗ್ಯೇಶ್ವರೇಣಾಪಿ ನಿರೀಕ್ಷಿತೇವಾ ॥೯೩೯॥ತಾ॥ ಕರ್ಮಾಧಿಪತಿ ಕರ್ಮಸ್ಥಾನದಲ್ಲಿ ಗೋಪುರಾಂಶೆಯಲ್ಲಾದರೂ ಮೃದ್ವಂಶೆ ಯಲ್ಲಾದರೂ ಇದ್ದು ಶುಭಗ್ರಹ ದೃಷ್ಟಿಯುಕ್ತವಾದರೂ, ಭಾಗ್ಯಾಧಿಪತಿಯಿಂದ ನೋಡಲ್ಪಟ್ಟರೂ ಜಾತಕನು ಬಾವಿ, ಕೆರೆ, ಕೊಳ ಮೊದಲಾದ ಜಲಾಶಯಗಳನ್ನು ನಿರ್ಮಾಣ ಮಾಡುವನು ॥೯೩೯॥

## ಆಜ್ಞಾಧಿಪತಿ ಯೋಗಃ

ಶ್ಲೋಕ॥ ಅಜ್ಞಾಸ್ಥಾನಾಧಿಪೇ ಸೌಮ್ಯೇ ಶುಭಯುಕ್ತೇ ಕ್ಷಿತೇಪಿವಾ । ಶೋಭ ನಾಂಶತತೇವಾಪಿ ಜಾತಸ್ತ್ವಾಜ್ಞಾಧರೋ ಭವೇತ್ ॥೯೪೦॥ತಾ॥ ದಶಮಾಧಿಪತಿ ಸೌಮ್ಯಗ್ರಹವಾಗಿ ಶುಭಯುಕ್ತನಾದರೂ ಶುಭದೃಷ್ಟಿಯುಳ್ಳವನಾದರೂ ಶುಭನವಾಂಶೆ ಯಲ್ಲಿದ್ದರೂ, ಜಾತಕನು ಅಜ್ಞೆ *ಮಾಡುವವನಾಗುವನು ॥೯೪೦॥

## ಕ್ರೂರಾಜ್ಞಾಯೋಗಃ

ಶ್ಲೋಕ॥ ಆಜ್ಞಾಸ್ಥಾನಗತೇ ಸೂರ್ಯೇ ಭೂಮಿಪುತ್ರೇಥವಾಸ್ಥಿತೇ । ಕೇಂದ್ರಾನ್ವಿತೇ ತದೀಶೇಪಿ ಕ್ರೂರಮಾಜ್ಞಾಂ ಕರೋತಿಸಃ ॥೯೪೧॥ತಾ॥ ಸೂರ್ಯನು ಆಜ್ಞಾಸ್ಥಾನದಲ್ಲಿದ್ದರೂ, ಕುಜನಿದ್ದರೂ, ಅಜ್ಞಾ ಸ್ಥಾನಾಧಿಪತಿ ಕೇಂದ್ರವರ್ತಿಯಾದರೆ ಅಂಥಾ ಜಾತಕನು ಕ್ರೂರವಾದ ಆಜ್ಞೆ ಮಾಡುವವನಾಗುವನು ॥೯೪೧॥

* ಆಜ್ಞೆ ಎಂದರೆ-ಮೇಜಸ್ಟ್ರೇಟ್ ಅಥವಾ ಜಡ್ಜಿ-ನ್ಯಾಯಾಧಿಪತಿ, ಇವುಗಳಿಗೆ ಅನ್ವಯಿಸತಕ್ಕದ್ದು

ಶ್ಲೋಕ।। ಅಜ್ಞಾಧಿಪೋ ಮಂದಯುತೇ ರಂಧ್ರನಾಥೇನ ಸಂಯುತೇ ।
ಕ್ರೂರಾಂಶೇ ಕೇಂದ್ರರಾಶೌವಾ ಕ್ರೂರಾಮಾಜ್ಞಾಂ ಕರೋತಿಸಃ।।೯೪೨।।ತಾ।। ಅಜಾಸ್ಥಾನಾಧಿಪತಿ ಶನಿ ಮತ್ತು ಅಷ್ಟಮಾಧಿಪತಿಯುಕ್ತನಾಗಿ ಕ್ರರಾಂಶೆಯಲ್ಲಿದ್ದರೂ ಕೇಂದ್ರಗಳಿದ್ದರೂ, ಜಾತಕನು ಕ್ರರವಾದ ಆಜ್ಞೆಮಾಡುವನು ।।೯೪೨।।

ಶ್ಲೋಕ।। ರಾಹೌಮಾಂದಿಯುತೇ ಮಾನೇ ರಂಧ್ರೇ ರಾಹೌಧ್ವಜೇಪಿವಾ ।
ನೀಚಸ್ಥೇ ಧರ್ಮಭಾವೇಶೇಕ್ರೂರಮಾಜ್ಞಾಂಕರೋತಿಸಃ ।।೯೪೩।।ತಾ।। ರಾಹುಮಾಂದಿಗ್ರಹಯುಕ್ತನಾಗಿ ದಶಮದಲ್ಲಿದ್ದರೂ ಅಥವಾ ಮಾಂದಿಗ್ರಹ ದಶಮದಲ್ಲಿದ್ದು ರಾಹುಕೇತುಗಳಲ್ಲಿ ಯಾರಾದರೂ ಅಷ್ಟಮದಲ್ಲಿದ್ದರೂ ಭಾಗ್ಯಾದಿಪತಿ ನೀಚನಾಗಿದ್ದರೆ ಅಂಥಾ ಕಾಲದಲ್ಲಿ ಹುಟ್ಟಿದವನು ಕ್ರೂರವಾದ ಆಜ್ಞೆಯನ್ನು ಮಾಡುವನು ।।೯೪೩।।

ಶ್ಲೋಕ।। ಮಾನಾಧಿಪೇ ಕೇಂದ್ರಗತೇ ಶುಭಯುಕ್ತೇಕ್ಷಿತೇಪಿವಾ । ಕ್ರೂರ ಷಷ್ಟ್ಯಂಶಸಂಯುಕ್ತೇ ಕ್ರೂರಮಾಜ್ಞಾಂಕರೋತಿಸಃ।।೯೪೪।।ತಾ।। ದಶಮಾಧಿಪತಿ ಕೇಂದ್ರದಲ್ಲಿದ್ದು ಶುಭಯುಕ್ತೇಕ್ಷಿತನಾದರೂ, ಕ್ರೂರಷಷ್ಠಂಶೆಯಲ್ಲಿ ಇದ್ದರೆ ಜಾತಕನು ಕ್ರೂರವಾದ ಆಜ್ಞೆಯನ್ನು ಮಾಡುವನು ।।೯೪೪।।

## ಸತ್ಕೀರ್ತಿ ಯೋಗಃ

ಶ್ಲೋಕ।। ಶಶಾಂಕೇ ಕೇಂದ್ರಸಂಯುಕೇ ಗುರುಶುಕ್ರ ನಿರೀಕ್ಷಿತೇ ।। ಪಾರಾವ ತಾದಿ ಭಾಗಸ್ಥೇ ಸತ್ಕೀರ್ತಿಸಹಿತೋ ಭವೇತ್ ।।೯೪೫।।ತಾ।। ಚಂದ್ರನು ಕೇಂದ್ರ ದಲ್ಲಿದ್ದು ಗುರುಶುಕ್ರರಿಂದ ನೋಡಲ್ಪಟ್ಟು ಪಾರಾವತಾದಿ ಅಂಶಗಳಿದ್ದರೆ, ಜಾತಕನು ಸತ್ಕೀರ್ತಿಯನ್ನು ಹೊಂದುವನು ।।೯೪೫।।

ಶ್ಲೋಕ।। ತದೀಶೇ ಶುಭಸಂಯುಕೇತೇ ಶುಭಮಧ್ಯಗತೇಪಿವಾ । ಶುಭಗ್ರಹಾ ಮಂಶೇವಾ ಸತ್ಕೀರ್ತಿಸಹಿತೋ ಭವೇತ್ ।।೯೪೬।।ತಾ।। ದಶಮಾಧಿಪತಿ ಶುಭಗ್ರಹ ಯುತನಾದರೂ, ಶುಭಗ್ರಹಗಳ ಮಧ್ಯದಲ್ಲಿದ್ದರೂ ಅಥವಾ ಶುಭಗ್ರಹಗಳ ನವಾಂಶೆ ಯಲ್ಲಿದ್ದರೂ ಜಾತಕನು ಸತ್ಕೀರ್ತಿಯುಕ್ತನಾಗುವನು ।।೯೪೬।।

ಶ್ಲೋಕ।। ಕೀರ್ತಿಸ್ಥಾನಾಧಿಪೇ ಸೌಮ್ಯೇಸ್ವೋಚ್ಚ ಮಿತ್ರಸ್ವವರ್ಗಗೇ। ಸೌಮ್ಯ ಷಷ್ಟ್ಯಂಶಗೇವಾಪಿ ಸತ್ಕೀರ್ತಿಸಹಿತೋ ಭವೇತ್ ।।೯೪೭।।ತಾ।। ದಶಮಾಧಿಪತಿಯು ಶುಭಗ್ರಹವಾಗಿ ಉಚ್ಚ ಸ್ವಕ್ಷೇತ್ರಮಿತ್ರಕ್ಷೇತ್ರ ಷಡ್ವರ್ಗಗಳಲ್ಲಿದ್ದು ಶುಭಷಷ್ಟ್ಯಂಶೆಯಲ್ಲಿದ್ದರೆ ಜಾತಕನು ಸತ್ಕೀರ್ತಿ ಯುಕ್ತನಾಗುವನು ।।೯೪೭।।

ಶ್ಲೋಕ।। ತದೀಶೇ ದೇವಲೋಕಸ್ಥೇ ಸಿಂಹಾಸನ ಗತೇಪಿವಾ। ಬಲಪೂರ್ಣೇ ವಿಘ್ನೇಶೇ ಸತ್ಕೀರ್ತಿಸಹಿತೋಭವೇತ್ ।।೯೪೮।।ತಾ।। ದಶಮಾಧಿಪತಿಯು ದೇವ

ಲೋಕಾಂಶೆಯಲ್ಲಿದ್ದರೂ ಸಿಂಹಾಸನಾಂಶೆಯಲ್ಲಿದ್ದರೂ, ಲಗ್ನಾಧಿಪತಿ ಪೂರ್ಣಬಲಿಷ್ಠ ನಾಗಿದ್ದರೆ ಜಾತಕನು ಸತ್ಕೀರ್ತಿಯುಕ್ತನಾಗುವನು ॥೯೪೮॥

## ಅಪಕೀರ್ತಿ ಯೋಗಃ

ಶ್ಲೋಕ॥ ಅಪಕೀರ್ತಿಯುತೋ ಜಾತಃ ಕರ್ಮಸ್ಥೇ ಸರವೌ ಶನೌ। ಪಾಪಾಂಶಗೇ ಪಾಪದೃಷ್ಟೇ ಪಾಪಮಧ್ಯಗತೇ ತಥಾ ॥೯೪೯॥ತಾ॥ ಕರ್ಮಸ್ಥಾನದಲ್ಲಿ ಸೂರ್ಯಶನಿ ಗಳಿದ್ದು ಪಾಪಮಧ್ಯದಲ್ಲಿದ್ದರೂ, ಪಾಪಗ್ರಹಗಳ ನವಾಂಶೆಯಲ್ಲಿದ್ದರೂ ಪಾಪಗ್ರಹ ದೃಷ್ಟಿಯುಕ್ತವಾದರೂ ಜಾತಕನು ಅಪಕೀರ್ತಿಯುಕ್ತನಾಗುವನು ॥೯೪೯॥

ಶ್ಲೋಕ॥ ಪಾಪಗ್ರಹಾಣಾಂ ಸಂಬಂಧೇ ಮಾನನಾಥೇ ಬಲಕ್ಷಯೇ । ಕ್ರೂರ ಷಷ್ಠ್ಯಂಶ ಸಂಯುಕ್ತೇ ಹ್ಯಪಕೀರ್ತಿ ಯುತೋಭವೇತ್ ॥೯೫೦॥ತಾ॥ ಕರ್ಮಾಧಿಪತಿ ಬಲಹೀನನಾಗಿ ಪಾಪಗ್ರಹ ಸಂಬಂಧದಲ್ಲಿ ಕ್ರೂರಷಷ್ಠ್ಯಂಶೆಯಲ್ಲಿದ್ದರೆ ಜಾತಕನು ಅಪಕೀರ್ತಿಯುಕ್ತನಾಗುವನು ॥೯೫೦॥

## ದೃಢವ್ರತ ಯೋಗಃ

ಶ್ಲೋಕ॥ ಶುಭಗ್ರಹಾಣಾಂ ಸಂಭಂಧೇ ಮಾನೇ ತನ್ನಾಯಕೇ ಪಿವಾ । ಸ್ವೋಚ್ಚೇವಾ ಸ್ವಗೃಹೇವಾಪಿ ಜಾತೋಮಾನೀ ದೃಢವ್ರತಃ ॥೯೫೧॥ತಾ॥ ದಶಮ ಭಾವವು ಶುಭಗ್ರಹ ಸಂಬಂಧ ಪಡೆದರೂ ಅಥವಾ ದಶಮಾಧಿಪತಿ ಉಚ್ಚಸ್ವಕ್ಷೇತ್ರ ದಲ್ಲಿದ್ದರೂ, ಜಾತಕನು ಮಾನವಂತನೂ ದೃಢವ್ರತನೂ ಆಗುವನು ॥೯೫೧॥

## ಇಂಗಿತಜ್ಞಾಭಿಮಾನಿ ಯೋಗಃ

ಶ್ಲೋಕ॥ ಇಂಗಿತಜ್ಞೋಭಿಮಾನೀಸ್ಯಾನ್ಮಾನೇ ಜೀವೇಥವಾ ಶುಭೇ। ತದೀಶೇ ಶುಭಸಂಬಂಧೇ ಶುಭಮಧ್ಯಗತೇಥವಾ ॥೯೫೨॥ತಾ॥ ದಶಮದಲ್ಲಿ ಬೃಹಸ್ಪತಿ ಇದ್ದರೂ, ಅಥವಾ ಶುಭಗ್ರಹಗಳ ಮಧ್ಯದಲ್ಲಿದ್ದರೂ, ಜಾತಕನು ಪರರ ಇಂಗಿತವನ್ನು ತಿಳಿದು ಅಭಿಮಾನ ಉಳ್ಳವನೂ ಆಗುವನು ॥೯೫೨॥

## ಸಂಚಾರ ವಿಚಾರಃ

ಶ್ಲೋಕ॥ ಮಾನಾಧಿಪೇ ಚರಾಂಶಸ್ಥೇ ಸಂಚಾರಸಹಿತೋ ಭವೇತ್। ಸ್ಥಿರಾಂಶೇ ಸ್ಥೈರ್ಯಮುದ್ದಿಷ್ಟಂ ಉಭಯಂಚ ದ್ವಿದೇಹಗೇ ॥೯೫೩॥ತಾ॥ ದಶಮಾಧಿಪತಿ ಚರರಾಶಿ ನವಾಂಶೆಯಲ್ಲಿದ್ದರೆ ಸದಾ ಸಂಚಾರ ಶೀಲನಾಗುವನು, ಸ್ಥಿರಾಂಶೆ ಯಲ್ಲಿದ್ದರೆ ಸ್ಥೈರ್ಯದಿಂದ ಒಂದೇ ಸ್ಥಳದಲ್ಲಿರುವನು, ದ್ವಿಸ್ವಭಾವನವಾಂಶೆಯಲ್ಲಿದ್ದರೆ ಕೆಲವು ಕಾಲ ಸಂಚಾರಮಾಡುತ್ತಲೂ, ಕೆಲವುಕಾಲ ಸ್ಥಿರವಾಗಿರುತ್ತಲೂ ಈ ಪ್ರಕಾರ ಮಿಶ್ರವಾಗಿರುವನು ॥೯೫೩॥

## ಸೇವಾಕಾದಿ ವಿಚಾರಃ

ಶ್ಲೋಕ।। ಷಷ್ಠೇಶೇಕರ್ಮರಾಶಿಸ್ಥೇ ಕರ್ಮೇಶೇ ಮಂದಸಂಯುತೇ। ಷಷ್ಠಾಧಿ ಪಸ್ಯ ಸಂಬಂಧೇ ಬಹುದಾಸಾನ್ವಿ ನಿರ್ದಿಶೇತ್ ।।೯೫೪।।ತಾ।। ಷಷ್ಠಾಧಿಪತಿ ಕರ್ಮರಾಶಿ ಯಲ್ಲಿದ್ದು ಕರ್ಮಾಧಿಪತಿ ಶನಿಯುಕ್ತನಾದರೂ ಅಥವಾ ಷಷ್ಠಾಧಿಪತಿ ಸಂಬಂಧ ವಾದರೂ ಜಾತಕನು ಅನೇಕ ಸೇವಕರುಳ್ಳವನಾಗುವನು ।।೯೫೪।।

ಶ್ಲೋಕ।। ಕರ್ಮಾಧಿಪಸ್ಥಾಂಶಪತೌ ಶನಿಸಂಬಂಧ ಸಂಯುತೇ। ಕೇಂದ್ರ ತ್ರಿಕೋಣಗೇವಾಪಿ ದಾಸೀದಾಸಾನ್ವಿರ್ದಿಶೇತ್ ।।೯೫೫।।ತಾ।। ಕರ್ಮಾಧಿಪತಿಯಿರುವ ನವಾಂಶಾಧಿಪತಿ ಶನಿಸಂಬಂಧನಾದರೂ, ಅಥವಾ ಕೇಂದ್ರ ತ್ರಿಕೋನಗಳಲ್ಲಿದ್ದರೂ, ಜಾತಕನು ಅನೇಕ ದಾಸೀ ದಾಸಾದಿಗಳುಳ್ಳವನು ।।೯೫೫।।

## ರತ್ನಾಧಿಪ ಯೋಗಃ

ಶ್ಲೋಕ।। ಕರ್ಮೇಶೇ ಲಾಭರಾಶಿಸ್ಥೇ ಲಾಭೇಸೇ ಲಗ್ನಸಂಸ್ಥಿತೇ । ಕರ್ಮರಾಶಿ ಸ್ಥಿತೇ ಶುಕ್ರೇ ರತ್ನವಾನ್ ಸನರೋಭವೇತ್ ।।೯೫೬।।ತಾ।। ಕರ್ಮಾಧಿಪತಿ ಲಾಭದಲ್ಲು ಲಾಭಾಧಿಪತಿ ಲಗ್ನದಲ್ಲೂ, ಕರ್ಮದಲ್ಲಿ ಶುಕ್ರನಿದ್ದರೆ, ಜಾತಕನು ರತ್ನವಂತನಾಗುವನು ।।೯೫೬।।

## ಸ್ವಜನದೂಷಕ ಯೋಗಃ

ಶ್ಲೋಕ।। ದಶಮೇ ಪಾಪಸಂಯುಕ್ತೇ ಲಾಭೇ ಪಾಪಸಮನ್ವಿತೇ। ದುಷ್ಕೃತಿಂ ಲಭತೇ ಮರ್ತ್ಯೋ ಸ್ವಜನಾನಾಂ ವಿದೂಷಕಃ ।।೯೫೭।।ತಾ।। ದಶಮ, ಲಾಭ, ಈ ಎರಡು ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ, ಜಾತಕನು ದುಷ್ಕಾರ್ಯಗಳನ್ನು ಮಾಡುವವನೂ ಸ್ವಜನರನ್ನು ದೂಷಣೆಮಾಡುವವನೂ ಆಗುತ್ತಾನೆ. ।।೯೫೭।।

## ಮೂರ್ಖ ಯೋಗಃ

ಶ್ಲೋಕ।। ಕರ್ಮೇಶೇ ನಾಶರಾಸಿಸ್ಥೇ ಕರ್ಮೇಶೇ ರಾಹು ಸಂಯುತೇ । ಜನದ್ವೇಷೀ ಮಹಾಮೂರ್ಖೋ ದುಷ್ಕೃತಿಂ ಲಭತೇನರಃ ।।೯೫೮।।ತಾ।। ಕರ್ಮಾಧಿಪತಿ ಅಷ್ಟಮದಲ್ಲಿ ರಾಹುಯುಕ್ತನಾಗಿದ್ದರೆ, ಜಾತಕನು ಜನದ್ವೇಷಿಯೂ ಮೂರ್ಖನೂ ದುಷ್ಕೃತಿಯುಳ್ಳವನೂ ಆಗುವನು ।।೯೫೮।।

## ಶಿಶ್ನೋದರ ಪರಾಯಣ ಯೋಗಃ

ಶ್ಲೋಕ।। ಕರ್ಮೇಶೇ ದ್ಯೂನರಾಶಿಸ್ಥೇ ಮಂದಭೌಮ ಸಮನ್ವಿತೇ ।। ದ್ಯೂನೇಶೇ ಪಾಪಸಂಯುಕ್ತೇ ಶಿಶ್ನೋದರ ಪರಾಯಣಃ।।೯೫೯।।ತಾ।। ಕರ್ಮಾಧಿಪತಿ ಸಪ್ತಮದಲ್ಲಿ

ಶನಿ ಕುಜರಯುಕ್ತವಾಗಿದ್ದು ಸಮಾಧಿಪತಿ ಪಾಪಯುಕ್ತನಾದರೆ ಜಾತಕನು ಶಿಶ್ನೋದರಪರಾಯಣನಾಗುವನು ॥೯೫೯॥

## ಮಾನೈಶ್ವರ್ಯ ಪ್ರತಾಪಯೋಗಃ

ಶ್ಲೋಕ॥ ತುಂಗರಾಶಿಂ ಸಮಾಶ್ರಿತ್ಯ ಕರ್ಮೇಶೇ ಗುರುಸಂಯುತೇ । ಭಾಗ್ಯೇಶೇ ಕರ್ಮರಾಶಿಸ್ಥೇ ಮಾನೇಶ್ವರ್ಯ ಪ್ರತಾಪವಾನ್ ॥೯೬೦॥ತಾ॥ ದಶಮಾಧಿಪತಿ ಉಚ್ಚನಾಗಿ ಗುರುಯುತನಾಗಿದ್ದು, ಭಾಗ್ಯಾಧಿಪತಿ ಕರ್ಮಸ್ಥಾನದಲ್ಲಿದ್ದರೆ, ಜಾತಕನು ಮಾನ, ಐಶ್ವರ್ಯ, ಪ್ರತಾಪವುಳ್ಳವನು ಆಗುವನು ।೯೬೦॥

## ಸುಖಜೀವನಯೋಗಃ

ಶ್ಲೋಕ॥ ಲಾಭೇಶೇ ಕರ್ಮರಾಶಿಸ್ಥೇ ಕರ್ಮೇಶೇ ಲಗ್ನೇಸಂಯುತೇ।ತಾ। ಉಭೌಕೇಂದ್ರಗೌವಾಪಿ ಸುಖಜೀವನ ಭಾಗ್ಭವೇತ್ ॥೯೬೧॥ತಾ॥ ಲಾಭಾಧಿಪತಿ ಕರ್ಮದಲ್ಲು , ಕಮಾಧಿಪತಿ ಲಗ್ನದಲ್ಲಿದ್ದರೂ ಅಥವಾ ಅವರಿಬ್ಬರೂ ೧೧-೧೦ ನೇ ಅಧಿಪತಿಗಳು ಕೇಂದ್ರಗಳಲ್ಲಿದ್ದರೂ ಜಾತಕನು ಜಾತಕನು ಸುಖ ಜೀವವುಳ್ಳವನಾಗುವನು ॥೯೬೧॥

## ವಸ್ತ್ರಾಭರಣ ಸೌಖ್ಯಯೋಗಃ

ಶ್ಲೋಕ॥ ಕರ್ಮೇಶೇ ಬಲಸಂಯುಕ್ತೇ ಮಾನೇ ಗುರುಸಮನ್ವಿತೇ । ವಸ್ತ್ರಾ ಭರಣ ಸೌಖ್ಯಾದಿ ಲಭತೇನಾತ್ರ ಸಂಶಯಃ॥೯೬೨॥ತಾ॥ ಕಮಾಧಿಪತಿ ಬಲಿಷ್ಠನಾಗಿ ದಶಮದಲ್ಲಿ ಬೃಹಸ್ಪತಿ ಇದ್ದರೆ, ವಸ್ತ್ರಾಭರಣ ಸೌಖ್ಯವುಳ್ಳವನಾಗುವನು ॥೯೬೨॥

ಇತಿ ಭಾವಫಲಪ್ರಕರಣೇ ದಶಮ ಭಾವಃ

ಲಾಭಭಾವ ಪ್ರಾರಂಭಃ

## ಬಹುಲಾಭ ಯೋಗಃ

ಶ್ಲೋಕ॥ ಲಾಭಾಧಿಪೋಯದಾಲಾಭೇ ತಿಷ್ಠೇತ್ಕೇಂದ್ರ ತ್ರಿಕೋಣಯೋಃ। ಬಹುಲಾಭಂ ತದಾಕುರ್ಯಾದುಚ್ಚ ಸೂರ್ಯಾಂಶಗೋಪಿವಾ ॥೯೬೩॥ತಾ॥ ಲಾಭಾಧಿ ಪತಿ ಲಾಭದಲ್ಲಿದ್ದರೂ ಕೇಂದ್ರತ್ರಿಕೋನಗಳಲ್ಲಿದ್ದರೂ, ಉಚ್ಚ ಸೂರ್ಯಾಂಶೆಯಲ್ಲಿದ್ದರೂ, ಬಹುವಿಧವಾದ ಲಾಭವನ್ನುಂಟು ಮಾಡುವರು ॥೯೬೩॥

## ದ್ವಿಸಹಸ್ರ ನಿಷ್ಕಯೋಗಃ

ಶ್ಲೋಕ॥ ಲಾಭೇಶೇ ಧನರಾಶಿಸ್ಥೇ ಧನೇಶೇ ಕೇಂದ್ರಸಂಸ್ಥಿತೇ । ಗುರುಣಾ ಸಹಿತೇ ಭಾವೇ ಗುರುಲಾಭಂ ವಿನಿರ್ದಿಶೇತ್॥ ಷಟ್ತ್ರಿಂಶೇ ವತ್ಸರೇ ಪ್ರಾಪ್ತೇ ಸಹಸ್ರ ದ್ವಯನಿಷ್ಕಭಾಕ್ ॥೯೬೪॥ತಾ॥ ಲಾಭಾಧಿಪತಿ ದ್ವಿತೀಯದಲ್ಲೂ, ದ್ವಿತೀಯಾಧಿಪತಿ

ಕೇಂದ್ರದಲ್ಲೂ, ಲಾಭಭಾವದಲ್ಲಿ ಗುರುವಿದ್ದರೆ ಜಾತಕನಿಗೆ ಸದ್ಗುರು ಲಾಭವಾಗುವುದು ಮತ್ತು ೩೬ನೇ ವರ್ಷದಲ್ಲಿ ೨೦೦೦ ನಿಷ್ಕದ್ರವ್ಯ ಪ್ರಾಪ್ತಿಯಾಗುವುದು ॥೯೬೪॥

## ಸಹಸ್ರಾರ್ಧ ನಿಷ್ಕಲಾಭಯೋಗಃ

ಶ್ಲೋಕ॥ ಕೇಂದ್ರತ್ರಿಕೋಣಗೇ ಭಾವೇನಾಥೇ ಶುಭಸಮನ್ವಿತೇ । ಚತ್ವಾರಿಂಶೇತು ಸಂಪ್ರಾಪ್ತೇಸ ಸಹಸ್ರಾರ್ಧನಿಷ್ಕಭಾಕ್ ॥೯೬೫॥ತಾ॥ ಲಾಭಭಾವಕ್ಕೆ ಕೇಂದ್ರತ್ರಿಕೋಣಗಳಲ್ಲಿ ಲಾಭಾಧಿಪತಿಯಿದ್ದರೆ ೪೦ನೇ ವರ್ಷದಲ್ಲಿ ಜಾತಕನಿಗೆ ೫೦೦ ನಿಷ್ಕದ್ರವ್ಯ ಪ್ರಾಪ್ತಿಯಾಗುವುದು ॥೯೬೫॥

## ಷಟ್ಸಹಸ್ರ ನಿಷ್ಕ ಪ್ರಾಪ್ತಿಯೋಗಃ

ಶ್ಲೋಕ॥ ಲಾಭಸ್ಥಾನೇ ಗುರುಯುತೇ ಧನೇ ಚಂದ್ರಸಮನ್ವಿತೇ । ಭಾಗ್ಯಸ್ಥಾನಗತೇ ಶುಕ್ರೇ ಷಟ್ಸಹಸ್ರಾಧಿಪೋ ಭವೇತ್ ॥೯೬೬॥ತಾ॥ ಲಾಭದಲ್ಲಿ ಗುರು, ದ್ವಿತೀಯದಲ್ಲಿ ಚಂದ್ರ, ಭಾಗ್ಯದಲ್ಲಿ ಶುಕ್ರನಿದ್ದರೆ ಜಾತಕನಿಗೆ ೬೦೦೦ ಸಹಸ್ರ ನಿಷ್ಕದ್ರವ್ಯ ಪ್ರಾಪ್ತಿಯಾಗುವುದು ॥೯೬೬॥

## ಸಹಸ್ರ ನಿಷ್ಕಪ್ರಾಪ್ತಿಯೋಗಃ

ಶ್ಲೋಕ॥ ಲಾಭೇಸೇ ಲಗ್ನಭಾವಸ್ಥೇ ಲಗ್ನೇಶೇ ಲಾಭಸಂಯುತೇ । ತ್ರಯಸ್ತ್ರಿಂಶೇತು ಸಂಪ್ರಾಪ್ತೇ ಸಹಸ್ರಂ ನಿಷ್ಕಭಾಗ್ಭವೇತ್ ॥೯೬೭॥ತಾ॥ ಲಾಭಾಧಿಪತಿ ಲಗ್ನದಲ್ಲು, ಲಗ್ನಾಧಿಪತಿ ಲಾಭದಲ್ಲೂ ಇದ್ದರೆ, ಜಾತಕನಿಗೆ ೩೩ನೆ ವರ್ಷದಲ್ಲಿ ೧೦೦೦ ನಿಷ್ಕದ್ರವ್ಯ ಪ್ರಾಪ್ತಿಯಾಗುವುದು ॥೯೬೭॥

## ಶ್ರೀಮಂತ ಯೋಗಃ

ಶ್ಲೋಕ॥ ಲಾಭಾಚ್ಚ ಲಾಭಗೇ ಜೀವೇ ಗುರು ಚಂದ್ರೇಣ ಸಂಯುತೇ । ಧನಧಾನ್ಯಾಧಿಪ ಶ್ರೀಮಾ‌ರ್ ರತ್ನದ್ಯಾಭರಣೈರ್ಯುತಃ ॥೯೬೮॥ತಾ॥ ಲಾಭಸ್ಥಾನದಿಂದ ಲಾಭಸ್ಥಾನದಲ್ಲಿ ಗುರು ಚಂದ್ರಯುಕ್ತನಾದರೆ, ಜಾತಕನು ಧನ ಧಾನ್ಯಾದಿಗಳಿಂದ ಕೂಡಿದವನಾಗಿಯೂ, ರತ್ನಾದ್ಯಾಭರಣವುಳ್ಳವನಾಗಿಯೂ, ಶ್ರೀಮಂತನಾಗಿಯೂ ಆಗುವನು ॥೯೬೮॥

## ವಿವಾಹಾತ್ಪರ ಭಾಗ್ಯ ಯೋಗಃ

ಶ್ಲೋಕ॥ ಧನೇಶೇ ಲಾಭರಾಶಿಸ್ಥೇ ತದೀಶೇ ಧನರಾಶಿಗೇ । ವಿವಾಹಾತ್ಪರ ತಶ್ಚೈವ ಬಹುಭಾಗ್ಯಂ ಸಮಾದಿಶೇತ್ ॥೯೬೯॥ತಾ॥ ಧನಾಧಿಪತಿ ಲಾಭದಲ್ಲೂ ಲಾಭಾಧಿಪನು ಧನದಲ್ಲಿಯೂ ಇದ್ದರೆ ಜಾತಕನಿಗೆ ವಿವಾಹಾತ್ಪರದಲ್ಲಿ ಬಹುಭಾಗ್ಯ ಪ್ರಾಪ್ತಿಯಾಗುವುದು ॥೯೬೯॥

## ಭ್ರಾತೃಮೂಲಾದ್ಧನ ಲಾಭಯೋಗಃ

ಶ್ಲೋಕ॥ ದೈರ್ಯೇಶೇ ಲಾಭರಾಶಿಸ್ಥೇ ಲಾಭೇಶೇ ಭ್ರಾತೃ ಸಂಸ್ಥಿತೇ। ಭ್ರಾತೃಭಾವಾದ್ಧನ

ಪ್ರಾಪ್ತಿರ್ದಿವ್ಯಾಭರಣ ಸಂಯುತಃ ।।೯೭೦।। ತೃತೀಯಾಧಿಪತಿ ಲಾಭದಲ್ಲೂ ಲಾಭಾಧಿಪತಿ ತೃತೀಯದಲ್ಲೂ ಇದ್ದರೆ ಜಾತಕನಿಗೆ ಭಾತೃವಿನ ಧನವೂ ದಿವ್ಯಾಭರಣವೂ ಪ್ರಾಪ್ತಿಯಾಗುವುದು ।।೯೭೦।।

## ಸೂರ್ಯಯುಕ್ತಾವಲೋಕಿತ ಫಲಂ

ಶ್ಲೋಕ।। ಸೂರ್ಕೇಣ ಯುಕ್ತೇಚ ವಿಲೋಕಿತೇವಾ ಲಾಭಾಲಯೇ ತಸ್ಯ ಗಣಾತ್ರ ಚೇತ್ಸ್ಯಾತ್। ಭೂಪಾಲಕಶ್ಚೋರಕುಲಾತ್ಕಲೇರ್ವಾ ಚತುಷ್ಪದಾ ದೇರ್ಬಹುದಾ ಧನಾಪ್ತಿಃ ।।೯೭೧।।ತಾ।। ಲಾಭಾಸ್ಥಾನವು ಸೂರ್ಯನಿಂದ ಕೂಡಿದರೂ, ನೋಡಲ್ಪಟ್ಟರೂ, ಸೂರ್ಯಾಂಶೆಯಲ್ಲಿದ್ದರೂ ಜಾತಕನಿಗೆ ರಾಜನಿಂದ ಯೂ ಕಳ್ಳರಿಂದ ವಿವಾಹದಿಂದ ಯೂ ಚತುಷ್ಪದ ಮೂಲದಿಂದ ಧನಲಾಭವಾಗುವುದು ।।೯೭೧।।

## ಚಂದ್ರಯುಕ್ತ ದೃಷ್ಯ ಫಲಂ

ಶ್ಲೋಕ।। ಚಂದ್ರೇಣ ಯುಕ್ತಂಚ ವಿಲೋಕಿತೇವಾ ಲಾಭಾಲಯೇ ಚಂದ್ರ ಗಣಾಶ್ರಿತಂಚೇತ್ । ಜಲಾಶಯಸ್ತ್ರೀ ಗಜವಾಜಿವೃದ್ಧಿಃ ಪೂರ್ಣೇಭವೇತ್ ಕ್ಷೀಣತರೇ ವಿಲೋಮಂ ।।೯೭೨।।ತಾ।। ಲಾಭಸ್ಥಾನದಲ್ಲಿ ಪೂರ್ಣಚಂದ್ರನಿದ್ದರೂ, ಅಥವಾ ಪೂರ್ಣಚಂದ್ರನು ದೃಷ್ಟಿಯಿದ್ದರೂ, ಚಂದ್ರಷಡ್ವರ್ಗದಲ್ಲಿದ್ದರೂ, ಜಾತಕನಿಗೆ ಗಜ, ಅಶ್ವ ಈ ಮೊದಲಾದದ್ದು ಪ್ರಾಪ್ತಿಯಾಗುವುದು, ಕ್ಷೀಣಚಂದ್ರನಿದ್ದರೆ ಈ ಫಲ ವಿಪರೀತವಾಗಿ ಪರಿಣಾಮವಾಗುವುದು. ಅಂದರೆ ಮೇಲೆ ಹೇಳಿದ ಶುಭ ಫಲಗಳು ನಷ್ಟವಾಗುತ್ತವೆಂದು ಚಂದ್ರನ ವೃದ್ಧಿ ಕ್ಷೀಣತ್ವದ ಮೇಲೆ ನಿರ್ಣೈಸತಕ್ಕದ್ದು ।।೯೭೨।।

## ಕುಜ ದೃಷ್ಟಯುತಫಲಂ

ಶ್ಲೋಕ।। ಲಾಭಾಲಯಂ ಮಂಗಲಯುಕ್ತ ದೃಷ್ಟಂ ಪ್ರಕೃಷ್ಟಭೂಷಾಮಣಿ ಹೇಮಲಬ್ಧಃ। ವಿಚಿತ್ರಯಾತ್ರಾ ಬಹು ಸಾಹಸೀಸ್ಯಾ ನ್ನಾನಾಕಲಾಕೌಶಲಬುದ್ಧಿಯೋಗ್ಯೇ ।।೯೭೩।।ತಾ।। ಲಾಭಸ್ಥಾನದಲ್ಲಿ ಕುಜನಿದ್ದರೂ ಅಥವಾ ಕುಜದೃಷ್ಟಿಯಿದ್ದರೂ ಆ ಜಾತಕನಿಗೆ ಉತ್ತಮ ಪ್ರಕಾರವಾದ ಭೂಷಣಗಳು ರತ್ನ ಮತ್ತು ಸುವರ್ಣ ಸಹ ಪ್ರಾಪ್ತಿಯಾಗುವುದು. ಅಲ್ಲದೆ ಪ್ರಯಾಣದಲ್ಲಿ ನಾನಾ ಪ್ರಕಾರದ ಸಾಹಸ ಮಾಡುವನು. ಅನೇಕ ಕಲಾಕುಶಲನು, ಬುದ್ಧವಂತನೂ ಆಗುವನು ।।೯೭೩।।

## ಬುಧಯುಕ್ತ ದೃಷ್ಟಫಲಂ

ಶ್ಲೋಕ।। ಲಾಭೇ ಸೌಮ್ಯಗಣಾಶ್ರಿತೇ ಸತಿಯುತೇ ಸೌಮ್ಯೇನ ಸಂವೀಕ್ಷಿತೇ । ನಾನಾಕಾವ್ಯ ಕಲಾ ಕಲಾಪವಿಧಿನಾ ಶಿಲ್ಪೇನ ಲಿಪ್ತ್ಯಾಸುಖಂ ।। ಯುಕ್ತಿಂ ದ್ರವ್ಯ

ಮಯೋಭವೇ ದ್ದನಚಯಃ ಸತ್ಸಾಹಸ್ಯೆರುದ್ಯಮ್ಯೈ । ನಖ್ಯಂಚಾಪಿ ವಣಿಗ್ಜನ್ಯೆರ್ಬಹುತರಂ ಕ್ಲೀಬೈರ್ನ್ನರಾಣಾಂ ಕೀರ್ತಿತಂ ॥೯೭೪॥ತಾ॥ ಲಾಭಸ್ಥಾನವು ಬುಧನಿಂದ ಯುಕ್ತವಾದರೂ, ಬುಧದೃಷ್ಟವಾದರೂ, ಜಾತಕನು ಅನೇಕ ಪ್ರಕಾರವಾದ ಕಾವ್ಯ ಕಲಾ, ಶಿಲ್ಪ, ಮೊದಲಾದದ್ದನ್ನು ತಿಳಿದವನಾಗುವನು ಮತ್ತು ಯುಕ್ತಿಯಿಂದ ಧನವನ್ನು ಸಂಪಾದಿಸುವನು. ಸಾಹಸದ ಉದ್ಯೋಗದಿಂದ ದ್ರವಾರ್ಜನೆ ಮಾಡುವನು, ವ್ಯಾಪಾರ ಮಾಡುವ ಜನರಲ್ಲಿ ಪ್ರೀತಿಯುಳ್ಳವನು, ನಪುಂಸಕರಲ್ಲಿ ಸ್ನೇಹ ಮಾಡುವನು. ಬುದ್ಧಿಶಾಲಿಯೆಂದು ಜನರಿಂದ ಅನ್ನಿಸಿಕೊಳ್ಳುವನು ॥೯೭೪॥

## ಗುರುಯುಕ್ತ ದೃಷ್ಟಫಲಂ

ಶ್ಲೋಕ॥ ಯಜ್ಞಕ್ರಿಯಾಸಾಧುಜನಾನು ಯಾತೋರಾಜಾಶ್ರಿತೋತ್ಕೃಷ್ಟ ಕೃಪೋನರಸ್ಯಾತ್ । ದ್ರವ್ಯೇಣಹೇಮ ಪ್ರಚುರೇಣಯುಕ್ತೋ ಲಾಭೇ ಗುರೋರ್ವರ್ಗನಿರೀಕ್ಷಣಂಚೇತ್ ॥೯೭೫॥ತಾ॥ ಲಾಭಸ್ಥಾನಕ್ಕೆ ಗುರುದೃಷ್ಟಿಯಿದ್ದರೂ ಅಲ್ಲಿಯೇ ಗುರುವಿದ್ದರೂ ಗುರುಷಡ್ವರ್ಗದಲ್ಲಿದ್ದರೂ ಜಾತಕನು ಯಜ್ಞಕ್ರಿಯೆ ಮಾಡುವನು, ಸಾಧುಜನರಲ್ಲಿ ಸಮಾಗಮ ಮಾಡುವನು, ರಾಜಾಶ್ರಿತನು, ದೊಡ್ಡ ದಯಾಳು, ಸುವರ್ಣಪ್ರಧಾನವಾದ ಸಂಪತ್ತುಳ್ಳವನೂ ಆಗುವನು ॥೯೭೫॥

## ಶುಕ್ರಯುಕ್ತ ದೃಷ್ಟಫಲಂ

ಶ್ಲೋಕ॥ ಲಾಭಾಲಯಂ ಭಾರ್ಗವವರ್ಗ ಯಾತಂ ಯುತೇಕ್ಷಿತಂವಾ ಯದಿ ಭಾರ್ಗವೇಣ । ವೇಶ್ಯಾಜನೈರಾಪಿ ಸಮಾಗಮೈರ್ವಾಸದ್ರೌಪ್ಯಮುಕ್ತಪ್ರಚುರಾಸ್ವಲಬ್ಧಿಃ ॥೯೭೬॥ತಾ॥ ಲಾಭಸ್ಥಾನವು ಶುಕ್ರಷಡ್ವರ್ಗದಲ್ಲಿದ್ದರೂ ಶುಕ್ರಯುಕ್ತೇಕ್ಷಿತವಾದರೂ ಜಾತಕನು ವೇಶ್ಯಾಜನಗಳ ಸಮಾಗಮಾನುವರ್ತಿಯಾಗಿಯೂ ಬೆಳ್ಳಿ, ಮುತ್ತು, ಸುವರ್ಣ, ಮೊದಲಾದವುಗಳು ಪ್ರಾಪ್ತಿಯಾಗುತ್ತವೆಂದು ತಿಳಿಯತಕ್ಕದ್ದು ॥೯೭೬॥

## ಶನಿಯುಕ್ತೇ ಕ್ಷಿತಫಲಂ

ಶ್ಲೋಕ॥ ಲಾಭವೇಶ್ಮನಿ ಶನೀಕ್ಷಿತ ಯುಕ್ತೇ ತದ್ಗಣೇನ ಸಹಿತೇಸತಿಪುಂಸಾಂ। ನೀಲಲೋಹಮಹಿಷೀಗಜ ಲಾಭೋಗ್ರಾಮ ವೃಂದಪುರಗೌರವಮಿಶ್ರಃ ॥೯೭೭॥

ತಾ॥ ಲಾಭಸ್ಥಾನವು ಶನಿಷಡ್ವರ್ಗದಲ್ಲಿದ್ದರೂ, ಶನಿಯುಕ್ತವಾದರೂ, ಶನಿವೀಕ್ಷಿತವಾದರೂ ಜಾತಕನಿಗೆ ನೀಲವರ್ಣದ ಲೋಹಗಳು, ಮಹಿಷ, ಗಜ, ಲಾಭವಾಗುವುದು; ಗ್ರಾಮವೃಂದಕ್ಕೂ ಪಟ್ಟಣಕ್ಕೂ ಅಧಿಪತಿಯಾಗಿಯೂ ಆಗುವನು ॥೯೭೭॥

## ಲಾಭಭಾವಶುಭ ಷಡ್ವರ್ಗ ಫಲಂ

ಶ್ಲೋಕ।। ಯುತ್ರೇಕ್ಷಿತಂ ಲಾಭಗೃಹೇಶ ಖಾಖ್ಯೇ ವರ್ಗೇಶುಬಾನಾಂಶ ಮವಸ್ಥಿತೇಚ । ಲಾಭೋನರಾಣಾಂ ಬಹುಧಾಥವಾ ಸ್ಮಿಸರ್ವಗ್ರಹೈರ್ಯುಕ್ತ ನಿರೀಕ್ಷ್ಯ ಮಾಣೇ ।।೯೭೮।।ತಾ।। ಲಾಭಸ್ಥಾನದಲ್ಲಿ ಶುಭಗ್ರಹಗಳಿದ್ದರೂ, ಸರ್ವಗ್ರಹಗಳಿಂದ ನೋಡಲ್ಪಟ್ಟರೂ, ಸರ್ವಗ್ರಹಗಳು ಲಾಭದಲ್ಲಿದ್ದರೂ, ಜಾತಕನು ಅನೇಕ ಲಾಭವನ್ನು ಆಯಾಸವಿಲ್ಲದೆ ಹೊಂದುವನು ।।೯೭೮।।

ಇತಿಭಾವಫಲ ಪ್ರಕರಣೇ ಲಾಭಭಾವಃ

ವ್ಯಯಭಾವ ಫಲಂ

## ರಾಜದಂಡ ಯೋಗಃ

ಶ್ಲೋಕ।। ವ್ಯಯಾಲಯೇಕ್ಷೀಣಕರಃಕಲಾರ್ವಾ ಸೂರ್ಯೋಥವಾದ್ವಾವಪಿ ತತ್ರ ಸಂಸ್ಥೌ। ದ್ರವ್ಯಂಹರೇ ದ್ಭೂಮಿಪತಿಸ್ತುತಸ್ಯ ವ್ರಯಾಲಯೇವಾ ಕುಜದೃಷ್ಟಿ ಯುಕ್ತೇ ।।೯೭೯।।ತಾ।। ವ್ಯಯಸ್ಥಾನದಲ್ಲಿ ಕ್ಷೀಣಚಂದ್ರ, ಸೂರ್ಯನಲ್ಲಿ ಯಾರಿದ್ದರೂ, ಅಥವಾ ಇವರಿಬ್ಬರಿದ್ದರೂ, ಕುಜದೃಷ್ಟಿ ಇದ್ದರೆ ಜಾತಕನ ದ್ರವ್ಯವನ್ನು ರಾಜನು ದಂಡರೂಪವಾಗಿ ಅಪಹರಿಸುವನು ।।೯೭೯।।

## ಧನನಾಶ ಯೋಗಃ

ಶ್ಲೋಕ।। ಪೂರ್ಣೇಂದುಸೌಮ್ಯೇಜ್ಯಸಿತಾ ವ್ಯಯಸ್ಥಾಃ ಕುರ್ವಂತಿ ಸೌಸ್ಥ್ಯಂ ಧನಸಂಚಯಸ್ಯ । ಭಾಂತ್ಯಸ್ಥಿತೇ ಸೂರ್ಯಸುತೇಕುಜೇನ ಯುಕ್ತೇಕ್ಷಿತೇ ವಿತ್ತ ವಿನಾಶಂಸ್ಯಾತಾ ।।೯೮೦।।ತಾ।। ಲಾಭಸ್ಥಾನದಲ್ಲಿ ಪೂರ್ಣಚಂದ್ರ, ಬುಧ, ಗುರು, ಶುಕ್ರ, ಈ ನಾಲ್ಕು ಗ್ರಹಗಳಿದ್ದರೆ ಧನವ್ಯಯವಾಗುವುದು, ರಾಶಿಯ ಅಂತ್ಯ ಅಂದರೆ ವ್ಯಯಭಾವದ ಅಂತ್ಯದಲ್ಲಿ ಶನಿ, ಕುಜರಿದ್ದರೂ, ಶನಿ ಕುಜರಿಂದ ನೋಡಲ್ಪಟ್ಟರೂ ಜಾತಕನ ದ್ರವ್ಯವೂ ನಾಶವಾಗುವುದು ।।೯೮೦।।

## ಪಾಪಮೂಲಾದ್ಧನವ್ರಯ ಯೋಗಃ

ಶ್ಲೋಕ।। ವ್ಯಯೇಪಾಪ ಸಮಾಯುಕ್ತೇ ತದೀಶೇ ಪಾಪಖೇಚರೇ। ಪಾಪ ಗ್ರಹೇಣ ಸಂದೃಷ್ಟೇ ಪಾಪಮೂಲಾದ್ಧನವ್ರಯಃ।।೯೮೧।।ತಾ।। ವ್ಯಯದಲ್ಲಿ ಪಾಪಗ್ರಹವಿದ್ದು ವ್ಯಯಾಧಿಪತಿ ಪಾಪಗ್ರಹವಾಗಿ, ವ್ಯಯಸ್ಥಾನಕ್ಕೆ ಪಾಪಗ್ರಹದೃಷ್ಟಿ ಯಿದ್ದರೆ ಜಾತಕನು ಪಾಪಮೂಲದಿಂದ ಧನವ್ರಯಮಾಡುವನು ।।೯೮೧।।

## ಧರ್ಮಮೂಲಾದ್ಧನ ವ್ಯಯಯೋಗಃ

ಶ್ಲೋಕ।। ವ್ಯಯಾಧಿಪ ಸಮಾಯುಕ್ತ ನವಭಾಗ ಪತೌಶುಭೇ । ಶುಭಾಂಶೇ ಶುಭಮಧ್ಯಸ್ಥೇ ಧರ್ಮಮೂಲಾದ್ಧನವ್ರಯಃ ।।೯೮೨।। ಗುರುಶುಕ್ರೌ ವ್ಯಯೇ ವಾಪಿ

ಬುಧಚಂದ್ರ ನಿರೀಕ್ಷಿತೌ। ಪಾರಾವತಾದಿಭಾಗಸ್ಥೌ ಧರ್ಮಮೂಲಾದ್ಧನ ವ್ರಯಃ ॥೯೮೩॥ ಶುಭೇನ ಕರ್ಮನಾಥೇನ ದೃಷ್ಟಿಯುಕ್ತೇ ವ್ಯಯೇಶ್ವರೇ । ಸ್ವೋಚ್ಚ ಮಿತ್ರಸ್ವ ವರ್ಗಸ್ಥೇ ಧರ್ಮಮೂಲಾದ್ಧನವ್ರಯಃ ॥೯೮೪॥ತಾ॥ ವ್ಯಯಾಧಿಪತಿ ಇದ್ದ ನವಾಂಶಾ ಧಿಪತಿಯು, ಶುಭಗ್ರಹವಾಗಿ ಶುಭಗ್ರಹ ನವಾಂಶೆಯಲ್ಲಿದ್ದರೂ ಶುಭಗ್ರಹಗಳ ಮಧ್ಯದಲ್ಲಿದ್ದರೂ, ಜಾತಕನು ಧರ್ಮಮೂಲದಿಂದ ಧನವ್ರಯ ಮಾಡುವನು ॥೯೮೩॥ ಗುರುಶುಕ್ರರು ವ್ಯಯದಲ್ಲಿದ್ದು ಬುಧಚಂದ್ರರಿಂದ ನೋಡಲ್ಪಟ್ಟು ಪಾರಾವತಾದಿ ಶುಭಾಂಶೆಯಲ್ಲಿದ್ದರೆ, ಜಾತಕನು ಧರ್ಮಮಾರ್ಗದಿಂದ ಧನವ್ರಯ ಮಾಡುವನು. ಶುಭಗ್ರಹವಾದ ಕರ್ಮಾಧಿಪತಿಯಿಂದ ವ್ಯಯಾಧಿಪತಿಯು ನೋಡಲ್ಪಟ್ಟು ವ್ಯಯಾಧಿಪತಿ ಉಚ್ಚ ಮಿತ್ರವರ್ಗಗಳಲಿದ್ದರೆ, ಜಾತಕನು ಧರ್ಮಮಾರ್ಗವಾಗಿ ಧನವ್ರಯಮಾಡುವನು ॥೯೮೪॥

## ಶತ್ರುಮೂಲಾದ್ಧನ ವ್ರಯಯೋಗಃ

ಶ್ಲೋಕ॥ ವ್ಯಯೇಶೇಬಲಹೀನೇವಾ ಶತ್ರುನಾಥಯುತೇಕ್ಷಿತೇ । ಗುಳಿಕಾಹಿ ಸಮಾಯುಕ್ತೇ ಶತ್ರುಮೂಲಾದ್ಧನವ್ರಯಃ॥೯೪೫॥ತಾ॥ ವ್ಯಯಾಧಿಪತಿ ಬಲಹೀನ ನಾಗಿ ಶತ್ರುಯುಕ್ತನಾದರೂ ನೋಡಲ್ಪಟ್ಟರೂ, ಗುಳಿಕ, ರಾಹುಯುಕ್ತನಾಗಿದ್ದರೂ ಶತ್ರುಮೂಲದಿಂದ ಧನವ್ಯಯವಾಗುವುದು ॥೯೪೫॥

## ಸ್ತ್ರೀಮೂಲಾದ್ಧನ ವ್ರಯಯೋಗಃ

ಶ್ಲೋಕ॥ ವ್ಯಯೇಶೇ ದಾರನಾಥೇನ ಬಲಹೀನೇನ ತೇನತು। ದೃಷ್ಟೇಯು ತೇವಾಕ್ರೂರಾಂಶೇ ಸ್ತ್ರೀಹೇತೋ ರ್ಧನನಾಶನಂ ॥೯೪೬॥ತಾ॥ ವ್ಯಯಾಧಿಪತಿ ಬಲಹೀನನಾಗಿ ಸಪ್ತಮಾಧಿಪತಿಯನ್ನು ಕೂಡಿದರೂ ದೃಷ್ಟಿಯುಕ್ತನಾದರೂ ಕ್ರೂರಾಂಶೆಯಲ್ಲಿದ್ದರೆ ಸ್ತ್ರೀಮೂಲಾದ್ಧನ ನಾಶವಾಗುವುದು ॥೯೮೬॥

## ಭ್ರಾತೃಮೂಲಾದ್ಧನ ವ್ರಯಯೋಗಃ

ಶ್ಲೋಕ॥ ತಾದೃಶೇ ವ್ಯಯನಾಥೇಸ್ಮಿ ದೃಷ್ಟೇ ಯುಕ್ತೇಥವಾಭವೇತ್। ತಥಾ ವಿಧೇನ ಭೌಮೇನ ಭ್ರಾತೃಮೂಲಾದ್ಧನವ್ರಯಃ ॥೯೮೭॥ತಾ॥ ವ್ಯಯಾಧಿಪತಿ ಬಲಹೀನನಾಗಿ ಅಂಗಾರಕ ಯುಕ್ತನಾದರೂ, ನೋಡದರೂ ಕ್ರೂರಾಂಶೆಯಲ್ಲಿದ್ದರೆ ಭ್ರಾತೃಮೂಲದಿಂದ ಧನವ್ರಯವಾಗುವುದು ॥೯೮೭॥

## ಮಾತೃಮೂಲಾದ್ಧನವ್ರಯ ಯೋಗಃ

ಶ್ಲೋಕ॥ ಏವಂಮಾತೃಪಯೋಗೇನ ಯುತೇ ದೃಷ್ಟೇ ವ್ಯಯಾಧಿಪೇ। ಕ್ರೂರಾ-ನ್ವಿತೇ ಕ್ರೂರಭಾಗೇ ಮಾತೃಮೂಲಾದ್ಧನವ್ರಯಃ ॥೯೮೮॥ತಾ॥ ವ್ಯಯಾಧಿಪತಿಯು ಬಲಹೀನನಾಗಿ ಮಾತೃಸ್ಥಾನಾಧಿಪತಿಯಿಂದ ಕೂಡಿದ್ದರೂ ನೋಡಲ್ಪಟ್ಟರೂ ಕ್ರೂರಾಂಶೆ

ಯಲ್ಲಿದ್ದರೂ ಕ್ರೂರಾಂಶೆಯಲ್ಲಿದ್ದರೆ ಮಾತೃಮೂಲದಿಂದ ಧನವ್ರಯವಾಗುವುದು ||೮೮೮||

## ಪುತ್ರಮೂಲಾದ್ಧನವ್ರಯ ಯೋಗಃ

ಶ್ಲೋಕ|| ಪುತ್ರಸ್ಥಾನೇಶ್ವರೇಣಾಪಿ ಬಲಹೀನೇನ ಸಂಯುತೇ| ದೃಷ್ಟೇ ವ್ಯಯೇಶೇ ಕ್ರೂರಾಂಶೇ ಪುತ್ರಮೂಲಾದ್ಧನವ್ರಯಃ ||೮೮೯||ತಾ|| ಪುತ್ರಸ್ಥಾನಾಧಿ ಪತಿಯು ಬಲಹೀನವಾದ ವ್ಯಯಾಧಿಪತಿಯೊಂದಿಗೆ ಕೂಡಿದ್ದರೂ ನೋಡಲ್ಪಟ್ಟರೂ ಕ್ರೂರಾಂಶೆಯಲ್ಲಿದ್ದರೆ ಪುತ್ರಮೂಲದಿಂದ ಧನವ್ರಯವಾಗುವುದು ||೮೮೯||

## ಪಿತೃಮೂಲಾದ್ಧನವ್ಯಯ ಯೋಗಃ

ಶ್ಲೋಕ|| ಪಿತೃಸ್ಥಾನೇಶ್ವರಸ್ಯಾಪಿ ಕಾರಕೇಣಾಪಿ ಸಂಯುತೇ | ವ್ಯಯೇಶೇ ದೃಷ್ಟಿಸಂಭಂಧೇ ಪಿತೃಮೂಲಾದ್ಧನವ್ಯಯಃ ||೮೯೦||ತಾ|| ಪಿತೃಸ್ಥಾನಾಧಿಪತಿಯಾಗಲೀ ಸೂರ್ಯನಾಗಲೀ, ಬಲಹೀನನಾದ ವ್ಯಯಾಧಿಪತಿಯ ಸಂಗಡ ಕೂಡಿದ್ದರೂ, ನೋಡಲ್ಪಟ್ಟರೂ, ಜಾತಕನಿಗೆ ಪಿತೃಮೂಲಾದ್ಧನವ್ರಯವಾಗುವುದು ||೮೯೦||

## ದೇಹವೈಕಲ್ಯ ವಿಚಾರಃ

ಶ್ಲೋಕ|| ಬಲಹೀನೇರಿಃಫೇಶೇ ಕ್ರೂರರಾಶ್ಯಂಶಕೇ ಪಿವಾ | ನೀಚಾಂಶಕೇ ನೀಚರಾಶೌದೇಹವೈಕಲ್ಯಮಾದಿಶೇತ್ ||೮೯೧||ತಾ|| ಬಹುಪಾಪ ಸಮಾಯೋಗೇ ವ್ಯಯೇತದ್ಭಾವನಾಯಕೇ| ಮಂದಮಾಂದಿಸುಸಂಯುಕ್ತೇ ದೇಹವ್ಯಕಲ್ಯ ಮಾದಿಶೇತ್ ||೮೯೨||ತಾ|| ವ್ಯಯಾಧಿಪತಿ ಬಲಹೀನನಾಗಿ ಕ್ರೂರಾಂಶೆಯಲ್ಲಿದ್ದರೂ ನೀಚನಾಗಿದ್ದರೂ, ನೀಚಾಂಶೆಯಲ್ಲಿದ್ದರೂ ದೇಹವೈಕಲ್ಯವಾಗುವುದು.

## ನೇತ್ರ ವಿಚಾರಃ

ಶ್ಲೋಕ|| ನೇತ್ರೇಶೇ ಶುಭಸಂಯುಕ್ತೇ ಶೋಭನಾಂಶ ಸಮನ್ವಿತೇ | ಶುಭ ಖೇಚರಸಂಬಂಧೇ ತನ್ನೇತ್ರಸ್ಯಶುಭಂವದೇತ್ ||೮೯೩||ತಾ|| ಅನ್ಯಥಾಚೇದ್ವದೇನ್ನಾಶಂ ಪಾದಾರಯೋರಪಿ ತತ್ತದಾ|| ತತ್ಪಪಂಚಾದಿಕಂ ಸರ್ವಂ ಧನಭಾವೇ ಪ್ರದರ್ಶಿತಂ ||೮೯೪||

ತಾ|| ವ್ಯಯಾಧಿಪತಿ ಶುಭಯುತನಾದರೂ, ಶುಭಗ್ರಹ ನವಾಂಶೆಯಲ್ಲಿದ್ದರೂ ಶುಭಗ್ರಹಯುಕ್ತ ದೃಷ್ಟಿ ಸಂಬಂಧವಾದರೂ ನೇತ್ರಕ್ಕೆ (ವಾಮ ನೇತ್ರಕ್ಕೆ) ಸೌಖ್ಯವನ್ನೂ, ನೇತ್ರರೋಗರಾಹಿತ್ಯವನೂ ಹೇಳತಕ್ಕದ್ದು ಅನ್ಯಥಾ ಪಾಪಸಂಬಂಧವಿದ್ದರೆ ರೋಗವನ್ನು ಹಾನಿಯನ್ನೂ ಹೇಳಬೇಕು ಮತ್ತು ವಾಮಪಾದಕ್ಕೆ ಸಹ ಈ ಫಲವನ್ನು ಹೇಳತಕ್ಕದ್ದು ಉಳಿದ ವಿಷಯಗಳ ಧನಭಾವದೆಯಲ್ಲಿ ವಿಸ್ತಾರವಾಗಿ ಹೇಳಿರುತ್ತೆ ||೮೯೩-೮೯೪||

## ಡೋಲಾ ಶಯನ ಸೌಖ್ಯವಿಚಾರಃ

ಶ್ಲೋಕ|| ಶುಭಗ್ರಹಾಣಾಂ ಸಂಬಂಧೇ ವ್ಯಯೇತದ್ಭಾವನಾಯಕೇ । ಡೋಲಾಯಮಾನಂ ಪ್ರಪದೇಚ್ಛಯನಾದಿ ಸುಖಂವದೇತ್ ||೯೯೫||ತಾ|| ವ್ಯಯಾಧಿಪತಿ ಶುಭಗ್ರಹಗಳ ಸಂಬಂಧದಲ್ಲಿದ್ದು ವ್ಯಯಸ್ಥಾನವು ಶುಭಗ್ರಹ ಸಂಬಂಧವುಳ್ಳದ್ದಾಗಿದ್ದರೆ ಜಾತಕನಿಗೆ ಡೋಲಾಯಮಾನವಾದ ಹಾಸಿಗೆಯಲ್ಲಿ ಮಲಗಿಕೊಂಡು ಸುಖಪಡುವನು ||೯೯೫||

## ಪರ್ಯಂಕೇ ಶಯನಯೋಗಃ

ಶ್ಲೋಕ|| ವ್ಯಯೇಶೇಸ್ವೋಚ್ಚರಾಶಿಸ್ಥೇ ಶುಭವರ್ಗಸಮನ್ವಿತೇ । ಶುಭಗ್ರಹೇಣ ಸಂದೃಷ್ಟೇ ಪರ್ಯಂಕ ಶಯನಂ ವದೇತ್ ||೯೯೬||ತಾ|| ವ್ಯಯಾಧಿಪತಿ ಉಚ್ಚನಾಗಿದ್ದು ಶುಭ ಷಡ್ವರ್ಗದಲ್ಲಿದ್ದರೆ ಅಥವಾ ಶುಭಗ್ರಹಗಳ ದೃಷ್ಟಿಯಿದ್ದರೂ ಜಾತಕನು ಮಂಚದ ಮೇಲೆ ಮಲಗುವನು ||೯೯೬||

## ವಿಚಿತ್ರ ಮಂಚೇ ಶಯನ ಯೋಗಃ

ಶ್ಲೋಕ|| ವಿಚಿತ್ರಮಂಚ ಶಯನಂ ವ್ಯಯೇಶೇ ಪರಮೋಚ್ಚಗೇ । ಭಾಗ್ಯ ನಾಥೇನವಾದೃಷ್ಟೇ ಮಣಿರತ್ನ ವಿಭೂಷಿತಂ ||೯೯೭||ತಾ|| ವ್ಯಯಾಧಿಪತಿ ಪರಮೋಚ್ಚನಾಗಿ ಭಾಗ್ಯಸ್ಥಾನಾಧಿಪತಿಯಿಂದ ನೋಡಲ್ಪಟ್ಟರೆ ಜಾತಕನು ವಿಚಿತ್ರವಾದ ಮಣಿರತ್ನಾದಿ ಖಚಿತವಾದ ಮಂಚದ ಮೇಲೆ ಮಲಗಿ ಸುಖಿಸುವನು ||೯೯೭||

## ಶಯನ ಸುಖರಹಿತ ಯೋಗಃ

ಶ್ಲೋಕ|| ಪಾಪಗ್ರಹಾಣಾಂ ಸಂಬಂಧೇ ವ್ಯಯೇತದ್ಭಾವನಾಯಕೇ । ಕ್ರೂರಾಂಶೇ ಕ್ರೂರಸಂಬಂಧೇ ಶಯನಾದಿ ಸಖಂ ನಹಿ ||೯೯೮||ತಾ|| ವ್ಯಯಾಧಿಪತಿಯು ಅಥವಾ ವ್ಯಯಭಾವವು ಪಾಪಗ್ರಹಗಳ ಸಂಬಂಧಪಡೆದರೆ ಶಯನ ಸೌಖ್ಯವಿರುವುದಿಲ್ಲ ||೯೯೮||

ಶ್ಲೋಕ|| ನೀಚೇವ್ಯಯೇವ ಲಗ್ನೇಶೇ ಶತ್ರುನಾಥೇನ ವೀಕ್ಷಿತೇ । ಮಂದ ಮಾಂದ್ಯ ಸುಸಂಯುಕ್ತೇ ಶಯನಾದಿ ಸುಖಂನಹಿ ||೯೯೯|| ವ್ಯಯದಲ್ಲಿ ನೀಚ ಗ್ರಹವಿದ್ದರೂ, ಲಗ್ನಾಧಿಪತಿ ಶತ್ರುಸ್ಥಾನಾಧಿಪತಿಯಿಂದ ನೋಡಲ್ಪಟ್ಟರೂ, ಮಂದಮಾಂದಿ, ರಾಹುಯುಕ್ತವಾದರೂ ಜಾತಕನಿಗೆ ಶಯನ ಸೌಖ್ಯವಿಲ್ಲ ||೯೯೯||

## ನರಕಪ್ರಾಪ್ತಿ ಯೋಗಃ

ಶ್ಲೋಕ|| ವ್ಯಯೇಶೇ ಪಾಪರಾಶ್ಯಂಶೇ ಕ್ರೂರಾಂಶೇ ಕ್ರೂರಸಂಯುತೇ । ಪಾಪಗ್ರಹೇಣ ಸಂದೃಷ್ಟೇನರಕೇ ನಿಪತಿಷ್ಯತಿ ||೧೦೦೦||ತಾ|| ವ್ಯಯಾಧಿಪತಿ

ಪಾಪಗ್ರಹರಾಶಿಯಲ್ಲಿದ್ದು ಕ್ರೂರಷಷ್ಠ್ಯಂಶೆಯಲ್ಲಿದ್ದರೂ ಪಾಪಗ್ರಹಷಡ್ವರ್ಗದಲ್ಲಿದ್ದರೂ ಪಾಪಗ್ರಹದಿಂದ ನೋಡಲ್ಪಟ್ಟರೂ ಜಾತಕನು ಮರಣಾನಂತರ ನರಕದಲ್ಲಿ ಬೀಳುವನು ||೧೦೦೦||

ಶ್ಲೋಕ|| ನರಕೇಪತನಂ ಬ್ರೂಯಾದ್ರಾಹು ಮಾಂದಿಯುತೇ ವ್ಯಯೇ| ಷಷ್ಠಾಧಿಪೇನ ಸಂದೃಷ್ಟೇ ರಂಧ್ರನಾಥೇನವಾಯುತೇ ||೧೦೦೧||ತಾ|| ವ್ಯಯಾಧಿ ಪತಿ ಷಷ್ಠಾಧಿಪತಿಯಿಂದ ನೋಡಲ್ಪಟ್ಟರೂ ಅಥವಾ ಅಷ್ಟಮಾಧಿಪತಿಯಿಂದ ನೋಡಲ್ಪಟ್ಟರೂ ರಾಹು ಮಾಂದಿಗಳ ಯುಕ್ತವಾಗಿದ್ದರೆ, ಜಾತಕನು ಮರಣಾ ನಂತರ ನರಕಕ್ಕೆ ಹೋಗುವನು ||೧೦೦೧||

ಶ್ಲೋಕ|| ವ್ಯಯೇಶಯುತ ಷಷ್ಠ್ಯಂಶೇ ಕ್ರೂರಭಾಗಾದಿ ಸಂಜ್ಞಿತೇ ಕ್ರೂರ ಗ್ರಹೇಣ ಸಂದೃಷ್ಟೇ ನರಕೇ ಪತನಂ ವದೇತ್ ||೧೦೦೨||ತಾ|| ವ್ಯಯಾಧಿಪತಿ ಕ್ರೂರ ಷಷ್ಠ್ಯಂಶೆಯಲ್ಲಿದ್ದರೂ ಕ್ರೂರಗ್ರಹದಿಂದ ನೋಡಲ್ಪಟ್ಟರೂ ಜಾತಕನು ನರಕದಲ್ಲಿ ಬೀಳುವನು ||೧೦೦೨||

## ಸ್ವರ್ಗಪ್ರಾಪ್ತಿಯೋಗಃ

ಶ್ಲೋಕ|| ಶುಭೇ ಸ್ವೋಚ್ಚವ್ಯಯೇವಾಪಿ ಸೌಮ್ಯಖೇಚರ ವೀಕ್ಷಿತೇ| ದೇವ ಲೋಕಾದಿ ಭಾಗಸ್ಥೇ ಸ್ವರ್ಗಪ್ರಾಪ್ತಿರ್ಭವಿಷ್ಯತಿ ||೧೦೦೩|| ದೇವಾಂಶೇ ಕರ್ಮರಾಶೀಶೇ ವ್ಯಯರಾಶಿಗತೇಪಿವಾ| ಶುಭಗ್ರಹೇಣ ಸಂದೃಷ್ಟೇ ಸ್ವರ್ಗಪ್ರಾಪ್ತಿರ್ಭವಿ ಷ್ಯತಿ ||೧೦೦೪||ತಾ|| ವ್ಯಯಸ್ಥಾನದಲ್ಲಿ ಶುಭಗ್ರಹವು ಉಚ್ಚನಾಗಿ ಶುಭಗ್ರಹದಿಂದ ನೋಡಲ್ಪಟ್ಟು ದೇವಲೋಕಾಂಶೆಯಲ್ಲಿದ್ದರೆ, ಜಾತಕನು ಸ್ವರ್ಗವನ್ನು ಹೊಂದುವನು|| ಕರ್ಮಾಧಿಪತಿ ದೇವಲೋಕಾಂಶೆಯಲ್ಲಿದ್ದರೂ ಅಥವಾ ವ್ಯಯರಾಶಿಯನ್ನು ಪಡೆದರೂ ಶುಭಗ್ರಹದಿಂದ ನೋಡಲ್ಪಟ್ಟರೆ ಜಾತಕನಿಗೆ ಸ್ವರ್ಗಪ್ರಾಪ್ತಿಯಾಗುವುದು ||೧೦೦೩-೧೦೦೪||

## ದೇವತಾ ಉಪಾಸನಾ ವಿಚಾರಃ

ಶ್ಲೋಕ|| ಪಂಚಮೇ ಭೃಗುಸಂಯುಕ್ತೇ ಚಂದ್ರೇಣ ಸಹಿತೇತಥಾ | ತಾಭ್ಯಾಂ ದೃಷ್ಟೇಥವಾಪುತ್ರೇ ಸ್ತ್ರೀದೇವ್ಯೋ ಪ್ರಾಪ್ತಿಮಾದಿಶೇತ್ ||೧೦೦೫||

ತಾ|| ಪಂಚಮದಲ್ಲಿ ಶುಕ್ರನಿದ್ದು ಚಂದ್ರಯುಕ್ತನಾದರೂ ಅಥವಾ ಪಂಚಮ ಭಾವವು ಶುಕ್ರ ಚಂದ್ರರಿಂದ ನೋಡಲ್ಪಟ್ಟರೂ ಜಾತಕನು ಸ್ತ್ರೀ ದೇವತಾರಾಧನೆ ಮಾಡುವನು ||೧೦೦೫||

ಶ್ಲೋಕ|| ಪಂಚಮೇ ಪಾಪಸಂಬಂಧೇ ಸೂರ್ಯಗೋವಿಂದ ಸೇವನಂ|

ಚಂದ್ರೇತಥಾ ವಿಧೇಜಾತೇ ಯಕ್ಷಿಣೀ ದೇವತಾಭವೇತ್ ॥೧೦೦೬॥ತಾ॥ ಪಂಚಮರಾಶಿಗೆ ಪಾಪಗ್ರಹ ಸಂಬಂಧವಿದ್ದರೆ ಸೂರ್ಯ ಅಥವಾ ಗೋವಿಂದನ ಉಪಾಸನೆ ಮಾಡುವನು. ಪಂಚಮದಲ್ಲಿ ಕೇವಲ ಚಂದ್ರನಿದ್ದರೆ ಯಕ್ಷಿಣೀ ದೇವತಾ ಉಪಾಸನೆ ಮಾಡುವನು ॥೧೦೦೬॥

ಶ್ಲೋಕ॥ ಸ್ಕಂದೋವಾ ಭೈರವೋವಾಪಿ ಕುಜಸಂಬಂಧವೀಕ್ಷಿತೇ । ಉಪಾಸ್ಯ ಶಾರದಾಸೌಮ್ಯೇ ವಿಷ್ಣುಸ್ಸಾತ್ವಾತ್ವಿಕೋಗುರೌ ॥೧೦೦೭॥ತಾ॥ ಪಂಚಮವನ್ನು ಕುಜ ನೋಡಿದರೂ, ಕೂಡಿದ್ದರೂ, ಸ್ಕಂದೋಪಾಸನೆ ಮಾಡುವನು ಬುಧನಿದ್ದರೆ ಶಾರದಾ ಉಪಾಸನೆಯನ್ನು ಮಾಡುವನು ಬೃಹಸ್ಪತಿಯಿದ್ದರೆ ಅಥವಾ ನೋಡಿದರೆ ವಿಷ್ಣು ಉಪಾಸನೆಯನ್ನು ಮಾಡುವನು ॥೧೦೦೭॥

ಶ್ಲೋಕ॥ ಚಾಮುಂಡೀಪಂಚಮೇಶುಕ್ರ ಸಂಬಂಧೇತ್ರವಿನಿರ್ದಿಶೇತ್ । ಶನೌಪ್ರೇತಾ ಶನಿಪ್ರೋಕ್ತಃ ಶ್ಮಶಾನನಿಲಯಾಭವೇತ್ ॥೧೦೦೮॥ತಾ॥ ಪಂಚಮದಲ್ಲಿ ಶುಕ್ರನಿದ್ದರೆ ಚಾಮುಂಡಾ ಉಪಾಸನೆ ಮಾಡುವನು ಶುಕ್ರ ಸಂಬಂಧಕ್ಕೂ ಈ ಫಲವನ್ನೇ ಹೇಳತಕ್ಕದ್ದು. ಪಂಚಮಕ್ಕೆ ಶನಿ ದೃಷ್ಟಿಯುತವಾದರೆ ಪ್ರೇತಾಧಿಪ ದೇವತೆಯ ಉಪಾಸನೆ ಮಾಡುವನು ॥೧೦೦೮॥

## ಪರಪೀಡನ ದೇವತೋಪಾಸನ ವಿಚಾರಃ

ಶ್ಲೋಕ॥ ರಾಹುಕೇತು ಯುತೇತತ್ರ ಪರಪೀಡನ ದೇವತಾ॥೧೦೦೯॥ತಾ॥ ಪಂಚಮದಲ್ಲಿ ರಾಹುವಾಗಲೀ ಕೇತುವಾಗಲೀ ಇದ್ದರೆ ಪರಪೀಡೆಯಾಗುವ ಕ್ಷುದ್ರ ದೇವತಾ ಉಪಾಸನೆ ಮಾಡುವನು ॥೧೦೦೯॥

## ದೇವತಾ ಉಪಾಸನ ಭೇದವಿಚಾರಃ

ಶ್ಲೋಕ॥ ಉಕ್ತೇಷ್ವೇತೇಷುಖೇಟೇಷು *ಸ್ವೋಚ್ಚ ಮಿತ್ರಾಂಶತೇಷುಚ॥ ತದ್ದೇವ ಭಜನಂಸ್ವಾರ್ಥಂ ಪರಾರ್ಥಂ ತ್ವನ್ಯಥಾಭವೇತ್ । ಸೌಮ್ಯೇಕ್ಷಿತೇಷು ಸರ್ವೇಷು ಮೃದ್ವಂಶಾದಿಗತೇಷುಚ ॥೧೦೧೦॥ ತದ್ದೇವ ಸೌಮ್ಯತಾವಾಚ್ಯಾಕ್ರೂರೇಷು ಕ್ರೂರತಾಭವೇತ್। ದ್ವಿತ್ರ್ಯಾದಿಗ್ರಹಯೋಗೇನ ತದ್ದೇವ ಭಜನಂ ವದೇತ್ ॥೧೦೧೧॥

ತಾ॥ ಈ ಮೇಲೆ ಹೇಳಿದ ಗ್ರಹಗಳು ಉಚ್ಚಾಂಶ, ಮಿತ್ರಾಂಶಗಳಲ್ಲಿದ್ದರೆ ದೇವತಾಉಪಾಸನೆಯನ್ನು ಸ್ವಾರ್ಥವಾಗಿಯೂ ಪರಾರ್ಥವಾಗಿಯೂ ಮಾಡುವನು, ಮೇಲೆ ಹೇಳಲ್ಪಟ್ಟ ಪಂಚಮಸ್ಥ ಗ್ರಹಗಳು ಶುಭಗ್ರಹೇಕ್ಷಿತವಾದರೂ ಮೃದ್ವಂಶೆ ಯಲ್ಲಿದ್ದರೆ ದೇವತಾ ಉಪಾಸನೆಯನ್ನು ಕ್ರೂರವಾಗಿಯೂ ಸೌಮ್ಯವಾಗಿಯೂ ಅನ್ಯಥಾ ಸಾಧಾರಣವಾಗಿಯೂ ಮಾಡುವನು ಪಂಚಮದಲ್ಲಿ ಎರಡು ಮೂರು ನಾಲ್ಕು ಐದು

* ಉಕ್ತೇಷ್ವೇತೇಷು ಭೇದೇಷು ॥ಪಾ॥

ಮೊದಲಾದ ಗ್ರಹಗಳಿದ್ದರೆ ಆಯಾಯ ಗ್ರಹಗಳಿಗೆ ಹೇಳಿದ ದೇವತಾ ಉಪಾಸನೆಯನ್ನು ಹೇಳತಕ್ಕದ್ದು ॥೧೦೧೧॥

## ಉಪಾಸನಾದೇವತಾ ಮೈತ್ರತ್ವ ವಿಚಾರಃ

ಶ್ಲೋಕ॥ ಲಗ್ನಾಧಿಪಸ್ಯ ಮಂತ್ರೇಸೇ ಮಿತ್ರೇ ತನ್ಮಿತ್ರತಾಭವೇತ್ । ಶತ್ರುತ್ವೇ ಶತ್ರುಭೂತಾಸ್ಯಾತ್ಸಮತ್ವೇ ಸಮತಾಂವ್ರಜೇತ್ ॥೧೦೧೨॥ತಾ॥ ಲಗ್ನಾಧಿಪತಿಗೆ ಪಂಚಮಧಿಪತಿ ಮಿತ್ರನಾಗಿದ್ದರೆ ದೇವತಾ ಉಪಾಸನೆ ಮಿತ್ರತ್ವ ಸಿದ್ಧಿಸುವುದು. ಶತ್ರುವಾಗಿದ್ದರೆ ಶತ್ರುತ್ವ ಉಂಟಾಗುವುದು. ಸಮನಾಗಿದ್ದರೆ ಸಮವಾಗಿರುವುದು ॥೧೦೧೨॥

ವಿಶೇಷ ತಾ॥ ಲಗ್ನಾಧಿಪತಿಗೆ ಪಂಚಮಾಧಿಪತಿ ಮಿತ್ರನಾಗಿದ್ದರೆ ದೇವತಾ ಉಪಾಸನದಿಂದ ಸಂಪತ್ತು ಬರುವುದು. ಲಗ್ನಾಧಿಪತಿಗೂ ಪಂಚಮಾಧಿಪತಿಗೂ ಶತ್ರುತ್ವವಿದ್ದರೆ ಆ ದೇವತಾ ಉಪಾಸನದಿಂದ ವಿರೋಧವಾಗುವುದು, ಅಂದರೆ ದೇವತಾ ಉಪಾಸನೆಯಿಂದ ಕಷ್ಟವೇ ಆಗುವುದು. ಲಗ್ನಾಧಿಪತಿಗೆ ಪಂಚಮಾಧಿಪತಿ ಸಮನಾಗಿದ್ದರೆ ದೇವತಾ ಉಪಾಸನೆದಿಂದ ಯಾವ ಫಲವೂ ಪ್ರಾಪ್ತಿಯಾಗುವುದಿಲ್ಲ.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಭಾವಫಲ ನಿರೂಪಣಂ ನಾಮವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪರ್ಯವಾರಾವಾರಾ ರಾಕಾಸುಧಾಕರಾಯಮಾನ ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯ ಶರ್ಮ ವಿರಚಿತೇ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಂ ಭಾವಫಲಂ ನಿರೂಪಣಂ ನಾಮನಿಂಶ ಪ್ರಕರಣಂ ಸಂಪೂರ್ಣಂ



ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಾಖ್ಯ ಹೋರಾಶಾಸ್ತ್ರೇ

# ೨೧ನೇ ಆಶ್ರಯಯೋಗಾಖ್ಯ ಪ್ರಕರಣಂ

ಅವತಾರಿಕೆ - ಈ ಗ್ರಂಥಕರ್ತನು ಈ ಪ್ರಕರಣದಲ್ಲಿ ಸ್ವಕ್ಷೇತ್ರ, ಉಚ್ಚ, ಮಿತ್ರ, ಶತ್ರುಕ್ಷೇತ್ರಾಶ್ರಿತ ಗ್ರಹಗಳ ಫಲವನ್ನು ಹೇಳಿರುತ್ತಾನೆ.

ಮೂಲ॥ ಕುಲಸಮಕುಲಮುಖ್ಯ ಬಂಧುಪೂಜ್ಯಾ। ಧನಿಸುಖಿಭೋಗಿ ನೃಪಾಃ
ಸ್ವಭೈಕವೃಧ್ಯಾ ॥ ಪರವಿಭವ ಸುಹೃತ್ಸ್ವ ಬಂಧುಪೋಷ್ಯಾ ।
ಗಣಪ ಬಲೇಶ ನೃಪಾಶ್ಚ ಮಿತ್ರಭೇಷು ॥೧॥

ಅವತಾರಿಕೆ ॥ ಈ ಶ್ಲೋಕದಲ್ಲಿ ಸ್ವಕ್ಷೇತ್ರ ಮತ್ತು ಮಿತ್ರಕ್ಷೇತ್ರದಲ್ಲಿ ಏಕೋತ್ತರ ವೃದ್ಧಿಯಾಗಿ ಗ್ರಹಗಳಿದ್ದಾಗ ಹುಟ್ಟಿದವನ ಫಲವು ಹೇಳಲ್ಪಡುತ್ತೆ.

## ಸ್ವಕ್ಷೇತ್ರಾಶ್ರಿತಗ್ರಹ ಫಲಂ

ಟೀಕು॥ ಸ್ವಭೈಕವೃಧ್ಯಾ-ಸ್ವಕ್ಷೇತ್ರದಲ್ಲಿರುವ ಸೂರ್ಯಾದಿ ಸಪ್ತಗ್ರಹಗಳ, ಏಕೋತ್ತರ ವೃದ್ಧಿಯಿಂದ ಕ್ರಮವಾಗಿ, ಕುಲಸಮಕುಲಮುಖ್ಯ ಬಂಧುಪೂಜ್ಯಾ ಧನಿಸುಖಿಭೋಗಿ ನೃಪ, ಈ ಪ್ರಕಾರ ಆಗುವರು. ಅದು ಯಾವ ಪ್ರಕಾರವೆಂದರೆ-ಜನನ ಕಾಲದಲ್ಲಿ ಒಂದು ಗ್ರಹ ಸ್ವಕ್ಷೇತ್ರದಲ್ಲಿರುವಾಗ ಹುಟ್ಟಿದವನು, ಕುಲಸಮ-ತನ್ನ ಕುಲಸ್ಥರಿಗೆ ಸಮಾನನಾಗುವನು, ಎರಡು ಗ್ರಹಗಳು ಸ್ವಕ್ಷೇತ್ರದಲ್ಲಿರುವಾಗ ಹುಟ್ಟಿದವನು, ಕುಲಮುಖ್ಯ-ತನ್ನ ಕುಲಸ್ಥರಲ್ಲಿ ಶ್ರೇಷ್ಠನಾಗುವನು. ಮೂರು ಗ್ರಹಗಳು ಸ್ವಕ್ಷೇತ್ರ-ದಲ್ಲಿರುವಾಗ ಜನಿಸಿದವನು, ಬಂಧುಪೂಜ್ಯಾಃ-ತನ್ನ ಬಂಧು ವರ್ಗದಲ್ಲಿ ಪೂಜ್ಯನಾಗುವನು, ನಾಲ್ಕು ಗ್ರಹಗಳು ಸ್ವಕ್ಷೇತ್ರದಲ್ಲಿರುವಾಗ ಜನಿಸಿದವನು, ಧನಿದ್ರವ್ಯವಂತನಾಗುವನು, ಐದು ಗ್ರಹ ಸ್ವಕ್ಷೇತ್ರಗಳಲ್ಲಿರುವಾಗ ಜನಿಸಿದವನು, ಸುಖೀಪ್ರಪಂಚದ ಸೌಖ್ಯಗಳನ್ನನುಭವಿಸುವನಾಗುವನು. ಆರು ಗ್ರಹಗಳು ಸ್ವಕ್ಷೇತ್ರದಲ್ಲಿರುವಾಗ ಹುಟ್ಟಿದವನು, ಭೋಗ-ರಾಜಸಮಾನ ಸುಖಭೋಗವುಳ್ಳ ಐಶ್ವರ್ಯವಂತನಾಗುವನು. ಸಪ್ತಗ್ರಹಗಳು ಸ್ವಕ್ಷೇತ್ರದಲ್ಲಿದ್ದಾಗ ಹುಟ್ಟಿದ ಪುರುಷನು, ನೃಪಾಃ-ರಾಜನಾಗುವನು. ತಾ॥ ಈ ಸ್ವಕ್ಷೇತ್ರಗಳಲ್ಲಿ ಸೂರ್ಯ, ಚಂದ್ರ, ಕುಜ, ಬುಧ, ಈ ಪ್ರಕಾರ ಇರಬೇಕೆಂಬುವ ವಿಧಿಯಿಲ್ಲ ಅಂದರೆ ಸೂರ್ಯಾದಿಗ್ರಹಗಳಲ್ಲಿ ಯಾರಾದರೂ ಇರಬಹುದು. ಈ ವಿಷಯಕ್ಕೆ ॥ಶ್ಲೋಕ॥ ಲಘುಜಾತಕೇ॥ ಸ್ವಗೃಹಸ್ಥೇರವೌ ಲೋಕೇಮುಹೋಗಶ್ಚ ದುಹೋದ್ಯಮೀ। ಚಂದ್ರೇ ಧರ್ಮರತಸ್ಸಾಧುರ್ಮನಸ್ವೀ ರೂಪವಾನಪಿ ॥೯॥ ಸ್ವಗೃಹಸ್ಥೇ ಕುಜೇಮಲ್ಲೋ

ಧನವಾನಪರಾಜಿತಃ ಬುಧೇನಾನಾ ಕಲಾಭಿಜ್ಞೋ ಪಂಡಿತೋ ಧನವಾನ್ನರಃ ॥೨॥ ಧನೀಕಾವ್ಯ ಶ್ರುತಿಜ್ಞಶ್ಚ ಸುಚೇಷ್ಟ ಸ್ವಗೃಹೇ ಗುರೌ। ಸ್ವಿತಃಕೃಷೀವಲಃ ಶುಕ್ರಶನೌ ವನ್ಯಃಖಲೋನರಃ ॥೩॥ ಈ ಪ್ರಕಾರ ಸೂರ್ಯಾದಿ ಗ್ರಹಗಳು ಸ್ವಕ್ಷೇತ್ರಗಳಲ್ಲಿದ್ದರೆ, ಫಲವನ್ನು ವಿವರಣೆಯಾಗಿ ಹೇಳಿರುವುದರಿಂದ ಯಾವ ಯಾವ ಗ್ರಹಗಳು ಸ್ವಕ್ಷೇತ್ರಗಳಲ್ಲಿರುವರೋ, ಆ ಫಲವನ್ನು ಮಿಶ್ರ ಮಾಡಿ ಹೇಳಬೇಕು॥

(ಸ್ವಭೈಕವೃಧ್ಯಾ-ಏಕೋತ್ತರವೃದ್ಧಿಯಾಗಿ ಎಂದು ಇಲ್ಲಿಯೂ ಅನ್ವಯಿಸತಕ್ಕದ್ದು) ಪರವಿಭವ ಸುಹೃತ್ಸಂಭಂಧು ಪೋಷ್ಯಾ-(ಪೋಷ್ಯಶಬ್ದಃ ಪ್ರತ್ಯೇಕಂ ಸಂಭದ್ಯತೇ ಯಥಾ-ಪರಿವಿಭಪೋಷ್ಯ, ಸುಹೃತ್ಪೋಷ್ಯ, ಸ್ವಪೋಷ್ಯ, ಬಂಧುಪೋಷ್ಯ ಇಲ್ಲಿ ಪ್ರತ್ಯೇಕವಾಗಿ ನಾಲ್ಕು ಶಬ್ದಗಳಿಗೂ ಉತ್ತರಪದ ವಿಶೇಷಣವಾಗಿರುತ್ತೆ) ಮಿತ್ರಭೇಷು-ಒಂದು ಗ್ರಹ ಮಿತ್ರಕ್ಷೇತ್ರದಲ್ಲಿರುವಾಗ ಜನಿಸಿದವನು, ಪರವಿಭವ ಪೋಷ್ಯ-ಅನ್ಯರಿಂದ ಪೋಷಿಸಲ್ಪಡುವವನು, ಎರಡು ಗ್ರಹಗಳು ಮಿತ್ರ ಕ್ಷೇತ್ರದಲ್ಲಿದ್ದಾಗ ಜನಿಸಿದವನು ಸುಹೃತ್ಪೋಷ್ಯ-ಸ್ನೇಹಿತರಿಂದ ಪೋಷಿಸಲ್ಪಡುವನು, ಮೂರು ಗ್ರಹಗಳು ಮಿತ್ರಕ್ಷೇತ್ರ ದಲ್ಲಿರುವಾಗ ಹುಟ್ಟಿದವನು, ಸ್ವಪೋಷ್ಯ-(ಜ್ಞಾತಿ) ದಾಯಾದಿ ಜನಗಳಿಂದ ಪೋಷಿಸಲ್ಪಡುವನು. (ಸ್ವಪೋಷ್ಯವೆಂಬುವ ಶಬ್ದಕ್ಕೆ ತಾನು ಸ್ವತಃ ಜೀವನ ಮಾಡುವನೆಂದು ಕೆಲವರು ಅರ್ಥಮಾಡುವರು) ನಾಲ್ಕುಗ್ರಹಗಳು ಮಿತ್ರ ಕ್ಷೇತ್ರದಲ್ಲಿದ್ದಾಗ ಹುಟ್ಟಿದವನು ಬಂಧುಪೋಷ್ಯಾಃ-ಬಂಧುಜನರು (ನೆಂಟರಿಂದ) ಪೋಷಿಸಲ್ಪಡುವನು ಐದುಗ್ರಹಗಳು ಮಿತ್ರಕ್ಷೇತ್ರದಲ್ಲಿದ್ದಾಗ ಹುಟ್ಟಿದವನು ಗಣಸಮೂಹಕ್ಕಧಿಪತಿಯಾಗುವನು ಆರು ಗ್ರಹಗಳು ಮಿತ್ರಕ್ಷೇತ್ರದಲ್ಲಿದ್ದ ಕಾಲದಲ್ಲಿ ಹುಟ್ಟಿದವನು ಬಲೇಶ-ಸೈನ್ಯಾಧಿಪತಿಯಾಗುವನು, ಏಳುಗ್ರಹಗಳು ಮಿತ್ರ ಕ್ಷೇತ್ರದಲ್ಲಿದ್ದಾಗ ಹುಟ್ಟಿದವನು ನೃಪಾಶ್ಚ-ದೊರೆಯಾಗುವನು ಈ ವಿಷಯದಲ್ಲಿ ಶ್ಲೋಕ॥ ಲಗ್ನಚಂದ್ರಕಾಯಾಂ॥ ಸೂರ್ಯೆ ಮಿತ್ರಗೃಹೇ ಜಾತಃ (ಖ್ಯಾತಃ) ಶಾಸ್ತ್ರಜ್ಞಃ ಸ್ಥಿರಸೌಹೃದಃ। ಚಂದ್ರೇನರೋ ಭಾಗ್ಯಯುಕ್ತ ಶ್ಚತುರೋಧನವಾನಪಿ ॥೪॥ ಭೌಮೇ ಶಸ್ತ್ರೋಪಜೀವೀಚ ಬುಧೇ ರೂಪಧನಾನ್ವಿತಃ । ಗುರುಮಿತ್ರ ಗೃಹೇ ಪೂಜ್ಯಃ ಸತಾಂ ಸತ್ಕರ್ಮ ಸಂಯುತಃ॥೫॥ ಶುಕ್ರೇಮಿತ್ರಗೃಹೇ ಲೋಕೇ ಧನೀ ಬಂಧುಜನಪ್ರಿಯಃ। ಶನೌಪರಾನ್ನಭೋಜೀಚ ಕುಕರ್ಮನಿರತೋ ನರಃ ॥೬॥ ಎಂದು ಪ್ರತ್ಯೇಕವಾಗಿ ಫಲವನ್ನು ಹೇಳಿರುತ್ತೆ.

## ಉಚ್ಚಗ್ರಹಮಿತ್ರ ಯುತದೃಷ್ಟಫಲಂ

ಮೂಲ॥ ಜನಯತಿ ನೃಪಮೇ ಕೊಪ್ಯುಚ್ಚಗೋ ಮಿತ್ರದೃಷ್ಟಃ। ಪ್ರಚುರಧನ ಸಮೇತಂ ಮಿತ್ರಯೋಗಾಚ್ಚ ಸಿದ್ಧಂ॥ ವಿಧನಸುಖ ಮೂಢ ವ್ಯಾಧಿತಾ ಬಂಧತಪ್ತಾ! ವಧದುರಿತಸಮೇತಾಃ ಶತ್ರುನೀಚರ್ಕ್ಷಗೇಷು ॥೨॥

ಅವತಾರಿಕೆ।। ಶ್ಲೋಕದ ಪೂರ್ವಾರ್ಧದಲ್ಲಿ ಒಂದು ಗ್ರಹ ಉಚ್ಚದಲ್ಲಿದ್ದು ಆ ಗ್ರಹಕ್ಕೆ ಮಿತ್ರನಾಗಿರುವ ಗ್ರಹದಿಂದ ನೋಡಲ್ಪಟ್ಟ ಫಲವನ್ನು ಉತ್ತರಾರ್ಧದಲ್ಲಿ ಏಕೋತ್ತರ ವೃದ್ಧಿಯಾಗಿ ನೀಚಕ್ಷೇತ್ರಗಳಲ್ಲೂ ಮತ್ತು ಶತ್ರುಕ್ಷೇತ್ರಗಳಲ್ಲು ಇರುವ ಗ್ರಹಗಳಿಗೆ ಫಲಹೇಳಲ್ಪಟ್ಟಿರುತ್ತೆ.

## ಉಚ್ಚಗ್ರಹ ಮಿತ್ರದೃಷ್ಟಫಲಂ

ಏಕೋಪಿ-ಒಂದು ಗ್ರಹವಾದರೂ, ಉಚ್ಚಗಃ-ಉಚ್ಚದಲ್ಲಿದ್ದು, ಮಿತ್ರದೃಷ್ಟಃ ಮಿತ್ರಗ್ರಹದಿಂದ ನೋಡಲ್ಪಟ್ಟರೆ, ನೃಪಂ-ಧೊರೆಯನ್ನು ಜನಯತಿ-ಹುಟ್ಟಿಸುತ್ತಾನೆ. ಆ ಉಚ್ಚಗತವಾದ ಒಂದು ಗ್ರಹವು, ಮಿತ್ರಯೋಗತ್-ಮಿತ್ರಗ್ರಹದಿಂದ ಕೂಡಿದರೆ, ಪ್ರಚುರಧನಸಮೇತಂ-ಸಂಪೂರ್ಣ ಧನವಂತನಾದ, ಸಿದ್ಧಂ-ಸರ್ವಜನ ಪೂಜ್ಯನನ್ನು, ಜನಯತಿ-ಹುಟ್ಟಿಸುತ್ತಾನೆ. (ಸಿದ್ಧಂ-ನಿಶ್ಚಯವೆಂದು ಕೆಲವರು ಅರ್ಥಮಾಡಿರುವರು) ಆದರೆ ಇಲ್ಲಿ ಭಟ್ಟೋತ್ಪಲ ವ್ಯಾಖ್ಯಾನದಲ್ಲಿ ಈ ಯೋಗವು ಸೂಚಕವಾದದ್ದಲ್ಲ ವೆಂತಲೂ ಸಿದ್ಧ ಎಂಬುವ ಪದಕ್ಕೆ ಸರ್ವಜನ ಪೂಜ್ಯನಾದ ವನೆಂತಲೂ ಅರ್ಥಮಾಡಿರುವರು.

### ಶತ್ರು ನೀಚಸ್ಥ ಫಲಂ

## ಶತ್ರುನೀಚಸ್ಥಾನಸ್ಥಿತ ಗ್ರಹಂ ಫಲಂ

ಶತ್ರುನೀಚರ್ಕ್ಷಗೇಷು-ಶತ್ರುಕ್ಷೇತ್ರದಲ್ಲಾದರೂ, ನೀಚಕ್ಷೇತ್ರದಲ್ಲಾದರೂ ೧ ಗ್ರಹವಿದ್ದರೆ ವಿಧನ-ದರಿದ್ರನಾಗುವನು, ೨ ಗ್ರಹಗಳಿರುವಾಗ ಹುಟ್ಟಿದವನು ವಿಸುಖ-ಸುಖವಿಲ್ಲದವನಾಗುವನು, ೩ ಗ್ರಹಗಳಿರುವಾಗ ಹುಟ್ಟಿದವನು ಮೂಢ-ಮೂರ್ಖ ನಾಗುವನು, ೪ ಗ್ರಹಗಳಿರುವಾಗ ಹುಟ್ಟಿದವನು ವ್ಯಾಧಿತಾಃ-ವ್ಯಾಧಿಗ್ರಸ್ತನಾಗುವನು, ೫ ಗ್ರಹಗಳಿರುವಾಗ ಹುಟ್ಟಿದವನು ಬಂಧತಪ್ತಾಃ-ಬಂಧನದಿಂದ ಕಷ್ಟಪಡುವನು, ಅಂದರೆ(ಬಂದೀಖಾನೇ ಪ್ರಾಪ್ತಿಯಾಗುವುದು) ಇದು ಕಾರಾಗ್ರಹ ಪ್ರಾಪ್ತಿಯೋಗವೆಂದು ಕೆಲವರು ಅರ್ಥ ಮಾಡಿರುವರು. ೬ ಗ್ರಹಗಳಿರುವಾಗ ಹುಟ್ಟಿದವನು ವಧ ಸಮೇತಾಃ-ಪ್ರಾಣಹಿಂಸೆಯಿಂದ ಕೂಡಿದವನಾಗುವನು. (ಇಲ್ಲಿ ಕೆಲವರು ವಧಸಮೇತಾಃ ವೆಂಬುವ ಶಬ್ದಕ್ಕೆ ಹಿಂದಿನ ಪದದಲ್ಲಿ ಹೇಳಲ್ಪಟ್ಟ, 'ಬಂಧತಪ್ತಾ ವಧದುರಿತ ಸಮೇತಾಃ' ಎಂಬುವ ಅನ್ವಯಗ್ರಹಣ ಮಾಡಿ ಬಂಧನಪ್ರಾಪ್ತಿಯು ಹಾಗೆಯೇ ಹಿಂಸೆಯಿಂದ ಮರಣವು ಆಗುವುದೆಂದೂ (ಮರಣಾಂತಶಿಕ್ಷೆ) ಮರಣದಂಡನೆ ಆಗುವುದೆಂದೂ ಹೇಳುವರು, ಕೆಲವರು ವಧದುರಿತ ಸಮೇತವೆಂದರೆ ಪ್ರಾಣಿ ಹಿಂಸೆಮಾಡುವ ಅಂದರೆ (ಮತ್ತೊಬ್ಬ ಮನುಷ್ಯನನ್ನು ಕೊಲ್ಲತಕ್ಕಂಥ ದುರ್ಯೋಗವೆಂದೆನ್ನುವರು) ೭ ಗ್ರಹಗಳಿರುವಾಗ ಹುಟ್ಟಿದವನು

ದುರಿತ ಸಮೇತಾಃ-ಪಾಪಿಯಾಗುವನೆಂದು ಹೇಳುವರು. ಇಲ್ಲಿ ಪರಸ್ಪರ ಪೂರ್ವಾಪರ ವಿರೋಧವುಂಟಾಗುತ್ತಲಿದೆ. ಪೂರ್ವದಲ್ಲಿ ವಜ್ರಾದಿ ಯೋಗಗಳಲ್ಲಿ ಚರ್ಚೆ ನಡೆದು ಏಕಕಾಲದಲ್ಲಿ ಸಪ್ತಗ್ರಹಗಳುಚ್ಚವಾಗಲಿ ಸಪ್ತಗ್ರಹಗಳು ನೀಚವಾಗಲೀ ಆಗುವುದಿಲ್ಲವೆಂದು ನಿರ್ಣಯಮಾಡಲ್ಪಟ್ಟಿರುತ್ತೆ. ಆದ್ದರಿಂದ ಸಪ್ತಗ್ರಹಗಳು ನೀಚದಲ್ಲಿರತಕ್ಕ ಕಾಲವು ಸಿಗುವುದಿಲ್ಲ. *ಆದರೆ ಪೂರ್ವ ಶಾಸ್ತ್ರಾನುಸಾರವಾಗಿ ಹೇಳಲ್ಪಟ್ಟಿರುತ್ತೆಂದು ತಿಳಿಯಬರುತ್ತೆ. ಸಪ್ತಗ್ರಹಗಳು ನೀಚ ಕ್ಷೇತ್ರದಲ್ಲಿರುವ ಫಲವನ್ನು ಯಾತಕ್ಕೋಸ್ಕರ ಹೇಳಿದರೆಂದು ಯೋಚಿಸಿದರೆ ನೀಚ ಕ್ಷೇತ್ರಗ್ರಹಕ್ಕೂ ಶತೃಗ್ರಹಕ್ಕೂ ಸಮಾನವಾಗಿ ಫಲವನ್ನು ಹೇಳಿರುವುದರಿಂದ ಕೆಲವು ಗ್ರಹಗಳು ನೀಚಕ್ಷೇತ್ರಗಳಲ್ಲೂ ಕೆಲವು ಗ್ರಹಗಳು ಶತೃಕ್ಷೇತ್ರಗಳಲ್ಲೂ ಇರುವ ಕಾಲವು ಸಿಕ್ಕುತ್ತೆ. ಆದುದರಿಂದ ಪೂರ್ವಶಾಸ್ತ್ರಕ್ಕನುಸಾರವಾಗಿ ಈ ಯೋಗವನ್ನು ಹೇಳಿರುವರು. ಪ್ರತ್ಯೇಕ ನೀಚಸ್ಥ ಫಲ ॥ಶ್ಲೋಕ॥ ನೀಚೇಸೂರ್ಯೇಭವೇತ್ಪ್ರೇಷ್ಯೋ ಬಂಧುಭಿರ್ವರ್ಜಿತೋನರಃ ಚಂದ್ರೇರೋಗಿಸ್ವಲ್ಪ ಪುಣ್ಯೋ ದುರ್ಭಗೋ ನೀಚರಾಶಿಗೇ ॥೭॥ ನೀಚೇಭೌಮೇ ಭವೇನ್ನಿಚಃ ಕುತ್ಸಿತೋ ವ್ಯಸನಾತುರಃ । ಬುಧೇ ಕ್ಷುದ್ರೋಬಂಧು ವೈರಿಸುತ್ತಾ ಧೀನೋಮಲಾನ್ವಿತಃ ॥೮॥ ಶುಕ್ರೇನೀಚೆ ನಷ್ಟದಾರಃ ಸ್ವತಂತ್ರಶೀಲವರ್ಜಿತಃ। ಶನೌಕಾಣೋ ದರಿದ್ರಶ್ಚ ಗತೌಚೌರೋತಿಗರ್ಹಿತಃ ॥೯॥ (ಮತ್ತು) ಪ್ರತ್ಯೇಕಗ್ರಹ ಶತೃರಾಶಿಸ್ಥಫಲಂ ॥ಲ.ಜಾ॥ ಸೂರ್ಯೇರಿಪು ಗೃಹೇನಿಃಸ್ವೋವಿಷಯೈಃ ಪೀಡಿತೋನರಃ। ಚಂದ್ರೇಹೃದಯುರೋಗೀಚ ಭೌಮೇ ಜಾಯಾ ಜಡೋಧನಃ ॥೧೦॥ ಬುಧೇರಿಪುಗೃಹೇಮೂರ್ಖೋ ವಾಗ್ಧಾನೋ ದುಃಖ ಪೀಡಿತಃ । ಜೀವೇರಿಭೇನರಃ ಕ್ಲೀಬೋನಾಪ್ತವೃತ್ತಿರ್ಬಭುಕ್ಷಿತಃ ॥೧೧॥ ಶುಕ್ರೇಶತೃಗೃಹೇ ಭೃತ್ಯಃಕುಬುದ್ಧಿ-ರ್ದುಖಿತೋನರಃ। ಶನೌವ್ಯಾದ್ಯರ್ದಶೋಕೇನ ಸಂತಪ್ತೋ ಮಲಿನೋ ಭವೇತ್ ॥೧೨॥ ಎಂದು ಹೇಳಿರುವುದರಿಂದ ಯಾವಯಾವ ಗ್ರಹಗಳು ನೀಚ, ಶತ್ರುಕ್ಷೇತ್ರಗಳಲ್ಲಿರುವರೋ ಆ ಫಲಗಳನ್ನು ಕೂಡಿಸಿ ಹೇಳತಕ್ಕದ್ದು.

## ಕುಂಭಲಗ್ನಜಾತಕಸ್ಯ ಅಶುಭಫಲ ವಿಚಾರಃ

ಮೂಲ॥ ನಕುಂಭ ಲಗ್ನಂತುಭಮಾಹ ಸತ್ಯೋನಭಾಗಭೇದಾದ್ಯವನಾವದಂತಿ।
ಕಸ್ಯಾಂಶ ಭೇದೋನ ತಥಾಸ್ಥಿರಾತೇ ರತಿ ಪ್ರಸಂಗಸ್ತ್ವಿತಿ ವಿಷ್ಣುಗುಪ್ತಃ ॥೩॥

ಟೀಕು॥ ಕುಂಭಲಗ್ನ ಜಾತಕನಿಗೆ ಅಶುಭಫಲ ಹೇಳಲ್ಪಡುತ್ತೆ. ಸತ್ಯಃ-ಸತ್ಯಾಚಾರ್ಯನು, ಯಾರಜನ್ಮ ಕುಂಭಲಗ್ನದಲ್ಲಾಗುವುದೋ ಆಗ, ಕುಂಭಲಗ್ನಂ- ಕುಂಭ

* ೭ ಗ್ರಹಗಳು ನೀಚಾಂಶೆಯಲ್ಲಿದ್ದರೆ ನೀಚದಲ್ಲಿದ್ದ ಫಲವನ್ನೇ ಹೇಳತಕ್ಕದ್ದು.

ಲಗ್ನವನ್ನು ನಶುಭಂ-ಶುಭವಾದದ್ದಲ್ಲವೆಂದು, ಅಂದರೆ ಪಾಪಫಲವನ್ನು ಕೊಡತಕ್ಕದ್ದೆಂದು, ಆಹ-ಹೇಳಿದನು. ಶ್ಲೋಕ॥ ಜನ್ಮನಿಚಂದ್ರಃ ಶ್ರೇಷ್ಠ ಪ್ರವದೇದ್ಧೋರಾರಿ ನಿಧನವರ್ಜ್ಯಸ್ಯಾತ್ಃ ಹೋರಾದಭವೇ ದಿಷ್ಟಾದ್ವಿಪದೇಷ್ವಿಹ ಕುಂಭವರ್ಜ್ಯಂಹಿ ॥೧೩॥ ಕುಂಭವಿಲಗ್ನೇಜಾತೋಭವತಿ ನರೋದುಃಖಶೋಕ ಸಂತಪ್ತಃ ಎಂದು ಸತ್ಯಾಚಾರ್ಯರು ಹೇಳಿದರು. ಯವನಾಃ-ಯವನಾಚಾರ್ಯಾದಿಗಳು, ಭಾಗಭೇದಾತ್-ಕುಂಭದ್ವಾದಶಾಂಶ, ನಶುಭಂ-ಅಶುಭವೆಂದು, ವದಂತಿ-ಹೇಳಿದರು. ಅಂದರೆ-ಯಾವ ಲಗ್ನದಲ್ಲಾದರೂ, ಕುಂಭದ್ವಾದಶಾಂಶ ವಿಷಯ ಅಶುಭಕರವೆಂದು ಯವನಾದಿಗಳು ಹೇಳಿದರೆಂದು, ಮುಖ್ಯ ತಾತ್ಪರ್ಯವಾಯಿತು. ಈ ವಿಷಯಕ್ಕೆ ॥ಶ್ಲೋಕ॥ ಸರ್ವಸ್ಮಿಲ್ಲಗ್ನಗತೇ ಕುಂಭದ್ವಿರಸಾಂಶಕೋಯದಾಭವತಿ। ರಾಶೌನ ತದಾಸುಖಿತಃ ಪರಾನ್ನಭೋಜೀ ಭವೇತ್ಪುರುಷಃ ॥ ಎಂಬುವ ಯವನ ಮತಾನುಸಾರವಾಗಿ ಶ್ರುತ ಕೀರ್ತಿಯಿಂದ ಹೇಳಲ್ಪಟ್ಟಿರುತ್ತೆ. ವಿಷ್ಣುಗುಪ್ತಸ್ತು-ವಿಷ್ಣುಗುಪ್ತನಾದರೂ, ಕಸ್ಯರಾಶೇಃ-ಯಾವರಾಶಿಗೆ, ತಥಾ-ಆ ಪ್ರಕಾರ, ಅಂಶಭೇದಃ-ಕುಂಭದ್ವಾದಶಾಂಶ, ನಾಸ್ತಿ-ಇಲ್ಲ, ಈ ಪ್ರಕಾರ, ಕುಂಭದ್ವಾದಶಾಂಶೆ ನಿಷಿದ್ಧವೆಂಬುದು, ಅತಿ ಪ್ರಸಂಗ ಇತಿ-ಅಧಿಕ ಪ್ರಸಂಗವೆಂದು, ಅಹ-ಹೇಳಿದನು. ಮೇಷಾದಿ ರಾಶಿಗಳಿಗೆಲ್ಲಾ ಕುಂಭ ದ್ವಾದಶಾಂಶೆ ಬರುತ್ತೆ. ಆದರೆ ಸಕಲ ರಾಶಿಗಳಲ್ಲೂ ಕಂಭದ್ವಾದಶಾಂಶ ಭಾಗ ಬರುವುದರಿಂದ ಅನಿಷ್ಟ ಫಲವೆಂದು ಹೇಳಿದರೆ, ಈವರಿಗೆ ಹೇಳಿರುವ ಲಗ್ನ ಫಲಗಳು ಅಸಾರ್ಥಕ (ನಿಷ್ಪ್ರಯೋಜನ) ವಾಗುವುದರಿಂದ ಕುಂಭಲಗ್ನ ಮಾತ್ರ ಅಶುಭಕರವೆಂದು ಮತ್ತು ಕುಂಭದ್ವಾದಶಾಂಶೆ ಅಶುಭಕರವಲ್ಲವೆಂದು ವಿಷ್ಣುಗುಪ್ತನು ಹೇಳಿದನು. ಈ ವಿಷಯಕ್ಕೆ ಶ್ಲೋಕ॥ ಕುಂಭದ್ವಾದಶಭಾಗೋ ಲಗ್ನಗತೋನ ಪ್ರಶಸ್ಯತೇ ಯವನ್ಯೈ। ಯದ್ಯೇವಂ ಸರ್ವೇಷಾಂ ಲಗ್ನಗತಾನಾ ಫಲಂನಸ್ಯಾತ್ ॥೧೫॥ ಘಟಿಯೋಗಾದ್ರಾಶೀನಾಂ ನಹ್ಯೇತಚ್ಛಾಸ್ತ್ರಕಾರಾಣಾಂ॥ ತಸ್ಮಾತ್ಕುಂಭವಿಲಗ್ನಂ ಜನ್ಮಸ್ಯ ಶುಭಂ ನತದ್ಭಾಗಃ ॥೧೬॥ ಆದ್ದರಿಂದ ಕುಂಭಲಗ್ನ ಕುಂಭಲಗ್ನ ಮಾತ್ರ ಅಶುಭವೆಂದು, ಕುಂಭ ದ್ವಾದಶಾಂಶೆ ಉಳಿದ ೧೧ ರಾಶಿಗಳಲ್ಲಿ ಅಶುಭವಲ್ಲ. ಈ ವಿಷಯಕ್ಕೆ -

## ಉದಾಹರಣೆ ೧

ಶಾಲಿವಾಹನ ಶಕ ೧೭೬೪ನೇ ಪ್ರಜೋತ್ಪತ್ತಿ ಸಂವತ್ಸರ ಅಧಿಕ ಭಾದ್ರಪದ ಶುಕ್ಲ ೪ ಭಾನುವಾರ ೮-೪ ಹಸ್ತಾ ನಕ್ಷತ್ರ ೧೩-೨ ಸಿಂಹಮಾಸ ತೇದಿ ೭ ಈ ದಿವಸ ಉದಯಾದಿ ೩೧-೦ ಕ್ಕೆ ಜನನ, ಇದಕ್ಕೆ ಕುಂಭಲಗ್ನ ಮೀನ ನವಾಂಶ ಮಿಥುನ ದ್ವಾದಶಾಂಶೆಯಾಗುತ್ತದೆ.

| | | | |
|---|---|---|---|
| | | | ಗುರು ೩ |
| ಲಗ್ನ೧೨ | ಭಾವ ಕುಂಡಲಿ | | |
| | | | ರವಿ ೨ |
| ಶನಿ ವ ೩ | | ಕುಜ೧೦ | ಚಂದ್ರ೬ ಬುಧ೧೦ ಶುಕ್ರ ೧ |

ಈ ಜಾತಕನಿಗೆ ಕುಂಭ ಲಗ್ನವಾಗಿದ್ದರೂ ಕುಂಭ ದ್ವಾದಶಾಂಶೆ ಮಾತ್ರ ಅಶುಭಫಲ ಸೂಚಕವೆಂದು ತೋರಿಬರುತ್ತಲಿದೆ ಮತ್ತು ಲಗ್ನಾದಿ ಪತಿಯನ್ನು ಗುರು ನೋಡುವುದ ರಿಂದಲೂ ಮತ್ತು ಲಗ್ನವನ್ನು ವಿಶೇಷ ದೃಷ್ಟಿಯಿಂದ ನೋಡುವುದರಿಂದ ಈ ಜಾತಕನಿಗೆ ಕುಂಭಲಗ್ನದಿಂದ ಉಂಟಾದ ಅಶುಭಫಲವನ್ನು ಹೋಗಲಾಡಿಸಿ ಶುಭಫಲವನ್ನೇ ಕೊಡುವುದು. ಇತ್ಯಾದಿ ವಿಷಯ ನೋಡತಕ್ಕದ್ದು. ಇದು ಪ್ರತ್ಯಕ್ಷಾಮ ವಾಗಿರುತ್ತದೆ.

## ಉದಾಹರಣೆ ೨

ಶಾಲಿವಾಹನ ಶಕ ೧೮೦೬ ಸ್ವಭಾನು ಸಂವತ್ಸರದ ಜ್ಯೇಷ್ಠಶುಕ್ಲ ೧೫ ಬುಧವಾರ ಈ ದಿವಸ ರಾತ್ರಿ ೧೦॥ ಘಳಿಗೆಗೆ ಜನ್ಮ ಕುಂಭಲಗ್ನ ಕುಂಭ ದ್ವಾದಶಾಂಶದಲ್ಲಿ ಜನ್ಮ.

| | | | |
|---|---|---|---|
| | ಕುಜ | ಬು ಶು ಶನಿ | ಗುರು |
| ಲಗ್ನ | ಭಾವ ಕುಂಡಲಿ | | |
| | | | |
| ಚಂದ್ರ | | | |

ಈ ಜಾತಕಕ್ಕೆ ಕುಂಭ ದ್ವಾದಶಾಂಶೆ ಆದ್ದರಿಂದ ಲಗ್ನದಿಂದ ಚತುರ್ಥಭಾವದಲ್ಲಿ ಬುಧ, ಶುಕ್ರ, ಶನಿಗಳಿದ್ದು ಯೋಗಕಾರಕ ರಾದರೂ ಕುಂಭಲಗ್ನ ಜಾತಕಕ್ಕೆ ಅಶುಭವನ್ನು ಹೇಳಿದ್ದರಲ್ಲಿ ದ್ವಾದಶಾಂಶಕ್ಕೆ ಅಶುಭಫಲವನ್ನು ಹೇಳಿರುವುದು ೧ನೇ ಉದಾಹರಣೆಗಿಂತ ಈ ಜಾತಕವು ಪ್ರಬಲವೆಂದು ಹೇಳಬಹುದಾದರೂ ಕುಂಭದ್ವಾದಶಾಂಶೆಯು ಬಲದಿಂದ ಅಶುಭ ಫಲವನ್ನು ಹೇಳಲು ನಿದರ್ಶನವಾಗಿರುವುದು ಆದ್ದರಿಂದ ಕುಂಭಲಗ್ನದಲ್ಲಿ ಕುಂಭದ್ವಾದಶಾಂಶೆ ಮಾತ್ರ ಅಶುಭವೆಂದು ಊಹಿಸತಕ್ಕದ್ದು.

## ಸೂರ್ಯಚಂದ್ರ ಹೋರಾಸ್ಥಿತ ಗ್ರಹಫಲಂ

**ಮೂ॥** ಯಾತೇಷ್ವ ಸತ್ಸ್ವ ಸಮಭೇಷು ದಿನೇಶಹೋರಾಂ ಖ್ಯಾತೋ ಮಹೋದ್ಯಮ ಬಲಾರ್ಥ ಯುತೋತಿ ತೇಜಾಃ। ಚಾಂದ್ರೀ ಶುಭೇಷು ಯುಜಿಮಾರ್ದವ ಕಾಂತಿ ಸೌಖ್ಯ ಸೌಭಾಗ್ಯಧೀ ಮಧುರ ವಾಕ್ಯಯುತಃ ಪ್ರಜಾತಃ ॥೪॥

ಟೀಕು॥ ಸೂರ್ಯಚಂದ್ರಹೋರಾಸ್ಥಿತಗ್ರಹಫಲಂ॥ ಅಸತ್ಸು-*ಕ್ರೂರಗ್ರಹಗಳು (ರವಿ, ಕ್ಷೀಣಚಂದ್ರ, ಕುಜ, ಪಾಪಯುಕ್ತಬುಧ) ಅಸಮಭೇಷು-ವಿಷಮರಾಶಿಗಳಲ್ಲಿ ದಿನೇಶಹೋರಾಂ-ರವಿಹೋರೆಯನ್ನು ಯಾತೇಷುಸತ್ಸು-ಹೊಂದಿರಲಾಗ ಜಾತಃ ಜನಿಸಿದವನು. ಮಹೋದ್ಯಮಬಲಾರ್ಥಯುತಃ-ಮಹೋದ್ಯಮ-ಮಹತ್ಸಾಹಸ ಮಾಡುವನು. ಬಲಾರ್ಥಯುತಃ-ಶೌರ್ಯದನದಿಂದ ಕೂಡಿರುವನು. ಅತಿತೇಜಾಃ-ಅಧಿಕವಾದ ತೇಜಸ್ಸುಳ್ಳವನೂ ಆಗುವನು, ಶುಭೇಷು-ಶುಭಗ್ರಹಗಳು, (ಪೂರ್ಣ ಚಂದ್ರ, ಶುದ್ಧ ಬುಧ, ಗುರು, ಶುಕ್ರ) ಯುಜಿ-ಸಮರಾಶಿಯಲ್ಲಿ, ಚಾಂದ್ರಿಂ-ಚಂದ್ರ ಹೋರೆಯನ್ನು ಯಾತೇಷುಸತ್ಸು-ಹೊಂದಿರುವಾಗ, ಪ್ರಜಾತಃ-ಜನಿಸಿದವನು ಮಾರ್ಧವ-ನಮ್ರನಾಗಿಯೂ, ಕಾಂತಿ-ಕಾಂತಿಯಿಂದಲೂ ಸೌಖ್ಯ-ಸೌಖ್ಯದಿಂದಲೂ, ಸೌಭಾಗ್ಯ (ಪತ್ನೀ, ಪುತ್ರ, ಮಿತ್ರ, ಧನ, ಆರೋಗ್ಯ) ಮೊದಲಾದ ಸೌಭಾಗ್ಯ ದಿಂದಲೂ, ಧೀ-ಒಳ್ಳೇಬುದ್ಧಿಯಿಂದಲೂ, ಮಧುರವಾಕ್ಯ-ಇಂಪಾದವಚನಗಳಿಂದಲೂ, ಯುತಃ-ಕೂಡಿದವನಾಗುವನು.

ಮೂಲ॥ ತಾಸ್ವೇವಹೋರಾ ಸ್ವಪರರ್ಕ್ಷಗಾ ಸುಜ್ಞೇಯಾನರಾಃ ಪೂರ್ವ ಗುಣೇಷು ಮಧ್ಯಾಃ । ವ್ಯತ್ಯಸ್ತಹೋರಾ ಭವನಸ್ಥಿತೇಷು ಮರ್ತ್ಯಾ ಭವಂತ್ಯುಕ್ತ ಗುಣೈರ್ವಿಹೀನಾಃ ॥೫॥

ಟೀಕು॥ ಮತ್ತು ಹೋರಾಗತಫಲವು ಹೇಳಲ್ಪಡುತ್ತೆ ॥ ತಾಸ್ವೇವಹೋರಾಸು-ಆ ಹೋರೆಗಳಲ್ಲಿ, ಅಪರರ್ಕ್ಷಗಾಸು-ಮೇಲೆ ಹೇಳಲ್ಪಡುವ ರಾಶಿಗಳಲ್ಲಿರುವಾಗ ಜನಿಸಿದ. ನರ್ರ್ಯಾಃ-ಮಾನವರು, ಪೂರ್ವಗುಣೇಷು-ಮೊದಲು ಹೇಳಲ್ಪಟ್ಟ ಮಹೋದ್ಯಮತ್ಯಾದಿ ಗುಣಗಳು ಮಧ್ಯಾಃ-ಮಧ್ಯಮ ಫಲವಾಗುವುದೆಂದು ಜ್ಞೇಯಾಃ-ತಿಳಿಯತಕ್ಕದ್ದು ಅಂದರೆ ಸಮರಾಶಿಯಲ್ಲಿ ಸೂರ್ಯಹೋರೆಯಲ್ಲಿ ಕ್ರೂರಗ್ರಹಗಳಿರುವಾಗ ಜನಿಸಿದವರಿಗೆ ಪೂರ್ವೋಕ್ತವಾದ ಮಹೋದ್ಯಮಾದಿಗುಣಗಳು ಮಧ್ಯಫಲಪ್ರದವಾಗುವುದು ಈ ವಿಷಮರಾಶಿಗಳಲ್ಲಿ ಚಂದ್ರಹೋರೆಯಲ್ಲಿ ಶುಭಗ್ರಹಣಗಳಿರುವಾಗ ಹುಟ್ಟಿದವರಿಗೆ ಮಾರ್ದವಾದಿಗುಣಗಳು ಮಧ್ಯಮವಾಗಿ ಫಲಪ್ರದವಾಗುವುದು. ವ್ಯತ್ಯಸ್ತಹೋರಾ ಭವನ ಸ್ಥಿತೇಷು-ವ್ಯತ್ಯಾಸವಾದ ಹೋರೆಯಲ್ಲಿರುವ ರಾಶಿಗಳಲ್ಲಿ ಹುಟ್ಟಿದ, ಮರ್ತ್ಯಾಃ-ಮನುಷ್ಯರು, ಉಕ್ತಗುಣೈಃ-ಮೊದಲು ಹೇಳಲ್ಪಟ್ಟ ಗುಣಗಳಿಂದ, ವಿಹೀನಾಃ. ಇಲ್ಲದವರಾಗಿ, ಭವಂತಿ-ಆಗುವರು, ಅಂದರೆ-ಯುಗ್ಮರಾಶಿಗಳಲ್ಲಿ ಚಂದ್ರಹೋರೆಯಲ್ಲಿ ಕ್ರೂರಗ್ರಹಗಳಿರುವಾಗ, ಹುಟ್ಟಿದವರು. ಮಹೋದ್ಯಮವಿಲ್ಲದವರು. ನಿರ್ಬಲರು

*-ಕ್ರೂರಗ್ರಹಗಳು ಅಂದರೆ ಶನಿ, ರವಿ, ಕುಜರು (ಈ ಮೂರುಗ್ರಹಗಳಿಗೆ ಮಾತ್ರವೆಂದು ಕೆಲವರು ಹೇಳುವರು)

ದ್ರವ್ಯಹೀನರೂ, ಕಾಂತಿಹೀನರೂ ಆಗುವರು, ಬೆಸರಾಶಿಗಳ ಸೂರ್ಯಹೋರೆಯಲ್ಲಿ ಶುಭಗ್ರಹಗಳಿರುವಾಗ ಹುಟ್ಟಿದವರು, ಸೌಖ್ಯ ಬುದ್ಧಿಹೀನರಾಗುವರು. ಈ ಮೇಲೆ ಹೇಳಲ್ಪಟ್ಟ ಹೋರಾಫಲಗಳಿಗೆ ಗ್ರಹಬಾಹುಳ್ಯವನ್ನನುಸರಿಸಿ ಗುಣಬಾಹುಳ್ಯವನ್ನು ಹೇಳತಕ್ಕದ್ದು.

## ದ್ರೇಕ್ಕಾಣಸ್ಥಿತ ಚಂದ್ರಫಲಂ

ಮೂಲ॥ ಕಲ್ಯಾಣರೂಪಗುಣಮಾತ್ಮ ಸುಹೃದ್ದೃಕ್ಕಾಣೇಚಂದ್ರೋನ್ಯಗಸ್ತದಧಿ ನಾಥ
ಗುಣಂ ಕರೋತಿ॥ ವ್ಯಾಳೋದ್ಯತಾಯ್ಯುಧಚತುಶ್ಚರಣಾಂಡ ಜೇಷು
ತೀಕ್ಷ್ಣೋ ನ್ನತಿ ಹಿಂಸ್ರಗುರುತಲ್ಪರತೋನಟಶ್ಚ ॥೬॥

ಅವತಾರಿಕೆ॥ ಈ ಶ್ಲೋಕದಿಂದ ಚಂದ್ರನು ಸ್ವದ್ರೇಕ್ಕಾಣದಲ್ಲಿದ್ದಾಗ ಹುಟ್ಟಿದವರ ಫಲ ಮತ್ತು ರವಿ, ಕುಜ, ಬುಧ, ಗುರು, ಶುಕ್ರ, ಶನಿ ಈ ಆರು ಗ್ರಹಗಳ ದ್ರೇಕ್ಕಾಣಗಳಲ್ಲಿದ್ದಾಗ ಹುಟ್ಟಿದವರ ಫಲವೂ ಹೇಳಲ್ಪಡುತ್ತೆ.

ಟೀ॥ ಚಂದ್ರಃ-ಜನ್ಮಕಾಲದ ಚಂದ್ರನು, ಆತ್ಮಸುಹೃದ್ದೃಕ್ಕಾಣೇ, ಆತ್ಮ-ತನ್ನ (ದ್ರೇಕ್ಕಾಣ) ಸುಹೃತ್-ಆ ಜನ್ಮಕಾಲದ ಚಂದ್ರನಿಗೆ ತತ್ಕಾಲಮಿತ್ರನಾಗಿರುವ ಗ್ರಹದ ದ್ರೇಕ್ಕಾಣೇ-ರಾಶಿಯ ೩ನೇ ಅಂಶವೆಂದು ಸಂಜ್ಞೆಯಾಗಿರುವುದಕ್ಕೆ ದ್ರೇಕ್ಕಾಣವೆಂದು ಹೆಸರು. ಅಂಥಾದ್ರೇಕ್ಕಾಣಭಾಗದಲ್ಲಿಯಾದರೂ ಇದ್ದರೆ, ಆ ಕಾಲದಲ್ಲಿ ಹುಟ್ಟಿದವರನ್ನು ಕಲ್ಯಾಣರೂಪಗುಣಂ, ಕಲ್ಯಾಣ-ಮಂಗಳಕರ (ಅಥವಾ ಸಮೀಚೀನವಾದ) ರೂಪ-ಶರೀರದ ಸೌಂದರ್ಯದಿಂದಲೂ, ಗುಣ-ಪರೋಪಕಾರ ಸುಗುಣಗಳಿಂದ ಕೂಡಿದವನನ್ನಾಗಿ, ಕರೋತಿ-ಮಾಡುತ್ತಾನೆ.

## ಜನ್ಮಕಾಲದ ಚಂದ್ರನು ಅನ್ಯದ್ರೇಕ್ಕಾಣಸ್ಥಿತನಾದರೆ ಫಲವು

ಅನ್ಯಗಃ-ಪರಕೀಯಗಳಾದ ಅಂದರೆ, ತನ್ನ ಮತ್ತು ತತ್ಕಾಲಮಿತ್ರದ್ರೇಕ್ಕಾಣಗಳನ್ನು ಬಿಟ್ಟು ಇತರವೆಂದರೆ, ತತ್ಕಾಲ ಸಮ, ತತ್ಕಾಲ ಶತ್ರು, ತತ್ಕಾಲ ಅಧಿಶತ್ರು ಈ ದ್ರೇಕ್ಕಾಣ ಗಳಲ್ಲಿದ್ದರೆ, ತದಧಿನಾಥ ಗುಣಂ ಕರೋತಿ-ಯಾವ ಗ್ರಹದ ದ್ರೇಕ್ಕಾಣದಲ್ಲಿ ಜನ್ಮಕಾಲದ ಚಂದ್ರನಿರುತ್ತಾನೋ ಆ ದ್ರೇಕ್ಕಾಣಕ್ಕೆ ಅಧಿಪತಿಯಾದ ಗ್ರಹ ರವಿ, ಕುಜ, ಬುಧ, ಗುರು, ಶುಕ್ರ. ಶನಿಗಳಲ್ಲಿ ಯಾವಗ್ರಹವಿದ್ದಾಗ್ಯೂ ಚಂದ್ರನಿಗೆ ಸಮಾನವಾಗಿದ್ದರೆ ಕಲ್ಯಾಣರೂಪ ಗುಣಗಳು, ಮಧ್ಯಮ ತರಗತಿಯವುಗಳಾಗಿರುವ ವೆಂತಲೂ ಆ ಮೇಲೆ ಹೇಳಲ್ಪಟ್ಟಂತೆ ದ್ರೇಕ್ಕಾಣಾಧಿಪತಿಯು ಚಂದ್ರನಿಗೆ ಶತೃವಾಗಿದ್ದರೆ, ಆ ಕಾಲದಲ್ಲಿ ಹುಟ್ಟಿದವನು ರೂಪ, ಗುಣ, ಕಲ್ಯಾದಿಗುಣಗಳು ಇಲ್ಲಿದವನಾಗುವನೆಂತಲೂ ತಿಳಿಯತಕ್ಕದ್ದು.

## ವ್ಯಾಳಾದಿದ್ರೇಕ್ಕಾಸ್ಥಿತ ಚಂದ್ರಫಲಂ

ವ್ಯಾಳೋದ್ಯತಾಯುಧ ಚತುಶ್ಚರಣಾಂಡಜೇಷು, ವ್ಯಾಳ-ಸರ್ಪದ್ರೇಕ್ಕಾಣಗಳು

ಯಾವುವೆಂದರೆ, ಕಟಕ ದ್ವಿತೀಯ ತೃತೀಯ, ವೃಶ್ಚಿಕ ಪ್ರಥಮದ್ವಿತೀಯ, ಮೀನ ತೃತೀಯ, ಅಂತು ೫ ವ್ಯಾಳದ್ರೇಕ್ಕಾಣ ಪ್ರಕರಣದಲ್ಲಿ ಹೇಳಲ್ಪಟ್ಟಿರುತ್ತೆ. ಉದ್ಯತಾಯುಧ- ಸಾಯುಧದ್ರೇಕ್ಕಾಣ-ಸಾಯುಧದ್ರೇಕ್ಕಾಣಗಳು ಯಾವವೆಂದರೆ ಮೇಷ ರಾಶಿಯಲ್ಲಿ ೧-೩ನೇ ದ್ರೇಕ್ಕಾಣಗಳು, ಮಿಥುನರಾಶಿಯಲ್ಲಿ ೨-೩ನೇ ದ್ರೇಕ್ಕಾಣಗಳು ಸಿಂಹರಾಶಿಯಲ್ಲಿ ೨-೩ನೇ ದ್ರೇಕ್ಕಾಣಗಳು, ಸಿಂಹರಾಶಿಯಲ್ಲಿ ೩-೨ ಕನ್ಯಾರಾಶಿಯಲ್ಲಿ ದ್ವಿತೀಯದ್ರೇಕ್ಕಾಣ ಧನುರಾಶಿಯಲ್ಲಿ ಪ್ರಥಮ ತೃತೀಯದ್ರೇಕ್ಕಾಣಗಳು ಅಂತು ೯ ದ್ರೇಕ್ಕಾಣಗಳು ಆಯುಧಧಾರಿಯಾಗಿರುವ ಪುರುಷಾಕೃತಿ ದ್ರೇಕ್ಕಾಣಗಳೆಂದು ಸಂಕೇತವು-ಚತುಶ್ಚರಣ-ಚತುಷ್ಪದದ್ರೇಕ್ಕಾಣ-ಮೇಷರಾಶಿಯ ೨ನೇ ದ್ರೇಕ್ಕಾಣ ವೃಷಭದ ೨-೩ನೇ ದ್ರೇಕ್ಕಾಣ ಕರ್ಕಾಟಕ ರಾಶಿಯ ೧ನೇ ದ್ರೇಕ್ಕಾಣ ಸಿಂಹರಾಶಿಯ ೨ನೇ ದ್ರೇಕ್ಕಾಣ, ವೃಶ್ಚಿಕರಾಶಿಯ ತೃತೀಯ ದ್ರೇಕ್ಕಾಣ ಧನೂರಾಶಿಯ ದ್ವಿತೀಯ ಅಂತು ೭ ಚತುಷ್ಪದ ಸಂಜ್ಞೆಯ ದ್ರೇಕ್ಕಾಣಗಳು, ಅಂಡಜಾಃ-ಪಕ್ಷಿದ್ರೇಕ್ಕಾಣಗಳು, ಪಕ್ಷಿದ್ರೇಕ್ಕಾಣಗಳು ಯಾವುವೆಂದರೆ-ಮಿಥುನರಾಶಿಯ ದ್ವಿತೀಯ ದ್ರೇಕ್ಕಾಣ, ತೃತೀಯ ದ್ರೇಕ್ಕಾಣ, ಸಿಂಹರಾಶಿಯ ಪ್ರಥಮದ್ರೇಕ್ಕಾಣ, ತುಲಾರಾಶಿಯ ದ್ವಿತೀಯದ್ರೇಕ್ಕಾಣ ಕುಂಭರಾಶಿಯ ಪ್ರಥಮದ್ರೇಕ್ಕಾಣ, ತುಲಾರಾಶಿಯ ದ್ವಿತೀಯದ್ರೇಕ್ಕಾಣ ಕುಂಭರಾಶಿಯ ಪ್ರಥಮದ್ರೇಕ್ಕಾಣ, ಈ ೫ ಪಕ್ಷಿ ಸಂಜ್ಞೆಯ ದ್ರೇಕ್ಕಾಣಗಳೆಂದು ಸಂಕೇತವು॥ ತೀಕ್ಷ್ಣಾತಿಹಿಂಸ್ರ ಗುರುತಲ್ಪರತೊನಟಶ್ಚ-ಸರ್ಪದ್ರೇಕ್ಕಾಣಗಳಲ್ಲಿ ಯಾವ ದ್ರೇಕ್ಕಾಣದಲ್ಲಿಯಾದರೂ ಚಂದ್ರನಿರುವಾಗ ಹುಟ್ಟಿದವನು ತೀಕ್ಷ್ಣಕ್ರೂರ ಸ್ವಭಾವನಾಗಿರುವನು. ಆಯುಧದಾರಿಯಾದ ದ್ರೇಕ್ಕಾಣಗಳಲ್ಲಿ ಯಾವ ದ್ರೇಕ್ಕಾಣದಲ್ಲಿ ಚಂದ್ರನಿದ್ದರೂ ಅತೀತೀಕ್ಷ್ಣ (ಅತಿಹಿಂಸ್ರ), ಅತಿಶಯವಾಗಿ ಜೀವಹಿಂಸೆ ಮಾಡುವವ ನಾಗುವನು. ಚತುಷ್ಪದದ್ರೇಕ್ಕಾಣ ಯಾವ ದ್ರೇಕ್ಕಾಣದಲ್ಲಿಯಾದರೂ ಚಂದ್ರನಿದ್ದರೆ, ಗುರುತಲ್ಪರತಃ-ಗುರುಪತ್ನಿಯಲ್ಲಿ ಆಸಕ್ತನಾಗುವನು. ಪಕ್ಷಿದ್ರೇಕ್ಕಾಣಗಳಲ್ಲಿ ಯಾವ ದ್ರೇಕ್ಕಾಣಗಳಲ್ಲಿ ಚಂದ್ರನಿದ್ದರೂ, ಆ ಕಾಲದಲ್ಲಿ ಹುಟ್ಟಿದವನು, ನಟಶ್ಚ-ಸದಾ ನಾಟ್ಯವಾಡತಕ್ಕ ಸ್ವಭಾವವುಳ್ಳವನಾಗುವನು. ಇದರಲ್ಲಿ ವಿಶೇಷವೆಂದರೆ-ಕರ್ಕಾಟಕ ರಾಶಿಯ ಪ್ರಥಮದ್ರೇಕ್ಕಾಣ ಚತುಷ್ಪದ ದ್ರೇಕ್ಕಾಣ ಕರ್ಕ್ಯಾಟಕರಾಶಿಯ ದ್ವಿತೀಯ, ತೃತೀಯ ದ್ರೇಕ್ಕಾಣಗಳು ಸರ್ಪ ದ್ರೇಕ್ಕಾಣಗಳಾಗಿರುತ್ತೆ. ಆದ್ದರಿಂದ ಚಂದ್ರನಿದ್ದರೆ ಚತುಷ್ಪದ ಮತ್ತು ಸರ್ಪ ದ್ರೇಕ್ಕಾಣದ ಫಲಗಳು ಆತ್ಮೀಯ ಅಂದರೆ ಚಂದ್ರನ ಸ್ವದ್ರೇಕ್ಕಾಣದ ಫಲಗಳನ್ನು ಕೂಡಿಸಿ ಹೇಳತಕ್ಕದ್ದು. ಇದರಂತೆ ಮಿತ್ರ. ಅತಿಮಿತ್ರ, ಸಮಶತ್ರು ಅಧಿಕಶತ್ರು ದ್ರೇಕ್ಕಾಣಫಲಗಳು ಈ ದ್ರೇಕ್ಕಾಣಫಲಗಳನ್ನು ಕೂಡಿಸಿ ಹೇಳತಕ್ಕದ್ದು.

## ಸರ್ಪಾದಿ ಚತುರ್ವಿಧ ದ್ರೇಕ್ಕಾಣ ಪದಕಂ

| ರಾಶಿ ನಾಮಾನಿ | ದ್ರೇಕ್ಕಾಣ | ವಿಶೇಷ ಸಂಜ್ಞೆ | ಈ ದ್ರೇಕ್ಕಾಣದಲ್ಲಿ ಚಂದ್ರನಿದ್ದ ಫಲ |
|---|---|---|---|
| ಕರ್ಕಾಟಕ | ೨ನೇ | | |
| | ೩ನೇ | | |
| ವೃಶ್ಚಿಕ | ೧ನೇ | ಈ ೫ ಸರ್ಪ | ಅತೀ ಕ್ರೂರನಾಗುವನು |
| | ೨ನೇ | | |
| ಮೀನ | ೩ನೇ | ದ್ರೇಕ್ಕಾಣಗಳು | |
| ಮೇಷ | ೧ನೇ | | |
| | ೩ನೇ | | |
| ಮಿಥುನ | ೨ನೇ | ಈ ೯ ಆಯುಧ | ಅತ್ಯಂತ ಪ್ರಾಣಹಿಂಸೆ |
| | ೩ನೇ | | |
| ಸಿಂಹ | ೨ನೇ | ವನ್ನು ಧರಿಸಿರುವ | ಮಾಡುವವನಾಗುವನು |
| | ೩ನೇ | | |
| ಕನ್ಯಾ | ೨ನೇ | ದ್ರೇಕ್ಕಾಣಗಳು | |
| | ೧ನೇ | | |
| ಧನುಸ್ಸು | ೩ನೇ | | |
| ಮೇಷ | ೨ನೇ | | |
| ವೃಷಭ | ೨ನೇ | | ಗುರುಪತ್ನೀಗಮನ ಅಥವಾ |
| ಕಟಕ | ೧ನೇ | ಈ ೭ ಚತುಷ್ಪದ | ತತ್ಸಮಾನ ಗಮನಾದಿ |
| ಸಿಂಹ | ೧ನೇ | ದ್ರೇಕ್ಕಾಣಗಳು | |
| | ೨ನೇ | | ಪಾಪಿಷ್ಠನಾಗುವನು |
| ವೃಶ್ಚಿಕ | ೩ನೇ | | |
| ಧನುಸ್ಸು | ೨ನೇ | | |
| ಮಿಥುನ | ೨ನೇ | | |
| | ೩ನೇ | ಈ ೫ ಪಕ್ಷಿ | ಸದಾ ಸಂಚಾರಶೀಲ |
| ಸಿಂಹ | ೧ನೇ | | |
| ತುಲ | ೨ನೇ | ದ್ರೇಕ್ಕಾಣಗಳು | ನಾಗುವನು |
| ಕುಂಭ | ೧ನೇ | | |
| | | | |

## ನವಾಂಶ ದ್ವಾದಶಾಂಶ ಫಲಂ

ಮೂಲ॥ ಸ್ತೇನೋಭೋಕ್ತಾಪಂಡಿತಾಢ್ಯೋ ನರೇಂದ್ರಃ ಕ್ಲೀಬಃಶೂರೋವಿಷ್ಟಿಕೃದ್ದಾಸವೃತ್ತಿಃ। ಪಾಪೋಹಿಂಸ್ರೋಭೀಶ್ಚವರ್ಗೋತ್ತಮಾಂಶೇ ಷ್ವೇಷಾಮೀಶಾರಾಶಿವದ್ದ್ವಾ ದ್ವಶಾಂಶೈಃ ॥೭॥

ಟೀಕು॥ ಮೇಷಾದಿನವಾಂಶೆಯಲ್ಲಿ ಮತ್ತು ದ್ವಾದಶಾಂಶೆಯಲ್ಲಿ ಹುಟ್ಟಿದವರ ಸ್ವಭಾವ. ಮೇಷಲಗ್ನವನ್ನು ಬಿಟ್ಟು ಉಳಿದ ಲಗ್ನಗಳಾಗಿ ಮೇಷ ನವಾಂಶೆಯಲ್ಲಿ ಹುಟ್ಟಿದವನು, ಸ್ತೇನಃ-ಕಳ್ಳನಾಗುವನು, ವೃಷಭಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ವೃಷಭ ನವಾಂಶೆಯಲ್ಲಿ ಹುಟ್ಟಿದವನು, ಭೋಕ್ತಾ-ಭೋಕ್ತಪುರುಷ, ಅಂದರೆ, ಭೋಗವಂತನಾಗುವನು, ಮಿಥುನ ಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಮಿಥುನ ನವಾಂಶೆಯಲ್ಲಿ ಹುಟ್ಟಿದವನು. ಪಂಡಿತಃ-ವಿದ್ವಾಂಸನಾಗುತ್ತಾನೆ. ಕರ್ಕಾಟಕ ಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಕರ್ಕಾಟಕ ನವಾಂಶೆಯುಲ್ಲಿ ಹುಟ್ಟಿದವನು ಆಢ್ಯಃ-ಧನವಂತನಾಗುವನು. ಸಿಂಹಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಸಿಂಹನವಾಂಶೆಯಲ್ಲಿ ಹುಟ್ಟಿದವನು, ನರೇಂದ್ರಃ-ರಾಜನಾಗುವನು, ಕನ್ಯಾಲಗ್ನವನ್ನು ಬಿಟ್ಟು, ಉಳಿದ ಲಗ್ನಗಳಲ್ಲಿ ಕನ್ಯಾನವಾಂಶೆಯಲ್ಲಿ ಹುಟ್ಟಿದವನು, ಕ್ಲೀಬಃ-ನಪುಂಸಕನಾಗುವನು, ತುಲಾಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ತುಲಾನವಾಂಶೆಯಲ್ಲಿ ಹುಟ್ಟಿದವನು, ಶೂರಃ-ಯುದ್ಧದಲ್ಲಿ ಸಮರ್ಥನಾಗುವನು. ವೃಶ್ಚಿಕಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ವೃಶ್ಚಿಕನವಾಂಶೆಯಲ್ಲಿ ಹುಟ್ಟಿದವನು, ವಿಷ್ಟಿಕೃತ್-ಭಾರವನ್ನು ಹೊತ್ತು ಹಾಕುವವನಾಗುವನು. ಧರ್ನುಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಧನುರ್ನವಾಂಶೆಯಲ್ಲಿ ಹುಟ್ಟಿದವನು. ದಾಸವೃತ್ತಿಃ- ಭೃತ್ಯನಾಗುವನು. ಮಕರಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಮಕರನವಾಂಶೆಯಲ್ಲಿ ಹುಟ್ಟಿದವನು. ಮಕರಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಮಕರನವಾಂಶೆ ಉಳಿದ ನವಾಂಶೆಯಲ್ಲಿ ಹುಟ್ಟಿದವನು, ಪಾಪಃ-ಪಾಪವಂತನಾಗುವನು. ಕುಂಭಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಕುಂಭನವಾಂಶೆಯುಲ್ಲಿ ಹುಟ್ಟಿದವನು, ಹಿಂಸ್ರಃ-ಪ್ರಾಣಹಿಂಸೆ ಮಾಡುವವನಾಗುವನು. ಮೀನಲಗ್ನವನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಮೀನ ನವಾಂಶೆಯಲ್ಲಿ ಹುಟ್ಟಿದವನು ಅಭೀಃ-*ನಿರ್ಭಯವುಳ್ಳವನಾಗುವನೆಂದು (ಮತ್ತು ಅಧೀಃ) ಬುದ್ಧಿಹೀನನಾಗುವನೆಂದು ಹೇಳುವರು. ಈ ವಿಷಯದಲ್ಲಿ ॥ಲ.ಜಾ ಶ್ಲೋಕ॥ ತಸ್ಕರಭೋಕ್ತೃವಿಚಕ್ಷಣ ಧನಿನೃಪತಿ ನಪುಂಸಕಾಭಯು ದರಿದ್ರಾಃ। ...ಪಾಪೋಗ್ರೋತ್ಕೃಷ್ಟಾವೇಷಾದ್ಯಾನಾಂ ನವಾಂಶಕಾಭಾವಾಃ ॥೧೬॥

* ಅಧೀಃ-ಬುದ್ಧಿಹೀನನೆಂದು ಪಾ॥ ಇದು ವರಾಹಮಿಹಿರರ ಸಮ್ಮತವಲ್ಲ.

ವರ್ಗೋತ್ತಮಾಂಶೇಷು-ಈ ಮೇಷಾದಿ ರಾಶಿಗಳಲ್ಲಿ ಮೇಷಾದಿ ನವಾಂಶೆಗಳು ವರ್ಗೋತ್ತಮಾಂಶೆಗಳು, ಅಂಥಾ ವರ್ಗೋತ್ತಮಾಂಶೆಯಲ್ಲಿ ಜನಿಸಿದವರು, ಏಷಾಂ-ಈ ಮೇಲೆ ಹೇಳಲ್ಪಟ್ಟ ಸ್ತೇನೋಭೋಕಾ ಪಂಡಿತಾಢ್ಯಾಃ ಮೊದಲಾದವರ, ಈಶಾಃ-ಪ್ರಭುಗಳಾಗುವರು. ಅದು ಹೇಗೆಂದರೆ-ಮೇಷದಲ್ಲಿ ಮೇಷ ನವಾಂಶೆಯಲ್ಲಿ ಹುಟ್ಟಿದವನು ಕಳ್ಳರಿಗೆ ದೊರೆಯಾಗುವನು. ವೃಷಭದಲ್ಲಿ ವೃಷಭ ನವಾಂಶೆಯಲ್ಲಿ ಹುಟ್ಟಿದವನು ಭೋಗಪುರುಷರಿಗೆ ದೊರೆಯಾಗುವನು. ಮಿಥುನದಲ್ಲಿ ಮಿಥುನ ವರ್ಗೋತ್ತಮಾಂಶೆಯಲ್ಲಿ ಹುಟ್ಟಿದವನು ಧನವಂತರಿಗೆ ಅಧಿಪತಿಯಾಗುವನು. ಸಿಂಹ ವರ್ಗೋತ್ತಮಾಂಶೆಯಲ್ಲಿ ಹುಟ್ಟಿದವನು ರಾಜರಿಗೆಲ್ಲಾ ದೊರೆ-ಚಕ್ರವರ್ತಿ ಯಾಗುವನು. ಈ ಪ್ರಕಾರವೇ ಉಳಿದ ವರ್ಗೋತ್ತಮಾಂಶೆಗಳಲ್ಲಿ ಹುಟ್ಟಿದವರು ಆಯಾಯ ಅಧಿಪತಿಗಳಾಗುವರು. ದ್ವಾದಶಾಂಶೈ-ಮೇಷಾದಿ ದ್ವಾದಶಾಂಶೆಗಳಲ್ಲಿ ಹುಟ್ಟಿದವರು ರಾಶಿವತ್-ಮೇಷಾದಿರಾಶಿಗಳಿಗೆ ಹೇಳಿದ ವೃತ್ತಾತಾಮ್ರ, ದೃಗುಪ್ತ ಶಾಕ ಲಘುಭುಕ್, ಎಂಬುವ ಫಲದಂತೆ ಆ ಮೇಷಾದಿ ದ್ವಾದಶರಾಶಿ ಫಲಗಳೇ ದ್ವಾದಶಾಂಶಗಳಿಗೂ ಫಲಗಳಾದ್ದರಿಂದ ಅವುಗಳನ್ನು ಊಹಿಸಿ ತಿಳಿದುಕೊಳ್ಳತಕ್ಕದ್ದು ।।೧೭।।



## ವರ್ಗೋತ್ತಮಾಂಶ ನವಾಂಶಜಾತ ಫಲ ಪದಕಂ

### ಜನ್ಮಕಾಲ ವರ್ಗೋತ್ತಮಾಂಶ ನವಾಂಶಕ್ಕೆ ಪದಕ ವಿವರಣೆ

| ಸಂ. | ರಾಶಿಗಳು | ರಾಶಿ ನವಾಂಶಕ್ಕೆ ವರ್ಗೋತ್ತಮಾಂಶೆಗೆ ಫಲಂ | ಇತರ ರಾಶಿಗಳಲ್ಲಿ |
|---|---|---|---|
| ೧. | ಮೇಷ | ತಸ್ಕರಾಧಿಪತಿ | ಕಳ್ಳನಾಗುವನು |
| ೨. | ವೃಷಭ | ಭೋಗಿಗಳಧಿಪತಿ | ಭೋಕ್ತಪುರುಷ |
| ೩. | ಮಿಥುನ | ವಿದ್ವಾಂಸರಿಗೆ ಗುರು | ವಿದ್ವಾಂಸ |
| ೪. | ಕಟಕ | ಧನವಂತರಿಗಧಿಪತಿ | ಧನವಂತ |
| ೫. | ಸಿಂಹ | ಚಕ್ರವರ್ತಿ | ರಾಜ(ನರೇಂದ್ರ) |
| ೬. | ಕನ್ಯ | ನಪುಂಸರಿಗೆ ಅಧಿಪತಿ | ನಪುಂಸಕ |
| ೭. | ತುಲಾ | ಸೈನ್ಯಾಧಿಪತಿ | ಶೂರ |
| ೮. | ವೃಶ್ಚಿಕ | ಭಾರಹೊರುವವರಿಗೆ ಅಧಿಪತಿ | ಭಾರ ಹೊರುವನು |
| ೯. | ಧನುಸ್ಸು | ಬೃತ್ಯರಿಗಧಿಪತಿ | ದಾಸ (ಬೃತ್ಯ) |
| ೧೦. | ಮಕರ | ಪಾಪಾಸಕ್ತರಿಗೆ ಗುರು (ದೊರೆ) | ಪಾಪಾಸಕ್ತ |
| ೧೧. | ಕುಂಭ | ಹಿಂಸಕನಿಗಧಿಪತಿ | ಹಿಂಸಕ |
| ೧೨. | ಮೀನ | ನಿರ್ಭಯವುಳ್ಳವರಿಗೆ ಅಧಿಪತಿ | ನಿರ್ಭಯುಳ್ಳವನು |

## ಅಥ ತ್ರಿಂಶಾಂಶ ಫಲಂ

ಮೂಲ॥ ಜಾಯಾನ್ವಿತೋಬಲ ವಿಭೂಷಣ ಸತ್ವಯುಕ್ತ ಸ್ತೇಜೋತಿ ಸಾಹಸ ಯುತಶ್ಚ ಕುಜೇ ಸ್ವಭಾಗೇ। ರೋಗೀ ಮೃತಸ್ವ ಯುವತಿರ್ವಿಷ ಮೋನ್ಯದಾರೋ ದುಃಖೀಪರಿಚ್ಛದಯುತೋ ಮಲಿನೋರ್ಕಪುತ್ರೇ॥

ಅವತಾರಿಕೆ॥ ಕುಜಶನಿಗಳು ತಮ್ಮ ತಮ್ಮ ತ್ರಿಂಶಾಂಶೆಯಲ್ಲಿದ್ದ ಫಲ

### ಕುಜಸ್ವತ್ರಿಂಶಾಂಶಫಲಂ

ಟೀ॥ ಕುಜೇ-ಕುಜನು, ಸ್ವಭಾಗೇ-ಸ್ವತ್ರಿಂಶಾಂಶೆಯಲ್ಲಿರುವಾಗ ಜನಿಸಿದವನು. ಜಾಯಾನ್ವಿತಃ-ಪತ್ನೀಸಮೇತ, ಬಲವಿಭೂಷಣಸತ್ವಯುಕ್ತ-ವೀರ್ಯ, ಭೂಷಣ. ಶೌರ್ಯ, ಅಲಂಕಾರ ಮೊದಲಾದ್ದರಿಂದ ಶೋಭಿಸುವನು. ತೇಜೋತಿ ಸಾಹಸಯುತಶ್ಚ-ತೇಜಸ್ಸಿನಿಂದ ಕೂಡಿದವನು, ಅತ್ಯಂತ ಸಾಹಸವುಳ್ಳವನೂ ಆಗುವನು, ಈ ಮೇಲೆ ಹೇಳಿದ ಗುಣಗಳು ಯಾವ ರಾಶಿಯಲ್ಲಾದರೂ, ಕುಜನು ತನ್ನ ತ್ರಿಂಶಾಂಶೆ ಯಲ್ಲಿದ್ದ ಕಾಲದಲ್ಲಿ ಹುಟ್ಟಿದವರಿಗೆ ಉಂಟಾಗುತ್ತದೆಂದು ತಿಳಿಯತಕ್ಕದ್ದು.

### ಶನಿಸ್ವತ್ರಿಂಶಾಂಶಫಲಂ

ಅರ್ಕಪುತ್ರೇ-ಶನಿಯು, ಸ್ವತ್ರಿಂಶಾಂಶೆಯಲ್ಲಿರುವಾಗ ಜನಿಸಿದವನು, ರೋಗೀ-ವ್ಯಾಧಿಪೀಡಿತನಾಗುವನು. ಮೃತಸ್ವಯುವತಿಃ-ತನ್ನ ಹೆಂಡತಿಯ ಮರಣವನ್ನು ನೋಡುವನು. ಅಂದರೆ ಅಪತ್ನೀಕನಾಗುವನು. ವಿಷಮಃ-ಕ್ರೂರಸ್ವಭಾವನಾಗುವನು. ಅನ್ಯದಾರಃ-ಪರದಾರಾಸಕ್ತನಾಗುವನು. ದುಃಖೀ-ದುಃಖವಂತನಾಗುವನು. ಪರಿಚ್ಛದಯುತಃ-ಮನೆ ಮೊದಲಾದವುಗಳನ್ನು ಕಳೆದುಕೊಂಡವನಾಗುವನು. ಮಲಿನಃ-ಶ್ವಪಚನಾಗುವನು. ಇಲ್ಲಿ ಸ್ವಭಾಗೆ ಎಂದು ಹೇಳಿರುವುದಕ್ಕೆ ಶುಕ್ರ ತ್ರಿಂಶಾಂಶೆಯ ಫಲವನ್ನು ಹೇಳುವಾಗ ಸ್ವತ್ರಿಂಶಾಂಶೆ ಎಂದು ಹೇಳಿರುವುದರಿಂದ ಇಲ್ಲಿ ತ್ರಿಂಶಾಂಶೆಯೆಂದು ಅರ್ಥಾತ್ ಗ್ರಹಿಸಿ ಫಲವನ್ನು ಬರೆದಿರುತ್ತೆ (೧೦ನೇ ಶ್ಲೋಕವನ್ನು ನೋಡತಕ್ಕದ್ದು) ॥೮॥

ಮೂಲ॥ ಸ್ವಾಂಶೇ ಗುರೌ ಧನಯಸ ಸ್ಸುಖಶುದ್ಧಿ ಯುಕ್ತಾಸ್ತೇಜಸ್ವಿ ಪೂಜ್ಯ ನಿರುರುದ್ಯಮ ಭೋಗವಂತಃ। ಮೇಧಾ ಕಲಾ ಕಪಟಕಾವ್ಯ ವಿವಾದ ಶಿಲ್ಪ ಶಾಸ್ತ್ರಾರ್ಥ ಸಾಹಸಯುತಾಃ ಶಶಿಜೇತಿಮಾನ್ಯಾಃ॥೯॥

ಅವತಾರಿಕೆ॥ ಗುರು ಬುಧರು ಸ್ವತ್ರಿಂಶಾಂಶೆಯಲ್ಲಿದ್ದ ಫಲ.

ಟೀಕು॥ ಗುರೌ-ಗುರುವು, ಸ್ವಾಂಶೇ-ತ್ರಿಂಶಾಂಶೆಯಲ್ಲಿರುವಾಗ ಜನಿಸಿದವರು. ಧನ ಯಶಸ್ಸುಖಬುದ್ಧಿಯುಕ್ತಾಃ-ದ್ರವ್ಯಕೀರ್ತಿ ಸೌಖ್ಯ ಪ್ರಜ್ಞೆ ಇವುಗಳಿಂದ ಕೂಡಿದವರು

ತೇಜಸ್ವಿ ಪೂಜ್ಯನಿರುಗುದ್ಯಮಭೋಗವಂತಃ-ತೇಜಸ್ವಿ-ತೇಜಸ್ಸುಳವರು, ಪೂಜ್ಯ-ಗೌರವದಿಂದ ಸನ್ಮಾನಹೊಂದುವರು, ನಿರುಕ್-ಆರೋಗ್ಯ ಅಂದರೆ ವ್ಯಾಧಿಯಿಂದ ಬಿಡಲ್ಪಟ್ಟವರು, ಉದ್ಯಮಃ - ಉತ್ಸಾಹ ಉಳ್ಳವರು, ಭೋಗವಂತಃ-ಭೋಗವುಳ್ಳವರೂ ಆಗುವರು.

## ಬುಧನು ಸ್ವತ್ರಿಂಶಾಂಶೆಯಲ್ಲಿದ್ದ ಫಲ

ಶಶೀಜೇ-ಬುಧನು, ಸ್ವತ್ರಿಂಶಾಯಲ್ಲಿರುವಾಗ ಜನಿಸಿದವರು. ಮೇಧಾ- ಬುದ್ಧಿ ಕಲಾ-ಗೀತಾವಾದ್ಯಾದಿಶಾಸ್ತ್ರವನ್ನು ತಿಳಿದವರು, ಕಪಟ-ಡಾಂಭಿಕ, ಕಾವ್ಯ-ಕವಿತ್ವ ಮಾಡುವಿಕೆ, ವಿವಾದ-ವ್ಯವಹಾರಶೀಲರೂ, ಶಿಲ್ಪ-ಶಿಲ್ಪಶಾಸ್ತ್ರಕರ್ಮಗಳು, ಶಾಸ್ತ್ರಾರ್ಥ-ಧರ್ಮಶಾಸ್ತ್ರರ್ಥವನ್ನು ತಿಳಿದವರೂ, ಸಾಹಸ, ಅಸಮೀಕ್ಷಕಾರಿತ್ವ-ಅಂದರೆ ತನ್ನ ಯೋಗ್ಯತೆಗೆ ಮೀರಿದ ಕಾರ್ಯವನ್ನು ಸಾಹಸಪಟ್ಟು ಮಾಡುವಿಕೆ ಈ ಗುಣಗಳಿಂದ, ಯುತಾಃ-ಕೂಡಿ, ಅತಿಮಾನ್ಯಾಃ-ಹೆಚ್ಚಾದ ಸನ್ಮಾನವಂತರಾಗುವರು.

ಮೂಲ॥ ಸ್ವತ್ರಿಂಶಾಂಶೇ ಬಹುಸುತ ಸುಖಾರೋಗ್ಯ ಭಾಗ್ಯಾರ್ಥ ರೂಪಃ।
ಶುಕ್ರೇ ತೀಕ್ಷ್ಣ ಸ್ಸುಲಲಿತವಪುಸ್ಸುಪ್ರಕೀರ್ಣೇಂದ್ರಿಯಶ್ಚ॥ ಶೂರಾಸ್ತಬ್ಧೌ ವಿಷಮವಧಕೌ ಸದ್ಗುಣಾಢ್ಯೌ ಸುಖಜ್ಞಾ! ಚಾರ್ವಾಂಗೇಶೌ ರವಿಶಶಿ ಯುತೇಷ್ವಾರ ಪೂರ್ವಾಂಶಂಕೇಷು ॥೧೦॥

## ಶುಕ್ರಸ್ವತ್ರಿಂಶಾಂತಫಲಂ

ಅವತಾರಿಕೆ॥ ಶುಕ್ರನು ತನ್ನ ತ್ರಿಂಶಾಂಶೆಯಲ್ಲಿರುವಾಗ ಹುಟ್ಟಿದವನ ಸ್ವರೂಪ ಮತ್ತು ರವಿ, ಚಂದ್ರ ಕುಜಾದಿ ತ್ರಿಂಶಾಂಶೆಯಲ್ಲಿರುವಾದ ಹುಟ್ಟಿದವನ ಸ್ವರೂಪವು ಸಹ ಹೇಳಲ್ಪಡುತ್ತೆ.

ಶುಕ್ರೇ-ಶುಕ್ರನು, ಸ್ವತ್ರಿಂಶಾಂಶೇ-ಸ್ವತ್ರಿಂಶಾಂಶೆಯಲ್ಲಿರುವಾಗ ಜನಿಸಿದವನು, ಬಹುಸುತಸುಖಾರೋಗ್ಯಭಾಗಾರ್ಥರೂಪಃ-ಅಧಿಕವಾದ ಪುತ್ರಸುಖ ಆರೋಗ್ಯ, ಸೌಭಾಗ್ಯ, ಧನ, ಸೌಂದರ್ಯಗಳುಳ್ಳವನು. ಭಾರ್ಯಾರ್ಥರೂಪಃ-(ಪತ್ನಿದ್ರವ್ಯರೂಪ ದಿಂದ ಕೂಡಿರುವನೆಂದು ಕೆಲವರು ಅರ್ಥಮಾಡಿರುವರು) ಇದು ಪಾಠಾಂತರ॥ ತೀಕ್ಷ್ಣಃ-ಕ್ರೂರನು, ಸುಲಲಿತವಪುಃ-ಮನೋಹರವಾದ ಶರೀರವುಳ್ಳವನು, ಸುಪ್ರಕೀರ್ಣಂದ್ರಯಶ್ಚ-ಹೆಚ್ಚಾಗಿ ವಿಷಯಾಸಕ್ತನೂ ಆಗುವನು.

## ಸೂರ್ಯಚಂದ್ರರ ತ್ರಿಂಶಾಂಶಫಲ

ಅರಪೂರ್ವಾಂಶಕೇಷು-ಕುಜ ಮೊದಲುಗೊಂಡು ಐದು ತ್ರಿಂಶಾಂಶಗಳಲ್ಲಿ, ರವಿ ಶಶಿಯುತೇಷು-ಸೂರ್ಯ ಚಂದ್ರರಿದ್ದರೆ, ಕ್ರಮವಾಗಿ ಶೂರ ಸ್ತಬ್ಧತ್ವಾದಿ ಗುಣಗಳನ್ನು

ಹೇಳತಕ್ಕದ್ದು. ಅದು ಯಾವ ಪ್ರಕಾರವೆಂದರೆ :- ಕುಜ ತ್ರಿಶಾಂಶೆಯಲ್ಲಿ ಸೂರ್ಯನಿದ್ದರೆ, ಶೂರಃ-ಯುದ್ಧದಲ್ಲಿ ಶೂರನಾಗುವನು. ಚಂದ್ರನಿದ್ದರೆ, ಸ್ತಬ್ಧಃ-ಆಲಸ್ಯವುಳ್ಳವನು, (ಸೋಮಾರಿ) ಶನಿತ್ರಿಂಶಾಂಶೆಯಲ್ಲಿ ರವಿಯಿದ್ದರೆ, ವಿಷಮಃ-ಕ್ರೂರಸ್ವಭಾವವುಳ್ಳವನಾಗುವನು, ಚಂದ್ರನಿದ್ದರೆ, ವಧುಕಃ-ಪ್ರಾಣಿಹಿಂಸಕನು, ಗುರು ತ್ರಿಂಶಾಂಶೆಯಲ್ಲಿ ಸೂರ್ಯನಿದ್ದರೆ, ಸದ್ಗುಣಃ-ಸುಗುಣಗಳಿಂದ ಪ್ರಕಾಶವುಳ್ಳವನು. ಚಂದ್ರನಿದ್ದರೆ ಆಢ್ಯಃ-ದ್ರವ್ಯವಂತನಾಗುವನು, ಬುಧ ತ್ರಿಂಶಾಂಶೆಯಲ್ಲಿ ರವಿಯಿದ್ದರೆ, ಸುಖಿ-ಸೌಖ್ಯವುಳ್ಳವನು. ಚಂದ್ರನಿದ್ದರೆ, ಜ್ಞ-ವಿದ್ವಾಂಸನಾಗುವನು, ಶುಕ್ರ ತ್ರಿಂಶಾಂಶೆಯಲ್ಲಿ ರವಿಯಿದ್ದರೆ, ಚಾರ್ವಂಗಃ-ಸೌಂದರ್ಯವುಳ್ಳ ಶರೀರವುಳ್ಳವನಾಗುವನು, ಚಂದ್ರನಿದ್ದರೆ, ಇಷ್ಟಃ-ಸಕಲ ಜನರಿಗೂ ಬೇಕಾದವನಾಗುವನು ॥೧೦॥

ಟೀ॥ ಈ ತ್ರಿಂಶಾಂಶ ಫಲಗಳು ಸುಲಭವಾಗಿ ತಿಳಿಯುವುದಕ್ಕೋಸ್ಕರ ಕುಜಾದಿ ಪಂಚಗ್ರಹಗಳಿಗೆ ೧ ಪದಕ, ಸೂರ್ಯ ಚಂದ್ರರಿಗೆ ೧ ಪದಕ ಮಾಡಿ ಇದಕ್ಕೆ ಸೇರಿಸಿದೆ. ಮೇಷಾದಿ ಯಾವ ರಾಶಿಯಲ್ಲಿ ಈ ತ್ರಿಶಾಂಶಗಳು ಬಂದರೂ ಫಲವು ಸಮಾನವಾಗಿರುವುದು.

## ತ್ರಿಂಶಾಂಶ ಫಲ ಪದಕ-ಕುಜಾದಿ ಸ್ವತ್ರಿಂಶಾಂಶ ಫಲ ಪದಕಂ

| ಸಂ. | ಗ್ರಹಾಃ | ತ್ರಿಶಾಂಶ | ಫಲ |
|---|---|---|---|
| ೧. | ಕುಜ | ಸ್ವತ್ರಿಂಶಾಂಶೆಯಲ್ಲಿ | ಸುತಸೌಖ್ಯ, ಭಾರ್ಯಾ ಸಮೇತನು, ವೀರ್ಯ ಭೂಷಣಾನ್ವಿತನು |
| ೨. | ಶನಿ | ಸ್ವತ್ರಿಂಶಾಂಶೆಯಲ್ಲಿ | ರೋಗಿ, ಹೆಂಡತಿಯನ್ನು ಕಳಕೊಂಡವನು, ಪರದಾರಾಸಕ್ತನು, ದುಃಖಿ |
| ೩ | ಗುರು | ಸ್ವತ್ರಿಂಶಾಂಶೆಯಲ್ಲಿ | ಧನ, ಕೀರ್ತಿ, ಸೌಖ್ಯ, ತೇಜಸ್ವಿ, ಪೂಜ್ಯ, ನಿರೋಗಿ, ಉತ್ಸಾಹಿ |
| ೪. | ಬುಧ | ಸ್ವತ್ರಿಂಶಾಂಶೆಯಲ್ಲಿ | ಬುದ್ಧಿವಂತ, ಕಲಾಕುಶಲ, ಡಾಂಬಿಕ, ಕವಿ, ವಿವಾದ ಶಿಲ್ಪಿ |
| ೫. | ಶುಕ್ರ | ಸ್ವತ್ರಿಂಶಾಂಶೆಯಲ್ಲಿ | ಸುತ, ಸೌಖ್ಯ, ಆರೋಗ್ಯಭಾಗ್ಯ ಹೆಂಡತಿ ಸುಂದರಿ ಮತ್ತು ಧನವುಳ್ಳವನು. |

## ಸೂರ್ಯ ಚಂದ್ರಸ್ಥಿತಿ ತ್ರಿಂಶಾಂಶೆ ಫಲಪದಕ

| ಸಂ. | ತ್ರಿಂಶಾಂಶ ಗ್ರಹಗಳು | ಗ್ರಹಗಳು | ಫಲ |
|---|---|---|---|
| ೧. | ಕುಜ ತ್ರಿಶಾಂಶೆ | ರವಿ ಇದ್ದರೆ | ರಣಶೂರ |
| | | ಚಂದ್ರ ಇದ್ದರೆ | ಸೋಮಾರಿ |
| ೨. | ಶನಿ ತ್ರಿಂಶಾಂಶೆ | ರವಿ ಇದ್ದರೆ | ಕ್ರೂರಸ್ವಭಾವ |
| | | ಚಂದ್ರ ಇದ್ದರೆ | ಹಿಂಸಕ ನಿರ್ದಯತ್ವ |
| ೩. | ಗುರು ತ್ರಿಂಶಾಂಶೆ | ರವಿ ಇದ್ದರೆ | ಸದ್ಗುಣಿ ಒಳ್ಳೆ ನಡತೆಯುಳ್ಳವ |
| | | ಚಂದ್ರ ಇದ್ದರೆ | ಧನಿಕ ಧನಾಧಿಪತಿ |
| ೪. | ಬುಧ ತ್ರಿಂಶಾಂಶೆ | ರವಿ ಇದ್ದರೆ | ಸುಖಿ |
| | | ಚಂದ್ರ ಇದ್ದರೆ | ಪಂಡಿತ (ವಿದ್ವಾಂಸ) |
| ೫. | ಶುಕ್ರ ತ್ರಿಂಶಾಂಶೆ | ರವಿ ಇದ್ದರೆ | ಸುಂದರಾಂಗ |
| | | ಚಂದ್ರ ಇದ್ದರೆ | ಸರ್ವಜನಪ್ರಿಯ |

ಇತಿ ಶ್ರೀ ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತ
ಕಾಖ್ಯೆ ಹೋರಾಶಾಸ್ತ್ರೇ ಸ್ವಕ್ಷೇತ್ರಾದಿ ಆಶ್ರಯಯೋಗಾಖ್ಯ
ವರ್ಣನಂ ನಾಮ ಏಕವಿಂಶ ಪ್ರಕರಣಂ.

ಇತಿ ಶ್ರೀ ಮದ್ಗೌತಮಾನ್ವಯ ಪರ್ಯಪಾರಾವಾರಾ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯ ಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಂ
ಸ್ವಕ್ಷೇತ್ರಾದಿ ಗ್ರಹಾಶ್ರಿತಫಲ ವರ್ಣಂ ನಾಮ
ಏಕವಿಂಶಪ್ರಕರಣಂ ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ

## ೨೨ನೇ ಸಂಕೀರ್ಣಯೋಗ ಪ್ರಕರಣಂ

ಅವತಾರಿಕೆ - ಈ ಪ್ರಕರಣದಲ್ಲಿ ಗ್ರಹಯೋಗದಿಂದುಂಟಾದ ಮಿಶ್ರಫಲವನ್ನು ಹೇಳುವುದರಿಂದ ಇದಕ್ಕೆ ಸಂಕೀರ್ಣ ಪ್ರಕರಣವೆಂತಲೂ ಹೆಸರು ಉಂಟಾಗುತ್ತೆ.

ಮೂಲ॥ ಸ್ವರ್ಕ್ಷತುಂಗ ಮೂಲತ್ರಿಕೋಣಗಾಃ ಕಂಟಕೇಷು ಯಾವಂತ
ಆಶ್ರಿತಾಃ ಸರ್ವಏತೊನ್ಯೋನ್ಯಕಾರಕಾಃ ಕರ್ಮಗಸ್ತು ತೇಷಾಂ-
ವಿಶೇಷಿತಃ ॥೧॥

ಟೀಕು॥ ಗ್ರಹಗಳಿಗೆ ಪರಸ್ಪರ ಕಾರಕಸಂಜ್ಞೆ ಹೇಳಲ್ಪಡುತ್ತೆ. ಸ್ವರ್ಕ್ಷತುಂಗ ಮೂಲತ್ರಿಕೋಣಗಾಃ-ಸ್ವಕ್ಷೇತ್ರ, ಉಚ್ಚ, ಮೂಲತ್ರಿಕೋಣಸ್ಥಾನಗಳನ್ನು ಹೊಂದಿರುವ, ಯಾವಂತಃ-ಎಷ್ಟು ಗ್ರಹಗಳು, ಕಂಟಕೇಷು-ಲಗ್ನಾದಿ ಕೇಂದ್ರಗಳಲ್ಲಿ (೧-೪-೭-೧೦) ಆಶ್ರಿತಾಃ-ಇರುವರೋ, ತೇಸರ್ವಏವ ಆ ಸರ್ವಗ್ರಹಗಳು, ಅನ್ಯೋನ್ಯಕಾರಕಾಃ- ಒಬ್ಬರಿಗೊಬ್ಬರು, ಕಾರಕ ಸಂಕೇತವುಳ್ಳವರು ಆಗುವರು ಕರ್ಮಗಸ್ತು ದಶಮಸ್ಥಾನದಲ್ಲಿದ್ದ ಗ್ರಹವು, ತೇಷಾಂ-ಆ ಎಲ್ಲಾ ಕಾರಕ ಗ್ರಹಗಳಲ್ಲಿ ವಿಶೇಷತಃ- ಅಧಿಕವಾದ ಕಾರಸಂಜ್ಞೆಯುಳ್ಳವನಾಗುವನು. ಇದರ ವಿವರಣೆಃ-ಸ್ವಕ್ಷೇತ್ರದಲ್ಲಾಗಲೀ ಉಚ್ಚ ಕ್ಷೇತ್ರದಲ್ಲಾಗಲೀ, ಮೂಲತ್ರಿಕೋಣದಲ್ಲಾಗಲೀ ಇರುವ ಗ್ರಹವು ಲಗ್ನಾದಿ ಕೇಂದ್ರದಲ್ಲಿದ್ದು ಮತ್ತೊಂದು ಗ್ರಹವು ಸ್ವಕ್ಷೇತ್ರ, ಉಚ್ಚಃ ಮೂಲ, ತ್ರಿಕೋಣದಲ್ಲೇ ಆಗಲಿ ಇದ್ದರೆ, ಆ ಸ್ವಕ್ಷೇತ್ರಗ್ರಹಕ್ಕೆ ಸ್ವಕ್ಷೇತ್ರಗ್ರಹವು ಉಚ್ಚಕ್ಷೇತ್ರ ಉಚ್ಚಗ್ರಹಕ್ಕೆ ಕ್ಷೇತ್ರಸ್ಥಿತಗ್ರಹವು, ಮೂಲತ್ರಿಕೋಣಗಳಲ್ಲಿದ್ದ ಗ್ರಹಕ್ಕೆ ಮೂಲತ್ರಿಕೋಣದಲ್ಲಿದ್ದ ಗ್ರಹವು, ಪರಸ್ಪರ ಕಾರಕರಾಗುವರು, ಈ ವಿಧದ ಕಾರಕದಲ್ಲಿ ದಶಮ ಕೇಂದ್ರದಲ್ಲಿದ್ದ ಗ್ರಹವು ಕಾರಕಗ್ರಹಗಳಲ್ಲಿ ಹೆಚ್ಚಾದ ಬಲವುಳ್ಳ ಕಾರಕನಾಗುವನು.

ಉದಾಹರಣೆ

<table>
<tr><td></td><td>ಕುಜ</td><td></td><td></td></tr>
<tr><td></td><td colspan="2" rowspan="2">ಭಾವ ಕುಂಡಲಿ</td><td>ಲಗ್ನ<br>ಚಂ</td></tr>
<tr><td>ಶನಿ</td><td></td></tr>
<tr><td>ಗುರು</td><td>ಬುಧ<br>ರವಿ</td><td>ಶುಕ್ರ</td><td></td></tr>
</table>

### ಸ್ವಕ್ಷೇತ್ರಗ್ರಹಕ್ಕೆ

ಈ ಜಾತಕದಲ್ಲಿ ಮೇಷದಲ್ಲಿ ಕುಜ ಸ್ವಕ್ಷೇತ್ರ, ಕಟಕದಲ್ಲಿ ಚಂದ್ರಸ್ವಕ್ಷೇತ್ರ, ತುಲೆಯಲ್ಲಿ ಶುಕ್ರ ಸ್ವಕ್ಷೇತ್ರ, ಮಕರದಲ್ಲಿ ಶನಿ, ಸ್ವಕ್ಷೇತ್ರ ಇಲ್ಲಿ ಲಗ್ನಕ್ಕೆ ಚತುರ್ಥದಲ್ಲಿ ಶುಕ್ರಸ್ವಕ್ಷೇತ್ರ, ಸಪ್ತಮದಲ್ಲಿ ಶನಿ ಸ್ವಕ್ಷೇತ್ರ ದಶಮದಲ್ಲಿ ಕುಜಸ್ವಕ್ಷೇತ್ರವಾದ್ದರಿಂದ ಚಂದ್ರನಿಗೆ ಶುಕ್ರ, ಶನಿ, ಕುಜ ಈ ೩ ಗ್ರಹಗಳು

ಕಾರಕರಾಗುವರು. ಇವರಲ್ಲಿ ಕುಜನು ದಶಮ ಕೇಂದ್ರದಲ್ಲಿರುವುದರಿಂದ ಅಧಿಕವಾದ ಕಾರಕರಾಗುವನು ಇದರಂತೆ ಶುಕ್ರನಿಗೂ ಶನಿಗೂ ಕುಜನಿಗೂ ಕಾರಕರಾಗುವರು ಇದರಲ್ಲಿ ಕುಜನೇ ಅಧಿಕ ಕಾರಕನಾಗುವನು ಈ ಪ್ರಕಾರವೇ ಮೂಲ ತ್ರಿಕೋನಸ್ಥಿತವಾದ ಗ್ರಹಗಳಿಗು ಉಚ್ಚಕ್ಷೇತ್ರಗತವಾದ ಗ್ರಹಗಳಿಗೂ ಪರಸ್ಪರಕಾರಕರಾಗುವರು. ಇಲ್ಲಿ ಉದಾಹರಣೆಯನ್ನು ತೋರಿಸಿರುವುದರಿಂದ ಸ್ಪಷ್ಟವಾಗಿ ಈ ಶ್ಲೋಕವನ್ನು ಪರಿಶೋಧಿಸಿ ತಿಳಿದುಕೊಳ್ಳತಕ್ಕದ್ದು. ॥೧॥

## ಉಚ್ಚ ಗ್ರಹಪರಸ್ಪರಕಾರಕಾಃ

ಮೂಲ॥ ಕರ್ಕಟೋದಯ ಗತೇಯಥೋಡುಪೇ ಸ್ವೋಚ್ಚಗಾಃ ಕುಜಯ ಮಾರ್ಕಸೂರಯಃ। ಕಾರಕಾ ನಿಗದಿತಾಃ ಪರಸ್ಪರಂ ಲಗ್ನಗಸ್ಯ ಸಕ ಲೋಂಬರಾಂಬುಗಃ ॥೨॥

ಅವತಾರಿಕೆ॥ ಈ ಕಾರಕ ಯೋಗಕ್ಕೆ ಒಂದು ಉದಾಹರಣೆಯ ಹೇಳಲ್ಪಡುತ್ತೆ. ಈ ಉದಾಹರಣೆಯಲ್ಲಿ ಉಚ್ಚಸ್ವಕ್ಷೇತ್ರ ಮೂಲತ್ರಿಕೋಣ ಗ್ರಹಗಳು ಪರಸ್ಪರಕಾರಕತ್ವ ಸಂಜ್ಞಕ್ಕೆ ಸೇರಿಸಿಕೊಂಡಿವೆ.

ಟೀಕು॥ ಉಡುಪೇ-ಚಂದ್ರನು ಕರ್ಕಟೋದಯಗತೇ-ಜನನಕಾಲ ಲಗ್ನವಾದ ಕರ್ಕಾಟಕದಲ್ಲಿರುವಾಗ ಕುಜಯಾಮಾರ್ಕಸೂರಯಃ-ಕುಜ, ಶನಿ, ರವಿ, ಗುರುಗಳು, ಸ್ವೋಚ್ಚಗಾಃ-ಅವರವರ ಉಚ್ಚಸ್ಥಾನದಲ್ಲಿದ್ದರೆ, ಈ ೫ ಗ್ರಹಗಳು ಪರಸ್ಪರಂ-ಅನ್ಯೋನ್ಯವಾಗಿ, ಕಾರಕಾಃ-ಕಾರಕರವೆಂದು. ನಿಗದಿತಾಃ-ಹೇಳಲ್ಪಡುತ್ತಾರೆ. ಈ ಯೋಗದಲ್ಲಿ ಸ್ವಕ್ಷೇತ್ರ ಚಂದ್ರನು ಲಗ್ನದಲ್ಲಿದ್ದು ಸ್ವೋಚ್ಚಯುಕ್ತವಾದ ಚತುರ್ಥದಲ್ಲಿರುವ ಶನಿ, ದಶಮ ಕೇಂದ್ರದಲ್ಲಿರುವ ರವಿ, ಸ್ವೋಚ್ಚಗತವಾದ ಗುರು, ಉಚ್ಚದಲ್ಲಿದ್ದ ಕುಜಃ-ಇವರು ಲಗ್ನಗಸ್ಯ-ಲಗ್ನದಲ್ಲಿರುವ, ಗ್ರಹಕ್ಕೆ (ಗ್ರಹಗಳಿಗೆ) ಅಂಬರಾಂಬುಗಃ- ದಶಮ ಚತುರ್ಥದಲ್ಲಿರುವ, ಕಸಲಃ-ಸಮಸ್ತಗ್ರಹಗಳು ಕಾರಕಸಂಜ್ಞೆಯುಳ್ಳವರಾಗುವರು. ಅಂದರೆ ಸ್ವಕ್ಷೇತ್ರೋಚ್ಚತ್ರಿಕೋಣಗಳಿಲ್ಲಿದ್ದು ಲಗ್ನಗತವಾದ ಗ್ರಹಕ್ಕೆ ದಶಮಚತುರ್ಥದಲ್ಲಿದ್ದ ಗ್ರಹಗಳು ಸ್ವಕ್ಷೇತ್ರೋಚ್ಚ ಮೂಲತ್ರಿಕೋಣಗತರಾಗದಿದ್ದರೂ, ಕಾರಕಾಖ್ಯರಾಗುವರು. ಆ ಗ್ರಹಗಳಿಗೆ ಲಗ್ನಗತ ಗ್ರಹವು ಕಾರಕವಾಗುವುದಿಲ್ಲವೆಂದು ತಾತ್ಪರ್ಯವು.

## ಉದಾಹರಣೆ

ಈ ಕುಂಡಲಿಯಲ್ಲಿ ಚಂದ್ರ, ಗುರುಗಳು ಲಗ್ನದಲ್ಲಿ ಸ್ವಕ್ಷೇತ್ರ ಮತ್ತು ಉಚ್ಚದಲ್ಲಿದ್ದಾರೆ. ಇವರಿಗೆ ನಾಲ್ಕನೇ ಕೇಂದ್ರದಲ್ಲಿರುವ ಶನಿ, ಸಪ್ತಮ ಕೇಂದ್ರದಲ್ಲಿರುವ ಕುಜ, ದಶಮಕೇಂದ್ರದಲ್ಲಿರುವ ರವಿಯು ಲಗ್ನಗತವಾದ ಗ್ರಹಕ್ಕೆ ಪರಸ್ಪರಕಾರಕ ರಾಗುವರು ಅವರಲ್ಲಿ ಸೂರ್ಯನು ದಶಮಕೇಂದ್ರ ದಲ್ಲಿರುವುದರಿಂದ ಅಧಿಕ

| | ರವಿ | ಬುಧ ಶುಕ್ರ | |
|---|---|---|---|
| | ಭಾವ ಕುಂಡಲಿ | | ಲಗ್ನ ಗುರು |
| ಕುಜ | | | |
| | | ಶನಿ | |

ಕಾರಕನಾಗುವನು ಅಂದರೆ ಈ ಶನಿ, ಕುಜ, ರವಿಗಳಿಗೆ ಲಗ್ನಗತರಾದ ಚಂದ್ರಗುರುಗಳು ಕಾರಕರಾಗುವುದಿಲ್ಲ. ಇದು ಒಂದು ವಿಧವಾದ ಕಾರಕತ್ವವೆಂದು ಅರಿಯುವುದು.

## ಪುನಃಕಾರಕ ಲಕ್ಷಣವಿಚಾರಃ

ಮೂಲ॥ ಸ್ವತ್ರಿಕೋಣೋಚ್ಚಗೋ ಹೇತುರನ್ಯೋಸ್ಯ ಯದಿಕರ್ಮಗಃ ।
ಸುಹೃದ್ಗುಣ ಸಂಪನ್ನಃ ಕಾರಕಾಶ್ಚಾಪಿ ಸಂಸ್ಮೃತಃ ॥೩॥

ಅವತಾರಿಕೆ॥ ಮತ್ತೊಂದು ವಿಧವಾದ ಕಾರಕಲಕ್ಷಣ ಹೇಳಲ್ಪಡುತ್ತೆ.

ಟೀಕು॥ ಸ್ವತ್ರಿಕೋಣೋಚ್ಚಗಃ-ಸ್ವಕ್ಷೇತ್ರ ಮೂಲತ್ರಿಕೋಣಗಳಲ್ಲಿರುವ ಗ್ರಹಗಳಲ್ಲಿ ಒಂದು ಗ್ರಹವು, ಹೇತುಃ-ಕಾರಕಸಂಜ್ಞೆಗೆ ಕಾರಣವು. ಕೇಂದ್ರ ಸ್ಥಾನದಲ್ಲಿದ್ದ ಗ್ರಹವು ಕಾರಣವಲ್ಲ. ಆದ್ದರಿಂದ ಲಗ್ನಾದಿ ಕೇಂದ್ರಗಳಲ್ಲಿಲ್ಲದಿದ್ದರೂ ಅಸ್ಯ-ಈ ಸ್ವಕ್ಷೇತ್ರಾದಿ ಸ್ಥಾನಗಳಲ್ಲಿದ್ದ ಗ್ರಹಗಳಿಗೆ, ಕರ್ಮಗಃ-ದಶಮಸ್ಥಾನದಲ್ಲಿದ್ದ ಸ್ವಕ್ಷೇತ್ರಾದಿಗಳಲ್ಲದ ಗ್ರಹವಾಗಲಿ, ಆ ದಶಮಸ್ಥಿತಗ್ರಹಕ್ಕೆ, ಸುಹೃತ್-ಸ್ವಭಾವದ ಮಿತ್ರಗ್ರಹವಾಗಲಿ, ತದ್ಗುಣಸಂಪನ್ನಃ-ತಾತ್ಕಾಲಿಕ ಮಿತ್ರತ್ವವನ್ನು ಹೊಂದಿರುವ ಗ್ರಹವಾಗಲಿ, ಸಚಾಪಿ-ಅಂಥಾ ಗ್ರಹವು ಕಾರಕಃ-ಕಾರಕಗ್ರಹವೆಂದು ಸ್ಮೃತಃ-ಹೇಳತಕ್ಕದ್ದು. ಈ ಪ್ರಕಾರವಾಗಿ ಸ್ವಕ್ಷೇತ್ರ ಉಚ್ಚ ಮೂಲತ್ರಿಕೋಣಗಳನ್ನು ಹೊಂದಿರುವ ಗ್ರಹಕ್ಕೆ ಸ್ವಕ್ಷೇತ್ರಾದಿಗಳನ್ನು ಹೊಂದದೆ ಇದ್ದ ಗ್ರಹಕಾರಕಾಖ್ಯವಾಗಲಿ, ಸ್ವಕ್ಷೇತ್ರವನ್ನು ಹೊಂದಿರುವ ಗ್ರಹಕ್ಕೆ ಸ್ವಕ್ಷೇತ್ರವನ್ನು ಹೊಂದಿರುವ ಗ್ರಹವಾಗಲಿ ಕಾರಕಗ್ರಹವಾಗುವುದಿಲ್ಲ ॥೩॥

## ಕಾರಕಗ್ರಹಾಣಾಂ ಫಲಂ

ಮೂಲ॥ ಶುಭಂ ವರ್ಗೋತ್ತಮೇ ಜನ್ಮವೇಶಿಸ್ಥಾನೇಚಸದ್ಗ್ರಹೇ ।
ಅಶೂನ್ಯೇಷುಚ ಕೇಂದ್ರೇಷು ಕಾರಕಾಖ್ಯ ಗ್ರಹೇಷುಚ ॥೪॥

ಟೀಕು॥ ಕಾರಕ ಗ್ರಹಕ್ಕೆ ಫಲಪ್ರಯೋಜನವು ಹೇಳಲ್ಪಡುತ್ತೆ. ಜನ್ಮ ಯಾವ ಮನುಷ್ಯನ ಜನ್ಮವು, ವರ್ಗೋತ್ತಮಾಂಶವಾಗುವುದೋ ಯಾರ ಜನ್ಮಕಾಲದಲ್ಲಿ ಚಂದ್ರನು ವರ್ಗೋತ್ತಮಾಂಶೆಯಲ್ಲಿರುವನೋ, ಅವನ ಜನನವು, ಶುಭಂ-ಶುಭಕರವೆಂದು ಹೆಸರು. ಅಂಥಾ ವೇಶಿಸ್ಥಾನದಲ್ಲಿ ಸದ್ಗ್ರಹೇ-ಬುಧ, ಗುರು, ಶುಕ್ರರಲ್ಲಿ ಯಾವುದಾದರೂ ಒಂದು

ಗ್ರಹವಿದ್ದರೆ, ಅವನ ಜನನವು ಶುಭಫಲಪ್ರದ ವಾದದ್ದು ಕೇಂದ್ರೇಷು-ಲಗ್ನಾದಿ ನಾಲ್ಕು ಕೇಂದ್ರಗಳು ಅಶೂನ್ಯೇಷು-ಗ್ರಹಗಳಿಂದ ಶೂನ್ಯವಾಗದಿದ್ದರೆ, ಆ ಕಾಲದಲ್ಲಿ ಹುಟ್ಟಿದವನ ಜನನವು ಶುಭಫಲಪ್ರದವಾದದ್ದು. ಈ ವಿಷಯದಲ್ಲಿ ಲಘುಜಾತಕದಲ್ಲಿ ॥ಶ್ಲೋಕ॥ ಏಕಸ್ಮಿನ್ನಪಿಕೇಂದ್ರೇಯಧಿ ಸೌಮ್ಯೋಚ್ಚಾರ್ಯಾಃ ॥೧॥ ಎಂದು ಹೇಳಿರುವುದರಿಂದ ಕೇಂದ್ರಗಳಲ್ಲಿ ಶುಭಗ್ರಹವೊಂದಾದರೂ ಇಲ್ಲದಿದ್ದರೆ, ಹೆಚ್ಚಾದ ಅಶುಭಸೂಚಕವೆಂದು ತಿಳಿಯತಕ್ಕದ್ದು. ಕಾರಕಾಖ್ಯಗ್ರಹೇಷುಚ-ಯಾರ ಜನ್ಮಕಾಲದಲ್ಲಿ ಕಾರಕಗ್ರಹಗಳು ಸಂಭವಿಸಿರುವರೋ ಅವರ ಜನನವು ಶುಭಕರವಾದದ್ದು. ಈ ಪ್ರಕಾರ ಶುಭಾಧಿಕ್ಯ ವನ್ನುಸರಿಸಿ ಶುಭಾಧಿಕ ಫಲವನ್ನು ಹೇಳತಕ್ಕದ್ದು. ಪಾಪಾಧಿಕ್ಯ ಗ್ರಹಗಳನ್ನು ಅನುಸರಿಸಿ ಪಾಪ (ಅನಿಷ್ಟ) ಫಲವನ್ನು ಹೇಳತಕ್ಕದ್ದು ॥೪॥

## ಸೌಖ್ಯಪ್ರಾಪ್ತಿಯೋಗ ಕಾಲವಿಚಾರಃ

**ಮೂಲ॥ ಮಧ್ಯೇ ವಯಸಸ್ಸುಖಪ್ರದಾಃ। ಕೇಂದ್ರಸ್ಥಾ ಗುರುಜನ್ಮ ಲಗ್ನಪಾಃ॥ ಪೃಷ್ಠೋ ಭಯತೋದಯರ್ಕ್ಷಗಾ । ಸ್ತ್ವಂತ್ಯಾಂತಃ ಪ್ರಥಮೇಷು ಪಾಕದಾಃ ॥೫॥**

ಅವತಾರಿಕೆ॥ ಯಾವ ಕಾಲದಲ್ಲಿ ಸುಖಯೋಗ ಪ್ರಾಪ್ತಿಯಾಗುವುದೋ ಆ ಯೋಗವನ್ನು ದಶಾಧಿಪತಿ ಫಲಪಾದಕಕಾಲವು ಹೇಳಲ್ಪಡುತ್ತೆ ॥ ಜನ್ಮಕಾಲದಲ್ಲಿ ಚಂದ್ರನು ಯಾವ ರಾಶಿಯಲ್ಲಿರುವನೋ, ಆ ರಾಶಿಗಧಿಪತಿ, ಜನ್ಮಾಧಿಪತಿ, ಯಾವ ಲಗ್ನದಲ್ಲಿ ಜನ್ಮವಾಗುವದೋ, ಆ ಲಗ್ನಕ್ಕಧಿಪತಿ ಲಗ್ನಾಧಿಪತಿ, ಗುರಜನ್ಮ ಲಗ್ನಪಾಃ ಗುರು-ಬೃಹಸ್ಪತಿ, ಜನ್ಮಪ-ಜನ್ಮಾಧಿಪತಿ, ಲಗ್ನಪ-ಲಗ್ನಾಧಿಪತಿ, ಇವರಲ್ಲಿ ಒಬ್ಬರು, ಕೇಂದ್ರಸ್ಥಾನಃ- ಕೇಂದ್ರದಲ್ಲಿದ್ದರೆ, ಮಧ್ಯೇವಯಸಃ-ಯೌವ್ವನಕಾಲದಲ್ಲಿ, ಸುಖಪ್ರದಾಃ-ಸುಖವನ್ನು ಕೊಡುವನು. ಬಹುವಚನ ಪ್ರಯೋಗದಿಂದ ಕೇಂದ್ರಗಳಲ್ಲಿದ್ದರೆ, ಯೌವನದಲ್ಲಿ ಹೆಚ್ಚಾದ ಸುಖವನ್ನು ಕೊಡುವರೆಂದು ಹೇಳತಕ್ಕದ್ದು. ಈ ವಿಷಯದಲ್ಲಿ ॥ಶ್ಲೋಕ॥ ಯವನೇಶ್ವರಃ॥ ಲಗ್ನಾಧಿಪೋ ಲಗ್ನಪತಿಶ್ಚ ಏಷಾಂ ಚತುಷ್ಟಯೇಸ್ಯಾದ್ಬಲವಾನ್ ಗುರುರ್ವಾ । ಚತುರ್ಷ ಹೋರಾದಿಷು ಸಂಗತ-ಸ್ಸ್ವಾಚ್ಚತುರ್ವಯಃ ಕಾಲ ಫಲಪ್ರದಸ್ಯಾತ್॥ ಎಂದು ಹೇಳಿರುವರು. ಪೃಷ್ಠೋಭಯ-ತೋದಯರ್ಕ್ಷಗಾಃ-ಪೃಷ್ಠೋದಯ ಉಭಯೋಧಯ, ಶೀರ್ಷೋದಯ, ರಾಶಿಗಳಲ್ಲಿರುವ ಗ್ರಹಗಳು ಕ್ರಮವಾಗಿ, ಅಂತ್ಯದಶಾಂತದಲ್ಲೂ, ಅಂತಃ- ದಶಾಮಧ್ಯ-ದಲ್ಲೂ, ಪ್ರಥಮೇಷು-ದಶಾದಿಯಲ್ಲೂ, ಪಾಕದಾಃ-ಫಲಪ್ರದರಾಗುವರು ಅಂದರೆ-ದಶಾನಾಥನು ತನ್ನ ದಶಾಪ್ರವೇಶ ಕಾಲದಲ್ಲಿ ಪೃಷ್ಠೋದಯರಾಶಿಗಳಾದ, ಮೇಷ ವೃಷಭ, ಧನುರ್ಮಕರ ರಾಶಿಗಳಲ್ಲಿ ಒಂದು ರಾಶಿಯಲ್ಲಿದ್ದರೆ, ಆ

ದಶಾಫಲವನ್ನು ಶುಭವಾಗಲೀ, ಅಶುಭವಾಗಲೀ ದಶಾಂತ್ಯದಲ್ಲಿ ಕೊಡುವನು. ಉಭಯೋದಯ ರಾಶಿಯಾದ ಮೀನದಲ್ಲಿದ್ದರೆ, ದಶಾಮಧ್ಯದಲ್ಲಿ ಫಲವನ್ನು ಕೊಡುವನು, ಶಿರೋದಯ ರಾಶಿಗಳಾದ ಮಿಥುನ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭರಾಶಿಗಳಲ್ಲಿ ಯಾವದಾದರೊಂದು ರಾಶಿಗಳಲ್ಲಿದ್ದರೆ ದಶಾಪ್ರವೇಶದಲ್ಲಿ ಫಲಪ್ರದನಾಗುವನು. ಆಯಾಯ ದಶಾಕಾಲವನ್ನು ೩ ಭಾಗಮಾಡಿ ಪೂರ್ವೋಕ್ತ ಪ್ರಕಾರವಾಗಿ ಫಲವನ್ನು ಹೇಳತಕ್ಕದ್ದು. ಈ ವಿಷಯದಲ್ಲಿ ||ಶ್ಲೋಕ|| ಆದ್ಯಂತ ಮಧ್ಯಫಲದಾಶಿರಃ ಪೃಷ್ಠೋ ಭಯೋದಯಾಃ। ದಶಾಪ್ರವೇಶ ಸಮಯೇತಿಷ್ರ್ಕ ವಾಚ್ಯೋ ಶಾಪತಿ ||೩||

## ಗ್ರಹಾಣಾಂ ಫಲಕಾಲವಿಚಾರಃ

ಮೂಲ|| ದಿನಕರ ರುದಿರೌ ಪ್ರವೇಶಕಾಲೇ ಗುರುಭೃಗುಜಾ ಭವನಸ್ಯಮಧ ಯಾತೌ ರವಿಸುತ ಶಶಿನೌ ವಿನಿರ್ಗಮಸ್ಥೌ ಶಶಿತನಯಃ ಫಲದಸ್ತು ಸಾರ್ವಕಾಲಂ ||೬||

ಟೀಕು|| ಅಷ್ಟಕವರ್ಗ ಫಲಕಾಲವು ಹೇಳಲ್ಪಡುತ್ತೆ. ದಿನಕರರುಧಿರೌ-ರವಿ, ಕುಜರು ದಶಾಕಾಲೇ-ದಶಾಪ್ರವೇಶಕಾಲದಲ್ಲೂ, ಅಂದರೆ ಚಾರವಶದಿಂದಯಾವ ರಾಶಿಯಲ್ಲಿದ್ದರೂ ಶುಭವನ್ನಾದರೂ, ಅಶುಭವನ್ನಾದರೂ ಅಷ್ಟಕವರ್ಗ ಫಲವನ್ನು ಕೊಡುವರೋ, ಆ ರಾಶಿಯ ಮೊದಲು ಏಕತ್ರತೀಯಾಂಶದಲ್ಲಿರುವಾಗ, ರವಿಕುಜರು ಫಲವನ್ನು ಕೊಡುವರು, ಗುರುಭೃಗುಜೌ-ಗುರು, ಶುಕ್ರರು, ಭವನಸ್ಯ- ಆಚಾರ ವಶದ ರಾಶಿಯ ಮಧ್ಯಯಾತೌ-ಮಧ್ಯದಲ್ಲಿರುವ ಕಾಲದಲ್ಲಿ ಫಲವನ್ನು ಕೊಡುವರು. ರವಿಸುತ ಶಶಿನೌ-ಶನಿ, ಚಂದ್ರರು, ವಿನಿರ್ಗಮಸ್ಥೌ-ಆ ರಾಶಿಯ ಕಡೆಯ ಭಾಗದಲ್ಲಿ ತೃತೀಯಾಂಶದಲ್ಲಿರುವ ಕಾಲದಲ್ಲಿ ಫಲವನ್ನು ಕೊಡುವರು. ಶಶಿತನ ಯಃಸ್ತು-ಬುಧನಾದರೆ, ಸರ್ವಕಾಲಂ-ರಾಶಿಯಲ್ಲೆಷ್ಟು ದಿವಸಗಳಿರುವನೋ ಅಷ್ಟು ದಿವಸಗಳು, ಫಲದಃ-ಫಲವನ್ನು ಕೊಡುವನು. ಈ ವಿಷಯದಲ್ಲಿ ||ಶ್ಲೋಕ|| ಪರಾಶರಃ|| ಸೂರ್ಯಾರೌ ಫಲದಾ ವಾದೌ ಗುರು ಶುಕ್ರೌತುಮಧ್ಯಗೌ । ಚಂದ್ರಾಸ್ತುಫಲದಾ ಅಂತ್ಯೇ ಬುಧಶ್ಚೇತ್ ಸಾರ್ವಕಾಲದಃ ||೪-೬|| ಈ ಪ್ರಕಾರ ಗೋಚರ ಫಲ ನಿರ್ಣಯ ಮಾಡಬೇಕೇ ಹೊರತು ಚಂದ್ರ ರಾಶಿಯು ಮೇಲೆ ೩-೬-೧೦-೧೧ರಲ್ಲಿ ಸೂರ್ಯನಿರುತ್ತಾನೆ. ಆದ್ದರಿಂದ ಶುಭಫಲದವನೆಂದು ಹೇಳಕೂಡದು. ಕೆಲವರು ನನ್ನ ನಕ್ಷತ್ರ ಅಶ್ವಿನೀ, ಸೂರ್ಯ, ಶನಿ, ಗುರು ಬಲವನ್ನು ಹೇಳಬೇಕೆಂದು ಅಪೇಕ್ಷಿಸುತ್ತಾರೆ. ಆಗ ಜ್ಯೋತಿಷ್ಯನು ಪೃಚ್ಛಕನ ಜಾತಕವಾಗಲಿ, ಅಷ್ಟಕವರ್ಗ ಬಿಂದು ಶೋದನವನ್ನಾಗಲಿ ಮಾಡಿರುವುದಿಲ್ಲ. ಪೃಚ್ಛಕನಿಗೆ ಕೋಪ ಬರುವುದಿಲ್ಲವೇ ? ಎಂದು ಅಶ್ವಿನೀ, ನಕ್ಷತ್ರ ಸೂರ್ಯನು ತೃತೀಯದಲ್ಲಿ

ಶುಭಫಲವನ್ನು ಕೊಡತಕ್ಕವನು. ಗುರು ನವಮದಲ್ಲಿದ್ದಾನೆ. ತ್ರಿಕೋಣ, "ಗುರುರದ್ರಿದ್ವಿ ನವ ಪಂಚಮೇ ಶುಭದಃ" ಆದ್ದರಿಂದ ಶುಭಪ್ರದವೆಂದು, ಶನಿಯು ೨ ರಲ್ಲಿದ್ದಾನೆ, ಇವನು ಮಾತ್ರ ಫಲಪ್ರದನಲ್ಲವೆಂದು ಹೇಳುತ್ತಾರೆ. ಈ ರೀತಿಯಾಗಿ ಹೇಳಕೂಡದು. ಯಾಕೆಂದರೆ-ಉಕ್ತಸ್ಥಾನಗಳಲ್ಲಿ ಅಷ್ಟಕವರ್ಗಬಿಂದು ಶೋಧನರೀತ್ಯಾ ಶುಭಫಲವು ಬಂದಿದ್ದರೆ ಶುಭವೇ ಆಗುವನು. ಆಗ ಜ್ಯೋತಿಷ್ಕನು ಬುದ್ಧಿವಂತನೆಂದು ಹೊಗಳುವುದು. ಅಷ್ಟಕವರ್ಗ ರೀತ್ಯಾ ಅಶುಭ ಫಲವು ಬಂದಿದ್ದರೆ, ಜ್ಯೋತಿಷ್ಕನು ಶುಭವನ್ನು ಹೇಳಿದರೂ ಜಾತಕನಿಗೆ ಅಶುಭ ಫಲವೇ ಆಗುವುದು. ಆಗ ಪೃಚ್ಛಕನು ಜ್ಯೋತಿಷ್ಕರ ಮಾತು ಸುಳ್ಳು ಎಂದು ಹೇಳುವನು. ಒಂದು ವೇಳೆ ಶುಭಾಶುಭ ಫಲಗಳು ಸಾಮ್ಯವಾಗಿದ್ದರೆ ಯಾವ ಫಲವೂ ಕಾಣುವುದೇ ಇಲ್ಲ. ಆಗಲೂ ಜೋಯಿಸನ ಮಾತು ಸುಳ್ಳಾಗುವುದು. ಇದರಿಂದ ಇದೊಂದೇ ಫಲಪ್ರಾಪ್ತಿ ಜ್ಯೋತಿಷ್ಕನಿಗೆ ಬರುವುದಿಲ್ಲ, ಅವನು ಈವರಿಗೆ ಯಾವ ಉತ್ತಮವಾದ ಹೆಸರನ್ನು ಸಂಪಾದಿಸಿಕೊಂಡಿದ್ದನೋ ಆ ಹೆಸರು ನಾಶವಾಗಿ ಜ್ಯೋತಿಷ್ಯಕ್ಕೆ ಅಪಯಶಸ್ಸು ಬರುವುದು.

ಜ್ಯೋತಿಷ್ಕರಿಗೆ ವಿಜ್ಞಾಪನೆ-ಮಹಾಶಯರೆ, ನಿಮಗೆ ೧ ಘಳಿಗೆ ಕಷ್ಟವಾದರೂ ಚಿಂತೆಯಿಲ್ಲ. ಈ ಮೇಲೆ ಉದಾಹರಿಸಿರುವ ಅಂಶವನ್ನು ಜ್ಞಾಪಕದಲ್ಲಿಟ್ಟುಕೊಂಡು ಚೆನ್ನಾಗಿ ನೋಡಿ ಹೇಳಿರಿ. ಕೇಳಿದ ಕ್ಷಣವೇ ಬಾಯಿಗೆ ಬಂದದ್ದು ಹೇಳಿ ಅಪಯಶಸ್ಸು ತರಬೇಡಿರಿ.

ಒಂದೇ ನಕ್ಷತ್ರದಲ್ಲಿ ಹುಟ್ಟಿದವರಲ್ಲಿ ಒಬ್ಬನಿಗೆ ಮರಣವೂ. ಇನ್ನೊಬ್ಬನಿಗೆ ಸಂಕಟವೂ, ಮತ್ತೊಬ್ಬನಿಗೆ ಸಂತೋಷವೂ ಆಗುತ್ತಲಿರುವದು. ಇದೆಲ್ಲಾ ಅಷ್ಟಕವರ್ಗ ಬಲಾಬಲ ಲಕ್ಷಣಗಳಿಂದು ತಿಳಿಯತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತ
ಕಾಖ್ಯ ಹೋರಾಶಾಸ್ತ್ರೇ ಸಂಕೀರ್ಣಫಲ ವಿಚಾರನಾಮ
ದ್ವಾವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾದಾರಾ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯ ಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ಸಂಕೀರ್ಣಫಲಾಖ್ಯ ದ್ವಾವಿಂಶ ಪ್ರಕರಣಂ
ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ

## ೨೩ನೇ ಅನಿಷ್ಟ ಯೋಗಾಖ್ಯ ಪ್ರಕರಣಂ

ಅ॥ ಇದುವರೆಗೆ ಹೇಳಲ್ಪಟ್ಟ ಯೋಗಗಳೆಲ್ಲವೂ ಜಾತಕನ ರಾಜಯೋಗಾದಿ ಸಂಪತ್ತುಗಳನ್ನು ಹೇಳಿದಂತಾಯಿತು. ಆದರೆ ಕೆಲವು ಜಾತಕಗಳಲ್ಲಿ ರಾಜಯೋಗಾದಿ ಗಳಿದ್ದರೂ, ಆ ಯೋಗಫಲಗಳ ಪ್ರಾಪ್ತಿಯಾಗದೆ ದರಿದ್ರರಾಗಿಯೂ, ಅಂಗಹೀನ ರಾಗಿಯೂ-ಅನೇಕ ಕೆಟ್ಟ ನಡತೆಯುಳ್ಳವರಾಗಿಯೂ, ಇರುವದು ದೃಷ್ಟಾಂತಕ್ಕೆ ಬರುತ್ತಿರುವುದರಿಂದ ಗ್ರಹ ಸಂಯೋಗದಿಂದ ಈ ಪ್ರಕಾರ ಆಗುವುದೆಂದು ಕಂಡು ಬರುತ್ತದೆ. ಈ ವಿಷಯವನ್ನು ಧುಂಡಿರಾಜ, ಜಯದೇವ, ಮಾಂಡವ್ಯ, ಶ್ರುತಕೀರ್ತಿ ಮೊದಲಾದವರು ಅನಿಷ್ಟಯೋಗವೆಂದು ಅವರವರ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಅವುಗಳನ್ನು ಅನ್ಯಗ್ರಂಥೋದಾಹರಣ ಸಮ್ಮತಿಯಾಗಿ ತೆಗೆದುಕೊಂಡು ಅನಿಷ್ಟ ಯೋಗ ಪ್ರಕರಣ ಸಾಂಗವಾಗಿ ಟೀಕೆಯಲ್ಲಿ ಪ್ರಕಾಶಗೊಳಿಸಿರುತ್ತೆ. ಈಗ ಗ್ರಂಥಾ ಧ್ಯಾಪಕರು ಜಾತಕಗಳಲ್ಲಿ ಅನಿಷ್ಟಯೋಗ ವಿಚಾರಮಾಡಿ ಈ ಯೋಗಗಳಿಗೆ ಸಂಬಂಧ ಪಡೆದಿದ್ದಲ್ಲಿ ಅನಿಷ್ಟಯೋಗವಿಲ್ಲವೆಂದು ನಿರ್ಣಯ ಮಾಡಿಕೊಳ್ಳತಕ್ಕದ್ದು.

ಮೂಲ॥ ಲಗ್ನಾತ್ಪುತ್ರಕಳತ್ರಭೇ ಶುಭಪತಿ ಪ್ರಾಪ್ತೇಥವಾ ಲೌಕಿಕೇ । ಚಂದ್ರಾ
ದ್ವಾಯದಿ ಸಂಪದಸ್ತಿಹಿತಯೋ ರ್ಜ್ಞೇಯೋನ್ಯಥಾ ಸಂಭವಃ ॥
ಪಾಥೋಸೋದಯುಗೇ ರವೌ ರವಿಸುತೇ ಮೀನಸ್ಥಿತೇದಾರಹಾ ।
ಪುತ್ರಸ್ಥಾನಗತಶ್ಚ ಪುತ್ರಮರಣಂ ಪುತ್ರೋವನೇರ್ಯಚ್ಛತಿ ॥೧॥

ಟೀಕು॥ ಈ ಶ್ಲೋಕದಲ್ಲಿ ಪತ್ನೀ ಪುತ್ರರಹಿತಯೋಗ ೧, ಕಳತ್ರನಾಶಯೋಗ ೧, ಪುತ್ರನಾಶಯೋಗ ೧, ಅಂತು ೩ ಯೋಗಗಳು ಹೇಳಲ್ಪಡುತ್ತೆ.

ಪತ್ನೀ ಪುತ್ರಾದಿ ರಹಿತಯೋಗಃ ॥ ಲಗ್ನಾತ್-ಜನ್ಮಲಗ್ನದಿಂದಾಗಲೀ, ಚಂದ್ರಾದ್ವಾ-ಚಂದ್ರನಿಂದಾಗಲೀ, ಪುತ್ರ ಕಳತ್ರಭೇ. ಪುತ್ರ-ಪಂಚಮ, ಕಳತ್ರ-ಸಪ್ತಮಭೇ-ರಾಶಿಸ್ಥಾನಗಳು, ಶುಭಪತಿಪ್ರಾಪ್ತೇ-ಶುಭಗ್ರಹಾಧಿಪತ್ಯವಾದ ರಾಶಿಯಾಗಿದ್ದರೂ ಅಥವಾ ಶುಭಗ್ರಹಗಳು ಆ ಸ್ಥಾನದಲ್ಲಿದ್ದರೂ ಅವಲೋಕಿತೇ-ಆ ಪಂಚಮ ಸಪ್ತಮ ಸ್ಥಾನಾಧಿಪತಿಗಳಿಂದ ನೋಡಲ್ಪಟ್ಟರೂ, ತಯೋಃ-ಆ ಪುತ್ರ ಕಳತ್ರ ಸಂಪತ್ ಸೌಖ್ಯ ಸಮೃದ್ಧಿಯು, ಅಸ್ತಿ-ಇರುವದು, ಅನ್ಯಥಾ ಈ ಪ್ರಕಾರವಿಲ್ಲದೆ ಅನ್ಯರೀತಿಯಲ್ಲಿದ್ದರೆ ಅಸಂಭವಃ-ಆ ಪುತ್ರ ಕಳತ್ರ ಸೌಖ್ಯವಿಲ್ಲವೆಂದು, ಜ್ಞೇಯಃ-ತಿಳಿಯತಕ್ಕದ್ದು, ವಿವರಣೆ-ಲಗ್ನದಿಂದಾಗಲೀ, ಚಂದ್ರನಿಂದಾಗಲೀ, ಪಂಚಮ, ಸಪ್ತಮ ರಾಶಿಗಳು ಶುಭಗ್ರಹಾಧಿಪತ್ಯವಾದರೂ, ಅಥವಾ ಶುಭಗ್ರಹಾಧಿಪತ್ಯರಾಶಿಯಾಗದಿದ್ದರೆ, ಆ

ಭಾವಗಳಲ್ಲಿ ಶುಭಗ್ರಹಾಧಿಷ್ಠಿತವಾದರೂ ಇರಬೇಕು. ಒಂದು ವೇಳೆ ಪಾಪಗ್ರಹಾಧಿಪತ್ಯ ಬಂದ ರಾಶಿಗಳಾಗಿದ್ದರೂ ಆ ಭಾವಾಧಿಪತಿಗಳಾದ ಗ್ರಹಗಳಿಂದ ಪಂಚಮ ಸಪ್ತಮಭಾವವನ್ನು ನೋಡಬೇಕು. ಈ ಪ್ರಕಾರ ಯಾವದೂ ಇಲ್ಲದಿದ್ದರೆ, ಅವನಿಗೆ ವಿವಾಹ, ಪುತ್ರ ಸಂಪತ್ತು ಮೊದಲಾದದ್ದು ಪ್ರಾಪ್ತಿಯಿಲ್ಲವೆಂದು ಪತ್ನೀಪುತ್ರರಿಲ್ಲದ ಅನಿಷ್ಟ ಯೋಗವೆಂದು ನಿರ್ಣಯಿಸತಕ್ಕದ್ದು. ಈ ವಿಷಯಕ್ಕೆ ಜಯದೇವಃ ॥ಶ್ಲೋಕ॥ ಲಗ್ನಾಚ್ಚಂದ್ರಾತ್ಸುತ್ರ ಕಳತ್ರೇ ಸ್ವೇಶಾಯುಕ್ತೇವಾತದದೃಷ್ಟೇ ಪುತ್ರಾಪಾಯ ಸ್ತ್ರೀ ನಿಧಯಂ ಸ್ಯಾತ್ತದ್ವಸ್ಸರ್ವೇಷ್ವೇವ ಗೃಹೇಷು ॥೧॥ ಮತ್ತು ಇಲ್ಲಿ ಪಂಚಮ ನವಮ ರಾಶಿಗಳು ಶುಭವಾಗಿರಬೇಕೆಂದು ಉದಾಹರಣೆಗೋಸ್ಕರ ಹೇಳಿರುತ್ತೆ. ತನ್ವಾದಿ ೧೨ ಭಾವಗಳು ಈ ಪ್ರಕಾರವಾಗಿಯೇ ಇರಬೇಕು. ಈ ವಿಷಯಕ್ಕೆ ಯವನೇಶ್ವರಃ॥ ॥ಶ್ಲೋಕ॥ 'ಮೂರ್ತಿಂಚ ಹೋರಾ ಶಶಿಭಂಚ ವಿಂದ್ಯಾತ್' ಎಂದು ಮತ್ತು ಪರಾಶರಃ॥ ಯದ್ಭಾವಸ್ಯ ಫಲಂವಾಚ್ಯಂತಲ್ಲಗ್ನಂ ಪರಿಕಲ್ಪ್ಯತಾಮ್ । ಎಂದು ಪ್ರಮಾಣ ವಿರುವುದರಿಂದ ಯಾವ ಭಾವಕ್ಕೆ ಫಲವನ್ನು ಕಲ್ಪಿಸಬೇಕೋ ಆ ಭಾವವೇ ಲಗ್ನವಾಗಿ ಕಲ್ಪಿಸಿಕೊಂಡು ಫಲವನ್ನು ನಿರ್ಣಯಮಾಡಬೇಕು.

## ಕಳತ್ರಹಾನಿಯೋಗಃ

ಪಾಥೋನೋದಯಗೇ ರವೌ-ಜನ್ಮಲಗ್ನವಾದ, ಕನ್ಯೆಯಲ್ಲಿ ಸೂರ್ಯನಿದ್ದು ರವಿಸುತಃ-ಶನಿಯು ಮೀನಸ್ಥಿತಃ-ಮೀನರಾಶಿಯಾದ ಸಪ್ತಮದಲ್ಲಿದ್ದರೆ, ದಾರಹಾ- ಆ ಕಾಲದಲ್ಲಿ ಹುಟ್ಟಿದವನು ತನ್ನ ಹೆಂಡತಿಯ ಮರಣವನ್ನು ನೋಡುವನು ಅಂದರೆ ಲಗ್ನವು ಕನ್ಯಾಲಗ್ನವಾಗಿ ಅಲ್ಲಿ ಸೂರ್ಯನಿದ್ದು ಅದಕ್ಕೆ ಸಪ್ತಮವಾದ ಮೀನದಲ್ಲಿ ರವಿ ಇದ್ದ ಕಾಲದಲ್ಲಿ ಹುಟ್ಟಿದವನ ಪತ್ನಿಯು ಅವನು ಬದುಕಿರುವಾಗಲೇ ಮೃತಿ ಹೊಂದುವಳು. ಈ ವಿಷಯಕ್ಕೆ ಶ್ಲೋಕ ॥ಜಯದೇವಃ॥ ಕನ್ಯಾಲಗ್ನೇ ತತ್ರಚೇದ್ವಾಸರೇಶೇ ಮೀನೇಮಂದೇ ಕಾಮಿನೀ ಮೃತ್ಯುಮೇತಿ॥

## ಪುತ್ರಹಾನಿ ಯೋಗಃ

ಈ ಮೇಲೆ ಹೇಳಲ್ಪಟ್ಟ ಕನ್ಯಾಲಗ್ನದಲ್ಲಿ ಸೂರ್ಯನಿದ್ದು, ಅವನೀ ಪುತ್ರಃ- ಅಂಗಾರಕನು, ಪುತಸ್ಥಾನಗತಃ-ಕನ್ಯಾಲಗ್ನಕ್ಕೆ ಸುತಸ್ಥಾನವಾದ ಮಕರದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನಿಗೆ, ಪುತ್ರಮರಣಂ-ಪುತ್ರಮರಣವನ್ನು ಪ್ರಯಚ್ಛತಿ ಕೊಡುವನು. ಶ್ಲೋಕ॥ಜಯದೇವಃ॥ ಪುತ್ರಸ್ಥಾನೇ ಸಂಸ್ಥಿತಶ್ಚೇನ್ಮಹೀಜಃ ಪುತ್ರಾಪಾಯೋ ಜಾಯತೇ ಜೀವಿತಸ್ಯ ॥೨॥ ಎಂದು ಉದಹರಿಸಿರುವನು. ಈ ಅನಿಷ್ಟ ಯೋಗತ್ರಯವನ್ನು ಧುಂಡಿರಾಜರೂ ಇದೇ ಪ್ರಕಾರವಾಗಿಯೇ ಹೇಳಿರುವರು. ॥ಶ್ಲೋಕ॥ ಲಗ್ನೇಂದ್ವೋಶ್ಚ ಕಲತ್ರಪುತ್ರಭವನೇಸ್ವ ಸ್ವಾಮಿ ಸೌಮ್ಯ ಗ್ರಹೈರ್ಯುಕ್ತೇವಾಥ ವಿಲೋಕಿತೇ ಖಲು

ತದಾತತ್ಪ್ರಾಪ್ತಿರಾವಶ್ಯಕೀ ।। ಲಗ್ನೇಚೇತ್ಸವಿತಾಸ್ಥಿ ತೋರವಿಸುತೋ ಜಾಯಾಶ್ರಿತೋ ಮೃತ್ಯುಕೃತ್ ಜಾಯಾಯಾಶ್ಚ ಮಹೀಸುತಃ ಸುತಗತಃ ಕುರ್ಯಾತ್ಸುತಾನಾಂಕ್ಷಿತಿಮ್॥೩॥

ಮೂಲ॥ ಉಗ್ರಗ್ರಹೈಸ್ಸಿತ ಚತುರಸ್ರ ಸಂಸ್ಥಿತೈರ್ಮಧ್ಯಸ್ಥಿತೇ ಭೃಗುತನಯೇ ಥವೋಗ್ರಯೋಃ । ಸೌಮ್ಯಗ್ರಹೈರಸಹಿತಸನ್ನಿರೀಕ್ಷಿತೇ ಜಾಯಾ ವಧೋದಹನನಿಪಾತ ಪಾಶಜಃ ॥೨॥

ಅವತಾರಿಕೆ॥ ಜಾತಕನಿಗೆ ಎರಡು ವಿಧವಾದ ಭಾರ್ಯಾವಧ ಯೋಗ ಹೇಳಿರುತ್ತೆ.

ಟೀಕು॥ ಸಿತಚತುರಸ್ರಸಂಸ್ಥಿತೈಃ-ಶುಕ್ರನ ಚತುರ್ಥಾಷ್ಟಮದಲ್ಲಿದ್ದ, ಉಗ್ರಗ್ರಹೈಃ-ಸೂರ್ಯಾಂಗಾರಕ ಶನಿಗಳಿಂದ ದಹನಜಃ-ಅಗ್ನಿಜನಿತವಾದ, ಜಾಯಾ ವಧಃ-ಭಾರ್ಯಾಮರಣವುಂಟಾಗುವುದು. ಅಂದರೆ, ಶುಕ್ರನಿಗೆ ಚತುರ್ಥಾಷ್ಟಮದಲ್ಲಿ ಸೂರ್ಯಾಂಗಾರಕ ಶನಿಗಳಿದ್ದ ಕಾಲದಲ್ಲಿ ಹುಟ್ಟಿದವನ ಪತ್ನಿಯು ಅಗ್ನಿಗುಂಡ ಜನಿತವಾದ ಮರಣವನ್ನು ಹೊಂದುವಳು. ಇದು ಒಂದು ವಿಧವಾದ ಯೋಗ ಅಥವಾ ಭೃಗುತನಯೇ-ಶುಕ್ರನು, ಉಗ್ರಯೋಃ-ಎರಡು ಅಶುಭಗ್ರಹಗಳ ಮಧ್ಯದಲ್ಲಿದ್ದ ಕಾಲದಲ್ಲಿ ಹುಟ್ಟಿದವನ ಪತ್ನಿಯು, ನಿಪಾತಜಃ-ಉನ್ನತಸ್ಥಾನದಿಂದ ಬಿದ್ದು ಮೃತಪಡುವನು, ಇದು ೨ನೇ ವಿಧವಾದ ಯೋಗ. ಭೃಗುತನಯೇ-ಶುಕ್ರನು, ಸೌಮ್ಯಗ್ರಹೈರಸಹಿತ ಸನ್ನಿರೀಕ್ಷಿತೇ-ಶುಭಗ್ರಹ ಸಂಯೋಗವೀಕ್ಷಣವಿಲ್ಲದೆ ಇರುವಾಗ ಹುಟ್ಟಿದವನ ಪತ್ನಿಯು, ಪಾಶಜಃ-ಬಂಧನಮೂಲದಿಂದ ಉಂಟಾದ ಮರಣಹೊಂದುವಳು. ಕೆಲವರು ಈ ಎರಡು ಯೋಗಗಳು ಪ್ರತ್ಯೇಕವೆಂದು ಹೇಳುವರು. ಅದು ಯುಕ್ತವಲ್ಲ. ಅಂದರೆ, ಶುಕ್ರನು ಪಾಪಮಧ್ಯನಾಗಿ ಶುಭಸಂಯೋಗ ವೀಕ್ಷಣವಿಲ್ಲದೆ ಇರುವಾಗ ಹುಟ್ಟಿದವನಿಗೆ ಈ ಯೋಗವೆಂದು ಹೇಳುವರು. ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಅಸೌಮ್ಯಮಧ್ಯಸ್ಥಿತ ಭಾರ್ಗವಶ್ಚೇತ್ಪಾತಾಲರಂಧ್ರೇ ಖಲಖೇಟಯುಕ್ತೇ । ಸೌಮ್ಯೈರದೃಷ್ಟೇ ಭೃಗುಜೇಚ ಪತ್ನಿನಾಶೋ ಭವೇತ್ಪಾಶ ಹುತಾಶನಾದ್ಯೈಃ ॥೪॥ ಮತ್ತು ಜಯದೇವಃ ॥ಶ್ಲೋಕ॥ ಶುಕ್ರಾತ್ಸುಖಾಷ್ಟಮ ಗತೇಷು ಖಲಗ್ರಹೇಷು ಮಧ್ಯಸ್ಥಿತೇ ಭೃಗುಸುತೇ ಖಲಖೇಟ ಯೋರ್ವಾ । ಸೌಮ್ಯಾಭಿದೃಗ್ಗಗನಗೈರಯುಗೀಕ್ಷಿತೇ ಚಯೋಷಾ ವಧೋಭವತಿ ವಹ್ನಿನಿಪಾತ ಪಾಶಾತ್ ॥೫॥ ಈ ಶ್ಲೋಕಗಳ ಪ್ರಕಾರ ಯೋಗಗಳು ಒಂದೇ ಆಗಿರುತ್ತೆ. ಗರ್ಗಸಂಹಿತೆಯಲ್ಲಿ ॥ಶ್ಲೋಕ॥ ಚತುರ್ಥಾಷ್ಟಮಗಃ ಶುಕ್ರಾತ್ಸೌರಾರಾರ್ಕೈ ಹುತಾಶನಾತ್ । ತೇಷಾಂದ್ವಯೋಸ್ತುಮಧ್ಯಸ್ತೇ ತಥಾಶುಕ್ರೋನಿಪಾತಜಃ ॥೬॥ ಶುಕ್ರೇಸದ್ಯೋಗದೃಘ್ಘೀನೇ ಪಾಶಾದ್ಭಾರ್ಯಾವಧೋ ಭವೇತ್ ॥ ಈ ಪ್ರಕಾರವಾಗಿ ೨ ಯೋಗಗಳಾಗುತ್ತವೆ. ಮೇಷಾದಿ ದ್ವಾದಶ

ಲಗ್ನಗಳಾಗಿ ಶುಕ್ರನು ೧೨ ಸ್ಥಾನಗಳಲ್ಲಿದ್ದರೆ, ಆ ಶುಕ್ರನಿಂದ ೪-೮ ರಲ್ಲಿ ರವಿ, ಕುಜ, ಶನಿಗಳು ಕ್ರಮವಾಗಿ ಇದ್ದರೆ, ೨೪ ಯೋಗಗಳಾಗುತ್ತವೆ. ೧೨x೧೨= ೧೪೪x೨೪=೩೪೫೬ ಯೋಗಗಳಾಗುತ್ತವೆ. ಈ ಯೋಗವನ್ನು ಅನಫಾಸುನಫಾಧಿ ಯೋಗಗಳಂತೆ ವಿಕಲ್ಪಮಾಡಿಕೊಂಡು ನ್ಯಾಸಮಾಡಿಕೊಳ್ಳಬೇಕು. ಮತ್ತು ಶುಕ್ರನು ಪಾಪಮಧ್ಯದಲ್ಲಿರುವಲ್ಲಿ ಇದೇ ಪ್ರಕಾರವೇ ಆಗುತ್ತದೆ ।।೨।।

## ಪತ್ನೀಸಹಿತ ಏಕನೇತ್ರಯೋಗಃ

ಮೂಲ।। ಲಗ್ನಾದ್ವಃ ಯಾರಿಗತಯೋಶ್ಶಶಿತಿಗ್ಮರಶ್ಮ್ಯೋಃ ಪತ್ನ್ಯಾ ಸಹೈಕನಯ
ನಸ್ಯವದಂತಿ ಜನ್ಮ । ದ್ಯೂನಸ್ಥಯೋರ್ನವಮ ಪಂಚಮ ಸಂಸ್ಥ
ಯೋರ್ವಾ ಶುಕ್ರಾರ್ಕಯೋರ್ವಿಕಲದಾರ ಮುಶಂತಿಜಾತಮ್ ।।೩।।

ಟೀಕು।। ಈ ಶ್ಲೋಕದಲ್ಲಿ ಪತ್ನೀಸಹಿತವಾದ ಏಕನೇತ್ರಯೋಗ ೧, ಅಂಗಹೀನದಾರಯೋಗ ೧, ಹೇಳಲ್ಪಡುತ್ತೆ. ಪತ್ನ್ಯಾ ಸಹ ಏಕನಯನಯೋಗಃ ।। ಶಶಿತಿಗ್ಮರಶ್ಮ್ಯೋಃ-ರವಿಚಂದ್ರರು, ಲಗ್ನಾತ್-ಲಗ್ನದಿಂದ, ವ್ಯಯಾರಿಗಯೋಃ-ದ್ವಾದಶ ಷಷ್ಠಸ್ಥಾನಗಳಲ್ಲಿದ್ದರೆ, ಪತ್ನ್ಯಾ ಸಹ-ಪತ್ನೀಸಹಿತವಾಗಿ. ಏಕನಯನಸ್ಯ- ಒಂದು ಕಣ್ಣುಳ್ಳರಾದವರ, ಜನ್ಮ-ಜನ್ಮವನ್ನು ವದಂತಿ-ಹೇಳುತ್ತಾರೆ. ಅದು ಹೇಗೆಂದರೆ- ಜನ್ಮಲಗ್ನದಿಂದ ೬ರಲ್ಲಿ ರವಿ, ದ್ವಾದಶದಲ್ಲಿ ಚಂದ್ರ ೧ ಯೋಗ. ೬ರಲ್ಲಿ ಚಂದ್ರ ದ್ವಾದಶದಲ್ಲಿ ರವಿ ೧ ಯೋಗ. ಈ ಯೋಗದಲ್ಲಿ ಹುಟ್ಟಿದವನು ಏಕನೇತ್ರ ವುಳ್ಳವನಾಗುವನು ಮತ್ತು ಆತನ ಭ್ಯಾರೆಯು ಏಕನೇತ್ರವುಳ್ಳವಳಾಗುವಳು. ಈ ೧೨ ಲಗ್ನಗಳಿಗು ೨೪ ಯೋಗಗಳು ಲಭಿಸುತ್ತವೆ. ಈ ವಿಷಯದಲ್ಲಿ ಶ್ಲೋಕ ।।ಜಯದೇವಃ।। ಲಗ್ನಾತ್ ಷಡಂತ್ಯಗತಯೋ ರವಿಚಂದ್ರಯೋಶ್ಚ ಕಾಣೋಭವೇ- ದ್ವನಿತಯಾ ಸಹಮಾನವೋಸೌ । ಜಾಯಾಶ್ರಿತೌಸುಕೃತಧೀಭವನಾ ಶ್ರಿತೌವಾ ದೈತ್ಯೇಜ್ಯವಾಸರಕರೌಮನುಜಃ ಕುಭಾರ್ಯಃ ।।೭।।

## ವಿಕಲಾಂಗಪತ್ನೀ ಯೋಗಃ

ಶುಕ್ರಾರ್ಕಯೋಃ-ಶುಕ್ರರವಿಗಳು, ದ್ಯೂನಸ್ಥಯೋಃ-ಸಪ್ತಮದಲ್ಲಿರುವಾಗ ಜಾತಃ- ಹುಟ್ಟಿದವನು, ವಿಕಲದಾರಂ-ಅಂಗಹೀನವಾದ ಪತ್ನಿಯುಳ್ಳವನೆಂದು ಉಶಂತಿ- ಹೇಳುತ್ತಾರೆ. ನವಮ ಪಂಚಮಸ್ಥಯೋರ್ವಾ-ನವಮದಲ್ಲಾಗಲೀ, ಪಂಚಮ ದಲ್ಲಾಗಲೀ, ಸೂರ್ಯಶುಕ್ರರಿರುವಾಗ ಹುಟ್ಟಿದವನಿಗೆ, ಅಂಗಹೀನವಾದ ಪತ್ನಿಯಾಗುವಳು. ಇಲ್ಲಿ ಕೆಲವರು ಪ್ರಾಕಾರಾಂತರವಾಗಿ ಅರ್ಥವನ್ನು ಹೇಳುತ್ತಾರೆ ಅದು ಯುಕ್ತವಲ್ಲ. ಈ ವಿಷಯದಲ್ಲಿ ।।ಶ್ಲೋಕ।। ದಿವಾಕರೇಂದೂವ್ಯಯ ವೈರಿಯಾತೌ ಜಾಯಾಪತೀ ಏಕವಿಲೋಚನೌಸ್ತಃ । ಕಲತ್ರಧರ್ಮಾತ್ಮಜಗೌ ಸಿತಾರ್ಕೌಪುರ್ಮಾ ಭವೇತ್ಕ್ಷೀಣಕಲತ್ರ ಏವ ।।೮।। ಮತ್ತು ।।ಗರ್ಗಃ।। ಪಂಚಮೇ ನವಮೇ ದ್ಯೂನೇ ಸಮೇತೌಸಿತಭಾಸ್ಕರೌ।

ಯಸ್ಯಸ್ಯಾತಾಂ ಭವೇದ್ಭಾರ್ಯಾತ ಸ್ಯೈಕಾಂಗ ವಿವರ್ಜಿತಾ॥ ॥೯॥ ಎಂದು ಪ್ರಮಾಣವಿರುತ್ತೆ.

## ವಂಧ್ಯಾಪತಿ ಯೋಗಃ

ಮೂಲ॥ ಕೋಣೋದಯೋ ಭೃಗುತನಯೇಸ್ತ ಚಕ್ರಸಂಧೌ । ವಂಧ್ಯಾಪತಿ
ರ್ಯದಿನಸುತರ್ಕ್ಷ ಮಿಷ್ಟಯುಕ್ತಂ॥ ಪಾಪಗ್ರಹೈರ್ವ್ಯಯ ಮದಲಗ್ನ
ರಾಶಿಸಂಸ್ಥೈಃ । ಕ್ಷೀಣೇ ಶಶಿನ್ಯಸುತ ಕಳತ್ರಜನ್ಮಧೀಸ್ಥೇ ॥೪॥

ಟೀಕು॥ ಈ ಶ್ಲೋಕದಲ್ಲಿ ವಂಧ್ಯಾಪತಿಯೋಗ, ಪುತ್ರಕಳತ್ರಹೀನಯೋಗವು ಹೇಳಲ್ಪಡುತ್ತೆ. ವಂಧ್ಯಾಪತಿ ಯೋಗಃ ॥ ಕೋಣೋದಯೇ-ಶನಿಯು ಲಗ್ನಗತನಾಗಿದ್ದು, ಭೃಗುತನಯೇ-ಶುಕ್ರನು, ಅಸ್ತಚಕ್ರಸಂಧೌ-ಚಕ್ರಸಂಧಿಗಳಾದ, ಕರ್ಕರಾಶಿಯ ಅಂತ್ಯನವಾಂಶ, ವೃಶ್ಚಿಕ ರಾಶಿಯ ಅಂತ್ಯನವಾಂಶ, ಮೀನರಾಶಿಯ ಅಂತ್ಯ ನವಾಂಶಗಳಲ್ಲಿದ್ದು, ಸುತರ್ಕ್ಷಂ-ಪಂಚಮಸ್ಥಾನವು, ಇಷ್ಟಯುಕ್ತಂನಯದಿ- ಶುಭಗ್ರಹ ಯುಕ್ತನಾಗದಿದ್ದರೆ. ಈ ಯೋಗದಲ್ಲಿ ಹುಟ್ಟಿದವನು ವಂಧ್ಯಾಪತಿಃ-ಬಂಜೆಯಗಂಡ ನಾಗುವನು. ಈ ಯೋಗವು ವೃಷಭ, ಕನ್ಯಾ, ಮಕರ ಈ ೩ ಲಗ್ನಜಾತಕಗಳಿಗೆ ಮಾತ್ರ ಸಂಭವಿಸುವದು. ವೃಷಭಜನ್ಮಲಗ್ನವಾಗಿ ವೃಷಭದಲ್ಲಿ ಶನಿಯು, ಪಂಚಮವಾದ ಕನ್ಯೆಯಲ್ಲಿ ಯಾವದಾದರೂ, ಪಾಪಗ್ರಹ (ರವಿ,ಕುಜ) ಸಪ್ತಮವಾದ ವೃಶ್ಚಿಕರಾಶಿ ಅಂತ್ಯನವಾಂಶೆಯಲ್ಲಿ ಶುಕ್ರನಿದ್ದರೆ ೧ ಯೋಗ, ಕನ್ಯಾಲಗ್ನದಲ್ಲಿ ಶನಿಯಿದ್ದು, ಪಂಚಮಸ್ಥಾನವಾದ ಮಕರದಲ್ಲಿ (ಕುಜ, ರವಿ) ಇವರಲ್ಲಿ ಯಾರಾದರೂ, ಇದ್ದು, ಸಪ್ತಮವಾದ ಮೀನರಾಶಿಯ ಅಂತ್ಯನವಾಂಶೆಯಲ್ಲಿ ಶುಕ್ರನಿದ್ದರೆ ೨ ನೆ ಯೋಗ, ಮಕರ ಲಗ್ನಜಾತಕವಾಗಿ, ಮಕರದಲ್ಲಿ ಶನಿ, ವೃಷಭದಲ್ಲಿ ಯಾವದಾದರೂ (ರವಿ, ಕುಜ) ಒಂದು ಪಾಪಗ್ರಹವಿದ್ದು, ಸಪ್ತಮದಲ್ಲಿ ಶುಕ್ರನು ಕಟಕರಾಶಿಯ ಅಂತ್ಯನವಾಂಶೆಯಲ್ಲಿದ್ದರೆ, ೩ನೆ ಯೋಗ. ಈ ಪ್ರಕಾರ ಪಂಚಮದಲ್ಲಿ ರವಿ ಇದ್ದರೆ, ೩ ಯೋಗ, ಕುಜನಿದ್ದರೆ, ೩ ಯೋಗವು ಅಂತು ೬ ಯೋಗಗಳು ಸಂಭವಿಸುತ್ತವೆ. ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋ॥ ಭಸಂಧಿಯಾತೇ ಚಸಿತೇ ಸ್ಮರಸ್ಥೇ ತನೌಪ್ರಯತ್ನೇನತು ಭಾನು ಸೂನೌ। ವಂಧ್ಯಾಪತಿಃಸ್ಯಾನ್ಮನುಜಃ ಸ್ತದಾನೀಂ ಸುತಾಲಯುನ್ನೋ ಶುಭದೃಷ್ಟಯುಕ್ತಂ ॥೧೦॥ ಈ ಯೋಗಗಳನ್ನು ವಂಧ್ಯಾಪತಿಯೆಂದು ಹೇಳಲ್ಪಟ್ಟಿರುವರಿಂದ ಮತ್ತೊಂದು ಭಾರ್ಯೆಯಲ್ಲಿ ಪುತ್ರಸಂತಾನವಾಗುವದೆಂದು ಹೇಳುತ್ತಾರೆ. ಅದು ಯುಕ್ತವಲ್ಲ.

## ಪುತ್ರಕಳತ್ರಹೀನಯೋಗಾಃ

ಕ್ಷೀಣೇಶಶಿನಿ-ಕ್ಷೀಣಚಂದ್ರನು, ಧೀಸ್ಥೇ-ಪಂಚಮದಲ್ಲಿದ್ದು, ವ್ಯಯಮದ ಲಗ್ನ ರಾಶಿ ಸಂಸ್ಥೈ-ದ್ವಾದಶ, ಸಪ್ತಮ ಜನ್ಮಲಗ್ನದಲ್ಲಿ, ಪಾಪಗ್ರಹೈ-ಪಾಪಗ್ರಹಗಳಾದ,

(ರವಿ, ಕುಜ, ಶನಿ) ಇವರಲ್ಲಿ ಯಾರಾದರೂ, ಈ ೩ ಸ್ಥಾನಗಳಲ್ಲೂ ಇದ್ದರೆ ಆ ಕಾಲದಲ್ಲಿ, ಅಸುತಕಳತ್ರಜನ್ಮಾ-ಹೆಂಡತಿ, (ಪತ್ನೀಪುತ್ರರುಂಟಾಗದವನ ಜನನ ವಾಗುವುದು) ಈ ಯೋಗ ೧೨ ಲಗ್ನಗಳಿಗೂ ಸಂಭವಿಸುವುದು, ಪಂಚಮದಲ್ಲಿ ಕ್ಷೀಣಚಂದ್ರ ದ್ವಾದಶದಲ್ಲಿ ರವಿ, ಸಪ್ತಮದಲ್ಲಿ ಕುಜ, ವ್ಯಯದಲ್ಲಿ ಶನಿ ೧ನೇ ಯೋಗ. ದ್ವಾದಶದಲ್ಲಿ ಕುಜ, ಸಪ್ತಮದಲ್ಲಿ ಶನಿ, ಜನ್ಮಲಗ್ನದಲ್ಲಿ ರವಿ ೨ನೇ ಯೋಗ. ದ್ವಾದಶದಲ್ಲಿ ಶನಿ, ಜನ್ಮದಲ್ಲಿ ಕುಜ, ಸಪ್ತಮದಲ್ಲಿ ರವಿ ೩ನೇ ಯೋಗ. ಈಗ ಪ್ರತಿಲಗ್ನಕ್ಕೂ ೩, ಮೇಷಾದಿ ೧೨ ಲಗ್ನಗಳಿಗೆ ೧೨x೩-೩೬ ಯೋಗಗಳು ಸಂಭವಿಸುವವು. ಈ ವಿಷಯದಲ್ಲಿ ಕ್ಷೀಣಚಂದ್ರನು, ೫-೭-೧೨-೧ ರಲ್ಲಿದ್ದರೆ ಈ ಯೋಗ ಸಂಭವಿಸುವದೆಂದು ಅರ್ಥ ಮಾಡಿರುವರು. ಅದು ಯುಕ್ತವಲ್ಲ. ಈ ವಿಷಯಕ್ಕೆ ॥ಶ್ಲೋಕ॥ ಕ್ರೂರಾಶ್ಚಹೋರಾಃ ಸ್ಮರರಿಃಫಯಾತಾಃ ಸುತಾಲಯೇ ಹೀನಬಲಃ ಕಲಾವಾ । ಏವಂ ಪ್ರಸೂತೌ ಕಿಲಯಸ್ಯಯೋಗೇ ಭವೇತ್ಸ ಭಾರ್ಯಾತನಯೈರ್ವಿಹೀನಃ ॥೧೧॥ ಎಂದು ಧುಂಡಿರಾಜರು ನಿರೂಪಿಸಿರುತ್ತಾರೆ. ಮತ್ತು ಜಯದೇವಃ ॥ ತನುಭವನಗತಾರ್ಕೌ ಕಾರ್ಪಕರ್ಕ್ಯಾಂ ಭಾಂತ್ಯಾಂಶಕಗತ ಭೃಗುಪುತ್ರೇ ಚೇತ್ಸುತರ್ಕ್ಷಂತ್ವನಿಷ್ಟಮ್ । ಮೃತಪತಿವನಿತೇಶಃ ಸ್ಯಾತ್ಸ ಭ್ರಾಂತ್ಯಾಂಗ ಪಾಪೈ ರ್ವಿಕಲ ಶಶಿನಿ ಧೀಸ್ಥೇ ವ್ಯಂಗತೋವ್ಯಾತ್ಮ ಜೋವಾ ॥೧೨॥

ಮೂಲ॥ ಅಸಿತ ಕುಜಯೋರ್ವರ್ಗೇಽಸ್ತಸ್ಥೇ ಸಿತೇತವೇಕ್ಷಿತೇ । ಪರಯುವತಿ ಗಸ್ತೌ ಪೇತ್ಸೇಂದೂ ಸ್ತ್ರಿಯಾಸಹಪುಂಶ್ಚಲಃ ॥ ಭೃಗುಜಶಶಿನೋ ರಸ್ತೇಭಾರ್ಯೋನರೋ ನಿಸುಲೋಽಪಿವಾ । ಪರಿಣತತನೂನ್ನೃ ಸ್ತ್ರೋರ್ದೃಷ್ಟೌಶುಭೈಃ ಪ್ರಮದಾಪತಿಃ ॥೫॥

ಅವತಾರಿಕೆ॥ ಈ ಶ್ಲೋಕದಲ್ಲಿ ಪರಸ್ತ್ರೀಗಮನ ಯೋಗ, ಭಾರ್ಯಾ ಸಹಿತ ಪರದಾರ ಪರಪುರುಷರತಯೋಗ, ಭಾರ್ಯಾಪುತ್ರಹೀನಯೋಗ, ವೃದ್ಧಾಪ್ಯೇ ಪ್ರಮದಾಪತಿಯೋಗ ಎಂಬ ೪ ವಿಧ ಅನಿಷ್ಟಯೋಗಗಳು ಹೇಳಲ್ಪಡುತ್ತವೆ.

## ಪರದಾರರತಯೋಗಃ

ಟೀಕು॥ ಅಸಿತಕುಜಯೋಃ-ಶನೈಶ್ಚರಾಂಗಾರಕರ, ವರ್ಗೇ-ಷಡ್ವರ್ಗದಲ್ಲಿರುವ ಸಿತೇ-ಶುಕ್ರನು, ಅಸ್ತಸ್ಥೇ-ಲಗ್ನಕ್ಕೆ ಸಪ್ತಮದಲ್ಲಿದ್ದು, ತದವೇಕ್ಷಿತೇ-ಆ ಶನಿ ಕುಜರಲ್ಲಿ ಯಾರೊಬ್ಬನಿಂದಾದರೂ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು. ಪರ ಯುವತಿಗಃ-ಪರರ ಭಾರ್ಯೆಯಲ್ಲಿ ಆಸಕ್ತಿಯುಳ್ಳವನಾಗುವನು. (ಅಂದರೆ ವ್ಯಭಿಚಾರಯೋಗ)

## ಭಾರ್ಯಾಸಹ ವ್ಯಭಿಚಾರಯೋಗಃ

ಸಪ್ತಮದಲ್ಲಿರುವ ತೌ ಆ ಶನಿ ಕುಜರು, ಸೇಂದೂಚೇತ್-ಚಂದ್ರನ ಸಂಗಡ

ಒಂದೇ ರಾಶಿಯಲ್ಲಿದ್ದರೆ, ಅಂಥಾ ಶನಿಕುಜರ ಷಡ್ವರ್ಗವನ್ನು ಹೊಂದಿದ ಲಗ್ನಕ್ಕೆ ಸಪ್ತಮ ಸ್ಥಾನದಲ್ಲಿರುವ ಶುಕ್ರನು ಶನಿ ಕುಜರಲ್ಲಿ ಯಾರಿಂದಾದರೂ ನೋಡಲ್ಪಟ್ಟರೆ, ಸ್ತ್ರಿಯಾಸಹ-ಪತ್ನಿಯ ಸಂಗಡ, ಪುಂಶ್ಚಲಃ- ವ್ಯಭಿಚಾರಿಯಾಗುವನು, ಅಂದರೆ ಗಂಡನು ಪರಸ್ತ್ರೀಸಕ್ತನಾಗುವನು, ಅವನ ಪತ್ನಿಯು ಪರಪುರುಷಗಾಮಿನಿಯಾಗುವಳು.

## ಭಾರ್ಯಾ ಪುತ್ರಹೀನಯೋಗಃ

ಭೃಗುಜಶಶಿನೋಃ-ಏಕರಾಶಿಗತರಾದ ಶುಕ್ರ-ಚಂದ್ರರು, ಲಗ್ನಕ್ಕೆ ಯಾವಸ್ಥಾನ-ದಲ್ಲಿದ್ದವರಾದರೂ, ಶುಕ್ರ ಚಂದ್ರರಿಗೆ, ಅಸ್ತೇ-ಸಪ್ತಮದಲ್ಲಿ, ತೌಚೇತ್- ಆ ಶನ್ಯಂಗಾರಕರಿದ್ದರೆ, ನರಃ-ಆ ಕಾಲದಲ್ಲಿ ಹುಟ್ಟಿದವನು, ಅಭಾರ್ಯಃ-ಪತ್ನಿ ಇಲ್ಲದವನು, ವಿಸುತೋಪಿವಾ-ಪುತ್ರಹೀನನೂ ಆಗುವನು (ಇಲ್ಲಿ ವಾ ಶಬ್ದ ಪ್ರಯೋಗದಿಂದ ಹೆಂಡತಿ ಇದ್ದರೂ ಪುತ್ರಹೀನನಾಗುವನು)

## ವೃದ್ಧಾಪ್ಯೇ ಪ್ರಮದಾಪತಿಯೋಗಃ

ನೃಸ್ತ್ರ್ಯೋಃ ಒಂದು ಪುಂಗ್ರಹವು, ಒಂದು ಸ್ತ್ರೀಗ್ರಹವು, ಏಕರಾಶಿಗತರಾಗಿರುವಾಗ, ಅಸ್ತೇ-ಆ ಗ್ರಹಕ್ಕೆ ಸಪ್ತಮದಲ್ಲಿರುವ ಶನಿ ಕುಜರು, ಶುಭೈಃ-ಸೌಮ್ಯಗ್ರಹಗಳಿಂದ, ದೃಷ್ಟೌ ಚೇತ್-ದೃಷ್ಟಿಯುಕ್ತವಾಗಿದ್ದರೆ, ಪರಿಣತತನೂ, ವಾರ್ಧಿಕ್ಯಾವಸ್ಥೆಯಲ್ಲಿ, ಪ್ರಮದಾಪತಿಃ-ಮದಿಸಿದ ಯೌವನವುಳ್ಳ ಪತ್ನಿಯನ್ನು ವಿವಾಹಮಾಡಿಕೊಳ್ಳುವನು, ಅಂದರೆ ಯೌವ್ವನ ಕಾಲದಲ್ಲಿ ವಿವಾಹವಿಲ್ಲದೆ ವಾರ್ಧಿಕ್ಯಾವಸ್ಥೆಯಲ್ಲಿ ಯೌವ್ವನವತಿಯನ್ನು ವಿವಾಹಮಾಡಿಕೊಂಡು ಅವಳಿಂದ ಉಪಚರಿಸಿಕೊಳ್ಳುವನು. ಈ ವಿಷಯದಲ್ಲಿ ಭಟ್ಟೋತ್ಪಲಾಚಾರ್ಯರು ವ್ಯಾಖ್ಯಾನ ಮಾಡಿರುವರು. ಪರಿಣತತನುರ್ನೋತೌದೃಷ್ಟೌ ಶುಭೈಃ ಪ್ರಮದಪತಿಃ।। ಎಂದು ಹೇಳಿರುತ್ತಾರೆ. ತೌ-ಏಕರಾಶಿಗತರಾದ ಶುಕ್ರ ಚಂದ್ರರಿಗೆ, ಸಪ್ತಮಸ್ಥಾನದಲ್ಲಿದ್ದ ಶನಿ ಕುಜರು, ನೋಶುಭೈರ್ದೃಷ್ಟೌ-ಶುಭಗ್ರಹಗಳಿಂದ ನೋಡಲ್ಪಡದೆ, ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವನು, ಪರಿಣತತನುಃ-ಶರೀರಕ್ಕೆ ವೃದ್ಧಾಪ್ಯಕಾಲ ಬಂದಿರುವಾಗ, ಪ್ರಮದಾಪತಿಃ-ಯೌವ್ವನವತಿಯಾದವಳನ್ನು ವಿವಾಹ ಮಾಡಿಕೊಂಡು ಅವಳಿಂದ ಉಪಚರಿಸಿಕೊಳ್ಳುವನೆಂದು ಅರ್ಥಮಾಡಿರುತ್ತಾರೆ. ಈ ವಿಷಯಕ್ಕೆ ।।ಶ್ಲೋಕ ।।ಜಯದೇವಃ।। ಸಸಿತೇಂದುತೋಸ್ತ ಭವನಾರ್ಕಿ ಕುಜೌ ವಿಸುತೋಥವಾ ವಿವನಿತೋಮನುಜಃ। ನರಯೋಪಿ ದೃಕ್ಷಗ ಕುಜಾರ್ಕಸುತೌ ಯದಿವಾರ್ಧಕೇಲ ಭತಿಯುವ ವಧೂಮ್ ।।೧೩।। ಶನಿಕುಜರ್ಕ್ಷ ವಧೂಭವನೇ ಭೃಗೌ ಪರವಧೂ ಪರತ ಸ್ತದವೇಕ್ಷಿತೇ । ಕುಜಸೈಶ್ಚರಯುಕ್ ಶಶಲಾಂಛನೇ ವನಿತಾಯುಹಿ ನರಸ್ಸಹಪುಂಶ್ಚಲಃ ।।೧೪।। ಇದೇ ವಿಷಯಕ್ಕೆ ।। ಧುಂಡಿರಾಜರ ಅಭಿಪ್ರಾಯ ।।ಶ್ಲೋಕ।।

ಸಿತೇಸ್ತಯಾತೇಶ ನಿಭೌಮವರ್ಗೇ ಭೌಮಾರ್ಕದೃಷ್ಟೇ ಪರದಾರಗಾಮಿ । ಮಂದರಾರಚಂದ್ರಾಯದಿ ಸಂಯುತಾಸ್ಯುಃ ಪೌಂಶ್ಚಲ್ಯ ಯುಕ್ತೌರಮಣೀ ನರೌಸ್ತಃ ॥೧೫॥ ಈ ಮೇಲಿನ ಯೋಗಗಳು ಬಹುಗ್ರಂಥಕರ್ತರ ಅಭಿಪ್ರಾಯ ಪ್ರಕಾರ ಹೇಳಲ್ಪಟ್ಟಿರುತ್ತೆ ॥೫॥

ಮೂಲ॥ ವಂಶಚ್ಛೇತ್ತಾಖಮದ ಸುಖಗೈಶ್ಚಂದ್ರದೈತ್ಯೇಜ್ಯ ಪಾಪೈ। ಶ್ಶಿಲ್ಪೀತ್ರ್ಯಾಂಶೇ ಶಶಿಸುತಯುತೇ ಕೇಂದ್ರ ಸಂಸ್ಥಾರ್ಕಿದೃಷ್ಟೇ॥ ದಾಸ್ಯಾಂ ಜಾತೋ ದಿತಿಸುತಗುರೌ ರಿಃಫಗೇ ಸೌರಭಾಗೇ। ನೀಚೋರ್ಕ್ರಿಂ ದ್ಯೋರ್ಮದ ನಗತಯೋ ರ್ದೃಷ್ಟಯೋ ಸ್ಸೂರ್ಯಜೇನ ॥೬॥

ಅವತಾರಿಕೆ ॥ ಈ ಶ್ಲೋಕದಲ್ಲಿ ವಂಶಭೇದಯೋಗ, ಶಿಲ್ಪಿಯೋಗ, ದಾಸೀ ಪುತ್ರಯೋಗ, ನೀಚ ಪತಿತಯೋಗ, ಅಂತು ೪ ಯೋಗ ಹೇಳಲ್ಪಡುತ್ತೆ.

## ವಂಶ ಭೇದಯೋಗಃ

ಟೀಕು॥ ಖಮದಸುಖಗೈಃ ಜನ್ಮಲಗ್ನಭಾವದಿಂದ ೧೦-೭-೪ನೇ ಸ್ಥಾನಗಳಲ್ಲಿರುವ, ಚಂದ್ರ ದೈತ್ಯೇಜ್ಯ ಪಾಪೈಃ-ಚಂದ್ರಶುಕ್ರ ಮತ್ತು ಕ್ರೂರಗ್ರಹಗಳಿಂದ ವಂಶಚ್ಛೇತ್ತಾ-ವಂಶವಿಚ್ಛೇದಕನಾದವನಾಗುವನು, ಅಂದರೆ ಲಗ್ನದಿಂದ ೧೦-೭-೪ ರಲ್ಲೂ ಚಂದ್ರ, ಶುಕ್ರ ಮತ್ತು (ರವಿ, ಕುಜ, ಶನಿ) ಇವರಲ್ಲಿ ಯಾರಾದರೂ ಇದ್ದರೆ ಆ ಕಾಲದಲ್ಲಿ ಹುಟ್ಟಿದವನು ವಂಶ ಭೇದಕನೆಂದರೆ ಸಂತತಿ ಇಲ್ಲದವನಾಗುವನು. ಆ ಸಂತತಿಗೆ ಅವನೇ ಅಂತ್ಯದವನು, ಈ ಯೋಗದಲ್ಲಿ ಚಂದ್ರ ಶುಕ್ರರು, ಸಪ್ತಮ, ದಶಮದಲ್ಲಿದ್ದು ಪಾಪಗ್ರಹಗಳು ಚತುರ್ಥದಲ್ಲಿರಬೇಕೆಂದು ಅರ್ಥವಾಗುತ್ತೆ. ಪ್ರತ್ಯಕ್ಷನು ಭವದಲ್ಲಿ ಚಂದ್ರ ಶುಕ್ರರು ಸಪ್ತಮದಲ್ಲಿದ್ದು ಪಾಪಗ್ರಹಗಳು ಚತುರ್ಥದಲ್ಲೂ ಮತ್ತು ದಶಮದಲ್ಲೂ ಇದ್ದರೆ ಈ ಯೋಗ ಪ್ರಾಪ್ತಿಯಾಗುತ್ತೆ. ಈ ವಿಷಯಕ್ಕೆ ॥ಶ್ಲೋಕ॥ ವಂಶಭೇದಕರಃ ಶಶಾಂಕ ಬೃಗುಜ ಕ್ರೂರೈಃ ಸ್ವಕಾಮಾಂ ಬುಷೈಃ ಶಿಲ್ಪೀಕೇಂದ್ರ ಗತಾರ್ಕಿಣೋಬುಧಯುತತ್ರ್ಯಂಶೇ ಸಮಾಲೋಕಿತೇ । ಅಂತ್ಯೇದೇವಸುತೌ ದಿನೇಶ್ವರ ಯುತ ಸ್ಯಾಂಶೇಚದಾಸೀಯುತೋ। ನೀಚಃಕಾಮ ಗಯೋಃಸ್ವರಾಂಶುಶಶಿನೋಃ ಸೌರೇಣ ಸಂದೃಷ್ಟಯೋಃ ॥೧೬॥ ಮತ್ತು ಜಯದೇವಃ॥ ವಂಶಚ್ಛೇತ್ತಾ ಕರ್ಮ ಮಿತ್ರಾಸ್ತ ಕರ್ಮಸಂಸ್ಥೈರ್ನಕ್ಷತ್ರೇಶಃ ಕ್ರೂರಕಾಪ್ಯೈ ರ್ಭವೇತ್ಸಃ । ಶಿಲ್ಪೀಲಗ್ನತ್ರ್ಯಂಶ ಯುಕ್ತೇಂದುಪುತ್ರೇಕೇಂದ್ರಸ್ಥೇ ನಾದಿತ್ಯಪುತ್ರೇಣದೃಷ್ಟೇ ॥೧೭॥

## ಶಿಲ್ಪಕರ್ಮಾದಿಯೋಗಃ

ಶಶಿಸುತಯುತೇ ಬುಧನು ಕೂಡಿರುವ, ತ್ರ್ಯಂಶೇ-ದ್ರೇಕ್ಕಾಣವು ಯಾವ ರಾಶಿಗೆ ಸೇರಿದುದೋ ಆ ರಾಶಿಗೆ, ಕೇಂದ್ರಸಂಸ್ಥಾರ್ಕಿದೃಷ್ಟೇ-ಲಗ್ನಕ್ಕೆ ಕೇಂದ್ರದಲ್ಲಿರುವ ಶನಿಯಿಂದ

ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವನು. ಶಿಲ್ಪೀ-ಚಿತ್ರಕಲಾದಿ ವಿದ್ಯೆಯಿಂದ ಜೀವಿಸುವನು, ಅಂದರೆ ಜನ್ಮಕಾಲದಲ್ಲಿ ಬುಧನು ದ್ರೇಕ್ಕಾಣದಲ್ಲಿರುವನೋ ಆ ದ್ರೇಕ್ಕಾಣ, ಯಾವರಾಶಿ ಸಂಬಂಧವಾದದ್ದೋ ಆ ರಾಶಿಯನ್ನು ಲಗ್ನಕ್ಕೆ ಕೇಂದ್ರದಲ್ಲಿರುವ ಶನಿಯಿಂದ ನೋಡಲ್ಪಟ್ಟರೆ ಅವನು ಶಿಲ್ಪಿಯಾಗಿ ಜೀವಿಸುವನು.

## ದಾಸೀಪುತ್ರ ಯೋಗಃ

ಜನ್ಮಕಾಲದಲ್ಲಿ, ದಿತಿಸುತಗುರೌ-ಶುಕ್ರನು, ರಿಃಫಗೇ-ಲಗ್ನಕ್ಕೆ ವ್ಯಯಭಾವದಲ್ಲಿ, ಸೌರೀಭಾಗೇ-ಶನಿ ನವಾಂಶೆಯಲ್ಲಿದ್ದರೆ, ದಾಸ್ಯಾಂ-ದಾಸಿಯಲ್ಲಿ ಜಾತಃ ಹುಟ್ಟಿದವನೆಂದು (ವದೇತ್) ಹೇಳತಕ್ಕದ್ದು॥

## ನೀಚಕರ್ಮಯಗಃ

ಅರ್ಕೇಂದ್ವೋಃ-ರವಿಚಂದ್ರರು, ಮದನಗತಯೋಃ-ಲಗ್ನಕ್ಕೆ ಸಪ್ತಮ ಸ್ಥಾನದಲ್ಲಿದ್ದು, ಸೂರ್ಯಜೇನ-ಶನೈಶ್ಚರನಿಂದ, ದೃಷ್ಟಯೋಃ-ನೋಡಲ್ಪಟ್ಟವರಾದರೆ, ಆ ಕಾಲದಲ್ಲಿ ಹುಟ್ಟಿದವನು ನೀಚಃ-ಅಧಮ ಕೃತ್ಯಗಳನ್ನು ಮಾಡುವನು. ನೀಚಕೃತ್ಯವೆಂದರೆ ಕುಲೋಚಿತವೃತ್ತಿಯಲ್ಲದೆ ಅನ್ಯಕಾರ್ಯಗಳ ಮಾಡುವಿಕೆಯೆಂದು ಹೇಳಲ್ಪಡುತ್ತೆ, ಈ ವಿಷಯಕ್ಕೆ ಸಮ್ಮತಿ ॥ಶ್ಲೋಕ॥ಜ.ದೇ॥ ದಾಸ್ಯಾಂಜಾತೋರಿಃಫಗೇಸೌರಿ ಭಾಗೇದೈತ್ಯಾಚಾರ್ಯೇ ಪ್ರಾಹುರಿತ್ಯೇ ವಮಾರ್ಯಾಃ । ಚಂದ್ರಾರ್ಕೌ ಚೇಲ್ಲಗ್ನತಃ ಸಪ್ತಮ ಸ್ಥೌಮಾರ್ತಾಂಡೀಯಾ ಲೋಕಿತೇ ಶಿಲ್ಪಕರ್ಮಾ ॥೧೮-೬॥

ಮೂಲ॥ ಪಾಪಾಲೋಕಿತಯೋ ಸ್ಸಿತಾವನಿಜಯೋ ದಸ್ತಸ್ಥಯೋರ್ವೃದ್ಧಿರು
ಕ್ಚದ್ರೇ। ಕರ್ಕಟವೃಶ್ಚಿಕಾಂಶಕಗತೇ ಪಾಪೈರ್ಯುತೇ ಗುಹ್ಯರುಕ್ ॥
ಶ್ವಿತ್ರೀರಿಃಫಧನಸ್ಥಯೋ ರಶುಭಯೋ ಶ್ಚಂದ್ರೋದಯೇಸ್ತ್ರೀರವೌ ॥
ಚಂದ್ರೇಖೇವ ನಿಜೇಸ್ತಗೇಚ ವಿಕಲಯದ್ಯರ್ಕಜೋವೇಶಿಗಃ ॥೭॥

ಟೀಕು॥ ಈ ಶ್ಲೋಕದಲ್ಲಿ ವೃದ್ಧಿರೋಗ, ಗುಹ್ಯರೋಗ, ಶ್ವೇತಕುಷ್ಟಯೋಗ ಅಂಗಹೀನಯೋಗ, ಈ ಪ್ರಕಾರ ೪ ವಿಧವಾದ ರೋಗವುಳ್ಳವರ ಜನನವು ಹೇಳಲ್ಪಡುತ್ತೆ ॥

## ವೃದ್ಧಿರೋಗಯೋಗಃ

ಸಿತಾವನಿಜಯೋ--ಶುಕ್ರಾಂಗಾರಕರು, ಅಸ್ತಸ್ಥಯೋಃ-ಲಗ್ನಕ್ಕೆ ಸಪ್ತಮಭಾವದಲ್ಲಿದ್ದು, ಪಾಪಲೋಕಿತಯೋಃ, ಪಾಪಗ್ರಹದಿಂದ ನೋಡಲ್ಪಟ್ಟರೆ, ಜಾತಕನು, ವೃದ್ಧಿರುಕ್-ವೃದ್ಧಿಯೆಂಬುವ ರೋಗವುಳ್ಳವನಾಗುವನು, ವೃದ್ಧಿರೋಗವೆಂದರೆ, (ಅಂಡವೃದ್ಧಿಯಾಗುವ ರೋಗವೆಂದು ಅನುಭವದಿಂದ ಈ ಮೇಲೆ ಹೇಳಿದ ಗ್ರಹಗಳಿಗೆ

ತಿಳಿದುಬಂದಿದೆ. ಆದ್ದರಿಂದ ಅಂಡ ವೃದ್ಧಿರೋಗವೆಂದು ಅರ್ಥಮಾಡಬಹುದು). ಪಾಠಾಂತರದಲ್ಲಿ ಅರ್ಧದೃಕ್-ಎಂದು ಪಠಿಸಿ ಅರೆಗಣ್ಣ ನೋಟವುಳ್ಳವನೆಂದು ಅರ್ಥ ಹೇಳುವರು. ಈ ವಿಷಯಕ್ಕೆ ಜಯದೇವಃ ॥ಶ್ಲೋಕ॥ ಪಾಪೇಕ್ಷಿತೌ ಭೃಗುಜ ಭೂಮಿಸುತೌ ಭವೇತಾಂ ಚೇದಸ್ತ ಗೌಚಮನುಜೋ ನಿಲರೋಗಭಾಕ್ಸ್ಯಾತ್ । ಕರ್ಕಾಂಶಕೇ ಶಶಿನಿ ವೃಶ್ಚಿಕಾಭಾಂಶಕೇವಾ ಕ್ರೂರೇಕ್ಷಿತೌ ಭವತಿಗುಹ್ಯರುಜಾರ್ತಿಮಾಂಶ್ಚ ॥೧೮॥

## ಗುಹ್ಯರೋಗಃ

ಚಂದ್ರೇ-ಚಂದ್ರನು ಕರ್ಕಟವೃಶ್ಚಿಕಾಂಶಗತೇ-ಯಾವ ರಾಶಿಯಲ್ಲಿಯಾದರೂ, ಕರ್ಕಾಟಕ ನವಾಂಶವನ್ನಾದರೂ, ವೃಶ್ಚಿಕನವಾಂಶವನ್ನಾದರೂ ಹೊಂದಿ ಪಾಪೈ-ಪಾಪಗ್ರಹಗಳಿಂದ ಯುತೇ-ಕೂಡಿದರೆ (ಜಾತಃ-ಹುಟ್ಟಿದವನು) ಗುಹ್ಯರುಕ್-ಗುಹ್ಯ ಪ್ರದೇಶದಲ್ಲಿ ರೋಗವುಳ್ಳವನಾಗುವನು. ಈ ವಿಷಯದಲ್ಲಿ ಉದಾಹರಣೆ ॥ಶ್ಲೋಕ॥ ಮೇಲೆ ಉದಾಹರಣೆ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ.

## ಶ್ವೇತಕುಷ್ಠ ಯೋಗಃ

ಅಶುಭಭೋಃ-ಶನಿ-ಕುಜರು, ರಿಃಫಧನಸ್ಥಯೋಃ-ದ್ವಾದಶ ದ್ವಿತೀಯದಲ್ಲಿದ್ದು, ಚಂದ್ರೋದಯೇ-ಚಂದ್ರನು ಲಗ್ನದಲ್ಲಿದ್ದು ರವೌ-ಸೂರ್ಯನು, ಅಸ್ತೇ-ಸಪ್ತಮದಲ್ಲಿದ್ದ ಕಾಲದಲ್ಲಿ ಹುಟ್ಟಿದವನು. ಶ್ವಿತ್ರೀ-ಶ್ವೇತಕುಷ್ಠವ್ಯಾಧಿಯುಳ್ಳವನಾಗುವನು.

## ಅಂಗಹೀನ ಯೋಗಃ

ಚಂದ್ರೇ-ಚಂದ್ರನು, ಖೇ-ದಶಮದಲ್ಲಿದ್ದು ಅವನಿಜೇ-ಕುಜನು ಅಸ್ತಗೇಚ ಸಪ್ತಮದಲ್ಲಿದ್ದು, ಅರ್ಕಜಃ-ಶನೈಶ್ಚರನು, ವೇಶಿಗೋಯದಿ (ಸೂರ್ಯನಿಗೆ ಎರಡನೇ ರಾಶಿ ವೇಶಿಸ್ಥಾನ) ವೇಶಿಸ್ಥಾನದಲ್ಲಿದ್ದರೆ (ಹುಟ್ಟಿದವನು) ವಿಕಲಃ-ಅಂಗಹೀನನಾಗುವನು. ಈ ವಿಷಯದಲ್ಲ ॥ಶ್ಲೋಕ॥ ಚೇತ್ಖಾಂತ್ಯಗೌ ಕ್ಷಿತಿಜಸೂರ್ಯಸುತೌ ತನುಸ್ಥೇ ಚಂದ್ರೇಸ್ತಗೇ ದಿನಮಣೌ ಖಲುಶಿಲ್ಪಕರ್ಮಾ । ಕರ್ಮಸ್ಥಿತೇಶಶಿನಿ ಸಪ್ತಮಗೇಥ ರಾಜೇ ವೇಶಿಸ್ಥಿತೇರ್ಕ ತನಯೇ ಮನುಜೋಂಗಹೀನಃ ॥೧೯॥

ಮೂಲ॥ ಅಂತಸ್ತ್ರಿಸ್ನ್ಯ ಶುಭಯೋರ್ಮೃಗಗೇ ಪತಂಗೇ । ಶ್ವಾನಕ್ಷ್ಯಯಪ್ಲಿಹ ಕವಿ ದ್ರಧಿಗುಲ್ಮಭಾಜಃ॥ ಶೋಷೀಪರಸ್ಪರ ಗೃಹಾಂಶಗಯೋರವೀಂದ್ವೋಃ । ಕ್ಷೇತ್ರೇಥವಾಯುಗಪದೇಕಗಯೋಃ ಕೃಶಃ[illegible]ವಾ ॥೮॥

ಅವತಾರಿಕೆ॥ ಈ ಶ್ಲೋಕದಲ್ಲಿ ಶ್ವಾಸಕ್ಷಯಾದಿ ರೋಗ ಯೋಗ, ಕ್ಷಯರೋಗ, ಅಂತು ೨ ಯೋಗಗಳು ಹೇಳಲ್ಪಡುತ್ತೆ.

## ಶ್ವಾಸಕ್ಷಯಾದಿ ಯೋಗಃ

ಟೀಕು॥ ಶಶಿನಿ-ಚಂದ್ರನು, ಅಶುಭಯೋಃ-ಶನ್ಯಂಗಾರಕರ, ಅಂತಃ-ಮಧ್ಯದಲ್ಲಿದ್ದು ಪತಂಗೇ-ಸೂರ್ಯನು, ಮೃಗಗೇ-ಮಕರದಲ್ಲಿರುವಾಗ ಜನ್ಮಿಸಿದವರು. ಶ್ವಾಸ ಕ್ಷಯ ಪ್ಲಿಹಕ ವಿದ್ರಧಿಗುಲ್ಮಭಾಜಃ-ಶ್ವಾಸ ಶ್ವಾಸ (ಕೆಮ್ಮು ಉಬ್ಬಸ) ಕ್ಷಯಿ-ಕ್ಷಯರೋಗ, ಪ್ಲೀಹ-ಹೊಟ್ಟೆಯಲ್ಲ ಗೆಡ್ಡೆ ಬೆಳೆಯುವ ರೋಗ. ಗುಲ್ಮ-ಗುಲ್ಮವ್ಯಾಧಿ ಈ ಮೇಲೆ ಹೇಳಲ್ಪಟ್ಟ ವ್ಯಾಧಿಗಳಲ್ಲಿ ಯಾವದಾದರೂ ವ್ಯಾಧಿಯನ್ನು, ಭಾಜಃ-ಹೊಂದುವನು. ಈ ವಿಷಯಕ್ಕೆ ॥ ಜಯದೇವಃ ॥ಶ್ಲೋಕ॥ ಗುಲ್ಮಶ್ವಾಸಕವಿದ್ರಧಿ ಕ್ಷಯರುಜಾಸಂ ಪೀಡತೋಂತಸ್ಥಿತೇ । ರಾತ್ರೀಶೇ ಖಲಖೇಟಯೋರ್ಯಧಿಭವೇಜ್ಜಾ ಮಿತ್ರಗೋ ಭಾಸ್ಕರಃ॥ ಅನ್ಯೋನ್ಯಾಂಶಗೃಹಸ್ಥಯೋರ್ಹಿಮಮಯೂಖಾ ದಿತ್ಯಯೋಃ ಪ್ಲೀಹಭಾಕ್। ತೌಚೇದೇಕಗೃಹಸ್ಥಿತಾವಪಿತಥಾಜಾತಃ ಕೃಶಾಂಗೋಥವಾ ॥೨೦॥ ಎಂದು ಹೇಳಿರುವರು.

## ಕ್ಷಯರೋಗ ಯೋಗಃ

ರವೀಂದ್ವೋಃ-ಸೂರ್ಯಚಂದ್ರರು, ಪರಸ್ಪರಗೃಹಾಂಶಗಯೋಃ-ಒಬ್ಬರ ಕ್ಷೇತ್ರದಲ್ಲೊಬ್ಬರು ಇದ್ದರೆ, ಕರ್ಕದಲ್ಲಿ ಸೂರ್ಯನು, ಸಿಂಹದಲ್ಲಿ ಚಂದ್ರನು ಅಥವಾ ಯಾವ ರಾಶಿಯಲ್ಲಾದರೂ ಸೂರ್ಯಾಂಶೆಯಲ್ಲಿ ಚಂದ್ರನು, ಚಂದ್ರನವಾಂಶೆಯಲ್ಲಿ ಸೂರ್ಯನು, ಈ ಪ್ರಕಾರವಿರುವಾಗ ಹುಟ್ಟಿದವನು ಶೋಷೀ-ಕ್ಷಯರೋಗವುಳ್ಳ ವನಾಗುವನು. ಕೆಲವರು ಕರ್ಕರಾಶಿಯಲ್ಲಿ ಕರ್ಕನವಾಂಶೆಯಲ್ಲಿ ಸೂರ್ಯನು ಸಿಂಹ ರಾಶಿಯಲ್ಲಿ ಚಂದ್ರನು ಇರುವಾಗ ಹುಟ್ಟಿದವನು ಕ್ಷಯರೋಗಿಯಾಗುವನೆಂದು ಹೇಳುವರು. ಈ ಅರ್ಥದಲ್ಲಿ ॥ಶ್ಲೋಕ॥ ಪರಸ್ಪರ ಗೃಹೇಯಾತೌಯದಿವಾಪಿ ತದಂಶಗೌ । ಭವೇತಾಮರ್ಕ ಶೀತಾಂಶೂತಥಾಂ ಶೋಪಿ ಪ್ರಜಾಯುತೇ ॥೨೧॥ ಎಂದು ಗರ್ಗ ಸಂಹಿತಾವಚನವಿರುತ್ತೆ. ಇದು ವಿರೋಧವಾಗುತ್ತೆಯಾಗಿ ಮೊದಲಿನ ಅರ್ಥವೇ ಸರಿಯಾದದ್ದು ರವೀಂದ್ವೋಃ ಕ್ಷೇತ್ರೇ-ಸೂರ್ಯಚಂದ್ರರಾಶಿಗಳಾದ ಸಿಂಹ ಕರ್ಕಾಟಕ ರಾಶಿಗಳಲ್ಲಿ ಸೂರ್ಯಚಂದ್ರರಿಬ್ಬರು, ಏಕಗಯೋಃ-ಒಂದೇ ರಾಶಿಗತ-ರಾಗಿರುವಾಗ ಹುಟ್ಟಿದವರು ಅಂದರೆ ಸಿಂಹದಲ್ಲಿಯಾಗಲೀ ಅಥವಾ ಕರ್ಕಾಟಕದಲ್ಲಿಯಾಗಲೀ ಸೂರ್ಯಚಂದ್ರರಿಬ್ಬರೂ ಇರುವಾಗ ಹುಟ್ಟಿದವರು ಕ್ಷಯರೋಗಿಯಾಗುವರು. ಕೃಶೋವಾ*-ಕೃಶವಾದ ಶರೀರವುಳ್ಳವರಾಗುವರು ॥೮॥

* ಶೌಚೇದೇಕ ಸ್ಥಿತಾವಪಿ ಎಂಬುವ ಶ್ಲೋಕ ಸಮ್ಮತಿಯನ್ನು ನೋಡಿ.

ಮೂಲ॥ ಚಂದ್ರೇಶ್ವಿಮಧ್ಯಝುಷಕರ್ಕಿ ಮೃಗಾಜಭಾಗೇ ಕುಷ್ಠೀಸ ಮಂದರುಧಿ ರೇತದವೇಕ್ಷಿತೇವಾ । ಯಾತ್ಯೈಸ್ತ್ರಿಕೋಣ ಮಳಿಕರ್ಕವೃಷೈರ್ಮೃಗೇಚ ಕುಷ್ಠೀಚ ಪಾಪಸಹಿತೈರವಲೋಕಿತೈರ್ವಾ ॥೯॥

ಟೀಕು॥ ಕುಷ್ಟಯೋಗ ಹೇಳಲ್ಪಡುತ್ತೆ. ಅಶ್ವಿಮಧ್ಯ-ಧನುರಾಶಿಯು ೫ನೇ ನವಾಂಶವಾದ ಸಿಂಹನವಾಂಶೆಯಲ್ಲಿಯಾದರೂ, ಝುಷ ಕರ್ಕಿಮೃಗಜಭಾಗೇ-ಯಾವರಾಶಿಯಲ್ಲಿಯಾದರೂ, ಮೇಷ, ಮೀನ, ಮಕರ, ಕರ್ಕಾಟಕ, ನವಾಂಶಗಳ ಲ್ಲಾದರೂ ಇರುವ, ಚಂದ್ರೇ-ಚಂದ್ರನು, ಸಮಂಧ ರುಧಿರೇ-ಶನ್ಯಂಗಾರಕರಲ್ಲಿ ಯಾವ ಒಂದು ಗ್ರಹದಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಹುಟ್ಟಿದವನು, ಕುಷ್ಠೀ-ಕುಷ್ಠರೋಗಿಯಾಗುವನು. ಈ ಯೋಗದಲ್ಲಿ ಚಂದ್ರನು ಶುಭಗ್ರಹದಿಂದ ನೋಡಲ್ಪಟ್ಟರೆ, ದದ್ರು ಮೊದಲಾದ ಕುಷ್ಠ ವಿಕಾರವೂ, ಕಂಡೂ ಮೊದಲಾದ ರೋಗವುಳ್ಳವ-ನಾಗುವನು. ಈ ವಿಷಯಕ್ಕೆ ॥ಶ್ಲೋಕ॥ ಯವನೇಶ್ವರಃ॥ ಮೀನಾಂಶಕೇ ಮೇಷ ಮೃಗಾಂಶಕೇವಾ ಚಂದ್ರಸ್ಥಿತೋ ತ್ರ್ಯೈವಹಿಪಾಪ ದೃಷ್ಟಃ । ಕಿಲಾಸ ಕುಷ್ಠಾದಿ ವಿನಷ್ಟದೇಹಮಿಷ್ಟೇಕ್ಷಿತಃ ಕಂಡುವಿಕಾರಣಂಚ ॥೨೨॥ ಎಂದುಕ್ತವಾಗಿರುತ್ತೆ. ಅಳಿಕರ್ಕ್ಕಿವೃಷೈರ್ಮೃಗೇಚ-ವೃಶ್ಚಿಕ, ಕರ್ಕಾಟಕ, ಮಕರಗಳಲ್ಲಿ ಯಾವದಾದರೂ ಒಂದು ರಾಶಿ, ತ್ರಿಕೋಣಂ-ಲಗ್ನಕ್ಕೆ ೫ನೇ ತ್ರಿಕೋಣ ೯ನೇ ತ್ರಿಕೋಣವಾಗಿ, ಯಾತ್ಯೈ-ಆಗಿರುವ, ಆ ರಾಶಿ ಪಾಪಸಹಿತ್ಯೈ-ಒಂದಾನೊಂದು ಪಾಪಗ್ರಹದಿಂದ ಕೂಡಿದರೂ, ಅವಲೋಕಿತೈರ್ವಾ-ಈಕ್ಷಿಸಲ್ಪಟ್ಟರೂ, ಅಂಥಾಕಾಲದಲ್ಲಿ ಜನ್ಮಿಸಿದವನು ಕುಷ್ಠರೋಗಿಯಾಗುವನು. ಈ ವಿಷಯಕ್ಕೆ ॥ಶ್ಲೋಕ॥ ಜಯದೇವಃ॥ ಧನ್ವಿಸ್ಥೇಚ ತದಂಶಕೇ ಹಿಮಕರೇ ಭೌಮೇನವಾಸೌರಿಣಾ ಯುಕ್ತೇವಾ ಸಮವೀಕ್ಷಿತೇಚ ಮನುಜಃ ಕುಷ್ಠೀಭವೇನ್ನಿಶ್ಚಿತಂ। ಹರ್ಕ್ಯಕ್ಷ ಕ್ರಿಯ ಕರ್ಕನಕ್ರ ಪೃಥುರೋಮಾಂಶಸ್ಥಿತೇ ಸೌರಿಣಾ। ವಾಭೌಮೇನ ಯುಗೀಕ್ಷಿತೇಪಿಚತಥಾಕುಷ್ಠೀಸಕಷ್ಟೀಭವೇತ್॥ ಮತ್ತು ಧುಂಡಿರಾಜಃ॥ ಮೃತಾಲಿಗೋ ಕರ್ಕಾಟಕಾಸ್ತ್ರಿಕೋಣೇ ಪ್ರಸೂತಿಕಾಲೇರ್ಗಲ-ಖೇಟಯುಕ್ತೇ। ನಿರೀಕ್ಷಿತಾವಾ ಜನಯಂತಿ ಜಾತಂ ಕುಷ್ಠೇನಯುಕ್ತಂ ಪ್ರವದಂತಿಸಂತಃ ॥೨೪॥

ಟಿಪ್ಪಣಿ ॥ ಈ ತ್ರಿಕೋಣಗಳಲ್ಲಿ ಶನಿಯಾಗಲೀ, ಕುಜನಾಗಲೀ, ಇದ್ದು ಇವರಲ್ಲಿ ಯಾರಾದರೂ ಒಂದು ಗ್ರಹದಿಂದ ನೋಡಲ್ಪಟ್ಟರೆ ಕುಷ್ಠರೋಗಿಯಾಗುವನು.

## ಅಂಧಯೋಗಃ

ಮೂಲ॥ ನಿಧನಾರಿಧನವ್ಯಯಸ್ಥಿತಾ । ರವಿಚಂದ್ರಾರಯ ಮಾಯಥಾತಥಾ॥ ಬಲವದ್ಗ್ರಹಯೋಪಕಾರಣ್ಯೈ । ರ್ಮನುಜಾನಾಂ ಜನ ಯಂತ್ಯನೇತ್ರ ತಾಂ ॥೧೦॥

ಟೀಕು॥ ಅಂಧತ್ವಪ್ರಾಪ್ತಿಯೋಗಃ॥ ರವಿ ಚಂದ್ರಾರಯಮಾಃ-ರವಿ, ಚಂದ್ರಾಂಗಾರಕ ಶನೈಶ್ಚರರು, ಯಥಾತಥಾ-ಕ್ರಮನಿಯಮವಿಲ್ಲದೆ, ನಿಧನಾರಿಧನವ್ಯಯಸ್ಥಿತಾಃ-ಷಷ್ಠ, ಅಷ್ಟ, ದ್ವಿತೀಯ, ದ್ವಾದಶದಲ್ಲಿ ಯಾವ ರಾಶಿಯಲ್ಲಾದರೂ ಅಂತೂ ಈ ನಾಲ್ಕು ಸ್ಥಾನಗಳಲ್ಲಿಯೇ ಇದ್ದು (ಅವರಲ್ಲಿ) ಬಲವದ್ಗ್ರಹದೋಷ ಕಾರಣೈಃ-ಈ ನಾಲ್ಕು ಗ್ರಹಗಳಲ್ಲಿ ಯಾವ ಗ್ರಹವು ಬಲವುಳ್ಳದ್ದಾಗಿರುವದೋ ಆ ಗ್ರಹಕ್ಕೆ ವಾತಪಿತ್ತ ಶ್ಲೇಷ್ಮಾದಿ ಧಾತುಗಳನ್ನು ಹೇಳಲ್ಪಟ್ಟಿರುತ್ತೆ. ಆ ಧಾತು ಪ್ರಕೋಪದಿಂದ, ಮನುಜಾನಾಂ-ಆ ಕಾಲದಲ್ಲಿ ಹುಟ್ಟಿದವರಿಗೆ, ಅನೇತ್ರತಾಂ-ಅಂಧತ್ವವನ್ನು, ಜನಯಂತಿ-ಉಂಟುಮಾಡುವರು. ಈ ವಿಷಯಕ್ಕೆ ॥ಶ್ಲೋಕ ॥ಧುಂಡಿರಾಜಃ॥ ಮಂದಾವನೀ ಸೂನುರವೀಂದ ವಶ್ಚೇಂದ್ರಂ ಧ್ರಾರಿವಿತ್ತೇವ್ಯಯಭಾವಸಂಸ್ಥಾಃ। ಆಂಧ್ಯಂ ಭವೇತ್ಸಾರ ಸಮನ್ವಿತಸ್ಯ ಖೇಟಸ್ಯ ದೋಷಾತ್ಪುರುಷಸ್ಯ ನೂನಮ್ ॥೨೩॥ ಮತ್ತು ಈ ವಿಷಯದಲ್ಲಿ ಜಯದೇವಃ ॥ಶ್ಲೋಕ॥ *ಧನೇ ಕುಜೋರಿಗೋ ವಿಧುರ್ವ್ಯಯೇ ಶನಿರ್ಮೃತೌ ರವಿಃ । ಯದಾತದಾ ಭವೇನ್ನಣಾಮ ವಶ್ಯಮಂಧತಾ ಸದಾ ॥೨೪॥ ಟೀ॥ ದ್ವಿತೀಯದಲ್ಲಿ ಕುಜ, ಷಷ್ಠದಲ್ಲಿ ಚಂದ್ರ, ದ್ವಾದಶದಲ್ಲಿ ಶನಿ, ಅಷ್ಟಮದಲ್ಲಿ ಸೂರ್ಯನಿದ್ದರೆ ತಪ್ಪದೆ ಕಣ್ಣು ಹೋಗುತ್ತದೆ.

## ಬಧಿರ ಯೋಗಃ

ಮೂಲ॥ ನವಮಾಯ ತೃತೀಯದೀಯುತಾನಚ ಸೌಮ್ಯೈರ ಶುಭಾನಿರೀಕ್ಷಿತಾಃ॥
ನಿಯಾಮಾಚ್ಛ್ರವಣೋಪ ಜಾತದಾರದವೈಕೃತ್ಯ ಕರಾಶ್ಚ ಸಪ್ತಮೇ ॥೧೧॥

ಅವತಾರಿಕೆ ಈ ಶ್ಲೋಕದಲ್ಲಿ ಬಧಿರಯೋಗ, ದಂತವೈಕೃತಿಯೋಗ ಹೇಳಲ್ಪಡುತ್ತೆ.

## ಬಧಿರ ಯೋಗಃ

ಟೀಕು॥ ನವಮಾಯ ತೃತೀಯಧೀಯುತಾಃ-ನವಮ ಏಕದಶ, ತೃತೀಯ, ಪಂಚಮ ಸ್ಥಾನಗಳಲ್ಲಿರುವ , ಅಶುಭಾಃ-ಪಾಪಗ್ರಹಗಳು, ಸೌಮ್ಯೈಃ-ಶುಭಗ್ರಹಗಳಿಂದ, ನನಿರೀಕ್ಷಿತಾಃ-ಈಕ್ಷಿಸಲ್ಪಡದಿದ್ದರೆ, ಬಲವದ್ಗ್ರಹದೋಷ ಕಾರಣೈಃ-ಆ ೯-೧೧-೩-೫ ಸ್ಥಾನಗಳಲ್ಲಿರುವ ಕ್ರೂರಗ್ರಹಗಳಲ್ಲಿ ಯಾರು ಅಧಿಕ ಬಲವುಳ್ಳವರೋ, ಆ ಗ್ರಹಕ್ಕೆ ಹೇಳಲ್ಪಟ್ಟಿರುವ ವಾತ ಪಿತ್ತಾದಿ ಧಾತುಗಳಲ್ಲಿ ಯಾವ ಧಾತುವಿಗೆ ಅಧಿಕಾರ

* ಸ್ಥಾನ ನಿರ್ದೇಶ ಮಾಡಿರುವರು.

ಇರುವುದೋ, ಆ ಧಾತು ಪ್ರಕೋಪದಿಂದ, ನಿಯಮಾತ್-ವಿಧಿಪ್ರಕಾರವಾಗಿ, ಶ್ರವಣೋಪಘಾತದಾಃ-(ಕಿವಿಯು) ರೋಗದಿಂದ ಕಿವುಡಾಗುವುದು ||ಇದೇ ಯೋಗಕ್ಕೆ|| ಧುಂಡಿರಾಜರು ||ಶ್ಲೋಕ|| ಮಂದಾರ್ಕಚಂದ್ರಾ ಸ್ತ್ರಿಸುತಾಯಧರ್ಮೇ ಸೌಮ್ಯೈರ್ನ ಯುಕ್ತಾ ನಚವೀಕ್ಷಿತಾಶ್ಚೇತ್ । ಕರ್ಣಪ್ರಣಾಶಂ ಜನಯಂತಿನೂನಂ ಸ್ವರಸ್ಥಿತಾಸ್ತೇದಶನಾಭಿಘಾತಮ್ ||೨೫||ತಾ|| ಶನಿ, ರವಿ, ಚಂದ್ರರು, ೩-೫-೧೧-೯ ಸ್ಥಾನಗಳಲ್ಲಿ ಯಾವ ಸ್ಥಾನಗಳಲ್ಲಿಯಾದರೂ ಇದ್ದು, ಯಾವ ಶುಭಗ್ರಹಗಳಿಂದಲೂ, ನೋಡಲ್ಪಡದಿದ್ದರೆ, ಬಧಿರತ್ವ ಪ್ರಾಪ್ತಿಯಾಗುತ್ತದೆಂದು ಹೇಳುವರು. ಅಂದರೆ-ವರಾಹಮಿಹಿರಾಚಾರ್ಯರ ಮತಕ್ಕೆ ವಿರೋಧವೇನೂ ಇಲ್ಲ, ಗ್ರಹಗಳನ್ನು ಮಾತ್ರ ನಿರ್ದೇಶಮಾಡಿರುತ್ತಾರೆ ಮತ್ತು ಜಯದೇವಃ ||ಶ್ಲೋಕ|| ನವಮಧೀ ಸಹಜಾಯಗತಾಃ ಖಲಾಯದಿ ಶುಭೈಃ ಖಚರೈರಯುಗೀಕ್ಷಿತಾಃ। ನಿಯಮತೋ ಬಧಿರತ್ವ ಕರಾನೃಣಾಂ ರದವಿಕಾರ ಕರಾಃ ಸ್ಮರಗಾಸ್ತಥಾ ||೨೫|| ಎಂದುಕ್ತವಾಗಿರುತ್ತೆ. ಆದ್ದರಿಂದ ಪಾಪಗ್ರಹಗಳು ೯-೫-೩-೧೧ ರಲ್ಲಿದ್ದು ಶುಭಗ್ರಹಗಳ ದೃಷ್ಟಿಯಲ್ಲಿದ್ದರೆ ಬಧಿರತ್ವ ಉಂಟಾಗುತ್ತೆ.

## ವಿಕಾರದಂತ ಯೋಗಃ

ಇಲ್ಲಿ ಶುಭಗ್ರಹ ಪಾಪಗ್ರಹ ವಿವೇಚನೆ ಮಾಡಿ ಅಶುಭಗ್ರಹಗಳೆಂದು ಹೇಳಿದ್ದರಿಂದ ಪೂರ್ವೋಕ್ತ ಶ್ಲೋಕ ಪ್ರಕಾರವಾಗಿ ರವಿ, ಚಂದ್ರ, ಕುಜ, ಶನಿಗಳು ಸಪ್ತಮೇಲಗ್ನಕ್ಕೆ ಸಪ್ತಮದಲ್ಲಿದ್ದು, ಶುಭಗ್ರಹದಿಂದ ನೋಡಲ್ಪಡದಿದ್ದರೆ, ರದವೈಕೃತ್ಯ ಕರಾಃ-ದಂತರೋಗವನ್ನು ಹೇಳತಕ್ಕದ್ದು. ಇದಕ್ಕುದಾಹರಣೆ ಮೇಲೆಯೇ ಉದಾಹರಣ ಶ್ಲೋಕದ ಉತ್ತರಾರ್ಧದಲ್ಲಿ ಏಕವಾಕ್ಯತೆಯಿಂದ ಹೇಳಲ್ಪಟ್ಟಿರುತ್ತೆ. ಆದರೆ ೩-೫-೯-೧೧ರಲ್ಲಿ ಪಾಪಗ್ರಹಗಳಿರಬೇಕೆಂದು ವಿಧಿಯಿಲ್ಲದೆ ಈ ಸ್ಥಾನಗಳಲ್ಲಿ ಎಲ್ಲಿ ಯಾದರೂ ೪ ಪಾಪಗ್ರಹಗಳಿರಬೇಕೆಂದು ಅರ್ಥವಾಗಿರುತ್ತದೆ. ಈ ಪ್ರಕಾರವಿರುವಾಗ ಮಕರಲಗ್ನ, ಜಾತಕವಾಗಿ, ಕುಂಭದಲ್ಲಿ ಗುರು, ಚಂದ್ರ, ಮೀನದಲ್ಲಿ ಶನಿ, ಮೇಷದಲ್ಲಿ ಕುಜ, ಸಿಂಹದಲ್ಲಿ ರವಿ, ಬುಧರು, ಕನ್ಯೆಯಲ್ಲಿ ಬುಧ ಶುಕ್ರರು, ಇರುವದರಿಂದ ತೃತೀಯದಲ್ಲಿದ್ದ ಶನಿದೆಶೆಯಲ್ಲಿ ಕರ್ಣರೋಗಪ್ರಾಪ್ತಿಯಾಗುತ್ತೆ.

**ಮೂಲ||** ಉದಯತ್ಯುಡುಪೇ ಸುರಾಸ್ಯಗೇ ಸಪಿಶಾಚಃ ಶುಭಯೋಃ ಸ್ತ್ರಿಕೋಣಯೋಃ । ಯದಿಸೋವಿಪ್ಲವ ಮಂಡಲೇ ರವಾವುದ ಯಸ್ಥೇ ನಯನಾ ಪವರ್ಜಿತಃ ||೧೨||

ಅವತಾರಿಕೆ|| ಪಿಶಾಚಗ್ರಸ್ತಯೋಗ, ಅಂಧಯೋಗ ಹೇಳಲ್ಪಡುತ್ತೆ.

## ಪಿಶಾಚಗ್ರಸ್ತಯೋಗಃ

ಟೀಕು।। ಅಸುರಾಸ್ಯಗೇ-ರಾಹುಗ್ರಸ್ತವಾದ, ಉಡುಪೇ-ಚಂದ್ರನು, ಉದಯತಿ-ಜನ್ಮಲಗ್ನದಲ್ಲಿದ್ದು, ಅಶುಭಯೋಃ-ಪಾಪಗ್ರಹಗಳು (ಶನಿ, ಕುಜರು) ತ್ರಿಕೋಣಯೋಃ" ಪಂಚಮ ನವಮದಲ್ಲಿದ್ದರೆ ಹುಟ್ಟಿದವನು, ಸಪಿಶಾಚಃ- ಪಿಶಾಚಗ್ರಸ್ತ. ಈ ವಿಷಯಕ್ಕೆ ।।ಶ್ಲೋಕ।। ಗ್ರಸ್ತೇವಿದೌ ಲಗ್ನಗತಾಶ್ಚಪಾಪಾ ಸ್ತ್ರಿಕೋಣಗಾ ಜನ್ಮಪಿಶಾಚ ಗಸ್ಯ ।। ಎಂದು ಧುಂಡಿರಾಜರು ಹೇಳಿರುವರು.

## ಅಂಧ ಯೋಗಃ

ಸೋಪಪ್ಲವಮಂಡಲೇ-ರಾಹುಗ್ರಹಣವಾದ, ರವೌ-ಸೂರ್ಯನು, ಉದಯಸ್ಥೇ-ಲಗ್ನಗತವಾಗಿದ್ದರೆ, ಅಶುಭಯೋಗಃ-ಶನಿ ಕುಜರು, ತ್ರಿಕೋಣಯೋಃ-ಪಂಚಮ ನವಮದಲ್ಲಿದ್ದ ಕಾಲದಲ್ಲಿ ಹುಟ್ಟಿದವನು, ನಯನವರ್ಜಿತಃ-ಕಣ್ಣಿಲ್ಲದವನಾಗುವನು, ಈ ವಿಷಯಕ್ಕೆ ।।ಶ್ಲೋಕ।।ಧುಂಡಿರಾಜಃ।। ಗ್ರಸ್ತೇರವೌ* ಲಗ್ನಗತೇ ತದ್ವೈವ ನೇತ್ರೋಪಘಾತಃ ಖಿಲುಕಲ್ಪನೀಯಃ ।।೨೬।। ಗ್ರಸ್ತನಾದ ಚಂದ್ರನು ಲಗ್ನದಲ್ಲಿದ್ದು, ತ್ರಿಕೋಣದಲ್ಲಿ ಪಾಪಗ್ರಹಗಳಿದ್ದರೆ ಅಂಧನಾಗುವನೆಂದು ಹೇಳಿರುತ್ತಾರೆ. ಈ ವಿಷಯಕ್ಕೆ ।।ಶ್ಲೋಕ।। ಸೋಪರಾಗಿಣಿ ವಿಧೌತನುಸ್ಥಿತೇ ಲಗ್ನತೋ ನವಮ ಪಂಚಮಸ್ಥಯೋಃ ।। ಸೂರ್ಯಜಾ ವನಿಜಯೋ ಪಿಶಾಚತಾಂ ಚಂದ್ರವದ್ದಿನಮಣೌ ವಿನೇತ್ರತಾ ।।೨೭।।

ಮೂಲ।। ಸ್ಪಂಷ್ಟಃ ಪವನೇನ ಮಂದಗಯುತೇ ದ್ಯೂನೇವಿಲಗ್ನೇಗುರೌ । ಸೋನ್ಮಾದೋವನಿಜೇಸ್ಥಿತೇಸ್ತ ಭವನೇ ಜೀವೇ ವಿಲಗ್ನಾಶ್ರಿತೇ।। ತದ್ವತ್ಸೂರ್ಯ ಸುತೋದಯೇ ವನಿಸುತೇ ಧರ್ಮಾತ್ಮಜ ದ್ಯೂನಗೇ। ಜಾತೋವಾಸ ಸಹಸ್ರ ರಶ್ಮಿತನಯೇ ಕ್ಷೀಣೇವ್ಯಯೇ ಶೀತಗೌ ।।೧೩।।

ಅವತಾರಿಕೆ ।। ಈ ಶ್ಲೋಕದಲ್ಲಿ ೧, ವಾತರೋಗಯೋಗ, ೨. ಚಿತ್ತಭ್ರಮಣ ಯೋಗ ೩, ಮತಿಭ್ರಮಣಯೋಗ ಹೇಳಲ್ಪಡುತ್ತೆ.

## ವಾತರೋಗ ಯೋಗಃ

ಟೀಕು।। ದ್ಯೂನೇ-ಸಪ್ತಮಸ್ಥಾನವು, ಮಂದಗಯುತೇ-ಶನಿಯುಕ್ತವಾಗಿ, ವಿಲಗ್ನೇ-ಜನ್ಮಲಗ್ನದಲ್ಲಿ, ಗುರೌ ಬೃಹಸ್ಪತಿಯಿದ್ದರೆ ಆಗ ಹುಟ್ಟಿದವನು, ವನೇ-ವಾಯು ರೋಗದಿಂದ, ಸಂಸ್ಪೃಷ್ಟಃ-ವ್ಯಾಪಿಸಿದವನಾಗುವನು. ಈ ವಿಷಯಕ್ಕೆ ।। ಸಮ್ಮತಿ ।।ಶ್ಲೋಕ।। ಲಗ್ನಸ್ಥಿತೇ ದೇವ ಪುರೋಹಿತೇಸ್ತೇ ಶನಿಶ್ಚವಾತಾಧಿಕ ತಾನಿತಾಂತಮ್ ।।

* ಗ್ರಸ್ತೇ ವಿಧೌ ಎಂದು ಪಾಠಾಂತರವಿರುತ್ತೆ.

## ಉನ್ಮಾದಯೋಗಃ

ಅವನಿಜೇ-ಕುಜನು ಅಸ್ತಭವನೇ-ಸಪ್ತಮದಲ್ಲಿದ್ದು ಜೀವೇ-ಬೃಹಸ್ಪತಿಯು ವಿಲಗ್ನಾಶ್ರಿತೇ-ಜನ್ಮಲಗ್ನದಲ್ಲಿದ್ದರೆ ಜನ್ಮಿಸಿದವನು. ಸೋನ್ಮಾದಃ-ಚಿತ್ತವಿಭ್ರಮಣೆಯಿಂದ ಯಿಂದ ಉನ್ಮತ್ತನಾಗುವನು. ಈ ವಿಷಯದಲ್ಲಿ ॥ ಸಮ್ಮತಿ ಶ್ಲೋಕ॥ ಜೀವೇ ವಿಲಗ್ನೇವ ನಿನಂದನೇಸ್ತೇ ಮದೋದ್ಧತಃ ಸ್ಯಾತ್‌ಪುರುಷೋ ವಿಶೇಷಾತ್ ॥೨೮॥

## ಚಿತ್ತ ಚಾಂಚಲ್ಯಯೋಗಃ

ಸೂರ್ಯಸುತೋದಯೇಃಶನೈಶ್ಚರನು, ಲಗ್ನಗತನಾಗಿದ್ದು, ಅವನಿಸುತೇ-ಕುಜನು, ಧರ್ಮಾತ್ಮಜದ್ಯೂನಗೇ-ನವಮ ಪಂಚಮ ಸಪ್ತಮಗಳಲ್ಲಿ ಯಾವ ಸ್ಥಾನದಲ್ಲಿಯಾದರೂ ಇದ್ದರೆ, ಆ ಕಾಲದಲ್ಲಿ ಹುಟ್ಟಿದವನು, ತದ್ವತ್-ಆ ಪ್ರಕಾರವೇ ಚಿತ್ತ ಚಾಂಚಲ್ಯವುಳಆಳವನಾಗುವನು. ಸಮ್ಮತಿ ॥ಶ್ಲೋಕ॥ ಸ್ಮರೇತ್ರಿಕೋಣೇ ಧರಣೀ ತನೂಜೇ ಶನೌತನೌವಾ ಪವನ ಪ್ರಕೋಪಃ ॥ ಎಂದುಕ್ತವಾಗಿರುತ್ತೆ.

## ಮತಿಭ್ರಮಣಯೋಗಃ

ಕ್ಷೀಣೇಶೀತಗೌ-ಕ್ಷೀಣಚಂದ್ರನು, ಸಹಸ್ರ ರಾಶ್ಮಿತನಯೇ-ಶನೈಶ್ಚರ್ಯಯುಕ್ತನಾಗಿ, ವ್ಯಯೇ-ದ್ವಾದಶದಲ್ಲಿರುವಾಗ, ಜಾತೋವಾ-ಹುಟ್ಟಿದವನಾದಾಗ್ಯೂ, ಮತಿಭ್ರಮಣವುಳ್ಳವನಾಗುವನು ॥ ಈ ವಿಷಯಕ್ಕೆ ಸಮ್ಮತಿ ಧುಂಡಿರಾಜಃ ॥ಶ್ಲೋಕ॥ ಕ್ಷೀಣೇಂದು ಮಂದೌ ವ್ಯಯಭಾವಯಾತೌ । ತದಾಪಿವಾತಾಧಿಕ ತಾನರಾಣಾಂ ॥೨೯॥ ಈ ವಿಷಯದಲ್ಲಿ ॥ಶ್ಲೋಕ॥ ಜಯದೇವಃ ॥ಶಾವಿ॥ವೃ॥ ವಾತವ್ಯಾಪ್ತ ತನುರ್ಭವೇ ಮದನಗೇ ಮಂದೇನಯುಕ್ತೇ ಗುರೌ । ಸೋನ್ಮಾದಸ್ತನುಗೇ ಗುರ್ರೌ ಸ್ಮರಗೃಹೇಯಾತೇ ಮಹೀನಂದನೇ । ತದ್ವತ್ಸ್ಯಾತ್ತನುಗೇರ್ಕಜೇ ವನಿಸುತೇ ಧೀಧರ ಜಾಮಿತ್ರಗೇ ಕ್ಷೀಣೇಂದೌ ಸಹಭಾನುಗಾಂತ್ಯಭವನೇ ಹ್ಯುನ್ಮಾದಿನಂವಾವದೇತ್ ॥೩೦॥ ಈ ಯೋಗದಲ್ಲಿ ವರಾಹಮಿಹಿರಿಚಾರ್ಯರ ಮತಕ್ಕೆ ಸ್ವಲ್ಪ ವಿರೋಧವಾಗಿರುತ್ತೆ. ಶನಿಯುಕ್ತನಾದ ಬೃಹಸ್ಪತಿ ಸಪ್ತಮದಲ್ಲಿದ್ದರೆ, ವಾತರೋಗಿಯಾಗುವನು. ಲಗ್ನದಲ್ಲಿ ಗುರುವಿದ್ದು, ಸಪ್ತಮದಲ್ಲಿ ಕುಜನಿದ್ದರೆ, ಉನ್ಮಾದವುಳ್ಳವನು. ಲಗ್ನದಲ್ಲಿ ಶನಿ, ಪಂಚಮ ಸಪ್ತಮ ನವಮದಲ್ಲಿ ಯಾವ ಸ್ಥಾನಗಳಾದರೂ, ಕುಜನಿದ್ದರೆ ಉನ್ಮಾದಿ ಯಾಗುವನು. ದ್ವಾದಶದಲ್ಲಿ ರವಿ ಚಂದ್ರರಿದ್ದರೆ ಉನ್ಮತ್ತನಾಗುವನು, ಇಲ್ಲಿ ವಿಶೇಷ ತಾತ್ಪರ್ಯವೇನೆಂದರೆ, ಈ ಶ್ಲೋಕದ ೪ನೇ ಪಾದದಲ್ಲಿ *ಕ್ಷೀಣೇಂದೌ ಸಹ ಭಾನುಗಾಂತ್ಯ ಎಂದು ಪ್ರಯೋಗ ಮಾಡಿದ್ದು ಯುಕ್ತವಲ್ಲ. ಸೂರ್ಯನ ಸಂಗಡ ಚಂದ್ರನು ಯಾವಾಗ ಇರುತ್ತಾನೋ ಆಗ ಸ್ವತಸ್ಸಿದ್ಧವಾಗಿ ಕ್ಷೀಣ ಚಂದ್ರಯುಕ್ತನಾದ ಸೂರ್ಯನೆಂದು

* ಕ್ಷೀಣೇಂದೌ ಸಹಭಾನುಜೇಂತ್ಯ ಭವನೇ ಎಂದು ಪಾಠಾಂತರ.

ಹೇಳಬೇಕಾದ್ದಿಲ್ಲ. ಸೂರ್ಯನ ಸಂಗಡ ಚಂದ್ರನು ಪೂರ್ಣನಾಗಿರುವದಕ್ಕಿಲ್ಲ. ಏಕೆಂದರೆ ಸೂರ್ಯನಿಂದಲೇ ಚಂದ್ರನಿಗೆ ಕಲಾವೃದ್ಧಿ, ಕಲಾಕ್ಷಯ ಉಂಟಾಗುವದ್ದರಿಂದ ಚಂದ್ರನಿಗೆ ಸ್ವಾತಂತ್ರ್ಯವಿಲ್ಲ. ಈ ವಿಷಯಕ್ಕೆ ।।ಶ್ಲೋಕ।। ಸಿದ್ಧಾಂತರತ್ನೇ ।। ತರಣಿಕಿರಣ ಸಂಗಾದೇಷಪಿಯೂಷ ಸಿಂಧು ರ್ದಿನಕರದಿಶಿ ಚಂದ್ರಶ್ಚಂದ್ರಿಕಾಭಿಶ್ಚತಾಸ್ತೇ। ತದಿತರದಿಶಿ ಬಾಲಾ ಕುಂತಲಶ್ಯಾಮಲಶ್ರೀರ್ಘಟ ಇವನಿಜಮೂರ್ತಿಚ್ಛಾಯಯೈವಾತಪಸ್ಥಃ ।।೩೧।। ಎಂದು ಪ್ರಮಾಣವಿರುವುದರಿಂದಲೂ, ವರಾಹಮಿಹಿರಾಚಾರ್ಯರು "ಸಸಹಸ್ರರಶ್ಮಿತನಯೇ ಕ್ಷೀಣೇವ್ಯಯೇಶೀತಗೌ" ಎಂದು ಪ್ರಯೋಗ ಮಾಡಿದ್ದರಿಂದ ದ್ವಾದಶದಲ್ಲಿ ರವಿ, ಚಂದ್ರರೆಂದು ಹೇಳುವುದಕ್ಕೆ ಬದಲಾಗಿ ಶನಿ ಕ್ಷೀಣ ಚಂದ್ರಯುಕ್ತನಾದರೆ, ಉನ್ಮಾದರೋಗವುಳ್ಳವನೆಂದು ನಿಶ್ಚಿತ ಮಾಡತಕ್ಕದ್ದು ಯುಕ್ತವಾಗಿರುತ್ತೆ. ಆದ್ದರಿಂದ ಪಾಠಾಂತರ ಭೇದವೇ ಸರಿಯಾದದ್ದು.

## ದಾಸಪುತ್ರಾದಿ ಯೋಗಃ

ಮೂಲ।। ರಾಶ್ಯಂಶಪೋಷ್ಣಕರ ಶೀತಕರಾಮರೇಜ್ಯೈ ರ್ನೀಚಾಂಧಿಪಾಂಶಕ ಗತ್ಯೈ-ರರಿಭಾಗಗೈರ್ವಾ । ಏಭ್ಯೋಲ್ಪಮಧ್ಯ ಬಹುಭಿಃಕ್ರಮಶಃ ಪ್ರಸೂತಾಜ್ಞೇಯಾ ಸ್ಯುರಭ್ಯುಪಗಮ ಕ್ರಯಗರ್ಭದಾಸಾಃ ।।೧೪।।

ಅವತಾರಿಕೆ।। ದಾಸಪುತ್ರ, ದಾಸೀಪುತ್ರ, ಗರ್ಭದಾಸಪುತ್ರ ಮೊದಲಾದ ಯೋಗತ್ರಯ ಹೇಳಲ್ಪಡುತ್ತೆ.

ರಾಶ್ಯಂಶಪೋಷ್ಣ ಕರಶೀತಕರಾಮರೇಜ್ಯೈಃ, ರಾಶ್ಯಂಶವ-ಯಾವನವಾಂಶೆಯಲ್ಲಿ ಚಂದ್ರನಿರುವೆನೋ, ಆ ನವಾಂಶವು ರಾಶ್ಯಂಶವೆನ್ನಲ್ಪಡುವದು. ಅಂಥಾ ರಾಶ್ಯಧಿ-ಪತಿಯೂ, ಉಷ್ಣಕರ-ಸೂರ್ಯನೂ, ಶೀತಕರ-ಚಂದ್ರನೂ, ಅಮರೇಜ್ಯ-ಗುರುವೂ, ಈ ನಾಲ್ಕು ಗ್ರಹಗಳು ನೀಚಾಧಿಪಾಂಶಕಗತ್ಯೈ-ಅವರವರ ನೀಚ ರಾಶ್ಯಪತಿಗಳ ನವಾಂಶ ದಲ್ಲಿಯಾದರೂ, ಅರಿಭಾಗಗೈರ್ವಾ-ಶತ್ರುನವಾಂಶ ದಲ್ಲಾದರೂ ಇರುವಾಗ, ಪ್ರಸೂತಾಃ-ಜನ್ಮಿಸಿದವರು. ದಾಸಾಃ-ದಾಸರಾಗುವರು, ಏಭ್ಯಃ-ಈ ಚಂದ್ರಾಧಿಷ್ಠಿತ ರಾಶ್ಯಧಿಪತಿ, ಸೂರ್ಯ, ಚಂದ್ರ, ಗುರುಗಳು, ಅಲ್ಪಮಧ್ಯಬಹುಭಿಃ, ಅಲ್ಪ-ಒಂದು ಗ್ರಹದಿಂದ, ಮಧ್ಯ-ಎರಡು ಗ್ರಹಗಳಿಂದ, ಬಹುಭಿಃ-ಮೂರು ನಾಲ್ಕು ಗ್ರಹಗಳಿಂದ, ಕ್ರಮಶಃ-ಕ್ರಮವಾಗಿ, ಅಭ್ಯುಪಗಮ ಕ್ರಯಗರ್ಭವಾಸಾಃ, ಅಭ್ಯುಪಗಮ-ತಾನು ತನ್ನ ಜೀವನಾರ್ಥವಾಗಿ ದಾಸತ್ವವನ್ನು ಅಂಗೀಕರಿಸಿದವನು, ಕ್ರಯ-ತನ್ನನೇ ತಾನು ಮಾರಿಕೊಂಡು ದಾಸತ್ವವನ್ನು ಮಾಡುವವನು, ಗರ್ಭದಾಸ-ದಾಸಪುತ್ರನು ಆಗುವನು, ಅಂದರೆ-ಈ ಮೇಲೆ ಹೇಳಲ್ಪಟ್ಟ ರಾಶ್ಯಾಧಿಪತಿ ರವಿ,ಚಂದ್ರ, ಗುರು ಇವರುಗಳಲ್ಲಿ ಒಂದು ಗ್ರಹ ನೀಚನವಾಂಶೆ-

ಯಲ್ಲಿಯಾದರು ಅಥವಾ ಶತ್ರು ನವಾಂಶೆಯಲ್ಲಿಯಾದರೂ ಇದ್ದಾಗ ಹುಟ್ಟಿದವನು, ತಾನು ತನ್ನ ಜೀವನಾರ್ಥವಾಗಿ ದಾಸತ್ವವನ್ನು ಹೊಂದುವನು. ಎರಡು ಗ್ರಹಗಳು ನೀಚ ಅಥವಾ ಶತ್ರುನವಾಂಶೆಗಳಲ್ಲಿದ್ದರೆ ತಾನು ದೇಹವನ್ನು ವಿಕ್ರಯಮಾಡಿಕೊಂಡು ದಾಸತ್ವವನ್ನಂಗೀಕರಿಸುವನು. ೩-೪ ಗ್ರಹಗಳು ಶತ್ರುನೀಚ ನವಾಂಶೆಯಲ್ಲಿದ್ದರೆ ಗರ್ಭದಾಸ, ದಾಸೀಪುತ್ರನಾಗುವನೆಂದು ತಿಳಿಯತಕ್ಕದ್ದು.

ಮೂಲ॥ ವಿಕೃತದಶನಃ ಪಾಪೈರ್ದೃಷ್ಟೇ ವೃಷಾಜಹಯೋದಯೇ । ಖಲತಿರ ಶುಭಕ್ಷೇತ್ರೇ ಲಗ್ನೇಹಯೇ ವೃಷಭೇಪಿವಾ ॥ ನವಮಸುತಗೇ ಪಾಪೈರ್ದೃಷ್ಟೇರವಾದದೃಢೇ । ಕ್ಷಣೋದಿನಕರಸುತೇ ನೈಕವ್ಯಾಧಿಃ ಕುಜೇ ವಿಕಲಃ ಪುಮಾ ॥೧೫॥

ಅವತಾರಿಕೆ ॥ ಈ ಶ್ಲೋಕದಲ್ಲಿ ವಿಕೃತದಂತಯೋಗ, ಖಲ್ವಾಟಯೋಗ, ಚಲೇ ಕ್ಷಣಯೋಗ, ವ್ಯಾಧಿಗ್ರಸ್ತಯೋಗ, ವಿಕಲಾಂಗಯೋಗ, ಅಂತು ೫ ಯೋಗಗಳು ಹೇಳಲ್ಪಡುತ್ತೆ.

## ವಿಕೃತದಂತ ಯೋಗಃ

ಟೀಕು॥ ವೃಷಾಜಹಯೋದಯೇ-ವೃಷಭ, ಮೇಷ, ಧನುಸ್ಸು ಈ ೩ ರಾಶಿಗಳಲ್ಲಿ ಯಾವದಾದರೂ ಲಗ್ನವಾಗಿ ಆ ಲಗ್ನವು ಪಾಪ ಗ್ರಹಗಳಿಂದ ದೃಷ್ಟೇ-ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು. ವಿಕೃತದಶನಃ-ವಿಕಾರವಾದ ಸೊಟ್ಟೆಯಾದ ಹಲ್ಲುಬೀರನೆಂಬ ದಂತವುಳ್ಳವನಾಗುವನು.

## ಖಲ್ವಾಟ ಯೋಗಃ

ಅಶುಭಕ್ಷೇತ್ರೇ-ಪಾಪಗ್ರಹ ರಾಶಿಗಳಾದ ಮೇಷ, ಸಿಂಹ, ವೃಶ್ಚಿಕ, ಮಕರ, ಕುಂಭ ಈ ೫ ರಾಶಿಗಳಲ್ಲಿ ಯಾವದಾದರೂ, ಲಗ್ನವಾದರೂ, ಹಯೇ-ಧನುರಾಶಿ ಯಾಗಲಿ, ವೃಷಭೇಪಿವಾ-ವೃಷಭವಾಗಲೀ, ಲಗ್ನೇ-ಜನ್ಮಲಗ್ನವಾಗಲೀ, ಆ ಲಗ್ನಪಾಪಗ್ರಹಗಳಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಖಲತಿಃ-ತಲೆಯ ಮೇಲೆ ಖಲ್ವಾಟ ವೆಂಬುವಂತೆ ಕೂದಲು ಉದರಿಹೋಗಿ ಬೋಳು ತಲೆಯ ರೋಗವುಳ್ಳವನಾಗುವನು. ಇದಕ್ಕೆ ಖಲ್ವಾಟವೆಂದು ಹೇಳುವರು. ಈ ಲಕ್ಷಣದಿಂದ ತಲೆಯ ಹಿಂಭಾಗದಲ್ಲಿ ಅರ್ಧಚಂದ್ರಾಕೃತಿಯಾಗಿ ಕೂದಲು ಮಾತ್ರ ನಿಂತುಕೊಂಡು ಉಳಿದ ಭಾಗವೆಲ್ಲ ಉದರಿಹೋಗುವುದು. ಅದು ಕೇವಲ ದೊಡ್ಡ ಮನುಷ್ಯರಿಗೆ ಬರುತ್ತೆಂದು ಹೇಳುವರು. ಇದು ಅನಿಷ್ಟಯೋಗ.

## ಚಲನೇತ್ರ ಯೋಗಃ

ನವಮಸುತಗೇ-ನವಮ, ಪಂಚಮದಲ್ಲಿ, ರವೌ-ಸೂರ್ಯನಿದ್ದು, ಪಾಪೈರ್ದೃಷ್ಟೇ-ಪಾಪಗ್ರಹಗಳಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ಅದೃಢೇ ಕ್ಷಣಃ-ನೇತ್ರದಾರ್ಢ್ಯ ವಿಲ್ಲದವನಾಗುವನು ಅಂದರೆ ಚಲಾಯಮಾನವಾದ ಕಣ್ಣುಳ್ಳವನು. ಅಂದರೆ ಸದಾಕಾಲವು ಕಣ್ಣು ತಿರುಗುತ್ತಲೇ ಇರುವುದು.

## ದೀರ್ಘರೋಗಿ ಯೋಗಃ

ದಿನಕರಸುತೇ-ಶನೈಶ್ಚರನು ಲಗ್ನಕ್ಕೆ ನವಮದಲ್ಲಿಯಾಗಲಿ ಪಂಚಮದಲ್ಲಾಗಲಿ ಇದ್ದು ಪಾಪಗ್ರಹಗಳಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದವನು, ನೈಕವ್ಯಾಧಿಃ-ಅನೇಕ ರೋಗವುಳ್ಳವನಾಗುವನು. ಈ ವಿಷಯದಲ್ಲಿ ಸಮ್ಮತಿ ಶ್ಲೋಕ॥ ಜಿ.ರೇ.ದೀಧರ್ಮಗೇ ದಿನಮಣೌ ಖಲಖೇಟದೃಷ್ಟೇಜಾತೋಭವೇದ ದೃಢಲೋಚನವಾನ ಸತ್ಯಃ। ಮಾರ್ತಾಂಡವತ್ಕ್ಷಿತಿಸುತೇವಯವೇನ ಹೀನಶ್ಚೆತಾದೃಶೇರ್ಕತನಯೇ ಮನುಜೋತಿ ರೋಗೀ॥ ಎಂದು ಪ್ರಮಾಣವಿರುತ್ತೆ.

## ವಿಕಲಾಂಗ ಯೋಗಃ

ಕುಜೇ-ಅಂಗಾರಕನು ನವಮದಲ್ಲಾಗಲಿ, ಪಂಚಮದಲ್ಲಾಗಲಿ ಇದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದ ಪುರ್ಮಾ-ಮನುಷ್ಯನು ವಿಕಲಃ-ಅಂಹೀನನಾಗುವನು.

ಮೂಲ॥ ವ್ಯಯಸುತ ಧನಧರ್ಮಗೈರ ಸೌಮ್ಯೈರ್ಭವನ ಸಮಾನ ನಿಬಂಧನಂ ವಿಕಲ್ಪ್ಯಂ । ಭುಜಗ ನಿಗಳ ಪಾಶಾಭೃದ್ದೃಕಾಣ್ಯೈ ರ್ಬಲಿವದ ಸೌಮ್ಯ ನಿರೀಕ್ಷಿತೈಶ್ಚತದ್ವತ್ ॥೧೬॥

ಅವತಾರಿಕೆ॥ ಈ ಶ್ಲೋಕದಲ್ಲಿ ಬಂಧನ, ಕಾರಾಗೃಹ ಪ್ರಾಪ್ತಿಯೋಗ ಹೇಳಲ್ಪಡುತ್ತೆ.

ಟೀಕು॥ ವ್ಯಯಸುತ ಧನ ಧರ್ಮಗೈ, ವ್ಯಯ-ದ್ವಾದಶ, ಸುತ-ಪಂಚಮ ಧನ-ದ್ವಿತೀಯ, ಧರ್ಮಗೈ-ನವಮಗಳಲ್ಲಿ, ಅಸೌಮ್ಯೈ-ಕ್ರೂರಗ್ರಹಗಳಿದ್ದರೆ, ಭವನ ಸಮಾನ ನಿಬಂಧನಂ-ಲಗ್ನರಾಶಿಗೆ ಸಮಾನವಾದ ನಿರ್ಬಂಧವನ್ನು, ವಿಕಲ್ಪ್ಯಂ-ವಿಶೇಷವಾಗಿ ಕಲ್ಪಿಸತಕ್ಕದ್ದು. ಅದು ಹೇಗೆಂದರೆ-ದ್ವಾದಶ, ಪಂಚಮ, ದ್ವಿತೀಯ, ನವಮ, ಈ ಸ್ಥಾನಗಳಲ್ಲಿ ಪಾಪಗ್ರಹವಿದ್ದು ಮೇಷ, ಧನುಸ್ಸು ಈ ಮೂರು ರಾಶಿಗಳಲ್ಲಿ ಯಾವದಾದರೂ ಲಗ್ನವಾಗಿದ್ದರೆ ಜಾತಕನು ಹಗ್ಗ ಮೊದಲಾದವುಗಳಿಂದ

ಕಟ್ಟಲ್ಪಡುವನು, ಮಿಥುನ, ಕನ್ಯಾ, ತುಲಾ, ಕುಂಭ, ಈ ರಾಶಿಗಳು ಲಗ್ನವಾಗಿ ಈ ಮೇಲೆ ಹೇಳಲ್ಪಟ್ಟ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಸಂಕೋಲೆ ಹಾಕಿಸಿಕೊಳ್ಳುವನು, ಕರ್ಕಾಟಕ, ಮಕರ, ಮೀನ ಈ ರಾಶಿಗಳಲ್ಲಿ ಯಾವದಾದರೂ, ಒಂದು ಲಗ್ನವಾಗಿದ್ದು ಈ ಮೇಲೆ ಹೇಳಿದ ಸ್ಥಾನಗಳಲ್ಲಿ ಗ್ರಹಗಳಿದ್ದರೆ, ಶರೀರಬಂಧನವಿಲ್ಲದೆ ದುರ್ಗಮ ಸ್ಥಾನದಲ್ಲಿ ಬಂಧನದಲ್ಲಿಡಲ್ಪಡುವನು. ವೃಶ್ಚಿಕ ಲಗ್ನವಾಗಿ ೧೨-೫-೯ ನೇ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ, ಭೂಮಿಯೊಳಗೆ ಕುಹರದಲ್ಲಿ ಬಂಧನದಲ್ಲಿಡಲ್ಪಡುವನು. ಈ ಪ್ರಕಾರ ಆಯಾಯ ರಾಶಿಯು ಸಮಸ್ತವಾದ ಸ್ಥಳದಲ್ಲಿ ಬಂಧನದಲ್ಲಿಡಲ್ಪಡುವನು. ಮಕರ-ಕರ್ಕಾಟಕ ಮೀನ ರಾಶಿಗಳು ಲಗ್ನವಾಗಿ ೧೨-೫-೨-೯ನೇ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಸಮುದ್ರ ಮಧ್ಯದಲ್ಲಿ ಬಂಧನದಲ್ಲಿಡಲ್ಪಡುವನು. ಈ ಪ್ರಕಾರ ಊಹಿಸತಕ್ಕದ್ದು. ಬಲವದ ಸೌಮ್ಯ ನಿರೀಕ್ಷಿತೈಃ-ಬಲಿಷ್ಠರಾದ ಕ್ರೂರಗ್ರಹಗಳಿಂದ ನೋಡಲ್ಪಟ್ಟ ಭುಜಗನಿಗಳ ಪಾಶಾ ಬೃದೃ ಕಾಣೈಃ-ಭುಜಗಪಾಸ ದ್ರೇಕ್ಕಾಣವೆಂದರೆ ಸರ್ಪದ್ರೇಕ್ಕಾಣ, ನಿಗಳಪಾಶಬೃದ್ರೇಕ್ಕಾಣವೆಂದರೆ-ನಿಗಳದ್ರೇಕ್ಕಾಣ, ಈ ಎರಡು ವಿಧವಾದ ದ್ರೇಕ್ಕಾಣಗಳಿಂದ ತದ್ವತ್-ಈ ಪೂರ್ವೋಕ್ತ ಪ್ರಕಾರ ಭವನ ಸಮಾನ ಬಂಧನವನ್ನು ಹೇಳತಕ್ಕದ್ದು. ಅದು ಹೇಗೆಂದರೆ-ಯಾವ ದ್ರೇಕ್ಕಾಣದಲ್ಲಿ ಶಿಶುವು ಜನ್ಮಿಸಿರುವುದೋ ಆ ದ್ರೇಕ್ಕಾಣವು ಭುಜಂಗದ್ರೇಕ್ಕಾಣವಾಗಲೀ, ಅಥವಾ ನಿಗಳ ದ್ರೇಕ್ಕಾಣವಾಗಲೀ ಆಗಿದ್ದರೆ, ಆ ದ್ರೇಕ್ಕಾಣ ಪ್ರಥಮ, ಪಂಚಮ, ನವಮ ಗಣನೆಯಿಂದ ಯಾವರಾಶಿ ಸಂಬಂಧವಾಗಿರುವುದೋ ಆ ರಾಶಿ ಬಲಯುಕ್ತವಾದ ಕ್ರೂರಗ್ರಹದಿಂದ ನೋಡಲ್ಪಟ್ಟರೆ, ಭವನ ಸಮಾನ ಬಂಧನವನ್ನು ಪೂರ್ವೋಕ್ತ ಪ್ರಕಾರ ಹೇಳತಕ್ಕದ್ದು. ಕರ್ಕಾಟಕ ರಾಶಿ ಪ್ರಥಮದ್ರೇಕ್ಕಾಣ, ವೃಶ್ಚಿಕ ಪ್ರಥಮ ದ್ವಿತೀಯ ದ್ರೇಕ್ಕಾಣ, ಮೀನಾಂತ್ಯದ್ರೇಕ್ಕಾಣ, ಇವು ಭುಜಂಗದ್ರೇಕ್ಕಾಣಗಳು, ಮಕರ ಪ್ರಥಮ ದ್ರೇಕ್ಕಾಣ ನಿಗಳದ್ರೇಕ್ಕಾಣ, ಈ ವಿಷಯವನ್ನು ಸೂಕ್ಷ್ಮ ಬುದ್ಧಿಯಿಂದ ವಿಚಾರಮಾಡಿ ತಿಳಿದುಕೊಳ್ಳತಕ್ಕದ್ದು.

ಇಲ್ಲಿ ಬಂಧನವನ್ನು ತಿಳಿಯತಕ್ಕ ವಿಷಯದಲ್ಲಿ ಉದಾಹರಣೆ, ಈ ಮುಂದೆ ಉದಹರಿಸುವ ರಾಶಿಗಳು ಲಗ್ನವಾದರೆ, ಆ ಲಗ್ನದಿಂದ ೧೨-೫-೨-೬ ಈ ರಾಶಿಗಳಲ್ಲಿ ನಾಲ್ಕು ರಾಶಿಯಲ್ಲಿಯಾದರೂ, ಮೂರು ರಾಶಿಗಳಲ್ಲಿಯಾದರೂ, ಎರಡು ರಾಶಿಗಳಲ್ಲಿಯಾದರೂ, ಪಾಪಗ್ರಹಗಳಿದ್ದು ಲಗ್ನವು ಪಾಪ ಅರ್ಗಲೆಯಲ್ಲಿರಬೇಕು.

೧. ಚತುಷ್ಪದ ರಾಶಿಗಳಾದ ಮೇಷ, ವೃಷಭ, ಸಿಂಹ, ಧನುಸ್ಸಿನ ಪೂರ್ವಾರ್ಧ ಇವುಗಳು ಲಗ್ನವಾದರೆ ಮೇಲೆ ಹೇಳಿರುವಂತೆ ಗ್ರಹಗಳಿದ್ದರೆ ಹಗ್ಗದಿಂದ ಬಂಧನವಾಗುವುದು.

೨. ಮನುಷ್ಯರಾಶಿಗಳಾದ ಮಿಥುನ, ಕನ್ಯಾ, ತುಲಾ, ಧನುಸ್ಸಿನ ಉತ್ತರಾರ್ಧ

ಕುಂಭ ಈ ರಾಶಿಗಳು ಲಗ್ನವಾಗಿ ಮೇಲೆ ಹೇಳಿರುವಂತೆ ಗ್ರಹಗಳಿದ್ದರೆ, ದೇಹಕ್ಕೆ ಸಂಕೋಲೆಯ ಸಹಿತ ಬಂಧನವಾಗುವುದು.

೩. ಜಲರಾಶಿಗಳಾದ ಕರ್ಕ, ಮಕರ, ಮೀನರಾಶಿಗಳು ಲಗ್ನವಾಗಿ ಮೇಲೆ ಉದಹರಿಸಿರುವಂತೆ ಗ್ರಹಗಳಿದ್ದರೆ, ಶರೀರಕ್ಕೆ ಬಂಧನವಿಲ್ಲದೆ ಪಂಜರಾದಿಗಳಿಂದ, ಬಂಧನೆಯಾಗುವುದು. ಸಮುದ್ರ, ಜಲ, ಮಧ್ಯದ್ವೀಪಾಂತವಾಗಿ ಶಿಕ್ಷೆಯಾಗುವುದು.

೪. ವೃಶ್ಚಿಕರಾಶಿ ಲಗ್ನವಾದರೆ, ಭೂಮಿಯಲ್ಲಿ (ನೆಲಮಾಳಿಗೆಯಲ್ಲಿ) ಬಂಧನ ಪ್ರಾಪ್ತಿಯಾಗುವುದು ॥೧೬॥

೫. ಜನ್ಮಕಾಲದ ದ್ರೇಕ್ಕಾಣ, ಭುಜಂಗಪಾಶ, ನಿಗಡಪೂಶ, ದ್ರೇಕ್ಕಾಣವಾದರೆ ಆ ರಾಶಿದ್ರೇಕ್ಕಾಣ ಯಾವರಾಶಿ ಸಂಬಂಧವಾದದ್ದೋ ಆ ಪ್ರಕಾರ ಬಂಧನ ಪ್ರಾಪ್ತಿಯಾಗುವುದು ॥೧೬॥

ಮೂಲ॥ ಪರುಷವಚನೋ ಪಸ್ಮಾರಾರ್ತಃ ಕ್ಷಯಾಚ ನಿಶಾಪತೌ। ಸರವಿ
ತನಯೇ ವಕ್ರಾಲೋಕಂಗತೇ ಪರಿವೇಷಗೇ ॥ ರವಿಯಮಕುಜೈಃ
ಸೌಮ್ಯಾದೃಷ್ಟೈರ್ನ ಭಃಸ್ಥಲಮಾಶ್ರಿತೈ। ರ್ಭೃತಕಮನುಜಃ ಪೂರ್ವೋ-
ದ್ದಿಷ್ಟೈರ್ನರಾಧಮ ಮಧ್ಯಮಾಃ ॥೧೭॥

ಅವತಾರಿಕೆ॥ ಈ ಶ್ಲೋಕದಲ್ಲಿ ನಿಷ್ಠುರಭಾಷಿಯೋಗ, ಅಪಸ್ಮಾರಯೋಗ, ಕ್ಷಯರೋಗಿ ಯೋಗ ಈ ಪ್ರೇಷ್ಯಯೋಗತ್ರಯವೂ ಸಹ ಹೇಳಲ್ಪಡುತ್ತೆ.

## ನಿಷ್ಠುರಭಾಷಿ ಯೋಗಃ

ನಿಶಾಪತೌ-ಚಂದ್ರನು, ಸರವಿತನಯೇ-ಶನಿಯಿಂದೊಡಗೂಡಿದವನಾಗಿ, ವಕ್ರಾಲೋಕಂಗತೇ-ಅಂಗಾರಕನಿಂದ ನೋಡಲ್ಪಟ್ಟ, ಪರಿವೇಷಗೇ-ಪರಿವೇಷ ಮಧ್ಯಗತನಾದ ಕಾಲದಲ್ಲಿ ಹುಟ್ಟಿದವನು, ಪರಷವಚನಃ-ನಿಷ್ಠುರವಾಗಿ ಮಾತನಾಡುವನು, ಅಪಸ್ಮಾರಾರ್ತಃ-ಅಪಿಸ್ಮಾರರೋಗದಿಂದ ಪೀಡಸಲ್ಪಟ್ಟವನೂ, ಕ್ಷಯಿಚ-ಕ್ಷಯ ರೋಗವುಳ್ಳವನೂ ಆಗುವನು, ಅಂದರೆ ಚಂದ್ರನೂ, ಶನಿಯು ಕೂಡಿದಾಗ ಹುಟ್ಟಿದವನು ನಿಷ್ಠುರಭಾಷಿಯಾಗುವನು, ಚಂದ್ರನು ಶನಿಯಿಂದ ತೂಡಿ ಕುಜನಿಂದ ನೋಡಲ್ಪಡುವಾಗ ಹುಟ್ಟಿದವನು ಅಪಸ್ಮಾರರೋಗವುಳ್ಳವನಾಗುವನು, ಚಂದ್ರನು ಶನಿಯಿಂದ ಕೂಡಿ, ಕುಜನಿಂದ ನೋಡಲ್ಪಟ್ಟು ಪರಿವೇಷ್ಯಗತನಾದರೆ, ಕ್ಷಯರೋಗ ವುಳ್ಳವನಾಗುವನು. ಈ ಯೋಗವು ಮೇಷಾದಿ ೧೨ ಲಗ್ನಗಳಿಗೂ, ಪ್ರತಿಲಗ್ನಕ್ಕೂ ೧೨ ವಿಧವಾಗಿ ೧೪೪ ಯೋಗಗಳಾಗುವುದು.

## ಪ್ರೇಷ್ಯ ಯೋಗಃ

ಸೌಮ್ಯದೃಷ್ಟೈಃ ಸೌಮ್ಯಗ್ರಹಗಳಿಂದ ನೋಡಲ್ಪಡದ ನಭಸ್ಥಲಮಾಶ್ರಿತೈಃ-ಲಗ್ನದಿಂದ ದಶಮಸ್ಥಾನವನ್ನು ಹೊಂದಿದ, ರವಿ ಯಮ ಕುಜೈಃ-ರವಿ ಶನಿ ಕುಜರಿಂದ, ಭೃತಕ ಮನುಜಾಃ-ಕೂಲಿಮಾಡುವ ಮನುಷ್ಯರು ಹುಟ್ಟುವರು, ಅವರು ಪೂರ್ವೋದ್ದಿಷ್ಟೈಃ-ಪೂರ್ವೋಕ್ತಪ್ರಕಾರವಾದ ರವಿ, ಶನಿ, ಕುಜರಿಂದ ವರಾಧಮ ಮಧ್ಯಮಾಃ-ಶ್ರೇಷ್ಠ, ಅಧಮ ಮಧ್ಯಮವಾದ ಪ್ರೇಷ್ಯರಾಗುವರು, ಅದು ಹೇಗೆಂದರೆಃ-ದಶಮದಲ್ಲಿ ೧ ಪಾಪಗ್ರಹವಿದ್ದು ಶುಭಗ್ರಹದೃಷ್ಟಿಯಿಲ್ಲದಿದ್ದರೆ, ಸೇವಕವೃತ್ತಿಯಲ್ಲಿ ಉತ್ತಮ ವಾದವನಾಗುವನು. ಎರಡು ಗ್ರಹಗಳಿದ್ದು, ಶುಭಗ್ರಹದೃಷ್ಟಿ ರಹಿತವಾಗಿದ್ದರೆ, ಮಧ್ಯಮವೃತ್ತಿಯಾದ ಸೇವಕನಾಗುವನು. ಈ ಗ್ರಹಗಳು ಶತ್ರುನೀಚ ಅಸ್ತರಾಗಿದ್ದರೆ ಅವರ ವೃತ್ತಿಯನ್ನು ಅತ್ಯಂತ ಹೀನವೃತ್ತಿಯೆಂದು ನಿರ್ಣಯಿಸಬೇಕು. ಈ ವಿಷಯಕ್ಕೆ ।।ಶ್ಲೋಕ।। ಪರಾಶರಾಃ।। ತ್ರಿಭಿಃ ಕುಜಯ ಮಾದಿತ್ಯೈ ಕರ್ಮ ಸ್ಥಾನಸಮಾಶ್ರಿತೈಃ। ಪ್ರೇಷ್ಯೋಭವತೀ ಜಾತೋ ಸೌ ನಿಯಮೇನವದೇದ್ಬುಧಃ ೩೩।।

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತ
ಕಾಖ್ಯ ಹೋರಾಶಾಸ್ತ್ರೇ ಅನಿಷ್ಟಯೋಗಫಲ ವಿಚಾರೋನಾಮ
ತ್ರಯೋವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ವಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ಅನಿಷ್ಟಯೋಗ ವಿಚಾರನ್ನಾಮ ತ್ರಯೋವಿಂಶ ಪ್ರಕರಣಂ
ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ

## ೨೪ನೇ ಸ್ತ್ರೀಜಾತಕ ಪ್ರಕರಣಂ

ಅವತಾರಿಕೆ ।। ವರಾಹಮಿಹಿರಾಚಾರ್ಯರು ಸ್ತ್ರೀಜಾತಕವೆಂಬ ಪ್ರಕರಣವನ್ನು ವಿಶದವಾಗಿಹೇಳಿರುವರು ನಾರದ ಯವನಾಚಾರ್ಯಾದಿಗಳು ಸ್ತ್ರೀಜಾತಕವನ್ನು ಅವರವರ ಗ್ರಂಥಗಳಲ್ಲಿ ಕೆಲವು ವಿಷಯಗಳನ್ನು ಮಾತ್ರ ಹೇಳಿರುವರು. ಮಹರ್ಷಿಗಳು ಅವುಗಳೆಲ್ಲವೂ ಗರ್ಭಿತವಾಗಿರುವಂತೆ ಅಲ್ಪಸಂಖ್ಯಾತವಾದ ಪದ್ಯಗಳಿಂದ ಪೂರ್ಣವಾಗಿ ಫಲಗಳು ತಿಳಿಯುವಂತೆ ಹೇಳಿರುತ್ತಾರೆ. ಅವರು ಯಾವಯಾವ ಋಷಿಮತವನ್ನೂ ಜೋತಿಷ್ಕರಮತವನ್ನನುಸರಿಸಿ ಹೇಳಿರುವರೋ ಅದನ್ನು ಅಷ್ಟು ಸ್ಪಷ್ಟವಾಗಿ ವಿವರಿಸಲು ಅಲ್ಪಮತಿಯಾದ ನನ್ನಿಂದ ಆಗಲಾರದು. ಆದಾಗ್ಯೂ ನನಗೆ ದೊರಕುವ ಮತ್ತು ಅವರ ಮತಕ್ಕೆ ಅನುಸಾರವಾದ ಉದಾಹರಣ ಶ್ಲೋಕಗಳ ಸಹಿತ ವಿವರಿಸಿರುತ್ತಾನೆ.

**ಮೂಲ।। ಯದ್ಯತ್ಫಲಂ ನರಭವೇಕ್ಷಮ ಮಂಗನಾನಾಂ । ತತ್ತದ್ವದೇತ್ಪತಿಷು ವಾಸಕಲಂ ವಿಧೇಯಂ ।। ತಾಸಾಂತು ಭರ್ತೃಮರಣಂನಿಧನೇವ ಪುಸ್ತು । ಲಗ್ನೇಂದುಗಂ ಸುಭಗತಾಸ್ತಮಯೇಪತಿಶ್ಚ ।।೧।।**

ಟೀಕು।। ನರಭವೇ-ಪುರುಷಜನ್ಮಾಜಾತಕದಲ್ಲಿ ಹೇಳಿದ, ಯದ್ಯತ್ಫಲಂ-ಯಾವ ಯಾವ ಫಲಗಳು ಅಂಗನಾನಾಂ-ಸ್ತ್ರೀಯರುಗಳಿಗೆ, ಅಕ್ಷಮಯೋಗ್ಯತಾರ್ಹವಾಗಿರು ವುದಿಲ್ಲವೋ, ತತ್ತತ್-ಆಯಾಫಲಗಳನ್ನು ಪತಿಷ-ಆ ಸ್ತ್ರೀಯರ ಭರ್ತೃಗಳಿಗೆ, ವದೇತ್-ಹೇಳತಕ್ಕದ್ದು. ಅಂದರೆ-ಪುರುಷಜನ್ಮಜಾತಕಕ್ಕೆ ಹೇಳಲ್ಪಟ್ಟ ಫಲಗಳಲ್ಲಿ ಹೆಂಗಸರಿಗೆ ಹೇಳಲ್ಪಡಬಹುದಾದ (ವೃತ್ತಾ, ತಾಮ್ರ, ದೃಗುಷ್ಟ, ಶಾಕ, ಲಘುಭುಕ್)ಇತ್ಯಾದಿ ಫಲಗಳು ಸ್ತ್ರೀಯರಿಗೆ ಹೇಳಲ್ಪಡುವದು, ಸ್ತ್ರೀಯರಿಗೆ ಆಯೋಗ್ಯವಾದ ಫಲಗಳನ್ನು ಸ್ತ್ರೀಜಾತಕದಲ್ಲಿ ಹೇಳಬಹುದಾದರೆ, ಅಂಥಾ ಕೆಲವು ಫಲಗಳು ಅವರ ಭರ್ತರಿಗೆ ಹೇಳಬಹುದು. ಸುಖದುಃಖಸೂಚಕವಾದ ಅನಫಾಸುನಫಾದುರಧುರಾದಿ ಯೋಗಗಳ ಫಲಗಳು ಭಾರ್ಯಾಭರ್ತರಿಗೆ ಕೂಡ ಹೇಳಲ್ಪಡಬಹುದು. ಈ ಪ್ರಕಾರ ಮೂರು ವಿಧವಾದ ಸ್ತ್ರೀಜಾತಕ ಫಲವನ್ನು ವಿಭಾಗಮಾಡಿಕೊಳ್ಳತಕ್ಕದ್ದು. ಅಥವಾ ಹಾಗಾಗದೆ ಹೋದರೆ, ಸಕಲಂ-ಸಕಲವಾದ, ಸ್ತ್ರೀಜಾತಕ ಫಲಗಳು ಪತಿಷು-ಭರ್ತನಲ್ಲಿಯೇ, ವಿಧೇಯಂ-ಹೇಳಲ್ಪಡತಕ್ಕದ್ದು, ಇದಕ್ಕೆ ಸಮ್ಮತಿ ।।ಜ.ಭ।।ಶ್ಲೋಕ।। ಯಜ್ಜನ್ಮ ಕಾಲಾದ್ಗದಿತಂ ನರಾಣಾಂ ಹೋರಾಪ್ರವೀಣೈಃ ಫಲಮೇತ ದೇವ । ಸ್ತ್ರೀಣಾಂಪ್ರಕಲ್ಪ್ಯಂ ಖಲುಚೇದ ಯೋಗ್ಯಂ ತನ್ನಾಯಕೇ ತತ್ಪರಿವೇದಿ ತವ್ಯಂ ।।೧।। ಎಂದು ಹೇಳಲ್ಪಟ್ಟಿರುತ್ತದೆ. ಮತ್ತು ವೃದ್ಧಯಾವನಃ

।।ಶ್ಲೋಕ।। ಸ್ತ್ರೀಣಾಂಜನ್ಮಫಲಂ ತುಲ್ಯಂ ಪುಂಭಿಸ್ಸಾರ್ಧಂ ಯದುಕ್ತವಾ। ವಿಶೇಷಸ್ತತ್ರಯೋದೃಷ್ಟಃ ಕಥ್ಯತೇ ವಿಸ್ತರೇಣಸಃ ।।೨।। ಎಂದುಕ್ತವಾಗಿರುತ್ತೆ. ತಾಸಾಂ-ಆ ಸ್ತ್ರೀಯರಿಗೆ, ನಿಧನೇ-ಜನ್ಮಲಗ್ನಕ್ಕೆ ಅಷ್ಟಮಸ್ಥಾನದಿಂದ ಭರ್ತ್ರು ಮರಣಂ-ಪತಿ ಮರಣವನ್ನು ಹೇಳಬೇಕು. ಇದಕ್ಕೆ ಉದಾಹರಣ ಶ್ಲೋಕ ವೈಧವ್ಯಂ ನಿಧನೇ ನಿತ್ಯಶರೀರಂ ಜನ್ಮಲಗ್ನಭಾಕ್ । ಸಪ್ತಮೇ ಸೌಖ್ಯ (ಪತಿ) ಸೌಭಾಗ್ಯಂ ಪಂಚಮೇ ಪ್ರಸವಸ್ತಥಾ ।।೩।। ಇತಿ ವೃದ್ಧ ಯಾವನೇ।। ವಪುಸ್ತು-ಆ ಸ್ತ್ರೀಯರ, ಶರೀರವು ಲಗ್ನೇಂದುಗಂ-ಜನ್ಮ ಲಗ್ನವು ಚಂದ್ರನಿಂದ, ವಕ್ಷ್ಯಮಾಣ ಶ್ಲೋಕ ಪ್ರಕಾರ ಹೇಳಲ್ಪಡತಕ್ಕದ್ದು. ಸುಭಗತಾ-ಸೌಭಾಗ್ಯವನ್ನು ಪತಿಶಿಷ್ಟ ಗಂಡನ ಸೌಭಾಗ್ಯಾತಿ ಶಯವನ್ನು, ಅಸ್ತಮಯೇ-ಸಪ್ತಮ ಸ್ಥಾನದಿಂದ ಹೇಳಲ್ಪಡತಕ್ಕದ್ದು. ಈ ವಿಷಯಕ್ಕೆ ಶ್ಲೋಕ।। ಜಾತಕಚಂದಿರ್ಕಾಯಾಂ।। ।।ಜಯದೇವಃ।। ಪುಂಯೋಷಿತೋ ಜನ್ಮಫಲಂತುತುಲ್ಯಂ ಕಿಂಚಾತ್ರರಾಶೀಶ್ವರ ಲಗ್ನ ಸಂಸ್ಥಮ್ । ತದ್ವೀರ್ಯ ಯೋಗಾದ್ವ ಪುರಾಕೃತಿಃ ।। ಸ್ಯಾತ್ಸೌಭಾಗ್ಯಶೀಲತ್ವಮುಶಂತಿಚಾಸ್ತೇ ।।೪।। ಮತ್ತು ಜಾತಕಾಭರಣೇ ।।ಧುಂಡಿರಾಜಃ।। ಲಗ್ನೇಶಶಾಂಕೇಚವರ್ಪೆ ಚಿಂತ್ಯತಯೋಃ ಕಳತ್ರೇ ಪತಿವೈಭವಾನಿ । ಸುತಾಖ್ಯಭಾವೇ ಪ್ರಸವೋಽವಗವ್ಯೋ ವೈಧವ್ಯಮಸಾಃ ಕಿಲಕಾಲಗೇಹೇ ।।೫।।

*ಸ್ತ್ರೀ ಜಾತಕದಿಂದ ತಿಳಿಯಬೇಕಾದ ಪದಕ,
ಸ್ತ್ರೀ ಜಾತಕ ಫಲಭೇದ ಪದಕ,

| ಸಂ. | ಸ್ಥಾನ | ತಿಳಿಯಬೇಕಾದ ಅಂಶ |
|---|---|---|
| ೧. | ಸ್ತ್ರೀ ಜಾತಕದಿಂದ (ಲಗ್ನದಿಂದ) | ಅವರ ಶರೀರಕಾಂತಿ ಸೌಂದರ್ಯಗುಣ |
| ೨. | ಸ್ತ್ರೀಯರಿಗೆ ಸಲ್ಲದ ಯೋಗಗಳಿದ್ದರೆ | ಗಂಡನಿಗೆ ಹೇಳತಕ್ಕದ್ದು |
| ೩. | ಅನಫಾದಿಯೋಗ | ಗಂಡಹೆಂಡರಿಬ್ಬರಿಗೆ ಹೇಳತಕ್ಕದ್ದು. |
| ೪. | ಸಪ್ತಮಸ್ಥಾನ | ಗಂಡನ ಸೌಭಾಗ್ಯಾತಿಶಯವನ್ನು |
| ೫. | ಪಂಚಮಸ್ಥಾನ | ಪುತ್ರಸಂತಾನಾದಿಯೋಗ ಪ್ರಸವ ಲಕ್ಷಣ |
| ೬ | ಅಷ್ಟಮಸ್ಥಾನ | ಗಂಡನ ಮರಣ ಮತ್ತು ಅವನ ಜೀವಿತಕಾಲ |

*ಲಗ್ನದಿಂದಾಗಲೀ ಚಂದ್ರನಿಂದಾಗಲೀ ಈ ಎರಡರಲ್ಲಿ ಯಾವುದು ಬಲಿಷ್ಠ ವಾದದ್ದೋ ಆ ವಿಚಕ್ಷಣೆ ಇದ್ದಂತೆ ತಿಳಿಯತಕ್ಕದ್ದು.

## ಸ್ತ್ರೀ ಸ್ವಭಾವ ವಿಚಾರಃ

ಮೂಲ॥ ಯುಗ್ಮೇಷು ಲಗ್ನಶಶಿನೋಃ ಪ್ರಕೃತಿಸ್ಥಿಶಾಸ್ತ್ರೀ । ಸಚ್ಛೀಲಭೂಷಣ ಯುತಾ ಶುಭದೃಷ್ಟಯೋಶ್ಚ ॥ ಓಜಸ್ಥಯೋಶ್ಚ ಪುರುಷಾಕೃತಿ ಶೀಲಯುಕ್ತಾ । ಪಾಪಾಚ ಪಾಪಯುತವೀಕ್ಷಿತಯೋರ್ಗುಣೋನಾ ॥೨॥

ಅವತಾರಿಕೆ॥ ೧ನೇ ಶ್ಲೋಕದಲ್ಲಿ ವಪುಸ್ತುಲಗ್ನೇಂದುವು' ಎಂದು ಹೇಳಲ್ಪಟ್ಟಿರುವುದರಿಂದ ಅದರ ವಿವರಣೆಯನ್ನು ಸ್ತ್ರೀ ಸ್ವಭಾವವನ್ನೂ ಹೇಳಿರುತ್ತೆ.

ಟೀಕು॥ ಲಗ್ನಶಶಿನೋಃ-ಲಗ್ನ ಚಂದ್ರರ, ಯುಗ್ಮೇಷು-ಯುಗ್ಮರಾಶಿಗಳಲ್ಲಿರುವಾಗ ಹುಟ್ಟಿದ ಸ್ತ್ರೀ (೨-೪-೬-೮-೧೦-೧೨) ಪ್ರಕೃತಿಸ್ಥಿತಾ-ಸ್ತ್ರೀ ಸ್ವಭಾವವುಳ್ಳವಳಾಗುವಳು, ಶುಭದೃಷ್ಟಯೋಶ್ಚ-ಆ ಲಗ್ನ ಚಂದ್ರರು, ಸೌಮ್ಯಗ್ರಹಗಳಿಂದ ನೋಡಲ್ಪಟ್ಟರೆ, ಸಚ್ಛೀಲಭೂಷಣಯುತಾ-ಸಚ್ಛೀಲ-ಸತ್ಸ್ವಭಾವದಿಂದಲೂ, ಭೂಷಣ-ಆಭರಣ ಗಳಿಂದಲೂ, ಯುತಾ-ಕೂಡಿದವಳಾಗುವಳು, ಸತ್ಸ್ವಭಾವವೆಂದರೆ-ಭೂಷಣಗಳಿಂದ ಕೂಡಿರುವದೆಂದು ಕೆಲವರು ಹೇಳಬಹುದು. ಈ ವಿಷಯಕ್ಕೆ ಸಮ್ಮತಿ ॥ ವೃದ್ಧಯಾವನೇ ॥ಶ್ಲೋಕ॥ ಪ್ರಕೃತಿಸ್ಥಾಲಗ್ನೇಂದ್ವೋಃಸಮಭೇಸಚ್ಛೀಲರೂಪಾಚ। ಭೂಷಣಗುಣೈರುಪೇತಾ ಶುಭವೀಕ್ಷಿತೇತಯೋಶ್ಚ ಯುವತಿಸ್ಯಾತ್ ॥೬॥ ಓಜಸ್ಥ ಯೋಸ್ತು-ಬೆಸರಾಶಿಗಳಲ್ಲಿ ಲಗ್ನ ಚಂದ್ರರು ಇರುವಾಗ ಹುಟ್ಟಿದ ಸ್ತ್ರೀ, ಪುರುಷಾಕೃತಿ ಶೀಲಯುಕ್ತಾ ಗಂಡಸಿನ ಆಕೃತಿ, ಗಂಡಸಿನ ಸ್ವಭಾವದಿಂದೊಡಗೂಡಿದವಳಾಗುವಳು, ಪಾಪಯುತ ವೀಕ್ಷಿತಯೋಃ-ಆ ಲಗ್ನ ಚಂದ್ರರು ಪಾಪಗ್ರಹಗಳಿಂದ ನೋಡಲ್ಪಟ್ಟರೂ, ಆ ಕಾಲದಲ್ಲಿ ಹುಟ್ಟಿದ ಸ್ತ್ರೀ, ಪಾಪಾ-ಪಾಪಾಚಾರದಿಂದ ಕೂಡಿ, ಗುಣೋನಾ-ಸುಗುಣ ಹೀನಳಾಗುವಳು, ಲಗ್ನ ಚಂದ್ರರು ವಿಷಮರಾಶಿಗಳಾದ, (೧-೩-೫-೭-೯-೧೧)ಈ ರಾಶಿಗಳಲ್ಲಿದ್ದ ವಿಷಯದಲ್ಲಿ ವೃದ್ಧಯಾವನ ॥ಸಮ್ಮತಿ॥ಶ್ಲೋಕ॥ ಪುತುಷಾಕೃತಿ ಶೀಲಯುತಾ ದುಃಶೀಲಾ ದುಃಖಿತಾ ವಿಷಮರಾಶೌ । ಕ್ರೂರೈರ್ವೀಕ್ಷಿತ ಯೋಗೇ ಪಾಪಾಸ್ತ್ರೀ ಸದ್ಗುಣೈರ್ಹೀನಾ ॥೭॥ ಲಗ್ನಚಂದ್ರರಲ್ಲಿ ಒಂದು ವಿಷಮ ರಾಶಿಯಲ್ಲೂ ಇನ್ನೊಂದು ಸಮರಾಶಿಯಲ್ಲೂ ಆಗಿದ್ದರೆ, ಆ ಕಾಲದಲ್ಲಿ ಜನ್ಮಿಸಿದ ಸ್ತ್ರೀ ಕೆಲವು ಪುರುಷಾಕೃನಿ ಸ್ವಭಾವ, ಕೆಲವು ಸ್ತ್ರೀ ಸ್ವಭಾವ ಉಳ್ಳವಳಾಗುವಳು. ಅಂದರೆ ಮಿಶ್ರಸ್ವಭಾವವುಳ್ಳವಳಾಗುವಳು. ಲಗ್ನಚಂದ್ರರಲ್ಲಿ ಲಗ್ನವಾಗಲೀ, ಚಂದ್ರನಾಗಲೀ, ಒಂದು ಪಾಪಗ್ರಹದಿಂದ ಕೂಡಿದರೂ, ಅಥವಾ ನೋಡಲ್ಪಟ್ಟರೂ, ಆ ಕಾಲದಲ್ಲಿ ಹುಟ್ಟಿದ ಸ್ತ್ರೀ ಕೆಲವು ಸದಾಚಾರದಿಂದಲೂ, ಕೆಲವು ದುರಾಚಾರದಿಂದಲೂ ಕೂಡಿರುವಳು. ಚಂದ್ರನಾಗಲೀ, ಲಗ್ನವಾಗಲೀ, ಶುಭಗ್ರಹಗಳಿಂದ ನೋಡಲ್ಪಟ್ಟರೂ, ಕೂಡಿದರೂ, ಆ ಕಾಲದಲ್ಲಿ ಹುಟ್ಟಿದ ಸ್ತ್ರೀ ಮಿಶ್ರವಾದಗುಣಾವುಳ್ಳವಳಾಗುವಳು. ಈ ವಿಷಯದಲ್ಲಿ

॥ಜಯದೇವಃ॥ಶ್ಲೋಕ॥ ಸಮಗತೇಬ್ಜೇ ಲಗ್ನೇ ಬಲಾಕೃತಿಸ್ಥಿತಾ ಶುಭಗಯುತೇ ದೃಷ್ಟೇಸಚ್ಛೀಲ ಭೂಷಣಸಂಯುತಾ । ಅಸಮಭಗತೌ ಚೇತ್ತೌಪುಂರೂಪಶೀಲಯುತಾ ಖಲ ಖಗದೃಷ್ಟೌ ಪಾಪಗುಣೈಶ್ಚವಿವರ್ಜಿತಾ ॥೮॥ ಮತ್ತು ಇದೇ ವಿಷಯದಲ್ಲಿ ಜಾತಕಾಭರಣದಲ್ಲಿ ॥ಶ್ಲೋಕ॥ ಲಗ್ನೇಚ ಚಂದ್ರೇ ಸಮರಾಶಿಯಾತೇ ಕಾಂತಾನಿತಾಂತಂ ಪ್ರಕೃತಿಸ್ಥಿತಾಸ್ಯಾತ್। ಸದ್ರತ್ನಭೂಷಾ ಸಹಿತಾಥಸೌಮ್ಯೈ ರ್ನಿರೀಕ್ಷಿತೌತೌ ಯದಿಚಾರುಶೀಲಾ ॥೯॥ ತಯೋಸ್ಥಿತಿಶ್ಚೇ ದ್ವಿಷಮಾಕ್ಯರಾಶೌ ನಾರೀ ನರಾಕಾರ ಧರಾಕುರೂಪಾ। ಪಾಪಗ್ರಹಾಲೋಕನ ಯೋಗಯಾತೌ ತೌಚೇತ್ಕುಶೀಲಾ ಗುಣವರ್ಜಿತಾಲಮ್ ॥೧೦॥ ಎಂದುಕ್ತವಾಗಿರುತ್ತೆ. ಈ ಉದಾಹರಣೆ ಶ್ಲೋಕಗಳ ಅರ್ಥವು ವರಾಹಮಿಹಿರಭಟ್ಟಾಚಾರ್ಯರ ಮತಕ್ಕನುಸಾರವಾಗಿರುವದರಿಂದ ವಿಷಯ ನಿರ್ಣಯಕ್ಕೋಸ್ಕರವಾಗಿ ಇಲ್ಲಿ ಉದಹರಿಸಿರುತ್ತೆ.

## ಸಮರಾಶಿ ವಿಷಮರಾಶಿ ಭೇದ ಪದಕ

| ರಾಶಿ | ಜನ್ಮಲಗ್ನ ಅಥವಾ ಜನ್ಮ ಚಂದ್ರ | ಫಲ |
|---|---|---|
| ಸಮರಾಶಿ | ಜನ್ಮಲಗ್ನ | ಸ್ತ್ರೀ ಸ್ವಭಾವ |
| ೪-೬-೮-೧೦- | ಚಂದ್ರ ರಾಶಿ | ಸ್ತ್ರೀ ಸ್ವಭಾವ |
| ೧೨ | ಶುಭದೃಷ್ಟಿ | ಸಚ್ಛೀಲ ಭೂಷಣಳು |
| | ಜನ್ಮಲಗ್ನ | ಪುರುಷ ಸ್ವಭಾವ |
| ವಿಷಮರಾಶಿ ೧- | ಚಂದ್ರ ರಾಶಿ | ಪುರುಷ ಸ್ವಭಾವ |
| ೩-೫-೭-೯-೧೧ | ಪಾಪದೃಷ್ಟಿ | ಪಾಪಚಾರವುಳ್ಳವಳು ಗುಣಹೀನಳು |
| ಸಮರಾಶಿ ಲಗ್ನ | ಜನ್ಮ ಲಗ್ನ | ಸ್ತ್ರೀ ಸ್ವಭಾವಾಚಾರ |
| ವಿಷಮ ರಾಶಿ | ಚಂದ್ರ ಲಗ್ನ | ಪುರುಷ ಸ್ವಭಾವಾಚಾರ |
| ಯಲ್ಲಿ ಚಂದ್ರ | ಶುಭ ದೃಷ್ಟಿ | ಒಳ್ಳೆ ನಡತೆಯುಳ್ಳವಳು |
| ವಿಷಮ ರಾಶಿ | ಜನ್ಮ ಲಗ್ನ | ಪುರುಷ ಸ್ವಭಾವ |
| ಲಗ್ನ ಸಮ | ಚಂದ್ರ ರಾಶಿ | ಸ್ತ್ರೀ ಸ್ವಭಾವ |
| ರಾಶಿ ಚಂದ್ರ | ಪಾಪದೃಷ್ಟಿ | ದುರ್ಮಾರ್ಗಿಯಾಗುವಳು |

## ಕುಜಕ್ಷೇತ್ರ ತ್ರಿಂಶಾಂಶಫಲಂ

ಮೂಲ॥ ಕನ್ಯೈವದುಷ್ಟಾ ವ್ರಜತೀಹದಾಸ್ಯಂ ಸಾಧ್ವೀಸಮಾಯಾ ಕುಚರಿತ್ರ ಯುಕ್ತಾ । ಭೂಮ್ಯಾತ್ಮಜರ್ಕ್ಷೇ ಕ್ರಮಶೋಂಶಕೇಷು ವಕ್ರಾರ್ಕಿ ಜೀವೇಂದುಜಭಾರ್ಗವಾನಾಂ ॥೩॥

ಅವತಾರಿಕೆ॥ ಕುಜಕ್ಷೇತ್ರಗಳಾದ ಮೇಷವೃಶ್ಚಿಕಗಳಲ್ಲಿ ಲಗ್ನವಾಗಲೀ ಚಂದ್ರನಾಗಲೀ, ಕುಜ, ಶನಿ, ಗುರು, ಬುಧ, ಶುಕ್ರ ತ್ರಿಂಶಾಂಶೆಗಳಲ್ಲಿ ಜನ್ಮವಾದ ಸ್ತ್ರೀಯರ ಗುಣಗಳು ಹೇಳಲ್ಪಡುತ್ತೆ ॥

ಟೀಕು॥ ಭೂಮ್ಯಾತ್ಮಜರ್ಕ್ಷೇ-ಕುಜಕ್ಷೇತ್ರಗಳಾದ ಮೇಷ, ವೃಶ್ಚಿಕದಲ್ಲಿ ಯಾವದಾದರೂ ಲಗ್ನವಾಗಿ, ಅಥವಾ ಚಂದ್ರಾಧಿಷ್ಠಿತರಾಗಿಯಾಗಲೀ, ವಕ್ರಾರ್ಕಿ ಜೀವೇಂದುಜ ಭಾರ್ಗವಾನಾಂ-ಅಂಗಾರಕ, ಶನಿ, ಬೃಹಸ್ಪತಿ, ಬುಧ, ಶುಕ್ರರ, ಅಂಶಕೇಷು-ತ್ರಿಂಶಾಂಶೆಗಳಲ್ಲಿ ಕ್ರಮಶಃ-ಕ್ರಮವಾಗಿ ಫಲಗಳನ್ನು ಹೇಳತಕ್ಕದ್ದು ಅದು ಹೇಗೆಂದರೆ-ಜನ್ಮಲಗ್ನವಾಗಲೀ, ಅಂಗಾರಕ ಕ್ಷೇತ್ರದಲ್ಲಿ ಅಂಗಾರಕ ತ್ರಿಂಶಾಂಶೆಯಲ್ಲಿರುವಾಗ ಹುಟ್ಟಿದ ಸ್ತ್ರೀ, ಕನ್ಯೈವದುಷ್ಟಾಭವತಿ-ವಿವಾಹಕ್ಕೆ ಮುಂಚಿತವಾಗಿಯೇ, ಪುರುಷಸಂಸರ್ಗಮಾಡುವಳು. ಕುಜಕ್ಷೇತ್ರದಲ್ಲಿ ಚಂದ್ರನಾಗಲೀ, ಲಗ್ನವಾಗಲಿ, ಶನಿತ್ರಿಂಶಾಂಸೆಯಲ್ಲಿರುವಾಗ ಹುಟ್ಟಿದ ಸ್ತ್ರೀ, ದಾಸ್ಯಂವ್ರಜತಿ-ದಾಸೀ ಭಾವವನ್ನು ಹೊಂದುವಳು, ಕುಜಕ್ಷೇತ್ರಗಳಲ್ಲಿ ಚಂದ್ರನಾಗಲೀ, ಲಗ್ನವಾಗಲೀ, ಗುರು ತ್ರಿಂಶಾಂಶೆಯಲ್ಲಿರುವಾಗ, ಹುಟ್ಟಿದ ಸ್ತ್ರೀ, ಸಾಧ್ವೀ-ಪತಿವ್ರತೆಯಾಗುವಳು. ಕುಜಕ್ಷೇತ್ರ ಗಳಲ್ಲಿ, ಬುಧತ್ರಿಂಶಾಂಶೆಯಲ್ಲಿ ಚಂದ್ರನಾಗಲೀ, ಲಗ್ನವಾಗಲೀ ಇರುವಾಗ, ಹುಟ್ಟಿದವಳು ಸಮಾಯಾ-ಮಾಯಾವತಿ ಮೋಸಮಾಡುವವಳಾಗುವಳು. ಕುಜಕ್ಷೇತ್ರಗಳಲ್ಲಿ ಚಂದ್ರನಾಗಲೀ, ಲಗ್ನವಾಗಲೀ, ಶುಕ್ರತ್ರಿಂಶಾಂಶೆಯಲ್ಲಿರುವಾಗ ಹುಟ್ಟಿದವಳು, ಕುಚರಿತ್ರಯುಕ್ತಾ-ದುರಾಚಾರ ದುರ್ನಡತೆಯುಳ್ಳವಳಾಗುವಳು, ಈ ವಿಷಯಕ್ಕೆ ॥ಶ್ಲೋಕ॥ ಜಾ.ಭ॥ ಲಂಗ್ನೇಂ ದ್ವೋರ್ಬಲರ್ವಾ ಕುಜಃಸ್ವಭಾವನೇ ಶುಕ್ರಸ್ಯಖಾಗ್ನ್ಯಂಶಕೇ ಕನ್ಯಾಸ್ಯಾದತಿ ನಿಂದಿತಾ ಸುರಗುರೋಃ ಸ್ವಾಧ್ವೀನಿತಾಂತಂ ಭವೇತ್ । ದುಷ್ಟಾಭೂತನಯಸ್ಯ ನೂನಮುದಿತಾಸೌಮ್ಯಸ್ಯಮಾಯಾವಿನೀ ದಾಸೀತಿಗ್ಮಮರೀಚಿ ಸೂನುಗಗನಾಗ್ನ್ಯಂಶೇ ಫಲಾನಿಕ್ರಮಾತ್ ॥೧೧॥ ಈ ವಿಷಯದಲ್ಲಿ ಮುಂದೆ ಪದಕ ಮಾಡಿದೆ. ಅದನ್ನು ನೋಡಿದರೆ ಸ್ಪಷ್ಟವಾಗಿ ತಿಳಿಯುವುದು.

## ಶುಕ್ರಕ್ಷೇತ್ರ ತ್ರಿಂಶಾಂಶಫಲಂ

ಮೂಲ॥ ದುಷ್ಟಾಪುನರ್ಭೂಸ್ಸುಗುಣಾ ಕಲಾಜ್ಞ್ಯಾಖ್ಯಾತಾಗುಣೈಶ್ಚಾಸುರಪೂಜಿ- ತರ್ಕ್ಷೇ । ಸ್ಯಾತ್ಕಾಪಟೀ ಕ್ಲೀಬ ಸಮಾಪತೀಚ ಬೌಧೇಗುಣಾಢ್ಯಾ ಪ್ರವಿಕೀರ್ಣಕಾಮಾ ॥೪॥

ಅವತಾರಿಕೆ।। ಬುಧಶುಕ್ರಕ್ಷೇತ್ರದಲ್ಲಿ ಲಗ್ನವಾಗಲಿ, ಚಂದ್ರನಾಗಲಿ, ಜನ್ಮಕಾಲ ವಾಗಿದ್ದರೆ, ಆ ಕಾಲದಲ್ಲಿ ಹುಟ್ಟಿದ ಸ್ತ್ರೀಯ ಗುಣಗಳು ಹೇಳಲ್ಪಡುತ್ತೆ.

ಟೀಕು।। ಶುಕ್ರಕ್ಷೇತ್ರಗಳಾದ ವೃಷಭ, ತುಲಾ, ಬುಧಕ್ಷೇತ್ರಗಳಾದ ಮಿಥುನ ಕನ್ಯ, ಈ ನಾಲ್ಕು ಕ್ಷೇತ್ರಗಳು ಜನ್ಮಲಗ್ನವಾದರೆ, ಚಂದ್ರಾಧಿಷ್ಠಿತವಾದ ಕುಜಾದಿ ತ್ರಿಂಶಾಂಶೆಗಳಲ್ಲಿ ಹುಟ್ಟಿದ ಸ್ತ್ರೀಯರ ಗುಣಾತಿಶಯಗಳು ಹೇಳಲ್ಪಡುತ್ತೆ. ಪೂರ್ವ ಶ್ಲೋಕದಲ್ಲಿ ವಕ್ರಾರ್ಕಿಜೀವೆಂದುಜಭಾರ್ಗವಾನಾಂ ಅಂಶಕೇಷು ಎಂಬುವ ವಾಕ್ಯವನ್ನು ಈ ಶ್ಲೋಕಕ್ಕೂ ಅನ್ವಯಿಸಬೇಕು.

ಟೀಕು।। ಅಸುರಪೂಜಿತರ್ಕ್ಷೇ-ಶುಕ್ರಕ್ಷೇತ್ರಗಳಾದ ವೃಷಭ, ತುಲಾ ರಾಶಿಗಳಲ್ಲಿ ಒಂದು ಲಗ್ನವಾದರೂ, ಚಂದ್ರಾದಿಷ್ಠತವಾದರೂ, ಕುಜ ತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ದುಷ್ಟಾ-ದುರ್ಮಾರ್ಗಿಯಾಗುವಳು, ಶನಿ ತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ ಪುನರ್ಭೂಃ-ವಿವಾಹಾನಂತರ ಮತ್ತೊಬ್ಬ ಪುರುಷನನ್ನು ವಿವಾಹಮಾಡಿಕೊಳ್ಳುವಳು, ಗುರುತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಸುಗುಣಾ-ಸಚ್ಛೀಲಸ್ವಭಾವವಾದ ಗುಣವುಳ್ಳವಳಾಗುವಳು, ಬುಧತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ ಕಲಾಜ್ಞಾ-ಗೀತಾದಿ ಶಾಸ್ತ್ರವನ್ನು ತಿಳಿದವಳಾಗುವಳು, ಶುಕ್ರತ್ರಿಂಶಾಂಶೆಯಲ್ಲಿರುವಾಗ ಹುಟ್ಟಿದ ಸ್ತ್ರೀ, ಗುಣ್ಯೈಃ-ಸೌಶೀಲ್ಯಾದಿ ಗುಣಗಳಿಂದ, ಖ್ಯಾತಾ-ಪ್ರಸಿದ್ಧಳಾಗುವಳು, ಈ ವಿಷಯಕ್ಕೆ ।।ಶ್ಲೋಕ।।ಜಾ.ಭ।। ದೇವಾಚಾರ್ಯಗೃಹೇಮೃತಾಂಶುರಥವಾ ಲಗ್ನಂಖವನ್ಹ್ಯಂಶಕೇ ಭೂಸೂನೋರ್ಗುಣಶಾಲಿನೀಸುರಗುರೋಃ ಖ್ಯಾತಗುಣಾನಾಂ ಗಣ್ಯೈ। ತಾರಾ ಸ್ವಾಮಿ ಸುತಸ್ಯ ಚಾರುವಿಭವಾ ಶುಕ್ರಸ್ಯಸಾಧ್ವೀಭವೇನ್ನೂನಂ ಭಾನುಸುತಸ್ಯ ಚಾಲ್ಪ ಸುರತಾ ಕಾಂತಾ ಬುಧ್ಯೈಃಕೀರ್ತಿತಾ ।।೧೨।।

## ಬುಧಕ್ಷೇತ್ರತ್ರಿಂಶಾಂಶ ಫಲಂ

ಬೌಧೇ-ಬುಧಕ್ಷೇತ್ರಗಳಾದ ಮಿಥುನ ಕನ್ಯಾರಾಶಿಗಳಲ್ಲಿ ಒಂದು ಲಗ್ನವಾಗಲೀ, ಚಂದ್ರಾಧಿಷ್ಠಿತವಾಗಲೀ, ಆಗಿರುವಾಗ ಹುಟ್ಟಿದ ಸ್ತ್ರೀಯ ಗುಣವು ಹೇಳಲ್ಪಡುತ್ತೆ. ಕುಜತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಕಾಪಟೀ-ಕಪಟಗುಣವುಳ್ಳವಳು, ಶನಿ ತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಕ್ಲೀಬಸಮಾ-ನಪುಂಸಕ ಸಮಾನಳಾಗುವಳು, ಈ ವಿಷಯಕ್ಕೆ ।।ಶ್ಲೋಕ।। ಶಾರೀರಕೇ।। ಋತೌಪುರುಷ ವದ್ಭಾಮಾ ಪ್ರವರ್ತೇ-ತಾಂಗನಾಯದಿ । ತತ್ರಕನ್ಯಾಯದಿ ಭವೇತ್ಸಾಭವೇನ್ನರ ಚೇಷ್ಟಿತಾ ।। ಎಂದು ಪ್ರಮಾಣ।। ಗುರುತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಸತೀಪತಿವ್ರತಾ ಶಿರೋಮಣಿ ಯಾಗುವಳು. ಬುಧತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ ಗುಣಾಢ್ಯಾ- ಸುಗುಣಾಧಿಕ

ಉಳ್ಳವಳಾಗುವಳು. ಶುಕ್ರತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ ಪ್ರವಿದೀರ್ಣ ಕಾಮಾ-*ಅನೇಕ ಪುರುಷರಿಂದ ವ್ಯಾಪಿಸಿದರೂ ಕಾಮಪೂರ್ತಿಯಾಗದೇ ಇರುವಳೂ ಆಗುತ್ತಾಳೆ. ಈ ವಿಷಯದಲ್ಲಿ ||ಶ್ಲೋಕ|| ಜಾ.ಭರಣೇ|| ತಾರಾ ನಾಯಕ ಪುತ್ರಭೇ ವನಿಸುತ ತ್ರಿಂಶಲ್ಲವೇ ಕಾರ್ಪಟಾ ಶೌಕ್ರೇಹೀನಮನೋಭವಾ ಶಶಿ ಸುತಸ್ಯಾತೀವ ಯುಕ್ತಾಗುಣೈಃ। ದೇವಾಧೀಶ ಪುರೋಹಿತಸ್ಯಹಿ ಭವೇತ್ಸಾದ್ವೀ ನಿತಾಂತಂ ತಥಾ ಖಾಗ್ನೈಂತೇರ್ಕಸುತಸ್ಯಸಾ ನಿಗದತಾ ಕ್ಲೀಬಸ್ಯಭಾರ್ಯಾ ಬುಧೈಃ ||೧೩||

## ಚಂದ್ರ, ರವಿ, ಗುರು, ಶನಿ ಕ್ಷೇತ್ರಸ್ಥಿತ ಲಗ್ನಚಂದ್ರತ್ರಿಂಶಾಂಶಫಲಂ

ಮೂಲ|| ಸ್ವಚ್ಛಂದಾಚತಿನೀ ಬಹುಗುಣಾ ಶಿಲ್ಪಿನ್ಯ ಸಾಧ್ವೀಂದುಭೇ । ನ್ಸಾಚಾರುಕಲಟಾರ್ಕಭೇ ನೃಪವಧೂ ಪುಂಶ್ಚೇಷ್ಟಿತಾ ಗಮ್ಯಗಾ ॥ ಜೈ ವೇಸ್ಯೈಕಗುಣಾಲ್ಪರತ್ಯತ್ರಿಗುಣಾ ವಿಜ್ಞಾನಯುಕ್ತಾಸತಿ । ದಾಸೀ ನೀಚರತಾರ್ಕಿಭೇಪತಿರತಾ ದುಷ್ಟಾಪ್ರಜಾಸ್ವಾಂತಕೈಃ ||೫||

ಅವತಾರಿಕೆ|| ಚಂದ್ರ, ರವಿ, ಗುರು, ಶನಿಕ್ಷೇತ್ರಗಳಲ್ಲಿ ಅಂದರೆ-ಕರ್ಕಾಟಕ, ಸಿಂಹ, ಧನುಃ, ಮೀನ, ಮಕರ, ಕುಂಭ, ಈ ರಾಶಿಗಳಲ್ಲಿ ಸ್ತ್ರೀಜನ್ಮಲಗ್ನವಾಗಿಯಾಗಲಿ ಇದ್ದರೂ, ಆ ಕಾಲದಲ್ಲಿ ಹುಟ್ಟಿದ ಸ್ತ್ರೀ ಲಕ್ಷಣಗಳು ಹೇಳಲ್ಪಡುತ್ತೆ.

### ಕಟಕರಾಶೌ ತ್ರಿಂಶಾಂಶಫಲಂ

ಟೀಕು|| ಇಂದುಭೇ-ಕರ್ಕಾಟಕವು ಲಗ್ನವಾಗಲೀ ಚಂದ್ರಾಧಿಷ್ಠಿತರಾಶಿಯಾಗಿ ಯಾಗಲೀ ಆಗಿ ಕುಜ ತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಸ್ವಚ್ಛಂದಾ-ಹೆಚ್ಚಿದ ವ್ಯಭಿಚಾರಿಣಿಯಾಗುವಳು. ಶನಿತ್ರಿಂಶಾಂಶೆಯಲ್ಲಿ ಹುಟ್ಟಿದವಳು, ಪತಿಘಾತಿನೀ-ಗಂಡನನ್ನೇ ಕೊಲ್ಲುವಳು ಗುರುತ್ರಿಂಶಾಂಶೆಯಲ್ಲಿ ಹುಟ್ಟಿದವಳು ಬಹುಗುಣಾ-ಅನೇಕ ಸುಗುಣಗಳಿಂದ ಕೂಡಿದವಳಾಗುವಳು. (*ಬಹುಸುತಾ ಎಂದು ಪಾಠಾಂತರವಿರುವದು) ಬುಧ ತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಶಿಲ್ಪಿನೀ-ಶಿಲ್ಪಕರ್ಮವುಳ್ಳವಳಾಗುವಳು, ಶುಕ್ರ ತ್ರಿಂಶಾಂಶೆಯಲ್ಲಿ ಹುಟ್ಟಿದವಳು, ಅಸಾಧ್ವೀ-ವ್ಯಭಿಚಾರಿಣಿಯಾಗುವಳು. ಈ ವಿಷಯಕ್ಕೆ ಜಾ.ಭ ||ಶ್ಲೋಕ|| ಚಂದ್ರಾಗಾರೇಖಾಗ್ನಿಭಾಗೇ ಕುಜಸ್ಯ ಸ್ವೇಚ್ಛಾ ವೃತ್ತಿರ್ಯಸ್ಯ ಶಿಲ್ಪೇಪ್ರವೀಣಾ। ವಾಚಾಂಪತ್ಯುಃ ಸದ್ಗುಣಾ ಭಾರ್ಗವಸ್ಯಸಾಧ್ವೀ ಮಂದಸ್ಯಪ್ರಿಯ ಪ್ರಾಣಹಂತ್ರೀ ॥

* ವ್ಯಭಿಚಾರಿಣೀ.

*ಪಾ|| ಬಹುಸುತಾ, ಉತ್ತರೀಯಪಾಠ

## ಸಿಂಹರಾಶೌ ತ್ರಿಂಶಾಂಶಫಲಂ

ಆರ್ಕಭೇ-ಸಿಂಹಲಗ್ನವಾಗಲಿ, ಸಿಂಹರಾಶಿಯಲ್ಲಿ ಚಂದ್ರನಿರುವಾಗ ಅಥವಾ ಲಗ್ನವಾದಾಗ ಸ್ತ್ರೀ ಲಕ್ಷಣವು ಹೇಳಲ್ಪಡುತ್ತೆ. ಕುಜತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, *ನ್ರಾಚಾರಾ-ಪುರುಷಾಚಾರವುಳ್ಳವಳಾಗುವವಳು. (ವಾಚಾಟಾ ಎಂದು ಪಾಠಾಂತರ ವಿರುವುದು) ಅಂದರೆ (ಬಹುಭಾಷಿನಿಯಾಗುವವಳು) ಶನಿತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಕುಲಟಾ-ವ್ಯಭಿಚಾರಿಣೆಯಾಗುವವಳು. ಗುರುತ್ರಿಂಶಾಂಶೆಯಲ್ಲಿ ಹುಟ್ಟಿದವಳು. ನೃಪವಧೂಃ-ರಾಜಪತ್ನಿ (ಪಟ್ಟದರಾಣಿಯಾಗುವವಳು), ಬುಧತ್ರಿಂಶಾಂಶೆಯಲ್ಲಿ ಹುಟ್ಟಿದವಳು, ಪುಂಶ್ಚೇಷ್ಟಿತಾ-ಪುರುಷಸ್ವಭಾವ (ಗಂಡುಬೀರಿಯಾಗುವವಳು ಶುಕ್ರತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ಆಗಮ್ಯಗಾ-ಹೊಂದಬಾರದ ಪುರುಷನನ್ನು ಹೊಂದುವವಳು, ಅಗಮ್ಯಗಾ-ಎಂದರೆ, ವಾವೆ, ವರಸೆ ಇಲ್ಲದೆ, ಪುರುಷಾಪೇಕ್ಷೆ ಯಿಂದ ಸಂಸರ್ಗವುಳ್ಳವಳಾಗುವವಳೆಂದು ಕೆಲವರು ಹೇಳುವರು. ಈ ವಿಷಯಕ್ಕೆ ॥ಶ್ಲೋಕ॥ಜಾ.ಭ॥ ಲಗ್ನೇವಾ ವಿಧುರರ್ಕಮಂದಿರ ಗತೋಭೌಮಸ್ಯಖಾಗ್ನ್ಯಂಶಕೇ ಸ್ವೋಚ್ಛಾಸಂಚರಣೋ ದ್ಯತಾಶ ಶಿಸುತ ಸ್ಯಾತೀವದುಷ್ಟಾಶಯಾ। ದೇವಾಧೀಶ ಪುರೋಧಸೋ ನಿಗದಿತಾಸಾರಾಜಪತನೀ ಭೃಗೋಃ ಪೌಂಶ್ಚಲ್ಯಾಭಿರತಾ ಶನೇ ರತಿತರಾಂಪುಂ ವತ್ತ್ವಗಲ್ಪಾಂಗನಾ ॥೧೫॥

## ಗುರುಕ್ಷೇತ್ರ ತ್ರಿಂಶಾಂಶಫಲಂ

ಜೈವೇ-ಗುರುಕ್ಷೇತ್ರಗಳಾದ, ಧನೂಮೀನರಾಶಿಗಳು ಜನ್ಮಲಗ್ನವಾಗಿಯಾದರೂ, ಚಂದ್ರಾದಿಷ್ಠಿತವಾಗಿಯಾದರೂ ಇರುವಾಗ ಹುಟ್ಟಿದ ಸ್ತ್ರೀ ಲಕ್ಷಣವು ಹೇಳಲ್ಪಡುತ್ತೆ. ಕುಜತ್ರಿಂಶಾಂಶೆಯಲ್ಲಿ ಹುಟ್ಟಿದ ಸ್ತ್ರೀ, ನೈಕಗುಣಾ-ಬಹುಸುಗುಣಗಳಿಂದ ಶೋಬಿಸುವಳು, (ನೈಕಗತಾ ಇತಿಪಾಠಃ) ನೈಕಗತಾ-ಬಹುಪುರುಷಗಾಮಿಯಾಗುವಳು. ಅಂದರೆ, ಹಾದರಗಿತ್ತಿ ಎಂದರ್ಥ. ಶನಿತ್ರಿಂಶಾಂಶೆಯಲ್ಲಿ ಹುಟ್ಟಿದವಳು, ಅಲ್ಪರತಿಃ-ಅಲ್ಪವಾದ ರತಿಸುಖಕ್ಕೆ ತೃಪ್ತಿಹೊಂದುವವಳು. ಗುರುತ್ರಿಂಶಾಂಶೆಯಲ್ಲಿ ಹುಟ್ಟಿದವಳು. ಅತಿ ಗುಣಾ-ಬಹುಗುಣವತಿಯಾಗುವಳು, ಬುಧತ್ರಿಂಶಾಂಶೆಯಲ್ಲಿ ಹುಟ್ಟಿದವಳು ವಿಜ್ಞಾನ ಶಾಸ್ತ್ರಜನ್ಯ ಪಂಡಿತಳಾನಾಗುವವಳು. ಈ ವಿಷಯಕ್ಕೆ ॥ಶ್ಲೋಕ॥ ಜಾ.ಬ॥ ದೇವಾಚಾರ್ಯ ಗೃಹೇಮೃತಾಂಶುರಥವಾ ಲಗ್ನಂಖಿವನ್ಹ್ಯಂಶಗೇ ಭೂಸೂನೋರ್ಗುಣಶಾಲಿನೀ ಸುರಗುರೋಃ ಖ್ಯಾಗುಣಾನಾಂಗಣ್ಯೈಃ । ತಾರಾಸ್ವಾಮಿ ಸುತಸ್ಯ ಚಾರುವಿಭವಾ ಶುಕ್ರಸ್ಯ ಸಾಧ್ವೀ ಭವೇನ್ಸೂನು ಭಾನುಸುತಸ್ಯಚಾಲ್ಪಸುರತಾ ಕಾಂತಾ ಬುಧ್ಯೈಃ ಕೀರ್ತಿತಾ॥೧೬॥

* ವಾಚಾಟಾ ಎಂದು ಉತ್ತರದೇಶದ ಪಾಠಾಂತರ.

## ಶನಿಕ್ಷೇತ್ರ ತ್ರಿಂಶಾಂಶಫಲಂ

ಅರ್ಕಿಭೇ-ಶನಿಕ್ಷೇತ್ರಗಳಾದ ಮಕರ ಕುಂಭಲಗ್ನಗಳಲ್ಲೊಂದು ಜನ್ಮಲಗ್ನವಾಗಲಿ, ಚಂದ್ರಸ್ಥಿತರಾಶಿಯಾಗಲಿ ಆಗಿ, ಕುಜತ್ರಿಂಶಾಂಶೆಯಲ್ಲಿ ಹುಟ್ಟಿದವಳು, ದಾಸಿ-ದಾಸಿಯಾಗುವಳು. ಶನಿತ್ರಿಂಶಾಂಶೆಯಲ್ಲಿ ಹುಟ್ಟಿದವಳು, ನೀಚರತಾ-ನೀಚ ಪುರುಷರ ಸಂಗ ಮಾಡುವಳು. ಗುರು ತ್ರಿಂಶಾಂಶೆಯಲ್ಲಿ ಹುಟ್ಟಿದವಳು ಪತಿವ್ರತಾ-ಪತಿಭಕ್ತಿಯಿಂದ ಸೇವಿಸುವವಳಾಗುವಳು. ಬುಧತ್ರಿಂಶಾಂಶೆಯಲ್ಲಿ ಹುಟ್ಟಿದವಳು, ದುಷ್ಟಾ- ಕೆಟ್ಟನಡತೆಯುಳ್ಳವಳಾಗುವಳು. ಶುಕ್ರತ್ರಿಂಶಾಂಶೆಯಲ್ಲಿ ಹುಟ್ಟಿದವಳು, ಅಪ್ರಜಾ-ಗೊಡ್ಡಿ (ಬಂಜೆ) ಯಾಗುವಳು. ಈ ವಿಷಯದಲ್ಲಿ ಜಾ.ಭ॥ಶ್ಲೋಕ॥
ಮಂದಾಲಯೇ ಖಾಗ್ನಿಲವೇ ಕುಜಸ್ಯದಾಶೀಚ ಸೌಮ್ಯಸ್ಯ ಖಲಾಹಿಬಾಲಾ ।
ಬೃಹಸ್ಪತೇಃಸ್ಯಾತ್ರತಿ ದೇವತಾಸಾ ವಂಧ್ಯಾಬೃಗೋರ್ನೀಚರತಾರ್ಕಸೂನೋಃ ॥೨೭॥
ಎಂದು ಹೇಳಲ್ಪಟ್ಟಿರುತ್ತೆ. ಈ ತ್ರಿಂಶಾಂಶ ಫಲವು ವೃದ್ಧಯವನಾಚಾರ್ಯರಿಂದಲೂ ಈ ಪ್ರಕಾರವಾಗಿಯೇ ಹೇಳಲ್ಪಟ್ಟಿರುವುದು. ಆ ವಿಷಯವನ್ನು ಮೇಷರಾಶಿ ಮೊದಲುಗೊಂಡು ಮೀನಾಂತ್ಯವಾಗಿ ಇಲ್ಲಿ ಉದಹರಿಸಿರುತ್ತೆ. ಶ್ಲೋಕ॥
ಕನ್ಯೈವಾರಗರ್ಝಹೇ ದುಷ್ಟಾ ಭೌಮತ್ರಿಂಶಾಂಶಕೇ ಭವೇತ್। ಕುಚರಿತ್ರಾ ತಥಾಶೌಕ್ರೇ ಸಮಾಯಾ ಬೌಧಗೇಜಲಾ ॥೧೮॥ ಜೈವೇಸಾಧ್ವ್ಯರ್ಕಜೇ ದಾಸೀಜ್ಞರ್ಕ್ಷೇ ಕೌಜೇತು ಕಾಪಟೀ। ಶೌಕ್ರೇ ವಿಕೀರ್ಣ ಕಾಮಾಚಬೌಧೇ ಗುಣವತೀ ಭವೇತ್॥೧೯॥ ಜೈವೇ ಸತೀಶನೌ ಕ್ಲೀಬಾಕೌಜೇ ದುಷ್ಟಾಸಿತರ್ಕ್ಷಗೇ । ಶೌಕ್ರೇಖ್ಯಾತಾ ಗುಣೈರ್ಬೌಧೇ ಕಲಾ ಸುನಿಪುಣಾನುತಾ ॥ ಜೈವೇ ಗುಣಾನ್ವಿತಾ ಮಂದೇ ಪುನರ್ಭೂಶ್ಚಂದ್ರಭೇನುತಾ। ಸ್ವಚ್ಛಂದಾ ವನಿತಾ ಕೌಜೇ ಗುಣಾಸ್ಸತಾ। ಪತಿಘ್ನಾರ್ಕೌರ್ಕಭೇ ಕೌಜೇನ್ರಾಚಾರಾ ಭಾರ್ಗವೇಸತಿ ॥೨೨॥ ಬೌಧೇಪುಂಶ್ಚೇಷ್ಟಿತಾಜೈವೇ ರಾಜ್ಞೀಮಾಂದೇ ಕುಲಚ್ಯತಾ। ಜೀವರ್ಕ್ಷಗೇ ಬಹುಗುಣಾ ಕೌಜೇಶೌಕ್ರೇ ಸತೀಸ್ಸತಾ ॥೨೪॥ ಬುಧೇ ವಿಜ್ಞಾನ ಸಂಪನ್ನಾ ಜೈವೇ *ನೈಕಗುಣಾಸ್ಸತಾ। ಮಾಂದೇ ಜನ್ಯರತಾಪ್ರೋಕ್ತಾದಾಸೀ ಕೌಜೇತ ಕಾರ್ಕಿಭೇ ॥೨೪॥ ಅಪ್ರಜಾಚ ಭವೇಚ್ಛೌಕ್ರೇ ಬೌದ್ರೇ ದುಷ್ಟಾ ಖಲಾತಥಾ । ಜೈವೇ ಪತಿವ್ರತಾ ನಿತ್ಯಂ ಮಾಂದೇ ನೀಚಾನುಸೇವಿನೀ ॥೨೫॥

- ಮುಂದುವರೆದಿದೆ -

* ಉತ್ತರದೇಶದ ಪುಸ್ತಕದಲ್ಲಿ ನೈಕಗತಾ ಎಂದಿರುತ್ತೆ.

## ತ್ರಂಶಾಂಶಫಲ ವಿವರಣೆ
## ಜನ್ಮಲಗ್ನವಾಗಲೀ ಚಂಡ್ರಾಧಿಷ್ಠಿತರಾಶಿ ತ್ರಿಂಶಾಂಶ ಫಲವು

| ಕ್ಷೇತ್ರ | ತ್ರಿಂಶಾಂಶ | ಫಲ |
|---|---|---|
| ಕುಜಕ್ಷೇತ್ರ ಮೇಷ ಮತ್ತು ವೃಶ್ಚಿಕ | ಕುಜ | ಮದುವೆಗೆ ಮುಂಚೆಯೇ ಪುರುಷ ಸಂಪರ್ಕ ಮಾಡುವಳು |
| | ಶನಿ | ದಾಸೀಭಾವ ಹೊಂದುವಳು |
| | ಗುರು | ಪತಿವ್ರತೆಯಾಗುವಳು |
| | ಬುಧ | ಮಾಯಾವತಿ (ಮೋಸಗಾತಿ) |
| | ಶುಕ್ರ | ದುರಾಚಾರವುಳ್ಳವಳು |
| ಶುಕ್ರಕ್ಷೇತ್ರ ವೃಷಭ ಮತ್ತು ತುಲ | ಕುಜ | ದುರ್ಮಾರ್ಗಿಯಾಗುವಳು |
| | ಶನಿ | ವಿವಾಹಾನಂತರ ವಿವಾಹವನ್ನು ಮಾಡಿಕೊಳ್ಳುವಳು. |
| | ಗುರು | ಸುಗುಣವುಳ್ಳವಳು |
| | ಬುಧ | ಗೀತಾದಿ ಶಾಸ್ತ್ರವನ್ನು ತಿಳಿದವಳು |
| | ಶುಕ್ರ | ಸೌಶೀಲ್ಯಾದಿ ಗುಣವುಳ್ಳವಳು, ಪ್ರಸಿದ್ಧಳು. |
| ಬುಧಕ್ಷೇತ್ರ ಕನ್ಯಾ ಮತ್ತು ಮಿಥುನ | ಕುಜ | ಕಪಟಗಾರಳು |
| | ಶನಿ | ನಪುಂಸಕಳು |
| | ಗುರು | ಪವಿವ್ರತೆ |
| | ಬುಧ | ಸುಗುಣಗಳು ಅಧಿಕವಾಗಿ ಉಳ್ಳವಳು |
| | ಶುಕ್ರ | ಅನೇಕ ಪುರುಷರಿಂದಲೂ ತಾನು ತೃಪ್ತಿ ಹೊಂದದವಳು |
| ಚಂದ್ರ ಕ್ಷೇತ್ರ ಕರ್ಕಾಟಕ | ಕುಜ | ಯಥೇಚ್ಛವಾಗಿ ಜಗಳ ಮಾಡುವಳು |
| | ಶನಿ | ಗಂಡನನ್ನು ಕೊಂದು ಸಂತೋಷ ಪಡುವಳು |
| | ಗುರು | ಅನೇಕ ಸುಗುಣವುಳ್ಳವಳು ಪಾ. ಬಹುಸುತೆ |
| | ಬುಧ | ಶಿಲ್ಪ ಕರ್ಮ ತಿಳಿದವಳು |
| | ಶುಕ್ರ | ವ್ಯಭಿಚಾರಿಣಿ |

| | | |
|---|---|---|
| ರವಿ ಕ್ಷೇತ್ರ ಸಿಂಹರಾಶಿ | ಕುಜ | ಪುರುಸ್ವಭಾವದವಳು (ಗಂಡುಬೀರಿ) (ಬಹುಭಾಷಿಣಿ ಎಂದು ಪಾಠಭೇದವಿದೆ |
| | ಶನಿ | ವ್ಯಭಿಚಾರಿಣಿ |
| | ಗುರು | ರಾಜನ ಪಟ್ಟದ ರಾಣಿಯಾಗುವಳು |
| | ಬಧ | ಪುರುಷ ಸ್ವಭಾವ ಉಳ್ಳವಳು |
| | ಶುಕ್ರ | ಹೊಂದಬಾರದ ಗಂಡನನ್ನು ಹೊಂದುವಳು |
| ಗುರು ಕ್ಷೇತ್ರ ಧನುಸ್ಸು ಮತ್ತು ಮೀನ | ಕುಜ | ಬಹುಗುಣವುಳ್ಳವಳು. ಪಾ॥ ಬಹು ಪುರುಷಗಾಮಿನಿ |
| | ಶನಿ | ಅಲ್ಪವಾದ ರತಿಯುಳ್ಳವಳು |
| | ಗುರು | ಬಹು ಗುಣವತಿ |
| | ಬುಧ | ಶಾಸ್ತ್ರ ಜನ್ಯಜ್ಞಾನವುಳ್ಳವಳು |
| | ಶುಕ್ರ | ವ್ಯಭಿಚಾರಿಣಿಯಾಗುವಳು |
| ಶನಿಕ್ಷೇತ್ರ ಮಕರ ಮತ್ತು ಕುಂಭ | ಕುಜ | ದಾಸಿಯಾಗುವಳು |
| | ಶನಿ | ನೀಚಪುರುಷಗಾಮಿನಿ |
| | ಗುರು | ಪತಿಭಕ್ತಿಯುಳ್ಳವಳು |
| | ಬುಧ | ದುರ್ಮಾರ್ಗಿಯಾಗುವಳು |
| | ಶುಕ್ರ | ಗೊಡ್ಡಿ (ಬಂಜೆ) ಯಾಗುವಳು |

ಮೂಲ॥ ಶಶಿಲಗ್ನ ಸಮಾಯುಕ್ತೈಃ ಫಲಂತ್ರಿಂಶಾಂಶಕೈರಿದಂ ॥ ಬಲಾಬಲ ವಿಕಲ್ಪೇನ ತಯೋರುಕ್ತ ವಿಚಿಂತಯೇತ್ ॥೬॥

ಅವತಾರಿಕೆ ॥ ಈ ಮೇಲೆ ಹೇಳಲ್ಪಟ್ಟ ತ್ರಿಂಶಾಂಶ ಫಲವನ್ನು ಈ ಶ್ಲೋಕದಿಂದ ಉಪಸಂಹಾರ ರೂಪಕವಾಗಿ ಬಲಾಬಲ ವಿವೇಚನದಿಂದ ತಿಳಿಯಬೇಕೆಂದು ಹೇಳಲ್ಪಡುತ್ತೆ.

ಟೀಕು॥ ಶಶಿಲಗ್ನ ಸಮಾಯುಕ್ತೈ-ಚಂದ್ರಲಗ್ನಗಳನ್ನು ಕೂಡಿದ್ದು, ತ್ರಿಂಶಾಂಶಕೈ-ಕುಜಾದಿ ತ್ರಿಂಶಾಂಶಗಳಿಂದ ಉಕ್ತಂ-ಹೇಳಲ್ಪಟ್ಟ ಇದಂಫಲಂ-ಈ ಮೇಲೆ ಹೇಳಲ್ಪಟ್ಟ ಫಲಗಳು, ತಯೋಃ-ಆ ಚಂದ್ರಲಗ್ನವಿರುವ ರಾಶಿಗಳ, ಬಲಾಬಲ ವಿಕಲ್ಪನೇ-ಬಲದುರ್ಬಲಗಳ ವಿವೇಚನದಿಂದ, ವಿಚಿಂತಯೇತ್-ವಿಚಾರಮಾಡಿ ತಿಳಿಯತಕ್ಕದ್ದು. ಅದು ಹೇಗೆಂದರೆ:- ಯಾವ ರಾಶಿಯಲ್ಲಿ ಯಾವ ಗ್ರಹಸಂಬಂಧವಾದ

ತ್ರಿಂಶಾಂಶೆಯಲ್ಲಿ ಚಂದ್ರನಿರುವನೋ, ಆ ಚಂದ್ರ ತ್ರಿಂಶಾಂಶಾಧಿಪತಿ ಬಲಿಷ್ಠನಾಗಿದ್ದರೆ ಮತ್ತು ಲಗ್ನವು ಯಾವ ತ್ರಿಶಾಂಶೆಯಲ್ಲಿರುವುದೋ ಆ ತ್ರಿಂಶಾಂಶಾಧಿಪತಿಯ ಬಲ ವಿಚಾರದಿಂದ ಇವರಿಬ್ಬರಲ್ಲಿ ಯಾರು ಬಲಿಷ್ಠರಾದವರೋ ಅವರಿಂದ ತಿಳಿಯಬೇಕು. ಚಂದ್ರ ತ್ರಿಂಶಾಂಶಾಧಿಪತಿ ಬಲಿಷ್ಠನಾಗಿ ಲಗ್ನತ್ರಿಂಶಾಂಶಾಧಿಪತಿ ದುರ್ಬಲನಾಗಿದ್ದರೆ, ಆಗ ಚಂದ್ರತ್ರಿಂಶಾಂಶೆಯನ್ನು ಅಂಗೀಕರಿಸಿ, ಫಲವನ್ನು ಹೇಳಬೇಕು. ಲಗ್ನ ತ್ರಿಂಶಾಂಶಧಿಪತಿ ಬಲಿಷ್ಠನಾಗಿ ಚಂದ್ರತ್ರಿಂಶಾಂಶೆಧಿಪತಿ ದುರ್ಬಲನಾಗಿದ್ದರೆ, ಆಗ ಲಗ್ನ ತ್ರಿಂಶಾಂಶಾಧಿಪತಿಯನ್ನೂ ಅಂಗೀಕರಿಸಬೇಕು. ಇದರಲ್ಲಿ ಬಲಿಷ್ಠನಾದ ತ್ರಿಂಶಾಂಶಾಧಿಪತಿಗೆ ಹೇಳಿರುವ ಫಲವು ಆ ಸ್ತ್ರೀಗೆ ಉಂಟಾಗುತ್ತೆ. ಈ ವಿಷಯದಲ್ಲಿ ॥ ವೃದ್ಧಯಾವನದಲ್ಲಿ ॥ಶ್ಲೋಕ॥ ಲಗ್ನೇಂದ್ವೋರ್ಯೋ ಬಲವಾಂಸ್ತತ್ತ್ರಿಂಶಾಂಶಾಧಿಪಿತ್ಯೈಃ ಫಲಂಕ್ರಮಶಃ। ಭೂಸುತಭಾರ್ಗವ ಬೋಧನಸುರಪತಿ ಗುರುತೀವ್ರ ಕರಪುತ್ರೈಃ॥೨೬॥

## ಮದನವಿಷಾನಲ ಅತೃಪ್ತಿಯೋಗಃ

ಮೂಲ॥ ದೃಕ್ಸಂಸ್ಥಾವತತಸಿತೌ ಪರಸ್ಪರಾಂಶೇ ಶೌಕ್ರೇವಾಯದಿ ಘಟರಾಶಿ ಸಂಭವೋ ನವಾಂಶಃ ಸ್ತ್ರೀಭಿಃ ಸ್ತ್ರೀಮದನ ವಿಷಾನಲಂ ಪ್ರದೀಪ್ತಂ ಸಂಶಾಂತಿಂ ನಯತಿ ನರ್ಾಕೃತಿಸಿತಾಭಿಃ ॥೭॥

ಅವತಾರಿಕೆ॥ ಯಾವ ಯೋಗದಲ್ಲಿ ಹುಟ್ಟಿದ ಸ್ತ್ರೀ ತನ್ನ ಕಾಮೋದ್ರೇಕದಿಂದ ಪುರುಷಸಂಸರ್ಗವಾಗಿ ತೃಪ್ತಿಯಾಗದೆ ಚರ್ಮಮಯಲಿಂಗಧಾರಿಣಿಯಾದ ಸ್ತ್ರೀಯಿಂದ ಕಾಮಶಮನ ಮಾಡಿಕೊಳ್ಳುವುಳೋ ಅಂಥಾ ೨ ಯೋಗಗಳು ಹೇಳಲ್ಪಡುತ್ತೆ.

ಟೀಕು॥ ಅಸಿತಸಿತೌ-ಶನೈಶ್ಚರಶುಕ್ರರು, ಪರಸ್ಪರರಾಂಶೇ-ಯಾವ ರಾಶಿಯಲ್ಲಿ ಯಾದರೂ, ಶನೈಶ್ಚರ ನವಾಂಶೆಯಲ್ಲಿ ಶುಕ್ರನು ಶುಕ್ರನವಾಂಶೆಯಲ್ಲಿ ಶನೈಶ್ಚರನು ಇದ್ದು, ದೃಕ್ಸಂಸ್ಥೌ-ಒಬ್ಬರಿಗೊಬ್ಬರು ನೋಡಿದರೆ ೧ ಯೋಗ, ಶೌಕ್ರೇವಾ-ಶುಕ್ರಕ್ಷೇತ್ರಗಳಾದ ವೃಷಭ, ತುಲಾರಾಶಿಗಳಲ್ಲಿ ಒಂದುರಾಶಿ ಜನ್ಮಲಗ್ನವಾಗಿ ಘಟರಾಶಿಸಂಭವಾಂಶೋ ಯದಿ-ಕುಂಭರಾಶಿ ನವಾಂಶಜನ್ಮವಾದರೆ ೨ನೆ ಯೋಗ. ಈ ಎರಡು ಯೋಗಗಳಲ್ಲಿ ಯಾವದಾದರೂ ಒಂದು ಯೋಗದಲ್ಲಿ ಹುಟ್ಟಿದ ಸ್ತ್ರೀ, ಪ್ರದೀಪ್ತಂ-ಪ್ರಜ್ವಲಿತವಾದ, ಮದನವಿಷಾನಲಂ-ವಿಷತುಲ್ಯವಾದ ವಿರಹಾಗ್ನಿಯನ್ನು- ನರಾಕೃತಿ ಸ್ಥಿತಾಭಿಃ-ಚರ್ಮಮಯಲಿಂಗಧಾರಿಯಾದ ಸ್ತ್ರೀಯಿಂದ (ಅಂದರೆ ಚರ್ಮಮಯ ಲಿಂಗವನ್ನು ಕಟ್ಟಿಕೊಂಡು ಸ್ತ್ರೀಯನ್ನು ತನ್ನ ಶರೀರದ ಮೇಲೆ ಪುರುಷನಂತೆ ಮಲಗಿಸಿಕೊಂಡು ಸಂಭೋಗ ಮಾಡುವಂತೆ ಮಾಡಿಕೊಂಡು ತೃಪ್ತಿಯನ್ನು ಹೊಂದುವಳು) ಸ್ತ್ರೀಭಿಃ-ಸ್ತ್ರೀಯಿಂದ, ಶಾಂತಂ-ಶಮನವನ್ನು, ನಯತಿ- ಹೊಂದುವಳು, ಈ ಯೋಗವು ೧೪ ತರಗತಿಯುಳ್ಳದ್ದಾಗಿರುವದು ೧೨ ರಾಶಿಗಳು ಲಗ್ನವಾದರೆ ೧ನೇ ಯೋಗ,

ವೃಷಭ, ತುಲಾ ಲಗ್ನವಾದರೆ, ಕುಂಭ ನವಾಂಶಜನ್ಮವಾದರೆ, ೧ ಯೋಗವು, ಈ ವಿಷಯದಲ್ಲಿ ॥ಜಾ.ಭ॥ ಶ್ಲೋಕ॥ ಅನ್ಯೋನ್ಯಭಾಗೇ ಕ್ಷಣಗೌಸಿತಾರ್ಕೀ ಯದ್ವಾಸಿತರ್ಕ್ಷೇ ತನುಗೇ ಘಟಾಂಶೇ । ಕಂದರ್ಪಶಾಂತಿಂ ಕುರುತೇ ನಿತಾಂತಂನರೀನರಾಕಾರಕ ರಾಂಗನಾಭಿಃ ॥೨೭॥ ವೃದ್ದಯಾವನೇ ॥ಶ್ಲೋಕ॥ ಶುಕ್ರಾಸಿದೌ ಯದಿಪರಸ್ಪರ ಭಾಗಸಂಸ್ಥೌ ಶೌಕ್ರೇಚ ದೃಷ್ಟಿವಥ ಗಾವುದಯೇಘಟಾಂಶಾಃ । ಸ್ತ್ರೀಣಾಮತೀವ ಮದನಾಗ್ನಿರಥ ಪ್ರವೃದ್ಧಃ ಸ್ತ್ರೀಭಿಃ ಶಮಂಚ ಪುರುಷಾಕೃತಿಭಿಃ ಲಭೇತ್ಸಃ ॥೨೮॥

## ಪತಿಸ್ವಭಾವ ವಿಚಾರಃ

ಮೂಲ॥ ಶೂನ್ಯೇ ಕಾಪುರುಷೋಬಲೇಸ್ತ ಭವನೇ ಸೌಮ್ಯಗ್ರಹಾವೀಕ್ಷಿತೇ ।
ಕ್ಲೀಬೋಸ್ತೇ ಬುಧಮಂದಯೋಶ್ಚರಗೃಹೇ ನಿತ್ಯಂಪ್ರವಾಸಾಸ್ಥಿತಃ ॥
ಉತ್ಸೃಷ್ಟೌತರಣೌ ಕುಜೇತು ವಿಧವಾ ಬಾಲ್ಯೇಸ್ತರಾಶಿಸ್ಥಿತೇ ।
ಕನ್ಯೈವಾ ಶುಭವೀಕ್ಷಿತೇರ್ಕತನಯೇ ದ್ಯೂನೇಜರಾಂಗಚ್ಛತಿ ॥೮॥

ಅವತಾರಿಕೆ॥ ಪೂರ್ವದಲ್ಲಿ ಅಸ್ತಮಯೇಪತಿಶ್ಚ ಎಂದು ಹೇಳಲ್ಪಟ್ಟಿರುವದರಿಂದ ಸ್ತ್ರೀ ಜನ್ಮಲಗ್ನಕ್ಕೆ ಸಪ್ತಮಸ್ಥಾನದಲ್ಲಿದ್ದ ಗ್ರಹಸ್ವಭಾವದ ಮೇಲೆ ಗಂಡನ ಸ್ಥಿತಿ ಹೇಳಲ್ಪಡುತ್ತೆ.

ಟೀಕು॥ ಅಸ್ತಭವನೇ-ಲಗ್ನಕ್ಕಾಗಲೀ-ಚಂದ್ರನಿಗಾಗಲಿ ಏಳನೇರಾಶಿಯಲ್ಲಿ, ಶೂನ್ಯೇ-ಶೂನ್ಯಗ್ರಹವಾದರೆ ಅಬಲೇ-ಬಲಹೀನನಾದ, ಸೌಮ್ಯಗ್ರಹಾವೀಕ್ಷಿತೇ-ಶುಭ ಗ್ರಹಗಳ ದೃಷ್ಟಿಯಿಲ್ಲದಿದ್ದರೆ, ಅಂಥಾಕಾಲದಲ್ಲಿ ಹುಟ್ಟಿದ ಸ್ತ್ರೀಯ ಪತಿಯು, ಕಾಪುರುಷಃ-ಕುತ್ಸಿತಪುರುಷನಾಗುವನು.

## ನಪುಂಸಕಪತಿಯೋಗಃ

ಅಸ್ತೇ-ಲಗ್ನದಿಂದ ಅಥವಾ ಚಂದ್ರನಿಂದ ಏಳನೆ ರಾಶಿಯಲ್ಲಿ ಬುಧಮಂದಯೋಃ- ಬುಧಶನಿಗಳಲ್ಲಿ ಒಂದಾನೊಂದು ಗ್ರಹವಿರುವಾಗ ಹುಟ್ಟಿದವಳ ಗಂಡನು, ಕ್ಲೀಬಃಷಂಡನಾಗುವನು (ನಪುಂಸಕ ಲಕ್ಷಣ) ಶ್ಲೋಕ॥ ಅಸೇಕ್ಯಶ್ಚಸು ಗಂಧೀಚ ಕುಂಭೀಕ ಶ್ಚೇರ್ಷಕಸ್ತಥಾ । ಸರೇತಸೂಸ್ತ್ವಮೀಜ್ಞೇಯಾ ಅಶುಕ್ರಃ ಷಂಡಪಂಚಮಃ ॥೩೯॥

ತಾ॥ ಅಸೇಕ್ಯ, ಸುಗಂಧೀ, ಕುಂಭೀಕ, ಈರ್ಷಕ, ಈ ನಾಲ್ಕು ವಿಧವಾದ ಷಂಡರಲ್ಲಿ ವೀರ್ಯವು ಅಲ್ಪವಿರುವದು. ಐದನೇ ವಿಧವಾದ ಷಂಡನಲ್ಲಿ ವೀರ್ಯವಿರುವುದಿಲ್ಲ. ಈ ಮೇಲೆ ಹೇಳಲ್ಪಟ್ಟಂಥಾ ನಪುಂಸಕನಾಗುವನು. ಪತಿಯು ಪರದೇಶದಲ್ಲಿರುವನೋ ಅಥವಾ ಸ್ವದೇಶದಲ್ಲಿರುವನೋ, ಎಂಬ ಯೋಗವು

ಹೇಳಲ್ಪಡುತ್ತೆ. ಅಸ್ತೇ-ಚಂದ್ರನಿಗಾಗಲೀ, ಲಗ್ನಕ್ಕಾಗಲೀ ಸಪ್ತಮ ರಾಶಿಚರಗೃಹೇ-ಚರರಾಶಿಯಾದರೆ ನಿತ್ಯಂ-ಸರ್ವಕಾಲದಲ್ಲಿ ಪ್ರವಾಸಾನ್ವಿತಃ-ಸಂಚಾಲಶೀಲನಾಗುವನು. ಸ್ಥಿರರಾಶಿಯಾದರೆ ಸರ್ವಕಾಲದಲ್ಲಿಯೂ ಒಂದೇ ಸ್ಥಳದಲ್ಲಿಯೇ ಇರುವನು. ದ್ವಿಸ್ವಭಾವರಾಶಿಯಾದರೆ, ಕೆಲವುದಿವಸ ಸಂಚರಿಸುವನು. ಕೆಲವು ದಿವಸ ಒಂದೇ ಸ್ಥಳದಲ್ಲಿರುವನೂ ಆಗುವನು. ಲಗ್ನಕ್ಕೆ ಚರರಾಶಿ ಸಪ್ತಮವಾಗಿ, ಚಂದ್ರನಿಂದ ಸಪ್ತಮರಾಶಿ ಸ್ಥಿರರಾಶಿಯಾದರೂ ಮಿಶ್ರವಾದ ಗುಣವುಳ್ಳವನಾಗುವನು. ಈ ಪ್ರಕಾರ ಭೇದವನ್ನು ತಿಳಿಯತಕ್ಕದ್ದು.

## ಪತಿಯಿಂದ ತಿರಸ್ಕರಿಸಲ್ಪಡತಕ್ಕ ಯೋಗವು

ಚಂದ್ರನಿಗಾಗಲೀ, ಲಗ್ನಕ್ಕಾಗಲೀ (ಸಪ್ತಮರಾಶಿಯಲ್ಲಿ) ತರುಣೌ-ಸೂರ್ಯನು, ಅಸ್ತರಾಶಿಸ್ಥಿತೇ-ಸಪ್ತಮರಾಶಿಯಲ್ಲಿದ್ದರೆ, ಪತಿನಾ ಗಂಡನಿಂದ, ಉತ್ಸೃಷ್ಟಾ-ಬಿಡಲ್ಪಡುವಳಾಗುವಳು.

## ಬಾಲ ವಿಧವಾ ಯೋಗವು

ಲಗ್ನಕ್ಕಾಗಲೀ, ಚಂದ್ರನಿಗಾಗಲೀ, ಸಪ್ತಮದಲ್ಲಿ, ಕುಜೇ-ಅಂಗಾರಕನಿದ್ದು, ಅಶುಭವೀಕ್ಷಿತೇ-ಪಾಪಗ್ರಹದಿಂದ ನೋಡಲ್ಪಟ್ಟರೆ ಬಾಲ್ಯೇ-ಬಾಲ್ಯದಲ್ಲಿಯೇ, ವಿಧವಾ-ಗಂಡನನ್ನು ಕಳೆದುಕೊಂಡು ವಿಧವೆಯಾಗುವಳು.

## ವಿವಾಹವಿಲ್ಲದೆ ಇರುವ ಯೋಗವು

ಚಂದ್ರನಿಗಾಗಲೀ, ಲಗ್ನಕ್ಕಾಗಲೀ, ಸಪ್ತಮದಲ್ಲಿ ಅರ್ಕತನಯೇ-ಶನಿಯಿದ್ದರೆ, ಅಶುಭವೀಕ್ಷಿತೇ-ಪಾಪಗ್ರಹದಿಂದ ನೋಡಲ್ಪಟ್ಟರೆ, ಕನ್ಯೈವ-ವಿವಾಹವಿಲ್ಲದೆಯೇ, ಜರಾಂ-ವೃದ್ಧತ್ವವನ್ನು, ಗಚ್ಛತಿ-ಹೊಂದುವಳು, ಇಲ್ಲಿ ಚಂದ್ರನಿಂದಲೂ, ಲಗ್ನ ಸಪ್ತಮಸ್ಥಾನದಲ್ಲಿ, ಬಲಾಬಲ ವಿವೇಚನೆ ಮಾಡಿ ನಿರ್ಣಯ ಮಾಡತಕ್ಕದ್ದು. ಲಗ್ನಕ್ಕೆ ಸಪ್ತಮಸ್ಥಾನದಲ್ಲಿ ಈ ಯೋಗವಿದ್ದು, ಚಂದ್ರನಿಗೆ ಸಪ್ತಮಸ್ಥಾನದಲ್ಲಿ ಈ ಯೋಗವಿಲ್ಲದಿದ್ದರೆ ಉಕ್ತಫಲವಾಗಲಾರದು. ಈ ಪ್ರಕಾರವಾಗಿ ಬಲ ನಿರ್ಣಯಮಾಡಿ ತಿಳಿಯತಕ್ಕದ್ದು. ಈ ವಿಷಯಕ್ಕೆ ।।ಶ್ಲೋಕ।।ಜಾ.ಭ.।। ಶೂನ್ಯೇ ಮನ್ಮಥ ಮಂದಿರೇ ಶುಭಖಗೈರ್ನಾಲೋಕಿತೇ ನಿರ್ಬಲೇ ಬಾಲಾಯಾಃ ಕಿಲನಾಯಕೋ ಮುನಿವರ್ಯೈಃ ಕಾಪೂರುಷಃ ಕೀರ್ತಿತಃ । ಜಾಮಿತ್ರಂ ಬುಧ ಮಂದಯೋ ರ್ಯದಿಗೃಹಂ ಷಂಡೋ ಭವೇನ್ನಿಶ್ಚಿತು । ರಾಶೌ ತತ್ರಚರೇ ವಿದೇಶ ನಿರತೋ ದ್ವ್ಯಂಗೇಚ ಮಿಶ್ರಸ್ಥಿತಃ ।।೩೦।। ಸಪ್ತಮೇ ದಿನಪತೌ ಪತಿಮುಕ್ತಾ ಕ್ಷೋಣಿಜೇಚ ವಿಧವಾಖಲುಬಾಲ್ಯೇ। ಪಾಪಖೇಚರ ವಿಲೋಕನಯಾತೇ ಮಂದಗೇಚ ಯುವತಿರ್ಜರತೀಸ್ಯಾತ್ ।।೩೧।। ವೃದ್ಧಯಾವನೇ

॥ಶ್ಲೋಕ॥ ಶೂನ್ಯೇಸ್ತೇಕಾಪುರುಷೋ ಬಲಹೀನೇ ಸೌಮ್ಯದರ್ಶನೈರ್ಹಿನೇ । ಚರಭೇ ಪ್ರವಾಸಶೀಲಾ ಭರ್ತಾಕ್ಲೀಬೋಜ್ಞ ಸೌರಯೋರ್ದ್ಯೂನೇ ॥೩೨॥ ಉತ್ಸೃಷ್ಟಾ ಸೂರ್ಯೇಸ್ತೇ ಕುಜೇಸ್ತೇ ವಿಧವಾ ಭವೇನ್ನವೋಢೈವ। ಕನ್ಯೈವಾಶುಭದೃಷ್ಟೇ ಶನೈಶ್ಚರೇ ವೃದ್ಧತಾಂಯಾತಿ॥೩೩॥ ಅಶುಭೇ ಋಕ್ಷೇಸ್ತಗತೇ ಅನಪತ್ಯಾಭವೇದ ಶುಭದೃಷ್ಟೇ ಕ್ರೂರೈರ್ವಿಧವಾಸ್ತ ಗತೈರ್ಭವತ ಪುನರ್ಭೂಸ್ತಥಾಮಿಶ್ರೇ ॥೩೪॥ ಈ ಪ್ರಕಾರವಾಗಿ ಅನ್ಯಗ್ರಂಥಾಭಿಪ್ರಾಯವಿರುತ್ತೆ. ಇವೆಲ್ಲವು ಬೃಹಜ್ಜಾತಕಾಭಿಪ್ರಾಯ ವನ್ನನುಸರಿಸಿರುತ್ತೆ. ಆದ್ದರಿಂದ ಇಲ್ಲಿ ಉದಹರಿಸಿರುತ್ತೆ.

ಇಲ್ಲಿ ತಿಳಿಯಬೇಕಾದ ಅಂಶವೇನೆಂದರೆ-ಇಲ್ಲಿ ಹೇಳಲ್ಪಟ್ಟ ಯೋಗಗಳು ಕೇವಲ ಗ್ರಂಥಾಧಾರದ ಮೇಲೆ ಹೇಳಿರುತ್ತೆ. ಸಪ್ತಮದಲ್ಲಿ ರವಿಯಿದ್ದು ಪಾಪಗ್ರಹದಿಂದ ನೋಡಲ್ಪಟ್ಟರೆ ಗಂಡನೇ ಬಿಟ್ಟುಬಿಡುವನು. ಕುಜನಿದ್ದರೆ ವಿಧವೆಯಾಗುವಳು ಶನಿಯಿದ್ದರೆ ಅವಳ ಗಂಡನು ನಪುಂಸಕನಾಗುವನು ಇವೆಲ್ಲಾ ಅನುಭವಸಿದ್ಧವಾದ ಯೋಗಗಳು.

## ಲಗ್ನಚಂದ್ರಾತ್ ಸಪ್ತಮಸ್ಥ ಗ್ರಹಫಲಂ

| ಸಂ | ಲಗ್ನಾತ್ ಚಂದ್ರಾತ್ ಸಪ್ತಮಸ್ತ ಗ್ರಹಾಃ | ಫಲಂ |
|---|---|---|
| | ಗ್ರಹಶೂನ್ಯವಾಗಿ ಬಲರಹಿತವಾದ ಶುಭಗ್ರಹ ನೋಡಿದರೆ | ಅವಳ ಗಂಡನು ಕುತ್ಸಿತ ಪುರುಷ |
| ೧ | ಬುಧನಾಗಲೀ ಶನಿಯಾಗಲೀ ಇದ್ದರೆ | ಗಂಡನು ನಪುಂಸಕನಾಗುವನು |
| ೨ | ಚರರಾಶಿಯಾದರೆ | ಗಂಡನು ನಿತ್ಯವೂ ತಿರುಗುವನು ಸಂಚಾರ ಶೀಲನಾಗುವನು |
| ೩ | ದ್ವಿಸ್ವಭಾವರಾಶಿಯಾದರೆ | ಕೆಲವುದಿವಸಸಂಚಾರ ಮತ್ತು ಕೆಲವು ದಿವಸ ಇದ್ದಲ್ಲಿಯೇ ಇರುವನು |
| ೪ | ಸ್ಥಿರರಾಶಿಯಾದರೆ | ಇದ್ದ ಸ್ಥಳದಲ್ಲಿಯೇ ಇರುವನು |
| ೫ | ಸೂರ್ಯನಿದ್ದರೆ | ಗಂಡನಿಂದ ಬಿಡಲ್ಪಡುವಳು |
| ೬ | ಕುಜನು ಸಪ್ತಮದಲ್ಲಿದ್ದು ಪಾಪ ಗ್ರಹಗಳಿಂದ ನೋಡಲ್ಪಟ್ಟರೆ | ಬಾಲ್ಯದಲ್ಲಿಯೇ ವಿಧವೆಯಾಗುವಳು |
| ೭ | ಶನಿಸಪ್ತಮದಲ್ಲಿದ್ದು ಪಾಪಗ್ರಹ ದಿಂದ ನೋಡಲ್ಪಟ್ಟರೆ | ವಿವಾಹವಿಲ್ಲದೆ ಮುದುಕಿಯಾಗುವಳು. |

## ವಿಧವಾದಿ ಯೋಗಃ

ಮೂಲ॥ ಆಗ್ನೇಯೈರ್ವಿಧವಾಸ್ತರಾಶಿ ಸಹಿತೈರ್ಮಿಶ್ರೈಃ ಪುನರ್ಭೂರ್ಭವೇ ।
ತ್ಕ್ರೂರೇಹೀನಬಲೇಸ್ತಗೇ ಸ್ವಪತಿನಾ ಸೌಮ್ಯೇಕ್ಷಿತೇಪ್ರೋಜ್ಝಿತಾ ॥
ಅನ್ಯೋನ್ಯಾಂಶಗಯೋಃ ಸ್ಸಿತಾವನಿಜಯೋರನ್ಯಪ್ರಸಕ್ತಾಂಗನಾ ।
ದ್ಯೂನೇವಾ ಯದಿ ಶೀತರಶ್ಮಿ ಸಹಿತೌಭರ್ತುಸ್ತದಾನುಜ್ಞಯಾ ॥೯॥

ಅವತಾರಿಕೆ॥ ಒಂದು ಗ್ರಹವು ಸಪ್ತಮದಲ್ಲಿದ್ದರೆ ಫಲವು ಹೇಳಲ್ಪಡುತ್ತೆ. ಆದರೆ ಅನೇಕ ಗ್ರಹಗಳು ಸಪ್ತಮದಲ್ಲಿದ್ದರೆ, ಆಯಾಯ ಗ್ರಹಗಳಿಗೆ ಹೇಳಿದ ಫಲವನ್ನು ಬಿಟ್ಟು ಯಾವ ಪ್ರತ್ಯೇಕ ಫಲವು ಉಂಟಾಗುತ್ತದೆಯೋ ಆ ಫಲವು ಹೇಳಲ್ಪಡುತ್ತೆ.

## ವಿಧವಾಯೋಗಃ

ಟೀಕು॥ ಅಗ್ನೇಯೈಃ-ಕ್ರೂರಗ್ರಹಗಳು, ಅಸ್ತರಾಶಿಸಹಿತೈಃ-ಸಪ್ತಮರಾಶಿಯಲ್ಲಿದ್ದಾಗ ಹುಟ್ಟಿದ ಕಾಮಿನಿಯು, ವಿಧವಾ-ವಿತಂತು ಆಗುವಳು.

## ಪುನರ್ವಿವಾಹ ಯೋಗಃ

ಮಿಶ್ರೈಃ ಶುಭಪಾಪಗ್ರಹ-ಮಿಶ್ರವಾಗಿ ಸಪ್ತಮರಾಶಿಯಲ್ಲಿದ್ದಾಗ ಹುಟ್ಟಿದವಳು. ಪುನರ್ಭೂಃ-ಮೊದಲು ಗಂಡನನ್ನು ಬಿಟ್ಟು ಮತ್ತೊಬ್ಬ ಗಂಡನನ್ನು ಮದುವೆ ಮಾಡಿ ಕೊಳ್ಳುವಳು.

## ಗಂಡನಿಂದ ತಿರಸ್ಕರಿಸಿಬಿಡಲ್ಪಡುವ ಯೋಗವು

ಹೀನಬಲೇ-ಸರ್ವಬಲರಹಿತವಾದ, ಕ್ರೂರೇ-ಪಾಪಗ್ರಹವು, ಅಸ್ತಗೇ-ಸಪ್ತಮ ದಲ್ಲಿದ್ದು, ಸೌಮ್ಯೇಕ್ಷಿತೇ-ಶುಭಗ್ರಹದಿಂದ ನೋಡಲ್ಪಟ್ಟ ಕಾಲದಲ್ಲಿ ಹುಟ್ಟಿದ ಸ್ತ್ರೀ, ಸ್ವಪತಿನಾ-ತನ್ನ ಗಂಡನಿಂದ ಪ್ರೋಜ್ಝಿತಾ-ಬಿಡಲ್ಪಡುವಳು.

## ಪರಪುರುಷಗಾಮಿನಿ ಯೋಗಃ

ಸಿತಾವನಿಜಯೋಃ-ಶುಕ್ರಕುಜರು, ಅನ್ಯೋನ್ಯಾಂಶಗಯೋಃ-ಯಾವರಾಶಿ ಯಲ್ಲಿದ್ದರೂ, ಶುಕ್ರನು ಕುಜನವಾಂಶೆಯಲ್ಲೂ, ಕುಜನು ಶುಕ್ರನವಾಂಶೆಯಲ್ಲಿರು ವಾಗಲೂ ಹುಟ್ಟಿದ, ಅಂಗನಾ-ಸ್ತ್ರೀ, ಅನ್ಯಪ್ರಸಕ್ತಾ-ಗಂಡಿರುವಾಗಲೇ ಸ್ವೇಚ್ಛೆಯಿಂದ ಪರಪುರುಷರ ಸಂಗ ಮಾಡುವಳು.

## ಭರ್ತಾಜ್ಞಾ ಪರಪುರುಷಗಾಮಿನಿ ಯೋಗಃ

ದ್ಯೂನೇ-ಸಪ್ತಮಸ್ಥಾನದಲ್ಲಿ, ಶೀತರಶ್ಮಿಸಹಿತೌ-ಆ ಶುಕ್ರಾಂಗಾರಕರು, ಚಂದ್ರ ಸಹಿತವಾಗಿದ್ದರೆ, ತದಾ-ಆ ಕಾಲದಲ್ಲಿ ಹುಟ್ಟಿದವಳು, ಭರ್ತುಃ-ಗಂಡನ, ಅನುಜ್ಞಯಾ-ಅಜ್ಞೆಯಿಂದ ಅನ್ಯಪ್ರಸಕ್ತಾ-ಪರಪುರುಷರ ಸಂಗಮ ಮಾಡುವಳು.

ಈ ವಿಷಯಕ್ಕೆ ॥ ಜಾ.ಭ॥ ಶ್ಲೋಕ॥ ಖಲೈಃಕಲತ್ರಸ್ಥಗತಾಲಕಾಸ್ಯಾ ತ್ಕಾಂತಾವಿಮಿಶ್ರೈಶ್ಚಭವೇತ್ಪುನರ್ಭೂಃ । ಕಲತ್ರಸಂಸ್ಥೇ ವಿಬಲೇ ಖಲಾಖ್ಯೇ ಸೌಮ್ಯೈರದೃಷ್ಟೇ ವಿಭುನಾವಿಮುಕ್ತಾ ॥೩೫॥ ಅನ್ಯೋನ್ಯಾಂಶಾವಸ್ಥಿತೌಭೌಮ ಶುಕ್ರೌಸ್ಯಾತಾಂಕಾಂತಾ ಸಂಗತಾನ್ಯನು ನೂನಮ್ । ಚಂದ್ರೋಪೇತೌಶುಕ್ರವ ಕ್ರೌಸ್ಮರಸ್ಥಾಚ್ಛೇವಸ್ಯಾತ್ತತ್ಸಾ ್ಯಮಿನಶ್ಚಾಮನಂತಿ ॥೩೬॥ ಇಲ್ಲಿ ಕಳತ್ರಸ್ಥಾನದಲ್ಲಿ ಬಲಹೀನರಾದ ಪಾಪಗ್ರಹಗಳಿದ್ದು, ಶುಭಗ್ರಹಗಳಿಂದ ನೋಡಲ್ಪಡದೆ ಹೋದರೆ, ಗಂಡನಿಂದ ಬಿಡಲ್ಪಡುವಳೆಂದು ಸ್ಪಷ್ಟವಾಗಿ ಹೇಳಿರುತ್ತೆ. ಇದು ಬೃಹಜ್ಜಾತಕ ಕರ್ತನ ಅಭಿಪ್ರಾಯಕ್ಕೆ ಭಿನ್ನವಾಗಿರುವುದು. ಮತ್ತು *ಕ್ರೂರೈರ್ವಿಧವಾಗತೈರ್ಭವತಿ ಪುನರ್ಭೂಸ್ತಥಾ ಮಿಶ್ರೈಃ। ಅನ್ಯೋನ್ಯಭಾಗಗತಯೋ ಸಿತಕುಜಯೋರನ್ಯಪುರುಷಸಕ್ತಾ ಸ್ಯಾತ್ । ದ್ಯೂನೇಶಶಿದಿನಕರಯೋಃ ಸ್ಯಾದ್ಯುವತಿರನುಜ್ಞಯಾ ಭರ್ತುಃ ॥೩೬॥ ಎಂದು ಹೇಳಲ್ಪಟ್ಟಿದೆ.

## ಮಾತ್ರಾಸಹ ವ್ಯಭಿಚಾರಿಣೀ ಯೋಗಃ

ಮೂಲ॥ ಸೌರಾರರ್ಕ್ಷೇ ಲಗ್ನಗೇಸೇಂದು ಶುಕ್ರೇ ಮಾತ್ರಾಸಾರ್ಧಂ ಬಂಧಕೀ ಪಾಪದೃಷ್ಟ್ಯೈಃ । ಕೌಜೇಸ್ತೇಂಶೇ ಸೌರಿಣಾ ವ್ಯಾಧಿ ಯೋನಿಶ್ಚಾರು ಶ್ರೋಣೀವಲ್ಲಭಾಸದ್ಗ ್ರಹಾಂಶೇ ॥೧೦॥

ಅವತಾರಿಕೆ॥ ಈ ಶ್ಲೋಕದಿಂದ ಮೂರುವಿಧವಾದ ಯೋಗ ಹೇಳಲ್ಪಡುತ್ತೆ. ೧ನೇ ಮಾತ್ರಾಸಹ ವ್ಯಭಿಚಾರಿಯೋಗ. ೧ನೇ ಮಾತ್ರಾಸಹ ವ್ಯಭಿಚಾರಿಯೋಗ, ೨ನೇ ರೋಗಯೋನಿಯೋಗ, ೩ನೇ ಸುಭಗಾಯೋಗ.

ಟೀಕು॥ ಸೌರಾರರ್ಕ್ಷೇ-ಶನೈಶ್ಚರಾಂಗಾರಕರ ಕ್ಷೇತ್ರಗಳಾದ, ಮಕರ, ಕುಂಭ, ಮೇಷ, ವೃಶ್ಚಿಕಗಳಲ್ಲೊಂದು ಜನ್ಮಲಗ್ನವಾಗಲಿ, ಆ ಲಗ್ನವು ಸೇಂದು ಶುಕ್ರೇ-ಚಂದ್ರಶುಕ್ರರಿಂದೊಡಗೂಡಿ, ಪಾಪದೃಷ್ಟೇ-ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವಳು, ಮಾತ್ರಾಸಾರ್ಧಂ-ತಾಯಿಯ ಸಹಿತ, ಬಂಧಕೀ-ವ್ಯಭಿಚಾರಿ ಯಾಗುವಳು. ಈ ವಿಷಯಕ್ಕೆ ॥ಸಮ್ಮತಿ॥ ವೃದ್ಧಯಾವನೇ ॥ಶ್ಲೋಕ॥ ಸೌರಾ ಅಗ್ರಹೇ ತದೃಚ್ಚಶಿನಿ ಸ ಶುಕ್ರೇವಿಲಗ್ನಗೇ ಜಾತಾ । ಮಾತ್ರಾ ಸಾರ್ಧಂ ಕುಲಟಾ ಕ್ರೂರಗ್ರಹ ವೀಕ್ಷಿತೇ ಭವತಿ ॥೩೮॥

## ರೋಗಯೋನಿಯೋಗಃ

ಅಸ್ತೇ-ಸಪ್ತಮಸ್ಥಾನದಲ್ಲಿರುವ, ಕುಜೇಂಶೇ-ಅಂಗಾರಕ ನವಾಂಶ, ಸೌರಿಣಾ-ಶನಿಯಿಂದ ನೋಡಲ್ಪಡುವಾಗ ಹುಟ್ಟಿದ ಸ್ತ್ರೀಯ ಯೋನಿಯು ವ್ಯಾಧಿಯೋನಿಃ-

* ವೃದ್ಧಯಾವನೇ.

ವ್ಯಾಧಿಪೀಡಿತ ಭಗವಾಗುವುದು. ಅಂದರೆ-ಪ್ರಮೇಹ, ಭಗಂಧರ ಮೊದಲಾದ ರೋಗ ಉಳ್ಳವಳಾಗುವಳು.

## ಸುಭಗಯೋಗಃ

ಪೂರ್ವದಲ್ಲಿ ಸುಭಗಾಸ್ತ ಮಯೇ ಎಂದು ಹೇಳಿರುವುದರಿಂದ ಅವಳ ಶರೀರ ಸೌಭಾಗ್ಯವು ಇಲ್ಲಿ ಹೇಳಲ್ಪಡುತ್ತೆ. ಸದ್ಗ್ರಹಾಂಶೇ-ಆ ಸ್ತ್ರೀಜನ್ಮಲಗ್ನಕ್ಕೆ ಸಪ್ತಮ ರಾಶಿಯಲ್ಲಿ ಶುಭಗ್ರಹನವಾಂಶೆ ಉದಯವಾಗಿದ್ದರೆ, ಚಾರೂಶ್ರೋಣೀ-ಸುಭಗವುಳ್ಳವಳು. ಅಂದರೆ-ಯೋನಿರೋಗರಹಿತಳು. ವಲ್ಲಭಾ- ಗಂಡನಿಗಿಷ್ಟವಾದವಳು. ಈ ವಿಷಯಕ್ಕೆ ||ಜಾ.ಭ||ಶ್ಲೋಕ|| ಲಗ್ನೇಸಿತೇಂದೂ ಕುಜಮಂದಸಂಸ್ಥೌ ಕ್ರೂರೇ ಕ್ಷಿತೌ ನಾನ್ಯರತಾಜನನ್ಯಾಃ । ಸ್ಮರೇಕುಜೇಸಾರ್ಕಸುತೇನ ದೃಷ್ಟೇ ವಿನಿಷ್ಟಯೋನಿಶ್ಚ ಶುಭಾಶುಭಾಂಗೇ ||೨೯||ತಾ|| ಶುಕ್ರ, ಚಂದ್ರ, ಮಂಗಳ, ಇವರು ಶನಿ ಕ್ಷೇತ್ರದಲ್ಲಿದ್ದು ಅವರ ಮೇಲೆ ಪಾಪಗ್ರಹ ವೀಕ್ಷಣೆಯಿದ್ದರೆ ಆ ಕಾಲದಲ್ಲಿ ಹುಟ್ಟಿದವಳು ತಾಯಿಯ ಸಹಿತ ಪರಪುರುಷ ಗಾಮಿನಿಯಾಗುವಳು. ಸಪ್ತಮದಲ್ಲಿ ಕುಜನಿದ್ದು, ಅವನ ಮೇಲೆ ಶನಿದೃಷ್ಟಿಯಿದ್ದರೆ ರೋಗಯೋನಿಯಾಗುವಳು, ಸಪ್ತಮದಲ್ಲಿ ಶುಭಗ್ರಹನವಾಂಶೋದಯವಾಗಿದ್ದರೆ, ಸುಶ್ರೋಣಿ ಸೌಭಾಗ್ಯಶಾಲಿನಿ ಮತ್ತು ಭಾಗ್ಯವಂತನ ಹೆಂಡತಿಯಾಗುವಳು. ಈ ವಿಷಯಕ್ಕೆ ಶ್ಲೋಕ|| ದ್ಯೂನೇತು ಕುಜನವಾಂಶೇ ಶಶಿನಾದೃಷ್ಟೇಚ ರೋಗಯೋನಿಸ್ತ್ರೀ ಸದ್ಗ್ರಹಗೇ ಭಾಗೇವಾ ಸುಶ್ರೋಣೀಭರ್ತೃವತ್ಸಲಾ ಭವತಿ ||೪೦|| ಇತಿ ವೃದ್ಧಯವನಃ

## ರಾಶಿನವಾಂಶವಶಾತ್ ಶುಭಾಶುಭಯೋಗಃ

ಮೂಲ|| ವೃದ್ಧೋಮೂರ್ಖ ಸ್ಸೂರ್ಯಜರ್ಕ್ಷೇಂಶಕೇವಾ । ಸ್ತ್ರೀಲೋಲಃ ಸ್ಯಾತ್ಕ್ರೋಧನಶ್ಚಾವನೇಯೇ ॥ ಶೌಕ್ರೇ ಕಾಂತೋತೀವ ಸೌಭಾಗ್ಯಯುಕ್ತೋ । ವಿದ್ವಾನ್ ಭರ್ತಾನೈಪುಣಜ್ಞಶ್ಚ ಬೌಧೇ ||೧೧||

ಅವತಾರಿಕೆ|| ಸ್ತ್ರೀಜನ್ಮರಾಶಿ ಸಪ್ತಮರಾಶಿಯ ಮೂಲಕವಾಗಿಯೂ, ಸಪ್ತಮರಾಶಿಯ ಜನ್ಮಕಾಲನವಾಂಶದ ಮೂಲವಾಗಿಯೂ, ಶುಭಾಶುಭ ಫಲವು ಹೇಳಲ್ಪಡುತ್ತೆ. ಜನ್ಮರಾಶಿಗೆ ಸಪ್ತಮರಾಶಿ, ಶನಿ, ಕುಜ, ಶುಕ್ರ, ಬುಧ, ಇವರುಗಳ ಕ್ಷೇತ್ರಗಳಾದ ಮಕರ, ಕುಂಭ, ಮೇಷ, ವೃಶ್ಚಿಕ, ವೃಷಭ, ತುಲಾ, ಕನ್ಯಾ, ಮಿಥುನ, ಈ ರಾಶಿಗಳಾದರೂ ಅಥವಾ ನವಾಂಶವಾದರೂ, ಅದರ ಫಲವು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಲ್ಪಡುತ್ತೆ.

ಟೀಕು॥ ಸೂರ್ಯಜರ್ಕ್ಷೇ-ಶನಿಕ್ಷೇತ್ರಗಳಾದ ಮಕರ ಕುಂಭಗಳಲ್ಲಿ ಒಂದು ರಾಶಿಯಾಗಲಿ, ಅಂಶಕೇವಾ-ಆ ನವಾಂಶದಾದರೂ, ಸಪ್ತಮವಾಗಿರುವ ಸ್ತ್ರೀಯ, ಭರ್ತಾ-ಗಂಡನು, ವೃದ್ಧ-ಮುದುಕನಾಗಿರುವನು, ಮೂಖಃ-ಮೂರ್ಖನೂ ಆಗುವನು. ಅವನೇಯೇ-ಕುಜಕ್ಷೇತ್ರಗಳಾದ ಮೇಷ, ವೃಶ್ಚಿಕ ರಾಶಿಗಳಲ್ಲಿ, ಒಂದು ರಾಶಿಯಾಗಲೀ, ನವಾಂಶವಾಗಲೀ, ಸಪ್ತಮದಲ್ಲಿರುವಾಗ ಹುಟ್ಟಿದ ಸ್ತ್ರೀಯ ಗಂಡನು, ಸ್ತ್ರೀಲೋಲಃ-ಸ್ತ್ರೀಯರಲ್ಲಿ ಅತಿ ಪ್ರೇಮವುಳ್ಳವನಾಗುವನು, ಕ್ರೋಧಶೀಲಃ-ಕೋಪ ಸ್ವಭಾವವುಳ್ಳವನೂ ಆಗುವನು, ಶೌಕ್ರೇ-ಶುಕ್ರಕ್ಷೇತ್ರಗಳಾದ ವೃಷಭತುಲೆಗಳಲ್ಲೊಂದು ರಾಶಿ ಸಪ್ತಮವಾದರೂ, ನವಾಂಶೋದಯವಾದರೂ ಸಪ್ತಮದಲ್ಲಿರುವಾಗ ಹುಟ್ಟಿದಸ್ತ್ರೀಯ ಗಂಡನು, ಕಾಂತಃ-ಸುಂದರ ಪುರುಷನು, ಅತೀವ-ಹೆಚ್ಚಾದ ಸೌಭಾಗ್ಯಯುಕ್ತಃ- ಸೌಭಾಗ್ಯದಿಂದ ಕೂಡಿದವನಾಗುವನು, ಬೌಧೇ-ಬುಧಕ್ಷೇತ್ರಗಳಾದ ಮಿಥುನ ಕನ್ಯೆಗಳಲ್ಲೊಂದು ರಾಶಿಯಲ್ಲಿ ನವಾಂಶೆಯಾಗಲಿ, ಸಪ್ತಮದಲ್ಲಿರುವಾಗ ಹುಟ್ಟಿದ ಸ್ತ್ರೀಯ ಗಂಡನು, ವ್ವಿದ್ವಾರ್-ಪಂಡಿತನಾಗುವನು, ನೈಪುಣಜ್ಞಃ-ಚೆನ್ನಾಗಿ ತಿಳಿದ ಪಂಡಿತನಾಗುವನು.

ಈ ವಿಷಯಕ್ಕೆ ॥ಶ್ಲೋಕ॥ ವೃದ್ಧಯಾವನೇ॥ ದ್ಯೂನೇವೃದ್ಧೊಮೂರ್ಖಃ ಸೌರ ಗೃಹೇಸ್ಥ ನವಾಂಶಕೇವಾಥ। ಸ್ತ್ರೀಲೋಲಃ ಕ್ರೋಧಪರಃ ಕುಜಭೇದ ನವಾಂಶ ಕೇವಾಸ್ಯಾತ್ ॥೪೧॥ ಶುಕ್ರಗ್ರಹೈ ನವಭಾಗೇವಾತಿರೂಪಸೌಭಾಗ್ಯ ಸಂಯುತೋ ಭರ್ತಾ । ನೈಪುಣವಿಜ್ಞಾನ ಯುತಸ್ತಥೈವ ಬುಧಭೇನವಾಂಶಕೇವಾ ಸ್ಯಾತ್ ॥೪೨॥ ಈ ಪ್ರಕಾರ ಹೇಳಿರುವಲ್ಲಿ ತಿಳಿಯತಕ್ಕ ಅಂಶವೇನೆಂದರೆ, ರಾಶಿ ಮತ್ತು ನವಾಂಶವೆಂದರೆ-ಸಪ್ತಮಭಾವವು ಆ ರಾಶಿಯೇ ಆದರೂ ಅಥವಾ ಇನ್ನಾವರಾಶಿಯಾದರೂ ಈ ಉಕ್ತವಾದ ನವಾಂಶ ಲಗ್ನದಲ್ಲಿ ಉದಿತ ನವಾಂಶೆಯಾಗಿದ್ದರೂ ಈ ಫಲವನ್ನು ನಿರ್ಣಯ ಮಾಡತಕ್ಕದ್ದು. ಉದಾ॥ ಮಕರ ರಾಶಿಯೇ ಸಪ್ತಮಭಾವವಾದರೂ, ಹಾಗೆ ರಾಶಿಯಲ್ಲಿದ್ದರೂ, ಇತರ ಲಗ್ನಗಳಲ್ಲಿ ಈ ಮಕರ ಕುಂಭನವಾಂಶೆಯಾಗಿದ್ದರೂ ಆಕೆಯ ಗಂಡನು ವೃದ್ಧನಾಗಿರುವನು.

ಮೂಲ॥ ಮದನವಶಗತೋ ಮೃದುಶ್ಚಚಾಂದ್ರೇ ತ್ರಿದಶ ಗುರೋರ್ಗುಣವಾನ್<br>ಜಿತೇಂದ್ರಿಯಶ್ಚ । ಅತಿ ಮೃದರತಿಕರ್ಮ ಕೃಚ್ಚ ಸೌರ್ಯೇಭವತಿ<br>ಗೃಹೇ ಸ್ತಮಯಸ್ಥಿತಾಂಶಕೇವಾ ॥೧೨॥

ಅವತಾರಿಕೆ॥ ಚಂದ್ರ, ಗುರು, ರವಿಕ್ಷೇತ್ರಗಳಾದ ಕರ್ಕಾಟಕ, ಧನುಸ್ಸು, ಮೀನ, ಸಿಂಹ, ಈ ರಾಶಿಗಳು ಸಪ್ತಮಭಾವವಾದರೂ ಮತ್ತು ಸಪ್ತಮದಲ್ಲಿ ಈ ನವಾಂಶೆ ಉದಯವಾದರೂ ಆ ಕಾಲದಲ್ಲಿ ಹುಟ್ಟಿದವಳ ಗಂಡನ ಗುಣಾತಿಶಯವು ಹೇಳಲ್ಪಡುತ್ತೆ.

ಟೀಕು।। ಚಂದ್ರೇಗ್ರಹೇ-ಕರ್ಕಾಟರಾಶಿಯು ಸಪ್ತಮ ಭಾವವಾದರೂ, ಅಂಶ ಕೇವಾ-ಸಪ್ತಮದಲ್ಲಿ ಕಟಕನವಾಂಶವಾದರೂ, ಅಸ್ತಮಯಸ್ಥಿತೇ-ಲಗ್ನಕ್ಕೆ ಸಪ್ತಮ-ವಾದರೂ, ಮದನವಶಗತಃ-ಅವಳ ಪತಿಯು ಕಾಮಾತುರನಾಗುವನು. ಮತ್ತು ಮೃದುಶ್ಚ-ಮೃದುಸ್ವಭಾವದ ನಡತೆಯುಳ್ಳವನಾಗುವನು. ತ್ರಿದಶಗುರೋರ್ಗೃಹೇಂಶಕೇವಾ-ಗುರುಕ್ಷೇತ್ರಗಳಾದ ಧನುರ್ಮೀನಗಳಲ್ಲಿ ಯಾವದಾದರೂ ಒಂದು ರಾಶಿಯಾದರೂ, ನವಾಂಶವಾದರೂ, ಸಪ್ತಮಭಾವವಾಗಿರುವಾಗ ಹುಟ್ಟಿದವಳ ಗಂಡನು ಗುಣವಾನ್-ಸುಗುಣವಂತನು, ಜಿತೇಂದ್ರಿಯಶ್ಚ-ಜಯಿಸಲ್ಪಟ್ಟ ಇಂದ್ರಿಯ (ನಿಗ್ರಹ) ವುಳ್ಳವನಾಗುವನು. ಸೌರ್ಯೇ-ರವಿಕ್ಷೇತ್ರವಾದ ಸಿಂಹರಾಶಿಯಾಗಲಿ, ನವಾಂಶವಾಲಿ, ಸಪ್ತಮದಲ್ಲಿರುವಾಗ ಹುಟ್ಟಿದವಳ ಗಂಡನು ಅತಿಮೃದು-ಹೆಚ್ಚಾದ ಮೃದುಸ್ವಭಾವ ಉಳ್ಳವನಾಗುವನು. ಅತಿಕರ್ಮ ಕೃಚ್ಚ-ಬಹುವ್ಯಾಪಾರಾದಿ ಕೆಲಸ ಮಾಡುವನು, (ಕೆಲವರು ಅತಿಕರ್ಮಕೃತ್ ಎಂದು ಪಾಠಾಂತರ ಹೇಳುವರು) ಈ ವಿಷಯಕ್ಕೆ ।।ಶ್ಲೋಕ।। ವೃದ್ಧಯಾವನೇ।। ಮದನಾರ್ತೋ ಮೃದುಚಿತ್ತಂಶಶಿ ಭೇದನವಾಂಶಕೇ ಭರ್ತಾ । ಗುರುಸಿತಭವನೇಷ್ವಥವಾ ಗುಣವಾನ್ ವಿಜಿತೇಂದ್ರಿಯೋ ಭವತಿ ।।೪೩।। ಅತಿಕರ್ಮಸ್ತೀಕ್ಷ್ಣೋ ರವಿಭೇದ ನವಾಂಶಕೇ ಭವತಿಭರ್ತಾ । ಸಪ್ತಮಭವನೋಪ ಗತೈರ್ನಿತ್ಯಂ ಸ್ತ್ರೀಣಾಂ ಸಮವಭಾರ್ಯಃ ।।೪೪।।

ಈ ಮೇಲೆ ಹೇಳಲ್ಪಟ್ಟ ಸಪ್ತಮಭಾವ ಮತ್ತು ನವಾಂಶ ಫಲವನ್ನು ರಾಶಿಯೇ ಒಂದು ಗ್ರಹ ಸಂಬಂಧವಾಗಿ, ನವಾಂಶ ಮತ್ತೊಂದು ಗ್ರಹಸಂಬಂಧವುಳ್ಳದ್ದಾದರೆ ಆಗ ರಾಶಿ ನವಾಂಶಾಧಿಪತಿಗಳಲ್ಲಿ ರಾಶ್ಯಾಧಿಪತಿ ಬಲಯುಕ್ತನಾದರೆ, ರಾಶಿಫಲವನ್ನು ನವಾಂಶಾಧಿಪತಿ ಬಲವುಳ್ಳವನಾದರೆ ನವಾಂಶ ಫಲವನ್ನು ಬುದ್ಧಿವಂತರು ಯೋಚಿಸಿ ಹೇಳತಕ್ಕದ್ದು. ಈ ಸಪ್ತಮರಾಶಿ ನವಾಂಶಫಲ ವಿಷಯದಲ್ಲಿ ಜಾತಕಚಂದ್ರಿಕೆ ಮತ್ತು ಧುಂಡಿರಾಜೀಯದಲ್ಲೂ, ಇದೇ ಅರ್ಥಕ್ಕೆ ಶ್ಲೋಕ।। ಸೂರ್ಯರ್ಕ್ಷೇವಾಂಶಕೇವಾದ್ಯುನ ಭವನ ಗತೇ ಭೂರಿಕರ್ಮಾಮೃದುಃಸ್ಯಾಚ್ಚಾಂದ್ರೇ ಕಾಮೀಮೃದುರ್ವಾ ಕ್ಷಿತಿಸುತ ಗೃಹಗೇ ಸ್ತ್ರೀವಿಲೋಲೋತಿಕೋಪಃ । ಬೌಧೇ ವಿದ್ವಾದ್ಸುಶೀಲಃ ಸುರುಗುರುಗೃಹಗೇ ಸದ್ಗುಣೇಸ್ಯಾತ್ಸಿ ್ವವಶ್ಯಃ ಶೌಕ್ರೇಕಾಂತಸ್ಸು ಭಾಗ್ಯೋ ರವಿಸುತಭವನೇ ಮೂರ್ಖ ಭತಾ ಚರಾತಃ ।।೪೫।।ಜಾ.ಭ.।। ಭಾನೋರ್ಭಯಂದಿವಾಲಿವಃ ಸ್ಮರಗೃಹೇ ಸಂಭೋಗಮಂದಃಪತಿಶ್ಚಂದ್ರಸ್ಯಾತಿ ಮೃದೋಮೃದುಃ ಕ್ಷಿತಿಸುತಾಸ್ಯ ಸ್ತ್ರೀಪ್ರಿಯಃ ಕ್ರೋಧಯುಕ್ । ವಿದ್ವಾಜ್ಞಸ್ಯಗುರೋರ್ವಶೀಗುಣಯುತಃ ಶುಕ್ರಸ್ಯಭಾಗ್ಯಾನ್ವಿತೋ ಮಂದಸ್ಯ ಪ್ರವಯಾಸ್ತು ಗೂಢಮತಿರಿತ್ಯುಕ್ತೋಬುಧೈರ್ಹೌರಿಕೈಃ ।।೪೬।।

## ಸಪ್ತಮರಾಶಿ ನವಾಂಶಫಲ ಪದಕಮ್

ಸಪ್ತಮಭಾವದಲ್ಲಿ ಈ ರಾಶಿಗಳೂ, ಈ ನವಾಂಶಗಳಿಗೂ ಫಲ

| ಸಂ | ರಾಶಿಯ ನವಾಂಶ | | ಫಲ |
|---|---|---|---|
| ೧ | ಮೇಷ | ಸ್ತ್ರೀಲೋಲ | ಕ್ರೋಧಪರ |
| ೨ | ವೃಷಭ | ಸುಂದರ | ಸೌಭಾಗ್ಯವಂತ |
| ೩ | ಮಿಥುನ | ವಿದ್ವಾಂಸ | ನಿಪುಣ |
| ೪ | ಕರ್ಕಾಟಕ | ಕಾಮಾತುರ | ಮೃದುಸ್ವಭಾವ |
| ೫ | ಸಿಂಹ | ಅತಿಮೃದು | ಅತಿಕರ್ಮಮಾಡುವನು |
| ೬ | ಕನ್ಯಾ | ವಿದ್ವಾಂಸ | ನಿಪುಣ |
| ೭ | ತುಲಾ | ಸುಂದರ | ಸೌಭಾಗ್ಯವುಳ್ಳವನು |
| ೮ | ವೃಶ್ಚಿಕ | ಸ್ತ್ರೀಲೋಲ | ಕ್ರೋಧವುಳ್ಳವನು |
| ೯ | ಧನುಸ್ಸು | ಸುಗುಣವುಳ್ಳವ | ಜಿತೇಂದ್ರಿಯ |
| ೧೦ | ಮಕರ | ವೃದ್ಧ | ಮೂರ್ಖ |
| ೧೧ | ಕುಂಭ | ವೃದ್ಧ | ಮೂರ್ಖ |
| ೧೨ | ಮೀನ | ಸುಗುಣಪೂರಿತ | ಜಿತೇಂದ್ರಿಯ |

ಟಿಪ್ಪಣಿ-ಈ ಫಲಗಳನ್ನು ರಾಶ್ಯಾಧಿಪತಿ ಬಲಿಷ್ಠನಾದರೆ ರಾಶಿಫಲವನ್ನೂ, ಅಂಶಾಧಿಪತಿ ಬಲಿಷ್ಠನಾದರೆ ಅಂಶಫಲವನ್ನೂ, ರಾಶಿ, ಅಂಶ ಒಂದೇ ಗ್ರಹಕ್ಕೆ ಬಂದರೆ ಈ ಫಲವು ಅತಿಶಯವಾಗಿ ತೋರಿಬರುವುದು.

ಮೂಲ॥ ಈರ್ಷ್ಯಾನ್ವಿತಾ ಸುಖಪರಾ ಶಶಿಶುಕ್ರ ಲಗ್ನೇಜ್ಞೇಂದ್ವೋಃ ಕಲಾಸು
ನಿಪುಣಾ ಸುಖಿತಾ ಗುಣಾಢ್ಯಾ। ಶುಕ್ರಜ್ಞಯೋಸ್ತುರುಚಿರಾ ಸುಭಗಾ
ಕಲಾಜ್ಞ ತ್ರಿಷ್ವಪ್ಯನೇಕ ವಸುಸೌಖ್ಯಗುಣಾಶ್ಶುಭೇಷು ॥೧೩॥

ಅವತಾರಿಕೆ।। ಚಂದ್ರ, ಶುಕ್ರ, ಬುಧರಲ್ಲಿ ಎರಡು ಗ್ರಹಗಳಾದರೂ, ಮೂರು ಗ್ರಹ ಗಳಾದರೂ, ಜನ್ಮಲಗ್ನದಲ್ಲಿದ್ದ ಕಾಲದಲ್ಲಿ ಹುಟ್ಟಿದ ಸ್ತ್ರೀ ಸ್ವಭಾವ ಹೇಳಲ್ಪಡುತ್ತೆ.

ಟೀಕು।। ಶಶಿಶುಕ್ರಲಗ್ನೇ-ಚಂದ್ರ ಶುಕ್ರರು ಜನ್ಮಲಗ್ನದಲ್ಲಿದ್ದ ಕಾಲದಲ್ಲಿ ಹುಟ್ಟಿದ ಸ್ತ್ರೀ, ಈರ್ಷ್ಯಾನ್ವಿತಾ-ಮತ್ಸರವುಳ್ಳವಳು, ಸುಖಪರಾ-ಸುಖಾಸಕ್ತಳೂ ಆಗುತ್ತಾಳೆ, ಜ್ಞೇಂದ್ವೋಃ-ಬುಧ ಚಂದ್ರರು ಜನ್ಮಲಗ್ನದಲ್ಲಿದ್ದ ಕಾಲದಲ್ಲಿ ಹುಟ್ಟಿದವಳು, ಕಳಾಸುಗೀತಾವಾದ್ಯಾದಿ ಕಲೆಯಲ್ಲಿ, ನಿಪುಣಾ-ಹೆಚ್ಚಾದ ತಿಳುವಳಿಕೆಯುಳ್ಳ ವಳಾಗುವಳು, ಸುಖಿತಾ-ಸುಖಪಡುವಳು, ಗುಣಾಢ್ಯಾ-ಗುಣವಂತಳಾಗುವಳು, ಶುಕ್ರಜ್ಞಯೋಃ-ಶುಕ್ರ ಬುಧರು, ಜನ್ಮಲಗ್ನದಲ್ಲಿದ್ದ ಕಾಲದಲ್ಲಿ ಹುಟ್ಟಿದವಳು, ರುಚಿರಾ-ಸೌಂದರ್ಯವತಿಯು, ಕಲಾಜ್ಞಾ-ಗೀತವಾದ್ಯಾದಿ (ಅಥವಾ) ಕಲಾಶಾಸ್ತ್ರಭಿಜ್ಞಳಾಗುವಳು, ಶುಭೇಷು-ಶುಭಗ್ರಹಗಳು, ತ್ರಿಷ್ವಪಿ-ಬುಧ, ಶುಕ್ರ, ಚಂದ್ರರಾಗಲೀ, ಬುಧ ಗುರು ಶುಕ್ರರಾಗಲೀ, ಜನ್ಮಲಗ್ನದಲ್ಲಿದ್ದ ಕಾಲದಲ್ಲಿ ಹುಟ್ಟಿದವಳು, ಅನೇಕ ವಸು ಸೌಖ್ಯಗುಣಾ, ಅನೇಕ ಬಹುವಿಧವಾದ ವಸುಸೌಖ್ಯಗುಣಾಧನ ಸುಖ ಸುಗುಣಗಳುಳ್ಳವಳಾಗುವಳು, ಈ ವಿಷಯಕ್ಕೆ ಯವನಾಚಾರ್ಯಃ।। ಈರ್ಷ್ಯಾನ್ವಿತಾ ಸುಖಪರಾ ಲಗ್ನೇಸಿತ ಚಂದ್ರಯೋ ರ್ಬುಧೇಂದ್ವೋಶ್ಚ । ಸಖಿತಾಕಲಾ ಸುಕುಶಲಾ ಗುಣಸುತ ಸಹಿತಾವಿನಿತಾಸ್ಯಾತ್ ।।೪೮।। ಶುಕ್ರಬುಧಯೋರ್ವಿ ಲಗ್ನೇ ರುಚಿರಾಸುಭಗಾ ಕಲಾಸುನಿಪುಣಾಂಚ । ದ್ರವ್ಯಾಂಬರ ಸೌಖ್ಯಯುತಾ ಶುಭೇಷು ಪಾಪೇಷು ವಿಪರೀತಾ ।।೪೮।। ತಥಾಚ ।। ಜಾ.ಭ।।ಶ್ಲೋಕ।। ಶುಕ್ರೇಂದೂ ಸ್ಮರಗೌಸ್ತ್ರಿಯಂ ಪ್ರಕುರುತಃ ಸೇರ್ಷ್ಯಾಂ ಸುಖೇನಾನ್ವಿತಾಂ । ಸೌಮ್ಯೇಂದೂ ಚ ಕಲಾಸುಖೋತ್ತುಮಗುಣಾಂ ಶುಕ್ರೇಂದು ಪುತ್ರಾವಥ । ಚಂಚದ್ಭಾಗ್ಯ ಕಲಾಜ್ಞ ತಾಭಿರುಚಿರಾಂ ಸೌಮ್ಯಗ್ರಹೇಂದ್ರಾ ಸ್ತನೌನಾನಾಭೂಷಣ ಸದ್ಗುಣಾಂಬರ ಸುಖಾಂಪಾಪಗ್ರಹೈಸ್ತನ್ಯಥಾ ।।೪೯।।ಕಿಂಚ।। ಜಾತಕಚಂದ್ರಿಕಾಯಾಂ ।।ಜಯದೇವಃ।। ಶ್ಲೋಕ।। ಈರ್ಷ್ಯಾಯುಕ್ತಾಸ್ತು ಸೌಖ್ಯಾಪತಿ ಹೃದಯ ಷರಾಚಂದ್ರಶುಕ್ರೌತನುಸ್ಥೌ ಚೇದ್ವಿಚ್ಚಂದ್ರೌಭವೇತಾಂ ಸಸುಖಗುಣ ಯುತಾಸ್ಯಾತ್ಸವಿಜ್ಞಾ ಕಲಾಸು।। ಸಾತ್ಯಾಂ ಶುಕ್ರೇಂದು ಪುತ್ರಾಯದಿ ರುಚಿರತನುಃ ಸ್ತ್ರೀ ಸುಭಾಗ್ಯೇನಯುಕ್ತಾ ತಸ್ಮಿಂಶ್ಚೇತ್ಸೌಮ್ಯ ಜೀವಾ ಸುರಗುರು ಗುರವೋನೇಕ ಸೌಖ್ಯಾಗುಣಾಢ್ಯಾ ।।೫೦।। ಈ ಪ್ರಕಾರ ಗುರು ಲಗ್ನದಲ್ಲಿ ಸೇರಿದ್ದರೆ ಅತ್ಯಧಿಕ ಸೌಖ್ಯವನ್ನನುಭವಿಸುವಳು.

## ವೈಧವ್ಯಪ್ರಾಪ್ತಿ ಯೋಗಃ

ಮೂಲ।। ಕ್ರೂರೇಷ್ಟಮೇ ವಿಧವತಾ ನಿಧನೇಶ್ವರೋಂಶೇ ಯಸ್ಯಸ್ಥಿತೋವಯ
ಸಿತಸ್ಯ ಸಮೇಪ್ರದಿಷ್ಟಾ । ಸತ್ಸ್ವರ್ಥಗೇಷು ಮರಣಂ ಸ್ವಯಮೇವ
ತಸ್ಯಾಃ ಕನ್ಯಾಳಿ ಗೋಹರಿಷು ಚಾಲ್ಪಸುತತ್ವಮಿಂದೌ ।।೧೪।।

ಅವತಾರಿಕೆ।। ಈ ಪ್ರಕರಣದ ಆದಿಯಲ್ಲಿ 'ತಾಸಾಂತುಭರ್ತೃಮರಣಂ ನಿಧನೇ' ಎಂದು ಹೇಳಲ್ಪಟ್ಟಿರುವದರಿಂದ ಆ ವಿಷಯವು ವಿವರಿಸಿ ಹೇಳಲ್ಪಡುತ್ತೆ. ಈ ಶ್ಲೋಕದಲ್ಲಿ ೩ ವಿಧವಾದ ಯೋಗವು ಹೇಳಲ್ಪಡುತ್ತೆ. ೧) ವೈಧವ್ಯಪ್ರಾಪ್ತಿಕಾಲ, ೨) ತನ್ನ ಕಂಡನ ಮುಂದೆ ತಾನೇ ಮರಣವನ್ನುಂಟುಮಾಡಿಕೊಳ್ಳುವದು, ೩) ಅಲ್ಪಪುತ್ರಯೋಗ.

ಟೀಕು।। ಕ್ರೂರೇ-ಪಾಪಗ್ರಹವು, ಅಷ್ಟಮೇ-ಸ್ತ್ರೀಜನ್ಮಲಗ್ನಕ್ಕೆ ಅಷ್ಟಮದಲ್ಲಿದ್ದರೆ, ಆ ಸ್ತ್ರೀಗೆ, ವಿಧವತಾ-ವೈಧವ್ಯವು, ಪ್ರದಿಷ್ಟಾ-ಹೇಳಲ್ಪಡತಕ್ಕದ್ದು. ನಿಧನೇಶ್ವರಃ-ಅಷ್ಟಮಾಧಿಪತಿ, ಯಸ್ಯ-ಯಾವಗ್ರಹದ, ಅಂಶೇ-ನವಾಂಶದಲ್ಲಿ ಸ್ಥಿತಃ-ಇರುವನೋ ತಸ್ಯ-ಆ ಗ್ರಹದ, ವಯಸಿ-ದಶಾಭುಕ್ತಿಕಾಲದಲ್ಲಿ ವೈಧವ್ಯವನ್ನು ಹೇಳತಕ್ಕದ್ದು. ಅದು ಹೇಗೆಂದರೆ-ಸ್ತ್ರೀಯ ಜನ್ಮಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಪಾಪಗ್ರಹವಿದ್ದರೆ, ಆ ಅಷ್ಟಮಭಾವಾಧಿಪತಿಯು ಯಾವಗ್ರಹದ ನವಾಂಶೆಯಲ್ಲಿರುತ್ತಾನೋ, ವಿವಾಹಾ ನಂತರದಲ್ಲಿ ಆ ಗ್ರಹದ ಭುಕ್ತಿ ಬಂದಾಗ, ವೈಧವ್ಯ ಸಂಭವಿಸುವುದು. ಕೆಲವರು ವಯಸಿ ಎಂದರೆ- ಏಕದ್ವ್ಯೌನವವಿಂಶತಿರ್ಧೃತಿಕೃತೀತ್ಯಾದ್ಯುಕ್ತ-ಗ್ರಹದವಯಸ್ಸೆಂದು ಹೇಳುವರು, ಇದು ಭಟ್ಟೋತ್ಪಲಾಚಾರ್ಯರವಾಖ್ಯಾನಕ್ಕೆ ಸಮ್ಮತಿಯಲ್ಲ. ಸತ್ಸು-ಶುಭಗ್ರಹಗಳು, ಇಂದೌ-ಚಂದ್ರನು, ಕನ್ಯಾಳಿ ಗೋಹರಿಷು-ಕನ್ಯಾ, ವೃಶ್ಚಿಕ ವೃಷಭ, ಸಿಂಹದಲ್ಲಿರುವಾಗ ಹುಟ್ಟಿದ ಸ್ತ್ರೀಗೆ, ಅಲ್ಪಸುತತ್ವಂ-ಅಲ್ಪಪುತ್ರರಾಗುವರು, ಈ ವಿಷಯಕ್ಕೆ ।।ವೃದ್ಧಯಾವನೇ।।ಶ್ಲೋಕ।। ಪಾಪೇಷ್ಟಮೇ ವಿಧವತಾನಿಧನಾಧಿ ಪತಿರ್ನವಾಂಶಕೇ ಯಸ್ಯಾಂ । ತಸ್ಯದ ಶಾಯಾಂ ಮರಣಂ ವಾಚ್ಯಂ ತಸ್ಯಾಶುಭೈರ್ದ್ವಿತೀಯಸ್ಥೈಃ ।।೫೧।। ಕನ್ಯಾಳಿವೃಷಭೇಸಿಂಹೇ ಶಿಶಿರಮಯೂಖೇಲ್ಪ ಪುತ್ರಕಾಕನ್ಯಾ । ಪುತ್ರಭವನೇ ಶುಭಯುತೇ ನಿರೀಕ್ಷಿತೇವಾ ತದ್ವೈವಸ್ಯಾತ್ ।।೫೨।। ತಥಾಚ।।ಜಾತಕಾಭರಣೇ।।ಶ್ಲೋಕ ವೈಧವ್ಯಂ ಸ್ಯಾತ್ಪಾಪಖೇಟೇಷ್ಟಮಸ್ಥೇರಂಧ್ರಸ್ವಾಮೀ ಸಂಸ್ಥಿತೋ ಯಸ್ಯಾಂಶೇ। ಮೃತ್ಯುಃಪಾಕೇಕನ್ಯವಾಚ್ಯೋಂಗನಾಯಾಃ ಸೌಮ್ಯೈ ರರ್ಥಸ್ಥಾನಗೈಃ ಸ್ವಾತ್ಪತ್ಯಯಂಹಿ।। ಕನ್ಯಾಲಿಗೋಸಿಂಹಗತೇಶಶಾಂಕೇಪಂಕೇರುಹಾಕ್ಷೀ ಖಲುಸಾಲ್ಪ ಪುತ್ರಾ । ಪುತ್ರಾಲಯಂ

ಚೇತ್ವಲುಖೇಚರೇಂದ್ರೈರ್ದೃಷ್ಟಂ ಯುತಂವಾ ಬಹುತಾಚ ಶೇಷಾಮ್ ॥೫೪॥

## ಸ್ತ್ರೀಣಾಂ ಬ್ರಹ್ಮಜ್ಞಾನಯೋಗಃ

ಮೂಲ॥ ಸೌರೇ ಮಧ್ಯಬಲೇಬಲೇನ ರಹಿತ್ಯೈ ಶ್ಶೀತಾಂಶು ಶುಕ್ರೇಂದುಜ್ಯೈ॥
ಶೇಷ್ಯೆ ರ್ವೀರ್ಯಸಮನ್ವಿತೇ ಪುರುಷಿಣೀಯದ್ಯೋಜರಾಶ್ಯುದ್ಗಮಃ ।
ಜೀವಾರ ಸ್ಫುಜಿದ್ಯೆಂದವೋಷು ಬಲಿಷುಪ್ರಾಗ್ಲಗ್ನರಾಶೌ ।
ಸಮೇವಿಖ್ಯಾತಾ ಭುವನ್ಯೆಕ ಶಾಸ್ತ್ರನಿಪುಣಾ ಸ್ತ್ರೀಬ್ರಹ್ಮವಾದಿನ್ಯಪಿ॥೧೫॥

ಅವತಾರಿಕೆ॥ ಈ ಶ್ಲೋಕದಲ್ಲಿ ಪುರುಷಸ್ವಭಾವಚೇಷ್ಟೆಯುಳ್ಳ ಸ್ತ್ರೀಲಕ್ಷಣ, ಮತ್ತು ಸ್ತ್ರೀ ಬ್ರಹ್ಮವಾದಿನಿಯಾಗುವಿಕೆ-ಈ ೨ ಯೋಗಗಳು ಹೇಳಲ್ಪಡುತ್ತೆ.

ಟೀಕು॥ ಸೌರೇ-ಶನಿಯು, ಮಧ್ಯಬಲೇ-ಅರ್ಧಬಲವುಳ್ಳವನಾಗಿ, ಶೀತಾಂಶು ಶುಕ್ರೇಂದುಜ್ಯೈ-ಚಂದ್ರ, ಶುಕ್ರ, ಬುಧರು, ಬಲೇನರಹಿತ್ಯೈ-ಬಲವಿಲ್ಲದವರಾಗಿದ್ದು ಶೇಷ್ಯೈ-ಉಳಿದ, ರವಿ, ಅಂಗಾರಕ, ಬೃಹಸ್ಪತಿಗಳು, ವೀರ್ಯಸಮನ್ವಿತೈ-ಬಲವಂತರಾಗಿ, ಓಜರಾಶ್ಯುದ್ಗಮೋಯದಿ-ವಿಷಮರಾಶಿಗಳಾದ ೧-೩-೫-೭-೯-೧೧ ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ರಾಶಿಗಳಲ್ಲಿ ಯಾವದಾದರೂ ಲಗ್ನವಾಗಿದ್ದರೆ, ಆ ಕಾಲದಲ್ಲಿ ಹುಟ್ಟಿದವಳು ಪುರುಷಿಣೀ-ಪುರುಷಸ್ವಭಾವವುಳ್ಳವಳಾಗುವಳು, ಸ್ತ್ರೀವೋಕ್ಷಶಾಸ್ತ್ರಾಭಿಜ್ಞ ಯೋಗಃ-ಜೀವಾರಸ್ಫುಜಿದ್ಯೆಂದ ಮೇಷ-ಗುರು, ಶುಕ್ರ, ಬುಧರು, ಯಾವರಾಶಿ ಯಲ್ಲಾದರೂ, ಬಲಿಷು-ಬಲಿಷ್ಠರಾಗಿರುವಾಗ, ಪ್ರಾಗ್ಲಗ್ನರಾಶೌ-ಸ್ತ್ರೀ ಜನ್ಮಲಗ್ನವು, ಸಮೇ-ಸಮರಾಶಿಗಳಾದ, ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ, ಈ ರಾಶಿಗಳಲ್ಲಿ, ಯಾವದಾದರೂ ಒಂದು ರಾಶಿ ಲಗ್ನವಾದರೆ ಭುವಿ-ಭೂಮಿಯಲ್ಲಿ, ವಿಖ್ಯಾತಾ-ಪ್ರಖ್ಯಾತಿಯನ್ನು ಹೊಂದಿ, ನೈಕಶಾಸ್ತ್ರನಿಪುಣಾ-ಅನೇಕ ಶಾಸ್ತ್ರಗಳಲ್ಲಿ ಸಮರ್ಥಳಾಗಿಯೂ ಬ್ರಹ್ಮವಾದಿನ್ಯಪಿ-ಬ್ರಹ್ಮಜ್ಞಾನಿಯಾಗಿಯೂ ಆಗುವಳು. ಅಂದರೆ ಕೇವಲ ಮೋಕ್ಷಾರ್ಥಿನಿಯಾಗುವಳು, ಈ ಎರಡು ವಿಷಯಕ್ಕೂ ।ವೃದ್ಧ ಯಾವನದಲ್ಲಿ॥ ಶ್ಲೋಕ॥ ರಿಕ್ಷೈರ್ಬುಧೇಜ್ಯಭೃಗ ಜ್ಯೈಃ ರವಿಜೇಚಮಧ್ಯೇ ಶೇಷ್ಯೈರ್ಬಲೇನ ಸಹಿತೈರ್ವಿಷಮೇಚಲಗ್ನೇ । ಜಾತಾಭವೇತ್ಪುರುಷಿಣೀಯುವತಿಃ ಸದೈವಪುಂಶ್ಚೇಷ್ಟಿತಾ ವಿಚರತಿಪ್ರಥಿತಾಚ ಲೋಕೇ ॥೫೫॥ ಬಲಭಿರ್ಬುಧಗುರು ಶುಕ್ರೈಃಶಶಾಂಕಸಹಿತೈ ರ್ವಿಲಗ್ನಭೇಸಮಭೇ । ಸ್ತ್ರೀಬ್ರಹ್ಮವಾದಿನೀ ಸ್ಯಾದನೇಕಶಾಸ್ತ್ರ ಕುಶಲಾಚ ವಿಖ್ಯಾತಾ॥ ಖಾ ೫೬ ॥ಕಿಂಚ॥ಜಾ.ಭ॥ಶ್ಲೋಕ॥ ಶುಕ್ರೇಂದು ಸೌಮ್ಯಾವಿಬಲಾ ಭವೇಯುಃ ಶನೈಶ್ಚರೇ

ಮಧ್ಯಬಲೋಯದಿಸ್ಯಾತ್ ।।೫೬।।ಶೇಷಾಸವೀರ್ಯಾ ವಿಷಮೇಚಲಗ್ನೇಯೋಷಾ ವಿಶೇಷಾತ್ಪುರುಷ ಪ್ರಗಲ್ಭಾ ।।೫೭।।ಸಮೇವಿಲಗ್ನೇಯ ದಿಸಂಸ್ಥಿತಾಸು ಬ್ರಲಾನ್ವಿತಾ ಶುಕ್ರಬುಧೇಂದು ಜೀವಾಃ। ಸ್ಯಾತ್ಕಾಮಿನೀ ಬ್ರಹ್ಮ ವಿಚಾರ ಚರ್ಚಾಪರಾಗಮಜ್ಞಾನ ವಿರಾಜಮಾನಾ ।।೫೮।।

## ಸ್ತ್ರೀಣಾಂಪ್ರವ್ರಜ್ಯಾಯೋಗ ವಿಚಾರಃ

ಮೂಲ।। ಪಾಪೇಸ್ತೇ ನವಮಗತಗ್ರಹಸ್ಯತುಲ್ಯಾಂ ಪ್ರವ್ರಜ್ಯಾಂ ಯುವತಿ ರುಪೈತ್ಯಸಂಶಯೇನ । ಉದ್ವಾಹೇವರಣವಿಧೌ ಪ್ರದಾನಕಾಲೇ ಚಿಂತಾಯಾಮಪಿ ಸಕಲಂ ವಿಧೇಯಮೇತತ್ ।।೧೬।।

ಅವತಾರಿಕೆ ।। ಸ್ತ್ರೀಗೆ ಸನ್ಯಾಸಯೋಗವು ಹೇಳಲ್ಪಡುತ್ತೆ. ಯಾವಯೋಗದಲ್ಲಿ ಹುಟ್ಟಿದ ಸ್ತ್ರೀ, ಪ್ರವ್ರಜ್ಯೆಯನ್ನಾಶ್ರಯಿಸುವಳೋ, ಆ ಯೋಗವನ್ನು ಹೇಳಿ ಪೂರ್ವದಲ್ಲಿ ಲಗ್ನ ಸಪ್ತಮದಲ್ಲಿರುವ ಗ್ರಹಗಳಿಗೆ ಪ್ರತ್ಯೇಕ ಪ್ರತ್ಯೇಕ ಫಲಗಳು ಹೇಳಲ್ಪಟ್ಟಿದೆಯಷ್ಟೆ. ಆ ಸಪ್ತಮದಲ್ಲಿ ಪಾಪಗ್ರಹವಿದ್ದು ನವಮದಲ್ಲಿ ಮತ್ತೊಂದು ಗ್ರಹವಿದ್ದರೆ, ಸಪ್ತಮದಲ್ಲಿದ್ದ ಪಾಪಗ್ರಹಕ್ಕೆ ಯಾವ ಫಲವೂ ಹೇಳದೆ ೯ನೇ ಸ್ಥಾನದಲ್ಲಿದ್ದ ಗ್ರಹಕ್ಕೆ ಪ್ರವ್ರಜ್ಯೆಯನ್ನು ಹೇಳತಕ್ಕದ್ದು. ಅದು ಹೇಗೆಂದರೆ :-

ಟೀ।। ಪಾಪೇ-ಪಾಪಗ್ರಹವು, ಅಸ್ತೇ-ಸಪ್ತಮದಲ್ಲಿರುವಾಗ, ಮತ್ತೊಂದು ಗ್ರಹವು ನವಮದಲ್ಲಿದ್ದರೆ, ನವಮಗತಗ್ರಹಸ್ಯ-ನವಮದಲ್ಲಿದ್ದ ಗ್ರಹಕ್ಕೆ ತುಲ್ಯಾಂ-ಸಮಾನವಾದ, ಅಂದರೆ ಪ್ರವ್ರಜ್ಯಾಪ್ರಕರಣದ ಮೊದಲನೆ ಶ್ಲೋಕದಲ್ಲಿ ಒಂದೊಂದು ಗ್ರಹಕ್ಕೆ ಒಂದೊಂದು ವಿಧವಾದ ಪ್ರವ್ರಜ್ಯೆಯು ಹೇಳಲ್ಪಟ್ಟಿರುವ ಪ್ರಕಾರ ಸನ್ಯಾಸ ಅಥವಾ ವೈರಾಗ್ಯವನ್ನು ಹೇಳಬೇಕು. ಆದ್ದರಿಂದ ಆ ಪ್ರಕಾರ ನವಮದಲ್ಲಿದ್ದ ಗ್ರಹಕ್ಕೆ ಸಮಾನವಾದ ಪ್ರವ್ರಜ್ಯಾಂ-ಸನ್ಯಾಸವನ್ನು, ಯುವತಿ-ಸ್ತ್ರೀ, ಅಸಂಶಯೇನ ನಿಸ್ಸಂಶಯವಾಗಿ, ಉಪೈ-ಹೊಂದುತ್ತಾಳೆ. ಈ ಪ್ರಕಾರ ಸ್ತ್ರೀ ಜಾತಕಕ್ಕೆ ವ್ಯಾಖ್ಯಾನ ಮಾಡಲ್ಪಟ್ಟಿರುತ್ತೆ. ಏತತ್ಫಲಂ-ಈ ಸ್ತ್ರೀ ಜಾತಕ ಪ್ರಕರಣದಲ್ಲಿ ಹೇಳಲ್ಪಟ್ಟ, ಸಕಲಂ-ಸಮಸ್ತ ಫಲಗಳನ್ನೂ, ಯೋಗಗಳನ್ನೂ, ಉದ್ವಾಹೇ-ವಿವಾಹ ಮುಹೂರ್ತದಲ್ಲೂ ವರಣವಿಧೌ-ಕನ್ಯಾವರಣ ಕಾಲದಲ್ಲಿಯೂ ಪ್ರಧಾನಕಾಲೇ-ಕನ್ಯಾದಾನ ಮುಹೂರ್ತದಲ್ಲಿಯೂ, ಚಿಂತಾಯಾಂ-ಆರೂಢಪ್ರಶ್ನೆ ಕಾಲದಲ್ಲಿಯೂ, ವಿಧೇಯಂ-ನಿರ್ಣಯಿಸಿ ಹೇಳತಕ್ಕದ್ದು. ಈ ಪ್ರವ್ರಜ್ಯಾ ವಿಷಯಕ್ಕೆ ।।ಶ್ಲೋಕ।। ವೃದ್ಧಯಾವನೇ ಕ್ರೂರೇಜಾ ಮಿತ್ರಗತೇನವಮೋಯದಿ ಖೇಚರೋಭವತಿ ನೂನಂ। ಪ್ರವ್ರಜ್ಯಾಭವತಿ ತದಾಪಾಪ ಗ್ರಹ ಸಂಭವಾದ ಬಲಾ।। ಜನ್ಮಕಾಲೇ ವಿವಾಹೇಚ

ಚಿಂತಾಯಾಂ ವರಣೇತಥಾ। ಚಿಂತ್ಯಂ ಸ್ತ್ರೀಣಾಂತು ಜನ್ಮೋಕ್ತಂ ಘಟಕೇ ತತ್ಪತಿಷ್ವಪಿ ॥೬೦॥

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟವಿರಚಿತೇ ಬೃಹಜ್ಜಾತಕಾಖ್ಯೆ
ಹೋರಾಶಾಸ್ತ್ರೇ ಸ್ತ್ರೀಜಾತಕಫಲ ವಿಚಾರೋನಾಮ
ಚತುರ್ವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯೆ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ಸ್ತ್ರೀಜಾತಕಫಲ ವಿಚಾರನ್ನಾಮ ತ್ರಯೋವಿಂಶ ಪ್ರಕರಣಂ
ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ

## ೨೫ನೇ ನೈರ್ಯಾಣಿಕಾಖ್ಯ ಪ್ರಕರಣಂ

ಅವತಾರಿಕೆ ।। ಈ ನೈರ್ಯಾಣಿಕ ಪ್ರಕರಣದಲ್ಲಿ ಜಾತಕನು ಜನ್ಮಾಂತ್ಯಕಾಲದಲ್ಲಿ ಯಾವರೀತಿ ದೇಹತ್ಯಾಗ ಮಾಡುವನೋ ಮತ್ತು ದೇಹತ್ಯಾಗ ಮಾಡುವುದಕ್ಕೆ ವಾತ, ಪಿತ್ತ, ಶ್ಲೇಷ್ಮ ಈ ಮೂರು ಧಾತುಗಳಲ್ಲಿ ಯಾವ ಧಾತುವಿನ ಕೋಪೋದ್ರೇಕದಿಂದ ರೋಗೋತ್ಪತ್ತಿಯಾಗುವುದೋ ಅಥವಾ ಯಾವ ಅಂಗದಲ್ಲಿ ಎಂಥಾ ವ್ರಣಾದಿಗಳು ಉತ್ಪತ್ತಿಯಾಗಿ ಆ ವ್ರಣಮೂಲದಿಂದ ಮರಣಪ್ರಾಪ್ತಿಯಾಗುವುದೋ ಮತ್ತು ಆ ದೇಹವು ಯಾವ ರೀತಿಯಾಗಿ ಪರಿಣಾಮವಾಗುವುದೋ ಅಂದರೆ ಅಗ್ನಿಯಿಂದ ದಹಿಸಲ್ಪಡುವುದೋ, ಭೂಮಿಯಲ್ಲಿ ಸ್ಥಾಪಿಸಲ್ಪಡುವದೋ ಅಥವಾ ನೀರಿನಲ್ಲಿ ಕೊಳೆತು ಹೋಗುವುದೋ ಹಾಗಿಲ್ಲದಿದ್ದರೆ ಮೃಗಪಕ್ಷಿಗಳಿಗೆ ಆಹಾರವಾಗಿ ಹೋಗುವದೋ ಇಂಥಾ ವಿಧವಾಗಿ ಮೃತನ ಶರೀರವು ನಾಶ ಹೊಂದುವದೆಂದು ಹೇಳುವಿಕೆ ಮತ್ತು ಮರಣ ಹೊಂದಿದವನಿಗೆ ಪರಲೋಕದಲ್ಲಿ ಯಾವ ಗತಿ ಉಂಟಾಗುವುದೋ ಅಥವಾ ಸ್ವರ್ಗಪ್ರಾಪ್ತಿಯಾಗುವುದೋ ಯಾ ಪುನರ್ಜನ್ಮವಿಲ್ಲದೇ ಮೋಕ್ಷಪ್ರಾಪ್ತಿಯಾಗುವುದೋ ಆ ವಿಷಯವೂ ವತ್ತು ಮೊದಲು ಹೇಳಿದ ಮೃತ್ಯು ಕಾರಣಕ್ಕೆ ಸಂಬಂಧಪಡುವ ಸಮಸ್ತ ವಿಷಯಗಳು ಹೇಳಲ್ಪಡುತ್ತೆ.

ಮೂಲ।। ಮೃತ್ಯು ರ್ಮೃತ್ಯುಗೃಹೇ ಕ್ಷಣೇನಬಲಿಭಿಸ್ತ ದ್ಧಾತುಕೋಪೋದ್ಭವ ।
ಸ್ತತ್ಸಂಯುಕ್ತ ಭಗಾತ್ರಜೋ ಬಹುಭವೋ ವಿರ್ಯಾನ್ವಿತೈರ್ಭೂರಿಭಿಃ।।
ಅಗ್ನ್ಯಂಬ್ವಾಯುಧ ಜೋಜ್ವರಾಮಯ ಕೃತಸ್ತೃಟ್‌ಕ್ಷುತ್ಕೃ ತಶ್ಚಾಷ್ಟಮೇ।
ಸೂರ್ಯಾದ್ಯೈ ರ್ನಿಧನೇಚರಾದಿಷು ಪರಸ್ವಾದ್ವ ಪ್ರದೇಶೇಷ್ವಪಿ ।।೧।।

ಅವತಾರಿಕೆ।। ಜನ್ಮಲಗ್ನದಿಂದ ಅಷ್ಟಮಭಾವರಾಶಿಯನ್ನು ಸೂರ್ಯಾದಿ ಗ್ರಹಗಳು ನೋಡುವಿಕೆಯಿಂದ ಮತ್ತು ಸಂಬಂಧಸ್ಥಿತಿಯಿಂದ ಮರಣ ಪ್ರಕಾರವು ಹೇಳಲ್ಪಡುತ್ತೆ. ಅಷ್ಟಮ ಭಾವಕ್ಕೆ ಗ್ರಹದೃಷ್ಟಿಯಿಂದ ಜಾತಕರಿಗೆ ಮರಣಕಾರಣವನ್ನು ಮರಣ ಹೇತುವಾದ ಧಾತು ಕೋಪೋದ್ರೇಕದಿಂದ ರೋಗೋತ್ಪತ್ತಿಯನ್ನು ಮರಣ ಸ್ಥಳವನ್ನು ಹೇಳುತ್ತಾನೆ.

### ರೋಗಕಾರಣ ವಿಚಾರಃ

ಟೀಕು।। ಬಲಿಭಿಃ-ಸ್ಥಾನಾದಿ ಬಲಿಷ್ಠರಾದ ಸೂರ್ಯಾದಿ ಸಪ್ತಗ್ರಹಗಳಿಂದ, ಮೃತ್ಯು ಗ್ರಹೇಕ್ಷಣೇನ-ಜನ್ಮಲಗ್ನಕ್ಕೆ ಅಷ್ಟಮಭಾವವು, ಗ್ರಹಶೂನ್ಯವಾಗಿ ಗ್ರಹಗಳಿಂದ ವೀಕ್ಷಿಸಲ್ಪಡುವದರಿಂದ, ಮೃತ್ಯುಃ-ಮೃತಿ ಹೊಂದುವಿಕೆಯು, ತದ್ಧಾತುಕೋಪೋದ್ಭವಃ-ಅಗ್ರಹಕ್ಕೆ ಉಕ್ತವಾಗಿರುವ ಧಾತು ಕೋಪೋದ್ರೇಕದಿಂದ ಸಂಭವಿಸುವದು. ಈ

ವಿಷಯಕ್ಕೆ ಗ್ರಹೋಯನಿಭೇದ ಪ್ರಕರಣದಲ್ಲಿ ೮ನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಪ್ರಕಾರ, ಸೂರ್ಯನಿಗೆ ಪಿತ್ತಧಾತು, ಬುಧನಿಗೆ ವಾತಪಿತ್ತಶ್ಲೇಷ್ಮ (ತ್ರಿಧಾತು) ಬೃಹಸ್ಪತಿಗೆ ಶ್ಲೇಷ್ಮಧಾತು, ಶುಕ್ರನಿಗೆ ವಾತ ಶ್ಲೇಷ್ಮಧಾತು ದ್ವಯವು, ತನಿಗೆ ವಾತಧಾತು ಹೇಳಲ್ಪಟ್ಟಿರುತ್ತೆಯಾದ್ದರಿಂದ ಜನ್ಮಲಗ್ನಕ್ಕೆ ಅಷ್ಟಮಭಾವ ರಾಶಿಯು ಗ್ರಹವರ್ಜಿತವಾಗಿ ಸ್ಥಾನಾದಿ ಬಲಿಷ್ಠವಾದ ಯಾವ ಗ್ರಹದಿಂದ ವೀಕ್ಷಿಸಲ್ಪಡುವದೋ ಆ ಗ್ರಹಕ್ಕೆ ಉಕ್ತವಾದ ಧಾತು ಕೋಪೋದ್ರೇಕದಿಂದ ಹುಟ್ಟಿದ ರೋಗದಿಂದ ಮರಣ ಉಂಟಾಗುವುದೆಂದು ತಿಳಿಯತಕ್ಕದ್ದು.

## ಕಾಲಪುರುಷಸ್ಯ ಅಂಗವಿಭಾಗವಶಾತ್ ರೋಗೋತ್ಪತ್ತಿ ಸ್ಥಾನವಿಚಾರಃ

ತತ್ಸಂಯುಕ್ತಭಗಾತ್ರಜಃ-ಆ ಅಷ್ಟಮಭಾವವಾಗಿರುವ ರಾಶಿಯು ಕಾಲ ಪುರುಷನ ಯಾವ ಅಂಗದಲ್ಲಿದೆ ಎಂದು ಉಕ್ತವಾಗಿರುತ್ತೋ ಆ ಪ್ರಕಾರ (೧ನೇ ಪ್ರಕರಣ ೮ನೇ ಶ್ಲೋಕದಲ್ಲಿ 'ಶಿರೋಮುಖಂ' ಎಂದು ಹೇಳಿರುವ ಪ್ರಕಾರ) ಆ ಅಂಗದಲ್ಲಿ ಅಷ್ಟಮಸ್ಥಾನವಾಗಿ ಆ ಸ್ಥಾನವು ನೋಡಲ್ಪಡುವದೋ, ಆ ಗ್ರಹಕ್ಕೆ ಹೇಳಿದ (ಮೇಲೆ ಉದಹರಿಸಿರುವ) ಧಾತುಕೋಪದಿಂದ ಮೃತ್ಯುಪ್ರಾಪ್ತಿಯಾಗುವುದು, ವೀರ್ಯಾನ್ವಿತೈಃ-ಸ್ಥಾನಾದಿಷಡ್ಬಲಯುಕ್ತರಾದ, ಭೂರಿಭಿಃ-ಅನೇಕ ಗ್ರಹಗಳಿಂದ, ಬಹುಭಮಃ- ಯಾವ ಯಾವ ಗ್ರಹಗಳು ಅಷ್ಟಮಸ್ಥಾನವನ್ನು ನೋಡುತ್ತಿರುವರೋ ಆ ಗ್ರಹಕ್ಕೆ ವಾತಪಿತ್ತಾದಿ-ಯಾವ ಯಾವ ಧಾತುಗಲುಖ್ಯವಾಗಿರುತ್ತೋ ಆಯಾಯ ಧಾತುದ್ರೇಕದಿಂದ ರೋಗೋತ್ಪತ್ತಿಯಾಗಿ ಮರಣ ಸಂಭವಿಸುವುದು. ಅಂದರೆ ಬಹು ಗ್ರಹಗಳು ಬಲಿಷ್ಠರಾಗಿ ಗ್ರಹಶೂನ್ಯವಾಗಿರುವ ಅಷ್ಟಮಸ್ಥಾನವನ್ನು ನೋಡಿರುತ್ತಿದ್ದರೆ ಧಾತು ಪ್ರಕೋಪದಿಂದ ಮರಣವನ್ನು ತಿಳಿಯಬೇಕು. ಅದು ಹೇಗೆಂದರೆ, ಕನ್ಯಾಲಗ್ನ ಜಾತಕಕ್ಕೆ ಅಷ್ಟಮ ಮೇಷರಾಶಿ-ಇಲ್ಲಿ ಸೂರ್ಯನು ಶುಕ್ರನು, ಬುಧನೂ ತುಲೆಯಲ್ಲಿದ್ದು ನೋಡುತ್ತಲೂ, ಮಕರದಲ್ಲಿ ಅಂಗಾರಕನಿದ್ದು ಚತುರ್ಥ ದೃಷ್ಟಿಯಿಂದ ನೋಡುತ್ತಲಿದ್ದಾನೆ. ಆದ್ದರಿಂದ ಸೂರ್ಯನಿಗೆ ಪಿತ್ತ, ಶುಕ್ರನಿಗೆ ವಾತಶ್ಲೇಷ್ಮ, ಬುಧನಿಗೆ ವಾತಪಿತ್ತಶ್ಲೇಷ್ಮ, ಕುಜನಿಗೆ ಪಿತ್ತ ಆದ್ದರಿಂದ ಪಿತ್ತ ೩ ವಾತ ೨ ಶ್ಲೇಷ್ಮ ೨ ಆದ್ದರಿಂದ ಈ ದಾತುಗಳು ಪ್ರಕೋಪವಾಗಿ ಪಿತ್ತಾಧಿಕವಾಗಿ ಶಿರಸ್ಸಿನಲ್ಲಿ ವ್ಯಾಧಿಹುಟ್ಟಿ ತನ್ಮೂಲಕ ಮೃತಿ ಹೊಂದುತ್ತಾನೆಂದು ತಿಳಿಯಬೇಕು।। ಈ ಪ್ರಕಾರ ಗ್ರಹಗಳ ವೀಕ್ಷಣೆಗೆ ನಿರ್ಣಯ ಮಾಡತಕ್ಕದ್ದು।।

## ಅಷ್ಟಮಸ್ಥ ಗ್ರಹವಶಾನ್ಮರಣಕಾರಣ ವಿಚಾರಃ

ಅಷ್ಟಮೇ-ಅಷ್ಟಮ ಭಾವದಲ್ಲಿರುವ, ಸೂರ್ಯಾದ್ಯೈ-ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿಗಳಿಂದ ಕ್ರಮವಾಗಿ ಅಗ್ನ್ಯಂಬ್ವಾಯುಧಜೋ ಜ್ವರಾಮಯ

ಕೃತಸ್ತ್ರುಟ್ ಕ್ಷುತ್ತೃತ-ಸೂರ್ಯನಿದ್ದರೆ, ಅಗ್ನಿ-ಅಗ್ನಿ ಮೂಲಕವಾಗಿಯೂ, ಚಂದ್ರನಿದ್ದರೆ, ಅಂಬು-ಜಲ, ಉದಕಾದಿಗಳ ಮೂಲವಾಗಿಯೂ, ಕುಜನಿದ್ದರೆ, ಆಯುಧಜ-ಶಸ್ತ್ರ ಅಸ್ತ್ರ ಮೊದಲಾದ ಆಯುಧದ ಮೂಲವಾಗಿಯೂ, ಬುಧನಿದ್ದರೆಜ್ವರ-ಜ್ವರ ದಿಂದಲೂ, ಬೃಹಸ್ಪತಿಯಿದ್ದರೆ, ಅಮಯ-ತಿಳಿಯಲಸಾಧ್ಯವಾದ ರೋಗ (ಅಂದರೆ ದೀರ್ಘರೋಗ) ದಿಂದಲೂ, ಶುಕ್ರನಿದ್ದರೆ ತೃಟ್-ಬಾಯಾರಿಕೆಯಿಂದಲೂ ಶನಿಯಿದ್ದರೆ, ಕ್ಷುತ್-ಹಸಿವುಗೊಂಡು ಇರುವಿಕೆ, (ಉಪವಾಸವಿರುವಿಕೆ) ಮೊದಲಾದ್ದರಿಂದಲೂ ಮರಣಸಂಭವಿಸುವುದು. ಈ ಮೇಲೆ ಹೇಳಿರುವ ಗ್ರಹಗಳು ಬಲಿಷ್ಠರಾಗಿದ್ದರೆ ಸೌಮ್ಯಕರ್ಮದಿಂದಲೂ, ಮಧ್ಯ ಬಲಿಷ್ಠರಾಗಿದ್ದರೆ ಮಿಶ್ರಕರ್ಮದಿಂದಲೂ, ನಷ್ಟ ಬಲಿಷ್ಠರಾಗಿದ್ದರೆ ಪಾಪ ಕರ್ಮದಿಂದಲೂ ಮರಣ ಉಂಟಾಗುವುದು. ಅದು ಹೇಗೆಂದರೆ-ಕೆಲವರು ಈ ಅಷ್ಟಮಸ್ಥಿತವಾದ ಗ್ರಹಕ್ಕೆ ಶುಭಾದಿತ್ಯವಾಗಿದ್ದರೆ ಆ ಗ್ರಹಕ್ಕೆ ಹೇಳಿರುವ ಅಗ್ನ್ಯಾದಿಗಳಿಂದ ಮರಣವುಂಟಾಗುವುದು. ಬಲಹೀನವಾಗಿದ್ದರೆ ಅಗ್ನ್ಯಾದಿ ಭಾಧಕವು ಉಂಟಾಗಿ ಶಮನವಾಗುವದೆಂದು ಮಧ್ಯಬಲಿಷ್ಠವಾಗಿದ್ದರೆ ಗ್ರಹೋಕ್ತವಾದ ಅಗ್ನ್ಯಾದಿ ಭಾದಕವುಂಟಾಗಿ ಮೃತ್ಯುವನ್ನು ತೋರಿಸಿ ಪರಿಹಾರವಾಗುವದೆಂದು ಹೇಳುತ್ತಾರೆ. ಇದಕ್ಕುದಾಹರಣೆ : ಚಂದ್ರನು ಅಷ್ಟಮದಲ್ಲಿ ಜಲರಾಶಿಯಲ್ಲಿದ್ದು ಅವನು ಶುಭಗ್ರಹದಿಂದ ನೋಡಲ್ಪಟ್ಟು ಬಲಹೀನನಾಗಿದ್ದರೆ ನೀರಿನಲ್ಲಿ ಬಿದ್ದು ಜೀವಿಸುವನು. ಸೂರ್ಯನು ಅಲ್ಪ ಬಲಿಷ್ಠನಾಗಿ ಅಷ್ಟಮದಲ್ಲಿದ್ದರೆ ಅಗ್ನಿಭಯ ಪ್ರಾಪ್ತವಾಗಿ ಅನಂತರ ಶಮನವಾಗುವುದು. ಈ ಪ್ರಕಾರ ತಿಳಿಯತಕ್ಕದ್ದು.

## ಮರಣ ಪ್ರದೇಶ ನಿರ್ಣಯಃ

ನಿಧನೇ-ಅಷ್ಟಮಭಾವವು, ಚರಾದಿಷು-ಸಂಜ್ಞಾಧ್ಯಾಯದಲ್ಲಿ ಹೇಳಲ್ಪಟ್ಟಿರುವ ಪ್ರಕಾರ ಚರ, ಸ್ಥಿರ, ದ್ವಿಸ್ವಭಾವ ರಾಶಿಯಾಗಿದ್ದರೆ ಪರಸ್ವಾಧ್ವಪ್ರದೇಶೇಷು-ಅಂದರೆ ಜನ್ಮ ಲಗ್ನಭಾವಕ್ಕೆ ಅಷ್ಟಮಭಾವವು ಚರರಾಶಿಯಾಗಿದ್ದರೆ ಪರ-ಪರದೇಶದಲ್ಲೂ ಅಷ್ಟಮವು ಸ್ಥಿರರಾಶಿಯಾಗಿದ್ದರೆ ಸ್ವ-ಸ್ವದೇಶದಲ್ಲೂ, ಅಷ್ಟಮವು ದ್ವಿಸ್ವಭಾವ ರಾಶಿಯಾಗಿದ್ದರೆ ಅಧ್ವ-ದಾರಿಯಲ್ಲಿ ಮರಣವಾಗುವದು, ಇಲ್ಲಿ ಪರಸ್ವಾಧ್ವ ಪ್ರದೇಶೇಷು ಎಂಬುವದಕ್ಕೆ ಪರಪ್ರದೇಶೇಷು, ಸ್ವಪ್ರದೇಶೇಷು, ಅಧ್ವಪ್ರದೇಶೇಷು ಎಂದು ಅನ್ವಯ ಮಾಡಿಕೊಳ್ಳಬೇಕು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ದಿನಕರ ಪ್ರಮುಖೈರ್ನಿಧನಸ್ಥಿತೈರ್ಭವತಿ ಮೃತ್ಯುರೀತಿ ಪ್ರವದೇತ್ಕ್ರಮಾತ್ । ಅನಲಕೋಜಲಿತಃ ಕರವಾಲತೋಜ್ವರ ಭವೋಗದತಃ ಕ್ಷುಧಯಾತೃಷಾ ॥ ॥೧॥ ಸ್ಥಿರಶ್ಚರೋದ್ವ್ಯಂಗ ಸಮಾಹ್ವಯಶ್ಚರಾಶೇರ್ಯದಾ ಜನ್ಮನಿಜಾಷ್ಟಮಸ್ಥಃ। ಸ್ವಕೀಯದೇಶೇ ವಿಷಯಾಂತರೇಚ ಮಾರ್ಗೇ ಪ್ರಕುರ್ಯಾನ್ಮರಣಂ ಕ್ರಮೇಣ ॥೨॥ ಆಯುರ್ಗ್ರಹಂ ಖೇಟವಿವರ್ಜಿತಂಚೇ

ದ್ವಿಲೋಕಯೇದ್ವಾ ಬಲವಾರ್ ಗ್ರಹೇಂದ್ರಃ । ತದ್ದೇತುಜಾತಂ ಪ್ರವದಂತಿಮೃತ್ಯುಂ ಬಹುಪ್ರಕಾರಂ ಬಹವೋ ಬಲಿಷ್ಠಾಃ ॥೩॥ ಪಿತ್ತಂಕಫಃ ಪಿತ್ತಮಥತ್ರಿದೋಷಃ ಶ್ಲೇಷ್ಮಾ ನಿಲೌವಾಪ್ಯನಿಲಃ ಕ್ರಮೇಣ। ಸೂರ್ಯಾದಿ ಕೇಭ್ಯೋ ಮರಣಸ್ಯಹೇತು- ಪ್ರಕಲ್ಪಿತಃ ಪ್ರಾಕ್ತನ ಜಾತಕಜ್ಞೈಃ ॥೪॥ ಮತ್ತು ಇದೇ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ಸೂರ್ಯೇಷ್ಟಮೇವಹ್ನಿ ಭಯಾನ್ಮೃತಿರ್ಭವೇಚ್ಚಂದ್ರೇ ಜಲಾದ್ಭೂಮಿ ಸುತೇಚಶಸ್ತ್ರತಃ। ಬದ್ಧೇಜರಾದಾಮಯತಃ ಸೂರಾರ್ಚಿತೇ ಶುಕ್ರೇಕ್ಷುಧಃ ಸೂರ್ಯಸುತೇ ತೃಷೋದ್ಭವಾ॥೫॥ ಶೂನ್ಯೇಷ್ಟಮೇ ಯೋಹಿ ಬಲೀ ಬಲೀಯಾಸ್ತದ್ಧಾತುಕೋಪೋದ್ಭವ ಮೃತ್ಯುಮೇತಿ। ಚರೇಷ್ಟಮೇ। ಸ್ಯಾನ್ನಿಧನಂ ವಿದೇಶೇ ಸ್ಥಿರೇ ಸ್ವದೇಶೇದ್ವಿತನೌಪತಿಃಸ್ಯಾತ್ ॥೬॥ ಸೂರ್ಯೇಪಿತ್ತೇ ಶ್ಲೇಷ್ಮವಾತೌ ಹಿಮಾಂಶೌ ಪಿತ್ತಶ್ಲೇಷ್ಮೌ ಭೂಮಿಜೇಜ್ಞೇತ್ರಯೋಪಿ । ಜೀವೇ ಶ್ಲೇಷ್ಮಾ ಭಾರ್ಗವೇ ಶ್ಲೇಷ್ಮವಾತೌ ಸೌರೇಶ್ವಾಸೋಧಾತವಃ ಸ್ಯುರ್ಗ್ರಹಾಣಾಂ ॥೭॥ ಈ ಪ್ರಕಾರ ಅನ್ಯಗ್ರಂಥದಲ್ಲಿ ಸಮ್ಮತಿಯಿರುತ್ತೆ.

| ಅಷ್ಟಮವನ್ನು ನೋಡುವ ಗ್ರಹಗಳು | ಮರಣ ಕಾರಣ | ಅಷ್ಟಮ ಸ್ಥಗ್ರಹಗಳು | ಮರಣ ಕಾರಣ |
|---|---|---|---|
| ರವಿ | ಪಿತ್ತ, ಧಾತು | ರವಿ | ಅಗ್ನಿಜನ್ಯವಾದ ಕಾರಣ |
| ಚಂದ್ರ | ವಾತ, ಶ್ಲೇಷ್ಮಧಾತು | ಚಂದ್ರ | ಜಲಸಂಬಂಧ |
| ಕುಜ | ಪಿತ್ತ ಧಾತು | ಕುಜ | ಶಸ್ತ್ರ ಸಂಬಂಧ |
| ಬುಧ | ವಾತ, ಪಿತ್ತ, ಧಾತು | ಬುಧ | ಜ್ವರ |
| ಗುರು | ಶ್ಲೇಷ್ಮಧಾತು | ಗುರು | ತಿಳಿಯಲಾರದ ರೋಗ |
| ಶುಕ್ರ | ವಾತ ಶ್ಲೇಷ್ಮಧಾತು | ಶುಕ್ರ | ಬಾಯಾರಿಕೆ (ತೃಷೆ) |
| ಶನಿ | ವಾತಧಾತು | ಶನಿ | ಕ್ಷುಧಾ (ಹಸಿವು) |

ಟಿಪ್ಪಣಿ - ಎರಡು ಮೂರು ಗ್ರಹಗಳಿದ್ದರೂ ಅಥವಾ ನೋಡಲ್ಪಟ್ಟರೂ ಆ ಫಲವನ್ನು ಸಹ ಕೂಡಿಸಿ ಹೇಳಬೇಕು.

ಮೂಲ॥ ಶೈಲಾಗ್ರಾಭಿಹತಸ್ಯ ಸೂರ್ಯಕುಜಯೋರ್ಮೃತ್ಯುಃಖ ಬಂಧುಸ್ಥಯೋಃ। ಕೂಪೇ ಮಂದಶಶಾಂಕ ಭೂಮಿ ತನಯೈರ್ಬಂಧ್ವಸ್ತ ಕರ್ಮಸ್ಥಿತೈಃ॥ ಕನ್ಯಾಯಾಂ ಸ್ವಜನಾದ್ಧಿ ಮೋಷ್ಣ ಕರಯೋಃ ಪಾಪಗ್ರಹೈರ್ದೃಷ್ಟಯೋಃ। ಸ್ಯಾತಾಂ ಯದ್ಯುಭಯೋದಯೇರ್ಕ- ಶಶಿನೌ ತೋಯೋ ತದಾಮಜ್ಜತಿ ॥೨॥

ಅವತಾರಿಕೆ॥ ಈ ಶ್ಲೋಕದಿಂದ ೧ ಪರ್ವತಾಗ್ರಾಭಿಹತಮರಣಯೋಗ,

೨ ಕೂಪ ಪತನಾನ್ಮರಣಯೋಗ, ೩ ಸ್ವಜನಾನ್ಮರಣಯೋಗ, ೪ ನೀರಿನಲ್ಲಿ ಮುಳುಗಿ ಹೋಗುವುದರಿಂದ ಮರಣಯೋಗ. ಅಂತು ನಾಲ್ಕು ವಿಧವಾದ ದುರ್ಮರಣಯೋಗ ಲಕ್ಷಣವು ಹೇಳಲ್ಪಡುತ್ತೆ.

## ಪರ್ವತಾಗ್ರಾಭಿಹತಮರಣ ಯೋಗಃ

ಟೀಕು॥ ಸೂರ್ಯ ಕುಜಯೋಃ-ರವ್ಯಂಗಾರಕರು, ಖಬಂಧುಸ್ಥಯೋಃ- ದಶಮ ಭಾವದಲ್ಲಾಗಲೀ, ಚತುರ್ಥಸ್ಥಾನದಲ್ಲಾಗಲೀ ಇದ್ದಾಗ ಜನ್ಮಿಸಿದವನಿಗೆ ಶೈಲಾಗ್ರಾಭಿ-ಹತಸ್ಯ-ಬೆಟ್ಟದ ತುದಿಯಲ್ಲಿ ಗುಂಡು ತಗಲುವದರಿಂದುಂಟಾದ ಮರಣಪ್ರಾಪ್ತಿಯೆಂದು ವರಾಹಮಿಹಿರಾಚಾರ್ಯರು ಹೇಳಿದರು (ಕೆಲವರು ಖ ಬಂಧು ಸ್ಥಯೋಃ ಎಂಬುದಕ್ಕೆ ಸೂರ್ಯನು ದಶಮದಲ್ಲು ಕುಜನು ಚತುರ್ಥದಲ್ಲೂ ಇದ್ದಾಗ ಹುಟ್ಟಿದವನಿಗೆ ಈ ಯೋಗವೆಂದು ಅರ್ಥಮಾಡಿರುವರು) ಈ ವಿಷಯಕ್ಕೆ ॥ ಜಯದೇವಃ ॥ಶ್ಲೋಕ॥ ಆರಾರ್ಕಯೋರ್ಮೃತ್ಯುಸುಖಾಸ್ಪದೈಶ್ಚ ಶಿಲಾಪ್ರಹಾರಾನ್ಮೃತಿರಸ್ತಿ ಜಂತೋಃ ಎಂದುಕ್ತವಾಗಿರುವುದರಿಂದ ವಕ್ಷ್ಯಮಾಣಶ್ಲೋಕದ ಪ್ರಕಾರ ಸೂರ್ಯನು ೧೦ರಲ್ಲು ಕುಜನು ೪ರಲ್ಲು ಇದ್ದರೆ ಈ ಯೋಗ ಪ್ರಾಪ್ತಿಯಾಗುತ್ತದೆ.

## ಕೂಪಪತನಾನ್ಮರಣ ಯೋಗಃ

ಮಂದಶಶಾಂಕ ಭೂಮಿತನಯಃ-ಶನೈಶ್ಚರ, ಚಂದ್ರ, ಮಂಗಳರು, ಬಂಧ್ವಸ್ತ ಕರ್ಮಸ್ಥಿತೈಃ. ಬಂಧು-ಚತುರ್ಥ, ಅಸ್ತ-ಸಪ್ತಮ, ಕರ್ಮ-ದಶಮ, ಸ್ಥಿತೈಃ-ಈ ಸ್ಥಾನದಲ್ಲಿರುವಾಗ (ಜನ್ಮಿಸಿದವನು) ಕೂಪೇ ಬಾವಿಯಲ್ಲಿ ಬಿದ್ದು ಮೃತನಾಗುವನು, ಈ ವಿಷಯಕ್ಕೆ॥ ಜಯದೇವನು ಹೇಳಿರುವುದೇನೆಂದರೆ :- ॥ಶ್ಲೋಕ॥ ಬಂಧ್ವಸ್ತಮೇ ಷೂರಣಗ್ಯೈರ್ಯಮೇಂದುಕ್ಷೋಣೀಸುತೈಃ ಸ್ಯಾತ್ಖಲು ಕೂಪಪಾತಾತ್॥೮॥ ಎಂದು ಚಂದ್ರ, ಶನಿ, ಕುಜರು ೪-೭-೧೦ರಲ್ಲಿದ್ದರೆ, ಕೂಪದಲ್ಲಿ ಬಿದ್ದು ಮರಣ ಹೊಂದುವನು.

## ಸ್ವಜನಾನ್ಮರಣ ಯೋಗಃ

ಹಿಮೋಷ್ಣ ಕರಯೋಃ-ಚಂದ್ರ, ರವಿಗಳು, ಕನ್ಯಾಯಾಃ-ಕನ್ಯಾರಾಶಿಯಲ್ಲಿ ಪಾಪಗ್ರಹೈಃ-ಪಾಪಗ್ರಹಗಳಾದ ಶನಿಮಂಗಳ, ಪಾಪಯುಕ್ತ ಬುಧ ಇವರಿಂದ ಕೃಷ್ಟಯೋಃ-ನೋಡಲ್ಪಟ್ಟ ಕಾಲದಲ್ಲಿ ಜನ್ಮಿಸಿದವನು, ಸ್ವಜನಾತ್-ತನ್ನ ಬಂಧುವರಿಂದ ಕೊಲ್ಲಲ್ಪಡುವನು. ಈ ವಿಷಯಕ್ಕೆ ॥ಜಯದೇವಃ॥ ಕನ್ಯಾರ್ಕ್ಷಗೌ ಭಾಸ್ಕರ ರಾತ್ರಿನಾಥೌ ಕ್ರೂರೇಕ್ಷಿತೌ ಚೇತ್ಸ್ವಜನಾದ್ವಧಸ್ಸ್ಯಾತ್। ಮೇಷಾದಿ ೧೨ ಲಗ್ನಗಳಿಗೂ ಸಂಭವಿಸುತ್ತದೆ.

## ತೋಯೇಮಜ್ಜನ ಯೋಗಃ

ಉಭಯೋದಯೇ-ದ್ವಿಸ್ವಭಾವರಾಶಿಗಳಾದ ೩-೬-೯-೧೨ ಈ ರಾಶಿಗಳು

ಲಗ್ನವಾಗಿ, ಅದರಲ್ಲಿ ಅರ್ಕಶಶಿನೌ-ರವಿ, ಶನೈಶ್ವರರು, ಸ್ಯಾತಾಂಯದಿ-ಅಲ್ಲಿದ್ದರೆ, ತದಾ-ಆ ಕಾಲದಲ್ಲಿ ಹುಟ್ಟಿದವನು, ತೋಯೇ-ನೀರಿನಲ್ಲಿ (ಪ್ರವಾಹದಲ್ಲಿ ಅಥವಾ ಅಗಾಧವಾದ ನೀರಿನಲ್ಲಿ) ಮಜ್ಜತಿ-ಮುಳುಗಿ ಹೋಗುವನು. ಈ ವಿಷಯಕ್ಕೆ ||ಶ್ಲೋಕ|| ದ್ವಿದೇಹಲಗ್ನೇ ಯದಿಸೂರ್ಯಚಂದ್ರೌ ಜಲೇನಿಮಜ್ಜನ್ಮ್ರಿಯತೇ ಸುಜಾತಃ||೯|| ದ್ವಿಸ್ವಭಾವರಾಶಿಗಳಾದ ಮಿಥುನ, ಕನ್ಯ, ಧನಸ್ಸು, ಮೀನ ಈ ನಾಲ್ಕು ರಾಶಿಗಳಲ್ಲಿ ರವಿಚಂದ್ರರಿದ್ದ ಕಾಲದಲ್ಲಿ ಜನ್ಮಿಸಿದವನಿಗೆ ನೀರಿನಲ್ಲಿ ಮುಳುಗು ವುದರಿಂದ ಮರಣ ಪ್ರಾಪ್ತಿ ಯಾಗುವದೆಂದು ತಿಳಿಯತಕ್ಕದ್ದು ||೨||

ಮೂಲ|| ಮಂದೇಕರ್ಕಟಕೇ ಜಲೋದರ ಕೃತೋಮೃತ್ಯುರ್ಮೃಗಾಂಕೇಮೃಗೇ ।
ಶಸ್ತ್ರಾಗ್ನಿಪ್ರಭವ ಶ್ಶಶಿನ್ಯ ಶುಭಯೋರ್ಮಧ್ಯೇ ಕುಜರ್ಕೇಸ್ಥಿತೇ । ಕನ್ಯಾಯಾಂ ರುಧಿರೋತ್ಥಶೋಷ ಜನಿತಸ್ತದ್ವತಾಸ್ಥಿತೇಶೀತಗೌ । ಸೌರರ್ಕ್ಷೇ ಯದಿತದ್ವದೇವ ಹಿಮಗೌರಜ್ಜ್ವಗ್ನಿ *ಪಾಶೈಃಕೃತೈಃ ||೩||

ಅವತಾರಿಕೆ|| ಈ ಮಂದೇ, ಕರ್ಕಟಕೇ ಎಂಬುವ ಶ್ಲೋಕದಿಂದ ೧ ಜಲೋದರದಿಂದ ಮರಣಯೋಗ, ೨ ಶಸ್ತ್ರಾಗ್ನಿ ಮೂಲದಿಂದ ಮರಣಯೋಗ, ೩ ಕ್ಷಯರೋಗದಿಂಡ ಮರಣಯೋಗ, ೪ ರಜ್ಜ್ವಗ್ನಿ ಪಾಶದಿಂದ ಮರಣಯೋಗ, ಅಂತು ನಾಲ್ಕು ಮರಣ ಯೋಗಗಳು ಹೇಳಲ್ಪಡುತ್ತೆ.

## ಜಲೋದರಾನ್ಮರಣ ಯೋಗಃ

ಟೀಕು|| ಮಂದೇ-ಶನೈಶ್ಚರನು, ಕರ್ಕಾಟಕೇ-ಕರ್ಕಾಟಕರಾಶಿಯಲ್ಲಿಯೂ ಮೃಗಾಂಕೇ-ಚಂದ್ರನು, ಮೃಗೇ ಮಕರರಾಶಿಯಲ್ಲಿಯೂ, ಇದ್ದಾಗ ಜನ್ಮಿಸಿದವನು ಜಲೋದರಕೃತಃ-ಜಲೋದರವೆಂಬ ಹೊಟ್ಟೆಯಲ್ಲಿ ನೀರಿನಗಡ್ಡೆ ಕಟ್ಟುವ ರೋಗದಿಂದ ಮೃತಿಯನ್ನು ಹೊಂದುವನೆಂದು ಹೇಳುವರು. ಅದು ಸರಿಯಲ್ಲ. ಈ ವಿಷಯದಲ್ಲಿ ಜಯದೇವಃ ||ಶ್ಲೋಕ|| ಕರ್ಕೇರ್ಕಪುತ್ರೇಮೃಗಗೇ ಮೃಗಾ ಕೇ ಜಲೋದರಾನ್ಮತ್ಯು ಮುಪೈತಿಜಾತಃ||

## ಶಸ್ತ್ರಾಗ್ನಿಜನ್ಯಮರಣ ಯೋಗಃ

ಶಶಿನಿ-ಚಂದ್ರನು ಅಶುಭಯೋಃ-ಪಾಪಗ್ರಹಗಳಾದ ರವಿ, ಶನಿ, ಕುಜರಲ್ಲಿ ಯಾರಾದರೂ ಎರಡು ಗ್ರಹಗಳ, ಮಧ್ಯೇ-ನಡುವೆ ಅಂದರೆ ಹಿಂದೆ ೧ ಪಾಪಗ್ರಹ, ಮುಂದೆ ೧ ಪಾಪಗ್ರಹ ಉದಾಹರಣೆ, (ಚಂದ್ರಸ್ಪುಟರಾ, ೦ ಭಾಗ, ೨೦ ಕಲೆ ೧೪ ವಿಕಲೆ, ೪೩ ಕುಜಸ್ಪುಟ ರಾ, ೦ ಭಾಗ-೧೪-ಕಲೆ-೪-ವಿಕಲೆ-೨೧-ಮತ್ತು

* ರಜ್ಜಗ್ನಿಪಾಶೈಃ ಕೃತೈಃ ಎಂದು ದಕ್ಷಿಣಾತ್ಯ ಪಾಠ.

ಶನಿಸ್ಫುಟಿರಾ ೦ ಭಾಗ ೨೭-ಕಲೆ ೧೮ ವಿಕಲೆ-೧೬ ಆದ್ದರಿಂದ ಮೇಷರಾಶಿಯಲ್ಲಿ ಕುಜಶನಿಗಳ ಮಧ್ಯೇ ಚಂದ್ರನಿದ್ದುಂತಾಯಿತು) ಕುಜರ್ಕ್ಷೇ- ಕುಜನಕ್ಷೇತ್ರಗಳಾದ ಮೇಷದಲ್ಲಾಗಲೀ, ವೃಶ್ಚಿಕದಲ್ಲಾಗಲೀ, ಸ್ಥಿತೇ-ಇರುವಾಗ ಜನ್ಮಿಸಿದವನಿಗ ಶಸ್ತ್ರಾಗ್ನಿ ಪ್ರಭಾವಃ-ಶಸ್ತ್ರದಿಂದ ಅಂದರೆ ಆಯುಧದಿಂದಾಗಲಿ ಅಗ್ನಿಮೂಲವೆಂದರೆ ಬೆಂಕಿ ಬಿದ್ದು ಸುಡುವುದರ ಮೂಲದಿಂದಾಗಲಿ, ಉಂಟಾದ ಉಪಹತಿಯಿಂದ ಮರಣವುಂಟಾಗುವುದು.

ಶ್ಲೋಕ।। ಪಾಪದ್ವಯಾಂತರ್ಗತಗೇ ಕುಜರ್ಕ್ಷೇಸ್ಥಿತೇ ವಿಧಾವಾಯುಧತೋಗ್ನಿ ತೋವಾ ।।೧೦।।

## ರಕ್ತಶೋಷ (ಕ್ಷಯ) ಮರಣಯೋಗಃ

ಶೀತಗೌ-ಶೀತರಶ್ಮಿಯುಳ್ಳವನೆಂದರೆ-ಚಂದ್ರನು, ಕನ್ಯಾಯಾಂ-ಕನ್ಯಾ ರಾಶಿಯಲ್ಲಿ ಅಂದರೆ ಜನ್ಮಲಗ್ನ ಯಾವದಾದರೂ ಬಾಧಕವಿಲ್ಲ. ತದ್ವತ್‌ಸ್ಥಿತೇ-ಮೇಲೆ ಹೇಳಿದಂತೆ ಅಂದರೆ-ಎರಡು ಪಾಪಗ್ರಹಗಳ ಮಧ್ಯದಲ್ಲಿ ಇದ್ದರೆ, ರುಧಿರೋತ್ಥಶೋಷ ಜನಿತಃ-ರಕ್ತ ಕೆಟ್ಟು ಹೋಗುವದಿಂದಲಾದರೂ, ಕ್ಷಯರೋಗದಿಂದಲಾದರೂ, ಮೃತಿ ಹೊಂದುವದು. ಈ ವಿಷಯಕ್ಕೆ ।।ಜಯದೇವಃ।। ಶ್ಲೋಕ।। ಕನ್ಯಾಯಾಂ ಚೇತ್ಪಾಪ ಮಧ್ಯಸ್ಥಿತೇಂದು ಮೃತ್ಯುರ್ಜಂತೋಃ ಶೋಣಿತೋದ್ಭೂತರೋಗಾತ್ ।।

## ರಜ್ಜ್ವಗ್ನಿಪಾಶಾನ್ಮೃತಿ ಯೋಗಃ

ಹಿಮಗೌ-ಚಂದ್ರನು, ಸೌರರ್ಕ್ಷೇ-ಶನೈಶ್ಚರನ ಕ್ಷೇತ್ರಗಳಾದ ಮಕರದಲ್ಲಾಗಲಿ, ಕುಂಭದಲ್ಲಾಗಲಿ, ತದ್ವದೇವ-ಅಂದರೆ ಮೇಲೆ ಉದಹರಿಸಿರುವಂತೆ ರವಿ, ಕುಜ, ಶನಿಗಳ ಮಧ್ಯದಲ್ಲಿರುವಾಗ ಜನ್ಮಿಸಿದವನಿಗೆ, ರಜ್ಜ್ವಗ್ನಿಪಾಶೈಃ-ಹಗ್ಗದಿಂದ ನೇಣು ಹಾಕಿಕೊಳ್ಳುವುದರಿಂದಾಗಲಿ, ಬೆಂಕಿಯಿಂದಾಗಲಿ, ಮೃತ್ಯು-ಶರೀರಕ್ಕೆ ಅವಸಾನ ಕಾಲವು ಪ್ರಾಪ್ತಿಯಾಗುವುದು. ರಜ್ಜ್ವಗ್ನಿಪಾಶೈಃ ಎಂಬುವದಕ್ಕೆ ರಜ್ಜ್ವಗ್ನಿಪಾಶೈಃ ಎಂದು ಪಾಠಾಂತರವಿರುತ್ತೆ. ಆದರೆ ಜಯದೇವನ ಸಮ್ಮತಿ।।ಶ್ಲೋಕ।। ಸೌರರ್ಕ್ಷಸ್ಥೇ ತದ್ವದೇವೌ ಷಧೀಶೇವನ್ಯೌಪಾತಾದ್ರಜ್ಜುನಾವಾವಧಃಸ್ಯಾತ್ ।।೧೧।। ಎಂದು ಹೇಳಿರುವದರಿಂದ ಅಗ್ನಿಪಾತ ಮತ್ತು ರಜ್ಜುವಿನಿಂದ ಮರಣವೆಂಬುವದೇ ನಿಶ್ಚಿತವಾಯಿತು.

ಮೂಲ।। ಬಂಧಾದ್ಧೀ ನವಮಸ್ಥಯೋ ರಶುಭಯೋ ಸೌಮ್ಯಗ್ರಹಾ ದೃಷ್ಟಯೋಃ।
ದ್ರೇಕ್ಕಾಣೈಶ್ಚಸ ಸರ್ಪಪಾಶನಿಗದೈ ಶ್ಛಿದ್ರಸ್ಥಿತೈ ರ್ಬಂಧತಃ।। ಕನ್ಯಾಯಾಮ ಶುಭಾನ್ವಿತೇಸ್ತಮಯುಗೇ ಚಂದ್ರೇಸ್ಥಿತೇ ಮೇಷಗೇ । ಸೂರ್ಯೇ ಲಗ್ನಗತೇಚ ವಧ್ಧಿಮರಣಂ ಸ್ತ್ರೀಹೇತುಕಂ ಮಂದಿರೇ ।।೪।।

ಅವತಾರಿಕೆ ।। ಈ ಶ್ಲೋಕದಿಂದ ೧ ನಿರ್ಬಂಧನದಿಂದ ಮರಣಯೋಗ,

೨ ಬಂಧನದಿಂದ ಮರಣಯೋಗ, ೩ ಸ್ತ್ರೀಹೇತುಕವಾದ ಮರಣಯೋಗ, ಅಂತು ೩ ಮರಣಯೋಗವು ಹೇಳಲ್ಪಡುತ್ತೆ.

## ನಿರ್ಬಂಧನದಿಂದ ಮರಣಯೋಗಃ

ಟೀಕು॥ ಸೌಮ್ಯಗ್ರಹಾದೃಷ್ಟಯೋಃ-ಶುಭಗ್ರಹಗಳಾದ ಶುಕ್ರ, ಬುಧ, ಗುರುಗಳಲ್ಲಿ ಯಾರಿಂದಾದರೂ ನೋಡಲ್ಪಡದ, ಅಶುಭಯೋಃ-ಪಾಪಗ್ರಹಗಳಾದ ರವಿ, ಕುಜ, ಶನಿಗಳಲ್ಲಿ ಯಾರಾದರೂ ಎರಡು ಗ್ರಹಗಳು ಧೀನವಮಸ್ಥಯೋಃ। ಧೀ-ನವಮದಲ್ಲಿ ೧ ಪಾಪಗ್ರಹ, ನವಮಸ್ಥಯೋಃ-ನವಮಸ್ಥಾನದಲ್ಲಿ ೧ ಪಾಪಗ್ರಹವಿರುವ ಕಾಲದಲ್ಲಿ ಜನ್ಮಿಸಿದವನು, ಬಂಧಾತ್-ನಿರ್ಬಂಧವೆಂದರೆ-ಶರೀರವು ಚಲಿಸದಂತೆಯಾಗಲೀ, ಸೆರೆಮನೆ ಮೊದಲಾದ್ದರಲ್ಲಿ, ಮೃತಪಡುವನು. ಈ ವಿಷಯಕ್ಕೆ ॥ ಶ್ಲೋಕ॥ ಜಯದೇವಃ॥ ಧೀಧರ್ಮಸದ್ಮಗತಯೋಃ ಪಾಪಖೇಚರಯೋಸ್ತಥಾ । ಸೌಮ್ಯಗ್ರಹಾದೃಷ್ಟಯೋಶ್ಚ ಬಂಧನಾನ್ಮೃತ್ಯುಮಾಪ್ನುಯಾತ್ ॥೧೨॥

## ಉದ್ಬಂಧನಾನ್ಮರಣ ಯೋಗ

ಛಿದ್ರಸ್ಥಿತೈಃ-ಜನ್ಮಲಗ್ನಕ್ಕೆಂಟನೆ ಭಾವದಲ್ಲುದಯಿಸಿದ, ಸಸರ್ಪಪಾಶನಿಗಳೈಃ, ಸರ್ಪ-ಸರ್ಪದ್ರೇಕ್ಕಾಣ, ಪಾಶ-ಪಾಶದ್ರೇಕ್ಕಾಣ, ನಿಗಳ-ನಿಗಳವೆಂದರೆ-ಸಂಕೋಲೆ, ದ್ರೇಕ್ಕಾಣಗಳಿಂದ, ಬಂಧತಃ-ಈ ಮೇಲೆ ಹೇಳಿದ ದ್ರೇಕ್ಕಾಣಸದೃಶವಾದ ಬಂಧದಿಂದ ಮರಣವು ಪ್ರಾಪ್ತಿಯಾಗುವುದು, ಅಂದರೆ ಜನ್ಮಲಗ್ನ ದ್ರೇಕ್ಕಾಣವೇ ಅಷ್ಟಮಭಾವೋದಯದ್ರೇಕ್ಕಾಣ ಆ (೭ x ೩=೨೧+೧=೨೨ನೇ ದ್ರೇಕ್ಕಾಣ) ಇಪ್ಪತ್ತೆರಡನೇ ದ್ರೇಕ್ಕಾಣವು ಸರ್ಪದ್ರೇಕ್ಕಾಣವಾಗಿದ್ದರೂ, ಪಾಶದ್ರೇಕ್ಕಾಣವಾಗಿದ್ದರೂ, ಸಂಕೋಲೆ (ಶೃಂಖಲಾ) ದ್ರೇಕ್ಕಾಣವಾಗಿದ್ದರೂ, ಉದಯದಲ್ಲಿರುವಾಗ ಹುಟ್ಟಿದ ಪುರುಷನು, ಉದ್ಬಂಧನದಿಂದ ಮರಣಹೊಂದುವನು.

## ಈ ದ್ರೇಕ್ಕಾಣಗಳ ವಿವರಣೆ

ಸರ್ಪಪಾಶದ್ರೇಕ್ಕಾಣಗಳು ಯಾವುವೆಂದರೆ-ಕಟಕಾಂತ್ಯದ್ರೇಕ್ಕಾಣ ಅಂದರೆ ಕಟಕ ರಾಶಿಯ ಮೂರನೇ ದ್ರೇಕ್ಕಾಣ, ಮೀನರಾಶಿಯ ಅಂತ್ಯದ್ರೇಕ್ಕಾಣ, ಮಕರರಾಶಿಯ ಪ್ರಥಮದ್ರೇಕ್ಕಾಣವಾದ ನಿಗಳದ್ರೇಕ್ಕಾಣ.

## ಸ್ತ್ರೀಹೇತು ಮರಣಯೋಗ

ಮೀನರಾಶಿಯು ಲಗ್ನವಾಗಿ, ಅಶುಭಾನ್ವಿತೇ-ಅಶುಭಗ್ರಹಗಳೆಂದರೆ-ರವಿ, ಕುಜ, ಶನಿಗಳಲ್ಲಿ ಯಾವ ಗ್ರಹದಿಂದಾದರೂ, ಯುಕ್ತವಾಗಿರುವ, ಚಂದ್ರೇ-ಚಂದ್ರನು, ಅಸ್ತಮಯೇ- ಸಪ್ತಮಸ್ಥಾನದಲ್ಲಿದ್ದು, ಕನ್ಯಾಯಾಂ-ಆ ಚಂದ್ರನಿರುವ ರಾಶಿ ಕನ್ಯಾರಾಶಿಯಾಗಿದ್ದು, ಸಿತೇ-ಶುಕ್ರನು, ಮೇಷಗೇ-ಮೇಷರಾಶಿಯಲ್ಲಿಯೂ, ಸೂರ್ಯೇ-

ಸೂರ್ಯನು, ಲಗ್ನಗತೇ-ಲಗ್ನವಾದ ಮೀನರಾಶಿಯಲ್ಲಿಯೂ ಇದ್ದರೆ, ಆ ಕಾಲದಲ್ಲಿ ಹುಟ್ಟಿದವನು, ಮಂದಿರೇ-ಮನೆಯಲ್ಲಿಯೇ, ಸ್ತ್ರೀಹೇತುಕಂ-ಸ್ತ್ರೀಯರ ಮೂಲವಾಗಿ, ಮರಣಂ-ಮೃತ್ಯುಪ್ರಾಪ್ತಿಯಾಗುವದೆಂದು, ವಿದ್ಧಿ-ತಿಳಿಯತಕ್ಕದ್ದು. ಈ ವಿಷಯದಲ್ಲಿ ಜಯದೇವಃ ।।ಶ್ಲೋಕ।। ಪಾಧೋನ ರಾಶಿರ್ಯದಿ ಸಪ್ತಮೇ ಸ್ಲಿತಸ್ತಸ್ಮಿಂಸ್ತ್ರಿಯಾ ಮಾಪನಿನಾನ್ವಿತಃ ಖಲಃ। ಕ್ರಿಯೇ ಭೃಗುಶ್ಚೇತ್ತರಣಿಸ್ತನೌಭವೇ ತ್ಸದನ್ಯಿಸ್ತ್ರೀಜನ ಹೇತುನಾಮೃತಿಃ ।।೧೩।। ಮತ್ತು ಜಾಗೇಶ್ವರಃ ।।ಶ್ಲೋಕ।। ವಿಲಗ್ನೇಚ ಮೀನೇರವೌ ಮೇಷಯಾತೇ ಬೃಗೌ ಕನ್ಯ ಕಾಯಾಂಸ ಪಾಪೇನರಾಣಾಂ। ತದಾಸ್ತ್ರೀ ಭಮಂಗೇಹಮದ್ಧೇ ವಿನಾಶಂ ಜಗುಸ್ಸಂಭವೇವೈ ವಿಲಗ್ನೇ ಯದ್ಯೆವಮ್ ।।೧೪।। ಮತ್ತು ಧುಂಡಿರಾಜಃ ।।ಶ್ಲೋಕ।। ಮೀನೋದಯೇರ್ಕೇಸ್ತಗತೇ ಮೃಗಾಂಕೇ ಸಪಾಪಕೇಟಾಸು ಜಿತಿಕ್ರಿಯಸ್ಥೇ ।। ಭಾರ್ಯಾಕೃತಂ ಸ್ಯಾನ್ಮರಣಂ ಸ್ವಗೇಹೇ ವದಂತಿ ಸರ್ವೇಮುನಯಃ ಪುರಾಣಾಃ ।।ತಾ।। ಜನ್ಮಕಾಲದಲ್ಲಿ ಮೀನಲಗ್ನದಲ್ಲಿ ಸೂರ್ಯನು, ಸಪ್ತಮವಾದ ಕನ್ಯೆಯಲ್ಲಿ ಚಂದ್ರನು, ಮೇಷದಲ್ಲಿ ಕುಜನು ಇದ್ದರೆ, ಆತನು ಪತ್ನಿಯ ನಿಮಿತ್ತವಾಗಿ ಮನೆಯಲ್ಲಿ ಮರಣವನ್ನು ಹೊಂದುವನು ।।೧೫।। ಈ ವಿಷಯದಲ್ಲಿ ಉದಾಹರಣೆ ।। ಭಾರ್ಯಾಕೃತ ಮರಣವೆಂದರೆ :- ಭಾರ್ಯೆಯು ಇತರರೊಡನೆ ವ್ಯಭಿಚರಿಸುತ್ತಿರುವಾಗ ಗಂಡನಿಗೂ ವ್ಯಭಿಚಾರ ಮಾಡುತ್ತಿದ್ದವನಿಗೂ ಹೋರಾಟವಾಗಿ ಮರಣ ಹೊಂದುವಿಕೆ ೧ ಯೋಗ. ಮತ್ತು ಭಾರ್ಯೆಯು ವ್ಯಭಿಚರಿಸುವುದರ ಸೌಲಭ್ಯಕೋಸ್ಕರವಾಗಿ ಗಂಡನಿಗೆ ವಿಷವನ್ನು ಹಾಕಿ ಕೊಲ್ಲುವಳು, ಇದೊಂದು ಯೋಗವು.

ಮೂಲ।। ಬಂದಾದ್ದೀ ನವಮಸ್ಥಯೋರಶುಭಯೋ ಸೌಮ್ಯಗ್ರಹಾದೃಷ್ಟಯೋ । ದ್ರೇಕ್ಕಾಣೈಶ್ಚ ಸರ್ಪಪಾಶನಿಗಳೈಸ್ಛಿದ್ರಸ್ಥಿತೈರ್ಬಂಧತಃ।। ಕನ್ಯಾಯಾಮ ಶುಭಾನ್ವಿತೇಸ್ತಮಯುಗೇ ಚಂದ್ರೇಸಿತೇ ಮೇಷಗೇ । ಸೂರ್ಯೇ ಲಗ್ನಗತೇಚ ವಿದ್ದಿಮರಣಂ ಸ್ತ್ರೀಹೇತುಕುಂ ಮಂದಿರೇ ।।೫।।

ಟೀಕು।। ಈ ಶ್ಲೋಕದಲ್ಲಿ ಉದ್ಬಂಧನಾದಿ ಮರಣತ್ರಯ ಯೋಗಗಳು ಹೇಳಲ್ಪಡುತ್ತೆ.

೧. ಬಂಧನ ಮರಣಯೋಗ, ೨. ಉದ್ಬಂಧನ ಮರಣಯೋಗಃ, ೩. ಗೃಹೇ ಸ್ತ್ರೀಹೇತು ಮರಣಯೋಗಃ.

೧ ಬಂಧನಾನ್ಮರಣಯೋಗಃ ।। ಸೌಮ್ಯಗ್ರಹಾ ದುಷ್ಟಯೋಃ-ಶುಭಗ್ರಹಗಳಿಂದ ನೋಡಲ್ಪಡದ, ಅಶುಭಯೋಃ-ಎರಡು ಪಾಪಗ್ರಹಗಳು, ಧೀನವಮಸ್ಥಯೋ-ಪಂಚಮದಲ್ಲೊಂದು ಪಾಪಗ್ರಹ, ನವಮದಲ್ಲೊಂದು ಪಾಪಗ್ರಹವಿರುವಾಗ ಹುಟ್ಟಿದವನು, ಬಂಧಾತ್-ಬಂಧರದಿಂದ ಮರಣ ಹೊಂದುವನು. ಈ ವಿಷಯಕ್ಕೆ

ಜಯದೇವಃ ॥ ಧೀಧರ್ಮಸದ್ಮ ಗತಯೋಃ ಪಾಪಖೇಚರಯೋಸ್ತಥಾ। ಸೌಮ್ಯಗ್ರಹಾ ದುಷ್ಟಯೋಶ್ಚ ಬಂಧನಾನ್ಮೃತ್ಯುಮಾಪ್ನುಯಾತ್ ॥೧೨॥

೨ ಉದ್ಬಂಧನಾನ್ಮರಣಯೋಗಃ ॥ ಛಿದ್ರಸ್ಥಿತೈಃ-ಜನ್ಮಲಗ್ನಕ್ಕೆ ಅಷ್ಟಮದಲ್ಲಿ ಉದಯಿಸಿದ, ಸಸರ್ಪಪಾಶನಿಗಳೈಃ-ಸರ್ಪ, ಪಾಶ, ನಿಗಳಾಖ್ಯಗಳಾದ, ದ್ರೇಕ್ಕಾಣೈಃ-ದ್ರೇಕ್ಕಾಣಗಳಿಂದ, ಬಂಧತಃ-ಬಂಧನದಿಂದ ಮೃತಿಹೊಂದುವನು, ಅಂದರೆ, ಲಗ್ನಕ್ಕೆ ಅಷ್ಟಮರಾಶಿಯಲ್ಲಿ ಸರ್ಪಪಾಶ ದ್ರೇಕ್ಕಾಣವಾಗಲೀ, ನಿಗಳ ದ್ರೇಕ್ಕಾಣವಾಗಲೀ ಉದಯಿಸುವಾಗ ಹುಟ್ಟಿದವನಿಗೆ ಬಂಧನದಿಂದ ಮರಣವುಂಟಾಗುವುದು.

೩ ಗೃಹೇ ಸ್ತ್ರೀಹೇತುನಾ ಮರಣಯೋಗಾಃ॥ ಮೀನಲಗ್ನವಾಗಿ, ಅಶುಭಾನ್ವಿತೇ-ಪಾಪಗ್ರಹಯುಕ್ತನಾದ, ಚಂದ್ರೇ-ಚಂದ್ರನು ಅಸ್ತಮಯಗೇ-ಸಪ್ತಮವಾದ, ಕನ್ಯಾಯಾಂ-ಕನ್ಯೆಯಲ್ಲಿದ್ದು, ಸೀತೇ-ಶುಕ್ರನು, ಮೇಷಗೇ-ಮೇಷದಲ್ಲಿದ್ದು. ಸೂರ್ಯೇ- ಸೂರ್ಯನು, ಲಗ್ನಗತೇ-ಲಗ್ನವಾದ ಮೀನದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನಿಗೆ ಮಂದಿರೇ-ಗೃಹದಲ್ಲಿ, ಸ್ತ್ರೀಹೇತುಕಂ-ಸ್ತ್ರೀನಿಮಿತ್ತವಾದ ಮರಣವನ್ನು, ವಿದ್ಧಿ-ತಿಳಿಯತಕ್ಕದ್ದು. ಈ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ಪಾಥೋ ನರಾಶಿರ್ಯದಿ ಸಪ್ತಮೇಸ್ಥಿತಸ್ತಸ್ಮಿಂಸ್ತ್ರಿಯಾಮಾಪತಿ ನಾನ್ವಿತಃಖಲಃ। ಕ್ರಿಯೇ ಬೃಗುಶ್ಚೇತ್ತರಣಿಸ್ತಿನೌ ಭವೇತ್ಸ್ವವಸದ್ಮನಿ ಸ್ತ್ರೀಜನಹೇತುನಾಮೃತಿಃ॥ ಮತ್ತು ಜಾಗೇಶ್ವರಃ॥ ವಿಲಗ್ನೇಚ ಮೀನೇ ರವೌಮೇಷಯಾತೇ ಬೃಗೌ ಕನ್ಯಕಾಯಾಂ ಸಪಾಪೇನರಾಣಾಂ । ತದಾಸ್ತ್ರೀ ಭವಂಗೇಹಮಧ್ಯೇ ವಿನಾಶಂಜನುಃ ಸಂಭವೇದ್ವೈ ವಿಲಗ್ನೇಯದ್ಯೆವಂ ॥೧೪॥ ಮತ್ತು ಧುಂಡಿರಾಜಃ ॥ಶ್ಲೋಕ॥ ಮೀನೋದಯೇರೇಸ್ತಗತೇ ಮೃಗಾಂಕೇ ಸಪಾಪಕೇಚಾಸ್ಪ ಜಿತಿಕ್ರಿಯಸ್ಥೇ । ಭಾರ್ಯಾಕೃತಂ ಸ್ಯಾನ್ಮರಣಂ ಸ್ವಗೇಹೇವಂದತಿ ಸರ್ವೇ ಮುನಯಃ ಪುರಾಣಾಃ॥ ಜನ್ಮಕಾಲದಲ್ಲಿ ಮೀನ ಲಗ್ನ ಜಾತಕವಾಗಿ, ಮೀನದಲ್ಲಿ ಸೂರ್ಯನು, ಸಪ್ತಮದಲ್ಲಿ ಚಂದ್ರನು ಮೇಷದಲ್ಲಿ ಕುಜನು ಇದ್ದರೆ ಆತನು ಹೆಂಡತಿ ನಿಮಿತ್ತವಾಗಿ ಮನೆಯಲ್ಲಿಯೇ ಮರಣ ಉಂಟಾಗುವುದು. ಈ ಯೋಗದ ವಿಶೇಷ ಫಲ-ಪತ್ನಿಯು ಇತರರೊಡನೆ ವ್ಯಭಿಚರಿಸುತ್ತಿರುವಾಗ ಅವಳ ಗಂಡನಿಂದ ನೋಡಲ್ಪಟ್ಟು ಜಾರಪುರುಷನಿಗೂ ಗಂಡನಿಗೂ ಹೊಡೆದಾಟವಾಗಿ ಮರಣ ಹೊಂದುವನು. ೧ ಯೋಗ ಹೆಂಡತಿಯು ವ್ಯಭಿಚಾರಮಾಡುವುದಕ್ಕೋಸ್ಕರ ಗಂಡನನ್ನು ಕೊಂದು ತನ್ನ ಮನೋರಥವು, ಅಂತು-ಈಡೇರಲು ಮಾಡುವದು ೧ ಯೋಗವು ಈ ಎರಡು ಯೋಗಗಳು.

ಮೂಲ॥ ಶೂಲೋದ್ಭಿನ್ನತನುಃ ಸುಖೇವನಿಸುತೇ ಸೂರ್ಯೇಽಪಿವಾಖ್ಯೇಯಮೇ।
ಸಪಕ್ಷೀಣ ಹಿಮಾಂಶುಭಿಶ್ಚಯುಗಪತ್ತಾ ಪೈ ಸ್ತ್ರಿಕೋಣಾದ್ಯಗೈಃ ॥
ಬಂಧುಸ್ಥೇಚರವಾ ವಿಯತ್ಯವನಿಜೇ ಕ್ಷೀಣೇಂದು ಸಂವೀಕ್ಷಿತೇ ।
ಕಾಷ್ಠೇನಾಭಿಹತಃಪ್ರಯಾತಿಮರಣಂ ಸೂರ್ಯಾತ್ಮಜೇನೇಕ್ಷಿತೇ ॥೬॥

ಅವತಾರಿಕೆ॥ ಈ ಶ್ಲೋಕದಲ್ಲಿ ೩ ಶೂಲೋದ್ಭಿನ್ನಯೋಗ ೧ ಕಾಷ್ಟಘಾತ ಮರಣ ಯೋಗ ಹೇಳಲ್ಪಡುತ್ತೆ.

## ೧ನೇ ಶೂಲೋದ್ಭಿನ್ನ ಮರಣಯೋಗ

ಟೀಕು॥ ಸುಖೇ-ಚತುರ್ಥದಲ್ಲಿ, ಅವನಿಸುತೇ-ಕುಜನಾದರೂ, ಸೂರ್ಯೇಪಿವಾ-ಸೂರ್ಯನಾದರೂ ಇದ್ದು, ಖೇ-ದಶಮದಲ್ಲಿ, ಯಮೇ-ಶನಿಯು ಇದ್ದಾಗ ಹುಟ್ಟಿದವನು, ಶೂಲೋದ್ಭಿನ್ನತನುಃ-ಶೂಲದಿಂದ ತಿವಿಯಲ್ಪಟ್ಟು ಮರಣಹೊಂದುವನು. ಈ ಯೋಗವು ಎರಡು ವಿಧವಾಗಿರುವುದು, ಚತುರ್ಥದಲ್ಲಿ ಕುಜ, ದಶಮದಲ್ಲಿ ಶನಿ, ೧ ಯೋಗ ಚತುರ್ಥದಲ್ಲಿ ರವಿ, ದಶಮದಲ್ಲಿ ಶನಿ ೨ ಯೋಗವು, ೧೨ ಲಗ್ನಗಳಿಗೂ, ಪ್ರತ್ಯೇಕವಾಗಿ ಕುಜನಿಂದ ೧೨ ಯೋಗವು, ರವಿಯಿಂದ ೧೨ ಯೋಗವು ಅಂತು ೨೪ ಯೋಗಗಳು ಲಭಿಸುತ್ತದೆ.

## ೨ನೇ ವಿಧವಾದ ಶೂಲ ಮರಣಯೋಗ

ಸಪ್ರಕ್ಷೀಣಹಿ ಮಾಂಶುಭಿಃ-ಕ್ಷೀಣಚಂದ್ರ ಸಹಿತವಾದ, ಪಾಪೈಃ-ಪಾಪಗ್ರಹಗಳು ಯುಗಪತ್-ಏಕಕಾಲದಲ್ಲಿ, ತ್ರಿಕೋಣಾದ್ಯಗೈಃ-ನವಮ, ಪಂಚಮ, ಜನ್ಮಲಗ್ನದಲ್ಲಿದ್ದು ಇತರ ಸ್ಥಾನಗಳಲ್ಲಿ ಪಾಪಗ್ರಹಗಳಿಲ್ಲದಿದ್ದರೆ ಶೂಲದಿಂದ ಮರಣ ಉಂಟಾಗುವುದು.

## ೩ನೇ ವಿಧವಾದ ಶೂಲೋದ್ಭಿನ್ನ ಮರಣಯೋಗ

ಬಂಧುಸ್ಥೇ-ಚತುರ್ಥದಲ್ಲಿ, ರವೌ-ಸೂರ್ಯನು, ವಿಯತಿ-ದಶಮದಲ್ಲಿ, ಅವನಿಸುತೇ ಕುಜನು, ಕ್ಷೀಣೇಂದು ಸಂವೀಕ್ಷಿತೇ-ಕ್ಷೀಣ ಚಂದ್ರನಿಂದ ನೋಡಲ್ಪಟ್ಟಾಗ ಹುಟ್ಟಿದವನು, ಶೂಲದಿಂದ ಮರಣ ಹೊಂದುವನು.

## ಕಾಷ್ಠಾಭಿಹತ ಮರಣಯೋಗ

ಮೇಲೆ ಹೇಳಲ್ಪಟ್ಟ ರವಿ, ಕುಜರು ಸೂರ್ಯತ್ಮಜೇನ-ಶನಿಯಿಂದ, ವೀಕ್ಷಿತೇ-ನೋಡಲ್ಪಟ್ಟರೆ, ಆ ಕಾಲದಲ್ಲಿ ಹುಟ್ಟಿದವನು, ಕಾಷ್ಠೇನ-ಕಟ್ಟಿಗೆಯಿಂದ, ಅಭಿಹತಃ-ಹೊಡೆಯಲ್ಪಟ್ಟು, ಮರಣಂ-ಮೃತಿಯನ್ನು, ಪ್ರಯಾತಿ-ಹೊಂದುವನು. ಈ ವಿಷಯಕ್ಕೆ ಧುಂಡಿರಾಜಃ॥ಶ್ಲೋಕ॥ ಮೇಷೂರಣಸ್ಥೇ ಧರಣೀತನೂಜೇ ದಿವಾಮಣೌ ಭೂತಲಭಾವಸಂಸ್ಥೇ । ಕ್ಷೀಣೇಂದು ಮಂದಪ್ರವಿಲೋಕ್ಯಮಾನೇ ಕಾಷ್ಠಾಭಿಘಾತೇನ ವದಂತಿ ಮೃತ್ಯುಂ ॥೧೬॥

ಮೂಲ॥ ರಂಧ್ರಾಸ್ಪದಾಂಗಹಿಬುಕೈ ರ್ಲಗುಡಾಹತಾಂಗಃ। ಪ್ರಕ್ಷೀಣಚಂದ್ರ ರುಧಿರಾರ್ಕಿ ದಿನೇಶಯುಕ್ತೈಃ ॥ ತೈರೇವಕರ್ಮನವಮೋದಯಪುತ್ರ ಸಂಸ್ಥೈ। ರ್ಧೂಮಾಗ್ನಿ ಬಂಧನ ಶರೀರನಿಕುಟ್ಟನಾಂತಃ ॥೭॥

ಅವತಾರಿಕೆ ।। ಈ ಶ್ಲೋಕದಲ್ಲಿ ದೊಣ್ಣೆ ಪೆಟ್ಟಿನಿಂದ ಮರಣಯೋಗ ೧, ಹೊಗೆ, ಅಗ್ನಿ, ಬಂಧನದಿಂದ ಮರಣಯೋಗ ೧, ಅಂತು ೨ ಯೋಗಗಳು ಹೇಳಲ್ಪಡುತ್ತೆ.

## ಲಗುಡಾಹತ ಮರಣಯೋಗಃ

ಟೀಕು।। ಪ್ರಕ್ಷೀಣಚಂದ್ರ ರುಧಿರಾರ್ಕಿ ದಿನೇಶಯುಕ್ತೈಃ-ಕ್ಷೀಣಚಂದ್ರ, ಕುಜ, ಶನಿ, ರವಿ ಈ ೪ ಗ್ರಹಗಳು ಕ್ರಮವಾಗಿ, ರಂಧ್ರಾಸ್ಪದಾಂಗಹಿಬುಕೈಃ-ಅಷ್ಟಮ, ದಶಮ, ಲಗ್ನ, ಚತುರ್ತದಲ್ಲಿರುವಾಗ ಹುಟ್ಟಿದವನು, ಲಗುಡಾಹತಾಂಗಃ-ದೊಣ್ಣೆ ಪೆಟ್ಟಿನಿಂದ ಮರಣ ಹೊಂದುವನೂ, ಕ್ಷೀಣಚಂದ್ರನು ಅಷ್ಟಮದಲ್ಲು, ಕುಜನು ದಶಮದಲ್ಲು, ಶನಿ ಜನ್ಮಲಗ್ನದಲ್ಲು. ರವಿ ಚತುರ್ಥದಲ್ಲಿರುವಾಗ ಹುಟ್ಟಿದವನಿಗೆ ಈ ಯೋಗವು ಸಂಭವಿಸುತ್ತದೆ. ಕ್ರಮವಾಗಿ ಮೇಷಾದಿ ೧೨ ಲಗ್ನಗಳಿಗೆ ೧೨ ಯೋಗವು ಲಭಿಸುತ್ತದೆ. ಈ ವಿಷಯದಲ್ಲಿ ಧುಂಡಿರಾಜಃ।।ಶ್ಲೋಕ।। ಕ್ಷೀಣೇಂದು ಭೌಮಾರ್ಕಿ ದಿವಾಕರೈಃ ಸ್ಯಾದಾಯುಃ ಖಲಾಂಬುಪ್ರಗ ತೈರ್ಗದಾದೇಃ। ಮೃತ್ಯುಃ ಖಪುಣ್ಯೋದಯ ಪಂಚಮಸ್ಥೈಸ್ತೈರೇವನಾನಾವಿಧಕುಟ್ಟನೇನ ।।೧೭।। ಈ ಶ್ಲೋಕದ ಉತ್ತರಾರ್ಧ-ಯೋಗವು ಮುಂದೆ ಹೇಳಲ್ಪಡುತ್ತೆ.

## ಧೂಮಾಗ್ನಿ ಬಂಧನೇ ಶರೀರ ಕುಟ್ಟನಾನ್ಮರಣಯೋಗಃ

ಕರ್ಮ ನವಮೋದಯ ಪುತ್ರಸಂಸ್ಥೈಃ-ದಶಮ, ನವಮ, ಲಗ್ನ, ಪಂಚಮ ಸ್ಥಾನಗಳಲ್ಲಿ, ತೈರೇವ-ಆ ಗ್ರಹಗಳೇ, ಅಂದರೆ ದಶಮದಲ್ಲಿ ಕ್ಷೀಣಚಂದ್ರನು, ನವಮದಲ್ಲಿ ಕುಜನು, ಲಗ್ನದಲ್ಲಿ ಶನಿ, ಪಂಚಮದಲ್ಲಿ ಸೂರ್ಯ ಈ ಪ್ರಕಾರ ಗ್ರಹಗಳಿರುವಾಗ ಹುಟ್ಟಿದವನಿಗೆ, ಧೂಮಾಗ್ನಿ ಬಂಧನ ಶರೀರ ನಿಕುಟ್ಟನಾಂತಃ- ಹೊಗೆಯಿಂದಾಗಲೀ, ಅಗ್ನಿಜನಿತವಾದ ಗಾಯದಿಂದಾಗಲೀ, ಬಂಧನದಿಂದಾಗಲೀ, ಅಂಕುಶಾದಿಗಳಿಂದ ತಿವಿಯಲ್ಪಟ್ಟಾಗಲೀ ಮರಣ ಸಂಭವಿಸುವುದು.

ಮೂಲ।। ಬಂಧ್ವಸ್ತಕರ್ಮಸಹಿತೈಃ ಕುಜಸೂರ್ಯಮಂದ್ಯೈರ್ನಿರ್ಯಾಣಮಾ
ಯುಧಶಿಖಿ ಕ್ಷಿತಪಾಲಕೋಪಾತಾ। ಸೌರೇಂದು ಭೂಮಿತನಯೈ
ಸ್ಸ್ವಸುಖಾಸ್ಪದಸ್ಥೈ ರ್ಜ್ಞೇಯಕ್ಷತಃ ಕೃಮಿಕೃತಶ್ಚ ಶರೀರಪಾತಃ ।।೮।।

ಅವತಾರಿಕೆ।। ಈ ಶ್ಲೋಕದಲ್ಲಿ ರಾಜಕೋಪ, ಅಗ್ನಿ, ಶಸ್ತ್ರಜನ್ಯ ಮರಣ ಯೋಗ ೧, ಶರೀರದಲ್ಲಿ ಕ್ರಿಮಿಗಳುಂಟಾಗಿ ಮರಣಯೋಗ ೧, ಅಂತು ೨ ಯೋಗಗಳು ಹೇಳಲ್ಪಡುತ್ತೆ.

## ಅಗ್ನಿ, ಶಸ್ತ್ರ ರಾಜಕೋಪಾದಿ ಮರಣಯೋಗ

ಟೀಕು॥ ಬಂಧ್ವಸ್ತ ಕರ್ಮಸಹಿತ್ತೈಃ-ಚತುರ್ಥ, ಸಪ್ತಮ, ದಶಮರಾಶಿಗಳು, ಕುಜಸೂರ್ಯ ಮಂದೈಃ-ಕುಜ ಸೂರ್ಯ ಶನಿಗಳು ಕ್ರಮವಾಗಿ ಚತುರ್ಥದಲ್ಲಿ ಕುಜ, ಸಪ್ತಮ ದಲ್ಲಿ ರವಿ, ದಶಮದಲ್ಲಿ ಶನಿ ಇರುವಾಗ ಹುಟ್ಟಿದವನಿಗೆ, ಆಯುಧ ಶಿಖಿ ಕ್ಷಿತ-ಪಾಲಕೋಪಾತ್-ಖಡ್ಗಾದ್ಯಾಯುಧದಿಂದಲಾಗಲೀ, ಅಗ್ನಿ ಮೂಲವಾಗಿಯಾಗಲೀ, ರಾಜಕೋಪದಿಂದಲಾಗಲೀ, ನಿರ್ಯಾಣಂ-ಮರಣವು ಸಂಭವಿಸುವುದು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಭೂಸುನು ಸೂರ್ಯಾರ್ಕಸುತಾ ಯದಿಸ್ಯುಶ್ಚತುರ್ಥಜಾ ಮಿತ್ರನ ಭೋಗೃಹಸ್ಥಾಃ । ಕುರ್ವಂತಿಕೇ ಶಸ್ತ್ರ ಹುತಾಶ ಭೂಪ ಪ್ರಕೋಪಜಾತಂ ನಿಯಮೇನ ಮೃತ್ಯುಮ್ ॥೧೮॥

## ಶರೀರೇ ಕೃಮಿಜನನಾತ್ ಮರಣಯೋಗಃ

ಸೌರೇಂದು ಭೂಮಿತನಯೈ ಸ್ಸ್ವಸುಖಾಸ್ಪದಸ್ಥೈಃ-ಶನಿ, ಚಂದ್ರಾಂಗಾರ ಕರು ದ್ವಿತೀಯ, ಚತುರ್ಥ, ದಶಮದಲ್ಲಿದ್ದರೆ, ಅಂದರೆ-ದ್ವಿತೀಯದಲ್ಲಿ ಶನಿ, ಚತುರ್ಥ ದಲ್ಲಿ ಚಂದ್ರ, ದಶಮದಲ್ಲಿ ಕುಜ ಈ ಪ್ರಕಾರ ಇರುವ ಕಾಲದಲ್ಲಿ ಹುಟ್ಟಿದವನು, ಕ್ಷತಃ ಕ್ರಿಮಿ ಕೃತಃ-ಘಾಯದಲ್ಲಿ ಕ್ರಿಮಿಗಳುಂಟಾಗಿ. ಶರೀರಪಾತಃ-ಮರಣ ಉಂಟಾಗುವುದು. ಈ ವಿಷಯದಲ್ಲಿ ಧುಂಡಿರಾಜಃ॥ಶ್ಲೋ॥ ಕುಜೇಂದು ಮಂದಾಃ ಖಜಲದ್ವಿಸಂಸ್ಥಾಃ ಕ್ರಿಮಿ ಕ್ಷತೈಸ್ತೇಮರಣಂ ಪ್ರಕುರ್ಯುಃ ॥ ಮತ್ತು ಜಯದೇವಃ ॥ಶ್ಲೋಕ॥ ಖೇತು-ರ್ಯಸ್ತೇ ಸೌರಿ ಭೂಮ್ಯಾತ್ಮಜಾರ್ಕೇ ಮೃತ್ಯುಶ್ಯಸ್ತ್ರಾಗ್ನೀ ಕ್ಷಮಾ ಪಾಲಕೋಪಾತ್। ದ್ರವ್ಯೇತುರ್ಯೇ ಕರ್ಮಭಾವೇರ್ಕಪುತ್ರೇ ಚಂದ್ರೇಕ್ಷ್ಮಾ ಜೇಸ್ಯಾ ದ್ವ್ರಣ್ಯೈಕೀಟಕೃದ್ಭಿಃ ॥೧೯॥ ಈ ಉದಾಹರಣ ಶ್ಲೋಕದಲ್ಲಿ ಎರಡು ಯೋಗಗಳು ಹೇಳಲ್ಪಟ್ಟಿರುವುದು. ವಕ್ಷ್ಯಮಾಣ ಶ್ಲೋಕಕ್ಕೆ ॥ ಸಮ್ಮತಿಯಾಗಿರುತ್ತೆ.

ಮೂಲ॥ ಖಸ್ಥೇರ್ಕೇವಳಿಜೇ ರಸಾತಲಗತೇ ಯಾನಪ್ರಪಾತಾದ್ವಧೋ ಯಂ
ತ್ರೋತ್ಪೀಡನಜಃ ಕುಜೇಸ್ತಮಯಗೇ ಸೌರೇಂದ್ವಿನಾಭ್ಯುದ್ಗಮೇ।
ವಿಣ್ಮಧ್ಯೇ ರುಧಿರಾರ್ಕಿ ಶೀತಕಿರಣೈ ರ್ಜೂಕಾಜಸೌರರ್ಕ್ಷಗೈ। ರ್ದ್ಯಾತ್ಯೈ-
ರ್ದ್ವಾಗಳಿತೇಂದು ಸೂರ್ಯರುಧಿರೈ ರ್ವ್ಯೋಮಾಸ್ತಬಂಧ್ವಾಷ್ಟಯಾನ್॥೯॥

ಅವತಾರಿಕೆ॥ ಈ ಶ್ಲೋಕದಲ್ಲಿ ೪ ವಿಧವಾದ ದುರ್ಮರಣಯೋಗವು ಹೇಳಲ್ಪಡುತ್ತೆ. ೧ ಯಾನಪಾತಾದ್ವಧಯೋಗ. ೨ ಯಂತ್ರೋತ್ಪೀಡನ ಮರಣ ಯೋಗ. ೩ ವಿಷ್ಠಾಕೂಪೇ ಮರಣಯೋಗ ೪ ವಿಷ್ಠಾಮಧ್ಯೇ ಮರಣಯೋಗ.

## ಯಾನಪ್ರಪಾತಾನ್ಮರಣ ಯೋಗಃ

ಅರ್ಕೇ-ಸೂರ್ಯನು, ಖಸ್ಥೇ-ದಶಮದಲ್ಲಿದ್ದು, ಅವನಿಜೇ-ಕುಜನು, ರಸಾತಲಗತೇ-

ಚತುರ್ಥದಲ್ಲಿದ್ದ ಕಾಲದಲ್ಲಿ ಹುಟ್ಟಿದವನು, ಯಾನಪ್ರಪಾತತ್-ವಾಹನದ ಮೇಲಿನಿಂದ ಬಿದ್ದು, ವಧಃ-ಮರಣ ಹೊಂದುವನು. ಈ ವಿಷಯಕ್ಕೆ ಸಮ್ಮತಿ ಶ್ಲೋಕ। ಮೇಷೂರಣೇಚ ತರಣೇ ರಸಾತಲಗತಃ ಕುಜಃ। ಯದಿಜನ್ಮನಿಜಾಯೇತ ವಾಹನಾ-ತ್ಪತಿತಸ್ತತ್ ॥೨೦॥

## ಯಂತ್ರೋತ್ಪೀಡನ ಮರಣಯೋಗಃ

ಯಂತ್ರೋತ್ಪೀಡನ ಜನಿತಮರಣಯೋಗ॥ ಕುಜೇ-ಕುಜನು, ಅಸ್ತಮಯಗೇ-ಸಪ್ತಮದಲ್ಲಿದ್ದು, ಸೌರೇಂದ್ವಿನಾಭ್ಯುದ್ಗಮೇ-ಶನಿ ಚಂದ್ರ ಸೂರ್ಯರು ಲಗ್ನದಲ್ಲಿರುವಾಗ ಹುಟ್ಟಿದವನು, ಯಂತ್ರೋತ್ಪೀಡನಜಃ-ಯಂತ್ರಪೀಡನ ಜನಿತವಾದ ಮರಣಹೊಂದುವನು (ಕ್ಷೀಮೇಂದ್ವಿನಾಭ್ಯುದ್ಗಮೇ। ಪಾಠಾಂತರ) ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋ॥ ಕ್ಷೀಣೇಂದು ಮಂದಾರ್ಕಯುತೋ ವಿಲಗ್ನೇ ಭೂಮಿಸುತೇ ಸಪ್ತಮಭಾವ ಸಂಸ್ಥೇ। ವಿನಾಶನಂ ಯಂತ್ರನಿಪೀಡನೇನ ಭವೇದವಶ್ಯಂ ಪರಿವೇದಿತವ್ಯಮ್ ॥೨೧॥

## ವಿಷ್ಠಾ ಮಧ್ಯೇ ಮರಣಯೋಗಃ

ರುಧಿರಾರ್ಕಿ ಶೀತಕಿರಣೈ ರ್ಜೂಕಾಜಸೌರಕ್ಷಗ್ಯೈ-ತುಲೆಯಲ್ಲಿ ಕುಜ, ಮೇಷ ದಲ್ಲಿ ಶನಿ, ಮಕರದಲ್ಲಾಗಲೀ, ಕುಂಭದಲ್ಲಾಗಲೀ ಚಂದ್ರ; ಈ ಪ್ರಕಾರ ಗ್ರಹಗಳಿರುವಾಗ ಹುಟ್ಟಿದವನು, ವಿಣ್ಮಧ್ಯೇ-ಅಮೇಧ್ಯದಲ್ಲಿ ಬಿದ್ದು ಮರಣ ಹೊಂದುವನು. ಈ ಯೋಗವು ೨ ಪ್ರಕಾರವಾಗಿರುವುದು. ಮೇಷದಲ್ಲಿ ಶನಿ, ತುಲೆಯಲ್ಲಿ ಕುಜ, ಮಕರದಲ್ಲಿ ಚಂದ್ರ ೧ ಯೋಗ. ಮೇಷದಲ್ಲಿ ಶನಿ, ತುಲೆಯಲ್ಲಿ ಕುಜ, ಮಕರದಲ್ಲಿ ಚಂದ್ರ ೧ ಯೋಗ. ಮೇಷದಲ್ಲಿ ಶನಿ, ತುಲೆಯಲ್ಲಿ ಕುಜ, ಕುಂಭದಲ್ಲಿ ಚಂದ್ರ ೧ ಯೋಗ. ಅಂತು ಈ ಎರಡು ಯೋಗಗಳಿಗೆ ೧೨ ಲಗ್ನಗಳಿಗೆ ೨೪ ಯೋಗಗಳು ಲಭಿಸುತ್ತವೆ. ಈ ವಿಷಯದಲ್ಲಿ ॥ಶ್ಲೋಕ ॥ಜಯದೇವಃ॥ ಜೂಕೇ ಕುಜೇರ್ಕಸುತೇರ್ಕಜರ್ಕ್ಷೇ ವಿಧೌಪುರೀಷಾದ್ಯಶುಚಿಸ್ಥಲೇತತ್। ನಕ್ರರ್ಕ್ಷಗೇ ಕ್ಷೀಣವಿಧೌ ಸ್ಮರೇರ್ಕೇ ಕರ್ಕೇ ಕುಜೇರ್ಕೇ ನಿಧನಂತಥೈವ ॥೨೨॥

## ವಿಣ್ಮಧ್ಯೇ ಮರಣಯೋಗಃ

ಶ್ಲೋಕ॥ ಯಾತೈರ್ವಾಗಳಿತೇಂದು ಸೂರ್ಯರುಧಿರೈ ರ್ವ್ಯೋಮಾಸ್ತ ಬಂಧ್ವಾಹ್ವಯಾ॥ ದಶಮದಲ್ಲಿ ಕ್ಷೀಣಚಂದ್ರ, ಸಪ್ತಮದಲ್ಲಿ ರವಿಯು, ಚತುರ್ಥದಲ್ಲಿ ಕುಜನು, ಈ ಪ್ರಕಾರ ಗ್ರಹಗಳಿರುವ ಕಾಲದಲ್ಲಿ ಹುಟ್ಟಿದವನು, ವಿಣ್ಮಧ್ಯೇ- ಅಮೇಧ್ಯ ಮಧ್ಯದಲ್ಲಿ ಮರಣ ಹೊಂದುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಭೌಮೇತುಲಾಯಾಂಚ ಯಮೇಚ ಕರ್ಕೇ ಪ್ರಾಲೇಯ ರಶ್ಮೌರವಿಜಾಲ ಯಸ್ಥೇ । ವಿಣ್ಮೂತ್ರಿಕಾ ಸಂಕುಲಿತಪ್ರದೇಶೇ ವಶ್ಯಂವಿನಾಶಃ ಪರಿವೇದಿತವ್ಯಃ ॥೨೩॥

ಜನ್ಮಕಾಲದಲ್ಲಿ ತುಲೆಯಲ್ಲಿ ಮಂಗಳ, ಕರ್ಕಾಟಕದಲ್ಲಿ ಶನಿ, ಶನಿಕ್ಷೇತ್ರಗಳಾದ ಮಕರದಲ್ಲಾಗಲೀ ಕುಂಭದಲ್ಲಾಗಲೀ ಚಂದ್ರನಿದ್ದರೆ ವಿಣ್ಮೂತ್ರಕೂಪ ಮಧ್ಯದಲ್ಲಿ ಮರಣವಾಗುವುದೆಂದು ಹೇಳಿರುತ್ತಾರೆ. ಆದರೆ ವರಾಹಮಿಹಿರಾಚಾರ್ಯರ ಮತದಲ್ಲಿ ಈ ಗ್ರಹಸ್ಥಿತಿ ಇರಬೇಕೆಂದಿಲ್ಲ. ಇವರ ಅಭಿಪ್ರಾಯದಲ್ಲಿ ಕರ್ಕದಲ್ಲಿ ಶನಿ, ವಾರಾಹಮಿಹಿರರು ಹೇಳಿರುವುದರಲ್ಲಿ ಮೇಷದಲ್ಲಿ ಶನಿ, ಆದ್ದರಿಂದ ಈ ಯೋಗ ಒಂದಕ್ಕೊಂದು ಸಂಬಂಧಪಡುವುದಿಲ್ಲ. ಆದರೆ ಇಲ್ಲಿ ವರಾಹಮಿಹಿರಾಚಾರ್ಯರ ಅಭಿಪ್ರಾಯವೇ ಗ್ರಾಹ್ಯವಾದದ್ದು. ಆದರೆ ಈ ಮತವು ಪರಾಶರಾದಿ ಮತಕ್ಕನುಸಾರವಾಗಿರುವುದರಿಂದ ಯೋಚಿಸತಕ್ಕ ವಿಷಯವಾಗಿ ಚರ್ಚೆಗೋಸುಗಮಾಗಿ ಇಲ್ಲಿ ಉದಹರಿಸಿರುತ್ತೇನೆ ॥೮॥

ಮೂಲ॥ ವೀರ್ಯಾನ್ವಿತ ವಕ್ರವೀಕ್ಷಿತೇ। ಕ್ಷೀಣೇಂಧೌನಿಧನಸ್ಥಿತೇರ್ಕಜೇ॥ ಗುಹ್ಯೋದ್ಭವರೋಗಪೀಡಯಾ। ಮೃತ್ಯುಸ್ಸ್ಯಾತ್ಕ್ರಿಮಿಶಸ್ತ್ರದಾಹಜಃ ॥೧೦॥

ಅವತಾರಿಕೆ॥ ಗುಹ್ಯಸ್ಥಾನದಲ್ಲಿ ಕ್ರಿಮಿಶಸ್ತ್ರಜ ಮರಣಯೋಗವು ಹೇಳಲ್ಪಡುತ್ತೆ.

## ಗುಹ್ಯಸ್ಥಾನೇ ಕ್ರಿಮಿಶಸ್ತ್ರಜ ಮರಣಯೋಗಃ

ಟೀಕು॥ ಕ್ಷೀಣೇಂದೌ - ಕ್ಷೀಣಚಂದ್ರನು, ವೀರ್ಯಾನ್ವಿತವಕ್ರವೀಕ್ಷಿತೇ - ಬಲಯುಕ್ತವಾದ ಕುಜನಿಂದ ನೋಡಲ್ಪಟ್ಟು, ಅರ್ಕಜೇ-ಶನೈಶ್ಚರನು, ನಿಧನಸ್ಥಿತೇ - ಅಷ್ಟಮದಲ್ಲಿದ್ದ ಕಾಲದಲ್ಲಿ ಹುಟ್ಟಿದವನು, ಗುಹ್ಯೋದ್ಭವಾರೋಗಪೀಡಯಾ - ಗುಹ್ಯಸ್ಥಾನದಲ್ಲಿ ಹುಟ್ಟಿದ ಭಗಂದರಾದಿ ರೋಗಪೀಡೆಯಿಂದ, ಕ್ರಿಮಿಶಸ್ತ್ರದಾಹಜಃ-ಅಂದರೆ ಗುಹ್ಯಸ್ಥಾನದಲ್ಲಿ ಉಂಟಾದ ಮೂಲವ್ಯಾದಿ, ಭಗಂದರಾದಿ ರೋಗ ಪ್ರದೇಶದಲ್ಲಿ ವ್ರಣವುಂಟಾಗಿ, ಕ್ರಿಮಿ ಹುಟ್ಟಿ, ಆ ವ್ಯಾಧಿ ಶಮನಾರ್ಥವಾಗಿ ಅಗ್ನಿಚಿಕಿತ್ಸೆಯಾಗಲೀ ಮಾಡಿಸಿಕೊಂಡು ಆ ಮೂಲಕವಾಗಿ, ಮೃತ್ಯುಃಸ್ಯಾತ್-ಮರಣ ಹೊಂದುವನು. ಈ ವಿಷಯಕ್ಕೆ ಧುಂಡಿರಾಜಃ ॥ಶ್ಲೋಕ॥ ಬಲೋಪಪನ್ನಾ ವನಿಸೂನುದೃಷ್ಟೇ ಕ್ಷೀಣೇವಿಧೌ ರಂಧ್ರಗತೇರ್ಕ ಪುತ್ರೇ । ಗುಹಾಮಯಾ ದ್ವಾಕ್ರಿಮಿಹೇತುತೋವಾ ಭವೇ ದಶ್ಯಂ ಮರಣಂ ವ್ರಣಾದ್ವಾ ॥೨೪॥ ಈ ವಿಷಯದಲ್ಲಿ ಜಯದೇವಃ। ॥ಶ್ಲೋಕ॥ ವೀರಾಢ್ಯೇನ ಕುಜೇನಚ ದೃಷ್ಟೇ ಕ್ಷೀಣೇಂದೌ ನಿಧನೇರ್ಕ ಸುತೇಚ । ಗುಹ್ಯೋದ್ಭೂತರುಜಾಚ ಮೃತಿರ್ವಾ ಶಸ್ತ್ರಾದ್ವಾ ಕ್ರಿಮಿತೋಥಚದಾಹಾತ್ ॥ ಈ ಶ್ಲೋಕದ ಅಭಿಪ್ರಾಯವೂ ವರಾಹಮಿಹಿರರಿಗೆ ಸಮ್ಮತಿಯಾಗಿರುತ್ತೆ.

ಮೂಲ॥ ಅಸ್ತೇರವೌ ಸುರುಧಿಲೇ ನಿಧನೇಕಪುತ್ರೇ ಕ್ಷೀಣೇ ರಸಾತಲಗತೇ ಹಿಮಗೌಖಗಾಂತಃ । ಲಗ್ನಾತ್ಮಜಾಷ್ಟಮ ತಪಸ್ಸಿನಭೌಮ ಮಂದಚಂದ್ರೈಸ್ತು ಶೈಲಶಿಖರಾಶನಿ ಕುಡ್ಯಪಾತೈಃ ॥೧೧॥

ಅವತಾರಿಕೆ॥ ಈ ಶ್ಲೋಕದಲ್ಲಿ ಎರಡು ವಿಧವಾದ ದುರ್ಮರಣಯೋಗವು ಹೇಳಲ್ಪಡುತ್ತೆ. ೧ ಪಕ್ಷಿಮೂಲವಾಗಿ ಮರಣಯೋಗ, ೨ ಶೈಲ ಶಿಖರಾಶನಿಕುಡ್ಯ-ಪಾತಾನ್ಮರಣಯೋಗಃ

## ಪಕ್ಷಿಮೂಲ ಮರಣಯೋಗವು

ಟೀಕು॥ ಸರುಧಿರೇ-ಕುಜಸಹಿತವಾದ, ರವೌ-ರವಿಯು, ಅಸ್ತೇ-ಸಪ್ತಮದಲ್ಲಿದ್ದು, ಅರ್ಕಪುತ್ರೇ - ಶನಿಯು, ನಿಧನೇ-ಅಷ್ಟಮದಲ್ಲಿಯೂ, ಕ್ಷೀಣೇಹಿಮಗೌ - ಕ್ಷೀಣಚಂದ್ರನು, ರಸಾತಲಗತೇ-ಚತುರ್ಥಭಾವದಲ್ಲಿರುವಾಗ ಹುಟ್ಟಿದವನು. ಖಗಾಂತಃ- *ಪಕ್ಷಿ-ಮೂಲವಾಗಿ ಮರಣಹೊಂದುವನು. ಈ ವಿಷಯದಲ್ಲಿ ಜಯದೇವಃ ॥ಶ್ಲೋಕ॥ ದ್ಯೂನಗೌ ಯದಿಸೂರ್ಯಭೂಮಿಜೌ ನಿಧನೇ ಸದ್ಮನಿ ಭಾಸ್ಕರಾತ್ಮಜಃ। ವಿಕಲೇ ಸಶಿನಿ-ಸ್ಥಿರಾತಲೇ ನಿಧನಂ ತಸ್ಯವದೇದ್ವಿಹಂಗಮಾತ್ ॥೨೬॥ ಮತ್ತು ಧುಂಡಿರಾಜಃ॥ ಮಿತ್ರೇಕಳತ್ರೋಪ ಗತೇಪಭೌಮೇ ಮಂದೇಷ್ವಮಸ್ಥೇಚ ವಿಧೌಚತುರ್ಥೇ ವಿಹಂ ಗಮ ಶ್ವಾಪದ ಕಾರಣೇನ ನಿರ್ಯಾಣಮಾಹುರ್ಮನಯಃ ಪುರಾಣಾಃ ॥ ಮತ್ತು ಈ ಪಕ್ಷಿ ಹೇತುವಾದ ಮರಣಹೊಂದಿದ ಶರೀರವು ಅಗ್ನಿದಹನ, ಭೂಸ್ಥಾಪನಾದಿ ಸಂಸ್ಕಾರವಿಲ್ಲದೆ ಪಕ್ಷಿಗಳಿಗೆ ಆಹಾರವಾಗಿ ಹೋಗುವುದು.

## ಶೈಲಶಿಖರಾ ಶನಿಕುಡ್ಯ ಪಾತಾನ್ಮರಣಯೋಗಃ

ಲಗ್ನಾತ್ಮಜಾಷ್ಟಮತಪಸ್ಸಿ ನಭೌಮಂದಚಂದ್ರೈ-ಅಂದರೆ ಲಗ್ನದಲ್ಲಿ ರವಿ, ಪಂಚಮದಲ್ಲಿ ಕುಜ, ಅಷ್ಟಮದಲ್ಲಿ ಶನಿ, ನವಮದಲ್ಲಿ ಚಂದ್ರನು, ಈ ಪ್ರಕಾರ ಗ್ರಹ ಸ್ಥಿತಿಯಲ್ಲಿರುವಾಗ ಹುಟ್ಟಿದವನು, ಶೈಲಶಿಖರಾ ಶನಿಕುಡ್ಯಪಾತೈ-ಪರ್ವತ ಶಿಖರ ದಿಂದಲಾಗಲೀ, ಸಿಡಿಲು ಬಡಿಯುವುದರಿಂದಲಾಗಲೀ, ಗೋಡೆ ತನ್ನ ಮೇಲೆ ಬೀಳುವುದರಿಂದಲಾಗಲೀ, ಗೋಡೆ ಮೇಲಿನಿಂದ ತಾನು ಬೀಳುವುದರಿಂದಲಾಗಲೀ, ಮರಣ ಹೊಂದುವನು. ಈ ವಿಷಯದಲ್ಲಿ ಧುಂಡಿರಾಜಃ ॥ಶ್ಲೋಕ॥ ಲಗ್ನಾಷ್ಟಮತ್ರಿ ಕೋಣೇಷು ಭಾನು ಭೌಮಾರ್ಕಜೇಂದುಷು। ಪಾರ್ವತಿಯೋ ಭವೇನ್ಮೃತ್ಯುರ್ಭಿತ್ತಿ ಪಾತಭವೋಯಥಾ ॥೨೮॥ ಇವರು ಶಿಡಿಲು ಬಡಿದು ಮರಣ ಹೊಂದುವನೆಂದು ಹೇಳಲಿಲ್ಲ, ಜಯದೇವಃ ॥ಶ್ಲೋಕ॥ ಲಗ್ನೇರವೌ ಪಂಚಮಗೇ ಕುಜೇಮೃತ್ಯೌ ಶನೌ ಧರ್ಮಗತೇಶಶಾಂಕೇ। ಕುಡ್ಯ ಪ್ರಪಾತಾಚ್ಛಿಖರ ಪ್ರಪಾತಾದ್ವಧೋ ಭವೇದ್ವಾಥಚವಜ್ರ ಪಾತಾತ್ ॥೨೯॥

* ಅವನ ದೇಹವನ್ನು ಹದ್ದು ಕಾಗೆಗಳು ತಿಂದುಹಾಕುವುವು.

## ಅಷ್ಟಮೇ ಗೃಹಸ್ಥಿತಿ ವೀಕ್ಷಣರಹಿತೇ ಮರಣಕಾರಣ ವಿಚಾರಃ

ಮೂಲ॥ ದ್ವಾವಿಂಶಃ ಕಥಿತಸ್ತು ಕಾರಣಂ ದ್ರೇಕ್ಕಾಣೋ ನಿಧನಸ್ಯಸೂರಿಭಿಃ।
ತಸ್ಯಾಧಿಪತಿರ್ಭವೋಪಿವಾ ನಿರ್ಯಾಣಂ ಸುಗುಣೈಃ ಪ್ರಯಚ್ಛತಿ ॥೧೨॥

ಅವತಾರಿಕೆ॥ ಈ ಹೇಳಲ್ಪಟ್ಟ ಯೋಗಗಳಲ್ಲಿ ಒಂದು ಯೋಗವು ಇಲ್ಲದೆ ಅಷ್ಟಮಸ್ಥಾನವು ಗ್ರಹ ಸಂಯೋಗ ವೀಕ್ಷಣರಹಿತವಾಗಿರುವ ಮರಣಕಾಲ ಕಾರಣವು ಹೇಳಲ್ಪಡುತ್ತೆ.

ಟೀಕು॥ ಸೂರಿಭಿಃ-ಪಂಡಿತರಿಂದ, ದ್ವಾವಿಂಶೋದ್ರೇಕ್ಕಾಣಃ-ಜನ್ಮದ್ರೇಕ್ಕಾಣಕ್ಕೆ ಇಪ್ಪತ್ತೆರಡನೇ ದ್ರೇಕ್ಕಾಣವು, ನಿಧನಸ್ಯ-ಮೃತ್ಯುಪ್ರಾಪ್ತಿಗೆ, ಕಾರಣಂ-ಆದಿನಿಮಿತ್ತವೆಂದು, ಕಥಿತಃ-ಹೇಳಲ್ಪಟ್ಟಿರುತ್ತೆ. ಅದು ಹೇಗೆಂದರೆ-ತಸ್ಯಾಧಿಪತಿಃ-ಆ ಇಪ್ಪತ್ತೆರಡನೇ ದ್ರೇಕ್ಕಾಣವು ಯಾವರಾಶಿ ಸಂಬಂಧವಾದದ್ದೋ ಆ ರಾಶ್ಯಾಧಿಪತಿ, ಅಂದರೆ-ಅಷ್ಟಮರಾಶಿಗಧಿಪತಿಯಾದ ಗ್ರಹವಾಗಲೀ, ಸ್ವಗುಣೈಃ-'ಅಗ್ನ್ಯಂಬ್ವಾಯುಧಜ' ಇತ್ಯಾದ್ಯುಕ್ತವಾದ ಹೇತುಗಳಿಂದ ನಿರ್ಯಾಣಂ-ದೇಹವಸಾನವನ್ನು, ಪ್ರಯಚ್ಛತಿ- ಕೊಡುತ್ತಾನೆ.

ತಾತ್ಪರ್ಯ॥ ಯಾವ ದ್ರೇಕ್ಕಾಣದಲ್ಲಿ ಜನ್ಮವಾಗುತ್ತದೆಯೋ ಆ ದ್ರೇಕ್ಕಾಣ ಮೊದಲುಗೊಂಡು ೨೨ನೇ ದ್ರೇಕ್ಕಾಣಕ್ಕಧಿಪತಿ ಯಾವ ಗ್ರಹವೋ ಆ ಗ್ರಹಕ್ಕೆ ಅಗ್ನಿಜಲಾದಿಗಳಲ್ಲಿ ಯಾವ ಕಾರಣವು ಹೇಳಿರುವದೋ, ಆ ಕಾರಣದಿಂದ ಮರಣ ಸಂಭವಿಸುವುದು. ಆ ಪ್ರಕಾರ ಮರಣವಾಗದಿದ್ದರೆ, ಅಷ್ಟಮರಾಶ್ಯಾಧಿಪತಿಯಾದ ಗ್ರಹಕ್ಕೆ ಹೇಳಲ್ಪಟ್ಟ, ಅಗ್ನಿಜಲಾದಿ ಕಾರಣದಿಂದ ಮರಣ ಸಂಭವಿಸುವದೆಂದು ತಿಳಿಯತಕ್ಕದ್ದು. ಆ ದ್ರೇಕ್ಕಾಣಾಧಿಪತಿ ಹೇಗೆ ತಿಳಿಯಬೇಕೆಂದರೆ-ಲಗ್ನ ಪ್ರಥಮ ದ್ರೇಕ್ಕಾಣದಲ್ಲಿ ಜನ್ಮವಾದರೆ ಅಷ್ಟಮದಲ್ಲಿ ಪ್ರಥಮ ದ್ರೇಕ್ಕಾಣವು ೨೨ನೇ ದ್ರೇಕ್ಕಾಣ ವಾಗುವದು. ಉದಾಹರಣೆ--ಮೇಷಲಗ್ನದಲ್ಲಿ ೧ನೇ ದ್ರೇಕ್ಕಾಣದಲ್ಲಿ ಜನ್ಮವಾಗಿದೆ. ಆದ್ದರಿಂದ ಮೇಷ ೩, + ವೃ ೩, +ಮಿ ೩, +ಕಟಕ ೩, +ಸಿಂಹ ೩, + ಕನ್ಯಾ ೩, + ತುಲಾ ೩, + ವೃಶ್ಚಿಕದಲ್ಲಿ + ೧ನೇ ದ್ರೇಕ್ಕಾಣ=೨೨ನೇ ದ್ರೇಕ್ಕಾಣವಾಗುವುದು. ಲಗ್ನದಲ್ಲಿ ದ್ವಿತೀಯ ದ್ರೇಕ್ಕಾಣ ಜನ್ಮವಾದರೆ, ಅಷ್ಟಮದಲ್ಲಿ ಎರಡನೆ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾಗುವದು. ಲಗ್ನದಲ್ಲಿ ೩ನೇ ದ್ರೇಕ್ಕಾಣ ಜನನವಾದರೆ, ಅಷ್ಟಮದಲ್ಲಿ ೩ನೇ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾಗುವುದು. ಸಕಲ ರಾಶಿಗಳಿಗೂ ಈ ಪ್ರಕಾರವಾಗಿಯೇ ದ್ರೇಕ್ಕಾಣವನ್ನು ತಿಳಿಯತಕ್ಕದ್ದು. ಇಲ್ಲಿ ಮುಖ್ಯಾಂಶವೇನೆಂದರೆ- ಲಗ್ನದಿಂದ ಅಷ್ಟಮ ರಾಶಿಯಲ್ಲಿ ಗ್ರಹವಿಲ್ಲದೆ ಯಾವ ಗ್ರಹದಿಂದಲೂ ನೋಡಲ್ಪಡದೆ, ಇದುವರಿಗೂ ಹೇಳಲ್ಪಟ್ಟ ದುರ್ಮರಣಾದಿ ಯೋಗಗಳಿಲ್ಲದೆ ಇರುವಾಗ ಅವನ ಮರಣವನ್ನು ೨೨ನೇ

ದ್ರೇಕ್ಕಾಣಾಧಿಪತಿ ಅಷ್ಟಮಾಧಿಪತಿಗಳಲ್ಲಿ ಯಾರು ಬಲವಂತರಾಗಿರುವರೋ ಆ ಗ್ರಹಕ್ಕೆ ಹೇಳಲ್ಪಟ್ಟಿರುವ ಅಗ್ನ್ಯಂಬ್ವಾ 'ಯುಧಜ' ಮೊದಲಾದ ಕಾರಣಗಳಿಂದ ಮರಣವನ್ನು ಹೇಳತಕ್ಕದ್ದು. ಈ ವಿಷಯಕ್ಕೆ ಜಯದೇವಃ ||ಶ್ಲೋಕ|| ನಚೇನ್ನಿಧನಭಂ ಗ್ರಹೈರ್ಭವತಿ ಸಂಯುತಂ ವೀಕ್ಷಿತಂ ನವಾ ನಿಧಾನಕಾರಕೋ ಭವತಿಕೋಪಿ ಯೋಸ್ತದಾ । ಬಲೀದ್ವಿಭುಜ ಸಂಖ್ಯಕೋದ್ಭವ ದೃಕಾಣನಾಥೋಥವಾ ವಿನಾಶಗ್ರಹನಾಯಕೋ ನಿಜಗುಣೈರ್ಮೃತಿಂಯಚ್ಛತಿ ||೩೦|| ಮತ್ತು ಇದೇ ವಿಷಯದಲ್ಲಿ ಧುಂಡಿರಾಜರು ಹೇಳಿರುವ ಅಭಿಪ್ರಾಯ ||ಶ್ಲೋಕ|| ಯುಕ್ತಂ ನೈವಾಲೋಕಿತಂ ಖೇಚರೇಂದ್ರೈರ್ಮೃತ್ಯು-ಸ್ಥಾನಂ ಯೋವಿಲಗ್ನೇ ದೃಕಾಣಃ| ದ್ವಾವಿಂಶೋಸ್ಮಾತ್ಸೋಪಿ ತಸ್ಯಾಪಿ ಭರ್ತಾಕುರ್ಯಾ-ನ್ಮೃತ್ಯುಂ ಹೇತುನಾಸ್ವೇನ ನೂನಂ ||೩೧|| ಅನಲತೋ ಜಲತೋ ಯದುದೀರಿತಂ ಭವತಿ ತತ್ತ್ರಿಲವಾಧಿಪ ಹೇತುಕಮ್| ಅಥ ದೃಕಾಣ ಫಲಾನಿಸವಿಸ್ತರಂ ಮುನಿವರ್ಯೈರು-ದಿತಾನಿ ವದಾಮ್ಯಹಮ್ ||೩೨|| ಈ ಮೇಲೆ ಹೇಳಲ್ಪಟ್ಟ ಕಾರಣಗಳಿಂದ ಪ್ರತಿ ಲಗ್ನಕ್ಕೂ ಮೂರು ದ್ರೇಕ್ಕಾಣಗಳಿರುವುದರಿಂದ ಆ ದ್ರೇಕ್ಕಾಣ ಬಲವಶದಿಂದ ಮುನಿಶ್ರೇಷ್ಠರಿಂದ ಹೇಳಲ್ಪಟ್ಟ ಮರಣ ಕಾರಣವನ್ನು ವಿಸ್ತಾರವಾಗಿ ಹೇಳುತ್ತೇನೆಂದು ಧುಂಡಿರಾಜರು ನಿರೂಪಿಸಿರುತ್ತಾರೆ.

## ೨೪ನೇ ಮೇಷರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ|| ಮೇಷಸ್ಯ ಪೂರ್ವತ್ರಿಲವೇನದೃಷೇ ಶುಭಗ್ರಹೈಃ ಪಾಪನಿರೀಕ್ಷ್ಯಮಾಣೆ| ಪ್ಲಿಹೋದ್ಭವಾವಾ ವಿಷಪಿತ್ತಜೋವಾ ಮೃತ್ಯುಸ್ತದಾನೀಂ ಪರಿವೇದಿತವ್ಯಃ ||೩೩|| ತಾ|| ಮೇಷರಾಶಿಯ ಆದ್ಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾಗಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ಪ್ಲೀಹ, ಅಥವಾ ವಿಷಪಿತ್ತದಿಂದ ಹುಟ್ಟಿದ ರೋಗದಿಂದ ಮರಣ ಉಂಟಾಗುವುದು ||೩೩.||

## ಮೇಷ ದ್ವಿತೀಯ ದ್ರೇಕ್ಕಾಣ ತೃತೀಯ ದ್ರೇಕ್ಕಾಣ

ಮೇಷ ದ್ವಿತೀಯೇ ಜಲತೋವನಾಂತೇ ತೃತೀಯಕೇ ಕೂಪತಡಾಗಜಾತಃ

ತಾ|| ಮೇಷದ್ವಿತೀಯ ೨೨ನೇ ದ್ರೇಕ್ಕಾಣವಾದರೆ, ಪಾಪಗ್ರಹದೃಷ್ಟಿಯಿದ್ದರೆ ನೀರಿನಿಂದ ಅಥವಾ ವನದಲ್ಲಿ ಮರಣಪ್ರಾಪ್ತಿಯಾಗುತ್ತದೆ. ಮೇಷ ತೃತೀಯ ದ್ರೇಕ್ಕಾಣ ೨೨ನೆ ದ್ರೇಕ್ಕಾಣವಾದರೆ, ಬಾವಿಯಲ್ಲಿಯಾಗಲೀ, ಕೆರೆಯಲ್ಲಿಯಾಗಲೀ, ಸರೋವರದಲ್ಲಾಗಲೀ ಮೃತ್ಯು ಪ್ರಾಪ್ತಿಯಾಗುತ್ತೆ ||೩೪||

## ವೃಷಭರಾಶಿ ದ್ರೇಕ್ಕಾಣೇ ಮರಣಯೋಗಾಃ

ವೃಷಸ್ಯ ಪೂರ್ವತ್ರಿಲವೇ ಖರಾಶ್ವ ಕ್ರಮೇಲಕಾದಿ ಪ್ರಭಮೋಹಿಮೃತ್ಯುಃ ॥ ದ್ವಿತೀಯಕೇ ಪಿತ್ತಹುತಾಶ ಚೋರೈ ರುಚ್ಚಸ್ಥಲಾಶ್ವಾದಿ ಭವಸ್ಯತಿಯೇ ॥ತಾ॥ ವೃಷಭರಾಶಿ ೧ನೇ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಕತ್ತೆ, ಕುದುರೆ, ಒಂಟೆ ಇವುಗಳ ಮೂಲವಾಗಿ ಮರಣವು. ವೃಷಭ ೨ನೇ ದ್ರೇಕ್ಕಾಣ ೨೨ನೇ ದ್ರೇಕ್ಕಾಣ ವಾದರ ಪಿತ್ತ, ಅಗ್ನಿ, ಚೋರ ಈ ಮೂಲವಾಗಿ ಮರಣವು, ವೃಷಭ ತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಉನ್ನತ ಪ್ರದೇಶದಿಂದ ಬೀಳುವದರಿಂದ-ಲಾಗಲೀ, ಅಶ್ವಾದಿಗಳ ಮೂಲವಾಗಿಯಾಗಲೀ ಮರಣ ಉಂಟಾಗುತ್ತದೆ.

## ಮಿಥುನರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ॥ ಅದ್ಯೇದೃಕಾಣೇ ಮಿಥುನೇಚ ವಾತಶ್ವಾಸೈರ್ದ್ವಿತೀಯೇ ವೃಷಗೇ-ತ್ರಿದೋಷೈಃ ॥೩೫॥ ಗಜಾದಿತಃ ಪರ್ವತಪಾತತೋವಾ ಭವೇದರಣ್ಯೇ ಮಿಥುನಾಂತ್ಯದೃಕ್ಕೇ ॥ತಾ॥ ಮಿಥುನರಾಶಿಯ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣ ವಾದರೆ ವಾತವ್ಯಾಧಿ ಅಥವಾ ಶ್ವಾಸರೋಗದಿಂದ ಮರಣವು, ಮಿಥುನ ದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ತ್ರಿದೋಷದಿಂದ ಮರಣವು ಮಿಥುನ ತೃತೀಯ ದೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಗಜದಿಂದಾಗಲೀ, ಪರ್ವತಾಗ್ರದಿಂದ ಬೀಳುವುದರಿಂದಲಾಗಲೀ ಅಥವಾ ಅರಣ್ಯದಲ್ಲಾಗಲೀ ಮರಣ ಪ್ರಾಪ್ತಿಯಾಗುತ್ತೆ.

## ಕಟಕರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಅಪೇಯಪಾನಾದತಿಕಂಟಕಾಚ್ಚ ಸ್ವಪ್ನಾಚ್ಚ ಕರ್ಕಪ್ರಥಮೇ ದೃಕಾಣೇ॥ ವಿಷಾದಿ ದೋಷಾದತಿಸಾರತೋವಾ ಕರ್ಕಸ್ಯಮಧ ತ್ರಿಲದೇಮೃತಿಸ್ಯಾತ್ । ಮಹಾಭ್ರಮಪ್ಲೀಹಕ ಗುಲ್ಮದೋಷೈಃ ಕರ್ಕಾಂತದೃಕ್ಕೇ ನಿಧನಂ ನಿರುಕ್ತಂ ॥ ಕರ್ಕರಾಶಿಯ ೧ನೇ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಅಪೇಯ ಪಾನಾದಿಗಳಿಂದ, ಅಂದರೆ ಸುರಾಪಾನಾದಿ ಮದಾಧಿಕ್ಯದಿಂದಲಾದರೂ, ಕಂಟಕದಿಂದಲಾದರೂ, ಸ್ವಪ್ನಗಳಿಂದ ಭಯಪಡುವದರಿಂದಲಾದರೂ ಮರಣವು, ಕರ್ಕ ದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ವಿಷಪ್ರಯೋಗ ಅಥವಾ ಅತಿಸಾರದಿಂದ ಮರಣವು. ಕರ್ಕ ತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಪ್ಲೀ ಅತವಾ ಗುಲ್ಮರೋಗದಿಂದ ಮರಣವುಂಟಾಗುತ್ತೆ ॥೩೭॥

## ಸಿಂಹರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ವಿಷಾಂಬುರೋಗೈಃ ಶ್ವಸನಾಂಬುರೋಗೈರಪನಾಪೀಡಾ ವಿಷಶಸ್ತ್ರಕೈಶ್ಚ। ಕ್ರಮೇಣ ಸಿಂಹಸ್ಯ ದೃಕರ್ಕಾಣಕೇಷು ನೂನಂ ಮುನೀದ್ರೈರ್ಮರಣಂ ಪದಿಷ್ಟಂ॥ ಸಿಂಹ ರಾಶಿಯ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ವಿಷ ಪ್ರಯೋಗ ಅಥವಾ ಜಲೋದಾರ ರೋಗದಿಂದ ಮರಣವು, ಸಿಂಹದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ವಾತವ್ಯಾಧಿ ಅಥವಾ ಜಲೋದರದಿಂದ ಮರಣವು, ಸಿಂಹ ತೃತೀಯ ದ್ರೇಕ್ಕಾಣವಾದರೆ ಅಪಾನವಾಯುರೋಗದಿಂದ ಮರಣವು ॥೩೮॥

## ಕನ್ಯಾರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಕನ್ಯಾದ್ಯದೃಕ್ಕೇ ನಿಲಮೌಲಿ ಋಗ್ಬೋದುರ್ಗಾದಿ ಪಾತಾಚ್ಚ ನೃಪೈರ್ದ್ವಿತೀಯೇ । ಖರೋಷ್ಟ್ರ ಶಸ್ತ್ರಾಂಬು ನಿಪಾತಕಾಂತೌ ನಿಮಿತ್ತಜಾತಂ ನಿಧನಂ ತೃತೀಯೇ ॥೩೯॥ ಕನ್ಯಾರಾಶಿ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾರೆ ವಾತವ್ಯಾಧಿ ಅಥವಾ ಶಿರೋರೋಗದಿಂದ ಮರಣವು. ಕನ್ಯಾ ದ್ವಿತೀಯ ದ್ರೇಕ್ಕಾಣವಾದರೆ ಕೋಟೆಯ ಮೇಲಿನಿಂದ, ಪರ್ವತಾಗ್ರದಿಂದ ಅಥವಾ ರಾಜದಂಡನೆಯಿಂದ ಮರಣವು, ಕನ್ಯಾರಾಶಿಯ ದ್ವಿತೀಯ ದ್ರೇಕ್ಕಾಣಕ್ಕೆ ಕೋಟೆಯ ಮೇಲಿನಿಂದ ಬಿದ್ದು ಮರಣ ಅಥವಾ ಪರ್ವತಾಗ್ರದಿಂದ ಅಥವಾ ಮರಣ ಸಂಭವಿಸದೆ ಇದ್ದರೆ ರಾಜಕೋಪದಿಂದ ಮರಣದಂಡನೆ ಶಿಕ್ಷೆಯಾದರೂ ಆಗುತ್ತೆ. ಕನ್ಯಾತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಗಾರ್ದಭದಿಂದಲಾಗಲೀ, ಶಸ್ತ್ರದಿಂದಲಾಗಲೀ, ಸ್ತ್ರೀಮೂಲವಾಗಿ ನೀರಿನಲ್ಲಿ ಮುಳುಗಿಯಾಗಲಿ ಮರಣಪ್ರಾಪ್ತಿಯಾಗುತ್ತೆ ॥೩೯॥

## ತುಲಾರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ॥ ತುಲದೃಕ್ಕಾಣೆ ಪ್ರಥಮೇನಿ ಪಾತಾ ತ್ಕಲತ್ರತೋವಾ ಪಶುತೋಪಿ ಮೃತ್ಯುಃ । ನೂನಂದ್ವಿತೀಯೇ ಜಠರಾಮಯೈಶ್ಚ ವ್ಯಾಲಾಜ್ಜಲಾಚ್ಚಾಪಿ ಭವೇತ್ತೃತೀಯೇ ॥೪೦॥ತಾ॥ ತುಲಾ ಪ್ರಥವು ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಉನ್ನತಾತ್ಪತನಂ-ಸ್ತ್ರೀಮೂಲವಾಗಿ ಅಥವಾ ಪಶುಮೂಲವಾಗಿ ಮರಣವು. ಅಂದರೆ ಎತ್ತರವಾದ ಪ್ರದೇಶ, ವೃಕ್ಷಾದಿಪತನದಿಂದ ಮರಣ ಸಂಭವಿಸುತ್ತದೆ. ಪತ್ನಿಯಿಂದ ಮರಣವಾಗಲೀ, ಪಶುಗಳಿಂದ ಬಿದ್ದಾಗಲೀ, ಕೋಡಿನಿಂದ ಚುಚ್ಚಿಯಾಗಲೀ ಮರಣ ಪ್ರಾಪ್ತಿಯಾಗುವುದು. ತುಲಾರಾಶಿ ದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಹೊಟ್ಟೆಯಲ್ಲಿ ಹುಟ್ಟಿದ ರೋಗದಿಂದ ಮರಣವಾಗುತ್ತದೆ. ತುಲಾ ತೃತೀಯದ್ರೇಕ್ಕಾಣ

೨೨ನೇ ದ್ರೇಕ್ಕಾಣವಾದರೆ ಸರ್ಪದಷ್ಟವಾದರೂ, ನೀರಿನಿಂದಾಗಲೀ ಮರಣವಾಗುವುದು ||೪೦||

## ವೃಶ್ಚಿಕರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ|| ಪೂರ್ವೇದೃಕಾಣೇ ಖಲುವೃಶ್ಚಿಕಸ್ಯ ಮೃತ್ಯುರ್ವಿಷಾನ್ನಾಸ್ತ್ರ ಭವೋವ ಗಮ್ಯಃ| ಭಾರಶ್ರಮಾದ್ವಾ ಕಟಿಬಸ್ತಿರೋಗೈ ರ್ಭವೇದ್ದ್ವಿತೀಯೇ ತ್ರಿಲವೇ ತುರ್ಮಾರ್ಗೀ ||೪೧|| ಜಂಘಾಸ್ಥಿ ಭಂಗಾತ್ಮಕಲೋಷ್ಟ ಕಾಷ್ಠೈರ್ಭವೇತ್ತೃತೀಯೇ ತ್ರಿಲವೇಲಿರಾಶೇಃ ತಾ|| ವೃಶ್ಚಿಕರಾಶಿಯ ಪ್ರಥಮದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ವಿಷಾನ್ನಪಾನ ಮೊದಲಾದ್ದರಿಂದ ಅಥವಾ ಶಸ್ತ್ರದಿಂದಲಾಗಲೀ ಮರಣವು ವೃಶ್ಚಿಕ ದ್ವಿತೀಯದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ಭಾರ ಹೊತ್ತು ಶ್ರಮದಿಂದ ಅಥವಾ ಕಟಿರೋಗದಿಂದ ಬಸ್ತಿ ರೋಗದಿಂದ ಮರಣವುಂಟಾಗುವುದು. ವೃಶ್ಚಿಕ ತೃತೀಯದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ಕಲ್ಲಿನಿಂದಾಗಲೀ, ಲೋಹದಿಂದಾಗಲೀ, ಕಾಷ್ಠದಿಂದಲಾಗಲೀ ತೊಡೆ ಮುರಿದು ಎಲುಬು ತುಂಡಾಗಿ ಮರಣಪ್ರಾಪ್ತಿ ಯಾಗುವುದು.

## ಧನೂರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ|| ಆದ್ಯೇದೃಕಾಣೆ ಧನುಷೋಮೃತಿಃ ಸ್ಯಾದ್ಗುದಾಮಯೈಶ್ಚಾಪಿ ಮರುದ್ವಿಕಾರೈಃ ||೪೨|| ವಿದಾಹತೋವ ವಿಷತಃಶರಾದ್ವಾನಾ ಶೋದೃಕಾಣೇ ಧನುಷೋ ದ್ವಿತೀಯೇ | ಭವೇಜ್ಜಲಾದ್ವಾಜಲ ಚಾರಿಣೋವಾ ಕ್ರೋಡಾಮಯಾ ದ್ವಾಧನುಷಸ್ತೃತೀಯೇ ||೪೩|| ಧನುಸ್ಸಿನ ಪ್ರಥಮದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ವಾತ ವ್ಯಾಧಿಯಿಂದ ಅಥವಾ (ಗುದರೋಗ) ಮೂಲವ್ಯಾದಿ ಯಿಂದ ಮರಣವು, ಧನುಸ್ಸಿನ ದ್ವಿತೀಯದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ದಾಹರೋಗ, ವಿಷಪ್ರಯೋಗ, ಅಸ್ತ್ರ ಶಸ್ತ್ರದಿಂದ ಮರಣವು, ಧನುಸ್ಸಿನ ತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ನೀರಿನಿಂದ ಅಥವಾ ಜಲಚರ ಪ್ರಾಣಿಗಳಿಂದ ಕಟಿರೋಗದಿಂದ ಮರಣ ಉಂಟಾಗುವುದು.

## ಮಕರರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ|| ಪೂರ್ವೇದೃಕಾಣೇ ಮಕರಸ್ಯಸಿಂಹಾ ದ್ವ್ಯಾಘ್ರಾದ್ವರಾಹಾಚ್ಚ ಕೃತೋದ್ವಿತೀಯೇ ಯಾದೋ ಭುಜಂಗೈಶ್ಚ ತಥಾತೃತೀಯೇ ಚೋರಾಗ್ನಿಶಸ್ತ್ರ ಜ್ವರತೋಹಿಮೃತ್ಯುಃ ||೪೪||ತಾ|| ಮಕರ ಪ್ರಥಮ ದ್ರೇಕ್ಕಾಣ ೨೯ನೇ ದ್ರೇಕ್ಕಾಣ ವಾದರೆ, ಸಿಂಹ, ವ್ಯಾಘ್ರ, ವರಾಹ ಮೊದಲಾದ ಅರಣ್ಯ ಮೃಗಗಳಿಂದ ಮರಣವು ಸಂಭವಿಸುವುದು. ಮಕರ ದ್ವಿತೀಯದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಸರ್ಪದಿಂದ

ಮರಣವು (ಕೆಲವರು ಮೊಸಳೆ ಮೊದಲಾದ ಜಲಚರ ಪ್ರಾಣಿಯಿಂದ ಮರಣವೆಂದು ಹೇಳುವರು) ಮಕರ ತೃತೀಯದ್ರೇಕ್ಕಾಣ ೨೨ನೆ ದ್ರೇಕ್ಕಾಣವಾದರೆ, ಕಳ್ಳರಿಂದ ಅಗ್ನಿಮೂಲದಿಂದ ಜ್ವರಮೂಲದಿಂದ ಮರಣ ಪ್ರಾಪ್ತಿಯಾಗುವುದು.

## ಕುಂಭರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ।। ಕುಂಭಸ್ಯಪೂರ್ವ ತ್ರಿಲವೇಷುಪತ್ನೀ ಸುತೋದರವ್ಯಾಧಿಗತ ದ್ವಿತೀಯೇ ಗುಹ್ಯಾಮಯಾತ್ಪರ್ವ ಕೃತೋತ ಪಾತನಾದ್ವಾವಿಷಾತ್ತೃತೀಯೇ ಮುಖರುಕ್ಪ ಶುಭ್ಯಃ ।।೪೫।।ತಾ।। ಕುಂಭರಾಶಿ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ಸ್ತ್ರೀ ಪುತ್ರರಿಂದ ಅತವಾ ಉದರಾಮಯದಿಂದ ಮರಣವು, ಕುಂಭ ದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಗುಹ್ಯರೋಗದಿಂದ ಪರ್ವತದಿಂದ ಬಿದ್ದಾಗಲೀ, ವಿಷದಿಂದಾಗಲೀ ಮರಣ ಉಂಟಾಗುವುದು. ಕುಂಭ ತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ, ಮುಖರೋಗದಿಂದ ಅಥವಾ ಪಶುಮೂಲದಿಂದ ಮರಣಪ್ರಾಪ್ತಿಯಾಗುವುದು.

## ಮೀನರಾಶಿ ದ್ರೇಕ್ಕಾಣವಶಾತ್ ಮರಣಯೋಗಾಃ

ಶ್ಲೋಕ।। ಮೀನದ್ಯದೃಕ್ಕೇ ಗ್ರಹಣೇಪ್ರಮೇಹ ಗುಲ್ಮಾಂಗನಾಭ್ಯಶ್ಚ ಭವೇ-ದ್ವಿತೀಯೇ। ಜಲೋದರಾದ್ಯೈಶ್ಚ ಗಜಗ್ರಹೈರ್ವಾ ಜಲಸ್ಯಮಧ್ಯೇಪಿಚನೌ ಪ್ರಭೇದಾತ್ ।।೪೬।। ಪ್ರಾಂತೇದೃಕಾಣೇ ಪೃಥುರೋಮಸಂಸ್ಥೇ ಮೃತ್ಯುಃ ಕುರೋಗೈಃ ಪರಿವೇ-ದಿತವ್ಯಂ। ಏವಂತದಾನೀಂ ನಿಧನಂನಿಯುಕ್ತಂ ನೈವಂ ಪ್ರದೃಷ್ಟಂಗ ಗನೇಚ ರೇಂದ್ರೈಃ ।।೪೭।।ತಾ।। ಮೀನರಾಶಿಯ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಗ್ರಹಣಿ, ಪ್ರಮೇಹ, ಗುಲ್ಮ ಅಥವಾ ಸ್ತ್ರೀಯರ ಮೇಹರೋಗದಿಂದ ಮರಣವು. ಮೀನದ್ವಿತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಉದರರೋಗ, ಜಲೋದರ, ಮಹೋದರಾದಿ ರೋಗ ಅಥವಾ ಜಲದಲ್ಲಿ ಹಡಗು, ಹರಿಗೋಲು, ತೆಪ್ಪ, ಮೊದಲಾದ್ದು ಒಡೆದುಹೋಗಿ ಮರಣ ಪ್ರಾಪ್ತಿಯಾಗುತ್ತದೆ. ಮೀನ ತೃತೀಯ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾದರೆ ಮತ್ಸ್ಯ, ಮೊಸಳೆ ಅಥವಾ ಕುತ್ಸಿತರೋಗದಿಂದ ಮರಣವುಂಟಾಗುವದು. ಈ ಫಲಗಳು ಕೇವಲ ಅಷ್ಟಮದಲ್ಲಿ ಗ್ರಹಶೂನ್ಯವಾಗಿ ಯಾವ ಗ್ರಹದ ವೀಕ್ಷಣೆಯೂ ಇಲ್ಲದಿದ್ದರೆ ಹೇಳತಕ್ಕದ್ದು ।।೫೭।।

# ದ್ರೇಕ್ಕಾಣವಶಾನ್ನಿಧನಯೋಗ ಪದಕಂ

## ಜನ್ಮದ್ರೇಕ್ಕಾಣಕ್ಕೆ ೨೨ನೇ ದ್ರೇಕ್ಕಾಣ ಯಾವುದಾಗುತ್ತದೆಂಬುವ ಪದಕವು

| ರಾಶಿ | ಸಂಖ್ಯೆ | ದ್ರೇಕ್ಕಾಣ | ಅಷ್ಟಮದಲ್ಲಿ ೨೨ನೆ ದ್ರೇಕ್ಕಾಣ | | | | ನಿಧನಹೇತು(ಕಾರಣ) |
|---|---|---|---|---|---|---|---|
| | | | ರಾ | ಸಂ | ದ್ರೇ | ಸಂಜ್ಞೆ | |
| ಮೇಷ | ೧ | ಪ್ರ | | ೨೨ | ಪ್ರ | ಸರ್ಪ | ವಿಷಾನ್ನ ಭೋಜನ, ಶಸ್ತ್ರಮೂಲದಿಂದ |
| | ೨ | ದ್ವಿ | ವೃಶ್ಚಿಕ ೮ | ೨೩ | ದ್ವಿ | ಸರ್ಪ | ಭಾರಹೊತ್ತಶ್ರಮ, ಕಟಿ, ವಸ್ತಿರೋಗ |
| | ೩ | ತೃ | | ೨೪ | ತೃ | ಚತು | ಶಿಲಾ, ಲೋಹ, ಕಾಷ್ಠ, ತೊಡೆ ಮುರಿದು ಮರಣ |
| ವೃಷಭ ೨ | ೪ | ಪ್ರ | | ೨೫ | ಪ್ರ | ಸಾಯುಧ | ವಾತವ್ಯಾಧಿ ಗುಣರೋಗ ಮೂಲವ್ಯಾದಿ |
| | ೫ | ದ್ವಿ | ಧನುಸ್ಸು ೯ | ೨೬ | ದ್ವಿ | ಚತು | ವಿಷಪ್ರಯೋಗ ಶಸ್ತ್ರಜನಿತ |
| | ೬ | ತೃ | | ೨೭ | ತೃ | ಚತು | ನೀರಿನಲ್ಲಿ ಜಲಚರಪ್ರಾಣಿ, ಕಟಿರೋಗ |
| ಮಿಥುನ ೩ | ೭ | ಪ್ರ | | ೨೮ | ಪ್ರ | ಸ್ತ್ರೀ | ಸಿಂಹ, ವ್ಯಾಘ್ರ, ಭಲ್ಲೂಕ ಅರಣ್ಯಮೃಗ |
| | ೮ | ದ್ವಿ | ಮಕರ ೧೦ | ೨೯ | ದ್ವಿ | ಪುರುಷ ಖಗ | ಸರ್ಪದಷ್ಟ, ಜಲಚರ, ಮೊಸಳೆ |
| | ೯ | ತೃ | | ೩೦ | ತೃ | ಸಾಯುಧ ಪು | ಕಳ್ಳ, ಅಗ್ನಿ, ಶಸ್ತ್ರ, ಜ್ವರಮೂಲ |
| ಕಟಕ ೪ | ೧೦ | ಪ್ರ | | ೩೧ | ಪ್ರ | ಪಕ್ಷಿ | ಸ್ತ್ರೀ, ಪುತ್ರ, ಉದರಾಮಯ |
| | ೧೧ | ದ್ವಿ | ಕುಂಭ ೧೧ | ೩೨ | ದ್ವಿ | ಸ್ತ್ರೀ | ಗುಹ್ಯರೋಗ, ವಿಷ, ಪರ್ವತಾತ್ಪತನ |
| | ೧೨ | ತೃ | | ೩೩ | ತೃ | ಸರ್ಪ | ಮುಖರೋಗ, ಪಶುಗಳಿಂದ ಪೆಟ್ಟು ತಿಂದು ಮರಣ. |

| | | | | | | | |
|---|---|---|---|---|---|---|---|
| ಸಿಂಹ ೫ | ೧೩ | ಪ್ರ | ಮೀನ ೧೨ | ೩೪ | ಪ್ರ | ತ್ರಿ* | ಗ್ರಹಣೀ, ಪ್ರಮೇಹ, ಗುಲ್ಮ, ಸ್ತ್ರೀರೋಗ |
| | ೧೪ | ದ್ವಿ | | ೩೫ | ದ್ವಿ | ಸಾಯುಧ | ಜಲೋದರ, ಮಹೋದರ ರೋಗ |
| | ೧೫ | ತೃ | | ೩೬ | ತೃ | ಸರ್ಪ | ಕುತ್ಸಿತರೋಗ, ಮೊಸಳೆ ಎಳೆದು ಮರಣ |
| ಕನ್ಯಾ ೬ | ೧೬ | ಪ್ರ | ಮೇಷ ೧ | ೧ | ಪ್ರ | ಸಾಯುಧ | ಪ್ಲೀಹ, ವಿಷ, ಪಿತ್ತ |
| | ೧೭ | ದ್ವಿ | | ೨ | ದ್ವಿ | ಚತು | ಜಲ, ವನಾಂತದಲ್ಲಿ ಮರಣ |
| | ೧೮ | ತೃ | | ೩ | ತೃ | ಸಾಯುಧ | ಕೂಪ, ತಟಾಕಗಳಲ್ಲಿ ಬಿದ್ದು ಮರಣ |
| ತುಲ ೭ | ೧೯ | ಪ್ರ | ವೃಷಭ ೨ | ೪ | ಪ್ರ | ನರ | ಖರ, ಅಶ್ವ, ಉಷ್ಟ್ರ, ಮಹಿಷ, ವೃಷಭ |
| | ೨೦ | ದ್ವಿ | | ೫ | ದ್ವಿ | ನರ ಪಕ್ಷಿ | ಪಿತ್ತ, ಅಗ್ನಿ, ಚೋರ |
| | ೨೧ | ತೃ | | ೬ | ತೃ | ಚತು | ಉನ್ನತಾತ್ಪತನ, ಅಶ್ವಾತ್ಪತನ |
| ವೃಶ್ಚಿಕ ೮ | ೨೨ | ಪ್ರ | ಮಿಥುನ ೩ | ೭ | ಪ್ರ | ಸರ್ಪ | ವಾತವ್ಯಾಧಿ, ಶ್ವಾಸರೋಗ |
| | ೨೩ | ದ್ವಿ | | ೮ | ದ್ವಿ | ಸಾಯುಧ | ತ್ರಿದೋಷ (ವಾತ, ಪಿತ್ತ, ಶ್ಲೇಷ್ಮ) |
| | ೨೪ | ತೃ | | ೯ | ತೃ | ಸಾಯುಧ | ಗಜ, ಪರ್ವತಾಗ್ರ, ಅರಣ್ಯ |
| ಧನುಸ್ಸು ೯ | ೨೫ | ಪ್ರ | ಕಟಕ ೪ | ೧೦ | ಪ್ರ | ಚತು | ಅಪೇಯಪಾನ, ಕಂಟಕ, ಸ್ವಪ್ನ |
| | ೨೬ | ದ್ವಿ | | ೧೧ | ದ್ವಿ | ಸರ್ಪ | ವಿಷಪ್ರಯೋಗ, ಅತಿಸಾರ |
| | ೨೭ | ತೃ | | ೧೨ | ತೃ | ಸರ್ಪ | ಪ್ಲೀಹ, ಗುಲ್ಮರೋಗ |
| ಮಕರ ೧೦ | ೨೮ | ಪ್ರ | ಸಿಂಹ ೫ | ೧೩ | ಪ್ರ | ಚತು | ವಿಷಪ್ರಯೋಗ, ಜಲೋದರ |
| | ೨೯ | ದ್ವಿ | | ೧೪ | ದ್ವಿ | ಸಾಯುಧ | ವಾತವ್ಯಾಧಿ, ಮಹೋದರ, ಜಲೋದರ |
| | ೩೦ | ತೃ | | ೧೫ | ತೃ | ಸಾಯುಧ | ಅಪಾನವಾಯು, ಮೂಲವ್ಯಾಧಿ |

* ತ್ರಿ = ನರ + ಪಕ್ಷಿ + ಚತುಷ್ಪದ

| | | | | | | | |
|---|---|---|---|---|---|---|---|
| ಕುಂಭ ೧೧ | ೩೧ | ಪ್ರ | ಕನ್ಯಾ ೬ | ೧೬ | ಪ್ರ | ನರ | ವಾತವ್ಯಾಧಿ, ಶಿರೋರೋಗ |
| | ೩೨ | ದ್ವಿ | | ೧೭ | ದ್ವಿ | ಸಾಯುಧ | ಕೋಟೆಯಿಂದ ಬೀಳುವಿಕೆ, ಪರ್ವತಾಗ್ರ ರಾಜಮೂಲದಿಂದ ಮರಣ ದಂಡನೆ |
| | ೩೩ | ತೃ | | ೧೮ | ತೃ | ಸ್ತ್ರೀ ಅಗ್ನಿ | ಅಶ್ವ, ಗಾರ್ದಭ, ಶಸ್ತ್ರ, ಸ್ತ್ರೀಮೂಲದಿಂದ ಜಲದಲ್ಲಿ ಮರಣ |
| ಮೀನ ೧೨ | ೩೪ | ಪ್ರ | ತುಲಾ ೭ | ೧೯ | ಪ್ರ | ಪ್ಲವ | ಉನ್ನತಾತ್ಪತನ, ಸ್ತ್ರೀಮೂಲ ಮರಣ ಪಶೂಮೂಲ ವೃಕ್ಷದಿಂದ ಬೀಳುವಿಕೆ |
| | ೨೫ | ದ್ವಿ | | ೨೦ | ದ್ವಿ | ಸ್ತ್ರೀ | ಉದರರೋಗ, ಹೊಟ್ಟೆಶೂಲೆ |
| | ೩೬ | ತೃ | | ೨೧ | ತೃ | ವ್ಯಾಳ | ಸರ್ಪದಷ್ಟ, ಜಲದಲ್ಲಿ ಮರಣ |

ಟಿಪ್ಪಣಿ-ಮೊದಲನೆರಾಶಿ ಸಂಖ್ಯಾದ್ರೇಕ್ಕಾಣಕ್ಕೆ ೨೨ನೆ ದ್ರೇಕ್ಕಾಣವನ್ನು ಅದರ ಪಂಕ್ತಿಯಲ್ಲಿ ಬರೆದಿರುತ್ತೆ. ಪ್ರ-ಪ್ರಥಮ, ದ್ವಿ-ದ್ವಿತೀಯ, ತೃ-ತೃತೀಯವೆಂದು ಸಂಕೇತ.

ಉದಾಃ-ಮೀನರಾಶಿಯ ಪ್ರಥಮ ದ್ರೇಕ್ಕಾಣ ಮೇಷಾದಿ ೩೪ ದ್ರೇಕ್ಕಾಣ ಅದಕ್ಕೆ ತುಲಾರಾಶಿಯಲ್ಲಿ ಮೇಷಾದಿ ೧೯ನೇ ದಾದ ತುಲಾ ಪ್ರಥಮ ದ್ರೇಕ್ಕಾಣ ೨೨ನೇ ದ್ರೇಕ್ಕಾಣವಾಗುತ್ತೆ. ಹೀಗೆಯೇ ಸರ್ವತ್ರ ತಿಳಿಯತಕ್ಕದ್ದು.

ಮೂಲ॥ ಹೋರಾನವಾಂಶಕಪಯುಕ್ತ ಸಮಾನಭೂಮೌ ಯೋಗೇಕ್ಷಣಾಧಿ
ಭಿರತಃ ಪರಿಕಲ್ಪ ಮೇತತ್ । ಮೋಹಸ್ತು ಮೃತ್ಯುಸಮಯೇ
ನುದಿತಾಂಶ ತುಲ್ಯಃ ಸ್ವಶೇಕ್ಷಿತೇ ದ್ವಿಗುಣತಸ್ತ್ರಿ ಗುಣಃಶುಭೈಶ ॥೧೩॥

ಅವತಾರಿಕೆ॥ ಈ ಶ್ಲೋಕದಲ್ಲಿ ಮರಣಭೂಮಿ ಲಕ್ಷಣವನ್ನೂ, ಮರಣ ಕಾಲದಲ್ಲಿ ಜ್ಞಾನಜ್ಞಾನಕಾಲ ಪರಿಣಾಮವನ್ನೂ ಸಹ ಹೇಳಿರುತ್ತೆ.

## ಮರಣಭೂಮಿ ಲಕ್ಷಣ

ಟೀಕು॥ ಹೋರನವಾಂಶ ಕಪಯುಕ್ತ ಸಮಾನಭೂಮೌ, ಹೋರಾನವಾಂಶಕಪ ಜನ್ಮಲಗ್ನದಲ್ಲಿ ಉದಯವಾದ ನವಾಂಶಾಧಿಪತಿ, ಯುಕ್ತ-ಕೂಡಿದರಾಶಿ, ಸಮಾನ-ಸಂಚಾರ ಯೋಗ್ಯವಾದ, ಭೂಮೌ-ಭೂಮಿಯಲ್ಲಿ ಮರಣವಾಗುವುದು. ಅದು ಹೇಗೆಂದರೆ-ಮೇಷಲಗ್ನದಲ್ಲಿ ಪಂಚಮನವಾಂಶ ಜನ್ಮಕಾಲವಾಗಿರುತ್ತೆ. ಮೇಷ ಲಗ್ನಕ್ಕೆ ೫ನೇ ನವಾಂಶ ಸಿಂಹ, ಸಿಂಹಕ್ಕಧಿಪತಿ ಸೂರ್ಯ ಸೂರ್ಯನರಾಶಿ ಸಿಂಹವಾದ್ದರಿಂದ

ಸಿಂಹವು ಸಂಚರಿಸುವದು ಸಾಮಾನ್ಯವಾಗಿ ಅರಣ್ಯವು, ಆದ್ದರಿಂದ ಅರಣ್ಯದಲ್ಲಿ ಮರಣವೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ರಾಶಿಭೇದ ಪ್ರಕರಣದಲ್ಲಿ ರಾಶಿ ಸಂಚಾರ ಸ್ಥಳದಲ್ಲಿ ॥ಶ್ಲೋಕ॥ ಆದ್ಯಃಸ್ಮತೋ ಮೇಷ ಸಮಾನ ಮೂರ್ತಿಃ ಕಾಲಸ್ಯ ಮೂರ್ಧಾಗದಿತಃ ಪುರಾಣ್ಯೈಃ । ಸೋಜಾವಿಕಾ ಸಂಚರ ಕಂದರಾದ್ರಿಸ್ತೇನ್ನಾಗಿ ಧಾತ್ವಾಕರ ರತ್ನಭೂಮಿಃ। ಇತ್ಯಾದಿ ಶ್ಲೋಕಗಳು ೧೨ ಹೇಳಲ್ಪಟ್ಟಿರುತ್ತಷ್ಟೆ. ಅಂಥಾ ಭೂಮಿಯೆಂದು ನಿರ್ಣಯಿಸತಕ್ಕದ್ದು. ಆ ಲಗ್ನ ನವಾಂಶಾಧಿಪತಿ ರಾಶಿಯೆಂದರೆ - ಆ ರಾಶಿ ಮೇಷ ನವಾಂಶೆಯಾದರೆ, ಮೇಕೆ, ಕುರಿ, ಸಂಚರಿಸುವ ಭೂಮಿ ವೃಷಭಾದರೆ-ವೃಷಭ ಸಂಚಾರ ಭೂಮಿ, ಮಿಥುನವಾದರೆ ಗಹ ಕಟಕವಾದರೆ ಭಾವಿ, ಸಿಂಹವಾದರೆ ಅಡವಿ, ಕನ್ಯೆಯಾದರೆ ಜಲಪ್ರಾಯ ಪ್ರದೇಶ, ತುಲೆಯಾದರೆ ಅಂಗಡಿ ಬೀದಿ ಸಾಲು ಮಳಿಗೆ, ವೃಶ್ಚಿಕವಾದರೆ ಸಂದಿ, ಕುಂಟೆ ಧನುಸ್ಸಾದರೆ ಅಶ್ವ ಸಂಚಾರ ಭೂಮಿ, ಮಕರವಾದರೆ ಜಲಪ್ರಾಯ ಭೂಮಿ, ಕುಂಭವಾದರೆ ಗೃಹ, ಮೀನವಾದರೆ ಜಲಪ್ರಾಯ ಪ್ರದೇಶ. ಈ ಮೇಲೆ ಹೇಳಲ್ಪಟ್ಟ ಪ್ರದೇಶಗಳಲ್ಲಿ ಮರಣವಾಗುವುದು, ನವಾಂಶರಾಶಿ ಸ್ವರೂಪವಲ್ಲದೆ ಗ್ರಹ ಸಂಯೋಗ ವೀಕ್ಷಣೆಯಿಂದಲೂ ಭೂಮಿಯನ್ನು ನಿರ್ಣಯಮಾಡತಕ್ಕದ್ದು. ಅದು ಹೇಗೆಂದರೆ- ಯೋಗೇಕ್ಷಣಾಧಿಭಿಃ-ಆ ಲಗ್ನ ನವಾಂಶಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶಿಯಲ್ಲಿ ಮತ್ತೊಂದು ಗ್ರಹವಿದ್ದರೆ, ಆ ಗ್ರಹ ಸಂಚಾರ ಭೂಮಿಯೆದು ಆ ನವಾಂಶಾಧಿಪತಿ ಇರುವ ರಾಶಿಯನ್ನು ಯಾವ ಗ್ರಹವು ನೋಡುವದೋ ಆ ಗ್ರಹ ಸಂಚಾರ ಭೂಮಿ, ಆದಿ ಶಬ್ದದಿಂದ ಆ ಗ್ರಹ ಯಾವ ನವಾಂಶೆಯಲ್ಲಿರುವದೋ ಆ ಗ್ರಹ ಸಂಚಾರ ಭೂಮಿಯೆಂದು ಹೇಳತಕ್ಕದ್ದು. ಗ್ರಹ ಸಂಚಾರ ಭೂಮಿ 'ದೇವಸ್ಥಾನಂ ಭಾಸ್ಕರಸ್ಯಾ' ಎಂಬುವ ಪ್ರಕಾರ ಗ್ರಹ ಸಂಚಾರ ಭೂಮಿ ತಿಳಿಯತಕ್ಕದ್ದು. ಈ ಪ್ರಕಾರ ಬಹುಭೂಮಿ ಹೇಳಲ್ಪಟ್ಟಾಗ ಈ ಗ್ರಹಗಳಲ್ಲಿ ಬಲಾಧಿಕವಾದ ಗ್ರಹಕ್ಕೆ ಹೇಳಿರುವ ಭೂಮಿಯೆಂದು ನಿರ್ಣಯ ಮಾಡತಕ್ಕದ್ದು. ಆ ಗ್ರಹಕ್ಕೆ ಭೂಮಿ ಯಾವದೆಂದು ತಿಳಿಯಬೇಕಾದರೆ, ಯಾವ ಗ್ರಹಕ್ಕಾದರೂ ರಾಶಿ ದತ್ವಯಾಧಿಪತ್ಯ ಬಂದಿದ್ದರೆ ಆಗ ಆ ಗ್ರಹಕ್ಕೆ ಮೂಲ ತ್ರಿಕೋಣ ರಾಶಿ ಸಮಾನ ಭೂಮಿಯೆಂದು ತಿಳಿಯತಕ್ಕದ್ದು. ಅದು ಹೇಗೆಂದರೆ :-ಸೂರ್ಯನಿಗೆ ಸಿಂಹಭೂಮಿ ಅರಣ್ಯ, ಚಂದ್ರನಿಗೆ ಕರ್ಕಾಟಕ ಭೂಮಿ ಜಲಪ್ರಾಯ ಪ್ರದೇಶ, ಕುಜನಿಗೆ ಮೇಷ ಭೂಮಿ, ಬುಧನಿಗೆ ಕನ್ಯಾಭೂಮಿ, ಜಲಪ್ರಾಯ ಪ್ರದೇಶ, ಗುರುವಿಗೆ ಧನು ಭೂಮಿ, ಅಶ್ವಸಂಚಾರ ಅಶ್ವಗಜಾದಿಶಾಲೆ, ಶುಕ್ರನಿಗೆ ತುಲಾ ಭೂಮಿ ಅಂಗಡಿ ಬೀದಿ ಶನಿಗೆ ಕುಂಭಭೂಮಿ ಗೃಹ ಕೆಲವರು ಗ್ರಹಗಳಿಗೆ ದೇವಾಲಯೋಗ್ನಿ ಧಿಹಾರಕೋಶ, ಶಯನಕ್ಷಿತ್ಯುತ್ಕರಾಸ್ಯಃ, ಇತ್ಯಾದುಕ್ತಸ್ಥಾನವೆಂದು ಹೇಳುತ್ತಾರೆ, ಆ ಪ್ರಕಾರ ಹೇಳುವುದಕ್ಕೆ ಭಾದಕವಿಲ್ಲ.

ಈ ಪ್ರಕಾರವಾಗಿ, ಏತತ್-ಈ ಮರಣಸ್ಥಾನವನ್ನು, ಪರಿಕಲ್ಪ್ಯ-ಕಲ್ಪಿಸತಕ್ಕದ್ದು. ಈ ವಿಷಯದಲ್ಲಿ ।।ಶ್ಲೋಕ।। ಲಗ್ನಾಂಶಾಧಿಪತಿ ಕ್ರಿಯೇ ಭವತಿ ಚೇನ್ನಾಶೋಜ ಚಾರೇಸ್ಥಲೇ। ಗೋಚಾರೇ ವೃಷಭೇ ಗೃಹೇಚಮಿಥುನೇ ಕೀಟೇಜಲೀಯಸ್ಥಲೇ।। ಸಿಂಹೇಚೇ ದ್ವಿಪೀನೇ ಸ್ತ್ರಿಯಾಂಚ ಭುವನೇ ಚೌಕೇತು ಪಣ್ಯೇಷ್ವಮೇ ಶ್ವಭ್ರೇಶ್ವೇ ಹಯನಂಚರೇತ ಮಕರೇ ತೋಯೆ ಘಟೇಸದ್ಮನಿ ।।೪೮।।

## ಮರಣಕಾಲೇ ಅಜ್ಞಾನಕಾಲನಿರ್ಣಯಃ

ಮರಣಕಾಲೇ ಅಜ್ಞಾನಕಾಲ ನಿರ್ಣಯಃ-ಅನುದಿತ ನವಾಂಶತುಲ್ಯಃ-ಜನ್ಮಿಸು ವಾಗ ಲಗ್ನದಲ್ಲಿ ಶೇಷವಿರುವ ನವಾಂಶವನ್ನು ಕೂಡಿಸಿದರೆ ಎಷ್ಟು ಕಾಲವಾಗುವದೋ ಅಷ್ಟು ಕಾಲ, ಮೃತ್ಯುಸಮಯೇ-ಮರಣಕಾಲದಲ್ಲಿ, ಮೋಹಃ- ಶರೀರಜ್ಞಾನವಿಲ್ಲದೆ ಹೋಗುವದು. ಸ್ವೇಶೇಕ್ಷಿತೇ-ಆ ಲಗ್ನರಾಶಿ ಸ್ವಸ್ವಾಮಿದೃಷ್ಟವಾದರೆ, ದ್ವಿಗುಣಿತಃ-ಲಗ್ನದಲ್ಲಿ ಶೇಷನವಾಂಶೆಯ ಕಾಲವನ್ನು ಕೂಡಿದರೆ ಆಗುವ ಘಟಿಕಾ ವಿಘಟಿಕ ಕಾಲಕ್ಕೆ ದ್ವಿಗುಣ ಮಾಡತಕ್ಕದ್ದು. ಅಷ್ಟುಕಾಲ ಸ್ಮತಿ ತಪ್ಪಿಹೋಗುವದು, ಶುಭೈಃ-ಆ ಲಗ್ನರಾಶಿ ಶುಭಗ್ರಹಗಳಿಂದ ನೋಡಲ್ಪಟ್ಟರೆ, ತ್ರಿಗುಣಃ-ಆ ಲಗ್ನ ಶೇಷಕಾಲವನ್ನು ೩ರಿಂದ ಗುಣಿಸತಕ್ಕದ್ದು, ಅಷ್ಟುಕಾಲ ಸ್ಮತಿತಪ್ಪಿ ಹೋಗಿರುವದು, ಲಗ್ನರಾಶಿಸ್ವ ಸ್ವಾಮಿಯಿಂದ ಶುಭಗ್ರಹದಿಂದ ನೋಡಲ್ಪಟ್ಟರೆ ಲಗ್ನದಲ್ಲಿ ಶೇಷವಿರತಕ್ಕ ಕಾಲವನ್ನು ಆರರಿಂದ ಗುಣಿಸಿದರೆ ಆಗುವಷ್ಟು ಕಾಲಸ್ಮತಿ ತಪ್ಪಿಹೋಗುವುದು ।।೧೨।।

## ಶವಪರಿಣಾಮ ವಿಚಾರಃ

ಮೂಲ।। ದಹನಜಲ ವಿಮಿಶ್ರೈಭಸ್ಮ ಸಂಕ್ಲೇದಶೋಷ್ಯೈ । ರ್ನಿಧನ ಭವನಸಂಸ್ಥೈ ವ್ಯಾಲಗರ್ರ್ಯರ್ಶ್ವಿಡಂತಃ ।। ಇತಿ ಶವ ಪರಿಣಾಮ ಶ್ಚಿಂತನೀಯೋ ಯಥೋಕ್ತಃ । ಪೃಥುವಿರಚಿತ ಶಾಸ್ತ್ರಾದ್ಗತ್ಯನೂ ಕಾದಿಚಿಂತ್ಯಂ ।।೧೪।।

ಅವತಾರಿಕೆ।। ಈ ಶ್ಲೋಕದಿಂದ ಸತ್ತುಹೋದವನ ಶರೀರ ಪರಿಣಾಮವು ಹೇಳಲ್ಪಡುತ್ತೆ. ಜನ್ಮಲಗ್ನಕ್ಕೆ ೨೨ನೇ ದ್ರೇಕ್ಕಾಣ ಸ್ವಭಾವದಿಂದ ಶವಪರಿಣಾಮವೆಂದರೆ, ದಹಿಸುವಿಕೆ, ನೀರಿನಲ್ಲಿ ಕೊಳೆತು ಹೋಗುವಿಕೆ, ಭೂಮಿಯಲ್ಲಿ ಸ್ಥಾಪಿಸುವಿಕೆ, ಪಕ್ಷಿ ಗಳಿಗೆ ಆಹಾರವಾಗುವಿಕೆ ಈ ನಾಲ್ಕು ಬಗೆಯಾದ ವಿನಿಯೋಗಗಳು ಹೇಳಲ್ಪಡುತ್ತೆ.

ಟೀಕು।। ದಹನಜಲ ವಿಮಿಶ್ರೈರ್ಭಸ್ಮ ಸಂಕ್ಲೇದಶೋಷ್ಯೈಃ-ಅಂದರೆ ಜನ್ಮಲಗ್ನಕ್ಕೆ

ಅಷ್ಟಮ ರಾಶಿಯಲ್ಲಿರುವ ೨೨ನೇ ದ್ರೇಕ್ಕಾಣ ಅಗ್ನಿ ದ್ರೇಕ್ಕಾಣವಾದರೆ-ಪಾಪಗ್ರಹ (ರವಿ, ಕುಜ, ಶನಿ) ದಹನ-ಅಗ್ನಿಯಿಂದ ಸುಡಲ್ಪಡುವದು, ಜಲ ದ್ರೇಕ್ಕಾಣವಾದರೆ-ಜಲ-ನೀರಿನಲ್ಲಿ ಕೊಳೆತು ಹೋಗುವದು. ಜಲದ್ರೇಕ್ಕಾಣವೆಂದರೆ ಶುಭಗ್ರಹ ದ್ರೇಕ್ಕಾಣವೆಂದರ್ಥ, ಮಿಶ್ರದ್ರೇಕ್ಕಾಣವಾದರೆ-ದಹಿಸಲ್ಪಡದೆ, ಭಸ್ಮಸಂಕ್ಲೇದ ಶೋಷ್ಯೈ-ಒಣಗಿ ಹೋಗುವದು, ಪಾಪಗ್ರಹವಾದ ಶುಭದ್ರೇಕ್ಕಾಣ, ಶುಭಗ್ರಹ ಯುತವಾದ ಪಾಪಗ್ರಹ ದ್ರೇಕ್ಕಾಣ ಮಿಶ್ರದ್ರೇಕ್ಕಾಣವಾದರೆ ಒಣಗಿಹೋಗುವದು, ಅಥವಾ ಭೂಮಿಯಲ್ಲಿ ಒಣಗಿಹೋಗುವದು. ನಿಧನ ಭವನ ಸಂಸ್ಥೈರ್ವ್ಯಾಳವರ್ಗೈ ರ್ವಿಡಂತಃ-ಅಂದರೆ ಜನ್ಮಲಗ್ನಕ್ಕೆ ಅಷ್ಟಮ ರಾಶ್ಯಾಶ್ರಿತವಾದ ೨೨ನೇ ದ್ರೇಕ್ಕಾಣ ಸರ್ಪ ದ್ರೇಕ್ಕಾಣವಾದರೆ, ಮೃತಪಟ್ಟವನ ಶರೀರ ನಾಯಿ, ನರಿ, ಹದ್ದು, ಕಾಗೆಗಳಿಗೆ ಆಹಾರವಾಗಿ ಪರಿಣಮಿಸುವದು. (ಕರ್ಕಾಟಕ ರಾಶಿಯ ಪ್ರಥಮ ತೃತೀಯ, ವೃಶ್ಚಿಕ ಪ್ರಥಮ ದ್ವಿತೀಯ ಮೀನ ತೃತೀಯ ಈ ೫ ವ್ಯಾಳ (ಸರ್ಪ) ದ್ರೇಕ್ಕಾಣಗಳು) ಈ ವಿಷಯದಲ್ಲಿ ಶ್ಲೋಕ।। ಶಶಿ ಗೃಹಪೂರ್ವಾಪರಗಃ ಕೀಟಸ್ಯಚ ಮೀನಪಶ್ಚಿಮೋಗ ದಿತಃ। ನಿಧನೇಯಸ್ಯಭವಂತಿ ದ್ರೇಕ್ಕಾಣಾಸ್ತಸ್ಯಚಮೃತಸ್ಯ।। ಭುಂಜಂತಿ ವಾಯಸಾದ್ಯಾಃ ಪ್ರಾಣಿಸಮೂಹಾ ಚಾಸ್ತಿ ಸಂದೇಹಃ। ಪಾಪಗ್ರಹದ್ರೇಕ್ಕಾಣೋ ಯಸ್ಯಾಷ್ಟಮರಾಶಿ ಸಂಸ್ಥಿತೋಭವತಿ।। ದಹನಂ ಪ್ರಾಪ್ನೋತಿ ನರೋಮೃತಮಾತ್ರೋ ನಿಶ್ಚಯಾತ್ತ್ವದೇತ್। ಏವಂ ಸೌಮ್ಯದೃಕಾಣೋ ಜಲಮಧ್ಯೇಕ್ಷಿಪ್ಯತೇನರೋತ್ರಮೃತಃ।। ಸೌಮ್ಯದೃಕಾಣಃ ಪಾಪೈಃ ಪಾಪದೃಕಾಣೋಪಿ ಸೌಮ್ಯಯುತಃ। ಯಸ್ಯಾಷ್ಟಮ ಭವನಗತಶ್ಶೋಷಂ ಪ್ರಾಪ್ನೋತಿ ಸೋಪಿಮೃತಃ ।।೫೨।। ಎಂದು ಜ್ಯೋತಿಷಾರ್ಣವದಲ್ಲಿ ಹೇಳಲ್ಪಟ್ಟಿರುತ್ತೆ. ಇತಿ-ಈ ಪ್ರಕಾರವಾಗಿ, ಶವ ಪರಿಣಾಮಂ-ಮೃತಶರೀರದ ದಹನ, ಕ್ಲೇದ, ಶೋಷ್ಯ ಮೊದಲಾದ ಸ್ಥಿತಿಯು, ಚಿಂತನೀಯಃ-ವಿಚಾರಿಸಿ ತಿಳಿಯತಕ್ಕದ್ದು, ಪೃಥುವಿರಚಿತ ಶಾಸ್ತ್ರಾತ್-ವಿಸ್ತಾರವಾಗಿ ಹೇಳಲ್ಪಟ್ಟ (ಪೃಥುಯಶಸ್ವೆಂಬುವನಿಂದ ರಚಿಸಲ್ಪಟ್ಟಶಾಸ್ತ್ರ) ಶಾಸ್ತ್ರದಿಂದ, ಗತ್ಯ ನೂಕಾದಿ-ಗತಿ-ಮೃತನಿಗೆ ಲೋಕಾಂತರಗತಿ, ಅನೂಕ-ಪೂರ್ವಜನ್ಮದ ಸ್ಥಿತಿ, ಆದಿ- ಈ ಮೊದಲಾದ ವಿಷಯಗಳನ್ನು, ಚಿಂತ್ಯಂ-ವಿಚಾರಿಸತಕ್ಕದ್ದು. ಮತ್ತು ನರಿ ನಾಯಿಗಳು ಪಕ್ಷಿ ಮೊದಲಾದುವುಗಳು ತಿನ್ನಲ್ಪಟ್ಟವನಿಗೆ ಪರಲೋಕದ ಗತಿ ಕೂಡ ಆಗುವದೆಂದು ಗ್ರಂಥಾಂತರದಲ್ಲಿ ಹೇಳಲ್ಪಡುತ್ತೆ.

ಶವ ಪರಿಣಾಮ ಪಟಕ
ಜನ್ಮರಾಶಿಗೆ ೨೨ನೇ ದ್ರೇಕ್ಕಾಣಮೂಲದಿಂದ ತಿಳಿಯತಕ್ಕ ಪಟಕ

| ಸಂಖ್ಯೆ | ದ್ರೇಕ್ಕಾಣಗಳ ಭೇದ | ಮೃತನ ಶರೀರದ ಪರಿಣಾಮ |
|---|---|---|
| ೧ | ಪಾಪಗ್ರಹ ದ್ರೇಕ್ಕಾಣಗಳಾದರೆ | ಅಗ್ನಿಯಿಂದ ಭಸ್ಮವಾಗುವುದು |
| ೨ | ಶುಭಗ್ರಹ ದ್ರೇಕ್ಕಾಣವಾದರೆ | ನೀರಿನಲ್ಲಿ ಕೊಳೆತು ಹೋಗುವುದು |
| ೩ | ಶುಭ ಪಾಪ ಮಿಶ್ರವಾದರೆ | ಭೂಮಿಯಲ್ಲಿ ಹೂಳಲ್ಪಡುವುದು |
| ೪ | ಸರ್ಪ ದ್ರೇಕ್ಕಾಣಗಳಾದರೆ | ನರಿ, ನಾಯಿ, ಹದ್ದು, ಕಾಗೆಗಳಿಗೆ ಆಹಾರವಾಗುವುದು |

## ಪೂರ್ವಜನ್ಮ ಜ್ಞಾನನಿರ್ಣಯಃ

**ಮೂಲ॥ ಗುರುರುಡುಪತಿ ಶುಕ್ರೌ ಸೂರ್ಯಭೌಮೌ ಯಮಜ್ಞೌವಿಬುಧಪಿತೃ ತಿರಶ್ಚೋನಾರ ಕಿಯಾಂಶ್ಚ ಕುರ್ಯ: । ದಿನಕರ ಶಶಿವೀರ್ಯಾದಿಷ್ಠಿತ ತ್ರ್ಯಂಶನಾಥಾತ್ಪ್ರವರ ಸಮನಿಕೃಷ್ಟಾಸ್ತುಂಗಹ್ರಾಸಾದನೂಕೇ*॥**

ಅವತಾರಿಕೆ॥ ಹುಟ್ಟಿದ ಮನುಷ್ಯನು ಯಾವಲೋಕದಿಂದ ಬಂದು ಹುಟ್ಟಿದನು ಎಂಬುವ ಪೂರ್ವಜನ್ಮಜ್ಞಾನವು ಹೇಳಲ್ಪಡುತ್ತೆ.

### ಅಧಿಪತಿಗಳು

| ಗುರು | ದೇವಲೋಕ ಸ್ವರ್ಗ ಕ್ಕಧಿಪತಿ | ರವಿ | ತಿರ್ಯಗ್ಲೋಕಕ್ಕಧಿಪತಿಗಳು |
|---|---|---|---|
| ಚಂದ್ರ ಶುಕ್ರ | ಪಿತೃಲೋಕಕ್ಕಧಿಪತಿ ಗಳು | ಶನಿ ಬುಧ | ನರಕಕ್ಕಧಿಪತಿಗಳು |

ಗುರುಃ-ಬೃಹಸ್ಪತಿಯು, ಉಡುಪತಿ ಶುಕ್ರೌ-ಚಂದ್ರ ಶುಕ್ರರು, ಸೂರ್ಯಭೌಮೌ-ರವಿ ಕುಜರು, ಯಮಜ್ಞೌ-ಶನಿ ಬುಧರು, ಈ ಗ್ರಹಗಳು ಕ್ರಮವಾಗಿ ವಿಬುಧ ಪಿತೃ ತಿರಶ್ಚೋ ನಾರಕೀಯಾಂಶ್ಚ, ವಿಬುಧಃ-ದೇವಲೋಕ ಪಿತೃ-ಪಿತೃಲೋಕ, ತಿರ್ಯಕ್-ತಿರ್ಯಗ್ಲೋಕ, ನಾರಕೀಯ-ನರಕಲೋಕ, ಸಂಬಂಧವುಳ್ಳ ಅಧಿಪತಿಗಳಾಗಿ, ಕುರ್ಯು :- ಮಾಡುವರು, ಅದು ಯಾವ ಪ್ರಕಾರವೆಂದರೆ :- ದಿನಕರ

* ತುಂಗಹಾನಾ ದನೂಕೇ - ಪಾ

ಶಶಿವೀರ್ಯಾಧಿಷ್ಠಿತಾತ್‌ತ್ರ್ಯಂಶನಾಥಾತ್ - ಸೂರ್ಯ ಚಂದ್ರರಲ್ಲಿ ಯಾರು ಬಲಿಷ್ಠರಾಗಿರುವರೋ ಅವರಲ್ಲಿ ಆ ಬಲವಂತವಾದ ಗ್ರಹವಿರುವ ದ್ರೇಕ್ಕಾಣಾಧಿಪತಿ ಯಾವ ಗ್ರಹವೋ ಆ ಗ್ರಹಕ್ಕೆ ಮೇಲೆ ಹೇಳಲ್ಪಟ್ಟ ಲೋಕಾಧಿಪತ್ಯವಾದದು ಬಂದಿರುವದೋ ಆ ಲೋಕದಿಂದ ಬಂದು ಹುಟ್ಟಿದನೆಂದು ಅರ್ಥವು. ಆ ದ್ರೇಕ್ಕಾಣಾಧಿಪತಿ ಗುರುವಾದರೆ ದೇವಲೋಕದಿಂದ, *ಚಂದ್ರ ಶುಕ್ರರಾದರೆ ಪಿತೃಲೋಕದಿಂದ, ರವಿ, ಕುಜರಲ್ಲೊಬ್ಬನಾದರೆ, ತಿರ್ಯಗ್ಲೋಕದಿಂದ *ಶನಿ ಬುಧರಲ್ಲೊಂದು ದ್ರೇಕ್ಕಾಣವಾದರೆ ನರಲೋಕದಿಂದ ಬಂದನೋ ಆ ಲೋಕದಿಂದ ಬಂದು ಹುಟ್ಟಿದನೆಂದು ತಿಳಿಯತಕ್ಕದ್ದು. ಮತ್ತು ಯಾವ ಲೋಕದಿಂದ ಬಂದನೋ ಆ ಲೋಕದಲ್ಲಿ ಶ್ರೇಷ್ಠನಾಗಿದ್ದನೋ, ಹೀನವಾಗಿದ್ದನೋ ಎಂಬುವ ವಿಷಯವನ್ನು, ಪ್ರವರ ಸಮನಿಕೃಷ್ಟಾಸ್ತುಂಗ ಹ್ರಾಸಾದಾನೂಕೇ-ಅಂದರೆ ಆಯಾಯ ಲೋಕವೆಂದು ಹೇಳಲ್ಪಟ್ಟ ಗ್ರಹವು ಉಚ್ಚಗತನಾಗಿದ್ದರೆ ಶ್ರೇಷ್ಠನಾಗಿದ್ದನೆಂತಲೂ, ನೀಚರಾಶಿಗತನಾಗಿದ್ದರೆ ಹೀನನಾಗಿದ್ದನೆಂತಲೂ, ನೀಚ ಉಚ್ಚ ಮಧ್ಯಸ್ಥವಾಗಿದ್ದರೆ ಮಧ್ಯಸ್ಥನಾಗಿದ್ದನೆಂತಲೂ ತಿಳಿಯತಕ್ಕದ್ದು. ಈ ವಿಷಯಕ್ಕೆ ಜಯದೇವಃ॥ಶ್ಲೋಕ॥ ಸೂರ್ಯೇಂದ್ವೋ ವೀರ್ಯಯುಕ್ತಶ್ಚೇದ್ದ್ರೇಕ್ಕಾಣೇ ಶೋಕ್ತಲೋಕತಃ। ಸಮಾಗತೋ ಜಾತಕೋಯಂ ಪೃಥ್ವಾ ಮಿತಿವದೇದ್ಬುಧಃ ॥೫೩॥ ಅವ್ಯಯಂ ಸುರಗುರೌ ಕಲಯಂತಿ ರಾತ್ರಿನಾಥಸಿತಯೋಃ ಪಿತೃಲೋಕಂ । ಭಾಸ್ಕರ ಕ್ಷಿತಿಜಯೋಃ ಖಲುತಿರ್ಯಕ್ ಸೌರಚಂದ್ರ ಸುತಯೋರ್ನರಕಂಚ ॥ ಈ ಶ್ಲೋಕಗಳಲ್ಲಿ ವರಾಹ ಮಿಹಿರಾಚಾರ್ಯರ ಮತವೇ ಅನುಸರಿಸಿರುತ್ತೆ ॥೫೪॥

## ಮೋಕ್ಷಯೋಗಃ

ಮೂಲ॥ ಗತಿರಪಿ ರಿಪು ರಂಧ್ರತ್ರ್ಯಂಶ ಪೋಸ್ತಸ್ಥಿತೋವಾ । ಗುರುರಥರಿಪು ಕೇಂದ್ರುಚ್ಛಿದ್ರಗಃ ಸ್ವೋಚ್ಚಸಂಸ್ಥಃ ॥ ಉದಯತಿ ಭವನೇಂತ್ಯೇ ಸೌಮ್ಯಭಾಗೇಚ ಮೋಕ್ಷೋ । ಯದಿಭವತಿ ಬಲೇನ ಪ್ರೋಜ್ಝಿತಾ ಸ್ತತ್ರಶೇಷಾಃ ॥೧೬॥

ಅವತಾರಿಕೆ॥ ಮರಣ ಹೊಂದಿದವನಿಗೆ ಪರಲೋಕಗತಿ ಯಾಗುವುದರಲ್ಲಿ ಮೋಕ್ಷ ಯೋಗ ಜಾತಕ ಲಕ್ಷಣವು ಹೇಳಲ್ಪಡುತ್ತೆ. ಗತಿರಪಿರಿಪು ರಂಧ್ರತ್ರ್ಯಂಶಪಃ-ಅಂದರೆ ಜನನಕಾಲದಲ್ಲಿ ೬-೭-ಲನೇ ಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ, ಷಷ್ಠಾಷ್ಟಮ ಭಾವಾಧಿಪತಿಗಳು ಯಾವ ದ್ರೇಕ್ಕಾಣಗಳಲ್ಲಿದ್ದಾರೆಯೋ ಆ ಎರಡು ದ್ರೇಕ್ಕಾಣಾಧಿಪತಿಗಳಲ್ಲಿ ಯಾರು ಬಲವಂತನಾಗಿರುವನೋ ಆ ಗ್ರಹಕ್ಕೆ ಹೇಳಿರುವ

* ಚಂದ್ರ ಶುಕ್ರ=ಈ ಗ್ರಹಗಳೊಂದಕ್ಕೆ ಈ ಫಲ ಹೇಳಬೇಕು.

* ಶನಿ ಬುಧ=ಈ ಗ್ರಹಗಳಿಗೂ ಒಂದೊಂದಕ್ಕೆ ಫಲವನ್ನು ಹೇಳಬೇಕು.

ಲೋಕಕ್ಕೆ ಮರಣ ಹೊಂದಿದವನು ಹೋಗುವನೆಂದು ಹೇಳತಕ್ಕದ್ದು. ಅಸ್ತಸಿ ತೋವಾ-ಜನ್ಮಲಗ್ನಕ್ಕೆ ೬-೭-೮ನೇ ಸ್ಥಾನಗಳಲ್ಲಿ ಎರಡು ಸ್ಥಾನದಲ್ಲಿಯಾಗಲೀ, ಗ್ರಹಗಳಿದ್ದರೆ, ಅವರಲ್ಲಿ ಬಲಾದಿಕವಾದ ಗ್ರಹದ ಲೋಕಕ್ಕೆ ಹೋಗುವನೆಂದು ಹೇಳತಕ್ಕದ್ದು. ಇಲ್ಲಿ ಅಸ್ತಸ್ಥಿತೋವಾ ಎಂದು ಮೂಲದಲ್ಲಿ ಸಪ್ತಮಸ್ಥಾನ ಮಾತ್ರವೇ ಗ್ರಹಸಲ್ಪಟ್ಟಿರುತ್ತೆ ವಾ ಶಬ್ದದಿಂದ ಷಷ್ಠಾಷ್ಟಮ ಸ್ಥಾನವು ಹೇಳಲ್ಪಟ್ಟಿರುತ್ತೆ. ವಾ ಶಬ್ದವನ್ನು ಉಪಲಕ್ಷಿಸಬೇಕಾದದ್ದು ಅವಶ್ಯಕವಾಗಿರುತ್ತೆ. ಈ ವಿಷಯದಲ್ಲಿ ಸತ್ಯಾಚಾರ್ಯ ಮೊದಲಾದವರ ಮತವಿರುತ್ತೆಂದು ಜಯದೇವನು ಹೇಳಿರುವ ॥ಶ್ಲೋಕ॥ ಷಷ್ಠಾಷ್ಟಸಪ್ತಮ ಸವೀರ್ಯ ಖಗೋಕ್ತಲೋಕೇ ವಾವ್ಯೆರಿ ರಂಧ್ರಸಬಲಸ್ಯ ದೃಕಾಣಪಸ್ಯ । ಗಂತವ್ಯ ಮತ್ರಮೃತಕೇನ ನರೇಣಸತ್ಯಂ ಸತ್ಯಾ ದಯೋಗ್ರಹ ವಿದೋಹಿ ವದಂತಿಸಂತಃ॥ ಈ ವಿಷಯಥಲ್ಲಿ ಲಘುಜಾತಕದಲ್ಲಿ ಸಹ ಹೇಳಲ್ಪಟ್ಟಿರುತ್ತೆ. ಶ್ಲೋಕ॥ ಸುರಪಿತೃತಿರ್ಯಙ್ನಾರ್ಕಾ ಗುರುರುಡು ಪಸಿತಾ ವ್ಯಗ್ರ ವೀಜ್ಞಯಮೌ । ರಿಪುರಂಧ್ರತ್ರ್ಯಂಶಕ ಪಾನಯಂತಿಚಾಸ್ತಾರಿ ನಿಧನಸ್ಥಾಃ ॥೫೬॥

## ಮೋಕ್ಷ ಸಾಮ್ರಾಜ್ಯಯೋಗಃ

ಮೋಕ್ಷಸಾಮ್ರಾಜ್ಯಯೋಗಃ । ರಿಪುಕೇಂದ್ರಚ್ಛಿದ್ರಗಃ-ಷಷ್ಠಾಸ್ಥಾನವನ್ನಾಗಲೀ, ಅಷ್ಟಮಸ್ಥಾನವನ್ನಾಗಲೀ, ಕೇಂದ್ರಗ-೧-೪-೭-೧೦ನೇ ಸ್ಥಾನಗಳನ್ನಾಗಲೀ, ಹೊಂದಿರುವ, ಗುರುಃ-ಬೃಹಸ್ಪತಿ, ಸ್ವೋಚ್ಚಸಂಸ್ಥಃ-ತನ್ನುಚ್ಚಸ್ಥಾನವಾದ ಕರ್ಕಾಟಕ ದಲ್ಲಿದ್ದರೆ, ಅಂಥಾ ಕಾಲದಲ್ಲಿ ಹುಟ್ಟಿದವರಿಗೆ, ಮೋಕ್ಷೋಭವತಿ-ಮೋಕ್ಷವಾಗುತ್ತದೆ. (ಮುಕ್ತಿಯಾಗುವದು) ಈ ಯೋಗವು ಮೇಷಲಗ್ನಕ್ಕೆ ಕರ್ಕಾಟಕ ೪ನೇ ಸ್ಥಾನವಾಗಿ ಉಚ್ಚ ಬೃಹಸ್ಪತಿ ಇರುವ ಕಾಲ ಸಿಕ್ಕುತ್ತದೆ, ಕುಂಭ ಲಗ್ನಕ್ಕೆ ೬ನೇ ಸ್ಥಾನ, ಮಕರಕ್ಕೆ ೭ನೇ ಸ್ಥಾನ, ಧನುರ್ಲಗ್ನಕ್ಕೆ ೮ನೇ ಸ್ಥಾನ, ತುಲಾಲಗ್ನಕ್ಕೆ ೧೦ನೇ ಸ್ಥಾನ, ಕರ್ಕ ಲಗ್ನಕ್ಕೆ ಲಗ್ನಕೇಂದ್ರಸ್ಥಾನ, ಈ ಮೇಷ, ಕರ್ಕ, ತುಲಾ, ಧನು, ಮಕರ, ಕುಂಭ ಈ ಲಗ್ನ ಜಾತಕರಿಗೆ ಲಭಿಸುತ್ತದೆ.

## ಮೀನ ಲಗ್ನಜಾತಸ್ಯ ಮೋಕ್ಷಯೋಗಃ

ಉದಯತಿಭವನೇಂತ್ಯೇ-ಮೀನರಾಶಿಲಗ್ನವಾಗಿ, ಸೌಮ್ಯಭಾಗೇ-ಶುಭಗ್ರಹ ನವಾಂಶದಲ್ಲಿ ಗುರುವಿದ್ದು, ಶೇಷಾಃ-ಉಳಿದ ರವಿ, ಚಂದ್ರ, ಕುಜ, ಬುಧ, ಶುಕ್ರ, ಶನಿಗಳು, ಬಲೇನ ಪ್ರೋಜ್ಝಿತಾಯದಿ-ಬಲವರ್ಜಿತರಾಗಿದ್ದರೆ, ತತ್ರ-ಆ ಕಾಲದಲ್ಲಿ ಹುಟ್ಟಿದವರಿಗೆ, ಮೋಕ್ಷೋಭವತಿ ಮುಕ್ತಿಯುಂಟಾಗುವದು. ಜನ್ಮಕಾಲದಲ್ಲಿ ಯಾವ ಪ್ರಕಾರ ಗತಿ ಹೇಳಲ್ಪಡುತ್ತದೆಯೋ ಮರಣಕಾಲದಲ್ಲಿ ಆ ಪ್ರಕಾರವಾಗಿ ಗತಿಯನ್ನು ಹೇಳಬಹುದು. ಈ ವಿಷಯಕ್ಕೆ ಲಘುಜಾತಕದಲ್ಲಿ ಶ್ಲೋಕ॥ ಷಷ್ಠಾಷ್ಟಮ

ಕಂಟಕಗೋಜೀವಶ್ಚೇದ್ಭವತಿ ಮೀನಲಗ್ನೇವಾ । ಶೇಷೈರಬಲೈರ್ಜನ್ಮನಿಮರಣೇವಾ ಮೋಕ್ಷಗತಿಮಾಹುಃ ।।೫೭।। ಮತ್ತು ಜಯದೇವಃ ।।ಶ್ಲೋಕ।। ರಿಪುನಿಧನ ಗೃಹಸ್ಥೇ ಸ್ವೋಚ್ಚಗೇದೇವ ಪೂಜ್ಯೇ ಝುಷಭತನುಗತೇವಾ ಸನ್ನವಾಂಶೇ ಸ್ಥಿತೇಚ । ಭವತಿಮನುಜ ಮುಕ್ತಿಶ್ಚೇದ್ವಿವೀರ್ಯಾಶ್ಚ ಶೇಷಾಜನಿ ಸಮಯವದೇವಸ್ಯಾದ್ಗತಿ ಮೃತ್ಯುಕಾಲೇ ।।೫೮।। ಈ ಪ್ರಕಾರವಾಗಿ ಪುನರ್ಜನ್ಮವಿಲ್ಲದ ಮೋಕ್ಷಯೋಗ ಜಾತಕಗಳಲ್ಲಿ ವಿಚಾರಮಾಡತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತಕಾಖ್ಯ
ಹೋರಾಶಾಸ್ತ್ರೇ ಸ್ತ್ರೀಜಾತಕಫಲ ವಿಚಾರೋನಾಮ
ಪಂಚವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ನೈರ್ಯಾಣಿಕಾಖ್ಯ ವಿಚಾರನ್ನಾಮ ಪಂಚವಿಂಶ ಪ್ರಕರಣಂ
ಸಂಪೂರ್ಣಂ



ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ

## ೨೬ನೇ ನಷ್ಟಜಾತಕಾಖ್ಯ ಪ್ರಕರಣಂ

ಅವತಾರಿಕೆ ॥ ಇದುವರೆವಿಗೂ ಜನನಕಾಲಕ್ಕೆ ಸರಿಯಾಗಿ ಜಾತಕವನ್ನು ಬರೆದು ಅದಕ್ಕೆ ಶುಭಾ ಶುಭ ಫಲವು ತಿಳಯತಕ್ಕದ್ದಕ್ಕೆ ವಿಧಿಯು ಹೇಳಲ್ಪಟ್ಟಿತ್ತು. ಆದರೆ ಅನೇಕರಿಗೆ ಜನನ ಕಾಲವು ತಿಳಿಯದೆಯೂ ಅಥವಾ ಜಾತಕಗಳು ಇಲ್ಲದೆಯೂ ಇರುವ ಸಂಭವವಿರುತ್ತೆ, ಅವರುಗಳಿಗೆ ಈ ಜ್ಯೋತಿಶ್ಶಾಸ್ತ್ರದ ಪ್ರಯೋಜನವೇ ಇಲ್ಲದೆ ಹೋಗುತ್ತದೆ. ಆದ್ದರಿಂದ ಜಾತಕವಿಲ್ಲದವರಿಗೂ ಜಾತಕ ನಿರ್ಮಾಣಮಾಡುವಂತೆ ಲೋಕಾನುಗ್ರಹಕೋಸ್ಕರವಾಗಿ ವರಾಹಮಿಹಿರಾಚಾರ್ಯನು ನಷ್ಟಜಾತಕ ನಿರ್ಮಾಣ ಮಾಡುವದಕ್ಕೋಸ್ಕರ ಬೇಕಾಗಿರುವ ವಿಷಯಗಳನ್ನು ಮಯ ಯವನ ಜೀವಶರ್ಮಾದಿಗಳ ಮತಕ್ಕನುಸಾರವಾಗಿ "ಆಧಾರಜನ್ಮಾ ಪರಿಬೋಧ ಕಾಲೆ" ಎಂಬುವ ಶ್ಲೋಕದಿಂದ ಹೇಳುತ್ತಾನೆ.

### ಪ್ರಶ್ನಲಗ್ನಾತ್ ಅಯನಜ್ಞಾನ

**ಮೂಲ॥ ಅಧಾನಜನ್ಮ ಪರಿಬೋಧಕಾಲೇ । ಸಂಪೃಚ್ಚತೋ ಜನ್ಮವದೇದ್ವಿ ಲಗ್ನಾತ್ ॥ ಪೂರ್ವಾಪರಾರ್ಧೇ ಭವನಸ್ಯವಿಂದ್ಯಾ । ದ್ಭಾನಾವುದ ಗ್ದಕ್ಷಿಣಗೇಪ್ರಸೂತಿಂ॥೧॥**

ಅವತಾರಿಕೆ ॥ ನಷ್ಟ ಜಾತಕಾಖ್ಯ ಪ್ರಕರಣವನ್ನು ಹೇಳಲುಪಕ್ರಮಿಸಿ ಜನ್ಮಕಾಲ ತಿಳಿಯದವನಿಗೆ ಪ್ರಶ್ನಕಾಲಮೂಲವಾಗಿ ಜನ್ಮಕಾಲ ಜ್ಞಾನವು ಹೇಳಲ್ಪಡುತ್ತೆ.

ಟೀ॥ ಅಧಾನಜನ್ಮಾಪರಿಬೋಧಕಾಲೇ, ಆಧಾನ-ಗರ್ಭಾದಾನಕಾಲವು ಜನ್ಮ-ಜನನ ಕಾಲವು, ಅಪರಿಬೋಧಕಾಲೇ-ತಿಳಿಯದೆ ಇರುವಾಗ, ಸಂಪೃಚ್ಛತಃ-ಯಾರು ಪ್ರಶ್ನೆ ಮಾಡುತ್ತಾರೋ ಅವರಿಗೆ ವಿಲಗ್ನಾತ್-ಪ್ರಶ್ನೆಯನ್ನು ಯಾವ ಕಾಲದಲ್ಲಿ ಕೇಳುತ್ತಾನೋ ಆ ಕಾಲವನ್ನೇ ಗ್ರಾಹ್ಯಮಾಡಿ, ಜನ್ಮ-ಪ್ರಶ್ನೆ ಮಾಡಿದವನ ಜನ್ಮ ಕಾಲವಾಗಲೀ, ಯಾರಿಗೋಸ್ಕರ ಕೇಳುತ್ತಾನೋ ಅವರಿಗೋಸ್ಕರವಾಗಲೀ ಜನನಕಾಲ ವನ್ನು, ವದೇತ್-ನುಡಿಯತಕ್ಕದ್ದು. (ಅಂದರೆ ಜನನ ಕಾಲ ನಿಶ್ಚಯಮಾಡತಕ್ಕದ್ದು)

ಆ ಜನ್ಮಕಾಲ ನಿಶ್ಚೈಸತಕ್ಕದ್ದು ಯಾವ ಪ್ರಕಾರವೆಂದರೆ -

ಪೂರ್ವಾಪರಾರ್ಧೇಭವನಸ್ಯವಿದ್ಯಾದ್ಭಾನಾವುದಗ್ದಕ್ಷಿಣಗೆಪ್ರಸೂತಿಂ-ಭವನಸ್ಯ-ಪ್ರಶ್ನಲಗ್ನದ, ಪೂರ್ವಾ-ಪ್ರಥಮ ಹೋರೆಯಾದರೆ, ಉತ್ತರಾಯನವಾದ ಮಕರಾದಿ ರಾಶಿಪಟ್ಕದಲ್ಲಿ ಎಂದರೆ-ಉದಕ್-ಉತ್ತರಾಯಣವೆಂತಲೂ, ಲಗ್ನ ದ್ವಿತೀಯ ಹೋರೆ ಯಾದರೆ, ದಕ್ಷಿಣತಃ-ದಕ್ಷಿಣಾಯನವೆಂತಲೂ, ಅಂದರೆ-ಕಟಕಾದಿರಾಶಿಷಟ್ಕವೆಂತಲೂ, ಅಯನವನ್ನು ತಿಳಿಯತಕ್ಕದ್ದು.

ತಾ।। ನಷ್ಟಜಾತಕವನ್ನು ಮಾಡಬೇಕಾದರೆ ತನಗೋಸ್ಕರವಾಗಲೀ, ಯಾರಿ ಗೋಸ್ಕರವಾಗಲೀ, ಕೇಳುತ್ತಾನೋ, ಆಗ ಕೇಳಿದ ಪ್ರಶ್ನಕಾಲಕ್ಕೆ ಸರಿಯಾದ ಲಗ್ನವನ್ನು ಕಂಡುಹಿಡಿದು, ಆ ಲಗ್ನದಲ್ಲಿ ಹೋರೆಗಳಾಗಿ ವಿಂಗಡಿಸಿ ಪ್ರಶ್ನಕಾಲ ಪ್ರಥಮ ಹೋರೆಯಾದರೆ ಉತ್ತರಾಯಣದಲ್ಲಿ ಹುಟ್ಟಿದವನೆಂತಲೂ, ದ್ವಿತೀಯ ಹೋರಾಜನ್ಮವಾದರೆ, ದಕ್ಷಿಣಾಯನದಲ್ಲಿ ಹುಟ್ಟಿದವನೆಂತಲೂ ತಿಳಿಯತಕ್ಕದ್ದು.

## ಸಂವತ್ಸರಋತು ನಿರ್ಣಯಃ

ಮೂಲ।। ಲಗ್ನತ್ರಿಕೋಣೇಷು ಗುರುಸ್ತ್ರಿಭಾಗ್ಯೈರ್ವಿಕಲ್ಪ್ಯ ವರ್ಷಾಣಿ ವಯೋನು ಮಾನಾತ್ । ಗ್ರೀಷ್ಮೋರ್ಕಲಗ್ನೇ ಕಥಿತಾಸ್ತುಶೇಷೈ ರನ್ಯಾಯನಾರ್ತ್ತಾ ಮೃತುರರ್ಕಚಾರಾತ್ ।।೨।।

ಅವತಾರಿಕೆ ।। ನಷ್ಟಜಾತಕ ಪ್ರಶ್ನಲಗ್ನವನ್ನು ಆಧಾರವಾಗಿಟ್ಟುಕೊಂಡು ಆದರಿಂದ ಜಾತಕನಿಗೆ ಕಳೆದು ಇರುವ ಸಂವತ್ಸರಗಳನ್ನು ಋತುಗಳನ್ನು ಈ ಶ್ಲೋಕ ದಿಂದ ಹೇಳಲ್ಪಡುತ್ತೆ.

ಟೀಕು।। ತ್ರಿಭಾಗ್ಯೈ:-ಲಗ್ನತ್ರಿಭಾಗೋ ದ್ರೇಕ್ಕಾಣಃ ಎಂಬುವ ಸೂತ್ರದ ಪ್ರಕಾರ ಪ್ರಶ್ನಲಗ್ನದಲ್ಲಿ ದ್ರೇಕ್ಕಾಣ ಯಾವದ್ರೇಕ್ಕಾಣವಾಗಿರುವದೋ ಆ ದ್ರೇಕ್ಕಾಣಗಳಲ್ಲಿ ಅಂದರೆ ತ್ರಿಕೋಣೇಷು-ಲಗ್ನ ಪಂಚಮ ನವಮರಾಶಿಗಳಲ್ಲಿ, ಗುರುಃ-ದೇವ ಗುರುವಾದ ಬೃಹಸ್ಪತಿ ಇದ್ದನೆಂದು ತಿಳಿಯತಕ್ಕದ್ದು. ಅದು ಹೇಗೆಂದು ಪ್ರಶ್ನ ಲಗ್ನದ ಪ್ರಥಮ ದ್ರೇಕ್ಕಾಣವಾದರೆ ಪ್ರಶ್ನಲಗ್ನ ಯಾವ ರಾಶಿಯೋ ಆ ಲಗ್ನದಲ್ಲಿ ಗುರು ಇದ್ದಾಗ ಜನಿಸಿದವನೆಂತಲೂ, ಪ್ರಶ್ನಲಗ್ನದ ೨ನೇ ದ್ರೇಕ್ಕಾಣವಾಗಿದ್ದರೆ ಆ ಪ್ರಶ್ನಲಗ್ನದ ರಾಶಿಗೆ ೫ನೇ ರಾಶಿಯಾವದೋ ಆ ರಾಶಿಯಲ್ಲಿ ಗುರುವಿರುವಾಗ ಜನ್ಮಿಸಿದನೆಂತಲೂ, ಪ್ರಶ್ನಲಗ್ನದ ೩ನೇ ದ್ರೇಕ್ಕಾಣವಾದರೆ ಪ್ರಶ್ನಲಗ್ನ ಯಾವರಾಶಿಯೋ ಆ ರಾಶಿಗೆ ೯ನೇ ರಾಶಿಯಾವದೋ ಆ ರಾಶಿಯಲ್ಲಿ ಗುರುವಿರುವಾಗ ಜನ್ಮಿಸಿದವನೆಂತಲೂ ಗುರುವಿರುವ ರಾಶಿಯನ್ನು ಕಂಡುಹಿಡಿಯಬೇಕು. ಲಗ್ನಕ್ಕೆ ೧೮೦೦ ಲಿಪ್ತಿ ಗಳಾಗಿಯೂ, ರಾಶಿಗೆ ೧೩೦೦ ಲಿಪ್ತಿಗಳಾಗಿಯೂ ಇರುವದರಿಂದ ಪ್ರಶ್ನಲಗ್ನದ ಎಷ್ಟನೇ ಲಿಪ್ತಿಯೋ, ಆ ಗುರುವಿರುವ ರಾಶಿಯಲ್ಲಿ ಅಷ್ಟನೇ ಲಿಪ್ತಿಸ್ಥಾನದಲ್ಲಿ ಗುರುವಿದ್ದನೆಂದು ಗಣಿತಮೂಲವಾಗಿ ತಿಳಿಯತಕ್ಕದ್ದು.

## ಗತ ಸಂವತ್ಸರ ಜ್ಞಾನಂ

ಪ್ರಶ್ನಲಗ್ನದಲ್ಲಿ ಪ್ರಥಮದ್ರೇಕ್ಕಾಣವಾದರೆ, ಆ ರಾಶಿಗೆ ಎಷ್ಟನೇ ರಾಶಿಯಲ್ಲಿ ಬೃಹಸ್ಪತಿ ಇರುತ್ತಾನೋ ಅಷ್ಟು ಸಂವತ್ಸರಗಳು ನಷ್ಟಜಾತಕನಿಗೆ ಗತಿಸಿರುತ್ತವೆಂತಲೂ, ಪ್ರಶ್ನಲಗ್ನದಲ್ಲಿ ತೃತೀಯದ್ರೇಕ್ಕಾಣವಾಗಿದ್ದರೆ, ಪ್ರಶ್ನಕಾಲದ ಲಗ್ನಕ್ಕೆ ೯ನೇ ರಾಶಿ

ಮೊದಲುಗೊಂಡು ಯಾವ ರಾಶಿಯಲ್ಲಿ ಬೃಹಸ್ಪತಿ ಇರುವನೋ ಅಷ್ಟು ಸಂಖ್ಯಾ ಸಂವತ್ಸರಗಳು ಗತಿಸಿರುತ್ತವೆಂತಲೂ, ಕೆಲವರು ಅರ್ಥಮಾಡಿರುತ್ತಾರೆ. ಇದು ಯುಕ್ತವಾಗಿ ತೋರುವುದಿಲ್ಲ. ಇದೇ ವಿಷಯಕ್ಕೆ ಯವನಾಚಾರ್ಯರು ಹೇಳಿರುವದೇನೆಂದರೆ ದ್ರೇಕ್ಕಾಣಲಗ್ನೇ ಕ್ರಮಶಸ್ತುರಾಶೌ ಗುರುರ್ವಿಲಗ್ನಾದಿ ತ್ರಿಕೋಣಗೋ ಭವೇತ್। ಸಮುದ್ಭವೇತ್ತಗಣಕ್ರಮೇಣ ಸ್ವಾಚ್ಚಾರಭಾದಬ್ದಗತಿಂ ಪ್ರಗಣ್ಯಾತ್ ॥೧॥ ಈ ವಿಷಯವು ವರಾಹಮಿಹಿರಾಚಾರ್ಯರ ವಕ್ಷ್ಯಮಾಣ ಶ್ಲೋಕದ ಅರ್ಥಕ್ಕನುಸಾರ ವಾಗಿರುತ್ತೆ. ಪ್ರಶ್ನ ಲಗ್ನದಿಂದ ಗುರುವಿನಿಂದ ರಾಶಿಯನ್ನು ಕಂಡು ಹಿಡಿಯತಕ್ಕ ಕ್ರಮವು ಹೇಗೆಂದರೆ-ಪ್ರಶ್ನಲಗ್ನದ ಪ್ರಥಮದ್ವಾದಶಾಂಶೆ ಪ್ರಶ್ನಕಾಲ ವಾದರೆ ಪ್ರಶ್ನ ಲಗ್ನವು ಮೇಷಾದಿ ಯಾವರಾಶಿಯಾಗಿರುವದೋ ಆ ಪ್ರಶ್ನ ಲಗ್ನರಾಶಿಯಲ್ಲಿಯೇ ಗುರುವಿದ್ದನೆಂತಲೂ, ದ್ವಿತೀಯದ್ವಾದಶಾಂಶೆ ಉದಯವಾದರೆ, ೨ನೇ ರಾಶಿಯಲ್ಲಿ ಗುರುವಿದ್ದನೆಂತಲೂ, ತೃತೀಯದ್ವಾದಶಾಂಶೆ ಉದಯವಾದರೆ, ಆ ಲಗ್ನದಿಂದ ೩ನೇ ರಾಶಿಯಲ್ಲಿ ಗುರುವಿದ್ದನೆಂತಲೂ, ೪ನೇ ದ್ವಾದಶಾಂಶೆ ಉದಯವಾದರೆ ಪ್ರಶ್ನಲಗ್ನಕ್ಕೆ ೪ನೇ ರಾಶಿಯಲ್ಲಿ ಗುರುವಿರುವಾಗ ಜನ್ಮಿಸಿದವನೆಂತಲೂ, ಈ ಪ್ರಕಾರ ೧೨ ದ್ವಾದಶಾಂಶೆಗಳಿಗೂ ೧೨ ರಾಶಿಗಳನ್ನು ತಿಳಿಯತಕ್ಕದ್ದು. ಈ ಮೇಲೆ ಹೇಳಿದ ಪ್ರಕಾರ ಬೃಹಸ್ಪತಿಯು ಇರುವ ಸ್ಥಾನವನ್ನು ತಿಳಿದುಕೊಂಡು ವಯಸ್ಸಿನ ಅನುಮಾನದಿಂದ ಜಾತಕವಾಗಬೇಕೆಂದು ಪ್ರಶ್ನೆ ಮಾಡಿದ ಮನುಜನ ಆಕಾರವನ್ನು ನೋಡಿ, ಇವನಿಗೆ ಇಷ್ಟು ಸಂವತ್ಸರಗಳಾಗಿರಬಹುದೆಂದು ಅನುಮಾನದಿಂದ, ವರ್ಷಾಣಿ-ವರ್ಷಗಳನ್ನು, ವಿಕಲ್ಪ್ಯ-ಊಹಿಸತಕ್ಕದ್ದು, ಅದು ಯಾವ ಪ್ರಕಾರವೆಂದರೆ-ಬೃಹಸ್ಪತಿ ವರ್ಷ ೧ಕ್ಕೆ ೧ ರಾಶಿಗಳಂತೆ ೧೨ ಸಂವತ್ಸರಕ್ಕೆ ೧ ಸಾರಿ ಅಶ್ವಿನೀ ನಕ್ಷತ್ರ ಪ್ರಥಮ ಕಲೆಯಿಂದ ಪುನಃ ಆ ಕಲಾಸ್ಥಾನಕ್ಕೆ ಬರುತ್ತಾನೆ. ಆದ್ದರಿಂದ ಪೂರ್ವೋಕ್ತವಾಗಿರುವಂತೆ ವಯೋನುಮಾನ ಪ್ರಕಾರ ಬೃಹಸ್ಪತಿಯು ಈ ರಾಶಿಯಲ್ಲಿದ್ದರೆ, ಜನನ ಕಾಲದಲ್ಲಿ ಈ ರಾಶಿಯಲ್ಲಿದ್ದನೆಂತಲೂ ಜ್ಯೋತಿಷ್ಕನು ಬುದ್ಧಿಕಲ್ಪನೆಯಿಂದ ಸಂವತ್ಸರ ಜ್ಞಾನವನ್ನುಂಟು ಮಾಡಿಕೊಳ್ಳಬೇಕು. ಇದರಲ್ಲಿ ಗುರುವಿನಂದ ರಾಶಿಯ ಅನುಮಾನವುಂಟಾದರೆ ಸಂವತ್ಸರವನ್ನು ತಿಳಿಯತಕ್ಕ ಕ್ರಮವೆಂತೆಂದರೆ :-

## ಅಂಗಸ್ಪರ್ಶವಶಾತ್ ಸಂವತ್ಸರಜ್ಞಾನಮ್

ಶ್ಲೋಕ॥ ಪಾದೌಸಗುಲ್ಫೌ ಪ್ರಥಮಂ ಪ್ರದಿಷ್ಟಮ್ ಜಂಘೇ ದ್ವಿತೀಯಂತು ಸುಜಾನುಚಕ್ರೇ । ಮೇಢ್ರೋರು ಮುಷ್ಕಂಚ ತತಸ್ತೃತೀಯಂ ನಾಭಿಂಕಟಿಂಚೇತಿ ಚತುರ್ಥಮಾಹುಃ ॥೨॥ ಉದರಂ ಕಥಯಂತಿ ಪಂಚಮಂ ಹೃದಯಂ ಷಷ್ಠಮಥ ಸ್ತನಾನ್ವಿತಂ । ಅಥಸಪ್ತಮಮಂಸಜತ್ರುಣೀ ಕಥಯಂತ್ಯಷ್ಟಮ ಮೋಷ್ಠಕಂಧರೇ ।

ನವಮಂ ನಯನೇಚಸ ಭ್ರೂಣೇಸಲಲಾಟಂ ದಶಮಂ ಶಿರಸ್ತಥಾ । ಅಶುಭೇಷ್ವ ಶುಭಂ ದಶಾಫಲಂ ಚರಣಾದ್ಯೇಷು ಶುಭೇಷು ಶೋಭನಂ ॥ ಎಂದು ಪುರುಷ ಲಕ್ಷಣದಲ್ಲಿ ಹೇಳಲ್ಪಟ್ಟಿದೆ. ನಷ್ಟಜಾತಕನು ಪ್ರಶ್ನೆಮಾಡಿದ ಕಾಲದಲ್ಲಿ ಯಾವ ಅಂಗವನ್ನು ಸ್ಪರ್ಶಮಾಡಿಕೊಳ್ಳುವನೋ ಅದು ಹೇಳಲ್ಪಡುತ್ತೆ.

| | | | | |
|---|---|---|---|---|
| ೧ | ಪಾದ, ಜಂಘೆ | ಮುಟ್ಟಿದರೆ | ಗುರುವಿನ | ೧ನೇ ಭಗಣ |
| ೨ | ಮೊಣಕಾಲು | " | " | ೨ನೇ " |
| ೩ | ಶಿಶ್ನ, ವೃಷಣ, ತೊಡೆ | " | " | ೩ನೇ " |
| ೪ | ನಾಭಿ, ಕಟಿ ಪ್ರದೇಶ | " | " | ೪ನೇ " |
| ೫ | ಹೊಟ್ಟೆ | " | " | ೫ನೇ " |
| ೬ | ಉರ ಸ್ತನ | " | " | ೬ನೇ " |
| ೭ | ಭುಜ, ಶಿರಸ್ಸು | " | " | ೭ನೇ " |
| ೮ | ಓಷ್ಠ, ಕಂಧರ | " | " | ೮ನೇ " |
| ೯ | ಕಣ್ಣು, ಹುಬ್ಬು | " | " | ೯ನೇ " |
| ೧೦ | ಲಲಾಟ, ಬ್ರಹ್ಮರಂಧ್ರ | " | " | ೧೦ನೇ " |

ಈ ಪ್ರಕಾರ ಗುರು ಭಗಣಗಳಮೇಲೆ, ವಯಸ್ಸನ್ನು ಕಂಡುಹಿಡಯಬೇಕು. ಗುರು ೧ ಸಾರಿ ರಾಶಿಚಕ್ರವನ್ನು ಸುತ್ತತಕ್ಕ ಕಾಲಕ್ಕೆ ೧೨ ವರ್ಷಗಳು ಹಿಡಿಯುವದರಿಂದ ಅದಕ್ಕೆ ಭಗಣವೆಂದು ಹೆಸರು. ಭಗಣಕ್ಕೆ ೨೧೬೦೦ ಲಿಪ್ತಿಗಳು, ವರ್ಷ ೧ಕ್ಕೆ ೩೬೦ ದಿವಸ ೩೬೦ x ೧೨=೪೩೨೦ ÷ ೨೧೬೦೦ ಗುರು ಭಗಣ ದಿವಸಗಳಿಂದ ೨೧೬೦೦ ರನ್ನ ಭಾಗಿಸಿದರೆ ೫ ಬರುತ್ತೆ. ಇದು ಗುರು ೧ ದಿವಸಕ್ಕೆ ಭೋಗಿಸುವ ಕಲೆಗಳ ಸಂಖ್ಯೆಯಾಗಿರುತ್ತದೆ. ಆದ್ದರಿಂದ ಗುರುವಿನ ೧೦ ಭಗಣಕ್ಕೆ ೧೨೦ ಸಂವತ್ಸರಗಳಾಗಿರುವದು, ಒಂದು ವೇಳೆ ೧೨೦ ಸಂವತ್ಸರಕ್ಕಿಂತ ಅಧಿಕವಾದ ವಯುಸ್ಸುಳ್ಳವನ ವಿಷಯುದಲ್ಲಿ ಈ ಅನುಮಾನವುಂಟಾದರೆ ಸಂವತ್ಸರ ನಿರ್ದೇಶೋಪಾಯವಿಲ್ಲದೆ ಹೋಗುವದು.

## ಋತು ನಿರ್ಣಯ ಕ್ರಮ

ಗ್ರೀಷ್ಮೋರ್ಕಲಗ್ನೇ-ನಷ್ಟಜಾತಕವಾಗಬೇಕೆಂಬುವ ಪ್ರಶ್ನೆ ಲಗ್ನದಲ್ಲಿ ಸೂರ್ಯ ನಿದ್ದರೆ ಗ್ರೀಷ್ಮಋತುವಿನಲ್ಲಿ ಜನ್ಮಿಸಿದವನೆಂದೂ, ಕಥಿತಾಸ್ತು ಶೇಷ್ಯೆ-ನಷ್ಟಜಾತಕ ಪ್ರಶ್ನಲಗ್ನದಲ್ಲಿ ಚಂದ್ರನೇ ಮೊದಲಾದ ಆರು ಗ್ರಹಗಳಿದ್ದರೆ, 'ದ್ರೇಕ್ಕಾಣೈಶ್ಶಿರಾ ದಯ ಶ್ಶಕುಜಜ್ಞ ಗ್ವಾದಿಷೂದ್ಯುತ್ಸವಾಃ' ಎಂಬುವ ಪ್ರಕಾರವಾಗಿ ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಆಯಾಯ ಋತುವಿನಲ್ಲಿ ಜನನವೆಂದು ತಿಳಿಯತಕ್ಕದ್ದು.

## ಋತುನಿರ್ಣಯ ಪದಕ

| | | | | | | |
|---|---|---|---|---|---|---|
| ೧ | ಲಗ್ನದಲ್ಲಿ | ಶನಿ | ಇದ್ದರೂ | ಶನಿ | ದ್ರೇಕ್ಕಾಣವಾಗಿದ್ದರೂ | ಶಿಶಿರಋತು |
| ೨ | " | ಶುಕ್ರ | " | ಶುಕ್ರ | " | ವಸಂತಋತು |
| ೩ | " | ಕುಜ | " | ಕುಜ | " | ಗ್ರೀಷ್ಮಋತು |
| ೪ | " | ಚಂದ್ರ | " | ಚಂದ್ರ | " | ವರ್ಷಋತು |
| ೫ | " | ಬುಧ | " | ಬುಧ | " | ಶರದೃತು |
| ೬ | " | ಗುರು | " | ಗುರು | " | ಹೇಮಂತಋತು |

ಟಿಪ್ಪಣಿ-ಲಗ್ನದಲ್ಲಿ ೧ಕ್ಕಿಂತಲೂ ಹೆಚ್ಚಾದ ಗ್ರಹಸಂಯೋಜನವಿದ್ದರೆ, ಆ ಗ್ರಹಗಳು ಯಾರು ಬಲಾಧಿಕರಾಗಿರುವರೋ ಅವರಿಗೆ ಹೇಳಿರುವ ಋತುವನ್ನು ಹೇಳಬೇಕು. ಬಲಸಾಮ್ಯವಾಗಿದ್ದರೆ, ಅವರಲ್ಲಿ ಯಾರು ಮೊದಲು ಸೂರ್ಯನಿಂದ ಉದಯಿಸಲ್ಪಟ್ಟಿರುವರೋ ಅವರ ಋತುವೆಂದು ಹೇಳಬೇಕು.

ಅನ್ಯಾಯನರ್ತೌ-ಒಂದು ಅಯನದಲ್ಲಿ ಅಂದರೆ-ದಕ್ಷಿಣಾಯನದಲ್ಲಿ ವಸಂತ ಋತು ಬಂದರೂ, ಉತ್ತರಾಣದಲ್ಲಿ ವರ್ಷಋತು ಬಂದರೂ ಸೂರ್ಯನ ಚಾರವಶದಿಂದ, ಋತುಃ-ಋತುನಿರ್ಣಯಮಾಡತಕ್ಕದ್ದು.

## ಉದಾಹರಣೆ

ಶಿಶಿರಋತುವೆಂದು ಶನಿಯಿಂದುಂಟಾದರೆ, ಶಿಶಿರಋತುವಿಗೆ ಹೇಳಲ್ಪಡುವ ಮಾಸಗಳಾದ ಮಕರ ಕುಂಭಗಳಲ್ಲಿ ಜನನವೆಂದು ತಿಳಿಯತಕ್ಕದ್ದು. ಈ ಪ್ರಕಾರವೇ ಉಳಿದ ೫ ಋತುಗಳಿಗೂ ಸೂರ್ಯಮಾಸವನ್ನು ತಿಳಿಯತಕ್ಕದ್ದು ಮೇಲಿನ ಪದಕದಿಂದ ಗ್ರಹಿಸಬೇಕು.

ಈ ನಷ್ಟಜಾತಕ ವಿಷಯದಲ್ಲಿ ಧುಂಡಿರಾಜರು ಹೇಳಿರುವುದನ್ನು ಇಲ್ಲಿ ಉದಹರಿಸಬೇಕಾಗಿರುತ್ತೆ. ಆದರೆ ಅದನ್ನು ಈ ಪ್ರಕರಣದ ಅಂತ್ಯದಲ್ಲಿ ಉದಹರಿಸಿರುತ್ತೇನೆ.

## ಅಯನಾದಿ ನಿರ್ಣಯಃ

ಮೂಲ|| ಚಂದ್ರಜ್ಞಜೀವಾ ಪರಿವರ್ತನೀಯಾ ಶುಕ್ರಾರಮಂದ್ಯೈ ರಯನೇ ವಿಲೋಮೇ । ದ್ರೇಕ್ಕಾಣಭಾಗೇ ಪ್ರಥಮೇತುಪೂರ್ವೋ ಮಾಸೋನು ಪಾತಾಚ್ಚ ತಿಥಿರ್ವಿಕಲ್ಪ್ಯ ||೩||

ಅವತಾರಿಕೆ ।। ಅಯನ ವ್ಯತ್ಯಾಸವಾಗಿದ್ದರೆ ಗ್ರಹಗಳ ಪರಿವರ್ತನಚಾರ ವಶದಿಂದ ಋತುಜ್ಞಾನವು ಮತ್ತು ಮಾಸ, ತಿಥಿ, ನಿರ್ಣಯವು ಹೇಳಲ್ಪಡುತ್ತೆ.

ಟೀಕು।। ಅಯನೇ-ಅಯನವೆಂದರೆ-ಸಂವತ್ಸರಾರ್ಧವೆಂತಲೂ, ಉತ್ತರಾಯಣ, ದಕ್ಷಿಣಾಯಣ ಆದರೆ ಮಕರಾದಿ ಕರ್ಕಾಂತ್ಯವಾಗಿ ಉತ್ತರಾಯಣ, ಕರ್ಕಾದಿ ಮಕರಾಂತ್ಯ ದಕ್ಷಿಣಾಯಣ, ಈ ಅಯನವು ವ್ಯತ್ಯಾಸವಾಗಿರುವಾಗ ಚಂದ್ರಜ್ಞಜೀವಾಃ ಚಂದ್ರ, ಬುಧ, ಗುರುಗಳು ಶುಕ್ರಾರಮಂದೈಃ-ಶುಕ್ರ, ಅಂಗಾರಕ ಶನೈಶ್ಚರರುಗಳಿಂದ ವ್ಯತ್ಯಾಸವಾಗಿರಿಸಲ್ಪತಕ್ಕದಾಗುವದು. ಅದು ಯಾವ ಪ್ರಕಾರವೆಂದರೆ,

## ಅನ್ಯೋನ್ಯ ಪರಿವರ್ತನ ನಿರ್ಣಯಃ

ಚಂದ್ರನ ಋತುವಿಗೆ ಶುಕ್ರ ಶುಕ್ರಋತುವಾದರೆ ಚಂದ್ರ

| | | | | | |
|---|---|---|---|---|---|
| ಬುಧ | ಋತುವಿಗೆ | ಕುಜ | ಕುಜನ | ” | ಬುಧ |
| ಗುರು | ” | ಶನಿ | ಶನಿ | ” | ಗುರು |

ಉತ್ತರಾಯಣದಲ್ಲಿ ಅನುಮಾನ ಬಂದರೆ, ಋತು ನಿಶ್ಚಯ ಕ್ರಮ.

| | | | |
|---|---|---|---|
| ವರ್ಷಋತು | ಆದರೆ | ಅದಕ್ಕೆ ಬದಲಾಗಿ | ವಸಂತಋತು |
| ಹೇಮಂತಋತು | ಆದರೆ | ” | ಶಿಶಿರಋತು |
| ಶರದೃತು | ಆದರೆ | ” | ಗ್ರೀಷ್ಮಋತು |

ದಕ್ಷಿಣಾಯನದಲ್ಲಿ ಅನುಮಾನ ಬಂದರೆ-ಋತು ನಿಶ್ಚಯ ಕ್ರಮ

| | | | |
|---|---|---|---|
| ವಸಂತಋತು | ಆದರೆ | ಅದಕ್ಕೆ ಬದಲಾಗಿ | ವರ್ಷಋತು |
| ಶಿಶಿರಋತು | ” | ” | ಹೇಮಂತಋತು |
| ಗ್ರೀಷ್ಮಋತು | ” | ” | ಶರದೃತು |

## ಅಥ ಮಾಸನಿರ್ಣಯಃ

ದ್ರೇಕ್ಕಾಣಭಾಗೇ-ನಷ್ಟಜಾತಕ ಪ್ರಶ್ನ ಲಗ್ನದಲ್ಲಿ ಯಾವ ದ್ರೇಕ್ಕಾಣದಲ್ಲಿ ಪ್ರಶ್ನ ನವಾಂಶವಿರುತ್ತೊ ಆ ದ್ರೇಕ್ಕಾಣ ಅಂದರೆ ಮೇಷಲಗ್ನದಲ್ಲಿ ವೃಷಭ ನವಾಂಶದಲ್ಲಿ ಪ್ರಶ್ನವಾಗಿರುತ್ತೆ. ಆದ್ದರಿಂದ ಮೇಷದ್ರೇಕ್ಕಾಣ (ಮೇಷದ್ರೇಕ್ಕಾಣಕ್ಕೆ ಮೇಷ. ವೃಷಭ, ಮಿಥುನ ಈ ಮೂರು ನವಾಂಶಗಳು ಸೇರಿ ೩ ದ್ರೇಕ್ಕಾಣವಾಗಿರುತ್ತೆ. ರಾಶಿಗೆ ೩೦ ಭಾಗಗಳಾದ್ದರಿಂದ ಪ್ರತಿದ್ರೇಕ್ಕಾಣಕ್ಕೂ ೧೦ ಭಾಗಗಳಾಗುತ್ತವೆ. ೩೦ ೩=೧೦ ರಾಶಿ ತ್ರಿಭಾಗೋ ದ್ರೇಕ್ಕಾಣ) ಈ ದ್ರೇಕ್ಕಾಣದಲ್ಲಿ ಮೊದಲ ೫ ಭಾಗದಲ್ಲಿ ಪ್ರಶ್ನಲಗ್ನ ವಾದರೆ, ಪೂರ್ವೋಮಾಸಃ-ಅಂದರೆ ಮೇಲೆ ಹೇಳಿದ ಋತು ನಿರ್ಣಯವಾದ ಮೇಲೆ

ಯಾವ ಋತುವೆಂದೇರ್ಪಡುತ್ತೋ ಆ ಋತುವಿನಲ್ಲಿ ಮೊದಲನೆ ಮಾಸವೆಂದು, ೬ ರಿಂದ ೧೦ನೇ ಭಾಗದವರಿಗೆ ಪ್ರಶ್ನಲಗ್ನವಾದರೆ ಎರಡನೆ ಮಾಸವೆಂದು ತಿಳಿಯತಕ್ಕದ್ದು. ಉದಾಹರಣ- ಪ್ರಶ್ನಲಗ್ನಸ್ಫುಟ ರಾಶಿ ೩, ಭಾಗ ೪, ಕಲಾ ೧೫, ವಿಕಲಾ ೨೭ ಇದಕ್ಕೆ ಮಾಸನಿರ್ಣಯ ಮಾಡಬೇಕು. ಲಗ್ನಗತ ಗ್ರಹದ ಪ್ರಕಾರ ಚಂದ್ರನು ಲಗ್ನದಲ್ಲಿರುವುದರಿಂದ ವರ್ಷ ಋತುವೆಂದು ನಿರ್ಣಯವಾಗಿರುತ್ತೆ. ಪ್ರಶ್ನ ಲಗ್ನದಲ್ಲಿ ಮೊದಲನೇ ಕರ್ಕಾಟಕ ದ್ರೇಕ್ಕಾಣವು ಕರ್ಕದ್ರೇಕ್ಕಾಣ ಸ್ಫುಟವಾಗಬೇಕಾದರೆ ರಾಶಿ ೩ ಭಾಗ, ೧೦ ಕಲಾ, ವಿಕಲ ೦ ಇದರಲ್ಲಿ ಕರ್ಕರಾಶಿಯಲ್ಲಿ ೫ ಭಾಗ ಪೂರ್ತಿ-ಯಾಗುವವರಿಗೆ ಕರ್ಕ ದ್ರೇಕ್ಕಾಣದಲ್ಲಿ ಮೊದಲನೇ ಪೂರ್ವಾರ್ಧಾಂಶವಾಗುತ್ತೆ. ಆದ್ದರಿಂದ ವರ್ಷಋತುವಿನಲ್ಲಿ ಮೊದಲನೆ ಮಾಸವೆಂದು ತಿಳಿಯಬೇಕು. ಆದ್ದರಿಂದ ಶ್ರಾವಣಮಾಸವೆಂದು ತಿಳಿಯಬೇಕು ಅಥವಾ ಸಿಂಹ ಸೂರ್ಯನಿಂದ ಸಿಂಹಮಾಸ-ವೆಂದು ತಿಳಿಯಬಹುದು.

## ತಿಥಿನಿರ್ಣಯಃ

ಅನುಪಾತಾ-("ಪ್ರಪೋರರ್ಷ") ಪ್ರಕಾರವಾಗಿಯೂ, ಅಥವಾ ತ್ರೈರಾಶಿಕ ಪ್ರಕಾರವಾಗಿಯಾದರು, ತಿಥಿಃ-ಜನ್ಮತ್ರಿಥಿಯನ್ನು ತಿಳಿಯತಕ್ಕದ್ದು. ಅದು ಹೇಗೆಂದರೆ ರಾಶಿ ಚಕ್ರಕ್ಕೆ ೨೧೬೦೦ ಲಿಪ್ತಿ ಅಥವಾ ಕಲೆಗಳಾದ್ದರಿಂದ ೨೧೬೦೦÷೧೨= ೧೮೦೦ ಕಲೆ ರಾಶಿ ಒಂದಕ್ಕೆ ಆಯಿತು. ಇದನ್ನು ದ್ರೇಕ್ಕಾಣವಾಗಿ ಮಾಡುವ ಕ್ರಮ ೧೮೦೦÷೩=೬೦೦, ಈ ೬೦೦ ಎಂಬ ಕಲಾಸಂಖ್ಯೆಯು ೧ ದ್ರೇಕ್ಕಾಣ ಪ್ರಮಾಣವಾಯಿತು. ದ್ರೇಕ್ಕಾಣಾರ್ಧಕ್ಕೆ ಮಾಸವಾದ್ದರಿಂದ ೬೦೦÷೨ ೩೦೦, ಇದು ದ್ರೇಕ್ಕಾಣಾರ್ಧಮಾಸ ಪ್ರಮಾಣಲಿಪ್ತಿ ಅಥವಾ ಕಲೆಗಳಾಗುತ್ತವೆ. ಇಲ್ಲಿ ಕರ್ಕರಾಶಿ ಸ್ಫುಟರಾಶಿ ೩, ಭಾಗ ೪, ಕಲಾ ೧೫, ವಿಕಲ ೭೨, ಆದ್ದರಿಂದ ಕರ್ಕಾದಿ ಭಾಗ ೪x೬೦=೨೪೦, ೨೪೦+ಕಲಾ ೧೫=೨೫೫, ಕಲೆ ೨೭ ವಿಕಲೆ ಆಯಿತು. ಮಾಸ ೧ಕ್ಕೆ ೩೦ ತಿಥಿಗಳಾದ್ದರಿಂದ ಮಾಸಲ್ಲಿಪ್ತಿ ೩೦÷೩=೧೦, ದೀನ ೧ಕ್ಕೆ ೧೦ ಲಿಪ್ತಿಯಾಯಿತು. ೨೫೫÷೧೦=೨೫, ಶೇಷ ೫ ಬರುತ್ತೆ. ಆದ್ದರಿಂದ ಶುಕ್ಲಪ್ರತಿಪದಾದಿ ೧೫, ಕೃಷ್ಣ ಪ್ರತಿಪದಾದಿ ೧೦, ಅಂತು ೨೫ ಕೃಷ್ಣಪಕ್ಷದ ೧೦ ಆಗಿ ಏಕಾದಶೀ ಜನನವೆಂದು ನಿಶ್ಚಯವಾಯಿತು.

## ಜನ್ಮಕಾಲ ಘಟಿಕಾ ನಿರ್ಣಯಃ

ಇಲ್ಲಿ ಮೇಲೆ ಹೇಳಿದ ಉದಾಹರಣೆಯ ಪ್ರಕಾರ ೫ ಕಲೆ ೨೭ ಕಲೆ ಶೇಷವು ಬರುವುದರಿಂದ ೫ ಕಲೆಗಳಿಗೆ ೩೦೦ ವಿಕಲೆ ಶೇಷವು ೨೭ ಕಲೆ ೩೨೭ ವಿಕಲೆ ಜನನ ಕಾಲಕ್ಕೆ ಆಗುತ್ತೆ. ದಿವಸ ಪ್ರಮಾಣ ೬೦೦, ಕಲೆಗೆ ಘಟಿಕಾ ಪ್ರಮಾಣ ೬೦

ಆದ್ದರಿಂದ ೬೦೦÷೬೦=೧೦, ವಿಕಲೆಗಳಿಗೆ ೧ಕ್ಕೆ ಆಗುತ್ತೆ. ಆದ್ದರಿಂದ ೩೦೦ ವಿಕಲೆಗೆ ೧ಕ್ಕೆ ಆಗುತ್ತೆ. ಆದ್ದರಿಂದ ೩೦೦ ವಿಕಲೆ ೩೦ ಘಳಿಗೆ ಆಯಿತು. ೨೭ ವಿಕಲೆಯಲ್ಲಿ ೩ ಘಳಿಗೆ ಅಂತು ೩೨ ಘಳಿಗೆ ಸಂದುಹೋಗಿ ೩೩ನೇ ಘಳಿಗೆಯಲ್ಲಿ ೨ ವಿಕಲೆಗೆ ೨೦ ವಿಘಳಿಗೆಗೆ ಜನನವು. ಆದ್ದರಿಂದ ಉದಾಹರಣ ಪ್ರಕಾರ ಶ್ರಾವಣ ಬಹುಳ (ಕೃಷ್ಣ) ಏಕಾದಶಿ ಉದಯಾದಿ ೩೨ ಘಳಿಗೆ ೩೦ ವಿಘಳಿಗೆಗೆ ಜನನವೆಂದು ಪ್ರಶ್ನಲಗ್ನದಿಂದ ಜನ್ಮಕಾಲವು ನಿಶ್ಚಯವಾಯಿತು.

ಮೂಲ॥ ಅತ್ರಾಪಿ ಹೋರಾಪಟವೋ ದ್ವಿಜೇಂದ್ರಾ ।ಸೂರ್ಯಾಂಶತುಲ್ಯಾಂ ತಿಥಿ ಮುದ್ದಿಶಂತಿ ॥ ರಾತ್ರಿದ್ಯುಸಂಜ್ಞೇಷು ವಿಲೋಮಜನ್ಮ । ಭಾಗೈಶ್ಚವೇಲಾಃ ಕ್ರಮಶೋ ವಿಕಲ್ಪ್ಯಾಃ ॥೪॥

ಅವತಾರಿಕೆ॥ ಈ ಶ್ಲೋಕದಲ್ಲಿ ಚಾಂದ್ರಮಾನದ ತಿಥಿಯು ಹೇಳಲ್ಪಡುತ್ತೆ.

ಟೀಕು॥ ಅತ್ರಾಪಿ ಈ ಮೇಲೆ ಹೇಳಲ್ಪಟ್ಟ ತಿಥಿಜ್ಞಾನದಲ್ಲಿಯೂ, ಹೋರಾಪಟವಃ-ಜಾತಕ ಶಾಸ್ತ್ರದಲ್ಲಿ ಬುದ್ಧಿವಂತರಾದ ದ್ವಿಜೇಂದ್ರಾಃ-ಮುನೀಂದ್ರರು, ಅಂದರೆ ಮಹರ್ಷಿಗಳು, ಸೂರ್ಯಾಂಶತುಲ್ಯಾಂ-ಪ್ರಶ್ನಲಗ್ನದ ಸ್ಫುಟ, ಸೂರ್ಯನ ಭಾಗಕ್ಕೆ ಸರಿಯಾದ ಸಂಖ್ಯೆಯುಷ್ಟು, ತಿಥಿಂ-ಚಾಂದ್ರಮಾನದ ತಿಥಿಯನ್ನು, ಉದ್ದಿಶಂತಿ-ನಿರ್ದೇಶಿಸುವರು. ಇದಕ್ಕೆ ಉದಾಹರಣೆ-ನಷ್ಟಜಾತಕ ಪ್ರಶ್ನಲಗ್ನ ಕಾಲದಲ್ಲಿ ಸೂರ್ಯನು ಯಾವ ರಾಶಿಯಲ್ಲಿರುತ್ತಾನೋ ಆ ರಾಶಿಯಲ್ಲಿ ಎಷ್ಟು ಭಾಗಗಳು ಕಳೆದು (ಭುಕ್ತ) ಹೋಗಿರುತ್ತೋ, ಅಷ್ಟು ಸಂಖ್ಯೆಯ ತಿಥಿಗಳು ಮೇಲೆ ಉದಹರಿಸಿರುವಂತೆ ನಿರ್ಣಯವಾದ ಮಾಸದಲ್ಲಿ ಶುಕ್ಲಪ್ರತಿಪಾದಿಯಾಗಿ ಸಂದಿರುತ್ತವೆಂದು ಮುಂದಿನ ಅಂಶದಲ್ಲಿ ಎಷ್ಟು ಕಲಾವಿಕಲೆಗಳು ಸಂದಿರುತ್ತೋ ಆ ತಿಥಿಯೆಂದು ತಿಳಿಯತಕ್ಕದ್ದು.

## ಉದಾಹರಣೆ
## ಸೂರ್ಯಮಾಸಾದಿ ಚಾಂದ್ರಮಾಸ ಪದಕ

| ಸೂರ್ಯನಿರುವ | ರಾಶಿ | ಚಾಂದ್ರಮಾನ ಮಾಸ |
|---|---|---|
| ಮೀನ | ವಾದರೆ | ಚೈತ್ರಮಾಸ |
| ಮೇಷ | ” | ವೈಶಾಖಮಾಸ |
| ವೃಷಭ | ” | ಜ್ಯೇಷ್ಠಮಾಸ |
| ಮಿಥುನ | ” | ಆಷಾಢಮಾಸ |
| ಕಟಕ | ” | ಶ್ರಾವಣಮಾಸ |
| ಸಿಂಹ | ” | ಭಾದ್ರಪದ |
| ಕನ್ಯಾ | ” | ಆಶ್ವಯುಜ |

| | | |
|---|---|---|
| ತುಲಾ | ,, | ಕಾರ್ತೀಕ |
| ವೃಶ್ಚಿಕ | ,, | ಮಾರ್ಗಶಿರ |
| ಧನುಸ್ಸು | ,, | ಪುಷ್ಯ |
| ಮಕರ | ,, | ಮಾಘ |
| ಕುಂಭ | ,, | ಫಾಲ್ಗುಣ |

ಈ ಪ್ರಕಾರ ಸೂರ್ಯನಿರುವ ಮಾಸಗಳಿಗೆ ಚಂದ್ರಮಾಸವನ್ನು ತಿಳಿಯತಕ್ಕದ್ದು. ಈ ವಿಷಯಕ್ಕೆ ಮಣೇತ್ಥಾಚಾರ್ಯರ ಸಮ್ಮತಿ ॥ಶ್ಲೋಕ॥ ಪೃಚ್ಛಾಕಾಲೇ ರವಿಣಾ ಯಾವಂತೋಂಶಾ ಸ್ಫುಟೀಭುಕ್ತಾಃ। ರಾಶೇಸ್ತಾಸ್ತಿಥಯಸ್ಯುಃ ಶುಕ್ಲಾದಾವರ್ಕಮಾಸಸ್ಯ ॥೪॥ ಇತಿ-ಈ ಪ್ರಕಾರವಾಗಿ ಹೇಳುತ್ತಾನೆ.

## ದಿವಾರಾತ್ರಿ ಜನನನಿರ್ಣಯಃ

ರಾತ್ರಿದ್ಯಸಂಜ್ಞೇಷು ವಿಲೋಮಜನ್ಮ

| ರಾತ್ರಿ ಸಂಜ್ಞಾರಾಶಿಗಳು | | ದಿವಾ ಸಂಜ್ಞಾರಾಶಿಗಳು | |
|---|---|---|---|
| ಮೇಷ | | ಸಿಂಹ | |
| ವೃಷಭ | ಪ್ರಶ್ನೆಯಾಗಿದ್ದರೆ | ಕನ್ಯೆ | ಪ್ರಶ್ನಲಗ್ನವಾಗಿದ್ದರೆ ರಾತ್ರಿಯಲ್ಲಿ |
| ಮಿಥುನ | ದಿವಾಜನನವೆಂದು | ತುಲ | |
| ಕರ್ಕಾಟಕ | ದಿವಾಜನನವೆದಯ | ವೃಶ್ಚಿಕ | ಜನನವೆಂದು ತಿಳಿಯತಕ್ಕದ್ದು |
| ಧನುಸ್ಸು | ತಿಳಿಯತಕ್ಕದ್ದು | ಕುಂಭ | |
| ಮಕರ | | ಮೀನ | |

ಟಿಪ್ಪಣಿ-ಈ ಲಗ್ನಗಳು ಪ್ರಶ್ನಲಗ್ನವಾಗಿದ್ದರೆ, ಅದಕ್ಕೆ ಎದುರಾಗಿ ತೋರಿಸಿರುವಂತೆ ಜನ್ಮಕಾಲವೆಂದು ನಿರ್ಣಯಮಾಡತಕ್ಕದ್ದು.

## ವೇಳಾಜ್ಞಾನ ನಿರ್ಣಯಃ

ಭಾಗೈಶ್ಚ ವೇಳಾ ಕ್ರಮಶೋವಿಕಲ್ಪ್ಯಾಃ-ನಷ್ಟಜಾತಕ ಪ್ರಶ್ನಕಾಲದಲ್ಲಿ ಸೂರ್ಯಗತ (ಭುಕ್ತ) ಕಲೆ ವಿಕಲೆಗಳನ್ನು ಸ್ಪಷ್ಟಮಾಡಿಕೊಂಡು, ಮೇಲೆ ಹೇಳಿದ ಪ್ರಕಾರ ರಾತ್ರಿಯಲ್ಲಿ ಜನನಕಾಲವೆಂದು ಗಣಿತವು ಬಂದರೆ ದಿವಾಪ್ರಮಾಣ ಘಳಿಗೆ ವಿಘಳಿಗೆಗಳಿಂದ ಸೂರ್ಯನ ಗತಕಲೆ ವಿಕಲೆಗಳನ್ನೂ ಗುಣಾಕಾರಮಾಡಿ ರಾತ್ರಿ ಪ್ರಮಾಣದಿಂದ ಭಾಗಮಾಡಿದರೆ ರಾತ್ರಿಕಾಲದ ಜನ್ಮಕಾಲದ ಘಳಿಗೆ ವಿಘಳಿಗೆಗಳು ಬರುತ್ತೆ. ಹಗಲಿನಲ್ಲಿ ಜನ್ಮಕಾಲವೆಂದು ತಿಳಿಯಬಂದರೆ, ರಾತ್ರಿ ಪ್ರಮಾಣಘಳಿಗೆ ವಿಘಳಿಗೆಗಳಿಂದ ಸೂರ್ಯನ ಭುಕ್ತ ಕಲಾವಿಕಲೆಗಳನ್ನು ಗುಣಾಕಾರಮಾಡಿ ದಿವಾ ಪ್ರಮಾಣ ಘಳಿಗೆ ವಿಘಳಿಗೆಗಳಿಂದ ಭಾಗಿಸಿದರೆ, ಹಗಲಿನಲ್ಲಿ ಜನ್ಮಕಾಲದ ಘಳಿಗೆ ವಿಘಳಿಗೆಗಳು ಬರುತ್ತೆ.

ಟೀಕು॥ ಇನ್ನು ಕೆಲವು ಜ್ಯೋತಿಷ್ಕರು ದಿವಾಪ್ರಮಾಣದಲ್ಲಾಗಲೀ, ರಾತ್ರಿ ಪ್ರಮಾಣಕಾಲದಲ್ಲಾಗಲೀ, ಪ್ರಶ್ನಕಾಲಕ್ಕೆ ಎಷ್ಟು ಘಳಿಗೆಗಳು ಭುಕ್ತವಾಗಿರುತ್ತದೋ ಅಷ್ಟು

ಫಳಿಗೆ ವಿಫಳಿಗೆಗೆ ಜನನ ಕಾಲವೆಂದು ಹೇಳುತ್ತಾರೆ. ಇದಕ್ಕೆ ಅನ್ಯಗ್ರಂಥ ಸಮ್ಮತಿ ಕಾಣಬರಲಿಲ್ಲ, ಆದ್ದರಿಂದ ಇಲ್ಲಿ ಗ್ರಾಹ್ಯವಲ್ಲ.

## ಮತಾಂತರೇ ಮಾಸಜ್ಞಾನ ವಿಚಾರಃ

ಮೂಲ॥ ಕೇ ಚಿಚ್ಛಶಾಂಕಾಧ್ಯುಷಿತಾನ್ನವಾಂಶಾ। ಚ್ಛುಕ್ಲಾಂತಸಂಜ್ಞಃ ಕಥಯಂತಿ ಮಾಸಪ॥ ಲಗ್ನತ್ರಿಕೋಣೋತ್ತಮ ವೀರ್ಯಯುಕ್ತಂ। ಸಂಪ್ರೋಚ್ಯತೇಂಗಾ ಲಭದಾದಿಭಿರ್ವಾ ॥೫॥

ಅವತಾರಿಕೆ ॥ ಈ ಶ್ಲೋಕದಿಂದ ಅನ್ಯಯವನ ಪರಾಶರಾದಿ ಮತಪ್ರಕಾರ ಮಾಸಜ್ಞಾನವು ಹೇಳಲ್ಪಡುತ್ತೆ.

ಟೀಕು॥ ಕೇಚಿತ್-ಜ್ಯೋತಿಶ್ಶಾಸ್ತ್ರ ಪಾರಂಗತರಾದವರಲ್ಲಿ ಕೆಲವು ಪಂಡಿತರು ಶಶಾಂಕಾಧ್ಯುಷಿತಾತ್-ಚಂದ್ರವಿರು, ನವಾಂಶಾತ್-ರಾಶಿಯ ೯ನೇ ಅಂಶದ ಮೂಲ ವಾಗಿ, ಶುಕ್ಲಾಂತ ಸಂಜ್ಞಂ-ಶುಕ್ಲಪಕ್ಷದ ಅಂತ್ಯ ಸಂಜ್ಞಿತವಾದ, ಮಾಸಂ-ಮಾಸವನ್ನು; ಕಥಯಂತಿ ಹೇಳುತ್ತಾರೆ. ಉದಾಹರಣೆ-ನಷ್ಟಜಾತಕದ ಪ್ರಶ್ನೆಯಲ್ಲಿ ಯಾವ ರಾಶಿಯು ನವಾಂಶೆಯಲ್ಲಿ ಚಂದ್ರನು ಅಧಿಷ್ಠಿತವಾಗಿರುತ್ತಾನೋ ಆ ನವಾಂಶೆಯನ್ನು ಮೂರು ಭಾಗಗಳಾಗಿ ಮಾಡಿ ಚಂದ್ರನವಾಂಶೆಗೆ ಪ್ರಾಪ್ತವಾದ ನಕ್ಷತ್ರವನ್ನು ನಿಶ್ಚಯಿಸಿಕೊಂಡು, ಆ ನಕ್ಷತ್ರವು ಯಾವ ತಿಂಗಳಿನಲ್ಲಿ ಶುಕ್ಲಪಕ್ಷದ ಅಂತ್ಯದಿನವಾದ ಪೂರ್ಣಿಮೆಯಲ್ಲಿ ಬರುವದೋ ಆ ಮಾಸವೇ ಜನ್ಮಮಾಸವೆಂದರಿಯತಕ್ಕದ್ದು.

## ಪೂರ್ಣಿಮೆಯ ಮಾಸ ನಕ್ಷತ್ರ ಪದಕ

| | | | |
|---|---|---|---|
| ಚೈತ್ರ | ಶುಕ್ಲ | ಪೂರ್ಣಿಮೆಗೆ | ಚಿತ್ತಾ ನಕ್ಷತ್ರ |
| ವೈಶಾಖ | ” | ” | ವಿಶಾಖ |
| ಜ್ಯೇಷ್ಠ | ” | ” | ಜ್ಯೇಷ್ಠ |
| ಆಷಾಢ | ” | ” | ಪೂ-ಷಾ |
| ಶ್ರಾವಣ | ” | ” | ಶ್ರವಣ |
| ಭಾದ್ರಪದ | ” | ” | ಪೂ-ಭಾ |
| ಅಶ್ವಯುಜ | ” | ” | ಅಶ್ವಿನಿ |
| ಕಾರ್ತಿಕ | ” | ” | ಕೃತ್ತಿಕ |
| ಮಾರ್ಗಶಿರ | ” | ” | ಮೃಗಶಿರ |
| ಪುಷ್ಯ | ” | ” | ಪುಷ್ಯ |
| ಮಾಘ | ” | ” | ಮಖ |
| ಫಾಲ್ಗುನ | ” | ” | ಪೂ-ಫಲ್ಗುನಿ |

ಶುಕ್ಲಾಂತ ಸಂಜ್ಞಿತವಾದ ಮಾಸ ನಕ್ಷತ್ರವಲ್ಲದ ಉಳಿದ ೧೫ ನಕ್ಷತ್ರಗಳಿಗೆ ಅಂದರೆ-ಭರಣಿ, ರೋಹಿಣಿ, ಆರಿದ್ರಾ, ಪುನರ್ವಸು, ಆಶ್ಲೇಷ, ಉತ್ತರ, ಹಸ್ತ, ಸ್ವಾತಿ, ಅನೂರಾಧ, ಮೂಲ, ಉ-ಷಾ, ಧನಿಷ್ಠೆ, ಶತಭಿಷ, ಉತ್ತರಾಭಾದ್ರ, ರೇವತಿ-ಈ ನಕ್ಷತ್ರಗಳಾದರೆ, ಗುರುಚಾರ ವಿಧಾನದಿಂದ ಶುಕ್ಲಪಕ್ಷಾಂತರ ಸಂಜ್ಞ ಮಾಸವನ್ನು ನಿಶ್ಚಯಮಾಡತಕ್ಕದ್ದು. ಈ ವಿಷಯದಲ್ಲಿ ಪರಾಶರಃ ।।ಶ್ಲೋಕ।। ನಕ್ಷತ್ರೇಣ ಸಹೋದಯ ಮಸ್ತಂ ವಾಯೇನಯಾತಿ ಸುರಮಂತ್ರೀ । ತತ್ಸಂಜ್ಞಂ ವಕ್ತವ್ಯಂ ವರ್ಷಂ ಮಾಸಕ್ರಮೇಣೈವ ।। ಎಂದುಕ್ತವಾಗಿರುತ್ತೆ.

ನಷ್ಟಜಾತಕ ಪ್ರಶ್ನಕಾಲದಲ್ಲಿ ಚಂದ್ರನು, ವೃಷಭರಾಶಿಯಲ್ಲಿ ೩ನೇ ನವಾಂಶಯಲ್ಲಿದ್ದರೆ ಮತ್ತು ೪ರಿಂದ ೭ರ ವರಿವಿಗಿನ ನವಾಂಶೆಗಳಾಗಿದ್ದರೆ, ಕಾರ್ತಿಕಮಾಸದಲ್ಲಿ ಜನನವೆಂದು ತಿಳಿಯತಕ್ಕದ್ದು. ವೃಷಭರಾಶಿ ನವಾಂಶಗಳಲ್ಲಿ ೭ನೇ ನವಾಂಶೆಗಳಾದ ಮೇಲೆ, ಮಿಥುನರಾಶಿಯ ೬ನೇ ನವಾಂಶದೊಳಗಿದ್ದರೆ, ಆ ನವಾಂಶ ನಕ್ಷತ್ರ-ಗಳಾಗಿರುವ ಮೃಗಶಿರ, ಆರ್ದ್ರೇಗಳಾಗಿದ್ದರಿಂದ ಮಾರ್ಗಶಿರಮಾಸದಲ್ಲಿ ಜನನವೆಂದು ತಿಳಿಯತಕ್ಕದ್ದು. ಮಿಥುನರಾಶಿಯ ೬ನೇ ನವಾಂಶೆಗಳಾದ ನಂತರ ಕರ್ಕಾಟಕರಾಶಿಯ ೫ನೇ ನವಾಂಶಗಳೊಳಗಿದ್ದರೆ, ಆ ನವಾಂಶ ಸಂಬಂಧವಾದ ನಕ್ಷತ್ರವೇ ಪುನರ್ವಸು, ಪುಷ್ಯಮಾಸದಲ್ಲಿ ಜನನವೆಂದು ನಿಶ್ಚಯಿಸತಕ್ಕದ್ದು. ಈ ಪ್ರಕಾರವೇ ನವಾಂಶಗತ ನಕ್ಷತ್ರದ ಪ್ರಕಾರವಾಗಿ ಪದಕಮಾಡಿರುತ್ತೆ ಅದರಂತೆ ನಿಶ್ಚಯಮಾಡತಕ್ಕದ್ದು.

## ಶುಕ್ಲಾಂಶಮಾಸ ನಿರ್ಣಯ ಪದಕ

| ಚಂದ್ರನವಾಂಶಗತ ನಕ್ಷತ್ರಗಳು | | ಜನ್ಮಮಾಸಗಳು |
|---|---|---|
| ೧ | ಕೃತ್ತಿಕಾ-ರೋಹಿಣಿ | ಕಾರ್ತಿಕಮಾಸ |
| ೨ | ಮೃಗಶಿರ-ಆರ್ದ್ರೆ | ಮಾರ್ಗಶಿರ |
| ೩ | ಪುನರ್ವಸು-ಪುಷ್ಯ | ಪುಷ್ಯ |
| ೪ | ಆಶ್ಲೇಷ-ಮಖ | ಮಾಘ |
| ೫ | ಪೂರ್ವಾಫಲ್ಗುನಿ-ಉ-ಫ-ಹಸ್ತ | ಫಾಲ್ಗುಣ |
| ೬ | ಚಿತ್ತಾ-ಸ್ವಾತಿ | ಚೈತ್ರ |
| ೭ | ವಿಶಾಖ-ಅನೂರಾಧ | ವೈಶಾಖ |
| ೮ | ಜ್ಯೇಷ್ಠ-ಮೂಲ | ಜ್ಯೇಷ್ಠ |
| ೯ | ಪೂ-ಷಾ-ಉ-ಷಾ | ಆಷಾಢ |
| ೧೦ | ಶ್ರವಣ-ಧನಿಷ್ಠ | ಶ್ರಾವಣ |
| ೧೧ | ಶತತಾರ-ಪೂ-ಭಾ-ಉ-ಭಾ | ಭಾದ್ರಪದ |
| ೧೨ | ರೇವತಿ-ಅಶ್ವನಿ-ಭರಣಿ | ಅಶ್ವಯುಜ |

ಟಿಪ್ಪಣಿ-ಕಾರ್ತಿಕಾದಿಯಾಗಿ ೫ನೇ ಮಾಸಕ್ಕೂ ೧೧ನೇ ಮಾಸಕ್ಕೂ ೧೨ನೆಯ ದಾದ ಆಶ್ವಯುಜಮಾಸಕ್ಕೂ, ಮೂರು ಮೂರು ನಕ್ಷತ್ರಗಳೇರ್ಪಡುತ್ತವೆ, ಇದಕ್ಕೆ ಪ್ರಮಾಣವು. "ತ್ರಿಭಂತು ಪಂಚಮ ಪಾಂತ್ಯಮಂಚ" ಎಂದು ಪರಾಶರರು ಉದಾಹರಿಸಿರುತ್ತಾರೆ. ಮತ್ತು ಯವನಾಚಾರ್ಯರ ಸಮ್ಮತಿ ॥ಶ್ಲೋ॥ ಯದ್ರಾಶಿ ಸಂಜ್ಞೇ ಶೀತಾಂಶುಃ ಪ್ರಶ್ನಕಾಲೇ ನವಾಂಶಕೇ । ಸಿತಸ್ತದ್ರಾಶಿಗಃ ಪೂರ್ವೋ ಯಸ್ಮಿ ಭವತಿ ಚಂದ್ರಮಾಃ ॥೬॥ ಜನಮಾಸಃಸನಿರ್ದಿಷ್ಟಃ ಪುರುಷ ಸ್ಯತುಪೃಚ್ಛತಃ । ಕೃಷ್ಣ ಪಕ್ಷಾಂತಿಕೋಮಾಸೋ ಜ್ಞೇಯೋತ್ರತುವಿಪಶ್ಚಿತಾ ॥೭॥

## ಚಂದ್ರರಾಶಿ ನಿರ್ಣಯಂ

ಲಗ್ನತ್ರಿಕೋಣೋತ್ತಮ ವೀರ್ಯಯುಕ್ತಂ ತತ್ಪ್ರೋಚ್ಯತೇ-ಅಂದರೆ ಪ್ರಶ್ನ ಲಗ್ನಕ್ಕಾಗಲಿ, ನಷ್ಟಜಾತಕ ಪ್ರಶ್ನಲಗ್ನಕ್ಕಾಗಲೀ. ಲಗ್ನ, ಪಂಚಮ, ನವಮ ಈ ಮೂರು ತ್ರಿಕೋಣರಾಶಿಗಳಾಗಿರುವದರಲ್ಲಿ ಯಾವ ರಾಶಿಯು ಅಧಿಕ ಬಲವುಳ್ಳದ್ದಾಗುತ್ತದೋ, ಆ ರಾಶಿಯಲ್ಲಿ ಚಂದ್ರನಿರುವಾಗ ಜನ್ಮಿಸಿದವನೆಂದು ನಿಶ್ಚೈಸತಕ್ಕದ್ದು, ಈ ವಿಷಯಕ್ಕೆ ಬೃಹತ್ಪರಾಶರಃ ॥ಶ್ಲೋ॥ ತತ್ರಿಕೋಣ ಬಲಾಧಿಕ್ಯಂ ರಾಶಿರ್ಲಗ್ನಾತ್ತುಯಾವತಿ। ಚಂದ್ರಸ್ತಾವತಿ ಭಂಚಾಪಿ ಜನ್ಮಲಗ್ನಂ ವಿನಿರ್ದಿಶೇತ್ ॥೮॥

## ಅಂಗಸ್ಪರ್ಶವಶಾತ್ ರಾಶಿನಿರ್ಣಯಃ

ಅಂಗಾಲಭನಾದಿಭಿರ್ವಾ-ಕಾಲಾಂಗಾನಿವರಾಂಗಮಾನವೆಂಬುವ ಶ್ಲೋಕದಲ್ಲಿ ಹೇಳಲ್ಪಟ್ಟಂತೆ ಕಾಲಪುರುಷನ ಅಂಗ ವಿಭಾಗ ಪ್ರಕಾರ ಯಾವ ರಾಶಿಯ ಅಂಗವನ್ನು ಪೃಚ್ಛಕನು, ಮುಟ್ಟಿಕೊಳ್ಳುವನೋ ಆ ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನೆಂದು ತಿಳಿಯತಕ್ಕದ್ದು. ಪರಾಶರಃ ॥ಶ್ಲೋಕ॥ ಶಿರೋಲಲಾಟ ಭ್ರೂನೇತ್ರನಾಸಾಕರ್ಣ ಕಪೋಲಕಾಃ॥ ಓಷ್ಠಂಚ ಚುಬುಕಂ ಕಂಠಮಂಸೌ ಹೃದಯಮೇವಚ ॥೯॥ ಪಾರ್ಶ್ವೌಚ ವಕ್ಷಃ ಕುಕ್ಷಿಶ್ಚನಾಭಿಶ್ಚಕಟಿರೇವಚ । ಜಘನಂಚ ನಿತಂಬಂಚ ಲಿಂಗಮಂಡಂ ಚಬಸ್ತಿಚ ॥೧೦॥ ಊರೂಚ ಜಾನೂ ಜಂಘಾಚ ಗುಲ್ಫಾಂಘ್ರೀ ಚಾಶ್ವಿಭಾತ್ ಕ್ರಮಾತ್ ॥ ಈ ಪ್ರಕಾರ ಪೃಚ್ಛಕನು ಸ್ಥಾನ ಸ್ಪರ್ಶಮಾಡುವುದರಿಂದ ಅಶ್ವಿನ್ಯಾದಿ ೨೭ ನಕ್ಷತ್ರಗಳ ಸ್ಥಾನಾನುಗುಣ್ಯವಾಗಿ ರಾಶಿಯನ್ನು ತಿಳಿಯತಕ್ಕದ್ದು.

## ಪ್ರಶ್ನಕಾಲೇ ಜಂತುದರ್ಶನ ಮೂಲಾತ್ ರಾಶಿನಿರ್ಣಯಃ

ವಿಶೇಷ ತಾತ್ಪರ್ಯವು-ಆದಿ ಶಬ್ದ ಪ್ರಯೋಗದಿಂದ ಪ್ರಶ್ನಕಾಲದಲ್ಲಿ ಯಾವ ಯಾವ ಜಂತು ದೃಷ್ಟಿಗೋಚರವಾಗುವುದೋ ಆಯಾ ರಾಶಿಯಲ್ಲಿ ಚಂದ್ರನಿದ್ದನೆಂದು ತಿಳಿಯತಕ್ಕದ್ದು.

ಮೂಲ॥ ಯಾವನ್ಗಶ್ಶೀತಕರೋ ವಿಲಗ್ನಾ ಚ್ಚಂದ್ರಾದ್ವದೇತ್ತಾವತಿಜನ್ಮರಾಶಿಃ॥
ಮೀನೋದಯೇ ಮೀನಯುಗಂ ಪ್ರದಿಷ್ಟಂ । ಭಕ್ಷ್ಯಾಹೃತಾಕಾರ
ರುತೈಶ್ಚಚಿಂತ್ಯಂ ॥೬॥

## ಮತಾಂತರೇ ಜನ್ಮರಾಶಿಜ್ಞಾನಯೋಗಃ

ಅವತಾರಿಕೆ॥ ಮತಾಂತರವಾಗಿ ನಷ್ಟಜಾತಕನ ಜನ್ಮರಾಶಿಯನ್ನು ತಿಳಿಯುವ ಬಗೆಯು ಈ ಶ್ಲೋಕದಿಂದ ಹೇಳಲ್ಪಡುತ್ತೆ.

ಟೀಕು॥ ಶೀತಕರಃ-ಪ್ರಕಾಲದ ಚಂದ್ರನು, ವಿಲಗ್ನಾತ್ ಪ್ರಶ್ನಲಗ್ನ ಮೊದಲುಗೊಂಡು ಯಾವದ್ಗತಃ-ಎಷ್ಟನೆಯ ರಾಶಿಭಾವದಲ್ಲಿರುತ್ತಾನೊ, ಚಂದ್ರಾತ್-ಚಂದ್ರನಿರುವ ರಾಶಿಯ ಮೊದಲುಗೊಂಡು, ತಾವತೀ-ಅಷ್ಟನೇ ಸಂಖ್ಯೆಯ ರಾಶಿಯನ್ನು, ಜನ್ಮ ರಾಶಿಂ-ಪ್ರಶ್ನಮಾಡುವ ನಷ್ಟಜಾತಕ ಜನ್ಮರಾಶಿಯನ್ನಾಗಿ, ವದೇತ್-ಹೇಳತಕ್ಕದ್ದು, ಮೀನೋದಯೇ-ಮೀನರಾಶಿಯು ನಷ್ಟಜಾತಕನ ಪ್ರಶ್ನ ಲಗ್ನವಾದರೆ, ಮೀನಯುಗಂ ಪ್ರದಿಷ್ಟಂ-ಮೀನರಾಶಿಯಲ್ಲಿಯೇ ಚಂದ್ರನಿರುವಾಗ ಜನ್ಮವಾದವನೆಂದು ತಿಳಿಯಬೇಕು.

## ಜನ್ಮರಾಶಿ ನಿರ್ಣಯಃ

ಅವತಾರಿಕೆ॥ ಈ ಮೇಲೆ ಹೇಳಿದ ಪ್ರಕಾರಾಂತರಗಳಿಂದ ರಾಶಿಗಳು ಬೇರೆ ಬೇರೆಯಾಗಿ ತಿಳಿಯುಬಂದರೆ, ಆಗ ಜಾತಕನಿಗೆ ಯಾವರಾಶಿಯೆಂದು ದೃಢಪಡಿಸಬೇಕೆಂಬುವ ವಿಷಯವು ನಿರ್ಣಯ ಮಾಡಲ್ಪಡುತ್ತೆ.

ಭಕ್ಷ್ಯ ಹೃತಾಕಾರರುತೈಶ್ಚಚಿಂತ್ಯಂ-ನಷ್ಟಜಾತಕ ಪ್ರಶ್ನಕಾಲದಲ್ಲಿ ಯಾವ ರಾಶಿಯ ಸಂಬಂಧವಾದ ಭಕ್ಷ್ಯದ್ರವ್ಯವಸ್ತುಗಳು ತರಲ್ಪಡುವದೋ ಆ ರಾಶಿಯಲ್ಲಿ ಚಂದ್ರನಿದ್ದಾಗ ಜನ್ಮಿಸಿದವನೆಂತಲೂ, ಯಾವ ಆಕಾರವಿರುವ ಜಂತುವು ಪ್ರಶ್ನಕಾಲದಲ್ಲಿ ದೃಷ್ಟಿಗೋಚರವಾಗುತ್ತೋ, ಆಯಾಕೃತಿಯುಳ್ಳ ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನೆಂತಲೂ, ಮತ್ತು ಯಾವ ರಾಶಿಯ ಸಮಾನ ಜಂತುವಿನ ಶಬ್ದ ಕೇಳಿ ಬರುವುದೋ ಆಯಾಕೃತಿಯ ರಾಶಿಯಲ್ಲಿ ಚಂದ್ರನಿರುವಾಗ ಹುಟ್ಟಿದವನೆಂತಲೂ ಮುಖ್ಯವಾಗಿ ರಾಶಿ ಭಕ್ಷ್ಯ-೧, ರಾಶಿಯ ದೃಷ್ಟಿ ಗೋಚಾರಾಕಾರ-೨, ರಾಶಿಯ ಶಬ್ದ-೩ ಈ ಮೂರು ಪ್ರಕಾರ ವಿಚಾರಿಸಬೇಕೆಂದು ಮುಖ್ಯ ತಾತ್ಪರ್ಯವು. ಅದು ಯಾವ ಪ್ರಕಾರವೆಂದರೆ :-ಬೆಕ್ಕು, ನಾಯಿ ಮೊದಲಾದ ಪಂಚ ನಖವುಳ್ಳ ಜಂತು ದರ್ಶನವಾಗಲೀ ಅವುಗಳ ಧ್ವನಿಶ್ರವಣವಾಗಲೀ ಆದರೆ ಸಿಂಹರಾಶಿಯೆಂತಲೂ, ವೃಷಭ, ಮಹಿಷ ಮೊದಲಾದವುಗಳ ದರ್ಶನವಾಗಲೀ, ಧ್ವನಿಯಾಗಲೀ ಕೇಳಬಂದರೆ

ವೃಷಭರಾಶಿಯೆಂತಲೂ, ದಂಪತಿಗಳ ವಿನೋದವಾರ್ತಾ ಶ್ರವಣವಾಗಲೀ, ದರ್ಶನವಾಗಲೀ ಆದರೆ ಮಿಥುನರಾಶಿಯೆಂತಲೂ ಕನ್ಯೆಯ ದರ್ಶನವಾಗಲೀ, ಧ್ವನಿಯಾಗಲೀ ಕೇಳಿಬಂದರೆ ಕನ್ಯಾರಾಶಿಯೆಂತಲೂ, ಅಶ್ವದರ್ಶನವಾಗಲೀ, ಅಶ್ವಧ್ವನಿಯಾಗಲೀ ಕೇಳಿಬಂದರೆ ಧನೂರಾಶಿಯೆಂತಲೂ ಈ ಪ್ರಕಾರ ಊಹಿಸಿ ತಿಳಿಯತಕ್ಕದ್ದು.

## ಜನ್ಮಲಗ್ನ ಜ್ಞಾನೋಪಾಯ

ಮೂಲ॥ ಹೋರಾನವಾಂಶ ಪ್ರತಿಮಂ ವಿಲಗ್ನಂ ಲಗ್ನಾದ್ರವಿರ್ಯಾವತಿಚಾ ದೃಕಾಣೇ। ತಸ್ಮಾದ್ವದೇತ್ತಾವತಿವಾ ವಿಲಗ್ನಂ ಪ್ರಷ್ಟುಃ ಪ್ರಸೂತಾಮಿತಿ ಶಾಸ್ತ್ರಮಾಹ ॥೭॥

ಅವತಾರಿಕೆ॥ ಇದುವರಿಗೆ ಹೇಳಲ್ಪಟ್ಟ ಕ್ರಮದಿಂದ ಜನ್ಮರಾಶಿಯನ್ನು ದೃಢ ಪಡಿಸಿಕೊಂಡ ಮೇಲೆ ಜನ್ಮಲಗ್ನವು ತಿಳಿಯಬೇಕಾದ ವಿಷಯವನ್ನು ಈ ವೃತ್ತದಿಂದ ಹೇಳುತ್ತಾನೆ.

ಟೀಕು॥ ಹೋರಾನವಾಂಶ ಪ್ರತಿಮಂ ವಿಲಗ್ನಂ-ನಷ್ಟಜಾತಕವಾಗ ಬೇಕೆಂಬುವ ಪ್ರಶ್ನಕಾಲದ ಲಗ್ನದಲ್ಲಿ, ಯಾವರಾಶಿ ಸಂಬಂಧವಾದ ನವಾಂಶೆ ಉದಯ ವಾಗಿರುವುದೋ ಆ ನವಾಂಶ ರಾಶಿಯೇ ಜನ್ಮಲಗ್ನವಾಗಿರುತ್ತೆಂದು ತಿಳಿಯತಕ್ಕದ್ದು. ಲಗ್ನಾತ್-ಪ್ರಶ್ನಲಗ್ನದಿಂದ, ರವಿಃ-ಸೂರ್ಯನು, ಯಾವತಿ ದೃಕಾಣೇ- ಎಷ್ಟನೇ ಸಂಖ್ಯೆಯ ದ್ರೇಕ್ಕಾಣದಲ್ಲಿರುತ್ತಾನೋ, ತಸ್ಮಾತ್-ಆ ನಷ್ಟಜಾತಕನ ಪ್ರಶ್ನಲಗ್ನ ಮೊದಲುಗೊಂಡು ತಾವತಿ-ಅಷ್ಟನೇ ಸಂಖ್ಯೆಯ ರಾಶಿಯ ರಾಶಿಯಲ್ಲಿ, ಪ್ರಷ್ಟುಃ- ಕೇಳುವವನ, ಪ್ರಸೂತೌ-ಜನ್ಮಕಾಲದಲ್ಲಿನ ವಿಲಗ್ನಂ-ಜನ್ಮಲಗನವೆಂದು, ವದೇತ್- ನುಡಿಯತಕ್ಕದ್ದು.

## ಉದಾಹರಣೆ

ಅಂದರೆ ಪ್ರಶ್ನೆಲಗ್ನ ದ್ರೇಕ್ಕಾಣ ಯಾವರಾಶಿಯ ಎಷ್ಟನೆಯದಾಗಿರುವದೋ ಆ ದ್ರೇಕ್ಕಾಣ ಮೊದಲುಗೊಂಡು ಸೂರ್ಯನಿರುವ ದ್ರೇಕ್ಕಾಣದವರಿಗೂ, ಎಷ್ಟು ಸಂಖ್ಯೆಯಾಗಿರುವುದೋ ಪ್ರಶ್ನಲಗ್ನ ಮೊದಲುಗೊಂಡು ಅಷ್ಟನೇ ಸಂಖ್ಯೆಯು ಜನ್ಮ ಲಗ್ನ ವಾಗುತ್ತೆಂದು ತಿಳಿಯತಕ್ಕದ್ದು. ದ್ರೇಕ್ಕಾಣ ಸಂಖ್ಯೆಯು ೩೬ ಆಗಿರುವದರಿಂದ ಚಕ್ರಾಧಿಕ (೧೨)ವಾದರೆ, ೧೨ರಿಂದ ಭಾಗಮಾಡಬೇಕು. ಶೇಷಸಂಖ್ಯೆಯೇ ಜನ್ಮ ಲಗ್ನವಾಗಿರುತ್ತೆ. ಈ ವಿಷಯಕ್ಕೆ ಉದಾಹರಣ ॥ಶ್ಲೋಕ ॥ಧುಂಡಿರಾಜಃ॥ ಪೃಚ್ಛ ಲಗ್ನ ನವಾಂಶಸ್ಯ ಯೋರಾಶಿಸ್ಸಂಖ್ಯಯಾಸಮಃ। ತತ್ಸಿನ್ನ್ಗತೇರಾಶೌ ವಕ್ತವ್ಯಂ ಜನ್ಮ ಪೃಚ್ಛತಃ ॥೧೧॥ ಯಾವತ್ಸಂಖ್ಯಾ ಗತೇಲಗ್ನಾ ದ್ರೇಕ್ಕಾಣೇ ದಿನಕೃತ್ತಃ। ತಾವತ್ಸಂಖ್ಯಾ ಗತೇರಾಶೌ ಪ್ರಷ್ಟುರ್ಜನ್ಮ ವಿನಿರ್ದಿಶೇತ್ ॥೧೨॥

## ಪ್ರಕಾರಾಂತರೇಣ ಜನ್ಮಲಗ್ನ ನಿರ್ಣಯಃ

ಮೂಲ॥ ಜನ್ಮಾದಿಶೇ ಲಗ್ನತೇಸವಿರ್ಯೇ ಛಾಯಾಂಗುಳಘ್ನೇರ್ಕಹತೇವ ಶಿಷ್ಟಂ।
ಆಸೀನ ಸುಪ್ತೋತ್ಥಿತತಿಷ್ಠತಾಂಭಂ ಜಾಯಾಸುಖಾಜ್ಞೋ ದಯ
ಗಂಪ್ರದಿಷ್ಟಂ ॥೮॥

ಅವತಾರಿಕೆ॥ ಮತಾಂತರದಲ್ಲಿ ಲಗ್ನನಿರ್ಣಯ ಮಾಡುವ ಕ್ರಮವು ಹೇಳಲ್ಪಡುತ್ತೆ.

ಟೀಕು॥ ಲಗ್ನಗತೇ-ನಷ್ಟಜಾತಕ ಪ್ರಶ್ನಲಗ್ನದಲ್ಲಿ ಗತಭಾಗ ಕಲಾವಿಕಲೆಗಳನ್ನು ತಾತ್ಕಾಲಿಕ ಗ್ರಹವೆಂದಿಟ್ಟುಕೊಂಡು, ಫಲಗಳಾಗಿ ಮಾಡಿಕೊಂಡು, ಛಾಯಾಂ-ಗುಳಘ್ನೇ-ಸಮವಾದ ಭೂಮಿಯಲ್ಲಿ ೧೨ ಅಂಗುಲ ಪ್ರಮಾಣವಿರತಕ್ಕ ಶಂಕುವಿನಲ್ಲಿ ದಷ್ಟವಾದ ತಾತ್ಕಾಲಿಕಾ ಛಾಯಾಂಗುಳ ವ್ಯಂಗುಳಗಳಿಂದ ತಾತ್ಕಾಲಿಕ ಗ್ರಹಲಿಪ್ತಿಗಳನ್ನು ಗುಣಿಸಿ, ಅರ್ಕಹತೇ-ಅರ್ಕ ಅಂದರೆ ದ್ವಾದಶಾದಿತ್ಯ ಸಂಖ್ಯೆ ೧೨ ಆದ್ದರಿಂದ ೧೨ ರಿಂದ ಭಾಗಿಸಿದರೆ, ಅವಶಿಷ್ಟಂ-ಶೇಷವೆಷ್ಟುಳಿಯುತ್ತದೋ ಅಷ್ಟನೆ ಸಂಖ್ಯೆಯು ಮೇಷ ಮೊದಲುಗೊಂಡು, ಎಣಿಸಲಾಗಿ ಎಷ್ಟನೇದಾಗುವದೋ, ಆ ಸಂಖ್ಯಾರಾಶಿಯು, ಜನ್ಮ-ಜನನ ಕಾಲದ ಲಗ್ನವೆಂದು ಆದಿಶೇತ್-ನಿರ್ಣಯಿಸತಕ್ಕದ್ದು.

## ಅನ್ಯಪ್ರಕಾರ ಲಗ್ನನಿರ್ಣಯಃ

ಸವೀರ್ಯೇ-ನಷ್ಟಜಾತಕ ಪ್ರಶ್ನಲಗ್ನದಲ್ಲಿ ಅನೇಕ ಗ್ರಹಗಳಿದ್ದರೆ, ಆ ಗ್ರಹಗಳಲ್ಲಿ ಯಾವ ಗ್ರಹವು ಸ್ಥಾನಾದಿ ಬಲಿಯುಕ್ತವಾಗಿರುವುದೋ ಆ ಗ್ರಹವನ್ನು ತಾತ್ಕಾಲಿಕ ಕಲೆಗಳನ್ನು ಮಾಡಿ ಅವನ್ನು ವಿಷುಗಚ್ಛಾಯಾಂಗುಳ ವ್ಯಂಗುಳಗಳಿಂದ ಗುಣಿಸಿ ೧೨ ರಿಂದ ಮೇಲೆ ಹೇಳಿರುವಂತೆ ಗ್ರಹಗಳಿಂದಲೂ ಗುಣಾಕಾರ ಮಾಡುವ ಧೃವಕ ಸಂಖ್ಯೆಯನ್ನು ಹೇಳುತ್ತಾನೆ. ಟೀ॥ ಗೋಸಿಂಹೌ-ವೃಷಭ ಸಿಂಹರಾಶಿಯನ್ನು ದಶಕ-ದಶ ಸಂಖ್ಯೆ (ಹತ್ತರಿಂದಲೂ) ಜತುಮಾಷ್ಟಮೌ-ಮಿಥುನ ವೃಶ್ಚಿಕವನ್ನು ಅಷ್ಟ-ಎಂಟನೇ ಸಂಖ್ಯೆಯಿಂದಲೂ, ಕ್ರಿಯತುಲೇ-ಮೇಷ ಮತ್ತು ತುಲಾ ರಾಶಿಗಳನ್ನು ಸಪ್ತ-ಏಳನೇ ಸಂಖ್ಯೆಯಿಂದಲೂ, ಕನ್ಯಾಮೃಗೌ-ಕನ್ಯಾ ಮತ್ತು ಮಕರ ರಾಶಿಗಳನ್ನು ವಿಷಯೈ-ವಿಷಯ ಸಂಖ್ಯೆಯಾದ ಐದರಿಂದಲೂ, ಕ್ರಮಾತ್ ಕ್ರಮವಾಗಿ, ಸಂವಾರ್ಗ್ಯಾಃ-ಗುಣಾಕಾರ ಮಾಡಬೇಕು, ಶೇಷಾಃ-ಉಳಿದ, ಕರ್ಕ, ಧನು, ಕುಂಭ, ಮೀನ ಈ ನಾಲ್ಕು ರಾಶಿಗಳು, ಸ್ವಸಂಖ್ಯಾಗುಣಾಃ-ಆ ರಾಶಿಗಳು ಎಷ್ಟನೇ ಸಂಖ್ಯೆಯುಳ್ಳದ್ದೋ ಅಷ್ಟನೇ ಸಂಖ್ಯೆಯಿಂದ ಅಂದರೆ ಕರ್ಕರಾಶಿಯನ್ನು ೪ರಿಂದಲೂ, ಧನುರಾಶಿಯನ್ನು ೯ರಿಂದಲೂ, ಕುಂಭರಾಶಿಯನ್ನು ೧೧ರಿಂದಲೂ, ಮೀನರಾಶಿಯನ್ನು ೧೨ರಿಂದಲೂ ಗುಣಾಕಾರ ಮಾಡತಕ್ಕದ್ದು.

## ರಾಶಿಗುಣಾಕಾರ ಪದಕ

| | | | | | |
|---|---|---|---|---|---|
| ಮೇಷರಾಶಿಗೆ | ೭ ರಿಂದ | ಗುಣಿಸು | ತುಲಾ ರಾಶಿಗೆ | ೭ ರಿಂದ | ಗುಣಿಸಬೇಕು |
| ವೃಷಭ | ೧೦ | " | ವೃಶ್ಚಿಕ " | ೮ | " |
| ಮಿಥುನ | ೮ | " | ಧನು " | ೯ | " |
| ಕರ್ಕಟ | ೪ | " | ಮಕರ " | ೪ | " |
| ಸಿಂಹ | ೧೦ | " | ಕುಂಭ " | ೧೧ | " |
| ಕನ್ಯಾ | ೫ | " | ಮೀನ " | ೧೨ | " |

## ಗ್ರಹ ಗುಣಾಕಾರ ನಿರ್ಣಯಃ

ಜೀವಾರಾಸ್ಫುಜಿ ದೈಂದವಾಃ-ಬೃಹಸ್ಪತಿ ಅಂಗಾರಕ ಶುಕ್ರ ಬುಧರು, ಪ್ರಥಮ ವತ್-ಆದಿಯಲ್ಲಿ ಹೇಳಿದಂತೆಯೇ, ದಶಾಕಾಷ್ಟ ಸಪ್ತವಿಷಯ್ಯೇ-ದಶಕ-೧೦, ಅಷ್ಟ-೮. ಸಪ್ತ-೭, ವಿಷಯ್ಯೇ-೫, ಇವುಗಳಿಂದ ಕ್ರಮವಾಗಿ ಗುಣಿಸಬೇಕು. ಶೇಷಾಗ್ರಹಾಃ-ಉಳಿದ ಸೂರ್ಯ, ಚಂದ್ರ ಶನೈಶ್ಚರರುಗಳು, ಸೌಮ್ಯವತ್-ಬುಧನಿಂದ ಗುಣಾಕರ ಮಾಡುವ ಹಾಗೆ ವಿಷಯ-೫ ರಿಂದ ಗುಣಿಸಲ್ಪಡತಕ್ಕವರಾಗುವರು. ಗ್ರಹಯುತೇ-ಪ್ರಶ್ನಭಾಗ ಮಾಡಿದರೆ ಶೇಷ ಸಂಖ್ಯೆಯೇ ಮೇಷಾದಿಯಾಗಿ ಜನ್ಮಲಗ್ನವೆಂದು ತಿಳಿಯತಕ್ಕದ್ದು.

## ಪೃಚ್ಛಕ ಸ್ವಭಾವವಶಾತ್ ಜನ್ಮಲಗ್ನವಿಚಾರಃ

ಆಸೀನಸುಪ್ತೋ ಸ್ಥಿತತಿಷ್ಠತಾಂಭು-ಕ್ರಮವಾಗಿ, ಜಾಯಾಸು ಸುಖಾಜ್ಞೋ ದಯಗಂ ಪ್ರದಿಷ್ಟಂ-ಆಸೀನ-ಪೃಚ್ಛಕನು ಕೂತುಕೊಡು ಪ್ರಶ್ನ ಮಾಡಿದರೆ, ಜಾಯಾ- ಪ್ರಶ್ನಲಗ್ನಕ್ಕೆ ಸಪ್ತಮಸ್ಥಾನ ಯಾವ ರಾಶಿಯೋ ಆ ರಾಶಿಯೇ ಜನ್ಮಲಗ್ನವೆಂತಲೂ, ಸುಪ್ತ-ಮಲಗಿಕೊಂಡು ಪ್ರಶ್ನೆಮಾಡಿದರೆ, ಸುಖ-ಪ್ರಶ್ನಲಗ್ನಕ್ಕೆ ಚತುರ್ಥರಾಶಿಯ ಜನ್ಮಲಗ್ನವೆಂತಲೂ, ಉತ್ಥಿತ-ನಡಿಯುತ್ತಾ ಪ್ರಶ್ನೆಮಾಡಿದರೆ, ಅಜ್ಞಾ-ಲಗ್ನಕು ದಶಮ ಸ್ಥಾನವೇ ಜನ್ಮಲಗ್ನವೆಂತಲೂ, ತಿಷ್ಠತಾಂ-ನಿಂತು ಪ್ರಶ್ನೆ ಮಾಡಿದರೆ, ಉದಯಗಂ-ಪ್ರಶ್ನಲಗ್ನವೇ ಜನ್ಮಕಾಲ ಲಗ್ನವೆಂತಲೂ ತಿಳಿಯತಕ್ಕದ್ದು. ಈ ವಿಷಯಕ್ಕೆ ಪರಾಃ ಶರಃ ಶ್ಲೋಕ॥ ಉತ್ತಿಷ್ಠತೋ ವಿಲಗ್ನಾತ್ರಷ್ಪುಸ್ಸುಪ್ತಸ್ಯ ಬಂಧು ಲಗ್ನಾಚ್ಚ । ಉಪವಿಷ್ಟಸ್ಯಾಪ್ತಮಯೇವ ಜತೋಮೇಷೂರಣೀಜನ್ಮ ॥೧೩॥ ಎಂದುಕ್ತವಾಗಿರುತ್ತೆ.

## ಪೃಚ್ಛಕ ಲಗ್ನವಶಾತ್ ಜನ್ಮಲಗ್ನವಿಚಾರಃ

| | | | |
|---|---|---|---|
| ಕೂತುಕೊಂಡು | ಪ್ರಶ್ನೆಮಾಡಿದರೆ | ಸಪ್ತಮರಾಶಿ | ಜನ್ಮಲಗ್ನ |
| ಮಲಗಿಕೊಂಡು | " | ಚತುರ್ಥರಾಶಿ | " |

| ನಡೆಯುತ್ತ | ಪ್ರಶ್ನೆಮಾಡಿದರೆ | ದಶಮರಾಶಿ | ಜನ್ಮಲಗ್ನ |
|---|---|---|---|
| ನಿಂತುಕೊಂಡು | " | ಪ್ರಶ್ನಲಗ್ನ | " |

ಈ ಪ್ರಕಾರ ಜನ್ಮಲಗ್ನ ನಿರ್ಣಯ ಮಾಡತಕ್ಕದ್ದು.

ಮೂಲ|| ಗೋಸಿಂಹೌ ಜತುಮಾಷ್ಟಮೌ ಕ್ರಿಯತುಲೇ ಕನ್ಯಾಮೃಗೌಚಕ್ರಮಾ ತ್ಸಂವರ್ಗ್ಯಾ ದಶಕಾಷ್ಟ ಸಪ್ತವಿಷಯ್ಯೈ ಶ್ಯೇಷಾಸ್ಸ್ವಸಂಖ್ಯಾಗುಣಾಃ || ಜೀವಾಂಸ್ಪುಜಿದ್ಯೆಂದವಾಃ ಪ್ರಥಮವತ್ ಶೇಷಾಗ್ರಹಾಸ್ಸೌಮ್ಯವತ್| ರಾಶೀನಾಂ ನಿಯತೋ ವಿಧಿರ್ಗ್ರಹಯುತ್ಯೈಃ ಕಾರ್ಯಾಚ ತದ್ವರ್ಗಣಾಃ ||೯||

ಅವತಾರಿಕೆ|| ನಷ್ಟಜಾತಕದಲ್ಲಿ ಪ್ರಶ್ನೆಕಾಲದಲ್ಲಿನ ತಾತ್ಕಾಲಿಕ ರಾಶಿಭಾಗ ಕಲೆಗಳನ್ನು ಕಲೆಗಳಾಗಿ ಮಾಡಿಕೊಂಡು ರಾಶಿಯಿಂದಲೂ ಮತ್ತು ಲಗ್ನವು ಗ್ರಹಸಹಿತವಾಗಿದ್ದರೆ, ತದ್ವರ್ಗಣಾಃ-ಆ ಗ್ರಹಕ್ಕೆ ಉಕ್ತವಾಗಿರುವ ಸಂಖ್ಯೆಯಿಂದ ಗುಣಿಸಬೇಕು. ಅಂದರೆ ಪ್ರಶ್ನಲಗ್ನವನ್ನು ಕಲೆಗಳಾಗಿ ಮಾಡಿಕೊಂಡು ಮೇಲೆ ಹೇಳಿರುವ ಕ್ರಮದಿಂದ ರಾಶಿ ಗುಣಕದಿಂದ ಗುಣಿಸಿ, ಆ ಪ್ರಶ್ನಲಗ್ನದಲ್ಲಿ ಗ್ರಹವಿದ್ದರೆ ಆ ಗ್ರಹೋಕ್ತವಾದ ಗುಣಕ ಸಂಖ್ಯೆಯಿಂದ ಗುಣಿಸಬೇಕು. ಒಂದಕ್ಕಿಂತಲೂ ಹೆಚ್ಚಾದ ಗ್ರಹಗಳಿದ್ದರೆ ಎಷ್ಟು ಗ್ರಹಗಳಿರುವವರೋ ಅವರಿಗೆ ಉಕ್ತವಾಗಿರುವ ಸಂಖ್ಯೆಗಳಿಂದ ಗುಣಾಕಾರ ಮಾಡಬೇಕೆಂದು ಮುಖ್ಯ ತಾತ್ಪರ್ಯವು.

## ಗ್ರಹ ಗುಣಾಕಾರ ಪದಕವು

| | | | | | | | |
|---|---|---|---|---|---|---|---|
| ಸೂರ್ಯನಿಗೆ | ೫ ರಿಂದ | ಗುಣಿಸಬೇಕು | ಗುರುವಿಗೆ | ೧೦ ರಿಂದ | ಗುಣಿಸಬೇಕು |
| ಚಂದ್ರನಿಗೆ | ೫ | " | ಶುಕ್ರನಿಗೆ | ೭ | " |
| ಕುಜನಿಗೆ | ೮ | " | ಶನಿಗೆ | ೫ | " |

ಟಿ-ಈ ಪ್ರಕಾರ ಗುಣಿಸಬೇಕು ||೯||

## ನಕ್ಷತ್ರ ನಿರ್ಣಯಃ

ಮೂಲ|| ಸಪ್ತಾಹತಂತ್ರಿ ಘನಭಾಜಿತ ಶೇಷಮೃಕ್ಷಂ| ದತ್ವಾಥವಾನವ ವಿಶೋಧ್ಯನ ವಾಥವಾಸ್ಮಾತ್|| ಏವಂ ಕಳತ್ರ ಸಹಜಾತ್ಮಜ ಶತ್ರುಭೇಜ್ಯಃ| ಪುಷ್ಪುರ್ವ ದೇದುದಯರಾಶಿ ವಶೇನಶೇಷಾಂ ||೧೦||

ಅವತಾರಿಕೆ|| ಈ ಶ್ಲೋಕದಿಂದ ನಕ್ಷತ್ರಜ್ಞಾನವನ್ನು ಹೇಳುತ್ತಾನೆ.

ಟೀಕು|| ಮೇಲೆ ಹೇಳಿದ ಪ್ರಕಾರವಾಗಿ, ಲಗ್ನದ ಕಲೆಗಳನ್ನು ಮೊದಲು (ಪ್ರಶ್ನಲಗ್ನದ) ಸಂಖ್ಯೆಯಿಂದ ಗುಣಿಸಿ ಅನಂತರ ಗ್ರಹಯುಕ್ತವಾಗಿದ್ದರೆ, ಗ್ರಹಗುಣಕ

ಸಂಖ್ಯೆಯಿಂದ ಗುಣಿಸಿದ ಮೊತ್ತವನ್ನು, ಸಪ್ತಾಹತಂ-೭ ರಿಂದ ಗುಣಾಕಾರ ಮಾಡಿ ಆ ಸಂಖ್ಯೆಯಲ್ಲಿ, ನವದತ್ವಾ-೯ರನ್ನು ಕೂಡಿಸಿಯಾದರೂ, ಅಥವಾ ಹಾಗೆ ಕೂಡಿಸದಿದ್ದರೆ, ನವವಿಶೋಧ್ಯ-೯ ರಿಂದ ವ್ಯವಕಲನ ಮಾಡಿಯಾದರೂ ನವಾ- ಸಂಕಲನೆ ಮಾಡುವುದು ಅಥವಾ ವ್ಯವಕಲನೆ ಮಾಡಿಯಾದರೂ ಯಾವದೂ ಇಲ್ಲದಿದ್ದರೆ, (ವಿಶೇಷ ತಾತ್ಪರ್ಯ) ಪ್ರಶ್ನಲಗ್ನದಲ್ಲಿ ಮೊದಲನೇ ದ್ರೇಕ್ಕಾಣೋದಯವಿದ್ದರೆ ೯ರನ್ನ ಸಂಕಲನ ಮಾಡಬೇಕೆಂತಲೂ, ದ್ವಿತೀಯ ದ್ರೇಕ್ಕಾಣವಾದರೆ ಸಂಕಲನ ವ್ಯವಕಲನ ಮಾಡದಿರಬೇಕೆಂತಲೂ ತೃತೀಯ ದ್ರೇಕ್ಕಾಣ ಪ್ರಶ್ನಲಗ್ನವಾದರೆ ೯ ರಿಂದ ವ್ಯವಕಲನ ಮಾಡಬೇಕೆಂತಲೂ ತಿಳಿಯತಕ್ಕದ್ದು.

## ಅನ್ಯಮತೇ ನಕ್ಷತ್ರಸಾಧನಂ

ಕೆಲವು ಪಂಡಿತರ ನಷ್ಟ ಜಾತಕದ ಪ್ರಶ್ನಲಗ್ನವು ಚರರಾಶಿಗಳಾದ ಮೇಷ, ಕರ್ಕಾಟಕ, ತುಲಾ, ಮಕರಗಳಲ್ಲಿ ಯಾವ ಲಗ್ನವಾದರೂ ಆದರೆ ೯ ಸೇರಿಸ ಬೇಕೆಂತಲೂ, ವೃಷಭ, ಸಿಂಹ, ವೃಶ್ಚಿಕ, ಕುಂಭಗಳಲ್ಲಿ ಯಾವ ಲಗ್ನವಾದರೂ ಪ್ರಶ್ನಲಗ್ನ ವಾದರೆ ೯ ಸೇರಿಸುವದಾದರೂ ೯ ಕಳೆಯುವದಾದರೂ ಅವಶ್ಯಕವಿಲ್ಲವೆಂತಲೂ, ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು ಮೀನಗಳಾದರೆ ೯ ಕಳೆಯಬೇಕೆಂತಲೂ ಅಭಿಪ್ರಾಯ ಪಡುತ್ತಾರೆ. ಈ ಪ್ರಕಾರ ನವಸಂಖ್ಯಾ ಸಂಕಲನ ವ್ಯವಕಲನಗಳನ್ನು ಮಾಡಿ, ತ್ರಿಘನ, ತ್ರಿ-೩, ಘನ-೩, ಅಂದರೆ ೩ ೩ ೩ = ೨೭ ರಿಂದ, ಭಾಜಿತ ಶೇಷಂ-ಭಾಗ ಮಾಡಿದ ಶೇಷಾಂಕವನ್ನು, ಋಕ್ಷಂ-ಅಶ್ವಿನ್ಯಾದಿಯಾಗಿ ಎಣಿಸಲಾಗಿ, ಪೃಚ್ಛಕನ ಜನ್ಮನಕ್ಷತ್ರವೆಂದು ತಿಳಿಯತಕ್ಕದ್ದು.

## ಕಳತ್ರಾದೀನಾಂ ನಕ್ಷತ್ರನಿರ್ಣಯಃ

ಏವಂ-ಈ ಮೇಲೆ ಹೇಳಿದ ಪ್ರಕಾರವಾಗಿ, ಕಳತ್ರ ಸಹಜಾತ್ಮಜ ಶತ್ರುಭೇಜ್ಯಃ- ಹೆಂಡತಿ, ಸಹೋದರರು, ಪುತ್ರ ಮತ್ತು ಶತ್ರುಗಳು ಇವರ ವಿಷಯವಾದ ನಷ್ಟಜಾತಕ ಪ್ರಶ್ನೆಯಲ್ಲಿ, ಬೇಭ್ಯಃ-ಆಯಾಯ ಭಾವಗಳಿಂದ, ತೇಷಾಂ-ಹೆಂಡತಿ, ಸಹೋದರ, ಪುತ್ರ, ಶತ್ರು, ಪಿತೃ, ಮಾತೃ, ಮೊದಲಾದವರಿಗೆ, ಪ್ರಷ್ಟುಃ ಪೃಚ್ಛಕನು, ಉದಯ ರಾಶಿವಶೇನ ನಷ್ಟಜಾತಕಬೇಕೆಂಬ ಪ್ರಶ್ನಲಗ್ನದ ಮೂಲವಾಗಿಯೇ, ಋಕ್ಷಂ ಅವರುಗಳ ಜನ್ಮ ನಕ್ಷತ್ರವನ್ನು, ವದೇತ್-ಹೇಳತಕ್ಕದ್ದು. ಕಳತ್ರಾದಿಗಳ ನಕ್ಷತ್ರವು ತಿಳಿಯಬೇಕಾದರೆ, ಪ್ರಶ್ನೆ ಮಾಡುವವನು ತನ್ನ ಹೆಂಡತಿಯ ಜನ್ಮ ನಕ್ಷತ್ರವು ಯಾವುದೆಂದು ಕೇಳಿದರೆ, ಪ್ರಶ್ನಲಗ್ನದಲ್ಲಿ ೭ ರಾಶಿಗಳಿಗೂ ಅಥವಾ ೧೦೮೦೦ ಸೇರಿಸಿ, ಲಗ್ನರಾಶಿ ಗುಣಾಕಾರದಿಂದ ಗುಣಿಸಿ, ಲಗ್ನದಲ್ಲಿ ಗ್ರಹವಿದ್ದರೆ, ಆ ಗ್ರಹ ಗುಣಕದಿಂದ ಗುಣಿಸಿ

ಮೊದಲಿನಂತೆ ನವಸಂಖ್ಯಾ ಸಂಕಲನ ವ್ಯವಕಲನವನ್ನು ಮಾಡಿ ೨೭ ರಿಂದ ಭಾಗಾಹಾರ ಮಾಡಿ ಶೇಷ ಸಂಖ್ಯೆ ಎಷ್ಟು ಉಳಿಯುತ್ತೋ. ಅಶ್ವಿನ್ಯಾದಿಯಾಗಿ ಯಾವ ಸಂಖ್ಯೆಯು ನಕ್ಷತ್ರವ ಗುತ್ತೊ, ಅಷ್ಟನೆಯ ನಕ್ಷತ್ರವು ಪ್ರಶ್ನೆ ಮಾಡುವವನ ಪತ್ನಿಯ ನಕ್ಷತ್ರವೆಂದು ಹೇಳಬೇಕು.

ಸಹೋದರನ ವಿಷಯವಾಗಿ ನಷ್ಟಜಾತಕದ ಪ್ರಶ್ನೆಮಾಡಿದರೆ, ಪ್ರಶ್ನೆಲಗ್ನದ ಕಲೆಗಳಿಗೆ ೩೬೦೦ ಕಲೆಗಳನ್ನು ಸೇರಿಸಿ (ಅಥವಾ ಎರಡು ರಾಶಿ) ಪೂರ್ವೋಕ್ತವಾಗಿ ಸಂಸ್ಕಾರ ಗಣಿತವನ್ನು ಮಾಡಿ ಸಹೋದರನ ನಕ್ಷತ್ರವನ್ನು ಹೇಳತಕ್ಕದ್ದು.

ಪುತ್ರನ ವಿಷಯವಾಗಿ ನಷ್ಟಜಾತಕದ ಪ್ರಶ್ನೆಮಾಡಿದರೆ, ಪ್ರಶ್ನಲಗ್ನದ ಕಲೆಗಳಿಗೆ ೭೨೦೦ ಸೇರಿಸಿ ಅಥವಾ (೪ ರಾಶಿಗಳ) ಪೂರ್ವೋಕ್ತವಾಗಿ ಸಂಸ್ಕಾರ ಗಣಿತವನ್ನು ಮಾಡಿದರೆ ಪುತ್ರನ ನಕ್ಷತ್ರವು ಬರುತ್ತೆ.

ಶತ್ರುವಿನ ನಕ್ಷತ್ರದ ವಿಷಯದಲ್ಲಿ ನಷ್ಟಜಾತಕ ಪ್ರಶ್ನೆ ಮಾಡಿದರೆ ಪ್ರಶ್ನಲಗ್ನದ ಕಲೆಗಳಿಗೆ ೫ ರಾಶಿಯನ್ನಾಗಲೀ, ಅಥವಾ ೯೦೦೦ ಕಲೆಗಳನ್ನಾಲಿ ಸೇರಿಸಿ ಪೂರ್ವೋಕ್ತ ಗಣಿತಮಾಡಿ ಶತ್ರುವಿನ ನಕ್ಷತ್ರವನ್ನು ಹೇಳತಕ್ಕದ್ದು.

## ಮಾತೃವಿನ ಜನ್ಮನಕ್ಷತ್ರ ಬೇಕೆಂಬುವ ಪ್ರಶ್ನೆ

ಲಗ್ನದ ಕಲೆಗಳಲ್ಲಿ ನಾಲ್ಕು ರಾಶಿಗಳನ್ನು ೫೪೦೦ ಕಲೆಗಳನ್ನು ಸೇರಿಸಿ, ಪೂರ್ವೋಕ್ತ ಗಣಿತಮಾಡಿ ಮಾತೃ ನಕ್ಷತ್ರವನ್ನು ಹೇಳತಕ್ಕದ್ದು. ವಿಶೇಷ ತಾತ್ಪರ್ಯ-ಕಳತ್ರಾದಿಗಳಿಗೆ ಜನ್ಮನಕ್ಷತ್ರ ತಿಳಿಯಬೇಕಾದರೆ ಯಾವ ಯಾವ ಸಂಖ್ಯೆಯನ್ನು ಸೇರಿಸಿ ನವಸಂಖ್ಯಾಶೋಧನ ಸಮ್ಮೇಳನ ಮಾಡಿ ತ್ರಿಘನಾ ಭಾಜಕ ಶೇಷದಿಂದ ತಿಳಿಯಬೇಕೆಂದು ಹೇಳಿರುವ ಪ್ರಕಾರವಾಗಿಯೇ ಮಿತ್ರನ ಜನ್ಮನಕ್ಷತ್ರಕ್ಕೆ ೩ ರಾಶಿಗಳನ್ನು ಸೇರಿಸಬೇಕು. ತಂದೆಯ ಜನ್ಮನಕ್ಷತ್ರವು ತಿಳಿಯಬೇಕಾದರೆ ಎಂಟು ರಾಶಿಯನ್ನೂ ಸೇರಿಸಬೇಕು ಇತ್ಯಾದಿ.

## ಸಂವತ್ಸರ, ಮಾಸ ತಿಥಿ ಸಾಧನಂ

ಮೂಲ।। ವರ್ಷರ್ತುಮಾಸ ತಿಥಯೋದ್ಯುನಿತಂ। ವೇಲೋದಯರ್ಕ್ಷನವಭಾಗ
ವಿಕಲ್ಪನಾತ್ಸ್ಯುಃ ।। ಭೂಯೋದಶಾದಿ ಗುಣಿತಾಸ್ಸ್ವ ವಿಕಲ್ಪಭಕ್ತಾ।
ವರ್ಷಾದಯೋ ನವಕದಾನ ವಿಶೋಧನಾಭ್ಯಾಂ ।।

ಅವತಾರಿಕೆ।। ನಷ್ಟಜಾತಕನ ವರ್ಷ, ಋತು, ಮಾಸ, ತಿಥಿಗಳು ತಿಳಿಯುವ ಗಣಿತವನ್ನು ಹೇಳುತ್ತಾನೆ.

ಟೀಕು।। ವರ್ಷರ್ತುಮಾಸ ತಿಥಯಃ-ಸಂವತ್ಸರ ಋತು, ತಿಂಗಳು, ಚಾಂದ್ರ ಮಾಸದ ತಿಥಿಗಳು, ದ್ಯುನಿಶಂ-ಹಗಲು ರಾತ್ರಿಗಳು, ಉಡೂನಿ-ನಕ್ಷತ್ರಗಳು, ವೇಳಾ-ಹಗಲು ರಾತ್ರಿಯಲ್ಲಿ ಪ್ರಶ್ನೆಕಾಲದ, ಉದಯರ್ಕ್ಷ-ಜನ್ಮಲಗ್ನವು, ನವ-ಈ ೯, ಭಾಗ ವಿಕಲ್ಪನಾತ್-ತಮ್ಮ ತಮ್ಮ ಭಾಗ ವಿಕಲ್ಪನೆಯಿಂದ, ಸ್ಯುಃ-ವರ್ಷ ಋತು ಮಾಸ ತಿಥಿ ವೇಳೆಗಳು ಆಗುವದು, ಅದು ಯಾವ ಪ್ರಕಾರವೆಂದರೆ :-

ಪ್ರಶ್ನಲಗ್ನಕಲೆಗಳನ್ನು ರಾಶಿ ಗುಣಾಕಾರ ಗ್ರಹಗುಣಾಕಾರ ಮಾಡಿದ ಬಳಿಕ, ಭೂರ್ಯಃ-ತಿರುಗಿಯೂ, ದಶಾದಿಗುಣಿತಾಃ-ದಶಾಷ್ಟ ಸಪ್ತ ವಿಷಯ ೧೦-೮-೫ ಈ ಸಂಖ್ಯೆಗಳಿಂದ ಗುಣಾಕಾರ ಮಾಡಿ ನವಕದಾನ ವಿಶೋಧನಾಭ್ಯಾಂ-೯ ಸೇರಿಸುವುದೇ ಆಗಲೀ, ನವಕ-೯ನ್ನು ಊನ ಮಾಡುವದೇ ಆಗಲಿ, ಸಂಸ್ಕಾರಮಾಡಿ ಸ್ವವಿಕಲ್ಪ ಭಕ್ತಾಃ-ಆಯಾಯ ಸಂಖ್ಯೆಗಳಿಂದ ಭಾಗಿಸಲಾಗಿ ಬಂದ ಶೇಷವು, ವರ್ಷಾದಯಃ-ಸಂವತ್ಸರ, ಋತು, ಮಾಸ, ತಿಥಿ, ಹೊತ್ತು (ಕಾಲ) ಆಗುವವು.

## ಉದಾಹರಣೆ

ನಷ್ಟಜಾತಕ ಪ್ರಶ್ನೆ ಲಗ್ನವನ್ನು ಕಲೆಗಳಾಗಿ ಮಾಡಿಕೊಂಡು ರಾಶಿ ಗುಣಾಕಾರ ಮಾಡಿ ಅನಂತರ ಗ್ರಹ ಗುಣಾಕಾರಮಾಡಿ, ಅನಂತರ ಆ ಸಂಖ್ಯಾಮೊತ್ತವನ್ನು ನಾಲ್ಕು ಸ್ಥಾನಗಳಲ್ಲಿಟ್ಟು, ಅವುಗಳಲ್ಲಿ ಮೊದಲನೆಯ ಸ್ಥಾನಾಂತವನ್ನು ಹತ್ತರಿಂದಲೂ, ಎರಡನೆಯ ಸ್ಥಾನಾಂತವನ್ನು ಲರಿಂದಲೂ, ಮೂರನೇ ಸ್ಥಾನಾಂತರವನ್ನು ೭ರಿಂದಲೂ, ನಾಲ್ಕನೆ ಸ್ಥಾನಾಂತರವನ್ನು ೫ ರಿಂದಲೂ ಗುಣಿಸಿ ಆ ನಾಲ್ಕು ವಿಧವಾದ ಸಂಖ್ಯಾಸ್ಥಾನ ಪರ್ಯಂತವಾಗಿ ಗುಣಾಕಾರ ಮಾಡಿದ ಮೊತ್ತವನ್ನು ನವಕದಾನ ವಿಶೋಧನ ಸಂಸ್ಕಾರಾರ್ಹವಾಗಿದ್ದರೆ ಮಾಡಿದ ನಂತರ ಮುಂದಿನ ಶ್ಲೋಕದಲ್ಲಿ ಹೇಳಿರುವ ಪ್ರಕಾರ ವರ್ಷ, ಮಾಸ, ಋತು, ದಿವಸಗಳ ಸಂಖ್ಯೆಗಳಿಂದ ಭಾಗಿಸಿದರೆ ವರ್ಷ, ಋತು, ಮಾಸ, ತಿಥಿಗಳು ಬರುತ್ತವೆ.

ಮೂಲ।। ವಿಜ್ಞೇಯಾ ದಶಕೇಷ್ವಬ್ದಾ ಋತುಮಾಸಾಸ್ತಥೈವಚ । ಅಷ್ಟಕೇಷ್ವಪಿ
ಮಾಸಾರ್ಧಂ ತಿಥಯಶ್ಚ ತಥಾಸ್ಮೃತಾಃ ।।೧೨।।

ಅವತಾರಿಕೆ।। ೧ನೇ ಶ್ಲೋಕದಲ್ಲಿ ಹೇಳಲ್ಪಟ್ಟ ಪ್ರಕಾರವಾಗಿ ನಾಲ್ಕು ಸ್ಥಾನದಲ್ಲಿಟ್ಟಿರುವ ಅಂಕಗಳನ್ನು, ಯಾವ ಯಾವ ಸ್ಥಾನಾಂಕವನ್ನು ಯಾವ ರೀತಿ ಗಣಿತ ಮಾಡಬೇಕೆಂಬುವದನ್ನು ಹೇಳಿರುತ್ತೆ.

ಟೀಕು।। ೧೧ನೇ ಶ್ಲೋಕದ ಪ್ರಕಾರ ೪ ಸ್ಥಾನಗಳಲ್ಲಿರುವ ಅಂಕಗಳಲ್ಲಿ ಮೊದಲನೇ ಸಂಖ್ಯೆಯನ್ನು ೧೦ರಿಂದ ಗುಣಿಸಿದ ಮೊತ್ತವನ್ನು ಅಬ್ದಾಃ-ಪರಮಾಯುಃ

ಪ್ರಮಾಣ ವರ್ಷ ಸಂಖ್ಯೆಯಾದ ೧೨೦ ರಿಂದ ಭಾಗಿಸಿದರೆ ಶೇಷವೂ, ಪೃಚ್ಛಕನ ವರ್ತಮಾನ ವರ್ಷ ಸಂಖ್ಯೆಯಾಗುವದು. ಇದರಲ್ಲಿ ಕೆಲವರ ಅಭಿಪ್ರಾಯವು ಮೇಲೆ ಹೇಳಿದ ಪ್ರಕಾರ, ಮೊದಲನೇ ಸ್ಥಾನಾಂಕಕ್ಕೆ ೧೦ ರಿಂದ ಗುಣಿಸಿದ ಮೊತ್ತವನ್ನು ೬೦ ರಿಂದ ಭಾಗಿಸಿದರೆ ನಿಲ್ಲುವ ಶೇಷ ಸಂಖ್ಯೆಯೇ ಪ್ರಭವಾದಿಯಾಗಿ ವರ್ಷ ಸ್ಯಂಖ್ಯೆಯೆಂದು ಹೇಳುವರು.

## ಋತುಮಾಸ ನಿರ್ಣಯಃ

ಋತುಮಾಸಾಸ್ತಥೈವಚ-ಋತುಗಳನ್ನು, ಮಾಸ-ತಿಂಗಳನ್ನು, ಈ ಮೇಲೆ ಹೇಳಿರುವ ಪ್ರಕಾರವೇ ಸಾಧಿಸಬೇಕು. ಅಂದರೆ ೧೦ ರಿಂದ ಗುಣಿಸಿದ ಅಂಕ ಸಮೂಹವನ್ನು, ಋತು ವಿಕಲ್ಪ ಪರಿವರ್ತನ ಸಂಖ್ಯೆಯಾದ ೬ ರಿಂದ ಭಾಗಿಸಿ ಬಂದ ಶೇಷವನ್ನೇ ಅಷ್ಟನೆ ಋತುವಿನಲ್ಲಿ ಜನನವೆಂದು ತಿಳಿಯತಕ್ಕದ್ದು.

ಆ ೧೦ ರಿಂದ ಗುಣಿಸಿದ ಸಂಖ್ಯೆಯನ್ನು ಋತು ಮಾಸ ಸಂಖ್ಯಾ ವಿಕಲ್ಪವಾದ ೧ ರಿಂದ ಭಾಗಮಾಡಿದರೆ ೧ ನಿಂತರೆ ಯಾವ ಋತುವೆಂದು ಗಣಿತಾಂಕವು ಬಂದಿರುತ್ತೋ, ಆ ಋತುವಿನಲ್ಲಿ ಮೊದಲನೆ ತಿಂಗಳೆಂತಲೂ ಶೇಷವಿಲ್ಲದಿದ್ದರೆ ಎರಡನೆ ತಿಂಗಳಲ್ಲಿ ಜನನವೆಂತಲೂ ತಿಳಿಯತಕ್ಕದ್ದು.

ಈ ಪ್ರಕಾರವಾಗಿ ದಶ ಗುಣಿತ ಸಂಖ್ಯಾ ಸಮೂಹದಿಂದ ಸಂವತ್ಸರ, ಋತು, ಮಾಸಗಳು ಕ್ರಮವಾಗಿ ಏರ್ಪಡುತ್ತವೆಂದು, ವಿಜ್ಞೇಯಾಃ-ತಿಳಿಯತಕ್ಕದ್ದು, ತಥೈವ- ಆ ಪ್ರಕಾರವಾಗಿಯೇ, ಅಷ್ಟಕೇಷು-೮ ರಿಂದ ಗುಣಾಕಾರ ಮಾಡಿದ ದ್ವಿತೀಯ ಸ್ಥಾನಾಂಕದಲ್ಲಿ ೯ ಸೇರಿಸುವಿಕೆಯಾಗಲಿ ೯ ಕಳೆದುಬಿಡುವಿಕೆಯಾಗಲಿ ಅಥವಾ ಯಾವದೂ ಇಲ್ಲದೇನೆಯಾಗಲೀ ಮಾಡಿದ ನುತರ ಆ ಸಂಖ್ಯೆಯನ್ನು ಮಾಸಾರ್ಧಂ-ಪಕ್ಷ ಸಂಖ್ಯೆಯಾದ ೨ ರಿಂದ ಭಾಗ ಮಾಡಿದರೆ ಶೇಷ ೧ ನಿಂತರೆ ಶುಕ್ಲಪಕ್ಷ ವೆಂತಲೂ, ಏನೂ ನಿಲ್ಲದಿರುವ ಸಂದರ್ಭದಲ್ಲಿ ಕೃಷ್ಣಪಕ್ಷವೆಂತಲೂ ತಿಳಿಯಬೇಕು.

## ತಿಥಿ ನಿರ್ಣಯಃ

ತಥಾ-ಆ ಮೇಲೆ ಹೇಳಿದ ದ್ವಿತೀಯ ಸ್ಥಾನಾಂಕವನ್ನು ೮ ರಿಂದ ಗುಣಿಸಿದ ಸಂಖ್ಯಾ ಸಮೂಹವನ್ನೆ ತಿಥಿ ಸಂಖ್ಯೆಯಾದ ೧೫ ರಿಂದ ಭಾಗಮಾಡಿದರೆ ಎಷ್ಟು ಶೇಷ ನಿಲ್ಲುತ್ತೋ ಅಷ್ಟನೆ ಸಂಖ್ಯೆಯ ತಿಥಿಯೆಂದು (ಸ್ಮೃತಾಃ-ಸಂವತ್ಸರ, ಋತು, ತಿಂಗಳು, ಪಕ್ಷ, ತಿಥಿ ಈ ೫ ಏರ್ಪಡುತ್ತೆಂದು) ತಿಳಿಯತಕ್ಕದ್ದು ॥೧೨॥

## ದಿವಾ ರಾತ್ರಿ ನಿರ್ಣಯಃ

ಮೂಲ॥ ದಿವಾರಾತ್ರಿ ಪ್ರಸೂತಿಂಚ ನಕ್ಷತ್ರಾನಯನಂತಥಾ । ಸಪ್ತಕೇಷ್ವಪಿ ವರ್ಗೇಷು ನಿತ್ಯಮೇವೋ ಪಲಕ್ಷಯೇತ್ ॥೧೩॥

ಅವತಾರಿಕೆ।। ಈ ಶ್ಲೋಕದಿಂದ ನಷ್ಟ ಜಾತಕನು ರಾತ್ರಿ ಹುಟ್ಟಿದನೋ ಹಗಲು ಹುಟ್ಟಿದನೋ ಎಂಬುದನ್ನು ತಿಳಿಸುತ್ತಾನೆ.

ಟೀಕು।। ಸಪ್ತಕೇಷ್ವಪಿ ವರ್ಗೇಷು-ಏಳೆಂಬ ಸಂಖ್ಯೆಯಿಂದ ಗುಣಿಸಲ್ಪಟ್ಟ ನವಕ ಸಂಕಲನವಾಗಲಿ, ನವಕ ವ್ಯವಕಲನವಾಗಲೀ ಮಾಡಿದ ಲಗ್ನರಾಶಿ ಗ್ರಹ ಗುಣಿತಾಂಕ ಸಮೂಹವನ್ನು ದಿವಾರಾತ್ರಿ ಸಂಖ್ಯಾ ಸೂಚಕವಾದ ೨ರಿಂದ ಭಾಗಿಸಿದರೆ ೧ನಿಂತರೆ ಹಗಲಿನಲ್ಲಿ ಜನನವೆಂತಲೂ, ೨ ನಿಂತರೆ ರಾತ್ರಿಯಲ್ಲಿ ಜನನವೆಂತಲೂ ತಿಳಿಯತಕ್ಕದ್ದು. ತಥಾ ಆ ಪ್ರಕಾರವಾಗಿಯೇ ಗುಣಿಸಲ್ಪಟ್ಟು ಇಟ್ಟುಕೊಂಡ ಸಂಖ್ಯೆಯನ್ನು ನವಕ ಸಂಕಲ, ನವಕ ವ್ಯವಕಲನಾ ನಂತರದಲ್ಲಿ ನಕ್ಷತ್ರಾನಯನಂ-ನಕ್ಷತ್ರ ಸಂಖ್ಯೆಯಾದ ೨೭ ರಿಂದ ಭಾಗಿಸಿದರೆ ಬರುವ ಸಂಖ್ಯೆಯೇ ಜನ್ಮ ನಕ್ಷತ್ರವಾಗಿರುತ್ತದೆ. ನಿತ್ಯಮೇವ-ಯಾವಾಲೂ ಈ ಪ್ರಕಾರವಾಗಿಯೇ ಗಣಿತಮಾಡತಕ್ಕದ್ದೆಂದು ನಿಶ್ಚಯಾರ್ಥವು ಹೇಳಲ್ಪಟ್ಟಿರುತ್ತೆ. ।।೧೩।।

## ಜನನಕಾಲ ಘಟಿಕಾ ನಿರ್ಣಯಃ

ಮೂಲ।। ವೇಲಾಮಥ ವಿಲಗ್ನಂಚ ಹೋರಾಮಂಶಕಮೇವಚ ।
ಪಂಚಕೇಷು ವಿಜಾನೀಯಾನ್ನಷ್ಟಜಾತಕ ಸಿದ್ಧಯೇ ।।೧೪।।

ಅವತಾರಿಕೆ।। ಈ ಶ್ಲೋಕದಿಂದ ಜನ್ಮಕಾಲ, ಲಗ್ನ ಹೋರಾ, ನವಾಂಶವನ್ನು ನಿರ್ಣಯ ಮಾಡತಕ್ಕ ಉಪಾಯಾಂತರವು ಹೇಳಲ್ಪಡುತ್ತೆ.

ಟೀಕು।। ಪಂಚಕೇಷು-ಪಂಚ-೫ ಸಂಖ್ಯೆಯಿಂದ ಗುಣಿಸಲ್ಪಟ್ಟಿದ್ದ ಸಂಖ್ಯಾ ಸಮೂಹವನ್ನು, ವೇಲಾಂ ಆ ದಿವಸದಲ್ಲಿ ದಿವಾಜನನವಾಗಿದ್ದರೆ, ಅಹಃಪರಿಮಾಣ ಸಂಖ್ಯಾ ಘಟಕದಿಂದಲೂ, ರಾತ್ರಿ ಜನ್ಮವಾಗಿದ್ದರೆ ರಾತ್ರಿ ಪ್ರಮಾಣ ಘಟಿಕಾ ಸಂಖ್ಯೆ ಯಿಂದಲೂ, ಭಾಗಿಸಿದರೆ ನಿಂತ ಶೇಷವೇ ಜಾತಕನ ಜನ್ಮಕಾಲವಾಗಿರುತ್ತೆ ವಿಲಗ್ನಂಚ ಆ ಮೇಲೆ ಹೇಳಿದ ಪಂಚ ಸಂಖ್ಯೆಯಿಂದ ಗುಣಿಸಿದ ಅಂಕ ಸಮೂಹವನ್ನು ೧೨ ರಿಂದ ಭಾಗಿಸಿದರೆ ಶೇಷ ನಿಲ್ಲುವ ಸಂಖ್ಯೆಯ ರಾಶಿ ಲಗ್ನದಲ್ಲಿ ಜನನವೆಂದು ತಿಳಿಯ ತಕ್ಕದ್ದು. ಈ ಪ್ರಕಾರವಾಗಿಯೇ ಹೋರಾ, ದ್ರೇಕ್ಕಾಣ, ನವಾಂಶ ದ್ವಾದಶಾಂಶ ತ್ರಿಂಶಾಂಶ ಗಳನ್ನು ನಿರ್ಣಯಿಸಿಕೊಂಡು ನಷ್ಟಜಾತಕವನ್ನು ಪೂರ್ತಿ ಮಾಡತಕ್ಕದ್ದು ।।೧೪।।

## ಪುನರ್ನಕ್ಷತ್ರ ನಿರ್ಣಯಃ

ಮೂಲ।। ಸಂಸಾರನಾಮಮಾತ್ರಾ ದ್ವಿಗುಣಾಛಾಯತಂಗುಳೈಸ್ಸಮಾಯುಕ್ತಾः।
ಶೇಷಂ ತ್ರಿವನಕ ಭಕ್ತಾ ನಕ್ಷತ್ರಂ ತದ್ಧನಿಷ್ಠಾದಿ ।।೧೫।।

ಅವತಾರಿಕೆ।। ಈ ಶ್ಲೋಕದಿಂದ ಅನ್ಯಮತಾನುಸಾರವಾಗಿ ನಷ್ಟಜಾತಕನ ಜನ್ಮನಕ್ಷತ್ರ ವನ್ನು ತಿಳಿಯುವ ಗಣಿತವನ್ನು ಹೇಳುತ್ತಾನೆ.

ಟೀಕು॥ ಸಂಸ್ಕಾರ ನಾಮಮಾತ್ರಾಃ-ತಾಯಿ ತಂದೆಗಳಿಂದ ವಿಧಿಪ್ರಕಾರ ಜಾತಕರ್ಮ ನಾಮಕರಣವನ್ನು ಮಾಡಿ ಹೆಸರಿಟ್ಟ ನಾಮದ ಮಾತ್ರೆಗಳನ್ನು ಅಂದರೆ-ಹಲ್ (ವ್ಯಂಜನ) ಎಂಬುವದೇ ಅರ್ಧಮಾತ್ರೆಯು, ಅಚ್ (ಸ್ವರ) ಏಕಮಾತ್ರಕವು ಈ ಮೇರೆ ಆ ಹೆಸರಿನಲ್ಲಿ ಎಷ್ಟು ಮಾತ್ರೆಗಳಿರುತ್ತೋ ಅವುಗಳನ್ನು ೧ ಸ್ಥಾನದಲ್ಲಿಟ್ಟು ಕೊಂಡು ದ್ವುಗುಣಾಃ-ಆ ಮಾತ್ರೆಗಳನ್ನು ದ್ವಿಸಂಖ್ಯೆಯಿಂದ ಗುಣಿಸಿ, ಛಾಯಾಂಗುಳ್ಯಿಃ-ತತ್ಕಾಲದಲ್ಲಿ ಸಮಭೂಮಿಯಲ್ಲಿ ಕಾಣಲ್ಪಟ್ಟ ದ್ವಾದಶಾಂಶಗಳ ಶಂಕುಛಾಯೆಯಲ್ಲಿ ಅಂಗುಳ ವ್ಯಂಗುಳಗಳಿಂದ, ಸಮಾಯುಕ್ತಾ-ಸಂಕಲನಮಾಡಿ, ತ್ರಿನವಕಭಕ್ತಾತ್ ತ್ರಿನವಕ ೩x೯=೨೭ರಿಂದ ಭಾಗಿಸಿದರೆ ಶೇಷವೆಷ್ಟುಳಿಯುತ್ತೋ ಆ ಸಂಖ್ಯೆಯೇ ಧನಿಷ್ಠಾ ನಕ್ಷತ್ರ ಮೊದಲುಗೊಂಡು ಎಣಿಸಲಾಗಿ ಎಷ್ಟನೆಯ ನಕ್ಷತ್ರವಾಗುತ್ತದೋ ಅಷ್ಟನೆ ನಕ್ಷತ್ರವೆಂದು ತಿಳಿಯತಕ್ಕದ್ದು.

## ಪುನರ್ನಕ್ಷತ್ರ ಜ್ಞಾನೋಪಾಯಮಾಹ

ಮೂಲ॥ ದ್ವಿತ್ರಿಚತುರ್ದಶತಿಥಿ ಸಪ್ತತ್ರಿಗುಣಾನವಾಷ್ಟಚೈಂದ್ರಾದ್ಯಾಃ। ಪಂಚಾದಶ ಘ್ನಾಸ್ತದ್ದಿಙ್ಮುಖಾನ್ವಿತಂಭಂ ಧನಿಷ್ಠಾದಿ ॥೧೬॥

ಅವತಾರಿಕೆ॥ ಈ ಶಲಿಲೋಕದಲ್ಲಿ ನಷ್ಟಜಾತಕ ಪೃಚ್ಛಕನು ಯಾವ ದಿಕ್ಕಿಗೆ ಅಭಿಮುಖ ವಾಗಿ ನಿಂತು ಪ್ರಶ್ನೆಮಾಡುವನೋ ಆ ದಿಕ್ಕಿನ ಮೂಲವಾಗಿ ನಕ್ಷತ್ರಜ್ಞಾನವು ಹೇಳಲ್ಪಡುತ್ತೆ.

ಟೀ॥ ನಷ್ಟಜಾತಕ ಪ್ರಶ್ನೆಮಾಡುವವನು ಪೂರ್ವಾಭಿಮುಖವಾಗಿ ನಿಂತು ಕೇಳಿ ದರೆ-ದ್ವಿ ೨, ಅಗ್ನೇಯ ದಿಕ್ಕಿಗಭಿಮುಖವಾಗಿ ಕೇಳಿದರೆ, ತ್ರಿ-ಮೂರು, ಯಮದಿಕ್ಕಿ ಗಭಿಮುಖವಾಗಿ ಪ್ರಶ್ನೆ ಕೇಳಿದರೆ, ದಶ-೧೦, ವರುಣ ದಿಕ್ಕಿಗಭಿಮುಖವಾಗಿ ಕೇಳಿದರೆ ತಿಥಿ-೧೫, ವಾಯುವ್ಯ ದಿಕ್ಕಿಗಭಿಮುಖವಾಗಿ ಪ್ರಶ್ನೆ ಕೇಳಿದರೆ, ಸಪ್ತತ್ರಿಗುಣ ೭ x ೩=೨೧, ಉತ್ತರ ದಿಕ್ಕಿಗಭಿಮುಖವಾಗಿ ಕೇಳಿದರೆ ನವ-೯, ಈಶಾನ್ಯ ದಿಕ್ಕಿಗಭಿಮುಖವಾಗಿ ಕೇಳಿದರೆ ಅಷ್ಟ-೮, ಈ ಪ್ರಕಾರ ಐಂದ್ರಾದ್ಯಾಃ-ಇಂದ್ರ, ಅಗ್ನಿ ಯಮ, ನೈರುತ್ಯ, ವರುಣ, ವಾಯುವ್ಯ, ಕುಬೇರ, ಈಶಾನ್ಯ ಈ ದಿಕ್ಕುಗಳಲ್ಲಿ ಯಾವ ದಿಕ್ಕಿಗಭಿಮುಖವಾಗಿ ನಿಂತುಕೊಂಡು ಪ್ರಶ್ನೆ ಮಾಡುತ್ತಾನೋ ಆ ದಿಕ್ಕಿಗುಕ್ತವಾಗಿರುವ ಸಂಖ್ಯೆಯನ್ನಿಟ್ಟುಕೊಂಡು, ಪಂಚದಶಘ್ನಾಃ೧೫ರಿಂದ ಗುಣಾಕಾರಮಾಡಿ ಪೃಚ್ಛಕನು ಯಾವ ದಿಕ್ಕಿಗಭಿಮುಖವಾಗಿ ಪ್ರಶ್ನೆ ಮಾಡುತ್ತಾನೋ ತದ್ದಿಙ್ಮುಖಾನ್ವಿತಂ-ಆ ಪೃಚ್ಛಕನಲ್ಲದೆ ಅವನೊಡನೆ ಎಷ್ಟು ಜನಗಳು ದಿಙ್ಮುಖಕ್ಕೆ ಹೇಳಲ್ಪಟ್ಟ ಸಂಖ್ಯೆಯನ್ನು ಮೊದಲು ೧೫ ರಿಂದ ಗುಣಿಸಿದ ಸಂಖ್ಯೆಗೆ ಸೇರಿಸಿ

(ಸಪ್ತವಿಂಶ) ೨೭ ರಿಂದ ಭಾಗ ಮಾಡಿದರೆ ಯಾವ ಅಂಕವು ಶೇಷವಾಗಿ ನಿಲ್ಲುತ್ತೋ, ಧನಿಷ್ಠಾದಿ ಅಷ್ಟನೇ ನಕ್ಷತ್ರವೆಂದು ನಿಶ್ಚೈಸತಕ್ಕದ್ದು ॥೧೬॥

ಮೂಲ॥ ಇತಿ ನಷ್ಟಜಾತಕಮಿದಂ ಬಹುಪ್ರಕಾರಂ ವಯಾವಿನಿರ್ದಿಷ್ಟಂ। ಗ್ರಾಹ್ಯಮತಸ್ಸಚ್ಛಿಷ್ಯೈಃ ಪರೀಕ್ಷ್ಯ ಯತ್ನಾದ್ಯಥಾಭವತಿ ॥೧೭॥

ಅವತಾರಿಕೆ॥ ನಷ್ಟಜಾತಕ ಪ್ರಕರಣವನ್ನು ಮತ್ತು ಇಧರ ಸಾಂಗೋಪಾಂಗವಾದ ಮಾರ್ಗವನ್ನು ಸಚ್ಛಿಷ್ಯನಿಗೆ ಉಪದೇಶ ಮಾಡಬೇಕೆಂದು ವರಾಹಮಿಹಿರಾಚಾರ್ಯರು ಪ್ರತಿವಾದಿಸುತ್ತಾರೆ.

ಟೀಕು॥ ಇತಿ-ಈ ಪ್ರಕಾರವಾಗಿ, ಮಯಾ - (ವರಾಹಮಿಹಿರಭಟ್ಟಾಚಾರ್ಯ) ನನ್ನಿಂದ, ಇದು ಈ ನಷ್ಟ ಜಾತಕ ಪ್ರಕರಣವು ಬಹುಪ್ರಕಾರಂ-ಅನೇಕ ಪ್ರಕಾರವಾಗಿ ಅಷ್ಟಾದಶ ಸಂಹಿತಾಕರ್ತರಿಂದ ಉಕ್ತವಾದ ಮತವನ್ನನುಸರಿಸಿ ಅನೇಕ ಪ್ರಕಾರವಾಗಿ, ವಿನಿರ್ದಿಷ್ಟಂ-ಹೇಳಲ್ಪಟ್ಟಿತು. ಅತಃ-ಈ ಮೇಲೆ ಹೇಳಲ್ಪಟ್ಟ ಕಾರಣಗಳಿಂದ, ಸಚ್ಛೀಷ್ಯೈಃ-ಗುರೂಪದೇಶ ಮಾರ್ಗವನ್ನು ಅವಲಂಬಿಸಿ ನಡೆಯತಕ್ಕ ಆಸ್ತಿಕರಾದ ಶಿಷ್ಯರಿಗೆ ಯತ್ನಾತ್-ಪ್ರಯತ್ನ ಮೂಲಕವಾಗಿ, ಪರೀಕ್ಷ್ಯ-ಅನುಭವಕ್ಕೆ ಬರುವಹಾಗೆ ತಿಳಿದುಕೊಂಡು, ಯಥಾಭವತಿ-ಯಾವ ಪ್ರಕಾರ ಅನುಭವಕ್ಕೆ ಸರಿ ಬರುವುದೋ ಹಾಗೆ, ಗ್ರಾಹ್ಯಂ-ಗ್ರಹಿಸತಕ್ಕದೆಂದು ಗ್ರಂಥಕರ್ತರ ಮುಖ್ಯಾಶಯವು ॥೧೭॥

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತಕಾಖ್ಯ
ಹೋರಾಶಾಸ್ತ್ರೇ ಸ್ತ್ರೀಜಾತಕಫಲ ವಿಚಾರೋನಾಮ
ಷಡ್ವಿಂಶ ಪ್ರಕರಣಂ

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ನಷ್ಟಜಾತಕಾಖ್ಯ ವಿಚಾರನ್ನಾಮ ಷಡ್ವಿಂಶ ಪ್ರಕರಣಂ
ಸಂಪೂರ್ಣಂ

ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾತಾಖ್ಯ ಹೋರಾಶಾಸ್ತ್ರೇ

# ೨೭ನೇ ದ್ರೇಕ್ಕಾಣ ವರ್ಣನ ಪ್ರಕರಣಂ

ಅ।। ಈ ಜಾತಕ ಶಾಸ್ತ್ರದಲ್ಲಿ ನೈರ್ಯಾಣಿಕ ಪ್ರಕರಣ. ಅನಿಷ್ಟಪ್ರಕರಣ, ಜನನ ಕಾಲ ಲಕ್ಷಣ ಪ್ರಕರಣಗಳಲ್ಲಿ ಹೇಳಲ್ಪಟ್ಟ ಫಲ ಪ್ರಯೋಜನಾರ್ಥವಾಗಿ ದ್ರೇಕ್ಕಾಣಗಳ ವರ್ಣನೆಮಾಡಿ ಲಕ್ಷಣ ಸ್ವರೂಪವು ಹೇಳಲ್ಪಡುತ್ತೆ.

## ಮೇಷರಾಶಿ ದ್ರೇಕ್ಕಾಣ ವಿಚಾರಃ

ಮೂಲ।। ಕಟ್ಯಾಂಸಿತವಸ್ತ್ರವೇಷ್ಟಿತಃ ಕೃಷ್ಣಃ ಶಕ್ತ ಇವಾಭಿರಕ್ಷಿತುಮ್ । ರೌದ್ರಂ ಪರಶುಂ ಸಮುದ್ಯತಂ ಧತ್ತೆ ರಕ್ತವಿಲೋಚನಃ ಪುಮಾನ್ ।।೧।।

ಅವತಾರಿಕೆ।। ಈ ಪ್ರಕರಣದಲ್ಲಿ, ಮೇಷಾದಿ ದ್ವಾದಶರಾಶಿಗಳಿಗೆ ೩೬ ದ್ರೇಕ್ಕಾಣಗಳಾಗುತ್ತವೆ. ಈ ದ್ರೇಕ್ಕಾಣಗಳ ಸ್ವರೂಪವನ್ನು ಹೇಳಲುಪಕ್ರಮಿಸಿ ಆಭಿಯಲ್ಲಿ ಮೇಷರಾಶಿ ಪ್ರಥಮ ದ್ರೇಕ್ಕಾಣ ಸ್ವರೂಪ ಹೇಳುತ್ತಾನೆ.

ಟೀಕು।। ಮೇಷ ಪ್ರತಮ ದ್ರೇಕ್ಕಾಣ ಸ್ವರೂಪ ವಿಚಾರಃ-ಈ ದ್ರೇಕ್ಕಾಣವು. ಕಟ್ಯಾಂ-ನಡು (ಕೂಂಟ-ಕಟಿ ಪ್ರದೇಶ)ದಲ್ಲಿ, ಸಿತವಸ್ತ್ರವೇಷ್ಟಿತಃ-ಬಿಳಿಯವಸ್ತ್ರ ಕಟ್ಟಿ ಕೊಂಡಿರುವನು, ಕೃಷ್ಣ-ನೀಲವರ್ಣವುಳ್ಳವನು, ಅಧಿರಕ್ಷಿತುಂ-ಎದುರಿಗಿದ್ದು ರಕ್ಷಿಸುವನು, ಶಕ್ತ ಇವ-ಸಮರ್ಥನಾಗಿರುವವನ ಹಾಗೆ ಕಾಣುವನು, ರೌದ್ರ-ಭಯಂಕರ ವುಳ್ಳವನು ರಕ್ತಲೋಚಮಃ-ಕೆಂಪಾದ ಕಣ್ಣುಳ್ಳವನು, ಪುಮಾನ್- ಪುರುಷನು, ಅಂದರೆ ಪುರುಷ ಸ್ವಭಾವವುಳ್ಳವನಾಗಿ, ಕುಠಾರಂ-ಗಂಡುಕೊಡಲಿಯನ್ನು, ಸಮುದ್ಯತಂ-ಎತ್ತಿಕೊಂಡ, ದತ್ತೇ-ಧರಿಸಿಕೊಂಡು ಇರುವನು, ಇದು ಆಯುಧ ಸಮೇತಕುಜಗ್ರಹಾ ಸಕ್ತ ಪುರುಷ ದ್ರೇಕ್ಕಾಣವಾಗಿರುವುದು. ತಾ।। ಈ ದ್ರೇಕ್ಕಾಣ ಸ್ವರೂಪಧಾರಿ ಪುರುಷನು, ಕಟಿಯಲ್ಲಿ ಬಿಳಿವಸ್ತ್ರ ಉಟ್ಟುಕೊಂಡು ಶ್ಯಾಮವರ್ಣ ಶರೀರವುಳ್ಳವನಾಗಿ, ರಕ್ಷಣಾಶಕ್ತಿಯುಳ್ಳವನಾಗಿ, ಭಯಂಕರವಾಗಿ ಗಂಡುಕೊಡಲಿಯನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡು ಕೆಂಗಣ್ಣುಳ್ಳವನಾಗಿ, ಪುರುಷದ್ರೇಕ್ಕಾಣವಾಗಿ ಚತುಷ್ಪದ ಉಳ್ಳದ್ದಾಗಿರುವದು.

## ಮೇಷ ದ್ವಿತೀಯೇ ದ್ರೇಕ್ಕಾಣ ಸ್ವರೂಪಮ್

ಮೂಲ।। ರಕ್ತಾಂಬರಾಭೂಷಣ ಭಕ್ಷಚಿತ್ತಾ ಕುಂಭಾಕೃತಿರ್ಮಜ ಮುಖೀ ತೃಷಾರ್ತಾ। ಏಕೋನ ಪಾದೇನಚ ಮೇಷ ಮಧ್ಯೇದ್ರೇಕ್ಕಾಣ ರೂಪಂ ಯಮನೋಪದಿಷ್ಟಮ್ ।।೨।।

ಅವತಾರಿಕೆ॥ ಮೇಷರಾಶಿ ದ್ವಿತೀಯ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮೇಷ ದ್ರೇಕ್ಕಾಣವು, ರಕ್ತಾಂಬರಾ-ಕೆಂಪು ಬಟ್ಟೆಯನ್ನು ಅಂದರೆ ಕೆಂಪು ಶೀರೆಯನ್ನುಟ್ಟುಕೊಂಡು, ಭೂಷಣಭಕ್ಷ್ಯಚಿತ್ತಾ-ಅಲಂಕಾರದಲ್ಲು ಭಕ್ಷ್ಯದಲ್ಲು ಮನಸ್ಸುಳ್ಳ, ಕುಂಭಾಕೃತಿಃ-ಘಟ ಸಮಾನವಾದ ದೊಳ್ಳು ಹೊಟ್ಟೆಯುಳ್ಳ, ವಾಜಿ ಮುಖೀ-ಕುದುರೆಯ ಮುಖದಂತಿರುವ ಮುಖವುಳ್ಳ, ತೃಷಾರ್ತಾ-ನೀರಡಿಕೆಯುಳ್ಳ, ಏಕೇನಪಾದೇನ-ಒಂದು ಕಾಲಿನಿಂದ ನಿಂತುಕೊಂಡು ಮೇಷ, ಮಧ್ಯೆ-ಮೇಷ ಮಧ್ಯದಲ್ಲಿರುವ ಸ್ತ್ರೀ ಅಂದರೆ ಮೇಷರಾಶಿಯ ಮಧ್ಯದ್ರೇಕ್ಕಾಣವು, ಯವನೋ ಪದಿಷ್ಟಂ-ಯವನೇಶ್ವರನಿಂದ ಹೇಳಲ್ಪಟ್ಟಿದೆ. ಇದು ಚತುಷ್ಪದೋನ್ಮುಖ ದ್ರೇಕ್ಕಾಣ. ಇದು ಚತುಷ್ಪದ ದ್ರೇಕ್ಕಾಣವೆಂದು ವ್ಯಾಖ್ಯಾನ ಮಾಡಿರುವುದರಿಂದ ಚತುಷ್ಪದವುಳ್ಳದ್ದಾಗಿ, ಅರ್ಕಸಕ್ತವಾದ-ಮೃಗಮುಖವಾದ ಸ್ತ್ರೀ ದ್ರೇಕ್ಕಾಣ. ತಾ॥ ಮೇಷ ದ್ವಿತೀಯ ದ್ರೇಕ್ಕಾಣವು, ಸ್ತ್ರೀ ಸ್ವಭಾವವಾಗಿ, ಕೆಂಪು ಬಟ್ಟೆಯನ್ನುಟ್ಟುಕೊಂಡು ಭೂಷಣ ಮತ್ತು ಭೋಜನ ಪದಾರ್ಥ ಚಿಂತೆಮಾಡುತ್ತಾ, ಘಟದ ಸಮಾನ ಹೊಟ್ಟೆಯುಳ್ಳ, ಅಶ್ವಮುಖವುಳ್ಳ, ಒಂದು ಕಾಲಿನಲ್ಲಿ ನಿಂತುಕೊಂಡಿರುವ ಸ್ತ್ರೀ ರೂಪವನ್ನು ಹೊಂದಿದ ಮೇಷ ಮಧ್ಯದ್ರೇಕ್ಕಾಣವು ಸಿಂಹದ್ರೇಕ್ಕಾಣವಾಗಿ ಚತುಷ್ಪದವಾಗಿರುವುದು ॥೨॥

## ಮೇಷ ತೃತೀಯ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ॥ ಕ್ರೂರಃ ಕಲಾಜ್ಞಃ ಕಪಿಲಃ ಕ್ರಿಯಾರ್ಥೋ ಭಗ್ನ ವ್ರತೋಽಭ್ಯುದ್ಯತ
ದಂಡಹಸ್ತಃ। ರಕ್ತಾನಿ ವಸ್ತ್ರಾಣಿ ಭಿಭರ್ತಿ ಚಂಡಿ ಮೇಷೇ
ತೃತೀಯಃ ಕಥಿತಸ್ತ್ರಿಭಾಗಃ ॥೩॥

ಅವತಾರಿಕೆ॥ ಮೇಷರಾಶಿಯ ತೃತೀಯ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮೇಷೇ-ಮೇಷರಾಶಿಯ, ತೃತೀಯಃ-ಮೂರನೆಯದಾದ ತ್ರಿಭಾಗಃ-ದ್ರೇಕ್ಕಾಣವು, ಕ್ರೂರಃ-ವಿಷಮಸ್ವಭಾವವುಳ್ಳ, ಕಲಾಜ್ಞಃ-ಚತುಃ-ಷಷ್ಠಿಕಳಾಶಾಸ್ತ್ರ ತಿಳಿದ, ಕ್ರಿಯಾರ್ಥಃ-ಕಾರ್‍ಯಗಳಲ್ಲಾಸಕ್ತಿಯುಳ್ಳ, ಭಗ್ನವ್ರತಃ-ವ್ರತಭಂಗವಾದ, ಅಭ್ಯುದ್ದತ ದಂಡಹಸಃ-ಎದುರಿಗೆ ದಂಡವನ್ನು ಹಿಡಿದುಕೊಂಡಿರುವ ಚಂಡಃ-ಹೆಚ್ಚಾದ ಕೋಪವುಳ್ಳ ಪುರುಷಾಕೃತಿಯಿಂದ, ರಕ್ತಾನಿ-ಕೆಂಪಾದ, ವಸ್ತ್ರಾಣಿ-ವಸ್ತ್ರವನ್ನು, ಬಿಭರ್ತಿ-ಧರಿಸಿಕೊಂಡಿರುವದು. ಈ ಪ್ರಕಾರವಾಗಿ, ಕಥಿತಃ-ಹೇಳಲ್ಪಟ್ಟಿತು. ಇದು ಸಾಯುಧವಾದ ಬೃಹಸ್ಪತಿ ಗ್ರಹಾಸಕ್ತವಾದ ಪುರುಷ ದ್ರೇಕ್ಕಾಣವು. ತಾ॥ ಮೇಷರಾಶಿಯ ೩ನೇ ದ್ರೇಕ್ಕಾಣ ಬೃಹಸ್ಪತಿ ಗ್ರಹಾಸಕ್ತವಾದ ಪುರುಷಸ್ವಭಾವವಾಗಿ, ಕೆಂಪು ವಸ್ತ್ರವನ್ನು ಧರಿಸಿಕೊಂಡು ಕೈಯಲ್ಲಿ ದಂಡವನ್ನು ಹಿಡಿದುಕೊಂಡು ವಿಷಮ ಸ್ವಭಾವವುಳ್ಳ ಅನೇಕ ಪ್ರಕಾರವಾದ ಕಾರ್‍ಯ ಸ್ವಭಾವವನ್ನು ತಿಳಿದಿರುವ ನಿರಂತರ

ಕಾರ್ಯಾಸಕ್ತನಾಗಿ, ವ್ರತಭಂಗವಾದ ಕ್ರೋಧ ಸ್ವಭಾವವುಳ್ಳ ಪುರುಷನು ದ್ವಿಪದ ರೂಪ ದ್ರೇಕ್ಕಾಣವಾಗಿರುವುದು ॥೩॥

## ವೃಷಭರಾಶಿ ದ್ರೇಕ್ಕಾಣ ವಿಚಾರಃ
## ವೃಷಭ ಪ್ರಥಮ ದ್ರೇಕ್ಕಾಣ ಸ್ವರೂಪಂ

ಮೂಲ॥ ಕುಂಚಿತಲೂನಕಚಾ ಘಟದೇಹಾ । ದಗ್ಧಪಟಾ ತೃಷಿತಾಶನ ಚಿತ್ತಾ।
ಆಭರಣಾನ್ಯಭಿವಾಛಂತಿ ನಾರೀ ರೂಪಮಿದಂ ಪ್ರಥಮೇವೃಷಾಭಸ್ಯ ॥೪॥

ಅವತಾರಿಕೆ॥ ವೃಷಭ ದ್ರೇಕ್ಕಾಣ ಸ್ವರೂಪವು ಹೇಗೆಂದರೆ :-

ಟೀಕು॥ ಕುಂಚಿಲೂನಕಚಾ-ತಲೆಗೂದಲ ಕತ್ತರಿಸಲ್ಪಟ್ಟ ಗುಂಗುರು ಗುಂಗುರು ಗಳಾಗಿರುವ (ಅಂದರೆ ಮೆಟ್ಲು ಕೂದಲುಳ್ಳದ್ದಾಗಿರುವ), ಘಟದೇಹಾ-ಘಟಾಕೃತಿ ದೇಹ ಮತ್ತು ಹೊಟ್ಟೆಯುಳ್ಳವಳು. ದಗ್ಧಪಟಾ, ಸುಟ್ಟುಹೋದ ಬಟ್ಟೆಯನ್ನು ಧರಿಸಿಕೊಂಡಿರುವ ತೃಷಿತಾ-ನೀರಡಿಕೆಯುಳ್ಳ, ಅಶನಚಿತ್ತಾ-ಭೋಜನದಲ್ಲಿ ಮನಸ್ಸುಳ್ಳ, ನಾರೀ-ಸ್ತ್ರೀರೂಪವಾದ, ಆಭರಣಾನ್ಯಪಿ-ಭೂಷಣಾದಿಗಳ, ವಾಂಛತಿ-ಕೋರಿಕೆಯುಳ್ಳ, ಇದಂ-ಇದು, ವೃಷಭ ಪ್ರಥಮಸ್ಯ-ವೃಷಭ ಪ್ರಥಮ ದ್ರೇಕ್ಕಾಣದ, ರೂಪಂ-ಸ್ವರೂಪವು, ಇದು ಅಷ್ನಿ ಸಹಿತ ಸ್ತ್ರೀರೂಪವಾದ ಶುಕ್ರ ಗ್ರಹಾಸಕ್ತವಾದ ದ್ರೇಕ್ಕಾಣ.

ತಾ॥ ವೃಷಭರಾಶಿಯ ಪ್ರಥಮ ದ್ರೇಕ್ಕಾಣ ಸ್ತ್ರೀಯಾಗಿ ಕತ್ತರಿಸಲ್ಪಟ್ಟ ಮೊಂಡವಾದ ಗುಂಗುರು ಕೂದಲುಳ್ಳದ್ದಾಗಿಯೂ, ಘಟಾಕೃತಿಯಲ್ಲಿ ಹೊಟ್ಟೆಯುಳ್ಳದ್ದಾ ಗಿಯೂ, ಭೋಜನಾಸಕ್ತವಾದ ಮನಸುಳ್ಳದ್ದಾಗಿಯೂ, ಅಭರಣಾದಿ ಕೋರಿಕೆಯು ಳ್ಳದ್ದಾಗಿಯೂ, ಇರುತ್ತದೆಂದು ತಿಳಿಯತಕ್ಕದ್ದು. ಕೆಲವರು 'ಕುಂಚಿತಲೂನಕಚ' ಎಂಬುವದಕ್ಕೆ ಕ್ಷೌರಮಾಡಿಕೊಂಡ ನಂತರ ಬೆಳದು ಗುಂಗುರು ಕೂದಲುಳ್ಳದ್ದಾಗಿ-ರುವದೆಂದು ಉತ್ತರ ದೇಶಿಯ ಪುಸ್ತಕದಲ್ಲಿ ವಾಖ್ಯಾನ ಮಾಡಿರುತ್ತಾರೆ. ಕೆಲವರು ಕತ್ತರಿಸಲ್ಪಟ್ಟ ತಲೆಗೂದಲು, ಮೆಟ್ಟಲು ಮೆಟ್ಟಲುಳ್ಳದ್ದಾಗಿರುವದೆಂದು ಹೇಳುವರು ಆದರೆ ಯಾವ ಅರ್ಥದಿಂದಲಾದರೂ, ಶಸ್ತ್ರಹತವಾದ ತಲೆಗೂದಲೆಂದು ಹೇಳಿದಂತಾಗುವುದಿಲ್ಲ. ಕೆಲವರು-ಅಂತಿಕಾಜ್ಞಾಯತೇ ದ್ರವ್ಯಂ ದ್ರೇಕ್ಕಾಣೈಸ್ತಸ್ಕರಾ ಸ್ಮೃತಾಃ॥ ಎಂಬುವದರ ಮೇಲೆಚೋರ ಲಕ್ಷಣವನ್ನು ತಿಳಿಯುವಾಗ, ಕಳ್ಳನು, ಕ್ಷೌರಮಾಡಲ್ಪಟ್ಟ ತಲೆಗೂದಲು ಮೆಟ್ಲು ಮೆಟ್ಟಾಗಿ ಗುಂಗುರು ಕೂದಲುಳ್ಳವನೆಂದು ಅಥವಾ ಆ ಸ್ವಭಾವದ ಸ್ತ್ರೀಯೆಂದು ಹೇಳತಕ್ಕದ್ದು. ಮತ್ತು ಸ್ತ್ರೀಜಾತಕದಲ್ಲಿ ಅಷ್ಟಮಭಾವದಲ್ಲಿ ವೃಷಭ ಪ್ರಥಮ ದ್ರೇಕ್ಕಾಣ ಉದಯವಾದರೆ ಅವಳು

ಮುಂಡೆಯಾಗುವಳೆಂದು ಅಥವಾ ಈ ದ್ರೇಕ್ಕಾಣದಲ್ಲಿದ್ದ ಗ್ರಹದಶಾಭುಕ್ತಿ ಪ್ರಾಪ್ತವಾದ ಕಾಲದಲ್ಲಿ ಈ ರೀತಿ ಫಲವಾಗುವದೆಂದು ಯೋಚಿಸಿ ಫಲ ನಿರ್ಣಯ ಮಾಡತಕ್ಕದ್ದು.

## ವೃಷಭರಾಶಿ ದ್ವಿತೀಯ ರಾಶಿ ದ್ರೇಕ್ಕಾಣ ಸ್ವರೂಪಂ

ಮೂಲ॥ ಕ್ಷೇತ್ರಧಾನ್ಯ ಗೃಹಧೇನು ಕಲಾಜ್ಞೋ ಲಾಂಗಲೀ ಸಶ್ರಕಟೇ ಕುಶಲಶ್ಚ। ಸ್ಕಂಧಮುದ್ವಹತಿಗೋ ಪತಿತುಲ್ಯಂ ಕ್ಷುತ್ಪರೋಜಿ-ವದನೋ ಮಲವಾಸಾಃ ॥೫॥

ಅವತಾರಿಕೆ॥ ವೃಷಭರಾಶಿ ದ್ವಿತೀಯ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಕ್ಷೇತ್ರಧಾನ್ಯ ಗೃಹಧೇನು ಕಲಾಜ್ಞ-ಕ್ಷೇತ್ರ-ಭೂಮಿ, ಧಾನ್ಯ-ಧಾನ್ಯಾದಿಗಳು, ಗೃಹ-ಮನೆ, ಧೇನು-ಗೋವು, ಕಲಾ-ಗೀತವಾದ್ಯಾದಿ ಕಲೆಗಳು, ಇವುಗಳನ್ನು, ಜ್ಞ-ತಿಳಿದವನು, ಸಶಕಟೇ-ಭಂಡಿಯಿಂದ ಕೂಡಿದವನು, ಲಾಂಗಲೀ-ನೇಗಲುಳ್ಳವನು ಮತ್ತು ಇವುಗಳಲ್ಲಿ ಕುಶಲಃ-ಸಮರ್ಥನಾದವನು. ಅಂದರೆ ಭಂಡಿ ಸವಾರಿ ಯಲ್ಲಿಯೂ, ನೇಗಿಲಿನಿಂದ ಉಳುವ ಕರ್ಮವನ್ನೂ ಚೆನ್ನಾಗಿ ತಿಳಿದವನ್ನುಕ್ಷುತ್ಪರಃ- ಹಿಸಿವು ಗೊಂಡಿರುವನು, ಅಜವದನಃ-ಮೇಕೆಯ ಮುಖದಂತೆ ಮುಖವುಳ್ಳವನಾಗಿ, ಮಲವಾಸಾಃ-ಮಾಸಿದ ವಸ್ತ್ರಗಳನ್ನು ಧರಿಸಿದವನು, ಗೋಪತಿತುಲ್ಯಂ-ವೃಷಭ ಸಮಾನವಾದ, ಸ್ಕಂಧಂ-ಭುಜವನ್ನು, ಉದ್ವಹತಿ- ವಹಿಸಿರುವನು. ಇದು ಚತುಷ್ಪದ ಬುಧ ಗ್ರಹಾಸಕ್ತವಾದ ಪುರುಷ ದ್ರೇಕ್ಕಾಣವಾಗಿರುವದು ॥೫॥

## ವೃಷಭ ತೃತೀಯ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ॥ ದ್ವಿಪಸಮಕಾಯಃ ಪಾಂಡುರದಂಷ್ಟ್ರಃ । ಶರಭಸಮಾಂಘ್ರಿಃ ಪಿಂಗಳಿಮೂರ್ತಿಃ ॥ ಅಜಮೃಗಲೋಭ ವ್ಯಾಕುಲಾಚಿತ್ತೋ ವೃಷಭವನಸ್ಯ ಪ್ರಾಂತಗತೋಯಂ ॥೬॥

ಅವತಾರಿಕೆ॥ ವೃಷಭ ತೃತೀಯ ದ್ರೇಕ್ಕಾಣ ಸ್ವರೂಪ ಹೇಳಲ್ಪಡುತ್ತೆ.

ಟೀಕು॥ ದ್ವಿಪಸಮಕಾಯಃ-ಆನೆಯ ಸಮಾನವಾದ ಶರೀರವುಳ್ಳವನಾಗಿ, ಪಾಂಡುರದಂಷ್ಟ್ರ-ಬಿಳಿ ಕೋರೆದಾಡೆಗಳುಳ್ಳವನಾಗಿಯೂ, ಶರಭ ಸಮಾಂಘ್ರಿಃ-ಶರಭ ಮೃಗದಂತೆ ಪಾದಗಳುಳ್ಳದ್ದಾಗಿಯೂ, ಕೆಲವರು ಶರಭಮೃಗದಂತೆ ಗೊರಸುಳ್ಳದ್ದಾಗಿ ಹೇಳುವರು, ಪಿಂಗಳಮೂರ್ತಿ-ಕಪಿಲವರ್ಣವುಳ್ಳದ್ದಾದ ಶರೀರವುಳ್ಳವನಾಗಿಯೂ, ಅಜಮೃಗ ಲೋಭವ್ಯಾಕುಲಚಿತ್ತಃ-ಅಜ-ಮೇಕೆ, ಮೃಗ-ಅರಣ್ಯ ಮೃಗಗಳಲ್ಲಿ ಲೋಭ-ವ್ಯಾಕುಲವಾದ, ಚಿತ್ತಃ-ಮನಸ್ಸುಳ್ಳುವನಾಗಿಯೂ, ಕೆಲವರು ಅಳಿಮೃಗ-

ಲೋಮಾ-ಎಂದು ಪಠಿಸಿ ಮೃಗರೋಮದಂತೆ ರೋಮವುಳ್ಳವನು ಮತ್ತು ವ್ಯಾಕುಲಚಿತ್ತವುಳ್ಳವನೆಂದು, ಅಯಂ-ಈ ಪ್ರಕಾರವಾಗಿ ವೃಷಭ ಭವನಸ್ಯ-ವೃಷಭ ರಾಶಿಯ, ಪ್ರಾಂತಗತಃ-ತೃತೀಯ ದ್ರೇಕ್ಕಾಣವು, ಇದು ಶಶಿಗ್ರಹಾಸಕ್ತವಾದ ಪುರುಷದ್ರೇಕ್ಕಾಣವಾಗಿರುವುದು.

## ಇತಿ ವೃಷಭ ದ್ರೇಕ್ಕಾಣ ವಿಚಾರಃ

## ಮಿಥುನ ಪ್ರಥಮ ದ್ರೇಕ್ಕಾಣ ವಿಚಾರಃ

ಮೂಲ॥ ಸೂಚ್ಯಾಶ್ರಯಂ ಸಮುಭಿವಾಂಛತಿ ಕರ್ಮನಾರೀ ರೂಪಾನ್ವಿತಾ
ಭರಣಕಾರ್ಯ ಕೃತಾದರಾಚ। ಹೀನಪ್ರಜ್ಯೋಚ್ಛ್ರಿತ್ರ ಭುಜರ್‍ತುಮತೀ
ತ್ರಿಭಾಗಮಾದ್ಯಂ ತೃತೀಯ ಭವನಸ್ಯವದಂತಿ ತಜ್ಞಾಃ ॥೭॥

ಅವತಾರಿಕೆ॥ ಮಿಥುನ ಪ್ರಥಮ ದ್ರೇಕ್ಕಾಣ ಸ್ವರೂಪ ವಿಚಾರ ಹೇಳಲ್ಪಡುತ್ತೆ.

ಟೀಕು॥ ರೂಪಾನ್ವಿತಾ-ಸೌಂದರ್ಯಯುಕ್ತವಾಗಿರುವ, ಆಭರಣ-ಕಾರ್ಯ ಕೃತಾದರಾಚ-ಭೂಷಣಕ್ರಿಯೆಗಳಲ್ಲಿ ಅಭಿಲಾಷೆ ಹೊಂದಿರುವ, ಹೀನಪ್ರಜಾಃ-ಸಂತಾಪ ಹೀನಳಾಗಿಯೂ, ಉಚ್ಛ್ರಿತ್ರ ಭುಜಾಃ-ಊರ್ಧ್ವ ಭುಜ ಉಳ್ಳವಳಾಗಿಯೂ, ಋತು ಮತೀ-ರಜಸ್ವಲೆಯಾಗಿಯೂ, (ಪಾಠಾಂತರ-ಉಚ್ಛ್ರಿತಭುಜ್ಞಾತುಸತೀ-ಎತ್ತಲ್ಪಟ್ಟ ಭುಜಗಳುಳ್ಳ ಸ್ತ್ರೀಯೆಂದೂ, ಸತೀ-ಪತಿವ್ರತೆಯೆಂದು ಕೆಲವರು ಹೇಳುವರು) ಸೂಚ್ಯಾ ಶ್ರಯಂ-ಸೂಚಿಯನ್ನು ಆಶ್ರಯಿಸಿ, ಕರ್ಮ ಮಾಡುವಿಕೆ, ಅಂದರೆ ಹೊಲಿಯುವ ಕೆಲಸ ಮಾಡುವಿಕೆ, (ಅಂದರೆ ವಸ್ತ್ರಸಂಯೋಜನ) ಈ ಪ್ರಕಾರ, ತದಾಜ್ಞಾಃ- ಪಂಡಿತರು, ತೃತೀಯ ಭವನಸ್ಯ-ಮಿಥುನರಾಶಿಯ ಪ್ರಥಮ ದ್ರೇಕ್ಕಾಣವು ಸುಂದರವಾದ ಸ್ತ್ರೀಸ್ವರೂಪವಾಗಿ, ಭೂಷಣಾದಿಗಳಲ್ಲಿ ಅಭಿಲಾಷೆ ಹೊಂದಿ ಭುಜಗಳನ್ನು ಮೇಲಕ್ಕೆ ಎತ್ತಿಕೊಂಡು, ಪವಿವ್ರತಾ ಧರ್ಮವುಳ್ಳವಳಾಗಿ ಹೊಲಿಗೆ ಕೆಲಸ ತಿಳಿದಿರುವ ಸ್ತ್ರೀ ದ್ರೇಕ್ಕಾಣವಾಗಿರುವುದು ॥೭॥

## ಮಿಥುನ ದ್ವಿತೀಯ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ॥ ಉದ್ಯಾನಸಂಸ್ಥಃ ಕವಚೀಧನುಷ್ಮಾ । ಶೂರೋಸ್ತ್ರಧಾರೀ ಗರುಡಾ
ನನಶ್ಚ । ಕ್ರೀಡಾತ್ಮಜಾಲಂ ಕರುಣಾರ್ಥಚಿಂತಾ । ಕರೋತಿಮಧ್ಯೇ
ಮಿಥುನಸ್ಯರಾಶೇ ॥೮॥

ಅವತಾರಿಕೆ॥ ಮಿಥುನ ದ್ವಿತೀಯ ದ್ರೇಕ್ಕಾಣ ಸ್ವರೂಪವೇನೆಂದರೆ :-

ಟೀಕು॥ ಮಿತುನಸ್ಯರಾಶೇಃ-ಮಿಥುನರಾಶಿಯ, ಮಧ್ಯೇ-ಮಧ್ಯದ್ರೇಕ್ಕಾಣವು

ಉದ್ಯಾನಸಂಸ್ಥಃ-ಉದ್ಯಾನವನವುಳ್ಳದ್ದು, ಕವಚೀ-ಕವಚವನ್ನು ಹಾಕಿಕೊಂಡು, ಧನುಷ್ಮಾನ್-ಧನುರ್ಧಾರಿಯಾಗಿ, ಶೂರ-ಯುದ್ಧಾಸಕ್ತನಾಗಿ ಅಸ್ತ್ರಧಾರೀ-ಅಸ್ತ್ರಗಳ ಧರಿಸಿದವನಾಗಿ, (ಪಾಠಾಂತರ-ಶಸ್ತ್ರಾಸ್ತ್ರಧಾರಿ-ಶಸ್ತ್ರಾಸ್ತ್ರ ಧರಿಸಿದವನು) ಗರುಡಾನನಃ-ಗರುಡನಂತೆ ಮುಖವುಳ್ಳವನು. ಕ್ರೀಡಾತ್ಮಜಾಲಂ ಕರಣಾರ್ಥಚಿಂತಾಂ-ರತಿ ಪುತ್ರ ಭೂಷಣ ಧನ ವಿಷಯವಾದ ವಿಚಾರವನ್ನು, ಕರೋತಿ-ಮಾಡುವವನು, ಮಿಥುನ ರಾಶಿಯ ಮಧ್ಯ ದ್ರೇಕ್ಕಾಣಮೂರ್ತಿಯು ಪುರುಷನಾಗಿ, ಉದ್ಯಾನವನದಲ್ಲಿದ್ದು ಕವಚ ವನ್ನು ಧರಿಸಿ, ಕೈಯಲ್ಲಿ ಬಿಲ್ಲನ್ನೂ, ಅಸ್ತ್ರಶಸ್ತ್ರಗಳನ್ನೂ ಧರಿಸಿ ಯುದ್ಧಾಸಕ್ತನಾಗಿ, ಗರುಡನ ಮುಖದಂತಿರುವವನಾಗಿ, ರತಿ-ಸ್ತ್ರೀಧನ ಪುತ್ರಾದಿಗಳ ವಿಚಾರ ಮಾಡುತ್ತ ಲಿರುವ ಶುಕ್ರಾ ಗ್ರಹಾಸಕ್ತನಾದ ಸಾಯುಧ ಪುರುಷ ದ್ರೇಕ್ಕಾಣವಾಗಿರುವುದು ॥೮॥

## ಮಿಥುನ ತೃತೀಯ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ॥ ಭೂಷಿತೋವರುಣವದ್ಬ ಹುರತ್ನೋ ಬದ್ಧಕೋಣಕವಚಃ ಸಧನುಷ್ಕಃ॥ ನೃತ್ಯವಾದನ ಕಲಾಸುಚ ವಿದ್ವಾನ್। ಕಾವ್ಯಕೃನ್ಮಿಥುನ ರಾಶ್ಯವಸಾನೇ ॥೯॥

ಟೀಕು॥ ಮಿಥುನರಾಶಿಯ ತೃತೀಯ ದ್ರೇಕ್ಕಾಣ ಸ್ವರೂಪವೇನೆಂದರೆ-ಮಿಥುನ ರಾಶ್ಯವಸಾನೇ-ಮಿಥುನರಾಶಿಯ ತೃತೀಯ ದ್ರೇಕ್ಕಾಣವು, ಭೂಷಿತಃ-ಅಲಂಕಾರ ಮಾಡಿಕೊಂಡವನು, ವರುಣವಾತ್-ಸಮುದ್ರದ ಹಾಗೆ ಗಂಭೀರವಾದವನಾಗಿ, ಬಹು ರತ್ನಃ-ಅನೇಕ ರತ್ನಗಳುಳ್ಳವನಾಗಿ, ಬದ್ಧಕೋಣಕವಚಃ-ಬದ್ಧ-ಕಟ್ಟಲ್ಪಟ್ಟ, ಕೋಣ-ಬತ್ತಳಿಕೆಯುಳ್ಳವನಾಗಿ, ಕವಚಃ-ಕವಚ ಧಾರಣೆ ಮಾಡಿಕೊಂಡು, ಸಧನುಷ್ಕಃ-ಬಿಲ್ಲುಳ್ಳವನಾಗಿಯೂ, ನೃತ್ಯವಾದನ ಕಲಾಸು-ನೃತ್ಯವಾದಿತ್ರ ಕಲೆಗಲನ್ನು ತಿಳಿದವನಾಗಿ. (ಅಥವಾ ಕಳಾಸು-ಚತುಃಷಷ್ಟಿ ಕಲೆಗಳನ್ನು ತಿಳಿದವನಾದ) ವಿದ್ವಾನ್-ವಿದ್ವಾಂಸನಾಗಿ, ಕಾವ್ಯಕೃತ್-ಕವಿತ್ವಮಾಡುವ ಯೋಗ್ಯತೆಯುಳ್ಳವನಾಗಿ, ಇದು ಆಯುಧ ಸಹಿತವಾದ ಶನಿಗ್ರಹಾಸಕ್ತವಾದ ಪುರುಷ ದ್ರೇಕ್ಕಾಣವಾಗಿರುವುದು. ತಾ॥ ಮಿಥುನ ತೃತೀಯ ದ್ರೇಕ್ಕಾಣವು, ಪುರುಷನು ಅಲಂಕಾರಮಾಡಿಕೊಂಡು ಸಮುದ್ರದ ಹಾಗೆ ಗಂಭೀರ-ವಾಗಿಯೂ, ಅನೇಕ ರತ್ನಗಳುಳ್ಳವನಾಗಿಯೂ ಅಂಗಿಹಾಕಿಕೊಂಡು ಬಿಲ್ಲು ಬತ್ತಳಿಕೆ ಅಂಬುಗಳನ್ನು ಧರಿಸಿಕೊಂಡು ಚತುಷಷ್ಟಿ ವಿದ್ಯಾಪಾರಂಗತನಾಗಿಯೂ, ವಿದ್ವಾಂಸ-ನಾಗಿಯೂ, ಕವಿತ್ವ ಮಾಡುವವನಾಗಿಯೂ ಇರುವ ಶನಿಗ್ರಹಾಸಕ್ತವಾದ ಸಾಯುಧ ಪುರುಷ ದ್ರೇಕ್ಕಾಣವು ॥೯॥

## ಕಟಕರಾಶಿಯ ಪ್ರಥಮ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ|| ಪತ್ರಮೂಲ ಫಲಭೃದ್ವಿಪಕಾಯಃಕಾನನೇಮಲಯಗಃ ಶರಭಾಂಘ್ರಿಃ|
ಕ್ರೋಡ ತುಲ್ಯವದನೋಹಯಕಂಠಃ ಕರ್ಕ್ಕಿಣಃಪ್ರಥಮ
ರೂಪಮುಶಂತಿ ||೧೦||

ಅವತಾರಿಕೆ|| ಕಟಕರಾಶಿಯ ಪ್ರಥಮ ದ್ರೇಕ್ಕಾಣ ಲಕ್ಷಣವು ಹೇಳಲ್ಪಡುತ್ತೆ.

ಟೀಕು|| ಪತ್ರಮೂಲ ಫಲಬೃತ್-ಪತ್ರ-ಎಲೆಗಳನ್ನು, ಮೂಲ-ಬೇರುಗಳನ್ನು ಫಲ-ಫಲಗಳನ್ನು, ಭೃತ್-ಭರಿಸಿದವನು, ದ್ವಿಪಕಾಯಃ-ಗಜಸಮಾನವಾದ ಶರೀರವುಳ್ಳವನು, ಕಾನನೇ ಅಡವಿಯಲ್ಲಿ ಮಲಯಗಃ-ಮಲಯ ಪರ್ವತವನ್ನು ಹೊಂದಿರುವವನು, ಶರಭಾಂಪ್ರಿ-ಶರಭ ಮೃಗದಂತೆ ಪಾದಗಳುಳ್ಳವನು, ಕ್ರೋಡತುಲ್ಯ ವದನಃ-ಹಂದಿಯಂತೆ ಬಾಯಿಯುಳ್ಳವನು, ಹಯಕಂಠಃ-ಕುದುರೆಯಂತೆ ಕಂಠವುಳ್ಳ ವನು, ಈ ಪ್ರಕಾರ ಕರ್ಕಿಣಃ-ಕರ್ಕಟರಾಶಿಯ, ಪ್ರಥಮ ರೂಪಂ-ಪ್ರಥಮ ದ್ರೇಕ್ಕಾಣ ಸ್ವರೂಪವನ್ನು, ಉಶಂತಿ-ಹೇಳಿರುವದು. ತಾ|| ಕರ್ಕಾಟಕರಾಶಿಯ ಪ್ರಥಮ ದ್ರೇಕ್ಕಾಣ ಪುರುಷನು ಕುದುರೆಯ ಕುತ್ತಿಗೆಯಂತೆ ಕಂಠವು ಹಂದಿಯ ಬಾಯಿಯಂತೆ ಬಾಯಿಯು, ಫಲ ಗಡ್ಡೆ ಎಲೆಗಳ ಆಸಕ್ತಿಯುಳ್ಳವನಾಗಿ ಅಡವಿಯಲ್ಲಿ ಸಂಚರಿಸುತ್ತಾ ಶರಭ ಮೃಗದಂತೆ ಪಾದಗಳುಳ್ಳವನಾಗಿ, ಆನೆಯಂತೆ ಶರೀರವುಳ್ಳವನಾಗಿ ಚಂದ್ರಗ್ರಹಾಸಕ್ತವಾದ ಕಟಕ ಪ್ರಥಮ ದ್ರೇಕ್ಕಾಣವು ನರದ್ರೇಕ್ಕಾಣವಾಗಿರುವುದು ||೧೦||

## ಕಟಕರಾಶಿ ದ್ವಿತೀಯ ದ್ರೇಕ್ಕಾಣ ಸ್ವರೂಪಂ

ಮೂಲ|| ಪದ್ಮಾರ್ಚಿತಾ ಮೂರ್ಧನಿಭೋಗಿಯುಕ್ತಾ | ಸ್ತ್ರೀಕರ್ಕಶಾರಣ್ಯಗತಾಪಿ ರೌತಿ||
ಶಾಖಾಂಪಲಾಶಸ್ಯ ಸಮಾಶ್ರಿರಾಚಾ| ಮಧ್ಯೇಸ್ಥಿತಾ ಕರ್ಕಸ್ಯ ಕಸ್ಯರಾಶೇಃ||೧೦||

ಅವತಾರಿಕೆ|| ಕಟಕರಾಶಿ ದ್ವಿತೀಯ ದ್ರೇಕ್ಕಾಣ ಸ್ವಭಾವವೇನೆಂದರೆ-

ಟೀಕು|| ಕರ್ಕಟಸ್ಯರಾಶೇಃ-ಕರ್ಕಟರಾಶಿಯ, ಮಧ್ಯೆಸ್ಥಿತಾಃ-ಮಧ್ಯದಲ್ಲಿರುವ ದ್ರೇಕ್ಕಾಣವು, ಮೂರ್ಧ್ನಿ-ಶಿರಸ್ಸಿನಲ್ಲಿ, ಭೋಗಿಯುಕ್ತ-ಸರ್ಪದಿಂದ ಕೂಡಿಯೂ, ಪದ್ಮಾರ್ಚಿತಾ-ಕಮಲದಿಂದ ಪೂಜಿಸಲ್ಪಟ್ಟ, ಕರ್ಕಶಾ-ಕಠಿಣವಾಗಿರುವ, ಸ್ತ್ರೀ-ಸ್ತ್ರೀಯ ರೂಪವಾಗಿ, ಅರಣ್ಯಗತಾ-ವಿಜನವಾದ ಅರಣ್ಯದಲ್ಲಿ ಪಲಾಶಸ್ಯ-ಮುತ್ತು ಗದ, ಶಾಖಾಂಕೊಂಬೆಯನ್ನು, ಸಮಾಶ್ರಿತಾ-ಆಶ್ರಯಿಸಿಕೊಂಡು ವಿರೌತಿ-ಅರಚುತ್ತಲಿರುವಳು. ಕರ್ಕಾಟರಾಶಿಯ ಮಧ್ಯದ್ರೇಕ್ಕಾಣ ಮೂರ್ತಿಯು ಸರ್ಪವನ್ನು ತಲೆಯಮೇಲೆ ಸುತ್ತಿ ಕೊಂಡು ಕಮಲದಿಂದ ಪೂಜಿಸಲ್ಪಟ್ಟು ಸ್ತ್ರೀರೂಪವಾಗಿ ವಿಜನ ಪ್ರದೇಶವಾದ ಅಡವಿಯಲ್ಲಿ ಮುತ್ತುಗದ ಮರದ ಕೊಂಬೆಯನ್ನು ಹಿಡಿದುಕೊಂಡು

ಅರಚುತ್ತಲಿರುವಳು. ಇದು ಸರ್ಪಯುಕ್ತ ಭೌಮಗ್ರಹಾಸಕ್ತವಾದ ಸ್ತ್ರೀದ್ರೇಕ್ಕಾಣ ವಾಗಿರುವದು ॥೧೧॥

## ಕಟಕರಾಶಿಯ ತೃತೀಯ ದ್ರೇಕ್ಕಾಣ ಸ್ವರೂಪ ವಿಚಾರಃ

ಮೂಲ॥ ಭಾರ್ಯಾಭರಣಾರ್ಥ ಮರ್ಣವೇನೌಃ ಸ್ಥೋಗಚ್ಛತ್ತಿ ಸರ್ಪವೇಷ್ಟಿತಃ।
ಹೇಮ್ನೈಶ್ಚಯುತೋ ವಿಭೂಷಣೈಶ್ಚಿಪಿಟಾಸ್ಯೋಂತ್ಯ ಗತಶ್ಚಕರ್ಕಟೇ ॥

ಟೀಕು॥ ಕಟಕರಾಶಿಯ ತೃತೀಯ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ. ಕರ್ಕಟೇ-ಕರ್ಕಾಟಕ ರಾಶಿಯಲ್ಲಿ, ಅಂತ್ಯಗತೇ-ಅಂತ್ಯವಾದರೆ ೩ನೇ ದ್ರೇಕ್ಕಾಣವು, ಸರ್ಪವೇಷ್ಟಿತಃ-ಸರ್ಪದಿಂದ ಸುತ್ತಲ್ಪಟ್ಟು, ಹೇಮ್ನೈಃ-ಸುವರ್ಣ ನಿರ್ಮಿತವಾದ, ವಿಭೂಷಣೈಃ-ಆಭರಣಗಳಿಂದ, ಯುತಃ-ಕೂಡಿಕೊಂಡು, ಚಿಪಿಟಾಸ್ಯಃ-ಗುಬ್ಬಚ್ಚಿಯಂತೆ ಬಾಯಿಯುಳ್ಳದ್ದಾಗಿ, (ಪುರುಷಾಕೃತಿಯಿಂದ) ಭಾರ್ಯಾಭರಣಾರ್ಥಂ-ಭಾರ್ಯ-ಪತ್ನಿಯ, ಆಭರಣಾರ್ಥಂ-ಭೂಷಣಾದಿಗಳ ಕೋರಿಕೆಯುಳ್ಳದ್ದಾಗಿ, ಅರ್ಣವೇ- ಸಮುದ್ರದ, ನೌಸ್ಥಃ-ಹಡಗಿನ ಮೇಲೆ ಹತ್ತಿಕೊಂಡು, ಗಚ್ಛತಿ-ಹೋಗುತ್ತಿರುವದು, ತಾ॥ ಕಟಕ ರಾಶಿಯ ತೃತೀಯ ದ್ರೇಕ್ಕಾಣವು ಪುರುಷಾಕೃತಿಯಾಗಿ ಸರ್ಪವನ್ನು ಸುತ್ತಿಕೊಂಡು, ಸ್ವರ್ಣಮಿಶ್ರಿತವಾದ ಆಭರಣದ ಕೋರಿಕೆಯಿಂದ ಸಮುದ್ರದಲ್ಲಿ ಹಡಗಿನ ಮೇಲೆ ಕೂತುಕೊಂಡು ಹೋಗುತ್ತಲಿರುವದು. ಈ ದ್ರೇಕ್ಕಾಣವು ಪುರುಷರೂಪವಾದದ್ದಾಗಿ ಗುರುಗ್ರಹಾಸಕ್ತವಾದ ನರ ದ್ರೇಕ್ಕಾಣವಾಗಿರುವದು ॥೧೨॥

## ಸಿಂಹರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ಶಾಲ್ಮಲೇರುಪರಿಗೃಧ್ರ ಜಂಬುಕೌಶ್ವಾನರಶ್ಚ ಮಲಿನಾಂಬರಾನ್ವಿತಃ। ರೌತಿ ಮಾತೃಪಿತೃವಿ ಪ್ರಯೋಜಿತ ಸಿಂಹರೂಪ ಮಿದಮಾದ್ಯ ಮುಚ್ಯತೇ ॥೧೩॥

ಅವತಾರಿಕೆ ॥ ಸಿಂಹರಾಶಿಯ ಪ್ರಥಮ ದ್ರೇಕ್ಕಾಣ ಸ್ವರೂಪ ವಿಚಾರವು ಹೇಳಲ್ಪಡುತ್ತೆ.

ಟೀಕು॥ ಶಲ್ಮಲೇಃ-ಬೂರಗದ ಮರದ, ಉಪರಿ-ಮೇಲೆ, ಗೃಧ್ರಜಂಬುಕೌ-ಹದ್ದು ಮತ್ತು ನರಿಯ ರೂಪವಾಗಿಯೂ, ಶ್ವಾ-ನಾಯಿಯಂತೆಯೂ, ಮಲಿನಾಂಬರಾನ್ವಿತಃ-ಮಲಿನವಾದ ವಸ್ತ್ರವನ್ನು ಧರಿಸಿದ, ನರಶ್ಚ-ಮನುಷ್ಯನೂ, ಮಾತೃಪಿತೃ ವಿಪ್ರಯೋಜಿತಃ-ಮಾತಾಪಿತೃಗಳಲ್ಲಿರದವನಾಗಿ, ರೌತಿ-ಅಳುತ್ತಿವನು, ಇದಂ-ಈ ದ್ರೇಕ್ಕಾಣವು, ಆದ್ಯಂ-ಸಿಂಹರಾಶಿಯ ಮೊದಲನೆಯದಾದ, ಸಿಂಹರೂಪಂ- ಸಿಂಹರಾಶಿ ದ್ರೇಕ್ಕಾಣ ರೂಪವು, ಉಚ್ಯತೇ-ಹೀಗೆಂದು ಹೇಳಲ್ಪಡುತ್ತೆ. ಈ ದ್ರೇಕ್ಕಾಣವು ನರ

ದ್ರೇಕ್ಕಾಣವಾಗಿಯೂ ನಾಯಿಯ ಹಾಗಿರುವುದರಿಂದ ಚತುಷ್ಪದವಾಗಿಯೂ, ಹದ್ದಿನಹಾಗಿರುವುದರಿಂದ ಪಕ್ಷಿದ್ರೇಕ್ಕಾಮವಾಗಿಯೂ, ಸೂರ್ಯಗ್ರಹಾಸಕ್ತವಾದ ದ್ರೇಕ್ಕಾಣವಾಗಿರುವುದು ॥೧೩॥

ಮೂಲ॥ ಹಯಾಕೃತಿಃ ಪಾಂಡುರ ಮಾಲ್ಯಶೇಖರೋ ಬಿಭರ್ತಿಕೃಷ್ಣಾಜಿನ ಕಂಬಳಂ*ನಂಃ । ದುರಾಸದಸ್ಸಿಂಹ ಇವಾತ್ತಕಾರ್ಮ್ಕ- ಕೋನತಾಗ್ರನಾಸೋ ಮೃಗರಾಜಮಧ್ಯಮಃ ॥೧೪॥

ಅವತಾರಿಕೆ॥ ಸಿಂಹರಾಶಿಯ ೨ನೇ ದ್ರೇಕ್ಕಾಣದ ಲಕ್ಷಣ ಮತ್ತು ಆಕೃತಿ ಹೇಳಲ್ಪಡುತ್ತೆ.

ಟೀಕು॥ ಮೃಗರಾಜ ಮಧ್ಯಮಃ-ಸಿಂಹರಾಶಿಯ ದ್ವಿತೀಯ ದ್ರೇಕ್ಕಾಣವು, ಹಯಾ ಕೃತಿಃ-ಕುದುರೆಯ ಆಕೃತಿಯುಳ್ಳದ್ದು, ಪಾಂಡುರಮಾಲ್ಯಶೇಖರಃ-ಸ್ವಲ್ಪ ಬಿಳುಪಾದ ಪುಷ್ಪಮಾಲೆಯನ್ನು ಶಿರಸ್ಸಿನಲ್ಲಿ ಧರಿಸಿದ, ನರಃ-ಮನುಷ್ಯನು, ಕೃಷ್ಣಾಜಿನ ಕಂಬಳಂ- ಜಿಂಕೆಯ ಚರ್ಮವನ್ನು (ಕೃಷ್ಣಾಜಿನವನ್ನು) ಕಂಬಳ-ದಾವಳಿಯನ್ನು, ಭಿಭರ್ತಿ-ಧರಿಸಿದವನು, ಸಿಂಹ ಇವ-ಸಿಂಹದಂತೆ ಕ್ರೂರವಾಗಿರುವನು, ಆತ್ತಕಾರ್ಮುಕಃ- ಧರಿಸಿದ ಬಿಲ್ಲುಳ್ಳವನು, ದುರಾಸದಃ-ಜೈಸಲಸಾಧ್ಯವಾದವನು, ಅಂದರೆ ಧನುರ್ಧಾರಿ, ನತಾಗ್ರನಾಸಃ-ಬೊಗ್ಗಿದ ನಾಸಿಕವುಳ್ಳವನು, ಅಂದರೆ ಗಿಣಿಮೂಗುಳ್ಳವನು, ಈ ಸಿಂಹ ದ್ವಿತೀಯ ದ್ರೇಕ್ಕಾಣವು ಆಯುಧ ಸಂಬಂಧವಾಗಿಯೂ, ಬೃಹಸ್ಪತ್ಯಧಿದೇವತೆ ಯಾಗಿಯೂ ಇರುವದು ॥೧೪॥

ಮೂಲ॥ ಋಕ್ಷಾನನೋ ವಾನರತುಲ್ಯಚೇಷ್ಟೋ । ಬಿಭರ್ತಿದಂಡಂ ಫಲಮಾ ಮಿಷಂಚ ॥ ಕೂರ್ಚೀಮನುಷ್ಯಃ ಕುಟಿಲೈಶ್ಚಕೇಶೈ। ರ್ಮೃಗೇಶ್ವರಸ್ಯಾಂ ತ್ಯಗತಸ್ತ್ರಿಭಾಗಃ ॥೨೫॥

ಅವತಾರಿಕೆ॥ ಸಿಂಹರಾಶಿಯ ಮೂರನೇ ದ್ರೇಕ್ಕಾಣದ ವರ್ಣನೆ ಹೇಳಲ್ಪಡುತ್ತೆ.

ಟೀಕು॥ ಮೃಗೈಶ್ವರಸ್ಯ-ಸಿಂಹರಾಶಿಯ, ಅಂತ್ಯಗತಃ-ಕೊನೆಯದಾದ, ತ್ರಿಭಾಗಃ- ತ್ರಿಭಾಗವೆಂದರೆ (ರಾಶಿ ತ್ರಿಭಾಗೋ ದ್ರೇಕ್ಕಾಣವೆಂಬುವ ಸೂತ್ರದ ಪ್ರಕಾರ) ದ್ರೇಕ್ಕಾಣವು, ಋಕ್ಷಾನನಃ-ಕರಡಿಯಂತೆ ಮುಖವುಳ್ಳವನು, ವಾನರ ತುಲ್ಯಚೇಷ್ಟಃ- ಕಪಿಯಂತೆ ನಟಿಸುವವನೂ, ಕೂರ್ಚಿ-ಉದ್ದವಾದ (ದಾಡೀ) ಮೀಸೆಗಳುಳ್ಳವನು. ಕುಟಿಲೈಃ-ಚಪಲವಾದ, ಕೇಶ್ಯೈಃ-ಕೇಶಪಾಶಗಳಿಂದ ವ್ಯಾವೃತನಾದ, ಮನುಷಃ- ಮನುಷ್ಯನು, ದಂಡಃ-ದೊಣ್ಣೆಯನ್ನು, ಫಲಂ-ಫಲವನ್ನೂ, ಆಮಿಷಂಚ- ಮಾಂಸವನ್ನು, ಬಿಭರ್ತಿ-ಧರಿಸಿದವನು ಆಗಿರುವ ಚತುಷ್ಪವೆಂದರೆ ನಾಲ್ಕು

* ಚೀವರಂ-ಪಾ॥ ಹಳೇ ಬಟ್ಟೆಯನ್ನು ಧರಿಸಿದವನು.

ಪಾದಗಳುಳ್ಳ ಆಯುಧಯುಕ್ತವಾದ ಭೌಮದೇವತಾಭಿಮಾನವುಳ್ಳ ನರದ್ರೇಕ್ಕಾಣವೆಂದು ಹೇಳಲ್ಪಟ್ಟಿದೆ ॥೧೫॥

## ಕನ್ಯಾರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ಪುಷ್ಪಪ್ರಪೂರ್ಣೇನ ಘಟೇನಕನ್ಯಾ। ಮಲಪ್ರದಿಗ್ಧಾಂಬರಸಂವೃತಾಂಗೀ॥ ವಸ್ತ್ರಾರ್ಥಸಂಯೋಗ ಮಭೀಪ್ಸಮಾನಾಂ । ಗುರೋಃ ಕಲುಂವಾಂಛತಿ ಕನ್ಯಕಾದ್ಯಾಃ ॥೧೬॥

ಅವತಾರಿಕೆ॥ ಕನ್ಯಾರಾಶಿಯ ಮೊದಲನೇ ದ್ರೇಕ್ಕಾಣದ ವರ್ಣನೆ ಹೇಳಲ್ಪಡುತ್ತೆ.

ಟೀಕು॥ ಕನ್ಯಾಕಾದ್ಯಃ-ಕನ್ಯಾರಾಶಿಯ ಮೊದಲನೆ ದ್ರೇಕ್ಕಾಣವು, ಪುಷ್ಪ ಪ್ರಪೂರ್ಣೇನ-ಹೂವುಗಳಿಂದ ಪೂರ್ಣವಾದ, ಘಟೇನ-ಗುಡಾಣದೊಡನೆ, ಉಪಲಕ್ಷಿತಾ-ಯುಕ್ತವಾದವಳೂ, ಮಲಪ್ರದಿಗ್ಧಾಂಗೀ-ಮಲಿನವಾದ ಬಟ್ಟೆಯನ್ನುಟ್ಟು ಕೊಂಡವಳೂ, ವಸ್ತ್ರಾರ್ಥಸಂಯೋಗಂ-ವಸ್ತ್ರ ಧನಗಳ ಕೂಡಿಡುವಿಕೆಯನ್ನು, ಅಭೀಪ್ಸಮಾನಾ-ಅಪೇಕ್ಷಿಸುತ್ತಿರುವವಳೂ ಆದ, ಕನ್ಯಾಂ-ಮೈನೆರೆಯದಿದ್ದ ಹುಡುಗಿಯಾಗಿ, ಗುರೋಃ-ಗುರುವಿನ, ಗೃಹಂ-ಗೃಹವನ್ನು ಕುರಿತು, ವಾಂಛತಿ- ಅಪೇಕ್ಷಿಸುವವಳೂ, ಆದ ಬುಧದೇವತಾಕಾರವಾದ ಸ್ತ್ರೀ ದ್ರೇಕ್ಕಾಣವಾಗಿರುವದು.

ಮೂಲ॥ ಪುರುಷಃ ಪ್ರಗೃಹೀತಲೇಖನಿಶ್ಯಾಮೋ ವಸ್ತ್ರಶಿರಾವ್ಯಯಾಯಕೃತ್। ವಿಪುಲಂಚ ಬಿಭರ್ತಿಕಾರ್ಮುಕು ರೋಮವ್ಯಾಪ್ತ ತನುಶ್ಚಮಧ್ಯಮಃ ॥

ಅವತಾರಿಕೆ॥ ಕನ್ಯಾರಾಶಿಯ ದ್ವಿತೀಯ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮಧ್ಯಮಃ-ಕನ್ಯಾರಾಶಿಯ ಮಧ್ಯಭಾಗದ ದ್ರೇಕ್ಕಾಣವು. ಪ್ರಗೃಹೀತ ಲೇಖನಿಃ-ಹಿಡಿಯಲ್ಪಟ್ಟ ಲೇಖಿಯುಳ್ಳವನು. ಶ್ಯಾಮಃ-ಕೃಷ್ಣವರ್ಣವುಳ್ಳವನು, ವಸ್ತ್ರಶಿರಾಃ-ವಸ್ತ್ರವೇಷ್ಟಿತವಾದ ತಲೆಯುಳ್ಳವನು, ವ್ಯಯಾಯಕೃತ್-ಲಾಭವ್ಯಯಗಳನ್ನು ಲೆಕ್ಕಮಾಡುವವನು, ರೋಮವ್ಯಾಪ್ತತನುಶ್ಚ-ರೋಮದಿಂದ ವ್ಯಾವೃತವಾದ ಶರೀರವುಳ್ಳವನೂ ಆದ, ಪುರುಷಃ-ಮನುಷ್ಯನು, ವಿಪುಲಂ-ವಿಸ್ತಾರವಾದ ಕಾರ್ಮುಕಂ-ಧನುಸ್ಸನ್ನು, ಬಿಭರ್ತಿ-ಧಾರಣ ಮಾಡುತ್ತಿರುವನು. ಈ ದ್ರೇಕ್ಕಾಣವು ಆಯುಧಯುಕ್ತವಾದ ಶನಿದೇವತಾಕವಾದ ಮನುಷ್ಯ ದ್ರೇಕ್ಕಾಣವು ॥೧೭॥

ಮೂಲ॥ ಗೌರೀಸುಧೌತಾಗ್ರದಕೂಲಗಂಪ್ತಾ । ಸಮುಚ್ಛ್ರಿತಾಕುಂಭಕಟೇಚ್ಛು ಹಸ್ತಾ ॥ ದೇವಾಲಯಂ ಸ್ತ್ರೀಪ್ರಯತಾಪ್ರವೃತ್ತಾ । ವದಂತಿ ಕನ್ಯಾಂ ತ್ಯಗತಸ್ತ್ರಿ ಭಾಗಃ ॥೧೮॥

ಅವತಾರಿಕೆ॥ ಕನ್ಯಾರಾಶಿಯ ತೃತೀಯ ದ್ರೇಕ್ಕಾಣದ ಲಕ್ಷಣವು ಹೇಳಲ್ಪಡುತ್ತೆ.

ಟೀಕು॥ ಕನ್ಯಾಂತ್ಯಗತ ಸ್ತ್ರಿಭಾಗಃ-ಕನ್ಯಾರಾಶಿಯ ತೃತೀಯ ದ್ರೇಕ್ಕಾಮವು, ಗೌರೀ-ಮಿಂಚುತ್ತಿರುವ ಹೊಳಪು ಬಣ್ಣವುಳ್ಳವಳು, ಸುಧೌತಾಗ್ರದುಕೂಲ ಗುಪ್ತಾ-ನಿರ್ಮಲವಾದ ಸೆರಗು ಅಂಚುಳ್ಳ ಪೀತಾಂಬರ ಧಾರಣೆಮಾಡಿಕೊಂಡವಳು, ಸಮುಚ್ಛ್ರಿತ್ರಾ- ಅತ್ಯಂತ ಉದ್ದವಾದವಳು. ಕುಂಭ ಕಟೇಚ್ಚುಹಸ್ತಾ-ಕೊಡವನ್ನೂ, ಸೌಟನ್ನೂ ಕೈಗಳಲ್ಲಿ ಹಿಡಿದುಕೊಂಡವಳೂ, ಪ್ರಯತಾ-ತಪ್ಪದೇ, ದೇವಾಲಯಂ-ದೇವಸ್ಥಾನವನ್ನು ಕುರಿತು, ಪ್ರವೃತ್ತಾ-ಪ್ರವರ್ತಿಸುತ್ತಿರುವವಳಾದ, ಸ್ತ್ರೀ-ಹೆಣ್ಣು ರೂಪವುಳ್ಳವಳು, ಎಂದು ವದಂತಿ-ಜ್ಯೋತಿಷ್ಕರು ಹೇಳುತ್ತಾರೆ. ಇದು ಶುಕ್ರ ದೇವತಾಕವಾದ ಸ್ತ್ರೀ ದ್ರೇಕ್ಕಾಣವು ॥೧೮॥

## ತುಲಾರಾಶಿ ದ್ರೇಕ್ಕಾಣ ಸ್ವರೂಪ ವಿಚಾರಃ

**ಮೂಲ॥ ವೀಥ್ಯಂತರಾಪಣಗತಃ ಪುರುಷಸ್ತುಲಾವಾ । ನುನ್ಮಾನಮಾನ ಕುಶಲಃ ಪ್ರತಿಮಾನಹಸ್ತಃ ॥ ಭಾಂಡಂ ವಿಚಿಂತಯತಿತಸ್ಯಚ ಮೂಲಮೇತ। ದ್ರೂಪಂವ ದಂತಿ ಯುವನಾಃ ಪ್ರಥಮಂತುಲಾಯಾಃ ॥೧೯॥**

ಅವತಾರಿಕೆ॥ ತುಲಾರಾಶಿಯ ಮೊದಲನೇ ದ್ರೇಕ್ಕಾಣ ಸ್ವರೂಪವು ವರ್ಣಿಸಲ್ಪಡುತ್ತೆ.

ಟೀಕು॥ ವೀಥ್ಯಂತರಾಪಣಗತಃ-ಶ್ರೇಣಿಯಲ್ಲಿ ಮಧ್ಯವಾದ ಅಂಗಡಿಯಲ್ಲಿರುವನು, ಪುರುಷಃ-ಪುರುಷನು, ತುಲವಾ-ಕೈಯಲ್ಲಿ ತೂಕಮಾಡುವ ತಕ್ಕಡಿಯನ್ನು ಹಿಡಿದು ಕೊಂಡಿರುವವನು, ಉನ್ಮಾನ ಮಾನಕುಶಲಃ-ತೂಕಮಾಡುವುದರಲ್ಲಿಯೂ ಅಳತೆ ಮಾಡುವುದರಲ್ಲಿಯೂ ಅತ್ಯಂತ ಚತುರತೆಯುಳ್ಳವನು. ಪ್ರತಿಮಾನ ಹಸ್ತ-ಒರೆಗಲ್ಲನ್ನೂ ಚಿನ್ನದ ತುಂಡನ್ನೂ ಕೈಯಲ್ಲಿ ಹಿಡಿದುಕೊಂಡಿರುವವನು, ಭಾಂಡಂ-ಮೂಲಧನವನ್ನು ಯೋಚಿಸುತ್ತಿರುವವನು ತಸ್ಯಮೌಲ್ಯಂಚ ಏತತ್-ಅದರ ಬೆಲೆಯು ಸರಿಯೋ ಸರಿಯಿಲ್ಲವೋ ಎಂದು ಚಿಂತಿಸುತ್ತಿರುವವನು. ಈ ಪ್ರಕಾರವಾಗಿ ಯವನಾಃ-ಯುವನನೆಂಬುವ ಜ್ಯೋತಿಷ್ಕನ ಮತಸ್ಥರಾದವರು, ತುಲಾಯಾಃ ಪ್ರಥಮಂ ರೂಪಂ-ತುಲಾರಾಶಿಯ ಆದಿ ದ್ರೇಕ್ಕಾಣದ ಸ್ವರೂಪವನ್ನು ವದಂತಿ-ಹೇಳುವರು ಇದು ಶುಕ್ರದೇವತಾಕವಾದ ಪುರುಷದ್ರೇಕ್ಕಾಣವು ॥೧೯॥

**ಮೂಲ॥ ಕುಲಶಂಪರಿಗೃಹ್ಯ ವಿನಿಷ್ಪತಿತುಂ । ಸಮಭೀಪ್ಸತಿ ಗೃಧ್ರಮುಖಃ ಪುರುಷಃ॥ ಕ್ಷುಧಿತಸ್ತೃಷಿತಶ್ಚ ಕಳತ್ರಸುತಾ । ನ್ಮನಸ್ಯೈವ ತುಲಾಧರ ಮಧ್ಯಗತಃ ॥೨೦॥**

ಅವತಾರಿಕೆ॥ ತುಲಾರಾಶಿಯ ದ್ವಿತೀಯ ದ್ರೇಕ್ಕಾಣದ ವರ್ಣನೆ ಹೇಳಲ್ಪಡುತ್ತೆ.

ಟೀಕು।। ತುಲಾಧರ ಮಧ್ಯಗತಃ-ತುಲಾರಾಶಿಯ ಮಧ್ಯ ದ್ರೇಕ್ಕಾಣವು, ಗೃಧ್ರಮುಖಃ ಹದ್ದಿನ ಮುಖವುಳ್ಳ, ಪುರುಷಃ-ಪುರುಷನು, ಕಲಶಃ-ನೀರು ತುಂಬಿದ ಕುಂಭವನ್ನು, ಪರಿಗೃಹ್ಯ-ಹಿಡಿದುಕೊಂಡು, ವಿನಿಷ್ಪತಿತುಂ-ಹಾರುವದಕ್ಕೆ, ಸಮಭೀಪ್ಸತಿ-ಅಪೇಕ್ಷಿಸುತ್ತಿರುವವನು ಮತ್ತು ಕ್ಷುಧಿತಃ-ಹಸಿವುಗೊಂಡವನು, ತೃಷಿತಃ-ನೀರಡಿಕೆ-ಯುಳ್ಳವನು. ಕಳಗ್ರಿ ಸುತಾರ್-ಪತ್ನಿ ಪುತ್ರರನ್ನು, ಮನಸಾ-ಮನಸ್ಸಿನಿಂದ, ಎತಿ-ಹೊಂದುತ್ತಾನೆ ಅಂದರೆ ಮನಸ್ಸಿನಲ್ಲಿ ಯೋಚಿಸು ವುದರಿಂದಲೇ ಹೊಂದುವನು, ಈ ಪ್ರಕಾರವಿರುವಂಥಾ ತುಲಾರಾಶಿಯ ದ್ವಿತೀಯ ದ್ರೇಕ್ಕಾಣವು ಶನಿದೇವತಾಕವಾದ ನರ ಪಕ್ಷಿ ದ್ರೇಕ್ಕಾಣವು ।।೨೦।।

ಮೂಲ।। ವಿಭೀಷಯಂಸ್ತಿಷ್ಠತಿ ರತ್ನಿಚಿತ್ರಿತೋ । ವನೇಮೃಗಾನ್ಕಾಂಚನತೂಣ ವರ್ಮ*ಭೃತ್ ।। ಫಲಾಮಿಷಂ ವಾನರರೂಪಭೃನ್ನರ್ನ ಸ್ತುಲಾವಸಾ ನೋಯುವನೈ ರುದಾಹೃತಃ ।।೨೧।।

ಅವತಾರಿಕೆ।। ತುಲಾರಾಶಿಯ ತೃತೀಯ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು।। ತುಲಾವಸಾನಃ-ತುಲಾರಾಶಿಯ ಅಂತ್ಯ ದ್ರೇಕ್ಕಾಣವು, ರತ್ನ ಚಿತ್ರಿತಃ-ಮಣಿಗಳಿಂದ ಅಲಂಕರಿಸಲ್ಪಟ್ಟವನು. ವನೇ-ಅರಣ್ಯದಲ್ಲಿ, ಮೃಗಾರ್-ಜಿಂಕೆ ಮೊದಲಾದವುಗಳನ್ನು, ವಿಭೀಷರ್ಯ-ಹೆದರಿಸುವವನಾಗಿ, ಕಾಂಚನತೂಣವರ್ಮ ಭೃತ್-ಚಿನ್ನದಬತ್ತಳಿಕೆಯನ್ನು, ಕವಚವನ್ನು ಧರಿಸಿದವನು, ಫಲಾಮಿಷಂ-ಹಣ್ಣನ್ನು, ಮಾಂಸವನ್ನು, ಭೃತ್-ಧರಿಸಿಕೊಂಡು, ತಿಷ್ಠತಿ ನಿಂತಿರುವನು, ವಾನರರೂಪಭೃತ್-ಕಪಿಯ ಆಕಾರವನ್ನು ವಹಿಸಿದನು, ನರಃ-ಈ ಮನುಷ್ಯ ರೂಪವಾಗಿರುವಂಥಾ ದ್ದೆಂದು, ಯವನೈಃ-ಯವನರಿಂದ, ಉದಾಹೃತಃ-ಹೇಳಲ್ಪಟ್ಟಿರುತ್ತೆ ।।೨೧।।

## ವೃಶ್ಚಿಕರಾಶಿ ದ್ರೇಕ್ಕಾಣವಿಚಾರಃ

ಮೂಲ।। ವಸ್ತ್ರೈರ್ವಿಹೀನಾವಿರಣೈಶ್ಚನಾರೀ। ಮಹಾಸಮುದ್ರಾತ್ಸಮುಪೈತಿ ಕೂಲಂ।। ಸ್ಥಾನಚ್ಯುತಾ ಸರ್ಪನಿಬದ್ಧಪಾದಾ । ಮನೋರಮಾ ವೃಶ್ಚಿಕರಾಶಿಪೂರ್ವಃ ।।೨೨।।

ಅವತಾರಿಕೆ।। ವೃಶ್ಚಿಕರಾಶಿಯ ಮೊದಲನೆ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು।। ವೃಶ್ಚಿಕರಾಶಿ ಪೂರ್ವಃ-ವೃಶ್ಚಿಕರಾಶಿಯ ಮೊದಲನೇ ದ್ರೇಕ್ಕಾಣವು, ವಸ್ತ್ರಾಭರಣೈಶ್ಚವಿಹೀನಾ ನಾರೀ-ವಸ್ತ್ರವು ಆಭರಣವು ಧರಿಸಿಕೊಳ್ಳದಿರುವ ನ್ನಗ್ನವಾದವಳು. (ಬೆತ್ತಲೆಯಾದ ಹೆಂಗಸು) ಮಹಾ ಸಮುದ್ರಾತ್ಸಮುಪೈತಿಕೂಲಂ ಮಹಾ

* ಪಾ-ವರ್ಮಭೃತ್.

ಸಾಗರದಿಂದ ದಡಕ್ಕೆ ಬರುತ್ತಿರುವಳು. ಸ್ಥಾನಚ್ಯುತಾ-ಸ್ವಸ್ಥಾನದಿಂದ ತಪ್ಪಿದವಳು. ಸರ್ಪನಿಬದ್ಧಪಾದಾ-ಸರ್ಪದಿಂದ ಕಟ್ಟಲ್ಪಟ್ಟ ಕಾಲುಗಳುಳ್ಳವಳು. ಆದಾಗ್ಯೂ ಮನೋರಮಾ-ಮನಸ್ಸಿಗೆ ರಮಣೀಯವಾದವಳು. ಈ ಪ್ರಕಾರ ವೃಶ್ಚಿಕ ರಾಶಿಯ ಆದಿ ದ್ರೇಕ್ಕಾಣವು, ಸ್ತ್ರೀಯಾಗಿ ಕುಜ ದೇವತಾಕವಾದ ಸರ್ಪ ದ್ರೇಕ್ಕಾಣವಾಗಿರುದು ॥೨೨॥

ಮೂಲ॥ ಸ್ಥಾನ ಸುಖಾನ್ನಭಿವಾಂಛತಿನಾರೀ । ಭರ್ತೃಕೃತೇ ಭುಜಗಾಮೃತ ದೇಹಾ ॥ ಕಚ್ಛ ಪಕುಂಭಪಸಮಾನಸುದೇಹಾ । ವೃಶ್ಚಿಕ ಮಧ್ಯಮರೂಪ ಮುಶಂತಿ ॥೨೩॥

ಅವತಾರಿಕೆ॥ ವೃಶ್ಚಿಕರಾಶಿಯ ಮಧ್ಯ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ವೃಶ್ಚಿಕ ಮಧ್ಯಮಃ-ವೃಶ್ಚಿಕರಾಶಿಯ ಮಧ್ಯಮ ರಾಶಿಯ ದ್ರೇಕ್ಕಾಣವು, ನಾರೀ-ಹೆಣ್ಣುರೂಪವುಳ್ಳದ್ದು. ಸ್ಥಾನಸುಖಾನಿ - ಸ್ವಸ್ಥಳದ ಸೌಖ್ಯವನ್ನು, ಅಭಿವಾಂಛತಿ-ಅಪೇಕ್ಷಿಸುತ್ತಿರುವಳು, ಭರ್ತೃಕೃತೇ - ಪತಿಗೋಸ್ಕರ, ಭುಜಗಾವೃತದೇಹಾ-ಸರ್ಪದಿಂದ ಬಿಗಿಯಲ್ಪಟ್ಟ ಶರೀರವುಳ್ಳವಳು, ಕಚ್ಛಪಕುಂಭ ಸಮಾನ ಶರೀರಾ-ಆಮೆ ವೃಶ್ಚಿಕ ರಾಶಿಯ ಎರಡನೆಯ ದ್ರೇಕ್ಕಾಣ ಸ್ವರೂವನ್ನು ಉಶಂತಿ-ಜೋತಿಷ್ಕರು ಹೇಳುವರು. ಇದು ಸ್ತ್ರೀ ದ್ರೇಕ್ಕಾಣವಾಗಿಯೂ, ಬೃಹಸ್ಪತ್ಯಾಧಿಪತ್ಯವುಳ್ಳ ಸರ್ಪ ದ್ರೇಕ್ಕಾಣವಾಗಿಯೂ ಇರುವುದು ॥೨೩॥

ಮೂಲ॥ ಪೃಥುಲ ಚಿಪಿಟಕೂರ್ಮತುಲ್ಯವಕ್ತ್ರಃ। ಶ್ವಮೃಗವರಾಹ ಸೃಗಾಲಭೀತಿ ಕಾರೀ ॥ ಅವತಿಚಮಲಯಾಕರ ಪ್ರದೇಶಂ । ಮೃಗಪತಿ-ರಂತ್ಯಗತಶ್ಚ ವೃಶ್ಚಿಕಸ್ಯ ॥೨೪॥

ಅವತಾರಿಕೆ॥ ವೃಶ್ಚಿಕರಾಶಿಯ ಅಂತ್ಯ ದ್ರೇಕ್ಕಾಣದ ಸ್ವರೂಪವು ವರ್ಣಿಸಲ್ಪಡುತ್ತೆ.

ಟೀಕು॥ ವೃಶ್ಚಿಕಸ್ಯ ಅಂತ್ಯಗತಸ್ಯ-ವೃಶ್ಚಿಕರಾಶಿಯ ಅಂತ್ಯ (ಭಾಗದ) ದ್ರೇಕ್ಕಾಣವು, ಪೃಥುಲಚಿಪಿಟಕೂರ್ಮತುಲ್ಯವಕ್ತ್ರಃ-ವಿಶಾಲವಾಗಿಯೂ, ತಟ್ಟೆಯಾಗಿಯೂ, ಕೂರ್ಮದ ಹಾಗೆಯೂ ಇರುವ ಮುಖವುಳ್ಳದ್ದು, ಶ್ವಮೃಗವರಾಹಸೃಗಾಲ ಭೀತಿಕಾರೀ- ನಾಯಿಗೂ, ಜಿಂಕೆಗೂ, ಗುಳ್ಳೆನರಿಗೂ ಹಂದಿಗೂ ಭಯವನ್ನುಂಟುಮಾಡಿ ಹೆದರಿಸು ತ್ತಿರುವದು. ಮಲಯಾಕರ ಪ್ರದೇಶಂ-ಶ್ರೀಗಂಧ ವೃಕ್ಷಗಳು ಹುಟ್ಟುವ ಕ್ಷೇತ್ರವನ್ನು, ಅವತಿ-ರಕ್ಷಿಸುತ್ತಲಿರುವುದು, ಮೃಗಪತಿಃ-ಸಿಂಹಸ್ವರೂವಾಗಿರುವ ವೃಶ್ಚಿಕರಾಶಿಯ ಕೊನೆಯ ಭಾಗದ ಈ ದ್ರೇಕ್ಕಾಣವು ಕೂರ್ಮದಂತೆ ಮುಖವಿರುವ ಸಿಂಹರೂಪ ದ್ರೇಕ್ಕಾಣ ಚಂದ್ರದೇವತಾಧಿಪತ್ಯವುಳ್ಳ ಚತುಷ್ಪದ ದ್ರೇಕ್ಕಾಣವಾಗಿರುವುದು ॥೨೪॥

## ಧನುರ್ರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ಮನುಷ್ಯವಕ್ತ್ರೋಶ್ವ ಸಮಾನಕಾಯೋ । ಧನುರ್ವಿಗೃಹ್ಯಾಯುತ ಮಾಶ್ರಮಸ್ಥಃ॥ ಕ್ರತೂಪಯೋಜಾನಿ ತಪಸ್ವಿನಶ್ಚ । ರರಕ್ಷಪೂರ್ವೋ ಧನುಷ ಸ್ತ್ರಿಭಾಗಃ ॥೨೫॥

ಅವತಾರಿಕೆ॥ ಧನೂರಾಶಿಯ ಪ್ರಥಮ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಧನುಷಸ್ತ್ರಿಭಾಗಃ ಪೂರ್ವಃ-ಧನುರಾಶಿಯ ಮೊದಲನೆ ದ್ರೇಕ್ಕಾಣವು ಮನುಷ್ಯ ವಕ್ತ್ರಃ-ಮನುಷ್ಯನ ಹಾಗೆ ಮುಖವುಳ್ಳದ್ದು, (ವಕ್ತ್ರಾಸ್ಯೇವದನಂ ತುಂಡಂ ಅನನಂಲಪನಂ ಮುಖಮಿತ್ಯಮರಃ) ಅಶ್ವಸಮಾನಕಾಯಃ-ಕುದುರೆಯ ಸಮಾನವಾದ ಶರೀರವುಳ್ಳದ್ದು, ಆಯಾತಂಧನುರ್ವಿಗೃಹ್ಯ-ಉದ್ದವಾದ ಬಿಲ್ಲನ್ನು ಧರಿಸಿ, ಆಶ್ರಮಸ್ಥಃ-ತಪೋವನದಲ್ಲಿರುವದು, ಕ್ರತೂಪಯೋಜ್ಯಾನಿ-ಯಜ್ಞಸಾಮಗ್ರಿಗಳನ್ನು, ತಪಶ್ವಿನಶ್ಚ-ತಪಿಸ್ಸುಮಾಡತಕ್ಕ ಋಷಿಗಳನ್ನು, ರಕ್ಷ-ರಕ್ಷಿಸುವದಾಗಿರುವದು, ಇದು, ಧನುರ್ರಾಶಿಯ ಮೊದಲನೆ ದ್ರೇಕ್ಕಾಣವು, ಗುರು ಅಧಿಪತ್ಯವುಳ್ಳ ಆಯುಧ ಸಹಿತವಾದ ಚತುಷ್ಪದವೂ ಮನುಷ್ಯನೂ ಆದ ದ್ರೇಕ್ಕಾಣವು ॥೨೫॥

ಮೂಲ॥ ಮನೋರಮಾ ಚಂಪಕಹೇಮವರ್ಣಾ । ಭದ್ರಾಸನೇ ತಿಷ್ಠತಿ ಮಧ್ಯರೂಪಾ ॥ ಸಮುದ್ರರತ್ನಾನಿ ವಿಘಟ್ಟಯಂತೀ । ಮಧ್ಯತ್ರಿಭಾಗೋ ಧನುಷಃ ಪ್ರ ದಿಷ್ಟಃ ॥೨೬॥

ಅವತಾರಿಕೆ॥ ಧನುರಾಶಿಯ ಎರಡನೆಯ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಧನುಷಃ ಮಧ್ಯತ್ರಿಭಾಗಃ-ಧನುರಾಶಿಯ ಮಧ್ಯದ್ರೇಕ್ಕಾಣವು, ಮನೋರಮಾ-ಮನಸ್ಸಿಗೆ ಸಂತೋಷಕರವಾದಳು. ಚಂಪಕಹೇಮವರ್ಣಾ-ಕೆಂಡಸಂಪಿಗೆ ಹೂವಿನಂತೆಯೂ, ಸುವರ್ಣದ ಹಾಗೂ ವರ್ಣವುಳ್ಳವಳು, ಭದ್ರಾಸನೇತಿಷ್ಠತಿ- ಮಂಗಳಕರವಾದ ಆಸನದಲ್ಲಿ ಕೂತುಕೊಂಡಿರುವಳು, ಮಧ್ಯರೂಪಾ-(ಅಂದರೆ ಬಾಲ್ಯಾವಸ್ಥೆ ಕಳೆದು ವಾರ್ಧಿಕ್ಯಾವಸ್ಥೆಗೆ ಬಾರದಿರುವ ಅವಸ್ಥೆಯೇ ಮಧ್ಯರೂಪಾವಸ್ಥೆ) ಅಂದರೆ ಯೌವನವತಿಯಾಗಿರುವಳು, ಸಮುದ್ರ ರತ್ನಾನಿ-ಸಮುದ್ರದಲ್ಲಿ ಹುಟ್ಟಿದ ರತ್ನಗಳನ್ನು, ವಿಘಟ್ಟಯಂತಿ-ಘಟ್ಟಿಸುತ್ತಿರುವಳು, ಇತಿ ಪ್ರದಿಷ್ಟಂ-ಈ ಮೇಲೆ ಹೇಳಿದ ಲಕ್ಷಣಯುಕ್ತವಾಗಿರುವ ಧನುಸ್ಸಿನ ದ್ವಿತೀಯ ದ್ರೇಕ್ಕಾಣವು ಅಂಗಾರಕಾಧಿಪತ್ಯವುಳ್ಳ ಸ್ತ್ರೀ ದ್ರೇಕ್ಕಾಣವು ॥೨೬॥

ಮೂಲ॥ ಕೂರ್ಚೀನರೋಹಾಟಕಚಂಪಕಾಭೋ । ಹರಾಸನೇದಂಡಧರೋ ನಿಷಣ್ಣಃ ॥ ಕೌಶೇಯಕಾನ್ಯುದ್ವಹತೇ ಜನಂಚ । ತೃತೀಯರೂಪಂ ನವಮಸ್ಯರಾಶೇಃ ॥೨೭॥

ಅವತಾರಿಕೆ॥ ಧನುರಾಶಿಯ ತೃತೀಯ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ನವಮಸ್ಯರಾಶೇಃ-೯ನೇ ರಾಶಿಯ, ತೃತೀಯ-ಮೂರನೆ ದ್ರೇಕ್ಕಾಣವು, ನರಃ-ಮನುಷ್ಯಾಕಾರವುಳ್ಳದ್ದು, ಕೂರ್ಚೀ-ಉದ್ದವಾದ ಗಡ್ಡ ಮೀಸೆಯುಳ್ಳವನು, ಹಾಟಕಚಂಪಕಾಭಃ-ಸುವರ್ಣದಂತೆಯೂ, ಸಂಪಿಗೆ ಹೂವಿನಂತೆಯೂ ಕಾಂತಿಯುಳ್ಳವನು, ದಂಡಧರಃ-ಕೈಯಲ್ಲಿ ದಂಡಾಯುಧವನ್ನು ಧರಿಸಿದವನೂ, ವರಾಸನೇನಿಷ್ಣ-ಶ್ರೇಷ್ಠವಾದ ಆಸನದಲ್ಲಿ ಕೂತುಕೊಂಡಿರುವವನು, ಕೌಶೇಯಕಾನಿ-ಪೀತಾಂಬರವನ್ನು, ಅಜಿನಂಚ-ಕೃಷ್ಣಾಜಿನವನ್ನು, ಉದ್ವಹತೇ-ಹೊದ್ದುಕೊಂಡಿರುವುದು; ಇದಂ-ಈ ರೂಪವುಳ್ಳದ್ದು ಧನುರಾಶಿಯ ತೃತೀಯ ದ್ರೇಕ್ಕಾಣವು ಸೂರ್ಯನ ಅಧಿಪತ್ಯವುಳ್ಳ ಸಾಯುಧ ನರ ದ್ರೇಕ್ಕಾಣವು ॥೨೭॥

## ಮಕರರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ರೋಮಚಿತೋ ಮಕರರೋಪಮ ದಂಷ್ಟ್ರಃ। ಸೂಕರ ಕಾಯಸಮಾನ ಶರೀರಃ॥ ಯೋಕ್ತ್ರಕಜಾಲಕ ಬಂಧನಧಾರೀ । ರೌದ್ರ ಮುಖೋಮಕರ ಪ್ರಥಮಸ್ತು ॥೨೮॥

ಅವತಾರಿಕೆ॥ ಮಕರರಾಶಿಯ ಪ್ರಥಮ ದ್ರೇಕ್ಕಾಣ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮಕರ ಪ್ರಥಮಂ-ಮಕರರಾಶಿಯ ಪ್ರಥಮ ದ್ರೇಕ್ಕಾಣವು. ರೋಮಚಿತಃ-ಶರೀರದ ಮೇಲೆ ಬಹು ಕೂದಲುಳ್ಳವನು, ಮಕರೋಪಮದಂಷ್ಟ್ರಃ-ನೆಗಳಿನ (ಮೊಸಳೆಯ) ಹಾಗೆ ಕೋರೆ ಹಲ್ಲುಗಳುಳ್ಳವನು, ಸೂಕರಕಾಯಸಮಾನ ಶರೀರಃ-ಹಂದಿಯ ಶರೀರದ ಹಾಗೆ ಶರೀರವುಳ್ಳವನು, ಯೋಕ್ತ್ರಕ ಜಾಲಕ ಬಂಧನಧಾರೀ-ಜೀರುಗುಣಿಕೆಯುಳ್ಳ ಕಣ್ಣಿಯನ್ನು, ಬಲೆಯನ್ನು ಹಿಡಿದುಕೊಂಡಿರುವವನು, ರೌದ್ರ ಮುಖಃ-ರೌದ್ರಾಕಾರವಾದ ಮುಖವುಳ್ಳವನು, ಮಕರ ಪ್ರಥಮ ದ್ರೇಕ್ಕಾಣವು ಶನೈಶ್ಚರಾಧಿಪತ್ಯವುಳ್ಳ ದ್ವಿಪದ ಪುರುಷ ದ್ರೇಕ್ಕಾಣವು ॥೨೮॥

ಮೂಲ॥ ಕಲಾಸ್ವಭಿಜ್ಞಾಬ್ಜದಳಾಯತಾಕ್ಷೀ। ಶ್ಯಾಮಾವಿಚಿತ್ರಾಣಿಚ ಮಾರ್ಗಮಾಣಾ॥ ವಿಭೂಷಣಾಲಂಕೃತ ಲೋಹಕರ್ಣಾ । ಯೋಷಾಪ್ರದಿಷ್ಟಾಮಕರಸ್ಯ ಮಧ್ಯೇ ॥೨೯॥

ಅವತಾರಿಕೆ॥ ಮಕರರಾಶಿಯ ಮಧ್ಯದ್ರೇಕ್ಕಾಣದ ಲಕ್ಷಣವು ಹೇಳಲ್ಪಡುತ್ತೆ.

ಟೀಕು॥ ಮಕರಸ್ಯಮಧ್ಯೇ-ಮಕರರಾಶಿಯ ಮಧ್ಯದ್ರೇಕ್ಕಾಣವು ಯೋಷಾ-ಸ್ತ್ರೀರೂಪವನ್ನು ಹೊಂದಿದವಳಾಗಿಯೂ, ಕಲಾಸು ಷತುಷಷ್ಟಿ ವಿದ್ಯೆಗಳಲ್ಲಿ, ಅಭಿಜ್ಞಾ-ನಿಪುಣತೆ ಹೊಂದಿದವಳು, ಅಬ್ಜದಳಾಯತಾಕ್ಷಿ-ಕಮಲಾಯತ ಲೋಚನವುಳ್ಳವಳು,

ವಿಚಿತ್ರವಾಣಿ-ನಾನಾಪ್ರಕಾರವಾದ ವಿಚಿತ್ರವಾದ ವಸ್ತುಗಳನ್ನು, ಮಾರ್ಗಮಾಣಾ-ಹುಡುಕುತ್ತಲಿರುವಳು, ಅಥವಾ ಬೇಕೆಂದು ಅಪೇಕ್ಷಿಸುತ್ತಿರುವಳು, ವಿಭೂಷಣಾಲಂಕೃತ ಲೋಹಕರ್ಣಾ-ಕಬ್ಬಿಣದ ಆಭರಣಗಳಿಂದ ಅಲಂಕಾರ ಮಾಡಲ್ಪಟ್ಟ ಕರ್ಣಗಳುಳ್ಳವಳು, ಇತಿ ಪ್ರದಿಷ್ಟಾ - ಈ ಪ್ರಕಾರ ಮಕರರಾಶಿಯ ದ್ವಿತೀಯ ದ್ರೇಕ್ಕಾಣವು ಶುಕ್ರ ಆಧಿಪತ್ಯವುಳ್ಳ ಸ್ತ್ರೀ ದ್ರೇಕ್ಕಾಣವು ॥೨೯॥

ಮೂಲ॥ ಕಿನ್ನರೋಪಮತನುಸ್ಸು ಕಂಬಳಃ। ತೂಣಚಾಪ ಕವಚೈಸ್ಸಮನ್ವಿತಃ॥
ಕುಂಭಮುದ್ವಹತಿ ರತ್ನ ಚಿತ್ರಿತಃ। ಸ್ಕಂಧಗಂ ಮಕರರಾಶಿಪಶ್ಚಿಮಃ॥

ಅವತಾರಿಕೆ॥ ಮಕರರಾಶಿಯ ಮೂರನೆ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮಕರರಾಶಿ ಪಶ್ಚಿಮಃ-ಮಕರರಾಶಿಯ ಮೂರನೇ ದ್ರೇಕ್ಕಾಣವು ಕಿನ್ನರೋಪಮತನುಃ-ಕಿನ್ನರರಂತೆ ಶರೀರವುಳ್ಳವನು, ಸುಕಂಬಳಃ-ಕವಚೈಸ್ಸಮನ್ವಿತಃ-ಶರಗಳನ್ನು ತುಂಬುವ ಚೀಲ, ಧನಸ್ಸು ಮತ್ತು ಕವಚಗಳನ್ನು ಧರಿಸಿದವನು, ರತ್ನಚಿತ್ರಿತಂ-ರತ್ನ ಖಚಿತವಾದ, ಕುಂಭಂ-ಕುಂಭವನ್ನು, ಸ್ಕಂಧಗಂ-ಹೆಗಲಿನ ಮೇಲೆ, ಉದ್ವಹತಿ-ಹೊತ್ತುಕೊಂಡಿರುವವನು, ಇದು ಮಕರರಾಶಿಯ ಮೂರನೇ ದ್ರೇಕ್ಕಾಣವು ನರಾಕಾರ ವಾದ ಆಯುಧ ಧರಿಸಿದ ಬುಧನಾಧಿಪತ್ಯವುಳ್ಳ ದ್ರೇಕ್ಕಾಣವಾಗಿರುವುದು ॥೩೦॥

## ಕುಂಭರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ಸ್ನೇಹಮಧ್ಯಜಲಭೋಜನಾಗಮು। ವ್ಯಾಕುಲೀಕೃತ ಮನಾಸ್ಸಕಂಬಳಃ॥ ಕೋಶಕಾರವಸನೋ ಜಿನಾನ್ವಿತೋ। ಗೃಧ್ರತುಲ್ಯವದನೋ ಘಟಾದಿಗಃ ॥೩೧॥

ಅವತಾರಿಕೆ॥ ಕುಂಭರಾಶಿಯ ಪ್ರಥಮ ದ್ರೇಕ್ಕಾಣದ ವರ್ಣನೆಯು ಹೇಳಲ್ಪಡುತ್ತೆ.

ಟೀಕು॥ ಘಟಾದಿಗಃ-ಕುಂಭರಾಶಿಯ ಪ್ರಥಮ ದ್ರೇಕ್ಕಾಣವು, ಸ್ನೇಹಮಧ್ಯ ಜಲ ಭೋಜನಾಗಮ ವ್ಯಾಕುಲೀಕೃತಮನಾಃ-ತೈಲ, ಸುರಾ, ಜಲ, ಅನ್ನ ಇವುಗಳನ್ನು ಸಂಪಾದಿಸುವಿಕೆಯಲ್ಲಿ ಚಿಂತಾಕ್ರಾಂತವಾದ ಮನಸ್ಸುಳ್ಳವನು, ಸಕಂಬಳಃ-ಕಂಬಳಿಯಿಂದ ಕೂಡಿದವನು, ಕೋಶಕಾರವಸನಃ-ಪಟ್ಟೆ ವಸ್ತ್ರಗಳುಳ್ಳವನು, ಅಜಿನಾನ್ವಿತಃ-ಕೃಷ್ಣಾಜಿನವನ್ನು ಧರಿಸಿದವನು, ಗೃಧ್ರತುಲ್ಯವದನಃ- ಹದ್ದಿನ ಹಾಗೆ ಬಾಯಿಯುಳ್ಳವನು, ಈ ಪ್ರಕಾರ ಲಕ್ಷಣವುಳ್ಳದ್ದು ಕುಂಭರಾಶಿಯ ಪ್ರಥಮ ದ್ರೇಕ್ಕಾಣವು. ಶನ್ಯಾಧಿಪತ್ಯವುಳ್ಳ ನರದ್ರೇಕ್ಕಾಣವು ॥೩೧॥

ಮೂಲ॥ ದಗ್ಧೇಶಕಟೇ ಸಶಾಲ್ಮಲೇ। ಲೋಹನ್ಯಾ ಹರತೇಂಗನಾವನೇ॥ ಮಲಿ
ನೇನ ಪಟೇನ ಸಂವೃತಾ। ಭಾಂಡೈ ಮೂರ್ಧ್ನ ಗತೈಸ್ಸಮಧ್ಯಮಃ॥

ಅವತಾರಿಕೆ॥ ಕುಂಭರಾಶಿಯ ಮಧ್ಯ ದ್ರೇಕ್ಕಾಣದ ವರ್ಣನೆಯು ಹೇಳಲ್ಪಡುತ್ತೆ.

ಟೀಕು॥ ಮಕರಮಧ್ಯಮಃ- ಮಕರರಾಶಿಯ ಮಧ್ಯರಾಶಿಯ ದ್ರೇಕ್ಕಾಣವು, ದಗ್ಧೇ- ಸುಡಲ್ಪಟ್ಟ, ಸಶಾಲ್ಮಲೀ-ಬೂರಗದ ಮರದಿಂದ ಕೂಡಿದ, ವನೇ-ಅರಣ್ಯದಲ್ಲಿ, ಶಕಟೇ-ಬಂಡಿಯಲ್ಲಿ, ಲೋಹಾನಿ-ಕಬ್ಬಿಣದ ತುಂಡುಗಳನ್ನು, ಅಹರತೇ-ಆರಿಸಿ ಕೊಳ್ಳುತ್ತಿರುವವಳು, ಮಲಿನೇನ ಪಟೇನ-ಮಾಸಿದ ವಸ್ತ್ರದಿಂದ, ಸಂವೃತಾ-ಹೊದ್ದು ಕೊಳ್ಳಲ್ಪಟ್ಟವಳು, ಮೂರ್ಧಗತ್ಯೈ-ತಲೆಯ ಮೇಲೇರಿರುವ, ಭಾಂಡ್ಯೈ-ಗಡಿಗೆಗಳಿಂದ ಕೂಡಿದವಳು ಆಗಿರುವ, ಅಂಗನಾ-ಸ್ತ್ರೀಯ, ಮಧ್ಯಮಃ-ಕುಂಭ ಮಧ್ಯ ದ್ರೇಕ್ಕಾಣವು, ಸ್ತ್ರೀ-ಸ್ತ್ರೀರೂಪವಾಗಿರುವ ಅಗ್ನಿ ಸಹಿತವಾದ ಬುಧ ದೇವತಾಧಿಪತ್ಯವುಳ್ಳ ದ್ರೇಕ್ಕಾಣವಾಗಿರುವುದು ॥೩೨॥

ಮೂಲ॥ ಶಾಮಸ್ಸರೋಮ ಶ್ರವಣಃಕಿರೀಟೇ। ತ್ವಕ್ಪತ್ರನಿರ್ಯಾಸ ಫಲೈರ್ಬಿಭರ್ತಿ॥ ಭಾಂಡಾನಿ ಲೋಹವ್ಯತಿ ಮಿಶ್ರಿತಾನಿ । ಸಂಚಾರಯತ್ಯಂತ ಗತೋ ಘಟಸ್ಯ ॥೩೩॥

ಅವತಾರಿಕೆ॥ ಘಟಸ್ಯ ಅಂತ್ಯಗತಃ-ಕುಂಭರಾಶಿಯ ತೃತೀಯ ದ್ರೇಕ್ಕಾಣವು, ಶ್ಯಾಮಃ-ಕರಿಯ ಬಣ್ಣವುಳ್ಳದ್ದು, ಸರೋಮಶ್ರವಣಃ-ರೋಮಯುಕ್ತವಾದ ಕಿವಿಯುಳ್ಳವನು, ಕಿರೀಟೀ-ಕಿರೀಟವನ್ನು ಧಾರಣೆ ಮಾಡಿಕೊಂಡಿರುವವನು ತ್ವಕ್ಪತ್ರನಿರ್ಯಾಸ ಫಲೈ-ಮರದ ಚಕ್ಕೆ, ಮರದ ಎಲೆ, ಮರದ ರಸ, ಅಂದರೆ ಅಂಟು (ವೃಕ್ಷರಸ) ಫಲೈ-ಹಣ್ಣು ಇವುಗಳಿಂದಲೂ, ಲೋಹವ್ಯತಿ ಮಿಶ್ರಿತಾನಿ-ಕಬ್ಬಿಣ ಮೊದಲಾದ ಲೋಹಗಳಿಂದ ಬೆರಕೆ ಮಾಡಲ್ಪಟ್ಟ, ಭಾಂಡಾನಿ-ಮಡಿಕೆ ಕುಡಿಕೆಗಳನ್ನು, ಸಂಚಾರ ಯತಿ-ಸ್ಥಳದಿಂದ ಸ್ಥಳಕ್ಕೆ, ಬಿಭರ್ತಿ-ಇಡುತ್ತಿರುವನು, ಏಷಃ-ಇದು, ಕುಂಭರಾಶಿಯ ಮೂರನೆಯ ದ್ರೇಕ್ಕಾಣದ ಸ್ವರೂಪವಾಗಿ ಶುಕ್ರಗ್ರಹಾಧಿಪತ್ಯವುಳ್ಳ ಪುರುಷ ದ್ರೇಕ್ಕಾಣವು ॥೩೩॥

## ಮೀನರಾಶಿ ದ್ರೇಕ್ಕಾಣ ವಿಚಾರಃ

ಮೂಲ॥ ಸೃಗ್ಭಾಂಡ ಮುಕ್ತಾಮಣಿಶಂಖಮಿಶ್ರೈ। ರ್ವ್ಯಾಕ್ಷಿಪ್ತ ಹಸ್ತಸ್ಸವಿಭೂಷಣತ್ವ ॥ ಭಾರ್ಯಾವಿಭೂಷಾರ್ಥ ಮುಪಾಂನಿದಾನಂ । ನಾವಾಪ್ಲವತ್ಯಾದಿ ಗತೋಝಷಸ್ಯ ॥೩೪॥

ಅವತಾರಿಕೆ॥ ಮೀನರಾಶಿಯ ಪ್ರಥಮ ದ್ರೇಕ್ಕಾಣ ಸ್ವರೂಪವು ವರ್ಣಿಸಲ್ಪಡುತ್ತೆ.

ಟೀಕು॥ ಝಷಸ್ಯ ಆದಿಗತಃ-ಮೀನರಾಶಿಯ ಪ್ರಥಮ ದ್ರೇಕ್ಕಾಣವು, ಸೃಗ್ಭಾಂಡ ಮುಕ್ತಾಮಣಿ ಶಂಖಮಿಶ್ರೈ-ಪುಷ್ಪಮಾಲಿಕೆ ಮತ್ತು ಶಂಖ, ರತ್ನ ಮೊದಲಾದವುಗಳಿಂದ ಕೂಡಿರುವ, ವ್ಯಾಕ್ಷಿಪ್ತಹಸ್ತ-ತೊಂದರೆಯಿಂದ ಕೂಡಿದ ಕೈಯುಳ್ಳವನು, ಸವಿಭೂಷಣಾ-

ಆಭರಣಗಳಿಂದ ಕೂಡಿದವನು, ಭಾರ್ಯಾವಿಭೂಷಾರ್ಥಂ-ಪತ್ನಿಯ ಅಲಂಕಾರ ಕೋಸ್ಕರ, ಅಪಾಂನಿದಾನಂ - ಮಹಾಸಮುದ್ರವನ್ನು, ನಾವಾಪ್ಲವತಿ- ಹಡಗಿನ ಮೇಲೆ ಹತ್ತಿ ದಾಟುವನು. ಇದು ಮೀನರಾಶಿಯ ಆದಿ ದ್ರೇಕ್ಕಾಣವಾಗಿರುವ ಗುರುವಿನ ಅಧಿಪತ್ಯವುಳ್ಳ ಪುರುಷ ದ್ರೇಕ್ಕಾಣವು ॥೩೪॥

ಮೂಲ॥ ಅತ್ಯುಚ್ಛ್ರತಧ್ವಜಪತಾಕ ಮುಪೈತಿಪೋತಂ । ಕೂಲಂಪ್ರಯಾತಿ ಜಲಧೇಃ ಪರಿವಾರಯುಕ್ತಾ ॥ ವರ್ಣೇನ ಚಂಪಕ ಮುಖಾಪ್ರಮ ದಾತ್ರಿಭಾಗೋ । ಮೀನಸ್ಯಚೈಷಕಥಿತೋಮುನಿಭಿರ್ದ್ವಿತೀಯಃ॥೩೫॥

ಅವತಾರಿಕೆ॥ ಮೀನರಾಶಿಯ ಎರಡನೆಯ ದ್ರೇಕ್ಕಾಣದ ಸ್ವರೂಪವು ಹೇಳಲ್ಪಡುತ್ತೆ.

ಟೀಕು॥ ಮೀನಸ್ಯದ್ವಿತೀಯೋಭಾಗಃ-ಮೀನರಾಶಿಯ ದ್ವಿತೀಯ ದ್ರೇಕ್ಕಾಣವು, ಅತ್ಯುಚ್ಛ್ರತಧ್ವಜಪತಾಕಂ-ಅತ್ಯಂತ ಉನ್ನತವಾಗಿರುವ ಧ್ವಜಗಳಿಂದಲೂ ಪತಾಕೆ ಯಿಂದಲೂ ಶೋಭಿಸುತ್ತಿರುವ ಪೋತಂ-ದೋಣಿಯನ್ನು, ಉಪೈತಿ-ಹತ್ತಿಕೊಂಡು ಜಲಧೇಃಕೂಲಂ-ಸಮುದ್ರದಡವನ್ನು ಕುರಿತು ಪ್ರಯಾತಿ-ಹೋಗುತ್ತಿರುವಳು, ಪರಿವಾರಯುಕ್ತ-ಪತಿ ಪುತ್ರಾದಿ ಪರಿವಾರಗಳಿಂದ ಕೂಡಿದವಳು, ವರ್ಣೇನ-ವರ್ಣದಲ್ಲಿ, ಚಂಪಕಮುಖಾ-ಸಂಪಿಗೆ ಹೂವಿನಂತೆ ಶರೀರಕಾಂತಿಯುಳ್ಳವಳು, ಏಷ-ಈ ಪ್ರಕಾರವಾಗಿ ಮುನಿಭಿಃಕಥಿತಃ-ಜ್ಯೋತಿಃ ಶ್ಯಾಸ್ತ್ರಗಳಲ್ಲಿ ಪಾರಂಗತರಾದ ಮುನಿಗಳಿಂದ ಹೇಳಲ್ಪಟ್ಟಿರುತ್ತೆ. ಇತಿ ಇದು ಚಂದ್ರನ ಅಧಿಪತ್ಯವುಳ್ಳ ದ್ರೇಕ್ಕಾಣವಾಗಿರುವುದು ॥೩೫॥

ಮೂಲ॥ ಶ್ವಭ್ರಾಂತಿಕೀ ಸರ್ಪವಿವೇಷ್ಟಿತಾಂಗೋ । ವಸ್ತ್ರೈರ್ವಿಹೀನಃ ಪುರುಷಸ್ಸ್ಟವ್ಯಾಂ॥ ಚೋರಾನಿಲವ್ಯಾಕುಲತಾಂತರಾತ್ಮಾ । ವಿಕ್ರೋಶತೇಂ ತ್ಯೋಪ ಗತೋಝಷಸ್ಯ ॥೩೬॥

ಮೀನರಾಶಿಯ ತೃತೀಯ ದ್ರೇಕ್ಕಾಣದ ಲಕ್ಷಣವು ಹೇಳಲ್ಪಡುತ್ತೆ.

ಟೀಕು॥ ಝಷಸ್ಯ ಅಂತ್ಯೋಪಗತಃ-ಮೀನರಾಶಿಯ ಮೂರನೆ ದ್ರೇಕ್ಕಾಣವು, ಶ್ವಭ್ರಾಂತಿಕೆ-ರಂಧ್ರದ ಅಂತ್ಯದಲ್ಲಿ, ಸರ್ಪವೇಷ್ಟಿತಾಂಗ-ಸರ್ಪದಿಂದ ಸುತ್ತಲ್ಪಟ್ಟ ಶರೀರವುಳ್ಳವನು, ವಸ್ತ್ರೈರ್ವಿಹೀನ-ವಸ್ತ್ರವಿಲ್ಲದಿರುವವನು. ಅಂದರೆ ಬೆತ್ತಲೆಯಿರುವ, ಪುರುಷಃ-ನರನು, ಆಟವ್ಯಾಂ-ಅರಣ್ಯದಲ್ಲಿ, ಚೋರಾನಲ ವ್ಯಾಕುಲತಾಂತ ರಾತ್ಮಾ-ಚೋರರಿಂದಲೂ, ಅಗ್ನಿಯಿಂದಲೂ, ವ್ಯಾಕುಲಿತವಾದ ಮನಸ್ಸುಳ್ಳವನಾಗಿ, ವಿಕ್ರೋಶತೇ-ಅಳುತ್ತಿರುವವನು, ಈ ಪ್ರಕಾರವಾಗಿ ಗುಣವುಳ್ಳ ಅಂಗಾರಕಾಧಿಪತ್ಯ ವುಳ್ಳ ಸರ್ಪ ದ್ರೇಕ್ಕಾಣವಾಗಿರುವುದು.

## ದ್ರೇಕ್ಕಾಣ ಪ್ರಯೋಜನಂ

ಈ ಮೇರೆ ದ್ವಾದಶರಾಶಿಗಳ ಮೂವತ್ತಾರು ದ್ರೇಕ್ಕಾಣಗಳ ಪ್ರಯೋಜನಗಳು ಆಯಾ ಪ್ರಕರಣಗಳಲ್ಲಿ ಉಪಯೋಗಕ್ಕೆ ಬೇಕಾಗಿರುತ್ತವೆ. ಯಾತ್ರಾ ಪ್ರಕರಣದಲ್ಲಿಯೂ, ಜನನಕಾಲ ಲಕ್ಷಣ ಪ್ರಕರಣದಲ್ಲಿಯೂ, ವಿಯೋನಿ ಜನ್ಮ ಪ್ರಕರಣದಲ್ಲಿಯೂ, ನಷ್ಟ ಚೋರ ಪ್ರಶ್ನೆಗಳಲ್ಲಿಯೂ, ನೈರ್ಯಾಣಿಕ ಪ್ರಕರಣದಲ್ಲಿಯೂ, ಕರ್ಮಾಜೀವ ಪ್ರಕರಣದಲ್ಲಿಯೂ ಈ ದ್ರೇಕ್ಕಾಣಗಳ ಸ್ವಭಾವದ ಮೇಲೆ ಫಲ ನಿರ್ಣಯ ಮಾಡಬೇಕು.

ಯಾತ್ರಾ ಪ್ರಕರಣದಲ್ಲಿ "ದ್ರೇಕ್ಕಾಣಾಕಾರ ಚೇಷ್ಟಾಂ ಗುಣಸದೃಶಫಲಂ ಯೋಜಯೇದ್ವೃದ್ಧಿಹೇತೋಃ । ದ್ರೇಕ್ಕಾಣೇ ಸೌಮ್ಯರೂಪೇ ಕುಸುಮ ಫಲಯತೇ ರತ್ನಭಾಂಡಾದ್ವಿತೇಚ॥ ಸೌಮ್ಯೈರ್ದೃಷ್ಟೇ ಜಯಃಸ್ಯಾತ್ಪ್ರಹರಣ ಸದೃಶೇ ಪಾಪ ದೃಷ್ಟೇಚಭಂಗಃ । ಸಮ್ಮೋಹೋವಾಥ ಬಂಧಸ್ವ ಭುಜಗನಿಗಳೇ ಪಾಪಯುಕ್ತೇ ಪಿಪಾಸುಃ" ॥೧॥ ಈ ಪ್ರಕಾರವಾಗಿ ಫಲ ನಿರ್ಣಯ ಮಾಡತಕ್ಕದ್ದು.

ಪ್ರಶ್ನಕರಣದಲ್ಲಿ "ಅಂಶತೋಜ್ಞಾಯತೇದ್ರವ್ಯಂ ದ್ರೇಕ್ಕಾಣೈಸ್ತಸ್ಕರಾಃಸ್ಮತಾಃ। ರಾಶಿಭ್ಯಃಕಾಲದಿಗ್ದೇಶಾಃ ವಯೋಜಾತಿಶ್ಚ ಲಗ್ನಪಾತ್ ॥೧॥" ಈ ಪ್ರಕಾರದಿಂದ ತಿಳಿಯತಕ್ಕದ್ದು.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಜಾತಕಾಖ್ಯ
ಹೋರಾಶಾಸ್ತ್ರೇ ದ್ರೇಕ್ಕಾಣ ವರ್ಣನ ವಿಚಾರೋನಾಮ
ಸಪ್ತವಿಂಶ ಪ್ರಕರಣಂ.

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಬಂಕೀಪುರ ವಿಠಲರಾಯಶರ್ಮತನುಜ ಸುಬ್ರಹ್ಮಣ್ಯಶರ್ಮವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸುಧಾರಸಧಾರ ಟೀಕಾಯಾಂ
ದ್ರೇಕ್ಕಾಣ ವರ್ಣನ ವಿಚಾರನ್ನಾಮ ಸಪ್ತವಿಂಶ ಪ್ರಕರಣಂ
ಸಂಪೂರ್ಣಂ.



ಅವಂತಿಕಾಚಾರ್ಯವರ್ಯ ವರಾಹ ಮಿಹಿರಭಟ್ಟ ವಿರಚಿತೇ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ

## ೨೮ನೇ ಗ್ರಂಥಾನುಕ್ರಮಣಿಕಾಖ್ಯ ಪ್ರಕರಣಂ

ಮೂಲ॥ ರಾಶಿಪ್ರಭೇದೋ ಗ್ರಹಯೋನಿಭೇದೋ । ವಿಯೋನಿಜನ್ಮಥನಿಷೇಕ ಕಾಲಃ॥ ಜನ್ಮಾಥ ಸದ್ಯೋಮರಣಂ ತಥಾಯು। ರ್ದಶಾವಿಪಾ-ಕೋಷ್ಟಕ ವರ್ಗಸಂಜ್ಞಃ ॥೧॥

ಅವತಾರಿಕೆ॥ ಶ್ಲೋಕ ಮೊದಲುಗೊಂಡು ಮೂರು ಶ್ಲೋಕಗಳು ಈ ಬೃಹಜ್ಜಾತಕ ವೆಂಬುವ ಗ್ರಂಥದಲ್ಲಿ ಅಡಗಿರುವ ಪ್ರತಿ ಪ್ರಕರಣದ ಹೆಸರನ್ನೊಡಗೂಡಿ ಅನುಕ್ರಮಣಿ ಕಾಖ್ಯ ಪ್ರಕರಣವೆಂದು ಸಂಕೇತವುಂಟಾಗಿದೆ. ಅನಂತರವಿರುವ ಶ್ಲೋಕಗಳಲ್ಲಿ ಗ್ರಂಥ ಕರ್ತೃವಿನ ವಂಶಪರಂಪರೆ ಮತ್ತು ಅದಕ್ಕನುಸಾರವಾದ ವೃತ್ತಾಂತವು ಹೇಳಲ್ಪಟ್ಟಿರುತ್ತೆ.

ಟೀಕು॥ ರಾಶಿಪ್ರಭೇದಃ-೧ನೇ ರಾಶಿಭೇದ ಪ್ರಕರಣ, ಗ್ರಹಯೋನಿ ಭೇದಃ-೨ನೇ ಗ್ರಹಯೋನಿ ಭೇದಪ್ರಕರಣ, ವಿಯೋನಿಜನ್ಮ-೩ನೇ ವಿಯೋನಿಜನ್ಮವೆಂಬುವ ತಿರ್ಯಗ್ಜಂತುಗಳು ಮತ್ತು ವೃಕ್ಷಲತಾ ಗುಲ್ಮಾದಿಗಳ ಉತ್ಪತ್ತಿ ಪ್ರಕರಣ, ಅಥ-ಅನಂತರದಲ್ಲಿ, ನಿಷೇಕಕಾಲಃ-೪ನೇ ಗರ್ಭಾದಾನಾದಿ ಕಾಲ ಮಶಾತ್ ಶುಭಾಶುಭ ಫಲ ಪ್ರಕರಣ, ಜಿನ-೫ನೇ ಜನ್ಮಕಾಲ ಲಕ್ಷಣ ಪ್ರಕರಣ, ಅಥ-ಅನಂತರದಲ್ಲಿ, ಸದ್ಯೋ ಮರಣಂ-೬ನೇ ಬಾಲಾರಿಷ್ಟ ಪ್ರಕರಣ, ತಥಾ-ಹಾಗೆಯೇ, ಆಯುಃ-೭ನೇ ಆಯುರ್ದಾಯ ಪ್ರಕರಣ, ದಶಾವಿಪಾಕ ಃ, ೮ನೇ ದಶಾಂತರ್ದಶಾ ಪ್ರಕರಣ, ಅಷ್ಟಕ ವರ್ಗ ಸಂಜ್ಞ-೯ನೇ ಅಷ್ಟಕವರ್ಗವೆಂಬ ಪ್ರಕರಣ. (ಅಂತು ೯ ಪ್ರಕರಣಗಳು) ॥೧॥

ಮೂಲ॥ ಕರ್ಮಾಜೀವೋ ರಾಜಯೋಗಾಃ ಖಯೋಗಾ । ಶ್ಚಂದ್ರಾ ಯೋಗಾದ್ವಿ ಗ್ರಹಾದ್ಯಾಶ್ಚಯೋಗಾಃ ॥ ಪ್ರವ್ರಜ್ಯಾಥೋ ರಾಶಿಶೀಲಾನಿ ದೃಷ್ಟಿ। ರ್ಭಾವಸ್ತಸ್ಮಾದಾಶ್ರಯೋಥಪ್ರಕೀರ್ಣಃ ॥೨॥

ಅವತಾರಿಕೆ॥ ಈ ಶ್ಲೋಕದಲ್ಲಿ ೧೦ ನೆ ಪ್ರಕರಣದಿಂದ ೨೨ ನೆ ಪ್ರಕರಣದವರಿಗೆ ಸಂಗ್ರಹಾನುಕ್ರಮಣಿಕೆಯು ಹೇಳಲ್ಪಡುತ್ತೆ.

ಟೀಕು॥ ಕರ್ಮಾಜೀವಃ-೧೦ ನೇ ಕರ್ಮಜೀವ ಪ್ರಕರಣ, ರಾಜಯೋಗಾಃ-೧೧ನೇ ರಾಜಯೋಗ ಪ್ರಕರಣ, ಖಯೋಗಾಃ-ಗ್ರಹಗಳ ಸೇರುವಿಕೆ ಮೊದಲಾದ ನಾಭಸಂಯೋಗವೆಂಬುವ ೧೨ನೇ ಪ್ರಕರಣ, ಚಂದ್ರಯೋಗಾಃ-೧೩ನೇ ಚಂದ್ರ ನಿಂದ ಹುಟ್ಟುವ ಯೋಗಗಳ ಪ್ರಕರಣ-ದ್ವಿಗ್ರಹದ್ಯಾಶ್ಚಯೋಃ ಗಾ-೧೪ನೇ ಪ್ರಕರಣದಲ್ಲಿ

ಎರಡು, ನಾಲ್ಕು, ಐದು, ಆರು, ಏಳು ಗ್ರಹಗಳು ಸೇರುವಿಕೆಯ ವಿಷಯವು. ಪ್ರವ್ರಜ್ಯಾ-ಪ್ರವ್ರಜ್ಯಾಯೋಗವೆಂಬ ವೈರಾಗ್ಯ ಮತ್ತು ಸಂನ್ಯಾಸ ಯೋಗವೆಂಬ ೧೫ ನೆ ಪ್ರಕರಣ, ಅಥ-ಅನಂತರದಲ್ಲಿ, ರಾಶಿಶೀಲ-ರಾಶಿಶೀಲ ಪ್ರಕರಣ. ಇದರಲ್ಲಿ ನಕ್ಷತ್ರ ಫಲಪ್ರಕರಣ ಮತ್ತು ರಾಶಿಫಲ ಪ್ರಕರಣ, ರವಿ ಕುಜಾದಿಪತ್ಯ ರಾಶಿ ಶೀಲ ಪ್ರಕರಣ, ಇದರಲ್ಲಿ ೧೬, ೧೭, ೧೮ ಸಹ ಸೇರಿರುತ್ತವೆ. ೧೯ನೇ ದೃಷ್ಟಿಃ- ದೃಷ್ಟಿಫಲ ಪ್ರಕರಣ, ೨೦ನೆ ಭಾವಫಲ ಪ್ರಕರಣ, ೨೧ನೇ ಆಶ್ರಯ ಯೋಗ ಪ್ರಕರಣ, ೨೨ ನೆ ಪ್ರಕೀರ್ಣಃ-ಪ್ರಕೀರ್ಣಯೋಗ ಪ್ರಕರಣವು ॥೨॥

ಮೂಲ॥ ನೇಷ್ಟಾಯೋಗಾ ಜಾತಕಂ ಕಾಮಿನೀನಾಂ । ನಿರ್ಯಾಣಂಷ್ಟಾನ್ನಷ್ಟ ಜನ್ಮದ್ರೆಕಾಣಃ ॥ ಅಧ್ಯಾಯಾನಾಂ ವಿಂಶತಿಃ ಸಪ್ತಯುಕ್ತಾ *ಜನ್ಮನ್ಯೇ ತದ್ಯಾತ್ರಿಕಂಚಾಭಿಧಾಸ್ಯೇ ॥೩॥

ಅವತಾರಿಕೆ॥ ಈ ಶ್ಲೋಕದಲ್ಲಿ ೨೩ನೇ ಪ್ರಕರಣದಿಂದ ೨೭ನೇ ಪ್ರಕರಣದವರಿಗೆ ಸಂಗ್ರಹಿಸಿ ಹೇಳಲ್ಪಟ್ಟಿರುತ್ತೆ.

ಟೀಕು॥ ನೇಷ್ಟಾಯೋಗಾಃ-೨೩ನೇ ಅನಿಷ್ಟಯೋಗಗಳ ಪ್ರಕರಣವು, ಕಾಮಿನಿನಾಂ ಜಾತಕಂ-೨೪ನೇ ಸ್ತ್ರೀಜಾತಕ ಪ್ರಕರಣವು, ನಿರ್ಯಾಣಂ-೨೫ನೇ ನೈರ್ಯಾಣಿಕ ಯೋಗ ಪ್ರಕರಣವು, ನಷ್ಟ-೨೬ನೇ ನಷ್ಟಜಾತಕ ಪ್ರಕರಣವು, ದ್ರೆಕಾಣಃ- ೨೭ನೇ ದ್ರೇಕ್ಕಾಣ ವರ್ಣನೆ ಪ್ರಕರಣವು, ಸಪ್ತಯುಕ್ತಾ ವಿಂಶತಿರಧ್ಯಾಯಾನಾಂ-ಏಳು ಸೇರಿದ ಇಪ್ಪತ್ತು ಅಂದರೆ ಇಪ್ಪತ್ತೇಳು ಪ್ರಕರಣಗಳಿಂದ, ಏತತ್-ಈ ಗ್ರಂಥವು, ಜನ್ಮನಿಜಾತಕ ವಿಷಯದಲ್ಲಿ ಹೇಳಲ್ಪಟ್ಟಿರುತ್ತೆ. ಯಾತ್ರಿಕಂ-ಪ್ರಯಾಣ ಕಾಲ ಮುಹೂರ್ತ ಪ್ರಕರಣ, ಚ-ಸಮುಚ್ಚಯಾರ್ಥ ಸೂಚಕವಾದ ಪದಪ್ರಯೋಗದಿಂದಕರ್ಮ ಕಾಲ ಮುಹೂರ್ತ ನಿಬಂಧನ ಪ್ರಕರಣ ಗ್ರಂಥಗಳು, ಪರಿಶಿಷ್ಟ ಬೃಹತ್ಸಂಹಿತಾದಿ ಗ್ರಂಥಗಳನ್ನು, ಪಂಚ ಸಿದ್ಧಾಂತವೆಂಬುವ ಗ್ರಹಗಣಿತವನ್ನು ಸಹ ಹೇಳಿರುತ್ತಾರೆ. ಮುಖ್ಯವಾಗಿ ವರಾಹ ಮಿಹಿರಾಚಾರ್ಯರು ೨೭ ನಕ್ಷತ್ರ ಸಂಖ್ಯೆಗೆ ಸರಿಯಾಗಿ ೨೭ ಪ್ರಕರಣ ರೂಪವಾಗಿ ಈ ಬೃಹಜ್ಜಾತಕ ಗ್ರಂಥವನ್ನು ಹೇಳಿರುತ್ತಾರೆ ॥೩॥

ಮೂಲ॥ ಪ್ರಶ್ನಾಸ್ತಿಥಿರ್ಭಂ ದಿವಸಕ್ಷಣಶ್ಚ । ಚಂದ್ರೋ ವಿಲಗ್ನಂತ್ವಥ ಲಗ್ನಭೇದಃ ॥ ಶುದ್ಧಿರ್ಗ್ರಹಾಣಾ ಮಥವಾಪವಾದೋ ವಿಮಿಶ್ರಿತಾಖ್ಯಂ ತನುವೇಪನಂಚ॥೪॥

* ಪಂಚಯುಕ್ತಾ - ಉತ್ತರದ ದೇಶದ ಪುಸ್ತಕದಲ್ಲಿ ೨೫ ಅಧ್ಯಾಯವೆಂದ ಹೇಳಿರುತ್ತೆ.

ಅವತಾರಿಕೆ।। ಅವಂತಿಕಾಚಾರ್ಯನಾದ ವರಾಹಮಿಹಿರಭಟ್ಟನು ತಾನು ಮಾಡಿದ ಗ್ರಂಥದ ಜ್ಞಾಪಕಾರ್ಥವಾಗಿ ಜ್ಯೋತಿಷ್ಯ ಗ್ರಂಥಗಳ ಮುಖ್ಯವಾದ ವಿಷಯಗಳನ್ನು ಸಂಕ್ಷೇಪವಾಗಿ ತಿಳಿಸುತ್ತಾನೆ.

ಟೀಕು।। ಪ್ರಶ್ನಾಃ-ಪ್ರಶ್ನಪ್ರಕರಣದಲ್ಲಿ ಚಿಂತಾಭಾವ ಪ್ರಕರಣ, ನಷ್ಟ ಪ್ರಶ್ನೆ ಪ್ರಕರಣ, ಮುಷ್ಟಿ ಪ್ರಕರಣ, ರೋಗಾರೋಗ್ಯ ಪ್ರಕರಣ, ಕಾರ್ಯಸಿದ್ಧಿ ಪ್ರಕರಣ, ಪ್ರಮುಖ ಸಕಲಪ್ರಶ್ನಸಿದ್ಧಿ ಪ್ರಕರಣ, ತಿಥಿಃ-ನಂದಾಭದ್ರಾಜಯಾದಿತಿಥಿ ಪ್ರಕರಣವು, ಭ-ನಕ್ಷತ್ರ ವಿವರಣಾದಿ ಪ್ರಕರಣವು, ದಿವಸಃ-ವಾರಫಲ ಲಕ್ಷಣ ಪ್ರಕರಣ, ಕ್ಷಣಾಃ-ಕ್ಷಣ ಮುಹೂರ್ತ ನಿರ್ದೇಶ ಪ್ರಕರಣ, ಚಂದ್ರಃ-ಚಂದ್ರ ಬಲಾಬಲ ಪ್ರಕರಣ, ವಿಲಗ್ನಂ-ಲಗ್ನಬಲಾಬಲ ಪ್ರಕರಣ, ಅಥ-ನಂತರದಲ್ಲಿ, ವಿಲಗ್ನ ಭೇದಃ-ಲಗ್ನಸಂದೇಹ ನಿವೃತ್ತಿ ಪ್ರಕರಣವು ಮತ್ತು ಲಗ್ನಭೇದ ಪ್ರಕರಣದಲ್ಲಿ ಲಗ್ನವರ್ಗಶೋಧ್ಯಾದಿ ಪ್ರಕರಣವು, ಶುದ್ಧಿರ್ಗ್ರಹಾಣಾಂ-ಆಯಾಕಾರ್ಯಾರಂಭ ಕಾಲಗಳಲ್ಲಿ ರಾಶಿ ಕುಂಡಲಿ ಪ್ರಕಾರ ಸ್ಥಾನ ಶುದ್ಧಿ ಮೊದಲಾಗಿ ವಿವರಿಸುವ ಗ್ರಹಶುದ್ಧಿ ಪ್ರಕರಣವು, ಅಪವಾದಃ- ಯಾವ ಯಾವ ಕಾಲದಲ್ಲಿ ಯಾವ ಯಾವ ಕಾರ್ಯಮಾಡಬೇಕೋ ಮಾಡಕೂಡದೋ ಎಂಬುವ ಮತಾಂತರ ಭೇದವನ್ನು ತೋರಿಸುವ ಅಪವಾದ ಪ್ರಕರಣವು, ವಿಮಿಶ್ರಿ ಕಾಖ್ಯಂ-ಕಾಲ ಗ್ರಹಗಳ ಅವಸ್ಥಾದೃಷ್ಟಿ ಮೊದಲಾದ ಮಿಶ್ರಫಲಗಳನ್ನು ತನುವೇ ಪನಂಚ-ತನ್ವಾದಿಭಾವಶುದ್ಧಿ ಪ್ರಕರಣವು ಸಹಾ ಹೇಳಲ್ಪಟ್ಟಿರುತ್ತೆ ।।೪।।

ಮೂಲ।। ಅತಃಪರಂ ಗುಹ್ಯಕ ಪೂಜನಂ ಸ್ಯಾ । ಸ್ವಪ್ನಂ ತತಃ
ಸ್ನಾನವಿಧಿಃ ಪ್ರದಿಷ್ಟಃ। ಯಜ್ಞೋ ಗ್ರಹಾಣಾಮಥ ನಿರ್ಗಮಶ್ಚ ।
ಕ್ರಮಾಚ್ಚದಿಷ್ಟಃ ಶಕುನೋಪದೇಶಃ ।।೫।।

ಅವತಾರಿಕೆ।। ಈ ಶ್ಲೋಕದಲ್ಲಿ ಗುಹ್ಯಕ ಪೂಜನ ಪ್ರಕರಣ ಮೊದಲುಗೊಂಡು ಶಕುನ ಪ್ರಕರಣದವರಿಗೆ ಹೇಳಲ್ಪಟ್ಟಿರುತ್ತೆ.

ಟೀಕು।। ಅತಃಪರಂ-ಅನಂತರದಲ್ಲಿ, ಗುಹ್ಯಕಪೂಜನಂ-ಗುಹ್ಯಕ ಪೂಜನ ಪ್ರಕರಣವು, ಸ್ವಪ್ನಫಲ ಪ್ರಕರಣವು, ಸ್ನಾನವಿಧಿಃ-ಸ್ನಾನ ವಿಧಿ ಪ್ರಕರಣವು, ಗ್ರಹಯಜ್ಞ ವಿಧಿಃ-ಗ್ರಹಯಜ್ಞ ವಿಧಿಪ್ರಕರಣವು, ನಿರ್ಗಮಶ್ಚ-ಯಾತ್ರಾ ನಿರ್ಣಯ ಪ್ರಕರಣವು, ಕ್ರಮಾಚ್ಚ-ಕ್ರಮವಾಗಿ, ಶಕುನೋಪದೇಶಃ-ಶಕುನ ಫಲ ಪ್ರಕರಣ ಹೇಳಲ್ಪಟ್ಟಿರುತ್ತೆ ।।೫।।

ಮೂಲ।। ವಿವಾಹಕಾಲಃ ಕರಣಂ ಗ್ರಹಾಣಾಂ। ಪ್ರೋಕ್ತಂ ಪೃಥಕ್‌ತದ್ವಿಪುಲಾ
ಶಾಖಾ।। ಸ್ಕಂಧೈ ಸ್ತ್ರಿಭಿರ್ಜ್ಯೋತಿಷ ಸಂಗ್ರಹೋಯಂ।
ಮಯಾಕೃತೋ ದೈವ ವಿದಾಂಹಿತಾಯ ।।೬।।

ಅವತಾರಿಕೆ॥ ಈ ಶ್ಲೋಕದಿಂದ ವಿವಾಹ ಪ್ರಕರಣ ಮೊದಲುಗೊಂಡು ಹೇಳಲ್ಪಟ್ಟಿರುತ್ತೆ.

ಟೀಕು॥ ವಿವಾಹಕಾಲಃ ವಿವಾಹ ಪ್ರಕರಣವು, ಕರಣಂ-ಪಂಚಸಿದ್ಧಾಂತ ಯುಕ್ತವಾದ ಸಿದ್ಧಾಂತ ಪ್ರಕರಣವು, ಗ್ರಹಾಣಾಂ ಪ್ರೋಕ್ತಂತನ್ವಿಪುಲಾಚ ಶಾಖಾ-ಗ್ರಹಗಳ ಅನೇಕ ವಿಧವಾದ ಸಿದ್ಧಾಂತ ತಂತ್ರ ಪ್ರಕರಣಗಳು, ಸ್ಕಂಧೈಸ್ತ್ರಿ-ಮೂರು ಸ್ಕಂದ ಗಳಿಂದ, ಜ್ಯೋತಿಷ ಸಂಗ್ರಹೋಯಂ-ಸಮಸ್ತ ಜ್ಯೋತಿಶಾಸ್ತ್ರವನ್ನು ಸಂಗ್ರಹವಾಗಿ, ದೈವವಿದಾಂ-ಜ್ಯೋತಿಷ್ಕರುಗಳಿಗೆ, ಮುದಾಯ-ಸಂತೋಷಾರ್ಥವಾಗಿ, ಮಯಾಕೃತಃ-ನನ್ನಿಂದ ಮಾಡಲ್ಪಟ್ಟಿತೆಂದು ಹೇಳುತ್ತಾನೆ ॥೬॥

ಮೂಲ॥ ಪೃಥುವಿರಚಿತ ಮನ್ಯೈಃ ಶಾಸ್ತ್ರಮೇತತ್ಸಮಸ್ತಂತದನುಲಘುಮಯೇ ದಂತ ತ್ತ್ವವೇಶಾರ್ಥಮೇವಮ್ ॥ ಕೃತಮಿಹಹಿ ಸಮರ್ಥಂ ಧೀವಿಷಾಣಾಮಲತ್ವೇ ಮಮಯದಿನಸದುಕ್ತಂ ಸಜ್ಜನೈಃ ಕ್ಷಮ್ಯ ತಾಂತತ್ ॥೭॥

ಅವತಾರಿಕೆ॥ ಈ ಪ್ರಕಾರವಾಗಿ ಪೂರ್ವಶಾಸ್ತ್ರವನ್ನಾಲೋಚಿಸಿ ಆ ಅರ್ಥವನ್ನು ಸಂಗ್ರಹ ವಾಗಿ ಈ ಗ್ರಂಥದಲ್ಲಿ ಹೇಳುತ್ತಾರೆ.

ಟೀಕು॥ ಏತತ್ಸಮಸ್ತಂ-ಈ ಶಾಸ್ತ್ರವೆಲ್ಲವನ್ನೂ, ಅನ್ಯೈಃ-ಇತರರುಗಳಾದ (ವಶಿಷ್ಠ ಪರಾಶರರು ಮೊದಲಾದವರುಗಳಿಂದ) ಪೃಥು-ವಿಸ್ತಾರವಾಗಿ, ವಿರಚಿತಂ-ರಚಿಸಲ್ಪಟ್ಟಿತು, ತದನು-ಅನಂತರದಲ್ಲಿ, ತತ್ತ್ವವೇಶಾರ್ಥಮೇವ-ಆ ಪರಾಶರ ವಶಿಷ್ಠಗರ್ಗ ಲೋಮಶಾದಿಗಳು ಹೇಳಲ್ಪಟ್ಟ ಅರ್ಥವನ್ನೇ, ಲಘು-ಸಂಕ್ಷೇಪವಾಗಿ ಸಂಗ್ರಹಿಸಿ, ದೀವಿಷಾಣ ಮಲತ್ವೇ-ಧೀ-ಬುದ್ಧಿಯ, ವಿಷಾಣ-ಅಲ್ಪತ್ವದಿಂದ, ಅಮಲತ್ವೇ-ನಿರ್ಮಲೀಕರಣದ ವಿಷಯದಲ್ಲಿ, ಸಮರ್ಥಂ-ಸಮರ್ಥವಾದ, ಇದಂ-ಈ ಬೃಹಜ್ಜಾತಕ ವೆಂಬುವ ಶಾಸ್ತ್ರವು ಮಯಾ-ನನ್ನಿಂದ, ಕೃತಂಹಿ-ಮಾಡಲ್ಪಟ್ಟಿದೆ, ಇಹ-ಈ ಬೃಹಜ್ಜಾತಕವೆಂಬುವ ಗ್ರಂಥದಲ್ಲಿ, ಮಮ-ನನ್ನಿಂದ, ನಸದುಕ್ತಂಯದಿ-ಚೆನ್ನಾಗಿ ಹೇಳಲ್ಪಡದಿದ್ದಲ್ಲಿ, ತತ್-ಅದು, ಸಜ್ಜನೈಃ-ಸತ್ಪುರುಷರುಗಳಿಂದ, ಕ್ಷಮ್ಯತಾಂ-ಕ್ಷಮಿಸಲ್ಪಡಬೇಕೆಂದು ವಿನಯೋಕ್ತಿಯಿಂದ ಪ್ರಾರ್ಥಿಸುವನು ॥೭॥

ಮೂಲ॥ ಗ್ರಂಥಸ್ಯಯತ್ತ್ರ ಚರತೋಸ್ಯವಿನಾಶಮೇತಿ । ಲೇಖ್ಯಾಬಹುಶ್ರುತ ಮುಖಾಧೆ ಗಮಕ್ರಮೇಣ ॥ ಯದ್ವಾಮಯಾಕುಕೃತಮಲ್ಪಮಥಾ ಕೃತಂವಾ । ಕಾರ್ಯಂ ತದತ್ರವಿಧುಷಾ ಪರಿಹೃತ್ಯರಾಗಮ್ ॥೮॥

ಅವತಾರಿಕೆ॥ ಕಾಲಾಂತರದಲ್ಲಿ ಲೇಖನ ಪ್ರಮಾದಾದಿ ದೋಷಗಳಿಂದ ನಷ್ಟವಾದಾಗ್ಯೂ ಚೆನ್ನಾಗಿ ಹೇಳದಿದ್ದಾಗ್ಯೂ ಅಸಂಪೂರ್ಣವಾಗಿ ಹೇಳಿದಾಗ್ಯೂ,

ಅದನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕೆಂದು ಈ ಗ್ರಂಥಕರ್ತನಾದ ವರಾಹ ಮಿಹಿರಭಟ್ಟಾಚಾರ್ಯನು ವಿದ್ವಾಂಸರುಗಳನ್ನು ಪ್ರಾರ್ಥನೆ ಮಾಡುತ್ತಾನೆ.

ಟೀಕು।। ಅಸ್ಯಗ್ರಂಥಸ್ಯ - ಈ ಗ್ರಂಥಕ್ಕೆ, ಪ್ರಚಾರತಸ್ತತ - ಪ್ರಚಾರವಾಗವುದರಲ್ಲಿಯೂ, ಲೇಖ್ಯಾತ್-ಲೇಖನ ದೋಷದಿಂದ, ಯತ್-ಯಾವದು, ವಿನಾಶಂಲಯವನ್ನು, ಏತಿ-ಹೊಂದುವುದೋ, ಇಹ-ಈ ಬೃಹಜ್ಜಾತಕವೆಂಬುವ ಗ್ರಂಥದಲ್ಲಿ, ಮಯಾ-ನನ್ನಿಂದ, ಯತ್-ಯಾವದು, ಕುಕೃತಂವಾ ದೋಷಯುಕ್ತವಾಗಿ ಮಾಡಿದ್ದಾಗ್ಯೂ ಯತ್-ಯಾವದು, ಅಲ್ಪಂ-ಅಸಂಪೂರ್ಣವಾಗಿ ಮಾಡಿದ್ದಾಗ್ಯೂ ಅಥಾ-ಅಥವಾ, ಅಕೃತಂ-ಮಾಡದಿದ್ದಾಗ್ಯೂ, ತತ್-ಅದೆಲ್ಲವು ಅತ್ರ-ಈ ವಿಷಯದಲ್ಲಿ ರಾಗಂ-ರಾಗ ದ್ವೇಷ ಮಾತ್ಸರ್ಯಗಳನ್ನು, ಪರಿಹೃತ್ಯ-ತ್ಯಜಿಸಿ, ವಿದುಷಾ-ಪಂಡಿತರಿಂದ, ಬಹುಶ್ರುತ ಮುಖಾಧಿ ಗಮಕ್ರಮೇಣ-ಅನೇಕ ಶಾಸ್ತ್ರವೇತ್ತರುಗಳಲ್ಲಿ ಪಂಡಿತತ್ವವನ್ನು ತಿಳಿದವರಿಂದ ಕ್ರಮವಾಗಿ, ಕಾರ್ಯಂ-ಚೆನ್ನಾಗಿ ತಿಳಿದುಕೊಳ್ಳತಕ್ಕದ್ದೆಂದು ವಿನಯದಿಂದ ಪ್ರಾರ್ಥಿಸುತ್ತಾನೆ.

## ಗ್ರಂಥ ಕರ್ತೃವಂಶಾನುವರ್ಣನೆ

ಮೂಲ।। ಆದಿತ್ಯದಾಸ ತನಯಸ್ತದವಾಪ್ತಬೋಧಃ ಕಾಪಿತ್ಥಕೇ ಸವಿತೃಲಬ್ಧ ವರ
ವರಪ್ರಸಾದಃ।। ಆವತಂಕೋ ಮುನಿಮತಾನ್ಯವಲೋಕ್ಯ ಸಮ್ಯ
ಗ್ಘೋರಾಂ ವರಾಹಮಿಹಿರೋ ರುಚಿರಾಂಚಕಾರ ।।೯।।

ಅವತಾರಿಕೆ।। ಗ್ರಂಥಕರ್ತನಾದ ವರಾಮಿಹಿರಾಚಾರ್ಯನ ತಂದೆಯ ನಾಮಧೇಯ ಪೂರ್ವಕವಾಗಿ ಸೂರ್ಯನ ವರಪ್ರಸಾದದಿಂದುಟಾದ ಜ್ಯೋತಿರ್ಜ್ಞಾನ ವಿಷಯವನ್ನು ತಿಳಿಯಪಡಿಸುತ್ತಾನೆ.

ಟೀಕು।। ಆದಿತ್ಯದಾಸತನಯಃ-ಆದಿತ್ಯದಾಸನೆಂಬುವ ಬ್ರಾಹ್ಮಣೋತ್ತಮನಪುತ್ರನಾದ, ತದವಾಪ್ತಭೋದಃ-ಆ ಆದಿತ್ಯದಾಸನಿಂದಲೇ ಹೊಂದಿದ ಜ್ಯೋತಿರ್ಜ್ಞಾನ ದಿಂದಲೇ, ಕಾಪಿತ್ಥಕೇ-ಕಪಿತ್ಥವೆಂಬುವ ವನದಲ್ಲಿ, ಸವಿತೃಲಬ್ಧವರ ಪ್ರಸಾದಃ-ಸೂರ್ಯೋಪಾಸನೆಯಿಂದುಂಟಾದ ವರಪ್ರಸಾದದಿಂದ. ಆವತಿಂಕಃ-ಅವಂತಿಕಾದೇಶ ವಾಸಿಯಾದ, ವರಾಹಮಿಹಿರಃ-ವರಾಹ ಮಿಹಿರಾಚಾರ್ಯನು, ಮುನಿಮತಾನಿ-ಪೂರ್ವದಲ್ಲಿ ಈ ಶಾಸ್ತ್ರದಲ್ಲಿ ಪಂಡಿತರಾಗಿದ್ದ, ಮಹರ್ಷಿ ದೇವರ್ಷಿಗಳ ಮತಾನುಸಾರವಾದ ಶಾಸ್ತ್ರಗಳನ್ನು, ಅವಲೋಕ್ಯ-ನೋಡಿ, ಸಮ್ಯಕ್-ಚೆನ್ನಾಗಿ, ರುಚಿರಾಂ-ಸುಂದರವಾದ, (ಸುಲಭವಾಗಿ ತಿಳಿಯುವಂತ ಮನೋಹರವಾಗಿ) ಹೋರಾಂ-ಈ ಜಾತಕ ಶಾಸ್ತ್ರವನ್ನು, ಚಕಾರ-ಮಾಡಿದವನು ।।೯।।

ವಿ-ತಾ॥ಆವಂತೀ ದೇಶದಲ್ಲಿ ಕಪಿತ್ಥಾರಣ್ಯದಲ್ಲಿ ವಾಸಮಾಡುತ್ತಿದ್ದ ಸೂರ್ಯೋಪಾಸನ ಧುರೀಣನಾದ ಆದಿತ್ಯದಾಸನ ಪುತ್ರನಾದ ಮಿಹಿರಭಟ್ಟನು ಜ್ಯೋತಿಶ್ಶಾಸ್ತ್ರದಲ್ಲಿ ತ್ರಿಸ್ಕಂಧ ಪಂಡಿತನಾಗಬೇಕೆಂದು ಯೋಚಿಸಿ ಕಪಿತ್ಥಾರಣ್ಯದಲ್ಲಿ ಒಂದು ವೃಕ್ಷಕ್ಕೆ ೧೨ ಕಾಲುಳ್ಳ ನೆಲುವನ್ನು ಕಟ್ಟಿ ಅದರ ಕೆಳಭಾಗದಲ್ಲಿ ಪಂಚಾಗ್ನಿ ಪ್ರತಿಷ್ಠೆ ಮಾಡಿ ತಾನು ಅದರಲ್ಲಿ ಕುಳಿತು ೧೨ ತಿಂಗಳ ಕಾಲ ಸೂರ್ಯನನ್ನು ಕುರಿತು ತಪಸ್ಸನ್ನು ಮಾಡುತ್ತೇನೆಂದು ನಿಶ್ಚಯಮಾಡಿ, ಒಂದೊಂದು ತಿಂಗಳು ಮುಗಿಯುತ್ತಲು ತಾನು ಮರಕ್ಕೆ ತೂಗುಗಟ್ಟಿರುವ ನೆಲವಿನಲ್ಲಿ ಕೂತುಕೊಂಡು ಅದರ ದಾರಗಳನ್ನ ೧ನೆ ತಿಂಗಳಿನಲ್ಲಿ ೧ನೇ ದಾರವನ್ನು, ೨ನೇ ತಿಂಗಳಲ್ಲಿ ೨ನೇ ದಾರವನ್ನು ಕತ್ತರಿಸುತ್ತಾ ೧೨ನೇ ತಿಂಗಳಲ್ಲಿ ೧೨ನೇ ದಾರವನ್ನು ಕತ್ತರಿಸುವುದಕ್ಕೆ ಸಿದ್ಧನಾಗಿ ಕೆಳಗಿರುವ ಅಗ್ನಿ ಕುಂಡದಲ್ಲಿ ಆತನ ತಪಸ್ಸಿಗೆ ಸೂರ್ಯಭಗವಾನರು ಮೆಚ್ಚಿ, ಪ್ರತ್ಯಕ್ಷವಾಗಿ (ಸೂರ್ಯನು) ತಾನಾಗಿಯೇ ತ್ರಿಸ್ಕಂಧ ಜ್ಯೋತಿಶ್ಶಾಸ್ತ್ರವನ್ನು ಉಪದೇಶ ಮಾಡಿದನು. ಈ ವರಪ್ರಸಾದ ವರಾಹಮಿಹಿರಭಟ್ಟನು ಈ ಶಾಸ್ತ್ರಕ್ಕೆ ಆಚಾರ್ಯನಾದನು. ಮತ್ತು ವರಾಹಮಿಹಿರಾಚಾರ್ಯನು, ಉಜ್ಜಯಿನೀ ಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ವಿಕ್ರಮಾರ್ಕ ಮಹಾರಾಜನ ಸಭೆಯಲ್ಲಿದ್ದ ಜ್ಯೋತಿಷ ವಿದ್ವಾಂಸರಲ್ಲಿ ಅಗ್ರಗಣ್ಯನಾಗಿದ್ದನು. ಆ ಕಾಲದಲ್ಲಿ ಕಾಳಿದಾಸನು ಮಹಾ ಪಂಡಿತನಾಗಿದ್ದದ್ದು ಗೀರ್ವಾಣ ಭಾಷಾಭ್ಯಾಸಿಗಳಿಗೆ ವಿದಿತವಾಗಿರುವುದು. ಆದರೂ ಜ್ಯೋತಿಶ್ಶಾಸ್ತ್ರವು ಕಾಳಿದಾಸನಿಗೆ ತಿಳಿಯದೆಂದು ಅಲ್ಲಿದ್ದ ಪಂಡಿತರು ತಿಳಿದುಕೊಂಡಿದ್ದರು. ವರಾಹಮಿಹಿರಾಚಾರ್ಯನನ್ನು ಗೆಲ್ಲುವುದ ಕ್ಕೋಸ್ಕರ ಕಾಳಿದಾಸನು ಜ್ಯೋತಿರ್ವಿದಾಭರಣವೆಂಬುವ ಗ್ರಂಥವನ್ನು ೬೪ ಅಧ್ಯಾಯ ಗಳಾಗಿ ರಚಿಸಿದನು. ಆ ಗ್ರಂಥವು ಜ್ಯೋತಿಶ್ಶಾಸ್ತ್ರ ಬೋಧಕವಾಗಿಯೂ, ಕಾವ್ಯ ಲಕ್ಷಣಯುಕ್ತವಾಗಿಯೂ ಇದೆ. ಈ ಗ್ರಂಥವು ಕಾಶೀ ಪಟ್ಟಣದಲ್ಲಿ ಮುದ್ರಿತ ವಾಗಿರುತ್ತೆ. ವರಾಹ ಮಿಹಿರಾಚಾರ್ಯನಿಗೆ ಪ್ರಶಸ್ತಿ ಉಂಟಾಗುವುದಕ್ಕೆ ಕಾರಣ ವರಾಹ ಮಿಹಿರಭಟ್ಟನೆಂದು ಹೆಸರು ಬರುವುದಕ್ಕೆ ಮುಂಚೆ ಮಿಹಿರಭಟ್ಟನೆಂದು ಹೆಸರುಂಟಾಗಿತ್ತು. ಈ ಮಿಹಿರಭಟ್ಟನು ರಾಜಪುತ್ರನ ಜಾತಕದಲ್ಲಿ ಕಲ್ಲಿನ ಹಂದಿಯ ಮೇಲಿನಿಂದ ಬಿದ್ದು ಮೃತಿಹೊಂದುವನೆಂದು ಬರೆದಿಟ್ಟಿದ್ದನು. ಆ ಪ್ರಕಾರವೇ ಆತನು ಮೃತಪಡಲು ಮಹಿರಭಟ್ಟನೆಂದು ಹೆಸರಿಗೆ ವಿಶೇಷಣವಾಗಿ ವರಾಹಮಿಹಿರ-ಭಟ್ಟಾಚಾರ್ಯನೆಂದು ಪ್ರಖ್ಯಾತಿಯುಂಟಾಯಿತು.

ವರಾಹಮಿಹಿರನೆಂದು ಹೆಸರು ಬರುವದಕ್ಕೆ ಮತ್ತೊಂದು ಪ್ರತೀತಿ ಏನೆಂದರೆ:- ರಾಜಪುತ್ರನು ಅರಣ್ಯದಲ್ಲಿ ಬೇಟೆಯನ್ನಾಡುತ್ತಿರುವಾಗ ಕಾಡುಹಂದಿಗಳಿಂದ ಅಪಾಯವುಂಟಾಗಿ, ಅಂಗಹೀನವಾಗುವದೆಂದು ಮುಂಚೆಯೇ ಸೂಚಿಸಿದ್ದನು.

ಆದಾಗ್ಯೂ ಈ ವಿಷಯವು ನಿಜವೋ ಸುಳ್ಳೋ ಪರೀಕ್ಷಿಸಬೇಕೆಂದು ರಾಜಪುತ್ರನು ಬೇಟೆಯಾಡುತ್ತಿರುವಾಗ ದೃಷ್ಟಾಂತವಾದ್ದರಿಂದ ಆತನು ಮಿಹಿರಭಟ್ಟನಿಗೆ ವರಾಹ ಮಿಹಿರಭಟ್ಟಾಚಾರ್ಯನೆಂದು ಬಿರುದನ್ನು ಕೊಟ್ಟನೆಂದು ಹೇಳುತ್ತಾರೆ.

"ಯಥಾ ಬಿಲಪಿತಂ ಜಲ್ಪಂತಿ" ಎಂಬುವ ನಾಣ್ಣುಡಿಯಂತೆ ಹಿರಿಯರು ಹೇಳಿದ್ದು, ಬರೆದಿಟ್ಟಿದ್ದನ್ನು ನೋಡಿರುತ್ತೇವೆಯೇ ಹೊರತು ಸಂಸ್ಕೃತ ಗ್ರಂಥದ ಮೂಲಾಧಾರನವೇನೂ ಇರುವದಿಲ್ಲ. ವರಾಹಮಿಹಿರಚಾರ್ಯನು ಕಲಿ ಗತ ೨೦೦೦ ವರ್ಷಗಳ ಕೆಳಗೆ ೩೦೦೦ ವರ್ಷಗಳ ಮಧ್ಯಕಾಲದಲ್ಲಿದ್ದನೆಂದು ಗೊತ್ತಾಗುತ್ತದೆ.

ಈ ಬೃಹಜ್ಜಾತಕಕ್ಕೆ ಉತ್ಪಲದೇವಿಯ ಮತ್ತು ಕೃಷ್ಣಭಟ್ಟೀಯವೆಂತಲೂ ಎರಡು ಪುರಾತನ ವ್ಯಾಖ್ಯಾನಗಳು ಪ್ರಸಿದ್ಧವಾಗಿರುತ್ತವೆ. ಇವುಗಳಲ್ಲಿ ಕೃಷ್ಣಭಟ್ಟೀಯವು ಶಾಲಿವಾಹನ ಶಕ ೭೨೬ರಲ್ಲಿಯೂ, ಉತ್ಪಲದೇವಿಯ ವ್ಯಾಖ್ಯಾನವು ತಕ ೮೮೮ರಲ್ಲಿಯೂ ಹುಟ್ಟಿರುತ್ತೆ. ಉತ್ಪಲದೇವಿಯವೆಂಬುವುದಕ್ಕೆ ಭಟ್ಟೋತ್ಪಲಾಚಾರ್ಯರ ವ್ಯಾಖ್ಯಾನವೆಂದು ಹೆಸರಿರುತ್ತೆ. ಇಧರ ಆಧಾರಗಳಮೇಲೆ ಮಹಾರಾಷ್ಟ್ರ ದೇಶದಲ್ಲಿ ಮಹಾರಾಷ್ಟ್ರ ಟೀಕೆಯೂ, ಹಿಂದಿ ಟೀಕೆಯೂ, ಕಲಕತ್ತಾ ನಗರದಲ್ಲಿ ವಂಗಭಾಷೆಯಲ್ಲಿಯೂ, ಗುಜರಾತಿ ಭಾಷೆಯಲ್ಲಿಯೂ ಟೀಕೆಗಳು ಹುಟ್ಟಿರುತ್ತವೆ.

ಆಂಧ್ರದೇಶದಲ್ಲಿ ಆಂಧ್ರಟೀಕೆಯೂ, ಕರ್ನಾಟಕ ದೇಶದಲ್ಲಿ ಕನ್ನಡ ಟೀಕೆಯೂ ಬರೆಯಲ್ಪಟ್ಟಿರುತ್ತವೆ. ಆದರೆ ಬೃಹಜ್ಜಾತಕವು ಗೀರ್ವಾಣ ಭಾಷೆಯನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಅಶಕ್ತರಾದವರಿಗೆ ಸರ್ವಜನ ಸುಲಭವಾಗುವಂತೆ ಮಹೋಪಕಾರವಾಗಿ ಮಾಡಲ್ಪಟ್ಟಿದೆ. ಆದರೂ ಈ ವ್ಯಾಖ್ಯಾನಗಳು ಮೇಲೆ ಹುಟ್ಟಿರುವ ದೇಶಭಾಷಾ ವ್ಯಾಖ್ಯಾನಗಳೆಲ್ಲವು ಪ್ರಾಚೀನ ಕಾಲಕ್ಕೆ ಸರಿಯಾಗಿರುತ್ತವೆಯೇ ಹೊರತು ಈಚಿನ ನವೀನ ಪದ್ಧತಿಯನ್ನನುಸರಿಸಿಲ್ಲ. ಆದ್ದರಿಂದ ಈ ಪುಸ್ತಕವು ಈಗಿನ ಶತಮಾನಕ್ಕನುಸಾರವಾಗಿ ಅನ್ಯ ಗ್ರಂಥದ ಉದಾಹರಣ ಸಹಿತವಾಗಿ ತಿಳಿದುಕೊಳ್ಳುವುದಕ್ಕೆ ಸುಲಭವಾಗಿ ಉದಾಹರಣ ಸಹಿತ ಸುಧಾರಸಧಾರಾ ಟೀಕಾ ರೂಪವಾಗಿ ರಚಿಸಲ್ಪಟ್ಟಿರುತ್ತೆ.

## ಉತ್ತರ ಮಂಗಳಾನುಶಾಸನಂ

ಮೂಲ|| ದಿನಕರ ಮುನಿಗುರು ಚರಣ । ಪ್ರಣಿಪಾತಕೃತ ಪ್ರಸಾದ ಮತಿನೇದಂ || ಶಾಸ್ತ್ರಮುಪ ಸಂಗೃಹೀತಂ । ನಮೋಸ್ತುಪೂರ್ವ ಪ್ರಣೈತೃಭ್ಯಃ ||೧೦||

ಅವತಾರಿಕೆ|| ಈ ಬೃಹಜ್ಞಾತಕ ಗ್ರಂಥಕ್ಕೂ ಈ ಗ್ರಂಥವನ್ನು ಪಠನ ಮಾಡುವವರಿಗೂ ಶ್ರೋಯಭಿವೃದ್ಧಿಯಾಗಿರುವಂತೆ ಗ್ರಂಥಾಂತ್ಯದಲ್ಲಿ ಮಂಗಳರೂಪವಾಗಿ ಆರ್ಯಾವೃತ್ತದಿಂದ ಹೇಳುತ್ತಾನೆ.

ಟೀಕು|| ದಿನಕರ ಮುನಿಗುರುಚರಣ ಪ್ರಣಿಪಾತಕೃತ ಪ್ರಸಾದಮತಿನಾ-ದಿನಕರ-ಸೂರ್ಯನ, ಮುನಿ-ವಸಿಷ್ಠ, ಪರಾಶರ, ನಾರದ, ಲೋಮಶ, ಮೈತ್ರೇಯಾದಿ ಋಷಿಗಳ, ಗುರು-ಆದಿತ್ಯದಾಸನೆ ಮೊದಲಾದ ಗುರುಗಳ, ಚರಣ-ಪಾದಗಳಿಗೆ, ಪ್ರಣಿಪಾತ-ಪ್ರಣಾಮ ಪೂರ್ವಕವಾಗಿ ನಮಸ್ಕಾರವನ್ನು, ಕೃತ-ಮಾಡಲ್ಪಟ್ಟಿದ್ದ ರಿಂದುಂಟಾದ, ಪ್ರಾಸಾದ-ಅನುಗ್ರಹದಿಂದುಂಟಾದ, ಮತಿನಾ-ಬುದ್ಧಿಯಿಂದ, ಮಯಾ-(ವರಾಹಮಿಹಿರಾಭಟ್ಟಾಚಾರ್ಯನಾದ) ನನ್ನಿಂದ, ಇದಂಶಾಸ್ತ್ರಂ-ಸಂಕ್ಷೇಪವಾಗಿ ಸಂಗ್ರಹಿಸಿರುತ್ತೇನೆಯಾಗಿ ಅಂದರೆ ಮೇಲೆ ಉದಹರಿಸಿರುವ ಸೂರ್ಯ, ಮುನಿಗಳು ತನ್ನ ತಂದೆಯಾದ ಆದಿತ್ಯವಾಸ ಇವರುಗಳಿಗೆ ನಮಸ್ಕರಿಸಿದ್ದರಿಂದುಂಟಾದ ಬುದ್ಧಿ ನೈರ್ಮಲ್ಯದಿಂದ ಈ ಗ್ರಂಥವನ್ನು ರಚಿಸಿರುತ್ತೇನೆ. ಆದ್ದರಿಂದ, ಪೂರ್ವಪ್ರಣೇ ತೃಭ್ಯಃ-ಪೂರ್ವಾಚಾರ್ಯರಾದ ವಸಿಷ್ಠ ಪರಾಶರ. ಅತ್ರ, ಗರ್ಗರೇ ಮೊದಲಾದ ಅಷ್ಟಾದಂಶ ಸಂಹಿತಾ ಪ್ರಣೇತೃಗಳಿಗೂ, ನಮಃ-ನಮಸ್ಕಾರವು, ಅಸ್ತು-ಆಗಲಿ.

ವಿ-ತಾ|| ನನಗಿಂತಲೂ ಪೂರ್ವದಲ್ಲಿ ಈ ಜ್ಯೋತಿಶಾಸ್ತ್ರ ಪ್ರವರ್ತರಾದ ವಸಿಷ್ಠ, ಪರಾಶರ, ಲೋಮಶ, ಪೌಲಿಶ, ಮಯ, ಯವನ, ಮಣೇತ್ಥ, ಸತ್ಯಾ ಚಾರ್ಯ, ಜೀವಶರ್ಮ ಮೊದಲಾದವರು ಲೋಕೋಪಕಾರಾರ್ಥವಾಗಿ ಈ ಮಹತ್ತರ ವಾದ ಶಾಸ್ತ್ರವನ್ನು ರಚಿಸಿರುವುದರಿಂದ ಅವರನ್ನು ಪೂಜಿಸುತ್ತೇನೆಂದು ಭಾವವು.

ಇತಿ ಶ್ರೀ ಅವಂತಿಕಾಚಾರ್ಯ ವರಾಹಮಿಹಿರಭಟ್ಟ ವಿರಚಿತೇ ಬೃಹಜ್ಞಾತ ಕಾಖ್ಯ ಹೋರಾಶಾಸ್ತ್ರೇ ಗ್ರಂಥಾಲಂಕಾರಾಖ್ಯ ವಿಚಾರೋನಾಮ ಅಷ್ಟಾವಿಂಶ ಪ್ರಕರಣಂ.

ಇತಿ ಶ್ರೀ ಮದ್ಗೌತಮಾನ್ವಯ ಪಯಃಪಾರಾವಾರ ರಾಕಾಸುಧಾಕರಾಯಮಾನ
ಅಶ್ವಲಾಯನ ಸೂತ್ರ ಋಕ್ಶಾಖಾನುವರ್ತಿ ಬಂಕೀಪುರ ವಿಠಲರಾಯಶರ್ಮ
ತನುಜ ಜ್ಯೋತಿರ್ವಿತ್ ಸುಬ್ರಹ್ಮಣ್ಯಶರ್ಮ ವಿರಚಿತೇ ಬೃಹಜ್ಜಾತಕಾಖ್ಯ
ಹೋರಾಶಾಸ್ತ್ರೇ ಸುಧಾರಸಧಾರಾ ಟೀಕಾಯಾಂ ಗ್ರಂಥಾಲಂಕಾರಾಖ್ಯಂ
ಅಷ್ಟಾವಿಂಶ ಪ್ರಕರಣಂ

## ಸಮಾಪ್ತೋಽಯಂ ಗ್ರಂಥಃ

## ಬೃಹಜ್ಜಾತಕಾಖ್ಯ ಹೋರಾಶಾಸ್ತ್ರವು
## ಸಂಪೂರ್ಣಂ